# ಪರಿಪೂರ್ಣಚಂದ್ರಿಕಾ

ಸೂತ್ರ-ಭಾಷ್ಯ- ಟೀಕಾ - ಟಿಪ್ಪಣಿ ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ







ಅಸ್ಪೃಷ್ಟದೋಷಗಂಧಾಯ ಕಲ್ಯಾಣಗುಣಸಿಂಧವೇ ।
ನಮೋ ನಮೋ ಭಕ್ತಮುಕ್ತಿದಾಯಿನೇ ಶೇಷಶಾಯಿನೇ ॥
ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್ ।
ಕೃಷ್ಣಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ॥

ಪ್ರಕಾಶಕರು : ಶ್ರೀಹರಿವಾಯುಪ್ರಕಾಶನ ಮೈಸೂರು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಪರಿಪೂರ್ಣಚಂದ್ರಿಕಾ

## ಜಿಜ್ಞಾಸಾಧಿಕರಣ

ಬ್ರಹ್ಮಸೂತ್ರ
ಸೂತ್ರದೀಪಿಕಾ
ತಂತ್ರದೀಪಿಕಾ
ನ್ಯಾಯಮುಕ್ತಾವಳಿ

ಬ್ರಹ್ಮಸೂತ್ರಭಾಷ್ಯ
ಭಾಷ್ಯದೀಪಿಕಾ
ಸತ್ತರ್ಕದೀಪಾವಳಿ
ತತ್ತ್ವಪ್ರಕಾಶಿಕಾ
ಭಾವದೀಪ
ವಾಕ್ಯಾರ್ಥಮಂಜರೀ

ತಾತ್ಪರ್ಯಚಂದ್ರಿಕಾ
ಪ್ರಕಾಶ
ಗುರುರಾಜೀಯ
ಭಾಟ್ಟಸಂಗ್ರಹ

ನ್ಯಾಯವಿವರಣ
ನ್ಯಾಯವಿವರಣಟೀಕಾ
ಅಣುಭಾಷ್ಯ
ತತ್ತ್ವಮಂಜರೀ

(ಶಂಕರಭಾಷ್ಯ, ಭಾಮತೀ, ವಿವರಣ, ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

- - - - - - -

ಪ್ರಕಾಶಕರು
ಶ್ರೀಹರಿವಾಯುಪ್ರಕಾಶನ
ಮೈಸೂರು

'ಪರಿಪೂರ್ಣಚಂದ್ರಿಕಾ' ವಿಕೃತಿನಾಮಸಂವತ್ಸರ ವೈಶಾಖ ಶುದ್ಧ ದ್ವಾದಶೀ ಶ್ರೀವೇದವ್ಯಾಸಜಯಂತಿ ಹಾಗೂ ಶ್ರೀವಿದ್ಯಾಮಾನ್ಯತೀರ್ಥರ ಆರಾಧನೆಯ ಶುಭ ಮುಹೂರ್ತದಲ್ಲಿ (ತಾ॥೨೫/೫/೨೦೧೦) ಪಲಿಮಾರು ಕ್ಷೇತ್ರದಲ್ಲಿ ಗುರುಗಳಾದ ಶ್ರೀ ಶ್ರೀವಿಶ್ವೇಶತೀರ್ಥಶ್ರೀಪಾದರಿಂದ ಹಾಗೂ ಶ್ರೀ ಶ್ರೀವಿದ್ಯಾಧೀಶತೀರ್ಥಶ್ರೀಪಾದರಿಂದ ಅಂತರ್ಯಾಮಿಗಳಿಗೆ ಸಮರ್ಪಿತವಾಯಿತು ಮತ್ತು ಆಷಾಢಶುಕ್ಲ ದಶಮಿಯಂದು (೨೧/೭/೨೦೧೦) ಶ್ರೀಸತ್ಯಾತ್ಮತೀರ್ಥಶ್ರೀಪಾದರಿಂದ ಬೆಂಗಳೂರಿನಲ್ಲಿ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀಹರಿವಾಯು ಪ್ರಕಾಶನ, ಮೈಸೂರು.

ಸಹಯೋಗ : ಎಮ್.ಬಿ.ಆರ್.ಐ.

ಪ್ರಥಮಮುದ್ರಣ : 2010

ಪುಟಗಳು : 1200

ಬೆಲೆ : 1000 ರೂ

ಪ್ರತಿಗಳು : 1000



ಅಕ್ಷರಜೋಡನೆ :

ಬಿ.ಎಸ್. ಚಿತ್ರಾ ಶ್ರೀನಿವಾಸರಾವ್, ಬೆಮ್ಮತ್ತಿ.

ನಾಗಲತಾ(ಸುಧಾ)ಗಿರಿ, ಬೆಂಗಳೂರು.

ಸುಬ್ರಹ್ಮಣ್ಯ ಕೆಂಪದಾಳಹಳ್ಳಿ - 93431 17136

ಮುದ್ರಕರು :

ಉದಯರವಿ ಆಫ್‌ಸೆಟ್ ಪ್ರಿಂಟರ್ಸ್

1354/1, ಕೃಷ್ಣಮೂರ್ತಿಪುರಂ,

ಮೈಸೂರು - 570 004.

ದೂರವಾಣಿ : 2332971

# ಪ್ರಕಾಶಕರ ನುಡಿ

*ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್ |*
*ಕೃಷ್ಣ ಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ||*
*ಶ್ರೀಮದಾನಂದತೀರ್ಥಾರ್ಯಪಾದಪಂಕಜರೇಣವಃ |*
*ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ||*

ತಾತ್ಪರ್ಯ ಚಂದ್ರಿಕೆಯ ಪರಮಮಂಗಳ ಪದ್ಯಗಳಿವು. ವ್ಯಾಸರಾಜರು ಕೃಷ್ಣನನ್ನು 'ಮೇಘ' ಎಂದಿದ್ದಾರೆ. ಆಚಾರ್ಯರ ಪಾದದ ಧೂಳನ್ನು 'ಪಂಡಿತ' ಎಂದಿದ್ದಾರೆ. ಈ ಶಬ್ದಗಳ ಅಂತರಂಗವನ್ನು ಕೆದಕಿದಾಗ ವ್ಯಾಸತೀರ್ಥರಿಗೆ ವೇದವ್ಯಾಸರ ಅನುಗ್ರಹವೇನೆಂದು ಅರ್ಥವಾಗುತ್ತದೆ.

ವಾಮನ ಪುರಾಣದಲ್ಲಿ ಶಿವನನ್ನು ಪ್ರಮಥಗಣದವರು ಸ್ತುತಿಸುತ್ತಾರೆ.

*ಶುದ್ಧ ಸ್ಫಟಿಕಸಂಕಾಶಃ ಶಾಂತಃ ಶುಕ್ಲೋ ನಿರಂಜನಃ*
*ಸ ಚಾಪ್ಯಂಜನಸಂಕಾಶಃ ಕಥಂ ತೇನೇಹ ಯುಜ್ಯತೇ ||*

(ವಾಮನ-ಪು. -ಅ-67-ಶ್ಲೋ-31)

"ರುದ್ರನೇ ! ನೀನಾದರೂ ಶುದ್ಧವಾದ ಸ್ಫಟಿಕಶಿಲೆಯಂತೆ ಸ್ವಚ್ಛವಾದ ಬೆಳ್ಳಗಿನ ಶಾಂತರೂಪನಾಗಿರುವಿ. ಆ ವಿಷ್ಣುವಾದರೂ ಕಣ್ಣಿಗೆ ಹಚ್ಚುವ ಕಜ್ಜಲದಂತೆ ಇದ್ದಾನೆ. ಅಂತಹ ವಿಷ್ಣುವು ನಿನಗೆ ಅಂತರ್ಯಾಮಿಯೆ /?" ಎಂದು ಪ್ರಶ್ನಿಸುತ್ತಾರೆ. ಇದಕ್ಕೆ ಉತ್ತರವಾಗಿ ರುದ್ರನು ತನ್ನೊಳಗಿನ ವಿಷ್ಣುರೂಪವನ್ನು ತೋರುತ್ತಾನೆ. ಇಲ್ಲಿ ನಮಗೆ ಬರುವ ಸಹಜ ಪ್ರಶ್ನೆ ಏನೆಂದರೆ ಸದಾಶಿವ ಶುದ್ಧಸ್ಫಟಿಕದಂತೆ ಇದ್ದಾನೆ. ವಿಷ್ಣು ಕಪ್ಪಗಿದ್ದಾನೆ. ಇದು ಲೋಕ ದೃಷ್ಟಿಯಿಂದ ದೋಷವಲ್ಲವೇ ? ಕನ್ಯೆಯರ ಬಳಿ "ಕಪ್ಪಗಿದ್ದಾನೆ ವರ ! ಸ್ವೀಕರಿಸು !" ಎಂದರೆ ಒಪ್ಪುವರೆ ? ಇದಕ್ಕೆ ವ್ಯಾಸತೀರ್ಥರು ಕೃಷ್ಣನನ್ನು 'ಕೃಷ್ಣಮೇಘ' ಎಂದು ಬಣ್ಣಿಸಿದ್ದಾರೆ. ಮೇಘವು ಕೃಷಿಕರಿಗೆ, ಉಂಬುವ ಜನರಿಗೆ, ಸಕಲ ಭೂ-ಚರ,-ಖೇ-ಚರ, ಜಲಚರ ಪ್ರಾಣಿಗಳಿಗೆ ಬೇಕಾದ ಮಳೆಯನ್ನು ಸುರಿಸುತ್ತದೆ. ಕೃಷ್ಣಮೇಘವು ಎಲ್ಲರಿಗೂ ಇಷ್ಟವಾದದ್ದು. ಇದೇ ಬಿಳೀ ಮೇಘವನ್ನು ಯಾರೂ ಬಯಸರು. ರುದ್ರದೇವರು ಬಿಳಿ ಇದ್ದ ಮಾತ್ರಕ್ಕೆ ಎಲ್ಲರ ಎಲ್ಲ ಮುಖದ ಇಷ್ಟಾರ್ಥಗಳನ್ನು ನೆರವೇರಿಸರು. ನೀಲಮೇಘಶ್ಯಾಮನಾದ ಕೃಷ್ಣನು ಸಕಲ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ. ಹಾಗೆ 'ನನ್ನನ್ನೂ ತನ್ನ ಕರುಣೆಯಿಂದ ಪುಷ್ಟನನ್ನಾಗಿಸಲಿ' ಎಂದು ವ್ಯಾಸರಾಜರು ಮಾರ್ಮಿಕವಾಗಿ ನುಡಿದಿದ್ದಾರೆ.

ಶ್ರೀಮದಾಚಾರ್ಯರ ಪಾದದ ಧೂಳಿನ ಕಣಗಳನ್ನು "ಪಾಪ-ಪಾಟನ-ಪಂಡಿತರು" ಎಂದು ವರ್ಣಿಸಬೇಕಾದರೆ ವ್ಯಾಸರಾಜರಿಗಿರುವ ಗುರುಭಕ್ತಿ ಎಷ್ಟು ಅನನ್ಯವಾದುದೆಂದು ಅರ್ಥವಾಗದಿರದು.

ಇನ್ನು ವ್ಯಾಸರಾಜರ ಗ್ರಂಥಗಳನ್ನು ಕುರಿತು ಅಪರೋಕ್ಷಜ್ಞಾನಿಗಳು ಉದ್ಧರಿಸಿದ ರೀತಿ ನೀವೇ ನೋಡಿ.

*ಪರಿಪೂರ್ಣಚಂದ್ರಿಕಾ*

*ಗುರುವ್ಯಾಸರಾಯ, ಗುರುವ್ಯಾಸರಾಯ ಶ್ರೀ ಹರಿಗತಿಪ್ರಿಯ*
*ಶರ್ಕರ ಕ್ಷೀರವ ಕುಡಿಸುವಂದದಿ ಶುಭ*
*ತರ್ಕತಾಂಡವ ನ್ಯಾಯಾಮೃತವನು ಸುರಿವ*
*ಸಾಂದ್ರ ಕೃತ್ವಾ ಮಸತಂತ್ರ ಓಡಿಸುವ*
*ಚಂದ್ರಿಕಾಕಾರಕರುಣಾಂಬುಧಿ ಧೀರ*
*ಕುಂಡಲ ಗಿರಿವರ ಪಾಂಡವಾಧಾರ ಬ್ರಹ್ಮಾಂಡ*
*ಕೋಟೀಶನ್ನ ಮಂಡಿಸಿ ನಲಿವಂಥ (ವಿಜಯದಾಸರು)*

ವ್ಯಾಸಯೋಗಿ ಮುಖ ಚಂದ್ರ ಚಂದ್ರಿಕೆಯು ಲೋಕಾ ವರಕವಾದ ಚಟುಲಾಂಧಕಾರವನ್ನು ಪರಿಹರಿಸಿತು. ಮಧ್ವದುಗ್ಧಾಬ್ಧಿಯನ್ನು ಉಕ್ಕಿ ಹರಿಸಿತು. ಪ್ರತ್ಯುಕ್ತಿ ಭೇದಕ ಉಕ್ತಿ ನರ್ತಕಿಯ ಬಿನ್ನಾಣವು ಪಂಡಿತರ ಮನೋಲ್ಲಾಸಕ್ಕೆ ನಾಂದಿಯಾಯಿತು. ಎಂದಿದ್ದಾರೆ. ವಿಜಯದಾಸರು.

ಅಭಿನವ ಚಂದ್ರಿಕೆಯಲ್ಲಿ ಶ್ರೀ ಸತ್ಯನಾಥರು -

*ವ್ಯಾಸರಾಜೇಂದುಮಾಶಾಸೇ ಚಂದ್ರಿಕಾ ಯಸ್ಯ ಸಂಮತಾ |*
*ದುರ್ವಾದಿಚೋರಾನ್ವಿದ್ರಾವ್ಯ ರಕ್ಷತಿ ಭುವನತ್ರಯಮ್ ||* ಎಂದುಕೊಂಡಾಡಿದ್ದಾರೆ.

ವ್ಯಾಸರಾಜರ ಬದುಕು ಎಲ್ಲ ರೀತಿಯ ಸಮೃದ್ಧಿಯಿಂದಲೂ ಕೂಡಿತ್ತು. ಸ್ವತಃ ಘನಪಂಡಿತರು. ತಪಸ್ವಿಗಳಾದ ಶ್ರೀ ಬ್ರಹ್ಮಣ್ಯತೀರ್ಥರಂತಹ ಆಶ್ರಮಗುರುಗಳು, ಶ್ರೀಪಾದರಾಜರಂತಹ ವಿದ್ಯಾಗುರುಗಳು ಶ್ರೀ ವಿಜಯೀಂದ್ರ ತೀರ್ಥರಂತಹ ಸನ್ಯಾಸಿ ಶಿಷ್ಯರು ಶ್ರೀ ಕೃಷ್ಣರಾಯನಂತಹ ಹೃದಯವಂತ ಶ್ರೀಮಂತಿಕೆಯ ಶಿಷ್ಯರು. ಪುರಂದರ ದಾಸರಂತಹ ಅನುಭವಿ ದಾಸರು. ಈ ಭಾಗ್ಯ ಯಾರಿಗಿದೆ ಹೇಳಿ !!

ಇಷ್ಟೆಲ್ಲಾ ಭಾಗ್ಯಗಳ ನಡುವೆ ವ್ಯಾಸರಾಜರಿಗೆ ಪ್ರಿಯವಾದದ್ದು ಮಧ್ವಸಿದ್ಧಾಂತವೆಂದರೆ ಅವರ ಜಿತೇಂದ್ರಿಯತ್ವದ ಮಹತ್ವವನ್ನು ಬಣ್ಣಿಸುವರಾರು ?

ಅವಿವೇಕಿಗಳಿಗಿರುವ ವಿಷಯಾಸಕ್ತಿ ವಿವೇಕಿಗಳಾದ ವ್ಯಾಸರಾಜರಿಗೆ ಗುರುಗಳಲ್ಲಿತ್ತು. ಇಂತಹ ವ್ಯಾಸತೀರ್ಥರು ರಚಿಸಿದ ತಾತ್ಪರ್ಯಚಂದ್ರಿಕೆಯ ಬಗ್ಗೆ ದಿಗ್ದಂತಿ ಪಂಡಿತರಾದ ಅನಪ್ಪಾಚಾರ್ಯರು ಹೀಗೆ ವರ್ಣಿಸಿದ್ದಾರೆ.

*ಆಮೂಲಾಗ್ರನಿಬದ್ಧ ತರ್ಕಜಟಿಲಂ ಶಬ್ದೈಕಜೀವಾತುಕಂ*
*ಮೀಮಾಂಸಾನುನಯಂ ಚ ಶಂಕರವಚೋ ಹುಂಕಾರಭಂಗಪ್ರದಮ್ |*
*ಶಾಸ್ತ್ರಂ ತಂತ್ರ ಚತುಷ್ಟಯಾತ್ಮಕಮಿದಂ ನಿಷ್ಪ್ರತ್ಯೂಹತಂತ್ರಾಂತರಾಃ*
*ವ್ಯಾಖ್ಯಾಸ್ಯಂತಿ ಪಠಂತಿ ಚ ಜನಾಃ ಕಿಂ ವಾ ಕಲೌ ದುಷ್ಕರಮ್ ||*

ಚಂದ್ರಿಕಾ ಗ್ರಂಥವು ಆದ್ಯಂತವಾಗಿ ತರ್ಕ, ವ್ಯಾಕರಣ, ಪೂರ್ವಮಿಮಾಂಸಾ ಶಾಸ್ತ್ರಗಳಿಂದ ಕೂಡಿದೆ. ಶಂಕರವಚನಗಳನ್ನು ಹುಂಕಾರದಿಂದ ಧಿಕ್ಕರಿಸುತ್ತಿವೆ. ಚತುಃ ಶಾಸ್ತ್ರಗಳ ಪಾಂಡಿತ್ಯ ಎತ್ತಿ ತೋರುತ್ತಿವೆ. ವೇದಾಂತ, ತರ್ಕ, ವ್ಯಾಕರಣ, ಮೀಮಾಂಸಾ ಗ್ರಂಥಗಳ ಪರಿಚಯವಿಲ್ಲದವರು ಈ ಗ್ರಂಥವನ್ನು ಸ್ವಪ್ನದಲ್ಲಿಯೂ

ಮುಟ್ಟಲಾಗದು. ಹೀಗಿರಲು ಅಧ್ಯಯನ ವ್ಯಾಖ್ಯಾನಗಳನ್ನು ಈ ಕಲಿಯುಗದಲ್ಲಿಯೂ ನಡೆಸುವ ಮಂದಿ ಇದ್ದಾರೆಂದರೆ ಇವರಿಗಸಾಧ್ಯವಾದ ಕೆಲಸಯಾವುದು ?

ವ್ಯಾಸತೀರ್ಥರು ತಾತ್ಪರ್ಯ ಚಂದ್ರಿಕೆಯಲ್ಲಿ ಒಂದು ಮಾತನ್ನು ಈ ಗ್ರಂಥದ ಬಗ್ಗೆ ಹೇಳುತ್ತಾರೆ. -

*"ಪರೋಕ್ತೀ ದೂಷ್ಯ ವಿವಾಂಶೋ ಮಿತ್ಯೆ: ಶಬ್ದೈರಸೂದ್ಯತೇ |*
*ದೂಷಣಾಂ ಚಾಪಿ ಹನುಮದ್ಭಾಷ್ಯ ಸೂಚಿತಮುಚ್ಯತೇ ||"* ಎಂದು

"ಇತರ ಗ್ರಂಥಗಳ ಅನುವಾದದ ಜೊತೆಗೆ ಅದನ್ನು ಮಧ್ಯಭಾಷ್ಯದ ಹಿನ್ನೆಲೆಯಲ್ಲಿ ಖಂಡಿಸಿದ್ದೇನೆ ಎಂದಿದ್ದಾರೆ.

ಈ ಗ್ರಂಥವನ್ನು ವ್ಯಾಸರಾಯರು ಶ್ರೀಪಾದರಾಜರಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗಲೇ ಆರಂಭಿಸಿ ಶ್ರೀರಂಗನಾಥನ ಸನ್ನಿಧಿಯಲ್ಲಿ ವೈಷ್ಣವ -ಶೈವ ಮತೀಯರ ವಿವಾದ ಪರಿಹರಿಸಲು ಹೋದಾಗ ಅಲ್ಲಿಯೇ ಸ್ವಲ್ಪ ಸಮಯ ಕುಳಿತು ರಚಿಸಿದ್ದಾರೆ. ನಂತರ ಉಡುಪಿ ಕೃಷ್ಣನ ಸನ್ನಿಧಾನಕ್ಕೆ ಬಂದು ಸಂಪೂರ್ಣಗೊಳಿಸಿ ಸಮರ್ಪಿಸಿದರೆಂದು ಇತಿಹಾಸ.

ಇಂದಿಗೂ ಶ್ರೀರಂಗನಾಥ ದೇವಾಲಯದಲ್ಲಿ ಚಂದ್ರಿಕಾಚಾರ್ಯರ ಮಂಟಪವೆಂದು ಸ್ಥಾನನೀಡಿದ್ದಾರೆ. ಅಲ್ಲಿ ಅವತಾರತ್ರಯ ಪ್ರಾಣದೇವರ ಸನ್ನಿಧಾನವೂ ಇದೆ. ವ್ಯಾಸರಾಜರು ತಮ್ಮ ಜೀವನದಲ್ಲಿ ಜೀವೋತ್ತಮನನ್ನು ಜಪಿಸುತ್ತಾ ಸರ್ವೋತ್ತಮನ ಮಹತ್ವವನ್ನು ಗ್ರಂಥಗಳ ಮೂಲಕ ನಿರೂಪಿಸಿದರು. ಅನೇಕ ಗ್ರಂಥಗಳಿದ್ದಾಗ ಈ ಗ್ರಂಥವೇಕೆ ಎಂದು ಪ್ರಶ್ನಿಸಿಕೊಂಡು ವ್ಯಾಸರಾಜರೇ ಹೀಗೆ ಉತ್ತರಿಸುತ್ತಾರೆ.

*"ವಿಕ್ಷಿಪ್ತ ಸಂಗ್ರಹಾತ್ವ್ಯಾಪಿ ವ್ಯಾಖ್ಯಾತ ಸ್ಫೋಟನಾದಪಿ |*
*ಅನುಕ್ತ ಕಥನಾತ್ವ್ಯಾಪಿ ಸಫಲೋಽಯಂ ಶ್ರಮೋ ಮಮ ||*

ಬೇರೆ ಬೇರೆ ಕಡೆ ಹೇಳಿದ್ದನ್ನು ಒಂದೆಡೆ ಸಂಗ್ರಹಿಸುವುದು, ಟೀಕಾಕಾರರು ಸಂಗ್ರಹಿಸಿ ಹೇಳಿದ್ದನ್ನು ವಿಸ್ತರಿಸುವುದು, ಅರ್ಥವಾಗುತ್ತದೆಂದು ಬಿಟ್ಟ ವಿಚಾರಗಳನ್ನು ಹೇಳುವುದು ನನ್ನ ಉದ್ದೇಶವಾಗಿರುವುದರಿಂದ, ನನ್ನ ಶ್ರಮ ಸಾರ್ಥಕ ಎಂದಿದ್ದಾರೆ. ಚಂದ್ರಿಕಾರಚನೆಯನಂತರ ಚಂದ್ರಿಕಾಚಾರ್ಯರೆಂದೇ ಪ್ರಸಿದ್ಧಿಯನ್ನೂ ಹೊಂದಿದ್ದಾರೆ.

ಇಷ್ಟಾಗಿಯೂ ವ್ಯಾಸರಾಜರು ಸುಧೆ ವ್ಯಾಖ್ಯಾನವನ್ನು ಏಕೆ ಬರೆಯಲಿಲ್ಲ ಎಂದು ಕೆಲವರ ಆಕ್ಷೇಪವಿದೆ. ಇದಕ್ಕೆ ಒಬ್ಬ ವಿದ್ವಾಂಸರು ಹೀಗೆ ಉತ್ತರಿಸಿದ್ದಾರೆ.

"What is Tatparya Chandrika ? it is a gist of sriman Nyaya Sudha"

ವ್ಯಾಸತ್ರಯವು ಶ್ರೀಮನ್ನ್ಯಾಯ ಸುಧೆಗೆ ಅಪ್ರತ್ಯಕ್ಷ ವ್ಯಾಖ್ಯಾನವೇ ಆಗಿದೆ. ಏನೆ ಹೇಳಿ ಇಂತಹ ಒಂದು ವಿಮರ್ಶಾತ್ಮಕವಾದ ಪ್ರಬಂಧ ಅದ್ಭುತವಾದ ವಿಶ್ವದಾಖಲೆಯನ್ನು ಸ್ಥಾಪಿಸಿದೆ. ಇದಕ್ಕೆ ಸಾಟಿಯಾಗುವ ಗ್ರಂಥ ಮುಂದಿನ ದಿನದಲ್ಲಿ ಉದಯಿಸಲಾರದು.

ಇಂತಹ ಒಂದು ಭವ್ಯ ಗ್ರಂಥವನ್ನು ಕನ್ನಡ ಭಾಷೆಗೆ ತರ್ಜುಮೆ ಮಾಡುವ ಸಾಹಸ ಮೆಚ್ಚಲೇ ಬೇಕಾದದ್ದು. ಇಂತಹ ಒಂದು ಸಾಹಸವನ್ನು ನನ್ನ ಸಹೋದರ ಬೆಮ್ಮತ್ತಿ ವೇಂಕಟೇಶಾಚಾರ್ಯರು ಮಾಡಿದ್ದಾರೆ. ನಾಲ್ಕಾರು ವಿದ್ವಾಂಸರ ಸಹಕಾರದಿಂದ ಅಹರ್ನಿಶಿ ಕೃಷಿಮಾಡಿದ ಫಲವೇ ಈ ಕೃತಿಯಾಗಿ ನಿಮ್ಮ ಕೈ ಸೇರಿದೆ. ಇದರ ಸ್ವೀಕೃತಿ ನಿಮಗೆ ಸೇರಿದ್ದು.

*ಪರಿಪೂರ್ಣಚಂದ್ರಿಕಾ*

## ಒಂದು ಮಾತು

ಶ್ರೀ ಶ್ರೀ ವಿಶ್ವೇಶತೀರ್ಥರ ವಿದ್ಯಾಶಿಷ್ಯರಾದ ನಾವು ಗುರುಭಕ್ತಿಯಿಂದ ಪಡೆದ ಫಲ ಈ ಕೃತಿಯಾಗಿದೆ. ವೇಂಕಟೇಶಾಚಾರ್ಯರು ಗುರುಗಳಿಗೊಂದು ಸೇವೆಮಾಡಲು ಹೋಗಿ ಯಾರದ್ದೋ ಅಪರಾಧಕ್ಕೆ ತಾವು ಗುರಿಯಾದರು. ಗುರುಗಳಿಗೆ ಅನ್ಯಾಯವೆಸಗಿದ ಅಪಖ್ಯಾತಿಗೆ ತುತ್ತಾಗಿ ಮನನೊಂದರು. ಇದಕ್ಕೊಂದು ಪ್ರಾಯಶ್ಚಿತವಾಗಬೇಕು ಮತ್ತು ಗುರುಪ್ರೀತಿ ಉಂಟಾಗಬೇಕೆಂದು ಸಾಂಸಾರಿಕ ಸುಖ-ವೈಭವ-ಕೀರ್ತಿ-ಸ್ಥಾನ-ಮಾನ-ಎಲ್ಲವನ್ನು ಬದಿಗಿಟ್ಟು ನಾರುಮಡಿಯುಟ್ಟು ಹರಿಭಕ್ತನಾಗಿ ಸಾಧಿಸಿದ ಸಾಧನೆಯೇ ಈ ಕೃತಿ. ನಂಬುವವರು ನಂಬಲಿ. ಈರ್ಷೆಯಿಂದ ನಂಬದವರಿಗೆ ನಮ್ಮ ಬಳಿ ಈರ್ಷೆಯ ಯಾವ ಉತ್ತರಗಳೂ ಇಲ್ಲ. ಈ ಕೃತಿಗೊಂದು ಮಹತ್ವ ಬರಲಿ. ಪ್ರಾಮಾಣಿಕ ವೈಷ್ಣವರಿಗೆ ಈ ಸಮಾಜದಿಂದ ಉತ್ತೇಜನ ದೊರೆಯಲೆಂದು ನಾವು ಹರಿವಾಯು ಪ್ರಕಾಶನದ ವತಿಯಿಂದ ಮುಂದೆ ಬಂದೆವು. ನಮ್ಮ ಹರಿವಾಯು ಪ್ರಕಾಶನ ಸಂಸ್ಥೆಯು ಧಾರ್ಮಿಕ ಬಂಧುಗಳಿಗೆ ಬೇಕಾದ ಕೃತಿಗಳನ್ನು ಈಗಾಗಲೇ ನೀಡುತ್ತಾ ಬಂದಿದೆ. ಅಧ್ಯಾತ್ಮ ಬಂಧುಗಳಿಗೆ ಅನೇಕ ರೀತಿಯ ಗ್ರಂಥಸೇವೆಯನ್ನು ನಡೆಸುತ್ತಿದೆ.

ಅದರಂತೆ ಚಂದ್ರಿಕಾ ಗ್ರಂಥ ಮುದ್ರಣಕ್ಕೆ ಮುಂದಾದಾಗ ನಮಗೆ ಆರ್ಥಿಕ ಸಹಾಯವನ್ನು ನೀಡಿದ ಮಹನೀಯರು ನಂಜನಗೂಡಿನ ಶ್ರೀಯುತ ಸತ್ಯನಾರಾಯಣರಾವ್ ಶ್ರೀಮತಿ ಇಂದಿರಾ ಮತ್ತು ಶ್ರೀಯುತ ಶ್ರೀನಿವಾಸ ಪ್ರಹಲ್ಲಾದ ಇವರು. ಸ್ವಯಂ ಆಸಕ್ತಿಯಿಂದ ಸ್ಫೂರ್ತಿಯಿಂದ ಇವರಿತ್ತ ಧನವೇ ಪ್ರಕಾಶನಕ್ಕೆ ನಾಂದಿಯಾಯಿತು. ನಂತರ ಅನೇಕ ಮಹನೀಯರು ಉದಾರ ಸೇವೆಯನ್ನು ಸಲ್ಲಿಸಿದರು. ಅವರ ಸಂಪೂರ್ಣ ಸಹಕಾರದಿಂದ ಈ ಕೃತಿಯು ಹೊರ ಬರುತ್ತಿದೆ.

## "ನಮ್ಮ ಉದ್ದೇಶ"

ಪರಿಪೂರ್ಣ ಚಂದ್ರಿಕೆಯ 1000 ಪ್ರತಿಗಳು ಅಧ್ಯಾತ್ಮ ಸಮಾಜಕ್ಕೆ ಉಚಿತವಾಗಿ ನೀಡಲಾಗುತ್ತಿದೆ. ಆದರೆ ಒಂದು ನಿಯಮವಿಲ್ಲಿದೆ. ಮುಂದಿನ ಪ್ರತಿಗಳ ಮುದ್ರಣಕ್ಕೆ ಬೇಕಾಗುವ ಖರ್ಚನ್ನು ನಿಗದಿಪಡಿಸಿದ್ದೇವೆ. ಅದನ್ನು ನೀಡಿ ಪಡೆಯಲೆಂಬುದು ನಮ್ಮ ಆಶಯ. ಚಂದ್ರಿಕಾಗ್ರಂಥವನ್ನು ಹೀಗೆ ಪಡೆಯುವುದರಿಂದ ಹತ್ತಾರು ವೈದಿಕ ವಿದ್ವಾಂಸರ ಪೋಷಣೆಯ ಜೊತೆಗೆ ಈ ಗ್ರಂಥಗಳ ಮುದ್ರಣಕ್ಕೆ ಉತ್ತೇಜನ ನೀಡಿದಂತಾಗುತ್ತದೆ. ಹೌದೆನಿಸಿದರೆ ಮುಂದೆ ಬನ್ನಿ. ಪಂಡಿತರು ಗ್ರಾಮವಾಸಿಗಳಾದರೆ ಅದು ಶತಾಪರಾಧ ಎಂದಿದೆ ಶಾಸ್ತ್ರ. ಅವರಿಂದ ಸಮಾಜಕ್ಕೆ ಲಾಭವಾಗಬೇಕು. ಸಮಾಜದಿಂದ ಅವರಿಗೆ ಲಾಭವಾಗಬೇಕು. ಈ ದೃಷ್ಟಿಯಿಂದ ಮುಂದೆ ಬನ್ನಿ. ನೀವು ಒಂದು ಹೆಜ್ಜೆ ಮುಂದೆ ಬಂದರೆ ನಾವು ಹತ್ತು ಹೆಜ್ಜೆ ಮುಂದೆ ಬರಲು ಸಿದ್ಧರಿದ್ದೇವೆ. ಅಸ್ಥಿರವಾದ ಬದುಕಿನಲ್ಲಿ ಸ್ಥಿರವಾದ ಫಲಗಳಿಗಾಗಿ ಸಾಧಿಸೋಣ. ನಮ್ಮ ಉದ್ದೇಶ ನಮ್ಮ ಕೃತಿಗಳನ್ನು ಸಹೃದಯರಾಗಿ ಸ್ವೀಕರಿಸಿದಲ್ಲಿ ನಮ್ಮ ಶ್ರಮ ಸಾರ್ಥಕ. ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಉದಯರವಿ ಮುದ್ರಣಾಲಯದ ಮಾಲಿಕರಾದ ಶ್ರೀ ಕೃಷ್ಣಮೂರ್ತಿ ಮತ್ತು ಶ್ರೀ ಬ್ರಹ್ಮಣ್ಯತೀರ್ಥರವರಿಗೆ ಕೃತಜ್ಞತೆಗಳು.

ಪ್ರಕಾಶಕರು
ಶ್ರೀ ಹರಿವಾಯು ಪ್ರಕಾಶನ
ಮೈಸೂರು

"ಪರಿಪೂರ್ಣ ಚಂದ್ರಿಕಾ ಗ್ರಂಥ ಸೇವಾಕರ್ತೃಗಳು"

1. ಶ್ರೀಯುತ ಸತ್ಯನಾರಾಯಣರಾವ್ ಶ್ರೀಮತಿ ಇಂದಿರಾ, ನಂಜನಗೂಡು
2. ಶ್ರೀಯುತ ಶ್ರೀನಿವಾಸ ಪ್ರಹಲ್ಲಾದ, ಕಾರ್ಯಕಾರಿ ನಿರ್ದೇಶಕರು, ಮರ್ಕ್ಸ್ ಫಾರ್ಮಸೂಟಿಕಲ್ಸ್, ನ್ಯೂಯಾರ್ಕ್
3. ಡಾ|| ಉಷಾ, ಡಾ|| ಕಮಲಾ, ಚೆನ್ನೈ
4. ಶ್ರೀಯುತ ಹೆಚ್.ಎಸ್. ನಾಗರಾಜ, ಹೆಚ್.ಎಸ್. ಶೇಷಗಿರಿ, ಸಹೋದರರು, ಮೈಸೂರು
5. ಶ್ರೀಯುತ ಎನ್.ಎಸ್. ರಾಮಚಂದ್ರರಾಯರು, ಮೈಸೂರು.
6. ಶ್ರೀಯುತ ಲಕ್ಷ್ಮೀನಾರಾಯಣ ಶ್ರೀಮತಿ ರಾಧಿಕಾ, ಮೈಸೂರು
7. ಶ್ರೀ ಸುಧಾ ಕಾಮಗಾರಿ, ದಿ|| ಸುಬ್ಬರಾವ್ ಸ್ಮರಣಾರ್ಥ, ಹೈದರಾಬಾದ್
8. ಶ್ರೀಮತಿ ಸುಧಾ, ಹೈದರಾಬಾದ್
9. ಶ್ರೀಯುತ ಬಿ.ಎಸ್. ಮುರಳಿ, ಮೈಸೂರು
10. ಶ್ರೀಯುತ ಆರ್ ಮುರಳಿ ಶ್ರೀಮತಿ ಸುಮತಿ, ಚೆನ್ನೈ
11. ಶ್ರೀಯುತ ಗಣೇಶ್ ಗುರುರಾಜನ್, ಚೆನ್ನೈ
12. ಶ್ರೀಯುತ ಸಿ.ಎಚ್. ಶ್ರೀನಿವಾಸಮೂರ್ತಿ, ಮೈಸೂರು
13. ಶ್ರೀಮತಿ ಶಶಿಕಲಾ ಪ್ರಸಾದ್, ಮೈಸೂರು
14. ಶ್ರೀಯುತ ಶ್ರೀನಿವಾಸನ್ ಶ್ರೀಮತಿ ಗಾಯತ್ರೀ, ಪೂನಾ
15. ಶ್ರೀಯುತ ಪ್ರಹ್ಲಾದ್, ಮೈಸೂರು
16. ಶ್ರೀಯುತ ರಾಘವೇಂದ್ರ, ಬೆಂಗಳೂರು
17. ಶ್ರೀ ಎಂ.ಎನ್. ಗುರುರಾಜ್, ಬೆಂಗಳೂರು
18. ಶ್ರೀಮತಿ ಚಂದ್ರಿಕಾ, ಮುಂಬೈ
19. ಶ್ರೀಯುತ ಬಿ. ಅನಂತಪದ್ಮನಾಭ ಶ್ರೀಮತಿ ಜಾನಕಿ. ಮುಂಬೈ
20. ಶ್ರೀ ಡಿ.ಎಸ್. ಕೃಷ್ಣಮೂರ್ತಿ, ಚೆನ್ನೈ
21. ದಿ|| ಆರ್. ಕೃಷ್ಣರಾವ್ ಸ್ಮರಣಾರ್ಥ, ಶ್ರೀ ಶಾಲ್ಮಲೀ, ಬೆಂಗಳೂರು
22. ಶ್ರೀಮತಿ ಉಷಾ ಸಂತಾನ ಕೃಷ್ಣನ್ (ಕೊಯಮುತ್ತೂರು)

ಇವರೆಲ್ಲರಿಗೂ ಶ್ರೀಹರಿ-ವಾಯುಗುರುಗಳ ಅನುಗ್ರಹವನ್ನು ಬಯಸಿ ಸಮಗ್ರ ಭಾಗವತವನ್ನು ಋತ್ವಿಜರಿಂದ ಪಾರಾಯಣ ಮಾಡಿಸಿ ಸುಕೃತವನ್ನು ಧಾರೆ ಎರೆಯಲಾಗಿದೆ.

# * ಪರಿಪೂರ್ಣಚಂದ್ರಿಕಾ *

ಒಳಗೇನಿದೆ?

| | |
|---|---|
| ೧. ಬ್ರಹ್ಮಸೂತ್ರ - | ಸರ್ವತಂತ್ರಸ್ವತಂತ್ರ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ಚತುರ್ದಶಲೋಕಗುರು ಸರ್ವಜ್ಞಶಿಖಾಮಣಿ **ಶ್ರೀವೇದವ್ಯಾಸದೇವರು** |
| ೨. ಬ್ರಹ್ಮಸೂತ್ರಭಾಷ್ಯ - | ಜಗದ್ಗುರು ಶ್ರೀಮದಾನಂದತೀರ್ಥ - **ಭಗವತ್ಪಾದರು** |
| ೩. ನ್ಯಾಯವಿವರಣ - | ಜಗದ್ಗುರು ಶ್ರೀಮದಾನಂದತೀರ್ಥ - **ಭಗವತ್ಪಾದರು** |
| ೪. ಅಣುಭಾಷ್ಯ - | ಜಗದ್ಗುರು ಶ್ರೀಮದಾನಂದತೀರ್ಥ - **ಭಗವತ್ಪಾದರು** |
| ೫. ಸತ್ತರ್ಕದೀಪಾವಲೀ - | ಪ್ರಾಚೀನಟೀಕಾಕಾರರಾದ **ಶ್ರೀಪದ್ಮನಾಭತೀರ್ಥರು** |
| ೬. ತತ್ವಪ್ರಕಾಶಿಕಾ - | ಸರ್ವಜ್ಞಕಲ್ಪ ಟೀಕಾಕೃತ್ಪಾದರೆಂದು ಪ್ರಸಿದ್ಧರಾದ **ಶ್ರೀಜಯತೀರ್ಥರು** |
| ೭. ನ್ಯಾಯವಿವರಣಟೀಕಾ - | ಸರ್ವಜ್ಞಕಲ್ಪ ಟೀಕಾಕೃತ್ಪಾದರೆಂದು ಪ್ರಸಿದ್ಧರಾದ **ಶ್ರೀಜಯತೀರ್ಥರು** |
| ೮. ತಾತ್ಪರ್ಯಚಂದ್ರಿಕಾ - | ಚಂದ್ರಿಕಾಚಾರ್ಯರಾದ ಶ್ರೀವ್ಯಾಸತೀರ್ಥರು |

೯. ಪ್ರಕಾಶ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೦. ತತ್ವಪ್ರಕಾಶಿಕಾಭಾವದೀಪ ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೧. ತತ್ವಮಂಜರೀ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೨. ನ್ಯಾಯಮುಕ್ತಾವಲೀ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೩. ತಂತ್ರದೀಪಿಕಾ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೪. ಭಾಟ್ಟಸಂಗ್ರಹ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೫. ಸೂತ್ರದೀಪಿಕಾ - ಭಾಷ್ಯದೀಪಿಕಾಚಾರ್ಯರಾದ
ಶ್ರೀಜಗನ್ನಾಥಯತಿಗಳು

೧೬. ಭಾಷ್ಯದೀಪಿಕಾ - ಭಾಷ್ಯದೀಪಿಕಾಚಾರ್ಯರಾದ
ಶ್ರೀಜಗನ್ನಾಥಯತಿಗಳು

೧೭. ಗುರುರಾಜೀಯ(ಚಂದ್ರಿಕಾ) - ಪಾಂಡುರಂಗೀ ಕೇಶವಾಚಾರ್ಯರು

೧೮. ವಾಕ್ಯಾರ್ಥಮಂಜರೀ(ತತ್ವಪ್ರಕಾಶಿಕಾ) -
ಶರ್ಕರಾ ಶ್ರೀನಿವಾಸಾಚಾರ್ಯರು

* * * *

# ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನ ಕ್ರಮ

ಮೂರು ಹಂತಗಳಲ್ಲಿ ಇದನ್ನು ಅಧ್ಯಯನ ಮಾಡಬಹುದು.

## *ಪ್ರಥಮಪ್ರವೇಶ*
## *ಸೂತ್ರ, ಭಾಷ್ಯ, ಟೀಕೆಗಳ ಅಧ್ಯಯನ*

ಅ) ಬ್ರಹ್ಮಸೂತ್ರಭಾಷ್ಯ, ತತ್ತ್ವಪ್ರಕಾಶಿಕಾ, ವಾಕ್ಯಾರ್ಥಮಂಜರೀ (ಭಾಗ -೧)

ಆ) ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ, ಸತ್ತರ್ಕದೀಪಾವಲೀ (ಭಾಗ -೧)

ಇ) ಬ್ರಹ್ಮಸೂತ್ರ, ಸೂತ್ರದೀಪಿಕಾ(ಭಾಗ-೧), ತಂತ್ರದೀಪಿಕಾ (ಭಾಗ-೩)

ಈ) ಅಣುಭಾಷ್ಯ, ತತ್ತ್ವಮಂಜರೀ(ಭಾಗ-೩)

## *ದ್ವಿತೀಯಪ್ರವೇಶ*
## *ನ್ಯಾಯವಿವರಣದ ಅಧ್ಯಯನ*

ಅ) ನ್ಯಾಯವಿವರಣ, ನ್ಯಾಯವಿವರಣಟೀಕಾ (ಭಾಗ-೩)

## *ತೃತೀಯಪ್ರವೇಶ*
## *ಚಂದ್ರಿಕಾಧ್ಯಯನ*

ಅ) ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ (ಭಾಗ -೨)

ಆ) ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತಿ, ವಿವರಣ, ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು (ಭಾಗ-೨)

ಇ) ನ್ಯಾಯಮುಕ್ತಾವಲೀ (ಚಂದ್ರಿಕಾಗ್ರಂಥದಲ್ಲಿರುವ ಅಧಿಕರಣದ ಸಾರ) (ಭಾಗ-೩)

ಈ) ಭಾವದೀಪ (ಚಂದ್ರಿಕಾಗ್ರಂಥದಲ್ಲಿರುವ ತತ್ತ್ವಪ್ರಕಾಶಿಕಾವಾಕ್ಯಗಳ ಸಂಯೋಜನೆ) (ಭಾಗ-೧)

# ಭಾಗಾನುಕ್ರಮಣಿಕಾ

# ಅನುವಾದಕರ ಬಿನ್ನಹ

ಅದ್ಭುತ! ಆಶ್ಚರ್ಯ! ಬಯಸಿದ್ದೆಲ್ಲಾ ದೊರೆಯುತ್ತಿದೆ. ನಿಜವಾದ ತೃಪ್ತಿ. ನೆಮ್ಮದಿ ಸಂತೋಷ. ಎಲ್ಲವೂ ಇಲ್ಲಿಯೇ ಇದೆ. ಆಹಾ! ಇಂತಹ ಆನಂದವನ್ನು ಅನುಭವಿಸದೆ ಇಷ್ಟು ದಿವಸ ಕಳೆದೆನಲ್ಲಾ. ನನ್ನ ಪ್ರಾಮಾಣಿಕಪ್ರಯತ್ನಕ್ಕೆ ಆ ದೈವ ಇಂದು ವರ ನೀಡಿದೆ. ದಾರಿ ದೊರೆತಿದೆ; ಗುರಿ ಖಚಿತವಾಗಿದೆ. ಹಿಂದಿರುಗಿ ಪುನಃ ನೋಡಲಾರೆ. ನನಗೆ ಇಂದು ದೊರೆತದಾರಿ ಪರಿಪೂರ್ಣ. ಶಾಶ್ವತಸುಖದ ಅರಮನೆಯ ದಾರಿ ಇದು.

"ತಾತ್ಪರ್ಯಚಂದ್ರಿಕಾ" ಗ್ರಂಥವನ್ನು ಕೈಯ್ಯಲ್ಲಿ ಹಿಡಿದು ನಾಲ್ಕಕ್ಷರ ಓದಿದ ಪ್ರತಿಯೊಬ್ಬ ಸಾಧಕನ ಅನುಭವವಿದು. ಅನುಭಾವಿಯ ಉದ್ಗಾರವೂ ಇದೆ.

ಇದೋ ಇಲ್ಲಿ ಬನ್ನಿ. ಗ್ರಂಥದ ಹೆಸರನ್ನು ಕೇಳಿದಾಕ್ಷಣ ಹೆದರಬೇಡಿ. ನಿತ್ಯನೂತನ ತಾರುಣ್ಯವನ್ನು ನೀಡಿ, ಸದಾ ಸುಖಸಂತೋಷಗಳ ಜೊತೆ ವಿಹರಿಸುವ ಶಾಶ್ವತಸುಖ ನೀಡುವ, ತೇಜಃಪುಂಜದ ಬೆಳ್ಳಂಬೆಳಗಿನ ಹುಡುಗಿಯಂತಹ ಗ್ರಂಥವಿದು. ಸದಾಕಾಲ ನಮ್ಮ ಜೊತೆ ಜೊತೆ-ಗಿದ್ದು ಸಲಹುವ, ಜನ್ಮಜನ್ಮಾಂತರದಲ್ಲಿಯೂ ಗೆಳೆಯನಾಗಿದ್ದು ಪ್ರೀತಿಸುವ ಆ ಜಗದೊಡೆಯನನ್ನು ಪರಿಚಯಿಸುವ ಏಕೈಕ ಪರಿಪೂರ್ಣಕೃತಿ ಇದು.

ಈ ಕೃತಿಯನ್ನು ರಚಿಸಿದ ಮಹಾಮಹಿಮರು ಶ್ರೀವ್ಯಾಸತೀರ್ಥರು. ಈ ಗ್ರಂಥದಿಂದಲೇ ತಮ್ಮ ಜೀವನದ ಅವಭೃಥವನ್ನು ಪರಿಪೂರ್ಣಗೊಳಿಸಿದ ಅನುಭಾವಿಗಳವರು. ಆದ್ದರಿಂದಲೇ ಚಂದ್ರಿಕಾಚಾರ್ಯರೆಂದು ಪ್ರಖ್ಯಾತರಿವರು.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸೂತ್ರಗಳು ಕೇವಲ ೫೬೪. ಅದರ ಮೇಲೆ ಹರಿದು ಬಂದ ಗ್ರಂಥಪರಂಪರೆ ನೂರಾರು, ಸಾವಿರಾರು. ಪ್ರತಿಯೊಂದೂ ಅಗಾಧ. ಶ್ರೀಮದಾಚಾರ್ಯರು ಸೂತ್ರಗಳ ಮೇಲೆ ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. ಆ ನಾಲ್ಕು ಗ್ರಂಥಗಳಿಗೆ ಶ್ರೀಪದ್ಮನಾಭ-ತೀರ್ಥರು, ಶ್ರೀಜಯತೀರ್ಥರೇ ಮೊದಲಾದ ದಿವ್ಯಜ್ಞಾನಿಗಳು ಟೀಕೆಗಳನ್ನು, ಶ್ರೀರಾಘವೇಂದ್ರ-ತೀರ್ಥರೇ ಮೊದಲಾದವರು ಟಿಪ್ಪಣಿಗಳನ್ನು ಬರೆದಿದ್ದಾರೆ. ಇವುಗಳನ್ನೆಲ್ಲಾ ಸೇರಿಸಿದರೆ ನೂರಕ್ಕಿಂತಲೂ ಹೆಚ್ಚು ಗ್ರಂಥಗಳಾಗುತ್ತವೆ. ಇವುಗಳ ಮಧ್ಯದಲ್ಲಿ ಪ್ರಮುಖವಾದ ಗ್ರಂಥಗಳು ಸುಮಾರು ಇಪ್ಪತ್ತು ಇರಬಹುದು. ಇವುಗಳನ್ನೆಲ್ಲಾ ಓದುವುದು ನಮ್ಮಿಂದ ಸಾಧ್ಯವಿಲ್ಲ. ಓದಿ ಜೀರ್ಣಿಸಿಕೊಳ್ಳುವುದಂತೂ ಸುತರಾಂ ಅಸಾಧ್ಯ.

ಈ ಸಮಸ್ಯೆಯ ಜೊತೆ ಬೇರೆಯವರ ಭಾಷ್ಯಗ್ರಂಥಗಳೂ ಹಲವಿವೆ. ಪ್ರಧಾನವಾಗಿ ಶಂಕರಭಾಷ್ಯ, ರಾಮಾನುಜಭಾಷ್ಯ, ಯಾದವಪ್ರಕಾಶ, ಶೈವಭಾಷ್ಯಗಳನ್ನಾದರೂ ಓದಲೇ ಬೇಕು. ಆದರೆ ಅವುಗಳಿಗೆ ಸಂಬಂಧಿಸಿದ ಟೀಕಾ ಟಿಪ್ಪಣಿಗಳು ಹತ್ತಾರು, ನೂರಾರು. ಇವುಗಳನ್ನೆಲ್ಲಾ ಓದುವುದು ಮತ್ತೊಂದು ಸಮಸ್ಯೆ. ಓದಿದರೆ ಸಾಕೇ? ಅವುಗಳ ಹಾರ್ದವೇನು? ಗ್ರಂಥಕಾರರ ಗುರಿಯೇನು? ಇವುಗಳನ್ನೆಲ್ಲಾ ಅನುಭವಿಸುವುದು ಹೇಗೆ? ನಮ್ಮಿಂದ ಸಾಧ್ಯವಿಲ್ಲ. ಜೊತೆಗೆ ಕೆಲವೊಮ್ಮೆ ಜಟಿಲವಾದ ತಾರ್ಕಿಕಭಾಷೆಯಲ್ಲಿ ಹೆಣೆದುಕೊಂಡ ವಾಕ್ಯವಿನ್ಯಾಸ; ಮತ್ತೊಂದೆಡೆ ವ್ಯಾಕರಣವಿಚಾರ; ಹೆಜ್ಜೆ ಹೆಜ್ಜೆಗೂ ಮೀಮಾಂಸಕರ ವಿಮರ್ಶೆ; ಅರ್ಥವಾದಷ್ಟೂ ಆಳವೇ ಆಗಿರುವ ವೇದಾಂತವಿಚಾರ. ಹಾಗಾದರೆ ಬ್ರಹ್ಮಮೀಮಾಂಸಾಶಾಸ್ತ್ರದ ಒಂದು ಸೂತ್ರವನ್ನಾದರೂ ನಮ್ಮ ಜೀವನದಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವೇ? ಇಲ್ಲ ಖಂಡಿತಾ ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಎಲ್ಲವೂ ಗೊಂದಲ.

ಅದಕ್ಕಾಗಿಯೇ ದೇವತಾಪುರುಷರಾದ ಶ್ರೀವ್ಯಾಸತೀರ್ಥರು ತಾತ್ಪರ್ಯಚಂದ್ರಿಕಾ ಗ್ರಂಥವನ್ನು ರಚಿಸಿದ್ದಾರೆ. ಮೇಲೆ ಹೇಳಿದ ಎಲ್ಲ ಸಮಸ್ಯೆಗಳ ಪರಿಹಾರವೇ ಈ ಗ್ರಂಥ. ಸುಮಾರು ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ವ್ಯಾಖ್ಯಾನಿಸಿದ ಕೃತಿ ಇದು. ಶ್ರೀಮದಾಚಾರ್ಯರ ನಾಲ್ಕೂ ಭಾಷ್ಯಗಳನ್ನು, ಅದಕ್ಕೆ ಸಂಬಂಧಪಟ್ಟ ಟೀಕೆಗಳನ್ನು ವ್ಯಾಖ್ಯಾನಿಸಿ, ಎಲ್ಲ ವಿಚಾರವನ್ನೂ ಒಂದೆಡೆ ಹೆಣೆದು ಪೋಣಿಸಿದ ಅದ್ಭುತ ಕೃತಿ ಇದು. ಇದರ ಜೊತೆಗೆ ಶಂಕರಭಾಷ್ಯ, ರಾಮಾನುಜಭಾಷ್ಯ, ಯಾದವಪ್ರಕಾಶೀಯ, ಭಾಮತೀ, ಪಂಚಪಾದಿಕಾ, ವಿವರಣ, ಕಲ್ಪತರು, ಶ್ರುತಪ್ರಕಾಶ ಹೀಗೆ ಹತ್ತು ಹಲವು ಪರವಾದಿಗಳ ವಿಚಾರಗಳೆಲ್ಲವನ್ನೂ ತುಲನಾತ್ಮಕವಾಗಿ ಈ ಕೃತಿಯಲ್ಲಿ ವಿಮರ್ಶಿಸಿದ್ದಾರೆ. ಆದರೂ ಈ ಗ್ರಂಥದಲ್ಲಿ ವ್ಯಾಖ್ಯಾನ-ವ್ಯಾಖ್ಯೇಯಭಾವಗಳ ಗೊಂದಲವಿಲ್ಲ. ಪ್ರಬಂಧರೂಪದಲ್ಲಿ ಸುಲಲಿತವಾಗಿ ಅರ್ಥವಾಗುವಂತೆ ಎಲ್ಲ ವಿಚಾರಗಳನ್ನೂ ತಿಳಿಸಿ ಹೇಳಿದ್ದಾರೆ.

ತಾತ್ಪರ್ಯಚಂದ್ರಿಕಾಗ್ರಂಥವು ಅಪರಿಪೂರ್ಣವೆಂಬ ವಾಡಿಕೆಯಿದೆ. ಇದು ಶುದ್ಧಸುಳ್ಳು. ಇಷ್ಟೆಲ್ಲಾ ಗ್ರಂಥಗಳನ್ನು ಪರಿಪೂರ್ಣವಾಗಿ ಸಂಗ್ರಹಿಸಿದ ಏಕೈಕ ಪರಿಪೂರ್ಣಗ್ರಂಥವಿದು. ಭಗವತ್ಸ್ವರೂಪವನ್ನು ಪರಿಪೂರ್ಣವಾಗಿ ಪರಿಚಯಿಸಿದ್ದರಿಂದಲೂ ಈ ಗ್ರಂಥ ಪರಿಪೂರ್ಣ. ಅಂದರೆ ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲೆರಡು ಅಧ್ಯಾಯಗಳು ಭಗವಂತನ ಸ್ವರೂಪವನ್ನು ತಿಳಿಸುತ್ತಿವೆ. ಉಳಿದೆರಡು ಅಧ್ಯಾಯಗಳು ಭಗವಂತನ ಸ್ವರೂಪವನ್ನು ತಿಳಿಸುತ್ತಿಲ್ಲ. ಆದ್ದರಿಂದ ಎರಡು ಅಧ್ಯಾಯಗಳ ಸಂಪೂರ್ಣ ವಿಚಾರಗಳನ್ನು ಸಾಧಿಸಿ ತಿಳಿಸಿದ್ದರಿಂದ ತಾತ್ಪರ್ಯಚಂದ್ರಿಕೆಯು ಪರಿಪೂರ್ಣವೆನಿಸಿದೆ.

ಚಂದ್ರನ ಚಂದ್ರಿಕೆಯ ಬೆಳಕು ಪರಿಪೂರ್ಣವಾಗದಿರಬಹುದು. ಆದರೆ ತತ್ತ್ವಜ್ಞಾನದ ಈ ಚಂದ್ರಿಕೆಯ ಬೆಳಕು ಪರಿಪೂರ್ಣವಾಗಿದೆ. ಸ್ವಲ್ಪವೂ ಕತ್ತಲಿಲ್ಲ. ಗೊಂದಲ, ಅತೃಪ್ತಿ, ದುಃಖಗಳ

ಅವಗಢವಿಲ್ಲ. ಮೋಕ್ಷದ ಮಾರ್ಗಕ್ಕೆ ಪರಿಪೂರ್ಣವಾದ ದಾರಿದೀಪವಿದು. ಅಡ್ಡಮಾರ್ಗಗಳಿಲ್ಲ. ಮುಂದೆ ಧಾವಿಸಿದಷ್ಟೂ ಸುಖಸಂತೋಷಗಳ ಪರಾಕಾಷ್ಠೆ. ಹಿಂದೆ ಹೋಗಬೇಕೆಂಬ ಇಚ್ಛೆಗೆ ಅವಕಾಶವಿಲ್ಲ. ಅಕ್ಕರೆಯಿಂದ ಕೈಹಿಡಿದು ಕರೆದೊಯ್ಯುವ ಪರಿಪೂರ್ಣ ಸ್ನೇಹದ ಗ್ರಂಥವಿದು. ಹೀಗೆ ಎಲ್ಲ ಬಗೆಯಲ್ಲಿಯೂ ಪರಿಪೂರ್ಣವಾದ ತಾತ್ಪರ್ಯಚಂದ್ರಿಕೆಯನ್ನು ಅಪರಿಪೂರ್ಣ ಎನ್ನಲು ಹೇಗೆ ಸಾಧ್ಯ?

ಶ್ರೀವ್ಯಾಸತೀರ್ಥರು ತಮ್ಮ ಜೀವನದಲ್ಲಿ ಸಾವಿರಾರು ಸತ್ಕಾರ್ಯಗಳನ್ನು ಮಾಡಿದರು. ನೂರಾರು ಕೃತಿಗಳನ್ನು ಹತ್ತಾರು ಶಾಸ್ತ್ರಗ್ರಂಥಗಳನ್ನು ರಚಿಸಿದರು. ಪ್ರಧಾನವಾಗಿ ವ್ಯಾಸತ್ರಯ-ಗಳೆಂದೇ ಪ್ರಸಿದ್ಧವಾದ ನ್ಯಾಯಾಮೃತ, ತರ್ಕತಾಂಡವ, ತಾತ್ಪರ್ಯಚಂದ್ರಿಕಾ ಗ್ರಂಥಗಳನ್ನು ರಚಿಸಿ, ಮಧ್ವಸಿದ್ಧಾಂತದ ಭದ್ರಕೋಟೆಯನ್ನು ನಿರ್ಮಿಸಿದರು. ಆದರೂ ಅವರು ಪ್ರಸಿದ್ಧರಾದದ್ದು ಚಂದ್ರಿಕಾಚಾರ್ಯರೆಂದೇ. ಅವರ ಜೀವನದ ಅವಭೃಥವಾದದ್ದು ಚಂದ್ರಿಕಾಗ್ರಂಥದಿಂದಲೇ. ಒಟ್ಟಾರೆ ಹೇಳಬೇಕೆಂದರೆ, ಶ್ರೀವ್ಯಾಸತೀರ್ಥರ ನೂರಾರು ಸಾಧನೆಗಳಲ್ಲಿ ತಮ್ಮ ಜೀವನದ ಪ್ರತಿಯೊಂದು ಕ್ಷಣಗಳಲ್ಲಿ ಉಸಿರಿನಲ್ಲಿ ತಾತ್ಪರ್ಯಚಂದ್ರಿಕಾಗ್ರಂಥವೇ ಅವರ ಜೀವನವನ್ನು ಧನ್ಯವನ್ನಾಗಿಸಿತು. ಕೃತಕೃತ್ಯ ಮಾಡಿತು. ಜೀವನವನ್ನು ಪರಿಪೂರ್ಣ ಮಾಡಿತು. ಹೀಗೆ ಗ್ರಂಥಕಾರರ ಜೀವನವನ್ನೇ ಪರಿಪೂರ್ಣ ಮಾಡಿಸಿದ ಕೃತಿ ತಾತ್ಪರ್ಯಚಂದ್ರಿಕಾ.

ಕಣ್ಣಾರೆ ಕಂಡ ಒಂದು ಅನುಭವ. ಪರಮಗುರು ಶ್ರೀವಿದ್ಯಾಮಾನ್ಯತೀರ್ಥರ ಸಾಧನೆ ಎಲ್ಲರಿಗೂ ತಿಳಿದಿದೆ. ಅವರೂ ಸಹ ತಮ್ಮ ಜೀವನದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಹತ್ತಾರು ಯತಿಪುಂಗವರಿಗೆ ಶಾಸ್ತ್ರಗ್ರಂಥಗಳನ್ನು ಪಾಠ ಮಾಡಿ, ವಿದ್ವಾಂಸರನ್ನಾಗಿ ಸಿದ್ಧಗೊಳಿಸಿದ್ದಾರೆ. ಒಂದು ಮುಖದಲ್ಲಿ ಇಂದಿನ ಮಾಧ್ವತತ್ವಜ್ಞಾನಪ್ರಸಾರಕ್ಕೆ ಮೂಲಕಾರಣರಾಗಿದ್ದಾರೆ. ಆದರೂ ಅವರ ಜೀವನ ಪರಿಪೂರ್ಣವಾದದ್ದೇ ತಾತ್ಪರ್ಯಚಂದ್ರಿಕಾಗ್ರಂಥದಿಂದ. ೮೦ವರ್ಷದ ವೃದ್ಧಾಪ್ಯಜೀವನ; ಪೀಠಾಧಿಪತ್ಯದ ಹಲವಾರು ಕರ್ತವ್ಯಗಳು; ಎಲ್ಲವನ್ನೂ ನಿಭಾಯಿಸುವ ಶಕ್ತಿ ದೇಹದಲ್ಲಿ ಕುಂದಿದೆ; ಗಂಟೆ ಗಂಟೆಗೂ ಪಾಠ ಕೇಳಲು ಬಾಗಿಲು ತಟ್ಟುವ ವಿದ್ಯಾರ್ಥಿಗಳು; ಆದರೂ ಇವರು ಮಾಡುತ್ತಿದ್ದುದು ಅನೇಕ ಗಂಟೆಗಳ ಕಾಲ ತಾತ್ಪರ್ಯಚಂದ್ರಿಕಾಗ್ರಂಥದ ಅಧ್ಯಯನ. ಸಮಯ ಸಿಕ್ಕರೆ ಸಾಕು, ಬಾಗಿಲು ಜಡಿದು ಉಳಿದೆಲ್ಲ ವಿಚಾರಗಳನ್ನು ತಲೆಯಿಂದ ಹೊರ ಹಾಕಿ, ತಾತ್ಪರ್ಯಚಂದ್ರಿಕಾಗ್ರಂಥದ ಪಂಕ್ತಿ ಪಂಕ್ತಿಗಳನ್ನು ಕಂಠಪಾಠ ಮಾಡುತ್ತಿದ್ದರು. ಅದೇಕೋ ಗೊತ್ತಿಲ್ಲ? ಜೀವನದಲ್ಲಿ ಹತ್ತಾರು ಬಾರಿ ಇದೇ ಗ್ರಂಥವನ್ನು ಪಾಠ ಮಾಡಿದ್ದಾರೆ. ಪರವಾದಿಗಳ ಜೊತೆ ವಾಕ್ಯಾರ್ಥಮಾಡಿ ಗೆದ್ದಿದ್ದಾರೆ. ಎಲ್ಲಾ ವಿಚಾರವೂ ಮನದಟ್ಟಾಗಿದೆ. ಆದರೂ ಸಹ ಜೋತುಬಿದ್ದ ಶರೀರದಿಂದ, ಕಾಣದ ಕಣ್ಣುಗಳಿಂದ, ಭಯಂಕರ ರೋಗಗಳ ಉಪದ್ರವ-ವಿದ್ದರೂ ಚಂದ್ರಿಕಾಗ್ರಂಥದ ವಾಕ್ಯವಾಕ್ಯಗಳನ್ನು ಚಿಕ್ಕಮಕ್ಕಳಂತೆ ಕಂಠಪಾಠ ಮಾಡುತ್ತಿದ್ದರು. ದಿವ್ಯಸಾಧಕರ ವರ್ತನೆಗಳು ಯಾರಿಗೆ ತಾನೆ ಅರ್ಥವಾಗಲು ಸಾಧ್ಯ? ಯಾವ ವಿದ್ವಾಂಸರೇ ಬರಲಿ,

ಈ ಸಮಸ್ಯೆಯ ಜೊತೆ ಬೇರೆಯವರ ಭಾಷ್ಯಗ್ರಂಥಗಳೂ ಹಲವಿವೆ. ಪ್ರಧಾನವಾಗಿ ಶಂಕರಭಾಷ್ಯ, ರಾಮಾನುಜಭಾಷ್ಯ, ಯಾದವಪ್ರಕಾಶ, ಶೈವಭಾಷ್ಯಗಳನ್ನಾದರೂ ಓದಲೇ ಬೇಕು. ಆದರೆ ಅವುಗಳಿಗೆ ಸಂಬಂಧಿಸಿದ ಟೀಕಾ ಟಿಪ್ಪಣಿಗಳು ಹತ್ತಾರು, ನೂರಾರು. ಇವುಗಳನ್ನೆಲ್ಲಾ ಓದುವುದು ಮತ್ತೊಂದು ಸಮಸ್ಯೆ. ಓದಿದರೆ ಸಾಕೇ? ಅವುಗಳ ಹಾರ್ದವೇನು? ಗ್ರಂಥಕಾರರ ಗುರಿಯೇನು? ಇವುಗಳನ್ನೆಲ್ಲಾ ಅನುಭವಿಸುವುದು ಹೇಗೆ? ನಮ್ಮಿಂದ ಸಾಧ್ಯವಿಲ್ಲ. ಜೊತೆಗೆ ಕೆಲವೊಮ್ಮೆ ಜಟಿಲವಾದ ತಾರ್ಕಿಕಭಾಷೆಯಲ್ಲಿ ಹೆಣೆದುಕೊಂಡ ವಾಕ್ಯವಿನ್ಯಾಸ; ಮತ್ತೊಂದೆಡೆ ವ್ಯಾಕರಣವಿಚಾರ; ಹೆಚ್ಚು ಹೆಚ್ಚುಗೂ ಮೀಮಾಂಸಕರ ವಿಮರ್ಶೆ; ಅರ್ಥವಾದಷ್ಟೂ ಆಳವೇ ಆಗಿರುವ ವೇದಾಂತವಿಚಾರ. ಹಾಗಾದರೆ ಬ್ರಹ್ಮಮೀಮಾಂಸಾಶಾಸ್ತ್ರದ ಒಂದು ಸೂತ್ರವನ್ನಾದರೂ ನಮ್ಮ ಜೀವನದಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವೇ? ಇಲ್ಲ ಖಂಡಿತಾ ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಎಲ್ಲವೂ ಗೊಂದಲ.

ಆದಕ್ಕಾಗಿಯೇ ದೇವತಾಪುರುಷರಾದ ಶ್ರೀವ್ಯಾಸತೀರ್ಥರು ತಾತ್ಪರ್ಯಚಂದ್ರಿಕಾ ಗ್ರಂಥವನ್ನು ರಚಿಸಿದ್ದಾರೆ. ಮೇಲೆ ಹೇಳಿದ ಎಲ್ಲ ಸಮಸ್ಯೆಗಳ ಪರಿಹಾರವೇ ಈ ಗ್ರಂಥ. ಸುಮಾರು ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ವ್ಯಾಖ್ಯಾನಿಸಿದ ಕೃತಿ ಇದು. ಶ್ರೀಮದಾಚಾರ್ಯರ ನಾಲ್ಕೂ ಭಾಷ್ಯಗಳನ್ನು, ಅದಕ್ಕೆ ಸಂಬಂಧಪಟ್ಟ ಟೀಕೆಗಳನ್ನು ವ್ಯಾಖ್ಯಾನಿಸಿ, ಎಲ್ಲ ವಿಚಾರವನ್ನೂ ಒಂದೆಡೆ ಹೆಣೆದು ಪೋಣಿಸಿದ ಅದ್ಭುತ ಕೃತಿ ಇದು. ಇದರ ಜೊತೆಗೆ ಶಂಕರಭಾಷ್ಯ, ರಾಮಾನುಜಭಾಷ್ಯ, ಯಾದವಪ್ರಕಾಶೀಯ, ಭಾಮತೀ, ಪಂಚಪಾದಿಕಾ, ವಿವರಣ, ಕಲ್ಪತರು, ಶ್ರುತಪ್ರಕಾಶ ಹೀಗೆ ಹತ್ತು ಹಲವು ಪರವಾದಿಗಳ ವಿಚಾರಗಳೆಲ್ಲವನ್ನೂ ತುಲನಾತ್ಮಕವಾಗಿ ಈ ಕೃತಿಯಲ್ಲಿ ವಿಮರ್ಶಿಸಿದ್ದಾರೆ. ಆದರೂ ಈ ಗ್ರಂಥದಲ್ಲಿ ವ್ಯಾಖ್ಯಾನ-ವ್ಯಾಖ್ಯೇಯಭಾವಗಳ ಗೊಂದಲವಿಲ್ಲ. ಪ್ರಬಂಧರೂಪದಲ್ಲಿ ಸುಲಲಿತವಾಗಿ ಅರ್ಥವಾಗುವಂತೆ ಎಲ್ಲ ವಿಚಾರಗಳನ್ನೂ ತಿಳಿಸಿ ಹೇಳಿದ್ದಾರೆ.

ತಾತ್ಪರ್ಯಚಂದ್ರಿಕಾಗ್ರಂಥವು ಅಪರಿಪೂರ್ಣವೆಂಬ ವಾಡಿಕೆಯಿದೆ. ಇದು ಶುದ್ಧಸುಳ್ಳು ಇಷ್ಟೆಲ್ಲಾ ಗ್ರಂಥಗಳನ್ನು ಪರಿಪೂರ್ಣವಾಗಿ ಸಂಗ್ರಹಿಸಿದ ಏಕೈಕ ಪರಿಪೂರ್ಣಗ್ರಂಥವಿದು. ಭಗವತ್ಸ್ವರೂಪವನ್ನು ಪರಿಪೂರ್ಣವಾಗಿ ಪರಿಚಯಿಸಿದ್ದರಿಂದಲೂ ಈ ಗ್ರಂಥ ಪರಿಪೂರ್ಣ. ಅಂದರೆ ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲೆರಡು ಅಧ್ಯಾಯಗಳು ಭಗವಂತನ ಸ್ವರೂಪವನ್ನು ತಿಳಿಸುತ್ತಿವೆ. ಉಳಿದೆರಡು ಅಧ್ಯಾಯಗಳು ಭಗವಂತನ ಸ್ವರೂಪವನ್ನು ತಿಳಿಸುತ್ತಿಲ್ಲ. ಆದ್ದರಿಂದ ಎರಡು ಅಧ್ಯಾಯಗಳ ಸಂಪೂರ್ಣ ವಿಚಾರಗಳನ್ನು ಸಾಧಿಸಿ ತಿಳಿಸಿದ್ದರಿಂದ ತಾತ್ಪರ್ಯಚಂದ್ರಿಕೆಯು ಪರಿಪೂರ್ಣವೆನಿಸಿದೆ.

ಚಂದ್ರನ ಚಂದ್ರಿಕೆಯ ಬೆಳಕು ಪರಿಪೂರ್ಣವಾಗದಿರಬಹುದು. ಆದರೆ ತತ್ತ್ವಜ್ಞಾನದ ಈ ಚಂದ್ರಿಕೆಯ ಬೆಳಕು ಪರಿಪೂರ್ಣವಾಗಿದೆ. ಸ್ವಲ್ಪವೂ ಕತ್ತಲಿಲ್ಲ. ಗೊಂದಲ, ಅತೃಪ್ತಿ, ದುಃಖಗಳ

ಅವಗಢವಿಲ್ಲ. ಮೋಕ್ಷದ ಮಾರ್ಗಕ್ಕೆ ಪರಿಪೂರ್ಣವಾದ ದಾರಿದೀಪವಿದು. ಅಡ್ಡಮಾರ್ಗಗಳಿಲ್ಲ. ಮುಂದೆ ಧಾವಿಸಿದಷ್ಟೂ ಸುಖಸಂತೋಷಗಳ ಪರಾಕಾಷ್ಠೆ. ಹಿಂದೆ ಹೋಗಬೇಕೆಂಬ ಇಚ್ಛೆಗೆ ಅವಕಾಶವಿಲ್ಲ. ಅಕ್ಕರೆಯಿಂದ ಕೈಹಿಡಿದು ಕರೆದೊಯ್ಯುವ ಪರಿಪೂರ್ಣ ಸ್ನೇಹದ ಗ್ರಂಥವಿದು. ಹೀಗೆ ಎಲ್ಲ ಬಗೆಯಲ್ಲಿಯೂ ಪರಿಪೂರ್ಣವಾದ ತಾತ್ಪರ್ಯಚಂದ್ರಿಕೆಯನ್ನು ಅಪರಿಪೂರ್ಣ ಎನ್ನಲು ಹೇಗೆ ಸಾಧ್ಯ?

ಶ್ರೀವ್ಯಾಸತೀರ್ಥರು ತಮ್ಮ ಜೀವನದಲ್ಲಿ ಸಾವಿರಾರು ಸತ್ಕಾರ್ಯಗಳನ್ನು ಮಾಡಿದರು. ನೂರಾರು ಕೃತಿಗಳನ್ನು ಹತ್ತಾರು ಶಾಸ್ತ್ರಗ್ರಂಥಗಳನ್ನು ರಚಿಸಿದರು. ಪ್ರಧಾನವಾಗಿ ವ್ಯಾಸತ್ರಯ-ಗಳೆಂದೇ ಪ್ರಸಿದ್ಧವಾದ ನ್ಯಾಯಾಮೃತ, ತರ್ಕತಾಂಡವ, ತಾತ್ಪರ್ಯಚಂದ್ರಿಕಾ ಗ್ರಂಥಗಳನ್ನು ರಚಿಸಿ, ಮಧ್ವಸಿದ್ಧಾಂತದ ಭದ್ರಕೋಟೆಯನ್ನು ನಿರ್ಮಿಸಿದರು. ಆದರೂ ಅವರು ಪ್ರಸಿದ್ಧರಾದದ್ದು ಚಂದ್ರಿಕಾಚಾರ್ಯರೆಂದೇ. ಅವರ ಜೀವನದ ಅವಭೃಥವಾದದ್ದು ಚಂದ್ರಿಕಾಗ್ರಂಥದಿಂದಲೇ. ಒಟ್ಟಾರೆ ಹೇಳಬೇಕೆಂದರೆ, ಶ್ರೀವ್ಯಾಸತೀರ್ಥರ ನೂರಾರು ಸಾಧನೆಗಳಲ್ಲಿ ತಮ್ಮ ಜೀವನದ ಪ್ರತಿಯೊಂದು ಕ್ಷಣಗಳಲ್ಲಿ ಉಸಿರಿನಲ್ಲಿ ತಾತ್ಪರ್ಯಚಂದ್ರಿಕಾಗ್ರಂಥವೇ ಅವರ ಜೀವನವನ್ನು ಧನ್ಯವನ್ನಾಗಿಸಿತು. ಕೃತಕೃತ್ಯ ಮಾಡಿತು. ಜೀವನವನ್ನು ಪರಿಪೂರ್ಣ ಮಾಡಿತು. ಹೀಗೆ ಗ್ರಂಥಕಾರರ ಜೀವನವನ್ನೇ ಪರಿಪೂರ್ಣ ಮಾಡಿಸಿದ ಕೃತಿ ತಾತ್ಪರ್ಯಚಂದ್ರಿಕಾ.

ಕಣ್ಣಾರೆ ಕಂಡ ಒಂದು ಅನುಭವ. ಪರಮಗುರು ಶ್ರೀವಿದ್ಯಾಮಾನ್ಯತೀರ್ಥರ ಸಾಧನೆ ಎಲ್ಲರಿಗೂ ತಿಳಿದಿದೆ. ಅವರೂ ಸಹ ತಮ್ಮ ಜೀವನದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಹತ್ತಾರು ಯತಿಪುಂಗವರಿಗೆ ಶಾಸ್ತ್ರಗ್ರಂಥಗಳನ್ನು ಪಾಠ ಮಾಡಿ, ವಿದ್ವಾಂಸರನ್ನಾಗಿ ಸಿದ್ಧಗೊಳಿಸಿದ್ದಾರೆ. ಒಂದು ಮುಖದಲ್ಲಿ ಇಂದಿನ ಮಾಧ್ವತತ್ವಜ್ಞಾನಪ್ರಸಾರಕ್ಕೆ ಮೂಲಕಾರಣರಾಗಿದ್ದಾರೆ. ಆದರೂ ಅವರ ಜೀವನ ಪರಿಪೂರ್ಣವಾದದ್ದೇ ತಾತ್ಪರ್ಯಚಂದ್ರಿಕಾಗ್ರಂಥದಿಂದ. ೮೦ವರ್ಷದ ವೃದ್ಧಾಪ್ಯಜೀವನ; ಪೀಠಾಧಿಪತ್ಯದ ಹಲವಾರು ಕರ್ತವ್ಯಗಳು; ಎಲ್ಲವನ್ನೂ ನಿಭಾಯಿಸುವ ಶಕ್ತಿ ದೇಹದಲ್ಲಿ ಕುಂದಿದೆ; ಗಂಟೆ ಗಂಟೆಗೂ ಪಾಠ ಕೇಳಲು ಬಾಗಿಲು ತಟ್ಟುವ ವಿದ್ಯಾರ್ಥಿಗಳು; ಆದರೂ ಇವರು ಮಾಡುತ್ತಿದ್ದುದು ಅನೇಕ ಗಂಟೆಗಳ ಕಾಲ ತಾತ್ಪರ್ಯಚಂದ್ರಿಕಾಗ್ರಂಥದ ಅಧ್ಯಯನ. ಸಮಯ ಸಿಕ್ಕರೆ ಸಾಕು, ಬಾಗಿಲು ಜಡಿದು ಉಳಿದೆಲ್ಲ ವಿಚಾರಗಳನ್ನು ತಲೆಯಿಂದ ಹೊರ ಹಾಕಿ, ತಾತ್ಪರ್ಯಚಂದ್ರಿಕಾಗ್ರಂಥದ ಪಂಕ್ತಿ ಪಂಕ್ತಿಗಳನ್ನು ಕಂಠಪಾಠ ಮಾಡುತ್ತಿದ್ದರು. ಅದೇಕೋ ಗೊತ್ತಿಲ್ಲ? ಜೀವನದಲ್ಲಿ ಹತ್ತಾರು ಬಾರಿ ಇದೇ ಗ್ರಂಥವನ್ನು ಪಾಠ ಮಾಡಿದ್ದಾರೆ. ಪರವಾದಿಗಳ ಜೊತೆ ವಾಕ್ಯಾರ್ಥಮಾಡಿ ಗೆದ್ದಿದ್ದಾರೆ. ಎಲ್ಲಾ ವಿಚಾರವೂ ಮನದಟ್ಟಾಗಿದೆ. ಆದರೂ ಸಹ ಜೋತುಬಿದ್ದ ಶರೀರದಿಂದ, ಕಾಣದ ಕಣ್ಣುಗಳಿಂದ, ಭಯಂಕರ ರೋಗಗಳ ಉಪದ್ರವ-ವಿದ್ದರೂ ಚಂದ್ರಿಕಾಗ್ರಂಥದ ವಾಕ್ಯವಾಕ್ಯಗಳನ್ನು ಚಿಕ್ಕಮಕ್ಕಳಂತೆ ಕಂಠಪಾಠ ಮಾಡುತ್ತಿದ್ದರು. ದಿವ್ಯಸಾಧಕರ ವರ್ತನೆಗಳು ಯಾರಿಗೆ ತಾನೆ ಅರ್ಥವಾಗಲು ಸಾಧ್ಯ? ಯಾವ ವಿದ್ವಾಂಸರೇ ಬರಲಿ,

ಚಂದ್ರಿಕಾಗ್ರಂಥವನ್ನು ಓದಿದ್ದೀರಾ? ಎಂದು ಪ್ರಶ್ನಿಸುತ್ತಿದ್ದರು. ಲೋಕವಿಚಾರವನ್ನು ಮಾತನಾಡದೆ ತಾವು ಅಧ್ಯಯನ ಮಾಡಿದ ವಿಚಾರಗಳನ್ನೆಲ್ಲಾ ಅವರ ಮುಂದೆ ವಿವರಿಸುತ್ತಿದ್ದರು. ತಮ್ಮ ಕೊನೆಯ ಉಸಿರಿನ ತನಕವೂ ಚಂದ್ರಿಕಾಗ್ರಂಥದ ಮಹಿಮೆಯನ್ನು ಸ್ಮರಿಸಿಕೊಳ್ಳುತ್ತಿದ್ದರು. ಒಟ್ಟಾರೆ ಚಂದ್ರಿಕಾಗ್ರಂಥದಿಂದ ತಮ್ಮ ಜೀವನದ ಅವಭೃಥವನ್ನು ಮಾಡಿದರು. ಅವರ ಜೀವನ ಪರಿಪೂರ್ಣವಾದದ್ದು ತಾತ್ಪರ್ಯಚಂದ್ರಿಕಾಗ್ರಂಥದಿಂದಲೇ.

ಈ ದೃಷ್ಟಾಂತದಂತೆ ಅನೇಕ ದಿವ್ಯಜ್ಞಾನಿಗಳು ತಾತ್ಪರ್ಯಚಂದ್ರಿಕಾಗ್ರಂಥದಲ್ಲಿಯೇ ತಮ್ಮ ಜೀವನದ ಪರಿಪೂರ್ಣತೆಯನ್ನು ಕಂಡಿದ್ದಾರೆ. ನಾವೂ ಸಹ ಪ್ರಯತ್ನಪಡೋಣವೆಂಬ ಮನಸ್ಸನ್ನಾದರೂ ಮಾಡೋಣ. ಹಿರಿಯರು ಆಶೀರ್ವದಿಸುತ್ತಾರೆ. ಈ ಜೀವನವನ್ನು ಸಾರ್ಥಕ ಮಾಡಿಕೊಳ್ಳೋಣ.

ಈ ಗ್ರಂಥದ ಕಳಕಳಿ -

ನ್ಯಾಯಸುಧಾ, ತಾತ್ಪರ್ಯಚಂದ್ರಿಕಾದಿಗ್ರಂಥಗಳನ್ನು ಅಧ್ಯಯನ ಮಾಡದಿದ್ದರೆ ಉಳಿದ ಅನೇಕ ಗ್ರಂಥಗಳ ಅಧ್ಯಯನಕ್ಕೆ ಅರ್ಥವೇ ಇಲ್ಲ. ಬಹಳಷ್ಟು ಪ್ರಯತ್ನ ಪಟ್ಟು ಹೆಣ್ಣುಮಗಳನ್ನು ಸುಂದರ ತರುಣಿಯನ್ನಾಗಿ ಬೆಳೆಸಿ ಅನಂತರ ಮದುವೆ ಮಾಡದಿದ್ದರೆ ಹೇಗೋ ಅದರಂತೆ ಬಾಲ್ಯದಿಂದ ಅನೇಕ ಕಠಿಣಗ್ರಂಥಗಳನ್ನೆಲ್ಲಾ ಅಧ್ಯಯನ ಮಾಡಿ, ವ್ಯುತ್ಪತ್ತಿಯ ಪರಿಪಕ್ವಾವಸ್ಥೆ ಬಂದಾಗ ನ್ಯಾಯಸುಧಾ ಚಂದ್ರಿಕಾದಿ ಗ್ರಂಥಗಳನ್ನು ಓದದವನ ಸ್ಥಿತಿಯಾಗಿದೆ. ಇಂದು ಪ್ರತಿಯೊಬ್ಬ ವಿದ್ಯಾರ್ಥಿಯ ಪರಿಸ್ಥಿತಿ ಇದೇ ಆಗಿದೆ ಎಂದರೆ ತಪ್ಪಾಗುವುದಿಲ್ಲ. ಅದಕ್ಕಾಗಿ ಚಂದ್ರಿಕಾ, ನ್ಯಾಯಸುಧಾದಿ ಗ್ರಂಥಗಳ ಮಹಿಮೆ ವೈಶಿಷ್ಟ್ಯಗಳು ಹೆಚ್ಚು ಹೆಚ್ಚು ಪ್ರಚಾರವಾಗಬೇಕು. ಪ್ರತಿಯೊಬ್ಬ ವಿದ್ಯಾರ್ಥಿಯೂ ತಾತ್ಪರ್ಯಚಂದ್ರಿಕಾ, ನ್ಯಾಯಸುಧಾದಿ ಗ್ರಂಥಗಳನ್ನು ಆಮೂಲಾಗ್ರ-ವಾಗಿ ಓದಲೇಬೇಕು. ಅವರ ಅಧ್ಯಯನದ ಅನುಕೂಲಕ್ಕಾಗಿ ಪುಸ್ತಕಗಳನ್ನು ಒದಗಿಸುವ ಜವಾಬ್ದಾರಿ ನಮ್ಮೆಲ್ಲರದ್ದಾಗಿದೆ. ಮತ್ತು ಚಂದ್ರಿಕಾಗ್ರಂಥದ ಅಧ್ಯಯನಕ್ಕೆ ಪೂರಕವಾದ ಎಲ್ಲಾ ಗ್ರಂಥಗಳನ್ನು ಒಂದೇ ಪುಸ್ತಕದಲ್ಲಿ ಸೇರಿಸಿದಾಗ ಅಧ್ಯಯನವು ಪರಿಪೂರ್ಣವಾಗುತ್ತದೆಂಬ ದೃಷ್ಟಿಯಿಂದ ಅನೇಕ ವರ್ಷಗಳಿಂದ ಪ್ರಯತ್ನಪಟ್ಟು ಈ ಕೃತಿಯನ್ನು ಹೊರತರಲಾಗಿದೆ.

೨೦೦೭ರ ಜನವರಿಯಲ್ಲಿ ಪ್ರಾರಂಭಗೊಂಡ ಅನುವಾದ ಕಾರ್ಯವು ಇಂದು ಮುದ್ರಣ-ಭವನವನ್ನು ಪ್ರವೇಶಿಸುತ್ತಿದೆ. ಈ ಕೃತಿಯ ರಚನೆಗೆ ಗುರುಗಳು ಹೆಜ್ಜೆ ಹೆಜ್ಜೆಗೂ ಉಪಕರಿಸಿದ್ದಾರೆ. ಇದರಿಂದ ದೊರೆಯುವ ಪುಣ್ಯರಾಶಿಯನ್ನು ಕರುಣಾಮೂರ್ತಿಗಳೂ, ತತ್ತ್ವಜ್ಞಾನಿಗಳೂ ಆದ ಗುರುಗಳಲ್ಲಿ ಭಕ್ತಿಯಿಂದ ಸಮರ್ಪಿಸುತ್ತೇನೆ. ಮುಂದಿನ ಜ್ಞಾನಕಾರ್ಯವು ನಿರ್ವಿಘ್ನವಾಗಿ ನಡೆಯಲೆಂದು ಆಶೀರ್ವಾದ ಬೇಡುತ್ತಾ ಸಾಷ್ಟಾಂಗ ನಮಸ್ಕರಿಸುತ್ತೇನೆ. ಮತ್ತು ನೆಚ್ಚಿನ ಮತ್ತೊಬ್ಬ ಗುರುಗಳಾದ ಪ್ರಸನ್ನವದನರಾದ, ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ಅನುಗ್ರಹಶಕ್ತಿಯನ್ನು

ಮನಸ್ಸಿನಲ್ಲೇ ಸ್ಮರಿಸಿಕೊಂಡು ಆಶೀರ್ವಾದವನ್ನು ಬೇಡುತ್ತಾ ಸಾಷ್ಟಾಂಗ ನಮಸ್ಕರಿಸುತ್ತೇನೆ. ವಿದ್ಯಾಪಕ್ಷಪಾತಿಗಳಾಗಿ ಈ ಗ್ರಂಥದ ಪ್ರಕಾಶನದ ಬಗ್ಗೆ ಮೇಲಿಂದ ಮೇಲೆ ವಿಚಾರಿಸಿ, ಬಹಳ ಪ್ರೋತ್ಸಾಹ ನೀಡಿ, ಅನುಗ್ರಹಿಸಿದ ಪೂಜ್ಯ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರಿಗೂ ಸಾಷ್ಟಾಂಗ ನಮಸ್ಕರಿಸುತ್ತೇನೆ.

ಈ ಗ್ರಂಥಪ್ರಕಾಶನಕ್ಕಾಗಿ ಉಪಕರಿಸಿದ ಅನೇಕ ಮಹನೀಯರು

| | |
|---|---|
| ಶ್ರೀ ಶ್ರೀ ಪರಮಪೂಜ್ಯ ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು - (ಗುರುಗಳು) | ಪರ್ಯಾಯಕಾಲದಲ್ಲಿ ತಾತ್ಪರ್ಯಚಂದ್ರಿಕಾ ಪಾಠವನ್ನು ಹೇಳಿ ಅನುಗ್ರಹಿಸಿದರು. |
| ವಿ।। ಹಯವದನಪುರಾಣಿಕರು - | ಈ ಕೃತಿಗೋಸ್ಕರ ಜಿಜ್ಞಾಸಾಧಿಕರಣ ಸಾರವನ್ನು ನೀಡಿ ಅನುಗ್ರಹಿಸಿದರು |
| ವಿ।। ರಾಮಚಂದ್ರಾಚಾರ್ಯರು (ಶ್ರೀರಂಗಮ್) - | ವಿಶಾಲಭಾವನೆಯಿಂದ ಚಂದ್ರಿಕಾಗ್ರಂಥದ ಚಿಂತನೆ ಮತ್ತು ವಿಮರ್ಶೆಗಳಿಗಾಗಿ ಸಹಾಯ ನೀಡಿ, ಅನುಗ್ರಹಿಸಿದರು. |
| ವಿ।। ಎ. ಹರಿದಾಸಭಟ್ಟರು - | ೨೦೦೬ರಲ್ಲಿ ಸಮಗ್ರಜಿಜ್ಞಾಸಾಧಿಕರಣವನ್ನು ಚಿಂತನೆಮಾಡಿಸಿ ಗ್ರಂಥಪ್ರಕಾಶನದ ಸಂಕಲ್ಪಕ್ಕೆ ಬೀಜ ಬಿತ್ತಿದರು. |
| ವಿ।। ಸಿ.ಹೆಚ್. ಶ್ರೀನಿವಾಸಮೂರ್ತಿ - | ಶಂಕರಭಾಷ್ಯ, ರಾಮಾನುಜಭಾಷ್ಯ, ಭಾಮತಿ, ಪಂಚಪಾದಿಕಾ, ವಿವರಣ, ಶ್ರುತಪ್ರಕಾಶ ಇಷ್ಟೂ ಗ್ರಂಥಗಳನ್ನು ಅಧ್ಯಯನ ಮಾಡಿ ಪ್ರಸಕ್ತವಾದ ಅಂಶಗಳನ್ನು ಆಯ್ದು ನೀಡಿದರು. |

ವಿ॥ಆರ್. ವೇಂಕಟೇಶಾಚಾರ್ಯರು - ಚಂದ್ರಿಕಾಗ್ರಂಥದಲ್ಲಿರುವ ಪ್ರತಿಯೊಂದು ಅಕ್ಷರಗಳನ್ನು ಕೂಲಂಕಷವಾಗಿ ವಿಮರ್ಶಿಸಿ ತಾವು ತಿಳಿದ ಸಾಂಪ್ರದಾಯಿಕ ತತ್ವಜ್ಞಾನವನ್ನೆಲ್ಲಾ ಧಾರೆಯೆರೆದರು.

ವಿ॥ ಮಣದ್ರಾವಿಡಶಾಸ್ತ್ರಿ(ಚೆನ್ನೈ) - ಕಠಿಣಮೀಮಾಂಸಾ-ನ್ಯಾಯಗಳಲ್ಲಿರುವ ಮಹತ್ವವಿಚಾರಗಳನ್ನು ಪಾಠಮಾಡಿದರು.

ಪ್ರತಿಯೊಂದು ಅಕ್ಷರಗಳನ್ನು ತಿದ್ದಿ ಅನೇಕ ದಿವಸಗಳಿಂದ ಈ ಕೃತಿಯ ನಿರ್ದುಷ್ಟತೆಗಾಗಿ ಹೋರಾಡಿದ ಏಕೈಕ ಧೀರರು ವಿ॥ ಬಿ.ಎನ್. ಸೀತಾರಾಮಾಚಾರ್ಯರು. ಇವರ ಉಪಕಾರವನ್ನು ನಿರಂತರ ಸ್ಮರಿಸುತ್ತಾ ಮುಂದಿನ ಎಲ್ಲಾ ಕೃತಿಗಳೂ ಸಹ ಇದರಂತೆ ಅವರ ನೇತೃತ್ವದಲ್ಲಿ ನಿರ್ದುಷ್ಟವಾಗಿ ಬರಬೇಕೆಂಬುದು ನನ್ನ ಹಂಬಲ. ವಿ ॥ ರಂಗನಾಥ ಗಣಾಚಾರಿ, ಇವರು ಪ್ರಾರಂಭದಲ್ಲಿ ಸಹಚಿಂತಕರಾಗಿ ಚಂದ್ರಿಕಾಗ್ರಂಥದ ಜೊತೆಗೆಮೀಮಾಂಸಾನ್ಯಾಯಗಳನ್ನು ಅರ್ಥ-ಮಾಡಿಕೊಳ್ಳಲು ಉಪಕರಿಸಿದರು. ಕಷ್ಟಕಾಲದಲ್ಲಿ ಸಂಪೂರ್ಣಬೆಂಬಲ ನೀಡಿ ಆತ್ಮಾರ್ಪಣೆ ಮಾಡಿಕೊಂಡು ಹಗಲು ರಾತ್ರಿ ಶ್ರಮಿಸಿ ಪುನಃ ಜೀವ ತುಂಬಿದ ಧೀರರು ವಿ. ಶ್ರೀಧರ್ ಇವರು. ಇವರಿಗೂ ನಾನು ಆಭಾರಿ. ಸುಮಾರು ಮೂರುವರ್ಷಗಳ ಕಾಲ ಪ್ರತಿನಿತ್ಯ ಸ್ನೇಹಿತನಾಗಿ ಜೊತೆಗಿದ್ದು ಉಪಕರಿಸಿದ ಧೀಮಂತರು ವಿ॥ ಜೆ. ವಿಜಯಾನಂದ. ಅಷ್ಟೇ ಅಲ್ಲದೆ ಗ್ರಂಥದ ಅನುವಾದವು ಮೂಲವಾಕ್ಯಗಳಿಗನುಗುಣವಾಗಿ ಇದೆಯೋ ಇಲ್ಲವೋ ಎಂದು ಪರೀಕ್ಷಿಸಿ, ಪ್ರತಿಯೊಂದು ಪಂಕ್ತಿಗಳನ್ನೂ ವೀಕ್ಷಿಸಿ ಉಪಕರಿಸಿದರು. ಒಂದು ಬಗೆಯಲ್ಲಿ ಉತ್ತಮವಿದ್ವಾಂಸರು ನಡೆಸುವ ಸಂಶೋಧನೆಯೆಂದೇ ಇವರ ಕಾರ್ಯವನ್ನು ಪ್ರಶಂಸಿಸುತ್ತೇನೆ. ಕಷ್ಟಕಾಲದಲ್ಲಿ ಸಂಪೂರ್ಣ ಬೆಂಬಲಿಗರಾಗಿ ಚಂದ್ರಿಕಾಗ್ರಂಥದ ಅಕ್ಷರಸಂಯೋಜನೆಯನ್ನು ಮಾಡುವ ಮೂಲಕ ಮನಸ್ಸಿಗೆ ಶಕ್ತಿಯನ್ನು ತುಂಬಿ ಪ್ರೋತ್ಸಾಹಿಸಿದ ಆತ್ಮೀಯ ಅಣ್ಣನಾದ ಬಿ.ಎನ್. ಶ್ರೀನಿವಾಸರಾವ್ ಇವರಿಗೆ ಕೇವಲ ಕೃತಜ್ಞತೆಯನ್ನಷ್ಟೇ ನನ್ನಿಂದ ಸಮರ್ಪಿಸಲು ಸಾಧ್ಯ.

ಹೆಜ್ಜೆಹೆಜ್ಜೆಗೂ ವಾತ್ಸಲ್ಯದಿಂದ ಆಶೀರ್ವದಿಸುವ ತಂದೆ ತಾಯಿಗಳಾದ ಪಿ.ಎಸ್.ನಾಗರಾಜರಾವ್ ಹಾಗೂ ಪರಿಮಳಾಬಾಯಿ ಇವರ ಪಾದಾರವಿಂದಗಳಲ್ಲಿ ಸಾಷ್ಟಾಂಗನಮಸ್ಕರಿಸುತ್ತೇನೆ. ಮತ್ತು ಮುಖಪುಟಕ್ಕಾಗಿ ಸುಂದರ ಕೃಷ್ಣನನ್ನು ಕುಂಚದಿಂದ ಚಿತ್ರಿಸಿದ ವಾತ್ಸಲ್ಯದ ತಾಯಿಗೆ ವಿಶೇಷ ನಮನಗಳು. ಚಂದ್ರಿಕಾಲೇಖನಕ್ಕಾಗಿ ಜೊತೆಗಿದ್ದು ಪ್ರೋತ್ಸಾಹಿಸಿ, ನೆರಳು ನೀಡಿದ ಪೂಜ್ಯ ವಿ ॥ ಅಂಬರೀಷಾಚಾರ್ಯ ಹಾಗೂ ಶ್ರೀಮತಿ ರಮಾರವರಿಗೂ ಅನಂತನಮಸ್ಕಾರಗಳು. ಪ್ರತಿತಿಂಗಳೂ

ಆರ್ಥಿಕಸಹಾಯ ಮಾಡಿ ಗ್ರಂಥಪ್ರಕಾಶನಕ್ಕೆ ಪ್ರೋತ್ಸಾಹಿಸಿದ ಎ॥ ನರಸಿಂಹಾಚಾರ್ಯ ಪುರೋಹಿತ್ ಹಾಗೂ ಶ್ರೀಮತಿ ಕಮಲಾ ಅವರಿಗೂ ಅನಂತ ನಮಸ್ಕಾರಗಳು.

ಆಧ್ಯಾತ್ಮಬಂಧುಗಳಾದ ಸಹಚಿಂತಕರಾದ ಶ್ರೀ ವೇಂಕಟೇಶಮೂರ್ತಿ ಮತ್ತು ಶ್ರೀಮತಿ ಮಾಲಿನಿ ಇವರ ಉಪಕಾರವನ್ನು ಬಣ್ಣಿಸಲೇ ಸಾಧ್ಯವಿಲ್ಲ. ಮುಂದಿನ ಸಮಗ್ರಗ್ರಂಥಪ್ರಕಾಶನದ ಜವಾಬ್ದಾರಿ ಹೊತ್ತು ಈ ಕೃತಿಯ ಮುಖ್ಯಫಲಕ್ಕೆ ಪಾತ್ರರಾದ ಇವರಿಗೆ ತುಂಬು ಹೃದಯದ ಕೃತಜ್ಞತೆಗಳು.

ಚಂದ್ರಿಕಾಲೇಖನವು ನಿರ್ವಿಘ್ನವಾಗಿ ನಡೆಯಲೆಂದೇ ಮನೆ ಬಾಡಿಗೆಯನ್ನೂ ಸ್ವೀಕರಿಸದೆ, ಉಪಕರಿಸಿದ ಪರೋಪಕಾರಿಗಳೆಂದೇ ಪ್ರಸಿದ್ಧರಾದ ಶ್ರೀ ಎಸ್.ಆರ್. ಪುರೋಹಿತ್ ಇವರಿಗೂ ಆಭಾರಿ.

ಕರಡುಪ್ರತಿಯ ತಿದ್ದುವಿಕೆಯಲ್ಲಿ ಪ್ರಚಂಡ ಸಾಮರ್ಥ್ಯ ತೋರಿಸಿದ ಪುಟ್ಟ ಬಾಲಕನಾದ ಬಿ.ಎನ್. ಶ್ರೀಶನಿಗೆ ಆಶೀರ್ವಾದಗಳು. ಡಿ.ಟಿ.ಪಿ.ಕಾರ್ಯದಲ್ಲಿ ತೊಡಗಿಸಿಕೊಂಡು ಸಮಯಕ್ಕೆ ತಕ್ಕಂತೆ ಮುದ್ರಣದ ಜವಾಬ್ದಾರಿಯನ್ನು ಹೊತ್ತ ಶ್ರೀಮತಿ ಸುಧಾಗಿರಿ ಇವರಿಗೆ ಭಗವಂತನು ವಿಶೇಷ ಮಂಗಳವನ್ನುಂಟು ಮಾಡಲೆಂದು ಪ್ರಾರ್ಥಿಸುತ್ತೇನೆ. ಡಿ.ಟಿ.ಪಿ. ಕಾರ್ಯದಲ್ಲಿ ಪರಿಪಕ್ವತೆಯನ್ನು ತೋರಿಸುವುದರ ಜೊತೆಗೆ ಬರೆದ ವಿಷಯಗಳನ್ನು ವಿಮರ್ಶಾತ್ಮಕವಾಗಿ ಗಮನಿಸುವ ದೋಷೈಕ-ದೃಕ್‌ಗಳು ಎಂದರೆ ಶ್ರೀ ಸುಬ್ಬಣ್ಣ ಕೆಂಪದಾಳಿಹಳ್ಳಿ ಇವರು. ಒಂದು ರೀತಿಯಲ್ಲಿ ಚಂದ್ರಿಕಾವನ್ನು ಬರೆದ ಹಸ್ತವೆಂದು ಇವರನ್ನು ಹೇಳಿದರೆ ತಪ್ಪಾಗುವುದಿಲ್ಲ.

ಪರೋಕ್ಷವಾಗಿ ಉಪಕರಿಸಿದ ಇನ್ನೂ ಹತ್ತು ಹಲವಾರು ಮಂದಿಗೆ ಮತ್ತು ಜ್ಞಾನಾಮೃತವನ್ನು ನೀಡಿ ಅನುಗ್ರಹಿಸಿದ ಹತ್ತಾರು ನೂರಾರು ಮಂದಿ ಗುರುಗಳಿಗೆ ಕೃತಜ್ಞತೆಗಳು ಮತ್ತು ಅನಂತಾನಂತ ನಮಸ್ಕಾರಗಳು.

> ಈ ಕೃತಿಯ ಪ್ರಕಾಶನವು ಇಷ್ಟು ಬೇಗ ಹೊರಬರುವ ನಿರೀಕ್ಷೆಯಿರಲಿಲ್ಲ. ಸುಮಾರು ಇನ್ನೂ ಎರಡು ವರ್ಷಗಳ ಅವಶ್ಯಕತೆ ಇತ್ತು. ಆದರೆ ಅನೇಕ ಸಮಸ್ಯೆಗಳನ್ನೆಲ್ಲಾ ಪರಿಹರಿಸಿ ಸಂಪೂರ್ಣ ಈ ಕೃತಿಯ ಪ್ರಕಾಶನಕ್ಕೆ ಅವಶ್ಯಕವಾದ ಆರ್ಥಿಕಸಹಾಯವನ್ನು ನೀಡಿ ಬಹಳ ದೊಡ್ಡ ಉಪಕಾರವನ್ನು ಮಾಡಿದ ಅಣ್ಣಂದಿರಾದ ವಿದ್ವಾನ್ ಬೆ.ನಾ. ವಿಜಯೀಂದ್ರಾಚಾರ್ಯರಿಗೆ ಅನಂತಕೃತಜ್ಞತೆಗಳು ಮತ್ತು ಹರಿವಾಯುಪ್ರಕಾಶನಕ್ಕೂ ಆಭಾರಿ.

* * * *

# ಮುನ್ನುಡಿ

ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿಗೆ ಹೇಳಿದ ಸಂದೇಶ - "ಆತ್ಮಾ ವಾ ಅರೇ ! ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ".

ಆತ್ಮನ ಬಗ್ಗೆ ಕೇಳಬೇಕು. ಒಳಗಿನಿಂದ ಕಾಣಬೇಕು. ಮಧ್ಯೆ ಮಧ್ಯೆ ಮನನ ಮಾಡಬೇಕು. ಕೇಳಿದ್ದನ್ನು ತಿಳಿಯಬೇಕು. ಸ್ವರೂಪಕಣ್ಣಿನಿಂದ ಕಾಣಬೇಕು. ಅನಂತರ ಬಿಂಬರೂಪಿಯ ಸಾಕ್ಷಾತ್ಕಾರವಾಗುತ್ತದೆ. ಜೀವನು ಒಂದು ಬೆಳಕಿನ ಕಿಡಿ. ಆದರೂ ಒಂದು ದೊಡ್ಡ ಅದ್ಭುತ. ಮಹಾಜ್ವಾಲೆಯಾದ ಭಗವಂತನು ಇನ್ನೂ ದೊಡ್ಡ ಅದ್ಭುತ. ಜೀವ ಹಾಗೂ ಪರಮಾತ್ಮರ ಸಂಬಂಧ ಶಾಶ್ವತ ಹಾಗೂ ನಿತ್ಯ ನೂತನ. ಉಳಿದೆಲ್ಲದರ ಸಂಬಂಧ ಅನಿತ್ಯ, ಅಸಾರ. ಆದ್ದರಿಂದ ಭಗವಂತನೇ ನಮ್ಮೆಲ್ಲರ ಸ್ನೇಹಿತ. ಮತ್ತು ರಕ್ಷಕ ಅವನ ಅರಿವಿಗಾಗಿ ಹೋರಾಡಲೇ ಬೇಕು. ಅವನು ಮಾಡುತ್ತಿರುವ ಉಪಕಾರವನ್ನು ನಿರಂತರವಾಗಿ ಸ್ಮರಿಸಬೇಕು. ಆವಾಗ ಮಾತ್ರ ಹುಟ್ಟು ಸಾವುಗಳ ಗೊಂದಲದಿಂದ ದೂರವಾಗಲು ಸಾಧ್ಯ.

ಪ್ರತಿನಿತ್ಯ ಭೌತಿಕಶರೀರಕ್ಕೋಸ್ಕರ ಏನೆಲ್ಲಾ ಶ್ರಮಪಡುತ್ತೇವೆ. ಎಷ್ಟೆಲ್ಲಾ ತಿನ್ನುತ್ತೇವೆ. ಆದರೆ ಭೌತಿಕಶರೀರದಂತೆ ಆತ್ಮನೆಂಬ ಶರೀರ ಇದ್ದಾನೆಂಬ ಎಚ್ಚರವೇ ಇಲ್ಲ. ಅವನ ಬಗ್ಗೆ ಕಾಳಜಿಯನ್ನು ನಾವು ತೋರಿಸುತ್ತಿಲ್ಲ. ಭೌತಿಕ ಆಹಾರವನ್ನು ಈ ಶರೀರಕ್ಕೆ ನೀಡಿದಂತೆ ಜ್ಞಾನಾಮೃತವೆಂಬ ಆಹಾರವನ್ನು ಆತ್ಮಶರೀರಕ್ಕೆ ನೀಡಬೇಕು. ಸೂಕ್ಷ್ಮವಾದ ಆತ್ಮನ ಒಳಗಡೆ ನಿಂತು ಅನಾದಿಕಾಲದಿಂದ ರಕ್ಷಿಸುತ್ತಿರುವ ಭಗವಂತನ ಆರಾಧನೆಗಾಗಿ ಹೋರಾಡಬೇಕು. ಈ ಭಗವಂತನನ್ನು ಹೆಚ್ಚು ಹೆಚ್ಚು ತಿಳಿದಷ್ಟು ಅವನಿಗೆ ಹತ್ತಿರವಾಗುತ್ತೇವೆ.

ಅದಕ್ಕಾಗಿಯೇ ಅಪೌರುಷೇಯ ಅನಂತ ವೇದರಾಶಿಗಳು ಹೊರಟಿವೆ. ಅನಾದಿಕಾಲದಿಂದಲೂ ವೇದಗಳು ಭಗವಂತನನ್ನು ಕೂಗಿ ಕೂಗಿ ಪರಿಚಯಿಸುತ್ತಿವೆ. ಭಗವಂತನನ್ನು ಪರಿಚಯಿಸುವ ನಿಜವಾದ ಸಾಮರ್ಥ್ಯ ಯಾರಿಂದಲೂ ಹುಟ್ಟದ ವೇದಗಳಿಗೆ ಮಾತ್ರ ಇರಲು ಸಾಧ್ಯ. ಆದ್ದರಿಂದಲೇ "ನಾನ್ಯಃ ಪಂಥಾ ಅಯನಾಯ ವಿದ್ಯತೇ" ವೇದವೆಂಬ ಮಾರ್ಗದಲ್ಲಷ್ಟೇ ಭಗವಂತನನ್ನು ತಲುಪಲು ಸಾಧ್ಯ.

ವೇದಗಳು ಮೇಲ್ನೋಟಕ್ಕೆ ಭಗವಂತನನ್ನು ಪರಿಚಯಿಸುತ್ತಿವೆಯೆಂದು ಕಾಣಲಾರವು. ಅಗ್ನಿ ಮೊದಲಾದ ದೇವತೆಗಳ ಬಗ್ಗೆ ಅಥವಾ ಯಜ್ಞಯಾಗಾದಿ ಕರ್ಮಗಳ ಬಗ್ಗೆ, ಸಮಗ್ರ ವೇದವು

ಹೇಳುತ್ತಿದೆ ಎಂದು ಅನಿಸುತ್ತದೆ. ಆದರೆ ವೇದಮಾತೆಯ ನಿಜಹೃದಯವನ್ನು ಕಾಣಬೇಕೆಂದರೆ ನಿಷ್ಕಲ್ಮಶ ಮನಸ್ಸಿನಿಂದ ವೇದಮಾತೆಗೆ ಶರಣಾಗಬೇಕು. ಆವಾಗ ಮಾತ್ರ ಮಗುವಿಗೆ ತಾಯಿ ಹಾಲುಣಿಸುವಂತೆ ವೇದಮಾತೆ ತತ್ತ್ವಜ್ಞಾನಾಮೃತವನ್ನು ನಮಗೆ ಉಣಿಸುತ್ತಾಳೆ.

ಮಗುವಿಗೆ ಉಪನಯನವೆಂಬ ಸಂಸ್ಕಾರವಿದೆ. ವೇದಗಳ ಅಧ್ಯಯನಕ್ಕಾಗಿ ಜ್ಞಾನಿಯ ಬಳಿ ಹೋಗುವುದೇ ಈ ಸಂಸ್ಕಾರದ ಉದ್ದೇಶ. ಇದನ್ನೇ ಗುರುಕುಲವಾಸ ಎನ್ನುತ್ತಾರೆ. ಹಿಂದಿನ ಕಾಲದಲ್ಲಿ ಉಪನೀತವಟುವಿಗೆ ಗುರುಕುಲವಾಸದ ಕಡ್ಡಾಯವಿತ್ತು. ಪ್ರಧಾನವಾಗಿ ಸ್ವಶಾಖಾಧ್ಯ-ಯನವನ್ನು ಮಾಡಲೇಬೇಕಿತ್ತು. ಶ್ರಾವಣಮಾಸದ ಹುಣ್ಣಿಮೆಯಿಂದ ಪೌಷಮಾಸದ ಹುಣ್ಣಿಮೆ ತನಕ ಆರು ತಿಂಗಳು ವೇದದ ಕಂಠಪಾಠ ಮಾಡಬೇಕು. ಅನಂತರ ಆರು ತಿಂಗಳು ವೇದಾಂಗವಾದ ಷಡಂಗಗಳನ್ನು ಅಧ್ಯಯನ ಮಾಡಬೇಕು. ಹೀಗೆ ಕಂಠಪಾಠದ ಜೊತೆಗೆ ವೇದಾರ್ಥದ ಅಧ್ಯಯನವೂ ನಡೆಯುತ್ತಿತ್ತು. ಆದ್ದರಿಂದ ವೇದಾಧ್ಯಯನ ಮುಗಿಯಿತೆಂದರೆ ಷಡಂಗಗಳ ಅಧ್ಯಯನದ ಜೊತೆಗೆ ವೇದಾರ್ಥದ ಅಧ್ಯಯನವು ಮುಗಿಯುತ್ತಿತ್ತು. ಅನಂತರ ಸ್ನಾತಕನಾಗಿ ಒಂದು ವರ್ಷದಲ್ಲಿ ವಿವಾಹವಾಗಬೇಕು. ಮುಂದೆ ಜೀವನಪರ್ಯಂತ ಶಿಷ್ಯರಿಗೆ ವೇದಪಾಠವನ್ನೇ ಮಾಡುತ್ತಿರಬೇಕು. ಹೀಗೆ ಹಿಂದಿನ ಕಾಲದಲ್ಲಿ ಬಾಲ್ಯದಿಂದ ವೃದ್ಧಾಪ್ಯದ ತನಕ ವೇದಾಧ್ಯಯನ-ದಲ್ಲಿಯೇ ಜೀವನವನ್ನು ಸವೆಸುತ್ತಿದ್ದರು. ಆದರೆ ಇಂದು ಎಲ್ಲಿಯೂ ವೇದಾಧ್ಯಯನವಿಲ್ಲ. ವೇದವನ್ನು ಕಂಠಪಾಠ ಮಾಡುವ ಸಂಪ್ರದಾಯವೇ ತಪ್ಪಿ ಹೋಗಿದೆ. ಇನ್ನು ವೇದಗಳ ಅರ್ಥವನ್ನು ತಿಳಿಯುವ ಮೂಲಕ ಭಗವಂತನ ಜ್ಞಾನ ಸಂಪಾದಿಸುವುದಂತೂ ದೂರತೋಪಾಸ್ತ. ಹಾಗಾದರೆ ನಮ್ಮೆಲ್ಲರ ಗತಿಯೇನು? ಭಗವಂತನನ್ನು ಕಾಣಲು ನಮ್ಮಿಂದ ಸಾಧ್ಯವೇ? ಅಥವಾ ಭಗವಂತನನ್ನು ತಲುಪುವ ಸಾಧಕರು ಈಗಿನ ಕಾಲದಲ್ಲಿ ಯಾರೊಬ್ಬರೂ ಇಲ್ಲವೇ? ಹೀಗೆ ಅನೇಕ ಗೊಂದಲಗಳು ಬರುತ್ತವೆ.

ಈ ಪ್ರಶ್ನೆಗೆ ಹೀಗೆ ಉತ್ತರಿಸಬಹುದು -- ಯುಗಧರ್ಮಕ್ಕೆ ಅನುಸಾರಿಯಾಗಿ ಭೂಲೋಕದ ಮನುಷ್ಯರಿಗೆ ಮೇಧಾಶಕ್ತಿ ಪ್ರಜ್ಞಾಶಕ್ತಿಗಳು ಸಹ ಕ್ಷೀಣವಾಗುತ್ತವೆ. ಕೃತಯುಗದ ಪುರುಷರಲ್ಲಿ ಇದ್ದ ಮೇಧಾಶಕ್ತಿಗಳು ತ್ರೇತಾಯುಗದಲ್ಲಿ ಕಮ್ಮಿಯಾಗುತ್ತವೆ. ದ್ವಾಪರ ಕಲಿಯುಗಗಳಲ್ಲಿ ಮತ್ತಷ್ಟು ಕಮ್ಮಿಯಾಗುತ್ತವೆ. ಅಷ್ಟೇ ಅಲ್ಲದೆ ಭಗವಂತನ ವಿಷಯದಲ್ಲಿ ಸಂಪೂರ್ಣ ಯಥಾರ್ಥಜ್ಞಾನವು ಕೃತಯುಗದಲ್ಲಿ ಮಾತ್ರ ಇರುತ್ತದೆ. ತ್ರೇತಾಯುಗದಲ್ಲಿ ಸ್ವಲ್ಪ ವಿಪರೀತಜ್ಞಾನ ಮತ್ತು ಅಜ್ಞಾನಗಳು ಬರುತ್ತವೆ. ಈ ಕ್ರಮದಲ್ಲಿ ದ್ವಾಪರಯುಗದ ಕೊನೆಯ ಭಾಗದಲ್ಲಿ ವಿಪರೀತಜ್ಞಾನ ಮತ್ತು ಅಜ್ಞಾನಗಳೂ ಹೆಚ್ಚಾಗುತ್ತವೆ. ಬುದ್ಧಿಯಲ್ಲಿಯೂ ಹೆಚ್ಚಿನ ಸಾಮರ್ಥ್ಯವಿಲ್ಲದಿದ್ದಾಗ ಸ್ವತಂತ್ರವಾಗಿ ಅಪಾರವೇದರಾಶಿಯನ್ನು ಜೀರ್ಣಿಸಿಕೊಂಡು ಭಗವಂತನ ಬಗ್ಗೆ ನಿಶ್ಚಯಜ್ಞಾನ ಹೊಂದಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಹೀಗೆ ಸಾತ್ವಿಕರು ಭಗವತ್‌ಪ್ರಜ್ಞೆಯನ್ನು ಕಾಲಪ್ರಭಾವದಿಂದ ಕಳೆದುಕೊಳ್ಳುತ್ತಾರೆ. ಆದಕ್ಕೋಸ್ಕರ ಕರುಣಾಮಯಿಯಾದ ಭಗವಂತನು ವೇದವ್ಯಾಸರೂಪದಿಂದ ಅವತರಿಸಿ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿದನು.

# ಮುನ್ನುಡಿ

ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿಗೆ ಹೇಳಿದ ಸಂದೇಶ - "ಆತ್ಮಾ ವಾ ಅರೇ ! ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ".

ಆತ್ಮನ ಬಗ್ಗೆ ಕೇಳಬೇಕು. ಒಳಗಿನಿಂದ ಕಾಣಬೇಕು. ಮಧ್ಯೆ ಮಧ್ಯೆ ಮನನ ಮಾಡಬೇಕು. ಕೇಳಿದ್ದನ್ನು ತಿಳಿಯಬೇಕು. ಸ್ವರೂಪಕಣ್ಣಿನಿಂದ ಕಾಣಬೇಕು. ಅನಂತರ ಬಿಂಬರೂಪಿಯ ಸಾಕ್ಷಾತ್ಕಾರವಾಗುತ್ತದೆ. ಜೀವನು ಒಂದು ಬೆಳಕಿನ ಕಿಡಿ. ಆದರೂ ಒಂದು ದೊಡ್ಡ ಅದ್ಭುತ. ಮಹಾಜ್ವಾಲೆಯಾದ ಭಗವಂತನು ಇನ್ನೂ ದೊಡ್ಡ ಅದ್ಭುತ. ಜೀವ ಹಾಗೂ ಪರಮಾತ್ಮರ ಸಂಬಂಧ ಶಾಶ್ವತ ಹಾಗೂ ನಿತ್ಯ ನೂತನ. ಉಳಿದೆಲ್ಲದರ ಸಂಬಂಧ ಅನಿತ್ಯ, ಅಸಾರ. ಆದ್ದರಿಂದ ಭಗವಂತನೇ ನಮ್ಮೆಲ್ಲರ ಸ್ನೇಹಿತ. ಮತ್ತು ರಕ್ಷಕ ಅವನ ಅರಿವಿಗಾಗಿ ಹೋರಾಡಲೇ ಬೇಕು. ಅವನು ಮಾಡುತ್ತಿರುವ ಉಪಕಾರವನ್ನು ನಿರಂತರವಾಗಿ ಸ್ಮರಿಸಬೇಕು. ಆವಾಗ ಮಾತ್ರ ಹುಟ್ಟು ಸಾವುಗಳ ಗೊಂದಲದಿಂದ ದೂರವಾಗಲು ಸಾಧ್ಯ.

ಪ್ರತಿನಿತ್ಯ ಭೌತಿಕಶರೀರಕ್ಕೋಸ್ಕರ ಏನೆಲ್ಲಾ ಶ್ರಮಪಡುತ್ತೇವೆ. ಎಷ್ಟೆಲ್ಲಾ ತಿನ್ನುತ್ತೇವೆ. ಆದರೆ ಭೌತಿಕಶರೀರದಂತೆ ಆತ್ಮನೆಂಬ ಶರೀರ ಇದ್ದಾನೆಂಬ ಎಚ್ಚರವೇ ಇಲ್ಲ. ಅವನ ಬಗ್ಗೆ ಕಾಳಜಿಯನ್ನು ನಾವು ತೋರಿಸುತ್ತಿಲ್ಲ. ಭೌತಿಕ ಆಹಾರವನ್ನು ಈ ಶರೀರಕ್ಕೆ ನೀಡಿದಂತೆ ಜ್ಞಾನಾಮೃತವೆಂಬ ಆಹಾರವನ್ನು ಆತ್ಮಶರೀರಕ್ಕೆ ನೀಡಬೇಕು. ಸೂಕ್ಷ್ಮವಾದ ಆತ್ಮನ ಒಳಗಡೆ ನಿಂತು ಅನಾದಿಕಾಲದಿಂದ ರಕ್ಷಿಸುತ್ತಿರುವ ಭಗವಂತನ ಆರಾಧನೆಗಾಗಿ ಹೋರಾಡಬೇಕು. ಈ ಭಗವಂತನನ್ನು ಹೆಚ್ಚು ಹೆಚ್ಚು ತಿಳಿದಷ್ಟು ಅವನಿಗೆ ಹತ್ತಿರವಾಗುತ್ತೇವೆ.

ಅದಕ್ಕಾಗಿಯೇ ಅಪೌರುಷೇಯ ಅನಂತ ವೇದರಾಶಿಗಳು ಹೊರಟಿವೆ. ಅನಾದಿಕಾಲದಿಂದಲೂ ವೇದಗಳು ಭಗವಂತನನ್ನು ಕೂಗಿ ಕೂಗಿ ಪರಿಚಯಿಸುತ್ತಿವೆ. ಭಗವಂತನನ್ನು ಪರಿಚಯಿಸುವ ನಿಜವಾದ ಸಾಮರ್ಥ್ಯ ಯಾರಿಂದಲೂ ಹುಟ್ಟದ ವೇದಗಳಿಗೆ ಮಾತ್ರ ಇರಲು ಸಾಧ್ಯ. ಆದ್ದರಿಂದಲೇ "ನಾನ್ಯಃ ಪಂಥಾ ಅಯನಾಯ ವಿದ್ಯತೇ" ವೇದವೆಂಬ ಮಾರ್ಗದಲ್ಲಷ್ಟೇ ಭಗವಂತನನ್ನು ತಲುಪಲು ಸಾಧ್ಯ.

ವೇದಗಳು ಮೇಲ್ನೋಟಕ್ಕೆ ಭಗವಂತನನ್ನು ಪರಿಚಯಿಸುತ್ತಿವೆಯೆಂದು ಕಾಣಲಾರೆವು. ಅಗ್ನಿ ಮೊದಲಾದ ದೇವತೆಗಳ ಬಗ್ಗೆ ಅಥವಾ ಯಜ್ಞಯಾಗಾದಿ ಕರ್ಮಗಳ ಬಗ್ಗೆ, ಸಮಗ್ರ ವೇದವು

ಹೇಳುತ್ತಿದೆ ಎಂದು ಅನಿಸುತ್ತದೆ. ಆದರೆ ವೇದಮಾತೆಯ ನಿಜಹೃದಯವನ್ನು ಕಾಣಬೇಕೆಂದರೆ ನಿಷ್ಕಲ್ಮಶ ಮನಸ್ಸಿನಿಂದ ವೇದಮಾತೆಗೆ ಶರಣಾಗಬೇಕು. ಆವಾಗ ಮಾತ್ರ ಮಗುವಿಗೆ ತಾಯಿ ಹಾಲುಣಿಸುವಂತೆ ವೇದಮಾತೆ ತತ್ತ್ವಜ್ಞಾನಾಮೃತವನ್ನು ನಮಗೆ ಉಣಿಸುತ್ತಾಳೆ.

ಮಗುವಿಗೆ ಉಪನಯನವೆಂಬ ಸಂಸ್ಕಾರವಿದೆ. ವೇದಗಳ ಅಧ್ಯಯನಕ್ಕಾಗಿ ಜ್ಞಾನಿಯ ಬಳಿ ಹೋಗುವುದೇ ಈ ಸಂಸ್ಕಾರದ ಉದ್ದೇಶ. ಇದನ್ನೇ ಗುರುಕುಲವಾಸ ಎನ್ನುತ್ತಾರೆ. ಹಿಂದಿನ ಕಾಲದಲ್ಲಿ ಉಪನೀತವಟುವಿಗೆ ಗುರುಕುಲವಾಸದ ಕಡ್ಡಾಯವಿತ್ತು. ಪ್ರಧಾನವಾಗಿ ಸ್ವಶಾಖಾಧ್ಯಯನವನ್ನು ಮಾಡಲೇಬೇಕಿತ್ತು. ಶ್ರಾವಣಮಾಸದ ಹುಣ್ಣಿಮೆಯಿಂದ ಪೌಷಮಾಸದ ಹುಣ್ಣಿಮೆ ತನಕ ಆರು ತಿಂಗಳು ವೇದದ ಕಂಠಪಾಠ ಮಾಡಬೇಕು. ಅನಂತರ ಆರು ತಿಂಗಳು ವೇದಾಂಗವಾದ ಷಡಂಗಗಳನ್ನು ಅಧ್ಯಯನ ಮಾಡಬೇಕು. ಹೀಗೆ ಕಂಠಪಾಠದ ಜೊತೆಗೆ ವೇದಾರ್ಥದ ಅಧ್ಯಯನವೂ ನಡೆಯುತ್ತಿತ್ತು. ಆದ್ದರಿಂದ ವೇದಾಧ್ಯಯನ ಮುಗಿಯಿತೆಂದರೆ ಷಡಂಗಗಳ ಅಧ್ಯಯನದ ಜೊತೆಗೆ ವೇದಾರ್ಥದ ಅಧ್ಯಯನವು ಮುಗಿಯುತ್ತಿತ್ತು. ಅನಂತರ ಸ್ನಾತಕನಾಗಿ ಒಂದು ವರ್ಷದಲ್ಲಿ ವಿವಾಹವಾಗಬೇಕು. ಮುಂದೆ ಜೀವನಪರ್ಯಂತ ಶಿಷ್ಯರಿಗೆ ವೇದಪಾಠವನ್ನೇ ಮಾಡುತ್ತಿರಬೇಕು. ಹೀಗೆ ಹಿಂದಿನ ಕಾಲದಲ್ಲಿ ಬಾಲ್ಯದಿಂದ ವೃದ್ಧಾಪ್ಯದ ತನಕ ವೇದಾಧ್ಯಯನದಲ್ಲಿಯೇ ಜೀವನವನ್ನು ಸವೆಸುತ್ತಿದ್ದರು. ಆದರೆ ಇಂದು ಎಲ್ಲಿಯೂ ವೇದಾಧ್ಯಯನವಿಲ್ಲ. ವೇದವನ್ನು ಕಂಠಪಾಠ ಮಾಡುವ ಸಂಪ್ರದಾಯವೇ ತಪ್ಪಿ ಹೋಗಿದೆ. ಇನ್ನು ವೇದಗಳ ಅರ್ಥವನ್ನು ತಿಳಿಯುವ ಮೂಲಕ ಭಗವಂತನ ಜ್ಞಾನ ಸಂಪಾದಿಸುವುದಂತೂ ದೂರತೋಪಾಸ್ತ. ಹಾಗಾದರೆ ನಮ್ಮೆಲ್ಲರ ಗತಿಯೇನು? ಭಗವಂತನನ್ನು ಕಾಣಲು ನಮ್ಮಿಂದ ಸಾಧ್ಯವೇ? ಅಥವಾ ಭಗವಂತನನ್ನು ತಲುಪುವ ಸಾಧಕರು ಈಗಿನ ಕಾಲದಲ್ಲಿ ಯಾರೊಬ್ಬರೂ ಇಲ್ಲವೇ? ಹೀಗೆ ಅನೇಕ ಗೊಂದಲಗಳು ಬರುತ್ತವೆ.

ಈ ಪ್ರಶ್ನೆಗೆ ಹೀಗೆ ಉತ್ತರಿಸಬಹುದು -- ಯುಗಧರ್ಮಕ್ಕೆ ಅನುಸಾರಿಯಾಗಿ ಭೂಲೋಕದ ಮನುಷ್ಯರಿಗೆ ಮೇಧಾಶಕ್ತಿ ಪ್ರಜ್ಞಾಶಕ್ತಿಗಳು ಸಹ ಕ್ಷೀಣವಾಗುತ್ತವೆ. ಕೃತಯುಗದ ಪುರುಷರಲ್ಲಿ ಇದ್ದ ಮೇಧಾಶಕ್ತಿಗಳು ತ್ರೇತಾಯುಗದಲ್ಲಿ ಕಮ್ಮಿಯಾಗುತ್ತವೆ. ದ್ವಾಪರ ಕಲಿಯುಗಗಳಲ್ಲಿ ಮತ್ತಷ್ಟು ಕಮ್ಮಿಯಾಗುತ್ತವೆ. ಅಷ್ಟೇ ಅಲ್ಲದೆ ಭಗವಂತನ ವಿಷಯದಲ್ಲಿ ಸಂಪೂರ್ಣ ಯಥಾರ್ಥಜ್ಞಾನವು ಕೃತಯುಗದಲ್ಲಿ ಮಾತ್ರ ಇರುತ್ತದೆ. ತ್ರೇತಾಯುಗದಲ್ಲಿ ಸ್ವಲ್ಪ ವಿಪರೀತಜ್ಞಾನ ಮತ್ತು ಅಜ್ಞಾನಗಳು ಬರುತ್ತವೆ. ಈ ಕ್ರಮದಲ್ಲಿ ದ್ವಾಪರಯುಗದ ಕೊನೆಯ ಭಾಗದಲ್ಲಿ ವಿಪರೀತಜ್ಞಾನ ಮತ್ತು ಅಜ್ಞಾನಗಳೂ ಹೆಚ್ಚಾಗುತ್ತವೆ. ಬುದ್ಧಿಯಲ್ಲಿಯೂ ಹೆಚ್ಚಿನ ಸಾಮರ್ಥ್ಯವಿಲ್ಲದಿದ್ದಾಗ ಸ್ವತಂತ್ರವಾಗಿ ಅಪಾರವೇದರಾಶಿಯನ್ನು ಜೀರ್ಣಿಸಿಕೊಂಡು ಭಗವಂತನ ಬಗ್ಗೆ ನಿಶ್ಚಯಜ್ಞಾನ ಹೊಂದಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಹೀಗೆ ಸಾತ್ವಿಕರು ಭಗವತ್‌ಪ್ರಜ್ಞೆಯನ್ನು ಕಾಲಪ್ರಭಾವದಿಂದ ಕಳೆದುಕೊಳ್ಳುತ್ತಾರೆ. ಅದಕ್ಕೋಸ್ಕರ ಕರುಣಾಮಯಿಯಾದ ಭಗವಂತನು ವೇದವ್ಯಾಸರೂಪದಿಂದ ಅವತರಿಸಿ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿದನು.

## *ಶ್ರೀವೇದವ್ಯಾಸದೇವರು -*
## ಬ್ರಹ್ಮಮೀಮಾಂಸಾಶಾಸ್ತ್ರ

ಈ ಬ್ರಹ್ಮಮೀಮಾಂಸಾಶಾಸ್ತ್ರವು ವೇದಗಳ ಸಾರ. ಎಲ್ಲ ವೇದಗಳನ್ನು ಅಧ್ಯಯನ ಮಾಡುವುದರಿಂದ ದೊರೆಯುವ ಪ್ರಯೋಜನ ಈ ಪುಟ್ಟ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಿಂದಲೇ ದೊರೆಯುತ್ತದೆ. ಆದ್ದರಿಂದ ಹಿಂದಿನ ಕಾಲದ ಸಾಧಕರಂತೆ ನಾವು ನೇರವಾಗಿ ವೇದಾಧ್ಯಯನವನ್ನು ಮಾಡುತ್ತಿಲ್ಲವೆಂದು ಕೊರಗುವಂತಿಲ್ಲ. ಆದ್ದರಿಂದಲೇ ಶ್ರೀಮದಾಚಾರ್ಯರು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಒಂದಲ್ಲ ಎರಡಲ್ಲ ನಾಲ್ಕು ಭಾಷ್ಯಗಳನ್ನು ಬರೆದಿದ್ದಾರೆ. ೧. ಬ್ರಹ್ಮಸೂತ್ರ ಭಾಷ್ಯ, ೨.ಅನುವ್ಯಾಖ್ಯಾನ, ೩.ನ್ಯಾಯವಿವರಣ, ೪.ಅಣುಭಾಷ್ಯ ಎಂದು. ವಸ್ತುತಃ ಪ್ರಯತ್ನಪಟ್ಟು ವೇದಾಧ್ಯಯನವನ್ನು ಮಾಡಲೇಬೇಕು. ವೇದಗಳಲ್ಲಿರುವ ಮಂತ್ರಗಳ ಅರ್ಥವನ್ನು ಯಥಾಶಕ್ತಿ ಅರ್ಥಮಾಡಿಕೊಳ್ಳಬೇಕು. ಅದಕ್ಕಾಗಿಯೇ ಶ್ರೀಮದಾಚಾರ್ಯರು ಋಗ್ಭಾಷ್ಯದ ಮೂಲಕ ದಿಕ್‌ಪ್ರದರ್ಶನ ಮಾಡಿದ್ದಾರೆ.

ಸ್ವಾಧ್ಯಾಯೋಽಧ್ಯೇತವ್ಯಃ ಎಂಬ ವಿಧಿಯು ಸ್ವಶಾಖಾಧ್ಯಯನವನ್ನು ಮಾಡಲೇಬೇಕೆಂದು ಹೇಳುತ್ತಿದೆ. ಉಪನಿಷತ್‌ಭಾಗವನ್ನಂತು ಓದಲೇಬೇಕು. ಸ್ವಶಾಖಾಧ್ಯಯನವನ್ನು ಮಾಡಿ. ವಿಷ್ಣುಭಕ್ತಿಯುಳ್ಳವನು ಮಾತ್ರ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನೋದಲು ಅಧಿಕಾರಿಯಾಗುತ್ತಾನೆ. ಇದು ಕನಿಷ್ಠವಾದ ಅರ್ಹತೆ; ವಸ್ತುತಃ ''ಬ್ರಹ್ಮದೇವರಿಂದ ಆರಂಭಿಸಿ ತೃಣಪರ್ಯಂತ ಸಕಲವೂ ಅಸಾರ ಅನಿತ್ಯ'' ಎಂದು ತಿಳಿದು ವೈರಾಗ್ಯಶಾಲಿಯಾಗಿ ಹರಿಪಾದವನ್ನೇ ನಿರಂತರ ಅಪೇಕ್ಷಿಸುವವನು ನಿಜವಾದ ಅಧಿಕಾರಿ. ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಲ್ಲಿ ತೊಡಗಬೇಕಾದರೆ ಕನಿಷ್ಠ ಅರ್ಹತೆಯನ್ನಾದರೂ ನಾವು ಹೊಂದಿರಬೇಕಾಗುತ್ತದೆ. ''ಏನೂ ಅರ್ಹತೆಯನ್ನು ಹೊಂದದೇ ಶಾಸ್ತ್ರಾಧ್ಯಯನದಲ್ಲಿ ತೊಡಗಬಾರದು'' ಎಂದು ಪ್ರಥಮಸೂತ್ರದ ''ಅಥ'' ಶಬ್ದವು ಕಟ್ಟೆಚ್ಚರ ನೀಡುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರ ರಚನೆಯ ಹಿನ್ನಲೆಯನ್ನು ಶ್ರೀಮದಾಚಾರ್ಯರು ಭಾಷ್ಯದ ಪ್ರಾರಂಭದಲ್ಲಿಯೇ ತಿಳಿಸಿದ್ದಾರೆ.

*ನಾರಾಯಣಾದ್ವಿನಿಷ್ಪನ್ನಂ ಜ್ಞಾನಂ ಕೃತಯುಗೇ ಸ್ಥಿತಮ್ ।*
*ಕಿಂಚಿತ್ತದನ್ಯಥಾಜಾತಂ ತ್ರೇತಾಯಾಂ ದ್ವಾಪರೇಽಖಿಲಮ್ ॥*
*ಗೌತಮಸ್ಯ ಋಷೇಃ ಶಾಪಾತ್ ಜ್ಞಾನೇ ತು ಅಜ್ಞಾನತಾಂ ಗತೇ ।*
*ಸಂಕೀರ್ಣಬುದ್ಧಯೋ ದೇವಾಃ ಬ್ರಹ್ಮರುದ್ರಪುರಸ್ಸರಾಃ ॥*
*ಶರಣ್ಯಂ ಶರಣಂ ಜಗ್ಮುರ್ನಾರಾಯಣಮನಾಮಯಮ್ ।*
*ತೈರ್ವಿಜ್ಞಾಪಿತಕಾರ್ಯಸ್ತು ಭಗವಾನ್ ಪುರುಷೋತ್ತಮಃ ॥*
*ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ।*
*ಉತ್ಸನ್ನಾನ್ ಭಗವಾನ್ ವೇದಾನುಜ್ಜಹಾರ ಹರಿಃ ಸ್ವಯಮ್ ॥* - ಸ್ಕಾಂದಪುರಾಣ

*ಪರಿಪೂರ್ಣಚಂದ್ರಿಕಾ*

ನಾರಾಯಣನಿಂದ ತತ್ತ್ವಜ್ಞಾನವು ಉಪದೇಶಿಸಲ್ಪಟ್ಟಿತ್ತು. ಚತುರ್ಮುಖಬ್ರಹ್ಮದೇವರೇ ಮೊದಲಾದವರಿಂದ ಆ ತತ್ತ್ವಜ್ಞಾನವನ್ನು ಪಡೆದು ಎಲ್ಲ ಸಾಧಕರು ಭಗವಂತನನ್ನು ತಿಳಿಯುತ್ತಿದ್ದರು. ಇಂತಹ ತತ್ತ್ವಜ್ಞಾನವು ಕೃತಯುಗದಲ್ಲಿ ಪರಿಪೂರ್ಣವಾಗಿ ಯಥಾರ್ಥವಾಗಿದ್ದಿತು. ತ್ರೇತಾಯುಗದಲ್ಲಿ ಕಾಲಪ್ರಭಾವದಿಂದ ಸ್ವಲ್ಪ ಸಂಶಯ ಹಾಗೂ ವಿಪರೀತಜ್ಞಾನಗಳಿಂದ ಕೂಡಿತ್ತು. ಹೀಗೆ ಕಾಲ ಪ್ರವಾಹದಲ್ಲಿ ತತ್ತ್ವಜ್ಞಾನವು ಕ್ರಮೇಣ ನಾಶವಾಗುವ ಸ್ಥಿತಿಯನ್ನು ಹೊಂದಿತು.

ಇದಕ್ಕೆ ಮುಖ್ಯ ಕಾರಣ ಕಲಿಯ ಪ್ರಭಾವ. ಕಲಿಯಲ್ಲಿ ವಿಷ್ಣುದ್ವೇಷ ಮೊದಲಾದ ಅನೇಕ ದೋಷಗಳಿವೆ. ದೋಷಪೂರ್ಣತ್ವ ವಿಷಯದಲ್ಲಿ ಅವನಿಗಿಂತ ಶ್ರೇಷ್ಠರು ಯಾರೂ ಇಲ್ಲ. ಈ ದೋಷಗಳು ಅನಾದಿಕಾಲದಿಂದಲೂ ಇವೆ. ಸ್ವಾಭಾವಿಕವಾಗಿ ಅವನಿಗಿರುವ ವಿಷ್ಣುದ್ವೇಷದಿಂದ ವಿಷ್ಣುಭಕ್ತರನ್ನು ಸಹ ದ್ವೇಷಿಸುತ್ತಾನೆ. ಇತರರಲ್ಲಿ ಪ್ರವೇಶಿಸಿ ಅವರಿಂದಲೂ ದ್ವೇಷವನ್ನು ಮಾಡಿಸುತ್ತಾನೆ. ಎಲ್ಲ ಸಂದರ್ಭದಲ್ಲಿಯೂ ದೈತ್ಯರೂಪದಿಂದ ಎದುರಿನಲ್ಲಿ ಬಂದು ತೊಂದರೆ ಕೊಡುವುದು ಅವನ ಸ್ವಭಾವ ಅಲ್ಲ. ಸಾಧಕ ಜೀವರ ಒಳಗಡೆ ಪ್ರವೇಶಿಸಿ ಗೊತ್ತಾಗದ ರೀತಿಯಲ್ಲಿ ಅಜ್ಞಾನ ವಿಪರೀತ ಜ್ಞಾನಗಳನ್ನು ಹುಟ್ಟಿಸುತ್ತಾನೆ. ವಿಷ್ಣುವಿನ ಮತ್ತು ವಿಷ್ಣುಭಕ್ತರ ಆರಾಧನೆಯನ್ನು ಮಾಡಲು ಬಿಡುವುದಿಲ್ಲ. ಪ್ರತಿಯೊಬ್ಬರೂ ಸಹ ಕಲಿಯ ಬಾಧೆಗೆ ಒಳಗಾಗುತ್ತಾರೆ. ಆದರೆ ನಾಲ್ಕು ಮಂದಿಗೆ ಮಾತ್ರ ಕಲಿಯ ಬಾಧೆ ಇಲ್ಲ. ೧. ನಾರಾಯಣ, ೨. ಲಕ್ಷ್ಮೀದೇವಿ, ೩. ಬ್ರಹ್ಮಾದಿ ಋಜು ಜೀವರು, ೪. ಸರಸ್ವತಿ ಮೊದಲಾದ ಋಜುಪತ್ನಿಯರು. ಉಳಿದ ರುದ್ರಾದಿ ದೇವತೆಗಳಿಂದ ಆರಂಭಿಸಿ ಸಕಲ ಜೀವರು ಕಲಿಪ್ರವೇಶಕ್ಕೆ ಒಳಗಾಗುತ್ತಾರೆ. ರುದ್ರಾದಿ ದೇವತೆಗಳೂ ಸಹ ಕಲಿಪ್ರವೇಶ ಕಾಲದಲ್ಲಿ ವಿಷ್ಣುಭಕ್ತರ ದ್ರೋಹವನ್ನು ಮಾಡುತ್ತಾರೆ. ಆದರೆ ಅನಾದಿಕಾಲದಿಂದ ಅವರಲ್ಲಿರುವ ವಿಷ್ಣುಭಕ್ತಿಯ ಬಲದಿಂದ ಕೂಡಲೇ ಚೇತರಿಸಿಕೊಂಡು ಸನ್ಮಾರ್ಗ ನಿರತರಾಗುತ್ತಾರೆ. ರುದ್ರಾದಿ ದೇವತೆಗಳೇ ಕಲಿಯ ವಶರಾದ ಮೇಲೆ ಮನುಷ್ಯರ ಪಾಡೇನು?

ಈ ಕಲಿಯು ಬ್ರಹ್ಮದೇವರಿಂದ ಅವಧ್ಯತ್ವವರವನ್ನು ಪಡೆದಿದ್ದಾನೆ. ಇದರಿಂದ ಅವನ ಬಲವು ಹೆಚ್ಚಾಗಿದೆ. ಮತ್ತು ಸಮುದ್ರಮಥನ ಕಾಲದಲ್ಲಿ ಹಾಲಾಹಲವಿಷ ಹುಟ್ಟಿತು. ಇದು ಕಲಿಯ ಶರೀರ. ಇದಕ್ಕಿಂತ ಪೂರ್ವದಲ್ಲಿ ಸಾಧಾರಣ ಶರೀರದಿಂದ ಕೂಡಿದ ಕಲಿಗೆ ಸರ್ವಾಂಗಪುಷ್ಟವಾದ ಶರೀರವು ದೊರೆತ ಮೇಲೆ ಮತ್ತಷ್ಟು ಬಲ ಹೆಚ್ಚಾಯಿತು. ಕೃತಯುಗದಲ್ಲಿ ಕಲಿಯು ಅತ್ಯಂತ ದುರ್ಬಲನಾಗಿರುತ್ತಾನೆ. ಕಾಲ ಕಳೆಯುತ್ತಾ ಬಂದಂತೆ ಬಲಶಾಲಿಯಾಗುತ್ತಾನೆ. ಹರಿಯ ಸಂಕಲ್ಪವೇ ಹೀಗಿದೆ.

ದ್ವಾಪರ ಯುಗದ ಕೊನೆಯಲ್ಲಿ ಒಮ್ಮೆ ಭೀಕರ ಬರಗಾಲ ಬಂದಿತು. ವೈವಸ್ವತಮನುವಿನ ೨೮ನೆಯ ಮಹಾಯುಗದ ಮೂರನೇ ದ್ವಾಪರಯುಗದ ಕೊನೆಯಲ್ಲಿ ನಡೆದ ಘಟನೆ ಇದು. ಹನ್ನೆರಡು ವರ್ಷಗಳ ಕಾಲ ಬರಗಾಲವು ಎಲ್ಲೆಡೆ ವ್ಯಾಪಿಸಿದ್ದರೂ ಗೌತಮರ ಆಶ್ರಮವು ಮಾತ್ರ ತಪಃಶಕ್ತಿಯಿಂದ ಸಮೃದ್ಧವಾಗಿತ್ತು. ಅಹಲ್ಯಾಪತಿಗಳೂ ಶತಾನಂದಋಷಿಗಳ ತಂದೆಯೂ ಆದ

ಗೌತಮ ಋಷಿಗಳು ಬಹಳ ಸಂತೋಷದಿಂದ ಸಜ್ಜನಸ್ತೋಮವನ್ನು ವಾತ್ಸಲ್ಯದಿಂದ ರಕ್ಷಿಸಿದರು. ಕೆಲವು ಸಮಯದ ಅನಂತರ ಎಲ್ಲೆಡೆಯೂ ಸುಭಿಕ್ಷ ಪ್ರಾರಂಭವಾಯಿತು. ಬರಗಾಲ ತೊಲಗಿತು. ಪುನಃ ತಮ್ಮ ತಮ್ಮ ಊರುಗಳಿಗೆ ಹೋಗಲು ಸಜ್ಜನರು ಅಪೇಕ್ಷಿಪಟ್ಟರು. ಆದರೆ ಗೌತಮರು ಅನುಜ್ಞೆಯನ್ನು ನೀಡಲಿಲ್ಲ. ''ವಿನಾಶಕಾಲೇ ವಿಪರೀತಬುದ್ಧಿಃ'' ಎಂಬಂತೆ ಬ್ರಾಹ್ಮಣರೆಲ್ಲರೂ ಸೇರಿ ವಂಚಿಸಿ ಹೋಗಲು ನಿರ್ಣಯಿಸಿದರು. ರುದ್ರದೇವರ ತಲೆಯಲ್ಲಿರುವ ಗಂಗೆಯನ್ನು ಕಳಗಿಳಿಸಲು ಪಾರ್ವತಿಯಿಂದ ಪ್ರೇರಿತನಾದ ಗಣಪತಿಯು ಈ ಸಜ್ಜನರಿಗೆ ಮಾರ್ಗದರ್ಶನ ನೀಡಿದನು. ಅದರಂತೆಯೇ ಎಲ್ಲ ಸಜ್ಜನರು ತಮ್ಮ ತಪಃಶಕ್ತಿಯಿಂದ ಮಾಯಾಗೋವನ್ನು ನಿರ್ಮಿಸಿ ಗೌತಮರ ಬಳಿ ಹೋಗುವಂತೆ ಮಾಡಿದರು. ಗೌತಮರು ಮುಟ್ಟಿದ ಕ್ಷಣದಲ್ಲಿಯೇ ಹಸು ಸತ್ತು ಬಿದ್ದಿತು. ಗೋಹತ್ಯಾ ದೋಷವು ಗೌತಮ ಋಷಿಗಳಿಗೆ ಬಂದಿತೆಂಬ ಅಪವಾದ ಹಾಕಿ, ಗೌತಮರನ್ನು ಪರಿತ್ಯಾಗ ಮಾಡಿ ತಮ್ಮ ತಮ್ಮ ದೇಶಕ್ಕೆ ತೆರಳಿದರು. ಗೋಹತ್ಯೆಯಿಂದ ದುಃಖಗೊಂಡ ಋಷಿಗಳು ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಸಾಕ್ಷಾತ್ಕರಿಸಿಕೊಂಡರು. ಆವಾಗ ರುದ್ರದೇವರು ತನ್ನ ಜಟೆಯಲ್ಲಿದ್ದ ಗಂಗೆಯನ್ನು ಗೌತಮರಿಗೆ ನೀಡಿದರು. ಗೌತಮರು ಆ ಗಂಗೆಯನ್ನು ತಂದು ಗೋವಿಗೆ ಪ್ರೋಕ್ಷಿಸಿದಾಗ ಗೋವು ಬದುಕಿತು. ಗೋವಿಗೆ ಪ್ರೋಕ್ಷಣೆ ಮಾಡಿದ ಗಂಗೆಯು ದೊಡ್ಡನದಿಯಾಗಿ ಪ್ರವಹಿಸಿತು. ಗೌತಮರಿಗೆ ಗೋವನ್ನು ಕೊಟ್ಟ ಕಾರಣದಿಂದ 'ಗೋದಾ' ಎಂದು ವಾರಿಗೆ ಹೆಸರು ಬಂತು. ಗೋದಾವಾರಿಯು 'ಗೋದಾವರಿ'ಯಾಯಿತು. ಅನಂತರ ಗೌತಮರು ದಿವ್ಯದೃಷ್ಟಿಯಿಂದ ಬ್ರಾಹ್ಮಣರ ಕುತಂತ್ರವನ್ನು ತಿಳಿದು ''ಎಲ್ಲ ಬ್ರಾಹ್ಮಣರ ಜ್ಞಾನವು ನಾಶವಾಗಲಿ ಅಜ್ಞಾನಾಂಧಾಕಾರವು ವ್ಯಾಪಿಸಲಿ'' ಎಂದು ಭಯಂಕರಶಾಪವನ್ನೇ ನೀಡಿದರು. ಬ್ರಾಹ್ಮಣರೆಲ್ಲರೂ ವಿದ್ಯಾವಿಹೀನರಾಗಿ ಧರ್ಮಮಾರ್ಗದಿಂದ ಭ್ರಷ್ಟರಾದರು. ಗೌತಮರ ಈ ಶಾಪವು ಕಲಿಗೆ ವರರೂಪವಾಯಿತು. ಅಂದಿನಿಂದ ಕಲಿಯು ಸಂಪೂರ್ಣ ಬಲದಿಂದ ಸಜ್ಜನರ ಮನಸ್ಸಿನಲ್ಲಿ ನಿರ್ಭೀತನಾಗಿ ಪ್ರವೇಶಿಸಿ ಅಜ್ಞಾನ, ವಿಪರೀತ- ಜ್ಞಾನಗಳನ್ನು ಪ್ರಸಾರ ಮಾಡಿದನು. ಇದು ಕಲಿಗೆ ಪೂರ್ಣ ಬಲ ಬರಲು ಮತ್ತೊಂದು ಕಾರಣ.

ಈ ಕಾರಣಗಳಿಂದ ಬಲಿಷ್ಠನಾದ ಕಲಿಯ ವಶರಾದ ಎಲ್ಲ ಸಜ್ಜನರು ನರಕಭಾಗಿಗಳಾಗುವ ಸಂದರ್ಭ ಬಂದಿತು. ಆಗ ದೇವತೆಗಳು ಸಜ್ಜನರ ಮೇಲಿನ ಕರುಣೆಯಿಂದ ಶ್ರೀಹರಿಯನ್ನು ಭೂಲೋಕದಲ್ಲಿ ಅವತರಿಸುವಂತೆ ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆ ಭಗವಂತನು ಸತ್ಯವತಿ ಮತ್ತು ಪರಾಶರರಲ್ಲಿ ಬಾದರಾಯಣರೂಪದಿಂದ ಪ್ರಾದುರ್ಭವಿಸಿದರು.

ವಿಷ್ಣುಭಕ್ತನಾದ ವಸುರಾಜನು ಒಮ್ಮೆ ಬೇಟೆಗೆ ಹೋಗಿದ್ದನು. ಆವಾಗ ಹೆಂಡತಿಯ ಸ್ಮರಣೆಯಿಂದ ವೀರ್ಯಸ್ಖಲನವಾಯಿತು. ಅದನ್ನು ಒಂದು ಗೃಧ್ರಪಕ್ಷಿಯ ಮೂಲಕವಾಗಿ ತನ್ನ ಹೆಂಡತಿಗೆ ಕಳುಹಿಸಿದನು. ಮಾರ್ಗದಲ್ಲಿ ಗೃಧ್ರಪಕ್ಷಿಗೂ ಮತ್ತೊಂದು ಗೃಧ್ರಪಕ್ಷಿಗೂ ಜಗಳ- ವಾಯಿತು. ಆಗ ಗೃಧ್ರಪಕ್ಷಿಯ ಬಾಯಲ್ಲಿದ್ದ ವೀರ್ಯವು ಯಮುನಾ ನದಿಯಲ್ಲಿ ಬಿತ್ತು. ಅದನ್ನು

ಒಂದು ಮೀನು ನುಂಗಿತು. ಆ ವೀರ್ಯದಿಂದ ಗರ್ಭವನ್ನು ಧರಿಸಿದ ಆ ಮೀನನ್ನು ಬೆಸ್ತರ ರಾಜನೊಬ್ಬನು ಹಿಡಿದನು. ಅದರ ಹೊಟ್ಟೆಯಲ್ಲಿ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿತ್ತು. ಆ ಮಕ್ಕಳನ್ನು ವಸುರಾಜನಿಗೆ ಬೆಸ್ತರಾಜನು ಸಮರ್ಪಿಸಿದನು. ವಸುರಾಜನು ಗಂಡುಮಗುವನ್ನು ತಾನು ಇಟ್ಟುಕೊಂಡು ಹೆಣ್ಣುಮಗುವನ್ನು ಬೆಸ್ತರಾಜನಿಗೆ ಕೊಟ್ಟನು. ಆ ಗಂಡುಮಗನೆ ಮತ್ಸ್ಯರಾಜನೆಂದು ಪ್ರಸಿದ್ಧನಾದನು. ಹೆಣ್ಣುಮಗು ಸತ್ಯವತಿ ಎಂದು ಪ್ರಸಿದ್ಧಳಾದಳು.

ವಸಿಷ್ಠರ ಮೊಮ್ಮಗನೂ ಶಕ್ತಿಯ ಮಗನೂ ಆದ ಪರಾಶರರು ತಪಸ್ಸಿನಿಂದ ನಾರಾಯಣನನ್ನು ಸಂತೋಷಪಡಿಸಿದರು. ನಾರಾಯಣನು ತನಗೆ ಮಗನಾಗಿ ಅವತರಿಸಬೇಕೆಂದು ವರವನ್ನು ಪ್ರಾರ್ಥಿಸಿದರು. ನಾರಾಯಣನು "ಬೆಸ್ತರ ರಾಜನ ಮನೆಯಲ್ಲಿ ಬೆಳೆಯುತ್ತಿರುವ ವಸುರಾಜನ ಮಗಳಾದ ಸತ್ಯವತಿಯನ್ನು ವಿವಾಹವಾಗಬೇಕು. ಆಗ ಮಗನಾಗಿ ಅವತರಿಸುತ್ತೇನೆ" ಎಂದು ವರ ನೀಡಿದನು. ಅದರಂತೆ ಯಮುನಾನದಿಯ ಮಧ್ಯದಲ್ಲಿ ಸತ್ಯವತಿಯನ್ನು ಪ್ರೀತಿಸಿದ ಪರಾಶರರಿಗೆ ಶಾಸ್ತ್ರೋಕ್ತಕ್ರಮದಿಂದ ವಸುರಾಜನು ಸತ್ಯವತೀದೇವಿಯನ್ನು ವಿವಾಹ ಮಾಡಿಕೊಟ್ಟನು. ದ್ವೀಪದ ಮಧ್ಯದಲ್ಲಿ ಪರಾಶರರ ಸ್ಪರ್ಶಮಾತ್ರದಿಂದ ಸತ್ಯವತೀದೇವಿಯಲ್ಲಿ ನಾರಾಯಣನು ಅವತರಿಸಿ-ದ್ದರಿಂದ 'ದ್ವೈಪಾಯನ' ಎಂಬ ಬಿರುದು ಬಂತು. ಈ ಕಥೆಯು ಮಹಾಭಾರತದಲ್ಲಿ ಹೇಳಲ್ಪಟ್ಟಿದೆ.

ಅವತರಿಸಿದ ದ್ವೈಪಾಯನರು ಸ್ಮರಿಸಿದ ಕೂಡಲೇ ತನ್ನ ದರ್ಶನವನ್ನು ನೀಡುವುದಾಗಿ ತಂದೆ ತಾಯಿಗಳಿಗೆ ವರವನ್ನು ಕೊಟ್ಟರು. ಉಪನೀತರಾಗಿ ಮೇರುಪರ್ವತಕ್ಕೆ ತೆರಳಿದರು. ವೇದಗಳನ್ನು ಉದ್ಧಾರ ಮಾಡಿದರು. ವಿಭಾಗ ಮಾಡಿದರು. ವೇದಗಳಲ್ಲಿ ಹೇಳಿರುವ ಅರ್ಥವನ್ನು ದೃಷ್ಟಾಂತ-ಪೂರ್ವಕವಾಗಿ ಸಮರ್ಪಿಸಲು 'ಹದಿನೆಂಟುಪುರಾಣ'ಗಳನ್ನು ಮತ್ತು 'ಮಹಾಭಾರತ'ವನ್ನು ರಚಿಸಿದರು. ಸಕಲಶಾಸ್ತ್ರಾರ್ಥನಿರ್ಣಾಯಕವಾದ ಬ್ರಹ್ಮಸೂತ್ರವನ್ನು ರಚಿಸಿದರು. ಆ ಬ್ರಹ್ಮಸೂತ್ರ-ದಿಂದ ಎಲ್ಲ ಸಜ್ಜನರ ಅಜ್ಞಾನಾಂಧಕಾರವು ದೂರವಾಯಿತು.

ಸ್ಕಾಂದಪುರಾಣದಲ್ಲಿ ಇದರ ಉಲ್ಲೇಖವಿದೆ. ಬ್ರಹ್ಮಸೂತ್ರದ ಈ ಹಿನ್ನೆಲೆ ಕಥೆಯಿಂದ "ಸಮಗ್ರ ವೇದಗಳ ಸಾರವೇ ಬ್ರಹ್ಮಸೂತ್ರಗಳು; ಪರಮಾತ್ಮನೇ ವೇದವ್ಯಾಸದೇವರು" ಎಂಬ ಎರಡು ಅಂಶಗಳು ಪ್ರಧಾನವಾಗಿ ತಿಳಿಯುತ್ತವೆ. ಇದರಿಂದ ಬ್ರಹ್ಮಸೂತ್ರಗ್ರಂಥಕ್ಕೆ ಪರಮಪ್ರಾಮಾಣ್ಯವನ್ನು ಸಮರ್ಥಿಸಿದಂತಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು ಭಾಷ್ಯದ ಪ್ರಾರಂಭದಲ್ಲಿ ಪೀಠಿಕಾರೂಪವಾಗಿ ಬ್ರಹ್ಮಸೂತ್ರದ ಆವಿರ್ಭಾವ ಕಥೆಯನ್ನು ಉಲ್ಲೇಖಿಸಿದ್ದಾರೆ. ಆಶ್ಚರ್ಯವೆಂದರೆ ಶಂಕರಾಚಾರ್ಯರೇ ಆಗಲಿ, ರಾಮಾನುಜಾರ್ಯರೇ ಆಗಲಿ ಈ ಹಿನ್ನೆಲೆಯನ್ನು ಮತ್ತು ಹಿಂದೆ ಹೇಳಿದ ಎರಡು ಪ್ರಧಾನ ಅಂಶಗಳನ್ನು ಗಮನಿಸಿಯೇ ಇಲ್ಲ. ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನವೇ ಮುಖ್ಯಗುರಿ ಎಂಬ ಚಿಂತನೆಯೂ ಇಲ್ಲ. ಭಗವಂತನೇ ವೇದವ್ಯಾಸದೇವರೆಂಬ ಅರಿವೂ ಇಲ್ಲ. "ವ್ಯಾಸಃ ಅಪಾಂತರತಮಃ ಕಶ್ಚನ ಋಷಿಃ" (ವ್ಯಾಸರು ಯಾರೋ ಒಬ್ಬ ಋಷಿಗಳು)

ಎನ್ನುತ್ತಾರೆ. ಯಾರೋ ಒಬ್ಬ ಋಷಿಗಳಿಗೆ ಅನಂತ ವೇದಗಳನ್ನೆಲ್ಲ ವಿಭಾಗ ಮಾಡಿ ವೇದಗಳ ಸಾರವನ್ನು ಬ್ರಹ್ಮಸೂತ್ರಗಳ ಮೂಲಕ ಸೆರೆಹಿಡಿದು ಮಹಾಭಾರತಾದಿ ಗ್ರಂಥಗಳನ್ನು ರಚಿಸಲು ಹೇಗೆ ತಾನೇ ಸಾಧ್ಯ? "ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್‌ಭವೇತ್" ಎಂಬ ಪ್ರಮಾಣದಂತೆ ಭಗವಂತನೇ ವೇದವ್ಯಾಸದೇವರೆಂದು ಸ್ಪಷ್ಟವಾಗುತ್ತದೆ.

*ತೃತೀಯಂ ಯುಗಮಾರಭ್ಯ ವ್ಯಾಸೋ ಬಹುಷು ಜಜ್ಞಿವಾನ್ ।*
*ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ ।*
*ಅಷ್ಟಾವಿಂಶೇ ಯುಗೇ ಕೃಷ್ಣಃ ಸತ್ಯಾವತ್ಯಾಂ ಪರಾಶರಾತ್ ॥*
*ವ್ಯಾಸಾಚಾರ್ಯಸ್ತು ಪೂರ್ವೇಷು ಚರಮೇ ಸ್ವಯಮೇವ ತು ।*
*ವಿವ್ಯಾಸ ವೇದಾನ್ ಚಕ್ರೇ ಚ ಭಾರತಂ ವೇದಸಂಹಿತಮ್ ॥* ಇತಿ ಕೌರ್ಮೇ

ಹೀಗೆ ಶ್ರೀಮದಾಚಾರ್ಯರು ಹೇಳಿದಂತೆ ವೈವಸ್ವತಮನ್ವಂತರದಲ್ಲಿ ಭಗವಂತನು ಐದು ಬಾರಿ ವೇದವ್ಯಾಸರೂಪದಿಂದ ಅವತರಿಸಿದ್ದಾನೆ. ವೈವಸ್ವತಮನ್ವಂತರದಲ್ಲಿ ಒಟ್ಟು ೭೨ ಮಹಾಯುಗಗಳೂ ಉರುಳುತ್ತವೆ. ಅವುಗಳಲ್ಲಿ ಮೂರು, ಏಳು, ಹದಿನಾರು, ಇಪ್ಪತ್ತೈದು ಹಾಗೂ ಇಪ್ಪತ್ತೆಂಟನೆಯ ದ್ವಾಪರಯುಗಗಳ ಕೊನೆಯ ಕಾಲದಲ್ಲಿ ಸತ್ಯವತೀ ಪರಾಶರರಿಂದ ಭಗವಂತನು ಅವತರಿಸುತ್ತಾನೆ. ಪ್ರತಿಬಾರಿಯೂ ವೇದಗಳನ್ನು ವಿಭಾಗಿಸಿ ಬ್ರಹ್ಮಸೂತ್ರಗಳನ್ನು ರಚಿಸಿ ಮಹಾಭಾರತಾದಿ ಗ್ರಂಥಗಳನ್ನೂ ರಚನೆ ಮಾಡುತ್ತಾನೆ.

ವಾಙ್ಮಯಪ್ರಪಂಚದಲ್ಲಿ ಬ್ರಹ್ಮಸೂತ್ರಗಳಿಗೆ ವಿಶಿಷ್ಟವಾದ ಸ್ಥಾನಮಾನವಿದೆ. ಅನೇಕ ಸಿದ್ಧಾಂತಗಳ ಆಧಾರಸ್ತಂಭವಾಗಿವೆ. "ಸಕಲ ವೇದಗಳೂ ಭಗವಂತನನ್ನೇ ಸಾರುತ್ತವೆ" ಎಂದು ಸಿದ್ಧವಾಗಬೇಕಾದರೆ ಬ್ರಹ್ಮಸೂತ್ರಗಳೇ ದಾರಿದೀಪ. ಆದ್ದರಿಂದಲೇ ಬ್ರಹ್ಮಸೂತ್ರಗಳಿಗೆ ಮತ್ತೊಂದು ಬಿರುದು 'ಅಪರವಿದ್ಯಾ" ಎಂದು. ಭಗವಂತನನ್ನು ಬಿಟ್ಟು ಪ್ರಪಂಚದ ಕಡೆ ಧಾವಿಸುವ ವೇದವನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಿ ಕಟ್ಟಿಹಾಕುವ ಸೂತ್ರಗಳಿವು. ಒಂದೊಂದು ಸೂತ್ರಗಳೂ ಸಹ ಹರಿಮಂದಿರಗಳಾಗಿವೆ. ಪ್ರತಿಯೊಂದು ಸೂತ್ರಗಳ ಒಳಗಡೆ ಭಗವಂತನ ಒಂದೊಂದು ವಿಭೂತಿ ರೂಪವು ಅಡಕವಾಗಿವೆ. ಒಂದು ಸೂತ್ರವನ್ನು ಉಚ್ಚರಿಸಿದರೆ ನೂರು ಗಾಯತ್ರಿ ಜಪದ ಪುಣ್ಯವೆನ್ನುತ್ತಾರೆ ಮಹಾತ್ಮರು. ಅನೇಕ ಸೂತ್ರಗ್ರಂಥಗಳಲ್ಲಿ ಬ್ರಹ್ಮಸೂತ್ರವೇ ಪ್ರಧಾನ ಸ್ಥಾನಹೊಂದಿದೆ. ಅನೇಕ ವ್ಯಾಸರ ಮಧ್ಯದಲ್ಲಿ ವ್ಯಾಸರೆಂದರೆ ಬಾದರಾಯಣರು ಹೇಗೋ ಅದರಂತೆ ಅನೇಕ ಸೂತ್ರಗ್ರಂಥಗಳ ಮಧ್ಯದಲ್ಲಿ ಸೂತ್ರಗಳೆಂದರೆ ಬ್ರಹ್ಮಸೂತ್ರಗಳೇ. ಬೇರೆ ಸೂತ್ರಗಳನ್ನು ಕೇವಲ ಸೂತ್ರಶಬ್ದದಿಂದ ಯಾರೂ ಹೆಸರಿಸುವುದಿಲ್ಲ. ಜೈಮಿನಿಸೂತ್ರ, ವೈಶೇಷಿಕಸೂತ್ರ ಹೀಗೆ ವಿಶೇಷಣವನ್ನು ಸೇರಿಸಿಯೇ ಹೆಸರಿಸುತ್ತಾರೆ. ಆದರೆ ಬ್ರಹ್ಮಸೂತ್ರಗಳಿಗೆ ಹೀಗಲ್ಲ. ಸೂತ್ರವೆಂದರೆ ಸಾಕು ಅವು ಬ್ರಹ್ಮಸೂತ್ರಗಳೇ. ಇದನ್ನೇ ಸ್ಕಾಂದಪುರಾಣವು --

*ನಿರ್ವಿಶೇಷಿತಸೂತ್ರತ್ವಂ ಬ್ರಹ್ಮಸೂತ್ರಸ್ಯ ಚಾಪ್ಯಥಃ ।*
*ಯಥಾ ವ್ಯಾಸತ್ವಮೇಕಸ್ಯ ಕೃಷ್ಣಸ್ಯಾನ್ಯೇ ವಿಶೇಷಣಾತ್ ।*
*ಸವಿಶೇಷಣಸೂತ್ರಾಣಿ ಹ್ಯಪರಾಣಿ ವಿದೋ ವಿದುಃ ॥* ಎಂದು ಹೇಳಿದೆ.

ಈ ಬ್ರಹ್ಮಸೂತ್ರಗಳನ್ನು ವೇದವ್ಯಾಸರು ರಚಿಸಿದ್ದಾರೆಂಬ ವಿಷಯದಲ್ಲಿ ವಿಪ್ರತಿಪತ್ತಿಯಿಲ್ಲ. ಆದರೆ ಸೂತ್ರಗಳ ಸಂಖ್ಯೆ ವಿಷಯದಲ್ಲಿ ಒಬ್ಬೊಬ್ಬರು ಒಂದೊಂದು ನಿಲುವನ್ನು ತಾಳಿದ್ದಾರೆ. ಭಾಸ್ಕರಾಚಾರ್ಯರು ೫೪೪, ವಿಜ್ಞಾನಭಿಕ್ಷುಗಳು ೫೫೬, ನಿಂಬಾರ್ಕಾಚಾರ್ಯರು ೫೪೯, ವಲ್ಲಭಾಚಾರ್ಯರು ೫೫೫, ಶ್ರೀಕಂಠರು ೫೪೫, ಶಂಕರಾಚಾರ್ಯರು ೫೫೫, ರಾಮಾನುಜಾಚಾರ್ಯರು ೫೪೫ ಎಂದು ತಿಳಿಸಿರುತ್ತಾರೆ. ಶ್ರೀಮದಾಚಾರ್ಯರು ಮಾತ್ರ ೫೬೪ ಸೂತ್ರಗಳೆಂದು ಘೋಷಿಸಿದ್ದಾರೆ. ವೇದವ್ಯಾಸರ ಅಭಿಪ್ರಾಯವೂ ೫೬೪ ಎಂಬುದೇ ಆಗಿದೆಯೆಂದು ಸ್ಪಷ್ಟವಾಗಿ ಶ್ರೀಮದಾಚಾರ್ಯರು ಪ್ರತಿಪಾದಿಸಿದ್ದಾರೆ. ಅಧ್ಯಾಯ ಪಾದಗಳು ೧೬ ಎಂಬ ವಿಷಯದಲ್ಲಿ ವಿವಾದವಿಲ್ಲ. ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ, ಫಲಾಧ್ಯಾಯ ಎಂಬ ನಾಲ್ಕು ಅಧ್ಯಾಯಗಳೆಂದು ಎಲ್ಲರೂ ಒಪ್ಪಿದ್ದಾರೆ.

ಬ್ರಹ್ಮಸೂತ್ರಕ್ಕೆ ಹತ್ತಾರು ಮಂದಿಗಳು ಹತ್ತಾರು ಭಾಷ್ಯಗಳನ್ನು ಬರೆದಿದ್ದಾರೆ. ಆದರೆ ಸೂತ್ರಕ್ಕೂ ಆ ಭಾಷ್ಯಗಳಿಗೂ ಪರಸ್ಪರ ಸಂಗತಿ ಇರುವುದಿಲ್ಲ. ಒಂದು ರೀತಿ ಅಂಧಪರಂಪರೆ. ಒಬ್ಬ ಉಗುಳಿದ ಉಚ್ಛಿಷ್ಟವನ್ನೇ ಮತ್ತೊಬ್ಬ ಆಸ್ವಾದಿಸುತ್ತಾನೆ. ಆದ್ದರಿಂದಲೇ ಸೂತ್ರಗಳ ನಿಜಾಭಿಪ್ರಾಯವನ್ನು ತೆರೆದು ತೋರಿಸಲು ಸತ್ಯಲೋಕದಿಂದ ವಾಯುದೇವರ ಆವಿರ್ಭಾವ ಅನಿವಾರ್ಯವಾಯಿತು. ಶ್ರೀಮದಾಚಾರ್ಯರು "ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ" ಎಂದು ಸೂತ್ರಗಳಿರುವ ಪ್ರಾಶಸ್ತ್ಯವನ್ನು ಎತ್ತಿ ತೋರಿಸಿದ್ದಾರೆ. ಸೂತ್ರಗಳಂತಹ ಪ್ರಮಾಣತಮಗ್ರಂಥ ಮತ್ತೊಂದಿಲ್ಲ. ಶ್ರುತಿ ಸೂತ್ರಗಳಿಗೆ ವಿರೋಧ ಬಂದಾಗ ಸೂತ್ರವೇ ಗೆಲ್ಲುತ್ತದೆಂದು ಸಾಧಿಸಿದ್ದಾರೆ. ಆದರೆ ಅದ್ವೈತಸಿದ್ಧಾಂತದಲ್ಲಿ ಶ್ರುತಿ ಪ್ರಧಾನವೆಂದು, ಸೂತ್ರ ಗೌಣವೆಂದು ಸಮರ್ಥಿಸುತ್ತಾರೆ. ಶ್ರೀಮದಾಚಾರ್ಯರು ಬಿಟ್ಟರೆ ಬಹುಷಃ ಇತರ ಯಾವುದೇ ಮತಾಚಾರ್ಯರು ಸೂತ್ರಗಳಿಗೆ ಅದ್ವಿತೀಯ ಸ್ಥಾನಮಾನಗಳನ್ನು ನೀಡಿಲ್ಲ.

ಸೂತ್ರಲಕ್ಷಣ -

*ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।*
*ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥*

ಕ್ಲುಪ್ತವಾದ ಶಬ್ದಗಳಿಂದ ಸಂದೇಹವಿಲ್ಲದಂತೆ ವಿಶಿಷ್ಟವಾದ ಪ್ರಮೇಯವನ್ನು ನಿರೂಪಿಸಬೇಕು. ವೇದದ ಪ್ರತಿಯೊಂದು ಶಾಖೆಗಳ ಅರ್ಥವನ್ನು ನಿರ್ಣಯಿಸಬೇಕು. ವ್ಯರ್ಥವಾದ ಅಕ್ಷರಗಳಿರ-ಬಾರದು. ದೋಷರಹಿತವಾಗಿರಬೇಕು. ಇದನ್ನು ಜ್ಞಾನಿಗಳು ಸೂತ್ರಗಳೆನ್ನುತ್ತಾರೆ. ಈ ಸೂತ್ರಲಕ್ಷಣವು

ಬ್ರಹ್ಮಸೂತ್ರಗಳಷ್ಟೇ ಸಮನ್ವಯವಾಗುತ್ತದೆ ಹೊರತು, ಉಳಿದ ಸೂತ್ರಗಳಲ್ಲಿ ಸಂಪೂರ್ಣ ಸಮನ್ವಯವಾಗುವುದಿಲ್ಲ. ಜೈಮಿನ್ಯಾದಿ ಸೂತ್ರಗಳು ವೇದವಿಚಾರಕ್ಕಾಗಿ ಹೊರಟಿದ್ದರೂ ವೇದದ ಏಕದೇಶವನ್ನಷ್ಟೇ ನಿರ್ಣಯಿಸುತ್ತವೆ. ವೇದದ ಎಲ್ಲಾ ಶಾಖೆಗಳ ತಾತ್ಪರ್ಯವನ್ನು ನಿರ್ಣಯಿಸುವುದಿಲ್ಲ. ಆದರೆ ಬ್ರಹ್ಮಸೂತ್ರಗಳು ಸಮಗ್ರ ವೇದಗಳ ತಾತ್ಪರ್ಯವನ್ನು ನಿರ್ಣಯಿಸುವುದರ ಜೊತೆಗೆ ಆ ವೇದದಲ್ಲಿರುವ ಪ್ರಕರಣ, ವಾಕ್ಯ, ಪದ, ಅಕ್ಷರ, ಪ್ರತ್ಯಯ ಇವುಗಳ ತಾತ್ಪರ್ಯವನ್ನು ಮತ್ತು ಅರ್ಥವನ್ನು ನಿರ್ಣಯಿಸುತ್ತವೆ. ಈ ವೈಶಿಷ್ಟ್ಯವು ಇತರ ಯಾವುದೇ ಸೂತ್ರಗ್ರಂಥಗಳಿಗೂ ಇರುವುದಿಲ್ಲ. ಅಷ್ಟೇ ಅಲ್ಲದೆ ಬ್ರಹ್ಮಸೂತ್ರಗ್ರಂಥವನ್ನು ಆಶ್ರಯಿಸಿಯೇ ಉಳಿದ ಸೂತ್ರಗಳ ಪ್ರಾಮಾಣ್ಯವು ಸಿದ್ಧಿಸುತ್ತದೆ.

*ವ್ಯಾಸಚಿತ್ತಸ್ಥಿತಾಕಾಶ ಅವಚ್ಛಿನ್ನಾನಿ ಕಾನಿಚಿತ್ ।*
*ಅನ್ಯೇ ವ್ಯವಹರಂತ್ಯೇತಾನಿ ಊರೀಕೃತ್ಯ ಗೃಹಾದಿವತ್ ॥*

ಆಕಾಶ ವ್ಯಾಪ್ತವಾಗಿದ್ದರೂ 'ನಮ್ಮ ಮನೆಯಲ್ಲಿರುವ ಆಕಾಶ ನಮ್ಮದು' ಎಂದು ಹೇಳುವಂತೆ ಶ್ರೀವೇದವ್ಯಾಸರ ಮನಸ್ಸಿನಲ್ಲಿರುವ ಅನೇಕ ಅಭಿಪ್ರಾಯವಿಶೇಷಗಳನ್ನು ಒಬ್ಬೊಬ್ಬ ಶಿಷ್ಯರು ಸ್ವೀಕರಿಸಿ ತಮ್ಮ ಮತವನ್ನಾಗಿ ಹೇಳುತ್ತಾರೆ.

*ಸೂತ್ರಪ್ರಾಮಾಣ್ಯ -*

ಯಾವುದೇ ಶಬ್ದಕ್ಕೆ ಮೂರು ಬಗೆಯಲ್ಲಿ ಪ್ರಾಮಾಣ್ಯವನ್ನು ಹೇಳಬೇಕು. ಆಪ್ತಮೂಲಕವಾಗಿ, ಶ್ರುತಿಮೂಲಕವಾಗಿ ಮತ್ತು ಯುಕ್ತಿಮೂಲಕವಾಗಿ. ಈ ಮೂರರಲ್ಲಿ ಒಂದು ಬಗೆಯ ಪ್ರಾಮಾಣ್ಯವನ್ನು ಹೇಳಿದರೂ ಸಾಕು. ಮೂರನ್ನು ಹೇಳಬೇಕೆಂದೇನೂ ಇಲ್ಲ. ಆದರೆ ಬ್ರಹ್ಮಸೂತ್ರಕ್ಕೆ ಮೂರೂ ಬಗೆಯ ಪ್ರಾಮಾಣ್ಯವಿರುವುದು ಅತ್ಯಾಶ್ಚರ್ಯಕರ ಸಂಗತಿ -

*ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।*
*ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ ।*
*ಯುಕ್ತಿಮೂಲತಯಾ ಚೈವ ಪ್ರಮಾಣ್ಯಂ ತ್ರಿವಿಧಂ ಮಹತ್ ॥*
*ದೃಶ್ಯತೇ ಬ್ರಹ್ಮಸೂತ್ರಾಣಾಂ ಏಕಧಾऽನ್ಯತ್ರ ಸರ್ವಶಃ ॥*

ಶ್ರುತಿನಿರ್ಣಾಯಕಗಳಾಗಿ ಯುಕ್ತಿಪ್ರದರ್ಶಕವಾದ್ದರಿಂದ ಶ್ರುತಿಮೂಲಕವೂ, ಯುಕ್ತಿಮೂಲಕವೂ ಆಗಿದೆ. ಸಾಕ್ಷಾತ್ ವಿಷ್ಣುವೇ ವೇದವ್ಯಾಸರೂಪದಿಂದ ಬ್ರಹ್ಮಸೂತ್ರಗಳನ್ನು ರಚಿಸಿದ್ದರಿಂದ ಆಪ್ತಿಮೂಲಕತ್ವವು ಸುಸ್ಪಷ್ಟ. ಮತ್ತು ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳೂ ಸಹ ಶಬ್ದಪ್ರಮಾಣ್ಯಕ್ಕೆ ಸಾಧಕಗಳಾಗಿವೆ. ಬ್ರಹ್ಮಸೂತ್ರಗಳನ್ನು ರಚಿಸಿದ ವೇದವ್ಯಾಸರು ವಿಷ್ಣುವಿನ ಅವತಾರರಾದ್ದರಿಂದ ವಕ್ತ್ರಾನುಕೂಲ್ಯವಂತು ಇದ್ದೇ ಇದೆ. ಈ ಶಾಸ್ತ್ರಕ್ಕೆ

ಚತುರ್ಮುಖಬ್ರಹ್ಮದೇವರೇ ಮೊದಲಾದವರು ಶ್ರೋತೃಗಳಾದ್ದರಿಂದ ಶ್ರೋತ್ರಾನುಕೂಲ್ಯವೂ ಇದೆ. ಅಜ್ಞಾನಂಧಾಕಾರದಲ್ಲಿ ಜಗತ್ತು ಮುಳುಗಿದಾಗ ಚತುರ್ಮುಖಾದಿಗಳ ಪ್ರಾರ್ಥನೆಯಂತೆ ಈ ಗ್ರಂಥವನ್ನು ರಚಿಸಿದ್ದರಿಂದ ಪ್ರಸಂಗಾನುಕೂಲ್ಯವೂ ಚೆನ್ನಾಗಿಯೇ ಇದೆ. ಆದ್ದರಿಂದ ಸಕಲಮುಖಗಳಲ್ಲಿಯೂ ಬ್ರಹ್ಮಸೂತ್ರಗ್ರಂಥಕ್ಕೆ ನಿರವಧಿಕಪ್ರಾಮಾಣ್ಯವು ಶತಸಿದ್ಧವಾಗಿದೆ.

## ಶ್ರೀಮಧ್ವಾಚಾರ್ಯರು - ಬ್ರಹ್ಮಸೂತ್ರಭಾಷ್ಯ

ಬ್ರಹ್ಮಸೂತ್ರಕ್ಕೆ ಇಪ್ಪತ್ತೆರಡು ಭಾಷ್ಯಗಳಿವೆ. ಹಿಂದಿನ ಇಪ್ಪತ್ತೊಂದು ಭಾಷ್ಯಗಳ ಕೂಲಂಕಷ ವಿಮರ್ಶಾತ್ಮಕವಾಗಿ ಹೊರಟ ಗ್ರಂಥವೇ ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯ. ಶ್ರುತಿ ಸೂತ್ರಗಳ ಸಾಮರಸ್ಯವನ್ನು ಸಮನ್ವಯದ ಸುಂದರ ವಿಶ್ಲೇಷಣೆಯನ್ನು ಶ್ರೀಮದಾಚಾರ್ಯರ ಭಾಷ್ಯದಲ್ಲಿ ಮಾತ್ರ ಕಾಣಲು ಸಾಧ್ಯ. ಮಿತವಾದ ಪದಗಳು, ಹಿತವಾದ ಅರ್ಥಗಳು, ಗಂಭೀರವಾದ ಚಿಂತನೆಗಳು ಈ ಭಾಷ್ಯದ ವೈಶಿಷ್ಟ್ಯ. ಶ್ರೀಮದಾಚಾರ್ಯರು ರಚಿಸಿರುವ ಸರ್ವಮೂಲಗ್ರಂಥಗಳಲ್ಲಿ ಬ್ರಹ್ಮಸೂತ್ರಭಾಷ್ಯವು ಎರಡನೆಯದು. ಗೀತಾಭಾಷ್ಯವನ್ನು ರಚಿಸಿ ವೇದವ್ಯಾಸದೇವರಿಗೆ ಅರ್ಪಿಸಿದಾಗ ಸಂತುಷ್ಟರಾದ ವೇದವ್ಯಾಸದೇವರು ಆದಷ್ಟು ಬೇಗ ತಡಮಾಡದೆ ಬ್ರಹ್ಮಸೂತ್ರವನ್ನು ಬರೆಯಿರಿ ಎಂದು ಆಜ್ಞಾಪಿಸಿದರು. 'ಕುರು ಸೂತ್ರಭಾಷ್ಯಮವಿಲಂಬಿತಂ ವ್ರಜೇಃ' ಎಂದು ವ್ಯಾಸರಿಂದ ಆದೇಶ ಪಡೆದ ಶ್ರೀಮದಾಚಾರ್ಯರು ಕೂಡಲೇ ಬ್ರಹ್ಮಸೂತ್ರಭಾಷ್ಯವನ್ನು ಬರೆದರು. ಅಷ್ಟರಲ್ಲಿ ತೃಪ್ತಿ ಕಾಣದ ಆಚಾರ್ಯರು ಬ್ರಹ್ಮಸೂತ್ರಗಳ ಮೇಲೆ ಪುನಃ ಮೂರು ಭಾಷ್ಯಗಳನ್ನು ಬರೆದರು. ಅಣುಭಾಷ್ಯ, ನ್ಯಾಯವಿವರಣ, ಅನುವ್ಯಾಖ್ಯಾನ ಎಂದು. 'ಗ್ರಂಥೋಽಯಽಮಪಿ ಬಹ್ವರ್ಥಃ ಭಾಷ್ಯಂ ಚಾತ್ಯರ್ಥವಿಸ್ತರಂ' ಭಾಷ್ಯದ ಅರ್ಥವು ಅನಂತವಾಗಿದೆಯೆಂದು ಆಚಾರ್ಯರೇ ಹಿತವಾಗಿ ನುಡಿದ್ದಾರೆ. ಆದ್ದರಿಂದ ಎಷ್ಟು ಮನನ ಮಾಡಿದರೂ ಕಮ್ಮಿ, ಎಂತಹ ವಿದ್ವಾಂಸರಿಗೂ ಅರ್ಥವಾಗದಷ್ಟು ಆಳ, ಸಾಮಾನ್ಯಜನರಿಗೂ ಸುಲಭವಾಗಿ ಅರ್ಥೈಸುವ ಸರಳ ಶೈಲಿ. ಜಗಿಯಲಾಗದ ಕಬ್ಬಿಣದ ಕಡಲೆಯಾದರೂ ಅರ್ಥಗಳ ನವರತ್ನಗಳ ಸೌಂದರ್ಯ ತುಂಬಿ ತುಳುಕಿದೆ. ಶ್ರೀಮದಾಚಾರ್ಯರ ಸೂತ್ರಭಾಷ್ಯವು ಪೂರ್ವಾಗ್ರಹದಿಂದ ಪೀಡಿತವಾಗಿಲ್ಲ. ಸ್ವಕಪೋಲಕಲ್ಪಿತ ಅರ್ಥಗಳನ್ನು ಒಮ್ಮೆಯೂ ಹೇಳಿಲ್ಲ. ತಾವು ಸೂತ್ರಕ್ಕೆ ವ್ಯಾಖ್ಯಾನಿಸುವಾಗ ಪ್ರತಿಯೊಂದು ಅರ್ಥಕ್ಕೂ ಶ್ರುತಿ ಸ್ಮೃತಿಗಳ ಆಧಾರವನ್ನು ನೀಡಿದ್ದಾರೆ. ತಮ್ಮ ಮಾತುಗಳೇ ಕಡಿಮೆ. ಶ್ರುತಿ ಸ್ಮೃತಿ ಪುರಾಣಾದಿಗಳನ್ನು ಸೂತ್ರಕ್ಕೆ ಅನುಗುಣವಾಗಿ ಜೋಡಿಸಿ ಸೂತ್ರದ ನಿಜಾರ್ಥವನ್ನು ಎಲ್ಲರಿಗೂ ಮನಮುಟ್ಟುವಂತೆ ತೋರಿಸಿದ್ದಾರೆ. ಆದರೆ ಇತರ ಮತಾಚಾರ್ಯರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದರೂ ತಾವು ಹೇಳಿದ ಅರ್ಥಕ್ಕೆ ಸರಿಯಾದ ಆಧಾರವನ್ನೇ ನೀಡುವುದಿಲ್ಲ.

ಸೂತ್ರಗಳಿಗೆ ಮಧ್ವಭಾಷ್ಯವೂ ಸೇರಿದಂತೆ ಒಟ್ಟು ಇಪ್ಪತ್ತೆರಡು ಭಾಷ್ಯಗಳಿವೆ. ಆದರೆ

ಪ್ರಧಾನವಾದ ಮೂರು ಭಾಷ್ಯಗಳನ್ನು ಬಿಟ್ಟರೆ ಉಳಿದವು ಇಂದು ಉಪಲಬ್ಧವಿಲ್ಲ. ಆದರೆ ಅವುಗಳ ಹೆಸರನ್ನಷ್ಟೇ ಮಧ್ವವಿಜಯದ ಛಲಾರಿವ್ಯಾಖ್ಯಾನದಲ್ಲಿ ಉಲ್ಲೇಖಿಸಿದ್ದಾರೆ.

೧. ಭಾರತೀವಿಜಯ, ೨. ಸಂವಿದಾನಂದ, ೩. ಬ್ರಹ್ಮಘೋಷ, ೪. ಶತಾನಂದ, ೫. ಉದ್ವರ್ತ, ೬. ವಿಜಯ, ೭. ರುದ್ರಭಟ್ಟೀಯ, ೮. ವಾಮನೀಯ, ೯. ಯಾದವಪ್ರಕಾಶ, ೧೦. ಮಾಧವದಾಸೀಯ, ೧೧. ಪ್ರಪಂಚ, ೧೨. ದ್ರಾವಿಡ, ೧೩. ಬ್ರಹ್ಮದತ್ತೀಯ, ೧೪. ಭಾಸ್ಕರೀಯ, ೧೫. ಪಿಶಾಚೀಯ, ೧೬. ವೃತ್ತಿಪ್ರಕಾಶ, ೧೭. ವಿಜಯಭಟ್ಟೀಯ, ೧೮, ವಿಷ್ಣುಕ್ರಾಂತೀಯ, ೧೯, ವಾದೀಂದ್ರೀಯ, ೨೦. ಶಾಂಕರೀಯ, ೨೧. ರಾಮಾನುಜೀಯ, ೨೨. ಶ್ರೀಮದಾನಂದತೀರ್ಥೀಯ - ಎಂದು. ಆದರೆ ಇಂದು ಶಾಂಕರೀಯ, ರಾಮಾನುಜೀಯ ಹಾಗೂ ಆನಂದತೀರ್ಥೀಯ ಭಾಷ್ಯಗಳಷ್ಟೇ ಉಪಲಬ್ಧವಾಗಿದೆ. ಶಂಕರಾಚಾರ್ಯರು ಏಳನೆಯ ಶತಮಾನದವರಾಗಿದ್ದಾರೆಂದು ಶಂಕರವಿಜಯದಲ್ಲಿ ಹೇಳಿದ್ದಾರೆ. ರಾಮಾನುಜಾಚಾರ್ಯರು ಹತ್ತನೆಯ ಶತಮಾನದವರಾಗಿದ್ದರೆಂದು ಅವರ ಚರಿತ್ರೆಯಿಂದ ತಿಳಿಯುತ್ತದೆ. ಶ್ರೀಮದಾಚಾರ್ಯರು ಹನ್ನೆರಡನೆಯ ಶತಮಾನದಲ್ಲಿ ಅವತರಿಸಿದರೆಂದು ವಿದ್ವಾಂಸರು ಹೇಳುತ್ತಾರೆ. ಆದ್ದರಿಂದ ಇಂದಿಗೆ ಶಂಕರಾಚಾರ್ಯರ ಭಾಷ್ಯವು ಹದಿಮೂರು ಶತಮಾನಗಳ ಪೂರ್ವಭಾವಿಯೆಂದು, ರಾಮಾನುಜಾಚಾರ್ಯರ ಭಾಷ್ಯವು ಹತ್ತು ಶತಮಾನಗಳ ಪೂರ್ವಭಾವಿಯೆಂದು, ಶ್ರೀಮದಾಚಾರ್ಯರ ಭಾಷ್ಯವು ಎಂಟು ಶತಮಾನಗಳ ಪೂರ್ವಭಾವಿಯೆಂದು ತಿಳಿಯುತ್ತದೆ. ಯುಕ್ತಿಮಲ್ಲಿಕಾಗ್ರಂಥದಲ್ಲಿ ಶ್ರೀವಾದಿರಾಜತೀರ್ಥಶ್ರೀಪಾದಂಗಳವರು ಹೇಳಿದಂತೆ 'ಅಂತೇ ಸಿದ್ಧಸ್ತು ಸಿದ್ಧಾಂತಃ ಮಧ್ವಸ್ಯಾಗಮ ಏವ ಹಿ' - ಶ್ರೀಮದಾಚಾರ್ಯರ ಭಾಷ್ಯವೇ ಕೊನೆಯ ಭಾಷ್ಯ; ಆದ್ದರಿಂದ ಉಳಿದ ಎಲ್ಲ ಭಾಷ್ಯಗಳನ್ನು ಮುಂದೆ ಬರಬಹುದಾದ ಭಾಷ್ಯಗಳನ್ನೂ ಧೂಳಿಪಟಮಾಡುವ ಸಾಮರ್ಥ್ಯ ಹೊಂದಿರುವ ಏಕೈಕ ಕೃತಿ.

ಶ್ರೀಮದಾಚಾರ್ಯರು ಭಾಷ್ಯದ ಪ್ರಾರಂಭದಲ್ಲಿ ನಾರಾಯಣನನ್ನು ಭಕ್ತಿಯಿಂದ ನಮಸ್ಕರಿಸುತ್ತಾರೆ. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡಿ ಅದರಿಂದ ಭಗವಂತನನ್ನು ಹೇಗೆ ಉಪಾಸನೆ ಮಾಡಬೇಕು ಎಂಬುದನ್ನು ಪ್ರಥಮ ಶ್ಲೋಕದಲ್ಲಿಯೇ ತೋರಿಸಿದ್ದಾರೆ. ಸಮಗ್ರಶಾಸ್ತ್ರದ ಸಾರವನ್ನು ಸೆರೆ ಹಿಡಿದಿದ್ದಾರೆ. ಮಂಗಳಮಯ ಭಗವಂತನನ್ನು ಹೀಗೆ ಪ್ರಾರಂಭದಲ್ಲಿ ಕೊಂಡಾಡಿದ್ದರಿಂದ ಶ್ರೀಮದಾಚಾರ್ಯರ ಭಾಷ್ಯವು ಪರಮಮಂಗಲವಾಗಿದೆ. ಬಹಳ ಆಶ್ಚರ್ಯ ಸಂಗತಿ ಎಂದರೆ ಶಂಕರಾಚಾರ್ಯರ ಭಾಷ್ಯ ಅಮಂಗಲ. ಇದನ್ನು ನಾವೇನು ಹೇಳಬೇಕಾಗಿಲ್ಲ. ಅವರೇ ಹೇಳಿಕೊಳ್ಳುತ್ತಾರೆ. ಶಂಕರಾಚಾರ್ಯರು ತಮ್ಮ ಭಾಷ್ಯದ ಪ್ರಾರಂಭದಲ್ಲಿ ಮಂಗಳಾಚರಣೆಯನ್ನೇ ಮಾಡಿಲ್ಲ. ಹೊರತಾಗಿ ಅಧ್ಯಾಸಭಾಷ್ಯದ ಮೂಲಕ ಸುಳ್ಳನ್ನೇ ವರ್ಣಿಸಿದ್ದಾರೆ. ಶಂಕರಾಚಾರ್ಯರ ಭಾಷ್ಯಕ್ಕೆ ವ್ಯಾಖ್ಯಾನ ಮಾಡುವ ಟೀಕಾಕಾರರು ''ಗುಣೇ ತ್ವನ್ಯಾಯಕಲ್ಪನಾ'' ಎಂಬ ನಿಯಮಕ್ಕೆ ಜೋತುಬಿದ್ದು, ಶ್ರುತಿಸೂತ್ರಗಳಿಗೆ ಏಕಮತ್ಯವಿಲ್ಲವೆಂದು ಸಾರಿದ್ದಾರೆ. ಬ್ರಹ್ಮಸೂತ್ರ ಹೊರಟಿರುವುದೇ ಸೂತ್ರಾರ್ಥನಿರ್ಣಯಕ್ಕಾಗಿ, ಹೀಗಿರುವಾಗ ಸೂತ್ರವನ್ನು ಶ್ರುತಿಗೆ

ಜೋಡಿಸಬೇಕಿಲ್ಲವೆಂಬ ಇವರ ಹೇಳಿಕೆ 'ಪ್ರಥಮಕವಲೇ ಮಕ್ಷಿಕಾಪಾತಃ' ಎಂಬಂತೆ ಆಗಿದೆ. ಈ ವಿಷಯದಲ್ಲಿ ಕುತೂಹಲದಿಂದ ಕೆಲವು ಅಂಶಗಳನ್ನು ವಿಮರ್ಶಿಸೋಣ.

೧. ಭಾಷ್ಯಕಾರರು ತಾವು ವ್ಯಾಖ್ಯಾನ ಮಾಡುವ ಗ್ರಂಥದ ಪ್ರಾರಂಭದಲ್ಲಿ ಪ್ರಾಮಾಣ್ಯ ಮೊದಲಾದವುಗಳನ್ನು ಅವಶ್ಯ ತೋರಿಸಬೇಕು. ಇದನ್ನು ಶ್ರೀಮದಾಚಾರ್ಯರ ಭಾಷ್ಯದಲ್ಲಿ ಮಾತ್ರ ನೋಡಲು ಸಾಧ್ಯ. ಬೇರೆ ಭಾಷ್ಯಕಾರರು ತೋರಿಸಿಯೇ ಇಲ್ಲ.

೨. ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವು ಬ್ರಹ್ಮವಿದ್ಯೆ ಎನಿಸಿದೆ. ಪ್ರತಿಸೂತ್ರವೂ ಮಂತ್ರತುಲ್ಯ-ವಾಗಿದೆ. ಮಂತ್ರದಲ್ಲಿ ಹೇಗೆ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸುತ್ತೇವೋ ಅದರಂತೆ ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕು. ಇದನ್ನು ಸಾಧಿಸಿ ತೋರಿಸಿದವರು ಶ್ರೀಮದಾಚಾರ್ಯರು ಮಾತ್ರ. ಉಳಿದ ಭಾಷ್ಯಕಾರರು ಬ್ರಹ್ಮಸೂತ್ರಗಳನ್ನೂ ಪಾಣಿನ್ಯಾದಿ ಸೂತ್ರಗಳಂತೆ ಭಾವಿಸಿ ಓಂಕಾರವನ್ನು ಉಚ್ಚರಿಸಲಾರರು.

೩. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಮೊದಲನೆಯದ್ದು ಸಮನ್ವಯಾಧ್ಯಾಯ. ಈ ಅಧ್ಯಾಯಕ್ಕೆ ಉಪನಿಷತ್ತುಗಳಷ್ಟೇ ಅಲ್ಲದೆ ಸಮಸ್ತ ವೇದರಾಶಿಯೂ ವಿಷಯವಾಗಿದೆ. ಅಷ್ಟೇ ಅಲ್ಲದೆ ಮಂತ್ರ, ಬ್ರಾಹ್ಮಣ, ಆರಣ್ಯಕ ಮತ್ತು ಇತಿಹಾಸ, ಪುರಾಣಗಳು ವಿಷಯವಾಗಿವೆ. ಇತರ ಸಮಸ್ತ ವಾಙ್ಮಯ-ಪ್ರಪಂಚವು ವಿಷಯವಾಗಿದೆ. ಹಲ್ಲಿ ಲೊಚಗುಟ್ಟುವ ಶಬ್ದವೂ ಸಹ ಭಗವಂತನ ಹೆಸರೆಂದು ಶ್ರೀಮದಾಚಾರ್ಯರು ಸಮರ್ಥಿಸಿದ್ದಾರೆ. ಹೀಗೆ ಸಕಲ ಶಬ್ದರಾಶಿಗಳೂ ಸಮನ್ವಯಾಧ್ಯಾಯಕ್ಕೆ ವಿಷಯವಾಗಿ ಭಗವಂತನ ಹೆಸರುಗಳಾಗುತ್ತವೆಂದು ಸಮರ್ಥಿಸಿದ ಧೀರ ಪುರುಷರು ಶ್ರೀಮದಾಚಾರ್ಯರು ಮಾತ್ರ. ಇತರ ಭಾಷ್ಯಕಾರರು ಕೇವಲ ಹತ್ತು ಅಥವಾ ಹನ್ನೆರಡು ಉಪ-ನಿಷತ್ತುಗಳು ಮಾತ್ರ ಸಮನ್ವಯಾಧ್ಯಾಯಕ್ಕೆ ವಿಷಯವೆನ್ನುತ್ತಾರೆ. ಅದರಲ್ಲಿಯೂ ಎಲ್ಲಾ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವ ಸ್ಥೈರ್ಯವನ್ನು ತೋರುವುದಿಲ್ಲ.

೪. ಇತರ ಮತದವರೂ ಹತ್ತು ಅಥವಾ ಹನ್ನೆರಡು ಉಪನಿಷತ್ತುಗಳನ್ನಷ್ಟೇ ಸಮನ್ವಯಾ-ಧ್ಯಾಯದಲ್ಲಿ ವಿಚಾರ ಮಾಡಬೇಕೆಂದು ಏನು ಸಿದ್ಧಾಂತ ಮಾಡಿದ್ದಾರೋ ಅದು ಅವರ ಗ್ರಂಥಕ್ಕೆ ವಿರುದ್ಧವಾಗಿದೆ. ಏಕೆಂದರೆ ಶಾಸ್ತ್ರಯೋನಿತ್ವಾತ್ ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಶಂಕರಾಚಾರ್ಯರು ಶಾಸ್ತ್ರವೆಂದರೆ ಋಗಾದಿವೇದಗಳೆಂದು ಹೇಳಿ, ಅಂತಹ ಶಾಸ್ತ್ರದಿಂದ ಬ್ರಹ್ಮನು ವೇದ್ಯನಾಗುತ್ತಾನೆಂದು ಪ್ರತಿಪಾದಿಸಿದ್ದಾರೆ. ಹಾಗಾದರೆ ಋಗಾದಿಗಳನ್ನು ಸಮನ್ವಯ ಮಾಡುವ ಉದ್ದೇಶ. ಸಮನ್ವಯಾಧ್ಯಾಯಕ್ಕೆ ಇಲ್ಲವೆಂದು ಹೇಳಲು ಹೇಗೆ ಸಾಧ್ಯ? ಮತ್ತು ಬ್ರಹ್ಮನು ಋಗಾದಿ ವೇದಗಳ ಸಮನ್ವಯಕ್ಕೆ ವಿಷಯನಾದರೂ "ಔಪನಿಷದಃ ಪುರುಷಃ" ಎಂಬ ಶ್ರುತಿಗೆ ವಿರೋಧ ಬರುವುದಿಲ್ಲ. ಏಕೆಂದರೆ 'ಉಪನಿಷತ್ತು' ಎಂದರೆ 'ರಹಸ್ಯವಿದ್ಯೆ' ಎಂದಷ್ಟೇ ಅರ್ಥ. ಇದನ್ನು 'ಉಪನಿಷದ್‌ರಹಸ್ಯಂ' ಎಂಬ ಭಾಮತೀವಾಕ್ಯವೇ ಸೂಚಿಸುತ್ತವೆ.

೫. ಬ್ರಹ್ಮವಿದ್ಯೆಯು ಅತ್ಯಂತ ರಹಸ್ಯವಾಗಿದೆ. 'ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯಾಮ್', 'ಇದಂ ತೇ ನಾತಪಸ್ಕಾಯ' ಇತ್ಯಾದಿಪ್ರಮಾಣಗಳಿಂದ ಇದನ್ನು ಅನಧಿಕಾರಿಗಳಿಗೆ ಉಪದೇಶಿಸಬಾರದೆಂದು ತಿಳಿಯುತ್ತದೆ. ಋಗಾದಿಮಂತ್ರಭಾಗಗಳಿಂದಲೂ, ವಿಧಾಯಕವಾದ ಬ್ರಾಹ್ಮಣ ವಾಕ್ಯಗಳಿಂದಲೂ, ಆರಣ್ಯಕವಿಚಾರಗಳಿಂದಲೂ, ಉಪನಿಷತ್ತುಗಳಿಂದಲೂ ಏಕರೂಪವಾಗಿ ಬ್ರಹ್ಮಸ್ವರೂಪವು ಪ್ರತಿಪಾದಿಸಲ್ಪಡುತ್ತದೆ ಎಂಬುದನ್ನು ಶಂಕರಾಚಾರ್ಯರು ಸರ್ವವೇದಾಂತಪ್ರತ್ಯಯಾಧಿಕರಣದ ಗುಣಸೂತ್ರವಾದ ''ದರ್ಶಯತಿ ಚ'' ಎಂಬ ಸೂತ್ರವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದರೆ ಅವರ ಹೇಳಿಕೆಗೂ ಆಚರಣೆಗೂ ಸಂಬಂಧವೇ ಇಲ್ಲ. ಉಪನಿಷತ್ತುಗಳನ್ನು ಪರವಿದ್ಯೆ ಎನ್ನುತ್ತಾರೆ. ಋಗಾದಿವೇದಗಳನ್ನು ಅಪರವಿದ್ಯೆ ಎಂದು ಹೇಳುತ್ತಾರೆ. ಎಲ್ಲವೂ ಬ್ರಹ್ಮಸ್ವರೂಪವನ್ನೇ ಏಕರೂಪದಿಂದ ಪ್ರತಿಪಾದಿಸುವಾಗ ಈ ವಿಭಾಗವು ಹೇಗೆ ಕೂಡುತ್ತದೆ. ಇಂತಹ ಅಪ್ರಾಮಾಣಿಕ ಆಧಾರಗಳ ಮೇಲೆಯೇ ಅದ್ವೈತಸಿದ್ಧಾಂತ ನಿಂತಿದೆ.

೬. ಶ್ರೀಮದಾಚಾರ್ಯರು ಐದನೆಯ ಅಧಿಕರಣದಲ್ಲಿ ಸಮನ್ವಯವನ್ನು ಪ್ರತಿಪಾದನೆ ಮಾಡಿ ಅದಕ್ಕೆ ಪೂರ್ವಪಕ್ಷರೂಪದಲ್ಲಿ 'ಯತೋ ವಾಚೋ ನಿವರ್ತಂತೇ' 'ಅವಚನೇನೈವ ಪ್ರೋವಾಚ' 'ಅಶಬ್ದಂ' ಇವೇ ಮೊದಲಾದ ವೇದವಾಕ್ಯಗಳಿಂದ ಆಪಾತರಮಣೀಯವಾಗಿ ತೋರುವ 'ಬ್ರಹ್ಮನು ಯಾವ ಶಬ್ದದಿಂದಲೂ ವಾಚ್ಯನಲ್ಲ'ವೆಂಬ ಅರ್ಥವನ್ನು ಸಯುಕ್ತಿಕವಾಗಿ ನಿರಾಕರಿಸಿದ್ದಾರೆ. ಬ್ರಹ್ಮನು ಸರ್ವಶಬ್ದವಾಚ್ಯನಾಗಿದ್ದಲ್ಲಿ ಅದ್ವೈತಿಗಳು ತಿಳಿದುಕೊಂಡಂತೆ ಅವನು ಲಕ್ಷಣಾವೃತ್ತಿಯಿಂದಲೂ ಪ್ರತಿಪಾದ್ಯನಾಗಲಾರನೆಂದು ತರ್ಕಬದ್ಧವಾಗಿ ಸಮರ್ಥಿಸಿದ್ದಾರೆ. ಈಕ್ಷತ್ಯಧಿಕರಣದ ಗುಣಸೂತ್ರದಲ್ಲಿ ಸಾಂಖ್ಯರ ಜಡಪ್ರಕೃತಿಗೆ ಜಗತ್ಕಾರಣತ್ವವನ್ನು ನಿರಾಕರಿಸಲಾಗಿದೆ ಎಂದು ಶಂಕರ ಭಾಷ್ಯವು ವ್ಯಾಖ್ಯಾನಿಸಿದೆ. ಆದರೆ ಎರಡನೇ ಅಧ್ಯಾಯದಲ್ಲಿ ಪ್ರತಿಪಾದಿಸಬೇಕಾಗಿರುವ ಸಮಯ ವಿರೋಧವನ್ನು ಪ್ರಥಮಾಧ್ಯಾಯದಲ್ಲೇ ಪ್ರತಿಪಾದಿಸುವ ವಿವಕ್ಷೆ ಸೂತ್ರಕಾರರಿಗೆ ಸರ್ವಥಾ ಇರುವುದಿಲ್ಲ. ಎರಡನೇ ಅಧ್ಯಾಯದಲ್ಲಿ ಸೂತ್ರಕಾರರೇ ಸ್ಪಷ್ಟವಾಗಿ ಸಾಂಖ್ಯರನ್ನು ನಿರಾಕರಿಸಿರುವಾಗ ಇಲ್ಲಿಯೂ ಅದನ್ನೇ ನಿರಾಕರಿಸಿದರೆ ಪುನರುಕ್ತಿ ಬರುವುದಿಲ್ಲವೆ?

ಹೀಗೆ ಪ್ರತಿಯೊಂದು ವಿಷಯಗಳಲ್ಲಿಯೂ ಪರಭಾಷ್ಯಕಾರರು ಎಡವಿದ್ದಾರೆ. ಅನುಭವಕ್ಕೆ ಬರುವಂತೆ ಮನೋಹರವಾದ ಸೂತ್ರಾರ್ಥವನ್ನು ಶ್ರೀಮದಾಚಾರ್ಯರ ಭಾಷ್ಯದಿಂದಷ್ಟೇ ತಿಳಿಯಲು ಸಾಧ್ಯ.

ಅದ್ವೈತಸಿದ್ಧಾಂತದ ಪ್ರತಿಷ್ಠಾಪಕರಾದ ಶಂಕರಾಚಾರ್ಯರು ಷಣ್ಮತಸ್ಥಾಪಕರೆಂದು ಅವರ ಇತಿಹಾಸದಲ್ಲಿ ಹೇಳಲ್ಪಟ್ಟಿದೆ. ಆದರೆ ಶೈವ,ವೈಷ್ಣವ ಮೊದಲಾದ ಷಣ್ಮತಗಳು ಪರಸ್ಪರವಿರುದ್ಧಗಳಾಗಿವೆ. ಶೈವರು ಶಿವನನ್ನೇ, ವೈಷ್ಣವರು ವಿಷ್ಣುವನ್ನೇ, ಶಾಕ್ತರು ಶಕ್ತಿಯನ್ನೇ, ಗಾಣಪತ್ಯರು ಗಣಪತಿಯನ್ನೇ, ಸೌರರು ಸೂರ್ಯನನ್ನೇ, ಸ್ಕಾಂದರು ಸ್ಕಂದನನ್ನೇ ಸರ್ವೋತ್ತಮನೆಂದು

ಹೇಳುತ್ತಾರೆ. ಇಂತಹ ಪರಸ್ಪರವಿರುದ್ಧವಾದ ಆರು ಮತಗಳನ್ನು ಸ್ಥಾಪಿಸಿದ ಶಂಕರಾಚಾರ್ಯರಿಗೆ ವ್ಯಾಹತಿದೋಷ ಬರುವುದಿಲ್ಲವೆ? ಯಾವರೀತಿಯಾಗಿ ಜೈನರು ಜಗತ್ತನ್ನು ಸಪ್ತಭಂಗಿಯನ್ನಾಗಿ ಹೇಳಿದ್ದರಿಂದ ವ್ಯಾಹತಭಾಷಿಗಳಾಗಿದ್ದಾರೋ ಅದರಂತೆ. ಆದರೆ ಶ್ರೀಮದಾಚಾರ್ಯರು ಪರಸ್ಪರವಿರುದ್ಧವಾದ ಮತಗಳನ್ನು ಸ್ಥಾಪಿಸಲಿಲ್ಲವಾದ್ದರಿಂದ ಅವರಲ್ಲಿ ಈ ದೋಷವಿಲ್ಲ. ಆದ್ದರಿಂದಲೇ ಪರಮಾಪ್ತರಾಗಿದ್ದಾರೆ.

ಶ್ರೀಮದಾಚಾರ್ಯರು ಬಳಿತ್ಥಾಸೂಕ್ತ ಮೊದಲಾದ ಶ್ರುತಿಗಳನ್ನು ಉಲ್ಲೇಖಿಸಿ ತನ್ನನ್ನು ಮುಖ್ಯಪ್ರಾಣದೇವರ ತೃತೀಯಾವತಾರವೆಂದು ಸ್ಪಷ್ಟವಾಗಿ ಧೈರ್ಯದಿಂದ ಹೇಳಿದ್ದಾರೆ. ಮತ್ತು ತಮ್ಮ ಶಿಷ್ಯರಾದ ತ್ರಿವಿಕ್ರಮಪಂಡಿತರಿಗೆ ತಮ್ಮ ಮೂರು ಅವತಾರಗಳನ್ನು ಪ್ರತ್ಯಕ್ಷವಾಗಿ ತೋರಿದ್ದಾರೆಂಬ ಇತಿಹಾಸವಿದೆ. ತ್ರಿವಿಕ್ರಮಪಂಡಿತರು ತಾವು ರಚಿಸಿದ ತತ್ವಪ್ರದೀಪಗ್ರಂಥದಲ್ಲಿ ಹೀಗೆ ಹೇಳಿದ್ದಾರೆ - 'ಪ್ರತ್ಯಕ್ಷಂ ಚೈತಲ್ಲಕ್ಷಣಂ ದೃಶ್ಯತೇ ಭಗವತಿ ಭಾಷ್ಯಕಾರೇ' ಎಂದು ಶ್ರೀಮದಾಚಾರ್ಯರಲ್ಲಿ ದೇವಸತ್ತಮರಾದ ಮುಖ್ಯಪ್ರಾಣದೇವರ ಲಕ್ಷಣಗಳು ಪ್ರತ್ಯಕ್ಷವಾಗಿ ನನಗೆ ತೋರುತ್ತಿವೆ ಎಂದು ಉಲ್ಲೇಖಿಸಿದ್ದಾರೆ. ಸಹಸ್ರಜನರು ಒಟ್ಟಿಗೆ ಸೇರಿದರೂ ಎತ್ತಲಿಕ್ಕೆ ಸಾಧ್ಯವಾಗದ ಬಂಡೆಗಲ್ಲನ್ನು ಆಚಾರ್ಯರು ಒಂದೇ ಹಸ್ತದಿಂದ ಎತ್ತಿ ಬಹುದೂರ ಹೊತ್ತುಕೊಂಡು ಹೋಗಿ ಅಂಬುತೀರ್ಥದಲ್ಲಿ ಸ್ಥಾಪಿಸಿದರೆಂಬ ಶಿಲಾಶಾಸನವಿದೆ. ಇವೇ ಮೊದಲಾದ ಅನೇಕ ಮಹಿಮೆಗಳು ಅವರು ಮುಖ್ಯಪ್ರಾಣದೇವರ ಅವತಾರ ಎಂಬುದಕ್ಕೆ ಸಂಭಾವಕಗಳಾಗಿವೆ. ಮುಖ್ಯಪ್ರಾಣದೇವರನ್ನು ಛಾಂದೋಗ್ಯಉಪನಿಷತ್ತು 'ಅಖಣಾಶ್ಮ' ಎಂದು ವರ್ಣಿಸಿದೆ. ಅಂದರೆ 'ಮುಖ್ಯಪ್ರಾಣದೇವರಿಗೆ ದೈತ್ಯರಿಂದ ಯಾವ ಬಾಧೆಯು ಉಂಟಾಗುವುದಿಲ್ಲ' ಎಂದು ಅದರರ್ಥ. ರುದ್ರಾದಿದೇವತೆಗಳಿಗೆ ದೈತ್ಯಾವೇಶದಿಂದ ನಿಜವಾದ ಜ್ಞಾನವು ಬಾಧಿತವಾಗಿ ಒಮ್ಮೊಮ್ಮೆ ವಿಪರೀತಜ್ಞಾನವುಂಟಾಗುತ್ತದೆ. ಆದರೆ ಮುಖ್ಯಪ್ರಾಣದೇವರಿಗೆ ಅಂತಹ ದೈತ್ಯಾವೇಶದಿಂದ ಯಾವ ಬಾಧೆಯೂ ಬರುವುದಿಲ್ಲ-ವಾದ್ದರಿಂದ ಯಾವಾಗಲೂ ಯಥಾರ್ಥಜ್ಞಾನವೇ ಇರುತ್ತದೆಂದು ಛಾಂದೋಗ್ಯೋಪನಿಷತ್ತಿನಿಂದ ಸಿದ್ಧವಾಗಿದೆ. ಅಂತಹ ಮುಖ್ಯಪ್ರಾಣದೇವರ ತೃತೀಯಾವತಾರಸ್ವರೂಪರಾದ ಶ್ರೀಮದಾ-ಚಾರ್ಯರಲ್ಲಿ ಸಂಶಯ, ವಿಪರೀತಜ್ಞಾನ, ಅಜ್ಞಾನಗಳು ಇರುವುದೇ ಇಲ್ಲ.

ಶಂಕರಾಚಾರ್ಯರು ಶಿವಾವತಾರಸ್ವರೂಪರೆಂದು ರಾಮಾನುಜಾಚಾರ್ಯರು ಶೇಷವತಾರ ಸ್ವರೂಪರೆಂದು ಅವರ ಅನುಯಾಯಿಗಳು ಹೇಳುತ್ತಾರೆ. ಅವರು ಹೇಳುವಂತೆ ಒಪ್ಪಿದರೂ ಪರಮಾಪ್ತರೆಂದು ನಿರ್ಣಯವಾಗುವುದಿಲ್ಲ. ಏಕೆಂದರೆ ಅಶ್ವತ್ಥಾಮಾಚಾರ್ಯರು ಶಿವಾವತಾರ-ಸ್ವರೂಪರು. ಬಲರಾಮರು ಶೇಷನ ಅವತಾರಸ್ವರೂಪರು. ಇವರಿಬ್ಬರೂ ಕಲಿಸ್ವರೂಪನಾದ ದುರ್ಯೋಧನನ ಪಕ್ಷಪಾತಿಗಳಾಗಿದ್ದಾರೆಂದು ಮಹಾಭಾರತದಲ್ಲಿ ಹೇಳಲ್ಪಟ್ಟಿದೆ. ವಿಪರೀತಜ್ಞಾನ-ಸ್ವರೂಪನಾದ ದುರ್ಯೋಧನನ ಪಕ್ಷಪಾತಿಗಳಿಗೆ ವಿಪರೀತಜ್ಞಾನದಿಂದ ತಪ್ಪಿಸಿಕೊಳ್ಳಲಾಗದು. ಆದ್ದರಿಂದ ಶಿವ ಮತ್ತು ಶೇಷಾವತಾರರೆಂದು ಸ್ವೀಕರಿಸುವ ಶಂಕರ ರಾಮಾನುಜರಲ್ಲಿಯೂ ಆಪ್ತತ್ವದ

ನಿರ್ಣಯವು ಆಗುವುದಿಲ್ಲ. ಶ್ರೀಮದಾಚಾರ್ಯರು ಭೀಮಸೇನಸ್ವರೂಪರು. ಭೀಮಸೇನದೇವರು ದುರ್ಯೋಧನನನ್ನು ನಿಗ್ರಹಿಸಿದ ಧೀರರು. ವಿಪರೀತಜ್ಞಾನದ ಗಂಧವೂ ಸಹ ಇವರಲ್ಲಿಲ್ಲ. ಅಂತಹ ಭೀಮಸೇನರ ಅವತಾರಸ್ವರೂಪರಾದ ಶ್ರೀಮಧ್ವಾಚಾರ್ಯರಲ್ಲಿ ವಿಪರೀತಜ್ಞಾನವು ಸರ್ವಥಾ ಇಲ್ಲವಾದ್ದರಿಂದ ಆಪ್ತತ್ವದ ನಿರ್ಣಯವಾಗುತ್ತದೆ. ಆಪ್ತರಾದ ಶ್ರೀಮದಾಚಾರ್ಯರಿಂದ ಉಪದಿಷ್ಟವಾದ ತತ್ತ್ವಜ್ಞಾನವೂ ಸಹ ಪ್ರಕೃಷ್ಟವೆಂದು ಸಿದ್ಧವಾಗುತ್ತದೆ.

ಶಂಕರರು ಅವಿಮುಕ್ತಸ್ಥಾನದಲ್ಲಿ ಕುಳಿತಿದ್ದ ಬಾದರಾಯಣರ ಜೊತೆ ವಾದ ಮಾಡಿ, ಬ್ರಹ್ಮಸೂತ್ರ ಭಾರತ ಮುಂತಾದ ಗ್ರಂಥಗಳಲ್ಲಿ ದ್ವೈತವನ್ನು ಸ್ಥಾಪಿಸಿದ್ದು ಸರಿಯಲ್ಲ ಎಂದು ಸಮರ್ಥಿಸಿ, ಅದ್ವೈತವೇ ಶಾಸ್ತ್ರಾರ್ಥವೆಂದು ಸಿದ್ಧಾಂತ ಮಾಡಿದರೆಂಬ ಉಲ್ಲೇಖ ಶಂಕರವಿಜಯದಲ್ಲಿದೆ. ಈ ಇತಿಹಾಸದಿಂದ ಬ್ರಹ್ಮಸೂತ್ರಾದಿಗಳನ್ನು ರಚಿಸಿದ ಬಾದರಾಯಣರು ದ್ವೈತವನ್ನೇ ಪಾರಮಾರ್ಥಿಕವನ್ನಾಗಿ ಹೇಳಿದ್ದರೆಂದು ಸಿದ್ಧವಾಗುತ್ತದೆ. ಆದ್ದರಿಂದ ಯಾರು ಬ್ರಹ್ಮಸೂತ್ರಾದಿಗಳನ್ನು ಪರಮಪ್ರಮಾಣಗಳೆಂದು ಒಪ್ಪುತ್ತಾರೋ ಅವರೆಲ್ಲರು ದ್ವೈತವನ್ನು ಒಪ್ಪದೇ ನಿರ್ವಾಹವಿಲ್ಲ. ಬಾದರಾಯಣರು ಶಂಕರರ ಜೊತೆ ವಾದ ಮಾಡುವ ಮೊದಲು ಶುಕಮುನಿಗಳಿಗೆ ತತ್ತ್ವೋಪದೇಶ ಮಾಡಿ ತತ್ತ್ವಸಾಕ್ಷಾತ್ಕಾರವಾಗುವಂತೆ ಮಾಡಿದ್ದಾರೆಂದು ಭಾಗವತಾದಿ ಗ್ರಂಥಗಳಿಂದ ತಿಳಿಯುತ್ತದೆ. ''ಬಾದರಾಯಣರು ಆವಾಗ ದ್ವೈತವಾದಿಗಳೇ ಆಗಿದ್ದರು; ಶುಕಮುನಿಗಳಿಗೆ ದ್ವೈತತತ್ತ್ವವನ್ನೇ ಉಪದೇಶಿಸಿದರು; ಶುಕಮುನಿಗಳಿಗೆ ದ್ವೈತಮತದ ಸಾಕ್ಷಾತ್ಕಾರವೇ ಆಯಿತೆ''ಂದು ಅದ್ವೈತಿಗಳು ಒಪ್ಪಬೇಕಾಗುತ್ತದೆ. ಶುಕಮುನಿಗಳು ರುದ್ರಾವತಾರರು. ಶಂಕರರು ರುದ್ರಾವತಾರರಾದ್ದರಿಂದ ಶಂಕರರಿಗೆ ದ್ವೈತತತ್ತ್ವದ ಸಾಕ್ಷಾತ್ಕಾರವೇ ಇರುತ್ತದೆಂದು ಒಪ್ಪದೇ ಬೇರೆ ಗತಿಯಿಲ್ಲ. ಆದ್ದರಿಂದ ಶಂಕರರು ದ್ವೈತವನ್ನು ಖಂಡಿಸಿ, ಅದ್ವೈತವನ್ನು ಬಾದರಾಯಣರ ಮುಂದೆ ಸ್ಥಾಪಿಸಿದರೆಂಬ ಕಥೆಯಲ್ಲಿ ಹುರುಳಿಲ್ಲ. ಆದ್ದರಿಂದ ಕೇವಲ ಲೀಲಾವಿವಾದವನ್ನೇ ಇಬ್ಬರೂ ಮಾಡಿದರೆಂದು ಅದ್ವೈತಿಗಳು ಹೇಳಬೇಕು. ಆವಾಗ ಬಾದರಾಯಣರು ದ್ವೈತವಾದಿಗಳೆಂದೇ ಶಂಕರವಿಜಯ ಕಥೆಯಿಂದ ಸಿದ್ಧವಾಗುತ್ತದೆ. ಆದ್ದರಿಂದ ದ್ವೈತಸಿದ್ಧಾಂತವೇ ಶ್ರೇಷ್ಠವೆಂದು ಸಿದ್ಧವಾಯಿತು.

ಮಹಾಮೇಧಾವಿಗಳಾದ ಅದ್ವೈತಮತದ ದಿಗ್ದಂತಿಪಂಡಿತರಾದ ತ್ರಿವಿಕ್ರಮಪಂಡಿತಾಚಾರ್ಯರು ಮತ್ತು ಶೋಭನಭಟ್ಟರೇ ಮೊದಲಾದವರು ಮಧ್ವಾಚಾರ್ಯರ ಜೊತೆಗೆ ವಾದ ಮಾಡಿದರು. ಸ್ವರ್ಣಕಾರನು ಒರೆಗಲ್ಲಿನಲ್ಲಿ ಒರೆಗೆ ಹಚ್ಚಿದ ನಂತರ ಇದು ಸುವರ್ಣ ಎಂದು ಒಪ್ಪುವಂತೆ, ಇವರು ಮಧ್ವಸಿದ್ಧಾಂತವೊಂದೇ ನಿಜವಾದ ಯಥಾರ್ಥ ಸಿದ್ಧಾಂತವೆಂದು ಒಪ್ಪಿದರು. ತಾವು ಮೊದಲು ಸ್ವೀಕರಿಸಿದ ಅದ್ವೈತಮತವನ್ನು ಪರಿತ್ಯಾಗ ಮಾಡಿ ಶ್ರೀಮದಾಚಾರ್ಯರ ಪಾದರಜೋದಾಸ್ಯವನ್ನು ಸ್ವೀಕರಿಸಿದರು. ಅದರಂತೆ ಮಹಾಮೇಧಾವಿಗಳಾದ ರಾಮಾನುಜಮತಾನುಯಾಯಿಗಳಾದ ದೇಶಿಕಾಚಾರ್ಯರು ಮಧ್ವಸಿದ್ಧಾಂತದ ತತ್ತ್ವವನ್ನು ಅಕ್ಷೋಭ್ಯತೀರ್ಥರಿಂದ ಕೂಡಿ ಚರ್ಚಿಸಿ ಮನಸಾ ಸ್ವೀಕಾರ ಮಾಡಿದರೆಂದು ಅವರೇ ಒಪ್ಪಿಕೊಂಡಿದ್ದಾರೆ. ತಮ್ಮ ಗ್ರಂಥದಲ್ಲಿ

'ಮತ್ಸನ್ನಿಕೃಷ್ಟಮತಮೇವಾಶ್ರಯಧ್ವಮ್' ಎಂದು ಇತರರಿಗೆ ಮಧ್ವಮತವನ್ನು ಆಶ್ರಯಿಸಿರೆಂದು ಹೇಳಿದ್ದಾರೆ.

*"ಪೂರ್ವಪೂರ್ವಃ ಪೂರ್ವಪಕ್ಷಃ ಯಾವನ್‌ಮಧ್ವಮತೋದಯಃ ।*
*ಅಂತೇ ಸಿದ್ಧಸ್ತು ಸಿದ್ಧಾಂತಃ ಮಧ್ವಸ್ಯಾಗಮ ಏವ ಹಿ ॥"*

(ಮಧ್ವಸಿದ್ಧಾಂತವು ಎಲ್ಲಾ ಮತಗಳ ಅನಂತರ ಪ್ರವೃತ್ತವಾಗಿದೆ. ಎಲ್ಲಾ ಮತಗಳನ್ನು ಕೂಲಂಕಷವಾಗಿ ವಿಮರ್ಶಿಸಿದ್ದರಿಂದ ಹಿಂದಿನ ಮತಗಳೆಲ್ಲವು ಪೂರ್ವಪಕ್ಷಗಳಾದವು. ಕೊನೆಗೆ ನಿರ್ಣಯವಾದ ಮಧ್ವಸಿದ್ಧಾಂತ ಮಾತ್ರವೇ ಸಿದ್ಧಾಂತ ಎಂಬ ಅನ್ವರ್ಥವುಳ್ಳದ್ದಾಯಿತು) ಹೀಗೆ ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಹೇಳಿದ್ದನ್ನು ಯಾವಾಗಲೂ ಸ್ಮರಿಸಿಕೊಳ್ಳಬೇಕು. ವಸ್ತುತಃ ವಲ್ಲಭಾಚಾರ್ಯರು ಮಧ್ವಭಾಷ್ಯದ ಅನಂತರದಲ್ಲಿ ಸೂತ್ರಕ್ಕೆ ಭಾಷ್ಯವನ್ನು ಬರೆದಿದ್ದಾರೆ. ಆದರೆ ಅದು ಬಹಳ ದುರ್ಬಲ. ಯಾವ ಮತದವರೂ ಅದನ್ನು ಖಂಡಿಸಲು ಪ್ರಯತ್ನವನ್ನೇ ಮಾಡಿಲ್ಲ. ಯಾವ ಮೇಧಾವಿಗಳೂ ತಮ್ಮ ಮತವನ್ನು ಬಿಟ್ಟು ವಲ್ಲಭಾಚಾರ್ಯರ ಮತಕ್ಕೆ ಸೇರಿಲ್ಲ. ಆದ್ದರಿಂದ ಮಧ್ವಾಚಾರ್ಯರ ಸಿದ್ಧಾಂತವೇ ಅಂತಿಮಸಿದ್ಧಾಂತವೆಂಬುದರಲ್ಲಿ ಎರಡನೇ ಮಾತಿಲ್ಲ.

## ಅಣುಭಾಷ್ಯ

*"ಅನಂತೋऽರ್ಥಃ ಪ್ರಕಟಿತಃ ತ್ವಯಾಣೌ ಭಾಷ್ಯಸಂಗ್ರಹೇ ।*
*ಅಹೋ ಆತ್ಮಪರಿಚ್ಛಿನ್ನೇ ಕೃಷ್ಣೇನೇವಾನನಾಂತರೇ ॥"*

ಅಂದರೆ "ಶ್ರೀಕೃಷ್ಣನು ಯಶೋದೆಗೆ ತನ್ನ ಪುಟ್ಟ ಬಾಯಿಯಲ್ಲಿ ಸಮಸ್ತ ಬ್ರಹ್ಮಾಂಡವನ್ನೇ ತೋರಿಸಿದನು. ಅದರಂತೆ ಶ್ರೀಮದಾಚಾರ್ಯರು ಅಣುಭಾಷ್ಯ ಎಂಬ ಪುಟ್ಟಗ್ರಂಥದಲ್ಲಿ ಸಮಸ್ತ ಬ್ರಹ್ಮಮೀಮಾಂಸಾಶಾಸ್ತ್ರದ ಅರ್ಥಗಳನ್ನು ತೋರಿಸಿದ್ದಾರೆ".

ಈ ಗ್ರಂಥಕ್ಕೆ 'ಅಣುಭಾಷ್ಯ', 'ಸರ್ವಶಾಸ್ತ್ರಾರ್ಥಸಂಗ್ರಹ' 'ಸಂಕ್ಷೇಪಭಾಷ್ಯ' 'ಭಾಷ್ಯಸಂಗ್ರಹ' 'ಅಣುವೇದಾಂತ' 'ಸಂಗ್ರಹಭಾಷ್ಯ' ಎಂಬ ಹೆಸರುಗಳಿವೆ. ಅನುಷ್ಟುಪ್ ಛಂದಸ್ಸಿನಲ್ಲಿರುವ ಮೂವತ್ತೆರಡು ಶ್ಲೋಕಗಳಿಂದ ಬ್ರಹ್ಮಸೂತ್ರಗಳ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ಕ್ರೋಢೀಕರಿಸಿದ್ದಾರೆ. ಆಕಾರದಲ್ಲಿ ಕಿರಿದಾದರೂ ಆಶಯದಲ್ಲಿ ಬಹಳ ಹಿರಿದಾದ ಗ್ರಂಥ.

ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರು ಪ್ರತಿನಿತ್ಯ ಬ್ರಹ್ಮಸೂತ್ರಭಾಷ್ಯದ ಪಾರಾಯಣ ಮಾಡುತ್ತಿದ್ದರು. ಸಾಧನಾದ್ವಾದಶಿಯಂದು ಗುರುಗಳ ಪಾರಾಯಣಕ್ಕೆ ಅನುಕೂಲವಾಗಬೇಕೆಂಬ ಉದ್ದೇಶದಿಂದ ಶ್ರೀಮದಾಚಾರ್ಯರು ಈ ಗ್ರಂಥವನ್ನು ರಚಿಸಿದರೆಂಬ ಐತಿಹ್ಯವಿದೆ. ಈ ಗ್ರಂಥದಲ್ಲಿರುವ ಆಚಾರ್ಯರ ಶೈಲಿ ಬಹಳ ಅಪೂರ್ವ ಹಾಗೂ ಆಶ್ಚರ್ಯಕರವಾದದ್ದು. ಕೆಲವೆಡೆ

ಒಂದೊಂದು ಅಧಿಕರಣಗಳ ಸಾರವನ್ನು ಒಂದೇ ಪದದಲ್ಲಿ ಸಂಗ್ರಹಿಸಿದ್ದರೆ ಇನ್ನು ಕೆಲವೆಡೆ ಅನೇಕ ಅಧಿಕರಣಗಳ ಸಾರವನ್ನು ಒಂದೇ ಪದದಿಂದ ಸಂಗ್ರಹಿಸಿದ್ದಾರೆ. ಮತ್ತು ಒಂದೊಂದು ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಪ್ರಮೇಯಗಳನ್ನು ಸಮರ್ಥನೆ ಮಾಡುವುದಲ್ಲದೆ ಪಾದ ಹಾಗೂ ಅಧ್ಯಾಯಗಳ ಪ್ರಮೇಯಗಳನ್ನೂ ನಿಷ್ಕೃಷ್ಟವಾಗಿ ಸಂಗ್ರಹಿಸಿದ್ದಾರೆ.

ಅಣುಭಾಷ್ಯಕ್ಕೆ ಅನೇಕ ವ್ಯಾಖ್ಯಾನಗಳಿವೆ. ಅಣುಭಾಷ್ಯಟೀಕಾ (ನಾರಾಯಣಪಂಡಿತಾ-ಚಾರ್ಯರು); ಅಣುಭಾಷ್ಯಟೀಕಾ (ಜಯತೀರ್ಥರು- ಇವರು ಟೀಕಾಕೃತ್ಪಾದರಲ್ಲ); ಸಿದ್ಧಾಂತ-ದೀಪಿಕಾ (ಅನಂತಭಟ್ಟರು); ತತ್ತ್ವಪ್ರಕಾಶಿಕಾ (ಛಲಾರಿಶೇಷಾಚಾರ್ಯರು); ತತ್ತ್ವಮಂಜರೀ(ಶ್ರೀರಾಘವೇಂದ್ರತೀರ್ಥರು); ಆನಂದಮಾಲಾ(ತ್ರೈವಿಕ್ರಮಾರ್ಯದಾಸರು); ಭಾವಪ್ರಕಾಶಿಕಾ (ನರ-ಸಿಂಹಾಚಾರ್ಯರು); ಅಣುಭಾಷ್ಯಟಿಪ್ಪಣೀ (ಶ್ರೀನಿವಾಸಾಚಾರ್ಯರು); ಅಣುಭಾಷ್ಯವಿವರಣ (ಬಿದರಹಳ್ಳಿ ಶ್ರೀನಿವಾಸತೀರ್ಥರು); ಅಣುಭಾಷ್ಯವಿವೃತಿ (ಆನಂದತೀರ್ಥಾರ್ಯಸೂನುಗಳು); ಅಣುಭಾಷ್ಯಪ್ರಪಂಚನ (ಷೈಠಣೀ ನಾರಾಯಣಾಚಾರ್ಯರು); ಅಣುಭಾಷ್ಯವಿವರಣ (ಸತ್ಯ-ಸಂತುಷ್ಟರ ಶಿಷ್ಯರು); ಅಣುಭಾಷ್ಯಪ್ರಕಾಶಿಕಾ (ರಂಗಾಚಾರ್ಯಸುತ ಭೀಮಾಚಾರ್ಯರು); ಅಣುಭಾಷ್ಯಟಿಪ್ಪಣೀ (ಶ್ರೀಪದ್ಮನಾಭತೀರ್ಥರು).

ಇವುಗಳಲ್ಲಿ ಕೆಲವು ಮುದ್ರಿತವಾಗಿವೆ. ಮತ್ತೆ ಕೆಲವು ಮುದ್ರಿತವಾಗಿಲ್ಲ. ಇನ್ನು ಕೆಲವು ಉಪಲಬ್ಧವೇ ಆಗಿಲ್ಲ.

## ನ್ಯಾಯವಿವರಣ

ಶ್ರೀವೇದವ್ಯಾಸದೇವರ ಬ್ರಹ್ಮಸೂತ್ರಗಳಿಗೆ ಶ್ರೀಮದಾಚಾರ್ಯರು ಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನಗಳೆಂಬ ಮೂರು ಗ್ರಂಥಗಳನ್ನು ರಚಿಸಿದ ಮೇಲೆ ನಾಲ್ಕನೆಯ ನ್ಯಾಯವಿವರಣ ಎಂಬ ಗ್ರಂಥವನ್ನು ರಚಿಸಿದರು. ಇದಕ್ಕೆ ಕಾರಣವನ್ನು ಸ್ವತಃ ಶ್ರೀಮದಾಚಾರ್ಯರೇ ಗ್ರಂಥಾ-ರಂಭದಲ್ಲಿ ಹೇಳಿದ್ದಾರೆ.

*'ಕೃತ್ವಾ ಭಾಷ್ಯಾನುಭಾಷ್ಯೇಽಹಂ ಅಪಿ ವೇದಾರ್ಥಸತ್ಪತೇಃ ।*
*ಕೃಷ್ಣಸ್ಯ ಸೂತ್ರಾನುವ್ಯಾಖ್ಯಾ ಸನ್ನ್ಯಾಯವಿವೃತಿಂ ಸ್ಫುಟಮ್ ॥*

*ಕರೋಮಿ ಮಂದಬುದ್ಧೀನಾಂ ಬುಧಾನಾಂ ಚೋಪಕಾರಿಕಾಮ್ ।*
*ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದಪುರಃಸರಃ ॥*

ಅಜ್ಞರಿಗೂ ಪ್ರಾಜ್ಞರಿಗೂ ಉಪಯೋಗವಾಗಲು ಈ ಕೃತಿ ಹೊರಟಿದೆ. ಸೂತ್ರಭಾಷ್ಯ, ಅನು-ವ್ಯಾಖ್ಯಾನ ಮತ್ತು ಅಣುಭಾಷ್ಯಗಳಲ್ಲಿ ಅಡಕವಾದ ನ್ಯಾಯಗಳ ವಿವರಣೆಯನ್ನು ಈ ಗ್ರಂಥದಲ್ಲಿ

ಮಾಡಲಾಗಿದೆ. ಭಾಷ್ಯ ಅನುವ್ಯಾಖ್ಯಾನಗಳನ್ನು ಚೆನ್ನಾಗಿ ಓದಿದರೂ ಸಮಗ್ರ ಸೂತ್ರಾರ್ಥವು ಬುದ್ಧ್ಯಾರೂಢವಾಗುವುದಿಲ್ಲ. ಅದಕ್ಕೋಸ್ಕರ ಈ ಕೃತಿಯು ಹೊರಟಿದೆ.

ಶ್ರೀಮದಾಚಾರ್ಯರು ಒಂದೊಂದು ಶಬ್ದಗಳಿಂದ ಒಂದೊಂದು ಅಧಿಕರಣಗಳ ಸಾರವನ್ನು ಹೇಳಿದಾಗ ಮೇರುಮಂದರಪರ್ವತಗಳನ್ನೇ ಮುಷ್ಟಿಯಲ್ಲಿ ಮುಚ್ಚಿ ತಂದುಕೊಟ್ಟ ಅನುಭವವಾಗುತ್ತದೆ. ಸಾವಿರಾರು ಪುಟಗಳಿಂದ ಒಂದೊಂದು ಅಧಿಕರಣಗಳ ವಿಚಾರವನ್ನು ವಿಸ್ತರಿಸಿದ ಸುಧಾಚಂದ್ರಿಕಾದಿಗ್ರಂಥಗಳ ವಿಷಯಗಳನ್ನೆಲ್ಲಾ ನಾಲ್ಕೇ ಮಾತುಗಳಲ್ಲಿ ಮುಗಿಸಿ ಬಿಡುವ ಶ್ರೀಮದಾಚಾರ್ಯರ ಚಾತುರ್ಯ ಅಸದೃಶವಾದದ್ದು. ಜಿಜ್ಞಾಸಾಧಿಕರಣದ ವಿಷಯವನ್ನು ಕೇವಲ ನಾಲ್ಕೇ ಮಾತುಗಳಲ್ಲಿ ಮುಗಿಸಿದ್ದು ಇದಕ್ಕೆ ಉದಾಹರಣೆಯಾಗಿದೆ.

ನಾಲ್ಕುನೂರು ಇಪ್ಪತ್ತು ಗ್ರಂಥಾತ್ಮಕವಾದ ಈ ಕಿರುಕೃತಿಯಲ್ಲಿ ೨೨೩ ಅಧಿಕರಣಗಳ ಪೂರ್ವಪಕ್ಷ, ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸಿದ್ದಾರೆ. ಟೀಕಾಕೃತ್ಪಾದರು ಮೊದಲ ಎರಡು ಅಧ್ಯಾಯಕ್ಕೆ ಟೀಕೆಯನ್ನು ಬರೆದಿದ್ದಾರೆ. ಮುಂದಿನ ಎರಡು ಅಧ್ಯಾಯಗಳಿಗೆ ಶ್ರೀರಘೂತ್ತಮತೀರ್ಥರು (ಶ್ರೀಭಾವಬೋಧಕಾರರು) ಟೀಕೆಯನ್ನು ಬರೆದಿದ್ದಾರೆ.

## ಶ್ರೀಪದ್ಮನಾಭ ತೀರ್ಥರು - ಸತ್ತರ್ಕದೀಪಾವಳಿ

''ಪ್ರಾಚೀನಟೀಕಾಕಾರ''ರೆಂದೇ ಪ್ರಸಿದ್ಧರಾದ ಶ್ರೀಪದ್ಮನಾಭತೀರ್ಥರು ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರು. ಶ್ರೀಮದಾಚಾರ್ಯರ ಎಲ್ಲ ಉದ್‌ಗ್ರಂಥಗಳಿಗೆ ಮೊಟ್ಟ ಮೊದಲು ಟೀಕೆಯನ್ನು ಬರೆದ ಯತಿಪುಂಗವರು. ಉತ್ತರಾದಿಮಠ, ರಾಘವೇಂದ್ರಮಠ, ವ್ಯಾಸರಾಜಮಠ, ಶ್ರೀಪಾದರಾಜಮಠ ಈ ಎಲ್ಲಾ ಮಠಗಳಿಗೂ ಮೂಲ ಸಂಸ್ಥಾಪಕರು ಇವರೇ. ''ಶ್ರೀಪದ್ಮನಾಭ ತೀರ್ಥರ ಟೀಕೆಯ ಮಾರ್ಗದರ್ಶನವಿಲ್ಲದಿದ್ದಲ್ಲಿ ಶ್ರೀಮದಾಚಾರ್ಯರ ಭಾಷ್ಯವೇ ಅರ್ಥವಾಗಲು ಸಾಧ್ಯವಿರಲಿಲ್ಲ ಮತ್ತು ವೇದಾಂತವೆಂಬ ಕಾಡಿನಲ್ಲಿ ದಾರಿಯೇ ತೋರದೆ ತತ್ವಜ್ಞಾನವು ದೊರೆಯಲು ಸಾಧ್ಯವಿರಲಿಲ್ಲ''- ವೆಂದು ಸ್ವತಃ ಶ್ರೀ ಜಯತೀರ್ಥರೇ ಪ್ರಶಂಸಿಸಿದ್ದಾರೆ. (''ನ ತತ್ವಮಾರ್ಗೇ ಗಮನಂ ವಿನಾ ಯದುಪಜೀವನಮ್''). ಮತ್ತು ಶ್ರೀನಾರಾಯಣಪಂಡಿತಾಚಾರ್ಯರು ಮಧ್ವವಿಜಯಗ್ರಂಥದಲ್ಲಿ ಪದ್ಮನಾಭತೀರ್ಥರ ವಿಷಯವು ಪ್ರಸ್ತಾಪವಾದಾಗಲೆಲ್ಲ ಹರ್ಷೋದ್ಗಾರದಿಂದ ಪ್ರಶಂಸಿದ್ದಾರೆ. ''ಶ್ರೀಪದ್ಮನಾಭತೀರ್ಥರ ವ್ಯಾಖ್ಯಾನಾದಿಗಳನ್ನು ಕೇಳಿದ ಮಾತ್ರಕ್ಕೆ ಮಾಯಾವಾದಿಗಳು ಓಡಿ ಹೋಗುತ್ತಾರೆ''ಂದು ಬಣ್ಣಿಸಿದ್ದಾರೆ.

*ವ್ಯಾಖ್ಯಾಪ್ರಣಾದಮಾತ್ರೇಣ ವೀರಂ ಮನ್ವಾನ್ ಸ್ವಮಂಡಲೇ ।*
*ಮಾಯಾವಿಗ್ರಮಾಸಿಂಹಾನ್ಯೋ ವಾದಿಸಿಂಹೋ ನಿರಾಕರೋತ್ ॥*

ಮತ್ತು ಶ್ರೀಜಯತೀರ್ಥರು ಕರುಣಾಮಯಿಗಳಾದ ಪದ್ಮನಾಭತೀರ್ಥರ ಕಾರುಣ್ಯವನ್ನು

ತತ್ತ್ವಪ್ರಕಾಶಿಕೆಯ ಪ್ರಾರಂಭದಲ್ಲಿ ಹೀಗೆ ಪ್ರಾರ್ಥಿಸುತ್ತಾರೆ. 'ಕೃಪಾಲವಃ ಪಂಕಜನಾಭತೀರ್ಥಾ: ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಂ' ಎಂದು.

ಶ್ರೀಪದ್ಮನಾಭತೀರ್ಥರ ಪೂರ್ವಾಶ್ರಮದ ಹೆಸರು ಶೋಭನಭಟ್ಟರು. ಗೋದಾವರೀ ತೀರದ ರಾಜಮಹೇಂದ್ರಿ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ಕಾಕತೀಯ ಗಣಪತಿದೇವನ ಆಸ್ಥಾನಮಂಟಪದಲ್ಲಿ ಶೋಭನಭಟ್ಟರು ಆಪ್ತಮಂತ್ರಿಗಳಾಗಿದ್ದರು. ಮತ್ತು ಆಸ್ಥಾನವಿದ್ವಾಂಸರೂ ಆಗಿದ್ದರು. ಒಮ್ಮೆ ಅನೇಕ ವಿದ್ವಾಂಸರನ್ನು ಮತ್ತು ತಾರ್ಕಿಕ ಧುರೀಣರನ್ನು ಶೋಭನಭಟ್ಟರು ಆಹ್ವಾನಿಸಿ ವಿದ್ವತ್ಸಭೆಯನ್ನು ನೆರವೇರಿಸಿದ್ದರು. ನೂರಾರು ದಿಗ್ದಂತಿ ಪಂಡಿತರು ಸೇರಿದ ಆ ಸಭೆಯಲ್ಲಿ ಶ್ರೀಮದಾಚಾರ್ಯರು ಸಹ ಬಂದಿದ್ದರು. ಆ ಸಂದರ್ಭದಲ್ಲಿ ನೆರೆದ ಸಕಲ ವಿದ್ವಾಂಸರು ಒಗ್ಗಟ್ಟಿನಿಂದ ಶ್ರೀಮದಾಚಾರ್ಯರನ್ನು ಪರೀಕ್ಷಿಸಲು ಮುಂದಾದರು. ಶ್ರೀಮದಾಚಾರ್ಯರ ನಿಶಿತವಾದ ವಾಗ್ಬಾಣಗಳಿಂದ ಎಲ್ಲಾ ವಿದ್ವಾಂಸರು ಸೋತು ಸುಣ್ಣಾದರು. ಆದರೆ ಗುಣಗ್ರಾಹಿಗಳಾದ ಶ್ರೀ ಶೋಭನಭಟ್ಟರು ಸಭೆಯ ಅಧ್ಯಕ್ಷರಾಗಿದ್ದರೂ, ಪಾಂಡಿತ್ಯದ ದುರಭಿಮಾನವನ್ನು ಬಿಟ್ಟು ಶ್ರೀಮದಾಚಾರ್ಯರ ಪಾದಕ್ಕೆ ಬಿದ್ದು ಶಿಷ್ಯತ್ವವನ್ನೇ ವಹಿಸಿದರು. ದ್ವೈತಭಾಷ್ಯವನ್ನು ಶ್ರೀಮದಾ-ಚಾರ್ಯರಿಂದಲೇ ಓದಿ ಕೃತಕೃತ್ಯರಾದರು.

*ಶ್ರುತ್ವಾ ಮತ್ವಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ ।*
*ಅಸ್ಮೈ ಪ್ರಸನ್ನಃ ಪ್ರಾಜ್ಞೇಕ್ಷಃ ಸದ್ಯೋ ವಿದ್ಯಾಂ ದದೌ ಶುಭಾಂ ॥*

ಶ್ರೀಮದಾಚಾರ್ಯರು ಶೋಭನಭಟ್ಟರ ಭಕ್ತಿ, ವೈರಾಗ್ಯ, ಗುರುಗಳ ನಿತ್ಯಸೇವೆ, ಶಾಸ್ತ್ರದ ಪಾಂಡಿತ್ಯ, ಪರವಾದಿಗಳ ನಿಗ್ರಹ ಇವುಗಳಿಂದ ಪ್ರೀತರಾಗಿ ವೇದಾಂತವಿದ್ಯೆಯನ್ನು ನೀಡಿ ಅನುಗ್ರಹಿಸಿದರು.

ಅನಂತರ ಶೋಭನಭಟ್ಟರು ಶ್ರೀಮದಾಚಾರ್ಯರಿಂದ ವೇದಾಂತಗಳನ್ನು ಅಧ್ಯಯನ ಮಾಡು -ವುದರ ಜೊತೆಗೆ ಪರಮತಗಳನ್ನು ಖಂಡಿಸುತ್ತ ಶ್ರೀಮದಾಚಾರ್ಯರ ಜೊತೆಗೆ ಒಮ್ಮೆ ಉಡುಪಿಗೆ ಬಂದರು. ಆವಾಗ ಶ್ರೀಮದಾಚಾರ್ಯರು ತಮ್ಮ ಪೂರ್ವಾಶ್ರಮದ ತಮ್ಮಂದಿರಿಗೂ ಮತ್ತು ಶೋಭನಭಟ್ಟರಿಗೂ ಸನ್ಯಾಸಾಶ್ರಮವನ್ನು ನೀಡಿ ಪದ್ಮನಾಭತೀರ್ಥರೆಂಬ ಹೆಸರನ್ನು ಇಟ್ಟರು.

*ಸೋದರ್ಯಂ ಸ್ವಂ ವಿರಕ್ತಂ ಯತಿಮಕೃತ ।*
*ಮಹಾಸದ್ಗುಣಂ ವಿಷ್ಣುತೀರ್ಥಂ ।*
*ವಾದೀಂದ್ರಂ ಪದ್ಮನಾಭಂ ಪ್ರಿಯಮಥ ಚ*

- ಎಂಬುದಾಗಿ ಅಣುಮಧ್ವವಿಜಯದಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಪದ್ಮನಾಭತೀರ್ಥರಿಗೆ ಸನ್ಯಾಸಾಶ್ರಮವನ್ನು ನೀಡುವಾಗ ಶ್ರೀಮದಾಚಾರ್ಯರು ತಾವು ಪ್ರತಿನಿತ್ಯ ಪೂಜಿಸುವ

ಗೋಪೀನಾಥ ಪ್ರತಿಮೆಯನ್ನು ಅನುಗ್ರಹಿಸಿದ್ದರು. ಆ ಗೋಪಿನಾಥಪ್ರತಿಮೆಯನ್ನು ಮುಂದೆ ಲಕ್ಷ್ಮೀಧರತೀರ್ಥರಿಗೆ ಪದ್ಮನಾಭತೀರ್ಥರು ಆಶ್ರಮವನ್ನು ನೀಡಿ ಅನುಗ್ರಹಿಸಿದರು. ಅದೇ ಪ್ರತಿಮೆ ಇಂದು ಮುಳುಬಾಗಿಲು ಶ್ರೀಪಾದರಾಜಮಠದಲ್ಲಿ ವಿರಾಜಮಾನವಾಗಿದೆ. ಇಂತಹ ಪದ್ಮನಾಭತೀರ್ಥರನ್ನು ಶ್ರೀನಾರಾಯಣಪಂಡಿತಾಚಾರ್ಯರು ಹೀಗೆ ಬಣ್ಣಿಸಿದ್ದಾರೆ. ವೇದ-ಪ್ರವಚನಾಚಾರ್ಯಶಿಷ್ಯೋಽಸಾವಿತಿಪೂಜಿತಃ - ಆ ಕಾಲದಲ್ಲಿ ಪದ್ಮನಾಭತೀರ್ಥರು ವೇದ-ಪ್ರವಚನಚಾರ್ಯರೆಂದೇ ಪ್ರಸಿದ್ಧರಾಗಿದ್ದರು. ಶ್ರೀಮದಾಚಾರ್ಯರ ಅನುವ್ಯಾಖ್ಯಾನಗ್ರಂಥಕ್ಕೆ 'ಸನ್ಯಾಯರತ್ನಾವಳಿ' ಎಂಬ ಟೀಕೆಯನ್ನು ಬರೆದಿದ್ದಾರೆ. ಬ್ರಹ್ಮಸೂತ್ರಭಾಷ್ಯಕ್ಕೆ 'ಸತ್ತರ್ಕ-ದೀಪಾವಳಿ'ಯನ್ನು ಬರೆದಿದ್ದಾರೆ. ಇಷ್ಟೇ ಅಲ್ಲದೆ 'ಮಾಯಾವಾದಖಂಡನಟೀಕಾ' ಮೊದಲಾದ ಪ್ರಕರಣಗ್ರಂಥಗಳ ಟೀಕೆಗಳನ್ನು ರಚಿಸಿದ್ದಾರೆ. ಇವರ ಮಾರ್ಗದರ್ಶನದಲ್ಲಿಯೇ ಶ್ರೀಜಯತೀರ್ಥರ ಟೀಕೆಯು ಹೊರಟಿದೆ ಎಂದು ಹೇಳಿದರೆ ಅತಿಶಯೋಕ್ತಿ ಆಗುವುದಿಲ್ಲ.

ಶ್ರೀಮದಾಚಾರ್ಯರ ಸನಿಹದಲ್ಲಿ ಪಾಠವನ್ನು ಕೇಳಿ ಬರೆದ ಇವರ ಗ್ರಂಥಗಳು ಶಿರೋ-ಮಾನ್ಯವಾಗಿವೆ. ಆದರೆ ಇಂದಿನ ಕಾಲದಲ್ಲಿ ಯಾರಿಗೂ ಅವರ ಗ್ರಂಥಗಳ ಪರಿಚಯವೇ ಇಲ್ಲ. ಮತ್ತು ಅವರ ಗ್ರಂಥಗಳ ಪ್ರಕಟಣೆ ಮೊದಲಾದವೂ ಸಹ ತೀರಾ ವಿರಳ. ಈ ದೃಷ್ಟಿಯಿಂದ ಪ್ರಕೃತ ಗ್ರಂಥದಲ್ಲಿ ಸತ್ತರ್ಕದೀಪಾವಳಿಯನ್ನು ಮುದ್ರಿಸಲಾಗಿದೆ. ಮತ್ತು ಅದರ ಕನ್ನಡ ಅನುವಾದವನ್ನು ಯಥಾಶಕ್ತಿ ಮಾಡಲಾಗಿದೆ. ವಿದ್ಯಾರ್ಥಿಗಳು ಅವಶ್ಯವಾಗಿ ಸತ್ತರ್ಕದೀಪಾವಳಿಯನ್ನು ಅಧ್ಯಯನ ಮಾಡಬೇಕೆಂಬುದು ನಮ್ಮ ಹಂಬಲ.

## ಶ್ರೀಜಯತೀರ್ಥರು ಮತ್ತು ಟೀಕೆ

ಶ್ರೀಮದಾಚಾರ್ಯರು ತಮ್ಮ ಅವತಾರ ಕಾರ್ಯವನ್ನು ಮುಗಿಸಿ ಬದರಿಕಾಶ್ರಮವನ್ನು ತೆರಳುವಾಗ ಸಜ್ಜನೋದ್ಧಾರಕಾರ್ಯಕ್ಕಾಗಿ ಅಷ್ಟಮಠದ ಯತಿಗಳಿಗೆ ಶ್ರೀಕೃಷ್ಣಪೂಜಾ-ಕೈಂಕರ್ಯವನ್ನು ದಯಪಾಲಿಸಿದರು. ಮತ್ತು ಪದ್ಮನಾಭತೀರ್ಥರೇ ಮೊದಲಾದವರಿಗೆ ರಾಮದೇವರ ಪ್ರತಿಮೆಯನ್ನು ನೀಡಿ ಅನುಗ್ರಹಿಸಿದರು. ಶ್ರೀಮದಾಚಾರ್ಯರ ಶಿಷ್ಯರೇ ಆದ ನರಹರಿತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರನ್ನು ಸಹ ಅನುಗ್ರಹಿಸಿದರು. ಶ್ರೀಮದಾಚಾರ್ಯರ ಕೃಪೆಗೆ ಪಾತ್ರರಾದ ಅಕ್ಷೋಭ್ಯತೀರ್ಥರು ದುರ್ಮತಗಳನ್ನು ನಿರಾಕರಿಸುತ್ತಾ, ಸತ್‌ಸಿದ್ಧಾಂತದ ಸ್ಥಾಪನೆಗಾಗಿ ಆಸೇತುಹಿಮಾಚಲ ಪರ್ಯಂತ ಸಂಚರಿಸಿದರು. ಅದೇ ಸಂದರ್ಭದಲ್ಲಿ ಮಂಗಳವೇಢೆಯೆಂಬ ಗ್ರಾಮದಲ್ಲಿ ರಘುನಾಥದಂಪತಿಗಳು ವಾಸಿಸುತ್ತಿದ್ದರು. ಆಗರ್ಭಶ್ರೀಮಂತರಾದ ಇವರಿಗೆ ಒಬ್ಬ ಮಗನು ಹುಟ್ಟಿದನು. ಧೋಂಡೋಪಾಂತನೆಂದು ನಾಮಕರಣ ಮಾಡಿದರು. ಧೊಂಡೋರಾಯನಿಗೆ ಯೌವ್ವನಾವಸ್ಥೆ ಪ್ರಾಪ್ತವಾದಾಗ ಸತ್ಕುಲ

ಪ್ರಸೂತರಾದ ಇಬ್ಬರು ಕನ್ಯೆಯರ ಜೊತೆಗೆ ವಿವಾಹ ಮಾಡಿದರು. ಒಮ್ಮೆ ಧೋಂಡೋರಾಯರು ಬೇಟೆಗಾಗಿ ಕುದುರೆ ಸವಾರಿ ಮಾಡುತ್ತಾ ಹೊರಟರು. ಮಧ್ಯಾಹ್ನದ ವೇಳೆ ಬಿಸಿಲಿನ ತಾಪದಿಂದ ಬಳಲಿ ಬಾಯಾರಿಕೆಯನ್ನು ಪರಿಹರಿಸಿಕೊಳ್ಳಲು ಭೀಮರಥೀ ನದಿಗೆ ತೆರಳಿದರು. ಕುದುರೆಯನ್ನು ನದಿಯ ಒಳಗಡೆ ಓಡಿಸುತ್ತಾ ಕುದುರೆಯಿಂದ ಇಳಿಯದೆ ಬಾಯಿಂದ ನೇರವಾಗಿ ಜಲಪಾನ ಮಾಡಿದರು. ಅದೇ ಸಂದರ್ಭದಲ್ಲಿ ಆ ಭೀಮರಥಿನದಿಯ ತೀರದಲ್ಲಿ ಶ್ರೀ ಅಕ್ಷೋಭ್ಯತೀರ್ಥರು ತಪಸ್ಸನ್ನಾಚರಿಸುತ್ತಿದ್ದರು. ಪ್ರಾಣಿಯಂತೆ ನೀರು ಕುಡಿಯುತ್ತಿರುವ ಧೋಂಡೋರಾಯರನ್ನು ನೋಡಿ ತಕ್ಷಣವೇ ಅವರು 'ಕಿಂ ಪಶುಃ ಪೂರ್ವದೇಹೇ?' ಹಿಂದಿನ ಜನ್ಮದಲ್ಲಿ ಪಶುವಾಗಿದ್ದೆಯೇನು? ಎಂದು ಸಂಬೋಧಿಸಿದರು. ಯಾವ ಕ್ಷಣದಲ್ಲಿ ಧೋಂಡೋರಾಯನಿಗೆ ಈ ಮಾತು ಕಿವಿಗೆ ಬಿತ್ತೋ ತತ್‌ಕ್ಷಣದಲ್ಲಿಯೇ ಜೀವನವೆಲ್ಲವೂ ಬದಲಾಯಿತು. ಹಿಂದಿನ ಜನ್ಮವೆಲ್ಲವು ನೆನಪಾದಂತೆ ಕ್ಷಣ-ಮಾತ್ರದಲ್ಲಿ ವಿರಕ್ತರಾಗಿಬಿಟ್ಟರು. ಆಗರ್ಭಶ್ರೀಮಂತ ಜೀವನವನ್ನು ಮನಸ್ಸಿನಿಂದ ಕಳಚಿದರು.

''ಶ್ರೀಮದಾಚಾರ್ಯರು ತಮ್ಮ ಶಿಷ್ಯರಿಗೆ ಪಾಠವನ್ನು ಮಾಡುತ್ತಿರುವಾಗ ಒಂದು ಹಸುವೂ ಸಹ ಅಲ್ಲೇ ಕುಳಿತಿರುತ್ತಿತ್ತು. ಒಂದು ಸಂದರ್ಭದಲ್ಲಿ ಎಲ್ಲ ಶಿಷ್ಯಂದಿರೂ ತಮ್ಮ ಗ್ರಂಥಗಳಿಗೆ ಯಾರು ಟೀಕೆಯನ್ನು ಬರೆಯುತ್ತಾರೆ? ಎಂದು ಕುತುಹಲದಿಂದ ಪ್ರಶ್ನಿಸಿದಾಗ ಶ್ರೀಮದಾಚಾರ್ಯರು ಹತ್ತಿರದಲ್ಲಿರುವ ಹಸುವನ್ನು ತೋರಿಸಿ 'ವ್ಯಾಖ್ಯಾಸ್ಯತ್ಯೇಷ ಗೋರಾಟ್' ಎಂದು ಹಸುವೇ ವ್ಯಾಖ್ಯಾನಿಸುತ್ತದೆ ಎಂದು ಉತ್ತರಿಸಿದ್ದರು''. ಯಾವಾಗ ಅಕ್ಷೋಭ್ಯತೀರ್ಥರು ಪಶುವೆಂದು ಸಂಬೋಧಿಸಿದರೋ ಆವಾಗ ಧೊಂಡೋರಾಯರಿಗೆ ತಮ್ಮ ಹಿಂದಿನ ಜನ್ಮದಲ್ಲಿ ಹಸುವಿನ ರೂಪ-ದಲ್ಲಿ ಶ್ರೀಮದಾಚಾರ್ಯರ ಬಳಿ ಶ್ರವಣ ಮಾಡಿದ ಘಟನೆ ನೆನಪಾಯಿತು. ಕೂಡಲೇ ಅತ್ಯಂತಭಕ್ತಿಯಿಂದ ಅಕ್ಷೋಭ್ಯತೀರ್ಥರನ್ನು ನಮಸ್ಕರಿಸಿದರು. ಅಕ್ಷೋಭ್ಯತೀರ್ಥರು ವಿಚಾರ ಮಾಡದೆ ಸ್ವಪ್ನಸೂಚನೆಯಂತೆ ಆ ಧೊಂಡೋರಾಯನಿಗೆ ಸನ್ಯಾಸಾಶ್ರಮವನ್ನು ನೀಡಿದರು. ಶ್ರೀ ಜಯತೀರ್ಥರೆಂದು ನಾಮಕರಣ ಮಾಡಿದರು. ವೇದಾಂತ ಸಾಮ್ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದರು. ಸುಮಾರು ಹದಿನೆಂಟು ವರ್ಷಗಳ ಕಾಲ ವೇದಾಂತ ಕ್ಷೇತ್ರದಲ್ಲಿ ಪ್ರವೇಶ ಮಾಡದ ಶ್ರೀಜಯತೀರ್ಥರು ಸನ್ಯಾಸಾಶ್ರಮ ಸ್ವೀಕರಿಸಿದ ಕೆಲವೇ ವರ್ಷಗಳಲ್ಲಿ ಸಕಲ ಶಾಸ್ತ್ರಗಳ ಅಧ್ಯಯನವನ್ನು ಮುಗಿಸಿಬಿಟ್ಟರು. ಉತ್ತಮ ತಪಸ್ವಿಗಳೂ, ಮಹಾಮೇಧಾವಿಗಳೂ, ಮಿತಭಾಷಿಗಳೂ ಆದ ಇವರಲ್ಲಿ ವಿನಯವೆಂಬ ಗುಣವು ಅತ್ಯುತ್ತಮ ರೀತಿಯಲ್ಲಿ ಪ್ರಕಾಶಿಸಿತು. ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳಲ್ಲಿ ಸುಮಾರು ಹದಿನೆಂಟು ಗ್ರಂಥಗಳಿಗೆ ಟೀಕೆಯನ್ನು ಬರೆದರು. ಮೂರು ಸ್ವತಂತ್ರ ಕೃತಿಗಳನ್ನು ರಚಿಸಿದರು. ಒಟ್ಟು ಇಪ್ಪತ್ತೊಂದು ಗ್ರಂಥಗಳನ್ನು ಕೆಲವೇ ವರ್ಷಗಳಲ್ಲಿ ಬರೆದು ಮುಗಿಸಿದ ಮಹಾಮಹಿಮರು ಇವರು. ೧. ತತ್ತ್ವಪ್ರಕಾಶಿಕಾ, ೨. ನ್ಯಾಯಸುಧಾ, ೩. ನ್ಯಾಯ-ದೀಪಿಕಾ, ೪. ಪ್ರಮೇಯದೀಪಿಕಾ, ೪೫. ಸಂಬಂಧದೀಪಿಕಾ, ೬ ನ್ಯಾಯವಿವರಣಟೀಕಾ ೭. ಈಶಾವಾಸ್ಯ ಭಾಷ್ಯಟೀಕಾ, ೮. ಷಟ್‌ಪ್ರಶ್ನೋತ್ತರಭಾಷ್ಯ ಟೀಕಾ, ೯. ಪ್ರಮಾಣಲಕ್ಷಣಟೀಕಾ,

೧೦. ಕಥಾಲಕ್ಷಣಟೀಕಾ, ೧೧. ಮಯಾವಾದಖಂಡನಟೀಕಾ, ೧೨. ಉಪಾಧಿಖಂಡನಟೀಕಾ, ೧೩. ಮಿಥ್ಯಾತ್ವಾನುಮಾನಖಂಡನಟೀಕಾ, ೧೪. ತತ್ತ್ವಸಂಖ್ಯಾನಟೀಕಾ, ೧೫. ತತ್ತ್ವವಿವೇಕಟೀಕಾ, ೧೬. ತತ್ತ್ವೋದ್ಯೋತಟೀಕಾ, ೧೭. ತತ್ತ್ವನಿರ್ಣಯಟೀಕಾ, ೧೮. ಕರ್ಮನಿರ್ಣಯಟೀಕಾ, ೧೯. ಪದ್ಯಮಾಲಾ, ೨೦. ವಾದಾವಳಿ, ೨೧. ಪ್ರಮಾಣಪದ್ಧತಿ ಎಂದು. ಇವುಗಳಲ್ಲಿ ಕೊನೆಯ ಮೂರು ಗ್ರಂಥಗಳು ಸ್ವತಂತ್ರಕೃತಿಗಳಾಗಿವೆ.

ಶ್ರೀಜಯತೀರ್ಥರು ಶ್ರೀಮದಾಚಾರ್ಯರ ಅಖಂಡ ಸೇವೆಗೋಸ್ಕರ ಅವರ ಗ್ರಂಥಗಳನ್ನು ವ್ಯಾಖ್ಯಾನಿಸಲು 'ಯರಗೊಳ' ಎಂಬ ಗುಹೆಯನ್ನು ಪ್ರವೇಶಿಸಿದರು. ಪ್ರಾರಂಭದಲ್ಲಿ ಪ್ರತಿನಿತ್ಯ ದುರ್ಗಾಮಂತ್ರವನ್ನು ಜಪಿಸಿ, ದುರ್ಗಾದೇವಿಯ ಅನುಗ್ರಹವನ್ನು ಪಡೆದರು. ದುರ್ಗಾದೇವಿಯು ಪ್ರತ್ಯಕ್ಷಳಾಗಿ ಏನು ಬೇಕೆಂದು ಕೇಳಿದಾಗ ಶ್ರೀಜಯತೀರ್ಥರ ಬೇಡಿಕೆಯಂತೆ ಒಂದು ಆಯಾತ ಲೇಖನಿ (ಕಬ್ಬಿಣದ ಲೇಖನಿ, ತಾಳೆಗರಿಯ ಮೇಲೆ ಬರೆಯಲು ಅನುಕೂಲವಾಗುವಂತಹದ್ದು) ಹಾಗೂ ಅಡಿಕೆಯ ಬೆಟ್ಟವನ್ನು ಅನುಗ್ರಹಿಸಿದಳು. ದೇವಿಯಿಂದ ಕೊಡಲ್ಪಟ್ಟ ಆ ಲೇಖನಿಯಿಂದ ಟೀಕೆಗಳನ್ನು ಬರೆದರು. ಅದರ ಮೇಲೆ ಅಡಿಕೆಯ ಬೆಟ್ಟವನ್ನು ಸವರುತ್ತಿದ್ದರು. ಹೀಗೆ ಅನೇಕ ವರ್ಷಗಳ ತನಕ ಗ್ರಂಥ ರಚನೆಯೆಂಬ ತಪಸ್ಸಿನಲ್ಲಿ ಮುಳುಗಿದ್ದರು. ಎದುರಿನಲ್ಲಿ ಪ್ರಾಣದೇವರನ್ನು ಇಟ್ಟು ಕೊಂಡು ತಾವು ಬರೆದದ್ದೆಲ್ಲವನ್ನು ಅವರ ಅಂತರ್ಯಾಮಿಗೆ ಸಮರ್ಪಿಸುತ್ತಿದ್ದರು. ಪೀಠಾಧಿಪತಿಗಳಾಗಿದ್ದರೂ ಯಾವ ವೈಭವವನ್ನೂ ಮನಸ್ಸಿನಿಂದಲೂ ಆಲೋಚಿಸದೆ ಪುಡಿಗಾಸಿಲ್ಲದ ಬಡಜೀವನದಲ್ಲಿ ಸಾಧನೆಗೈದರು. ಶ್ರೀಮೂಲರಾಮದೇವರನ್ನು ಬಾಳೆಯ ಎಲೆಯ ಮೇಲೆಯೇ ಇಟ್ಟು ಪೂಜಿಸುತ್ತಿದ್ದರು. ಇಂದಿನ ಯುಗದಂತೆ ಅಂದು ಯಾರೂ ಸಹ ಗ್ರಂಥಕಾರರಿಗೆ ದುಡ್ಡನ್ನು ಸುರಿಯುತ್ತಿರಲಿಲ್ಲ. ಅಥವಾ ಅದನ್ನು ಗ್ರಂಥಕಾರರು ಅಪೇಕ್ಷಿಸುತ್ತಿರಲಿಲ್ಲ. ಮತ್ತು ಹಾಳೆ, ಪೆನ್ನು ಮೊದಲಾದ ಯಾವ ಸಾಮಗ್ರಿಗಳೂ ಇರಲಿಲ್ಲ. ಮರದ ತೊಗಟೆಯನ್ನು ಸಂಗ್ರಹಿಸಿ ಅದರ ಮೇಲೆ ಅಕ್ಷರಗಳನ್ನು ಕೊರೆದು ಕೊರೆದು ಗ್ರಂಥವನ್ನು ರಚಿಸಬೇಕಿತ್ತು. ರಾತ್ರಿಕಾಲದಲ್ಲಿ ಸುತ್ತಮುತ್ತಲಿರುವ ತರೆಗೆಲೆಗಳಿಗೆ ಬೆಂಕಿ ಹಚ್ಚಿ ಅದರ ಬೆಳಕಿನಲ್ಲಿಯೇ ಗ್ರಂಥವನ್ನು ಬರೆಯಬೇಕಿತ್ತು. ಇಷ್ಟೆಲ್ಲಾ ಕಷ್ಟಗಳ ಮಧ್ಯದಲ್ಲಿ ವಿವಿಧ ಪ್ರಾಣಿಗಳ ಆವಾಸಸ್ಥಾನವಾದ ಗುಹೆಯಲ್ಲಿಯೇ ಕುಳಿತು ಗ್ರಂಥಗಳನ್ನು ಹೇಗೆ ಬರೆದರೆಂಬುದನ್ನು ನಮಗೆ ಊಹಿಸಲೂ ಸಾಧ್ಯವಿಲ್ಲ. ಇದೇ ನಿಜವಾದ ಸಾಧನೆ. ಇದೇ ನಿಜವಾದ ಶ್ರೀಮದಾಚಾರ್ಯರ ಸೇವೆ.

ಶ್ರೀಜಯತೀರ್ಥರ ಮರೆಯಲಾರದ ಅತ್ಯದ್ಭುತವಾದ ಈ ಸೇವೆಯನ್ನು ಗಮನಿಸಿ ಸಕಲ ಮಧ್ವಮತಾನುಯಾಯಿಗಳೂ ಅವರಿಗೆ 'ಶ್ರೀಮತ್‌ಟೀಕಾಕೃತ್ಪಾದರು' ಎಂಬ ಬಿರುದನ್ನು ನೀಡಿ ಗೌರವದಿಂದ ಹಾಗೆಯೇ ಕರೆದರು. ಇಂತಹ ಟೀಕಾಕೃತ್ಪಾದರ ಟೀಕೆಯನ್ನು ವ್ಯಾಸತೀರ್ಥರು ನ್ಯಾಯಾಮೃತದಲ್ಲಿ ಭಕ್ತಿಯಿಂದ ಹೀಗೆ ವರ್ಣಿಸಿದ್ದಾರೆ. -

*ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।*
*ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥*

ಟೀಕಾಕೃತ್ಪಾದರ ವಾಗ್‌ಭಾರತಿಯನ್ನು ಬಣ್ಣಿಸಲು ಯಾರಿಗೆ ಸಾಧ್ಯ? ಪದಗಳಲ್ಲಿರುವ ಲಾಲಿತ್ಯ-ಭಾವದ ಮಾಧುರ್ಯ, ವಿಷಯದ ವೈಖರಿ, ಯುಕ್ತಿಗಳ ಜೋಡಣೆ ಪ್ರತಿಯೊಂದು ಅಪೂರ್ವ ಅದ್ಭುತ. ಟಿಪ್ಪಣಿಕಾರರಾದ ಮಂತ್ರಾಲಯಪ್ರಭುಗಳೂ ಸಹ ಟೀಕಾಕೃತ್ಪಾದರ ಟೀಕೆಯನ್ನು ವ್ಯಾಖ್ಯಾನಿಸುತ್ತಾ ಅತ್ಯಂತ ಹರ್ಷಪುಳಕಿತರಾಗುತ್ತಾರೆ. ಟೀಕೆಯಲ್ಲಿರುವ ಗಾಂಭೀರ್ಯ ಹಿರಿಮೆ-ಗಳನ್ನು ಹೆಮ್ಮೆಯಿಂದ ಪ್ರಶಂಸಿಸುತ್ತಾರೆ.

*''ಟೀಕಾಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಃ ಕ್ಷಮಾಃ''*

ಟೀಕೆಯ ಗಾಂಭೀರ್ಯವನ್ನು ಎತ್ತಿ ತೋರಿಸಲು ವ್ಯಾಸತೀರ್ಥರೇ ಸಮರ್ಥರೆನ್ನುತ್ತಾರೆ. ತರ್ಕತಾಂಡವದಲ್ಲಿ ಶ್ರೀ ವ್ಯಾಸತೀರ್ಥರು ಟೀಕಾಕೃತ್ಪಾದರನ್ನು ಹೀಗೆ ಪ್ರಶಂಸಿದ್ದಾರೆ.

*ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ ।*
*ಪ್ರದರ್ಶಿತೋ ಯೇನ ಸಮ್ಯಕ್ ಜಯತೀರ್ಥಂ ತಮಾಶ್ರಯೇ ॥*

ನಾರಾಯಣನೆಂಬ ನಿಧಿಯಿರುವ ಸ್ಥಳವನ್ನು ಆನಂದತೀರ್ಥರು ತೋರಿಸಿದ್ದಾರೆ. ಜಯ-ತೀರ್ಥರು ಅಂಜನವನ್ನು ಹಚ್ಚಿ ಕನ್ನಡಿ ಹಿಡಿದು ನಿಧಿಯನ್ನು ನಮಗೆ ತೋರಿಸಿದ್ದಾರೆ. ತಾತ್ಪರ್ಯ-ಚಂದ್ರಿಕೆಯ ಪ್ರಾರಂಭದಲ್ಲಿ ಅದೇ ವ್ಯಾಸತೀರ್ಥರೇ ಪುನಃ ಹೀಗೆ ಪ್ರಶಂಸಿದ್ದಾರೆ.

*ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ।*
*ಜಯತೀರ್ಥಾಖ್ಯತರಣಿರ್ಭಾಸತಾಂ ನೋ(ಮೇ) ಹೃದಂಬರೇ ॥*

ಸುಳ್ಳನ್ನು ಹೇಳುವ ಸಿದ್ಧಾಂತ, ಅಥವಾ ಸುಳ್ಳುಸಿದ್ಧಾಂತಗಳೆಂಬ ಕೆಟ್ಟ ಅಜ್ಞಾನವನ್ನು ಪರಿಹರಿಸು-ವುದರಲ್ಲಿ ನಿಪುಣರಾದ ಜಯತೀರ್ಥರೆಂಬ ಸೂರ್ಯರು ನಮ್ಮ ಹೃದಯದಲ್ಲಿ ಪ್ರಕಟವಾಗಲಿ ಎಂದು.

ಬ್ರಹ್ಮಸೂತ್ರಭಾಷ್ಯದ ಸಂಪೂರ್ಣ ಅರ್ಥವನ್ನು ವಿವರಿಸುವ ಏಕೈಕ ಕೃತಿ ಟೀಕಾಕೃತ್ಪಾದರ 'ತತ್ತ್ವ-ಪ್ರಕಾಶಿಕಾ'. ಆದ್ದರಿಂದಲೇ ಈ ತತ್ತ್ವಪ್ರಕಾಶಿಕೆಗೆ ಮಾಧ್ವಸಂಪ್ರದಾಯದಲ್ಲಿ ಎಲ್ಲಿಲ್ಲದಷ್ಟು ಗೌರವವಿದೆ. ಮೂವತ್ತಕ್ಕೂ ಹೆಚ್ಚು ಟಿಪ್ಪಣಿಗಳನ್ನು ಅನೇಕ ಜ್ಞಾನಿಗಳು ಈ ಗ್ರಂಥಕ್ಕೆ ಬರೆದಿದ್ದಾರೆ. -

*೧. ತಾತ್ಪರ್ಯಚಂದ್ರಿಕಾ (ಶ್ರೀ ವ್ಯಾಸತೀರ್ಥರು)*

*೨. ಭಾವಬೋಧ (ಶ್ರೀರಘೂತ್ತಮತೀರ್ಥರು)*

*೩. ಗುರ್ವರ್ಥದೀಪಿಕಾ (ಶ್ರೀವಾದಿರಾಜತೀರ್ಥರು)*
*ಪಂಪೂರ್ಣಚಂದ್ರಿಕಾ*

೪. ಭಾವದೀಪ (ಶ್ರೀರಾಘವೇಂದ್ರತೀರ್ಥರು)

೫. ಅಭಿನವಚಂದ್ರಿಕಾ (ಶ್ರೀಸತ್ಯನಾಥತೀರ್ಥರು)

೬. ಶೇಷತಾತ್ಪರ್ಯಚಂದ್ರಿಕಾ (ಶ್ರೀರಘುನಾಥತೀರ್ಥರು)

೭. ಭಾವರತ್ನಕೋಶ (ಶ್ರೀಸುಮತೀಂದ್ರತೀರ್ಥರು)

೮. ತತ್ವಪ್ರಕಾಶಿಕಾವ್ಯಾಖ್ಯಾ (ಶ್ರೀಸತ್ಯಪ್ರಿಯತೀರ್ಥರು)

೯. ತತ್ವಪ್ರಕಾಶಿಕಾ ಟಿಪ್ಪಣ (ಶ್ರೀಬ್ರಹ್ಮಣ್ಯತೀರ್ಥರು)

೧೦. ಚಂದ್ರಿಕಾಬಿಂದು (ಶ್ರೀಸತ್ಯಪ್ರಿಯತೀರ್ಥರು)

೧೧. ಚಂದ್ರಿಕಾಟಿಪ್ಪಣ (ಶೇಷದಾಸಾರ್ಯ ಆದ್ಯ)

೧೨. ಚಂದ್ರಿಕಾವ್ಯಾಖ್ಯಾನ (ಶ್ರೀಸುಬ್ರಹ್ಮಣ್ಯಾಚಾರ್ಯ ಗುರ್ಜಾರಿ)

೧೩. ಶರದಾಗಮಚಂದ್ರಿಕಾಟಿಪ್ಪಣ (ಶ್ರೀವ್ಯಾಸತತ್ವಜ್ಞರು)

೧೪. ದ್ವೈತಭೂಷಣಂ (ಚಂದ್ರಿಕಾಖಂಡನಾಖಂಡನ) (ಶ್ರೀಕಾಶೀತಿಮ್ಮಣ್ಣಾಚಾರ್ಯರು)

೧೫. ಚಂದ್ರಿಕಾಭೂಷಣಂ (ಶ್ರೀಕೊಟ್ಟರಂಗಪ್ಪಾಚಾರ್ಯ)

೧೬. ಚಂದ್ರಿಕಾಪ್ರಕಾಶಪ್ರಸರಃ (ಶ್ರೀಗೌಡಗೆರೆ ವೆಂಕಟರಮಣಾಚಾರ್ಯ)

೧೭. ಅದ್ವೈತದೀಪಿಕಾವಾತಾಗಮಃ (ಶ್ರೀಗೌಡಗೆರೆ ವೆಂಕಟರಮಣಾಚಾರ್ಯ)

೧೮. ಚಂದ್ರಿಕಾಮಂಡನಂ (ಶ್ರೀಸತ್ಯಧ್ಯಾನತೀರ್ಥರು)

೧೯. ಸಭಾಪ್ರಸರ (ಶ್ರೀಅನಂತಾಚಾರ್ಯ ಗಲಗಲಿ)

೨೦. ಚಂದ್ರಿಕಾನ್ಯಾಯವಿವರಣಂ (ಶ್ರೀವರಖೇಡಿ ತಿಮ್ಮಣ್ಣಾಚಾರ್ಯ)

೨೧. ತತ್ವಪ್ರಕಾಶಿಕಾಟಿಪ್ಪಣ (ಬಿದರಹಳ್ಳಿ ಶ್ರೀನಿವಾಸತೀರ್ಥರು)

೨೨. ವ್ಯಾಖ್ಯಾರ್ಥಮಂಜರಿ (ಶರ್ಕರಾ ಶ್ರೀನಿವಾಸತೀರ್ಥರು)

೨೩. ತತ್ವಪ್ರಕಾಶಿಕಾಟಿಪ್ಪಣ (ಶ್ರೀ ವಿಜಯೀಂದ್ರತೀರ್ಥರು)

೨೪. ಗುರುರಾಜೀಯ (ಪಾಂಡುರಂಗಿ ಕೇಶವಾಚಾರ್ಯರು)

೨೫. ಅನಂತಭಟ್ಟೀಯ (ಶ್ರೀಮುಷ್ಣಂ ಅನಂತಾಚಾರ್ಯರು)

೨೬. ಕುಂಡಲಗಿರಿಯಾ (ಕುಂಡಲಗಿರಿಆಚಾರ್ಯರು)

೨೭. ಭಾವಪ್ರದೀಪಭಾಷ್ಯವ್ಯಾಖ್ಯಾನ (ಚಿಕ್ಕೋಡಿ ಭಗವಂತರಾಯರು)

೨೮. ಸುಬೋಧಚಂದ್ರಿಕಾ (ಆದ್ಯ ವರದಾಚಾರ್ಯರು)

೨೯. ನಯದರ್ಪಣ (ಶ್ರೀ ವಾದೀಂದ್ರ ತೀರ್ಥರು)

೩೦. ತತ್ವ ಸುಬೋಧಿನಿ (ಪಾಂಡುರಂಗಿ ಶ್ರೀನಿವಾಸಚಾರ್ಯರು)

ಸಂಪೂರ್ಣಚಂದ್ರಿಕಾ

*೩೧. ಪ್ರಮೇಯಮುಕ್ತಾವಲಿ (ತಾಮ್ರಪರ್ಣ ಶ್ರೀನಿವಾಸಾಚಾರ್ಯರು)*

*೩೨. ತತ್ವಪ್ರಕಾಶಿಕಾ ಟಿಪ್ಪಣ (ಛಲಾರಿ ಸಂಕರ್ಷಣಾಚಾರ್ಯರು)*

*೩೩. ವ್ಯಾಖ್ಯಾರ್ಥಮುಕ್ತಾವಲಿ (ತಾಮ್ರಪರ್ಣ ಶ್ರೀನಿವಾಸಾಚಾರ್ಯರು)*

*೩೪. ತತ್ವಪ್ರಕಾಶಿಕಾಟೀಕಾಟಿಪ್ಪಣಿಸಾರೋದ್ಧಾರ (ಮಹಿಷಿ ವ್ಯಾಸರಾಯಾಚಾರ್ಯರು)*

*೩೫. ತತ್ವಪ್ರಕಾಶಿಕಾ ಸಾರ (ಶ್ರೀಧರಾಚಾರ್ಯ ಅಪಸಂಗಿ ನೀಲಂಗ)*

ತತ್ವಪ್ರಕಾಶಿಕಾ ಗ್ರಂಥವು ಸುಮಾರು ೮೦೦೦ ಗ್ರಂಥಗಳಷ್ಟು ವಿಸ್ತಾರವಾಗಿದೆ. ಪ್ರಾಚೀನ ಹಾಗೂ ಅರ್ವಾಚೀನ ಟೀಕೆಗಳೆನ್ನಲ್ಲಾ ಮೀರಿಸಿದ ಮೇರು ಕೃತಿ ಇದು. ಈ ಗ್ರಂಥದ ಮೇಲೆ ಶ್ರೀವ್ಯಾಸತೀರ್ಥರು ತಾತ್ಪರ್ಯಚಂದ್ರಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ರಾಯರು 'ಭಾವದೀಪ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಅವರೇ ಪುನಃ ತಾತ್ಪರ್ಯಚಂದ್ರಿಕಾ ಗ್ರಂಥಕ್ಕೂ 'ಪ್ರಕಾಶ'ವೆಂಬ ವ್ಯಾಖ್ಯಾನ ಬರೆದಿದ್ದಾರೆ. ಇದರಿಂದಲೇ ತತ್ವಪ್ರಕಾಶಿಕೆಯು ಎಷ್ಟು ಅಗಾಧವೆಂದು ಸ್ಪಷ್ಟವಾಗುತ್ತದೆ. ತತ್ವಪ್ರಕಾಶಿಕೆಯ ಮೇಲೆ ತಿಳಿಸಿದಂತೆ ಅನೇಕ ಟಿಪ್ಪಣಿಗಳು ಹೊರಟಿರುವುದಲ್ಲದೆ ಪರಮತೀಯರೂ ಸಹ ಕೆಲವೆಡೆ ಇದನ್ನು ನಿರಾಕರಿಸಿದ್ದಾರೆ. ಪರಮತೀಯರ ಆ ಜೊಳ್ಳು-ವಾದಗಳನ್ನೆಲ್ಲಾ ಚಂದ್ರಿಕಾಚಾರ್ಯರು ಮತ್ತು ಭಾವದೀಪಾಚಾರ್ಯರು ನಿರಾಕರಿಸಿದ್ದಾರೆ.

ಛಲಾರಿ ಆಚಾರ್ಯರು ತಮ್ಮ "ಜಯತೀರ್ಥವಿಜಯ" ಎಂಬ ಕಾವ್ಯದಲ್ಲಿ ನ್ಯಾಯಸುಧಾ-ಗ್ರಂಥವನ್ನು ಐರಾವತವೆಂದು ವರ್ಣಿಸಿ, ತತ್ವಪ್ರಕಾಶಿಕೆಯನ್ನು ಉಚ್ಚೈಶ್ರವಸ್ಸು ಎಂದು ಹೃದಯಂಗಮವಾಗಿ ವರ್ಣಿಸಿದ್ದಾರೆ. ಮತ್ತು ಶ್ರೀಜಯತೀರ್ಥರು ಮೊದಲ ಎರಡು ಅಧ್ಯಾಯ-ಗಳಿಗೆ ಮಾತ್ರ ಟೀಕೆಯನ್ನು ಬರೆದಿರುವ ಶ್ರೀಮದಾಚಾರ್ಯರ ನ್ಯಾಯವಿವರಣ ಗ್ರಂಥದ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳಿಗೆ ಶ್ರೀರಘೂತ್ತಮತೀರ್ಥರು ಟೀಕೆಯನ್ನು ಬರೆದಿದ್ದಾರೆ. ಕೊನೆಯಲ್ಲಿ ಅವರು ಮಾಡಿದ ಮಂಗಳಶ್ಲೋಕ ಹೀಗಿದೆ.

*ತತ್ವಪ್ರಕಾಶಿಕಾಸಂಸ್ಥೋ ಮಯಾऽನುಗ್ರಹತೋ ಹರೇಃ ।*
*ಸನ್ನ್ಯಾಯವಿವೃತೇರ್ಭಾವೋ ಬಾಲಬೋಧಾರ್ಥಮುದ್ಧೃತಃ ॥*

"ತತ್ವಪ್ರಕಾಶಿಕೆಯಲ್ಲಿರುವ ವಿಷಯವನ್ನೇ ನಾನು ನ್ಯಾಯವಿವರಣದ ಟೀಕೆಯಲ್ಲಿ ಹರಿಯ ಅನುಗ್ರಹದಿಂದ ಬರೆದಿದ್ದೇನೆ. ಇದರಿಂದ ಬಾಲಕರಿಗೆ ಅನುಕೂಲವಾಗುತ್ತದೆ".

ಇವರ ಈ ಮಾತಿನಿಂದ ತತ್ವಪ್ರಕಾಶಿಕೆಯಲ್ಲಿ ಎಲ್ಲವೂ ಇದೆ ಎಂದು ತಿಳಿಯುತ್ತದೆ. ತತ್ವ-ಪ್ರಕಾಶಿಕೆಯು ಮೇಲ್ನೋಟಕ್ಕೆ ಸುಲಭವೆಂದು ತೋರಬಹುದು. ಆದರೆ ಇದರಲ್ಲಿರುವ ಗಾಂಭೀರ್ಯಅರ್ಥದ ವಿಸ್ತಾರ ಇವುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವೆಂದು ಜನ್ಮಾಧಿ-ಕರಣದ ಪ್ರಾರಂಭದಲ್ಲಿ ರಾಯರೇ ಹೇಳಿದ್ದಾರೆ - "ಶ್ರೀಮಜ್ಜಯತೀರ್ಥರು ಭಾಷ್ಯದ ಶೈಲಿಯಲ್ಲಿ ತತ್ವಪ್ರಕಾಶಿಕೆಯನ್ನು ರಚಿಸಿದ್ದಾರೆ. ಅನುವ್ಯಾಖ್ಯಾನದ ಶೈಲಿಯಲ್ಲಿ ನ್ಯಾಯಸುಧೆಯನ್ನು ರಚಿಸಿದ್ದಾರೆ".

"ಬಾಲಸಂಘಮಪಿ ಬೋಧಯದ್‌ಭೃಶಂ ದುರ್ನಿರೂಪವಚನಂ ಚ ಪಂಡಿತೈಃ ।" ಎಂಬ ಶ್ರೀಮದಾಚಾರ್ಯರ ಭಾಷ್ಯಸ್ವರೂಪವನ್ನು ವಿವರಿಸುವ ಪಂಡಿತಾಚಾರ್ಯರ ಮಾತಿನಂತೆ ತತ್ತ್ವಪ್ರಕಾಶಿಕೆಯು ಕೂಡ ಸುಲಭವಾಗಿ ತೋರಿದರೂ ಅಷ್ಟೇ ಗಹನಾರ್ಥಗಳಿಂದ ತುಂಬಿದೆ.

ಪ್ರತಿಯೊಂದು ಅಧಿಕರಣಗಳಲ್ಲಿಯೂ ವಿಷಯ, ಸಂಶಯ, ಪೂರ್ವಪಕ್ಷ ಹಾಗೂ ಸಿದ್ಧಾಂತ-ಗಳನ್ನು ತೋರಿಸುತ್ತಾರೆ. ಪ್ರತಿಯೊಂದು ಅಧಿಕರಣಗಳಲ್ಲಿಯೂ ಇದನ್ನೇಕೆ ತೋರಿಸಬೇಕು? ಎಂಬ ಪ್ರಶ್ನೆಗೆ ಅಭಿನವಚಂದ್ರಿಕೆಯಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ. "ಬ್ರಹ್ಮಮಿಮಾಂಸಾಶಾಸ್ತ್ರದಲ್ಲಿರುವ ಪ್ರತಿಯೊಂದು ಅಧಿಕರಣಗಳೂ ಸಹ ಒಂದೊಂದು ಶಾಸ್ತ್ರದಂತಿವೆ. ಬೇರೆ ಬೇರೆ ಶಾಸ್ತ್ರಗಳಾದ್ದರಿಂದ ಎಲ್ಲಾ ಅಧಿಕರಣಗಳಲ್ಲಿಯೂ ಪ್ರತ್ಯೇಕವಾಗಿ ವಿಷಯಾದಿಪಂಚಕಗಳನ್ನು ತೋರಿಸಿದ್ದಾರೆ. ಮೋಕ್ಷವನ್ನು ಬಯಸುವ ಪ್ರತಿಯೊಬ್ಬ ಬುಭುತ್ಸುವು ತತ್ತ್ವಪ್ರಕಾಶಿಕೆಯನ್ನು ಓದಲೇಬೇಕು. ಅಷ್ಟೇ ಅಲ್ಲದೆ ನ್ಯಾಯಸುಧಾಗ್ರಂಥವನ್ನು ಅಧ್ಯಯನ ಮಾಡುವ ಮೊದಲು ತತ್ತ್ವಪ್ರಕಾಶಿಕೆಯ ನಾಲ್ಕು ಅಧ್ಯಾಯಗಳನ್ನು ಅವಶ್ಯವಾಗಿ ಓದಿರಲೇ ಬೇಕು. ತತ್ತ್ವಪ್ರಕಾಶಿಕೆಯನ್ನು ಓದದ ವಿದ್ಯಾರ್ಥಿಗೆ ನ್ಯಾಯಸುಧಾಗ್ರಂಥವನ್ನು ಓದಲು ಸರ್ವಥಾ ಅರ್ಹತೆಯಿರುವುದಿಲ್ಲ. ನ್ಯಾಯಸುಧೆಯನ್ನು ಓದದ ವ್ಯಕ್ತಿಗೆ ತಾತ್ಪರ್ಯಚಂದ್ರಿಕಾದಿವ್ಯಾಸತ್ರಯಗಳನ್ನು ಓದಲು ಅರ್ಹತೆಯಿರುವುದಿಲ್ಲ.

ಪ್ರಕೃತ ಈ ಪರಿಪೂರ್ಣಚಂದ್ರಿಕೆಯಲ್ಲಿ ತತ್ತ್ವಪ್ರಕಾಶಿಕಾಗ್ರಂಥವನ್ನು ಪ್ರಧಾನವಾಗಿ ಉಲ್ಲೇಖಿಸಲಾಗಿದೆ. ಮೂರು ಭಾಗಗಳಿಂದ ಕೂಡಿದ ಈ ಪುಸ್ತಕದಲ್ಲಿ ಮೊದಲು ತತ್ತ್ವಪ್ರಕಾಶಿಕಾ ಭಾಗವನ್ನು ಓದಿ ಅರ್ಥಮಾಡಿಕೊಂಡು ಅನಂತರ ತಾತ್ಪರ್ಯಚಂದ್ರಿಕಾದಿಗ್ರಂಥಗಳನ್ನು ಅಧ್ಯಯನ ಮಾಡಬೇಕು. ತತ್ತ್ವಪ್ರಕಾಶಿಕೆಯನ್ನು ಸುಲಭವಾಗಿ ಅರ್ಥಮಾಡಿಕೊಳ್ಳುವುದಕ್ಕಾಗಿ ಭಾವದೀಪ ಹಾಗೂ ಶರ್ಕರಾ ಟಿಪ್ಪಣಿಯನ್ನು ಜೊತೆಗೆ ಮುದ್ರಿಸಲಾಗಿದೆ. ಓದುಗರು ಇದರ ಪ್ರಯೋಜನವನ್ನು ಸಂಪೂರ್ಣವಾಗಿ ಪಡೆದುಕೊಳ್ಳಬೇಕೆಂಬುದೇ ಕಳಕಳಿ.

## ಶ್ರೀವ್ಯಾಸತೀರ್ಥರು - ತಾತ್ಪರ್ಯಚಂದ್ರಿಕಾ

ಶ್ರೀವ್ಯಾಸತೀರ್ಥರ ಮುಖಕಮಲದಿಂದ ಧುಮುಕಿದ ವಾಙ್ಮಯಗಂಗಾಪ್ರವಾಹವೇ 'ವ್ಯಾಸ-ತ್ರಯ'. ವ್ಯಾಸತ್ರಯಗಳಲ್ಲಿಯೂ ಅತ್ಯಂತ ಶ್ರೇಷ್ಠವಾದ ಮಹೋನ್ನತ ಕೃತಿಯೆಂದರೆ 'ತಾತ್ಪರ್ಯ-ಚಂದ್ರಿಕಾ'. ಆದ್ದರಿಂದಲೇ ಶ್ರೀವ್ಯಾಸತೀರ್ಥರಿಗೆ ಇತಿಹಾಸ ನೀಡಿದ ಬಿರುದು "ಚಂದ್ರಿಕಾ-ಚಾರ್ಯ"ರೆಂದು.

ಮೊದಲು ಚಂದ್ರಿಕಾಚಾರ್ಯರ ಜೀವನವನ್ನು ಸ್ವಲ್ಪ ತಿಳಿಯೋಣ. ಸರ್ವಜ್ಞ ಸಿಂಹಾಸನದ ಪರಂಪರೆಯಲ್ಲಿ ಬಂದ ಸಿದ್ಧಪುರುಷರು ಶ್ರೀ ಬ್ರಹ್ಮಣ್ಯತೀರ್ಥರು. ಇವರು ಶ್ರೀ ವ್ಯಾಸತೀರ್ಥರಿಗೆ ಆಶ್ರಮ ನೀಡಿದ ಗುರುಗಳು. ಇವರನ್ನು ಚಂದ್ರಿಕಾಚಾರ್ಯರು ಗ್ರಂಥದ ಪ್ರಾರಂಭದಲ್ಲಿ ಹೀಗೆ ಪ್ರಶಂಸಿಸುತ್ತಾರೆ.

*ಕಂಸಧ್ವಂಸಿಪದಾಂಭೋಜಸಂಸಕ್ತೋ ಹಂಸಪುಂಗವಃ ।*
*ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥*

''ಎಲ್ಲಾ ಗುರುಗಳಿಗೂ ರಾಜರಾದವರು ಶ್ರೀ ಬ್ರಹ್ಮಣ್ಯತೀರ್ಥರು; ಕೃಷ್ಣನ ಪಾದಕಮಲಗಳಲ್ಲಿ ಆಸಕ್ತರಾದ ಪರಮಹಂಸರಿವರು. ನನ್ನ ಮನಸ್ಸೆಂಬ ಸರೋವರದಲ್ಲಿ ನಿರಂತರ ನೆಲಸಲಿ''.

ಮೈಸೂರು ಜಿಲ್ಲೆಯ ಸೋಸಲೆಯ ಬಳಿ ಇರುವ ಬನ್ನೂರು ಗ್ರಾಮದಲ್ಲಿ ಶ್ರೀವ್ಯಾಸತೀರ್ಥರು ಜನಿಸಿದರು. ಅವರ ತಂದೆ ಬಲ್ಲಣ್ಣಸುಮತಿ. ಇವರು ರಾಮಾಚಾರ್ಯರ ಆರು ಗಂಡುಮಕ್ಕಳಲ್ಲಿ ಕೊನೆಯವರು. ಮೊದಲನೇ ಹೆಂಡತಿಯಲ್ಲಿ ಸಂತಾನವಾಗದಿದ್ದಾಗ ಎರಡನೆಯ ಮದುವೆಯಾದರು. ಎರಡನೆಯ ಹೆಂಡತಿಯು ಚೆನ್ನಪಟ್ಟಣದಲ್ಲಿ ಬ್ರಹ್ಮಣ್ಯತೀರ್ಥರ ಅನುಗ್ರಹದಿಂದ ಒಬ್ಬ ಮಗಳು ಇಬ್ಬರು ಗಂಡುಮಕ್ಕಳಿಗೆ ಜನ್ಮನೀಡಿದಳು. ಅವರಲ್ಲಿ ಕಿರಿಯವನೇ ಮುಂದೆ ವ್ಯಾಸತೀರ್ಥರಾದರು. ಆ ಕಿರಿಯ ಬಾಲಕನಿಗೆ ಐದನೇ ವರ್ಷದಲ್ಲಿ ಅಕ್ಷರಾಭ್ಯಾಸ ಮಾಡಿಸಿ ಏಳನೇ ವರ್ಷದಲ್ಲಿ ಉಪನಯನ ಮಾಡಲಾಯಿತು. ಅನಂತರ ನಾಲ್ಕು ವರ್ಷಗಳ ಕಾಲ ಗುರುಕುಲವಾಸ ಮಾಡಿದರು. ಈ ಸಂದರ್ಭದಲ್ಲಿ ದಂಪತಿಗಳೂ ಬ್ರಹ್ಮಣ್ಯತೀರ್ಥರಿಗೆ ತಮ್ಮ ಎರಡನೇ ಮಗನನ್ನು ಒಪ್ಪಿಸುವುದಾಗಿ ಮಾತು ಕೊಟ್ಟಿದ್ದರು. ಬ್ರಹ್ಮಣ್ಯತೀರ್ಥರು ಇದು ಸರಿಯಾದ ಸಮಯವೆಂದು ಅರಿತು ದಂಪತಿಗಳಿಗೆ ಕೊಟ್ಟ ಮಾತನ್ನು ಜ್ಞಾಪಿಸಿದರು. ಮೊದಲು ಸ್ವಲ್ಪ ಬೇಸರವಾದರೂ ಕೊನೆಯಲ್ಲಿ ತಮ್ಮ ಮಗನನ್ನು ತಂದೊಪ್ಪಿಸಲು ನಿರ್ಧರಿಸಿದರು. ಸ್ವತಃ ದಂಪತಿಗಳೇ ಬಂದು ಬ್ರಹ್ಮಣ್ಯತೀರ್ಥರಿಗೆ ಮಗನನ್ನು ಸಮರ್ಪಿಸಿದರು. ಶಿಷ್ಯನ ಪ್ರೌಢಿಮೆಯನ್ನು ಗಮನಿಸಿ ಗುರುಗಳಿಗೆ ಅತ್ಯಂತ ಆನಂದವಾಯಿತು. ಕಾಲಕ್ರಮದಲ್ಲಿ ಅವರಿಗೆ ಸನ್ಯಾಸ ದೀಕ್ಷೆಯನ್ನು ನೀಡಬೇಕೆಂದು ಚಿಂತಿಸುತ್ತಿದ್ದರು. ಇದನ್ನು ಅರಿತ ಬಾಲಕನು ಸನ್ಯಾಸಾಶ್ರಮಕ್ಕೆ ತಾನು ಯೋಗ್ಯನಲ್ಲವೆಂದು ಭಾವಿಸಿ ಗುರುಗಳ ಆಶ್ರಮದಿಂದ ಹೇಳದೆ ಕೇಳದೆ ಹೊರಬಂದನು. ಬಹುದೂರ ಧಾವಿಸಿ ಆಯಾಸಗೊಂಡಾಗ ಮರದ ನೆರಳಿನಲ್ಲಿ ಮಲಗಿದನು. ಆವಾಗ ಸ್ವಪ್ನದಲ್ಲಿ ಭಗವಂತನು ದರ್ಶನವಿತ್ತು ಕರ್ತವ್ಯಕರ್ಮವನ್ನು ಉಪದೇಶಿಸಿದನು. ಏನೂ ತಿಳಿಯದ ಬಾಲಕ ಆಶ್ಚರ್ಯಚಕಿತನಾಗಿ ಆಶ್ರಮಕ್ಕೆ ಮರಳಿ ಬಂದನು. ಅನಂತರ ಕೆಲವೇ ದಿವಸಗಳಲ್ಲಿ ಶ್ರೀ ಬ್ರಹ್ಮಣ್ಯತೀರ್ಥರು ಅವರಿಗೆ ಸನ್ಯಾಸದೀಕ್ಷೆಯನ್ನು ನೀಡಿ ''ವ್ಯಾಸತೀರ್ಥ'' ಎಂದು ನಾಮಕರಣ ಮಾಡಿದರು.

ಆಶ್ರಮ ಸ್ವೀಕರಿಸಿದ ಕೆಲವು ದಿನಗಳ ಕಾಲ ತಮ್ಮ ಗುರುಗಳ ಬಳಿಯೇ ಇದ್ದರು. ಸುಮಾರು ಕ್ರಿ.ಶ. ೧೪೭೫ರಲ್ಲಿ ಗುರುಗಳಾದ ಬ್ರಹ್ಮಣ್ಯತೀರ್ಥರು ಅಬ್ಬೂರು ಕ್ಷೇತ್ರದಲ್ಲಿ ವೃಂದಾವನಸ್ಥರಾದರು. ಪ್ರಾಯಃ ಆವಾಗ ಶ್ರೀವ್ಯಾಸತೀರ್ಥರಿಗೆ ಹದಿನೈದು ವರ್ಷವಿರಬಹುದು. ಅನಂತರ ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾದ ಕಂಚಿ ಕ್ಷೇತ್ರಕ್ಕೆ ಹೋಗಿ ಅನೇಕ ವರ್ಷಗಳ ಕಾಲ ಅನೇಕ ವಿದ್ವಾಂಸರಿಂದ ಷಡ್ದರ್ಶನಗಳನ್ನು ಅಧ್ಯಯನ ಮಾಡಿದರು. ಅದ್ವೈತ, ವಿಶಿಷ್ಟಾದ್ವೈತ, ಮೀಮಾಂಸಾ, ನ್ಯಾಯ,

ವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ಅಪ್ರತಿಮವೈದುಷ್ಯವನ್ನು ಸಂಪಾದಿಸಿದರು. ಮುಂದೆ ನ್ಯಾಯಾಮೃತ, ತಾತ್ಪರ್ಯಚಂದ್ರಿಕಾ, ತರ್ಕತಾಂಡವ ಮೊದಲಾದ ಮೇರುಕೃತಿಗಳನ್ನು ರಚಿಸಲು ಭದ್ರಬುನಾದಿಯನ್ನು ನಿರ್ಮಾಣ ಮಾಡಿಕೊಂಡರು. ವಿದ್ಯಾಭ್ಯಾಸ ಮುಗಿಸಿದ ಅನಂತರ ಮುಳಬಾಗಿಲು ಕ್ಷೇತ್ರದಲ್ಲಿದ್ದ ಶ್ರೀಪಾದರಾಜರ ಸನಿಹಕ್ಕೆ ಬಂದರು. ಆಗಿನ ಕಾಲದಲ್ಲಿ ಕಂಚಿಯಂತೇ ಮುಳಬಾಗಿಲು ಸಹ ಹೆಸರಾಂತ ವಿದ್ಯಾಕೇಂದ್ರವಾಗಿತ್ತು. ಶ್ರೀಪಾದರಾಜರ ಬಳಿ ಶಿಷ್ಯತ್ವವನ್ನು ವಹಿಸಿ ದ್ವೈತವೇದಾಂತವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದರು. ಶ್ರೀಪಾದರಾಜರಿಂದಲೇ ತಾವು ವಿದ್ಯಾಭ್ಯಾಸ ಮಾಡಿದ್ದಾರೆಂಬುದನ್ನು ಉಪಾಧಿಖಂಡನ ಟೀಕೆಯ ಮಂದಾರಮಂಜರಿಯಲ್ಲಿ ತಾವೇ ಹೇಳಿಕೊಂಡಿದ್ದಾರೆ. - ಲಕ್ಷ್ಮೀನಾರಾಯಣಾಖ್ಯಾತ್ ದ್ವೈತಕುಲತಿಲಕಾದಧೀತಮಧ್ವಶಾಸ್ತ್ರಾವೃತೇನ ವ್ಯಾಸಯತಿನಾ ವಿರಚಿತ ಮಂದಾರಮಂಜರಿ ಸಮಾಪ್ತಾ - ಎಂದು.

ಶ್ರೀವ್ಯಾಸತೀರ್ಥರು ಸುಮಾರು ಐದಾರು ವರ್ಷಗಳಷ್ಟು ಕಾಲ ಕೇವಲ ದ್ವೈತಶಾಸ್ತ್ರಾಧ್ಯಯನವನ್ನು ಶ್ರೀಪಾದರಾಜರ ಬಳಿ ಮಾಡಿದರು. ಅಧ್ಯಯನದ ಅನಂತರ ಒಮ್ಮೆ ಚಂದ್ರಗಿರಿಗೆ ಬಂದಾಗ ನರಸಿಂಹ ಎಂಬ ರಾಜನು ಅಭೂತಪೂರ್ವಸ್ವಾಗತದಿಂದ ಆಹ್ವಾನಿಸಿದನು. ಕೆಲಕಾಲ ಅಲ್ಲಿಯೇ ವಾಸಮಾಡಿದರು. ಗಂಗೇಶೋಪಾಧ್ಯಾಯನ ತತ್ವಚಿಂತಾಮಣಿ ಗ್ರಂಥದ ಬಗ್ಗೆ ವಿಶೇಷ ಚರ್ಚೆ ನಡೆಸಿದರು. ಅದೇ ಸಂದರ್ಭದಲ್ಲಿ ತಿರುಪತಿ ಶ್ರೀನಿವಾಸನ ಪೂಜಾಕೈಂಕರ್ಯದ ಸೌಭಾಗ್ಯವೂ ಪ್ರಾಪ್ತವಾಯಿತು. ಶ್ರೀ ವ್ಯಾಸತೀರ್ಥರು ಹನ್ನೆರಡು ವರ್ಷಗಳ ಕಾಲ ಶ್ರೀನಿವಾಸನನ್ನು ಪೂಜಿಸಿದರೆಂಬ ದಾಖಲೆಯಿದೆ. ಕೆಲವೊಮ್ಮೆ ಮಧ್ಯದಲ್ಲಿ ಪೂಜೆಯನ್ನು ಶಿಷ್ಯರಿಗೆ ವಹಿಸಿ ಸಂಚಾರಕ್ಕೂ ಹೋಗಿ ಬರುತ್ತಿದ್ದರು. ಸುಮಾರು ೧೪೮೬ರಿಂದ ೯೮ರ ತನಕ ತಿರುಪತಿಯಲ್ಲಿ ನೆಲೆಸಿ ೯೮ರ ಅನಂತರ ಸ್ವಲ್ಪ ಕಾಲ ಚಂದ್ರಗಿರಿಯನ್ನು ಬಿಟ್ಟು ಎಲ್ಲಿಯೂ ಹೋಗದೆ ಕೇವಲ ಪಾಠಪ್ರವಚನ ಗ್ರಂಥರಚನೆಗಳಲ್ಲಿ ತಲ್ಲೀನರಾಗಿದ್ದರು. ಅನಂತರ ವ್ಯಾಸತೀರ್ಥರು ವಿಜಯನಗರಕ್ಕೆ ತೆರಳಿದರು. ಆಸ್ಥಾನದ ವರಿಷ್ಠಗುರುವೆಂದು ಅಲ್ಲಿನ ರಾಜನು ಗೌರವಿಸಿದನು. ಆದರೆ ಅನೇಕ ಜನರು ಮತ್ತು ವಿದ್ವಜ್ಜನರೂ ಸಹ ಶ್ರೀ ವ್ಯಾಸತೀರ್ಥರನ್ನು ಪ್ರತಿಭಟಿಸಿದರು. ಕಳಿಂಗದ ಬಸವಭಟ್ಟನ ನೇತೃತ್ವದಲ್ಲಿ ತಮ್ಮ ಬಿರುದು ಪತ್ರಗಳನ್ನು ಅರಮನೆಯ ಕಂಬಗಳಿಗೆ ತೂಗುಹಾಕಿ ವಾಕ್ಯಾರ್ಥಕ್ಕೆ ಬರಲು ಕೆಣಕಿದರು. ಸುಮಾರು ೩೦ ದಿನಗಳ ವಾಕ್ಯಾರ್ಥವನ್ನು ನಡೆಸಿ ಎಲ್ಲಾ ವಿದ್ವಾಂಸರುಗಳನ್ನು ಶ್ರೀವ್ಯಾಸತೀರ್ಥರು ಪರಾಭವಗೊಳಿಸಿದರು.

ಸೋಮನಾಥಕವಿಯು 'ವ್ಯಾಸಯೋಗಚರಿತೆ' ಎಂಬ ಗ್ರಂಥದಲ್ಲಿ ವ್ಯಾಸತೀರ್ಥರ ಜೀವನದ ಒಂದು ಘಟನೆಯನ್ನು ವರ್ಣಿಸಿದ್ದಾನೆ. ಒಮ್ಮೆ ಕಳಿಂಗ ದೇಶದ ಅರಸನಿಂದ ವಿಮರ್ಶೆಗಾಗಿ ಕಳುಹಿಸಿದ್ದ ಅದ್ವೈತ ಗ್ರಂಥವೊಂದನ್ನು ಕೃಷ್ಣದೇವರಾಯನು ವ್ಯಾಸತೀರ್ಥರಿಗೆ ನೀಡಿದನು. ವ್ಯಾಸತೀರ್ಥರು ಪಂಡಿತರಾಗಿದ್ದಲ್ಲಿ ಈ ಅದ್ವೈತಗ್ರಂಥವನ್ನು ಖಂಡಿಸಲಿ ಎಂಬ ಅಹಂಕಾರದಿಂದ

ಇದನ್ನು ಕಳುಹಿಸಿದ್ದನು. ಆ ಸಂದರ್ಭದಲ್ಲಿ ಶ್ರೀವ್ಯಾಸತೀರ್ಥರು ಅದರ ಖಂಡನೆಯನ್ನು ಸಣ್ಣ ಗ್ರಂಥದಿಂದಲೇ ಮಾಡಿ ಪುನಃ ಹಿಂತಿರುಗಿಸಿದರು.

ವ್ಯಾಸತೀರ್ಥರು ಒಟ್ಟು ಎಂಟು ಗ್ರಂಥಗಳನ್ನು ರಚಿಸಿದ್ದಾರೆ. ಅವರು ರಚಿಸಿದ ಪ್ರಮುಖ-ಗ್ರಂಥಗಳು ಮೂರು. ನ್ಯಾಯಾಮೃತ, ತರ್ಕತಾಂಡವ ಮತ್ತು ಚಂದ್ರಿಕಾ. ಇವನ್ನು ''ವ್ಯಾಸತ್ರಯ'' ಎನ್ನುವುದು ವಾಡಿಕೆ. ಅವರ ಉಳಿದ ಕೃತಿಗಳಲ್ಲಿ ಪ್ರಥಮಸ್ಥಾನ ಭೇದೋಜ್ಜೀವನಕ್ಕೆ ಸಲ್ಲತಕ್ಕದ್ದು. ಅನಂತರ ಖಂಡನತ್ರಯ ಹಾಗೂ ತತ್ತ್ವವಿವೇಕಕ್ಕೆ ರಚಿಸಿರುವ ಶಾಸ್ತ್ರೀಯಪ್ರಕ್ರಿಯೆ ಮತ್ತು ಪಾರಿ-ಭಾಷಿಕಶಬ್ದಗಳನ್ನೊಳಗೊಂಡ ಗಂಭೀರಟಿಪ್ಪಣಿಗಳದ್ದು. (ಇವನ್ನು ಮಂದಾರಮಂಜರಿ ಎಂದು ಕರೆದಿದ್ದಾರೆ.) ಮಧ್ವಾಚಾರ್ಯರ ಮೂವತ್ತೇಳು ಗ್ರಂಥಗಳ ಉಲ್ಲೇಖವಿರುವ ಗ್ರಂಥಮಾಲಿಕಾ-ಸ್ತೋತ್ರ ಎಂಬುದೂ ಸಹ ಇವರ ರಚನೆಯೆಂದು ಹೇಳಲಾಗುತ್ತದೆ. ಸಾಮಾನ್ಯವಾಗಿ ಮಧ್ವಮತದ ಪ್ರಮುಖ ಒಂಭತ್ತು ಪ್ರಮೇಯಗಳನ್ನು ತಿಳಿಸುವ ಶ್ಲೋಕವಾದ ''ಶ್ರೀಮನ್ಮಧ್ವಮತೇ ......'' ಎಂಬುದೂ ಅವರ ರಚನೆಯೆಂದು ಹೇಳುತ್ತಾರೆ.

ತಾತ್ಪರ್ಯಚಂದ್ರಿಕಾ ಅಥವಾ ಸಂಕ್ಷೇಪವಾಗಿ ''ಚಂದ್ರಿಕಾ'' ಎಂದು ಪ್ರಸಿದ್ಧಿ ಇರುವ ಗ್ರಂಥವು ದ್ವೈತವೇದಾಂತದ ಸೂತ್ರಪ್ರಸ್ಥಾನದ ಶ್ರೀಜಯತೀರ್ಥರ 'ತತ್ತ್ವಪ್ರಕಾಶಿಕಾ'ಕ್ಕೆ ಬರೆದಿರುವ ವಿಸ್ತೃತಟಿಪ್ಪಣಿಯಾಗಿದೆ. ಇದು ನ್ಯಾಯಾಮೃತದ ನಂತರ ರಚಿಸಿದ್ದೆಂಬುದು ಸುಸ್ಪಷ್ಟ. ಏಕೆಂದರೆ ಅನೇಕಸಂದರ್ಭಗಳಲ್ಲಿ ಈ ಕೃತಿಯಲ್ಲಿ ನ್ಯಾಯಾಮೃತಗ್ರಂಥದ ಉಲ್ಲೇಖವಿದೆ. ಇದು ಟಿಪ್ಪಣಿ ಗ್ರಂಥವೆಂದು ಪ್ರಸಿದ್ಧಿ ಪಡೆದಿದ್ದರೂ ವಸ್ತುತಃ ಇದು ಸೂತ್ರಪ್ರಸ್ಥಾನದಲ್ಲಿ ಶಂಕರ, ರಾಮಾನುಜ ಮತ್ತು ಮಧ್ವ - ಇವರು ಬರೆದಿರುವ ಭಾಷ್ಯಗಳ ಸಮಗ್ರ ತೌಲನಿಕ ಅಧ್ಯಯನರೂಪವಾಗಿದೆ. ಈ ಕೃತಿಯಲ್ಲಿ ಶ್ರೀವ್ಯಾಸತೀರ್ಥರು ಅದ್ವೈತಭಾಷ್ಯದ ಮೇಲೆ ರಚಿಸಲ್ಪಟ್ಟ ಭಾಮತೀ, ಕಲ್ಪತರು, ಪಂಚಪಾದಿಕಾ, ವಿವರಣ ಮೊದಲಾದ ಟೀಕಾಟಿಪ್ಪಣಿಗಳನ್ನೂ, ಶ್ರುತಪ್ರಕಾಶ ಮತ್ತು ಅಧಿಕರಣ-ಸಾರಾವಲೀ ಎಂಬ ವಿಶಿಷ್ಟಾದ್ವೈತಗ್ರಂಥಗಳನ್ನೂ, ನ್ಯಾಯಸುಧಾ, ತತ್ತ್ವಪ್ರಕಾಶಿಕಾ ಮುಂತಾದ ದ್ವೈತಗ್ರಂಥಗಳನ್ನೂ ವಿಮರ್ಶೆಮಾಡಿದ್ದಾರೆ. ಹೀಗೆ ಈ ಗ್ರಂಥವು ತತ್ತ್ವಶಾಸ್ತ್ರಕ್ಕೆ ನೀಡಿದ ಅಮೋಘಸ್ವತಂತ್ರಕೃತಿಯಾಗಿದೆ.

ಗ್ರಂಥಕಾರರು ತಮ್ಮ ಗ್ರಂಥದಲ್ಲಿ ಬ್ರಹ್ಮಸೂತ್ರಗಳ ಪದಾನುಸಾರಿ ಅರ್ಥ ಹಾಗೂ ತಾತ್ಪರ್ಯ-ವನ್ನು ಸಮರ್ಪಕವಾಗಿ ಹೇಳುವಲ್ಲಿ ಶ್ರೀಮಧ್ವಾಚಾರ್ಯರು ಮತ್ತು ಅವರ ಅನುಯಾಯಿಗಳು ಮಾತ್ರ ಯಶಸ್ವಿಗಳಾಗಿದ್ದಾರೆಂದೂ, ಮಿಕ್ಕ ಆಚಾರ್ಯರ ಭಾಷ್ಯಗಳು ಮತ್ತು ಅವರ ಅನುಯಾಯಿಗಳು ಬರೆದ ಟೀಕಾಟಿಪ್ಪಣಿಗಳು ಸಾಮಾನ್ಯವಾಗಿ ಅಷ್ಟು ಸಮಂಜಸವಾಗಿಲ್ಲವೆಂದೂ, ಅನೇಕ ಸಂದರ್ಭಗಳಲ್ಲಿ ಸೂತ್ರಕ್ಕೂ ಅವರು ಹೇಳಿರುವ ಅರ್ಥಕ್ಕೂ ಸಂಬಂಧವೇ ಇರುವುದಿಲ್ಲ-ವೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಅಂದರೆ ಈ ಗ್ರಂಥದಲ್ಲಿ ಎರಡು ದೃಷ್ಟಿಕೋನಗಳಿಂದ ಅಧ್ಯಯನವನ್ನು ಪ್ರಸ್ತುತ ಪಡಿಸ-ದಂತಾಯಿತು. (೧) ಸಿದ್ಧಾಂತದ ಪ್ರಕಾರ ಹೇಳಿರುವ ಅರ್ಥ ಸುಸಂಗತವಾದುದು; ತರ್ಕ ಸಮ್ಮತವಾದುದು ಎಂದು ಸಮರ್ಥಿಸುವುದು; (೨) ಪರಮತದವರು ಹೇಳಿದ ಅರ್ಥವನ್ನು ವಿಮರ್ಶಿಸಿ ಅದು ಯುಕ್ತಿಯುಕ್ತವಲ್ಲವೆಂದು ಪ್ರಮಾಣಪೂರ್ವಕವಾಗಿ ಸ್ಥಾಪಿಸುವುದು.

(೧) ಮೊದಲನೆಯದ್ದರಲ್ಲಿ ಅವರು ಶ್ರೀಮಧ್ವಾಚಾರ್ಯರು (ಸೂತ್ರಗಳಿಗೂ, ಅಧಿಕರಣ-ಗಳಿಗೂ) ಹೇಳಿರುವ ಅರ್ಥವನ್ನು ಪುಷ್ಟೀಕರಿಸುವಾಗ ನಡೆಸಿರುವ ಚರ್ಚೆಯಲ್ಲಿ ''ಅನೇಕ ಪ್ರಮಾಣಗಳಿಂದ, ಹಾಗೂ ವ್ಯಾಕರಣ ಮೀಮಾಂಸಾದಿಶಾಸ್ತ್ರಗಳಲ್ಲಿ ಹೇಳಿರುವ ನ್ಯಾಯ ಹಾಗೂ ನಿರ್ಣಯಿಸುವ ಕ್ರಮಾನುಸಾರಿಯಾಗಿ ಹೊಸ ಯುಕ್ತಿಯುಕ್ತ ಸಮರ್ಥನೆ''ಯನ್ನು ಕಾಣಬಹುದು. ಅಂತೆಯೇ ಮಾಧ್ವಪ್ರಾಚೀನಟೀಕಾಟಿಪ್ಪಣಿಕಾರರು ಈ ನಿಟ್ಟಿನಲ್ಲಿ ಭಿನ್ನ ಭಿನ್ನ ದೃಷ್ಟಿಕೋನದಿಂದ ಹೇಳಿರುವ ಅರ್ಥಗಳ ಸ್ವರಸಸಾಮರಸ್ಯವನ್ನು ಸ್ಥಾಪಿಸಿದ್ದಾರೆ. (ಜ್ಯೋತಿರಧಿಕರಣ -೧/೧/೧೦ಅಧಿ; ಭೋಕ್ತ್ರಾಪತ್ತ್ಯಧಿಕರಣ ೨/೧/೫ಅಧಿ.ಗಳಲ್ಲಿ ನೋಡಬಹುದು.) ಅನೇಕ ಸಂದರ್ಭಗಳಲ್ಲಿ ಸೂತ್ರ, ಭಾಷ್ಯ ಹಾಗೂ ಟೀಕಾಗಳಲ್ಲಿ ಅಸ್ಪಷ್ಟವಾಗಿರುವುದನ್ನು --

*''ಸೂತ್ರೇ ಭಾಷ್ಯೇಽನುಭಾಷ್ಯೇ ಚ ಸನ್ನ್ಯಾಯವಿವೃತೌ ತಥಾ ।*
*ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥''*

ಎಂದು ತಾವೇ ಹೇಳಿಕೊಂಡಂತೆ ಸ್ಪಷ್ಟೀಕರಿಸಿದ್ದಾರೆ. ಅವಶ್ಯಕವೆನಿಸಿದಾಗ ಅನುವ್ಯಾಖ್ಯಾನ, ವಿಷ್ಣುತತ್ತ್ವನಿರ್ಣಯ, ನ್ಯಾಯವಿವರಣಗಳಿಂದ ಅನೇಕವಾಕ್ಯಗಳನ್ನು ಉಲ್ಲೇಖಿಸುತ್ತಾರೆ.

(೧) ಎರಡನೆಯದಾಗಿ ಪರಮತವಿಮರ್ಶೆಯನ್ನು ಮಾಡುವಾಗ ಶ್ರೀವ್ಯಾಸತೀರ್ಥರು ಪರವಾದಿಗಳ, ಅದರಲ್ಲೂ ವಿಶೇಷವಾಗಿ ಶಂಕರ ಹಾಗೂ ರಾಮಾನುಜರ, ಸೂತ್ರಭಾಷ್ಯ, ಅವುಗಳ ಪ್ರಸಿದ್ಧವಾದ ಟೀಕಾಟಿಪ್ಪಣಿಗಳಲ್ಲಿ ಹೇಳಿರುವ ಪ್ರತಿಯೊಂದು ಅಧಿಕರಣ ಮತ್ತು ಪ್ರತಿಸೂತ್ರದ ಅರ್ಥವೂ ಅಸಂಗತವೆಂದು ಹೇಳಿ, ನಿರ್ದಾಕ್ಷಿಣ್ಯವಾಗಿ ಪುಂಖಾನುಪುಂಖವಾಗಿ ಲೋಪದೋಷ-ಗಳನ್ನು ತೋರಿಸಿಕೊಟ್ಟಿದ್ದಾರೆ.

*''ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ ।*
*ಸ್ವೀಯಾನ್ಯಪಕ್ಷಯೋಃ ಸಮ್ಯಕ್ ವಿದಾಂ ಕುರ್ವಂತು ಸೂರಯಃ ॥''*

ಅವರ ವಿಮರ್ಶೆಯ ತೀಕ್ಷ್ಣತೆಯನ್ನು ಪರಿಚಯ ಮಾಡಿಕೊಡಲು ಒಂದು ಉದಾಹರಣೆ ಸಾಕು -- ''ಭೂಮಾ ಸಂಪ್ರಸಾದಾದಧ್ಯುಪದೇಶಾತ್'' (ಬ್ರ.ಸೂ. ೧/೩/೮). ಈ ಸೂತ್ರಕ್ಕೆ ಮಧ್ವಾಚಾರ್ಯರು ಹೇಳಿರುವ ಅರ್ಥವು ಸೂತ್ರದಲ್ಲಿ ''ಚ''ಕಾರವು ಘಟಿತವಾಗಿಲ್ಲದಿರುವ ಕಾರಣ ಅಸಂಗತವೆಂದು ಒಬ್ಬ ಆಧುನಿಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ವ್ಯಾಸತೀರ್ಥರು

'ಮಧ್ವಾಚಾರ್ಯರು ಹೇಳಿರುವ ಅರ್ಥವೇ ಸಮಂಜಸ ಹಾಗೂ ಸಮರ್ಥನೀಯ; ಇತರರು ಹೇಳಿರುವುದು ಅಸಂಗತ'ವೆಂದು ಪ್ರತಿಪಾದಿಸಿದ್ದಾರೆ[1]. ಮಧ್ವಾಚಾರ್ಯರು ಹೇಳುವಂತೆ ಬ್ರಹ್ಮನ ಭೂಮತ್ವವನ್ನು ಸಾಧಿಸಲು 'ಸಂಪ್ರಸಾದಾತ್' ಮತ್ತು 'ಅಧ್ಯುಪದೇಶಾತ್' ಎಂಬ ಎರಡು ಹೇತುಗಳು ಉಕ್ತವಾಗಿವೆ. ಬ್ರಹ್ಮನೇ ಭೂಮಾ, ಸರ್ವೋತ್ಕೃಷ್ಟ. ಏಕೆಂದರೆ ನಿರತಿಶಯಸುಖ-ಪೂರ್ಣನಾಗಿರುವುದರಿಂದ (ಸಮ್ಯಕ್+ಪ್ರಸಾದ) ಮತ್ತು ಇತರರೆಲ್ಲರಿಗಿಂತಲೂ ಶ್ರೇಷ್ಠನಾದ-ವನೆಂದು ಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವುದರಿಂದ (ಸರ್ವೇಷಾಮುಪರಿ ಉಪದೇಶಾಚ್ಚ). ಎಲ್ಲ ಭಾಷ್ಯಕಾರರೂ ಈ ಸೂತ್ರಕ್ಕೆ ವಿಷಯವಾಕ್ಯವಾಗಿ ಛಾಂದೋಗ್ಯೋಪನಿಷತ್ತಿನ ೭/೨೩-೨೪ ವನ್ನು ಗ್ರಹಿಸಿದ್ದಾರೆ. ಆದರೆ ಶ್ರೀಮಧ್ವಾಚಾರ್ಯರು ಮಾತ್ರ 'ಸಂಪ್ರಸಾದ' ಮತ್ತು 'ಅಧ್ಯುಪದೇಶ' ಈ ಎರಡು ಪದಗಳಿಗೆ ಇತರರಿಗಿಂತ ಬೇರೆಯ ಅರ್ಥವನ್ನು ಹೇಳುತ್ತಾರೆ. ಅವುಗಳು ಬ್ರಹ್ಮನ ಅಗ್ಗಳಿಕೆಯನ್ನು ಎರಡು ಹೇತುಗಳಿಂದ ಸಾರುತ್ತಿವೆ ಎನ್ನುತ್ತಾರೆ. ಇತರರು ಶಂಕರರ ಜಾಡನ್ನೇ ಹಿಡಿದು ಈ ಪದಪುಂಜದಿಂದ ಒಂದೇ ಹೇತು ಉಕ್ತವಾಗಿದೆ 'ಪ್ರಾಣನ ನಂತರ ಭೂಮಾ ಇತ್ಯಾದಿ ಎಂದು ಹೇಳಿದೆಯಾದ್ದರಿಂದ' ಎನ್ನುತ್ತಾರೆ. ವ್ಯಾಸತೀರ್ಥರು ಹೀಗೆ ಅರ್ಥಮಾಡುವುದರಿಂದ ಉದ್ಭವಿಸುವ ಅನೇಕ ದೋಷಗಳನ್ನು ಎತ್ತಿ ತೋರಿಸಿದ್ದಾರೆ.

ಹೀಗೆ ದ್ವೈತವಾಙ್ಮಯದಲ್ಲೇ ಚಂದ್ರಿಕಾ ಅನುಪಮ ವ್ಯಾಖ್ಯಾನಗ್ರಂಥವಾಗಿದೆ. ಇದರಲ್ಲಿ ಸೂತ್ರಗಳ ಹಾರ್ದವನ್ನು ಸ್ಪಷ್ಟೀಕರಿಸುವ ವ್ಯಾಜದಲ್ಲಿ ಅವರ ವಾಕ್ಯಾರ್ಥಕುಶಲತೆಯನ್ನು ಕಾಣಬಹುದು.

ಶ್ರೀಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲಿ ಹಾಗೂ ಶ್ರೀಜಯತೀರ್ಥರು ಶ್ರೀಮನ್ನ್ಯಾಯ-ಸುಧಾದಲ್ಲಿ ಅನುಸರಿಸಿದ ವಾದಪದ್ಧತಿಯನ್ನು ಶ್ರೀವ್ಯಾಸತೀರ್ಥರು ಅನುಸರಿಸಿ, ಸಮರ್ಥರೀತಿಯಲ್ಲಿ ನ್ಯಾಯ, ಮೀಮಾಂಸಾದಿ ಪ್ರಕ್ರಿಯೆಗಳನ್ನು ಅವರುಗಳಿಗೆ ಸಮ್ಮತವಾದ ರೀತಿಯಲ್ಲಿ ಪ್ರಯೋಗಿಸಿದ್ದಾರೆ. ''ಸೂತ್ರಾಕ್ಷರಾಣಾಮ್ ಆರ್ಜವಾನಾರ್ಜವಚಿಂತಾ ಶಿಷ್ಯೈರೇವ ಕ್ರಿಯತಾಮ್'' ಎಂಬ ನ್ಯಾಯಸುಧೆಯ ಮಾತಿನಂತೆ 'ಚಂದ್ರಿಕಾ'ದಲ್ಲಿ ವಿದ್ವತ್ತು ಮುಗಿಲು ಮುಟ್ಟಿದೆ. ಸಮಗ್ರತೆ, ವಿವರಣೆಯನ್ನು ಕೊಡುವುದರಲ್ಲಿ ನಿಷ್ಪಕ್ಷತೆ, ಎಲ್ಲಕ್ಕಿಂತ ಮಿಗಿಲಾಗಿ ತಟಸ್ಥ ವಿಚಾರಕ್ಷಮತೆ ಇವುಗಳು ಅನ್ಯತ್ರ ದುರ್ಲಭವಾದ ಗುಣಗಳು. ಇಡೀ ಸಂಸ್ಕೃತವಾಙ್ಮಯದ ತತ್ತ್ವಶಾಸ್ತ್ರೀಯ ಗ್ರಂಥಪ್ರಪಂಚದಲ್ಲಿ ಈ ಕೃತಿಗೆ ವ್ಯಾಪಕ ಹಾಗೂ ಗಂಭೀರವಿಚಾರಪರತೆಯ ದೃಷ್ಟಿಯಿಂದ ಸರಿಸಮಾನವಾದ ಇನ್ನೊಂದು

---

೧ ಚಂದ್ರಿಕಾಗ್ರಂಥಕ್ಕೆ ಸಮಂಜಸವಾದ ವಿವರಣೆ, ಪ್ರಶಂಸೆಗಳೆಂದರೆ ಹೀಗಿವೆ
ಆಮೂಲಾಗ್ರನಿಬದ್ಧತರ್ಕಜಟಿಲಂ ಶಬ್ದೈಕಜೀವಾತುಕಮ್ ।
ಮೀಮಾಂಸಾನುನಯಂ ಚ ಶಂಕರವಚೋ ಹುಂಕಾರಭಂಗಪ್ರದಮ್ ।
ಶಾಸ್ತ್ರಂ ತಂತ್ರಚತುಷ್ಟಯಾತ್ಮಕಮಿದಂ ನಿಃಸ್ವಪ್ನತಂತ್ರಾಂತರಾ ।
ವ್ಯಾಖ್ಯಾಸ್ಯಂತಿ ಕಥಂ ಪಠಂತಿ ಚ ಕಥಂ ಕಿಂ ವಾ ಕಲೌ ದುಷ್ಕರಮ್ ।। - (ಗೂಢಕೃತ)
*ಪರಿಪೂರ್ಣಚಂದ್ರಿಕಾ*

ಕೃತಿ ದುರ್ಲಭ. ಬ್ರಹ್ಮಸೂತ್ರಗಳ ಹಾಗೂ ಅವುಗಳ ಅರ್ಥವಿವರಣೆಗೆಂದೇ ಮೀಸಲಾದ ಭಾಷ್ಯಗಳ ವಿಮರ್ಶಾತ್ಮಕ ಅಧ್ಯಯನಕ್ಕೆ ಹೆಸರಾದಂತಹ ಈ ಕೃತಿಯು ಪಾಂಡಿತ್ಯ, ಸೂಕ್ಷ್ಮವಿಶ್ಲೇಷಣೆ, ನಿಶಿತವಿಮರ್ಶೆ, ಪ್ರೌಢಪ್ರತಿಪಾದನಾಶೈಲಿ ಮತ್ತು ಬಾದರಾಯಣರ ಕೃತಿಗಳ ಅಂತಃಪ್ರಜ್ಞೆ - ಈ ಎಲ್ಲ ದೃಷ್ಟಿಗಳಿಂದಲೂ ಅತ್ಯುತ್ಕೃಷ್ಟವಾದುದು. ಈ ಕೃತಿಯನ್ನು ಮೀರಬಲ್ಲ ಇನ್ನೊಂದು ಗ್ರಂಥ ಇದುವರೆಗೂ ಬಂದಿಲ್ಲ; ಮುಂದೆಯೂ ಬರಲಾರದು.

ಬ್ರಹ್ಮಸೂತ್ರಗಳ ಮೊದಲ ಎರಡು ಅಧ್ಯಾಯಗಳಿಗೆ ಮಾತ್ರ ಸೀಮಿತವಾಗಿದೆ ಚಂದ್ರಿಕಾ. ಉಳಿದ ಎರಡು ಅಧ್ಯಾಯಗಳಿಗೆ ವ್ಯಾಖ್ಯೆಯನ್ನು ಬರೆದು ಪೂರೈಸಿದವರು ಶ್ರೀರಘುನಾಥತೀರ್ಥರು(ಶೇಷ ಚಂದ್ರಿಕಾಚಾರ್ಯರು). ಇವರು ವ್ಯಾಸರಾಜರ ನಂತರ ಪೀಠಿಗೆಯಲ್ಲಿ ಬಂದ ಹತ್ತನೆಯ ಪೀಠಾಧಿಪತಿಗಳು.

ಚಂದ್ರಿಕಾಕೃತಿಯು ಸ್ಥೂಲವಾಗಿ ೩೪೫೦ಗ್ರಂಥಗಳಷ್ಟಿದೆ. ಇದು ತತ್ತ್ವಪ್ರಕಾಶಿಕಾ ಟಿಪ್ಪಣಿಗಳಲ್ಲಿ ಪ್ರಥಮತಃ ಉಪಲಬ್ಧವಾದ ಗ್ರಂಥ. ಆದರೂ ತತ್ತ್ವಪ್ರಕಾಶಿಕಾದ ಮರ್ಮವನ್ನು ತಿಳಿಸುವುದರಲ್ಲಿ ಅಧಿಕೃತವೂ, ವಿಮರ್ಶಾತ್ಮಕವೂ ಆಗಿದೆ. ಇಂದಿಗೂ ಶ್ರೀಮದಾಚಾರ್ಯರ ಸೂತ್ರಪ್ರಸ್ಥಾನದಲ್ಲಿ ಅಂತಿಮವಾಗಿ ಸಿದ್ಧಾಂತತತ್ತ್ವವನ್ನು ನಿರ್ಧರಿಸಿರುವ ಗ್ರಂಥವಾಗಿದೆ. ವ್ಯಾಸತೀರ್ಥರ ನಂತರ ವೈಚಾರಿಕ, ವಾಕ್ಯಾರ್ಥಕೌಶಲಗಳಿಗೆ ಹೆಸರಾದಂತಹ ಟಿಪ್ಪಣೀಕಾರರೆಲ್ಲರೂ ನಿಃಸಂಕೋಚವಾಗಿ ವ್ಯಾಸತೀರ್ಥರಿಗೆ ಋಣಿಯಾಗಿದ್ದಾರೆ. ಅವರ ವಾಕ್ಯಗಳನ್ನೇ ಪ್ರಮಾಣವಾಗಿ ಉದಾಹರಿಸಿರುತ್ತಾರೆ. ಈ ಕಾರಣಗಳಿಂದಾಗಿಯೇ ಶ್ರೀಮಧ್ವ ಮತ್ತು ಶ್ರೀಜಯತೀರ್ಥರೊಂದಿಗೆ ಶ್ರೀವ್ಯಾಸತೀರ್ಥರನ್ನೂ ಸೇರಿಸಿ ಮಧ್ವಸಿದ್ಧಾಂತದ ಮುನಿತ್ರಯರೆಂದು ಜನತೆ ಸ್ಮರಿಸುತ್ತಾ ಬಂದಿದೆ. ಇದೆಂತಹ ಅಸಾಧಾರಣಗೌರವ; ಎಷ್ಟು ಔಚಿತ್ಯಪೂರ್ಣವಾದುದು.

*ಶ್ರೀಮಧ್ವಃ ಕಲ್ಪವೃಕ್ಷಸ್ತು ಜಯಾರ್ಯಃ ಕಾಮಧುಕ್ ಸ್ಮೃತಃ ।*
*ಚಿಂತಾಮಣಿಸ್ತು ವ್ಯಾಸಾರ್ಯೋ ಮುನಿತ್ರಯಮುದೀರಿತಮ್ ॥*

ಶ್ರೀಮಧ್ವಾಚಾರ್ಯರ ಸೂತ್ರಭಾಷ್ಯದಲ್ಲಾಗಲೀ ಅವರ ನಂತರ ಬಂದ ಅವರ ಸಮೀಪವರ್ತಿಗಳಾದ ವ್ಯಾಖ್ಯಾನಕಾರರಾಗಲೀ ಪೂರ್ವಮೀಮಾಂಸಾಶಾಸ್ತ್ರದ ನ್ಯಾಯಗಳನ್ನು ಮತ್ತು ಅಧಿಕರಣಗಳನ್ನು ಪ್ರಧಾನವಾಗಿ ತಮ್ಮ ವಾದಮಂಡನೆಯಲ್ಲಿ ಬಳಸಿಲ್ಲವೆಂಬುದು ಸರ್ವವಿದಿತ. (ಅಗತ್ಯವಿದ್ದಲ್ಲಿ ಮಾಡಿರುವುದು ಕಂಡಿದೆಯಾದ್ದರಿಂದ ಸಂಪೂರ್ಣವಾಗಿ ಉಪೇಕ್ಷೆ ಮಾಡಿದ್ದಾರೆ ಎನ್ನುವುದು ಸರಿಯಲ್ಲ.) ಆದರೆ ಶಂಕರ ಮತ್ತು ರಾಮಾನುಜರ ಭಾಷ್ಯಗಳಲ್ಲಿ ಹಾಗೂ ಅವರ ಅನುಯಾಯಿಗಳ ಕೃತಿಗಳಲ್ಲಿ ಈ ನ್ಯಾಯಗಳನ್ನು ಬಳಸಿರುವುದು ಕಂಡಿದೆ. ಹಾಗಾಗಿ ಮಧ್ವಾಚಾರ್ಯರು ಈ ನ್ಯಾಯಗಳು ತಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿವೆಯೆಂದರಿತು ಅವುಗಳನ್ನು ಉಲ್ಲೇಖಿಸದೆ ಉಪೇಕ್ಷೆ ಮಾಡಿದ್ದಾರೆ ಎಂಬ ಆರೋಪವು ಸಹಜವಾಗಿದೆ. ಈ

ಆಪಾದನೆಯನ್ನು ಶ್ರೀವ್ಯಾಸತೀರ್ಥರು ತಮ್ಮ ಚಂದ್ರಿಕಾಗ್ರಂಥದಲ್ಲಿ ಆ ನ್ಯಾಯಗಳನ್ನು ಬಳಸಿಕೊಂಡು ಮಧ್ವಾಚಾರ್ಯರ ಭಾಷ್ಯವು ಪೂರ್ವಮೀಮಾಂಸಾಶಾಸ್ತ್ರಕ್ಕೆ ಸಮ್ಮತವಾದುದೆಂದು ತೋರಿಸಿ, ನಿರಾಕರಿಸಿದ್ದಾರೆ. ಈ ರೀತಿಯ ವಿಮರ್ಶಾತ್ಮಕ ಅಧ್ಯಯನವನ್ನು ಪ್ರಸ್ತುತಪಡಿಸಿ ಮಧ್ವಾಚಾರ್ಯರು ಹೇಳಿರುವ ಸೂತ್ರಾರ್ಥಕ್ಕೂ ಪೂರ್ವಮೀಮಾಂಸಾಶಾಸ್ತ್ರಗಳ ನ್ಯಾಯಗಳಿಗೂ ತಾತ್ಪರ್ಯಕ್ಕೂ ಏನೂ ವಿರೋಧವಿಲ್ಲ; ಅಷ್ಟೇ ಅಲ್ಲ ಸಂಪೂರ್ಣ ಹೊಂದಾಣಿಕೆ ಇದೆ ಎಂಬುದನ್ನು ತೋರಿಸಿದ್ದಾರೆ.

ಈ ಕಾರ್ಯವು ಸುಲಭವಾದುದೇನಲ್ಲ. ಆದರೂ ತಮ್ಮ ಕಾಲದಲ್ಲಿ ಅಗತ್ಯವೆನಿಸಿದ ಈ ಸವಾಲನ್ನು ಸ್ವೀಕರಿಸಿ ವ್ಯಾಸತೀರ್ಥರು ತಮ್ಮ ಚಂದ್ರಿಕಾದಲ್ಲಿ ಸಮಯೋಚಿತವಾಗಿ ಪೂರ್ವ-ಮೀಮಾಂಸಾನ್ಯಾಯಗಳನ್ನು ಉಲ್ಲೇಖಿಸಿ ಅವುಗಳ ಅಭಿಪ್ರಾಯವನ್ನು ವಿವರಿಸಿ, ಮಧ್ವರ ಅರ್ಥಕ್ಕೂ ಆ ನ್ಯಾಯಗಳಿಗೂ ಇರುವ ಸಾಮರಸ್ಯವನ್ನು ಪ್ರಕಟಿಸಿ ಅದ್ಭುತಕಾರ್ಯವನ್ನು ಮಾಡಿದರು. (ಶಾಸ್ತ್ರದೀಪಿಕಾ, ತಂತ್ರರತ್ನ, ಶಾಬರಭಾಷ್ಯ, ಕುಮಾರಿಲನ ವಾರ್ತಿಕ ಮುಂತಾದವುಗಳ ವಾಕ್ಯಗಳನ್ನು ಉಲ್ಲೇಖಿಸಿರುವುದನ್ನು ಕಾಣಬಹುದು. ಇದರಿಂದ ಮುಂದೆ ಚಂದ್ರಿಕಾಕ್ಕೆ ವ್ಯಾಖ್ಯಾನ ಬರೆದಿರುವ ಕೇಶವಾಚಾರ್ಯರು, ಶ್ರೀರಾಘವೇಂದ್ರತೀರ್ಥರು ಮೊದಲಾದವರು ನಿರಾತಂಕವಾಗಿ ಮೀಮಾಂಸಾಶಾಸ್ತ್ರದ ಅಧಿಕೃತಗ್ರಂಥಗಳಿಂದ ಉಲ್ಲೇಖಿಸಿ, ತಮ್ಮ ನಿಲುವನ್ನು ಸಮರ್ಥಿಸಲು ಅವಕಾಶವಾಯಿತು).

ಅದಲ್ಲದೆ ಪಾಣಿನೀಯ ವ್ಯಾಕರಣಶಾಸ್ತ್ರ ಮತ್ತು ಅವುಗಳ ವ್ಯಾಖ್ಯಾನಗಳನ್ನೂ ಉದಾಹರಿಸಿ, ಮಧ್ವಭಾಷ್ಯವನ್ನು ಪುಷ್ಟೀಕರಿಸಿದರು. ಈ ಎರಡು ವೈಶಿಷ್ಟ್ಯಗಳನ್ನು ನ್ಯಾಯಾಮೃತದಲ್ಲೂ ಕಾಣಬಹುದು. ಪ್ರಾಯಃ ಆ ಕಾಲದ ವಿಮತೀಯರು ದ್ವೈತವೇದಾಂತದಲ್ಲಿದ್ದ ಈ ನ್ಯೂನತೆಯನ್ನು ಕುರಿತು ಆಕ್ಷೇಪಿಸುತ್ತಿದ್ದಿರಬೇಕು. ಆದ್ದರಿಂದ ಶ್ರೀವ್ಯಾಸತೀರ್ಥರು ತಮ್ಮ ನೆಲೆ ಬೆಲೆಗಳೆರಡೂ ಅಚ್ಚುಕಟ್ಟಾಗಿವೆ ಎಂದು ತೋರಿಸಲು ಯತ್ನಿಸಿ, ಯಶಸ್ವಿಗಳಾದರು. ಅವರು ಹಾಕಿದ ಈ ನವೀನಪದ್ಧತಿಯು ಎಷ್ಟು ಶಾಸ್ತ್ರೀಯವಾಗಿತ್ತೆಂದರೆ ದ್ವೈತವೇದಾಂತದಲ್ಲಿ ಹೊಸಪ್ರಕ್ರಿಯೆಯನ್ನೇ ಅನುಸರಿಸುವಂತೆ ಮಾಡಿತು; ಮುಂದೆ ಈ ಕ್ಷೇತ್ರದಲ್ಲಿ ನಿರ್ಮಿತವಾದ ಟಿಪ್ಪಣಿಗಳಲ್ಲಿ ಇದನ್ನು ಕಾಣಬಹುದು. ವ್ಯಾಸತೀರ್ಥರ ತರುವಾಯ ಬಂದ ಮಾಧ್ವಗ್ರಂಥಕಾರರೆಲ್ಲರೂ ಪೂರ್ವ-ಮೀಮಾಂಸಾ ಮತ್ತು ವ್ಯಾಕರಣಗಳ ಆಲೋಕದಲ್ಲಿಯೇ ತಮ್ಮ ಕೃತಿಗಳನ್ನು ವಿವೇಚಿಸುವ ಸಂಪ್ರದಾಯ ಬೆಳೆದು ಬಂದಿತು. ನ್ಯಾಯಾಮೃತ ಮತ್ತು ಚಂದ್ರಿಕಾಗ್ರಂಥಗಳಲ್ಲಿ ವ್ಯಾಸತೀರ್ಥರು ಪೂರ್ವಮೀಮಾಂಸಾನ್ಯಾಯಗಳಲ್ಲಿ ಮತ್ತು ಅದಕ್ಕೆ ಸಂಬಂಧಿಸಿದ ಸಾಹಿತ್ಯದಲ್ಲಿ ಎಷ್ಟು ಪ್ರೌಢಿಮೆಯನ್ನು ಪಡೆದಿದ್ದರೆಂಬುದನ್ನು ಕಾಣಬಹುದು. ಮುಂದಿನ ವಿದ್ವತ್ ಪ್ರಪಂಚದಲ್ಲಿ ಮಧ್ವಾಚಾರ್ಯರ ಅನುಯಾಯಿಗಳು ಪೂರ್ವಮೀಮಾಂಸಾಶಾಸ್ತ್ರಕ್ಕೆ ಅಂಜುವಂತಹ ಪರಿಸ್ಥಿತಿ ಇರಲಿಲ್ಲ. ಹಾಗೂ ಪೂರ್ವಮೀಮಾಂಸಾನಿಲುವು ತಮ್ಮ ಸಿದ್ಧಾಂತಕ್ಕೆ ಸಮಾಖ್ಯಾರೂಪವಾಗಿದೆ ಎಂಬುದನ್ನು ಸ್ಪಷ್ಟೀಕರಿಸಲು ಆ ನ್ಯಾಯಗಳನ್ನು ಬಳಸಬಹುದೆಂದು ಅರಿಯುವಂತಾಯಿತು.

ಚಂದ್ರಿಕಾದಲ್ಲಿ ಸಂದರ್ಭೋಚಿತವಾಗಿ ಉಲ್ಲೇಖಿಸಿರುವ ವಿಮತೀಯ ಗ್ರಂಥಕರ್ತರ ಹೆಸರು ಮತ್ತು ಕೃತಿಗಳು ಹೀಗಿವೆ. -- ಭಾಸ್ಕರ, ಕೈಯಟ, ಯಾದವಪ್ರಕಾಶ, ಕಲ್ಪತರು(ಅದ್ವೈತ), ಮಹಾಭಾಷ್ಯ, ನ್ಯಾಸ, ನಿಬಂಧನಾ, ಪದಮಂಜರೀ, ಪಂಚಪಾದಿಕಾ, ಭಾಮತೀ, ಋಗ್ವೇದಾನುಕ್ರಮಣೀ(ಕಾತ್ಯಾಯನ), ಶಂಕರ(ಬ್ರ.ಸೂ.ಭಾ.), ಶ್ರೀಭಾಷ್ಯ, ತಂತ್ರಸಾರ- (ಮೀಮಾಂಸಾ), ವಿವರಣ, ಶ್ಲೋಕವಾರ್ತಿಕ.

ಹೀಗೆ ವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾಗ್ರಂಥವು ಹೆಸರಿಗೆ ಮಾತ್ರ ಟಿಪ್ಪಣಿಗ್ರಂಥ. ವಾಸ್ತವವಾಗಿ ಬ್ರಹ್ಮಸೂತ್ರಗಳ ಮೇಲೆ ಆಚಾರ್ಯತ್ರಯರು ರಚಿಸಿರುವ ಭಾಷ್ಯ ಹಾಗೂ ಅವುಗಳ ಪ್ರೌಢಟೀಕಾಟಿಪ್ಪಣಿಗಳ ತುಲನಾತ್ಮಕ ಅಧ್ಯಯನವನ್ನು ಕೈಗೊಂಡು, ಕೂಲಂಕಷವಿಮರ್ಶೆಗೊಳಪಡಿಸಿರುವ ಉದ್‌ಗ್ರಂಥವಾಗಿದೆ. ಇದರಲ್ಲಿ ಪುಂಖಾನುಪುಂಖವಾಗಿ ಬರುವ ವಿಚಾರಸರಣಿ, ಪ್ರತಿವಾದಿಗಳನ್ನು ಉಸಿರುಕಟ್ಟಿಸುವಂತಹ ವಿಮರ್ಶೆ ಇವುಗಳನ್ನೆಲ್ಲಾ ಆಧುನಿಕ ವಿದ್ವಾಂಸರು ಅಧ್ಯಯನ ಮಾಡಬೇಕು. ಬ್ರಹ್ಮಸೂತ್ರಗಳು ಮತ್ತು ಅವುಗಳ ಭಾಷ್ಯಗಳನ್ನು ವಿಮರ್ಶಿಸುವ ಪ್ರಾಮಾಣಿಕ ಹಂಬಲವಿರುವ ಅವರಿಗೆ ವ್ಯಾಸತೀರ್ಥರು ಹೇಗೆ ಸೂತ್ರಗಳನ್ನು ತಮ್ಮದೇ ಆದ ವೈಶಿಷ್ಟ್ಯತೆಯಿಂದ ವ್ಯಾಖ್ಯಾನಿಸಿದ್ದಾರೆ ಮತ್ತು ಹೇಗೆ ಪ್ರತಿವಾದಿಗಳನ್ನು ನಿರುತ್ತರರನ್ನಾಗಿ ಮಾಡಿದ್ದಾರೆಂಬುದನ್ನು ಕಂಡು ಆಶ್ಚರ್ಯಚಕಿತರಾಗದೇ ಇರುವುದು ಅಸಾಧ್ಯ. ಈ ಉದ್ಗ್ರಂಥವನ್ನು ಸರಿಯಾದ ರೀತಿಯಲ್ಲಿ ಆಧುನಿಕವಿದ್ವಾಂಸರ ಹಾಗೂ ವಿಮರ್ಶಕರ ಅವಗಾಹನೆಗೆ ಬರುವಂತೆ ಮಾಡಿದ್ದೇ ಆದರೆ, ತೌಲನಿಕ ಅಧ್ಯಯನದ ಕ್ಷೇತ್ರದಲ್ಲಿ ಕ್ರಾಂತಿಕಾರಕ ಪರಿಣಾಮವನ್ನುಂಟುಮಾಡಿ ಬ್ರಹ್ಮಸೂತ್ರಗಳ ಅಧ್ಯಯನಕ್ರಮವನ್ನು ಹಸನಾಗಿಸುವುದರಲ್ಲಿ ಸಂದೇಹವಿಲ್ಲ.

ದ್ವೈತಸಂಪ್ರದಾಯದಲ್ಲಿಯೇ 'ಚಂದ್ರಿಕಾ'ಗ್ರಂಥವು ಅಧಿಕರಣಪ್ರಸ್ಥಾನಕ್ಕೊಂದು ಹೊಸ ಆಯಾಮವನ್ನೇ ತಂದುಕೊಟ್ಟಿದೆ. ಏಕೆಂದರೆ ಪರವಾದಿಗಳ ಶ್ರೇಷ್ಠಗ್ರಂಥಗಳಿಗೆ ವಿಷಯ ಹಾಗೂ ಪ್ರತಿಪಾದನಾಪದ್ಧತಿಯಲ್ಲಿ ಹೆಗಲೆಣೆಯಾಗಿ ನಿಂತದ್ದು ಮಾತ್ರವಲ್ಲ; ಜ್ಞಾನದ ಪರಿಧಿಯನ್ನು ಹಾಗೂ ಸಮಕಾಲೀನ ಸಕಲಶಾಸ್ತ್ರಗಳ ಕೂಲಂಕಷವಿಮರ್ಶೆಯನ್ನು ನಡೆಸಿ ಅಧ್ಯಯನಕ್ಕೊಂದು ಮಾದರಿಯಾಗಿರುವುದರಿಂದಲೂ. ಈ ಕಾರ್ಯ ಅಂದಿನ ಪರಿಸ್ಥಿತಿಯಲ್ಲಿ ಅಗತ್ಯವಾಗಿತ್ತು. ಆದುದರಿಂದಲೇ ಈ ಸಂಪ್ರದಾಯವು ಇತರ ಸಂಪ್ರದಾಯಗಳಿಗಿಂತ ಸಮಕಾಲೀನತತ್ತ್ವಶಾಸ್ತ್ರ ಪ್ರಪಂಚದಲ್ಲಿ ಪರರ ದೃಷ್ಟಿಯಿಂದಲೂ ಅತ್ಯುಚ್ಚ ಮಾನ್ಯತೆಯನ್ನು ಪಡೆದಿದೆ.

ಹೀಗೆ ವ್ಯಾಸತೀರ್ಥರು ದ್ವೈತವೇದಾಂತವೆಂಬ ದಿವಿಲೋಕದಲ್ಲಿ ಅತ್ಯಂತ ದೇದೀಪ್ಯಮಾನ ನಕ್ಷತ್ರದಂತೆ ಇದ್ದಾರೆ. ಇವರು ದ್ವೈತವೇದಾಂತದ ಪ್ರತಿಪಾದನೆಯಲ್ಲಿ ಹೊಸ ಆಯಾಮವನ್ನು ತಮ್ಮ ವಿಶಿಷ್ಟತಂತ್ರದಿಂದಾಗಿ ಅಧಿಕೃತವಾಗಿ ಸ್ಥಾಪಿಸಿದರೆಂಬುದು ಅಲ್ಲದೆ, ಆ ತತ್ತ್ವಜ್ಞಾನದಲ್ಲಿ ಅತ್ಯಂತ ನಿಷ್ಠಾವಂತರೂ ಆಗಿದ್ದರು. ಅವರ ಗ್ರಂಥತ್ರಯಗಳು ಅಂದರೆ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ,

ತರ್ಕತಾಂಡವಗಳು 'ವ್ಯಾಸತ್ರಯ'ವೆಂದೇ ಗೌರವ ಪಡೆದಿವೆ. ಅವುಗಳನ್ನು ಮಾಧ್ವಸಿದ್ಧಾಂತವೆಂಬ ನರಸಿಂಹದೇವರ ಮೂರು ಕಣ್ಣುಗಳೆಂದೇ ಸಂಪ್ರದಾಯದಲ್ಲಿ ಭಾವಿಸಿದ್ದಾರೆ.

*ಮಾಯಾತಂತ್ರಾಮರಾರಿಸ್ಥಯಮಪನಯತೋ ಮಧ್ವಸಿದ್ಧಾಂತನಾಮ್ನೋ ।*
*ನೇತ್ರಾಣೀವ ತ್ರಯೋಽಪಿ ತ್ರಿಜಗತಿ ನೃಹರೇರಿಂಧತೇ ಯತ್ಪ್ರಬಂಧಾಃ ॥ (ವಾದೀಂದ್ರರು)*

ವ್ಯಾಸತೀರ್ಥರು ದ್ವೈತತತ್ವಜ್ಞಾನದ ಪರಿಧಿಯನ್ನು ವಿಶದೀಕರಿಸುವ ಮೂಲಕ ಸ್ವಮತೀಯರಿಗೆ ತತ್ವಶಾಸ್ತ್ರದೃಷ್ಟಿಯಿಂದ ಸ್ವಸಿದ್ಧಾಂತವನ್ನು ಎಷ್ಟು ಸಮೃದ್ಧವಾಗಿ ವ್ಯಾಖ್ಯಾನಿಸಬಹುದೆಂಬ ಹೊಸಪಂಥವನ್ನು ತೋರಿಸಿದರೆಂದಷ್ಟೇ ಅಲ್ಲ; ಸ್ವತಃ ಮಧ್ವರ ವಿಚಾರವು ಎಷ್ಟು ಹೊಸದು ಮತ್ತು ಶಕ್ತಿಯುತವಾದುದೆಂಬುದನ್ನು ಅನ್ಯಶಾಸ್ತ್ರೋವಿದರೂ ಒಪ್ಪಿಕೊಳ್ಳುವಂತೆ ಮಾಡಿದರು. ಅವರು ಮಾಧ್ವತತ್ವಜ್ಞಾನವು ಕೇವಲ ಪುರಾಣವನ್ನಾಶ್ರಯಿಸಿದ ಹಿಂದೂ ಧರ್ಮ ಅಥವಾ ಭಕ್ತಿಪಂಥದ ನವ್ಯವಿಕಾಸ ಅಥವಾ ಸಮಕಾಲೀನ ತತ್ವಶಾಸ್ತ್ರಗಳಲ್ಲಿ ಆಧ್ಯಾತ್ಮಿಕಪ್ರಧಾನವಾದ ಸಂಪ್ರದಾಯ ಮಾತ್ರವಲ್ಲ; ಅದೊಂದು ತತ್ವಜ್ಞಾನದಲ್ಲಿ ಕ್ರಾಂತಿಯನ್ನುಂಟುಮಾಡಿರುವ ತತ್ವಶಾಸ್ತ್ರ; ವೈಚಾರಿಕ-ಜಗತ್ತಿನಲ್ಲಿ ಇತರ ಸಂಪ್ರದಾಯಗಳಿಗಿಂತ ಗಂಭೀರವೂ, ವ್ಯಾಪಕವೂ, ನಿರ್ದುಷ್ಟವೂ ಆಗಿರುವ ಸುಸಂಪನ್ನವಿಚಾರಶಾಸ್ತ್ರವೆಂದು ಸರ್ವರಿಗೂ ಮನವರಿಕೆ ಮಾಡಿಕೊಟ್ಟರು. ಒಟ್ಟಿನಲ್ಲಿ ತಮ್ಮ ಅಮೋಘಕೃತಿಗಳ ಮೂಲಕ ನಿರ್ದುಷ್ಟವಿಚಾರವೇದಿಕೆಯಲ್ಲಿ ಸಮಕಾಲೀನಶಾಸ್ತ್ರಜ್ಞರ ಮಧ್ಯೆ ಅತ್ಯುಚ್ಚಸ್ಥಾನವನ್ನು ಮಾಧ್ವತತ್ವಜ್ಞಾನಕ್ಕೆ ದೊರೆಯುವಂತೆ ಮಾಡಿದರೆಂದಷ್ಟೇ ಅಲ್ಲ; ತಲ-ತಲಾಂತರಕ್ಕೂ ಅದು ಉಳಿಯುವಂತೆ ಮಾಡಿದ ಸತ್ಕೀರ್ತಿ ಶ್ರೀವ್ಯಾಸರಾಯರಿಗೆ ಸಲ್ಲುತ್ತದೆ.

ಅಷ್ಟಲ್ಲದೇ ಮಾಧ್ವಸಂಪ್ರದಾಯದ ಪ್ರಚಾರಕ್ಕಾಗಿ ಜನಸಾಮಾನ್ಯರ ಧರ್ಮಭಾವನೆಗೆ ಇಂಬುಕೊಟ್ಟು, ಅವರಲ್ಲಿ ವಿಷ್ಣುಭಕ್ತಿಯು ನೆಲೆಸುವಂತೆ ಮಾಡಲು 'ದಾಸಕೂಟ'ವನ್ನು ಸಂಘಟಿಸುವ ಮೂಲಕ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿದರು. ಅತ್ಯಂತ ದೀಕ್ಷಾಬದ್ಧರಾದ ಹರಿದಾಸರುಗಳು ಜ್ಞಾನಭಕ್ತಿಗಳ ಪ್ರಚಾರಕ್ಕಾಗಿ ಕಟಿಬದ್ಧರಾಗಿ ಹೊರಟರು. ಸಂಗೀತ ಹಾಗೂ ಸಾಹಿತ್ಯಕ್ಷೇತ್ರಗಳಲ್ಲಿ ಕನ್ನಡಸಾಹಿತ್ಯಕ್ಕೆ ಹೊಸ ದಿಗಂತವನ್ನೇ ಸೃಷ್ಟಿಸಿದರು. ವ್ಯಾಸರಾಯರು ತಾವಷ್ಟೇ ಕನ್ನಡದಲ್ಲಿ ಗೀತೆಗಳನ್ನು ರಚಿಸಿ ಹಾಡಿದುದಲ್ಲದೆ, ಪುರಂದರದಾಸರು, ಕನಕದಾಸರು ಮುಂತಾದ ದಾಸಶ್ರೇಷ್ಠರಿಗೆ ದೀಕ್ಷಾಗುರುಗಳಾಗಿ ಕರ್ನಾಟಕಸಂಗೀತಕ್ಕೆ ಭದ್ರಬುನಾದಿಯನ್ನು ಹಾಕಿಕೊಟ್ಟರು. ಎಲ್ಲೆಲ್ಲೂ ಭಗವದ್‌ಭಕ್ತಿಭರಿತ ಗೀತೆಗಳು ಮೊಳಗುವಂತೆ ಮಾಡಿದರು.

ವ್ಯಾಸರಾಯರ ಕೀರ್ತಿ ಬಹುದೂರದ ಬಂಗಾಳದೇಶಕ್ಕೂ ಹರಡಿತು. 'ಮಧ್ವಮತದ ವಿಶಿಷ್ಟ ಹಾಗೂ ಆದರ್ಶಪ್ರತಿಪಾದಕರು ಹಾಗೂ ಶುದ್ಧ ವೈಷ್ಣವಸಂಪ್ರದಾಯಪ್ರವರ್ತಕರೂ' ಎಂದು ಚೈತನ್ಯಪಂಥೀಯರು ಇವರ ಬಗ್ಗೆ ಗೌರವಾದರಗಳನ್ನು ತೋರಿಸಿದರು. ವ್ಯಾಸತೀರ್ಥರನ್ನು ಗುರುಗಳೆಂದು ಅಂಗೀಕರಿಸಿದ ಕಾರಣ, ಚೈತನ್ಯಪಂಥವು ಅಧ್ಯಾತ್ಮದೃಷ್ಟಿಯಿಂದ ಮಧ್ವಮತದ

ಶಾಖೆ ಎನ್ನುವಂತಾಯಿತು. ಹೀಗೆ ಬಂಗಾಳದ ವೈಷ್ಣವಸಂಪ್ರದಾಯಕ್ಕೂ ಮಾಧ್ವವೈಷ್ಣವ ಸಂಪ್ರದಾಯಕ್ಕೂ ಶಾಶ್ವತವಾದ ತತ್ವಜ್ಞಾನದ ಬೆಸುಗೆ ಬಿದ್ದಿತು.

ವ್ಯಾಸತೀರ್ಥರ ಕಾಲದಲ್ಲಿ ರಾಜಕೀಯಕ್ಷೇತ್ರದಲ್ಲಿಯೂ ಮಧ್ವಮತವು ಅತ್ಯುನ್ನತ ಸ್ಥಾನವನ್ನು ಗಳಿಸಿತು. ಅವರು ದಕ್ಷಿಣಭಾರತದ ವಿಜಯನಗರದ ಹಿಂದೂ ಸಮ್ರಾಟರಲ್ಲಿ ಅಮರಕೀರ್ತಿಗೆ ಪಾತ್ರನಾದ ಕೃಷ್ಣದೇವರಾಯನಿಂದ ಅನುಪಮಗೌರವಾನ್ವಿತರಾಗಿ ಗುರುಸ್ಥಾನದಲ್ಲಿದ್ದರು. ಆ ಗುರುಶಿಷ್ಯಭಾವ ಚಿರಸ್ಮರಣೀಯ.

ಪ್ರಕೃತ ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕೆಯು ಮನೆಮನೆಯಲ್ಲಿ ಬೆಳಗಬೇಕೆಂಬ ಹಂಬಲದಿಂದ ಈ ಕೃತಿಯನ್ನು ರಚಿಸಲಾಗಿದೆ. ಸಮಗ್ರಗ್ರಂಥವನ್ನು ಶ್ರೀವ್ಯಾಸತೀರ್ಥರೇ ಅನು- ಗ್ರಹಮಾಡಿ ಅನುವಾದ ಮಾಡಿಸಬೇಕು.

## ಶ್ರೀರಾಘವೇಂದ್ರಸ್ವಾಮಿಗಳು- ತತ್ವಪ್ರಕಾಶಿಕಾ ಭಾವದೀಪ

ಶ್ರೀರಾಘವೇಂದ್ರಸ್ವಾಮಿಗಳು ಟೀಕಾರಾಯರ ಅನೇಕಗ್ರಂಥಗಳಿಗೆ ಟಿಪ್ಪಣಿಗಳನ್ನು ರಚಿಸಿದ್ದಾರೆ. ಟೀಕಾರಾಯರ ಹಾಗೂ ವ್ಯಾಸತೀರ್ಥರ ಕೃತಿಗಳು ಪ್ರೌಢಶೈಲಿಯ ಗ್ರಂಥಗಳು. ನಿಶಿತಮತಿಗಳಿಗೂ ಓದಿ ಅರಗಿಸಿಕೊಳ್ಳುವುದು ಕಷ್ಟಸಾಧ್ಯವಿಚಾರ. ಮಂದಮತಿಗಳಂತು ಗೊಂಡಾರಣ್ಯದಲ್ಲಿ ಸಿಕ್ಕಿಹಾಕಿ- ಕೊಂಡಿರುವ ದಿಙ್ಮೂಢರಂತೆ ಈ ಗ್ರಂಥಗಳ ಗೊಡವೆಯೇ ಬೇಡವೆಂಬ ನಿರಾಶೆಗೊಳ್ಳುವ ಪ್ರಸಂಗ ಇರುತ್ತಿತ್ತು. ಶ್ರೀರಾಘವೇಂದ್ರತೀರ್ಥರ ಟಿಪ್ಪಣಿಗಳು ದಿಙ್ಮೂಢರಿಗೆ ದಾರಿದೀಪಗಳಾಗಿವೆ. ಗ್ರಂಥಾ- ಧ್ಯಯನದಲ್ಲಿ ಉತ್ಸಾಹವನ್ನು ಹೆಚ್ಚಿಸುತ್ತವೆ. ರಾಘವೇಂದ್ರತೀರ್ಥರ ಟಿಪ್ಪಣಿ ಇದೆ ಎಂದರೆ ಗ್ರಂಥವನ್ನು ಅರ್ಥಮಾಡಿಕೊಳ್ಳಬಹುದೆಂಬ ಧೈರ್ಯವುಂಟಾಗುತ್ತದೆ. ಈ ವಿಷಯದಲ್ಲಿ ಭಾವದೀಪ ಹಾಗೂ ಚಂದ್ರಿಕಾಪ್ರಕಾಶ ಟಿಪ್ಪಣಿಗಳು ಜ್ವಲಂತದೃಷ್ಟಾಂತಗಳಾಗಿವೆ. ಶ್ರೀಮದಾಚಾರ್ಯರ ಸೂತ್ರಭಾಷ್ಯಕ್ಕೆ ಜಯತೀರ್ಥರ ಟೀಕೆ ತತ್ವಪ್ರಕಾಶಿಕಾ. ಇದಕ್ಕೆ ರಾಯರು ತತ್ವಪ್ರಕಾಶಿಕಾ ಭಾವದೀಪ ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ವಸ್ತುತಃ ವ್ಯಾಸತೀರ್ಥರು ಮೊದಲೇ ತತ್ವಪ್ರಕಾಶಿಕಾ ಗ್ರಂಥಕ್ಕೆ ತಾತ್ಪರ್ಯಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಆದರೆ ಇದು ಉಪನ್ಯಾಸದ ಶೈಲಿಯಲ್ಲಿದ್ದು ಟೀಕೆಯ ಪ್ರತಿವಾಕ್ಯವನ್ನು ಉದ್ಧರಿಸಿ ವಿವರಣೆ ನೀಡುತ್ತಿಲ್ಲ. ಅದಕ್ಕೋಸ್ಕರ ಮಂದಮತಿಗಳಿಗೂ ಅರಗಿಸಿಕೊಳ್ಳಲು ಯೋಗ್ಯವಾದ ಶೈಲಿಯಲ್ಲಿ ಮೂಲಗ್ರಂಥದ ಪ್ರತಿವಾಕ್ಯಗಳನ್ನು ಎತ್ತಿಕೊಂಡು ವಿವರಿಸುವುದಕ್ಕಾಗಿ ಭಾವದೀಪ ಟಿಪ್ಪಣಿಯು ಹೊರಟಿದೆ. ಅಷ್ಟೇ ಅಲ್ಲದೆ ಶ್ರೀವ್ಯಾಸತೀರ್ಥರ ಚಂದ್ರಿಕಾಗ್ರಂಥದ ಮೇಲೆ ಅಪ್ಪಯ್ಯದೀಕ್ಷಿತರೇ ಮೊದಲಾದವರು ಮಾಡಿದ ಆಕ್ಷೇಪವನ್ನು ಪರಿಹರಿಸುವ ಉದ್ದೇಶದಿಂದಲೂ ಈ ಕೃತಿ ಹೊರಟಿದೆ ಎಂದು ಪ್ರಾರಂಭದಲ್ಲಿ ರಾಯರೇ ಪ್ರತಿಜ್ಞೆ

ಮಾಡಿದ್ದಾರೆ. ಈ ಅರ್ಥದಲ್ಲಿ ತತ್ವಪ್ರಕಾಶಿಕಾ ಭಾವದೀಪ ಎಂಬ ಹೆಸರನ್ನು ಹೀಗೆ ವಿಭಾಗಿಸಿ ಅರ್ಥ ಹೇಳಬೇಕು - ತತ್ವಪ್ರಕಾಶಿಕಾ + ಅಭಾವ + ದೀಪ, ತತ್ವಪ್ರಕಾಶಿಕಾದ ಅಭಿಪ್ರಾಯಕ್ಕೆ ಅಭಾವ = ವಿರುದ್ಧವಾದ ಪರಮತೀಯರ ಆಕ್ಷೇಪವನ್ನು, ದೀಪ = ದೀಪದಂತೆ ಸುಡುವುದರಿಂದ ಇದಕ್ಕೆ ತತ್ವಪ್ರಕಾಶಿಕಾ ಭಾವದೀಪ ಎಂಬ ಹೆಸರು ಸಾರ್ಥಕವಾಗಿದೆ.

ರಾಯರ ಈ ಗ್ರಂಥದಲ್ಲಿ ಎಲ್ಲೆಡೆಯೂ ಸ್ವಾರಸ್ಯವೇ ತುಂಬಿದೆ. ಕೆಲವನ್ನಷ್ಟೇ ಹೀಗೆ ಉದಾಹರಿಸಬಹುದು.

*ಶುದ್ಧಾನಂದೋರುಸಂವಿದ್ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಮ್ ।*
*ಚಿಂತಾಸಂತಾಪಲೇಪೋದ್ಭವಮೃತಿಮುಖರಾಶೇಷದೋಷಾತಿದೂರಮ್ ॥*
*ಸದ್ವೈರಾಗ್ಯಭಕ್ತಿಶ್ರುತಿಮತಿನಿಯತಧ್ಯಾನಜಜ್ಞಾನಯೋಗಾತ್ ।*
*ಗಮ್ಯಂ ವಂದೇ ಮುಕುಂದಾಭಿಧಮಮಲಮಲಂ ಬ್ರಹ್ಮ ವೇದಾಂತವೇದ್ಯಮ್ ॥*

ಟೀಕಾರಾಯರ ಈ ಮಂಗಳಪದ್ಯವನ್ನು ನೋಡಿದಾಗ ನಮಗೆ ತಿಳಿಯುವ ಅರ್ಥಕ್ಕಿಂತ ಅತ್ಯಂತ ವಿಭಿನ್ನವಾದ ಸ್ವಾರಸ್ಯಕರವಾದ ವ್ಯಾಖ್ಯಾನವನ್ನು ರಾಯರು ತಮ್ಮ ಟಿಪ್ಪಣಿಯಲ್ಲಿ ತೋರಿಸಿದ್ದಾರೆ. ಶ್ರೀಮದಾಚಾರ್ಯರ ಭಾಗವತತಾತ್ಪರ್ಯದ ಮಂಗಳಶ್ಲೋಕವು, ಭಾಗವತ ಮಂಗಳಶ್ಲೋಕದ ವ್ಯಾಖ್ಯಾನರೂಪವಾಗಿದೆ. ಅದೇ ಆದರ್ಶದಲ್ಲಿ ಶ್ರೀಮದಾಚಾರ್ಯರ ಶಿಷ್ಯರಾದ ಟೀಕಾರಾಯರು ಸಹ ಶ್ರೀಮದಾಚಾರ್ಯರ ಭಾಷ್ಯದ ಮಂಗಳ ಶ್ಲೋಕವನ್ನು ತಮ್ಮ ಈ ಮಂಗಳಶ್ಲೋಕದಿಂದಲೇ ವ್ಯಾಖ್ಯಾನಿಸುತ್ತಿದ್ದಾರೆ. ಈ ಶ್ಲೋಕದ ಶುದ್ಧಾನಂದೋರು ಎಂಬ ಮೊದಲ ಪಾದದಲ್ಲಿ ಸಮನ್ವಯಾಧ್ಯಾಯದ ಸಾರವನ್ನು ಸಂಗ್ರಹಿಸಿದ್ದಾರೆ. ಪರಮಾತ್ಮನ ಆನಂದ ಶುದ್ಧವಾಗಿದೆ ಎಂದರೆ ಅವನ ಆನಂದಕ್ಕೆ ಮಿತಿಯಿಲ್ಲ. ಮತ್ತು ಸರಿಸಾಟಿಯಾದ ಮತ್ತೊಂದು ಆನಂದವಿಲ್ಲ. ರಮೆಯ ಆನಂದಕ್ಕೂ ಪರಮಾತ್ಮನ ದೃಷ್ಟಿಯಿಂದ ಪರಿಮಿತಿ ಇದೆ. ಆದರೆ ಅವಳ ಆನಂದಕ್ಕಿಂತಲೂ ಭಗವಂತನ ಆನಂದವು ಉತ್ಕೃಷ್ಟವಾಗಿದೆ. ಯಾವ ಆನಂದಕ್ಕೆ ಕೊನೆಯೇ ಇಲ್ಲವೋ ಮತ್ತು ಅದಕ್ಕಿಂತ ಉತ್ತಮವಾದ ಮತ್ತೊಂದು ಆನಂದವಿಲ್ಲವೋ ಅಂತಹ ಆನಂದವು ಶುದ್ಧಾನಂದವೆನಿಸುತ್ತದೆ. ಆನಂದದೇಹಃ ಶುದ್ಧತ್ವಂ ನಾಮ ಸಾಂತತ್ವಸಾತಿಯಶತ್ವರಾಹಿತ್ಯಂ - ಶುದ್ಧವಾದ ಆನಂದವು ಮತ್ತು ಎಲ್ಲವನ್ನೂ ವಿಷಯೀಕರಿಸುವ ಜ್ಞಾನವು ಭಗವಂತನಲ್ಲಿದೆ ಎಂದು ಟೀಕಾರಾಯರು ವರ್ಣಿಸುವ ಮೂಲಕ ಆನಂದಮಯಾಧಿಕರಣದ ಸಾರವನ್ನು ಸಂಗ್ರಹಿಸಿದ್ದಾರೆ. ಉರುದ್ಯುತಿ ಎಂಬ ಪದ ಪ್ರಯೋಗದಿಂದ ಅನುಕೃತೇಸ್ತಸ್ಯ ಚ (೧-೩-೨೨) ಎಂಬ ಸೂತ್ರ ಪ್ರತಿಪಾದ್ಯವಾದ ಸೂರ್ಯ ಚಂದ್ರಾದಿ ದೇವತೆಗಳ ಶಕ್ತಿಯು ಭಗವದಧೀನವೆಂಬ ಪ್ರಮೇಯವನ್ನು ಸಂಗ್ರಹಿಸಿದ್ದಾರೆ. ಉರುಬಲ ಎಂಬ ಪದಪ್ರಯೋಗದಿಂದ ಭಗವಂತನ ಶಕ್ತಿ ಅಪರಿಮಿತ ಹಾಗೂ ಅದ್ಭುತ ಎಂದು ಹೇಳಿದ್ದಾರೆ. ಇದರಿಂದ ಅತ್ತಾ ಚರಾಚರಗ್ರಹಣಾತ್ (೧-೨-೯) ಎಂಬ ಸೂತ್ರದಲ್ಲಿ

ಶ್ರೀಹರಿಯು ಚರಾಚರಾತ್ಮಕವಿಶ್ವವನ್ನು ಅನಾಯಾಸವಾಗಿ ಸಂಹರಿಸುತ್ತಾನೆಂದು ಹೇಳಿದ್ದಾರೆ. ಅದನ್ನು ಈ ವಿಶೇಷಣವು ಸಂಗ್ರಹಿಸಿದೆ. ಇದರಂತೆ ಬಹುಲೋದಾರ್ಯ ಎಂಬ ಪದ-ಪ್ರಯೋಗದಿಂದ ಔದಾರ್ಯ ಮೊದಲಾದ ಗುಣಗಳೇ ಶ್ರೀಹರಿಯ ದೇಹವೆಂದು ಟೀಕಾರಾಯರು ವರ್ಣಿಸಿದ್ದಾರೆ. ಇದರಿಂದ ಮುಕ್ತೋಪಸೃಪ್ಯ ವ್ಯಪದೇಶಾತ್ (೧-೩-೨) ತನ್ನಿಷ್ಠಸ್ಯಮೋಕ್ಷೋಪದೇಶಾತ್ ಮೊದಲಾದ ಸೂತ್ರಗಳ ಪ್ರಮೇಯವನ್ನು ಸಂಗ್ರಹಿಸಿದ್ದಾರೆ. ಈ ಸೂತ್ರದಲ್ಲಿ ಕರುಣಾಮಯಿಯಾದ ಭಗವಂತನು ಭಕ್ತರ ಅಪರಾಧಗಳನ್ನು ಲೆಕ್ಕಿಸದೆ ನಿರ್ಮಲಭಕ್ತಿಗೆ ಮೆಚ್ಚಿ ನಿತ್ಯಸುಖವನ್ನು ಕರುಣಿಸುತ್ತಾನೆಂಬ ಔದಾರ್ಯಗುಣವನ್ನು ವರ್ಣಿಸಲಾಗಿದೆ. ಇಷ್ಟೇ ಅಲ್ಲದೆ ಆನಂದ, ಜ್ಞಾನ, ಔದಾರ್ಯ ಮೊದಲಾದ ಗುಣಗಳೇ ಭಗವಂತನ ದೇಹವೆಂಬ ವರ್ಣನೆಯ ಮೂಲಕ ತಾರ್ಕಿಕರು ಹೇಳುವ ದುಃಖದ್ವೇಷ ಮೊದಲಾದ ಗುಣಗಳನ್ನು ಮತ್ತು ವೇದಪ್ರಸಿದ್ಧವಾದ ಸತ್ವರಜ-ಸ್ತಮೋಗುಣಗಳನ್ನು ವಿವಕ್ಷಿಸಬಾರದೆಂದು ಸೂಚಿಸಿದ್ದಾರೆ. ಹೀಗೆ ಟೀಕಾರಾಯರ ಪ್ರತಿಯೊಂದು ಪದಗಳಲ್ಲಿ ಅಡಕವಾದ ನಿಜವಾದ ಭಾವವನ್ನು ಹೆಚ್ಚು ಹೆಚ್ಚಾಗಿ ತೋರಿಸುವ ದೀಪವೆಂದರೆ ಭಾವದೀಪ ಮಾತ್ರ. ಇಂತಹ ಟಿಪ್ಪಣಿಯು ಅನ್ವರ್ಥಕವೂ, ಹೃದಯಂಗಮವೂ, ಅಪೂರ್ವವೂ, ಮಹೋಪಕಾರಿಯೂ ಆಗಿದೆ.

ಟೀಕೆಯ ಭಾವವನ್ನು ದೀಪಿಸುವ ರಾಯರ ವ್ಯಾಖ್ಯಾನದ ಬಗೆ ಹೀಗಿದೆ -- 'ವಾಚೋ ವಿಶುದ್ಧಿಸಿದ್ಧ್ಯರ್ಥಂ ಸಂಗಮ್ಯಂತೇ ಗುರೋರ್ಗಿರಃ'. ಈ ಟೀಕಾವಾಕ್ಯಕ್ಕೆ ಚಂದ್ರಿಕೆಯಲ್ಲಿ ಎರಡು ಬಗೆಯ ವಿವರಣೆ ಇದೆ. -- ನನ್ನ ಮಾತಿನ ಜೊತೆಗೆ ಗುರುಗಳ ಮಾತನ್ನು ಸೇರಿಸುತ್ತೇನೆ ಅಂದರೆ ವ್ಯಾಖ್ಯಾನ ಮಾಡುತ್ತೇನೆಂದು ಒಂದು ಅರ್ಥ. ಗುರುಗಳು ಹೇಳಿದ ಮಾತುಗಳನ್ನೇ ಪರಸ್ಪರ ಹೊಂದುವಂತೆ ಸೇರಿಸುತ್ತೇನೆ ಎಂಬುದು ಎರಡನೆಯ ಅರ್ಥ. ಈ ಎರಡನೆಯ ಅರ್ಥಕ್ಕೆ ಸಂಗತಿಯು ನಮಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಭಾವದೀಪದಲ್ಲಿ ಮಾತ್ರ ಇದನ್ನು ತೋರಿಸಿದ್ದಾರೆ. 'ನ್ಯಾಯವಿವರಣ, ಗೀತಾಭಾಷ್ಯ, ಛಾಂದೋಗ್ಯಭಾಷ್ಯ, ವಿಷ್ಣುತತ್ವವಿನಿರ್ಣಯ ಮೊದಲಾದ ಕಡೆ ಆಚಾರ್ಯರು ಹೇಳಿದ ಮಾತುಗಳನ್ನು ಬ್ರಹ್ಮಸೂತ್ರಭಾಷ್ಯದ ಮಾತುಗಳ ಜೊತೆಗೆ ಹೊಂದಿಸಿ-ಕೊಳ್ಳುತ್ತೇನೆಂದು ಟೀಕಾರಾಯರು ಹೇಳುತ್ತಿದ್ದಾರೆ. ಉದಾಹರಣೆ :- ನ್ಯಾಯವಿವರಣಾನುಸಾರವಾಗಿ ತತ್ವಪ್ರಕಾಶಿಕೆಯಲ್ಲಿ ಅಧಿಕರಣವನ್ನು ರಚನೆ ಮಾಡುತ್ತಾ ಸೂತ್ರಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಾರೆ. ಶಾಸ್ತ್ರಯೋನ್ಯಧಿಕರಣ ಮೊದಲಾದೆಡೆ ಗೀತಾಭಾಷ್ಯದ ಪ್ರಮೇಯಗಳನ್ನು ಸೇರಿಸಿಕೊಂಡು ವ್ಯಾಖ್ಯಾನಿಸಿರುತ್ತಾರೆ. ದಹರಾಧಿಕರಣದಲ್ಲಿ ಜೀವನ ಹೃದಯಾಕಾಶದಲ್ಲಿ ವಿಷ್ಣುವು ಇರುತ್ತಾನೆಂಬ ಅಂಶವನ್ನು ಭಾಷ್ಯದಲ್ಲಿ ಹೇಳದಿದ್ದರೂ ಛಾಂದೋಗ್ಯಭಾಷ್ಯವನ್ನು ಉದ್ಧರಿಸಿ ಜೋಡಿಸಿದ್ದಾರೆ. ದ್ಯುಭ್ವಾದ್ಯಧಿಕರಣದಲ್ಲಿ ಮೂಲಪ್ರಕೃತಿಯ ವಿಚಾರವನ್ನು ಹೇಳದಿದ್ದರೂ ವಿಷ್ಣುತತ್ವವಿನಿರ್ಣಯದಿಂದ ತಂದು ಸೇರಿಸಿದ್ದಾರೆ. ಹೀಗೆ ಇನ್ನೂ ಅನೇಕ ದೃಷ್ಟಾಂತಗಳನ್ನು ಗಮನಿಸಬೇಕು.

ಟೀಕೆಯಲ್ಲಿ ಹೇಳಲ್ಪಟ್ಟ ವಿಷಯವು ಭಾಷ್ಯಕಾರರಿಗೆ ಸಮ್ಮತವಾಗಿದೆಯೋ ಇಲ್ಲವೋ ಎಂಬ ಕುತೂಹಲ ಸಹಜವಾಗಿ ಬರುತ್ತದೆ. ಈ ಕುತೂಹಲಕ್ಕೆ ಭಾವದೀಪದಲ್ಲಿ ರಾಯರು ಉತ್ತರಿಸಿದ್ದಾರೆಂದು ನೋಡೋಣ - ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂಬ ಸೂತ್ರದಲ್ಲಿ ಟೀಕೆಯಲ್ಲಿ ಮಾಡಿದ ಪೂರ್ವಪಕ್ಷವು ಭಾಷ್ಯದಿಂದ ಲಭ್ಯವಾದಂತೆ ತೋರುವುದಿಲ್ಲ. ಏಕೆಂದರೆ ಟೀಕೆಯ ಪೂರ್ವಪಕ್ಷದ ಸಿದ್ಧಾಂತವು ಹೀಗಿವೆ. 'ಬ್ರಹ್ಮನು ಜೀವನಿಂದ ಅಭಿನ್ನನಾಗಿದ್ದಾನೆ. ನಾನು ಎಂಬ ಅನುಭವದಿಂದ ಜೀವನು ನಿತ್ಯಸಿದ್ಧನಾಗಿದ್ದಾನೆ. ಜೀವನಿಂದ ಅಭಿನ್ನನಾದ ಬ್ರಹ್ಮನು ನಿರ್ವಿಶೇಷನಾದ್ದರಿಂದ ನಾನು ಎಂಬ ಜ್ಞಾನಕ್ಕಿಂತ ಹೆಚ್ಚಿನ ಅಂಶವನ್ನು ಬ್ರಹ್ಮನ ವಿಷಯದಲ್ಲಿ ವೇದಾಂತಗಳು ಹೇಳಲಾರವು. ಆದ್ದರಿಂದ ಸಂದಿಗ್ಧನಲ್ಲದ ಬ್ರಹ್ಮನು ವಿಷಯನಾಗಲಾರ. ಆದ್ದರಿಂದ ಬ್ರಹ್ಮಜಿಜ್ಞಾಸೆಯೂ ಕೂಡುವುದಿಲ್ಲವೆಂದು ಪೂರ್ವಪಕ್ಷ.

''ತದ್ವಿವಿಜಿಜ್ಞಾಸಸ್ವ'' ಎಂಬಲ್ಲಿ ಜಿಜ್ಞಾಸೆಗೆ ವಿಷಯನಾದವನು ಬ್ರಹ್ಮ. ಆದರೂ 'ಅಥ ಕಸ್ಮಾತ್ ಉಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ'' ಎಂಬ ಶ್ರುತಿಯ ಆಧಾರದಿಂದ ಬ್ರಹ್ಮನು ಗುಣಪೂರ್ಣನಾಗಿದ್ದಾನೆಂದು ಸಿದ್ಧನಾಗಿದ್ದಾನೆ. ಆದರೆ ಜೀವನು ಅಲ್ಪಗುಣನೆಂದೂ ಅನುಭವದಿಂದ ಸಿದ್ಧನಾಗಿದ್ದಾನೆ. ಇಂತಹ ಜೀವನಿಗಿಂತ ಬ್ರಹ್ಮನು ಭಿನ್ನನಾದ್ದರಿಂದ ಅಸಂದಿಗ್ಧನಾಗಿದ್ದಾನೆ. ಆದ್ದರಿಂದಲೇ ವೇದಾಂತಗ್ರಂಥಗಳಿಗೆ ವಿಷಯನೂ ಆಗುತ್ತಾನೆ. ಬ್ರಹ್ಮಜಿಜ್ಞಾಸೆಯ ಕರ್ತವ್ಯವೂ ಆಗಿದೆಯೆಂದು ಸಿದ್ಧಾಂತ.

ಆದರೆ ಭಾಷ್ಯಕಾರರು ಸೂತ್ರದಲ್ಲಿರುವ ಬ್ರಹ್ಮಪದಕ್ಕೆ ಬ್ರಹ್ಮಶಬ್ದಶ್ಚ ವಿಷ್ಣಾವೇವ ಎಂದು ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ರೂಢ್ಯರ್ಥವನ್ನು ಹೇಳಿದ್ದಾರೆ. ಆದ್ದರಿಂದ ಟೀಕೆಯಲ್ಲಿ ಹೇಳಿದ ಗುಣಪೂರ್ಣತ್ವವೆಂಬ ಯೌಗಿಕಾರ್ಥವು ಹೇಗೆ ಭಾಷ್ಯಾರೂಢವಾಗುತ್ತದೆ ? ಎಂದೇ ತಿಳಿಯುವುದಿಲ್ಲ. ಈ ಸಂದರ್ಭದಲ್ಲಿ ಭಾವದೀಪಕಾರರು ಗೊಂದಲ ಪರಿಹರಿಸಿದ್ದಾರೆ - ಭಾಷ್ಯದಲ್ಲಿರುವ ಅತಃ ಎಂಬ ಪದವನ್ನು ಆವೃತ್ತಿ ಮಾಡಿ ಯೋಜನೆ ಮಾಡಿದಾಗ ಟೀಕೆಯಲ್ಲಿ ಈ ರೀತಿಯ ಪೂರ್ವಪಕ್ಷ ಸಿದ್ಧಾಂತಗಳನ್ನು ಮಾಡಿದ್ದಾರೆಂದು ತಿಳಿಸಿದ್ದಾರೆ. ಇಷ್ಟರಿಂದಲೇ ಎಲ್ಲ ಗೊಂದಲಗಳು ಪರಿಹಾರವಾಗುತ್ತವೆ.

ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಶ್ರೀಮದಾಚಾರ್ಯರು ಅಥ ಶಬ್ದವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ. ಬ್ರಹ್ಮನ ಬಗ್ಗೆ ವಿಚಾರಮಾಡುವಾಗ ಅಧಿಕಾರಿಗಳು ಉತ್ತಮ, ಮಧ್ಯಮ, ಅಧಮ ಎಂದು ಮೂರು ವಿಧದಲ್ಲಿದ್ದಾರೆ. ದೇವತೆಗಳೂ ಉತ್ತಮಾಧಿಕಾರಿಗಳು ಋಷಿಗಂಧರ್ವರು ಮಧ್ಯಮರು, ಮನುಷ್ಯೋತ್ತಮರು ಅಧಮಾಧಿಕಾರಿಗಳೆಂದು. ಇದು ಜಾತಿಯನ್ನು ಆಧರಿಸಿದ ವಿಂಗಡಣೆ.

ಆದರೆ ಇಲ್ಲೊಂದು ಪ್ರಶ್ನೆ ಬರುತ್ತದೆ. ಮುಕ್ತಿಯೋಗ್ಯರಾದ ದೇವತೆಗಳೇ ಆಗಲಿ, ಋಷಿಗಳೇ ಆಗಲಿ ಶಾಪನಿಮಿತ್ತಕವಾಗಿ ಭೂಮಿಯಲ್ಲಿ ಶೂದ್ರರಾಗಿಯೋ ಪಶು ಪಕ್ಷಿಗಳಾಗಿಯೋ ಹುಟ್ಟುತ್ತಾರೆ.

ಅಂತಹ ಪ್ರಸಂಗದಲ್ಲಿ ಮುಕ್ತಿಯೋಗ್ಯರಾಗಿದ್ದರು ಅವರಿಗೆ ವೇದಾಧಿಕಾರವಿರುವುದಿಲ್ಲ. ಪ್ರಕೃತ ಮುಕ್ತಿಯೋಗ್ಯರು ಬ್ರಹ್ಮಮೀಮಾಂಸಾ ಶಾಸ್ತ್ರದ ಅಧ್ಯಯನಕ್ಕೆ ಯೋಗ್ಯರೆಂದಷ್ಟೇ ಹೇಳಿದರೆ ಇಂತಹ ಸಚ್ಛೂದ್ರಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಇನ್ನೊಂದು ಬಗೆಯ ಅಧಿಕಾರವನ್ನು ನಿರೂಪಿಸಿದ್ದಾರೆಂದು ಟೀಕಾರಾಯರು ವ್ಯಾಖ್ಯಾನಿಸಿದ್ದಾರೆ. ಗುಣಗಳ ಆಧಾರದಿಂದ ಬ್ರಹ್ಮವಿದ್ಯೆಯಲ್ಲಿ ಮೂರು ಬಗೆಯ ಅಧಿಕಾರಿಗಳಿದ್ದಾರೆ. ವಿಷ್ಣು ಭಕ್ತಿ ಇದ್ದು ವೇದಾಧ್ಯಯನದಿಂದ ಕೂಡಿದ್ದರೆ ಬ್ರಹ್ಮಜಿಜ್ಞಾಸೆಗೆ ಅಧಮಾಧಿಕಾರಿಗಳಾಗುತ್ತಾರೆ. ಈ ಗುಣಗಳ ಜೊತೆಗೆ ಶಮದಮಾದಿಗುಣಗಳೂ ಸೇರಿದ್ದಾರೆ ಮಧ್ಯಮಾಧಿಕಾರಿಗಳಾಗುತ್ತಾರೆ. ಈ ಎಲ್ಲ ಗುಣಗಳ ಜೊತೆಗೆ ಸಮಸ್ತವಿಶ್ವವನ್ನು ಅಸಾರವೆಂದು ತಿಳಿದು. ಭಗವಂತನಲ್ಲಿಯೇ ಅನನ್ಯವಾದ ಭಕ್ತಿಯಿಂದ ಶರಣಾಗತನಾದರೆ ಉತ್ತಮಾಧಿಕಾರಿಗಳಾಗುತ್ತಾರೆ. ಈ ಮೂರುವಿಧ ಅಧಿಕಾರಿಗಳಲ್ಲಿ ಪ್ರತಿಯೊಬ್ಬರಲ್ಲಿಯೂ ಪ್ರತಿ-ಯೊಬ್ಬರಲ್ಲಿರುವ ಗುಣಗಳು ಇರಬೇಕು. ಆದರೆ ಉತ್ತಮರಲ್ಲಿರುವ ಗುಣಕ್ಕಿಂತ ಕಮ್ಮಿ ಗುಣಗಳು ಅಧಮರಲ್ಲಿರುತ್ತವೆ. ಆದ್ದರಿಂದ ಲಕ್ಷಣ ಸಾಂಕರ್ಯವೆಂಬ ದೋಷಕ್ಕೆ ಅವಕಾಶವಿಲ್ಲವೆಂದು ಭಾವ-ದೀಪದಲ್ಲಿ ಸ್ಪಷ್ಟಪಡಿಸಿದ್ದಾರೆ.

ಕೇವಲ ತ್ರೈವರ್ಣಿಕರಿಗೆ ವೇದಾಧಿಕಾರವಿರುವುದರಿಂದ ದೇವತೆ ಮೊದಲಾದವರು ಶೂದ್ರಾದಿ ಜಾತಿಯಲ್ಲಿ ಹುಟ್ಟಿದರೂ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಗಳಾಗುವುದಿಲ್ಲ. ಆದ್ದರಿಂದ ಜಾತಿಕೃತ ಅಧಿಕಾರವಿಭಾಗದಲ್ಲಿ ಮುಕ್ತಿಯೋಗ್ಯರೂ ಸಹ ಬ್ರಹ್ಮಜಿಜ್ಞಾಸಾಧಿಕಾರಿಗಳು ಎಂದು ಹೇಳಿದಾಗ ಯಾವುದೇ ದೋಷವಿಲ್ಲ.

*ಸಚ್ಛೂದ್ರಾದೇರ್ದೇಹಾಂತರೇ ವೈದಿಕಬ್ರಹ್ಮವಿದ್ಯಾಧಿಕಾರೇಽಪಿ ನೈತದ್ದೇಹೇಽಧಿಕಾರಃ ।*
*ದೇಹಾಂತರೇಽಧಿಕಾರಶ್ಚ ನೇದಾನೀಂ ಪ್ರವೃತ್ತ್ಯುಪಯೋಗೀ । --ಭಾವದೀಪ.*

ಆದ್ದರಿಂದ ಜಾತಿಕೃತ ಅಧಿಕಾರವಿಭಾಗದಲ್ಲಿ ಮುಕ್ತಿಯೋಗ್ಯರು ಬ್ರಹ್ಮಜಿಜ್ಞಾಸೆಗೆ ಅಧಿಕಾರಿಗಳು ಎಂದು ಹೇಳಿದಾಗ ವರ್ಣದಿಂದ ಅವರರಾದರೂ ವೇದಾಧ್ಯಯನದ ಮೂಲಕ ಬ್ರಹ್ಮಜಿಜ್ಞಾಸೆಯಲ್ಲಿ ಅಧಿಕಾರ ಪ್ರಾಪ್ತವಾಗುತ್ತದೆಂಬ ತಪ್ಪು ಕಲ್ಪನೆಗೆ ಅವಕಾಶವಿಲ್ಲ. ಏಕೆಂದರೆ ತ್ರೈವರ್ಣಿಕರು ಅಥವಾ ಎರಡನೆಯ ರೀತಿಯಲ್ಲಿ ನಿರೂಪಿಸಿದ ಅಧಿಕಾರಸಂಪತ್ತನ್ನು ಪಡೆದವರಿಗೆ ಮಾತ್ರವೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಇದನ್ನು ತಿಳಿಸಲು ಶ್ರೀಮದಾಚಾರ್ಯರು ಗುಣಾಧಾರಿತವಾದ ಅಧಿಕಾರವಿಭಾಗವನ್ನು ನಿರೂಪಿಸಿರುತ್ತಾರೆ. ಇದನ್ನೇ ಟೀಕೆಯಲ್ಲಿಯೂ ವಿಶದ ಪಡಿಸಿದ್ದಾರೆ.

ಈ ವಿಷಯದ ಮೇಲೆ ಟೀಕಾಚಾರ್ಯರ ಅನಂತರದ ಪರಕೀಯರು ಮಾಡಿದ ಆಕ್ಷೇಪವನ್ನು ಶ್ರೀರಾಘವೇಂದ್ರತೀರ್ಥರು ತಮ್ಮ ಭಾವದೀಪದಲ್ಲಿ ಉಲ್ಲೇಖಿಸಿ ನಿರಾಕರಿಸಿದ್ದಾರೆ. ಪರಕೀಯರ ಆಕ್ಷೇಪ ಹೀಗಿದೆ - ''ಬ್ರಹ್ಮವಿದ್ಯಾಧಿಕಾರಿಯ ಲಕ್ಷಣವು (ಮುಕ್ತಿಯೋಗ್ಯತೆಯು) ಎಂದೇ ಹೇಳೋಣ.

ಸಚ್ಛೂದ್ರಾದಿಗಳಲ್ಲಿ ಈ ಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬಂದರೆ ಅಪಶೂದ್ರಾಧಿಕರಣ ನ್ಯಾಯದಿಂದಲೇ ಪರಿಹರಿಸಬಹುದು. ಏಕೆಂದರೆ ಅಪಶೂದ್ರಾಧಿಕರಣದಲ್ಲಿ ತ್ರೈವರ್ಣಿಕರಿಗೆ ಮಾತ್ರ ವೇದ ಹಾಗೂ ವೇದಜ್ಞಾನದಲ್ಲಿ ಅಧಿಕಾರವನ್ನು ಪ್ರತಿಪಾದಿಸಿದ್ದಾರೆ. ಪ್ರಥಮಸೂತ್ರದಲ್ಲಿ ಬ್ರಹ್ಮಪದದಿಂದ ಜೀವನಿಗಿಂತ ಭಿನ್ನನಾದ ಬ್ರಹ್ಮನೇ ಜಿಜ್ಞಾಸ್ಯನಾಗಿದ್ದಾನೆಂದು ಹೇಳಿದಾಗ ಮುಕ್ತಿಯೋಗ್ಯನಾದ ತ್ರೈವರ್ಣಿಕನೇ ಅಧಿಕಾರಿಯೆಂಬುದು ಸ್ವತಃ ಸಿದ್ಧವಾಗುತ್ತದೆ. ಈ ಹಿನ್ನಲೆಯಲ್ಲಿ ಸ್ವೀಕಾರ ಮಾಡಿದಾಗ ಶ್ರೀಮದಾಚಾರ್ಯರ ಮತ್ತು ಅವರ ವ್ಯಾಖ್ಯಾನಕಾರರ ಪ್ರಕಾರ ಅಧಿಕಾರಿಸೂಚಕವಾದ 'ಅಥ'ಶಬ್ದ ಮತ್ತು ಗುಣಾಧಾರಿತವಾದ ಅಧಿಕಾರನಿರೂಪಣೆ ಎರಡೂ ಅನುಪಯುಕ್ತ ಹಾಗೂ ಅಸಂಗತ ಎನಿಸುತ್ತದೆ''.

ಪರಕೀಯರ ಈ ಆಕ್ಷೇಪವನ್ನು ರಾಘವೇಂದ್ರತೀರ್ಥಶ್ರೀಪಾದರು ಹೀಗೆ ಖಂಡಿಸುತ್ತಾರೆ. ''ತ್ರೈವರ್ಣಿಕರಿಗೆ ಮಾತ್ರ ವೇದಾಧ್ಯಯನ ಮತ್ತು ವೇದಾರ್ಥಜಿಜ್ಞಾಸೆಯಲ್ಲಿ ಅವಕಾಶವೆನ್ನುವುದು ನಿಜ. ಆದರೆ ತ್ರೈವರ್ಣಿಕರಾದ ಮಾತ್ರಕ್ಕೆ ವೇದಾಧಿಕಾರಿಗಳಾಗುವುದಿಲ್ಲ. ವಿಷ್ಣುಭಕ್ತಿ ಶಮ-ದಮಾದಿಗುಣಗಳೆಲ್ಲವೂ ಇದ್ದರೆ ಮಾತ್ರ ವೇದಾಧಿಕಾರಿಗಳಾಗುತ್ತಾರೆ. ಈ ಗುಣಗಳಿಲ್ಲದೆ ತ್ರೈವರ್ಣಿಕರಾಗಿದ್ದರೂ ವೇದಾಧ್ಯಯನದಲ್ಲಾಗಲೀ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಾಗಲೀ ಸರ್ವಥಾ ಅಧಿಕಾರಿಗಳಾಗುವುದಿಲ್ಲವೆಂಬ ವಿಚಾರವು ಅಪಶೂದ್ರಾಧಿಕರಣದಿಂದ ಸಿದ್ಧವಾಗುವುದಿಲ್ಲ. ಈ ಪ್ರಮೇಯವನ್ನು ನಿಖರವಾಗಿ ತೋರಿಸಲು ಪ್ರಥಮಸೂತ್ರದಲ್ಲಿ 'ಅಥ' ಎಂಬ ಶಬ್ದವನ್ನು ಅದನ್ನು ವಿವರಿಸುವ ಭಾಷ್ಯ ಹಾಗೂ ಟೀಕೆಗಳ ಗುಣಾಧಾರಿತ ಅಧಿಕಾರಿಯ ನಿರೂಪಣೆಯು ಅತ್ಯಂತ ಅನಿವಾರ್ಯವಾಗಿದೆ. 'ಅಧ್ಯಯನಮಾತ್ರವತಃ' ಎಂಬ ಸೂತ್ರದಲ್ಲಿ ವಿಮರ್ಶೆಮಾಡಿದ ಗುಣಾ-ಧಾರಿತ ಅಧಿಕಾರಸಂಪತ್ತಿಯ ವಿವರಣೆಯ ಮೂಲಮಂತ್ರವೇ ಅಥಶಬ್ದವಾಗಿದೆ. ಹೀಗೆ ರಾಯರು ಪರಕೀಯರನ್ನು ಖಂಡಿಸುವುದಷ್ಟೇ ಅಲ್ಲದೆ ಹೃದಯಂಗಮವಾಗಿ ಸೂಕ್ಷ್ಮಪ್ರಮೇಯಗಳನ್ನು ನಿರೂಪಿಸಿರುತ್ತಾರೆ.

ಭಾವದೀಪಕಾರರು 'ಉಕ್ತಂ ನೋ ವಕ್ತಿ ಭೂಯಃ' (ಒಂದು ವಿಷಯವನ್ನು ಹೇಳಿದ ಮೇಲೆ ಪುನಃ ಅದನ್ನು ಹೇಳಲಾರೆ) ಎನ್ನುತ್ತಾರೆ. ಆದರೆ ಯಾವ ಸಂದೇಹವನ್ನೂ ಪರಿಹರಿಸದೆ ಬಿಡುವು-ದಿಲ್ಲ. 'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ' (ತನಗೆ ಸಂಶಯವಿರಬಾರದು; ಇನ್ನೊಬ್ಬರ ಸಂಶಯವನ್ನು ಪರಿಹರಿಸಬೇಕು) ಇಂತಹ ಗುರು ಎಂದರೆ ಶ್ರೀರಾಘವೇಂದ್ರಸ್ವಾಮಿಗಳು ಮಾತ್ರ. ಭಾವದೀಪದ ಈಕ್ಷತ್ಯಧಿಕರಣದಲ್ಲಿ ಕೊನೆಯಲ್ಲಿ ರಾಯರು ಹೀಗೆ ಹೇಳುತ್ತಾರೆ -- 'ತಸ್ಮಾತ್,

*ದೇವೋತ್ತಮ್ಯೈರ್ಲಾಲನೀಯೋ ಭಾಷ್ಯಕಾರೋ ನಿರೂಪಿತಃ ।*
*ಸೂತ್ರಾರ್ಥೋಽನೇಕಮಾನೇತಃ ಸರ್ವೈರ್ಗ್ರಾಹ್ಯೋ ಬುಭೂಷುಭಿಃ ॥'*

*ಪರಿಪೂರ್ಣಚಂದ್ರಿಕಾ*

''ಎಲ್ಲ ಸಂಶಯಗಳಿಗೂ ಉತ್ತರನೀಡುವ ಶ್ರೀಮದಾಚಾರ್ಯರ ಸೂತ್ರಾರ್ಥವೇ ಸರ್ವ-ಪ್ರಮಾಣಸಮ್ಮತವಾಗಿದೆ. ಎಲ್ಲ ಮುಮುಕ್ಷುಗಳಿಗೂ ಗ್ರಾಹ್ಯವಾಗಿದೆ. ದೇವೋತ್ತಮರಿಗೂ ಅತ್ಯಂತ-ಪ್ರಿಯವಾಗಿದೆ'' ಎಂದು ಘಂಟಾಘೋಷವಾಗಿ ಸಾರಿದ್ದಾರೆ.

ರಾಘವೇಂದ್ರವಿಜಯದಲ್ಲಿ ರಾಯರ ಬಗ್ಗೆ ಹೀಗೆ ಹೇಳಿದ್ದಾರೆ. 'ವೇತ್ತಿ ವರ್ಣನಿಚಯಂ ಸಮಯಾನಾಂ ಸಂಖ್ಯಯಾ ಸಹಧಿಯ್ಯವ ಸಹಾರ್ಥೈಃ' - ರಾಘವೇಂದ್ರತೀರ್ಥರಿಗೆ ಎಲ್ಲ ಶಾಸ್ತ್ರಗಳಲ್ಲಿರುವ ಅಕ್ಷರಗಳೆಷ್ಟು ಅವುಗಳ ಅರ್ಥಗಳೆಷ್ಟು ಎಂಬುದು ತಿಳಿದಿದೆ. ವಾಯುದೇವರ ಆವೇಶವಿರುವ ಪ್ರಯುಕ್ತ ಈ ಮಾತು ಅತಿಶಯೋಕ್ತಿಯಾಗುವುದಿಲ್ಲ. ಇಂತಹ ವಿದ್ವನ್ಮಣಿಗಳಾಗಿ-ದ್ದರೂ ರಾಯರು ಜಿಜ್ಞಾಸಾಧಿಕರಣದ ಕೊನೆಯಲ್ಲಿ ವಿನಯದಿಂದ ಹೀಗೆ ಹೇಳಿದ್ದಾರೆ.

*ಟೀಕಾತಾತ್ಪರ್ಯವಿವೃತೌ ವ್ಯಾಸತೀರ್ಥಾದಯಃ ಕ್ಷಮಾಃ ।*
*ವಯಂ ತು ತತ್ಕೃತಾವ್ಯಾಖ್ಯಾಲೇಶಭಾಜೋ ವದಾಮಹೇ ॥*

ಟೀಕೆಯ ನಿಗೂಢವಾದ ಅಭಿಪ್ರಾಯಗಳನ್ನು ತೆರದು ತೋರಿಸುವಲ್ಲಿ ಶ್ರೀವ್ಯಾಸತೀರ್ಥರೇ ಸಮರ್ಥರು. ಅವರು ಹೇಳಿದ್ದನ್ನೇ ನಾವು ಲೇಶಮಾತ್ರ ತಿಳಿದುಕೊಂಡು ಹೇಳುತ್ತಿದ್ದೇವೆ. ಮಹಾನುಭಾವರಾದ ಜಯತೀರ್ಥರೇ 'ನ ಶಬ್ದಾಬ್ಧೌ ಗಾಧಾಃ' ಎಂದು ಯಾವ ಶಾಸ್ತ್ರದಲ್ಲಿಯೂ ತನಗೆ ಪರಿಣತಿ ಇಲ್ಲ ಎಂದಿದ್ದಾರೆ. ಅಂದ ಮೇಲೆ ಅವರ ಶಿಷ್ಯರಾದ ರಾಘವೇಂದ್ರತೀರ್ಥರು ಅಂತಹ ಮಾತು ಹೇಳಿದರೆ ಅದು ಭೂಷಣವೇ ಆಗಿದೆ. ರಾಯರ ವಿದ್ವತ್ತಿನ ಪರಾಕಾಷ್ಠೆಯು ನಮಗೆ ಅರ್ಥವಾಗುವುದಿಲ್ಲ. ಅವರ ವಿನಯದ ಪರಾಕಾಷ್ಠತೆಯೂ ನಮಗೆ ಅರ್ಥವಾಗುವುದಿಲ್ಲ.

## ಚಂದ್ರಿಕಾಪ್ರಕಾಶ

ಶ್ರೀ ರಾಘವೇಂದ್ರ ಗುರುಗಳು ಉಡುಪಿ ಶ್ರೀಕೃಷ್ಣನ ಸನ್ನಿಧಾನದಲ್ಲಿ ''ಚಂದ್ರಿಕಾಪ್ರಕಾಶ'' ''ತಂತ್ರದೀಪಿಕಾ'' ಮತ್ತು ''ನ್ಯಾಯಮುಕ್ತಾವಲಿ'' ಎಂಬ ಮೂರು ಕೃತಿಗಳನ್ನು ನಿರ್ಮಿಸಿದ್ದಾರೆ. (ರಾ. ವಿ. ಅಧ್ಯಾಯ - ೮, ಶ್ಲೋಕ ೧೦, ೧೧, ೧೨) ತತ್ವಪ್ರಕಾಶಿಕೆಯ ಟಿಪ್ಪಣಿಯಾದ 'ಭಾವದೀಪ' -ವನ್ನು ಮತ್ತು ಅನುಭಾಷ್ಯದ ಟೀಕೆಯಾದ 'ತತ್ವಮಂಜರಿ'ಯನ್ನು ಕೃಷ್ಣಾನದಿಯ ದಡದಲ್ಲಿ ನಿರ್ಮಿಸಿದ್ದಾರೆ. (ರಾ.ವಿ. ಅಧ್ಯಾಯ - ೮, ೭೦ ಶ್ಲೋಕ) ಮತ್ತು ಉಡುಪಿಯಲ್ಲಿ ಹತ್ತು ಬಾರಿ ಚಂದ್ರಿಕಾಗ್ರಂಥದ ಪ್ರವಚನವನ್ನು ನಡೆಸಿದ್ದಾರೆ. (ರಾ.ವಿ. ೮, ಶ್ಲೋಕ ೯)

ರಾಯರಿಗೆ ಅತ್ಯಂತ ಪ್ರಿಯವಾದ ಗ್ರಂಥ ಎಂದರೆ 'ತಾತ್ಪರ್ಯಚಂದ್ರಿಕಾ'. ತಾವು ಪರಿಮಳದಲ್ಲಿ ಏನೇ ಹೇಳಿದರೂ 'ತಥೈವ ಚಂದ್ರಿಕೋಕ್ತೇಃ' ಎಂದಿದ್ದಾರೆ. ವಸ್ತುತಃ ಪರಿಮಳಾಚಾರ್ಯರೆಂದು ಪ್ರಸಿದ್ಧರಾಗಿದ್ದರೂ ಸಹ ಪ್ರಕಾಶ ಟಿಪ್ಪಣಿಯನ್ನು ಬಹಳ ವಿಸ್ತಾರವಾಗಿ ಕೂಲಂಕಷವಾಗಿ ಬರೆದಿದ್ದಾರೆ.

ನ್ಯಾಯಸುಧಾ ಗ್ರಂಥಕ್ಕೆ ಅನೇಕ ಟಿಪ್ಪಣಿಗಳಿವೆ. ಆದರೆ ತಾತ್ಪರ್ಯಚಂದ್ರಿಕೆಗೆ ಅಷ್ಟೊಂದು ಟಿಪ್ಪಣಿಗಳಿಲ್ಲ. ಇರುವ ಟಿಪ್ಪಣಿಗಳಲ್ಲಿಯೂ ವಿಸ್ತಾರವಾದ ಟಿಪ್ಪಣಿ ರಾಯರ ಪ್ರಕಾಶ ಮಾತ್ರ. ಚಂದ್ರಿಕಾಟಿಪ್ಪಣಿಯನ್ನು ಬರೆಯುವಾಗ ರಾಯರೇ ಅದ್ವಿತೀಯಸಿಂಹರು. ತಾವೇ ಬರೆದ ಭಾವದೀಪದಲ್ಲಂತೂ ಚಂದ್ರಿಕೆಯ ವಿಷಯವನ್ನೇ ಹೆಚ್ಚಾಗಿ ಹೇಳಿದ್ದಾರೆ.

ರಾಯರ ದೈನಂದಿನ ಪ್ರವಚನ ಪ್ರಮಾಣಪದ್ಧತಿಯಿಂದ ಆರಂಭಿಸಿ ಚಂದ್ರಿಕಾ ಗ್ರಂಥದ ತನಕ ಇರುತ್ತಿತ್ತೆಂದು ರಾಘವೇಂದ್ರವಿಜಯದಲ್ಲಿ ಉಲ್ಲೇಖಿಸಿದ್ದಾರೆ -

*ಮಾನಪದ್ಧತಿಮುಖಂ ಮತಮಾಖ್ಯಾತ್ ಚಂದ್ರಿಕಾಂತಮಸಕೃತ್ ಚತುರೋಸೌ ।*

ಶ್ರೀರಂಗದಲ್ಲಿ ಅನೇಕ ಬಾರಿ ಚಂದ್ರಿಕಾಪ್ರವಚನವನ್ನು ಮಾಡಿ ಉಡುಪಿಗೆ ಬಂದು ಶ್ರೀಕೃಷ್ಣನ ಸನ್ನಿಧಿಯಲ್ಲಿ ಚಂದ್ರಿಕಾಪ್ರಕಾಶವನ್ನು ಪ್ರಾರಂಭಿಸಿದರು. ಅವಸರ ಮಾಡದೆ ಸಾವಧಾನದಿಂದ ಇದನ್ನು ರಚಿಸಿದ್ದಾರೆ. ಪರಿಮಳಗ್ರಂಥವನ್ನು 'ಪ್ರಕಾಶ'ಗ್ರಂಥದ ಅನಂತರವೇ ರಚಿಸಿರಬೇಕು. ಆದ್ದರಿಂದಲೇ ಪರಿಮಳದಲ್ಲಿ 'ಅನ್ಯತ್ ಚಂದ್ರಿಕಾವ್ಯಾಖ್ಯಾನೇ ಅವಸೇಯಂ' ಎಂದು ಹೇಳಿದ್ದಾರೆ.

'ಪ್ರಕಾಶ' ಗ್ರಂಥವು ಅನೇಕ ಗ್ರಂಥಗಳ ವ್ಯಾಖ್ಯಾನವಾಗಿದೆ. ಏಕೆಂದರೆ ಚಂದ್ರಿಕೆಗೆ ಮೂಲವಾದ ತತ್ವಪ್ರಕಾಶಿಕೆಯ ಪ್ರಾರಂಭದಲ್ಲಿ ಟೀಕಾಕೃತ್ಪಾದರು "ಸಂಗಮ್ಯಂತೇ ಗುರೋರ್ಗಿರಃ" ಎಂದು ಹೇಳಿದ್ದಾರೆ. ಅಂದರೆ "ಆಚಾರ್ಯರ ಭಾಷ್ಯಕ್ಕೆ ವ್ಯಾಖ್ಯಾನ ಮಾಡುವ ಸಾಮರ್ಥ್ಯ ನನಗಿಲ್ಲ. ಅವರ ಮಾತುಗಳನ್ನಷ್ಟೇ ಈ ಕೃತಿಯಲ್ಲಿ ಪರಸ್ಪರ ಜೋಡಿಸಿದ್ದೇನೆ. 'ಸೂತ್ರಪ್ರಸ್ಥಾನ', 'ಗೀತಾಪ್ರಸ್ಥಾನ', 'ಉಪನಿಷತ್‌ಪ್ರಸ್ಥಾನ', 'ತತ್ವನಿರ್ಣಯ' ಮೊದಲಾದ ಗ್ರಂಥಗಳಲ್ಲಿರುವ ಶ್ರೀಮದಾಚಾರ್ಯರ ಮಾತುಗಳನ್ನು ಒಂದೇ ಕಡೆ ಜೋಡಿಸಲು ಈ ಕೃತಿ ಹೊರಟಿದೆ"ಯೆಂದು ಪ್ರತಿಜ್ಞೆಗೈಯುತ್ತಾರೆ. ಆದ್ದರಿಂದ ತತ್ವಪ್ರಕಾಶಿಕೆಯು ಕೇವಲ ಭಾಷ್ಯದ ವ್ಯಾಖ್ಯಾನವಲ್ಲ. ಬೇರೆ ಬೇರೆ ಗ್ರಂಥಗಳ ವ್ಯಾಖ್ಯಾನವೂ ಆಗಿದೆ. ಇದಕ್ಕೆ ವ್ಯಾಖ್ಯಾನವಾಗಿರುವ ಚಂದ್ರಿಕೆ ಇನ್ನೂ ಮುಂದೆ ಹೋಗಿ ಆಚಾರ್ಯರ ಭಾಷ್ಯ, ಅನುವ್ಯಾಖ್ಯಾನ ಮೊದಲಾದ ಎಲ್ಲಾ ಗ್ರಂಥಗಳ ಜೊತೆಗೆ 'ತತ್ವಪ್ರದೀಪ', 'ಸನ್ನ್ಯಾಯರತ್ನಾವಳಿ' ಮೊದಲಾದ ಟೀಕೆಗಳನ್ನೂ ವ್ಯಾಖ್ಯಾನಿಸಿದೆ. ಅಷ್ಟೇ ಅಲ್ಲದೆ ಬೇರೆಯವರ ವ್ಯಾಖ್ಯಾನಗಳನ್ನು ನಿರಾಕರಿಸಿದ್ದಾರೆ. ಇಷ್ಟೊಂದು ಕಾರ್ಯವ್ಯಾಪ್ತಿವುಳ್ಳ ಚಂದ್ರಿಕೆಗೆ ಪ್ರಕಾಶವು ವ್ಯಾಖ್ಯಾನವಾಗಿದೆ ಎಂದರೆ ಅದು ಮತ್ತಷ್ಟು ಹೆಚ್ಚಿನ ಗ್ರಂಥಗಳನ್ನು ವಿಚಾರ ಮಾಡಿದೆ ಎಂದು ಸ್ಪಷ್ಟವಾಗುತ್ತದೆ. ಚಂದ್ರಿಕಾಗ್ರಂಥದ ಅನಂತರ ಬಂದ ಅಪ್ಪಯ್ಯದೀಕ್ಷಿತ ಮೊದಲಾದ ಪರ-ಮತೀಯರ ಗ್ರಂಥಗಳನ್ನು ಪ್ರಕಾಶವು ನಿರಾಕರಿಸಿದೆ. ಅಷ್ಟೇ ಅಲ್ಲದೆ ಚಂದ್ರಿಕಾಚಾರ್ಯರು ಯಾವುದಾದರೂ ವಾಕ್ಯದಲ್ಲಿ ಮೀಮಾಂಸಾಧಿಕರಣವನ್ನು ಉದಾಹರಿಸಿದರೆ ಅದನ್ನು ಪ್ರಕಾಶದಲ್ಲಿ ವಿಸ್ತಾರವಾಗಿ ವ್ಯಾಖ್ಯಾನಿಸಲಾಗಿದೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಪ್ರಕಾಶದ ಸಹಾಯವಿಲ್ಲದಿದ್ದರೆ ವಿದ್ವಜ್ಜನರಿಗೂ ಚಂದ್ರಿಕೆಯೂ ಅಗಮ್ಯವಾಗುತ್ತಿತ್ತು.

ನ್ಯಾಯ-ಮೀಮಾಂಸಾ-ವ್ಯಾಕರಣ-ವೇದಾಂತ ಈ ಚತುಃಶಾಸ್ತ್ರಗಳಿಂದ ಕೂಡಿದ ಪ್ರಕಾಶ ವ್ಯಾಖ್ಯಾನವು ಅಪೂರ್ವ ಕುಶಲತೆಯಿಂದ ಕೂಡಿದೆ. ನ್ಯಾಯವಿವೇಕ, ನಿಬಂಧನಾ, ತಂತ್ರಚೂಡಾಮಣಿ ಮೊದಲಾದ ಪ್ರಾಚೀನ ಮೀಮಾಂಸಾಗ್ರಂಥಗಳ ಹಾಗೂ ವಿವರಣ, ಭಾಮತಿ, ಶಿವತತ್ತ್ವಪ್ರಕಾಶ, ಶಿವಾರ್ಕಮಣಿದೀಪಿಕಾ ಮೊದಲಾದ ಅನೇಕ ಪರಮತೀಯರ ಗ್ರಂಥಗಳ ಕೂಲಂಕಷ ವಿಮರ್ಶೆಯನ್ನು ಇದರಲ್ಲಿ ವಿಶೇಷವಾಗಿ ಕಾಣಬಹುದು. ಎಂತಹ ಸಂದರ್ಭದಲ್ಲಿಯೂ ಎದುರಾಳಿಗಳನ್ನು ಹೀನಾಯವಾಗಿ ತಿರಸ್ಕರಿಸುವುದನ್ನು ಎಲ್ಲಿಯೂ ಕಾಣಲು ಸಾಧ್ಯವಿಲ್ಲ.

ಈ ಪರಿಪೂರ್ಣಚಂದ್ರಿಕೆಯಲ್ಲಿ ಪ್ರಕಾಶವ್ಯಾಖ್ಯಾನವನ್ನು ಬಹಳ ಗಮನವಿಟ್ಟು ಅನುವಾದಿಸಲಾಗಿದೆ. ಮತ್ತು ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಪ್ರಕಾಶ ವ್ಯಾಖ್ಯಾನವನ್ನು ಓದಿದರೆ ಸಾಕು ಉಳಿದೆಲ್ಲ ಗ್ರಂಥಗಳು ಜೀರ್ಣವಾದಂತೆ.

## ತತ್ತ್ವಮಂಜರಿ

ಶ್ರೀಮದಾಚಾರ್ಯರ ಅಣುಭಾಷ್ಯಗ್ರಂಥಕ್ಕೆ ಹತ್ತಾರು ಟಿಪ್ಪಣಿಗಳಿವೆ. ಆದರೆ ಶ್ರೀರಾಘವೇಂದ್ರ-ಸ್ವಾಮಿಗಳು ಬರೆದ ತತ್ತ್ವಮಂಜರಿ ಎಂಬ ಟಿಪ್ಪಣಿಯು ಅಧ್ಯಯನ ಪರಂಪರೆಯಲ್ಲಿ ವಿಶೇಷಸ್ಥಾನಮಾನವನ್ನು ಪಡೆದಿದೆ. ಅಣುಭಾಷ್ಯಕ್ಕೆ ಅನೇಕ ಟಿಪ್ಪಣಿಗಳಿದ್ದರೂ ಓದುಗರ ಅನುಕೂಲಕ್ಕಾಗಿ ಕೇವಲ ತತ್ತ್ವಮಂಜರಿಯನ್ನಷ್ಟೇ ಈ ಕೃತಿಯಲ್ಲಿ ಅಳವಡಿಸಲಾಗಿದೆ.

ತತ್ತ್ವಮಂಜರಿಯು ಭಾಷ್ಯ, ಟೀಕಾ, ಚಂದ್ರಿಕಾದಿಗ್ರಂಥಗಳಲ್ಲಿರುವ ಅಪೂರ್ವವಿಷಯಗಳನ್ನು ನಿರೂಪಿಸಿದೆ. ಪ್ರತಿಯೊಂದು ಅಧಿಕರಣಗಳ ಮೊದಲು ಆಯಾ ಅಧಿಕರಣದ ಪೂರ್ವಪಕ್ಷವನ್ನು ಸಂಗ್ರಹಿಸಿದ್ದಾರೆ. ಅಣುಭಾಷ್ಯದ ಪದ ಅಥವಾ ವಾಕ್ಯವನ್ನು ವಿವರಿಸಿ, ಅದರಲ್ಲಿ ಆಯಾ ಅಧಿಕರಣದ ಸಿದ್ಧಾಂತವು ಹೇಗೆ ಅಡಕವಾಗಿದೆಯೆಂಬುದನ್ನು ವಿವರಿಸಿದ್ದಾರೆ. ಅನುವೃತ್ತಿ ಆವೃತ್ತಿ, ಭಿನ್ನಕ್ರಮ ಮೊದಲಾದ ವ್ಯಾಖ್ಯಾನಗಳ ತಂತ್ರಗಳನ್ನು ಬಳಸಿಕೊಂಡು ಅಣುಭಾಷ್ಯದ ಒಂದೇ ಪದದಿಂದ ಸೂತ್ರಗಳ ತಾತ್ಪರ್ಯವು ಹೇಗೆ ತಿಳಿಯುತ್ತದೆ? ಎಂಬುದನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ. ಪಾದ ಹಾಗೂ ಅಧ್ಯಾಯದ ಕೊನೆಯಲ್ಲಿ ಅಣುಭಾಷ್ಯದ ಆಯಾ ಪಾದ ಹಾಗೂ ಅಧ್ಯಾಯದ ಯುಕ್ತಿಯನ್ನು ಸಂಗ್ರಹಿಸುವ ವಾಕ್ಯವನ್ನು ಆಯಾ ಅಧಿಕರಣಕ್ಕನುಗುಣವಾಗಿ ವ್ಯಾಖ್ಯಾನಿಸಿದ್ದಾರೆ. ನಾರಾಯಣಪಂಡಿತಾಚಾರ್ಯರು ಅಣುಭಾಷ್ಯವನ್ನು ಕುರಿತು ಪ್ರಶಂಸಿಸಿದ "ಅನಂತೋಽರ್ಥಃ ಪ್ರಕಟಿತಃ" ಎಂಬುದನ್ನು ಸಾಕ್ಷಿಸಿದ್ಧವಾಗಿ ತೋರ್ಪಡಿಸಿದ್ದಾರೆ.

ವಿದ್ಯೆಯನ್ನು ಅಧ್ಯಯನ ಮಾಡುವಾಗ ಲಕ್ಷ್ಮಿಯ ನಮನವೂ ಅತ್ಯಾವಶ್ಯಕವಾಗಿದೆ. ಆದರೆ ಭಾಷ್ಯದ ಪ್ರಾರಂಭದಲ್ಲಿ ಶ್ರೀಮದಾಚಾರ್ಯರು ವಿಷ್ಣುವನ್ನಷ್ಟೇ ನಮಿಸಿದ್ದು ಉಚಿತವೇ ? ಎಂಬ ಸಂಶಯವನ್ನು ರಾಯರು ತತ್ತ್ವಮಂಜರಿಯಲ್ಲಿ ಪರಿಹರಿಸಿದ್ದಾರೆ. ದೋಷರಹಿತಳು,

ಗುಣಪೂರ್ಣಳೂ ಆದ ಲಕ್ಷ್ಮೀದೇವಿಯ ಪತಿಯಾದವನು ವಿಷ್ಣು ಎಂಬುದು ನಾರಾಯಣ ಪದದಿಂದಲೇ ತಿಳಿಯುತ್ತದೆ. ಇದನ್ನು ರಾಯರು 'ಲಕ್ಷ್ಮೀನಾರಾಯಣಂ' ಎಂಬುದಾಗಿ ವ್ಯಾಖ್ಯಾನಿಸುತ್ತಾ ಲಕ್ಷ್ಮಿಯ ನಮನವನ್ನು ಮಾಡಿದ್ದಾರೆ. ತಮಗೆ ಅತ್ಯಂತ ಆತ್ಮೀಯನಾದ ವಿಷ್ಣುವನ್ನು 'ನಾರಾಯಣಂ' ಎಂಬುದಾಗಿ ಏಕವಚನದಿಂದ ಸ್ತುತಿಸಿದ್ದರೂ ಆ ದೇವತೆಯನ್ನೇ ವೇದವ್ಯಾಸರೂಪದಿಂದ ಸ್ತುತಿಸುವಾಗ ಗುರೂನ್ ಎಂಬುದಾಗಿ ಬಹುವಚನದಿಂದ ನಮಸ್ಕರಿಸಿದ್ದಾರೆ. ಗುರುಗಳನ್ನು ಗೌರವಭಾವದಿಂದಲೇ ಕಾಣಬೇಕೆಂಬುದು ಇದರ ಆಂತರ್ಯ. ಇದರಂತೆ ರಾಯರೂ ಸಹ ತಮ್ಮ ಗುರುಗಳಾದ ಮಧ್ವರನ್ನು "ಗುರೂನ್ ನತ್ವಾ" ಎಂದು ನಮಸ್ಕರಿಸುವ ನೆಪದಿಂದ "ಸಂಸಾರಕ್ಲೇಶ ಸಂಶ್ರಾಂತಸಜ್ಜನಾವನತತ್ಪರಃ ದಯಾಲವೋ ಮಹಾಂತಃ" ಎಂಬುದಾಗಿ ಗುರುಗಳ ಲಕ್ಷಣವನ್ನು ತಿಳಿಸಿದ್ದಾರೆ.

'ವಿಷ್ಣುರೇವ ವಿಜಿಜ್ಞಾಸ್ಯಃ' ಎಂಬ ಒಂದೇ ಮಾತಿನಿಂದ ಸಮಗ್ರ ಜಿಜ್ಞಾಸಾಧಿಕರಣದ ಸಾರವನ್ನು ಶ್ರೀಮದಾಚಾರ್ಯರು ಹೇಳಿದ್ದಾರೆ. ಇದರಲ್ಲಿ ಅಡಕವಾಗಿರುವ ಅನೇಕಾರ್ಥಗಳನ್ನು ರಾಯರು ತೆರೆದಿಟ್ಟಿದ್ದಾರೆ. "ಸೂತ್ರದಲ್ಲಿ ಬ್ರಹ್ಮಪದವಿದ್ದರೂ ಆಚಾರ್ಯರು ವಿಷ್ಣುಪದವನ್ನೇ ಏಕೆ ಪ್ರಯೋಗಿಸಿದರು?" ಎಂಬ ಶಂಕೆಗೆ ವಿಷ್ಣುಪದವು ಬ್ರಹ್ಮಪದದ ವ್ಯಾಖ್ಯಾನವಾಗಿದೆ. ಸೂತ್ರದಲ್ಲಿರುವ ಬ್ರಹ್ಮ ಶಬ್ದಕ್ಕೆ ವಿಷ್ಣುವೆಂದು ಅರ್ಥ. 'ಬೃಹ ವೃದ್ಧೌ' ಎಂಬ ಧಾತುವಿಗೆ ಮನಿನ್ ಪ್ರತ್ಯಯ ಸೇರಿಸಿದಾಗ ಬ್ರಹ್ಮ ಶಬ್ದವು ನಿಷ್ಪನ್ನವಾಗುತ್ತದೆ. 'ವಿಷ್ಲ'ಎಂಬ ಧಾತುವಿಗೆ 'ನು' ಪ್ರತ್ಯಯವನ್ನು ಸೇರಿಸಿದಾಗ ವಿಷ್ಣು ಎಂಬ ರೂಪವು ನಿಷ್ಪನ್ನವಾಗುತ್ತದೆ. ಹೀಗೆ ಒಂದೇ ಅರ್ಥದಲ್ಲಿ ಎರಡೂ ಶಬ್ದಗಳು ನಿಷ್ಪನ್ನವಾದ್ದರಿಂದ ಶ್ರುತಿಯಲ್ಲಿರುವ ಬ್ರಹ್ಮಶಬ್ದಕ್ಕೆ ವಿಷ್ಣುವೆಂಬ ಅರ್ಥವನ್ನೇ ಹೇಳಬೇಕು. 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬ ದೇವತಾಕಾಂಡದ ಸೂತ್ರಗಳೂ ಸಹ ಇದನ್ನೇ ತಿಳಿಸುತ್ತಿವೆ. "ದೇಶಕಾಲಾದಿಗಳಿಂದ ಅಪರಿಚಿತನಾದ ವಿಷ್ಣುವು ಜೀವನಿಗಿಂತ ಭಿನ್ನನಾಗಿದ್ದು ನಾನು ಎಂಬ ಅನುಭವಕ್ಕೆ ವಿಷಯನಾಗಿಲ್ಲ. ಸಗುಣನೋ ನಿರ್ಗುಣನೋ" ಇತ್ಯಾದಿಯಾಗಿ ವಿವಾದವಿರುವುದರಿಂದ ಜಿಜ್ಞಾಸೆಗೆ ವಿಷಯನಾಗುತ್ತಾನೆ. ಹೀಗೆ ರಾಯರ ವ್ಯಾಖ್ಯಾನವು ಕುತೂಹಲಕಾರಿಯಾಗಿ ಹೊರಟಿದೆ.

## ನ್ಯಾಯಮುಕ್ತಾವಲಿ

*ಗ್ರಂಥೋಽಯಂ ನ್ಯಾಯಮುಕ್ತಾವಲಿರಿತಿ ಭವತಾಃ ರಾಘವೇಂದ್ರಪ್ರಣೀತೋ ।*
*ನೂನಂ ಮುಕ್ತಾವಲೀಯರ್ತ್ ಪ್ರಥಮಮುಪಚಿತಾದುದ್ಧೃತಸ್ತಂತ್ರಸಿಂಧೋಃ ।*
*ಪ್ರೋತಶ್ಚ ಧ್ಯಾನತಂತೌ ತದನು ತವ ಗುಣಪ್ರಾಥಿಮಾಶಂಸತಾಂ ನಃ ।*
*ಕಂಠೇಷು ಪ್ರೇಮಭೂಮ್ನಾ ಬಹುಮತಿ ವಿಧಯೇವಾಧುನಾ ಸನ್ನ್ಯಧಾಯಿ ॥*

*ಪರಿಪೂರ್ಣಚಂದ್ರಿಕಾ*

ಗುರುಗಳಾದ ಶ್ರೀ ರಾಘವೇಂದ್ರತೀರ್ಥರೇ! 'ಬ್ರಹ್ಮಮೀಮಾಂಸಾ' ಎಂಬ ಶಾಸ್ತ್ರಸಾಗರದ ಆಳದಲ್ಲಿ ಇಳಿದವರು ನೀವು. ಆಳದಲ್ಲಿರುವ ನ್ಯಾಯಗಳೆಂಬ ಮುತ್ತುಗಳನ್ನು ತಂದು ಧ್ಯಾನವೆಂಬ ನೂಲಿನಲ್ಲಿ ಪೋಣಿಸಿದಿರಿ. ಅಂತಹ ಗ್ರಂಥವೇ 'ನ್ಯಾಯಮುಕ್ತಾವಲೀ' ಎನಿಸಿದೆ. ತಮ್ಮ ಪ್ರೌಢಿಮೆಯನ್ನು ಸ್ತುತಿಸುವ ಸಜ್ಜನರ ಕಂಠದಲ್ಲಿ ಬಹುಮಾನ ಪೂರ್ವಕವಾಗಿ ಈ ಹಾರವನ್ನು ತೊಡಿಸಿದ್ದೀರಿ.

ಈ ಗ್ರಂಥದಲ್ಲಿ ಪ್ರತಿಯೊಂದು ಅಧಿಕರಣದ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪೂರ್ವಪಕ್ಷನ್ಯಾಯ, ಸಿದ್ಧಾಂತನ್ಯಾಯ ಹಾಗೂ ಫಲಗಳನ್ನು ರಾಯರು ಸಂಕ್ಷೇಪವಾಗಿ ನಿರೂಪಿಸಿ-ರುತ್ತಾರೆ. ಅಷ್ಟೇ ಅಲ್ಲದೆ ಅಧ್ಯಾಯ ಹಾಗೂ ಪಾದಗಳಿಗೆ ಪೂರ್ವಾಧಿಕರಣದ ಸಂಗತಿಗಳನ್ನು ಸ್ಪಷ್ಟಪಡಿಸಿದ್ದಾರೆ. ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದ ಶ್ರೀಮದಾಚಾರ್ಯರ ಎಲ್ಲಾ ಗ್ರಂಥಗಳ ಹಾಗೂ ಅವುಗಳ ವ್ಯಾಖ್ಯಾನಗಳ ಸಾರವೇ ಈ ಗ್ರಂಥವಾಗಿದೆ. ಈ ಗ್ರಂಥವು ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿರುವ ಎಲ್ಲಾ ಅಧಿಕರಣಗಳನ್ನು ಸ್ಪಷ್ಟವಾಗಿ ತಿಳಿಸುವುದರಲ್ಲಿ ಮಹೋಪಕಾರಿಯಾಗಿದೆ.

ಆಚಾರ್ಯರು ಕೆಲವು ಸೂತ್ರಗಳಿಗೆ ಭಾಷ್ಯದಲ್ಲಿ ಒಂದು ಅರ್ಥವನ್ನು ಹೇಳಿದರೆ ಅನು-ವ್ಯಾಖ್ಯಾನದಲ್ಲಿ ಮತ್ತೊಂದು ಅರ್ಥವನ್ನು ಹೇಳಿರುತ್ತಾರೆ. ಇವೆರಡನ್ನೂ ರಾಯರು ನ್ಯಾಯಮುಕ್ತಾವಲೀಯಲ್ಲಿ ಸಂಗ್ರಹಿಸಿದ್ದಾರೆ. ಒಟ್ಟಾರೆ ಹೇಳಬೇಕೆಂದರೆ ಗೀತಾವಿವೃತಿಯಲ್ಲಿರುವಂತೆ ಬೇರೆ ಬೇರೆ ಗ್ರಂಥಗಳಲ್ಲಿರುವ ಅರ್ಥಗಳನ್ನು ಒಂದೆಡೆ ಸೇರಿಸಿ ಸುಲಲಿತವಾಗಿ ಎಲ್ಲಾ ಗ್ರಂಥಗಳ ಸಾರವನ್ನು ತಿಳಿಯಲು ಏಕೈಕ ಕೃತಿ ಇದು. ಕೆಲವೆಡೆ ಚಂದ್ರಿಕಾ ಹಾಗೂ ತತ್ತ್ವಪ್ರಕಾಶಿಕಾದಲ್ಲಿರುವ ಗ್ರಂಥಗಳ ಸಾರವನ್ನು ರಾಯರು ಹೇಳುತ್ತಾರೆ. ಆದ್ದರಿಂದ ಸಾಮಾನ್ಯ ಜನರಿಗಷ್ಟೇ ಅಲ್ಲದೆ ವಿದ್ವಜ್ಜನರಿಗೂ ಅತ್ಯಂತ ಉಪಯುಕ್ತವಾಗಿದೆ. ಆದ್ದರಿಂದ ಪ್ರಾರಂಭದಲ್ಲಿ 'ವಿದುಷಾಂ ಕಂಠ-ಭೂಷಣಂ' ಎಂದು ಹೇಳಿದ್ದಾರೆ. ಆದ್ದರಿಂದ ಚಂದ್ರಿಕಾದಿಗ್ರಂಥಗಳನ್ನು ಅಧ್ಯಯನ ಮಾಡಿದವರೂ ಸಹ ನ್ಯಾಯಮುಕ್ತಾವಲಿಯನ್ನು ಓದಲೇಬೇಕು. ಮತ್ತು ಎಲ್ಲಾ ಗ್ರಂಥಗಳ ಪ್ರವೇಶಕ್ಕೂ ನ್ಯಾಯಮುಕ್ತಾವಲಿಯನ್ನು ಓದಲೇಬೇಕು.

ಆಶ್ಚರ್ಯವೆಂದರೆ ಮೂರು ಹಾಗೂ ನಾಲ್ಕನೇ ಅಧ್ಯಾಯಗಳಲ್ಲಿ ಮಾತ್ರ ಸೂತ್ರಗಳ ಪೌರ್ವಾ-ಪರ್ಯವನ್ನು ಅಧ್ಯಾಯ ಪಾದಸಂಗತಿಗಳನ್ನು ತೋರಿಸಿದ್ದಾರೆ. ಮೊದಲೆರಡು ಅಧ್ಯಾಯಗಳಲ್ಲಿ ಇದನ್ನು ತೋರಿಸಿಲ್ಲ. ರಾಯರ ಅಂತರ್ಯವೇನೆಂದರೆ ಮೊದಲೆರಡು ಅಧ್ಯಾಯಗಳಲ್ಲಿ ಚಂದ್ರಿಕಾ-ಚಾರ್ಯರೇ ಎಲ್ಲವನ್ನೂ ತೋರಿಸಿದ್ದರಿಂದ ಪುನಃ ಅದನ್ನು ತಾವು ಬರೆಯಬೇಕಾಗಿಲ್ಲವೆಂದು. ತತ್ತ್ವಪ್ರಕಾಶಿಕೆಯಲ್ಲಿ ಮಾಡಿದ ಪೂರ್ವಪಕ್ಷ ಸಿದ್ಧಾಂತಗಳಿಗೆ ನ್ಯಾಯವಿವರಣ, ಅಣುಭಾಷ್ಯಗಳಿಂದ ವಿರೋಧ ಬಂದರೆ ರಾಯರು ಏಕಾಭಿಪ್ರಾಯದಿಂದ ವಿರೋಧವನ್ನು ಪರಿಹರಿಸಿದ್ದಾರೆ. ಒಂದೇ ಸೂತ್ರಕ್ಕೆ ಅನೇಕ ಪೂರ್ವಪಕ್ಷ ಸಿದ್ಧಾಂತಗಳನ್ನು ಮಾಡುತ್ತಾರೆ. "ಅತ್ರ ಆದ್ಯಂ ಟೀಕಾಭಿಪ್ರೇತಂ

ಅಂತ್ಯೇತು ಸುಧಾಭಿಪ್ರೇತೇ ತತ್ರಾಪ್ಯಂತ್ಯಂ ಉಪಾಸನಾಪಾದೇ ಇತಿ ಧ್ಯೇಯಂ'' ಇತ್ಯಾದಿಯಾಗಿ ವಿರೋಧವನ್ನು ಪರಿಹರಿಸುತ್ತಾರೆ. ಹೀಗೆ ಅತ್ಯಂತ ಉಪಯುಕ್ತವಾದ್ದರಿಂದ ನ್ಯಾಯ-ಮುಕ್ತಾವಲೀಯನ್ನು ಈ ಕೃತಿಯಲ್ಲಿ ಜೋಡಿಸಿಕೊಳ್ಳಲಾಗಿದೆ. ಪ್ರತಿಯೊಬ್ಬ ಬುಭುತ್ಸುಗಳು ಅಗತ್ಯವಾಗಿ ಈ ಗ್ರಂಥದ ಸ್ವಾರಸ್ಯವನ್ನು ಅನುಭವಿಸಬೇಕು.

## *ಭಾಟ್ಟಸಂಗ್ರಹಃ -*

*ಮಂತ್ರಿಶ್ರೀನೀಲಕಂಠಾಭಿಧಮಖಿಮಣಿನಾ ಭಟ್ಟತಂತ್ರಾನುಬಂಧೇ*
*ಗ್ರಂಥೇ ತಾವತ್ತ್ವದೀಯೇ ಕಠಿಣ ಗುಣವಿದಾಽಽರೋಪಿತೇಽಭ್ಯರ್ಹಣಾಯ ।*
*ಕೀರ್ತಿಸ್ತೇ ರಾಘವೇಂದ್ರವ್ರತಿಷು ಮಣಿಮಣೇ ನೂನಮುನ್ಯೂನವೇಗಾ-*
*ದಿಙ್ನಾಗಾನಾರುರುಕ್ಷುಃ ಸ್ವಯಮಪಿ ಸಹಸಾಽಧಾವದಷ್ಟೌ ದಿಗಂತಾನ್ ॥*

ಯತಿಶ್ರೇಷ್ಠರೂ ವಿದ್ವನ್ಮಣಿಗಳೂ ಆದ ಶ್ರೀರಾಘವೇಂದ್ರತೀರ್ಥರೇ! ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಶ್ರೇಷ್ಠಪಂಡಿತರಾದ ಗುಣಗ್ರಾಹಿಗಳೂ ಮತ್ತು ಮಂತ್ರಿಗಳೂ ಆದ ನೀಲಕಂಠ-ದೀಕ್ಷಿತರು ತಮ್ಮ ಭಾಟ್ಟಸಂಗ್ರಹವೆಂಬ ಪೂರ್ವಮೀಮಾಂಸಾಶಾಸ್ತ್ರವನ್ನು ಆನೆಯ ಮೇಲಿಟ್ಟು ಮೆರವಣಿಗೆ ಮಾಡಿದಾಗ ತಮ್ಮ ಕೀರ್ತಿಯು ಸಹ ಅಷ್ಟದಿಕ್ಕುಗಳಲ್ಲಿರುವ ದಿಗ್ಗಜಗಳ ಮೇಲೇರಲು ಎಂಟು ದಿಕ್ಕುಗಳ ಕಡೆಗೆ ಹರಡಿತು.

ದ್ವೈತವೇದಾಂತದ ಹತ್ತಾರು ಗ್ರಂಥಗಳಿಗೆ ಟಿಪ್ಪಣಿಯನ್ನು ಬರೆದು ಟಿಪ್ಪಣ್ಯಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀಮಂತ್ರಾಲಯಪ್ರಭುಗಳು ಪರಮತದ ಪೂರ್ವಮೀಮಾಂಸಾಗ್ರಂಥಕ್ಕೂ ಟಿಪ್ಪಣಿ-ಯನ್ನು ಬರೆದಿದ್ದಾರೆ.

ಪೂರ್ವಮೀಮಾಂಸಾಶಾಸ್ತ್ರವು ವೇದವ್ಯಾಸದೇವರ ಶಿಷ್ಯರಾದ ಜೈಮಿನಿಋಷಿಗಳಿಂದ ಪ್ರಣೀತವಾಗಿದೆ. ಆದರೆ ಆ ಸೂತ್ರಗಳ ನಿಜವಾದ ಅಂತರ್ಯವನ್ನು ಅರ್ಥಮಾಡಿಕೊಳ್ಳದ ಶಬರಸ್ವಾಮಿ ಮೊದಲಾದವರು ಭಾಷ್ಯವನ್ನು ಬರೆದಿದ್ದಾರೆ. ''ಭಗವಂತನನ್ನಾಗಲೀ, ದೇವತೆ-ಗಳನ್ನಾಗಲೀ ಪ್ರತಿಪಾದಿಸುವ ಅಭಿಪ್ರಾಯ ವೇದಶಾಸ್ತ್ರಕ್ಕೆ ಇರುವುದಿಲ್ಲ. ಕರ್ಮವಿಚಾರವನ್ನಷ್ಟೇ ಪ್ರತಿಪಾದಿಸಲು ಸಮಗ್ರವೇದಶಾಸ್ತ್ರವು ಹೊರಟಿದೆ. ಕರ್ಮಕ್ಕಿಂತ ಅತಿರಿಕ್ತವಾದ ಯಾವ ದೇವತೆಯೂ ಇಲ್ಲ'' ಎಂದು ಶಬರಸ್ವಾಮಿ ಮೊದಲಾದವರ ಧೋರಣೆ. ಇಂತಹ ಕರ್ಮವಾದಿ-ಗಳಾದ ಶಬರಸ್ವಾಮಿ ಮೊದಲಾದವರು ಬರೆದ ಗ್ರಂಥಗಳಿಗೆ ರಾಯರು ಭಾಟ್ಟಸಂಗ್ರಹ ಗ್ರಂಥವನ್ನು ಬರೆದಿದ್ದಾರೆ. ಒಂದು ವೇಳೆ ಈ ಭಾಟ್ಟಸಂಗ್ರಹವನ್ನು ರಾಯರು ರಚಿಸದಿದ್ದಲ್ಲಿ ಇಂದಿನ ವಿದ್ವಾಂಸರಿಗೆ 'ನ್ಯಾಯಾಮೃತ' 'ಚಂದ್ರಿಕಾ'ದಿ ಗ್ರಂಥಗಳಲ್ಲಿ ಉದಾಹರಿಸುವ ಪೂರ್ವಮೀಮಾಂಸಾ ನ್ಯಾಯಗಳ ದೃಷ್ಟಾಂತವನ್ನು ಅರ್ಥಮಾಡಿಕೊಳ್ಳಲು ಸಾಧ್ಯವೇ ಆಗುತ್ತಿರಲಿಲ್ಲ.

*ಪರಿಪೂರ್ಣಚಂದ್ರಿಕಾ*

ಗ್ರಂಥದ ಪ್ರಾರಂಭದಲ್ಲಿ

*'ನತ್ವಾ ಧರ್ಮಂ ವೇದಗಮ್ಯಂ ಜೈಮಿನ್ಯಾದಿ ಮುನೀನಪಿ ।*
*ಕರೋಮಿ ಬಾಲಬೋಧಾಯ ಭಾಟ್ಟೋಕ್ತನ್ಯಾಯಸಂಗ್ರಹಮ್ ॥'*

ಎಂದು ಮಂಗಳಾಚರಣೆ ಮಾಡಿದ್ದಾರೆ. ವಸ್ತುತಃ ಮಂಗಳಾಚರಣೆಯನ್ನು ಮಾಡಿದ್ದರೂ ಭಗವಂತನಿಗಾಗಲೀ, ಅಥವಾ ಮಧ್ವಗುರುಗಳಿಗಾಗಲೀ ಪರಮಭಾಗವತರಾದ ಇವರು ವಂದನೆಯನ್ನು ಮಾಡದಿರುವುದು ತಪ್ಪಲ್ಲವೇ? ಮಣಿಮಂಜರಿಯಲ್ಲಿ 'ಏಷ್ಯಕಶ್ಚ ಧಾರವಿ-ರ್ಭಾಟ್ಟಂ ಸಮುದಾಸ್ತೇ ನಿರೀಶ್ವರಮ್' ಎಂದು ಭಾಟ್ಟರನ್ನು ನಿರೀಶ್ವರವಾದಿಗಳೆಂದು ಹೇಳಿದ್ದಾರೆ. 'ಭಾಟ್ಟಸಂಗ್ರಹವೆಂಬ ಈ ಕೃತಿಯಲ್ಲಿ ಈಶ್ವರವಂದನೆಯನ್ನು ಬಿಡುವುದು ಉಚಿತವೇ ಆಗಿದೆ' ಎಂಬ ಸಮಾಧಾನವನ್ನು ಹೇಳಬಾರದು. ಭಾಟ್ಟರ ಅಧಿಕರಣಗಳನ್ನು ಅನುವಾದ ಮಾಡದಿದ್ದರೂ ಸಜ್ಜನರ ಉಪಕಾರಕ್ಕಾಗಿ ಗ್ರಂಥ ಹೊರಟಿರುವುದರಿಂದ ಈಶ್ವರವಂದನೆಯನ್ನು ಮಾಡುವುದು ಅತ್ಯಂತ ಆವಶ್ಯಕ. ಆದರೂ ಸಹ ಭಗವಂತನನ್ನು ಮತ್ತು ಗುರುಗಳನ್ನು ಏಕೆ ವಂದಿಸಿಲ್ಲ? ಎಂಬ ಪ್ರಶ್ನೆ ಬಂದೇ ಬರುತ್ತದೆ. ಇಲ್ಲಿ ಹೀಗೆ ಸಮಾಧಾನವನ್ನು ತಿಳಿಯಬೇಕು - ಧರ್ಮಶಬ್ದಕ್ಕೆ ಶ್ರೀಹರಿ ಹಾಗೂ ಪ್ರಾಣದೇವರೆಂಬ ಅರ್ಥವು ಪ್ರಸಿದ್ಧವಾಗಿದೆ. ಸಕಲವನ್ನೂ ಧಾರಣೆ ಮಾಡಿದ್ದರಿಂದ ಧರ್ಮಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ಆದ್ದರಿಂದ ಭಗವಂತನನ್ನು ಹಾಗೂ ಪ್ರಾಣದೇವರನ್ನು ನಮಸ್ಕರಿಸಿಯೇ ಗ್ರಂಥವನ್ನು ಪ್ರಾರಂಭಿಸಿದ್ದಾರೆ.

ಜೈಮಿನಿಸೂತ್ರಗಳಲ್ಲಿ ೨೭೦೦ ಸೂತ್ರಗಳಿವೆ. ೧೦೦೦ ಅಧಿಕರಣಗಳು, ೧೨ ಅಧ್ಯಾಯ-ಗಳಿಂದ ಈ ಸೂತ್ರಗಳನ್ನು ವಿಭಾಗಿಸಿದ್ದಾರೆ. ಸಾಮಾನ್ಯವಾಗಿ ಎಲ್ಲಾ ಅಧ್ಯಾಯಗಳಲ್ಲಿಯೂ ನಾಲ್ಕು ಪಾದಗಳಿವೆ. ಆದರೆ ೩,೬ ಮತ್ತು ೧೦ನೆಯ ಅಧ್ಯಾಯಗಳಲ್ಲಿ ೮ಪಾದಗಳಿವೆ. ಆದ್ದರಿಂದ ಇವುಗಳನ್ನು ಶರಭಪಾದದ ಅಧ್ಯಾಯಗಳೆನ್ನುತ್ತಾರೆ. ಮೊದಲಿನ ಆರು ಅಧ್ಯಾಯಗಳಿಗೆ ಉಪದೇಶಭಾಗವೆಂದೂ, ಮುಂದಿನ ಆರು ಅಧ್ಯಾಯಗಳಿಗೆ ಅತಿದೇಶಭಾಗವೆಂದು ಹೆಸರು. ಉಪದೇಶಭಾಗದಲ್ಲಿರುವ ಆರು ಅಧ್ಯಾಯಗಳಲ್ಲಿ ಆರು ವಿಷಯಗಳನ್ನು ಪ್ರತಿಪಾದಿಸಿದ್ದಾರೆ. ೧.ಪ್ರಮಾಣ, ೨. ಕರ್ಮಭೇದ, ೩.ಶೇಷಶೇಷಿಭಾವ, ೪.ಪ್ರಯೋಜ್ಯಪ್ರಯೋಜಕಭಾವ, ೫. ಕರ್ಮಕ್ರಮ, ೬.ಅಧಿಕಾರ ಎಂದು. ಎರಡನೆಯ ಅತಿದೇಶಭಾಗದಲ್ಲಿಯೂ ಆರು ವಿಷಯಗಳಿವೆ. ೧.ಪ್ರಕೃತಿಯಿಂದ ವಿಕೃತಿಗಳಿಗೆ ಧರ್ಮಾತಿದೇಶ, ೨.ಯಾವ ಪ್ರಕೃತಿಯಿಂದ ಯಾವ ವಿಕೃತಿಗಳಿಗೆ ಎಂಬ ವಿಶೇಷನಿರ್ಣಯ; ೩.ಊಹ, ೪.ಬಾಧ, ೫. ತಂತ್ರ, ೬.ಪ್ರಸಂಗ ಎಂದು. ಈ ಎಲ್ಲಾ ವಿಷಯಗಳನ್ನೂ ಭಾಟ್ಟಸಂಗ್ರಹದಲ್ಲಿ ಸುಲಭವಾಗಿ ಮತ್ತು ಸ್ಪಷ್ಟವಾಗಿ ವಿವರಿಸಿದ್ದಾರೆ.

ವೇದವ್ಯಾಸಋಷಿಗಳಿಂದ ಉಪದಿಷ್ಟರಾದ ಜೈಮಿನಿ ಋಷಿಗಳು ಈ ಪೂರ್ವಮೀಮಾಂಸಾ ಶಾಸ್ತ್ರವನ್ನು ರಚಿಸಿದ್ದಾರೆ. ಈ ಸೂತ್ರಗಳಿಗೆ ಶಬರಸ್ವಾಮಿಯು ಭಾಷ್ಯವನ್ನು ಬರೆದಿದ್ದಾನೆ. ಮತ್ತು

ಪ್ರಭಾಕರನೂ ಸಹ ಬೃಹತೀ ಎಂಬ ಭಾಷ್ಯವನ್ನು ಬರೆದಿದ್ದಾನೆ. ಇವರಿಬ್ಬರ ವಿಚಾರಧಾರೆಗಳು ಅತ್ಯಂತ ವಿಭಿನ್ನವಾದ್ದರಿಂದ ಮೀಮಾಂಸಕರ ಮತದಲ್ಲಿ ಭಾಟ್ಟ(ಶಬರ)ಸಂಪ್ರದಾಯ, ಪ್ರಾಭಾಕರ ಸಂಪ್ರದಾಯ ಎಂದು ಎರಡು ಪಂಗಡಗಳು ಸೃಷ್ಟಿಯಾಯಿತು. ದರ್ಶನಪ್ರಪಂಚದಲ್ಲಿ ಪ್ರಾಭಾಕರರ ಪರಂಪರೆ ಹೆಚ್ಚಾಗಿ ಬೆಳಕಿಗೆ ಬಂದಿದೆ. ಆದರೆ ಸೂತ್ರವ್ಯಾಖ್ಯಾನರೂಪದಲ್ಲಿ ಭಾಟ್ಟಮತವೇ ಪ್ರಸಿದ್ಧವಾಗಿದೆ. ಈ ಭಾಟ್ಟಸಂಪ್ರದಾಯದಲ್ಲಿ ಪಾರ್ಥಸಾರಥಿಮಿಶ್ರನು ಶಾಸ್ತ್ರದೀಪಿಕಾ ಎಂಬ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ಗ್ರಂಥದಲ್ಲಿ ಆಯಾಯ ಅಧಿಕರಣಗಳ ಪೂರ್ವಪಕ್ಷ, ಸಿದ್ಧಾಂತಯುಕ್ತಿಗಳನ್ನು ವಿಸ್ತಾರವಾಗಿ ನಿರೂಪಿಸುವುದರ ಜೊತೆಗೆ ಅನೇಕ ವಾದವಿಷಯಗಳನ್ನು ಮಂಡಿಸಿದ್ದಾನೆ. ಕೆಲವೆಡೆ ತನ್ನ ಗ್ರಂಥಕ್ಕೆ ವ್ಯಾಖ್ಯೇಯವಾದ ಶಬರಭಾಷ್ಯವನ್ನು ನಿರಾಕರಿಸುತ್ತಾನೆ. ಕೆಲವೆಡೆ ಕುಮಾರಿಲ ಭಟ್ಟರ ವಾರ್ತಿಕವನ್ನೂ ನಿರಾಕರಿಸುತ್ತಾನೆ. ಒಟ್ಟಾರೆ ಈ ಗ್ರಂಥವನ್ನು ಸುಲಭವಾಗಿ ಓದಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಇವರ ನಂತರ ವಿದ್ಯಾರಣ್ಯರು ಜೈಮಿನೀಯ ನ್ಯಾಯಮಾಲಾ ಎಂಬ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ಪ್ರತಿಯೊಂದು ಅಧಿಕರಣದ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳನ್ನು ಮಾತ್ರ ಹೇಳಿದ್ದಾರೆ. ಇದು ಸಂಕ್ಷಿಪ್ತಗ್ರಂಥ. ಒಂದೆಡೆ ವಿಸ್ತಾರವಾದ ಶಾಸ್ತ್ರದೀಪಿಕಾಗ್ರಂಥ, ಮತ್ತೊಂದೆಡೆ ಸಂಕ್ಷಿಪ್ತವಾದ ಜೈಮಿನೀಯ ನ್ಯಾಯಮಾಲಾ ಎರಡೂ ಗ್ರಂಥಗಳ ಅಭಿಪ್ರಾಯವನ್ನು ಸಂಗ್ರಹಿಸಿ ರಾಘವೇಂದ್ರ-ಸ್ವಾಮಿಗಳು ಜೈಮಿನೀಯಸೂತ್ರಗಳಿಗೆ ಭಾಟ್ಟಸಂಗ್ರಹವನ್ನು ರಚಿಸಿದ್ದಾರೆ. ಆದ್ದರಿಂದಲೇ ಗ್ರಂಥದ ಕೊನೆಯಲ್ಲಿ ಹೀಗೆ ಹೇಳಿದ್ದಾರೆ.

*ಭಾಷ್ಯವಾರ್ತಿಕಟೀಕಾದಿ ನಾನಾಗ್ರಂಥಾವಮರ್ಶಿನಾ ।*
*ರಾಘವೇಂದ್ರೇಣ ಯತಿನಾ ಕೃತೋಽಯಂ ಭಾಟ್ಟಸಂಗ್ರಹಃ ॥*

ವಸ್ತುತಃ ರಾಯರ ಹತ್ತಿರದ ಕಾಲದಲ್ಲಿಯೇ ಖಂಡದೇವನು ಭಾಟ್ಟದೀಪಿಕಾ ಗ್ರಂಥವನ್ನು ಬರೆದಿದ್ದಾನೆ. ಆದರೆ ಅವನ ಗ್ರಂಥವೂ ಸಹ ಪ್ರೌಢಪ್ರಬಂಧರೂಪವಾದ್ದರಿಂದ ಅತ್ಯಂತ ಕಠಿಣ-ವಾಗಿದೆ.

ಭಾಟ್ಟಸಂಗ್ರಹದಲ್ಲಿ ಸಂಗತಿ, ವಿಷಯವಾಕ್ಯ, ಸಂದೇಹ, ಪೂರ್ವಪಕ್ಷ, ಸಿದ್ಧಾಂತ ಮತ್ತು ಫಲ ಎಂದು ಪ್ರತಿಯೊಂದು ಅಧಿಕರಣಗಳನ್ನು ವಿಭಾಗ ಮಾಡಿದ್ದಾರೆ. ಮತ್ತು ವಿಷಯವಾಕ್ಯವೆನಿಸಿದ ಬ್ರಾಹ್ಮಣವಾಕ್ಯದ ಪ್ರತಿಪದಾರ್ಥವನ್ನು ನಿರೂಪಿಸಿದ್ದಾರೆ. ಅಷ್ಟೇ ಅಲ್ಲದೆ ಸಂಪೂರ್ಣ ಬ್ರಾಹ್ಮಣವಾಕ್ಯ-ವನ್ನು ಉಲ್ಲೇಖಿಸಿದ್ದಾರೆ. ಜೊತೆಗೆ ಸೂತ್ರಗಳ ಪ್ರತಿಪದಾರ್ಥವನ್ನು ನಿರೂಪಿಸಿದ್ದಾರೆ. ತಾವು ಹೇಳಿದ ಎಲ್ಲ ವಿಚಾರವನ್ನೂ ಸೂತ್ರಾರೂಢ ಮತ್ತು ಬ್ರಾಹ್ಮಣವಾಕ್ಯಾರೂಢವನ್ನಾಗಿ ಮಾಡಿ ತೋರಿಸುತ್ತಾರೆ. ಶಬರಭಾಷ್ಯ ಮತ್ತು ಕುಮಾರಿಲರ ವಾಕ್ಯಗಳಲ್ಲಿ ಭಿನ್ನಾಭಿಪ್ರಾಯ ಬಂದಾಗ ಅವೆರಡನ್ನೂ ಪ್ರತ್ಯೇಕ-ವಾಗಿ ಉಲ್ಲೇಖಿಸಿ ಭಾಷ್ಯಕಾರರ ಅಭಿಪ್ರಾಯವನ್ನು ಎತ್ತಿತೋರಿಸುತ್ತಾರೆ. ಕೆಲವೆಡೆ ಸಂದರ್ಭಕ್ಕೆ-

ನುಸಾರಿಯಾಗಿ ಸಮನ್ವಯಮಾಡುತ್ತಾರೆ. ಮೀಮಾಂಸಕಮತದಲ್ಲಿ ಒಂದು ಅಧಿಕರಣಕ್ಕೆ ಒಂದೇ ಪೂರ್ವಪಕ್ಷವಿರಬೇಕೆಂಬ ನಿಯಮವಿಲ್ಲ. ಶಾಬರಭಾಷ್ಯದಲ್ಲಿ ಅನೇಕ ಪೂರ್ವಪಕ್ಷಗಳನ್ನು ಒಂದೇ ಅಧಿಕರಣದಲ್ಲಿ ತೋರಿಸುತ್ತಾರೆ. ಅಂತಹ ಸಂದರ್ಭದಲ್ಲಿ ರಾಯರು ಪ್ರಥಮವರ್ಣಕ, ದ್ವಿತೀಯ-ವರ್ಣಕ, ತೃತೀಯವರ್ಣಕ ಎಂದು ತಮ್ಮದೇ ಆದ ಶೈಲಿಯಲ್ಲಿ ಪೂರ್ವಪಕ್ಷವನ್ನು ಸ್ಪಷ್ಟಪಡಿಸು-ತ್ತಾರೆ.

ತಾತ್ಪರ್ಯಚಂದ್ರಿಕಾಗ್ರಂಥದ ವ್ಯಾಖ್ಯಾನರೂಪವಾದ ಪ್ರಕಾಶಟಿಪ್ಪಣಿಯಲ್ಲಿಯೂ ರಾಯರು ಪೂರ್ವಮೀಮಾಂಸಾನ್ಯಾಯಗಳನ್ನು ವ್ಯಾಖ್ಯಾನಿಸಿದ್ದಾರೆ. ಆದರೂ ಸಹ ಭಾಟ್ಟಸಂಗ್ರಹಕ್ಕಿಂತ ಮತ್ತಷ್ಟು ಸಂಕ್ಷೇಪರೂಪದಲ್ಲಿರುವುದರಿಂದ ಭಾಟ್ಟಸಂಗ್ರಹದ ಅಧಿಕರಣಗಳನ್ನು ಪ್ರತ್ಯೇಕವಾಗಿ ಓದುವ ಅವಶ್ಯಕತೆ ಬಹಳಷ್ಟಿದೆ. ಆದಕ್ಕೋಸ್ಕರ ಈ ಕೃತಿಯಲ್ಲಿ ಭಾಟ್ಟಸಂಗ್ರಹದ ಅಧಿಕರಣಗಳನ್ನು ಸಂದರ್ಭಕ್ಕನುಸಾರಿಯಾಗಿ ಜೋಡಿಸಲಾಗಿದೆ.

## ಶ್ರೀಜಗನ್ನಾಥಯತಿಗಳು - ಭಾಷ್ಯದೀಪಿಕಾ

ಶ್ರೀವ್ಯಾಸರಾಜಮಠದ ಪರಂಪರೆಯಲ್ಲಿ ಶ್ರೀಮದಾಚಾರ್ಯರಿಂದ ಪ್ರಾರಂಭಿಸಿ ೨೩ನೆಯ ಯತಿಪುಂಗವರು ಶ್ರೀಜಗನ್ನಾಥತೀರ್ಥರು. ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ರಮ-ಣೀಯವಾದ ಭಾಷ್ಯದೀಪಿಕೆಯನ್ನು ಬರೆದು ಭಾಷ್ಯದೀಪಿಕಾಚಾರ್ಯರೆಂದೇ ಪ್ರಸಿದ್ಧರಾಗಿದ್ದಾರೆ. ಶ್ರೀಮದಾಚಾರ್ಯರ ಭಾಷ್ಯಕ್ಕೆ ತತ್ತ್ವಪ್ರಕಾಶಿಕಾ ಮೊದಲಾದ ಟೀಕೆಗಳಿದ್ದರೂ ಭಾಷ್ಯದ ಪ್ರತಿಪದಾರ್ಥಗಳು ಸ್ಪಷ್ಟವಾಗಿ ತಿಳಿಯಬೇಕೆಂದರೆ ಭಾಷ್ಯದೀಪಿಕೆ ಅತ್ಯಂತ ಅನಿವಾರ್ಯ. ಬ್ರಹ್ಮಸೂತ್ರಭಾಷ್ಯವನ್ನು ಪಾಠಮಾಡುವ ಪ್ರತಿಯೊಬ್ಬ ವಿದ್ವಾಂಸರು ಸಹ ಭಾಷ್ಯದೀಪಿಕೆಯನ್ನು ಅವಶ್ಯವಾಗಿ ಅಧ್ಯಯನ ಮಾಡಿರುತ್ತಾರೆ. "ಭಾಷ್ಯದೀಪಿಕಾ ಗ್ರಂಥವಿಲ್ಲದೆ ಭಾಷ್ಯದ ಪಾಠ ಅಪರಿಪೂರ್ಣ"ವೆಂಬ ವಾಡಿಕೆಯು ಪರಂಪರಾಗತವಾಗಿದೆ. ಆದ್ದರಿಂದ ಈ ಕೃತಿಯಲ್ಲಿ ಭಾಷ್ಯದೀಪಿಕೆಯನ್ನೂ ಸೇರಿಸಲಾಗಿದೆ. ಬ್ರಹ್ಮಸೂತ್ರಭಾಷ್ಯದ ಪ್ರತಿಯೊಂದು ಪದಗಳ ಅರ್ಥವನ್ನು ಬಿಡಿಸಿ ಅರ್ಥೈಸುತ್ತಾ, ಇಲ್ಲದ ಪದಗಳನ್ನು ಹೇಗೆ ಶೇಷಪೂರಣ ಮಾಡಿಕೊಳ್ಳಬೇಕೆಂಬುದೇ ಭಾಷ್ಯದೀಪಿಕೆಯಲ್ಲಿರುವ ಸ್ವಾರಸ್ಯ. ಈ ಕೃತಿಯಲ್ಲಿ ಭಾಷ್ಯದ ತಾತ್ಪರ್ಯವನ್ನು ಮೊದಲು ಬರೆದು ಅನಂತರ ಭಾಷ್ಯದೀಪಿಕೆಗೆ ಅನುಸಾರಿಯಾದ ಪ್ರತಿಪದಾರ್ಥವನ್ನು ಬರೆಯಲಾಗಿದೆ. ಹೆಚ್ಚಿನ ವಿಚಾರಗಳು ತತ್ತ್ವಪ್ರಕಾಶಿಕಾ ಹಾಗೂ ಭಾವದೀಪಗಳಲ್ಲಿ ವಿವರಿಸಿದ್ದರಿಂದ ಪುನಃ ಭಾಷ್ಯದೀಪಿಕೆಯ ಅನುವಾದದಲ್ಲಿ ಅದನ್ನು ಸೇರಿಸಿಲ್ಲ. ಅಪೂರ್ವ ವಿಷಯಗಳನ್ನು ಮಾತ್ರ ಕಂಸದಲ್ಲಿ ಬರೆಯಲಾಗಿದೆ.

ಆಚಾರ್ಯರು ಭಾಷ್ಯದಲ್ಲಿ ಉದಾಹರಿಸಿದ ಪ್ರತಿಯೊಂದು ಪ್ರಮಾಣ ವಚನಗಳ ಅರ್ಥವನ್ನೂ ವಿವರಿಸಿ ಆಚಾರ್ಯರ ಆಶಯವೂ ಓದುಗರಿಗೆ ಅರ್ಥ ಮಾಡಿಸಲು ಈ ದಿವ್ಯ ಗ್ರಂಥ ಹೊರಟಿದೆ.

ಮತ್ತು ಸೂತ್ರಕಾರರ ಹೃದಯವನ್ನು ಸ್ಪಷ್ಟಪಡಿಸಲು ಇವರು ಮರೆಯುವುದಿಲ್ಲ. ಭಾಷ್ಯದಲ್ಲಿರುವ ಪ್ರತಿಯೊಂದು ವಾಕ್ಯಗಳಿಗೆ, ಪದಗಳಿಗೆ, ಅಕ್ಷರಗಳಿಗೂ ಸಹ ಕೃತ್ಯವನ್ನು ವಿಚಾರ ಮಾಡಿದ್ದಾರೆ. ''ಚ, ವೈ, ತು, ಹಿ, ಏವ'' ಮುಂತಾದ ಎಲ್ಲಾ ಶಬ್ದಗಳ ಸ್ವಾರಸ್ಯವನ್ನು ಅನುಸ್ವಾರ ವಿಸರ್ಗಗಳ ಸ್ವಾರಸ್ಯವನ್ನೂ ಸಹ ವಿಸ್ತರಿಸುವುದಲ್ಲದೇ ಅನೇಕ ಅರ್ಥಗಳಿಂದ ಗೂಢಾಭಿಪ್ರಾಯವನ್ನು ಪ್ರಕಟ-ಪಡಿಸಿದ್ದಾರೆ. ಕೇವಲ ಭಾಷ್ಯಪ್ರವಚನ ಮಾಡುವವರಿಗೆ ಈ ಗ್ರಂಥವು ದಿವ್ಯ ಮಾರ್ಗದರ್ಶಕವಾಗಿದೆ.

ಶ್ರೀಜಗನ್ನಾಥಯತಿಗಳು ತಮ್ಮ ಗುರುಗಳಾದ ಶ್ರೀ ರಘುನಾಥತೀರ್ಥರಲ್ಲಿಯೇ ಅಧ್ಯಯನ ಮಾಡಿದರು. ಒಮ್ಮೆ ಭಾಷ್ಯದೀಪಿಕಾ ಗ್ರಂಥವನ್ನು ಬರೆಯುತ್ತಲೇ ರಾತ್ರಿಕಾಲದಲ್ಲಿ ನಿದ್ರೆ ಹೋಗಿ-ದ್ದರು. ಅವರ ಗುರುಗಳಾದ ಶ್ರೀರಘುನಾಥತೀರ್ಥರು ಆಕಸ್ಮಿಕವಾಗಿ ಬಂದು ನೋಡಿದರು. ಶಿಷ್ಯರು ಬರೆದಿಟ್ಟ ಭಾಷ್ಯದೀಪಿಕಾಗ್ರಂಥದ ತಾಡವಾಲೆಯ ಗರಿಗಳು ಸುತ್ತಲೂ ಹರಡಿದ್ದವು. ಲೇಖನಸಾಮಗ್ರಿಗಳೂ ಅಲ್ಲಿಯೇ ಇದ್ದವು. ಆ ತಾಡವಾಲೆಗಳನ್ನು ಕೂಡಿಸಿಟ್ಟು ಓದಿದರು. ಅವುಗಳಲ್ಲಿನ ವಿಷಯವು ಶ್ರೀಮದಾಚಾರ್ಯರ ಹೃದಯಕ್ಕೆ ಹಿಡಿದ ಕೈಗನ್ನಡಿಯಂತಿತ್ತು. ಚಳಿಯಲ್ಲಿ ನಡುಗುತ್ತಾ ಮಲಗಿದ ಶಿಷ್ಯನನ್ನು ಕಂಡು ಶ್ರೀಗಳು ತಮ್ಮ ಶಾಲನ್ನೇ ಹೊದಿಸಿ ತೆರಳಿದರು. ಮರುದಿನ ಇಂತಹ ಗ್ರಂಥವನ್ನು ಬರೆದ ಶಿಷ್ಯರನ್ನು ಕರೆದು ಅವರಿಗೆ ಸಂಸ್ಥಾನದ ಸರ್ವಾಧಿಕಾರವನ್ನು ಒಪ್ಪಿಸಿದರು.

ಶ್ರೀ ಜಗನ್ನಾಥತೀರ್ಥರು ಮಹಾಪಂಡಿತರಲ್ಲಷ್ಟೇ ಅಲ್ಲದೆ ಸಾಹಸಿಗರು, ಧೀರರು ಆಗಿದ್ದರು. ಒಮ್ಮೆ ಯವನರು ಇವರ ಮೇಲೆ ದಾಳಿಮಾಡಿದಾಗ ದೇವರ ಪೆಟ್ಟಿಗೆಯನ್ನು ಕೊರಳಲ್ಲಿ ಕಟ್ಟಿಕೊಂಡು ಕಾವೇರಿ ಪ್ರವಾಹದಲ್ಲಿ ಧುಮುಕಿದ್ದರು. ಸುಮಾರು ಮೈಲುಗಳ ದೂರದಷ್ಟು ಈಜುತ್ತಾ ಸಾಗಿದರು. ಮಧ್ಯದಲ್ಲಿ ಪುನಃ ಅನೇಕ ಯವನರು ಕೂಡ ಈಜುತ್ತಾ ಇವರನ್ನು ಪೀಡಿಸಲು ಬರುತ್ತಿದ್ದರು. ಆ ಸಂದರ್ಭದಲ್ಲಿ ಒಬ್ಬ ಯವನನು ತನ್ನ ಅಸ್ತ್ರದಿಂದ ಇವರ ದೇಹವನ್ನು ಘಾಸಿ ಮಾಡಿದನು. ಆದರೂ ಸಹ ವಿಚಲಿತರಾಗದ ಇವರು ಜಯಿಸಿಕೊಂಡು ದೇವರ ಪ್ರತಿಮೆಗಳನ್ನು ರಕ್ಷಿಸಿದರು.

''ವಿಕಾರೋಽಪಿ ಶ್ಲಾಘ್ಯೋ ಭುವನಭಯಭಂಗವ್ಯಸನಿನಾಮ್ ।'' ಎಂಬ ಮಾತಿನಂತೆ ದೇವರ ಪೆಟ್ಟಿಗೆಯ ರಕ್ಷಣೆಯಲ್ಲಿ ಅವರಿಗೆ ಅಂಗವಿಕಾರವಾದರೂ, ಅದು ಶ್ಲಾಘ್ಯವೇ ಆಗಿದೆ.

ಶ್ರೀ ಜಗನ್ನಾಥತೀರ್ಥರು ಶ್ರೀನರಸಿಂಹದೇವರ ಅತ್ಯಂತ ಭಕ್ತರಾಗಿದ್ದರು. ಒಮ್ಮೆ ಶ್ರೀಗಳವರು ಸಂಚಾರ ಮಾಡುತ್ತಿದ್ದಾಗ ಯವನ ಸೈನಿಕರು ಖಡ್ಗಗಳನ್ನು ಹಿಡಿದು ಇವರ ಮೇಲೆ ಎರಗಿದರು. ಶಾಂತಚಿತ್ತರಾಗಿ ಯತಿಗಳು ನರಸಿಂಹದೇವರನ್ನು ಸ್ಮರಿಸಿದರು. ಕೂಡಲೇ ಹತ್ತಿರವಿದ್ದ ಮಾವಿನ ಮರದಿಂದ ವಿಚಿತ್ರವಾದ ಶಕ್ತಿಯೊಂದು ಹೊರಹೊಮ್ಮಿ ಆ ಯವನರ ತಂಡವನ್ನೆಲ್ಲಾ ಹೊಡೆ-ದೋಡಿಸಿತು. ಇಂತಹ ಗಂಡಾಂತರದಿಂದ ಪ್ರತ್ಯಕ್ಷವಾಗಿ ಪಾರು ಮಾಡಿದ ನರಸಿಂಹದೇವರನ್ನು ಜಗನ್ನಾಥಯತಿಗಳು ಭಾಷ್ಯದೀಪಿಕೆಯ ಪ್ರಾರಂಭದಲ್ಲಿ ಹೀಗೆ ಸ್ತುತಿಸಿದ್ದಾರೆ.

*ಆಮ್ರಸ್ಥಂಭಾತ್ ಸಮಾಗತ್ಯ ತಾಮ್ರತುಂಡಾನ್ ನಿಹತ್ಯ ಯಃ*
*ನಮ್ರಂ ನೌಮಿ ಜಗನ್ನಾಥಂ ಶಮ್ರೋಪಾತ್ತಂ ನೃಕೇಸರೀ ।*

"ಮಾವಿನಮರದಿಂದ ಹೊರಬಂದು ಕೆಂಪುಮೂತಿ ಯವನರನ್ನು ಸಂಹರಿಸಿದ ಮನೋಹರನಾದ ಜಗನ್ನಾಥನನ್ನು ರಕ್ಷಿಸಿದ ನರಸಿಂಹನನ್ನು ನಮ್ರನಾಗಿ ನಮನಿಸುತ್ತೇನೆ" ಎಂದಿದರ ಅರ್ಥ.

ಹೀಗೆ ಅನೇಕ ಮಹಿಮೆಗಳಿಂದ ಕೂಡಿದ ಜಗನ್ನಾಥಯತಿಗಳು ಮೂವತ್ತು ವರ್ಷಗಳ ಕಾಲ ವ್ಯಾಸರಾಜಮಠದ ಸಾಮ್ರಾಜ್ಯವನ್ನು ಆಳಿದರು. ಮುಂದೆ ಶ್ರೀನಾಥತೀರ್ಥರಿಗೆ ಆಶ್ರಮವನ್ನಿತ್ತರು.

ಸೂತ್ರದೀಪಿಕಾ - ಶ್ರೀಜಗನ್ನಾಥಯತಿಗಳ ಮತ್ತೊಂದು ಗ್ರಂಥ "ಸೂತ್ರದೀಪಿಕಾ". ಸೂತ್ರದ ನೇರವಾದ ಅರ್ಥವನ್ನು ಬಿತ್ತರಿಸುವ ಈ ಗ್ರಂಥವನ್ನು ಓದದ ವಿದ್ವಾಂಸರಿಲ್ಲ. ಚಿಕ್ಕದಾಗಿ ಚೊಕ್ಕದಾಗಿ ಮತ್ತು ವಿಷಯವಾಕ್ಯವನ್ನು ಉಲ್ಲೇಖಿಸುತ್ತಾ, ಸೂತ್ರದ ಸಮಗ್ರ ಅರ್ಥವನ್ನು ಅಂತರ್ಯವನ್ನು ಈ ಗ್ರಂಥವು ತೆರೆದಿಡುತ್ತದೆ. ಪ್ರತಿಯೊಂದು ಸೂತ್ರಗಳಿಗೂ ಪರ್ವತದಷ್ಟು ವಿಷಯಗಳಿವೆ. ಅದರ ಭಾರದಿಂದ ಸೂತ್ರದ ನೇರವಾದ ಅರ್ಥವೇ ತಿಳಿಯದಿದ್ದಾಗ ಈ ಸೂತ್ರದೀಪಿಕೆಯೂ ಪರ್ವತದಂತಹ ವಿಷಯವನ್ನು ಪುಟ್ಟದಾಗಿಸಿ ಮುಷ್ಟಿಯಲ್ಲಿ ತಂದು ನೀಡಿದೆ. ಈ ಪರಿಪೂರ್ಣಚಂದ್ರಿಕೆಯಲ್ಲಿ ಸೂತ್ರಗಳ ಅರ್ಥವನ್ನು ಬರೆಯುವಾಗ ಸೂತ್ರದೀಪಿಕೆಯನ್ನು ಜೋಡಿಸಲಾಗಿದೆ.

## ಶರ್ಕರಾ ಶ್ರೀನಿವಾಸಾಚಾರ್ಯರು - ವಾಕ್ಯಾರ್ಥಮಂಜರೀ

ತತ್ವಪ್ರಕಾಶಿಕೆಯನ್ನು ಸುಲಭವಾಗಿ ಅಧ್ಯಯನ ಮಾಡಬೇಕಾದರೆ ವಾಕ್ಯಾರ್ಥಮಂಜರಿಯು ಬೇಕು. ಇವರ ಶೈಲಿ ಬಹಳ ಸರಳ ಮತ್ತು ಮನೋಹರ. ಪರಂಪರಾಗತವಾಗಿ ಇವರ ಟಿಪ್ಪಣಿಯ ಅಧ್ಯಯನ ಹೆಚ್ಚು ಬಳಕೆಯಲ್ಲಿದೆ. ಆದ್ದರಿಂದ ಈ ಕೃತಿಯಲ್ಲಿ ವಾಕ್ಯಾರ್ಥಮಂಜರಿಯನ್ನು ಜೋಡಿಸಲಾಗಿದೆ. ಇವರ ಬಗ್ಗೆ ಹೆಚ್ಚಿನ ವಿಚಾರ ತಿಳಿದಿಲ್ಲ. ಆದರೆ ಯಾದವಾರ್ಯರ ಅಳಿಯಂದಿರೆಂಬ ವಾಡಿಕೆ ಇದೆ.

## ಶ್ರೀಪಾಂಡುರಂಗಿ ಕೇಶವಾಚಾರ್ಯರು - ತಾತ್ಪರ್ಯಚಂದ್ರಿಕಾ ಟಿಪ್ಪಣಿ ಗುರುರಾಜೀಯ

ಕೊಲ್ಹಾಪುರದ ಮಹಾಲಕ್ಷ್ಮಿದೇವಿಯನ್ನು ಹನ್ನೆರಡು ವರ್ಷಗಳ ಕಾಲ ಸೇವೆ ಮಾಡಿ ಪರಮಾನುಗ್ರಹವನ್ನು ಪಡೆದ ಪಾಂಡುರಂಗಿ ಆಚಾರ್ಯರೆಂದರೆ ಆನಂದಭಟ್ಟಾರಕರು. ಇವರಿಗೆ ತ್ರಿವಿಕ್ರಮಾಚಾರ್ಯರೆಂಬ ಹಿರಿಯ ಸಹೋದರರಿದ್ದರು. ತ್ರಿವಿಕ್ರಮಾಚಾರ್ಯರಿಗೆ ನಾಲ್ಕು ಮಂದಿ ಗಂಡುಮಕ್ಕಳು, ಆನಂದಭಟ್ಟಾರಕರಿಗೆ ಶ್ರೀನಿವಾಸಾಚಾರ್ಯರು, ನರಸಿಂಹಾಚಾರ್ಯರೆಂದು

ಇಬ್ಬರು ಮಕ್ಕಳು. ಇವರಿಬ್ಬರು ಅಣ್ಣತಮ್ಮಂದಿರು ಪಾಲಾಗುವಾಗ ಮನೆತನದ ಎಲ್ಲ ಆಸ್ತಿಯನ್ನು ಸರಿಯಾಗಿ ವಿಭಾಗ ಮಾಡಿದ್ದರು. ಸಮಪಾಲನ್ನು ಆನಂದಭಟ್ಟಾರಕರಿಗೆ ನೀಡಿದರೂ ಏಕೋ ಸಂತೋಷವಾಗಿರಲಿಲ್ಲ. ಅವರ ವಿಷಾದವನ್ನು ಗಮನಿಸಿದ ತ್ರಿವಿಕ್ರಮಾಚಾರ್ಯರು ಕಾರಣವನ್ನು ಪ್ರಶ್ನಿಸಿದಾಗ "ನಿಮಗೆ ನಾಲ್ಕುಜನ ಮಕ್ಕಳು; ನನಗೆ ಇಬ್ಬರು ಮಾತ್ರ ಮಕ್ಕಳು; ಆ ಆಸ್ತಿಯು ಸಮಪಾಲಾಗಿದ್ದರೂ, ಮಕ್ಕಳ ವಿಷಯದಲ್ಲಿ ಸಮಾನ ಪಾಲಿಲ್ಲವೆಂದು ನನಗೆ ಬೇಸರವಾಗಿದೆ" ಎಂದು ನಿರ್ದಾಕ್ಷಿಣ್ಯದಿಂದ ಉತ್ತರಿಸಿದರು. ಆವಾಗ ತ್ರಿವಿಕ್ರಮಾಚಾರ್ಯರು ತಮ್ಮ ಕೊನೆಯ ಮಗನಾದ ಕೇಶವನನ್ನು ಆನಂದಭಟ್ಟಾರಕರಿಗೆ ನೀಡಿದರು.

ಮುಂದೆ ಆನಂದಭಟ್ಟಾರಕರು ಕೇಶವಭಟ್ಟಾರಕರನ್ನು ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತಲೂ ಹೆಚ್ಚಿನ ಪ್ರೀತಿಯಿಂದ ಸಾಕಿ. ಸಲಹಿದರು. ತಮ್ಮ ಕೊನೆಯ ಕಾಲದಲ್ಲಿ ಶ್ರೀಶ್ರೀವಿದ್ಯಾಧೀಶಶ್ರೀಪಾದರ ಕೈಗೆ ಒಪ್ಪಿಸಿ ಅಪ್ರತಿಮಪಂಡಿತರನ್ನಾಗಿ ಮಾಡಿರೆಂದು ಪ್ರಾರ್ಥಿಸಿದರು. ಆನಂದಭಟ್ಟಾರಕರ ಎರಡನೇ ಮಗನಾದ ನರಸಿಂಹಾಚಾರ್ಯರೇ ಉತ್ತರಾದಿಮಠದ ಸರ್ವಜ್ಞ ಸಿಂಹಾಸನದಲ್ಲಿ ಶ್ರೀ ವಿದ್ಯಾಧೀಶತೀರ್ಥರೆಂದು ಮಂಡಿತರಾದವರು. ಶ್ರೀ ವಿದ್ಯಾಧೀಶತೀರ್ಥರು ಪೂರ್ವಾಶ್ರಮದ ತಮ್ಮ ತಂದೆಯ ಬಿನ್ನಹದಂತೆ ಕೇಶವಭಟ್ಟಾರಕರನ್ನು ಪ್ರಚಂಡಪಾಂಡಿತ್ಯದ ಮಹಾಮೂರ್ತಿಯನ್ನಾಗಿ ತಯಾರು ಮಾಡಿದರು. ಈ ವೃತ್ತಾಂತವು ವಾಕ್ಯಾರ್ಥರತ್ನಮಾಲೆಯಲ್ಲಿ ಉಲ್ಲೇಖಿತವಾಗಿದೆ.

ಶ್ರೀಕೇಶವಭಟ್ಟಾರಕರಿಗೆ ಗುರುರಾಜರೆಂಬುದು ಮತ್ತೊಂದು ಹೆಸರು. ಇವರ ಗುರು, ಹಾಗೂ ಅಣ್ಣಂದಿರಾದ ಶ್ರೀವಿದ್ಯಾಧೀಶತೀರ್ಥರು ಪಂಚಾಧಿಕರಣ ನ್ಯಾಯಸುಧಾಕ್ಕೆ ವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಗುರುರಾಜರು ಮುಂದಿನ ಸಮಗ್ರ ನ್ಯಾಯಸುಧಾಗ್ರಂಥಕ್ಕೆ ಶೇಷವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದು ಗುರುಕಾಣಿಕೆಯಾಗಿ ಅಣ್ಣಂದಿರಿಗೆ ಸಮರ್ಪಿಸಿದ್ದಾರೆ. ಇಷ್ಟೇ ಅಲ್ಲದೆ ಶ್ರೀಮದಾಚಾರ್ಯರ ದಶಪ್ರಕರಣಗಳ ಟೀಕೆಗೆ ಟಿಪ್ಪಣಿಯನ್ನು ಬರೆದಿದ್ದಾರೆ. ಮತ್ತು ತತ್ವಪ್ರಕಾಶಿಕಾ ಮೊದಲಾದ ಗ್ರಂಥಗಳಿಗೂ ಟಿಪ್ಪಣಿಯನ್ನು ಬರೆದಿದ್ದಾರೆ. ತಾತ್ಪರ್ಯಚಂದ್ರಿಕಾ ಗ್ರಂಥಕ್ಕೆ ಭಾವದೀಪ ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಈ ಟಿಪ್ಪಣಿಯು ಹಾಗೂ ಶೇಷವಾಕ್ಯಾರ್ಥಚಂದ್ರಿಕೆಯೂ ಇವರ ಎಲ್ಲಾ ಟಿಪ್ಪಣಿಗಳಿಗಿಂತ ಅತ್ಯುನ್ನತವಾಗಿದೆ.

ಇವರು ಯಾದವಾರ್ಯರ ಸಮಕಾಲೀನರು. ಯಾದವಾರ್ಯರ ಮಾರ್ಗದರ್ಶನದಂತೆ ಸಮಗ್ರ ಭಾಗವತವನ್ನು ವಿಶೇಷವಾಗಿ ಅಧ್ಯಯನ ಮಾಡಿದ ಕೀರ್ತಿ ಇವರದ್ದಾಗಿದೆ.

ಪ್ರಕೃತ ಈ ಪರಿಪೂರ್ಣಚಂದ್ರಿಕೆಯಲ್ಲಿ ಇವರ ಚಂದ್ರಿಕಾಗ್ರಂಥದ ವ್ಯಾಖ್ಯಾನವನ್ನು ಜೋಡಿಸಲಾಗಿದೆ. ಜಿಜ್ಞಾಸಾಧಿಕರಣದ ಪ್ರಾರಂಭದಲ್ಲಿ ಬಹಳ ಅಪೂರ್ವ ಪ್ರಮೇಯಗಳನ್ನು ಆಶ್ಚರ್ಯವಾಗುವಂತೆ ಬರೆದಿದ್ದಾರೆ. ಮುಂದೆಯೂ ಸಹ ತಾವು ಗುರುಗಳ ಬಳಿ ಕೇಳಿದ ಅಪೂರ್ವ

ಪ್ರಮೇಯಗಳನ್ನು ಅಲ್ಲಲ್ಲಿ ಬರೆದಿದ್ದಾರೆ. ಮಂಗಲಾಚರಣ ವಿಷಯದಲ್ಲಿ ಇವರು ಮಾಡಿದ ವಿಮರ್ಶೆಯು ಅತ್ಯಂತ ಅಪೂರ್ವವಾಗಿದೆ. ವ್ಯಾಕರಣದ ವಿಷಯಗಳನ್ನು ವಿಷದವಾಗಿ ಅರ್ಥವಾಗುವಂತೆ ಸುಲಲಿತವಾಗಿ ವಾಕ್ಯಾರ್ಥಕ್ರಮದಲ್ಲಿ ಬರೆದಿದ್ದಾರೆ. ನಾರಾಯಣಶಬ್ದ ವಿಚಾರವನ್ನು ದೀರ್ಘಪ್ರಬಂಧದ ರೂಪದಲ್ಲಿ ಎಲ್ಲಾ ಗ್ರಂಥಗಳಿಂದ ಕ್ರೋಢೀಕರಿಸಿ ಅತ್ಯದ್ಭುತವಾಗಿ ನಿರೂಪಿಸಿದ್ದಾರೆ. ಪೂರ್ವಮೀಮಾಂಸೆಯ ಧರ್ಮಜಿಜ್ಞಾಸಾಧಿಕರಣ ಮೊದಲಾದವುಗಳನ್ನು ಚೇತೋಹಾರಿಯಾಗಿ ಬಣ್ಣಿಸಿದ್ದಾರೆ. ಪೂರ್ವಮೀಮಾಂಸೆಯ ಹತ್ತಾರು ಕೃತಿಗಳ ಅಂತರ್ಯವನ್ನು ತಮ್ಮ ಪ್ರಬಂಧದಲ್ಲಿ ಜೋಡಿಸಿದ್ದಾರೆ.

*ಸಂದೇಹಬೀಜಪೂರ್ವಸ್ಯ ಟೀಕಾದಾವೇವ ಕೀರ್ತನಾತ್ ।*

ಎಂಬ ವ್ಯಾಸತೀರ್ಥರ ವಾಕ್ಯವನ್ನು ವ್ಯಾಖ್ಯಾನಿಸುವಾಗ ಅಪರೂಪದ ವಿಷಯವೊಂದನ್ನು ತಮ್ಮ ಟಿಪ್ಪಣಿಯಲ್ಲಿ ಹೇಳಿದ್ದಾರೆ. ಹೀಗೆ ಅನೇಕ ಪ್ರಮೇಯಗಳನ್ನು ಓದುವವರು ಅಲ್ಲಲ್ಲಿ ಗಮನಿಸಬೇಕು. ಈ ಪರಿಪೂರ್ಣಚಂದ್ರಿಕೆಯಲ್ಲಿ ಅವರ ವ್ಯಾಖ್ಯಾನದ ವಿಚಾರಗಳನ್ನೆಲ್ಲಾ ವಿವರವಾಗಿ ಬರೆಯಲಾಗಿದೆ. ಜಿಜ್ಞಾಸಾಧಿಕರಣದ ಅನುವಾದದ ಅರ್ಧಭಾಗದಿಂದ ಪ್ರಕಾಶಟಿಪ್ಪಣಿಯನ್ನು ಅನುವಾದ ಮಾಡುವಾಗಲೇ ಗುರುರಾಜೀಯವನ್ನು ಜೋಡಿಸಿ ಬರೆಯಲಾಗಿದೆ.

ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಸಾವಿರಾರು ತತ್ತ್ವಬುಭುತ್ಸುಗಳಿಗೆ ಈ ಕೃತಿಯ ಮೂಲಕ ತತ್ತ್ವಜ್ಞಾನಪ್ರಚಾರವಾಗಲಿ. ನಮ್ಮೆಲ್ಲರಿಗೂ ಶ್ರೀರಂಗನಾಥನ ಸಂಪೂರ್ಣಅನುಗ್ರಹವಾಗಲಿ.

- ವಿ|| ಆರ್. ವೇಂಕಟೇಶಾಚಾರ್ಯ

ಶ್ರೀರಂಗಮ್.

# ಗ್ರಂಥಋಣ


೧. ಬ್ರಹ್ಮಸೂತ್ರಭಾಷ್ಯಮ್. (ಜಯತೀರ್ಥವ್ಯಾಸತೀರ್ಥರಾಘವೇಂದ್ರತೀರ್ಥಾನಾಂ ಟೀಕಾಭಿಃ ಸಮಲಂಕೃತಮ್) (ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು)

೨. ತಾತ್ಪರ್ಯಚಂದ್ರಿಕಾ, ಬ್ರಹ್ಮಸೂತ್ರಭಾಷ್ಯಮ್ (ದ್ವೈತವೇದಾಂತಾಧ್ಯಯನಸಂಶೋಧನಪ್ರತಿಷ್ಠಾನಮ್, ಬೆಂಗಳೂರು)

೩. ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್ (ದ್ವೈತವೇದಾಂತಾಧ್ಯಯನಸಂಶೋಧನಪ್ರತಿಷ್ಠಾನಮ್, ಬೆಂಗಳೂರು)

೪. ಶ್ರೀಮದ್ಬ್ರಹ್ಮಸೂತ್ರಭಾಷ್ಯಮ್ (ಗುರುಸಾರ್ವಭೌಮ ರಾಘವೇಂದ್ರತೀರ್ಥಪ್ರತಿಷ್ಠಾನಮ್, ಧಾರವಾಡ)

೫. ತಾತ್ಪರ್ಯಚಂದ್ರಿಕಾ (ಟಿ.ಆರ್. ಕೃಷ್ಣಾಚಾರ್ಯರಿಂದ ಪ್ರಕಾಶಿತ)

೬. ಭಾಷ್ಯದೀಪಿಕಾ (ಸೂತ್ರದೀಪಿಕಾಸಂವಲಿತಮ್) (ಸಂ. ಮಾಗಡಿರಂಗನಾಥಾಚಾರ್ಯ)

೭. ನ್ಯಾಯಮುಕ್ತಾವಲೀ (ಗುರುಸಾರ್ವಭೌಮ ಸಂಸ್ಕೃತವಿದ್ಯಾಪೀಠ, ಮಂತ್ರಾಲಯ)

೮. ಭಾಟ್ಟಸಂಗ್ರಹಃ (ಗುರುಸಾರ್ವಭೌಮ ಸಂಸ್ಕೃತವಿದ್ಯಾಪೀಠ, ಮಂತ್ರಾಲಯ)

೯. ನ್ಯಾಯವಿವರಣಮ್ (ದ್ವೈತವೇದಾಂತಾಧ್ಯಯನಸಂಶೋಧನಪ್ರತಿಷ್ಠಾನಮ್, ಬೆಂಗಳೂರು;

೧೦. ನ್ಯಾಯವಿವರಣಮ್ (ರಾಮಕೃಷ್ಣಾಚಾರ್ಯ, ಉಡುಪಿ)

೧೧. ತತ್ತ್ವಮಂಜರೀ (ದ್ವೈತವೇದಾಂತಾಧ್ಯಯನಸಂಶೋಧನಪ್ರತಿಷ್ಠಾನಮ್, ಬೆಂಗಳೂರು)

೧೨. ಚಂದ್ರಿಕಾಪ್ರಕಾಶ (ವಿದ್ವಾನ್ ಹಯವದನಪುರಾಣಿಕರು)

೧೩. ಬ್ರಹ್ಮಸೂತ್ರಭಾಷ್ಯಮ್ (ಅಖಿಲಭಾರತಮಾಧ್ವಮಹಾಮಂಡಲ, ವಿದ್ವಾನ್ ಎ. ಹರಿದಾಸಭಟ್ಟ)

೧೪. ತತ್ತ್ವಪ್ರಕಾಶಿಕಾ (ಪಿ.ಕೃ. ಸುಬ್ಬರಾವ್)

೧೫. ತಂತ್ರದೀಪಿಕಾ (ಶ್ರೀಗುರುರಾಜಾ ಅಸೋಸಿಯೇಷನ್, ಬೆಂಗಳೂರು)

೧೬. ಬ್ರಹ್ಮಸೂತ್ರಭಾಷ್ಯಮ್ (ಮಾಧ್ವಗ್ರಂಥಪ್ರಕಾಶನ, ಬಳ್ಳಾರಿ)

೧೭. ಶಬ್ದಾರ್ಥಕೌಸ್ತುಭ (ಬಾಸ್ಕೋ ಪ್ರಕಾಶನ, ಬೆಂಗಳೂರು)

೧೮. ಅಣುಭಾಷ್ಯಮ್ (ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು)

೧೯. ಸುಧಾಸೌರಭ (ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು)

೨೦. ಸೂತ್ರಸೌರಭ (ಪಿ.ಎಚ್. ಬದರೀನಾಥಾಚಾರ್ಯ, ಬೆಂಗಳೂರು)

೨೧. ಬ್ರಹ್ಮಸೂತ್ರಶ್ರೀಭಾಷ್ಯಮ್ (ಶ್ರುತಪ್ರಕಾಶಿಕಾ ಸಹಿತಮ್) (ವಿಶಿಷ್ಟಾದ್ವೈತಪ್ರಚಾರಿಣೀಸಭಾ, ಚೆನ್ನೈ)

೨೨. ಶ್ರೀಶಂಕರಭಾಷ್ಯಮ್

೨೩. ಭಾಮತಿಕಲ್ಪತರು

೨೪. ಪಂಚಪಾದಿಕಾವಿವರಣಮ್ (ಸುಬ್ರಾಯಶರ್ಮ, ಚೆನ್ನೈ)

೨೫. ಕಾಶಿಕಾವೃತ್ತಿ


*ಪರಿಪೂರ್ಣಚಂದ್ರಿಕಾ*

# ಜಿಜ್ಞಾಸಾಧಿಕರಣಸಾರ

ವಿ। ಹಯವದನಪುರಾಣಿಕರು, ತಿರುಪತಿ

**ಪ್ರಕಾಶಮಂಗಲಾಚರಣೆ**

ಗುಣಪೂರ್ಣತ್ವ, ದೋಷದೂರತ್ವ, ಜ್ಞೇಯತ್ವ, ಗಮ್ಯತ್ವರೂಪವಾದ ಬ್ರಹ್ಮಸೂತ್ರ ಪ್ರತಿಪಾದ್ಯವಾದ, ನಾಲ್ಕು ಲಕ್ಷಣಗಳಿಂದ ಕೂಡಿದ ಕಮಲಾಪತಿಗೆ, ರುದ್ರಾದಿಸಕಲದೇವತೆಗಳಿಗೆ ಮೋಕ್ಷದಾಯಕರಾದ ಶ್ರೀಮದಾಚಾರ್ಯರಿಗೆ, ದುರ್ಮತಾಂಧಕಾರ ಕಳೆದು ಮೋಕ್ಷಮಾರ್ಗ- ತೋರಿ ಸಜ್ಜನರನ್ನು ಉದ್ಧರಿಸುವ ಜಯತೀರ್ಥರಿಗೆ ಚತುಃಶಾಸ್ತ್ರವಿಶಾರದರಾಗಿದ್ದು ಸಂಪ್ರದಾಯಾ- ರ್ಥಜ್ಞರಾಗಿದ್ದು ದುರ್ವಾದಿ ಭಯಂಕರರಾದ ವ್ಯಾಸರಾಜರಿಗೆ, ಗುರು ಸುಧೀಂದ್ರತೀರ್ಥರಿಗೆ ವಿಜಯೀಂದ್ರತೀರ್ಥರಿಗೆ ನಮಿಸಿ ಶಿಷ್ಯರ ಬುದ್ಧಿಗೆ ನಿಲುಕುವಷ್ಟು ತಾತ್ಪರ್ಯ ಚಂದ್ರಿಕೆಯ ವ್ಯಾಖ್ಯಾನ ಮಾಡಲು ಸಂಕಲ್ಪಿಸುತ್ತಾರೆ ಶ್ರೀರಾಘವೇಂದ್ರತೀರ್ಥರು.

**ಚಂದ್ರಿಕಾ ಮಂಗಲಾಚರಣೆ**

ದೋಷದೂರತ್ವ ಗುಣಪೂರ್ಣತ್ವ ಜ್ಞೇಯತ್ವ ಗಮ್ಯತ್ವರೂಪವಾದ, ಬ್ರಹ್ಮಸೂತ್ರ ಪ್ರತಿಪಾದ್ಯನಾದ, ನಾಲ್ಕು ಲಕ್ಷಣಗಳಿಂದ ಕೂಡಿದ ಶೇಷಶಾಯಿಗೆ, ಭವಸಂತಾಪ ಕಳೆದು ಸಜ್ಜನರಿಗೆ ಸುಖ ನೀಡುವ ಕರುಣಾಜಲಧಾರೆ ಸುರಿಸುವ ವ್ಯಾಸಕೃಷ್ಣರೆಂಬ ಮೇಘಗಳಿಗೆ, ಪಾಪಪರಿಹಾರಕರಾದ ಶ್ರೀಮದಾಚಾರ್ಯರ ಪಾದಕಮಲ ಧೂಳಿಗಳಿಗೆ, ಸರ್ವಶಾಸ್ತ್ರವಿಶಾರದರಾಗಿದ್ದು ಮುಖದಲ್ಲಿ ಶಾರದೆಯನ್ನಿರಿಸಿಕೊಂಡ ಪದ್ಮನಾಭತೀರ್ಥರಿಗೆ, ಚತುಃಶಾಸ್ತ್ರವಿಶಾರದರಾದ ವಿದ್ಯಾಗುರು ಶ್ರೀಪಾದರಾಜರಿಗೆ ನಮಿಸಿ ಶಿಷ್ಯಬುದ್ಧಿಗೆ ನಿಲುಕುವಷ್ಟು ತತ್ತ್ವಪ್ರಕಾಶಿಕೆಗೆ ವ್ಯಾಖ್ಯಾನ ಮಾಡಲು ಸಂಕಲ್ಪಿಸುತ್ತಾರೆ ಶ್ರೀ ವ್ಯಾಸತೀರ್ಥರು. ಸೂತ್ರದ ಮೇಲೆ ಬಂದಿರುವ ಭಾಷ್ಯ ಅನುವ್ಯಾಖ್ಯಾನ ನ್ಯಾಯವಿವರಣಗಳಲ್ಲಿ ಅವುಗಳ ಟೀಕೆಗಳಲ್ಲಿ ಅಸ್ಪಷ್ಟವಾಗಿರುವ ನಿಗೂಢವಾದ ಅಂಶಗಳನ್ನು ಸ್ಪಷ್ಟಪಡಿಸುವುದಾಗಿಯೂ ಪ್ರತಿಸೂತ್ರದಲ್ಲಿ ಸ್ವಮತ ಪರಮತ ವ್ಯಾಖ್ಯಾನಗಳ ಯುಕ್ತಾಯುಕ್ತತೆಗಳನ್ನು ತೋರಿಸುವುದಾಗಿಯೂ ಘೋಷಿಸುತ್ತಾರೆ.

**ತತ್ತ್ವಪ್ರಕಾಶಿಕಾ ಮಂಗಲಾಚರಣೆಗಳ ಭಾವಗಾಂಭೀರ್ಯ**

ಟೀಕಾಕೃತ್ಪಾದರ ಮೊದಲ ಮಂಗಲಪದ್ಯ ಭಾಷ್ಯದ ಮಂಗಲಪದ್ಯಕ್ಕೆ ವ್ಯಾಖ್ಯಾನ ರೂಪವಾಗಿದೆ. ಅದರಂತೆಯೇ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವಾಗಿದೆ. ಮುಂದೆ ಸೂತ್ರಕಾರರಿಗೂ ಭಾಷ್ಯಕಾರರಿಗೂ ನಮಿಸಿ ಭಾಷ್ಯಕ್ಕೆ ಟೀಕೆ ರಚಿಸಲು ಸಂಕಲ್ಪಿಸುತ್ತಾರೆ. ಆದರಿಂದ ವಾಕ್‌ಶುದ್ಧಿಯಾಗಲಿ ಎನ್ನುತ್ತಾರೆ ಟೀಕಾಕೃತ್ಪಾದರು.

ಟೀಕೆಯ ಮೊದಲ ಅಥಶಬ್ದ

ಸಮಗ್ರ ಗ್ರಂಥದ ವ್ಯಾಖ್ಯಾನವನ್ನು ಸಂಕ್ಷೇಪವಾಗಿ ಮಂಗಲಪದ್ಯದಲ್ಲಿ ಮಾಡಿ ಮುಂದೆ ಭಾಷ್ಯದ ಪ್ರತಿವಾಕ್ಯ ಪ್ರತಿಪದಗಳ ವ್ಯಾಖ್ಯಾನ ಪ್ರಾರಂಭಿಸುತ್ತಿದ್ದೇವೆ ಎನ್ನುತ್ತಿದ್ದಾರೆ, ಅಥಶಬ್ದದಿಂದ.

ನಾರಾಯಣ ಶಬ್ದಾರ್ಥ

ನಾರಾಯಣನೆ ಬ್ರಹ್ಮಸೂತ್ರ ಪ್ರತಿಪಾದ್ಯನೆಂದು ಸೂಚಿಸಲು ಭಾಷ್ಯದಲ್ಲಿರುವ ನಾರಾಯಣಶಬ್ದ ಬ್ರಹ್ಮಶಬ್ದ ಸಮಾನಾರ್ಥಕವೆಂದೂ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವೆಂದೂ ಟೀಕಾಕೃತ್ಪಾದರು ಹೇಳುತ್ತಾರೆ. 'ನಾರ'ವೆಂದರೆ ಅಮೃತತ್ವಕ್ಕೆ ಮೋಕ್ಷಕ್ಕೆ ಸಾಧನವಾದ ತತ್ತ್ವಜ್ಞಾನ. ಅಥವಾ ನಿರ್ದುಃಖವಾದ ಸ್ಥಾನಕ್ಕೆ ಒಯ್ಯುವ ತತ್ತ್ವಜ್ಞಾನ. ಅಥವಾ ನಿರ್ದೋಷ ವೇದೋತ್ಪನ್ನವಾದ ತತ್ತ್ವಜ್ಞಾನ. ಇಂಥ ತತ್ತ್ವಜ್ಞಾನಕ್ಕೆ ವಿಷಯನಾಗಿ ಆಶ್ರಯನೆನಿಸಿದವನು ನಾರಾಯಣ. ಇಲ್ಲಿ 'ನಾರ'ವೆಂದರೆ ನಿರ್ದೋಷವಾದ ವೇದ. ಅದರಿಂದ ಬರುವ ಜ್ಞಾನವೂ 'ನಾರ'. ಅಣ್ ಪ್ರತ್ಯಯ ಸೇರಿಸಬೇಕು. ಛ ಪ್ರತ್ಯಯ ಬಂದು ನಾರೀಯ ಎಂದಾದೀತು ಎಂಬ ಸಮಸ್ಯೆಗೆ ಪರಿಹಾರವಿದೆ.

ನಾರಾಯಣ ಶಬ್ದದಲ್ಲಿ ನಲೋಪಾಭಾವ

ದೋಷದೂರ ಎಂಬ ಅರ್ಥದಲ್ಲಿ 'ನ ಅರಾಯನ'ವು 'ನಾರಾಯಣ' ಎಂದಾಗುವುದು. ಆದರೆ ಇಲ್ಲಿ ನಲೋಪ ಬಂದೀತು. 'ನ ಆರೋಗ್ಯ' 'ಅನಾರೋಗ್ಯ'ವಾಗುವಂತೆ 'ನ ಅರಾಯನ'ವು 'ಅನರಾಯಣ' ಏಕಾಗುವುದಿಲ್ಲ? ಇದಕ್ಕೆ ಪರಿಹಾರ - 'ನಲೋಪವನ್ನು ಹೇಳುವ ಸೂತ್ರದಲ್ಲಿ ವಿಕಲ್ಪವನ್ನು ಹೇಳುವ 'ವಿಭಾಷಾ' ಪದದ ಅನುವೃತ್ತಿ ಇದೆ ಎಂದು ನ್ಯಾಸಗ್ರಂಥದಲ್ಲಿ ಹೇಳಿದೆ' ಎಂದು ಹೇಳಬಹುದು. ವಸ್ತುತಃ ಅನುವೃತ್ತಿ ಬೇಡ. ಆದರಿಂದ ಇಲ್ಲಿ 'ನ ಅರಾಯನ' ಎಂಬಲ್ಲಿ 'ನಞ್' ಎಂಬ ಅವ್ಯಯವಲ್ಲ. 'ನ' ಎಂಬ ಅವ್ಯಯ ಎಂದಿಟ್ಟುಕೊಳ್ಳಬೇಕು.

ನಾರಾಯಣ ಶಬ್ದದಲ್ಲಿ ಣತ್ವ

ರೇಫದ ಮುಂದೆ ಬರುವ ನಕಾರಕ್ಕೆ ಣಕಾರ ಬರುವುದು ಸಾಮಾನ್ಯವಾಗಿ ಅವೆರಡೂ ಒಂದು ಅಖಂಡಪದದಲ್ಲಿ ಬಂದಾಗ ಮಾತ್ರ. ಪ್ರಕೃತದಲ್ಲಿ 'ನಾರ ಅಯನ' ಎಂದು ಎರಡು ಪದ ಸೇರಿ ಒಂದಾಗಿದೆ. ಅಖಂಡವಲ್ಲ. ಆದರೂ ರೂಢಿಯ ಹೆಸರುಗಳಲ್ಲಿ ಈ ನಿಯಮವಿಲ್ಲ. ಆದರಿಂದ ಣತ್ವ ಬರಬಹುದು. 'ಶೂರ್ಪ ನಖಾ' ಶೂರ್ಪಣಖಾ ಎಂದಾಗುತ್ತದೆ. ಹಾಗೇ ಇದು.

ನಾರಾಯಣ ಶಬ್ದದ ಪುಲ್ಲಿಂಗ

'ನಾರ ಅಯನ' ಎಂಬಲ್ಲಿ ಅಯನಶಬ್ದ ಲ್ಯುಟ್ ಪ್ರತ್ಯಯಾಂತ, ನಪುಂಸಕವಾಗಬೇಕು. ಈ ಸಮಸ್ಯೆಗೆ ಪರಿಹಾರ - ಕರಣ ಅಧಿಕರಣ ಅರ್ಥಗಳಲ್ಲಿ ಲ್ಯುಟ್ ವಿಧಾಯಕವಾದ ಸೂತ್ರದಲ್ಲಿ

'ನಪುಂಸಕೇ' ಎಂದು ಅನುವೃತ್ತಿ ಇಲ್ಲ ಎಂದು ಒಂದು ಪರಿಹಾರ. 'ಲ್ಯುಟ್' ಎಂಬಲ್ಲಿ ಟಕಾರ ಇತ್ ಏಕೆ? 'ರಾಜಧಾನೀ' ಎಂದು ಮುಂತಾಗಿ ಸ್ತ್ರೀಲಿಂಗ ಪ್ರತ್ಯಯ ಬರುವುದಕ್ಕಾಗಿ ಎನ್ನಬೇಕು. ಆಗ ನಪುಸಂಕಲಿಂಗ ನಿಯಮವಿಲ್ಲವೆಂದು ಹೇಳಿದಂತಾಯಿತು. ಅದರಿಂದಲೆ ಭಾಷ್ಯಕಾರನೂ 'ಅನುಮಾನ' ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿದ್ದಾನೆ. ಇದು ಇನ್ನೊಂದು ಪರಿಹಾರ. 'ಕೃತ್ಯಲ್ಯುಟೋ ಬಹುಲಂ' ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಲ್ಯುಟ್ ಪ್ರತ್ಯಯಾಂತ ಶಬ್ದಕ್ಕೆ ಲೋಕರೂಢಿಗನುಸಾರ ಯಾವ ಲಿಂಗವನ್ನೂ ಇಟ್ಟುಕೊಳ್ಳಬಹುದೆಂದಿದೆ ಎಂದು ಮತ್ತೊಂದು ಪರಿಹಾರ.

### ಗುರುದೇವತಾ ನಮಸ್ಕಾರ

ಶಿಷ್ಯರು ಮುಂದೆ ಗ್ರಂಥ ರಚನೆ ಮಾಡುವಾಗ ಗುರುದೇವತಾ ನಮಸ್ಕಾರ ಮಾಡಬೇಕು. ಗ್ರಂಥದ ವಿಷಯ ಪ್ರಯೋಜನಾದಿಗಳನ್ನು ಸ್ಮರಿಸಿ ಮೋಕ್ಷಾದಿ ಮಹಾಫಲಭಾಗಿಗಳಾಗಬೇಕು ಎಂಬ ಉದ್ದೇಶದಿಂದ ಶ್ರೀಮದಾಚಾರ್ಯರು ನಮಸ್ಕಾರವನ್ನೂ ವಿಷಯಪ್ರಯೋಜನಾದಿಗಳನ್ನೂ ಹೇಳಿದ್ದಾರೆ.

### ಬ್ರಹ್ಮಸೂತ್ರದ ಹಿರಿಮೆ

ಮೋಕ್ಷ ಸಂಪಾದನೆಗಾಗಿ ಅಧ್ಯಯನ ಮಾಡಬೇಕಾಗಿರುವ ಗ್ರಂಥ ಬ್ರಹ್ಮಸೂತ್ರ. ಆದರಿಂದ ಅದು ವಾಸ್ತವವಿಷಯಗಳನ್ನೇ ಹೇಳುತ್ತದೆ. ಗ್ರಂಥಕಾರರಾದ ಬಾದರಾಯಣರೂ ಸ್ವತಃ ಸರ್ವಜ್ಞರು. ಅವತರಿಸಿದೊಡನೆಯೆ, ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡದೆಯೆ, ಗ್ರಂಥರಚನೆ ಮಾಡಿದ್ದಾರೆ.

### ಸೂತ್ರಲಕ್ಷಣ

ಸೂತ್ರಲಕ್ಷಣಗಳಲ್ಲಿ ಮುಖ್ಯವಾದ ಅಲ್ಪಾಕ್ಷರತ್ವ ವಿಶ್ವತೋಮುಖತ್ವಗಳನ್ನೂ ಅಸ್ತೋಭತ್ವವನ್ನೂ ಸ್ಪಷ್ಟಗೊಳಿಸಲಾಗಿದೆ. ಬ್ರಹ್ಮಸೂತ್ರದಲ್ಲಿಯೆ ಎಲ್ಲ ಸೂತ್ರಲಕ್ಷಣಗಳೂ ಪುಷ್ಕಲವಾಗಿ ಬರುವುದರಿಂದ ಅದೇ ಮುಖ್ಯವಾಗಿ 'ಸೂತ್ರ' ಎನಿಸುತ್ತದೆ. ಆದರಿಂದ 'ಸೂತ್ರ' ಎಂದರೆ ಬ್ರಹ್ಮಸೂತ್ರವೆ. ಬೇರೆ ಸೂತ್ರಗಳಿಗೆ ಜೈಮಿನಿಸೂತ್ರ ಪಾಣಿನಿಸೂತ್ರ ಎಂದು ಮುಂತಾಗಿ ವಿಶೇಷಣ ಕೊಟ್ಟೇ ಹೇಳಬೇಕಾಗುತ್ತದೆ.

### ಹನುಮದ್‌ಭಾಷ್ಯ

ಹನು ಶಬ್ದದ ಮೇಲೆ ಮತುಪ್ ಬಂದಾಗ ಹನೂಮತ್ ಎಂದೇ ಆಗಬೇಕು. ರೂಢಿಯ ಹೆಸರುಗಳಲ್ಲಿ ದೀರ್ಘ ಬರುತ್ತದೆ. ಮತ್ತು ರೂಢಿಯ ಹೆಸರುಗಳಲ್ಲಿ ಮತುಪ್ ಪ್ರತ್ಯಯದ ಮಕಾರ ವಕಾರವೂ ಆಗಬೇಕು. ಶರಾವತಿ ಮುಂತಾದ ಶಬ್ದಗಳಲ್ಲಿ ಈ ಎರಡೂ ನಿಯಮಗಳು ಕಾಣುತ್ತವೆ. ಆದರೆ ಸಂಜ್ಞಾಪೂರ್ವಕವಿಧಿ ಅನಿತ್ಯವಾದ್ದರಿಂದ ದೀರ್ಘನಿಯಮವಿಲ್ಲ. 'ಹನುಮತ್' 'ಹನೂಮತ್' ಎರಡೂ ಸರಿಯೆ. ಹನುಶಬ್ದ ಯವಾದಿಗಣದಲ್ಲಿ ಸೇರಿರುವುದರಿಂದ ಅದರ ಮುಂದಿನ ಮತುಪಿನಲ್ಲಿ ಮಕಾರಕ್ಕೆ ವಕಾರ ಬರುವುದೂ ಇಲ್ಲ.

ಭಾಮತಿಯಲ್ಲಿ ಜಿಜ್ಞಾಸಾಧಿಕರಣ

'ನಾನು' ಎಂದು ಅನುಭವಸಿದ್ಧನಾದ ಜೀವಾತ್ಮನೆ ಬ್ರಹ್ಮ. ಅವನ ಬಗ್ಗೆ ಸಂದೇಹವಿಲ್ಲದುದರಿಂದ ವಿಚಾರ ಬೇಡ. ಜೀವಾತ್ಮನ ಜ್ಞಾನವಿದ್ದರೂ ಮೋಕ್ಷ ಉಂಟಾಗುತ್ತಿಲ್ಲ ಎಂದ ಮೇಲೆ ವಿಚಾರಕ್ಕೂ ಮೋಕ್ಷವೆಂಬ ಪ್ರಯೋಜನವೂ ಇಲ್ಲ. 'ಜೀವಾತ್ಮ ಕರ್ಮ ಮಾಡುತ್ತಾನೆ ಅದರ ಫಲ ಉಣ್ಣುತ್ತಾನೆ. ವೇದಾಂತದಲ್ಲಿ ಹೇಳುವ ಬ್ರಹ್ಮ ಹಾಗೆ ಮಾಡುವುದಿಲ್ಲ. ಅವನು ಶುದ್ಧ, ನಿರ್ಧರ್ಮಕ. ಅವನ ಬಗ್ಗೆ ವಿಚಾರಕ್ಕೆ ಅವಕಾಶವಿದೆ. ವಿಚಾರ ಮಾಡಿ ತಿಳಿದರೆ ಮೋಕ್ಷಫಲವೂ ಇದೆ' ಎನ್ನಬಾರದು. ಅನುಭವ ಪ್ರಬಲ. ಅದಕ್ಕೆ ವಿರುದ್ಧವಾಗಿ ವೇದಾಂತ ಏನಾದರೂ ಹೇಳಿದರೆ ಗ್ರಾಹ್ಯವಾಗುವುದಿಲ್ಲ. ಅನುಭವಾನುಸಾರ ಅದಕ್ಕೆ ಬೇರೆ ಅರ್ಥ ಗ್ರಹಿಸಬೇಕು ಎಂದು ಪೂರ್ವಪಕ್ಷ. ವೇದಾಂತ ಅಪೌರುಷೇಯ, ನಿರ್ದೋಷ. ಅನುಭವ ಕೆಲವೊಮ್ಮೆ ತಪ್ಪಾಗುವುದಿದೆ. 'ನಾನು ದಪ್ಪ' ಎನ್ನುವ ಅನುಭವ ಇದಕ್ಕೆ ಉದಾಹರಣೆ. 'ನಾನು ದಪ್ಪ ಅಲ್ಲ, ನನ್ನ ಶರೀರ ದಪ್ಪ' ಎನ್ನುವುದು ಸರಿಯಾದ ಅನುಭವ. ಆದ್ದರಿಂದ ನಿರ್ದೋಷವಾದ ವೇದಾಂತವು ಹೇಳುವ ಶುದ್ಧಚೈತನ್ಯ ಸತ್ಯ. ಅದು ನಾನು ಎನ್ನುವ ಅನುಭವದಲ್ಲಿ ಕಾಣುವುದಿಲ್ಲ. ಅದನ್ನು ವಿಚಾರಿಸಬೇಕು. ಅದರ ಜ್ಞಾನದಿಂದ ಮೋಕ್ಷ ಎಂಬ ಪ್ರಯೋಜನವೂ ಇದೆ. - ಇದು ಭಾಮತಿಯಲ್ಲಿ ಕಾಣುವ ಜಿಜ್ಞಾಸಾಧಿಕರಣ.

೧೪ ಎ) ಭಾಮತ್ಯಧಿಕರಣದಲ್ಲಿ ಅನುಪಪತ್ತಿ

ಶುದ್ಧ ಚೈತನ್ಯ ಅನುಭವದಲ್ಲಿ ಕಾಣುವುದಿಲ್ಲ ಎಂದು ಹೇಳುವುದೆ ತಪ್ಪು. ಶುದ್ಧತ್ವವೆಂದರೆ ಕರ್ತೃತ್ವ ಭೋಕ್ತೃತ್ವಾದಿಗಳ ಅಭಾವ, ಇದು ಅನುಭವದಲ್ಲಿ ಕಾಣುವುದಿಲ್ಲ ಚೈತನ್ಯ ಮಾತ್ರ ಕಾಣುತ್ತದೆ ಎಂದರೆ ಚೈತನ್ಯಕ್ಕಿಂತ ಬೇರೆಯಾಗಿ ಶುದ್ಧತ್ವವೆಂಬುದಿದೆ ಎಂದಂತಾಯಿತು. ಇದು ಅದ್ವೈತ-ವಾಗುವುದಿಲ್ಲ. ಅದ್ವೈತದಲ್ಲಿ ಚೈತನ್ಯಕ್ಕಿಂತ ಬೇರೆ ಏನೂ ಇಲ್ಲ. ಇಲ್ಲದಿದ್ದರೂ ಅವಿದ್ಯೆಯಿಂದಾಗಿ ಇರುವಂತೆ ಭ್ರಾಂತಿಯಲ್ಲಿ ಭಾಸವಾಗುತ್ತದೆ ಎಂದರೆ ಹೇಗೆ ಭಾಸವಾಗುತ್ತದೆ? ಚೈತನ್ಯಸ್ವರೂಪವು ಸ್ವಪ್ರಕಾಶ ಅನುಭವದಲ್ಲಿ ಪ್ರಕಾಶಿಸುತ್ತಿರುವಾಗ ಭ್ರಾಂತಿಯಾದರೂ ಹೇಗೆ ಬರುತ್ತದೆ?

'ಅದ್ವೈತದಲ್ಲಿ ಚೈತನ್ಯಕ್ಕಿಂತ ಬೇರೆಯೂ ಇದೆ. ಆದರೆ ಅದು ಸತ್ಯವಲ್ಲ, ಮಿಥ್ಯೆ. ಅದು ಸತ್ಯವಾದ ಚೈತನ್ಯವನ್ನು ವೇದಾಂತದಿಂದ ತಿಳಿಯಲು ಉಪಲಕ್ಷಣವಾಗಿ ಬೇಕು. ಉಪಲಕ್ಷಿತವಾದ ಚೈತನ್ಯವೆ ವೇದಾಂತವೇದ್ಯ. ಅದು ಅನುಭವ ಗೋಚರವಲ್ಲ. ಅನುಭವ ಗೋಚರ ಶುದ್ಧ ಚೈತನ್ಯ. ಅದು ವೇದಾಂತ ವೇದ್ಯವಲ್ಲ'-ಹೀಗೂ ಕೆಲವರು ಹೇಳುತ್ತಾರೆ. ಆದರೆ ಇದೂ ಸರಿಯಲ್ಲ. ಅರುಂಧತೀನಕ್ಷತ್ರವನ್ನು ತೋರಿಸುವಾಗ ಮೊದಲಿಗೆ ಉಪಲಕ್ಷಣವಾಗಿ ಸಮೀಪದ ಒಂದು ದೊಡ್ಡ ನಕ್ಷತ್ರವನ್ನು ತೋರಿಸುವುದುಂಟು. ಹಾಗೆ ಪ್ರಕೃತದಲ್ಲಿ ಹೇಳಲಾಗುವುದಿಲ್ಲ. ಶುದ್ಧ ಚೈತನ್ಯ ಮೊದಲೇ ಅನುಭವಗೋಚರವಾಗಿರುವಾಗ ಅದನ್ನು ತಿಳಿಯಲು ಉಪಲಕ್ಷಣವೇಕೆ?

ಅನುಭವಗೋಚರವಲ್ಲವೆಂದರೆ 'ನಾನು ಅಜ್ಞ' ಎಂದು ಅವಿದ್ಯೆ ಕಾಣುವುದು ಆತ್ಮಾನುಭವವಲ್ಲ ಎಂದಾದೀತು. 'ಶುದ್ಧ ಚೈತನ್ಯವು ಅನುಭವವೇದ್ಯವೆ. ಆದರೂ ಅವಿದ್ಯೆಯ ಪ್ರಭಾವದಿಂದ

ಅವೇದ್ಯವೆಂದು ಭ್ರಮಿಸುತ್ತೇವೆ. ಹೀಗಾಗಿ ಆತ್ಮಾನುಭವದಲ್ಲಿ ಅವಿದ್ಯೆ ಕಾಣುವುದೂ ಕೂಡುತ್ತದೆ. ಅವೇದ್ಯತ್ವ ಭ್ರಮನಿರಸನಕ್ಕಾಗಿ ವೇದಾಂತ ವಿಚಾರವೂ ಕೂಡುತ್ತದೆ' - ಎಂದೂ ಕೆಲವರು ಹೇಳುತ್ತಾರೆ. ಇವರೂ ಕೂಡ ಆತ್ಮನ ನಿಜರೂಪ ಅನುಭವದಲ್ಲಿ ಕಾಣುತ್ತಿರುವಾಗ ಅವೇದ್ಯತ್ವಭ್ರಮೆ ಹೇಗೆ ಬರುತ್ತದೆ ಎನ್ನುವುದನ್ನು ಹೇಳಲಾರರು.

'ಅವೇದ್ಯತ್ವಭ್ರಮೆ ಬರುವುದು ಅವಿದ್ಯೆಯ ಪ್ರಭಾವದಿಂದ. ಅದನ್ನು ಓಡಿಸಲು ಅಂತಃಕರಣ ವೃತ್ತಿಬೇಕು. ಅದು ಹುಟ್ಟದ ತನಕ ಅವಿದ್ಯೆ ಇದ್ದೇ ಇರುತ್ತದೆ' ಎನ್ನುವುದು ಸರಿಯಲ್ಲ. ಘಟಪಟಾದಿಗಳನ್ನು ಪ್ರತ್ಯಕ್ಷ ಕಾಣುವ ಅಂತಃಕರಣವೃತ್ತಿ ಆ ಪದಾರ್ಥಗಳ ಜೊತೆಗೆ ಶುದ್ಧ ಚೈತನ್ಯವನ್ನೂ ಕಾಣುತ್ತಿದೆ ಎಂದು ಅದ್ವೈತಸಿದ್ಧಾಂತವಿದೆ. ಆದರಿಂದ ಅಂತಃಕರಣವೃತ್ತಿ ಹುಟ್ಟಲ್ಲ ಎನ್ನುವುದು ತಪ್ಪು. ಇನ್ನು ಈ ವೃತ್ತಿ ವೇದಾಂತಶ್ರವಣಾದಿ ಸಂಸ್ಕಾರದಿಂದ ಕೂಡಿಲ್ಲವಾದ್ದರಿಂದ ಅವಿದ್ಯೆಯನ್ನು ಓಡಿಸುತ್ತಿಲ್ಲ ಎನ್ನುವುದು ಅದ್ವೈತಕ್ಕೇ ವಿರುದ್ಧ. ಕೇವಲ ವೃತ್ತಿಯಿಂದ ದೂರವಾಗುವ ಶುಕ್ತಿಯ ಅಜ್ಞಾನ ಮಿಥ್ಯೆ. ಭ್ರಮರ ಧ್ಯಾನದಿಂದ ದೂರವಾಗುವ ಕೀಟತ್ವ ಸತ್ಯ. ಹಾಗೇ ಸಂಸ್ಕಾರ ಸಹಿತ ವೃತ್ತಿಯಿಂದಲೆ ಅವಿದ್ಯೆ ದೂರವಾಗುವುದಾದರೆ ಅದು ಸತ್ಯವಾಗಬೇಕಾದೀತು.

ಪ್ರತ್ಯಕ್ಷಾನುಭವ ಕೆಲವೊಮ್ಮೆ ತಪ್ಪಾಗುವುದರಿಂದ ದುರ್ಬಲ. ವೇದಾಂತ ಅಪೌರುಷೇಯ-ವಾದುದರಿಂದ ನಿರ್ದೋಷವಾಗಿದ್ದು ಪ್ರಬಲವಾಗಿದೆ ಎಂಬುದೂ ಸರಿಯಲ್ಲ. ವೇದಾಂತ ಅಪೌರುಷೇಯವಾದರೂ ಅದರ ತಾತ್ಪರ್ಯವನ್ನು ತಪ್ಪಾಗಿ ತಿಳಿಯುವ ಸಾಧ್ಯತೆ ಇರುವುದರಿಂದ ಅದರಿಂದ ಬರುವ ಜ್ಞಾನ ತಪ್ಪಾಗಿರಬಹುದು. ಯಜಮಾನನಿಗೆ ಪ್ರತಿನಿಧಿಯಾಗಿ ಯಾಗಶಾಲೆಯಲ್ಲಿ ಇರಿಸುವ ಮುಷ್ಟಿದರ್ಭೆಯನ್ನು ಯಜಮಾನ ಎಂದೇ ವೇದವು ಕರೆದಿದೆ. ಪ್ರತ್ಯಕ್ಷ ವಿರೋಧವಿರುವುದರಿಂದಲೆ ದರ್ಭೆ ಯಜಮಾನನೆ ಅಲ್ಲ. ಅವನ ಪ್ರತಿನಿಧಿ ಎಂದು ಆ ವೇದ ವಾಕ್ಯಕ್ಕೆ ಬೇರೆ ಅರ್ಥ ಗ್ರಹಿಸುತ್ತಾರೆ. 'ತತ್ವಮಸಿ' ಎಂಬಲ್ಲಿ ಅಲ್ಪಜ್ಞ ಜೀವನು ನೀನು ಸರ್ವಜ್ಞ ಬ್ರಹ್ಮನೆ ಆಗಿರುವಿ ಎಂದು ಹೇಳುತ್ತಿದ್ದರೂ ಪ್ರತ್ಯಕ್ಷವಿರೋಧದಿಂದಲೆ ಈ ಮುಖ್ಯಾರ್ಥವನ್ನು ಬಿಟ್ಟು ಶುದ್ಧಚೈತನ್ಯಾಭೇದವೆಂಬ ಅಮುಖ್ಯಾರ್ಥ ಗ್ರಹಿಸುತ್ತಾರೆ ಅದ್ವೈತಿಗಳು. ಆದರಿಂದ ಪ್ರತ್ಯಕ್ಷ ಪ್ರಬಲವೆನ್ನುವುದು ಅವರ ಸಿದ್ಧಾಂತ. ಹೀಗಿದ್ದರೂ ಪ್ರತ್ಯಕ್ಷವನ್ನು ವೇದಾಂತ ಬಾಧಿಸುತ್ತದೆ ಎನ್ನುತ್ತಾರೆ. ಇದು ವಿರುದ್ಧ.

### ವಿವರಣ ಮತದಲ್ಲಿ ಜಿಜ್ಞಾಸಾಧಿಕರಣ

ಅಲ್ಪಜ್ಞನಾದ ಜೀವ ಮತ್ತು ಸರ್ವಜ್ಞಬ್ರಹ್ಮ ಇಬ್ಬರೂ ಒಂದಾಗಲಾರರು. ಒಂದೆನ್ನುವ ವೇದಾಂತ ಸುಳ್ಳು. ಅದರ ಬಗ್ಗೆ ವಿಚಾರ ಬೇಡ. ವಿಚಾರದಿಂದ ಪ್ರಯೋಜನವೂ ಇಲ್ಲ. ವಿಚಾರದಿಂದ ಬರುವುದು ಜ್ಞಾನ. ಅದು ಸುಳ್ಳಾದ ಕಲ್ಪನೆಗಳನ್ನು ದೂರ ಮಾಡೀತು ಹೊರತು ವಾಸ್ತವವಾದ ಸಂಸಾರವನ್ನು ಕಳೆಯಲಾರದು ಎಂದು ಪೂರ್ವಪಕ್ಷ. ಬ್ರಹ್ಮ ಒಂದೆ ಸತ್ಯ. ಪ್ರಪಂಚ ಮಿಥ್ಯೆ. ಅಜ್ಞಾನದಿಂದಾಗಿರುವ ಸುಳ್ಳು ಕಲ್ಪನೆಯಷ್ಟೆ. ಆದರಿಂದ ಜೀವಬ್ರಹ್ಮರೊಳಗೆ ಕಾಣುವ ವ್ಯತ್ಯಾಸವೂ

ಸುಳ್ಳು. ಐಕ್ಯವೆ ಸತ್ಯ. ವಿಚಾರದಿಂದ ಇದರ ಜ್ಞಾನ ಬಂದರೆ ಅವಾಸ್ತವವಾದ ಸಂಸಾರದ ಕಲ್ಪನೆ ಕರಗಿಹೋಗುತ್ತದೆ ಎಂದು ಸಿದ್ಧಾಂತ.

### ವಿವರಣದ ಅಧಿಕರಣವೂ ಅಸಂಗತ

ಭಾಮತಿಯ ಅಧಿಕರಣದಲ್ಲಿ ಹೇಳಿದ ಅಸಂಗತಿ ಎಲ್ಲವೂ ವಿವರಣದ ಅಧಿಕರಣದಲ್ಲಿಯೂ ಇದೆ. ಜೊತೆಗೆ, ಜೀವಬ್ರಹ್ಮರೊಳಗಿನ ವ್ಯತ್ಯಾಸವನ್ನು ಅವಾಸ್ತವವೆಂದುದೂ ತಪ್ಪು. ಅವಾಸ್ತವವೆಂದೇಕೆ ಹೇಳಬೇಕು? ವಾಸ್ತವ ವ್ಯತ್ಯಾಸವಿರುವಾಗಲೆ ಅಭೇದವನ್ನು ಏಕೆ ವೇದಾಂತ ಹೇಳಬಾರದು? ಪ್ರತ್ಯಕ್ಷ ವಿರೋಧದ ಭಯವೆ? ಅದು ಅವಾಸ್ತವ ಭೇದವನ್ನು ತೋರಿಸುತ್ತದೆ, ವಾಸ್ತವ ಅಭೇದವನ್ನು ನಿರ್ದೋಷವಾದ ವೇದಾಂತ ಹೇಳುತ್ತದೆ ಎನ್ನೋಣ. ಈಗ ತತ್ ತ್ವಂ ಪದಗಳಿಗೆ ಶುದ್ಧಚೈತನ್ಯವೆಂಬ ಅಮುಖ್ಯಾರ್ಥ ಗ್ರಹಿಸಬೇಕಾಗಿಲ್ಲ. ಮತ್ತು, ಶುದ್ಧಚೈತನ್ಯದಲ್ಲಿ ಭೇದ ಪ್ರಸಕ್ತಿ ಇಲ್ಲದಿರುವಾಗ ಅಭೇದವನ್ನು ಏಕೆ ಹೇಳಬೇಕು? ಅದಕ್ಕಾಗಿ ಮುಖ್ಯಾರ್ಥವನ್ನು ಏಕೆ ಗ್ರಹಿಸಬೇಕು?

ಜ್ಞಾನದಿಂದ ವಾಸ್ತವವಾದ ಸಂಸಾರ ದೂರವಾಗದು ಎಂಬುದೂ ತಪ್ಪು. ರಾಮೇಶ್ವರ ಸೇತುದರ್ಶನದಿಂದ ವಾಸ್ತವವಾದ ಬ್ರಹ್ಮಹತ್ಯಾ ಪಾಪ ದೂರವಾಗುವುದು ತಾನೆ?

### ರಾಮಾನುಜರ ಜಿಜ್ಞಾಸಾಧಿಕರಣ

· ಎಲ್ಲ ಶಬ್ದಗಳಿಗೂ ಏನಾದರೊಂದು ಕಾರ್ಯವನ್ನು ತಿಳಿಸುವುದೆ ಉದ್ದೇಶ. ವೇದಾಂತವೂ ಹಾಗೆಯೆ. ಅದು ಬ್ರಹ್ಮನಂಥ ಸಿದ್ಧವಸ್ತುವನ್ನು ಬೋಧಿಸಲಾರದು. ಅದರ ಬಗ್ಗೆ ವಿಚಾರ ಮಾಡುವ ಬ್ರಹ್ಮಸೂತ್ರವೂ ಗ್ರಾಹ್ಯವಾಗಲಾರದು ಎಂದು ಪೂರ್ವಪಕ್ಷ. ಭಾಷೆ ಕಲಿಯುವ ಮಕ್ಕಳು ಮೊದಲಿಗೆ ಅಪ್ಪ ಅಮ್ಮ ಮುಂತಾದ ಸಿದ್ಧವಸ್ತು ಬೋಧಕಪದಗಳನ್ನೆ ತಿಳಿಯುವುದರಿಂದ ಅವುಗಳಂತೆ ಬೇರೆ ಶಬ್ದಗಳೂ ಸಿದ್ಧಪರವಾಗುವುದರಿಂದ ಬ್ರಹ್ಮನನ್ನು ವೇದಾಂತವು ಬೋಧಿಸಬಲ್ಲುದು. ಬ್ರಹ್ಮವಿಚಾರವನ್ನು ನಡೆಸಬಹುದು ಎಂದು ಸಿದ್ಧಾಂತ.

### ರಾಮಾನುಜರ ಅಧಿಕರಣ ಸೂತ್ರದಲ್ಲಿ ಇಲ್ಲ

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಕೃತ ಸೂತ್ರಕ್ಕೆ ಕರ್ಮವಿಚಾರ ಮಾಡಿದ ಬಳಿಕ, ಕರ್ಮವಿಚಾರ ಮಾಡಿ ಮುಗಿದಿರುವುದರಿಂದಲೆ ಬ್ರಹ್ಮವಿಚಾರ ಮಾಡಬೇಕು ಎಂದು ರಾಮಾನುಜರ ಪ್ರಕಾರ ಅರ್ಥ. ಇಲ್ಲಿ ಶಬ್ದಗಳು ಸಿದ್ಧಪರವಾಗುವುದರ ಬಗ್ಗೆ ಏನೂ ಹೇಳಿಲ್ಲ. ಅದರಿಂದ ಅಧಿಕರಣಕ್ಕೂ ಸೂತ್ರಕ್ಕೂ ಏನೂ ಸಂಬಂಧವಿಲ್ಲ. ಸಿದ್ಧಪರವಾದ ಬ್ರಹ್ಮಶಬ್ದ ಸೂತ್ರದಲ್ಲಿರುವುದರಿಂದಲೆ ಶಬ್ದಗಳು ಸಿದ್ಧಪರವೆಂದು ಸೂಚಿಸಿದಂತಾಗುತ್ತದೆ ಎನ್ನುವುದೂ ಸರಿಯಲ್ಲ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು ವಿಷಯವಾಕ್ಯದಲ್ಲಾಗಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಸೂತ್ರದಲ್ಲಾಗಲೀ 'ಬ್ರಹ್ಮವಿಚಾರ ಮಾಡಬೇಕು' ಎಂದು ಕಾರ್ಯವನ್ನೇ ಹೇಳಿರುವುದರಿಂದ ಬ್ರಹ್ಮಶಬ್ದ ಕಾರ್ಯಪರವೆ ಎಂದು ಪೂರ್ವಪಕ್ಷಿ ಹೇಳಿದರೆ ಏನು ಉತ್ತರ?

ರಾಮಾನುಜಮತದಲ್ಲಿ ಕರ್ಮಮೀಮಾಂಸೆ ದೇವಮೀಮಾಂಸೆ ಬ್ರಹ್ಮಮೀಮಾಂಸೆ ಇವು ಮೂರು ಒಂದೇ ಗ್ರಂಥದ ಮೂರು ಭಾಗಗಳು. ಅವುಗಳನ್ನು ಕ್ರಮವಾಗಿಯೆ ಅಧ್ಯಯನ ಮಾಡಬೇಕು. ದೇವಮೀಮಾಂಸೆ ಸಿದ್ಧಬೋಧಕ. ಶಬ್ದಗಳಿಗೆ ಸಿದ್ಧಪರತ್ವವನ್ನು ಒಪ್ಪದೆ ದೇವಮೀಮಾಂಸ ನಡೆಯಲಾರದು ಎಂದ ಮೇಲೆ ಮುಂದೆ ಅಧ್ಯಯನ ಮಾಡುವ ಬ್ರಹ್ಮಮೀಮಾಂಸೆಯಲ್ಲಿ ಸಿದ್ಧಪರತ್ವದ ಬಗ್ಗೆ ವಿವಾದ ಸಂಗತವಾಗುವುದೆ?

**ಶೈವಭಾಷ್ಯೋಕ್ತ ಅಧಿಕರಣ ಅಸಂಗತ**

ಶೈವಭಾಷ್ಯದಲ್ಲಿ 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' 'ವಿಚಾರಕ್ಕಾಗಿ ಗುರುವಿನ ಬಳಿಗೆ ಹೋಗಬೇಕು'ಎಂಬುದು ವಿಷಯವಾಕ್ಯ. 'ಅಯಮಾತ್ಮಾ ಬ್ರಹ್ಮ' ಎಂದು ವೇದಾಂತವು 'ನಾನು' ಎಂದು ಅನುಭವಸಿದ್ಧವಾದ ಜೀವಾತ್ಮನನ್ನೆ ಬ್ರಹ್ಮ ಎಂದು ಕರೆದಿದೆ. ಅದ್ವೈತಿಗಳು ಹೇಳುವ ಶುದ್ಧ ಚೈತನ್ಯಾಭೇದ ಇಲ್ಲಿ ಉಕ್ತವಾಗುವುದಿಲ್ಲ. ಅದನ್ನೊಪ್ಪಿದರೂ ಶುದ್ಧಚೈತನ್ಯ ನಿರ್ಧರ್ಮಕವಾದ್ದರಿಂದ ಅದನ್ನು ಶಬ್ದದಿಂದ ಹೇಳುವುದೆ ಅಶಕ್ಯ. ಮತ್ತು ಜೀವಾತ್ಮನಲ್ಲಿರುವ ಕರ್ತೃತ್ವಾದಿ ಧರ್ಮ ಮಿಥ್ಯೆ ಎನಿಸಲೂ ಸಾಧ್ಯವಿಲ್ಲ. ಸತ್ಯವೆಂದು ಪ್ರತ್ಯಕ್ಷಾನುಭವ ಹೇಳುತ್ತಿದೆ. ಅದರಿಂದ ಜೀವಬ್ರಹ್ಮಾಭೇದವನ್ನೇ ಶ್ರುತಿ ಹೇಳುತ್ತದೆ. ಜೀವಾತ್ಮನ ವಿಷಯದಲ್ಲಿ ಸಂಶಯವಿಲ್ಲದ್ದರಿಂದ ವಿಚಾರ ಬೇಡ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಯಾರಿಗೂ ಶಕ್ಯವಿಲ್ಲ. ಅಲ್ಪಸ್ವಲ್ಪ ತಿಳಿದರೆ ಅದರಿಂದ ಮೋಕ್ಷಫಲವಿಲ್ಲ. ಅದರಿಂದಲೂ ಬ್ರಹ್ಮವಿಚಾರ ಬೇಡ. ಅದಕ್ಕಾಗಿ ಗುರುವಿನ ಬಳಿಗೆ ಹೋಗುವುದೂ ಬೇಡ ಎಂದು ಪೂರ್ವಪಕ್ಷ.

ಜೀವಬ್ರಹ್ಮಭೇದವನ್ನೂ ವೇದಾಂತದಲ್ಲಿ ಅಲ್ಲಲ್ಲಿ ಹೇಳಿರುವುದರಿಂದ ಭೇದವೆ ಅಭೇದವೆ ಎಂದು ಸಂದೇಹ ಬರುವುದರಿಂದ ವಿಚಾರ ಬೇಕು ಎಂದು ಸಿದ್ಧಾಂತ.

ಇಲ್ಲಿ ವಿಷಯವಾಕ್ಯವನ್ನು ಆರಿಸಿಕೊಳ್ಳುವುದರಲ್ಲಿಯೆ ತಪ್ಪಿದೆ. ಈ ವಿಷಯ ವಾಕ್ಯದಲ್ಲಿ ಅರ್ಥನಿರ್ಣಯಕ್ಕೆ ಯುಕ್ತಿಯೆ ಇಲ್ಲ. ಸಾಕ್ಷಾತ್ 'ಜಿಜ್ಞಾಸಾ' ಶಬ್ದದಿಂದಲೆ ಕೂಡಿದ ವಾಕ್ಯಗಳಿರುವಾಗ ಅವನ್ನು ಬಿಟ್ಟು ಸಂಬಂಧವೆ ಇಲ್ಲದ ಈ ವಿಷಯವಾಕ್ಯವೆತ್ತಿಕೊಂಡಿರುವುದು ಅಯುಕ್ತ. ಶ್ರುತಿ ಜೀವಬ್ರಹ್ಮೈಕ್ಯವನ್ನು ಹೇಳುವಾಗ ಪ್ರತ್ಯಕ್ಷವಿರೋಧ ಬಂದರೆ ಪ್ರತ್ಯಕ್ಷ ಅತತ್ವಾವೇದಕ, ದುರ್ಬಲವೆಂದು ಅದ್ವೈತಿಗಳಂತೆ ಈ ಶೈವರು ಹೇಳುವುದಿಲ್ಲ. ಆಗ ಶ್ರುತಿ ಐಕ್ಯವನ್ನು ಹೇಗೆ ಹೇಳುವುದು ಸಾಧ್ಯ? ಅಭೇದ ವಾಕ್ಯಗಳನ್ನು ತೋರಿಸುವ ಪೂರ್ವಪಕ್ಷ ಭೇದವಾಕ್ಯಗಳನ್ನು ನೋಡಿಯೆ ಇಲ್ಲವೆ? ಅವುಗಳಿಗೆ ಏನು ಗತಿ? ನಾನು ಎಂದು ಜೀವ ಅನುಭವಸಿದ್ಧನೇ ಆಗಿದ್ದರೂ ದೇಹಾದಿಗಳಿಗಿಂತ ಜೀವ ಭಿನ್ನನೆ ಅಭಿನ್ನನೆ ಎಂದು ವಿಚಾರ ಮಾಡಬಹುದು. ಬೇಡ ಏಕೆ? 'ಶುದ್ಧಚೈತನ್ಯಾಭೇದ ಒಪ್ಪಿದರೂ ಶಬ್ದದಿಂದ ಅದನ್ನು ಹೇಳಲಾಗದು' ಎನ್ನುವ ಮಾತೂ ಸ್ವವ್ಯಾಹತ. ಒಪ್ಪಬೇಕೆಂದರೆ ಅದನ್ನು ಹೇಳುವ ಶಬ್ದ ಬೇಕು. ಯಾವ ಶಬ್ದವೂ ಹೇಳದೆಂದು ಹೇಳುವುದು ಸರಿಯಲ್ಲ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಅಶಕ್ಯವೆಂದರೆ ಶಕ್ಯವಿದ್ದಷ್ಟು ತಿಳಿದರೆ ಮೋಕ್ಷ ಎಂದೇ ಒಪ್ಪಬೇಕಾಗುವುದರಿಂದ ಮೋಕ್ಷಫಲವಿಲ್ಲ

ಎಂದುದೂ ಅಯುಕ್ತ. ಭೇದಾಭೇದ ಸಂದೇಹವಿದೆ ಎಂಬ ಸಿದ್ಧಾಂತ ಯುಕ್ತಿಗೆ ಸೂಚಕವಾದ ಯಾವ ಶಬ್ದವೂ ಸೂತ್ರದಲ್ಲಿಲ್ಲ. ಅದರಿಂದ ಈ ಅಧಿಕರಣ ಸೂತ್ರಕ್ಕೆ ಸಂಬಂಧಿಸಿಯೆ ಇಲ್ಲ - ಹೀಗೆ ಶೈವಭಾಷ್ಯದ ಅಧಿಕರಣವನ್ನು ಪ್ರಕಾಶದಲ್ಲಿ ವಿಮರ್ಶಿಸಲಾಗಿದೆ.

### ಜಿಜ್ಞಾಸಾಧಿಕರಣದ ಸಂಗತಿ

ಬ್ರಹ್ಮವಿಚಾರವು ಶಾಸ್ತ್ರದಲ್ಲಿ ನಡೆಯಬೇಕಾದರೆ ಅದರ ಅವಶ್ಯಕತೆಯನ್ನು ಮೊದಲಿಗೆ ಸೂತ್ರ ಸಮರ್ಥಿಸುವುದರಿಂದ ಶಾಸ್ತ್ರದ ಉಪೋದ್ಘಾತ ಸಂಗತಿ ಇದೆ. ಆದರೆ ಪ್ರಥಮಾಧ್ಯಾಯ ಪ್ರಥಮ ಪಾದಗಳ ಸಂಗತಿಗಳಿಲ್ಲ. ಈ ಸೂತ್ರದ ಬಲದಿಂದಲೆ ಪ್ರಥಮಾಧ್ಯಾಯ ಪ್ರಥಮ ಪಾದಗಳು ಪ್ರವೃತ್ತಿ ಮಾಡುವುದು ನಿಜವೆ. ಆದರೆ ಕ್ರಮವಾಗಿ ನಾಲ್ಕು ಪಾದಗಳೂ ಆ ಮೂಲಕ ನಾಲ್ಕು ಅಧ್ಯಾಯಗಳೂ ಈ ಸೂತ್ರದ ಬಲದಿಂದಲೆ ಪ್ರವೃತ್ತಿ ಮಾಡುವುದರಿಂದ ಪ್ರತ್ಯೇಕವಾಗಿ ಪ್ರಥಮಾಧ್ಯಾಯ ಪ್ರಥಮಪಾದಗಳ ಸಂಗತಿಗಳಿಲ್ಲ.

ಬ್ರಹ್ಮವಿಚಾರ ವಿಧಾಯಕ ವಾಕ್ಯದ ಅರ್ಥನಿರ್ಣಯಕ್ಕೆ ಯುಕ್ತಿಯನ್ನು ಹೇಳುವ ಮೂಲಕ ಈ ಸೂತ್ರ ಬ್ರಹ್ಮವಿಚಾರವೆನಿಸುವುದರಿಂದ ಬ್ರಹ್ಮವಿಚಾರರೂಪವಾದ ಶಾಸ್ತ್ರದ ಅಂತರ್ಭಾವ ಸಂಗತಿಯೂ ಈ ಸೂತ್ರಕ್ಕೆ ಇದೆ.

'ಕಲ್ಪತರು'ವಿನಲ್ಲಿ ಈ ಸೂತ್ರಕ್ಕೆ ಶಾಸ್ತ್ರಸಂಗತಿ ಪ್ರಥಮಾಧ್ಯಾಯಸಂಗತಿ ಪ್ರಥಮಪಾದ ಸಂಗತಿಗಳು ಮೂರು ಇವೆ ಎಂದಿದೆ. ಅದು ಸರಿಯಲ್ಲ ಎನ್ನುವುದು ಸ್ಪಷ್ಟ.

'ವಿವರಣ'ದಲ್ಲಿ ಈ ಸೂತ್ರ ವಿಷಯವಾಕ್ಯಕ್ಕೆ ಅದರ ಅರ್ಥದೊಂದಿಗೆ ಸಮನ್ವಯ-ಗೊಳಿಸುವುದರಿಂದ ಆ ಮೂಲಕ ಎಲ್ಲ ವೇದಾಂತವಾಕ್ಯಗಳಿಗೂ ಬ್ರಹ್ಮನೊಂದಿಗೆ ಸಮನ್ವಯಗೊಳಿಸಲು ದಾರಿ ಮಾಡಿಕೊಡುವುದರಿಂದ ಸಮನ್ವಯಾಧ್ಯಾಯದ ಸಂಗತಿ ಇದೆ ಎಂದಿದೆ. ಆದರೆ ಆಯಾ ವಾಕ್ಯಗಳಿಗೆ ಅವುಗಳ ಅರ್ಥಗಳೊಡನೆ ಸಮನ್ವಯಗೊಳಿಸಿದ ಮಾತ್ರಕ್ಕೆ ಸಮನ್ವಯಾಧ್ಯಾಯದಲ್ಲಿಯೆ ಆ ಎರಡೂ ಅಧ್ಯಾಯಗಳು ಸೇರಬೇಕಾದೀತು.

ಸಮನ್ವಯ ಸೂತ್ರದಲ್ಲಿ ಸಮನ್ವಯ ಪ್ರಸ್ತಾವ ಇದೆ ಈಕ್ಷತಿ ಸೂತ್ರದಲ್ಲಿ ಸಮನ್ವಯಕ್ಕೆ ಬಾಧಕವಾದ ಅವಾಚ್ಯತ್ವವನ್ನು ಪರಿಹಾರ ಮಾಡಿದೆ ಅದರಿಂದ ಎರಡಕ್ಕೂ ಸಮನ್ವಯಾಧ್ಯಾಯದ ಸಂಗತಿ ಇದೆ. ಪಾದಸಂಗತಿ ಇಲ್ಲ. ಆನಂದಮಯಾಧಿಕರಣದಿಂದ ತೊಡಗಿ ಮುಂದಿನ ಎಲ್ಲ ಅಧಿಕರಣಗಳಿಗೂ ಅಧ್ಯಾಯ-ಪಾದಸಂಗತಿಗಳೆರಡೂ ಇವೆ. ಹೀಗಾಗಿ ಹಿಂದಿನ ಐದು ಅಧಿಕರಣಗಳು ಪ್ರಥಮಾಧ್ಯಾಯಕ್ಕೂ ಪೀಠಿಕಾರೂಪವಾಗಿವೆ. ಮೊದಲನೆ ಅಧಿಕರಣ ವಿಚಾರದ ಅವಶ್ಯಕತೆಯನ್ನು ಸಮರ್ಥಿಸುತ್ತದೆ. ಮುಂದೆ ನಾಲ್ಕು ಅಧಿಕರಣಗಳು ಕ್ರಮದಿಂದ ಬರುತ್ತವೆ. ಬಳಿಕ ಸಮನ್ವಯ ಹೇಗೆ ಎಂಬ ಜಿಜ್ಞಾಸೆ ಬಂದಾಗ ಪ್ರಥಮಾಧ್ಯಾಯದ ಮತ್ತು ಅದರ ಆದಿಯ ನಾಮಪಾದಗಳ ಪ್ರವೃತ್ತಿ.

ಪ್ರಥಮಸೂತ್ರಕ್ಕೆ ಪೂರ್ವಾಧಿಕರಣದ ಮತ್ತು ಅದು ವಿಚಾರಿಸುವ ಶ್ರುತಿಯ ಸಂಗತಿ ಇರಲು

ರಾಮಾನುಜಮತದಲ್ಲಿ ಕರ್ಮಮೀಮಾಂಸೆ ದೇವಮೀಮಾಂಸೆ ಬ್ರಹ್ಮಮೀಮಾಂಸೆ ಇವು ಮೂರು ಒಂದೇ ಗ್ರಂಥದ ಮೂರು ಭಾಗಗಳು. ಅವುಗಳನ್ನು ಕ್ರಮವಾಗಿಯೆ ಅಧ್ಯಯನ ಮಾಡಬೇಕು. ದೇವಮೀಮಾಂಸೆ ಸಿದ್ಧಬೋಧಕ. ಶಬ್ದಗಳಿಗೆ ಸಿದ್ಧಪರತ್ವವನ್ನು ಒಪ್ಪದೆ ದೇವಮೀಮಾಂಸೆ ನಡೆಯಲಾರದು ಎಂದ ಮೇಲೆ ಮುಂದೆ ಅಧ್ಯಯನ ಮಾಡುವ ಬ್ರಹ್ಮಮೀಮಾಂಸೆಯಲ್ಲಿ ಸಿದ್ಧಪರತ್ವದ ಬಗ್ಗೆ ವಿವಾದ ಸಂಗತವಾಗುವುದೆ?

**ಶೈವಭಾಷ್ಯೋಕ್ತ ಅಧಿಕರಣ ಅಸಂಗತ**

ಶೈವಭಾಷ್ಯದಲ್ಲಿ 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' 'ವಿಚಾರಕ್ಕಾಗಿ ಗುರುವಿನ ಬಳಿಗೆ ಹೋಗಬೇಕು'ಎಂಬುದು ವಿಷಯವಾಕ್ಯ. 'ಅಯಮಾತ್ಮಾ ಬ್ರಹ್ಮ' ಎಂದು ವೇದಾಂತವು 'ನಾನು' ಎಂದು ಅನುಭವಸಿದ್ಧವಾದ ಜೀವಾತ್ಮನನ್ನೆ ಬ್ರಹ್ಮ ಎಂದು ಕರೆದಿದೆ. ಅದ್ವೈತಿಗಳು ಹೇಳುವ ಶುದ್ಧ ಚೈತನ್ಯಾಭೇದ ಇಲ್ಲಿ ಉಕ್ತವಾಗುವುದಿಲ್ಲ. ಅದನ್ನೊಪ್ಪಿದರೂ ಶುದ್ಧಚೈತನ್ಯ ನಿರ್ಧರ್ಮಕವಾದ್ದರಿಂದ ಅದನ್ನು ಶಬ್ದದಿಂದ ಹೇಳುವುದೆ ಅಶಕ್ಯ. ಮತ್ತು ಜೀವಾತ್ಮನಲ್ಲಿರುವ ಕರ್ತೃತ್ವಾದಿ ಧರ್ಮ ಮಿಥ್ಯೆ ಎನಿಸಲೂ ಸಾಧ್ಯವಿಲ್ಲ. ಸತ್ಯವೆಂದು ಪ್ರತ್ಯಕ್ಷಾನುಭವ ಹೇಳುತ್ತಿದೆ. ಅದರಿಂದ ಜೀವಬ್ರಹ್ಮಾಭೇದವನ್ನೇ ಶ್ರುತಿ ಹೇಳುತ್ತದೆ. ಜೀವಾತ್ಮನ ವಿಷಯದಲ್ಲಿ ಸಂಶಯವಿಲ್ಲದ್ದರಿಂದ ವಿಚಾರ ಬೇಡ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಯಾರಿಗೂ ಶಕ್ಯವಿಲ್ಲ. ಅಲ್ಪಸ್ವಲ್ಪ ತಿಳಿದರೆ ಅದರಿಂದ ಮೋಕ್ಷಫಲವಿಲ್ಲ. ಅದರಿಂದಲೂ ಬ್ರಹ್ಮವಿಚಾರ ಬೇಡ. ಆದಕ್ಕಾಗಿ ಗುರುವಿನ ಬಳಿಗೆ ಹೋಗುವುದೂ ಬೇಡ ಎಂದು ಪೂರ್ವಪಕ್ಷ.

ಜೀವಬ್ರಹ್ಮಭೇದವನ್ನೂ ವೇದಾಂತದಲ್ಲಿ ಅಲ್ಲಲ್ಲಿ ಹೇಳಿರುವುದರಿಂದ ಭೇದವೆ ಅಭೇದವೆ ಎಂದು ಸಂದೇಹ ಬರುವುದರಿಂದ ವಿಚಾರ ಬೇಕು ಎಂದು ಸಿದ್ಧಾಂತ.

ಇಲ್ಲಿ ವಿಷಯವಾಕ್ಯವನ್ನು ಆರಿಸಿಕೊಳ್ಳುವುದರಲ್ಲಿಯೆ ತಪ್ಪಿದೆ. ಈ ವಿಷಯ ವಾಕ್ಯದಲ್ಲಿ ಅರ್ಥನಿರ್ಣಯಕ್ಕೆ ಯುಕ್ತಿಯೆ ಇಲ್ಲ. ಸಾಕ್ಷಾತ್ 'ಜಿಜ್ಞಾಸಾ' ಶಬ್ದದಿಂದಲೆ ಕೂಡಿದ ವಾಕ್ಯಗಳಿರುವಾಗ ಅವನ್ನು ಬಿಟ್ಟು ಸಂಬಂಧವೆ ಇಲ್ಲದ ಈ ವಿಷಯವಾಕ್ಯವೆತ್ತಿಕೊಂಡಿರುವುದು ಅಯುಕ್ತ. ಶ್ರುತಿ ಜೀವಬ್ರಹ್ಮೈಕ್ಯವನ್ನು ಹೇಳುವಾಗ ಪ್ರತ್ಯಕ್ಷವಿರೋಧ ಬಂದರೆ ಪ್ರತ್ಯಕ್ಷ ಅತತ್ತ್ವಾವೇದಕ, ದುರ್ಬಲವೆಂದು ಅದ್ವೈತಿಗಳಂತೆ ಈ ಶೈವರು ಹೇಳುವುದಿಲ್ಲ. ಆಗ ಶ್ರುತಿ ಐಕ್ಯವನ್ನು ಹೇಗೆ ಹೇಳುವುದು ಸಾಧ್ಯ? ಅಭೇದ ವಾಕ್ಯಗಳನ್ನು ತೋರಿಸುವ ಪೂರ್ವಪಕ್ಷ ಭೇದವಾಕ್ಯಗಳನ್ನು ನೋಡಿಯೆ ಇಲ್ಲವೆ? ಅವುಗಳಿಗೆ ಏನು ಗತಿ? ನಾನು ಎಂದು ಜೀವ ಅನುಭವಸಿದ್ಧನೇ ಆಗಿದ್ದರೂ ದೇಹಾದಿಗಳಿಗಿಂತ ಜೀವ ಭಿನ್ನನೆ ಅಭಿನ್ನನೆ ಎಂದು ವಿಚಾರ ಮಾಡಬಹುದು. ಬೇಡ ಏಕೆ? 'ಶುದ್ಧಚೈತನ್ಯಾಭೇದ ಒಪ್ಪಿದರೂ ಶಬ್ದದಿಂದ ಅದನ್ನು ಹೇಳಲಾಗದು' ಎನ್ನುವ ಮಾತೂ ಸ್ವವ್ಯಾಹತ. ಒಪ್ಪಬೇಕೆಂದರೆ ಅದನ್ನು ಹೇಳುವ ಶಬ್ದ ಬೇಕು. ಯಾವ ಶಬ್ದವೂ ಹೇಳದೆಂದು ಹೇಳುವುದು ಸರಿಯಲ್ಲ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಅಶಕ್ಯವೆಂದರೆ ಶಕ್ಯವಿದ್ದಷ್ಟು ತಿಳಿದರೆ ಮೋಕ್ಷ ಎಂದೇ ಒಪ್ಪಬೇಕಾಗುವುದರಿಂದ ಮೋಕ್ಷಫಲವಿಲ್ಲ

ಎಂದುದೂ ಅಯುಕ್ತ. ಭೇದಾಭೇದ ಸಂದೇಹವಿದೆ ಎಂಬ ಸಿದ್ಧಾಂತ ಯುಕ್ತಿಗೆ ಸೂಚಕವಾದ ಯಾವ ಶಬ್ದವೂ ಸೂತ್ರದಲ್ಲಿಲ್ಲ. ಅದರಿಂದ ಈ ಅಧಿಕರಣ ಸೂತ್ರಕ್ಕೆ ಸಂಬಂಧಿಸಿಯೆ ಇಲ್ಲ - ಹೀಗೆ ಶೈವಭಾಷ್ಯದ ಅಧಿಕರಣವನ್ನು ಪ್ರಕಾಶದಲ್ಲಿ ವಿಮರ್ಶಿಸಲಾಗಿದೆ.

### ಜಿಜ್ಞಾಸಾಧಿಕರಣದ ಸಂಗತಿ

ಬ್ರಹ್ಮವಿಚಾರವು ಶಾಸ್ತ್ರದಲ್ಲಿ ನಡೆಯಬೇಕಾದರೆ ಅದರ ಅವಶ್ಯಕತೆಯನ್ನು ಮೊದಲಿಗೆ ಸೂತ್ರ ಸಮರ್ಥಿಸುವುದರಿಂದ ಶಾಸ್ತ್ರದ ಉಪೋದ್ಘಾತ ಸಂಗತಿ ಇದೆ. ಆದರೆ ಪ್ರಥಮಾಧ್ಯಾಯ ಪ್ರಥಮ ಪಾದಗಳ ಸಂಗತಿಗಳಿಲ್ಲ. ಈ ಸೂತ್ರದ ಬಲದಿಂದಲೆ ಪ್ರಥಮಾಧ್ಯಾಯ ಪ್ರಥಮ ಪಾದಗಳು ಪ್ರವೃತ್ತಿ ಮಾಡುವುದು ನಿಜವೆ. ಆದರೆ ಕ್ರಮವಾಗಿ ನಾಲ್ಕು ಪಾದಗಳೂ ಆ ಮೂಲಕ ನಾಲ್ಕು ಅಧ್ಯಾಯಗಳೂ ಈ ಸೂತ್ರದ ಬಲದಿಂದಲೆ ಪ್ರವೃತ್ತಿ ಮಾಡುವುದರಿಂದ ಪ್ರತ್ಯೇಕವಾಗಿ ಪ್ರಥಮಾಧ್ಯಾಯ ಪ್ರಥಮಪಾದಗಳ ಸಂಗತಿಗಳಿಲ್ಲ.

ಬ್ರಹ್ಮವಿಚಾರ ವಿಧಾಯಕ ವಾಕ್ಯದ ಅರ್ಥನಿರ್ಣಯಕ್ಕೆ ಯುಕ್ತಿಯನ್ನು ಹೇಳುವ ಮೂಲಕ ಈ ಸೂತ್ರ ಬ್ರಹ್ಮವಿಚಾರವೆನಿಸುವುದರಿಂದ ಬ್ರಹ್ಮವಿಚಾರರೂಪವಾದ ಶಾಸ್ತ್ರದ ಅಂತರ್ಭಾವ ಸಂಗತಿಯೂ ಈ ಸೂತ್ರಕ್ಕೆ ಇದೆ.

'ಕಲ್ಪತರು'ವಿನಲ್ಲಿ ಈ ಸೂತ್ರಕ್ಕೆ ಶಾಸ್ತ್ರಸಂಗತಿ ಪ್ರಥಮಾಧ್ಯಾಯಸಂಗತಿ ಪ್ರಥಮಪಾದ ಸಂಗತಿಗಳು ಮೂರು ಇವೆ ಎಂದಿದೆ. ಅದು ಸರಿಯಲ್ಲ ಎನ್ನುವುದು ಸ್ಪಷ್ಟ.

'ವಿವರಣ'ದಲ್ಲಿ ಈ ಸೂತ್ರ ವಿಷಯವಾಕ್ಯಕ್ಕೆ ಅದರ ಅರ್ಥದೊಂದಿಗೆ ಸಮನ್ವಯ-ಗೊಳಿಸುವುದರಿಂದ ಆ ಮೂಲಕ ಎಲ್ಲ ವೇದಾಂತವಾಕ್ಯಗಳಿಗೂ ಬ್ರಹ್ಮನೊಂದಿಗೆ ಸಮನ್ವಯಗೊಳಿಸಲು ದಾರಿ ಮಾಡಿಕೊಡುವುದರಿಂದ ಸಮನ್ವಯಾಧ್ಯಾಯದ ಸಂಗತಿ ಇದೆ ಎಂದಿದೆ. ಆದರೆ ಆಯಾ ವಾಕ್ಯಗಳಿಗೆ ಅವುಗಳ ಅರ್ಥಗಳೊಡನೆ ಸಮನ್ವಯಗೊಳಿಸಿದ ಮಾತ್ರಕ್ಕೆ ಸಮನ್ವಯಾಧ್ಯಾಯದಲ್ಲಿಯೆ ಆ ಎರಡೂ ಅಧ್ಯಾಯಗಳು ಸೇರಬೇಕಾದೀತು.

ಸಮನ್ವಯ ಸೂತ್ರದಲ್ಲಿ ಸಮನ್ವಯ ಪ್ರಸ್ತಾವ ಇದೆ ಈಕ್ಷತಿ ಸೂತ್ರದಲ್ಲಿ ಸಮನ್ವಯಕ್ಕೆ ಬಾಧಕವಾದ ಅವಾಚ್ಯತ್ವವನ್ನು ಪರಿಹಾರ ಮಾಡಿದೆ ಆದರಿಂದ ಎರಡಕ್ಕೂ ಸಮನ್ವಯಾಧ್ಯಾಯದ ಸಂಗತಿ ಇದೆ. ಪಾದಸಂಗತಿ ಇಲ್ಲ. ಆನಂದಮಯಾಧಿಕರಣದಿಂದ ತೊಡಗಿ ಮುಂದಿನ ಎಲ್ಲ ಅಧಿಕರಣಗಳಿಗೂ ಅಧ್ಯಾಯ-ಪಾದಸಂಗತಿಗಳೆರಡೂ ಇವೆ. ಹೀಗಾಗಿ ಹಿಂದಿನ ಐದು ಅಧಿಕರಣಗಳು ಪ್ರಥಮಾಧ್ಯಾಯಕ್ಕೂ ಪೀಠಿಕಾರೂಪವಾಗಿವೆ. ಮೊದಲನೆ ಅಧಿಕರಣ ವಿಚಾರದ ಅವಶ್ಯಕತೆಯನ್ನು ಸಮರ್ಥಿಸುತ್ತದೆ. ಮುಂದೆ ನಾಲ್ಕು ಅಧಿಕರಣಗಳು ಕ್ರಮದಿಂದ ಬರುತ್ತವೆ. ಬಳಿಕ ಸಮನ್ವಯ ಹೇಗೆ ಎಂಬ ಜಿಜ್ಞಾಸೆ ಬಂದಾಗ ಪ್ರಥಮಾಧ್ಯಾಯದ ಮತ್ತು ಅದರ ಆದಿಯ ನಾಮಪಾದಗಳ ಪ್ರವೃತ್ತಿ.

ಪ್ರಥಮಸೂತ್ರಕ್ಕೆ ಪೂರ್ವಾಧಿಕರಣದ ಮತ್ತು ಅದು ವಿಚಾರಿಸುವ ಶ್ರುತಿಯ ಸಂಗತಿ ಇರಲು

ಶಕ್ಯವಿಲ್ಲ. ಆದರಿಂದ 'ಅಧಿಕರಣ ಶ್ರುತಿ ಸಂಗತಿಗಳಿಲ್ಲ' ಎಂದು ಟೀಕೆಯಲ್ಲಿ ಹೇಳಿದ್ದೇಕೆ ಎಂದರೆ 'ಕಲ್ಪತರು'ವಿನಲ್ಲಿ ಶ್ರುತಿ ಸಂಗತಿಯನ್ನು ಹೇಳಿದೆ. ಅದು ಸರಿಯಲ್ಲ - 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಶ್ರುತಿ ''ವೇದದಿಂದ ಅರ್ಥಜ್ಞಾನ ಪಡೆಯಬೇಕು'' ಎಂದಿದೆ. ವಿಚಾರವಿಲ್ಲದೆ ಅರ್ಥಜ್ಞಾನ ಬರಲಾರದೆಂದಮೇಲೆ ಶ್ರುತಿಯೇ ವಿಚಾರದ ಅವಶ್ಯಕತೆಯನ್ನು ನಿರ್ಣಯ ಮಾಡಿ ಹೇಳಿದಂತಾಯಿತು. ಈ ಅಧಿಕರಣವೂ ಅದೇ ಕಾರ್ಯ ಮಾಡುವುದರಿಂದ ಶ್ರುತಿಸಂಗತಿ ಬಂದಿತು ಎಂದು 'ಕಲ್ಪತರು' ಹೇಳಿದೆ. ಆದರೆ ಇದು ಶ್ರುತಿಮೂಲತ್ವವೆ ಹೊರತು ಶ್ರುತಿಸಂಗತಿಯಲ್ಲ. ವಿಷಯ ಸಂದೇಹ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ ಇವು ಐದು ಸೇರಿದರೆ ಅಧಿಕರಣವೆನಿಸುತ್ತದೆ ಎಂದು ಪ್ರಸಿದ್ಧಿ. ಆದರೆ ಇದು ಪರಮತಾನುಸಾರಿ. ನಮ್ಮ ಸಿದ್ಧಾಂತದಲ್ಲಿ ಅಧಿಕರಣದೊಳಗೆ ಸಂದೇಹಬೀಜವನ್ನು ಸೇರಿಸಬೇಕು. ಪ್ರಯೋಜನವನ್ನು ಬಿಡಬೇಕು. ಏಕೆಂದರೆ ಪ್ರಯೋಜನ ಅಧಿಕರಣದ ಫಲವೆ ಹೊರತು ಅಧಿಕರಣದ ಶರೀರದಲ್ಲಿ ಅದು ಸೇರುವುದಿಲ್ಲ.

### ಜಿಜ್ಞಾಸಾಧಿಕರಣದ ವಿಷಯ ಮತ್ತು ಸಂದೇಹ

ಜಿಜ್ಞಾಸಾಧಿಕರಣಕ್ಕೆ ವಿಚಾರಶಾಸ್ತ್ರವೆ ವಿಷಯ. ಅದು ಬೇಕೆ ಬೇಡವೆ ಎಂದು ಸಂದೇಹ. ಏಕೆಂದರೆ ಬ್ರಹ್ಮ ಜೀವನಿಗಿಂತ ಬೇರಲ್ಲವಾದರೆ ಅವನು ಅನುಭವವೇದ್ಯನಾಗಿರುವುದರಿಂದ ವಿಚಾರ ಬೇಡ, ವಿಚಾರಶಾಸ್ತ್ರವೂ ಬೇಡ. ಬ್ರಹ್ಮ ಜೀವನಿಗಿಂತ ಬೇರೆಯೆಂದಾದರೆ ಅನುಭವವೇದ್ಯನಾದ ಜೀವನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲದಿದ್ದರೂ ಬ್ರಹ್ಮ ವಿಚಾರಯೋಗ್ಯನೆನಿಸಬಹುದು. ವಿಚಾರಶಾಸ್ತ್ರ- ಬೇಕೆನ್ನ-ಬಹುದು. ವಿಷಯದ ಬಗ್ಗೆ ಸಂದೇಹದಂತೆ ಪ್ರಯೋಜನದ ಬಗ್ಗೆಯೂ ಸಂದೇಹವನ್ನು ಹೇಳಬಹುದು. ಮೋಕ್ಷ ಕರ್ಮಸಾಧ್ಯವೆ, ಜ್ಞಾನಸಾಧ್ಯವೆ? ಕರ್ಮಸಾಧ್ಯವಾದರೆ ಜ್ಞಾನಕ್ಕಾಗಿ ವಿಚಾರ ಮಾಡಬೇಕಾಗಿಲ್ಲ, ಶಾಸ್ತ್ರ ಬೇಡ. ಜ್ಞಾನಸಾಧ್ಯವೆಂದಾದರೆ ಜ್ಞಾನಕ್ಕಾಗಿ ವಿಚಾರ ಬೇಕು, ಶಾಸ್ತ್ರ ಬೇಕು ಎಂದು. ಆದರೆ ಈ ಸಂದೇಹವನ್ನು ತೋರಿಸದಿರಲು ಅನೇಕ ಕಾರಣಗಳಿವೆ. ವಿಷಯ ಸಂದೇಹವನ್ನು ತೋರಿಸಿದ್ದರಿಂದಲೆ ಪ್ರಯೋಜನ ಸಂದೇಹವನ್ನೂ ತೋರಿಸಿದಂತಾಯಿತು. ಅಥವಾ ಮುಂದೆ ವಿದ್ಯಾಧಿಕರಣದಲ್ಲಿ ಇದರ ಬಗ್ಗೆ ವಿಚಾರವಿರುವುದರಿಂದ ಇಲ್ಲಿ ಕೈಬಿಡಲಾಗಿದೆ. ಅಥವಾ ಕರ್ಮದಿಂದ ಮೋಕ್ಷಲಭ್ಯವೆನ್ನುವ ಪಕ್ಷದಲ್ಲಿ ಹೇಗೆ ವಿಚಾರ ವ್ಯರ್ಥವೋ ಹಾಗೆಯೆ ಜ್ಞಾನದಿಂದ ಲಭ್ಯವೆನ್ನುವ ಪಕ್ಷದಲ್ಲಿಯೂ ವ್ಯರ್ಥವೆ. ಏಕೆಂದರೆ ಮುಂದೆ ಹೇಳುವಂತೆ ಜ್ಞಾನವಿದ್ದರೂ ಮೋಕ್ಷ ಲಭಿಸಬೇಕಿಲ್ಲ. ಆದ್ದರಿಂದ ಸಂದೇಹವೆ ಅನುಚಿತ. ವಸ್ತುತಃ ಸೂತ್ರದ ಬ್ರಹ್ಮಶಬ್ದದಿಂದ ನಿವಾರಣೆಯಾಗುವುದು ಈ ವಿಷಯಾಭಾವಪೂರ್ವಪಕ್ಷ ಅತಃಶಬ್ದದಿಂದ ನಿವಾರಣೆಯಾಗುವ ಪ್ರಯೋಜನಾಭಾವ ಪೂರ್ವಪಕ್ಷ ಈಗ ಅಪ್ರಸಕ್ತ ಎಂದು ಪ್ರಯೋಜನ ಸಂದೇಹವನ್ನು ತೋರಿಸಿಲ್ಲ.

### ಜಿಜ್ಞಾಸಾಧಿಕರಣ ಪೂರ್ವಪಕ್ಷ-ಅದ್ವೈತರೀತಿಯಿಂದ

ಸೂತ್ರದ ಬ್ರಹ್ಮಶಬ್ದಕ್ಕೆ ಬ್ರಹ್ಮನು ಗುಣಪೂರ್ಣನಾದ್ದರಿಂದ ಜೀವನಿಗಿಂತ ವಿಲಕ್ಷಣ ಎಂದು ತಿಳಿಸುವ ಅಭಿಪ್ರಾಯವಿರುವುದರಿಂದ ಆ ಶಬ್ದದಿಂದ ನಿವಾರಣೆಯಾಗುವ ಪೂರ್ವಪಕ್ಷವನ್ನು ಹೇಳಬೇಕು -

*ಪರಿಪೂರ್ಣಚಂದ್ರಿಕಾ*

ವೇದದಲ್ಲಿ ಕರ್ಮಕಾಂಡ ಕರ್ಮವನ್ನು ಹೇಳಲು ಹೊರಟಿದೆ. ವೇದಾಂತಕ್ಕೆ ಅದ್ವೈತಿಗಳು ಹೇಳಿದಂತೆ ಉಪಕ್ರಮಾದಿ ಲಿಂಗಗಳಿಂದ ನಿರ್ಧರ್ಮಕ ಚೈತನ್ಯವನ್ನು ಹೇಳುವ ಅಭಿಪ್ರಾಯ ಮೇಲುನೋಟಕ್ಕೆ ಕಾಣುತ್ತದೆ. ಹೀಗಾಗಿ ಜೀವನಿಗಿಂತ ಬೇರೆ ಗುಣಪೂರ್ಣ ಬ್ರಹ್ಮನಿಲ್ಲ. ಜೀವ ಸ್ವಪ್ರಕಾಶನಾಗಿ ಸಿದ್ಧನಾಗಿದ್ದಾನೆ. ಆತ್ಮನಿಗಿಂತ ಬೇರೆ ಯಾವುದೂ ಸತ್ಯವಲ್ಲ. ಶಾಸ್ತ್ರವೇದ್ಯವೂ ಅಲ್ಲ. ಸತ್ಯವಲ್ಲದ್ದು ಶಾಸ್ತ್ರವೇದ್ಯವಾದರೆ ಶಾಸ್ತ್ರ ಅಪ್ರಮಾಣವಾದೀತು. ವೇದಾಂತವೇದ್ಯವಾದ ಶುದ್ಧಚೈತನ್ಯ ಅನುಭವದಲ್ಲಿ ಅವೇದ್ಯ ಎನ್ನುವ ವಾದವನ್ನು ಹಿಂದೆಯೆ ನಿರಾಕರಿಸಲಾಗಿದೆ. ವೇದ್ಯವೆ ಆದರೂ ಅವಿದ್ಯೆಯ ಪ್ರಭಾವದಿಂದ ಅವೇದ್ಯವೂ ಹೌದೆನ್ನುವುದನ್ನೂ ಹಿಂದೆ ನಿರಾಕರಿಸಲಾಗಿದೆ. ಪ್ರತ್ಯಕ್ಷ ವಿರೋಧವಿರುವಾಗ ವೇದಾಂತ ಶುದ್ಧ ಚೈತನ್ಯವನ್ನು ಹೇಗೆ ಹೇಳುತ್ತದೆ ಎಂದರೆ ಅದ್ವೈತಿ ರೀತಿಯಿಂದ ಪ್ರತ್ಯಕ್ಷ ದುರ್ಬಲ.

ನ್ಯಾಯವಿವರಣಾನುಸಾರವಾಗಿ ಇಲ್ಲಿ ಟೀಕೆ ಹೀಗೆ ಹೇಳಿದೆ. ಸುಧೆಯಲ್ಲಿ ಯಾವ ರೀತಿಯಿಂದ ನೋಡಿದರೂ ವಿಚಾರ ಅನಾವಶ್ಯಕವೆನ್ನಲು ಪ್ರತ್ಯಕ್ಷ ವಿರುದ್ಧವಾಗಿ ಶ್ರುತಿ ಏನು ಹೇಳಿದರೂ ಅದು ನಿರರ್ಥಕ, ವಿಚಾರಕ್ಕೇ ಅಯೋಗ್ಯವೆಂದು ಪೂರ್ವಪಕ್ಷವಿದೆ.

### ಆತ್ಮಸ್ವಪ್ರಕಾಶ

'ನಾನು' ಎಂಬುದು ತಾರ್ಕಿಕರು ಹೇಳುವಂತೆ ಮಾನಸಾನುಭವವೆಂದರೆ ಅದು ಇನ್ನೊಂದು ಮಾನಸಾನುಭವಕ್ಕೆ ವೇದ್ಯ ಅದೂ ಮತ್ತೊಂದಕ್ಕೆ ಎಂದು ಅನವಸ್ಥೆ. ಜಿಜ್ಞಾಸೆ ಬಂದರೆ ಮಾತ್ರ ಜ್ಞಾನಗೋಚರವಾಗಬೇಕು. ಇಲ್ಲದಿದ್ದರೆ ಇಲ್ಲ, ಅನವಸ್ಥೆ ಇಲ್ಲ ಎನ್ನಕೂಡದು. ಜ್ಞಾನಗೋಚರವಾಗದ ಜ್ಞಾನ ಒಂದರ ಅಸ್ತಿತ್ವದಲ್ಲಿ ಏನು ಪ್ರಮಾಣ? ಆದರಿಂದ 'ನಾನು' ಎಂಬುದು ಸ್ವಪ್ರಕಾಶಾತ್ಮಾನುಭವ ವೆನ್ನಬೇಕು. ಪ್ರಾಭಾಕರರ ಪ್ರಕಾರ ಜ್ಞಾನ ಸ್ವಪ್ರಕಾಶ. ಆತ್ಮನಲ್ಲ. ಜ್ಞಾನ ತನ್ನನ್ನು ತಾನು ಕಾಣುವಾಗ ತನಗೆ ಆಶ್ರಯನಾದ ಆತ್ಮನನ್ನೂ ಕಾಣುತ್ತದೆ ಎನ್ನುತ್ತಾರೆ. ಆದರೆ ನಿದ್ದೆಯಲ್ಲಿಯೂ 'ನಾನು' ಎಂಬ ಜ್ಞಾನವಿದೆ. ಅದು ಮಾನಸಜ್ಞಾನವಲ್ಲ. ಆಗಲೂ ಮಾನಸಜ್ಞಾನವಿದ್ದರೆ ಅದು ನಿದ್ದೆಯೆ ಅಲ್ಲ. ನಿದ್ದೆಯಿಂದ ಎದ್ದಾಗ ನಾನು ಇಷ್ಟು ಹೊತ್ತು ಸುಖವಾಗಿ ನಿದ್ದೆ ಮಾಡಿದ್ದೇನೆ ಎಂದು ನಮ್ಮ ನಿದ್ದೆಯನ್ನು ನಾವು ನೆನೆಯುವುದರಿಂದ ನಿದ್ದೆಯಲ್ಲಿ ಆತ್ಮಾನುಭವವಿದೆ. ಅದು ಸ್ವಪ್ರಕಾಶ. ಆತ್ಮನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲವೆನ್ನಲು ಯಾವುದಾದರೊಂದು ಬಗೆಯಿಂದ ಆತ್ಮನು ಪ್ರಕಾಶನೆಂದಾದರೆ ಸಾಕು. ವಸ್ತುಸ್ಥಿತಿ ಆತ ಸ್ವಪ್ರಕಾಶನೆಂದು.

### ವೇದಾಂತವು ಅನುವಾದಕ

ವಾಯುಯಾಗವನ್ನು ಪ್ರಶಂಸಿಸಲು 'ವಾಯು ಶೀಘ್ರಗಾಮಿ' ಎಂದು ನಾವು ತಿಳಿದಿರುವುದನ್ನೆ ಶ್ರುತಿ ಅನುವಾದ ಮಾಡುತ್ತದೆ. ಹುಣ್ಣಿಮೆಯಂದು ಮಾಡುವ ಮೂರು ಯಾಗಗಳನ್ನು 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ' ಎಂದೂ ಅಮಾವಾಸ್ಯೆಯಲ್ಲಿ ಮಾಡುವ ಮೂರು ಯಾಗಗಳನ್ನು

'ಯ ಏವಂ ವಿದ್ವಾನ್ ಅಮಾವಾಸ್ಯಾಂ ಯಜತೇ' ಎಂದೂ ಶ್ರುತಿ ಅನುವಾದಿಸುತ್ತದೆ. 'ವಾಯು ಶೀಘ್ರಗಾಮಿ' ಎನ್ನುವುದು ವಾಯುಯಾಗ ಪ್ರಶಂಸೆಗಾಗಿರುವುದರಿಂದ ಸಾರ್ಥಕ. ಎರಡು ವಿದ್ವದ್ ವಾಕ್ಯಗಳು, 'ದರ್ಶ' 'ಪೂರ್ಣಮಾಸ'ಗಳೆಂಬ ಯಾಗನಾಮಗಳು ಅಮಾವಾಸ್ಯೆ ಹುಣ್ಣಿಮೆಗಳಲ್ಲಿ ಮಾಡುವ ಮೂರು ಮೂರು ಯಾಗಗಳ ಗುಂಪುಗಳಿಗೆ ಹೆಸರುಗಳೆಂದು ತಿಳಿಸಿ ಸಾರ್ಥಕವೆನಿಸುವುವು. ಹಾಗೇ ಅನುಭವಸಿದ್ಧವಾದ ಆತ್ಮಸ್ವರೂಪವನ್ನು ಅನುವಾದ ಮಾಡುವ ವೇದಾಂತವು ಪಾರಾಯಣ ಜಪಗಳಿಂದ ಪುಣ್ಯ ಉಂಟುಮಾಡಿ ಸಾರ್ಥಕವೆನಿಸುವುದು.

ಪ್ರಮಾಣ ಶಿಖಾಮಣಿ ಎನಿಸಿದ ವೇದಾಂತ ಅನುವಾದಕವಾಗುವುದಾದರೆ ಪೌರುಷೇಯವಾದ ವಿಚಾರಶಾಸ್ತ್ರ ಹಾಗಾದರೆ ತಪ್ಪೇನು ಎನ್ನಬಾರದು. ಪೌರುಷೇಯ ಗ್ರಂಥ ಏನಾದರೂ ಅಪೂರ್ವವಿಷಯವನ್ನು ಹೇಳಬೇಕು. ತಿಳಿದಿದ್ದನ್ನೇ ಹೇಳಿದರೆ ಯಾರೂ ಕೇಳುವುದಿಲ್ಲ. ಅಪೌರುಷೇಯಗ್ರಂಥ ಹಾಗಲ್ಲ. ಪ್ರತ್ಯಕ್ಷಾದಿಗಳಂತೆ ಸ್ವಾಭಾವಿಕವಾಗಿ ತಾನು ಹೇಳುವುದನ್ನು ಹೇಳಿಬಿಡುತ್ತದೆ. ಅದು ದೋಷವಲ್ಲ. ತಿಳಿದ ವಿಷಯವನ್ನೆ ತಿಳಿಸಲು ವಾಕ್ಯಪ್ರಯೋಗ ಮಾಡುವುದು ಪುರುಷನ ದೋಷ. ವಿಚಾರಶಾಸ್ತ್ರ ಅಪೂರ್ವಯುಕ್ತಿಗಳನ್ನು ಹೇಳಲು ಹೊರಟ ಗ್ರಂಥ. ಸಂದೇಹ ಬಂದಾಗ ಮಾತ್ರ ನಿರ್ಣಯಕ್ಕಾಗಿ ಯುಕ್ತಿ ಬೇಕು. ಅಸಂದಿಗ್ಧವಾದ ವಿಷಯದಲ್ಲಿ ಯುಕ್ತಿಯನ್ನು ಹೇಳುವುದು ವ್ಯರ್ಥ, ಅಗ್ರಾಹ್ಯ.

ಅಪೌರುಷೇಯವಾದ ವೇದವನ್ನೂ ಅದು ಅನುವಾದಕ, ವಿಚಾರಕ್ಕೆ ಅಯೋಗ್ಯವೆಂದು ಆಕ್ಷೇಪಿಸಿ ಪೂರ್ವಪಕ್ಷ ಮಾಡುವುದು ಹೊಸತೇನಲ್ಲ. ಧರ್ಮಾದಿಗಳನ್ನು ಬೋಧಿಸದ ಅರ್ಥವಾದ ವ್ಯರ್ಥವೆಂದು ಭಾಟ್ಟರು ಪೂರ್ವಪಕ್ಷ ಮಾಡಿದ್ದುಂಟು. ವಾಯು ಶೀಘ್ರಗಾಮಿಯಾದ್ದರಿಂದ ಶೀಘ್ರಫಲಕಾರಿಯಾದ ವಾಯುಯಾಗವನ್ನು ಮಾಡಬೇಕು ಎಂದು ವಿಧಿವಾಕ್ಯವು ಅರ್ಥವಾದದಿಂದ ಸಮರ್ಥನೆಯನ್ನು ಅಪೇಕ್ಷಿಸಿ ಅಪ್ರಮಾಣವೆನಿಸುತ್ತದೆ ಎಂದು ಪ್ರಾಭಾಕರರು ಪೂರ್ವಪಕ್ಷ ಮಾಡಿದ್ದಾರೆ. ಜಗತ್ತಿಗೆ ಕಾರಣ ಒಂದಿರಬೇಕೆಂದು ನಾವು ಊಹಿಸಿರುವುದನ್ನೆ ಶ್ರುತಿ ಹೇಳುವುದರಿಂದ ಶ್ರುತಿ ಅನುವಾದಕ, ಅಪ್ರಮಾಣವೆಂದು ರಾಮಾನುಜರು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಈಕ್ಷತ್ಯಧಿಕರಣದಲ್ಲಿ ಶಂಕರ ರಾಮಾನುಜರಿಬ್ಬರೂ ಸಾಂಖ್ಯರ ಮೂಲಪ್ರಕೃತಿಯನ್ನು ಶ್ರುತಿ ಹೇಳಿ ಅನುವಾದಕವೆನಿಸಿದೆ ಎಂದು ಪೂರ್ವಪಕ್ಷ ತೋರಿಸಿದ್ದಾರೆ. ಅದರಿಂದ ನಾವೂ ಪೂರ್ವಪಕ್ಷದಲ್ಲಿ ಹೇಳುತ್ತೇವೆ - 'ವೇದಾಂತವೂ ಅದನ್ನು ವಿಚಾರಿಸುವ ಶಾಸ್ತ್ರವೂ ಶುದ್ಧಚೈತನ್ಯ ಬೋಧಕವಾದರೆ ಅವುಗಳ ಅರ್ಥಜ್ಞಾನಕ್ಕೆ ವಿವೇಕಿಗಳು ಪ್ರವೃತ್ತಿ ಮಾಡಲಾರರು' ಎಂದು.

ಅಥವಾ ವೇದಾಂತ ಅನುವಾದಕವಾದರೆ ಏನು ಗತಿ ಎಂಬುದರ ಬಗ್ಗೆ ಪೂರ್ವಪಕ್ಷಿ ಸುಮ್ಮನಿರಲೂ ಸಾಧ್ಯವಿದೆ. ಪ್ರಮಾಣವಾದ ವೇದಾಂತದ ಬಗ್ಗೆ ಏನೂ ಹೇಳದೆ, 'ಬ್ರಹ್ಮನು ಅದ್ವೈತರೀತಿಯಿಂದ ಸ್ವಪ್ರಕಾಶಾತ್ಮ ಸ್ವರೂಪನಾದ್ದರಿಂದ ವಿಚಾರ ಯೋಗ್ಯನಲ್ಲ' ಎಂದು ಪ್ರಮೇಯದ ಬಗ್ಗೆ ಮಾತ್ರ ತನ್ನ ವಾದವನ್ನು ಮಂಡಿಸಬಹುದು.

### ಪೂರ್ವಪಕ್ಷ ಪ್ರಾಭಾಕರ ರೀತಿಯಿಂದಲ್ಲ

ಪ್ರಾಭಾಕರ ರೀತಿಯಿಂದ ಪೂರ್ವಪಕ್ಷವೆಂದರೆ ನ್ಯಾಯವಿವರಣ ವಿರೋಧ. ಅಲ್ಲಿ ಆತ್ಮ ಸ್ವಪ್ರಕಾಶ ಎಂದಿದೆ. ಅದು ವಸ್ತುಸ್ಥಿತಿಯ ಅಭಿಪ್ರಾಯದಿಂದ ಹೇಳಿದ್ದೆಂದರೂ ಪ್ರಾಭಾಕರ ರೀತಿಯಿಂದ ಪೂರ್ವಪಕ್ಷ ಮಾಡುವುದಾದರೆ ಜೀವಸ್ವರೂಪದ ಬಗ್ಗೆ ಸಂದೇಹವಿಲ್ಲದಿದ್ದರೂ ಶರೀರಾದಿ ವಿಲಕ್ಷಣತ್ವದಂಥ ಸತ್ಯವಸ್ತುಗಳು ವಿಚಾರ ವಿಷಯವಾಗುವ ಸಂಭವವಿದೆ. ಜೀವ ಆನಂದರೂಪನೆ ಅಲ್ಲವೆ? ಜ್ಞಾನರೂಪನೆ ಅಲ್ಲವೆ, ಅಣುವೆ, ಮಹತ್ತೆ ಎಂದು ಮುಂತಾಗಿ ವಿಚಾರ ಶಕ್ಯವಿದೆ. ವೇದವಲ್ಲ ಕಾರ್ಯಪರವಾದ್ದರಿಂದ ಜೀವವಿಲಕ್ಷಣನಾದ ಬ್ರಹ್ಮನ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ ಎಂಬ ಅಂಶದಲ್ಲಿ ಪ್ರಾಭಾಕರ ರೀತಿ. ಶರೀರಾದಿ ವಿಲಕ್ಷಣತ್ವಾದಿ ವಿಷಯದಲ್ಲಿ ಅವು ಸತ್ಯವಲ್ಲ, ತತ್ತ್ವಾವೇದಕವಾದ ವೇದಾಂತದಲ್ಲಿ ಅವುಗಳ ವಿಚಾರ ಶಕ್ಯವಿಲ್ಲವೆಂದು ಅದ್ವೈತರೀತಿ ಎಂದರೆ ಅರ್ಧಜರತೀಯ ನ್ಯಾಯವಾಗುತ್ತದೆ.

ಸುಧೆಯಲ್ಲಿ ಕಾರ್ಯಪರತ್ವ ಪೂರ್ವಪಕ್ಷವಿದೆ. ಆದರೆ ಅದು ಸೂತ್ರದ ಅತಃಶಬ್ದದಿಂದ ಪರಿಹಾರವಾಗುವ ಬೇರೆಯ ಒಂದು ಪೂರ್ವಪಕ್ಷ. ಪ್ರಕೃತ ಟೀಕೆಯಲ್ಲಿ ನ್ಯಾಯವಿವರಣಕ್ಕೆ ಅನುಸಾರವಾಗಿ ಬ್ರಹ್ಮಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ತೋರಿಸಲಾಗಿದೆ. ಏಕೆಂದರೆ ಬ್ರಹ್ಮಶಬ್ದ ಅದ್ವೈತಿಗಳು ಹೇಳುವ ಜೀವಬ್ರಹ್ಮೈಕ್ಯಕ್ಕೆ ವಿರೋಧಿ.

### ಪೂರ್ವಪಕ್ಷ ಪೂರ್ತಿ ಅದ್ವೈತ ರೀತಿಯಲ್ಲ

'ಸ್ವಪ್ರಕಾಶ ಶುದ್ಧ ಆತ್ಮಸ್ವರೂಪ ಸಿದ್ಧವಾಗಿರುವುದರಿಂದ ಅದನ್ನು ವರ್ಣಿಸುವ ವೇದಾಂತ ಅನುವಾದಕ' ವೆನ್ನುವುದು ಅದ್ವೈತ ರೀತಿಯಲ್ಲ. ಅದ್ವೈತಿಗಳು ಅದನ್ನು ಒಪ್ಪಿದರೆ ಅವರ ಜಿಜ್ಞಾಸಾಧಿಕರಣಸಿದ್ಧಾಂತ ಹೊರಡಲಾರದು. ಸ್ವಪ್ರಕಾಶ ಎಂದರೆ ಅದ್ವೈತದಲ್ಲಿ ಕರ್ತೃಕರ್ಮ-ವಿರೋಧಭಯದಿಂದ ಅವೇದ್ಯ ಎಂದು ಅರ್ಥ ಹೇಳುತ್ತಾರೆ. ಆದರಿಂದ ವೇದಾಂತವು ಅಖಂಡ ಆತ್ಮಸ್ವರೂಪ ಮಾತ್ರ ಪರ ಎಂಬ ವಿಷಯದಲ್ಲಿ ಮಾತ್ರ ಅದ್ವೈತರೀತಿ. ಆತ್ಮನಿಗೆ ಸ್ವಪ್ರಕಾಶಾನು-ಭವಸಿದ್ಧತ್ವವು ಸಿದ್ಧಾಂತರೀತಿಯಿಂದ.

ಅಥವಾ ಆತ್ಮ ಸ್ವಪ್ರಕಾಶಾನುಭವಕ್ಕೆ ವಿಷಯನೂ ಆಗುತ್ತಾನೆ. ಇಲ್ಲಿ 'ವಿಷಯ'ವೆಂದರೆ ಅನುಭವವನ್ನು ಮಾತಿನಲ್ಲಿ ವ್ಯಕ್ತಗೊಳಿಸಲು ನಿಮಿತ್ತವೆಂದರ್ಥ. ಆತ್ಮನೂ ಇಂಥ ವಿಷಯನೆಂದು ಅದ್ವೈತಿಗಳು ಒಪ್ಪಿದ್ದಾರೆ. ಆತ್ಮ ತನ್ನ ಸ್ವರೂಪವೆ ಆದ ಪ್ರಕಾಶಕ್ಕೆ ತಾನು ಕರ್ಮ ಎನಿಸದಿದ್ದರೂ ತನ್ನಿಂದ ಉಂಟಾಗುವ ಶಬ್ದಪ್ರಯೋಗಕ್ಕೆ ತಾನು ವಿಷಯನಾಗಲು ಯೋಗ್ಯ. ಈ ಅರ್ಥದಲ್ಲಿ ಆವನು ಸ್ವತಃಸಿದ್ಧ. ಅಂಥ ಆತ್ಮನ ಸ್ವರೂಪಭೂತವಾದ ಐಕ್ಯವನ್ನು ವೇದಾಂತವು ಬೋಧಿಸಿದರೆ ಅದು ಅನುವಾದಕವೆಂದು ಅದ್ವೈತರೀತಿಯಿಂದಲೆ ಹೇಳಲು ಬರುತ್ತದೆ.

**ವಿಚಾರವಿಧಿಗೆ ಏನು ಗತಿ?**

ಆತ್ಮವಿಚಾರ ಮಾಡಬೇಕೆಂದು ವಿಧಿಸುವ ವಾಕ್ಯಗಳಿಗೆ ಏನು ಗತಿ? ಬ್ರಹ್ಮನ ಬಗ್ಗೆ ಹೇಳುವ ವೇದಾಂತ ವಾಕ್ಯಗಳಿಗೆ ಗತಿ ಹೇಳಬೇಕಾಗಿಲ್ಲ, ಸುಮ್ಮನಿರಬಹುದು. ಆದರೆ ವಿಚಾರವಿಧಿವಾಕ್ಯಗಳ ಅರ್ಥನಿರ್ಣಯ ಮಾಡುವುದೆ ಈ ಅಧಿಕರಣದ ಉದ್ದೇಶ. ಅವುಗಳ ಬಗ್ಗೆ ಏನೂ ಹೇಳದೆ ಮೌನವಹಿಸಲು ಶಕ್ಯವೆ ಈ ಪ್ರಶ್ನೆಗೆ ಹೀಗೆ ಸಮಾಧಾನ -

'ಮಂತವ್ಯಃ' 'ಸೋऽನ್ವೇಷ್ಟವ್ಯಃ' ಎಂದು ಮುಂತಾಗಿ ತವ್ಯಪ್ರತ್ಯಯವಿದ್ದರೂ ಅದು ಬ್ರಹ್ಮಪರ ವಾಕ್ಯಗಳ ನಡುವೆ ಬರುವುದರಿಂದ ವಿಚಾರವನ್ನು ವಿಧಿಸುವ ತಾತ್ಪರ್ಯ ಅದಕ್ಕೆ ಇಲ್ಲ. 'ವಿಷ್ಣುರುಪಾಂಶು ಯಷ್ಟವ್ಯಃ ಪ್ರಜಾಪತಿರುಪಾಂಶು ಯಷ್ಟವ್ಯಃ' ಎಂದು ಮುಂತಾಗಿ ಮೂರು ವಾಕ್ಯಗಳಲ್ಲಿ ಮೂರು ತವ್ಯಪ್ರತ್ಯಯಗಳಿದ್ದರೂ ಅವುಗಳಿಗೆ ಯಾಗವಿಧಾನ ಮಾಡುವ ತಾತ್ಪರ್ಯವಿಲ್ಲ ಎಂದು ಮೀಮಾಂಸಕರು ಅಂಗೀಕರಿಸಿದ್ದಾರೆ. ಏಕೆಂದರೆ ದರ್ಶಪೂರ್ಣಮಾಸದ ಆಗ್ನೇಯ ಅಗ್ನೀಷೋಮೀಯಗಳೆಂಬ ಎರಡು ಪುರೋಡಾಶ ಯಾಗಗಳ ನಡುವೆ ಬೇರೊಂದು ಯಾಗದ ವ್ಯವಧಾನವಿಲ್ಲದಿದ್ದರೆ ಬೇಸರ ಉಂಟಾಗುವುದೆಂದು ಮೊದಲಿಗೆ ಹೇಳಿ, ಉಪಾಂಶುಯಾಗ ಮಾಡಬೇಕೆಂದು ಹೇಳಿ, ವಿಷ್ಣುಉಪಾಂಶುಯಾಗವನ್ನೂ ಪ್ರಜಾಪತಿಉಪಾಂಶುಯಾಗವನ್ನೂ ಅಗ್ನೀಷೋಮಉಪಾಂಶುಯಾಗವನ್ನೂ ಮಾಡಬೇಕೆಂದು ತವ್ಯಪ್ರತ್ಯಯದಿಂದ ಹೇಳಿ, ಹೀಗೆ ಮಾಡಿದರೆ ಬೇಸರ ಕಳೆಯುವುದೆಂದು ಉಪಸಂಹಾರ ಮಾಡಿದೆ. ಇಲ್ಲಿ ಬೇಸರ ಕಳೆಯುವ ಬಗ್ಗೆ ಇರುವ ಪ್ರಕರಣದಲ್ಲಿ ಪ್ರಕರಣಾನುಗುಣವಾಗಿ ಒಂದು ಯಾಗವನ್ನು ವಿಧಾನ ಮಾಡಬೇಕು. ಮೂರು ಯಾಗಗಳನ್ನು ಮೂರು ತವ್ಯಪ್ರತ್ಯಯಗಳು ವಿಧಿಸಿದರೆ ಪ್ರಕರಣಕ್ಕೆ ಅನುಗುಣವಾಗುವುದಿಲ್ಲ. ಅದರಿಂದ ತವ್ಯಪ್ರತ್ಯಯಗಳಿಗೆ ಯಾಗವನ್ನು ವಿಧಿಸುವ ಅಭಿಪ್ರಾಯವಿಲ್ಲ.

'ಪಶ್ಯೇತ್' ಎಂಬಲ್ಲಿ ಜ್ಞಾನವನ್ನು ವಿಧಾನಮಾಡಲು ಲಿಙ್ ಪ್ರತ್ಯಯಕ್ಕೆ ಶಕ್ತಿ ಇಲ್ಲ. ಏಕೆಂದರೆ ಜ್ಞಾನ ವಿಧಾನಕ್ಕೆ ಯೋಗ್ಯವಲ್ಲ. 'ವಿಜಿಜ್ಞಾಸಸ್ವ' ಎಂಬಲ್ಲಿ ಲೋಟ್ ಪ್ರತ್ಯಯಕ್ಕೂ ವಿಧಿ ಶಕ್ತಿ ಇಲ್ಲ. ಏಕೆಂದರೆ ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ. ಇಚ್ಛೆ ವಿಧಾನಯೋಗ್ಯವಲ್ಲ. ವಿಚಾರವೆಂಬ ಅಮುಖ್ಯಾರ್ಥವಿಟ್ಟುಕೊಂಡರೆ ವಿಧಿ ಕೂಡಬಹುದು, ನಿಜ. ಆದರೆ ವಿಧಿವಾಕ್ಯದಲ್ಲಿ ಅಮುಖ್ಯಾರ್ಥವಿಟ್ಟುಕೊಳ್ಳಕೂಡದೆಂದು ನಿಯಮವಿದೆ. ಬ್ರಹ್ಮಪರ ವಾಕ್ಯಗಳ ನಡುವೆ ಬರುವುದರಿಂದ ವಿಧಿ ಪ್ರತ್ಯಯಗಳಿಗೆ ವಿಧಿಶಕ್ತಿ ಕುಂಠಿತವೂ ಆಗಿದೆ. 'ಅಭಿಘಾರಣ ಮಾಡಬೇಕು ಬೇಡ ಎಂದು ವಿಚಾರ ಮಾಡುತ್ತಾರೆ' ಎಂಬಲ್ಲಿ 'ಮಾಡಬೇಕು' ಎನ್ನುವುದು ವಿಧಿಯಲ್ಲ. ಬೇಕು ಬೇಡವೆಂದು ವಿಚಾರ ಮಾಡುತ್ತಾರೆ ಎನ್ನುವಲ್ಲಿ ಅದಕ್ಕೆ ತಾತ್ಪರ್ಯ. ಕೊನೆಯಲ್ಲಿ 'ಅಭಿಘಾರಣ ಮಾಡಲೇಬೇಕು' ಎನ್ನುವುದು ವಿಧಿ. ಮೊದಲಿಗೆ ಹೇಳಿದುದು ಪ್ರಶಂಸೆಗಾಗಿ ಹೊರಟಿರುವ ಅರ್ಥವಾದ. ಹಾಗೇ ಪ್ರಕೃತದಲ್ಲಿ ವಿಧಿಪ್ರತ್ಯಯಗಳಿಗೆ ವಿಧಿಯಲ್ಲಿ ತಾತ್ಪರ್ಯವಿಲ್ಲ.

೨೭ ಬ) ವಿಚಾರದಿಂದ ನಿರ್ಣಯವಾಗುವುದು ಅನುಭವಸಿದ್ಧವಾಗಿರುವಾಗ ನಿರ್ಣಯಕ್ಕಾಗಿ ವಿಚಾರ ಮಾಡಬೇಕು ಎಂದು ವಿಧಿಸುವುದೂ ವ್ಯರ್ಥ. ವಿಚಾರ ಮಾಡಿಯೆ ನಿರ್ಣಯ ಮಾಡಬೇಕು

ಎನ್ನುವುದು ವಿಧಿಗೆ ತಾತ್ಪರ್ಯವೆನ್ನುವುದು ವಿಚಾರವಿಲ್ಲದೆಯೂ ನಿರ್ಣಯ ಶಕ್ಯವಿದ್ದಾಗ ಹೇಳಬಹುದಾದ ಮಾತು. ಭತ್ತವನ್ನು ಕುಟ್ಟಿಯೆ ಹೊಟ್ಟು ತೆಗೆಯಬೇಕು ಎನ್ನುವುದು ಸರಿ. ಏಕೆಂದರೆ ಕುಟ್ಟದೆಯೂ ಉಗುರಿನಿಂದ ಸುಲಿದು ಹೊಟ್ಟು ತೆಗೆಯುವುದು ಶಕ್ಯವಿದೆ. ಕುದುರೆಯ ಹಗ್ಗ ಒಂದನ್ನೇ ಎತ್ತಿಕೊಳ್ಳಬೇಕು, ಜೊತೆಗೆ ಕತ್ತೆಯ ಹಗ್ಗವನ್ನು ಎತ್ತಿಕೊಳ್ಳಬಾರದು ಎನ್ನುವುದು ಸರಿಯಾಗುತ್ತದೆ. ಪ್ರಕೃತದಲ್ಲಿ ಬ್ರಹ್ಮಜ್ಞಾನ ಬರಬೇಕಾದರೆ ವಿಚಾರ ಒಂದೇ ಸಾಧನವಾಗಿರುವಾಗ ವಿಚಾರದಿಂದಲೇ ನಿರ್ಣಯ ಮಾಡಬೇಕೆನ್ನುವುದೂ ಅಸಂಗತ.

'ಯಾಗದಲ್ಲಿ ಉಪಯೋಗವಾಗುವ ಭತ್ತದ ಹೊಟ್ಟು ತೆಗೆಯಲು ಉಗುರು ಸಾಧನವಲ್ಲದಿದ್ದರೂ ಸಾಮಾನ್ಯ ಭತ್ತದ ಹೊಟ್ಟು ತೆಗೆಯಲು ಉಗುರೂ ಸಾಧನವಾಗಬಹುದು. ಯಾಗದಲ್ಲಿ ಅದು ಕೂಡದೆಂದು ಕುಟ್ಟಿಯೆ ಹೊಟ್ಟು ತೆಗೆಯಬೇಕೆಂದು ನಿಯಮ ಮಾಡಲಾಗಿದೆ. ಹಾಗೆಯ ಅಖಂಡ ಶುದ್ಧ ಚೈತನ್ಯ ವಿಷಯದಲ್ಲಿ ನಿರ್ಣಯಕ್ಕೆ ವಿಚಾರ ಒಂದೇ ಸಾಧನವಾದರೂ ಸಾಮಾನ್ಯವಾಗಿ ಚೈತನ್ಯ ವಿಷಯದಲ್ಲಿ ನಿರ್ಣಯಕ್ಕೆ ವಿಚಾರವೇ ಬೇಕಾಗಿಲ್ಲ. ಬೇರೆ ರೀತಿಯಿಂದಲೂ ಸಾಧ್ಯವಿದೆ. ಅದರಿಂದ ಶುದ್ಧ ಚೈತನ್ಯ ಜ್ಞಾನವನ್ನು ವಿಚಾರದಿಂದಲೆ ಪಡೆಯಬೇಕೆಂದು ನಿಯಮ ಮಾಡಬಹುದು'-ಎಂದು ಆಕ್ಷೇಪವಿದೆ. ಇದಕ್ಕೆ ಸಮಾಧಾನ ಹೀಗೆ - 'ಭತ್ತವನ್ನು ಕುಟ್ಟಬೇಕು' ಎನ್ನುವಲ್ಲಿ 'ಭತ್ತ' ಎಂದರೆ ಭತ್ತವೆ ವಿವಕ್ಷಿತವಲ್ಲ. 'ಯಾಗದಲ್ಲಿ ಉಪಯೋಗವಾಗುವ ಧಾನ್ಯ' ಎಂದು ವಿವಕ್ಷಿತ. ಇಲ್ಲದಿದ್ದರೆ ಭತ್ತದ ಸ್ಥಾನದಲ್ಲಿ ಯವೆಯನ್ನು ಕೆಲವು ಯಾಗಗಳಲ್ಲಿ ಕುಟ್ಟುವುದು 'ಭತ್ತವನ್ನು ಕುಟ್ಟಬೇಕು' ಎನ್ನುವ ವಿಧಿಗೆ ಸಮಿತವಾಗದೆ ಹೋದೀತು. ಅದರಿಂದ ಯಾಗದಲ್ಲಿ ಉಪಯೋಗವಾಗುವ ಭತ್ತದ ಹೊಟ್ಟು ತೆಗೆಯಲು ಉಗುರು ಸಾಧನವಾಗಬಲ್ಲುದೆಂದೇ ಅದನ್ನು ನಿವಾರಿಸಲು ಕುಟ್ಟುವ ನಿಯಮವಿದೆ. ಹಾಗೇ ಪ್ರಕೃತದಲ್ಲಿ ಶುದ್ಧಚೈತನ್ಯದ ಜ್ಞಾನಕ್ಕೇ ವಿಚಾರ ಹೊರತು ಬೇರೆ ಸಾಧನವಿದ್ದರೆ ವಿಚಾರನಿಯಮ ಯುಕ್ತವಾದೀತು. ಸ್ತ್ರೀಶೂದ್ರಾದಿಗಳೂ ಓದಬಹುದಾದ ಸ್ಮೃತಿ ಪುರಾಣಗಳು ಸಾಧನವಾಗಬಹುದು ಎನ್ನುವುದೂ ಸರಿಯಲ್ಲ. ಸ್ಮೃತಿ ಪುರಾಣಗಳಲ್ಲಿಯೂ ವಿಚಾರದಿಂದಲೆ ನಿರ್ಣಯ ಪಡೆಯಬೇಕು.

ವಿಚಾರವಿಲ್ಲದೆ ವೇದದಿಂದ ಅರ್ಥಜ್ಞಾನ ಶಕ್ಯವಿಲ್ಲದುದರಿಂದ ವೇದಾಧ್ಯಯನವಿಧಿಯೆ ಅರ್ಥಾತ್ ವಿಚಾರವನ್ನೂ ವಿಧಿಸುತ್ತದೆ ಎನ್ನುವುದೂ ಸರಿಯಲ್ಲ. ಅಧ್ಯಯನವಿಧಿ ನಿತ್ಯ. ಅರ್ಥಜ್ಞಾನಕ್ಕಾಗಿ ಅಲ್ಲ ಎಂದು ಅದ್ವೈತಭಾಷ್ಯದಲ್ಲಿ ಹೇಳಿದೆ.

### ವಿಚಾರವಿಧಿ ಅಪ್ರಮಾಣ

ಅಥವಾ ವಿಚಾರವಿಧಿ ಅಪ್ರಮಾಣವೆಂದ ಪೂರ್ವಪಕ್ಷಿ ವಾದಿಸಬಹುದು. ಸೂತ್ರದ ಅತಃ ಶಬ್ದಕ್ಕೆ ವೇದ ಪ್ರಮಾಣವಾಗಿರುವುದರಿಂದ ಎಂದೂ ಅರ್ಥವಿರುವುದರಿಂದ ಅದಕ್ಕೆ ಅನುಗುಣವಾಗಿ ಈ ಪೂರ್ವಪಕ್ಷವನ್ನೂ ಮಾಡಬಹುದು. 'ಸ್ವರ್ಗಕಾಮೋ ಯಜೇತ' ಎಂಬಲ್ಲಿ ಯಾಗಪ್ರವೃತ್ತಿ ಮಾಡಬೇಕು, ಅದಕ್ಕೆ ಏನು ಫಲವೆಂದರೆ ಯಾಗವೆ. ಪ್ರವೃತ್ತಿಯನ್ನು ಪ್ರತ್ಯಯದಿಂದ ಬೋಧಿಸುವ 'ಯಜೇತ' ಪದವೆ ಧಾತುವಿನಿಂದ ಯಾಗವನ್ನು ಬೋಧಿಸುವುದರಿಂದ ಸಮೀಪದ ಯಾಗವನ್ನು ಬಿಟ್ಟು

ವಿಚಾರವಿಧಿಗೆ ಏನು ಗತಿ?

ಆತ್ಮವಿಚಾರ ಮಾಡಬೇಕೆಂದು ವಿಧಿಸುವ ವಾಕ್ಯಗಳಿಗೆ ಏನು ಗತಿ? ಬ್ರಹ್ಮನ ಬಗ್ಗೆ ಹೇಳುವ ವೇದಾಂತ ವಾಕ್ಯಗಳಿಗೆ ಗತಿ ಹೇಳಬೇಕಾಗಿಲ್ಲ, ಸುಮ್ಮನಿರಬಹುದು. ಆದರೆ ವಿಚಾರವಿಧಿವಾಕ್ಯಗಳ ಅರ್ಥನಿರ್ಣಯ ಮಾಡುವುದೆ ಈ ಅಧಿಕರಣದ ಉದ್ದೇಶ. ಅವುಗಳ ಬಗ್ಗೆ ಏನೂ ಹೇಳದೆ ಮೌನವಹಿಸಲು ಶಕ್ಯವೆ ಈ ಪ್ರಶ್ನೆಗೆ ಹೀಗೆ ಸಮಾಧಾನ -

'ಮಂತವ್ಯಃ' 'ಸೋऽನ್ವೇಷ್ಟವ್ಯಃ' ಎಂದು ಮುಂತಾಗಿ ತವ್ಯಪ್ರತ್ಯಯವಿದ್ದರೂ ಅದು ಬ್ರಹ್ಮಪರ ವಾಕ್ಯಗಳ ನಡುವೆ ಬರುವುದರಿಂದ ವಿಚಾರವನ್ನು ವಿಧಿಸುವ ತಾತ್ಪರ್ಯ ಅದಕ್ಕೆ ಇಲ್ಲ. 'ವಿಷ್ಣುರುಪಾಂಶು ಯಷ್ಟವ್ಯಃ ಪ್ರಜಾಪತಿರುಪಾಂಶು ಯಷ್ಟವ್ಯಃ' ಎಂದು ಮುಂತಾಗಿ ಮೂರು ವಾಕ್ಯಗಳಲ್ಲಿ ಮೂರು ತವ್ಯಪ್ರತ್ಯಯಗಳಿದ್ದರೂ ಅವುಗಳಿಗೆ ಯಾಗವಿಧಾನ ಮಾಡುವ ತಾತ್ಪರ್ಯವಿಲ್ಲ ಎಂದು ಮೀಮಾಂಸಕರು ಅಂಗೀಕರಿಸಿದ್ದಾರೆ. ಏಕೆಂದರೆ ದರ್ಶಪೂರ್ಣಮಾಸದ ಆಗ್ನೇಯ ಅಗ್ನೀಷೋಮಿಯಗಳೆಂಬ ಎರಡು ಪುರೋಡಾಶ ಯಾಗಗಳ ನಡುವೆ ಬೇರೊಂದು ಯಾಗದ ವ್ಯವಧಾನವಿಲ್ಲದಿದ್ದರೆ ಬೇಸರ ಉಂಟಾಗುವುದೆಂದು ಮೊದಲಿಗೆ ಹೇಳಿ, ಉಪಾಂಶುಯಾಗ ಮಾಡಬೇಕೆಂದು ಹೇಳಿ, ವಿಷ್ಣುಉಪಾಂಶುಯಾಗವನ್ನೂ ಪ್ರಜಾಪತಿಉಪಾಂಶುಯಾಗವನ್ನೂ ಅಗ್ನೀಷೋಮಉಪಾಂಶುಯಾಗವನ್ನೂ ಮಾಡಬೇಕೆಂದು ತವ್ಯಪ್ರತ್ಯಯದಿಂದ ಹೇಳಿ, ಹೀಗೆ ಮಾಡಿದರೆ ಬೇಸರ ಕಳೆಯುವುದೆಂದು ಉಪಸಂಹಾರ ಮಾಡಿದೆ. ಇಲ್ಲಿ ಬೇಸರ ಕಳೆಯುವ ಬಗ್ಗೆ ಇರುವ ಪ್ರಕರಣದಲ್ಲಿ ಪ್ರಕರಣಾನುಗುಣವಾಗಿ ಒಂದು ಯಾಗವನ್ನು ವಿಧಾನ ಮಾಡಬೇಕು. ಮೂರು ಯಾಗಗಳನ್ನು ಮೂರು ತವ್ಯಪ್ರತ್ಯಯಗಳು ವಿಧಿಸಿದರೆ ಪ್ರಕರಣಕ್ಕೆ ಅನುಗುಣವಾಗುವುದಿಲ್ಲ. ಆದರಿಂದ ತವ್ಯಪ್ರತ್ಯಯಗಳಿಗೆ ಯಾಗವನ್ನು ವಿಧಿಸುವ ಅಭಿಪ್ರಾಯವಿಲ್ಲ.

'ಪಶ್ಯೇತ್' ಎಂಬಲ್ಲಿ ಜ್ಞಾನವನ್ನು ವಿಧಾನಮಾಡಲು ಲಿಙ್ ಪ್ರತ್ಯಯಕ್ಕೆ ಶಕ್ತಿ ಇಲ್ಲ. ಏಕೆಂದರೆ ಜ್ಞಾನ ವಿಧಾನಕ್ಕೆ ಯೋಗ್ಯವಲ್ಲ. 'ವಿಜಿಜ್ಞಾಸಸ್ವ' ಎಂಬಲ್ಲಿ ಲೋಟ್ ಪ್ರತ್ಯಯಕ್ಕೂ ವಿಧಿ ಶಕ್ತಿ ಇಲ್ಲ. ಏಕೆಂದರೆ ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ. ಇಚ್ಛೆ ವಿಧಾನಯೋಗ್ಯವಲ್ಲ. ವಿಚಾರವೆಂಬ ಅಮುಖ್ಯಾರ್ಥವಿಟ್ಟುಕೊಂಡರೆ ವಿಧಿ ಕೂಡಬಹುದು, ನಿಜ. ಆದರೆ ವಿಧಿವಾಕ್ಯದಲ್ಲಿ ಅಮುಖ್ಯಾರ್ಥವಿಟ್ಟುಕೊಳ್ಳಕೂಡದೆಂದು ನಿಯಮವಿದೆ. ಬ್ರಹ್ಮಪರ ವಾಕ್ಯಗಳ ನಡುವೆ ಬರುವುದರಿಂದ ವಿಧಿ ಪ್ರತ್ಯಯಗಳಿಗೆ ವಿಧಿಶಕ್ತಿ ಕುಂಠಿತವೂ ಆಗಿದೆ. 'ಅಭಿಘಾರಣ ಮಾಡಬೇಕು ಬೇಡ ಎಂದು ವಿಚಾರ ಮಾಡುತ್ತಾರೆ' ಎಂಬಲ್ಲಿ 'ಮಾಡಬೇಕು' ಎನ್ನುವುದು ವಿಧಿಯಲ್ಲ. ಬೇಕು ಬೇಡವೆಂದು ವಿಚಾರ ಮಾಡುತ್ತಾರೆ ಎನ್ನುವಲ್ಲಿ ಅದಕ್ಕೆ ತಾತ್ಪರ್ಯ. ಕೊನೆಯಲ್ಲಿ 'ಅಭಿಘಾರಣ ಮಾಡಲೇಬೇಕು' ಎನ್ನುವುದು ವಿಧಿ. ಮೊದಲಿಗೆ ಹೇಳಿದುದು ಪ್ರಶಂಸೆಗಾಗಿ ಹೊರಟಿರುವ ಅರ್ಥವಾದ. ಹಾಗೇ ಪ್ರಕೃತದಲ್ಲಿ ವಿಧಿಪ್ರತ್ಯಯಗಳಿಗೆ ವಿಧಿಯಲ್ಲಿ ತಾತ್ಪರ್ಯವಿಲ್ಲ.

೨೭ ಬ) ವಿಚಾರದಿಂದ ನಿರ್ಣಯವಾಗುವುದು ಅನುಭವಸಿದ್ಧವಾಗಿರುವಾಗ ನಿರ್ಣಯಕ್ಕಾಗಿ ವಿಚಾರ ಮಾಡಬೇಕು ಎಂದು ವಿಧಿಸುವುದೂ ವ್ಯರ್ಥ. ವಿಚಾರ ಮಾಡಿಯೆ ನಿರ್ಣಯ ಮಾಡಬೇಕು

ಎನ್ನುವುದು ವಿಧಿಗೆ ತಾತ್ಪರ್ಯವೆನ್ನುವುದು ವಿಚಾರವಿಲ್ಲದೆಯೂ ನಿರ್ಣಯ ಶಕ್ಯವಿದ್ದಾಗ ಹೇಳಬಹುದಾದ ಮಾತು. ಭತ್ತವನ್ನು ಕುಟ್ಟಿಯೆ ಹೊಟ್ಟು ತೆಗೆಯಬೇಕು ಎನ್ನುವುದು ಸರಿ. ಏಕೆಂದರೆ ಕುಟ್ಟದೆಯೂ ಉಗುರಿನಿಂದ ಸುಲಿದು ಹೊಟ್ಟು ತೆಗೆಯುವುದು ಶಕ್ಯವಿದೆ. ಕುದುರೆಯ ಹಗ್ಗ ಒಂದನ್ನೇ ಎತ್ತಿಕೊಳ್ಳಬೇಕು, ಜೊತೆಗೆ ಕತ್ತೆಯ ಹಗ್ಗವನ್ನು ಎತ್ತಿಕೊಳ್ಳಬಾರದು ಎನ್ನುವುದು ಸರಿಯಾಗುತ್ತದೆ. ಪ್ರಕೃತದಲ್ಲಿ ಬ್ರಹ್ಮಜ್ಞಾನ ಬರಬೇಕಾದರೆ ವಿಚಾರ ಒಂದೇ ಸಾಧನವಾಗಿರುವಾಗ ವಿಚಾರದಿಂದಲೇ ನಿರ್ಣಯ ಮಾಡಬೇಕೆನ್ನುವುದೂ ಅಸಂಗತ.

'ಯಾಗದಲ್ಲಿ ಉಪಯೋಗವಾಗುವ ಭತ್ತದ ಹೊಟ್ಟು ತೆಗೆಯಲು ಉಗುರು ಸಾಧನವಲ್ಲದಿದ್ದರೂ ಸಾಮಾನ್ಯ ಭತ್ತದ ಹೊಟ್ಟು ತೆಗೆಯಲು ಉಗುರೂ ಸಾಧನವಾಗಬಹುದು. ಯಾಗದಲ್ಲಿ ಅದು ಕೂಡದೆಂದು ಕುಟ್ಟಿಯೆ ಹೊಟ್ಟು ತೆಗೆಯಬೇಕೆಂದು ನಿಯಮ ಮಾಡಲಾಗಿದೆ. ಹಾಗೆಯೆ ಅಖಂಡ ಶುದ್ಧ ಚೈತನ್ಯ ವಿಷಯದಲ್ಲಿ ನಿರ್ಣಯಕ್ಕೆ ವಿಚಾರ ಒಂದೇ ಸಾಧನವಾದರೂ ಸಾಮಾನ್ಯವಾಗಿ ಚೈತನ್ಯ ವಿಷಯದಲ್ಲಿ ನಿರ್ಣಯಕ್ಕೆ ವಿಚಾರವೇ ಬೇಕಾಗಿಲ್ಲ. ಬೇರೆ ರೀತಿಯಿಂದಲೂ ಸಾಧ್ಯವಿದೆ. ಅದರಿಂದ ಶುದ್ಧ ಚೈತನ್ಯ ಜ್ಞಾನವನ್ನು ವಿಚಾರದಿಂದಲೆ ಪಡೆಯಬೇಕೆಂದು ನಿಯಮ ಮಾಡಬಹುದು'-ಎಂದು ಆಕ್ಷೇಪವಿದೆ. ಇದಕ್ಕೆ ಸಮಾಧಾನ ಹೀಗೆ - 'ಭತ್ತವನ್ನು ಕುಟ್ಟಬೇಕು' ಎನ್ನುವಲ್ಲಿ 'ಭತ್ತ' ಎಂದರೆ ಭತ್ತವೆ ವಿವಕ್ಷಿತವಲ್ಲ. 'ಯಾಗದಲ್ಲಿ ಉಪಯೋಗವಾಗುವ ಧಾನ್ಯ' ಎಂದು ವಿವಕ್ಷಿತ. ಇಲ್ಲದಿದ್ದರೆ ಭತ್ತದ ಸ್ಥಾನದಲ್ಲಿ ಯವೆಯನ್ನು ಕೆಲವು ಯಾಗಗಳಲ್ಲಿ ಕುಟ್ಟುವುದು 'ಭತ್ತವನ್ನು ಕುಟ್ಟಬೇಕು' ಎನ್ನುವ ವಿಧಿಗೆ ಸಮ್ಮತವಾಗದೆ ಹೋದೀತು. ಅದರಿಂದ ಯಾಗದಲ್ಲಿ ಉಪಯೋಗವಾಗುವ ಭತ್ತದ ಹೊಟ್ಟು ತೆಗೆಯಲು ಉಗುರು ಸಾಧನವಾಗಬಲ್ಲುದೆಂದೇ ಅದನ್ನು ನಿವಾರಿಸಲು ಕುಟ್ಟುವ ನಿಯಮವಿದೆ. ಹಾಗೇ ಪ್ರಕೃತದಲ್ಲಿ ಶುದ್ಧಚೈತನ್ಯದ ಜ್ಞಾನಕ್ಕೇ ವಿಚಾರ ಹೊರತು ಬೇರೆ ಸಾಧನವಿದ್ದರೆ ವಿಚಾರನಿಯಮ ಯುಕ್ತವಾದೀತು. ಸ್ತ್ರೀಶೂದ್ರಾದಿಗಳೂ ಓದಬಹುದಾದ ಸ್ಮೃತಿ ಪುರಾಣಗಳು ಸಾಧನವಾಗಬಹುದು ಎನ್ನುವುದೂ ಸರಿಯಲ್ಲ. ಸ್ಮೃತಿ ಪುರಾಣಗಳಲ್ಲಿಯೂ ವಿಚಾರದಿಂದಲೆ ನಿರ್ಣಯ ಪಡೆಯಬೇಕು.

ವಿಚಾರವಿಲ್ಲದೆ ವೇದದಿಂದ ಅರ್ಥಜ್ಞಾನ ಶಕ್ಯವಿಲ್ಲದುದರಿಂದ ವೇದಾಧ್ಯಯನವಿಧಿಯೆ ಅರ್ಥಾತ್ ವಿಚಾರವನ್ನೂ ವಿಧಿಸುತ್ತದೆ ಎನ್ನುವುದೂ ಸರಿಯಲ್ಲ. ಅಧ್ಯಯನವಿಧಿ ನಿತ್ಯ. ಅರ್ಥಜ್ಞಾನಕ್ಕಾಗಿ ಅಲ್ಲ ಎಂದು ಅದ್ವೈತಭಾಷ್ಯದಲ್ಲಿ ಹೇಳಿದೆ.

### ವಿಚಾರವಿಧಿ ಅಪ್ರಮಾಣ

ಅಥವಾ ವಿಚಾರವಿಧಿ ಅಪ್ರಮಾಣವೆಂದೆ ಪೂರ್ವಪಕ್ಷಿ ವಾದಿಸಬಹುದು. ಸೂತ್ರದ ಅತಃ ಶಬ್ದಕ್ಕೆ ವೇದ ಪ್ರಮಾಣವಾಗಿರುವುದರಿಂದ ಎಂದೂ ಅರ್ಥವಿರುವುದರಿಂದ ಅದಕ್ಕೆ ಅನುಗುಣವಾಗಿ ಈ ಪೂರ್ವಪಕ್ಷವನ್ನೂ ಮಾಡಬಹುದು. 'ಸ್ವರ್ಗಕಾಮೋ ಯಜೇತ' ಎಂಬಲ್ಲಿ ಯಾಗಪ್ರವೃತ್ತಿ ಮಾಡಬೇಕು, ಅದಕ್ಕೆ ಏನು ಫಲವೆಂದರೆ ಯಾಗವೆ. ಪ್ರವೃತ್ತಿಯನ್ನು ಪ್ರತ್ಯಯದಿಂದ ಬೋಧಿಸುವ 'ಯಜೇತ' ಪದವೆ ಧಾತುವಿನಿಂದ ಯಾಗವನ್ನು ಬೋಧಿಸುವುದರಿಂದ ಸಮೀಪದ ಯಾಗವನ್ನು ಬಿಟ್ಟು

ದೂರದ 'ಸ್ವರ್ಗಕಾಮ' ಎಂಬ ಬೇರೆ ಪದದಲ್ಲಿರುವ ಸ್ವರ್ಗ ಫಲವೆನ್ನಬಾರದು. ಅದರಿಂದ ಯಾಗಮಾಡಿ ಏನೂ ಫಲವಿಲ್ಲದ್ದರಿಂದ ಯಾಗಪ್ರವೃತ್ತಿ ಮಾಡಲು ವಿಧಿಸುತ್ತಿರುವ ಯಾಗವಿಧಿ ಅಪ್ರಮಾಣ ಎಂದು ಪೂರ್ವಮೀಮಾಂಸೆಯಲ್ಲಿ ಪೂರ್ವಪಕ್ಷವಿದೆ. 'ವಿಶ್ವಜಿತಾ ಯಜೇತ' ಎಂಬಲ್ಲಿ ಫಲವನ್ನು ಹೇಳದಿರುವುದರಿಂದ ವಿಶ್ವಜಿತ್ ಯಾಗ ಪ್ರವೃತ್ತಿಗೆ ಆ ಯಾಗವೆ ಫಲವೆಂದು ಅನ್ವಯವಾಗುತ್ತದೆ. ಹೀಗಾಗಿ ಯಾಗಕ್ಕೆ ಫಲವಿಲ್ಲ. ಫಲವಿಲ್ಲದ ಯಾಗದಲ್ಲಿ ಪುರುಷನು ಪ್ರವೃತ್ತಿ ಮಾಡಲಾರ. ಪುರುಷ ಪ್ರವೃತ್ತಿರೂಪವಾದ ಫಲವಿಲ್ಲದ್ದರಿಂದ ಯಾಗವಿಧಿ ಅಪ್ರಮಾಣ ಎಂದೂ ಪೂರ್ವಪಕ್ಷವಿದೆ. ಅದರಿಂದ ನಾವೂ ವಿಚಾರವಿಧಿ ಅಪ್ರಮಾಣವೆಂದು ಪೂರ್ವಪಕ್ಷವನ್ನಿಟ್ಟುಕೊಳ್ಳಬಹುದು.

**ಪೂರ್ವಪಕ್ಷಸಿದ್ಧಾಂತ ಸಂಕ್ಷೇಪ**

ಜೀವನಿಗಿಂತ ಬೇರೆ ಈಶ್ವರ ಎಂಬುವನಿಲ್ಲ. ಜೀವ ಸ್ವಪ್ರಕಾಶನಾದ್ದರಿಂದ ವಿಚಾರ ಯೋಗ್ಯನಲ್ಲ. ಜ್ಞಾನದಿಂದ ಮೋಕ್ಷವು ಬರುತ್ತಿಲ್ಲವಾದ್ದರಿಂದ ಮೋಕ್ಷವು ಫಲವೂ ಅಲ್ಲ. ಅದರಿಂದ ವಿಚಾರಬೇಡ ಎಂದು ಪೂರ್ವಪಕ್ಷ. ಜೀವ ಅಲ್ಪಗುಣ. ಪೂರ್ಣಗುಣನಾದ ಭಗವಂತ ಬೇರೆಯೆ ಇದ್ದಾನೆ. ಅವನ ಬಗ್ಗೆ ವಿಚಾರಬೇಕು. ಅವನ ಜ್ಞಾನದಿಂದ ಮೋಕ್ಷ ಸಿಗುವುದರಿಂದ ಫಲವೂ ಇದೆ ಎಂದು ಸಿದ್ಧಾಂತ.

**ಜಿಜ್ಞಾಸಾಧಿಕರಣ ಸಿದ್ಧಾಂತ**

ಬ್ರಹ್ಮಶಬ್ದವು 'ಗುಣಪೂರ್ಣ' ಎಂಬ ಅರ್ಥವನ್ನು ಕೊಡುತ್ತದೆ. 'ನಾನು' ಎಂದು ಅನುಭವದಲ್ಲಿ ಕಾಣುವ ಜೀವ 'ಅಪೂರ್ಣಗುಣ' ಎಂದೇ ಸಿದ್ಧನಾಗಿದ್ದಾನೆ. ಅದರಿಂದ ಬ್ರಹ್ಮಶಬ್ದವು ಹೇಳುವ ಗುಣಪೂರ್ಣನು ಜೀವನಿಗಿಂತ ಬೇರೆ ಎಂದು ತಿಳಿಯುತ್ತದೆ. ಅನುಭವವೂ ಜೀವನನ್ನು ಗ್ರಹಿಸುವಾಗ ಬ್ರಹ್ಮಶಬ್ದವು ಹೇಳುವ ಗುಣಪೂರ್ಣನಿಗಿಂತ ಜೀವನು ಬೇರೆ ಎಂದೇ ಗ್ರಹಿಸುತ್ತದೆ. ಬ್ರಹ್ಮಜಿಜ್ಞಾಸೆ ಮಾಡೆಂದು ಶ್ರುತಿ ವಿಧಿಸುತ್ತಿದೆ. ಬ್ರಹ್ಮ ಜಿಜ್ಞಾಸ್ಯ. ಜೀವ ಜಿಜ್ಞಾಸು. ಇವರಿಬ್ಬರೂ ಬೇರೆಯೆ ಆಗಿರಬೇಕು. 'ಜೀವ ಪರಮಾತ್ಮರು ಬೇರೆ. ಅವರ ಸ್ವಭಾವ ಬೇರೆಯಾದ್ದರಿಂದ ನೀರು ಬೆಂಕಿಗಳಂತೆ' ಎಂದು ಅನುಮಾನವೂ ಇದೆ. ಹೀಗೆ ಬ್ರಹ್ಮ ಬೇರೆಯೆ ಇರುವುದರಿಂದ ಅವನು 'ನಾನು' ಎಂಬ ಸ್ವಪ್ರಕಾಶಾನುಭವದಲ್ಲಿ ಜೀವನಿಗೆ ಗೋಚರನಲ್ಲ. ಅವನು ನಿರ್ಗುಣ, ಎಂಟು ಗುಣಉಳ್ಳವನೆಂದು ಮುಂತಾಗಿ ವಿವಾದವೂ ಇರುವುದರಿಂದ ಸಂದೇಹವಿದೆ. ವಿಚಾರಕ್ಕೆ ಯೋಗ್ಯನೇ ಆಗಿದ್ದಾನೆ. ಪೂರ್ಣತ್ವ ಅಪೂರ್ಣತ್ವಗಳು ಅವಾಸ್ತವವಾದ್ದರಿಂದ ಭೇದವಿಲ್ಲ ಎನ್ನಬಾರದು. ಪೂರ್ಣತ್ವ ಶ್ರುತಿಸಿದ್ಧ. ಅಪೂರ್ಣತ್ವ ಸಾಕ್ಷಿವೇದ್ಯ. ಶ್ರುತಿ ಸಾಕ್ಷಿಗಳೆರಡೂ ಅನಾದಿ ನಿರ್ದೋಷ. ಅವುಗಳಿಂದ ಸಿದ್ಧವಾದುದು ಅವಾಸ್ತವವಾಗಲಾರದು.

ಸಮಸ್ತ ವೇದಾಂತವು ಉಪಕ್ರಮ ಮುಂತಾದ ಬಲವಾದ ಯುಕ್ತಿಗಳಿಂದ ಅದ್ವೈತಪರವೆಂದು ಸಿದ್ಧವಾಗಿರುವಾಗ ಒಂದು ಬ್ರಹ್ಮಶಬ್ದ ಅದಕ್ಕೆ ವಿರುದ್ಧವಾಗಿ ಗುಣಪೂರ್ಣತ್ವವನ್ನು ಹೇಳೀತೆ? ಅದ್ವೈತಿಗಳು ಹೇಳುವಂತೆ ವಸ್ತುಪೂರ್ಣತ್ವರೂಪವಾದ ಅದ್ವೈತವನ್ನೆ ಬ್ರಹ್ಮಶಬ್ದ ಹೇಳಬೇಕು'- ಈ

ಆಕ್ಷೇಪ ಸರಿಯಲ್ಲ. ಸಮಸ್ತ ವೇದಾಂತವು ವಿಚಾರವಿಧಿಗೆ ಅಧೀನ. ವಿಚಾರವಿಧಿ ಪ್ರಧಾನ. ಆದರಲ್ಲಿರುವ ಬ್ರಹ್ಮಶಬ್ದ ಪ್ರಬಲ. ಅದ್ವೈತ ಬೋಧಕವಾದ ವೇದಾಂತ ವಾಕ್ಯಪ್ರಮಾಣ. ಉಪಕ್ರಮಾದಿಗಳು ಲಿಂಗಪ್ರಮಾಣ. ಬ್ರಹ್ಮಶಬ್ದ ಶ್ರುತಿಪ್ರಮಾಣ. ವಾಕ್ಯಲಿಂಗಗಳಿಗಿಂತ ಶ್ರುತಿ ಪ್ರಬಲ ಎಂದು ಪೂರ್ವ ಮೀಮಾಂಸೆಯಲ್ಲಿ ನಿರ್ಣಯವಾಗಿದೆ. ಇಲ್ಲಿಯೂ ಮುಂದೆ ವಾಮನಾಧಿಕರಣದಲ್ಲಿ ಅದು ಸ್ಪಷ್ಟವಿದೆ. ವೇದಾಂತ ವಿಕ್ಯವನ್ನು ಹೇಳಲು ಮೊದಲಿಗೆ ಬ್ರಹ್ಮಶಬ್ದದಿಂದ ಬ್ರಹ್ಮನನ್ನು ಹೇಳಬೇಕು. ಆದರಿಂದ ಬ್ರಹ್ಮಶಬ್ದ ಉಪಜೀವ್ಯವೂ ಹೌದು. ಹೀಗಾಗಿ ಸಂಖ್ಯೆಯಲ್ಲಿ ಬ್ರಹ್ಮಶಬ್ದ ಒಂದೇ ಆಗಿದ್ದರೂ ಸ್ವಭಾವದಿಂದ ಪ್ರಬಲವೇ ಆಗಿದೆ. ಸಂಖ್ಯಾಪ್ರಾಬಲ್ಯಕ್ಕಿಂತಲೂ ಸ್ವಭಾವ ಪ್ರಾಬಲ್ಯ ಮೇಲು. ಬ್ರಹ್ಮಶಬ್ದಕ್ಕೆ ವಸ್ತುಪೂರ್ಣತ್ವ ಅರ್ಥಹೇಳಲು ಬರುವುದಿಲ್ಲವೆಂದು ಮುಂದೆ ಹೇಳುತ್ತೇವೆ. ಅದರಿಂದ ಅದು ನಿರವಕಾಶ. ಉಪಕ್ರಮಾದಿಗಳು ದ್ವೈತಪರವಾಗಬಲ್ಲವು. ಅದರಿಂದ ಸಾವಕಾಶ. ವಸ್ತುತಃ ವಿಚಾರವಿಧಾಯಕವಾಕ್ಯಗಳು ಸಾವಿರಾರು. ಅವುಗಳಲ್ಲಿರುವ ಓಂ ಬ್ರಹ್ಮ ಆತ್ಮ ನಾರಾಯಣಾದಿ ಶಬ್ದಗಳೂ ಸಾವಿರಾರು. ಅವುಗಳಲ್ಲಿ ಒಂದೊಂದು ಶಬ್ದವೂ ನಾನಾವಿಧ ವಿಚಾರ ವಿಧಿಗಳಲ್ಲಿ ಬರುವುದರಿಂದ ಸಂಖ್ಯೆಯಲ್ಲಿಯೂ ಅಪರಿಮಿತವೆ. ಬ್ರಹ್ಮಶಬ್ದವು ಜೀವಬ್ರಹ್ಮ ಭೇದದ ವಿಷಯದಲ್ಲಿ ಪ್ರತ್ಯಕ್ಷ ಅನುಮಾನ ಆಗಮ ಎಂಬ ಮೂರು ಪ್ರಮಾಣಗಳನ್ನು ಸೂಚಿಸುತ್ತಿದೆ. ಅವುಗಳಲ್ಲಿ ಪ್ರತ್ಯಕ್ಷಾನುಭವ ಒಂದಕ್ಕೇ ಸಾವಿರ ಆಗಮ ವಾಕ್ಯಗಳಿದ್ದರೂ ಅವು ಬಾಧಕವಾಗಲಾರವು. ಆದರಿಂದ ವಿಷಯಾದಿಗಳಿರುವುದರಿಂದ ವಿಚಾರ ಯುಕ್ತವೆ.

'ಮಂತವ್ಯಃ' ಇತ್ಯಾದಿ ವಾಕ್ಯಗಳಲ್ಲಿ ತವ್ಯಪ್ರತ್ಯಯಕ್ಕೆ ವಿಚಾರವಿಧಿಯಲ್ಲಿ ತಾತ್ಪರ್ಯವಿಲ್ಲ ಬ್ರಹ್ಮಪರವಾಕ್ಯಗಳ ನಡುವೆ ಬರುವುದರಿಂದ ಎನ್ನಕೂಡದು. ದರ್ಶಪೂರ್ಣಮಾಸ ಯಾಗಗಳಿಂದ ಸ್ವರ್ಗ ಸಂಪಾದಿಸಬೇಕು ಹೇಗೆ? ಎಂದು ಇತಿ ಕರ್ತವ್ಯತಾಕಾಂಕ್ಷೆ ಇದೆ. ಪ್ರಯಾಜಾದಿಗಳಿಗೆ ಏನು ಫಲ ಎಂದು ಫಲಾಕಾಂಕ್ಷೆ ಇದೆ. ಆದರಿಂದ ಎರಡಕ್ಕೂ ಏಕವಾಕ್ಯತೆ ಬರುವುದರಿಂದ ಪ್ರಯಾಜಗಳು ಅಂಗಯಾಗಗಳಾಗುತ್ತವೆ. ಪರಸ್ಪರ ವಿರೋಧವಿಲ್ಲ. ಹಾಗೆಯೆ ವೇದಾಂತಕ್ಕೆ ವಿಚಾರದ ಅಪೇಕ್ಷೆ ಇದೆ. ವಿಚಾರವಿಧಿಗೆ ಬ್ರಹ್ಮಜ್ಞಾನ ಉಂಟುಮಾಡುವುದೆ ಉದ್ದೇಶ. ಹೀಗಾಗಿ ಬ್ರಹ್ಮಜ್ಞಾನ ಸಾಧನವಾದ ವೇದಾಂತಕ್ಕೆ ಸಹಾಯವಾಗಲೆಂದು ವಿಚಾರವನ್ನು ವಿಚಾರವಿಧಿ ವಿಧಿಸುತ್ತದೆ ಎಂದು ಏಕವಾಕ್ಯತೆ ಇರುವುದರಿಂದ ವಿಚಾರವಿಧಿಯಲ್ಲಿ ಬರುವ ತವ್ಯಾದಿ ಪ್ರತ್ಯಯಗಳಿಗೆ ವಿಧಿಶಕ್ತಿ ಪ್ರತಿಬಂಧವಾಗುವುದಿಲ್ಲ.

'ಅಭಿಚಾರ ಮಾಡಬೇಕು, ಬೇಡ ಎಂದು ವಿಚಾರ ಮಾಡುತ್ತಾರೆ' ಎಂಬಲ್ಲಿ ವಿಧಿ ಇಲ್ಲ ಏಕೆಂದರೆ ವಿಚಾರವನ್ನು ಹೇಳುವ ಅಭಿಪ್ರಾಯ ಪ್ರತಿಬಂಧಕವಾಗಿದೆ. ಪ್ರಕೃತದಲ್ಲಿ ಅಂಥ ಪ್ರತಿಬಂಧಕ ವಿನಿಲ್ಲ.

'ಭೃಗುಮುನಿಯೆ, ಬ್ರಹ್ಮವಿಚಾರ ಮಾಡು' ಎಂದು ಸಂಬೋಧನವಿದೆ. ಶ್ರೋತೃಗಳು ಅಭಿಮುಖರಾಗುವಂತಿದ್ದರೆ ಮಾತ್ರ ಸಂಬೋಧನೆಗೆ ಅವಕಾಶ. ವಿಧಿಯು ಹಾಗಲ್ಲ. ಶ್ರೋತೃಗಳು ಅಭಿಮುಖರಾಗಲಿ ಆಗದಿರಲಿ, ವಿಧಿಯು ಪ್ರವೃತ್ತಿ ಮಾಡುತ್ತದೆ. ಹೀಗೆ ವಿರುದ್ಧ ಸ್ವಭಾವದ ವಿಧಿ ಸಂಬೋಧನಗಳು ಒಂದೇ ವಕ್ಯಾದಲ್ಲಿ ಇರಲಾರವು ಎಂದು ಆಕ್ಷೇಪ ಬರಬಹುದು. ಆದರೆ ಮಂತ್ರಗಳಲ್ಲಿ ಸಂಬೋಧನೆ ವಿಧಿಗೆ ವಿರುದ್ಧ ಎನ್ನಬಹುದು. ಪ್ರಕೃತ ಭೃಗುಮುನಿಯನ್ನು

ಸಂಬೋಧಿಸಿರುದು ಅರ್ಥವಾದದಲ್ಲಿ. ಅರ್ಥವಾದದ ಬಲದಿಂದಲೆ ವಿಧಿ ಇದೆ ಎಂದೆನಿಸುತ್ತದೆ. ವಿಧಿ ಒಂದಿಲ್ಲದಿದ್ದರೆ ಅರ್ಥವಾದ ಪ್ರಶಂಸೆ ಮಾಡುವುದೇನನ್ನು? ಆದರಿಂದ ಇಲ್ಲಿ ವಿಧಿ ಸಿದ್ಧವಾಗುತ್ತಿರುವುದರಿಂದ ಸಂಬೋಧನೆ ಪ್ರತಿಬಂಧಕವಾಗುವುದಿಲ್ಲ.

'ಜ್ಞಾನವು ವಿಧಾನಕ್ಕೆ ಯೋಗ್ಯವಲ್ಲ' ಎಂಬ ಆಕ್ಷೇಪವೂ ಸರಿಯಲ್ಲ. ''ತಸ್ಮಾತ್ ಪಶ್ಯೇತ್ ಸ ನಿತ್ಯಶಃ' ಎಂದು ಮುಂತಾಗಿ ಜ್ಞಾನವನ್ನು ವಿಧಿಸಿದ್ದು ಕಂಡಿದೆ. ವಿಧಿವಾಕ್ಯದಲ್ಲಿ ಅಮುಖ್ಯಾರ್ಥವಿಟ್ಟು-ಕೊಳ್ಳಲಾಗದೆಂದೂ ಮೀಮಾಂಸಾಶಾಸ್ತ್ರಕ್ಕೆ ವಿರುದ್ಧ 'ಸೋಮೇನ ಯಜೇತ' ಎಂಬಲ್ಲಿ 'ಸೋಮ' ಎಂದರೆ ಸೋಮದಿಂದ ಮಾಡುವ ಯಾಗ' ಎಂದು ಅಮುಖ್ಯಾರ್ಥ ಸ್ವೀಕರಿಸಿದ್ದಾರೆ. ಮುಖ್ಯಾರ್ಥ ಕೂಡದಿರುವುದು ಮತ್ತು ತಾತ್ಪರ್ಯಕ್ಕೆ ಅನನುಗುಣವಾಗುವುದು ಅಮುಖ್ಯಾರ್ಥ ಸ್ವೀಕರಿಸಲು ಕಾರಣ. ಇದು ಬೇರೆ ಕಡೆ ಇರುವಂತೆ ವಿಧಿವಾಕ್ಯದಲ್ಲಿಯೂ ಇರುವುದು ಅಸಂಭವವಲ್ಲ. ಆದರಿಂದ ಅನುವಾದಕ ವಾಕ್ಯಕ್ಕೆ ಮುಖ್ಯಾರ್ಥ ಬರಬೇಕೆಂದು ವಿಧಿವಾಕ್ಯಕ್ಕೆ ಅಮುಖ್ಯಾರ್ಥ ಹಚ್ಚಬಾರದು ಎಂಬುದೆ ಮೀಮಾಂಸಕರ ಅಭಿಪ್ರಾಯ.

### ಓಂಕಾರ ಸೂತ್ರ ಘಟಕ

'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ವಚನಾನುಸಾರ ಬ್ರಹ್ಮಸೂತ್ರದಲ್ಲಿ ಪ್ರತಿಸೂತ್ರವೂ ಬ್ರಹ್ಮವಿದ್ಯೆಯಾಗಿರುವುದರಿಂದ ಆದ್ಯಂತಗಳಲ್ಲಿ ಓಂಕಾರ ಊಹಮಾಡಿಕೊಳ್ಳಬೇಕು. ಯದ್ಯಪಿ ಪೂರ್ವಮೀಮಾಂಸೆಯಲ್ಲಿ ಮಂತ್ರ ಸಾಮ ಸಂಸ್ಕಾರಗಳನ್ನು ಒಂದು ಬಗೆಯಾಗಿ ಪ್ರಕೃತಿಯಾಗದಲ್ಲಿ ಹೇಳಿದ್ದರೆ ವಿಕೃತಿಯಾಗದಲ್ಲಿ ಇನ್ನೊಂದು ಬಗೆಯಾಗಿ ಅನುಷ್ಠಾನ ಮಾಡುವುದನ್ನು 'ಊಹ' ಎಂದು ಕರೆಯಲಾಗಿದೆ. ಉದಾ: 'ಅಗ್ನಿ' ಪದಯುಕ್ತವಾದ ಮಂತ್ರ ಪ್ರಕೃತಿಯಾಗದಲ್ಲಿ ಇದೆ. ಅಲ್ಲಿ ಅಗ್ನಿ ದೇವತೆ. ಸೂರ್ಯದೇವತಾಕ ವಿಕೃತಿಯಾಗದಲ್ಲಿ ಆ ಮಂತ್ರವನ್ನೇ 'ಅಗ್ನಿ' ಪದದ ಸ್ಥಾನದಲ್ಲಿ 'ಸೂರ್ಯ' ಪದವನ್ನಿಟ್ಟು ಹೇಳಬೇಕು. ಹೀಗೆ ಪ್ರಕೃತದಲ್ಲಿ ಓಂಕಾರ ಊಹಕ್ಕೆ ಅದರ ಸ್ಥಾನದಲ್ಲಿ ಬೇರೆ ಶಬ್ದವಿಲ್ಲ ಎಂಬ ಸಮಸ್ಯೆ ಬರಬಹುದು. ಆದರೆ ಇಲ್ಲಿ 'ಊಹ' ಎಂದರೆ ಅಧ್ಯಾಹಾರ. ಊಹ ಧಾತುವಿನ ಮೇಲೆ ಭಾವಾರ್ಥದಲ್ಲಿ ಪ್ರತ್ಯಯ ಬಂದಿದೆ. ಕರ್ಮಾರ್ಥದಲ್ಲಿ ಅಲ್ಲ.

ಅಧ್ಯಾಹಾರಕ್ಕೂ ಆಕಾಂಕ್ಷೆ ಬೇಕಲ್ಲವೆ? 'ಸಂಯಜ್ಞಪತಿರಾಶಿಷಾ' ಎಂಬಲ್ಲಿ 'ಯಜಮಾನನಿಗೆ ಅಭೀಷ್ಟ' ಎಂದಿಷ್ಟೇ ಹೇಳಿದೆ. 'ಸಿದ್ಧಿಸಲಿ' ಎಂದು ಅಧ್ಯಾಹಾರ ಮಾಡದಿದ್ದರೆ, ಆಕಾಂಕ್ಷೆ ಶಾಂತವಾಗುವುದಿಲ್ಲ. ಇಲ್ಲಿ ಸೂತ್ರದಲ್ಲಿ ಓಂಕಾರದ ಅಧ್ಯಾಹಾರಕ್ಕೆ ಆಕಾಂಕ್ಷೆ ಇಲ್ಲ ಎಂದು ಆಕ್ಷೇಪ ಬಂದರೆ ಆಕಾಂಕ್ಷೆ ಇಲ್ಲದಿದ್ದರೂ 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ವಚನದಲ್ಲಿ ವಿಹಿತವಾದ್ದರಿಂದ ಅಧ್ಯಾಹಾರ ಮಾಡುತ್ತೇವೆ ಎಂದು ಸಮಾಧಾನ.

ಅಧ್ಯಾಹಾರ ಮಾಡಿದ ಶಬ್ದಕ್ಕೆ ವಾಕ್ಯದಲ್ಲಿ ಅನ್ವಯ ಬೇಕು. ಓಂ ಎಂದರೆ ಗುಣಪೂರ್ಣ ಎಂದರ್ಥ. ಇದನ್ನು ಬ್ರಹ್ಮಶಬ್ದದೊಂದಿಗೇ ಅನ್ವಯ ಮಾಡಬೇಕು. 'ಗುಣಪೂರ್ಣನಾದ ಬ್ರಹ್ಮ' ಎಂದು. ಆದರೆ 'ಬ್ರಹ್ಮಜಿಜ್ಞಾಸಾ' ಎಂಬ ಸಮಾಸದಲ್ಲಿ ಸೇರಿ ಹೋಗಿರುವ ಬ್ರಹ್ಮಶಬ್ದದೊಡನೆ

ಹೊರಗಿರುವ ಓಂಕಾರದ ಅನ್ವಯವಾಗಲು ಶಕ್ಯವಿಲ್ಲ ಎಂದು ಆಕ್ಷೇಪ ಬರುತ್ತದೆ. ಆದರೆ 'ಹದಿನೇಳು ಮೊಳ ವಾಜಪೇಯದ ಯೂಪ' ಎಂದು ಶ್ರುತಿಯು ಹೇಳಿದಾಗ ವಾಜಪೇಯದಲ್ಲಿ ಯೂಪವೇ ಇಲ್ಲ. ಅದರ ಅಂಗವಾದ ಪಶುಯಾಗದಲ್ಲಿ ಇದೆ. ಆದರಿಂದ ಅನ್ವಯ ಕೂಡುವುದಿಲ್ಲ. ಆದರೂ 'ದೇವದತ್ತನ ಮೊಮ್ಮಗ'. ಇಲ್ಲಿ ಮೊಮ್ಮಗನಿಗೆ ದೇವದತ್ತನ ನೇರ ಸಂಬಂಧವಿಲ್ಲದಿದ್ದರೂ ಮಗನ ಮೂಲಕ ಇದೆ. ಹಾಗೇ ಯೂಪಕ್ಕೆ ವಾಜಪೇಯದ ಸಂಬಂಧ ಅದರ ಅಂಗವಾದ ಪಶುಯಾಗದ ಮೂಲಕ ಇದೆ. ಆದರಿಂದ ಹದಿನೇಳು ಮೊಳ ಎತ್ತರ ಪ್ರಮಾಣ ಪ್ರಧಾನವಾದ ವಾಜಪೇಯಕ್ಕೆ ಸಂಬಂಧಿಸಿದಂತೆ ಮೊದಲಿಗೆ ಕಂಡರೂ ಅದು ಅಶಕ್ಯವಾದ್ದರಿಂದ ಅಂಗವಾದ ಪಶುಯಾಗಕ್ಕೆ ಸಂಬಂಧಿಸುತ್ತದೆ. ಹಾಗೆಯೆ ಸಮಾಸದಲ್ಲಿ ಪ್ರಧಾನವಾದ ಜಿಜ್ಞಾಸೆ ಗುಣಪೂರ್ಣವೆನಿಸದಿರುವುದರಿಂದ ಅಂಗವಾದ ಬ್ರಹ್ಮ ಗುಣಪೂರ್ಣ ಎಂದು ಅನ್ವಯ ಹೊಂದುತ್ತದೆ. 'ಯಜೇತ' 'ಯಾಗದಿಂದ ಇಷ್ಟ ಸಂಪಾದಿಸಬೇಕು' ಇಲ್ಲಿ ಅರ್ಥವಾದವು ಹೇಳುವ ಪ್ರಾಶಸ್ತ್ಯ ಅಪ್ರಧಾನವಾದ ಯಾಗದಲ್ಲಿ ಸಂಬಂಧಿಸುತ್ತದೆ. 'ದಂಡವನ್ನು ಹಿಡಿದ ಮೈತ್ರಾವರುಣನು ಪ್ರೈಷ ಅನುವಾಕ್ಯಗಳನ್ನು ಪಠಿಸಬೇಕು' ಇಲ್ಲಿ ಮೈತ್ರಾವರುಣ ದಂಡ ಹಿಡಿಯಬೇಕೆನ್ನುವುದೂ ಅವನು ಪ್ರೈಷಾದಿಮಂತ್ರ ಪಠಿಸಬೇಕೆನ್ನುವುದೂ ಬೇರೆ ವಿಧಿ ವಾಕ್ಯಗಳಿಂದ ಸಿದ್ಧವಾಗಿದೆ. ಪಠನ ಕಾಲದಲ್ಲಿ ದಂಡ ಹಿಡಿಯಬೇಕೆಂದು ವಿಧಿಸುವ ಅಭಿಪ್ರಾಯ ಈ ವಾಕ್ಯಕ್ಕೆ ಇದೆ. ಆದರಿಂದ 'ದಂಡಿ' ಎಂಬಲ್ಲಿ ದಂಡ ವಿಶೇಷಣವಾಗಿದ್ದರೂ ಅದಕ್ಕೇ ವಿಧಿಯ ಅನ್ವಯವಾಗುತ್ತದೆ. ಪ್ರಕೃತದಲ್ಲಿಯೂ ಓಂಕಾರ ಸಮಾಸದಲ್ಲಿ ವಿಶೇಷಣವಾದ ಬ್ರಹ್ಮನಿಗೆ ಅನ್ವಯಿಸುತ್ತದೆ.

ಬ್ರಹ್ಮಶಬ್ದಕ್ಕೂ ಗುಣಪೂರ್ಣ ಎಂದೇ ಅರ್ಥ. ಓಂಕಾರಕ್ಕೂ ಅದೇ ಅರ್ಥವೆಂದರೆ ವ್ಯರ್ಥವಾಗುವುದಿಲ್ಲವೆ? ಎಂದರೆ, ಬ್ರಹ್ಮ ಜೀವನಿಗಿಂತ ಭಿನ್ನನಾಗಿದ್ದು ವಿಚಾರಯೋಗ್ಯನೆನ್ನಲು 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬಲ್ಲಿ ಗುಣಪೂರ್ಣ ಎಂಬ ಅರ್ಥದ ಬ್ರಹ್ಮಶಬ್ದವಿರುವಂತೆ 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಎಂಬಲ್ಲಿ ಅದೇ ಅರ್ಥದ ಓಂಕಾರವಿದೆ. ಇದು ಉಪಲಕ್ಷಣ. 'ನಾರಾಯಣಂ ಮಹಾಜ್ಞೇಯಂ' ಎಂಬಲ್ಲಿ ಅದೇ ಅರ್ಥದ ನಾರಾಯಣ ಶಬ್ದವಿದೆ. ಹೀಗೆ ಅನೇಕ ವಿಚಾರವಿಧಿ ವಾಕ್ಯಗಳಲ್ಲಿ ಅನೇಕ ಸಿದ್ಧಾಂತ ಯುಕ್ತಿಗಳಿವೆ ಎಂದು ಸೂಚಿಸಲು ಓಂಕಾರ ಸೂತ್ರದಲ್ಲಿ ಬೇಕು.

ಒಂದೇ ಅರ್ಥದ ಎರಡು ಶಬ್ದಗಳಿಗೆ ಅನ್ವಯ ಹೇಳಿದರೆ 'ಗುಣಪೂರ್ಣನಾದ ಗುಣಪೂರ್ಣ' ಎಂದಾದೀತೆಂಬ ಸಮಸ್ಯೆ ಬಂದರೆ ಎರಡೂ ವಿಷ್ಣು ಎಂಬರ್ಥದಲ್ಲಿ ಯೋಗರೂಢವಾಗಿರುವುದರಿಂದ ಒಂದರ ಯೋಗಾಂಶವನ್ನು ಇನ್ನೊಂದರ ರೂಢ್ಯಂಶವನ್ನೂ ಇಟ್ಟುಕೊಂಡು ಅನ್ವಯ ಹೇಳಬೇಕು. 'ಆತ್ಮೇತಿ ತೂಪಗಚ್ಛಂತಿ' ಸೂತ್ರದಲ್ಲಿ ಸುಧೆಯಲ್ಲಿ ಎರಡು ಆತ್ಮ ಶಬ್ದಗಳಿಗೆ ಹಾಗೇ ಅನ್ವಯವೆಂದು ಹೇಳಿದೆ. 'ಪರಿ ಯದಿಂದ್ರ ರೋದಸೀ ಉಭೇ' ಎಂಬ ಮಂತ್ರವ್ಯಾಖ್ಯಾನದಲ್ಲಿ ಋಗ್ಭಾಷ್ಯ ಟೀಕೆಯಲ್ಲಿ ಎರಡು ಇಂದ್ರಶಬ್ದಗಳಿಗೆ ಹಾಗೇ ಅನ್ವಯ ಉಕ್ತವಾಗಿದೆ.

ಓಂಕಾರ ಪ್ರತಿಪಾದ್ಯನಾದ ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕೆಂದು ಹೇಳುವುದಕ್ಕೆ ಇನ್ನೊಂದು ಪ್ರಯೋಜನವಿದೆ. ಓಂಕಾರಾರ್ಥವೆ ವ್ಯಾಹೃತಿ ಗಾಯತ್ರಿ ಪುರುಷಸೂಕ್ತಗಳ ಮೂಲಕ ಸಮಸ್ತವೇದಾರ್ಥ. ಅದರಿಂದ ಸಮಸ್ತವೇದಗಳು ಈ ವಿಚಾರಶಾಸ್ತ್ರದಲ್ಲಿ ವಿಚಾರಕ್ಕೊಳಪಡುವ ಪ್ರಮಾಣಗಳು ಎಂದು ಸೂಚಿಸಿದಂತಾಗುತ್ತದೆ. 'ಸ್ರವತ್ಯನೋಂಕೃತಂ ಬ್ರಹ್ಮ' ಎನ್ನುವಂತೆ ಅದೃಷ್ಟಫಲಕ್ಕಾಗಿಯೂ ಓಂಕಾರ ಬೇಕು.

ಹೀಗೆ ಪ್ರಥಮಸೂತ್ರದ ಆದಿಯ ಓಂಕಾರಕ್ಕೆ ಅನ್ವಯವಿರುವುದರಿಂದ ದೃಷ್ಟಫಲವೂ ಇದೆ. 'ಸ್ರವತಿ' ಎಂಬಂತೆ ಅದೃಷ್ಟ ಫಲವೂ ಇದೆ. ಸ್ವಿಷ್ಟಕೃತ್ ಮುಂತಾದ ಯಾಗಗಳಲ್ಲಿ ಮಂತ್ರೋಚ್ಚಾರಣೆಯ ಅಂಶದಲ್ಲಿ ದೇವತಾಸ್ಮರಣ, ಹವಿಸ್ಸನ್ನು ಹಾಕುವ ಅಂಶದಲ್ಲಿ ಹವಿಸ್ಸಿನ ವಿನಿಯೋಗಗಳೆಂದು ದೃಷ್ಟಫಲಗಳಿರುವಾಗಲೆ ಜೊತೆಗೆ ತ್ಯಾಗಾಂಶದಲ್ಲಿ ಅದೃಷ್ಟಫಲವೂ ಇದೆ. ಸೂತ್ರದ ಕೊನೆಯಲ್ಲಿ ಓಂಕಾರಕ್ಕೆ ಕೇವಲ ಅದೃಷ್ಟ ಫಲ. ಹಾಗೇ ಮುಂದಿನ ಸೂತ್ರಗಳಲ್ಲಿಯೂ ಕೇವಲ ಅದೃಷ್ಟ ಫಲ. ಒಂದು ಕಡೆ ದೃಷ್ಟ ಫಲವಿದ್ದ ಮಾತ್ರಕ್ಕೇ ಬೇರೆ ಕಡೆಯೂ ದೃಷ್ಟ ಫಲವೆ ಇರಬೇಕೆಂದಿಲ್ಲ. ಕರ್ಮಾಂಗ ಮಂತ್ರಗಳಿಗೆ ಕರ್ಮಕಾಲದಲ್ಲಿ ದೇವತಾಸ್ಮರಣ ರೂಪ ದೃಷ್ಟ ಫಲ. ಪಾರಾಯಣ ಜಪಾದಿ ಕಾಲದಲ್ಲಿ ಅದೃಷ್ಟ ಫಲವಿರುವುದುಂಟು. ಏಕಪಶುಕ ಯಾಗದಲ್ಲಿ 'ಅನ್ವೇನಂ ಮಾತಾ ಮನ್ಯತಾಂ' ಎಂದು ಏಕವಚನಾಂತ ಮಾತೃ ಶಬ್ದ ದೃಷ್ಟ ಫಲಕವಾದರೂ ಅನೇಕ ಪಶುಕವಾದ ಯಾಗಗಳಲ್ಲಿ ಅದೃಷ್ಟ ಫಲಕವಾಗುತ್ತದೆ. ಅಲ್ಲಿ ಮಾತೃ ಶಬ್ದವನ್ನು ಬಹುವಚನಾಂತವಾಗಿ ಪರಿಣಾಮ ಮಾಡಿಕೊಳ್ಳುವುದಿಲ್ಲ. 'ಮಾತುಃಪಯೋಧರರಸಂ ನ ಪುನಃ ಪಿಬಂತಿ' ಎಂಬಲ್ಲಿ ಮಾತೃಶಬ್ದಕ್ಕೆ 'ಆಯಾ ಮಾನವನ ತಾಯಿ' ಎಂದರ್ಥ. ಹಾಗೇ 'ಅನ್ವೇನಂ ಮಾತಾ' ಎಂಬಲ್ಲಿಯೂ 'ಆಯಾ ಪಶುವಿನ ತಾಯಿ' ಎಂದು ಅರ್ಥ ಕೊಡುವುದರಿಂದ ದೃಷ್ಟ ಫಲಕವೆ ಆಗಿದೆ ಎಂದು ಆಕ್ಷೇಪಿಸವುದು ಸರಿಯಲ್ಲ. ಅನೇಕ ತಾಯಂದಿರು ನೀಡುವ ಅನುಮತಿಯನ್ನು ಒಬ್ಬಳು ನೀಡಲಾರರು. ಅದಕ್ಕೆ ಬಹುವಚನಾಂತವಾಗಿಯೆ ಮಾಡಬೇಕಾಗುತ್ತದೆ. ಮಾತುಃಪಯೋಧರರಸಂ ಎಂಬುದು ಗೌಣಪ್ರಯೋಗವೆ. 'ಬಹುಗಣ ವತುಡತಿ ಸಂಖ್ಯಾ' ಎಂಬಲ್ಲಿ 'ಸಂಖ್ಯಾ'ಎಂಬುದು ಒಂದು ಹೆಸರು. 'ಷ್ಣಾಂತಾಃ ಷಟ್' ಎಂಬಲ್ಲಿ ಬರುವ ಅದೇ ಶಬ್ದಕ್ಕೆ ಆ ಹೆಸರಿನ ಶಬ್ದಗಳು ಎಂದರ್ಥ. ಹೀಗೆ ಓಂಕಾರಕ್ಕೆ ಬೇರೆ ಬೇರೆ ಸೂತ್ರಗಳಲ್ಲಿ ಬೇರೆ ಬೇರೆ ಪ್ರಯೋಜನಗಳಿರಬಹುದು.

ಹೀಗೆ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳುವ ಈ ಓಂಕಾರ ಸೂತ್ರದ ಭಾಗವೆ. ಅಂದರೆ ಸೂತ್ರದೊಡನೆ ಸೇರಿ ವಾಕ್ಯಾರ್ಥ ಬೋಧವನ್ನಾಗಲಿ ಅದೃಷ್ಟ ಫಲವನ್ನಾಗಲಿ ಮಾಡಿಕೊಡಬಹುದು. ಅಥವಾ ಎರಡನ್ನೂ ಮಾಡಿಕೊಡಬಹುದು. ಇದನ್ನು ಒಪ್ಪದಿದ್ದರೆ 'ಸಂ ಯಜ್ಞಪತಿರಾಶಿಷಾ' ಎಂಬಲ್ಲಿ ಅಧ್ಯಾಹಾರ ಮಾಡಿಕೊಳ್ಳುವ 'ಗಚ್ಛತಾಂ' ಎಂಬ ಪದ ಅನನ್ವಿತವೆನ್ನಬೇಕಾದೀತು. ಈ ಅಭಿಪ್ರಾಯದಿಂದ ಸುಧಾದಲ್ಲಿ 'ಅಧ್ಯಾಹೃತವಾದ ಶಬ್ದ ವಾಕ್ಯಘಟಕವಲ್ಲವೆನ್ನುವಂತಿಲ್ಲ' ಎನ್ನಲಾಗಿದೆ.

## ಸನ್ಯಾಯರತ್ನಾವಳಿಯಲ್ಲಿ ಓಂಕಾರವಿಚಾರ

'ಪೃಥಗೋಂಕ್ರಿಯತೇಽಖಿಲೈಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುತ್ತ ಸನ್ಯಾಯರತ್ನಾವಳಿಯಲ್ಲಿ 'ಓಂಕಾರವು ಸೂತ್ರದಲ್ಲಿ ಅಥಶಬ್ದದಂತೆ ಸೇರಿಕೊಂಡಿಲ್ಲ. ಪ್ರತ್ಯೇಕವಾಗಿ ಉಚ್ಚರಿಸಬೇಕು' ಎಂದಿದೆ. ಈ ಸಮಸ್ಯೆಗೆ ಪರಿಹಾರ - ಅಷ್ಟಾಕ್ಷರ ಮಂತ್ರದಲ್ಲಿ ಒಂದು ಓಂಕಾರ ಮಂತ್ರಘಟಕ. ಇನ್ನೆರಡು ಆದ್ಯಂತಗಳಲ್ಲಿ ಅದೃಷ್ಟಫಲಕ್ಕಾಗಿ. ಹೀಗೆ ಮೂರು ಓಂಕಾರಗಳು. ಹಾಗೇ ಪ್ರಥಮ ಸೂತ್ರದಲ್ಲಿಯೂ ಮೂರು ಓಂಕಾರಗಳು. 'ಓಂಕಾರಶ್ಚಾಥಶಬ್ದಶ್ಚ' ಎಂದು ಸ್ಮೃತಿ ಇರುವುದರಿಂದ ಅಥಶಬ್ದದ ಮೊದಲಿಗೆ ಒಂದು ಓಂಕಾರ, ಅಥಶಬ್ದದಂತೆಯೆ ಸೂತ್ರಘಟಕವಾಗಿದೆ. ಅಂದರೆ ಗುಣಪೂರ್ಣತ್ವವನ್ನು ಹೇಳಿ ಅನ್ವಯ ಹೊಂದುತ್ತದೆ. ಇದನ್ನು ಸುಧೆಯಲ್ಲಿ ಹೇಳಿದೆ. ಇನ್ನೆರಡು ಓಂಕಾರಗಳು ಆದ್ಯಂತಗಳಲ್ಲಿ 'ಪ್ರವರ್ತನೋಂಕೃತಂ' ಎಂದು ಶ್ರುತಿ ವಿಹಿತವಾದವುಗಳು. ಇವು ಸೂತ್ರ ಘಟಕವಲ್ಲ. ಸನ್ಯಾಯರತ್ನಾವಳಿ ಹೇಳುವುದು ಇದನ್ನೆ. ಅಥವಾ ಆದಿಯಲ್ಲಿ ಶ್ರುತಿವಿಹಿತವಾದ ಓಂಕಾರವನ್ನೆ ಸ್ಮೃತಿಯೂ ಹೇಳುತ್ತದೆ. ಒಂದೇ ಓಂಕಾರ. ಅದನ್ನು ಒಮ್ಮೆ ಉಚ್ಚರಿಸಿದರೂ ಎಲ್ಲಾ ಸೂತ್ರಗಳಿಗೂ ಸಂಬಂಧಿಸುವಂತೆ ಬಿಡಿಸಿ ಉಚ್ಚಾರ ಮಾಡಿದೆ. ಅಥಶಬ್ದದಂತೆ ಸೇರಿಸಿ ಅಲ್ಲ ಎಂಬುದು ಸನ್ಯಾಯರತ್ನಾವಳಿಯ ಅಭಿಪ್ರಾಯ. ತನ್ನ ಅರ್ಥವನ್ನು ಬೋಧಿಸಿ ಅನ್ವಯ ಹೊಂದುವುದರಿಂದ ಸೂತ್ರ ಘಟಕವಾಗಿದೆ ಎಂದು ಸುಧೆ ಹೇಳುತ್ತದೆ. ಪರಸ್ಪರ ವಿರೋಧವಿಲ್ಲ.

ಭಾಷ್ಯದಲ್ಲಿ 'ಅಥ ಅತಃ ಶಬ್ದಗಳನ್ನೇ ಆದಿಯಲ್ಲಿ ಹೇಳುತ್ತಾರೆ' 'ತಾವೇವಾದೌ ಪ್ರಯುಂಜತೇ' ಎಂದಿದ್ದು ಓಂಕಾರ ಇಲ್ಲವೆಂಬ ಅಭಿಪ್ರಾಯದಿಂದಲ್ಲ. ಬ್ರಹ್ಮಜಿಜ್ಞಾಸಾದಿ ಪದಗಳು ಆದಿಯಲ್ಲಿ ಬರುವುದಿಲ್ಲ ಎಂದರ್ಥ. ಅಥವಾ ಏವಕಾರಕ್ಕೆ 'ಅಥ ಅತಃಶಬ್ದಗಳು ಆದಿಯಲ್ಲಿ ಬಂದೇ ಬರುತ್ತವೆ' ಎಂದು ಅರ್ಥ. ಅಥವಾ ಆದಿಯಲ್ಲಿ ಎಂದರೆ ಬ್ರಹ್ಮಶಬ್ದದ ಆದಿಯಲ್ಲಿ ಅಥ ಅತಃ ಶಬ್ದಗಳೇ ಬರುತ್ತವೆ ಎಂದರ್ಥ. ಭಾಷ್ಯದಲ್ಲಿ ಓಂಕಾರಕ್ಕೆ ವ್ಯಾಖ್ಯಾನ ಮಾಡದಿರುವುದು, ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡಲಿದ್ದೇವೆ, ಛಾಂದೋಗ್ಯಾದಿ ಭಾಷ್ಯಗಳಲ್ಲಿ ಮಾಡಿದ್ದೇವೆ ಮತ್ತು ಪೂರ್ವಪಕ್ಷದ ಎಲ್ಲ ಯುಕ್ತಿಗಳನ್ನೂ ಅಥಾದಿ ಶಬ್ದಗಳೆ ಸೂಚಿಸುವುದರಿಂದ ಅವುಗಳಿಗೆ ವ್ಯಾಖ್ಯಾನ ಮಾಡಿದರೆ ಸಾಕು ಎಂಬ ಅಭಿಪ್ರಾಯದಿಂದ. ಅದೃಷ್ಟಫಲಕ್ಕಾಗಿ ಉಚ್ಚರಿಸುವ ಓಂಕಾರಕ್ಕೆ ವಾಕ್ಯಾರ್ಥದಲ್ಲಿ ಅನ್ವಯವೂ ಇದೆ ಎಂದು ತೋರಿಸಲು ಅನುವ್ಯಾಖ್ಯಾನ ವ್ಯಾಖ್ಯಾನ ಮಾಡಿದೆ.

## ಅಥಶಬ್ದಾರ್ಥ-ಆರಂಭವಲ್ಲ

'ಭಾಮತಿ'ಯಲ್ಲಿ ಹೀಗೆ ಹೇಳಿದೆ. 'ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ ಮುಖ್ಯಾರ್ಥ. ಅದು ಯತ್ನಸಾಧ್ಯವಲ್ಲ. ಅದನ್ನು ಆರಂಭಿಸಲಾಗುವುದಿಲ್ಲ. 'ವಿವರಣ'ವು ಹೇಳುವಂತೆ ಅಮುಖ್ಯಾರ್ಥವಾದ ವಿಚಾರವನ್ನಿಟ್ಟುಕೊಳ್ಳುವುದು ಮುಖ್ಯಾರ್ಥಸಂಭವವಿರುವಾಗ ಸಲ್ಲದು'. ಇದು ಸರಿಯಲ್ಲ. ಅಮುಖ್ಯಾರ್ಥವಾದ ವಿಚಾರವನ್ನಾದರೂ ಇಟ್ಟುಕೊಂಡು ಅಥ ಶಬ್ದಾರ್ಥವಾದ ಆರಂಭವನ್ನು ಅನ್ವಯಿಸಬಾರದೇಕೆ?

ಈ ಪ್ರಶ್ನೆಗೆ ಭಾಮತಿ ಹೀಗೆ ಹೇಳುತ್ತದೆ - 'ಅಥ ಶಬ್ದಕ್ಕೆ ಆರಂಭಾರ್ಥ ಅಯುಕ್ತವೆಂದಲ್ಲ. ಅನಂತರ ಎಂಬ ಅರ್ಥವಿಟ್ಟುಕೊಂಡು ಅಧಿಕಾರಿ ಸೂಚನೆಯನ್ನು ತೋರಿಸುವ ಉದ್ದೇಶದಿಂದ ಆರಂಭಾರ್ಥವನ್ನು ಕೈಬಿಡಲಾಗಿದೆ. ಇದೂ ಸರಿಯಲ್ಲ. ಅದ್ವೈತ ಸಿದ್ಧಾಂತದ ಪ್ರಕಾರ ಅಧಿಕಾರಿ ಪ್ರಯೋಜನಗಳು ಎರಡೂ ಅಸಂಭವಿ. ಏಕೆಂದರೆ 'ವಿಚಾರವು ಜ್ಞಾನಸಾಧನವೆಂಬುದು ಸಿದ್ಧವಿಷಯವಾದ್ದರಿಂದ ವಿಚಾರವಿಧಿ, ನಿಯಮವಿಧಿ' ಎನ್ನುವ ಅದ್ವೈತಮತದಲ್ಲಿ ವಿಚಾರ ಮೋಕ್ಷಸಾಧನವಲ್ಲ. ಸಾಧನವೆಂದರೆ ವಿಚಾರವಿಧಿ ಅಪೂರ್ವವಿಧಿ ಎನಿಸೀತು ಮೋಕ್ಷ ಪ್ರಯೋಜನವಲ್ಲ. ಮುಮುಕ್ಷು ಅಧಿಕಾರಿಯಲ್ಲ. ಮುಮುಕ್ಷು ಮೋಕ್ಷಸಾಧನವಾದ ಜ್ಞಾನದಲ್ಲಿ ಇಚ್ಛೆ ಮಾಡಬೇಕು. ಜ್ಞಾನದಲ್ಲಿ ಇಚ್ಛೆ ಕೂಡಲಾರದು. ಜ್ಞಾನದ ಬಗ್ಗೆ ಜ್ಞಾನವಿಲ್ಲದೆ ಅದರಲ್ಲಿ ಇಚ್ಛೆ ಉಂಟಾಗುವುದಿಲ್ಲ. ಜ್ಞಾನದ ಜ್ಞಾನವಿದ್ದರೆ ಜ್ಞಾನದ ವಿಷಯದ ಬಗ್ಗೆಯೂ ಜ್ಞಾನವಿರಲೇಬೇಕು. ಆದರಿಂದ ಮೊದಲೆ ಇರುವ ಜ್ಞಾನದಲ್ಲಿ ಇಚ್ಛೆ ಶಕ್ಯವಿಲ್ಲ.

ಬ್ರಹ್ಮನ ಬಗ್ಗೆ ಪರೋಕ್ಷಜ್ಞಾನ ಬಂದಾಗ ಅಪರೋಕ್ಷದ ಇಚ್ಛೆ ಬರಬಹುದು. ಆದರೆ ಆ ಇಚ್ಛೆಯನ್ನು ಅಪರೋಕ್ಷಾನುಭವ ಗ್ರಹಿಸುವಾಗ ಇಚ್ಛೆಯ ವಿಷಯವಾದ ಜ್ಞಾನದ ಜೊತೆಗೆ ಅದರ ವಿಷಯವಾದ ಬ್ರಹ್ಮನನ್ನೂ ಗ್ರಹಿಸಲೇಬೇಕು. ಆದರಿಂದ ಮೊದಲೇ ಇರುವ ಅಪರೋಕ್ಷಕ್ಕಾಗಿ ವಿಚಾರ ಅಸಂಭವ. 'ಇದು ಬ್ರಹ್ಮಜ್ಞಾನವನ್ನು ಗ್ರಹಿಸುವ ಅಪರೋಕ್ಷ, ಕೇವಲ ಬ್ರಹ್ಮನನ್ನು ಗ್ರಹಿಸುವ ಅಪರೋಕ್ಷದಲ್ಲಿ ಇಚ್ಛೆ ಎನ್ನುವುದಾದರೆ ಕೇವಲ ಬ್ರಹ್ಮನನ್ನು ಗ್ರಹಿಸುವ ಪರೋಕ್ಷದಲ್ಲಿ ಇಚ್ಛೆಯನ್ನು ಏಕೆ ಒಪ್ಪಬಾರದು? ಪರೋಕ್ಷದಲ್ಲಿ ಇಚ್ಛೆ ಬರಲಾರದೆಂದರೆ ಧರ್ಮವಿಚಾರದಲ್ಲಿ ಪ್ರವೃತ್ತಿ ಹೇಗೆ? ಧರ್ಮ ಅಪರೋಕ್ಷವಾಗದು ತಾನೆ? ಧರ್ಮದ ಅಪರೋಕ್ಷದಲ್ಲಿ ಇಚ್ಛೆ ಹೇಗೆ ಉಂಟಾದೀತು? ಧರ್ಮ ಸದಾ ಪರೋಕ್ಷವೆ. ಅಪರೋಕ್ಷ ವಿಷಯದಲ್ಲಿ ಮಾತ್ರ ಮೊದಲಿಗೆ ಪರೋಕ್ಷದಿಂದ ನಿಶ್ಚಯಿಸಿಕೊಂಡೆ ಅಪರೋಕ್ಷಕ್ಕಾಗಿ ವಿಚಾರ ಮಾಡಬೇಕು ಎನ್ನುವುದಾದರೆ ಮೋಟುಮರದ ಬಗ್ಗೆ ಅದೇನೆಂದು ಸಂದೇಹ ಬಂದಾಗ ಪ್ರತ್ಯಕ್ಷ ಕಾಣಲು ಬಯಸುವುದಕ್ಕೆ ಮುನ್ನ ಪರೋಕ್ಷದಿಂದ ನಿಶ್ಚಯಿಸಿಕೊಳ್ಳಬೇಕಾದೀತು. ಇದು ಅನುಭವ ವಿರುದ್ಧ.

ಆದರಿಂದ ಸಾಮಾನ್ಯವಾಗಿ ತಿಳಿದುದನ್ನು ವಿಶೇಷವಾಗಿ ತಿಳಿಯಲು ಇಚ್ಛೆ ಉಂಟಾಗುವುದನ್ನು ಒಪ್ಪಬೇಕು. ಅದನ್ನು ಒಪ್ಪದ ವಿವರಣಮತದಲ್ಲಿ ವಿಚಾರ ಪ್ರವೃತ್ತಿಮಾಡದೆ ಪರೋಕ್ಷ ನಿಶ್ಚಯವಿಲ್ಲ. ಪರೋಕ್ಷ ನಿಶ್ಚಯವಿಲ್ಲದೆ ಅಪರೋಕ್ಷೇಚ್ಛೆಯಿಂದ ವಿಚಾರ ಪ್ರವೃತ್ತಿ ಕೂಡುವುದಿಲ್ಲ ಎಂದು ಅನ್ಯೋನ್ಯಾಶ್ರಯ. ಆದರಿಂದ ಅಥ ಶಬ್ದಕ್ಕೆ 'ಅನಂತರ' ಎಂದು ಅರ್ಥವಿಟ್ಟುಕೊಂಡರೂ ಮುಮುಕ್ಷುವಿಗಾಗಿ ವಿಚಾರವಿಧಿ, ಅಪರೋಕ್ಷ ಅಥವಾ ಮೋಕ್ಷ ಫಲ ಎನ್ನುವ ಸೂಚನೆ ಸಿಗಲಾರದು. ಹಾಗಾದರೆ ಅಥ ಶಬ್ದಕ್ಕೆ ಆರಂಭ ಎಂದೇ ಅರ್ಥ ಏಕೆ ಇಟ್ಟುಕೊಳ್ಳಬಾರದು?

೩.೩ ಬ) ಭಾಮತೀಮತದಲ್ಲಿ 'ಬ್ರಹ್ಮಜಿಜ್ಞಾಸೆ ಅಂದರೆ ಬ್ರಹ್ಮಜ್ಞಾನೇಚ್ಛೆ ಉಂಟಾಗುವುದು ಯುಕ್ತ' ಎಂದು ಸೂತ್ರಾರ್ಥ. ವಿಚಾರ ತಾತ್ಪರ್ಯಾರ್ಥ. ಇದರ ಅನ್ವಯಕ್ಕಾಗಿ 'ಕರ್ತವ್ಯಾ' ಎಂಬ ಪದದ ಅಧ್ಯಾಹಾರ ಎನ್ನುತ್ತಾರೆ. ಆದರೆ ವಿಚಾರಕ್ಕೆ ಅಧ್ಯಾಹೃತ ಕರ್ತವ್ಯ ಪದಾನ್ವಯ ಹೇಳುವುದಾದರೆ ಅದಕ್ಕೆ

ಸೂತ್ರದಲ್ಲಿ ಮೊದಲೆ ಇರುವ ಆರಂಭಾರ್ಥದ ಅಥಪದದಿಂದ ಅನ್ವಯ ಏಕೆ ಹೇಳಬಾರದು? ತಾತ್ಪರ್ಯಾರ್ಥಕ್ಕೆ ಅಧ್ಯಾಹೃತದೊಂದಿಗೇ ಅನ್ವಯವೆಂದು ನಿಯಮ ಉಂಟೆ? 'ಸೌರ್ಯಚರು ನಿರ್ವಾಪ ಮಾಡಬೇಕು' ಎಂಬಲ್ಲಿ ತಾತ್ಪರ್ಯಾರ್ಥವಾದ ಯಾಗಕ್ಕೆ ಪ್ರತ್ಯಕ್ಷವಿಧಿಯ ಅನ್ವಯವಿದೆ. ಅಂದರೆ ವಿಧಿಪ್ರತ್ಯಯ ಹೇಳುವ ಪ್ರಯತ್ನಕ್ಕೆ ವಿಶೇಷಣವಾಗಿ ಯಾಗದ ಅನ್ವಯವಿದೆ. ಪ್ರಯತ್ನ ಮಾಡು ಎಂದು ಮಾತ್ರ ವಿಧಿಸಲಾಗುವುದಿಲ್ಲ. ಯಾವುದರ ಪ್ರಯತ್ನ ಎಂದು ಹೇಳಬೇಕು ತಾನೆ? ದ್ರವ್ಯ ದೇವತೆಗಳ ಬಲದಿಂದ ಊಹಿಸಿದ ಯಾಗವನ್ನು ವಿಶೇಷಣವಾಗಿ ಅನ್ವಯಿಸಬೇಕು.

ಆದರಿಂದ ಅಥ ಶಬ್ದಕ್ಕೆ ಆರಂಭಾರ್ಥತ್ವವನ್ನು ಹೇಳಿದರೆ ಅನ್ವಯ ಕ್ಲೇಶವಿಲ್ಲ. ಆದರೂ ಆರಂಭಿಸುತ್ತೇವೆ ಎಂದು ಹೇಳದೆ ಆರಂಭಿಸಿದರೂ ಆರಂಭವಾಗುವುದನ್ನು ತಿಳಿಯುವುದು ಕಷ್ಟವೇನಲ್ಲ. ಆದರಿಂದ ಹೇಳಬೇಕಾಗಿಲ್ಲ ಎನ್ನಬೇಕು. ಮತ್ತು ಅಧಿಕಾರಾದಿಗಳನ್ನು ಅವಶ್ಯ ಹೇಳಬೇಕಾಗಿದೆ. ಹೇಳಲು ಬೇರೆ ಶಬ್ದವಿಲ್ಲ. ಅಥ ಶಬ್ದ ಹೇಳಬಲ್ಲುದು ಆದರಿಂದ ಅಥ ಶಬ್ದಕ್ಕೆ 'ಅಧಿಕಾರ ಪ್ರಾಪ್ತಿಯಾದ ಅನಂತರ' ಎಂದೇ ಅರ್ಥ.

### ಅಥಶಬ್ದಕ್ಕೆ ಮಂಗಳ ಅರ್ಥವಲ್ಲ

ಮಂಗಲ ಅಥಶಬ್ದೋಚ್ಚಾರಣದಿಂದಾಗುವ ಪ್ರಯೋಜನವೆ ಹೊರತು ಶಕ್ತಿಯಿಂದಾಗಲಿ ಲಕ್ಷಣೆಯಿಂದಾಗಲಿ ಅಥಶಬ್ದದಿಂದ ಮಂಗಳದ ಪ್ರತೀತಿ ಉಂಟಾಗುವುದಿಲ್ಲ. ಸೂತ್ರದಲ್ಲಿ ಅಥಶಬ್ದದಿಂದ ಮಂಗಳ ವಿವಕ್ಷಿತವೂ ಅಲ್ಲ. ವಿವಕ್ಷೆ ಮಾಡಿದರೆ ಅಧಿಕಾರದ ಬಗ್ಗೆ ಸೂತ್ರದಲ್ಲಿ ಏನೂ ಹೇಳಿದಂತಾಗುವುದಿಲ್ಲ ಎಂಬ ಪ್ರಸಂಗವೂ ಇದೆ.

ಅದ್ವೈತ ಭಾಷ್ಯದಲ್ಲಿಯೂ ಮಂಗಳವು ಅಥಶಬ್ದಾರ್ಥವಲ್ಲ ಎಂದಿದೆ. ಆದರೆ ಏಕೆ ಎಂದರೆ ಮಂಗಳಕ್ಕೆ ವ್ಯಾಕ್ಯಾರ್ಥದಲ್ಲಿ ಸಮನ್ವಯವಿಲ್ಲ. ಸಮನ್ವಯ ಏಕೆ ಇಲ್ಲ ಎಂದರೆ ಮಂಗಳವು ಅಥಶಬ್ದಾರ್ಥವಲ್ಲದ್ದರಿಂದ ಎಂದು ಭಾಮತಿ ಹೇಳುತ್ತದೆ. ಇದು ಅನ್ಯೋನ್ಯಾಶ್ರಯ. ವಿವರಣದಲ್ಲಿ 'ಮಂಗಳಕ್ಕೆ ವಾಕ್ಯಾರ್ಥದಲ್ಲಿ ಸಮನ್ವಯ ಏಕೆ ಇಲ್ಲ?' ಎಂಬ ಪ್ರಶ್ನೆಗೆ ಮಂಗಳ ವಿಚಾರಕ್ಕೆ ಕರ್ತೃವೂ ಅಲ್ಲ, ಕರ್ಮವೂ ಅಲ್ಲ. ಯಾವ ಭೇದ ಸಂಬಂಧದಿಂದಲೂ ಅನ್ವಯ ಶಕ್ಯವಿಲ್ಲ. ಅಭೇದ ಸಂಬಂಧದಿಂದ ಅನ್ವಯ ಹೇಳಿದರೆ, 'ವಿಚಾರವು ಮಂಗಳ' ಎಂದರೆ, ಕೇವಲ ಪ್ರಶಂಸೆಯಾದೀತು. ಶ್ರುತ್ಯರ್ಥ ನಿರ್ಣಯಕ್ಕೆ ಬೇಕಾದ ಯುಕ್ತಿಯನ್ನು ಹೇಳಿದಂತಾಗುವುದಿಲ್ಲ ಎಂದಿದೆ. ಆದರೆ 'ವಿಚಾರವು ಮಂಗಳ' ಎಂದರೆ, ಮಂಗಳವಾದ್ದರಿಂದ ಕರ್ತವ್ಯ ಎಂದು ಹೇತುವನ್ನು ಹೇಳಿ ಸಾರ್ಥಕವಾಗಬಹುದು. 'ಮಂಗಳಕರವಾದ್ದರಿಂದ ಪ್ರತಿದಿನ ಬ್ರಹ್ಮವಿಚಾರ ಮಾಡಬೇಕು' ಎಂದು ಭಾಮತಿಯಲ್ಲಿ ಹೇಳಿದ್ದುಂಟು.

### ಅಥಶಬ್ದಾರ್ಥ ಪೂರ್ವಪ್ರಕೃತಾಪೇಕ್ಷೆಯಲ್ಲ

ಅದ್ವೈತಭಾಷ್ಯದಲ್ಲಿ 'ಪೂರ್ವಪ್ರಕೃತಾಪೇಕ್ಷೆಯೂ ಪರ್ಯವಸಾನದಲ್ಲಿ 'ಅನಂತರ' ಎಂಬ ಅರ್ಥಕ್ಕಿಂತ ವಿಲಕ್ಷಣವಲ್ಲ' ಎಂದಿದೆ. ಇದಕ್ಕೆ ಭಾಮತಿ ಕೊಡುವ ವಿವರಣೆ-'ಬ್ರಹ್ಮವಿಚಾರಕ್ಕೆ

ಪೂರ್ವದಲ್ಲಿ ಹೇತುರೂಪದಿಂದ ಪ್ರಕೃತವಾದುದನ್ನು ಅಥಶಬ್ದದಿಂದ ತಿಳಿಯಬೇಕಾಗಿದೆ. ಅಥಶಬ್ದಕ್ಕೆ ಅನಂತರ ಎಂಬ ಅರ್ಥದಂತೆ ಪೂರ್ವಪ್ರಕೃತಾಪೇಕ್ಷೆ ಎಂಬ ಅರ್ಥವಿಟ್ಟುಕೊಂಡರೂ ಈ ಉದ್ದೇಶ ನೆರವೇರುತ್ತದೆ. ಅನಂತರ ಎಂಬ ಅರ್ಥದಲ್ಲಿ ನಾವು ಆಗ್ರಹಪಡುವುದು ವ್ಯರ್ಥ'. ಈ ವಿವರಣ ಭಾಷ್ಯಕ್ಕೆ ವಿರುದ್ಧ. ಭಾಷ್ಯದಲ್ಲಿ 'ಅನಂತರ ಎಂಬ ಅರ್ಥವನ್ನೇ ಅಥಶಬ್ದಕ್ಕೆ ಇಟ್ಟುಕೊಳ್ಳುತ್ತೇವೆ' ಎಂದಿದೆ. ಇದಕ್ಕೆ ಭಾಮತಿ ಹೇಳುತ್ತದೆ. 'ವಸ್ತುತಃ ಒಂದು ಪಕ್ಷವನ್ನು ಹೇಳಿ ಇನ್ನೊಂದು ಪಕ್ಷವನ್ನು ಹೇಳುವಾಗ ಪೂರ್ವಪ್ರಕೃತದ ಅಪೇಕ್ಷೆ. ಪ್ರಕೃತದಲ್ಲಿ ಅದಕ್ಕೆ ಅವಕಾಶವಿಲ್ಲ. ಕೊನೆಗೂ ಅಥಶಬ್ದಕ್ಕೆ ಅನಂತರ ಎಂಬ ಅರ್ಥವನ್ನೇ ಹೇಳಬೇಕು'. ಈಗ ಭಾಷ್ಯ ಇನ್ನಷ್ಟು ಅಸಂಗತವಾಗುವುದು. ಸೂತ್ರದಲ್ಲಿ ಬ್ರಹ್ಮಜಿಜ್ಞಾಸೆ ಕರ್ತವ್ಯ ಎಂದಿಷ್ಟೇ ಹೇಳಿದೆ. ಬೇರೆ ಪಕ್ಷವನ್ನು ಹೇಳಿಲ್ಲ. ಆದರಿಂದ ಪೂರ್ವಪ್ರಕೃತಾಪೇಕ್ಷೆ ಅಥಶಬ್ದಾರ್ಥವಿರಬಹುದೆ? ಎಂಬ ಸಂದೇಹಕ್ಕೇ ಅವಕಾಶವಿಲ್ಲ. ಆದರೂ ಸಂದೇಹ ಪರಿಹಾರಕ್ಕೆ ಭಾಷ್ಯ ಹೊರಟಿದೆ. ಅದರ ವ್ಯಾಖ್ಯಾನಕ್ಕೆ ಭಾಮತಿ ಹೊರಟಿದೆ.

ವಸ್ತುತಃ ಬೇರೆ ಪಕ್ಷವನ್ನು ಹೇಳುವಾಗ, ಮೊದಲಿನ ಪಕ್ಷವನ್ನು ಹೇಳುವಾಗ ಪ್ರಕೃತವಾದ ಶಬ್ದದ ಅಪೇಕ್ಷೆ ಇದ್ದರೂ ಅದು ಅಥಶಬ್ದಾರ್ಥವಲ್ಲ. ಅದು ಸೂತ್ರದಲ್ಲಿ ವಿವಕ್ಷಿತವೆ ಅಲ್ಲವೆ ಎಂಬ ವಿಚಾರವೆ ಅಯುಕ್ತ. ವಿವರಣದಲ್ಲಿ ಇದಕ್ಕೆ ಸಮಾಧಾನವಾಗಿ ಹೀಗೆ ಹೇಳಿದೆ - 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬುದು ಅಥಶಬ್ದದ ಅರ್ಥವಾಗುವುದುಂಟು. ಆದರೆ ಯಾವುದಾದರೊಂದು ಪೂರ್ವಪ್ರಕೃತಕ್ಕಿಂತ ಬೇರೆ ಎನ್ನುವುದು ಸಿದ್ಧವೆ ಆಗಿರುವುದರಿಂದ ಹೇಳುವುದು ವ್ಯರ್ಥ. ಕಾರಣಸಾಮಗ್ರೀ ರೂಪದಿಂದ ಪೂರ್ವಪ್ರಕೃತಕ್ಕಿಂತ ಬೇರೆ ಎನ್ನಬೇಕು. ಈ ಅಭಿಪ್ರಾಯದಲ್ಲಿ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದಿಷ್ಟೇ ಹೇಳಿದರೆ ಸಾಲದು. 'ಪೂರ್ವಪ್ರಕೃತದ ಅನಂತರ' ಎನ್ನಬೇಕು. ಆಗ 'ಕಾರಣದ ಅನಂತರ' ಎಂಬುದು ಮುಖ್ಯವಾದ್ದರಿಂದ ಅದನ್ನೇ ಹೇಳಿದಂತಾಗುವುದು. ಇದಕ್ಕಿಂತ ಅಥಶಬ್ದಕ್ಕೆ 'ಅನಂತರ' ಎಂಬ ಅರ್ಥವಿಟ್ಟುಕೊಳ್ಳುವುದೆ ಮೇಲು ಎಂದು. ಈ ವಿವರಣೆ ಸರಿಯಲ್ಲ. 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದು ಹೇಳಿದರೂ 'ಕಾರಣ ಸಾಮಗ್ರಿಗಿಂತ ಬೇರೆ' ಎನ್ನುವುದೆ ಮುಖ್ಯವೆಂದು ತಿಳಿಯಬಹುದು. 'ಯಾವುದಾದರೊಂದು ವಸ್ತುವಿಗಿಂತ ಬೇರೆ' ಎಂದರೆ 'ವಿಚಾರವು ಕರ್ತವ್ಯ' ಎಂಬುದರ ಸಮರ್ಥನೆಗೆ ಉಪಯುಕ್ತವಾಗಲಾರದು ತಾನೆ? 'ಬೇರೆ' ಎಂದರೆ 'ಕಾರಣಕ್ಕಿಂತ ಬೇರೆ' ಮುಖ್ಯವಾಗಬೇಕಿಲ್ಲ, 'ಅನಂತರ' ಎಂದರೆ 'ಕಾರಣದ ಅನಂತರ' ಮುಖ್ಯವಾಗುತ್ತದೆ ಎಂದು ವಿವರಣಕಾರರು ಹೇಳಬಹುದು. ಆನಂತರ್ಯಗಳಲ್ಲಿ ಅವ್ಯವಹಿತ ಆನಂತರ್ಯ ಮುಖ್ಯವೆನ್ನುವುದು ನಿಜ. ಆದರೂ ಅವ್ಯವಹಿತ ಆನಂತರ್ಯ ಕಾರಣದ ಆನಂತರ್ಯವೆ ಆಗಬೇಕೆಂದಿಲ್ಲ. ಚೈತ್ರನ ಗಮನಕ್ಕೂ ಮೈತ್ರನ ಆಗಮನಕ್ಕೂ ನಡುವೆ ವ್ಯವಧಾನವಿಲ್ಲದಿದ್ದಾಗ ಅವುಗಳಲ್ಲಿ ಒಂದು ಇನ್ನೊಂದಕ್ಕೆ ಕಾರಣವಲ್ಲದಿದ್ದರೂ ಆ ಆನಂತರ್ಯ ಮುಖ್ಯವೆ ಆಗಿರುತ್ತದೆ. ಅದು ಅಮುಖ್ಯವೆಂದು ಯಾರಿಗೂ ಅನಿಸುವುದಿಲ್ಲ. ಕಾರಣಾನಂತರ್ಯವೆ ಮುಖ್ಯವಾಗಿದ್ದರೆ ಕಾರ್ಯಲಕ್ಷಣದಲ್ಲಿ 'ತನಗಿಂತ ಪೂರ್ವದಲ್ಲಿ ತಪ್ಪದೆ ಇರುವ ವಸ್ತುವಿನ ಅನಂತರ ತಾನು ಹುಟ್ಟುವುದು ಕಾರ್ಯಲಕ್ಷಣ' ಎಂದು 'ಪೂರ್ವದಲ್ಲಿ ತಪ್ಪದೆ ಇರುವ' ಎಂಬ ವಿಶೇಷಣವನ್ನು ಸೇರಿಸಬೇಕಾಗಿರಲಿಲ್ಲ.

ಅಥಶಬ್ದಾರ್ಥ ಕರ್ಮವಿಚಾರಾನಂತರ್ಯವಲ್ಲ

ರಾಮಾನುಜಮತದಲ್ಲಿ ಕರ್ಮವಿಚಾರಾನಂತರ ಬ್ರಹ್ಮವಿಚಾರ ಮಾಡಬೇಕು ಎಂದು ಸೂತ್ರದ ಅರ್ಥ. ಆದರೆ ಈ ವಿಷಯದಲ್ಲಿ ಶ್ರುತಿ, ಅರ್ಥ, ಪಠನ, ಸ್ಥಾನ, ಮುಖ್ಯ ಪ್ರವೃತ್ತಿಕ್ರಮಗಳೆಂಬ ಆರು ಪ್ರಮಾಣಗಳಲ್ಲಿ ಒಂದೂ ಸಿಗುವುದಿಲ್ಲ.

ಜಿಜ್ಞಾಸುವಿನ ಅರ್ಹತೆಗಳು

'ಭಕ್ತಿಮಾನ್ ಪರಮೇ ವಿಷ್ಣೌ' ಎಂದು ಮುಂತಾಗಿ ನಮ್ಮ ಭಾಷ್ಯದಲ್ಲಿ ಹೇಳಿದ ವಿಷ್ಣು ಭಕ್ತಿಪೂರ್ವಕ ಅಧ್ಯಯನ ಮುಂತಾದುವೆ ಜಿಜ್ಞಾಸುವನಲ್ಲಿರಬೇಕಾದ ನಿಜವಾದ ಅರ್ಹತೆಗಳು. ಪರಭಾಷ್ಯಕಾರರು ಹೇಳಿದುದಲ್ಲ.

ಅದ್ವೈತಭಾಷ್ಯದಲ್ಲಿ 'ನಿತ್ಯಾನಿತ್ಯವಸ್ತುವಿವೇಕ, ಐಹಿಕಾಮುಷ್ಮಿಕ ಸುಖಭೋಗಗಳಲ್ಲಿ ವೈರಾಗ್ಯ, ಶಮ ದಮ ಮುಂತಾದ ಗುಣಸಂಪತ್ತು ಮತ್ತು ಮೋಕ್ಷಭಿಲಾಷೆ - ಈ ಸಾಧನ ಚತುಷ್ಟಯವೆ ಅರ್ಹತೆ ಎಂದಿದೆ. ಇಲ್ಲಿ ನಿತ್ಯಾನಿತ್ಯವಸ್ತು ವಿವೇಕವೆಂದರೆ ಭಾಮತಿ ಪ್ರಕಾರ 'ಬ್ರಹ್ಮ ಒಂದೇ ನಿತ್ಯ' ಎನ್ನುವ ಅರಿವು. ಈ ವಿವೇಕ ಮೊದಲೆ ಇದ್ದರೆ ವಿಚಾರ ವ್ಯರ್ಥ. ವಿಚಾರದಿಂದ ತಿಳಿಯಬೇಕಾದುದೂ ಬ್ರಹ್ಮ ಒಂದೇ ನಿತ್ಯವೆಂದು ತಾನೆ? ಸಗುಣನಿರ್ಗುಣ ವಿವೇಕ ವಿಚಾರದ ಪ್ರಯೋಜನ ಎನ್ನುತ್ತಾರೆ. ಆದರೆ ಈ ಸಗುಣನಿರ್ಗುಣ ವಿವೇಕಕ್ಕೂ 'ಬ್ರಹ್ಮ ಒಂದೇ ಸತ್ಯ ಬೇರೆ ಎಲ್ಲವೂ ಮಿಥ್ಯಾ, ಎಂಬ ಜ್ಞಾನವೆ ಪ್ರಯೋಜನ. ಬ್ರಹ್ಮ ಒಂದೆ ನಿತ್ಯ ಬೇರೆ ಎಲ್ಲವೂ ಅನಿತ್ಯವೆಂದರೂ ಇದುವೆ. ಭಾಮತಿಯಲ್ಲಿ 'ನಿತ್ಯ, ಅನಿತ್ಯ' ಎಂದರೆ 'ಸತ್ಯ, ಮಿಥ್ಯಾ' ಎಂದೇ ವ್ಯಾಖ್ಯಾನಿಸಿದೆ. 'ನಿರ್ಗುಣವನ್ನು ಬೋಧಿಸುವುದ ಶಾಸ್ತ್ರಗಳ ತಾತ್ಪರ್ಯ' ಎಂಬುದನ್ನು ಅರಿಯುವುದು ವಿಚಾರದ ಪ್ರಯೋಜನವೆಂದೂ ಹೇಳುತ್ತಾರೆ. ಆದರೆ ಈ ತಾತ್ಪರ್ಯವನ್ನು ಅರಿಯುವುದೂ ಕೂಡ 'ಬ್ರಹ್ಮ ಒಂದೇ ಸತ್ಯ' ಎನ್ನುವ ಪ್ರಮೇಯದ ನಿಶ್ಚಯಕ್ಕಾಗಿ ಎಂದಮೇಲೆ ಪ್ರಮೇಯನಿಶ್ಚಯ ಇರುವವನಿಗೆ ಶಾಸ್ತ್ರತಾತ್ಪರ್ಯಜ್ಞಾನ ಸಂಪಾದಿಸುವ ಅವಶ್ಯಕತೆ ಇಲ್ಲ. 'ಜೀವಬ್ರಹ್ಮಭೇದ ಮಿಥ್ಯಾ, ಅಭೇದ ಸತ್ಯ' ಎಂಬುದನ್ನು ಅರಿಯುವುದು ವಿಚಾರದ ಪ್ರಯೋಜನ ಎಂದೂ ಹೇಳುತ್ತಾರೆ. ಆದರೆ ಬ್ರಹ್ಮ ಒಂದೇ ಸತ್ಯ, ಬೇರೆ ಎಲ್ಲವೂ ಮಿಥ್ಯಾ ಎಂಬ ಜ್ಞಾನವಿದ್ದರೆ 'ಬ್ರಹ್ಮನಿಗಿಂತ ಬೇರೆಯಾಗಿರುವ ಭೇದ ಮಿಥ್ಯಾ. ಬ್ರಹ್ಮಸ್ವರೂಪವೆ ಆದ ಅಭೇದ ಸತ್ಯ' ಎಂದು ತಿಳಿಯುವುದು ಶಕ್ಯವೆ? ಅದಕ್ಕೆ ವಿಚಾರವೇಕೆ?

ಪ್ರಪಂಚದಲ್ಲಿ ನಿತ್ಯ ಅನಿತ್ಯ ಎಂದು ಎರಡು ಬಗೆಯ ಪದಾರ್ಥಗಳುಂಟು ಎಂದು ತಿಳಿಯುವುದು ನಿತ್ಯಾನಿತ್ಯವಿವೇಕ ಎಂದು ಇನ್ನೊಂದು ವಿವರಣೆ. ಇಂಥ ವಿವೇಕವುಳ್ಳವನು ನಿತ್ಯ ಯಾವುದು ಅನಿತ್ಯ ಯಾವುದೆಂದು ತಿಳಿಯದೆ ಸಂದೇಹಪಟ್ಟು ಬ್ರಹ್ಮವಿಚಾರಕ್ಕೇ ತೊಡಗಲಾರ. ಬ್ರಹ್ಮ ಒಂದೇ ನಿತ್ಯವೆಂದು ತಿಳಿದರೆ ಮಾತ್ರ ಬ್ರಹ್ಮ ವಿಚಾರದಲ್ಲಿ ಪ್ರವೃತ್ತಿ ಸಾಧ್ಯವಾದೀತು. ಈ ಅನಿತ್ಯಪ್ರಪಂಚ ನಿತ್ಯವಸ್ತು ಒಂದರಲ್ಲಿ ಆರೋಪಿತವಾಗಿದೆ ಎಂದು ತಿಳಿಯುವುದೇ ನಿತ್ಯಾನಿತ್ಯವಿವೇಕ ಎಂಬುದು ಮತ್ತೊಂದು

ವಿವರಣೆ. ಆದರೆ ಇಂಥ ವಿವೇಕ ಉಳ್ಳವನು ವಿಚಾರದಿಂದ ತಿಳಿಯಬೇಕಾದುದು ಬೇರೆ ಏನಿದೆ? ನಿತ್ಯವಸ್ತುವನ್ನು 'ಬ್ರಹ್ಮ' ಎಂದು ತಿಳಿಯದಿದ್ದರೂ ಬ್ರಹ್ಮಸ್ವರೂಪವನ್ನು ಅವನು ತಿಳಿದಿದ್ದಾನೆ. ಬ್ರಹ್ಮಸ್ವರೂಪವನ್ನು ತಿಳಿಸುವುದೆ ವೇದಾಂತದ ಉದ್ದೇಶ. ಬ್ರಹ್ಮ ಎಂಬ ಹೆಸರನ್ನು ತಿಳಿಸಲು ಹೊರಟರೆ ಸ್ವರೂಪವನ್ನು ತಿಳಿಸುವ ತಾತ್ಪರ್ಯಕ್ಕೆ ವಿರುದ್ಧವಾಗುತ್ತದೆ.

ವಿವರಣಮತದಲ್ಲಿ ಕರ್ಮಫಲ ಅನಿತ್ಯ ಬ್ರಹ್ಮಜ್ಞಾನಫಲ ನಿತ್ಯ ಎನ್ನುವುದೇ ನಿತ್ಯಾನಿತ್ಯವಿವೇಕ. 'ಅನಿತ್ಯ ನಿತ್ಯ' ಎಂದರೆ ವಿನಾಶಿ ಅವಿನಾಶಿ ಎಂದರ್ಥ. ಆದರೆ ಕರ್ಮಫಲ ಅದ್ವೈತಮತದಲ್ಲಿ ವಿನಾಶಿಯಾಗಲು ಸಾಧ್ಯವಿಲ್ಲ. ಏಕೆಂದರೆ ಅದು ಮಿಥ್ಯಾ. ಮೊಲದ ಕೊಂಬಿನಂತ ಮೂರುಕಾಲದಲ್ಲಿಯೂ ಇಲ್ಲದುದು. ಅದಕ್ಕೆ ನಾಶ ಎಂಬುದಿದೆಯೆ?

ಮಿಥ್ಯ ಎಂದರೆ ಮೊಲದ ಕೊಂಬಿನಂತೆ ಅಲ್ಲ. ಪಾರಮಾರ್ಥಿಕವಾಗಿ ಇಲ್ಲ ಎನ್ನುತ್ತೇವೆ ಎಂದರ ಕೇಳುತ್ತೇವೆ, ಪಾರಮಾರ್ಥಿಕವೆಂದರೇನು? ಮಿಥ್ಯೆಯಲ್ಲದುದು. ಮಿಥ್ಯೆ ಎಂದರೇನು? ಪಾರಮಾರ್ಥಿಕವಲ್ಲದುದು. ಇದು ಅನ್ಯೋನ್ಯಾಶ್ರಯ.

ಪ್ರಪಂಚ ಮಿಥ್ಯ ಎಂದು ಹೇಳುವ ವೇದಾಂತವೆ ಅದಕ್ಕೆ ನಾಶವನ್ನು ಹೇಳುವುದರಿಂದ ಅದನ್ನು ಒಪ್ಪಬೇಕು ಎನ್ನುವವರು 'ಗೌರನಾದ್ಯಂತವತೀ' 'ಏಷೋಽಶ್ವತ್ಥಃ ಸನಾತನಃ' ಎಂದು ಮುಂತಾಗಿ ಪ್ರಪಂಚ ನಿತ್ಯತ್ವವನ್ನೂ ವೇದಾಂತ ಹೇಳುವುದನ್ನು ಗಮನಿಸಬೇಕು. ಮೋಕ್ಷದಲ್ಲಿಯೂ ಪ್ರಪಂಚವಿದೆ ಎನ್ನಬೇಕು. 'ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ' ಎಂದು ಮೋಕ್ಷದಲ್ಲಿ ಪ್ರಪಂಚ ನಿವೃತ್ತಿಯನ್ನು ವೇದಾಂತ ಹೇಳಿದರೆ ಅದರ ಅಭಿಪ್ರಾಯ - 'ಮೋಕ್ಷದಲ್ಲಿ ಪ್ರಪಂಚನಿವೃತ್ತಿ ಪಾರಮಾರ್ಥಿಕ. ಅಪಾರಮಾರ್ಥಿಕವಾಗಿ ಪ್ರಪಂಚವಿರುತ್ತದೆ. ವಿರೋಧವಿಲ್ಲ' ಎಂದು. ಹಾಗಾದರೆ ಸಂಸಾರಕ್ಕೂ ಮೋಕ್ಷಕ್ಕೂ ಏನು ವ್ಯತ್ಯಾಸ ಎಂದರೆ, ಸಂಸಾರದಲ್ಲಿ ಮೋಕ್ಷದಲ್ಲಿರುವಂತೆಯೆ ಅಪಾರಮಾರ್ಥಿಕ ಪ್ರಪಂಚವಿದೆ. ಪಾರಮಾರ್ಥಿಕ ನಿವೃತ್ತಿ ಮಾತ್ರವಿರುವುದಿಲ್ಲ. ಮೋಕ್ಷದಲ್ಲಿ ಅದೂ ಇರುತ್ತದೆ !

ಅದ್ವೈತಮತದಲ್ಲಿ ವಿಷಯಸುಖವೈರಾಗ್ಯವೂ ಜಿಜ್ಞಾಸುವಿಗೆ ಬರಲು ಶಕ್ಯವಿಲ್ಲ. ವಿವರಣದಲ್ಲಿ ಹೇಳಿದಂತೆ ವಿಷಯಪದಾರ್ಥಗಳಿಂದಲೂ ನಿತ್ಯವಾದ ಆತ್ಮಸ್ವರೂಪ ಸುಖವೆ ವ್ಯಕ್ತವಾಗುತ್ತದೆ. ಬೇರೇನೂ ಸುಖ ಉತ್ಪನ್ನವಾಗುವುದಿಲ್ಲ. ಆದರಿಂದ ವಿಷಯಸುಖವೆ ಮೋಕ್ಷದಲ್ಲಿ ಸಿಗುವ ಬ್ರಹ್ಮಾನಂದವಾಗಿರುವಾಗ ಅದರಲ್ಲಿ ವೈರಾಗ್ಯ ಹೇಗೆ ತಾನೆ ಬಂದೀತು? ವಿಷಯಸುಖ ಮೋಕ್ಷ-ಸುಖಗಳಲ್ಲಿ ಭೇದಭ್ರಮವಿರುವುದರಿಂದ ವಿಷಯಸುಖದಲ್ಲಿ ವೈರಾಗ್ಯ ಎನ್ನುವುದು ಸರಿಯಲ್ಲ. ಬೆಂಕಿಯಲ್ಲ, ಗುಲಗುಂಜಿ ಎಂದು ಭ್ರಮಿಸಿದರೂ ಬೆಂಕಿ ಸುಡುವಂತೆ ಮೋಕ್ಷಸುಖವಲ್ಲ ಎಂದು ಭ್ರಮಿಸಿದರೂ ವಿಷಯಸುಖ ಇಷ್ಟವೆನಿಸಲೆ ಬೇಕು. ಅದರಲ್ಲಿ ವೈರಾಗ್ಯ ಬರಲಾರದು.

'ವಿಷಯಸುಖ ಅಂತಃಕರಣದಲ್ಲಿ ಹುಟ್ಟುವ ಮಿಥ್ಯಾಪದಾರ್ಥ. ಅದಕ್ಕೂ ಮೋಕ್ಷಸುಖಕ್ಕೂ ವಾಸ್ತವ ಭೇದವಿಲ್ಲದಿದ್ದರೂ ಅದರಂತೆ ವಾಸ್ತವ ಅಭೇದವೂ ಇಲ್ಲ. ಆದರಿಂದ ಮೋಕ್ಷ ಸುಖದಂತೆ

ವಿಷಯಸುಖ ಇಷ್ಟವೆನಿಸದಿರಬಹುದು. ಬೆಂಕಿ ಸುಡುವುದು ಬೆಂಕಿಯ ವಾಸ್ತವ ಅಭೇದವಿರುವುದರಿಂದ. ಪ್ರಕೃತದಲ್ಲಿ ಮಿಥ್ಯಾ ಸತ್ಯಗಳಿಗೆ ವಾಸ್ತವ ಅಭೇದವಿರಲು ಶಕ್ಯವಿಲ್ಲ' ಎಂದು ಭಾಮತಿಮತವಿದೆ. ಆದರೆ ಎರಡು ವಸ್ತುಗಳೊಳಗೆ ವಾಸ್ತವ ಭೇದವೂ ಇಲ್ಲ. ವಾಸ್ತವ ಅಭೇದವೂ ಇಲ್ಲ ಎನ್ನುವುದು ವಿರುದ್ಧ. ವಾಸ್ತವ ಅವಾಸ್ತವಗಳೊಳಗೆ ವಾಸ್ತವ ಭೇದವಿಲ್ಲವೆನ್ನುವುದೂ ಅರ್ಥಶೂನ್ಯ. ಅದ್ವೈತಕ್ಕೆ ಭಂಗಬಂದೀತೆಂದು ಹೆದರಿ ವಾಸ್ತವ ಭೇದವನ್ನು ಒಪ್ಪದಿದ್ದಲ್ಲಿ ವಾಸ್ತವ ಅಭೇದವನ್ನ ಒಪ್ಪಿರಿ. ಆಗ ಮೋಕ್ಷ ಸುಖದಲ್ಲಿ ಅಭಿಲಾಷೆ, ವಿಷಯ ಸುಖದಲ್ಲಿ ವೈರಾಗ್ಯ ಎನ್ನುವುದು ಅರ್ಥಶೂನ್ಯವಾಗುವುದು.

ಶಮದಮಾದಿ ಸಂಪತ್ತು ಎಂಬಲ್ಲಿ ಆದಿ ಪದದಿಂದ ವಿವೇಕ ವೈರಾಗ್ಯಗಳನ್ನು ಬಿಟ್ಟು ಬೇರೆಯ ಗುಣಗಳನ್ನು ಗ್ರಹಿಸಲು ನಿಯಾಮಕವೇನು? ವಿವೇಕ ವೈರಾಗ್ಯಗಳಲ್ಲಿಲ್ಲದ, ಸಹನೆ ಮುಂತಾದವುಗಳಲ್ಲಿ ಮಾತ್ರವಿರುವ ವಿಶೇಷತೆ ಒಂದಿದ್ದರೆ ಆ ವಿಶೇಷತೆ ಉಳ್ಳವುಗಳನ್ನೆಲ್ಲ ಆದಿಪದದಿಂದ ಗ್ರಹಿಸಲು ಶಕ್ಯವಿದೆ. ಅಂಥ ವಿಶೇಷತೆ ಏನಿಲ್ಲ.

ನಮ್ಮ ಭಾಷ್ಯದಲ್ಲಿಯೂ 'ಶಮಾದಿಸಂಯುಕ್ತಃ ಮಧ್ಯಮಃ' ಎಂದು ಆದಿಪದವಿದೆ. ಆದರೆ ಬ್ರಹ್ಮಜ್ಞಾನಸಾಧನವೆಂದು ಶ್ರುತ್ಯುಕ್ತವಾದ ಎಲ್ಲ ಗುಣವನ್ನೂ ಆದಿಪದದಿಂದ ಗ್ರಹಿಸುತ್ತೇವೆ. ಅದ್ವೈತಭಾಷ್ಯದಂತೆ ನಾವು ವಿವೇಕ ಮುಂತಾದುವನ್ನು ಪ್ರತ್ಯೇಕ ಹೇಳಿ ಆದಿಪದವನ್ನು ಪ್ರಯೋಗಿಸಿಲ್ಲ. ಆಬ್ರಹಸ್ತಂಬಪರ್ಯಂತಂ ಎಂದು ವಿವೇಕ ವೈರಾಗ್ಯಗಳನ್ನು ಹೇಳಿದುದು ಪ್ರಕೃತ ಮಧ್ಯಮಾಧಿಕಾರಿಗಳ ವಿಷಯದಲ್ಲಿ ಅಲ್ಲ. ಅದು ಉತ್ತಮಾಧಿಕಾರಿಗಳಿಗೆ ಹೇಳಿದುದು. ಅದು ಉತ್ತಮಾಧಿಕಾರಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿರಬೇಕೆಂದು ತಿಳಿಸುವ ಅಭಿಪ್ರಾಯದಿಂದ.

### ಅದ್ವೈತಮತದಲ್ಲಿ ಮೋಕ್ಷಾಭಿಲಾಷೆ ಸಲ್ಲದು

ಅದ್ವೈತದಲ್ಲಿ ಮೋಕ್ಷವೆಂದರೇನು? ನಿತ್ಯಸಿದ್ಧವಾದ ಆತ್ಮಸ್ವರೂಪವೆ? ಅದು ಸಂಸಾರದಲ್ಲಿಯೂ ಇದೆ. ತತ್ತ್ವಜ್ಞಾನದಿಂದ ಉಪಲಕ್ಷಿತವಾದ ಆತ್ಮಸ್ವರೂಪವೆ? ಅದೂ ಕೂಡ ತತ್ತ್ವಜ್ಞಾನ ಬರುವುದಕ್ಕೆ ಮೊದಲು ಇದ್ದೇ ಇದೆ. 'ಅಜ್ಞಾನ ನಿವೃತ್ತಿಯೇ ಮೋಕ್ಷ. ಅದು ಆತ್ಮಸ್ವರೂಪವಲ್ಲ. ಆದರೆ ಸತ್ಯವೂ ಅಲ್ಲ, ಮಿಥ್ಯೆಯೂ ಅಲ್ಲದ ಪದಾರ್ಥ' ಎಂದರೆ ಅಂಥ ಪದಾರ್ಥವನ್ನು ಒಪ್ಪುವುದೆ ಅಸಂಗತ. ಅಜ್ಞಾನನಿವೃತ್ತಿ ಅಭಾವರೂಪವಾದ್ದರಿಂದ ಸತ್ಯವೆಂದೊಪ್ಪಿದರೆ ಅದ್ವೈತ ಭಂಗವಿಲ್ಲ ಎನ್ನುತ್ತಾರೆ ಕೆಲವರು. ಇದರ ನಿರಾಕರಣೆ ನ್ಯಾಯಾಮೃತದಲ್ಲಿ ಇದೆ. ಅಭಾವ ಸತ್ಯವೆಂದೊಪ್ಪಿದರೂ ಇಂಥ ಮೋಕ್ಷದ ಅಭಿಲಾಷೆ 'ನಾನು ಮುಕ್ತನಾಗಬೇಕೆ'ಂಬ ಅಭಿಲಾಷೆಯ? ಅಥವಾ 'ಶುದ್ಧ ಚೈತನ್ಯಕ್ಕೆ ಮೋಕ್ಷವಾಗಲೆ'ಂದೆ? 'ನಾನು' ಮಿಥ್ಯಾಪದಾರ್ಥ. ಅದಕ್ಕೆ ತತ್ತ್ವಜ್ಞಾನದಿಂದ ನಾಶವೆ ಹೊರತು ಮೋಕ್ಷದಲ್ಲಿ ಅದಕ್ಕೆ ಅಸ್ತಿತ್ವವಿಲ್ಲ. ಶುದ್ಧ ಚೈತನ್ಯಕ್ಕೆ ಮೋಕ್ಷಸಿಗಲೆಂದು ಅಭಿಲಾಷೆ ಯಾರಿಗೆ? ಶುದ್ಧ ಚೈತನ್ಯಕ್ಕಂತೂ ಅಲ್ಲ. 'ನಾನು' ಎಂಬ ಪದಾರ್ಥಕ್ಕೆ ಬರಲು ಶಕ್ಯವಿಲ್ಲ. ಇನ್ನೊಬ್ಬರಿಗೆ ಫಲ ಸಿಗಲಿ ಎಂದು ಬ್ರಹ್ಮವಿಚಾರದಂಥ ದುಷ್ಕರವಾದ ಕಾರ್ಯದಲ್ಲಿ ಯಾರು ಪ್ರವೃತ್ತಿ ಮಾಡುತ್ತಾರೆ? ಮಗನಿಗೆ ಒಳ್ಳೆಯದಾಗಲಿ ಎಂದು ತಂದೆ ಜಾತೇಷ್ಟಿ ಮಾಡುವುದಕ್ಕೆ ಮಗನು ತಂದೆಗೆ ಆನಂದ

ಉಂಟುಮಾಡುವವನು ಪ್ರೀತಿಪಾತ್ರನೆಂಬ ಕಾರಣವಿದೆ. ಶುದ್ಧ ಚೈತನ್ಯ ಹಾಗೆ 'ನಾನು' ಎಂಬ ಪದಾರ್ಥಕ್ಕೆ ಉಪಕಾರಿಯಲ್ಲ ಪ್ರೀತಿಪಾತ್ರವಲ್ಲ. ನಾನು ನಾಶವಾಗಬಾರದು. ನಾನು ಮುಕ್ತನಾಗಬೇಕು ಎಂದು ತಾನೆ ಎಲ್ಲರ ಮುಖ್ಯ ಅಭಿಲಾಷೆ?

### ಸಾಧನಚತುಷ್ಟಯ ಅದ್ವೈತದಲ್ಲಿ ಅಯುಕ್ತ

ವಿವೇಕ ವೈರಾಗ್ಯಾದಿ ನಾಲ್ಕು ಸಾಧನಗಳೂ ಸ್ವತಂತ್ರವಾಗಿ ಬ್ರಹ್ಮವಿಚಾರಕ್ಕೆ ಕಾರಣವಾಗುವುದಿಲ್ಲ. ಅವುಗಳನ್ನು ಹಿಂದಿನವು ಮುಂದಿನವುಗಳನ್ನು ಉಂಟುಮಾಡಬೇಕು ಎನ್ನುತ್ತದೆ ಭಾಮತಿ. ಹಾಗಾದರೆ 'ಮೋಕ್ಷಾಭಿಲಾಷೆಯ ಅನಂತರ ಬ್ರಹ್ಮವಿಚಾರ' ಎನ್ನಬೇಕಾಗಿತ್ತು ಭಾಷ್ಯದಲ್ಲಿ. ಆದರೆ 'ವಿವೇಕಾದಿಗಳ ಅನಂತರ ಎಂದು ಅಲ್ಲಿ ಹೇಳಿದೆ. ಅಥಶಬ್ದವು 'ಮೋಕ್ಷಾಭಿಲಾಷೆಯ ಅನಂತರ' ಎಂದರೂ ಅದರ ಕಾರಣಗಳ ಆನಂತರ್ಯವೂ ಅಭಿಪ್ರೇತವಾಗಿದೆ. ಆ ಅಭಿಪ್ರಾಯದಿಂದ ಭಾಷ್ಯ ಹೊರಟಿದೆ ಎಂದರೆ ಅಥಶಬ್ದವು ವಿವೇಕಾದಿಗಳ ಆನಂತರ್ಯವನ್ನು ಹೇಳಿದಾಗ ಅವುಗಳ ಕಾರಣಗಳ ಆನಂತರ್ಯವೂ ಅಭಿಪ್ರೇತವೆಂದಾಗುತ್ತದೆ. ಆಗ ಕೇವಲ ವಿವೇಕಾದಿಗಳ ಆನಂತರ್ಯವನ್ನು ಭಾಷ್ಯ ಹೇಳಿದ್ದು ಯುಕ್ತವಾಗಲಾರದು. ನಾಲ್ಕು ಸಾಧನಗಳೂ ಸ್ವತಂತ್ರವಾಗಿ ಬ್ರಹ್ಮವಿಚಾರಕ್ಕೆ ಕಾರಣ ಎಂದು ವಿವರಣ ಮತದಲ್ಲಿ ಕೆಲವರು ಹೇಳುತ್ತಾರೆ. ಆದರೆ ಶಮದಮಾದಿಗಳಿಲ್ಲದಿದ್ದರೂ ಕೇವಲ ಮೋಕ್ಷಾಭಿಲಾಷೆಯಿಂದ ಬ್ರಹ್ಮವಿಚಾರ ಮಾಡುವುದು ಕಂಡಿರುವುದರಿಂದ ನಾಲ್ಕು ಸಾಧನಗಳೂ ಕಾರಣವೆನ್ನಲಾಗದು. ಆ ಬ್ರಹ್ಮವಿಚಾರ ಸಫಲವಾಗದಿರಬಹುದು. ಆದರೆ ವೈರಾಗ್ಯಾದಿಗಳು ಮೂರು ಇದ್ದರೆ ಸಫಲವಾದ ಬ್ರಹ್ಮವಿಚಾರ ನಡೆಯುವುದರಿಂದ ವಿವೇಕ ಬೇಕಾಗಿಲ್ಲ. ವಿವೇಕವಿಲ್ಲದವನಿಗೆ ವೈರಾಗ್ಯಾದಿಗಳೇ ಉಂಟಾಗಲಾರವು ಎಂದು ಹೇಳಕೂಡದು. ವಿವರಣ ಮತದಲ್ಲಿ ವಿವೇಕ ವೈರಾಗ್ಯಾದಿಗಳಿಗೆ ಕಾರಣವೆಂದೊಪ್ಪಿಲ್ಲ. ವಿವೇಕವು ಬ್ರಹ್ಮವಿಚಾರಕ್ಕೆ ಅವಶ್ಯಕವೆಂದು ಶಾಸ್ತ್ರದಲ್ಲಿ ಹೇಳಿದ ಮಾತ್ರಕ್ಕೆ ಅದು ಸ್ವತಂತ್ರವಾಗಿ ವಿಚಾರ ಕಾರಣ ಎಂದು ಸಿದ್ಧವಾಗುವುದಿಲ್ಲ. ಮಂತ್ರಗಳು ಯಾಗಸಾಧನವೆಂದು ಶ್ರುತಿ, ಪ್ರಕರಣ ಮುಂತಾದ ಪ್ರಮಾಣಗಳು ಹೇಳಿದ ಮಾತ್ರಕ್ಕೆ ಅವು ಯಾಗಕ್ಕೆ ಸಾಕ್ಷಾತ್ತಾಗಿ ಸಾಧನವೆಂದಾಗುವುದಿಲ್ಲ. ಯಾಗದ ದ್ರವ್ಯದೇವತೆಗಳನ್ನು ಬೋಧಿಸುವ ಮೂಲಕ ಯಾಗ ಸಾಧನವಾಗುವುವು. ಸೋಮವನ್ನು ಕೊಳ್ಳಲು ಕೆಂಪು ಹಸು ಸಾಧನವೆಂದಾಗ ಹಸುವಿನಂತೆ ಅದರ ಕೆಂಪು ಬಣ್ಣವೂ ಕ್ರಯ ಸಾಧನವಾದರೂ ಸಾಕ್ಷಾತ್ತಾಗಿ ಸಾಧನವಲ್ಲ. ಎಂಥ ಹಸು ಸಾಧನವೆಂಬುದನ್ನು ನಿರ್ಧರಿಸುವ ಮೂಲಕವೆ ಸಾಧನವಾಗುತ್ತದೆ. ಹಾಗೇ ವಿವೇಕ ಮುಂತಾದವು ಶಮಾದಿಗಳನ್ನು ಉಂಟು ಮಾಡುವ ಮೂಲಕ ವಿಚಾರ ಸಾಧನಗಳಾಗುತ್ತವೆ ಎನ್ನಬೇಕು. ಹೀಗೆ ಅದ್ವೈತಮತದಲ್ಲಿ ಸಾಧನ ಚತುಷ್ಟಯ ಹೇಗೆ ವಿಚಾರ ಕಾರಣವಾಗುತ್ತದೆ ಎನ್ನುವುದನ್ನು ಹೇಳಲಾರರು.

### ಸಾಧನ ಚತುಷ್ಟಯ ನಿರಾಕರಣೆ ರಾಮಾನುಜರಿಗೆ ಅಶಕ್ಯ

'ನಿತ್ಯಾನಿತ್ಯವಿವೇಕ ಈ ಶಾಸ್ತ್ರದಿಂದಲೆ ಬರಬೇಕು ವೈಶೇಷಿಕ ಮುಂತಾದ ಬೇರೆ ಶಾಸ್ತ್ರಗಳನ್ನು ಓದಲು ಉಪನೀತನಾದ ವಟುವಿಗೆ ಕಾಲಾವಕಾಶವಿಲ್ಲ. ಅವನು ವೇದಾಧ್ಯಯನವನ್ನೆ ಮಾಡಬೇಕು.

ಮತ್ತು ಬ್ರಹ್ಮಜ್ಞಾನದ ಫಲ ನಿತ್ಯ ಬೇರೆಲ್ಲವೂ ಅನಿತ್ಯವೆಂಬ ವಿವೇಕ ವೈಶೇಷಿಕಾದಿ ಶಾಸ್ತ್ರದಿಂದ ಬರಲಾರದು. ಇತಿಹಾಸಪುರಾಣದಿಂದಲೂ ವಿಚಾರವಿಲ್ಲದೆ ನಿಶ್ಚಯರೂಪವಾದ ವಿವೇಕ ಬರಲಾರದು. ಶಮಾದಿಗಳು ವಿಚಾರಕ್ಕೆ ಅವಶ್ಯಕವಲ್ಲ. ನಿದಿಧ್ಯಾಸನಕ್ಕೆ ಅವಶ್ಯಕ. ವಿಚಾರಕ್ಕೆ ಅವಶ್ಯಕವೆಂದರೆ ಶಮಾದಿಗಳಿಂದ ವಿಚಾರ. ವಿಚಾರದಿಂದ ಶಮಾದಿಗಳೆಂದು ಅನ್ಯೋನ್ಯಾಶ್ರಯ. ಏಕೆಂದರೆ ಮುಂದೆ ಬ್ರಹ್ಮಸೂತ್ರದಲ್ಲಿ ಶಮದಮಾದ್ಯುಪೇತಃ ಸ್ಯಾತ್ ಎಂದು ಶಮಾದಿಗಳನ್ನು ವಿಧಿಸಲಾಗಿದೆ. ಅದನ್ನು ತಿಳಿಯಲು ಶಾಸ್ತ್ರವಿಚಾರ ಮಾಡಬೇಕಾಗುತ್ತದೆ'. - ಹೀಗೆ ರಾಮಾನುಜಮತದಲ್ಲಿ ವಿಚಾರವಿದೆ. ಆದರೆ ಇದು ಸರಿಯಲ್ಲ. ಶ್ರುತಿಯನ್ನು ನಂಬುವ ಜಿಜ್ಞಾಸುವಿಗೆ ವಿಚಾರವಿಲ್ಲದೆಯೆ ಶ್ರುತಿಯಿಂದ ನಿತ್ಯಾನಿತ್ಯವಿವೇಕ ಬರಬಹುದು. ಮುಂದೆ ವಿಚಾರದಿಂದ ಇದನ್ನ ದೃಢೀಕರಿಸಬಹುದು. ಇತಿಹಾಸ ಪುರಾಣಗಳಿಂದಲೂ ಈ ವಿವೇಕ ಬರಬಹುದು. ಹಿತೈಷಿಗಳಾದ ಗುರುಗಳ ಉಪದೇಶದಿಂದಲೂ ಬರಬಹುದು. ಅಥವಾ ವಿಚಾರವು ಮನನರೂಪವಾದ್ದರಿಂದ ಶ್ರವಣಕಾಲದಲ್ಲಿ ಬಂದ ನಿತ್ಯಾನಿತ್ಯವಿವೇಕ ವಿಚಾರಕ್ಕೆ ಸಾಧನವಾಗಬಹುದು. ಅನ್ಯೋನ್ಯಾಶ್ರಯ ದೋಷವಿಲ್ಲ. ಇಲ್ಲದಿದ್ದರೆ, ಶೂದ್ರೇತರರು ಶಾಸ್ತ್ರದ ಅಧ್ಯಯನಕ್ಕೆ ಅರ್ಹರೆಂದು ಅಪಶೂದ್ರಾಧಿಕರಣದಲ್ಲಿ ಶಾಸ್ತ್ರದಿಂದಲೇ ತಿಳಿಯಬೇಕು. ಎಂಟು ವರ್ಷದ ಬ್ರಾಹ್ಮಣವಟು ವೇದಾಧ್ಯಯನ ಮಾಡಬೇಕೆಂದು ವೇದದಿಂದಲೇ ತಿಳಿಯಬೇಕು ಎಂದು ಅನ್ಯೋನ್ಯಾಶ್ರಯ. ನಿಶ್ಚಯವಾಗಿಯೆ ತಿಳಿಯಬೇಕಾಗಿಲ್ಲವಾದ್ದರಿಂದ ಅನ್ಯೋನ್ಯಾಶ್ರಯವಿಲ್ಲ ಎನ್ನಕೂಡದು. ನಿಶ್ಚಯವಾಗಿ ತಿಳಿಯದೆ ನಿಃಶಂಕೆಯಿಂದ ಶಾಸ್ತ್ರವಿಚಾರದಲ್ಲಿ ಪ್ರವೃತ್ತಿ ಉಂಟಾಗದು. ಶಮಾದಿಗಳು ನಿದಿಧ್ಯಾಸನಕ್ಕೆ ಅವಶ್ಯಕವೆಂದ ಮಾತ್ರಕ್ಕೆ ವಿಚಾರಕ್ಕೆ ಅನಾವಶ್ಯಕವೆಂದಾಗುವುದಿಲ್ಲ ಎರಡೂ ಶ್ರುತಿಸಿದ್ಧವೆ ಆಗಿವೆ. ಅವುಗಳಿಗೆ ಪರಸ್ಪರ ವಿರೋಧವೂ ಇಲ್ಲ. ಮೊಸರು ಶಾಸ್ತ್ರದಲ್ಲಿ ಹೇಳಿದಂತೆ ಯಾಗ ಸಾಧನವಾಗಬಹುದು. ಅನುಭವ ಹೇಳಿದಂತೆ ಭೋಗಸಾಧನವೂ ಆಗಬಹುದು. 'ಪರೀಕ್ಷ್ಯ ಲೋಕಾನ್' ಎಂಬ ಶ್ರುತಿ ಗುರೂಪಸತ್ತಿಗೆ ವಿವೇಕ ಅವಶ್ಯಕವೆಂದಿದೆ. ವಿಚಾರದಿಂದಲೆ ವಿವೇಕ ಬರಬೇಕೆನ್ನುವುದು ಸರಿಯೆ? ವಿಚಾರಕ್ಕೆ ಮೊದಲು ವಿವೇಕವಿದ್ದ ಮಾತ್ರಕ್ಕೆ ವಿಚಾರ ವ್ಯರ್ಥವಾಗಬೇಕಿಲ್ಲ. ವಿವೇಕ ಒಂದೇ ವಿಚಾರಫಲವಲ್ಲ. ಭಗವಂತನ ಮಹಿಮೆಯನ್ನೂ ವಿಚಾರಶಾಸ್ತ್ರ ತಿಳಿಸುತ್ತದೆ. ಹೀಗೆ ಸೂತ್ರದ ಅಥಶಬ್ದಕ್ಕೆ ಅಧಿಕಾರಾನಂತರ್ಯವೆಂದೆ ಅರ್ಥ ಹೇಳಬೇಕು. ಅದೂ ನಮ್ಮ ಸಿದ್ಧಾಂತದಲ್ಲಿ ಹೊರತು ಪರಮತದಲ್ಲಿ ಅಲ್ಲ.

### ಟೀಕಾಪಾಠ ಶೋಧನೆ

ಅಥಶಬ್ದಾರ್ಥ ವಿವರಣೆಗೆ ಹೊರಟ ಟೀಕಾಪಂಕ್ತಿಯಲ್ಲಿ 'ತತ್ಫಲತಯಾ' 'ಅಥಶಬ್ದ ಮಂಗಳವನ್ನು ಉಂಟುಮಾಡುವುದರಿಂದ' ಎಂದಿದೆ. 'ತತ್ಪರತಯಾ' 'ಮಂಗಳವೆಂಬ ಅರ್ಥದಲ್ಲಿ ಅಥಶಬ್ದಕ್ಕೆ ತಾತ್ಪರ್ಯವಿದೆ' ಎಂದೂ ಪಾಠವಿದೆ. ಇದು ಸರಿಯಲ್ಲ. ಅಥಶಬ್ದದಲ್ಲಿ ಅಕಾರ ವಿಷ್ಣುವಾಚಕ. ವಿಷ್ಣು ಮಂಗಳಸ್ವರೂಪ. ಆದರಿಂದ ಮಂಗಳಪರತ್ವವನ್ನು ಅಥಶಬ್ದಕ್ಕೆ ಏಕೆ ಹೇಳಬಾರದು? ಎಂದರೆ ಗ್ರಂಥಾರಂಭದಲ್ಲಿ ಇಂಥ ಮಂಗಳ ಪ್ರಸಕ್ತವಲ್ಲ. ವಿಘ್ನ ನಿವಾರಣೆ ಮಾಡಬಲ್ಲ ವಿಷ್ಣುಸ್ಮರಣೆ ಅಥಶಬ್ದೋಚ್ಚಾರಣೆಗಳು ಮಂಗಳಗಳು. ಇವು ಅಥಶಬ್ದಾರ್ಥವಲ್ಲ. 'ಮಂಗಲೋತ್ಪಾದೇಃ

ಶಬ್ದಾಂತರೇಣಾಪಿ ಸಂಭವಾತ್' 'ಮಂಗಲವನ್ನು ಹೇಳುವುದು ಬೇರೆ ಶಬ್ದದಿಂದಲೂ ಶಕ್ಯ' ಎಂಬ ಟೀಕಾವಾಕ್ಯಕ್ಕೂ ಮಂಗಳ ಅಥಶಬ್ದದ ಅರ್ಥ ಎಂದರ್ಥವಲ್ಲ. 'ಮಂಗಲವನ್ನು ಹೇಳುವುದು' ಎಂದರೆ ಮಂಗಳಕರವಾದ ಅಥಶಬ್ದಾದಿಗಳನ್ನು ಉಚ್ಚರಿಸುವುದು ಎಂದರ್ಥ. 'ತತ್ಪರತಯಾ' ಎಂಬ ಪಾಠ ಪ್ರಾಮಾಣಿಕವಾಗಿರುವುದಾದರೆ 'ಪರ' ಎಂದರೆ ಮುಖ್ಯಪ್ರಯೋಜನ, ಅಥಶಬ್ದಕ್ಕೆ ಮಂಗಳ ಉಂಟುಮಾಡುವುದೆ ಮುಖ್ಯಪ್ರಯೋಜನ ಎಂದು ಅಭಿಪ್ರಾಯ ಹೇಳಬೇಕು.

'ಅಥಶಬ್ದೋ ಮಂಗಲಾರ್ಥಃ' ಎಂಬ ಭಾಷ್ಯದಲ್ಲಿ ಎರಡೂ ಅರ್ಥ ವಿವಕ್ಷಿತವೆನ್ನಬಹುದು. ವಿಷ್ಣುಸ್ಮರಣ ಅಥಶಬ್ದೋಚ್ಚಾರಣರೂಪ ಮಂಗಲವು ಅಥಶಬ್ದಕ್ಕೆ 'ಅರ್ಥ', ಅಂದರೆ ಪ್ರಯೋಜನ ಎಂದು. ಮತ್ತು ಮಂಗಲಸ್ವರೂಪನಾದ ವಿಷ್ಣು ಅಥಶಬ್ದಕ್ಕೆ 'ಅರ್ಥ' ಅಂದರೆ ವಾಚ್ಯ ಎಂದು. ವಿಷ್ಣುವಾಚಕವಾದ್ದರಿಂದ ಅಥಶಬ್ದ ವಿಷ್ಣುಸ್ಮರಣೆ ಉಂಟುಮಾಡುತ್ತ ಮಂಗಲಪ್ರಯೋಜನಕವಾಗುತ್ತದೆ ಎಂದು ತತ್ವಪ್ರದೀಪ ಹೇಳಿದೆ.

### ಅಥಾತಃ ಶಬ್ದಗಳ ವೈಶಿಷ್ಟ್ಯ

ಎಲ್ಲ ಸೂತ್ರಗ್ರಂಥಗಳಲ್ಲಿ ಅಥ ಅತಃ ಶಬ್ದಗಳು ಪ್ರಾರಂಭದಲ್ಲಿ ತಪ್ಪದೆ ಬರಲು ಮೂರು ಕಾರಣಗಳಿವೆ. ೧. ಅವಶ್ಯ ಹೇಳಬೇಕಾಗಿರುವುದನ್ನು ಅವು ಹೇಳುತ್ತವೆ. ೨. ಆ ಶಬ್ದಗಳ ಸ್ವರೂಪದಲ್ಲಿಯೆ ಏನೋ ಶಕ್ತಿ ಅಡಗಿದೆ. ೩. ಅತ್ಯಂತ ಪ್ರಶಸ್ತವಾದ ಅರ್ಥಗಳು ಅವುಗಳಿಗೆ ಇವೆ.

### 'ಮಹತ್ತತ್ತ್ವ' ಶಬ್ದಪ್ರಯೋಗ

'ಮಹತ್‌ತತ್ತ್ವ' 'ಮಹಾತತ್ತ್ವ'ವಾಗಬೇಕೆಂದು 'ಆನ್‌ಮಹತಃ ಸಮಾನಾಧಿಕರಣ ಜಾತೀಯಯೋಃ' ಎಂಬ ಪಾಣಿನಿಸೂತ್ರ ಹೇಳುತ್ತದೆ. 'ಮಹತ್ತತ್ತ್ವ' ಎಂಬ ಪ್ರಯೋಗ ಸರಿಯೆ? ಈ ಪ್ರಶ್ನೆಗೆ ಸಮಾಧಾನ - ಈ ಸೂತ್ರದಲ್ಲಿ ಪದಗಳ ಜೋಡಣೆಯಲ್ಲಿ ವೈಚಿತ್ರ್ಯವಿರುವುದರಿಂದ ಈ ಸೂತ್ರದಲ್ಲಿ ಹೇಳಿದ ಆಕಾರಾದೇಶ ನಿಯಮ ಎಲ್ಲ ಕಡೆ ಅನ್ವಯಿಸವುದಿಲ್ಲ ಎಂದು ಸೂಚಿತವಾಗುತ್ತದೆ - 'ಮಹತಃ ಆತ್' ಎಂದು ಸ್ಥಾನವನ್ನು ಮೊದಲಿಗೆ ಹೇಳಿ ಬಳಿಕ ಆದೇಶವನ್ನು ಹೇಳಬೇಕಾಗಿತ್ತು. ವ್ಯತ್ಯಾಸ ಮಾಡಿ 'ಆನ್ಮಹತಃ' ಎಂದಿದೆ. ದ್ವಂದ್ವಸಮಾಸದಲ್ಲಿ ಕಡಿಮೆ ಸ್ವರಾಕ್ಷರ ಉಳ್ಳಶಬ್ದ ಮೊದಲಿಗೆ ಬರಬೇಕು. ಆದರೆ ಇಲ್ಲಿ ವ್ಯತ್ಯಾಸ ಮಾಡಿ 'ಸಮಾನಾಧಿಕರಣ ಜಾತೀಯಯೋಃ' ಎಂದಿದೆ. 'ಸಂಜ್ಞಾಛಂದಸೋ-ರ್ಬಹುಲಂ' ಎಂಬ ವಾರ್ತಿಕವೂ ರೂಢಿಯ ಹೆಸರಾದ 'ಮಹತ್ತತ್ತ್ವ' ಶಬ್ದದಲ್ಲಿ ಆಕಾರಾದೇಶ ಮಾಡದಿರುವುದನ್ನು ಸಮರ್ಥಿಸುತ್ತದೆ.

### ಯೋಗ್ಯಜಿಜ್ಞಾಸುಗಳ ಲಕ್ಷಣ

ಹರಿಭಕ್ತಿಯನ್ನೂ ಶಮದಮಾದಿಗಳನ್ನೂ ಸಂಪಾದಿಸಿ ವೇದಾಧ್ಯಯನ ಮಾಡಿದರೆ ಅದು ಬ್ರಹ್ಮವಿಚಾರಕ್ಕೆ ಬೇಕಾಗುವ ಕನಿಷ್ಠ ಅರ್ಹತೆ ಎನಿಸುವುದು. ಅಂದರೆ ಒಬ್ಬ ವ್ಯಕ್ತಿಯಲ್ಲಿರುವ ಅಧ್ಯಯನ ಶಮದಮಾದಿ ಮತ್ತು ವಿಷ್ಣುಪಾದಶರಣಾಗತಿ ಇವುಗಳಲ್ಲಿ ಶಮದಮಾದಿ ಮತ್ತು ವಿಷ್ಣುಪಾದ-

ಶರಣಾಗತಿಗಳು ಅಧ್ಯಯನಕ್ಕಿಂತ ಕಡಿಮೆ ಪ್ರಮಾಣದಲ್ಲಿದ್ದರೆ ಅದು ಕನಿಷ್ಠ ಅರ್ಹತೆ. ವಿಷ್ಣುಪಾದ-ಶರಣಾಗತಿಯೊಂದೆ ಅಧ್ಯಯನ ಶಮದಮಾದಿಗಳಿಗಿಂತ ಕಡಿಮೆ ಇದ್ದರೆ ಅದು ಮಧ್ಯಮ ಅರ್ಹತೆ. ಅಧ್ಯಯನ ಶಮದಮಾದಿಗಳು ವಿಷ್ಣುಪಾದ ಶರಣಾಗತಿಗಿಂತ ಕಡಿಮೆ ಇದ್ದರೆ ಅದು ಉತ್ತಮ ಅರ್ಹತೆ.

ಅತಃಶಬ್ದಾರ್ಥ

'ಅತಃ' ಅದರಿಂದ, ಎಂದು ಹೇಳಿದರೆ 'ಯಾವುದರಿಂದ?' ಎಂಬ ಪ್ರಶ್ನೆ ಬರುತ್ತದೆ. ಹಿಂದೆ ಪ್ರಕೃತವಾದುದನ್ನೆ ಮನಸ್ಸಿನಲ್ಲಿಟ್ಟುಕೊಂಡು 'ಅದರಿಂದ' ಎಂದು ಸರ್ವನಾಮ ಶಬ್ದವನ್ನು ಪ್ರಯೋಗಿಸುತ್ತೇವೆ. ಸೂತ್ರದಲ್ಲಿ 'ಅತಃ' ಶಬ್ದಕ್ಕೆ ಭಾಷ್ಯದಲ್ಲಿ 'ನಾರಾಯಣನ ಅನುಗ್ರಹವಿಲ್ಲದೆ ಮೋಕ್ಷವಿಲ್ಲ. ಜ್ಞಾನವಿಲ್ಲದೆ ನಾರಾಯಣನ ಪರಮಾನುಗ್ರಹ ಲಭ್ಯವಿಲ್ಲ. ಅದರಿಂದ ಬ್ರಹ್ಮವಿಚಾರ ಮಾಡಬೇಕು' ಎಂದು ಅರ್ಥ ಉಕ್ತವಾಗಿದೆ. ಇಲ್ಲಿ ಮೋಕ್ಷಕ್ಕೆ ನಾರಾಯಣನ ಅನುಗ್ರಹವು ಕಾರಣ. ಅನುಗ್ರಹಕ್ಕೆ ಜ್ಞಾನ ಕಾರಣ. ಜ್ಞಾನಕ್ಕೆ ವಿಚಾರ ಕಾರಣ - ಇವೆಲ್ಲವೂ ಹಿಂದೆ ಪ್ರಕೃತವೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಏಳು ಬಗೆಯ ಪರಿಹಾರಗಳಿವೆ.

(೧) ಪ್ರಯೋಜನವಿಲ್ಲದ ಈ ವಿಚಾರಶಾಸ್ತ್ರವೇಕೆ ಎಂಬ ಪೂರ್ವಪಕ್ಷಕ್ಕೆ ಸಮಾಧಾನ ಹೇಳಬಲ್ಲ ಶಬ್ದವು ಸೂತ್ರದಲ್ಲಿ ಬೇರೆ ಯಾವುದೂ ಇಲ್ಲ. ಶ್ರುತಿಗನುಗುಣವಾಗಿ ಭಾಷ್ಯದಲ್ಲಿ ಹೇಳಿದಂತೆ ಮೇಲಿನ ಎಲ್ಲ ಅಂಶಗಳನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕು. ಅದರಿಂದ ಪ್ರಕೃತವಾದುದನ್ನು ಅತಃಶಬ್ದ ಹೇಳುತ್ತದೆ. 'ಸ್ರುವದಿಂದ ಬೇರ್ಪಡಿಸಿ ತೆಗೆಯಬೇಕು' ಎಂದು ಶ್ರುತಿವಾಕ್ಯವಿದೆ. ಏನನ್ನು? ಎಂದರೆ 'ದ್ರವ ಪದಾರ್ಥವನ್ನು' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದಾಧ್ಯಾಹಾರಕ್ಕೆ ಪ್ರಮಾಣವಾಗಿ ಭಾಷ್ಯದಲ್ಲಿ 'ಅವಶ್ಯಕವಾದ ಪದವನ್ನೋ ವಾಕ್ಯವನ್ನೋ ಅಧ್ಯಾಹಾರ ಮಾಡಿಕೊಳ್ಳಬೇಕು' ಎಂಬ ವಚನವನ್ನು ಉದಾಹರಿಸಲಾಗಿದೆ. ಇಲ್ಲಿ 'ವಾಕ್ಯವನ್ನೋ' ಎಂಬುದರಿಂದ ಅತಃ ಶಬ್ದಕ್ಕೆ ಅಪೇಕ್ಷಿತವಾದ ಮೇಲೆ ಹೇಳಿದ ವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂಚಿತವಾಗಿದೆ.

(೨) 'ಜನ್ಮಾದ್ಯಸ್ಯಯತಃ' ಎಂಬ ಸೂತ್ರದಲ್ಲಿ 'ಅಸ್ಯ' 'ಇದರ' ಎಂದರೆ. 'ಈ ಅನುಭವ ಸಿದ್ಧವಾದ ಪ್ರಪಂಚದ' ಜನ್ಮಾದಿಕರ್ತ ಎಂದು ಹೇಳಿದೆ. ಹಾಗೇ ಪ್ರಕೃತದಲ್ಲಿ 'ಅತಃ' ಎಂಬುದರಿಂದ 'ಮೋಕ್ಷ ಭಗವದನುಗ್ರಹ ಮುಂತಾದ ಪ್ರಮಾಣಸಿದ್ಧವಾದ ಪ್ರಯೋಜನವಿರುವುದರಿಂದ' ಎಂದು ಉಕ್ತವಾಗಬಹುದು. ಪ್ರಕೃತವಾಗುವುದೆಂದರೇನು? ಬುದ್ಧಿಸ್ಥವಾಗಿರುವುದು. ಪ್ರಮಾಣಸಿದ್ಧವಾದುದು ಆ ಪ್ರಮಾಣದ ಬಲದಿಂದಲೆ ಬುದ್ಧಿಸ್ಥವಾಗಿರುತ್ತದೆ.

ಜನ್ಮಾದಿಸೂತ್ರದಲ್ಲಿ 'ಅಸ್ಯ' ಎಂದಿರುವುದು ಅದರ ವಿಷಯ ವಾಕ್ಯದಲ್ಲಿ 'ಯತೋ ವಾ ಇಮಾನಿ ಭೂತಾನಿ' ಎಂದು ಹೇಳಿದ 'ಇಮಾನಿ' ಪದದ ರೂಪಾಂತರ ಹೊರತು 'ಅನುಭವಸಿದ್ಧವಾದ' ಎಂಬ ಅರ್ಥದಲ್ಲಿ ಅಲ್ಲ ಎಂಬ ಆಕ್ಷೇಪ ಬರಬಹುದು. ಆದರೆ ವಿಷಯ ವಾಕ್ಯದಲ್ಲಿಯೂ 'ಇಮಾನಿ' 'ಈ ಚೇತನಗಳು' ಎಂದುದು ಅನುಭವಸಿದ್ಧವಾದವುಗಳೆಂಬ ಅಭಿಪ್ರಾಯದಿಂದಲೆ.

(೩) ಈ ಸೂತ್ರಕ್ಕೆ ಅನೇಕ ವಿಚಾರವಿಧಾಯಕ ವಾಕ್ಯಗಳು ವಿಷಯವಾಕ್ಯಗಳಾಗಿವೆ. ಅವುಗಳಲ್ಲಿ ಅನೇಕ ಕಡೆ ಮೋಕ್ಷ ಭಗವದನುಗ್ರಹ ಮುಂತಾದುವನ್ನು ಹೇಳಿರುವುದರಿಂದ ಸೂತ್ರ ಅವುಗಳನ್ನು ಮನಸ್ಸಿನಲ್ಲಿಟ್ಟುಕೊಂಡು 'ಅತಃ' ಎಂದಿದೆ.

(೪) ವಿಚಾರವು ಜ್ಞಾನ ಭಗವದನುಗ್ರಹಗಳಿಗೆ ಕಾರಣವಾಗುವುದು ಬ್ರಹ್ಮತರ್ಕದಲ್ಲಿ ಉಕ್ತವಾಗಿದೆ. ಬ್ರಹ್ಮತರ್ಕ ಈ ವಿಚಾರಶಾಸ್ತ್ರಕ್ಕೆ ಅಂಗವಾಗಿದೆ. ಅಲ್ಲದೆ ಬ್ರಹ್ಮತರ್ಕವನ್ನು ರಚಿಸಿದವರೂ ಸೂತ್ರಕಾರರಾದ ಬಾದರಾಯಣರೆ. ಆದರಿಂದ ಬ್ರಹ್ಮತರ್ಕದಲ್ಲಿ ಹೇಳಿದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ಸೂತ್ರಕಾರರು 'ಅತಃ' ಎಂದಿದ್ದಾರೆ.

(೫) ಮುಂದೆ ಜನ್ಮಾದಿಸೂತ್ರದಲ್ಲಿ ವಿಚಾರದಿಂದ ಜ್ಞಾನ, ಭಗವದನುಗ್ರಹ, ಮೋಕ್ಷಗಳುಂಟಾಗುವುದನ್ನು ಹೇಳುತ್ತಿದೆ. ಅಲ್ಲಿ ಹೇಳಲಿರುವುದನ್ನು ಪ್ರಥಮ ಸೂತ್ರವು ಅತಃ ಎಂದು ನಿರ್ದೇಶಿಸಬಹುದು. ಅಥೈಷ ಜ್ಯೋತಿಃ ಅಥೈಷ ವಿಶ್ವಜ್ಯೋತಿಃ ಎಂಬಲ್ಲಿ ಬರುವ 'ಏಷಃ' 'ಈ ಯಾಗವು' ಮುಂದೆ ಹೇಳುವ ಯಾಗವನ್ನು ನಿರ್ದೇಶಿಸುತ್ತಿದೆ ಎಂದು ಮೀಮಾಂಸಕರು ಒಪ್ಪಿದ್ದಾರೆ.

(೬) ಈ ಸೂತ್ರದಲ್ಲಿಯ ಅಥಶಬ್ದವು 'ಮೋಕ್ಷಾಭಿಲಾಷೆಯನ್ನು ಹೊಂದಿದ ಬಳಿಕ' ಬ್ರಹ್ಮವಿಚಾರ ಮಾಡಬೇಕೆಂದು ಹೇಳಿದೆ. ಮೋಕ್ಷವು ಜ್ಞಾನ ಭಗವದನುಗ್ರಹಗಳ ಮೂಲಕವೆ ವಿಚಾರದಿಂದ ಲಭ್ಯವೆಂಬುದು ಪ್ರಮಾಣಸಿದ್ಧ. ಯಾಗಕ್ಕೆ ಸ್ವರ್ಗವೆ ಫಲವೆಂದು ಶ್ರುತಿ ಹೇಳುವಾಗ ಸ್ವರ್ಗವು ಅದೃಷ್ಟದ ಮೂಲಕವೆ ಲಭ್ಯವಾದ್ದರಿಂದ ಅದನ್ನೂ ಶ್ರುತಿಯು ಹೇಳಿದಂತಾಗುವುದು. ಭತ್ತವು ಯಾಗ ಸಾಧನವೆಂದು ಶ್ರುತಿ ಹೇಳುವಾಗ ಪ್ರೋಕ್ಷಣ ಅವಹನನಾದಿಗಳ ಮೂಲಕವೆ ಭತ್ತವು ಯಾಗಸಾಧನವಾಗುವುದರಿಂದ ಅದನ್ನೂ ಶ್ರುತಿ ಹೇಳಿದಂತಾಗುವುದು. ಆದರಿಂದ ವಿಚಾರವು ಜ್ಞಾನ ಭಗವದನುಗ್ರಹಗಳ ಮೂಲಕ ಮೋಕ್ಷಸಾಧನವಾಗುವುದರಿಂದ ಅದನ್ನೂ ಅಥಶಬ್ದ ಹೇಳಿದಂತಾಗುವುದು. ಆಗ ಪ್ರಕೃತವಾದುದನ್ನು ಅತಃ ಶಬ್ದವು ನಿರ್ದೇಶಿಸುತ್ತದೆ.

(೭) ಮನನರೂಪವಾದ ವಿಚಾರಕ್ಕೆ ಶ್ರವಣ ಮೊದಲಿಗೆ ಅವಶ್ಯಕವೆಂದು ಅಥಶಬ್ದ ಹೇಳುತ್ತದೆ. ಶ್ರವಣಕಾಲದಲ್ಲಿ ತಿಳಿದಿದ್ದ ಮೋಕ್ಷ ಭಗವದನುಗ್ರಹಾದಿಗಳ ಕಾರ್ಯಕಾರಣಭಾವ ಮನನ ಪ್ರಾರಂಭದಲ್ಲಿ ಬುದ್ಧಿಸ್ಥವಾಗಿದ್ದು ವಿಚಾರಕರ್ತವ್ಯತ್ವಕ್ಕೆ ಅದು ಹೇತುವಾಗಲು ಯೋಗ್ಯವೂ ಆಗಿರುವುದರಿಂದ ಅದನ್ನು ಹೇತುವೆಂದು ಅತಃಶಬ್ದವು ನಿರ್ದೇಶಿಸುತ್ತದೆ.

**ಅಥ ಅತಃ ಬ್ರಹ್ಮ ಶಬ್ದಗಳ ಸಾರ್ಥಕತೆ**

ಅತಃಶಬ್ದವು ಹೀಗೆ ಶ್ರವಣಕಾಲದಲ್ಲಿ ತಿಳಿದಿರುವ ಮತ್ತು ಪ್ರಮಾಣಸಿದ್ಧವಾದ ಜಿಜ್ಞಾಸುವಿನ ಅರ್ಹತೆಗಳು, ವಿಷಯ, ಪ್ರಯೋಜನ ಎಲ್ಲವನ್ನೂ ಹೇಳುವುದಾದರೆ ಅಥ ಬ್ರಹ್ಮ ಶಬ್ದಗಳು ಏಕೆ? ಎಂದರೆ, ಅರ್ಹತೆ ವಿಷಯ ಪ್ರಯೋಜನಗಳ ವೈಲಕ್ಷಣ್ಯಸೂಚನೆಗಾಗಿ ಮೂರು ಶಬ್ದಗಳು ಬೇಕು. ಅರ್ಹತೆ ಸಿದ್ಧವಾದುದೆ ಇರಬೇಕು. ಪ್ರಯೋಜನ ಅಸಿದ್ಧವೆ ಇರಬೇಕು. ವಿಷಯ ಧರ್ಮವಿಚಾರದಲ್ಲಿ ಅಸಿದ್ಧವಾದ ಯಾಗಾದಿಧರ್ಮ, ಬ್ರಹ್ಮವಿಚಾರದಲ್ಲಿ ಸಿದ್ಧವಾದ ಬ್ರಹ್ಮ. ಇವು

ಮೂರರಲ್ಲಿರುವ ವೈಲಕ್ಷಣ್ಯಗಳು. ಮತ್ತು ಮೂರೂ ಶಬ್ದಗಳಲ್ಲಿಯೂ ತಮ್ಮದೆ ಆದ ವಿಲಕ್ಷಣಶಕ್ತಿ ಇದೆ, ಮಂಗಳಕರವಾಗಿದೆ. ಸೂತ್ರದಿಂದ ಅರ್ಥನಿರ್ಣಯವಾಗಬೇಕಾಗಿರುವ ಬೇರೆಬೇರೆ ಶ್ರುತಿವಾಕ್ಯಗಳನ್ನು ಜ್ಞಾಪಿಸುತ್ತವೆ. ಬೇರೆಬೇರೆ ಸಂದೇಹಗಳಿಗೆ ತಮ್ಮದೆ ಆದ ಪರಿಹಾರವನ್ನೂ ನೀಡುತ್ತವೆ.

ಸಂಸಾರ ಮಿಥ್ಯೆಯಾದ್ದರಿಂದ ಜ್ಞಾನದಿಂದ ಅದು ನಿವೃತ್ತಿಹೊಂದಲು ನಾರಾಯಣನ ಅನುಗ್ರಹ ಬೇಕಾಗಿಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ಜಗತ್ ಸತ್ಯತ್ವವನ್ನೂ ಸತ್ಯವಸ್ತುವಿಗೆ ಮಾತ್ರವೆ ನಾಶಯೋಗ್ಯತ್ವ ಮುಂತಾದ ಯುಕ್ತಿಯನ್ನೂ ಅತಃ ಶಬ್ದ ಹೇಳುತ್ತದೆ. ಕೇವಲ ಪ್ರಯೋಜನವನ್ನಲ್ಲ. ವಿಷಯ ಪ್ರತಿಪಾದನೆಗೆ ಬೇಕಾಗುವ ಗುಣಪೂರ್ಣತ್ವಾದಿ ಯುಕ್ತಿಗಳನ್ನು ಬ್ರಹ್ಮಶಬ್ದ ಹೇಳುತ್ತದೆ. ಆಗಮವು ಪ್ರಮಾಣವಲ್ಲ. ಪ್ರಮಾಣವೆಂದೊಪ್ಪಿದರೂ ಸಿದ್ಧವಾದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ವೇದಪ್ರಾಮಾಣ್ಯ ಸಿದ್ಧಪರತ್ವ ಮುಂತಾದ ವಿಷಯ ಸಾಧಕಯುಕ್ತಿಗಳನ್ನೂ ಅತಃಶಬ್ದ ಹೇಳುತ್ತದೆ.

### ಭಾಮತಿಯಲ್ಲಿ ಅತಃಶಬ್ದಾರ್ಥ

ಬ್ರಹ್ಮಶಬ್ದದಿಂದ ಪ್ರಕೃತವಾದ, ಬ್ರಹ್ಮವಿಷಯದಲ್ಲಿ ಪ್ರಮಾಣವಾದ ವೇದವನ್ನು ಅತಃಶಬ್ದ ನಿರ್ದೇಶಿಸುತ್ತದೆ. ಆದರೆ ಎಲ್ಲ ವೇದವನ್ನಲ್ಲ, ವಿಚಾರ ಸಾಧನವಾದ ವೈರಾಗ್ಯ ಹುಟ್ಟುವ ಸಂಭವವಿಲ್ಲ ಎಂಬ ಆಕ್ಷೇಪಕ್ಕೆ ಪರಿಹಾರವಾಗಿ ಬ್ರಹ್ಮಜ್ಞಾನಫಲ ನಿತ್ಯ, ಕರ್ಮಫಲ ಅನಿತ್ಯ ಎನ್ನುವ ವೇದ ವಾಕ್ಯಗಳನ್ನು ಮಾತ್ರ ನಿರ್ದೇಶಿಸಿ ನಿತ್ಯಾನಿತ್ಯ ವಿವೇಕವೂ ಆ ಮೂಲಕ ವಿಷಯ ವೈರಾಗ್ಯವೂ ಲಭ್ಯವೆನ್ನುತ್ತದೆ. ಇದು ಕಲ್ಪತರುವಿನಲ್ಲಿ ಸ್ಪಷ್ಟವಿದೆ.

ಆದರೆ ಭಾಮತೀಪ್ರಕಾರ 'ಅಧಿಕಾರ ಪ್ರಾಪ್ತಿಯ ಅನಂತರ ಬ್ರಹ್ಮಜಿಜ್ಞಾಸೇಚ್ಛೆ ಉಂಟಾಗುವುದು ಯುಕ್ತ' ಎಂದು ಸೂತ್ರ ಹೇಳಿದಾಗ ಅರ್ಥಾತ್ ಬ್ರಹ್ಮವಿಚಾರ ಕರ್ತವ್ಯ ಎಂದು ಹೇಳಿದಂತಾಗುವುದು. ಅತಃ ಎಂಬುದನ್ನು ಮುಖ್ಯಸಾಧ್ಯವಾದ ವಿಚಾರಕರ್ತವ್ಯತ್ವದಲ್ಲಿ ಅನ್ವಯಿಸುವುದು ಸ್ವರಸ. ಆದರೆ ವೈರಾಗ್ಯವನ್ನು ಪಡೆದ ಅನಂತರ ಎಂಬ ಅಥಶಬ್ದಾರ್ಥದಲ್ಲಿ ಸೇರಿರುವ ವೈರಾಗ್ಯ ಎಂಬ ಅಂಶಕ್ಕೆ ಅತಃ ಶಬ್ದವನ್ನು ಅನ್ವಯಿಸುವುದು ಸರಿಯಲ್ಲ.

### ವಿವರಣದಲ್ಲಿ ಅತಃ ಶಬ್ದಾರ್ಥ

'ಅಥ' ಸಾಧನ ಸಂಪತ್ತನ್ನು ಪಡೆದ ಅನಂತರ 'ಅತಃ' ಸಾಧನಸಂಪತ್ತು ಇರುವುದರಿಂದಲೆ ಬ್ರಹ್ಮವಿಚಾರ ಎಂದರ್ಥ. ಇಲ್ಲಿ ಅಥಶಬ್ದದಿಂದ ಮುಖ್ಯವಾದ ಕಾರಣದ ಆನಂತರ್ಯವಿಟ್ಟುಕೊಂಡಾಗ ಅತಃ ಶಬ್ದವೂ ಅದನ್ನೇ ಹೇಳುವುದು ಪುನರುಕ್ತಿಯಲ್ಲವೆ? ಎಂಬ ಸಂದೇಹ ಬರಬಹುದು. ಕರ್ಮಫಲ ನಿತ್ಯವೆಂದು ಹೇಳುವ ಕೆಲವು ಶ್ರುತಿಗಳನ್ನು ಕಂಡವನಿಗೆ ಬ್ರಹ್ಮಜ್ಞಾನ ಫಲವೊಂದೇ ನಿತ್ಯ, ಬೇರೆಲ್ಲವೂ ಅನಿತ್ಯ ಎಂಬ ವಿವೇಕ ಬಾರದೆ ಇದ್ದೀತು. ವಿಚಾರವಾಗದೆ ಇದ್ದೀತು. ಆಗ ಪುನಃ 'ಸಾಧನ ಸಂಪತ್ತು ಇರುವುದರಿಂದ' ಎಂದು ಹೇಳಿದರೆ ಈ ಪುನರುಕ್ತಿಯಿಂದಲೆ ಸಂದೇಹ ಪರಿಹಾರವಾಗುತ್ತದೆ'. ಎಂದು

ವಿವರಣಮತವು ಹೇಳುತ್ತದೆ. ಆದರೆ ಅಥಶಬ್ದವು ಹೇಳಿದುದಕ್ಕಿಂತ ಹೆಚ್ಚೇನೂ ಹೇಳದೆ ಹೇಳಿದ್ದನ್ನೇ ತಿರುಗಿ ಹೇಳಿದ ಮಾತ್ರಕ್ಕೆ ಅತಃಶಬ್ದ ಹೇಗೆ ಸಂದೇಹ ಪರಿಹಾರಕವಾದೀತು? ವಿಚಾರ ಕರ್ತವ್ಯತ್ವವೆಂಬ ಮುಖ್ಯಸಾಧ್ಯಕ್ಕೆ ಹೇತುವನ್ನು ಹೇಳಲು ಬರುವಾಗ ಅಥಶಬ್ದದ ಅರ್ಥದೊಳಗೆ ವಿಶೇಷಣವಾಗಿ ಸೇರಿದ ವೈರಾಗ್ಯವೆಂಬ ಅಂಶಕ್ಕೆ ಹೇತುವನ್ನು ಅತಃ ಶಬ್ದ ಹೇಳುವುದು ಉಚಿತವೂ ಅಲ್ಲ.

### ರಾಮಾನುಜರ ಅತಃ ಶಬ್ದಾರ್ಥ

'ಅಥ ಬ್ರಹ್ಮಜಿಜ್ಞಾಸಾ' 'ಧರ್ಮವಿಚಾರದ ಅನಂತರ ಬ್ರಹ್ಮವಿಚಾರ ಮಾಡಬೇಕು' ಇದಕ್ಕೆ ಹೇತುವು ಕರ್ಮಫಲ ಅನಿತ್ಯವೆಂಬ ನಿಶ್ಚಯ ಮತ್ತು ಬ್ರಹ್ಮಜ್ಞಾನ ಫಲ ನಿತ್ಯವಾಗಬಹುದೆಂಬ ಸಾಮಾನ್ಯಜ್ಞಾನ. ಇದನ್ನು ಅತಃ ಶಬ್ದ ಹೇಳುತ್ತದೆ ಎಂದು ರಾಮಾನುಜಮತ. ಇದೂ ಸರಿಯಲ್ಲ. ಅಥ ಶಬ್ದ 'ಧರ್ಮವಿಚಾರದ ಅನಂತರ ಎಂದಿಷ್ಟೇ ಹೇಳಿರುವಾಗ 'ಅತಃಶಬ್ದೋ ವೃತ್ತಸ್ಯ ಹೇತುಭಾವೇ' ಎಂದು ಭಾಷ್ಯವಿರುವುದರಿಂದ ಅತಃ ಶಬ್ದವು 'ಧರ್ಮವಿಚಾರ ನಡೆದಿರುವುದರಿಂದ' ಎಂದಿಷ್ಟೇ ಹೇಳಬೇಕು. ಬೇರೇನೂ ಹೇಳಬಾರದು. ಅಥಶಬ್ದವು 'ಕರ್ಮಫಲ ಅನಿತ್ಯವೆಂಬ ನಿಶ್ಚಯ ಸಹಿತವಾದ, ಬ್ರಹ್ಮಜ್ಞಾನಫಲ ನಿತ್ಯವೆಂಬ ಜ್ಞಾನದ ಅನಂತರ' ಎಂದೇ ಹೇಳುತ್ತಿದ್ದರೆ, ಕಾರಣವಲ್ಲದ ಯಾವುದೋ ಒಂದರ ಆನಂತರ್ಯವನ್ನು ಹೇಳುವುದು ವ್ಯರ್ಥವೆಂದು ಮೇಲೆ ಹೇಳಿದ ಜ್ಞಾನವು ಕಾರಣವೆಂದೇ ಹೇಳಿದಂತಾಗುವುದರಿಂದ ಅತಃಶಬ್ದವು ತಿರುಗಿ ಅದನ್ನೇ ಹೇಳಿದರೆ ವಿವರಣಮತದಂತೆಯೆ ಪುನರುಕ್ತಿಯೆನಿಸುವುದು.

ಕರ್ಮವಿಚಾರದ ಅನಂತರ ಬ್ರಹ್ಮವಿಚಾರ ಮಾಡಬೇಕು ಏಕೆ? ಬ್ರಹ್ಮಜಿಜ್ಞಾಸುವಿಗೆ ಕರ್ಮವಿಚಾರ ಅರ್ಹತೆಯೆಂದೆ? ಮೊದಲಿಗೆ ಕರ್ಮವಿಚಾರ, ಬಳಿಕ ಬ್ರಹ್ಮವಿಚಾರ ಎಂಬ ಕ್ರಮಕ್ಕೆ ಶ್ರುತಿ ಅರ್ಥ ಪಠನ ಮುಂತಾದ ಆರು ಪ್ರಮಾಣಗಳಲ್ಲಿ ಒಂದು ಪ್ರಮಾಣವೂ ಸಿಗುವುದಿಲ್ಲ.

ಆಗಮವು ಸಿದ್ಧಪರವಲ್ಲದುದರಿಂದ ಬ್ರಹ್ಮವಿಚಾರ ಬೇಡವೆಂಬ ರಾಮಾನುಜಮತದ ಪೂರ್ವಪಕ್ಷಕ್ಕೆ ಉತ್ತರವಾಗಿ 'ಬ್ರಹ್ಮವಿಚಾರ ಕರ್ತವ್ಯ' ಎಂದೇ ಸಿದ್ಧಾಂತ ಮಾಡಬೇಕು ಹೊರತು 'ಕರ್ಮವಿಚಾರಾನಂತರ ಬ್ರಹ್ಮವಿಚಾರ ಕರ್ತವ್ಯ' ಎಂದಲ್ಲ. ಪೂರ್ವಪಕ್ಷಿ 'ಕರ್ಮವಿಚಾರಾನಂತರ ಬ್ರಹ್ಮವಿಚಾರ ಮಾಡುವುದು ಬೇಡ' ಎಂದೇನೂ ಪೂರ್ವಪಕ್ಷ ಮಾಡುವುದಿಲ್ಲ. ಏಕೆಂದರೆ ಆಗಮವು ಸಿದ್ಧಪರವಲ್ಲವೆಂದಾದರೆ ಕರ್ಮವಿಚಾರಕ್ಕಿಂತ ಮೊದಲೂ ಬ್ರಹ್ಮವಿಚಾರ ಮಾಡುವುದು ಅಯುಕ್ತವೆ ತಾನೆ?

### ಅದ್ವೈತದಲ್ಲಿ ಜಿಜ್ಞಾಸಾಶಬ್ದವು ವಿಷಯ ಪ್ರಯೋಜನ ಸೂಚಕವಲ್ಲ

ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ. ಜ್ಞಾನೇಚ್ಛೆ ಉಂಟಾಗುತ್ತದೆ ಎಂದರೆ ವಿಷಯ ಪ್ರಯೋಜನಗಳಿರಲೇಬೇಕು. ಇಲ್ಲದಿದ್ದರೆ ಜ್ಞಾನೇಚ್ಛೆ ಉಂಟಾಗದು ಎಂದು ಭಾಮತಿ ಹೇಳುವುದು ಅಸಂಗತ. ಪೂರ್ವಪಕ್ಷಿ ವಿಷಯ ಪ್ರಯೋಜನವಿಲ್ಲದುದರಿಂದ ಜ್ಞಾನೇಚ್ಛೆ ಇಲ್ಲ ಎನ್ನುತ್ತಿದ್ದಾನೆ. ಜ್ಞಾನೇಚ್ಛೆ ಇರುವುದರಿಂದ ವಿಷಯ ಪ್ರಯೋಜನಗಳಿವೆ ಎಂದು ಸಿದ್ಧಾಂತಿ ಹೇಳುತ್ತಿದ್ದಾನೆ. ಜ್ಞಾನೇಚ್ಛೆ ಇದ್ದರೆ ವಿಷಯಾದಿ ಇದೆ. ವಿಷಯಾದಿ ಇದ್ದರೆ ಜ್ಞಾನೇಚ್ಛೆ ಇದೆ ಎನ್ನುವುದು ಅನ್ಯೋನ್ಯಾಶ್ರಯ.

ವಿವರಣ ಮತದಲ್ಲಿಯೂ ಇಚ್ಛೆಗೆ ವಿಷಯವಾದ ಬ್ರಹ್ಮಜ್ಞಾನವೆಂಬ ಫಲ ಜಿಜ್ಞಾಸಾಶಬ್ದದಿಂದ ಸೂಚಿತವಾಗುತ್ತದೆ. ಜೊತೆಗೆ ಬ್ರಹ್ಮನು ವಿಷಯನೆಂದೂ ಸೂಚಿತವಾಗುತ್ತದೆ. ಆದರೆ ವಿವರಣಮತದಲ್ಲಿ ಜಿಜ್ಞಾಸಾಶಬ್ದ ವಿಚಾರ ಎಂಬ ಅರ್ಥದಲ್ಲಿ ಲಾಕ್ಷಣಿಕ. ಏಕೆಂದರೆ ಮುಖ್ಯಾರ್ಥವಾದ ಜ್ಞಾನೇಚ್ಛೆ ಬಾಧಿತ. ಜ್ಞಾನದಲ್ಲಿ ಇಚ್ಛೆ ಎಂಬುದೆ ಇಲ್ಲ. ಜಿಜ್ಞಾಸಾಶಬ್ದದಿಂದ ಮೊದಲಿಗೆ ಜ್ಞಾನೇಚ್ಛೆಯ ಪ್ರತೀತಿ ಬಂದರೂ ಅದನ್ನು ಬಿಟ್ಟು ಲಕ್ಷಣಯಾ ವಿಚಾರವನ್ನೇ ಗ್ರಹಿಸಬೇಕು. 'ಕೂಲಂ ಪಿಪತಿಷತಿ' ಎಂದಾಗ 'ನದಿಯ ದಡ ಬೀಳಲು ಬಯಸುತ್ತದೆ' ಎಂಬ ಅರ್ಥ ತೋರಿದರೂ ಅದು ಅಸಂಗತವೆಂದು ಬಿಟ್ಟು 'ಆಶಂಕಾಯಾಂ ಸನ್ ವಕ್ತವ್ಯಃ' ಎಂಬ ವಾರ್ತಿಕಾನುಸಾರ 'ದಡವು ಯಾವ ಕ್ಷಣದಲ್ಲಿಯೂ ಬೀಳಬಹುದು' ಎಂಬ ಅರ್ಥವನ್ನೇ ಗ್ರಹಿಸುತ್ತೇವೆ. ಆದರಿಂದ ದಡವು ಬೀಳುವುದು ಇಚ್ಛಾವಿಷಯ ಎಂದಾಗುವುದಿಲ್ಲ. ಹಾಗೇ ವಿಚಾರ ಎಂಬ ಅರ್ಥವನ್ನು ಜಿಜ್ಞಾಸಾಶಬ್ದದಿಂದ ಗ್ರಹಿಸುವಾಗ ಜ್ಞಾನವು ಇಚ್ಛಾವಿಷಯ ಎಂದು ಹೇಳಿದಂತಾಗುವುದಿಲ್ಲ. ಆದರಿಂದ ಫಲಸೂಚನೆ ವಿಷಯಸೂಚನೆಗಳಿಲ್ಲ. ಪೂರ್ವಪಕ್ಷಿ ಬ್ರಹ್ಮಜ್ಞಾನೇಚ್ಛೆಯನ್ನು ಒಪ್ಪಿಲ್ಲ ಎಂಬ ದೋಷವಿದ್ದೇ ಇದೆ.

ಜಿಜ್ಞಾಸಾಶಬ್ದದಿಂದಲೆ ವಿಷಯಸೂಚನೆಯಾದರೂ ಹೇಗೆ? 'ಜ್ಞಾನೇಚ್ಛೆಗೆ ಮೊದಲು ಸಂಶಯವಿರಬೇಕು. ಅದಕ್ಕೆ ವಿಷಯವಿರಬೇಕು. ಅದರಿಂದ ವಿಷಯಸೂಚನೆ' ಎನ್ನುವುದಾದರೆ 'ಈ ಪ್ರಥಮಸೂತ್ರವೆ ಬೇಡ. ಜನ್ಮಾದಿ ಸೂತ್ರದಿಂದಲೆ ಗ್ರಂಥ ಪ್ರಾರಂಭವಾಗಲಿ. ವಿಷಯಾದಿಗಳಿಲ್ಲದಿದ್ದರೆ ವಿವೇಕಿಗಳಾದ ಶಾಸ್ತ್ರಕಾರರು ಶಾಸ್ತ್ರವನ್ನಾರಂಭಿಸುತ್ತಿರಲಿಲ್ಲ' ಎಂದೂ ಹೇಳಬಹುದು. ಅಥವಾ 'ಬ್ರಹ್ಮವಿಚಾರವು ಕರ್ತವ್ಯ' ಎಂದಿಷ್ಟೇ ಸೂತ್ರಕಾರರು ಹೇಳಿದರೂ ಸಾಕಾಗುತ್ತಿತ್ತು. ವಿಷಯಾದಿಗಳಿಲ್ಲದಿದ್ದರೆ ವಿಚಾರವು ಕರ್ತವ್ಯ ಎಂದು ಸೂತ್ರಕಾರರು ಹೇಳುತ್ತಿರಲಿಲ್ಲ ಎನ್ನಬಹುದು. ಹಾಗೆ 'ಈಕ್ಷತೇರ್ನಾಶಬ್ದಂ' 'ಆನಂದಮಯೋಽಭ್ಯಾಸಾತ್' ಎಂದು ಮುಂತಾಗಿ ಸೂತ್ರಗಳಲ್ಲಿ ಹೇತುವನ್ನು ಹೇಳಬೇಕಾಗಿರಲಿಲ್ಲ. ಜಗತ್ಕಾರಣ ಪ್ರಧಾನವಲ್ಲ, ಆನಂದಮಯವು ಬ್ರಹ್ಮ ಎಂದು ಸೂತ್ರಗಳು ಹೇಳಬೇಕಾದರೆ ಅದಕ್ಕೆ ಸರಿಯಾದ ಕಾರಣವಿರಲೇಬೇಕು ಎನ್ನುತ್ತ ಹೇತುಸೂಚನೆಯಾಗುವುದೆಂದು ತೃಪ್ತಿಪಡಬಹುದಿತ್ತು.

ಬ್ರಹ್ಮಶಬ್ದಾರ್ಥ ನಿರ್ಗುಣವಲ್ಲ

ನಿರ್ಗುಣವನ್ನು ಶಬ್ದವು ಲಕ್ಷಣಾವೃತ್ತಿಯಿಂದಲೆ ಹೇಳಬೇಕಾಗುವುದರಿಂದ ಶ್ರುತಿಸೂತ್ರಗಳಲ್ಲಿ ಬ್ರಹ್ಮಶಬ್ದದ ಮುಖ್ಯಾರ್ಥವನ್ನು ಬಿಡುವುದು ಅದ್ವೈತದಲ್ಲಿ ದೋಷವಾಗುತ್ತದೆ. ಇದಕ್ಕೆ ಅದ್ವೈತದಲ್ಲಿ ಹೀಗೆ ಸಮಾಧಾನ ಹೇಳುತ್ತಾರೆ. 'ದೇಶಕಾಲ ವಸ್ತುಗಳೆಂಬ ಮೂರರ ಪರಿಮಿತಿ ಇಲ್ಲದ ತತ್ತ್ವವೆ ಮುಖ್ಯವಾಗಿ ಮಹತ್ ಎನಿಸುತ್ತದೆ. ಬ್ರಹ್ಮನಲ್ಲಿ ಜೀವನೆಂಬ ವಸ್ತುವಿನ ಸ್ವರೂಪ ಇಲ್ಲದಿದ್ದರೆ ನ್ಯೂನತೆ ಬಂದಂತಾಗುವುದು. ಮುಖ್ಯವಾದ ಮಹತ್ತ್ವವಿಲ್ಲ ಎಂದಾಗುವುದು. ಆದರಿಂದ ವಸ್ತುಪರಿಮಿತಿ ಇಲ್ಲದುದು ಎಂಬ ಬ್ರಹ್ಮಶಬ್ದದ ಮುಖ್ಯಾರ್ಥವಿಟ್ಟುಕೊಂಡಾಗಲೆ ಜೀವಬ್ರಹ್ಮೈಕ್ಯ ಸಿದ್ಧಿಸುವುದು ಎಂದು. ಇದನ್ನು ಒಪ್ಪುವುದಾದರೆ ಬ್ರಹ್ಮನಲ್ಲಿ ಜೀವೈಕ್ಯದಂತೆ ಘಟೈಕ್ಯವೂ ಬರಬೇಕಾದೀತು. ಇಲ್ಲದಿದ್ದರೆ ಘಟಸ್ವರೂಪ ಬ್ರಹ್ಮನಲ್ಲಿಲ್ಲವೆಂದು ಅವನ ಮುಖ್ಯ ಮಹತ್ತ್ವಕ್ಕೆ ಭಂಗ ಬಂದೀತು. ಘಟೈಕ್ಯವೂ

ಬ್ರಹ್ಮನಲ್ಲಿ ಬರಲಿ ಎನ್ನುವಂತಿಲ್ಲ. ಅವನಲ್ಲಿ ಪ್ರಪಂಚ ವೈಲಕ್ಷಣ್ಯವನ್ನು ಅದ್ವೈತ ಹೇಳುತ್ತದೆ.

'ಘಟಸ್ವರೂಪ ಅವಾಸ್ತವವಾದ್ದರಿಂದ ಬ್ರಹ್ಮನಲ್ಲಿ ಘಟೈಕ್ಯವಿಲ್ಲದಿದ್ದರೆ ಕುಂದಿಲ್ಲ, ಜೀವಸ್ವರೂಪ ವಾಸ್ತವವಾದ್ದರಿಂದ ಜೀವೈಕ್ಯ ಮಾತ್ರ ಅವಶ್ಯಕ' ಎನ್ನುತ್ತಾರೆ. ಆದರೆ ದೇಶಕಾಲಗಳು ಅವಾಸ್ತವವಾದರೂ ಅವುಗಳ ಪರಿಮಿತಿ ಶೂನ್ಯತ್ವವು ಘಟದಲ್ಲಿ ತನ್ನಂತೆ ಸತ್ಯವಾಗಿ ಇಲ್ಲದುದರಿಂದ ಘಟ ಅಲ್ಪವೆನಿಸುತ್ತದೆ. ಹಾಗೇ ಘಟ ಅವಾಸ್ತವವಾದರೂ ಬ್ರಹ್ಮನಲ್ಲಿ ಘಟೈಕ್ಯ ತನ್ನಂತೆ ಸತ್ಯವಾಗಿ ಇಲ್ಲದಿದ್ದರೆ ಬ್ರಹ್ಮನೂ ಅಲ್ಪನೆನಿಸಬೇಕಾಗುತ್ತದೆ. 'ಮಹತ್ವ ಬರಬೇಕಾದರೆ ತನ್ನಂತೆ ಸತ್ಯವಾದ ವಸ್ತುವಿನ ಪರಿಮಿತಿ ತನ್ನಲ್ಲಿ ಇಲ್ಲ ಎಂದಾಗಬೇಕು' ಎನ್ನುವುದಾದರೆ ಬ್ರಹ್ಮನಲ್ಲಿ ದೇಶಕಾಲ ಪರಿಮಿತಿ ಬರಬಹುದೆಂದಾಯಿತು. ಏಕೆಂದರೆ ದೇಶಕಾಲಗಳು ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವಲ್ಲ. ಆಕಾಶದಲ್ಲಿ ತನ್ನಂತೆ ವ್ಯಾವಹಾರಿಕ ಸತ್ಯವಾದ ಘಟದ ಭೇದರೂಪವಾದ ಪರಿಮಿತಿ ಬರುವುದರಿಂದ ಆಕಾಶ ಅಲ್ಪವೆನಿಸಬೇಕಾದೀತು.

'ಮಹತ್ವ ಬರಬೇಕಾದರೆ ತನ್ನಂತೆ ಸತ್ಯವಾದ ಪರಿಮಿತಿ ಇಲ್ಲ ಎಂದಾಗಬೇಕು' ಎನ್ನುವುದಾದರೆ ಬ್ರಹ್ಮನಲ್ಲಿ ತನ್ನಂತೆ ಸತ್ಯವಾದ ಘಟಭೇದವಿಲ್ಲದಿರುವುದೆ ಮಹತ್ವವೆನ್ನುವಂತೆ ತನ್ನಂತೆ ಸತ್ಯವಾದ ಜೀವಭೇದವಿಲ್ಲದಿರುವುದೆ ಮಹತ್ವ ಎಂದಾಗಲಿ. ಜೀವೈಕ್ಯವನ್ನು ಒಪ್ಪಬೇಕಾಗಿಲ್ಲ. ಜೀವಭೇದದ ಅಭಾವವೆ ಜೀವೈಕ್ಯ ಎಂದರೆ ಘಟಭೇದದ ಅಭಾವವೆ ಘಟೈಕ್ಯ ಎಂದಾದೀತು.

ಆಕಾಶದಲ್ಲಿ ತನ್ನಂತೆ ಸತ್ಯವಾದ ದೇಶಕಾಲಪರಿಮಿತಿ ಶೂನ್ಯತ್ವವೆ ಮಹತ್ವ. ಬ್ರಹ್ಮನಲ್ಲಿ ಘಟಾಭೇದರೂಪವಾದ ಪರಿಮಿತಿಶೂನ್ಯಕ್ಕೆ ತನ್ನಂತೆ ಪಾರಮಾರ್ಥಿಕ ಸತ್ಯವಲ್ಲದ್ದರಿಂದ ಮಹತ್ವವಿಲ್ಲ ಎಂದೇಕೆ ಹೇಳಬಾರದು? ಇದಕ್ಕೆ ಅದ್ವೈತಿಗಳು ಹೇಳಬಹುದು - ಆಕಾಶದಲ್ಲಿ ತನ್ನಂತೆ ಸತ್ಯವಾದ ದೇಶಕಾಲ ಪರಿಮಿತಿ ಇಲ್ಲದ್ದರಿಂದ ಮಹತ್ವ. ಬ್ರಹ್ಮನಲ್ಲಿ ತನ್ನಂತೆ ಪಾರಮಾರ್ಥಿಕವಾದ ಘಟಭೇದವಿಲ್ಲದ್ದರಿಂದ ಮಹತ್ವ. ಹೊರತು ಅವನಲ್ಲಿ ತನ್ನಂತೆ ಸತ್ಯವಾದ ಘಟಾಭೇದವನ್ನು ನಾವು ಒಪ್ಪಿಲ್ಲ ಎಂದು. ಆದರೆ ಇದು ಸರಿಯಲ್ಲ. ಬ್ರಹ್ಮನಲ್ಲಿ ಘಟಾಭೇದ ಸತ್ಯವಲ್ಲದಿದ್ದರೆ ಘಟಭೇದ ಸತ್ಯವಿರಲೇಬೇಕು. ಎರಡು ವಿರದ್ಧವಸ್ತುಗಳಲ್ಲಿ ಒಂದು ಸತ್ಯವಲ್ಲದಿದ್ದರೆ ಇನ್ನೊಂದು ಸತ್ಯವಿರಲೇ-ಬೇಕು. ಆದರಿಂದ ಬ್ರಹ್ಮನಲ್ಲಿ ತನ್ನಂತೆ ಸತ್ಯವಾದ ಘಟಭೇದವೆಂಬ ಪರಿಮಿತಿ ಬರುವುದರಿಂದ ಅವನಲ್ಲಿ ಅಲ್ಪತ್ವ ಅಪರಿಹಾರ್ಯ.

ವಸ್ತುತಃ ಬ್ರಹ್ಮನಲ್ಲಿ ಜೀವಭೇದವಿದ್ದರೆ ಮಹತ್ವವೇ ಬರುತ್ತದೆ. ಅಲ್ಪತ್ವವಲ್ಲ. ಅಲ್ಪನಾದ ಜೀವನಿಗಿಂತ ಬ್ರಹ್ಮ ವಿಲಕ್ಷಣನೆಂದರೆ ಅದು ಮಹತ್ವವೆ ತಾನೆ? ಅದ್ವೈತಿಗಳಿಗೆ ಬ್ರಹ್ಮನಲ್ಲಿ ಪ್ರಪಂಚಭೇದವೂ ಬೇಕು. ಮಹತ್ವವೂ ಬೇಕು. ಎರಡೂ ಸೇರಬೇಕಾದರೆ ಭೇದವು ಅಲ್ಪತ್ವವೆನ್ನುವುದನ್ನು ಬಿಡಲೇಬೇಕು.

ದೇಶಕಾಲ ಪರಿಮಿತಿ ಶೂನ್ಯತ್ವದಂತೆ ವಸ್ತುಭೇದ ಶೂನ್ಯತ್ವವೂ ಮಹತ್ವಕ್ಕೆ ಕಾರಣವೆನ್ನುವುದಾದರೆ ಈ ವಸ್ತುಭೇದ ಶೂನ್ಯತ್ವ ಬ್ರಹ್ಮನಿಗಿಂತ ಭಿನ್ನವೊ, ಅಭಿನ್ನವೊ? ಅಭಿನ್ನ ಎಂದರೆ 'ಬ್ರಹ್ಮ' ಬ್ರಹ್ಮ ಎನಿಸಲಾರದು. ಏಕೆಂದರೆ 'ಬ್ರಹ್ಮ' ಎಂಬಲ್ಲಿ ಬೃಹಧಾತುವಿನ ಅರ್ಥ ವಸ್ತುಭೇದ ಶೂನ್ಯತ್ವ

ರೂಪವಾದ ಮಹತ್ತ್ವ. ಮನಿನ್ ಪ್ರತ್ಯಯಕ್ಕೆ ಆ ಮಹತ್ತ್ವ 'ಉಳ್ಳದ್ದು' ಎಂದರ್ಥ. ಮಹತ್ತ್ವ ಬ್ರಹ್ಮಸ್ವರೂಪವೆ ಆದರೆ ಪ್ರತ್ಯಯಾರ್ಥವಿಲ್ಲ ಎಂದಾಗುವುದು.

ಮಹತ್ತ್ವ ಬ್ರಹ್ಮನಿಗಿಂತ ಭಿನ್ನವಾದರೆ, ಭಿನ್ನವಾಗಿದ್ದು ಮಿಥ್ಯೆಯಾದರೆ ವಸ್ತುತಃ ಮಹತ್ತ್ವ ಬ್ರಹ್ಮನಲ್ಲಿ ಇಲ್ಲ. ಭಿನ್ನವಾಗಿದ್ದು ಸತ್ಯವಾಗಿದ್ದರೆ ಸತ್ಯವಾದ ಆ ವಸ್ತುವಿನ ಭೇದ ಬ್ರಹ್ಮನಲ್ಲಿ ಬರುವುದರಿಂದ ಅಲ್ಪತ್ವ ಬಂದಿತು.

ಬ್ರಹ್ಮಶಬ್ದದಿಂದಲೆ ಜೀವಾಭೇದ ಸಿದ್ಧವಾಗುವುದೂ ಸುಳ್ಳು. ಜೀವರು ಬೇರೆ ಇದ್ದರೆ ಮಾತ್ರ ಅಲ್ಪರಾದ ಜೀವರಿಗಿಂತ ಬ್ರಹ್ಮನಲ್ಲಿ ಮಹತ್ತ್ವ ಬಂದೀತು. ಆದರಿಂದ ಬ್ರಹ್ಮಶಬ್ದದಿಂದಲೆ ಜೀವಭೇದ ಸಿದ್ಧವಾಗುತ್ತದೆ.

ಬ್ರಹ್ಮನಲ್ಲಿ ದೇಶಕಾಲ ಪರಿಮಿತಿ ಶೂನ್ಯತ್ವರೂಪವಾದ ಮಹತ್ತ್ವ ಬರಲು ದೇಶಕಾಲಗಳ ಅಸ್ತಿತ್ವವೆ ಕಾರಣ. ಅಭಾವವಲ್ಲ. ಆದ್ದರಿಂದ ದೇಶಕಾಲಗಳಿಂದಲೂ ಗುಣಗಳಿಂದಲೂ ಪೂರ್ಣನೆನಿಸುವುದೆ ಬ್ರಹ್ಮಶಬ್ದದ ಅರ್ಥ. ಈ ಅರ್ಥದಲ್ಲಿ ವಿಷ್ಣುವೆ ಬ್ರಹ್ಮ. 'ವಿಷ್ಣು' ಶಬ್ದವೂ ಪೂರ್ಣತ್ವ ಎಂಬ ಅರ್ಥದ ವಿಷ್ ಧಾತುವಿಗೆ ಕ್ನು ಪ್ರತ್ಯಯ ಸೇರುವುದರಿಂದಾಗಿದೆ.

### 'ಬ್ರಹ್ಮಜಿಜ್ಞಾಸಾ'-ಯಾವ ಸಮಾಸ?

'ಬ್ರಹ್ಮಜಿಜ್ಞಾಸಾಶಬ್ದ ಷಷ್ಠೀತತ್ಪುರುಷ ಸಮಾಸ. ಕರ್ಮಾರ್ಥಕ ಷಷ್ಠೀವಿಭಕ್ತಿಯನ್ನಿಟ್ಟು ಕೊಳ್ಳಬೇಕು. ಶೇಷ ಷಷ್ಠಿಯನ್ನಲ್ಲ. ಶೇಷ ಷಷ್ಠಿಯಿಂದ ಜಿಜ್ಞಾಸೆಗೆ ಸಂಬಂಧಿಸಿದುದು ಬ್ರಹ್ಮ ಎಂದಿಷ್ಟೇ ತಿಳಿಯುತ್ತದೆ. ಯಾವ ಸಂಬಂಧ? ಎಂದು ವಿಚಾರ ಬಂದಾಗ ಬೇರಾವುದೂ ಅಲ್ಲ, ಕರ್ಮತ್ವವೆ ಸಂಬಂಧ ಎಂದು ತಿಳಿಯಬೇಕಾಗುತ್ತದೆ. ಇದು ಬಳಸು ದಾರಿ. ಶ್ರುತಿಯಲ್ಲಿಯೂ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂದು ಬ್ರಹ್ಮನನ್ನು ಜಿಜ್ಞಾಸೆಗೆ ಕರ್ಮ ಎಂದೇ ನಿರ್ದೇಶಿಸಿದೆ' ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ನಿರ್ಗುಣಬ್ರಹ್ಮ ಯಾವ ಕಾರಕವೂ ಆಗಲಾರದು, ಕರ್ಮವೆನಿಸವುದು ಹೇಗೆ?

ವಿಚಾರದಿಂದ ಬರುವ ಅಪರೋಕ್ಷವೃತ್ತಿಗೆ ವಿಷಯನಾಗುವುದೇ ಕರ್ಮತ್ವವೆನ್ನುವುದೂ ಸರಿಯಲ್ಲ. ಅಪರೋಕ್ಷವೃತ್ತಿಯಲ್ಲಿ ಪ್ರತಿಬಿಂಬಿತವಾಗುವ ಚೈತನ್ಯಕ್ಕೆ ಘಟಾದಿಗಳು ವಿಷಯವಾಗುವುದ-ರಿಂದಲೆ ಘಟಾದಿಗಳು ಕರ್ಮವೆನಿಸುತ್ತವೆ. ವೃತ್ತಿಯಲ್ಲಿ ಪ್ರತಿಬಿಂಬಿಸುವುದೂ ತಾನೆ, ಆ ಪ್ರತಿಬಿಂಬಕ್ಕೆ ವಿಷಯನಾಗವುದೂ ತಾನೆ ಎಂದರೆ ಕರ್ತೃಕರ್ಮಗಳೆರಡೂ ಒಂದು ಎಂದಂತಾಗುವುದೆಂದು ಹೆದರಿ ಅದ್ವೈತಿಗಳು ಚೈತನ್ಯದಲ್ಲಿ ಕರ್ಮತ್ವವನ್ನು ಒಪ್ಪಿಲ್ಲ. ಆದರಿಂದ ಬ್ರಹ್ಮಕರ್ಮವೆನಿಸುವುದು ಹೇಗೆ?

ನಮ್ಮ ಸಿದ್ಧಾಂತದಲ್ಲಿ ಕರ್ಮಷಷ್ಠೀ ಸಮಾಸವನ್ನೇ ಒಪ್ಪಿದ್ದೇವೆ. ಇದು ಬ್ರಹ್ಮಸ್ವರೂಪ ವಿಚಾರ ಪ್ರಧಾನ ಎಂಬ ಅಭಿಪ್ರಾಯದಿಂದ. ಜೊತೆಗೆ ಬ್ರಹ್ಮಸ್ವರೂಪವಿಚಾರಕ್ಕೆ ಸಂಬಂಧಿಸಿದ ಲಕ್ಷಣ ಪ್ರಮಾಣ ಪ್ರಯೋಜನ ಮುಂತಾದ ಬೇರೆ ವಿಷಯಗಳ ವಿಚಾರವನ್ನೂ ಮಾಡಬೇಕೆಂಬುದು ಶ್ರುತಿಸೂತ್ರಗಳ ಅಭಿಪ್ರಾಯ.

'ಕರ್ಮಾರ್ಥದಲ್ಲಿ' ಎಂದು ವಿಹಿತವಾದ ಷಷ್ಠೀವಿಭಕ್ತಿ ಬಂದಿದ್ದರೆ ಸಮಾಸವಾಗುವುದಿಲ್ಲ ಎಂದು 'ಕರ್ಮಣಿ ಚ' ಎಂಬ ಸೂತ್ರ ಹೇಳುತ್ತದೆ. ಪ್ರಕೃತದಲ್ಲಿ 'ಉಭಯ ಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಲ್ಲಿ 'ಕರ್ಮಣಿ' 'ಕರ್ಮಾರ್ಥದಲ್ಲಿ' ಎಂದು ಷಷ್ಠಿ ವಿಹಿತವಾಗಿದೆ ಎಂಬ ಸಮಸ್ಯೆಗೆ ಹೀಗೆ ಉತ್ತರ - 'ಅಕಾಕಾರಯೋಃ ಪ್ರಯೋಗೇ ನೇತಿ ವಕ್ತವ್ಯಂ' ಎಂಬ ವಾರ್ತಿಕದಂತೆ 'ಅಕ' ಮತ್ತು 'ಅ' ಪ್ರತ್ಯಯ ಸ್ಥಳಗಳಲ್ಲಿ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಂತೆ ಕರ್ಮಷಷ್ಠಿ ಬರುವುದು ನಿಷಿದ್ಧವಾಗಿದೆ. ಪ್ರಕೃತದಲ್ಲಿ 'ಜಿಜ್ಞಾಸಾ' ಶಬ್ದ ಸನ್ ಪ್ರತ್ಯಯಾಂತವಾದ 'ಜಿಜ್ಞಾಸ' ಶಬ್ದದ ಮೇಲೆ 'ಅ' ಪ್ರತ್ಯಯ ಬಂದು ಸಿದ್ಧವಾಗಿರುವುದರಿಂದ 'ಉಭಯಪ್ರಾಪ್ತೌ ಕರ್ಮಣಿ' ಸೂತ್ರವಿಹಿತವಾದ ಷಷ್ಠಿ ಬರುವುದಿಲ್ಲ. 'ಕರ್ತೃಕರ್ಮಣೋಃ ಕೃತಿ' ಎಂದೇ ಷಷ್ಠಿ ಬಂದಿದೆ. ಆದರಿಂದ 'ಕರ್ಮಣಿ ಚ' ಎಂದು ಷಷ್ಠೀಸಮಾಸ ನಿಷೇಧವಿಲ್ಲ. 'ಕೃದ್ಯೋಗ ಲಕ್ಷಣಾ ಷಷ್ಠೀ ಸಮಸ್ಯತೇ' ಎಂದು ಪ್ರತಿಪ್ರಸವವಿರುವುದರಿಂದ 'ಪ್ರತಿಪದವಿಧಾನ ಷಷ್ಠೀ ನ ಸಮಸ್ಯತೇ' ಎನ್ನುವ ನಿಷೇಧವೂ ಅನ್ವಯಿಸುವುದಿಲ್ಲ.

### 'ಜಿಜ್ಞಾಸಾ' ಶಬ್ದಾರ್ಥ - ಸ್ವಮತದಲ್ಲಿ

ಟೀಕೆಯಲ್ಲಿ ಶ್ರವಣಮನನ ನಿದಿಧ್ಯಾಸನ ಇವು ಮೂರು ಜಿಜ್ಞಾಸೆಯೆ ಎಂದಿದೆ. ಸುಧೆಯಲ್ಲಿ ಮನನವೇ ಜಿಜ್ಞಾಸೆ ಎಂದಿದೆ. ಇವುಗಳ ವಿರೋಧ ಪರಿಹಾರಕ್ಕೆ ಹೀಗೆ ಹೇಳಬೇಕು - 'ಜಿಜ್ಞಾಸೆ' ಎಂದರೆ ಶ್ರವಣ ಮುಂತಾದ ಮೂರರಲ್ಲಿಯೂ ಹಾಸು ಹೊಕ್ಕಾಗಿರುವ ಉಪಾಸನೆ, ಅಂದರೆ ಭಗವಂತನಲ್ಲಿ ಮನಸ್ಸಿನ ಏಕಾಗ್ರತೆ. ಇದು ನಿದಿಧ್ಯಾಸನದಲ್ಲಿ ಸ್ವತಃ ಇದೆ. ಶ್ರವಣ ಮನನಗಳಲ್ಲಿ ಪ್ರಮಾಣಗಳ ಮೂಲಕ ಇದೆ ಎಂಬುದು ಟೀಕೆಯ ಅಭಿಪ್ರಾಯ. ಇದು ಸುಧೆಗೂ ಸಂಮತವೆ. ಆದರೆ ಶಾಸ್ತ್ರದ ಅವಶ್ಯಕತೆಯನ್ನು ಸಮರ್ಥಿಸಲು ಮನನ ರೂಪದ ಉಪಾಸನೆಯ ಅವಶ್ಯಕತೆಯನ್ನು ಸಮರ್ಥಿಸಿದರೆ ಸಾಕು ಎಂದು ಸುಧೆ ಅಭಿಪ್ರಾಯಪಡುತ್ತದೆ.

ಜಿಜ್ಞಾಸಾ ಶಬ್ದವು ಜ್ಞಾಧಾತುವಿಗೆ ಇಚ್ಛೆ ಎಂಬ ಅರ್ಥದ 'ಸನ್' ಪ್ರತ್ಯಯ ಸೇರಿ ನಿಷ್ಪನ್ನವಾಗಿದ್ದರೂ ಆ ಶಬ್ದದಿಂದ ಮೊದಲಿಗೆ ವಿಚಾರ ಎಂಬ ಅರ್ಥವೇ ಹೊಳೆಯುತ್ತದೆ ಹೊರತು ಜ್ಞಾನೇಚ್ಛೆಯಲ್ಲ. ಆದರಿಂದಲೆ ಎಲ್ಲ ಸೂತ್ರಕಾರರೂ ಧರ್ಮಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂದು 'ಜಿಜ್ಞಾಸಾ' ಶಬ್ದವನ್ನೆ ಬಳಸುತ್ತಾರೆ. ಅದೇ ಅರ್ಥದ 'ಬುಭುತ್ಸಾ' ಶಬ್ದವನ್ನಲ್ಲ. ಏಕೆ? ಎಂಬ ಪ್ರಶ್ನೆಗೆ, ಬುಭುತ್ಸಾ ಶಬ್ದವನ್ನು ಹೇಳಿದರೆ ಮೊದಲಿಗೆ ಜ್ಞಾನೇಚ್ಛೆ ಎಂಬ ಅರ್ಥ ಹೊಳೆಯುತ್ತದೆ ಹೊರತು ವಿಚಾರವೆಂಬ ಅರ್ಥವಲ್ಲ ಎಂದೇ ಉತ್ತರಿಸಬೇಕು. ಆದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರ ಎಂಬ ಅರ್ಥದಲ್ಲಿ ರೂಢಿ ಎಂದು ಒಪ್ಪಬೇಕು. ಲಕ್ಷಣೆ ಎಂದಲ್ಲ.

### ಜಿಜ್ಞಾಸಾ ಶಬ್ದಾರ್ಥ ಅದ್ವೈತ ಮತದಲ್ಲಿ

ಪಂಚಪಾದಿಕಾ ವಿವರಣೆಗಳಲ್ಲಿ ರೂಢಿಯನ್ನು ನಿರಾಕರಿಸಿದರೂ ಭಂಗ್ಯಂತರದಿಂದ ಅದನ್ನೇ ಒಪ್ಪಿರುವಂತೆ ಕಾಣುತ್ತದೆ. ಏಕೆಂದರೆ 'ವಿಚಾರದಿಂದ ಲಭ್ಯವಾಗಬಲ್ಲ ಜ್ಞಾನದ ಇಚ್ಛೆಯು 'ಜಿಜ್ಞಾಸಾ' ಶಬ್ದದಿಂದ ಪ್ರತೀತವಾಗುತ್ತದೆ. ಕೇವಲ ಉಪದೇಶದಿಂದ ಲಭಿಸುವ ಜ್ಞಾನದ ಇಚ್ಛೆಯಲ್ಲ' ಎಂದು ಪರಿಪೂರ್ಣಚಂದ್ರಿಕಾ

ಅವರು ಹೇಳುತ್ತಾರೆ. ಇಲ್ಲಿ ಜ್ಞಾನೇಚ್ಛೆ ಪ್ರತೀತವಾಗುವಾಗಲೆ ಆ ಜ್ಞಾನ 'ವಿಚಾರಲಭ್ಯ' ಎಂದು ವಿಚಾರದ ಪ್ರತೀತಿಯೂ ಮೊದಲಿಗೆ ಆಗುತ್ತಿದೆ ಎಂದು ಒಪ್ಪಿದಂತಾಯಿತು. ಹೀಗೆ ಮೊದಲಿಗೇ ವಿಚಾರದ ಪ್ರತೀತಿ ಇರುವುದಾದರೆ ರೂಢಿಯನ್ನೇ ಏಕೆ ಒಪ್ಪಬಾರದು? ರೂಢಿಯನ್ನು ಒಪ್ಪಿದರೆ 'ತದ್ ವಿಜಿಜ್ಞಾಸಸ್ವ' 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಶ್ರುತಿಸೂತ್ರಗಳಲ್ಲಿ ಲಕ್ಷಣಾವೃತ್ತಿಯನ್ನು ತಪ್ಪಿಸಬಹುದು. 'ವಿಧಿ ವಾಕ್ಯದಲ್ಲಿ ಲಕ್ಷಣಾವೃತ್ತಿ ಕೂಡದು' ಎಂಬ ನಿಯಮವನ್ನೂ ಪಾಲಿಸಿದಂತಾಗುವುದು. ಲಕ್ಷಣಾವೃತ್ತಿ ಎಂದೇ ಆಗ್ರಹಿಸುವುದಾದರೆ ಮಂಡಪ ಪ್ರವೀಣ ಕುಶಲ ವಾಜಿ ಶಬ್ದಗಳನ್ನೂ ಲಾಕ್ಷಣಿಕವೆನ್ನುತ್ತ ರೂಢಿಯನ್ನು ಅಲ್ಲಗಳೆಯಬಹುದು. ವೇದದಲ್ಲಿಯೂ 'ಅಪರಿಮಿತ ಗೋವುಗಳನ್ನು ದಾನ ಮಾಡಬೇಕು' ಎಂಬ ವಾಕ್ಯದಲ್ಲಿ 'ಅಪರಿಮಿತ'ವೆಂದರೆ 'ಸಂಖ್ಯಾಮಿತಿ ಇಲ್ಲದ' ಎಂಬ ಅವಯವಾರ್ಥವಿಟ್ಟುಕೊಳ್ಳದೆ, ನೇರವಾಗಿ ಪ್ರತೀತವಾಗುವ 'ಬಹಳ' ಎಂಬ ರೂಢ್ಯರ್ಥವನ್ನೆ ಇಟ್ಟುಕೊಳ್ಳಲಾಗಿದೆ. 'ವೈಶ್ವದೇವೇನ ಯಜೇತ' ಎಂಬಲ್ಲಿ 'ವೈಶ್ವದೇವ' ಶಬ್ದಕ್ಕೆ ವೈಶ್ವದೇವ ಮತ್ತಿತರ ಯಾಗಗಳ ಸಮೂಹ ಎಂಬ ಅರ್ಥದಲ್ಲಿ ರೂಢಿಯನ್ನು ಇಟ್ಟುಕೊಳ್ಳದೆ ಲಕ್ಷಣಾವೃತ್ತಿಯನ್ನಿಟ್ಟುಕೊಂಡುದು, ಅಲ್ಲಿ ವೈಶ್ವದೇವ' ಎಂದಾಗ ಆ ಹೆಸರಿನ ಆಮಿಕ್ಷಾಯಾಗವೆಂಬ ಮುಖ್ಯಾರ್ಥವೆ ಮೊದಲಿಗೆ ಹೊಳೆಯುವುದರಿಂದ, ಅನಂತರ ಹೊಳೆಯುವ ಯಾಗ ಸಮೂಹದಲ್ಲಿ ಲಕ್ಷಣಾವೃತ್ತಿ ಸಹಜವಾಗಿರುವುದರಿಂದ ಎನ್ನಬೇಕು. ಪ್ರಕೃತದಲ್ಲಿ 'ಜಿಜ್ಞಾಸೆ' ಎಂದಾಗ 'ಜ್ಞಾನೇಚ್ಛೆ ಎಂಬ ಮುಖ್ಯಾರ್ಥ ಹೊಳೆದ ಬಳಿಕವೆ ವಿಚಾರವೆಂಬ ಅಮುಖ್ಯಾರ್ಥ ಪ್ರತೀತಿ' ಎಂಬುದಿಲ್ಲ ತಾನೆ?

ಅದ್ವೈತಮತದಲ್ಲಿಯೂ ಜಿಜ್ಞಾಸಾಶಬ್ದಕ್ಕೆ ಜ್ಞಾನೇಚ್ಛೆಎಂಬ ಮುಖ್ಯಾರ್ಥವಿಟ್ಟುಕೊಳ್ಳಲಾಗದು. ಏಕೆಂದರೆ ಜ್ಞಾನದಲ್ಲಿ ಇಚ್ಛೆ ಅಸಂಭವ ಎಂದು ಅವರೇ ಹೇಳುತ್ತಾರೆ. ಅಪರೋಕ್ಷಜ್ಞಾನದ ಇಚ್ಛೆ ಎಂಬ ಅರ್ಥದಲ್ಲಿ ರೂಢಿಯನ್ನೇ ಒಪ್ಪಬೇಕಾಗುತ್ತದೆ. ಏಕೆಂದರೆ ಆ ಅರ್ಥವೇ ಮೊದಲಿಗೆ ಹೊಳೆಯುತ್ತದೆ. ಸಾಮಾನ್ಯವಾಗಿ ಜ್ಞಾನೇಚ್ಛೆಯಲ್ಲ ಎಂದು ಅವರು ಹೇಳಬೇಕು. ಹೀಗೆ ಎರಡು ಮತದಲ್ಲಿಯೂ ರೂಢಿ ಅವಶ್ಯಕವೆಂದ ಮೇಲೆ ವಿಚಾರದಲ್ಲಿ ರೂಢಿ. ಅಪರೋಕ್ಷ ಜ್ಞಾನೇಚ್ಛೆಯಲ್ಲಿ ಲಕ್ಷಣಾ ಎಂದಾಗಲಿ.

### ಜಿಜ್ಞಾಸಾಶಬ್ದಾರ್ಥ ರಾಮಾನುಜಮತದಲ್ಲಿ

ರಾಮಾನುಜಮತದಲ್ಲಿ 'ಜಿಜ್ಞಾಸೆ' ಎಂದರೆ ಜ್ಞಾನೇಚ್ಛೆ. ಆದರೆ ವಿಚಾರ ಎಂಬ ಅರ್ಥದಲ್ಲಿ ಲಕ್ಷಣಾ ಮಾಡಬೇಕಾಗಿಲ್ಲ. 'ಸ್ನಾನ ಮಾಡಿ ಭೋಜನ ಮಾಡಬೇಕು' ಎಂಬಲ್ಲಿ ಭೋಜನಪ್ರವೃತ್ತಿ ಸ್ವಾಭಾವಿಕವಾದ್ದರಿಂದ ಅದನ್ನು ವಿಧಿಸುವುದಿಲ್ಲ. ಪೂರ್ವದಲ್ಲಿ ತಪ್ಪದೆ ಸ್ನಾನ ಮಾಡುವುದು ಅವಶ್ಯಕವೆಂದು ವಿಧಿ. ಇಲ್ಲಿ ಭೋಜನ ಮಾಡಬೇಕು ಎಂಬ ಮಾತಿಗೇ ಸ್ನಾನವಿಧಿ ಅರ್ಥವಲ್ಲ. ಅದಕ್ಕೆ ರೂಢಿ ಲಕ್ಷಣೆ ಅರ್ಥಾಪತ್ತಿ ಯಾವುದೂ ಬೇಡ. ಹಾಗೆಯ 'ವಿಚಾರರೂಪವಾದ ಜ್ಞಾನವನ್ನು ಬಯಸಬೇಕು' 'ತದ್ ವಿಜಿಜ್ಞಾಸಸ್ವ' ಎಂದಾಗ ಇಚ್ಛೆ ಸ್ವಾಭಾವಿಕವಾಗಿ ಬರುವಂಥದ್ದಾದರಿಂದ ಅದನ್ನು ವಿಧಿಸುವುದಿಲ್ಲ. ವಿಚಾರ ಮಾಡಬೇಕೆಂದು ವಿಧಿ. ಇದಕ್ಕೆ ರೂಢಿ ಲಕ್ಷಣೆ ಯಾವುದೂ ಬೇಡ. - ಹೀಗೆ

ಹೇಳುತ್ತಾರೆ. ಆದರೆ ವಿಚಾರ ಇಚ್ಛೆಗೆ ಕರ್ಮವಾಗಿದ್ದು ಉದ್ದೇಶ್ಯವೆನಿಸುವುದರಿಂದ ವಿಧೇಯ-ವೆನಿಸಲಾರದು. ಪ್ರಧಾನವು ಗೌಣವಾಗಲಾರದು. 'ವಿಧಿಯು ಇಷ್ಟವಿಷಯದಲ್ಲಿ ಪ್ರೇರಣ ನೀಡುವುದರಿಂದ ಇಷ್ಟವಾದ ವಿಚಾರವೆ ವಿಹಿತವಾಗುತ್ತದೆ' ಎಂದೂ ಹೇಳುವುದು ಸರಿಯಲ್ಲ. ಫಲವು ಇಷ್ಟವಾದ್ದರಿಂದ ಸ್ವಾಭಾವಿಕ ಪ್ರವೃತ್ತಿ ಸಾಧ್ಯವೆಂದು ಅದರಲ್ಲಿ ವಿಧಿ ಇಲ್ಲವೆಂದೆ ಮೀಮಾಂಸಕರ ಸಿದ್ಧಾಂತ. ಯದ್ಯಪಿ ವಿಚಾರ ಇಷ್ಟಸಾಧನವಾದ್ದರಿಂದ ವಿಧೇಯ ಎನಿಸಬಹುದು. ಆದರೂ 'ಪೂರ್ವಾಭಿಮುಖವಾಗಿ ಕುಳಿತು ಭೋಜನ ಮಾಡಬೇಕು' ಎಂಬಲ್ಲಿ ಪೂರ್ವಾಭಿಮುಖವಾಗುವುದು ಭೋಜನ ಕ್ರಿಯೆಯಲ್ಲಿ ಇದ್ದರೆ ಆಗ ಆಯುಷ್ಯಾದಿ ಫಲ ಲಭಿಸುವುದು ಎನ್ನಲು 'ಭೋಜನ' ಶಬ್ದಬೇಕು. ಪೂರ್ವಾಭಿಮುಖತ್ವವು ಭೋಜನಕ್ರಿಯಾದ್ವಾರಾ ಫಲಕಾರಿ. ಪ್ರಕೃತದಲ್ಲಿ ವಿಚಾರವು ಇಚ್ಛೆಯ ಮೂಲಕ ಸಾಧಿಸುವುದು ಏನೂ ಇಲ್ಲ. ವಿಚಾರ ಮಾಡಬೇಕು. ಅದರಿಂದ ಫಲ. ಇಚ್ಛೆ ಮಾಡೆಂದು ಹೇಳಬೇಕಾಗಿಲ್ಲ. ಸನ್‌ಪ್ರತ್ಯಯ ವ್ಯರ್ಥ. ವಸ್ತುತಃ ಜ್ಞಾನೇಚ್ಛೆ ಜಿಜ್ಞಾಸಾ ಶಬ್ದದ ಅರ್ಥ. ವಿಚಾರೇಚ್ಛೆಯಲ್ಲ. ವಿಚಾರದಿಂದ ಜ್ಞಾನ ಉಂಟಾಗುವುದು ಅನುಭವಸಿದ್ಧವಾದ್ದರಿಂದ ಜ್ಞಾನಕ್ಕಾಗಿ ವಿಚಾರವನ್ನು ವಿಧಿಸುವುದೂ ವ್ಯರ್ಥ. 'ಜ್ಞಾನಕ್ಕಾಗಿ ವಿಚಾರ ಮಾಡುವುದು ಲೋಕದಲ್ಲಿ ಸಿದ್ಧವಾಗಿ-ದ್ದರೂ ಕರ್ಮವಿಚಾರಾನಂತರ ಬ್ರಹ್ಮವಿಚಾರ ಎನ್ನುವುದು ಹೊಸತು, ಅದನ್ನು ವಿಧಿಸಬೇಕು' ಎನ್ನುವುದಾದರೆ 'ಕರ್ಮವಿಚಾರಾನಂತರವೇ ವೇದಾಂತಶ್ರವಣ' ಎನ್ನುವುದೂ ಹಾಗೇ ಹೊಸತು. ಅದನ್ನೂ ವಿಧಾನ ಮಾಡಬಹುದು. ಅದನ್ನು ರಾಮಾನುಜೀಯರು ಒಪ್ಪಿಲ್ಲ.

### ಶಕ್ತಿಪಕ್ಷ - ಲಕ್ಷಣಾಪಕ್ಷ

'ಇಚ್ಛೆಯನ್ನು ಮಾಡೆಂದು ವಿಧಿಸಲಾಗದು' ಎನ್ನುವ ಟೀಕಾವಾಕ್ಯವು ಜ್ಞಾನೇಚ್ಛೆ ಎಂಬ ಮುಖ್ಯಾರ್ಥದಲ್ಲಿ ಅನುಪಪತ್ತಿಯನ್ನು ಹೇಳುತ್ತ ವಿಚಾರದಲ್ಲಿ ಲಕ್ಷಣಾವನ್ನೆ ಹೇಳುತ್ತಿದೆ ಎನಿಸಬಹುದು. ಆದರೆ ವಸ್ತುತಃ ಇಚ್ಛಾವಿಧಿ ಕೂಡದಿರುವುದರಿಂದ ಜ್ಞಾನೇಚ್ಛೆ ಜಿಜ್ಞಾಸಾಶಬ್ದದ ಅರ್ಥವಲ್ಲ. ವಿಚಾರದಲ್ಲಿಯೆ ರೂಢಿ ಎಂದು ಅಭಿಪ್ರಾಯ. ನ್ಯಾಯಸುಧೆಯಲ್ಲಿ ವಿಚಾರದಲ್ಲಿ ಲಕ್ಷಣಾ ಎಂದಿರುವುದು ಪರಮತಾನುಸಾರ. ಅಲ್ಲಿಯೆ ಮುಂದೆ 'ಜಿಜ್ಞಾಸಾಶಬ್ದವನ್ನು ಮೀಮಾಂಸಾ ಶಬ್ದದಂತೆ ವಿಚಾರಾರ್ಥದಲ್ಲಿಯೆ ಇಟ್ಟುಕೊಳ್ಳಬೇಕು' ಎಂದಿರುವುದು ಸ್ವಮತಾನುಸಾರ. ಅಥವಾ ಪ್ರಮೇಯದೀಪಿಕೆಯಲ್ಲಿ 'ಮಾ ಕರ್ಮಫಲಹೇತುರ್ಭೂಃ' ಎಂಬ ಗೀತಾಭಾಷ್ಯ ವ್ಯಾಖ್ಯಾನ ಕಾಲದಲ್ಲಿ 'ಜ್ಞಾನೇಚ್ಛೆಯ ಅನಂತರ ಬರುವ ವಿಚಾರದಲ್ಲಿ ಲಕ್ಷಣಾ' ಎಂದಿರುವುದರಿಂದ ಹೀಗೆ ಹೇಳಬೇಕು - ಸುಧೆಯಲ್ಲಿ ಶಕ್ತಿ ಲಕ್ಷಣಾಪಕ್ಷಗಳನ್ನು ಎರಡನ್ನೂ ಹೇಳಿದೆ. ಎರಡರಲ್ಲಿಯೂ ವಿಚಾರ ಎಂಬ ಅರ್ಥವಿದ್ದೇ ಇದೆ. ಅದರಿಂದ ಯಾವ ಪಕ್ಷ ಸರಿ ಎಂಬ ವಿಚಾರ ಬೇಕಾಗಿಲ್ಲ ಎಂಬುದು ಅದರ ಅಭಿಪ್ರಾಯ. ಅದರಿಂದ ಇಲ್ಲಿ ಟೀಕಾವಾಕ್ಯಕ್ಕೂ ಲಕ್ಷಣಾಪಕ್ಷವನ್ನು ಹೇಳುವ ಅಭಿಪ್ರಾಯವೆನ್ನಬಹುದು.

ವಸ್ತುತಃ ಶಕ್ತಿಪಕ್ಷವೇ ಸರಿ. 'ಜಿಜ್ಞಾಸಾ' ಶಬ್ದದಲ್ಲಿ ಇಚ್ಛಾರ್ಥಕ ಸನ್‌ಪ್ರತ್ಯಯ ಸ್ವರ ಸಂಸ್ಕಾರಗಳಿಗಾಗಿ ಇದೆ ಎಂದು ತಿಳಿಯಬೇಕು. ಜಿಜ್ಞಾಸತೇ ಬುಭುತ್ಸತೇ ಎಂದು ಹೇಳುವಾಗ ಅದು ಸಾರ್ಥಕವೇ ಆಗಿದೆ.

'ಲಕ್ಷಣಾಪಕ್ಷದಲ್ಲಿ 'ಜ್ಞಾನೇಚ್ಛೆ ಬರುತ್ತದೆ' ಎಂದು ಸೂತ್ರವು ಹೇಳುತ್ತದೆ. ಜ್ಞಾನದಲ್ಲಿ ಇಚ್ಛೆ ಬರಲು ಜ್ಞಾನಕ್ಕೆ ವಿಷಯ ಪ್ರಯೋಜನಗಳಿರುವುದು ಕಾರಣ. ಅದರಿಂದ ಅರ್ಥಾತ್ ವಿಷಯ ಪ್ರಯೋಜನಗಳಿವೆ ಎಂದಂತಾಗುವುದು' ಎನ್ನುತ್ತಾರೆ. ಇದು ಸರಿಯಲ್ಲ ಪೂರ್ವಪಕ್ಷಿಯು ಜ್ಞಾನೇಚ್ಛೆ ಬರುತ್ತದೆ ಎನ್ನುವುದನ್ನೇ ಒಪ್ಪಿಲ್ಲ ಎಂದು ಹಿಂದೆಯೆ ಹೇಳಿದೆ. 'ಜ್ಞಾನೇಚ್ಛೆ ಉಂಟಾಗುತ್ತದೆ' ಎಂದು ಹೇಳಿದಾಗ ಅರ್ಥಾತ್ ಅದರ ಫಲವಾದ ವಿಚಾರವೂ ಉಂಟಾಗುತ್ತದೆ ಎಂದಂತಾಗುವುದು ಎನ್ನುತ್ತಾರೆ. ಇದೂ ಸರಿಯಲ್ಲ. ಒಂದು ಕಾರಣವಿದ್ದ ಮಾತ್ರಕ್ಕೆ ಕಾರ್ಯವಾಗಬೇಕಿಲ್ಲ. ಎಲ್ಲ ಕಾರಣಗಳಿರಬೇಕು. ಇಚ್ಛೆ ಒಂದೇ ಕಾರಣವಾಗಿದ್ದರೆ ಕಾರ್ಯವು ನಿಯಮೇನ ಆಗಬೇಕಾದೀತು. ಆದರೆ ಫಲೇಚ್ಛೆ ಒಂದರಿಂದಲೆ ಸಾಧನದಲ್ಲಿ ಪ್ರವೃತ್ತಿ ಕಂಡಿಲ್ಲ.

'ಬ್ರಹ್ಮಜ್ಞಾನೇಚ್ಛೆ ಬರುವುದರಿಂದ ವಿಚಾರ ಮಾಡಬೇಕು ಎಂದು ಸೂತ್ರಾರ್ಥ. ಇಲ್ಲಿ ಶಕ್ತಿಯಿಂದ ಜ್ಞಾನೇಚ್ಛೆಯೂ ಲಕ್ಷಣೆಯಿಂದ ವಿಚಾರವೂ ಪ್ರತೀತವಾಗುತ್ತದೆ' ಎಂದು ಕೌಮುದಿಯಲ್ಲಿ ಹೇಳಿದೆ. ಆದರೆ ಏಕಕಾಲದಲ್ಲಿ ಶಕ್ತಿಲಕ್ಷಣಾ ಎಂಬ ಎರಡು ವೃತ್ತಿಗಳನ್ನು ಒಪ್ಪಲಾಗದು. ವಿಷಯ ಪ್ರಯೋಜನ ಸೂಚನೆ ಬೇರೆ ರೀತಿಯಿಂದ ಲಭ್ಯವಿರುವಾಗ ಶಕ್ತಿಯಿಂದ ಜ್ಞಾನೇಚ್ಛೆ ಎಂಬ ಅರ್ಥ ಆವಶ್ಯಕವೂ ಅಲ್ಲ. 'ಭವತಿ' ಎಂದು ಅಧ್ಯಾಹಾರ ಮಾಡಿ ಎರಡು ವಾಕ್ಯಗಳನ್ನು ಮಾಡುವುದೂ ಅನುಚಿತ.

ಬ್ರಹ್ಮಸೂತ್ರದಲ್ಲಿ ವಿಚಾರಾಂಶ

ವೇದವಿಹಿತವೆಲ್ಲವೂ ಧರ್ಮ. ಬ್ರಹ್ಮಜ್ಞಾನವೂ ವೇದವಿಹಿತವೆಂದ ಮೇಲೆ ಧರ್ಮವಿಚಾರದಲ್ಲಿಯೆ ಬ್ರಹ್ಮವಿಚಾರ ಆಗಿಹೋಗಿದೆ. ಹೊಸ ವಿಚಾರಾಂಶ ಇಲ್ಲಿ ಏನಿದೆ? ಅದ್ವೈತಿಗಳು ಹೇಳುತ್ತಾರೆ - ಧರ್ಮವಿಚಾರದಲ್ಲಿ ಕರ್ಮಪರ ವೇದಭಾಗವಿಚಾರ. ಇಲ್ಲಿ ವಾಸ್ತವ ಬ್ರಹ್ಮತತ್ತ್ವವಿಚಾರವು ವಿಶೇಷ ಎಂದು. ಆದರೆ ಅವಾಸ್ತವವಾದ ಸಗುಣ ಬ್ರಹ್ಮನನ್ನೇ ಇಲ್ಲಿ ಎಲ್ಲೆಡೆ ವಿಚಾರಿಸಲಾಗಿದೆ. ಉಪಾಸನಾಪಾದದಲ್ಲಿ ಮೋಕ್ಷಸಾಧನವಾಗದ ಉಪಾಸನಾ ವಿಚಾರವಿದೆ. ನಾಮದಲ್ಲಿ ಬ್ರಹ್ಮತ್ವವನ್ನು ಆರೋಪಿಸುವಂಥ ಅತಾತ್ತ್ವಿಕವಾದ ಉಪಾಸನೆಯನ್ನೂ ಅತಾತ್ತ್ವಿಕವಾದ ಅದರ ಕರ್ತವ್ಯತೆಯನ್ನೂ ಹೇಳುತ್ತದೆ. ಉದ್ಗೀಥೋಪಾಸನೆಯಂಥ ಉಪಾಸನೆಗಳೂ ಮಾನಸಕರ್ಮಗಳೇ ಆಗಿವೆ. ಉದ್ಗೀಥವೂ ಸಾಮಗಾನ ರೂಪವಾದ ಒಂದು ಕರ್ಮವೆ. ಇವಲ್ಲವೂ ಕರ್ಮವಿಚಾರದಲ್ಲಿಯೆ ಬರಬೇಕು. ಇಲ್ಲಿ ಅಲ್ಲ. ಅವೂ ಕೂಡ ನಿರ್ಗುಣೋಪಾಸನೆಗೆ ಸಾಧನಗಳೆನ್ನುವುದಾದರೆ ಯಾಗಾದಿ ಕರ್ಮಗಳೂ ಜ್ಞಾನ ಸಾಧನವಾಗುವುದರಿಂದ ಇಲ್ಲಿಯೆ ಬರಬೇಕಾದೀತು. ಮತ್ತು 'ಯಾಗ' ಎಂದರೆ ಈ ಆಹುತಿ ಈ ದೇವತೆಗೆ ಎಂಬ ಮಾನಸ ಸಂಕಲ್ಪವಾಗಿದ್ದು ಉಪಾಸನೆಯಂತೆಯೆ ಬ್ರಹ್ಮಜ್ಞಾನವೆಂಬ ಮಾನಸ ವ್ಯಾಪಾರ ವಿಚಾರದಲ್ಲಿ ಬರಲು ಯೋಗ್ಯವಾಗಿದೆ.

ನಾವು ಹೇಳುವ ಸಮಾಧಾನ ಹೀಗಿದೆ - ಎಲ್ಲ ವೇದಗಳ ವಿಚಾರವೂ ಬ್ರಹ್ಮಸೂತ್ರದಲ್ಲಿ ಬರಬೇಕು. ಕೇವಲ ಜ್ಞಾನಕಾಂಡ ವಿಚಾರವಲ್ಲ, ಆದರೆ ಮುಖ್ಯ ತಾತ್ಪರ್ಯವಾದ ಭಗವಂತನ ವಿಚಾರ ಇಲ್ಲಿ

ಹೊಸತು. ಅವಾಂತರ ತಾತ್ಪರ್ಯಗೋಚರವಾದ ಕರ್ಮ ದೇವತಾ ವಿಚಾರಗಳು ಮಾತ್ರ ಕರ್ಮಮೀಮಾಂಸಾ ದೈವೀ ಮೀಮಾಂಸಾಗಳಲ್ಲಿ ಆಗಿರುತ್ತವೆ ಎಂದು.

### ಸಾಮಾನ್ಯ ಪರಿಚಯ-ವಿಶೇಷ ವಿವಾದ

ವಿಚಾರವಿಷಯದ ಬಗ್ಗೆ ಮೊದಲಿಗೆ ಸಾಮಾನ್ಯಪರಿಚಯ ಮತ್ತು ವಿಶೇಷ ವಿವಾದಗಳು ಬೇಕು. ಸಾಮಾನ್ಯವಾಗಿ ಏನೂ ಪರಿಚಯವಿಲ್ಲದಿದ್ದರೆ ಅಥವಾ ವಿಶೇಷ ಅಂಶಗಳಲ್ಲಿ ವಿವಾದವಿಲ್ಲದಿದ್ದರೆ ವಿಚಾರವು ಹೊರಡುವುದಿಲ್ಲ. ಬ್ರಹ್ಮವಿಚಾರಕ್ಕೆ ಅವಶ್ಯಕವಾದ ಸಾಮಾನ್ಯ ಪರಿಚಯ ವಿಶೇಷವಿವಾದಗಳ ಬಗ್ಗೆ ಅದ್ವೈತಿಗಳು ಹೇಳುವುದು ಹೀಗೆ - 'ನಾನು' ಎಂದು ಜೀವನ ಬಗ್ಗೆ ಸಾಮಾನ್ಯ ಪರಿಚಯವಿದೆ. ಶರೀರ ಹೊರತಾಗಿ ಬೇರೆ ಜೀವವೆಂಬುದಿಲ್ಲ ಎಂದು ಚಾರ್ವಾಕರು ಹೇಳುತ್ತಾರೆ. ಇಂದ್ರಿಯಗಳ ಜೀವ, ಮನಸ್ಸೆ ಜೀವ, ಬ್ರಹ್ಮನೇ ಜೀವ, ಶೂನ್ಯವೆ ಜೀವ ಎಂದು ಮುಂತಾಗಿ ವಿಶೇಷವಿವಾದಗಳೂ ಇವೆ. ಆದರಿಂದ ಬ್ರಹ್ಮವಿಚಾರ ಉಂಟಾಗುತ್ತದೆ. ಜೀವನ ಸಾಮಾನ್ಯ ಪರಿಚಯ ವಿಶೇಷವಿವಾದಗಳಿಂದ ಬ್ರಹ್ಮನ ವಿಚಾರ ಹೇಗೆ ಎಂದರೆ ಜೀವನೆ ಬ್ರಹ್ಮ ಎನ್ನುತ್ತದೆ ವೇದಾಂತ. ಇದು ಮೂರು ರೀತಿಗಳಿಂದ ಶಕ್ಯವಿದೆ-

(೧) ಬ್ರಹ್ಮನಲ್ಲಿ ಜೀವಾಭೇದ ವಿಚಾರ ನಡೆಯುವುದರಿಂದ ಅದು ಬ್ರಹ್ಮವಿಚಾರ

(೨) ಜೀವನಲ್ಲಿ ಬ್ರಹ್ಮಾಭೇದ ವಿಚಾರ ನಡೆಯುವುದರಿಂದ ಅದು ಬ್ರಹ್ಮವಿಚಾರ

(೩) ಜೀವಬ್ರಹ್ಮರೊಳಗಿರುವ ಕೇವಲ ಚೈತನ್ಯಾಂಶಗಳಿಗೆ ಅಭೇದ ವಿಚಾರ. ಕೇವಲ ಚೈತನ್ಯ ಸ್ವರೂಪನಾದ ಬ್ರಹ್ಮನಲ್ಲಿ ಕೇವಲ ಚೈತನ್ಯಾಭೇದ ವಿಚಾರ ನಡೆಯುವುದರಿಂದ ಅದು ಬ್ರಹ್ಮವಿಚಾರ.

ಇವು ಮೂರು ಅಸಂಗತ. ಮೊದಲಿನ ಪಕ್ಷದಲ್ಲಿ ಜೀವನ ಬಗ್ಗೆ ವಿವಾದ ಬಂದಾಗ ಬ್ರಹ್ಮನ ಬಗ್ಗೆ ವಿಚಾರ ಮಾಡುವುದು, ಬ್ರಹ್ಮನಲ್ಲಿ ಜೀವಾಭೇದವನ್ನು ಹೇಳುವುದು ಕೂಡುವುದಿಲ್ಲ. ಎರಡನೆ ಪಕ್ಷದಲ್ಲಿ ಜೀವನು ಬ್ರಹ್ಮ ಹೌದೆ ಅಲ್ಲವೆ ಎನ್ನುವ ವಿಚಾರ ಜೀವವಿಚಾರವಾಗುವುದೆ ಹೊರತು ಬ್ರಹ್ಮವಿಚಾರವಾಗುವುದಿಲ್ಲ, ಶಬ್ದ ನಿತ್ಯವೆ ಅನಿತ್ಯವೆ ಎಂಬುದು ಶಬ್ದವಿಚಾರವಾಗುವುದೇ ಹೊರತು ನಿತ್ಯತ್ವವಿಚಾರವೂ ಆಗುವುದಿಲ್ಲ, ಅನಿತ್ಯತ್ವ ವಿಚಾರವೂ ಆಗುವುದಿಲ್ಲ. ಜೀವನಲ್ಲಿ ಬ್ರಹ್ಮಾಭೇದವೆನ್ನುವುದು ಅದ್ವೈತವೂ ಅಲ್ಲ. ಜೀವಬ್ರಹ್ಮರಲ್ಲಿರುವ ವಿರುದ್ಧಾಂಶಗಳನ್ನು ಬಿಟ್ಟು ಶುದ್ಧ ಚೈತನ್ಯಾಭೇದ ಹೇಳುವುದೇ ಅದ್ವೈತ. ಜೀವನೆಂಬ ವಿಶಿಷ್ಟ ಪದಾರ್ಥದಲ್ಲಿ ವಿಶೇಷ್ಯವಾಗಿರುವ ಶುದ್ಧಚೈತನ್ಯವನ್ನೇ ಉದ್ದೇಶಿಸಿ ಅಭೇದವನ್ನು ವಿಧಿಸಬೇಕು. ಆದರಿಂದ ಸಾಮಾನ್ಯ ಪರಿಚಯ ವಿವಾದಗಳನ್ನೂ ಶುದ್ಧದಲ್ಲಿಯೆ ತೋರಿಸಬೇಕು. ಈ ದೋಷ ಮೊದಲಿನ ಪಕ್ಷದಲ್ಲಿಯೂ ಇದೆ. ಆ ಪಕ್ಷದಲ್ಲಿಯೂ ಬ್ರಹ್ಮ ಎಂಬ ವಿಶಿಷ್ಟ ಪದಾರ್ಥದಲ್ಲಿ ಜೀವಾಭೇದವನ್ನು ಹೇಳುವುದು ಅದ್ವೈತಕ್ಕೆ ಸಮ್ಮತವಲ್ಲ. ಎರಡನೆ ಪಕ್ಷದಲ್ಲಿ ಜೀವವಿಚಾರವಾದ್ದರಿಂದ ಜೀವನಲ್ಲಿ ದೇಹರೂಪತ್ವ ಮುಂತಾದ ತಪ್ಪು ಕಲ್ಪನೆಗಳನ್ನು ಕಳೆಯಲು ಬ್ರಹ್ಮಾಭೇದವನ್ನು ಜನ್ಮಾಧಿಕರಣದಲ್ಲಿ ಹೇಳಬೇಕು. ಜಗಜ್ಜನ್ಮಾದಿ ಕಾರಣತ್ವರೂಪವಾದ ಬ್ರಹ್ಮಲಕ್ಷಣವನ್ನು ಹೇಳುವುದು ಅಸಂಗತ. "ಜೀವನು ಬ್ರಹ್ಮನೆ ಆಗಿರುವುದರಿಂದ

ಬ್ರಹ್ಮಲಕ್ಷಣವೆ ಜೀವಲಕ್ಷಣವೂ ಆಗಬಹುದು' ಎನ್ನುವುದು ಅಯುಕ್ತ. ಮನುಷ್ಯನನ್ನು ಮೋಟು ಮರವೆಂಧು ಭ್ರಮಿಸಿದಾಗ ಈತ ಮನುಷ್ಯನೆನ್ನಬೇಕು ಹೊರತು, ಮನುಷ್ಯನ ಲಕ್ಷಣಗಳು ಹೀಗೆ ಎಂದು ಹೇಳುವುದಲ್ಲ. ಜನ್ಮಾದಿಗಳು ಜೀವನ ಅಸಾಧಾರಣ ಲಕ್ಷಣಗಳೆಂದು ಮೊದಲಿಗೆ ಸಿದ್ಧವೂ ಆಗಿಲ್ಲ. ಅದು ಅದ್ವೈತ ಸಿದ್ಧಾಂತವೂ ಅಲ್ಲ. ಮುಂದೆ 'ಶಾರೀರಶ್ಚೋಭಯೇಽಪಿ ಹಿ ಭೇದೇನ್ಯನ-ಮಧೀಯತೇ' 'ಪ್ರಾಣಭೃಚ್ಚ' ಇತ್ಯಾದಿ ಸೂತ್ರಗಳಲ್ಲಿ ಜನ್ಮಾದಿ ಸೂತ್ರೋಕ್ತ ಬ್ರಹ್ಮಲಕ್ಷಣ ಜೀವನಲ್ಲಿ ಅಸಂಭವಿ ಎಂದೇ ಹೇಳಿದೆ. ಮೂರನೆ ಪಕ್ಷದಲ್ಲಿ ಶುದ್ಧಚೈತನ್ಯದ ಬಗ್ಗೆ ವಿವಾದ, ವಿಶಿಷ್ಟಬ್ರಹ್ಮನ ಬಗ್ಗೆ ವಿಚಾರ ಎನ್ನುವುದು ಕೂಡುವುದಿಲ್ಲ. ವಿಶಿಷ್ಟಬ್ರಹ್ಮ ಮಿಥ್ಯವಾದ್ದರಿಂದ ಮೋಕ್ಷಾರ್ಥಿ ಅವನ ಬಗ್ಗೆ ವಿಚಾರ ಮಾಡುವುದೂ ಅಯುಕ್ತ. ಶುದ್ಧ ಚೈತನ್ಯದ ಬಗ್ಗೆ ವಿವಾದವೂ ಇಲ್ಲ ಶಾಂಕರಭಾಷ್ಯದಲ್ಲಿ ಜೀವನ ಬಗ್ಗೆ ಮತ್ತು ವಿಶಿಷ್ಟ ಬ್ರಹ್ಮನ ಬಗ್ಗೆ ವಿವಾದಗಳನ್ನೇ ಹೇಳಿದೆ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಬ್ರಹ್ಮನೆಂದರೆ ವಿಶಿಷ್ಟ ಬ್ರಹ್ಮ, ಪರಮಾತ್ಮ ಎಂದೂ ಹೇಳುತ್ತಾರೆ. ಆದರೆ ಪರಮಾತ್ಮ ಅದ್ವೈತದಲ್ಲಿ ಮಿಥ್ಯ. ಸತ್ಯವಾದ ಶುದ್ಧ ಚೈತನ್ಯವೆ ಬ್ರಹ್ಮ. ಮಿಥ್ಯವಾದುದು ಯಾವುದೂ ಬ್ರಹ್ಮ ಅಲ್ಲ. 'ಅಸ್ತಿ ತಾವದ್ ಬ್ರಹ್ಮ ನಿತ್ಯಶುದ್ಧ' ಎಂದು ಮುಂತಾಗಿ ಶಾಂಕರಭಾಷ್ಯದ ಭಾಮತಿಯಲ್ಲಿ ಪರಮಾತ್ಮನ ಬಗ್ಗೆ ಸಾಮಾನ್ಯ ಪರಿಚಯವನ್ನೂ 'ಅಸ್ತಿ ತದ್ವ್ಯತಿರಿಕ್ತ' ಎಂಬ ಭಾಷ್ಯದ ಭಾಮತಿಯಲ್ಲಿ ಪರಮಾತ್ಮನ ಬಗ್ಗೆ ವಿವಾದವನ್ನೂ ಹೇಳಿದ್ದರಿಂದ ಪರಮಾತ್ಮನ ಬಗ್ಗೆಯ ವಿಚಾರ ಎಂದು ಅದ್ವೈತಿಗಳು ಹೇಳಿದರೆ ಅದೂ ಸರಿಯಲ್ಲ. ಶಾಂಕರಭಾಷ್ಯದಲ್ಲಿ ಜೀವನ ಬಗ್ಗೆ ದೇಹರೂಪತ್ವಾದಿ ವಿವಾದವನ್ನು ಹೇಳಿದ್ದು ಕೂಡಲಾರದು. ಅದು ಪರಮಾತ್ಮನ ಬಗ್ಗೆ ವಿವಾದ ಸೂಚನೆಗಾಗಿ ಎನ್ನುವುದಾದರೆ ಜೀವಪರಮಾತ್ಮರೊಳಗೆ ಭೇದಾಭೇದ ವಿವಾದ ಪರಿಹಾರಕ್ಕೆ ಜನ್ಮಾಧಿಕರಣದಲ್ಲಿ ಅಭೇದವನ್ನು ಹೇಳಬೇಕಾಗಿತ್ತು. ಅಲ್ಲಿ ಭೇದಸಾಧಕವಾದ ಜನ್ಮಾದಿಕರ್ತೃತ್ವರೂಪ ಲಕ್ಷಣವನ್ನೇ ಹೇಳಿದೆ.

ಬ್ರಹ್ಮನ ಬಗ್ಗೆ ಸಾಮಾನ್ಯಪರಿಚಯವಿದೆ ಎನ್ನುತ್ತಾರೆ. ಇಲ್ಲಿ ಬ್ರಹ್ಮ ವಿಶಿಷ್ಟವೆಂಬ ಅಭಿಪ್ರಾಯವೆಂದರೆ ವಿಶಿಷ್ಟವು ಮಿಥ್ಯಾ. ಅದರ ವಿಚಾರ ಅನಾವಶ್ಯಕ. ಅದರಲ್ಲಿ ಜೀವಾಭೇದವೂ ಇಲ್ಲ. ಶಾಂಕರಭಾಷ್ಯದಲ್ಲಿ 'ನಿತ್ಯಶುದ್ಧಬುದ್ಧಮುಕ್ತಸ್ವಭಾವಂ' ಎಂದು ಶುದ್ಧದ ಪರಿಚಯವನ್ನೇ ಹೇಳಿದೆ. ಬ್ರಹ್ಮ ಶುದ್ಧವೆಂಬ ಅಭಿಪ್ರಾಯದಲ್ಲಿ ಶುದ್ಧದ ಬಗ್ಗೆ ವಿವಾದವಿಲ್ಲದಿರುವುದು, ವಿಶಿಷ್ಟದ ಬಗ್ಗೆಯ ವಿವಾದಗಳನ್ನು ಭಾಷ್ಯದಲ್ಲಿ ತೋರಿಸಿದುದು, 'ಸರ್ವಜ್ಞಂ ಸರ್ವಶಕ್ತಿಸಮನ್ವಿತಂ' ಎಂದು ವಿಶಿಷ್ಟದ ಬಗ್ಗೆ ಸಾಮಾನ್ಯ ಪರಿಚಯ ನೀಡಿದುದು, ಶುದ್ಧ ಅವೇದ್ಯವಾದ್ದರಿಂದ ಶಬ್ದದಿಂದ ಹೇಳಲಾಗದುದು ಎಂದು ಅನೇಕ ದೋಷಗಳಿವೆ.

ಶುದ್ಧಚೈತನ್ಯದ ಬಗ್ಗೆ ಸಾಮಾನ್ಯಜ್ಞಾನ ವಿಶೇಷಜ್ಞಾನಗಳಿಲ್ಲದಿರುವುದರಿಂದಲೂ ಅದರ ಬಗ್ಗೆ ವಿಚಾರ ಕೂಡಲಾರದು. ಏಕೆಂದರೆ ಶುದ್ಧನಲ್ಲಿ ಸಾಮಾನ್ಯ, ವಿಶೇಷ ಧರ್ಮಗಳೇ ಇಲ್ಲ.

ಅದರಿಂದ ಹೀಗೆ ಹೇಳಬೇಕು - 'ಗುಣಪೂರ್ಣನಾದ ಪರಮಾತ್ಮನ ಬಗ್ಗೆ ಉಪನಿಷತ್ತುಗಳಿಂದ ಸಾಮಾನ್ಯ ಪರಿಚಯ ಉಂಟಾಗಿರುತ್ತದೆ. ಮತ್ತು ಪರಮಾತ್ಮ ಸಗುಣನೆ ನಿರ್ಗುಣನೆ ಅಲ್ಪಗುಣನೆ ಎಂದು ಮುಂತಾಗಿ ವಿವಾದಗಳಿರುವುದರಿಂದ ಅವನ ಬಗ್ಗೆಯ ವಿಚಾರ' ಎಂದು.

**ಟೀಕೆಯಲ್ಲಿ ಉಳಿದ ವಾಕ್ಯಗಳ ಅರ್ಥ**

'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿ 'ಅನ್ಯತಸ್ಯ' ಎಂದರೆ ಋತನಾಮಕನಾದ ವಿಷ್ಣುವಿಗಿಂತ ಬೇರೆಯಾದ ಎಂದರ್ಥ. ಅಂಭೃಣೀಸೂಕ್ತದಲ್ಲಿ ಅದರ ದೇವತೆಯಾದ ಲಕ್ಷ್ಮೀಸ್ವರೂಪಳಾದ ಅಂಭೃಣೀದೇವಿ ಬ್ರಹ್ಮಾದಿಗಳೆಲ್ಲ ತನ್ನ ಅಧೀನರೆನ್ನುತ್ತಿದ್ದಾಳೆ. ಹರಿವಂಶದಲ್ಲಿ ಮೂರು ಪರ್ವಗಳಿರುವುದರಿಂದ ಮೂರು ಹರಿವಂಶಗಳೆಂದು ವ್ಯವಹಾರ. ಇಲ್ಲದ್ದನ್ನು ತೋರುವುದು ನಟನ, ಇಲ್ಲದ್ದನ್ನು ಹೇಳುವುದು ವಂಚನ, ಎಲ್ಲೂ ಇಲ್ಲದ ಲಿಂಗಮೂಲಾನ್ವೇಷಣ ಮುಂತಾದುದು ಅತಥ್ಯ. ಬೇರೆಯವರಲ್ಲಿರುವುದನ್ನು ತನ್ನಲ್ಲಿ ಹೇಳಿಕೊಂಡರೆ ಅದು ಮಿಥ್ಯ.

ಇಲ್ಲಿಗೆ ಜಿಜ್ಞಾಸಾಧಿಕರಣಸಾರವು ಮುಗಿಯಿತು

* * * * *

# ವಿಷಯಾನುಕ್ರಮಣಿಕೆ



---

## ಭಾಗ -1

### ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ, ಸತ್ತರ್ಕದೀಪಾವಳಿ, ತತ್ತ್ವಪ್ರಕಾಶಿಕಾ, ಭಾವದೀಪ, ವಾಕ್ಯಾರ್ಥಮಂಜರೀ

ಜಿಜ್ಞಾಸಾಧಿಕರಣ

# ಭಾಗ - 2

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,

ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ವಿವರಣ,ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

---

## ಭಾಗ -3



* * * *

# ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಲೀ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

||ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ||

## ಅನುವಾದಕರ ಮಂಗಳಾಚರಣೆ

ಭಾಮಿನಿಷಟ್ಪದಿ --

ಹರಿಗುಣಾಮೃತಸಾರ ಗುರುಗಳ ।
ಕರುಣದಿಂದಾಪನಿತು ಬರೆಯುವೆ ।
ಪರಮಭಗವದ್ಭಕ್ತರಿದನಾದರದಿ ಓದುವುದು ॥

ಬ್ರಹ್ಮವಾಯ್ವಮರೇಂದ್ರವರ್ಗಕೆ ।
ಸರ್ವಶಾಸ್ತ್ರಸುಧಾಬ್ಧಿಯುಣಿಸಿದ ।
ಶ್ರೀರಮಾ ಹಯವದನದೇವನೆ ನಮಿಪೆ ಅನುದಿನವು ।
ಶರ್ವಪೂರ್ವಸುಪರ್ವವರ್ಯರ
ಯಜ್ಞವಿಘ್ನಧ್ವಂಸಶೀಲನೆ
ಶ್ರೀರಮಾನರಸಿಂಹದೇವನೆ ಸಲಹು ಪ್ರತಿಪದವು ॥೧॥

ಸೂತ್ರನಾಮಕಪ್ರಾಣದೇವಗೆ
ಬ್ರಹ್ಮಸೂತ್ರಾದ್ಯಖಿಲಶಾಸ್ತ್ರದ
ಳನ್ನು ತಿಳಿಸಿದ ವ್ಯಾಸಗುರುಗಳೆ! ನ್ನನುದ್ಧರಿಸಿ ।
ಬಾದರಾಯಣಪೂರ್ಣಸಮ್ಮತ
ಸನ್ನತೈಕವ್ರತಪ್ರವರ್ತಕ
ಮಧ್ವಮುನಿಗಳೆ ತಿದ್ದಿ ಬುದ್ಧಿಯನೆಲ್ಲ ಕಾಲದಲಿ ॥೨॥

ಪ್ರಾಣಗಳ ವರಪ್ರಾಣಭೂತನ
ಪ್ರಾಣದೇವನ ಪ್ರಾಣವಲ್ಲಭೆ
ವೇದವಾಙ್ಮಯಭಿಮಾನಿ ವೀಣಾಪಾಣಿ! ಮಾಂ ಪಾಹಿ ।
ವೀಶಶೇಷಮಹೇಶಗಣಪತಿ
ತತ್ವಮಾನ್ಯಮರೇಂದ್ರವರ್ಯರೆ
ತಾರತಮ್ಯಜ್ಞಾನಪೂರ್ವಕ ನನ್ನ ಮುನ್ನಡೆಸಿ ॥೩॥

ಮಧ್ವಶಾಸ್ತ್ರಾಂಬುಧಿಮಂಥನ
ಶೀಲಜಯತೀರ್ಥಾರ್ಯಸೂರ್ಯರೆ!
ಜ್ಞಾನದೀಕ್ಷೆಯ ಭಿಕ್ಷೆ ಬೇಡುವೆ ನೀಡಿ ಅನುದಿನವು ।

ಸರ್ವದುರ್ಮತತಿಮಿರನಾಶಕ
ವ್ಯಾಸರಾಜಜ್ಞಾನಚಂದ್ರರೆ!
ಮನದ ಕತ್ತಲೆಯನ್ನು ಕಳೆಯಿರಿ ಎಲ್ಲ ಕಾಲದಲಿ ॥೪॥

ಸರ್ವಮೂಲಸುತತ್ವದೀಪಕ-
ರಾಘವೇಂದ್ರಸುಕಲ್ಪವೃಕ್ಷರೆ!
ತತ್ವಚಂದ್ರಿಕೆಯಲ್ಲಿ ಕೈಪಿಡಿದೆನ್ನ ಮುನ್ನಡೆಸಿ ।
ಮಂದಸುಜನಾನಂದಕಾರಕ-
ಮಾಧ್ವಟಿಪ್ಪಣಿಕಾರಕೋವಿದ
ಗುರುಪರಂಪರೆಯನ್ನು ನಮಿಸುವೆ ಭಕ್ತಿಭರದಿಂದ ॥೫॥

ಮಧ್ವಮುನಿಕಮಲವಿಕಲಿತ-
ತತ್ವಮಧುಪಾನೈಕಲೋಲುಪ
ಯೋಗಿ ವಿದ್ಯಾಮಾನ್ಯಗುರುವರಚರಣಕೆರೆಗುವೆನು ।
ವಿಶ್ವತೋಮುಖವಿಶ್ವಕರುಣಾ-
ಕಾರ್ಯಪೂರಣನಿಪುಣ
ಗುರುವಿಶ್ವೇಶಚರಣರ ಸ್ಮರಣೆಮಾಡುವೆನೆಲ್ಲ ಕಾಲದಲಿ ॥೬॥

ಪೂಜ್ಯವಿದ್ಯಾಮಾನ್ಯಮುನಿ
ವಿಶ್ವೇಶತೀರ್ಥರ ಚರಣಸೇವಕ
ಬೆಮ್ಮತ್ತಿಗ್ರಾಮದ ವೇಂಕಟೇಶನು ಬ್ರಹ್ಮಸೂತ್ರಗಳ ।
ಭಾಷ್ಯಟೀಕಾಗ್ರಂಥಟಿಪ್ಪಣಿ
ಭಾವಗಳ ಅನುವಾದಕೃತಿ ಪರಿ-
ಪೂರ್ಣಚಂದ್ರಿಕೆಯೆಂಬ ನಾಮದಿ ಪ್ರಕಟಪಡಿಸುವೆನು ॥೭॥

ಹರಿಗುಣಾಮೃತಸಾರ ಗುರುಗಳ ।
ಕರುಣದಿಂದಾಪನಿತು ಬರೆಯುವೆ ।
ಪರಮಭಗವದ್ಭಕ್ತರಿದನಾದರದಿ ಓದುವುದು ॥

* * * *

॥ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್॥

ಶ್ರೀವೇದವ್ಯಾಸಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ

ಶ್ರೀಗುರುಭ್ಯೋ ನಮಃ

ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ಜಿಜ್ಞಾಸಾಧಿಕರಣ

**ॐ॥ अथातो ब्रह्मजिज्ञासा ॥ ॐ (१/१/१)**

ಅನುವಾದ - ವೇದಾಧ್ಯಯನವನ್ನು ಪೂರೈಸಿ ಜಗತ್ತಿನ ವಿಷಯದಲ್ಲಿ ವಿರಕ್ತನಾಗಿ ಗುಣಪರಿಪೂರ್ಣನಾದ ವಿಷ್ಣುವಿನ ವಿಚಾರದಲ್ಲಿ ತೊಡಗಬೇಕು. ಇದರಿಂದ ಮೋಕ್ಷವೆಂಬ ಮಹಾಫಲವು ದೊರೆಯುತ್ತದೆ.

ಇಲ್ಲಿಗೆ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ
ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು

* * * * *

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

कृष्णं रामं नारसिंहं व्यासं नत्वा गुरूनपि ।
जगन्नाथाख्ययतिना क्रियते सूत्रदीपिका ॥

ರಾಮ, ಕೃಷ್ಣ, ವೇದವ್ಯಾಸದೇವರನ್ನು, ನರಸಿಂಹದೇವರನ್ನು ಮತ್ತು ಗುರುಗಳನ್ನು ನಮಸ್ಕರಿಸಿ, ಜಗನ್ನಾಥ ಎಂಬ ಯತಿಯಿಂದ ಸೂತ್ರದೀಪಿಕಾ ಎಂಬ ಗ್ರಂಥವು ರಚಿಸಲ್ಪಡುತ್ತಿದೆ.

॥ॐ अथातो ब्रह्मजिज्ञासा ॐ ॥ अथ = अध्ययनशमदमादिरूपाधिकारसम्पत्त्यनन्तरम्, अतः = मोक्षाख्यप्रयोजनस्य सत्वात्, विष्णोः प्रसादाद्वा । ॐ = गुणपूर्णस्य, ब्रह्मजिज्ञासा = ब्रह्मणः विष्णोः जिज्ञासा श्रवणादिरूपा कर्तव्येत्यर्थः ।

ಅಥ = ವೇದಾಧ್ಯಯನ, ವೈರಾಗ್ಯ, ವಿಷ್ಣ್ವೇಕನಿಷ್ಠತ್ವ ಮೊದಲಾದ ಅಧಿಕಾರವನ್ನು ಹೊಂದಿದ ಅನಂತರ, ಅತಃ = ಮೋಕ್ಷವೆಂಬ ಪ್ರಯೋಜನವಿರುವುದರಿಂದ, ಅಥವಾ ವಿಷ್ಣುವಿನ ಪ್ರಸಾದದಿಂದ, ಓಂ = ಗುಣಪೂರ್ಣನಾದ, ಬ್ರಹ್ಮಜಿಜ್ಞಾಸಾ = ವಿಷ್ಣುವಿನ ಶ್ರವಣಮನನನಿದಿಧ್ಯಾಸನರೂಪವಾದ ವಿಚಾರವನ್ನು, ಕರ್ತವ್ಯಾ = ಮಾಡತಕ್ಕದ್ದು.

ಸೂತ್ರದೀಪಿಕೆಯಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು

* * * * *

ಜಗದ್ಗುರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಮಂಗಳಾಚರಣೆ

### ನಾರಾಯಣನಿಗೆ ನಮಸ್ಕಾರ

**नारायणं गुणैः सर्वैरुदीर्णं दोषवर्जितम् ।**
**ज्ञेयं गम्यं गुरूंश्चापि नत्वा सूत्रार्थ उच्यते ॥**

ನಾರಾಯಣನು ಸಕಲಗುಣಪರಿಪೂರ್ಣನಾಗಿದ್ದಾನೆ. ಸಕಲದೋಷಗಳಿಂದ ವಿದೂರನಾಗಿದ್ದಾನೆ. ಸಜ್ಜನರಿಂದ ತಿಳಿಯಲು ಅರ್ಹನು ಮತ್ತು ಹೊಂದಲು ಯೋಗ್ಯನೂ ಆಗಿದ್ದಾನೆ. ಇಂತಹ ಲಕ್ಷ್ಮೀಪತಿಯನ್ನು ಭಕ್ತಿಯಿಂದ ನಮಸ್ಕಾರ ಮಾಡಿ, ಮತ್ತು ಗುರುಗಳಾದ ವೇದವ್ಯಾಸದೇವರನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳಿಗೆ ಅರ್ಥವನ್ನು ಹೇಳುತ್ತೇನೆ.

ಪ್ರತಿಪದಾರ್ಥ - ಸರ್ವೈಃ = ಸಕಲವಿಧವಾದ, ಗುಣೈಃ = ಕಲ್ಯಾಣಗುಣಗಳಿಂದ, ಉದೀರ್ಣಂ = ಪೂರ್ಣನಾದ (ಉತ್ಕೃಷ್ಟನಾದ), ದೋಷವರ್ಜಿತಮ್ = ಸಕಲದೋಷಗಳಿಂದ ವಿದೂರನಾದ, ಜ್ಞೇಯಂ = ಸಜ್ಜನರ ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನಗಳಿಗೆ ವಿಷಯನಾದ, ಗಮ್ಯಂ = ಜ್ಞಾನಿಗಳಿಂದ ಹೊಂದಲು ಯೋಗ್ಯನಾದ, ನಾರಾಯಣಂ = ಲಕ್ಷ್ಮೀಪತಿಯಾದ ನಾರಾಯಣನನ್ನು, ನತ್ವಾ = ನಮಸ್ಕಾರಮಾಡಿ, ಅಪಿ = ಮತ್ತು (ಅಪಿ ಪದವು ಗುರುದೇವತೆಗಳ ಭೇದದಲ್ಲಿ ಅರುಚಿಯನ್ನು ತೋರಿಸುತ್ತಿದೆ), ಗುರೂಂಶ್ಚ = ಗುರುಗಳಾದ ವೇದವ್ಯಾಸದೇವರನ್ನೂ ಕೂಡ, ನತ್ವಾ = ನಮಸ್ಕಾರ ಮಾಡಿ, ಸೂತ್ರಾರ್ಥಃ = ಬ್ರಹ್ಮಸೂತ್ರಾರ್ಥವು (ಸಮಸ್ತವೇದಇತಿಹಾಸಪುರಾಣ ಮೊದಲಾದ ಸಕಲಶಬ್ದರಾಶಿಗಳಿಂದ ಪ್ರತಿಪಾದ್ಯನಾದ ನಾರಾಯಣನೆಂಬ ಬ್ರಹ್ಮಸೂತ್ರಾರ್ಥವು), (ಮಯಾ = ನನ್ನಿಂದ), ಉಚ್ಯತೇ = ಹೇಳಲ್ಪಡುತ್ತದೆ[1].

---

(೧) ಶ್ರೀಜಗನ್ನಾಥಯತಿಗಳಿಂದ ವಿರಚಿತವಾದ ಭಾಷ್ಯದೀಪಿಕಾ

(ಭಾಷ್ಯದ ಪ್ರತಿಪದಾರ್ಥವನ್ನು ಭಾಷ್ಯದೀಪಿಕೆಗೆ ಅನುಗುಣವಾಗಿ ಬರೆಯಲಾಗಿದೆ. ಭಾಷ್ಯದೀಪಿಕೆಯಲ್ಲಿನ ಹೆಚ್ಚಿನ ವಿಚಾರಗಳು ತತ್ತ್ವಪ್ರಕಾಶಿಕೆ ಹಾಗೂ ಭಾವದೀಪಗಳಲ್ಲಿರುವುದರಿಂದ ಪ್ರತ್ಯೇಕವಾಗಿ ಅನುವಾದಿಸಿಲ್ಲ. ಆದ್ದರಿಂದ ಭಾಷ್ಯದೀಪಿಕೆಯನ್ನು ಎಲ್ಲೆಡೆ ಅಡಿಟಿಪ್ಪಣಿಯನ್ನಾಗಿ ಸೇರಿಸಲಾಗಿದೆ.)

॥ ॐ ॥ जिज्ञास्यं जन्मरक्षालयनियतिमतिप्रत्यगज्ञानबन्ध-
श्रेयोदं शास्त्रगम्यं श्रुतिगतवचनैर्मुख्यवृत्त्याऽभिधेयम् ।
भैष्मीसत्यासमेतं बहुगुणवपुषं भीतिपूर्वारदूरं
भक्तिश्रुत्यादिचिन्त्यं भजनपरगतिं भावये वेणुकृष्णम् ॥ १ ॥

*ಪಂಪೂರ್ಣಚಂದ್ರಿಕಾ*

ಜಿಜ್ಞಾಸ್ಯನಾದ, ಜಗತ್ತಿನ ಜನ್ಮ ರಕ್ಷಣೆ ಸಂಹಾರ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷ ಇವುಗಳನ್ನು ದಯಪಾಲಿಸುವ, ಶಾಸ್ತ್ರಗಳಿಂದಷ್ಟೇ ನಿಲುಕುವ, ಶ್ರುತಿಗಳಲ್ಲಿರುವ ಎಲ್ಲಾ ಪದಗಳಿಂದಲೂ ಪರಮಮುಖ್ಯವೃತ್ತಿಯಿಂದ ವಾಚ್ಯನಾದ, ರುಕ್ಮಿಣೀಸತ್ಯಭಾಮಾಸಮೇತನಾದ, ಅನಂತಗುಣಗಳನ್ನೇ ಶರೀರವನ್ನಾಗಿ ಹೊಂದಿರುವ, ಭಯ ಮೊದಲಾದ ದೋಷಗಳಿಂದ ವಿದೂರನಾದ, ಭಕ್ತಿಯಿಂದ ನಡೆಸುವ ಶ್ರವಣಾದಿಗಳಿಂದ ಚಿಂತಿಸಲು ಯೋಗ್ಯನಾದ, ಭಜನೆಯಲ್ಲಿ ತತ್ಪರರಾದವರಿಗೆ ಮುಖ್ಯಾಶ್ರಯನಾದ ವೇಣುಗೋಪಾಲಕೃಷ್ಣನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತೇನೆ.

**आम्रस्तम्भात् समागत्य ताम्रतुण्डान् निहत्य यः ।**
**नम्रं नौमि जगन्नाथं कम्रोपात्तं नृकेसरी ।। २ ।।**

ಮಾವಿನ ಮರದ ಕಂಭದಿಂದ ಹೊರಬಂದು, ಕೆಂಪುಮೂತಿಯ ಮನುಷ್ಯರನ್ನು ಕೊಂದು, ಜಗನ್ನಾಥನೆಂಬ ಯತಿಯನ್ನು ಯಾವ ಸುಂದರನಾದ ನರಸಿಂಹದೇವರು ರಕ್ಷಿಸಿದರೋ, ಅಂತಹವರನ್ನು ವಿನಯದಿಂದ ನಮಸ್ಕರಿಸುತ್ತೇನೆ.

**अनधीत्य महाभाष्यं यस्य व्याकृष्यनुग्रहात् ।**
**तमुपासे नृसिंहार्कं प्रत्यूहतिमिरापहम् ।। ३ ।।**

ಮಹಾಭಾಷ್ಯವನ್ನು ಓದದಿದ್ದರೂ ಯಾರ ಅನುಗ್ರಹದಿಂದ ವ್ಯಾಖ್ಯಾನಮಾಡಲು ಹೊರಟಿರುವೆನೋ, ಅಂತಹ ವಿಘ್ನಗಳೆಂಬ ಕತ್ತಲನ್ನು ಪರಿಹರಿಸುವ ನರಸಿಂಹರೆಂಬ ಸೂರ್ಯರನ್ನು ಧ್ಯಾನಮಾಡುತ್ತೇನೆ.

**पूर्णबोधगुरून् वन्दे जयार्यान् व्यासदेशिकान् ।**
**रामचन्द्रगुरूनार्यान् लक्ष्मीकान्तगुरूनपि ।। ४ ।।**

ಪೂರ್ಣಪ್ರಜ್ಞರೆಂಬ ಗುರುಗಳನ್ನು, ಶ್ರೀಜಯತೀರ್ಥರನ್ನು, ಶ್ರೀವ್ಯಾಸತೀರ್ಥರನ್ನು, ಶ್ರೀರಾಮಚಂದ್ರ-ಗುರುಗಳನ್ನು, ಪೂಜ್ಯರಾದ ಲಕ್ಷ್ಮೀಕಾಂತತೀರ್ಥರನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

**येनायं निरणायि मध्वगुरुसद्भाष्यप्रकाशाशयः**
**प्राखण्डि प्रतिवादिदर्शनगणः प्राबन्धि गुर्वर्णवः ।**
**शिष्येभ्यः समदायि वित्तमुभयं प्रालम्भि विद्यासनं**
**सोऽयं श्रीरघुनाथतीर्थगुरुराट् शुद्धिं विदध्यान्मतेः ।। ५ ।।**

ಗುರುಗಳಾದ ಶ್ರೀಮದಾಚಾರ್ಯರ ಭಾಷ್ಯಕ್ಕೆ ಟೀಕಾರಾಯರು ತತ್ತ್ವಪ್ರಕಾಶಿಕೆಯನ್ನು ಬರೆದಿದ್ದಾರೆ. ಆ ತತ್ತ್ವಪ್ರಕಾಶಿಕೆಯ ಅಭಿಪ್ರಾಯವು ಯಾರಿಂದ ನಿರ್ಣಯಿಸಲ್ಪಟ್ಟಿತೋ, ಪ್ರತಿವಾದಿಗಳ ಸಿದ್ಧಾಂತಸಮೂಹಗಳು ನಿರಾಕರಿಸಲ್ಪಟ್ಟವೋ, ಭಕ್ತಿಯಿಂದ ಗುರುಗಳೆಂಬ ಸಮುದ್ರವು ಬಂಧಿಸಲ್ಪಟ್ಟಿತೋ, ಶಿಷ್ಯರಿಗೆ ಲೌಕಿಕ ಹಾಗೂ ಅಲೌಕಿಕವಾದ ಧನವು ನೀಡಲ್ಪಟ್ಟಿತೋ, ಶ್ರೀಮದಾಚಾರ್ಯರ ವಿದ್ಯಾಸಿಂಹಾಸನವು ಹೊಂದಲ್ಪಟ್ಟಿತೋ ಅಂತಹ ಗುರುಶ್ರೇಷ್ಠರಾದ ರಘುನಾಥತೀರ್ಥರು(ಶೇಷತಾತ್ಪರ್ಯಚಂದ್ರಿಕಾಚಾರ್ಯರು) ನನ್ನ ಬುದ್ಧಿಯನ್ನು ಪವಿತ್ರಗೊಳಿಸಲಿ.

**जयार्यरचितां टीकामनुसृत्य यथामति ।**
**जगन्नाथाख्ययतिना क्रियते भाष्यदीपिका ।। ६ ।।**

*ಜಿಜ್ಞಾಸಾಧಿಕರಣ*

ಶ್ರೀಪದ್ಮನಾಭತೀರ್ಥಶ್ರೀಪಾದರಿಂದ ವಿರಚಿತವಾದ
ಸತ್ತರ್ಕದೀಪಾವಲೀ

निर्दोषं गुणपूर्णं च ज्ञेयं गम्यं रमापतिम् ।
श्रीमदानन्दतीर्थाख्यं वन्दे सर्वविदं गुरुम् ॥

ಸಕಲಗುಣಪರಿಪೂರ್ಣನಾದ ದೋಷವಿದೂರನಾದ, ಜ್ಞೇಯನೂ ಗಮ್ಯನೂ ಆದ, ಲಕ್ಷ್ಮೀಪತಿಯನ್ನು ಮತ್ತು ಸರ್ವಜ್ಞರಾದ, ಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದರನ್ನು ನಮಸ್ಕರಿಸುತ್ತೇನೆ.

प्रसन्नमपि गूढार्थं भाष्यं तत्सुमनोहरम् ।
व्याख्यास्ये लेशतो भक्त्या गुरुदेवप्रसादतः ॥

ಮೇಲ್ನೋಟಕ್ಕೆ ಅರ್ಥವಾಗುವಂತಿದ್ದರೂ ಗೂಢಾರ್ಥದಿಂದ ತುಂಬಿರುವ, ಅತ್ಯಂತ ಮನೋಹರವಾದ ಭಾಷ್ಯವನ್ನು ಗುರುಗಳು ಹಾಗೂ ದೇವತೆಗಳ ಅನುಗ್ರಹದಿಂದ, ಭಕ್ತಿಯಿಂದ ಸ್ವಲ್ಪಮಾತ್ರ ವ್ಯಾಖ್ಯಾನಿಸಲು ಬಯಸುತ್ತೇನೆ.

* * * *

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ
ತತ್ತ್ವಪ್ರಕಾಶಿಕಾ

शुद्धानन्दोरुसंविद्द्युतिबलबहुलौदार्यवीर्यादिदेहं
चिन्तासन्तापलेपोद्भवमृतिमुखराशेषदोषातिदूरम् ।
सद्भिर्वैराग्यभक्तिश्रुतिमतिनियतध्यानजज्ञानयोगाद् ।
गम्यं वन्दे मुकुन्दाभिधममलमलं ब्रह्म वेदान्तवेद्यम् ॥१॥

---

ಶ್ರೀಜಯತೀರ್ಥರು ರಚಿಸಿದ ತತ್ತ್ವಪ್ರಕಾಶಿಕೆಗೆ ಅನುಸಾರಿಯಾಗಿ ಜಗನ್ನಾಥಯತಿಯೆನಿಸಿದ ನಾನು ಬುದ್ಧಿಗೆ ನಿಲುಕಿದಷ್ಟು ಭಾಷ್ಯದೀಪಿಕೆಯನ್ನು ಬರೆಯುತ್ತಿದ್ದೇನೆ.

क्वचिद् भाष्यविवृत्यैव टीकार्थोऽपि विविच्यते ।
तत्त्वप्रदीपतात्पर्यचन्द्रिकायुक्तमार्गतः ॥ ७ ॥

ಕೆಲವೊಮ್ಮೆ ಭಾಷ್ಯವನ್ನು ವಿವರಿಸುವಾಗ ತತ್ತ್ವಪ್ರಕಾಶಿಕೆಯ ಅರ್ಥವನ್ನು ವಿವರಿಸುತ್ತೇನೆ. ಆದರೆ ತತ್ತ್ವಪ್ರದೀಪ, ತಾತ್ಪರ್ಯಚಂದ್ರಿಕಾ ಮೊದಲಾದ ಗ್ರಂಥಗಳೇ ನನಗೆ ಮಾರ್ಗದರ್ಶಕಗಳು.

* * * * *

ಪರಿಪೂರ್ಣಚಂದ್ರಿಕಾ

ಅಪರಿಮಿತವೂ ಬೇರೆ ಯಾವುದಕ್ಕೆ ಕಡಿಮೆ ಇಲ್ಲದ್ದೂ ಆದ ಜ್ಞಾನ, ಆನಂದ, ಕಾಂತಿ, ಬಲ, ಬಹಳವಾದ ಔದಾರ್ಯ, ಪರಾಕ್ರಮ ಇತ್ಯಾದಿ ಗುಣಸ್ವರೂಪವೇ ದೇಹವಾಗಿವುಳ್ಳವನು ಭಗವಂತ (ಮೊದಲನೆ ಅಧ್ಯಾಯದ ಸಾರ); ಮತ್ತು ಚಿಂತೆ, ಆಧ್ಯಾತ್ಮಿಕ, ಆಧಿದೈವಿಕ ಆಧಿಭೌತಿಕವೆಂಬ ತಾಪತ್ರಯಗಳೆಂಬ ಸಂತಾಪ, ಪುಣ್ಯಪಾಪಗಳ ಸಂಬಂಧ, ಜನ್ಮ, ಮರಣ ಇತ್ಯಾದಿ ಸಕಲದೋಷಗಳಿಂದ ಅತ್ಯಂತ ದೂರನಾಗಿದ್ದಾನೆ(ಎರಡನೆ ಅಧ್ಯಾಯದ ಸಾರ ); ಸಕಲ ಸಜ್ಜನರಿಗೆ ವೈರಾಗ್ಯ, ಭಕ್ತಿ, ಶ್ರವಣ, ಮನನ, ಸ್ವಯೋಗ್ಯತಾನುಸಾರ ಉಪಾಸನೆ ಇವುಗಳಿಂದ ಹುಟ್ಟಿದ ಸಾಕ್ಷಾತ್ಕಾರದಿಂದ ಹೊಂದಲು ಯೋಗ್ಯನಾಗಿದ್ದಾನೆ (ಮೂರನೆಯ ಅಧ್ಯಾಯದ ಸಾರ) ಇಂತಹ ಭಗವಂತನು ಬ್ರಹ್ಮಸೂತ್ರವೇ ಮೊದಲಾದವುಗಳಿಂದ ತಿಳಿಯಲ್ಪಡುವವನಾಗಿದ್ದಾನೆ. ಮೋಕ್ಷದಾತೃ-ವಾಗಿದ್ದಾನೆ (ನಾಲ್ಕನೆಯ ಅಧ್ಯಾಯದ ಸಾರ) ಮಾಯಾರಹಿತನಾದ ಇಂತಹ ಮುಕುಂದನನ್ನು ನಮಸ್ಕರಿಸುತ್ತೇನೆ.

यात्रामन्दरलोलिताधत रदैद्विषेन्दिरा निर्जरैः
जातो भारतपारिजातसुतरुः सद्ब्रह्मसूत्रामृतम् ।
आसीत्तन्त्रपुराणसन्मणिगणो जातः शुकेन्दुः सदा
सोऽयं व्याससुधानिधिर्भवतु मे भूत्यै सतां भूतिदः ॥ २ ॥

ವೇದವ್ಯಾಸರೆಂಬ ಕ್ಷೀರಸಮುದ್ರವು ದೇವತೆಗಳ ಪ್ರಾರ್ಥನೆಯೆಂಬ ಮಂದರಪರ್ವತದಿಂದ ಚೆನ್ನಾಗಿ ಮಥಿಸಲ್ಪಟ್ಟಿತು. ಆವಾಗ ಸಾತ್ವಿಕವಿದ್ಯೆಯೆಂಬ ಲಕ್ಷ್ಮೀದೇವಿಯು, ಮಹಾಭಾರತವೆಂಬ ಪಾರಿಜಾತವೃಕ್ಷವು, ಬ್ರಹ್ಮಸೂತ್ರವೆಂಬ ಅಮೃತವು, ಪಂಚರಾತ್ರ ಹಾಗು ಪುರಾಣಗಳೆಂಬ ಉತ್ತಮಮಣಿಗಳು, ಶುಕಾಚಾರ್ಯರೆಂಬ ಚಂದ್ರನು ಹುಟ್ಟಿದವು. ಹೇಗೆ ಕ್ಷೀರಸಮುದ್ರವು ದೇವತೆಗಳಿಗೆಲ್ಲಾ ಬೇಡಿದ ಐಶ್ವರ್ಯಗಳನ್ನೆಲ್ಲಾ ನೀಡಿತೋ ಅದರಂತೆ ಶ್ರೀವೇದವ್ಯಾಸರೆಂಬ ಕ್ಷೀರಸಮುದ್ರವೂ ಸಹ ನಮಗೆಲ್ಲಾ ಸದ್‌ಬುದ್ಧಿಯೇ ಮೊದಲಾದ ಐಶ್ವರ್ಯಗಳನ್ನು ನೀಡಲಿ.

स्वान्तध्वान्तनिकृन्तने जितमहावैकर्तनांशुव्रजं
निर्दोषं जितचन्द्रचन्द्रिकमलं तापत्रयोन्मूलने ।
गाम्भीर्ये जितसिन्धुराजममितं भाष्यं यदास्याम्बुजात्
आविर्भूतममन्दबोधभगवत् पादान् प्रपद्येऽथ तान् ॥ ३ ॥

ಅನುವಾದ -- ಸೂರ್ಯನ ಕಿರಣಗಳು ಬಾಹ್ಯವಾದ ಅಂಧಕಾರವನ್ನಷ್ಟೇ ನಾಶಪಡಿಸುತ್ತವೆ. ಆದರೆ ಬ್ರಹ್ಮಸೂತ್ರಭಾಷ್ಯವು ಒಳಗಿನ ಅಜ್ಞಾನಾಂಧಕಾರವನ್ನೂ ನಾಶಪಡಿಸುವ ಮೂಲಕ ಸೂರ್ಯನ ಕಿರಣಗಳನ್ನು ಗೆದ್ದಿದೆ. ಚಂದ್ರನು ಬೆಳದಿಂಗಳ ಮೂಲಕ ಬಾಹ್ಯವಾದ ತಾಪವನ್ನಷ್ಟೇ ಪರಿಹರಿಸಿದರೆ ಭಾಷ್ಯವು ತಾಪತ್ರಯಗಳನ್ನು ಪರಿಹರಿಸುವ ಮೂಲಕ ಚಂದ್ರನ ಚಂದ್ರಿಕೆಯನ್ನೂ

ಗೆದ್ದಿದೆ. ಮತ್ತು ಈ ಭಾಷ್ಯವು ದೋಷರಹಿತವಾಗಿದೆ. ಗಾಂಭೀರ್ಯದಲ್ಲಿ ಸಮುದ್ರವನ್ನು ಗೆದ್ದಿದೆ. (ಅನೇಕ ಯೋಜನೆಗಳಷ್ಟು ಸಮುದ್ರವು ಬೃಹತ್ ಆಗಿದ್ದರೂ ಪರಿಮಿತವಾಗಿದೆ. ಆದರೆ ಭಾಷ್ಯವು ಅಪರಿಮಿತವಾದ ಅರ್ಥದಿಂದೊಳಗೂಡಿ ಸಮುದ್ರವನ್ನೂ ಮೀರಿಸಿದೆ). ಹೀಗೆ ಪರಮೋತ್ಕೃಷ್ಟವಾದ ಭಾಷ್ಯವು ಯಾರ ಮುಖಾರವಿಂದದಿಂದ ಪ್ರಕಟವಾಗಿದೆಯೋ; ಅಂತಹ ಶ್ರೀಮದಾನಂದತೀರ್ಥ-ಭಗವತ್ಪಾದರನ್ನು ಅನನ್ಯವಾಗಿ ಶರಣು ಹೊಂದುತ್ತೇನೆ.

श्रीमध्वसंसेवनलब्धशुद्धविद्यासुधाम्भोनिधयोऽमला ये ।
कृपालवः पङ्कजनाभतीर्थाः कृपालवः स्यान्मयि नित्यमेषाम् ।। ४ ।।

ಶ್ರೀಮದಾಚಾರ್ಯರ ಅಖಂಡವಾದ ಸೇವೆಯಿಂದ ಸಮುದ್ರದಷ್ಟು ಅಪಾರವಾದ ಸದ್ವಿದ್ಯೆಯನ್ನು ಸಂಪಾದಿಸಿದವರು ಶ್ರೀಪದ್ಮನಾಭತೀರ್ಥರು. ನಿರ್ದುಷ್ಟರಾದ ಕೃಪಾಳುಗಳಾದ ಇಂತಹ ಪದ್ಮನಾಭತೀರ್ಥರ ಕೃಪಾಲೇಶವು ನನ್ನ ಮೇಲೆ ನಿರಂತರವಾಗಿ ಇರಲಿ.

श्रीमद्रमारणसद्गिरिपादसक्तव्याख्यानिनाददलिताखिलदुष्टदर्पम् ।
दुर्वादिवारणविदारणदक्षदीक्षमक्षोभ्यतीर्थमृगराजमहं नमामि ।। ५ ।।

ಕಮಲಾಪತಿಯಾದ ನಾರಾಯಣನೆಂಬ ಶ್ರೇಷ್ಠಪರ್ವತದ ಪಾದವನ್ನು ಆಶ್ರಯಿಸಿ ವ್ಯಾಖ್ಯಾನವೆಂಬ ಘರ್ಜನೆಯಿಂದ ಕ್ರೂರಮೃಗಗಳಂತಿರುವ ಎಲ್ಲಾ ದುರ್ವಾದಿಗಳ ದುಷ್ಟದರ್ಪವನ್ನು ಭಂಗಗೊಳಿಸಿ ದುರ್ವಾದಿಗಳೆಂಬ ಮದ್ದಾನೆಗಳನ್ನು ಸೀಳುವುದರಲ್ಲಿ ಬದ್ಧದೀಕ್ಷರಾದ ಅಕ್ಷೋಭ್ಯತೀರ್ಥರೆಂಬ ಮೃಗರಾಜರನ್ನು ನಾನು ನಮಸ್ಕರಿಸುತ್ತೇನೆ.

अथ तत्कृपया ब्रह्मसूत्रभाष्यं यथामति ।
व्याकुर्वे श्रीमदानन्दतीर्थार्यमुखनिःसृतम् ।। ६ ।।

ಭಾಷ್ಯವು ಅತ್ಯಂತ ಗಂಭೀರವಾದ್ದರಿಂದ ಗುರುಗಳ ಕೃಪಾಪೋಷಿತನಾಗಿ ಶ್ರೀಮದಾನಂದತೀರ್ಥರ ಮುಖಕಮಲದಿಂದ ಹೊರಹೊಮ್ಮಿದ ಬ್ರಹ್ಮಸೂತ್ರಭಾಷ್ಯವನ್ನು ಯಥಾಮತಿ ವ್ಯಾಖ್ಯಾನಿಸುತ್ತೇನೆ.

गङ्गासङ्गेन नैर्मल्यं रथ्याद्भिर्लभ्यते यथा ।
वाचो विशुद्धिसिध्यर्थं सङ्गम्यन्ते गुरोर्गिरः ।। ७ ।।

ರಸ್ತೆಯ ನೀರು ಅಪವಿತ್ರವಾಗಿದ್ದರೂ ಸಹ ಗಂಗೆಯ ಸಂಪರ್ಕದಿಂದ ಹೇಗೆ ಪವಿತ್ರವಾಗುವುದೋ ಅದರಂತೆ ನನ್ನ ಮಾತುಗಳೂ ಸಹ ಪವಿತ್ರವಾಗಲೆಂದು ಗುರುಗಳ ಮಾತುಗಳ ಜೊತೆಗೆ ಸೇರಿಸಲ್ಪಡುತ್ತವೆ.

* * * * *

ಪರಿಪೂರ್ಣಚಂದ್ರಿಕಾ

## ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಭಾವದೀಪ

लक्ष्मीनारायणं नत्वा पूर्णबोधान् गुरूनपि ।
तत्वप्रकाशिकाभावदीपं कुर्यां यथामति ।।

ಲಕ್ಷ್ಮೀನಾರಾಯಣನನ್ನು ನಮಸ್ಕರಿಸಿ, ಗುರುಗಳಾದ ಪೂರ್ಣಪ್ರಜ್ಞರನ್ನೂ ಸಹ ನಮಿಸಿ, ತತ್ತ್ವಪ್ರಕಾಶಿಕಾ-ಗ್ರಂಥಕ್ಕೆ ಬುದ್ಧಿಗೆ ನಿಲುಕಿದಷ್ಟು "ಭಾವದೀಪ" ಎಂಬ ವ್ಯಾಖ್ಯಾನವನ್ನು ರಚಿಸುತ್ತಿದ್ದೇವೆ.

यद्यपि 'तत्वप्रकाशिकाऽऽकूतं चन्द्रिकातःप्रकाशितम् ।
अपि मन्दकृते सर्वविषया च कृतिर्मम ।।'

ವಸ್ತುತಃ ತತ್ತ್ವಪ್ರಕಾಶಿಕೆಯ ಅಭಿಪ್ರಾಯವನ್ನು ಚಂದ್ರಿಕೆಯಲ್ಲೇ ಸ್ಪಷ್ಟಪಡಿಸಿದ್ದಾರೆ. ಆದರೂ ಪ್ರತಿಪಂಕ್ತಿಗಳ ಅರ್ಥವನ್ನು ನಿರೂಪಿಸುವುದಕ್ಕಾಗಿ ಈ ಕೃತಿಯು ಹೊರಟಿದೆ. ಮಂದಜನರಿಗೆ ಉಪಯೋಗ-ವಾಗಬೇಕೆಂಬುದೇ ಇದರ ಉದ್ದೇಶ.

नूतनैरुदिता ये तु दोषास्तेषामलग्नताम् ।
सम्प्रदर्शयितुं चाऽतः प्रसन्नाः सन्तु सज्जनाः ।।

ತತ್ತ್ವಪ್ರಕಾಶಿಕಾಗ್ರಂಥದ ಮೇಲೆ ಹೊಸದಾಗಿ ಮಾಡಲ್ಪಟ್ಟ ಎಲ್ಲ ಆಕ್ಷೇಪಗಳನ್ನು ನಿರಾಕರಿಸುವುದು ಈ ಕೃತಿಯ ಮತ್ತೊಂದು ಉದ್ದೇಶ. ಇದರಿಂದ ಸಜ್ಜನರೆಲ್ಲರೂ ಸಂತುಷ್ಟರಾಗಲಿ.

* * * *

## ಶ್ರೀಶರ್ಕರಾ ಶ್ರೀನಿವಾಸಾಚಾರ್ಯರಿಂದ ವಿರಚಿತವಾದ
## ವಾಕ್ಯಾರ್ಥಮಂಜರೀ

रामं सर्वगुणैः पूर्णं निर्दोषं साधुसेवितम् ।
मुक्तिदं जानकीकान्तं प्रणमामि निरन्तरम् ।।

ಅನುವಾದ -- ಎಲೈ ಸೀತಾಪತಿಶ್ರೀರಾಮಚಂದ್ರನೇ, ನೀನು ಸಕಲಗುಣಪೂರ್ಣನಾಗಿದ್ದಿ, ಮತ್ತು ನಿರ್ದೋಷಿಯೂ ಸಜ್ಜನರಿಂದ ಆರಾಧ್ಯನೂ, ಮುಕ್ತಿಯನ್ನು ದಯಪಾಲಿಸುವವನೂ ಆಗಿದ್ದಿ; ಇಂತಹ ನಿನ್ನನ್ನು ಎಡಬಿಡದೆ ನಮಸ್ಕರಿಸುತ್ತೇನೆ.

ज्ञानभां हृत्तमोहर्ता श्रुतिपङ्कजबोधकः ।
व्यासांशुमान् दर्शयतु सन्मार्गं गुणमण्डलः ।।

ಜ್ಞಾನದಿಂದ ಕಂಗೊಳಿಸುವ ಎಲೈ ವೇದವ್ಯಾಸದೇವರೇ! ನೀವು ಶ್ರುತಿಗಳೆಂಬ ಕಮಲಗಳನ್ನು ಅರಳಿಸುವುದರಲ್ಲಿ ಸೂರ್ಯರಾಗಿದ್ದೀರಿ. ಗುಣಮಂಡಲರಾದ ನೀವು ನನ್ನ ಹೃದಯದಲ್ಲಿ ಕವಿರುವ ಕತ್ತಲೆಯನ್ನು ನಾಶಪಡಿಸಿ ಸತ್ಯಮಾರ್ಗವನ್ನು ತೋರಿರಿ.

**वाग्जोत्स्नाध्वस्तहृद्ध्वान्तविबुधाब्ध्यृद्धिसाधकम् ।**
**शुद्धाध्वबोधकं सेवे नित्यं मध्वविधुं विदे ॥**

ಮಧ್ವಗುರುಗಳೇ! ನಮ್ಮ ಹೃದಯದಲ್ಲಿರುವ ಕತ್ತಲೆಯನ್ನು ನಾಶ ಪಡಿಸುವುದರಲ್ಲಿ ನಿಮ್ಮ ಮಾತುಗಳು ಬೆಳದಿಂಗಳಾಗಿವೆ. ದೇವತೆಗಳೆಂಬ ಸಮುದ್ರದ ಏಳಿಗೆಗೆ ನೀವು ಚಂದ್ರರಾಗಿದ್ದೀರಿ. ಶುದ್ಧಮಾರ್ಗದಲ್ಲಿ ಕರೆದೊಯ್ಯುವ ನಿಮ್ಮನ್ನು ನಿತ್ಯ ಆರಾಧಿಸುತ್ತೇನೆ.

**मध्वसिद्धान्तमामथ्य शुद्धधीमन्दराद्रिणा ।**
**लब्धा न्यायसुधा येन तं जयीन्द्रमहं भजे ॥**

ಮಧ್ವಸಿದ್ಧಾಂತವೆಂಬ ಕ್ಷೀರಸಮುದ್ರವನ್ನು ಶುದ್ಧಬುದ್ಧಿಯೆಂಬ ಮಂದರಪರ್ವತದಿಂದ ಚೆನ್ನಾಗಿ ಮಥಿಸಿ ನ್ಯಾಯಸುಧೆಯನ್ನು ಪಡೆದ ಜಯತೀರ್ಥರೆಂಬ ಇಂದ್ರರನ್ನು ಭಜಿಸುತ್ತೇನೆ.

**दुर्वादिमातङ्गसिंहान् सर्वशास्त्रार्थकोविदान् ।**
**व्यासराजमुखान् पूर्वव्याख्यातॄन् प्रणमाम्यहम् ॥**

ದುರ್ವಾದಿಗಳೆಂಬ ಮದಭರಿತ ಆನೆಗಳಿಗೆ ಸಿಂಹರಾಗಿರುವ ಸರ್ವಶಾಸ್ತ್ರಾರ್ಥವಿಶಾರದರಾದ ಶ್ರೀವ್ಯಾಸತೀರ್ಥರೇ ಮೊದಲಾದವರು ಟೀಕೆಗೆ ವ್ಯಾಖ್ಯಾನವನ್ನು ಮೊದಲೇ ಬರೆದಿದ್ದಾರೆ. ಅವರನ್ನೆಲ್ಲಾ ಭಕ್ತಿಯಿಂದ ನಮಸ್ಕರಿಸುತ್ತೇನೆ.

**दुर्मार्गादुद्धृतो यैश्च सन्मार्गे सम्प्रवेशितः ।**
**तान् गुरून् सततं सेवे सर्वशास्त्रविशारदान् ॥**

ಕೆಟ್ಟ ಮಾರ್ಗದಲ್ಲಿ ಹೋಗುತ್ತಿರುವ ನನ್ನನ್ನು ಹಿಡಿದೆತ್ತಿ ಸನ್ಮಾರ್ಗದಲ್ಲಿ ಕರೆದೊಯ್ದು ಮಹದುಪಕಾರ ಮಾಡಿದ ಸರ್ವಶಾಸ್ತ್ರಪಾರಂಗತರಾದ ಗುರುಗಳನ್ನು ಎಡೆಬಿಡದೆ ಸೇವಿಸುತ್ತೇನೆ.

**अथ तत्कृपया ब्रह्मसूत्रभाष्यप्रकाशिकाम् ।**
**व्याकरिष्ये यथाबोधं वाक्शुद्ध्यै नाभिमानतः ॥**

ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಟೀಕಾರಾಯರು ತತ್ತ್ವಪ್ರಕಾಶಿಕೆಯನ್ನು ರಚಿಸಿದ್ದಾರೆ. ಆ ತತ್ತ್ವಪ್ರಕಾಶಿಕೆಗೆ ನನಗೆ ತಿಳಿದಷ್ಟು ಗುರುಕೃಪೆಯಿಂದ ವ್ಯಾಖ್ಯಾನಿಸಲು ಪ್ರಯತ್ನಿಸುತ್ತೇನೆ. ನನ್ನ ವಾಕ್ ಶುದ್ಧಿಗೋಸ್ಕರವಷ್ಟೇ ಈ ಪ್ರಯತ್ನ, ಹೊರತು ವಿದ್ವತ್ತಿನ ಪ್ರದರ್ಶನಕ್ಕೋಸ್ಕರವಲ್ಲ.

**पूर्वाचार्यकृताः सन्ति व्याख्या विद्वन्मनोहराः ।**
**मन्दबोधाय तत्रोक्तसङ्ग्रहोऽप्यप्ययं मम ॥**

ವಿದ್ವಾಂಸರ ಚೇತೋಹಾರಿಯಾದ ವ್ಯಾಖ್ಯಾನಗಳನ್ನು ಅನೇಕ ಜ್ಞಾನಿವರೇಣ್ಯರು ಈಗಾಗಲೇ ರಚಿಸಿದ್ದಾರೆ. ಆದರೂ ಸಹ ಮಂದಜನರಿಗೆ ಸುಲಲಿತವಾಗಿ ಅರ್ಥವಾಗಲು ಜ್ಞಾನಿವರೇಣ್ಯರು ಹೇಳಿದ್ದನ್ನೇ ಸಂಗ್ರಹಿಸುತ್ತೇನೆ.

* * * *

## ಅವತಾರಿಕೆ
## ಮೋಕ್ಷಕ್ಕೋಸ್ಕರ ಈ ಶಾಸ್ತ್ರ ಹೊರಟಿದೆ

**भा.दी. – इह खलु विविधसांसारिकदुःखपरिश्रमिणामधिकारिणामखिलदुःखनिवृत्तिविशिष्टपरमानन्दावाप्तये प्रवृत्तानामाम्नायानाम् इतिकर्तव्यताभूतब्रह्मसूत्राणां यथावदर्थविवक्षया प्रवृत्तमतिगहनार्थं भाष्यं व्याचिकीर्षुर्ग्रन्थादौ मङ्गलमाचरति जयतीर्थमुनिः -- शुद्धेति ॥**

ಅನು- ಈ ಜಗತ್ತಿನಲ್ಲಿ ನಾನಾವಿಧವಾದ ದುಃಖಗಳನ್ನು ಅನುಭವಿಸಿ ಸಜ್ಜನರು ಬಳಲಿದ್ದಾರೆ. ಅವರ ದುಃಖದ ಪರಿಹಾರಕ್ಕೋಸ್ಕರ ಮತ್ತು ಪರಮಾನಂದರೂಪವಾದ ಮೋಕ್ಷವನ್ನು ಪಡೆಯುವುದಕ್ಕೋಸ್ಕರ ಸಕಲವೇದಗಳು ಹೊರಟಿವೆ. ಜಟಿಲವಾದ ವೇದಾರ್ಥಗಳನ್ನು ತಿಳಿಯಲು ಸಾಧ್ಯವಿಲ್ಲದ ಕಾರಣ, ಅವುಗಳನ್ನು ವ್ಯಾಖ್ಯಾನಿಸುವುದಕ್ಕಾಗಿ ಬ್ರಹ್ಮಮೀಮಾಂಸಾಶಾಸ್ತ್ರವು ಹೊರಟಿದೆ. ಆ ಬ್ರಹ್ಮಸೂತ್ರಗಳನ್ನೂ ಸಹ ಯಥಾರ್ಥವಾಗಿ ತಿಳಿಯಲು ಸಾಧ್ಯವಾಗದೇ ಇದ್ದಾಗ ಶ್ರೀಮದಾಚಾರ್ಯರ ಭಾಷ್ಯವು ಹೊರಟಿದೆ. ಅತಿಗಹನವಾದ ಅರ್ಥಗಳನ್ನೊಳಗೊಂಡ ಭಾಷ್ಯವೂ ಕೂಡ ಮಂದಜನರಿಗೆ ಸುಲಭವಾಗಿ ಅರ್ಥವಾಗದು. ಅದಕ್ಕೋಸ್ಕರ ಭಾಷ್ಯದ ವ್ಯಾಖ್ಯಾನರೂಪವಾಗಿ ತತ್ತ್ವಪ್ರಕಾಶಿಕಾಗ್ರಂಥವನ್ನು ಮಾಡಲು ಇಚ್ಛಿಸುತ್ತಾ ಶ್ರೀಜಯತೀರ್ಥಮುನಿಗಳು ಗ್ರಂಥಪ್ರಾರಂಭದಲ್ಲಿ ಮಂಗಳಾಚರಣೆಯನ್ನು "ಶುದ್ಧಾನಂದೋರು" ಇತ್ಯಾದಿಯಾಗಿ ಮಾಡುತ್ತಿದ್ದಾರೆ.

**वा.मं. – इह खलु तापत्रयपरिशुष्यत्सत्कुमुदमोदकरीं श्रीमध्वदुग्धाब्धिसम्भूतभाष्येन्दूदितकौमुदीं परतत्त्वप्रकाशिकां कर्तुकामो जयतीर्थमुनिः प्रारिप्सिताविघ्नपरिसमाप्त्यादिप्रयोजनकशिष्टाचारानुमितश्रुतिबोधितकर्तव्यताकेष्टदेवतास्तुतिनतिरूपं मङ्गलं कृत्वा शिष्यशिक्षायै ग्रन्थादावुपनिबध्नाति – शुद्धेति ॥**

ಅನು -- ಕ್ಷೀರಸಮುದ್ರದಿಂದ ಜನಿಸಿದ ಚಂದ್ರನ ಚಂದ್ರಿಕೆಯು ದೈಹಿಕ ಮಾನಸಿಕ ತಾಪವನ್ನೆಲ್ಲ ಪರಿಹರಿಸುತ್ತದೆ. ನೈದಿಲೆಹೂಗಳನ್ನು ಬಹಳ ಸಂತೋಷಪಡಿಸುತ್ತದೆ. ಕತ್ತಲೆಯನ್ನು ಪರಿಹರಿಸಿ ವಸ್ತುಗಳು

ಗೋಚರವಾಗುವಂತೆ ಮಾಡುತ್ತದೆ. ಇದರಂತೆ ಶ್ರೀಜಯತೀರ್ಥರು ರಚಿಸಿರುವ ತತ್ತ್ವಪ್ರಕಾಶಿಕೆಯು ಚಂದ್ರನ ಚಂದ್ರಿಕೆಯಂತೆ ಶ್ರೇಷ್ಠತತ್ತ್ವಗಳನ್ನು ಪ್ರಕಾಶಪಡಿಸುತ್ತದೆ. ತಾಪತ್ರಯಗಳನ್ನು ಪರಿಹರಿಸುವ ಮೂಲಕ ಸಜ್ಜನರೆಂಬ ಕುಮುದಗಳನ್ನು ಸಂತೋಷಪಡಿಸುತ್ತದೆ. ಶ್ರೀಮದಾನಂದತೀರ್ಥರೆಂಬ ಕ್ಷೀರಸಮುದ್ರದಿಂದ ಜನಿಸಿದ ಭಾಷ್ಯವು ಚಂದ್ರನಂತಿದ್ದರೆ; ಈ ತತ್ತ್ವಪ್ರಕಾಶಿಕೆಯು ಬೆಳದಿಂಗಳಿನಂತಿರುತ್ತದೆ. ಇಂತಹ ಶ್ರೇಷ್ಠವಾದ ''ತತ್ತ್ವಪ್ರಕಾಶಿಕಾ'' ಎಂಬ ವ್ಯಾಖ್ಯಾನವನ್ನು ಶ್ರೀಜಯತೀರ್ಥಮುನಿಗಳು ಮಾಡಲಿಚ್ಛಿಸಿ ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ. ಮಂಗಳವನ್ನು ಆಚರಿಸುವುದರಿಂದ ಗ್ರಂಥವು ವಿಘ್ನವಿಲ್ಲದೆ ಪರಿಸಮಾಪ್ತಿಯಾಗುತ್ತದೆ. 'ಸಮಾಪ್ತಿಕಾಮೋ ಮಂಗಲಮಾಚರೇತ' ಎಂಬ ಶ್ರುತಿಪ್ರಮಾಣದಿಂದ ಮಂಗಳಾಚರಣೆಯು ಸಿದ್ಧವಾಗಿದೆ. ಶಿಷ್ಟಾಚಾರಅನುಮಿತವಾದ್ದರಿಂದ ಈ ಶ್ರುತಿಯನ್ನು ಅಪ್ರಮಾಣವೆನ್ನಬಾರದು. ಹೀಗೆ ಅವಶ್ಯಕರ್ತವ್ಯವಾದ ಮಂಗಳವನ್ನು ಭಗವಂತನನ್ನು ನಮಿಸುವ ಮೂಲಕ ಆಚರಿಸಿದ್ದಾರೆ. ಶಿಷ್ಯಶಿಕ್ಷಣೆಗಾಗಿ 'ಶುದ್ಧಾನಂದೋರು' ಇತ್ಯಾದಿಯಾಗಿ ಗ್ರಂಥದಲ್ಲಿ ನಿಬಂಧನೆ ಮಾಡುತ್ತಿದ್ದಾರೆ.

## ತತ್ತ್ವಪ್ರಕಾಶಿಕಾ ಮಂಗಳಾಚರಣೆ - ಸಮಗ್ರಶಾಸ್ತ್ರದ ಸಂಕ್ಷೇಪ ವ್ಯಾಖ್ಯಾನ

**शुद्धानन्दोरुसंविद्द्युतिबलबहुलौदार्यवीर्यादिदेहं**
**चिन्तासन्तापलेपोद्भवमृतिमुखराशेषदोषातिदूरम् ।**
**सद्भिर्वैराग्यभक्तिश्रुतिमतिनियतध्यानजज्ञानयोगाद्**
**गम्यं वन्दे मुकुन्दाभिधममलमलं ब्रह्म वेदान्तवेद्यम् ॥१॥**

ಅಪರಿಮಿತವೂ ಬೇರೆ ಯಾವುದಕ್ಕೆ ಕಡಿಮೆ ಇಲ್ಲದ್ದೂ ಆದ ಜ್ಞಾನ, ಆನಂದ, ಕಾಂತಿ, ಬಲ, ಬಹಳವಾದ ಔದಾರ್ಯ, ಪರಾಕ್ರಮ ಇತ್ಯಾದಿ ಗುಣಸ್ವರೂಪವೇ ದೇಹವಾಗಿವುಳ್ಳವನು ಭಗವಂತ (ಮೊದಲನೆ ಅಧ್ಯಾಯದ ಸಾರ); ಮತ್ತು ಚಿಂತೆ, ಆಧ್ಯಾತ್ಮಿಕ, ಆಧಿದೈವಿಕ ಆಧಿಭೌತಿಕವೆಂಬ ತಾಪತ್ರಯಗಳೆಂಬ ಸಂತಾಪ, ಪುಣ್ಯಪಾಪಗಳ ಸಂಬಂಧ, ಜನ್ಮ, ಮರಣ ಇತ್ಯಾದಿ ಸಕಲದೋಷಗಳಿಂದ ಅತ್ಯಂತ ದೂರನಾಗಿದ್ದಾನೆ(ಎರಡನೆ ಅಧ್ಯಾಯದ ಸಾರ ); ಸಕಲ ಸಜ್ಜನರಿಗೆ ವೈರಾಗ್ಯ, ಭಕ್ತಿ, ಶ್ರವಣ, ಮನನ, ಸ್ವಯೋಗ್ಯತಾನುಸಾರ ಉಪಾಸನೆ ಇವುಗಳಿಂದ ಹುಟ್ಟಿದ ಸಾಕ್ಷಾತ್ಕಾರದಿಂದ ಹೊಂದಲು ಯೋಗ್ಯನಾಗಿದ್ದಾನೆ (ಮೂರನೆಯ ಅಧ್ಯಾಯದ ಸಾರ); ಇಂತಹ ಭಗವಂತನು ಬ್ರಹ್ಮಸೂತ್ರವೇ ಮೊದಲಾದವುಗಳಿಂದ ತಿಳಿಯಲ್ಪಡುವವನಾಗಿದ್ದಾನೆ. ಮೋಕ್ಷದಾತೃವಾಗಿದ್ದಾನೆ (ನಾಲ್ಕನೆಯ ಅಧ್ಯಾಯದ ಸಾರ); ಮಾಯಾರಹಿತನಾದ ಇಂತಹ ಮುಕುಂದನನ್ನು ನಮಸ್ಕರಿಸುತ್ತೇನೆ.

* * *

## ಮಂಗಳಾಚರಣೆಯಲ್ಲಿಯೂ ಗುರುಗಳ ಅನುಕರಣೆ

**भा.दी. – इदं च पद्यं भागवतस्याद्यपद्यस्य तात्पर्यस्याद्यपद्यमिव भाष्यस्याद्यश्लोकविवरणरूपत्वात् तद्वदेव वक्ष्यमाणादिसूचकत्वेन व्याख्येयम् । तथाहि । आद्याध्यायार्थस्य 'गुणैः सर्वैरुदीर्णम्' इत्यस्य व्याख्या 'शुद्धा' इत्यादि ।**

ಅನುವಾದ - ಟೀಕಾಕೃತ್ಪಾದರ ಮೊದಲ ಮಂಗಳಪದ್ಯವು, ಭಾಗವತದಲ್ಲಿರುವ 'ಜನ್ಮಾದ್ಯಸ್ಯ ಯತಃ' ಎಂಬ ಮೊದಲಪದ್ಯಕ್ಕೆ ವ್ಯಾಖ್ಯಾನರೂಪವಾದ ಶ್ರೀಮದಾಚಾರ್ಯರ 'ಸೃಷ್ಟಿಸ್ಥಿತ್ಯಯೇಹಾ' ಎಂಬ ತಾತ್ಪರ್ಯದಲ್ಲಿರುವ ಪದ್ಯದಂತೆ, ಮೂಲವ್ಯಾಖ್ಯಾನರೂಪವಾಗಿದೆ. ಮತ್ತು ಮುಂದಿನ ಸಮಗ್ರಶಾಸ್ತ್ರದಲ್ಲಿ ವಿವರಿಸುವ ಸಕಲಪ್ರಮೇಯಸೂಚಕವೂ ಆಗಿದೆ. ಅದು ಹೀಗೆ -- ಬ್ರಹ್ಮಸೂತ್ರಗಳ ಪ್ರಥಮಾಧ್ಯಾಯದಲ್ಲಿ ಭಗವಂತನಲ್ಲಿ ಎಲ್ಲ ವಿಧವಾದ ಶಬ್ದಸಮನ್ವಯವನ್ನು ಮಾಡುವ ಮೂಲಕ ಅನಂತಗುಣಪರಿಪೂರ್ಣತ್ವವನ್ನು ಸಾಧಿಸಲಾಗಿದೆ. ಇದನ್ನು ಶ್ರೀಮದಾಚಾರ್ಯರು 'ಗುಣೈಃ ಸರ್ವೈರುದೀರ್ಣಮ್' ಎಂಬ ಮಂಗಳಶ್ಲೋಕದ ಪ್ರಥಮಪಾದದಿಂದ ಹೇಳಿದ್ದಾರೆ. ಇದನ್ನೇ ಟೀಕಾಕೃತ್ಪಾದರು 'ಶುದ್ಧಾನಂದೋರು' ಎಂಬ ಮೊದಲಪಾದದಿಂದಲೇ ಸಂಗ್ರಹಿಸಿದ್ದಾರೆ. ಟೀಕೆಯ ಮಂಗಳಶ್ಲೋಕದಲ್ಲಿರುವ ಒಂದೊಂದು ಪದಗಳೂ ಅನೇಕ ಅಧಿಕರಣಗಳ ಸಾರರೂಪವಾಗಿವೆ.

**भा.दी. – तत्र शुद्धत्वं चन्द्रिकारीत्या सान्तत्वसातिशयत्वराहित्यम् आनन्दादेः सर्वस्य विशेषणम् । दुःखासम्भिन्नत्वादेः 'चिन्ता' इत्यादिना लाभात् । उरुत्वादिकं तु सर्वविषयकत्वादिमात्रम् । व्यक्तमेतत् सर्वमग्रे । 'आनन्दमयोऽभ्यासात्' इत्यादौ परिपूर्णानन्दसंविदादेः, 'अनुकृतेस्तस्य च' इत्यादावुरुद्युतेः, 'अत्ता' इत्यादौ सर्वसंहारकत्वाद्युक्त्या उरुबलस्य, 'मुक्तोपसृप्यव्यपदेशात्', 'तन्निष्ठस्य मोक्षोपदेशात्' इत्यादौ मोक्षदानादिना बहुलौदार्यादीनामुक्तेः । एतेन भाष्यस्य 'गुण'पदस्य वैशेषिकादिप्रसिद्ध्या दुःखादिकं वैदिकप्रसिद्ध्या सत्त्वादिकं वा नार्थ इत्युक्तं भवति । द्युतिबलादेर्गुणत्वं तु 'गुणाद्वाऽलोकवत्' इत्यत्र द्वितीये तदनुविधानादिना वक्ष्यत इति भावः ।**

ಪರಮಾತ್ಮನ ಆನಂದವು ಶುದ್ಧವಾಗಿದೆ ಎಂದರೆ "ಅವನ ಆನಂದಕ್ಕೆ ಮಿತಿಯಿಲ್ಲ. ಮತ್ತು ಅವನ ಆನಂದಕ್ಕೆ ಸರಿಸಾಟಿಯಾದ ಮತ್ತೊಂದು ಆನಂದವಿಲ್ಲ" ಎಂದರ್ಥ. ಲಕ್ಷ್ಮೀದೇವಿಯ ಆನಂದಕ್ಕೂ ಸಹ ಪರಮಾತ್ಮನ ದೃಷ್ಟಿಯಿಂದ ಪರಿಮಿತಿ ಇದೆ. ಆದರೆ ಅವಳ ಆನಂದಕ್ಕಿಂತ ಶ್ರೀಹರಿಯ ಆನಂದವು ಅತ್ಯಂತ ಉತ್ಕೃಷ್ಟವಾಗಿದೆ. ಪರಮಾತ್ಮನ ಆನಂದಕ್ಕೆ ಕೊನೆಯೇ ಇಲ್ಲ. ಮತ್ತು ಅದಕ್ಕಿಂತ ಹಿರಿದಾದ ಮತ್ತೊಂದು ಆನಂದವಿಲ್ಲ. ಇಂತಹ ಆನಂದವೇ 'ಶುದ್ಧಾನಂದ'ವೆನಿಸಿದೆ. ಇದನ್ನೇ ಚಂದ್ರಿಕೆಯಲ್ಲಿ 'ಆನಂದಾದೇಃ

ಶುದ್ಧತ್ವಂ ಚ ಸಾಂತತ್ಯಸಾತಿಶಯತ್ವರಾಹಿತ್ಯಮ್' ಎಂದು ಹೇಳಿದ್ದಾರೆ. ಶುದ್ಧಶಬ್ದಕ್ಕೆ ಹೀಗೆಯೇ ಅರ್ಥಹೇಳಬೇಕು ಹೊರತು 'ದುಃಖಾದಿದೋಷವಿಲ್ಲದ್ದು' ಎಂಬರ್ಥವನ್ನು ಹೇಳಬಾರದು. ಆ ಅರ್ಥವು 'ಚಿಂತಾಸಂತಾಪ' ಇತ್ಯಾದಿವಿಶೇಷಣಗಳಿಂದಲೇ ಸಿದ್ಧವಾಗಿದೆ. ಈ ಶುದ್ಧತ್ವವನ್ನು ಮತ್ತು ಉರುತ್ವವನ್ನು ಆನಂದ, ದ್ಯುತಿ ಮೊದಲಾದ ಎಲ್ಲ ಗುಣಗಳಲ್ಲಿಯೂ ವಿಶೇಷಣವನ್ನಾಗಿ ವಿವಕ್ಷಿಸಬೇಕು.

ಭಗವಂತನಲ್ಲಿ ಇಂತಹ ಶುದ್ಧಾನಂದಾದಿಗುಣಗಳು ಇವೆಯೆಂದು ಮುಂದಿನ ಅಧಿಕರಣಗಳಿಂದ ಸ್ಪಷ್ಟವಾಗುತ್ತದೆ. 'ಆನಂದಮಯೋಽಭ್ಯಾಸಾತ್'(೧/೧/೧೨) ಎಂಬ ಸೂತ್ರದಲ್ಲಿ ಪರಮಾತ್ಮನು ನಿತ್ಯನಿರಂತರವಾದ, ಪರಿಪೂರ್ಣವಾದ ಆನಂದಸ್ವರೂಪನು ಮತ್ತು ಜ್ಞಾನವಿಜ್ಞಾನಾದಿಸ್ವರೂಪನಾಗಿರುವನೆಂದು ಪ್ರತಿಪಾದಿಸಲಾಗಿದೆ. ಆನಂದಮಯಾಧಿಕರಣದ ಈ ವಿಷಯವನ್ನು ಟೀಕಾಕೃತ್ಪಾದರು 'ಶುದ್ಧಾನಂದ' ಎಂಬ ಪದದಿಂದ;

'ಉರುದ್ಯುತಿಃ' ಎಂಬ ವಿಶೇಷಣದಿಂದ ಅನುಕೃತ್ಯಧಿಕರಣದ ಪ್ರಮೇಯವನ್ನು ಸಂಗ್ರಹಿಸಿದ್ದಾರೆ. 'ಅನುಕೃತೇಸ್ತಸ್ಯ ಚ'(೧/೩/೨೨) ಎಂಬ ಸೂತ್ರದಲ್ಲಿ ಜಗತ್ಪ್ರಕಾಶಕರಾದ ಸೂರ್ಯಚಂದ್ರ ಮೊದಲಾದ ದೇವತೆಗಳಲ್ಲಿರುವ ಶಕ್ತಿಯು ನಾರಾಯಣನಿಂದ ಪ್ರಾಪ್ತವಾಗಿರುತ್ತದೆ ಮತ್ತು ಅವನ ಅಧೀನವಾಗಿರುತ್ತದೆಂಬ ಪ್ರಮೇಯವು ನಿರೂಪಿತವಾಗಿದೆ.

'ಅತ್ತಾ ಚರಾಚರಗ್ರಹಣಾತ್' (೧/೨/೯)ಎಂಬ ಸೂತ್ರದಲ್ಲಿ ಶ್ರೀಹರಿಯು ಚರಾಚರಾತ್ಮಕವಾದ ವಿಶ್ವವನ್ನು ಅನಾಯಾಸವಾಗಿ ಸಂಹರಿಸುತ್ತಾನೆಂಬ ಮಹಿಮೆಯು ಹೇಳಲ್ಪಟ್ಟಿದೆ. ಇದನ್ನು 'ಉರುಬಲ' ಎಂಬ ವಿಶೇಷಣವು ಪರಮಾತ್ಮನ ಬಲವು ಅಪರಿಮಿತವಾಗಿದೆ ಮತ್ತು ಅದ್ಭುತವಾಗಿದೆ ಎಂದು ಸಂಗ್ರಹಿಸುತ್ತಿದೆ.

ಇದರಂತೆ ಬಹುಲೌದಾರ್ಯವೇ ಮೊದಲಾದ ಗುಣಗಳು ಭಗವಂತನ ದೇಹಸ್ವರೂಪವಾಗಿದೆ ಎಂದು ವರ್ಣಿಸುವ ಮೂಲಕ 'ಮುಕ್ತೋಪಸೃಪ್ಯವ್ಯಪದೇಶಾತ್ (೧/೩/೨); ತನ್ನಿಷ್ಠಸ್ಯ ಮೋಕ್ಷೋಪದೇಶಾತ್' (೧/೧/೭) ಮೊದಲಾದ ಸೂತ್ರಗಳಲ್ಲಿ ಪ್ರತಿಪಾದಿಸಿದ ಪ್ರಮೇಯವನ್ನು ಸಂಗ್ರಹಿಸಿದ್ದಾರೆ. ಈ ಸೂತ್ರಗಳಲ್ಲಿ ಭಗವಂತನು ಭಕ್ತರ ಅಪರಾಧಗಳನ್ನು ಮನ್ನಿಸಿ ಭಕ್ತಿಗೆ ಮೆಚ್ಚಿ ನಿತ್ಯಸುಖವನ್ನು ಕರುಣಿಸುತ್ತಾನೆಂಬ ಔದಾರ್ಯಗುಣಗಳನ್ನು ಪ್ರತಿಪಾದಿಸಲಾಗಿದೆ.

ಹೀಗೆ ಟೀಕಾಕೃತ್ಪಾದರು ಆನಂದ, ಜ್ಞಾನ, ಔದಾರ್ಯ ಮೊದಲಾದ ಗುಣಗಳು ಭಗವಂತನ ದೇಹಸ್ವರೂಪವಾಗಿವೆ ಎಂದು ವರ್ಣಿಸುವ ಮೂಲಕ ಗುಣಪದದಿಂದ ತಾರ್ಕಿಕರು ಹೇಳುವ ಗುಣಗಳನ್ನು ವ್ಯಾವೃತ್ತಿಮಾಡಿದ್ದಾರೆ. ತಾರ್ಕಿಕರ ಸಿದ್ಧಾಂತದಲ್ಲಿ ದುಃಖ, ದ್ವೇಷ ಮೊದಲಾದವೂ ಸಹ ಗುಣಗಳೆನಿಸುತ್ತವೆ. ಮತ್ತು ವೇದದ ಪ್ರಸಿದ್ಧಿಯಿಂದ ಸತ್ತ್ವರಜಸ್ತಮೋಗುಣಗಳೂ ಸಹ ಗುಣಗಳೆನಿಸುತ್ತವೆ. ಇಂತಹ ಗುಣಗಳನ್ನೆಲ್ಲ ಪ್ರಕೃತ ನಿರಾಕರಿಸಿದ್ದಾರೆ. ಜ್ಞಾನಮೊದಲಾದ ಗುಣಗಳು ಭಗವಂತನ ಸ್ವರೂಪವಾಗಿದೆ ಎಂಬುದು 'ಗುಣಾದ್ವಾಽಽಲೋಕವತ್'(೨/೩/೨೬) ಎಂಬ ಎರಡನೆ ಅಧ್ಯಾಯದಲ್ಲಿರುವ ಸೂತ್ರದಲ್ಲಿ ಪ್ರತಿಪಾದಿಸಿದ್ದಾರೆ. ಅದನ್ನು 'ದ್ಯುತಿಬಲ' ಎಂಬ ವಿಶೇಷಣದಿಂದ ಇಲ್ಲಿ ಸಂಗ್ರಹಿಸಿದ್ದಾರೆ.

भा.दी. – ननु देहसत्त्वे दुःखादिभोगप्रसङ्गात् 'दोषवर्जितम्' इति भाष्योक्तमसत् । 'करणवच्चेन्न भोगादिभ्यः' 'अन्तवत्त्वम्' इति वक्ष्यमाणत्वात् । तदसत्त्वे ज्ञानादिगुणोदीर्णता भाष्योक्ता न युक्ता । 'असर्वज्ञता वा' इति सूत्रकृतैव वक्ष्यमाणादित्यतः – वीर्यादिदेहम् इति ॥ 'अप्राकृतदेहवत्वात् न दुःखादिदोषप्रसङ्गः' इति भावः । एतच्च अदृश्यत्वनयगुणसूत्रे 'रूपोपन्यासात्' इत्यत्र सिद्धम् । तथा अन्यभावव्यावृत्तेश्च' इत्यादावपि, तस्यैव 'अरूपवदेव' इत्यत्र तृतीये उपपादयिष्यमाणत्वात् ।

ದೇಹವಿದ್ದಲ್ಲೆಲ್ಲಾ ದುಃಖವಿರುವುದು ಲೋಕದಲ್ಲಿ ಕಂಡಿದೆ. ಭಗವಂತನಿಗೆ ದೇಹವು ಇರುವುದಾದರೆ ದುಃಖವೂ ಬರಬೇಕಾದೀತು. ಹೀಗಿರುವಾಗ 'ದೋಷವರ್ಜಿತಮ್' ಎಂದು ಭಾಷ್ಯದಲ್ಲಿ ಹೇಳಿದ್ದು ತಪ್ಪಲ್ಲವೇ? 'ಕರಣವಚ್ಚೇನ್ನ ಭೋಗಾದಿಭ್ಯಃ' ಇತ್ಯಾದಿ ಸೂತ್ರಗಳಲ್ಲಿ ಭಗವಂತನಿಗೆ ದೇಹವಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಒಂದು ವೇಳೆ ದೇಹವನ್ನೇ ಒಪ್ಪದಿದ್ದರೆ ಜ್ಞಾನಾದಿಗುಣಪರಿಪೂರ್ಣತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ. ಇದನ್ನು ಸೂತ್ರಕಾರರೇ 'ಅಸರ್ವಜ್ಞತಾ ವಾ' ಎಂಬಲ್ಲಿ ಹೇಳಿದ್ದಾರೆ. ಈ ಶಂಕೆಯ ಪರಿಹಾರಕ್ಕೋಸ್ಕರ ಮತ್ತು ಭಾಷ್ಯದಲ್ಲಿರುವ 'ದೋಷವರ್ಜಿತಮ್' ಎಂಬ ವಿಶೇಷಣವನ್ನು ವ್ಯಾಖ್ಯಾನಿಸುವುದಕ್ಕೋಸ್ಕರ 'ವೀರ್ಯಾದಿದೇಹಮ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಭಗವಂತನಿಗೆ ಅಪ್ರಾಕೃತವಾದ ದೇಹವಿರುವುದರಿಂದ ದುಃಖಾದಿದೋಷಗಳಿಗೆ ಪ್ರಸಕ್ತಿ ಇಲ್ಲ. ಈ ವಿಚಾರವು ಅದೃಶ್ಯತ್ವಾಧಿಕರಣದ 'ರೂಪೋಪನ್ಯಾಸಾತ್'(೧/೨/೨೩) ಎಂಬ ಗುಣಸೂತ್ರದಲ್ಲಿ ಸಿದ್ಧವಾಗಿದೆ. ಮತ್ತು 'ಅನ್ಯಭಾವವ್ಯಾವೃತ್ತೇಶ್ಚ' ಇತ್ಯಾದಿ ಸೂತ್ರಗಳಲ್ಲಿಯೂ 'ಅರೂಪವದೇವ' ಎಂಬ ಮೂರನೆಯ ಅಧ್ಯಾಯದ ಸೂತ್ರದಲ್ಲಿಯೂ ಅಪ್ರಾಕೃತದೇಹವುಳ್ಳ ಭಗವಂತನಲ್ಲಿ ಯಾವುದೇ ದೋಷಗಳಿಗೆ ಅವಕಾಶವಿಲ್ಲ ಮತ್ತು ಸಕಲಗುಣಪರಿಪೂರ್ಣತ್ವಕ್ಕೆ ಅವಕಾಶವಿದೆ ಎಂದು ಸಮರ್ಥಿಸಲಾಗಿದೆ.

## ಎರಡನೆ ಅಧ್ಯಾಯದ ಸಾರ

भा.दी.– द्वितीयाध्यायार्थस्य 'दोषवर्जितम्' इत्यस्य विवरणं 'चिन्ता' इत्यादि । लेपः = पुण्यपापसम्बन्धः । चिन्तादयो मुखं प्रधानं येषामस्तीति चिन्तादिमुखराः । ते च ते अशेषदोषा इति विग्रहः । खमुखकुञ्जेभ्यः इति मत्वर्थे रः । यद्वा 'सन्मुखरितं सद्भिः प्रधानीकृतम्' इति दशमतात्पर्योक्तेः मुखरशब्द एव प्रधानवाची । चिन्तादिभिर्मुखराः ध्वनन्त इव स्थिता इत्यर्थ इत्यप्याहुः । 'अधिकं तु भेदनिर्देशात्', 'न कर्माविभागादिति चेन्न अनादित्वात्', 'असम्भवस्तु सतोऽनुपपत्तेः' 'नात्माश्रुतेर्नित्यत्वाच्च ताभ्यः', 'सर्वधर्मोपपत्तेश्च' इत्यादिभिश्चिन्तादिदोषाभावस्य

**द्वितीये वक्ष्यमाणत्वादिति** भावः । **'न कर्मा'** इत्यत्र **कर्मणोऽस्वातन्त्र्योक्त्या तल्लेपाभावसिद्धेः** । **उक्तं च गीताभाष्ये – 'यः कर्माणि नियमयति कथं** तत् तं **बध्नाति'** इति । एतेन तार्किकादिरीत्या रागादिरेव दोषपदार्थ इति भ्रमोऽपास्तः ।

ಎರಡನೆಯ ಅಧ್ಯಾಯದ ಅರ್ಥವನ್ನೇ ಶ್ರೀಮದಾಚಾರ್ಯರು 'ದೋಷವರ್ಜಿತಮ್' ಎಂದು ಸಂಗ್ರಹಿಸಿದ್ದಾರೆ. ಅದನ್ನು 'ಚಿಂತಾಸಂತಾಪ' ಎಂಬ ಎರಡನೆಯ ಪಾದದಿಂದ ಟೀಕಾಕೃತ್ಪಾದರು ವ್ಯಾಖ್ಯಾನಿಸುತ್ತಿದ್ದಾರೆ. ಲೇಪ = ಪುಣ್ಯಪಾಪಗಳ ಸಂಬಂಧ. ಚಿಂತಾದಯಃ ಮುಖಂ ಯೇಷಾಂ ಅಸ್ತೀತಿ ಚಿಂತಾದಿಮುಖರಾಃ, ಚಿಂತಾದಿಮುಖರಾಶ್ಚ ತೇ ಅಶೇಷದೋಷಾಶ್ಚ ಎಂದು ಸಮಾಸ. ಚಿಂತಾಸಂತಾಪಾದಿಗಳೇ ಪ್ರಧಾನವಾಗಿ ಉಳ್ಳ ಸಕಲದೋಷಗಳನ್ನು ವಿವಕ್ಷಿಸಬೇಕೆಂದು ಇದರ ಅರ್ಥ. 'ಖಮುಖಕುಂಜೇಭ್ಯಃ' ಎಂಬುದರಿಂದ ಮತ್ವರ್ಥದಲ್ಲಿ ರಪ್ರತ್ಯಯ ಬಂದು ಮುಖರ ಎಂದಾಗಿದೆ. ಅಂದರೆ ಮುಖಶಬ್ದಕ್ಕೆ ಪ್ರಧಾನ ಎಂದರ್ಥ. ಪ್ರಧಾನವಾಗಿ ಉಳ್ಳದ್ದು ಎಂಬರ್ಥದಲ್ಲಿ ರಪ್ರತ್ಯಯ ಬಂದಿದೆ. ಅಥವಾ 'ಮುಖರ'ಶಬ್ದಕ್ಕೇನೇ ಪ್ರಧಾನ ಎಂದರ್ಥ. 'ಸನ್ಮುಖರಿತಂ ಸದ್ಭಿಃ ಪ್ರಧಾನೀಕೃತಮ್' ಎಂದು ದಶಮಭಾಗವತತಾತ್ಪರ್ಯದಲ್ಲಿ ಮುಖರಶಬ್ದವನ್ನು ಪ್ರಧಾನ ಎಂಬರ್ಥದಲ್ಲಿ ಬಳಸಿದ್ದಾರೆ. ಇನ್ನೂ ಕೆಲವರು ಹೀಗೆ ವ್ಯಾಖ್ಯಾನಿಸುತ್ತಾರೆ - ಚಿಂತಾದಿಗಳು ಜೋರಾಗಿ ಶಬ್ದಮಾಡುವಂತೆ ಇವೆಯೆಂದು. 'ಅಧಿಕಂ ತು ಭೇದನಿರ್ದೇಶಾತ್' (೨/೧/೨೩), 'ನ ಕರ್ಮಾವಿಭಾಗಾದಿತಿ ಚೇನ್ನ ಅನಾದಿತ್ವಾತ್' (೨/೧/೩೬), 'ಅಸಂಭವಸ್ತು ಸತೋಽನುಪಪತ್ತೇಃ' (೨/೩/೯), 'ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ' (೨/೩/೧೭), ಸರ್ವಧರ್ಮೋಪಪತ್ತೇಶ್ಚ (೨/೧/೩೮) ಇತ್ಯಾದಿಯಾಗಿ ಎರಡನೆಯ ಅಧ್ಯಾಯದ ಸೂತ್ರಗಳಲ್ಲಿ ಚಿಂತೆ, ಸಂತಾಪ ಮೊದಲಾದ ಯಾವ ದೋಷಗಳೂ ಭಗವಂತನಲ್ಲಿ ಇಲ್ಲವೆಂದು ಸಮರ್ಥಿಸಲಾಗಿದೆ. 'ನ ಕರ್ಮಾ' ಎಂಬ ಸೂತ್ರದಲ್ಲಿ ಕರ್ಮಕ್ಕೆ ಅಸ್ವಾತಂತ್ರ್ಯ ಹೇಳಿದ್ದರಿಂದ ಕರ್ಮದ ಲೇಪವು ಭಗವಂತನಲ್ಲಿಲ್ಲವೆಂದು ಸಿದ್ಧವಾಗುತ್ತದೆ. ಇದನ್ನೇ ಗೀತಾಭಾಷ್ಯದಲ್ಲಿ 'ಯಃಕರ್ಮಾಣಿ ನಿಯಮಯತಿ ಕಥಂ ತತ್ ತಂ ಬಧ್ನಾತಿ' ಕರ್ಮಗಳನ್ನು ಯಾರು ನಿಯಮನ ಮಾಡುತ್ತಾನೋ ಅವನನ್ನೇ ಕರ್ಮವು ಹೇಗೆ ತಾನೇ ಬಂಧಿಸುತ್ತದೆ? ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ತಾರ್ಕಿಕಾದಿಗಳು ಹೇಳುವಂತೆ ರಾಗಾದಿಗಳಷ್ಟೇ ದೋಷಪದದ ಅರ್ಥವೆಂಬ ಭ್ರಮೆಯನ್ನು ಪರಿಹರಿಸಿದಂತಾಯಿತು.

भा.दी.– **तृतीयाध्यायार्थस्य 'ज्ञेयम्' इत्यस्य ज्ञाने कर्त्रुपाययोर्गत्युपायत्वस्य चोक्त्या विवरणं क्रियते – सद्भिः इति** ।। एतच्च **'असार्वत्रिकी' 'सर्वथापि तु त एवोभयलिङ्गात्'** इत्यादौ सिद्धम् । **'वैराग्य'** इति आद्यपदार्थोक्तिः । तत्र गत्या- गतिस्वर्गनरकगर्भवासादिस्वरूपोक्त्याऽर्थाद्वैराग्यस्योक्तेः । **'भक्ति'** इति द्वितीयपादस्य । तत्र भगवन्माहात्म्योक्त्या भक्तेरुक्तेः । **'श्रुतिमती'** श्रवणमनने । **'नियतध्यानम्'** स्वयोग्योपासनम् इति तृतीयपादार्थः । तत्र **सर्ववेदान्तनये यथाशक्ति-**

कृत्स्नवेदविषयश्रवणमननयोः उपसंहारादिनयेषु स्वयोग्योपासनस्य चोक्तेः । एतेन 'ज्ञानप्रणाड्या एतान्येवोपायो नान्यत् कर्मादि' इति सूचितम् ।

'ज्ञानं साक्षात्कारः, स एव योग उपायः, तस्मात्' इति चतुर्थपादार्थः । तत्र पुरुषार्थनयादौ पुमर्थोपायत्वसिद्धेः ।

ಮೂರನೆಯ ಅಧ್ಯಾಯದ ಸಾರವನ್ನು ಶ್ರೀಮದಾಚಾರ್ಯರು 'ಜ್ಞೇಯಮ್' ಎಂಬ ವಿಶೇಷಣದಿಂದ ಸಂಗ್ರಹಿಸಿದ್ದಾರೆ. ಅದನ್ನೇ ಟೀಕಾಕೃತ್ಪಾದರು ಸಾಧಕನ ಸಾಧನೆಯನ್ನು ವಿವರಿಸುತ್ತಾ 'ಸದ್ಭಿ' ಇತ್ಯಾದಿ ಮೂರನೆಯ ಪಾದದಲ್ಲಿ ವ್ಯಾಖ್ಯಾನಿಸಿದ್ದಾರೆ. 'ಅಸಾರ್ವತ್ರಿಕೀ'(೩/೪/೧೧) 'ಸರ್ವಥಾऽಪಿ ತು ತ ಏವೋಭಯಲಿಂಗಾತ್' (೩/೪/೩೪) ಇತ್ಯಾದಿ ಸೂತ್ರಗಳಲ್ಲಿ ಈ ಪ್ರಮೇಯವು ನಿರೂಪಿತವಾಗಿದೆ. 'ವೈರಾಗ್ಯ' ಎಂಬ ಪದದಿಂದ ಮೂರನೆಯ ಅಧ್ಯಾಯದ ಪ್ರಥಮಪಾದದ ಅರ್ಥವನ್ನು ಸಂಗ್ರಹಿಸಿದ್ದಾರೆ. ವೈರಾಗ್ಯಪಾದದಲ್ಲಿ ಜೀವನ ಗತಿ, ಆಗತಿ, ಸ್ವರ್ಗ, ನರಕ, ಗರ್ಭವಾಸ ಮೊದಲಾದವುಗಳನ್ನು ನಿರೂಪಿಸಿದ್ದರಿಂದ ವೈರಾಗ್ಯವು ಸಹಜವಾಗಿ ಬರುತ್ತದೆ. ಆದ್ದರಿಂದ ಆ ಪಾದದ ಸಾರವನ್ನು ವೈರಾಗ್ಯ ಎಂದೇ ಹೇಳಿದ್ದಾರೆ. 'ಭಕ್ತಿ' ಎಂಬ ಪದದಿಂದ ಎರಡನೆಯ ಪಾದದ ಸಾರವನ್ನು ಹೇಳಿದ್ದಾರೆ. ಭಗವಂತನ ಮಹಿಮೆಯನ್ನು ಹೇಳುವ ಮೂಲಕ ಭಕ್ತಿಯು ಭಕ್ತಿಪಾದದಲ್ಲಿ ನಿರೂಪಿತವಾಗಿದೆ. 'ಶ್ರುತಿಮತೀ' ಎಂಬ ಶಬ್ದದಿಂದ ಶ್ರವಣಮನನಗಳನ್ನು ವಿವಕ್ಷಿಸಬೇಕು. 'ನಿಯತಧ್ಯಾನಮ್' ಎಂದರೆ ತಮ್ಮ ಯೋಗ್ಯತೆಗೆ ಅನುಸಾರಿಯಾದ ಉಪಾಸನೆ ಎಂದರ್ಥ. ಇದರಿಂದ ಉಪಾಸನಾಪಾದದ ಸಾರವನ್ನು ಸಂಗ್ರಹಿಸಿದಂತಾಯಿತು. ಅಲ್ಲಿರುವ ಸರ್ವವೇದಾಂತಪ್ರತ್ಯಯಾಧಿಕರಣದಲ್ಲಿ ಯಥಾಶಕ್ತಿ ಸಮಸ್ತವೇದದ ಶ್ರವಣ ಮನನಗಳನ್ನು ಮಾಡಬೇಕೆಂದು ಹೇಳಲ್ಪಟ್ಟಿದೆ. ಉಪಸಂಹಾರಾಧಿಕರಣಗಳಲ್ಲಿಯೂ ಸ್ವಯೋಗ್ಯೋಪಾಸನೆಯನ್ನು ಹೇಳಲಾಗಿದೆ. ಹೀಗೆ ಹೇಳಿದ್ದರಿಂದ 'ಜ್ಞಾನದ ಮೂಲಕ ಶ್ರವಣ-ಮನನಾದಿಗಳೇ ಕರ್ತವ್ಯ; ಹೊರತು ಕರ್ಮಾದಿಗಳಲ್ಲ' ಎಂದು ಸೂಚಿಸಿದಂತಾಯಿತು.

ಜ್ಞಾನಶಬ್ದಕ್ಕೆ ಸಾಕ್ಷಾತ್ಕಾರ ಎಂದರ್ಥ. ಈ ಸಾಕ್ಷಾತ್ಕಾರವೇ ಯಾವುದಕ್ಕೆ ಕಾರಣವಾಗಿದೆಯೋ ಅಂತಹ ಮೋಕ್ಷ ಎಂದು ಹೇಳಿದ್ದರಿಂದ ನಾಲ್ಕನೆಯ ಪಾದದ ಅರ್ಥವನ್ನು ತಿಳಿಸಿದಂತಾಯಿತು. ಚತುರ್ಥಪಾದದಲ್ಲಿರುವ ಪುರುಷಾರ್ಥಾಧಿಕರಣದಲ್ಲಿ ಮೋಕ್ಷದ ಉಪಾಯವನ್ನು ನಿರೂಪಿಸಿದ್ದಾರೆ.

### ನಾಲ್ಕನೆಯ ಅಧ್ಯಾಯದ ಸಾರ

भा.दी.– एतेन चतुर्थार्थो 'गम्यम्' इत्येतदपि विवृतम् । प्रणाड्या वैराग्यादिजातज्ञानात् सद्भिर्गम्यं न कर्मात् इति । अत एव अलं सम्यक् मुख्यवृत्त्या असंशयं वा । 'वेदान्तवेद्यम्' वेदानामन्तो निर्णयो यस्मात् तेन ब्रह्ममीमांसाशास्त्रेण वेद्यम् । 'सर्ववेदान्तप्रत्ययम्' इत्यत्रैवान्तो निर्णयः ।

एतेन भाष्योक्तविशेषणानामधिकृतत्वद्योतनमपि फलं सूचितम् । 'नारायण'-पदस्य प्रतिपदं 'ब्रह्म' इति । तेन 'ब्रह्मतन्त्रे नारायणनतिरनुचिता' इति शङ्काऽपास्ता । अत एव 'मुकुन्दाभिधम्' इत्युक्तिः । नारायणमुकुन्दशब्दयोः पर्यायत्वप्रसिद्धेः । वक्ष्यति च 'ब्रह्मशब्दव्याख्यानं नारायणपदम्' इति ।

'ಗಮ್ಯಮ್' ಎಂಬ ವಿಶೇಷಣದಿಂದ ಶ್ರೀಮದಾಚಾರ್ಯರು ನಾಲ್ಕನೆಯ ಅಧ್ಯಾಯದ ಸಾರವನ್ನು ಸಂಗ್ರಹಿಸಿದ್ದಾರೆ. ಅದನ್ನೇ ಟೀಕಾಕೃತ್ಪಾದರು 'ಗಮ್ಯಮ್' ಎಂಬುದಾಗಿಯೇ ವ್ಯಾಖ್ಯಾನಿಸಿದ್ದಾರೆ. ವೈರಾಗ್ಯಾದಿಗಳಿಂದ ಹುಟ್ಟುವ ಜ್ಞಾನದಿಂದಷ್ಟೇ ಪುರುಷಾರ್ಥವು ದೊರೆಯಲು ಸಾಧ್ಯ; ಕರ್ಮಾದಿಗಳಿಂದಲ್ಲ. ಆದ್ದರಿಂದಲೇ 'ಅಲಮ್' ಎಂದು ಹೇಳಿದ್ದಾರೆ. ಈ ವಿಷಯದಲ್ಲಿ ಸಂಶಯವಿಲ್ಲವೆಂದು ಇದರ ಅರ್ಥ. 'ವೇದಾಂತವೇದ್ಯಮ್' ಎಂಬ ಪದಕ್ಕೆ 'ಬ್ರಹ್ಮಮೀಮಾಂಸಾಶಾಸ್ತ್ರದಿಂದ ಪ್ರತಿಪಾದ್ಯನಾದವನು ಎಂದರ್ಥ. ಯಾವ ಶಾಸ್ತ್ರದಿಂದ ವೇದಗಳ ತಾತ್ಪರ್ಯವು ನಿರ್ಣಯವಾಗುತ್ತದೋ ಅಂತಹ ಬ್ರಹ್ಮಮೀಮಾಂಸಾಶಾಸ್ತ್ರವೇ ವೇದಾಂತ ಎನಿಸುತ್ತದೆ. 'ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್' (೩/೩/೧) ಎಂಬ ಸೂತ್ರದಲ್ಲಿ ಅಂತಶಬ್ದಕ್ಕೆ 'ನಿರ್ಣಯ' ಎಂಬರ್ಥವನ್ನು ನಿರೂಪಿಸಿದ್ದಾರೆ.

ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿರುವ ವಿಶೇಷಣಗಳು ನಮಸ್ಕಾರಮಾಡುವುದಕ್ಕೆ ಯೋಗ್ಯವಾದ ಅಧಿಕೃತತತ್ವವನ್ನು ಸಮರ್ಥಿಸುತ್ತಿವೆ ಎಂದರ್ಥ ದೊರೆಯುತ್ತದೆ. 'ನಾರಾಯಣ'ಪದವು 'ಬ್ರಹ್ಮ'ಪದದ ವ್ಯಾಖ್ಯಾನವಾಗಿದೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ನಾರಾಯಣನ ನಮಸ್ಕಾರವು ಅನುಚಿತವೆಂಬ ಶಂಕೆಯು ಪರಿಹಾರವಾಯಿತು. ಆದ್ದರಿಂದಲೇ 'ಮುಕುಂದಾಭಿಧಮ್' ಎಂದು ಟೀಕಾರಾಯರು ಹೇಳಿದ್ದಾರೆ. ನಾರಾಯಣ ಹಾಗೂ ಮುಕುಂದಶಬ್ದಗಳು ಪರ್ಯಾಯಶಬ್ದಗಳೆಂದು ಸಿದ್ಧವಾಗಿವೆ. ಈ ವಿಚಾರವನ್ನು ಮುಂದೆ ಸಮರ್ಥಿಸುತ್ತಾರೆ.

### 'ಅಮಲಂ' ಪದದಿಂದ ಅದ್ವೈತ ನಿರಾಕರಣೆ

भा.दी.– नन्वेवमुक्तदिशा सविशेषं मुकुन्दाभिधं ब्रह्म चेत् तर्हि –

**निर्विशेषं परं ब्रह्म साक्षात् कर्तुमनीश्वराः ।**
**ये मन्दास्तेऽनुकम्प्यन्ते सविशेषनिरूपणैः ।।**

इत्यद्वैत्युक्तदिशा मन्दोपास्यं किम्? नेत्याह – अमलमिति ।।

'न विद्यते मलं संसाराख्यं यस्मात् तत् अमलम्, संसारनिवर्तकं मुमुक्षूपास्यं न मन्दोपास्यम्' इति यावत् । 'मायाख्यमलरहितम्' इति वाऽर्थः । 'अमलम्' इत्यस्यालमित्यमलमिति वाऽन्वयः । एतच्च भाष्यस्थनारायणपदस्य मुक्ताश्रयत्वरूपार्थमभिप्रेत्योक्तम् ।

एवं वक्ष्यमाणार्थस्यादौ सूचनाच्छ्रोतृणोमुष्यनुकूलिता भवति । तथा वक्ष्यमाणदिशा ब्रह्मशब्दव्याख्यानपरतया तस्यैव नम्यत्वोपपादनपरतया चेदं पद्यं योज्यम् । ग्रन्थगौरवभयात् न प्रपञ्च्यते ॥१॥

'ಮಂದಜನರು ನಿರ್ವಿಶೇಷಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಅಸಮರ್ಥರು. ಸವಿಶೇಷಬ್ರಹ್ಮನ ನಿರೂಪಣೆಯಿಂದ ಆ ಮಂದಜನರು ಅನುಕಂಪಕ್ಕೆ ಅರ್ಹರಾಗಿದ್ದಾರೆ' ಎಂದು.

ನ ವಿದ್ಯತೇ ಮಲಂ ಯಸ್ಮಾತ್ ತತ್ ಅಮಲಂ, (ಸಂಸಾರವೆಂಬ ಮಲವು ಯಾವ ಬ್ರಹ್ಮನಿಂದ ಪರಿಹಾರವಾಗುತ್ತದೋ ಅಂತಹ ಬ್ರಹ್ಮನನ್ನು) ಎಂದರ್ಥ. ಇಂತಹ ಸಂಸಾರನಿವರ್ತಕನಾದ ಪರಬ್ರಹ್ಮನು ಮುಮುಕ್ಷುಗಳಿಂದ ಉಪಾಸ್ಯನಾಗಿದ್ದಾನೆ ಹೊರತು ಮಂದರಿಂದ ಉಪಾಸ್ಯನಾಗಿಲ್ಲ ಎಂದರ್ಥ. ಅಥವಾ ಮಾಯಾ ಎಂಬ ಮಲದಿಂದ ರಹಿತನು ಎಂದರ್ಥ. ಅಲಂ ಎಂಬ ಪದಕ್ಕೆ ಅಮಲಂ ಎಂಬಲ್ಲಿ ಅನ್ವಯ. ಭಾಷ್ಯದಲ್ಲಿರುವ ನಾರಾಯಣಪದಕ್ಕೆ ಮುಕ್ತಾಶ್ರಯತ್ವ ಎಂಬರ್ಥವನ್ನು ವಿವಕ್ಷಿಸಿ ಹೀಗೆ ವ್ಯಾಖ್ಯಾನಿಸಲಾಗಿದೆ. ಇದರಿಂದ ಭಾಷ್ಯದಲ್ಲಿರುವ ನಾರಾಯಣಪದಕ್ಕೆ ಮುಕ್ತಾಶ್ರಯತ್ವ ಎಂಬ ಅರ್ಥವು ವಿವಕ್ಷಿತವಾಗಿದೆ ಎಂದು ವ್ಯಾಖ್ಯಾನಿಸಿದಂತಾಯಿತು.

ಮುಂದಿನ ಸಮಗ್ರಶಾಸ್ತ್ರದಲ್ಲಿರುವ ಪ್ರಮೇಯವನ್ನು ಮೊದಲೇ ಸಂಕ್ಷೇಪವಾಗಿ ಹೇಳುವುದರಿಂದ ಶ್ರೋತೃಗಳ ಬುದ್ಧಿಗೆ ಬಹಳ ಅನುಕೂಲವಾಗುತ್ತದೆ. ಮತ್ತೆ ಮುಂದೆ ಹೇಳುವಂತೆ ಬ್ರಹ್ಮಶಬ್ದದ ವ್ಯಾಖ್ಯಾನರೂಪವಾಗಿಯೇ ಸಮಗ್ರಶಾಸ್ತ್ರವು ಹೊರಟಿದೆ. ಇಂತಹ ಬ್ರಹ್ಮನೇ ನಮಸ್ಕಾರಕ್ಕೆ ಅರ್ಹನಾಗಿದ್ದಾನೆ. ಆ ಬ್ರಹ್ಮಶಬ್ದದ ವ್ಯಾಖ್ಯಾನವನ್ನೇ 'ಗುಣೈಃ ಸರ್ವೈರುದೀರ್ಣಮ್' ಇತ್ಯಾದಿ ನಾಲ್ಕು ವಿಶೇಷಣಗಳು ಮಾಡುತ್ತಿವೆ ಎಂದು ತಿಳಿಯಬೇಕು. ಗ್ರಂಥಗೌರವದ ಭಯದಿಂದ ಇಲ್ಲಿ ವಿವರಿಸುತ್ತಿಲ್ಲ.

## ಟೀಕೆಯ ಮಂಗಳಶ್ಲೋಕದಲ್ಲಿ 'ಅಹಂ' ಎಂದು ಇಟ್ಟುಕೊಳ್ಳಬೇಕು

वा.मं. – 'अस्मदुत्तमः इति सूत्रेणास्मच्छब्द एव उपपदत्वेन श्रूयमाणेऽश्रूयमाणे वा तदर्थविवक्षायामुत्तमपुरुषो भवति' इत्युक्तोत्तमपुरुषस्यास्मच्छब्दाविनाभावादेवात्र 'वन्दे' इत्युत्तमपुरुषप्रयोगादेव 'अहम्' इति कर्ता लभ्यते । तथा च । 'अहं ब्रह्म अलं वन्दे' इत्यन्वयः । इदं पद्यं भाष्यस्याद्यपद्यव्याख्यानरूपम् । तथाहि । आद्याध्यायार्थतयोक्तम् - 'गुणैः सर्वैरुदीर्णम्' इति ।

'ಬ್ರಹ್ಮ ಅಲಂ ವಂದೇ' 'ಬ್ರಹ್ಮನನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆಂದು ಅನ್ವಯ. ಇಲ್ಲಿ ಕರ್ತೃವಾಚಕಪದವನ್ನೇ ಹೇಳಿಲ್ಲವೆಂಬ ಪ್ರಶ್ನೆ ಬರುತ್ತದೆ. ಆದರೆ 'ಅಸ್ಮದುತ್ತಮಃ' ಎಂಬ ಸೂತ್ರ ಏನು ಹೇಳುತ್ತದೆಂದರೆ - ಉತ್ತಮಪುರುಷದಲ್ಲಿ 'ಅಸ್ಮತ್' ಶಬ್ದವೇ ಉಪಪದವಾಗಿರುತ್ತೆ. ಅಸ್ಮತ್ ಶಬ್ದವು ಕೇಳಿಸಲಿ ಅಥವಾ ಬಿಡಲಿ ತದರ್ಥವು ವಿವಕ್ಷಿತವಾದರೆ ಸಾಕು ಉತ್ತಮಪುರುಷದಲ್ಲಿ ಅಸ್ಮತ್ ಶಬ್ದವು

ಅನುವಾದ -ಅಥ ಅವಿದ್ಯಾ ಎಂಬಲ್ಲಿರುವ ಅಥಶಬ್ದಕ್ಕೆ ಪ್ರತಿಗ್ರಂಥವ್ಯಾಖ್ಯಾನವು ಪ್ರಾರಂಭವಾಗುತ್ತಿದೆ ಎಂದರ್ಥ. 'ಅವಿದ್ಯಾಪಟಲಪಿಹಿತನಯನೈಃ' ಎಂಬುದಕ್ಕೆ ಹೀಗೆ ಅರ್ಥ -- ''ಯಾವರೀತಿಯಾಗಿ ಕಣ್ಣಿಗೆ ಪೊರೆಯು ಮುಚ್ಚಿರುತ್ತದೆಯೋ ಅದರಂತೆ ಮನಸ್ಸನ್ನು ಅಥವಾ ತತ್ತ್ವಜ್ಞಾನವನ್ನು ಅಜ್ಞಾನವೆಂಬ ಪೊರೆಯು ಮುಚ್ಚಿರುತ್ತದೆ. ಅಂತಹ ಸಿದ್ಧಾಂತಿಗಳಿಂದ'' ಎಂದು. ''ಪೊರೆಯಿಂದ ಮುಚ್ಚಿದ ಕಣ್ಣಿನಂತೆ ಅವಿದ್ಯೆಯಿಂದ ಮುಚ್ಚಲ್ಪಟ್ಟ ತತ್ತ್ವಜ್ಞಾನವುಳ್ಳವರಿಂದ ಬ್ರಹ್ಮಸೂತ್ರವು ಅನ್ಯಥಾವ್ಯಾಖ್ಯಾತವಾಗಿದೆ'' ಎಂದು ಮುಂದಿನ ಶಬ್ದಗಳ ಅರ್ಥ. 'ಫಲಸಾಧನತಾಸಿದ್ಧ್ಯರ್ಥಂ' = 'ಫಲಸಾಧನೆಯ ಸಿದ್ಧಿಗೋಸ್ಕರ'. ಮಂಗಲಸಹಿತ-ಗ್ರಂಥವಷ್ಟೇ ಸಫಲವಾಗಿರುತ್ತದೆಂದು ಇದರ ಅಭಿಪ್ರಾಯ. ಪರಿಸಮಾಪ್ತ್ಯಾದ್ಯರ್ಥಂ = ಪರಿಸಮಾಪ್ತಿ ಹಾಗೂ ಕೀರ್ತಿ ಮೊದಲಾದ ಪ್ರಯೋಜನಗಳಿಗೋಸ್ಕರ. 'ಅವಶ್ಯಕರ್ತವ್ಯಂ' ಎಂಬುದನ್ನು ಶೇಷಪೂರಣ ಮಾಡಬೇಕು. ಇದನ್ನೇ ಸುಧೆಯಲ್ಲಿ ಹೀಗೆ ಹೇಳಿದ್ದಾರೆ. ''ನಾರಾಯಣಪ್ರಣಾಮಾದಿಕಂ ಪ್ರಾರಿಪ್ಸಿತಸ್ಯಾನಂತರಾಯಪರಿಸಮಾಪ್ತೇಃ ಪ್ರಚಯಸ್ಯ ಹೇತುತಯಾಽವಿಗೀತಶಿಷ್ಟಾಚಾರಾದಿನಾ ಅವಗತಮವಶ್ಯ-ಕರಣೀಯಂ ಶಿಷ್ಯಾನ್ ಗ್ರಾಹಯಿತುಂ ಗ್ರಂಥಾದೌ ನಿಬಧ್ನಾತಿ'' (ಗ್ರಂಥದ ಪ್ರಾರಂಭದಲ್ಲಿ ಮಾಡುವ ನಾರಾಯಣನ ಪ್ರಣಾಮಾದಿಗಳು ಪ್ರಾರಿಪ್ಸಿತಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿ ಎಂಬ ಮತ್ತು ಕೀರ್ತಿಯೆಂಬ ಪ್ರಯೋಜನವುಳ್ಳದ್ದಾಗಿದೆ. ಇಂತಹ ಮಂಗಳಾಚರಣೆಯು ಅವಿಗೀತಶಿಷ್ಟಾಚಾರ-ಪರಂಪರೆಯಿಂದ ಪ್ರಾಪ್ತವಾದ್ದರಿಂದ ಅವಶ್ಯಕರ್ತವ್ಯವಾಗಿದೆ. ಇದನ್ನು ಶಿಷ್ಯರಿಗೆ ತಿಳಿಸುವುದಕ್ಕಾಗಿ ಗ್ರಂಥದ ಪ್ರಾರಂಭದಲ್ಲಿ ನಿಬಂಧನೆ ಮಾಡುತ್ತಿದ್ದಾರೆ) ಎಂದು.

### ಶ್ರೀಮದಾಚಾರ್ಯರ ಭಾಷ್ಯವು ಅನಾರಂಭಣೀಯವೇ?

**वा.मं. – नन्वाचार्यैः भाष्यं नारम्भणीयं प्रयोजनाभावात् । न च सूत्रव्याख्यानं प्रयोजनम् । अन्यैर्व्याख्यातत्वात्, अस्तु वा आरम्भणीयम् । तथाप्याद्यपद्यं व्यर्थम् । न च मङ्गलनिबन्धनार्थं तदिति वाच्यम्, फलाभावेन तस्यैवाकर्तव्यत्वात् । अस्तु वा कर्तव्यत्वं तथापि 'सूत्रार्थ उच्यते' इत्यंशो व्यर्थः, इत्याशङ्कां पराकुर्वन् आद्यपद्यमवतारयति – अथेति ।।**

ಅನುವಾದ -- ಆಕ್ಷೇಪ : - ೧) ಬ್ರಹ್ಮಸೂತ್ರಭಾಷ್ಯವನ್ನು ಶ್ರೀಮದಾಚಾರ್ಯರು ರಚಿಸಬೇಕಾಗಿಲ್ಲ. ಭಾಷ್ಯವಿಲ್ಲದೆ ಸೂತ್ರವು ಅರ್ಥವಾಗದೆಂದರೆ ಬೇರೆಯವರ ಭಾಷ್ಯದಿಂದಲೇ ಸೂತ್ರಾರ್ಥವು ತಿಳಿಯುತ್ತದೆ. ಅದಕ್ಕೋಸ್ಕರ ಆಚಾರ್ಯರ ಭಾಷ್ಯವು ಬೇಕಿಲ್ಲ.

೨) ಅಥವಾ ಭಾಷ್ಯವು ಆರಂಭಣೀಯವಾಗಲಿ. ಆದರೆ ಮಂಗಳಶ್ಲೋಕವು ಅನಾವಶ್ಯಕ. ಮಂಗಳ-ನಿಬಂಧನೆಗೋಸ್ಕರ ಆದ್ಯಪದ್ಯವು ಸಾರ್ಥಕ, ಎನ್ನಬಹುದು. ಆದರೆ ಯಾವ ಫಲವೂ ಇಲ್ಲದ ಕಾರಣ ಮಂಗಳವನ್ನೇ ಮಾಡಬೇಕಿಲ್ಲ.

೩) ಅಥವಾ ಮಂಗಳವನ್ನು ಮಾಡಬೇಕೆಂದು ಒಪ್ಪಿಕೊಳ್ಳೋಣ. ಆದರೆ ಮಾಡಿದ ಮಂಗಳವನ್ನು

ಗ್ರಂಥದಲ್ಲಿ ಉಲ್ಲೇಖಿಸಬೇಕಿಲ್ಲ. ಅಥವಾ ಮಂಗಳವನ್ನು ಉಲ್ಲೇಖಿಸಬೇಕೆಂದು ಒಪ್ಪಿಕೊಳ್ಳೋಣ. ಆದರೆ 'ಸೂತ್ರಾರ್ಥ ಉಚ್ಯತೇ' ಎಂಬ ಅಂಶವು ವ್ಯರ್ಥ.

ಸಮಾಧಾನ : - ಈ ಮೂರು ಆಕ್ಷೇಪಗಳನ್ನು ಪರಿಹರಿಸುವ ಮೂಲಕ ಮಂಗಳಶ್ಲೋಕಕ್ಕೆ ಅವತಾರಿಕೆಯನ್ನು 'ಅಥಾವಿದ್ಯಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**वा.मं. – अत्र 'अविद्या' इत्यारभ्य 'आचार्यवर्य' इत्यन्तेन आद्यशङ्कायाः, 'प्रारिप्सित' इत्यारभ्य 'समाप्त्याद्यर्थम्' इत्यन्तेन द्वितीयायाः, 'ग्रन्थारम्भम्' इत्यादिना तृतीयाश्च निरास इति ध्येयम् ।**

ಸೂತ್ರಾರ್ಥಪರಿಜ್ಞಾನಕ್ಕೋಸ್ಕರ ಭಾಷ್ಯವನ್ನು ರಚಿಸಲೇಬೇಕು. ಬೇರೆಯವರು ಭಾಷ್ಯವನ್ನು ರಚಿಸಿರಬಹುದು. ಆದರೆ ಅಜ್ಞಾನವೆಂಬ ಪೊರೆಯಿಂದ ತತ್ತ್ವಜ್ಞಾನವೆಂಬ ಕಣ್ಣು ಅವರಿಗೆ ಮುಚ್ಚಿಹೋಗಿದೆ. ಆದ್ದರಿಂದ ಅವರೆಲ್ಲರೂ ತಪ್ಪು ತಪ್ಪಾಗಿ ಸೂತ್ರಾರ್ಥ ಬರೆದಿದ್ದಾರೆ. ಆದರೆ ಶ್ರೀಮದಾಚಾರ್ಯರು ಸೂತ್ರಗಳಿಗೆ ಯಥಾವತ್ತಾದ ಅರ್ಥವನ್ನು ಬರೆಯುತ್ತಿದ್ದಾರೆ. ಇದರಿಂದ ಮೊದಲನೆಯ ಆಕ್ಷೇಪವು ಪರಿಹಾರವಾಯಿತು.

'ಇಂತಹ ಭಾಷ್ಯವನ್ನು ರಚಿಸುವ ಮೊದಲು ಮಂಗಳಾಚರಣೆ ಮಾಡಲೇಬೇಕು. ಆವಾಗ ಮಂಗಳಮಯವಾದ ಭಾಷ್ಯದ ಅಧ್ಯಯನದಿಂದ ಮೋಕ್ಷಾದಿಸಕಲಪುರುಷಾರ್ಥಗಳು ದೊರೆಯುತ್ತವೆ. ಮತ್ತು ನಿರ್ವಿಘ್ನವಾಗಿ ಗ್ರಂಥವೂ ಪರಿಸಮಾಪ್ತವಾಗುತ್ತದೆ. ಅದಕ್ಕೋಸ್ಕರ ನಾರಾಯಣನ ನಮಸ್ಕಾರವನ್ನು ಗ್ರಂಥದಲ್ಲಿ ಉಲ್ಲೇಖಿಸುತ್ತಿದ್ದಾರೆ'. ಹೀಗೆ ಹೇಳಿದ್ದರಿಂದ ಎರಡನೆಯ ಆಕ್ಷೇಪವು ನಿರಸ್ತವಾಯಿತು.

ತಾವು ಮಾಡುತ್ತಿರುವ ಗ್ರಂಥದ ಪ್ರತಿಜ್ಞೆಯನ್ನು 'ಸೂತ್ರಾರ್ಥ ಉಚ್ಯತೇ' ಎಂಬುದರಿಂದ ಮಾಡುತ್ತಿದ್ದಾರೆ. ಇದರಿಂದ ಮೂರನೆಯ ಆಕ್ಷೇಪವೂ ನಿರಸ್ತವಾಯಿತು.

### ಟೀಕೆಯ 'ಅಥ'ಶಬ್ದಕ್ಕೆ ಏನರ್ಥ?

**वा.मं. – ननु 'मङ्गलानन्तरारम्भप्रश्नकार्त्स्न्येष्वथो अथ' इति स्मरणात्, अत्र अथशब्दः किं मङ्गलार्थः? उतानन्तर्यार्थः अथ प्रारम्भार्थः यदि वा प्रश्नाद्यर्थः । नाद्यः । मङ्गलस्य कृतत्वात् । न द्वितीयः । कस्याप्यर्थस्य भाष्ये पूर्वमप्रकृतत्वाद् भाष्यकृन्नमनस्य टीकाकृद्व्याख्याप्रतिज्ञानन्तर्यायोगाच्च । न तृतीयः । 'व्याकुर्वे' इत्यनेन 'व्याख्या प्रारभ्यते' इति लाभात् । न चतुर्थः । उत्तराद्यनुपलम्भात् । अतो व्यर्थ इति चेत् ।**

ಆಕ್ಷೇಪ : - 'ಅಥ' ಶಬ್ದದಿಂದಲೇ ಟೀಕೆಯನ್ನೇಕೆ ಪ್ರಾರಂಭಿಸುತ್ತಿದ್ದಾರೆ? 'ಮಂಗಲಾನಂತರಾರಂಭ-

ಪ್ರಶ್ನಕಾತ್ಸ್ನ್ಯೇರ್ಷ್ವಥೋ ಅಥ' ಎಂಬ ವಚನದಂತೆ ಅಥ ಶಬ್ದಕ್ಕೆ ಮಂಗಳ ಎಂದರ್ಥವೋ? ಆನಂತರ್ಯ ಎಂದರ್ಥವೋ? ಪ್ರಾರಂಭ ಎಂದರ್ಥವೋ? ಪ್ರಶ್ನಾದ್ಯರ್ಥವೋ?

ಮಂಗಳವನ್ನು ಈಗಾಗಲೇ ಮಾಡಿರುವುದರಿಂದ ಮಂಗಳವೆಂಬರ್ಥವನ್ನು ಹೇಳಲಾಗದು. ಭಾಷ್ಯವು ಈಗಲೇ ಪ್ರಾರಂಭವಾಗುತ್ತಿದೆ. ಇಲ್ಲಿಯ ತನಕ ಯಾವ ವಿಷಯವೂ ಪ್ರಸಕ್ತವೇ ಆಗಿಲ್ಲ. ಆದ್ದರಿಂದ ಆನಂತರ್ಯ ಎಂಬರ್ಥವನ್ನು ಹೇಳಲಾಗದು. ಟೀಕೆಯ ಮಂಗಳಶ್ಲೋಕದ ಅನಂತರ ಭಾಷ್ಯದ ಮಂಗಳಶ್ಲೋಕವು ಪ್ರಾರಂಭವಾಗುತ್ತಿದೆಯೆಂಬರ್ಥವಂತೂ ಅತ್ಯಂತ ಅಸಂಗತ.

ಇನ್ನು ಪ್ರಾರಂಭ ಎಂಬರ್ಥವೂ ಕೂಡುವುದಿಲ್ಲ. 'ವ್ಯಾಕುರ್ವೇ' ಎಂಬುದರಿಂದಲೇ ವ್ಯಾಖ್ಯಾನವು ಪ್ರಾರಂಭವಾಗಿದೆಯೆಂದು ತಿಳಿಯುತ್ತದೆ. ಉತ್ತರವನ್ನು ಹೇಳದ 'ಪ್ರಶ್ನೆ' ಮೊದಲಾದ ಅರ್ಥಗಳನ್ನೂ ಅಥಶಬ್ದಕ್ಕೆ ಹೇಳಲಾಗದು. ಹೀಗೆ ಯಾವ ಅರ್ಥವೂ ಇಲ್ಲದ ಅಥ ಶಬ್ದವನ್ನು ಹೇಳಬೇಕಿತ್ತೇಕೆ?

### 'ಅಥ'ಶಬ್ದಕ್ಕೆ ಅನೇಕಾರ್ಥಗಳಿವೆ

**वा.मं. – अत्र ब्रूमः । 'आचार्यवर्यः ब्रह्मसूत्राणि यथावद् व्याचिख्यासुर्नमस्कारं ग्रथयति, ग्रन्थारम्भं च प्रतिजानीते' इत्युक्ते इयं शङ्कोन्मिषति । ननु सूत्रव्याख्यानार्थं प्रवृत्तेनाचार्येण तदेव कार्यं किमनेनासङ्गतेन नमस्कारादिग्रथनेन?** इत्यत उक्तम् – **अथ व्याचिख्यासुः इति ॥** 'देवतानमनग्रथनादिकरणानन्तरं व्याचिख्यासुः' **इत्यर्थः । तथा च 'बुभुक्षुः स्नानं करोति इत्यादौ स्नानस्य भोजन इव देवतानमन-ग्रथनादेर्व्याख्यानोपयोगलाभात् नासङ्गतिः' इति भावः । अथवा, बुद्धिस्थ-'बुद्धचार्वाकतार्किककणादकपिलाख्यपञ्चमतप्रवृत्त्यनन्तरम्' इत्यर्थः । 'अन्यथा-व्याख्यातानि' इत्यनेन सम्बन्धः । पञ्चमतप्रवृत्त्यनन्तरमेव अन्यैरन्यथाव्याख्यातम् । यद्वा, सामान्यतः पूर्वं समग्रग्रन्थव्याख्याप्रारम्भेऽपि प्रतिग्रन्थव्याख्याप्रारम्भार्थः 'अथ'शब्दः ।**

ಸಮಾಧಾನ : - 'ಶ್ರೀಮದಾಚಾರ್ಯರು ಬ್ರಹ್ಮಸೂತ್ರಗಳನ್ನು ಯಥಾವತ್ತಾಗಿ ವ್ಯಾಖ್ಯಾನ ಮಾಡಲು ಬಯಸಿದವರಾಗಿ ನಮಸ್ಕಾರವನ್ನು ಉಲ್ಲೇಖಿಸುತ್ತಾ ಗ್ರಂಥಾರಂಭದ ಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ' ಎಂದು ಟೀಕೆಯು ಹೇಳಿದಾಗ ನಮಗೆ ಶಂಕೆ ಬರುತ್ತದೆ - "ಸೂತ್ರವ್ಯಾಖ್ಯಾನದಲ್ಲಿ ತೊಡಗಿದ ಆಚಾರ್ಯರು ಸೂತ್ರವ್ಯಾಖ್ಯಾನವನ್ನೇ ಮಾಡಬೇಕು. ಅಸಂಗತವಾದ ನಮಸ್ಕಾರಾದಿಗ್ರಥನಗಳೇಕೆ?" ಎಂದು.

ಈ ಶಂಕೆಗಳ ಪರಿಹಾರಕ್ಕಾಗಿ 'ಅಥ' ಎಂದು ಹೇಳಿದರು. 'ಅಥ ವ್ಯಾಚಿಖ್ಯಾಸುಃ' ಎಂಬ ಮಾತಿಗೆ 'ದೇವತಾನಮನ ಮತ್ತು ಅದರ ಉಲ್ಲೇಖವನ್ನು ಮಾಡಿದ ಅನಂತರ ವ್ಯಾಖ್ಯಾನ ಮಾಡಲು

ಬಯಸಿದವರಾಗಿ' ಎಂದರ್ಥ. ಯಾವರೀತಿಯಾಗಿ 'ಊಟಮಾಡಲು ಬಯಸಿ ಸ್ನಾನ ಮಾಡುತ್ತಾನೆ' ಎಂದು ಹೇಳಿದರೆ ಸ್ನಾನವು ಊಟಮಾಡಲು ಅಂಗವೆಂದು ತಿಳಿಯುತ್ತದೋ, ಅದರಂತೆ ವ್ಯಾಖ್ಯಾನ ಮಾಡಲು ದೇವತಾನಮನ, ಮತ್ತು ಪ್ರತಿಜ್ಞೆಗಳು ಅಂಗವೆಂದು ತಿಳಿಯುತ್ತದೆ.

ಅಥವಾ 'ಬುದ್ಧಿಯಲ್ಲಿ ಉಪಸ್ಥಿತವಾದ ಬುದ್ಧ, ಚಾರ್ವಾಕ, ತಾರ್ಕಿಕ, ಕಾಣಾದ, ಕಾಪಿಲವೆಂಬ ಐದು ಮತಗಳ ಪ್ರವೃತ್ತ್ಯನಂತರ' ಎಂದು 'ಅಥ' ಶಬ್ದಕ್ಕೆ ಅರ್ಥ. 'ಅನ್ಯೈಃ ಅನ್ಯಥಾವ್ಯಾಖ್ಯಾತಾನಿ' ಎಂಬುದರ ಜೊತೆಗೆ ಅಥಶಬ್ದಕ್ಕೆ ಅನ್ವಯ. ಏಕೆಂದರೆ ಐದುಮತಗಳ ಪ್ರವೃತ್ತ್ಯನಂತರವೇ ಉಳಿದ ಮತದವರು ಅನ್ಯಥಾ(ಸಮುಚಿತವಲ್ಲದಂತೆ) ವ್ಯಾಖ್ಯಾನಿಸಿದ್ದರಿಂದ.

ಅಥವಾ 'ಶುದ್ಧಾನಂದೋರು ಇತ್ಯಾದಿಯಾಗಿ ಸಮಗ್ರಗ್ರಂಥಕ್ಕೆ ಸಾಮಾನ್ಯವಾಗಿ ವ್ಯಾಖ್ಯಾನಮಾಡಿದ್ದಾಗಿದೆ. ಈಗ ಭಾಷ್ಯದ ಪ್ರತಿಯೊಂದು ವಾಕ್ಯಗಳನ್ನು ವ್ಯಾಖ್ಯಾನಿಸುತ್ತಿದ್ದೇವೆ' ಎಂದು ಅಥಶಬ್ದಕ್ಕೆ ಅರ್ಥ. ಇಷ್ಟು ಅಥಶಬ್ದವಿಚಾರ.

### ೨೧ ಕುಭಾಷ್ಯಗಳು

वा.मं. – अविद्यापटलपिहितनयनैरिति ।। 'अविद्यया अयोग्यतालक्षणया सूत्रतात्पर्यार्थापरिज्ञानरूपया च नेत्रबन्धाद्याच्छादितनयना इव वर्तमानैः' इत्यर्थः । अन्यथाव्याख्यानबीजायथार्थज्ञानोपपादनायैतत् । अन्यैरिति ।।

भारतीविजयश्चैव सच्चिदानन्द एव च ।
ब्रह्मघोषः शतानन्द उद्वर्तश्चैव पञ्चमः ।।

विजयो रुद्रभट्टश्च वामनाख्यस्तथाष्टमः ।
सयादवप्रकाशश्च नवमस्तत्र कीर्तितः ।।

रामानुजस्तथा भर्तृप्रपञ्चो द्रविडस्तथा ।
ब्रह्मदत्तो भास्करश्च विशाखो वृत्तिकारकः ।।

तथा विजयभट्टश्च विष्णुक्रान्तस्तथैव च ।
वादीन्द्रस्तु ततः पश्चात् तथा माधवदासकः ।।

तथा पश्चात् सङ्करश्चेत्येकविंशतिवादिभिः ।
प्रणीतानि निराचक्रे दुर्भाष्याणि महामतिः ।।'

इत्येकविंशतिसङ्ख्याकैरित्यर्थः । यथावद् व्याख्यानसामर्थ्योपपादनाय 'भगवान्' इत्युक्तम् । 'समग्रज्ञानवान्' इत्यर्थः ।

'ಅವಿದ್ಯಾಪಟಲಪಿಹಿತನಯನೈಃ' ಎಂಬ ಶಬ್ದಕ್ಕೆ ಹೀಗೆ ಅರ್ಥ. ಯೋಗ್ಯತೆಯಿಲ್ಲದ ಕಾರಣ ಸೂತ್ರತಾತ್ಪರ್ಯದ ಪರಿಜ್ಞಾನ ಹೊಂದಿಲ್ಲ. ಅಜ್ಞಾನವಿರುವ ಕಾರಣದಿಂದ ಮತ್ತು ಯೋಗ್ಯತೆಯಿಲ್ಲದ ಕಾರಣದಿಂದ ಸೂತ್ರತಾತ್ಪರ್ಯಪರಿಜ್ಞಾನವನ್ನು ಇತರರು ಹೊಂದಿಲ್ಲ. ಕಣ್ಣಿಗೆ ಪಟ್ಟಿಕಟ್ಟಿಕೊಂಡ ಪುರುಷನಂತೆ ಅಂತಶ್ಚಕ್ಷುಸ್ಸನ್ನು ಕಳೆದುಕೊಂಡಿದ್ದಾರೆ.

ಬ್ರಹ್ಮಸೂತ್ರಗಳಿಗೆ ಅನ್ಯಥಾವ್ಯಾಖ್ಯಾನಮಾಡಿದವರಲ್ಲಿ ಇಪ್ಪತ್ತೊಂದು ಮಂದಿ ಪ್ರಸಿದ್ಧರಾಗಿದ್ದಾರೆ. ೧) ಭಾರತೀವಿಜಯ ೨) ಸಚ್ಚಿದಾನಂದ ೩) ಬ್ರಹ್ಮಘೋಷ ೪) ಶತಾನಂದ ೫)ಉದ್‌ವರ್ತ ೬) ವಿಜಯ ೭) ರುದ್ರಭಟ್ಟ ೮) ವಾಮನ ೯) ಯಾದವಪ್ರಕಾಶ ೧೦) ರಾಮಾನುಜ ೧೧) ಭರ್ತೃಪ್ರಪಂಚ ೧೨) ದ್ರವಿಡ ೧೩ ) ಬ್ರಹ್ಮದತ್ತ ೧೪) ಭಾಸ್ಕರ ೧೫) ಪಿಶಾಚ ೧೬) ವೃತ್ತಿಕಾರಕ ೧೭) ವಿಜಯಭಟ್ಟ ೧೮) ವಿಷ್ಣುಕ್ರಾಂತ ೧೯) ವಾದೀಂದ್ರ ೨೦) ಮಾಧವದಾಸ ೨೧) ಶಂಕರ.

ಯಥಾರ್ಥವಾಗಿ ವ್ಯಾಖ್ಯಾನಮಾಡಲು ಆಚಾರ್ಯರೊಬ್ಬರೇ ಸಮರ್ಥರು. ಇದಕ್ಕೆ ಮುಖ್ಯ ಕಾರಣ ಆಚಾರ್ಯರಲ್ಲಿರುವ ಸಾರ್ವಜ್ಞ್ಯ. 'ಭಗವಾನ್' ಎಂಬ ಶಬ್ದ ಸರ್ವಜ್ಞತ್ವವನ್ನು ತಿಳಿಸುತ್ತಿದೆ.

### ಗ್ರಂಥಾರಂಭದಲ್ಲಿ ಮಂಗಳದ ಉಲ್ಲೇಖ

**वा.मं. – कैवल्यादीति** ।। 'वाचनिकमङ्गलस्य भगवन्नमस्कारोपबृंहितत्वाद् भाष्यं पठतामितरेषां मोक्षादिफलं निर्विघ्नपरिसमाप्त्यादिफलं च भवति । एकान्तभक्तस्य निरन्तरायस्य चाचार्यस्य भगवत्प्रीतिरेव फलम्' इति भावः । 'समाप्त्यर्थं च' इत्यनन्तरं 'कृतम्' इति शेषः । यद्वा, कैवल्याद्यखिलफलसाधनतासिद्धिरर्थप्रयोजनं यस्य नमस्कारस्य स तथोक्तः । एवं 'निरन्तराय' इत्याद्यपि नमस्कारविशेषणम् । तेन तयोश्चतुर्थ्यन्तत्वमभिप्रेत्य 'ग्रथयति' इत्यनेनान्वये ग्रथनस्य फलसाधनतासिद्ध्यादिफलकत्वमुक्तं स्यात् । तथाच नमस्काराधिकारादिग्रथनसूचने 'शिष्यशिक्षार्थम्' इत्युत्तरग्रन्थविरोधः । तत्र ग्रथनस्य शिष्यशिक्षाफलकत्वोक्तेरिति शङ्का परास्ता ।

'ಕೈವಲ್ಯಾದಿ' ಎಂಬ ವಾಕ್ಯದ ಅರ್ಥ ಹೀಗೆ --

ಬಾಯಿಯಿಂದ ಗಟ್ಟಿಯಾಗಿ ಭಗವಂತನನ್ನು ಹೊಗಳಿ ನಮಿಸಬೇಕು. ಇಂತಹ ಮಂಗಳವನ್ನು ಆಚರಿಸಿ ಭಾಷ್ಯವನ್ನು ಪಠಿಸಿದಾಗ ನಿರ್ವಿಘ್ನವಾಗಿ ಗ್ರಂಥಾಧ್ಯಯನ ಪೂರ್ಣವಾಗುತ್ತದೆ. ಅಷ್ಟೆ ಅಲ್ಲದೆ ಮೋಕ್ಷಾದಿಪುರುಷಾರ್ಥವೂ ದೊರೆಯುತ್ತದೆ. ಈ ಫಲ ನಮಗಷ್ಟೇ ಹೊರತು ಆಚಾರ್ಯರಿಗಲ್ಲ. ವಿಘ್ನವೇ ಇಲ್ಲದ ಏಕಾಂತಭಕ್ತರಿಗೆ ಪ್ರತಿಯೊಂದರಿಂದ ಕೇವಲ ಭಗವತ್‌ಪ್ರೀತಿಯೇ ಮುಖ್ಯಫಲ. 'ಸಮಾಪ್ತ್ಯರ್ಥಂ ಚ' ಎಂಬ ಪದದ ಮುಂದೆ 'ಕೃತಮ್(ಮಾಡಲ್ಪಟ್ಟಿದೆ)' ಎಂಬುದನ್ನು ಸೇರಿಸಿಕೊಳ್ಳಬೇಕು.

ಅಥವಾ ಈ ಅನ್ವಯದಲ್ಲಿ 'ಕೈವಲ್ಯಾದ್ಯಖಿಲಫಲಸಾಧನತಾಸಿದ್ಧ್ಯರ್ಥಂ' ಎಂಬ ಪದಕ್ಕೆ ನಮಸ್ಕಾರದಲ್ಲಿ ಅನ್ವಯ. ಮೋಕ್ಷಾದಿಪುರುಷಾರ್ಥವೇ ಪ್ರಯೋಜನವಾಗಿ ಉಳ್ಳದ್ದು ನಮಸ್ಕಾರ ಎಂದರ್ಥವಾಗುತ್ತದೆ. 'ನಿರಂತರಾಯ ಪರಿಸಮಾಪ್ತ್ಯಾದ್ಯರ್ಥಂ' ಎಂಬ ಪದಕ್ಕೂ ಸಹ ನಮಸ್ಕಾರದಲ್ಲಿ ಅನ್ವಯ. ಆದ್ದರಿಂದ ಗ್ರಂಥಾರಂಭದಲ್ಲಿ ಮಾಡುವ ನಾರಾಯಣನ ನಮಸ್ಕಾರಕ್ಕೆ ಮೋಕ್ಷಾದಿಪುರುಷಾರ್ಥವು ಪ್ರಯೋಜನವಾಗಿದೆ ಮತ್ತು ನಿರ್ವಿಘ್ನಪರಿಸಮಾಪ್ತಿಯು ಪ್ರಯೋಜನವಾಗುತ್ತದೆ ಎಂದರ್ಥವಾಗುತ್ತದೆ. ಹೀಗೆ ಹೇಳಿದಾಗ ಈ ಎರಡೂ ಪದಗಳು ಚತುರ್ಥಿವಿಭಕ್ತ್ಯಂತವಾದ ಅರ್ಥವನ್ನು ನೀಡುತ್ತವೆ. ಈ ಎರಡು ಪ್ರಯೋಜನವುಳ್ಳ ನಮಸ್ಕಾರಕ್ಕೆ ಗ್ರಥಯತಿ ಎಂಬುದಕ್ಕೆ ಅನ್ವಯಮಾಡಿದಾಗ ಗ್ರಂಥದಲ್ಲಿ ಮಾಡುವ ನಮಸ್ಕಾರದ ಉಲ್ಲೇಖಕ್ಕೂ ಕೈವಲ್ಯಾದಿಪ್ರಯೋಜನಗಳಿವೆ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಮುಂದೆ 'ಶಿಷ್ಯಶಿಕ್ಷಣೆಗೋಸ್ಕರ ನಮಸ್ಕಾರ ಹಾಗೂ ಅನುಬಂಧಚತುಷ್ಟಯದ ಉಲ್ಲೇಖ'ವೆಂದು ಹೇಳುತ್ತಾರೆ. ಇದರ ವಿರೋಧಕ್ಕೆ ಈಗ ಅವಕಾಶವಿಲ್ಲ.

## ನಾರಾಯಣನಿಗೆ ನಮಸ್ಕಾರ

**ब्रह्मसूत्रभाष्यम् –**

**नारायणं गुणैः सर्वैरुदीर्णं दोषवर्जितम् ।**
**ज्ञेयं गम्यं गुरूंश्चापि नत्वा सूत्रार्थ उच्यते ॥**

ನಾರಾಯಣನು ಸಕಲಗುಣಪರಿಪೂರ್ಣನಾಗಿದ್ದಾನೆ. ಸಕಲದೋಷಗಳಿಂದ ವಿದೂರನಾಗಿದ್ದಾನೆ. ಸಜ್ಜನರಿಂದ ತಿಳಿಯಲು ಅರ್ಹನು ಮತ್ತು ಹೊಂದಲು ಯೋಗ್ಯನೂ ಆಗಿದ್ದಾನೆ. ಇಂತಹ ಲಕ್ಷ್ಮೀಪತಿಯನ್ನು ಭಕ್ತಿಯಿಂದ ನಮಸ್ಕಾರ ಮಾಡಿ, ಮತ್ತು ಗುರುಗಳಾದ ವೇದವ್ಯಾಸದೇವರನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳಿಗೆ ಅರ್ಥವನ್ನು ಹೇಳುತ್ತೇನೆ.

ಪ್ರತಿಪದಾರ್ಥ - ಸರ್ವೈಃ = ಸಕಲವಿಧವಾದ, ಗುಣೈಃ = ಕಲ್ಯಾಣಗುಣಗಳಿಂದ, ಉದೀರ್ಣಂ = ಪೂರ್ಣನಾದ (ಉತ್ಕೃಷ್ಟನಾದ), ದೋಷವರ್ಜಿತಮ್ = ಸಕಲದೋಷಗಳಿಂದ ವಿದೂರನಾದ, ಜ್ಞೇಯಂ = ಸಜ್ಜನರ ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನಗಳಿಗೆ ವಿಷಯನಾದ, ಗಮ್ಯಂ = ಜ್ಞಾನಿಗಳಿಂದ ಹೊಂದಲು ಯೋಗ್ಯನಾದ, ನಾರಾಯಣಂ = ಲಕ್ಷ್ಮೀಪತಿಯಾದ ನಾರಾಯಣನನ್ನು, ನತ್ವಾ = ನಮಸ್ಕಾರಮಾಡಿ, ಅಪಿ = ಮತ್ತು (ಅಪಿ ಪದವು ಗುರುದೇವತೆಗಳ ಭೇದದಲ್ಲಿ ಅರುಚಿಯನ್ನು ತೋರಿಸುತ್ತಿದೆ), ಗುರೂಂಶ್ಚ = ಗುರುಗಳಾದ ವೇದವ್ಯಾಸದೇವರನ್ನೂ ಕೂಡ, ನತ್ವಾ = ನಮಸ್ಕಾರ ಮಾಡಿ, ಸೂತ್ರಾರ್ಥಃ = ಬ್ರಹ್ಮಸೂತ್ರಾರ್ಥವು (ಸಮಸ್ತವೇದಇತಿಹಾಸಪುರಾಣ ಮೊದಲಾದ ಸಕಲಶಬ್ದರಾಶಿಗಳಿಂದ ಪ್ರತಿಪಾದ್ಯನಾದ ನಾರಾಯಣನೆಂಬ ಬ್ರಹ್ಮಸೂತ್ರಾರ್ಥವು), (ಮಯಾ = ನನ್ನಿಂದ), ಉಚ್ಯತೇ = ಹೇಳಲ್ಪಡುತ್ತದೆ[1].

(१) **भाष्यदीपिका –** परमानन्दाद्यात्मकस्य परमात्मनः प्रतिबिम्बतया स्वतश्चिदानन्दाद्यात्मकस्य जीवस्य अनाद्यविद्याकामकर्मादिनिमित्तबन्धध्वंसाय निखिलजीवजडात्मकात् प्रपञ्चात्

परमार्थतोऽत्यन्तभिन्नतया निखिलगुणोदारतया निरस्तसमस्तदोषतया परमपुरुष-मवगमयितुं सकलसदागमानां प्रवृत्तिरिति तत्त्वम् । यदाहुः -

**'अदुःखमितरत् सर्वं जीवा एव तु दुःखिनः ।**
**तेषां दुःखप्रहाणाय श्रुतिरेषा प्रवर्तते ।।' इति ।**

प्रवर्तते दुःखप्रहाणसाधनं परमात्मानं प्रतिपादयतीत्यर्थः । तेषां चार्थनिर्णयाय ब्रह्मसूत्राणि चकार भगवान् बादरायणः । तानि च पटलपिहितनयनवद् यथावदर्था-वेत्तृभिरविद्याख्यपटलपिहितनयनप्रदोक्तसदर्थैरन्यैरन्यथाव्याख्यातानि यथावद् व्याचिख्या-सुर्भगवानानन्दतीर्थाचार्यः समङ्गलस्यैव सफलत्वात् प्रारिप्सितभाष्यस्य कैवल्याद्यखिल-फलसाधनतासिद्ध्यर्थं निरन्तरायपरिसमाप्त्यर्थं च नारायणप्रणामरूपं मङ्गलमाचरन् शिष्यशिक्षार्थं ग्रथयति चिकीर्षितं च प्रतिजानीते – **नारायणम्** इति ।।

**सर्वैर्गुणैरुदीर्णं** उदारम् उत्कृष्टम् । **दोषवर्जितं** दोषरहितम् । **ज्ञेयं** परोक्षापरोक्षाख्योभय-विधज्ञानविषयीकरणीयम् । **गम्यं** प्राप्यम् । उभयत्र सद्भिरिति शेषः । नारायणं नत्वा गुरूंश्च इति चकारार्थः समुच्चयः । तथा च गुरूंश्च नत्वा साष्टाङ्गं नमस्कृत्य सूत्रार्थः समस्तवेदतदुपबृंहणेतिहासपुराणादिशब्दराश्यर्थभूतो नारायणाख्यो ब्रह्मसूत्रार्थो मया 'उच्यते' भाष्यत इति योजना ।।

अत्र गुणैरुदीर्णम् इत्यनेन प्रथमाध्यायस्य, दोषवर्जितम् इत्यनेन द्वितीयाध्यायस्य, ज्ञेयम् इत्यनेन तृतीयाध्यायस्य, गम्यम् इत्यनेन चतुर्थाध्यायस्यार्थः शिष्यहिततयाऽऽदौ सङ्गृहीत इति ज्ञातव्यम् । अनेनैव विशेषणचतुष्टयेन विशेष्यवाचकनारायणशब्दः न डित्थादिशब्दवत् साङ्केतिकः; किन्तु अराः दोषाः तद्विरुद्धाः नाराः गुणाः तेषामाश्रय इति वा, अराणामाश्रयो न भवतीति वा, विषयतया नरविशेषसम्बन्धिज्ञानाश्रय इति वा, अरविधुरमुक्ताश्रय इति वा योगेनोत्कृष्टगुणवाचक इत्युक्तं भवति । तेन नारायण एव शास्त्रार्थ इति प्रदर्शितम् । अनेनैव विशेषणचतुष्टयेन वन्द्यताप्रयोजकानि बहुगुणत्व-निर्दोषत्वशास्त्रज्ञेयत्वशास्त्रगम्यत्वानि चोक्तानि ।।

यद्वा – अत्र नारायणमित्यादिपदपञ्चकेन समुद्रशायित्वसर्ववसनोत्कर्षक्रीडाज्ञानादि-गुणैरुच्चत्वसम्यग्दोषकर्षणप्रकृष्टद्युतिमेयत्वज्ञानिनः प्रति प्राप्तिनिरोधरहितत्वाख्य-निमित्तपञ्चकयुतेन नारायणवासुदेवसङ्कर्षणप्रद्युम्नानिरुद्धाख्यमूर्तय उच्यन्ते; तासामेत-च्छास्त्राध्यायपादेषु प्रतिपिपादयिषितत्वात् । तथा च 'नारायणं नत्वा गुणैरुदीर्णं नत्वा दोषवर्जितं नत्वा' इत्यादिका तत्वप्रदीपिकोक्तयोजना द्रष्टव्या ।।

ಪಂಚಪೂರ್ಣಚಂದ್ರಿಕಾ

## ಮಂಗಳಶ್ಲೋಕದಲ್ಲಿರುವ ನಾಲ್ಕು ವಿಶೇಷಣಗಳ ವೈಶಿಷ್ಟ್ಯ

तत्वप्रकाशिका –

**अत्र निरुपपद'सूत्र'शब्देन ब्रह्मसूत्रमुच्यते । तस्य मुख्यार्थाभिधायकत्वात् । तेषां च तादृशत्वात् । वक्ष्यमाणमेव सूत्रार्थं श्रोतृशेमुषीमनुकूलयिष्यन्नादौ प्रस्तावयितुं विशेषणचतुष्टयेनेष्टदेवतां विशिनष्टि । तथा हि । आदिसूत्रे भगवतः प्रसत्त्या पुरुषार्थो भवतीति सूचितेऽधिकारिणः शङ्कोन्मिषति 'पुरुषान्तरेऽनुपलभ्यमानं पुरुषार्थप्रदत्वं तस्य चेत् कीदृशोऽसौ?' इति । तां निवारयदाद्याध्यायस्यार्थो – गुणैः सर्वैरुदीर्णम् इति ॥**

**तत्र तत्पर्यायानन्तशब्दानां महायोगवृत्त्या हरौ समन्वयसमर्थनद्वारा सर्वगुणोदीर्णतैव वर्ण्यते । स च युक्त्यादिभिरुक्तसमन्वये निरोधिते दोषवानपि स्यात्, इत्याशङ्कां परिहरतो द्वितीयाध्यायस्यार्थो – दोषवर्जितमिति ॥ तत्र युक्त्यादीनामाभासत्ववर्णनेन निर्दोषत्वस्यैव भाषितत्वात् । एवंविधस्य च प्रसादः कया विधया भविष्यति? इत्याकाङ्क्षां पूरयतस्तृतीयस्यार्थो – ज्ञेयमिति ॥ तत्र निरुक्त्यादिभिस्तत्प्रसत्त्यर्थं तस्य ज्ञेयतायाः कथितत्वात् । प्रसन्नश्च कीदृशं पुमर्थं प्रयच्छति? इत्याकाङ्क्षां पूरयतस्तुरीयस्यार्थो – गम्यमिति ॥ तत्र ज्ञानिनो भगवत्प्राप्तिलक्षणमोक्षस्योदितत्वात् ॥**

ಶ್ಲೋಕದಲ್ಲಿ 'ಸೂತ್ರಾರ್ಥಃ ಉಚ್ಯತೇ' ಎಂದು ಹೇಳಿದ್ದಾರೆ. ಇಲ್ಲಿ ಯಾವ ಸೂತ್ರವೆಂದು ಹೇಳದೆ ಕೇವಲ(ವಿಶೇಷಣವಿಲ್ಲದೆ) ಸೂತ್ರವೆಂದು ಹೇಳಿದ್ದರಿಂದ ಯಾವ ಸೂತ್ರವನ್ನು ತೆಗೆದುಕೊಳ್ಳಬೇಕು? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಉಪಪದವಿಲ್ಲದ್ದು ಮುಖ್ಯಾರ್ಥವನ್ನೇ ಹೇಳುತ್ತದೆ' ಎಂಬ ನಿಯಮ ಪ್ರಸಿದ್ಧವಾಗಿದೆ. ಹಾಗಾಗಿ ವಿವಿಧಸೂತ್ರಗಳಲ್ಲಿ ಬ್ರಹ್ಮಸೂತ್ರವೇ ಮುಖ್ಯವಾದ್ದರಿಂದ ಪ್ರಕೃತ ನಿರುಪಪದಸೂತ್ರಶಬ್ದದಿಂದ ಬ್ರಹ್ಮಸೂತ್ರವನ್ನೇ ಇಟ್ಟುಕೊಳ್ಳಬೇಕು.

ಮುಂದೆ ಹೇಳುವ ಸೂತ್ರಾರ್ಥಗಳಲ್ಲಿ ಶ್ರೋತೃಗಳ ಬುದ್ಧಿಗೆ ಅನುಕೂಲವಾಗಲೆಂಬ ಉದ್ದೇಶದಿಂದ ಮೊದಲು ಪ್ರಸ್ತಾವನೆ ಮಾಡಲು ನಾಲ್ಕು ವಿಶೇಷಣಗಳ ಮೂಲಕ ಇಷ್ಟದೇವತೆಯನ್ನು ವರ್ಣನೆ ಮಾಡುತ್ತಿದ್ದಾರೆ. ಹೇಗೆಂದರೆ 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬ ಪ್ರಥಮಸೂತ್ರದಲ್ಲಿ 'ಅತಃ' ಎಂಬ ಪದದಿಂದ 'ಭಗವಂತನ ಪ್ರಸಾದದಿಂದ ಪುರುಷಾರ್ಥವು ಪ್ರಾಪ್ತವಾಗುತ್ತದೆ' ಎಂದು ಸಂಕ್ಷೇಪವಾಗಿ ಹೇಳಲಾಗಿದೆ. ಇದನ್ನು ಕೇಳಿದ ಅಧಿಕಾರಿಗೆ ಸಹಜವಾಗಿ

ಆಕಾಂಕ್ಷೆ ಬರುತ್ತದೆ. ಬೇರೆ ಯಾವ ಪುರುಷನಲ್ಲಿಯೂ ದೊರೆಯಲಾರದ ಮೋಕ್ಷದಾತೃತ್ವಗುಣವು ಬ್ರಹ್ಮನಲ್ಲಿ ಇದೆಯೆಂದರೆ ಅಂತಹ ಬ್ರಹ್ಮನು ಹೇಗಿದ್ದಾನೆ? ಎಂದು. ಈ ಶಂಕೆಗೆ ಪರಿಹಾರಕವಾಗಿ ಮೊದಲನೆಯ ಅಧ್ಯಾಯದ ಅರ್ಥವನ್ನು 'ಗುಣೈಃ ಸರ್ವೈರುದೀರ್ಣಂ' ಎಂಬುದರಿಂದ ಹೇಳಿದ್ದಾರೆ. ಮೊದಲನೆಯ ಅಧ್ಯಾಯದಲ್ಲಿ ಪರ್ಯಾಯಶಬ್ದಗಳಲ್ಲದ ಅನಂತಶಬ್ದಗಳನ್ನು ಮಹಾಯೋಗವೃತ್ತಿಯಿಂದ ಹರಿಯಲ್ಲಿ ಸಮನ್ವಯಮಾಡುವ ಮೂಲಕ ಸಕಲಗುಣ-ಪರಿಪೂರ್ಣತ್ವವನ್ನು ವರ್ಣಿಸಿದ್ದಾರೆ. 'ಸಕಲಶ್ರುತಿಗಳಿಗೆ ಭಗವಂತನಲ್ಲಿ ಸಮನ್ವಯ ಹೇಳುವುದಾದರೆ ಶ್ರುತಿಗಳಿಗೆ ಯುಕ್ತಿವಿರೋಧ ಬರುವುದರಿಂದ ಭಗವಂತನು ದೋಷವುಳ್ಳವನೂ ಆಗಬೇಕಾದೀತು ಎಂಬ ಶಂಕೆಯನ್ನು ಪರಿಹರಿಸಲು ಎರಡನೆಯ ಅಧ್ಯಾಯದ ಅರ್ಥವನ್ನು 'ದೋಷವರ್ಜಿತಮ್' ಎಂಬುದರಿಂದ ಹೇಳುತ್ತಿದ್ದಾರೆ. ಅಂತಹ ಯುಕ್ತಿಗಳಿಗೆ ಆಭಾಸತ್ವವನ್ನು ವರ್ಣಿಸುವ ಮೂಲಕ ನಿರ್ದೋಷತ್ವವನ್ನೇ ಈ ಅಧ್ಯಾಯದಲ್ಲಿ ಸಮರ್ಥಿಸಿದ್ದಾರೆ.

ಸಕಲಗುಣಪರಿಪೂರ್ಣನೂ ನಿರ್ದೋಷಿಯೂ ಆದ ಇಂತಹ ಭಗವಂತನ ಪ್ರಸಾದವು ಯಾವುದರಿಂದ ಪ್ರಾಪ್ತವಾಗುತ್ತದೆ? ಎಂಬ ಶಂಕೆಯನ್ನು ಪರಿಹರಿಸಲು ಮೂರನೆ ಅಧ್ಯಾಯದ ಅರ್ಥವನ್ನು 'ಜ್ಞೇಯಮ್' ಎಂಬುದರಿಂದ ಹೇಳಿದ್ದಾರೆ. ಈ ಅಧ್ಯಾಯದಲ್ಲಿ ಭಗವಂತನ ಪ್ರಸಾದಕ್ಕಾಗಿ ಭಕ್ತಿ,ವಿರಕ್ತಿಗಳಿಂದ ಅವನನ್ನು ತಿಳಿಯಬೇಕೆಂದು ಸಾಧನೆಯ ಮಾರ್ಗವನ್ನು ತಿಳಿಸಿದ್ದಾರೆ. ಪ್ರಸನ್ನನಾದ ಭಗವಂತನು ಎಂತಹ ಪುರುಷಾರ್ಥವನ್ನು ಕೊಡುತ್ತಾನೆ? ಎಂಬ ಆಕಾಂಕ್ಷೆಯನ್ನು ಪೂರಣಗೊಳಿಸಲು ನಾಲ್ಕನೇ ಅಧ್ಯಾಯದ ಅರ್ಥವನ್ನು 'ಗಮ್ಯಂ' ಎಂಬುದರಿಂದ ಹೇಳುತ್ತಿದ್ದಾರೆ. ಈ ಅಧ್ಯಾಯದಲ್ಲಿ ಜ್ಞಾನಿಗಳಿಂದ ಹೊಂದಲು ಯೋಗ್ಯವಾದ ಭಗವತ್‌ಪ್ರಾಪ್ತಿ-ರೂಪವಾದ ಮೋಕ್ಷವನ್ನು ವರ್ಣಿಸಿದ್ದಾರೆ. ಹೀಗೆ ಮಂಗಳಶ್ಲೋಕದಲ್ಲಿ ನಾಲ್ಕುವಿಶೇಷಣಗಳಿಂದ ನಾಲ್ಕು ಅಧ್ಯಾಯದ ಅರ್ಥವನ್ನು ತಿಳಿಸಿದರು.

### ಟೀಕೆಯ ಕಠಿಣಪದಗಳ ಅರ್ಥ

भा.दी. – **'सूत्रम्'** इति समुदाया(शयम्)र्थम् । अत एव **'तेषाम्'** इत्यग्रे बहुवचनम् । तस्य निरुपपदस्य । व्यक्तमेतदग्रे **'मुख्यस्य निर्विशेषणत्वात्'** इति भावः ।

अत्र गुणदोषादिस्वरूपोक्तिः शुद्धेत्याद्यपद्य एव व्यक्ता इति विशेषणानां कृत्यमेव त्रेधा व्यनक्ति – **वक्ष्यमाणमित्यादिना** ।। **प्रस्तावयितुं** = सङ्क्षिप्यादौ वक्तुम् । तस्य च प्रपञ्चजिज्ञासाजननं फलमिति भावः । **प्रसत्त्या** = प्रसादेन । **सूचित इति** ।। अतःशब्देन सङ्क्षिप्योक्त इत्यर्थः । **महायोगेति** ।। **'शब्दैरतोऽनन्तगुणो**

**यच्छब्दा योगवृत्तयः' इत्यणुभाष्योक्तिरिति** भावः । **दोषवानपीति** ।। **'समन्वयनिरोधे सर्वकर्तृत्वसार्वज्ञसर्वैश्वर्यादेरसिद्ध्या तत्तन्नयपूर्वपक्षोक्तयुक्त्यादिभिर्जीववत् जनि-मृत्यादिदोषवानपि स्यात्' इत्यर्थः । 'न केवलं सर्वकर्तृत्वादिगुणाभाववान्' इति 'अपेः' अर्थः । तस्य च श्रुत्यैव निरस्तत्वात् तत्समन्वयस्य युक्तिसमयादिभि-र्निरुद्धत्वादिति** भावः । **निर्दोषत्वस्यैवेति** ।। **'सर्वदोषोज्झितस्तस्मात्' इत्याद्युक्तेरिति** भावः । **विरक्त्यादिभिरिति** ।। **तस्मात् 'विरक्तः सन् ज्ञानमेव समाश्रयेत्' इत्युक्तेरिति** भावः । **'प्रविश्य भुञ्जते भोगान्' इत्याद्युक्तेराह – भगवत्प्राप्तिरिति** ।।

'ಸೂತ್ರಮ್'' ಎಂಬಲ್ಲಿರುವ ಏಕವಚನವು ಸಮುದಾಯಾರ್ಥದಲ್ಲಿದೆ. ಆದ್ದರಿಂದಲೇ ಮುಂದೆ 'ತೇಷಾಂ' ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ. 'ತಸ್ಯ' ಎಂದರೆ ನಿರುಪಪದವಾದ ಎಂದರ್ಥ. 'ಮುಖ್ಯಸ್ಯ ನಿರ್ವಿಶೇಷಣತ್ವಾತ್' ಎಂಬಲ್ಲಿ ನಿರುಪಪದಕ್ಕೆ ಮುಖ್ಯತ್ವವನ್ನು ಸ್ಪಷ್ಟಪಡಿಸುತ್ತಾರೆ.

ಮಂಗಳಶ್ಲೋಕದಲ್ಲಿ ನಿರೂಪಿಸಿದ ಗುಣದೋಷಗಳ ಸ್ವರೂಪವು ಶುದ್ಧಾನಂದೋರು ಎಂಬ ಪ್ರಥಮಮಂಗಳಶ್ಲೋಕದಿಂದಲೇ ಸ್ಪಷ್ಟಪಡಿಸಿದ್ದಾಗಿದೆ. ಆ ವಿಶೇಷಣಗಳ ಕೃತ್ಯವನ್ನು ಮೂರು ಬಗೆಯಲ್ಲಿ "ವಕ್ಷ್ಯಮಾಣಂ" ಎಂಬ ಮಾತಿನಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಪ್ರಸ್ತಾವಯಿತುಂ' ಸಂಕ್ಷೇಪವಾಗಿ ಮೊದಲು ಹೇಳಲು. ವಿಸ್ತಾರವಾದ ಜಿಜ್ಞಾಸೆಗೆ ಇಂತಹ ಸಂಕ್ಷೇಪಕಥನವು ಕಾರಣವಾಗಿದೆ ಎಂದರ್ಥ. ಪ್ರಸತ್ಯಾ = ಪ್ರಸಾದದಿಂದ. ಸೂಚಿತಃ = ಅತಃಶಬ್ದದಿಂದ ಸಂಕ್ಷೇಪವಾಗಿ ಹೇಳಲ್ಪಟ್ಟಿದೆ.

'ಇತ್ಯಾದ್ಯನ್ಯತ್ರ ನಿಯತ್ಯೈರಪಿ ಮುಖ್ಯತಯೋದಿತಃ ।
ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ।।'

ಎಂದು ಅಣುಭಾಷ್ಯದಲ್ಲಿ ಎಲ್ಲಾ ಶಬ್ದಗಳ ಮಹಾಯೋಗವೃತ್ತಿಯನ್ನು ನಾರಾಯಣನಲ್ಲಿ ಹೇಳಿದ್ದಾರೆ.

ದೋಷವಾನಪಿ ಎಂಬ ಶಬ್ದಕ್ಕೆ ಹೀಗೆ ಅರ್ಥ -- 'ಸಮನ್ವಯವನ್ನು ವಿರೋಧಿಸಿದಾಗ ಸರ್ವಕರ್ತೃತ್ವ, ಸರ್ವಜ್ಞತ್ವ, ಸರ್ವೈಶ್ವರ್ಯ' ಮೊದಲಾದ ಗುಣಗಳು ಭಗವಂತನಲ್ಲಿ ಸಿದ್ಧವಾಗುವುದಿಲ್ಲ. ಆಗ ಆಯಾ ಅಧಿಕರಣಗಳ ಪೂರ್ವಪಕ್ಷದ ಯುಕ್ತಿಗಳಿಂದ ಜೀವನಲ್ಲಿ ಜನನಮರಣಾದಿದೋಷಗಳು ಭಗವಂತ-ನಲ್ಲಿಯೂ ಬರಬೇಕಾದೀತು' ಎಂದು. 'ಕೇವಲ ಸರ್ವಕರ್ತೃತ್ವಾದಿಗುಣಗಳಿಲ್ಲ ಎಂದಷ್ಟೇ ಅಲ್ಲ' ಎಂದು ಅಪಿಪದದ ಅರ್ಥ. ಅಂತಹ ದೋಷಗಳು ಭಗವಂತನಲ್ಲಿ ಇಲ್ಲವೆಂದು ಶ್ರುತಿಯೇ ನಿರಾಕರಿಸಿದೆ.

"ನಿರ್ದೋಷತ್ವಸ್ಯೈವ ಇತಿ" - 'ಸರ್ವದೋಷೋಜ್ಝಿತಸ್ತಸ್ಮಾತ್' ಎಂದು ಅಣುಭಾಷ್ಯದಲ್ಲಿ ಹೇಳಿದಂತೆ ನಿರ್ದೋಷತ್ವವು ಸಿದ್ಧವಾಗಿದೆ ಎಂದು ಅಭಿಪ್ರಾಯ. "ವಿರಕ್ತ್ಯಾದಿಭಿರಿತಿ" - 'ಯಾತಿ ತಸ್ಮಾತ್ ವಿರಕ್ತಃಸನ್ ಜ್ಞಾನಮೇವ ಸಮಾಶ್ರಯೇತ್' ಎಂದು ಅಣುಭಾಷ್ಯದಲ್ಲಿ ಹೇಳಿದಂತೆ ಭಕ್ತಿ,ವಿರಕ್ತಿಗಳಿಂದ ಭಗವಂತನನ್ನು ತಿಳಿಯಬೇಕೆಂದು ಅಭಿಪ್ರಾಯ. 'ಪ್ರವಿಶ್ಯ ಭುಂಜತೇ ಭೋಗಾನ್' ಎಂಬಂತೆ ಭಗವಂತನನ್ನು ಹೊಂದ-ಬೇಕೆಂದು "ಭಗವತ್ಪ್ರಾಪ್ತಿಃ" ಎಂಬ ಟೀಕೆಯಲ್ಲಿ ಹೇಳಿದ್ದಾರೆ.

*ಜಿಜ್ಞಾಸಾಧಿಕರಣ*

वा.मं. – पाणिन्यादिसूत्रप्रतीतिनिरासायाह – अत्रेति ।। अत्र 'सर्वसूत्राणां ब्रह्मरूपैकार्थप्रतिपादकत्वेनैकवाक्यत्वम्' इति सूचनाय समुदायविवक्षया एकवचनप्रयोगः । उच्यते – 'मुख्यया वृत्त्या प्रतिपाद्यते' । कुतः? इत्यत आह – तस्येति ।। 'निरुपपदशब्दस्य' इत्यर्थः । 'मुख्यस्य निर्विशेषेण शब्दोऽन्येषां विशेषणात् इति वक्ष्यमाणत्वात्' इति भावः ।

तथापि तथाविधान्यसूत्रस्य ग्रहणं किं न स्यात्? इत्यत आह – तेषां चेति ।। 'ब्रह्मसूत्राणामेव' इत्यर्थः । अत्र महावाक्यार्थभेदाभावेऽपि अवान्तरवाक्यार्थभेदात् सर्वसूत्राणां प्रत्येकम् अवान्तरब्रह्मविद्यात्वम् इति सूचनाय बहुवचनप्रयोगः । तादृशत्वात् ।। सूत्रान्तरापेक्षया मुख्यत्वात् । 'येषां सूत्रत्वमञ्जसा इति वक्ष्यमाणत्वात्' इति भावः । 'नारायणं नत्वा' इत्येतावता नमस्कारग्रथनात्, किं विशेषणचतुष्टयेन? इत्यत आह – वक्ष्यमाणमिति ।। 'सूत्रस्याध्यायचतुष्टयात्मकस्य वक्ष्यमाणो योऽर्थः गुणपरिपूर्णत्वादिरूपः तम्' इत्यर्थः । प्रस्तावयितुं सङ्क्षेपतो निरूपयितुं तस्य प्रपञ्चे जिज्ञासाजननं प्रयोजनमिति भावः । विशिनष्टि = इतरेभ्यो व्यावर्तयति । प्रस्तावप्रकारं दर्शयति – 'तथाहि' इत्यादिना 'उदितत्वात्' इत्यन्तेन । प्रसक्त्या = प्रमादेन । सूचित इति ।। 'अतःशब्देन सङ्क्षिप्योक्तः' इत्यर्थः । तेन 'परस्य ब्रह्मणो विष्णोः प्रसादादिति वा भवेत्' इति प्रमाणानुसारेण साक्षादतःशब्दार्थसम्भवे 'सूचितम्' इति कथमुक्तम्? इति शङ्का परास्ता । उन्मिषति = उदेति । प्रथमाध्याये सर्वशब्दसमन्वयस्यैवोक्त्या कथं गुणपूर्णत्वं तदर्थः? इत्यत आह – तत्र हीति ।। 'आनन्दमयादिसर्वशब्दानां समन्वये तत्तच्छब्दप्रवृत्तिनिमित्तप्रचुरानन्दत्वादिसर्वगुणगणलाभात्' इति भावः । अत्र पर्यायानन्तशब्दसमन्वये तेषामेकार्थप्रतिपादकत्वात् सर्वगुणोदीर्णतासिद्धिः न स्यात्, अतः 'अपर्याय' इत्युक्तम् । तथाविधकतिपयशब्दसमन्वयेपि तदप्रसिद्ध्या 'अनन्ता' इत्युक्तम् । अपर्यायानन्तशब्दानां रूढ्या समन्वये गुणालाभात् 'महायोगवृत्त्या' इति । 'अनन्यसाधारणावयवार्थसापेक्ष्यवृत्त्या' इत्यर्थः । समन्वयेति ।। 'उपक्रमादिलिङ्गप्रमाणकशक्तितात्पर्यलक्षणसम्बन्धः' इत्यर्थः । 'स च' इति हरिपरामर्शकतच्छब्दस्य 'दोषवानपि' इत्यनेन सम्बन्धः । युक्त्यादीति आदिपदेन समयश्रुति-

न्यायोपेतश्रुतीनां ग्रहणम् । दोषवानपीति ।। प्रथमसूत्रे जीवव्यावृत्ततया ब्रह्मण एव जिज्ञासस्य सिद्धये तस्य गुणपूर्णत्वमुक्तम् । गुणपूर्त्यर्थमेव प्रथमाध्याये श्रुतिस्थशब्दसमन्वयो निरूपितः । युक्त्यादिविरोधेन श्रुतीनामप्रामाण्ये चोक्त-समन्वयासिद्ध्या गुणपूर्णत्वस्याप्यसिद्धिप्रसङ्गेन विरुद्धधर्माधिकरणत्वाभावेन जीवाभेदे जीववत् दोषवान् स्यादित्यर्थः । यद्वा, युक्त्यादिविरोधेन श्रुतीनामप्रामाण्यात् समन्वये निरोधिते सर्वकर्तृत्वसार्वज्ञ्यसर्वेश्वर्यादेरसिद्ध्या तत्तदधिकरणपूर्वपक्षप्रापक-युक्त्यादिभिः जीववज्जनिमृत्यादिदोषवानपि स्यादित्यर्थः । न केवलं गुणाभाववान् किन्तु दोषवानपि इत्यपिशब्दः ।

तत्रेति ।। युक्त्यादीनामाभासत्वेन तद्विरोधाभावे श्रुतिप्रामाण्यात् समन्वयेन गुणपूर्णत्वसिद्धौ विरुद्धधर्माधिकरणत्वेनाभेदाभावे दोषशङ्कानवकाश इति भावः । यद्वा, युक्त्यादेरप्रामाण्यप्रापकाभावात् न दोषशङ्का इति भावः । तत्रेति ।। पाद-त्रयोक्तवैराग्यभक्त्युपासनादिभिः चतुर्थपादोक्तभगवज्ज्ञानं भवतीत्युक्ते तस्य ज्ञेयत्व-मेवोक्तमिति भावः ।। तत्रेति ।। पादत्रयोक्तकर्मक्षयोत्क्रान्तिमार्गाणां भगवत्-प्राप्त्यर्थत्वात् चतुर्थपादोक्तभोगस्य तत्प्राप्तिं विनाऽयोगात् गम्यत्वमेवोक्तमिति भावः ।।

ಭಾಷ್ಯದ ಮಂಗಳಪದ್ಯದಲ್ಲಿ 'ಸೂತ್ರಾರ್ಥ ಉಚ್ಯತೇ' 'ಸೂತ್ರಗಳ ಅರ್ಥಗಳನ್ನು ಹೇಳುತ್ತೇನೆ' ಎಂದಷ್ಟೇ ಹೇಳಿದೆ. ಯಾವ ಸೂತ್ರಗಳೆಂದು ಹೇಳದ ಕಾರಣ ಪಾಣಿನ್ಯಾದಿಸೂತ್ರಗಳೆಂಬ ಭ್ರಾಂತಿ ಬರುತ್ತದೆ. ಅದರ ಪರಿಹಾರಕ್ಕೋಸ್ಕರ ಟೀಕೆಯಲ್ಲಿ 'ಅತ್ರ ನಿರುಪಪದ' ಇತ್ಯಾದಿ ಮಾತು ಹೊರಟಿದೆ. ವಿಶೇಷಣವಿಲ್ಲದ ಸೂತ್ರಶಬ್ದವು ಪ್ರಧಾನವಾದ ಬ್ರಹ್ಮಸೂತ್ರವನ್ನೇ ಹೇಳುತ್ತದೆ. ಬೇರೆ ಅಪ್ರಧಾನಸೂತ್ರಗಳನ್ನು ಹೇಳುವುದಿಲ್ಲ. ಇಲ್ಲಿ 'ಬ್ರಹ್ಮಸೂತ್ರಂ' ಎಂದು ಏಕವಚನಪ್ರಯೋಗ ತಪ್ಪಲ್ಲ. ಬ್ರಹ್ಮನೆಂಬ ಒಂದೇ ಅರ್ಥವನ್ನು ಸಕಲಸೂತ್ರಗಳು ಪ್ರತಿಪಾದಿಸುವುದರಿಂದ ಸಮುದಾಯಾರ್ಥದಲ್ಲಿ ಏಕವಚನವು ಯುಕ್ತವಾಗುತ್ತದೆ.

ಟೀಕೆಯಲ್ಲಿ 'ಉಚ್ಯತೇ' ಎಂದಿದ್ದಾರೆ. 'ಬ್ರಹ್ಮಸೂತ್ರಗಳೇ ಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತವೆ' ಎಂದರ್ಥ. ಏಕೆಂದರೆ ಮುಂದೆ 'ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋಽನ್ಯೇಷಾಂ ವಿಶೇಷಣಾತ್' ಎಂದು ವಿವರಿಸುತ್ತಾರೆ.

'ತೇಷಾಂ ಚ ತಾದೃಶತ್ವಾತ್' ಎಂಬ ಟೀಕೆಗೆ ಬ್ರಹ್ಮಸೂತ್ರಗಳೇ ಪ್ರಧಾನಗಳಾಗಿವೆ ಎಂದರ್ಥ. ಇಲ್ಲಿ 'ತೇಷಾಂ' ಎಂದು ಬಹುವಚನಪ್ರಯೋಗ ಮಾಡಿದ್ದಾರಲ್ಲ? ಎಂದರೆ ಒಂದೊಂದು ಸೂತ್ರಗಳೂ ಪ್ರತ್ಯೇಕ

ಬ್ರಹ್ಮವಿದ್ಯೆ ಎನಿಸುವುದರಿಂದ ಬಹುವಚನಪ್ರಯೋಗ ಮಾಡಿದ್ದಾರೆ. ಹಿಂದೆ ಸಕಲಸೂತ್ರಗಳ ಮಹಾತಾತ್ಪರ್ಯ ಒಂದೇ ಎಂಬ ವಿವಕ್ಷೆಯಿಂದ ಏಕವಚನ ಹೇಳಿದ್ದರು. ಈಗ ಅವಾಂತರವಾಕ್ಯಾರ್ಥದಲ್ಲಿ ಭೇದವಿರುವುದರಿಂದ ಬಹುವಚನ ಹೇಳಿದ್ದಾರೆ. ಎರಡೂ ತಪ್ಪಲ್ಲ.

ಮಂಗಳಶ್ಲೋಕದಲ್ಲಿ 'ನಾರಾಯಣಂ ನತ್ವಾ' ಎಂದಷ್ಟೇ ಸಾಕಿತ್ತು. ಇಷ್ಟರಿಂದಲೇ ನಮಸ್ಕಾರ ಮಾಡಿದಂತಾಗುತ್ತದೆ. ಪುನಃ ನಾಲ್ಕು ವಿಶೇಷಣಗಳು ಏಕೆ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ವಕ್ಷ್ಯಮಾಣ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಮುಂದಿನ ಗ್ರಂಥದಲ್ಲಿರುವುದನ್ನೇ ನಾಲ್ಕು ವಿಶೇಷಣಗಳಿಂದ ಸಂಗ್ರಹಿಸುತ್ತಿದ್ದಾರೆ. ಸಂಗ್ರಹವಾಗಿ ಹೇಳಿದಾಗ ಹೆಚ್ಚಿನ ವಿಚಾರದಲ್ಲಿ ಜಿಜ್ಞಾಸೆ ಬರುತ್ತದೆ. ಇದೇ ಇದರ ಪ್ರಯೋಜನ.

ನಾಲ್ಕು ಅಧ್ಯಾಯಗಳ ಅರ್ಥವೇನು? ಆ ನಾಲ್ಕು ಅಧ್ಯಾಯಗಳು ಆ ಅರ್ಥಗಳನ್ನೇ ಏಕೆ ಪ್ರತಿಪಾದಿಸುತ್ತವೆ? ಮಂಗಳಶ್ಲೋಕದಲ್ಲಿರುವ ನಾಲ್ಕು ವಿಶೇಷಣಗಳು ನಾಲ್ಕು ಅಧ್ಯಾಯಗಳ ಅರ್ಥವನ್ನೇ ಏಕೆ ಹೇಳುತ್ತಿವೆ? ಹೀಗೆ ಆಕಾಂಕ್ಷೆಯನ್ನು ಅನುಸರಿಸಿ ಟೀಕೆಯಲ್ಲಿ 'ತಥಾಹಿ' ಎಂಬಲ್ಲಿಂದ 'ಉದಿತತ್ವಾತ್' ಎಂಬಲ್ಲಿಯ ತನಕ ವಿವರಿಸುತ್ತಿದ್ದಾರೆ.

ಟೀಕೆಯಲ್ಲಿ 'ಭವತೀತಿ ಸೂಚಿತೇ' ಎಂದಿದೆ. ಇದಕ್ಕೆ ಸಂಕ್ಷೇಪವಾಗಿ ಹೇಳುತ್ತಿರಲು ಎಂದು ಅರ್ಥೈಸಬೇಕು. ಏಕೆಂದರೆ 'ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್' ಎಂಬ ಪ್ರಮಾಣದಂತೆ ಭಗವಂತನ ಪ್ರಸಾದದಿಂದ ಮೋಕ್ಷವಾಗುತ್ತದೆಂಬುದು ಅಥಶಬ್ದದ ಅರ್ಥವೆನ್ನಲಾಗಿದೆ.

ಪ್ರಥಮಾಧ್ಯಾಯದಲ್ಲಿ ಸರ್ವಶಬ್ದಗಳ ಸಮನ್ವಯವನ್ನಷ್ಟೇ ಮಾಡುತ್ತಾರೆ. ನೀವು ಗುಣಪೂರ್ಣತ್ವವು ಪ್ರಥಮಾಧ್ಯಾಯದ ಅರ್ಥವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ತತ್ರ ಹಿ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಆನಂದಮಯಾದಿಸಕಲಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಮಾಡಿದಾಗ ಆ ಶಬ್ದಗಳ ಪ್ರವೃತ್ತಿನಿಮಿತ್ತವಾದ ಪ್ರಚುರಆನಂದತ್ವಾದಿಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆಂದು ಅಭಿಪ್ರಾಯ.

ಅನೇಕಶಬ್ದಗಳ ಸಮನ್ವಯ ಎಂದರೆ ಪರ್ಯಾಯಶಬ್ದಗಳ ಸಮನ್ವಯವೆಂದೂ ಅರ್ಥವಾಗುತ್ತದೆ. ಇಂತಹ ಪರ್ಯಾಯಶಬ್ದಗಳ ಸಮನ್ವಯದಿಂದ ಒಂದೊಂದು ಗುಣಗಳಷ್ಟೇ ಸಿದ್ಧವಾಗುತ್ತವೆ. ಸಕಲಗುಣಗಳ ಸಮನ್ವಯವು ಸಿದ್ಧವಾಗುವುದಿಲ್ಲವೆಂಬ ಅಭಿಪ್ರಾಯದಿಂದ 'ಅಪರ್ಯಾಯಾನಂತ-ಶಬ್ದಾನಾಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಪರ್ಯಾಯಶಬ್ದಗಳಲ್ಲದ ಬೇರೆಬೇರೆ ಶಬ್ದಗಳ ಸಮನ್ವಯವನ್ನೇ ಮಾಡಲಾಗಿದೆ. ಹಾಗಾದರೂ ಪರ್ಯಾಯಶಬ್ದಗಳಲ್ಲದ ಕೆಲವು ಶಬ್ದಗಳ ಸಮನ್ವಯದಿಂದ ಅನಂತಗುಣಪೂರ್ಣತ್ವವು ಸಿದ್ಧವಾಗುವುದಿಲ್ಲ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ 'ಅನಂತ' ಎಂದು ಹೇಳಿದರು. ಅನಂತಶಬ್ದಗಳ ಸಮನ್ವಯವನ್ನೇ ಪ್ರಥಮಾಧ್ಯಾಯ ಮಾಡುತ್ತಿರುವುದರಿಂದ ಭಗವಂತನಲ್ಲಿ ಅನಂತಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಇಷ್ಟಾದರೂ ಅಪರ್ಯಾಯ-ಅನಂತಶಬ್ದಗಳನ್ನು ರೂಢಿಯಿಂದ ಸಮನ್ವಯ ಮಾಡಿದರೆ ವಿಷ್ಣುವಿನಲ್ಲಿ ಯಾವ ಗುಣಗಳೂ ಸಿದ್ಧವಾಗುವುದಿಲ್ಲವೆಂಬ ಸಮಸ್ಯೆ ಬರುತ್ತದೆ. ಅದಕ್ಕೋಸ್ಕರ 'ಮಹಾಯೋಗವೃತ್ತ್ಯಾ' ಎಂದು ಹೇಳಿದರು. ಬೇರೆಲ್ಲೂ ಕಾಣದ ಅವಯವಾರ್ಥವನ್ನು ಅಪೇಕ್ಷಿಸಿ ಹೊರಟ ವೃತ್ತಿಯು ವಿಷ್ಣುವಿನಲ್ಲಿ ಮಾತ್ರವಿದೆ

ಆದ್ದರಿಂದ ಅನಂತಗುಣಪರಿಪೂರ್ಣತ್ವವು ನಿಶ್ಚಯವಾಗಿ ಸಿದ್ಧವಾಗುತ್ತದೆ. ಆದ್ದರಿಂದ 'ಅಪರ್ಯಾಯಾನಂತಶಬ್ದಾನಾಂ ಮಹಾಯೋಗವೃತ್ತ್ಯಾ ಹರೌ ಸಮನ್ವಯಸಮರ್ಥನದ್ವಾರಾ ಸರ್ವಗುಣೋದೀರ್ಣತ್ವೈವ ವರ್ಣ್ಯತೇ' ಎಂಬ ಟೀಕೆಯ ಮಾತು ಬಹಳ ಅರ್ಥಪೂರ್ಣವಾಗಿದೆ. ಇಲ್ಲಿ ಸಮನ್ವಯಶಬ್ದಕ್ಕೆ "ಉಪಕ್ರಮಾದಿಲಿಂಗಗಳೇ ಪ್ರಮಾಣವಾಗಿ ಉಳ್ಳ ಶಕ್ತಿತಾತ್ಪರ್ಯ ಎಂಬ ಸಂಬಂಧ" ಎಂದರ್ಥ.

ಮುಂದಿನ ವಾಕ್ಯದಲ್ಲಿರುವ 'ಸ ಚ' ಎಂಬುದಕ್ಕೆ 'ದೋಷವಾನಪಿ' ಎಂಬಲ್ಲಿ ಅನ್ವಯ. 'ಯುಕ್ತ್ಯಾದಿಭಿಃ' ಎಂಬಲ್ಲಿ ಆದಿ ಶಬ್ದದಿಂದ ಸಮಯವಿರೋಧ, ಶ್ರುತಿವಿರೋಧ, ನ್ಯಾಯೋಪೇತಶ್ರುತಿವಿರೋಧವನ್ನು ಇಟ್ಟುಕೊಳ್ಳಬೇಕು. ಇವುಗಳ ವಿರೋಧ ಬಂದಾಗ ವಿಷ್ಣುವಿನಲ್ಲಿ ದೋಷಶಂಕೆ ಬರುತ್ತದೆ. ಜಿಜ್ಞಾಸ್ಯತ್ವವು ಬ್ರಹ್ಮನಲ್ಲಷ್ಟೇ ಕೂಡುತ್ತದೆ. ಜೀವನಲ್ಲಿ ಕೂಡುವುದಿಲ್ಲವೆಂದು ಸಮರ್ಥಿಸಲು ಪ್ರಥಮಸೂತ್ರದಲ್ಲಿ ಗುಣಪೂರ್ಣತ್ವವನ್ನು ಬ್ರಹ್ಮನಲ್ಲಿ ಹೇಳಿದರು. ಆ ಗುಣಪೂರ್ಣತ್ವದ ಸಮರ್ಥನೆಗಾಗಿಯೇ ಪ್ರಥಮಾಧ್ಯಾಯದಲ್ಲಿ ಸಕಲಶ್ರುತಿಸಮನ್ವಯವನ್ನು ನಿರೂಪಿಸಲಾಗಿದೆ. ಇದರ ಮೇಲೆ ಸಂಶಯ ಬರುತ್ತದೆ. ಯುಕ್ತ್ಯಾದಿವಿರೋಧದಿಂದ ಶ್ರುತಿಗಳು ಅಪ್ರಮಾಣಗಳಾಗಿವೆ. ಆದ್ದರಿಂದ ಸಮನ್ವಯವು ಸಿದ್ಧವಾಗುವುದಿಲ್ಲ. ಗುಣಪೂರ್ಣತ್ವವೂ ಸಿದ್ಧವಾಗುವುದಿಲ್ಲ. ಯಾವಾಗ ಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲವೋ ಆವಾಗ ವಿರುದ್ಧಧರ್ಮಾಧಿಕರಣತ್ವವನ್ನು ಹೇಳಲಾಗದ ಕಾರಣ ಜೀವಾಭೇದವು ಸಿದ್ಧವಾಗುತ್ತದೆ. ಜೀವನಿಂದ ಅಭಿನ್ನನಾದ ಬ್ರಹ್ಮನಲ್ಲಿ ಜೀವನಂತೆ ದೋಷವೂ ಬರುತ್ತದೆಂದರ್ಥ.

ಅಥವಾ ಯುಕ್ತ್ಯಾದಿವಿರೋಧವಿರುವುದರಿಂದ ಶ್ರುತಿಗಳು ಅಪ್ರಮಾಣಗಳಾಗುತ್ತವೆ. ಆದ್ದರಿಂದ ಸರ್ವಕರ್ತೃತ್ವಸಾರ್ವಜ್ಞ್ಯಸರ್ವೈಶ್ವರ್ಯಾದಿಗಳು ಅಸಿದ್ಧವಾಗುತ್ತವೆ. ಆಗ ಎಲ್ಲಾ ಅಧಿಕರಣಗಳ ಪೂರ್ವಪಕ್ಷವೇ ಸರಿಯೆಂದಂತಾಗಿ ಜೀವನಂತೆ ಬ್ರಹ್ಮನೂ ಜನನ ಮರಣಾದಿದೋಷವುಳ್ಳವನಾಗುತ್ತಾನೆ. 'ಕೇವಲ ಗುಣಗಳಿಲ್ಲವೆಂದಷ್ಟೇ ಅಲ್ಲ ದೋಷವಿರುವುದರಿಂದಲೂ' ಎಂದು ಅಪಿ ಶಬ್ದ ಹೇಳುತ್ತದೆ.

ಈ ಶಂಕೆಯನ್ನು ಎರಡನೆಯ ಅಧ್ಯಾಯವು ಪರಿಹರಿಸುತ್ತದೆ. ಯುಕ್ತಿಗಳೆಲ್ಲವೂ ಅಯಥಾರ್ಥಗಳಾದ್ದರಿಂದ ಅವುಗಳ ವಿರೋಧ ಬರುವುದಿಲ್ಲ. ಆದ್ದರಿಂದ ಶ್ರುತಿಗಳೆಲ್ಲವೂ ಪ್ರಮಾಣಗಳಾಗುತ್ತವೆ. ಅಂತಹ ಶ್ರುತಿಗಳ ಸಮನ್ವಯದಿಂದ ಗುಣಪೂರ್ಣತ್ವವು ಸಿದ್ಧವಾಗುತ್ತದೆ. ಹೀಗಿರುವಾಗ ಜೀವನಿಂದ ಅಭೇದವನ್ನೂ ಹೇಳಲಾಗದು. ಜೀವನಲ್ಲಿರುವ ದೋಷಗಳೂ ಬ್ರಹ್ಮನಲ್ಲಿ ಬರುವುದಿಲ್ಲ.

ಅಥವಾ ಶ್ರುತಿಗಳಿಗೆ ಅಪ್ರಾಮಾಣ್ಯ ಹೇಳಲು ಶ್ರುತಿಯುಕ್ತಿಗಳಿಗೆ ಸಾಮರ್ಥ್ಯವಿಲ್ಲವೆಂದು ಎರಡನೆಯ ಅಧ್ಯಾಯದಲ್ಲಿ ಸಮರ್ಥಿಸುತ್ತಾರೆ. ಆದ್ದರಿಂದಲೂ ದೋಷಶಂಕೆಯು ಬರುವುದಿಲ್ಲ. ಈ ವಿಚಾರವನ್ನು 'ತತ್ರ' ಇತ್ಯಾದಿ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

ಇಂತಹ ಭಗವಂತನ ಪ್ರಸಾದವು ಯಾವುದರಿಂದ ದೊರೆಯುತ್ತದೆಂಬ ಪ್ರಶ್ನೆಗೆ ಉತ್ತರರೂಪವಾಗಿ ಮೂರನೆಯ ಅಧ್ಯಾಯ ಹೊರಟಿದೆ. ವೈರಾಗ್ಯ, ಭಕ್ತಿ, ಉಪಾಸನಾದಿಗಳಿಂದ ಭಗವಂತನ ಜ್ಞಾನ ಬರುತ್ತದೆಂದು ಹೇಳುವುದರಿಂದ ಜ್ಞೇಯತ್ವವನ್ನೇ ಹೇಳಿದಂತಾಗುತ್ತದೆ. ಆದ್ದರಿಂದ ಜ್ಞೇಯತ್ವವನ್ನು ತೃತೀಯಾಧ್ಯಾಯದಲ್ಲಿ ಹೇಳಿಲ್ಲವೆಂಬ ಶಂಕೆಗೆ ಆಸ್ಪದವಿಲ್ಲ.

*ಜಿಜ್ಞಾಸಾಧಿಕರಣ*

ಬ್ರಹ್ಮವಿದ್ಯೆ ಎನಿಸುವುದರಿಂದ ಬಹುವಚನಪ್ರಯೋಗ ಮಾಡಿದ್ದಾರೆ. ಹಿಂದೆ ಸಕಲಸೂತ್ರಗ ಮಹಾತಾತ್ಪರ್ಯ ಒಂದೇ ಎಂಬ ವಿವಕ್ಷೆಯಿಂದ ಏಕವಚನ ಹೇಳಿದ್ದರು. ಈಗ ಅವಾಂತರವಾಕ್ಯಾರ್ಥದ ಭೇದವಿರುವುದರಿಂದ ಬಹುವಚನ ಹೇಳಿದ್ದಾರೆ. ಎರಡೂ ತಪ್ಪಲ್ಲ.

ಮಂಗಳಶ್ಲೋಕದಲ್ಲಿ 'ನಾರಾಯಣಂ ನತ್ವಾ' ಎಂದಷ್ಟೇ ಸಾಕಿತ್ತು. ಇಷ್ಟರಿಂದಲೇ ನಮಸ್ಕಾ ಮಾಡಿದಂತಾಗುತ್ತದೆ. ಪುನಃ ನಾಲ್ಕು ವಿಶೇಷಣಗಳು ಏಕೆ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ವಕ್ಷ್ಯಮಾಣ ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಮುಂದಿನ ಗ್ರಂಥದಲ್ಲಿರುವುದನ್ನೇ ನಾಲ್ಕು ವಿಶೇಷಣಗಳಿಂ ಸಂಗ್ರಹಿಸುತ್ತಿದ್ದಾರೆ. ಸಂಗ್ರಹವಾಗಿ ಹೇಳಿದಾಗ ಹೆಚ್ಚಿನ ವಿಚಾರದಲ್ಲಿ ಜಿಜ್ಞಾಸೆ ಬರುತ್ತದೆ. ಇದೇ ಇದ ಪ್ರಯೋಜನ.

ನಾಲ್ಕು ಅಧ್ಯಾಯಗಳ ಅರ್ಥವೇನು? ಆ ನಾಲ್ಕು ಅಧ್ಯಾಯಗಳು ಆ ಅರ್ಥಗಳನ್ನೇ ಏ ಪ್ರತಿಪಾದಿಸುತ್ತವೆ? ಮಂಗಳಶ್ಲೋಕದಲ್ಲಿರುವ ನಾಲ್ಕು ವಿಶೇಷಣಗಳು ನಾಲ್ಕು ಅಧ್ಯಾಯಗಳ ಅರ್ಥವನ್ನ ಏಕೆ ಹೇಳುತ್ತಿವೆ? ಹೀಗೆ ಆಕಾಂಕ್ಷೆಯನ್ನು ಅನುಸರಿಸಿ ಟೀಕೆಯಲ್ಲಿ 'ತಥಾಹಿ' ಎಂಬಲ್ಲಿಂದ 'ಉದಿತತ್ವಾತ್ ಎಂಬಲ್ಲಿಯ ತನಕ ವಿವರಿಸುತ್ತಿದ್ದಾರೆ.

ಟೀಕೆಯಲ್ಲಿ 'ಭವತೀತಿ ಸೂಚಿತೇ' ಎಂದಿದೆ. ಇದಕ್ಕೆ ಸಂಕ್ಷೇಪವಾಗಿ ಹೇಳುತ್ತಿರಲು ಎಂದು ಅರ್ಥೈಸಬೇಕು. ಏಕೆಂದರೆ 'ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್' ಎಂಬ ಪ್ರಮಾಣದಂತೆ ಭಗವಂತನ ಪ್ರಸಾದದಿಂದ ಮೋಕ್ಷವಾಗುತ್ತದೆಂಬುದು ಅಥಶಬ್ದದ ಅರ್ಥವೆನ್ನಲಾಗಿದೆ.

ಪ್ರಥಮಾಧ್ಯಾಯದಲ್ಲಿ ಸರ್ವಶಬ್ದಗಳ ಸಮನ್ವಯವನ್ನಷ್ಟೇ ಮಾಡುತ್ತಾರೆ. ನೀವು ಗುಣಪೂರ್ಣತ್ವ ಪ್ರಥಮಾಧ್ಯಾಯದ ಅರ್ಥವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ತತ್ರ ಹಿ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಆನಂದಮಯಾದಿಸಕಲಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಮಾಡಿದಾಗ ಆ ಶಬ್ದಗ ಪ್ರವೃತ್ತಿನಿಮಿತ್ತವಾದ ಪ್ರಚುರಆನಂದತ್ವಾದಿಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆಂದು ಅಭಿಪ್ರಾಯ

ಅನೇಕಶಬ್ದಗಳ ಸಮನ್ವಯ ಎಂದರೆ ಪರ್ಯಾಯಶಬ್ದಗಳ ಸಮನ್ವಯವೆಂದೂ ಅರ್ಥವಾಗುತ್ತದೆ ಇಂತಹ ಪರ್ಯಾಯಶಬ್ದಗಳ ಸಮನ್ವಯದಿಂದ ಒಂದೊಂದು ಗುಣಗಳಷ್ಟೇ ಸಿದ್ಧವಾಗುತ್ತವೆ ಸಕಲಗುಣಗಳ ಸಮನ್ವಯವು ಸಿದ್ಧವಾಗುವುದಿಲ್ಲವೆಂಬ ಅಭಿಪ್ರಾಯದಿಂದ 'ಅಪರ್ಯಾಯಾನಂತ-ಶಬ್ದಾನಾಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಪರ್ಯಾಯಶಬ್ದಗಳಲ್ಲದ ಬೇರೆಬೇರೆ ಶಬ್ದಗ ಸಮನ್ವಯವನ್ನೇ ಮಾಡಲಾಗಿದೆ. ಹಾಗಾದರೂ ಪರ್ಯಾಯಶಬ್ದಗಳಲ್ಲದ ಕೆಲವು ಶಬ್ದಗ ಸಮನ್ವಯದಿಂದ ಅನಂತಗುಣಪೂರ್ಣತ್ವವು ಸಿದ್ಧವಾಗುವುದಿಲ್ಲ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ 'ಅನಂತ' ಎಂದು ಹೇಳಿದರು. ಅನಂತಶಬ್ದಗಳ ಸಮನ್ವಯವನ್ನೇ ಪ್ರಥಮಾಧ್ಯಾಯ ಮಾಡುತ್ತಿರುವುದರಿಂದ ಭಗವಂತನಲ್ಲಿ ಅನಂತಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಇಷ್ಟಾದರೂ ಅಪರ್ಯಾಯ-ಅನಂತಶಬ್ದಗಳನ್ನು ರೂಢಿಯಿಂದ ಸಮನ್ವಯ ಮಾಡಿದರೆ ವಿಷ್ಣುವಿನಲ್ಲಿ ಯಾವ ಗುಣಗಳೂ ಸಿದ್ಧವಾಗುವುದಿಲ್ಲವೆಂಬ ಸಮಸ್ಯೆ ಬರುತ್ತದೆ. ಅದಕ್ಕೋಸ್ಕರ 'ಮಹಾಯೋಗವೃತ್ತ್ಯಾ' ಎಂದು ಹೇಳಿದರು ಬೇರೆಲ್ಲೂ ಕಾಣದ ಅವಯವಾರ್ಥವನ್ನು ಅಪೇಕ್ಷಿಸಿ ಹೊರಟ ವೃತ್ತಿಯು ವಿಷ್ಣುವಿನಲ್ಲಿ ಮಾತ್ರವಿದೆ

ಆದ್ದರಿಂದ ಅನಂತಗುಣಪರಿಪೂರ್ಣತ್ವವು ನಿಶ್ಚಯವಾಗಿ ಸಿದ್ಧವಾಗುತ್ತದೆ. ಆದ್ದರಿಂದ 'ಅಪರ್ಯಾಯಾನಂತಶಬ್ದಾನಾಂ ಮಹಾಯೋಗವೃತ್ತ್ಯಾ ಹರೌ ಸಮನ್ವಯಸಮರ್ಥನದ್ವಾರಾ ಸರ್ವಗುಣೋದೀರ್ಣತ್ವಮೇವ ವರ್ಣ್ಯತೇ' ಎಂಬ ಟೀಕೆಯ ಮಾತು ಬಹಳ ಅರ್ಥಪೂರ್ಣವಾಗಿದೆ. ಇಲ್ಲಿ ಸಮನ್ವಯಶಬ್ದಕ್ಕೆ "ಉಪಕ್ರಮಾದಿಲಿಂಗಗಳೇ ಪ್ರಮಾಣವಾಗಿ ಉಳ್ಳ ಶಕ್ತಿತಾತ್ಪರ್ಯ ಎಂಬ ಸಂಬಂಧ" ಎಂದರ್ಥ.

ಮುಂದಿನ ವಾಕ್ಯದಲ್ಲಿರುವ 'ಸ ಚ' ಎಂಬುದಕ್ಕೆ 'ದೋಷವಾನಃ' ಎಂಬಲ್ಲಿ ಅನ್ವಯ. 'ಯುಕ್ತ್ಯಾದಿಭಿಃ' ಎಂಬಲ್ಲಿ ಆದಿ ಶಬ್ದದಿಂದ ಸಮಯವಿರೋಧ, ಶ್ರುತಿವಿರೋಧ, ನ್ಯಾಯೋಪೇತಶ್ರುತಿವಿರೋಧವನ್ನು ಇಟ್ಟುಕೊಳ್ಳಬೇಕು. ಇವುಗಳ ವಿರೋಧ ಬಂದಾಗ ವಿಷ್ಣುವಿನಲ್ಲಿ ದೋಷಶಂಕೆ ಬರುತ್ತದೆ. ಜಿಜ್ಞಾಸ್ಯತ್ವವು ಬ್ರಹ್ಮನಲ್ಲಷ್ಟೇ ಕೂಡುತ್ತದೆ. ಜೀವನಲ್ಲಿ ಕೂಡುವುದಿಲ್ಲವೆಂದು ಸಮರ್ಥಿಸಲು ಪ್ರಥಮಸೂತ್ರದಲ್ಲಿ ಗುಣಪೂರ್ಣತ್ವವನ್ನು ಬ್ರಹ್ಮನಲ್ಲಿ ಹೇಳಿದರು. ಆ ಗುಣಪೂರ್ಣತ್ವದ ಸಮರ್ಥನೆಗಾಗಿಯೇ ಪ್ರಥಮಾಧ್ಯಾಯದಲ್ಲಿ ಸಕಲಶ್ರುತಿಸಮನ್ವಯವನ್ನು ನಿರೂಪಿಸಲಾಗಿದೆ. ಇದರ ಮೇಲೆ ಸಂಶಯ ಬರುತ್ತದೆ. ಯುಕ್ತ್ಯಾದಿವಿರೋಧದಿಂದ ಶ್ರುತಿಗಳು ಅಪ್ರಮಾಣಗಳಾಗಿವೆ. ಆದ್ದರಿಂದ ಸಮನ್ವಯವು ಸಿದ್ಧವಾಗುವುದಿಲ್ಲ. ಗುಣಪೂರ್ಣತ್ವವೂ ಸಿದ್ಧವಾಗುವುದಿಲ್ಲ. ಯಾವಾಗ ಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲವೋ ಆವಾಗ ವಿರುದ್ಧಧರ್ಮಾಧಿಕರಣತ್ವವನ್ನು ಹೇಳಲಾಗದ ಕಾರಣ ಜೀವಾಭೇದವು ಸಿದ್ಧವಾಗುತ್ತದೆ. ಜೀವನಿಂದ ಅಭಿನ್ನನಾದ ಬ್ರಹ್ಮನಲ್ಲಿ ಜೀವನಂತೆ ದೋಷವೂ ಬರುತ್ತದೆಂದರ್ಥ.

ಅಥವಾ ಯುಕ್ತ್ಯಾದಿವಿರೋಧವಿರುವುದರಿಂದ ಶ್ರುತಿಗಳು ಅಪ್ರಮಾಣಗಳಾಗುತ್ತವೆ. ಆದ್ದರಿಂದ ಸರ್ವಕರ್ತೃತ್ವಸಾರ್ವಜ್ಞ್ಯಸರ್ವೈಶ್ವರ್ಯಾದಿಗಳು ಅಸಿದ್ಧವಾಗುತ್ತವೆ. ಆಗ ಎಲ್ಲಾ ಅಧಿಕರಣಗಳ ಪೂರ್ವಪಕ್ಷವೇ ಸರಿಯೆಂದಂತಾಗಿ ಜೀವನಂತೆ ಬ್ರಹ್ಮನೂ ಜನನ ಮರಣಾದಿದೋಷವುಳ್ಳವನಾಗುತ್ತಾನೆ. 'ಕೇವಲ ಗುಣಗಳಿಲ್ಲವೆಂದಷ್ಟೇ ಅಲ್ಲ ದೋಷವಿರುವುದರಿಂದಲೂ' ಎಂದು ಅಪಿ ಶಬ್ದ ಹೇಳುತ್ತದೆ.

ಈ ಶಂಕೆಯನ್ನು ಎರಡನೆಯ ಅಧ್ಯಾಯವು ಪರಿಹರಿಸುತ್ತದೆ. ಯುಕ್ತಿಗಳೆಲ್ಲವೂ ಅಯಥಾರ್ಥಗಳಾದ್ದರಿಂದ ಅವುಗಳ ವಿರೋಧ ಬರುವುದಿಲ್ಲ. ಆದ್ದರಿಂದ ಶ್ರುತಿಗಳೆಲ್ಲವೂ ಪ್ರಮಾಣಗಳಾಗುತ್ತವೆ. ಅಂತಹ ಶ್ರುತಿಗಳ ಸಮನ್ವಯದಿಂದ ಗುಣಪೂರ್ಣತ್ವವು ಸಿದ್ಧವಾಗುತ್ತದೆ. ಹೀಗಿರುವಾಗ ಜೀವನಿಂದ ಅಭೇದವನ್ನೂ ಹೇಳಲಾಗದು. ಜೀವನಲ್ಲಿರುವ ದೋಷಗಳೂ ಬ್ರಹ್ಮನಲ್ಲಿ ಬರುವುದಿಲ್ಲ.

ಅಥವಾ ಶ್ರುತಿಗಳಿಗೆ ಅಪ್ರಾಮಾಣ್ಯ ಹೇಳಲು ಶ್ರುತಿಯುಕ್ತಿಗಳಿಗೆ ಸಾಮರ್ಥ್ಯವಿಲ್ಲವೆಂದು ಎರಡನೆಯ ಅಧ್ಯಾಯದಲ್ಲಿ ಸಮರ್ಥಿಸುತ್ತಾರೆ. ಆದ್ದರಿಂದಲೂ ದೋಷಶಂಕೆಯು ಬರುವುದಿಲ್ಲ. ಈ ವಿಚಾರವನ್ನು 'ತತ್ರ' ಇತ್ಯಾದಿ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

ಇಂತಹ ಭಗವಂತನ ಪ್ರಸಾದವು ಯಾವುದರಿಂದ ದೊರೆಯುತ್ತದೆಂಬ ಪ್ರಶ್ನೆಗೆ ಉತ್ತರರೂಪವಾಗಿ ಮೂರನೆಯ ಅಧ್ಯಾಯ ಹೊರಟಿದೆ. ವೈರಾಗ್ಯ, ಭಕ್ತಿ, ಉಪಾಸನಾದಿಗಳಿಂದ ಭಗವಂತನ ಜ್ಞಾನ ಬರುತ್ತದೆಂದು ಹೇಳುವುದರಿಂದ ಜ್ಞೇಯತ್ವವನ್ನೇ ಹೇಳಿದಂತಾಗುತ್ತದೆ. ಆದ್ದರಿಂದ ಜ್ಞೇಯತ್ವವನ್ನು ತೃತೀಯಾಧ್ಯಾಯದಲ್ಲಿ ಹೇಳಿಲ್ಲವೆಂಬ ಶಂಕೆಗೆ ಆಸ್ಪದವಿಲ್ಲ.

*ಜಿಜ್ಞಾಸಾಧಿಕರಣ*

ಅಂತಹ ಭಗವಂತನು ಯಾವ ಫಲವನ್ನು ನೀಡುತ್ತಾನೆ? ಎಂಬ ಪ್ರಶ್ನೆಗೆ ನಾಲ್ಕನೆಯ ಅಧ್ಯಾಯ ಹೊರಟದೆ. ನಾಲ್ಕನೆಯ ಅಧ್ಯಾಯದಲ್ಲಿ ಗಮ್ಯತ್ವವನ್ನು ಹೇಳೀ ಇಲ್ಲ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗಗಳನ್ನು ಭಗವತ್ಪ್ರಾಪ್ತಿಗೋಸ್ಕರವೇ ಹೇಳಿದ್ದು. ಮತ್ತು ಚತುರ್ಥಪಾದದಲ್ಲಿ ಹೇಳಿದ ಭೋಗವು ಭಗವಂತನನ್ನು ಹೊಂದದೆ ಲಭಿಸುವುದಿಲ್ಲ. ಇದರಿಂದ ಗಮ್ಯತ್ವವೇ ನಾಲ್ಕನೆಯ ಅಧ್ಯಾಯದ ತಾತ್ಪರ್ಯವೆಂದು ನಿರ್ಣಯವಾಗುತ್ತದೆ.

## ನಾರಾಯಣಪದದ ವ್ಯಾಖ್ಯಾನ

**तत्वप्रकाशिका –**

**अथवा 'नैतत् नारायणपदं देवदत्तादिपदवत् साङ्केतिकं भवति; किन्तु विशिष्टगुणानप्याचष्टे' इत्याशयवान् पदचतुष्टयेन तन्निर्वक्ति । तथा हि । दोषारशब्दयोरभिन्नार्थत्वात् नञश्च विरुद्धार्थवाचित्वाद् दोषविरुद्धा गुणा नारास्तदाश्रयो नारायणः । नञोऽभावार्थत्वादराश्रयो न भवतीति वा नारायणः । नरसम्बन्धित्वात् नरीयतेऽनेनेति वा, नारमणं येनेति वा, निर्दोषवेदोत्पन्नत्वाद्वा नारं ज्ञानं विषयतया तदाश्रयत्वाच्च नारायणः । नगनाकादिशब्दवदयं शब्दो ज्ञातव्यः । अथ वा नारायणस्यैव नम्यत्वोपपादकमेतत् । यो हि बहुगुणो निर्दोषः शास्त्रज्ञेयोऽधीतशास्त्रगम्यः स हि वन्द्यो भवति । देवतानतिसमनन्तरं गुरूनपि नमति – गुरूंश्चेति ।। 'गुरोर्नाम न गृह्णीयाच्छिष्यो भार्या पतेरपि' इत्यतो न तन्नाम जग्राह । स्वस्य गुरुदेवताभेदेऽरुचिं सूचयति 'अपि'पदेन । यद्यपि गुरुर्न देवताभिन्नः, तथापि विशेषानुग्रहार्थं पृथङ्नतिरिति । अनेनैव शास्त्रस्याधिकारिविषयप्रयोजनसम्बन्धाश्च श्रोतृप्रवृत्त्यङ्गभूताः सूचिता ज्ञातव्याः । तत्स्मरणस्य महाफलहेतुत्वाच्च । तदुक्तम् –**

'अधिकारं फलं चैव प्रतिपाद्यं च वस्तु यत् ।
स्मृत्वा प्रारभतो ग्रन्थं करोतीशो महत् फलम् ।।

**इति ।। नमस्काराधिकार्यादिग्रथनसूचने शिष्यशिक्षार्थम् । तथाहि । ज्ञेयत्वगम्यत्वयोः** ज्ञातृगन्तृसापेक्षत्वात् तद्योग्यस्तदिच्छुरेव अधिकारी सूचितः । **नारायण एव विषयः । तज्ज्ञानगमने प्रयोजनम् । यथायोग्यं सम्बन्ध इति ।**

ಪರಿಪೂರ್ಣಚಂದ್ರಿಕಾ

ಅನುವಾದ -- ಅಥವಾ ಈ 'ನಾರಾಯಣ' ಪದವೇ ನಾಲ್ಕು ಅಧ್ಯಾಯಗಳ ಅರ್ಥವನ್ನು ಹೇಳುತ್ತಿದೆ. ದೇವದತ್ತಾದಿಪದಗಳಂತೆ ನಾರಾಯಣಪದವು ಕೇವಲ ಸಾಂಕೇತಿಕವಲ್ಲ, (ರೂಢಮಾತ್ರಪದವಲ್ಲ) ಹೊರತಾಗಿ ವಿಶಿಷ್ಟಗುಣಗಳನ್ನು ಪ್ರತಿಪಾದಿಸುತ್ತಿದೆ. ಈ ಅಭಿಪ್ರಾಯದಿಂದ ಶ್ಲೋಕದಲ್ಲಿರುವ ನಾಲ್ಕು ಪದಗಳಿಂದ ನಾರಾಯಣಶಬ್ದದ ಅರ್ಥವನ್ನೇ ವ್ಯಾಖ್ಯಾನಿಸಿದ್ದಾರೆ. ಹೇಗೆಂದರೆ - 'ಅರ' ಎಂದರೆ ದೋಷ ಎಂದರ್ಥ. 'ನಞ್' ಎಂಬ ಅವ್ಯಯ 'ವಿರುದ್ಧ' ಎಂಬ ಅರ್ಥವುಳ್ಳದ್ದು. ಆದ್ದರಿಂದ 'ನಾರಾಃ' ದೋಷವಿರುದ್ಧವಾದ ಗುಣಗಳು. ಅವುಗಳಿಗೆ ಅಯನ ಎಂದರೆ ಆಶ್ರಯನಾಗಿದ್ದಾನೆ. ಆದ್ದರಿಂದ 'ಗುಣೈಸ್ಸರ್ವೈರುದೀರ್ಣಂ' ಎಂಬ ಅರ್ಥವನ್ನು ನಾರಾಯಣ ಎಂಬ ಪದವೇ ಹೇಳಿ ಮೊದಲನೇ ಅಧ್ಯಾಯದ ಅರ್ಥವನ್ನು ಹೇಳುತ್ತಿದೆ.

ಹಾಗೆಯೇ 'ದೋಷವರ್ಜಿತತ್ವ'ವೆಂಬ ಅರ್ಥವನ್ನು ಹೇಳುತ್ತಿದೆ. ಈಗ ನ + ಅರಾಯನ ಎಂದು ಪದಚ್ಛೇದ ಮಾಡಬೇಕು. ಅರಾಯನ ಎಂದರೆ ದೋಷಾಶ್ರಯ ಎಂದರ್ಥ. 'ನ' ಅರಾಯನ ಎಂದರೆ ದೋಷಾಶ್ರಯನಲ್ಲ ಎಂಬ ಅರ್ಥದಿಂದ ಎರಡನೆ ಅಧ್ಯಾಯದ ಅರ್ಥವನ್ನು ಹೇಳಿದಂತಾಯಿತು. 'ಪೂರ್ವಪದಾತ್ ಸಂಜ್ಞಾಯಾಮಗಃ' ಎಂಬ ಸೂತ್ರದಿಂದ ಣತ್ವ ಬಂದರೆ ನಾರಾಯಣ ಎಂಬ ಶಬ್ದ ನಿಷ್ಪನ್ನವಾಗುತ್ತದೆ.

ಇನ್ನು ನಾರಾಯಣಪದವು 'ಜ್ಞೇಯನಾಗಿದ್ದಾನೆ' ಎಂಬ ಅರ್ಥವನ್ನೂ ಹೇಳುತ್ತಿದೆ. ೧. ನಾರಂ ಎಂದರೆ ಜ್ಞಾನವೆಂದರ್ಥ -- ಸಜ್ಜನರಿಗೆ ಸಂಬಂಧವಾದದ್ದು ನಾರ = ಜ್ಞಾನ, ಅಥವಾ ೨. ಯಾವುದರ ಸಂಬಂಧದಿಂದ ನಾಶವಾಗುವುದಿಲ್ಲವೋ, ಅದು ನಾರ = ಜ್ಞಾನ, ಅಥವಾ ೩. ಯಾವುದರಿಂದ ದುಃಖವಾಗುವುದಿಲ್ಲವೋ ಅದು 'ನಾರ' = ಜ್ಞಾನ. ಅಥವಾ ೪. ನಿರ್ದೋಷವಾದ ವೇದದಿಂದ ಉತ್ಪನ್ನವಾದ್ದರಿಂದ 'ನಾರ' = ಜ್ಞಾನ. ಇಂತಹ ಜ್ಞಾನಕ್ಕೆ ಭಗವಂತನು ವಿಷಯನೂ, ಆಶ್ರಯನೂ ಆಗಿರುವುದರಿಂದ ನಾರಾಯಣನೆಂದು ಕರೆಸಿಕೊಳ್ಳುತ್ತಾನೆ. ಹೀಗೆ ಮೂರನೇ ಅಧ್ಯಾಯದ ಅರ್ಥವನ್ನೂ 'ನಾರಾಯಣ' ಪದವು ಹೇಳಿದಂತಾಯಿತು.

ಹಾಗೆಯೇ ಗಮ್ಯತ್ವವೆಂಬ ಅರ್ಥವನ್ನೂ 'ನಾರಾಯಣ' ಪದವು ಹೇಳುತ್ತದೆ. ನಾರಾಃ ಎಂಬ ಪದಕ್ಕೆ ಮುಕ್ತರು ಎಂದರ್ಥ. ೧. ಅರ = ದೋಷ, ರಹಿತರಾದ್ದರಿಂದ, ೨. ಅರತಿ = ದುಃಖರಹಿತರಾದ್ದರಿಂದ, ೩. ಅರ = ಕ್ಷಯ, ರಹಿತರಾದ್ದರಿಂದಲೂ 'ನಾರಾಃ' ಎಂದರೆ ಮುಕ್ತರು. ಆ ಮುಕ್ತರಿಗೆ ಆಶ್ರಯನಾದ್ದರಿಂದ 'ನಾರಾಯಣ' ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ನಾಲ್ಕನೇ ಅಧ್ಯಾಯದ ಅರ್ಥವನ್ನೂ ಹೇಳುತ್ತಿದೆ.

'ನಾರಾಯಣ' ಶಬ್ದದಲ್ಲಿ 'ನ'ಕಾರಲೋಪವಾಗಿ 'ನುಟ್'ಪ್ರತ್ಯಯ ಬಂದು 'ಅನರಾಯಣ' ಎಂದು ರೂಪವಾಗಬೇಕು. ಆದರೆ 'ನಗ' 'ನಾಕ' ಮೊದಲಾದ ಶಬ್ದಗಳಲ್ಲಿ ಹೇಗೆ 'ನ'ಕಾರ

ಲೋಪಾದಿಗಳಿಲ್ಲವೋ ಹಾಗೆಯೇ ಇಲ್ಲಿಯೂ ಎಂದು ತಿಳಿಯಬೇಕು. ಆದ್ದರಿಂದ 'ನಾರಾಯಣ' ಎಂಬ ರೂಪವು ಸಮೀಚೀನವೇ ಆಗಿದೆ.

ಅಥವಾ ಶ್ಲೋಕದಲ್ಲಿರುವ ನಾಲ್ಕು ವಿಶೇಷಣಗಳು ನಾರಾಯಣನೇ ನಮಸ್ಕಾರಾರ್ಹನಾಗಿದ್ದಾನೆಂದು ತಿಳಿಸಲು ಹೊರಟಿವೆ. ಯಾರನ್ನು ನಮಸ್ಕರಿಸಬೇಕೆಂದು ನಮಗೆ ಅಪೇಕ್ಷೆಯಾಗುತ್ತದೆ ಎಂದರೆ ಯಾರು ಬಹುಗುಣವುಳ್ಳವನೋ, ನಿರ್ದೋಷಿಯೋ, ಶಾಸ್ತ್ರಗಳಿಂದ ಜ್ಞೇಯನೂ, ಶಾಸ್ತ್ರಗಳನ್ನು ಅಧ್ಯಯನ ಮಾಡಿ ಹೊಂದಲು ಅರ್ಹನೋ ಅಂತಹವನೇ ವಂದ್ಯನಾಗುತ್ತಾನೆ. ಹೀಗೆ ವಂದ್ಯತ್ವಪ್ರಯೋಜಕಧರ್ಮಗಳೆಲ್ಲ ನಾರಾಯಣನಲ್ಲಿ ಇರುವುದರಿಂದ ಅವನನ್ನು ನಮಸ್ಕರಿಸುವುದು ಅತ್ಯಂತ ಯುಕ್ತವಾಗಿದೆ.

ದೇವತಾನಮಸ್ಕಾರದ ನಂತರ ಗುರುಗಳ ನಮಸ್ಕಾರವನ್ನೂ ಮಾಡುತ್ತಿದ್ದಾರೆ. 'ಗುರೂಂಶ್ಚಾಪಿ' ಎಂದು. 'ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯೋ ಭಾರ್ಯಾ ಪತೇರಪಿ' (ಶಿಷ್ಯನಾದವನು 'ಗುರುಗಳ ಹೆಸರನ್ನು ಉಚ್ಚಾರಮಾಡಬಾರದು, ಹೆಂಡತಿಯಾದವಳು ಗಂಡನ ಹೆಸರನ್ನು ಉಚ್ಚಾರ ಮಾಡಬಾರದು) ಎಂಬ ಪ್ರಮಾಣವಿರುವುದರಿಂದ ಪ್ರಕೃತ ಶ್ರೀಮದಾಚಾರ್ಯರು ತಮ್ಮ ಗುರುಗಳ ಹೆಸರನ್ನು ಉಲ್ಲೇಖಿಸಿಲ್ಲ.

'ಗುರೂಂಶ್ಚಾಪಿ' ಎಂಬಲ್ಲಿ 'ಅಪಿ' ಶಬ್ದದಿಂದ ತಮ್ಮ ಗುರುಗಳು ಹಾಗು ದೇವತೆ ಇಬ್ಬರೂ ಒಬ್ಬರೇ ಆಗಿದ್ದಾರೆ ಬೇರೆ ಅಲ್ಲ ಎಂದು ಸೂಚಿಸಿದ್ದಾರೆ. ವಾಸ್ತವಿಕವಾಗಿ ದೇವತೆ ಹಾಗು ಗುರುಗಳು ಒಬ್ಬರೇ ಆಗಿರುವುದರಿಂದ ಗುರುಗಳಿಗೆ ಪ್ರತ್ಯೇಕವಾಗಿ ನಮಸ್ಕಾರ ಮಾಡಬೇಕಾಗಿರಲಿಲ್ಲ. ಆದರೂ ಸಹ ಗುರುತ್ವೇನ ವಿಶೇಷಾನುಗ್ರಹಲಾಭಕ್ಕಾಗಿ ಪ್ರತ್ಯೇಕವಾಗಿ ನಮಸ್ಕರಿಸಿದ್ದಾರೆ.

ಶ್ರೋತೃಗಳ ಪ್ರವೃತ್ತಿಗೆ ಅಂಗಭೂತವಾದ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧಗಳನ್ನು ಈ ವಿಶೇಷಣಗಳಿಂದಲೇ ಸೂಚಿಸಿದ್ದಾರೆಂದು ತಿಳಿಯಬೇಕು. ಗ್ರಂಥದ ಪ್ರಾರಂಭದಲ್ಲಿ ಈ ಅನುಬಂಧಚತುಷ್ಟಯವನ್ನು ಸ್ಮರಣೆಮಾಡಿದ್ದಲ್ಲಿ ಮಹಾಫಲವು ದೊರೆಯುವುದೆಂದು ಹೇಳಿದ್ದಾರೆ.

*ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।*
*ಸ್ಮೃತ್ವಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ ಫಲಮ್ ॥'* ಎಂದು.

ಶ್ರೀಮದಾಚಾರ್ಯರು ನಿರಂತರವಾಗಿ ಭಗವಂತನನ್ನು ನಮಸ್ಕಾರಮಾಡುತ್ತಲೇ ಇರುತ್ತಾರೆ. ಹಾಗಾಗಿ ಗ್ರಂಥಾರಂಭದಲ್ಲಿ ನಮಸ್ಕಾರವನ್ನು ಉಲ್ಲೇಖಿಸುವ ಅವಶ್ಯಕತೆ ಇಲ್ಲ. ಹಾಗೆಯೇ ಅನುಬಂಧಚತುಷ್ಟಯ ಉಲ್ಲೇಖದ ಅವಶ್ಯಕತೆಯಿಲ್ಲ. ಉಲ್ಲೇಖಿಸದಿದ್ದರೂ ಸ್ಮರಣೆ ಬರುತ್ತದೆ. ಈ ಪ್ರಶ್ನೆಗೆ ಇಷ್ಟು ಉತ್ತರ. 'ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ' ಎಂಬಂತೆ ಶಿಷ್ಯಶಿಕ್ಷಣಕ್ಕೋಸ್ಕರವಷ್ಟೇ ಇಲ್ಲಿ ಉಲ್ಲೇಖಿಸಿದ್ದಾರೆ.

'ಜ್ಞೇಯಂ ಗಮ್ಯಂ' ಎಂದು ಹೇಳಿದ್ದರಿಂದ ಅಧಿಕಾರಿಯನ್ನು ಸೂಚಿಸಿದಂತಾಯಿತು. ಹೇಗೆಂದರೆ ಜ್ಞೇಯತ್ವ ಹಾಗೂ ಗಮ್ಯತ್ವಗಳು ಜ್ಞಾತೃ ಹಾಗು ಗಂತೃಗಳನ್ನು ಅಪೇಕ್ಷಿಸಿದೆ. ಆದ್ದರಿಂದ ಜ್ಞಾನಕ್ಕೆ

ಹಾಗೂ ಗಮನಕ್ಕೆ ಯೋಗ್ಯನಾದವನು, ಅವುಗಳನ್ನು ಅಪೇಕ್ಷಿಸುವವನು 'ಅಧಿಕಾರಿ' ಎಂದು ಸೂಚಿತವಾಯಿತು. ನಾರಾಯಣನೇ ವಿಷಯ. ನಾರಾಯಣನ ಜ್ಞಾನ, ಗಮನಗಳೇ ಪ್ರಯೋಜನ. ಯಥಾಯೋಗ್ಯವಾಗಿ ಇವು ಮೂರಕ್ಕೆ ಸಂಬಂಧವನ್ನು ತಿಳಿಯಬೇಕು.

### ನಾರಾಯಣಶಬ್ದದ ನಿಷ್ಪತ್ತಿ

भा.दी. – 'ननु ब्रह्मतन्त्रोक्तगुणवैशिष्ट्यं कथं नारायणस्योच्यते । किन्तु ब्रह्मण एव वाच्यम्?' इत्याशङ्कां निरसितुं योजनान्तरमाह – **अथवा** इति ।।

**विशिष्टगुणान्** इति ।। 'विशिष्टानितरासाधारणान् गुणोदीर्णत्वदोषवर्जितत्व-ज्ञेयत्वगम्यत्वरूपगुणान्' इत्यर्थः । **निर्वक्ति** = निरुच्य दर्शयति; 'विशेषणचतुष्टयेन' इत्यर्थः । 'भाष्यकारीयं नारायणपदस्य विशेषणचतुष्टयेन विशिष्टगुणवाचकत्व-प्रदर्शनं च तस्य ब्रह्मशब्दसमानार्थत्वात् शास्त्रार्थवाचकत्वाच्च नारायण एव शास्त्रार्थः इति दर्शयितुम् इति नोक्तशङ्कावकाशः' इति भावः । एतदपि 'स्तुत्यर्थम्' इति सुधोक्तेरुपलक्षणत्वादविरोधः ।

**दोषारशब्दयोः** इति ।। 'दोषारच्छिद्रशब्दानां पर्यायत्वं यतस्ततः' इत्यनु-भाष्योक्तेरिति भावः । **नरेति** ।। सज्जनेत्यर्थः ।

वा.मं. – ननु ब्रह्ममीमांसाशास्त्रोक्तधर्माः ब्रह्मण एव वक्तव्याः किमर्थं नारायणस्योच्यन्ते? इति शङ्कानिरासाय, 'ब्रह्मण एव नारायणत्वात् नारायण एव एतच्छास्त्रप्रतिपाद्यः' इति द्योतनाय ब्रह्मशब्दसमानार्थकनारायणशब्दनिर्वचन-परत्वेनापि विशेषणचतुष्टयं योजयति – **अथवा** इति ।।

'नारायणशब्दनिर्वचनस्योक्तशङ्कानिरासफलकत्वे 'एतदपि स्तुत्यर्थम्' इति सुधाविरोधः' इति चेन्न । तस्याः उपलक्षणत्वाभिप्रायेण प्रवृत्तेः । **साङ्केतिकमिति** ।। प्रवृत्तिनिमित्ताद्यभावेऽपि 'इदमनेन शब्देन वाच्यं भवतु' इति कस्यचिदिच्छामात्रेण बोधकमित्यर्थः । **विशिष्टगुणान्** = गुणपूर्णत्वाद्यनन्यसाधारणधर्मान् । **आचष्टे** = वक्ति 'प्रतिपादयति' इति यावत् ।। **निर्वक्ति** ।। निरुच्य दर्शयति ।

तदेव क्रमेण दर्शयति – **तथाहि** इत्यादिना ।। **अभिन्नार्थत्वात्** इति ।। 'दोषारच्छिद्रशब्दानां पर्यायत्वं यतस्ततः' इत्युक्तेरिति भावः । **विरुद्धार्थ** इति ।।

सादृश्यं तदभावश्च तदन्यत्वं तदल्पता ।
अप्राशस्त्यं विरोधश्च नञर्थाः षट् प्रकीर्तिताः ।।

इत्युक्तेरिति भावः ।

ಅನುವಾದ -- ಪ್ರಶ್ನೆ : - ಬ್ರಹ್ಮಮೀಮಾಂಸಾಶಾಸ್ತ್ರದಿಂದ ಪ್ರತಿಪಾದ್ಯವಾದ ಸಕಲಧರ್ಮಗಳನ್ನು ಬ್ರಹ್ಮನಲ್ಲೇ ಹೇಳಬೇಕು. ನೀವು ನಾರಾಯಣನಲ್ಲಿ ಹೇಳುತ್ತಿರುವುದು ತಪ್ಪಲ್ಲವೇ?

ಉತ್ತರ : - ಬ್ರಹ್ಮ ಬೇರೆಯಲ್ಲ. ನಾರಾಯಣ ಬೇರೆಯಲ್ಲ. ಬ್ರಹ್ಮಶಬ್ದಕ್ಕೆ ಏನು ಅರ್ಥವೋ, ಅದೇ ಅರ್ಥವನ್ನು ನಾರಾಯಣಶಬ್ದವೂ ಹೇಳುತ್ತಿದೆ. ಆದ್ದರಿಂದ ಈ ಶಾಸ್ತ್ರದಿಂದ ಪ್ರತಿಪಾದ್ಯನಾದವನು ನಾರಾಯಣ ಎಂಬುದರಲ್ಲಿ ಸಂಶಯವಿಲ್ಲ. ನಾರಾಯಣಶಬ್ದದಿಂದಲೇ ನಾಲ್ಕು ಅಧ್ಯಾಯಗಳ ಅರ್ಥವು ತಿಳಿಯುತ್ತದೆ. ಇದನ್ನು 'ಅಥವಾ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ.

(ಭಾ.ದೀ. - 'ವಿಶಿಷ್ಟಗುಣಾನಪಿ ಆಚಷ್ಟೇ' ಎಂಬ ಟೀಕೆಗೆ ಹೀಗರ್ಥ. ವಿಶಿಷ್ಟಾನ್ = ಇತರ ಅಸಾಧಾರಣವಾದ ಗುಣೋದ್ರೇಕತ್ವ, ದೋಷವರ್ಜಿತತ್ವ, ಜ್ಞೇಯತ್ವ, ಗಮ್ಯತ್ವ ಗುಣಗಳನ್ನು, ಆಚಷ್ಟೇ = ಹೇಳುತ್ತಿದೆ. ನಿರ್ವಕ್ತಿ = ನಾಲ್ಕು ವಿಶೇಷಣಗಳಿಂದ ನಿರ್ವಚನ ಮಾಡಿ ತೋರಿಸುತ್ತಿದ್ದಾರೆ.)

"ನಾರಾಯಣಶಬ್ದದ ನಿರ್ವಚನದಿಂದಲೂ ಹಿಂದಿನ ಎಲ್ಲಾ ಶಂಕೆಗಳು ಪರಿಹಾರವಾಗುತ್ತವೆ. ಹಾಗಾದರೆ ಸುಧೆಯಲ್ಲಿ ನಾರಾಯಣಶಬ್ದವು ಸ್ತುತಿಪರವೆಂದು ಹೇಳಿದ್ದು ತಪ್ಪಾಗುತ್ತದಲ್ಲವೇ?" ಎಂದರೆ ಸುಧೆಯಲ್ಲಿ ಹೇಳಿದ್ದನ್ನು ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕಾದ್ದರಿಂದ ಸುಧಾವಿರೋಧ ಬರುವುದಿಲ್ಲ.

ನಾರಾಯಣಶಬ್ದವು ಸಾಂಕೇತಿಕವಲ್ಲ. ದೇವದತ್ತನು 'ದೇವದತ್ತಪದದಿಂದ ವಾಚ್ಯನಾಗಲಿ' ಎಂಬ ಇಚ್ಛೆಯಿಂದಷ್ಟೇ ದೇವದತ್ತ ಎನಿಸಿದ್ದಾನೆ. ಆದರೆ ನಾರಾಯಣನು ಹೀಗಲ್ಲ; ನಾರಾಯಣಶಬ್ದವನ್ನು ಬಿಡಿಸಿದಾಗ ಯಾವ ಅರ್ಥವು ತಿಳಿಯುತ್ತದೋ, ಅಂತಹ ವಿಶಿಷ್ಟಗುಣಗಳನ್ನು ಹೊಂದಿರುವವನಾದ್ದರಿಂದ 'ನಾರಾಯಣ' ಎನಿಸಿದ್ದಾನೆ.

ಅದು ಹೀಗೆ - 'ನಾರ' ಎಂದರೆ ಗುಣಗಳು. ಏಕೆಂದರೆ ದೋಷ, ಅರ, ಛಿದ್ರ ಶಬ್ದಗಳು ಪರ್ಯಾಯಶಬ್ದಗಳಾಗಿವೆ. ಆದ್ದರಿಂದ ಅರ ಎಂದರೆ ದೋಷ, ದೋಷವಿರುದ್ಧವಾದ ಗುಣಗಳನ್ನು ನಾರ ಶಬ್ದವು ಹೇಳುತ್ತದೆ. ನಞ್‌ಗೆ ವಿರೋಧ ಎಂಬರ್ಥವು ಪ್ರಸಿದ್ಧವಾಗಿದೆ -

ಸಾದೃಶ್ಯಂ ತದಭಾವಶ್ಚ ತದನ್ಯತ್ವಂ ತದಲ್ಪತಾ ।
ಅಪ್ರಾಶಸ್ತ್ಯಂ ವಿರೋಧಶ್ಚ ನಞರ್ಥಾಃ ಷಟ್ ಪ್ರಕೀರ್ತಿತಾಃ ।।

ಸಾದೃಶ್ಯ, ವಸ್ತುವಿನ ಅಭಾವ, ವಸ್ತುವಿನ ಭೇದ, ಅಲ್ಪತ್ವ, ಅಪ್ರಾಶಸ್ತ್ಯ, ವಿರೋಧ ಹೀಗೆ ನಞ್‌ಗೆ ಆರು ಅರ್ಥಗಳಿವೆ. ಆದ್ದರಿಂದ 'ನಾರಾಯಣ' ಎಂಬ ಶಬ್ದಕ್ಕೆ ಗುಣಗಳಿಗೆ ಆಶ್ರಯನೆಂಬ ಅರ್ಥವನ್ನು ಸುಲಭವಾಗಿ ಹೇಳಬಹುದು.

ಪರಿಪೂರ್ಣಚಂದ್ರಿಕಾ

**भा.टी. – न रीयत इति** ।। नञुपपदात् 'रीङ् क्षये' इति धातोः करणे डप्रत्यये 'प्रज्ञादिभ्यश्च' इति स्वार्थिकेऽण्प्रत्यये 'यस्येति चेति लोपे च आदिवृद्धौ वक्ष्यमाणदिशा न लोपाभावे च नारमिति रूपमिति भावः । अरमणं दुःखम् । निर्दोषवेदवाचकान्नारशब्दात् 'तस्येदम्' इत्यणिकृते नारशब्दो वेदजन्यज्ञानवाची इति भावः ।

ननु नारशब्दात् 'वृद्धिर्यस्याचाम्' इति वृद्धसञ्ज्ञायां 'वृद्धाच्छः' इति छप्रत्यये ईयादेशे नारीयम् इति स्यात्, कथं नारम्? इति । मैवम् । 'वा नामधेयस्य' इति वृद्धसञ्ज्ञाया एवाऽभावात् । 'ओर्गुणः' इत्यत्र गुणग्रहणेन 'सञ्ज्ञापूर्वको विधिरनित्यः' इति ज्ञापनाद्वा । सञ्ज्ञया विधीयमानस्यैव सञ्ज्ञापूर्वकविधित्वात् । अत एव तृतीयस्य द्वितीयपादे 'स्पृहिगृहि' इत्यादिसूत्रे 'श्रद्धालुः' इत्यत्र श्लाविति द्विर्वचनमाशङ्क्य सञ्ज्ञापूर्वको विधिरनित्य इति द्विर्वचनं न' इत्युक्तं मञ्जर्याम् ।

ननु 'अरायणो न' इति व्युत्पत्तौ 'नलोपो नञः' इति नलोपे, 'तस्मान्नुडचि' इति नुटि सति अनरायणेति भाव्यम्, इत्यत आह – **नगनाकादिशब्दवत् इति** ।।

'नभ्राण्नपान्नवेदानासत्यानमुचिनकुलनखनपुंसकनक्षत्रनक्रनाकेषु प्रकृत्या', 'न गो प्राणिष्वन्यतरस्याम्' इत्याभ्यां नाकादिशब्दस्य निपातितत्वेन तत्र यथा सौत्रत्वेन समाधानं तथाऽत्रापि सौत्रत्वेन समाधानमूह्यम्, इति भावः । तथाहि 'नलोप' इति सूत्रे 'रात्रेः कृति विभाषा' इति पूर्वसूत्रादनुवृत्त्या विभाषाया व्यवस्थितविभाषत्वस्य न्यास एवोक्तत्वात् 'नारायणः' इत्यत्रापि नलोपाभावाद्युपपत्तिः । यद्वा, 'दोषारः' इत्याद्यनुभाष्यसुधोक्तदिशा नसमासोऽस्त्विति । 'लघ्वक्षरं पूर्वम्' इत्युक्तेः 'नगनाके'ति निर्देशः । नलोपाभावमात्रस्याद्यम् । नलोपाभाव-नुडभावयोर्द्वितीयमित्येवं निर्देश इत्यप्याहुः । नारायणशब्दे 'पूर्वपदात् सञ्ज्ञाया-मगः' इति णत्वं ल्युटष्टित्वसामर्थ्येनायनशब्दोऽधिकरणे त्रिलिङ्ग इति पुल्लिङ्गत्वं च सुधोक्तमेव ध्येयम् । व्यक्तमेतत् सर्वं चन्द्रिकायाम् ।

नन्वथापि नारायणशब्दार्थनिरुक्तसम्भवे किमेवमेव निरुक्तौ बीजमिति चेन्न । ब्रह्मशब्दासमानार्थत्वादिद्योतकत्वेन प्रागेव समाधानात् । किञ्च नारायणनमनस्या-

वश्यकत्वोपपादनार्थतया च सार्थक्यं विशेषणानाम् इति भावेनाह – **अयत्र इति ॥**

**स हि वन्द्य इति ॥** त्रिविधा हि देवता वन्द्या भवति, विशिष्टा अधिकृता इष्टा च । भक्तिपूर्वकदेवतानतेर्विघ्नविघातार्थत्वाद् विशिष्टैव देवता तस्येष्टे । अधिकृता च स्वविषयग्रन्थप्रबोधादिकं सम्पादयति । इष्टायामेव देवतायां भक्त्यादिपूर्वं नमनं भवतीति, '' 'गुणोदीर्णं दोषवर्जितम्' इत्याभ्यां वैशिष्ट्यस्य, 'ज्ञेयम्' इत्यनेनाधिकृतत्वस्य, 'गम्यम्' इत्यनेनेष्टत्वस्य चोक्त्या नम्यत्वमुपपादितं भवति'' इति भावः । तेन **'भाष्यं चात्यर्थविस्तरम्'** इत्यनुव्याख्यानोक्तं लेशतो दर्शितं भवति । तत्वप्रदीपे तु **अर्थान्तरमप्युक्तम् – गुरूनपीति ॥**

भाष्ये बहुवचनं **'बहुवचनं गौरवादेव'** इति गीताभाष्यटीकोक्ताशयं वा । 'तमेव शास्त्रे'त्यादिभिर्बहुभिः प्रकारैः यद् गौरवत्वोपपादनं तेन 'गुरूंश्च' इति बहुवचनान्तं पदं विवृतमिति सुधोक्ताभिप्रायं वेति भावः । **पतेः** = पत्युः । शेषोक्तेर्वक्ष्यमाणलक्ष्मीवाक्ये 'मम योनिः' इत्यत्रोपयोगः ।

'चकारेणैव गुरुदेवतानतिसमुच्चयलाभात् अपीति व्यर्थम्?' इत्यत आह - **स्वस्य इति ॥** कथम्? इत्यत आह – **'यद्यपि'** इत्यादिना **'नतिः'** इत्यन्तेन । **अनेनैव** इति ॥ 'विशेषणचतुष्टयेनैव' इत्यर्थः । अन्यार्थमुपात्तेनापि इति 'एव'कारार्थः । सम्बन्धाश्चेति न केवलं प्रागुक्तार्थ इति चार्थः । अधिकार्यादिसूचनं व्यर्थमित्यतः प्रवृत्त्यङ्गत्वमेकं हेतुमुक्त्वाऽन्यं चाह – **तत्स्मरणस्य इति ॥** 'सूचिता' इत्यन्वयः । तेषां श्रोतृप्रवृत्त्यङ्गत्वं निर्विषये निष्फलेऽन्यविषयफलोद्देशेनान्यत्र चाप्रवृत्तेस्तद्विषयफले ज्ञात्वैव तत्र प्रवृत्तेर्दर्शनादिति ज्ञेयम् ॥ **तदुक्तम् इति ॥** 'प्रथमस्कन्धतात्पर्ये' इति योज्यम् । **प्रारभतः** = प्रारभमाणस्य । **'चन्द्रादयस्तु मन्यन्ते सर्वस्मादुभयं पदम्'** इत्युक्तेः । **'महत्'** इति भिन्नं पदम् ।

ननु विघ्नाभावस्य नमस्कारेणैव सिद्धेर्ग्रथनं व्यर्थमेव । यद्यपि 'तत्स्मरणस्य' इत्यादि तदप्यसाध्वेव । अधिकार्यादिसूचनस्य श्रोतृप्रवृत्त्यङ्गतया कार्यत्वेऽपि न महाफलार्थं तत्कार्यं तेन विनापि तत्स्मरणसम्भवेन तेनैव फलसिद्धिरित्यत आह -

नमस्कार इति ।। यथा क्रममन्वयः । 'यद्यदाचरति श्रेष्ठः' इत्यादेः शिष्या अप्येवं कुर्युरिति बोधनार्थम् इत्यर्थः । सूचिता इत्युक्तमेव व्यनक्ति – तथाहि इति ।। विषय इति ।। 'सूचित' इति सर्वत्रान्वेति । प्रयोजनम् इति ।। 'यथाक्रममवान्तर-प्रधानप्रयोजने सूचिता' इत्यर्थः । यथायोग्यम् इति ।। नारायणस्य विषयस्य शास्त्रप्रतिपाद्यत्वं ज्ञानस्य, तद्विषयकत्वं गमनाख्यफलस्य, तज्जन्यत्वं सम्बन्ध इति भावः ।।

वा.मं. – अभावार्थत्वम् । अन्योन्याभावार्थत्वात् । अत एवाह – 'अराश्रयो न भवति' इति ।। नरेति ।। 'सज्जने'त्यर्थः । न रीयत इति ।। 'न क्षीयते' इत्यर्थः । नञुपपदात् 'रीङ् क्षये' इत्यस्माद् धातोः 'उणादयो बहुलम्' इति बहुलग्रहणा-दौणादिके करणे डप्रत्यये डित्वात् टेरिति टिलोपे च नरमिति भवति । ततः 'प्रज्ञादिभ्यश्च' इति स्वार्थिकाण्प्रत्यये तद्धितेष्वचामादेरित्यादिवृद्धौ 'यस्येति च' इत्यकारलोपे 'नारम्'इति रूपसिद्धिरिति भावः । अरमणमिति ।। 'रमु क्रीडायाम्' इत्यस्माद् भावार्थे औणादिके डप्रत्यये रमणं, तन्न भवतीत्यरमणं दुःखमित्यर्थः । निर्दोषवेदोत्पन्नत्वात् इति ।। अरविरुद्धत्वात् नारो वेदः । नारशब्दात् 'तस्येदम्' इत्यणि कृते यस्येत्यकारलोपे नारशब्दो वेदजन्यज्ञान-वाचीति भावः ।

ननु नारशब्दात् 'वृद्धिर्यस्याचामादिस्तद् वृद्धम्' इति वृद्धसञ्ज्ञायां 'वृद्धाच्छः' इति छप्रत्यये 'आयनेयीनीयियः फढखछघां प्रत्ययादीनाम्' इत्यनेन छस्येयादेशे 'नारीयम्' इति स्यात् । कथं नारम्? इति चेत्, सत्यम्; 'वा नामधेयस्य वृद्धसञ्ज्ञा' इति नामधेयस्य विकल्पेन वृद्धसञ्ज्ञोक्तेः । 'सञ्ज्ञापूर्वको विधिरनित्यः' इति वा, एतत्साधु ।

ननु विरुद्धार्थकनञ्समासेन अरेति स्थिते 'नलोपो नञः' नञो नस्य लोपः स्यादुत्तरपदे इति नलोपे अअर इति जाते 'तस्मान्नुडचि' तस्माल्लुप्तनकारात् नञुत्तर पदस्याजादेर्नुडागमः स्यात् अचि परे इति नुडागमे 'अनर'इति स्यात् । एवमभावार्थत्वेऽपि अरायणादन्यो 'अनरायणः' इति भवेत् । 'अश्वादन्यो अनश्वः' इतिवत् । 'नारायणः' इति कथम्?

ननु वृत्तौ षष्ठाध्याये तृतीयपादे 'स्त्रैणार्थः' इत्यत्र 'स्त्रीपुंसाभ्यां नञ्स्नञौ भवनात्' इति विहितस्य नञः नलोपाभावाय 'नलोपो नञः' इति सूत्रे 'रात्रेः कृति विभाषा'

इत्यव्यवहितपूर्वसूत्रस्थविभाषापदानुवृत्तेरुक्तत्वात् । विभाषायाश्च व्यवस्थित-विभाषात्वस्य न्यासेऽभिहितत्वात् अत्रापि नलोपाभावे नारायण इति साधुरिति चेत्, न । नलोपसूत्रे विभाषापदानुवृत्तौ विभाषायाः व्यवस्थितत्वेन भाषात्वेन 'नभ्राड्' इत्यादिशब्देष्वपि तेन नलोपाभावसम्भवेन तेषु शब्देषु नलोपाभावकथनाय प्रवृत्तयोः 'नभ्राण्नपान्नवेदानासत्यानमुचिनकुलनखनपुंसकनक्षत्रनक्रनाकेषु प्रकृत्या' 'न गोप्राणिष्वन्यतरस्याम्' इत्यनयोः सूत्रयोर्वैयर्थ्यप्रसङ्गात् । 'प्रपञ्चनार्थम्' इति तु अगतिकागतिः । तथाविधशब्दपरिगणनार्थमित्यपि 'स्त्रैणार्थः' इत्यादेरपि परिगणनप्रसङ्गाच्च कथं तर्हि 'स्त्रैणार्थः' इति रूपम्? तत्रापि नलोपनुडागमे अयादेशे च स्त्रायणेति स्यादिति चेन्न । 'चरितार्थाचरितार्थयोरचरितार्थस्य ग्रहणम्' इति न्यायेन 'स्त्रैणार्थः' इत्यत्र नञ्प्रत्यये ञकारस्य च वृद्ध्यर्थत्वेन चरितार्थत्वात् । तदनुबन्धि नञ्प्रत्ययस्यापि चरितार्थत्वेन नलोपसूत्रे नञ् इत्यनेन प्रत्ययनञोऽग्रहणात् । अचरितार्थञकारयुक्तनिपातनञ एव ग्रहणात् । किं च 'नलोपो नञः' इति सूत्रे 'उत्तरपदे परतः पूर्वस्य नलोपो भवति' इत्युक्त्या, 'पूर्वस्य पदत्वं च गम्यते प्रत्ययनञः पदत्वाभावादेव नलोपाभावः' इति समाधानद्वयस्य मञ्जर्यामेवोक्तम् । 'नारायणः' इत्यत्र निषेधार्थकनिपातनञो अचरितार्थत्वात् । स्यादेव नलोपः इति, तत्राह – **नगनाकादिशब्दवदयं शब्दो ज्ञातव्य इति** ।। उक्तनिर्वचनानुसारेण शब्दप्रयोगस्य प्रामाणिकत्वात् 'न भ्राड्' इत्यादि सूत्रद्वये अयमपि शब्द उपसङ्ख्येय इति भावः । सुधायां तु 'उपसङ्ख्यानं वैय्याकरणैर्न कृतम् इत्यरुच्या, अमानो नाः प्रतिषेध इति गणपठितसमासोऽयम्' इति समाधानान्तर-मुक्तम् । चन्द्रिकायां तु वृत्त्यनुसारेण विभाषापदानुवृत्त्या समाधानमभिधाय तत्र मञ्जर्युक्तास्वारस्यं मनसि निधाय सुधानुसारेण पक्षान्तरमुक्तम् । 'लघ्वक्षरं पूर्वम्' इत्युक्तेरुत्तरसूत्रस्थस्यापि नगशब्दस्य पूर्वनिर्देशः । नलोपाभावमात्रे नगशब्दो दृष्टान्तः । 'न रीयते अनेन' इत्युक्तडान्तत्वं नगशब्दवदिति सूचनाय प्रथमप्राप्त-नभ्राडित्यादिशब्दत्यागेन नाकशब्दस्य स्वशब्देनोपादानं च तस्य नुडागमप्रसक्त्यापि युक्तत्वात् इतरेषां तदभावात् नलोपाभावमात्रे दृष्टान्ततया आदिपदेन ग्रहणम् । सूत्रान्तरस्थत्वात् नगशब्दस्य स्वशब्देन ग्रहणम् । यद्वा, आदिपदेन 'नैकधा' इत्यादिग्रहणम्, तेन 'नसमासोऽयम्' इति सुधोक्तसमाधानानन्तरमप्यत्रोक्तं बोध्यम् । नारायणपदस्य पदद्वयसमारूढत्वेन समानपदत्वाभावाद् 'रषाभ्यां नो णः समानपदे'

इत्यनेन णत्वासम्भवात् 'पूर्वपदात् सञ्ज्ञायामगः' इति णत्वम् । तदर्थश्च पूर्वपदस्थान्निमित्तात् उत्तरस्य नकारस्य णकारादेशो भवति सञ्ज्ञायां न गकार-व्यवधान इति ।

ननु 'नपुंसके भावे क्तः' इत्यतो 'नपुंसके' इत्यनुवर्तमाने 'करणाधिकरणयोश्च' इति ल्युटो विहितत्वेन ल्युडन्तनारायणशब्दस्य नपुंसकत्वं स्यादिति चेन्न, वृत्तिकारेण 'करणाधिकरणयोः' इति सूत्रे 'नपुंसके' इत्यस्यानुवृत्तेरनुक्तत्वात् लिङ्गानुशासने 'इध्मप्रव्रश्चनः' 'गोदोहन' इत्याद्युदाहरणात् । महाभाष्ये 'भूवादयो धातवः' इति सूत्रव्याख्यानावसरे 'कोसावनुमानो नाम' इत्युक्तत्वात्, 'स्मृतिः प्रत्यक्षमैतिह्यमनुमानं चतुष्टयम्' इति श्रौतप्रयोगाच्च- इति । सुधायां तु 'ल्युटः टित्करणसामर्थ्यादयनशब्दो अधिकरणे त्रिलिङ्ग इति पुल्लिङ्गत्वं च युक्तम्' इति समाधानान्तरमुक्तम् ।

'ಅರಾಯಣೋ ನ ಭವತಿ' ಎಂದು ವ್ಯುತ್ಪತ್ತಿಯನ್ನು ತೋರಿಸಿದಾಗ 'ನ ಅರಾಯಣ' ಎಂದಿರುತ್ತದೆ. ಈಗ 'ನಲೋಪೋ ನಞಃ' ಎಂಬ ಸೂತ್ರದ ಪ್ರಕಾರ ನಞ್‌ನಿಪಾತದ ನಕಾರಕ್ಕೆ ಲೋಪವಾಗಿ ಅಕಾರ ಮಾತ್ರ ಉಳಿಯಬೇಕು. ಅನಂತರ 'ತಸ್ಮಾನ್ನುಡಚಿ' ಎಂಬ ಸೂತ್ರದಂತೆ 'ಅರಾಯಣ' ಎಂಬಲ್ಲಿರುವ ಮೊದಲನೆಯ ಅಕಾರಕ್ಕೆ ನುಡಾಗಮವು ಬಂದರೆ ಅರಾಯಣ ಎಂದು ರೂಪವಾಗಬೇಕು. 'ನಾರಾಯಣ' ಎಂಬ ರೂಪ ಹೇಗೆ ಆಗುತ್ತದೆ? ಎಂಬುದಕ್ಕೆ ಚಂದ್ರಿಕಾ ನಿರೂಪಣೆಯ ಪ್ರಕಾರ ಹೀಗಿದೆ ಎಂದು ತಿಳಿಸುತ್ತಾರೆ. 'ನ ಭ್ರಾಣ್ನಪಾನ್ನವೇದಾನಾಸತ್ಯಾನಮುಚಿನಕುಲನಖನಪುಂಸಕನಕ್ಷತ್ರನಕ್ರನಾಕೇಷು ಪ್ರಕೃತ್ಯಾ' ಎಂಬ ಸೂತ್ರ(೬/೩/೭೫)ನಿರ್ದೇಶದಿಂದ ನಾಕಶಬ್ದದಲ್ಲಿ ನಞ್‌ಸಮಾಸವಿದ್ದರೂ ನಲೋಪವಾಗುವು-ದಿಲ್ಲವೆಂದು ತಿಳಿಯುತ್ತದೆ. 'ನಾರಾಯಣ'ಶಬ್ದದಲ್ಲಿಯೂ ಸಹ ಸೂತ್ರನಿರ್ದೇಶವಿಲ್ಲದಿದ್ದರೂ ಸೂತ್ರಸಮ್ಮತವಾದ ಕಾರಣದಿಂದಲೇ ನಲೋಪವಾಗುವುದಿಲ್ಲವೆಂದು ಟೀಕಾಚಾರ್ಯರ ಅಭಿಪ್ರಾಯವೆಂದು ಚಂದ್ರಿಕಾಚಾರ್ಯರ ಆಶಯ. ಅದು ಹೇಗೆಂದರೆ 'ಸ್ತ್ರೀಪುಂಸಾಭ್ಯಾಂ ನಞ್‌ಸ್ನಞೌ ಭವನಾತ್' ಎಂಬ ಸೂತ್ರದಿಂದ ಸ್ತ್ರೀಶಬ್ದಕ್ಕೆ ನಞ್‌ಪ್ರತ್ಯಯವು ಬರುತ್ತದೆ. ಸ್ತ್ರೀ ನಞ್ ಎಂದು ಇರುವಾಗ ಞಿತ್‌ಪ್ರತ್ಯಯವಾದ ಕಾರಣ ಸ್ತ್ರೀ ಎಂಬಲ್ಲಿರುವ ಈಕಾರಕ್ಕೆ ವೃದ್ಧಿಬಂದು ಐಕಾರವಾಗಿ ಸ್ತ್ರೈ ಎಂದಾಗುತ್ತದೆ. 'ರಷಾಭ್ಯಾಂ ನೋ ಣಃ ಸಮಾನಪದೇ' ಎಂಬ ಸೂತ್ರದಿಂದ ನಕಾರಕ್ಕೆ ಣಕಾರವು ಆದೇಶವಾಗಿ ಬಂದರೆ ಸ್ತ್ರೈಣ ಎಂದು ರೂಪವಾಗುತ್ತದೆ. ಈಗ ಸ್ತ್ರೈಣಸ್ಯ ಅರ್ಥಃ ಎಂಬ ವಿಗ್ರಹವನ್ನು ಅನುಸರಿಸಿ ಸಮಾಸವನ್ನು ಮಾಡಲು ಹೊರಟರೆ 'ಸ್ತ್ರೈಣ ಅರ್ಥ' ಎಂದಿರುವಾಗ 'ನಲೋಪೋ ನಞಃ'(೬/೩/೭೩) ಎಂಬ ಸೂತ್ರದಿಂದ ನಲೋಪಪ್ರಾಪ್ತವಾಗುತ್ತದೆ. ಯದ್ಯಪಿ 'ಸ್ತ್ರೈಣ' ಎಂಬಲ್ಲಿ ಣಕಾರಮಾತ್ರ ಇದೆ. ನಕಾರವೇ ಇಲ್ಲದಿರುವಾಗ ಲೋಪದ ಪ್ರಸಕ್ತಿ ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ರಷಾಭ್ಯಾಂ ನೋ ಣಃ ಸಮಾನಪದೇ'(೮/೪/೧) ಎಂಬುದು ತ್ರಿಪಾದಿಯ ಸೂತ್ರ. 'ನಲೋಪೋ ನಞಃ' ಎಂಬ ಸೂತ್ರದ

ದೃಷ್ಟಿಯಿಂದ ಅದು ಅಸಿದ್ಧವಾಗಿರುವುದರಿಂದ ನಕಾರಕ್ಕೆ ಲೋಪ ಬರಲಿ ಎಂಬ ಪ್ರಸಕ್ತಿಯು ಇದ್ದೇ ಇದೆ ಹಾಗೆ ಲೋಪ ಬಂದರೆ ಪುನಃ 'ತಸ್ಮಾನ್ನುಡಚಿ' ಎಂಬ ಸೂತ್ರದಿಂದ ನುಡಾಗಮವು ಬಂದು ಸ್ತ್ರಾಯನರ್ಥ ಎಂದು ರೂಪವಾಗಬೇಕಾಗಿರುತ್ತದೆ. ಅದನ್ನು ನಿವಾರಿಸಲು 'ರಾತ್ರೇಃ ಕೃತಿ ವಿಭಾಷಾ' (೬/೩/೭೨) ಎಂಬ ಸೂತ್ರದಿಂದ ಅದರ ಮುಂದಿನ ಸೂತ್ರವಾದ 'ನಲೋಪೋ ನಞಃ' ಎಂಬಲ್ಲಿಗೆ ವಿಭಾಷಾ ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಹಾಗಾದರೆ ನಲೋಪವು ವಿಕಲ್ಪ ಎಂದಾಗಿ ನಲೋಪವಾಗಿರುವ ರೂಪ ಮತ್ತು ನಲೋಪವಾಗದಿರುವ ರೂಪ ಎಂದು ಎರಡು ರೂಪಗಳು 'ಅನಶ್ವ' ಎಂಬಲ್ಲಿಯೂ ಪ್ರಾಪ್ತವಾಗುತ್ತವೆ. ಅದನ್ನು ಪರಿಹರಿಸಲು ವಿಭಾಷೆಯು ಪ್ರತಿಯೊಂದು ರೂಪದಲ್ಲಿಯೂ ವಿಕಲ್ಪವನ್ನು ಹೇಳದೆ ವ್ಯವಸ್ಥಿತವಿಕಲ್ಪವನ್ನು ಹೇಳುತ್ತದೆ ಎಂದು ಅರ್ಥ ಮಾಡಬೇಕು. ಆಗ ಕೆಲವು ಕಡೆಗಳಲ್ಲಿ ನಲೋಪವು ಆಗುತ್ತದೆ. ಕೆಲವು ಕಡೆಗಳಲ್ಲಿ ಆಗುವುದಿಲ್ಲ ಎಂದು ಸೂತ್ರಾರ್ಥವಾಗುವುದರಿಂದ ಅನಶ್ವ ಎಂಬಲ್ಲಿ ನಲೋಪವಾಗುವ ಕಾರಣ ಎರಡು ರೂಪಗಳ ಪ್ರಸಕ್ತಿ ಇಲ್ಲವೆಂದು ವೈಯ್ಯಾಕರಣರ 'ನ್ಯಾಸ' ಎಂಬ ಗ್ರಂಥದಲ್ಲಿಯೇ ಹೇಳಿರುವುದರಿಂದ ಈ ವಿಷಯದಲ್ಲಿ ನಾವು ಪ್ರಯಾಸ ಪಡಬೇಕಾಗಿಲ್ಲ.

ಹಾಗಾದರೆ 'ನಭ್ರಾಣ್ನಪಾತ್...' ಸೂತ್ರವೂ 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಸೂತ್ರವೂ ವ್ಯರ್ಥವಾಗುತ್ತದೆ. 'ನಲೋಪೋ ನಞಃ' ಎಂಬ ಸೂತ್ರದಿಂದಲೇ ನಲೋಪವು ವ್ಯವಸ್ಥಿತವಿಕಲ್ಪವಾದ್ದರಿಂದ ಕೆಲವು ಕಡೆ ಆಗುವುದಿಲ್ಲ ಎಂದು ತಿಳಿದು ಬರುವುದರಿಂದ ಈ ಸೂತ್ರಗಳೇ ಬೇಡ ಎಂಬ ಆಪತ್ತಿ ಪರಿಹಾರಮಾಡುವುದು ಕಷ್ಟವಾಗುತ್ತದೆ. 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಹೇಳದ ನಲೋಪವಾಗದ ಸ್ಥಳಗಳನ್ನು ಪ್ರಪಂಚನ ಮಾಡುವುದು ಅಥವಾ ಪರಿಗಣನೆ ಮಾಡುವುದು ಈ ಸೂತ್ರದ್ವಯದ ಉದ್ದೇಶವೆಂದು ಹೇಳಿದರೆ ಅದು ಅಗತಿಕಾಗತಿ.

ಆದ್ದರಿಂದ ವಿಭಾಷಾ ಪದವನ್ನು ಅನುವೃತ್ತಿ ಮಾಡಬಾರದು. ಮಾಡದಿದ್ದರೆ 'ನ ಅರಾಯಣ' ಎಂಬಲ್ಲಿ 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಹೇಳಿದ ನಲೋಪವು ನಿತ್ಯವಾದುದರಿಂದ ನಲೋಪ ಮತ್ತು ನುಟ್‌ಗಳು ಬಂದು ಅನರಾಯಣ ಎಂದಾಗಬೇಕಾದೀತು. ಅದಕ್ಕೆ ಚಂದ್ರಿಕಾಚಾರ್ಯರು ಬೇರೆಯೇ ಸಮಾಧಾನವನ್ನು ಹೇಳುತ್ತಾರೆ. ಅದು ನಞ್‌ಸಮಾಸದ ಸ್ಥಳವೇ ಅಲ್ಲ. ನಸಮಾಸ ಮಾತ್ರ. ಎಂದರೆ ಪ್ರತಿಷೇಧಾರ್ಥಕವಾದ ಅ ಮಾ ನೋ ನ ಎಂಬ ನಾಲ್ಕು ನಿಪಾತಗಳಲ್ಲಿ ನಾಲ್ಕನೆಯ ನಿಪಾತವಾದ ನಶಬ್ದದಿಂದ ಸಮಾಸ. 'ನಲೋಪೋ ನಞಃ' ಎಂಬ ಸೂತ್ರವು ನಞ್‌ನ ನಕಾರಕ್ಕೆ ಲೋಪ ಹೇಳುತ್ತದೆ. ಅದು ನಞ್ ಅಲ್ಲ. ನಶಬ್ದ. ಆದ್ದರಿಂದ ಲೋಪಾದಿಗಳ ಪ್ರಸಕ್ತಿ ಇಲ್ಲ. ನಾರಾಯಣ ಎಂಬ ರೂಪ ಸುಲಭವಾಗಿ ಆಗುತ್ತದೆ. ಹಾಗಾದರೆ ನಗನಾಕಶಬ್ದಗಳಲ್ಲಿಯೂ ಇದೇ ಕ್ರಮವನ್ನು ಅನುಸರಿಸಬಹುದಾದ್ದರಿಂದ ಆ ಸೂತ್ರಗಳು ವ್ಯರ್ಥ ಎಂಬ ಆಪತ್ತಿ ಬರುತ್ತದೆ. ಅದಕ್ಕೆ ಸಮಾಧಾನವೇನೆಂದರೆ ಅಲ್ಲಿಯೂ ಹೀಗೆಯೇ ಸಮಾಸ ಮಾಡಬಹುದಾದರೂ ನಞ್‌ಪ್ರತ್ಯಯದ ಞಿತ್ತ್ವಪ್ರಯುಕ್ತ ಸ್ವರ ಬೇಕಾಗಿದೆ. ನಸಮಾಸ ಮಾಡಿದರೆ ಆ ಸ್ವರ ಸಿಗುವುದಿಲ್ಲ. ಆದ್ದರಿಂದ ನಞ್‌ಸಮಾಸವನ್ನೇ ಮಾಡಿ ನಲೋಪವಾಗದಿರುವ ಸ್ಥಳಗಳನ್ನು ಪರಿಗಣನೆ ಮಾಡಲು ಆ ಸೂತ್ರಗಳು ಹೊರಟಿವೆ ಎಂದೇ ಹೇಳಬೇಕಾಗುತ್ತದೆ.

*ಪರಿಪೂರ್ಣಚಂದ್ರಿಕಾ*

ಮಂಜರಿಯಲ್ಲಿ 'ನಲೋಪೋ ನಞಃ' ಸೂತ್ರದಲ್ಲಿ ವಿಭಾಷಾ ಪಾದವನ್ನು ಅನುವೃತ್ತಿಮಾಡದ ಬೇರೆ ಸಮಾಧಾನವನ್ನು ಹೇಳಿದ್ದಾರೆ. ಅನುವೃತ್ತಿ ಮಾಡದಿದ್ದರೆ 'ಸ್ತ್ರೈಣಾರ್ಥ' ಎಂಬಲ್ಲಿ ನಞ್‌ಪ್ರತ್ಯಯದ ನಕಾರಕ್ಕೆ ಲೋಪಬರಲಿ ಎಂಬ ಆಪತ್ತಿ ಬರುತ್ತದೆ. ಅದರ ಪರಿಹಾರ ಹೀಗೆ -- ನಞ್‌ಗಳು ಎರಡು ಇವೆ. ಒಂದು ಪ್ರತ್ಯಯ ರೂಪವಾದದ್ದು. ಇನ್ನೊಂದು ನಿಪಾತರೂಪವಾದದ್ದು. ಪ್ರತ್ಯಯ ನಞ್‌ನ ಞ್‌ತ್ವಕ್ಕೆ ಬೇರೆ ಪ್ರಯೋಜನವಿದೆ. ಪ್ರಾತಿಪದಿಕದ ಆದಿವೃದ್ಧಿ ಮತ್ತು ಸ್ವರ ಅದರ ಪ್ರಯೋಜನ. ಅವುಗಳನ್ನು ಹೇಳುವ ಸೂತ್ರದಲ್ಲಿ ಪ್ರತ್ಯಯ ನಞ್‌ನ ಗ್ರಹಣವಿದೆ. 'ನಲೋಪೋ ನಞಃ' ಸೂತ್ರದಲ್ಲಿ ನಞ್‌ಶಬ್ದದಿಂದ ಪ್ರತ್ಯಯ ನಞ್ ತೆಗೆದುಕೊಳ್ಳುವುದಿಲ್ಲ. ನಿಪಾತ ನಞ್‌ಯನ್ನು ಮಾತ್ರ ತೆಗೆದುಕೊಳ್ಳಬೇಕು. ಅದರ ನಕಾರಕ್ಕೆ ಮಾತ್ರ ಲೋಪ. ಸ್ತ್ರೈಣಾರ್ಥ ಎಂಬಲ್ಲಿ ಪ್ರತ್ಯಯನಞ್ ಇರುವುದರಿಂದ ಅದರಲ್ಲಿ ಲೋಪಪ್ರಸಕ್ತಿಯೇ ಇಲ್ಲವಾದ್ದರಿಂದ ವಿಭಾಷಾಪದವನ್ನು ಅನುವೃತ್ತಿ ಮಾಡುವ ಅಗತ್ಯವಿಲ್ಲ. ಆದ್ದರಿಂದ ನಗನಾಕಾದಿಶಬ್ದಗಳಲ್ಲಿ ನಲೋಪಾಭಾವವನ್ನು ಹೇಳುವ ಸೂತ್ರಗಳು ಸಾರ್ಥಕವಾಗುತ್ತವೆ.

ವಿಭಾಷಾಪದವನ್ನು ಅನುವೃತ್ತಿ ಮಾಡದಿರುವುದಕ್ಕೆ ಮಂಜರಿಯಲ್ಲಿ ಇನ್ನೊಂದು ಗಮಕವನ್ನು ಹೇಳಿದ್ದಾರೆ. 'ನಲೋಪೋ ನಞಃ' ಎಂಬ ಸೂತ್ರವು 'ಅಲುಗುತ್ತರಪದೇ'(೬/೩/೧) ಎಂಬ ಅಧಿಕಾರಸೂತ್ರದ ಅನಂತರ ಬರುತ್ತದೆ. 'ಉತ್ತರಪದೇ' ಎಂಬ ಪದವು ಪಾದದ ಪರಿಸಮಾಪ್ತಿಯವರೆಗೂ ಅನುವೃತ್ತವಾಗುತ್ತದೆ. 'ನಲೋಪೋ ನಞಃ' ಎಂಬುದು ಇದೇ ಪಾದದ ೭೩ನೆಯ ಸೂತ್ರ. ಅಲ್ಲಿಯೂ ಉತ್ತರಪದೇ ಎಂಬ ಪದದ ಅನುವೃತ್ತಿ ಉಂಟು. ಎಂದರೆ ಉತ್ತರಪದವು ಪರದಲ್ಲಿದ್ದಾಗ ಪೂರ್ವಪದದ ನಞ್‌ನ ನಕಾರಕ್ಕೆ ಲೋಪವು ಬರುತ್ತದೆ ಎಂದು ಸೂತ್ರಾರ್ಥ. ಪ್ರತ್ಯಯಕ್ಕೆ ಪೂರ್ವಪದತ್ವವಿಲ್ಲದ ಕಾರಣ ನಞ್‌ನ ನಕಾರವು ಪ್ರತ್ಯಯಕ್ಕೆ ಪೂರ್ವಪದತ್ವವಿಲ್ಲದ ಕಾರಣ ನಞ್‌ನ ನಕಾರವು ಪೂರ್ವ-ಪದಸ್ಥವಲ್ಲವಾದ್ದರಿಂದ ಸ್ತ್ರೈಣ ಎಂಬಲ್ಲಿ ನಲೋಪಪ್ರಸಕ್ತಿ ಇಲ್ಲ. ತಥಾಚ ವಿಭಾಷಾಪದದ ಅನುವೃತ್ತಿಯ ಅಗತ್ಯವಿಲ್ಲ.

ಈ ಪಕ್ಷದಲ್ಲಿ ನಗನಾಕಾದಿಗಳ ಜೊತೆಯಲ್ಲಿ 'ನಾರಾಯಣ'ಶಬ್ದವಿಲ್ಲದಿರುವುದರಿಂದ ಇಲ್ಲಿ ನಲೋಪ ಮೊದಲಾದವುಗಳು ಬರಲಿ? ಎಂಬ ಆಕ್ಷೇಪವನ್ನು ಪರಿಹರಿಸಲು 'ಇದು ನಞ್‌ಸಮಾಸವೇ ಅಲ್ಲ. ನಸಮಾಸ ಮಾತ್ರ. ಆದ್ದರಿಂದ ಯಾವ ಅನುಪಪತ್ತಿಯೂ ಇಲ್ಲ' ಎಂದು ಎರಡನೆಯ ಪಕ್ಷ.

ಇನ್ನು ನಾರಾಯಣ ಎಂಬಲ್ಲಿ 'ಣತ್ವ' ಹೇಗೆ ಬರುತ್ತದೆ? ಎಂಬ ಪ್ರಶ್ನೆಯಿದೆ. ಯದ್ಯಪಿ 'ರಷಾಭ್ಯಾಂ ನೋ ಣಃ ಸಮಾನಪದೇ' ಎಂಬ ಣತ್ವವಿಧಾಯಕಸೂತ್ರವಿದೆ. ಆದರೆ ಆ ಸೂತ್ರದಿಂದ ಇಲ್ಲಿ ಣತ್ವವು ಬರುವುದಿಲ್ಲ. ಏಕೆಂದರೆ ಪೂರ್ವಪದತ್ವೋತ್ತರಪದತ್ವವಿಭಾಗವಿಲ್ಲದಿರುವ ಸಮಾನಪದದ ಸ್ಥಳದಲ್ಲಿ ಮಾತ್ರ ಈ ಸೂತ್ರದಿಂದ ಣತ್ವ ಬರುತ್ತದೆ. ನಾರಾಯಣಶಬ್ದವು ಸಮಾಸವಾದ್ದರಿಂದ ಅಲ್ಲಿ ಪೂರ್ವಪದ, ಉತ್ತರಪದ ಎಂಬ ಕಲ್ಪನೆ ಇರುವುದರಿಂದ ಅಲ್ಲಿ ಬರುವುದಿಲ್ಲ. 'ಪೂರ್ವಪದಾತ್ ಸಂಜ್ಞಾಯಾಮಗಃ' ಎಂಬ ಸೂತ್ರದಿಂದ ಬರುತ್ತದೆ ಎಂದು ಸುಧಾಕಾರರ ಅಭಿಪ್ರಾಯ.

* * * *

ಜಿಜ್ಞಾಸಾಧಿಕರಣ

### ನಾರಾಯಣಶಬ್ದದ ನಿಷ್ಪತ್ತಿಯ ಪ್ರಯೋಜನ

**वा.मं. – एवं ब्रह्ममीमांसाशास्त्रार्थसङ्ग्राहकविशेषणचतुष्टयस्य नारायणशब्दनिर्वचनपरत्वप्रदर्शनेन नारायणस्यैतच्छास्त्रप्रतिपाद्यत्वकथनात् नम्यत्वप्रयोजकाधिकृतत्वमपि तस्योपपादितं भवति ।**

ಹೀಗೆ ಮಂಗಳಶ್ಲೋಕದಲ್ಲಿರುವ ನಾಲ್ಕು ವಿಶೇಷಣಗಳು ಸಮಗ್ರಬ್ರಹ್ಮಮೀಮಾಂಸಾಶಾಸ್ತ್ರ ಅರ್ಥವನ್ನು ಸಂಗ್ರಹಿಸುತ್ತಿವೆ. ಅದು ನಾರಾಯಣಶಬ್ದದ ನಿಷ್ಪತ್ತಿಯಿಂದಲೂ ತಿಳಿಯುತ್ತದೆಯಂದ ಇಲ್ಲಿಯ ತನಕ ಉಪಪಾದಿಸಿದ್ದಾಯಿತು. ಇದರಿಂದ ನಮ್ಯತ್ವಪ್ರಯೋಜಕವಾದ ಅಧಿಕೃತತ್ವವನ್ನೂ ನಾರಾಯಣನಿಗೆ ತೋರಿಸಿದಂತಾಯಿತು.

### ನಾರಾಯಣಶಬ್ದದಲ್ಲಿ ನಮ್ಯತ್ವಪ್ರಯೋಜಕವಾದ ಗುಣಗಳು

**वा.मं. – इदानीं तस्यैव नम्यत्वद्योतनाय नम्यत्वप्रयोजकविशिष्टेष्टाधिकृतत्वरूपत्रितयोपपादकत्वेनापि योजयति – अथवेति ।। अत्र बहुगुणत्वनिर्दोषत्वाभ्यां विशिष्टत्वम्, शास्त्रज्ञेयत्वेन अधिकृतत्वम्, अधीतशास्त्रगम्यत्वेन इष्टत्वं प्रदर्शितम् । इतरासाधारणधर्मवत्त्वशास्त्रप्रतिपाद्यत्वापेक्षितफलदातृत्वानामेव क्रमेण विशिष्टाधिकृतेष्टशब्दार्थत्वात् इति ज्ञेयम् ।।**

ಈಗ ನಮ್ಯತ್ವಪ್ರಯೋಜಕವಾದ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವ ಮೂರನ್ನೂ ನಾರಾಯಣನಲ್ಲಿ 'ಅಥವಾ ನಾರಾಯಣಸ್ಯೈವ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ೧) ಬಹುಗುಣತ್ವ ನಿರ್ದೋಷತ್ವಗಳಿಂದ ವಿಶಿಷ್ಟತ್ವವನ್ನು ೨) ಶಾಸ್ತ್ರಜ್ಞೇಯತ್ವದಿಂದ ಅಧಿಕೃತತ್ವವನ್ನು ೩) ಅಧೀತಶಾಸ್ತ್ರಗಮ್ಯನಾದ್ದರಿಂದ ಇಷ್ಟತ್ವವನ್ನು ತೋರಿಸಿದಂತಾಯಿತು. ಏಕೆಂದರೆ ಬೇರೆಲ್ಲೂ ಇರದ ಅಸಾಧಾರಣಗುಣವಿದ್ದರಷ್ಟೇ ವಿಶಿಷ್ಟನಾಗುತ್ತಾನೆ. ಶಾಸ್ತ್ರಪ್ರತಿಪಾದ್ಯನಾದವನೇ ಅಧಿಕೃತನಾಗುತ್ತಾನೆ. ಅಪೇಕ್ಷಿತವಾದ ಫಲ ನೀಡುವವನೇ ಇಷ್ಟನಾಗುತ್ತಾನೆ.

(ಭಾ.ದೀ. -ಭಕ್ತಿಪೂರ್ವಕದೇವತಾನಮಸ್ಕಾರದಿಂದ ವಿಘ್ನವಿಘಾತವು ಉಂಟಾಗುತ್ತದೆ. ವಿಘ್ನವಿಘಾತವನ್ನು ಸರ್ವೋತ್ತಮದೇವತೆಯಷ್ಟೇ ಮಾಡಲು ಸಮರ್ಥನಾಗುತ್ತಾನೆ. ಆದ್ದರಿಂದ ವಿಶಿಷ್ಟದೇವತೆಯು ನಮಸ್ಕಾರಕ್ಕೆ ಅರ್ಹನಾಗಿದ್ದಾನೆ. ಅಧಿಕೃತದೇವತೆಯು ತನ್ನನ್ನು ಪ್ರತಿಪಾದಿಸುವ ಗ್ರಂಥಜ್ಞಾನವನ್ನು ಜಿಜ್ಞಾಸುಗಳಿಗೆ ನೀಡುತ್ತಾನೆ ಆದ್ದರಿಂದ ಅಧಿಕೃತದೇವತೆಯೂ ನಮಸ್ಕಾರಕ್ಕೆ ಅರ್ಹ. ಇಷ್ಟದೇವತೆಯಲ್ಲಷ್ಟೇ ಭಕ್ತ್ಯಾದಿಗಳು ಹುಟ್ಟುತ್ತವೆ. ಆದ್ದರಿಂದ ಇಷ್ಟದೇವತೆಯೂ ನಮಸ್ಕಾರಕ್ಕೆ ಅರ್ಹನಾಗಿದ್ದಾನೆ. 'ಭಾಷ್ಯಂ ಚಾತ್ಮರ್ಥವಿಸ್ತರಮ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು ಇಲ್ಲಿ ಲೇಶತಃ ತೋರಿಸಿದಂತಾಯಿತು. ತತ್ತ್ವಪ್ರದೀಪದಲ್ಲಿ ಮತ್ತೊಂದು ಬಗೆಯ ವ್ಯಾಖ್ಯಾನವಿದೆ. ಅದನ್ನು ಶಿಷ್ಯರು ಗಮನಿಸಿ ತಿಳಿಯಬೇಕು).

*ಪರಿಪೂರ್ಣಚಂದ್ರಿಕಾ*

वा.मं. – गुरूनपीति ।। 'यथा देवे तथा गुरौ' इति श्रुतेरिति भावः । सामान्यप्रयोगे निमित्तमाह – गुरोरिति ।।

"ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ" ಎಂಬ ಪ್ರಮಾಣದಂತೆ ಭಗವಂತನಲ್ಲಿ ಭಕ್ತಿ ಮಾಡುವಂತೆ ಗುರುಗಳಲ್ಲಿಯೂ ಮಾಡಬೇಕು ಎಂಬುದನ್ನು ತಿಳಿಸಲು ಶ್ರೀಮದಾಚಾರ್ಯರು ಗುರುಗಳನ್ನು ನಮಿಸಿದ್ದಾರೆ. ಗುರುಗಳನ್ನು ಹೆಸರಿಸದಿರಲು ಕಾರಣವನ್ನು 'ಗುರೋಃ' ಎಂಬ ವಾಕ್ಯದಿಂದ ತಿಳಿಸಿದ್ದಾರೆ.

### ಗುರುಗಳ ಹೆಸರನ್ನೇಕೆ ಉಚ್ಚರಿಸಬಾರದು

वा.मं. – नन्वेवमीशावास्यभाष्ये –

> यस्माद् ब्रह्मेन्द्ररुद्रादिदेवतानां श्रियोऽपि च ।
> ज्ञानस्फूर्तिः सदा तस्मै हरये गुरवे नमः ।।

इति नामग्रहणं कथम्? इति चेत् । उदाहृतवाक्यस्यापरोक्षतो नामग्रहणनिषेधकत्वेन परोक्षतस्तद्ग्रहणे बाधकाभावात् । अत एवाचार्याणां नित्यापरोक्षीकृतगुरुत्वेऽपि मर्यादारक्षणाय तत्र 'तस्मै नमः' इति परोक्षनिर्देशः कृतः । अत्र तु 'गुरूंश्च' इति साधारणप्रयोगस्यापरोक्षकत्वकथनस्यैवोचितत्वात् । उपलक्षणमेतत् । सुधोक्तरीत्या 'गुरुत्वोपपादकगुरुत्वशास्त्रप्रभवत्वादिहेतुबाहुल्यसूचनाय 'गुरून्' इति बहुवचन-प्रयोगः' इति द्रष्टव्यम् ।

ಶಂಕೆ --

> ಯಸ್ಮಾದ್ ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋಽಪಿ ಚ ।
> ಜ್ಞಾನಸ್ಫೂರ್ತಿಃ ಸದಾ ತಸ್ಮೈ ಹರಯೇ ಗುರವೇ ನಮಃ ।।

(ಬ್ರಹ್ಮ ಇಂದ್ರ ರುದ್ರ ಮೊದಲಾದ ದೇವತೆಗಳು, ಲಕ್ಷ್ಮಿಯೂ ಕೂಡ ಯಾರಿಂದ ಜ್ಞಾನದ ಸ್ಫೂರ್ತಿಯನ್ನು ಪಡೆದಿದ್ದಾರೋ, ಅಂತಹ ಹರಿಯೆಂಬ ಗುರುವಿಗೆ ನಮಸ್ಕಾರವು) ಹೀಗೆ ಈಶಾವಾಸ್ಯೋ-ಪನಿಷದ್ಭಾಷ್ಯದಲ್ಲಿ ಹರಯೇ ಎಂದು ಗುರುಗಳ ಹೆಸರನ್ನು ಉಲ್ಲೇಖಿಸಿದ್ದಾರೆ. ಆದರೆ ಈ ಭಾಷ್ಯದ ಮಂಗಳಶ್ಲೋಕದಲ್ಲಿ ಗುರುಗಳನ್ನು ಹೆಸರಿಸದಿರಲು ಏನು ಕಾರಣ?

ಸಮಾಧಾನ -- ಗುರುಗಳು ಪ್ರತ್ಯಕ್ಷವಾಗಿದ್ದಾಗ ಹೆಸರನ್ನು ಉಚ್ಚರಿಸಬಾರದು. ಪರೋಕ್ಷವಾಗಿದ್ದಾಗ ಗುರುಗಳ ಹೆಸರನ್ನು ಉಚ್ಚರಿಸಿದರೆ ತಪ್ಪಲ್ಲ. ವಸ್ತುತಃ ಶ್ರೀಮದಾಚಾರ್ಯರು ನಿತ್ಯಾಪರೋಕ್ಷಿಗಳು. ಆದರೂ ಸಹ ಶಾಸ್ತ್ರದ ಮರ್ಯಾದೆಯ ರಕ್ಷಣೆಗಾಗಿ ಪರೋಕ್ಷವಾಚಕವಾದ "ತಸ್ಮೈ" ಎಂಬ ಶಬ್ದವನ್ನು

ಪ್ರಯೋಗಿಸಿದ್ದಾರೆ. ಅಂತಹ ಪರೋಕ್ಷವಾಚಕವಾದ ಶಬ್ದಗಳನ್ನು ಇಲ್ಲಿ ಪ್ರಯೋಗಿಸದ ಕಾರಣ ಗುರುಗಳಾದ ವೇದವ್ಯಾಸದೇವರು ಪ್ರತ್ಯಕ್ಷವಾಗಿ ಕುಳಿತಿದ್ದಾರೆಂದು ತಿಳಿಯಬೇಕು. "ಗುರೋರ್ನಾಮ ನ ಗೃಹ್ಣೀಯಾತ್" ಎಂದಿಷ್ಟೇ ಹೇಳಿದ್ದಾರೆ ಸಾಕಿತ್ತು. ಭಾರ್ಯಾಪತೇರಪಿ ಎಂದು ಹೇಳಬೇಕಾಗಿರಲಿಲ್ಲ ಆದರೆ 'ಮಮ ಯೋನಿಃ' ಎಂಬ ಲಕ್ಷ್ಮೀಸೂಕ್ತದಲ್ಲಿ ಪತಿಯಾದ ಪರಮಾತ್ಮನ ಹೆಸರನ್ನು ಹೇಳಿರುವ ಕಾರಣವನ್ನು ಇದರಿಂದ ಸೂಚಿಸಿದ್ದಾರೆ.

(ಭಾ.ದೀ. ಗುರೂನ್ ಎಂಬ ಬಹುವಚನವು ಗುರುಗಳಲ್ಲಿರುವ ಗೌರವವನ್ನು ತಿಳಿಸುತ್ತದೆ ಅಥವಾ ಗೀತಾಭಾಷ್ಯದ ಟೀಕೆಯಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.) ಗುರೂನ್ ಎಂಬ ಬಹುವಚನ-ಪ್ರಯೋಗಕ್ಕೆ ಸುಧೆಯಲ್ಲಿ ಹೇಳಿದ "ಗುರುತ್ವಕ್ಕೆ ಉಪಪಾದಕವಾದ ಗುರುತ್ವ, ಶಾಸ್ತ್ರಪ್ರಭವತ್ವ ಮೊದಲಾದ ಅನೇಕ ಧರ್ಮಗಳು ಗುರುಗಳಾದ ವೇದವ್ಯಾಸದೇವರಲ್ಲಿ ಇವೆ ಎಂದು ಸೂಚಿಸಲು ಬಹುವಚನವನ್ನು ಪ್ರಯೋಗಿಸಿದ್ದಾರೆ" ಎಂಬ ಕಾರಣವನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

### 'ಚ' 'ಅಪಿ'ಶಬ್ದಗಳ ಸ್ವಾರಸ್ಯ

**वा.मं. – 'ननु देवतासमुच्चायक 'च'शब्दसद्भावात् 'अपि'शब्दो व्यर्थः' इत्यत आह – स्वस्येति ।। 'पृथङ्नमस्कारेण प्रसक्तं गुरुदेवताभेदमपिशब्देन गर्हयामास' इत्यर्थः । आक्षिपति – यद्यपीति ।। 'तथाच न पृथङ्नतिर्युक्ता' इति भावः । परिहरति – तथापीति ।। इतिशब्दः श्लोकव्याख्यानसमाप्तौ । यद्वा, अपिपदेन कथमरुचिः सूचिता? इत्यत आह – यद्यपीति ।। अनेनापि 'तथापि विशेषानुग्रहार्थं नत्वा' इति व्याख्यातं भवति । तथाच 'भेदज्ञापिकायाः पृथङ्नतेर्विशेषानुग्रहरूप-प्रयोजनान्तरसूचिकापिशब्देन भेदे रुच्यभावः सूचितः' इति भावः । नतिरिति प्रकारवाचीति शब्दस्येत्यरुचिं सूचयतीत्यनेनान्वयः । उपलक्षणमेतत् । सुधानुसारेण 'अस्योद्भवादिदम्' इत्याद्यनुव्याख्यानोक्तजगज्जन्मादिकारणत्वादिविशेषणसमुच्चायक-त्वमपि पदप्रयोजनं द्रष्टव्यम् ।**

ಪ್ರಶ್ನೆ : - ಮಂಗಳಶ್ಲೋಕದಲ್ಲಿ 'ಗುರೂಂಶ್ಚಾಪಿ' ಎಂದು ಒಂದೇ ಅರ್ಥವುಳ್ಳ 'ಚ' ಮತ್ತು 'ಅಪಿ' ಎಂಬ ಎರಡು ಪದಗಳನ್ನು ಏಕೆ ಹೇಳಿದರು? ದೇವತೆಯನ್ನು ಸಮುಚ್ಚಯ ಮಾಡಲು ಚ ಶಬ್ದವೇ ಸಾಕು. ಅಪಿ ಶಬ್ದವು ಬೇಡವಲ್ಲವೆ?

ಉತ್ತರ : -ಇದಕ್ಕೆ ಉತ್ತರರೂಪವಾಗಿ ಟೀಕೆಯಲ್ಲಿ 'ಸ್ವಸ್ಯ ಗುರುದೇವತಾದಿಭೇದೇ ಅರುಚಿಂ ಸೂಚಯತಿ ಅಪಿಪದೇನ' ಎಂದಿದ್ದಾರೆ. ದೇವತೆಯನ್ನು ಪ್ರತ್ಯೇಕವಾಗಿ ನಮಸ್ಕಾರ ಮಾಡಿದಾಗ ಗುರು ಬೇರೆ ದೇವತೆ ಬೇರೆಯೆಂಬ ಸಂಶಯ ಬರುತ್ತದೆ. ಈ ಸಂಶಯವನ್ನು 'ಅಪಿ' ಪದವು ನಿಂದಿಸುತ್ತಿದೆ. ಶ್ರೀಮದಾ-ಚಾರ್ಯರಿಗೆ ದೇವತೆಯೆನಿಸಿದ ನಾರಾಯಣನೇ ವೇದವ್ಯಾಸರೂಪದಿಂದ ಗುರು ಎನಿಸಿದ್ದಾನೆ.

*ಪರಿಪೂರ್ಣಚಂದ್ರಿಕಾ*

'ಯದ್ಯಪಿ' 'ತಥಾಪಿ' ಇತ್ಯಾದಿಗ್ರಂಥದಿಂದ ಈ ಪ್ರಶ್ನೆ ಮತ್ತು ಉತ್ತರಗಳನ್ನು ಟೀಕಾರಾಯರು ನಿರೂಪಿಸಿದ್ದಾರೆ. "ಪೃಥಙ್ನತಿರಿತಿ" ಎಂಬಲ್ಲಿರುವ ಇತಿಶಬ್ದವು ಶ್ಲೋಕವ್ಯಾಖ್ಯಾನವು ಮುಗಿಯಿತು ಎಂಬರ್ಥವನ್ನು ಹೇಳುತ್ತಿದೆ. ಅಥವಾ 'ಯದ್ಯಪಿ' ಎಂಬ ಗ್ರಂಥಕ್ಕೆ ಮತ್ತೊಂದು ಬಗೆಯಲ್ಲಿ ಅವತಾರಿಕೆಯನ್ನು ನೀಡಬಹುದು. ಗುರು ಹಾಗೂ ದೇವತೆಗಳು ಭಿನ್ನರಾಗಿದ್ದಾರೆಂಬ ವಿಷಯದಲ್ಲಿ ಅರುಚಿಯನ್ನು ತೋರಿಸಿದ್ದಾರೆಂದು 'ಅಪಿ'ಪದದಿಂದ ಸೂಚಿಸಿದ್ದಾರೆಂದು ಹೇಳಿದಿರಿ. ಇದು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ 'ಯದ್ಯಪಿ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ವಿಶೇಷ ಅನುಗ್ರಹಕ್ಕೋಸ್ಕರ ಗುರುಗಳನ್ನು ಪ್ರತ್ಯೇಕ ನಮಸ್ಕರಿಸಿದ್ದಾರೆಂದು ಇದರಿಂದ ತಿಳಿಯುತ್ತದೆ. ಈ ಪಕ್ಷದಲ್ಲಿ 'ಇತಿ'ಶಬ್ದಕ್ಕೆ 'ಪ್ರಕಾರ' ಎಂದರ್ಥ. 'ಅರುಚಿಂ ಸೂಚಯತಿ' ಎಂಬಲ್ಲಿ 'ಇತಿ'ಶಬ್ದಕ್ಕೆ ಅನ್ವಯ ಮಾಡಬೇಕು.

ಉಪಲಕ್ಷಣಯಾ ಇದನ್ನು ತಿಳಿಯಬೇಕು - ಅನುವ್ಯಾಖ್ಯಾನದ ಮಂಗಳಪದ್ಯದಲ್ಲಿರುವ 'ಅಸ್ಯೋದ್ಭವಾದಿದಮ್' ಇತ್ಯಾದಿಯಾದ ಜಗಜ್ಜನ್ಮಾದಿಕಾರಣತ್ವವನ್ನೂ ಇಲ್ಲಿ ಸಮುಚ್ಚಯ ಮಾಡಿ ಇಟ್ಟುಕೊಳ್ಳಬೇಕೆಂದು 'ಅಪಿ' ಪದ ಹೇಳುತ್ತಿದೆ.

ಅನುಬಂಧಚತುಷ್ಟಯವಿರುವುದರಿಂದ ಶಾಸ್ತ್ರವು ಅನಾರಂಭಣೀಯವಲ್ಲ

**वा.मं. – अधिकार्यादिशून्यत्वात् नेदं शास्त्रमारम्भणीयम्, इत्यत आह – अनेनैव इति ।। आद्यपद्येनैव इत्यर्थः । 'अन्यार्थं प्रवृत्तेनापि' इत्येवार्थः । वस्तुगत्या अधिकार्यादिसत्त्वमपेक्षितं न तु तत्सूचनम् इत्यत आह – श्रोतृप्रवृत्त्यङ्गभूता इति ।। सूचनेन 'ज्ञातानामेव प्रवृत्त्यङ्गत्वात् नाज्ञातानाम् । ज्ञातार्थज्ञातसम्बन्धं श्रोतुं श्रोता प्रवर्तते ।।' इत्युक्तेरिति भावः । एवं प्रवृत्त्यङ्गत्वेन अधिकारादिसूचनं कर्तव्यमित्युक्तम् । इतोऽपि तत् कर्तव्यम् इत्याह – तत्स्मरणस्येति ।। 'स्मरणार्थं सूचनम्' इति भावः । उक्तम् = प्रथमतात्पर्ये । प्रारभतः = प्रारभमाणस्य । 'महत्' इति भिन्नं पदम् । तेन 'आन्महतः समानाधिकरणे' इत्याकारे महाफलमिति स्यादिति निरस्तम् ।**

ಭಾಷ್ಯದ ಮಂಗಳಪದ್ಯವು ಮಂಗಳಾಚರಣೆಗೋಸ್ಕರ ಹೇಳಲ್ಪಟ್ಟಿದ್ದರೂ ಅನುಬಂಧಚತುಷ್ಟಯವನ್ನು ತಿಳಿಸುತ್ತದೆ. ಆದ್ದರಿಂದ ಅನುಬಂಧಚತುಷ್ಟಯವಿಲ್ಲದ ಈ ಗ್ರಂಥವು ಅನಾರಂಭಣೀಯವೆಂಬ ಶಂಕೆಗೆ 'ಅನೇನೈವ' ಎಂಬ ಗ್ರಂಥವು ಪರಿಹಾರ ನೀಡುತ್ತಿದೆ. ಪ್ರಥಮಮಂಗಳಶ್ಲೋಕದಿಂದಲೇ ಅನುಬಂಧಚತುಷ್ಟಯವನ್ನು ತಿಳಿಸಿದ್ದಾರೆಂದು ಅರ್ಥ. ಅಂದರೆ 'ಮಂಗಳಾಚರಣೆಗೋಸ್ಕರ ಈ ಶ್ಲೋಕವು ಹೊರಟಿದ್ದರೂ ಅನುಬಂಧಚತುಷ್ಟಯವನ್ನೂ ಸಹ ತಿಳಿಸುತ್ತಿದೆ' ಎಂದು ಅಭಿಪ್ರಾಯ.

ಗ್ರಂಥಕ್ಕೆ ಅನುಬಂಧಚತುಷ್ಟಯವಿದ್ದರೆ ಸಾಕು. ಅದನ್ನು ತಿಳಿಯಬೇಕಾಗಿಲ್ಲ. ತಿಳಿಸುವುದಕ್ಕೋಸ್ಕರ ಸೂಚಿಸಲೂ ಬೇಕಿಲ್ಲ ಎಂಬ ಶಂಕೆಗೆ ಉತ್ತರರೂಪವಾಗಿ 'ಶ್ರೋತೃಪ್ರವೃತ್ತ್ಯಂಗಭೂತಾಃ' ಎಂದಿದ್ದಾರೆ.

ಜ್ಞಾತವಾದ ಅನುಬಂಧಚತುಷ್ಟಯವೇ ಪ್ರವೃತ್ತಿಗೆ ಕಾರಣವಾಗಿದೆ. ಅದಕ್ಕೋಸ್ಕರ ಅದರ ಸೂಚನೆಯು ಅತ್ಯಾವಶ್ಯಕ. ಹೀಗೆ ಪ್ರವೃತ್ತಿಗೋಸ್ಕರ ಅಧಿಕಾರ್ಯಾದಿಗಳ ಸೂಚನೆ ಸಾರ್ಥಕ ಎಂದಷ್ಟೇ ಅಲ್ಲ ಅಧಿಕಾರ್ಯಾದಿಗಳನ್ನು ಸ್ಮರಣೆ ಮಾಡುವುದರಿಂದ ಮಹಾಫಲವೇ ದೊರೆಯುತ್ತದೆ. ಇದನ್ನು 'ತತ್ಸ್ಮರಣಸ್ಯ' ಎಂಬ ವಾಕ್ಯವು ಪ್ರತಿಪಾದಿಸುತ್ತಿದೆ.

'ಅಧಿಕಾರಂ ಫಲಂ' ಎಂಬ ಶ್ಲೋಕವನ್ನು ಭಾಗವತದ ಪ್ರಥಮಸ್ಕಂಧದ ತಾತ್ಪರ್ಯದಲ್ಲಿ ಆಚಾರ್ಯರು ಉಲ್ಲೇಖಿಸಿದ್ದಾರೆ. ಪ್ರಾರಭತಃ ಎಂಬ ಪದಕ್ಕೆ ಪ್ರಾರಂಭಮಾಡುತ್ತಿರುವ ಎಂದರ್ಥ. ('ಚಂದ್ರಾದಯಸ್ತು ಮನ್ಯಂತೇ ಸರ್ವಸ್ಮಾದುಭಯಂ ಪದಮ್' - ಚಾಂದ್ರವ್ಯಾಕರಣದ ಪ್ರಕಾರ ಎಲ್ಲ ಧಾತುಗಳು ಉಭಯಪದಿ ಎನಿಸುತ್ತವೆ.) ಪ್ರಮಾಣಶ್ಲೋಕದಲ್ಲಿ 'ಮಹತ್ಫಲಮ್' ಎಂದಿದೆ. ವಸ್ತುತಃ 'ಆನ್ಮಹತಃ ಸಮಾನಾಧಿಕರಣೇ' ಇತ್ಯಾದಿ ಸೂತ್ರದಂತೆ ಮಹಾಫಲಮ್ ಎಂದಾಗಬೇಕು. ಆದರೆ ಮಹತ್ ಎಂಬ ಬೇರೆ ಪದವಾದ್ದರಿಂದ ದೋಷವಿಲ್ಲ.

### ಮಂಗಳಾಚರಣೆಯ ಉಲ್ಲೇಖ ಬಹಳ ಮುಖ್ಯ

**वा.मं.** – ननु ''निर्विघ्नपरिसमाप्त्यादेः नमस्कारेणैव सिद्धेः ग्रथनं व्यर्थम् । एवमधिकारादि सूचनस्य प्रवृत्त्यङ्गतया कर्तव्यत्वेऽपि न महाफलार्थकर्तव्यत्वम् अधिकारादिस्मरणेन महाफलसिद्धेः नच स्मरणार्थमेव सूचनम्'' इति वाच्यम् । तस्य अन्यतोऽपि सम्भवात्, इत्यत आह – **नमस्काराधिकारादीति** ।। यथाक्रममन्वयः । सत्यम्, 'नमस्कारेणैव समाप्त्यादिफलम्' इति । तथापि ग्रथनाभावे शिष्याः 'आचार्यैर्नमस्कारो न कृत एव' इति मत्वा स्वयमपि न कुर्युः । अतः तच्छिक्षणार्थं ग्रथनम् । 'अधिकारादिस्मरणम् अन्यतोऽपि भवति' इत्यपि सत्यम् । तथापि तत्सूचनाभावे शिष्याः 'अधिकारादिस्मरणं नावश्यकमिति आचार्यैर्न तत्सूचनं कृतम्' इति मत्वा न तत्स्मरणादिकं कुर्युः । अतः 'महाफलार्थं तत्-स्मरणमावश्यकमिति शिष्यशिक्षार्थं सूचनं कार्यमेव' इति न तस्य वैयर्थ्यमिति भावः । प्रागूर्ध्वं वा ग्रथनस्य सार्थक्ये वक्तव्ये अधिकारादिप्रसङ्गे तत्कथनम् एक-वाक्येनोभयप्रयोजनकथनसौकर्यार्थम् इति ध्येयम् । अधिकारादिसूचनमेवोपपादयति – **तथाहीति** ।। **सूचित इति** यथायोगं सर्वत्रान्वेति । **प्रयोजनमिति** ।। 'यथाक्रम-मवान्तरमुख्यप्रयोजनम्' इत्यर्थः । **यथा सम्भवमिति**[१] ।। 'नारायणस्य विषयस्य प्रतिपाद्यत्वं ज्ञानस्य तद्विषयकत्वं गमनस्य ज्ञानजन्यत्वं सम्बन्धः' इति भावः ।

---

(१) यथायोग्यं सम्बन्धः- पा

ಪ್ರಶ್ನೆ : - ಗ್ರಂಥದ ನಿರ್ವಿಘ್ನಪರಿಸಮಾಪ್ತಿಗೆ ನಮಸ್ಕಾರಮಾಡಿದರೆ ಸಾಕು. ಮಂಗಳಾಚರಣೆಯನ್ನು ಗ್ರಂಥದಲ್ಲಿ ನಿಬಂಧನೆ ಮಾಡಬೇಕಿಲ್ಲ. ಅದರಂತೆ ಅಧಿಕಾರ್ಯಾದಿಗಳ ಸೂಚನೆಯು ಪ್ರವೃತ್ತ್ಯಂಗ-ವಾದ್ದರಿಂದ ಕರ್ತವ್ಯವಾಗಿರಬಹುದು. ಆದರೆ ಮಹಾಫಲಕ್ಕೋಸ್ಕರ ಮಾಡಬೇಕಿಲ್ಲ. ಅಧಿಕಾರ್ಯಾದಿಗಳ ಸ್ಮರಣೆಯಿಂದಲೇ ಮಹಾಫಲವು ದೊರೆಯುವಾಗ ಅದರ ಸೂಚನೆಯು ಅನಾವಶ್ಯಕವಲ್ಲವೇ?

ಉತ್ತರ : - ಈ ಪ್ರಶ್ನೆಗೆ ಉತ್ತರರೂಪವಾಗಿ 'ನಮಸ್ಕಾರಾಧಿಕಾರ್ಯಾದಿಗ್ರಥನಸೂಚನೇ' ಎಂದು ಉತ್ತರಿಸುತ್ತಿದ್ದಾರೆ. ನಮಸ್ಕಾರಾಧಿಕಾರ್ಯಾದಿ ಎಂಬಲ್ಲಿರುವ ನಮಸ್ಕಾರಪದಕ್ಕೆ ಗ್ರಥನ ಎಂಬಲ್ಲಿ ಅನ್ವಯ. ಅಧಿಕಾರಿಪದಕ್ಕೆ ಸೂಚನೆ ಎಂಬಲ್ಲಿ ಅನ್ವಯ. ಭಕ್ತಿಯಿಂದ ನಮಸ್ಕಾರಮಾಡಿದರೆ ಸಾಕು. ನಿರ್ವಿಘ್ನವಾಗಿ ಗ್ರಂಥವು ಪರಿಸಮಾಪ್ತಿ ಆಗುತ್ತದೆ. ಆದರೆ ತಾವು ಮಾಡಿದ ಮಂಗಳವನ್ನು ಗ್ರಂಥದಲ್ಲಿ ನಿಬಂಧನೆ ಮಾಡದಿದ್ದರೆ ಶಿಷ್ಯರಿಗೆ ತಿಳಿಯುವುದಿಲ್ಲ. ಹಿರಿಯರು ಮಂಗಳವನ್ನು ಮಾಡಿಲ್ಲವೆಂದು ತಿಳಿದು ತಾವೂ ಸಹ ಮಂಗಳವನ್ನು ಮಾಡಲಾರರು. (ಭಾ- 'ಯದ್ಯದಾಚರತಿ ಶ್ರೇಷ್ಠः' ಎಂಬ ಪ್ರಮಾಣದಂತೆ.) ಅದಕ್ಕೋಸ್ಕರ ನಮಸ್ಕಾರದ ಗ್ರಥನವು ಶಿಷ್ಯಶಿಕ್ಷಣೆಗೋಸ್ಕರ ಸಾರ್ಥಕವಾಗಿದೆ. ಅದರಂತೆ ಅಧಿಕಾರ್ಯಾದಿಗಳ ಸ್ಮರಣೆಯು ಬೇರೆಯದರಿಂದ ಬರಬಹುದು. ಆದರೆ ಗ್ರಂಥಾರಂಭದಲ್ಲಿ ಅದನ್ನು ಸೂಚಿಸದಿದ್ದರೆ ಅಧಿಕಾರ್ಯಾದಿಗಳು ಬೇಕಾಗಿಲ್ಲವೆಂದು ಶಿಷ್ಯರು ಅದರ ಸ್ಮರಣೆಯನ್ನು ಮಾಡಲಾರರು. ಆದ್ದರಿಂದ ಮಹಾಫಲಕ್ಕೋಸ್ಕರ ಅಧಿಕಾರ್ಯಾದಿಗಳ ಸ್ಮರಣೆಯು ಆವಶ್ಯಕವೆಂದು ಶಿಷ್ಯರಿಗೆ ಶಿಕ್ಷಣ ಮಾಡುವುದಕ್ಕೋಸ್ಕರ ಸೂಚನೆಯು ಸಾರ್ಥಕವಾಗಿದೆ. ಅಧಿಕಾರ್ಯಾದಿಗಳ ಸೂಚನೆಗೆ ಫಲವನ್ನು 'ತಥಾಹಿ' ಎಂಬ ಗ್ರಂಥದಿಂದ ನಿರೂಪಿಸಿದ್ದಾರೆ. 'ಸೂಚಿತः' ಎಂಬ ಪದಕ್ಕೆ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಎಂದು ಎಲ್ಲೆಡೆ ಅನ್ವಯಿಸಬೇಕು. 'ತಜ್ಜ್ಞಾನಗಮನೇ ಪ್ರಯೋಜನಮ್' ಎಂಬ ಟೀಕೆಯಲ್ಲಿ ಭಗವಂತನ ಜ್ಞಾನವು ಅವಾಂತರಪ್ರಯೋಜನ, ಭಗವಂತನ ಪ್ರಾಪ್ತಿಯು ಮುಖ್ಯ-ಪ್ರಯೋಜನವೆಂದು ಹೇಳಿದ್ದಾರೆ. 'ಯಥಾಸಂಭವಮ್(ಯಥಾಯೋಗ್ಯಂ-ವಾ)' ನಾರಾಯಣನೆಂಬ ವಿಷಯದಲ್ಲಿ ಪ್ರತಿಪಾದ್ಯತ್ವವು, ಜ್ಞಾನದಲ್ಲಿ ವಿಷಯಕತ್ವವು, ಗಮನದಲ್ಲಿ ಜ್ಞಾನಜನ್ಯತ್ವವು ಸಂಬಂಧವೆಂದು ತಿಳಿಯಬೇಕು. ನಮಸ್ಕಾರಗ್ರಥನದ ಪ್ರಯೋಜನವನ್ನು ಹಿಂದೆಯೂ ಹೇಳಬಹುದಿತ್ತು. ಇಲ್ಲಿಯೇ ಹೇಳಿದ್ದರಿಂದ ಎರಡು ಶಂಕೆಯನ್ನು ಒಟ್ಟಿಗೆ ಪರಿಹರಿಸಿದಂತಾಯಿತು.

## ಬ್ರಹ್ಮಮೀಮಾಂಸಾಶಾಸ್ತ್ರರಚನೆಯ ಹಿನ್ನೆಲೆ

**ब्रह्मसूत्रभाष्यम् –**

**१) द्वापरे सर्वत्र ज्ञान आकुलीभूते तन्निर्णयाय ब्रह्मरुद्रेन्द्रादिभिरर्थितो भगवान्नारायणो व्यासत्वेनावततार ।**

**२) अथेष्टानिष्टप्राप्तिपरिहारेच्छूनां तद्योगमविजानतां तज्ज्ञापनार्थं वेदमुत्सन्नं व्यञ्जयंश्चतुर्धा व्यभजत् । चतुर्विंशतिधैकशतधा सहस्रधा द्वादशधा च ।**

**३) तदर्थनिर्णयाय ब्रह्मसूत्राणि चकार ।**

**(೧) ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯಲ್ಲಿ ಸಕಲಸಜ್ಜನರ ತತ್ವಜ್ಞಾನವು ಸಂಶಯಾಸ್ಪದವಾದಾಗ ತತ್ವಜ್ಞಾನದ ನಿರ್ಣಯಕ್ಕೋಸ್ಕರ ಬ್ರಹ್ಮರುದ್ರ ಇಂದ್ರ ಮೊದಲಾದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನು ವೇದ- ವ್ಯಾಸರೂಪದಿಂದ ಅವತರಿಸಿದನು.**

**(೨) ಅವತಾರ ಮಾಡಿದ ಕೂಡಲೇ, ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರದ ಅಪೇಕ್ಷೆ ಇದ್ದರೂ ಅದರ ಉಪಾಯವನ್ನು ತಿಳಿಯದೆ ದುಃಖಪಡುತ್ತಿರುವ ಸಜ್ಜನರಿಗೆ, ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರದ ಉಪಾಯವನ್ನು ತಿಳಿಸುವುದಕ್ಕಾಗಿ; ಅಪಪಾಠಾದಿಗಳಿಂದ ತಿರೋಹಿತವಾದ ವೇದವನ್ನು ಶುದ್ಧವಾಗಿ ಉಪದೇಶಿಸುತ್ತಾ, ನಾಲ್ಕು ಭಾಗಗಳಾಗಿ ವಿಂಗಡಿಸಿದನು. ಋಗ್ವೇದವನ್ನು ಇಪ್ಪತ್ತನಾಲ್ಕುಶಾಖೆಗಳನ್ನಾಗಿ, ಯಜುರ್ವೇದವನ್ನು ನೂರೊಂದು ಶಾಖೆಗಳನ್ನಾಗಿ, ಸಾಮವೇದವನ್ನು ಸಾವಿರಶಾಖೆಗಳನ್ನಾಗಿ, ಅಥರ್ವವೇದವನ್ನು ಹನ್ನೆರಡು ಶಾಖೆಗಳನ್ನಾಗಿ ವಿಂಗಡಿಸಿದನು.**

**(೩) ಈ ವೇದಗಳ ಅರ್ಥವನ್ನು ನಿರ್ಣಯಿಸುವುದಕ್ಕಾಗಿಯೇ ಬ್ರಹ್ಮಸೂತ್ರಗಳನ್ನು ರಚಿಸಿದನು.**

ಪ್ರತಿಪದಾರ್ಥ - ೧. ದ್ವಾಪರೇ = ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯ ಭಾಗದಲ್ಲಿ (ಎರಡೇ ಧರ್ಮಪಾದಗಳು ಉಳಿದಿರುವ ಯುಗದಲ್ಲಿ ಅಥವಾ ಕೃತ, ತ್ರೇತಾಯುಗಗಳ ಅನಂತರದ ಯುಗದಲ್ಲಿ), ಸರ್ವತ್ರ = ಭೂಲೋಕದಲ್ಲಿರುವ ದೇವತೆಗಳು, ಋಷಿಗಳು ಹಾಗೂ ಮನುಷ್ಯರೇ ಮೊದಲಾದ ಸಜ್ಜನರಲ್ಲಿ, ಜ್ಞಾನೇ = ತತ್ವಜ್ಞಾನವು, ಆಕುಲೀಭೂತೇ = 'ಬ್ರಹ್ಮನು ಸಗುಣ ಮತ್ತು ಜಗತ್ತು ಸತ್ಯ' ಎಂಬುದು ತತ್ವಜ್ಞಾನವೋ, ಅಥವಾ 'ಬ್ರಹ್ಮನು ನಿರ್ಗುಣ ಮತ್ತು ಜಗತ್ತು ಮಿಥ್ಯಾ' ಎಂಬುದು ತತ್ವಜ್ಞಾನವೋ ಎಂಬ ಸಂಶಯದಿಂದ ಮತ್ತು ಬ್ರಹ್ಮನು ನಿರ್ಗುಣನೇ ಆಗಿದ್ದಾನೆ ಜಗತ್ತು ಮಿಥ್ಯಾಭೂತವೇ ಆಗಿದೆ ಎಂಬ ವಿಪರೀತಜ್ಞಾನದಿಂದ ಕೆಟ್ಟುಹೋಗುತ್ತಿರಲು, ತನ್ನಿರ್ಣಯಾಯ = ಬ್ರಹ್ಮನು ಸಗುಣನಾಗಿದ್ದಾನೆ, ಜಗತ್ತು ಸತ್ಯವಾಗಿದೆ ಎಂಬುದೇ ತತ್ವಜ್ಞಾನ ಹೊರತು ಬೇರೆಯಲ್ಲ ಎಂಬುದರ ದಾರ್ಢ್ಯಕ್ಕೋಸ್ಕರ, ಬ್ರಹ್ಮರುದ್ರೇಂದ್ರಾದಿಭಿಃ = ಚತುರ್ಮುಖಬ್ರಹ್ಮ, ರುದ್ರ ಇಂದ್ರ ಇವರೇ ಮೊದಲಾದ ದೇವತೆಗಳಿಂದ, ಅರ್ಥಿತಃ = ಪ್ರಾರ್ಥಿತನಾದ, ಭಗವಾನ್ = ಸಮಗ್ರ ಷಡ್ಗುಣೈಶ್ವರ್ಯಸಂಪನ್ನನಾದ, ನಾರಾಯಣಃ = ಶ್ರೀಮನ್ನಾರಾಯಣನು, ವ್ಯಾಸತ್ವೇನ = ಶುಭಮರಕತವರ್ಣ ಎಂಬಲ್ಲಿ ವರ್ಣಿಸಿದ ವೇದವ್ಯಾಸರೂಪದಿಂದ, ಅವತತಾರ = ಆವಿರ್ಭವಿಸಿದನು[1].

---

(१) भाष्यदीपिका – ननु ब्रह्मसूत्राणां प्रामाण्ये सत्येव प्रेक्षावदुपादेयत्वम्, प्रायोऽस्य प्रामाण्यप्रयोज्यत्वात् । सत्येव तस्मिन् प्रातीतिकार्थनिरासेन यथावद् व्याख्येयत्वं

೨. ಅಥ = ಅವತಾರಮಾಡಿದ ಕೂಡಲೇ (ತತ್ತ್ವಜ್ಞಾನಕ್ಕೆ ಅನುಕೂಲವಲ್ಲದ ವಿಜಾತೀಯವ್ಯಾಪಾರದಿಂದ ತಡಮಾಡದೆ ಅಥವಾ ಪರೋಪದೇಶಾದಿಗಳನ್ನು ಅಪೇಕ್ಷಿಸದೆ), 'ಇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಮ್' = ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರಗಳನ್ನು ಬಯಸುವವರು, ತದ್ಯೋಗಂ = ಅವುಗಳ ಉಪಾಯವನ್ನು (ನಿವೃತ್ತಧರ್ಮರೂಪವಾದ ಪರಾಪರತತ್ತ್ವಜ್ಞಾನವನ್ನು), ಅವಿಜಾನತಾಂ = ತಿಳಿಯದ ಸಜ್ಜನರಿಗೆ, ತಜ್ಞ್ಞಾಪನಾರ್ಥಂ = ಇಷ್ಟಾನಿಷ್ಟಪ್ರಾಪ್ತಿಪರಿಹಾರರೂಪ ಉಪಾಯವನ್ನು ತಿಳಿಸಲು, ಉತ್ಸನ್ನಂ = ಅಪಪಾಠಾದಿಗಳಿಂದ ತಿರೋಹಿತವಾದ, ವೇದಂ = ಮೂಲವೇದದಿಂದ ಋಕ್-ನಿಗದಾದಿರೂಪವಾಗಿ ನಾಲ್ಕು ಬಗೆಯಲ್ಲಿ ಮೊದಲೇ ವಿಭಕ್ತವಾದ ಉಪವೇದವನ್ನು, ಚತುರ್ಧಾ = ಪುನಃ ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದವೆಂದು ನಾಲ್ಕು ಬಗೆಯಾಗಿ, ವ್ಯಭಜತ್ = ವಿಭಾಗಮಾಡಿದನು.

---

सम्भवति । प्रामाण्यमेव कथम्? इत्याशङ्क्य, 'आप्तिमूलत्वादिनैव' इति परिहारमभिप्रेत्य वक्तृश्रोतृप्रसक्तदोषाभावरूपाप्तिमूलत्वोपपादनाय सूत्रागतिक्रममाह - 'द्वापरे' इत्यादिना ॥

द्वावेव धर्मपादौ परावशिष्टौ यस्मिन् युगे, द्वाभ्यां युगाभ्यां परस्मिनुत्तरस्मिन् युगे इति वा, वैवस्वतमन्वन्तरे महायुगेषु प्रथमद्वापरापेक्षयाऽष्टाविंशे धर्मपादद्वययुतत्वाद् द्वापराख्ये युगे । 'सर्वत्र' 'मनुष्याणाम् ऋषीणां देवानां च' इति तत्वप्रदीपोक्तेः 'लोक इति सज्जनो विवक्षितः' इति प्रमेयदीपोक्तेश्च सर्वेषां देवऋष्यादीनां सतां; 'ज्ञाने' सम्यग्ज्ञाने 'आकुलीभूते' सम्यग्ज्ञानं सगुणत्वादिज्ञानं, उत निर्गुणत्वादिज्ञानमिति विप्रतिपत्ति-जन्यसन्देहविषयतां निर्गुणत्वादिज्ञानमेव न त्वन्यदिति मिथ्याज्ञानविषयतां च प्राप्ते सति; तज्ज्ञानविषयीभूतं सगुणत्वादिकं तत्त्वमन्यद् वेति सन्देहे तादृग्विपर्यये च सतीति यावत् । 'तन्निर्णयाय' तस्मिन् सगुणत्वादिज्ञाने तस्य सम्यग्ज्ञानत्वस्य निश्चयार्थं, इदमेव तत्त्वं नान्यदिति विषये सम्यक्त्वनिश्चयार्थमिति यावत् । 'ब्रह्मरुद्रेन्द्रादिभिः' देवैरिति शेषः । 'अर्थितः' उपयाचितः । अन्यपदार्थानां देवानां ब्रह्मरुद्रेन्द्रादिभिरिति यद् विशेषणं तत् प्रसिद्धप्रभावानामपि भगवदितरेषामशक्यमिदं कार्यमिति प्रदर्शनार्थम् । 'भगवान्' समग्रैश्वर्यवैराग्यादिगुणसम्पन्नो 'नारायणः' तन्निर्णयाय 'व्यासत्वेन' व्यासभावेन 'शुभमरकतवर्णम्' इत्युक्तव्यासरूपेण 'अवततार' आविर्बभूवेति । 'तन्निर्णयाय' इत्यस्याऽवृत्त्या योजना । 'तन्निर्णयाय' 'इन्द्रादिभिरर्थितो रुद्रो ब्रह्मा च ततः तैः सर्वैरुपगम्योत्तमाधिकारिभिरर्थितो भगवान्' इति बुद्ध्वा विवेकेनान्वयः ॥

(೧) ಅಪ್ರಾಪ್ತವಾದ ಸುಖದಪ್ರಾಪ್ತಿ ಮತ್ತು ದುಃಖದ ಪರಿಹಾರವನ್ನು ಇಚ್ಛಿಸುವವರು - ತತ್ತ್ವಪ್ರದೀಪ. ಮೋಕ್ಷವು ಪುರುಷಾರ್ಥರೂಪವೆಂದು ಇತರ ದಾರ್ಶನಿಕರು ಒಪ್ಪಲಾರರು. ಅವರನ್ನು ನಿರಾಕರಿಸಿ ಮೋಕ್ಷಸ್ವರೂಪವನ್ನು ನಿರ್ಣಯಿಸುವುದಕ್ಕಾಗಿ ಇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಂ ಎಂದು ಹೇಳಿದ್ದಾರೆ. ಇಲ್ಲದಿದ್ದಲ್ಲಿ ಮುಮುಕ್ಷೂಣಾಂ ಎಂದೇ ಸಾಕಿತ್ತು.

ಈ ನಾಲ್ಕು ವೇದಗಳನ್ನು ಅನೇಕ ರೀತಿಯಾಗಿ ವಿಭಾಗ ಮಾಡಿದರು. ಚತುರ್ವಿಂಶತಿಧಾ = ಋಗ್ವೇದವನ್ನು ಇಪ್ಪತ್ತನಾಲ್ಕುಶಾಖೆಗಳನ್ನಾಗಿ, ಏಕಶತಧಾ = ಯಜುರ್ವೇದವನ್ನು ನೂರೊಂದು ಶಾಖೆಯನ್ನಾಗಿ, ಸಹಸ್ರಧಾ = ಸಾಮವೇದವನ್ನು ಸಾವಿರಶಾಖೆಯನ್ನಾಗಿ, ದ್ವಾದಶಧಾ = ಅಥರ್ವವೇದವನ್ನು ಹನ್ನೆರಡು ಶಾಖೆಗಳನ್ನಾಗಿ ವಿಭಾಗ ಮಾಡಿದನು[१].

---

(१) **भाष्यदीपिका** – ततः किं प्रकृते? इत्यत आह – **अथेति** ।। 'अथ' तस्मात् तन्निर्णयायावतीर्णत्वाद् अवतारानन्तरमेव तत्वज्ञानाननुकूलविजातीयव्यापार-व्यवधानमकृत्वेति यावत्, न तु परोपदेशमपेक्ष्येति वा । 'इष्टानिष्टप्राप्तिपरिहारेच्छूनाम्' इष्टप्राप्तिश्चानिष्टपरिहारश्च ताविच्छूनाम् । तत्वप्रदीपरीत्या अप्राप्तसुखप्राप्तिदुःखपरिहारे-च्छावतामिति वा । मोक्षस्य पुरुषार्थतासमर्थनार्थं वादिविप्रतिपत्तेः तत् स्वरूपनिरूपणार्थं चैवमुक्तम् । अन्यथा मुमुक्षूणामित्येव ब्रूयात् । नैतावताऽलम् 'आत्यन्तिके' इति चोपस्कर्तव्यम् । 'तद्योगं' तयोरुपायविशेषं निवृत्तधर्मपरापरतत्त्वज्ञानरूपं 'अविजानताम्' अजानानां सज्जनानां 'तज्ज्ञापनार्थम्' इष्टानिष्टप्राप्तिपरिहारोपाय-ज्ञापनार्थं । 'उत्सन्नम्' अपपाठादिना तिरोहितं 'वेदं चतुर्धा' – 'व्यभजत्' इत्यावर्तते, 'ततः प्रागेव विभक्तम्' इति 'पुनरेकैकम्' इति च शेषः । तथा च अवान्तरवेदविभागात् प्रागेव ततः स्वत एव चतुर्धा विभक्ताद् ऋगादिरूपान्मूलवेदाच्च चतुर्धा विभक्तं वेदम् ऋङ्निगदादिरूपमुपवेदं व्यञ्जयन् अध्यापनेनाभिव्यज्य ततस्तस्मादेकैकस्मादेकैको भाग इति चतुर्धा व्यभजत् । ऋचो ऋच उद्धृत्याभिव्यज्य ततो ऋग्वेदं, निगदाद् यजुर्वेदम्, साम्नः सामवेदम्, अथर्वणादथर्वणवेदं कृतवानित्यर्थः । पुनरेकैकं च वेदम् ऋग्वेदादिरूपावान्तरभेदं वेदम् अध्येतॄणामल्पशक्तिं वीक्ष्य चतुर्विंशतिधा एकशतधा एकोत्तरशताख्यप्रकारेण सहस्रधा द्वादशधा च व्यभजदित्यर्थः ।।

तदुक्तम् ऋग्भाष्ये —

'ऋचः स ऋच उद्धृत्य ऋग्वेदं कृतवान् प्रभुः ।
यजूंषि निगदाच्चैव तथा सामानि सामतः ।।'

इत्यादिना । स्वत एव चतुर्धा विभक्तान्मूलवेदाद् ऋगादिरूपोपवेदमुद्धृत्याभिव्यज्य तस्मादवान्तरम् ऋग्वेदादि कृतवानित्यर्थः । अत्र पूर्वं द्वापरग्रहणं महावेदाद् उद्धृतस्य उपवेदस्य अवान्तरवेदत्वेन अवान्तरवेदस्य च चतुर्विंशत्यादित्वेन विभागकथनं चाखिल-ज्ञानाकुलीभावसमर्थनार्थम् । कालतो विभागात् पूर्वं तत्तच्छाखाऽपरिज्ञानाच्च भवति ह्याकुलीभावः । तदुक्तं – 'चक्रे वेदतरोः' (भाग.१.३.२१) इत्यादिना । 'अल्पमेधसः' आकुलीभूतज्ञानान्, तन्निवारणार्थमिति शेषः ।।

ಪರಿಪೂರ್ಣಚಂದ್ರಿಕಾ

(೩) ತತ್ = ಆ ವಿಭಕ್ತವಾದ ವೇದಗಳ, ಅರ್ಥ = ಯಥಾವಸ್ಥಿತವಾದ ಅರ್ಥದ, ನಿರ್ಣಯಾಯ = ನಿರ್ಣಯಕ್ಕೋಸ್ಕರ, ಬ್ರಹ್ಮಸೂತ್ರಾಣಿ = ಬ್ರಹ್ಮಸೂತ್ರಗಳನ್ನು, ಚಕಾರ = ಮಾಡಿದನು[1].

### ಸೂತ್ರಪ್ರಾಮಾಣ್ಯಸಮರ್ಥನೆಗಾಗಿ ಹಿನ್ನೆಲೆಕಥೆ

सत्तर्कदीपावली – **कथमेतेषां सूत्राणां प्रामाण्यम्?, कथं चोपादेयत्वम्?** इत्यत आह – द्वापरे इति । न दुर्मतिजिनादिवाक्यवदस्याप्यसुरादिव्यामोहनार्थत्वं किन्तु

यद्यपि –

**'एको वेदः कृते ह्यासीत् त्रेतायां स त्रिधाऽभवत् ।**
**स एव पञ्चधा जातो द्वापरं प्राप्य वै युगम् ॥**
**उत्सन्नः स कलिं प्राप्य वेदः प्रायेण सर्वशः ॥'**

इत्याथर्वणभाष्योदाहृतस्मृतौ कृतयुगे वेदैकत्वस्य त्रेतायां त्रैविध्यमात्रस्य द्वापरे पञ्चविधत्वस्य चोक्तेः, तथा सर्वस्यापि वेदस्य कलावेवोत्सादोक्तेः, अत्र तु 'वेदमुत्सन्नम्' इत्यनेन त्रेतायुगे चतुर्धा विभागस्य द्वापर एवोत्सादस्य चोक्तेर्विरोधो भाति । तथाऽप्यव्यक्तमूलराश्यपेक्षया वेदैक्योक्तेः सम्भवात्, त्रेतायुगे प्राचुर्येण भगवदिज्यासाधनत्वविवक्षया त्रैविध्योक्तावपि वस्तुत अथर्वणाख्यप्रकारान्तरसत्त्वस्यानिषेधेन विधान्तरस्यापि सत्त्वसम्भवात्, द्वापरेऽपौरुषेयस्य वेदस्य चतुर्विधत्वेऽपि पौरुषेयैरितिहासपुराणादिभिः सह पञ्चविधत्वस्यापि सम्भवात्, बाहुल्येन सर्वैः प्रकारैर्वेदस्य कलावुत्सादेऽपि व्यासावतारात् पूर्वं द्वापरेऽप्यपपाठादिरूपोत्सादस्य सम्भवाद् अविरोधः ।

(१) भाष्यदीपिका – एवमुपोद्घातमुक्त्वा प्रकृतमाह – **'तदर्थनिर्णयाय'** इति ॥ तेषां सर्वेषाम् अर्थः तम् उपक्रमादियुक्तिभिर्निर्णेतुमित्यर्थः । **'ब्रह्मसूत्राणि'** ब्रह्म वेदः, तदर्थः परब्रह्म वा, तस्य सूत्राणि तत्स्वरूपनिर्णायकानीत्यर्थः । ***गीताभाष्ये*** तु 'ब्रह्मसूत्राणि शारीरकसूत्राणि' इति रूढिरप्युक्ता । अत्र द्वापर इत्यादिना 'ब्रह्मसूत्राणि चकार' इत्यन्तेन वक्तुर्व्यासस्य नारायणावतारत्वोक्त्या प्रमादाज्ञानादिदोषाभावसाधनात्, तत्राप्रयोजकत्वशङ्कायाश्च भगवत्त्वोक्त्या परिहृतत्वात्, ब्रह्मादीनामर्थित्वोक्त्या च श्रोतृदोषाभावस्य वक्तरि तन्निमित्तविप्रलम्भाभावस्य चोक्तत्वात्, 'ज्ञान आकुलीभूते तन्निर्णयाय' इत्यनेनाज्ञाननिर्हरणस्य प्रसक्तत्वेन प्रसङ्गदोषाभावस्य तत एवानपहासस्य चोक्तत्वादाप्तिमूलता दर्शिता भवति । 'ब्रह्मसूत्राणि' इत्यनेन ब्रह्मपरश्रुतिव्याख्यानरूपत्वाच्छ्रुतिमूलत्वं, न्यायव्युत्पादकत्वाद् युक्तिमूलत्वं च सूचितम् । तथा च सिद्धं ब्रह्मसूत्राणां प्रामाण्यमिति भावः ।

ಜಿಜ್ಞಾಸಾಧಿಕರಣ

**ब्रह्मादिदेवऋष्यादीनां परतत्वज्ञाननिर्वृत्त्यर्थं प्रणीतत्वात् श्रुतिमूलत्वाद् युक्तिमूलत्वाच्च प्रामाण्यम् । उपादेयत्वं त्विष्टानिष्टप्राप्तिपरिहारोपायज्ञापकवेदनिर्णायकत्वात् सिद्ध्यतीत्यर्थः । बहुपुराणादिसिद्धत्वेन विगानानर्हमप्येतत्सूत्रप्रामाण्यं स्कान्दपुराणादिवाक्यैर्द्रढयति – नारायणात् इति ।। गौतमशापस्तु स्वहतगोनिर्मातृविषयः । चतुर्विंशत्यादिभेदस्तु वेदशाखाविषयः । कृष्णद्वैपायनादन्ये द्रौणिव्यासादयो विशेषणात् सोपपदव्यासशब्दाभिधेया इत्यर्थः ।**

ಅನುವಾದ - ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವಿದೆಯೇ? ಉಪಾದೇಯಗಳಾಗಿವೆಯೇ? ಎಂಬ ಪ್ರಶ್ನೆಗೆ ದ್ವಾಪರೇ ಎಂಬ ಭಾಷ್ಯವು ಉತ್ತರಿಸುತ್ತಿದೆ. ದುಷ್ಟಬುದ್ಧಿಯುಳ್ಳ ಜಿನಾದಿವಾಕ್ಯಗಳಂತೆ ಈ ಭಾಷ್ಯವೂ ಸಹ ಅಸುರಾದಿಗಳ ಮೋಹಕ್ಕೋಸ್ಕರ ಹೊರಟಿಲ್ಲ, ಹೊರತು ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳಿಗೆ ಮತ್ತು ಋಷಿಮೊದಲಾದವರಿಗೆ ಶ್ರೇಷ್ಠವಾದ ತತ್ವಜ್ಞಾನವನ್ನು ದಯಪಾಲಿಸುವುದಕ್ಕಾಗಿ (ನಿರ್ವೃತ್ತಿ = ನಿಷ್ಪತ್ತಿ) ಹೊರಟಿರುತ್ತದೆ. ಮತ್ತು ಶ್ರುತಿಮೂಲತ್ವ ಯುಕ್ತಿಮೂಲತ್ವಇರುವುದರಿಂದ ಪ್ರಮಾಣವೂ ಆಗಿದೆ. ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರದ ಉಪಾಯವನ್ನು ತಿಳಿಸುವ ಮೂಲಕ ವೇದಾರ್ಥವನ್ನು ನಿರ್ಣಯಿಸುವುದರಿಂದ ಉಪಾದೇಯವಾಗಲೇಬೇಕು. ಬ್ರಹ್ಮಸೂತ್ರಗಳಿಗೆ ಯಾವುದೇ ವಿರೋಧವಿಲ್ಲದಿದ್ದರೂ ಪ್ರಾಮಾಣ್ಯವು ಅನೇಕ ಪುರಾಣಸಿದ್ಧವಾಗಿದೆ. ಪ್ರಕೃತ ಸ್ಕಾಂದಪುರಾಣವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ನಾರಾಯಣಾತ್' ಎಂಬ ವಾಕ್ಯದಿಂದ.

ಗೌತಮರ ಶಾಪವು ತಮ್ಮಿಂದ ಮೃತವಾದ ಗೋವನ್ನು ಸೃಷ್ಟಿಮಾಡಿದವರಲ್ಲಿ ಮಾತ್ರ ಪ್ರಭಾವವನ್ನು ಬೀರಿದೆ. ಇಪ್ಪತ್ತನಾಲ್ಕು ಮೊದಲಾದ ವಿಭಾಗಗಳು ವೇದಶಾಖೆಗೆ ವಿಷಯವಾಗಿದೆ. ಕೃಷ್ಣದ್ವೈಪಾಯನರನ್ನು ಬಿಟ್ಟು ಉಳಿದ ದ್ರೌಣಿವ್ಯಾಸಾದಿಗಳನ್ನು ವಿಶೇಷಣಸಹಿತವಾಗಿ ಕರೆದಿದ್ದಾರೆ ಎಂದರ್ಥ.

### ಎಂತಹ ಗ್ರಂಥವನ್ನು ಅಧ್ಯಯನ ಮಾಡಬೇಕು?
### ವ್ಯಾಖ್ಯೇಯಗ್ರಂಥದ ಲಕ್ಷಣವೇನು?

तत्वप्रकाशिका -

**ननु यदुपादेयं तदेवानन्यार्थतया व्याख्येयम् । यच्च प्रमाणत्वे सतीष्टसाधनताऽवबोधकम्, प्रायः तदेवोपादेयम्, अतः कथं ब्रह्मसूत्राणां व्याख्येयत्वोपयोग्युपादेयतायै प्रामाण्यादिः? इत्याशङ्कां परिहर्तुं सूत्रागतिक्रममाह – द्वापरे इति ।।**

**सर्वत्रेति सार्वत्रिकपुरुषोक्तिः । ज्ञाने = सम्यग्ज्ञाने । आकुलीभूते =**

'किमिदमदो वा' इति सन्दिग्धे, 'अन्यदेव' इति मिथ्यादृष्टिदुष्टे च । आकुलीभावसमर्थनाय द्वापरग्रहणम् ।

तद्योगम् = इष्टप्राप्त्यनिष्टपरिहारोपायम् । वेदमुत्सन्नम् इत्यादेः अपपाठादिना तिरोहितम् । प्रागेव चतुर्धा विभक्तं वेदं ऋङ्निगदादिरूपं व्यक्तीकृत्यैकैकस्माद् एकैको भाग इति चतुर्धा व्यभजदेकैकं चावान्तरमृगादिवेदं चतुर्विंशत्यादिशाखाभेदेन व्यभजदित्यर्थः। तदुक्तम् –

'ऋचः स ऋच उध्दृत्य ऋग्वेदं कृतवान् प्रभुः ।
यजूंषि निगदाच्चैव तथा सामानि सामतः' ।

इति । अवान्तरवेदादिविभागकथनं च ज्ञानाकुलीभावसमर्थनार्थम् । 'चक्रे वेदतरोः शाखा दृष्ट्वा पुंसोऽल्पमेधसः ।' इत्यादेः ।

अयं भावः । ''वाक्यप्रामाण्यं तावन्निर्दोषतया सम्भवति । निर्दोषता चापौरुषेयतया आप्तिमूलतया च । आप्तिश्च वक्तृनिर्दोषतैव । आप्तिमूलत्वाद् ब्रह्मसूत्राणां प्रामाण्यसिद्धिः । प्रमादाज्ञानसंशयविपर्ययाणां नारायणावतारे व्यासेऽसम्भवात् भगवत्वादेव । विप्रलम्भकत्वस्य च श्रोतृदोषनिबन्धनस्य ज्ञान-अयोग्यतायाः ब्रह्मादिश्रोतृषु अभावात् अपहासस्य च प्रसङ्गदोषनिबन्धनस्य तदभावेनाभावनिर्णयात् । ज्ञानायोग्यताया ब्रह्मादिश्रोतृष्वभावात् । अपहासस्य च प्रसङ्गदोषनिबन्धनस्य तदभावेनाभावनिर्णयात् । अज्ञाननिर्हरणस्य च प्रसक्तत्वेन श्रुतियुक्तिमूलत्वात् । इष्टानिष्टप्राप्तिपरिहारसाधनवेदनहेतुवेदनिर्णायकत्वेन इष्टसाधनावबोधकत्वं च सिध्यति । अतो ब्रह्मसूत्राणामत्युपादेयत्वाद् व्याख्येयता'' इति ।

ಅನುವಾದ -- ಯಾವ ಗ್ರಂಥವು ಸ್ವೀಕಾರಾರ್ಹವಾಗಿರುತ್ತದೋ ಅಂತಹ ಗ್ರಂಥವನ್ನು ಮಾತ್ರ ಮೇಲುನೋಟಕ್ಕೆ ತೋರುವ ಅಪಾರ್ಥದ ಗ್ರಹಣವಾಗದಂತೆ (ಅನನ್ಯಾರ್ಥತಯಾ) ಸರಿಯಾದ ರೀತಿಯಲ್ಲಿ ವ್ಯಾಖ್ಯಾನ ಮಾಡಬೇಕು. ಸ್ವೀಕಾರಾರ್ಹವಾದ ಅಂತಹ ಗ್ರಂಥವು ಯಾವುದು? ಎಂದರೆ ''ಯಾವುದು ಪ್ರಮಾಣವಾಗಿದ್ದು ಇಷ್ಟಸಾಧನೆಯನ್ನು ತಿಳಿಸಿಕೊಡುತ್ತದೋ'' ಅಂತಹ ಗ್ರಂಥವೇ ಪ್ರಾಯಃ ಸ್ವೀಕಾರಾರ್ಹವಾಗುತ್ತದೆ. (ಅಪ್ರಮಾಣಗ್ರಂಥವನ್ನೂ ಕೆಲವರು ಕೀರ್ತಿಕಾಮುಕರಾಗಿ ವ್ಯಾಖ್ಯಾನಿಸಬಹುದು; ಅದಕ್ಕಾಗಿ ಪ್ರಾಯಃ ಎಂದದ್ದು). ಹಾಗಾಗಿ ಬ್ರಹ್ಮ-

ಸೂತ್ರಗಳಿಗೆ ವ್ಯಾಖ್ಯಾನ ಮಾಡಲು ಉಪಯುಕ್ತವಾದ ಉಪಾದೇಯತ್ವವನ್ನು ಸಮರ್ಥಿಸಬೇಕು. ಆ ಉಪಾದೇಯತ್ವಕ್ಕೆ ಉಪಯುಕ್ತವಾದ ಪ್ರಾಮಾಣ್ಯ, ಇಷ್ಟಸಾಧನತಾಬೋಧಕತ್ವಗಳನ್ನು ಸಾಧಿಸಬೇಕು. ಇವೆಲ್ಲವೂ ಬ್ರಹ್ಮಸೂತ್ರಗಳಿಗೆ ಹೇಗೆ ಇವೆ? ಎಂಬ ಶಂಕೆಯನ್ನು ಪರಿಹರಿಸಲು ಸೂತ್ರಪ್ರವೃತ್ತಿಯ ಹಿನ್ನೆಲೆಯನ್ನು 'ದ್ವಾಪರೇ' ಇತ್ಯಾದಿ ಭಾಷ್ಯದಿಂದ ವಿವರಿಸುತ್ತಿದ್ದಾರೆ.

ಭಾಷ್ಯದಲ್ಲಿ 'ಸರ್ವತ್ರ' ಎಂಬ ಪದಕ್ಕೆ 'ಸರ್ವಪುರುಷರಲ್ಲಿ' ಎಂದು ಅರ್ಥ. ನಿರುಪಪದವಾದ 'ಜ್ಞಾನ' ಶಬ್ದಕ್ಕೆ 'ಯಥಾರ್ಥಜ್ಞಾನ' ಎಂಬ ಮುಖ್ಯಾರ್ಥವನ್ನೇ ಇಟ್ಟುಕೊಳ್ಳಬೇಕು. 'ಆಕುಲೀಭೂತೇ' ಎಂದರೆ 'ಗೊಂದಲಗೊಂಡಾಗ' ಎಂದರ್ಥ. ಅಂದರೆ - "ಗುಣೋತ್ಕರ್ಷಜ್ಞಾನವು ತತ್ತ್ವಜ್ಞಾನವೋ? ಅಥವಾ ಐಕ್ಯಜ್ಞಾನವು ತತ್ತ್ವಜ್ಞಾನವೋ? ಎಂದು ಕೆಲವರಿಗೆ ಗೊಂದಲ; ಮತ್ತೆ ಕೆಲವರಿಗೆ ಐಕ್ಯಜ್ಞಾನವೇ ತತ್ತ್ವಜ್ಞಾನವೆಂಬ ವಿಪರೀತ ತಿಳುವಳಿಕೆ; ಇವುಗಳು ಉಂಟಾದಾಗ"- ಎಂದರ್ಥ. ಗೊಂದಲಕ್ಕೆ ಕಾರಣವನ್ನು 'ದ್ವಾಪರೇ' ಎಂಬ ಪದದಿಂದ ತಿಳಿಸಿದ್ದಾರೆ. ಧರ್ಮದ ಎರಡೇ ಪಾದಗಳು ಉಳಿದದ್ದರಿಂದ ಇಂತಹ ಅನರ್ಥಗಳು ಸಹಜ.

'ಅಥ' ಎಂದರೆ ಗುರೂಪದೇಶಾದಿಗಳ ಅವಶ್ಯಕತೆ ಇಲ್ಲದೆ ಅವತಾರ ಮಾಡಿದ ಕೂಡಲೆ ಎಂದರ್ಥ. ತದ್ಯೋಗಮ್- ಎಂದರೆ ಇಷ್ಟಪ್ರಾಪ್ತಿ ಅನಿಷ್ಟಪರಿಹಾರದ ಕಾರಣವನ್ನು ಎಂದರ್ಥ. ('ವೇದಮುತ್ಸನ್ನಮಿತ್ಯಾದೇಃ' ಎಂಬುದಕ್ಕೆ 'ಇತ್ಯರ್ಥಃ' ಎಂಬಲ್ಲಿ ಅನ್ವಯ.) ಉತ್ಸನ್ನಂ = ಅಪಪಾಠದಿಂದ ಮರೆಮಾಚಿದ.

ಮೊದಲೇ ಮೂಲವೇದದಿಂದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬುದಾಗಿ ಉಪವೇದಗಳು ವಿಭಕ್ತವಾಗಿದ್ದವು. ಈ ಒಂದೊಂದು ಉಪವೇದದಿಂದಲೂ ಒಂದೊಂದು ಅವಾಂತರವೇದಗಳು ಉದ್ಧರಿಸಲ್ಪಟ್ಟವು. ಈ ಅವಾಂತರವೇದಗಳಿಂದ ಪುನಃ ಶಾಖೆಗಳು ವಿಭಕ್ತವಾದವು. ಋಗ್ವೇದ ಇಪ್ಪತ್ತನಾಲ್ಕುಶಾಖೆ, ಯಜುರ್ವೇದ ನೂರೊಂದು, ಸಾಮವೇದ ಸಾವಿರ, ಅಥರ್ವವೇದ ಹನ್ನೆರಡು ಶಾಖೆಗಳಾಗಿ ವಿಭಾಗ ಮಾಡಲ್ಪಟ್ಟವು. ಇದನ್ನೇ ಋಗ್‌ಭಾಷ್ಯದಲ್ಲಿ ಉದಾಹರಿಸಿದ ಈ ಸ್ಮೃತಿ ಹೇಳುತ್ತಿದೆ -

*ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।*
*ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥*

ಎಂದು. ಹೀಗೆ ಅವಾಂತರವೇದವಿಭಾಗಮಾಡಬೇಕಾದರೆ ಜ್ಞಾನದಲ್ಲಿ ಎಲ್ಲರಿಗೂ ಎಷ್ಟು ಗೊಂದಲವಾಗಿತ್ತು ಎಂದು ತಿಳಿಯಬಹುದು. ಜ್ಞಾನದಲ್ಲಿರುವ ಆಕುಲೀಭಾವವನ್ನು ಸಮರ್ಥಿಸಲು 'ಅವಾಂತರವೇದವಿಭಾಗ' ಎಂದು ಹೇಳಲಾಗಿದೆ. ಇದನ್ನೇ ಭಾಗವತಪ್ರಥಮಸ್ಕಂಧದಲ್ಲಿ ಹೀಗೆ ಹೇಳಲಾಗಿದೆ -

*ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ*

(ಪುರುಷರ ಮಂದಬುದ್ಧಿಯನ್ನು ಗಮನಿಸಿ ವೇದಗಳು ಶಾಖೆಗಳಾಗಿ ವಿಭಾಗಿಸಲ್ಪಟ್ಟವು) ಇತ್ಯಾದಿಯಾಗಿ.

ಬ್ರಹ್ಮಸೂತ್ರಪ್ರಾಮಾಣ್ಯವನ್ನು ಹೀಗೆ ತಿಳಿಯಬೇಕು - ನಿರ್ದುಷ್ಟನಾಗಿದ್ದರಷ್ಟೇ ವಾಕ್ಯಪ್ರಾಮಾಣ್ಯ ಸಿದ್ಧವಾಗುತ್ತದೆ. ಈ ನಿರ್ದುಷ್ಟತ್ವವು ಅಪೌರುಷೇಯತ್ವದಿಂದ ಅಥವಾ ಆಪ್ತಿಮೂಲತ್ವದಿಂದ ಸಿದ್ಧವಾಗುತ್ತದೆ. ಪ್ರಕೃತ ಬ್ರಹ್ಮಸೂತ್ರಗಳು ಆಪ್ತಿಮೂಲಗಳಾಗಿವೆ. ಅಂದರೆ ಬ್ರಹ್ಮಸೂತ್ರಗಳನ್ನು ರಚಿಸಿದವರು ಯಥಾರ್ಥಭಾಷಿಗಳಾಗಿದ್ದಾರೆ. ಆಪ್ತಿಮೂಲವಾದ್ದರಿಂದ ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ವೇದವ್ಯಾಸರಲ್ಲಿ ಪ್ರಮಾದ, ಅಜ್ಞಾನ, ಸಂಶಯ, ವಿಪರ್ಯಯ ಇವೇ ಮೊದಲಾದ ದೋಷಗಳ ಸಂಪರ್ಕವು ಬರಲು ಸಾಧ್ಯವಿಲ್ಲ. ಆದ್ದರಿಂದ ಅವರು ನಿರ್ದುಷ್ಟರಾಗಿದ್ದಾರೆ. ಈ ನಿರ್ದುಷ್ಟತ್ವವು ಭಗವತ್ತ್ವದಿಂದ ಲಭ್ಯವಾಗುತ್ತದೆ.

*(ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಾಂಸ್ಯಶೇಷತಃ ।*
*ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ ॥*

ಎಂದು ವಿಷ್ಣುಪುರಾಣದಲ್ಲಿ ನಿರತಿಶಯವಾದ ಜ್ಞಾನಶಕ್ತ್ಯಾದಿಗಳು ಇದ್ದು, ಹೇಯದೋಷಗಳಿಂದ ದೂರನಾದವನನ್ನೇ ಭಗವಂತನೆಂದಿದ್ದಾರೆ).

ಇದರಂತೆಯೇ ಪ್ರಾಮಾಣ್ಯ ಸಿದ್ಧಿಸಲು ಶ್ರೋತೃದೋಷ, ವಕ್ತೃದೋಷ, ಪ್ರಸಂಗದೋಷಗಳು ಇರಬಾರದು. ಆವಾಗ ಸೂತ್ರಗಳು ಆಪ್ತಿಮೂಲವಾಗುತ್ತವೆ. ಮತ್ತು ಇದರ ಜೊತೆಗೆ ಶ್ರುತಿಮೂಲತ್ವ ಹಾಗು ಯುಕ್ತಿಮೂಲತ್ವಗಳೂ ಇದ್ದರೆ ಪರಮಪ್ರಮಾಣವಾಗುತ್ತವೆ. ಅಷ್ಟೇ ಅಲ್ಲದೆ ಇಷ್ಟಸಾಧಕ ಅನಿಷ್ಟಪರಿಹಾರಕವಾಗಿದ್ದರೆ ಅತ್ಯಂತವಾಗಿ ಉಪಾದೇಯವಾಗುತ್ತವೆ. ಇವೆಲ್ಲವೂ ಬ್ರಹ್ಮಸೂತ್ರಗಳಿಗೆ ಇದೆಯೆಂದು ವಿಪ್ರಲಂಭಕತ್ವಸ್ಯ ಚ ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ.

ಈಗಾಗಲೇ ವಕ್ತೃದೋಷವಿಲ್ಲವೆಂದು ಸಮರ್ಥಿಸಿದ್ದಾಗಿದೆ. ಆದರೆ ವಕ್ತೃದೋಷವಿಲ್ಲದಿದ್ದರೂ ಸಹ ಶ್ರೋತೃದೋಷವಿದ್ದಾಗ ಅಪಾತ್ರರಿಗೆ ಜ್ಞಾನದಾನ ಮಾಡಿದಂತಾಗುವುದರಿಂದ ವಂಚಕತ್ವ-ದೋಷವು ಬರುತ್ತದೆ. ಆದರೆ ಪ್ರಕೃತದಲ್ಲಿ ಬ್ರಹ್ಮಾದಿಗಳೇ ಶ್ರೋತೃಗಳಾಗಿರುವುದರಿಂದ ಅವರಲ್ಲಿ ಅಪಾತ್ರತ್ವಾದಿದೋಷಗಳಿಗೆ ಅವಕಾಶವಿಲ್ಲವಾದ್ದರಿಂದ ಶ್ರೋತೃದೋಷಪ್ರಯುಕ್ತವಾಗಿ ವಕ್ತೃದೋಷ-ವನ್ನು ಹೇಳಲಾಗದು. ಹಾಗೆಯೇ ಪ್ರಸಂಗದೋಷವೂ ಇಲ್ಲ. ಏಕೆಂದರೆ ಪ್ರಸಂಗದೋಷಕ್ಕೆ ನಿಬಂಧನವಾದದ್ದು ಅಪಹಾಸ, ಆದರೆ ಅಜ್ಞಾನದ ಪರಿಹಾರಕ್ಕಾಗಿ ಬ್ರಹ್ಮಾದಿಗಳು ಕಳಕಳಿಯಿಂದ ಪ್ರಾರ್ಥನೆ ಮಾಡುತ್ತಿರುವಾಗ ಅಪಹಾಸಾದಿಗಳಿಗೆ ಪ್ರಸಕ್ತಿಯೇ ಇಲ್ಲ.

ಹೀಗೆ ಆಪ್ತಿಮೂಲತ್ವದಿಂದಲೇ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು ಸಿದ್ಧವಾಗಿದೆ. ಇದರ ಮೇಲೆ ಪುನಃ ಶ್ರುತಿನಿರ್ಣಾಯಕತ್ವವಿರುವುದರಿಂದ ಶ್ರುತಿಮೂಲತ್ವವು ಸ್ವತಃ ಯುಕ್ತ್ಯಾತ್ಮಕವಾಗಿದ್ದರಿಂದ

ಯುಕ್ತಿಮೂಲತ್ವವೂ ಇರುವುದರಿಂದ ಪರಮಪ್ರಾಮಾಣ್ಯವು ಸಿದ್ಧವಾಗುತ್ತದೆ. ಇಷ್ಟಪ್ರಾಪಕ, ಅನಿಷ್ಟಪರಿಹಾರಕವಾದದ್ದು ವೇದಾರ್ಥಜ್ಞಾನ. ಅಂತಹ ಯಥಾರ್ಥವೇದಾರ್ಥ ತತ್ತ್ವಜ್ಞಾನವನ್ನು ತಂದುಕೊಡುವಂತಹದ್ದು ಈ ಸೂತ್ರಗಳು. ಹಾಗಾಗಿ ಇಷ್ಟಸಾಧನಜ್ಞಾನಜನಕತ್ವವು ಸಿದ್ಧವಾಗುತ್ತದೆ ಪರಮಪ್ರಮಾಣವಾದ್ದರಿಂದ ಬ್ರಹ್ಮಸೂತ್ರಗಳು ಅತ್ಯಂತ ಉಪಾದೇಯವಾಗಿವೆ. ಆದ್ದರಿಂದಲೇ ವ್ಯಾಖ್ಯಾನ ಮಾಡಲು ಅರ್ಹವಾಗಿವೆ.

### ಉಪಾದೇಯಗ್ರಂಥವಷ್ಟೇ ವ್ಯಾಖ್ಯಾನಮಾಡಲು ಅರ್ಹ

**भा.दी. – भाष्ये सूत्रार्थोक्तिं प्रतिज्ञाय तदुत्पत्तिक्रमोक्तिरयुक्ता?** इत्यत आह – **नन्विति ।। अनन्यार्थतयेति ।।** प्रातीतिकार्थपरं न भवतीत्यनेन प्रकारेण' इत्यर्थः ।

**वा.मं** – 'सूत्रार्थ उच्यते' इति प्रतिज्ञाय, 'द्वापरे' इत्यादिना सूत्रागतिप्रकार-निरूपणमसङ्गतम् इत्यतः, तदुपयोगं वक्तुमाक्षिपति – **नन्विति** ।। व्याख्येयत्व-प्रयोजकत्वशून्यत्वात् न सूत्राणां व्याख्येयत्वम् इति वक्तुं व्याख्येयत्वप्रयोजकं तावद्दर्शयति – **यदुपादेयमिति** ।। अनुपादेयस्यापि पूर्वपक्षग्रन्थस्य व्याख्येयत्व-दर्शनादाह – **अनन्यार्थतयेति** ।। 'प्राधान्येन' इत्यर्थः । पूर्वपक्षग्रन्थस्य महावाक्यार्थ बोधोपयोगितया व्याख्येयत्वेपि न प्राधान्येन व्याख्येयत्वम् । न चेदं शास्त्रमवान्तरं वाक्यं येनानुपादेयमिति महावाक्यार्थज्ञानोपयोगितया व्याख्येयं स्यादिति भावः । तर्ह्युपादेयत्वमपि अस्तु इत्यतः तत्प्रयोजकशून्यत्वात् नास्ति इति वक्तुमुपादेयत्व-प्रयोजकमाह – **यद्वेति** ।।

'ಸೂತ್ರಾರ್ಥಃ ಉಚ್ಯತೇ' ಎಂದು ಪ್ರತಿಜ್ಞೆ ಮಾಡಿ 'ದ್ವಾಪರೇ ಸರ್ವತ್ರ' ಇತ್ಯಾದಿಯಾಗಿ ಸೂತ್ರಾಗಮನದ ಕಥೆಯನ್ನು ನಿರೂಪಿಸಿದ್ದಾರೆ. ಇದು ಅಸಂಗತವೆಂದು ಪ್ರಶ್ನೆಗೆ ಬಂದರೆ ಅದರ ಉಪಯೋಗವನ್ನು ತೋರಿಸಲು "ನನು" ಇತ್ಯಾದಿಯಾಗಿ ಆಕ್ಷೇಪಮಾಡಿಕೊಳ್ಳುತ್ತಿದ್ದಾರೆ.

ಸೂತ್ರಗಳನ್ನು ವ್ಯಾಖ್ಯಾನ ಮಾಡಬೇಕಾದರೆ ಸೂತ್ರಗಳಲ್ಲಿ ವ್ಯಾಖ್ಯೇಯತ್ವಪ್ರಯೋಜಕವಾದ ಧರ್ಮ ಇರಬೇಕು. ಅದನ್ನು 'ಯದುಪಾದೇಯಮ್' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

ಉಪಾದೇಯವಾದ ಗ್ರಂಥವಷ್ಟೇ ವಾಖ್ಯಾನ ಮಾಡಲು ಅರ್ಹವಾಗಿರುತ್ತದೆ. ಹಾಗಾದರೆ ಅನುಪಾದೇಯವಾದ ಪೂರ್ವಪಕ್ಷಗ್ರಂಥವನ್ನು ವ್ಯಾಖ್ಯಾನಿಸುವುದು ತಪ್ಪಾದೀತು? ಎಂದರೆ ಅನು-ಪಾದೇಯಗ್ರಂಥವನ್ನು ಪ್ರಧಾನವಾಗಿ ವ್ಯಾಖ್ಯಾನಿಸಬಾರದೆಂದಷ್ಟೇ ಅಭಿಪ್ರಾಯ. ಪೂರ್ವಪಕ್ಷಗ್ರಂಥವು ಮಹಾವಾಕ್ಯಾರ್ಥಜ್ಞಾನಕ್ಕೆ ಉಪಯೋಗಿಯಾದ್ದರಿಂದ ವ್ಯಾಖ್ಯೇಯವಾಗಿದ್ದರೂ ಪ್ರಧಾನವಾಗಿ ವ್ಯಾಖ್ಯೇಯ-ವಲ್ಲದ್ದರಿಂದ ದೋಷವಿಲ್ಲ.

ಪರಿಪೂರ್ಣಚಂದ್ರಿಕಾ

ಆದ್ದರಿಂದ ಉಪಾದೇಯವಾದ ಗ್ರಂಥವಷ್ಟೇ ವ್ಯಾಖ್ಯೇಯವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರವು ಉಪಾದೇಯವಲ್ಲದ್ದರಿಂದ ವ್ಯಾಖ್ಯೇಯವಾಗಿಲ್ಲವೆಂದು ಆಕ್ಷೇಪ. ಒಂದು ವೇಳೆ ಈ ಶಾಸ್ತ್ರವು ಅವಾಂತರವಾಕ್ಯವೆನಿಸಿದ್ದರೆ ಅನುಪಾದೇಯವಾಗಿದ್ದರೂ ಮಹಾವಾಕ್ಯಾರ್ಥಜ್ಞಾನಕ್ಕೆ ಉಪಯೋಗಿಯಾದ್ದರಿಂದ ವ್ಯಾಖ್ಯೇಯವಾಗುತ್ತಿತ್ತು. ಆದರೆ ಈ ಶಾಸ್ತ್ರವು ಅವಾಂತರವಾಕ್ಯವಾಗಿಲ್ಲ. ಉಪಾದೇಯತ್ವ ಏಕಿಲ್ಲ? ಎಂಬುದನ್ನು 'ಯಚ್ಚ' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ.

### ಉಪಾದೇಯತ್ವಲಕ್ಷಣದಲ್ಲಿ ಕೃತ್ಯವಿಚಾರ

भा.दी. – **इष्टसाधनतावगमेऽपि** अनाप्तवाक्ये उपादेयत्वाभावात् **प्रमाणत्वे सतीति** । अप्रमाणत्वादिना निश्चितस्यापि ख्यात्याद्यर्थं व्याख्यानदर्शनादाह – **प्रायः इति** ।। बहुशः इत्यर्थः । देशे ज्ञानाप्रसक्तेराह – **सार्वत्रिकेति** ।। **सम्यग्ज्ञान इति** ।। 'निरुपपदज्ञानपदस्य मुख्यार्थत्वात्' इति भावः । **इदमिति** ।। गुणोत्कर्षादिज्ञानमेव तत्वज्ञानम् उत ऐक्यादिज्ञानं वा? इति केषाञ्चित् । केषाञ्चित् 'अन्यदेव ऐक्यादिज्ञानमेव तत्वज्ञानमुत्कर्षादिज्ञानं तत्वज्ञानादन्यदेव' इति विपरीतज्ञानविषयीभूते चेत्यर्थः ।

वा.मं – **इष्टसाधनतावबोधकस्यापि** विप्रलम्भकवाक्यस्यानुपादेयत्वात् **सत्यन्तम्** । प्रमाणभूतस्यापि वाणिज्योपदेशस्य विरक्तेनानुपादेयत्वात् तदुत्तरभागः । अप्रमाणत्वे ष्टसाधनानवबोधकत्वाभ्यां निश्चितस्यापि दुःशास्त्रस्य ख्यात्याद्यर्थमुपादेयत्वदर्शनात् 'प्रायः' इत्युक्तम् । 'अत्यन्तम्' इत्यर्थः । अत एव ब्रह्मसूत्राणामुपादेयत्वादिति वक्ष्यति । यदर्थमेतत् निरूपणम्, तदिदानीमाह – **अत इति** ।। **कथम्?** न कथमपि । शब्दप्रामाण्यप्रयोजकापौरुषेयत्वाप्तिमूलत्वयोरभावात् एतत् कामेनेदं कार्यमित्यप्रतिपादनाच्च' इति भावः । देशे ज्ञानाप्रसक्तेराह – **सार्वत्रिकपुरुषेति** ।। **सम्यग्ज्ञान इति** ।। 'असम्यग्ज्ञानस्य तन्निर्णयायेत्युक्तनिर्णयानुपपत्तेः' इति भावः । **किमिदमदो वा इति** ।। विष्णुर्गुणपूर्ण इति ज्ञाने इदं प्रमाणमप्रमाणं वा मोक्षसाधनं न वा इति केषाञ्चित् सन्देहविषयीभूते केषाञ्चिदप्रमाणमेव मोक्षसाधनं नवेति विपरीतज्ञानविषयीकृते चेत्यर्थः ।

आकुलीभावे किन्निमित्तम्? इत्यत आह – **आकुलीभावेति** ।। तस्याकुलीभावप्रयोजकत्वं **'द्वापरेखिलम्'** इति वक्ष्यमाणप्रमाणे व्यक्तमिति भावः ।

ಪ್ರಮಾಣತ್ವೇ ಸತಿ ಇಷ್ಟಸಾಧನತಾಽವಬೋಧಕತ್ವಂ ಉಪಾದೇಯತ್ವಸ್ಯ ಲಕ್ಷಣಮ್ ಎಂದಂತಾಯಿತು ಇಲ್ಲಿ ಇಷ್ಟಸಾಧನತಾಽವಬೋಧಕತ್ವಂ ಎಂದಿಷ್ಟೇ ಹೇಳಿದರೆ ವಿಪ್ರಲಂಭಕವಾಕ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆ ಅದರ ಪರಿಹಾರಕ್ಕೋಸ್ಕರ ಪ್ರಮಾಣತ್ವವೆಂಬ ವಿಶೇಷಣವನ್ನು ಕೊಡಬೇಕು. ವಿಪ್ರಲಂಭಕವಾಕ್ಯ ಅಪ್ರಮಾಣವಾದ್ದರಿಂದ ಅತಿವ್ಯಾಪ್ತಿ ಇಲ್ಲ. ಇನ್ನು ಪ್ರಮಾಣತ್ವವೆಂದಷ್ಟೇ ಹೇಳಿದರೆ ವಿರಕ್ತನಿಗೆ ಮಾಡುವ ವಾಣಿಜ್ಯೋಪದೇಶದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದರ ಪರಿಹಾರಕ್ಕೋಸ್ಕರ 'ಇಷ್ಟಸಾಧನತಾಽವಬೋಧಕಂ' ಎಂದು ಹೇಳಬೇಕು. ವಿರಕ್ತನಿಗೆ ಅದು ಅನಿಷ್ಟವಾದ್ದರಿಂದ ಅತಿವ್ಯಾಪ್ತಿ ಬರಲ್ಲ.

ದುಃಶಾಸ್ತ್ರಗಳಲ್ಲಿ ಅಪ್ರಾಮಾಣ್ಯನಿಶ್ಚಯ ಮತ್ತು ಇಷ್ಟಸಾಧನಗಳಿಲ್ಲವೆಂಬ ನಿಶ್ಚಯವಿದ್ದರೂ ವ್ಯಾಖ್ಯಾನ ಮಾಡುವುದು ಲೋಕದಲ್ಲಿ ಕಂಡಿದೆ. ಅದರ ಪರಿಹಾರಕ್ಕೋಸ್ಕರ ಟೀಕೆಯಲ್ಲಿ 'ಪ್ರಾಯಃ' ಎಂದು ಹೇಳಿದ್ದಾರೆ. 'ಪ್ರಾಯಃ ಉಪಾದೇಯ'ವೆಂದರೆ ಅತ್ಯುಪಾದೇಯ ಎಂದರ್ಥ. ಅತ್ಯುಪಾದೇಯತ್ವ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಷ್ಟೇ ಇದೆ ಹೊರತು ದುಃಶಾಸ್ತ್ರಗಳಲ್ಲಿಲ್ಲದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ.

ಇಲ್ಲಿಯ ತನಕ ನಿರೂಪಿಸಿದ ವಿಚಾರದ ಸಾರ್ಥಕ್ಯವನ್ನು ಅಥವಾ ಎಂಬುದಾಗಿ ವಿವರಿಸುತ್ತಿದ್ದಾರೆ ಶಬ್ದಪ್ರಾಮಾಣ್ಯಕ್ಕೆ ಪ್ರಯೋಜಕವಾದ ಅಪೌರುಷೇಯತ್ವವಾಗಲೀ, ಆಪ್ತಮೂಲತ್ವವಾಗಲಿ ಇಲ್ಲದ ಕಾರಣ ಮತ್ತು ಇಷ್ಟಪ್ರಾಪ್ತಿಯನ್ನು ನಿರೂಪಿಸಿದ ಕಾರಣ ಅಪ್ರಮಾಣವಾಗಿದೆ ಎಂದು ಈ ವಾಕ್ಯದ ಅಭಿಪ್ರಾಯ ಭಾಷ್ಯದಲ್ಲಿರುವ 'ಸರ್ವತ್ರ' ಎಂಬ ಪದಕ್ಕೆ ಎಲ್ಲ ದೇಶದಲ್ಲಿ ಎಂಬರ್ಥವು ಆಪಾತತ ತೋರುತ್ತದೆ. ಅದರ ನಿವಾರಣೆಗಾಗಿ 'ಸಾರ್ವತ್ರಿಕಪುರುಷ' ಎಂದು ಹೇಳಿದ್ದಾರೆ. ಜ್ಞಾನ ಎಂಬ ಶಬ್ದಕ್ಕೆ ಯಥಾರ್ಥ ಜ್ಞಾನವೆಂಬ ಅರ್ಥವನ್ನು ಹೇಳಿದ್ದಾರೆ. 'ಕಿಂ ಇದಂ ಅದೋ ವಾ' ವಿಷ್ಣುವು ಗುಣಪೂರ್ಣನಾಗಿದ್ದಾನೆ ಎಂಬ ಜ್ಞಾನದ ಪ್ರಮಾಣವೋ ಅಪ್ರಮಾಣವೋ? ಅಥವಾ ಇದು ಮೋಕ್ಷ ಸಾಧನವೋ? ಅಲ್ಲವೋ? ಎಂಬ ಸಂಶಯವು ಕೆಲವರಲ್ಲಿ ಉಂಟಾಗಿವೆ. ಇನ್ನು ಕೆಲವರಲ್ಲಿ ಇದು ಅಪ್ರಮಾಣ ಮತ್ತು ಮೋಕ್ಷಸಾಧನವಲ್ಲ ಎಂಬ ವಿಪರೀತಜ್ಞಾನವೇ ಉಂಟಾಗಿದೆ. ಜ್ಞಾನದ ಆಕುಲೀಭಾವಕ್ಕೆ ನಿಮಿತ್ತವನ್ನು ಆ ಆಕುಲಿಭಾವ ಎಂಬ ಭಾವದಿಂದ ನಿರೂಪಿಸುತ್ತಿದ್ದಾರೆ. ಆಕುಲಿಭಾವ ಪ್ರಯೋಜಕತ್ವವನ್ನು "ದ್ವಾಪರೇ ಅಖಿಲಂ" ಎಂಬ ಮುಂದೆ ಹೇಳುವ ಪ್ರಮಾಣದಲ್ಲಿ ಸ್ಪಷ್ಟವಾಗುತ್ತದೆ.

### ವೇದವಿಭಾಗದ ವಿಚಾರ

**भा.दी. – द्वापरग्रहणमिति ।।** 'द्वावेव धर्मपादौ यस्मिन् युगे प्राप्ते ततः क्रमादपचयोऽन्ते एकोऽवशिष्यते' इति तत्वप्रदीपोक्तव्युत्पत्त्या पादद्वयह्रासस्सूचनादिति भावः । अथ 'इष्टानिष्ट' इति भाष्ये 'अथ' इत्यस्यावतारानन्तरमेव न तु परोपदेशमपेक्ष्य येन सार्वज्ञादि न स्यादित्यर्थस्य तत्वप्रदीपे व्यक्तत्वात् नात्राथशब्दो व्याख्यातः । अत एव प्रमेयदीपिकायाम् 'व्यासोऽवततार' । ततश्चेष्टानिष्टप्राप्तिपरिहारे'ति भाष्यगतस्य 'ततश्च' इत्यस्य 'अवतारानन्तरमेव' इत्यर्थ

उक्तः । 'वेदमुत्सन्नम्' इत्यादेरित्यस्य 'इत्यर्थः' इति वक्ष्यमाणेनान्वयः । 'उत्सन्नम्' इत्यस्यार्थः – अपपाठेति । 'वेदमित्यस्य मूलवेदम्' इति प्रतीतिं निरस्यन् व्याचष्टे – प्रागेवेति ।। 'अवान्तरवेदादिविभागात् पूर्वम्' इत्यर्थः । वेदम् – 'मूलवेदादुद्धृतमुपवेदम्' इत्यर्थः । भाष्ये 'व्यञ्जयन्' इत्यनन्तरम् एकैकस्मादिति, 'वेदम्' इत्यतः प्राक् प्रागेव चतुर्धा विभक्तमिति, 'व्यभजत्' इत्यनन्तरम् एकैकं चेति च योज्यमिति भावः । 'मूलवेदादुद्धृतऋङ्निगदादिरूपादुपवेदादवान्तरवेदः कृतः' इति भाष्येऽस्पष्टमपि कुतः कल्प्यः? इत्यत आह – तदुक्तमिति ।। तत् = ऋङ्निगदादिरूपादुपवेदादवान्तरवेदकरणम् ऋग्भाष्योक्तस्मृतावुक्तम् इत्यर्थः । 'ऋचो निगदात् सामतः' इति मूलवेदादुद्धृतोपवेदा उच्यन्ते । 'तथा'इति यजुर्वेदं सामवेदं समुच्चिनोति । ऋग्वेदं यजुर्वेदं सामवेदम् इत्यवान्तरवेदा उच्यन्ते । तेषाम् ऋग्यत्रार्थवशेन पादव्यवस्था । 'अर्थैकत्वादेकं वाक्यं साकाङ्क्षं चेद् विभागे स्यात्' 'गीतिषु समाख्या' इत्यादि जैमिनिसूत्रोक्तलक्षणकानि ऋग्यजुःसामान्युद्धृत्येत्यर्थः । व्यक्तमेतत् सर्वं -

'................ तथा सामानि सामतः ।
एवं पुराणवचनादुद्धृता हि ततस्ततः ।
ऋचः शाखात्वमापन्नाः शिष्यतच्छिष्यकैरिमाः ।।'

इति श्लोकद्वयव्याख्यानावसर एव ऋग्भाष्यटीकायाम् । तथाहि तत्र टीका –'भवेदेतद् यदि मूलवेदादुपवेदानां ततोऽवान्तरवेदानां चोद्धारेण प्रबन्धनिर्माणं प्रामाणिकं स्यात् तदेव कुतः? इत्यत आह – ऋच इति ।। ऋङ्निगदसामानीति मूलवेदादुद्धृता उपवेदा उच्यन्ते, ततो मूलवेदादुपवेदास्ततश्चावान्तरवेदा उद्धृता इत्येवं पुराणवचनादवगम्यत इत्यर्थः । यथोपवेदादिः प्रबन्धः कृत्रिमः एवं शाखाभेदोऽपि इत्येतत् प्रसङ्गादाह – ऋच इति ।। ऋच इति प्रस्तुतत्वादुक्तं यजुरादिकं चैवमित्यादि ज्ञातव्यम्' इत्यादि ।

वा.मं – भाष्ये 'तन्निर्णयाय' इति तच्छब्देन ज्ञानपरामर्शः । 'तस्य प्रमाणत्वमोक्षहेतुत्वादिना निर्णयः' तन्निर्णयः । 'अथ' इत्यस्य 'अवतारानन्तरमेव न तु परोपदेशमपेक्ष्य, येन स्वतः सार्वज्ञं न स्यात्' इत्यर्थः । यद्वा, अथशब्दो

अवतारानन्तर्यार्थः सन् व्यासावतारस्य मुख्यतो वेदोद्धारकत्वादि प्रयोजनमाह । भाष्ये 'उत्सन्नम्' इत्यस्य 'नष्टम्' इति । 'व्यभजत्' इत्युक्त्येदानीमेव व्यासेन वेदविभागः कृतः पूर्वं त्वविभक्त इति । 'चतुर्विंशतिधा' इत्यादेः 'एकैकं चतुर्विंशत्यादिभेदेन च' इति प्रतीतिनिरासायाह – वेदमुत्सन्नमित्यादेरिति ॥ 'अस्येत्यर्थः' इति वक्ष्यमाणेनान्वयः । प्रागेवेति ॥ 'व्यासावतारात् पूर्वमेव' इत्यर्थः । वेदं मूलवेदादुद्धृतम् उपवेदम् । एकैकस्मादेकैको भाग इति । 'ऋक्सञ्ज्ञकादुपवेदाद् ऋग्वेदाख्यो अवान्तरवेद इत्यादिप्रकारेण' इत्यर्थः । एकैकमवान्तरमिति ॥ 'ऋगादिसञ्ज्ञकादुपवेदादुद्धृत्य विभक्तम् ऋग्वेदाद्यवान्तरवेदम्' इत्यर्थः । चतुर्विंशत्यादीति ॥ ऋगादौ यथा क्रममेतद्धृचेयम् । 'मूलवेदादुद्धृता-दृगादिरूपादुपवेदादवान्तरवेदः कृतः' इति भाष्ये अस्पष्टमपि किमर्थं कल्पितम्? इत्यतः, तत्र ऋग्भाष्यसम्मतिमाह – तदुक्तमिति ॥ अयमर्थः – आदावेक एव वेद इति, स नारायणेन ऋङ्निगदसामाथर्वभेदेन चतुर्धा विभक्तः, त एवोपवेदा इत्युच्यन्ते । अनन्तरं व्यासेन चतुर्णामुपवेदानां मध्ये एकैकस्मादेकैको वेदः कृतः, तेषां च ऋग्वेद इत्यादि नाम । त एवावान्तरवेदा इत्युच्यन्ते । तेषां च मध्ये 'एकैकस्माच्चतुर्विंशतिधा' इत्युक्तप्रकारेण शाखाः कृताः - इति । इदं चात्र ऋङ्-निगदसामशब्दैर्महावेदादुद्धृता उपवेदा इत्युच्यन्त इत्यादि ऋग्भाष्यटीकास्थ-व्यवहारतोऽवगम्यते ।

ಭಾಷ್ಯದಲ್ಲಿ ತನ್ನಿರ್ಣಯಾಯ ಎಂದು ಹೇಳಿದ್ದಾರೆ. ಇಲ್ಲಿ 'ತತ್' ಶಬ್ದದಿಂದ ಜ್ಞಾನವನ್ನು ಪರಾಮರ್ಶ ಮಾಡಬೇಕು. ಅಂದರೆ ಪ್ರಮಾಣದ ನಿರ್ಣಯ, ಅಥವಾ ಮೋಕ್ಷಹೇತುವಾದ ನಿರ್ಣಯವೆಂದರ್ಥ.

'ಅಥ' ಶಬ್ದವು ಪರೋಪದೇಶಾದಿಗಳನ್ನು ಅಪೇಕ್ಷಿಸದೆ ಅವತಾರವಾದ ಕೂಡಲೇ ಎಂದು ಅವ್ಯವಹಿತಾನಂತರ್ಯವನ್ನು ಹೇಳುತ್ತಿದೆ. ಆದ್ದರಿಂದ ವ್ಯಾಸರಲ್ಲಿ ಸ್ವತಃ ಸಾರ್ವಜ್ಞವನ್ನು ಸಮರ್ಥಿಸಿದಂತಾಗುತ್ತದೆ. (ಭಾ -'ಅಥೇಷ್ಟಾನಿಷ್ಟ' ಎಂಬ ಭಾಷ್ಯದಲ್ಲಿರುವ ಅಥಶಬ್ದಕ್ಕೆ ತತ್ತ್ವಪ್ರದೀಪಕಾರರು ಹೀಗೆ ವ್ಯಾಖ್ಯಾನ ಮಾಡಿದ್ದಾರಾದ್ದರಿಂದ ಟೀಕಾಕಾರರು ಪ್ರತ್ಯೇಕವಾಗಿ ವ್ಯಾಖ್ಯಾನಿಸಿಲ್ಲ. ತತ್ತ್ವಪ್ರದೀಪಕಾರರ ವ್ಯಾಖ್ಯಾನವು ಟೀಕಾಕಾರರಿಗೆ ಸಮ್ಮತವಾಗಿದೆಯೆಂಬುದು ಪ್ರಮೇಯದೀಪಿಕಾದಿಂದ ತಿಳಿಯುತ್ತದೆ. 'ತತಶ್ಚ ಇಷ್ಟಾನಿಷ್ಟಪ್ರಾಪ್ತಿಪರಿಹಾರ' ಎಂಬ ಗೀತಾಭಾಷ್ಯದಲ್ಲಿರುವ ''ತತಶ್ಚ'' ಎಂಬ ಪದಕ್ಕೆ 'ಅವತಾರವಾದ ಕೂಡಲೇ' ಎಂದು ಪ್ರಮೇಯದೀಪಿಕಾದಲ್ಲಿ ವ್ಯಾಖ್ಯಾನಿಸಿದ್ದಾರೆ.)

ಅಥವಾ ವ್ಯಾಸಾವತಾರದ ಮುಖ್ಯೋದ್ದೇಶ ವೇದಗಳ ಉದ್ಧಾರವೆಂದು 'ಅಥ' ಶಬ್ದ ತಿಳಿಸುತ್ತಿದೆ.

ಪರಿಪೂರ್ಣಚಂದ್ರಿಕಾ

ವೇದವಿಭಾಗಶಬ್ದಕ್ಕೆ ಹೀಗೆ ಅರ್ಥ - ಮೊದಲು ಒಂದೇ ವೇದವಿತ್ತು. ಅದನ್ನು ನಾರಾಯಣನು ಋಕ್, ನಿಗದ, ಸಾಮ, ಅಥರ್ವ ಎಂದು ನಾಲ್ಕು ಭಾಗಗಳನ್ನಾಗಿ ವಿಭಾಗ ಮಾಡಿದನು. ಇದಕ್ಕೆ ಉಪವೇದ ಎಂದು ಹೆಸರು. ವೇದವ್ಯಾಸದೇವರು ಈ ಉಪವೇದಗಳಿಂದ ಒಂದೊಂದು ವೇದಗಳನ್ನು ವಿಭಾಗಮಾಡಿದರು. ಅವುಗಳಿಗೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ಹೆಸರು. ಇವುಗಳೇ ಅವಾಂತರವೇದ ಎನಿಸಿವೆ. ಈ ವಿಷಯವು 'ಋಙ್ನಿಗದಸಾಮಶಬ್ದೈರ್ಮಹಾ-ವೇದಾದುದ್ಧೃತಾಃ ಉಪವೇದಾಃ ಇತ್ಯುಚ್ಯಂತೇ' ಎಂಬ ಋಗ್‌ಭಾಷ್ಯದ ಟೀಕೆಯಿಂದ ತಿಳಿಯುತ್ತದೆ. (ಭಾಷ್ಯದಲ್ಲಿ 'ವ್ಯಂಜಯಂಶ್ಚತುರ್ಧಾ ವ್ಯಭಜತ್' ಎಂದಿದೆ. ಇಲ್ಲಿ ಬೇರೆ ಪದಗಳನ್ನು ಅಧ್ಯಾಹಾರ ಮಾಡಿದಾಗ ಸಮಸ್ತವಾಕ್ಯ ಹೀಗಾಗುತ್ತದೆ. 'ಪ್ರಾಗೇವ ಚತುರ್ಧಾ ವಿಭಕ್ತಂ ವೇದಮ್ ಉತ್ಪನ್ನಂ ವ್ಯಂಜಯನ್ ಏಕೈಕಸ್ಮಾತ್ ಚತುರ್ಧಾ ವ್ಯಭಜತ್ ಏಕೈಕಂ ಚ' ಎಂದು. ಇಲ್ಲಿಯ ತನಕ ಹೇಳಿದ ವಿಚಾರವು ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿಲ್ಲ. ಭಾಷ್ಯದ ಮಾತಿಗೆ ಹೀಗೆ ಅರ್ಥೈಸಲು ಏನು ಆಧಾರ? ಎಂಬ ಪ್ರಶ್ನೆಗೆ ಋಗ್ಭಾಷ್ಯದ ಸಮ್ಮತಿಯನ್ನು "ತದುಕ್ತಂ" ಎಂಬುದರಿಂದ ನೀಡುತ್ತಿದ್ದಾರೆ.)

(ಭಾ- ತದುಕ್ತಂ ಎಂಬ ಶಬ್ದಕ್ಕೆ ಋಕ್-ನಿಗದಾದಿಗಳಿಂದ ಉಪವೇದ ಮತ್ತು ಅವಾಂತರವೇದಗಳನ್ನು ಮಾಡಿದ್ದಾರೆಂಬುದು ಋಗ್ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ ಎಂದರ್ಥ. 'ಋಚಃ ಸ ಋಚ ಉದ್ಧೃತ್ಯ' ಋಕ್-ನಿಗದ- ಸಾಮ ಎಂಬ ಮೂಲವೇದಗಳಿಂದ ಉಪವೇದಗಳು ಉದ್ಧರಿಸಲ್ಪಟ್ಟವು. ತಥಾ ಎಂಬ ಶಬ್ದದಿಂದ ಯಜುರ್ವೇದ ಹಾಗೂ ಸಾಮವೇದಗಳನ್ನು ಸಮುಚ್ಚಯಮಾಡಿದ್ದಾರೆ. ಋಗ್ವೇದ, ಯಜುರ್ವೇದ ಸಾಮವೇದಗಳು ಅವಾಂತರವೇದಗಳೆನಿಸಿವೆ. ಈ ಮೂರು ವೇದಗಳ ಲಕ್ಷಣವು ಜೈಮಿನಿಸೂತ್ರದಲ್ಲಿ ಹೀಗೆ ಹೇಳಲ್ಪಟ್ಟಿದೆ. 'ತೇಷಾಂ ಋಗ್ಯತ್ರಾರ್ಥವಶೇನ ಪಾದವ್ಯವಸ್ಥಾ' (ಇಷ್ಟೇ ಅಕ್ಷರಗಳೆಂಬ ವ್ಯವಸ್ಥೆಯಿಂದ ಋಕ್ ಎನಿಸುತ್ತದೆ) ಅರ್ಥವ್ಯವಸ್ಥೆಯಿಂದ ಪಾದವ್ಯವಸ್ಥೆಯು ಇರುತ್ತದೆ. ಇದು ಋಗ್ವೇದದ ಲಕ್ಷಣ. 'ಅರ್ಥೈಕತ್ವಾದೇಕಂ ವಾಕ್ಯಂ ಸಾಕಾಂಕ್ಷಂ ಚೇದ್ ವಿಭಾಗೇ ಸ್ಯಾತ್' ಒಂದೇ ಅರ್ಥವನ್ನು ಪ್ರತಿಪಾದಿಸುವ ವಾಕ್ಯದಲ್ಲಿ ಯಾವ ಪದವನ್ನು ತೆಗೆದರೆ ವಾಕ್ಯವು ಅಪೂರ್ಣವಾಗುತ್ತದೋ ಯಾವ ಪದವನ್ನು ಹಾಕಿದರೆ ವಾಕ್ಯವು ಪರಿಪೂರ್ಣವಾಗುತ್ತದೋ ಅದು ಸಂಪೂರ್ಣವಾಕ್ಯ ಎನಿಸುತ್ತದೆ. ಇದು ಯಜುರ್ವೇದದ ಲಕ್ಷಣ. 'ಗೀತಿಷು ಸಾಮಾಖ್ಯಾ' ಗಾನರೂಪವಾದದ್ದು ಸಾಮವೇದ. ಇದು ಸಾಮವೇದದ ಲಕ್ಷಣ. ಇಂತಹ ಲಕ್ಷಣವುಳ್ಳ ಮೂರು ವೇದಗಳನ್ನು ವಿಭಾಗ ಮಾಡಿದರೆಂದು ತಿಳಿಯಬೇಕು. ಈ ಎಲ್ಲ ವಿಚಾರವು ಋಗ್ಭಾಷ್ಯದ ಈ ಮಾತಿನಿಂದ ತಿಳಿಯುತ್ತದೆ.

'ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।
ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥'

'ಏವಂ ಪುರಾಣವಚನಾದುದ್ಧೃತಾ ಹಿ ತತಸ್ತತಃ ।
ಋಚಃ ಶಾಖಾತ್ವಮಾಪನ್ನಾಃ ಶಿಷ್ಯತಚ್ಛಿಷ್ಯಕೈರಿಮಾಃ ॥'

ಈ ಎರಡು ಶ್ಲೋಕಗಳನ್ನು ವ್ಯಾಖ್ಯಾನಿಸುವ ಋಗ್ಭಾಷ್ಯಟೀಕೆಯಲ್ಲಿ ಹೇಳಲಾಗಿದೆ. ಒಂದು ವೇಳೆ ಮೂಲವೇದದಿಂದ ಉಪವೇದಗಳು, ಉಪವೇದಗಳಿಂದ ಅವಾಂತರವೇದಗಳೆಂಬ ಪ್ರಬಂಧನಿರ್ಮಾಣವು

ಪ್ರಾಮಾಣಿಕವಾಗಿದ್ದಲ್ಲಿ ಹಿಂದೆ ಹೇಳಿದ್ದು ಉಪಪನ್ನವಾಗುತ್ತಿತ್ತು. ಆದರೆ ಇದೇ ಪ್ರಾಮಾಣಿಕವಲ್ಲ ಎಂಬ ಪ್ರಶ್ನೆಗೆ ಆಚಾರ್ಯರು 'ಋಚಃ ಸ ಋಚಃ' ಎಂಬ ಮಾತಿನಿಂದ ಉತ್ತರಿಸಿದ್ದಾರೆ. ಋಕ್-ನಿಗದ-ಸಾಮ ಎಂಬುದು ಮೂಲವೇದದಿಂದ ಉದ್ಧೃತವಾದ ಉಪವೇದಗಳು. ಈ ಉಪವೇದಗಳಿಂದ ಅವಾಂತರವೇದಗಳು ಉದ್ಧರಿಸಲ್ಪಟ್ಟವೆ ಎಂಬುದು ಪುರಾಣದ ಮಾತಿನಿಂದ ತಿಳಿಯುತ್ತದೆ ಎಂದು ಆಚಾರ್ಯರ ಮಾತಿನ ಅರ್ಥ. ಹೇಗೆ ಉಪವೇದಗಳೆಂಬ ಪ್ರಬಂಧವು ಕೃತ್ರಿಮವೋ ಅದರಂತೆ ಶಾಖೆಗಳು ಸಹ ಕೃತ್ರಿಮವಾಗಿವೆ (ಕೃತ್ರಿಮವೆಂದರೆ ಒಟ್ಟಾಗಿ ಇರುವುದನ್ನು ಸಂಗ್ರಹಿಸಿ ವಿಭಾಗಮಾಡಿದ್ದು ಎಂದರ್ಥ) ಎಂಬುದನ್ನು ಪ್ರಸಂಗವಶಾತ್ 'ಋಚಃ ಶಾಖಾತ್ವಮಾಪನ್ನಾಃ' ಎಂಬುದರಿಂದ ಹೇಳಿದ್ದಾರೆ. ಯಜುರಾದಿಗಳನ್ನು ಉಪಲಕ್ಷಣಯಾ ಇದರಿಂದ ತಿಳಿಯಬೇಕು.

ಪ್ರಕೃತ ಟೀಕೆಯಲ್ಲಿ "ವೇದಮುತ್ಸನ್ನಂ" ಎಂಬ ಶಬ್ದಕ್ಕೆ ವ್ಯಾಖ್ಯಾನಿಸುತ್ತಾ, ಮೂಲವೇದದಿಂದ ಉಪವೇದಗಳು ಉದ್ಧರಿಸಲ್ಪಟ್ಟವೆ ಎಂಬುದನ್ನು ಕಂಠತಃ ಸ್ಪಷ್ಟವಾಗಿ ಹೇಳಿಲ್ಲ. ಇದಕ್ಕೆ ಕಾರಣವೇನೆಂದರೆ ಮುಂದೆ ಉದಾಹರಿಸುವ 'ಉತ್ಸನ್ನಾನ್ ಭಗವಾನ್' ಎಂಬ ಸ್ಮೃತಿಯಲ್ಲಿ ಮತ್ತು ಋಗ್ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ ಉಪವೇದವು ಮೂಲವೇದದಿಂದ ಉದ್ಧೃತವಾಗಿದೆಯೆಂಬುದು ಅಸ್ಪಷ್ಟವಾಗಿದೆ. ಅದನ್ನು ಅನುಸರಿಸಿ ಇಲ್ಲಿನ ಟೀಕೆಯು ಈ ವಿಚಾರವು ಗೂಢಪ್ರಮೇಯವೆಂದು ಸ್ಪಷ್ಟವಾಗಿ ಹೇಳಿಲ್ಲ. ವೇದದಲ್ಲಿ ಅನೇಕ ವಿಭಾಗದ ಪ್ರಯೋಜನವನ್ನು ಅವಾಂತರವೇದಾದಿ ಎಂಬ ವಾಕ್ಯವು ಸ್ಪಷ್ಟಪಡಿಸುತ್ತಿದೆ.)

### ವೇದವಿಭಾಗಕಥನಕ್ಕೆ ಸಂಗತಿ

**भा.दी.** – **इह टीकायाम्** **'वेदमुत्सन्नम्'** इत्येतस्य मूलवेदादुद्धृतमुपवेदम् इति कण्ठतोऽनुक्तिः 'उत्सन्नान् भगवान्' इति वक्ष्यमाणस्मृतौ, 'ऋचः' इति ऋग्भाष्योक्तस्मृतौ मूलवेदादुद्धृतत्वांशस्य अस्पष्टत्वात् ऋङ्निगदादिरूपाद् वेदादृगाद्युद्धारेण ऋग्यजुरादिवेदकरणमात्रप्रतीतेस्तदनुरोधेनेति ध्येयम् । **'वेदमुत्सन्नं व्यञ्जयंस्तदर्थनिर्णयाय'** इत्यादिनैव पूर्तौ किमनेकविभागोक्त्या? इत्यत आह – **अवान्तरवेदादीति** ।। **स्वत एव** ऋङ्निगदादिरूपादेकैकस्मात् महावेदादुद्धृतस्यावान्तरस्य ऋगादिवेदस्य चतुर्विंशत्यादिशाखाभेदेन । 'आदि'पदेन शाखानां चोपशाखाभेदेन कथनम् इत्यर्थः । यद्वा, महावेदस्यावान्तरत्वेन च आदिपदेन चतुर्विंशत्यादित्वेन कथनम् इत्यर्थः ।। **ज्ञानेति** ।। एतच्च तन्निर्णयप्रसञ्जनार्थम् इति भावः । **इत्यादेरिति** ।। 'प्रथमस्कन्धे' इति ज्ञेयम् । एतच्च शाखाभेदकृतेर्ज्ञानाकुलीभावानुमापकत्वे मानम् ।

ननु 'यदुपादेयम्' इत्यादिना कृतचोद्यस्य कथमनेन निरासः? किञ्च 'नारायणो व्यासत्वेनावतीर्य ब्रह्मसूत्राणि चकार' इत्येतावतैवाप्तिमूलत्वेन प्रामाण्यलाभादवशिष्टं व्यर्थम् । 'प्रामाण्यस्य स्वतस्त्वेन आप्तेरनुपयोगश्च' इत्यत आह – अयं भाव इति ॥

वा.मं – 'सूत्रागतिक्रमं वक्तुं प्रवृत्तेन वेदमुत्सन्नं व्यञ्जयंस्तदर्थनिर्णयाय ब्रह्मसूत्राणि चकार' इत्येव वक्तव्ये वेदविभागकथनं किमर्थम्? इत्यत आह – अवान्तरेति ॥ महावेदादुद्धृतोपवेदानामवान्तरवेदत्वेन विभागकथनम्, 'आदि'पदेन तेषां चतुर्विंशत्यादि विभागकथनं ग्राह्यम् । न केवलं द्वापरग्रहणमिति 'च'शब्दः । अन्यथा विभागो व्यर्थः स्यादिति भावः । अत्र प्रथमभागवतसम्मतिमाह – चक्र इति ॥ अल्पमेधसः = अल्पज्ञानिनः । 'यदुपादेयम्' इत्यादिना कृतचोद्यस्य कथमनेन परिहारः? इत्यत आह – 'अयं भावः' इत्यादिना 'व्याख्येयता' इत्यन्तेन ॥ आप्तिमूलत्वेन सूत्रप्रामाण्योपपादनायोपद्धातसङ्गतिमाह – वाक्यप्रामाण्यमिति ॥ श्रुत्यादिमूलत्वेन प्रामाण्यस्याग्रे वक्ष्यमाणत्वात् 'तावत्'शब्दः । आप्तिश्च वक्तृनिर्दोषतैवेति ।

ಸೂತ್ರಾಗತಿಕ್ರಮವನ್ನು ಹೇಳಲು ಹೊರಟಾಗ ವೇದವಿಭಾಗಕಥನವು ಅನುಚಿತ. ಆದ್ದರಿಂದ 'ವೇದಮುತ್ಸನ್ನಂ ವ್ಯಂಜಯನ್ ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ' ಇಷ್ಟೇ ಸಾಕಿತ್ತು. ಈ ಪ್ರಶ್ನೆಗೆ 'ಅವಾಂತರವೇದಾದಿವಿಭಾಗಕಥನಂ ಚ' ಎಂದು ಉತ್ತರಿಸುತ್ತಿದ್ದಾರೆ. ಜ್ಞಾನದ ಸ್ಥಿತಿ ಎಷ್ಟು ಅಧೋಗತಿಗೆ ಹೋಗಿತ್ತೆಂದು ತಿಳಿಸಲು ವೇದವಿಭಾಗದ ಬಗ್ಗೆ ಹೇಳಿದ್ದಾರೆ. ಇದು ಅನುಚಿತವಲ್ಲ.

'ಅವಾಂತರವೇದಾದಿವಿಭಾಗಕಥನಂ ಚ' ಎಂಬ ಶಬ್ದಕ್ಕೆ 'ಮಹಾವೇದದಿಂದ ಉಪವೇದಗಳು; ಉಪವೇದಗಳಿಂದ ಅವಾಂತರವೇದಗಳು ವಿಭಾಗವಾಗಿವೆ. ಇದರ ಕಥನವು' ಎಂದರ್ಥ. 'ಆದಿ'ಪದಕ್ಕೆ 'ಚತುರ್ವಿಂಶತ್ಯಾದಿವಿಭಾಗಗಳ ಕಥನ' ಎಂದರ್ಥ. ಜ್ಞಾನದ ತಿರೋಧಾನಕ್ಕೆ ದ್ವಾಪರಪದದ ಗ್ರಹಣವಷ್ಟೇ ಕಾರಣವಲ್ಲ. ವೇದವಿಭಾಗಕಥನವೂ ಕಾರಣವೆಂದು 'ಚ' ಶಬ್ದ ತಿಳಿಸುತ್ತಿದೆ.

(ಭಾ - ಯದುಪಾದೇಯಂ ತದೇವ ಅನನ್ಯಾರ್ಥತಯಾ ವ್ಯಾಖ್ಯೇಯಮ್ ಎಂದು ಪ್ರಾರಂಭದಲ್ಲಿ ಸೂತ್ರವ್ಯಾಖ್ಯಾನವು ವ್ಯರ್ಥವೆಂದು ಆಕ್ಷೇಪಿಸಲಾಗಿತ್ತು. ಇಲ್ಲಿಯ ತನಕ ಹೇಳಿದ ವಿಚಾರದಿಂದ ಅದಕ್ಕೆ ಉತ್ತರವನ್ನು ನೀಡಿದಂತಾಗಲಿಲ್ಲ. ಮತ್ತು ನಾರಾಯಣನು ವ್ಯಾಸರೂಪದಿಂದ ಅವತರಿಸಿ ಬ್ರಹ್ಮಸೂತ್ರವನ್ನು ರಚಿಸಿದನು ಎಂದಷ್ಟೇ ಹೇಳಿದರೆ ಸಾಕು. ಆಪ್ತಿಮೂಲಕವಾದ ಪ್ರಾಮಾಣ್ಯವು ಸಿದ್ಧಿಸುವಾಗ ಉಳಿದ ವಿಚಾರಗಳೆಲ್ಲ ವ್ಯರ್ಥ. ಮತ್ತು ಪ್ರಾಮಾಣ್ಯಸ್ವತಸ್ತ್ವವನ್ನು ಸಿದ್ಧಾಂತದಲ್ಲಿ ಒಪ್ಪಿರುವುದರಿಂದ

ಆಪ್ತಿಮೂಲತ್ವವನ್ನು ಸಮರ್ಥಿಸಿದ್ದೂ ಸಹ ವ್ಯರ್ಥ ಎಂಬ ಪ್ರಶ್ನೆಗೆ 'ಅಯಂ ಭಾವಃ' ಎಂಬುದರಿಂದ ಉತ್ತರಿಸಿದ್ದಾರೆ.)

'ಯದುಪಾದೇಯಮ್' ಇತ್ಯಾದಿ ವಾಕ್ಯದಿಂದ ಮಾಡಿದ ಆಕ್ಷೇಪಕ್ಕೆ ಈಗ 'ಅಯಂ ಭಾವಃ' ಎಂಬಲ್ಲಿಂದ ಪ್ರಾರಂಭಿಸಿ 'ವ್ಯಾಖ್ಯೇಯತಾ ಇತಿ' ಎಂಬಲ್ಲಿಯ ತನಕ ಉತ್ತರಿಸುತ್ತಿದ್ದಾರೆ.

'ವಾಕ್ಯಪ್ರಾಮಾಣ್ಯಂ ತಾವತ್' ಎಂಬಲ್ಲಿರುವ 'ತಾವತ್' ಶಬ್ದವು ಮುಂದೆ ಹೇಳುವ ಶ್ರುತಿಮೂಲಕವಾದ ಪ್ರಾಮಾಣ್ಯವನ್ನು ಸೂಚಿಸುತ್ತಿದೆ.

### ಹಿನ್ನೆಲೆನಿರೂಪಣೆಯ ಪ್ರಯೋಜನ

**भा.दी. – वक्तृनिर्दोषता केन लब्धा? इत्यत आह – प्रमादेति ।।** 'भगवान्' इत्यस्योपयोगमाह – **भगवत्त्वादेवेति ।।**

**ज्ञानशक्तिबलैश्वर्यवीर्यतेजांस्यशेषतः ।**
**भगवच्छब्दवाच्यानि विना हेयैर्गुणादिभिः ।।**

इत्यादौ 'अशेषतः' इति विशेषणात् निरतिशयज्ञानादिगुणवान् भगवच्छब्दार्थ उक्तः स्यात् । **'गुणगुण्यादिभेदाभिप्रायात्'** इत्यादितत्वप्रदीपोक्तदिशा वा । 'ऐश्वर्यस्य समग्रस्य' इत्यादेर्वा सम्पूर्णसार्वज्ञादिमत्वादेव इत्यर्थः । **'ब्रह्मरुद्र'** इत्यादेर्भावमाह – **विप्रलम्भेति ।।** 'तन्निर्णयाय' इत्येतदुपयोगमाह – **अपहासस्येति ।।** 'तदर्थनिर्णयाय' इत्येतद्भावमाह – **आप्तीति ।। युक्तीति ।।** 'सूत्राणां न्यायैरेव निर्णायकत्वात् निर्णयाय इत्युक्त्यैव युक्तिमूलत्वं प्राप्तम्' इति भावः । एतेन **'वक्तृश्रोतृप्रसक्तीनाम्'** इत्याद्यनुभाष्योक्तदिशा प्रामाण्यमुपपादितं ध्येयम् । **'अथेष्टानिष्ट'** इत्यादेरुपयोगमाह – **इष्टेति ।। 'इत्ययं भावः'** इति इतिशब्दान्वयः ।।

**वा.मं. – यद्यपि 'वक्तृश्रोतृप्रसक्तीनां यदाप्तिरनुकूलता' इत्यनुव्याख्याने 'श्रोतृप्रसङ्ग-निर्दोषताप्तिः'** इत्युक्तम् । तथापि 'श्रोतृप्रसङ्गयोः दुष्टत्वे वक्तरि विप्रलम्भापहास-रूपदोषौ तयोरदुष्टत्वे तस्यापि तदुभयराहित्यमिति । श्रोतृप्रसङ्गदोषयोस्त-दुभव्यापकत्वेन व्यापकीभूतश्रोतृप्रसङ्गदोषाभावे व्याप्यभूतविप्रलम्भापहासाख्यवक्तृ-दोषाभावः' इति 'वक्तृनिर्दोषतैवाप्तिः' इत्युक्तम् । अत एवाग्रे श्रोतृप्रसङ्गदोषाभावाभ्यां विप्रलम्भापहासाख्यवक्तृदोषाभावमुपपादयिष्यति । यदर्थम् उपोद्घातनिरूपणम्,

परಿಪೂರ್ಣಚಂದ್ರಿಕಾ

**तदिदानीमाह – आप्तिमूलत्वादिति ।। वक्तृनिर्दोषत्वरूपाप्तिमूलत्वमुपपादयति । 'प्रमादे'त्यादिना 'दोषाभावात्' इत्यन्तेन ।। 'नारायणावतारे व्यासे' इति हेतु-गर्भविशेषणमेतत् । अनेन नारायणो व्यासत्वेनावततारेत्येतदुक्तार्थम् । नारायणा-वतारत्वस्य प्रमादाद्यसम्भवं प्रति अप्रयोजकत्वं परिहरति – भगवत्त्वादेवेति ।। अन्यथा तत्र स्यादिति भावः । अनेन 'भगवान्' इत्येतदुक्तभावम् । कोऽयं श्रोतृदोषः कथं च तदभावः? इत्यत आह – ज्ञानायोग्यताया इति ।। ब्रह्मादिश्रोतृषु इति । अनेन 'ब्रह्मरुद्रेन्द्रादिभिः' इत्येतदुक्ताभिप्रायम् । प्रसङ्गदोषः श्रोतृप्रयोजनो-द्देशाभावः । निर्हरणस्य = निवारणस्य । अनेन 'तन्निर्णयायार्थितः' इति पदद्वयमुक्ततात्पर्यम् । 'मूलत्वात्' इत्यनन्तरं 'सुतरां प्रामाण्यसिद्धिः' इति योज्यम् । 'तन्मूलत्वोपपादनाय श्रुतिनिर्णायकत्वेन इत्युक्त निर्णायकत्वेन इत्यनेनैव मीमांसारूपत्वेन युक्तिमूलत्वस्यापि प्राप्तत्वात्' इति भावः । अनेन 'तन्निर्णयाय' इत्येतदुक्ताशयम् ।**

**अत्र श्रुतियुक्तिमूलत्वं श्रुतियुक्तिभ्यामर्थमुपलभ्य रचितत्वरूपं सर्वज्ञव्यासप्रणीतेन सम्भवति, किन्तु समानार्थकत्वसाम्येन तत्संवादित्वमेव । नच तर्हि श्रुतियुक्ति-संवादादित्वादित्येव किं नोक्तम्? इति वाच्यम् । यादृच्छिकसंवादिताप्रतीति-निरासायैवमुक्तत्वात् । इष्टसाधनतावबोधकत्वमाह – इष्टानिष्टेति ।। तन्निर्णायकत्वेन तत्समानार्थकत्वादिति भावः । अनेन 'अथेष्टानिष्टे'त्याद्युक्तप्रयोजनम् ।।**

ಯಾವ ಕಾರಣಕ್ಕೋಸ್ಕರ ಇಲ್ಲಿಯ ಉಪೋದ್ಘಾತವನ್ನು ಹೇಳಿದರೋ, ಅದನ್ನು ಈಗ 'ಆಪ್ತಿಮೂಲತ್ವಾದ್ ಬ್ರಹ್ಮಸೂತ್ರಾಣಾಮ್' ಎಂದು ಹೇಳುತ್ತಿದ್ದಾರೆ. ಆದ್ದರಿಂದ ಬ್ರಹ್ಮಸೂತ್ರಗಳಿಗೆ ವಕ್ತೃವಿನ ನಿರ್ದೋಷತ್ವದಿಂದ ಆಪ್ತಿಮೂಲಕವಾದ ಪ್ರಾಮಾಣ್ಯವನ್ನು ಸಮರ್ಥಿಸಿದಂತಾಯಿತು. ವಕ್ತೃಗಳಾದ ವ್ಯಾಸರಲ್ಲಿರುವ ನಿರ್ದೋಷತ್ವವನ್ನೇ 'ಪ್ರಮಾದಾಜ್ಞಾನಸಂಶಯ' ಎಂಬಲ್ಲಿಂದ 'ಪ್ರಸಂಗದೋಷಾಭಾವಾತ್' ಎಂಬಲ್ಲಿಯ ತನಕ ಸಮರ್ಥಿಸುತ್ತಿದ್ದಾರೆ. 'ನಾರಾಯಣಾವತಾರೇ ವ್ಯಾಸೇಽಸಂಭವಾತ್' ಎಂಬುದು ಹೇತುಗರ್ಭವಿಶೇಷಣ. ವ್ಯಾಸರು ನಾರಾಯಣನ ಅವತಾರರಾದ್ದರಿಂದ ಅಜ್ಞಾನಸಂಶಯಾದಿಗಳು ಅವರಲ್ಲಿಲ್ಲವೆಂದು ಅರ್ಥ. ನಾರಾಯಣನ ಅವತಾರರಾದರೂ ಕೂಡ ಪ್ರಮಾದಾದಿಗಳು ಇರಲಿ ಎಂಬ ಅಪ್ರಯೋಜಕಶಂಕೆಯನ್ನು 'ಭಗವತ್ತ್ವಾದೇವ' ಎಂದು ಪರಿಹರಿಸುತ್ತಿದ್ದಾರೆ. ವೇದವ್ಯಾಸದೇವರು ಷಡ್ಗುಣೈಶ್ವರ್ಯಸಂಪನ್ನರಾದ್ದರಿಂದ 'ಭಗವಾನ್' ಎನಿಸಿದ್ದಾರೆ. ಆದ್ದರಿಂದ ಅವರಲ್ಲಿ ಅಜ್ಞಾನಾದಿಗಳು ಬರಲು ಸಾಧ್ಯವೇ ಇಲ್ಲ. ಹಾಗಾದಲ್ಲಿ ಅವರು 'ಭಗವಾನ್' ಎಂದೇ ಅನಿಸುವುದಿಲ್ಲ. (ಭಾ-ತತ್ತ್ವಪ್ರದೀಪಿಕಾಕಾರರು ಗುಣಗುಣಿಗಳ ಅಭೇದ ಅಭಿಪ್ರಾಯದಿಂದ ಭಗವಚ್ಛಬ್ದವನ್ನು ಹೇಳಲಾಗಿದೆ

ಸ್ವೀಕರಿಸುತ್ತಾನೋ, ತೇನೈವ = ಅಂತಹ ಭಕ್ತನಿಂದಲೇ, ಸಃ = ಆ ಪರಮಾತ್ಮನು, ಲಭ್ಯಃ = ಪ್ರಸನ್ನನ್ನಾಗಿ ಹೊಂದಲ್ಪಡುತ್ತಾನೆ. ತಸ್ಯ = ಆ ಅಧಿಕಾರಿಗೆ, ಏಷಃ = ಪ್ರಸನ್ನನಾದ, ಆತ್ಮಾ = ಪರಮಾತ್ಮನು, ಸ್ವಾಂ = ತನ್ನ, ತನೂಂ = ಸ್ವರೂಪವನ್ನು, ವಿವೃಣುತೇ = ಪ್ರಕಟಪಡಿಸುತ್ತಾನೆ[1].

ಪ್ರತಿಪದಾರ್ಥ - ಅಂತಹ ಭಕ್ತಿಯು ವಿಷ್ಣುವಿನಲ್ಲಿ ಉತ್ಕೃಷ್ಟವಾಗಿರಬೇಕು, ಉಳಿದ ಬ್ರಹ್ಮಾದಿಗುರುಗಳಲ್ಲಿ ತಾರತಮ್ಯಾನುಸಾರಿಯಾಗಿರಬೇಕೆಂದು ಶ್ವೇತಾಶ್ವತರೋಪನಿಷದ್ವಾಕ್ಯವನ್ನು ಉದಾಹರಿಸುತ್ತಿದ್ದಾರೆ. ಯಸ್ಯ = ಯಾವ ಅಧಿಕಾರಿಗೆ, ದೇವೇ = ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನಲ್ಲಿ, ಪರಾ = ನಿರವಧಿಕವಾದ ಭಕ್ತಿಃ = ಭಕ್ತಿಯು, ಯಥಾ = ಹೇಗಿದೆಯೋ, ಗುರೌ = ಗುರುಗಳಲ್ಲಿ, ತಥಾ = ಹಾಗೆಯೇ ಯೋಗ್ಯತಾನುಸಾರಿಯಾದ, ಭಕ್ತಿಃ = ಭಕ್ತಿಯು ಇರುತ್ತದೋ, ತಸ್ಯ = ಅಂತಹ ಭಕ್ತರಿಗೆ, ಏತೇ ಕಥಿತಾಃ = ಗುರುಗಳಿಂದ ಉಪದೇಶಿಸಲ್ಪಟ್ಟದ್ದು, ಪ್ರಕಾಶಂತೇ = ಮನ ಮುಟ್ಟುತ್ತವೆ. ಅಥವಾ ಮಹಾತ್ಮನಃ = ಮಹಾತ್ಮರಿಗೆ, ಅಕಥಿತಾಃ = ಗುರುಗಳಿಂದ ಉಪದಿಷ್ಟವಾಗದಿದ್ದರೂ, ಅರ್ಥಾಃ = ಅರ್ಥಗಳು, ಪ್ರಕಾಶಂತೇ = ಪ್ರಕಾಶಿಸುತ್ತವೆ. ಇತ್ಯಾದಿ = ಇವೇ ಮೊದಲಾದ, ಶ್ರುತಿಭ್ಯಶ್ಚ = ಶ್ರುತಿಸ್ಮೃತಿಗಳಿಂದಲೂ ಹೇಳಲ್ಪಟ್ಟದೆ[2].

---

(१) **भाष्यदीपिका – विष्णुभक्तिरपि ब्रह्मविद्यायामधिकार इत्येतत् कठश्रुत्या दर्शयति - यमिति ।। आथर्वणेऽपीयं पठ्यते । 'एषः' इच्छारूपः 'आत्मा' विष्णुः 'यं' अधिकारिणं 'वृणुते' परिगृह्णाति 'तेन' एव 'लभ्यः' प्राप्यः तस्य प्रसन्नो भवति ।।**

**ततश्च 'तस्य' अधिकारिणः 'एषः' प्रसन्नः 'आत्मा स्वां तनूं' रूपं 'विवृणुते' प्रकाशयतीत्यर्थः । अत्र 'भक्तमेव च वृणुत इति प्रसिद्धः' इति प्रमेयदीपोक्तरीत्या वृणुत इत्यनेन भक्तत्वं सूचितम् । तत्त्वप्रदीपे तु - 'यमेवैषः' परमात्मा भक्तिदानेन 'वृणुते' स्वीकरोति 'तेन' प्राप्यो यतस्तस्यैव 'स्वां तनुं' प्रकाशयतीत्युक्तम् ।।**

(२) **भाष्यदीपिका – सा च भक्तिः विष्णौ सर्वाधिका, अन्येष्वपि यथायोग्या ब्रह्मविद्योपयोगिनीत्यर्थे श्वेताश्वतराणां श्रुतिं दर्शयति - यस्येति ।। 'यथा' इत्यावर्तते । 'तथा' इति समुच्चये । 'कथिताः' 'अकथिताः' इति द्वेधा विच्छेदः । पूर्ववेदादिभिर्गुरुणेति च शेषः । तथाच – 'यस्य' अधिकारिणो 'देवे' द्योतनादिगुणे विष्णौ 'परा' सर्वाधिका 'भक्तिः' अस्ति 'तथा' 'देवे' तदितरदेवेषु ब्रह्मादिषु 'यथा' यथायोग्या भक्तिरस्ति, 'तथा गुरौ' अन्येषु स्वोत्तमेषु च यथायोग्या भक्तिरस्ति । 'तस्य' महात्मनः कर्तरि षष्ठीयम् । तेनाधिकारिणा पूर्वं वेदादिभिर्गुरुणा वा 'कथिताः' 'एते' उक्ताः 'अर्थाः' परापरतत्त्वरूपाः 'प्रकाशयन्ते' ज्ञायन्त इत्यर्थः । यद्वा -'एते' शमादिरूपा 'अर्थाः' गुणास्तस्मिन् 'प्रकाशयन्ते' दृश्यन्त इत्यर्थः । अथवा - 'अकथिताः' गुरुभिरनुपदिष्टा 'अर्थाः' अस्य भक्तिवशात् 'प्रकाशयन्ते' 'हि' प्रसिद्धमित्यर्थः । 'प्रकाशन्ते' इतिपाठे तत्कर्तृकज्ञानानुकूलभानकर्तारो भवन्तीत्यर्थः ।।**

सत्तर्कदीपावली – विष्णुभक्तिमत्वे सति अध्ययनवतामपि शमदमादिराहित्यसाहित्यवशात् मन्दमध्योत्तमभेदविशेषित एव जिज्ञासाधिकारो नाविशेषित इत्येतस्मिन्नुपरितनमपि सूत्रद्वयं दर्शयति – अध्ययनेति ।।

तथानेकशाखागतश्रुतिमप्यस्मिन्नर्थे दर्शयति – शान्त इत्यादिना ।। 'यमेवैष वृणुते' इत्यनेन व्रियमाणस्य भक्तत्वं सिद्ध्यति । न ह्यभक्तं कश्चित् स्वीकरोतीति । 'तेन लभ्यः' इत्यनेन स्वीकृतेन लभ्य इत्युच्यते । लब्धः परमात्मा किं करोति? इत्याकाङ्क्षायामुक्तम् – 'तस्यैष आत्मा विवृणुते तनूं स्वाम्' इति । तस्य स्वीकृतस्य एष परमात्मा स्वां तनूं वेदवाक्यैः विवृणुते प्रकाशयतीत्यर्थः । अनेन भक्त्या विष्णुं प्रसाद्य तस्मात् प्रसन्नात् तज्जिज्ञासा कर्तव्येत्युक्तं भवति । विष्ण्वादिकं नाम । इतिहासादि तन्त्रम् ।

ವಿಷ್ಣುಭಕ್ತಿ ಹಾಗೂ ಅಧ್ಯಯನಗಳು ಅಧಮಾಧಿಕಾರಿಯ ಲಕ್ಷಣ; ಇಂತಹವನಲ್ಲಿ ಶಮದಮಾದಿಗುಣಗಳೂ ಸಹ ಇರಬೇಕು. ಇಲ್ಲದಿದ್ದರೆ ಮುಂದಿನ ಎರಡು ಸೂತ್ರಗಳಿಂದ ವಿರೋಧ ಬರುತ್ತದೆಂದು ಅಧ್ಯಯನ ಎಂಬ ಭಾಷ್ಯವು ಹೊರಟಿದೆ. ಅನೇಕಶಾಖೆಗಳಲ್ಲಿರುವ ಶ್ರುತಿಯನ್ನೂ ಸಹ ಈ ಅರ್ಥದಲ್ಲಿ 'ಶಾಂತ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. 'ಯಮೇವೈಷ ವೃಣುತೇ' ಎಂಬುದರಿಂದ ಸ್ವೀಕೃತನಾದವನಷ್ಟೇ ಭಕ್ತನೆಂದು ಸಿದ್ಧವಾಗುತ್ತದೆ. ಅಭಕ್ತನನ್ನು ಯಾರೂ ಸಹ ಸ್ವೀಕರಿಸುವುದಿಲ್ಲ. ಆದ್ದರಿಂದ ಲಭ್ಯಃ ಎಂಬುದಕ್ಕೆ ಸ್ವೀಕೃತನಿಂದ ಪರಮಾತ್ಮನು ದೊರೆಯುತ್ತಾನೆಂದು ಅರ್ಥ. ಲಬ್ಧನಾದ ಪರಮಾತ್ಮನು ಏನು ಮಾಡುತ್ತಾನೆ? ಎಂಬ ಆಕಾಂಕ್ಷೆಗೆ ತನ್ನನ್ನು ತೋರಿಸಿಕೊಳ್ಳುತ್ತಾನೆ ಎಂಬುದನ್ನು 'ತಸ್ಯೈಷ ಆತ್ಮಾ' ಎಂಬುದರಿಂದ ಹೇಳಿದ್ದಾರೆ. ಇದರಿಂದ ಏನು ತಿಳಿಯುತ್ತದೆಂದರೆ 'ಭಕ್ತಿಯಿಂದ ವಿಷ್ಣುವನ್ನು ಸಂತೋಷಪಡಿಸಿ, ಅವನ ಅನುಗ್ರಹದಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು' ಎಂದು.

ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟ ಅಧಿಕಾರ ಬ್ರಹ್ಮವಿದ್ಯೆಗೆ ಸಂಬಂಧಿಸಿದ್ದು

तत्वप्रकाशिका - नन्वत्र 'ब्रह्मविद्यायाम्' इत्यनुक्तेः कुतोऽयमधिकारः,

---

'इत्यादिश्रुतिभ्यश्च' इत्यस्य 'अधिकार उक्तः' इत्यनेनान्वयः । न केवलमुक्तश्रुतिभिः, किन्तु –

'भक्त्या त्वनन्यया शक्य अहमेवंविधोऽर्जुन ।

ज्ञातुं द्रष्टुं ......................' इत्यादिस्मृतिभ्यश्चेति चशब्दार्थः ।

तत्त्रैविध्यं च ब्रह्मविद्यायाम्? इत्यत आह -- अध्ययनेति ।। उपरि तृतीये वक्ष्यते । शमादिसंयुक्तता च ब्रह्मविद्यायामेवाधिकार इति श्रुत्याऽऽह -- शान्त इति ।। शान्तो भगवन्निष्ठबुद्धिः । दान्तो निगृहीतेन्द्रियः । उपरतो विषयालम्बुद्धिमान् । तितिक्षुर्द्वन्द्वसहिष्णुः । समाहितो यथावस्तुज्ञानादिमान् । शान्तादिर्भूत्वा परमात्मानं स्वस्मिन्नं विद्यादिति तेषां तादर्थ्यमुक्तं भवति 'उपनीतोऽधीयीत' इत्यादिवत् । अत्र 'आत्मनि' इत्युक्त्या मध्यमाधिकारित्वं सूचितम् । 'ऋषयोऽन्तःप्रकाशाः' इति श्रुतेः ।

सारासारविवेकाद्यपि ब्रह्मविद्यायामेवाधिकार इति श्रुत्या दर्शयति -- परीक्ष्येति ।। लोकान् विष्णुलोकेतरान् कर्मापादितान् असारानित्यतया परीक्ष्य वैराग्यं प्राप्नुयात् । स च मोक्षादितरत्र निर्विण्णो विज्ञानार्थं गुरुमेवाभिगच्छेत् । 'यस्मात् नित्यपुमर्थो मोक्षकर्मादिना न सिध्यति तस्मात्' इत्यर्थः । अत्रापि विज्ञानपदेनोत्तमाधिकारित्वं सूचितम् । 'देवादीनां तु यज्ज्ञानं विज्ञानमिति कीर्तितम्' इत्युक्तेः । विष्णुभक्तिरपि ब्रह्मविद्यायामधिकार इति श्रुत्याऽऽह -यमिति ।। 'एष विष्णुः यं वृणुते तेन लभ्यस्तस्य प्रसन्नो भवति । ततश्च तस्याधिकारिणः स्वस्वरूपं प्रकाशयति' इत्यर्थः । अत्र वृणुत इत्यनेन भक्तत्वं सूचितम् । 'सा च भक्तिर्विष्णौ सर्वाधिकाऽन्येष्वपि यथायोग्या ब्रह्मविद्योपयोगिनि' इत्येतच्छ्रुत्याऽऽह – यस्येति ।।

ಅನುವಾದ -- ಪ್ರಶ್ನೆ - ಭಾಗವತತಂತ್ರದ ಈ ಪ್ರಮಾಣವಚನದಲ್ಲಿ 'ಬ್ರಹ್ಮವಿದ್ಯೆ' ಎಂಬ ಪದವೇ ಇಲ್ಲ. ಆದ್ದರಿಂದ ಇಲ್ಲಿ ಹೇಳಲ್ಪಟ್ಟ ಅಧಿಕಾರವು ಬ್ರಹ್ಮವಿದ್ಯೆಗೆ ಸಂಬಂಧಪಟ್ಟದೆಯೆಂದು ಮತ್ತು ಮೂರು ಪ್ರಕಾರದಲ್ಲಿರುವುದೆಂದು ಹೇಗೆ ತಿಳಿಯುತ್ತದೆ?

ಉತ್ತರ - ಈ ಪ್ರಶ್ನೆಗೆ 'ಅಧ್ಯಯನ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ಉಪರಿ = ತೃತೀಯಾಧ್ಯಾಯದಲ್ಲಿ ಹೇಳುತ್ತಾರೆ. ಶಮಾದಿಸಂಯುಕ್ತತಾ = ಶಮಾದಿಗಳಿಂದ ಕೂಡಿರುವಿಕೆಯು ಸಹ, ಬ್ರಹ್ಮವಿದ್ಯೆಯಲ್ಲಿಯೇ ಇದು ಅಧಿಕಾರವಾಗಿದೆ ಎಂಬುದನ್ನು ಶ್ರುತಿಯಿಂದ ಹೇಳುತ್ತಿದ್ದಾರೆ 'ಶಾಂತಃ' ಇತ್ಯಾದಿಯಾಗಿ. ಶಾಂತಃ = ಭಗವಂತನಲ್ಲಿ ನಿಶ್ಚಲವಾದ ಬುದ್ಧಿಯು, ದಾಂತಃ = ಇಂದ್ರಿಯಜಯವು, ಉಪರತಃ = ವಿಷಯಪದಾರ್ಥಗಳಲ್ಲಿ 'ಸಾಕು' ಎಂಬ ಬುದ್ಧಿಯು, ತಿತಿಕ್ಷು :

ನನ್ನು ತಿಳಿಯುತ್ತಾನೋ' ಎಂದು ಹೇಳಿದ್ದರಿಂದ ಬ್ರಹ್ಮಜ್ಞಾನಕ್ಕೆ ಶಮದಮಾದಿಗುಣಗಳು ಕಾರಣವೆಂದು ಸಿದ್ಧವಾಯಿತು. 'ಉಪನೀತೋಽಧೀಯೀತ' (ಉಪನಯನ ಮಾಡಿದ ಮೇಲೆ ಅಧ್ಯಯನ ಮಾಡಬೇಕು) ಎಂದು ಹೇಳಿದಾಗ ಅಧ್ಯಯನಕ್ಕೆ ಉಪನಯನವು ಕಾರಣವೆಂದು. 'ಆತ್ಮನಿ' ಎಂದು ಹೇಳಿರುವುದರಿಂದ ಇದು ಮಧ್ಯಮಾಧಿಕಾರಿಯ ಲಕ್ಷಣವೆಂದು ಸೂಚಿಸಿದ್ದಾರೆ. ಏಕೆಂದರೆ 'ಋಷಯೋಽಂತಃಪ್ರಕಾಶಾಃ' (ಋಷಿಗಳು ಹೃದಯದಲ್ಲಿ ಪರಮಾತ್ಮನನ್ನು ಕಾಣುತ್ತಾರೆ) ಎಂಬ ಶ್ರುತಿ ಇರುವುದರಿಂದ. ಸಾರಾಸಾರವಿವೇಕವೂ ಕೂಡ ಬ್ರಹ್ಮವಿದ್ಯೆಗೆ ಅಧಿಕಾರವೆನಿಸಿದೆ ಎಂಬುದನ್ನು 'ಪರೀಕ್ಷ್ಯ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಲೋಕಾನ್ = ವಿಷ್ಣುಲೋಕಕ್ಕಿಂತ ಭಿನ್ನವಾದ, ಕರ್ಮದಿಂದ ಸಂಪಾದಿಸಲ್ಪಟ್ಟ ಸ್ವರ್ಗಾದಿಲೋಕಗಳನ್ನು, ಸಾರವಿಲ್ಲದ್ದು ಮತ್ತು ಅನಿತ್ಯವೆಂದು ತಿಳಿದು ವಿರಕ್ತನಾಗಬೇಕು. ಹೀಗೆ ಮೋಕ್ಷಕ್ಕಿಂತ ಇತರವಾದ ಲೋಕಗಳಲ್ಲಿ ವೈರಾಗ್ಯವನ್ನು ತಾಳಿ ತತ್ವನಿಶ್ಚಯಕ್ಕಾಗಿ ಗುರುವನ್ನೇ ಅರಸಿ ಹೊರಡಬೇಕು. ಏಕೆಂದರೆ, ನಿತ್ಯಪುರುಷಾರ್ಥರೂಪವಾದ ಮೋಕ್ಷವು ಕರ್ಮಾದಿಗಳಿಂದ ದೊರೆಯುವುದಿಲ್ಲವಾದ ಕಾರಣ ಎಂದು. ಇಲ್ಲಿಯೂ ಸಹ ವಿಜ್ಞಾನಪದದಿಂದ ಉತ್ತಮಾಧಿಕಾರಿಯನ್ನು ಸೂಚಿಸಿದ್ದಾರೆ. 'ದೇವಾದೀನಾಂ ತು ಯಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಮ್' ಎಂದು ಹೇಳಿದ್ದರಿಂದ.

ವಿಷ್ಣುಭಕ್ತಿಯೂ ಸಹ ಬ್ರಹ್ಮವಿದ್ಯೆಯ ಅಧಿಕಾರದಲ್ಲಿ ಆವಶ್ಯಕವೆಂಬುದನ್ನು ಶ್ರುತಿಯಿಂದ ಹೇಳುತ್ತಿದ್ದಾರೆ 'ಯಮೇವೈಷ' ಎಂಬುದಾಗಿ. ಏಷಃ = ಈ ವಿಷ್ಣುವು, ಯಮ್ = ಯಾವ ಸಾಧಕನನ್ನು, ವೃಣುತೇ = ಭಕ್ತನೆಂದು ಸ್ವೀಕರಿಸುತ್ತಾನೋ, ತೇನ = ಆ ಸಾಧಕನಿಂದಷ್ಟೆ, ಲಭ್ಯಃ = ಪರಮಾತ್ಮನು ದೊರೆಯುತ್ತಾನೆ. ತಸ್ಯ = ಅವನಿಗೆ ಮಾತ್ರ, ಪ್ರಸನ್ನೋ ಭವತಿ = ಪ್ರಸನ್ನನಾಗುತ್ತಾನೆ. ಅನಂತರ ಆ ಸಾಧಕಪುರುಷನಿಗೆ ತನ್ನ ಸ್ವರೂಪವನ್ನು ಪ್ರಕಟಪಡಿಸುತ್ತಾನೆ ಎಂದರ್ಥ. ಇಲ್ಲಿ 'ವೃಣುತೇ' ಎಂದು ಹೇಳಿದ್ದರಿಂದ ಭಕ್ತಿ ಎಂಬ ಗುಣವನ್ನು ಸೂಚಿಸಿದಂತಾಯಿತು. ಅಂತಹ ಭಕ್ತಿಯು ವಿಷ್ಣುವಿನ ವಿಷಯದಲ್ಲಿ ಸರ್ವೋತ್ಕೃಷ್ಟವಾಗಿರಬೇಕು. ಇತರ ವಿಷಯದಲ್ಲಿ ಯಥಾಯೋಗ್ಯವಾಗಿರಬೇಕು. ಇಂತಹ ಭಕ್ತಿಯೇ ಬ್ರಹ್ಮವಿದ್ಯೆಯಲ್ಲಿ ಉಪಯುಕ್ತವಾಗುತ್ತದೆ. ಇದನ್ನೇ ಶ್ರುತಿಯಿಂದ "ಯಸ್ಯ ದೇವೇ" ಎಂದು ಹೇಳುತ್ತಿದ್ದಾರೆ.

**भा.दी. – तृतीय इति ।।** 'अध्याये' चतुर्थपादे इत्यर्थः । 'मात्रा' इति कात्स्न्यर्यमुच्यते । 'यथाशक्ति कृत्स्नाध्ययनवतोधिकारिता' इत्युक्त्या कुतोऽयमधिकारो ब्रह्मविद्यायाम्? इति शङ्कापास्ता । सा चाधिकारिता देवादीनामविशेषान्न भवति । अविशेषेण न भवति । एकरूपा न भवति । अविशेषात् । ज्ञानादेरप्यविशेषप्रसङ्गात् । सा च प्रज्ञान्तरपृथक्त्ववद्दृष्टिश्च 'तदुक्तम्' इत्यत्र निरस्त इति

तत्त्रैविध्यं च ब्रह्मविद्यायाम्? इत्यत आह -- अध्ययनेति ।। उपरि तृतीये वक्ष्यते । शमादिसंयुक्तता च ब्रह्मविद्यायामेवाधिकार इति श्रुत्याऽऽह -- शान्त इति ।। शान्तो भगवन्निष्ठबुद्धिः । दान्तो निगृहीतेन्द्रियः । उपरतो विषयाल-म्बुद्धिमान् । तितिक्षुर्द्वन्द्वसहिष्णुः । समाहितो यथावस्तुज्ञानादिमान् । शान्तादिर्भूत्वा परमात्मानं स्वस्थिनं विद्यादिति तेषां तादर्थ्यमुक्तं भवति 'उपनीतोऽधीयीत' इत्यादिवत् । अत्र 'आत्मनि' इत्युक्त्या मध्यमाधिकारित्वं सूचितम् । 'ऋषयोऽन्तःप्रकाशाः' इति श्रुतेः ।

सारासारविवेकाद्यपि ब्रह्मविद्यायामेवाधिकार इति श्रुत्या दर्शयति -- परीक्ष्येति ।। लोकान् विष्णुलोकेतरान् कर्मापादितान् असारानित्यतया परीक्ष्य वैराग्यं प्राप्नुयात् । स च मोक्षादितरत्र निर्विण्णो विज्ञानार्थं गुरुमेवाभिगच्छेत् । 'यस्मात् नित्यपुमर्थो मोक्षकर्मादिना न सिध्यति तस्मात्' इत्यर्थः । अत्रापि विज्ञानपदेनोत्तमाधिकारित्वं सूचितम् । 'देवादीनां तु यज्ज्ञानं विज्ञानमिति कीर्तितम्' इत्युक्तेः । विष्णुभक्तिरपि ब्रह्मविद्यायामधिकार इति श्रुत्याऽऽह -यमिति ।। 'एष विष्णुः यं वृणुते तेन लभ्यस्तस्य प्रसन्नो भवति । ततश्च तस्याधिकारिणः स्वस्वरूपं प्रकाशयति' इत्यर्थः । अत्र वृणुत इत्यनेन भक्तत्वं सूचितम् । 'सा च भक्तिर्विष्णौ सर्वाधिकाऽन्येष्वपि यथायोग्या ब्रह्मविद्योपयोगिनि' इत्येतच्छ्रुत्याऽऽह – यस्येति ।।

ಅನುವಾದ -- ಪ್ರಶ್ನೆ - ಭಾಗವತತಂತ್ರದ ಈ ಪ್ರಮಾಣವಚನದಲ್ಲಿ 'ಬ್ರಹ್ಮವಿದ್ಯೆ' ಎಂಬ ಪದವೇ ಇಲ್ಲ. ಆದ್ದರಿಂದ ಇಲ್ಲಿ ಹೇಳಲ್ಪಟ್ಟ ಅಧಿಕಾರವು ಬ್ರಹ್ಮವಿದ್ಯೆಗೆ ಸಂಬಂಧಪಟ್ಟದೆಯೆಂದು ಮತ್ತು ಮೂರು ಪ್ರಕಾರದಲ್ಲಿರುವುದೆಂದು ಹೇಗೆ ತಿಳಿಯುತ್ತದೆ?

ಉತ್ತರ - ಈ ಪ್ರಶ್ನೆಗೆ 'ಅಧ್ಯಯನ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ಉಪರಿ = ತೃತೀಯಾಧ್ಯಾಯದಲ್ಲಿ ಹೇಳುತ್ತಾರೆ. ಶಮಾದಿಸಂಯುಕ್ತತಾ = ಶಮಾದಿಗಳಿಂದ ಕೂಡಿರುವಿಕೆಯೂ ಸಹ, ಬ್ರಹ್ಮವಿದ್ಯೆಯಲ್ಲಿಯೇ ಇದು ಅಧಿಕಾರವಾಗಿದೆ ಎಂಬುದನ್ನು ಶ್ರುತಿಯಿಂದ ಹೇಳುತ್ತಿದ್ದಾರೆ 'ಶಾಂತಃ' ಇತ್ಯಾದಿಯಾಗಿ. ಶಾಂತಃ = ಭಗವಂತನಲ್ಲಿ ನಿಶ್ಚಲವಾದ ಬುದ್ಧಿಯು, ದಾಂತಃ = ಇಂದ್ರಿಯಜಯವು, ಉಪರತಃ = ವಿಷಯಪದಾರ್ಥಗಳಲ್ಲಿ 'ಸಾಕು' ಎಂಬ ಬುದ್ಧಿಯು, ತಿತಿಕ್ಷುಃ = ಸುಖದುಃಖಾದಿಗಳನ್ನು ಸಮಾನವಾಗಿ ಕಾಣುವಿಕೆಯು, ಸಮಾಹಿತಃ = ವಸ್ತುವಿನ ಯಥಾರ್ಥ ಜ್ಞಾನವುಳ್ಳವನು. 'ಯಾವಾತನು ಶಾಂತಾದಿಗುಣವುಳ್ಳವನಾಗಿ ತನ್ನ ಹೃದಯದಲ್ಲಿರುವ ಪರಮಾತ್ಮ

ನನ್ನು ತಿಳಿಯುತ್ತಾನೋ' ಎಂದು ಹೇಳಿದ್ದರಿಂದ ಬ್ರಹ್ಮಜ್ಞಾನಕ್ಕೆ ಶಮದಮಾದಿಗುಣಗಳು ಕಾರಣವೆಂದು ಸಿದ್ಧವಾಯಿತು. 'ಉಪನೀತೋಽಧೀಯೀತ' (ಉಪನಯನ ಮಾಡಿದ ಮೇಲೆ ಅಧ್ಯಯನ ಮಾಡಬೇಕು) ಎಂದು ಹೇಳಿದಾಗ ಅಧ್ಯಯನಕ್ಕೆ ಉಪನಯನವು ಕಾರಣವೆಂದು. 'ಅಕ್ಷನಿ' ಎಂದು ಹೇಳಿರುವುದರಿಂದ ಇದು ಮಧ್ಯಮಾಧಿಕಾರಿಯ ಲಕ್ಷಣವೆಂದು ಸೂಚಿಸಿದ್ದಾರೆ. ಏಕೆಂದರೆ 'ಋಷಯೋಽಂತಃಪ್ರಕಾಶಾಃ' (ಋಷಿಗಳು ಹೃದಯದಲ್ಲಿ ಪರಮಾತ್ಮನನ್ನು ಕಾಣುತ್ತಾರೆ) ಎಂಬ ಶ್ರುತಿ ಇರುವುದರಿಂದ. ಸಾರಾಸಾರವಿವೇಕವೂ ಕೂಡ ಬ್ರಹ್ಮವಿದ್ಯೆಗೆ ಅಧಿಕಾರವೆನಿಸಿದೆ ಎಂಬುದನ್ನು 'ಪರೀಕ್ಷ್ಯ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಲೋಕಾನ್ = ವಿಷ್ಣುಲೋಕಕ್ಕಿಂತ ಭಿನ್ನವಾದ, ಕರ್ಮದಿಂದ ಸಂಪಾದಿಸಲ್ಪಟ್ಟ ಸ್ವರ್ಗಾದಿ-ಲೋಕಗಳನ್ನು, ಸಾರವಿಲ್ಲದ್ದು ಮತ್ತು ಅನಿತ್ಯವೆಂದು ತಿಳಿದು ವಿರಕ್ತನಾಗಬೇಕು. ಹೀಗೆ ಮೋಕ್ಷಕ್ಕಿಂತ ಇತರವಾದ ಲೋಕಗಳಲ್ಲಿ ವೈರಾಗ್ಯವನ್ನು ತಾಳಿ ತತ್ವನಿಶ್ಚಯಕ್ಕಾಗಿ ಗುರುವನ್ನೇ ಅರಸಿ ಹೊರಡ-ಬೇಕು. ಏಕೆಂದರೆ, ನಿತ್ಯಪುರುಷಾರ್ಥರೂಪವಾದ ಮೋಕ್ಷವು ಕರ್ಮಾದಿಗಳಿಂದ ದೊರೆಯು-ವುದಿಲ್ಲವಾದ ಕಾರಣ ಎಂದು. ಇಲ್ಲಿಯೂ ಸಹ ವಿಜ್ಞಾನಪದದಿಂದ ಉತ್ತಮಾಧಿಕಾರಿಯನ್ನು ಸೂಚಿಸಿದ್ದಾರೆ. 'ದೇವಾದೀನಾಂ ತು ಯಜ್ಞಾನಂ ವಿಜ್ಞಾನಮಿತಿ ಕೀರ್ತಿತಮ್' ಎಂದು ಹೇಳಿದ್ದರಿಂದ.

ವಿಷ್ಣುಭಕ್ತಿಯೂ ಸಹ ಬ್ರಹ್ಮವಿದ್ಯೆಯ ಅಧಿಕಾರದಲ್ಲಿ ಆವಶ್ಯಕವೆಂಬುದನ್ನು ಶ್ರುತಿಯಿಂದ ಹೇಳುತ್ತಿದ್ದಾರೆ 'ಯಮೇವೈಷ' ಎಂಬುದಾಗಿ. ಏಷಃ = ಈ ವಿಷ್ಣುವು, ಯಮ್ = ಯಾವ ಸಾಧಕನನ್ನು, ವೃಣುತೇ = ಭಕ್ತನೆಂದು ಸ್ವೀಕರಿಸುತ್ತಾನೋ, ತೇನ = ಆ ಸಾಧಕನಿಂದಷ್ಟೆ, ಲಭ್ಯಃ = ಪರಮಾತ್ಮನು ದೊರೆಯುತ್ತಾನೆ. ತಸ್ಯ = ಅವನಿಗೆ ಮಾತ್ರ, ಪ್ರಸನ್ನೋ ಭವತಿ = ಪ್ರಸನ್ನನಾಗುತ್ತಾನೆ. ಅನಂತರ ಆ ಸಾಧಕಪುರುಷನಿಗೆ ತನ್ನ ಸ್ವರೂಪವನ್ನು ಪ್ರಕಟಪಡಿಸುತ್ತಾನೆ ಎಂದರ್ಥ. ಇಲ್ಲಿ 'ವೃಣುತೇ' ಎಂದು ಹೇಳಿದ್ದರಿಂದ ಭಕ್ತಿ ಎಂಬ ಗುಣವನ್ನು ಸೂಚಿಸಿದಂತಾಯಿತು. ಅಂತಹ ಭಕ್ತಿಯು ವಿಷ್ಣುವಿನ ವಿಷಯದಲ್ಲಿ ಸರ್ವೋತ್ಕೃಷ್ಟವಾಗಿರಬೇಕು. ಇತರ ವಿಷಯದಲ್ಲಿ ಯಥಾ-ಯೋಗ್ಯವಾಗಿರಬೇಕು. ಇಂತಹ ಭಕ್ತಿಯೇ ಬ್ರಹ್ಮವಿದ್ಯೆಯಲ್ಲಿ ಉಪಯುಕ್ತವಾಗುತ್ತದೆ. ಇದನ್ನೇ ಶ್ರುತಿಯಿಂದ "ಯಸ್ಯ ದೇವೇ" ಎಂದು ಹೇಳುತ್ತಿದ್ದಾರೆ.

भा.दी. – **तृतीय इति** ।। 'अध्याये' चतुर्थपादे इत्यर्थः । 'मात्रा' इति कात्स्न्यर्थमुच्यते । 'यथाशक्ति कृत्स्नाध्ययनवतोधिकारिता' इत्युक्त्या कुतोऽयम-धिकारो ब्रह्मविद्यायाम्? इति शङ्कापास्ता । सा चाधिकारिता देवादीनामविशेषान्न भवति । अविशेषेण न भवति । एकरूपा न भवति । अविशेषात् । ज्ञानादेरप्य-विशेषप्रसङ्गात् । सा च प्रज्ञान्तरपृथक्त्ववद्दृष्टिश्च 'तदुक्तम्' इत्यत्र निरस्त इति

'नाविशेषात्' इत्यनेन तत् त्रैविध्यं च कुतः? इति शङ्काऽपास्तेति भावः । ब्रह्मविद्यायां श्रवणादिरूपायाम् । श्रुत्येति ।। 'विस्पष्टं विवक्षितसर्वार्थलाभात् स्मृतिः पूर्वमुक्ता' इति भावः । अत्रैके कानिचिद्वचनान्युदाहृत्य तदनुरोधेन टीकायां श्रुत्यर्थोक्तिः इत्याहुः । तानि चाचार्यैर्न काप्युदाहृतानीति केचिन्न श्रद्दधते । अन्ये त्वाचार्यानुदाहृतत्वेऽपि पञ्चरात्रपञ्चाधिकरणीसूत्रभाव(भाष्य)विवृतिपरभारद्वाजसंहितादौ पठ्यमानत्वाददोष इत्याहुः । 'शमो मन्निष्ठता बुद्धेः' इत्येकादशस्कन्धोक्तेराह - भगवन्निष्ठेति ।। 'वैष्णवसिद्धान्तादचलनम् इत्यर्थः' इति तत्वप्रदीपे । 'पश्येत्' इत्युक्त्या शमादेरपरोक्षाङ्गत्वप्रतीत्या प्रकृतानुपयोगमाशङ्क्य, 'अनुबन्ध्यादिभ्यः' इत्यत्र तृतीये –

दयाच्छमदमादींश्च तेन चैते गुणाः पुनः ।
तैः सर्वैर्दर्शनं विष्णोः श्रवणादिकृतं भवेत् ।।

इत्यादिस्मृत्यादौ वक्ष्यमाणदिशा अपरोक्षाङ्गत्वमिव प्रशान्तचित्ताय शमान्विताय 'प्रोवाच तां तत्वतो ब्रह्मविद्याम्' इत्यादौ श्रवणादिरूपब्रह्मविद्याङ्गत्वमपि श्रुतमिति भावेन पश्येदिति पदं श्रवणादिरूपज्ञानमात्रार्थतया व्याचष्टे – विद्यादिति ।। तस्मात् 'एवंवित् शान्तः' इति पूर्ववाक्ये 'एवंवित्'शब्देन न श्रवणादिरूपं ज्ञानं विवक्षितं किन्तु तदङ्गमन्यदेव ज्ञानम् इति भावः । 'अपरोक्षदृशो मिथ्यादर्शनं न कचिद्भवेत्' इत्येतद्व्याख्यानावसरे तत्वनिर्णयटीकादौ 'पश्यार्थैश्च नालोचने'[1] इति पाणिनीये चाक्षुषभिन्नज्ञानार्थैरित्यर्थोक्त्या दृशि धात्वादेशस्य पश्येदित्यस्य ज्ञानमात्रे प्रयोगादिति व्याख्यानादिति हृदयम् । षष्ठे काण्वशाखायां 'पश्यति' इति पाठेऽपि तदर्थानुवादेन शाखान्तरस्थत्वेन भाष्ये 'पश्येत्' इति पाठः साधुरिति भावः ।

इति श्रुतेरिति ।। चतुर्थाध्यायतृतीयपादान्ते 'विशेषं च दर्शयति' इत्यत्र भाष्योक्तश्रुतेरित्यर्थः ।

विवेकाद्यपीति ।। 'आदि'पदोक्तवैराग्यद्वाराऽधिकारत्वं विवेकस्य ज्ञेयम् । नतु परमत इव वैराग्यादिवत्साक्षात् । 'परीक्ष्य' इति श्रुतौ 'विज्ञाय जातवैराग्यः' इति स्मृतौ च ल्यबन्तोक्त्या तथैव प्रतीतेः । उक्तं च पद्धत्यादौ 'तदेवंभूतैः प्रमाणैः

(१) ८/१/२५

पदार्थानां नित्यानित्यत्वादिकं निश्चित्य विषयेषु विरक्तस्य' इत्यादि । 'तत्' इत्यस्यार्थः 'तस्मात्' इति । अत्र विवेकादेः श्रवणाद्यङ्गगुरूपसत्तेः पूर्वभावश्रवणात् तादर्थ्यं सिद्धमिति स्फुटत्वात् नोक्तम् । भाष्ये 'श्रोत्रियम्' इत्यस्य 'छन्दोध्यायिनम्' इत्यर्थः । इत्युक्तेरिति ।। गीताभाष्ये षष्ठे अध्याये इत्यर्थः ।

नन्वत्र 'आत्मन्येव' इति श्रुतौ 'तद्धि ज्ञानार्थम्' इति श्रुतौ च मध्यमोत्तमयोर्यथाक्रमं शमादिकं विवेकादि च विशेषणं प्राप्तं न त्वाद्यायामुत्तमाधमयोरन्त्यायां मध्यमाधमयोरिति प्राप्तं तथा मध्यमोत्तमयोरध्ययनादिकं च विशेषणमिति च श्रुतिद्वयेन न प्राप्तमिति चेन्न । 'ब्रह्मविद्यायां शमदमादिकमङ्गम् उत न' इति विचारे 'शमदमादिकमङ्गम्' इत्येव वक्तुं प्रवृत्तत्वाच्छ्रुतिद्वयस्य । अत एव टीकायां 'शमादिसंयुक्तता च ब्रह्मविद्यायामेवाधिकारः' इत्येवोक्तम् । अध्ययनादिकं तु पूर्वोक्तविशेषस्मृतिबलादुपलक्षणत्वेन ग्राह्यम् । 'शमादेर्विवेकादेश्च स्वशब्देनोक्तिस्तु श्रुतिद्वये मध्यमोत्तमयोः स्वगतधर्मेष्वध्ययनादिषु यथाक्रमं शमादेर्विवेकादेः प्राचुर्याभिप्रायेण अत एव श्रुतिबलात् प्राचीनस्मृतिरपि ब्रह्मविद्याधिकारपरेति द्वयोरप्यन्योन्यसाहाय्येन विवक्षितार्थे साधकत्वात् श्रुतिस्मृत्योर्द्वयोरप्युक्तिर्भाष्ये अर्थवती' इति भावः ।

भक्त्यैव वृणुते विष्णुर्भक्त्या दद्यान्निजं पदम् ।
भक्त्यैव दृश्यते नित्यं भक्त्या भोगान् ददाति च ।।

इति पाद्मस्मृत्या अन्यत्र भाष्ये अन्यथाव्याख्यानेऽपि इह प्रकृतोपयोगितया लभ्यपदेन प्रसादोऽभिमतः । 'विवृणुते' इत्यनेन श्रवणादिजन्यप्रकाशविषयं स्वां तनुं करोतीत्यर्थ इत्यभिप्रेत्याह – विष्णुरिति ।। वृणुते 'तदीयभक्त्या स्वीकरोति' इत्यर्थः । ततश्च भक्तिजन्यप्रसादतश्च इत्यर्थः । परस्य ब्रह्मणो विष्णोः प्रसादादिति वा भवेत् । तज्जिज्ञासादिकं कार्यमिति पूर्वोक्तदिशा श्रवणादिविषयतायामपि प्रसादस्यावश्यकत्वादिति भावः । श्रुत्यर्थं व्यञ्जयन्नेव तामवतारयति – सा चेति ।। परेत्यस्यार्थः सर्वाधिकेति । 'देवे गुरौ' इत्येतद्बहुवचनान्तं व्याचष्टे – अन्येष्वपीति ।। यथायोग्येति ।। देवेषु देवयोग्या गुरौ गुरुयोग्येत्यर्थः । उक्तं च

ज्ञानपादीयसुधायाम् – 'यथा देवे तथा गुरौ' इति । यथा देवे देवयोग्या, तथा गुरौ गुरुयोग्येत्यर्थ इति ।

विष्णुभक्तिर्देवभक्तिर्गुरुभक्तिस्तथैव च ।
तत्तच्छ्रेष्ठ्यानुसारेण .....'

इति प्रथमाध्याय बृहद्भाष्योक्तेश्च इति ज्ञेयम् । ब्रह्मविद्येति ।। 'प्रकाशन्ते' इति प्रकाशपदेन ज्ञानरूपपरतत्वादिविद्योक्तेरिति भावः । श्रुत्याऽऽहेति ।। एतेन भाष्ये 'इत्यादिश्रुतिभिश्च' इत्यस्य 'आधिकारश्चोक्तः' इति पूर्वेणान्वयः सूचितः । तत्वप्रदीपे तु –

'भक्त्या त्वनन्यया शक्य अहमेवंविधोऽर्जुन ।
ज्ञातुं द्रष्टुं च ....'

इत्यादिस्मृतिश्च शब्दाद् गृह्यते इत्युक्तम् ।।

वा.मं. – अत्र भागवततन्त्रे, तृतीये वक्ष्यते इति । तृतीयाध्याये चतुर्थपादे द्वितीयाधिकरणे – '' 'किं सर्वेषां ज्ञानाधिकारः, उत केषाञ्चिदेव?' इति सन्देहे. 'फलार्थित्वसाम्यात् सर्वेषामस्ति' इति पूर्वपक्षे; 'यथा नवकोटिदेवानां देवत्वसाम्येऽपि तन्मध्ये शतस्यैव सोमपानाधिकारः तथा पुरुषार्थित्वसाम्येऽपि न सर्वेषां ज्ञानाधिकारः । किन्त्वध्ययनमात्रवतः । यथाशक्त्यखिलवेदाध्ययनवत एव'' इति सिद्धान्तितम् । अनेन अध्ययनस्य ब्रह्मविद्याधिकारत्वं गम्यते । तत्रैव तृतीयाधिकरणे 'किं सर्वेषामेकप्रकारेण ज्ञानाधिकारः, उत तारतम्येन? इति सन्देहे. तारतम्यकल्पनस्य व्यर्थत्वादविशेषेणैव सर्वेषामधिकारः इति प्राप्ते, 'नाविशेषात् न अविशेषेण ज्ञानाधिकारः तथा सत्यात्मज्ञानेऽपि साम्यापत्तेः' इति सिद्धान्तितम् । अनेन ब्रह्मविद्याधिकारत्रैविध्यं गम्यत इति भावः ।।

द्वन्द्वसहिष्णुः सुखदुःखाभ्यामुच्चनीचत्वहीनः । स्वस्थितम् इति ।। आत्मनि इत्यनन्तरं स्थितम् इति शेषः इति भावः । 'पश्येदिति तेषामपरोक्षज्ञानसाधनत्वमुच्यते न श्रवणादिरूपजिज्ञासार्थत्वम्' इत्यत उक्तम् – विद्यादिति ।। 'पश्यार्थैश्चानलोचनः' इत्यत्र 'पश्यार्थै'रित्यत्र 'ज्ञानार्थै'रिति व्याख्यानेन ज्ञानमात्रेपि प्रयोगादिति भावः

तादर्थ्यं ज्ञानार्थत्वम् । उपनीत इति ।। 'उपनयनवान् अध्ययनं सम्पादयेत् इत्यत्र यथोपनयनस्याध्ययनार्थत्वं तथा' इत्यर्थः । अन्तःप्रकाशा इति ।। 'शरीरान्तःस्थिता-त्मज्ञानवन्तः' इत्यर्थः । तेषां मध्यमत्वं च 'मध्यमा ऋषिगन्धर्वाः' इति प्रागेवोक्तमिति भावः । निर्विण्णः विरक्तः अकृतशब्दार्थौ नित्यपुमर्थ इति । 'कृतेन' इत्यस्य 'कर्मादिना' इति । तत् इत्यस्य तस्मादिति । देवादीनामिति ।। 'सामान्यैर्ये त्वविज्ञेया विशेषा मम गोचराः' इति पूर्वार्धः । तेषामुत्तमत्वं देवास्तत्रोत्तमा इति प्रागेवोक्तमिति भावः । वृणुते = स्वीकरोति । यथा 'भक्त्या हरिस्तुष्टः' इति प्रमाणानुसारेण तेन लभ्य इत्यस्याभिप्रायमाह । तस्य प्रसन्न इति । प्रकाशयति ।। श्रवणादिकं विषयीकरोति । भक्तिवाचकपदाभावादाह – अत्रेति ।। अभक्तस्य स्वीकाराभावात् इति भावः । हरिभक्तिमात्रस्य प्रयोजकत्वे देवतागुरुद्वेषिणस्तत्र साम्येन भक्तस्य वा ब्रह्मविद्याधिकारप्रसक्तिनिरासायोदाहृतश्रुत्यर्थं व्यञ्जयन्नेव तामवतारयति – सा चेति ।। अनेन 'यस्य देवे हरौ परा सर्वोत्कृष्टा देवे देवतासमूहे यथा योग्यतानुसारेण गुरौ च गुरुसमुदाये तथा योग्यतानुसारेण भक्तिर्वर्तते तस्य महात्मनः पूर्वकथिता एते अर्थाः प्रकाशन्ते' इति श्रुतिर्योजिता भवति ।।

ಪ್ರಶ್ನೆ : - ಭಾಗವತತಂತ್ರದ ಪ್ರಮಾಣವಚನದಲ್ಲಿ 'ಬ್ರಹ್ಮವಿದ್ಯೆ' ಎಂಬ ಪದವಿಲ್ಲ. ಹೀಗಿರುವಾಗ ಇಲ್ಲಿ ಹೇಳಿದ ಅಧಿಕಾರವು ಬ್ರಹ್ಮವಿದ್ಯೆಗೆ ಸಂಬಂಧಪಟ್ಟವ ಎಂದು ಮತ್ತು ಮೂರೂ ಪ್ರಕಾರಗಳನ್ನು ಹೊಂದಿದೆಯೆಂದು ಹೇಗೆ ತಿಳಿಯಬೇಕು?

ಉತ್ತರ : -ಈ ಪ್ರಶ್ನೆಗೆ 'ಅಧ್ಯಯನಮಾತ್ರವತಃ' ಎಂದು ಉತ್ತರಿಸುತ್ತಾರೆ. ಇದನ್ನು ಮುಂದೆ ಮೂರನೇ ಅಧ್ಯಾಯದ ನಾಲ್ಕನೇ ಪಾದದ ಎರಡನೆಯ ಅಧಿಕರಣದಲ್ಲಿ ವಿವರಿಸಲಾಗುತ್ತದೆ.

(ಜ್ಞಾನಾಧಿಕಾರವು ಎಲ್ಲರಿಗೂ ಇದೆಯೋ? ಅಥವಾ ಕೆಲವರಿಗೆ ಮಾತ್ರವೋ? ಎಂದು ಸಂದೇಹ)

ಜ್ಞಾನಫಲದ ಅಪೇಕ್ಷೆ ಎಲ್ಲರಿಗೂ ಇರುವುದರಿಂದ ಪ್ರತಿಯೊಬ್ಬರೂ ಬ್ರಹ್ಮಜ್ಞಾನಾಧಿಕಾರಿಗಳೆಂದು ಪೂರ್ವಪಕ್ಷ.

ಯಾವರೀತಿಯಾಗಿ ಒಂಬತ್ತುಕೋಟಿ ದೇವತೆಗಳಲ್ಲಿ ದೇವತ್ವವು ಸಮಾನವಾಗಿದ್ದರೂ ಅವರ ಮಧ್ಯದಲ್ಲಿ ಕೇವಲ ನೂರುಮಂದಿಗೆ ಮಾತ್ರ ಸೋಮಪಾನಕ್ಕೆ ಅರ್ಹತೆಯಿದೆಯೋ, ಅದೇ ರೀತಿ ಜ್ಞಾನಫಲಾಪೇಕ್ಷೆಯು ಎಲ್ಲರಿಗೂ ಸಮಾನವಾಗಿದ್ದರೂ ಎಲ್ಲರೂ ಬ್ರಹ್ಮಜ್ಞಾನಾಧಿಕಾರಿಗಳಾಗುವುದಿಲ್ಲ. ಕಿಂತು ಯಾರು ಯಥಾಶಕ್ತಿವೇದಾಧ್ಯಯನ ಮಾಡಿರುತ್ತಾರೋ ಅವರಷ್ಟೇ ಬ್ರಹ್ಮಜ್ಞಾನಕ್ಕೆ ಅಧಿಕಾರಿಗಳೆಂದು ಸಿದ್ಧಾಂತ.

ಜಿಜ್ಞಾಸಾಧಿಕರಣ

ಇದರಿಂದ ಬ್ರಹ್ಮವಿದ್ಯೆಗೆ ವೇದಾಧ್ಯಯನ ಮಾಡಿದವನೇ ಅಧಿಕಾರಿಯೆಂದು ಸ್ಪಷ್ಟವಾಗುತ್ತದೆ.

ಎಲ್ಲರಿಗೂ ಏಕಪ್ರಕಾರವಾಗಿ ಜ್ಞಾನಾಧಿಕಾರವೋ? ಅಥವಾ ಅದರಲ್ಲಿ ತಾರತಮ್ಯವಿದೆಯೇ? ಎಂದು ಸಂದೇಹ.

ತಾರತಮ್ಯಕಲ್ಪನೆಯು ಅನಾವಶ್ಯಕ. ತಾರತಮ್ಯವಿಲ್ಲದೆ ಎಲ್ಲರಿಗೂ ಏಕಪ್ರಕಾರವಾಗಿ ಜ್ಞಾನಾಧಿಕಾರವೆಂದು ಪೂರ್ವಪಕ್ಷ.

ಹಾಗೆ ಎಲ್ಲರಿಗೂ ಏಕಪ್ರಕಾರವಾಗಿ ಜ್ಞಾನಾಧಿಕಾರ ಹೇಳಬಾರದು. ಹಾಗಾದಲ್ಲಿ ಅಜ್ಞಾನದಲ್ಲಿ ಸಮಾನತೆ ಬರಬೇಕಾದೀತೆಂದು ಸಿದ್ಧಾಂತ.

ಹೀಗೆ ಈ ಎರಡು ಅಧಿಕರಣಗಳಿಂದ ಅಧ್ಯಯನವು ಬ್ರಹ್ಮವಿದ್ಯೆಗೆ ಅಧಿಕಾರವೆಂದು ಮತ್ತು ಅವುಗಳಲ್ಲಿ ತಾರತಮ್ಯವಿದೆಯೆಂದು ತಿಳಿಯುತ್ತದೆ.

'ಶಮಾದಿಗುಣಗಳಿಂದ ಕೂಡಿರುವಿಕೆಯು ಬ್ರಹ್ಮವಿದ್ಯೆಯಲ್ಲಿಯೇ ಅಧಿಕಾರ' ಎಂಬುದನ್ನು ಶ್ರುತಿಯಿಂದ ಹೇಳುತ್ತಾರೆ. ಶ್ರುತ್ಯರ್ಥ ಹೀಗಿದೆ - ಶಾಂತಃ = ಭಗವಂತನಲ್ಲೇ ಬುದ್ಧಿಯುಳ್ಳವನು, ದಾಂತಃ = ಇಂದ್ರಿಯನಿಗ್ರಹವುಳ್ಳವನು, ತಿತಿಕ್ಷುಃ = ಸುಖದುಃಖಾದಿಗಳಿಂದ ಹಿಗ್ಗುವಿಕೆ ಕುಗ್ಗುವಿಕೆ ಆಗದಿರುವವನು ಅಥವಾ ದ್ವಂದ್ವಗಳನ್ನು ಸಹಿಸಿಕೊಳ್ಳುವ ಶಕ್ತಿಯುಳ್ಳವನು, ಸಮಾಹಿತಃ = ವಸ್ತುಗಳ ನಿಜಸ್ವರೂಪ ತಿಳಿದವನು. 'ಹೀಗೆ ಶಾಂತಾದಿಗುಣಗಳನ್ನು ಹೊಂದಿ ತನ್ನಲ್ಲಿರುವ ಪರಮಾತ್ಮನನ್ನು ತಿಳಿಯಬೇಕು' ಎಂದು ಹೇಳಿದ್ದರಿಂದ ಬ್ರಹ್ಮಜ್ಞಾನಕ್ಕೆ ಶಮಾದಿಗುಣಗಳು ಕಾರಣವೆಂದಂತಾಯಿತು. 'ಪಶ್ಯೇತ್' ಎಂದರೆ ನೋಡಬೇಕು ಅರ್ಥವಿದ್ದರೂ ಇಲ್ಲಿ 'ತಿಳಿಯಬೇಕೆಂಬ ಅರ್ಥ ಹೇಳಬೇಕು. 'ಪಶ್ಯಾರ್ಥ್ಯಶ್ಚ ಅನಾಲೋಚನೇ' ಎಂಬಲ್ಲಿ 'ಪಶ್ಯಾರ್ಥ್ಯಃ' ಎಂದರೆ 'ಜ್ಞಾನಾರ್ಥ್ಯಃ'. 'ಉಪನೀತೋಽಧೀಯೀತ' 'ಉಪನಯನವಾದ ಮೇಲೆ ಅಧ್ಯಯನ ಮಾಡಬೇಕು' ಎಂಬ ವಾಕ್ಯದಲ್ಲಿ ಅಧ್ಯಯನಕ್ಕೆ ಉಪನಯನವು ಹೇಗೆ ಕಾರಣವಾಗಿದೆಯೋ ಅದರಂತೆ ಇಲ್ಲಿಯೂ ತಿಳಿಯಬೇಕು.

ಇಲ್ಲಿ 'ಆತ್ಮನಿ' ಎಂದು ಹೇಳಿದ್ದರಿಂದ ಮಧ್ಯಮಾಧಿಕಾರಿಲಕ್ಷಣವೆಂದು ತಿಳಿಯಬೇಕು. ಏಕೆಂದರೆ ''ಋಷಯೋಽಂತಃಪ್ರಕಾಶಃ'' 'ಋಷಿಗಳು ತಮ್ಮ ಶರೀರದಲ್ಲಿರುವ ಭಗವಂತನನ್ನು ತಿಳಿದವರು' ಎಂಬ ಶ್ರುತಿ ಇರುವುದರಿಂದ ಋಷಿಗಳು ಮಧ್ಯಮಾಧಿಕಾರಿಗಳೆಂದು 'ಮಧ್ಯಮಾ ಋಷಿಗಂಧರ್ವಾಃ' ಎಂಬಲ್ಲಿ ಹೇಳಿದ್ದಾಗಿದೆ.

ಸಾರಾಸಾರವಿವೇಕವೂ ಬ್ರಹ್ಮವಿದ್ಯೆಗೆ ಕಾರಣವಾಗಿದೆಯೆಂದು 'ಪರೀಕ್ಷ್ಯ ಲೋಕಾನ್' ಎಂಬ ಶ್ರುತಿಯಿಂದ ತೋರಿಸುತ್ತಿದ್ದಾರೆ. ವಿಷ್ಣುಲೋಕಕ್ಕಿಂತ ಇತರವಾದ ಸ್ವರ್ಗಾದಿಲೋಕಗಳು ಕರ್ಮದಿಂದ ಲಭಿಸುವುದರಿಂದ ಅಸಾರ ಮತ್ತು ಅನಿತ್ಯಗಳಾಗಿವೆ ಎಂದು ತಿಳಿದು ಅವುಗಳಲ್ಲಿ ವೈರಾಗ್ಯ ಹೊಂದಬೇಕು. ಮೋಕ್ಷವನ್ನು ಬಿಟ್ಟು ಉಳಿದ ವಿಷಯಗಳಲ್ಲಿ ನಿರ್ವಿಣ್ಣಃ = ವಿರಕ್ತನಾಗಿ, ಬ್ರಹ್ಮಜ್ಞಾನವನ್ನು ಪಡೆಯಲು ಗುರುಗಳ ಬಳಿ ಹೋಗಬೇಕು. ಅಕೃತಃ = ನಿತ್ಯಪುರುಷಾರ್ಥರೂಪವಾದ ಮೋಕ್ಷವು, ಕೃತೇನ = ಕರ್ಮಾದಿಗಳಿಂದ, ನಾಸ್ತಿ = ದೊರೆಯುವುದಿಲ್ಲ. ತತ್ = ಆದ್ದರಿಂದ ಎಂದರ್ಥ. ಇಲ್ಲಿ ವಿಜ್ಞಾನಪದದಿಂದ

ಇದು ಉತ್ತಮಾಧಿಕಾರಿಗೆ ಸಂಬಂಧಿಸಿದ್ದೆಂದು ಸೂಚಿತವಾಗಿರುತ್ತದೆ. ಏಕೆಂದರೆ 'ದೇವತೆಗಳ ಜ್ಞಾನವು ವಿಜ್ಞಾನವೆಂದು ಕರೆಯಲ್ಪಡುತ್ತದೆ' ಎಂಬ ಪ್ರಮಾಣವಚನವಿದೆ. (ದೇವತೆಗಳು ಉತ್ತಮಾಧಿಕಾರಿಗಳೆಂದು ದೇವಾಸ್ತತ್ರೋತ್ತಮಾ ಮತಾಃ ಎಂಬಲ್ಲಿ ಹೇಳಿದ್ದಾಗಿದೆ)

ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಬರಲು ವಿಷ್ಣುಭಕ್ತಿಯೂ ಆವಶ್ಯಕ ಎಂಬುದನ್ನು 'ಯಮೇವೈಷಃ' ಇತ್ಯಾದಿ ಶ್ರುತಿಯಿಂದ ವಿವರಿಸುತ್ತಿದ್ದಾರೆ. ಈ ವಿಷ್ಣುವು ಯಾರನ್ನು ತನ್ನ ಭಕ್ತರನ್ನಾಗಿ ಸ್ವೀಕಾರ ಮಾಡುತ್ತಾನೋ, ಅಂತಹ ಭಕ್ತನಿಗೆ ಮಾತ್ರ ವಿಷ್ಣುವು ಪ್ರಸನ್ನನಾಗುತ್ತಾನೆ. ಅನಂತರ ಆ ಅಧಿಕಾರಿಪುರುಷನಿಗೆ ತನ್ನ ಸ್ವರೂಪವನ್ನು ತೋರಿಸುತ್ತಾನೆಂದರ್ಥ. ಇಲ್ಲಿ 'ವೃಣುತೇ' ಎಂದು ಇರುವುದರಿಂದ ಭಕ್ತನಾದವನನ್ನು ಎಂದು ಸೂಚಿತವಾಗುತ್ತದೆ. ಅಭಕ್ತನನ್ನು ಸ್ವೀಕರಿಸುವುದಿಲ್ಲ. (ಕೇವಲ ಹರಿಭಕ್ತಿ ಇದ್ದರಷ್ಟೇ ಸಾಲದು. ದೇವತೆಗಳಲ್ಲಿ ಹಾಗೂ ಗುರುಗಳಲ್ಲಿ ತಾರತಮ್ಯಾನುಸಾರೇಣ ಭಕ್ತಿ ಇರಬೇಕೆಂದು ಹೇಳುತ್ತಿದ್ದಾರೆ) ಈ ಭಕ್ತಿಯು ವಿಷ್ಣುವಿಷಯದಲ್ಲಿ ಸರ್ವಾಧಿಕವಾಗಿದ್ದು ಇತರರ ವಿಷಯದಲ್ಲಿ ತಾರತಮ್ಯಾನುಸಾರಿಯಾಗಿರಬೇಕು. ಅಂತಹ ಭಕ್ತಿಯು ಬ್ರಹ್ಮವಿದ್ಯೆಗೆ ಉಪಯುಕ್ತವಾಗುತ್ತದೆಂದು 'ಯಸ್ಯ ದೇವೇ' ಎಂಬ ಶ್ರುತಿಯಿಂದ ವಿವರಿಸುತ್ತಿದ್ದಾರೆ.

## ಸ್ತ್ರೀಶೂದ್ರಾದಿಗಳಿಗೆ ಅಧಿಕಾರವಿಲ್ಲ

**ब्रह्मसूत्रभाष्यम् –**

**व्योमसंहितायां च—**

**अन्त्यजा अपि ये भक्ता नामज्ञानाधिकारिणः ।**
**स्त्रीशूद्रब्रह्मबन्धूनां तन्त्रज्ञानेऽधिकारिता ॥**
**एकदेशे परोक्ते तु नतु ग्रन्थपुरःसरे ।**
**त्रैवर्णिकानां वेदोक्ते सम्यग्भक्तिमतां हरौ ॥**
**आहुरप्युत्तमस्त्रीणामधिकारं तु वैदिके ।**
**यथोर्वशी यमी चैव शच्याद्याश्च तथाऽपरा ॥ इति ।**

ಅನುವಾದ - ವ್ಯೋಮಸಂಹಿತಾಯಾಂ ಚ = ಶಾಸ್ತ್ರಾಧ್ಯಯನವಿಲ್ಲದವರಿಗೂ ಮೋಕ್ಷದಲ್ಲಿ ಅಧಿಕಾರವಿದೆಯೆಂದು ವ್ಯೋಮಸಂಹಿತೆ ಹೇಳುತ್ತಿದೆ.

ಕೊನೆಯ ವರ್ಣದವರಾದ ಶೂದ್ರರು ಭಕ್ತರಾಗಿದ್ದರೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ-ವಿದ್ದರೂ ಹರಿನಾಮಸ್ಮರಣೆಯಲ್ಲಿ ಅಧಿಕಾರಿಗಳಾಗಿರುತ್ತಾರೆ. ಅದರಿಂದಲೇ ಅವರಿಗೆ ಮೋಕ್ಷವು ದೊರೆಯುತ್ತದೆ. ಅದರಿಂದಲೇ ಅವರಿಗೆ ಮೋಕ್ಷವಾಗುತ್ತದೆ. ಸ್ತ್ರೀಯರಿಗೆ

ಶೂದ್ರರಿಗೆ ಭ್ರಷ್ಟಬ್ರಾಹ್ಮಣರಿಗೆ ಮಹಾಭಾರತಾದಿಪೌರುಷೇಯಗ್ರಂಥಗಳಲ್ಲಿ, ಅಧಿಕಾರ-ವಿದೆ. ವೇದದಲ್ಲಿ ಅಧಿಕಾರವಿಲ್ಲ. ಮಹಾಭಾರತಾದಿಗ್ರಂಥಗಳಲ್ಲಿಯೂ ಸಂಪೂರ್ಣ ಅಧಿಕಾರವಿಲ್ಲ. ಗುರುಮುಖೇನ ಸಂಪೂರ್ಣವಾಗಿ ಪಾಠಕೇಳುವ ಅಧಿಕಾರವೂ ಇಲ್ಲ. (ಉತ್ತಮರಿಗೆ ಹೇಳುವಾಗ ಹೇಳಿದ್ದನ್ನು ಕೇಳಿಸಿಕೊಳ್ಳಬೇಕು).

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಇವರಿಗೆ ವೇದಾಧ್ಯಯನದಿಂದ ಬರುವ ಬ್ರಹ್ಮಜ್ಞಾನದಲ್ಲಿ ಅಧಿಕಾರವಿದೆ. ಆದರೆ ನಿಶ್ಚಲವಾದ ಅತ್ಯುತ್ತಮಭಕ್ತಿ ವಿಷ್ಣುವಿನಲ್ಲಿರಬೇಕು. ಮತ್ತು ಶಚೀದೇವಿ, ಊರ್ವಶೀ, ಶ್ಯಾಮಲಾ ಮೊದಲಾದ ದೇವತಾಸ್ತ್ರೀಯರು ಮನುಷ್ಯರಾಗಿ ಹುಟ್ಟಿದರೂ ವೇದವಿದ್ಯೆಯಲ್ಲಿ ಅಧಿಕಾರವಿದೆ.

ಪ್ರತಿಪದಾರ್ಥ -- ಅಧ್ಯಯನವುಳ್ಳವರಿಗೆ ಮಾತ್ರ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಬರುವುದಾದರೆ ಶೂದ್ರಾದಿಗಳಿಗೆ ಅಧ್ಯಯನವಿಲ್ಲದ ಕಾರಣ ಬ್ರಹ್ಮವಿದ್ಯೆಗೆ ಅಧಿಕಾರವಿಲ್ಲವೆಂದಂತಾಯಿತು. ಆದ್ದರಿಂದ ಬ್ರಹ್ಮಜ್ಞಾನವಿಲ್ಲದ ಶೂದ್ರಾದಿಗಳಿಗೆ ಮೋಕ್ಷವೂ ಸಹ ದೊರೆಯದೆ ಇರಬೇಕಾದೀತು ಎಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ.

ವ್ಯೋಮಸಂಹಿತಾಯಾಂ ಚ = ವ್ಯೋಮಸಂಹಿತೆಯೆಂಬ ಗ್ರಂಥದಲ್ಲಿಯೂ, ಅಂತ್ಯಜಾಃ = ಕೊನೆಯ ವರ್ಣದವರಾದ ಶೂದ್ರರು, ಭಕ್ತಾ ಅಪಿ = ಹರಿಭಕ್ತರಾಗಿದ್ದರೆ, ನಾಮಜ್ಞಾನ = ಪರಮಾತ್ಮನ ನಾಮಸ್ಮರಣೆಯಲ್ಲಿ, ಅಧಿಕಾರಿಣಃ = ಅಧಿಕಾರಿಗಳಾಗಿರುತ್ತಾರೆ. ಸ್ತ್ರೀ = ಸ್ತ್ರೀಯರು, ಶೂದ್ರ = ಶೂದ್ರರು ಬ್ರಹ್ಮಬಂಧೂನಾಂ = ಭ್ರಷ್ಟಬ್ರಾಹ್ಮಣರು ಇವರೇ ಮೊದಲಾದವರಿಗೆ, ತಂತ್ರಜ್ಞಾನೇ = ಭಾರತಾದಿ ಪೌರುಷೇಯಗ್ರಂಥಗಳಲ್ಲಿ, ಅಧಿಕಾರಿತಾ = ಅಧಿಕಾರವಿರುತ್ತದೆ. ಪರೋಕ್ತೇ = ಬೇರೆ ಮತ್ತು ಉತ್ತಮಪುರುಷನನ್ನು ಕುರಿತು ಹೇಳುವಾಗ, ಏಕದೇಶೇ = ಏಕದೇಶದಲ್ಲಿ ಮಾತ್ರ (ಅಧಿಕಾರವಿರುತ್ತದೆ). ನ ತು ಗ್ರಂಥಪುರಃಸರೇ = ಗ್ರಂಥವನ್ನು ಆಮೂಲಾಗ್ರವಾಗಿ (ಅಧ್ಯಯನ ಮಾಡಲು ಅಧಿಕಾರವಿರುವುದಿಲ್ಲ)[1].

---

(१) भाष्यदीपिका –

ननु यद्यध्ययनवतामेव ब्रह्मविद्याधिकारः तर्हि त्रिवर्णेतरेषामध्ययनाभावेनाधिकारो न स्यात् । ततश्च तेषां ब्रह्मज्ञानाभावेन मोक्षाभावः स्यादित्याशङ्कां स्मृत्या परिहरति – 'व्योमसंहितायां च' इति । प्रकृतशङ्कानिरासपूर्वकमिति शेषः । पूर्वग्रन्थसमुच्चये चशब्दः । अस्यापि 'अधिकार उक्तः' इत्यनेनान्वयः ।

अन्ते भवाः अन्त्याः, तेषु जाताः 'अन्त्यजाः' त्रिवर्णबाह्याः । अयं चार्थो 'विष्णुनाम-स्वाध्यायोऽन्त्यानां' इत्येतदवतारिकारूपया 'नाग्निर्न यज्ञः शूद्रस्येत्यादेस्त्रिवर्णबाह्यानां' इति न्यायदीपिकया सूचितः । 'भक्ताः' इति भक्तिमानित्युक्तब्रह्मविद्याधिकारकथनम्

ವೇದಾಧ್ಯಯನದಿಂದ ಹುಟ್ಟುವ ಬ್ರಹ್ಮವಿದ್ಯೆಯಲ್ಲಿ ಯಾರಿಗೆ ಅಧಿಕಾರ? ಪರಿಶೇಷದಿಂದ ತ್ರೈವರ್ಣಿಕರಿಗೆಂದು ತಿಳಿಯುತ್ತದೆ. ಆದರೆ ಎಲ್ಲ ತ್ರೈವರ್ಣಿಕರಿಗೂ ಅಧಿಕಾರವಿರುವುದಿಲ್ಲ -- ಹರೌ = ಶ್ರೀಹರಿಯಲ್ಲಿ, ಸಮ್ಯಗ್ಭಕ್ತಿಮತಾಂ = ಅತ್ಯುತ್ತಮಭಕ್ತಿಯುಳ್ಳವರಾದ, ತ್ರೈವರ್ಣಿಕಾನಾಂ = ಬ್ರಾಹ್ಮಣಾದಿ ಮೂರು ವರ್ಣದವರಿಗೆ ಮಾತ್ರ, ವೇದೋಕ್ತೇ = ವೇದಾಧ್ಯಯನದ ಅಧಿಕಾರವು (ಇರುತ್ತದೆ). ಅಪಿ = ಮತ್ತು, ವೈದಿಕೇ = ವೇದವು ಹೇಳಲ್ಪಟ್ಟ ವಿಷಯದಲ್ಲಿ, ಉತ್ತಮಸ್ತ್ರೀಣಾಂ = ದೇವತಾಸ್ತ್ರೀಯರಿಗೆ, ಅಧಿಕಾರಂ ತು = ಅಧಿಕಾರವನ್ನು, ಆಹುಃ = ಹೇಳುತ್ತಾರೆ. ಯಥಾ = ಹೇಗೆ, ಊರ್ವಶಿ = ಊರ್ವಶಿಯೆಂಬ ಅಪ್ಸರೆಯು, ಯಮೀ = ಯಮನ ಪತ್ನಿಯಾದ ಶ್ಯಾಮಲೆಯು, ಶಚ್ಯಾದ್ಯಾಃ = ಇಂದ್ರನ ಪತ್ನಿಯರಾದ ಶಚೀ ಮೊದಲಾದವರು, ಅಪರಾಃ = ಬೇರೆ ಋಷಿಪತ್ನಿಯರು ಇವರಂತೆ, ಇತಿ = ಹೀಗೆ (ಹೇಳಲ್ಪಟ್ಟಿದೆ)[1].

---

एवं 'भक्तिमतां' इत्यपि । एतच्चोभयान्वयि । तथा च – न केवलं त्रैवर्णिकाः, किन्तु ये अन्त्यजाः त्रिवर्णबाह्याः शूद्रादयः पुल्कसान्ताः ते यद्यपि वैदिकब्रह्मज्ञानानधिकारिणः, तथाऽपि यतो भक्ताः अतो नामज्ञानाधिकारिणः विष्णुनामज्ञानतत्स्वाध्यायाधिकारिणः, अतस्ते ब्रह्मज्ञानमुक्त्यधिकारिण इति योजना ।। त्रैवर्णिकेष्वपि वेदानधिकारिणां केषाञ्चित्, अन्त्यजेष्वपि केषाञ्चिद् भक्तिमतां, उक्तादन्यत्राऽऽह – 'स्त्रीशूद्रब्रह्मबन्धूनाम्' इति । स्त्रियश्च शूद्राश्च ब्रह्मबन्धवो ब्राह्मणाभासाश्च तेषामिति विग्रहः । तन्त्रं पञ्चरात्रादि, तज्ज्ञाने तदुक्तार्थज्ञाने, तन्त्रोत्पन्नब्रह्मविद्यायामिति यावत् । अपिशब्दोऽत्रापि सम्बध्यते । तथाच तेषां तद्ज्ञानद्वाराऽपि मोक्षोपपत्तिरिति भावः ।।

(१) भाष्यदीपिका – तन्त्रेऽपि न सर्वत्राधिकारः, किन्तु एकदेशे एव । तत्रापि 'न ग्रन्थपुरस्सरे' न स्वप्राधान्येन ग्रन्थारम्भेऽधिकारः, किन्तु परोक्ते परेणान्येन परार्थं प्रोक्ते आरब्ध एवेत्याह – 'एकदेश' इति ।। अवधारणे तुशब्दः । तद्व्यावर्त्यमाह - 'नतु' इति । स्त्र्यादिमात्रपुरस्कारेण प्रारभ्यमाणतन्त्रग्रन्थादौ तेषां नाधिकारितेत्यर्थः । अनेन स्त्रीशूद्रादिमात्रं पुरस्कृत्य पुराणादिग्रन्थप्रवचनमपि न कार्यमित्युक्तं भवति । द्वितीयतुशब्दस्योत्तरत्रान्वयः । तर्हि वेदोत्पन्नब्रह्मविद्यायां केषामधिकारः ? परिशेषात् त्रैवर्णिकानां चेत् – तेषामपि किं सर्वेषामधिकारः? न, किं तु केषाञ्चिदित्याह - 'त्रैवर्णिकानामिति ।। 'वेदोक्ते' वेदोत्पन्नब्रह्मज्ञाने तु 'हरौ सम्यग्भक्तिमतां' एव 'त्रैवर्णिकानां' उक्तेतरब्रह्मक्षत्रियवैश्यानाम् अधिकारितेत्यर्थः । न केवलं नामादिज्ञानाधिकार इत्यर्थेऽपि तुशब्दः ।।

'सपत्नीं मे पराधम पतिं मे केवलं कुरु' इत्यादौ स्त्रीणामपि वेदाधिकारदर्शनात् कथं तासामनधिकार इत्यत उक्तस्यापवादमाह– 'आहुः' इति ।। तुरप्यर्थेऽपि । 'वैदिके'

## ಅಪರೋಕ್ಷಜ್ಞಾನಕ್ಕಾಗಿ ಬ್ರಹ್ಮಜಿಜ್ಞಾಸೆಯು ಅವಶ್ಯಕ

**ब्रह्मसूत्रभाष्यम् –**

**यतो नारायणप्रसादमृते न मोक्षः, न च ज्ञानं विनाऽत्यर्थप्रसादः, अतो ब्रह्म-जिज्ञासा कर्तव्या ।**

**यत्रानवसरोऽन्यत्र पदं तत्र प्रतिष्ठितम् ।**
**वाक्यं वेति सतां नीतिः सावकाशे न तद् भवेत् ।। इति ब्रह्मसंहितायाम् ।**

ಅನುವಾದ -- ನಾರಾಯಣನ ಪ್ರಸಾದವಿಲ್ಲದೇ ಮೋಕ್ಷವಾಗುವುದಿಲ್ಲ. ಅಪರೋಕ್ಷಜ್ಞಾನ-ವಿಲ್ಲದೆ ಪ್ರಸಾದವಾಗುವುದಿಲ್ಲ. ಅಪರೋಕ್ಷಜ್ಞಾನಕ್ಕೋಸ್ಕರ ಬ್ರಹ್ಮವಿಚಾರವನ್ನು ಮಾಡಬೇಕು.

"ಯಾವ ಪದವಿಲ್ಲದೆ ವಾಕ್ಯದ ಅರ್ಥವು ಪೂರ್ಣವಾಗುವುದಿಲ್ಲವೋ; ಅಂತಹ ಪದವನ್ನು ವಾಕ್ಯದಲ್ಲಿ ಅಧ್ಯಾಹಾರ ಮಾಡಬೇಕು. ಅದರಂತೆ ಅವಾಂತರವಾಕ್ಯವನ್ನು ಅಧ್ಯಾಹಾರ-ಮಾಡಿಕೊಳ್ಳದೇ ಮಹಾವಾಕ್ಯದ ಅರ್ಥವು ಪೂರ್ಣವಾಗುವುದಿಲ್ಲವೋ ಅಂತಹ ಅವಾಂತರವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆದರೆ ಪದ ಅಥವಾ ಅವಾಂತರವಾಕ್ಯಗಳು ಇಲ್ಲದಿದ್ದರೂ ವಾಕ್ಯವಾಗಲೀ ಮಹಾವಾಕ್ಯವಾಗಲೀ ಪರಿಪೂರ್ಣ ಅರ್ಥವುಳ್ಳದ್ದಾಗುವುದಾದರೆ ಆವಾಗ ಪದವನ್ನು ಅಥವಾ ವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬಾರದು. ಹೀಗೆ ಜ್ಞಾನಿಗಳು ಹೇಳುತ್ತಾರೆ". ಬೃಹತ್ಸಂಹಿತೆಯಲ್ಲಿ ಈ ನಿಯಮವು ಹೇಳಲ್ಪಟ್ಟಿರುವುದರಿಂದ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ ಕರ್ತವ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

---

इत्यस्य विपरिणामेनाऽवृत्तिः । 'उत्तमस्त्रीणाम्' इति तत्पुरुषकर्मधारयौ । तथाच ·: केवलमुत्तमानां देवानां स्त्रीणां नामादिज्ञानेऽधिकारः, किन्तु वैदिकेऽपि ज्ञा· वेदोत्पन्नब्रह्मविद्यायामपि वैदिका अधिकारमाहुरिति योजना । ता उदाहरति – 'एव· इति ।। 'एव' एवं 'यमी' यमस्य भार्या श्यामला । चशब्द उक्तसमुच्चये । आ· शब्देन उमारत्यादि गृह्यते । अनुक्तसमुच्चये द्वितीयश्चः, तेन मनुष्यादिकुलोत्पन्नदेवस्त्रि· गृह्यन्ते । तथाशब्द उपमायां उक्तसमुच्चये वा । अपरा उत्तमस्त्रीभ्यो अन्या ऋषिपत्न्· अवरा इति वा, उत्तमदेवस्त्र्यपेक्षया मध्यमऋषिपत्नीनां अवरत्वादिति । 'व्योमसंहिताय· इति इतिशब्दान्वयः ।।

**ಪ್ರತಿಪದಾರ್ಥ** -- ಇಲ್ಲಿಯ ತನಕ ಅಥಶಬ್ದವನ್ನು ಸಂಕ್ಷೇಪ ಹಾಗೂ ವಿಸ್ತಾರವಾಗಿ ವ್ಯಾಖ್ಯಾನಿಸಿ ಈಗ ಸೂತ್ರದಲ್ಲಿ ಕರ್ತವ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದಾರೆ. ಯತಃ = ಯಾವ ಕಾರಣದಿಂದ, ನಾರಾಯಣಪ್ರಸಾದಂ = ನಾರಾಯಣನ ಪ್ರಸಾದವು, ಋತೇ = ಇಲ್ಲದೆ, ಮೋಕ್ಷಃ = ಮೋಕ್ಷವು, ನ = ಆಗುವುದಿಲ್ಲವೋ, ಜ್ಞಾನಂ ವಿನಾ = ಅಪರೋಕ್ಷಜ್ಞಾನವಿಲ್ಲದೆ, ಅತ್ಯರ್ಥಪ್ರಸಾದಃ = ಭಗವಂತನ ಮೋಕ್ಷಕಾರಣ ಪ್ರಸಾದವು, ನಚ = ದೊರೆಯುವುದೇ ಇಲ್ಲ. ಆದ್ದರಿಂದ ಬ್ರಹ್ಮಜಿಜ್ಞಾಸಾ = ಬ್ರಹ್ಮವಿಷಯಕವಿಚಾರವನ್ನು, ಕರ್ತವ್ಯಾ = ಮಾಡಲೇ ಬೇಕು[1]. ಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದವನ್ನೇ ಏಕೆ ಅಧ್ಯಾಹಾರ ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಯತ್ರ = ಯಾವ ವಾಕ್ಯದಲ್ಲಿ, ಅನವಸರಃ = ಯಾವ ಪದವಿಲ್ಲದಿದ್ದರೆ, ಅರ್ಥವು ಪೂರ್ಣವಾಗುವುದಿಲ್ಲವೋ, ತತ್ರ = ಆ ವಾಕ್ಯದಲ್ಲಿ, ಅನ್ಯತ್ರಪದಂ = ಬೇರೆಡೆ ಇರುವ ಪದವನ್ನು, ಪ್ರತಿಕ್ಷಿಪ್ತಮ್ = ಅಧ್ಯಾಹಾರಮಾಡಿ ಅರ್ಥವನ್ನು ತಿಳಿಯಬೇಕು. ವಾಕ್ಯಂ ವಾ = ಮಹಾವಾಕ್ಯವನ್ನಾದರೋ, ಇತಿ = ಇದೇ ರೀತಿಯಾಗಿ, ಸತಾಂ = ಸಜ್ಜನರ, ನೀತಿಃ = ನಿಯಮವು, ಸಾವಕಾಶೇ = ಅವಕಾಶದಿಂದ ಕೂಡಿದ್ದರೆ, ತತ್ = ಆ ವಿವಕ್ಷಿತಾರ್ಥವು, ಭವೇತ್ = ಆಗುತ್ತದೆ. ಇತಿ = ಈ ರೀತಿಯಾಗಿ ಬೃಹತ್ಸಂಹಿತೆಯಲ್ಲಿ ಹೇಳಿದ್ದಾರೆ[2].

---

(१) **भाष्यदीपिका** – एवं प्रतिज्ञाप्रमाणोपन्यासाभ्याम् आनन्तर्यप्रतियोग्यधिकारविवरणमुखेनाथशब्दं सङ्क्षेपविस्तराभ्यां व्याख्याय सूत्रे 'कर्तव्या' इति पदम् अतश्शब्दपरामर्शनीयसमर्पकं 'यतः' इत्यादिकं चाध्याहार्यमिति दर्शयन् 'अतश्शब्दो हेत्वर्थे' इति सङ्क्षेपेणोक्तमर्थं विशदयति - 'यतः' इति । 'यतः' इत्यावर्तते । तथाच - यतः सुखमेव मे स्यात् दुःखमीषदपि मा भूदिति सर्वाभिमतो 'मोक्षः' स च 'नारायणप्रसादमृते' विना नास्ति, स च 'अत्यर्थप्रसादः' अतिमात्रप्रसादश्च नापरोक्षज्ञानं विना, तच्च न ब्रह्मजिज्ञासां विना, 'अतो ब्रह्मजिज्ञासा कर्तव्या' इत्यर्थः । उक्तं हि शब्दाधिकरणे तत्त्वप्रदीपे 'मोक्षस्यैव परमपुरुषार्थत्वात् तस्य च समीचो विना विष्णुप्रसादाद् अलभ्यत्वात् तस्य च अतिमात्रस्यापरोक्षज्ञानप्रसाध्यत्वाद् तस्य चापरोक्षस्य जिज्ञासासमायत्तत्वाद् विष्णुरेव जिज्ञास्य इत्युक्तम्' इति । सावधारणान्वयस्याप्युपलक्षकमेतत् । तस्यातश्शब्देन परामर्शानानुपपत्तिः । अनेन सूत्रे यतो नारायणप्रसादमृते न मोक्षः, किन्तु प्रसादेनैव, न च ज्ञानं विनाऽत्यर्थप्रसादः, किन्तु ज्ञानेनैव, न च जिज्ञासां विना ज्ञानं, किन्तु जिज्ञासयैव, अतो ब्रह्मजिज्ञासा कर्तव्येत्यन्वयप्रदर्शनमुखेनातश्शब्दस्य मोक्षसाधनप्रसादसाधनज्ञानसाधनत्वादिति हेतुरर्थ इत्येतद् विवृतं भवति । एवं यतो नारायणप्रसादमृते न ज्ञानं न जिज्ञासा किन्तु प्रसादेनैवेति योजनायामतःशब्दस्यार्थान्तरमपि विवृतं भवति । नारायणशब्दप्रयोगेण सौत्रब्रह्मशब्दोऽपि व्याख्यातो भवति ॥

(२) **भाष्यदीपिका** – ननु सूत्रे 'कर्तव्या' इति पदस्यैवाध्याहारः कुतः? अध्याहारस्य

सत्तर्कदीपावली – अतश्शब्दस्य हेत्वर्थं विवृणोति – यत इति ।। जिज्ञासाऽऽसादितब्रह्मज्ञानं विना विष्णुप्रसादद्वारकमोक्षासिद्धेः, ब्रह्मजिज्ञासा कर्तव्या' इत्यर्थः । नच 'साक्षादध्ययनादेव ब्रह्मज्ञानसिद्धेर्व्यर्था ब्रह्मजिज्ञासा' इति वाच्यम् । जिज्ञासामन्तरेण संशयविपर्ययरहितज्ञानासम्भवात् । न हि परस्पर विरुध्यमानवाक्यैर्निर्णायकन्यायव्युत्पादनमन्तरेण सम्यग्ज्ञानं ब्रह्मविषयक-मुत्पद्यते । अत्र 'ब्रह्मजिज्ञासापदं स्वाकाङ्क्षितेन न्यायप्राप्तेन कर्तव्यमितिपदेन योजयितव्यम्' इत्येतद्धृदि निधाय, 'पदसापेक्षं वाक्यसापेक्षं वा यत्सूत्रं तत्र न्यायप्राप्तं पदादिकमभुतमप्यध्याहर्तव्यम्' इत्येतद् बृहत्संहितावचनेन दर्शयति - तत्रेति ।। न चाध्याहारस्य निरङ्कुशत्वादिदं पदमध्याहर्तव्यमिदं तु नेति नियमहेतुर्नास्तीति वाच्यम् । यत्र साकाङ्क्षवाक्ये यत्पदं विनान्यस्य पदस्यावकाशो न्यायबाधितः तत्र तदेव पदमध्याहार्यतया प्रतिष्ठितं न्यायवशादिति नियामकस्य वक्तुं शक्यत्वात् । अनेकपदानामविशेषेण अवकाशवति हि साकाङ्क्षवाक्ये इदमेव पदमध्याहार्यमिति नियमो न युज्यत इत्यर्थः ।

ಹೇತ್ವರ್ಥವುಳ್ಳ ಅತಃಶಬ್ದವನ್ನು 'ಯತಃ' ಎಂಬುದಾಗಿ ವಿವರಿಸುತ್ತಿದ್ದಾರೆ. ಬ್ರಹ್ಮಜಿಜ್ಞಾಸೆಯಿಂ ದೊರೆಯುವ ಬ್ರಹ್ಮಜ್ಞಾನವಿಲ್ಲದೆ ವಿಷ್ಣುಪ್ರಸಾದವಾಗುವುದಿಲ್ಲ. ವಿಷ್ಣುಪ್ರಸಾದವಾಗದೆ ಮೋಕ್ಷ ಸಿದ್ಧಿಸುವುದಿಲ್ಲ. ಅದಕ್ಕೋಸ್ಕರ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆಯೆಂದು ಇದರ ಅರ್ಥ ಸಾಂಗವಾದ ವೇದಾಧ್ಯಯನದಿಂದಲೇ ಬ್ರಹ್ಮಜ್ಞಾನವು ದೊರೆಯುವಾಗ ಬ್ರಹ್ಮಜಿಜ್ಞಾಸೆ

---

निरङ्कुशत्वेन 'न कर्तव्या' इति वाक्यस्यैवाध्याहारः किं न स्यादित्यत आह - 'यत्र' इति ।। अत्र यत्रेति तत्रेति पदमिति चाऽवर्तते, तथा वाक्यमित्यपि, विनेत्यध्याह्रियते तथा च - 'यत्र' अवान्तरवाक्ये यत् 'पदं' विना 'अन्यत्र' अर्थान्तरे 'अनवसरः' अघटना 'तत्र' वाक्ये तदेव 'पदं' 'प्रतिष्ठितं' प्राप्तं भवेत्, नान्यदिति 'सतां' न्याय यत्र वाक्ये यस्मिन् वाक्ये सावकाशेऽर्थान्तरे घटनावति सति तदेव पदं नियमेन प्रतिष्ठितं प्राप्तं न भवेत् । एवं यत्र महावाक्ये यदवान्तरवाक्यं विनाऽन्यत्रानवसरः तत्र महावाक्ये तदेव वाक्यं प्रतिष्ठितं, यत्र यस्मिन् महावाक्ये सावकाशे सति तदवान्तरवाक्यं नियमेन प्रतिष्ठितं न भवेदित्यर्थः । यत्र वाक्ये यत्पदं वाक्यं वाऽपेक्षितमन्यत्रान्यस्यानवसर इति वा । इति बृहत्संहितायामुक्तत्वात् 'कर्तव्या' इति पदमेवावश्यमध्याहर्तव्यमिति वाक्यशेषेणास्यान्वयः । 'न कर्तव्या' इत्यध्याहारे अथातश्शब्दार्थाधिकारादेरत्रान्वय योगादिति भावः । एवं चन्द्रिकोक्तरीत्या 'यत्र' इति श्लोको 'यतः' इत्याद्यध्याहार समर्थनपरतयाऽपि व्याख्येयः ।।

ಅನಿವಾರ್ಯತೆ ಏನು? ಎಂದು ಪ್ರಶ್ನಿಸಬಾರದು. ಬ್ರಹ್ಮಜಿಜ್ಞಾಸೆ ಮಾಡದೆ ಸಂಶಯ ಹಾಗೂ ವಿಪರೀತಜ್ಞಾನರಹಿತವಾದ ತತ್ವಜ್ಞಾನವು ಪ್ರಾಪ್ತವಾಗುವುದಿಲ್ಲ. ಪರಸ್ಪರವಿರುದ್ಧವಾದ ಎರಡು ವಾಕ್ಯಗಳಿಂದ ನಿರ್ಣಾಯಕ ನ್ಯಾಯಗಳ ವ್ಯುತ್ಪತ್ತಿಯಿಲ್ಲದೆ ಯಥಾರ್ಥಜ್ಞಾನವು ಬ್ರಹ್ಮವಿಷಯಕ-ವಾಗುವುದಿಲ್ಲ. ಪ್ರಕೃತ ಬ್ರಹ್ಮಜಿಜ್ಞಾಸಾಪದಕ್ಕೆ ಕರ್ತವ್ಯ ಪದದ ಆಕಾಂಕ್ಷೆಯು ಇರುತ್ತದೆ. ಆದ್ದರಿಂದ ಪ್ರಥಮಸೂತ್ರದಲ್ಲಿ "ಕರ್ತವ್ಯಾ" ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು 'ತತ್ರ' ಎಂಬ ಭಾಷ್ಯದಿಂದ ಹೇಳುತ್ತಿದ್ದಾರೆ. ಪದ ಹಾಗೂ ವಾಕ್ಯವನ್ನು ಅಪೇಕ್ಷಿಸುವ ಸೂತ್ರದಲ್ಲಿ ನ್ಯಾಯಪ್ರಾಪ್ತವಾದ ಪದ ಹಾಗೂ ವಾಕ್ಯಗಳನ್ನು ಅಶ್ರುತವಾದರೂ ಅಧ್ಯಾಹಾರ ಮಾಡಿ-ಕೊಳ್ಳಬೇಕೆಂದು ಬೃಹತ್ಸಂಹಿತಾಪ್ರಮಾಣದಿಂದ ತೋರಿಸಿದ್ದಾರೆ. ಇಂತಹ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕೆನ್ನಲು ಏನು ಗಮಕ? ಎಂದು ಪ್ರಶ್ನಿಸಬಹುದು. ಆದರೆ, ಯಾವ ಪದವಿಲ್ಲದೆ ಸಾಕಾಂಕ್ಷವಾದ ವಾಕ್ಯವು ಪೂರ್ಣವಾಗುವುದಿಲ್ಲವೋ ಮತ್ತು ಬೇರೆ ಪದಗಳ ಅಧ್ಯಾಹಾರಕ್ಕೂ ಅವಕಾಶವಿಲ್ಲವೋ ಅಲ್ಲಿ ಅದೇ ಪದವನ್ನೇ ಅಧ್ಯಾಹಾರಮಾಡಿಕೊಳ್ಳಬೇಕೆಂಬ ನಿಯಮವೇ ಇಲ್ಲಿ ಪ್ರಮಾಣವಾಗಿದೆ. ಯಾವ ವಾಕ್ಯದಲ್ಲಿ ಇಂತಹ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ಗಮಕವಿರುವುದಿಲ್ಲವೋ ಅಲ್ಲಿ ಮಾತ್ರ ಬೇರೆ ಬೇರೆ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬಹುದು. ಇಂತಹ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ನಿಯಮವಿರುವುದಿಲ್ಲ.

## ಅತಃಶಬ್ದಾರ್ಥವಿಚಾರ ಹಾಗೂ ಕರ್ತವ್ಯಾಪದವಿಚಾರ

तत्वप्रकाशिका – **नन्वध्ययनवतामेव ब्रह्मविद्याधिकारित्वे त्रिवर्णेतरेषा-मध्ययनविधुराणां ज्ञानाभावेन मोक्षाभावः स्यादित्याशङ्कां प्रमाणेन परिहरति –** व्योमसंहितायां चेति ।। अन्त्यजा = **वर्णबाह्याः । भक्ता इत्यधिकारकथनम् ।** तन्त्रं = **पञ्चरात्रादि । 'अध्ययनाभावेन वैदिकज्ञानानधिकारित्वेऽपि त्रिवर्णेतरेषां नामादिज्ञानाधिकारित्वात् मोक्षोपपत्तिः' इति भावः । 'सपत्नीं मे पराधम' इत्यादौ स्त्रीणामपि वेदाधिकारदर्शनात् कथं तासामनधिकारः? इत्यत उक्तस्यापवादमाह –** आहुरिति ।। **तथा परा मुनिस्त्रियो नरादिकुलजाश्च ।**

**एवमथशब्दं संक्षेपविस्तराभ्यां व्याख्याय, 'अतःशब्दो हेत्वर्थः' इत्युक्तं व्यनक्ति –** यत इति ।। **'सुखमेव मे स्याद् दुःखं मनागपि मा भूत्' इति सर्वाभिमतमोक्षस्य नारायणात्यर्थप्रसादमन्तरेणासम्भवात्, अत्यर्थप्रसादस्य च तदपरोक्षज्ञानमन्तरेणालाभात्, अपरोक्षज्ञानस्य च ब्रह्मजिज्ञासां विनाऽनुदयात्, अत्यर्थप्रसादद्वारा मोक्षसाधनापरोक्षज्ञानोत्पादिका ब्रह्मजिज्ञासा कर्तव्या इत्यर्थः ।**

यदुक्तम् 'असन्दिग्धत्वान्न ब्रह्मणो विषयत्वम्' इति तद् ब्रह्मपदप्रयोगेण परास्तम् । तथाहि । भवेदेतदसन्दिग्धत्वं जिज्ञास्यस्य यदि तत्स्वप्रकाशजीवाभिन्नं स्यात् । न चैतदस्ति । जिज्ञास्ये ब्रह्मपदश्रवणात् 'तद् विजिज्ञासस्व' 'तद् ब्रह्म' इति । ब्रह्मशब्दश्च पूर्णगुणतां वक्ति । 'अथ कस्मादुच्यते ब्रह्मेति । बृहन्तो ह्यस्मिन् गुणाः' इति श्रुतेः । तथाच कथं तस्य जीवाभेदः जीवस्याल्पगुणत्वेनानुभवात् । न च ब्रह्मणि गुणध्यासः । परमार्थतोऽब्रह्मत्वप्रसङ्गात् । देशाद्यपरिच्छिन्नता ब्रह्मतेति चेन्न । उक्तश्रुतिविरोधात् । देशाद्यपरिच्छेदेन च जीवभेदसिद्धेः, जीवाणुत्वस्य च वक्ष्यमाणत्वात् । अतो जीवस्य स्वप्रकाशत्वेऽपि तद्भिन्नब्रह्मणः सन्दिग्धत्वाद् विषयत्वसिद्धेर्मुख्यप्रयोजनसद्भावात् तत एवाधिकार्यादिसम्भवाद् ब्रह्मजिज्ञासा कर्तव्येति । ब्रह्मपदव्याख्यानरूपं नारायणपदम् ।

ननु 'कर्तव्या' इति पदमत्र न श्रूयते; यदि अध्याहारस्तर्हि न कर्तव्येत्यध्याहारः किं न स्यात् अध्याहारस्य निरङ्कुशत्वात्? इत्यत आह – यत्रेति ॥ 'यत्र' वाक्ये महावाक्ये वा, यत् पदं वाक्यं वा विना अन्यत्रार्थान्तरेऽनवसरोऽर्थान्तरस्याघटना, तत्र वाक्ये महावाक्ये वा, तदेव पदं वाक्यं वा प्रतिष्ठितं प्राप्तं नान्यत् इति सतां न्यायः । यत् पदं वाक्यं वा विनापि पदान्तरेण वाक्यान्तरेण वा वाक्ये महावाक्ये वा सावकाशेऽर्थान्तरे घटनावति तदेव पदं वाक्यं वा नियमेन प्रतिष्ठितं न भवेत् इति न्यायात् कर्तव्यपदमेवाध्याहार्यम् । 'न कर्तव्येत्यादेरधिकारकथनादिनाऽयोगात्' इति भावः ।

ಅನುವಾದ - ಅಧ್ಯಯನ ಮಾಡಿದರಷ್ಟೇ ಬ್ರಹ್ಮವಿದ್ಯೆಗೆ ಅಧಿಕಾರಿಗಳಾಗುವುದಾದ ಅಧ್ಯಯನವಿಲ್ಲದ ಶೂದ್ರಾದಿಗಳಿಗೆ ಬ್ರಹ್ಮಜ್ಞಾನವೇ ಬರುವುದಿಲ್ಲವೆಂದಾಯಿತು. ಆದ್ದರಿಂದ ಅವರಿ ಮೋಕ್ಷವು ಬಾರದಿರಲಿ ಎಂಬ ಆಕ್ಷೇಪವನ್ನು ಪ್ರಮಾಣಪುರಃಸರವಾಗಿ 'ವ್ಯೋಮಸಂಹಿತಾಯಾಂ ಚ' ಎಂಬುದಾಗಿ ಪರಿಹರಿಸುತ್ತಿದ್ದಾರೆ.

ಅಂತ್ಯಜಾಃ = ತ್ರಿವರ್ಣಬಾಹ್ಯರು, ಭಕ್ತಾಃ ಎಂಬ ಪದವು ಅಧಿಕಾರವನ್ನು ಹೇಳುತ್ತಿದೆ. ತಂತ್ರ = ಪಂಚರಾತ್ರಾದಿಗಳು. ತ್ರಿವರ್ಣಬಾಹ್ಯರಿಗೆ ಅಧ್ಯಯನವಿಲ್ಲದ ಕಾರಣ ವೇದಜ್ಞಾನವಿಲ್ಲದಿರಬಹುದು ಆದರೆ ಪರಮಾತ್ಮನ ನಾಮಸ್ಮರಣೆಯಲ್ಲಿ ಅಧಿಕಾರವಿರುವುದರಿಂದ ಅವರಿಗೂ ಮೋಕ್ಷ ದೊರೆಯುತ್ತದೆ.

ಪರಿಪೂರ್ಣಚಂದ್ರಿಕಾ

ಪ್ರಶ್ನೆ - 'ಸಪತ್ನೀಂ ಮೇ ಪರಾಧಮ' (ಸಪತ್ನಿಯಿಂದ ನನ್ನನ್ನು ಬಿಡಿಸು) ಎಂಬ ಶ್ರುತಿಪ್ರಮಾಣದಿಂದ ಸ್ತ್ರೀಯರಿಗೂ ಸಹ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆಂದು ತಿಳಿಯುತ್ತದೆ. ಆದ್ದರಿಂದ ಸ್ತ್ರೀಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂದು ಹೇಗೆ ಹೇಳಿದಿರಿ?

ಉತ್ತರ - ಈ ವಿಷಯದಲ್ಲಿ ಕೆಲವು ಅಪವಾದಗಳನ್ನು 'ಆಹುಃ' ಇತ್ಯಾದಿ ವಚನಗಳಿಂದ ಹೇಳುತ್ತಿದ್ದಾರೆ. ಕಥಾಽಪರಾಃ = ಋಷಿಸ್ತ್ರೀಯರು ಮತ್ತು ಮನುಷ್ಯಕುಲದಲ್ಲಿ ಹುಟ್ಟಿದವರು.

ಈ ರೀತಿಯಾಗಿ 'ಅಥ'ಶಬ್ದವನ್ನು ಸಂಕ್ಷೇಪ ಹಾಗೂ ವಿಸ್ತಾರವಾಗಿ ವ್ಯಾಖ್ಯಾನ ಮಾಡಿ, ಮುಂದೆ 'ಅತಃ' ಎಂಬ ಶಬ್ದವನ್ನು ಹೇತ್ವರ್ಥದಲ್ಲಿ 'ಯತಃ' ಎಂಬಿತ್ಯಾದಿ ಭಾಷ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. " 'ನನಗೆ ಸುಖವೇ ಆಗಲಿ ದುಃಖದ ಲವಲೇಶವೂ ಬೇಡ' ಎಂಬ ಎಲ್ಲರಿಂದ ಅಪೇಕ್ಷಿತವಾದ ಮೋಕ್ಷವು ನಾರಾಯಣನ ಪ್ರಸಾದವಿಲ್ಲದೆ ದೊರೆಯುವುದಿಲ್ಲ. ನಾರಾಯಣನ ಪ್ರಸಾದವಾಗ-ಬೇಕಾದರೆ ಅಪರೋಕ್ಷಜ್ಞಾನವಾಗಬೇಕು. ಅಪರೋಕ್ಷಜ್ಞಾನವು ಬ್ರಹ್ಮಜಿಜ್ಞಾಸೆಯಿಲ್ಲದೆ ಹುಟ್ಟು-ವುದಿಲ್ಲ. ಆದ್ದರಿಂದ ಪರಮಾತ್ಮನ ಅತ್ಯರ್ಥಪ್ರಸಾದದ ಮೂಲಕ ಮೋಕ್ಷವೇ ಫಲವಾಗಿ ಉಳ್ಳ ಅಪರೋಕ್ಷಜ್ಞಾನಕ್ಕೆ ಉಪಯೋಗಿಯಾದ ಬ್ರಹ್ಮಜಿಜ್ಞಾಸೆಯನ್ನು ಅವಶ್ಯ ಆಚರಿಸಬೇಕು" ಎಂದು ಅಭಿಪ್ರಾಯ.

ಹಿಂದೆ 'ಸಂದೇಹವಿಲ್ಲದ ಬ್ರಹ್ಮನು ವಿಷಯನಾಗಲಾರ'ನೆಂದು ಪೂರ್ವಪಕ್ಷ ಮಾಡಲಾಗಿತ್ತು. ಅದನ್ನು ಈಗ ಬ್ರಹ್ಮಪದದ ಪ್ರಯೋಗದಿಂದಲೇ ನಿರಾಕರಿಸಿದ್ದಾರೆ. ಅದು ಹೀಗೆ -- " ಜಿಜ್ಞಾಸೆಗೆ ವಿಷಯನಾದ ಬ್ರಹ್ಮನು ಸ್ವಪ್ರಕಾಶನಾದ ಜೀವನಿಗಿಂತ ಅಭಿನ್ನನಾಗಿದ್ದರೆ ಅಸಂದಿಗ್ಧನಾದ ಕಾರಣ ವಿಷಯನಾಗುತ್ತಿರಲಿಲ್ಲ. ಆದರೆ ಬ್ರಹ್ಮನು ಅಸಂದಿಗ್ಧನಲ್ಲ. 'ತದ್ ವಿಜಿಜ್ಞಾಸಸ್ವ, ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿ ಬ್ರಹ್ಮನನ್ನು ಜಿಜ್ಞಾಸ್ಯನೆಂದು ಹೇಳಲಾಗಿದೆ. ಬ್ರಹ್ಮಶಬ್ದಕ್ಕೆ ಗುಣಪೂರ್ಣ ಎಂದರ್ಥ. ಈ ವಿಷಯದಲ್ಲಿ 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ' ಎಂಬ ಶ್ರುತಿಯೇ ಆಧಾರ. ಆದ್ದರಿಂದ ಇಂತಹ ಗುಣಪೂರ್ಣನಾದ ಬ್ರಹ್ಮನು ಜೀವನಿಂದ ಅಭಿನ್ನನಾಗಲು ಹೇಗೆ ಸಾಧ್ಯ? ಏಕೆಂದರೆ ಜೀವನು ಅಲ್ಪಗುಣನೆಂದು ಅನುಭವಸಿದ್ಧನಾಗಿದ್ದಾನೆ.

ಬ್ರಹ್ಮನಲ್ಲಿರುವ ಎಲ್ಲ ಗುಣಗಳು ಆರೋಪಿತವಾದ್ದರಿಂದ ಜೀವಾಭೇದವನ್ನು ಹೇಳಬಹುದೆಂದು ಶಂಕಿಸಬಾರದು. ಹಾಗಾದಲ್ಲಿ ಪಾರಮಾರ್ಥಿಕವಾಗಿ ಬ್ರಹ್ಮನು ಬ್ರಹ್ಮನಲ್ಲ ಎಂದಂತಾಯಿತು(ಇದು ವ್ಯಾಹತ). ದೇಶತಃ ಕಾಲತಃ ಅಪರಿಚ್ಛಿನ್ನತ್ವವನ್ನಷ್ಟೇ ಬ್ರಹ್ಮಪದವು ಹೇಳುತ್ತಿದೆ. ಗುಣಪೂರ್ಣತ್ವವನ್ನು ಹೇಳುತ್ತಿಲ್ಲವೆಂದು ಶಂಕಿಸಬಾರದು. ಹಾಗಾದರೆ ಅಥ ಕಸ್ಮಾದುಚ್ಯತೇ ಎಂಬ ಶ್ರುತಿವಿರೋಧ ಬರುತ್ತದೆ. ಮತ್ತು ದೇಶಕಾಲಾದ್ಯಪರಿಚ್ಛೇದದಿಂದಲೂ ಜೀವಭೇದವೆಂಬ ನಮ್ಮ ಇಷ್ಟವು ಸಿದ್ಧಿಸುತ್ತದೆ. ಏಕೆಂದರೆ ಜೀವನು ಅಣುವೆಂದು ಮುಂದೆ ಉಪಪಾದಿಸಿದ್ದೇವೆ. ಆದ್ದರಿಂದ ಜೀವನು ಸ್ವಪ್ರಕಾಶನಾದರೂ ಜೀವಭಿನ್ನನಾದ ಬ್ರಹ್ಮನು ಸಂದಿಗ್ಧನಾಗುತ್ತಾನೆ. ಆದ್ದರಿಂದಲೇ ಶಾಸ್ತ್ರಕ್ಕೆ

ವಿಷಯನೂ ಆಗುತ್ತಾನೆ. ಇದಕ್ಕೆ ಮೋಕ್ಷವೆಂಬ ಫಲವೂ ಇರುತ್ತದೆ. ಆದ್ದರಿಂದಲೇ ಅಧಿಕಾರಿಗಳೂ ಇರುತ್ತಾರೆ. ಹೀಗೆ ವಿಷಯಪ್ರಯೋಜನಾದಿಗಳೆಲ್ಲವೂ ಪರಿಪೂರ್ಣವಾಗಿರುವುದರಿಂ ಬ್ರಹ್ಮಜಿಜ್ಞಾಸೆಯು ಅವಶ್ಯಕರ್ತವ್ಯವೇ ಆಗಿದೆ" ಎಂದು.

"ನಾರಾಯಣ"ಪದವು ಬ್ರಹ್ಮಪದವನ್ನೇ ವ್ಯಾಖ್ಯಾನಿಸುತ್ತಿದೆ.

"ಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದವು ಕೇಳಿಸುತ್ತಿಲ್ಲ. ಅಧ್ಯಾಹಾರ ಮಾಡಿಕೊಳ್ಳುವುದಾದ 'ನ ಕರ್ತವ್ಯಾ' ಎಂಬ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬಹುದು. ಇದನ್ನೇ ಅಧ್ಯಾಹಾ ಮಾಡಿಕೊಳ್ಳಬೇಕೆಂಬುದಕ್ಕೆ ನಿಯಮವಿಲ್ಲ"ವೆಂಬ ಪ್ರಶ್ನೆಗೆ ಆಚಾರ್ಯರು 'ಯತ್ರಾऽನವಸರೋ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

"ಯಾವ ವಾಕ್ಯದಲ್ಲಿ ಅಥವಾ ಮಹಾವಾಕ್ಯದಲ್ಲಿ ಯಾವ ಪದವಿಲ್ಲದೆ ಅಥವಾ ವಾಕ್ಯವಿಲ್ಲದೆ ಬೇರೆ ಅರ್ಥವು ತಿಳಿಯಲು ಸಾಧ್ಯವಿಲ್ಲವೋ, ಅಂತಹ ವಾಕ್ಯ ಮತ್ತು ಮಹಾವಾಕ್ಯಗಳಲ್ಲಿ ಅನಿವಾರ್ಯವಾದ ಅದೇ ಪದವನ್ನು ಮತ್ತು ಅದೇ ವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಬೇರೆ ಪದ ಮತ್ತು ಬೇರೆ ವಾಕ್ಯಗಳನ್ನು ಅಧ್ಯಾಹಾರ ಮಾಡಿಕೊಳ್ಳಬಾರದು' ಈ ನಿಯಮವು ಸಜ್ಜನಸಮ್ಮತವಾಗಿದೆ. ಆದರೆ "ಯಾವ ಪದವನ್ನು ಅಥವಾ ವಾಕ್ಯವನ್ನು ಇಟ್ಟುಕೊಳ್ಳಬೇಕೆಂಬ ನಿಯಮವಿರುವುದಿಲ್ಲವೋ, ಬೇರೆ ಪದವನ್ನು ಅಥವಾ ಬೇರೆ ವಾಕ್ಯವನ್ನು ಇಟ್ಟುಕೊಂಡರೂ ಆ ವಾಕ್ಯ ಮತ್ತು ಮಹಾವಾಕ್ಯಗಳು ಪರಿಪೂರ್ಣವಾಗುತ್ತವೋ, ಅಂತಹ ವಾಕ್ಯದಲ್ಲಿ ಮತ್ತು ಮಹಾವಾಕ್ಯದಲ್ಲಿ ಅದೇ ಪದವನ್ನು ಅಥವಾ ಅದೇ ವಾಕ್ಯವನ್ನು ಅನಿವಾರ್ಯವಾಗಿ ಇಟ್ಟುಕೊಳ್ಳಬೇಕಾಗಿಲ್ಲ" ಎಂಬ ನ್ಯಾಯದಂತೆ ಸೂತ್ರದಲ್ಲಿ ಕರ್ತವ್ಯಾ ಎಂಬ ಪದವನ್ನೇ ಅಧ್ಯಾಹಾರ ಮಾಡಬೇಕು. 'ನ ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರ ಮಾಡಬಾರದು. ನ ಕರ್ತವ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿದರೆ ಸೂತ್ರದಲ್ಲಿ ಅಧಿಕಾರಾದಿಗಳನ್ನು ಹೇಳಿದ್ದಕ್ಕೆ ಯಾವ ಪ್ರಯೋಜನವೂ ದೊರೆಯುವುದಿಲ್ಲವೆಂದು ಅಭಿಪ್ರಾಯ.

## ವ್ಯೋಮಸಂಹಿತೆಯಲ್ಲಿ ಅಧಿಕಾರವಿಚಾರ

**भा.दी. – व्योमसंहितायां चेति' इति** ।। भाष्ये 'व्योमसंहितायां चाधिकार उक्तः' इत्यन्वयः । अयमपि सौत्राथशब्दार्थ एव । ब्रह्मजिज्ञासा नाम सर्ववेदान्तनये 'दर्शयति च' इति सूत्रभाष्यादिदिशा यथाधिकारं ब्रह्मज्ञानायामखिलवेदवेदानुसारिग्रन्थार्थविषयकश्रवणमननिदिध्यासनादि । तत्र अथपदेनोक्तानां मुक्तियोग्यानां मध्ये त्रैवर्णिकानां प्रागुक्तगुणयुक्तानां सर्वत्राधिकारः । तदन्येषां तु भक्तानां वेदानुसारिग्रन्थार्थजिज्ञासायामेव । तत्रापि केषाञ्चिन्नाममात्रादौ इत्यादिरूपोऽधिकारविशेषो व्योमसंहितायामुक्त इत्यर्थः ।

ಪರಿಪೂರ್ಣಚಂದ್ರಿಕಾ

ಅನುವಾದ -- 'ವ್ಯೋಮಸಂಹಿತಾಯಾಂ ಚ' ಎಂದಿಷ್ಟೇ ಭಾಷ್ಯದಲ್ಲಿ ಹೇಳಿದ್ದಾರೆ. 'ಅಧಿಕಾರಃ ಉಕ್ತಃ' ಎಂಬುದನ್ನು ಶೇಷಪೂರಣ ಮಾಡಬೇಕು. ವ್ಯೋಮಸಂಹಿತೆಯಲ್ಲಿ ಹೇಳಲ್ಪಟ್ಟ ಅಧಿಕಾರವೂ ಸಹ ಸೂತ್ರದ ಅಥಶಬ್ದದ ಅರ್ಥವೇ ಆಗಿದೆ. ಬ್ರಹ್ಮಜಿಜ್ಞಾಸಾಶಬ್ದಕ್ಕೆ ಸರ್ವವೇದಾಂತಪ್ರತ್ಯಯಾಧಿಕರಣದಲ್ಲಿ ಮತ್ತು 'ದರ್ಶಯತಿ ಚ' ಎಂಬ ಅಧಿಕರಣದ ಭಾಷ್ಯದಲ್ಲಿ ಹೀಗೆ ಅರ್ಥವನ್ನು ಹೇಳಿದ್ದಾರೆ. -- 'ಯೋಗ್ಯತೆಗೆ ತಕ್ಕಂತೆ ಬ್ರಹ್ಮಜ್ಞಾನಕ್ಕೋಸ್ಕರ ಸಕಲ ವೇದ ಮತ್ತು ವೇದಾನುಸಾರಿಯಾದ ಗ್ರಂಥಗಳ ಶ್ರವಣ ಮನನ, ನಿದಿಧ್ಯಾಸನಗಳು' ಎಂದು. ಆದರೆ ಇಲ್ಲಿ ಅಥಪದದಿಂದ ಹೇಳಿರುವಂತಹ ಮುಕ್ತಿಯೋಗ್ಯರ ಮಧ್ಯದಲ್ಲಿ ಹಿಂದೆ ಹೇಳಿದ ಪ್ರಕಾರ ತ್ರೈವರ್ಣಿಕರಿಗೆ ವೇದ ಹಾಗೂ ವೇದಾನುಸಾರಿ ಗ್ರಂಥಗಳ ಶ್ರವಣಾದಿಗಳಲ್ಲಿ ಅಧಿಕಾರವಿದೆ. ತ್ರೈವರ್ಣಿಕರನ್ನು ಬಿಟ್ಟು ಇತರ ಭಕ್ತರಿಗೆ ವೇದದಲ್ಲಿ ಅಧಿಕಾರವಿರುವುದಿಲ್ಲ. ಕೇವಲ ವೇದಾನುಸಾರಿಯಾದ ಗ್ರಂಥಗಳ ಜಿಜ್ಞಾಸೆಯಲ್ಲಷ್ಟೇ ಅಧಿಕಾರವಿರುತ್ತದೆ. ಅದರಲ್ಲಿಯೂ ಸಹ ಕೆಲವರಿಗೆ ಕೇವಲ ಭಗವಂತನ ನಾಮಸ್ಮರಣೆಯಲ್ಲಷ್ಟೇ ಅಧಿಕಾರವಿರುತ್ತದೆಯೆಂದು ವ್ಯೋಮಸಂಹಿತೆಯಲ್ಲಿ ಹೇಳಲ್ಪಟ್ಟಿದೆ.

### ಭಾಷ್ಯವು ಉತ್ಸೂತ್ರಿತವಲ್ಲ

**भा.दी. – 'अरुच्या प्रकारान्तरेण' इत्यादिटीका तु जिज्ञासाविशेषपरा । तेन एतद्भाष्यम् उत्सूत्रमिति न कस्यचिदुपालम्भावकाशः । वेदाधिकारेति ।। अन्यथा तद्द्रष्टृत्वं न स्यादिति भावः ।**

ಟೀಕೆಯಲ್ಲಿ ಹಿಂದೆ 'ಅರುಚ್ಯಾ ಪ್ರಕಾರಾಂತರೇಣ' ಎಂದು ಅಧಿಕಾರಿಗಳ ಸ್ವರೂಪದ ಬಗ್ಗೆ ಮತ್ತೊಂದು ಬಗೆಯಾಗಿ ವ್ಯಾಖ್ಯಾನಿಸಿದ್ದರು. ಆದರೆ ಇಲ್ಲಿ ಅಂತಹ ಅಧಿಕಾರಿಗಳನ್ನು ಸೇರಿಸಿದ್ದರಿಂದ ಹಿಂದಿನ ಟೀಕೆಯು ಕೇವಲ ಜಿಜ್ಞಾಸಾವಿಷಯಕವೆಂದು ತಿಳಿಯಬೇಕು. ಇದರಿಂದ "ಸೂತ್ರದಲ್ಲಿ ಹೇಳದ್ದನ್ನು ಭಾಷ್ಯಕಾರರು ವ್ಯಾಖ್ಯಾನಿಸಿದ್ದಾರೆಂಬ ಶಂಕೆಗೆ ಅವಕಾಶವಿಲ್ಲ". ಸ್ತ್ರೀಯರಿಗೆ ವೇದಾಧಿಕಾರ ಇಲ್ಲದಿದ್ದರೆ 'ಸಪತ್ನೀಂ ಮೇ ಪರಾಧಮ' ಎಂಬ ವೇದದ ದ್ರಷ್ಟೃತ್ವವು ಕೂಡದಿರಬೇಕಾದೀತು.

### ಮನುಷ್ಯದೇವತಾಸ್ತ್ರೀಯರಿಗೆ ವೇದಾಧಿಕಾರವಿದೆ

**भा.दी. – मुनिस्त्रियः इति ।। काण्वश्रुतौ 'एतद् वै तदक्षरं गार्गि' इत्यस्य वा 'अक्षरस्य प्रशासने गार्गि' इत्यक्षरविद्यायां गार्ग्याः सम्बोधनात् । तथा 'आत्मा वा अरे द्रष्टव्यः' इत्यादौ 'अरे' इति मैत्रेय्याः सम्बोधनात् । तथा 'भवति ते व्याख्यास्यामि' इति मैत्रेयीं सम्बोध्य, 'व्याचक्षाणस्य तु मे निदिध्यासस्व' इति निदिध्यासनविधानादिति भावः । नरादिकुलजाश्चेति ।। तदुक्तं तात्पर्यनिर्णये एकोनत्रिंशेऽध्याये --**

**देव्यो मुनिस्त्रियश्चैव नरादिकुलजा अपि ।**
**उत्तमा इति विज्ञेयाः सच्छूद्रैरप्यवैदिकम् ।**
**ज्ञेयमन्यैर्हरेर्नाम .... ।। - इत्यादि ।**

ಅನುವಾದ -- ಮುನಿಸ್ತ್ರಿಯಃ ಎಂಬ ಟೀಕೆಗೆ ಹೀಗೆ ಅರ್ಥ -- ಕಾಣ್ವಶ್ರುತಿಯಲ್ಲಿ 'ಏತದ್ ವೈ ತದಕ್ಷರಂ ಗಾರ್ಗಿ' ಎಂಬುದಾಗಿ ಅಕ್ಷರವಿದ್ಯೆಯಲ್ಲಿ ಗಾರ್ಗಿಯನ್ನು ಸಂಬೋಧಿಸಲಾಗಿದೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಯಲ್ಲಿ 'ಅರೇ' ಎಂದು ಮೈತ್ರೇಯಿಯನ್ನು ಸಂಬೋಧಿಸಲಾಗಿದೆ. ಅದರಂತೆ 'ಭವತಿ ತೇ ವ್ಯಾಖ್ಯಾಸ್ಯಾಮಿ' ಎಂದು ಮೈತ್ರೇಯಿಯನ್ನು ಸಂಬೋಧಿಸಿ 'ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವ' ಎಂದು ನಿದಿಧ್ಯಾಸನವನ್ನು ವಿಧಾನಮಾಡಲಾಗಿದೆ. ಆದ್ದರಿಂದ ಮುನಿಸ್ತ್ರೀಯರಿಗೆ ವೇದಾಧಿಕಾರವಿದೆಯೆಂದು ಹೇಳಬೇಕಾದೀತು. ಇಂತಹ ಉತ್ತಮಸ್ತ್ರೀಯರು ಮನುಷ್ಯರಾಗಿ ಹುಟ್ಟಿದಾಗಲೂ ವೇದಾಧಿಕಾರವಿರುತ್ತದೆಂದು 'ನರಾದಿಕುಲಜಾ' ಎಂಬ ಟೀಕೆಯಲ್ಲಿ ಹೇಳಿದ್ದಾರೆ. ಇದನ್ನೇ ತಾತ್ಪರ್ಯನಿರ್ಣಯದ ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ.

'ದೇವ್ಯೋ ಮುನಿಸ್ತ್ರಿಯಶ್ಚೈವ ನರಾದಿಕುಲಜಾ ಅಪಿ ।
ಉತ್ತಮಾ ಇತಿ ವಿಜ್ಞೇಯಾಃ ಸಚ್ಛೂದ್ರೈರಪ್ಯವೈದಿಕಮ್ ।
ಜ್ಞೇಯಮನ್ಯೈರ್ಹರೇರ್ನಾಮ ....'

ದೇವತಾಸ್ತ್ರೀಯರು ಮತ್ತು ಮುನಿಸ್ತ್ರೀಯರು ಮನುಷ್ಯರಾಗಿ ಹುಟ್ಟಿದರೂ ಉತ್ತಮರೇ ಆಗಿರುತ್ತಾರೆ. ಉಳಿದ ಸಜ್ಜನರಾದ ಶೂದ್ರಾದಿಗಳು ಶ್ರೀಹರಿಯ ನಾಮಸ್ಮರಣೆಯಲ್ಲಿ ಅಧಿಕಾರಿಗಳಾಗಿರುತ್ತಾರೆ.

## ಸಂಕ್ಷೇಪಭಾಷ್ಯದ ಮಹಿಮೆ

**भा.दी. – सङ्क्षेपेति** ।। **'अथशब्दोऽधिकारे' इत्यादिसङ्क्षेपः । 'अधिकारश्चोक्तो भागवततन्त्रे' इति विस्तरः ।**

**'सङ्क्षेपविस्तराभ्यां च प्रवदन्ति मनीषिणः ।**
**इत्यादेर्भाष्यत्वाच्च द्वाभ्यामुक्तिरर्थवति ।।' इति भावः ।**

'ಅಥಶಬ್ದಃ ಅಧಿಕಾರೇ' ಎಂಬುದು ಸಂಕ್ಷೇಪಭಾಷ್ಯ. 'ಅಧಿಕಾರಶ್ಚೋಕ್ತೋ ಭಾಗವತತಂತ್ರೇ' ಎಂಬುದು ವಿಸ್ತಾರವಾದ ಭಾಷ್ಯ. (ಶಬ್ದದಿಂದಷ್ಟೇ ಹೊರತು ಅರ್ಥದಿಂದಲ್ಲ). 'ಸಂಕ್ಷೇಪ ಹಾಗೂ ವಿಸ್ತಾರವಾಗಿ ಜ್ಞಾನಿಗಳು ವ್ಯಾಖ್ಯಾನ ಮಾಡುತ್ತಾರೆ' ಆದ್ದರಿಂದ ಶ್ರೀಮದಾಚಾರ್ಯರು ಅಥಶಬ್ದವನ್ನು ಸಂಕ್ಷೇಪ ಹಾಗೂ ವಿಸ್ತಾರವಾಗಿ ವ್ಯಾಖ್ಯಾನಿಸಿದ್ದು ಸಾರ್ಥಕವಾಗಿದೆ.

## ಅಧಿಕಾರಿಯ ಸಾಮಾನ್ಯಲಕ್ಷಣ

**भा.दी. – व्याख्यायेति** ।। **ब्रह्मज्ञानहेतुजिज्ञासामात्रे योग्यत्वमधिकारः । तद्विशेषे तु तद्विशेष इत्यर्थतया व्याख्याय इत्यर्थः । अनिर्वचनीयाविद्यानिवृत्ति-**

रूपमोक्षस्य ज्ञानादेव सिद्धेः किं प्रसादेनेत्यतो वा, गौतमाद्यभिमतैकविंशति-दुःखध्वंसादिरूपस्य मोक्षस्य पुरुषैरर्थ्यमानत्वरूपपुमर्थत्वाभावेन तदुद्देशेन जिज्ञासायाः कर्तव्यत्वायोगादित्यतो, कर्मसाध्यत्वसूचनाय वा मोक्षस्वरूपं वदन्नेव वाक्यं योजयति – **सुखमेवेति** ।। 'सर्वाभिमता' इत्युक्त्या सर्वाविवादो वाऽस्य परमपुरुषार्थत्वं वा सूचितम् । तदुक्तं तत्वनिर्णयादौ 'मोक्षो हि सर्वपुरुषार्थोत्तमः' इत्यादि । अन्यत्रापि 'न मोक्षसदृशं किञ्चिदधिकं वा सुखं क्वचित्' इत्यादि । परोक्तमोक्षस्वरूपे तु न सर्वाभिमतिरस्तीति तत्र मोक्षस्वरूपं किन्तु दुःखनिवृत्तिविशिष्टसुखावाप्तिरूपमेवेति भावः ।

ಅನುವಾದ -- "ವ್ಯಾಖ್ಯಾಯ" ಎಂಬ ಪದಕ್ಕೆ "ಬ್ರಹ್ಮಜ್ಞಾನಕ್ಕೆ ಕಾರಣವಾದ ಜಿಜ್ಞಾಸಾಸಾಮಾನ್ಯದಲ್ಲಿ ಯೋಗ್ಯನಾಗಿರುವಿಕೆಯು ಅಧಿಕಾರಿಯ ಸಾಮಾನ್ಯಲಕ್ಷಣ. ವಿಶೇಷಜಿಜ್ಞಾಸೆಯಲ್ಲಿ ಯೋಗ್ಯನಾಗಿರುವಿಕೆಯು ವಿಶೇಷಲಕ್ಷಣ" ಎಂದರ್ಥ. ಅನಿರ್ವಚನೀಯವಾದ ಅವಿದ್ಯಾನಿವೃತ್ತಿ ಎಂಬ ಮೋಕ್ಷವು ಜ್ಞಾನದಿಂದಲೇ ಲಭ್ಯವಾಗುವಾಗ ಪ್ರಸಾದವೇಕೆ? ಅಥವಾ, ಗೌತಮಾದಿತಾರ್ಕಿಕರಿಗೆ ಅಭಿಮತವಾದ ಏಕವಿಂಶತಿದುಃಖ-ಧ್ವಂಸರೂಪವಾದ ಮೋಕ್ಷವು ಪುರುಷಾರ್ಥವಲ್ಲದ ಕಾರಣ ಅಂತಹ ಮೋಕ್ಷದ ಉದ್ದೇಶಕ್ಕಾಗಿ ಜಿಜ್ಞಾಸೆಯನ್ನು ಏಕೆ ಮಾಡಬೇಕು? ಎಂಬೆರಡು ಪ್ರಶ್ನೆಗಳಿಗೆ ಉತ್ತರಿಸುವುದಕ್ಕಾಗಿ ಮತ್ತು ಮೋಕ್ಷವು ಕರ್ಮಸಾಧ್ಯವಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ, ಮೋಕ್ಷಸ್ವರೂಪವನ್ನು ಹೇಳಲು "ಸುಖಮೇವ" ಇತ್ಯಾದಿ ವಾಕ್ಯವು ಹೊರಟಿದೆ. 'ಸರ್ವಾಭಿಮತಮೋಕ್ಷಸ್ಯ' ಎಂದು ಹೇಳಿದ್ದರಿಂದ ಪ್ರತಿಯೊಬ್ಬರಿಗೂ ಸುಖವೇ ಆಗಬೇಕು ದುಃಖವಾಗಬಾರದೆಂಬ ಬಯಕೆ ಇರುತ್ತದೆ. ಈ ವಿಚಾರದಲ್ಲಿ ವಿವಾದವಿಲ್ಲವೆಂದು ಸೂಚಿಸಿದ್ದಾರೆ. ಅಥವಾ ಇಂತಹ ಮೋಕ್ಷವು ಸರ್ವಾಭಿಮತವಾದದ್ದರಿಂದ ಪರಮಪುರುಷಾರ್ಥ-ರೂಪವಾಗಿದೆ ಎಂದು ಸೂಚಿಸಿದ್ದಾರೆ. ಇದನ್ನೇ ತತ್ವನಿರ್ಣಯಾದಿಗಳಲ್ಲಿ 'ಮೋಕ್ಷೋ ಹಿ ಸರ್ವ-ಪುರುಷಾರ್ಥೋತ್ತಮಃ' (ಮೋಕ್ಷವು ಸಕಲಪುರುಷಾರ್ಥಗಳಿಗಿಂತ ಉತ್ತಮವಾಗಿದೆ). ಬೇರೆಡೆ ಮೋಕ್ಷದಲ್ಲಿ ಇರುವಂತಹ ಸುಖವಾಗಲಿ, ಅಥವಾ ಮೋಕ್ಷಕ್ಕಿಂತ ಅಧಿಕವಾದ ಸುಖವಾಗಲೀ ದೊರೆಯಲು ಸಾಧ್ಯವಿಲ್ಲ. ಪರರು ಹೇಳಿದ ಮೋಕ್ಷಸ್ವರೂಪದಲ್ಲಿ ಸರ್ವಾಭಿಮತವು ಇಲ್ಲದ ಕಾರಣ ಪರರು ನಿರೂಪಿಸಿದ ಮೋಕ್ಷಸ್ವರೂಪವು ಅಸಾಧುವಾಗಿದೆ. ದುಃಖನಿವೃತ್ತಿವಿಶಿಷ್ಟವಾದ ಸುಖಾವಾಪ್ತಿರೂಪವಾದದ್ದನ್ನೇ ಮೋಕ್ಷವೆನ್ನಬೇಕು.

भा.दी. – उपरि **'अत्यर्थे'ति** भाष्यानुवादात् पूर्वत्रापि तथा ज्ञेयमिति भावेनोक्तम् – **नारायणात्त्यर्थेति** ।। **अत्यर्थप्रसादस्य चेति** ।। एतेन भाष्ये 'अत्यर्थप्रसादश्च' इति चकारान्वयः । ज्ञानपदं चापरोक्षपरम् । 'अपरोक्षज्ञानस्य नेत्याविशेषश्च ज्ञेयः' इति दर्शितम् । जिज्ञासां = श्रवणमनननिदिध्यासनरूपाम् ।

'जिज्ञासोत्यज्ञानजात् तत्प्रसादादेव मुच्यते' इत्यनुभाष्योक्तेः । अत्राप्यग्रे सर्वस्योक्तस्य भाष्ये यथाक्रमं स्पष्टयिष्यमाणत्वाच्चेति भावः । भाष्यस्यातःशब्दार्थमाह – अत्यर्थेत्यादिना ।। उत्पादिकेत्यन्तेन हेतुगर्भविशेषणेन । पक्षधर्मताभिव्यक्त्यर्थं हेतुविभक्त्यनुक्तिः ।

ಅನುವಾದ -- 'ಅತ್ಯರ್ಥಪ್ರಸಾದಸ್ಯ ಚ' ಎಂದು ಟೀಕೆಯಲ್ಲಿ ಹೇಳಿದ್ದರಿಂದ ಭಾಷ್ಯದಲ್ಲಿ 'ಅತ್ಯರ್ಥಪ್ರಸಾದಶ್ಚ' ಎಂದು ಚಕಾರಕ್ಕೆ ಅನ್ವಯವು ತಿಳಿಯುತ್ತದೆ. ಮತ್ತು ಜ್ಞಾನಂ ಎಂಬ ಭಾಷ್ಯದಲ್ಲಿರುವ ಪದಕ್ಕೆ ಅಪರೋಕ್ಷಜ್ಞಾನಮ್ ಎಂದು ವ್ಯಾಖ್ಯಾನಿಸಿದ್ದಾರೆ. 'ಅಪರೋಕ್ಷಜ್ಞಾನಸ್ಯ ಚ' ಇತ್ಯಾದಿ ವಾಕ್ಯಶೇಷಕ್ಕೆ ಜಿಜ್ಞಾಸಾಎಂಬ ಪದಕ್ಕೆ 'ಶ್ರವಣಮನನನಿದಿಧ್ಯಾಸನರೂಪವಾದ ಜಿಜ್ಞಾಸೆಯನ್ನು' ಎಂದರ್ಥ. ಏಕೆಂದರೆ 'ಜಿಜ್ಞಾಸೋತ್ಥಜ್ಞಾನಜಾತ್ ತತ್ ಪ್ರಸಾದಾದೇವ ಮುಚ್ಯತೇ' ಎಂದು ಅನುಭಾಷ್ಯದಲ್ಲಿ ಹೇಳಿದ್ದರಿಂದ ಮತ್ತು ಇಲ್ಲಿಯೇ ಮುಂದೆ ಭಾಷ್ಯದಲ್ಲಿ ಇದನ್ನು ಸ್ಪಷ್ಟಪಡಿಸುತ್ತಾರೆ. ಭಾಷ್ಯದಲ್ಲಿರುವ ಅತಃ ಎಂಬ ಶಬ್ದದ ಅರ್ಥವನ್ನು 'ಅತ್ಯರ್ಥಪ್ರಸಾದ' ಎಂದು ಹೇಳಿದ್ದಾರೆ. 'ಉತ್ಪಾದಿಕಾ' ಎಂಬಲ್ಲಿಯ ತನಕ ಇರುವ ವಿಶೇಷಣಗಳು ಹೇತುಗರ್ಭವಿಶೇಷಣಗಳಾಗಿವೆ. ಪಕ್ಷಧರ್ಮತ್ವವನ್ನು ತೋರಿಸಲು ಹೇತುವಿಭಕ್ತಿಯನ್ನು ಸೂಚಿಸಿಲ್ಲ/ ಪ್ರಯೋಗಿಸಿಲ್ಲ.

## ಅತಃಶಬ್ದದ ವ್ಯಾಖ್ಯಾನ

भा.दी. – एतेन ''सौत्रातःशब्दस्य सर्वनामत्वात् प्रकृतस्य हेतुत्ववाचकेनातःशब्देन कथमेतावल्लभ्यम् । अथशब्दोक्ताधिकारिविशेषणत्वेन मोक्षस्येच्छाविषयतया प्रकृतत्वेऽपि तं प्रति नारायणप्रसादसाधनत्वादेरप्रकृतत्वेन, तस्य 'अतः' इत्यत्र प्रातिपदिकेन परामर्शासम्भवेन, तस्य जिज्ञासाकर्तव्यतायां हेतुत्वस्य तसिल्प्रत्ययरूपविभक्त्योक्त्ययोगात्'' इति चोद्यं निरस्तम् । सूत्रे अथशब्दानन्तरमतःशब्दात् पूर्वं नारायणेत्यादिवाक्यस्य भाष्यकृताऽध्याहृतत्वेन मोक्षहेतुप्रसादजनकज्ञानोत्पादकत्वस्य प्रकृतत्वसम्भवेनात इत्यत्राकाररूपप्रातिपदिकेनोक्तरूपोत्पादकत्वं परामृश्य 'पञ्चम्यास्तसिल्' इत्युक्ततसिल्प्रत्ययेन तस्य हेतुत्वं जिज्ञासां प्रति वक्तुं शक्यते । तादृशज्ञानोत्पादकत्वात् जिज्ञासा कर्तव्येति । न चैवमध्याहारो निष्प्रमाणकः । 'यत्रानवसरोऽन्यत्र' इति वक्ष्यमाणमूलकत्वादस्याध्याहारस्य । अत एव 'तत्र वाक्यं च' इत्युक्तम् । अत एव च मोक्षप्रसादज्ञानजिज्ञासानामुत्तरोत्तरेण विना पूर्वपूर्वस्याघटनोक्ता भाष्ये । 'तमेवम्' इत्यादि वक्ष्यमाणप्रमाणसिद्धत्वाच्चेति ।

ಪರಿಪೂರ್ಣಚಂದ್ರಿಕಾ

ಅತಃ ಎಂಬ ಸೂತ್ರದಲ್ಲಿರುವ ಪದಕ್ಕೆ ಟೀಕೆಯಲ್ಲಿ ಹಾಗೂ ಭಾಷ್ಯದಲ್ಲಿ ಬಹಳ ದೀರ್ಘವಾದ ಅರ್ಥವನ್ನು ಹೇಳಿದ್ದಾರೆ. ಆದರೆ ಸೂತ್ರದಲ್ಲಿ ಉಲ್ಲೇಖಿಸಿದ ಅತಃ ಎಂಬ ಪದವು ಸರ್ವನಾಮಶಬ್ದವಾದ್ದರಿಂದ ಕೇವಲ ಹೇತುವಾಚಿಯಾಗಿದೆ ಎನ್ನಬಹುದೇ ಹೊರತು ಇಷ್ಟೆಲ್ಲಾ ಅರ್ಥಗಳನ್ನು ಹೇಳುವುದು ಕಠಿಣವೇ ಆಗಿದೆ. ಇನ್ನು 'ಅಥ'ಶಬ್ದದಿಂದ ಹೇಳಿದ ಅಧಿಕಾರಿಗೆ ವಿಶೇಷಣವಾದ ಮೋಕ್ಷವು ಇಚ್ಛಾವಿಷಯವಾಗಿ ಪ್ರಸಕ್ತವಾಗಿದ್ದರೂ ಆ ಮೋಕ್ಷಕ್ಕೆ ಕಾರಣವಾದ ನಾರಾಯಣನ ಪ್ರಸಾದಾದಿಗಳು ಅಪ್ರಸ್ತುತವಾಗಿವೆ. ಅದನ್ನು ಅತಃ ಎಂಬ ಪ್ರಾತಿಪದಿಕದಿಂದ ಪರಾಮರ್ಶಿಸಲು ಸಾಧ್ಯವಿಲ್ಲ. ನಾರಾಯಣನ ಪ್ರಸಾದಾದಿಗಳಿಗೆ ಜಿಜ್ಞಾಸಾಕರ್ತವ್ಯತ್ವವನ್ನು ಹೇಳಿದರೆ ತಸಿಲ್‌ಪ್ರತ್ಯಯದ ಅರ್ಥವು ಕೂಡುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಈಗ ಅವಕಾಶವಿಲ್ಲ. ಸೂತ್ರದಲ್ಲಿ ಅಥಶಬ್ದದ ಅನಂತರ ಅತಃ ಎಂಬ ಶಬ್ದದ ಮೊದಲು "ನಾರಾಯಣಪ್ರಸಾದಂ" ಇತ್ಯಾದಿ ವಾಕ್ಯವನ್ನು ಭಾಷ್ಯಕಾರರು ಅಧ್ಯಾಹಾರ ಮಾಡಿದ್ದಾರೆ. ಆದ್ದರಿಂದ ಮೋಕ್ಷಹೇತುಪ್ರಸಾದಜನಕಜ್ಞಾನೋತ್ಪಾದಕತ್ವವು ಪ್ರಕೃತವೇ ಆಗಿದೆ. ಮತ್ತು ಅತಃ ಎಂಬಲ್ಲಿರುವ ಅಕಾರವೆಂಬ ಪ್ರಾತಿಪದಿಕದಿಂದ ಹಿಂದೆ ಪ್ರಸಕ್ತವಾದ ಜ್ಞಾನೋತ್ಪಾದಕತ್ವವನ್ನು ಪರಾಮರ್ಶೆಮಾಡಿ, 'ಪಂಚಮ್ಯಾಸ್ತಸಿಲ್' ಎಂಬಂತೆ ತಸಿಲ್‌ಪ್ರತ್ಯಯವನ್ನು ಹೇಳಿದಾಗ ಜಿಜ್ಞಾಸೆಯನ್ನು ಕುರಿತು ಕಾರಣವೆಂದು ಸಹ ಹೇಳಿದಂತಾಗುತ್ತದೆ. ಅಂದರೆ "ಅಂತಹ ಜ್ಞಾನಕ್ಕೆ ಉತ್ಪಾದಕವಾದ್ದರಿಂದ ಜಿಜ್ಞಾಸೆಯು ಕರ್ತವ್ಯವಾಗಿದೆ" ಎಂದು ತಿಳಿಯಬೇಕು.

ಶ್ರೀಮದಾಚಾರ್ಯರು ಮಾಡಿಕೊಂಡ ಅಧ್ಯಾಹಾರಕ್ಕೆ ಪ್ರಮಾಣವಿಲ್ಲವೆಂದು ಶಂಕಿಸಬಾರದು. 'ಯತ್ರಾನವಸರೋಽನ್ಯತ್ರ' ಎಂದು ಮುಂದೆ ಉಲ್ಲೇಖಿಸುವ ಶ್ಲೋಕವೇ ಪ್ರಮಾಣವಾಗಿದೆ. ಕೇವಲ ಕರ್ತವ್ಯಪದದ ಅಧ್ಯಾಹಾರಕ್ಕಷ್ಟೇ ಆ ಶ್ಲೋಕವು ಆಧಾರವಲ್ಲ. 'ನಾರಾಯಣಪ್ರಸಾದಂ' ಎಂಬ ವಾಕ್ಯದ ಅಧ್ಯಾಹಾರಕ್ಕೂ ಆಧಾರವಾಗಿದೆ. ಆದ್ದರಿಂದಲೇ ಅಲ್ಲಿ 'ವಾಕ್ಯಂ ಚ' ಎಂದು ಹೇಳಿದ್ದಾರೆ. ಆದ್ದರಿಂದಲೇ ಮೋಕ್ಷ, ಪ್ರಸಾದ, ಜ್ಞಾನ, ಜಿಜ್ಞಾಸಾ ಇವುಗಳಲ್ಲಿ ಹಿಂದಿನವುಗಳನ್ನು ಕುರಿತು ಮುಂದಿನವುಗಳು ಕಾರಣಗಳಾಗುತ್ತವೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಈ ವಿಚಾರದಲ್ಲಿ 'ತಮೇವಮ್' ಎಂಬ ಮುಂದಿನ ಭಾಷ್ಯದಲ್ಲಿ ಉದಾಹರಿಸುವ ಪ್ರಮಾಣಗಳು ಆಧಾರವಾಗಿದೆ.

## ನ್ಯಾಯವಿವರಣಾನುಸಾರಿ ಪೂರ್ವಪಕ್ಷದ ನಿರಾಕರಣೆ

**भा.दी. – नन्वेतदयुक्तम् । मुक्त्यर्थिरूपाधिकारिसामान्ये सिद्धे सति तस्य मुक्तियोग्यत्वाध्ययनशमदमादिरूपविशेषणमर्पयितुम् 'अथ'पदम् । सिद्धे च मोक्षफले प्रसादादिद्वारा तद्धेतुत्वार्पकम् 'अतः'पदम् । न चैतदस्ति । अहमर्थान्यविषयाभावात् तस्मिंश्चाहमिति ज्ञायमानेऽपि मोक्षानुपलम्भात् प्रयोजनं नास्ति । तदभावान्नाधिकारीत्युक्तत्वात् इत्यतः सर्वमेतद्विषयाभावमूलम् । विषयसत्वे तु तज्ज्ञानात् मोक्षः, तदिच्छुरधिकारी च सिद्ध्यतीति भावेन 'जीवान्यविषयप्रदर्शनपरसौत्र-**

इत्यत आह – इच्छाया इति ।। 'प्रयत्नसाध्यस्यैव विधेयत्वेन पुरुषप्रयत्नागोचरेच्छाया कर्तव्यत्वविधानायोगात्' इति भावः ।

ननु कर्तव्यत्वविधायकं कर्तव्यपदं सूत्रे न श्रूयते न चाध्याहारः कृतः, इति वाच्यम् । 'भवति' इत्यध्याहारेणापि वाक्यपर्यवसानेन कर्तव्यपदाध्याहारनिर्बन्धाभावात् । अतोत्र इच्छाग्रहणं सम्भवति, इत्यत आह – भवतीत्यादीति ।। आदिपदेन प्रशस्तेत्यादिसङ्ग्रहः । प्रवृत्त्युपयुक्तवाक्यस्यैव सार्थकत्वेन 'घटोऽस्ति' इत्यादिवत् 'जिज्ञासा भवति' इत्युक्ते प्रवृत्त्ययोगात् तत्कथनमनर्थकम् इत्यर्थः ।

दूषणान्तरं चाह – सूत्रं चेति ।। 'तद्विजिज्ञासस्व' इति श्रुतौ जिज्ञासाविधानात् तदनुसारेण जिज्ञासाविधायककर्तव्यपदमेव अध्याहार्यम् । न भवतीत्यादीत्यर्थः । अतोऽत्र इच्छाग्रहणायोगात् श्रवणादेरेव जिज्ञासात्वमिति भावः । तत् कर्म हरितोषं यदिति ।। 'यद्धरितुष्टिकरं तदेव कर्म' इत्यर्थः । य इति ।। 'य इमं परमं गुह्यं मद्भक्तेष्वभिधास्यति' इत्यत्राभिधापदोक्तप्रवचनस्य 'नच तस्मान्मनुष्येषु कश्चिन्मे प्रियकृत्तमः' इत्युत्तरवाक्यस्य प्रियकृत्तमपदेन प्रसादहेतुत्वलाभात् इति भावः । आदिपदेन श्रवणादि ग्राह्यम् । 'सिद्धेः' इत्यस्य 'इत्याशङ्काम्' इत्यनेन अन्वयः ।

ननु प्रसादस्य कर्मादिसाध्यत्ववत्, मोक्षस्यापि कर्मसाध्यत्वम् 'अपाम सोमममृता अभूम' 'कर्मणैव हि संसिद्धिमास्थिता जनकादयः' इत्यादिसिद्धम् । तत्र मोक्षस्य कर्मसाध्यत्वमनाशङ्क्य प्रसादस्य तत्साध्यत्वं किमर्थम्? इत्याशङ्क्य परिहरति - यद्यपीति ।। अन्यनिषेधादिति ।। आद्ये 'नान्यः पन्था' इति, द्वितीये 'तेनैव' इत्यन्यनिषेधादित्यर्थः । अत एव प्राक् 'तेनैव' इत्येवकारान्वयो दर्शितः ।

ಶ್ರವಣಾದಿ ಎಂಬಲ್ಲಿ ಅತದ್ಗುಣಸಂವಿಜ್ಞಾನಬಹುವ್ರೀಹಿಸಮಾಸವನ್ನು ಮಾಡಬೇಕು. ಶ್ರವಣವು ಯಾವುದಕ್ಕೆ ಆದಿಯಾಗಿದೆಯೋ ಅಂತಹ ಮನನ ಎಂದರ್ಥ. ಆದ್ದರಿಂದ ಮನನರೂಪವಾದ ವಿಚಾರವನ್ನು ಮಾಡಬೇಕೆಂದು ಸುಧೆಯ ಅಭಿಪ್ರಾಯ. ಈ ಅರ್ಥ ಟೀಕೆಗೆ ವಿರುದ್ಧವಲ್ಲ. 'ವಿಚಾರ ಎಂಬರ್ಥದಲ್ಲಿಯೂ ಜಿಜ್ಞಾಸಾಶಬ್ದದ ಪ್ರಯೋಗವಿರುವುದರಿಂದ' ಎಂದು ಟೀಕೆಯಲ್ಲಿಯೇ ಮುಂದೆ ಹೇಳಿದ್ದಾರೆ.

ಅಥವಾ 'ಶ್ರವಣಾದಿರೂಪಾ' ಎಂಬುದಕ್ಕೆ ಮತ್ತೊಂದು ಅರ್ಥ. ಶ್ರವಣ ಮನನ ನಿದಿಧ್ಯಾಸನ ಇವು ಮೂರೂ ಜಿಜ್ಞಾಸೆಗಳೇ ಆಗಿವೆ. ಆದರೆ ಶ್ರವಣ ಮತ್ತು ನಿದಿಧ್ಯಾಸನಗಳು ಶಾಸ್ತ್ರದಲ್ಲಿ ವಿಹಿತವಾದ್ದರಿಂದ ಮುಮುಕ್ಷುವಿಗೆ ಹೇಗೆ ಆವಶ್ಯಕವೋ ಅದರಂತೆ ಮನನವೂ ಸಹ ಆವಶ್ಯಕವಾಗಿದೆಯೆಂದು ದೃಷ್ಟಾಂತ

ಟ್ೀಸ್ಕರ ಶ್ರವಣಾದಿರೂಪಾ ಎನ್ನಲಾಗಿದೆ. ಹೊರತು ಶ್ರವಣನಿದಿಧ್ಯಾಸನಗಳು ಶಾಸ್ತ್ರದ ಆರಂಭಣೀಯತ್ವಕ್ಕೆ ಪ್ರಯೋಜಕಗಳೆಂಬ ಅಭಿಪ್ರಾಯದಿಂದಲ್ಲ.

ಅಥವಾ ಮತ್ತೊಂದು ಬಗೆಯಲ್ಲಿ ಸಮಾಧಾನ ಹೇಳಬಹುದು. ಶ್ರವಣಾದಿರೂಪಾ ಎಂದರೆ ಶ್ರವಣಮನನನಿದಿಧ್ಯಾಸನ ಮೂರನ್ನೂ ಇಟ್ಟುಕೊಳ್ಳಬೇಕು. ಅವುಗಳಲ್ಲಿ ನಿದಿಧ್ಯಾಸನವು ಅಕರ್ತವ್ಯವಾದರೆ ನಿಧ್ಯಾಸನದ ಅಂಗವಾದ ಮನನವೂ ಅಕರ್ತವ್ಯವಾಗುತ್ತದೆ. ಮನನವು ಅಕರ್ತವ್ಯವಾದರೆ ಶಾಸ್ತ್ರವು ಅನಾರಂಭಣೀಯವಾಗುತ್ತದೆ. ಹೀಗೆ ನಿದಿಧ್ಯಾಸನವು ಪರಂಪರೆಯಿಂದ ಶಾಸ್ತ್ರಾರಂಭಕ್ಕೆ ಪ್ರಯೋಜಕ-ವಾಗಿದೆ. ಅದರಂತೆ ಶ್ರವಣವೂ ಶಾಸ್ತ್ರಾರಂಭಕ್ಕೆ ಪ್ರಯೋಜಕವಾಗುತ್ತದೆ. ಈ ವಾಕ್ಯದಲ್ಲಿ ಈ ಅರ್ಥವೇ ಸರಿಯೇ? ಅಥವಾ ಬೇರೆ ಅರ್ಥವಿದೆಯೋ? ಎಂಬ ಸಂಶಯದ ಪರಿಹಾರಕ್ಕೋಸ್ಕರ ಶಾಸ್ತ್ರವು ಯುಕ್ತಿ-ಗಳನ್ನು ಹೇಳುತ್ತದೆ. ಮೊದಲು 'ಈ ವಾಕ್ಯಕ್ಕೆ ಇದು ಅರ್ಥ' ಎಂಬ ಧರ್ಮಿಜ್ಞಾನವು ಶ್ರವಣದಿಂದ ಬರಬೇಕು. ಪ್ರಯತ್ನಪಟ್ಟರೆ ಮಾತ್ರ ವಾಕ್ಯಾರ್ಥಜ್ಞಾನ ಬರಲು ಸಾಧ್ಯ. ಶ್ರವಣವೂ ಸಹ ಶಾಸ್ತ್ರಾರಂಭಕ್ಕೆ ಪ್ರಯೋಜಕವಾಗುತ್ತದೆ.

ಇನ್ನು ಒಂದೇ ಜಿಜ್ಞಾಸಾಶಬ್ದಕ್ಕೆ ಶ್ರವಣಮನನಾದ್ಯನೇಕಾರ್ಥಗಳನ್ನು ಹೇಳುವುದು ತಪ್ಪಲ್ಲ. ಏಕೆಂದರೆ 'ದ್ವೇ ವಾವ ಬ್ರಹ್ಮಣೋ ರೂಪೇ' ಎಂಬಲ್ಲಿ ಒಂದೇ ರೂಪಶಬ್ದಕ್ಕೆ ಸ್ವರೂಪ, ಪ್ರತಿಮಾ ಇತ್ಯಾದ್ಯನೇಕಾರ್ಥಗಳನ್ನು ಹೇಳಿದ್ದಾರೆ. ಅದರಂತೆ ಇಲ್ಲಿಯೂ ತಿಳಿಯಬೇಕು. (ಉಳಿದ ಭಾಗವನ್ನು ಭಾವದೀಪದ ಅನುವಾದದಲ್ಲಿ ನೋಡಿ ತಿಳಿದುಕೊಳ್ಳಬೇಕು.)

## ಭಗವಂತನ ಉತ್ತಮಪ್ರಸಾದವೇ ಮೋಕ್ಷಸಾಧಕ

**ब्रह्मसूत्रभाष्यम् –**

**'कर्मणा त्वधमः प्रोक्तः प्रसादः श्रवणादिभिः ।**
**मध्यमो ज्ञानसम्पत्त्या प्रसादस्तूत्तमो मतः ।।**
**प्रसादात् त्वधमाद् विष्णोः स्वर्गलोकः प्रकीर्तितः ।**
**मध्यमाज्जनलोकादिरुत्तमस्त्वेव मुक्तिदः ।।**
**श्रवणं मननं चैव ध्यानं भक्तिस्तथैव च ।**
**साधनं ज्ञानसम्पत्तौ प्रधानं नान्यदिष्यते ।**
**न चैतानि विना कश्चिज्ज्ञानमाप कुतश्चन ।।' इति नारदीये ।**

ಅನುವಾದ - ಸತ್ಕರ್ಮಾಚರಣೆಯಿಂದ ದೊರೆಯುವ ಭಗವಂತನ ಪ್ರಸಾದವು ಅಧಮ, ಶ್ರವಣಾದಿಗಳಿಂದ ದೊರೆಯುವ ಭಗವಂತನ ಪ್ರಸಾದವು ಮಧ್ಯಮ, ಅಪರೋಕ್ಷಜ್ಞಾನದಿಂದ ದೊರೆಯುವ ಪ್ರಸಾದವು ಉತ್ತಮ, ಅಧಮಪ್ರಸಾದದಿಂದ ಸ್ವರ್ಗಲೋಕವು, ಮಧ್ಯಮ-

ಪ್ರಸಾದದಿಂದ ಜನೋಲೋಕ ತಪೋಲೋಕ ಸತ್ಯಲೋಕಗಳು, ಉತ್ತಮಪ್ರಸಾದದಿಂ ಮೋಕ್ಷವು ದೊರೆಯುತ್ತವೆ.

ಸಚ್ಛಾಸ್ತ್ರಶ್ರವಣವು, ಮನನವು, ಧ್ಯಾನವು ಮತ್ತು ಭಕ್ತಿ ಇವುಗಳು ಪರಮಾತ್ಮ ಅಪರೋಕ್ಷಜ್ಞಾನವನ್ನು ಪಡೆಯಲು ಮುಖ್ಯವಾದ ಸಾಧನಗಳು. ಕರ್ಮವು ಮುಖ್ಯವಾ ಸಾಧನವಲ್ಲ. ಈ ಶ್ರವಣಾದಿಗಳನ್ನು ಹೊಂದದೆ ಯಾರೂ ಸಹ ಇಲ್ಲಿಯ ತನಕ ಪರಮಾತ್ಮ ಅಪರೋಕ್ಷಜ್ಞಾನವನ್ನು ಹೊಂದಿಲ್ಲ. ಹೀಗೆ ನಾರದೀಯಪುರಾಣದಲ್ಲಿ ಹೇಳಲ್ಪಟ್ಟದೆ.

ಪ್ರತಿಪದಾರ್ಥ -- 'ತತ್ ಕರ್ಮ ಹರಿತೋಷಮ್' ಇತ್ಯಾದಿ ಸ್ಮೃತಿಗಳಂತೆ ಕರ್ಮಾದಿಗಳಿಂದ ಭಗವತ್ಪ್ರಸಾದವು ದೊರೆಯುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಕರ್ಮಣಾ = ಕಾಮ್ಯ ಮತ್ತು ನಿಷ್ಕಾಮಕರ್ಮಗಳಿಂದ, ಪ್ರಸಾದಃ = ದೊರೆಯುವ ಭಗವಂತನ ಅನುಗ್ರಹವು, ಅಧಮಃ = ಅಧಮವಾದದ್ದು, ಶ್ರವಣಾದಿಭಿಃ = ಶ್ರವಣಮನನಾದಿಗಳಿಂದ ದೊರೆಯುವ, ಪ್ರಸಾದಃ = ಭಗವಂತ ಪ್ರಸಾದವು, ಮಧ್ಯಮಃ = ಮಧ್ಯಮವಾದದ್ದು, ಜ್ಞಾನಸಂಪತ್ತ್ಯಾ = ಅಪರೋಕ್ಷಜ್ಞಾನದ ಪಕ್ವತೆಯಿಂ ಹುಟ್ಟಿದ, ಪ್ರಸಾದಃ = ಭಗವಂತನ ಪ್ರಸಾದವು, ಉತ್ತಮಃ = ಉತ್ಕೃಷ್ಟವಾದದ್ದು[1].

ಈ ಮೂರುವಿಧ ಪ್ರಸಾದಗಳಿಂದ ಯಾವ ಯಾವ ಫಲಗಳು ದೊರೆಯುತ್ತವೆ? ಎಂದರೆ, ಅಧಮಾತ್ = ಅಧಮವಾದ, ಪ್ರಸಾದಾತ್ = ಕಾಮ್ಯಕರ್ಮದಿಂದ ದೊರೆತ ಪ್ರಸಾದದಿಂದ, ಸ್ವರ್ಗಲೋಕಃ = ಸ್ವರ್ಗಲೋಕವು, ಪ್ರಕೀರ್ತಿತಃ = ಹೇಳಲ್ಪಟ್ಟಿದೆ. ಮಧ್ಯಮಾತ್ = ಶ್ರವಣಜನ್ಯವಾದ ಮಧ್ಯಮಪ್ರಸಾದದಿಂ ಜನಲೋಕಾದಿ = ಜನೋಲೋಕವೇ ಮೊದಲಾದವುಗಳು, ಪ್ರಕೀರ್ತಿತಾಃ = ಹೇಳಲ್ಪಟ್ಟಿದೆ. ಉತ್ತಮ

(१) भाष्यदीपिका – ननु 'तत्कर्म हरितोषं' 'य इमं परमं गुह्यं' इत्यादेः कर्मादिनाऽपि भगवत्प्रसादसिद्धेः किं ज्ञानेन? प्रसादस्य मोक्षसाधनतावबोधके 'तमेवं विद्वान्' 'यमेवैष वृणुते' इत्यादाविव 'प्रियो हि' इति वाक्येऽन्यनिषेधाभावादित्याशङ्कां स्मृत्या परिहरति - 'कर्मणा' इति ।। काम्याकाम्योभयकर्मणेति यावत् । तथा च 'कर्मणा' जन्यो यः 'प्रसादः' स 'अधमः' एव 'प्रोक्तः' प्रामाणिकैः । एवं 'श्रवणादिभिः' यः प्रसादो भवति । स 'मध्यमः' । 'ज्ञानसम्पत्त्या' अपरोक्षज्ञानपरिपाकेन जन्यो यः 'प्रसादः' स एव 'उत्तमो मतः' उत्कृष्टतया प्रमित इत्यर्थः । अवधारणार्थकतुशब्दस्य द्विर्ग्रहणं त्रिष्वप्यन्वयसूचनार्थम् ।। किमतो यद्येवमित्यत आह – 'प्रसादादिति ।। तुर्विशेषे । तथाच 'अधमाद् विष्णोः प्रसादात्' काम्यकर्मसाध्यात् 'स्वर्गलोकः' भाव्यतया वृद्धैः 'प्रकीर्तितः' इत्यर्थः । काम्यफलमात्रोपलक्षकमेतत् 'परीक्ष्य लोकान्' इति श्रुतेः काम्यकर्मणां वैराग्यजननद्वारा मोक्षेऽप्युपयोगोऽस्तीति ज्ञातव्यम् । एवमकाम्यकर्मसाध्याद् अधमप्रसादाद् अन्तःकरणशुद्ध्यादिद्वारा मोक्षो भवतीत्यपि ज्ञातव्यम् ।।

ಎವ : ಉತ್ತಮವಾದ ಅಪರೋಕ್ಷಜ್ಞಾನಜನ್ಯಪ್ರಸಾದವೇ, ಮುಕ್ತಿದಃ = ಮೋಕ್ಷದಾಯಕವಾದದ್ದು[1].

ಪ್ರತಿಪದಾರ್ಥ - ಕರ್ಮಾದಿಗಳಿಂದಲೂ ಅಪರೋಕ್ಷಜ್ಞಾನವು ದೊರೆಯುವಾಗ ಬ್ರಹ್ಮಜಿಜ್ಞಾಸೆಯು ಏಕೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಶ್ರವಣಂ = ಸಚ್ಛಾಸ್ತ್ರಶ್ರವಣವು, ಮನನಂ ಚೈವ = ಮನನವೂ ಸಹ, ಜ್ಞಾನಂ = ಶಾಸ್ತ್ರಜನ್ಯಜ್ಞಾನವು, ತಥೈವ ಚ = ಅದರಂತೆ, ಭಕ್ತಿಃ = ಹಂಭಕ್ತಿಯು, ಜ್ಞಾನಸಂಪತ್ತೌ = ಮೋಕ್ಷಕಾರಣವಾದ ಅಪರೋಕ್ಷಜ್ಞಾನದ ಸಂಪತ್ತಿನಲ್ಲಿ, ಪ್ರಧಾನ = ಮುಖ್ಯವಾದ, ಸಾಧನಂ = ಕಾರಣವು. ಅನ್ಯತ್ : ಬೇರೆ ಯಾವುದೂ, ನ ಇಷ್ಯತೇ = ಮೋಕ್ಷಕಾರಣವಾಗುವುದಿಲ್ಲ. ಏತಾನಿ = ಈ

---

(१) भाष्यदीपिका – न चाधमप्रसादशून्यानामतिद्वेषिणां दुर्योधनादीनां कथं स्वर्गप्राप्तिः? इति वाच्यम्, भागवताचार्यरहितानां तदभावोक्तावपि तद्वतां तत्सम्भवात् ।।

यथोक्तं गीतातात्पर्ये -

'......आचार्याणां तु तेजसा ।
यान्ति स्वर्गं ततः क्षिप्रं तमोऽन्यं प्राप्नुवन्ति च ।।
तदन्ये नैव च स्वर्गम् ।।'

इति । स्वर्गलोक इत्युक्त्या तत्रैव –

'मोक्षः साङ्कल्पिकः स्वर्गः भूतादित्वं फलं क्रमात्' इति वचनोक्तो यो नित्यसंसारिभी राजसराजसै राजसतामसैश्च प्राप्यस्वर्गप्रतिनिधित्वेन कल्पितो दैत्येन्द्रलोकः साङ्कल्पिकः स्वर्गः स इह न विवक्षितः, किन्तु सप्तलोकान्तर्गतो राजससात्त्विकैः प्राप्यः स्वर्गलोक एवेति सूचितम् ।।

'जनलोकादिः' इत्यत्र तु जनत्यागेन जनाख्यलोकस्यैव प्रतिपत्त्यर्थं लोकशब्दप्रयोग इति ज्ञेयम् । जनलोकादिरित्यत्र तत्पुरुषो बहुव्रीहिश्च विवक्षितः । तुशब्दो विशेषार्थः । तथा च 'मध्यमात्' विष्णोः प्रसादाद् जनलोकस्याऽऽदिर्महर्लोकः जनतपोलोकादिरेव वा भवति, न मुक्तिः । 'मुक्तिदस्तु' उत्तमप्रसाद एव प्रकीर्तितो वृद्धैः, न त्वन्याविति योजना । तथा च कर्मादिना भगवत्प्रसादसिद्धावपि तस्यानुत्तमत्वाद् ज्ञानसाध्यस्यैवोत्तमत्वाद् अनुत्तमेन स्वर्गादिमात्रसिद्धावपि मोक्षासिद्धेः तत्साधनप्रसादाय ज्ञानमपेक्षितमिति भावः । नचात्र 'ईयुस्त्रीन् कर्मणा लोकान् ज्ञानेनैव तदुत्तरान्' इति वाक्यविरोधः शङ्क्यः, तस्य महर्लोकस्याकृतकभागविषयत्वात्, अस्य च पुनरावर्त्यभागविषयत्वात्, 'सामान्यदर्शनाल्लोकाः' इति प्रमाणबलेन ज्ञानशब्दस्य स्वबिम्बविषययोग्यापरोक्षव्यतिरिक्तसामान्यावताराद्यपरोक्षविषयत्वात्, तस्य च श्रवणादिभिरित्यत्र ज्ञादिपदेन ग्रहणाद्वा; न्यायामृतोक्तरीत्या ज्ञानद्वारेति शेषकरणाद्वा; एवकारस्यायोगव्यवच्छेदार्थत्वाद्वा न विरोधः ।।

ಶ್ರವಣಾದಿಸಾಧನಗಳನ್ನು, ವಿನಾ = ಬಿಟ್ಟು, ಕಶ್ಚಿದ್ = ಯಾರೂ ಸಹ, ಕುತಶ್ಚನ = ಬೇರೆ ಕರ್ಮಾದಿಗಳ ಜ್ಞಾನಂ = ಅಪರೋಕ್ಷಜ್ಞಾನವನ್ನು, ನ ಆಪ ಚ = ಹೊಂದಿರುವುದೇ ಇಲ್ಲ. ಇತಿ = ಹೀಗೆ, ನಾರದೀಯೇ = ನಾರದಪುರಾಣದಲ್ಲಿ ಹೇಳಲ್ಪಟ್ಟಿದೆ[1].

**सत्तर्कदीपावली – 'यज्ञादिकर्मणैव विष्णुप्रसादः' इत्येतामाशङ्कां नारदीय-वचनेन परिहरति – कर्मणेति ।।**

ತೀರ್ಥಸ್ನಾನಾದಿಗಳಿಂದಲೇ ಭಗವಂತನ ಜ್ಞಾನವು ಲಭಿಸುವಾಗ ಬ್ರಹ್ಮಜಿಜ್ಞಾಸೆಯು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಆತ್ಮಾ ವಾ ಅರೇ' ಎಂಬ ಶ್ರುತಿಯು ಭಗವಂತನ ಜ್ಞಾನಕ್ಕೋಸ್ಕರ ಶ್ರವಣಾದಿಗಳನ್ನು ವಿಧಾನಮಾಡಿದ್ದು ವ್ಯರ್ಥವಾಗಬೇಕಾದೀತು. ಯಜ್ಞಾದಿಕರ್ಮಗಳಿಂದಲೇ ವಿಷ್ಣುಪ್ರಸಾದವು ದೊರೆಯುತ್ತದೆಂಬ ಆಶಂಕೆಯನ್ನು ನಾರದೀಯ ಪುರಾಣವಾಕ್ಯದಿಂದ ಪರಿಹರಿಸುತ್ತಿದ್ದಾರೆ. 'ಕರ್ಮಣಾ' ಇತ್ಯಾದಿಯಾಗಿ.

---

(१) **भाष्यदीपिका** – नन्वस्तूत्तमप्रसादाय ज्ञानापेक्षा, तथाऽपि 'कर्मणा ज्ञानमातनोति' इत्यादेः कर्मादिनाऽपि ज्ञानं भवतीति न तदर्थं जिज्ञासा कर्तव्या 'आत्मा' इति वाक्यैः अन्यनिषेधाभावादित्याशङ्कां प्रकृतप्रमाणशेषेण परिहरति - **श्रवणमिति** ।। अत्र एवकारस्य द्विर्ग्रहणं सर्वत्र सम्बन्धज्ञापनाय । ते च श्रवणादीनां कार्यसाधनेऽन्यसाहित्यनिरासकाः 'नरं च नारायणमेव' इत्यादाविवानभिमतकर्मादिव्यावर्तकाश्च । द्वयोर्द्वयोः समुच्चये 'च' शब्दौ । 'तथा' शब्द उपमायाम् । 'तथैव च' इति निपातसमुदायो वा । भक्तिग्रहणं प्रसङ्गाद् दृष्टान्तार्थं वा । तथा च 'ज्ञानसम्पत्तौ' अपरोक्षज्ञानप्राप्तौ यथा भक्तिस्तथा श्रवणाद्येव साधनं, नान्यत् कर्मादीत्यर्थः । का गतिस्तर्हि 'कर्मणा ज्ञानमातनोति' इत्यादिवचनस्येत्यत आह - **प्रधानमिति** ।। श्रवणादि प्रधानं साधनं 'अन्यत्' अप्रधानमित्येव 'इष्यते' अभ्युपेयते प्रामाणिकैः, न त्वन्यत् साधनमेव नेति योजना । अप्रधानसाधनविषयं कर्मादिवचनमिति भावः । विपरीतं किं न स्यादित्यत आह - **नचेति** ।। चशब्दोऽप्यर्थः । तथा च 'एतानि' श्रवणादीनि 'विना कश्चित्' अपि अधिकारी 'कुतश्चन' कर्मादेः सतः 'ज्ञानं नाऽप' एवमेतानि श्रवणादीनि सन्ति चेत् कुतश्च कर्मादेर्विना ज्ञानं नाऽपेति नेति योजना । तथा च निरपेक्षान्वयव्यतिरेकाभ्यां श्रवणाद्येव ज्ञाने प्रधानं साक्षात् साधनं, कर्मादि तु तदभावात् पारम्पर्येण साधनमिति न वैपरीत्यमिति भावः । 'नारदीये' 'यत उक्तं' इति शेषः । अस्य 'अतो ''यतो नारायण'' इत्यादिनोक्तं युक्तं' इत्युपस्कृतवाक्येनान्वयः । 'यतो नारायण' इत्यनेन जिज्ञासायाः निर्विषयत्वशङ्कानिरासाय प्रयुक्तः सौत्रो ब्रह्मशब्दो नारायणपर इति व्याख्यातः ।।

ಪರಿಪೂರ್ಣಚಂದ್ರಿಕಾ

## ಪ್ರಸಾದಜ್ಞಾನಗಳಿಗೆ ಕರ್ಮವು ಅಮುಖ್ಯಕಾರಣ

तत्वप्रकाशिका – अत्र पुनः **'प्रियो हि' इतिवाक्येऽन्यनिषेधाभावात् भवेदेव शङ्का' इत्याशङ्कां प्रमाणेन परिहरति – कर्मणेति ।। सत्यं भवेदेव कर्मादिना भगवत्प्रसादस्तथापि तस्यानुत्तमत्वात् ज्ञानसाध्यस्यैवोत्तमत्वात् । अनुत्तमेन स्वर्गादिमात्रसिद्धेरुत्तमेनैव मोक्षसिद्धेस्तत्साधनं ज्ञानमपेक्षितमिति भावः ।**

**ननु ज्ञानं च 'कर्मणा ज्ञानमातनोति' इत्यादेः कर्मादिनाऽपि सम्भवतीति न जिज्ञासया कृत्यम् । 'आत्मा' इतिवाक्येऽन्यनिषेधाभावादित्याशङ्कां तच्छेषेण परिहरति – श्रवणमिति ।। का गतिस्तर्ह्येतद्वचनस्येत्यत आह – प्रधानमिति ।। अप्रधानसाधनं कर्मादीति भावः । विपरीतं किन्न स्यात्? इत्यत आह – न चेति ।। एतानि = श्रवणादीनि । कुतश्चन = कर्मादेः । 'ज्ञानस्य श्रवणाद्यन्वयव्यतिरेकित्वात् तदेव प्रधानसाधनम्, कर्मादेस्तदभावात् तत्पारम्पर्येण साधनम्' इति भावः ।**

ಅನುವಾದ -- 'ಪ್ರಿಯೋ ಹಿ' ಇತ್ಯಾದಿ ವಾಕ್ಯಗಳಲ್ಲಿ ಕರ್ಮಾದಿಗಳನ್ನು ನಿಷೇಧಮಾಡ-ದಿರುವುದರಿಂದ 'ಕರ್ಮಾದಿಗಳಿಂದಲೂ ಮೋಕ್ಷವು ದೊರೆಯಲಿ'ಎಂಬ ಶಂಕೆಯು ಬಂದೇ ಬರುತ್ತದೆ. ಈ ಶಂಕೆಯನ್ನು ಪರಿಹಾರಮಾಡುವುದಕ್ಕಾಗಿ 'ಕರ್ಮಣಾ' ಇತ್ಯಾದಿ ವಾಕ್ಯಗಳಿಂದ ಪ್ರಮಾಣಗಳನ್ನು ನೀಡುತ್ತಿದ್ದಾರೆ.

ಕರ್ಮಾದಿಗಳಿಂದ ಭಗವಂತನ ಪ್ರಸಾದವು ಲಭ್ಯವಾಗುತ್ತದೆಂಬುದು ನಿಜ. ಆದರೆ ಕರ್ಮಜನ್ಯವಾದ ಪ್ರಸಾದವು ಶ್ರೇಷ್ಠವಾಗಿರುವುದಿಲ್ಲ. ಜ್ಞಾನದಿಂದ ದೊರೆಯುವ ಪ್ರಸಾದವು ಶ್ರೇಷ್ಠವಾಗಿರುತ್ತದೆ. ಶ್ರೇಷ್ಠವಲ್ಲದ ಪ್ರಸಾದದಿಂದ ಸ್ವರ್ಗಾದಿಫಲಗಳಷ್ಟೇ ದೊರೆಯುತ್ತವೆ. ಶ್ರೇಷ್ಠಪ್ರಸಾದದಿಂದ ಮೋಕ್ಷವು ದೊರೆಯುತ್ತದೆ. ಆದ್ದರಿಂದ ಮೋಕ್ಷಕ್ಕೆ ಸಾಧನವಾದದ್ದು ಜ್ಞಾನವೇ ಆಯಿತು. ಆದ್ದರಿಂದಲೇ ಆ ಜ್ಞಾನವನ್ನು ಎಲ್ಲರೂ ಅಪೇಕ್ಷಿಸುತ್ತಾರೆಂದು ಅಭಿಪ್ರಾಯ.

'ಕರ್ಮಣಾ ಜ್ಞಾನಮಾತನೋತಿ' (ಕರ್ಮದಿಂದ ಜ್ಞಾನವು ದೊರೆಯುತ್ತದೆ) ಇತ್ಯಾದಿ ಪ್ರಮಾಣಗಳಂತೆ ಕರ್ಮದಿಂದ ಜ್ಞಾನವು ಹುಟ್ಟುತ್ತದೆ ಎಂದು ಹೇಳಿರುವುದರಿಂದ ಜ್ಞಾನವನ್ನು ಪಡೆಯಲು ಕರ್ಮವೇ ಸಾಕು; ಜಿಜ್ಞಾಸೆಯು ಬೇಕಾಗಿಲ್ಲ ಮತ್ತು 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇತ್ಯಾದಿ ವಾಕ್ಯಗಳು ಭಗವಂತನ ಜ್ಞಾನಕ್ಕೆ ಬೇರೆ ಸಾಧನಗಳನ್ನು ನಿಷೇಧಿಸುತ್ತಿಲ್ಲ. ಈ ಶಂಕೆಯನ್ನು 'ಶ್ರವಣಂ ಮನನಂ' ಎಂದು ಹಿಂದೆ ಹೇಳಿದ ಪ್ರಮಾಣಶೇಷದಿಂದ ಪರಿಹರಿಸುತ್ತಿದ್ದಾರೆ. ಹಾಗಾದರೆ 'ಕರ್ಮಣಾ ಜ್ಞಾನಮಾತನೋತಿ' ಎಂಬ ವಾಕ್ಯಕ್ಕೆ ಏನು ಗತಿ? ಎಂಬ ಪ್ರಶ್ನೆಗೆ 'ಪ್ರಧಾನಂ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಕರ್ಮಾದಿಗಳು ಅಪ್ರಧಾನಸಾಧನವಾಗಿವೆ ಎಂದು ಅರ್ಥ.

ಇದಕ್ಕೆ ವಿರುದ್ಧವಾಗಿ ಏಕೆ ಹೇಳಬಾರದು? ಎಂಬ ಪ್ರಶ್ನೆಗೆ 'ನ ಚೈತಾನಿ' ಎಂದು ಉತ್ತರಿಸಿದ್ದಾರೆ. ಏತಾನಿ = ಈ ಶ್ರವಣಾದಿಗಳು; ಕುತಶ್ಚನ = ಕರ್ಮಾದಿಗಳಿಂದ.

" 'ಶ್ರವಣಾದಿಗಳನ್ನು ಮಾಡಿದರೆ ಜ್ಞಾನವು ದೊರೆಯುತ್ತದೆ; ಶ್ರವಣಾದಿಗಳನ್ನು ಮಾಡದಿದ್ದರೆ ಜ್ಞಾನವು ದೊರೆಯುವುದಿಲ್ಲ' ಎಂಬ ಅನ್ವಯವ್ಯತಿರೇಕದಿಂದ ಜ್ಞಾನಕ್ಕೆ ಶ್ರವಣಾದಿಗಳು ಪ್ರಧಾನಸಾಧನವೆಂದು ತಿಳಿಯುತ್ತದೆ. ಕರ್ಮಾದಿಗಳಲ್ಲಿ ಈ ರೀತಿಯ ಅನ್ವಯವ್ಯತಿರೇಕಗಳಿಲ್ಲದ ಕಾರಣ ಅವುಗಳು ಕೇವಲ ಪರಂಪರೆಯಿಂದ ಕಾರಣವಾಗುತ್ತವೆ" ಎಂದು ಅಭಿಪ್ರಾಯ.

### ಭಾಗವತತಾತ್ಪರ್ಯದ ವಿರೋಧಪರಿಹಾರ

**भा.दी.** – ननु प्रसादस्य हेतुविभागपूर्वं विभागोक्त्या फलविभागकथनेन कथमुक्तशङ्कानिरासः? इत्यतो भावमाह – **सत्यमिति** ।। **ज्ञानसाध्यस्यैवेति** ।। अत एव भाष्ये प्राक् 'अत्यर्थप्रसादः' इत्यर्थपदप्रयोग उत्तमप्रसादोक्त्यै कृतः ।

'मध्यमाज्जनलोकादिः' इति भाष्यम् एके व्याचक्षते । जनलोकादिरिति बहुव्रीहितत्पुरुषौ । स्वबिम्बेतररूपसाक्षात्कारसहितान् मध्यमादिति वाच्यम् । 'न सामान्यादप्युपलब्धेर्मृत्युवन्नहि लोकापत्तिः' इत्यत्र भाष्ये सामान्यदर्शनात् लोकाः इति वक्ष्यमाणत्वात् । तथा च 'ईयुस्त्रीन् कर्मणा लोकान् ज्ञानेनैव तदुत्तरान्' इति द्वितीयस्कन्धतात्पर्यविरोध इति । अन्ये तु –

**प्रादुर्भावानृते विष्णुमिन्द्रियैर्नैव पश्यति ।**
**प्रादुर्भावानपि यदा ज्ञानदृष्ट्यैव पश्यति ।**
**तदैव मुच्यते जीवो न दृष्टैरिन्द्रियैः क्वचित् ।।**

इति काठकभाष्योक्तेरवतारविषयकज्ञानदर्शनसहितान् मध्यमादित्यर्थ इत्याहुः ।

अपरे तु – स्वबिम्बसाक्षात्कारवतामेव कार्यं ब्रह्म प्राप्तवतां मध्ये जनलोकादौ कियत्कालमवस्थानं न निर्हेतुकं भवितुमर्हतीति तत्कृतश्रवणादिजन्यमध्यमप्रसादात् जनलोकादीत्याहुः ।

इतरे तु – जनलोकादिरिति तत्पुरुष एव, तथाच यथान्यास एव साधुः श्रवणादेरपि ज्ञानत्वात् 'ज्ञानेनैव तदुत्तरान्' इति वाक्यं न विरुद्ध्यत इत्याहुः ।

'आध्यानाय' इत्यत्र टीकायां श्रवणादेर्जनलोकादिफलकत्वोक्तिरप्येवं नेयेति । स्मृतिशेषोक्तेरुपयोगमाह – नन्विति ।। 'कर्मणा ज्ञानमातनोति, ज्ञानेनामृतीभवति' इति, 'भाक्तं वा' इत्यत्र भाष्योक्तवचनादित्यर्थः । अन्यनिषेधेति ।। तद्वाक्यस्य प्रागुक्तिस्तु 'कर्मणा ज्ञानम्' इत्येतद्विरोधमाशङ्क्य 'श्रवणं मननम्' इत्यादि स्मृत्या प्रधानसाधनत्वं श्रुत्यभिप्राय इति विवरितुम् – तदभावादिति ।। 'साक्षात्' इति योज्यम् । तेन 'न पारम्पर्येण' इति वक्ष्यमाणविरोधः । पारम्पर्येणेति ।। 'चित्तशुद्धिद्वारा विविदिषन्ति यज्ञेन दानेन' इत्यादेर्वक्ष्यति च सर्वापेक्षा च यज्ञादिश्रुतेरश्ववदिति । 'उत्क्रमिष्यत एवम्भावादिति च' इति भावः । एतेन – ज्ञानप्रसादादेस्तद्धेतुत्वादेश्च प्रामाणिकत्वात् प्रमाणैः श्रुत्यादिभिः सर्वस्य बुद्धौ सन्निधापितस्य सूत्रे 'अतः' इति मोक्षहेतुप्रसादजनकज्ञानोत्पादकत्वात् इति परामर्शो युक्तः इत्यपि सूचितम् ।।

ಅನುವಾದ - ಆಚಾರ್ಯರು ಭಾಷ್ಯದಲ್ಲಿ ಹೇತುವಿಭಾಗಕ್ಕಿಂತ ಮೊದಲು ಪ್ರಸಾದದ ವಿಭಾಗವನ್ನು ಹೇಳಿದ್ದಾರೆ. ಮುಂದೆ ಪ್ರಸಾದದಿಂದ ದೊರೆಯುವ ಫಲವಿಭಾಗವನ್ನು ಹೇಳಿದ್ದಾರೆ. ಇದರಿಂದ ಹಿಂದಿನ ಶಂಕೆಯು ಹೇಗೆ ಪರಿಹಾರವಾಗುತ್ತದೆ? ಎಂಬ ಪ್ರಶ್ನೆಗೆ 'ಸತ್ಯಮ್' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ. ಅಂದರೆ ಕರ್ಮಾದಿಗಳಿಂದಲೂ ಭಗವತ್‌ಪ್ರಸಾದವು ದೊರೆಯುತ್ತದೆ. ಆದರೆ ಅದು ಉತ್ತಮವಾದದ್ದಲ್ಲ. ಜ್ಞಾನಸಾಧ್ಯವಾದದ್ದಷ್ಟೇ ಉತ್ತಮಪ್ರಸಾದವೆನಿಸುತ್ತದೆ. ಆದ್ದರಿಂದಲೇ ಭಾಷ್ಯದಲ್ಲಿ ಹಿಂದೆ 'ಅತ್ಯರ್ಥಪ್ರಸಾದಃ' ಎಂದು ಉತ್ತಮಪ್ರಸಾದವನ್ನೇ ಜ್ಞಾನಸಾಧ್ಯವೆಂದಿದ್ದಾರೆ.

ಕರ್ಮದಿಂದ ಅಧಮಪ್ರಸಾದ; ಶ್ರವಣಾದಿಗಳಿಂದ ಮಧ್ಯಮಪ್ರಸಾದ; ಜ್ಞಾನದಿಂದ ಉತ್ತಮಪ್ರಸಾದವು ದೊರೆಯುತ್ತದೆ. ಅಧಮಪ್ರಸಾದದಿಂದ ಸ್ವರ್ಗಲೋಕವು ಮಧ್ಯಮಪ್ರಸಾದದಿಂದ ಜನಲೋಕಾದಿಗಳು ಉತ್ತಮಪ್ರಸಾದದಿಂದ ಮೋಕ್ಷವು ದೊರೆಯುತ್ತದೆಂದು ಸಾಧನ ಹಾಗೂ ಫಲಗಳನ್ನು ತಿಳಿಯಬೇಕು. ಇಲ್ಲಿ 'ಮಧ್ಯಮಾಜ್ಜನಲೋಕಾದಿಃ' ಎಂಬ ಭಾಷ್ಯವನ್ನು ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಏಕೆಂದರೆ 'ಆಯುಃ ಸ್ತ್ರೀನ್ ಕರ್ಮಣಾ ಲೋಕಾನ್ ಜ್ಞಾನೇನ್ಯೆವ ತದುತ್ತರಾನ್' (ಭಾಗ.ತಾ. ದ್ವಿತೀಯಸ್ಕಂಧ) ಎಂಬಲ್ಲಿ ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳು ಕರ್ಮದಿಂದ ದೊರೆಯುತ್ತವೆ; ಮೇಲಿನ ಮಹರ್ಲೋಕಾದಿಗಳು ಕೇವಲ ಜ್ಞಾನದಿಂದಲೇ ದೊರೆಯುತ್ತವೆಯೆಂದು ಹೇಳಿದ್ದಾರೆ. ಆದರೆ ಇಲ್ಲಿ ಶ್ರವಣದಿಂದ ಜನಲೋಕವು ದೊರೆಯುತ್ತವೆಂದು ಹೇಳುತ್ತಿದ್ದಾರೆ. ಇದು ಭಾಗವತತಾತ್ಪರ್ಯಕ್ಕೆ ವಿರುದ್ಧವಲ್ಲವೇ? ಎಂದು ಪ್ರಶ್ನೆ ಬರುತ್ತದೆ. ಇದಕ್ಕೆ ಕೆಲವರು ಹೀಗೆ ಉತ್ತರಿಸುತ್ತಾರೆ -- ಜನಲೋಕಾದಿಃ ಎಂಬಲ್ಲಿ 'ಜನಲೋಕವೇ ಆದಿಯಾಗಿ ಉಳ್ಳ ಮಹರ್ಲೋಕಗಳನ್ನು' ವಿವಕ್ಷಿಸಬೇಕೆಂದು ಬಹುವ್ರೀಹಿಸಮಾಸವನ್ನು ಮಾಡಬೇಕು. ಅಥವಾ, ಜನಲೋಕವೇ

ಮೊದಲಾದ ಲೋಕಗಳೆಂದು ತತ್ಪುರುಷಸಮಾಸವನ್ನು ಮಾಡಬಹುದು. ಮತ್ತು 'ಮಧ್ಯಮಾ' ಎಂ. ಪದಕ್ಕೆ 'ಬಿಂಬರೂಪಕ್ಕಿಂತ ಬೇರೆಯಾದ ಇತರ ರೂಪಗಳ ಸಾಕ್ಷಾತ್ಕಾರಸಹಿತವಾದ ಶ್ರವಣಾದಿಗಳಿಂ: ಜನಲೋಕವು ದೊರೆಯುತ್ತದೆ' ಎಂದರ್ಥ. ಏಕೆಂದರೆ 'ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಲೋಕಾಪತ್ತಿಃ' ಎಂಬ ಸೂತ್ರದ ಭಾಷ್ಯದಲ್ಲಿ ಸಾಮಾನ್ಯಜ್ಞಾನದಿಂದ ಲೋಕಾದಿಗಳು ದೊರೆಯುತ್ತವೆಂ ಹೇಳಿದ್ದಾರೆ. ಆದ್ದರಿಂದ ಬಿಂಬರೂಪದ ಸಾಕ್ಷಾತ್ಕಾರದಿಂದ ಮೋಕ್ಷವು ದೊರೆಯುತ್ತದೆ; ಬೇರೆ ರೂಪಗ ಸಾಕ್ಷಾತ್ಕಾರದಿಂದ ಜನಲೋಕಾದಿಗಳು ದೊರೆಯುತ್ತವೆಂದು ಇದರ ಅಭಿಪ್ರಾಯ. ಆದ್ದರಿಂ: ಭಾಗವತತಾತ್ಪರ್ಯದ ಮಾತಿಗೆ ವಿರೋಧವಿಲ್ಲ.

ಇನ್ನು ಕೆಲವರು ಹೀಗೆ ವ್ಯಾಖ್ಯಾನಿಸಿದ್ದಾರೆ.

'ಪ್ರಾದುರ್ಭಾವಾನ್ಯತೇ ವಿಷ್ಣುಮಿಂದ್ರಿಯೈರ್ನೈವ ಪಶ್ಯತಿ ।
ಪ್ರಾದುರ್ಭಾವಾನಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ ।
ತದೈವ ಮುಚ್ಯತೇ ಜೀವೋ ನ ದುಷ್ಟೈರಿಂದ್ರಿಯೈಃ ಕ್ವಚಿತ್ ॥

ಎಂದು ಆಚಾರ್ಯರು ಕಾಠಕಭಾಷ್ಯದಲ್ಲಿ ಹೇಳಿದ 'ಭಗವಂತನ ಪ್ರಾದುರ್ಭಾವರೂಪಗಳನ್ನು ದುಷ್ಟವಾದ ಇಂದ್ರಿಯಗಳಿಂದ ನೋಡಲು ಸಾಧ್ಯವಿಲ್ಲ; ಜ್ಞಾನದೃಷ್ಟಿಯಿಂದಲೇ ನೋಡಬೇಕು. ಆವಾ ಮಾತ್ರ ಜೀವನು ಮುಕ್ತನಾಗುತ್ತಾನೆ' ಎಂಬ ಪ್ರಮೇಯದಂತೆ ಭಗವಂತನ ಅವತಾರವಿಷಯಕವಾದ ಜ್ಞಾನದಿಂದ ಜೀವನು ಮಧ್ಯಮಲೋಕಗಳಾದ ಜನಲೋಕಾದಿಗಳನ್ನು ಪಡೆಯುತ್ತಾನೆ.

ಬೇರೆ ಕೆಲವರು ಹೀಗೆ ವ್ಯಾಖ್ಯಾನಿಸಿದ್ದಾರೆ --''ಯಾವ ಪುರುಷನಿಗೆ ಬಿಂಬಸಾಕ್ಷಾತ್ಕಾರವಾಗಿರುತ್ತದೋ ಅಂತಹವನು ಬ್ರಹ್ಮಲೋಕವನ್ನು ಕುರಿತು ಹೋಗುತ್ತಾನೆ. ಆವಾಗ ಮಧ್ಯದಲ್ಲಿರುವ ಜನಲೋಕಾದಿಗಳಲ್ಲಿ ಸ್ವಲ್ಪಕಾಲ ವಾಸಿಸಿ ಮುಂದೆ ಹೋಗುತ್ತಾನೆ. ಈ ವಾಸವಾದರೋ ಆ ಪುರುಷನಿಂದ ಮಾಡಲ್ಪಟ್ಟ ಶ್ರವಣಾದಿಗಳಿಂದ ಪಡೆಯಲ್ಪಟ್ಟದ್ದು. ಆದ್ದರಿಂದಲೂ ಭಾಗವತದ ಮಾತಿಗೆ ವಿರೋಧವಿಲ್ಲ'' ಎಂದು.

ಮತ್ತೂ ಕೆಲವರು 'ಜನಲೋಕಾದಿಃ' ಎಂಬಲ್ಲಿ ತತ್ಪುರುಷಸಮಾಸವನ್ನಾಶ್ರಯಿಸಿ ಯಥಾಶ್ರುತವಾದ ಅರ್ಥವನ್ನೇ ಹೇಳುತ್ತಾರೆ. ಶ್ರವಣಾದಿಗಳೂ ಕೂಡ ಜ್ಞಾನರೂಪವಾದ್ದರಿಂದ ಜ್ಞಾನದಿಂದಲೇ ಜನಲೋಕಾದಿಗಳನ್ನು ಪಡೆದಿದ್ದಾನೆ. ಆದ್ದರಿಂದ 'ಜ್ಞಾನೇನೈವ ತದುತ್ತರಾನ್' ಎಂಬ ಭಾಗವತವಾಕ್ಯಕ್ಕೆ ವಿರೋಧವಿಲ್ಲ-- ಎಂದು.

'ಆಧ್ಯಾನಾಯ' ಎಂಬ ಸೂತ್ರದ ಟೀಕೆಯಲ್ಲಿಯೂ ಶ್ರವಣಾದಿಗಳನ್ನು ಜನಲೋಕಾದಿಗಳನ್ನು ಹೇಳಿದ್ದಾರೆ. ಅಲ್ಲಿಯೂ ಈ ನಾಲ್ಕು ಬಗೆಯ ಸಮಾಧಾನಗಳನ್ನು ಅನುಸಂಧಾನ ಮಾಡಿಕೊಳ್ಳಬೇಕು.

ಮುಂದಿನ ಸ್ಮೃತಿಯನ್ನು ಉಲ್ಲೇಖಿಸಲು ಕಾರಣವನ್ನು 'ನನು' ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ 'ಭಾಕ್ತಂ ವಾ' ಎಂಬ ಸೂತ್ರದಲ್ಲಿ ಕರ್ಮದಿಂದ ಜ್ಞಾನವನ್ನು, ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆಂದು ಹೇಳಿದ್ದಾರೆ. ಅದರ ಆಧಾರದಲ್ಲಿ ನನು ಜ್ಞಾನಂ ಚ ಎಂಬ ವಾಕ್ಯವನ್ನು ಹೇಳಲಾಗಿದೆ. 'ಆತ್ಮಾ ವಾ ಅರೇ' ಎಂಬ ವಾಕ್ಯವನ್ನು ಹಿಂದೆ ಏಕೆ ಹೇಳಿದರೆಂದರೆ? ಕರ್ಮದಿಂದ ಜ್ಞಾನವು ದೊರೆಯುತ್ತದೆಂದು ಶಂಕಿ.

'ಶ್ರವಣಂ ಮನನಂ ಚೈವ' ಇತ್ಯಾದಿಸ್ಮೃತಿಗಳಿಗೆ ಜ್ಞಾನಕ್ಕೆ ಶ್ರವಣಮನನಾದಿಗಳು ಪ್ರಧಾನಸಾಧನವಾಗಿದೆ ಎಂಬ ಅಭಿಪ್ರಾಯವಿದೆ ಎಂಬುದನ್ನು ವಿವರಿಸಲು ಉಲ್ಲೇಖಿಸಿದ್ದಾರೆ -ಎಂದರ್ಥ.

ತದಭಾವಾತ್ - ಜ್ಞಾನಕ್ಕೆ ಕರ್ಮವು ಪ್ರಧಾನಸಾಧನವಾಗಿಲ್ಲ. ಹೊರತು ಪರಂಪರೆಯಿಂದ ಸಾಧನವಾಗಿದೆ. ಆದ್ದರಿಂದ ಮುಂದೆ ಪರಂಪರೆಯಿಂದ ಹೇಳುವ ಸಾಧನಕ್ಕೆ ವಿರೋಧವಿಲ್ಲ. ಕರ್ಮವು ಚಿತ್ತಶುದ್ಧಿಯನ್ನು ಹುಟ್ಟಿಸುವ ಮೂಲಕ ಜ್ಞಾನಕ್ಕೆ ಸಾಧನವಾಗುತ್ತದೆ. ಚಿತ್ತಶುದ್ಧಿಗೋಸ್ಕರವೇ ಯಜ್ಞದಾನಾದಿ ಕರ್ಮಗಳೆಲ್ಲವೂ ಹೊರಟಿದೆ. ಈ ವಿಚಾರವನ್ನು 'ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇಃ ಅಶ್ವವತ್' 'ಉತ್ಕ್ರಮಿಷ್ಯತ ಏವಂಭಾವಾತ್' ಎಂಬ ಸೂತ್ರಗಳಲ್ಲಿ ಮುಂದೆ ಹೇಳುತ್ತಾರೆ.

ಇಲ್ಲಿಯ ತನಕ ಮೋಕ್ಷಕ್ಕೆ ಪ್ರಧಾನಸಾಧನವಾದದ್ದು ಪ್ರಸಾದ. ಪ್ರಸಾದಕ್ಕೆ ಪ್ರಧಾನಸಾಧನವಾದದ್ದು ಜ್ಞಾನ; ಜ್ಞಾನಕ್ಕೆ ಪ್ರಧಾನಸಾಧನವಾದದ್ದು ಶ್ರವಣ ಮನನಾದಿಗಳೆಂದು ಉಪಪಾದಿಸಿದ್ದಾಯಿತು. ಈ ವಿಷಯದಲ್ಲಿ ಅನೇಕಪ್ರಮಾಣಗಳನ್ನು ಉದಾಹರಿಸಿ ಪ್ರಾಮಾಣಿಕವೆಂದು ಸಮರ್ಥಿಸಿದ್ದಾಯಿತು. ಮತ್ತು ಈ ಎಲ್ಲ ಶ್ರುತಿಗಳನ್ನು ಬುದ್ಧಿಯಲ್ಲಿ ಅನುಸಂಧಾನಮಾಡಿಕೊಂಡು ಸೂತ್ರದಲ್ಲಿರುವ 'ಅತಃ' ಎಂಬ ಪದಕ್ಕೆ ಮೋಕ್ಷಹೇತುಪ್ರಸಾದಜನಕಜ್ಞಾನೋತ್ಪಾದಕವಾದ್ದರಿಂದ ಎಂಬ ಅರ್ಥವನ್ನು ಸಮರ್ಥಿಸಿದಂತಾಯಿತು.

## ಅಪರೋಕ್ಷಜ್ಞಾನವು ಎರಡು ವಿಧ

वा.मं. – ज्ञानसाध्यस्यैवेति ।। अत एव प्राक् 'नच ज्ञानं विनाऽत्यर्थप्रसादः' इत्यत्यर्थग्रहणम् इति भावः ।

ननु 'मध्यमाज्जनलोकादिः' इति श्रवणादिजन्यप्रसादात् जनलोकादिप्राप्तिकथन-मयुक्तम् ।

'योगस्य तपसश्चैव ज्ञानस्य गतयोऽमलाः ।
महर्जनस्तपः सत्यं भक्तियोगस्य मद्गतिः ।।
इत्येकादशभागवते ।

'नित्यशो भगवद्रूपस्यापरोक्ष्येण दर्शनम् ।
मुहूर्तमात्रं ज्ञानं स्यान्महाज्ञानं ततोऽधिकम् ।
सदैवाखण्डितं ध्यानं तप इत्युच्यते बुधैः ।।
अपरोक्षदृशा युक्तं नित्यं षण्मात्रकालया ।
अपरोक्षदृशा युक्तमेकमात्रयुजायुतम् ।।
योगनाम्ना समुद्दिष्टं ध्यानं नित्यमखण्डितम् ।
तच्चतुर्भागया नित्यमपरोक्षदृशायुतम् ।।

**पादयोगाख्यमुदितं ध्यानं नित्यमखण्डितम् ।**
**ज्ञानेन ब्रह्मलोकः स्यान्महाज्ञानाद्धरेर्गतिः ।।**
**पादयोगान्महर्लोको जनोलोकस्तु योगतः ।**
**तपसस्तु तपोलोकः प्राप्यते नान्यतः क्वचित् ।।**

इति तत्तात्पर्ये 'ईयुस्तीन् कर्मणा लोकान् ज्ञानेनैव तदुत्तरान्' इति द्वितीयतात्पर्ये च जनोलोकादेरपरोक्षज्ञानमात्रसाध्यत्वस्मरणात् । एतेन जनोलोकस्यादिरिति जनोलोकादिशब्देन महर्लोक एव गृह्यत इति निरस्तम् । उक्तरीत्या तस्याप्यपरोक्षज्ञानसाध्यत्वावगमादिति चेत्, उच्यते । अपरोक्षज्ञानं द्विविधम् । स्वयोग्यबिम्बादिदर्शनं ध्यानसामर्थ्यलब्धभगवन्मूर्तिसामान्यदर्शनं चेति । अत्र श्रवणादिभिरित्यादिपदेन सामान्यदर्शनं च ग्राह्यम् । तथाच सामान्यदर्शनस्य जनलोकादिहेतुत्वं नाप्रामाणिकम् । 'न सामान्यादप्युपलब्धेर्मृत्युवन्न हि लोकापत्तिः' (३/३/५३) इति सूत्रेण सामान्यदर्शनाल्लोकान्मुक्तिर्योग्यात्मदर्शनादिति भाष्ये च स्फुटत्वात् । एतदनुसारेण 'ज्ञानसम्पत्त्या' इति भाष्यं 'योग्यज्ञानसम्पत्त्या' इति व्याख्येयम् । अतो न कोपि विरोधः इति । आत्मेति ।। अतो न तद्विरोध इति भावः । तच्छेषेण प्रमाणशेषेण । **श्रवणाद्यन्वयेति** ।। श्रवणाद्यन्वयव्यतिरेकप्रयुक्तान्वयव्यतिरेकप्रतियोगित्वादित्यर्थः । तदभावाज्ज्ञानान्वयव्यतिरेकप्रयोजकान्वयव्यतिरेकप्रतियोगित्वाभावात् पारम्पर्येण अन्तःकरणशुद्ध्यादिद्वारा । यद्यपि श्रवणमननयोरपि निदिध्यासनद्वारैव हेतुत्वं, तथापि कर्मानधिकारिणां कर्मणा विनापि तन्त्रादिश्रवणादिना अपरोक्षज्ञानोदयात् श्रवणादिना विना कस्यापि ज्ञानोदयाभावाद् वैषम्यमिति भावः ।

ಶಂಕೆ - ಮಧ್ಯಮಾಜ್ಞನಲೋಕಾದಿಃ ಎಂಬುದಾಗಿ ಶ್ರವಣದಿಂದ ಹುಟ್ಟಿದ ಪ್ರಸಾದದಿಂದಲೇ ಜನಲೋಕಾದಿಗಳು ಪ್ರಾಪ್ತವಾಗುತ್ತವೆಂದು ಹೇಳಿದಿರಿ. ಇದು ತಪ್ಪಲ್ಲವೇ? ಏಕೆಂದರೆ,

ಯೋಗಸ್ಯ ತಪಸಶ್ಚೈವ ಜ್ಞಾನಸ್ಯ ಗತಯೋಽಮಲಾಃ ।
ಮಹರ್ಜನಸ್ತಪಃ ಸತ್ಯಂ ಭಕ್ತಿಯೋಗಸ್ಯ ಮದ್ಗತಿಃ ।।

ಯೋಗ, ತಪಸ್ಸು, ಜ್ಞಾನ ಮೊದಲಾದವುಗಳಿಗೆ ಮಹಃ, ಜನಃ, ತಪಃ, ಸತ್ಯಮ್ ಎಂಬ ಲೋಕಪ್ರಾಪ್ತಿಯೇ ಫಲವು. ಭಕ್ತಿಯೋಗಕ್ಕೆ ವೈಕುಂಠಾದಿಪ್ರಾಪ್ತಿಯೇ ಫಲವು.' ಎಂದು ಏಕಾದಶಸ್ಕಂಧ ಭಾಗವತದಲ್ಲಿ ಹೇಳಿದ್ದಾರೆ. ಮತ್ತು,

ನಿತ್ಯಶೋ ಭಗವದ್ರೂಪಸ್ಯಾಪರೋಕ್ಷ್ಯೇಣ ದರ್ಶನಮ್ ।
ಮುಹೂರ್ತಮಾತ್ರಂ ಜ್ಞಾನಂ ಸ್ಯಾನ್ಮಹಾಜ್ಞಾನಂ ತತೋಽಧಿಕಮ್ ।
ಜ್ಞಾನೇನ ಬ್ರಹ್ಮಲೋಕಃ ಸ್ಯಾನ್ಮಹಾಜ್ಞಾನಾತ್ ಹರೇರ್ಗತಿಃ ॥

ಮುಹೂರ್ತಪರ್ಯಂತ ಪ್ರತಿನಿತ್ಯವೂ ಭಗವದ್ರೂಪವನ್ನು ಪ್ರತ್ಯಕ್ಷೀಕರಿಸಿಕೊಳ್ಳುವುದು ಜ್ಞಾನವೆನಿಸುತ್ತದೆ. ಎರಡು ಮುಹೂರ್ತಪರ್ಯಂತ ನಿತ್ಯದಲ್ಲಿಯೂ ಭಗವದ್ದರ್ಶನವು ಮಹಾಜ್ಞಾನವು. ಜ್ಞಾನದಿಂದ ಸತ್ಯಲೋಕಪ್ರಾಪ್ತಿಯು. ಮಹಾಜ್ಞಾನದಿಂದ ವಿಷ್ಣುಲೋಕಪ್ರಾಪ್ತಿಯು.

ಸದೈವಾಖಂಡಿತಂ ಧ್ಯಾನಂ ತಪ ಇತ್ಯುಚ್ಯತೇ ಬುಧೈಃ ।
ಅಪರೋಕ್ಷದೃಶಾ ಯುಕ್ತಂ ನಿತ್ಯಂ ಷಣ್ಮಾತ್ರಕಾಲಯಾ ॥

ಆರು ಹ್ರಸ್ವಾಕ್ಷರೋಚ್ಚಾರಣಕಾಲಪರ್ಯಂತ ಇರತಕ್ಕ ಅಪರೋಕ್ಷಜ್ಞಾನದಿಂದ ಕೂಡಿದ ವಿಚ್ಛೇದ-ರಹಿತವಾದ ಧ್ಯಾನವು ತಪಃ ಎನಿಸುತ್ತದೆ.

ಅಪರೋಕ್ಷದೃಶಾಯುಕ್ತಮೇಕಮಾತ್ರಾಯುಜಾ ಯುತಮ್ ।
ಯೋಗನಾಮ್ನಾ ಸಮುದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಮ್ ॥

ಒಂದು ಹ್ರಸ್ವಾಕ್ಷರೋಚ್ಚಾರಣಕಾಲಪರ್ಯಂತ ಇರತಕ್ಕ ಅಪರೋಕ್ಷಜ್ಞಾನದಿಂದ ಪ್ರತಿನಿತ್ಯ ಕೂಡಿದ ಅಖಂಡಿತಧ್ಯಾನವು ಯೋಗ ಎನಿಸುತ್ತದೆ.

ತಚ್ಚತುರ್ಭಾಗಯಾ ನಿತ್ಯಮಪರೋಕ್ಷದೃಶಾಯುತಮ್ ।
ಪಾದಯೋಗಾಖ್ಯಮುದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಮ್ ॥

ಒಂದು ಹ್ರಸ್ವಾಕ್ಷರೋಚ್ಚಾರಣಕಾಲದ ನಾಲ್ಕನೆಯ ಒಂದುಭಾಗದಲ್ಲಿ ಉಂಟಾಗತಕ್ಕ ಅಪರೋಕ್ಷ-ಜ್ಞಾನದಿಂದ ಕೂಡಿದ ವಿಚ್ಛೇದರಹಿತವಾದ ಧ್ಯಾನವು ಪಾದಯೋಗವೆನಿಸುತ್ತದೆ.

ಪಾದಯೋಗಾನ್ಮಹರ್ಲೋಕೋ ಜನೋಲೋಕಸ್ತು ಯೋಗತಃ ।
ತಪಸಸ್ತು ತಪೋಲೋಕಃ ಪ್ರಾಪ್ಯತೇ ನಾನ್ಯತಃ ಕ್ವಚಿತ್ ॥

ಪಾದಯೋಗದಿಂದ ಮಹರ್ಲೋಕ, ಯೋಗದಿಂದ ಜನೋಲೋಕ, ತಪಸ್ಸಿನಿಂದ ತಪೋಲೋಕ, (ಜ್ಞಾನದಿಂದ ಸತ್ಯಲೋಕ, ಮಹಾಜ್ಞಾನದಿಂದ ವಿಷ್ಣುಲೋಕ)ಗಳು ಪ್ರಾಪ್ತಗಳಾಗುತ್ತವೆ" ಎಂದು ಆದರ ತಾತ್ಪರ್ಯದಲ್ಲಿ ಹೇಳಿದ್ದಾರೆ.

ಮತ್ತು 'ಈಯುಃ ತ್ರೀನ್ ಕರ್ಮಣಾ ಲೋಕಾನ್ ಜ್ಞಾನೇನೈವ ತದುತ್ತರಾನ್" ಎಂದು ಮೊದಲ ಮೂರು ಲೋಕಗಳು ಕರ್ಮದಿಂದ, ಅನಂತರದ ಲೋಕಗಳು ಜ್ಞಾನದಿಂದ ಲಭಿಸುತ್ತವೆಂದು ತ್ರಿತೀಯಸ್ಕಂಧದ ತಾತ್ಪರ್ಯದಲ್ಲಿ ಹೇಳಿದ್ದಾರೆ. ಜನೋಲೋಕಾದಿಗಳು ಅಪರೋಕ್ಷಜ್ಞಾನದಿಂದಲೇ ದೊರೆಯುತ್ತವೆಯೆಂದು ಇದರಿಂದ ತಿಳಿಯುತ್ತದೆ. ಹೀಗೆ ಹೇಳಿದ್ದರಿಂದ 'ಜನೋಲೋಕಾದಿ'ಶಬ್ದದಿಂದ ಮಹರ್ಲೋಕವನ್ನೇ ಇಟ್ಟುಕೊಳ್ಳಬೇಕೆಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಹಿಂದೆ ಹೇಳಿದಂತೆ

ಮಹರ್ಲೋಕವೂ ಸಹ ಅಪರೋಕ್ಷಜ್ಞಾನದಿಂದಲೇ ಸಾಧ್ಯವಾಗಿದೆಯಲ್ಲವೆ?

ಸಮಾಧಾನ - ಈ ಶಂಕೆಗೆ ಅವಕಾಶವಿಲ್ಲ. ಅಪರೋಕ್ಷಜ್ಞಾನವು ಎರಡು ವಿಧ. (೧) ಸ್ವಯೋಗ್ಯ ಬಿಂಬರೂಪದ ಸಾಕ್ಷಾತ್ಕಾರ. (೨) ಜ್ಞಾನಸಾಮರ್ಥ್ಯದಿಂದ ಲಭಿಸಿದ ಭಗವಂತನ ರೂಪದ ಸಾಮಾನ್ಯ ದರ್ಶನ. ಪ್ರಕೃತ 'ಶ್ರವಣಾದಿಭಿಃ' ಎಂಬಲ್ಲಿ ಆದಿಪದದಿಂದ ಸಾಮಾನ್ಯದರ್ಶನವನ್ನು ವಿವಕ್ಷಿಸಲಾಗಿದೆ. ಆದ್ದರಿಂದ ಸಾಮಾನ್ಯದರ್ಶನಕ್ಕೆ ಜನೋಲೋಕಾದಿಹೇತುತ್ವವು ಅಪ್ರಾಮಾಣಿಕವೆಂದು ತಿಳಿಯುತ್ತದೆ. ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ'(೩/೩/೫೩) ಎಂಬ ಸೂತ್ರದಲ್ಲಿ 'ಸಾಮಾನ್ಯ ದರ್ಶನಾಲ್ಲೋಕಾನ್ಮುಕ್ತಿಯೋಗ್ಯಾತ್ಮದರ್ಶನಾತ್' ಎಂಬ ಭಾಷ್ಯದಲ್ಲಿ ಈ ವಿಚಾರವನ್ನು ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ 'ಜ್ಞಾನಸಂಪತ್ತ್ಯಾ' ಎಂಬ ಭಾಷ್ಯಕ್ಕೆ 'ಯೋಗ್ಯಜ್ಞಾನವೆಂಬ ಸಂಪತ್ತಿನಿಂದ' ಎಂದು ಅರ್ಥೈಸಲಾಗಿದೆ. ಹೀಗೆ ಹೇಳಿದಾಗ ಯಾವ ವಿರೋಧವೂ ಬರುವುದಿಲ್ಲ.

## ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿದೆ

**ब्रह्मसूत्रभाष्यम् –**

**'ब्रह्म'शब्दश्च विष्णावेव ।**

**'यमन्तः समुद्रे कवयोऽवयन्ति यदक्षरे परमे प्रजाः ।**
**यतः प्रसूता जगतः प्रसूती तोयेन जीवान् व्यससर्ज भूम्याम्' इत्युक्त्वा**

**'तदेवर्तं तदु सत्यमाहुस्तदेव ब्रह्म परमं कवीनाम्' इति हि श्रुतिः ।। 'तत्रो विष्णुः' इति वचनाद् विष्णुरेव हि तत्रोच्यते ।। न चेतरशब्दात् तत्प्राप्तिः ।।**

**'नामानि विश्वाऽभि न सन्ति लोके यदाविरासीदनृतस्य सर्वम् ।**
**नामानि सर्वाणि यमाविशन्ति तं वै विष्णुं परममुदाहरन्ति ।।'**
**इति भाल्लवेयश्रुतिः।।**

**'यो देवानां नामधा एक एव तं सम्प्रश्नं भुवनायन्त्यन्या' इत्येवशब्दान्नान्येषां सर्वनामता । 'अजस्य नाभावध्येकमर्पितं यस्मिन् विश्वानि भुवनानि तस्थुः' इति विष्णोर्हि लिङ्गम् । न च प्रसिद्धार्थं विनाऽन्योऽर्थो युज्यते ।।**

**'अजस्य नाभाविति यस्य नाभेरभूच्छ्रुतेः पुष्करं लोकसारम् ।।**
**तस्मै नमो व्यस्तसमस्तविश्वविभूतये विष्णवे लोककर्त्रे' इति स्कान्दे ।**

'परो दिवा पर एना पृथिव्या' इति समाख्याश्रुतौ ।। 'यं कामये तंतमुग्रं कृणोमि तं ब्रह्माणं तमृषिं तं सुमेधाम्', इत्युक्त्वा 'मम योनिरप्स्वँतःसमुद्रे' इत्याह । उग्रो रुद्रः । समुद्रेऽन्तर्नारायणः । प्रसिद्धत्वात् सूचितत्वाच्चा-स्यार्थस्य । न चाविरोधे प्रसिद्धः परित्यज्यते । उक्तन्यायेन च श्रुतय एतमेव वदन्ति ।

'वेदे रामायणे चैव पुराणे भारते तथा ।
आदावन्ते च मध्ये च विष्णुः सर्वत्र गीयते' इति हरिवंशेषु ।।

ಅನುವಾದ -- ಬ್ರಹ್ಮ ಎಂಬ ಶಬ್ದವಾದರೂ ವಿಷ್ಣುವಿನಲ್ಲೇ ಮುಖ್ಯವಾಗಿದೆ. ಏಕೆಂದರೆ "ಜ್ಞಾನಿಗಳು ಯಾರನ್ನು ಕ್ಷೀರಸಮುದ್ರದ ಮಧ್ಯದಲ್ಲಿ ತಿಳಿಯುತ್ತಾರೋ; ನಾಶರಹಿತನಾದ ಸರ್ವೋತ್ತಮನಲ್ಲಿ, ಬ್ರಹ್ಮಾದಿದೇವತೆಗಳು ಆಶ್ರಿತರಾಗಿದ್ದಾರೋ; ಸಮಸ್ತಜಗತ್ತಿಗೆ ತಾಯಿಯಾದ ಲಕ್ಷ್ಮೀದೇವಿಯೂ ಸಹ ಯಾರಿಂದ ಹುಟ್ಟಿದಳೋ; ನೀರು ಮೊದಲಾದ ಪಂಚಭೂತಗಳಿಂದ ಪೃಥಿವ್ಯಾದಿಲೋಕಗಳಲ್ಲಿ ವಿವಿಧವಾದ ಜೀವರಾಶಿಗಳನ್ನು ಸೃಷ್ಟಿಮಾಡಿದನೋ' ಎಂದು ವಿಷ್ಣುವಿನ ಅಸಾಧಾರಣಗುಣಗಳನ್ನು ಉಲ್ಲೇಖಿಸಿ, 'ಈ ಗುಣಗಳುಳ್ಳವನೇ ಋತಶಬ್ದವಾಚ್ಯನಾದವನು ಮತ್ತು ಸತ್ಯಶಬ್ದವಾಚ್ಯನಾದವನು' ಎಂದು ಹೇಳುತ್ತಾರೆ; 'ಅವನೇ ಕವಿಗಳಿಗೆ ಅತ್ಯಂತಶ್ರೇಷ್ಠನಾದ ಬ್ರಹ್ಮನು'. ಎಂದು ವೇದವು ಹೇಳಿದೆ.

ಹೀಗೆ ಶ್ರುತಿಯು ಹೇಳುತ್ತಿರುವುದರಿಂದ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ. ವಸ್ತುತಃ ಬೃಹಧಾತುವಿನ ಆಧಾರದಿಂದ ಜೀವ, ಶಬ್ದರಾಶಿ, ಚತುರ್ಮುಖ ಮೊದಲಾದ ಅರ್ಥಗಳು ತಿಳಿದರೂ ಅವುಗಳನ್ನು ಇಲ್ಲಿ ವಿವಕ್ಷಿಸಬಾರದು. ಗುಣಪೂರ್ಣನಾದ ವಿಷ್ಣುವನ್ನೇ ವಿವಕ್ಷಿಸ-ಬೇಕು. ಆದ್ದರಿಂದ ಶ್ರುತ್ಯುಕ್ತನಾದ ಬ್ರಹ್ಮನೇ ಜಿಜ್ಞಾಸ್ಯನಾಗಿದ್ದಾನೆ. ವಿಚಾರವಿಷಯನಾದ್ದರಿಂದ ಸೂತ್ರದಲ್ಲಿ ಹೇಳಿದ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ.

'ನಾರಾಯಣಾಯ ವಿದ್ಮಹೇ, ವಾಸುದೇವಾಯ ಧೀಮಹಿ, ತನ್ನೋ ವಿಷ್ಣುಃ ಪ್ರಚೋ-ದಯಾತ್' (ನಮ್ಮೆಲ್ಲರನ್ನೂ ನಿರಂತರವಾಗಿ ಶುಭಕರ್ಮಗಳಲ್ಲಿ ಪ್ರೇರಿಸಲಿ) ಎಂಬ ವಿಷ್ಣುಶ್ರುತಿಯಲ್ಲಿ ವಿಷ್ಣು ಎಂಬ ಶಬ್ದವು ಸ್ಪಷ್ಟವಾಗಿ ಇರುವುದರಿಂದ ಋತ ಸತ್ಯಾದಿಗಳನ್ನು ಹೇಳಿದ ಶ್ರುತಿಯಲ್ಲಿಯೂ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

'ತನ್ನೋ ರುದ್ರಃ ಪ್ರಚೋದಯಾತ್' ಎಂಬ ರುದ್ರಶ್ರುತಿಯೂ ಇರುವುದರಿಂದ ರುದ್ರಾದಿ-ಗಳು ಏಕೆ ಪ್ರತಿಪಾದ್ಯರಾಗಬಾರದು? ಎಂಬ ಶಂಕೆ ಸರಿಯಲ್ಲ. ರುದ್ರನೆಂದರೆ ವಿಷ್ಣುವೇ ಆಗಿದ್ದಾನೆ. ಸಕಲನಾಮಗಳು ಬೇರೆಯವರಲ್ಲಿ ಮುಖ್ಯವಲ್ಲ. ಏಕೆಂದರೆ 'ವಿಷ್ಣುವಿಗಿಂತ

ಅತಿರಿಕ್ತವಾದ ಸಮಸ್ತಜಗತ್ತಿನ ಸೃಷ್ಟ್ಯಾದಿಗಳೆಲ್ಲವೂ ವಿಷ್ಣುವಿನಿಂದಲೇ ಆಗುತ್ತವೆ. ಆದ್ದರಿಂದ ಎಲ್ಲಹೆಸರುಗಳು ಯಾರನ್ನು ಪ್ರತಿಪಾದಿಸುತ್ತವೋ ಅಂತಹ ವಿಷ್ಣುವನ್ನೇ ಸರ್ವೋತ್ತಮನೆಂದು ಜ್ಞಾನಿಗಳು ಹೇಳುತ್ತಾರೆ.

'ಯಾರು ರುದ್ರಾದಿಸಕಲದೇವತೆಗಳ ಹೆಸರನ್ನು ಧರಿಸಿದ್ದಾನೋ, ಅವನು ಒಬ್ಬನೇ ಆಗಿದ್ದಾನೆ. ಅವನಲ್ಲಿ ಎಲ್ಲ ಲೋಕಗಳೂ ಲಯವನ್ನು ಹೊಂದುತ್ತವೆ' ಎಂಬ ಋಙ್ಮಂತ್ರದಿಂದ ಬ್ರಹ್ಮಾದಿದೇವತೆಗಳು ಸಕಲಶಬ್ದಪ್ರತಿಪಾದ್ಯರಲ್ಲವೆಂದು ತಿಳಿಯುತ್ತದೆ. ಮುಂದಿನ ಋಙ್ಮಂತ್ರ ಹೀಗಿದೆ. 'ಸಕಲಲೋಕಗಳು ಯಾವ ವಸ್ತುವಿನಲ್ಲಿ ಆಶ್ರಯ ಹೊಂದಿವೆಯೋ, ಅಜ ಜನನರಹಿತನಾದ ಪರಮಾತ್ಮನ ನಾಭಿಯಲ್ಲಿವೆ' ಎಂದು. ಸಕಲಲೋಕಕ್ಕೆ ಆಧಾರವಾದ ಆ ವಸ್ತು ಕಮಲವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಜನನರಹಿತನ ನಾಭಿಯಲ್ಲಿ ಕಮಲ ಬಿಟ್ಟು ಬೇರೆ ವಸ್ತುವು ಇದೆಯೆಂಬ ಸಂದೇಹಕ್ಕೆ ಅವಕಾಶವಿಲ್ಲ.

ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದೆ - 'ಅಜಸ್ಯ ನಾಭೌ' ಎಂಬ ಶ್ರುತಿಯಲ್ಲಿ ಹೇಳಿದಂತೆ ಯಾರ ನಾಭಿಯಿಂದ ಹದಿನಾಲ್ಕು ಲೋಕಗಳಿಗೆ ಆಶ್ರಯವಾದ ಕಮಲವು ಹುಟ್ಟಿತೋ ಅಂತಹ ಜೀವಜಡಗಳ ಸೃಷ್ಟ್ಯಾದಿಗಳಿಗೆ ಕಾರಣನಾದ ಜಗತ್ತಿಗೆ ಸ್ವಾಮಿಯಾದ ವಿಷ್ಣುವಿಗೆ ನಮಸ್ಕಾರವು. ಇದರಿಂದ ಅಜಸ್ಯ ನಾಭೌ ಎಂಬ ಋಙ್ಮಂತ್ರವು ವಿಷ್ಣುಪರವೆಂದು ನಿರ್ಣಯವಾಗುತ್ತದೆ.

ಮತ್ತು ವಿಶ್ವಕರ್ಮಸೂಕ್ತದಲ್ಲಿ ಹೀಗೆ ಹೇಳಿದೆ. 'ಪರೋ ದಿವಾ ಪರ ಏನಾ ಪೃಥಿವ್ಯಾ' ಎಂದು ಅದೇ ಋಙ್ಮಂತ್ರದ ಐದನೆಯ ಸೂಕ್ತ. ಅಂಭೃಣೀಸೂಕ್ತದಲ್ಲಿಯೂ ಹೀಗೆ ಹೇಳಿದೆ. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ....' ಯಾರು ರುದ್ರನಾಗಬೇಕೆಂದು ನಾನು ಬಯಸುತ್ತೇನೋ ಅವನು ರುದ್ರನಾಗುತ್ತಾನೆ. ಬ್ರಹ್ಮನಾಗಬೇಕೆಂದು ಬಯಸಿದರೆ ಬ್ರಹ್ಮನಾಗುತ್ತಾನೆ. ಋಷಿಯಾಗುತ್ತಾನೆ. ಬಹುಮೇಧಾವಿಯೂ ಆಗುತ್ತಾನೆ' ಎಂದು ಬ್ರಹ್ಮಾದಿಗಳೂ ಸಹ ತನ್ನ ಅಧೀನರೆಂದು ಲಕ್ಷ್ಮೀದೇವಿಯು ಹೇಳಿದ್ದಾಳೆ. ಮುಂದೆ ಅಲ್ಲಿಯೇ ಏಳನೆಯ ಮಂತ್ರದಲ್ಲಿ 'ಇಂತಹ ನನಗೂ ಕಾರಣಪುರುಷನಾದವನು ಕ್ಷೀರಸಮುದ್ರ-ಶಯನನಾದ ನಾರಾಯಣನು' ಎಂದು ಹೇಳಿ ಆ ಕ್ಷೀರಸಮುದ್ರಶಾಯಿಯ ಮಹಿಮೆಯನ್ನು 'ಪರೋ ದಿವಾ' ಎಂಬ ಕೊನೆಯ ಮಂತ್ರದಲ್ಲಿ ಹೇಳಿದ್ದಾಳೆ. ಆದ್ದರಿಂದ ಋಙ್ಮಂತ್ರದಲ್ಲಿರುವ ಮಂತ್ರಗಳಿಂದ ಪ್ರತಿಪಾದ್ಯನಾದವನು ಬ್ರಹ್ಮಾದಿಗಳಿಗಿಂತಲೂ ಉತ್ತಮನಾದ ವಿಷ್ಣುವೇ ಆಗಿದ್ದಾನೆ.

ಅಂಭೃಣೀಸೂಕ್ತದಲ್ಲಿ ಲಕ್ಷ್ಮೀದೇವಿಯ ಅಧೀನರೆಂದು ಹೇಳಲ್ಪಟ್ಟ ಉಗ್ರನೆಂದರೆ ರುದ್ರನೇ ಆಗುತ್ತಾನೆ. ಸಮುದ್ರಸ್ಥನಾದವನು ನಾರಾಯಣನೇ ಆಗಿದ್ದಾನೆ; ವಿಷ್ಣುಸಹಸ್ರನಾಮದಲ್ಲಿ

'ಮಹೋದಧಿಶಯೋಽಂತಕಃ' ಎಂದು ಹೇಳಲಾಗಿದೆ. ಮತ್ತು ನಾರಾಯಣಶಬ್ದದಲ್ಲಿಯೇ ನೀರು ಯಾರಿಗೆ ಆಶ್ರಯವಾಗಿದೆಯೋ? ಎಂಬರ್ಥವು ಸೂಚಿತವಾಗಿದೆ. ವಿರೋಧವಿಲ್ಲ-ದಿದ್ದಾಗ ಆಯಾ ಶಬ್ದಗಳ ಪ್ರಸಿದ್ಧಾರ್ಥವನ್ನು ಬಿಡಬಾರದು.

ಮೇಲೆ ಹೇಳಿದ ಯುಕ್ತಿಗಳಿಂದ ಸಕಲವೇದಗಳು ನಾರಾಯಣನಾದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಮತ್ತು 'ವೇದಗಳಲ್ಲಿ ಮೂಲರಾಮಾಯಣಾದಿಗಳಲ್ಲಿ ಅಷ್ಟಾದಶಪುರಾಣ-ಗಳಲ್ಲೂ ಮತ್ತು ಮಹಾಭಾರತದಲ್ಲಿಯೂ ಆರಂಭ ಮಧ್ಯ ಕೊನೆಯಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ' ಎಂದು ಹರಿವಂಶದ ಭಾಗತ್ರಯಗಳಲ್ಲಿ ಹೇಳಲ್ಪಟ್ಟಿದೆ.

ಪ್ರತಿಪದಾರ್ಥ -- ನಾರಾಯಣಪ್ರಸಾದವಿಲ್ಲದೇ ಮೋಕ್ಷವಿಲ್ಲವೆಂದು ಹೇಳಿದಿರಿ. ಹಾಗಾದರೆ ನಾರಾಯಣನ ಜಿಜ್ಞಾಸವೇ ಕರ್ತವ್ಯವಾಯಿತು. ಬ್ರಹ್ಮಜಿಜ್ಞಾಸೆಯನ್ನು ಏಕೆ ಆಚರಿಸಬೇಕು? ಬ್ರಹ್ಮಶಬ್ದಕ್ಕೆ ನಾರಾಯಣವೆಂಬ ಅರ್ಥವನ್ನು ಹೇಗೆ ಹೇಳುವಿರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಬ್ರಹ್ಮಶಬ್ದಶ್ಚ = ಬ್ರಹ್ಮಶಬ್ದವಾದರೂ, ವಿಷ್ಣಾವೇವ = ಸರ್ವತ್ರ ವ್ಯಾಪ್ತನಾದ ಪರಮಾತ್ಮನಲ್ಲಿಯೇ ಸಮನ್ವಯವಾಗುತ್ತದೆ.

ಬ್ರಹ್ಮಶಬ್ದವು ಬೇರೆಡೆಯೂ ರೂಢವಾಗಿರುವುದರಿಂದ ವಿಷ್ಣುವನ್ನೇ ಹೇಗೆ ಪ್ರತಿಪಾದಿಸುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯಂ = ಯಾವನನ್ನು, ಅಂತಃಸಮುದ್ರೇ = ಕ್ಷೀರಸಮುದ್ರದ ಮಧ್ಯದಲ್ಲಿ, ಅವಯಂತಿ = ತಿಳಿಯುತ್ತಾರೋ, ತದಕ್ಷರೇ = ಅಂತಹ ನಾಶರಹಿತನಾದ, ಪರಮೇ = ಪರಮಾತ್ಮನಲ್ಲಿ, ಪ್ರಜಾಃ = ಬ್ರಹ್ಮಾದಿ ಸಕಲಜೀವರಾಶಿಗಳು, ಆಶ್ರಿತರಾಗಿದ್ದಾರೆ; ಯತಃ = ಯಾರಿಂದ, ಜಗತಃ = ಸಮಸ್ತ-ಜಗತ್ತಿನ, ಪ್ರಸೂತೀ = ಉತ್ಪಾದಕಳಾದ ಲಕ್ಷ್ಮೀದೇವಿಯು, ಪ್ರಸೂತಾ = ಹುಟ್ಟಿದಳೋ; ತೋಯೇನ = ನೀರುಮೊದಲಾದ ಪಂಚಮಹಾಭೂತಗಳಿಂದ (ಆಯಾ ಜೀವಿಗಳ ಕರ್ಮಕ್ಕೆ ಅನುಸಾರಿಯಾಗಿ ಅಥವಾ ತನ್ನ ವೀರ್ಯದಿಂದ), ಜೀವಾನ್ = ಅನೇಕವಿಧವಾದ ಜೀವರಾಶಿಗಳನ್ನು, ಭೂಮ್ಯಾಮ್ = ಪೃಥಿವ್ಯಾದಿ-ಲೋಕಗಳಲ್ಲಿ, ವ್ಯಸಸರ್ಜ = ವಿವಿಧಬಗೆಯಲ್ಲಿ ಸೃಷ್ಟಿಮಾಡಿದನು. ಇತ್ಯುಕ್ತ್ವಾ = ಹೀಗೆ ಹೇಳಿ, ತದೇವ = ಈ ಗುಣಗಳುಳ್ಳವನೇ, ಋತಂ = ಋತಶಬ್ದವಾಚ್ಯನಾದವನು(ಅನಾದಿಕಾಲದಿಂದ ಒಂದೇ ಪ್ರಕಾರದಲ್ಲಿ ತಿಳಿಯಲ್ಪಡುವವನು), ತದೇವ = ಅವನೇ, ಸತ್ಯಂ = ಸತ್ಯಶಬ್ದವಾಚ್ಯನಾದವನು ಎಂದು, ಆಹುಃ = ಜ್ಞಾನಿಗಳು ಹೇಳುತ್ತಾರೆ. ತದೇವ = ಅವನೇ, ಕವೀನಾಂ = ಜ್ಞಾನಿಗಳಿಗೆ, ಪರಮಂ = ಅತ್ಯಂತಶ್ರೇಷ್ಠನಾದ, ಬ್ರಹ್ಮ = ಬ್ರಹ್ಮಶಬ್ದವಾಚ್ಯನಾದವನು. ಇತಿ = ಹೀಗೆ, ಶ್ರುತಿ ಹಿ = ಶ್ರುತಿಪ್ರಸಿದ್ಧಿಯಾಗಿದೆ[1].

---

(१) **भाष्यदीपिका** – ननु नारायणप्रसादमृते न मोक्षश्चेत् तर्हि तज्जिज्ञासैव कर्तव्या न ब्रह्मजिज्ञासा । न च वाच्यं नारायण एव ब्रह्मपदेन विवक्षितः सूत्रकृतेति, ब्रह्मशब्दस्य बह्वर्थत्वेन सूत्रकारविवक्षाविशेषस्य दुर्ज्ञेयत्वादित्यत आह - 'ब्रह्म' इति ।। मुख्य इति शेषः । चः 'अनेकार्थोऽपि ब्रह्मशब्दः' इति अप्यर्थे, यत इत्यर्थे च । तथा च ब्रह्मशब्दस्यानेकार्थत्वेऽपि यतः सः विष्णावेव मुख्योऽतो मुख्यामुख्ययोर्मुख्यस्यैव

ग्राह्यत्वात् स एव सूत्रकारविवक्षितो ज्ञायत इति योजना । अत्र शब्दान्तरं विहाय विष्णुशब्दप्रयोगेण तच्छब्दगतानां वर्गपञ्चमषष्ठचतुर्थानां णषवानां सङ्ख्यारेखालेखनेन सूत्राणां चतुष्षष्ट्युत्तरपञ्चशतसङ्ख्योक्ता भवति । यद्वा –

'देशतः कालतश्चैव गुणतश्चापि पूर्तितः ।
विष्णौ ब्रह्मेति नामैतन्मुख्यतोऽन्यत्र न क्वचित् ॥'

इत्यैतरेयभाष्योक्तेः देशकालगुणापरिच्छेदरूपत्रिविधपूर्तिवाचकब्रह्मशब्दव्याख्यानाय तादृशविष्णुशब्दप्रयोगः ।

टीकायां तु - अत्र विष्णुग्रहणेन 'स विष्णुराह हि । तं ब्रह्मेत्याचक्षते' इत्यन्योन्याव्यवहितसूत्रद्वयकरणानन्तरमेव ब्रह्ममीमांसायाः व्यासेनाऽरब्धत्वादेतदव्यवहितदेवमीमांसान्त्यसूत्रद्वये ब्रह्मत्वेन नारायणस्यैव प्रकृतत्वं सूचयतीति प्रयोजनान्तरमुक्तम् । तत्त्वप्रदीपेऽप्येतदेव 'यश्च देवतामीमांसान्ते ''विष्णुरेव हि तच्छ्रुतेस्तं ब्रह्मेत्याचक्षते' इति सर्वदेवोत्तमत्वेन प्रतिज्ञातो ब्रह्मत्वेन चोक्तः, स एव ब्रह्मशब्देनोत्तरमीमांसायां विचार्यत्वेनोच्यते' इति पाठभेदेनोक्तम् ॥

ब्रह्मशब्दस्यान्यत्रापि रूढत्वाद् रूढेरेव मुख्यवृत्तित्वात् कुतोऽसौ विष्णावेव मुख्य इत्यत आह - यमिति ॥ 'ब्रह्मशब्दश्च' इत्यादि अत्रापि सम्बध्यते । चो यद्यपीत्यार्थे । हिशब्दो यत इत्यर्थे । श्रुतिराहेति शेषः । तथा च यद्यपि ब्रह्मशब्दोऽन्यत्र रूढः, तथाऽपि 'श्रुतिः' 'यमन्तः' इत्यादिका यतः कवीनां मते 'तदेव परमं ब्रह्म' इत्याहुरिति प्रयोगबाहुल्यरूपां रूढिमाह, अतो ब्रह्मशब्दो विष्णावेव परममुख्य इत्यर्थः । अन्यत्राज्ञरूढेः विद्वद्रूढेरतिमुख्यत्वादिति भावः ॥

'यमन्तः समुद्रे' इति वाक्यम् -

'यदोषधीभिः पुरुषान् पशूंश्च विवेश भूतानि चराचराणि ।
अतः परं नान्यदणीयसं हि परात् परं यन्महतो महान्तम् ॥
यदेकमव्यक्तमनन्तरूपं विश्वं पुराणं तमसः परस्तात् ॥'

इति वाक्येन सह व्याख्यातं विष्णुतत्त्वनिर्णयटीकायाम् । तथा हि - 'यमन्तस्समुद्रे' विभक्त्यर्थेऽव्ययीभावः समुद्रस्यान्तस्स्थितं 'कवयः' ज्ञानिनः 'अवयन्ति' ईषदेव जानन्ति. यस्मिन् 'तदक्षरे' अविज्ञेयत्वरूपपूर्वविशेषणविशिष्टे प्रसिद्धे वाऽविनाशिनि 'परमे' प्रजा अधीनाः सन्ति । 'जगतः प्रसूती' प्रसूतिर्जनयित्री मूलप्रकृतिर्लक्ष्मीः 'यतः' यस्मात्

'ತದೇವ' ಎಂಬ ವಾಕ್ಯದಲ್ಲಿ ತತ್‌ಶಬ್ದದಿಂದ ವಿಷ್ಣುವನ್ನೇ ಏಕೆ ವಿವಕ್ಷಿಸಬೇಕು? ಅಲ್ಲಿ ಕೇಳಿಸುತ್ತಿರುವ ಸಮುದ್ರಾಂತಸ್ಥತ್ವಾದಿಲಿಂಗಗಳನ್ನು ರುದ್ರಾದಿಗಳಲ್ಲಿಯೂ ಕಥಂಚಿತ್ ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ

---

प्रसूता उत्पन्ना, सृष्टौ अभिमुखीबभूवेति वा, यत्र यद् वस्तु 'तोयेन' तत्तज्जीवकर्मणा स्ववीर्येण वा, तोयशब्दोक्ताम्बूपलक्षितैर्भूतैर्वा 'भूम्यां' पृथिव्यादिषु लोकेषु 'जीवान् व्यससर्ज' विविधं ससर्ज । यत्र 'ओषधीभिः' सहितान् 'पुरुषान् पशूंश्च चराचराणि भूतानि' प्रेरणाय 'विवेश' । 'चराचराणि भूतानि' इत्यनेनैव सिद्धे यज्ञाङ्गत्वादिना विशिष्टानां व्रीह्योषधीनां ग्रहणाय पुनर्वचनम् । 'अतः' यस्मात् 'परं' अतिशयेन 'अन्यत्' वस्तु 'अणीयसं' अणीयो नास्ति, यत्र 'परात्परं' उत्कृष्टादुत्कृष्टं 'महतः' महत्परिमाणादपि 'महान्तं' महत्, 'यदेकं' केवलं 'अव्यक्तं' स्वप्रसादं विनाऽतीन्द्रियं 'विश्वं पूर्णं तमसः' प्रकृतेरज्ञानाद्वा 'परस्तात्' अतिक्रम्य स्थितं 'तदेवर्तं' यथार्थज्ञानरूपं 'तदु' तदेव 'सत्यं' ज्ञानपूर्वक्रियावत् 'तदेव कवीनां' मते 'परमं' मुख्यं 'ब्रह्म' इत्याहुरिति ।।

अत्र 'तदक्षरे' इति श्रुतिपाठः । 'यदक्षरे' इति क्वचित्पाठे यस्मिन्नित्यध्याहारो न कार्यः । 'व्यससर्ज' इति प्रायिकः श्रुतिपाठः । 'व्यचसर्ज' इत्यपि क्वचित् पठन्ति । अत्र सकारस्य चकारादेशः छान्दसः । आद्यपक्षेऽपि वि आ ससर्जेत्यवयवविभागः । तत्राऽङो ह्रस्वत्वं छान्दसं बहुलग्रहणात् । 'इन्द्रा वरुण वामहम्' इति श्रुतौ णकारात् परस्याकारस्य यथा ह्रस्वत्वं तद्वदिति नारायणपण्डिताचार्योक्तिः । 'व्यससर्ज विससर्ज बहुलग्रहणात्' इति प्रमेयदीपोक्तिरपि ह्रस्वाभिप्रायिकैव ।।

केचित्तु लिट्यडागमः छान्दसो बहुलग्रहणादिति प्रमेयदीपार्थमाहुः । तदाचार्योक्तात् पक्षान्तरम् । पद्मनाभतीर्थकृततत्वनिर्णयटीकायां न्यायरत्नावल्यां तु 'वयन्ति' इति विच्छिद्य 'तदक्षरे' इत्येव च पठित्वा, 'यं पुरुषं समुद्रेऽन्तः कवयो वयन्ति वाञ्छन्ति तदक्षरे यस्मिन् तस्मिन् अक्षरे नाशवर्जिते परमे प्रजास्तदाधाराः तिष्ठन्ति, जगतः प्रसूती जगज्जनयित्री प्रकृतिः यतः प्रसूता प्रादुर्भूता सती तोयेन इतरमिश्रितेन जीवान् देहवत्त्वेन व्यससर्ज विसृष्टवती' इत्येकान्वयेन 'तदेव तात्पर्यविषयीभूतत्वादृतं तदेवाबाधितरूपत्वात् सत्यं तदेव कवीनामभिमतं परं ब्रह्म' इत्यर्थ उक्तः ।।

नारायणपण्डिताचार्यकृतौ तत्वमञ्जर्यामपि 'तदक्षरे' इति पठित्वा 'यमवयन्ति अवगच्छन्ति यस्मिन् तस्मिन् अक्षरे प्रजाः सन्ति यतः प्रसूता पराधीनविशेषं प्राप्ता श्रीः तोयेन कर्मणा जीवान् भूम्यां प्रकृत्यां व्यससर्ज' इत्यन्वयेन 'तदेवर्तं शश्वदेकप्रकारं सत्यं साधु ब्रह्म गुणपूर्णं' इत्यर्थ उक्तः ।।

ನಿರವಕಾಶವಿಷ್ಣುಶ್ರುತಿಯಿಂದ ಉತ್ತರಿಸುತ್ತಿದ್ದಾರೆ. ತನ್ನೋ ವಿಷ್ಣುರಿತಿ = ನಾರಾಯಣಾಯ ವಿದ್ಮ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್ ಎಂಬ, ವಚನಾತ್ = ವಾಕ್ಯವಿರುವುದರಿಂದ ಅತ್ರ = ಋತ, ಸತ್ಯಾದಿಗಳನ್ನು ಹೇಳಿದ ಶ್ರುತಿಯಲ್ಲಿಯೂ, ವಿಷ್ಣುರೇವ = ವಿಷ್ಣುವೇ, ಉಚ್ಯತೆ ಪ್ರತಿಪಾದ್ಯನಾಗಿದ್ದಾನೆ[1].

'ತನ್ನೋ ರುದ್ರಃ ಪ್ರಚೋದಯಾತ್' ಎಂಬ ಶ್ರುತಿಯಿರುವುದರಿಂದ ರುದ್ರಾದಿಗಳೇಕೆ ವಾಚ್ಯರಾ ಬಾರದು? ಎಂದರೆ, ಇತರಶಬ್ದಾತ್ = ಶ್ರುತಿಯಲ್ಲಿ ರುದ್ರಾದಿಶಬ್ದಗಳಿದ್ದರೂ, ತತ್ಪ್ರಾಪ್ತಿಃ = ರುದ್ರಾದಿಗ ಪ್ರಾಪ್ತಿಯು, ನ = ಆಗುವುದಿಲ್ಲವಷ್ಟೇ[2].

ಏಕೆಂದರೆ, ವಿಶ್ವಾ = ಸಕಲವಿಧವಾದ, ನಾಮಾನಿ = ಹೆಸರುಗಳು, ಲೋಕೇ = ರುದ್ರಾದಿಜಗತ್ತಿನಲ್ಲಿ ಅಭಿ = ಮುಖ್ಯವಾಚಕವಾಗಿ, ನ ಸಂತಿ = ಇರುವುದಿಲ್ಲ. ಯದಾ = ಯಾವಕಾಲದಲ್ಲಿ, ಅವಿರಾಸತ: ಶಬ್ದಗಳು ಹೊರಹೊಮ್ಮಿದವೋ, ಸರ್ವಂ = ಆ ಎಲ್ಲ ಶಬ್ದಗಳು, ಅನ್ಯತಸ್ಯ = ಋತ ಎಸಿದ ಪರಮಾತ್ಮನಿಗಿಂತ ಭಿನ್ನವಾದ ಜಗದ್ವಾಚಕವಾದ, ಸರ್ವಾಣಿ = ಸಕಲನಾಮಾತ್ಮಕಶಬ್ದಗಳು, ಯಂ: ಯಾವ ಭಗವಂತನನ್ನು, ಆವಿಶಂತಿ = ಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತವೋ, ತಂ = ಅಂತಹ ಪರಮಂ = ಸರ್ವೋತ್ತಮನಾದ, ವಿಷ್ಣುಂ = ವಿಷ್ಣುವನ್ನು, ಉದಾಹರಂತಿ = ಹೇಳುತ್ತವೆ. ಇತಿ = ಹೀಗೆ ಭಾಲ್ಲವೇಯಶ್ರುತಿಃ = ಭಾಲ್ಲವೇಯಶ್ರುತಿಯು ಹೇಳುತ್ತದೆ[3].

---

(१) **भाष्यदीपिका** – ननु 'तदेव' इति वाक्ये तच्छब्देन कुतो विष्णुनिश्चयः समुद्रस्थत्वलिङ्गादिति चेत् - न, तस्य रुद्रादावपि कथञ्चित् सम्भवादित्यतो निरवकाशविष्णुश्रुतेरेवेत्याह - 'तन्नः' इति । 'इति वचनाद् विष्णुरेव' 'तत्र' 'तदेव' इति श्रुतौ तच्छब्देन 'उच्यते' इति निश्चीयत इत्यर्थः । हिशब्दः प्रसिद्धौ । अत्र 'तन्नः' इत्येकदेशग्रहणेन 'नारायणाय विद्महे वासुदेवाय धीमहि । तन्नो विष्णुः प्रचोदयात्' इति समग्रवाक्यं गृह्यते । द्वितीयार्थे चतुर्थ्यौ । तथा च यस्माद् वयं नारायणं 'विद्महे' जानीमहे यतश्च तं वासुदेवं 'धीमहि' ध्यायेमहि 'तत्' तस्मात् 'नः' अस्मान् 'तत्' शुभं प्रति 'विष्णुः प्रचोदयात्' प्रेरयत्विति श्रुत्यर्थः ॥

(२) **भाष्यदीपिका** – यद्युत्तरवाक्ये विष्णुशब्दश्रवणाद् विष्णुरेवात्रोक्तं ब्रह्म, तर्हि 'तन्नो रुद्रः' इत्यादीतरशब्दश्रवणाद् रुद्रादेरपि मुख्यब्रह्मता प्राप्तेत्यत आह – नचेति ॥ चशब्दः समुच्चये । तथा च 'इतरशब्दात्' रुद्रादिवाचकशब्दबलात् तस्य रुद्रादेरपि तस्य मुख्यब्रह्मत्वस्य 'प्राप्तिर्न' इत्यर्थः ॥

(३) **भाष्यदीपिका** – कुत इत्यतस्तत्प्रापकशब्दानां विष्णावेव मुख्यत्वादिति हेतूपस्कारमभि प्रेत्य तस्यासिद्धिपरिहाराय विष्णोर्मुख्यतः सर्वनामवाच्यत्वे श्रुतिमाह - 'नामानि

ಯಃ = ಯಾರು, ದೇವಾನಾಂ = ರುದ್ರಾದಿಸಕಲದೇವತೆಗಳ, ನಾಮಧಾಃ = ಹೆಸರುಗಳನ್ನು ಧರಿಸಿದ್ದಾನೋ, ಸಃ = ಅವನು, ಏಕ ಏವ = ಮುಖ್ಯವಾಗಿ ಒಬ್ಬನೇ ಆಗಿದ್ದಾನೆ, ಇತಿ = ಹೀಗೆ, ಏವ-ಶಬ್ದಾತ್ = ಏವ ಕಾರವಿರುವುದರಿಂದ, ಅನ್ಯೇಷಾಂ = ಇತರದೇವತೆಗಳಿಗೆ, ಸರ್ವನಾಮತಾ = ಮುಖ್ಯ-ವೃತ್ತಿಯಿಂದ ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತವು, ನ = ಇಲ್ಲ[1].

"ಯೋ ದೇವಾನಾಂ" ಎಂಬ ಶ್ರುತಿಯಿಂದಲೂ ವಿಷ್ಣುವೇ ಏಕ ಪ್ರತಿಪಾದ್ಯನಾಗಬೇಕು. ವಿಶ್ವ-ಕರ್ಮಾದಿಗಳೇ ಪ್ರತಿಪಾದ್ಯರಾಗಲಿ? ಎಂಬ ಪ್ರಶ್ನೆಗೆ 'ಅಜಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಜಸ್ಯ = ಜನನರಹಿತನಾದ ಪರಮಾತ್ಮನ, ನಾಭೌ = ಹೊಕ್ಕಳಿನಲ್ಲಿ, ಏಕಂ = ಒಂದು ವಸ್ತುವು, ಅರ್ಪಿತಂ = ಹುಟ್ಟಿತು. ಯಸ್ಮಿನ್ = ಯಾವ ಆ ವಸ್ತುವಿನಲ್ಲಿ (ಕಮಲದಲ್ಲಿ), ವಿಶ್ವಾನಿ = ಸಕಲ, ಭುವನಾನಿ =

---

इति ।। 'श्रुतेः' इति क्वचित् पञ्चम्यन्तपाठः । प्रथमान्तपाठे यतोऽत इति शेषः । अस्य 'न च' इत्यनेनान्वयः । 'यत्' यस्मात् 'अनृतस्य' ऋतभिन्नस्य विष्ण्वितरस्य लोकस्य जगतः 'सर्वं' नामप्रवृत्तिनिमित्तम् 'आविरासीत्' अभूत् तस्मादुत्पत्तिमत्प्रवृत्तिनिमित्त-वत्त्वात् 'विश्वा' विश्वानि सर्वाणि 'नामानि' 'लोके' रुद्रादिजगति 'अभि' मुख्यतः वाचकतया 'न सन्ति' इत्यर्थः । तर्हि कस्मिन् तानि मुख्यानीत्यत आह 'नामानि' इति ।। वैशब्दोऽवधारणे । परममिति हेतुगर्भविशेषणम् । तथा च 'सर्वाणि नामानि' 'यम्' 'आ' मुख्यतो वाचकत्वेन 'विशन्ति' 'तं परमं' देशकालाभ्यामपरिच्छिन्नप्रवृत्ति-निमित्तं 'विष्णुं वै' वदन्ति विद्वांस इत्यर्थः । तत्वप्रदीपे तु - 'विश्वा' विश्वानि 'नामानि लोके' अभितो 'न सन्ति' मुख्यतो न सन्ति मुख्यतो न लोकवाचकानि 'यत्' यस्मात्, यतः पुरुषात् 'अनृतस्य' विष्ण्वन्यस्य जगतो जन्मलयादिकं सर्वं 'आविरासीत्', यं च वाचकत्वेन 'नामानि आ' समन्तात् 'विशन्ति', 'तं' ह 'विष्णुं' उत्तमं वदन्तीत्यर्थ उक्तः । एतत्पक्षे यच्छब्दस्याऽवृत्तिः । द्वितीयादिपादत्रयस्य हेतुसमर्पकत्वम् । पक्षद्वयेऽपि विष्णुशब्दो भिन्नक्रमः ।

(१) भाष्यदीपिका – ननु यथा विष्णोः श्रुत्यन्तरसिद्धसर्वनामत्वेनात्रोक्तं ब्रह्मत्वं सिद्ध्यति तथा रुद्रादीनामपि विष्ण्वादिशब्दवाच्यत्वेनात्रोक्तं ब्रह्मत्वं किं न स्यादित्यत आह - य इति ।। 'इत्येवशब्दात्' इति इतिवाक्यस्यैवशब्दात् 'अन्येषां' रुद्रादीनां 'सर्वनामता' विष्ण्वादिसर्वशब्दवाच्यत्वं नेत्यर्थः । सर्वनामतेत्यनन्तरं – यत एवमतः 'तन्नो विष्णुः' (महाना.३-१६) इत्यादौ नान्येषां प्राप्तिः, अत एव न ब्रह्मत्वं तेषामिति वाक्यशेषः । 'यः' भगवान् 'एक एव देवानां' ब्रह्मादीनां 'नामधाः' – विश्वपाशब्दवदयं शब्दः । नामधारकः न त्वन्येऽपि 'तं प्रश्नं' प्रष्टारं 'अन्या' अन्यानि 'भुवना' भुवनानि लोकाः 'संयन्ति' संयान्ति मोक्षे प्रलये चेति श्रुत्यर्थः ।

ಚತುರ್ದಶಲೋಕಗಳು, (ಆಶ್ರಯಿಸಿ), ತಸ್ಥುಃ = ನಿಂತವು. ಇತಿ = ಹೀಗೆ, ವಿಷ್ಣೋಃ = ವಿಷ್ಣು... ಲಿಂಗವು = ಪದ್ಮನಾಭತ್ವಲಿಂಗವು, ಹಿ = ಪ್ರಸಿದ್ಧವಷ್ಟೇ[1].

ನಾಭಿಯಲ್ಲಿರುವುದು ಪದ್ಮವೇ ಏಕಾಗಬೇಕು? ಎಂದರೆ, ಪ್ರಸಿದ್ಧಾರ್ಥಂ = ವಿಷ್ಣುವಿನ ನಾಭಿ... ಪ್ರಸಿದ್ಧವಾದ ಪದ್ಮವೆಂಬ ಅರ್ಥವನ್ನು, ವಿನಾ = ಬಿಟ್ಟು, ಅನ್ಯಃ = ಬೇರೆ, ಅರ್ಥಃ = ವಸ್ತುವು, ... ಯುಜ್ಯತೇ = ಯುಕ್ತವಾಗುವುದಿಲ್ಲ[2].

ಪ್ರಸಿದ್ಧಿಯ ಜೊತೆಗೆ ಶ್ರುತಿಸ್ಮೃತಿಗಳ ಸಂವಾದವೂ ಇದೆ. ಅಜಸ್ಯ ನಾಭಾವಿತಿ = 'ಅಜ... ನಾಭಾವಧ್ಯೇಕಮರ್ಪಿತಮ್' ಎಂದು ಮುಂದುವರೆದ, ಶ್ರುತೇಃ = ವೇದಭಾಗದಿಂದ, ಯಸ್ಯ = ಯಾ... ಪರಮಾತ್ಮನ, ನಾಭೇಃ = ಹೊಕ್ಕಳ ದೆಸೆಯಿಂದ, ಲೋಕಸಾರಮ್ = ಹದಿನಾಲ್ಕು ಲೋಕಗ... ಆಶ್ರಯವಾದ, ಪುಷ್ಕರಂ = ಕಮಲವು, ಅಭೂತ್ = ಹುಟ್ಟಿತೋ; ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ... ತಸ್ಮೈ = ಅಂತಹ, ವ್ಯಸ್ತ= ಸೃಷ್ಟ್ಯಾದ್ಯಷ್ಟಕಗಳಲ್ಲಿ ಸೃಷ್ಟಿ,ಸ್ಥಿತಿ,ಸಂಹಾರ,ನಿಯಮನಗಳು ಜ... ಜಡಪದಾರ್ಥಗಳಲ್ಲಿ, ಸಮಸ್ತ = ಸೃಷ್ಟ್ಯಾದ್ಯಷ್ಟಕಗಳು ಜೀವರಲ್ಲಿ, ಹೀಗೆ ವಿಶ್ವ = ಸಮಸ್ತಜಗತ್... ವಿಭೂತಯೇ = ಸೃಷ್ಟ್ಯಾದಿಗಳಿಗೆ ಕಾರಣನಾದ, ಲೋಕಕರ್ತ್ರೇ = ಲೋಕಸ್ವಾಮಿಯಾದ, ವಿಷ್ಣವೇ = ಮಹಾವಿಷ್ಣುವಿಗೆ, ನಮಃ = ನಮಸ್ಕಾರವು. ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟ...

---

(१) भाष्यदीपिका – नन्वत्रापि यच्छब्देन विष्णुरिति कुतः? विश्वकर्मेति श्रुतिबलादस्य सूक्ताख्यप्रकरणस्य विश्वकर्माद्यन्यपरतया तद्गतयच्छब्दस्यापि तत्परत्वौचित्यादित्यत आह – 'अजस्य' इति ।। 'हि' यस्मात् इति वाक्ये 'विष्णोः लिङ्गं' पद्मनाभत्वाख्यमसाधारणो धर्मः श्रुतः तस्माद् यच्छब्दोदितो विष्णुरेवेत्यन्वयः । उत्सर्गतो लिङ्गाच्छ्रुतेः प्राबल्येऽपि सावकाशाया विश्वकर्मश्रुतेः निरवकाशलिङ्गेन बाधोपपत्तेरिति भावः ।।

श्रुत्यर्थस्तु - 'अजस्य' अजन्यस्य पुरुषस्य 'नाभौ एकं' वस्तु 'अर्पितम्' उद्धृतम् 'यस्मिन् विश्वानि भुवनानि' सर्वे चतुर्दशलोकाः 'अधितस्थुः' अधिष्ठिताः इति ।।

(२) भाष्यदीपिका – नाभ्यर्पितं पद्मादन्यत् किं न स्यादित्यत आह - 'नच' इति ।। चः समुच्चये । प्रसिद्धं विष्णुनाभिस्थत्वेन प्रसिद्धं पद्माख्यार्थं 'विनाऽन्योऽर्थो' न युज्यते. प्रसिद्धिबाधादित्यर्थः । विश्वकर्मश्रुतिवत् पद्मनाभत्वलिङ्गमप्यन्यस्य किं न स्यात्? इत्यतो वाऽऽह - 'नच' इति । पद्मनाभत्वेन प्रसिद्धपदार्थं भगवन्तं विना 'अन्यः' पद्मनाभो न युज्यते प्रसिद्धिबाधादित्यर्थः ।।

(३) भाष्यदीपिका – न केवलं प्रसिद्धिबलादेवैतच्छ्रुत्युक्तं पद्मं पद्मनाभश्च हरिरित्यवसीयते किन्तु 'अजस्य' इति श्रुतेस्तदुभयबोधकत्वेन स्मृत्यनुगृहीतत्वाच्चेत्याह - 'अजस्य' इति ।। इति श्रुतेरित्यन्वयः । तथा च 'अजस्य नाभाविति श्रुतेः' सकाशात् 'लोकसार

ನಿರವಕಾಶಲಿಂಗವೇ ಶ್ರುತಿಬಾಧಕವಾಗುವಾಗ ಸಮಾಖ್ಯಾಸಹಿತವಾದ ನಿರವಕಾಶ- ಲಿಂಗವು ಶ್ರುತಿಯನ್ನು ನಿಶ್ಚಯವಾಗಿ ಬಾಧಿಸುತ್ತದೆ. ದಿವಾ = ಸ್ವರ್ಗಲೋಕದಲ್ಲಿರುವ ಸಕಲ ದೇವತೆ- ಗಳಿಗಿಂತ, ಪರಃ = ಉತ್ತಮನು, ಏನಾ = ಈ, ಪೃಥಿವ್ಯಾ = ಭೂಲೋಕದಲ್ಲಿರುವ ಸಕಲ ಜೀವಜಂತುಗಳಿ- ಗಿಂತಲೂ, ಪರಃ = ಉತ್ತಮನು, ಇತಿ = ಹೀಗೆ, ಸಮಾಖ್ಯಾಶ್ರುತೌ = ಸಮಾನವಾದ ಅರ್ಥವುಳ್ಳ ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿದೆ[1].

ಸಮಾಖ್ಯಾಶ್ರುತಿಯಲ್ಲಿಯೂ ವಿಷ್ಣುವೇ ಏಕೆ ಪ್ರತಿಪಾದ್ಯನಾಗಬೇಕು? ಎಂದರೆ, ಯಂ = ಯಾವನನ್ನು, ಕಾಮಯೇ = ರುದ್ರ ಬ್ರಹ್ಮಾದಿಗಳನ್ನಾಗಿ ಮಾಡಲು ಇಚ್ಛಿಸುತ್ತೇನೆಯೋ, ತಂ = ಅವ- ನನ್ನು, ಉಗ್ರಂ = ರುದ್ರನನ್ನಾಗಿ, ಕೃಣೋಮಿ = ಮಾಡುತ್ತೇನೆ. ತಂ = ಅವನನ್ನು, ಬ್ರಹ್ಮಾಣಂ = ಚತು- ರ್ಮುಖಬ್ರಹ್ಮನನ್ನಾಗಿ, ತಂ = ಅವನನ್ನು, ಋಷಿಂ = ಋಷಿಯನ್ನಾಗಿ, ಸುಮೇಧಾಮ್ = ಪ್ರಜ್ಞಾವಂತ- ನನ್ನಾಗಿ, ಕೃಣೋಮಿ = ಮಾಡುತ್ತೇನೆ. ಇತ್ಯುಕ್ತ್ವಾ = ಹೀಗೆ ಹೇಳಿ, ಮಮ = ಇಂತಹ ನನಗೂ (ಲಕ್ಷ್ಮೀದೇವಿಗೂ), ಯೋನಿಃ = ಕಾರಣಪುರುಷನು, ಸಮುದ್ರೇ ಅಪ್ಸು = ಕ್ಷೀರಸಮುದ್ರದ, ಅಂತಃ = ಒಳಗಡೆ ಇರುವ ಪುರುಷನು, ಇತಿ = ಹೀಗೆ, ಆಹ = ಅಂಭ್ರಣೀಸೂಕ್ತದಲ್ಲಿ ಲಕ್ಷ್ಮೀದೇವಿಯೇ ಹೇಳಿದ್ದಾಳೆ[2].

---

लोकाधारभूतं 'पुष्करं' पद्मम् 'अभूत्' इति ज्ञायते । 'तस्मै व्यस्तसमस्तविश्वविभूतये' विश्वस्य जगतो विभूतयः सृष्ट्याद्यष्टकं जीवादौ व्यस्ताः विस्तृताः जडादौ समस्ताः संक्षिप्ताः विश्वविभूतयो येनासौ व्यस्तसमस्तविश्वविभूतिस्तस्मै 'लोककर्त्रे' लोकस्वामिने 'विष्णवे नमः' इत्यर्थः । तत्त्वप्रदीपे तु - समस्तविश्वविभूतयो येन व्यस्ता स व्यस्तसमस्तविश्वविभूतिः । अथ वा व्यस्ताः समस्ता विश्वविभूतयो येनेति द्वेधा व्याख्यातम् । तत्र द्वितीयं टीकायां विवृतम् । पूर्वार्धे विष्णुवाचकशब्दाभावादुत्तरार्धो- दाहरणम् । 'इति च स्कान्दे' इति चशब्दो भिन्नक्रमेण 'उक्तम्' इत्यध्याहृतपदेन सम्बध्यते । यत एवमतः 'अजस्य' इत्युक्तं पद्ममेव, पद्मनाभश्च हरिरेवेति वाक्यशेषः । न केवलं प्रसिद्धिबाधादिति चार्थः ।।

(१) भाष्यदीपिका – यदा निरवकाशलिङ्गमात्रं श्रुतिबाधकं तदा किमु वाच्यं समाख्यायुक्तं तदिति भावेनाऽऽह – पर इति ।। इदं चाऽवर्तते, 'विष्णुरेव' इत्यादिकमत्रापि सम्बध्यते । तथाच यतः विश्वकर्मसूक्ते 'परो दिवा पर एना पृथिव्या परो देवेभिर- सुरैर्यदस्ति' इति या आख्या उक्तिः तस्याः समा समाना 'परो दिवा' इत्येवंरूपश्रुतौ आम्भ्रिणीसूक्तेऽस्ति अतोऽपि 'विष्णुरेव' विश्वकर्मसूक्तोदित इत्यर्थः ।।

(२) भाष्यदीपिका – ननु समाख्याश्रुतावपि विष्णुः कुतो वाच्य इत्यत आह - यमिति ।। इतीत्यनन्तरं वाक्येनेत्युभयत्र शेषः । 'परो दिवा' इत्येतत् समस्तमनेनापि योज्यम् । अत्र समाख्याश्रुतावित्येकं पदम् । तथाच यस्मात् 'परो दिवा' इति समाख्याश्रुतौ

ಸಮುದ್ರದಲ್ಲಿರುವವನು ರುದ್ರನೇಕಾಗಬಾರದು? ಮತ್ತು ಉಗ್ರಶಬ್ದದಿಂದ ಬೇರೊಬ್ಬ ಕ್ರೂರ ಪ್ರತಿಪಾದ್ಯನಾಗಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಉಗ್ರಃ = ಉಗ್ರ- ನೆಂದರೆ, ರುದ ಈಶ್ವರನು, ಸಮುದ್ರೇऽಂತಃ = ಕ್ಷೀರಸಮುದ್ರದ ಮಧ್ಯದಲ್ಲಿರುವವನು, ನಾರಾಯಣಃ = ನಾರಾಯ ಪ್ರಸಿದ್ಧತ್ವಾತ್ = ಹೀಗೆ ಶ್ರುತಿಪ್ರಸಿದ್ಧಿ ಇರುವುದರಿಂದ, ಅಸ್ಯ ಅರ್ಥಸ್ಯ = ಈ ಬ್ರಹ್ಮಶಬ್ದದ ಅಭಿಪ್ರಾಯ ಸೂಚಿತತ್ವಾತ್ = ಸೂಚಿಸಿರುವುದರಿಂದ[1].

---

मेत्याख्या माख्या तया सहिता समाख्या 'प्रकृतिर्वाव समासमा' (माध्यन्दिनश्रुति इति श्रुतौ समासमत्वोक्तेः 'नामैकदेशे' इति न्यायेन समाभिधा वा, अहमिति प्रकृ लक्ष्मीः 'यं' इत्यादिवाक्येन ब्रह्मादीनां स्वाधीनत्वमुक्त्वा 'मम योनिरप्स्वन्तःसमुद्रे' इति वाक्येन 'परो दिवा' इत्युक्तं विष्णुं स्वकारणत्वेन समुद्रस्थत्वेन चाऽह, तस्माद् विष्णुरेव समाख्याश्रुतिप्रतिपाद्य इत्यर्थः । उक्त्वेत्यनेन लक्ष्मीकारणं ब्रह्माद्यन्यतमं किं न स्यादिति शङ्का वारिता । श्रुतौ 'दिवा' इत्यादितृतीया पञ्चम्यर्थे । तथा च - 'दिवः' 'दिव' 'परः' 'एना' एतस्याः भूम्याश्च 'परः' उत्तमः । 'देवेभिः' 'देवेभ्यः' 'असुरैः' असुरेभ्य 'परः' उत्तमः । किं बहुना ? 'यदस्ति' तस्मात् सर्वस्मादपि परः । स विष्णुः द्यावापृथिवीभ्यां परः । अहं तु 'महिना' महिम्ना 'एतावती' परिमिता बभूव । अहमेतावती यथोक्तप्रकारा महिम्ना नातोऽधिकेति वा श्रुत्यर्थः । अहमिति लब्धपदेन लक्ष्मीरुच्यते, एतत्सूक्तप्रवर्तिकायाः अम्भ्रिण्याः लक्ष्मीरूपत्वात् । तथाच - अहं 'यं यं' रुद्रपदयोग्यं जीवं 'उग्रं' रुद्रं कर्तुं 'कामये' इच्छेयं 'तं तं' उग्रं कृणोमि करोमि । एवं तत्तत्पदयोग्यं यंयं 'ब्रह्माणं' 'ऋषिं' 'सुमेधां' सुमेधसं वा कर्तुं कामये तंतं तथा करोमीत्यर्थः । शिष्टवाक्यार्थः 'पत्युरसामञ्जस्यात्' (ब्र.सू. २-२-३७) इत्यधिकरणे वक्ष्यते । तथाऽपि मम न स्वातन्त्र्यमित्याह - 'मम' इति ।। 'मम' 'योनिः' कारणं 'समुद्रे अप्सु' अपाम् 'अन्तः' तिष्ठति । तस्याऽधिक्यं कम्पस्वरार्थः । पतिनाम न ग्राह्यमिति भावेन नारायण इत्यनुक्त्वा तदर्थबोधनायैवमुक्तिः ।।

(१) भाष्यदीपिका – नन्वत्र समुद्रस्थो रुद्रः किं न स्यात् 'तप्यमानाय सलिले' इति भारतोक्तेः । न च रमाधीनतोक्तिविरोधः, उग्रशब्देन कस्यचित् क्रूरस्य ग्रहणसम्भवादित्यत आह – 'उग्र' इति ।। भवेदित्युभयत्र शेषः । तथा च अत्रोग्र इत्युक्तो रुद्र एव भवेत्, तथा समुद्रेऽन्तःस्थितो नारायण एव भवेत्, इति प्रतिज्ञावाक्यद्वयार्थः । तत्र हेतुमाह - 'प्रसिद्धत्वात्' इति ।। 'अस्यार्थस्य' रुद्रे उग्रशब्दवाच्यत्वरूपार्थस्य प्रसिद्धत्वात्, 'उग्रः कपर्दी' इत्यादिकोशप्रसिद्धत्वात्, उग्रशब्देन रुद्रशब्दार्थस्य क्रौर्यस्य ज्ञापितत्वाच्चेत्यर्थः । 'रुद्रो रौद्र उग्रः' इत्येतेषामेकार्थत्वादिति भावः । एवं समुद्रशायित्वरूपार्थस्य 'महोदधिशयोऽन्तकः' इत्यादिविष्णुसहस्रनामप्रसिद्धत्वात् समुद्रेऽन्तःस्थत्वकथनेन 'आपं

ಪ್ರಸಿದ್ಧಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನೇಕೆ ಸ್ವೀಕರಿಸಬಾರದು? ಎಂದರೆ ಅವಿರೋಧೇ = ವಿರೋಧವಿಲ್ಲದಿದ್ದಾಗ, ಪ್ರಸಿದ್ಧಃ = ಪ್ರಸಿದ್ಧವಾದ ಅರ್ಥವನ್ನು, ನಚ ಪರಿತ್ಯಜ್ಯತೇ = ಬಿಡಬಾರದು. ಉಕ್ತನ್ಯಾಯೇನ ಚ = ಮೇಲೆ ಹೇಳಿದ ಯುಕ್ತಿಗಳಿಂದ, ಶ್ರುತಯಃ = ಸಕಲವೇದಗಳು, ಏತಮೇವ = ನಾರಾಯಣನಾದ ಭಗವಂತನನ್ನೇ, ವದಂತಿ = ಪ್ರತಿಪಾದಿಸುತ್ತವೆ[1].

ಎಲ್ಲ ಶ್ರುತಿಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆನ್ನಲು ಸ್ಮೃತಿಪ್ರಮಾಣವೂ ಇದೆ. ವೇದೇ = ಸಕಲವೇದಗಳಲ್ಲಿ, ರಾಮಾಯಣೇ ಚ = ಮೂಲರಾಮಾಯಣದಲ್ಲಿಯೂ, ಪುರಾಣೇ = ಅಷ್ಟಾದಶ-ಪುರಾಣಗಳಲ್ಲಿ, ತಥಾ = ಹಾಗೇ, ಭಾರತೇ = ಮಹಾಭಾರತದಲ್ಲಿಯೂ, ಆದೌ = ಪ್ರಾರಂಭದಲ್ಲಿ, ಮಧ್ಯೇ ಚ = ಮಧ್ಯದಲ್ಲಿಯೂ, ಅಂತೇ ಚ = ಅಂತ್ಯದಲ್ಲಿಯೂ, ವಿಷ್ಣುಃ = ನಾರಾಯಣನು, ಸರ್ವತ್ರ = ಎಲ್ಲಶಬ್ದಗಳಿಂದಲೂ, ಗೀಯತೇ = ಗಾನಮಾಡಲ್ಪಡುತ್ತಾನೆ. ಇತಿ = ಹೀಗೆ, ಹರಿವಂಶೇಷು = ಹರಿವಂಶದ ಮೂರು ಭಾಗಗಳಲ್ಲಿ ಹೇಳಲಾಗಿದೆ[2].

---

नाराः' इति स्मृतिसिद्धनारशब्दोदितोदकाश्रयत्वरूपनारायणशब्दार्थस्य 'सूचितत्वाच' इत्यर्थः ।।

(१) भाष्यदीपिका – ननु प्रसिद्ध्यादिसद्भावेऽपि तत्परित्यागेनान्यस्वीकारे किं बाधकमित्यत आह - 'न च' इति ।। अर्थस्येत्येतद् विपरिणामेनात्र सम्बध्यते । तथा च यतोऽयमर्थः 'प्रसिद्धः' अतः 'अविरोधे' प्रमाणविरोधाभावे 'न परित्यज्यते' न त्यज्यत इत्यर्थः, प्रसिद्धार्थस्य विरोधैकापोद्यत्वात्, अन्यथा प्रसिद्धिबाधादिति भावः । 'आकाशादेव समुत्पद्यन्ते' (छां. उ. १-९-१.) 'जनितोत विष्णोः' (ऋ.सं. ९-९७-५.) 'नकि-रिन्द्रत्वदुत्तरः'(ऋ.सं. ४-३०-१.) इत्यादौ व्यभिचारवारणायाविरोध इति । ननु विरोधाभावोऽसिद्धः, यतोऽत्र यदि रुद्रो लक्ष्म्यधीनतयोग्रपदेनोच्यते तर्हि 'विश्वाधिको रुद्रः' इत्यादिश्रुतिविरोधः स्यात् । अतोऽत्र तत्परित्यागो युक्त इत्यत आह - 'उक्त' इति । करणव्युत्पत्त्या न्यायः प्रमाणम् । तथा च - यतो 'नामानि विश्वा' (भाल्लवेय-श्रुतिः) इत्याद्युक्तागमेन, तदुक्तोत्पत्तिमत्प्रवृत्तिनिमित्तवत्त्वाद्यनुमानेन, चशब्दसमुच्चितैः 'वेदे रामायणे चैव' इति वक्ष्यमाणप्रमाणैश्च साधकैः 'श्रुतयो' 'विश्वाधिको रुद्रः' (महाना. १०-३.) इत्याद्यागमाः रुद्रादिपदानां विष्णुवाचित्वमाश्रित्य वा, विश्वो वायुः अधिको यस्माद् विश्वाधिक इत्यर्थाश्रयणेन वा 'एतमेव' विष्णुमेव 'वदन्ति' तात्पर्यतः प्राधान्येन बोधयन्ति इत्यवगम्यते । अतो न 'विश्वाधिकः' इत्यादिश्रुतिविरोध इति योजना ।।

(२) भाष्यदीपिका – किं बहुना? 'सर्वत्र' सर्वग्रन्थेषु 'गीयते' प्रतिपाद्यते । तेष्वपि न भागे, किन्त्वादौ, मध्ये, अन्ते च, कर्मादिकाण्डत्रयेऽपि, उपक्रमोपसंहारयोरवान्तरप्रकरणेषु

सत्तर्कदीपावली – 'विष्णुजिज्ञासया विष्णुप्रसादो युक्तः न तु ब्रह्मजिज्ञासया' इत्यत आह – ब्रह्मेति ।। 'विष्णुरेव ब्रह्म' इत्यत्र तद्विषयत्वेन प्रसिद्धश्रुतिमाह - यमन्तरिति ।। क्षीरसमुद्रशायित्वलिङ्गविशिष्टमन्तस्समुद्र इत्यादिनाऽनूद्य 'तदेव ब्रह्म परमं कवीनाम्' इति विधानात् । 'तन्नो विष्णुः प्रचोदयात्' इत्युत्तरत्र श्रवणाच्च । न च तत्रैव 'तन्नो रुद्र' इत्यादिश्रवणात् रुद्रादीनामपि ब्रह्मत्वप्राप्तिरिति वाच्यम् । 'तदेवाग्निस्तद्वायुस्तत्सूर्यस्तदुचन्द्रमाः' इत्यादिना क्षीरसमुद्रशायिन्येव इतरदेवतानाम्नां रुद्रादिशब्दानां च मुख्यनिष्ठत्वात् । रुद्रादिनाममात्रवाच्यत्वे विष्णोः श्रुतिमाह – नामानीति ।। लोके तावत् सुरनरादिरूपे परमैश्वर्यादिप्रवृत्तिनिमित्ताभावाद् विश्वानीन्द्रानिनामानि अभितो मुख्यतो न सन्ति । अतोऽनृतस्य ब्रह्म व्यतिरिक्तस्य जगतः यस्मादैश्वर्यादिकं सर्वं मुख्यतो नामप्रवृत्तिनिमित्तम् आविरासीत् । तं च गुणसमुद्रं सर्वाणि नामानि आसमन्तात्परमुख्यतया विशन्ति तं विष्णुमेव परममुदाहरन्ति इत्यर्थः । अन्येषामपि विष्णवादिनामवत्वं किं न स्यादित्येतत् श्रुत्या परिहरति – यो देवानामिति ।। अत्र विश्वकर्तृत्वात् विश्वकर्मनामा विष्णुरेवेति प्रतिपाद्यते न देववर्धक्यादिः । अजस्य नाभावध्येकमर्पितं यस्मिन्विश्वा भुवनानि तस्थुरिति पद्मताभत्वाख्याविष्णुलिङ्गश्रवणविरोधात् । ननु पद्मनाभवदन्योऽप्ययं सम्भवतीत्यत आह । न चेति ।। न हि सर्वभुवनाश्रयपद्माधारानाभिमान् इतः पद्मनाभादन्यः श्रुतिपुराणादि प्रसिद्धोस्तीत्यर्थः । एतामेव श्रुतिमुदाहृत्य पद्मनाभप्रतिपादकपुराणवचनमाह । अजस्येति । व्यस्ताः इन्द्रादीन् प्रति समस्ता एकीकृत्य दत्ता ब्रह्माणं प्रति विश्वविभूतिर्येन स तथोक्तः । इतोपि विश्वकर्मसूक्ते प्रतिपादितो विष्णुरेव पर एना पृथिव्यैतावती महिना सम्बभूवेति परशब्दस्यावध्यपेक्षत्वात् दिवेत्यादेर्विभक्तिविपरिणामः कार्यस्ततश्चैतदुक्तं भवति । दिवः पर एतस्याः पृथिव्याश्च परो यः पुरुषोत्तमो निर्दिष्टो अस्य महिम्ना प्रभावेन अहमेतावती अहं रुद्रेभिर्वसुभिश्चरामीत्यारभ्य उक्तमाहात्म्यवती सम्बभूवेति । द्यावापृथिवीदेवता चात्र लक्ष्मीरेव द्विरूपा विवक्षिता । तेन द्यावापृथिवीपरत्वं नाम विष्णोः

---

च, सर्वत्र प्रतिवाक्यं प्रतिपदं प्रत्यक्षरं च मुख्यतः प्रतिपाद्यत इत्यर्थः । 'वेदे' इति वचनस्य खिलाखिलपारिजाताख्यहरिवंशभागत्रयगतत्वसूचनाय 'हरिवंशेषु' इति बहुवचनम् । हरिवंशेष्वित्यनन्तरं 'यदुक्तं' इति शेषः, तस्यातो न विरोध इति हरिवंशेषूक्तन्यायेन उक्तरीत्या इति वाऽन्वयः ।

प्रकृतिपरत्वमेव । न चात्रलक्ष्मीप्रभावकारणभूतः द्यावापृथिवीपरो विष्णुरेव कस्माद् ब्रह्मादिः किं न स्यादिति वाच्यम् । 'यं कामये तं तमुग्रं कृणोमि' इत्यादिना रुद्रब्रह्मादीनां स्वसृज्यत्वमुक्त्वा लक्ष्मीरेव 'मम योनिरप्स्वान्तः समुद्रः' इति क्षीरोदार्णवान्तःशयानस्य स्वप्रादुर्भावकारणस्य विष्णोर्निर्दिष्टत्वेन ब्रह्मादेर्लक्ष्मीच्छयास्पदत्वेन विष्णोः प्रकृतिपरत्वेन सिद्धेः । ब्रह्मशब्देन चतुर्मुख इवात्र उग्रशब्देन रुद्र एवोच्यते । 'उग्रः कपर्दि' इति प्रसिद्धत्वात् । समुद्राप्स्वन्तर्योनिशब्दार्थस्य निर्देशेन च नारायणपदयौगिकार्थस्य सूचितत्वात् प्रसिद्धत्वाच्च स एवात्र निर्दिश्यते । नाराः आपः अयनं यस्य सः नारायणः । तन्नामग्रहणं लक्ष्म्याः स्त्रीणां स्वभर्तृनामग्रहणम् अनुचितमिति ज्ञापयितुं न कृतम् । नचोग्रशब्देन रुद्रादन्य एव गौण्यावृत्त्योक्तः किं न स्यात्? इति वाच्यम् । असति बाधके प्रसिद्धपरित्यागासम्भवात् । न चान्याधीनत्वे रुद्रस्य 'विश्वाधिको रुद्रो महर्षिः' इति श्रुतिविरोध इति वाच्यम् । तत् श्रुतेरुक्तरीत्या विष्णुपरत्वात् । 'शाश्वतं शिवमच्युतम्' इत्यादिश्रुतीतिहासादौ विष्णुविषयत्वेन शिवादिशब्दप्रयोगाच्च । एवं यत्र सर्वोत्तमत्वविषयतया प्रयोग इन्द्रादिशब्दानां 'विश्वस्मादिन्द्र उत्तरः' इत्यादिश्रुतीतिहासादौ तत्रोक्तवक्ष्यमाणन्यायैः विष्णुरेवोच्यते । तथाहि वचनम् । वेद इति । तदेतदाह – परो दिवेत्यादिना ।

ವಿಷ್ಣುವಿನ ಜಿಜ್ಞಾಸೆಯಿಂದಲೇ ವಿಷ್ಣುವಿನ ಪ್ರಸಾದವು ದೊರೆಯಬಹುದೇ ಹೊರತು ಬ್ರಹ್ಮಜಿಜ್ಞಾಸೆಯಿಂದ ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ 'ಬ್ರಹ್ಮ' ಎಂದು ಉತ್ತರಿಸಿದ್ದಾರೆ. ವಿಷ್ಣುವೇ ಬ್ರಹ್ಮನೆಂಬ ವಿಷಯದಲ್ಲಿ ಪ್ರಸಿದ್ಧಶ್ರುತಿಯನ್ನು 'ಯಮಂತಃ' ಇತ್ಯಾದಿಯಾಗಿ ಹೇಳಿದ್ದಾರೆ. ಕ್ಷೀರಸಮುದ್ರಶಾಯಿತ್ವಲಿಂಗವಿಶಿಷ್ಟನನ್ನು 'ಅಂತಃಸಮುದ್ರೇ' ಎಂದು ಅನುವಾದ ಮಾಡಿ 'ತದೇವ ಬ್ರಹ್ಮ' ಎಂದು ಬ್ರಹ್ಮತ್ವವನ್ನು ಶ್ರುತಿಯು ವಿಧಿಸುತ್ತಿದೆ. ಮತ್ತು ಅದೇ ಪ್ರಕರಣದಲ್ಲಿ ಮುಂದೆ 'ತನ್ನೋ ವಿಷ್ಣುಃ ಪ್ರಚೋದಯಾತ್' ಎಂದು ಸ್ಪಷ್ಟವಾಗಿ ವಿಷ್ಣುವನ್ನೇ ಶ್ರುತಿಯು ಹೇಳಿದೆ. ಆದ್ದರಿಂದ ವಿಷ್ಣು ಹಾಗೂ ಬ್ರಹ್ಮರು ಬೇರೆಯಲ್ಲ.

'ತನ್ನೋ ರುದ್ರಃ' ಎಂಬುದಾಗಿಯೂ ಆ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ರುದ್ರಾದಿಗಳೂ ಬ್ರಹ್ಮರಾಗಲಿ? ಎಂದು ಪ್ರಶ್ನಿಸಬಾರದು. 'ತದೇವಾಗ್ನಿಸ್ತದ್ವಾಯುಃ' ಎಂಬ ಶ್ರುತಿಯಂತೆ ಇತರ ಸಕಲದೇವತೆಗಳ ನಾಮಗಳು ರುದ್ರಾದಿಶಬ್ದಗಳೂ ಸಹ ಕ್ಷೀರಸಮುದ್ರಶಾಯಿಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿವೆ. ಈ ವಿಷಯದಲ್ಲಿ 'ನಾಮಾನಿ' ಎಂಬ ಶ್ರುತಿಯು ಪ್ರಮಾಣವಾಗಿದೆ. ಶ್ಲೋಕ :

सत्तर्कदीपावली – नच वेदरामायणादिभिः विष्णुरेव सर्वोत्तमतया प्रतिपाद्यते चेत् पाशुपतादिग्रन्थैर्विरोधः तैस्तु रुद्रादेरेव सर्वैश्वर्यादितयेरणादिति वाच्यम् । लोकव्यामोहनार्थं विष्णुनियुक्तरुद्रकृतत्वेनोक्तत्वात् तेषां वराहपुराणे । तदाह – न चेति ॥ मुह्यति तथ्यमिति प्रतिपादितानीत्यर्थः । तथाच पाद्मे । 'आगमैः कल्पितैस्त्वंच जनान् मद्विमुखान् कुरु' इति ।

ननु वैष्णवेष्वेव पुराणेषु विष्णोः सर्वोत्तमत्वप्रतिपादनं नान्यत्रेत्यत आह । शैव इति । अतः शिवादेः सर्वोत्तमत्वप्रतिपादनं शैवपुराणेषु मोहार्थमेवेति मन्तव्यम् । न तु तद्वद्वैष्णवेषु विष्ण्वन्यस्य सर्वोत्तमत्वप्रतिपादनमस्ति । यत्र क्वचित्सन्दिग्धमिव दृश्यते तदेष मोहं सृजामि इत्यत्र मोहार्थत्वेन परिहृतमित्यर्थः । (१।१।१)

॥ इति श्रीपद्मनाभभट्टारकविरचितायां सत्तर्कदीपावल्यां जिज्ञासाधिकरणम् ॥

'ವೇದರಾಮಾಯಣಾದಿಗಳಿಂದ ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದಿಸಿದರೆ ಪಾಶುಪತಾದಿಗ್ರಂಥಗಳ ವಿರೋಧ ಬರುತ್ತದೆ. ಪಾಶುಪತಾದಿಗ್ರಂಥಗಳಲ್ಲಿ ರುದ್ರಾದಿಗಳಿಗಷ್ಟೆ ಸರ್ವೋತ್ತಮತ್ವವನ್ನು ಪ್ರತಿಪಾದಿಸಿದ್ದಾರೆ' ಎಂದು ಹೇಳಬಾರದು. ಲೋಕವ್ಯಾಮೋಹಕ್ಕೋಸ್ಕರ ಭಗವಂತನಿಂದ ಆದಿಷ್ಟನಾದ ರುದ್ರದೇವರೇ ಹಾಗೆ ತಮಗೆ ಸರ್ವೋತ್ತಮತ್ವವನ್ನು ಪಾಶುಪತಾದಿ-ಶಾಸ್ತ್ರಗಳಲ್ಲಿ ಹೇಳಿಕೊಂಡಿರುತ್ತಾರೆ ಈ ವಿಷಯದಲ್ಲಿ ವರಾಹಪುರಾಣವೇ ಆಧಾರ. ಇದನ್ನು 'ನಚ' ಎಂಬ ಭಾಷ್ಯದಿಂದ ಸಮರ್ಥಿಸಿದ್ದಾರೆ. ಇದನ್ನೇ ಪದ್ಮಪುರಾಣದಲ್ಲಿಯೂ ಹೀಗೆ ಹೇಳಿದ್ದಾರೆ. 'ಆಗಮೈಃ ಕಲ್ಪಿತೈಃ ತ್ವಂ ಚ ಜನಾನ್ ಮದ್ವಿಮುಖಾನ್ ಕುರು' ಎಂದು.

ಕೇವಲ ವೈಷ್ಣವಪುರಾಣಗಳಲ್ಲಷ್ಟೇ ವಿಷ್ಣುವನ್ನು ಸರ್ವೋತ್ತಮ ಎನ್ನಲಾಗಿದೆ. ಬೇರೆ ಪುರಾಣಗಳಲ್ಲಿ ಹೇಳಿಲ್ಲವೆಂಬ ಪ್ರಶ್ನೆಗೆ 'ಶೈವೇ ಚ' ಎಂದು ಉತ್ತರಿಸಿದ್ದಾರೆ. ಶೈವ ಪುರಾಣಗಳಲ್ಲಿ ಶಿವಸರ್ವೋತ್ತಮತ್ವವು ಹೇಳಲ್ಪಟ್ಟಿದ್ದರೂ ಅದು ಕೇವಲ ಮೋಹಕ್ಕೋಸ್ಕರ. ಅದರಂತೆ ವೈಷ್ಣವ-ಪುರಾಣಗಳಲ್ಲಿಯೂ ವಿಷ್ಣುಸರ್ವೋತ್ತಮತ್ವವು ಮೋಹಕ್ಕೋಸ್ಕರವೆಂದು ಏಕೆ ಹೇಳಬಾರದು? ಎಂದು ಪ್ರಶ್ನಿಸಬಾರದು. ಎಲ್ಲಿ ಸಂದೇಹಕ್ಕೆ ಅವಕಾಶವಿರುತ್ತದೋ ಅಲ್ಲಿ ಮಾತ್ರ 'ಏಷ ಮೋಹಂ ಸೃಜಾಮಿ' ಎಂಬ ವಾಕ್ಯದಂತೆ ಉತ್ತರವನ್ನು ನೀಡಿ ವಿರೋಧವನ್ನು ಪರಿಹರಿಸಬೇಕು.

ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ
ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು
ಪರಿಪೂರ್ಣಚಂದ್ರಿಕಾ

ಸರ್ವೋತ್ತಮನಾದ ವಿಷ್ಣುವೇ ಜಿಜ್ಞಾಸ್ಯ

तत्वप्रकाशिका – तथाप्यस्ति पाशुपतादिशास्त्रविरोधः । तत्र रुद्रादीनां सर्वोत्तमत्वाद्युक्तेरित्यत आह – नचेति ।। कुतो न विरोधः? इति चेत् तेषां मोहार्थं कृतत्वादिति भावेनाह – एष इति ।। 'मुह्यतेऽनेन जनः' इति मोहो मदनं वञ्चनं वा । त्वं च सृज, दधीच्यादिभिः कारय च । अविद्यमानम् अतथ्यम् । व्यधिकरणत्वेन विद्यमानं वितथ्यम् । आत्मानं मां च प्रति । प्रकाशं प्रसिद्धिम् । स्कान्दादिपुराणानां शिवादिविषयत्वात् तद्विरोधः स्यात्? इत्यत आह – शैवे चेति ।। ब्राह्मे ब्रह्मविषये । क्रीडनकैः क्रीडासाधनैरस्माभिः करणैः । तेषां शैवादित्वेऽपि न विरोधित्वम् । तत्रापि विष्णूत्तमत्वादेरेवोक्ततया स्वविरोधेन तत्राप्रामाण्यात् ।

न च विपरीतं किं न स्यात्? इति वाच्यम् । शिवाद्युत्कर्षादेः शैवादि-पुराणेष्वसाधारण्येन प्राप्तत्वादिति भावः । तथापि विष्णूत्तमत्वरुद्राधमत्वयो वैष्णवग्रन्थविरोधोऽस्तीत्यत आह – न चेति ।। तथा सर्वोत्तमत्वादिविरोधः । ननु तत्रापि विष्णुना रुद्रस्तुत्यादि कथमुच्यते? इत्यत आह – तचेति ।। यदुच्यते 'तचैष मोहम्' इति वचनात् मोहार्थत्वेन प्रत्युक्तमित्यर्थः । तस्माद् रुद्रादीनाम् अधमत्वे बाधकाभावात्, 'यं कामये' इत्यादौ तद्वचनाल्लक्ष्मीकारणत्वेन 'मम योनिः' इत्युक्तो विष्णुरेव । ततश्च तत्समाख्यानाद् विश्वकर्मसूक्तवाच्योऽपि स एव । तथाच । तस्यैव 'यो देवानाम्' इति सर्वनामत्वोक्तेः नान्येषां सर्वनामता, अतस्तेषां 'तन्नो विष्णुः' इत्यादावप्राप्तेर्विष्णुरेव परं ब्रह्म । ततो 'विष्णावेव ब्रह्म शब्दस्य मुख्यत्वेन स एव सूत्रकृता जिज्ञास्यतया विवक्षितः' इति । ''तदेवं जिज्ञास्ये 'तद् ब्रह्म' इति ब्रह्मपदश्रवणात् तेन च तस्य पूर्णगुणत्वोक्तेर्नानुभव-सिद्धाल्पगुणजीवाभेदस्तस्येति सन्दिग्धत्वेन विषयत्वसिद्धेः प्रयोजनादिसद्भावाच्च ब्रह्मजिज्ञासा कर्तव्यैव अतः शास्त्रमारम्भणीयमेव'' इति सिद्धम् ।।१।।अ-१।।

।। इति श्रीमज्जयतीर्थभिक्षुविरचितायां तत्वप्रकाशिकायां जिज्ञासाधिकरणम् ।।

ಅನುವಾದ - ಆದರೂ ಸಹ ಪಾಶುಪತಾದಿಶಾಸ್ತ್ರಗಳ ವಿರೋಧವು ತಪ್ಪಿದ್ದಲ್ಲ. ಏಕೆಂದರೆ, ಪಾಶುಪತಾದಿಶಾಸ್ತ್ರಗಳಲ್ಲಿ ರುದ್ರಾದಿಗಳನ್ನೇ ಸರ್ವೋತ್ತಮರೆಂದು ಸ್ಪಷ್ಟವಾಗಿ ಹೇಳಲಾಗಿದೆ. ಈ

ಪ್ರಶ್ನೆಗೆ ಆಚಾರ್ಯರು 'ನಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಪಾಶುಪತಾದಿಶಾಸ್ತ್ರಗಳ ವಿರೋಧವು ಏಕಿಲ್ಲ? ಎಂದರೆ ಆ ಶಾಸ್ತ್ರಗಳನ್ನು ಕೇವಲ ಮೋಹಕಕ್ಕೋಸ್ಕರ ರಚಿಸಿದ್ದಾರೆಂಬ ಅಭಿಪ್ರಾಯದಿಂದ 'ಏಷಃ' ಎಂಬ ಭಾಷ್ಯವು ಹೊರಟಿದೆ. ಮೋಹಶಬ್ದಕ್ಕೆ 'ಮುಹ್ಯತೇ ಅನೇನ ಜನಃ' ಎಂಬ ವ್ಯುತ್ಪತ್ತಿಯಿಂದ ನಟನ ಅಥವಾ ವಂಚನ ಎಂದರ್ಥ. 'ಎಲೈ ರುದ್ರನೇ ಮೋಹಶಾಸ್ತ್ರವನ್ನು ನೀನೂ ರಚಿಸು. ಮತ್ತು ದಧೀಚಿ ಮುಂತಾದವರಿಂದಲೂ ರಚನೆ ಮಾಡಿಸು' ಅತಥ್ಯಶಬ್ದಕ್ಕೆ 'ಇಲ್ಲದಿರುವಿಕೆ' ಎಂದರ್ಥ. 'ವಿತಥ್ಯ'ಶಬ್ದಕ್ಕೆ 'ಬೇರೆ ಸ್ಥಳದಲ್ಲಿರುವಿಕೆ' ಎಂದರ್ಥ 'ನಿನ್ನನ್ನು ಪ್ರಸಿದ್ಧಿ ಪಡಿಸಿಕೊ' 'ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' 'ಪ್ರಕಾಶ' ಶಬ್ದಕ್ಕೆ ಪ್ರಸಿದ್ಧಿ ಎಂದರ್ಥ.

'ಸ್ಕಾಂದಾದಿಪುರಾಣಗಳು ರುದ್ರಾದಿಗಳನ್ನು ಪ್ರತಿಪಾದಿಸುವುದರಿಂದ ಅವುಗಳ ವಿರೋಧ ಬರುತ್ತದೆ' ಎಂಬ ಪ್ರಶ್ನೆಗೆ 'ಶೈವೇ ಚ' ಎಂಬುದರಿಂದ ಉತ್ತರಿಸಿದ್ದಾರೆ. 'ಬ್ರಾಹ್ಮೇ' ಎಂದರೆ 'ಬ್ರಹ್ಮವಿಷಯಕವಾದ' ಎಂದರ್ಥ. 'ಕ್ರೀಡನಕೈಃ' 'ಕ್ರೀಡಾಸಾಧನಗಳಾದ ನಮ್ಮಿಂದ' ಎಂದರ್ಥ. ಸ್ಕಾಂದಾದಿಪುರಾಣಗಳಲ್ಲಿ ರುದ್ರಾದಿಗಳನ್ನು ಪ್ರತಿಪಾದಿಸಿದ್ದರೂ ಅವುಗಳ ವಿರೋಧವಿಲ್ಲ. ಅಲ್ಲಿಯೂ ಸಹ ವಿಷ್ಣುಸರ್ವೋತ್ತಮತ್ವವೇ ಹೇಳಲ್ಪಟ್ಟಿದೆ. ಆದ್ದರಿಂದ ತನ್ನ ವಾಕ್ಯಕ್ಕೆ ವಿರೋಧ ಬರುವುದರಿಂದ ಆ ಶಾಸ್ತ್ರಗಳು ಅಪ್ರಮಾಣವಾಗಬೇಕಾದೀತು. ಹಾಗಾದರೆ ವಿಪರೀತವಾಗಿ ಶಿವಸರ್ವೋತ್ತಮತ್ವದಲ್ಲಿ ತಾತ್ಪರ್ಯವನ್ನು ಏಕೆ ಹೇಳಬಾರದು, ಏಕೆಂದರೆ ಶೈವಾದಿಪುರಾಣಗಳಲ್ಲಿ ರುದ್ರಾದಿಗಳ ಉತ್ಕರ್ಷವನ್ನೇ ಅಸಾಧಾರಣವಾಗಿ ಪ್ರತಿಪಾದಿಸಿರುತ್ತಾರೆಂದು ಅಭಿಪ್ರಾಯ. ಆದರೂ ಸಹ ವೈಷ್ಣವಗ್ರಂಥಗಳಲ್ಲಿ ವಿಷ್ಣುಸರ್ವೋತ್ತಮತ್ವವನ್ನು ಹೇಳಿ, ರುದ್ರಾದಿಗಳ ಅಧಮತ್ವವನ್ನು ಹೇಳಿದ್ದಾರೆ. ವೈಷ್ಣವಗ್ರಂಥಗಳ ವಿರೋಧ ಶೈವಗ್ರಂಥಗಳಿಗೆ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ನೀವು ಹೇಳಿದಂತೆ ವಿಷ್ಣುಸರ್ವೋತ್ತಮತ್ವಾದಿಗಳಿಂದ ವಿರೋಧ ಬರುವುದಿಲ್ಲ.

ವೈಷ್ಣವಶಾಸ್ತ್ರಗಳಲ್ಲಿಯೂ ಸಹ ವಿಷ್ಣುವಿನಿಂದ ರುದ್ರನು ಸ್ತುತನಾಗಿದ್ದಾನೆಂದು ಕಾಣಸುತ್ತಿದೆ. ಇದನ್ನು ಹೇಗೆ ಕೂಡಿಸುತ್ತೀರಿ? ಎಂಬ ಪ್ರಶ್ನೆಗೆ 'ತಚ್ಚ' ಎಂಬುದರಿಂದ ಉತ್ತರಿಸಿದ್ದಾರೆ. ಆದ್ದರಿಂದ ಸಕಲಶಬ್ದಗಳು ವಿಷ್ಣುವಾಚಕಗಳಾಗಿವೆ. ಇತರ ದೇವತೆಗಳನ್ನು ಪ್ರತಿಪಾದಿಸುವುದಿಲ್ಲ. ಆದ್ದರಿಂದ 'ತನ್ನೋ ವಿಷ್ಣುಃ' ಇತ್ಯಾದಿ ವಾಕ್ಯಗಳಲ್ಲಿ ರುದ್ರಾದಿಗಳು ಪ್ರಾಪ್ತರಾಗದ ಕಾರಣ ವಿಷ್ಣುವೇ ಪರಬ್ರಹ್ಮನೆಂದು ನಿರ್ಣಯವಾಯಿತು. ಆದ್ದರಿಂದ ಸೂತ್ರಕಾರರು ಹೇಳಿದ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿ ಸಮನ್ವಯವಾಗುತ್ತದೆ. ಅಂತಹ ವಿಷ್ಣುವಿನ ಜಿಜ್ಞಾಸೆಯೇ ಸೂತ್ರಕಾರರಿಗೆ ವಿವಕ್ಷಿತವಾಗಿದೆ. 'ತದೇವಂ ಜಿಜ್ಞಾಸ್ಯೇ' 'ತದ್ಬ್ರಹ್ಮ' ಹೀಗೆ ಜಿಜ್ಞಾಸ್ಯನಾದ ವಿಷ್ಣುವಿನಲ್ಲಿ 'ತದ್ ಬ್ರಹ್ಮ' ಎಂಬ ಶ್ರುತಿಯಿಂದ ಬ್ರಹ್ಮಪದವು ಕೇಳಿಸುತ್ತಿದೆ. ಆದ್ದರಿಂದ ಜಿಜ್ಞಾಸ್ಯನು ಗುಣಪೂರ್ಣನಾಗಿದ್ದಾನೆಂಬ ಅರ್ಥವು ತಿಳಿಯುತ್ತದೆ. ಅನುಭವಸಿದ್ಧನಾದ ಜೀವನು ಅಲ್ಪಗುಣನೆಂದು

ತೀಯಲ್ಪಡುತ್ತಿದ್ದಾನೆ. ಈ ಅಲ್ಪಗುಣನಾದ ಜೀವನಿಗೂ ಗುಣಪೂರ್ಣನಾದ ವಿಷ್ಣುವಿಗೂ ಅಭೇದವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಗುಣಪೂರ್ಣನಾದ ವಿಷ್ಣುವು ಸಂದಿಗ್ಧ- ನಾದ್ದರಿಂದ ವಿಷಯನಾಗಿದ್ದಾನೆ. ಆದ್ದರಿಂದಲೇ ಈ ಶಾಸ್ತ್ರಕ್ಕೆ ಪ್ರಯೋಜನ ಅಧಿಕಾರಿ ಸಂಬಂಧಗಳು ಸಹ ಇರುತ್ತವೆ. ಆದ್ದರಿಂದ ಬ್ರಹ್ಮಜಿಜ್ಞಾಸೆಯನ್ನು ಅವಶ್ಯ ಮಾಡಲೇಬೇಕು. ಅದಕ್ಕೋಸ್ಕರ ಈ ಶಾಸ್ತ್ರದ ಆರಂಭವು ಆಗಲೇಬೇಕು.

ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ
ತತ್ವಪ್ರಕಾಶಿಕೆಯ ಅನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತಿಯಾಯಿತು.

* * * *

## ತತ್ವಪ್ರಕಾಶಿಕೆಯನ್ನು ವ್ಯಾಖ್ಯಾನಿಸಲು ಶ್ರೀವ್ಯಾಸತೀರ್ಥರೇ ಸಮರ್ಥರು

भा.दी. – 'न चाविरोधः' इति पूर्वभाष्ये श्रुतिपुराणादिविरोधस्य प्रसिद्ध-रुद्रार्थत्याजनेन निरस्तत्वात् 'न चेतरे'ति किमर्थम्? इत्यत आह – तथापीति ।। अत्र 'उग्र'पदेन रुद्रग्रहणे इत्यनुषङ्गः । भाष्ये एषोहमित्यर्थः । नटनमिति ।। विद्यमानाकाराच्छादनेनाविद्यमानाकारप्रदर्शनं नटनम् । वञ्चनं तु अविद्यमान-कथनम् । 'सृजामि' इत्यस्य विपरिणामेनान्वयमाह – सृजेति ।। गीताभाष्यटीकायां तु कारयेति स्वार्थे णिजित्युक्तं द्वितीये । 'काप्यविद्यमानं लिङ्गमूलान्वेषणादिक-मतथ्यम्' इति तत्वप्रदीपे । विष्ण्वादौ विद्यमानं रुद्रादिनिष्ठतयोच्यमानं स्वातन्त्र्यादिकं वितथ्यम् । आत्मानं मां चेति ।। कर्मप्रवचनीययुक्ते द्वितीया । 'आत्मानं प्रति प्रकाशं प्रसिद्धिं कुरु । मां च प्रति अप्रकाशम् अप्रसिद्धिं कुरु । आत्मप्रसिद्धिं ममाऽप्रसिद्धिं च कुरु' इत्यर्थः । भाष्ये इति वाराहवचनात् मोहार्थं कृतत्वावगमात् नेतरग्रन्थविरोधश्च इत्यन्वयः । 'शैवे च' इत्यादेः सङ्गत्य प्रतीतेराह – स्कान्देति ।। 'शिवादि' इत्यादिपदेन ब्रह्मादिः । तद्विरोध इति ।। अत्र 'उग्र'पदेन रुद्रग्रहणे इति इहाप्यनुषङ्गः । ब्रह्मपुराणभ्रान्तिनिरासायाह – ब्राह्म इति ।। तेनाहमिति ब्रह्मोक्तिरिति दर्शितम् । एतेन 'शैवे' इत्यपि व्याख्यातम् । चोद्यनिरासप्रकारमाह – तेषामिति ।। तत्र शिवाद्युत्कर्षादावप्रामाण्यादिति भावः । तथेति व्याख्येयानुवादः – वचनादिति ।। भाष्ये वचनादित्यस्यानुवृत्तिः । 'उक्तम्' इत्यस्य 'प्रत्युक्तम्' इत्यर्थः । मोहार्थत्वेनेति शेष इति दर्शितम् ।

ननु सूत्रं व्याचक्षाणस्य किं प्रसक्तानुप्रसक्तानुपयुक्तोक्त्या? इत्यतः सर्वस्य प्रकृतोपयोगमाह – तस्मादिति ।। पुराणादौ शिवाद्युत्कर्षोक्तेर्मोहार्थत्वात् 'विश्वाधिकः' इत्यादिश्रुतेर्विष्णुपरत्वादित्यर्थः । अयं च हेतुर्बाधकाभावे बोध्यः । तथाहीत्यादिनोक्तं सिद्धान्तप्रमेयमुन्मूलमिति भ्रमनिरासाय 'तद् विजिज्ञासस्व तद् ब्रह्म' इति ब्रह्मशब्देन पूर्णगुणत्वोक्तेर्नानुभवसिद्धाल्पगुणजीवाभेद इति न्यायविवरणारूढं दर्शयन् अधिकरणार्थं प्रयोजनोक्त्या उपसंहरति – तदेवमिति ।। तच्छब्दार्थं व्यनक्ति – ब्रह्मपदश्रवणादिति ।। एवम् 'अथ कस्मादुच्यते' इति श्रुत्युक्तप्रकारेण पूर्णत्वोक्तेरित्यन्वयः । एतेन न्यायविवरणे ब्रह्मशब्देनेत्यत्र जिज्ञास्यं श्रुतेनेति, 'पूर्णगुणत्वोक्तेः' इत्यत्र तस्येत्यपि योज्यमिति दर्शितम् । सन्दिग्धत्वेनेति ।। ब्रह्मशब्दादिना आपातप्रतीतस्य सगुणनिर्गुणाल्पगुणत्वादिना विप्रतिपत्त्या सन्दिग्धत्वेनेत्यर्थः । जिज्ञासा श्रवणादिरूपा । शास्त्रं = न्यायग्रथनात्मकम् ।

टीकातात्पर्यविवृतौ व्यासतीर्थादयः क्षमाः ।
वयं तु तत्कृतव्याख्यालेशभा(जो)वं वदामहे ।।

।। इति श्रीमद्राघवेन्द्रतीर्थविरचिततत्वप्रकाशिकाभावदीपे जिज्ञासाधिकरणम् ।।

ಅನುವಾದ -- "ತನ್ನೋ ವಿಷ್ಣುಃ ಪ್ರಚೋದಯಾತ್" ಎಂಬಲ್ಲಿರುವ ತತ್ ಪದದಿಂದ ರುದ್ರಾದಿಗಳನ್ನು ಇಟ್ಟುಕೊಳ್ಳಬಾರದು. ಮತ್ತು ಹಿಂದೆ ಪ್ರಸಕ್ತವಾದ ರುದ್ರಾದಿಶಬ್ದಗಳು ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಒಂದು ವೇಳೆ ಪ್ರಸಿದ್ಧರಾದ ರುದ್ರಾದ್ಯರ್ಥಗಳನ್ನೇ ಸ್ವೀಕರಿಸಿದರೆ ಶ್ರುತಿಪುರಾಣಾದಿಗಳ ವಿರೋಧವು ಬರುತ್ತದೆಂದು 'ನಚಾವಿರೋಧೇ' ಎಂಬ ಹಿಂದಿನ ಭಾಷ್ಯದಿಂದ ನಿರಾಕರಿಸಿದರು. ಹಾಗಾದರೆ 'ನಚ ಇತರಗ್ರಂಥವಿರೋಧಃ' ಎಂಬ ಭಾಷ್ಯವು ಪುನಃ ಅದೇ ವಿಚಾರವನ್ನು ಪ್ರತಿಪಾದಿಸುತ್ತರಲ್ಲವೇ? ಎಂಬ ಪ್ರಶ್ನೆಗೆ ತಥಾಹಿ ಎಂಬ ಟೀಕಾಪಂಕ್ತಿಯಿಂದ ಉತ್ತರಿಸುತ್ತಿದ್ದಾರೆ. ಈ ವಾಕ್ಯದಲ್ಲಿ 'ಉಗ್ರಪದೇನ ರುದ್ರಗ್ರಹಣೇ' (ಉಗ್ರಪದದಿಂದ ರುದ್ರನನ್ನು ಸ್ವೀಕರಿಸಿದರೆ) ಎಂಬುದನ್ನು ಅಧ್ಯಾಹಾರ ಮಾಡಬೇಕು. ಭಾಷ್ಯದಲ್ಲಿರುವ 'ಏಷಃ' ಎಂಬ ಶಬ್ದಕ್ಕೆ 'ಅಹಮ್' ಎಂದರ್ಥ. 'ನಟನಮ್' = ಇರುವ ಆಕಾರವನ್ನು ಮುಚ್ಚಿ ಇಲ್ಲದಿರುವ ಸ್ವರೂಪವನ್ನು ತೋರಿಸಿಕೊಳ್ಳುವಿಕೆ. ವಂಚನಮ್ = ಇಲ್ಲದ್ದನ್ನು ಹೇಳುವಿಕೆ. 'ಸೃಜಾಮಿ' ಎಂಬ ಕ್ರಿಯಾಪದವನ್ನು ವಿಪರಿಣಾಮ ಮಾಡಿ 'ಸೃಜ' ಎಂದಿದ್ದಾರೆ. ಗೀತಾಭಾಷ್ಯಟೀಕೆಯಲ್ಲಿ 'ಸ್ವಾರ್ಥೇ ಣಿಚ್ ಪ್ರತ್ಯಯ' ವನ್ನು ಹೇಳಿ 'ಕಾರಯ'ಶಬ್ದಕ್ಕೆ 'ಮಾಡು' ಎಂಬರ್ಥವನ್ನು ಹೇಳಿದ್ದಾರೆ. ತತ್ವಪ್ರದೀಪದಲ್ಲಿ 'ಅತಥ್ಯ'ಶಬ್ದಕ್ಕೆ ಎಲ್ಲಿಯೂ ಇಲ್ಲದ ಲಿಂಗಮೂರ್ತಿ ಅನ್ವೇಷಣಾದಿಗಳೆಂಬ ಅರ್ಥವನ್ನು ಹೇಳಿದ್ದಾರೆ. 'ವಿತಥ್ಯ'ಶಬ್ದಕ್ಕೆ ವಿಷ್ಣುವಿನಲ್ಲಿರುವ ಸ್ವಾತಂತ್ರ್ಯಾದಿಗಳನ್ನು

ಪುರಾಣಾದಿಗಳಲ್ಲಿ ಹೇಳುವಿಕೆ ಎಂದರ್ಥ. 'ಆತ್ಮಾನಂ ಮಾಂ ಚ' ಎಂಬಲ್ಲಿ 'ಕರ್ಮಪ್ರವಚನೀಯಯುಕ್ತೇ ದ್ವಿತೀಯಾ' ಎಂಬ ಸೂತ್ರದಿಂದ ದ್ವಿತೀಯಾವಿಭಕ್ತಿ ಬಂದಿದೆ. 'ಆತ್ಮಾನಂ ಪ್ರತಿ ಪ್ರಕಾಶಂ ಪ್ರಸಿದ್ಧಿಂ ಕುರು' (ನಿನ್ನನ್ನು ಪ್ರಸಿದ್ಧಿ ಮಾಡಿಕೋ) 'ಮಾಂ ಚ ಪ್ರತಿ ಅಪ್ರಸಿದ್ಧಿಂ ಕುರು' (ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' ಎಂದರ್ಥ. ಭಾಷ್ಯದಲ್ಲಿ 'ಇತಿ ವಾರಾಹವಚನಾತ್' ಎಂಬ ಪದಕ್ಕೆ 'ನ ಚೇತರಗ್ರಂಥವಿರೋಧಶ್ಚ' ಎಂಬಲ್ಲಿ ಅನ್ವಯ. ಅಂದರೆ, ಪಾಶುಪತಾದಿಶಾಸ್ತ್ರಗಳು ಮೋಹಕ್ಕಾಗಿ ಹೊರಟಿರುವುದರಿಂದ ಅವುಗಳ ವಿರೋಧವಿಲ್ಲವೆಂದು ತಿಳಿಯಬೇಕು. 'ಶೈವೇ ಚ' ಎಂಬ ಮುಂದಿನ ಭಾಷ್ಯಕ್ಕೆ ಸಂಗತಿಯು ಸ್ಪಷ್ಟವಾಗಿ ತಿಳಿಯದ ಕಾರಣ "ಸ್ಕಾಂದ" ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ. "ಶಿವಾದಿ" ಎಂಬಲ್ಲಿರುವ ಆದಿಪದದಿಂದ ಚತುರ್ಮುಖಾದಿಗಳನ್ನು ಇಟ್ಟುಕೊಳ್ಳಬೇಕು. 'ತದ್ವಿರೋಧಃ' = ಉಗ್ರಪದೇನ ರುದ್ರ-ಗ್ರಹಣೇ (ಉಗ್ರಪದದಿಂದ ರುದ್ರನನ್ನು ಸ್ವೀಕರಿಸಿದರೆ) ಎಂಬುದನ್ನು ಅಧ್ಯಾಹಾರ ಮಾಡಬೇಕು. 'ಬ್ರಾಹ್ಮ'-ಶಬ್ದಕ್ಕೆ ಬ್ರಹ್ಮಪುರಾಣ ಎಂಬ ಭ್ರಾಂತಿಯನ್ನು ನಿರಾಸಮಾಡುವುದಕ್ಕಾಗಿ 'ಬ್ರಾಹ್ಮ' ಎಂಬ ಟೀಕೆಯು ಹೊರಟಿದೆ. ಆದ್ದರಿಂದ ಅಹಂ ಎಂಬುದು ಬ್ರಹ್ಮನ ಮಾತು ಎಂದು ತಿಳಿಸಿದಂತಾಯಿತು. ಆದ್ದರಿಂದಲೇ ಶೈವೇ ಎಂಬ ಹಿಂದಿನ ಭಾಷ್ಯದ ಮಾತನ್ನು ವ್ಯಾಖ್ಯಾನಿಸಿದಂತಾಯಿತು. ಶಂಕೆಯ ನಿರಾಸದ ಪ್ರಕಾರವನ್ನು 'ತೇಷಾಮ್' ಎಂಬ ಟೀಕೆಯು ವಿವರಿಸುತ್ತಿದೆ. ಪಾಶುಪತಾದಿಗಳಿಗೆ ಶಿವಾದಿಗಳ ಉತ್ಕರ್ಷದಲ್ಲಿ ಪ್ರಾಮಾಣ್ಯವಿಲ್ಲವೆಂದು ಅಭಿಪ್ರಾಯ. 'ತಥಾ'' ಎಂಬುದು ಭಾಷ್ಯದ ಮಾತು. 'ವಚನಾತ್' ಎಂಬ ಪದದ ನಂತರ 'ಭಾಷ್ಯೇ' ಎಂಬುದನ್ನು ಅಧ್ಯಾಹಾರ ಮಾಡಬೇಕು. 'ಉಕ್ತಂ' ಎಂದರೆ ಪ್ರತ್ಯುಕ್ತಮ್ ಎಂದರ್ಥ. 'ಮೋಹಾರ್ಥತ್ವೇನ' ಎಂಬುದನ್ನು ಅಧ್ಯಾಹಾರ ಮಾಡಬೇಕು.

ಸೂತ್ರವನ್ನಷ್ಟೇ ವ್ಯಾಖ್ಯಾನಿಸಬೇಕು. ಅಪ್ರಸಕ್ತವಾದದ್ದನ್ನೆಲ್ಲ ಹೇಳುತ್ತಿರುವುದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ತಸ್ಮಾತ್' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ. ಪುರಾಣಾದಿಗಳಲ್ಲಿ ಶಿವಾದಿಗಳ ಉತ್ಕರ್ಷೆಯನ್ನು ಕೇವಲ ಮೋಹಕ್ಕೋಸ್ಕರ ಹೇಳಿರುತ್ತಾರೆ. ಆದ್ದರಿಂದ 'ವಿಶ್ವಾಧಿಕೋ ರುದ್ರಃ' ಎಂಬ ಶ್ರುತಿಯು ವಿಷ್ಣು-ಪರವೇ ಆಗಿದೆ. ಬಾಧಕವಿಲ್ಲದಿದ್ದಾಗ ಮಾತ್ರ ಈ ಅರ್ಥವನ್ನು ತಿಳಿಯಬೇಕು. 'ತಥಾಹಿ' ಎಂಬುದರಿಂದ ಪ್ರಾರಂಭಿಸಿ ಇಲ್ಲಿಯ ತನಕ ನಿರೂಪಿಸಿದ ಸಿದ್ಧಾಂತಪ್ರಮೇಯವು ಮೂಲದಲ್ಲಿ ಹೇಳಿಲ್ಲವೆಂಬ ಭ್ರಾಂತಿಯನ್ನು ಪರಿಹರಿಸಲು 'ತದೇವಮ್' ಇತ್ಯಾದಿ ಟೀಕೆಯು ಹೊರಟಿದೆ. 'ತದ್ವಿಜಿಜ್ಞಾಸಸ್ವ' 'ತದ್ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತಿದೆ. ಅನುಭವದಿಂದ ಜೀವನು ಅಲ್ಪಗುಣನೆಂದು ಸಿದ್ಧನಾಗಿ-ದ್ದಾನೆ. ಈ ಜೀವೇಶ್ವರರಿಗೆ ಅಭೇದವು ಕೂಡುವುದಿಲ್ಲ ಎಂಬ ನ್ಯಾಯವಿವರಣೆಯಲ್ಲಿ ಹೇಳಿದ್ದನ್ನೇ ನಾವು ಇಲ್ಲಿಯತನಕ ನಿರೂಪಿಸಿದ್ದೇವೆ ಎಂದು ತೋರಿಸುತ್ತಾ ಅಧಿಕರಣದ ತಾತ್ಪರ್ಯವನ್ನು ಮತ್ತು ಪ್ರಯೋಜನ-ವನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ. ತತ್ ಶಬ್ದದ ಅರ್ಥವನ್ನು ಬ್ರಹ್ಮಪದಶ್ರವಣಾತ್ ಎಂಬುದರಿಂದ ನಿರೂಪಿಸಿದ್ದಾರೆ. ಇದರಂತೆ 'ಅಥ ಕಸ್ಮಾದುಚ್ಯತೇ ಇತಿ ಶ್ರುತ್ಯುಕ್ತಪ್ರಕಾರೇಣ ಪೂರ್ಣತ್ವೋಕ್ತೇಃ' ಎಂದು ಅನ್ವಯ. ಆದ್ದರಿಂದ ನ್ಯಾಯವಿವರಣದಲ್ಲಿ 'ಬ್ರಹ್ಮಶಬ್ದೇನ' ಎಂಬಲ್ಲಿ ಮತ್ತು ಜಿಜ್ಞಾಸ್ಯೇ ಶ್ರುತೇನೇತಿ ಪೂರ್ಣಗುಣತ್ವೇನ' ಎಂಬಲ್ಲಿ 'ತಸ್ಯ' ಎಂಬ ಪದವನ್ನು ಯೋಜನ ಮಾಡಿಕೊಳ್ಳ-ಬೇಕೆಂದು ತಿಳಿಯಬೇಕು. 'ಸಂದಿಗ್ಧತ್ವೇನ' ಎಂಬುದಕ್ಕೆ "ಬ್ರಹ್ಮಶಬ್ದದಿಂದ ಆಪಾತತಃ ಸಗುಣನೋ,

ನಿರ್ಗುಣನೋ ಅಲ್ಪಗುಣನೋ ಇತ್ಯಾದಿಯಾಗಿ ವಿಪ್ರತಿಪತ್ತಿಗಳು ಇರುವುದರಿಂದ ಸಂದಿಗ್ಧವಾಗಿ ಎಂದರ್ಥ. 'ಜಿಜ್ಞಾಸಾ' ಎಂದರೆ ಶ್ರವಣಾದಿರೂಪವಾದ ಜಿಜ್ಞಾಸೆ' ಎಂದರ್ಥ. ನ್ಯಾಯಗ್ರಥನಾತ್ಮಕವಾದದ್ದು ಶಾಸ್ತ್ರವೆನಿಸಿದೆ.

ಟೀಕಾತಾತ್ಪರ್ಯವಿವೃತೌ ವ್ಯಾಸತೀರ್ಥಾದಯಃ ಕ್ಷಮಾಃ ।
ವಯಂ ತು ತತ್ಕೃತವ್ಯಾಖ್ಯಾಲೇಶಭಾ(ಜೋ)ವಂ ವದಾಮಹೇ ॥

ಟೀಕೆಯು ಅತ್ಯಂತಗಂಭೀರ. ಇದರ ತಾತ್ಪರ್ಯವನ್ನು ವಿವರಿಸಲು ಜ್ಞಾನಿಗಳಾದ ವ್ಯಾಸತೀರ್ಥಾದಿಗಳೇ ಸಮರ್ಥರು. ನಾವು ಸಮರ್ಥರಲ್ಲ. ಆದರೂ ವ್ಯಾಸತೀರ್ಥಾದಿಗಳ ವ್ಯಾಖ್ಯಾನದ ತುಣುಕಿನ ಅಭಿಪ್ರಾಯವನ್ನಷ್ಟೇ ಇಲ್ಲಿ ನಿರೂಪಿಸಿದ್ದೇವೆ.

ಶ್ರೀರಾಘವೇಂದ್ರತೀರ್ಥರಿಂದ ವಿರಚಿತವಾದ ತತ್ತ್ವಪ್ರಕಾಶಿಕಾವ್ಯಾಖ್ಯಾನವೆಂಬ
ಭಾವದೀಪಟಿಪ್ಪಣಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

* * * *

## ಜಿಜ್ಞಾಸಾಧಿಕರಣದ ಸಮಾಪ್ತಿ

वा.मं. – 'विरोधः' इत्यनन्तरम् 'अत्र रुद्रग्रहणे' इत्यनुवर्तते । भाष्ये 'एष'इत्यस्य 'एनम्' इत्यर्थः । मोहस्य मिथ्याज्ञानरूपस्य मोहकत्वादपवादमाह – मुख्यत इति ॥ 'नटनं वञ्चनं वा' इति विद्यमानाकाराच्छादनेनाविद्यमानाकारप्रदर्शनं नटनम् । 'अविद्यमानकथनं वञ्चनम्' इत्युभयोः क्रियावचनरूपत्वाद् भेदः । दधीच्यादिभिः ऋषिभिः क्वापि अविद्यमानं लिङ्गमूलान्वेषणादिकम् अतथ्यम् । विष्ण्वादौ विद्यमानं स्वातन्त्र्यादिकं रुद्रादौ उच्यमाने वितथ्यम् । 'आत्मानं मामित्यनयोः कर्मणि द्वितीयात्वे प्रकाशवन्तम् इत्यादि स्यात्, नतु प्रकाशमित्यादि' इत्यत आह – आत्मानं मां च प्रतीति ॥ 'अभितः परितः समयानिकषा ह प्रतियोगेऽपि'(वा) इति स्मरणात् कर्मप्रवचनीययोगे द्वितीयेति भावः । प्रकाशं प्रसिद्धमिति ॥ तेन अप्रकाशम् अप्रसिद्धम् इत्यपि व्याख्यातम् । आत्मप्रसिद्धिं मामप्रसिद्धिं च कुर्वित्यर्थः । शिवादिविषयत्वादिति ॥ अनेन 'शैवे' इत्येतत् 'शिवविषये' इति व्याख्यातम् । तेषां व्यासप्रणीतत्वेन मोहार्थं निर्मितपाशुपतादिविलक्षणत्वमिति भावः । भाष्ये 'श्वपचात्' इति तर्कितं ध्येयम् । 'करणैः' इति 'क्रीडासाधनैः' इत्यर्थः । स्वविरोधेनेति ॥ स्वप्रतिपादितविष्णूत्तमत्वविरोधेनेत्यर्थः । तत्र रुद्राद्युत्तमत्वे । विपरीतं स्वविरोधेन विष्णूत्तमत्वादावप्रामाण्यरूपम् । असाधा-

ण्येनेति ।। 'मुख्यप्रतिपाद्यत्वेन' इत्यर्थः । असाधारण्येन रुद्राद्युत्कर्षप्रतिपादनाय प्राप्तमविद्यमानमपि तद्ब्रूयादिति तदुद्देशेन प्रवृत्ते राजस्तुत्यादौ तथा दर्शनात् । प्रासङ्गिकं विष्णूत्तमत्वं विद्यमानमेव ब्रूयात् । नहि तत् तदुद्देशेन प्रवृत्तम्, येन अविद्यमानमपि ब्रूयादिति भावः । 'तथा' इत्यनुवादः । 'उक्त'शब्दार्थः प्रत्युक्तमिति । उच्यत इति ।।

'आराध्य देवदेवेशं शङ्करं लोकशङ्करम् ।
तपसा तोषयित्वा तं कैलासगिरिवासिनम् ।
रुक्मिण्यास्तनयं लेभे दग्धं कामं पुनर्हरिः ।।

इत्यादिनोच्यत इत्यर्थः । 'ब्रह्मशब्दश्च विष्णावेव' इत्यादिनोक्तमुपसंहरति – तस्मादित्यादिना ।। अधिकरणार्थमुपसंहरति – तदेवमिति ।। 'अतः' इति सिद्धान्ते फलकथनम् ।।

।। इति शर्कराश्रीनिवासाचार्यविरचितवाक्यार्थमञ्जर्यां
जिज्ञासाधिकरणं समाप्तम् ।।

'ವಿರೋಧ' ಎಂಬ ಪದದ ನಂತರ 'ಅತ್ರ ರುದ್ರಗ್ರಹಣೇ' ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಆವಾಗ ಶ್ರುತಿಯಲ್ಲಿ ರುದ್ರನನ್ನು ಸ್ವೀಕರಿಸಿದರೆ ಪಾಶುಪತಾದಿಶಾಸ್ತ್ರಗಳ ವಿರೋಧ ಬರುತ್ತದೆ ಎಂದು ಅರ್ಥವಾಗುತ್ತದೆ. ಭಾಷ್ಯದಲ್ಲಿರುವ 'ಏಷಃ' ಎಂಬ ಪದಕ್ಕೆ 'ಏನಮ್' ಎಂದರ್ಥ. 'ಮೋಹ' ಶಬ್ದಕ್ಕೆ ಮಿಥ್ಯಾಜ್ಞಾನವೆಂದರ್ಥ; ಹೊರತು ಮೋಹಕ ಎಂಬರ್ಥ ತಿಳಿಯುವುದಿಲ್ಲ. ಅದಕ್ಕೋಸ್ಕರ 'ಮುಹ್ಯತೇ' ಎಂಬ ವಾಕ್ಯವು ಹೊರಟಿದೆ. 'ನಟನಂ ವಂಚನಂ ವಾ' ಇರುವಂತಹ ಆಕಾರವನ್ನು ಮುಚ್ಚಿ ಇಲ್ಲದ ಆಕಾರವನ್ನು ತೋರಿಸುವಿಕೆಯೇ ನಟನ ಎನ್ನಿಸುತ್ತದೆ. ಇಲ್ಲದ್ದನ್ನು ಹೇಳುವಿಕೆಯು ವಂಚನೆ ಎನ್ನಿಸುತ್ತದೆ. ಹೀಗೆ ಎರಡರಲ್ಲಿರುವ ಕ್ರಿಯೆಯ ವೈಲಕ್ಷಣ್ಯವನ್ನು ತಿಳಿಯಬೇಕು. ದಧೀಚ್ಯಾದಿ ಋಷಿಗಳಿಂದ ಎಲ್ಲಿಯೂ ಇಲ್ಲದ ಲಿಂಗಮೂಲಾನ್ವೇಷಣದ ಹೇಳುವಿಕೆಯು 'ಅತಥ್ಯ' ಎನ್ನಿಸುತ್ತದೆ. ''ವಿಷ್ಣುವಿನಲ್ಲಿರುವ ಸ್ವಾತಂತ್ರ್ಯಾದಿಗಳನ್ನು ರುದ್ರಾದಿಗಳಲ್ಲಿ ಹೇಳುವಿಕೆ''ಯು ವಿತಥ್ಯ ಎನ್ನಿಸುತ್ತದೆ.

'ಆತ್ಮಾನಂ ಮಾಂ' ಎಂಬಲ್ಲಿರುವ ಎರಡೂ ಪದಗಳಿಗೆ ಕರ್ಮಾರ್ಥದಲ್ಲಿ ದ್ವಿತೀಯಾವಿಭಕ್ತಿಯನ್ನು ಹೇಳಿದರೆ 'ಪ್ರಕಾಶವಂತಂ' ಎಂದಾಗಬೇಕು. 'ಪ್ರಕಾಶಂ' ಎಂದು ಹೇಳಿದ್ದು ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಆತ್ಮಾನಂ ಮಾಂ ಚ ಪ್ರತಿ' ಎಂದು ಉತ್ತರಿಸಿದ್ದಾರೆ. 'ಅಭಿತಃ ಪರಿತಃ ಸಮಯಾನಿಕಷಾ ಹ ಪ್ರತಿಯೋಗೇಷು' ಎಂಬ ಸೂತ್ರದಂತೆ ಕರ್ಮಪ್ರವಚನೀಯಸಂಜ್ಞೆಯಿರುವ ಶಬ್ದಕ್ಕೆ ದ್ವಿತೀಯಾವಿಭಕ್ತಿಯೇ ಬರುತ್ತದೆ.

ಪ್ರಕಾಶಕಬಬ್ದಕ್ಕೆ ಪ್ರಸಿದ್ಧಿಯೆಂದು ಅರ್ಥಸಿದ್ದರಿಂದ ಅಪ್ರಕಾಶಕಶಬ್ದಕ್ಕೆ ಅಪ್ರಸಿದ್ಧಿ ಎಂದು ಕ್ಷ... ನಿಸಬೇಕು. ಅಂದರೆ 'ನಿನ್ನನ್ನು ಪ್ರಸಿದ್ಧಿಗೊಳಿಸು; ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' ಎಂದರ್ಥ.

'ಶಿವಾದಿವಿಷಯತ್ವಾತ್' - ಸ್ಕಾಂದಪುರಾಣವನ್ನು ಶಿವವಿಷಯಕವೆಂದು ಹೇಳಿದ್ದರಿಂದ, ಶೈವ... ಪದಕ್ಕೆ 'ಶಿವವಿಷಯಕ'ವೆಂದು ವ್ಯಾಖ್ಯಾನಿಸಿದಂತಾಯಿತು. ಸ್ಕಾಂದಪುರಾಣಾದಿಗಳನ್ನು ವೇದವ್ಯಾಸದೇ... ರಚಿಸಿದ್ದರಿಂದ ಮೋಹಕ್ಕೋಸ್ಕರ ರುದ್ರದೇವರಿಂದ ರಚಿಸಲ್ಪಟ್ಟ ಪಾಶುಪತಾದಿಶಾಸ್ತ್ರ... ವಿಲಕ್ಷಣವಾಗಿವೆ ಎಂದು ತಿಳಿಯುತ್ತದೆ. 'ಕರಣ್ಯೈ' ಎಂಬ ಪದಕ್ಕೆ ಕ್ರೀಡಾಸಾಧನಗಳಿಂದ ... 'ಸ್ವವಿರೋಧೇನ'- ರುದ್ರದೇವರಿಂದಲೇ ಪ್ರತಿಪಾದಿಸಲ್ಪಟ್ಟ ವಿಷ್ಣುಸರ್ವೋತ್ತಮತ್ವದ ವಿ... ಬರುವುದರಿಂದ. ಒಂದು ವೇಳೆ ರುದ್ರಾದಿಗಳೇ ಉತ್ತಮರೆಂದು ಹೇಳಿದರೆ ವಿಷ್ಣುಸರ್ವೋತ್ತಮತ್ವ... ವಿರೋಧ ಬರುತ್ತದೆ. 'ಅಸಾಧಾರಣ್ಯೇನ' - ಶೈವಾದ್ಯಾಗಮಗಳಲ್ಲಿ ರುದ್ರದೇವರೇ ಮುಖ್ಯ... ಪ್ರತಿಪಾದ್ಯರಾದ್ದರಿಂದ. ರುದ್ರಾದಿಗಳಿಗೆ ಸರ್ವೋತ್ತಮತ್ವವನ್ನು ಅಸಾಧಾರಣ್ಯದಿಂದ ಪ್ರತಿಪಾದಿಸುವುದು ಇಲ್ಲದ್ದನ್ನೂ ಸಹ ಹೇಳಬೇಕು ಎಂದು ಅಭಿಪ್ರಾಯ. 'ತಥಾ' ಎಂಬ ಶಬ್ದವು ಅನುವಾದವಾಗಿದೆ ... ದಲ್ಲಿರುವ 'ಉಕ್ತಮ್' ಎಂಬ ಶಬ್ದಕ್ಕೆ ಪ್ರತ್ಯುಕ್ತಮ್ ಎಂದು ವ್ಯಾಖ್ಯಾನಿಸಿದ್ದಾರೆ. "ಉಚ್ಯತೇ"- ವೈಷ್ಣ... ಗ್ರಂಥಗಳಲ್ಲಿಯೂ ಸಹ ವಿಷ್ಣುವು ರುದ್ರನನ್ನು ಕುರಿತು ಮಾಡುವ ಅನೇಕ ಸ್ತೋತ್ರಗಳಿವೆಯಲ್ಲವೇ?

"ಆರಾಧ್ಯ ದೇವದೇವೇಶಂ ಶಂಕರಂ ಲೋಕಶಂಕರಮ್ ।
ತಪಸಾ ತೋಷಯಿತ್ವಾ ತಂ ಕೈಲಾಸಗಿರಿವಾಸಿನಮ್ ।
ರುಕ್ಮಿಣ್ಯಾಸ್ತನಯಂ ಲೇಭೇ ದಗ್ಧಂ ಕಾಮಂ ಪುನರ್ಹರಿಃ ॥"

"ಕೃಷ್ಣಪರಮಾತ್ಮನು ದೇವತೆಗಳಿಗೂ ದೇವತೆಯಾದ ಲೋಕಕ್ಕೆ ಸುಖವನ್ನುಂಟುಮಾಡು... ಕೈಲಾಸಪರ್ವತದಲ್ಲಿ ವಾಸಿಸುವ ಶಂಕರನನ್ನು ಆರಾಧಿಸಿ, ತಪಸ್ಸಿನಿಂದ ಸಂತೋಷಪಡಿಸಿ, ರುಕ್ಮಿಣಿಯ... ಭಸ್ಮೀಭೂತನಾದ ಕಾಮನನ್ನು ಮಗನನ್ನಾಗಿ ಪಡೆದನು" ಎಂದು.

"ಬ್ರಹ್ಮಶಬ್ದಶ್ಚ ವಿಷ್ಣಾವೇವ' ಎಂದು ಪ್ರಾರಂಭಿಸಿದ ವಿಷಯವನ್ನು 'ತಸ್ಮಾತ್' ಎಂದು ಉಪಸಂ... ಮಾಡುತ್ತಿದ್ದಾರೆ. ಅಧಿಕರಣಪ್ರಮೇಯವನ್ನು 'ತದೇವಂ' ಎಂಬ ಗ್ರಂಥದಿಂದ ಉಪಸಂಹಾರ ಮಾಡು... ದ್ದಾರೆ. ಸಿದ್ಧಾಂತದ ಫಲವನ್ನು 'ಅತಃ ಶಾಸ್ತ್ರಮಾರಂಭಣೀಯಮೇವ' ಎಂದು ಹೇಳಿದ್ದಾರೆ.

ಇಲ್ಲಿಗೆ ಶರ್ಕರಾಶ್ರೀನಿವಾಸಾಚಾರ್ಯರು ಬರೆದ
ವಾಕ್ಯಾರ್ಥಮಂಜರಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.
॥ ಶ್ರೀಮಧ್ವೇಶಾರ್ಪಣಮಸ್ತು ॥

* * * * * *

ಪರಿಪೂರ್ಣಚಂದ್ರಿಕಾ

# ಭಾಗ - ೨

ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ವಿವರಣ,
ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

ಪ್ರಕಾಶಶಬ್ದಕ್ಕೆ ಪ್ರಸಿದ್ಧಿಯೆಂದು ಅರ್ಥವಿರುವುದರಿಂದ ಅಪ್ರಕಾಶಶಬ್ದಕ್ಕೆ ಅಪ್ರಸಿದ್ಧಿ ಎಂದು ವ್ಯಾಖ್ಯಾನಿಸಬೇಕು. ಅಂದರೆ 'ನಿನ್ನನ್ನು ಪ್ರಸಿದ್ಧಿಗೊಳಿಸು; ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' ಎಂದರ್ಥ.

'ಶಿವಾದಿವಿಷಯತ್ವಾತ್' - ಸ್ಕಾಂದಪುರಾಣವನ್ನು ಶಿವವಿಷಯಕವೆಂದು ಹೇಳಿದ್ದರಿಂದ, ಶೈವೇ ಎಂಬ ಪದಕ್ಕೆ 'ಶಿವವಿಷಯಕ'ವೆಂದು ವ್ಯಾಖ್ಯಾನಿಸಿದಂತಾಯಿತು. ಸ್ಕಾಂದಪುರಾಣಾದಿಗಳನ್ನು ವೇದವ್ಯಾಸರೇ ರಚಿಸಿದ್ದರಿಂದ ಮೋಹಕ್ಕೋಸ್ಕರ ರುದ್ರದೇವರಿಂದ ರಚಿಸಲ್ಪಟ್ಟ ಪಾಶುಪತಾದಿಶಾಸ್ತ್ರಗಳಿಗಿಂತ ವಿಲಕ್ಷಣವಾಗಿವೆ ಎಂದು ತಿಳಿಯುತ್ತದೆ. 'ಕರಣ್ಯೈಃ' ಎಂಬ ಪದಕ್ಕೆ ಕ್ರೀಡಾಸಾಧನಗಳಿಂದ ಎಂದರ್ಥ 'ಸ್ವವಿರೋಧೇನ'- ರುದ್ರದೇವರಿಂದಲೇ ಪ್ರತಿಪಾದಿಸಲ್ಪಟ್ಟ ವಿಷ್ಣುಸರ್ವೋತ್ತಮತ್ವದ ವಿರೋಧ ಬರುವುದರಿಂದ. ಒಂದು ವೇಳೆ ರುದ್ರಾದಿಗಳೇ ಉತ್ತಮರೆಂದು ಹೇಳಿದರೆ ವಿಷ್ಣುಸರ್ವೋತ್ತಮತ್ವದಿಂದ ವಿರೋಧ ಬರುತ್ತದೆ. 'ಅಸಾಧಾರಣ್ಯೇನ' - ಶೈವಾದ್ಯಾಗಮಗಳಲ್ಲಿ ರುದ್ರದೇವರೇ ಮುಖ್ಯವಾಗಿ ಪ್ರತಿಪಾದ್ಯರಾದ್ದರಿಂದ. ರುದ್ರಾದಿಗಳಿಗೆ ಸರ್ವೋತ್ತಮತ್ವವನ್ನು ಅಸಾಧಾರಣ್ಯದಿಂದ ಪ್ರತಿಪಾದಿಸುವುದಕ್ಕಾಗಿ ಇಲ್ಲದ್ದನ್ನೂ ಸಹ ಹೇಳಬೇಕು ಎಂದು ಅಭಿಪ್ರಾಯ. 'ತಥಾ' ಎಂಬ ಶಬ್ದವು ಅನುವಾದವಾಗಿದೆ. ಭಾಷ್ಯದಲ್ಲಿರುವ 'ಉಕ್ತಮ್' ಎಂಬ ಶಬ್ದಕ್ಕೆ ಪ್ರತ್ಯುಕ್ತಮ್ ಎಂದು ವ್ಯಾಖ್ಯಾನಿಸಿದ್ದಾರೆ. ''ಉಚ್ಯತೇ''- ವೈಷ್ಣವಗ್ರಂಥಗಳಲ್ಲಿಯೂ ಸಹ ವಿಷ್ಣುವು ರುದ್ರನನ್ನು ಕುರಿತು ಮಾಡುವ ಅನೇಕ ಸ್ತೋತ್ರಗಳಿವೆಯಲ್ಲವೇ?

''ಆರಾಧ್ಯ ದೇವದೇವೇಶಂ ಶಂಕರಂ ಲೋಕಶಂಕರಮ್ ।
ತಪಸಾ ತೋಷಯಿತ್ವಾ ತಂ ಕೈಲಾಸಗಿರಿವಾಸಿನಮ್ ।
ರುಕ್ಮಿಣ್ಯಾಸ್ತನಯಂ ಲೇಭೇ ದಗ್ಧಂ ಕಾಮಂ ಪುನರ್ಹರಿಃ ॥''

''ಕೃಷ್ಣಪರಮಾತ್ಮನು ದೇವತೆಗಳಿಗೂ ದೇವತೆಯಾದ ಲೋಕಕ್ಕೆ ಸುಖವನ್ನುಂಟುಮಾಡುವ, ಕೈಲಾಸಪರ್ವತದಲ್ಲಿ ವಾಸಿಸುವ ಶಂಕರನನ್ನು ಆರಾಧಿಸಿ, ತಪಸ್ಸಿನಿಂದ ಸಂತೋಷಪಡಿಸಿ, ರುಕ್ಮಿಣಿಯಲ್ಲಿ ಭಸ್ಮೀಭೂತನಾದ ಕಾಮನನ್ನು ಮಗನನ್ನಾಗಿ ಪಡೆದನು'' ಎಂದು.

''ಬ್ರಹ್ಮಶಬ್ದಶ್ಚ ವಿಷ್ಣಾವೇವ' ಎಂದು ಪ್ರಾರಂಭಿಸಿದ ವಿಷಯವನ್ನು 'ತಸ್ಮಾತ್' ಎಂದು ಉಪಸಂಹಾರ ಮಾಡುತ್ತಿದ್ದಾರೆ. ಅಧಿಕರಣಪ್ರಮೇಯವನ್ನು 'ತದೇವಂ' ಎಂಬ ಗ್ರಂಥದಿಂದ ಉಪಸಂಹಾರ ಮಾಡುತ್ತಿದ್ದಾರೆ. ಸಿದ್ಧಾಂತದ ಫಲವನ್ನು 'ಅತಃ ಶಾಸ್ತ್ರಮಾರಂಭಣೀಯಮೇವ' ಎಂದು ಹೇಳಿದ್ದಾರೆ.

ಇಲ್ಲಿಗೆ ಶರ್ಕರಾಶ್ರೀನಿವಾಸಾಚಾರ್ಯರು ಬರೆದ
ವಾಕ್ಯಾರ್ಥಮಂಜರಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.
॥ ಶ್ರೀಮಧ್ವೇಶಾರ್ಪಣಮಸ್ತು ॥

* * * * * *

ಪರಿಪೂರ್ಣಚಂದ್ರಿಕಾ

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
## ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ವಿವರಣ,
## ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

ಅಸ್ಪೃಷ್ಟದೋಷಗಂಧಾಯ ಕಲ್ಯಾಣಗುಣಸಿಂಧವೇ ।
ನಮೋನಮೋ ಭಕ್ತಮುಕ್ತಿದಾಯಿನೇ ಶೇಷಶಾಯಿನೇ ॥ ೧ ॥

ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್ ।
ಕೃಷ್ಣಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ॥ ೨ ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

॥ ಶ್ರೀಮಧ್ವರಾಜೋ ವಿಜಯತೇತರಾಮ್ ॥

॥ ಶ್ರೀಗುರುಭ್ಯೋ ನಮಃ ॥

# ತಾತ್ಪರ್ಯಚಂದ್ರಿಕಾ

## ಶ್ರೀರಾಘವೇಂದ್ರತೀರ್ಥವಿರಚಿತ
## ಪ್ರಕಾಶ

### ಮಂಗಲಾಚರಣೆ

**ॐ समस्तगुणसम्पूर्णं सर्वदोषविवर्जितम् ।**
**ज्ञानिप्रियतमं वन्दे मुक्तिदं कमलापतिम् ॥ १ ॥**

ಸಮಸ್ತಗುಣಸಂಪೂರ್ಣಂ ಸರ್ವದೋಷವಿವರ್ಜಿತಮ್ ।
ಜ್ಞಾನಿಪ್ರಿಯತಮಂ ವಂದೇ ಮುಕ್ತಿದಂ ಕಮಲಾಪತಿಮ್ ॥ ೧ ॥

ಸರ್ವೋತ್ತಮನಾದ ನಾರಾಯಣನು ಸಕಲಸಂಪೂರ್ಣನೂ ಸರ್ವದೋಷಗಳಿಂದ ಅತಿದೂರನೂ ಜ್ಞಾನಿಶ್ರೇಷ್ಠರುಗಳಿಗೆ ಅತ್ಯಂತಪ್ರೀತಿಪಾತ್ರನೂ ತನ್ನ ಭಕ್ತರಿಗೆ ಮೋಕ್ಷವನ್ನು ದಯಪಾಲಿಸುವವನೂ ಆಗಿದ್ದಾನೆ. ಲಕ್ಷ್ಮೀಪತಿಯಾದ ಇವನನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

**ब्रह्मादिसर्वगीर्वाणनिर्वाणगतिहेतवः ।**
**पूर्णप्रज्ञपदाम्भोजपांसवः पान्तु नः सदा ॥ २ ॥**

ಬ್ರಹ್ಮಾದಿಸರ್ವಗೀರ್ವಾಣನಿರ್ವಾಣಗತಿಹೇತವಃ ।
ಪೂರ್ಣಪ್ರಜ್ಞಪದಾಂಭೋಜಪಾಂಸವಃ ಪಾಂತು ನಃ ಸದಾ ॥ ೨ ॥

ಶ್ರೀಮದಾಚಾರ್ಯರ ಪಾದಕಮಲಗಳ ಧೂಳುಗಳು, ರುದ್ರದೇವರೇ ಮೊದಲಾದ ಸಕಲ ದೇವತೆಗಳಿಗೂ ಮೋಕ್ಷ [illegible] ರಕ್ಷಿಸಲಿ

**[illegible] ।**
**[illegible] ॥ ३ ॥**

[illegible]

ವಿಧೂತದುರ್ಮತಧ್ವಾಂತೋ ವಿಶದೀಕೃತಸದ್ಧತಿಃ ।
ಯಃ ಸಜ್ಜನಾನುಜ್ಜಹಾರ ಜಯತೀರ್ಥರವಿಂ ಭಜೇ ॥ ೩ ॥

ಜಯತೀರ್ಥರೆಂಬ ಸೂರ್ಯರ ಉದಯವು ಯಾವಾಗ ಆಯಿತೋ, ಆಗ ಜಗದ್ ವ್ಯಾಪ್ತ ಗಿದ್ದ ಇಪ್ಪತ್ತೊಂದು ಬಗೆಯ ದುಷ್ಟಮತಗಳ ಕೆಟ್ಟ ಮಾತುಗಳೆಂಬ ಕತ್ತಲೆಯು ನಾಶವಾಯಿತು. ಮೋಕ್ಷ ಮಾರ್ಗವು ಪ್ರಕಾಶಮಾನವಾಯಿತು. ಹೀಗೆ ಸಜ್ಜನರನ್ನು ದುಃಖದಿಂದ ಪಾರುಮಾಡಿದ ಜಯತೀರ್ಥ ರೆಂಬ ಸೂರ್ಯರನ್ನು ಭಜಿಸುತ್ತೇನೆ. (ಈ ಎರಡು ಶ್ಲೋಕಗಳು ಗ್ರಂಥದ ಮಂಗಳಶ್ಲೋಕಗಳ ಅನುಗುಣವಾಗಿವೆ.)

पदवाक्यप्रमाणज्ञान् सम्प्रदायार्थकोविदान् ।
व्यासतीर्थमुनीन् सेवे दुर्वादिफणिपक्षिपान् ॥ ४ ॥

ಪದವಾಕ್ಯಪ್ರಮಾಣಜ್ಞಾನ್ ಸಂಪ್ರದಾಯಾರ್ಥಕೋವಿದಾನ್ ।
ವ್ಯಾಸತೀರ್ಥಮುನೀನ್ ಸೇವೇ ದುರ್ವಾದಿಫಣಿಪಕ್ಷಿಪಾನ್ ॥ ೪ ॥

ಗ್ರಂಥಕಾರರಾದ ಶ್ರೀವ್ಯಾಸತೀರ್ಥರು ಕೇವಲ ವೇದವೇದಾಂತಗಳನ್ನಷ್ಟೇ ಬಲ್ಲವರಲ್ಲ; ವ್ಯಾಕರಣ ಮೀಮಾಂಸಾ, ತರ್ಕಶಾಸ್ತ್ರಗಳನ್ನೂ ಸಹ ಚೆನ್ನಾಗಿ ಬಲ್ಲವರು. ಸಾಂಪ್ರದಾಯಿಕವಾದ ಅರ್ಥಗಳನ್ನು ತಿಳಿದವರಲ್ಲಿ ಅಗ್ರೇಸರರು. ದುರ್ವಾದಿಗಳೆಂಬ ಹಾವುಗಳಿಗೆ ಗರುಡನಂತಿರುವ. ಇಂತಹ ಮುನಿಗಳನ್ನು ಚೆನ್ನಾಗಿ ಸೇವಿಸಿ ವ್ಯಾಖ್ಯಾನವನ್ನು ಪ್ರಾರಂಭಿಸುತ್ತೇನೆ.

अस्मद्देशिकपादानां प्रणम्य चरणाम्बुजम् ।
तात्पर्यचन्द्रिकाव्याख्यां विधास्यामि यथामति ॥ ५ ॥

ಅಸ್ಮದ್ದೇಶಿಕಪಾದಾನಾಂ ಪ್ರಣಮ್ಯ ಚರಣಾಂಬುಜಮ್ ।
ತಾತ್ಪರ್ಯಚಂದ್ರಿಕಾವ್ಯಾಖ್ಯಾಂ ವಿಧಾಸ್ಯಾಮಿ ಯಥಾಮತಿ ॥ ೫ ॥

ನಮ್ಮ ಆಶ್ರಮಗುರುಗಳ ಪಾದಕಮಲಗಳಲ್ಲಿ ಭಕ್ತಿಯಿಂದ ನಮಸ್ಕರಿಸಿ 'ತಾತ್ಪರ್ಯಚಂದ್ರಿಕಾ ಎಂಬ ಗ್ರಂಥಕ್ಕೆ ನನಗೆ ತಿಳಿದಷ್ಟು ವ್ಯಾಖ್ಯಾನವನ್ನು ಮಾಡುತ್ತೇನೆ.




## ಪ್ರಕಾಶ ಮಂಗಲಾಚರಣೆ

ಗುಣಪೂರ್ಣತ್ವ ದೋಷದೂರತ್ವ ಜ್ಞೇಯತ್ವ ಗಮ್ಯತ್ವರೂಪವಾದ, ಬ್ರಹ್ಮಸೂತ್ರ ಪ್ರತಿಪಾದ್ಯವಾದ ನಾಲ್ಕು ಲಕ್ಷಣಗಳಿಂದ ಕೂಡಿದ ಕಮಲಾಪತಿಗೆ, ರುದ್ರಾದಿ ಸಕಲ ದೇವತೆಗಳಿಗೆ ಮೋಕ್ಷದಾಯಕರಾದ ಶ್ರೀಮದಾಚಾರ್ಯರಿಗೆ, ದುರ್ಮತಾಂಧಕಾರ ಕಳೆದು ಮೋಕ್ಷಮಾರ್ಗತೋರಿ ಸಜ್ಜನರನ್ನು ಉದ್ಧರಿಸಿದ

ಜಯತೀರ್ಥರಿಗೆ ಚತುಃಶಾಸ್ತ್ರವಿಶಾರದರಾಗಿದ್ದು ಸಂಪ್ರದಾಯಾರ್ಥಜ್ಞರಾಗಿದ್ದು ದುರ್ವಾದಿ ಭಯಂಕರರಾದ ವ್ಯಾಸರಾಜರಿಗೆ, ಗುರು ಸುಧೀಂದ್ರತೀರ್ಥರಿಗೆ ವಿಜಯೀಂದ್ರತೀರ್ಥರಿಗೆ ನಮಿಸಿ ಶಿಷ್ಯರ ಬುದ್ಧಿಗೆ ನಿಲುಕುವಷ್ಟು ತ್ಪರ್ಯ ಚಂದ್ರಿಕೆಯ ವ್ಯಾಖ್ಯಾನ ಮಾಡಲು ಸಂಕಲ್ಪಿಸುತ್ತಾರೆ ಶ್ರೀರಾಘವೇಂದ್ರತೀರ್ಥರು.

---

• • • • •

## ಪಾಂಡುರಂಗಿಕೇಶವಾಚಾರ್ಯವಿರಚಿತ ಗುರುರಾಜೀಯ (ಭಾವದೀಪ)

## ಮಂಗಳಾಚರಣ

**सकलसुगुणपात्रं सर्वदोषैकजैत्रं**
**सुमतिसुगतिदात्रं सुष्ठु सज्ज्ञाननेत्रम् ।**
**निखिलजनिजनित्रं नित्यदुष्टैकवेत्रं**
**नवनवसुचरित्रं नौमि लक्ष्मीकलत्रम् ॥ १ ॥**

**ಸಕಲಸುಗುಣಪಾತ್ರಂ ಸರ್ವದೋಷೈಕಜೈತ್ರಂ**
**ಸುಮತಿಸುಗತಿದಾತ್ರಂ ಸುಷ್ಠು ಸಜ್ ಜ್ಞಾನನೇತ್ರಮ್ ।**
**ನಿಖಿಲಜನಿಜನಿತ್ರಂ ನಿತ್ಯದುಷ್ಟೈಕವೇತ್ರಂ**
**ನವನವಸುಚರಿತ್ರಂ ನೌಮಿ ಲಕ್ಷ್ಮೀಕಲತ್ರಮ್ ॥ ೧ ॥**

ನಾರಾಯಣನು ಶುಭ್ರವಾದ ಎಲ್ಲ ಗುಣಗಳನ್ನು ಹೊಂದಿದ್ದಾನೆ. ಸಕಲದೋಷಗಳನ್ನು ಗೆದ್ದಿದ್ದಾನೆ. ಶುಭ್ರವಾದ ಜ್ಞಾನವನ್ನು ಹೊಂದಿದವರಿಗೆ ಪರಮಪುರುಷಾರ್ಥವನ್ನು ನೀಡುತ್ತಾನೆ. ಜ್ಞಾನವೆಂಬ ನೇತ್ರ-ವುಳ್ಳವನಾಗಿದ್ದಾನೆ. ಸಮಸ್ತ ಜಗತ್ತಿನ ಜನ್ಮ, ಸ್ಥಿತಿ, ಸಂಹಾರ ಇವೇ ಮೊದಲಾದವುಗಳಿಗೆ ಕಾರಣನಾಗಿದ್ದಾನೆ. ನಿತ್ಯದುಷ್ಟರಿಗೆ ದಂಡದಂತೆ ಶಿಕ್ಷಕನಾಗಿದ್ದಾನೆ. ಇಷ್ಟೇ ಅಲ್ಲದೆ ಹೊಸಹೊಸದಾದ ಅನೇಕ ಶುಭಚರಿತ್ರಗಳನ್ನು ಹೊಂದಿದ್ದಾನೆ. ಲಕ್ಷ್ಮೀಪತಿಯಾದ ಇಂತಹ ನಾರಾಯಣನನ್ನು ಭಕ್ತಿಯಿಂದ ಸಾಷ್ಟಾಂಗ ನಮಿಸುತ್ತೇನೆ.

ವಿಶೇಷವಿಚಾರ : - **ಸುಷ್ಠುಸಜ್ ಜ್ಞಾನನೇತ್ರಂ** - ಇಲ್ಲಿ 'ಸುಷ್ಠು' ಎಂಬುದು ಜ್ಞಾನದಲ್ಲಿ ವಿಶೇಷಣ-ವಾಗಿದೆ. ಸಮಾಸಾಘಟಕವಾದ ಪದಾರ್ಥಕ್ಕೆ ಸಮಾಸಘಟಕವಾದ ಪದಾರ್ಥದಲ್ಲಿ ಅನ್ವಯವನ್ನು ಹೇಳುವುದು ಅಪ್ರಮಾಣಿಕವಲ್ಲ. 'ಸುಷ್ಠು' ಎಂದರೆ 'ಶೋಭಾಯಮಾನವಾದ' ಎಂದರ್ಥ. 'ಸತ್' ಎಂಬ ಪದಕ್ಕೆ 'ವಿಪರೀತಜ್ಞಾನವಲ್ಲದ್ದು' ಎಂದರ್ಥ. ಆದ್ದರಿಂದ ಜ್ಞಾನದಲ್ಲಿ 'ಸತ್' ಎಂಬುದು ಮೊದಲೇ ಅನ್ವಿತವಾಗಿದ್ದರೂ ಪುನಃ 'ಸುಷ್ಠು' ಎಂಬುದೂ ಸಹ ಅನ್ವಿತವಾಗುತ್ತದೆ. ಆದ್ದರಿಂದ ಸುಷ್ಠುಸಜ್ ಜ್ಞಾನನೇತ್ರಂ ಎಂಬ ಶಬ್ದಕ್ಕೆ 'ವಿಪರೀತಜ್ಞಾನವಲ್ಲದ ಶೋಭಾಯಮಾನವಾದ ಜ್ಞಾನವುಳ್ಳವನು' ಎಂದರ್ಥ. ಅಥವಾ ಸುಷ್ಠು = ಅಧಿಕವಾದ ಪ್ರಮಾಣವುಳ್ಳವನು, ಅಂದರೆ ನಿರವಧಿಕವಾದ ಜ್ಞಾನವುಳ್ಳವನು ಎಂದರ್ಥ.

'ನಿಖಿಲಜನಿಜನಿತ್ರಮ್' ಈ ಪದದಿಂದ ಆಪಾತತಃ ತೋರುವ ಅರ್ಥ ಹೀಗಿದೆ - 'ಸಕಲವಿಧವಾದ ಹುಟ್ಟುಳ್ಳ ಪದಾರ್ಥಗಳಿಗೆ ಕಾರಣನು' ಎಂದು. ಆದರೆ 'ಜನಿ' ಶಬ್ದಕ್ಕೆ 'ಜನಿಮತ್‌ಪದಾರ್ಥ' ಎಂಬರ್ಥವು ಅಸ್ವರಸವಾಗಿದೆ.

ಆದ್ದರಿಂದ ಹೀಗೆ ಅರ್ಥ ಹೇಳಬೇಕು - ನಿಖಿಲ = ಸಮಸ್ತಜಗತ್ತಿನ, ಜನಿ = ಜನ್ಮ, ಸ್ಥಿತಿ, ಮೊದಲಾದವುಗಳ ಜನಿತ್ರಂ = ಕಾರಣನು ಎಂದು. ಜನಿಶಬ್ದಕ್ಕೆ ಜನ್ಮ ಎಂಬ ಅರ್ಥವು ಪ್ರಸಿದ್ಧವಾಗಿದೆ. ಉಪಲಕ್ಷಣಯಾ ಸ್ಥಿ ಸಂಹಾರ ಮೊದಲಾದ ಅಷ್ಟಕಗಳನ್ನೂ ವಿವಕ್ಷಿಸಬೇಕು. ಆಗ 'ನಿಖಿಲಜನಿಜನಿತ್ರಂ' ಎಂಬ ಪದಕ್ಕೆ 'ಸಮಸ್ತಜಗತ್ತಿ ಸೃಷ್ಟ್ಯಾದ್ಯಷ್ಟಕಗಳಿಗೆ ಕಾರಣನು' ಎಂಬರ್ಥವು ಲಭಿಸುತ್ತಿದೆ.

'ನಿತ್ಯದುಷ್ಟ್ರಕವೇತ್ರಂ' ಕೆಲವು ಪುಸ್ತಕಗಳಲ್ಲಿ ನಿತ್ಯದುಷ್ಟ್ರಕನೇತ್ರಂ ಎಂಬ ಪಾಠವಿದೆ. ಇದು ಸರಿಯಾದ ಪಾಠವಲ್ಲ. ನಿತ್ಯದುಷ್ಟ್ರಕವೇತ್ರಂ ಎಂಬುದು ಸರಿಯಾದ ಪಾಠ. ಇದರ ಅರ್ಥ - ನಿತ್ಯದುಷ್ಟರಿಗೆ ಮುಷ್ಟಿ ದಂಡದಂತೆ ಶಿಕ್ಷಕನು ಎಂದು. ವೇತ್ರ ಎಂದರೆ ಬಿದಿರು ಎಂದರ್ಥ. ಬಿದಿರಿನ ದೊಣ್ಣೆಯನ್ನು ಇಟ್ಟುಕೊಳ್ಳಬೇಕು

**शुभगुणगणगात्रं शुद्धविज्ञाननेत्रं**
**श्रुतिविततचरित्रं श्रान्ततापातपत्रम् ।**
**श्रमजलधिवहित्रं, शान्तिमन्तः पवित्रं**
**श्रयत विबुधमित्रं शक्तियोगीन्द्रपौत्रम् ॥२॥**

ಶುಭಗಣಗಣಗಾತ್ರಂ ಶುದ್ಧವಿಜ್ಞಾನನೇತ್ರಂ
ಶ್ರುತಿವಿತತಚರಿತ್ರಂ ಶ್ರಾಂತತಾಪಾತಪತ್ರಮ್ ।
ಶ್ರಮಜಲಧಿವಹಿತ್ರಂ ಶಾಂತಿಮಂತ:ಪವಿತ್ರಂ
ಶ್ರಯತ ವಿಬುಧಮಿತ್ರಂ ಶಕ್ತಿಯೋಗೀಂದ್ರಪೌತ್ರಮ್ ॥ ೨ ॥

ಶುಭವಾದ ಗುಣರಾಶಿಯೇ ಶರೀರವಾಗಿ ಉಳ್ಳವರು ಶ್ರೀವೇದವ್ಯಾಸದೇವರು. ಶೋಭನವಾದ ವಿಜ್ಞಾನವೆಂಬ ನ್ರೇತ್ರವುಳ್ಳವರು. ಶ್ರುತಿಯಲ್ಲಿ ವಿಸ್ತರಿಸಲ್ಪಟ್ಟ ಚರಿತ್ರೆಯುಳ್ಳವರು. ಸಂಸಾರದ ತಾಪದಿಂದ ಬಳಲಿದವರಿಗೆ ಛತ್ರಿಯಂತೆ ಇರುವವರು. ಕಷ್ಟಕಾರ್ಪಣ್ಯಗಳೆಂಬ ಸಮುದ್ರಕ್ಕೆ ದೋಣಿಯಂತೆ ಇರುವವರು. ಪವಿತ್ರಸ್ವರೂಪರಾದವರು. ದೇವತೆಗಳ ಮಿತ್ರರು. 'ಶಕ್ತಿ' ಎಂಬ ಯೋಗಿವರೇಣ್ಯರ ಮೊಮ್ಮಕ್ಕಳು. ಎಲೈ! ಶಾಂತಸ್ವರೂಪರಾದ ಸಜ್ಜನರುಗಳೇ! ಇಂತಹ ಶ್ರೇಷ್ಠ ವೇದವ್ಯಾಸದೇವರನ್ನು ಅನನ್ಯವಾಗಿ ಆಶ್ರಯಿಸಿರಿ.

ವಿಶೇಷ ವಿಚಾರ :- ಶಾಂತಿಮಂತಃ - ಈ ಶಬ್ದವು ವೇದವ್ಯಾಸದೇವರಿಗೆ ವಿಶೇಷಣ ಎಂಬ ಭ್ರಾಂತಿ ಬರುತ್ತದೆ ಆದರೆ ಸಜ್ಜನರನ್ನು ಕುರಿತು ಮಾಡುವ ಸಂಬೋಧಕ ಪದವೆಂದು ತಿಳಿಯಬೇಕು. ಆದ್ದರಿಂದ 'ಶಾಂತಿಮಂತಃ' ಎಂದರೆ ಶಾಂತಿಯನ್ನು ಹೊಂದಿದ ಸಜ್ಜನರೇ ! ಎಂದರ್ಥ.

**विद्याख्यरत्नप्रभवाय बुद्धौ विद्योतमानाय सुबृंहिताय ।**
**शुद्धाय नित्यं मुनिसेविताय मध्वाद्भुताम्भोनिधये नमोऽस्तु ॥ ३ ॥**

ವಿದ್ಯಾಖ್ಯರತ್ನಪ್ರಭವಾಯ ಬುದ್ಧೌ ವಿದ್ಯೋತಮಾನಾಯ ಸುಬೃಂಹಿತಾಯ ।
ಶುದ್ಧಾಯ ನಿತ್ಯಂ ಮುನಿಸೇವಿತಾಯ ಮಧ್ವಾದ್ಭುತಾಂಭೋನಿಧಯೇ ನಮೋಽಸ್ತು ॥ ೩॥

*ಪರಿಪೂರ್ಣಚಂದ್ರಿಕಾ*

ಶ್ರೀಮದಾಚಾರ್ಯರು ಅತ್ಯದ್ಭುತಸದ್ಗುಣಸಮುದ್ರರು. ಸಮುದ್ರವು ರತ್ನಕ್ಕೆ ಕಾರಣವಾಗಿರುತ್ತದೆ. ಸಮಗ್ರ ಭೂಮಿಯಲ್ಲೇ ಪ್ರಕಾಶಮಾನವಾಗಿರುತ್ತದೆ. ನೀರಿನಿಂದ ತುಂಬಿರುತ್ತದೆ. ಶುದ್ಧವಾಗಿರುತ್ತದೆ. ಮುನಿಜನರಿಂದ ಸೇವಿತವಾಗಿರುತ್ತದೆ. ಶ್ರೀಮದಾಚಾರ್ಯರೂ ಈ ಸಮುದ್ರದಂತೆ ಸದ್‌ವಿದ್ಯೆಗಳೆಂಬ ಶ್ರೇಷ್ಠರತ್ನಗಳಿಗೆ ಕಾರಣರಾಗಿದ್ದಾರೆ. ಸಜ್ಜನರ ಬುದ್ಧಿಯಲ್ಲಿ ದೇದೀಪ್ಯಮಾನರಾಗಿದ್ದಾರೆ. ಶುಭಗುಣಗಳಿಂದ ತುಂಬಿದ್ದಾರೆ; ನಿರ್ಮಲಜಲದಂತೆ ನಿರ್ಮಲ ಅಂತಃಕರಣವುಳ್ಳವರಾಗಿದ್ದಾರೆ. ಜ್ಞಾನಿವರೇಣ್ಯರಾದ ಮುನಿಜನರಿಂದ ಸೇವಿತರಾಗಿದ್ದಾರೆ. ಹೀಗೆ ಅದ್ಭುತಸಮುದ್ರರಾದ ಶ್ರೀಮದಾಚಾರ್ಯರನ್ನು ಸಾಷ್ಟಾಂಗ ನಮಸ್ಕರಿಸುತ್ತೇನೆ.

**श्रीमद् व्याससुशास्त्रदुग्धजलधिं मध्वोक्तसत्तर्कदु-**
**स्तर्काख्यामरदानवाभृतमतिश्रेष्ठाहिहृद्भूभृता ।**
**आलोड्याखिलतत्त्वभासकमहारत्नानि चाप्नोत् सुधां**
**सोऽयं योगिमहेन्द्रसन्निभजयार्याख्यो भवेन्मे मुदे ॥ ४ ॥**

**ಶ್ರೀಮದ್‌ವ್ಯಾಸಸುಶಾಸ್ತ್ರದುಗ್ಧಜಲಧಿಂ ಮಧ್ವೋಕ್ತಸತ್ತರ್ಕದು-**
**ಸ್ತರ್ಕಾಖ್ಯಾಮರದಾನವಾಭೃತಮತಿಶ್ರೇಷ್ಠಾಹಿಹೃದ್‌ಭೂಭೃತಾ ।**
**ಆಲೋಡ್ಯಾಖಿಲತತ್ತ್ವಭಾಸಕಮಹಾರತ್ನಾನಿ ಚಾಪ್ನೋತ್ ಸುಧಾಂ**
**ಸೋಽಯಂ ಯೋಗಿಮಹೇಂದ್ರಸನ್ನಿಭಜಯಾರ್ಯಾಖ್ಯೋ ಭವೇನ್ ಮೇ ಮುದೇ ॥೪॥**

ದೇವೇಂದ್ರರಂತೆ ಶ್ರೀಮಟ್ಟೀಕಾಕೃತ್ಪಾದರೂ ಸಹ ಕ್ಷೀರಸಾಗರವನ್ನು ಮಥನ ಮಾಡಿದ್ದಾರೆ. ದೇವೇಂದ್ರರು ಕ್ಷೀರಸಾಗರವನ್ನು ಮಂದರಪರ್ವತದಿಂದ ಮಥಿಸಿದರು. ದೇವತೆಗಳು ಹಾಗೂ ದೈತ್ಯರು ವಾಸುಕಿಯನ್ನೇ ಹಗ್ಗವನ್ನಾಗಿಸಿಕೊಂಡು ಕಡೆದರು. ಅವಾಗ ಅನೇಕ ರತ್ನಗಳು ಮತ್ತು ಅಮೃತವು ಉದ್ಭವಿಸಿದವು.

ಅದರಂತೆ ಜಯತೀರ್ಥರೂ ಸಹ ವೇದವ್ಯಾಸರ ಸಚ್ಛಾಸ್ತ್ರಗಳೆಂಬ ಕ್ಷೀರಸಮುದ್ರವನ್ನು ಮಥನ ಮಾಡಿದ್ದಾರೆ. ಶ್ರೀಮದಾಚಾರ್ಯರು ಹೇಳಿದ ಸತ್ತರ್ಕಗಳೇ ದೇವತೆಗಳು. ಇತರಮತೀಯರು ಹೇಳಿದ ದುಸ್ತರ್ಕಗಳೇ ದೈತ್ಯರು. ಜಯತೀರ್ಥರ ಬುದ್ಧಿಯೇ ಶ್ರೇಷ್ಠವಾದ ಸರ್ಪವು. ಮನಸ್ಸೇ ಪರ್ವತವು ಇವುಗಳಿಂದ ಮಥನ ಮಾಡಿದಾಗ ಸಕಲತತ್ತ್ವಗಳನ್ನು ಪ್ರಕಾಶಿಸುವ ಅನೇಕವಿಚಾರಗಳು, ರತ್ನಗಳಂತೆ ಉದ್ಭವಿಸಿವೆ. ಸುಧಾಗ್ರಂಥವೇ ಅಮೃತವಾಗಿದೆ. ಹೀಗೆ ದೇವೇಂದ್ರರಂತೆ ಸಮುದ್ರಮಥನ ಮಾಡಿದ ಯೋಗಿಗಳಾದ ಶ್ರೀಜಯತೀರ್ಥರು ನಮ್ಮೆಲ್ಲರಿಗೂ ಸಂತೋಷವನ್ನುಂಟುಮಾಡಲಿ. (ದೇವಲೋಕದ ಸುರರಿಗೆ ದೇವೇಂದ್ರರು ಅಮೃತವನ್ನು ನೀಡಿದರೆ ಭೂಸುರರಿಗೆ ನ್ಯಾಯಸುಧೆಯೆಂಬ ಅಮೃತವನ್ನು ಶ್ರೀ ಜಯತೀರ್ಥರು ನೀಡಿದ್ದಾರೆ. ಈ ಶ್ಲೋಕದಲ್ಲಿ ದೇವೇಂದ್ರರೇ ಜಯತೀರ್ಥರೆಂಬ ಭಾವನೆಯಿಂದ ಸ್ತುತಿಸಿದ್ದಾರೆ.)

*ಜಿಜ್ಞಾಸಾಧಿಕರಣ*

**वेदव्यासमतापगापतिवरं श्रीमज्जयप्रोक्तिसत्-**
**सर्पावेष्टितमध्वसन्मुनिवरग्रन्थागवर्येण यः ।**
**संलोड्याखिलसन्नयामृतवरं तत्त्वादिसद्दीपिका -**
**सत्तात्पर्यसुचन्द्रिकातरुवरं यस्तर्कसत्ताण्डवम् ॥ ५ ॥**

ವೇದವ್ಯಾಸಮತಾಪಗಾಪತಿವರಂ ಶ್ರೀಮಜ್ಜಯಪ್ರೋಕ್ತಿಸತ್-
ಸರ್ಪಾವೇಷ್ಟಿತಮಧ್ವಸನ್ಮುನಿವರಗ್ರಂಥಾಗವರ್ಯೇಣ ಯಃ।
ಸಂಲೋಡ್ಯಾಖಿಲಸನ್ನಯಾಮೃತವರಂ ತತ್ವಾದಿಸದ್ದೀಪಿಕಾ -
ಸತ್ತಾತ್ಪರ್ಯಸುಚಂದ್ರಿಕಾತರುವರಂ ಯಸ್ತರ್ಕಸತ್ತಾಂಡವಮ್ ॥ ೫ ॥

**निष्कास्याद्भुतखण्डनत्रयमुखव्याख्यानरत्नोच्चयं**
**दृष्ट्वा कुत्सितयुक्त्यरातिपिहितां श्रीव्यासतीर्थो बुधः ।**
**स्वोक्तिं रक्षितुमत्र यः प्रतिपदं सम्यग् विशेषार्पको**
**विद्याधीशसुतीर्थसद्गुरुवरः किं नावतीर्णः स हि ॥ ६ ॥**

ನಿಷ್ಕಾಸ್ಯಾದ್ಭುತಖಂಡನತ್ರಯಮುಖವ್ಯಾಖ್ಯಾನರತ್ನೋಚ್ಚಯಂ
ದೃಷ್ಟ್ವಾ ಕುತ್ಸಿತಯುಕ್ತ್ಯರಾತಿಪಿಹಿತಾಂ ಶ್ರೀವ್ಯಾಸತೀರ್ಥೋ ಬುಧಃ।
ಸ್ವೋಕ್ತಿಂ ರಕ್ಷಿತುಮತ್ರ ಯಃ ಪ್ರತಿಪದಂ ಸಮ್ಯಗ್ ವಿಶೇಷಾರ್ಪಕೋ
ವಿದ್ಯಾಧೀಶಸುತೀರ್ಥಸದ್ಗುರುವರಃ ಕಿಂ ನಾವತೀರ್ಣಃ ಸ ಹಿ ॥ ೬ ॥

ಜಯತೀರ್ಥರ ಮಾತುಗಳು ಸರ್ಪವಾಗಿವೆ. ಶ್ರೀಮದಾಚಾರ್ಯರ ಗ್ರಂಥಗಳೇ ಪರ್ವತವಾಗಿವೆ ಇವುಗಳಿಂದ ವೇದವ್ಯಾಸ ಮತವೆಂಬ ಸಮುದ್ರವನ್ನು ಮಥಿಸಿ ನ್ಯಾಯಾಮೃತವನ್ನು ವ್ಯಾಸತೀರ್ಥರು ನೀಡಿದ್ದಾರೆ. ತತ್ವಗಳನ್ನು ಪ್ರಕಾಶಿಸುವ 'ತಾತ್ಪರ್ಯಚಂದ್ರಿಕೆ' ಎಂಬ ಕಲ್ಪವೃಕ್ಷವನ್ನು ತರ್ಕತಾಂಡವವನ್ನು ನೀಡಿದ್ದಾರೆ. ಮತ್ತು ಖಂಡನತ್ರಯ ಮೊದಲಾದ ಗ್ರಂಥಗಳಿಗೆ ಅದ್ಭುತವಾದ 'ಮಂದಾರಮಂಜರೀ' ಇತ್ಯಾದಿವ್ಯಾಖ್ಯಾನವೆಂಬ ಶ್ರೇಷ್ಠರತ್ನವನ್ನು ನೀಡಿದ್ದಾರೆ. ಕೆಟ್ಟಬುದ್ಧಿಯೆಂಬ ಶತ್ರುಗಳು ಈ ಗ್ರಂಥ-ಸಂಪತ್ತುಗಳನ್ನು ಹಾಳು(ನಾಶ)ಮಾಡಿದ್ದಾರೆ. ಸಜ್ಜನರಿಗೆ ಸಿಗದಂತೆ ಮುಚ್ಚಿಬಿಟ್ಟದ್ದಾರೆ. ಹೀಗೆ ತಮ್ಮ ಗ್ರಂಥಗಳು ದುಷ್ಟರ ಪಾಲಿಗೆ ದೊರಕಿದಾಗ ತಮ್ಮ ಮಾತುಗಳನ್ನು ರಕ್ಷಿಸಿಕೊಳ್ಳುವ ಅಪೇಕ್ಷೆಯಿಂದ ವ್ಯಾಸತೀರ್ಥರೇ ಪುನಃ ವಿದ್ಯಾಧೀಶತೀರ್ಥರಾಗಿ ಹುಟ್ಟಿ ಬಂದಿದ್ದಾರೆಯೇ? ವ್ಯಾಸತೀರ್ಥರ ಗ್ರಂಥಗಳಲ್ಲಿರುವ ಪ್ರತಿಯೊಂದು ವಾಕ್ಯಗಳಿಗೆ ಮತ್ತು ಪದಗಳಿಗೆ ಅಸಾಧಾರಣವಾದ ಅರ್ಥವನ್ನು ಹೇಳುವ ಗುರುಶ್ರೇಷ್ಠರಾದ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು ವ್ಯಾಸತೀರ್ಥರ ಅವತಾರವೇ?

ವಿಶೇಷ ವಿಚಾರ :- ಈ ಶ್ಲೋಕದಲ್ಲಿ ವಿದ್ಯಾಧೀಶತೀರ್ಥ ಶ್ರೀಪಾದಂಗಳವರನ್ನು ಶ್ರೀವ್ಯಾಸತೀರ್ಥರ ಅವತಾರವೆಂದು ವರ್ಣಿಸಲಾಗಿದೆ. ವಿದ್ಯಾಧೀಶತೀರ್ಥರು ವ್ಯಾಸತೀರ್ಥರ ಅವತಾರರೆನ್ನಲು ಪ್ರಚಲಿತವಾದ ಕಥೆಯೊಂದು ಹೀಗಿದೆ - ಆನಂದಭಟ್ಟಾರಕರು ಪಾಂಡುರಂಗಿ ವಂಶದ ಶ್ರೇಷ್ಠವಿದ್ವಾಂಸರು. ವ್ಯಾಸತೀರ್ಥ-

ದುಃಖೀನರು. ವ್ಯಾಸತೀರ್ಥರು 'ನ್ಯಾಯಾಮೃತ', ಎಂಬ ಗ್ರಂಥವನ್ನು ಬರೆದರು. ಆಗ ಅದೇ ಕಾಲದಲ್ಲಿದ್ದ 'ಮಧುಸೂದನ ಸರಸ್ವತಿ' ಎಂಬ ದೊಡ್ಡ ಅದ್ವೈತಸನ್ಯಾಸಿಗಳೊಬ್ಬರು ನ್ಯಾಯಾಮೃತಕ್ಕೆ 'ಅದ್ವೈತಸಿದ್ಧಿ' ಎಂಬ ಖಂಡನಾಗ್ರಂಥವನ್ನು ಬರೆದರು. ಅದನ್ನು ಗೋಪ್ಯವಾಗಿ ಇಟ್ಟಿದ್ದರು. ಈ ವಿಷಯವು ಆನಂದಭಟ್ಟಾರಕರಿಗೆ ತಿಳಿದು ಹೇಗಾದರೂ ಮಾಡಿ ಅದ್ವೈತಸಿದ್ಧಿಗ್ರಂಥವನ್ನು ಖಂಡಿಸಿ ನ್ಯಾಯಾಮೃತದಲ್ಲಿ ಹೇಳಿದ ವಿಚಾರಗಳನ್ನು ಸಮರ್ಥಿಸಬೇಕೆಂದು ಇಚ್ಛಿಸಿದರು. ಉಪಾಯವೊಂದನ್ನು ಹೂಡಿ ಅದ್ವೈತ ವೇಷದಿಂದ ಮಧುಸೂದನ ಸರಸ್ವತಿಗಳ ಬಳಿ ಶಿಷ್ಯತ್ವವನ್ನು ವಹಿಸಿದರು. ಪಾಠ ಕೇಳುವ ನೆಪದಿಂದ ಸಮಸ್ತ ಅದ್ವೈತಸಿದ್ಧಿಯನ್ನು ತಿಳಿದರು. ಪ್ರತಿದಿನ ರಾತ್ರಿಕಾಲದಲ್ಲಿ ಅದನ್ನು ಖಂಡನೆ ಮಾಡುತ್ತಾ ಬಂದರು. ಅದಕ್ಕೆ 'ಕಂಠಕೋದ್ಧಾರ' ಎಂದು ಹೆಸರನ್ನಿಟ್ಟರು. ಈ ಗ್ರಂಥವು ಅದ್ವೈತಸಿದ್ಧಿಗೆ ಖಂಡನಾರೂಪವಾಗಿ ಇರುವುದಲ್ಲದೆ ನ್ಯಾಯಾಮೃತದ ವ್ಯಾಖ್ಯಾನವೂ ಆಗಿದೆ. ಇಂತಹ ಶ್ರೇಷ್ಠಗ್ರಂಥವನ್ನು ರಚಿಸಿ ಶ್ರೀವ್ಯಾಸತೀರ್ಥರ ಮುಂದೆ ಸಮರ್ಪಿಸಿದರು. ಆನಂದಭಟ್ಟಾರಕರು ರಚಿಸಿದ ಈ ಕಂಠಕೋದ್ಧಾರ ವ್ಯಾಖ್ಯಾನವನ್ನು ನೋಡಿ ವ್ಯಾಸತೀರ್ಥರು ಬಹಳ ಸಂತೋಷಪಟ್ಟರು. ಹೀಗೆ ಉದ್ಗರಿಸಿದರೂ ಸಹ? "ಮುಂದಿನ ಜನ್ಮದಲ್ಲಿ ನಾನು ಹುಟ್ಟುವುದಾದರೆ ನಿನ್ನ ಹೊಟ್ಟೆಯಲ್ಲಿಯೇ ಹುಟ್ಟುತ್ತೇನೆ'' ಎಂದು.

ಈ ಆನಂದಭಟ್ಟಾರಕರ ಮಕ್ಕಳೇ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು. ಈ ಕಥೆಯ ಆಧಾರದಿಂದ ಇಲ್ಲಿ ವಿದ್ಯಾಧೀಶತೀರ್ಥರನ್ನು ವ್ಯಾಸತೀರ್ಥರ ಅವತಾರವೆಂದು ಸ್ತುತಿಸಿರಬಹುದು. ಶ್ರೀವಿದ್ಯಾಧೀಶತೀರ್ಥಶ್ರೀಪಾದರ ಪೂರ್ವಾಶ್ರಮದ ತಮ್ಮಂದಿರು ಪಾಂಡುರಂಗಿ ಕೇಶವಾಚಾರ್ಯರು. ಇವರು ಅಣ್ಣಂದಿರ ಬಳಿ ಸಮಗ್ರವಾಗಿ ವ್ಯಾಸತೀರ್ಥರ ಎಲ್ಲ ಗ್ರಂಥಗಳ ಪಾಠವನ್ನು ಕೇಳಿದ್ದಾರೆ. ಪ್ರಕೃತ 'ಭಾವದೀಪ' ಎಂಬ ಚಂದ್ರಿಕಾ ವ್ಯಾಖ್ಯಾನವನ್ನು ಬರೆಯುತ್ತಿದ್ದಾರೆ.

**विद्याधीशं चन्द्रिकाब्धिविक्रीडनविचक्षणम् ।**
**विद्यागुरुं कुलगुरुं नौमि तं मे जगद्गुरुम् ।। ७ ।।**

ವಿದ್ಯಾಧೀಶಂ ಚಂದ್ರಿಕಾಬ್ಧಿವಿಕ್ರೀಡನವಿಚಕ್ಷಣಮ್ ।
ವಿದ್ಯಾಗುರುಂ ಕುಲಗುರುಂ ನೌಮಿ ತಂ ಮೇ ಜಗದ್ಗುರುಮ್ ॥ ೭ ॥

'ಚಂದ್ರಿಕಾ' ಎಂಬ ಸಮುದ್ರದಲ್ಲಿ ಕಲಾತ್ಮಕವಾಗಿ ಕ್ರೀಡಿಸುವವರು ಶ್ರೀವಿದ್ಯಾಧೀಶತೀರ್ಥರು. ನಮ್ಮ ಕುಲಗುರುಗಳೂ ವಿದ್ಯಾಗುರುಗಳೂ ಆದ ಇವರು ಸಮಸ್ತ ಸಜ್ಜನ ಪ್ರಪಂಚಕ್ಕೆ ಗುರುಗಳಿದ್ದಾರೆ. ಇವರನ್ನು ಭಕ್ತಿಯಿಂದ ನಮಿಸುತ್ತೇನೆ.

**निशम्य सकलं शास्त्रं विद्याधीशाज्जगद्गुरोः ।**
**चन्द्रिकायाः प्रकाशोऽयं केशवेन प्रकाश्यते ।। ८ ।।**

ನಿಶಮ್ಯ ಸಕಲಂ ಶಾಸ್ತ್ರಂ ವಿದ್ಯಾಧೀಶಾಜ್ಜಗದ್ಗುರೋಃ ।
ಚಂದ್ರಿಕಾಯಾಃ ಪ್ರಕಾಶೋಽಯಂ ಕೇಶವೇನ ಪ್ರಕಾಶ್ಯತೇ ॥ ೮ ॥

ಗುರುಗಳಾದ ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರ ಬಳಿ ಸಕಲಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದೇನೆ. ಕೇಶವ ಎಂಬ ಹೆಸರುಳ್ಳವನಾಗಿದ್ದೇನೆ. ಪ್ರಕೃತ ತಾತ್ಪರ್ಯಚಂದ್ರಿಕಾ ಎಂಬ ಗ್ರಂಥಕ್ಕೆ ಪ್ರಕಾಶದಂತಿರುವ ವ್ಯಾಖ್ಯಾನವನ್ನು ಬರೆಯುತ್ತಿದ್ದೇನೆ.

(ಪಾಂಡುರಂಗಿ ಕೇಶವಾಚಾರ್ಯರು ಚಂದ್ರಿಕಾಗ್ರಂಥಕ್ಕೆ ವ್ಯಾಖ್ಯಾನ ಮಾಡಿದಂತೆ ಆನಂದಮುದ್ರೀ-ಕರಣದಿಂದ ಪ್ರಾರಂಭಿಸಿ ಸಮಗ್ರನ್ಯಾಯಸುಧಾಗ್ರಂಥಕ್ಕೂ ವ್ಯಾಖ್ಯಾನಿಸಿದ್ದಾರೆ. ಶೇಷವಾಕ್ಯಾರ್ಥಚಂದ್ರಿಕಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇಲ್ಲಿರುವ ಮಂಗಳಶ್ಲೋಕಗಳನ್ನು ಅಲ್ಲಿಯೂ ಕಾಣಬಹುದು. ಶೇಷವಾಕ್ಯಾರ್ಥಚಂದ್ರಿಕೆಗೆ 'ವಾಕ್ಯಾರ್ಥರತ್ನಮಾಲಾ' ಎಂಬ ವ್ಯಾಖ್ಯಾನವಿದೆ. ಆ ವ್ಯಾಖ್ಯಾನದಲ್ಲಿ ಈ ಎಲ್ಲ ಮಂಗಳ ಶ್ಲೋಕಗಳನ್ನು ವಿವರವಾಗಿ ಮತ್ತು ಹತ್ತಾರು ಅರ್ಥಗಳಿಂದ ವ್ಯಾಖ್ಯಾನಿಸಿದ್ದಾರೆ. ಹೆಚ್ಚಿನ ವಿಚಾರಗಳನ್ನು ಅಲ್ಲಿ ನೋಡಿ ತಿಳಿದುಕೊಳ್ಳಬೇಕು.)

● ● ● ● ●

ಶ್ರೀವೇದವ್ಯಾಸಾಯ ನಮಃ

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯಶ್ರೀವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ

## ಜಿಜ್ಞಾಸಾಧಿಕರಣಮ್

॥ ಮಂಗಳಾಚರಣೆ ॥

ಶ್ರೀರಂಗನಾಥನಿಗೆ ನಮಸ್ಕಾರ

**अस्पृष्टदोषगन्धाय कल्याणगुणसिन्धवे ।**
**नमोनमो भक्तमुक्तिदायिने शेषशायिने ॥ १ ॥**

**ಅಸ್ಪೃಷ್ಟದೋಷಗಂಧಾಯ ಕಲ್ಯಾಣಗುಣಸಿಂಧವೇ ।**
**ನಮೋನಮೋ ಭಕ್ತಮುಕ್ತಿದಾಯಿನೇ ಶೇಷಶಾಯಿನೇ ॥ ೧ ॥**

ಪರಮಾನಂದಭರಿತನಾಗಿ ಶೇಷಶಯನನಾದ ರಂಗನಾಥನೇ ! ಇದೋ ನಿನಗೆ ಭಕ್ತವೃಂದದ ಅನಂತಾನಂತ ನಮಸ್ಕಾರಗಳು. ಯಾವ ದೋಷಗಳ ಲೇಶದ ಸಂಪರ್ಕವೂ ಇಲ್ಲದ ಸಮಸ್ತ ಗುಣಗಳ ರಾಶಿಗೆ ಸಮುದ್ರನಾದ ಭಕ್ತರಿಗೆ ಮೋಕ್ಷವನ್ನು ದಯಪಾಲಿಸುವ ಪರಮಪುರುಷನು ನೀನು. (ಶ್ರೀರಂಗಕ್ಷೇತ್ರನಿವಾಸಿಯಾದ ರಂಗನಾಥನೇ ! ಎಲ್ಲ ವಿಘ್ನಗಳನ್ನು ಪರಿಹರಿಸು. !)

*ಪರಿಪೂರ್ಣಚಂದ್ರಿಕಾ*

प्रकाशः – तत्वप्रकाशिकाव्याख्याव्याजेन अधिसूत्रं प्रवर्तमानेषु ग्रन्थेषु दुर्गमार्थान् सुगमान् विधित्सुर्व्यासतीर्थमुनिः प्रारिप्सितग्रन्थपरिसमाप्त्याद्यर्थ-मध्यायचतुष्टयोक्तगुणविशिष्टदेवतानतिरूपं मङ्गलं विदधाति – अस्पृष्टेति ॥ 'असम्बद्धदोषलेशाय' इति द्वितीयाध्यायार्थः । ''गन्धो गन्धक आमोदे सम्बन्धे लेशगर्वयोः'' इत्यभिधानात् । यं दोषलेशोऽपि न स्पृशति तस्मा इति यावत् । बहुव्रीहेर्दोषगन्धपदान्तत्वेन गन्धपदान्तत्वाभावात् ''अल्पाख्यायाम्'' इतीत्वं न भवति । कल्याणानां 'गुणानां' धर्माणां सिन्धुरिव 'सिन्धुः' आश्रय इति आद्याध्यायार्थः । सत्त्वादीनां श्रुत्यादौ गुणत्वप्रसिद्धेः मतान्तरे दुःखादीनां गुणत्वेनोक्तेश्च तद्व्युदासाय – कल्याणेति ॥ आद्यार्थस्यादौ वाच्यत्वेऽपि द्वितीयार्थस्य आद्यार्थे हेतुत्वादादावुक्तिः । कल्याणधर्मत्वोपापदकत्वाद्वा । सदोषत्वे तस्यायोगात् । विघ्नादिदोषनिवृत्तेरादावपेक्षितत्वाद्वा । ''तं यथायथोपासते'' इत्यादि । 'भक्तेभ्यः' भक्त्युपलक्षितवैराग्यश्रवणमननादि-साधनवद्भ्यः 'मुक्तिदायिने' इत्यनेन तृतीयचतुर्थार्थोक्तिः । 'नमोनमः' इत्यादराद् द्विरुक्तिः । ''नमःस्वस्ति'' इत्यादिना चतुर्थी । एवंविधश्च नारायण इति सूचयति - शेषशायिन इति ॥ १ ॥

गुरुराजीय – ग्रन्थादौ मङ्गलमाचरति – अस्पृष्टेति ॥ अध्यायचतुष्टय-प्रतिपाद्यगुणविशिष्टतया परदेवता स्तूयते । तत्र अस्पृष्टेति द्वितीयाध्यायार्थः । अस्पृष्टोऽसम्बद्धो दोषगन्धो दोषलेशो येन स तथोक्तः, तस्मै । 'अस्पृष्टदोषाय' इत्यनुक्त्वा 'अस्पृष्टदोषगन्धाय' इति गन्धपदोपादानं तु एतद् व्याख्येय-'चिन्तासन्तापलेपोद्भवमृतिमुखराशेषदोषातिदूरम्' इति विशेषणगता 'अतिदूरम्' इति पदाभिप्रायेण । कल्याणानां गुणानां धर्माणां सिन्धुरिव सिन्धुः आश्रय इति आद्याध्यायार्थः । ''सज्ज्ञानसुखशक्तिभिः पयोनिधिरिव'' इति ''ज्ञानेन सूर्य इव'' इति ''निखिलपूर्णगुणैरर्णः समुद्र इव'' इति च तत्रतत्र टीकाकारैस्तृतीया-समासाश्रयणादत्रापि कल्याणगुणैः सिन्धुः समुद्र इवेति । ''तृतीया'' इति योगविभागात् तृतीयातत्पुरुष इति वा । कल्याणत्वेन गुणविशेषणं तु वीर्यादि-देहमित्यत्रत्यादिशब्दसङ्ग्राह्यतावच्छेदकधर्मसूचनार्थम् ।

यद्यपि अध्यायद्वयार्थकथनरूपटीकाग्रन्थक्रमानुरोधेन 'कल्याणगुणसिन्धवः' इत्याद्यध्यायार्थोक्त्यनन्तरम् 'अस्पृष्टदोषगन्धाय' इति द्वितीयाध्यायार्थोक्तिरुचिता नतु व्यत्यासेन । तथापि 'दुःखनिवृत्त्यनन्तरमेवानन्दादिगुणावाप्तिलक्षणो मोक्षः' इति फलक्रममनुसृत्य तत्साधानोपासनविषययोर्निर्दोषत्वकल्याणगुणत्वयोः पौर्वापर्यमुचितमिति भावेनायं व्यत्यास इति ज्ञेयम् ।

यद्वा, 'द्वितीयाध्यायार्थभूताऽपि भगवन्निर्दोषता विघ्नरूपदोषनिर्हरणाय मुमुक्षुणा प्रथममनुसन्धेया' इति भावेन टीकाक्रमपरित्यागेन क्रमान्तराश्रयणमिदमिति ज्ञातव्यम् । भक्तेति तृतीयाध्यायार्थसूचनम् । ततश्च 'भक्तेभ्यो भक्त्युपलक्षितवैराग्यादिसमस्तसाधनवद्भ्यश्चतुर्विधमोक्षदायिनः' इत्युक्तं भवति । शेषशायिन इति परदेवतायाः शेषरूपमञ्चस्यत्वकथनेन तादृशस्य परमात्मनः परमानन्दमग्नत्वात् तत्प्रार्थनमविलम्बेनापेक्षिताशेषपुरुषार्थसाधनमिति सूचितं भवति ॥१॥

**ವಿವರಣೆ** - ಶ್ರೀಮದ್ವ್ಯಾಸತೀರ್ಥಶ್ರೀಪಾದಂಗಳವರು ತತ್ವಪ್ರಕಾಶಿಕಾಗ್ರಂಥಕ್ಕೆ, 'ತಾತ್ಪರ್ಯಚಂದ್ರಿಕಾ' ಎಂಬ ವ್ಯಾಖ್ಯಾನವನ್ನು ಬರೆಯಲು ಪ್ರಾರಂಭಿಸಿದ್ದಾರೆ. ತತ್ವಪ್ರಕಾಶಿಕೆಗೆ ವ್ಯಾಖ್ಯಾನ ಎಂಬುದು ನೆಪಮಾತ್ರ. ಬ್ರಹ್ಮಸೂತ್ರಗಳಿಗೆ ಸಂಬಂಧಪಟ್ಟ ಎಲ್ಲ ಗ್ರಂಥಗಳಿಗೂ ವ್ಯಾಖ್ಯಾನ ಮಾಡಲು ಹೊರಟದ್ದು ಆ ಎಲ್ಲಾ ಗ್ರಂಥಗಳಲ್ಲಿನ ದುರ್ಗಮವಾದ ಅರ್ಥವುಳ್ಳ ವಾಕ್ಯಗಳಿಗೆ ಈ ಗ್ರಂಥದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನ ಮಾಡಬೇಕೆಂಬ ಇಚ್ಛೆಯುಳ್ಳವರಾಗಿದ್ದಾರೆ ಶ್ರೀವ್ಯಾಸತೀರ್ಥರು. ಗ್ರಂಥದ ಪರಿಸಮಾಪ್ತಿಗೋಸ್ಕರ ಪ್ರಾರಂಭದಲ್ಲಿ ಮಂಗಳಾಚರಣೆ ಮಾಡಿದ್ದಾರೆ.

'ಅಸ್ಪೃಷ್ಟ' ಇತ್ಯಾದಿ ವಿಶೇಷಣಗಳಿಂದ ನಾಲ್ಕು ಅಧ್ಯಾಯಗಳಲ್ಲಿ ಹೇಳಿರುವಂತಹ ಗುಣಗಳಿಂದ ವಿಶಿಷ್ಟನಾದ ನಾರಾಯಣನನ್ನು ನಮಸ್ಕರಿಸುತ್ತಿದ್ದಾರೆ.

**ಅಸ್ಪೃಷ್ಟದೋಷಗಂಧಾಯ** - 'ಯಾವುದೇ ತರಹದ ದೋಷಸಂಪರ್ಕವಿಲ್ಲ'ವೆಂದು ಎರಡನೆಯ ಅಧ್ಯಾಯವು ಸಮರ್ಥಿಸುತ್ತದೆ. ಆ ಗುಣವನ್ನು ಈ ವಿಶೇಷಣವು ಹೇಳುತ್ತಿದೆ.

ಇಲ್ಲಿರುವ ಗಂಧಶಬ್ದಕ್ಕೆ 'ಲೇಶ' ಎಂದರ್ಥ. ಗಂಧಶಬ್ದಕ್ಕೆ ಹಲವು ಅರ್ಥಗಳಿವೆಯೆನ್ನುತ್ತದೆ ವಿಶ್ವಕೋಶ - 'ಗಂಧೋ ಗಂಧಕೇ ಆಮೋದೇ ಸಂಬಂಧೇ ಲೇಶಗರ್ವಯೋಃ'

| | | |
|---|---|---|
| ಗಂಧಕ | = | ವೃಕ್ಷವಿಶೇಷ |
| ಆಮೋದ | = | ಪರಿಮಳ |
| ಸಂಬಂಧ | = | ಸಂಬಂಧ |
| ಲೇಶ | = | ಸ್ವಲ್ಪ |
| ಗರ್ವ | = | ಅಹಂಕಾರ |

ಪರಿಪೂರ್ಣಚಂದ್ರಿಕಾ

ಪ್ರಕೃತ ಲೇಶವೆಂಬ ಅರ್ಥವನ್ನು ವಿವಕ್ಷಿಸಲಾಗಿದೆ. ಆದ್ದರಿಂದ ಯಾವ ವ್ಯಕ್ತಿಯನ್ನು ದೋಷದ ಕಣಕೂ ಸಹ ಮುಟ್ಟಲಾರದೋ, ಅಂತಹ ನಾರಾಯಣನಿಗೆ ಎಂಬರ್ಥವು ತಿಳಿಯುತ್ತದೆ.

ವಿಗ್ರಹ - ಅಸ್ಪೃಷ್ಟಃ ದೋಷಗಂಧಃ ಯೇನ ಸಃ ಅಸ್ಪೃಷ್ಟದೋಷಗಂಧಃ ತಸ್ಮೈ ಅಸ್ಪೃಷ್ಟದೋಷಗಂಧಾಯ ಎಂದು ಬಹುವ್ರೀಹಿಸಮಾಸ.

ವ್ಯಾಕರಣವಿಚಾರ - ಬಹುವ್ರೀಹಿಸಮಾಸದಲ್ಲಿ ಗಂಧಪದವು ಕೊನೆಯಲ್ಲಿದ್ದರೆ ಆ ಗಂಧಪದದ ಕೊನೆಗೆ ಇಕಾರವು ಬರುತ್ತದೆ. 'ಅಲ್ಪಾಖ್ಯಾಯಾಂ' ಸೂತ್ರದಲ್ಲಿ ಗಂಧಪದಾಂತವಾದ ಬಹುವ್ರೀಹಿ-ಸಮಾಸಕ್ಕೆ 'ಇ' ಕಾರವನ್ನು ಹೇಳಲಾಗಿದೆ. ಉದಾಹರಣೆ -- ಸೂಪಸ್ಯ ಗಂಧೋ =ಲೇಶೋ, ಯಸ್ಮಿನ್ ತತ್ ಸೂಪಗಂಧಿ - ಭೋಜನಮ್. 'ಸೂಪಃ ಗಂಧಃ ಯಸ್ಮಿನ್ ತತ್ ಸೂಪಗಂಧಿ' ಎಂಬ ಬಹು-ವ್ರೀಹಿಸಮಾಸದಲ್ಲಿ ಗಂಧಶಬ್ದವು ಕೊನೆಯಲ್ಲಿರುವುದರಿಂದ ಇಕಾರವು ಬಂದು 'ಸೂಪಗಂಧಿ' ಎಂದು ಆಗುತ್ತದೆ. ಇದರಂತೆ ಪ್ರಕೃತದಲ್ಲಿಯೂ 'ಅಸ್ಪೃಷ್ಟದೋಷಗಂಧಾಯ' ಎಂಬಲ್ಲಿ 'ಗಂಧ'ಪದವು ಸಮಾಸದ ಕೊನೆಯಲ್ಲಿರುವುದರಿಂದ 'ಅಸ್ಪೃಷ್ಟದೋಷಗಂಧಿ' ಎಂದು ಇಕಾರ ಬರಬೇಕಿತ್ತಲ್ಲವೆ?

ಉತ್ತರ :- ಗಂಧಪದಾಂತವಾದ ಬಹುವ್ರೀಹಿಸಮಾಸಕ್ಕೆ ಇಕಾರ ಬರುತ್ತದೆಂಬುದು ಸರಿ. ಆದರೆ ಪ್ರಕೃತ ಗಂಧಪದಾಂತವಾದ ಬಹುವ್ರೀಹಿಸಮಾಸವಲ್ಲ. ದೋಷಗಂಧಪದಾಂತವಾದ ಬಹುವ್ರೀಹಿ-ಸಮಾಸ. ಒಂದು ವೇಳೆ ಗಂಧಪದಾಂತವಾದ ಬಹುವ್ರೀಹಿಸಮಾಸವಾಗಿದ್ದಲ್ಲಿ 'ಅಲ್ಪಾಖ್ಯಾಯಾಂ' ಎಂಬ ಸೂತ್ರದಿಂದ 'ಇ' ಕಾರವು ಬರುತ್ತಿತ್ತು. ಆದ್ದರಿಂದ ಇಲ್ಲಿ 'ಅಸ್ಪೃಷ್ಟಃ ದೋಷಗಂಧಃ ಯೇನ ಸಃ' ಎಂದು 'ಅಸ್ಪೃಷ್ಟ' ಶಬ್ದಕ್ಕೂ 'ದೋಷಗಂಧ' ಶಬ್ದಕ್ಕೂ ಸಮಾಸ ಮಾಡಬೇಕು. ಇಲ್ಲಿ ಗಂಧಪದವೇಕೆ? 'ಅಸ್ಪೃಷ್ಟದೋಷಾಯ' ಎಂದಷ್ಟೇ ಸಾಕು. ಎಂದರೆ, ಗಂಧಪದವನ್ನು ಹೇಳಲು ಒಂದು ಸ್ವಾರಸ್ಯವಿದೆ - ಟೀಕಾರಾಯರು ತತ್ವಪ್ರಕಾಶಿಕೆಯ ಮಂಗಲಪದ್ಯದಲ್ಲಿ ಚಿಂತಾಸಂತಾಪಲೇಶೋದ್ಭವಮೃತಿಮುಖರಾ-ಶೇಷದೋಷಾತಿದೂರಂ ಚಿಂತೆ, ಸಂತಾಪ, ಪುಣ್ಯಪಾಪಗಳ ಸಂಬಂಧ, ಜನ್ಮ, ಮರಣ, ಇವೇ ಮೊದಲಾದ ದೋಷಗಳಿಂದ ಅತ್ಯಂತ ದೂರನಾಗಿದ್ದಾನೆ ಎಂದು ಹೇಳಿದ್ದಾರೆ. ಇಲ್ಲಿರುವ 'ಅತಿದೂರಂ' ಎಂಬ ವಿಶೇಷಣವನ್ನೇ ಪ್ರಕೃತ ಗಂಧಪದದಿಂದ ವ್ಯಾಖ್ಯಾನಿಸಿದ್ದಾರೆ. ಇದರಿಂದ ಟೀಕೆಯ ಮಂಗಳಶ್ಲೋಕವನ್ನು ಅನುಸರಿಸಿದಂತಾಗುತ್ತದೆ.

ಕಲ್ಯಾಣಗುಣಸಿಂಧವೇ :- 'ಕಲ್ಯಾಣವಾದ ಗುಣಗಳಿಗೆ ಸಮುದ್ರದಂತೆ ಇದ್ದಾನೆ' ಎಂಬುದು ಎರಡನೆಯ ವಿಶೇಷಣ. ಮೊದಲನೆಯ ಅಧ್ಯಾಯದಲ್ಲಿ ಹೇಳಿದ ಗುಣಪರಿಪೂರ್ಣತ್ವವನ್ನು ಈ ವಿಶೇಷಣದಿಂದ ಸಂಗ್ರಹಿಸಿದ್ದಾರೆ.

ಗುಣ ಎಂದರೇನು? ಶ್ರುತಿಗಳು ಸತ್ವರಜಸ್ತಮೋಗುಣಗಳನ್ನೂ ಗುಣವೆನ್ನುತ್ತವೆ. ತಾರ್ಕಿಕರು ದುಃಖಾದಿಗಳನ್ನೂ ಗುಣ ಎನ್ನುತ್ತಾರೆ. ಪ್ರಕೃತ 'ಗುಣಸಿಂಧವೇ' ಎಂದಷ್ಟೇ ಹೇಳಿದ್ದಲ್ಲಿ ಇಂತಹ ದುಷ್ಟ-ಗುಣಗಳನ್ನೂ ಹೇಳಿದಂತಾಗುತ್ತಿತ್ತು. ಅದಕ್ಕೋಸ್ಕರ 'ಕಲ್ಯಾಣ' ಎಂಬ ವಿಶೇಷಣವನ್ನು ನೀಡಲಾಗಿದೆ.

*ಜಿಜ್ಞಾಸಾಧಿಕರಣ*

ಸತ್ವಾದಿಗುಣಗಳನ್ನಾಗಲೀ ದುಃಖಾದಿಗಳನ್ನಾಗಲೀ ಕಲ್ಯಾಣಗುಣಗಳೆಂದು ಯಾರೂ ಕರೆಯುವುದಿಲ್ಲ. ಆದ್ದರಿಂದ ದೋಷವಿಲ್ಲ.

ತತ್ವಪ್ರಕಾಶಿಕೆಯ ಮಂಗಳಪದ್ಯದಲ್ಲಿ '**ಶುದ್ಧಾನಂದೋರುಸಂವಿದ್ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಂ**' ಶುದ್ಧವಾದ ಆನಂದ, ಬಹಳವಾದ ಜ್ಞಾನ, ಕಾಂತಿ, ಬಲ, ಬಹಳವಾದ ಔದಾರ್ಯ, ವೀರ್ಯ ಇವೇ ಮೊದಲಾದ ಗುಣಗಳ ದೇಹವುಳ್ಳವನು ಎಂದು ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಇನ್ನೂ ಹಲವು ಗುಣಗಳಿವೆಯೆಂದು ಸೂಚಿಸಿದ್ದಾರೆ. ಅಂತಹ ಹಲವು ಗುಣಗಳು ಎಂತಹವು? ಎಂಬ ಪ್ರಶ್ನೆ ಬಂದರೆ ಉತ್ತರಿಸಲು ಪ್ರಕೃತ ಗುಣದಲ್ಲಿ 'ಕಲ್ಯಾಣ' ಎಂಬ ವಿಶೇಷಣವನ್ನು ನೀಡಿದ್ದಾರೆ. 'ಕಲ್ಯಾಣಮಯವಾದ ಅನಂತಗುಣಗಳುಳ್ಳವನು' ಎಂದು ಇದರರ್ಥ. ಆದಿಪದದ ಸಂಗ್ರಾಹ್ಯತಾವಚ್ಛೇದಕಧರ್ಮ = ಕಲ್ಯಾಣತ್ವ.

ವಿಗ್ರಹ :- '**ಕಲ್ಯಾಣಾಶ್ಚ ತೇ ಗುಣಾಶ್ಚ ಕಲ್ಯಾಣಗುಣಾಃ ಕಲ್ಯಾಣಗುಣಾನಾಂ ಸಿಂಧುರಿವ ಸಿಂಧುಃ ಕಲ್ಯಾಣಗುಣಸಿಂಧುಃ ತಸ್ಮೈ ಕಲ್ಯಾಣಗುಣಸಿಂಧವೇ**' ಎಂದು ಷಷ್ಠೀತತ್‌ಪುರುಷಸಮಾಸ. 'ಸಿಂಧು' ಶಬ್ದಕ್ಕೆ ಆಶ್ರಯವೆಂದರ್ಥ. ಸಮುದ್ರವು ನೀರಿಗೆ ಆಶ್ರಯವಾಗಿದೆ. ಅದರಂತೆ ನಾರಾಯಣನು ಗುಣಗಳಿಗೆ ಆಶ್ರಯನಾಗಿದ್ದಾನೆ ಎಂದರ್ಥ.

ಅಥವಾ ತೃತೀಯಾತತ್‌ಪುರುಷವನ್ನೂ ಮಾಡಬಹುದು. - '**ಕಲ್ಯಾಣಾಶ್ಚ ತೇ ಗುಣಾಶ್ಚ ಕಲ್ಯಾಣಗುಣಾಃ ಕಲ್ಯಾಣಗುಣೈಃ ಸಿಂಧುರಿವ ಸಿಂಧುಃ ಕಲ್ಯಾಣಗುಣಸಿಂಧುಃ ತಸ್ಮೈ ಕಲ್ಯಾಣ- ಗುಣಸಿಂಧವೇ**' ಎಂದು. ಕಲ್ಯಾಣಗುಣಗಳಿಂದ ಸಮುದ್ರದಂತೆ ಇದ್ದಾನೆಂದು ಅರ್ಥ. ತೃತೀಯಾತತ್‌ಪುರುಷವನ್ನು ವಿಧಿಸುವ ಸೂತ್ರ. ''ತೃತೀಯಾ ತತ್ಕೃತಾರ್ಥೇನ ಗುಣವಚನೇನ'' - (೧ -೨ -೩೦)

**ಸುಪ್ ಸುಪೇತಿ ವರ್ತತೇ, ತಸ್ಯ ವಿಶೇಷಣಮೇತತ್ ತೃತೀಯಾ । ತೃತೀಯಾಂತಂ ಸುಬಂತಃ ಗುಣವಚನೇನಾಽರ್ಥಶಬ್ದೇನ ಚ ಸಹ ಸಮಸ್ಯತೇ । ತತ್ಪುರುಷಶ್ಚ ಸಮಾಸೋ ಭವತಿ ಕೀದೃಶೇನ ಗುಣವಚನೇನ? ತತ್ಕೃತೇನ ತದರ್ಥಕೃತೇನ, ತೃತೀಯಾಂತಾರ್ಥಕೃತೇನೇತಿ ಯಾವತ್. ಶಂಕುಲಯಾ ಖಂಡಃ ಶಂಕುಲಾಖಂಡಃ। ಕಿರಿಣಾ ಕಾಣಃ ಕಿರಿಕಾಣಃ । ಅರ್ಥಶಬ್ದೇನ ಧಾನ್ಯೇನಾರ್ಥಃ ಧಾನ್ಯಾರ್ಥಃ । ತತ್ಕೃತೇನೇತಿ ಕಿಮ್? ಅಕ್ಷ್ಣಾ ಕಾಣಃ ಗುಣವಚನೇನೇತಿ ಕಿಮ್? ಗೋಭಿರ್ವಪನಮ್ ।**

**ಸೂತ್ರಾರ್ಥ**- ತೃತೀಯಾಂತವಾದ ಸುಬಂತವು ತೃತೀಯಾಂತಪದದ ಅರ್ಥದಿಂದ ಮಾಡಲ್ಪಟ್ಟ ಗುಣವಾಚಿಪದದಿಂದ ಸಮಾಸವಾಗುತ್ತದೆ. ಮತ್ತು ಅರ್ಥಶಬ್ದದಿಂದಲೂ ಸಮಾಸವಾಗುತ್ತದೆ. ಉದಾ - 'ಶಂಕುಲಯಾ ಖಂಡಃ ಶಂಕುಲಾಖಂಡಃ' 'ಶಂಕುಲ' ಎಂಬ ಆಯುಧವಿಶೇಷದಿಂದ ಭೂಮಿಯು ತೋಡಲ್ಪಟ್ಟಿದೆ. ಇಲ್ಲಿ ತೃತೀಯಾಂತವಾದ ಶಬ್ದವೆಂದರೆ 'ಶಂಕುಲಯಾ' ಎಂಬ ಶಬ್ದ. ಇದರ ಅರ್ಥ - ಶಂಕುಲ. ಇದರಿಂದ ಮಾಡಲ್ಪಟ್ಟಿದ್ದು, ಖಂಡ, ಇದನ್ನು ಹೇಳುವ ಶಬ್ದ ಖಂಡಶಬ್ದ, ಇದರೊಂದಿಗೆ ಸಮಾಸವಾಗುತ್ತದೆ.

*ಪರಿಪೂರ್ಣಚಂದ್ರಿಕಾ*

ಪ್ರಶ್ನೆ :- ಶಂಕುಲಾಖಂಡಃ, ಎಂಬಲ್ಲಿ ಹೇಗೆ ತತ್‌ಕೃತಾರ್ಥತ್ವವಿದೆಯೋ, ಅದರಂತೆ ಪ್ರಕೃತ, 'ಕಲ್ಯಾಣಗುಣಸಿಂಧು' ಪದವು ಆಗಿಲ್ಲ. ಕಲ್ಯಾಣಗುಣಗಳಿಂದ ಸಿಂಧುವು ಮಾಡಲ್ಪಟ್ಟಿಲ್ಲ. ಹೀಗಿರ-ದಿದ್ದರೆ ತೃತೀಯಾತತ್‌ಪುರುಷಸಮಾಸ ಮಾಡಲು ಹೇಗೆ ಸಾಧ್ಯ ?

ಉತ್ತರ :- ವ್ಯಾಕರಣದ ಈ ನಿಯಮವನ್ನು ಅನುಸರಿಸದೆ ತೃತೀಯಾತತ್‌ಪುರುಷವನ್ನು ಮಾಡಿರುವುದು ಅನೇಕ ಕಡೆ ಕಂಡಿದೆ. ಟೀಕಾರಾಯರೇ ಸ್ವತಃ ತತ್‌ಕೃತಾರ್ಥತ್ವವಿಲ್ಲದ ಅನೇಕ ಕಡೆ ತೃತೀಯಾಸಮಾಸ ಮಾಡಿದ್ದಾರೆ. ಮಾಯಾವಾದಖಂಡನಗ್ರಂಥದ 'ಅಮಿತಸಜ್ಞಾನಸುಖಶಕ್ತಿಪಯೋನಿಧಿಃ' ಮಂಗಲಶ್ಲೋಕದಲ್ಲಿ ಎಂಬ 'ಸಜ್ಞಾನಸುಖಶಕ್ತಿಭಿಃ ಪಯೋನಿಧಿರಿವ' ಎಂದು ತೃತೀಯಾಸಮಾಸ ಮಾಡಿದ್ದಾರೆ. ಅದರಂತೆ ಅನುವ್ಯಾಖ್ಯಾನದಲ್ಲಿ 'ಜ್ಞಾನಸೂರ್ಯಃ' ಎಂಬ ಶಬ್ದವಿದೆ. ಇದಕ್ಕೆ 'ಜ್ಞಾನೇನ ಸೂರ್ಯ ಇವ' ಎಂದು ತೃತೀಯಾಸಮಾಸ ಮಾಡಿದ್ದಾರೆ. ಮತ್ತು ಋಗ್‌ಭಾಷ್ಯದ ಮಂಗಲಶ್ಲೋಕದಲ್ಲಿ 'ನಿಖಿಲಪೂರ್ಣಗುಣಾರ್ಣ' ಎಂದಿದೆ. ಇದಕ್ಕೆ ವ್ಯಾಖ್ಯಾನಿಸುತ್ತಾ 'ನಿಖಿಲಪೂರ್ಣಗುಣೈಃ ಅರ್ಣ ಇವ' ಎಂದು ತೃತೀಯಾಸಮಾಸ ಮಾಡಿದ್ದಾರೆ. ಇಲ್ಲಿ ಎಲ್ಲಿಯೂ ತತ್‌ಕೃತಾರ್ಥತ್ವವು ಇರುವುದಿಲ್ಲ. ಆದರೂ ಹೇಗೆ ಸಮಾಸವಾಗಿದೆಯೋ, ಅದರಂತೆ 'ಕಲ್ಯಾಣಗುಣಸಿಂಧವೇ' ಎಂಬಲ್ಲಿಯೂ ಸಮಾಸವಾಗುತ್ತದೆ.

ಅಥವಾ 'ತೃತೀಯಾ' ಎಂಬುದನ್ನು ಯೋಗವಿಭಾಗ ಮಾಡಬೇಕು. ಅಂದರೆ 'ತೃತೀಯಾ' ಎಂಬುದೇ ಒಂದು ಪ್ರತ್ಯೇಕ ಸೂತ್ರ. 'ತತ್ಕೃತಾರ್ಥೇನ ಗುಣವಚನೇನ' ಎಂಬುದು ಮತ್ತೊಂದು ಸೂತ್ರ. ಇಲ್ಲಿ 'ತೃತೀಯಾ' ಎಂಬ ಸೂತ್ರಕ್ಕೆ ತೃತೀಯಾಂತವಾದ ಶಬ್ದಕ್ಕೆ ತತ್ಪುರುಷಸಮಾಸವಾಗುತ್ತದೆ. ಈಗ ತತ್ ಕೃತಾರ್ಥತ್ವವು ಇರಬೇಕಿಲ್ಲ. ಹೀಗೆ ಹೇಳಿದಾಗ ಯಾವ ಬಾಧಕವೂ ಇಲ್ಲ. 'ಕಲ್ಯಾಣಗುಣೈಃ ಸಿಂಧುರಿವ ಸಿಂಧುಃ ಕಲ್ಯಾಣಗುಣಸಿಂಧುಃ' ಎಂಬ ತೃತೀಯಾತತ್ಪುರುಷವು ವ್ಯಾಕರಣವಿರುದ್ಧವಾಗುವುದಿಲ್ಲ.

ಪ್ರಶ್ನೆ :- ಮಂಗಲಶ್ಲೋಕದಲ್ಲಿ 'ಕಲ್ಯಾಣಗುಣಸಿಂಧವೇ' ಎಂಬ ವಿಶೇಷಣವನ್ನು ಮೊದಲು ಹೇಳಿ, ಅನಂತರ 'ಅಸ್ಪೃಷ್ಟದೋಷಗಂಧಾಯ' ಎಂಬ ವಿಶೇಷಣವನ್ನು ಹೇಳಬೇಕು. ಏಕೆಂದರೆ ಈ ಮಂಗಳ-ಪದ್ಯವು ಟೀಕೆಯ ಮಂಗಳಪದ್ಯವನ್ನು ಅನುಸರಿಸಿ ಹೊರಟದೆ. ಟೀಕೆಯ ಮಂಗಲಶ್ಲೋಕವು ಬ್ರಹ್ಮಮೀಂಮಾಸಾಶಾಸ್ತ್ರವನ್ನು ಅನುಸರಿಸಿ ಹೊರಟದೆ. ಬ್ರಹ್ಮಮೀಂಮಾಸಾ ಶಾಸ್ತ್ರದಲ್ಲಿ ಮೊದಲು ಗುಣಪೂರ್ಣತ್ವವನ್ನು ಸಮರ್ಥಿಸಲಾಗಿದೆ. ಅನಂತರ ಎರಡನೆಯ ಅಧ್ಯಾಯದಲ್ಲಿ ದೋಷದೂರತ್ವ-ವನ್ನು ಹೇಳಲಾಗಿದೆ. ಹೀಗಿರುವಾಗ ದೋಷದೂರತ್ವವನ್ನು ವ್ಯತ್ಯಾಸ ಮಾಡಿದ್ದು ತಪ್ಪಲ್ಲವೆ?

ಉತ್ತರ :- ತಪ್ಪಲ್ಲ. ಏಕೆಂದರೆ ವ್ಯತ್ಯಾಸ ಮಾಡಿ ಹೇಳಲು ಒಟ್ಟು ನಾಲ್ಕು ಕಾರಣಗಳಿವೆ -

೧) ಮೊದಲನೆಯ ಅಧ್ಯಾಯದಲ್ಲಿ ಸಮರ್ಥಿಸುವ ಗುಣಪೂರ್ಣತ್ವಕ್ಕೆ ಎರಡನೆಯ ಅಧ್ಯಾಯ-ದಲ್ಲಿ ಸಮರ್ಥಿಸುವ ದೋಷದೂರತ್ವವು ಕಾರಣವಾಗಿದೆ. ಕಾರಣವನ್ನು ಮೊದಲು ತಿಳಿದರೆ ಅನಂತರ ಕಾರ್ಯವನ್ನು ಸುಲಭವಾಗಿ ತಿಳಿಯಬಹುದೆಂಬ ಅಭಿಪ್ರಾಯದಿಂದ ಹೀಗೆ ಹೇಳಿದ್ದಾರೆ.

೨) ಅಥವಾ ಭಗವಂತನಲ್ಲಿರುವ ಗುಣಗಳಿಗೆ ಕಲ್ಯಾಣಮಯತ್ವವನ್ನು ಉಪಪಾದಿಸಲು ಎರಡನೆಯ ಅಧ್ಯಾಯವನ್ನು ಮೊದಲು ಹೇಳಿದರು. ಒಂದು ವೇಳೆ ದೋಷದೂರತ್ವವನ್ನು ಹೇಳದೆ ಗುಣ-

ಪೂರ್ಣತ್ವವನ್ನಷ್ಟೇ ಹೇಳಿದರೆ ಅವನಲ್ಲಿರುವ ಎಲ್ಲಾ ಗುಣಗಳು ದೋಷರಹಿತವೆಂದು ತಿಳಿಯುವುದಿಲ್ಲ. ಆದ್ದರಿಂದ ಅವನಲ್ಲಿ ಯಾವುದೇ ದೋಷಗಳೂ ಇಲ್ಲವೆಂದು ತಿಳಿದಾಗ ನಂತರ ಅವನಲ್ಲಿರುವ ಗುಣಗಳೆಲ್ಲವೂ ಕಲ್ಯಾಣಮಯವಾಗಿವೆಯೆಂದು ಸುಲಭವಾಗಿ ತಿಳಿಯುತ್ತದೆ. ಮೊದಲ ಸಮಾಧಾನದಲ್ಲಿ ಇರುವಂತಹ ಗುಣಗಳಿಗೆ ಕಲ್ಯಾಣಮಯತ್ವವನ್ನು ಸಮರ್ಥಿಸಿದ್ದರಿಂದ ಎರಡನೆ ಸಮಾಧಾನವು ವಿಲಕ್ಷಣವಾಗಿದೆಯೆಂದು ತಿಳಿಯಬೇಕು.

೩) ಗ್ರಂಥದ ಪ್ರಾರಂಭದಲ್ಲಿ ವಿಘ್ನಗಳನ್ನು ಅವಶ್ಯವಾಗಿ ಪರಿಹರಿಸಿಕೊಳ್ಳಬೇಕು. 'ತಂ ಯಥಾ ಯಥೋಪಾಸತೇ' ಎಂಬಂತೆ ಭಗವಂತನನ್ನು ಹೇಗೆ ಉಪಾಸಿಸುತ್ತೇವೆಯೋ ಭಗವಂತ ಆ ಫಲವನ್ನೇ ನೀಡುತ್ತಾನೆ. ದೋಷವಿಲ್ಲದವನೆಂದು ಉಪಾಸಿಸಿದರೆ ನಮಗೂ ಸಹ ವಿಘ್ನಾದಿದೋಷಗಳನ್ನು ಪರಿಹರಿಸುತ್ತಾನೆ. ಆದ್ದರಿಂದ ಮೊದಲು ದೋಷದೂರತ್ವ ಗುಣದಿಂದ ಸ್ತುತಿಸಿದ್ದು ಅರ್ಥಪೂರ್ಣವಾಗಿದೆ

೪) ಅಥವಾ ದುಃಖನಿವೃತ್ತಿಯ ಅನಂತರವೇ ಪರಮಾನಂದಪ್ರಾಪ್ತಿರೂಪವಾದ ಮೋಕ್ಷವು ಲಭಿಸುತ್ತದೆ. ಫಲದಲ್ಲಿರುವ ಈ ಕ್ರಮವನ್ನೇ ಅನುಸರಿಸಿ ನಾವು ಭಗವಂತನನ್ನು ಉಪಾಸನೆ ಮಾಡಬೇಕು. ಮೊದಲು ನಿರ್ದೋಷನೆಂದು ಅನಂತರ ಗುಣಪರಿಪೂರ್ಣನೆಂದು ನಾವು ಉಪಾಸಿಸಿದಾಗ ಭಗವಂತನು ನಮಗೆ ಆ ಕ್ರಮದಲ್ಲಿಯೇ ಮೋಕ್ಷವನ್ನು ದಯಪಾಲಿಸುತ್ತಾನೆ.

ಈ ಎಲ್ಲಾ ಕಾರಣಗಳಿಂದ ದೋಷದೂರತ್ವಗುಣವನ್ನೇ ಮೊದಲು ಹೇಳಿದ್ದಾರೆ.

ಭಕ್ತಮುಕ್ತಿದಾಯಿನೇ :- ಇಲ್ಲಿರುವ 'ಭಕ್ತ' ಎಂಬ ಶಬ್ದದಿಂದ ಸಾಧನಾಧ್ಯಾಯದ ಅರ್ಥವನ್ನು ಸೂಚಿಸಿದ್ದಾರೆ. ವೈರಾಗ್ಯ, ಉಪಾಸನಾ, ಜ್ಞಾನಗಳನ್ನೂ ಭಕ್ತಶಬ್ದದಿಂದ ಉಪಲಕ್ಷಣಯಾ ಇಟ್ಟುಕೊಳ್ಳಬೇಕು. ಇದರಿಂದ 'ಭಕ್ತಿ ವೈರಾಗ್ಯ ಶ್ರವಣ ಮನನಾದಿಸಾಧನೆಗಳನ್ನು ಹೊಂದಿದ ಭಕ್ತನಿಗೆ ಮೋಕ್ಷವನ್ನು ದಯಪಾಲಿಸುವವನು' ಎಂಬರ್ಥವನ್ನು ಹೇಳಿದಂತಾಯಿತು. 'ಮುಕ್ತಿದಾಯಿನೇ' ಎಂಬುದರಿಂದ ನಾಲ್ಕನೆಯ ಅಧ್ಯಾಯಾರ್ಥವನ್ನು ಸಂಗ್ರಹಿಸಿದ್ದಾರೆ. ಮಾಡುತ್ತಿರುವ ನಮಸ್ಕಾರದಲ್ಲಿ ಭಕ್ತ್ಯತಿಶಯವನ್ನು 'ನಮೋನಮೋ' ಎಂದು ದ್ವಿರುಕ್ತಿಯಿಂದ ಸೂಚಿಸುತ್ತಿದ್ದಾರೆ.

ನಮೋನಮೋ - ಶ್ಲೋಕದಲ್ಲಿರುವ ಎಲ್ಲಾ ವಿಶೇಷಣಗಳಿಗೆ 'ನಮೋನಮೋ' ಎಂಬಲ್ಲಿ ಅನ್ವಯ. ನಮಃ ಎಂಬ ಶಬ್ದವು 'ಅಸುನ್' ಪ್ರತ್ಯಯಾಂತವಾದ ಕೃದಂತ ಅವ್ಯಯ. 'ಅಸುನ್' ಪ್ರತ್ಯಯವು ಕರ್ಮಾರ್ಥದಲ್ಲಿ ಬರುತ್ತದೆ. ಆದ್ದರಿಂದ 'ಕರ್ತೃಕರ್ಮಣೋಃ ಕೃತಿ' ಎಂಬ ಸೂತ್ರದಂತೆ ಎಲ್ಲ ವಿಶೇಷಣಗಳಲ್ಲಿಯೂ ಷಷ್ಠೀವಿಭಕ್ತಿಗೆ ಅಪವಾದವಾಗಿ 'ನಮಃ ಸ್ವಸ್ತಿಸ್ವಾಹಾಸ್ವಧಾಽಲಂವಷಡ್‌ಯೋಗಾಚ್ಚ' ಎಂಬ ಸೂತ್ರವು ಚತುರ್ಥೀ ವಿಭಕ್ತಿಯನ್ನು ವಿಧಿಸುತ್ತದೆ. 'ನಮಃ' 'ಸ್ವಸ್ತಿ' ಇತ್ಯಾದಿಶಬ್ದಗಳ ಯೋಗವಿದ್ದಾಗ ಚತುರ್ಥೀಯನ್ನೇ ಮಾಡಬೇಕೆನ್ನುತ್ತದೆ ಈ ಸೂತ್ರ. ಆದ್ದರಿಂದ 'ಅಸ್ಪೃಷ್ಟದೋಷಗಂಧಾಯ' ಎಂಬಲ್ಲಿ ಚತುರ್ಥೀವಿಭಕ್ತಿಯು ಸಾಧುವೇ ಆಗಿದೆ. ಷಷ್ಠೀ ವಿಭಕ್ತಿಯು ಬರಬೇಕಾಗಿಲ್ಲ.

*ಪರಿಪೂರ್ಣಚಂದ್ರಿಕಾ*

**ಶೇಷಶಾಯಿನೇ :-** ದೋಷದೂರಾದಿ ಗುಣಗಳುಳ್ಳವನೂ ಚತುರ್ಥಾಧ್ಯಾಯ- ಪ್ರತಿಪಾದ್ಯನೂ ಆದವನು ನಾರಾಯಣನೇ ಹೊರತು ಬೇರೆ ಯಾರೂ ಅಲ್ಲ. ಇದನ್ನು 'ಶೇಷಶಾಯಿನೇ' ಎಂಬ ವಿಶೇಷಣದಿಂದ ಗ್ರಂಥಕಾರರು ಹೇಳುತ್ತಿದ್ದಾರೆ. ಏಕೆಂದರೆ ನಾರಾಯಣಶಬ್ದಕ್ಕೆ 'ಶೇಷಶಾಯಿನೇ' ಎಂದೂ ಅರ್ಥವಿದೆ. ಹೇಗೆಂದರೆ 'ನರಸ್ಯ ಸಂಬಂಧೀ ನಾರಃ, ನಾರಃ ಏವ ಅಯನಃ ನಾರಾಯಣಃ' ಎಂದು ವಿಗ್ರಹ. ಬದರಿಕಾಶ್ರಮದಲ್ಲಿರುವ ನರನಾರಾಯಣ ರೂಪಗಳಲ್ಲಿ ನರರೂಪವನ್ನು ಪ್ರಕೃತ ನರ ಶಬ್ದದಿಂದ ಇಟ್ಟುಕೊಳ್ಳಬೇಕು. ಈ ನರರೂಪವು ಶೇಷದೇವರ ಅವತಾರ. ಶೇಷದೇವರ ಅವತಾರ ರೂಪಕ್ಕೆ ಸಂಬಂಧಪಟ್ಟ ಶೇಷದೇವರ ಮೂಲರೂಪವು ನಾರ ಎನಿಸಿದೆ. ಅಂತಹ ಶೇಷದೇವರೇ ಹಾಸಿಗೆಯ ರೂಪದಲ್ಲಿ ಆಶ್ರಯರಾಗಿ ಉಳ್ಳವನು ನಾರಾಯಣನು. ಹೀಗೆ 'ಶೇಷಶಾಯಿನೇ' ಎಂಬ ವಿಶೇಷಣದಿಂದ ನಾರಾಯಣನನ್ನು ನಮಿಸಿದ್ದಾರೆ. ನಾರಾಯಣನನ್ನೇ ನಮಿಸಲು ಕಾರಣವಿದೆ. ಭಾಷ್ಯಕಾರರು ಭಾಷ್ಯದ ಪ್ರಾರಂಭದಲ್ಲಿ ನಾರಾಯಣನನ್ನು ನಮಿಸಿದ್ದಾರೆ. ಅದನ್ನೇ ಅನುಸರಿಸಿ ಟೀಕಾರಾಯರು 'ಕುದ್ಧಾನಂದೋರು' ಇತ್ಯಾದಿಯಾಗಿ ನಾರಾಯಣಶಬ್ದಾರ್ಥವನ್ನೇ ವಿವರಿಸಿದ್ದಾರೆ. ನಾರಾಯಣಶಬ್ದದ ಸಮಾನಾರ್ಥಕವಾದ ಬ್ರಹ್ಮಶಬ್ದವನ್ನು ಹೇಳಿ ಮಂಗಳ ಮಾಡಿದ್ದಾರೆ. ಟೀಕಾರಾಯರ ಈ ಮಂಗಳಶ್ಲೋಕವನ್ನು ಅನುಸರಿಸಿ ಗ್ರಂಥಕಾರರೂ ಕೂಡ ಪ್ರಕೃತ ನಾರಾಯಣನನ್ನೇ ನಮಿಸುತ್ತಿದ್ದಾರೆ. ಹೀಗೆ 'ಶೇಷಶಾಯಿನೇ' ಎಂಬ ನಾರಾಯಣನ ನಮನವು ಭಾಷ್ಯ ಹಾಗೂ ಟೀಕೆಗಳ ಮಂಗಳಪದ್ಯಗಳಿಗೆ ಅನುಸಾರಿಯಾಗಿ ಇದೆ.

(ಚಂದ್ರಿಕಾಗ್ರಂಥಕ್ಕೆ ಲಕ್ಷ್ಮೀನಾಥತೀರ್ಥರು ವ್ಯಾಖ್ಯಾನ ಮಾಡಿದ್ದಾರೆ. ಇವರು ವ್ಯಾಸರಾಯಮಠದ ಪರಂಪರೆಯಲ್ಲಿ ಬಂದ ಪರಮಹಂಸರು. ಇವರ ಮೂಲ ವೃಂದಾವನ ಶ್ರೀರಂಗಕ್ಷೇತ್ರದಲ್ಲಿದೆ. 'ಶೇಷಶಾಯಿನೇ' ಎಂಬ ಪದದ ಮೇಲೆ ಹೇಳಿದ ವ್ಯಾಖ್ಯಾನವನ್ನು ಇವರು ತಮ್ಮ ವ್ಯಾಖ್ಯಾನದಲ್ಲಿ ಮಾಡಿದ್ದಾರೆ.)

ಅಥವಾ ಶೇಷಶಾಯಿಯನ್ನು ನಮಸ್ಕಾರ ಮಾಡಲು ಮತ್ತೊಂದು ಸ್ವಾರಸ್ಯವಿದೆ. ಚಂದ್ರಿಕಾಚಾರ್ಯರು ಚಂದ್ರಿಕಾಗ್ರಂಥವನ್ನು ಬರೆದದ್ದು ಶ್ರೀರಂಗಕ್ಷೇತ್ರದಲ್ಲಿ. ಶೇಷಶಾಯಿಯಾದ ರಂಗನಾಥನ ಮುಂಭಾಗದಲ್ಲಿ ಕುಳಿತು ತಪಸ್ವಿನಂತೆ ಈ ಶ್ರೇಷ್ಠಗ್ರಂಥವನ್ನು ಬರೆದಿದ್ದಾರೆ. ಶ್ರೀರಂಗಕ್ಷೇತ್ರದಲ್ಲಿರುವ ರಂಗನಾಥನ ದೇವಸ್ಥಾನದಲ್ಲಿ ಇಂದಿಗೂ ಚಂದ್ರಿಕಾಮಂಟಪವು ಇದೆ. ಪ್ರಾಣದೇವರನ್ನು ಎದುರಿನಲ್ಲಿ ಪ್ರತಿಷ್ಠಾಪಿಸಿ ಬರೆದಿದ್ದಾರೆ. ಆ ಶ್ರೀರಂಗ-ಕ್ಷೇತ್ರವಾಸಿಯಾದ ನಾರಾಯಣನನ್ನು ಇಲ್ಲಿ ಭಕ್ತಿಯಿಂದ ನಮಿಸಿದ್ದಾರೆ.

ಮತ್ತೊಂದು ಸ್ವಾರಸ್ಯ - ಯಾವ ವ್ಯಕ್ತಿಯು ಶಾಂತಚಿತ್ತನಾಗಿರುತ್ತಾನೋ, ಆನಂದೋದ್ರೇಕ-ದಲ್ಲಿರುತ್ತಾನೋ ಅಂತಹವನ ಬಳಿಯೇ ವರ ಕೇಳಬೇಕು. ಆಗ ತತ್‌ಕ್ಷಣದಲ್ಲಿಯೇ ವರವನ್ನು ಪಡೆಯಬಹುದು. ನಾರಾಯಣನು ಶಾಂತಚಿತ್ತನಾಗಿ ಶೇಷಶಾಯಿಯಾಗಿ ಮಲಗಿದ್ದಾನೆ. ಮನಸ್ಸಿನಲ್ಲಿ ಆವನಿಗೆ ಯಾವ ಉದ್ವೇಗವೂ ಇಲ್ಲ. ಆದ್ದರಿಂದ ನಾವು ಕೇಳುವ ವರಗಳನ್ನೆಲ್ಲಾ ಶೀಘ್ರದಲ್ಲಿಯೇ ಕೊಡುತ್ತಾನೆ. ವಿಘ್ನಾದಿದೋಷಗಳನ್ನೆಲ್ಲ ಪರಿಹರಿಸುತ್ತಾನೆ. ಹೀಗೆ 'ಶೇಷಶಾಯಿನೇ' ಎಂಬ ಪದಪ್ರಯೋಗಕ್ಕೆ ಹತ್ತಾರು ಪ್ರಯೋಜನಗಳಿವೆ.

---

ಜಿಜ್ಞಾಸಾಧಿಕರಣ

ಶ್ರೀಕೃಷ್ಣನಿಗೆ ವೇದವ್ಯಾಸದೇವರಿಗೆ ನಮಸ್ಕಾರ

**तात्पर्यचन्द्रिका –**

**शमयन् भवसन्तापं रमयन् साधुचातकान् ।**
**कृष्णमेघः कृपादृष्टिवृष्ट्या पुष्णातु मामपि ॥ २ ॥**

ಶಮಯನ್‌ಭವಸಂತಾಪಂ ರಮಯನ್ ಸಾಧುಚಾತಕಾನ್ ।
ಕೃಷ್ಣಮೇಘಃ ಕೃಪಾದೃಷ್ಟಿವೃಷ್ಟ್ಯಾ ಪುಷ್ಣಾತು ಮಾಮಪಿ ॥ ೨ ॥

ಸೂರ್ಯನ ತಾಪದಿಂದ ಚಾತಕಪಕ್ಷಿಗಳು ಕಂಗೆಡುತ್ತವೆ. ಅದರಂತೆ ಸಂಸಾರತಾಪದಿಂದ ನಾ[illegible] ಕಂಗೆಟ್ಟಿದ್ದೇವೆ. ಎಲೈ ಶ್ರೀಕೃಷ್ಣನೇ! ಸೂತ್ರಕಾರರಾದ ಶ್ರೀವೇದವ್ಯಾಸರೇ! ನಮ್ಮನ್ನು ಸಂತೋಷ ಪಡಿಸಿರಿ. ಕಾರ್ಮೋಡವು ಮಳೆಯನ್ನು ಸುರಿಸಿ ಚಾತಕಗಳಿಗೆ ಸಂತೋಷ ನೀಡುವ[illegible] ಜ್ಞಾನಭಕ್ತ್ಯಾದಿಗಳ ಮಳೆಯನ್ನು ಸುರಿಸಿ ನೀವು ನಮ್ಮನ್ನು ಪುಷ್ಟೀಕರಿಸಿರಿ.

**प्रकाशः** – प्रतिपाद्यदेवतां नत्वा सूत्रकर्तुः कृपादृष्टिमात्मन्याशास्ते - **शमयन्निति** ॥ 'कृष्णमेघः' वेदव्यासाख्यमेघः 'पुष्णातु' ज्ञानभक्त्यादिभिः । भव-सन्तापशान्तिविशिष्टस्वरूपानन्दानुभवलक्षणरमणदानेन वा पुष्टं करोतु । तस्य मेघत्वोपपादनं विशेषणद्वयेन । इष्टदेवतात्वाद् वसुदेवसुतः कृष्णोऽपि ग्राह्यः ॥

**गुरुराजीय** – मीमांसाशास्त्रकर्तुर्वासिष्ठकृष्णस्य स्वेष्टदेवताया यादवकृष्णस्य च स्वात्मनि कृपादृष्टिवृष्टिपुष्टिमाशास्ते – **शमयन्निति** ॥ कृष्णस्य मेघत्वोपपादनाय विशेषणद्वयमिदम् – **साधुचातकानिति** ॥ भगवत्पक्षे 'साधव एव चातकाः तान् रमयन्' इति, कालमेघपक्षे 'चातकान् साधु रमयन्' इति योजना ॥२॥

ಗ್ರಂಥಪ್ರತಿಪಾದ್ಯನಾದ ನಾರಾಯಣನನ್ನು ನಮಿಸಿದ್ದಾಯಿತು. ಈಗ ಸೂತ್ರಕಾರರಾದ ಶ್ರೀವೇದ-ವ್ಯಾಸದೇವರನ್ನು ಸ್ತೋತ್ರ ಮಾಡುತ್ತಿದ್ದಾರೆ. ಶ್ರೀವೇದವ್ಯಾಸದೇವರ ಕೃಪಾದೃಷ್ಟಿಯನ್ನು ಯಾಚಿಸುತ್ತಿ-ದ್ದಾರೆ. ಕೃಷ್ಣಮೇಘಃ = ವೇದವ್ಯಾಸರೆಂಬ, ಮೇಘವು ಪುಷ್ಣಾತು = ಜ್ಞಾನಭಕ್ತ್ಯಾದಿಗಳೆಂಬ ಮಳೆಯನ್ನು ಸುರಿಸಿ ಸಂಸಾರ ತಾಪವನ್ನು ಪರಿಹರಿಸಲಿ. ಸ್ವರೂಪಾನಂದಾನುಭವರೂಪವಾದ ಶಾಶ್ವತಸುಖವನ್ನು ನೀಡಿ ಎಲ್ಲ ವಿಧದಲ್ಲಿಯೂ ಪುಷ್ಟೀಕರಿಸಲಿ.

ಕಾಲಮೇಘವು ಸೂರ್ಯತಾಪವನ್ನು ಪರಿಹರಿಸುತ್ತದೆ. ಮತ್ತು ಚಾತಕಪಕ್ಷಿಗಳನ್ನು ಸಂಪೂರ್ಣವಾ[illegible] ತೃಪ್ತಿಪಡಿಸುತ್ತದೆ. ಅದರಂತೆ ವೇದವ್ಯಾಸದೇವರೆಂಬ ಮೇಘವೂ ಸಹ ಸಂಸಾರತಾಪವನ್ನು ಪರಿಹರಿಸುತ್ತದೆ. ಚಾತಕಗಳಂತಿರುವ ಸಜ್ಜನರಾದ ತತ್ವಬುಭುತ್ಸುಗಳಿಗೆ ಜ್ಞಾನಭಕ್ತ್ಯಾದಿಗಳನ್ನು ಕೊಟ್ಟು

ಮೋಕ್ಷವನ್ನು ನೀಡಿ ಸಂತೋಷ ನೀಡುತ್ತದೆ. ಈ ರೀತಿಯಾಗಿ 'ಶಮಯನ್ ಭವಸಂತಾಪಂ ರಮಯನ್ ಸಾಧುಚಾತಕಾನ್' ಎಂಬ ಎರಡು ವಿಶೇಷಣಗಳಿಂದ ಕಾಲಮೇಘದ ಸಾಮ್ಯವನ್ನು ಸಮರ್ಥಿಸಿದ್ದಾರೆ.

ವೇದವ್ಯಾಸರ ಪಕ್ಷದಲ್ಲಿ 'ಸಾಧುಚಾತಕಾನ್' ಎಂಬುದು ಸಮಸ್ತಪದ. ಚಾತಕಗಳಂತಿರುವ ಸಜ್ಜನರನ್ನು ಎಂದರ್ಥ. (ಸಾಧವಃ ಏವ ಚಾತಕಾಃ ಸಾಧುಚಾತಕಾಃ ತಾನ್) ಕಾಲಮೇಘಪಕ್ಷದಲ್ಲಿ 'ಸಾಧು' ಶಬ್ದವೇ ಬೇರೆ 'ಚಾತಕಾನ್' ಎಂಬುದೇ ಬೇರೆ. ಸಾಧುಶಬ್ದಕ್ಕೆ 'ರಮಯನ್' ಎಂಬಲ್ಲಿ ಅನ್ವಯ. 'ಚಾತಕಾನ್ ಸಾಧು ರಮಯನ್' ಎಂದು ಯೋಜನೆ ಮಾಡಬೇಕು.

ಚಂದ್ರಿಕಾಚಾರ್ಯರ ಇಷ್ಟದೇವ ಗೋಪಾಲಕೃಷ್ಣ. ಅವನ ಸ್ತೋತ್ರವನ್ನು ಸಹ ಈ ಶ್ಲೋಕದಲ್ಲಿಯೇ ಮಾಡಿದ್ದಾರೆ. ಕೃಷ್ಣಮೇಘಃ ಎಂಬ ಪದದಿಂದ ವ್ಯಾಸಕೃಷ್ಣರನ್ನು ವಿವಕ್ಷಿಸಿದಂತೆ ಯಾದವಕೃಷ್ಣನನ್ನೂ ಸಹ ವಿವಕ್ಷಿಸಬೇಕು.

## ಶ್ರೀಮದಾಚಾರ್ಯರಿಗೆ ನಮಸ್ಕಾರ

**तात्पर्यचन्द्रिका –**

**श्रीमदानन्दतीर्थार्यपादपङ्कजरेणवः ।**
**पवित्रयन्तु मां नित्यं पापपाटनपण्डिताः ।। ३ ।।**

**ಶ್ರೀಮದಾನಂದತೀರ್ಥಾರ್ಯಪಾದಪಂಕಜರೇಣವಃ ।**
**ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ।। ೩ ।।**

ಭಕ್ತರ ಪಾಪಗಳೆಲ್ಲವನ್ನೂ ಪರಿಹರಿಸುವುದರಲ್ಲಿ ಬಲು ಕುಶಲಿಗಳೆಂದರೆ ಶ್ರೀಮದಾನಂದ-ತೀರ್ಥಭಗವತ್ಪಾದರ ಪಾದಕಮಲಗಳಲ್ಲಿ ಶೋಭಾಯಮಾನವಾದ ಧೂಳುಗಳು. ಇಂತಹ ಧೂಳುಗಳು ನಮ್ಮನ್ನು ಪವಿತ್ರರನ್ನಾಗಿಸಲಿ.

**प्रकाशः** – भाष्यकर्तुश्चादिगुरोः पादरेणुभ्यः कामान्तरं याचते – **श्रीमदिति** ।। कथं तेषां पवित्रीकरणशक्ततेत्यत उक्तम् – **पापेति** ।। 'भजकानां' इति शेषः ।।३।।

**गुरुराजीय** – भाष्यकर्तॄन् प्रार्थयते – **श्रीमदिति** ।। तेषां पवित्रीकरणशक्ति-मुपपादयितुमुक्तम् – **पापेति** ।। **पण्डिताः** कुशलाः ।। ३ ।।

ಗ್ರಂಥಪ್ರತಿಪಾದ್ಯನಾದ ನಾರಾಯಣನನ್ನು ಸೂತ್ರಕಾರರಾದ ವೇದವ್ಯಾಸರನ್ನು ಇಷ್ಟದೇವನಾದ ಶ್ರೀಕೃಷ್ಣನನ್ನು ನಮಿಸಿದ್ದಾಯಿತು.

ಜಿಜ್ಞಾಸಾಧಿಕರಣ

ಪ್ರಕೃತ ಆದಿಗುರುಗಳೂ ಭಾಷ್ಯಕಾರರೂ ಆದ ಶ್ರೀಮದಾಚಾರ್ಯರನ್ನು ನಮಸ್ಕರಿಸುತ್ತಿದ್ದಾ ಗ್ರಂಥದ ಪ್ರಾರಂಭದಲ್ಲಿ ಇವರ ಸ್ತೋತ್ರವು ಅತ್ಯಾವಶ್ಯಕವಾಗಿದೆ. ಯಾವ ಶ್ರೀಮದಾಚಾರ್ಯ ಪಾದಧೂಳುಗಳನ್ನು ಶಿರಸಾವಹಿಸಲು ಕೋಟಿಕೋಟಿ ದೇವತೆಗಳೆಲ್ಲಾ ಓಡೋಡಿ ಬಂದು ತ ತಲೆಗಳನ್ನು ಪಾದಪೀಠದಲ್ಲಿ ಘಟ್ಟಿಸುತ್ತಾರೋ ಅಂತಹ ಪಾದಧೂಳಿಗಳು ನಮ್ಮೆಲ್ಲರ ಪಾಪಗಳ ಪರಿಹರಿಸುವುದರಲ್ಲಿ ಸಂದೇಹವೇ ಇಲ್ಲ. ನಮ್ಮೆಲ್ಲರ ಮನಸ್ಸನ್ನು ಪವಿತ್ರೀಕರಿಸುವುದರಲ್ಲಿ ಸಂದೇಹವಿಲ್ಲ. ಪಾದಧೂಳಿಗಳಲ್ಲಿರುವ ಪವಿತ್ರೀಕರಣದ ಸಾಮರ್ಥ್ಯವನ್ನು ಪರಿಗ 'ಪಾಪಪಾಟನಪಂಡಿತಾಃ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಪಂಡಿತಶಬ್ದಕ್ಕೆ ಕುಶಲಿಗಳು ಎಂದರ್ಥ

## ಪದ್ಮನಾಭತೀರ್ಥರಿಗೆ ನಮಸ್ಕಾರ

**तात्पर्यचन्द्रिका –**

**शारदावासवदनशारदाम्बुरुहान् मुहुः ।**
**पद्मनाभमुनीन् वन्दे सर्वशास्त्रविशारदान् ।। ४ ।।**

ಶಾರದಾವಾಸವದನಶಾರದಾಂಬುರುಹಾನ್‌ಮುಹುಃ ।
ಪದ್ಮನಾಭಮುನೀನ್‌ವಂದೇ ಸರ್ವಶಾಸ್ತ್ರವಿಶಾರದಾನ್ ॥ ೪ ॥

ಶರತ್ಕಾಲದ ಕಮಲದಂತಹ ಮುಖವುಳ್ಳವರು ಪದ್ಮನಾಭತೀರ್ಥರು. ಸರ್ವಶಾಸ್ತ್ರಗಳ ಅದ್ವಿತೀಯಪಾಂಡಿತ್ಯವನ್ನು ಹೊಂದಿದವರು. ಅಷ್ಟೇ ಅಲ್ಲದೆ ಇವರ ಮುಖಕಮಲವು, ವಾ ಮತ್ತು ಮನಸ್ಸಿಗೆ ಅಭಿಮಾನಿನಿಯಾದ ಸರಸ್ವತಿಯ ಆವಾಸಸ್ಥಳವಾಗಿದೆ. ಪ್ರಾಚೀನಟೀಕಾಕಾರರೆಂ ಪ್ರಸಿದ್ಧರಾದ ಇಂತಹ ಪದ್ಮನಾಭತೀರ್ಥರನ್ನು ಸಾಷ್ಟಾಂಗ ನಮಿಸುತ್ತೇನೆ.

**प्रकाशः – प्राचीनटीकाकर्तॄन् नमति – शारदेति ।। सरस्वत्यावासभूतं** वद **ख्यशरत्कालसम्बन्धिपङ्कजं येषां तान् । एतदुपपादयति – सर्वेति ।।** गुरुत्वा **बहुवचनम् ।। ४ ।।**

गुरुराजीय – आदिटीकाकर्तॄन् नमति – शारदेति ।। 'शारदायाः सरस्वत्याः आवासो यस्मिन् तच्छारदावासं तच्च तद्वदनं च शारदावासवदनम् । तदेव शारदाम्बुरुहं शरत्काल सम्बन्धि पङ्कजं येषां तान्' इत्यर्थः । तस्यैवोपपादनम् - सर्वेति ।। गुरुत्वात् बहुवचनम् ।।४।।

ಪ್ರಾಚೀನಟೀಕಾಕಾರರಾದ ಪದ್ಮನಾಭತೀರ್ಥರನ್ನು ನಮಿಸುತ್ತಿದ್ದಾರೆ. ಸರಸ್ವತೀದೇವಿಯ ಆವಾ ಸ್ಥಾನವೆಂದರೆ ಪದ್ಮನಾಭತೀರ್ಥರ ಮುಖಕಮಲ. ಸರಸ್ವತೀದೇವಿಯು ಯಾವ ಯಾವ ವಿದ್ಯ

ಅಭಿಮಾನಿಯಾಗಿರುವಳೋ, ಆ ಎಲ್ಲ ವಿದ್ಯೆಗಳೂ ಇವರ ಮುಖಕಮಲದಲ್ಲಿವೆ. ಆದ್ದರಿಂದ ಸರಸ್ವತಿಯು ವಾಸಸ್ಥಳವಾದ ಮುಖಕಮಲವುಳ್ಳ ಪದ್ಮನಾಭತೀರ್ಥರನ್ನು ನಮಸ್ಕರಿಸುತ್ತೇನೆ.

ವಿಗ್ರಹ :- ಶಾರದಾಯಾಃ ಆವಾಸಃ ಯಸ್ಮಿನ್ ತತ್ ಶಾರದಾವಾಸಂ ಶರದಾವಾಸಂ ಚ ತತ್ ವದನಂ ಚ ಶಾರದಾವಾಸವದನಂ, ಶಾರದಾವಾಸವದನಮೇವ ಶಾರದಾಂಬುರುಹಂ ಶಾರದಾವಾಸವದನಶಾರದಾಂಬುರುಹಃ, ತಾನ್ ಶಾರದಾವಾಸವದನ- ಶಾರದಾಂಬುರುಹಾನ್.

## ಶ್ರೀಟೀಕಾಚಾರ್ಯರಿಗೆ ನಮಸ್ಕಾರ

**तात्पर्यचन्द्रिका –**

**मिथ्यासिद्धान्तदुर्ध्वान्तविध्वंसनविचक्षणः ।**
**जयतीर्थाख्यतरणिःर्भासतां मे हृदम्बरे ॥ ५ ॥**

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ।
ಜಯತೀರ್ಥಾಖ್ಯತರಣಿರ್ಭಾಸತಾಂ ನೋ(ಮೇ) ಹೃದಂಬರೇ ॥ ೫ ॥

ಹಾಳು (ಸುಳ್ಳು) ಸಿದ್ಧಾಂತಗಳೆಂಬ ಕತ್ತಲೆಯು ಎಲ್ಲೆಡೆ ವ್ಯಾಪಿಸಿದೆ. ಇಂತಹ ಕತ್ತಲೆಯನ್ನು ನಾಶಪಡಿಸಿ, ಮೋಕ್ಷಮಾರ್ಗವನ್ನು ಸ್ಪಷ್ಟವಾಗಿ ತೋರಿಸುವಂತಹ ಸೂರ್ಯರೆಂದರೆ ಟೀಕಾಚಾರ್ಯರೆಂದೇ ಪ್ರಸಿದ್ಧರಾದ ಜಯತೀರ್ಥರು. ಇಂತಹ ಜಯತೀರ್ಥರೆಂಬ ಸೂರ್ಯರು ನನ್ನ ಹೃದಯದಲ್ಲಿ ನಿರಂತರವಾಗಿ ಪ್ರಕಾಶಿಸಲಿ.

**प्रकाशः** – व्याख्येयग्रन्थकर्तुर्हृद्यावासं प्रार्थयते – मिथ्येति ॥ तस्य तरणित्वोपपादकमेतत् ॥ ५ ॥

**गुरुराजीय** – व्याख्येयग्रन्थकर्तुर्हृद्यावासं प्रार्थयते – मिथ्येति ॥ एतच्च टीकाकर्तुस्तरणित्वोपपादनार्थं विशेषणम् ॥ ५ ॥

ಚಂದ್ರಿಕಾಗ್ರಂಥವು ತತ್ವಪ್ರಕಾಶಿಕೆಯ ವ್ಯಾಖ್ಯಾನವಾಗಿದೆ. ತತ್ವಪ್ರಕಾಶಿಕೆಯ ಕರ್ತೃಗಳು ಶ್ರೀಮಟ್ಟೀಕಾಕೃತ್ಪಾದರು. ಅವರ ಸ್ತೋತ್ರವು ಗ್ರಂಥಾರಂಭದಲ್ಲಿ ಅತ್ಯವಶ್ಯವಾಗಿದೆ. ಆದ್ದರಿಂದ ಅವರೇ ನಮ್ಮ ಹೃದಯದಲ್ಲಿ ನಿಂತು ಅಜ್ಞಾನವನ್ನು ಪರಿಹರಿಸಿ ಸನ್ಮಾರ್ಗದಲ್ಲಿ ಕರೆದೊಯ್ಯಲಿ. ಮತ್ತು ಈ ಗ್ರಂಥಕ್ಕೆ ಯಶಸ್ಸು ಸಿಗಲಿ ಎಂದು ಪ್ರಾರ್ಥಿಸಲಾಗಿದೆ. ಇತರ ಸಿದ್ಧಾಂತಗಳೆಲ್ಲವೂ ಮಿಥ್ಯಾಸಿದ್ಧಾಂತಗಳು = ಸುಳ್ಳು ಸಿದ್ಧಾಂತಗಳು ಅಥವಾ ಸುಳ್ಳನ್ನು ಹೇಳುವ ಸಿದ್ಧಾಂತಗಳು. ಇಂತಹ ದುಷ್ಟಸಿದ್ಧಾಂತಗಳೆಂಬ ಕತ್ತಲೆಯಿಂದ ಸಜ್ಜನರು ದಿಕ್ಕು ಕಾಣದೆ ಭ್ರಾಂತರಾಗಿದ್ದಾರೆ. ಯಾವಾಗ ಜಯತೀರ್ಥರೆಂಬ ಸೂರ್ಯರ ಉದಯವಾಯಿತೋ ಆಗ ದುಷ್ಟಸಿದ್ಧಾಂತಗಳೆಂಬ ಕತ್ತಲೆಯು

ನಾಶವಾಗಿದೆ. ಮೋಕ್ಷಮಾರ್ಗವು ದೇದೀಪ್ಯಮಾನವಾಗಿದೆ. ಇಂತಹ ಜಯತೀರ್ಥರೆಂಬ ಸೂರ್ಯ ನಮ್ಮ ಹೃದಯದಲ್ಲಿ ಎಡಬಿಡದೆ ಪ್ರಕಾಶಿಸಲಿ. ಅಜ್ಞಾನವಿಪರೀತಜ್ಞಾನಗಳನ್ನೆಲ್ಲಾ ತೊಳೆಯಲಿ.

### ಆಶ್ರಮ ಗುರುಗಳಿಗೆ ನಮಸ್ಕಾರ

**तात्पर्यचन्द्रिका –**

**कंसध्वंसिपदाम्भोजसंसक्तो हंसपुङ्गवः ।**
**ब्रह्मण्यगुरुराजाख्यो वर्ततां मम मानसे ।। ६ ।।**

ಕಂಸಧ್ವಂಸಿಪದಾಂಭೋಜಸಂಸಕ್ತೋ ಹಂಸಪುಂಗವಃ ।
ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥ ೬ ॥

ಎಲ್ಲ ಗುರುಗಳಿಗೂ ರಾಜರಾದವರು ಶ್ರೀಬ್ರಹ್ಮಣ್ಯತೀರ್ಥರು. ಶ್ರೀಕೃಷ್ಣನ ಪಾದವೆಂಬ ಕಮಲದಲ್ಲಿ ಆಸಕ್ತರಾದ ಈ ಶ್ರೇಷ್ಠ ಪರಮಹಂಸರು ನನ್ನ ಮನಸ್ಸೆಂಬ ಸರೋವರದಲ್ಲಿ ಈ ಹಂಸಶ್ರೇಷ್ಠರು ನಿರಂತರ ವಾಸಮಾಡಲಿ.

**प्रकाशः** – यतः स्वस्य पारमहंस्यं । तस्य गुरोः हृद्यावासमर्थयते - कंसेति ।। 'कंसध्वंसी' कृष्णः । तस्य पदाख्याम्बुजानुरक्तः । परमहंसाश्रमीत्यर्थः ।।६।।

**गुरुराजीय** – आश्रमगुरोर्हृद्यावासं प्रार्थयते – कंसेति ।। कंसध्वंसी श्रीकृष्णः तस्य पदाख्याम्बुजानुरक्तः । हंसपुङ्गवः चतुर्थाश्रमीत्यर्थः ।। ६ ।।

ಆಶ್ರಮಗುರುಗಳಾದ ಬ್ರಹ್ಮಣ್ಯತೀರ್ಥರನ್ನು ನಮಿಸುತ್ತೇನೆ. ಕಂಸಧ್ವಂಸಿಯಾದವನು ಶ್ರೀಕೃಷ್ಣ ಅವನ ಪಾದಗಳೆಂಬ ಕಮಲಗಳಲ್ಲಿ ಅನುರಕ್ತರಾದ ಹಂಸರೆಂದರೆ ಗುರುರಾಜರಾದ ಹಂಸಶ್ರೇಷ್ಠರು ಬ್ರಹ್ಮಣ್ಯತೀರ್ಥರು. ನಮ್ಮ ಮನಸ್ಸೆಂಬ ಸರೋವರದಲ್ಲಿ ಈ ಹಂಸಪಕ್ಷಿಯು ನಿರಂತರ ವಾಸಮಾಡಲಿ

### ವಿದ್ಯಾ ಗುರುಗಳಿಗೆ ನಮಸ್ಕಾರ : -

**तात्पर्यचन्द्रिका –**

**पदवाक्यप्रमाणाब्धिविक्रीडनविशारदान् ।**
**लक्ष्मीनारायणमुनीन् वन्दे विद्यागुरून् मम ।। ७ ।।**

ಪದವಾಕ್ಯಪ್ರಮಾಣಾಬ್ಧಿವಿಕ್ರೀಡನವಿಶಾರದಾನ್ ।
ಲಕ್ಷ್ಮೀನಾರಾಯಣಮುನೀನ್ ವಂದೇ ವಿದ್ಯಾಗುರೂನ್ ಮಮ ॥ ೭ ॥

ವ್ಯಾಕರಣಶಾಸ್ತ್ರ, ಮಿಮಾಂಸಾಶಾಸ್ತ್ರ, ನ್ಯಾಯಶಾಸ್ತ್ರಗಳೆಂಬ ಸಮುದ್ರದಲ್ಲಿ ಕ್ರೀಡಾಪಟುಗಳಾದವರು ಶ್ರೀಪಾದರಾಜರು. ನಮ್ಮ ವಿದ್ಯಾಗುರುಗಳಾದ ಇವರನ್ನು ನಮಸ್ಕರಿಸುತ್ತೇನೆ.

**प्रकाशः – स्वस्य विद्योपदेष्टॄन् नमति – पदेति ।। इदं तु गुरुत्वे शक्त्युपपादकम् । 'पदं' शब्दशास्त्रम् । 'वाक्यं' मीमांसायुग्मम् । 'प्रमाणं' तर्कशास्त्रम् । बहुवचनं प्राग्वत् ।। ७ ।।**

**गुरुराजीय – विद्यागुरून् प्रणमति – पदेति ।। अत्र 'पदार्थज्ञानोपायभूतं पद्यते शब्दार्थोऽनेन' इति व्युत्पत्त्या, व्याकरणं पदम् । वाक्यार्थज्ञानोपायन्यायसमर्पकं प्रमेयमीमांसाशास्त्रं वाक्यम् । उद्देशलक्षणविभागपरीक्षाभिः प्रमाणस्वरूपनिर्धारकं प्रमाणमीमांसाशास्त्रं प्रमाणम्' इति विवेकः ।। ७ ।।**

ವಿದ್ಯಾಗುರುಗಳಾದ ಶ್ರೀಪಾದರಾಜರನ್ನು ನಮಸ್ಕರಿಸುತ್ತಿದ್ದಾರೆ. ಪದ(ವ್ಯಾಕರಣ), ವಾಕ್ಯ (ಮೀಮಾಂಸಾ), ಪ್ರಮಾಣ (ನ್ಯಾಯಶಾಸ್ತ್ರ) ಇವುಗಳ ಸಮುದ್ರದಲ್ಲಿ ಕ್ರೀಡಿಸುವುದರಲ್ಲಿ ಬಹುಪಟುಗಳು ಶ್ರೀಪಾದರಾಜರು.

ನ್ಯಾಯಸುಧೆಯ ವ್ಯಾಖ್ಯಾನದಲ್ಲಿ 'ವಾಕ್ಯ'ಶಬ್ದಕ್ಕೆ ವಾರ್ತಿಕ ಎಂಬರ್ಥವನ್ನು ಹೇಳಿದ್ದಾರೆ. ಆದರೆ ಕೆಲವು ವ್ಯಾಖ್ಯಾನಗಳಲ್ಲಿ ಮೀಮಾಂಸಾ ಎಂಬರ್ಥವೇ ಇರುತ್ತದೆ. 'ವಾಕ್ಯ'ಪದದಿಂದ ಪೂರ್ವಮೀಮಾಂಸಾ ಹಾಗು ಉತ್ತರಮೀಮಾಂಸಾ ಎರಡನ್ನೂ ಇಟ್ಟುಕೊಳ್ಳಬೇಕೆಂದು ರಾಯರು ಹೇಳುತ್ತಾರೆ.

೧) ಪದಾರ್ಥಜ್ಞಾನೋಪಾಯಭೂತಂ ಪದ್ಯತೇ ಶಬ್ದಾರ್ಥಃ ಅನೇನ ಇತಿ ವ್ಯುತ್ಪತ್ತ್ಯಾ ವ್ಯಾಕರಣಂ ಪದಮ್ ಯಾವ ಶಾಸ್ತ್ರದಿಂದ ಪದಾರ್ಥಜ್ಞಾನಕ್ಕೆ ಕಾರಣವಾದದ್ದನ್ನು ವ್ಯುತ್ಪತ್ತಿಯಿಂದ ತೋರಿಸುತ್ತಾರೋ ಅಂತಹ ವ್ಯಾಕರಣಶಾಸ್ತ್ರವನ್ನು 'ಪದ' ಎಂದು ಕರೆಯುತ್ತಾರೆ.

೨) ವಾಕ್ಯಾರ್ಥಜ್ಞಾನೋಪಾಯನ್ಯಾಯಸಮರ್ಪಕಂ ಪ್ರಮೇಯಮೀಮಾಂಸಾಶಾಸ್ತ್ರಂ ವಾಕ್ಯಮ್ ವಾಕ್ಯಾರ್ಥಜ್ಞಾನಕ್ಕೆ ಕಾರಣವಾದ ನ್ಯಾಯಗಳನ್ನು ಹೇಳುವ ಪ್ರಮೇಯವಾದ ಮೀಮಾಂಸಾಶಾಸ್ತ್ರವೇ 'ವಾಕ್ಯ' ಎನಿಸಿದೆ.

೩) ಉದ್ದೇಶ, ಲಕ್ಷಣ, ವಿಭಾಗ, ಪರೀಕ್ಷಾಭಿಃ, ಪ್ರಮಾಣಸ್ವರೂಪನಿರ್ಧಾರಕಂ ಪ್ರಮಾಣಮೀಮಾಂಸಾಶಾಸ್ತ್ರಂ ಪ್ರಮಾಣಮಿತಿ ವಿವೇಕಃ ಉದ್ದೇಶ, ಲಕ್ಷಣ, ವಿಭಾಗ, ಪರೀಕ್ಷಾ ಇವುಗಳ ಕ್ರಮದಲ್ಲಿ ಪ್ರಮಾಣದ ಸ್ವರೂಪವನ್ನು ನಿರ್ಧರಿಸುವಂತಹ ಮೀಮಾಂಸಾಶಾಸ್ತ್ರವು ಪ್ರಮಾಣಶಾಸ್ತ್ರವೆನಿಸಿದೆ. ಅಂದರೆ

ನ್ಯಾಯಶಾಸ್ತ್ರ, ಶಬ್ದಶಾಸ್ತ್ರ, ಪ್ರಮೇಯಶಾಸ್ತ್ರ, ಪ್ರಮಾಣಶಾಸ್ತ್ರಗಳನ್ನು ಇಲ್ಲಿ ಕ್ರಮವಾಗಿ ಪದ, ವಾ
ಪ್ರಮಾಣ ಶಬ್ದಗಳಿಂದ ವಿವಕ್ಷಿಸಬೇಕು.

## ಗ್ರಂಥ ಪ್ರತಿಜ್ಞೆ

**तात्पर्यचन्द्रिका –**
**श्रीमद्भाष्यस्य टीका या जयतीर्थार्यनिर्मिता ।।**
**गम्भीरा निर्मला चेमां व्याकरिष्ये यथामति ।। ८ ।।**

**ಶ್ರೀಮದ್ಭಾಷ್ಯಸ್ಯ ಟೀಕಾ ಯಾ ಜಯತೀರ್ಥಾರ್ಯನಿರ್ಮಿತಾ ।**
**ಗಂಭೀರಾ ನಿರ್ಮಲಾ ಚೇಮಾಂ ವ್ಯಾಕರಿಷ್ಯೇ ಯಥಾಮತಿ ।। ೮ ।।**

ಶ್ರೀಮದಾಚಾರ್ಯರ ಭಾಷ್ಯಕ್ಕೆ ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರಕಾಶಿಕಾ ಎಂಬ ಟೀಕೆಯನ್ನು ಬರೆದಿದ್ದಾರೆ. ಬಹಳ ಗಂಭೀರವೂ ನಿರ್ದುಷ್ಟವೂ ಆದ ಈ ಟೀಕೆಯನ್ನು ಬುದ್ಧಿಗೆ ನಿಲುಕುವಷ್ಟು ವ್ಯಾಖ್ಯಾನಿಸುತ್ತೇನೆ.

**प्रकाशः** – एवं मङ्गलनिचयमारचय्य शिष्यमनस्समाधानार्थं चिकीर्षितं प्रतिजानीते – **श्रीमदिति** ।। तत्वप्रदीपभ्रान्तिं निरस्यति – **जयतीर्येति** ।। 'या जयतीर्थार्यनिर्मितामिमाम्' इत्यन्वयः । व्याख्याने हेतुमाह – **गम्भीरेति** ।। **'गाम्भीर्यं'** गहनार्थत्वम् । **'निर्मलत्वं'** च असङ्गतार्थवर्णनादिशून्यत्वम् ।। ८ ।।

**गुरुराजीय** – टीकाया व्याख्येयत्वप्रयोजकं निर्दोषत्वगम्भीरत्वादिकं दर्शयन्नेव चिकीर्षितं निर्दिशति – **श्रीमद्भाष्यस्येति** ।। तत्वप्रदीपभ्रान्तिं वारयति – **जयतीर्थार्यनिर्मितेति** ।। 'या जयतीर्थार्यनिर्मिता इमाम्' इत्यन्वयः ।। ८ ।।

ಗ್ರಂಥಕಾರರು ಇಲ್ಲಿಯವರೆಗೆ ಬಹುಮಂಗಳಗಳನ್ನು ಹಾಡಿದರು. ಪ್ರಕೃತ ಶಿಷ್ಯರ ಮನಸ್ಸು ಸಮಾಧಾನವಾಗಲು (ಉದ್ದೇಶವನ್ನು ತಿಳಿಸಲು) ಗ್ರಂಥದ ಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ. ಮತ್ತು ಟೀಕೆಯು ಏಕೆ ವ್ಯಾಖ್ಯೇಯವಾಗಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ ವ್ಯಾಖ್ಯೇಯತ್ವಕ್ಕೆ ಪ್ರಯೋಜಕವಾದ ಗಾಂಭೀರ್ಯ ಮತ್ತು ನಿರ್ದುಷ್ಟತ್ವಗಳನ್ನು ತೋರಿಸುತ್ತಿದ್ದಾರೆ.

ಶ್ರೀಮದಾಚಾರ್ಯರ ಭಾಷ್ಯಕ್ಕೆ ತ್ರಿವಿಕ್ರಮಪಂಡಿತರೂ ಸಹ ಟೀಕೆಯನ್ನು ಬರೆದಿದ್ದಾರೆ. ಆ ಟೀಕೆ ಚಂದ್ರಿಕೆಯು ಪ್ರಧಾನವ್ಯಾಖ್ಯಾನವಾಗಿಲ್ಲ, ಹೊರತು ಜಯತೀರ್ಥರಿಂದ ರಚಿತವಾದ ತತ್ವಪ್ರಕಾಶಿಕೆ ಪ್ರಧಾನ ವ್ಯಾಖ್ಯಾನವಾಗಿದೆ. ಈ ವಿಷಯವನ್ನು 'ಜಯತೀರ್ಥಾರ್ಯನಿರ್ಮಿತಾ' ಎಂಬ ವಿಶೇಷಣವ

ತೋರುತ್ತಿದೆ. ಟೀಕೆಯು ಸುಲಭವಾಗಿ ಅರ್ಥವಾದಂತೆ ತೋರುತ್ತಿದೆ. ಆದರೆ ಅತ್ಯಂತಗಹನಾರ್ಥ-ವುಳ್ಳದ್ದಾಗಿದೆ. ಆ ಗಹನಾರ್ಥವನ್ನು ನಮ್ಮ ಬುದ್ಧಿಗೆ ನಿಲುಕಿದಷ್ಟು ಮಾತ್ರ ಸ್ಪಷ್ಟಪಡಿಸುತ್ತೇವೆ. ಆದ್ದರಿಂದ ಈ ವ್ಯಾಖ್ಯಾನವು ಆವಶ್ಯಕವಾಗಿದೆ. ಗ್ರಂಥಕಾರರು 'ಗಂಭೀರಾ' ಎಂಬ ವಿಶೇಷಣದಿಂದ ಇದನ್ನು ಸೂಚಿಸಿದ್ದಾರೆ. ಟೀಕೆಯು ನಿರ್ಮಲವೆಂದರೆ ಅಸಂಗತಾರ್ಥವರ್ಣನೆ ಮೊದಲಾದ ಯಾವ ದೋಷಗಳೂ ಇಲ್ಲದ್ದು ಎಂದರ್ಥ.

ಶ್ಲೋಕದಲ್ಲಿ ಅನ್ವಯವನ್ನು ಹೀಗೆ ತಿಳಿಯಬೇಕು - 'ಯಾ ಗಂಭೀರಾ ನಿರ್ಮಲಾ ಶ್ರೀಮದ್ ಭಾಷ್ಯಸ್ಯ ಟೀಕಾ ಜಯತೀರ್ಥಾರ್ಯನಿರ್ಮಿತಾ (ತಾಂ) ಇಮಾಂ ಯಥಾಮತಿ ವ್ಯಾಕರಿಷ್ಯೇ' ಎಂದು.

**तात्पर्यचन्द्रिका –**

**सूत्रे भाष्येऽनुभाष्ये च सन्न्यायविवृतौ तथा ।**
**टीकासु च यदस्पष्टं तच्च स्पष्टीकरिष्यते ।। ९ ।।**

**ಸೂತ್ರೇ ಭಾಷ್ಯೇಽನುಭಾಷ್ಯೇ ಚ ಸನ್ನ್ಯಾಯವಿವೃತೌ ತಥಾ ।**
**ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ।।೯।।**

ಸೂತ್ರ, ಅನುವ್ಯಾಖ್ಯಾನ, ಅಣುಭಾಷ್ಯ, ನ್ಯಾಯವಿವರಣ ಹಾಗು ಇವುಗಳ ಟೀಕೆ ತ್ರಿವಿಕ್ರಮಪಂಡಿತರ ತತ್ವಪ್ರದೀಪ, ಪದ್ಮನಾಭತೀರ್ಥರ ಸನ್ನ್ಯಾಯರತ್ನಾವಳಿ, ಶ್ರೀಮಟ್ಟೀಕಾಕೃತ್ಪಾದರ ತತ್ವಪ್ರಕಾಶಿಕಾ ನ್ಯಾಯಸುಧಾ ಇಷ್ಟು ಗ್ರಂಥಗಳಲ್ಲಿ ಯಾವ ಭಾಗವು ನಿಗೂಢವಾಗಿದೆಯೋ ಅವುಗಳ ಅರ್ಥವನ್ನು ಸ್ಪಷ್ಟಗೊಳಿಸುತ್ತೇನೆ.

प्रकाशः – स्वप्रवृत्तेः फलान्तरमाह – सूत्र इति ।। निरुपपदसूत्रशब्दस्य ब्रह्मसूत्र एव मुख्यत्वात् 'सूत्रे' इत्यवादि । एवं 'भाष्ये' इत्यपि । 'अनुभाष्ये' अनुव्याख्याने । चशब्दादणुभाष्ये च ।। टीकास्विति ।। 'त्रिविक्रमपण्डिताचार्यकृता तत्वप्रदीपाख्या, अनुव्याख्यानटीकान्यायसुधा, पद्मनाभाचार्यकृता सन्न्यायरत्नावली च न्यायविवरणटीका च, तत्वप्रकाशिका च इत्येतासु टीकासु' इत्यर्थः ।। ९ ।।

गुरुराजीय – स्वप्रवृत्तेः प्रयोजनमाह – सूत्र इति ।। 'च'शब्दोऽणुभाष्य सङ्ग्रहार्थः । टीकासु = भाष्यानुव्याख्यानसन्न्यायविवृतिटीकासु तत्वप्रदीपसन्न्याय-रत्नावलि तत्वप्रकाशिकान्यायसुधासु ।। ९ ।।

ತಾವು ಮಾಡುತ್ತಿರುವ ವ್ಯಾಖ್ಯಾನಕ್ಕೆ ಒಂದು ರೀತಿಯಲ್ಲಿ ಸಾರ್ಥಕ್ಯವನ್ನು ತೋರಿಸಿದ್ದಾಯಿತು. ಸ್ಪಷ್ಟವಾದ ಮತ್ತೊಂದು ಪ್ರಯೋಜನವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಈ ಶ್ಲೋಕದಲ್ಲಿ

ನಿರುಪಪದವಾದ ಸೂತ್ರಪದವನ್ನು ಮತ್ತು ಭಾಷ್ಯಪದವನ್ನು ಪ್ರಯೋಗಿಸಿದ್ದಾರೆ. ಯಾವರೀತಿ ನಿರುಪಪದವಾದ ವ್ಯಾಸ ಶಬ್ದವು ವೇದವ್ಯಾಸದೇವರನ್ನೇ ಹೇಳುತ್ತದೆಯೋ, ಅದರಂತೆ ನಿರುಪಪದವಾದ ಸೂತ್ರ ಶಬ್ದವು ಮುಖ್ಯವಾದ ಬ್ರಹ್ಮಸೂತ್ರವನ್ನೇ ಹೇಳುತ್ತದೆ. ನಿರುಪಪದವಾದ ಭಾಷ್ಯಪದವೂ ಸಹ ಮಧ್ವಭಾಷ್ಯವನ್ನೇ ಹೇಳುತ್ತದೆ. ಹೊರತು ಇತರ ಶಂಕರಭಾಷ್ಯಾದಿಗಳನ್ನು ಹೇಳುವುದಿಲ್ಲ.

ಈ ಗ್ರಂಥವು ತತ್ವಪ್ರಕಾಶಿಕೆಯ ವ್ಯಾಖ್ಯಾನವಾಗಿದ್ದರೂ ಸಮಸ್ತ ಸೂತ್ರಪ್ರಸ್ಥಾನದ ವ್ಯಾಖ್ಯಾನವಾಗಿದೆ. ಹೊರತು ಕೇವಲ ತತ್ವಪ್ರಕಾಶಿಕೆಯ ವ್ಯಾಖ್ಯಾನವಾಗಿಲ್ಲವೆಂಬುದನ್ನು ಗಮನಿಸಬೇಕು. ಅಂದರೆ ಸೂತ್ರಪ್ರಸ್ಥಾನಕ್ಕೆ ಸಂಬಂಧಪಟ್ಟ ಎಲ್ಲ ಗ್ರಂಥಗಳಲ್ಲಿರುವ ಗೊಂದಲಗಳನ್ನು ಇ. ಪರಿಹರಿಸಲಾಗಿದೆ. ಆ ಗ್ರಂಥಗಳಲ್ಲಿನ ಅಸ್ಪಷ್ಟವಿಷಯಗಳನ್ನು ಸ್ಪಷ್ಟ ಮಾಡಲಾಗಿದೆ. ಹೀಗಿರುವಾಗ ಚಂದ್ರಿಕಾಗ್ರಂಥವು ಅತ್ಯಂತ ಸಾರ್ಥಕವೆಂದು ಪುನಃ ಏನು ಹೇಳಬೇಕು?

ಒಟ್ಟು ಇಷ್ಟು ಗ್ರಂಥಗಳಲ್ಲಿ ಬರುವ ಸಂಶಯಗಳನ್ನು ಇಲ್ಲಿ ಪರಿಹರಿಸಿ ವ್ಯಾಖ್ಯಾನಿಸಲಾಗಿದೆ.

೧) ಬ್ರಹ್ಮಸೂತ್ರಗಳು

೨) ಬ್ರಹ್ಮಸೂತ್ರ ಭಾಷ್ಯ

೩) ಅನುವ್ಯಾಖ್ಯಾನ

೪) ಅಣುಭಾಷ್ಯ

೫) ನ್ಯಾಯವಿವರಣ

೬) ತತ್ವಪ್ರದೀಪ (ತ್ರಿವಿಕ್ರಮಪಂಡಿತರ ಟೀಕೆ)

೭) ನ್ಯಾಯಸುಧಾ

೮) ಸನ್ನ್ಯಾಯರತ್ನಾವಳಿ (ಪದ್ಮನಾಭತೀರ್ಥರು)

೯) ತತ್ವಪ್ರಕಾಶಿಕಾ

೧೦) ನ್ಯಾಯವಿವರಣ ಭಾವಬೋಧ (ರಘೂತ್ತಮತೀರ್ಥರು)

೧೧) ಸತ್ತರ್ಕದೀಪಾವಲೀ (ಪದ್ಮನಾಭತೀರ್ಥರ ಭಾಷ್ಯಟೀಕೆ)

೧೨) ನಯಚಂದ್ರಿಕಾ (ನಾರಾಯಣಪಂಡಿತರ ಅನುವ್ಯಾಖ್ಯಾನ ಟೀಕೆ)

ಅಷ್ಟೇ ಅಲ್ಲದೇ ಇತರ ಎಲ್ಲಾ ಮತಗಳ ಕೂಲಂಕಷ ವಿಮರ್ಶಾತ್ಮಕ ಗ್ರಂಥವಾಗಿದೆ.

೧) ಶಂಕರಭಾಷ್ಯ

೨) ಭಾಮತೀ

೩) ವಿವರಣ

೪) ಕಲ್ಪತರು
೫) ರಾಮಾನುಜಭಾಷ್ಯ
೬) ಶ್ರುತ ಪ್ರಕಾಶ
೭) ಶೈವಭಾಷ್ಯ (ಶಿವಾರ್ಕಮಣಿದೀಪಿಕಾ)
೮) ಯಾದವಪ್ರಕಾಶ

ಇಷ್ಟು ಗ್ರಂಥಗಳಲ್ಲಿ ಮಾಡಿದ ಅಧಿಕರಣರಚನೆ ಮತ್ತು ಪ್ರತಿಯೊಂದು ಸೂತ್ರಾರ್ಥದ ವಿಮರ್ಶೆ ಇಲ್ಲಿದೆ. ಇತರರ ಸೂತ್ರಾರ್ಥಗಳು ಅಸಂಬದ್ಧಗಳಾಗಿವೆ. ಶ್ರೀಮದಾಚಾರ್ಯರು ಹೇಳಿದ ಸೂತ್ರಾರ್ಥವು ಅತ್ಯಂತ ಸಮಂಜಸವಾಗಿದೆಯೆಂದು ವಿಚಾರ ಮಾಡಲಾಗಿದೆ. ಅಷ್ಟೇ ಅಲ್ಲದೇ ಮಂಡಿಸಿದ ವಿಷಯಗಳನ್ನು ಮನದಟ್ಟಾಗಿಸಲು ಅನೇಕ ಪೂರ್ವಮೀಮಾಂಸಾನ್ಯಾಯಗಳನ್ನು ಮತ್ತು ವ್ಯಾಕರಣ ಸೂತ್ರಗಳನ್ನು ದೃಷ್ಟಾಂತ ನೀಡಲಾಗಿದೆ. ಈ ಎಲ್ಲ ವಿಷಯಗಳನ್ನು ಜ್ಞಾನಿಗಳು ಗಮನಿಸಿರಿ ಎಂದು ಗ್ರಂಥಕಾರರು ವಿನಯದಿಂದ ಹೇಳುತ್ತಾರೆ.

**तात्पर्यचन्द्रिका –**

**प्रतिसूत्रं प्रकाश्येते घटनाघटने मया ।**
**स्वीयान्यपक्षयोः सम्यग् विदांकुर्वन्तु सूरयः ॥ १० ॥**

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿರುವ ಪ್ರತಿಯೊಂದು ಸೂತ್ರಗಳ ವ್ಯಾಖ್ಯಾನವು ನಮ್ಮ ಪಕ್ಷದಲ್ಲಿ ಯುಕ್ತವೆಂದು ಪರಕೀಯಪಕ್ಷದಲ್ಲಿ ಅಯುಕ್ತವೆಂಬುದನ್ನು ತೋರಿಸುತ್ತಿದ್ದೇನೆ. ಜ್ಞಾನಿಗಳು ಇದನ್ನು ಗಮನಿಸಬೇಕು.

**प्रकाशः** – स्वप्रवृत्तेरन्यच्च फलमाह – प्रतिसूत्रमिति ॥ स्वपरपक्षयोर्यथाक्रमं घटनाघटने । विदाङ्कुर्वन्तु जानन्तु । यद्यपि स्वस्येदमित्यर्थे अणि कृते स्वशब्दस्य द्वारादिषु पाठेन "द्वारादीनां च" इति सूत्रेण वकारात् पूर्वमैजागमेनौकारे सति सौवेति भाव्यम् । तथाऽपि स्वस्मै हितमित्यर्थे "प्राक् क्रीताच्छः" इति छप्रत्यये स्वीयेति साध्विति ज्ञेयम् । चतुर्थस्य द्वितीयपादे "गहादिभ्यश्च" इत्यत्र दुर्घटवृत्तौ तथैवोक्तेः ॥ १० ॥

**गुरुराजीय** – यद्यप्यभूततद्भावार्थकच्विप्रयोगादेवास्पष्टत्वलाभादस्पष्टमिति पृथगस्पष्टत्वकथनमनर्थकं तथापि विशिष्टवाचकानां शब्दानां विशेषणवाचक-पदसन्निधाने विशेष्यमात्रपरत्वस्य बहुषु स्थलेषु दृष्टत्वादवैयर्थ्यमिति ज्ञेयम् ।

स्वीयान्य इत्यत्र स्वीयश्चान्यश्च स्वीयान्यौ अन्यत्वं च प्रकृतात् स्वीयादि
वधेयम् ॥

## ಸ್ಪಷ್ಟೀಕರಿಷ್ಯತೇ ಎಂಬಲ್ಲಿ ವ್ಯಾಕರಣವಿಚಾರ

"ಅಸ್ಪಷ್ಟಂ ಸ್ಪಷ್ಟಂ ಸಂಪದ್ಯಮಾನಂ ಕರಿಷ್ಯತೇಽತಿ ಸ್ಪಷ್ಟೀಕರಿಷ್ಯತೇ" ಎಂದು ವಿಗ್ರಹ. ಮೊ... ಅಸ್ಪಷ್ಟವಾದದ್ದು ಅನಂತರ ಸ್ಪಷ್ಟವಾದಾಗ ಮಾತ್ರ 'ಚ್ವಿ' ಪ್ರತ್ಯಯ ಬರುತ್ತದೆ. "ಕೃಭ್ವಸ್ತಿಯೋ... ಸಂಪದ್ಯಮಾನಕರ್ತರಿ ಚ್ವಿಃ (೫-೪-೫೦) ಅಭೂತತದ್ಭಾವೇ ಇತಿ ವಕ್ತವ್ಯಂ" ಎಂದು ವಾರ್ತಿ... ವಾರ್ತಿಕ ಹೇಳುವಂತೆ "ಅಭೂತತದ್ಭಾವೇ ಸಂಪದ್ಯಮಾನಕರ್ತರಿ ಚ್ವಿಃ" ಎಂದು ಸೂತ್ರವಾದು... ಸೂತ್ರದಿಂದ 'ಚ್ವಿ' ಪ್ರತ್ಯಯ ಬರುತ್ತದೆ. ಅನಂತರ ಅವರ್ಣಾಂತವಾದ ಅಂಗಕ್ಕೆ 'ಚ್ವಿ' ಪ್ರತ್ಯ... ಪರದಲ್ಲಿದ್ದಾಗ ಈಕಾರಾದೇಶವು ಬರುತ್ತದೆ. ಸ್ಪಷ್ಟಶಬ್ದವು ಅವರ್ಣಾಂತವಾಗಿದೆ. ಅಂಗಸಂಜ್ಞೆಯೂ ... ಇಲ್ಲಿರುವ ಅಕಾರಕ್ಕೆ ಈಕಾರ ಬರುತ್ತದೆ. ಅನಂತರ 'ಚ್ವಿ' ಪ್ರತ್ಯಯವು ಲೋಪವಾಗಿ 'ಸ್ಪಷ್ಟೀ' ... ಈಕಾರಂತರೂಪವು ಸಿದ್ಧಿಸುತ್ತದೆ. ಆದ್ದರಿಂದ "ಅಕೃಷ್ಣಃ ಕೃಷ್ಣಃ ಸಂಪದ್ಯಮಾನಂ ಕರೋತೀತಿ ಕೃಷ್ಣೀ... ಕರೋತಿ" ಎಂಬಂತೆ ಇಲ್ಲಿಯೂ "ಅಸ್ಪಷ್ಟಂ ಸ್ಪಷ್ಟಂ ಸಂಪದ್ಯಮಾನಂ ಕರಿಷ್ಯತೇಽತಿ ಸ್ಪಷ್ಟೀಕರಿಷ್ಯ... ಎಂದಾಗುತ್ತದೆ.

ಪ್ರಶ್ನೆ :- ಹೀಗೆ ಮೊದಲು ಅಸ್ಪಷ್ಟವಾಗಿದೆಯೆಂಬುದು ಸಹ ಸ್ಪಷ್ಟೀಕರಿಷ್ಯತೇ ಎಂಬ ಪದದಿಂದ... ತಿಳಿಯುತ್ತದೆ. ಪುನಃ ಶ್ಲೋಕದಲ್ಲಿ ಅಸ್ಪಷ್ಟಂ ಎಂದು ಹೇಳಿದ್ದು ವ್ಯರ್ಥ.

ಉತ್ತರ :- ವ್ಯರ್ಥವಲ್ಲ. ಒಂದು ನಿಯಮವಿದೆ - "ವಿಶಿಷ್ಟವಾಚಕಾನಾಂ ಶಬ್ದಾನಾಂ ವಿಶೇಷಣವಾಚಕಪದಸನ್ನಿಧಾನೇ ಸತಿ ವಿಶೇಷ್ಯಮಾತ್ರಪರತ್ವಮ್ ಅಂಗೀಕಾರ್ಯಮ್" (ವಿಶಿಷ್ಟವಾಚಕ... ಶಬ್ದಗಳಿಗೆ ವಿಶೇಷಣವಾಚಕಪದದ ಸನ್ನಿಧಾನವಿದ್ದಾಗ ವಿಶೇಷ್ಯ ಮಾತ್ರ ಪರತ್ವವನ್ನು ಅಂಗೀಕರಿಸಬೇಕು) ಎಂದು. ಉದಾಹರಣೆ 'ಕರಿಕಲಭ' ಎಂಬ ಪ್ರಾಮಾಣಿಕ ವ್ಯವಹಾರವಿದೆ. 'ಕಲಭ' ಎಂಬ ಪದಕ್ಕೆ 'ಆನೆಯ ಮರಿ' ಎಂದರ್ಥ. ಪುನಃ 'ಕರಿ' ಪದವು ಬೇಕಾಗಿಲ್ಲ. ಆದರೆ 'ಕರಿಕಲಭ' ಎಂಬ ಪ್ರಯೋಗ... ಇದೆ. ಇಂತಹ ಸಂದರ್ಭದಲ್ಲಿ ಕಲಭ ಶಬ್ದಕ್ಕೆ ಕೇವಲ 'ಮರಿ' ಎಂದಷ್ಟೇ ಅರ್ಥ ಮಾಡಬೇಕು. 'ಕ... ಶಬ್ದಕ್ಕೆ 'ಆನೆ' ಎಂದರ್ಥವು ಇರುವುದರಿಂದ 'ಕರಿಕಲಭ' ಎಂದರೆ 'ಆನೆಯಮರಿ' ಎಂಬರ್ಥವು ... ಹೊಂದುತ್ತದೆ. ಇಲ್ಲಿ ವಿಶಿಷ್ಟವಾಚಕಶಬ್ದವೆಂದರೆ 'ಕಲಭ' ಶಬ್ದ. ವಿಶೇಷಣವಾಚಕವಾದ 'ಕರಿ' ಶಬ್ದ... ಸನ್ನಿಧಾನವಿದೆ. ಆದ್ದರಿಂದ 'ಮರಿ' ಎಂಬ ವಿಶಿಷ್ಟಮಾತ್ರಪರತ್ವವನ್ನು ಹೇಳಬೇಕು. ಇದರಂತೆ 'ವಾರಣಯೂಥ ' ಶಬ್ದವೂ ದೃಷ್ಟಾಂತವಾಗಿದೆ. 'ಯೂಥ' ಎಂದರೆ 'ಆನೆಗಳ ಹಿಂಡು' ಎಂದರ್ಥ. ಆದರೆ 'ಆನೆ' ಎಂಬರ್ಥವನ್ನು ಹೇಳುವ ವಾರಣ ಶಬ್ದವು ಪ್ರತ್ಯೇಕವಾಗಿ ಇರುವುದರಿಂದ 'ಯೂಥ' ಶಬ್ದಕ್ಕೆ ಕೇವಲ 'ಹಿಂಡು' ಎಂಬರ್ಥವನ್ನಷ್ಟೇ ಸ್ವೀಕರಿಸಬೇಕು.

ಅದರಂತೆ 'ಚ್ವಿ' ಪ್ರತ್ಯಯವಿರುವ 'ಸ್ಪಷ್ಟೀಕರಿಷ್ಯತೇ' ಎಂಬ ಶಬ್ದಕ್ಕೆ ಅಸ್ಪಷ್ಟವಾದ್ದನ್ನು ಸ್ಪಷ್ಟಮಾಡಲಾಗುತ್ತದೆ. ಎಂದಷ್ಟೇ ಅರ್ಥವನ್ನು ಹೇಳಬೇಕು. ಆಗ ವಿಶೇಷಣವಾಚಕವಾದ 'ಅಸ್ಪಷ್ಟಂ' ಎಂಬ ಪದವು ವ್ಯರ್ಥವಾಗಲಾರದು.

## ಸ್ವೀಯ ಎಂಬ ಪ್ರಯೋಗವು ಸಾಧುವೇ?

ಪ್ರಶ್ನೆ : - ವ್ಯಾಕಾರಣದ ಪ್ರಕಾರ 'ಸೌವ' ಎಂದೇ ಆಗಬೇಕು. 'ಸ್ವೀಯ' ಎಂಬ ಪ್ರಯೋಗವು ಸಮಂಜಸವಲ್ಲ. ಅದು ಹೀಗೆ - 'ದ್ವಾರಾದೀನಾಂ ಚ' (೭-೩-೪) "ದ್ವಾರ ಇತ್ಯೇವಮಾದೀನಾಂ ಯವಾಭ್ಯಾಮ್ ಉತ್ತರಸ್ಯಾಚಾಮಾದೇರಚಃ ಸ್ಥಾನೇ ವೃದ್ಧಿರ್ನ ಭವತಿ ಪೂರ್ವೌ ತು ತಾಭ್ಯಾಮೈಚಾಗಮೌ ಭವತಃ" 'ದ್ವಾರ' ಮೊದಲಾದ ಶಬ್ದಗಳಲ್ಲಿರುವ 'ಯ' ಮತ್ತು 'ವ' ಕಾರಗಳ ಮುಂದೆ ಯಾವ ಅಚ್ಚಕ್ಷರವಿರುತ್ತದೋ, ಆ ಅಚಕ್ಷರಕ್ಕೆ 'ಅಚೋ ಞ್ಣಿತಿ' ಎಂಬ ಸೂತ್ರದಿಂದ ಆದಿವೃದ್ಧಿಯು ಬರದೆ ಯಕಾರದ ಮೊದಲು 'ಐ' ಕಾರವು, 'ವ' ಕಾರದ ಮೊದಲು 'ಔ' ಕಾರವು ಬರುತ್ತದೆ. ಉದಾಹರಣೆ :- ದ್ವಾರೇ ನಿಯುಕ್ತಃ ದೌವಾರಿಕಃ

ಪ್ರಕೃತ 'ಸ್ವೀಯ' ಎಂಬಲ್ಲಿನ 'ಸ್ವ' ಶಬ್ದವು ದ್ವಾರಾದಿಗಣದಲ್ಲಿ ಸೇರಿದೆ. 'ಸ್ವಸ್ಯ ಇದಂ' ಎಂಬ ಸಂಬಂಧ್ಯರ್ಥದಲ್ಲಿ ಸ್ವಶಬ್ದದ ಮುಂದೆ 'ಅಣ್'ಪ್ರತ್ಯಯವು ಬರುತ್ತದೆ. 'ಸ್ವ' ಶಬ್ದವು ದ್ವಾರಾದಿಗಣದಲ್ಲಿ ಸೇರಿರುವುದರಿಂದ 'ದ್ವಾರಾದೀನಾಂ ಚ' ಎಂಬ ಸೂತ್ರದಿಂದ ವಕಾರದ ಪೂರ್ವದಲ್ಲಿ ಐಚಾಗಮವು ಬರುತ್ತದೆ. ಆಗ 'ಸೌವ' ಎಂದೇ ಆಗುತ್ತದೆ. 'ಸ್ವೀಯ' ಎಂಬ ರೂಪವಾಗಲು ಸಾಧ್ಯವಿಲ್ಲ. ಆದ್ದರಿಂದ 'ಸ್ವೀಯಾನ್ಯಪಕ್ಷಯೋಃ' ಎಂಬ ಪ್ರಯೋಗವನ್ನು ಗ್ರಂಥಕಾರರು ಹೇಗೆ ಮಾಡಿದರು?

ಉತ್ತರ :- 'ಸ್ವೀಯ' ರೂಪವೂ ಸಹ ವ್ಯಾಕರಣಸಿದ್ಧವೇ ಆಗಿದೆ. 'ಪ್ರಾಕ್ ಕ್ರೀತಾಚ್ಛ' (೫-೧-೧) "ಪ್ರಾಗೇತಸ್ಮಾತ್ ಕ್ರೀತಸಂಶಬ್ದನಾದ್ಯಾನಿತ ಊರ್ಧ್ವಮನುಕ್ರಮಿಷ್ಯಾಮಃಪ್ರತ್ಯಯಸ್ತೇಷ್ವಧಿಕೃತೋ ವೇದಿತವ್ಯಃ" ಎಂಬ ವೃತ್ತಿಯಂತೆ 'ತೇನ ಕ್ರೀತಮ್' ಎಂಬ ಸೂತ್ರದ ತನಕ ಇರುವ ಎಲ್ಲಾ ಸೂತ್ರಗಳಲ್ಲಿ 'ಛ'ಪ್ರತ್ಯಯವನ್ನು ಇಟ್ಟುಕೊಳ್ಳಬೇಕೆಂದು ಈ ಸೂತ್ರವು ಹೇಳುತ್ತದೆ. ಆದ್ದರಿಂದ 'ವತ್ಸೇಭ್ಯೋ ಹಿತಃ ವತ್ಸೀಯಃ 'ಎಂಬ ರೂಪವು ಸಿದ್ಧವಾಗುತ್ತದೆ. ಅದರಂತೆ 'ಸ್ವೀಯ' ಎಂಬಲ್ಲಿಯೂ ತಿಳಿಯಬೇಕು. 'ಪ್ರಾಕ್ಕ್ರೀತಾಚ್ಛಃ' ಎಂಬ ಸೂತ್ರದಿಂದ ಸ್ವ ಶಬ್ದದ ಮುಂದೆ 'ಹಿತ' ಎಂಬರ್ಥದಲ್ಲಿ 'ಛ ' ಪ್ರತ್ಯಯವು ಬಂದಿದೆ. ಅನಂತರ 'ಆಯನೇಯೀನೀಯಿಯಃ ಫಢಖಛಘಾಂ ಪ್ರತ್ಯಯಾದೀನಾಮ್' (೭-೧-೨) ಎಂಬ ಸೂತ್ರದಿಂದ ಈಯಾದೇಶವು ಬರುತ್ತದೆ. ಆದ್ದರಿಂದ ಸ್ವಸ್ಮೈ ಹಿತಂ ಎಂಬರ್ಥದಲ್ಲಿ ಸ್ವೀಯಮ್ ಎಂಬ ರೂಪವು ಸಿದ್ಧವಾಗುತ್ತದೆ.

ನಾಲ್ಕನೆಯ ಅಧ್ಯಾಯದ ದ್ವಿತೀಯ ಪಾದದ 'ಗಹಾದಿಭ್ಯಶ್ಚ' ಎಂಬ ಸೂತ್ರವ್ಯಾಖ್ಯಾನದ ದುರ್ಘಟ-ವೃತ್ತಿಯಲ್ಲಿ ಮೇಲೆ ಹೇಳಿದಂತೆ ಹೇಳಿದ್ದಾರೆ.




### ಚಂದ್ರಿಕಾ ಮಂಗಲಾಚರಣೆ

ದೋಷದೂರತ್ವ ಗುಣಪೂರ್ಣತ್ವ ಜ್ಞೇಯತ್ವ ಗಮ್ಯತ್ವರೂಪವಾದ, ಬ್ರಹ್ಮಸೂತ್ರ ಪ್ರತಿಪಾದ್ಯ ನಾಲ್ಕು ಲಕ್ಷಣಗಳಿಂದ ಕೂಡಿದ ಶೇಷಶಾಯಿಗೆ, ಭವಸಂತಾಪ ಕಳೆದು ಸಜ್ಜನರಿಗೆ ಸುಖ ನೀಡುವ ಕರುಣಾ ಜಲಧಾರೆ ಸುರಿಸುವ ವ್ಯಾಸಕೃಷ್ಣರೆಂಬ ಮೇಘಗಳಿಗೆ, ಪಾಪಪರಿಹಾರಕರಾದ ಶ್ರೀಮದಾಚಾರ್ಯ ಪಾದಕಮಲ ಧೂಳಿಗಳಿಗೆ, ಸರ್ವಶಾಸ್ತ್ರವಿಶಾರದರಾಗಿದ್ದು ಮುಖದಲ್ಲಿ ಶಾರದೆಯನ್ನಿಂಬಿಟ್ಟ ಪದ್ಮನಾಭತೀರ್ಥರಿಗೆ, ಚತುಃಶಾಸ್ತ್ರವಿಶಾರದರಾದ ವಿದ್ಯಾಗುರು ಶ್ರೀಪಾದರಾಜರಿಗೆ ನಮಿಸಿ ಶಿಷ್ಯಬುದ್ಧಿ ನಿಲುಕುವಷ್ಟು ತತ್ತ್ವಪ್ರಕಾಶಿಕೆಗೆ ವ್ಯಾಖ್ಯಾನ ಮಾಡಲು ಸಂಕಲ್ಪಿಸುತ್ತಾರೆ ಶ್ರೀ ವ್ಯಾಸತೀರ್ಥರು. ಸೂತ್ರದ ಮೇಲೆ ಬಂದಿರುವ ಭಾಷ್ಯ ಅನುವ್ಯಾಖ್ಯಾನ ನ್ಯಾಯವಿವರಣಗಳಲ್ಲಿ ಅವುಗಳ ಟೀಕೆಗಳಲ್ಲಿ ಅಸ್ಪಷ್ಟವಾಗಿದ್ದ ನಿಗೂಢವಾದ ಅಂಶಗಳನ್ನು ಸ್ಪಷ್ಟಪಡಿಸುವುದಾಗಿಯೂ ಪ್ರತಿಸೂತ್ರದಲ್ಲಿ ಸ್ವಮತ ಪರಮತ ವ್ಯಾಖ್ಯಾನಗಳ ಯುಕ್ತಾಯುಕ್ತತೆಗಳನ್ನು ತೋರಿಸುವುದಾಗಿಯೂ ಘೋಷಿಸುತ್ತಾರೆ.

• • • • •

### ಟೀಕೆಯ ಪ್ರಥಮ ಶ್ಲೋಕ ವ್ಯಾಖ್ಯಾನ

**तात्पर्यचन्द्रिका –**

**ग्रन्थादौ मङ्गलमाचरति – शुद्धेति ।। इदं च पद्यं भाष्यस्याद्यश्लोकविवरणरूपत्वात् तद्वदेव वक्ष्यमाणादिसूचकत्वेन व्याख्येयम् ।**

**आनन्दादेः शुद्धत्वं नाम सान्तत्वसातिशयत्वादिराहित्यम् । 'लेपः' पुण्य-पाप सम्बन्धः । 'श्रुतिमती' श्रवणमनने । 'नियतध्यानं' स्वयोग्योपासनम् । 'ज्ञानं' साक्षात्कारः , स एव 'योगः' उपायः । 'अमलं' मुमुक्षूपास्यम् । नतु परमत इव मुकुन्दाभिधं मन्दोपास्यम् ।**

ಅನುವಾದ - ಟೀಕಾರಾಯರು ಗ್ರಂಥದ ಪ್ರಾರಂಭದಲ್ಲಿ 'ಶುದ್ಧಾನಂದೋರುಸಂವಿತ್' ಎಂಬ ಶ್ಲೋಕದಿಂದ ಮಂಗಳವನ್ನು ಆಚರಿಸುತ್ತಿದ್ದಾರೆ. ಈ ಮಂಗಳಪದ್ಯವು ಭಾಷ್ಯದ ಮಂಗಳಪದ್ಯ ವ್ಯಾಖ್ಯಾನವೂ ಆಗಿದೆ.

ಓಂ ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

*ಪರಿಪೂರ್ಣಚಂದ್ರಿಕಾ*

ಈ ಭಾಷ್ಯಪದ್ಯದಲ್ಲಿರುವ ನಾಲ್ಕು ವಿಶೇಷಣಗಳು ಯಾವ ರೀತಿಯಾಗಿ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರವನ್ನು ಸೂಚಿಸುತ್ತಿವೆಯೋ, ಹಾಗೆಯೇ ತತ್ತ್ವಪ್ರಕಾಶಿಕಾದ ಮಂಗಳಪದ್ಯವೂ ಆ ನಾಲ್ಕು ಅಧ್ಯಾಯಗಳ ಸಾರವನ್ನು ಸೂಚಿಸುತ್ತಿದೆಯೆಂದು ವ್ಯಾಖ್ಯಾನಿಸಬೇಕು.

'ಶುದ್ಧಾನಂದ' ಇತ್ಯಾದಿಪದ್ಯದಲ್ಲಿ ಆನಂದವು ಶುದ್ಧವಾಗಿದೆ ಎಂದರೆ ಕೊನೆಯಿಲ್ಲದ್ದು, ಹಾಗು ಬೇರೆ ಯಾವುದಕ್ಕೂ ಕಡಿಮೆಯಿಲ್ಲದ್ದು ಎಂದರ್ಥ, ಲೇಪ = ಪುಣ್ಯಪಾಪಗಳ ಸಂಬಂಧ ಶ್ರುತಿಮತೀ, ಶ್ರವಣ ಹಾಗು ಮನನಗಳು, ನಿಯತಧ್ಯಾನ = ತಮಗೆ ಯೋಗ್ಯವಾದ ಉಪಾಸನೆ, ಜ್ಞಾನಂ = ಅಪರೋಕ್ಷಜ್ಞಾನ, ಇವು ಕ್ರಮವಾಗಿ ಮುಕ್ತಿಗೆ ಉಪಾಯಗಳಾಗಿವೆ ಎಂದರ್ಥ. 'ಅಮಲಂ' ಎಂದರೆ 'ಮುಮುಕ್ಷುಗಳ ಉಪಾಸನೆಗೆ ಅರ್ಹನಾದವನು' ಎಂದರ್ಥ. ಹೊರತು ಅದ್ವೈತಿಗಳು ಹೇಳುವಂತೆ ಮುಕುಂದನು ಅಜ್ಞಾನಿಗಳಿಂದ ಉಪಾಸ್ಯನೆಂದರ್ಥವಲ್ಲ.

**ಕಠಿಣಪದಾರ್ಥ**

**ಗ್ರಂಥಾದೌ** = ತತ್ತ್ವಪ್ರಕಾಶಿಕಾ ಗ್ರಂಥದ ಪ್ರಾರಂಭದಲ್ಲಿ. **ಮಂಗಳಮಾಚರತಿ** = ಮಂಗಳವನ್ನು ಆಚರಿಸಿ ಗ್ರಂಥದಲ್ಲಿ ಉಲ್ಲೇಖಿಸುತ್ತಿದ್ದಾರೆ.

**ಇದಂ ಚ ಪದ್ಯಮ್** = 'ಶುದ್ಧಾನಂದೋರು' ಎಂಬ ಶ್ಲೋಕವು **ವಕ್ಷ್ಯಮಾಣಾದಿ ಸೂಚಕತ್ವೇನ** = ೧) ಮುಂದಿನ ಅಧ್ಯಾಯಗಳ ಅರ್ಥವನ್ನು ಸೂಚಿಸುವ ಮೂಲಕ ೨) ವಿಷಯ ಪ್ರಯೋಜನಾದಿಗಳನ್ನು ಸೂಚಿಸುವ ಮೂಲಕ; **ಸಾಂತತ್ವಸಾತಿಶಯತ್ವಾದಿರಾಹಿತ್ಯಮ್** = ಕೊನೆಯಿಲ್ಲದ್ದು ಬೇರೆ ಯಾವುದಕ್ಕೂ ಕಡಿಮೆಯಿಲ್ಲದ್ದು.

**प्रकाशः** – ननु भाष्यव्याख्यार्थं प्रवृत्तस्य भगवतो जयतीर्थमुनेः सैव कार्या, किमाद्यपद्येन? मङ्गलाचरणस्यापि ''अथातो'' इति भाष्यव्याख्यारम्भे माङ्गलिकस्य 'अथ' इत्यस्य प्रयोक्ष्यमाणतया सिद्धत्वादित्यत आह – ग्रन्थादा-विति ।। तस्य तु कृत्यं वक्ष्यत इति भावः । मङ्गलमाचर्य ग्रन्थे निबध्नातीत्यर्थः । मङ्गलपदोपादानेन तस्य प्रारिप्सितपरिसमाप्त्यादिहेतुतया तदनुष्ठानस्य शिष्टाचारपरम्पराप्राप्तत्वेनावश्यकत्वं सूचितम् । 'ग्रन्थादौ' इत्युक्त्या च मङ्गलस्य ग्रन्थाङ्गत्वं च । भाष्यव्याख्यानरूपं चेदम्, अतो नानुपयुक्तकथनमित्याह – इदं चेति ।। यद्वा 'ब्रह्म वन्दे' इत्यनेनैव मङ्गलस्य चीर्णत्वात् किं विशेषणैः कृत्यम्? इत्याशङ्क्य, 'व्याख्येयपद्यगतविशेषणकृत्यानीव अत्रापि ध्येयानि' इत्याह – इदं चेति ।। 'वक्ष्यमाणाध्यायार्थसूचकत्वेन' इत्यर्थः । आदिपदेन 'नारायणशब्दान् वाख्यानपरत्ववत्

तत्पर्यायब्रह्मशब्दान्वाख्यानपरत्वसूचकत्वेन तस्यैव वन्द्य-त्वोपपादकत्वेन च' इति ग्राह्यम् । यद्वा - 'अधिकार्यादिचतुष्टयसूचकत्वेन' इत्यर्थः ।

''तथा ह्यादिसूत्रे भगवतः'' इत्याद्यपद्यव्याख्या सर्वाऽप्यत्र यथायोगमनुसन्धेया इति भावः । आद्यार्थस्य ''गुणैस्सर्वैरुदीर्णम्'' इत्यस्य विवरणं 'शुद्ध' इत्यादि । तत्र यदि शुद्धत्वं दुःखासम्भिन्नत्वं तदा 'चिन्तादिदोषदूरम्' इत्यनेन गतार्थमत आह – आनन्दादेरिति ।। द्वितीयार्थस्य ''दोषवर्जितम्'' इत्यस्य विवृतिः 'चिन्ता' इति । तत्र चिन्तासन्तापाभ्यां 'लेपः' सङ्ग इति भ्रान्तिं निराह – लेप इति ।। तृतीयार्थस्य ''ज्ञेयं'' इत्यस्य विवृतिः -'सद्भिः' इत्यादि । तत्र 'श्रुत्या' श्रवणेन जाता या मतिः तया 'नियतं' तद्विषय एव नियमितं यत् 'ध्यानं' आलोचनात्मक मननं तज्जनितनिरन्तरानुस्मृतिरूपज्ञानलक्षणध्यानादिति भ्रान्तिं निराह - श्रुतिमती इति ।। योग उपाय इति ।। ''योगस्सन्नहनोपायः'' इत्यभिधानादिति भावः । ननु 'अमलं' निर्दोषमित्यर्थश्चेत् चिन्तेत्यादिना गतार्थम्, अत आह ।। अमलमिति ।। मायारूपमलरहितम् । ''निर्विशेषं परं ब्रह्म'' इत्याद्युक्त्या परमते मायिन एव मन्दोपास्यत्वात् । यद्वा - न विद्यते मलं संसाराख्यं यस्मादित्यर्थः । 'मुमुक्षूपास्यम्' इति पर्यवसितव्याख्यानम् । संसारनिवर्तकस्यैव तदुपास्यत्वादिति भावः ।

गुरुराजीय – ग्रन्थादौ मङ्गलमाचरतीति ।। नन्वयं मङ्गलोपनिबन्ध एव तत् कथं मङ्गलाचारत्वोक्तिः । नच मङ्गलोपनिबन्धनस्य नमस्काराङ्गतया स्वातन्त्र्येण वा समास्यननुकूलत्वादयुक्तत्वमिति वाच्यम् । समास्यननुकूलस्यापि शिष्यशिक्षार्थतया युक्तत्वात् । तथाहि नहि ग्रन्थो व्यसनितया क्रियते किन्तु –

''यावत् कीर्तिर्मनुष्याणां पुण्यलोकेषु गीयते ।
तावद् वर्षसहस्राणि पुण्यलोके महीयते ।।''

इति सत्कीर्त्यनुवृत्तये । नचाप्रचरता तेन सत्कीर्तिरनुवर्तयितुं शक्या । नचाशिक्षिताः शिष्या मङ्गलं कुर्युः । नच तेषां मङ्गलाकरणे ग्रन्थाध्ययनाध्यापने भवतः । कदाचित् कस्यचिदन्तरा विघ्नानुत्पादेऽपि बहुलविघ्नोत्पादात् । तथाचाहुः

"श्रेयांसि बहुविघ्नानि" इति ।। तस्मात् ग्रन्थारम्भे मङ्गलाचरणविषया शिष्यशिक्षैव युक्ता । वक्ष्यति च ग्रन्थकारः "नमस्काराधिकार्यादिग्रथनसूचने शिष्यशिक्षार्थम्" इति ।।

तत् कथं शिष्यशिक्षार्थस्य मङ्गलोपनिबन्धस्य मङ्गलाचारत्वकथनम्? इति चेत् अत्र स्वामिनः यद्यप्येवं शिष्यशिक्षार्थता नमस्कारोपनिबन्धस्य सम्भवति तथापि न सैव प्रयोजनम् । मङ्गलान्तर इव इष्टसिद्ध्यर्थिनां शिष्याणां कर्तव्यत्वबुद्धिसम्भवात् । न खल्वन्यन्मङ्गलं कृतं ग्रन्थकारैर्ग्रन्थादौ निबध्यते । ततश्च प्रचरद्ग्रन्थेषु सहस्रशो नमस्कारोऽपि निबन्धनेन शिष्यशिक्षायाः सम्भावितत्वेऽप्युत्तरोत्तरेषां ग्रन्थकाराणां नमस्कारोपनिबन्धदर्शनादवगच्छामो यत्प्रणामवाचकनमःशब्दादिवत् तदनुमापक-लिपेरपि विघ्नानुत्पादोद्देशेनैव करणम् । गृह्णन्त्यपि केचिद्विघ्नो मा भूदिति । कृतेऽपि मङ्गलान्तरे विघ्नहेतुबलीयस्त्वसम्भावनायां मङ्गलप्राचुर्यार्थं नमस्कारकरणवत् कृतेऽपि नमस्कारे तदुपनिबन्धरूपमङ्गलांतरानुष्ठानमप्युपपन्नमेव । तथाच टीकायां "शिष्यशिक्षार्थम्" इत्यानुषङ्गिकप्रयोजननिर्देशः । अन्यार्थमपि कृतस्य लोकेऽन्यार्थत्वदर्शनात् । तद्यथा शाल्यर्थं कुल्याः प्रणीयन्ते ताभ्यश्च पानीयं पीयत इति सर्वमनवद्यम् ।

वस्तुतस्तु त्रिविधस्यापि नमस्कारस्य सैद्धान्तिकत्वात्वात् सर्वेष्वपि ग्रन्थेष्वादौ नमःशब्दादिप्रयोगो वाचिकनमस्कार एव । नत्वसौ मङ्गलोपनिबन्धः । अन्यथा का गतिः? "अस्पृष्टदोषगन्धाय" इत्यादिस्तुतिरूपशब्देषु । नहि सोऽपि स्तुतिरूपमङ्गलोपनिबन्धः । स्तुतिरूपशब्दाप्रतिपादकत्वात् । किंतूत्कर्षप्रतिपादकशब्दत्वेन तेषामेव स्तुतित्वम् । तस्मादेवंजातीयकेषु सर्वग्रन्थेषु गुणप्रधानभावेन नतिस्तुतिरूपमङ्गलाचरणमेव । शिष्यशिक्षा त्वानुषङ्गिक्येव पूर्ववत् । तादृशलिपिरचनया नमःशब्दादिरूपनमस्कारज्ञानेन तस्याः सम्भवात् ।

ननु 'ब्रह्म वन्दे' इत्यनेनैव मङ्गलस्य चीर्णत्वात् किं विशेषणैः कृत्यम्? इत्याशङ्क्य, "नारायणं गुणैः" इति व्याख्येयपद्यगतविशेषणकृत्यानामेवात्रापि तत्कृत्यत्वाद्वानुपपत्तिः इत्याह – इदं चेति ।। आद्यश्लोकविवरणरूपत्वात् इति । विवरणं च 'भाष्याद्यश्लोकस्थो गुणशब्दो न तार्किकोक्तदुःखादिपरः किंत्वानन्दादि-

परः । दोषशब्दोऽपि न रागद्वेषमोहपरः किन्तु चिन्तादिपरः । ज्ञेयशब्दोऽपि न ज्ञेयत्वमात्रपरः घटादिसाधारण्यात् किन्तु श्रोतव्यत्वादिचतुष्टयपरः । गम्यशब्दोऽपि न मुक्तप्राप्यत्वमात्रपरः किन्तु वेदसमधिगम्यत्वपरोऽपि' इति द्रष्टव्यम् । वक्ष्यमाणावीति ।। वक्ष्यमाणं गुणपूर्णत्वनिर्दोषत्वादि । आदिपदेन नम्यत्वप्रयोजकेष्टत्वादिपरिग्रहः । तस्यापि 'शुद्धानन्दे'त्यादिना सूचितत्वादित्यपि द्रष्टव्यम् ।।

आनन्दादेः शुद्धत्वं सान्तत्वसातिशयत्वादिराहित्यमिति । यद्यप्यत्र आनन्दादिरूपो देहो यस्यासौ आनन्दादिदेहः । शुद्धश्चासावानन्दादिदेहश्चेति शुद्धत्वं न तावद् ब्रह्मणो विशेषणम् । तस्य दोषातिदूरमित्यनेनैवोक्तत्वात् । नापि शुद्धः आनन्दादिरूपो देहो यस्येति देहस्य विशेषणम् । देहस्यानन्दरूपत्वेनैव शुद्धत्वसिद्धेः । तथापि शुद्धः आनन्दादिर्देहो यस्येति आनन्दादेर्गुणस्य विशेषणम् उरुत्वादिवत् । तत्रापि शुद्धत्वं न दुःखाद्यमिश्रत्वं तस्य दोषातिदूरमित्यनेनैव सिद्धेः । किंतु सान्तत्वादिराहित्यमेव । उरुत्वादिविशेषणेन ज्ञानादेः सर्वविषयत्वादिलाभेऽपि सान्तत्वादिराहित्यालाभात् तल्लाभाय शुद्धत्वस्यानन्दादिसर्वविशेषणत्वाश्रयणमिति द्रष्टव्यम् ।

ननु 'चिन्तासन्तापलेपे'त्यत्र चिन्तासन्तापराहित्योक्त्यैव दोषातिदूरमित्यत्रैव तत्सम्बन्धाभावस्य सिद्धत्वात् 'लेप'पदमनर्थकम् इत्यतः, भवेदेवं यद्यत्र लेपश्चिंतासन्तापाभ्यां सम्बन्धरूपो विवक्षितः स्यात्, न चैवं किन्तु पुण्यपापादिसम्बन्धरूपं दोषान्तरमेव स इत्यतो न तदानर्थक्यम् इति भावेनाह - लेपः पुण्यपापसम्बन्ध इति ।।

श्रुतिमती श्रवणमनने इति ।। श्रुतिमतिशब्दौ न प्रसिद्धवेदबुद्धिपरौ, किन्तु श्रवणमननपरौ । तेन 'ध्यान'शब्दवत् साधनाध्यायार्थसूचकत्वमनयोरपि युक्तमिति भावः । ननु ध्यानस्येव श्रवणमननयोरप्यवश्यानुष्ठेयत्वात् तदर्थक'नियत'-पदानर्थक्यमित्यतो न ध्यानस्य नियतत्वमवश्यानुष्ठेयत्वं येन श्रवणादिसाधारण्यं स्यात् । किं नाम स्वयोग्यत्वम्? तच्च ध्यानासाधारणं ध्यानस्येव श्रवणादेः शक्यत्वेऽप्ययोग्यत्वप्रयुक्तनिषेधाभावादिति भावेनाह – नियतध्यानं स्वयोग्योपासनमिति ।। ज्ञानं साक्षात्कार इति ।। ननु परोक्षज्ञानम् । तस्य ध्यानजनकत्वेन

तदजन्यत्वादिति भावः । योगशब्दस्य सम्बन्धार्थत्वे वैयर्थ्यभियाऽर्थांतरमाह – स एव योग उपाय इति ।। तथाच गम्यत्वेऽपि न ज्ञेयत्वं ब्रह्मणोंऽगीकार्यम् । कर्मादिनाऽपि तत्प्राप्तेः श्रुतत्वादित्याशङ्कानिरासार्थमुपायांतरनिरासकं तदावश्यकमिति भावः ।

अमलम् इत्यस्य निर्दोषार्थत्वे दोषातिदूरम् इत्यनेन पौनरुक्त्यम्, इत्यतः प्रकारान्तरेण व्याचष्टे – अमलं मुमुक्षूपास्यमिति ।। विशेषणप्रयोजनमाह – नन्विति ।। वन्द्यत्वप्रयोजकविशिष्टत्वलाभाय ब्रह्मपदम् । गुणवत्त्वे दोषवत्त्वमपि स्यादित्यतः, अमलम् इति तदुपपादनम् । मुकुन्दाभिधम् इति मोक्षदत्वोक्त्या वन्द्यत्वनिमित्तेष्टत्वसमर्थनम् । वेदान्तवेद्यम् इति तन्निमित्ताधिकृतत्वकथनम् । विशेषणचतुष्टयविवरणरूपाणि चापराणि विशेषणानि । 'विश्वस्योदयमातनोति' इत्यादाविव । तथाहि । ब्रह्मशब्दोक्तविशिष्टत्वविवरणं शुद्धेति । तत्रोपपादकामलत्वविवरणं चिंतेति । अत्र मुखरशब्दः स्वार्थिकरप्रत्ययान्त एवाभिमतः । नतु मत्वर्थीयरप्रत्ययान्तः । तथा सति वाचालार्थत्वापत्त्या तत्प्रमुखत्वालाभप्रसङ्गात् । वेदान्तवेद्यम् इत्युक्ताधिकृतत्वविवरणं सद्भिर्वैराग्यभक्तीत्यादि । 'धर्मादिषूभयम्' इत्युक्तत्वात् । गुणवृद्धी इत्यादिवत् वैराग्यभक्तीत्यस्य साधुत्वम् । मुकुन्दाभिधम् इत्युक्तेष्टत्वविवरणं गम्यमिति । विशेषणमात्रमर्थवदित्यपि योजना द्रष्टव्येति गुरवः।

ವಿವರಣೆ : ಶಿಷ್ಟಾಚಾರಪರಂಪರೆಯಿಂದ ಪ್ರಾಪ್ತವಾದ ಮಂಗಳಾಚರಣೆಯನ್ನು ಶ್ರೀಮಟ್ಟೀಕಾಕೃತ್ಪಾದರು 'ಶುದ್ಧಾನಂದೋಽರು' ಇತ್ಯಾದಿಪದ್ಯಗಳಿಂದ ಆಚರಿಸುತ್ತಿದ್ದಾರೆ.

ಪ್ರಶ್ನೆ :- ಭಾಷ್ಯಕ್ಕೆ ವ್ಯಾಖ್ಯಾನಿಸಲು ಪ್ರವೃತ್ತರಾದ ಟೀಕಾರಾಯರು ವ್ಯಾಖ್ಯಾನ ಮಾಡಲು ಪ್ರಾರಂಭಿಸಬೇಕು ಅದನ್ನು ಬಿಟ್ಟು 'ಶುದ್ಧಾನಂದೋಽರು' ಎಂಬ ಮಂಗಳಪದ್ಯವನ್ನು ಹಾಡುವ ಅವಶ್ಯಕತೆ ಏನಿತ್ತು? 'ಗ್ರಂಥದ ಪ್ರಾರಂಭದಲ್ಲಿ ಮಂಗಳವನ್ನು ಆಚರಿಸಲೇಬೇಕು' ಎಂದರೆ ಭಾಷ್ಯಕ್ಕೆ ವ್ಯಾಖ್ಯಾನಿಸಲು ಪ್ರಾರಂಭಿಸಿದಾಗ 'ಅಥಾವಿದ್ಯಾ' ಇತ್ಯಾದಿಯಾಗಿ ಹೇಳುತ್ತಾರೆ. 'ಅಥ' ಶಬ್ದವು ಪರಮಮಂಗಳವಾದ ಶಬ್ದ. 'ಅಥ' ಶಬ್ದದಿಂದಲೇ ಮಂಗಳವು ಸಿದ್ಧಿಸುವಾಗ ಪುನಃ 'ಶುದ್ಧಾನಂದೋಽರು' ಇತ್ಯಾದಿ ಮಂಗಳಪದ್ಯಗಳ ಅವಶ್ಯಕತೆಯಾದರೂ ಏನಿತ್ತು?

ಉತ್ತರ :- ಈ ಪ್ರಶ್ನೆಗೆ ಗ್ರಂಥಕಾರರು 'ಗ್ರಂಥಾದೌ ಮಂಗಳಮಾಚರತಿ' ಎಂದು ಉತ್ತರಿಸಿದ್ದಾರೆ. ಇಷ್ಟಪದ್ಯಕ್ಕೆ ವ್ಯಾಖ್ಯಾನರೂಪವಾಗಿರುವುದರಿಂದ ಸಾರ್ಥಕವೆಂದು ತಿಳಿಯಬೇಕು.

## ಮಂಗಳಾಚರಣೆ ಮಾಡಲು ಸಾಧ್ಯವೇ?
## (ಒಂದು ವಿಮರ್ಶೆ)

ಗ್ರಂಥಕಾರರು 'ಮಂಗಳಮಾಚರತಿ' ಎಂದಿದ್ದಾರೆ. ಇದು ಹೇಗೆ ಸರಿ? ಆಚರಣೆ ಎಂದರೆ ಅನುಷ್ಠಾನ ಎಂದರ್ಥ. ಕಾಯಿಕವಾಗಿ ವಾಚನಿಕವಾಗಿ ಅಥವಾ ಮಾನಸಿಕವಾಗಿ ಮಾಡುವ ವ್ಯಾಪಾರ-ವಿಶೇಷವೇ ಅನುಷ್ಠಾನವಾಗಿದೆ. ಇಂತಹ ನಮಸ್ಕಾರರೂಪವಾದ ಅನುಷ್ಠಾನವನ್ನು ಯಾವುದೇ ಗ್ರಂಥಕಾರರು ಗ್ರಂಥದ ಮೊದಲು ಮಾಡಿರುತ್ತಾರೆ. ಅನಂತರ ತಾವು ಮಾಡಿದ ಮಂಗಳವನ್ನು ಗ್ರಂಥದ ಪ್ರಾರಂಭದಲ್ಲಿ ಉಲ್ಲೇಖಿಸುತ್ತಾರೆ. ಈಗ ಗ್ರಂಥಾರಂಭದಲ್ಲಿ ನಮಗೆ ಕಾಣಸುತ್ತಿರುವ 'ಶುದ್ಧಾನಂದೋ...' ಇತ್ಯಾದಿ ಶ್ಲೋಕಗಳು ಮಂಗಳಾಚರಣೆಯಾಗಲು ಸಾಧ್ಯವಿಲ್ಲ. ಕೇವಲ ಮಂಗಳಾಚರಣದ ಉಲ್ಲೇಖವೆಂದು ಹೇಳಬೇಕು.

ಮತ್ತು ಮಂಗಳಾಚರಣೆಯ ಉಲ್ಲೇಖವು ಮಂಗಳಕ್ಕೆ ಸಹಕಾರಿಯೂ ಆಗುವುದಿಲ್ಲ. ಹಾಗಾಗಿದ್ದರೆ ಮಂಗಳದ ಉಲ್ಲೇಖವು ಮಂಗಳದ್ವಾರಾ ಸಮಾಪ್ತಿಗೆ ಕಾರಣವೆಂದು ಹೇಳಬಹುದಿತ್ತು. ಮತ್ತು ಸಾಕ್ಷಾತ್ತಾಗಿಯೂ ಸಹ ಸಮಾಪ್ತಿಗೆ ಕಾರಣವಾಗುವುದಿಲ್ಲ. ಹೀಗಿರಬೇಕಾದರೆ ಮಂಗಳದ ಉಲ್ಲೇಖವು ಗ್ರಂಥಾರಂಭದಲ್ಲಿ ಏಕೆ?

ಈ ಪ್ರಶ್ನೆಗೆ ಗ್ರಂಥಾರಂಭದಲ್ಲಿ ಶಿಷ್ಯರು ಮಂಗಳವನ್ನು ಆಚರಿಸಬೇಕೆಂದು ತಿಳಿಸಲು ಉಲ್ಲೇಖಿಸಬೇಕೆಂದು ಉತ್ತರಿಸಬೇಕು. ಏಕೆಂದರೆ -

> ಯಾವತ್ ಕೀರ್ತಿರ್ಮನುಷ್ಯಾಣಾಂ ಪುಣ್ಯಲೋಕೇಷು ಗೀಯತೇ ।
> ತಾವದ್‌ವರ್ಷಸಹಸ್ರಾಣಿ ಪುಣ್ಯಲೋಕೇ ಮಹೀಯತೇ ॥

ಸಜ್ಜನನು ಉತ್ತಮಕೀರ್ತಿಯನ್ನು ಸಂಪಾದಿಸಬೇಕು. ಎಷ್ಟು ವರ್ಷ ಸತ್‌ಕೀರ್ತಿ ಇರುತ್ತದೋ, ಅಷ್ಟು ವರ್ಷಗಳ ಕಾಲ ಪುಣ್ಯಲೋಕದಲ್ಲಿ ಸನ್ಮಾನಿತನಾಗುತ್ತಾನೆ. ಸುಖಶಾಲಿ ಆಗುತ್ತಾನೆ.

ಗ್ರಂಥವು ಶಿಷ್ಯರಿಂದಷ್ಟೇ ಪ್ರಚಾರವಾಗಲು ಸಾಧ್ಯ. ಶಿಷ್ಯರು ಗ್ರಂಥದ ಆರಂಭದಲ್ಲಿ ಮಂಗಳವನ್ನು ಆಚರಿಸದಿದ್ದಲ್ಲಿ ಗ್ರಂಥದ ಅಧ್ಯಯನ ಪರಿಪೂರ್ಣವಾಗುವುದಿಲ್ಲ. ಅಧ್ಯಯನವೇ ನಡೆಯದಿದ್ದರೆ ಅಧ್ಯಾಪನವೂ ನಡೆಯದು. ಆದ್ದರಿಂದ ಗ್ರಂಥಾರಂಭದಲ್ಲಿ ಶಿಷ್ಯರು ಮಂಗಳವನ್ನು ಅತ್ಯವಶ್ಯವಾಗಿ ಆಚರಿಸಬೇಕು. ಹೀಗೆ ಶಿಕ್ಷಣ ನೀಡದಿದ್ದರೆ ಶಿಷ್ಯರಿಗೆ ಮಂಗಳ ಮಾಡಬೇಕೆಂದು ತಿಳಿಯುವುದಿಲ್ಲ. ಆದ್ದರಿಂದ ಸಮಾಪ್ತಿಗೆ ಮಂಗಳದ ಉಲ್ಲೇಖವು ಕಾರಣವಾಗದಿದ್ದರೂ, ಶಿಷ್ಯರ ಶಿಕ್ಷಣಗೋಸ್ಕರ ಸಾರ್ಥಕವಾಗುತ್ತದೆ.

ಈ ವಿಚಾರವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಕೆಲವರಿಗೆ ವಿಘ್ನವೇ ಬಾರದಿರಬಹುದು ಅಥವಾ ಎಲ್ಲಾ ಕಾಲದಲ್ಲಿಯೂ ವಿಘ್ನವಿಲ್ಲದಿರಬಹುದು. ಆದರೆ ಬಹುವಿಧವಾದ ವಿಘ್ನಗಳ ಮಧ್ಯೆ ಒಂದಲ್ಲ ಒಂದು ವಿಘ್ನ ಇದ್ದೇ ಇರುತ್ತದೆ. ವಿಘ್ನವಿಲ್ಲದೆ ಗ್ರಂಥಾಧ್ಯಯನವು ಪರಿಪೂರ್ಣವಾಗಬೇಕಾದ

ಶಿಷ್ಯರು ಗ್ರಂಥಾರಂಭದಲ್ಲಿ ಅತ್ಯವಶ್ಯವಾಗಿ ಮಂಗಳಾಚರಣೆಯನ್ನು ಮಾಡಲೇಬೇಕಾಗುತ್ತದೆ. ಶಿಷ್ಯರಿಗೆ ಇದನ್ನು ತಿಳಿಸಬೇಕಾದರೆ ಹಿರಿಯರು ಮೊದಲು ತಾವು ಮಂಗಳವನ್ನು ಮಾಡಿ ಅದರ ಉಲ್ಲೇಖವನ್ನು ಮಾಡಬೇಕು. ಶಿಷ್ಯರು ಅದನ್ನು ನೋಡಿ ಮಂಗಳವನ್ನು ಆಚರಿಸುತ್ತಾರೆ. ಆದ್ದರಿಂದ ಗ್ರಂಥದ ಆರಂಭದಲ್ಲಿ ಶಿಷ್ಯಶಿಕ್ಷಣೆಗಷ್ಟೇ ಮಂಗಳದ ಉಲ್ಲೇಖ. ಇದನ್ನು ಮುಂದೆ ಹೇಳುವವರಿದ್ದಾರೆ. 'ನಮಸ್ಕಾರಾಧಿಕಾರ್ಯಾದಿಗ್ರಥನಸೂಚನೇ ಶಿಷ್ಯಶಿಕ್ಷಾರ್ಥಮ್' 'ನಮಸ್ಕಾರ ಮತ್ತು ಅಧಿಕಾರ ಮೊದಲಾದವನ್ನು ಗ್ರಂಥಾರಂಭದಲ್ಲಿ ಶಿಷ್ಯರ ಶಿಕ್ಷಣೆಗೋಸ್ಕರ ಉಲ್ಲೇಖಿಸಲಾಗುತ್ತದೆ ' ಎಂದು.

ಹೀಗೆ ಮಂಗಳವನ್ನು ಉಲ್ಲೇಖಿಸುವುದು ಶಿಷ್ಯರ ಶಿಕ್ಷಣೆಗೋಸ್ಕರವೆಂದು ಸಿದ್ಧವಾಯಿತು. ಅಂತಹ ಮಂಗಳದ ಉಲ್ಲೇಖವು ಮಂಗಳಾಚರಣೆ ಎನ್ನಲು ಸಾಧ್ಯವಿಲ್ಲ. ಹೀಗಿರಬೇಕಾದರೆ ಮಂಗಳದ ಉಲ್ಲೇಖವನ್ನು ಮಂಗಳಾಚರಣೆಯೆಂದು ಗ್ರಂಥಕಾರರು ಹೇಗೆ ಕರೆದರು? ಈ ಆಕ್ಷೇಪಕ್ಕೆ ವಿದ್ಯಾಧೀಶತೀರ್ಥರು ಹೇಳುವ ಪರಿಹಾರ -

## ಮಂಗಳಾಚರಣೆಯಂತೆ ಮಂಗಳನಿಬಂಧನವೂ ವಿಘ್ನಪರಿಹಾರಕ
## (ಶ್ರೀವಿದ್ಯಾಧೀಶತೀರ್ಥರು)

ಗ್ರಂಥಾರಂಭದಲ್ಲಿರುವ ಮಂಗಳದ ಉಲ್ಲೇಖವು ಮಂಗಳಾಚರಣೆ ಅಲ್ಲ. ಅದು ಕೇವಲ ಶಿಷ್ಯರ ಶಿಕ್ಷಣೆಗೋಸ್ಕರ ಇರುವ ಮಂಗಳಾಚರಣೆಯ ಉಲ್ಲೇಖವೆಂಬುದು ಸತ್ಯ. ಆದರೂ ಸಹ ಮಂಗಳದ ಉಲ್ಲೇಖಕ್ಕೆ ಶಿಷ್ಯಶಿಕ್ಷಣೆಯಷ್ಟೇ ಪ್ರಯೋಜನವಲ್ಲ. ಶಿಷ್ಯರಿಗೆ ತಿಳಿಸುವುದಕ್ಕಾಗಿ ಮಂಗಳವನ್ನು ಉಲ್ಲೇಖಿಸುವ ಅವಶ್ಯಕತೆಯಿಲ್ಲ. ಹೇಗೆಂದರೆ ಕಾಯಿಕವಾದ ಅಥವಾ ಮಾನಸಿಕವಾದ ಅಥವಾ ಸ್ತೋತ್ರಪಾರಾಯಣಾದಿರೂಪವಾದ ಮಂಗಳವನ್ನು ಆಚರಿಸಬೇಕೆಂದು ಯಾರೂ ಹೇಳಿರುವುದಿಲ್ಲ. ಆದರೂ ಸಹ ಇಷ್ಟಸಿದ್ಧಿಗೋಸ್ಕರ ಶಿಷ್ಯರೇ ಅದನ್ನು ತಿಳಿದು ಅನುಷ್ಠಾನ ಮಾಡುತ್ತಾರೆ. ಅದರಂತೆ ಗ್ರಂಥಾಧ್ಯಯನವನ್ನು ಸಂಪೂರ್ಣ ಮಾಡಬೇಕೆಂಬ ಅಪೇಕ್ಷೆಯು ಯಾವ ಶಿಷ್ಯರಿಗಿರುತ್ತದೋ, ಅಂತಹವರು ಭಗವಂತನನ್ನು ಪ್ರಾರ್ಥಿಸಿ ವಿಘ್ನಗಳನ್ನು ಪರಿಹರಿಸಿಕೊಳ್ಳುತ್ತಾರೆ. ಅದರ ಶಿಕ್ಷಣೆಯ ಅವಶ್ಯಕತೆ ಇರುವುದಿಲ್ಲ. ಅಷ್ಟೇ ಅಲ್ಲದೆ ಹಿಂದಿನ ಗ್ರಂಥಕಾರರಾದ ವ್ಯಾಸಶುಕಾದಿಗಳೆಲ್ಲರೂ ಮಂಗಳದ ಉಲ್ಲೇಖವನ್ನು ಗ್ರಂಥದಲ್ಲಿ ಮಾಡಿರುತ್ತಾರೆ. ಅದನ್ನು ನೋಡಿಯೇ ಗ್ರಂಥಾರಂಭದಲ್ಲಿ ಅವಶ್ಯವಾಗಿ ಮಂಗಳವನ್ನು ಆಚರಿಸಬೇಕೆಂದು ಶಿಷ್ಯರು ತಿಳಿಯುತ್ತಾರೆ. ಶಿಷ್ಯರಿಗೆ ತಿಳಿಸುವದಕ್ಕಾಗಿ ಈ ಗ್ರಂಥಗಳಲ್ಲಿ ಮಂಗಳವನ್ನು ಉಲ್ಲೇಖಿಸಬೇಕಾಗಿಲ್ಲ. ಆದರೂ ಸಹ ಜ್ಞಾನಿಗಳೆಲ್ಲರೂ ಅವಶ್ಯವಾಗಿ ಮಂಗಳವನ್ನು ಉಲ್ಲೇಖಿಸುತ್ತಾರೆ. ಇದರಿಂದ ಏನು ತಿಳಿಯುತ್ತದೆ? ಎಂದರೆ ಮಂಗಳದ ಆಚರಣೆಯಂತೆ ಮಂಗಳದ ಉಲ್ಲೇಖವೂ ಸಹ ವಿಘ್ನನಿವಾರಕವಾಗಿದೆ. ವಿಘ್ನಗಳು ಬಹಳವಿರಬಹುದೆಂದು ಗ್ರಂಥಕಾರರು ಮಂಗಳಾಚರಣೆಯನ್ನು ಅದರ ನಿಬಂಧನೆಯನ್ನೂ ಅವಶ್ಯ ಮಾಡುತ್ತಾರೆ.

ವಿಘ್ನಪರಿಹಾರಕ್ಕಾಗಿ ಭಗವಂತನಿಗೆ ಭಕ್ತಿಯಿಂದ ನಮಸ್ಕರಿಸಲಾಗುತ್ತದೆ. ಪುನಃ ಬಾಯಿಯಿಂದ 'ನಮಃ' ಎಂದು ಉಚ್ಚರಿಸಲಾಗುತ್ತದೆ. ಪುನಃ ಅದನ್ನೇ ಲಿಪಿಯಿಂದ ಉಲ್ಲೇಖಿಸಲಾಗುತ್ತದೆ. ಹೀಗೆ

ಅನೇಕ ವಿಧವಾದ ಮಂಗಳಗಳು ವಿಘ್ನಪರಿಹಾರಕಗಳೇ ಆಗಿವೆ. ಆದ್ದರಿಂದ ಸ್ತೋತ್ರಪಠನರೂಪವಾಗಿ ಮೊದಲು ಮಂಗಳವನ್ನು ಆಚರಿಸುತ್ತಾರೆ. ಆದರೆ ವಿಘ್ನಪ್ರಾಚುರ್ಯದ ಭಯದಿಂದ ಪುನಃ ಕಾಯಿಕವಾದ ಸಾಷ್ಟಾಂಗ ನಮಸ್ಕಾರದಿಂದ ಮಂಗಳವನ್ನು ಆಚರಿಸುತ್ತಾರೆ. ಇನ್ನೂ ಅನೇಕ ವಿಘ್ನಗಳಿರಬಹುದೆಂದು ಮಂಗಳದ ಉಲ್ಲೇಖದ ಮೂಲಕ ಮಂಗಳವನ್ನು ಆಚರಿಸುತ್ತಾರೆ. ಆದ್ದರಿಂದ ಮಂಗಳದ ಉಪನಿಬಂಧನಕ್ಕೆ ಶಿಷ್ಯಶಿಕ್ಷಣೆಮಾತ್ರ ಪ್ರಯೋಜನವಲ್ಲ. ವಿಘ್ನಪರಿಹಾರವೂ ಪ್ರಯೋಜನವಾಗಿದೆ.

ಹಾಗಾದರೆ ಗ್ರಂಥಕಾರರು ಹೇಳಿದ ಶಿಷ್ಯಶಿಕ್ಷಣೆಗೋಸ್ಕರ ಮಂಗಳ ಎಂಬ ಮಾತಿಗೆ ಏನು ಅರ್ಥ? ಎಂದರೆ ಶಿಷ್ಯಶಿಕ್ಷಣೆಯೂ ಇದರಿಂದಾಗುತ್ತದೆ ಎಂದಷ್ಟೇ ಅರ್ಥ. ಶಿಷ್ಯಶಿಕ್ಷಣೆಯು ಆನುಷಂಗಿಕವಾದ ಪ್ರಯೋಜನ. ಅಂದರೆ 'ಬೇರೆ ಯಾವುದಕ್ಕೋ ಮಾಡಿದ್ದು ಮತ್ತೊಂದಕ್ಕೆ ಪ್ರಯೋಜನವಾಗಿದೆ' ಎಂದರ್ಥ. ಉದಾ :- ಕೆರೆಯ ನೀರನ್ನು ಗದ್ದೆಗೆ ಕಳಿಸಲು ಕಾಲುವೆಯನ್ನು ಮಾಡಿರುತ್ತಾರೆ. ಆದರೆ ದಾರಿಹೋಕರು ಕಾಲುವೆಯ ನೀರನ್ನು ಕುಡಿಯಲು ಉಪಯೋಗಿಸುತ್ತಾರೆ. (ಅನ್ಯಾರ್ಥಮಪಿ ಕೃತಸ್ಯ ಲೋಕೇಽನ್ಯಾರ್ಥತ್ವದರ್ಶನಾತ್) ಅದೇ ರೀತಿಯಾಗಿ ಪ್ರಕೃತದಲ್ಲಿ ವಿಘ್ನಪರಿಹಾರಕ್ಕಾಗಿ ಮಂಗಳದ (ಉಪನಿಬಂಧನ) ಉಲ್ಲೇಖವಿರುತ್ತದೆ. ಇದರಿಂದ ಶಿಷ್ಯಶಿಕ್ಷಣಾದಿಪ್ರಯೋಜನಾಂತರಗಳೂ ಸಿದ್ಧಿಸುತ್ತವೆ

ಆದ್ದರಿಂದ ಮಂಗಳದ ಉಲ್ಲೇಖವು ಮಂಗಳಮಯವಾದ್ದರಿಂದ ಮಂಗಳಾಚರಣೆ ಎಂದೇ ಕರೆಸಿಕೊಳ್ಳುತ್ತದೆ. ಗ್ರಂಥಕಾರರು 'ಮಂಗಳಮಾಚರತಿ' ಎಂದು ಹೇಳಿದ್ದು ಎಲ್ಲ ರೀತಿಯಿಂದ ಸಮಂಜಸವಾಗುತ್ತದೆ. 'ಆಚರಣ' ಶಬ್ದಕ್ಕೆ ಗೌಣಾರ್ಥ ಮಾಡುವ ಅವಶ್ಯಕತೆಯು ಇರುವುದಿಲ್ಲ.

ಶ್ರೀವ್ಯಾಸತೀರ್ಥರು ಮಂಗಳ ಎಂಬ ಪದವನ್ನು ಉಲ್ಲೇಖಿಸಿರುವುದರಿಂದ ಮಂಗಳಾಚರಣೆಯು ಪ್ರಾರಿಪ್ಸಿತಪರಿಸಮಾಪ್ತ್ಯಾದಿ ಪ್ರಯೋಜನವುಳ್ಳದ್ದು, ಹಾಗು ಶಿಷ್ಟಾಚಾರ ಪರಂಪರಾಪ್ರಾಪ್ತವಾದದ್ದೆಂದು ತಿಳಿಯುತ್ತದೆ. ಆದ್ದರಿಂದ ಮಂಗಳವನ್ನು ಅವಶ್ಯ ಆಚರಿಸಬೇಕೆಂದು ಸ್ಪಷ್ಟವಾಗುತ್ತದೆ. ಇನ್ನು 'ಗ್ರಂಥಾದೌ' ಎಂದು ಹೇಳಿದ್ದರಿಂದ ಮಂಗಳವು ಗ್ರಂಥದ ಒಂದು ಅಂಗವೆಂದು ತಿಳಿಯುತ್ತದೆ. ಈ ಮಂಗಳಪದ್ಯವೂ ಭಾಷ್ಯವ್ಯಾಖ್ಯಾನರೂಪವಾಗಿರುವುದರಿಂದ ಅನುಪಯುಕ್ತವಲ್ಲವೆಂದು 'ಇದಂ ಚ' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

ಅಥವಾ 'ಶುದ್ಧಾನಂದೋರು' ಎಂಬ ಶ್ಲೋಕದಲ್ಲಿ 'ಬ್ರಹ್ಮ ವಂದೇ' ಎಂದಷ್ಟೇ ಹೇಳಿದರೂ ಮಂಗಳವನ್ನು ಆಚರಿಸಿದಂತಾಗುತ್ತದೆ. ಪುನಃ ಅನೇಕ ವಿಶೇಷಣಗಳ ಅವಶ್ಯಕತೆಯಾದರೂ ಏನು? ಎಂಬ ಶಂಕೆ ಬಂದರೆ ವ್ಯಾಖ್ಯೇಯವಾದ 'ನಾರಾಯಣಂ ಗುಣೈಸ್ಸರ್ವೈಃ' ಎಂಬ ಪದ್ಯದಲ್ಲಿನ ವಿಶೇಷಣಗಳಿಗೆ ಯಾವ ರೀತಿಯಾಗಿ ಸಾರ್ಥಕ್ಯವಿದೆಯೋ, ಅದರಂತೆ ಈ ಶ್ಲೋಕದಲ್ಲಿಯೂ ಸಾರ್ಥಕ್ಯ ಇದೆಯೆಂದು ಭಾವಿಸಬೇಕು. ಇಲ್ಲವಾದರೆ 'ನಾರಾಯಣಂ ನತ್ವಾ' ಎಂದಷ್ಟೇ ಸಾಕೆಂಬ ಪ್ರಶ್ನೆ ಅಲ್ಲಿಯೂ ಸಮಾನ.

ಭಾಷ್ಯದಲ್ಲಿ 'ನಾರಾಯಣಂ ನತ್ವಾ' ಎಂದಿದೆ. ತತ್ವಪ್ರಕಾಶಿಕೆಯಲ್ಲಿ 'ಬ್ರಹ್ಮ ವಂದೇ' ಎಂದಿದೆ. ಇದರಿಂದ ಏನು ಗೊತ್ತಾಗುತ್ತದೆ? ಎಂದರೆ ಭಾಷ್ಯದ ಮಂಗಳಶ್ಲೋಕವು ನಾರಾಯಣಶಬ್ದಾರ್ಥವನ್ನು

ವರಿಸುವಂತೆ ನಾರಾಯಣ ಶಬ್ದಕ್ಕೆ ಸಮಾನವಾದ ಅರ್ಥವುಳ್ಳ ಬ್ರಹ್ಮಶಬ್ದದ ಅರ್ಥವನ್ನೂ ವಿವರಿಸುತ್ತರೆ. ಹೀಗೆ ತತ್ವಪ್ರಕಾಶಿಕೆಯ ಮಂಗಳಪದ್ಯವು ವ್ಯಾಖ್ಯಾನಿಸುತ್ತಿದೆಯೆಂದು ಸ್ಪಷ್ಟವಾಗುತ್ತದೆ. ಈ ವಿಷಯವನ್ನು ಗ್ರಂಥಕಾರರು ಆದಿಶಬ್ದದಿಂದ ಸೂಚಿಸಿದ್ದಾರೆ.

ಬ್ರಹ್ಮಸೂತ್ರದ ಪ್ರಥಮಾಧ್ಯಾಯದಲ್ಲಿ ಭಗವಂತನಿಗೆ ಸಕಲಗುಣಪರಿಪೂರ್ಣತ್ವವನ್ನು ಸಮರ್ಥಿಸಲಾಗಿದೆ. ಅದನ್ನು ಭಾಷ್ಯದ ಮಂಗಲಶ್ಲೋಕದಲ್ಲಿ 'ಗುಣೈಸ್ಸರ್ವೈರುದೀರ್ಣಂ' ಎಂಬ ವಿಶೇಷಣದಿಂದ ಹೇಳಲಾಗಿದೆ. ಇದರ ವಿವರಣೆಯನ್ನೇ ವ್ಯಾಖ್ಯಾನರೂಪವಾಗಿ 'ಶುದ್ಧಾನಂದೋರುಸಂವಿದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಂ' ಎಂಬುದಾಗಿ ಹೇಳಲಾಗಿದೆ. ಇಲ್ಲಿ ಆನಂದವನ್ನು 'ಶುದ್ಧ' ಎಂದಿದ್ದಾರೆ. ಇದರ ಅರ್ಥವೇನು? ಒಂದು ವೇಳೆ ದುಃಖಾದಿಗಳ ಸಂಪರ್ಕವಿಲ್ಲದ್ದೆಂಬ ಅರ್ಥ ಹೇಳಿದರೆ ಮುಂದಿನ 'ಚಿಂತಾದಿದೋಷಗಳಿಂದ ದೂರನಾಗಿದ್ದಾನೆ' ಎಂಬ ವಿಶೇಷಣದಿಂದಲೇ ಈ ಅರ್ಥ ಲಭಿಸುತ್ತದೆ. ಆದ್ದರಿಂದ ಶುದ್ಧಪದಕ್ಕೆ ಯಾವ ರೀತಿಯಾಗಿ ಅರ್ಥ ಮಾಡಬೇಕು? ಎಂದರೆ ಕೊನೆಯಿಲ್ಲದ್ದು ಬೇರೆ ಇನ್ನೊಂದಕ್ಕಿಂತ ಕಡಿಮೆಯಲ್ಲದ್ದು' ಎಂಬರ್ಥವನ್ನೇ ಮಾಡಬೇಕು. ಶುದ್ಧ ಎಂಬುದನ್ನು ಆನಂದ, ಸಂವಿತ್, ಬಲ, ಮುಂತಾದ ಗುಣಗಳಿಗೆ ಅನ್ವಯ ಮಾಡಬೇಕು. ಹೊರತು ಮುಕುಂದನಿಗಾಗಲೀ ದೇಹಕ್ಕಾಗಲೀ ಅನ್ವಯ ಮಾಡಬಾರದು. ಹಾಗೇನಾದರೂ ಅನ್ವಯ ಮಾಡಿದಲ್ಲಿ ದೋಷಾತಿದೂರ' ಇತ್ಯಾದಿ ವಿಶೇಷಣಗಳು ವ್ಯರ್ಥವಾಗುತ್ತವೆ.

## ಶುದ್ಧತ್ವ ಎಂದರೆ ಏನು?
## (ಒಂದು ವಿಮರ್ಶೆ)

'ಆನಂದಾದೇಃ ಶುದ್ಧತ್ವಂ ನಾಮ ಸಾಂತತ್ವಸಾತಿಶಯತ್ವಾದಿರಾಹಿತ್ಯಮ್' ''ಆನಂದವು ಶುದ್ಧವೆಂದರೆ ಕೊನೆಯಿಲ್ಲದ್ದು ಇತರ ಯಾವುದೇ ಆನಂದಗಳಿಗೆ ಕಡಿಮೆಯಲ್ಲದ್ದು'' ಎಂದು ಚಂದ್ರಿಕೆಯ ಮಾತು.

ಶುದ್ಧ ಶಬ್ದವನ್ನು ಕೇಳಿದಾಗ ನಮಗೆ ಸಾಮಾನ್ಯವಾಗಿ ದೋಷವಿಲ್ಲದ್ದು ಎಂಬರ್ಥವೇ ತೋರುತ್ತದೆ. ಆದರೆ ಈ ಅರ್ಥಕ್ಕಿಂತ ವಿಭಿನ್ನವಾದ ಸ್ವರಸವಾದ ಅಪೂರ್ವವಾದ ಅರ್ಥವನ್ನು ಗ್ರಂಥಕಾರರು ಇಲ್ಲಿ ಹೇಳುತ್ತಿದ್ದಾರೆ. ಆದರೆ ಕೆಲವು ವ್ಯಾಖ್ಯಾನಕಾರರು 'ದುಃಖಾದಿದೋಷವಿಲ್ಲದ್ದು ಎಂಬರ್ಥವನ್ನೂ ಹೇಳಬಹುದು, ಚಂದ್ರಿಕೆಯಲ್ಲಿ ಹೇಳಿದ ಅರ್ಥವನ್ನೂ ಹೇಳಬಹುದು' ಎನ್ನುತ್ತಾರೆ. ಬೇರೆ ಕೆಲವರು ದುಃಖಾದಿದೋಷವಿಲ್ಲದ್ದು ಎಂಬರ್ಥವನ್ನು ಹೇಳಲು ಸಾಧ್ಯವೇ ಇಲ್ಲವೆನ್ನುತ್ತಾರೆ. ಈ ಎರಡು ಬಗೆಯ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ಪ್ರಕೃತ ವಿಮರ್ಶಿಸಲಾಗಿದೆ.

'ಶುದ್ಧಾನಂದೋರುಸಂವಿತ್' ಇತ್ಯಾದಿ ಮಂಗಳಶ್ಲೋಕದಲ್ಲಿ ಭಗವಂತನ ಆನಂದವನ್ನು ಶುದ್ಧವೆನ್ನಲಾಗಿದೆ. ಇಲ್ಲಿ ಶುದ್ಧಶಬ್ದಕ್ಕೆ 'ದುಃಖಾದಿದೋಷವಿಲ್ಲದ್ದು' ಎಂದು ಅರ್ಥೈಸಿದರೆ ಮುಂದಿನ 'ಚಿಂತಾಸಂತಾಪ' ಇತ್ಯಾದಿ ವಿಶೇಷಣದಿಂದಲೇ ಇದು ತಿಳಿಯುವಾಗ, ಪುನಃ ಅದನ್ನೇ ಶುದ್ಧಶಬ್ದದಿಂದ ಹೇಳಿದರೆ, ಹೇಳಿದ್ದನ್ನೇ ಹೇಳಿದಂತಾಗಿ ಪುನರುಕ್ತಿದೋಷ ಬರುತ್ತದೆ. ಹಾಗಾಗಿ ಶುದ್ಧಶಬ್ದವೇ

ವ್ಯರ್ಥವಾಗಬೇಕಾದೀತು. ಈ ದೋಷದ ಪರಿಹಾರಕ್ಕಾಗಿ ಗ್ರಂಥಕಾರರು 'ಆನಂದಾದೇಃ ಶುದ್ಧ ನಾಮ ಸಾಂತತ್ವಸಾತಿಶಯತ್ವಾದಿರಾಹಿತ್ಯಮ್' ಎಂದು ಹೇಳುತ್ತಿದ್ದಾರೆ. 'ಚಿಂತಾಸಂತಾಪ' ಇತ್ಯಾ ವಿಶೇಷಣದಿಂದ ಭಗವಂತನ ಆನಂದವು ದುಃಖಾದಿದೋಷಗಳಿಲ್ಲದ್ದೆಂದು ತಿಳಿಯುತ್ತದೆ. 'ಆನಂದ ಕೊನೆಯಿಲ್ಲ ಇತರ ಯಾವುದೇ ಆನಂದಗಳಿಗೂ ಕಡಿಮೆಯಲ್ಲ' ಎಂಬರ್ಥವನ್ನು ಶುದ್ಧಶಬ್ದ ತಿಳಿಸುತ್ತದೆ. ಹೀಗೆ 'ಚಿಂತಾಸಂತಾಪ' ಇತ್ಯಾದಿ ವಿಶೇಷಣಗಳು ಹೇಳದ ಹೊಸದೊಂದು ದೋಷ ಅಸಂಪರ್ಕವನ್ನು ಶುದ್ಧಶಬ್ದವು ತಿಳಿಸುತ್ತದೆ. ಈಗ ಪುನರುಕ್ತಿಯು ಬರುವುದಿಲ್ಲ.

ಪುನರುಕ್ತಿಯು ನಮ್ಮ ಸಿದ್ಧಾಂತದಲ್ಲಿ ದೋಷವೇ ಅಲ್ಲ. ಅವನ ಆನಂದವೂ ಶುದ್ಧ. ಭಗವಂತ ಶುದ್ಧವೆಂದು ಹೇಳಿದರೆ ಅಪೂರ್ವೋತ್ಪತ್ತಿಯೇ ಆಗುತ್ತದೆ, ಹೊರತು ಪುನರುಕ್ತಿಯಿಂದ ಯಾ ಹಾನಿಯೂ ಆಗುವುದಿಲ್ಲ. ಆದ್ದರಿಂದ ಭಗವಂತನ ಆನಂದವು ದುಃಖಾಸಂಭಿನ್ನ ಎಂದರೆ ಏನು ತಪ್ಪು? ಇನ್ನು ಗ್ರಂಥಕಾರರು 'ಶುದ್ಧತ್ವಂ ನಾಮ ಸಾಂತತ್ವಸಾತಿಶಯತ್ವಾದಿರಾಹಿತ್ಯಮ್' ಎಂದೇಕೆ ಹೇಳಿದರು? ಎಂದರೆ. 'ದುಃಖಾಸಂಭಿನ್ನ' ಎಂಬುದು ಒಂದು ಅರ್ಥ. 'ಸಾಂತತ್ವಸಾತಿಶಯತ್ವಾದಿರಾಹಿತ್ಯಮ್' ಎಂಬುದು ಇನ್ನೊಂದು ಅರ್ಥ. ಹೀಗೆ ವ್ಯಾಖ್ಯಾನಿಸಿದಾಗ ಯಾವ ಬಾಧಕವೂ ಇಲ್ಲವೆನ್ನುತ್ತಾರೆ ಭಾವಬೋಧಕಾರರು. ಈ ಎರಡೂ ವ್ಯಾಖ್ಯಾನಗಳಲ್ಲಿ ಆಪಾತತಃ ವಿರೋಧ ತೋರುತ್ತದೆ. ಸರಿಯಾಗಿ ವಿಮರ್ಶಿಸಿದರೆ ಇಬ್ಬರ ಅಭಿಪ್ರಾಯವು ಒಂದೇ ಆಗಿದೆ. ಹೇಗೆಂದರೆ ದುಃಖಾಸಂಭಿನ್ನತ್ವ ಶಬ್ದಕ್ಕೆ ದುಃಖವೈಯಧಿಕರಣ್ಯ ಎಂದರ್ಥ. ದುಃಖವೈಯಧಿಕರಣ್ಯವು ಎರಡುವಿಧ. ೧) ದುಃಖಾನಧಿಕರಣವೃತ್ತಿತ್ವಂ, ೨) ದುಃಖಾಧಿಕರಣಾವೃತ್ತಿತ್ವಮ್ ಎಂದು.

ರಾಯರು ದುಃಖಾನಧಿಕರಣಾವೃತ್ತಿತ್ವರೂಪವಾದ ದುಃಖಾಸಂಭಿನ್ನತ್ವವನ್ನು ವಿವಕ್ಷಿಸಿದ್ದಾರೆ. ಆದರೆ ಭಾವಬೋಧಕಾರರು ದುಃಖಾಧಿಕರಣ ಅವೃತ್ತಿತ್ವರೂಪದ ದುಃಖಾಸಂಭಿನ್ನತ್ವವನ್ನು ವಿವಕ್ಷಿಸಿದ್ದಾರೆ. ದುಃಖಕ್ಕೆ ಅಧಿಕರಣರಾದವರು ಬ್ರಹ್ಮಾದಿದೇವತೆಗಳು. ಅವರಲ್ಲಿ ಭಗವಂತನ ಆನಂದವು ಅವೃತ್ತಿಯಾಗಿದೆ. ಅಂದರೆ ಭಗವಂತನಲ್ಲಿರುವ ಅಪ್ರಾಕೃತ ಆನಂದವು ಉಳಿದ ಯಾವುದೇ ದೇವತೆಗಳಲ್ಲಿಯೂ ಬರಲಾರದು, ಎಂದಭಿಪ್ರಾಯ. ಆದ್ದರಿಂದ ಇಂತಹ ದುಃಖಾಸಂಭಿನ್ನತ್ವವನ್ನು ಹೇಳಿದರೆ ಪುನರುಕ್ತಿಗೆ ಅವಕಾಶವೇ ಇಲ್ಲ. ಇಂತಹ ದುಃಖಾಸಂಭಿನ್ನತ್ವಾರ್ಥವನ್ನು ಶುದ್ಧಶಬ್ದಕ್ಕೆ ಹೇಳಬಹುದು. 'ಸಾಂತತ್ವಸಾತಿಶಯತ್ವಾದಿರಾಹಿತ್ಯಂ' ಎಂಬ ಮತ್ತೊಂದು ಅರ್ಥವನ್ನೂ ಸಹ ಹೇಳಬಹುದು. ಈ ಯಾವ ದೋಷವೂ ಬರುವುದಿಲ್ಲವೆನ್ನುತ್ತಾರೆ ಭಾವಬೋಧಕಾರರು. ಹೀಗೆ ಬೇರೆ ಬೇರೆ ಅರ್ಥವನ್ನು ವಿವಕ್ಷಿಸಿದಾಗ ಎರಡೂ ವ್ಯಾಖ್ಯಾನಗಳಲ್ಲಿ ಪರಸ್ಪರವಿರೋಧವು ಬರುವುದಿಲ್ಲ

ಕೆಲವು ಅರ್ವಾಚೀನವಿದ್ವಾಂಸರು ಪ್ರಕಾಶದಲ್ಲಿರುವ "ತತ್ರ ಯದಿ ಶುದ್ಧತ್ವಂ ದುಃಖಾಸಂಭಿನ್ನತ್ವಮ್ ತದಾ ಚಿಂತಾದಿದೋಷದೂರಮಿತ್ಯನೇನ ಗತಾರ್ಥಮತ ಆಹ ಆನಂದಾದೇರಿತಿ" ಎಂಬ ವಾಕ್ಯವನ್ನೇ ಪ್ರಕ್ಷಿಪ್ತ ಎನ್ನುತ್ತಾರೆ. ಏಕೆಂದರೆ ನಮ್ಮ ಸಿದ್ಧಾಂತದಲ್ಲಿ ಪುನರುಕ್ತಿಯನ್ನು ದೋಷವಾಗಿ ಪರಿಗಣಿಸಿಲ್ಲ. ಭಗವಂತನನ್ನು ಎಷ್ಟು ಬಾರಿ ಪ್ರಶಂಸಿಸಿದರೂ ಅದರಿಂದ ಪುಣ್ಯವೇ ಅಧಿಕವಾಗುತ್ತದೆ

ಮತ್ತು ಪುನರುಕ್ತಿಯನ್ನು ದೋಷವೆಂದು ಅಂಗೀಕರಿಸಿದರೂ ಅದರ ಪರಿಹಾರವು ಅಸಾಧ್ಯ. ಏಕೆಂದರೆ ಐಂತತ್ವಸಾತಿಶಯತ್ವವೂ ಸಹ ಒಂದು ದೋಷವೇ ಆಗಿದೆ. ಈ ದೋಷವು 'ಚಿಂತಾಸಂತಾಪ' ಇತ್ಯಾದಿ ವಿಶೇಷಣದಿಂದಲೇ ಭಗವಂತನಲ್ಲಿ ಇಲ್ಲವೆಂದು ತಿಳಿಯುತ್ತದೆ. ಏಕೆಂದರೆ ಯಾವ ದೋಷವೂ ಭಗವಂತನಲ್ಲಿಲ್ಲವೆಂದು ಹೇಳಿದಾಗ ಸಾಂತತ್ವಾದಿದೋಷಗಳು ಇಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಪುನಃ ಶುದ್ಧ ಶಬ್ದದಿಂದ ಅದನ್ನೇ ಹೇಳುವ ಅವಶ್ಯಕತೆ ಇಲ್ಲ. ಆದ್ದರಿಂದ ಈ ವಾಕ್ಯವನ್ನು ಪ್ರಕ್ಷಿಪ್ತ-ವೆನ್ನುವರು.

ಆದರೆ ಇವರ ಈ ವಿಚಾರವನ್ನು ವಿಮರ್ಶಿಸಬೇಕು. ಏಕೆಂದರೆ ತತ್ವಪ್ರಕಾಶಿಕೆಯ ಭಾವದೀಪದಲ್ಲಿಯೂ ಸಹ ಇದೇ ಮಾತು ಕಾಣಿಸುತ್ತಿರುವಾಗ ಎರಡನ್ನೂ ಪ್ರಕ್ಷಿಪ್ತವೆಂದು ಹೇಳುವುದು ಸಮಂಜಸವಲ್ಲ. ಹೊರತಾಗಿ ಹಿಂದೆ ಹೇಳಿದ ಸಮಾಧಾನವನ್ನೇ ಅನುಸಂಧಾನ ಮಾಡಿಕೊಳ್ಳಬೇಕು. 'ಚಿಂತಾಸಂತಾಪ' ಇತ್ಯಾದಿ ಮಾತುಗಳಿಂದ ದುಃಖಾದಿದೋಷಗಳಿಲ್ಲವೆಂದು ತಿಳಿಯುತ್ತದೆ. ಆದರೆ 'ಐಂತತ್ವಸಾತಿಶಯತ್ವ' ಎಂಬ ದೋಷವನ್ನು ಇಲ್ಲವೆಂದು ಸ್ಪಷ್ಟವಾಗಿ ಹೇಳಿಲ್ಲ. ಅದನ್ನು ಶುದ್ಧಶಬ್ದವು ಸ್ಪಷ್ಟವಾಗಿ ಹೇಳುತ್ತಿದೆ. ಅಥವಾ 'ಭಗವಂತನ ಆನಂದವು ದೋಷವಿಲ್ಲದ್ದು' ಎಂದು ಶುದ್ಧ ಶಬ್ದವು ಹೇಳುತ್ತದೆ. ಭಗವಂತನಲ್ಲಿ ಯಾವುದೇ ದೋಷಗಳಿಲ್ಲವೆಂದು 'ಚಿಂತಾಸಂತಾಪ' ಇತ್ಯಾದಿ ವಿಶೇಷಣಗಳು ಹೇಳುತ್ತವೆ. (ವಿಶೇಷವನ್ನು ಅಂಗೀಕರಿಸಿರುವುದರಿಂದ) ಅಥವಾ ಸಂಸಾರಿಗಳಲ್ಲಿ ಯಾವ ಆನಂದವಿದೆಯೋ ಅದು ದುಃಖಾದಿದೋಷಗಳಿಂದ ಕೂಡಿರುತ್ತದೆ. ಆದರೆ ಭಗವಂತನಲ್ಲಿರುವ ಆನಂದವು ಅಂತಹದ್ದಲ್ಲವೆಂದು ಶುದ್ಧಶಬ್ದವು ಹೇಳುತ್ತದೆ. ಸಂಸಾರಿಗಳಿಗೆ ರೋಗರುಜಿನಾದಿ ದುಃಖಗಳಿವೆ. ಇಂತಹ ದುಃಖಗಳು ಭಗವಂತನಲ್ಲಿಲ್ಲವೆಂದು 'ಚಿಂತಾಸಂತಾಪ' ಇತ್ಯಾದಿ ವಿಶೇಷಣಗಳು ಹೇಳುತ್ತವೆ. ಹೀಗೆ ದುಃಖಮಿಶ್ರಿತವಾದ ಆನಂದವು ದೇವರಿಗಿಲ್ಲ, ದುಃಖವೂ ಭಗವಂತನಿಗಿಲ್ಲವೆಂಬ ವ್ಯತ್ಯಾಸವನ್ನು ಎರಡು ಪ್ರತ್ಯೇಕ ವಿಶೇಷಣಗಳಿಂದ ನಾವು ತಿಳಿಯಬಹುದು. ಹೀಗೆ ಹೇಳಿದಾಗ ಯಾವುದೇ ರೀತಿಯಾದ ವೈಯರ್ಥ್ಯದೋಷವು ಬರುವುದಿಲ್ಲ. ರಾಯರ ಮಾತೂ ಸಹ ಈಗ ಪ್ರಕ್ಷಿಪ್ತವಾಗುವುದಿಲ್ಲ. ಭಾವಬೋಧಕ್ಕೂ, ಪ್ರಕಾಶಕ್ಕೂ ವಿರೋಧವೂ ಸಹ ಬರುವುದಿಲ್ಲ. ಇನ್ನೂ ಹೆಚ್ಚಿನ ವಿಚಾರವನ್ನು ಜ್ಞಾನಿಗಳು ವಿಚಾರ ಮಾಡಬೇಕು.

'ಶುದ್ಧಾನಂದೋರುಸಂವಿದ್‌ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಮ್' ಎಂಬಲ್ಲಿ ಸಮಾಸ - ಶುದ್ಧತ್ವವನ್ನು ಬ್ರಹ್ಮನಲ್ಲಿ ವಿಶೇಷಣ ಮಾಡಿದರೆ 'ಆನಂದಾದಿಃ ದೇಹಃ ಯಸ್ಯಸಃ ಆನಂದಾದಿದೇಹಃ ಶುದ್ಧಶ್ಚಾಸೌ ಆನಂದಾದಿದೇಹಶ್ಚ ಶುದ್ಧಾನಂದಾದಿದೇಹಃ' ಎಂದು ವಿಗ್ರಹ. ಆದರೆ 'ದೋಷಾತಿದೂರಂ' ಇತ್ಯಾದಿ ವಿಶೇಷಣದಿಂದಲೇ ಬ್ರಹ್ಮನು ಶುದ್ಧನೆಂದು ತಿಳಿಯುವಾಗ ಪುನಃ ಇಲ್ಲಿ ಅದನ್ನೇ ಹೇಳಿದರೆ ವೈಯರ್ಥ್ಯದೋಷ ಬರುತ್ತದೆ.

ಇನ್ನು ಶುದ್ಧತ್ವವನ್ನು ದೇಹದಲ್ಲಿ ವಿಶೇಷಣ ಮಾಡಿದರೆ; 'ಆನಂದಾದಿಃ ದೇಹಃ ಯಸ್ಯ ಸಃ ಆನಂದಾದಿದೇಹಃ; ಶುದ್ಧಃ ಆನಂದಾದಿದೇಹಃ ಯಸ್ಯ ಸಃ' ಎಂದು ವಿಗ್ರಹ. ಆದರೆ ದೇಹವು

ಆನಂದರೂಪವೆಂದು ಹೇಳುವುದರಿಂದಲೇ ಶುದ್ಧವೆಂದು ತಿಳಿಯುತ್ತದೆ. ಪುನಃ ಹೇಳಿದ್ದು ಹೇಳಿದಂತಾಗುತ್ತದೆಂದು ಪುನರುಕ್ತಿ ತಪ್ಪಿದ್ದಲ್ಲ. ಆದಕ್ಕೋಸ್ಕರ ಆನಂದವೇ ಮೊದಲಾದ ಗುಣಗಳಲ್ಲಿಯೂ ಶುದ್ಧತ್ವವನ್ನು ವಿಶೇಷಣವನ್ನಾಗಿ ಹೇಳಬೇಕು. 'ಶುದ್ಧಃ ಆನಂದಾದಿಃ ಯಸ್ಯ ಸಃ' ಎಂದು; ಯಾವ ರೀತಿಯಾಗಿ ಜ್ಞಾನಾದಿಗಳಲ್ಲಿ ಉರುತ್ವಾದಿಗಳು ವಿಶೇಷಣವಾಗಿವೆಯೋ ಅದರಂತೆ ಶುದ್ಧತ್ವವು ದುಃಖಾಸಂಭಿನ್ನತ್ವರೂಪವಲ್ಲ. 'ದೋಷಾತಿದೂರ' ಎಂಬ ವಿಶೇಷಣದಿಂದಲೇ ವಿಷಯವು ತಿಳಿದಿದೆ. ಆದ್ದರಿಂದ 'ಸಾಂತತ್ವಸಾತಿಶಯತ್ವರಾಹಿತ್ಯರೂಪ'ವಾದದ್ದೆಂದು ಹೇಳಬೇಕು. ಭಗವಂತನ ಜ್ಞಾನವು ಸಕಲವಸ್ತು ವಿಷಯಕವಾಗಿದೆಯೆಂದು ಉರುತ್ವಾದಿ ವಿಶೇಷಣಗಳಿಂದ ತಿಳಿಯುತ್ತದೆ. ಆದರೆ 'ಕೊನೆಯಿಲ್ಲದ್ದು ಇತರ ಯಾವುದೇ ಆನಂದಗಳಿಗೆ ಕಡಿಮೆ ಇಲ್ಲದ್ದು' ಎಂಬುದನ್ನೂ ಶುದ್ಧತ್ವ ವಿಶೇಷಣದಿಂದಲೇ ತಿಳಿಯಬೇಕು. ಇಂತಹ ಶುದ್ಧತ್ವವು ಪ್ರತಿಯೊಂದು ಗುಣಗಳಲ್ಲಿಯೂ ವಿಶೇಷಣವಾಗುತ್ತದೆ. ಹೀಗೆ 'ಶುದ್ಧಾನಂದೋರು' ಎಂಬಲ್ಲಿ ಹೇಳಿರುವ ಶುದ್ಧಶಬ್ದವು ಅನೇಕವಿಧದಲ್ಲಿ ಸಾರ್ಥಕವಾಗುತ್ತದೆ.

ಶುದ್ಧತ್ವವನ್ನು ಬ್ರಹ್ಮನಿಗೆ ವಿಶೇಷಣ ಮಾಡಿದರೆ ಹೀಗೆ ವಿಗ್ರಹ - 'ಆನಂದಾದಿಃ ದೇಹಃ ಯಸ್ಯ ಸಃ ಆನಂದಾದಿದೇಹಃ ಶುದ್ಧಶ್ಚಾಸೌ ಆನಂದಾದಿದೇಹಶ್ಚ ಶುದ್ಧಾನಂದಾದಿದೇಹಃ' ಎಂದು. ಆದರೆ 'ದೋಷಾತಿದೂರಂ' ಇತ್ಯಾದಿ ವಿಶೇಷಣದಿಂದಲೇ ಬ್ರಹ್ಮನು ಶುದ್ಧನೆಂದು ತಿಳಿಯುತ್ತಾನೆ. ಪುನಃ ಇಲ್ಲಿ ಅದನ್ನೇ ಹೇಳಿದರೆ ವೈಯರ್ಥ್ಯದೋಷ ಬರುತ್ತದೆ.

ದ್ವಿತೀಯಾಧ್ಯಾಯದಲ್ಲಿ ಭಗವಂತನಿಗೆ ಸಕಲದೋಷವಿವರ್ಜಿತತ್ವವನ್ನು ಸಮರ್ಥಿಸಿದ್ದಾರೆ. ಅದನ್ನು ಆಚಾರ್ಯರು 'ದೋಷವರ್ಜಿತಮ್' ಎಂದು ಸಂಗ್ರಹಿಸಿದ್ದಾರೆ. ಇದನ್ನೇ ಟೀಕೆಯಲ್ಲಿ 'ಚಿಂತಾಸಂತಾಪಲೇಪೋದ್ಭವಮೃತಿಮುಖರಾಶೇಷದೋಷಾತಿದೂರಮ್' ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. 'ಚಿಂತಾಸಂತಾಪಲೇಪ' ಎಂಬಲ್ಲಿ ಲೇಪ ಪದವು ಬೇಡ. ಏಕೆಂದರೆ ಚಿಂತಾಸಂತಾಪ ಮೊದಲಾದ ದೋಷಗಳಿಂದ ದೂರನಾಗಿದ್ದಾನೆಂದು ಹೇಳುವುದರಿಂದಲೇ ಅವುಗಳ ಸಂಬಂಧವಿಲ್ಲವೆಂದು ತಿಳಿಯುತ್ತದೆ. ಪುನಃ ಲೇಪ ಪದವು ಅನಾವಶ್ಯಕ. ಈ ಪ್ರಶ್ನೆಗೆ ವ್ಯಾಸತೀರ್ಥರು 'ಲೇಪಃ = ಪುಣ್ಯಪಾಪಸಂಬಂಧಃ' ಎಂದು ಉತ್ತರಿಸುತ್ತಿದ್ದಾರೆ. ಒಂದು ವೇಳೆ ಇಲ್ಲಿ ಲೇಪ ಶಬ್ದವು ಚಿಂತಾಸಂತಾಪಗಳ ಸಂಬಂಧವನ್ನು ಹೇಳುತ್ತಿದ್ದರೆ ನಿಮ್ಮ ಆಕ್ಷೇಪಕ್ಕೆ ಅವಕಾಶವಿರುತ್ತಿತ್ತು. ಆದರೆ ಪುಣ್ಯ ಪಾಪಗಳ ಸಂಬಂಧವೆಂಬ ಬೇರೆ ದೋಷವನ್ನೇ ಹೇಳುತ್ತದೆ. ಆದ್ದರಿಂದ ಚಿಂತೆ, ಸಂತಾಪ, ಪುಣ್ಯಪಾಪಗಳ ಸಂಬಂಧ, ಇತ್ಯಾದಿ ದೋಷಗಳಿಂದ ದೂರನಾಗಿದ್ದಾನೆಂಬ ಅರ್ಥವನ್ನು ತಿಳಿಯಬೇಕು.

ತೃತೀಯಾಧ್ಯಾಯದಲ್ಲಿ ಸಾಧನೆಯ ವಿಚಾರವನ್ನು ಹೇಳಿದ್ದಾರೆ. ಅದನ್ನು ಭಾಷ್ಯದಲ್ಲಿ 'ಜ್ಞೇಯಂ' ಎಂಬ ವಿಶೇಷಣದಿಂದ ಸಂಗ್ರಹಿಸಿದ್ದಾರೆ. ಅದರ ವ್ಯಾಖ್ಯಾನವನ್ನೇ 'ಸದ್‌ಭಿರ್ವೈರಾಗ್ಯಭಕ್ತಿ ಶ್ರುತಿಮತಿನಿಯತಧ್ಯಾನಜಜ್ಞಾನಯೋಗಾತ್' ಎಂಬುದರಿಂದ ಮಾಡಲಾಗಿದೆ. ಈ ವಿಶೇಷಣವನ್ನು ನೋಡಿದಾಗ ಆಪಾತತಃ ತೋರುವ ಅರ್ಥ ಹೀಗಿದೆ - ಶ್ರುತಿ ಎಂದರೆ ಶ್ರವಣ, ಅದರಿಂದ ಹುಟ್ಟಿದ ಮತಿ = ಜ್ಞಾನ.

ಅಂತಹ ಜ್ಞಾನವು ಯಾವ ವಿಷಯದಲ್ಲಿ ನಿಯತವಾಗಿದೆಯೋ, ಅಂತಹ ನಿಯತವಿಷಯಕವಾದದ್ದು ಧ್ಯಾನ. ಧ್ಯಾನ ಎಂದರೆ ಆಲೋಚನಾತ್ಮಕವಾದ ಮನನ. ಆ ಮನನದಿಂದ ಹುಟ್ಟಿರುವಂತಹದ್ದು ಪರೋಕ್ಷಜ್ಞಾನ. ಇಂತಹ ಪರೋಕ್ಷಜ್ಞಾನದಿಂದ ಭಗವಂತನು ಗಮ್ಯನಾಗಿದ್ದಾನೆ ಎಂದು. ಅಥವಾ 'ಶೃತಿ' ಎಂದರೆ ಪ್ರಸಿದ್ಧವಾದ ವೇದ, 'ಮತಿ' ಎಂದರೆ 'ಬುದ್ಧಿ' ಎಂದು ಅಪಾರ್ಥವಾಗುವ ಸಂದರ್ಭವಿದೆ. ಅದಕ್ಕೋಸ್ಕರ ಗ್ರಂಥಕಾರರು 'ಶೃತಿಮತೀ = ಶ್ರವಣಮನನೇ' ಎಂದು ಹೇಳಿದರು. ಈ ಅರ್ಥವನ್ನು ಇಟ್ಟುಕೊಂಡಾಗ ಅಪಾರ್ಥವಾಗುವ ಸಂದರ್ಭವಿಲ್ಲ. ಶೃತಿ = ಶ್ರವಣ, ಮತಿ = ಮನನ, ನಿಯತಧ್ಯಾನ : ಸ್ವಯೋಗ್ಯೋಪಾಸನೆ, ಜ್ಞಾನಂ = ಸಾಕ್ಷಾತ್‌ಕಾರ, ಹೀಗೆ ಟೀಕೆಯ ವಿಶೇಷಣಪದಗಳ ಅರ್ಥ.

ಪ್ರಶ್ನೆ :- 'ನಿಯತಧ್ಯಾನ' ಎಂಬಲ್ಲಿ ನಿಯತ ಪದವನ್ನು ಶ್ರವಣ ಮನನಗಳಲ್ಲಿ ವಿಶೇಷಣವನ್ನಾಗಿ ಹೇಳದೆ ಧ್ಯಾನದಲ್ಲಿ ಮಾತ್ರ ವಿಶೇಷಣವನ್ನಾಗಿ ಹೇಳಲು ಏನು ಕಾರಣ? ಮತ್ತು ಧ್ಯಾನವಷ್ಟೇ ಅವಶ್ಯ ಅನುಷ್ಠೇಯವಾಗಿದ್ದಲ್ಲಿ ನಿಯತಪದವನ್ನು ಧ್ಯಾನದಲ್ಲಿ ಮಾತ್ರ ವಿಶೇಷಣವನ್ನಾಗಿ ಹೇಳಬಹುದಿತ್ತು. ಆದರೆ ಶ್ರವಣ ಮನನಗಳೂ ಸಹ ಅವಶ್ಯ ಅನುಷ್ಠೇಯಗಳಾದ್ದರಿಂದ ನಿಯತಪದವನ್ನು ಧ್ಯಾನದಲ್ಲಿ ಮಾತ್ರ ವಿಶೇಷಣವನ್ನಾಗಿ ಹೇಳಲು ಕಾರಣವಿಲ್ಲ.

ಉತ್ತರ : - ನಿಯತಪದಕ್ಕೆ ಅವಶ್ಯ ಅನುಷ್ಠೇಯತ್ವ ಎಂಬರ್ಥವನ್ನು ನಾವು ಹೇಳುತ್ತಲೇ ಇಲ್ಲ. 'ಸ್ವಯೋಗ್ಯತ್ವಂ' ಎಂಬರ್ಥವನ್ನು ಹೇಳುತ್ತೇವೆ. ಇಂತಹ ಸ್ವಯೋಗ್ಯತ್ವವು ಧ್ಯಾನದಲ್ಲಷ್ಟೇ ಇದೆ. ತಮ್ಮ ತಮ್ಮ ಯೋಗ್ಯತೆಯನ್ನು ಅನುಸರಿಸಿ ಧ್ಯಾನದಲ್ಲಿ ತೊಡಗಬೇಕು. ಆದರೆ ಶ್ರವಣ ಮನನಗಳಲ್ಲಿ ಯೋಗ್ಯತೆಯ ಪ್ರಸಕ್ತಿಯೇ ಇಲ್ಲ. ಪ್ರತಿಯೊಬ್ಬರೂ ಯಥಾಶಕ್ತಿ ಶ್ರವಣಮನನಗಳನ್ನು ಮಾಡಬೇಕು. ಋಕ್‌ಶಾಖಿಗಳು ಋಗ್ವೇದವನ್ನು ಅಧ್ಯಯನ ಮಾಡಿದ ಮೇಲೆ ಬೇರೆ ವೇದಗಳನ್ನೂ ಓದಬಹುದು. ಓದಬಾರದೆಂಬ ನಿಯಮವಿಲ್ಲ. ಅದರಂತೆ ಯಜುರ್ವೇದಿಗಳೂ ಸಹ ಬೇರೆ ವೇದವನ್ನು ಓದಬಹುದು. ಆದ್ದರಿಂದ ಶ್ರವಣಕ್ಕೆ ತಮ್ಮ ಶಾಖೆಗಿಂತ ಉಳಿದ ನಿಯತತ್ವವು ವಿಧಿಸಿದ್ಧವಾಗಿಲ್ಲ. ಆದರೆ ಧ್ಯಾನಮಾತ್ರ ಒಬ್ಬೊಬ್ಬರಿಗೆ ಒಂದೊಂದು ಪ್ರಕಾರದಲ್ಲಿ ಇರುತ್ತದೆ. ಅವರವರ ಯೋಗ್ಯತೆಗೆ ಅನುಸಾರಿಯಾದ ಧ್ಯಾನವನ್ನಷ್ಟೇ ಅವರವರು ಮಾಡಬೇಕು. ಈ ಸೂಕ್ಷ್ಮವಿಷಯವನ್ನು ತಿಳಿಸುವುದಕ್ಕಾಗಿ ನಿಯತಪದವನ್ನು ಧ್ಯಾನದಲ್ಲೇ ವಿಶೇಷಣವನ್ನಾಗಿ ಹೇಳಿದ್ದಾರೆ.

ಜ್ಞಾನವೆಂದರೆ ಅಪರೋಕ್ಷಜ್ಞಾನವನ್ನೇ ಇಟ್ಟುಕೊಳ್ಳಬೇಕು. ಪರೋಕ್ಷಜ್ಞಾನವು ಧ್ಯಾನಕ್ಕೆ ಜನಕವಾಗಿ-ರಯೇ ಹೊರತು ಧ್ಯಾನದಿಂದ ಹುಟ್ಟುವಂತಹದ್ದಲ್ಲ. ಆದ್ದರಿಂದ ಪರೋಕ್ಷಜ್ಞಾನವನ್ನು ಧ್ಯಾನಶಬ್ದದಿಂದ ವಿವಕ್ಷಿಸಲು ಬರುವುದಿಲ್ಲ. 'ಯೋಗಾತ್' ಎಂಬಲ್ಲಿರುವ ಯೋಗಶಬ್ದದಿಂದ 'ಯೋಗಃ ಸನ್ನಹನೋ-ಪಾಯೇ' ಎಂಬ ಕೋಶದಂತೆ ಸನ್ನಹನ ಉಪಾಯ ಎಂಬರ್ಥಗಳಲ್ಲಿ ಯೋಗ ಶಬ್ದವಿರುವುದರಿಂದ. ಪ್ರಕೃತ ಉಪಾಯ ಎಂಬ ಅರ್ಥವನ್ನೇ ಇಲ್ಲಿ ಇಟ್ಟುಕೊಳ್ಳಬೇಕು. 'ಸಂಬಂಧ' ಎಂಬರ್ಥವನ್ನು ಹೇಳಬಾರದು ಈ ಅರ್ಥವನ್ನು ಹೇಳುವುದರಿಂದ 'ಬ್ರಹ್ಮನು ಗಮ್ಯನಾಗಲು ಜ್ಞಾನದ ಅವಶ್ಯಕತೆಯು ಇರುವುದಿಲ್ಲ. ಕರ್ಮಾಚರಣೆಯಿಂದಲೂ ಗಮ್ಯನಾಗುತ್ತಾನೆ'. ಎಂಬ ಶಂಕೆಗೆ ಅವಕಾಶವಿಲ್ಲ.

'ಜ್ಞಾನಯೋಗಾತ್' ಎಂದು ಹೇಳಿದ್ದರಿಂದ ಅವನನ್ನು ಹೊಂದಲು ಜ್ಞಾನವೇ ಉಪಾಯ ಹೊ... ಮತ್ತೊಂದು ಉಪಾಯವಿಲ್ಲವೆಂದು ಜ್ಞಾನಕ್ಕಿಂತ ಭಿನ್ನವಾದ ಉಪಾಯವನ್ನು ನಿರಾಕರಿಸಿದಂತಾಗುತ್ತದೆ

'ಅಮಲಂ' ಎಂಬ ಪದಕ್ಕೆ 'ದೋಷವಿಲ್ಲದ್ದು' ಎಂಬರ್ಥವು ಮೇಲ್ನೋಟಕ್ಕೆ ತೋರುತ್ತದೆ ಹಾಗಾದಲ್ಲಿ 'ದೋಷಾತಿದೂರಂ' ಎಂಬ ಹಿಂದಿನ ವಿಶೇಷಣದಿಂದ ಪುನರುಕ್ತಿಯು ಬರುತ್ತದೆ ಅದಕ್ಕೋಸ್ಕರ ಗ್ರಂಥಕಾರರು 'ಅಮಲಂ ಮುಮುಕ್ಷೂಪಾಸ್ಯಂ' ಎಂದು ಮುಮುಕ್ಷುಗಳಿಗೆ ಉಪಾಸ್ಯನಾದ ಬ್ರಹ್ಮನು ಮಾಯಾ ಎಂಬ ಮಲರಹಿತನಾಗಿದ್ದಾನೆಂದು ಅರ್ಥ. ಮಾಯಾವಾದಿಗಳು ವಿಶಿಷ್ಟಬ್ರಹ್ಮನು ಮಂದರಿಂದ ಉಪಾಸ್ಯನೆಂದು ಹೇಳುತ್ತಾರೆ. 'ಅಮಲಂ' ಎಂಬ ವಿಶೇಷಣದಿಂದ ಮಾಯಾವಿಶಿಷ್ಟ ಬ್ರಹ್ಮನ ಉಪಾಸನೆಯನ್ನೂ ಮಾಡಬೇಕಾಗಿಲ್ಲವೆಂದು ತಿಳಿಯುತ್ತದೆ. ಅಥವಾ '... ವಿದ್ಯತೇ ಮಲಂ ಯಸ್ಮಾತ್ ಸಃಅಮಲಃ, ತಂ ಅಮಲಂ' ಎಂದು ಹೇಳಬಹುದು. ಯಾರಿಗೆ ಸಂಸಾರವೆಂಬ ದೋಷವೇ ಇಲ್ಲವೋ, ಅಂತಹವನನ್ನು ಮುಮುಕ್ಷುಗಳು ಉಪಾಸನ ಮಾಡಬೇಕೆಂದು ತಾತ್ಪರ್ಯ. ಬಡವನು ಶ್ರೀಮಂತನನ್ನು ಆರಾಧನೆ ಮಾಡುವಂತೆ ಸಂಸಾರದ ಬಿಡುಗಡೆಯನ್ನು ಅಪೇಕ್ಷಿಸುವ ಮುಮುಕ್ಷುಗಳು ಸಂಸಾರ ಇಲ್ಲದವನನ್ನೇ ಉಪಾಸನೆ ಮಾಡಬೇಕು.

ಶ್ರೀವಿದ್ಯಾಧೀಶತೀರ್ಥಶ್ರೀಪಾದರು ಮತ್ತೊಂದು ಭಂಗಿಯಲ್ಲಿ ಈ ಶ್ಲೋಕವನ್ನು ವ್ಯಾಖ್ಯಾನಿಸುತ್ತಾರೆ – ಗ್ರಂಥಾರಂಭದಲ್ಲಿ ವಿಶಿಷ್ಟನಾದವನನ್ನು ಇಷ್ಟನಾದವನನ್ನು ಅಧಿಕೃತನಾದವನನ್ನು ಅವಶ್ಯ ನಮಿಸಬೇಕು ಇವು ಮೂರು ನಮ್ಯತ್ವಕ್ಕೆ ಪ್ರಯೋಜಕವಾದ ಧರ್ಮಗಳು. ಈ ವಿಶಿಷ್ಟತ್ವಾದಿಗಳನ್ನು ಸಮರ್ಥಿಸಲು ೧) ಬ್ರಹ್ಮ ೨) ಅಮಲಂ ೩) ಮುಕುಂದಾಭಿಧಂ ೪) ವೇದಾಂತಾಭಿಧಂ ಎಂಬ ನಾಲ್ಕು ವಿಶೇಷಣಗಳನ್ನು ಹೇಳಲಾಗಿದೆ. ಈ ನಾಲ್ಕು ವಿಶೇಷಣಗಳ ವಿವರಣರೂಪವಾಗಿ ಕಾರಿಕೆಯಲ್ಲಿ ಹೇಳಿದ ವಿಶೇಷಣಗಳು ಇರುತ್ತವೆ. ಯಾವರೀತಿಯಾಗಿ ತತ್ವನಿರ್ಣಯದ ಮಂಗಳಶ್ಲೋಕದಲ್ಲಿ 'ವಿಶ್ವಸ್ಯೋದಯಮಾತನೋ... ತದನು ತ್ರಾಣಂ ವಿಧತ್ತೇ ಪುನಃ' ಎಂಬಲ್ಲಿ 'ತಂ ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಂ' ಎಂದು ಕೊನೆಯಲ್ಲಿರುವ 'ದೇವಂ, ಪತಿಂ ಪಿತರಂ ಗುರುತಮಂ' ಇತ್ಯಾದಿ ವಿಶೇಷಣಗಳನ್ನು ವಿವರಿಸುವ ರೂಪದಲ್ಲಿಯೇ ಉಳಿದ ವಿಶೇಷಣಗಳು ಇರುತ್ತವೋ ಅದರಂತೆ ಪ್ರಕೃತದಲ್ಲೂ ಸಹ ತಿಳಿಯಬೇಕು. ಬ್ರಹ್ಮ ಎಂದರೆ ಸಕಲಗುಣಪರಿಪೂರ್ಣ ಎಂದರ್ಥ. ಇದರಿಂದ ನಾರಾಯಣನಲ್ಲಿ ನಮ್ಯತ್ವಪ್ರಯೋಜಕವಾದ ವಿಶಿಷ್ಟತ್ವವನ್ನು ಹೇಳಿದಂತಾಯಿತು. ಇದನ್ನು 'ಶುದ್ಧಾನಂದೋರುಸಂವಿದ್‌ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಂ' ಎಂಬ ವಿಶೇಷಣವು ವಿವರಿಸುತ್ತಿದೆ. ಯಾವ ವ್ಯಕ್ತಿಯಲ್ಲಿ ಗುಣಗಳು ಬರುತ್ತವೆಯೋ ಅಂತಹವನಲ್ಲಿ ದೋಷಗಳೂ ಬರುತ್ತವೆ. ಈ ಶಂಕೆಯನ್ನು 'ಅಮಲಂ' ಎಂಬ ವಿಶೇಷಣವು ಪರಿಹರಿಸುತ್ತಿದೆ ಹೀಗೆ ವಂದ್ಯತ್ವಪ್ರಯೋಜಕವಾದ ಬ್ರಹ್ಮಪದೋಕ್ತವಾದ ವಿಶಿಷ್ಟತ್ವವನ್ನು ವಿವರಿಸುವುದಕ್ಕಾಗಿ 'ಅಮಲಂ' ಎಂಬ ವಿಶೇಷಣವು ಹೊರಟಿದೆ. 'ಅಮಲಂ' ಪದದಿಂದ ಹೇಳಿದ ದೋಷವಿದೂರತ್ವವನ್ನೇ 'ಚಿಂತಾಸಂತಾಪಲೇಪೋದ್ಭವಮೃತಿಮುಖರಾऽಶೇಷದೋಷಾತಿದೂರಮ್' ಎಂಬ ವಿಶೇಷಣವು ವಿವರಿಸುತ್ತದೆ.

ಪರಿಪೂರ್ಣಚಂದ್ರಿಕಾ

ಮುಖರ ಎಂಬಲ್ಲಿನ 'ರ'ಪ್ರತ್ಯಯಕ್ಕೆ ಎರಡು ಅರ್ಥಗಳನ್ನು ಹೇಳಬಹುದು - ಸ್ವಾರ್ಥದಲ್ಲಿ ಮತ್ತು ಮತ್ವರ್ಥದಲ್ಲಿ 'ರ' ಪ್ರತ್ಯಯವನ್ನು ಮಾಡಿದಾಗ 'ಮೊದಲಾದವು' ಎಂದರ್ಥ. ಮತ್ವರ್ಥದಲ್ಲಿ 'ರ' ಪ್ರತ್ಯಯವನ್ನು ಮಾಡಿದಾಗ 'ವಾಚಾಳಿ' ಎಂದರ್ಥ. 'ವಾಚಾಳಿ' ಎಂಬರ್ಥವು ಪ್ರಕೃತ ಅಸಂಗತವಾದ್ದರಿಂದ ಸ್ವಾರ್ಥದಲ್ಲೇ 'ರ' ಪ್ರತ್ಯಯನ್ನು ಇಟ್ಟುಕೊಂಡು ಮೊದಲಾದವು ಎಂಬರ್ಥವನ್ನು ಹೇಳಬೇಕು.

ನಮ್ಮ ಶ್ರವ್ರಯೋಜಕವಾದ ಮತ್ತೊಂದು ಧರ್ಮ ಅಧಿಕೃತತ್ವ. ಈ ಅಧಿಕೃತತ್ವವನ್ನು 'ವೇದಾಂತ-ವೇದ್ಯಂ' ಎಂಬ ವಿಶೇಷಣವು ಸಮರ್ಥಿಸುತ್ತಿದೆ. ನಾರಾಯಣನು ಸಮಗ್ರ ವೇದಾಂತಗಳಿಂದ ಪ್ರತಿಪಾದ್ಯನಾಗಿದ್ದಾನಾದ್ದರಿಂದ ಅಧಿಕೃತನಾಗಿದ್ದಾನೆ. ಇದನ್ನೇ 'ಸದ್ವಿರ್ವೈರಾಗ್ಯಭಕ್ತಿಶ್ರುತಿಮತಿನಿಯತ-ಧ್ಯಾನಜಜ್ಞಾನಯೋಗಾತ್' ಎಂಬ ವಿಶೇಷಣವು ವಿವರಿಸುತ್ತಿದೆ.

ಪ್ರಶ್ನೆ :- ವೈರಾಗ್ಯಭಕ್ತಿಪದವು ದ್ವಂದ್ವಸಮಾಸದಲ್ಲಿದೆ. ದ್ವಂದ್ವಸಮಾಸದಲ್ಲಿ 'ವೈರಾಗ್ಯಭಕ್ತಿ' ಎಂದು ಹೇಳುವುದು ತಪ್ಪು. 'ಭಕ್ತಿ ವೈರಾಗ್ಯ' ಎಂದೇ ಹೇಳಬೇಕು. ಏಕೆಂದರೆ ದ್ವಿತೀಯಾಧ್ಯಾಯದ ದ್ವಿತೀಯಪಾದದ ೨೯ನೆಯ ಸೂತ್ರಗಳಿಂದ ಪ್ರಾರಂಭಿಸಿ ಕೆಲವು ಸೂತ್ರಗಳಲ್ಲಿ ದ್ವಂದ್ವಸಮಾಸದಲ್ಲಿ ಇರಬೇಕಾದ ಕೆಲವು ನಿಯಮಗಳನ್ನು ವಿಧಿಸಲಾಗಿದೆ – 'ಅಲ್ಪಾಚ್' ಉಳ್ಳಂತಹ ಶಬ್ದಗಳು 'ಘಿ'ಸಂಜ್ಞೆಯನ್ನು ಹೊಂದಿದ ಶಬ್ದಗಳು. ಅಜಾದಿಯಾದ ಶಬ್ದಗಳು, ಅಜಂತವಾದ ಶಬ್ದಗಳು ಸಮಾಸದಲ್ಲಿ ಮೊದಲು ಬರುತ್ತವೆ. ಇತ್ಯಾದಿ ನಿಯಮಗಳನ್ನು ಹೇಳಿದ್ದಾರೆ. ಆದ್ದರಿಂದ ಧವಖದಿರೌ, ಹರಿಹರೌ, ಇಂದ್ರಾಗ್ನೀ, ಹೀಗೆಯೇ ವ್ಯವಹರಿಸಬೇಕು. ಭಕ್ತಿಶಬ್ದವು 'ಅಲ್ಪಾಚ್' ಉಳ್ಳದ್ದಾಗಿದೆ. 'ಘಿ'ಸಂಜ್ಞೆಯನ್ನು ಹೊಂದಿದೆ. ಆದ್ದರಿಂದ ಭಕ್ತಿವೈರಾಗ್ಯ ಎಂದೇ ಹೇಳಬೇಕು. 'ವೈರಾಗ್ಯಭಕ್ತಿ' ಎಂದು ಹೇಳಿದ್ದು ತಪ್ಪು.

ಉತ್ತರ :- 'ಧರ್ಮಾದಿಷು ಅನಿಯಮಃ' ಎಂಬ ವಾರ್ತಿಕವನ್ನು ಅನುಸರಿಸಿ 'ವೈರಾಗ್ಯಭಕ್ತಿ' ಎಂದು ಹೇಳಲ್ಪಟ್ಟಿದೆ. ಧರ್ಮಾದಿಶಬ್ದಗಳಲ್ಲಿ (೨. ೨. ೩೧) ಈ ಸೂತ್ರದಲ್ಲಿ 'ಧರ್ಮಾದಿಷು ಅನಿಯಮಃ' ಎಂಬ ವಾರ್ತಿಕವು ಹೇಳಲ್ಪಟ್ಟಿದೆ. ಧರ್ಮಾದಿಶಬ್ದಗಳಲ್ಲಿ ಇಂತಹ ಪದವೇ ಮೊದಲಿರಬೇಕೆಂಬ ನಿಯಮವಿಲ್ಲ. 'ಧರ್ಮಾರ್ಥೌ' ಎಂದು ಹೇಳಬಹುದು. ಅಥವಾ 'ಅರ್ಥಧರ್ಮೌ', ಎಂದು ಹೇಳಬಹುದು. 'ಗುಣವೃದ್ಧೀ' ಎಂದು ಅಥವಾ 'ವೃದ್ಧಿಗುಣೌ' ಎಂದು ಹೇಳಬಹುದು. ಅದರಂತೆ 'ವೈರಾಗ್ಯಭಕ್ತಿ' ಎಂದೂ ಹೇಳಬಹುದು ತಪ್ಪಿಲ್ಲ.

ನಮ್ಮ ಶ್ರವ್ರಯೋಜಕವಾದ ಮತ್ತೊಂದು ಧರ್ಮ 'ಇಷ್ಟತ್ವ' ಇದನ್ನು 'ಮುಕುಂದಾಭಿದಂ' ಎಂದು ವಿಶೇಷಣವು ಸಮರ್ಥಿಸುತ್ತಿದೆ. ಮೋಕ್ಷವನ್ನು ದಯಪಾಲಿಸುವಂತಹವನು ಮುಕುಂದನಾದ್ದರಿಂದ ಅವನು ನಮಗೆ ಅತ್ಯಂತ ಇಷ್ಟನಾಗಿದ್ದಾನೆ. 'ಮುಕುಂದಾಭಿದಂ' ಎಂಬ ಪದದಿಂದ ಹೇಳಲ್ಪಟ್ಟ ಈ ಇಷ್ಟತ್ವವನ್ನೇ 'ಗಮ್ಯಂ' ಎಂಬ ವಿಶೇಷಣವು ವಿವರಿಸುತ್ತದೆ. ಹೀಗೆ ಶ್ಲೋಕದಲ್ಲಿರುವ ಎಲ್ಲಾ ವಿಶೇಷಣವೂ ಸಾರ್ಥಕವು ಅತ್ಯಂತ ಸಮಾಂಜಸವೂ ಆಗಿವೆ.

*ಜಿಜ್ಞಾಸಾಧಿಕರಣ*

ಟೀಕೆಯ ಮಂಗಳಪದ್ಯಗಳಲ್ಲಿ ಗಾಂಭೀರ್ಯ

**तात्पर्यचन्द्रिका –**

**व्याचिख्यासितभाष्यमूलसूत्रप्रामाण्यं सूचयन् मङ्गलान्तरमाचरति - याश्चेति ॥ अत्र 'यत उदैद् विद्येन्दिरा' इत्यादिना वक्त्रानुकूल्यं 'निजैः' इत्यादिना श्रोत्रानुकूल्यं, 'याश्चा' इत्यादिना प्रसङ्गानुकूल्यं, च दर्शयता ''वक्तृश्रोतृप्रसक्तीनां यदाप्तिरनुकूलता'' इत्यनुव्याख्यानोक्ता आप्तिमूलता सूत्राणां सूचिता । ब्रह्मसूत्रपदेन ब्रह्मपरश्रुतिव्याख्यानरूपत्वात् श्रुतिमूलत्वं, न्यायव्युत्पादकत्वाद् युक्तिमूलत्वं च सूचितम् ।**

**भाष्यस्य व्याख्येयत्वप्रयोजकं सफलत्वगम्भीरत्वादि दर्शयन् भाष्यकृतं प्रणमति – स्वान्तेति ॥ वैकर्तनांशुव्रजादेः स्वान्तध्वान्तनिकृन्तनादावशक्तत्वादेव भाष्येण जितत्वम् ॥ गङ्गासङ्गेन यथा रथ्याद्भिः नैर्मल्यं लभ्यते, तथा मदीयाया वाचो विशुद्धिसिध्यर्थं गुरोर्गिरः मदीयया वाचा 'सङ्गम्यन्ते' व्याख्यानव्याख्येयभावेन सम्बध्यन्त इत्यर्थः । यद्वा गुरोर्गिरः परस्परं 'सङ्गम्यन्ते' सम्बद्धतया प्रकाशन्त इत्यर्थः ॥**

ಅನುವಾದ - ಟೀಕಾರಾಯರು ಭಾಷ್ಯವನ್ನು ವ್ಯಾಖ್ಯಾನಿಸಲು ಇಚ್ಛಿಸಿದ್ದಾರೆ. ಭಾಷ್ಯಕ್ಕೆ ಮೂಲವಾದದ್ದು ಬ್ರಹ್ಮಸೂತ್ರಗಳು. ಪ್ರಾರಂಭದಲ್ಲಿ ಬ್ರಹ್ಮಸೂತ್ರಗಳ ಪ್ರಾಮಾಣ್ಯವನ್ನು ಸೂಚಿಸುವ ಮೂಲಕ ಮತ್ತೊಂದು ಮಂಗಳವನ್ನು 'ಯಾಶ್ಚಾ' ಇತ್ಯಾದಿ ಪದ್ಯದಿಂದ ನಿಬಂಧನೆ ಮಾಡುತ್ತಿದ್ದಾರೆ. ಸೂತ್ರಪ್ರಾಮಾಣ್ಯಕ್ಕೆ ಪೂರಕವಾದ ವಕ್ತ್ರಾದ್ಯಾನುಕೂಲ್ಯವನ್ನು ಅನೇಕ ವಿಶೇಷಣಗಳಿಂದ ಸಮರ್ಥಿಸುತ್ತಿದ್ದಾರೆ.

''ಯಾವ ವೇದವ್ಯಾಸರೆಂಬ ಕ್ಷೀರಸಾಗರದಿಂದ ವಿದ್ಯೆ ಎಂಬ ಲಕ್ಷ್ಮೀದೇವಿಯು ಪ್ರಾದುರ್ಭವಿಸಿದಳೋ'' ಎಂದು ಹೇಳಿದ್ದರಿಂದ 'ವೇದವ್ಯಾಸರು ಸರ್ವಜ್ಞರು' ಎಂದಂತಾಯಿತು. ಇದರಿಂದ ವಕ್ತ್ರಾನುಕೂಲ್ಯವು ಸಿದ್ಧವಾಯಿತು. ''ದೇವತೆಗಳು 'ಪ್ರಾರ್ಥನೆ' ಎಂಬ ಮಂದರ ಪರ್ವತದಿಂದ ಕ್ಷೀರ ಸಾಗರವನ್ನು ಕಡೆದರು'' ಎಂದು ಹೇಳಿದ್ದರಿಂದ ದೇವತೆಗಳು ಶ್ರವಣಾಧಿಕಾರಿಗಳು ಎಂದಂತಾಯಿತು. ಇದರಿಂದ ಶ್ರೋತ್ರಾನುಕೂಲ್ಯವು ಸಿದ್ಧಿಸಿತು. ದೇವತೆಗಳ ಪ್ರಾರ್ಥನೆಯಿಂದ ವೇದವ್ಯಾಸರು ಸೂತ್ರಗಳನ್ನು ರಚನೆ ಮಾಡಿದರೆಂದು ಹೇಳಿದ್ದರಿಂದ ಪ್ರಸಂಗಾನುಕೂಲ್ಯವು

ಕೂಡ ತೋರಿಸಿದಂತಾಯಿತು. ಹೀಗೆ ವಕ್ತೃ, ಶ್ರೋತೃ ಪ್ರಸಂಗಾನುಕೂಲ್ಯಗಳಿಂದ ಬ್ರಹ್ಮಸೂತ್ರಗಳಿಗೆ ಆಪ್ತಮೂಲತ್ವವು ಸಿದ್ಧವಾಯಿತು. ಇದನ್ನೇ ಅನುವ್ಯಾಖ್ಯಾನದಲ್ಲಿ ''ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ'' ಎಂದು ಹೇಳಲಾಗಿದೆ.

''ಸದ್ಬ್ರಹ್ಮಸೂತ್ರಾಮೃತಂ'' ಎಂಬಲ್ಲಿ ಬ್ರಹ್ಮಶಬ್ದಕ್ಕೆ 'ಶ್ರುತಿ' ಎಂಬರ್ಥವನ್ನು ಹೇಳಿದ್ದಾರೆ. ಶ್ರುತಿಗಳು ಬ್ರಹ್ಮಪರವೆಂದು ನಿರ್ಣಯಿಸಲು ಅತ್ಯಾವಶ್ಯಕವಾದ ಯುಕ್ತಿಗಳೇ ಸೂತ್ರವೆಂದು ಕರೆಸಿಕೊಳ್ಳುತ್ತವೆ. ಹೀಗೆ ಬ್ರಹ್ಮಸೂತ್ರವೆಂಬ ಪದದಿಂದಲೇ ಶ್ರುತಿಮೂಲತ್ವವನ್ನು ಯುಕ್ತಿ-ಮೂಲತ್ವವನ್ನು ಸೂಚಿಸಿದಂತಾಯಿತು. ಆದ್ದರಿಂದ ಸರ್ವೋತ್ತಮಪ್ರಾಮಾಣ್ಯವನ್ನು ಬ್ರಹ್ಮ-ಮೀಮಾಂಸಾಶಾಸ್ತ್ರಕ್ಕೆ ಸಮರ್ಥಿಸಿದಂತೆ ಆಯಿತು.

"ಶ್ರೀಮದಾಚಾರ್ಯರ ಭಾಷ್ಯವು ಮೋಕ್ಷಾದಿಪುರುಷಾರ್ಥದಾಯಕವಾಗಿದೆ, ಗಂಭೀರವಾಗಿದೆ, ತಾಪತ್ರಯಪರಿಹಾರಕವಾಗಿದೆ. ಆದ್ದರಿಂದ ವ್ಯಾಖ್ಯಾನಿಸಲು ಅತ್ಯಂತ ಅರ್ಹವಾಗಿದೆ'' ಎಂದು ಹೇಳುತ್ತಾ ಭಾಷ್ಯಕಾರರನ್ನು 'ಸ್ವಾಂತಧ್ವಾಂತ' ಇತ್ಯಾದಿಯಾಗಿ ನಮಿಸುತ್ತಾರೆ.

ಸೂರ್ಯನ ಕಿರಣಗಳು ಹೊರಗಿನ ಕತ್ತಲೆಯನ್ನಷ್ಟೇ ನಾಶಮಾಡುತ್ತವೆ. ಆದರೆ ಶ್ರೀಮದಾಚಾರ್ಯರ ಭಾಷ್ಯವು ಒಳಗಿನ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುತ್ತದೆ. ಚಂದ್ರನು ಬೆಳದಿಂಗಳ ಮೂಲಕ ಹೊರಗಿನ ತಾಪವನ್ನಷ್ಟೇ ಪರಿಹರಿಸುತ್ತಾನೆ. ಆದರೆ ಭಾಷ್ಯವು ಒಳಗಿನ ತಾಪವನ್ನೂ ಪರಿಹರಿಸುತ್ತದೆ. ಹೀಗೆ ಭಾಷ್ಯವು ಅತ್ಯಂತ ಶ್ರೇಷ್ಠವಾಗಿದೆ.

'ಗಂಗಾಸಂಗೇನ' ಎಂಬ ಶ್ಲೋಕದಲ್ಲಿ ಹೀಗೆ ಅನ್ವಯಿಸಿ ಅರ್ಥವನ್ನು ತಿಳಿಯಬೇಕು – ''ರಸ್ತೆಯ ನೀರು ಸ್ವತಃ ಅಪವಿತ್ರವಾಗಿದ್ದರೂ ಗಂಗಾಜಲದ ಜೊತೆಗೆ ಸೇರಿದಾಗ ಪವಿತ್ರವಾಗುತ್ತದೆ. ಅದರಂತೆ ನನ್ನ ಮಾತುಗಳು ಸ್ವತಃ ಅಪವಿತ್ರ. ಆದರೆ ಗಂಗಾಜಲದಂತಿರುವ ಗುರುಗಳ ಮಾತುಗಳ ಜೊತೆಗೆ ನನ್ನ ಮಾತುಗಳು ವ್ಯಾಖ್ಯಾನ ರೂಪದಿಂದ ಸೇರಿದಾಗ ಪವಿತ್ರವಾಗುತ್ತವೆ. ಅಥವಾ ಬೇರೆ ಬೇರೆ ಗ್ರಂಥಗಳಲ್ಲಿರುವ ಗುರುಗಳ ಮಾತುಗಳನ್ನು ಪರಸ್ಪರ ಜೋಡಿಸುವುದಷ್ಟೇ ನನ್ನ ಕೆಲಸ''.

### ಕಠಿಣಪದಾರ್ಥ

**ವ್ಯಾಚಿಖ್ಯಾಸಿತಭಾಷ್ಯಮೂಲಸೂತ್ರಪ್ರಾಮಾಣ್ಯಮ್** = ವ್ಯಾಖ್ಯಾನ ಮಾಡಲು ಬಯಸಿದ ಭಾಷ್ಯಕ್ಕೆ ಮೂಲವಾದ ಸೂತ್ರಗಳ ಪ್ರಾಮಾಣ್ಯವನ್ನು. - **ಬ್ರಹ್ಮಪರಶ್ರುತಿವ್ಯಾಖ್ಯಾನರೂಪತ್ವಾತ್** = ಬ್ರಹ್ಮನನ್ನು ಹೇಳುವ ಶ್ರುತಿಗಳ ವ್ಯಾಖ್ಯಾನರೂಪವಾದ್ದರಿಂದ, **ಭಾಷ್ಯಕೃತಂ** = ಭಾಷ್ಯಕಾರರಾದ ಶ್ರೀಮದಾಚಾರ್ಯರನ್ನು, **ರಥ್ಯಾದ್ಭಿಃ** = ರಸ್ತೆಯ ನೀರಿನಿಂದ (ಅಪ್ ಶಬ್ದದ ತೃತೀಯಾವಿಭಕ್ತಿ (ಸ್ತ್ರೀ)).

### *ಜಿಜ್ಞಾಸಾಧಿಕರಣ*

प्रकाशः – ननु ग्रन्थादाववश्यकार्यस्य मङ्गलस्य कृतत्वात् किं द्वितीयपद्येन? यदि ''श्रेयांसि बहुविघ्नानि'' इति मङ्गलान्तरस्य कार्यता, तदा 'व्यासो भवतु मे भूत्यै' इत्येतावता पूर्तेः किं विशेषणैः कृत्यम्? इत्यत आह – व्याचिख्यासितेति ।। एतेन सूत्रप्रामाण्यसूचनं विशेषणकृत्यमित्युक्तं भवति । 'व्याचिख्यासित' इत्युक्त्या तत्सूचनमपि नानुपयुक्तमित्याह – ब्रह्मपरेति ।। 'ब्रह्मसूत्र' इत्यत्र तन्त्रेण 'ब्रह्मणः' विष्णोः सम्बन्धि यत् 'ब्रह्म' श्रुतिजातं तस्य 'सूत्राणि' न्यायनिबन्धनात्मकवाक्यानीत्युक्तं भवति । यद्वा 'ब्रह्मणः' श्रुतिजातस्य 'सूत्रं' तन्निर्णायकान्यायनिबन्धनात्मकशास्त्रमित्यर्थः । 'श्रुतिजातस्य ब्रह्मपरत्वं न वास्तवमित्यभिप्रेत्य' इति ध्येयम् । 'न्याय' इति 'सूत्रे' इत्युक्तिलब्धोऽर्थः ।

ननु भाष्यव्याख्याने तत्कर्तृप्रसादस्यावश्यकतया तत्प्रणामस्य कार्यत्वेऽपि न विशेषण कृत्यम्, इत्यत आह – भाष्यस्येति ।। ध्वान्तशब्दिताज्ञाननिवर्तकत्व-तापत्रयोन्मूलकत्वरूपं फलवत्त्वम् । गाम्भीर्यम् आपाततोऽप्रतीयमानहृदयत्वम् । आदिपदेनामितशब्दितबह्वर्थत्वग्रहः ।। प्रणमतीति ।। यद्यपि 'प्रपद्ये' इति प्रपत्तिरेव श्रुता । तथाऽपि नमनादिनैव सा भवतीति तथोक्तम् । धातूनामनेकार्थत्वा-न्नमनार्थत्वमुपेत्य वा एवमुक्तम् । ध्वान्तनिवर्तकत्वाद्यविशेषे कथं जितत्वम्? इत्यत आह – वैकर्तनेति । स्वान्तेति ।। भाष्यस्य तु शक्तत्वाद् विशेष इति भावः । उभयत्र 'आदि'पदेन चन्द्रचन्द्रिकायास्तापत्रयोन्मूलनेऽशक्तत्वात् समुद्रस्य चामितत्वाभावादिति ग्राह्यम् । यद्वा, काकोलूकवत् परस्परं युद्धलब्धजयाभावात् कथं तेन जितत्वं तेषाम्? इत्यत आह – वैकर्तनेति ।। एवकारेण लौकिकं जयं प्रत्याह । 'वाचो विशुद्धिसिद्ध्यर्थम्' इत्यत्र वाचः कर्तुरश्रवणात् 'गुरोः' इत्यस्यैवात्राप्यन्वये 'गुरोर्वाचो विशुद्ध्यर्थं गुरोर्गिरो मिथः सङ्गमय्य' इत्यस्यायोगात् गिरां सङ्गतत्वासङ्गतत्वाभ्यां सङ्गतिकरणासम्भवाच्च इत्याशङ्क्य दृष्टान्तांशं स्फुटीकुर्वन्नपेक्षितपूर्त्योत्तरार्धं द्वेधा व्याचष्टे – गङ्गासङ्गेनेति ।। रथ्याद्भिरिति ।। ''द्वित्रिभ्यां पाद्दन्मूर्धसु'' इति निर्देशात् ज्ञापकात् ''ऋक्पूरब्धूःपथामानक्षे'' इति समासान्तोऽनित्य इति भावः ।। यद्वेति ।। 'मदीयया वाचा'

त्यनुकर्षः। अस्मिन् पक्षे वाचो गीर्भिः सङ्गतिरर्थिकीति न दृष्टान्तानानुगुण्यम् ।

गुरुराजीय – सूत्रप्रामाण्यं सूचयन्निति ।। मूलिप्रामाण्यस्य मूलप्रामाण्याधीनत्वादिति भावः ।। अशक्तत्वादेव जितत्वमिति ।। ननु शक्तौ सत्यामपि दीपालोकादेः सौरालोकादाविव तत्सङ्कोचादित्यर्थः । स्वान्तेति लोके निर्दोषमित्येतत् मध्यदीपिकान्यायेन पूर्वत्रोत्तरत्र च हेतुप्रदर्शनपरम् । जितसिन्धुराजम् इत्यत्र हेतुमाह – अमितमिति ।। मूले निकृन्तनमिति ।। निकृन्तनमिति ।। नचेदं युक्तम्, 'कृती च्छेदने' इत्यस्य इदित्त्वाभावेन 'इदितो नम् धातोः' इत्यनेन नुमोऽप्रसङ्गात् । विनिकृन्तति इत्यत्र तु "शेमुचादीनाम्"इति भविष्यति । निकर्तन इति तु वक्तव्यम् । अस्मात् ल्युटि तस्यानादेशे तस्यार्धधातुकतया तस्मिन् परतो लघूपधगुणे रपरत्वे च उक्तरूपनिष्पत्तिसम्भवात् । "नखनिकृन्तनेन सर्वं कार्ष्णायसं विज्ञातं स्यात्" इत्यादौ तु च्छान्दसत्वान्नुम् भविष्यति । तथाच निकृन्तन इत्यपशब्द इति चेत् न । "इदितो नुम् धातोः" इत्यत्र धातोरिति योगविभागाश्रयणस्याकरे स्थितत्वेनानिदित्त्वेऽप्यस्य तेनात्र नुम्सम्भवात् । न च योगविभागो न शक्योऽङ्गीकर्तुं तथा सति धातुमात्रानुम्प्राप्त्याऽतिप्रसङ्गापातात् । ततश्च योगविभागे "शेमुचादीनाम्" इति शेग्रहणस्य धातोरित्यत्र सिंहावलोकितन्यायेनापेक्षणाच्च प्रकृते नुम्सिद्धिरिति वाच्यम् । योगविभागस्येष्टसिद्ध्यर्थत्वमात्रेणानतिप्रसङ्गसम्भवे "शेमुचादीनाम्" इत्यतः शेग्रहणानुवृत्तेस्तदर्थतयाऽनपेक्षितत्वेन नुम् सम्भवादिति गुरवः ।।

मूले कृपालव इति ।। यद्यपि कृपेरालुच् प्रत्ययो न विहितः "स्पृहिगृहि" इत्यादिना स्पृह्यादिभ्य एव तत्स्मरणात् । तथापि स्पृह्यादिभ्यो लुश्मात्रविधानेनैव 'स्पृहयालुः' इत्यादिरूपसिद्धावालुज्विधानसामर्थ्यात् कृपेरपि तत्सिद्धिः । नचालुज्विधौ "अयामन्ताल्वाय्येत्न्विष्णुषु"इति णेरयादेशात् तत्सिद्धावपि लुश्विधौ कथं स्पृहयालुरिति रूपसिद्धिरिति वाच्यम् । स्पृहेर्लुशि तस्य शित्वेन "तिङ्शित्सार्वधातुकम्" इति सार्वधातुकतया "कर्तरि शप्" इति शपि "सार्वधातुकार्धधातुकयोः"इति गुणे अयादेशे "अतो दीर्घो यञि"इति दीर्घतायां च सत्यां स्पृहयालुरिति रूपसिद्धेरप्रत्यूहत्वात् । सत्यप्येवं लुश्विधानमात्रेणापि विवक्षितसिद्धावालुच्करणमन्यत्रापि यथा स्यादित्यस्यार्थस्य ज्ञापकम् । तथाच

तद्बलात् कृपेरालुचि कृपालुशब्दनिष्पत्तिरप्रत्यूहैव । अत एव कौमुद्यां "हरे कृपालो नः पाहि" इत्युक्तम् ।

ननु च न लुश्विधौ विवक्षितसिद्धिः । लुश्विधौ लकारस्येत्संज्ञाप्रसङ्गात् स्पृहयालुरिति दीर्घानुपपत्तेश्च । तिङीत्यनुवृत्त्या तिङि यञि परत एव "अतो दीर्घो यञि" इत्यनेन दीर्घविधानात् । श्रद्धालुश्च न सिद्ध्येत् । श्रत्पूर्वाद्धाधातोर्लुशि शपि तस्य जुहोत्यादित्वाच्छ्लुभावे 'श्लाविति द्विर्भावे' 'ह्रस्वः' इति ह्रस्वत्वे च "श्नाभ्यस्तयोरातः" इत्यालोपे च श्रद्धलुरिति प्रसङ्गात् । अतो लुश्विधौ स्पृहयालुरित्यादिविवक्षितरूपासिद्धिप्रसक्त्या तत्सिध्यर्थमेवलुच्करणसार्थक्यात्र तदन्यथानुपपत्त्याऽन्यत्राप्यालुच्प्रत्ययविधायकत्वमस्येति चेत् उच्यते लुश्विधावपि यादित्वादित्संज्ञाभावोपपत्तेः । यकारश्च लुप्तनिर्दिष्टः क्रियते । प्रयोजनाभावाद्वा तत्संज्ञाभावः । नह्यत्र लित्स्वरप्रत्ययस्वरयोर्विशेषोऽस्ति । उभयत्र "एकादेश उदात्तेनोदात्तः" इत्युदात्तस्वरस्य भावात् ।

नापि स्पृहयालुरिति दीर्घानुपपत्तिरिति द्वितीयो दोषः । "अतो दीर्घो यञि" इत्यत्र "तुरुस्तु शम्यमःसार्वधातुके" इत्यतः सार्वधातुकग्रहणस्यैवानुवृत्त्या तिङ्ग्रहणाननुवृत्तेः । नाप्यन्यो दोषः । अनेकार्थत्वाद्धातूनामत्र विषये दधात्यर्थे वर्तमानस्य धेटो भविष्यति । नच शिदाश्रयोऽशितीत्यात्वपतिषेधात् तदनुपपत्तिः । एवं तर्हि श्रद्धा आ श्रद्धेत्याकारप्रश्लेषादात्वं भविष्यति । अथवा दधातेरेव "संज्ञापूर्वको विधिरनित्य" इति न द्विर्वचनं प्रवर्तिष्यते । ततश्च लुश्विधिनैवोपपत्तावेवमपि ज्ञानार्थमालुज् विधीयते । एतत् ज्ञापयति यत्रालुचैव रूपसिद्धिस्ततोऽप्ययं भवतीति कृपेरप्यालुच्प्रत्यय इति ।। यद्यपि "संज्ञापूर्वको विधिरनित्यः" इत्येतद्भाष्ये नोक्तं तथापि प्रयोगबाहुल्यादुक्तम् । एतदेवाभिप्रेत्योक्तं गीताभाष्यटीकायां "व्याकरणान्तरादवगन्तव्यः" इति ।। व्याकरणस्य "स्पृहिगृहि" इत्यादेरान्तरं लुशमभिधाय आलुच्करणसामर्थ्यं तस्मादित्यर्थः । केचित्तु 'दयालवः' इत्येवात्र पाठः अतो नोक्तशङ्कासमाधानयोरवसर इत्याहुः ।।

मूले रथ्याद्भिरिति ।। यदत्र रथ्यापाभिरिति प्राप्नोति रथ्याद्भिरित्यपशब्द इति केनचिदुक्तं तदसत् । समासान्तविधेरनित्यत्वेन तदप्रसङ्गात् । तदनित्यत्वं च

शोभना आपो यस्मिन् सरसीति स्वप् इत्यादौ "ऋक्पूरब्धूःपथामानक्षे" इति समासान्ताकारस्याभावादेवावसीयते । सति हि समासान्तस्य नित्यत्वे तत्रापि समासान्ताकारप्रसङ्गे स्वपमिति प्रसङ्गात् । तथाचोक्तं प्रसादकृता "ऋक्पूरब्धूः पथामानक्ष इति समासान्तस्तु न भवति । तस्यानित्यत्वात्" इति । अथ न पूजनादिति निषेधादेव तत्र समासान्ताकाराप्रसक्तेर्न तस्यानित्यतायामिदं ज्ञापकम् । अत एव अनित्यत्वादिति प्राचोक्तः परिहारः प्रामादिक एवास्येष इति चेत् सत्यम् । तथापि बह्वप् बह्वपी बह्वाम्पीत्यादौ काशिकोदाहृते समासान्ताकारस्यानिवारणात् । तत्रापूजनार्थतया "न पूजनात्" इति निषेधाप्रसङ्गात् । ततश्च समासान्तविधेरनित्यत्वादेव तदभाव इति वक्तव्यम् । उक्तं च शेषिकृता "समासान्तविधेरनित्यत्वान्न स कृत" इति ॥

तथा "स्फिगपूतवीणांजोध्वकुक्षिसीरनामनामच" इत्यध्वग्रहणम् । तद्धि अपादध्वनः अपादित्यनुवर्तमाने अपादुत्तरस्याध्वशब्दस्यान्तोदात्तत्वं यथा स्यादिति क्रियते । यदि च नित्यः समासांतः स्यात् तदा "उपसर्गादध्वन" इति टचि कृते टित्त्वा (अचिकृते चित्त्वा)दन्तोदात्तत्वं सिद्धमित्यध्वग्रहणं न कुर्यात् । कृतं चातो ज्ञापकमस्तीयं परिभाषा 'समासान्तविधिरनित्यः' इति । तथा भाष्ये "द्वित्रिभ्यां पाद्दन्मूर्धसु बहुव्रीहौ" इति सूत्रे अकृतसमासान्तस्य मूर्धशब्दस्योपादानं लिङ्गम् । अनित्यो हि समासांतो यथा स्यादिति । पाद्दन्निति "पादस्य लोपोऽहस्त्यादिभ्यः" "वयसि दन्तस्य दतृ" इति समासान्तो निर्दिष्टस्तथा मूर्धशब्दोऽपि "द्वित्रिभ्यां मूर्ध्न" इति समासान्ते मूर्धेष्विति निर्दिष्टः स्यात् । तथाचाकृतः । स च समासान्तविधेरनित्यत्वं ज्ञापयति । तेन द्विमूर्धात्रिमूर्धेत्युदात्तत्वं भवति । तस्मात् समासान्तविधेरनित्यत्वेऽपि तन्नित्यत्वभ्रममात्रमूलकमेव परस्य रथ्यापाभिरिति रूपप्रसञ्जनमिति दिक् ।

'टीकायां वाच इत्येतत् सन्निधानाद् गुरोर्वाक्परमिति भाति । तच्चायुक्तम् । तस्याः स्वतः शुद्धत्वेन तद्विशुद्ध्यर्थत्वस्यायोगादित्यतस्तत् योग्यतया टीकाकृद्वाक्यपरम्' इत्याह – मदीयाया वाच इति ॥ अत्र मदीयया वाचेत्यपि पूर्णीयं भवतीत्यपरितोषादाह – यद्वेति ॥

**ವಿವರಣೆ** - ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆಯನ್ನು ಮಾಡಿದ್ದಾಯಿತು. ಪುನಃ ಎರ ಶ್ಲೋಕ ಏಕೆ? 'ಶ್ರೇಯಾಂಸಿ ಬಹುವಿಘ್ನಾನಿ' ಎಂಬಂತೆ ಅನೇಕ ಮಂಗಳಾಚರಣೆ ಅನಿವಾರ್ಯವೇ "ವ್ಯಾಸೋ ಭವತು ಮೇ ಭೂತ್ಯೈ" ಎಂದಷ್ಟೇ ಸಾಕು. ದೀರ್ಘವಾದ ಮಂಗಳಾಚರಣೆ ಏಕೆ? ಪ್ರ ಪ್ರಾರಂಭದಲ್ಲಿ ಸೂತ್ರಪ್ರಾಮಾಣ್ಯದ ಸಮರ್ಥನೆಯ ಅವಶ್ಯಕತೆ ಏನು? ಎಂದರೆ ತತ್ವಪ್ರಕಾಶಿ ಬ್ರಹ್ಮಸೂತ್ರಭಾಷ್ಯದ ವ್ಯಾಖ್ಯಾನವಾಗಿದೆ. ಆದ್ದರಿಂದ ಮೊದಲು ತತ್ವಪ್ರಕಾಶಿಕಾಗ್ರಂಥಕ್ಕೆ ಪ್ರಾ ಸಿದ್ಧಿಸಬೇಕು. ಇದಕ್ಕೆ ಪ್ರಾಮಾಣ್ಯವು ಸಿದ್ಧವಾಗಬೇಕಾದರೆ ಅದಕ್ಕೂ ಮೂಲವಾದ ವ್ಯಾಖ್ಯೇಯ ಭಾಷ್ಯದ ಪ್ರಾಮಾಣ್ಯವು ಸಿದ್ಧವಾಗಬೇಕು. ಭಾಷ್ಯದ ಪ್ರಾಮಾಣ್ಯವು ಯಾವಾಗ ಸಿದ್ಧವಾಗುತ್ತ ಭಾಷ್ಯಕ್ಕೂ ಮೂಲವಾದ ಬ್ರಹ್ಮಸೂತ್ರಗಳ ಪ್ರಾಮಾಣ್ಯವು ಸಿದ್ಧವಾದಾಗ ಮಾತ್ರ. ಆದ್ದರಿಂದ ಗ್ರಂಥಗಳಿಗೂ ಮೂಲವಾದ ಬ್ರಹ್ಮಸೂತ್ರಗಳ ಪ್ರಾಮಾಣ್ಯವು ಸಿದ್ಧವಾದರೆ ಮಾತ್ರ ಭಾಷ್ಯಕ್ಕೂ ಟೀ ಪ್ರಾಮಾಣ್ಯವು ಸಿದ್ಧಿಸಲು ಸಾಧ್ಯ. ಈ ಅಭಿಪ್ರಾಯದಿಂದ ಸೂತ್ರಗಳ ಪ್ರಾಮಾಣ್ಯವನ್ನು ಟೀಕಾಕಾ ಈ ಶ್ಲೋಕದಲ್ಲಿ ಸೂಚಿಸುತ್ತಿದ್ದಾರೆ. ಸೂತ್ರಪ್ರಮಾಣ್ಯದ ಸಿದ್ಧಿಗೋಸ್ಕರ ಶ್ಲೋಕದಲ್ಲಿರುವ ವಿಶೇಷಣಗಳೂ ಸಾರ್ಥಕಗಳಾಗುತ್ತವೆ.

ಗ್ರಂಥಕಾರರು 'ವ್ಯಾಚಿಖ್ಯಾಸಿತ' ಎಂದು ಹೇಳಿದ್ದರಿಂದ ಸೂತ್ರಪ್ರಾಮಾಣ್ಯದ ಸೂಚನ ಅನುಪಯುಕ್ತವಲ್ಲವೆಂದು ತಿಳಿಯುತ್ತದೆ. ಮೂಲಪ್ರಾಮಾಣ್ಯವು ಮೂಲಿಪ್ರಮಾಣಾಧೀನವಾದ್ದರಿ ಅನುಪಯುಕ್ತವಲ್ಲವೆಂದು ಅಭಿಪ್ರಾಯ. ಸೂತ್ರಪ್ರಾಮಾಣ್ಯಕ್ಕೆ ಪೂರಕವಾಗಿರುವ ವಕ್ತೃ ಕೂಲ್ಯವನ್ನು ಅನೇಕ ವಿಶೇಷಣಗಳಿಂದ ಈ ಶ್ಲೋಕದಲ್ಲಿ ಸಮರ್ಥಿಸುತ್ತಿದ್ದಾರೆ. ಪ್ರಾಮಾ ಸಮರ್ಥನೆಗೆ ಶೃತಿಮೂಲತ್ವ ಮತ್ತು ಯುಕ್ತಿಮೂಲತ್ವಗಳು ಅನಿವಾರ್ಯ. 'ಸದ್‌ಬ್ರಹ್ಮಸೂತ್ರಾ ಎಂಬ ಪದವೇ ಇವೆರಡನ್ನು ಸೂಚಿಸುತ್ತದೆ. ಬ್ರಹ್ಮಸೂತ್ರ ಎಂಬಲ್ಲಿ ಬ್ರಹ್ಮಶಬ್ದಕ್ಕೆ ವಿಷ್ಣು ಎಂದ ವಿಷ್ಣುವಿಗೆ ಸಂಬಂಧಪಟ್ಟವುಗಳು ಶ್ರುತಿಗಳು. ಬ್ರಹ್ಮಪದವನ್ನು ತಂತ್ರದಿಂದ ಎರಡು ಅನ್ವಯಿಸಬೇಕು. ಬ್ರಹ್ಮ = ಶ್ರುತಿ ಸಮೂಹಗಳು, ಅವುಗಳನ್ನು ನಿಬಂಧನೆ ಮಾಡುವ ಸೂತ್ರಗಳು ಇವೆಯೋ ಆ ಬ್ರಹ್ಮಸೂತ್ರಗಳು ಎಂದರ್ಥ. ಅಥವಾ ಬ್ರಹ್ಮಶಬ್ದಕ್ಕೇನೆ ಬ್ರಹ್ಮ ಎಂದರ್ಥ. ಈ ಪಕ್ಷದಲ್ಲಿ ಶ್ರುತಿಗಳು ವಿಷ್ಣುವಿಗೆ ಸಂಬಂಧಿಸಿದವು ಎಂದು ಪ್ರತ್ಯೇಕವಾಗಿ ಹೇಳಬೇಕಾ ಅದನ್ನು ಸಿದ್ಧವತ್ ಕೃತ್ಯ ಅರ್ಥೈಸಬೇಕು. ಈ ವ್ಯುತ್ಪತ್ತಿಯಿಂದ ಬ್ರಹ್ಮಸೂತ್ರಗಳು ಶ್ರುತಿವ್ಯಾಪ್ತಿ ರೂಪವಾಗಿರುವುದರಿಂದ ಶ್ರುತಿಮೂಲತ್ವವು ಸಿದ್ಧವಾಯಿತು. ಸ್ವತಃ ಯುಕ್ತಿರೂಪಗಳಾದ್ದರಿ ಯುಕ್ತಿಮೂಲತ್ವವೂ ಬ್ರಹ್ಮಸೂತ್ರಗಳಿಗೆ ಇದೆ ಎಂದು ತಿಳಿಯಬೇಕು.

ವ್ಯಾಖ್ಯಾನ ಬರೆಯುವ ಪ್ರಾರಂಭದಲ್ಲಿ ಭಾಷ್ಯಕಾರರಾದ ಶ್ರೀಮದಾಚಾರ್ಯರ ಪ್ರಸಾದ ಅತ್ಯಾವಶ್ಯಕವಾದ್ದರಿಂದ ಮೂರನೇ ಶ್ಲೋಕದಿಂದ ಶ್ರೀಮದಾಚಾರ್ಯರನ್ನು ಸ್ತೋತ್ರ ಮಾಡುತ್ತಿದ್ದಾ

ಭಾಷ್ಯಕಾರರನ್ನು ನಮಸ್ಕರಿಸುವುದು ಅವಶ್ಯಕವಾದರೂ ಅಷ್ಟೊಂದು ವಿಶೇಷಣಗಳು ವ್ಯರ್ಥ ವಲ್ಲವೇ? ಈ ಪ್ರಶ್ನೆಗೆ ಗ್ರಂಥಕಾರರು 'ಭಾಷ್ಯಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಭಾಷ್ಯಕಾ

ಪ್ರಣಾಮವಷ್ಟೆ ಉದ್ದೇಶವಾಗಿಲ್ಲ. ಭಾಷ್ಯದ ಸಾಫಲ್ಯವನ್ನು ಗಾಂಭೀರ್ಯವನ್ನು ತೋರಿಸುವುದೂ ಉದ್ದೇಶವಾಗಿದೆ. ಆದ್ದರಿಂದ ಎಲ್ಲಾ ವಿಶೇಷಣಗಳೂ ಸಾರ್ಥಕಗಳಾಗಿವೆ.

ಭಾಷ್ಯವು ಸಫಲವಾಗಿದೆಯೆಂದರೆ ಅಜ್ಞಾನವನ್ನು ಪರಿಹರಿಸುತ್ತದೆ. ಅಷ್ಟೇ ಅಲ್ಲದೇ ಅಪತ್ರಯಗಳನ್ನೂ ಸಹ ನಿವಾರಣೆ ಮಾಡುತ್ತದೆ ಎಂದು ಅರ್ಥ. ಗಾಂಭೀರ್ಯವೆಂದರೆ ಮೇಲ್ನೋಟಕ್ಕೆ ಭಾಷ್ಯವು ಸ್ಪಷ್ಟವಾಗಿ ತಿಳಿಯುವುದಿಲ್ಲವೆಂದರ್ಥ. ಆದಿಪದದಿಂದ ಅನೇಕ ಶಬ್ದಗಳು ಪ್ರತಿಪಾದಿಸುವ ಅರ್ಥಗಳನ್ನು ಸ್ವೀಕರಿಸಬೇಕು.

ಭಾಷ್ಯವು ಅಜ್ಞಾನಾಂಧಕಾರವನ್ನು ಪರಿಹರಿಸುವುದರಿಂದ ಸೂರ್ಯನ ಕಿರಣವನ್ನು ಗೆದ್ದಿದೆಯೆಂದು ಹೇಳಿದ್ದಾರೆ. ದೀಪವು ಎಷ್ಟು ಕತ್ತಲೆಯನ್ನು ನಾಶಪಡಿಸುತ್ತದೋ, ಅದಕ್ಕಿಂತ ಹೆಚ್ಚಿನದಾದ ಕತ್ತಲನ್ನು ಸೂರ್ಯನ ಬೆಳಕು ಪರಿಹರಿಸುವುದರಿಂದ ದೀಪವನ್ನು ಹೇಗೆ ಗೆದ್ದಿದೆಯೋ, ಅದರಂತೆ ಭಾಷ್ಯವು ಸೂರ್ಯನ ಕಿರಣವನ್ನು ಗೆದ್ದಿದೆಯೆಂಬ ದೃಷ್ಟಾಂತವನ್ನು ಇಲ್ಲಿ ಇಟ್ಟುಕೊಳ್ಳಬಾರದು. ಏಕೆಂದರೆ ದೀಪಕ್ಕೆ ಸ್ವಲ್ಪವಾದರೂ ಕತ್ತಲನ್ನು ನಿವಾರಿಸುವ ಶಕ್ತಿಯಿದೆ. ಆದರೆ ಆಂತರಿಕ ಅಜ್ಞಾನವನ್ನು ಪರಿಹರಿಸುವ ಶಕ್ತಿ ಸೂರ್ಯನ ಕಿರಣಗಳಿಗೆ ಸ್ವಲ್ಪವೂ ಇರುವುದಿಲ್ಲ. ಹೀಗೆ ಭಾಷ್ಯವು ಸೂರ್ಯನ ಕಿರಣವನ್ನು ಗೆದ್ದಿದೆಯೆಂಬ ಸೂಕ್ಷ್ಮವಿಷಯವನ್ನು ತಿಳಿಯಬೇಕು.

'ನಿರ್ದೋಷಂ' ಎಂಬ ಪದವನ್ನು ದೀಪವನ್ನು ಇಟ್ಟರೆ ಹೊರಗೂ ಒಳಗೂ ಬೆಳಕು ಬರುವಂತೆ ಮಧ್ಯದೀಪಿಕಾನ್ಯಾಯದಿಂದ ಎರಡೂ ಕಡೆ ಅನ್ವಯ ಮಾಡಿಕೊಳ್ಳಬೇಕು - ಸೂರ್ಯನ ಕಿರಣವನ್ನು ಭಾಷ್ಯವು ಏಕೆ ಗೆದ್ದಿದೆ? ಎಂದರೆ ನಿರ್ದುಷ್ಟವಾದ್ದರಿಂದ. ಅದರಂತೆ ಚಂದ್ರನನ್ನೂ ಸಹ ಭಾಷ್ಯವು ಏಕೆ ಗೆದ್ದಿದೆ? ಎಂದರೆ ನಿರ್ದುಷ್ಟವಾದ್ದರಿಂದ, ಹೀಗೆ ನಿರ್ದೋಷ ಎಂಬುದು ಎರಡೂ ಕಡೆ ಅನ್ವಯವನ್ನು ಹೊಂದುತ್ತದೆ ಎಂದು.

ಅಗಾಧವಾದ ಸಮುದ್ರವನ್ನು ಭಾಷ್ಯವು ಹೇಗೆ ಗೆಲ್ಲಲು ಸಾಧ್ಯ ? ಎಂಬ ಪ್ರಶ್ನೆಗೆ 'ಅಮಿತ' ಎಂಬ ವಿಶೇಷಣದಿಂದ ಉತ್ತರಿಸುತ್ತಿದ್ದಾರೆ. ಸಮುದ್ರವು ಮಿತವಾಗಿದೆ. ಆದರೆ ಭಾಷ್ಯವು ಅಮಿತವಾಗಿದೆ. ಆದ್ದರಿಂದ ಗೆಲ್ಲುವ ಶಕ್ತಿಯು ಭಾಷ್ಯಕ್ಕೆ ಇದೆ ಎಂದು ತಿಳಿಯಬೇಕು.

## 'ನಿಕೃಂತನ' ಶಬ್ದಸಾಧುತ್ವಸಮರ್ಥನೆ

ಆಕ್ಷೇಪ : - ಟೀಕೆಯಲ್ಲಿ 'ಸ್ವಾಂತಧ್ವಾಂತನಿಕೃಂತನೇ' ಎಂದು ಹೇಳಲಾಗಿದೆ. ವ್ಯಾಕರಣದ ಪ್ರಕಾರ 'ನಿಕರ್ತನೇ' ಎಂದಾಗಬೇಕು. 'ನಿಕೃಂತನೇ' ಎಂಬ ಪ್ರಯೋಗವು ಸಾಧುವಲ್ಲ. ಏಕೆಂದರೆ ಇಕಾರವು 'ಇತ್' ಆದಾಗ 'ಇದಿತೋ ನುಮ್ ಧಾತೋಃ' ಎಂಬ ಸೂತ್ರವು 'ನುಮ್' ಆಗಮವನ್ನು ವಿಧಿಸುತ್ತದೆ. ಉದಾ :- 'ವದಿ' ಧಾತುವು ಇದಿತ್ ಆಗಿದೆ. ಆದ್ದರಿಂದ 'ನುಮ್' ಆಗಮ ಬಂದರೆ 'ವಂದ್' ಎಂದಾಗುತ್ತದೆ. ನುಮಾಗಮವು ಧಾತುವಿನ ಮಧ್ಯದಲ್ಲೇ ಬರುತ್ತದೆಂದು 'ಮಿದಚೋಂತ್ಯಾತ್ ಪರಃ' ಎಂಬ ಸೂತ್ರವು ಹೇಳುತ್ತದೆ. ಆದರೆ 'ಕೃತೀ' ಧಾತುವಿಗೆ ನುಮಾಗಮವು ಬರುವುದಿಲ್ಲ. ಏಕೆಂದರೆ

ವದಿ ಧಾತುವಿನಲ್ಲಿ ಹ್ರಸ್ವ ಇಕಾರವು ಇತ್ ಆದಂತೆ 'ಕೃತೀ' ಧಾತುವಿನಲ್ಲಿ ಹ್ರಸ್ವ ಇಕಾರವು ಇ ಆಗಿಲ್ಲ. ಹೊರತಾಗಿ ದೀರ್ಘ ಈಕಾರವು ಇತ್ ಆಗಿದೆ ಹೀಗಿರುವಾಗ 'ಇದಿತೋನುಮ್ ಧಾತೋ ಎಂಬ ಸೂತ್ರದಿಂದ ನುಮಾಗಮ ಬರಲು ಪ್ರಸಕ್ತಿಯೇ ಇಲ್ಲ. ಒಂದು ವೇಳೆ ನುಮಾಗಮ ಬಂದಿ 'ನಿಕೃಂತನೇ' ಎಂದಾಗುತ್ತಿತ್ತು. ನುಮಾಗಮವು ಬಾರದ ಕಾರಣ 'ನಿಕೃಂತನೇ' ಎಂದು ಟೀಕೆಯಲ್ಲಿ ಪ್ರಯೋಗಿಸಿದರು?

ಇನ್ನು 'ವಿನಿಕೃಂತತಿ' ಎಂದು ಪ್ರಯೋಗಿಸಿದ್ದು ಹೇಗೆ ಕೂಡುತ್ತದೆ? ಎಂದು ಪ್ರಶ್ನಿಸಬಾರದು.

'ಶ' ವಿಕರಣಪ್ರತ್ಯಯವು ಪರದಲ್ಲಿರುವದರಿಂದ ಮುಚಾದಿಗಣದಲ್ಲಿ ಸೇರಿದ 'ಕೃತೀ'ಧಾತು 'ಶೇಮುಚಾದೀನಾಮ್' ಎಂಬ ಸೂತ್ರದಿಂದ ನುಮಾಗಮ ಬರುತ್ತದೆ. ಆದ್ದರಿಂದ 'ವಿನಿಕೃಂತತಿ' ಎಂ ಪ್ರಯೋಗವು ಸಾಧುವಾಗಿದೆ. ಆದರೆ 'ನಿಕೃಂತನೇ' ಎಂಬಲ್ಲಿ ಹಾಗೆ ಹೇಳಲು ಬರುವುದಿಲ್ಲ ಇ 'ಲ್ಯುಟ್' ಪ್ರತ್ಯಯ ಪರದಲ್ಲಿರುವುದರಿಂದ 'ಶೇಮುಚಾದೀನಾಂ' ಎಂಬ ಸೂತ್ರದಿಂದ ನುಮಾಗ ಬರಲು ಸಾಧ್ಯವಿಲ್ಲ. ಆದ್ದರಿಂದ 'ವಿಕರ್ತನೇ' ಎಂದೇ ಆಗಬೇಕು. ನಿಕೃಂತನೇ ಎಂದಾಗುವುದಿ 'ವಿಕರ್ತನೇ' ಎಂಬ ರೂಪನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು -

| ಕಾರ್ಯ | ಸೂತ್ರ | ನಿಷ್ಪತ್ತಿ |
|---|---|---|
| ಧಾತು | ........ | ಕೃತೀ (ಛೇದನೇ) |
| ಈಕಾರಕ್ಕೆ ಲೋಪ- | ಉಪದೇಶೇಽಜನುನಾಸಿಕ ಇತ್ | ಕೃತ್ |
| ಲ್ಯುಟ್ ಆಗಮ (ಭಾವಾರ್ಥದಲ್ಲಿ) | ಕೃತ್ಯಲ್ಯುಟೋ ಬಹುಲಮ್ | ಕೃತ್+ ಲ್ಯುಟ್ - |
| 'ಲ್ಯುಟ್'ಎಂಬಲ್ಲಿರುವ ಲಕಾರ ಟಕಾರ ಗಳಿಗೆ ಲೋಪ | 'ಲಶಕ್ವತದ್ಧಿತೇ'; 'ಹಲಂತ್ಯಮ್' | ಕೃತ್+ಯ್ - |
| ಯಕಾರಕ್ಕೆ 'ಅನ' ಆದೇಶ | ಯುವೋರನಾಕೌ( ೭-೧-೧-) | ಕೃತ್+ಅನ - |
| ಆರ್ಧಧಾತುಕಸಂಜ್ಞೆ | ಆರ್ಧಧಾತುಕಂ ಶೇಷಃ ) (೩-೪-೧೧೪ | ಕೃತ್+ಅನ - |
| ಗುಣ ರಪರವಾಗಿ ಅಕಾರದೇಶ ಕರ್ತನ | ಪುಗಂತಲಘೂಪಧಸ್ಯ ಚ (೭-೩-೮೬) | ಕ್+ಅರ್+ ತ್+ ಅನ - |

'ವಿ' ಉಪಸರ್ಗ ಸೇರಿದರೆ ವಿ = ಕರ್ತನ = ವಿಕರ್ತನ ಎಂದಾಗುತ್ತದೆ. 'ನಿಕೃಂತನ ಎಂದಾಗುವುದಿಲ್ಲ.

ಇನ್ನು 'ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಎಂಬ ಶ್ರುತಿಯಲ್ಲಿ ನಿಕೃಂತ ಎಂದು ಪ್ರಯೋಗಿಸಲಾಗಿದೆ. ನಿಮ್ಮ ಪ್ರಕಾರ ಇದೂ ತಪ್ಪಾಗಬೇಕಲ್ಲವೇ? ಎಂದು ಪ್ರಶ್ನಿಸಬಾರದು.

*ಪರಿಪೂರ್ಣಚಂದ್ರಿಕಾ*

ಇದು ಛಾಂದಸಪ್ರಯೋಗವಾದ್ದರಿಂದ ದೋಷವಿಲ್ಲ. ವೇದಗಳಲ್ಲಿನ ಪ್ರಯೋಗವು ಪಾಣಿನೀ-ವ್ಯಾಕರಣವನ್ನು ಅನುಸರಿಸಿರುವುದಿಲ್ಲ. ಆದ್ದರಿಂದ ಟೀಕೆಯಲ್ಲಿ 'ವಿಕರ್ತನೇ' ಎಂದೇ ಹೇಳಬೇಕಿತ್ತು. 'ನಿಕೃಂತನೇ' ಎಂಬ ಅಪಶಬ್ದವನ್ನು ಪ್ರಯೋಗಿಸಬಾರದಿತ್ತು. ಇಷ್ಟು ಆಕ್ಷೇಪದ ಸ್ವರೂಪ.

ಸಮಾಧಾನ :- 'ಇದಿತೋ ನುಮ್ ಧಾತೋಃ' ಎಂಬ ಸೂತ್ರವನ್ನು ಯೋಗವಿಭಾಗ ಮಾಡಿಕೊಳ್ಳಬೇಕೆಂಬ ವಿಚಾರವು ವೈಯ್ಯಾಕರಣರಿಗೂ ಸಮ್ಮತವಾಗಿದೆ. ಯೋಗವಿಭಾಗ ಮಾಡಿದಾಗ 'ಇದಿತೋ ನುಮ್' ಎಂಬುದೇ ಬೇರೆ ಸೂತ್ರ. ' ಧಾತೋಃ' ಎಂಬುದೇ ಬೇರೆ ಸೂತ್ರ. 'ಇದಿತೋ ನುಮ್' ಎಂಬ ಸೂತ್ರದಲ್ಲಿ 'ಧಾತೋಃ' ಎಂಬುದು ಅನುವೃತ್ತವಾಗುತ್ತದೆ. ಆದ್ದರಿಂದ 'ವದಿ' ಧಾತುವಿಗೆ 'ಇದಿತೋ ನುಮ್' ಎಂಬ ಸೂತ್ರದಿಂದ ನುಮಾಗಮ ಬಂದು 'ವಂದ್' ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ.

'ಕೃತೀ' ಮೊದಲಾದ ಕಡೆ 'ಧಾತೋಃ'ಎಂಬ ಸೂತ್ರದಿಂದ ನುಮಾಗಮ ಬರುತ್ತದೆ. ಈಗ 'ಕೃತೀ' ಧಾತುವು ಇದಿತ್ ಆಗದಿದ್ದರೂ 'ನುಮ್' ಬರಲು ತೊಂದರೆ ಇಲ್ಲ. 'ನಿಕೃಂತನೇ' ಶಬ್ದಪ್ರಯೋಗವು ಸಾಧುವಾಗುತ್ತದೆ.

ಪ್ರಶ್ನೆ :- ಹೀಗೆ ಯೋಗವಿಭಾಗ ಮಾಡುವುದಾದರೆ ಸಕಲಧಾತುಗಳಿಗೂ ನುಮಾಗಮವು ಬರ-ಬೇಕಾದೀತೆಂಬ ಅತಿಪ್ರಸಂಗ ಬರುತ್ತದೆ. ಇದನ್ನು ಪರಿಹರಿಸಿಕೊಳ್ಳಲು 'ಶೇಮುಚಾದೀನಾಮ್' ಎಂಬ ಸೂತ್ರದಲ್ಲಿರುವ 'ಶೇ' ಎಂಬುದನ್ನು 'ಧಾತೋಃ' ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಹಾಗಾದರೆ 'ಕೃತೀ' ಧಾತುವಿನ ಮುಂದೆ 'ಶೇ'ಪರದಲ್ಲಿಲ್ಲದ್ದರಿಂದ 'ನುಮ್' ಬರುವುದಿಲ್ಲ. ಆದ್ದರಿಂದ ಯೋಗವಿಭಾಗ ಮಾಡಿದರೂ ನುಮಾಗಮ ಬರಲು ಸಾಧ್ಯವಿಲ್ಲ.

ಉತ್ತರ :- ಯೋಗವಿಭಾಗವನ್ನು ಆಶ್ರಯಿಸುವ ಉದ್ದೇಶವೇ ಇಷ್ಟಸಿದ್ಧಿ. ಆದ್ದರಿಂದ ಇಷ್ಟಸ್ಥಳವಾದ 'ಕೃತೀ' ಎಂಬಲ್ಲಿ ಮಾತ್ರ 'ಧಾತೋಃ' ಸೂತ್ರವು ನುಮಾಗಮವನ್ನು ಹೇಳುತ್ತದೆ. ಉಳಿದ ಧಾತುಗಳಲ್ಲಿ ನುಮಾಗಮವನ್ನು ಸರ್ವಥಾ ಹೇಳುವುದಿಲ್ಲ. ಆದ್ದರಿಂದಲೇ 'ಶೇಮುಚಾದೀನಾಂ' ಎಂಬ ಸೂತ್ರದಿಂದ 'ಶೇ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕಾಗಿಲ್ಲ. ಗುರುಗಳಾದ ಶ್ರೀವಿದ್ಯಾಧೀಶತೀರ್ಥ-ಶ್ರೀಪಾದರು ಈ ಸಮಾಧಾನ ಹೇಳುತ್ತಾರೆ. ಆದ್ದರಿಂದ 'ನಿಕೃಂತನೇ' ಎಂಬ ಪ್ರಯೋಗವು ತಪ್ಪಾಗು-ವುದಿಲ್ಲ. ಇಷ್ಟು ಸಮಾಧಾನ.

ಪ್ರಪದ್ಯೇ ಎಂಬ ಶ್ಲೋಕದಲ್ಲಿ ಪ್ರಪದ್ಯೇ = ಶರಣಾಗತನಾಗುತ್ತೇನೆ ಎಂದು ಹೇಳಿದ್ದಾರೆ. ಇದರಿಂದ ನಮಸ್ಕಾರವನ್ನು ಮಾಡಿದಂತಾಗುತ್ತದೆ. 'ಸ್ವೋತ್ಕೃಷ್ಟತ್ವಪ್ರಕಾರಕಜ್ಞಾನಾನುಕೂಲವ್ಯಾಪಾರವೇ ನಮಸ್ಕಾರವೆನಿಸುತ್ತದೆ. ಯಾರನ್ನು ನಾವು ನಮಸ್ಕಾರ ಮಾಡುತ್ತೇವೋ ಅವರು ನಮಗಿಂತ ಉತ್ತಮರಾಗಿದ್ದಾರೆ. ಅವರಿಗಿಂತ ನಾವು ಅಧಮರಾಗಿದ್ದೇವೆಂಬ ಅನುಸಂಧಾನವೇ ನಮಸ್ಕಾರ. ಈ ಅನುಸಂಧಾನವಿದ್ದರಷ್ಟೇ ಶರಣಾಗತರಾಗಲು ಸಾಧ್ಯ.

*ಜಿಜ್ಞಾಸಾಧಿಕರಣ*

ಅಥವಾ 'ಪ್ರಪದ್ಯೇ' ಎಂಬಲ್ಲಿರುವ 'ಪದ್' ಧಾತುವಿಗೆ ಶರಣಾಗತಿ ಎಂಬರ್ಥದಂತೆ ಪ್ರಾಪ್ತಿ ಎಂಬರ್ಥವನ್ನೂ ಹೇಳಬಹುದು. ಧಾತುಗಳಿಗೆ ಅನೇಕಾರ್ಥ ಹೇಳುವುದು ತಪ್ಪಿಲ್ಲ.

## 'ಕೃಪಾಲು' ಶಬ್ದಸಾಧುತ್ವಸಮರ್ಥನೆ

ಆಕ್ಷೇಪ :- 'ಕೃಪಾಲವಃ ಪಂಕಜನಾಭತೀರ್ಥಾಃ।
ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥'

ಎಂದು ಟೀಕೆಯಲ್ಲಿ 'ಕೃಪಾಲು'ಶಬ್ದವನ್ನು ಪ್ರಯೋಗಿಸಿದ್ದಾರೆ. ಶ್ರೀಮದಾಚಾರ್ಯರೂ ಸಹ ಗೀತಾಭಾಷ್ಯದ ಪ್ರಾರಂಭದಲ್ಲಿ 'ನಷ್ಟಧರ್ಮಜ್ಞಾನಲೋಕಕೃಪಾಲುಭಿಃ' ಎಂದು ಕೃಪಾಲುಶಬ್ದವನ್ನು ಬಳಸಿದ್ದರೆ. ಆದರೆ ವ್ಯಾಕರಣದ ಪ್ರಕಾರ ಕೃಪಾಲು ಎಂದಾಗುವುದಿಲ್ಲ ಅದು ಹೀಗೆ - ಸ್ಪೃಹಿ ಗೃಹಿ ಪತಿದಯಿನಿದ್ರಾತಂದ್ರಾಭ್ಯಃ ಆಲುಚ್ - (೩-೨-೧೫೮) ಎಂಬ ಸೂತ್ರವು ಸ್ಪೃಹಿ ಮೊದಲಾದ ಧಾತುಗಳಿಗೆ 'ಆಲುಚ್' ಪ್ರತ್ಯಯವನ್ನು ವಿಧಿಸುತ್ತದೆ. 'ಆಲುಚ್'ವಿಧಾಯಕಸೂತ್ರ ಇದನ್ನು ಬಿಟ್ಟು ಬೇರೆ ಇಲ್ಲ. ಈ ಸೂತ್ರದಂತೆ ಸ್ಪೃಹಯಾಲುಃ, ಗೃಹಯಾಲುಃ, ಪತಯಾಲುಃ, ದಯಾಲುಃ, ನಿದ್ರಾಲುಃ, ತಂದ್ರಾಲುಃ, ಶ್ರದ್ಧಾಲುಃ ಇವೇ ಮೊದಲಾದ ಪ್ರಯೋಗಗಳು ಸಾಧು ಆಗುತ್ತವೆ. ಇವುಗಳ ಮಧ್ಯದಲ್ಲಿ 'ಕೃಪ್'ಧಾತುವು ಕೃಪಾಲುಃ ಎಂದಾಗುವುದಿಲ್ಲ.

ಪ್ರಶ್ನೆ :- ಸೂತ್ರಗಳಲ್ಲಿರುವ ಧಾತುಗಳಿಗಷ್ಟೇ ಆಲುಚ್‌ಪ್ರತ್ಯಯ ಬರುತ್ತದೆಂಬ ಅಭಿಪ್ರಾಯ ಪಾಣಿನಿಗಿಲ್ಲ. ಹಾಗಿದ್ದಲ್ಲಿ ಪಾಣಿನಿಯು ಲುಶ್‌ಪ್ರತ್ಯಯವನ್ನೇ ಹೇಳುತ್ತಿದ್ದ. ಸ್ಪೃಹಯಾಲುಃ ಇತ್ಯಾದಿ ರೂಪಗಳು ಲುಶ್‌ಪ್ರತ್ಯಯದಿಂದಲೂ ಸಿದ್ಧವಾಗುತ್ತವೆ. ವೈಯ್ಯಾಕರಣರು ಅರ್ಧಮಾತ್ರಾಕ್ಷರದಿಂದ ಲಾಘವವಿದ್ದರೂ ಪುತ್ರೋತ್ಸವದ ಆನಂದವನ್ನು ಅನುಭವಿಸುತ್ತಾರೆ. ಹೀಗಿದ್ದರೂ ಲುಶ್‌ಪ್ರತ್ಯಯವನ್ನು ಹೇಳದೇ ಆಲುಚ್‌ಪ್ರತ್ಯಯವನ್ನು ಹೇಳಿದ್ದರಿಂದ ಬೇರೆ ಕಡೆಯೂ ಆಲುಚ್‌ಪ್ರತ್ಯಯ ಬರುತ್ತದೆಂದು ತಿಳಿಸಿದ್ದಾನೆ ಆದ್ದರಿಂದ 'ಕೃಪ್'ಧಾತುವು ಸೂತ್ರದಲ್ಲಿ ಪಠಿತವಾಗದಿದ್ದರೂ ತಿಳಿಯುತ್ತದಲ್ಲವೇ?

ಉತ್ತರ :- 'ಲುಶ್' ಪ್ರತ್ಯಯದಿಂದಲೇ ಸ್ಪೃಹಯಾಲುಃ ಇತ್ಯಾದಿ ರೂಪಗಳು ನಿಷ್ಪನ್ನಗಳಾಗುತ್ತಿದ್ದರೆ ನೀವು ಹೇಳಿದ್ದನ್ನು ಒಪ್ಪಬಹುದಿತ್ತು. ಆದರೆ ಆಲುಚ್‌ಪ್ರತ್ಯಯವನ್ನು ಹೇಳಿದರೆ ಮಾತ್ರ 'ಸ್ಪೃಹಯಾಲುಃ' ಇತ್ಯಾದಿರೂಪಗಳು ಸಿದ್ಧವಾಗುತ್ತವೆ, ಹೊರತು 'ಲುಶ್' ಪ್ರತ್ಯಯದಿಂದಲ್ಲ. ಆಲುಚ್ ಪ್ರತ್ಯಯಬಂದಾಗ ಸಿದ್ಧವಾಗುವ ರೂಪನಿಷ್ಪತ್ತಿ ಹೀಗಿದೆ -

ಸ್ಪೃಹ್(ಧಾತು)

| ಸೂತ್ರ | ಕಾರ್ಯ | ನಿಷ್ಪತ್ತಿ |
|---|---|---|
| ಸ್ಪೃಹಿಗೃಹಿಪತಿದಯಿನಿದ್ರಾ-ತಂದ್ರಾಭ್ಯಃ ಆಲುಚ್ (೩-೨-೧೫೮) | 'ಆಲುಚ್' ಪ್ರತ್ಯಯ | ಸ್ಪೃಹಿ+ಆಲು |
| ಚುರಾದಿಭ್ಯೋ ಣಿಚ್ (೩-೧-೨೫) | ಚುರಾದಿಗಣದಲ್ಲಿ ಸೇರಿದ್ದರಿಂದ ಸ್ವಾರ್ಥದಲ್ಲಿ 'ಣಿಚ್' | ಸ್ಪೃಹಿ+ಣಿ+ಆಲು |

| | | |
|---|---|---|
| ಅಯಾಮಂತಾಲ್ವಾಯ್ಯೇ | 'ಣಿ'ಗೆ - | ಸ್ಪೃಹಿ+ಅಯ+ಆಲು |
| ತ್ನಿಷ್ಣುಷು-(೬-೪-೫೫) | ಅಯಾದೇಶ | |
| ಸಾರ್ವಧಾತುಕಾರ್ಧಧಾತುಕಯೋಃ (೭-೩-೮೪) | ಗುಣ | ಸ್ಪೃಹೇ + ಅಯ + ಆಲು |
| ಏಚೋಽಯವಾಯಾವಃ | ಅಯಾದೇಶ | ಸ್ಪೃಹಯ+ಅಯ+ಆಲು |
| | | ಸ್ಪೃಹಯಾಲುಃ |

ಹೀಗೆ ಆಲುಚ್‌ಪ್ರತ್ಯಯ ಮಾಡಿದರೆ ಮಾತ್ರ ರೂಪನಿಷ್ಪತ್ತಿ ಆಗುತ್ತದೆ. ಇಷ್ಟು ಆಕ್ಷೇಪ.

ಸಮಾಧಾನ :- ಹಾಗೇನಿಲ್ಲ 'ಲುಶ್'ಪ್ರತ್ಯಯ ಮಾಡಿದರೂ 'ಸ್ಪೃಹಯಾಲುಃ' ರೂಪವು ನಿಷ್ಪನ್ನವಾಗುತ್ತದೆ. ಅದು ಹೀಗೆ -

| ಸೂತ್ರ | ಕಾರ್ಯ | ರೂಪ |
|---|---|---|
| ಸ್ಪೃಹಿಗೃಹಿ --- | 'ಲುಶ್' ಪ್ರತ್ಯಯ | ಸ್ಪೃಹಿ+ಲುಶ್ |
| ತಿಙ್ಶಿತ್ಸಾರ್ವಧಾತುಕಂ | ಸಾರ್ವಧಾತುಕಸಂಜ್ಞೆ | ಸ್ಪೃಹಿ+ಲುಶ್ |
| ಕರ್ತರಿ ಶಪ್ | ಶಪ್‌ಪ್ರತ್ಯಯ | ಸ್ಪೃಹಿ+ಅ+ಲುಶ್ |
| ಚುರಾದಿಭ್ಯೋ ಣಿಚ್ | ಸ್ವಾರ್ಥದಲ್ಲಿ ಣಿಚ್ | ಸ್ಪೃಹಿ+ಇ+ಅ+ ಲುಶ್ |
| ಸಾರ್ವಧಾತುಕಾರ್ಧಧಾತುಕಯೋಃ | ಗುಣ | ಸ್ಪೃಹೇ+ಅ+ಲುಶ್ |
| ಏಚೋಽಯವಾಯಾವಃ | ಅಯಾದೇಶ | ಸ್ಪೃಹಯ + ಲುಶ್ |
| ಅತೋದೀರ್ಘೋ ಯಞಿ - | ದೀರ್ಘ | ಸ್ಪೃಹಯಾ+ಲುಶ್ |
| | | ಸ್ಪೃಹಯಾಲುಃ |

ಹೀಗೆ 'ಲುಶ್'ಪ್ರತ್ಯಯವನ್ನು ಹೇಳಿದರೂ ಸಹ ಸ್ಪೃಹಯಾಲುಃ ಎಂಬ ರೂಪವು ಸಿದ್ಧವಾಗುತ್ತದೆ. ಅದಕ್ಕೋಸ್ಕರ 'ಆಲುಚ್'ಪ್ರತ್ಯಯವನ್ನು ಹೇಳಬೇಕಾಗಿಲ್ಲ. ಆದರೂ ಸಹ ಪಾಣಿನಿಯು ಆಲುಚ್ ಪ್ರತ್ಯಯವನ್ನು ಹೇಳಿದ್ದಾನೆ. ಇದರಿಂದ ಏನು ತಿಳಿಯುತ್ತದೆ? ಎಂದರೆ ಸೂತ್ರಗಳಲ್ಲಿಲ್ಲದ ಕೃಪ್ ಮೊದಲಾದ ಧಾತುಗಳಿಗೂ ಆಲುಚ್ ಪ್ರತ್ಯಯವನ್ನು ಹೇಳಬಹುದೆಂದು ಕೌಮುದಿಯಲ್ಲಿಯೂ 'ಹರೇ! ಕೃಪಾಲೋ ನಃ ಪಾಹಿ' ಎಂದು ಕೃಪಾಲು ಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ 'ಕೃಪಾಲು' ಶಬ್ದವು ಅಪಶಬ್ದವಲ್ಲ, ಅಪಾಣಿನೀಯವೂ ಅಲ್ಲ.

ಆಕ್ಷೇಪ :- 'ಲುಶ್' ಪ್ರತ್ಯಯವನ್ನು ಹೇಳಿದರೆ ವಿವಕ್ಷಿತವಾದ 'ಸ್ಪೃಹಯಾಲುಃ' ಮೊದಲಾದ ರೂಪಗಳು ನಿಷ್ಪನ್ನವಾಗುವುದಿಲ್ಲ. ಏಕೆಂದರೆ 'ಲಶಕ್ವತದ್ಧಿತೇ' ಎಂಬ ಸೂತ್ರದಿಂದ ಲುಶ್ ಎಂಬಲ್ಲಿರುವ ಶಕಾರಕ್ಕೆ ಲೋಪ ಬರುತ್ತದೆ. ಮತ್ತು 'ಅತೋ ದೀರ್ಘೋ ಯಞಿ' ಎಂಬ ಸೂತ್ರದಿಂದ ದೀರ್ಘವೂ ಬರುವುದಿಲ್ಲ. ಈ ಸೂತ್ರದಲ್ಲಿ 'ತಿಙ್'ಎಂಬುದು ಅನುವೃತ್ತಿಯಾಗುತ್ತದೆ. 'ಲುಶ್' ಎಂಬುದು 'ತಿಙ್' ಪ್ರತ್ಯಯವಲ್ಲದ ಕಾರಣ ದೀರ್ಘವು ಬರುವುದಿಲ್ಲ ಮತ್ತು 'ಶ್ರದ್ಧಾಲುಃ' ಎಂಬ ರೂಪವೂ ಸಿದ್ಧವಾಗುವುದಿಲ್ಲ. ಅದು ಹೀಗೆ -

'ಧಾ'ಧಾತು

| ಸೂತ್ರ | ಕಾರ್ಯ | ರೂಪ |
|---|---|---|
| ಸ್ಪೃಹಿಗೃಹಿಪತಿ | 'ಶ್ರತ್'ಉಪಪದಸೇರಿದಾಗ ಲುಶ್ ಪ್ರತ್ಯಯ | ಶ್ರದ್+ಧಾ+ ಲುಶ್ |
| ಕರ್ತರಿ ಶಪ್ | 'ಶಪ್'ಪ್ರತ್ಯಯ | ಶ್ರದ್ +ಧಾ+ ಅ+ಲುಶ್ |
| ಜುಹೋತ್ಯಾದಿಭ್ಯಃ ಶ್ಲುಃ | 'ಶ್ಲು' ಪ್ರತ್ಯಯ | ಶ್ರದ್+ಧಾ+ಶ್ಲು+ಅ+ಲುಶ್ |
| ಶ್ಲೌ | ಧಾ ಧಾತುವಿಗೆ ದ್ವಿತ್ವ- (ಶ್ಲು ಲೋಪ) | ಶ್ರದ್+ಧಾ+ಧಾ+ಅ+ಲುಶ್ |
| ಹ್ರಸ್ವಃ | ಮೊದಲನೆಯ 'ಧಾ' ಗೆ ಹ್ರಸ್ವ - | ಶ್ರದ್+ಧ+ಧಾ+ಅ+ಲುಶ್ |
| ಶ್ನಾಭ್ಯಸ್ತಯೋರಾತಃ (೬-೪-೧೧೨) | ಅಭ್ಯಸ್ತವಾದ 'ಧಾ'- ಎಂಬಲ್ಲಿರುವ ಆಕಾರಕ್ಕೆ ಲೋಪ | ಶ್ರದ್+ಧ+ಧ್+ಅ+ಲುಶ್ |
| | | ಶ್ರದ್ಧದಲುಃ |

ಹೀಗೆ 'ಶ್ರದ್ಧದಲುಃ' ಎಂಬ ರೂಪವಾಗುತ್ತದೆ. ಹೊರತು 'ಶ್ರದ್ಧಾಲುಃ' ಎಂಬ ರೂಪವು ನಿಷ್ಪನ್ನವಾಗುವುದಿಲ್ಲ.

ಆದ್ದರಿಂದ 'ಲುಶ್' ಪ್ರತ್ಯಯವನ್ನು ಹೇಳುವುದರಿಂದ ಯಾವುದೇ ಅನುಕೂಲವಿಲ್ಲ. ಹೊರತು ಬಾಧಕವೇ ಇದೆ. ಇದನ್ನು ತಿಳಿದು ಪಾಣಿನಿಯು 'ಆಲುಚ್' ಪ್ರತ್ಯಯವನ್ನು ಹೇಳಿದ್ದಾನೆ.'ಕೃಪಾಲು' ಶಬ್ದನಿಷ್ಪತ್ತಿಗಾಗಿ ಆಲುಚ್ ಹೇಳಿದ್ದಲ್ಲ. ಆದ್ದರಿಂದ 'ಕೃಪಾಲು' ಶಬ್ದವು ಅಸಾಧುವೇ ಆಗಿದೆ.

ಇದುವರೆಗಿನ ಆಕ್ಷೇಪದಲ್ಲಿ ಗಮನಿಸಬೇಕಾದ ಮೂರು ಅಂಶ-

೧) ಲುಶ್ ಎಂಬಲ್ಲಿನ ಲಕಾರವು ಲೋಪವಾಗುತ್ತದೆ.

೨) 'ಅತೋ ದೀರ್ಘೋ ಯಞಿ' ಎಂಬುದರಿಂದ ದೀರ್ಘ ಬರುವುದಿಲ್ಲ.

೩) 'ಶ್ರದ್ಧಾಲುಃ' ಎಂಬ ರೂಪವು ಸಿದ್ಧವಾಗುವುದಿಲ್ಲ.

ಸಮಾಧಾನ :- ಮೂರೂ ಆಕ್ಷೇಪಗಳಿಗೆ ಅವಕಾಶವಿಲ್ಲ. 'ಲಶಕ್ವತದ್ಧಿತೇ' ಎಂಬ ಸೂತ್ರವು ಪ್ರತ್ಯಯದ ಆದಿಯಲ್ಲಿರುವ ಲಕಾರಾದಿಗಳಿಗಷ್ಟೇ ಇತ್ ಸಂಜ್ಞೆಯನ್ನು ಹೇಳುತ್ತದೆ. 'ಲುಶ್' ಎಂಬುದು ಯಾದಿ ಪ್ರತ್ಯಯವೇ ಹೊರತು ಲಾದಿಪ್ರತ್ಯಯವಲ್ಲ. ಯಕಾರ ಕಾಣಿಸುತ್ತಿಲ್ಲ ಎಂದರೆ, ಬೇಡ, ಇದು ಲುಪ್ತನಿರ್ದಿಷ್ಟವಾಗಿದೆ. ಯಕಾರವು ಬರಬೇಕಾದರೆ ಯಕಾರಲೋಪವನ್ನು ಹೊಂದಿಯೇ ಬರುತ್ತದೆ. ಆದ್ದರಿಂದ 'ಲ' ಕಾರವು ಲೋಪವಾಗುವುದಿಲ್ಲ.

ಅಥವಾ ಯಾದಿಪ್ರತ್ಯಯವಲ್ಲದಿದ್ದರೂ ತೊಂದರೆಯಿಲ್ಲ. ಯಕಾರಕ್ಕೆ ಲೋಪ ಬರುವುದಿಲ್ಲ

ಯಾದರೂ ಪ್ರಯೋಜನವಿದ್ದರೆ ಮಾತ್ರ ಲೋಪ ಹೇಳಬೇಕು. ಯಕಾರವನ್ನು ಲೋಪ ಮಾಡಿದರ ಏನೂ ಪ್ರಯೋಜನವಿಲ್ಲ.

ಪ್ರಶ್ನೆ :- ಪ್ರಯೋಜನವಿದೆ. 'ಲ'ಕಾರವು ಇತ್ ಆದರೆ ಲಿತ್‌ಸ್ವರವಾಗುತ್ತದೆ. ಇತ್ ಆಗದಿದ್ದರೆ ಪ್ರತ್ಯಯಸ್ವರವಾಗುತ್ತದೆ. ಹೀಗೆ ಲಿತ್‌ಸ್ವರವನ್ನು ಹೇಳುವುದೇ ಪ್ರಯೋಜನ.

ಉತ್ತರ :- ಲಿತ್‌ಸ್ವರವಾದರೇನು? ಪ್ರತ್ಯಯಸ್ವರವಾದರೇನು? ಸ್ವರವ್ಯತ್ಯಾಸದಿಂದ ಪ್ರಯೋಗ-ದಲ್ಲೇನು ವ್ಯತ್ಯಾಸವಿಲ್ಲ ತಾನೇ? ಲಿತ್‌ಸ್ವರ,ಪ್ರತ್ಯಯಸ್ವರ ಎರಡೂ ಉದಾತ್ತಸ್ವರವೇ ಆಗುತ್ತದೆ.

ನಿಮ್ಮ ಮತ್ತೊಂದು ಆಕ್ಷೇಪ - 'ಅತೋ ದೀರ್ಘೋ ಯಞಿ' ಎಂಬ ಸೂತ್ರದಿಂದ ದೀರ್ಘ ಬರುವುದಿಲ್ಲವೆಂದು. ಆದರೆ 'ತಿಙ್' ಎಂಬುದು ಈ ಸೂತ್ರದಲ್ಲಿ ಅನುವೃತ್ತಿಯೇ ಆಗುವುದಿಲ್ಲ. ಸಾರ್ವಧಾತುಕವು ಪರದಲ್ಲಿರಬೇಕೆಂದು ಹೇಳಿದರೆ ಸಾಕು. 'ತಿಙ್' ಎಂಬುದೇ ಪರದಲ್ಲಿರಬೇಕೆಂದು ಏಕೆ ಹೇಳಬೇಕು? ಇಷ್ಟರಿಂದಲೇ ಉದ್ದೇಶಸಿದ್ಧಿಯಾಗುತ್ತದೆ. 'ತಿಙ್' ಪ್ರತ್ಯಯದ ಅವಶ್ಯಕತೆಯೇ ಇಲ್ಲವಾದ್ದರಿಂದ ದೀರ್ಘ ಬರಬಾರದೇಕೆ?

ಇನ್ನು 'ಶ್ರದ್ಧಾಲುಃ' ಎಂಬ ರೂಪವೇ ಸಿದ್ಧವಾಗದೆಂಬ ಮೂರನೆಯ ಆಕ್ಷೇಪವೂ ಹುರುಳಿಲ್ಲದ್ದು. ಏಕೆ ಗೊತ್ತೋ? ನಾವಿಲ್ಲಿ ಹೇಳುತ್ತಿರುವುದು 'ಧೇಟ್' ಧಾತು. 'ಧಾ' ಧಾತುವಲ್ಲ. 'ಧೇಟ್' ಧಾತು ಜುಹೋತ್ಯಾದಿ ಗಣದಲ್ಲಿ ಸೇರಿಯೇ ಇಲ್ಲ. ದ್ವಿತ್ವ ಹೇಗೆ ಹೇಳುತ್ತೀರಿ? ಪಾನಾರ್ಥದಲ್ಲಿರುವ 'ಧೇಟ್' ಧಾತು ಇಲ್ಲಿ ಹೇಗೆ? ಎಂದು ಕೇಳಬಹುದು. ಆದರೆ 'ಅನೇಕಾರ್ಥತ್ವಾತ್ ಧಾತೂನಾಮ್' ಎಂಬಂತೆ ಧಾತುಗಳಿಗೆ ಅನೇಕ ಅರ್ಥಗಳಿರುತ್ತವೆ ಎಂಬುದಂತು ಸತ್ಯ ವಿಚಾರ.

ಈಗ ಅನಾಯಸವಾಗಿ ಶ್ರದ್ಧಾಲುಃ ರೂಪವಾಗುತ್ತದೆ - 'ಶ್ರದ್' ಉಪಪದ ಸೇರಿದ 'ಧೇಟ್' ಧಾತುವಿಗೆ 'ಲುಶ್' ಪ್ರತ್ಯಯ ಬಂದರೆ ಶ್ರದ್+ಧೇ+ಲುಶ್ ಎಂದಾಗುತ್ತದೆ. ಆದೇಚೋಽಪ-ದೇಶೋಽಶಿತಿ (೬-೧-೪೫) ಎಂಬ ಸೂತ್ರದಿಂದ ಏಜಂತವಾದ 'ಧೇ' ಎಂಬುದಕ್ಕೆ ಆಕಾರ ಬರುತ್ತದೆ. ಒಟ್ಟಿಗೆ ಸೇರಿಸಿದರೆ 'ಶ್ರದ್ಧಾಲುಃ' ಎಂದಾಗುತ್ತದೆ. ಧಾರಣಾರ್ಥಕವಾದ 'ಧಾ' ಧಾತುವೇ ಬೇಡ.

ಪ್ರಶ್ನೆ :- 'ಆದೇಚೋಽಪದೇಶೋಽಶಿತಿ' ಈ ಸೂತ್ರ ಶಿತ್‌ಪ್ರತ್ಯಯ ಪರದಲ್ಲಿಲ್ಲದಾಗ ಮಾತ್ರ ಆಕಾರ ಹೇಳುತ್ತದೆ. 'ಲುಶ್' ಎಂಬುದು ಶಿತ್ ಪ್ರತ್ಯಯವಾದ್ದರಿಂದ ಆಕಾರಾದೇಶಕ್ಕೆ ಪ್ರಸಕ್ತಿಯೇ ಇಲ್ಲವಲ್ಲ?

ಉತ್ತರ :- ಹಾಗಾದರೆ 'ಧೇಟ್' ಧಾತುವಿನ 'ಅ' ಎಂಬುದನ್ನು ಸೇರಿಸಿಕೊಂಡರಾಯಿತು. ಈಗ ಏಜಂತ ಧಾತುವಿನ ಮುಂದೆ ಆಕಾರವಿದೆಯೇ ಹೊರತು ಶಿತ್ ಆದ ಲುಶ್ ಪ್ರತ್ಯಯವಿಲ್ಲ 'ಧೇ' ಎಂಬುದು 'ಧಾ' ಆಗಲು ತೊಂದರೆಯಿಲ್ಲ. ಅನಂತರ ಸವರ್ಣದೀರ್ಘದಿಂದ 'ಶ್ರದ್ಧಾಲುಃ' ಎಂದಾಗುತ್ತದೆ.

ಗೊಂದಲವಾದರೆ 'ಧೇಟ್'ಧಾತು ಬೇಡ. 'ಧಾ' ಧಾತುವೇ ಇರಲಿ, ಲುಶ್ ಪ್ರತ್ಯಯವೂ ಇರಲಿ 'ಶ್ರದ್ಧಾಲುಃ' ಎಂದೇ ಆಗುತ್ತದೆ. ಏಕೆಂದರೆ 'ಶ್ಲೌ' ಸೂತ್ರದಿಂದ ದ್ವಿತ್ವ ಬಂದರಷ್ಟೇ ಎಲ್ಲಾ ಸಮಸ್ಯೆಗಳು.

*ಜಿಜ್ಞಾಸಾಧಿಕರಣ*

ಆದರೆ ದ್ವಿತ್ವವೇ ಬರುವುದಿಲ್ಲ. ವ್ಯಾಕರಣದಲ್ಲಿ ಒಂದು ನಿಯಮವಿದೆ - 'ಸಂಜ್ಞಾಪೂರ್ವಕೋ ವಿಧಿರನಿತ್ಯಃ' 'ಸಂಜ್ಞೆಯನ್ನು ಹೇಳಿ ಮಾಡಿದ ವಿಧಿಯು ಅನಿತ್ಯ' ಎಂದು. 'ಶ್ಲೌ'ಸೂತ್ರವು 'ಧಾತೋಃ' ಎಂದು ಸಂಜ್ಞಾಪೂರ್ವಕವಾಗಿ ದ್ವಿತ್ವವನ್ನು ವಿಧಿಸುತ್ತಿದೆ. ಇಂತಹ ವಿಧಿಗಳನ್ನು ಮಾಡಲೇಬೇಕೆಂದು ಆಗ್ರಹಿಸಬೇಕಿಲ್ಲ. ಬೇಡವಾದರೆ ಬಿಡಬಹುದು. ಈಗ 'ಶ್ರದ್' ಉಪಪದ ಸೇರಿದರೆ ಇ... ರೂಪವಾಗುತ್ತದೆ. ಶ್ರದ್ +ಧಾ+ಲುಶ್ ಇದನ್ನು ಸೇರಿಸಿದರೆ ಸಾಕು ಶ್ರದ್ಧಾಲುಃ ಎಂದಾಗುತ್ತದೆ.

ಅಂತೂ ಆಲುಚ್ ಪ್ರತ್ಯಯ ಹೇಳಿದ್ದು ವ್ಯರ್ಥವೆಂದಾಯಿತು. 'ವ್ಯರ್ಥಮಪಿ ಕಂಚಿದರ್ಥಂ ಜ್ಞಾಪಯತಿ' ಎಂಬಂತೆ 'ಕೃಪ್' ಧಾತುವಿಗೂ ಆಲುಚ್ ಪ್ರತ್ಯಯ ವಿಧಿಸುವುದಕ್ಕಾಗಿಯೇ ಆಲುಚ್ ಹೇಳಿದ್ದು. ಈ ನಿಟ್ಟಿನಲ್ಲಿ ಮಾತ್ರ ಆಲುಚ್‌ಪ್ರತ್ಯಯಕ್ಕೆ ಸಾರ್ಥಕ್ಯ ಹೇಳಲು ಸಾಧ್ಯ. ಆದ್ದರಿಂದ 'ಕೃಪಾಲುಃ' ಎಂಬ ರೂಪವು ಸಾಧುವಾಗುತ್ತದೆ.

'ಸಂಜ್ಞಾಪೂರ್ವಕೋ ವಿಧಿರನಿತ್ಯಃ' ಎಂಬ ನಿಯಮವು ಭಾಷ್ಯದಲ್ಲಿ ವಸ್ತುತಃ ಇಲ್ಲ. ಆದರೆ ಪ್ರಯೋಗಬಾಹುಲ್ಯದಿಂದಷ್ಟೇ ಇಲ್ಲಿ ಇಟ್ಟುಕೊಳ್ಳಲಾಗಿದೆ.

ಕೆಲವರು ಟೀಕೆಯಲ್ಲಿ 'ಕೃಪಾಲವಃ' ಎಂಬ ಪಾಠವಿಲ್ಲ 'ದಯಾಲವಃ' ಎಂಬ ಪಾಠವಿದೆ ಎನ್ನುತ್ತಾರೆ. ಈ ಪಕ್ಷದಲ್ಲಿ ಯಾವ ಸಮಸ್ಯೆಯಿಲ್ಲ .

## ಗೀತಾಭಾಷ್ಯದಲ್ಲಿ ಕೃಪಾಲು ಶಬ್ದಾರ್ಥವಿಚಾರ

ಗೀತಾಭಾಷ್ಯ - ಬ್ರಹ್ಮರುದ್ರೇಂದ್ರಾದಿಭಿಃ ಅರ್ಥಿತೋ ಜ್ಞಾನಪ್ರದರ್ಶನಾಯ ಭಗವಾನ್ ನಷ್ಟಧರ್ಮಜ್ಞಾನಲೋಕಕೃಪಾಲುಭಿಃ ವ್ಯಾಸೋ ಅವತಾರ.

ಪ್ರಮೇಯದೀಪಿಕಾ - ಯದ್ಯಪಿ ಸ್ಪೃಹಿಗೃಹೀತ್ಯಾದಿನಾ ಕೃಪೇಃ ಆಲುಚ್ ಪ್ರತ್ಯಯಃ ನ ವಿಹಿತಃ ತಥಾ... ವ್ಯಾಕರಣಾಂತರಬಲಾದವಗಂತವ್ಯಃ ಕಲಶವಾಚೀ ವಾ ಆಲುಶಬ್ದಃ ಕೃಪಾಪೂರ್ಣಕಲಶೈಃ ಇತ್ಯರ್ಥಃ

ಭಾವದೀಪಿಕಾ - 'ಸ್ಪೃಹಿಗೃಹಿ' ಇತ್ಯಾದಿಸೂತ್ರದಿಂದ 'ಸ್ಪೃಹಯಾಲು' ಮೊದಲಾದ ರೂಪಗಳಾಗುತ್ತವೆ. 'ಕೃಪಾಲುಃ' ಎಂಬ ರೂಪವು ಸಿದ್ಧವಾಗುವುದಿಲ್ಲ. ಆದರೆ ಬೇರೆ ಚಾಂದ್ರಾದಿವ್ಯಾಕರಣಗಳ ಪ್ರಕಾರ ಸಿದ್ಧವಾಗುತ್ತದೆ.

ಅಥವಾ 'ಆಲು'ಎಂದರೆ 'ಕಲಶ' ಎಂದರ್ಥ. ಈ ಅರ್ಥವು 'ಗರ್ಗರ್ಯಾಲುರ್ಗಲಂತಿಕಾ' ಎಂಬ ಕೋಶದಿಂದ ಸಿದ್ಧವಾಗಿದೆ. 'ಕೃಪಾಪೂರ್ಣವಾದ ಕಲಶದಿಂದ' ಎಂದರ್ಥ. (ಹೆಚ್ಚಿನ ವಿಚಾರವನ್ನು ಸುಧೀಂದ್ರತೀರ್ಥರ ಭಾವರತ್ನಕೋಶವನ್ನು ನೋಡಿ ತಿಳಿಯಬೇಕು)

## 'ರಥ್ಯಾದ್ಭಿಃ' ಎಂಬ ಶಬ್ದದ ಸಾಧುತ್ವಸಮರ್ಥನೆ

ಆಕ್ಷೇಪ :- 'ರಥ್ಯಾಪಾಭಿಃ' ಎಂದಾಗಬೇಕು 'ರಥ್ಯಾದ್ಭಿಃ' ಎಂಬುದು ಅಪಶಬ್ದ. ಏಕೆಂದರೆ 'ರಥ್ಯಾಶ್ಚತಾಃ ಆಪಶ್ಚ ರಥ್ಯಾಪಾಃ ತಾಭಿಃ ರಥ್ಯಾಪಾಭಿಃ' ಎಂದು ಸಮಾಸ. ಸಮಾಸದಲ್ಲಿ ಋಕ್‌ಪೂರಬ್ಧೂಃ...

ಪಥಾಮಾನಕ್ಷೇ (೫-೪-೭೪) ಎಂಬ ಸೂತ್ರದಿಂದ ಅಕಾರ ಬರುತ್ತದೆ. ಸ್ತ್ರೀಲಿಂಗವಾದ್ದರಿಂದ 'ಟಾಪ್' ಪ್ರತ್ಯಯವೂ ಬಂದರೆ 'ರಥ್ಯಾಪಾಃ' ಎಂದಾಗುತ್ತದೆ ತೃತೀಯಾ ವಿಭಕ್ತಿಯಲ್ಲಿ ರಥ್ಯಾಪಾಭಿಃ ಎಂದಾಗುತ್ತದೆ. ('ಅಪ್'ಶಬ್ದವು ಪಕಾರಾಂತವಾದ ನಿತ್ಯ ಬಹುವಚನಾಂತವಾದ ಸ್ತ್ರೀಲಿಂಗಶಬ್ದ. ಇದರ ಸಪ್ತವಿಭಕ್ತಿಗಳು ಹೀಗಿವೆ - ೧) ಆಪಃ ೨) ಅಪಃ ೩)ಅದ್ಭಿಃ ೪)ಅದ್ಭ್ಯಃ ೫)ಅದ್ಭ್ಯಃ ೬) ಅಪಾಂ ೭) ಅಪ್ಸು ಎಂದು. ತೃತೀಯಾವಿಭಕ್ತಿಯ ಅದ್ಭಿಃ ಎಂಬುದನ್ನು ಟೀಕೆಯಲ್ಲಿ ಸರಿಯಾಗಿಯೇ ಬಳಸಿದ್ದಾರೆ ಎಂದೆನಿಸುತ್ತದೆ. ಆದರೆ ಸಮಾಸವಾಗದಿದ್ದಾಗ ಮಾತ್ರ ಅದ್ಭಿಃ ಎಂದಾಗುತ್ತದೆ. ಸಮಾಸವಾದಾಗ 'ಟಾಪ್' ಮೊದಲಾದ ಪ್ರತ್ಯಯಗಳು ಬಂದು 'ಅಪಾಭಿಃ' ಎಂದಾಗಲಿ. ಎಂದು ಆಕ್ಷೇಪದ ತಾತ್ಪರ್ಯ).

ಸಮಾಧಾನ :- ಹಾಗಾಗಬೇಕಿಲ್ಲ. ಸಮಾಸಾಂತವಿಧಿಯು ಅನಿತ್ಯವೆಂದು ವೈಯ್ಯಾಕರಣರೇ ಒಪ್ಪಿದ್ದಾರೆ. 'ಋಕ್‌ಪೂರಬ್ಧೂಃ ಪಥಾಮಾನಕ್ಷೇ' ಎಂಬುದು ಸಮಾಸಾಂತವಿಧಿಯಾಗಿದೆ. ಇದನ್ನು ಇಟ್ಟುಕೊಳ್ಳಲೇಬೇಕೆಂದೇನಿಲ್ಲ.

ಮತ್ತು 'ಸ್ವಪ್' ಎಂಬ ಪ್ರಯೋಗವು ವ್ಯಾಕರಣದಲ್ಲಿಯೇ ಇದೆ. 'ಶೋಭನಾಃ ಆಪಃ ಯಸ್ಮಿನ್ ಸರಸಿ ಸ್ವಪ್' ಎಂದು ಸಮಾಸವಾಗಿದೆ. ನೀವು ಹೇಳುವಂತೆ ಅಕಾರ ಬರುವುದಾದರೆ 'ಸ್ವಪಂ' ಎಂದಾಗದೇಕಿತ್ತಲ್ಲವೇ? ಅಷ್ಟೇ ಅಲ್ಲದೇ, ಸಮಾಂಸಾಂತವಿಧಿಯು ನಿತ್ಯವಾದರೆ 'ಪಥಾನಾಮ್' ಎಂದಾಗಬೇಕಲ್ಲವೇ? 'ಋಕ್‌ಪೂರಬ್ಧೂಃ ಪಥಾಂ' ಎಂದು ಪಾಣಿನಿಯು ಹೇಗೆ ಹೇಳಿದ? ಇದರಿಂದ ಸ್ಪಷ್ಟವಾಗುತ್ತದೆ - ಸಮಾಸಾಂತವಿಧಿಯು ಅನಿತ್ಯವೆಂದು.

ಇನ್ನು 'ಪ್ರಸಾದ' ಎಂಬ ಗ್ರಂಥವನ್ನು ಬರೆದವನಂತು ಸ್ಪಷ್ಟವಾಗಿ ಇದನ್ನು ಅನಿತ್ಯವೆಂದು ಹೇಳುತ್ತಾನೆ - 'ಋಕ್‌ಪೂರಬ್ಧೂಃ ಪಥಾಮಾನಕ್ಷೇ ಇತಿ ಸಮಾಸಾಂತಸ್ತು ನ ಭವತಿ ತಸ್ಯ ಅನಿತ್ಯತ್ವಾತ್' ಎಂದು.

ಪ್ರಶ್ನೆ :- 'ಸ್ವಪಂ' ಎಂದು ಹೇಳದೆ 'ಸ್ವಪ್' ಎಂದು ಹೇಳಲು ಕಾರಣವಿದೆ. 'ನ ಪೂಜನಾತ್' (೫-೪-೬೯) ಎಂಬ ಸೂತ್ರವು ಪೂಜಾರ್ಥಕ ಪ್ರತ್ಯಯ ಸೇರಿದಾಗ ಸಮಾಸಾಂತವಿಧಿಯನ್ನು ನಿಷೇಧಿಸಿದೆ. ಈ ಕಾರಣದಿಂದಲೇ ಪ್ರಸಾದಕಾರನ ವ್ಯಾಖ್ಯಾನವು ಪ್ರಾಮಾದಿಕವೆಂದು ಸಿದ್ಧವಾಗುತ್ತದೆ. ಸಮಾಸಾಂತವಿಧಿಯನ್ನು ಅನಿತ್ಯವೆಂದು ಹೇಳಬೇಕಾಗಿಲ್ಲ.

ಉತ್ತರ :- ಪ್ರಸಾದಕಾರ ಹೇಳಿದಂತೆ ಸಮಾಸಾಂತವಿಧಿಯನ್ನು ಅನಿತ್ಯವೆಂದು ಹೇಳಲೇಬೇಕು. ಈ ವಿಷಯದಲ್ಲಿ 'ಸ್ವಪ್' ಎಂಬುದು ಉದಾಹರಣೆ ಆಗುವುದು ಬೇಡ. ಕಾಶಿಕಾದಲ್ಲಿ 'ಬಹ್ವಪ್' ಬಹ್ವಪೀ, ಬಹ್ವಂಪೀ ಎಂದು ಉದಾಹರಿಸಲಾಗಿದೆ. 'ಬಹ್ವ್ಯಹಃ ಆಪಃ ಯಸ್ಮಿನ್ ಸರಸಿ ಬಹ್ವಪ್' ಎನ್ನಲಾಗಿದೆ. 'ಬಹ್ವಪಂ' ಎಂದು ಹೇಳಲಿಲ್ಲ. ಇಲ್ಲಿ 'ನ ಪೂಜನಾತ್' ಎಂಬ ನಿಷೇಧವನ್ನು ಹೇಳಲಾಗದು. ಆದ್ದರಿಂದ ಸಮಾಸಾಂತವಿಧಿಯನ್ನು ಅನಿತ್ಯವೆನ್ನುವುದು ಅನಿವಾರ್ಯ.

ಶೇಷಕಾರನೆಂಬ ಮತ್ತೊಬ್ಬ ವೈಯಾಕರಣ ಇದನ್ನೇ ಅನುಮೋದಿಸಿದ್ದಾನೆ - 'ಸಮಾಸಾಂತವಿಧೇರನಿತ್ಯತ್ವಾನ್ನ ಸ ಕೃತಃ' 'ಸಮಾಸಾಂತವಿಧಿಯು ಅನಿತ್ಯವಾದ್ದರಿಂದ ಹಾಗೆ ಪ್ರಯೋಗಿಸಿಲ್ಲ' ಎಂದು.

### ಜಿಜ್ಞಾಸಾಧಿಕರಣ

'ಸ್ಫಿಗಪೂತವೀಣಾಂಜೋಧ್ವಕುಕ್ಷಿಸೀರನಾಮ ನಾಮ ಚ' (೬-೨-೧೮೭) ಈ ಸೂತ್ರದಲ್ಲಿ ಅಧ್ವಗ್ರಹಣ ಮಾಡಿದ್ದರಿಂದಲೂ ಸಮಾಸಾಂತವಿಧಿಯು ಅನಿತ್ಯವೆಂದು ತಿಳಿಯುತ್ತದೆ. ಮತ್ತು ಅಪಾದ್ಯ -(೬-೨-೧೮೬) ಸೂತ್ರದಲ್ಲಿರುವ ಅಪಾತ್ ಎಂಬುದು ಇಲ್ಲಿ ಅನುವೃತ್ತವಾಗುತ್ತದೆ. 'ಅಪಾತ' ಶಬ್ದ ಮುಂದೆ ಅಧ್ವಶಬ್ದವಿದ್ದರೆ ಅಂತೋದಾತ್ತತ್ವ ಬರುತ್ತದೆ. ಸಮಾಸಾಂತವಿಧಿಯು ನಿತ್ಯವಾದಲ್ಲಿ ಇದು ಹೇಳಬೇಕಾಗಿರಲಿಲ್ಲ - ಉಪಸರ್ಗಾದಧ್ವನಃ - (೫-೪-೮೫) ಎಂಬ ಸೂತ್ರದಿಂದ 'ಅಧ್ವ' ಶಬ್ದ 'ಅಚ್' ಪ್ರತ್ಯಯ ಬರುತ್ತದೆ. ಇದು ಚಿತ್ ಆದ್ದರಿಂದಲೇ ಅಂತೋದಾತ್ತತ್ವವು ಸಿದ್ಧವಾಗುತ್ತಿತ್ತು. ಆ 'ಸ್ಫಿಗಪೂತ' ಇತ್ಯಾದಿ ಸೂತ್ರದಲ್ಲಿ ಅಧ್ವ ಶಬ್ದವನ್ನು ಹೇಳಬೇಕಾಗಿರಲಿಲ್ಲವಾದರೂ ಪಾಣಿನಿ ಅಧ್ವಶಬ್ದವನ್ನು ಗ್ರಹಣ ಮಾಡಿದ. ಇದರಿಂದಲೂ ಸಮಾಸಾಂತವಿಧಿಯು ಅನಿತ್ಯವೆಂದು ಗೊತ್ತಾಗುತ್ತದೆ.

ಮಹಾಭಾಷ್ಯವೂ ಸಹ ಇದನ್ನು ಸಮ್ಮತಿಸುತ್ತಾ ಹೀಗೆ ಹೇಳಿದೆ - 'ದ್ವಿತ್ರಿಭ್ಯಾಂ ಪಾದ್ದನ್ ಮೂರ್ಧಸು ಬಹುವ್ರೀಹೌ (೬-೨-೧೯೭) ಎಂಬ ಸೂತ್ರದಲ್ಲಿ 'ಮೂರ್ಧೇಷು' ಎನ್ನದೆ 'ಮೂರ್ಧಸು ಎಂದು ಹೇಳಿದ್ದರಿಂದಲೇ ಸಮಾಸಾಂತವಿಧಿಗೆ ಅನಿತ್ಯತ್ವ ತಿಳಿಯುತ್ತದೆ. ಅದು ಹೀಗೆ - ಪಾದ್, ದತ್ ಮೂರ್ಧಸು ಎಂದು ಮೂರು ಶಬ್ದಗಳನ್ನು ಉದ್ದೇಶಿಸಲಾಗಿದೆ. ಇವುಗಳಲ್ಲಿ ಪಾದ್ ಮತ್ತು ದತ್‌ಗಳು ಸಮಾಸಾಂತವಿಧಿಗಳೇ ಆಗಿವೆ. ಏಕೆಂದರೆ 'ಪಾದಸ್ಯ ಲೋಪೋಽಹಸ್ತ್ಯಾದಿಭ್ಯಃ' (೫-೪-೧೩೮) ಎಂಬ ಸೂತ್ರದಲ್ಲಿ ಪಾದಶಬ್ದ ಲೋಪ ಮಾಡಿ 'ಪಾತ್' ಎಂಬುದನ್ನು ಸಮಾಸಾಂತದಲ್ಲಿ ವಿಧಿಸಿದ್ದಾರೆ. ಅದರಂತೆ 'ವಯಸಿ ದಂತಸ್ಯ ದತೃ' (೫-೪-೧೪೧) ಎಂಬಲ್ಲಿ ದಂತ ಶಬ್ದಕ್ಕೆ ದತೃ ಆದೇಶವನ್ನು ಸಮಾಸಾಂತದಲ್ಲಿ ವಿಧಿಸಲಾಗಿದೆ. ಅದನ್ನು ಅನುಸರಿಸಿ 'ದ್ವಿತ್ರಿಭ್ಯಾಂ ಪಾದ್ದನ್‌ಮೂರ್ಧಸು ಬಹುವ್ರೀಹೌ ಎಂಬಲ್ಲಿ 'ಪಾತ್' 'ದತ್' ಸಮಾಸಾಂತವಿಧಿಯನ್ನು ಆಶ್ರಯಿಸಲಾಗಿದೆ. ಆದರೆ ಮೂರ್ಧ ಶಬ್ದದಲ್ಲಿ ಇದನ್ನು ಆಶ್ರಯಿಸಿಲ್ಲ. 'ದ್ವಿತ್ರಿಭ್ಯಾಂ ಮೂರ್ಧ್ನಃ' (೫-೪-೧೧೫) ಎಂಬ ಸೂತ್ರದಲ್ಲಿ ಮೂರ್ಧಶಬ್ದಕ್ಕೆ ಶಪ್ ಪ್ರತ್ಯಯವನ್ನು ಹೇಳಿದ್ದಾರೆ. ಶಪ್‌ಪ್ರತ್ಯಯ ಬಂದರೆ ಅಕಾರಾಂತಶಬ್ದವಾಗಿ ಸಪ್ತಮೀ ಬಹುವಚನದಲ್ಲಿ 'ಮೂರ್ಧೇಷು' ಎಂದಾಗುತ್ತದೆ. ಅದರಂತೆ 'ದ್ವಿತ್ರಿಭ್ಯಾಂ' ಇತ್ಯಾದಿ ಸೂತ್ರದಲ್ಲಿ 'ಮೂರ್ಧೇಷು' ಎಂದು ಸಮಾಸಾಂತವಿಧಿಯನ್ನೇ ಆಶ್ರಯಿಸಬೇಕು. ಆದರೆ ಪಾಣಿನಿಯು ಎರಡು ಶಬ್ದಗಳಲ್ಲಷ್ಟೇ ಸಮಾಸಾಂತವಿಧಿಯನ್ನು ಆಶ್ರಯಿಸಿ 'ಮೂರ್ಧಸು ಎಂಬಲ್ಲಿ ಸಮಾಸಾಂತವಿಧಿಯನ್ನು ಆಶ್ರಯಿಸಿಲ್ಲ. ಇದರಿಂದ ಸಮಾಸಾಂತವಿಧಿಯು ಅನಿತ್ಯವೆಂದು ತಿಳಿಯುತ್ತದೆ. ಇಷ್ಟು ಮಹಾಭಾಷ್ಯದಲ್ಲಿರುವ ವಿಚಾರ. ಆದ್ದರಿಂದ ಯಾರು 'ರಥ್ಯಾಪಾಭಿಃ' ಎಂಬ ಪ್ರಯೋಗವನ್ನು ಆಕ್ಷೇಪಿಸುತ್ತಿದ್ದಾರೋ ಅವರು ಸಮಾಸಾಂತವಿಧಿಯನ್ನು ನಿತ್ಯವೆಂದು ತಪ್ಪು ತಿಳಿದಿದ್ದಾರೆ. ಅವರ ಆಕ್ಷೇಪವು ಭ್ರಮಮೂಲಕ ವಾದ್ದರಿಂದ ಹೇಯವಾಗಿದೆ.

## 'ಸಂಗಮ್ಯಂತೇ ಗುರೋರ್ಗಿರಃ'

ಪ್ರಶ್ನೆ :- 'ಗಂಗಾಸಂಗೇನ' ಇತ್ಯಾದಿ ಪದ್ಯದಲ್ಲಿ 'ವಾಚೋ ವಿಶುದ್ಧಿಸಿದ್ಧ್ಯರ್ಥಂ ಸಂಗಮ್ಯಂತೇ ಗುರೋರ್ಗಿರಃ' ಎಂದಿದೆ. ಇದರ ಅರ್ಥವೇನು? 'ಮಾತಿನ ಶುದ್ಧಿಗಾಗಿ ಗುರುಗಳ ಮಾತುಗಳನ್ನು ಸೇರಿಸುತ್ತೇನೆ' ಎಂಬುದು ಸಾಮಾನ್ಯ ಅರ್ಥ. ಇಲ್ಲಿ ಕರ್ತೃವಾಚಕಪದವೇ ಕಾಣುತ್ತಿಲ್ಲ. ಯಾ

ಮಾತಿನ ಶುದ್ಧಿಗಾಗಿ? ಎಂಬ ಪ್ರಶ್ನೆಗೆ 'ಗುರುಗಳ ಮಾತಿನ ಶುದ್ಧಿಗಾಗಿ' ಎಂಬ ಉತ್ತರ ಸರಿ ಆಗುವುದಿಲ್ಲ. ಗುರುಗಳ ಮಾತು ಸ್ವತಃ ಶುದ್ಧವಾಗಿರುವಾಗ ಪುನಃ ಗುರುಗಳ ಮಾತಿನ ಶುದ್ಧಿಗಾಗಿ ಗುರುಗಳ ಮಾತನ್ನು ಸೇರಿಸುತ್ತೇನೆಂಬುದು ಅತ್ಯಂತ ಅಸಂಗತ. ಆದ್ದರಿಂದ ಈ ಮಾತಿನ ಅರ್ಥವೇನು?

ಉತ್ತರ :- ಈ ಪ್ರಶ್ನೆಗೆ ಗ್ರಂಥಕಾರರೇ 'ಗಂಗಾಸಂಗೇನ' ಇತ್ಯಾದಿ ಮಾತಿನಿಂದ ಉತ್ತರಿಸುತ್ತಿದ್ದಾರೆ. 'ಮದೀಯಯಾ ವಾಚಾ' ಎಂಬ ಕರ್ತೃವಾಚಕಪದವನ್ನು ಇಟ್ಟುಕೊಳ್ಳಬೇಕು.

ರಸ್ತೆಯ ನೀರು ಅಪವಿತ್ರವಾಗಿದ್ದರೂ ಗಂಗಾಜಲದ ಸಂಪರ್ಕದಿಂದ ಹೇಗೆ ಪವಿತ್ರವಾಗುತ್ತದೋ, ಅದರಂತೆ ನನ್ನ ಮಾತುಗಳೂ ಸಹ ಸ್ವತಃ ಅಪವಿತ್ರವಾಗಿವೆ. ಗಂಗೆಯ ನೀರಿನಂತೆ ಗುರುಗಳ ಮಾತುಗಳು ಪವಿತ್ರವಾಗಿವೆ. ಪವಿತ್ರವಾದ ಗುರುಗಳ ಮಾತುಗಳಲ್ಲಿ ನನ್ನ ಮಾತುಗಳನ್ನು ಸೇರಿಸುತ್ತೇನೆ. ಆವಾಗ ನನ್ನ ಮಾತುಗಳೂ ಪವಿತ್ರವಾಗುತ್ತವೆ.

ಅಥವಾ ಗುರುಗಳ ಮಾತುಗಳಲ್ಲೇ ಸಂಗತಿಯು ಸ್ಪಷ್ಟವಾಗಿ ತೋರುವುದಿಲ್ಲ. ಅಂದರೆ ನ್ಯಾಯವಿವರಣ, ಭಾಷ್ಯ, ಅನುವ್ಯಾಖ್ಯಾನ, ಇತ್ಯಾದಿ ಬೇರೆ ಬೇರೆ ಗ್ರಂಥಗಳಲ್ಲಿ ಇರುವ ಗುರುಗಳ ಮಾತುಗಳಿಗೆ ಪರಸ್ಪರ ಸಂಬಂಧವು ಮಂದರಿಗೆ ತೋರುತ್ತಿಲ್ಲ. ಅಂತಹ ಗುರುಗಳ ಮಾತುಗಳಲ್ಲಿ ಪರಸ್ಪರ ಸಂಬಂಧವನ್ನು ಮಂದರಿಗೂ ಅರ್ಥ ಮಾಡಿಸುವಂತೆ ನನ್ನ ಮಾತುಗಳನ್ನು ಸೇರಿಸುತ್ತೇನೆ. ಹೀಗೆ ಎರಡು ರೀತಿ ಅರ್ಥವನ್ನು ತಿಳಿಯಬೇಕು. ಗುರುಗಳ ಮಾತುಗಳನ್ನು ಪರಸ್ಪರ ಸೇರಿಸುವುದಷ್ಟೇ ನನ್ನ ಕೆಲಸವೆಂದು ಅಭಿಪ್ರಾಯ.

### ಸಾರ

**ತತ್ವಪ್ರಕಾಶಿಕಾ ಮಂಗಲಾಚರಣೆಗಳ ಭಾವಗಾಂಭೀರ್ಯ**

ಟೀಕಾಕೃತ್ಪಾದರ ಮೊದಲ ಮಂಗಲಪದ್ಯ ಭಾಷ್ಯದ ಮಂಗಲಪದ್ಯಕ್ಕೆ ವ್ಯಾಖ್ಯಾನ ರೂಪವಾಗಿದೆ. ಅದರಂತೆಯೇ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವಾಗಿದೆ. ಮುಂದೆ ಸೂತ್ರಕಾರರಿಗೂ ಭಾಷ್ಯಕಾರರಿಗೂ ನಮಿಸಿ ಭಾಷ್ಯಕ್ಕೆ ಟೀಕೆ ರಚಿಸಲು ಸಂಕಲ್ಪಿಸುತ್ತಾರೆ. ಅದರಿಂದ ವಾಕ್‌ಶುದ್ಧಿಯಾಗಲಿ ಎನ್ನುತ್ತಾರೆ ಟೀಕಾಕೃತ್ಪಾದರು.

• • • • •

## ಟೀಕೆಯ ಪ್ರಾರಂಭವೂ ಅಥ ಶಬ್ದದಿಂದಲೇ

**तात्पर्यचन्द्रिका –**

**।। अथाविघ्नेति ।। प्रतिग्रन्थव्याख्याप्रारम्भार्थः अथशब्दः ।। फलसाधनतासिद्ध्यर्थमिति ।। समङ्गलस्यैव सफलत्वादिति भावः ।। भगवतः प्रसत्त्या पुरुषार्थो**

**भवतीति सूचित इति ।। भगवत्प्रसादस्य मोक्षहेतुत्वे अतश्शब्देन संक्षिप्योक्त इत्यर्थः ।।**

ಅನುವಾದ - 'ಅಥಾವಿದ್ಯಾ' ಎಂಬ ಟೀಕೆಯಲ್ಲಿರುವ 'ಅಥ' ಶಬ್ದಕ್ಕೆ 'ಪ್ರತಿಗ್ರಂಥ ವ್ಯಾಖ್ಯಾ ಪ್ರಾರಂಭ' ಎಂದು ಅರ್ಥ. 'ತನ್ನ ಗ್ರಂಥವು ಶಿಷ್ಯರಿಗೆ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡಲಿ ಎಂಬ ಉದ್ದೇಶದಿಂದ ಆಚಾರ್ಯರು ಮಂಗಲಾಚರಣೆ ಮಾಡಿದ್ದಾರೆ' ಎಂದು ಟೀಕೆಯಲ್ಲಿ ಹೇಳಲಾಗಿದೆ. ಆದರೆ ಮಂಗಳಾಚರಣೆಯೇ ಮೋಕ್ಷಾದಿಪುರುಷಾರ್ಥಗಳನ್ನು ಕೊಡುತ್ತದೆಯೇ ಎಂದರೆ, ಹಾಗಲ್ಲ. ಮಂಗಳಾಚರಣೆಯಿಂದ ಗ್ರಂಥವು ಮಂಗಳಮಯವಾಗುತ್ತದೆ. (ಸಮಂಗಲ ವಾಗುತ್ತದೆ) ಇಂತಹ ಮಂಗಳಮಯ ಗ್ರಂಥದ ಅಧ್ಯಯನದಿಂದಲೇ ಸಕಲ ಪುರುಷಾರ್ಥಗಳು ಲಭಿಸುತ್ತವೆಯೆಂದು ತಿಳಿಯಬೇಕು. 'ಭಗವಂತನ ಪ್ರಸಾದದಿಂದ ಪುರುಷಾರ್ಥವು ದೊರಕು ವುದು ಸೂತ್ರದಲ್ಲಿ ಸೂಚಿತವಾಗಿದೆ'ಯೆಂದು ಟೀಕೆಯಲ್ಲಿ ಹೇಳಲಾಗಿದೆ. ವಾಸ್ತವಿಕವಾಗಿ 'ಅತಃ' ಶಬ್ದದಿಂದ ಈ ವಿಷಯವು ಉಕ್ತವಾಗಿದೆ. ಆದ್ದರಿಂದ ಸೂಚಿತವಾಗಿದೆ ಎಂದು ಟೀಕೆಯಲ್ಲಿ ಹೇಳಿದ್ದು ಹೇಗೆ ಯುಕ್ತ? ಎಂದರೆ ಟೀಕೆಯಲ್ಲಿರುವ 'ಸೂಚಿತಃ ' ಎಂಬ ಶಬ್ದಕ್ಕೆ 'ಸಂಕ್ಷಿಪ್ಯ ಉಕ್ತಃ' (ಸಂಕ್ಷೇಪವಾಗಿ ಹೇಳಲ್ಪಟ್ಟಿದೆ) ಎಂದು ಅರ್ಥ ಮಾಡಬೇಕು.

### ಕಠಿಣಪದಾರ್ಥ

ಪ್ರತಿಗ್ರಂಥವ್ಯಾಖ್ಯಾಪ್ರಾರಂಭಾರ್ಥಃ = ಭಾಷೆಯ ಪ್ರತಿಯೊಂದು ಮಾತುಗಳಿಗೆ ವ್ಯಾಖ್ಯಾನವನ್ನು. ಪ್ರಸತ್ತ್ಯಾ = ಪ್ರಸಾದದಿಂದ. ಪ್ರಜ್ಞಾದಿತ್ವಾತ್ = ಪ್ರಜ್ಞಾದಿಗಣದಲ್ಲಿ ಸೇರಿರುವುದರಿಂದ

**प्रकाशः** – ननु **'अथाविद्या'** इत्यत्र 'अथ'शब्दो न मङ्गलार्थः । तस्य कृतत्वात् । नाप्यानन्तर्यार्थः । कस्याप्यर्थस्य भाष्ये पूर्वमप्रकृतत्वात् । भाष्यकृतनमनस्य टीकाकृत्कृतव्याख्याप्रतिज्ञानन्तर्यायोगात् । नाप्यारम्भार्थः । 'आरभ्यते' इत्यनुक्त्वापि आरब्धे इदमनेनारब्धमिति ज्ञातुं शक्यत्वात् । 'व्याकुर्वे' इत्युक्त्यैव व्याख्या प्रारभ्यत इत्यस्य लाभाच्च । प्रश्नाद्यर्थकत्वशङ्कानवकाशाच्च व्यर्थ इत्यत आह – **अथाविद्येतीति** ।। यद्यपि 'प्रतिग्रन्थव्याख्यानमारभ्यते' इत्यनुक्त्वाऽपि तस्मिन्नारब्धेऽनेन प्रतिग्रन्थव्याख्या आरब्धेति ज्ञातुं शक्यम् । तथाऽपि शिष्यमनस्समाधानार्थं प्रतिग्रन्थव्याख्यानमारभ्यत इति वक्तुमथशब्दः प्रायोजीति ध्येयम् ।

ಪರಿಪೂರ್ಣಚಂದ್ರಿಕಾ

ननु भाष्यस्याखिलफलसाधनतासिद्धिः कथं नमस्कारमात्रात् स्यादित्यत आह - **समङ्गलस्येति** ।। अतःशब्देनोक्तत्वात् कथं सूचनम् इत्यत आह – **भगवत इति** ।।

गुरुराजीय – "अथाविद्यापटले"ति टीकायामथशब्दो न मङ्गलार्थः । मङ्गलानामनुष्ठितत्वात् । नाप्यानन्तर्यार्थः । आचार्यकर्तृकनमस्कारादिग्रथनस्य टीकाकारीयव्याख्यानप्रतिज्ञानादानन्तर्यासम्भवात् । नापि भाष्यव्याख्याप्रारम्भार्थः । "शुद्ध"त्यादिनैव तस्यारम्भात् । यदाह "भाष्यस्याद्यश्लोकविवरणरूपत्वात्" इति ।। नापि प्रतीकग्रहणपूर्वकव्याख्यानप्रारम्भार्थः । "व्याकुर्वे" इत्यनेनैव तत्सिद्धेः । नच गङ्गासङ्गेन इत्यनेन व्यवधानात् पुनः प्रतिज्ञानमावश्यकम् । तस्य तच्छेषतया व्यवधायकत्वाभावात् । "व्याकुर्वे" इति लडभिप्रेतवर्तमानसामीप्यस्याबाधाच्च । तस्मादनर्थकोऽथशब्द इत्यतः "अथ यदसन्दिग्धमप्रयोजनं च न तत् प्रेक्षावत्प्रतिपित्सागोचरः" इति साङ्करभाष्यावतारिकारूपभामतिग्रन्थस्याथशब्दस्य प्रतिग्रन्थव्याख्याप्रारम्भार्थत्वेन कल्पतरौ व्याख्यानदर्शनादत्रापि प्रतिग्रन्थव्याख्यारम्भार्थोऽथशब्द इत्याह – **प्रतिग्रन्थेति** ।। यद्यपि प्रतिग्रन्थव्याख्या प्रारभ्यत इत्यनुक्त्वाऽपि तस्मिन्नारब्धेऽनेन प्रतिग्रन्थव्याख्या प्रारब्धेत्यवगन्तुं शक्यं तथापि श्रोतृणां श्रद्धेयत्वप्रतिपत्त्यर्थं तदुक्तिः । दृश्यन्ते हि तदर्थमेव लोकेऽप्याप्ताः किञ्चिदहं वदिष्यामीत्युक्त्वाऽपि हितमुपदिशन्तीति भावः ।

ग्रथनस्य **'नमस्काराधिकार्यादिग्रथनसूचने शिष्यशिक्षार्थम्'** इत्युत्तरग्रन्थे शिष्यशिक्षार्थताया वक्ष्यमाणत्वेन फलसाधनतासिध्यादिफलकत्वाभावात् कैवल्याद्यखिलफलसाधनतासिध्यर्थत्वोक्त्यनुपपत्तिरित्यत आह – **समङ्गलस्यैवेति** ।। नन्वतःशब्देन भगवत्प्रसादस्य मोक्षहेतुतायाः वचनवृत्त्या प्रतिपादनादार्थिकत्वप्रतिपादकटीकास्यसूचितपदानुपपत्तिरित्यतस्तदभिप्रायमाह – **सङ्क्षिप्योक्त इति** ।। सङ्क्षिप्योक्तिरेवात्र सूचनमित्यभिप्रेतमिति भावः ।

**ವಿವರಣೆ** - ಇಲ್ಲಿಯ ತನಕ ಟೀಕಾರಾಯರು ಮಂಗಳವನ್ನು ಅನುಷ್ಠಾನ ಮಾಡಿದರು. ಪ್ರಕೃತ ಭಾಷ್ಯದ ಮಾತುಗಳಿಗೆ 'ಅಥ ಅವಿದ್ಯಾಪಟಲಪಿಹಿತನಯನೈಃ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನ ಮಾಡಲು ಪ್ರಾರಂಭ ಮಾಡುತ್ತಿದ್ದಾರೆ.

## ಟೀಕೆಯ 'ಅಥ' ಶಬ್ದವಿಚಾರ

**ಪ್ರಶ್ನೆ** :- ಟೀಕೆಯು 'ಅಥ' ಶಬ್ದದಿಂದ ಪ್ರಾರಂಭವಾಗುತ್ತದೆ. ಗ್ರಂಥವು ಅಥಶಬ್ದದಿಂದ ಪ್ರಾರಂಭವಾದರೆ ಮಂಗಳವಾಗುತ್ತದೆ. ಅದಕ್ಕಾಗಿ ಟೀಕಾರಾಯರು 'ಅಥ' ಶಬ್ದದಿಂದ ವ್ಯಾಖ್ಯಾನವನ್ನು ಪ್ರಾರಂಭ ಮಾಡುತ್ತಿದ್ದಾರೆ ಎಂದೆನಿಸುತ್ತದೆ. ಆದರೆ ಟೀಕಾರಾಯರು ಈಗಾಗಲೇ ಅನೇಕ ಶ್ಲೋಕಗಳಿಂದ ಮಂಗಳವನ್ನು ಹಾಡಿದ್ದಾಗಿದೆ. ಪುನಃ ಅಥಶಬ್ದದಿಂದ ಮಂಗಳ ಹೇಳುವ ಅವಶ್ಯಕತೆ ಏನು?

**ಉತ್ತರ** :- ಮಂಗಳಾರ್ಥದಲ್ಲಿ ಅಥ ಶಬ್ದವನ್ನು ಹೇಳಿದ್ದೇ ಅಲ್ಲ. 'ಅನಂತರ' ಎಂಬರ್ಥದಲ್ಲಿ ಹೇಳಿದ್ದಾರೆ.

**ಪ್ರಶ್ನೆ** :- ಇದು ಹೇಗೆ ಸರಿ? ಭಾಷ್ಯವು ಈಗಲೇ ಪ್ರಾರಂಭವಾಗುತ್ತಿದೆ. ಈ ಮೊದಲು ಪ್ರಾರಂಭವಾಗಿಲ್ಲ. ಆದ್ದರಿಂದ ಯಾವುದರ ಅನಂತರ? ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದಲ್ಲವೇ?

**ಉತ್ತರ** :- 'ವ್ಯಾಖ್ಯಾನದ ಪ್ರತಿಜ್ಞೆ'ಯ ಅನಂತರ ಭಾಷ್ಯಕಾರರ ಮಂಗಳಾಚರಣೆಯು ಪ್ರಸ್ತುತವಾಗಿದೆ. ಹೀಗೆ ಆನಂತರ್ಯಶಬ್ದದ ಅರ್ಥ.

**ಪ್ರಶ್ನೆ** :- ಹಾಗಾದರೆ ನೀವು 'ಆರಂಭ' ಎಂಬರ್ಥವನ್ನು ಹೇಳಿದಂತಾಯಿತು. ಆದರೆ 'ಆರಂಭ ಮಾಡುತ್ತಿದ್ದೇವೆ' ಎಂದು ಹೇಳದಿದ್ದರೂ ಪ್ರತ್ಯಕ್ಷದಿಂದಲೇ ಆರಂಭ ಮಾಡಿರುವುದು ತಿಳಿಯುತ್ತದೆ ಮತ್ತು ಭಾಷ್ಯವ್ಯಾಖ್ಯಾನವನ್ನು ಪ್ರಾರಂಭಿಸುತ್ತಿದ್ದೇನೆ ಎನ್ನಬೇಕು. ಆದರೆ 'ಭಾಷ್ಯಸ್ಥ ಆದ್ಯಶ್ಲೋಕವಿವರಣರೂಪತ್ವಾತ್' ಎಂದು ಹಿಂದೆ ಹೇಳಿದಂತೆ ಭಾಷ್ಯವ್ಯಾಖ್ಯಾನವನ್ನು ಮಂಗಳಪದ್ಯಗಳಿಂದಲೇ ಪ್ರಾರಂಭಿಸಿದ್ದಾಗಿದೆಯಲ್ಲವೇ?

**ಉತ್ತರ** :- ಪ್ರತೀಕಗಳನ್ನು ಹಿಡಿದು ವ್ಯಾಖ್ಯಾನವನ್ನು ಪ್ರಾರಂಭಿಸುತ್ತಿದ್ದೇವೆ ಎಂದರ್ಥ.

**ಪ್ರಶ್ನೆ** :- ಇದನ್ನು ಹಿಂದೆಯೇ 'ವ್ಯಾಕುರ್ವೇ' ಎಂಬ ಪದದಿಂದ ಹೇಳಿದ್ದಾಗಿದೆಯಲ್ಲವೇ?

**ಉತ್ತರ** :- 'ಗಂಗಾಸಂಗೇನ' ಎಂಬ ಪದ್ಯದಿಂದ ವ್ಯವಹಿತವಾಗಿದೆ. ಹಾಗಾಗಿ ಸ್ಮರಣೆಗೋಸ್ಕರ ಪುನಃ ಹೇಳಲಾಗಿದೆ.

**ಪ್ರಶ್ನೆ** :- ಆ ಪದ್ಯವು ಪ್ರತಿಜ್ಞೆಯನ್ನೇ ವಿವರಿಸುತ್ತಿದೆ. ಅದು ಪ್ರತಿಜ್ಞೆಗೆ ಪೂರಕವಾಗುತ್ತದಲ್ಲವೇ? ಆದ್ದರಿಂದ 'ವ್ಯಾಕುರ್ವೇ' ಎಂಬ ಪದವೇ ಸಾಕಾಗಿರುವಾಗ ಪುನಃ ಟೀಕೆಯಲ್ಲಿ 'ಅಥ' ಎಂದು ಏಕೆ ಹೇಳಿದರು?

**ಉತ್ತರ** :- ಈ ಪ್ರಶ್ನೆಗೆ ಉತ್ತರರೂಪವಾಗಿ ಗ್ರಂಥಕಾರರು 'ಪ್ರತಿಗ್ರಂಥವ್ಯಾಖ್ಯಾಪ್ರಾರಂಭಾರ್ಥೋಽಥಶಬ್ದಃ' ಎಂದು ಹೇಳಿದರು. "ಸಮಗ್ರಭಾಷ್ಯವ್ಯಾಖ್ಯಾನವನ್ನು ಮಂಗಳಾಚರಣೆಯಲ್ಲೇ ಸಂಕ್ಷೇಪವಾಗಿ ಮಾಡಿದ್ದಾಯಿತು. ಇನ್ನು ಮುಂದೆ ಭಾಷ್ಯದ ಪ್ರತಿಯೊಂದು ವಾಕ್ಯಗಳನ್ನು ಪದಗಳನ್ನು ವಿವರವಾಗಿ ವ್ಯಾಖ್ಯಾನಿಸುತ್ತೇವೆ" ಎಂದು ಇದರರ್ಥ.

*ಪರಿಪೂರ್ಣಚಂದ್ರಿಕಾ*

ಶ್ನೆ :- ಇದನ್ನು ಏಕೆ ಹೇಳಬೇಕು? ಪ್ರತಿಗ್ರಂಥವ್ಯಾಖ್ಯಾನವು ಪ್ರಾರಂಭವಾದದ್ದನ್ನು ಪ್ರತ್ಯಕ್ಷವಾಗಿ ನೋಡಿಯೇ ತಿಳಿಯಬಹುದಲ್ಲವೇ?

ಉತ್ತರ :- ಆದರೂ ಸಹ ಶಿಷ್ಯರಿಗೆ ಮನಃಸಮಾಧಾನವಾಗಲಿದೆಯೆಂದು ಹೀಗೆ ಹೇಳಿದ್ದಾರೆ. 'ಆಚಾರ್ಯರ ಮಾತುಗಳು ಗಂಭೀರವಾಗಿವೆಯೆಂದು ಹೆದರಬೇಡಿರಿ. ಆಚಾರ್ಯರ ಪ್ರತಿಯೊಂದು ವಾಕ್ಯಗಳಿಗೆ ಪದಗಳಿಗೆ ವ್ಯಾಖ್ಯಾನಿಸುತ್ತೇವೆ' ಎಂದು ಹೇಳಿದಾಗ ಶಿಷ್ಯರಿಗೆ ಓದಲು ಉತ್ಸಾಹ ಶ್ರದ್ಧೆಗಳು ಬರುತ್ತದೆ. ಮನಸ್ಸಿಗೆ ಸಮಾಧಾನವಾಗುತ್ತದೆ.

ಲೋಕದಲ್ಲೂ ಈ ರೀತಿ ಕಂಡಿದೆ. ದುಃಖದಲ್ಲಿರುವ ವ್ಯಕ್ತಿಗೆ 'ನಾನು ನಿನಗೆ ಹಿತವನ್ನು ಹೇಳುತ್ತೇನೆ ಕೇಳಪ್ಪ!' ಎಂದು ಪ್ರತಿಜ್ಞೆ ಮಾಡಿ ಅನಂತರ ಹಿತೋಪದೇಶ ಮಾಡುತ್ತಾರೆ. ಪ್ರಾರಂಭದಲ್ಲಿ ಮಾಡಿದ ಪ್ರತಿಜ್ಞೆಮಾತಿನಿಂದಲೇ ಕೇಳುವಂತಹವನಿಗೆ ಬಹಳಷ್ಟು ಸಮಾಧಾನವಾಗುತ್ತದೆ. ಕೇಳುವಂತಹ ಮಾತುಗಳಲ್ಲಿಯೂ ಶ್ರದ್ಧೆಯು ಹೆಚ್ಚುತ್ತದೆ.

ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಟೀಕೆಯಲ್ಲಿ ಹೇಳಿದ 'ಅಥ'ಶಬ್ದ ಎಷ್ಟು ಅರ್ಥಪೂರ್ಣ? ಮತ್ತು ಸ್ವರಸ? ಅಲ್ಲವೇ!

ಗ್ರಂಥಾರಂಭದಲ್ಲಿ ಮಾಡುವ ನಮಸ್ಕಾರವು ಶಿಷ್ಯಶಿಕ್ಷಣೆಗೋಸ್ಕರವೆಂದು ಗ್ರಂಥಕಾರರೇ ಮುಂದೆ ಹೇಳುತ್ತಾರೆ. ಆದರೆ ಟೀಕೆಯಲ್ಲಿ ಕೈವಲ್ಯಾದಿ ಸಕಲಪುರುಷಾರ್ಥಸಿದ್ಧಿಗೋಸ್ಕರ ನಮಸ್ಕಾರವನ್ನು ನಿಬಂಧನೆ ಮಾಡಲಾಗಿದೆ ಎಂದು ಹೇಳಲಾಗಿದೆ. ಇದು ಹೇಗೆ ಸರಿ? ನಮಸ್ಕಾರವನ್ನು ಮಾಡಿದ ಮಾತ್ರದಿಂದ ಭಾಷ್ಯವು ಸಕಲಪುರುಷಾರ್ಥದಾಯಕವಾಗಲು ಹೇಗೆ ಸಾಧ್ಯ?

ಈ ಪ್ರಶ್ನೆಗೆ ಗ್ರಂಥಕಾರರು 'ಸಮಂಗಲಸ್ಯೈವ ಸಫಲತ್ವಾತ್' ಎಂದು ಉತ್ತರಿಸುತ್ತಿದ್ದಾರೆ. ನಾರಾಯಣನ ನಮಸ್ಕಾರವು ಮಂಗಳಕರವಾಗಿದೆ. ಇಂತಹ ಮಂಗಳದಿಂದ ಕೂಡಿದ ಗ್ರಂಥವು ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಕೈವಲ್ಯಾದಿ ಸಕಲಪುರುಷಾರ್ಥಗಳನ್ನು ನೀಡುವುದರಲ್ಲಿ ಸಂದೇಹವೇ ಇಲ್ಲ. (ಆಶ್ಚರ್ಯವೆಂದರೆ ಶಂಕರಭಾಷ್ಯದ ಪ್ರಾರಂಭದಲ್ಲಿ ಮಂಗಳಾಚರಣೆಯನ್ನು ಮಾಡಿಯೇ ಇಲ್ಲ ಆದ್ದರಿಂದ ಶಂಕರಭಾಷ್ಯವು ಅಮಂಗಳಗ್ರಂಥ. ಶ್ರೀಮದಾಚಾರ್ಯರ ಭಾಷ್ಯವು ಮಂಗಳ ಗ್ರಂಥ)




ಟೀಕೆಯ ಮೊದಲ ಅಥಶಬ್ದ

ಸಮಗ್ರಗ್ರಂಥದ ವ್ಯಾಖ್ಯಾನವನ್ನು ಸಂಕ್ಷೇಪವಾಗಿ ಮಂಗಲಪದ್ಯದಲ್ಲಿ ಮಾಡಿ ಮುಂದೆ ಭಾಷ್ಯದ ಪ್ರತಿವಾಕ್ಯ ಪ್ರತಿಪದಗಳ ವ್ಯಾಖ್ಯಾನ ಪ್ರಾರಂಭಿಸುತ್ತಿದ್ದೇವೆ ಎನ್ನುತ್ತಿದ್ದಾರೆ, ಅಥಶಬ್ದದಿಂದ.

ನಾರಾಯಣನಮನದಲ್ಲೂ ಚಮತ್ಕಾರ

**तात्पर्यचन्द्रिका –**

**विशिष्टगुणानप्याचष्ट इति ।। नारायणशब्दस्य विशिष्टगुणवाचकत्वप्रदर्शनं च तस्य ब्रह्मशब्दसमानार्थत्वात् । शास्त्रार्थवाचकत्वाच्च नारायण एव शास्त्रार्थ इति दर्शयितुम् ।। न रीयत इति ।। नञुपपदात् ''रीङ् क्षये'' इत्यस्माद्धातोः करणे डप्रत्यये प्रज्ञादित्वात् स्वार्थिकेऽण्प्रत्यये च कृते नारमिति रूपसिद्धिरिति द्रष्टव्यम् । 'अरमणं' दुःखम् ।। निर्दोषवेदोत्पन्नत्वादिति ।। निर्दोषवेदवाचकात् नारशब्दात् ''तस्येदम्'' इत्यणि कृते नारशब्दो वेदजन्यज्ञानवाचीति भावः ।।**

ಅನುವಾದ - 'ನಾರಾಯಣ ಶಬ್ದವು ಭಗವಂತನಲ್ಲಿ ವಿಶಿಷ್ಟಗುಣಾದಿಗಳನ್ನು ಹೇಳುತ್ತದೆ' ಎಂದು ಟೀಕೆಯಲ್ಲಿ ಹೇಳಲಾಗಿದೆ. ನಾರಾಯಣ ಶಬ್ದಕ್ಕೇನೇ 'ವಿಶಿಷ್ಟ ಗುಣವಾಚಕತ್ವ'ದನ್ನು ತೋರಿಸಿದ ಉದ್ದೇಶವೇನೆಂದರೆ ಬ್ರಹ್ಮಸೂತ್ರದ ಪ್ರತಿಪಾದ್ಯನಾದ ಬ್ರಹ್ಮನೇ ನಾರಾಯಣನಾಗಿದ್ದಾನೆ ಎಂದು ತಿಳಿಸುವಿಕೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರ ಪ್ರತಿಪಾದ್ಯನಾದವನು ನಾರಾಯಣನೆಂದು ಸ್ಪಷ್ಟವಾಗುತ್ತದೆ.

'ನಾರಾಯಣ' ಎಂಬಲ್ಲಿ 'ನಾರ' ಎಂಬ ರೂಪ ಹೇಗೆ ಸಿದ್ಧವಾಯಿತು? ಎಂದರೆ 'ರೀಙ್ ಕ್ಷಯೇ' ಎಂಬ ಧಾತುವಿಗೆ 'ನಞ್' ಉಪಪದ ಸೇರಿದರೆ 'ನ ರೀ' ಎಂದಾಯಿತು. 'ರೀ' ಧಾತುವಿಗೆ ಕರಣಾರ್ಥದಲ್ಲಿ 'ಡ'ಪ್ರತ್ಯಯ ಮಾಡಿದರೆ 'ನಾರ' ಎಂದಾಯಿತು. ಪ್ರಜ್ಞಾದಿಶಬ್ದಗಳಂತೆ ಸ್ವಾರ್ಥದಲ್ಲಿ 'ಅಣ್' ಪ್ರತ್ಯಯ ಮಾಡಿದರೆ ಆದಿವೃದ್ಧಿ ಬಂದು 'ನಾರಂ' ಎಂಬ ರೂಪ ಸಿದ್ಧವಾಗಿದೆ. ಇನ್ನು 'ಅರಮಣಂ' ಎಂದರೆ ದುಃಖವೆಂದರ್ಥ. ಟೀಕೆಯಲ್ಲಿ 'ನಿರ್ದೋಷವೇದೋತ್ಪನ್ನವಾದ್ದರಿಂದ 'ನಾರಂ' ಎಂದರೆ ಜ್ಞಾನ' ಎಂಬ ಅರ್ಥ ಹೇಳಲಾಗಿದೆ. ಇಲ್ಲಿ 'ನಾರ' ಎಂದರೆ ನಿರ್ದುಷ್ಟವಾದ ವೇದ ಎಂದರ್ಥ. 'ತಸ್ಯ ಇದಂ' ಎಂಬರ್ಥದಲ್ಲಿ 'ಅಣ್' ಪ್ರತ್ಯಯ ಮಾಡಿದರೆ 'ನಾರ' ಶಬ್ದವು 'ವೇದಜನ್ಯಜ್ಞಾನ' ಎಂಬರ್ಥವನ್ನು ಹೇಳಿದಂತಾಗುತ್ತದೆ.

**प्रकाशः** – ननु भाष्ये आदौ वक्ष्यमाणार्थकथनस्य श्रोतृबुद्ध्यानुकूल्यरूपफलवत्त्वेऽपि नारायणशब्दान्वाख्यानस्य न किञ्चित् फलमत आह – **विशिष्टेति** ।। 'न रीयतेऽनेन' इत्यत्र डप्रत्यये कृते 'नरम्' इति स्यात् 'नारम्' इति कथमत आह – **न रीयत इतीति** ।। औणादिके डप्रत्यये टिलोपे च 'नरम्' इति भवति । ततः ''प्रज्ञादिभ्यश्च'' इति स्वार्थिकाण्प्रत्यये ''तद्धितेष्वचामादेः'' इत्यादिवृद्धौ ''यस्येति च'' इत्यकारलोपे वक्ष्यमाणरीत्या नलोपाभावे च 'नारम्' इति

सिद्धमित्यर्थः । अरमणं रमणाभाव इति भ्रान्तिं निराह – अरमणमिति ।। 'नारम्' इत्यनेन कथं निर्दोषवेदोत्पन्नत्वस्य लाभ इत्यत आह – निर्दोषेति ।। न विद्यन्ते अरा दोषा निरर्थकत्वादयो यस्य सोऽयं नारो वेदः । ततोऽणि "यस्येति च" इति लोपे 'नारम्' इति सिद्धम् । सम्बन्धश्च जन्यजनकभाव इति भावः ।

ननु नारशब्दात् "वृद्धिर्यस्याचामादिस्तद् वृद्धम्" इति वृद्धसंज्ञायां "वृद्धाच्छः" इति छप्रत्यये 'नारीयम्' इति भाव्यम्, कथं 'नारम्' इति । सत्यम् । "वा नामधेयस्य वृद्धसंज्ञा" इति वा, "ओर्गुणः" इत्यत्र गुणग्रहणेन ज्ञापनात् "संज्ञापूर्वको विधिरनित्यः" इति वा 'नारम्' इति साधु । अत एव तृतीयस्य द्वितीयपादे "स्पृहिगृहिपतिदयि" इति सूत्रे 'श्रद्धालुः' इत्यत्र "श्लौ" इति द्विर्वचनमाशङ्क्य "संज्ञापूर्वको विधिरनित्यः" इति द्विर्वचनं नेत्युक्तं मञ्जर्याम् ।

गुरुराजीय – ननु भाष्ये आदौ वक्ष्यमाणार्थकथनस्य श्रोतृबुद्ध्यानुकूल्य-रूपफलवत्वादुपपत्तावपि नारायणशब्दान्वाख्यानस्य निष्प्रयोजनत्वान्न तदुपपत्तिः, इत्यतस्तत्प्रयोजनमाह – नारायणशब्दस्य विशिष्टगुणवाचकत्वप्रदर्शनं चेति ।। 'सर्वगुणोदीर्णत्वनिर्दोषत्वज्ञेयत्वगम्यत्वरूपविशिष्टगुणवाचकत्वप्रदर्शनं च' इत्यर्थः । एतच्च 'नारायण एव शास्त्रार्थ इति दर्शयितुम्' इत्युत्तरेण सम्बध्यते ।

कथं विशिष्टगुणवाचकत्वप्रदर्शनेन नारायणस्य शास्त्रार्थतासिद्धिः? इत्यत उक्तम् –ब्रह्मशब्दसमानार्थत्वादिति ।। तथाच नारायणशब्दस्य विशिष्टगुणवाचकत्वेन तद्वाचकब्रह्मशब्दसमानार्थत्वात् ब्रह्मणश्च शास्त्रार्थत्वात् नारायणस्यापि शास्त्रार्थत्वे-नाधिकृतत्वाद् युक्तं नम्यत्वमिति भावः ।

ननु च गुणोदीर्णत्वमात्रस्य नारायणशब्दार्थत्वकथनेनापि तदर्थकब्रह्म-शब्दसमानार्थत्वासिद्धिसम्भवाद् गुणचतुष्टयाभिधायकत्वप्रदर्शनमनुपयुक्तमेवापन्नम्, इत्यत उक्तम् – शास्त्रार्थवाचकत्वाच्चेति ।। तथाच गुणचतुष्टयस्याध्यायचतुष्टयप्रति-पाद्यत्वात् नारायणशब्दस्य गुणचतुष्टयाभिधायकत्वान्नारायणस्य शास्त्रार्थत्वसिद्धि-रिति भावः । यद्वा, ब्रह्मशब्दसमानार्थत्वान्नारायणशब्दस्य ब्रह्मणः शास्त्रप्रति-

पाद्यत्वान्नारायणस्य शास्त्रप्रतिपाद्यत्वमित्युक्तौ परंपरा भवतीत्यपरितोषादाह - शास्त्रार्थेति ।। शास्त्रार्थभूतगुणोदीर्णत्वनिर्दोषत्वादिप्रतिपादकत्वे नारायणशब्दस्य दर्शिते साक्षान्नारायण एव शास्त्रप्रतिपाद्य इति सिद्ध्यतीति भावः । अत्र दर्शयितुम् इत्यतः परम् 'अतो युक्तं ब्रह्ममीमांसाशास्त्रव्याख्यानावसरे तन्नमनम्' इति शेषो बोध्यः । तेन 'ब्रह्ममीमांसाशास्त्रे ब्रह्मण एवाधिकृतत्वेन नम्यत्वात् तत्परित्यागेन नारायणवन्दनं न युक्तम्' इति चोद्यानवकाश इति ध्येयम् ।।

नञुपपदादिति ।। डप्रकरणे "अन्येष्वपि दृश्यते" इत्यपिशब्दस्य प्रागुक्तोपपदकर्तृकारकादिसर्वोपाधिव्यभिचारार्थत्वादिति भावः । 'नन्वेवं न रीयतेऽनेनेति करणे डप्रत्यये डित्वाट्टिलोपे नरमित्येव स्यात् नारमिति तु कथम्? इत्यत आह –प्रज्ञादित्वादिति ।। "प्रज्ञाश्रद्धार्चाभ्योण" इति सूत्रे प्रज्ञाऽस्यास्तीत्यर्थे मत्वर्थीयणप्रत्ययविधानेन प्राज्ञ इति रूपोपपादनेऽपि "प्रज्ञादिभ्यश्च" इति सूत्रे प्रजानातीति प्रज्ञः स एव प्राज्ञ इति स्वार्थेऽण्प्रत्ययविधानात् प्रज्ञादित्वान्नरशब्दस्य नरमेव नारमिति स्वार्थेऽण्प्रत्यये कृते "तद्धितेष्वचामादेः" इत्यादिवृद्धौ "यस्येति च" इत्यकारलोपे नारमिति रूपसिद्धिरिति भावः । ज्ञानस्य बन्धनिवृत्त्यर्थत्वेन मोक्षसुखातिशयार्थत्वाभावादरमणशब्दो न सुखाभावार्थ इत्याह – अरमणं दुःखमिति ।। कथं नारशब्देन वेदजन्यज्ञानस्य लाभः येन तस्य तद्वाचित्वं स्यात्, इत्यत आह – निर्दोषेति ।। न विद्यन्ते अरा दोषा यस्यासौ नारो वेदः, ततो वेदवाचकान्नारशब्दान्नारस्येदं नारमित्यर्थेऽणिकृते "यस्येति च"त्यकारलोपे नारमिति रूपसिद्धिः ।

"तस्येदम्" इति सूत्रेण सम्बन्धसामान्येऽणो विहितत्वेऽपि योग्यत्वात् सामान्यस्य विशेषे पर्यवसानमभिप्रेत्य तज्जन्येत्युक्तम् । नच नारशब्दात् "वृद्धिर्यस्याचामादिस्तद्वृद्धम्" इति वृद्धसंज्ञायां "वृद्धाच्छः" इति च्छप्रत्यये नारीयमिति भवितव्यम् । तत् कथमण्प्रत्ययाश्रयणेन नारमिति रूपं सिद्ध्येत्? इति वाच्यम् । "वानामधेयस्य" इति वृद्धसंज्ञायाः वैकल्पिकत्वेन नारीयं नारमिति रूपद्वयस्याप्युपपन्नत्वात् "ओर्गुणः" इत्यत्र गुणग्रहणेन संज्ञापूर्वकस्य विधेरनित्यत्वज्ञापनाच्च तदुपपत्तिः । अत एव "स्पृहिगृहि" इति सूत्रे 'श्रद्धालुः' इत्यत्र श्नाविति द्विर्वचनमाशङ्क्य, 'संज्ञापूर्वको विधिरनित्य इति द्विर्वचनं नेत्युक्तं पदमञ्जर्याम्' इति ध्येयम् ।।

ಚಂದ್ರಿಕಾರ್ಚಂದ್ರಿಕಾ

ವಿವರಣೆ - ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಮುಂದೆ ಸಕಲಗುಣಪರಿಪೂರ್ಣತ್ವ, ನಿರ್ದೋಷತ್ವ, ಜ್ಞೇಯತ್ವ, ಗಮ್ಯತ್ವಗಳನ್ನು ಸಮರ್ಥಿಸುತ್ತಾರೆ. ಅವುಗಳನ್ನು ಮೊದಲು ಪ್ರಸ್ತಾವನೆಯ ಮೂಲಕ ತಿಳಿಸಿದರೆ ಶ್ರೋತೃಗಳ ಬುದ್ಧಿಗೆ ಅನುಕೂಲವಾಗುತ್ತದೆ. ಆದರೆ ಈ ಪ್ರಸ್ತಾವನೆಯನ್ನು ನಾರಾಯಣಶಬ್ದದ ವ್ಯಾಖ್ಯಾನದ ಮೂಲಕವೇ ಮಾಡಲು ಏನು ಕಾರಣ?

ಈ ಪ್ರಶ್ನೆಗೆ ಉತ್ತರರೂಪವಾಗಿ ಗ್ರಂಥಕಾರರು 'ನಾರಾಯಣಶಬ್ದಸ್ಯ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಬ್ರಹ್ಮ' ಎಂದರೆ ಗುಣಪರಿಪೂರ್ಣ ಎಂದರ್ಥ. ಆ ಅರ್ಥವನ್ನು 'ನಾರಾಯಣ ಶಬ್ದಕ್ಕೆ ಹೇಳಿದರೆ ಬ್ರಹ್ಮನು ನಾರಾಯಣನೇ ಆಗಿದ್ದಾನೆಂದು ನಿರ್ಣಯವಾಗುತ್ತದೆ. ಮತ್ತು ಬ್ರಹ್ಮಮೀಮಾಂಸಾ-ಶಾಸ್ತ್ರಪ್ರತಿಪಾದ್ಯನು ನಾರಾಯಣನೇ ಆಗಿದ್ದಾನೆಂದು ಸಿದ್ಧವಾಗುತ್ತದೆ. ಆದ್ದರಿಂದ ನಾರಾಯಣನಿಗೆ ನಮಿಸಿದ್ದು ಅತ್ಯಂತ ಸಮಂಜಸವಾಗಿದೆ.

ಪ್ರಶ್ನೆ :- ನಾರಾಯಣಶಬ್ದಕ್ಕೆ ಗುಣಪೂರ್ಣತ್ವಾರ್ಥವನ್ನು ಹೇಳಿದರೆ ಸಾಕು. ಬ್ರಹ್ಮಶಬ್ದದಿಂದ ಸಮಾನಾರ್ಥತ್ವವೆಂಬ ಉದ್ದೇಶವು ಸಿದ್ಧವಾಗುತ್ತದೆ. ಪುನಃ ಗುಣಚತುಷ್ಟಯಗಳೆಂಬ ಅರ್ಥವನ್ನು ಹೇಳುವ ಅವಶ್ಯಕತೆ ಏನಿತ್ತು?

ಉತ್ತರ :- ಈ ಪ್ರಶ್ನೆಗೆ 'ಶಾಸ್ತ್ರಾರ್ಥವಾಚಕತ್ವಾಚ್ಚ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ನಾಲ್ಕು ಅಧ್ಯಾಯಗಳಲ್ಲಿ ಗುಣಚತುಷ್ಟಯಗಳು ಕ್ರಮವಾಗಿ ಪ್ರತಿಪಾದ್ಯವಾಗಿವೆ. ಆ ಗುಣಚತುಷ್ಟಯಗಳು ನಾರಾಯಣಶಬ್ದದ ಅರ್ಥವೆಂದು ಹೇಳಿದರೆ ಸಕಲಶಾಸ್ತ್ರಪ್ರತಿಪಾದ್ಯನಾದವನು ನಾರಾಯಣನೆಂದು ಸ್ಪಷ್ಟವಾಗುತ್ತದೆ.

ಅಥವಾ, ಮತ್ತೊಂದು ಕಾರಣದಿಂದ 'ಶಾಸ್ತ್ರಾರ್ಥವಾಚಕತ್ವಾಚ್ಚ' ಎಂಬ ಮಾತನ್ನು ಹೇಳಿದ್ದಾರೆ. ಬ್ರಹ್ಮಮೀಮಾಂಸಾಶಾಸ್ತ್ರಪ್ರತಿಪಾದ್ಯನಾದವನು ಬ್ರಹ್ಮ. ಬ್ರಹ್ಮಶಬ್ದದ ಅರ್ಥವೇ ನಾರಾಯಣಶಬ್ದದ ಅರ್ಥವಾದ್ದರಿಂದ ನಾರಾಯಣನು ಶಾಸ್ತ್ರಪ್ರತಿಪಾದ್ಯನಾಗಿದ್ದಾನೆಂದು ಹೇಳಿದಿರಿ. ಈ ಪಕ್ಷದಲ್ಲಿ ನಾರಾಯಣನಿಗೆ ಶಾಸ್ತ್ರಪ್ರತಿಪಾದ್ಯತ್ವವನ್ನು ಪರಂಪರಯಾ ಹೇಳಿದಂತಾಯಿತು. ಎಂಬ ಪ್ರಶ್ನೆಗೆ 'ಶಾಸ್ತ್ರಾರ್ಥವಾಚಕತ್ವಾಚ್ಚ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಗುಣಚತುಷ್ಟಯಗಳು ಶಾಸ್ತ್ರಪ್ರತಿಪಾದ್ಯಗಳಾಗಿವೆ. ಅದನ್ನೇ ನಾರಾಯಣಶಬ್ದವೂ ಪ್ರತಿಪಾದನೆ ಮಾಡುತ್ತಿರುವುದರಿಂದ ನಾರಾಯಣನು ಸಾಕ್ಷಾತ್ತಾಗಿಯೇ ಶಾಸ್ತ್ರಪ್ರತಿಪಾದ್ಯನೆಂದಾಯಿತು.

ಹೀಗೆ ಗ್ರಂಥಪ್ರತಿಪಾದ್ಯನಾದ್ದರಿಂದ ಅಧಿಕೃತನಾಗಿರುವ ನಾರಾಯಣನನ್ನು ನಮಿಸುವುದು ಅತ್ಯಂತ ಸಮಂಜಸವಾಗಿದೆ. ಬ್ರಹ್ಮನನ್ನು ಬಿಟ್ಟು ನಾರಾಯಣನ ನಮನವೇಕೆ? ಎಂಬ ಕುಚೋದ್ಯಕ್ಕೆ ಅವಕಾಶವೇ ಇಲ್ಲ.

'ನಾರಾಯಣ' ಶಬ್ದಕ್ಕೆ ಜ್ಞಾನವಿಷಯ ಎಂಬ ಅರ್ಥವನ್ನು ಟೀಕೆಯಲ್ಲಿ ಹೇಳಬೇಕಾದರೆ ಅನೇಕವಿಧದಲ್ಲಿ 'ನಾರಾ'ಶಬ್ದಕ್ಕೆ ವ್ಯುತ್ಪತ್ತಿ ಮಾಡಿದ್ದಾರೆ. ಅವುಗಳಲ್ಲಿ 'ನ ರೀಯತೇ ಅನೇನ ಇತಿ ನಾರಂ'

ಎಂಬುದೂ ಒಂದುವಿಧದ ವ್ಯುತ್ಪತ್ತಿ. 'ಯಾವುದರಿಂದಾಗಿ ನಾಶವಿಲ್ಲವೋ, ಅದು' ಅಂದರೆ ಶಶ್ವತ್ಸ್ಥಃ ಎಂದರ್ಥ. ಆದರೆ ಇಲ್ಲಿ 'ನ ರೀಯತೇ' ಎಂಬ ವ್ಯುತ್ಪತ್ತಿ ಮಾಡಿ 'ಡ' ಪ್ರತ್ಯಯ ಮಾಡಿದರೆ 'ನಃ' ಎಂದಾಗಬೇಕು. 'ನಾರಂ' ಎಂದು ಹೇಗಾಯಿತು? ಎಂಬ ಪ್ರಶ್ನೆಗೆ 'ನಞುಪಪದಾತ್' ಎಂಬುದರಿಂದ ಗ್ರಂಥಕಾರರು ಉತ್ತರಿಸುತ್ತಿದ್ದಾರೆ.

ಇಲ್ಲಿ 'ನಾರಶಬ್ದ'ದ ನಿಷ್ಪತ್ತಿಯನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು. 'ನಾಶ' ಎಂಬ ಅರ್ಥದಲ್ಲಿರುವ 'ರೀಙ್' ಧಾತುವಿಗೆ 'ನಞ್' ಎಂಬ ಅವ್ಯಯವು ಉಪಪದವಾಗುತ್ತದೆ. ಸಂಬಂಧಾರ್ಥದಲ್ಲಿ ಅಣ್ ಪ್ರತ್ಯಯ ಮಾಡಿ 'ಯಸ್ಯೇತಿ ಚ' ಎಂಬುದರಿಂದ ಲೋಪ ಮಾಡಿದರೆ ವೇದದಿಂದ ಹುಟ್ಟುವ ಜ್ಞಾನ ಎಂಬರ್ಥವು ಲಭಿಸುತ್ತದೆ. ಸಂಬಂಧವೆಂದರೆ ಜನ್ಯಜನಕಭಾವಸಂಬಂಧವನ್ನು ಇಲ್ಲಿ ಇಟ್ಟುಕೊಳ್ಳಬೇಕು.

ಇಲ್ಲಿ ಒಂದು ಪ್ರಶ್ನೆ ಬರುತ್ತದೆ - 'ವೃದ್ಧಿರ್ಯಸ್ಯಾಚಾಮಾದೇಸ್ತದ್ವೃದ್ಧಮ್' ಎಂಬ ಸೂತ್ರದಿಂದ 'ನಾರ' ಶಬ್ದಕ್ಕೆ 'ವೃದ್ಧ' ಎಂಬ ಸಂಜ್ಞೆ ಬರುತ್ತದೆ. ಏಕೆಂದರೆ 'ನಾರ' ಶಬ್ದದ ಮೊದಲನೆಯ ಸ್ವರಾಕ್ಷರ 'ಆ' ಎಂಬುದು. ಇದಕ್ಕೆ ಈ ಸೂತ್ರ 'ವೃದ್ಧ' ಎಂಬ ಸಂಜ್ಞೆಯನ್ನು ಹೇಳುತ್ತದೆ. ಅನಂತರ 'ವೃದ್ಧಾಚ್ಛಃ' ಎಂಬ ಮತ್ತೊಂದು ಸೂತ್ರವು 'ಛ' ಪ್ರತ್ಯಯವನ್ನು ವಿಧಿಸುತ್ತದೆ. 'ಛ' ಪ್ರತ್ಯಯ ಬಂದರೆ 'ಈಯ' ಪ್ರತ್ಯಯ ಬಂದು 'ನಾರೀಯ' ಎಂದು ರೂಪವಾಗುತ್ತದೆ. ಹಾಗಾಗಿ ನೀವು 'ನಾರ' ಎಂದು ಹೇಗೆ ಹೇಳಿದಿರಿ? ಎಂದರೆ ಎರಡು ರೀತಿಯ ಸಮಾಧಾನವನ್ನು ಇಲ್ಲಿ ತಿಳಿಯಬೇಕು.

'ವಾ ನಾಮಧೇಯಸ್ಯ ವೃದ್ಧಸಂಜ್ಞಾ' ಎಂಬ ಸೂತ್ರವು ರೂಢಶಬ್ದಗಳಲ್ಲಿ ಮೊದಲನೆಯ ಸ್ವರಾಕ್ಷರವು ವೃದ್ಧ್ಯಕ್ಷರವಾಗಿದ್ದರೂ (ದೀರ್ಘವಾಗಿದ್ದರೂ) ಆ ಸಂಜ್ಞೆಯನ್ನು ವಿಕಲ್ಪ ಮಾಡಿದೆ. ಆದ್ದರಿಂದ 'ನಾರೀಯ' ಎಂಬ ಅನಿಷ್ಟರೂಪದ ಹೆದರಿಕೆಯಿಲ್ಲ.

ಅಥವಾ ನಾರಶಬ್ದದ ಸಾಧುತ್ವವನ್ನು ಮತ್ತೊಂದು ಬಗೆಯಲ್ಲಿ ಚಿಂತಿಸಬಹುದು. ಹೇಗೆಂದರೆ ಓರ್ಗುಣಃ (೩-೪-೧೪೩) ಎಂಬ ಸೂತ್ರದಲ್ಲಿ 'ಭ' ಸಂಜ್ಞೆ ಇರುವ 'ಉ'ವರ್ಣಾಂತವಾದ ಶಬ್ದಕ್ಕೆ ತದ್ಧಿತಪ್ರತ್ಯಯ ಪರದಲ್ಲಿದ್ದಾಗ ಗುಣವು ಬರುತ್ತದೆ ಎಂದು ಹೇಳಲಾಗಿದೆ. ಉಕಾರವು ಗುಣಾಕ್ಷರವೆಂದರೆ 'ಓ'ಕಾರ ಬರುತ್ತದೆ ಎಂದು ಅರ್ಥ. ವಾಸ್ತವಿಕವಾಗಿ ಇಲ್ಲಿ 'ಓರೋತ್' 'ಉ'ಕಾರಕ್ಕೆ 'ಓ'ಕಾರ ಬರುತ್ತದೆ ಎಂದೇ ಲಘುವಾಗಿ ಹೇಳಿದ್ದರೂ ಸಾಕಾಗಿತ್ತು. ಆದರೂ ಸಹ 'ಗುಣ' ಎಂಬ ಹೆಸರಿನಿಂದ ವಿಧಿಸಿದ್ದರಿಂದ 'ಸಂಜ್ಞಾಪೂರ್ವಕೋ ವಿಧಿರನಿತ್ಯಃ' ಸಂಜ್ಞಾಪೂರ್ವಕ ಕಾರ್ಯಗಳನ್ನು ಮಾಡಲೇಬೇಕೆಂಬ ನಿಯಮವಿಲ್ಲವೆಂಬ ಪರಿಭಾಷೆಯು ಸೂಚಿತವಾಗುತ್ತದೆ. ಆದ್ದರಿಂದ ನಾರಂ ಎಂಬಲ್ಲಿ ಛ ಪ್ರತ್ಯಯ ಬರುತ್ತದೆ. ಈ ವಿಷಯವನ್ನು ತಿಳಿಸುವುದಕ್ಕಾಗಿಯೇ ಕಾಶಿಕಾವ್ಯಾಖ್ಯಾನಕಾರನಾದ ಪದಮಂಜರೀಕಾರನು ಮೂರನೆಯ ಅಧ್ಯಾಯದ ದ್ವಿತೀಯಪಾದದಲ್ಲಿ ಹೀಗೆ ಹೇಳಿದ್ದಾನೆ. 'ಸ್ಪೃಹಿಗೃಹಿಪತಿದಯಿನಿದ್ರಾತಂದ್ರಾ-ಶ್ರದ್ಧಾಭ್ಯ ಆಲುಚ್' ಎಂಬ ಸೂತ್ರದಲ್ಲಿ 'ಆಲುಚ್' ಪ್ರತ್ಯಯದ ಬದಲು 'ಲುಶ್' ಪ್ರತ್ಯಯವನ್ನೇ ಹೇಳಬಹುದಿತ್ತಲ್ಲವೇ? ಎಂದರೆ ಹಾಗೆ ಹೇಳಿದರೆ 'ಶ್ರದ್ಧಾಲುಃ' ಎಂಬ ರೂಪವು ಸಿದ್ಧಿಸುತ್ತಿರಲಿಲ್ಲ. ಏಕೆಂದರೆ 'ಲುಶ್' ಪ್ರತ್ಯಯದಲ್ಲಿರುವ ಶ ಕಾರವು 'ಇತ್' ಆಗುವುದರಿಂದ ಸಾರ್ವಧಾತುಕ ಸಂಜ್ಞೆ

ಬಯಸ್ತರೆ. ಆವಾಗ ಶ್ಲು ಪ್ರತ್ಯಯ ಬಂದು ಧಾತುವಿಗೆ ದ್ವಿರುಕ್ತಿಯು ಬಂದು 'ಶ್ರದ್ದಧಾಲು' ಎಂದು ಅನಿಷ್ಟರೂಪವಾಗಬೇಕಾದೀತು. ಆದರೆ ಇಲ್ಲಿ 'ಧಾತು' ಎಂಬ ಸಂಜ್ಞೆಯಿಂದ ಕಾರ್ಯವನ್ನು ವಿಧಿಸುವುದರಿಂದ ಇಂತಹ ಸಂಜ್ಞಾಪೂರ್ವಕವಾದ ವಿಧಿಗಳು ಅನಿತ್ಯವಾಗಿವೆ. ಹಾಗಾಗಿ 'ಶ್ರದ್ಧಾಲುಃ' ಎಂಬ ರೂಪ ಸಿದ್ಧಿಸಲು ಏನೂ ಬಾಧಕವಿಲ್ಲ. ಆದರೂ ಸೂತ್ರದಲ್ಲಿ 'ಲುಶ್' ಪ್ರತ್ಯಯವನ್ನು ಬಿಟ್ಟು 'ಆಲುಚ್' ಪ್ರತ್ಯಯವನ್ನು ಏಕೆ ವಿಧಿಸಿದ್ದೆಂದರೆ 'ಕೃಪಾಲು' ಎಂಬ ರೂಪ ಸಿದ್ಧಿಯಾಗುವುದಕ್ಕೋಸ್ಕರ.

ಪ್ರಕೃತದಲ್ಲಿ 'ನಾರ' ಎಂಬುದಕ್ಕೆ 'ವೃದ್ಧಿ' ಸಂಜ್ಞೆ ಬಂದರೂ ಸಂಜ್ಞಾಪೂರ್ವಕವಾದ 'ಛ' ಪ್ರತ್ಯಯದ ಕಾರ್ಯವನ್ನು ಮಾಡಬೇಕಾಗಿಲ್ಲ. ಹೊರತಾಗಿ 'ಅಣ್' ಪ್ರತ್ಯಯವಷ್ಟೇ ಬಂದು ಸಾಧುರೂಪವು ಸಿದ್ಧಿಸುತ್ತದೆ.




ನಾರಾಯಣ ಶಬ್ದಾರ್ಥ

ನಾರಾಯಣನೇ ಬ್ರಹ್ಮಸೂತ್ರಪ್ರತಿಪಾದ್ಯನೆಂದು ಸೂಚಿಸಲು ಭಾಷ್ಯದಲ್ಲಿರುವ ನಾರಾಯಣಶಬ್ದ ಬ್ರಹ್ಮಶಬ್ದ ಸಮಾನಾರ್ಥಕವೆಂದೂ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವೆಂದೂ ಟೀಕಾಕೃತ್ಪಾದರು ತಿಳಿಸುತ್ತಾರೆ. 'ನಾರ'ವೆಂದರೆ ಅಮೃತತ್ವಕ್ಕೆ ಮೋಕ್ಷಕ್ಕೆ ಸಾಧನವಾದ ತತ್ವಜ್ಞಾನ. ಅಥವಾ ನಿರ್ದುಃಖವಾದ ಸ್ಥಾನಕ್ಕೆ ಒಯ್ಯುವ ತತ್ವಜ್ಞಾನ. ಅಥವಾ ನಿರ್ದೋಷ ವೇದೋತ್ಪನ್ನವಾದ ತತ್ವಜ್ಞಾನ. ಇಂಥ ತತ್ವಜ್ಞಾನಕ್ಕೆ ವಿಷಯನಾಗಿ ಆಶ್ರಯನೆನಿಸಿದವನು ನಾರಾಯಣ. ಇಲ್ಲಿ 'ನಾರ'ವೆಂದರೆ ನಿರ್ದೋಷವಾದ ವೇದ. ಅದರಿಂದ ಬರುವ ಜ್ಞಾನವೂ 'ನಾರ'. ಅಣ್ ಪ್ರತ್ಯಯ ಸೇರಿಸಬೇಕು. ಛ ಪ್ರತ್ಯಯ ಬಂದು ನಾರೀಯ ಎಂದಾದೀತು ಎಂಬ ಸಮಸ್ಯೆಗೆ ಪರಿಹಾರವಿದೆ.



• • • • •

ಅನರಾಯಣ ಎಂದೋ? ನಾರಾಯಣ ಎಂದೋ?

**तात्पर्यचन्द्रिका –**

**नगनाकादिशब्दवदिति ॥ ननु "नभ्राण्नपात्" इत्यादिसूत्राभ्यां नाकनगशब्दयोर्नलोपाभाव उक्तः नारायणशब्दे तु नेति कथं तद्दृष्टान्तीकरणम्? इति चेत्, मैवम् । "स्त्रैणार्थः" इत्यत्र "स्त्रीपुंसाभ्यां" इत्यादिना विहितस्य नञो नलोपाभावार्थं "नलोपो नञः" इति सूत्रे "रात्रेः कृति विभाषा" इत्यतोऽनुवृत्ताया**

**विभाषायाः व्यवस्थितविभाषात्वस्य न्यास एवोक्तत्वेन नारायण इत्यादौ नलोपाभावाद्युपपत्तेः । यद्वा – नसमासोऽस्तु ।**

ಅನುವಾದ - 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರ, ಹಾಗು 'ನ ಭ್ರಾಣ್ ಪಾನ್----' ಇತ್ಯಾದಿ ಎರಡು ಸೂತ್ರಗಳಲ್ಲಿ 'ನಗ' ಹಾಗು 'ನಾಕ' ಶಬ್ದಗಳ ನಞ್ ಲೋಪವಾಗುವುದಿಲ್ಲವೆಂದು ಹೇಳಲಾಗಿದೆ. ಆದರೆ 'ನಾರ' ಎಂಬಲ್ಲಿನ 'ನ' ಕಾರಕ್ಕೆ ಲೋಪಾಭಾವವನ್ನು ಹೇಳಿಲ್ಲ. ಆದ್ದರಿಂದ ಟೀಕೆಯಲ್ಲಿ 'ನಗನಾಕಾದಿವತ್' ನಾರಾಯಣಶಬ್ದಸಾಧುತ್ವವು ತಿಳಿಯಬೇಕೆಂದು ಹೇಗೆ ದೃಷ್ಟಾಂತ ಕೊಟ್ಟರು?

ಈ ಪ್ರಶ್ನೆಗೆ ಹೀಗೆ ಉತ್ತರ - ನ್ಯಾಸಕಾರನು 'ಸ್ತ್ರೈಣಾರ್ಥಃ' ಎಂಬ ರೂಪನಿಷ್ಪತ್ತಿ ಮಾಡುವ ಸಂದರ್ಭದಲ್ಲಿ 'ನ' ಲೋಪವನ್ನು ವಿಕಲ್ಪ ಮಾಡಿದ್ದಾನೆ. ಸ್ತ್ರೀ ಶಬ್ದದ ಮೇಲೆ ಸಂಬಂಧಾರ್ಥದಲ್ಲಿ 'ಸ್ತ್ರೀಪುಂಸಾಭ್ಯಾಂ ನಞ್ಸ್ನಞೌ ಭವನಾತ್' ಎಂಬ ಸೂತ್ರದಿಂದ 'ನಞ್' ಪ್ರತ್ಯಯ ಬರುತ್ತದೆ. ಇಲ್ಲಿಯೂ ಸಹ 'ನಞ್'ಗೆ ಹೇಳಿದ ನಲೋಪವು ಬರಲು ಪ್ರಸಕ್ತಿಯಿದೆ. ಅದಕ್ಕೋಸ್ಕರ 'ದಿಕ್ಸ್ಕೃತಿ ವಿಭಾಷಾ' ಎಂಬ ಸೂತ್ರದಿಂದ 'ವಿಭಾಷಾ' ಎಂಬ ಪದವನ್ನು 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಅವಾಗ ನಲೋಪವು ವಿಕಲ್ಪವೆಂದು ಅರ್ಥವಾಗುತ್ತದೆ. ಹಾಗಾಗಿ 'ಸ್ತ್ರೈಣಾರ್ಥಃ' ಎಂಬ ರೂಪವು ಸಾಧುವಾಗುತ್ತದೆ. ಅದರಂತೆ ಪ್ರಕೃತದಲ್ಲಿ ನಾರಾಯಣ ಶಬ್ದದಲ್ಲಿಯೂ ನಲೋಪಾಭಾವವು ಉಪಪನ್ನವಾಗುತ್ತದೆ. ಅಥವಾ 'ನಾರಾ' ಎಂಬುದು 'ನ' ಎಂಬುದರಿಂದ ಸಮಾಸವಾಗಿದೆ 'ನಞ್' ನ ಜೊತೆಗಲ್ಲ.

**ಕಠಿಣಪದಾರ್ಥ**

ನಾಕ = ಸ್ವರ್ಗ. ನಗ = ಪರ್ವತ. ಸ್ತ್ರೈಣಾರ್ಥ = ಸ್ತ್ರೀಗೆ ಸಂಬಂಧಿಸಿದ ಸಂಪತ್ತು. ನ್ಯಾಸೇ = ವಾಮನ, ಜಯಾದಿತ್ಯರು. ಕಾಶಿಕಾವೃತ್ತಿಯ ವ್ಯಾಖ್ಯಾನ ಬರೆದ (ಜಿನೇಂದ್ರಬುದ್ಧಿ). ನ ಸಮಾಸಃ = 'ನಞ್' ಜೊತೆಗೆ ಸಮಾಸ. ಗ್ರಥನಮ್ = ಉಲ್ಲೇಖಿಸುವುದು. ತತ್ಕಾರ್ಯಮ್ = ಅಧಿಕಾರಾದಿಗಳ ಸೂಚನೆಯ ಕಾರ್ಯವನ್ನು. ತತ್ಸ್ಮರಣೇನೈವ = ಅಧಿಕಾರಾದಿಗಳ ಸ್ಮರಣೆಯಿಂದಲೇ.

**प्रकाशः** – ननु 'अरायणो न' इत्यादिव्युत्पत्तौ नञो नलोपे नुटि च सति अनरायणेति भाव्यम् इत्याशङ्क्योक्तं मूले ''नगनाकादिशब्दवत्'' इति । तत्राक्षिपति – नन्विति ।। ''नभ्राण्नपान्नवेदानासत्यानमुचिनकुलनखनपुंसकनक्षत्रनक्रनाकेषु प्रकृत्या'' इति सूत्रेण नाकशब्दस्य ''नगोऽप्राणिष्वन्यतरस्याम्'' इति सूत्रेण नगशब्दस्य नलोपाभावो निपातित इत्यर्थः ।

ಪರಿಪೂರ್ಣಚಂದ್ರಿಕಾ

नगनाकादौ यथा सौत्रत्वात् साधुत्वमेवमिहापि सौत्रत्वादेव समाधानमिति टीकाशय इत्यभिप्रेत्य सौत्रत्वप्रकारं दर्शयति – मैवमित्यादिना ।। स्त्रीशब्दात् हितायर्थे तद्धिते "स्त्रीपुंसाभ्यां नञ्स्नञौ भवनात्" इति नञ्प्रत्यये 'स्त्री नञ्' इति स्थिते ञित्वादादिवृद्धौ णत्वे च 'स्त्रैण' इति रूपं ततोऽर्थशब्देन समासे 'स्त्रैणार्थ' इति भवति । तत्र "नलोपो" इति नलोपे कार्ये णत्वस्यासिद्धतया नलोपे "तस्मानुडचि" इति नुटि कृते 'स्त्रायनर्थ' इति प्राप्नोति । तत्र "रात्रेः कृति विभाषा" इत्यव्यवहितपूर्वसूत्राद् विभाषापदमनुवृत्य नञो नलोपो भवति विभाषेति षष्ठे तृतीयपादे व्याख्यातम् । तर्हि 'अनश्वः' इत्यादावपि रूपद्वयं प्राप्नोति । अतः 'कचिन्नित्यं स्यात् कचिन्नैव स्यात् इति व्यवस्थितविकल्पः' इति वृत्तिव्याख्यानं न्यास एवोक्तम् । नास्माभिर्यतितव्यम् इत्यर्थः । आदिपदेन नुडभावग्रहः ।

ननु विभाषापदानुवृत्तौ "नभ्राण्नपात्" इत्यादिसूत्रं व्यर्थम् । तत्रापि उक्तरीत्या समाधानसम्भवात् । प्रपञ्चनस्यागतिकगतित्वात् । परिगणनत्वे प्राप्तः स एव दोषः । अतो ज्ञायते नात्र तदनुवृत्तिरस्तीत्यनुशयेनाह – यद्वेति ।। अस्मिन् पक्षे "नभ्राट्" इत्यादिस्तु नञ्स्वरार्थं नञ्समास इति भावः । मञ्जर्यां तु नञ्प्रत्ययस्य नलोपमाशङ्क्य प्रत्ययञित्वस्य वृद्धिस्वरयोश्चरितार्थत्वात् निपातञित्त्वस्याचरितार्थत्वात् निपातस्यैव नञो "नलोपो नञः" इति सूत्रे ग्रहणं, न प्रत्ययनञः इत्येकं समाधिमुक्त्वा उत्तरपदाधिकारवशात् पूर्वपदस्य नञ इत्याक्षेपात् प्रत्ययनञोऽपूर्वपदत्वान्न नलोप इत्युक्तम् । तन्मते विभाषापदाननु-वृत्तेस्तदनुरोधेन वाऽऽह – यद्वेति ।।

"अमानोनाः प्रतिषेधे" इति निषेधार्थकनशब्देन "सुप्सुपा" इति समासः । तथाच नञोऽभावान्न नलोपः । अत एव कौमुद्यां 'नैकधा' इत्यादौ नसमास इत्युक्तमिति भावः ।

गुरुराजीय – नभ्राण्नपादित्यादिसूत्राभ्यामिति ।। अत्र 'नभ्राण्नपात्' इत्येकदेशेन समग्रसूत्रोपलक्षणात्, 'आदि'शब्देन "नगो प्राणिष्वन्यतरस्याम्"

इत्यस्य सङ्ग्रहात् सूत्राभ्याम् इत्युक्तम् । ततश्च "नभ्राण्नपान्नवेदानासत्यानमुचि-नकुलनखनपुंसकनक्षत्रनक्रनाकेषु प्रकृत्या" इति सूत्रेण नाकशब्दे "नगो प्राणिष्वन्यतरस्याम्" इति सूत्रेण नगशब्दे नलोपाभावो निपात्यत इत्यर्थः । आदिपदेन प्रभृत्यर्थकेन शिष्टसम्पूर्णसूत्रपरिग्रहः । केवल'सूत्र'पदेन च "नगो प्राणिष्वन्यतरस्याम्" इति सूत्रपरिग्रहः । तथाच "नभ्राण्नपादित्यादिसूत्राभ्याम्" इत्युक्तमुपपन्नमित्यप्याहुः ।

कथं तद् दृष्टान्तीकरणमिति ।। यद्यप्युदाहृतसूत्राभ्यामिह नलोपाभावस्या-नुक्तत्वादेव तद्दृष्टान्तीकरणमुपपद्यते । प्रत्युत तत्सूत्रेणेह नलोपाभावोक्तौ अत्र नभ्राण्नपात् इत्यादिना नलोपाभावः इत्येव वक्तुं शक्यत्वात् येन सूत्रेण नलोपाभावो विधीयते तस्यैकस्यैवोदाहरणसम्भवाच्च नगनाकादिशब्दवदिति दृष्टान्तीकरणमेवानुपपन्नं प्रसज्यते । किंच यदि नलोपाभाव एव दृष्टान्तः तर्हि नाकादिशब्दवदित्येतावतैव पूर्तेर्वैकल्पिकनलोपाभाववन्नगशब्दोदाहरणं व्यर्थं नभ्राडित्यस्यैव दृष्टान्तत्वसम्भवे नाकशब्दोदाहरणं च व्यर्थम् । तस्मादलाक्षणिकडप्रत्ययप्रदर्शनार्थं नगशब्दस्य नित्यनलोपाभावस्य तत्प्रयुक्तनुडभावस्य नारमणं येनेत्यादिव्युत्पत्तेश्च प्रदर्शनाय नाकशब्दस्य अराश्रयो न भवतीति प्रदर्शनायादिशब्देन नासत्यादिशब्दस्य च ग्रहणमित्यङ्गीकार्यम् । तथाचोदाहृतसूत्राभ्यामत्र डप्रत्ययनलोपाभावानुक्तावपि यथा कथंचिड्डप्रत्ययनलोपाभावादिव्युत्पादनाय नगनाकादिशब्दवदिति दृष्टान्तीकरणं युक्तमेव । तथाचोक्तं न्यासे 'रूढिशब्दा एते यथाकथंचिद् व्युत्पाद्या' इति । तथापि डप्रत्यये साधकस्योभयत्र साम्येन तस्य दृष्टान्तत्वसम्भवेऽपि नलोपाभावसाधक-सूत्रद्वयस्येहाप्रवृत्त्या साधकान्तरस्याभावेन कथंचिदपि नलोपाभावस्य व्युत्पादयितु-मशक्यतया कथं तद् दृष्टान्तीकरणम्? इत्यत्र तात्पर्यमित्यवधेयम् ।

अत्र 'नभ्राडित्यादिषु नारायणशब्दोऽप्युपसङ्ख्येयः' इति सुधोक्तरीत्या समाधाने सत्येव स्वयं समाधानान्तरमाह – मैवमिति ।। स्त्रैणार्थ इत्यत्रेति ।। स्त्रिया अयं स्त्रैणः "स्त्रीपुंसाभ्यां नञ्स्नञौ भवनात्" इत्यत्र "धान्यानां भवने क्षेत्रे खञ्" इति वक्ष्यमाणभवनसंशब्दात् प्राग् येऽर्थास्तेषु स्त्रीशब्दान्नञो विहितत्वात् तस्येदमित्यर्थस्य ततः प्राचीनत्वात् । स्त्रीशब्दादिदमर्थे नञ्प्रत्यये ञित्त्वादादिवृद्धौ णत्वे च स्त्रैणशब्दनिष्पत्तिः । ततः सचासावर्थश्चेत्यर्थशब्देन समासे स्त्रैणार्थ इति

भवति । अत्र "नलोपो नञः" इत्येतत्प्रसक्त्यर्थमर्थपदं गृहीतम् । अन्यथा "नलोपो नञः" इति सूत्रे "अलुगुत्तरपदे" इत्यत उत्तरपद इत्यस्यानुवृत्तेरुत्तरपदस्यापरत्वादेव नलोपाप्रसक्त्या विभाषाकथनानौचित्यप्रसंगादिति भावः । तर्हि 'अनघः' इत्यादावपि रूपद्वयं प्राप्नोतीत्यत आह – व्यवस्थितेति ।। 'कचिन्नित्यं स्यात् कचिन्नैव स्यादिति व्यवस्थिता' इत्यर्थः । "नलोपाभावाद्युपपत्तेः" इत्यादिपदेन तत्प्रयुक्तनुडभावपरिग्रहः ।

नचैवं सति "नलोपो नञः" इत्यत्र नञ इति सानुबन्धग्रहणमनर्थकमापद्यते । तथाहि । 'पामनपुत्रः' इत्यादौ नलोपाभावार्थं सानुबन्धग्रहणमिति वाच्यम् । पामास्यास्तीति पामनः "लोमादिपामादिपिच्छादिभ्यः शनेलचः" इति पामशब्दात् मत्वर्थीयो नप्रत्ययः । तस्य पुत्रशब्देन षष्ठीसमासः विभाषानुवृत्तौ तस्याः व्यवस्थितत्वे च तत एव पामनपुत्र इत्यत्रापि नलोपाभावोपपत्तौ किं सानुबन्धग्रहणेन । नच 'विभाषाननुवृत्तौ स्त्रैणपुत्रः स्त्रैणार्थः' इत्यत्र नलोपाभावो न स्यात् । सानुबन्धकत्वस्यापि तत्र सत्त्वात् । अतो विभाषानुवृत्तिरावश्यकीति वाच्यम् ।। प्रत्ययञित्त्वे हि "अचोञ्णिति" इति वृद्धिर्विहिता । तथा "ञ्नित्यादिर्नित्यम्" इत्याद्युदात्तत्वं च तन्निमित्ततया प्रत्ययञित्त्वस्य चरितार्थत्वान्निपाताञित्त्वस्याचरितार्थत्वाच्चरितार्थाचरितार्थयोश्चाचरितार्थस्यैव ग्राह्यत्वात् "नलोपो नञः" इत्यत्राचरितार्थसानुबन्धकनिपातस्यैव ग्रहणेन स्त्रैणार्थ इत्यादौ नलोपाभावोपपत्तेः । यद्वा पूर्वपदत्वेन नञो विशेषणान्न भवति नलोपः । उत्तरशब्दस्य सम्बन्धिशब्दत्वेन पूर्वपदभूतस्य नञ एव "नलोपो नञः" इत्यत्र ग्रहणादिति न्यास एवोक्तत्वात् । 'स्त्रैणपुत्रः' इत्यादौ तु न नञः पूर्वपदत्वम् । स्त्रैण इत्येतावत्येव पूर्वपदत्वस्य पर्याप्तत्वेन नञ्मात्रे पूर्वपदत्वापर्याप्तिः । अतो न भवति 'स्त्रैणार्थः' इत्यादौ नलोपः ।

नचैवं सानुबन्धकग्रहणमनर्थकमापद्यते । अपूर्वपदत्वादेव पामनपुत्र इत्यादौ नलोपाभावसम्भवात् । नहि तत्र नकारमात्रे पूर्वपदत्वपर्याप्तिः । किंतु पामन इत्यस्मिन्निति कथं तत्प्रसक्तिः? इति वाच्यम् । 'नैकधा' इत्यादौ नलोपाभावसिद्ध्यर्थत्वोपपत्तेः । तत्र नकारस्य पूर्वपदत्वपर्याप्त्यधिकरणत्वेन पूर्वपदत्वविशेषणेन नलोपाभावासिद्धेः । व्यवस्थितविभाषाश्रयणे च तत एव नैकधेत्यादावपि नलोपा-

भावसिद्ध्युपपत्तेरनर्थकं सानुबन्धग्रहणमापद्यते । तस्मात् व्यवस्थितविभाषाश्रयणस्यायुक्तत्वात् कथं तेन नारायणशब्दे नलोपाभावसिद्धिः । नञः पूर्वपदत्वपर्यास्यधिकरणत्वेन नलोपप्राप्तेर्वञलेपत्वात् । तत् कथमेतत् समाधानम्? इत्यतो न्यास एवोक्तत्वादित्युक्तम् । नात्र गुणदोषचिंतया प्रयोजनम् । न्यासस्यापि वृत्तिव्याख्यानत्वत् तदुक्तरीत्याऽप्यस्मदभिलषितसिद्धेः । संमतं चैतत् ग्रन्थकारस्य । अन्यथा व्यवस्थितविभाषाश्रयणान्नलोपाभावोपपत्तेरित्येव ब्रूयात् । नतु न्यास एवोक्तत्वादितीत्यवधेयम् ।

यद्वा एतदस्वरसादेवाह – यद्वेति ।। **"अमानोनाः प्रतिषेध"** इति वचनात् प्रतिषेधार्थकस्य नशब्दस्य नैकधेत्यादाविव **"सुप्सुपा"** इत्यनेन समास इति भावः । ततश्चोक्तरीत्या **"नलोपो नञः"** इत्यत्र सानुबन्धकग्रहणसिद्धेर्नसमासाश्रयणे न तेन नलोपप्राप्तिरिति । अत्र वदन्ति नात्र प्रतिषेधार्थकनसमासाश्रयणमुचितं **"नञो विरुद्धार्थवाचित्वात् नञो भावार्थत्वात्"** इत्यादिटीकाविरुद्धत्वात् । तस्मात् प्रौढिवाद एवायम् । अत एवास्त्वित्युक्तमिति । किंचैवं नगनाकादिशब्दवदिति दृष्टान्तीकरणमनर्थकमापद्यते । एतत्पक्षे नलोपाप्राप्तेस्तदनपेक्षणादिति । तदसत् । टीकाया आद्यपक्षानुसारेण प्रवृत्तत्वेन तदविरोधात् । दृष्टान्तीकरणस्य चालाक्षणिकडप्रत्ययप्रदर्शनार्थत्वेन सार्थक्यादिति सङ्क्षेपः ।

ವಿವರಣೆ - 'ನ ಭ್ರಾಣ್‌ನಪಾತ್ ಇತ್ಯಾದಿಸೂತ್ರಾಭ್ಯಾಮ್'ಎಂದು ಚಂದ್ರಿಕೆಯಲ್ಲಿದೆ. ಇಲ್ಲಿ 'ನಭ್ರಾಣ್‌ನಪಾತ್' ಎಂಬ ಏಕದೇಶದಿಂದ ಸಂಪೂರ್ಣಸೂತ್ರವನ್ನು ಉಪಲಕ್ಷಣಯಾ ಇಟ್ಟುಕೊಳ್ಳಬೇಕು. ಆದಿಶಬ್ದದಿಂದ 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರವನ್ನು ಸಂಗ್ರಹಿಸಬೇಕು. ಆದ್ದರಿಂದ 'ಸೂತ್ರಾಭ್ಯಾಂ' ಎಂಬ ದ್ವಿವಚನಪ್ರಯೋಗವು ಉಪಪನ್ನವಾಗುತ್ತದೆ. ಇದರರ್ಥ ಹೀಗೆ - 'ನಭ್ರಾಣ್‌ನಪಾನ್ನವೇದಾನಾಸತ್ಯಾನಮುಚಿನಕುಲನಖನಪುಂಸಕನಕ್ಷತ್ರನಕ್ರನಾಕೇಷು ಪ್ರಕೃತ್ಯಾ' (೬/೩/೭೫) ಎಂಬ ಸೂತ್ರದಿಂದ ನಾಕ ಶಬ್ದದಲ್ಲಿ ನಲೋಪಾಭಾವವನ್ನು ನಿಪಾತ ಮಾಡಲಾಗಿದೆ. 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರದಿಂದ ನಗಶಬ್ದದಲ್ಲಿ ನಲೋಪಾಭಾವವನ್ನು ನಿಪಾತ ಮಾಡಲಾಗಿದೆ ಎಂದು

ಅಥವಾ ಇದಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸುತ್ತಾರೆ - ಆದಿಶಬ್ದದಿಂದ 'ನಭ್ರಾಣ್' ಎಂಬ ಸೂತ್ರವನ್ನು ಸಂಪೂರ್ಣ ತೆಗೆದುಕೊಳ್ಳಬೇಕು. ಸೂತ್ರ ಶಬ್ದದಿಂದ 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರವನ್ನು ತೆಗೆದುಕೊಳ್ಳಬೇಕು.' ನಭ್ರಾಣ್‌ನಪಾದಿತ್ಯಾದಿಸೂತ್ರಾಭ್ಯಾಮ್' ಎಂಬಲ್ಲಿಯೂ ದ್ವಿವಚನವು ಸಾಧುವಾಗುತ್ತದೆ.

ಸಂಪೂರ್ಣಚಂದ್ರಿಕಾ

## 'ಕಥಂ ತದ್‌ದೃಷ್ಟಾಂತೀಕರಣಮ್' ಈ ಮಾತು ಸರಿಯೇ?

ಚಂದ್ರಿಕೆಯಲ್ಲಿ 'ನಗನಾಕಾದಿವತ್' ಎಂಬ ದೃಷ್ಟಾಂತವನ್ನು ಟೀಕೆಯಲ್ಲಿ ನೀಡಿದ್ದು ತಪ್ಪು ಎಂದಿದೆ. ಆದರೆ ಟೀಕೆಯಲ್ಲಿ ನೀಡಿದ ದೃಷ್ಟಾಂತ ಸಮಂಜಸವೇ ಆಗಿದೆ. ಹೇಗೆಂದು ವಿಚಾರ ಮಾಡೋಣ - 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರದಲ್ಲಿ ಮತ್ತು 'ನಭ್ರಾಣ್' ಇತ್ಯಾದಿ ಸೂತ್ರದಲ್ಲಿ 'ನಾರ'ಶಬ್ದದಲ್ಲಿರುವ ನ ಕಾರಕ್ಕೆ ಲೋಪ ಆಗುವುದಿಲ್ಲವೆಂದು ಹೇಳಿಲ್ಲ. ಆದ್ದರಿಂದಲೇ ನಗ ನಾಕಾದಿ ಶಬ್ದಗಳು ದೃಷ್ಟಾಂತಗಳಾಗುತ್ತವೆ. ಒಂದು ವೇಳೆ ಈ ಎರಡು ಸೂತ್ರಗಳಲ್ಲಿ ಲೋಪ ಆಗುವುದಿಲ್ಲವೆಂದು ಹೇಳಿದ್ದರೆ 'ನಗನಾಕಾದಿವತ್' ಎಂಬ ದೃಷ್ಟಾಂತದ ಮಾತು ತಪ್ಪಾಗುತ್ತಿತ್ತು. 'ನಾರ' ಎಂಬಲ್ಲಿ ಮೇಲಿನ ಎರಡು ಸೂತ್ರಗಳಿಂದ ನಕಾರಕ್ಕೆ ಲೋಪ ಬರುವುದಿಲ್ಲವೆಂದು ಹೇಳಬೇಕಿತ್ತು. ಆದರೆ 'ನಾರ' ಎಂಬಲ್ಲಿನ ನಕಾರಕ್ಕೆ ಲೋಪ ಬರುವುದಿಲ್ಲವೆಂದು ಹೇಳದ ಕಾರಣ 'ನಗನಾಕಾದಿವತ್' ಎಂದು ದೃಷ್ಟಾಂತ ನೀಡಿದ್ದು ಸಮಂಜಸವೇ ಆಗಿದೆ. ಹೀಗಿರುವಾಗ ದೃಷ್ಟಾಂತ ನೀಡಿದ್ದು ಸರಿಯಲ್ಲವೆಂದು ಚಂದ್ರಿಕೆಯಲ್ಲಿ ಹೇಗೆ ಆಕ್ಷೇಪಿಸಿದರು?

ಗಮನಿಸಬೇಕಾದ ಮತ್ತೊಂದು ಅಂಶ - 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರದಲ್ಲಾಗಲೀ 'ನಾಭ್ರಾಟ್' ಇತ್ಯಾದಿ ಸೂತ್ರದಲ್ಲಾಗಲೀ ನೀವು ಹೇಳುವಂತೆ ನಾರ ಎಂಬಲ್ಲಿರುವ ನಕಾರಕ್ಕೂ ಲೋಪಾಭಾವ ಹೇಳಿದ್ದರೆ, ಆ ಒಂದು ಸೂತ್ರವನ್ನು ಮಾತ್ರ ಟೀಕೆಯಲ್ಲಿ ಉಲ್ಲೇಖಿಸಬೇಕಿತ್ತಲ್ಲವೇ? 'ನಗನಾಕಾದಿವತ್' ಎಂದು ಎರಡು ಸೂತ್ರಗಳನ್ನು ಉಲ್ಲೇಖಿಸುವ ಅವಶ್ಯಕತೆ ಏನಿತ್ತು?

ಆದ್ದರಿಂದ ನಗನಾಕಾದಿವತ್ ಎಂಬ ವಚನದಿಂದ ಮತ್ತು ಎರಡು ಸೂತ್ರಗಳನ್ನು ಉಲ್ಲೇಖಿಸಿರುವುದೆಂಬ ಎರಡು ಕಾರಣಗಳಿಂದ 'ನಾರ' ಎಂಬಲ್ಲಿ ನಲೋಪಾಭಾವವನ್ನು ಸೂತ್ರದಲ್ಲಿ ಹೇಳಿಲ್ಲವೆಂದು ನಿರ್ಣಯವಾಗುತ್ತದೆ. ಆದ್ದರಿಂದಲೇ ದೃಷ್ಟಾಂತವಚನವೂ ಸಮಂಜಸವಾಗುತ್ತದೆ.

ಮತ್ತು 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರದಲ್ಲಿ ಮತ್ತು 'ನಭ್ರಾಟ್' ಇತ್ಯಾದಿ ಸೂತ್ರದಲ್ಲಿ ನಗ ಮತ್ತು ನಾಕಶಬ್ದಗಳ ನಕಾರ ಮಾತ್ರ ಲೋಪವಾಗುವುದಿಲ್ಲವೆಂದು ಹೇಳಲಾಗಿದೆ. ಹೊರತು 'ನಾರ' ಎಂಬಲ್ಲಿನ ನಕಾರಕ್ಕೆ ಲೋಪವಾಗುವುದಿಲ್ಲವೆಂದು ಹೇಳುತ್ತಿಲ್ಲ. ಆದ್ದರಿಂದ ಟೀಕೆಯಲ್ಲಿ 'ನಗನಾಕಾದಿವತ್' ಎಂದು ದೃಷ್ಟಾಂತ ನೀಡಿದ್ದು ಹೇಗೆ ಸರಿ? ಎಂದು ಚಂದ್ರಿಕೆಯಲ್ಲಿ ಆಕ್ಷೇಪ ಮಾಡಲಾಗಿದೆ. ಇದರಿಂದ ನಲೋಪಾಭಾವ ವಿಷಯದಲ್ಲಿ ಮಾತ್ರ ದೃಷ್ಟಾಂತ ನೀಡಬೇಕೆಂದು ಚಂದ್ರಿಕಾಚಾರ್ಯರು ಆಗ್ರಹಿಸಿದಂತಾಯಿತು. ಇಲ್ಲಿ ನಿಮಗೆ ಎರಡು ಪ್ರಶ್ನೆ ಕೇಳುತ್ತೇವೆ -

೧) 'ನಾಕಾದಿಶಬ್ದವತ್' ಎಂದಷ್ಟೇ ಟೀಕೆಯಲ್ಲಿ ಹೇಳಿದ್ದರೆ ಸಾಕಾಗಿತ್ತು. ವಿಕಲ್ಪವಾಗಿ ನಲೋಪ ಹೊಂದುವ ನಗ ಶಬ್ದದ ಉದಾಹರಣೆ ಏಕೆ ಬೇಕಿತ್ತು?

೨) 'ನಭ್ರಾಟ್' ಇತ್ಯಾದಿ ಸೂತ್ರದಲ್ಲಿ ಮೊದಲು ಉಪಸ್ಥಿತವಾಗುವ 'ನಭ್ರಾಟ್' ಎಂಬ ಶಬ್ದವನ್ನೇ ದೃಷ್ಟಾಂತವನ್ನಾಗಿ ಹೇಳಬಹುದಿತ್ತು. ಅದನ್ನು ಬಿಟ್ಟು ಕೊನೆಯಲ್ಲಿರುವ ನಾಕಶಬ್ದದ ಉದಾಹರಣೆಯನ್ನೇ ಏಕೆ ನೀಡಿದರು?

ಈ ಎರಡು ಪ್ರಶ್ನೆಗಳಿಗೆ ನೀವು ಹೀಗೆ ಉತ್ತರಿಸಬೇಕು - ಸೂತ್ರದಲ್ಲಿ 'ಡ' ಪ್ರತ್ಯಯವನ್ನು ಹೇಳ ಆದರೂ ನಿಪಾತ ಮಾಡಿ ಅದನ್ನು ಇಟ್ಟುಕೊಳ್ಳಬೇಕೆಂದು ತಿಳಿಸಲು ನಗ ಶಬ್ದವನ್ನು ಬಳಸಿ ಉದಾಹರಿಸಿದ್ದಾರೆ. ಆದ್ದರಿಂದ ಸೂತ್ರದಲ್ಲಿ ಹೇಳದಿದ್ದರೂ 'ಡ'ಪ್ರತ್ಯಯವನ್ನು ನಗ ಶಬ್ದದಲ್ಲಿ ಹೇಗೆ ಹೇಳಬೇಕೋ, ಅದರಂತೆ 'ನಾರ' ಎಂಬಲ್ಲಿಯೂ 'ಡ'ಪ್ರತ್ಯಯವನ್ನು ಹೇಳಬೇಕೆಂದು ನಗ ಶಬ್ದದ ಉದಾಹರಣೆ ಸಾರ್ಥಕವಾಗಿದೆ. ಅದರಂತೆ ನಾಕಶಬ್ದದ ಉದಾಹರಣೆಯೂ ಸಾರ್ಥಕವಾಗಿದೆ. ಹೇಗಂದರೆ 'ನಾಕ' ಎಂಬಲ್ಲಿ ನಲೋಪವು ನಿತ್ಯವಾಗಿ ಬರುತ್ತದೆಂದು ಸೂತ್ರದಲ್ಲಿ ಕಂಠತಃ ಹೇಳದಿದ್ದರೂ ನಿಪಾತ ಮಾಡಿದ್ದರಿಂದ ಇಟ್ಟುಕೊಳ್ಳಬೇಕು. ತತ್ಪ್ರಯುಕ್ತವಾದ 'ನುಟ್' ಆಗಮವೂ ಬರುವುದಿಲ್ಲ. ಅದರಂತೆ 'ನಾರ' ಎಂಬಲ್ಲಿಯೂ ನಕಾರಕ್ಕೆ ನಿತ್ಯಲೋಪ ಬರುವುದಿಲ್ಲ. ತತ್ಪ್ರಯುಕ್ತವಾದ 'ನುಟ್' ಆಗಮವೂ ಬರುವುದಿಲ್ಲ. ಆದ್ದರಿಂದ 'ನ ಅರಮಣಂ ಯೇನ' ಎಂಬ ವ್ಯುತ್ಪತ್ತಿ ಮಾಡಿದಾಗಲೂ 'ನಾರಾಯಣ' ಎಂದೇ ಆಗುತ್ತದೆ 'ಅನರಾಯಣ' ಎಂದಾಗುವುದಿಲ್ಲವೆಂದು 'ನಾರ' ಶಬ್ದದ ಉದಾಹರಣೆ ಸಾರ್ಥಕವಾಗಿದೆ. ಇನ್ನು ಆದಿಶಬ್ದವನ್ನು ಏಕೆ ಹೇಳಿದ್ದೆಂದರೆ 'ಅಸತ್ಯಂ ನ ಭವತೀತಿ ನಾಸತ್ಯಮ್' ಎಂಬಂತೆ 'ಅರಾಯನೋ ನ ಭವತೀತಿ ನಾರಾಯಣಃ' ಎಂದಾಗುತ್ತದೆಂಬ ಮತ್ತೊಂದು ವ್ಯುತ್ಪತ್ತಿಯನ್ನು ತೋರಿಸುವುದಕ್ಕೋಸ್ಕರ ಹೇಳಲಾಗಿದೆ.

ಆದ್ದರಿಂದ ಉದಾಹರಿಸಿದ ಎರಡು ಸೂತ್ರಗಳಲ್ಲಿ 'ಡ'ಪ್ರತ್ಯಯ ನಲೋಪಾಭಾವಗಳನ್ನು ನಗನಾಕಶಬ್ದಗಳಲ್ಲಿ ಕಂಠತಃ ಹೇಳದಿದ್ದರೂ ನಿಪಾತದಿಂದ ಕಥಂಚಿತ್ ಹೇಗೆ ಇಟ್ಟುಕೊಳ್ಳುತ್ತೇವೋ, ಅದರಂತೆ ನಾರಾಯಣ ಎಂಬಲ್ಲಿಯ ಡ ಪ್ರತ್ಯಯ ನಲೋಪಾಭಾವಗಳನ್ನು ಸೂತ್ರದಲ್ಲಿ ಹೇಳದಿದ್ದರೂ ಇಟ್ಟುಕೊಳ್ಳಬೇಕು. ಅವಾಗ 'ನಗನಾಕಾದಿವತ್' ಎಂಬ ದೃಷ್ಟಾಂತ ಅತ್ಯಂತ ಸಮಂಜಸವಾಗುತ್ತದೆ.

ಇದಕ್ಕೆ ಸಂವಾದಿಮಾತು ಕಾಶಿಕಾವ್ಯಾಖ್ಯಾನವಾದ ನ್ಯಾಸದಲ್ಲಿದೆ - 'ರೂಢಿಶಬ್ದಾಃ ಏತೇ ಕಥಂಚಿತ್ ವ್ಯುತ್ಪಾದ್ಯಾಃ' ರೂಢಿ ಶಬ್ದಗಳ ವ್ಯುತ್ಪತ್ತಿಯನ್ನು ಸೂತ್ರದಲ್ಲಿ ಸ್ಪಷ್ಟವಾಗಿ ಹೇಳದಿದ್ದರೂ ಹೇಗಾದರೂ ಉಪಪಾದಿಸಬೇಕು? ಎಂದು.

ನಮ್ಮ ಪ್ರಶ್ನೆಗಳಿಗೆ ಈ ರೀತಿಯಾದ ಉತ್ತರವನ್ನು ಬಿಟ್ಟು ಬೇರೆ ಉತ್ತರವನ್ನು ನಿಮ್ಮಿಂದ ಹೇಳಲಾಗದು. ಹಾಗಾದರೆ ಟೀಕೆಯಲ್ಲಿ 'ನಗನಾಕಾದಿವತ್' ಎಂದು ದೃಷ್ಟಾಂತ ನೀಡಿದ್ದು ಸಮಂಜಸವೆಂದು ನೀವು ಒಪ್ಪಿಕೊಂಡಂತಾಯಿತು. ಹೀಗಿರುವಾಗ ಟೀಕೆಯಲ್ಲಿ ದೃಷ್ಟಾಂತ ನೀಡಿದ್ದು ಸರಿಯಲ್ಲವೆಂದು ಚಂದ್ರಿಕೆಯಲ್ಲಿ ಮಾಡಿದ ಆಕ್ಷೇಪ ಹೇಗೆ ತಾನೆ ಸರಿಯಾಗುತ್ತದೆ?

ಸಮಾಧಾನ :- ಹೌದು, ನೀವು ಹೇಳಿದಂತೆ 'ಡ'ಪ್ರತ್ಯಯವಿಷಯದಲ್ಲಿ ದೃಷ್ಟಾಂತ ಕೂಡಬಹುದು. ಏಕೆಂದರೆ 'ನಗೋಪ್ರಾಣಿಷ್ವನ್ಯತರಸ್ಯಾಮ್' ಮತ್ತು 'ನಭ್ರಾಟ್' ಈ ಎರಡು ಸೂತ್ರಗಳು ಸಮಾನನ್ಯಾಯವಾದ್ದರಿಂದ 'ನಾರ' ಎಂಬಲ್ಲಿಯೂ 'ಡ' ಪ್ರತ್ಯಯವನ್ನು ಹೇಳುತ್ತವೆ. ಆದ್ದರಿಂದ ಈ ಅಂಶದಲ್ಲಿ ದೃಷ್ಟಾಂತ ನೀಡುವುದು ಏನೂ ತಪ್ಪಿಲ್ಲ. ಆದರೆ ನಲೋಪಾಭಾವವಿಷಯದಲ್ಲಿ ಮಾತ್ರ ದೃಷ್ಟಾಂತವಾಗುವುದಿಲ್ಲ. ಈ ಎರಡು ಸೂತ್ರ ಬಿಟ್ಟರೆ ನಲೋಪಾಭಾವವಿಷಯದಲ್ಲಿ ಬೇರೆ ಸೂತ್ರವಿಲ್ಲ.

ಆದ್ದರಿಂದ ಯಾವ ರೀತಿಯಿಂದಲೂ ನಲೋಪಾಭಾವವನ್ನು ಉಪಪಾದಿಸುವುದು ಅಶಕ್ಯವಾಗಿದೆ. ಈ ಅಂಶದಲ್ಲಿ 'ನಗನಾಕಾದಿವತ್' ಎಂಬ ದೃಷ್ಟಾಂತ ಸರಿಯಾಗುವುದಿಲ್ಲ. ಆದ್ದರಿಂದ ಟೀಕೆಯ ಮೇಲೆ ಆಕ್ಷೇಪಿಸಿದ 'ಕಥಂ ತದ್ ದೃಷ್ಟಾಂತೀಕರಣಮ್' ಎಂಬ ಚಂದ್ರಿಕೆಯ ಮಾತು ಬಹಳ ಅರ್ಥಪೂರ್ಣವಾಗಿದೆ.

ಪ್ರಶ್ನೆ :- 'ಅರಾಶ್ರಯೋ ನ ಭವತೀತಿ' ಎಂದು ನಾರಾಯಣ ಶಬ್ದದ ನಿಷ್ಪತ್ತಿ. ಹೀಗೆ ಮಾಡಿದಾಗ 'ಅನರಾಯಣ' ಎಂದೇ ಆಗುತ್ತದೆ. ಹೊರತು 'ನಾರಾಯಣ' ಎಂದಾಗುವುದಿಲ್ಲ. ಏಕೆಂದರೆ 'ನಲೋಪೋ ನಞಃ' ಎಂಬ ಸೂತ್ರವು ನಾರ ಎಂಬಲ್ಲಿರುವ ನಞ್ ಗೆ ಲೋಪವನ್ನು ಹೇಳುತ್ತದೆ. ಆವಾಗ 'ಅ' ಎಂದಷ್ಟೇ ಉಳಿಯುತ್ತದೆ. ಅಕಾರಕ್ಕೆ ನುಟಾಗಮ ಬಂದರೆ. ಅನರಾಯಣ, ಎಂದಾಗಬೇಕಲ್ಲವೆ.

ಉತ್ತರ :- ನಗ ಮತ್ತು ನಾಕ ಇತ್ಯಾದಿ ಶಬ್ದಗಳಲ್ಲಿರುವ ನಕಾರಕ್ಕೆ ಲೋಪ ಬರುವುದಿಲ್ಲ. ನುಟ್ ಪ್ರತ್ಯಯವು ಸಹ ಬಂದಿಲ್ಲ. ಅದರಂತೆ 'ನಾರಾ' ಎಂಬಲ್ಲಿಯೂ ಸಹ ನಕಾರಕ್ಕೆ ಲೋಪ ಮತ್ತು 'ನುಟ್' ಪ್ರತ್ಯಯ ಬರುವುದಿಲ್ಲ. ಒಂದು ವೇಳೆ ಇಲ್ಲಿ 'ನ' ಕಾರವು ಲೋಪವಾಗಿ 'ನುಟ್' ಬಂದು ಅನರಾಯಣ ಎಂದಾಗುವುದಾದರೆ ಅಲ್ಲಿಯೂ ಸಹ 'ಅನಗ' 'ಅನಾಕ' ಎಂದಾಗಲಿ.

ಪ್ರಶ್ನೆ:- 'ನಭ್ರಾಣ್ನಪಾನ್ನವೇದಾನಾಸತ್ಯಾನಮುಚಿನಕುಲನಖನಪುಂಸಕನಕ್ಷತ್ರನಕ್ರನಾಕೇಷು ಪ್ರಕೃತ್ಯಾ' ಎಂಬ ಸೂತ್ರದಲ್ಲಿ ನಾಕ ಶಬ್ದದ ನಕಾರಕ್ಕೆ ಲೋಪವಾಗುವುದಿಲ್ಲವೆಂದು ನಿಪಾತ ಮಾಡಿದ್ದಾರೆ. ಅದರಂತೆ 'ನಗೋಽಪ್ರಾಣಿಷ್ವನ್ಯತರಸ್ಯಾಮ್' ಎಂಬ ಸೂತ್ರದಲ್ಲಿ ನಗ ಶಬ್ದದಲ್ಲಿರುವ ನಕಾರವು ಲೋಪವಾಗುವುದಿಲ್ಲವೆಂದು ನಿಪಾತ ಮಾಡಿದ್ದಾರೆ. ಆ ರೀತಿಯಾಗಿ ನಾರ ಶಬ್ದದಲ್ಲಿರುವ ನಕಾರಕ್ಕೆ ಲೋಪಾಭಾವವನ್ನು ಹೇಳಿಲ್ಲ. ಹೇಳದ ಕಾರಣ ನ ಕಾರವು ಲೋಪವಾಗಿ ನುಟಾಗಮವು ಬಂದು ಅನರಾಯಣ ಎಂದೇ ಆಗಬೇಕು.

ಉತ್ತರ :- 'ನಭ್ರಾಣ್ನಪಾತ್' ಇತ್ಯಾದಿ ಸೂತ್ರದಲ್ಲಿ 'ನಾಸತ್ಯಾ' ಇತ್ಯಾದಿ ಶಬ್ದಗಳನ್ನು ನಿಪಾತ ಮಾಡಿದ್ದಾರೆ. ಅವುಗಳ ಜೊತೆಗೆ ನಾರಾಯಣ ಶಬ್ದವನ್ನು ಸಹ ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. ಆದ್ದರಿಂದ ನಾಕಾದಿ ಶಬ್ದಗಳು ಹೇಗೆ ಸಾಧುವಾಗುತ್ತವೋ, ಅದರಂತೆ ನಾರಾಯಣ ಶಬ್ದವು ಸಹ ಸಾಧುವಾಗುತ್ತದೆ. (ಸುಧೆಯಲ್ಲಿ ಹೇಳಿದ ಸಮಾಧಾನ)

ಅಥವಾ ನಗ ನಾಕ ಶಬ್ದಗಳಲ್ಲಿ ನಲೋಪವು ಆಗುವುದಿಲ್ಲವೆಂದು ಸೂತ್ರದಿಂದಲೇ ನೀವು ಸಮರ್ಥಿಸಿದಿರಿ, ಹಾಗೆಯೇ ನಾರಾಯಣ ಶಬ್ದದಲ್ಲೂ ನಲೋಪವಾಗುವುದಿಲ್ಲವೆಂದು ಸೂತ್ರದಿಂದಲೇ ಸಮರ್ಥಿಸುತ್ತೇವೆ. ಅದು ಹೀಗೆ -

'ಸ್ತ್ರೀಪುಂಸಾಭ್ಯಾಂ ನಞ್ಸ್ನಞೌ ಭವನಾತ್' 'ಸ್ತ್ರೀ' ಮತ್ತು 'ಪುಂ' ಶಬ್ದಗಳಿಗೆ ಕ್ರಮವಾಗಿ 'ನಞ್' ಮತ್ತು 'ಸ್ನಞ್' ಪ್ರತ್ಯಯಗಳು 'ಧಾನ್ಯಾನಾಂ ಭವನಕ್ಷೇತ್ರೇ ಖಞ್' ಎಂಬ ಸೂತ್ರದ ತನಕ ಬರುತ್ತವೆ.

ಆದ್ದರಿಂದ 'ಸ್ತ್ರೈಣಃ' 'ಪೌಂಸ್ನಃ' ಎಂಬ ರೂಪಗಳು ಸಿದ್ಧವಾಗುತ್ತವೆ. ಸ್ತ್ರೀ ಶಬ್ದಗಳಿಗೆ ಹಿತಾದ್ಯರ್ಥದಲ್ಲಿ 'ನಞ್' ಎಂಬ ತದ್ಧಿತ ಪ್ರತ್ಯಯ ಬರುತ್ತದೆ. ಅನಂತರ ಞಿತ್ ಪ್ರತ್ಯಯವು ಪರದಲ್ಲಿರುವುದರಿಂದ 'ಅಚೋ ಞ್ಣಿತಿ' ಎಂಬ ಸೂತ್ರವು ಆದಿವೃದ್ಧಿಯನ್ನು ಹೇಳುತ್ತದೆ. 'ರಷಾಭ್ಯಾಂ ನೋ ಣಃ ಸಮಾನಪದೇ' ಎಂಬ ಸೂತ್ರದಿಂದ ಣತ್ವ ಬಂದರೆ 'ಸ್ತ್ರೈಣಃ' ಎಂದಾಗುತ್ತದೆ. ಇದಕ್ಕೆ 'ಅರ್ಥ' ಶಬ್ದದ ಜೊತೆಗೆ ಸಮಾಸ ಮಾಡಿದಾಗ 'ಸ್ತ್ರೈಣಾರ್ಥಃ ' (ಸ್ತ್ರೀಗೆ ಸಂಬಂಧಿಸಿದ ಸಂಪತ್ತು) ಎಂದಾಗುತ್ತದೆ.

'ಸ್ತ್ರೈಣಾರ್ಥಃ' ಎಂಬಲ್ಲಿರುವ ನಕಾರವು 'ನಞ್' ಪ್ರತ್ಯಯದ ವಿಕೃತಿಯಾಗಿದೆ. ಹಾಗಾಗಿ 'ನಲೋಪೋ ನಞಃ' ಎಂಬ ಸೂತ್ರದಿಂದ ನಕಾರವು ಲೋಪವಾಗುತ್ತದೆ. 'ತಸ್ಮಾನ್ನುಡಚಿ' ಎಂಬ ಸೂತ್ರದಿಂದ ನುಡಾಗಮ ಬಂದರೆ ಸ್ತ್ರ್ಯಯನರ್ಥಃ ಎಂದಾಗುತ್ತದೆ ಹೊರತು 'ಸ್ತ್ರೈಣಾರ್ಥಃ' ಎಂಬ ರೂಪವು ನಿಷ್ಪನ್ನವಾಗುವುದಿಲ್ಲ. ಅದಕ್ಕೋಸ್ಕರ ನ್ಯಾಸಕಾರನು 'ನಲೋಪೋ ನಞಃ' ಎಂಬ ಸೂತ್ರ ವ್ಯಾಖ್ಯಾನಿಸುತ್ತಾ ಹೀಗೆ ಹೇಳುತ್ತಾನೆ. - 'ನಲೋಪೋ ನಞಃ' ಎಂಬ ಸೂತ್ರದಲ್ಲಿ 'ರಾತ್ರೇಃ ಕೃತಿ ವಿಭಾಷಾ' ಎಂಬ ಹಿಂದಿನ ಸೂತ್ರದಿಂದ 'ವಿಭಾಷಾ' ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆಗ 'ನಲೋಪೋ ನಞಃ' ಎಂಬ ಸೂತ್ರವು ವಿಕಲ್ಪವಾಗಿ 'ನಞ್' ಲೋಪವನ್ನು ಹೇಳುತ್ತದೆ. ಆದ್ದರಿಂದ 'ಸ್ತ್ರೈಣಾರ್ಥಃ' ಎಂಬ ರೂಪನಿಷ್ಪತ್ತಿಗೆ ಯಾವ ವಿಘ್ನವಿಲ್ಲ.

'ಸ್ತ್ರೈಣಃ' ಎಂಬುದನ್ನಷ್ಟೇ ಉದಾಹರಣೆಯನ್ನಾಗಿ ತೆಗೆದುಕೊಂಡರೆ 'ನಲೋಪೋ ನಞಃ' ಎಂಬ ಸೂತ್ರದಿಂದ ನಲೋಪದ ಪ್ರಸಕ್ತಿಯೇ ಬರುವುದಿಲ್ಲ. ಏಕೆಂದರೆ 'ಅಲುಗುತ್ತರಪದೇ' ಎಂಬ ಸೂತ್ರದಿಂದ 'ಉತ್ತರಪದೇ' ಎಂಬ ಶಬ್ದದ ಅನುವೃತ್ತಿಯನ್ನು 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಮಾಡಬೇಕು. ಆವಾಗ 'ಸ್ತ್ರೈಣಃ' ಎಂಬಲ್ಲಿ ಉತ್ತರಪದವು ಪರದಲ್ಲಿಲ್ಲದ ಕಾರಣ ನಲೋಪಕ್ಕೆ ಪ್ರಸಕ್ತಿಯೇ ಇಲ್ಲ. ಈ ಅಭಿಪ್ರಾಯದಿಂದ ಅರ್ಥಶಬ್ದದ ಜೊತೆಗೆ ಸಮಾಸವನ್ನು ಮಾಡಿ 'ಸ್ತ್ರೈಣಾರ್ಥಃ' ಎಂಬ ಉದಾಹರಣೆಯನ್ನು ಸ್ವೀಕರಿಸಲಾಗಿದೆ.

ಪ್ರಶ್ನೆ :- 'ಅನಶ್ವಃ' ಎಂಬಲ್ಲಿ 'ನಲೋಪೋ ನಞಃ' ಎಂಬ ಸೂತ್ರದಿಂದ ನಕಾರವು ಲೋಪವಾಗಿ ನುಡಾಗಮ ಬಂದು ರೂಪವಾಗಿದೆ. ಒಂದು ವೇಳೆ 'ರಾತ್ರೇಃ ಕೃತಿ ವಿಭಾಷಾ' ಎಂಬ ಸೂತ್ರದಿಂದ 'ವಿಭಾಷಾ' ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂದು ನೀವು ಹೇಳಿದರೆ 'ಅನಶ್ವಃ' ಎಂಬಲ್ಲಿಯೂ ನುಡಾಗಮ ಬರದೇ 'ನ' ಲೋಪವೂ ಆಗದೆ ಎರಡು ರೂಪಗಳಾಗಬೇಕಾದೀತು.

ಉತ್ತರ :- ಆದ್ದರಿಂದಲೇ 'ವಿಭಾಷಾ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಲಾಗಿದೆ. 'ವಿಭಾಷಾ' ಪದಕ್ಕೆ ವಿಕಲ್ಪವೆಂದು ಅರ್ಥವಲ್ಲ. ಲೋಕರೂಢಿಯನ್ನು ಅನುಸರಿಸಿ ನಲೋಪವು ಎಲ್ಲಾ ಕಡೆ ಬರುತ್ತದೆ. ಆದರೆ ಕೆಲವು ಕಡೆ ಬರುವುದೇ ಇಲ್ಲವೆಂದು, ವ್ಯವಸ್ಥಿತವಿಕಲ್ಪಾರ್ಥದಲ್ಲಿ ವಿಭಾಷಾಶಬ್ದ ಇದೆಯೆಂದು ನ್ಯಾಸಕಾರನೇ ಹೇಳಿದ್ದಾನೆ. ಹೀಗೆ 'ನಲೋಪೋ ನಞಃ' ಎಂಬ ಸೂತ್ರದಲ್ಲಿ 'ವಿಭಾಷಾ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆದ್ದರಿಂದ ನಾರಾಯಣಶಬ್ದದಲ್ಲೂ 'ನ' ಲೋಪವಾಗುವುದಿಲ್ಲ. ವ್ಯವಸ್ಥಿತವಿಭಾಷಾವಾದ್ದರಿಂದ ನಿತ್ಯವಾಗಿ ನಲೋಪವಾಗುವುದಿಲ್ಲ. ನಾರಾಯಣ ಎಂಬ ಪ್ರಯೋಗವು ವ್ಯಾಕರಣವಿರುದ್ಧವಾಗುವುದಿಲ್ಲ.

ಪರಿಪೂರ್ಣಚಂದ್ರಿಕಾ

'ನಲೋಪೋ ನಞಃ' ಎಂಬ ಸೂತ್ರದಲ್ಲಿ 'ರಾತ್ರೇಃ ಕೃತಿ ವಿಭಾಷಾ' ಎಂಬ ಸೂತ್ರದಿಂದ 'ವಿಭಾಷಾ' ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂದು ಗ್ರಂಥಕಾರರ ಅಭಿಪ್ರಾಯವಾಗಿದೆ. ಆದರೆ 'ವಿಭಾಷಾ' ಪದವನ್ನು ಅನುವೃತ್ತಿ ಮಾಡಿಕೊಂಡಲ್ಲಿ 'ನಲೋಪೋ ನಞಃ?'ಎಂಬ ಸೂತ್ರದಲ್ಲಿನ ಸಾನುಬಂಧ-ಗ್ರಹಣವು ವ್ಯರ್ಥವಾಗುತ್ತದೆ.

ಪ್ರಶ್ನೆ :- ಸಾನುಬಂಧಗ್ರಹಣವು ವ್ಯರ್ಥವಲ್ಲ. 'ಪಾಮನಪುತ್ರಃ' ಇತ್ಯಾದಿ ಪದಗಳಲ್ಲಿರುವ ನಕಾರವು ಲೋಪವಾಗಬಾರದು. ಆದಕಾರಣ ಸಾನುಬಂಧಗ್ರಹಣವು ಸಾರ್ಥಕ. 'ಅನುಬಂಧ' ಎಂದರೆ 'ಇತ್' ಎಂದರ್ಥ. ಅನುಬಂಧದಿಂದ ಕೂಡಿರುವ ಪ್ರತ್ಯಯವು ಸಾನುಬಂಧವೆನಿಸುತ್ತದೆ. 'ನಞ್' ಎಂಬಲ್ಲಿ 'ಞ್' ಕಾರವು ಇತ್ ಆಗಿದೆ. ಇಂತಹ ಇತ್‌ಅಕ್ಷರದಿಂದ ಕೂಡಿರುವ 'ನಞ್'ಎಂಬ ಸಾನುಬಂಧವನ್ನು ಏಕೆ ಗ್ರಹಣ ಮಾಡಿದರು? ಎಂದರೆ 'ಪಾಮನಪುತ್ರಃ' ಎಂಬಲ್ಲಿರುವ ನಕಾರವು ಲೋಪವಾಗಬಾರದೆಂದು.

ಒಂದು ವೇಳೆ 'ನಲೋಪೋ ನ' ಎಂದಷ್ಟೇ ಸೂತ್ರ ಹೇಳಿದ್ದಲ್ಲಿ 'ಪಾಮನ ಪುತ್ರಃ' ಎಂಬಲ್ಲಿರುವ 'ನ'ಕಾರವೂ ಲೋಪವಾಗುತ್ತಿತ್ತು. ಇದನ್ನು ಪರಿಹರಿಸಲು 'ನಞ್' ಎಂದು ಹೇಳಿದ್ದಾರೆ. 'ಪಾಮನ ಪುತ್ರಃ' ಎಂಬಲ್ಲಿರುವ ನಕಾರವು 'ನ' ಪ್ರತ್ಯಯವಾಗಿದೆ. ಹೊರತು 'ನಞ್' ಪ್ರತ್ಯಯವಲ್ಲ. ಆದ್ದರಿಂದ 'ನಲೋಪೋ ನಞಃ' ಎಂಬ ಸೂತ್ರದಿಂದ ನಕಾರವು ಲೋಪವಾಗದ ಕಾರಣ ರೂಪವು ಸಾಧುವಾಗಿದೆ. ಸಾನುಬಂಧಗ್ರಹಣವು ಸಾರ್ಥಕವಾಗಿದೆ.

ಉತ್ತರ :- 'ಪಾಮಾ ಅಸ್ಯ ಅಸ್ತೀತಿ ಪಾಮನಃ' (ಚರ್ಮರೋಗವುಳ್ಳವನು) 'ಲೋಮಾದಿ-ಪಾಮಾದಿಪಿಚ್ಛಾದಿಭ್ಯಃ ಶನೇಲಚಃ' ಎಂಬ ಸೂತ್ರದಿಂದ 'ಪಾಮ'ಶಬ್ದದ ಮೇಲೆ ಮತ್ವರ್ಥದಲ್ಲಿ 'ನ' ಎಂಬ ಪ್ರತ್ಯಯವು ಬರುತ್ತದೆ. ಈ 'ಪಾಮನ' ಶಬ್ದಕ್ಕೆ ಪುತ್ರಶಬ್ದದಿಂದ 'ಪಾಮನಸ್ಯ ಪುತ್ರಃ' ಎಂದು ಷಷ್ಠೀಸಮಾಸವನ್ನು ಮಾಡಬೇಕು. ಪ್ರಕೃತ 'ನಲೋಪೋ ನಞಃ' ಎಂಬ ಸೂತ್ರದಲ್ಲಿ 'ರಾತ್ರೇಃ ಕೃತಿ ವಿಭಾಷಾ' ಎಂಬ ಸೂತ್ರದಲ್ಲಿರುವ 'ವಿಭಾಷಾ' ಪದವನ್ನು ಅನುವೃತ್ತಿ ಮಾಡಿಕೊಳ್ಳುವುದಾದರೆ ನಕಾರವು ಲೋಪವಾಗುವುದಿಲ್ಲ. ಏಕೆಂದರೆ 'ವಿಭಾಷಾ' ಪದವು 'ವ್ಯವಸ್ಥಿತವಿಕಲ್ಪ' ಎಂಬರ್ಥದಲ್ಲಿದೆ. ಕೆಲವೊಂದೆಡೆ ನಕಾರವು ಲೋಪವೇ ಆಗುವುದಿಲ್ಲ. ಕೆಲವೆಡೆ ಲೋಪವಾಗುತ್ತದೆ. ಪಾಮನಪುತ್ರಃ ಎಂಬಲ್ಲಿರುವ 'ನ' ಕಾರವು ಲೋಪವೇ ಆಗುವುದಿಲ್ಲ. ಹೀಗೆ ನಲೋಪಾಭಾವವನ್ನು ಕೂಡಿಸಲು ಬರುವಾಗ ಸಾನುಬಂಧಗ್ರಹಣವನ್ನು ಮಾಡಿದ್ದು ವ್ಯರ್ಥವೆನಿಸುತ್ತದೆ. ಆದರೂ ಸಹ ಪಾಣಿನಿಯು ಸಾನುಬಂಧಗ್ರಹಣವನ್ನು ಮಾಡಿದ್ದಾನೆ. ಇದರಿಂದ ಏನು ತಿಳಿಯುತ್ತದೆ? ಎಂದರೆ 'ವಿಭಾಷಾ' ಪದದ ಅನುವೃತ್ತಿಯನ್ನು ಮಾಡಿಕೊಳ್ಳಬೇಕಿಲ್ಲವೆಂದು.

ಪ್ರಶ್ನೆ :- 'ವಿಭಾಷಾ' ಪದವನ್ನು ಅನುವೃತ್ತಿ ಮಾಡಿಕೊಳ್ಳದಿದ್ದಲ್ಲಿ 'ಸ್ತ್ರೈಣಪುತ್ರಃ' 'ಸ್ತ್ರೈಣಾರ್ಥಃ' ಇತ್ಯಾದಿ ಶಬ್ದಗಳು ಸಾಧುವಾಗದಿರಬೇಕಾದೀತು. ಇಲ್ಲಿರುವ ನಕಾರವು 'ನಞ್' ಪ್ರತ್ಯಯವಾಗಿದೆ. ಸೂತ್ರದಲ್ಲಿ 'ನಞ್' ಪ್ರತ್ಯಯದ ನಕಾರಕ್ಕೆ ಲೋಪವನ್ನು ಹೇಳಿದ್ದರಿಂದ 'ಸ್ತ್ರೈಣಪುತ್ರಃ' ಎಂಬಲ್ಲಿರುವ ನಕಾರವೂ ಲೋಪವಾಗಬೇಕಾದೀತು.ಆದ್ದರಿಂದ ವಿಭಾಷಾ ಪದವನ್ನು ಅನುವೃತ್ತಿ ಮಾಡಬೇಕು.

ವ್ಯವಸ್ಥಿತವಿಕಲ್ಪಾರ್ಥದಲ್ಲಿ ವಿಭಾಷಾಪದವು ಇರುವುದರಿಂದ 'ಸ್ತ್ರೈಣಪುತ್ರಃ' ಇತ್ಯಾದಿ ಸ್ಥಳದಲ್ಲಿ ನಿತ್ಯವಾಗಿ ನಕಾರವು ಲೋಪವಾಗುವುದಿಲ್ಲ. ಹೀಗೆ ವಿಭಾಷಾಪದದ ಅನುವೃತ್ತಿಯು ಆವಶ್ಯಕವಾಗಿದೆ

ಉತ್ತರ :- 'ವಿಭಾಷಾ' ಪದದ ಅನುವೃತ್ತಿಯನ್ನು ಮಾಡಿಕೊಳ್ಳದಿದ್ದರೂ 'ಸ್ತ್ರೈಣಪುತ್ರಃ' ಇತ್ಯಾದಿ ಶಬ್ದಸಾಧುತ್ವವನ್ನು ಉಪಪಾದಿಸಬಹುದು. ಹೇಗೆಂದರೆ 'ನಞ್' ಪ್ರತ್ಯಯವು ಎರಡು ವಿಧದಲ್ಲಿದೆ. ೧) ನಿಪಾತ = ಅವ್ಯಯ ೨) ಪ್ರತ್ಯಯ ಎಂದು. 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಪ್ರತ್ಯಯರೂಪವಾದ 'ನಞ್' ಎಂಬುದನ್ನು ಹೇಳಿದ್ದಾರೋ? ಅಥವಾ ಅವ್ಯಯರೂಪವಾದ 'ನಞ್' ಅನ್ನು ಹೇಳಿದ್ದಾರೋ? ಎಂದು ಸಂಶಯ ಬರುತ್ತದೆ. ಪ್ರತ್ಯಯರೂಪವಾದ 'ಞ' ಕಾರಕ್ಕೆ ಬೇರೆ ಪ್ರಯೋಜನವಿದೆ. ಪ್ರತ್ಯಯದ 'ಞ' ಕಾರವು ಇತ್ ಆದರೆ 'ಅಚೋ ಞ್ಣಿತಿ' ಎಂಬ ಸೂತ್ರವು ಆದಿವೃದ್ಧಿಯನ್ನು ಹೇಳುತ್ತದೆ. 'ಞ್ನಿತ್ಯಾದೇರ್ನಿತ್ಯಂ' ಎಂಬ ಸೂತ್ರವು ಆದ್ಯುದಾತ್ತತ್ವವನ್ನು ಹೇಳುತ್ತದೆ. ಹೀಗೆ ಅನೇಕ ಪ್ರಯೋಜನಗಳಿರುವುದರಿಂದ ಪ್ರತ್ಯಯ ಞ್ತ್ವವು ಚರಿತಾರ್ಥವಾಗಿದೆ. ಆದರೆ ನಿಪಾತಞ್ತ್‌ಗೆ ಇಂತಹ ಯಾವುದೇ ಪ್ರಯೋಜನಗಳೂ ಇರುವುದಿಲ್ಲ. ಚರಿತಾರ್ಥ ಮತ್ತು ಅಚರಿತಾರ್ಥಗಳಲ್ಲಿ ಅಚರಿತಾರ್ಥವನ್ನೇ ಸ್ವೀಕರಿಸಬೇಕು. ಆದಕಾರಣ 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಅವ್ಯಯರೂಪವಾದ 'ನಞ್' ಎಂಬುದನ್ನೇ ಸ್ವೀಕಾರ ಮಾಡಬೇಕು. ಹಾಗಾದರೆ 'ಸ್ತ್ರೈಣಪುತ್ರಃ' ಎಂಬಲ್ಲಿರುವ 'ನಞ್' ಎಂಬುದು ಪ್ರತ್ಯಯರೂಪವಾಗಿದೆ. ಹೊರತು ನಿಪಾತರೂಪವಲ್ಲ. ಸೂತ್ರವು ನಿಪಾತ 'ಞಿತ್' ಆದ ನಞ್‌ಗೆ ಲೋಪವನ್ನು ಹೇಳುತ್ತಿದೆ. ಆದರೆ ಅಂತಹ ಪ್ರತ್ಯಯವು 'ಸ್ತ್ರೈಣಪುತ್ರಃ' ಎಂಬಲ್ಲಿಲ್ಲ. ಹೀಗಿರುವಾಗ ಸೂತ್ರದಿಂದ ನಕಾರದ ಲೋಪಪ್ರಸಕ್ತಿಯು ಇಲ್ಲ. ಹೀಗೆ ವಿಭಾಷಾಪದವನ್ನು ಅನುವೃತ್ತಿ ಮಾಡಿಕೊಳ್ಳದಿದ್ದರೂ ಎಲ್ಲ ಸಮಸ್ಯೆಗಳನ್ನು ಪರಿಹರಿಸಬಹುದು. ಬರುವಾಗ ವ್ಯರ್ಥವಾಗಿ ವಿಭಾಷಾಪದದ ಅನುವೃತ್ತಿಯನ್ನು ಹೇಳುವುದು ಅನಾವಶ್ಯಕ.

ಮತ್ತೊಂದು ಸಮಾಧಾನ - ಹಿಂದಿನ ಸೂತ್ರ 'ಅಲಗುತ್ತರಪದೇ' ಎಂದು. ಈ ಸೂತ್ರದಲ್ಲಿರುವ 'ಉತ್ತರಪದೇ' ಎಂಬುದನ್ನು 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಇಟ್ಟುಕೊಳ್ಳಬಹುದು. ಉತ್ತರ ಶಬ್ದವು ಸಸಂಬಂಧಿಯಾದ ಶಬ್ದವಾಗಿದೆ. ಉತ್ತರಪದವು ಪರದಲ್ಲಿದ್ದಾಗ ಎಂದು ಹೇಳಿದರೆ 'ನಞ್' ಎಂಬುದು ಪೂರ್ವಪದವಾಗಿರಬೇಕು ಎಂದಂತಾಯಿತು. ಯಾವ ಒಂದು ಶಬ್ದಸ್ವರೂಪದಲ್ಲಿ 'ನಞ್' ಎಂಬ ಪ್ರತ್ಯಯವು ಪೂರ್ವಪದವಾಗಿರುತ್ತದೋ ಅಂತಹ ಸ್ಥಳದಲ್ಲಿ ನಕಾರವು ಲೋಪವಾಗುತ್ತದೆ ಎಂದು 'ನಲೋಪೋ ನಞಃ' ಸೂತ್ರದ ಅರ್ಥವಾಯಿತು.

'ಸ್ತ್ರೈಣಪುತ್ರಃ' ಇತ್ಯಾದಿಸ್ಥಳದಲ್ಲಿ 'ನಞ್' ಎಂಬುದು ಪೂರ್ವಪದವಾಗಿಲ್ಲ. 'ಸ್ತ್ರೈಣ' ಎಂಬುದು ಪೂರ್ವಪದವಾಗಿದೆ. ಒಂದು ವೇಳೆ 'ನಞ್' ಎಂಬುದಷ್ಟೇ ಪೂರ್ವಪದವಾಗಿದ್ದಲ್ಲಿ ನಕಾರಲೋಪದ ಪ್ರಸಕ್ತಿಯು ಇರುತ್ತಿತ್ತು. ಅದರ ಪರಿಹಾರಕ್ಕಾಗಿ ವಿಭಾಷಾಪದದ ಅನುವೃತ್ತಿಯು ಬೇಕಾಗುತ್ತಿತ್ತು. ಆದರೆ 'ಸ್ತ್ರೈಣ' ಎಂಬುದೇ ಪೂರ್ವಪದವಾಗಿರುವುದರಿಂದ 'ನಲೋಪೋ ನಞಃ' ಎಂಬ ಸೂತ್ರವು 'ನಞ್' ಗೆ ಲೋಪವನ್ನು ಹೇಳುವುದೇ ಇಲ್ಲ. ಆದ್ದರಿಂದ 'ಸ್ತ್ರೈಣಪುತ್ರಃ' ಎಂಬಲ್ಲಿ ಯಾವ ಬಾಧಕವೂ ಇಲ್ಲ.

ಪರಿಪೂರ್ಣಚಂದ್ರಿಕಾ

**ಪ್ರಶ್ನೆ** :- ಹಾಗಾದರೆ ಸಾನುಬಂಧಗ್ರಹಣವು ವ್ಯರ್ಥವಾಗುತ್ತದೆ. 'ವಾಮನಪುತ್ರಃ' ಎಂಬಲ್ಲಿಯೂ ಹೀಗೆಯೇ ಸಮಾಧಾನವನ್ನು ಹೇಳಬಹುದು. 'ವಾಮನ' ಎಂಬುದು ಪೂರ್ವಪದವೇ ಹೊರತು ವಾಮನಪದದಲ್ಲಿ ಗರ್ಭಿತವಾದ 'ನ'ಪ್ರತ್ಯಯವು ಪೂರ್ವಪದವಾಗಿಲ್ಲ. ಆದ್ದರಿಂದ 'ನಲೋಪೋ ನಞಃ' ಎಂಬ ಸೂತ್ರದಿಂದ ನಕಾರಲೋಪಕ್ಕೆ ಆಸ್ಪದವೇ ಇಲ್ಲ. ಆದ್ದರಿಂದ ಸಾನುಬಂಧಗ್ರಹಣವನ್ನು ಮಾಡುವುದೂ ಸಹ ವ್ಯರ್ಥ.

**ಉತ್ತರ** :- 'ವಾಮನಪುತ್ರಃ' ಎಂಬಲ್ಲಿ ಸಾನುಬಂಧಗ್ರಹಣವು ವ್ಯರ್ಥವಾದರೂ 'ನೈಕಧಾ' ಇತ್ಯಾದಿ ಸ್ಥಳದಲ್ಲಿ ಸಾರ್ಥಕವಾಗಿದೆ. ಇಲ್ಲಿ ಪೂರ್ವಪದವು 'ನಞ್'ಪ್ರತ್ಯಯ ಸ್ವರೂಪವಾಗಿದೆ. ಆದ್ದರಿಂದ 'ನಲೋಪೋ ನಞಃ' ಎಂಬ ಸೂತ್ರವು ನಕಾರಕ್ಕೆ ಲೋಪವನ್ನು ವಿಧಿಸುತ್ತದೆ. ಇದನ್ನು ನಿವಾರಿಸಲು 'ರಾತ್ರೇಃ ಕೃತಿ ವಿಭಾಷಾ' ಎಂಬ ಸೂತ್ರದಿಂದ ವಿಭಾಷಾಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಹಾಗೆ ಅನುವೃತ್ತಿಯನ್ನು ಮಾಡಿದಾಗ ನಿತ್ಯವಾಗಿ ನೈಕಧಾ ಎಂಬಲ್ಲಿ ನಕಾರವು ಲೋಪವಾಗುವುದಿಲ್ಲ. ಆದ್ದರಿಂದ ಸಾನುಬಂಧಗ್ರಹಣವು ವ್ಯರ್ಥವೇ ಆಗಿದೆ. 'ವಾಮನಪುತ್ರಃ' ಎಂಬಲ್ಲಿಯೂ ಅದಕ್ಕೆ ಸಾರ್ಥಕ್ಯವಿಲ್ಲ. 'ನೈಕಧಾ' ಎಂಬಲ್ಲಿಯೂ ವಿಭಾಷಾಪದದ ಅನುವೃತ್ತಿಯಿಂದಲೇ ಕಾರ್ಯವು ಆಗುವಾಗ ಸಾನುಬಂಧಗ್ರಹಣಕ್ಕೆ ಕೃತ್ಯವಿಲ್ಲ. ಆದರೂ ಪಾಣಿನಿಯು ಸಾನುಬಂಧಗ್ರಹಣವನ್ನು ಮಾಡಿದ್ದಾನೆ. ಇದರಿಂದ ಸೂತ್ರಕಾರನಿಗೆ ವ್ಯವಸ್ಥಿತವಿಭಾಷಾವನ್ನು ಆಶ್ರಯಿಸುವುದು ಸಮ್ಮತಿಯಿಲ್ಲವೆಂದು ತಿಳಿಯುತ್ತದೆ. ಹೀಗಿರುವಾಗ ಪಾಣಿನಿಯ ಮತಕ್ಕೆ ವಿರುದ್ಧವಾಗಿ ಗ್ರಂಥಕಾರರು ವ್ಯವಸ್ಥಿತವಿಭಾಷಾವನ್ನು ಆಶ್ರಯಿಸಿ ಸಮಾಧಾನವನ್ನು ಹೇಳಿದ್ದು ಹೇಗೆ ಸೂಕ್ತವಾಗುತ್ತದೆ?

ನಾರಾಯಣಶಬ್ದದಲ್ಲಿರುವ 'ನಞ್' ಎಂಬುದು ಪೂರ್ವಪದವಾಗಿದೆ. ಇದಕ್ಕೆ 'ನಲೋಪೋ ನಞಃ' ಎಂಬ ಸೂತ್ರವು ಲೋಪವನ್ನು ವಿಧಿಸುತ್ತದೆ. ವಿಭಾಷಾಪದದ ಅನುವೃತ್ತಿಯಿಂದ ಸಮಾಧಾನ-ವನ್ನು ಹೇಳಲಾಗದು. ಮೇಲೆ ಹೇಳಿದ ಈ ಪ್ರಬಲ ಪ್ರಶ್ನೆಯು ಯಥಾರ್ಥವೇ ಆಗಿದೆ. ಆದ್ದರಿಂದಲೇ ಪದಮಂಜರೀಕಾರನು ವಿಭಾಷಾಪದದ ಅನುವೃತ್ತಿಯನ್ನು ಒಪ್ಪಿಕೊಂಡಿಲ್ಲ. ಆದರೆ ಕಾಶಿಕಾವೃತ್ತಿಯ ಮತ್ತೊಬ್ಬ ವ್ಯಾಖ್ಯಾನಕಾರನಾದ ನ್ಯಾಸಕಾರನು ವಿಭಾಷಾಪದದ ಅನುವೃತ್ತಿಯನ್ನು ಆಶ್ರಯಿಸಿದ್ದಾನೆ. ನ್ಯಾಸಕಾರನ ಮತವನ್ನು ಇಟ್ಟುಕೊಂಡಾಗಲೂ ನಾರಾಯಣಪದದ ಶಬ್ದಸಾಧುತ್ವವನ್ನು ಉಪಪಾದಿಸಲು ಬರುತ್ತದೆಂದು ಗ್ರಂಥಕಾರರ ಅಭಿಪ್ರಾಯ. ಆದ್ದರಿಂದ ಇಲ್ಲಿ ಗುಣದೋಷಗಳ ವಿಮರ್ಶೆಯ ಅವಶ್ಯಕತೆಯು ಇರುವುದಿಲ್ಲ. ನ್ಯಾಸಕಾರನ ಅಭಿಪ್ರಾಯವು ತಪ್ಪೋ ಒಪ್ಪೋ? ಅಂತೂ ಅವನ ಅಭಿಪ್ರಾಯದಿಂದಲೂ ನಮ್ಮ ಅಭಿಲಾಷೆಯು ಸಿದ್ಧಿಸುತ್ತದೆ ಎಂದು ಅರಿಯಬೇಕು. ಈ ವಿಷಯವು ಗ್ರಂಥಕಾರರಿಗೂ ಸಮ್ಮತವಾಗಿದೆ. ಆದ್ದರಿಂದಲೇ 'ನ್ಯಾಸೇ ಏವ ಉಕ್ತತ್ವಾತ್' ಎಂದು ಹೇಳಿದ್ದಾರೆ. ಇಲ್ಲವಾದಲ್ಲಿ 'ವ್ಯವಸ್ಥಿತವಿಭಾಷಾಽಽಶ್ರಯಣಾತ್ ನಲೋಪಾಭಾವೋಪಪತ್ತೇಃ' 'ವ್ಯವಸ್ಥಿತವಿಭಾಷಾವನ್ನು ಆಶ್ರಯಿಸಿದ್ದರಿಂದ ನಲೋಪಾಭಾವವು ಉಪಪನ್ನವಾಗುತ್ತದೆ' ಎಂದಷ್ಟೇ ಹೇಳುತ್ತಿದ್ದರು. 'ನ್ಯಾಸೇ ಏವ ಉಕ್ತತ್ವಾತ್' ಎಂದು ಹೇಳುವ ಅವಶ್ಯಕತೆಯು ಇರಲಿಲ್ಲ. ಇದರಿಂದ ನಾರಾಯಣ ಶಬ್ದಸಾಧುತ್ವವು ನ್ಯಾಸಕಾರನ ಮತದಂತೆಯೂ ಸರಿಹೊಂದುತ್ತದೆಂದು ತಿಳಿಯುತ್ತದೆ.

*ಜಿಜ್ಞಾಸಾಧಿಕರಣ*

ಪದಮಂಜರೀಕಾರನ ಅಭಿಪ್ರಾಯವನ್ನು ಇಟ್ಟುಕೊಂಡಾಗ ನಾರಾಯಣಶಬ್ದವು ಹೇಗೆ ಸಾಧು ವಾಗುತ್ತದೆ? ಎಂಬ ಪ್ರಶ್ನೆ ಬಂದರೆ 'ಯದ್ವಾ' ಎಂದು ಮತ್ತೊಂದು ಪಕ್ಷವನ್ನು ಹೇಳುತ್ತಿದ್ದಾರೆ. ಮತ್ತು ನ್ಯಾಸಕಾರನ ಮತದಲ್ಲಿಯೂ ಅಸ್ವಾರಸ್ಯವಿದೆ. ವಿಭಾಷಾಪದವನ್ನು ಅನುವೃತ್ತಿಮಾಡಿಕೊಳ್ಳದೇ 'ನೈಕಧಾ' ಇತ್ಯಾದಿ ಅನೇಕಶಬ್ದಗಳ ಸಾಧುತ್ವವನ್ನು ಉಪಪಾದಿಸಲು ಬರುತ್ತದೆ. ಆದರೂ ಬಲವಂತವಾಗಿ ವಿಭಾಷಾಪದದ ಅನುವೃತ್ತಿಯನ್ನು ಅವನು ಹೇಳಿದ್ದಾನೆ. ಈ ಅಸ್ವಾರಸ್ಯದಿಂದಲೂ 'ಯದ್ವಾ' ಎಂದು ಮತ್ತೊಂದು ಪಕ್ಷವನ್ನು ಗ್ರಂಥಕಾರರು ಹೇಳುತ್ತಿದ್ದಾರೆ.

ಅಥವಾ 'ಅಮಾನೋನಾಃ ಪ್ರತಿಷೇಧೇ' ಎಂಬ ಸೂತ್ರದಲ್ಲಿ ಹೇಳಿದಂತೆ 'ನ' ಸಮಾಸವನ್ನು ಮಾಡಬಹುದು. ನಿಷೇಧಾರ್ಥಕವಾದ ನಕಾರವು ಅರಾಯಣ ಎಂಬ ಪದದ ಜೊತೆಗೆ 'ಸುಪ್ ಸುಪಾ' ಎಂಬ ಸೂತ್ರದ ಪ್ರಕಾರ ಸಮಾಸವಾಗುತ್ತದೆ. ಇದಕ್ಕೆ ಸಿದ್ಧಾಂತಕೌಮುದಿಯಲ್ಲಿ 'ನೈಕಧಾ' ಎಂಬುದನ್ನು ದೃಷ್ಟಾಂತವನ್ನಾಗಿ ಹೇಳಿದ್ದಾರೆ. ಹೀಗೆ ಹೇಳಿದಾಗ ಹಿಂದಿನ ಯಾವ ಸಮಸ್ಯೆಗಳೂ ಬರಲಾರವು.

ಕೆಲವರ ಆಕ್ಷೇಪ :- ನಿಷೇಧಾರ್ಥಕವಾದ 'ನ' ಪದದ ಜೊತೆಗೆ ಸಮಾಸವನ್ನು ಗ್ರಂಥಕಾರರು ಹೇಳುತ್ತಿದ್ದಾರೆ. ಆದರೆ ಈ ಪಕ್ಷವು ಗ್ರಂಥಕಾರರಿಗೆ ಸಮ್ಮತವಾಗಿಲ್ಲ. ಹಾಗಾದಲ್ಲಿ 'ನಞಃ ವಿರುದ್ಧಾರ್ಥವಾಚಕತ್ವಾತ್ ನಞೋ ಭಾವಾರ್ಥತ್ವಾತ್' 'ನಞ್' ಎಂಬುದು 'ವಿರುದ್ಧಾರ್ಥವಾಚಿ ಯಾದ್ದರಿಂದ ಭಾವಾರ್ಥಕವಾಗಿದೆ' ಇತ್ಯಾದಿ ಟೀಕೆವಾಕ್ಯಗಳ ವಿರೋಧ ಬರುತ್ತದೆ. ಆದ್ದರಿಂದ ನಿಷೇಧಾರ್ಥಕವಾದ 'ನ'ಸಮಾಸವನ್ನು ಹೇಳಿರುವುದು ಕೇವಲ ಪ್ರೌಢಿವಾದ. ಈ ವಿವಕ್ಷೆಯಿಂದಲೇ ಗ್ರಂಥಕಾರರು 'ಅಸ್ತು' ಎಂಬ ಪದವನ್ನು ಹೇಳಿದರು. ಇದರಿಂದ ತಮಗೆ ಈ ಪಕ್ಷದಲ್ಲಿ ಸಮ್ಮತಿ ಯಿಲ್ಲವೆಂದು ಸೂಚಿಸಿದ್ದಾರೆ. ಮತ್ತು 'ನಗನಾಕಾದಿಶಬ್ದವತ್' ಎಂಬ ದೃಷ್ಟಾಂತವು ಈ ಪಕ್ಷದಲ್ಲಿ ಸಮಂಜಸವಾಗದು. ಏಕೆಂದರೆ 'ನ' ಸಮಾಸವನ್ನು ಆಶ್ರಯಿಸಿದಾಗ ನಕಾರಲೋಪಕ್ಕೆ ಪ್ರಸಕ್ತಿಯಿಲ್ಲ. ಹೀಗಿರುವಾಗ ನಗನಾಕಾದಿ ಶಬ್ದಗಳಂತೆ ಸಾಧುತ್ವವನ್ನು ಏಕೆ ಸಮರ್ಥಿಸಬೇಕು?

ಸಮಾಧಾನ :- ಈ ವಾದವು ಅತ್ಯಂತ ವಿಮರ್ಶನೀಯ. ಏಕೆಂದರೆ 'ನಞೋ ವಿರುದ್ಧಾರ್ಥ ವಾಚಿತ್ವಾತ್' ಇತ್ಯಾದಿ ಟೀಕಾಮಾತುಗಳು 'ಯದ್ವಾ' ಎಂಬ ಎರಡನೆಯ ಪಕ್ಷವನ್ನು ಆಶ್ರಯಿಸಿ ಹೊರಟದ್ದೇ ಅಲ್ಲ. ಮೊದಲನೆಯ ಪಕ್ಷಕ್ಕೆ ಅನುಸಾರಿಯಾದ ಮಾತುಗಳನ್ನೂ ಆ ವಾಕ್ಯಗಳು ಹೇಳುತ್ತಿವೆ. ಹೀಗಿರುವಾಗ ಎರಡನೆಯ ಪಕ್ಷದ ಸಮರ್ಥನೆಯಲ್ಲಿ ಆ ಮಾತುಗಳ ವಿರೋಧಕ್ಕೆ ಆಸ್ಪದವಿಲ್ಲ. ಮತ್ತು ನಗನಾಕಾದಿಶಬ್ದವತ್ ಎಂಬ ದೃಷ್ಟಾಂತಮಾತನ್ನು ತಪ್ಪೆಂದರು. ಆದರೆ ಸೂತ್ರದಲ್ಲಿ ಹೇಳದ 'ಡ' ಪ್ರತ್ಯಯದ ಪ್ರದರ್ಶನಕ್ಕೋಸ್ಕರ ಈ ದೃಷ್ಟಾಂತವು ಉಪಪನ್ನವಾಗಿದೆಯೆಂದು ಈ ಹಿಂದೆ ಸಮರ್ಥಿಸಿದ್ದೇವೆ. ಸಂಕ್ಷೇಪವಾದ ವಿಮರ್ಶೆ ಇಲ್ಲಿಗೆ ಸಾಕು.

ಹೀಗೆ ನೀವು ವಿಭಾಷಾಪದವನ್ನು 'ನಲೋಪೋ ನಞಃ' ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳುತ್ತೀರಾದರೆ ಅದರಿಂದಲೇ 'ನಭ್ರಾಟ್' ಮೊದಲಾದ ನಲೋಪ ಸಿದ್ಧವಾಗುವುದರಿಂದ 'ನಭ್ರಾಟ್' ಇತ್ಯಾದಿ ಸೂತ್ರ ಹೊರಟದ್ದೇ ವ್ಯರ್ಥ. ಇನ್ನು ವಿಭಾಷಾ ಪದದ ಅರ್ಥವನ್ನೇ ವಿವರಿಸು

ಈ ಸೂತ್ರ ಹೊರಟಿದೆ ಎಂಬ ಸಮಾಧಾನವು ಬೇರೆ ಯಾವುದೇ ರೀತಿಯ ಗತಿ ಇಲ್ಲದಾಗ ಮಾತ್ರ ಹೇಳಬೇಕು. 'ನಭ್ರಾಟ್' ಇತ್ಯಾದಿ ಪದಗಳಲ್ಲಿ ಮಾತ್ರ ನಲೋಪವು ಬರುವುದಿಲ್ಲವೆಂದು ವಿಭಾಷಾಪದವು ಹೇಳುತ್ತಿದೆಯೆಂದರೆ 'ಸ್ತ್ರೈಣಾರ್ಥಃ' ಎಂಬಲ್ಲಿ ನಲೋಪ ಆಗಬೇಕಾದೀತೆಂಬ ಪ್ರಶ್ನೆ ಪುನಃ ಬರುತ್ತದೆ. ಆದ್ದರಿಂದ 'ವಿಭಾಷಾ' ಪದವನ್ನು ಅನುವೃತ್ತಿ ಮಾಡಬಾರದು ಎಂದರೆ ಗ್ರಂಥಕಾರರು 'ಯದ್ವಾ' ಎಂದು ಮತ್ತೊಂದು ಸಮಾಧಾನ ಹೇಳುತ್ತಿದ್ದಾರೆ.

ಪದಮಂಜರಿಕಾರನು 'ವಿಭಾಷಾ' ಪದದ ಅನುವೃತ್ತಿ ಬೇಡವೆನ್ನುತ್ತಾನೆ. ಅವನ ಪ್ರಕಾರ 'ಯದ್ವಾ' ಎಂದು ಹೇಳಿದ್ದಾರೆಂದೂ ಸಹ ಇಟ್ಟುಕೊಳ್ಳಬಹುದು. ಅವನ ಅಭಿಪ್ರಾಯ ಹೀಗಿದೆ – 'ನಲೋಪೋ ನಞಃ' ಎಂಬ ಸೂತ್ರದಲ್ಲಿ 'ನಞ್' ಎಂಬ ಅವ್ಯಯವನ್ನೇ ಇಟ್ಟುಕೊಳ್ಳಬೇಕು. ಹೊರತು ಪ್ರತ್ಯಯವನ್ನಲ್ಲ. ಏಕೆಂದರೆ ಪ್ರತ್ಯಯದ 'ಇತ್' ಆದ ಞ ಕಾರಕ್ಕೆ ವೃದ್ಧಿಸ್ವರಾದಿಗಳಂತಹ ಇತರ ಪ್ರಯೋಜನಗಳಿವೆ. ಆದರೆ ಅವ್ಯಯದ 'ಞ್ಇತ್'ಗೆ ಬೇರೆ ಪ್ರಯೋಜನವಿಲ್ಲ. ಪ್ರಕೃತದಲ್ಲಿ 'ಸ್ತ್ರೈಣಾರ್ಥಃ' ಎಂಬಲ್ಲಿ ನಞ್ ಪ್ರತ್ಯಯವೇ ಇದೆ ಹೊರತು ಅವ್ಯಯವಲ್ಲ. ಆದ್ದರಿಂದ 'ನಲೋಪೋ ನಞಃ' ಎಂಬುದರಿಂದ ನಲೋಪಪ್ರಸಕ್ತಿಯೂ ಇಲ್ಲ. ಹಾಗಾಗಿ ಸೂತ್ರದಲ್ಲಿ ವಿಭಾಷಾ ಪದದ ಅನುವೃತ್ತಿ ಬೇಡ.

ಅಥವಾ 'ನಲೋಪೋ ನಞಃ' ಎಂಬ ಸೂತ್ರಕ್ಕೆ ನ್ಯಾಸಕಾರನ ವ್ಯಾಖ್ಯಾನ ಇಟ್ಟುಕೊಂಡರೂ ಸಹ ವಿಭಾಷಾ ಪದದ ಅನುವೃತ್ತಿ ಬೇಕಾಗಿಲ್ಲ. ಏಕೆಂದರೆ 'ಅಲಗುತ್ತರಪದೇ' ಎಂಬ ಹಿಂದಿನ ಸೂತ್ರದಿಂದ 'ಉತ್ತರಪದೇ' ಎಂಬುದನ್ನು ಈ ಸೂತ್ರದಲ್ಲಿಯೂ ಇಟ್ಟುಕೊಳ್ಳಬೇಕು. ಈಗ ಸೂತ್ರಕ್ಕೆ ಹೀಗೆ ಅರ್ಥ - ನಞ್‌ಪದದ ನಕಾರವು ಲೋಪವಾಗುತ್ತದೆ. ಮುಂದೆ ಒಂದು ಪದವಿದ್ದಾಗ 'ಸ್ತ್ರೈಣಾರ್ಥಃ' ಎಂಬಲ್ಲಿ ನಞ್ ಪ್ರತ್ಯಯದ ಮುಂದೆ 'ಅರ್ಥ' ಎಂಬ ಪದವಿದೆ. ಆದರೆ 'ನಞ್' ಎಂಬುದು ಪದವಾಗಿಲ್ಲ ಪ್ರತ್ಯಯವಾಗಿದೆ. ಆದ್ದರಿಂದ ನಲೋಪಕ್ಕೆ ಅವಕಾಶವೇ ಇಲ್ಲ.

'ಯದ್ವಾ' ಪಕ್ಷದಲ್ಲಿ ಹೇಳುತ್ತಿರುವ ನಕಾರವು 'ಅಮಾನೋನಾಃ ಪ್ರತಿಷೇಧೇ' ಎಂಬಲ್ಲಿ ಹೇಳಿದ ನಿಷೇಧಾರ್ಥಕವಾದ ಶಬ್ದವಾಗಿದೆ, ಇದಕ್ಕೆ 'ಸುಪ್‌ಸುಪಾ' ಎಂಬುದರಿಂದ ಸಮಾಸವಾಗಿದೆ. ಇದಕ್ಕೆ ದೃಷ್ಟಾಂತ – 'ನೈಕಧಾ' ಎಂಬುದು. ಇಲ್ಲಿಯೂ 'ನ'ಸಮಾಸವೆಂದು ಸಿದ್ಧಾಂತಕೌಮುದಿಯಲ್ಲಿ ಹೇಳ-ಲಾಗಿದೆ.

ನ್ಯಾಸಕಾರನ ಪ್ರಕಾರ 'ವಿಭಾಷಾ' ಪದವನ್ನು ಇಟ್ಟುಕೊಳ್ಳಬೇಕು. ಅವನ ಪ್ರಕಾರ ಚಂದ್ರಿಕೆಯಲ್ಲಿ ಒಂದು ರೀತಿ ವ್ಯಾಖ್ಯಾನಿಸಿ ಯದ್ವಾ ಎಂದು ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

* * * *

### ಸಾರ

ನಾರಾಯಣ ಶಬ್ದದಲ್ಲಿ ನಲೋಪಾಭಾವ

ದೋಷದೂರ ಎಂಬ ಅರ್ಥದಲ್ಲಿ 'ನ ಅರಾಯನ'ವು 'ನಾರಾಯಣ' ಎಂದಾಗುವುದು. ಆದರೆ ಇ
ನಲೋಪ ಬಂದೀತು. 'ನ ಆರೋಗ್ಯ' 'ಅನಾರೋಗ್ಯ'ವಾಗುವಂತೆ. 'ನ ಅರಾಯನ'ವು 'ಅನರಾಯ
ಏಕಾಗುವುದಿಲ್ಲ? ಇದಕ್ಕೆ ಪರಿಹಾರ - 'ನಲೋಪವನ್ನು ಹೇಳುವ ಸೂತ್ರದಲ್ಲಿ ವಿಕಲ್ಪವನ್ನು ಹೇಳು
'ವಿಭಾಷಾ' ಪದದ ಅನುವೃತ್ತಿ ಇದೆ ಎಂದು ನ್ಯಾಸಗ್ರಂಥದಲ್ಲಿ ಹೇಳಿದೆ' ಎಂದು ಹೇಳಬಹುದು. ವಸ್ತು
ಅನುವೃತ್ತಿ ಬೇಡ. ಆದರಿಂದ ಇಲ್ಲಿ 'ನ ಅರಾಯನ' ಎಂಬಲ್ಲಿ 'ನಞ್' ಎಂಬ ಅವ್ಯಯವಲ್ಲ. 'ನ' ಎಂ
ಅವ್ಯಯ ಎಂದಿಟ್ಟುಕೊಳ್ಳಬೇಕು.

● ● ● ● ●

## ಣತ್ವ ಪುಲ್ಲಿಂಗಗಳು ವ್ಯಾಕರಣವಿರುದ್ಧವಲ್ಲ

**तात्पर्यचन्द्रिका –**

**अत्र ''पूर्वापदात् संज्ञायामगः'' इति णत्वम् । ल्युटः टित्करणसामर्थ्येन अयनशब्दोऽधिकरणे त्रिलिङ्ग इति पुल्लिंगत्वं च द्रष्टव्यम् ।**

'ನಾರಾಯಣ' ಎಂಬಲ್ಲಿ ಣತ್ವವು 'ಪೂರ್ವಪದಾತ್ಸಂಜ್ಞಾಯಾಮಗಃ' ಎಂಬ ಸೂತ್ರದಿಂ
ಬಂದಿದೆ. 'ಲ್ಯುಟ್' ಪ್ರತ್ಯಯವನ್ನು 'ಟಿತ್' ಮಾಡಿರುವುದರಿಂದಲೇ ಅಧಿಕರಣಾರ್ಥದಲ್ಲಿಯೂ
ಅಯನ ಶಬ್ದವು ಮೂರೂ ಲಿಂಗಗಳಲ್ಲಿದೆಯೆಂದು ತಿಳಿಯುವುದರಿಂದ ಪುಲ್ಲಿಂಗವು ಸಾಧುವಾಗಿ

**प्रकाशः** – समासस्थले सत्यप्यैकपद्ये ''रषाभ्यां नो णः समानपदे'' इत्यत्र विवक्षितस्य समानमेव पदं नतु पूर्वोत्तरपदव्यवहारभागित्येवंरूपस्य समानपदत्वस्याभावात् कथं णत्वम्? इत्यतः सुधोक्तमाह – अत्रेति ।। ननु ''नपुंसके भावे क्तः'' इति 'नपुंसके' इत्यनुवर्तमाने ''ल्युट् च'' ''करणाधिकरणयोश्च'' इति ल्युटो विधानेन 'नारायणम्' इति नपुंसकलिङ्गेन भाव्यमित्यत आह – ल्युट इति ।। ल्युटः टित्करणं हि ''टिड्ढाणञ्'' इत्यादिना ङीबर्थम् । यदि ल्युडन्तस्य क्लीबत्वमेव तर्हि स्त्रीत्वाभावात् तन्निमित्तकङीबर्थं टित्करणमनर्थकम् । तेन ज्ञापनं

लिङ्गान्तरमस्तीति सामान्यतो ज्ञापनात् पुल्लिङ्गतोपपत्तिरित्यर्थः । 'अधिकरणे' इति प्रकृताभिप्रायेण । अत एव महाभाष्ये "भूवादयो धातवः" इत्यत्र "कोऽसावनुमानो नाम" इति करणे पुंल्लिङ्गप्रयोगः ।

यद्यपि वृत्तौ "करणाधिकरणयोः" इति सूत्रे 'नपुंसके' इत्यस्यानुवृत्तेरनुक्तेः 'इध्मप्रव्रश्चनः' इत्युदाहरणे पुंल्लिङ्गोक्तेश्च 'नपुंसके' इति नानुवर्तत इत्येव सुवचम् । तथाऽपि तदननुवृत्तिरेव टित्करणेन ज्ञाप्यत इत्येवमुक्तमित्यदोषः । वृत्तिकारस्यापीदमेव बीजमित्युक्तं भवति ।

गुरुराजीय – ननु नारायनमिति वक्तव्यम् । नारायणमिति णत्वं तु तत्प्रापकाभावादयुक्तम् । न च "रषाभ्यां नोणः समानपदे" इत्येतदेव तत्प्रापकमिति वाच्यम् । निमित्तस्य रेफस्य निमित्तिनो नकारस्य च समानपदस्थत्व एव तेन णत्वविधानेन प्रकृते च तयोरसमानपदस्थतया तेन णत्वाप्राप्तेः । नचैकपद्यमैकस्वर्यमेकविभक्तिकत्वं च समासप्रयोजनमिति वदद्भिर्वैयाकरणैः समासस्यैकपदत्वाङ्गीकारान्नारायणपदस्यापि पदद्वयसमासरूपत्वेन समानपदत्वसम्भवाद् युक्तैवानेन णत्वप्राप्तिरिति वाच्यम् । तत्र अखण्डपदत्वरूपैकपदत्वस्यैव समानपदतया विवक्षितत्वेन समासरूपैकपदस्य व्यावर्तितत्वेनासमानपदत्वानिवारणात् । नचात्र ज्ञापकाभाव इति वाच्यम् । सौत्रसमानग्रहणस्यैव तत्र ज्ञापकत्वात् । तदुक्तम् । पद इत्येतावतैव सामर्थ्यादेकपदत्वे लब्धेऽपि समानग्रहणं यत्समानमेव पदं न कदाचिद् भिन्नं तत्रैव यथा स्यादित्येवमर्थम् । तेनाखण्डपद एव भवति न समासपद इति । तथाच 'दुर्नामरामनाम' इत्यादाविवाखण्डपदत्वाभावान्नारायणपदे न तेन णत्वसम्भव इत्यतोऽत्र सुधोक्तं णत्वप्रापकमुदाहरति – अत्रेति ।। पूर्वपदस्थान्निमित्तादुत्तरस्य गकारानन्तरितस्य नकारस्य णकार आदेशो भवति संज्ञाविषय इति सूत्रार्थः । तथाच असमानपदत्वेऽपि 'शूर्पणखा' इत्यादाविव णत्वं युक्तमिति भावः ।

ननु "ल्युडनान्तमकर्तरि" इति कर्तृव्यतिरिक्तकारके ल्युडनप्रत्ययान्तं तत् तृतीये नपुंसकलिङ्गे इत्यमरकोशोऽनप्रत्ययान्तस्य नपुंसकताया नियमितत्वात्, 'साध्यते अनेनेति साधनम्' इत्यादौ साधनम् इत्यादिशब्दानां नित्यनपुंसकताया

एवोपलंभादत्राप्ययनशब्दस्याधिकरणसाधनत्वात् नपुंसकतैव युक्ता । नच "करणाधिकरणयोश्च" इत्यत्र "नपुंसकभावे क्तः" इत्यतो भावग्रहणाननुवृत्त्या "संनियोगशिष्टानां सहवा प्रवृत्तिः सहवा निवृत्ति" इति परिभाषया नपुंसक इत्यंशस्यापि निवृत्तेर्विशेष्यनिघ्नतया लिङ्गत्रयेऽपि करणाधिकरणादौ ल्युडनुशासन-सम्भवान्न नपुंसकत्वनियम इति वाच्यम् । तथा सति साधनादिशब्दानां नियतलिङ्गत्वाभावप्रसङ्गात् "यवनान्तर्यमकर्तरि" इत्यस्य विशेषविषयकत्वाच्च परिभाषाया अनित्यतामाश्रित्य 'करणाधिकरणयोश्च' इत्यत्र नपुंसक इत्यनु-वृत्तेरावश्यकत्वात् । तथाच नारायण इति पुल्लिङ्गानुपपत्तिरेवेत्यत आह - ल्युट इति ।। नच सामार्थ्याश्रयणं निर्बीजम् । करणं करणी प्रमाणं प्रमाणीत्याद्य-भियुक्तप्रयोगाणामेव तत्र बीजत्वात् । अत एव "टिड्ढाणञ्" इति सूत्रे लटो ह्यनुबन्धकत्वात् टिद्ग्रहणेन ग्रहणे निरस्ते तर्हि तत एव ल्युटोऽप्यग्रहणं प्रसज्येतेत्याशङ्किते लटष्टित्त्वस्य टेरेत्वेन चरितार्थत्वात् ल्युटष्टित्त्वस्याचरितार्थत्वात् तदग्रहणे टित्त्ववैयर्थ्यापत्त्या ङीबर्थमेव टित्करणसामर्थ्यम् । इदं च बाहुलकमनाश्रित्य समाधानम् । तदाश्रयणे तु "कृत्यल्युटो बहुलम्" इति बाहुलकादेव त्रिलिंगता-सिद्धिरिति सर्वमनवद्यम् ।

ವಿವರಣೆ - 'ನಾರಾಯಣ' ಶಬ್ದದಲ್ಲಿ ಣತ್ವಕ್ಕೆ ಪ್ರಸಕ್ತಿಯೇ ಇಲ್ಲ. ಏಕೆಂದರೆ ನಾರ ಎಂಬುದೇ ಬೇರೆ ಪದ. ಅಯನ ಎಂಬುದೇ ಬೇರೆ ಪದ. ಣತ್ವ ಬರಬೇಕಾದರೆ 'ರಷಾಭ್ಯಾಂ ನೋ ಣಃ ಸಮಾನಪದೇ' ಎಂಬ ಸೂತ್ರವು ಒಂದೇ ಪದವಾಗಿರಬೇಕೆಂದು ಹೇಳುತ್ತದೆ. ಆದರೆ ನಿಮಿತ್ತವಾದ ರೇಫವೇ ಬೇರೆ ಪದದಲ್ಲಿದೆ. ನಿಮಿತ್ತಿಯಾದ ನಕಾರವು ಮತ್ತೊಂದು ಪದದಲ್ಲಿದೆ. ಹಾಗಾಗಿ ಣತ್ವ ಹೇಗೆ ತಾನೆ ಬರುತ್ತದೆ? ಎಂದರೆ ಸುಧಾದಲ್ಲಿ ಹೇಳಿದ ಸಮಾಧಾನವನ್ನೇ 'ಅತ್ರ' ಎಂಬುದರಿಂದ ಹೇಳುತ್ತಿದ್ದಾರೆ. ವಾಸ್ತವಿಕವಾಗಿ ರಾಮ+ನಾಮ ಇತ್ಯಾದಿಗಳಲ್ಲಿ ಭಿನ್ನಪದಗಳಾಗಿರುವುದರಿಂದ ಣತ್ವ ಬರುವುದಿಲ್ಲ. ಆದರೆ ಶೂರ್ಪ+ನಖಾ ಮೊದಲಾದ ಕಡೆ ಭಿನ್ನಪದವಾಗಿದ್ದರೂ ಣತ್ವ ಬರುತ್ತದೆ. ಕಾರಣವೇನೆಂದರೆ ಶೂರ್ಪಣಖಾ ಎಂಬುದು ರೂಢಪದವಾಗಿದೆ. ಆದರೆ 'ರಾಮನಾಮ' ಎಂಬುದು ರೂಢಪದವಲ್ಲ, ಯೋಗಪದವಾಗಿದೆ. ಹಾಗಾಗಿ ಅಲ್ಲಿ ಣತ್ವ ಬರುವುದಿಲ್ಲ. ಪ್ರಕೃತ 'ನಾರಾಯಣ' ಶಬ್ದವೂ ರೂಢಪದವಾದ್ದರಿಂದ ಣತ್ವವು ಬರುತ್ತದೆಂದು ತಿಳಿಯಬೇಕು. ಈ ವಿಷಯವನ್ನು 'ಪೂರ್ವಪದಾತ್ಸಂಜ್ಞಾಯಾಮಗಃ' ಎಂಬ ಸೂತ್ರವು ಹೇಳುತ್ತಿದೆ.

'ನಾರಾಯಣ' ಎಂಬಲ್ಲಿರುವ ಗಮನಾರ್ಥಕವಾದ 'ಅಯ' ಧಾತುವಿಗೆ 'ಕರಣಾಧಿಕರಣಯೋಶ್ಚ' ಎಂಬ ಸೂತ್ರದ ಪ್ರಕಾರ ಅಧಿಕರಣಾರ್ಥದಲ್ಲಿ 'ಲ್ಯುಟ್' ಪ್ರತ್ಯಯ ಬಂದಿದೆ. ಈ ಸೂತ್ರದ

'ನಪುಂಸಕೇ ಭಾವೇ ಕ್ತಃ' ಎಂಬ ಸೂತ್ರದಿಂದ 'ನಪುಂಸಕೇ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಹಾಗಾಗಿ 'ಲ್ಯುಟ್' ಪ್ರತ್ಯಯವು ನಪುಂಸಕಲಿಂಗದಲ್ಲಷ್ಟೇ ವಿಧಿಸಿದಂತಾಯಿತು. ಆದ್ದರಿಂದ ನಾರಾಯಣ-ಶಬ್ದವು ನಪುಂಸಕಲಿಂಗವಾಗಬೇಕು ಪುಲ್ಲಿಂಗ ಹೇಗಾಯಿತು? ಎಂದರೆ 'ಲ್ಯುಟಃ ಟಿತ್ಕರಣ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಲ್ಯುಟ್‌ಪ್ರತ್ಯಯದಲ್ಲಿ ಲಕಾರ ಟಕಾರಗಳು ಇತ್ ಆದರೆ 'ಯು' ಮಾತ್ರ ಉಳಿಯುತ್ತದೆ. ಹಾಗಾಗಿ 'ಯು' ಎಂದಿಷ್ಟೇ ವಿಧಿಸಿದ್ದರೂ ಸಾಕಾಗಿತ್ತು. ಲ್ಯುಟ್ ಎಂದು ಟಿತ್ ಮಾಡಿದ್ದು ಏಕೆ? ಎಂದರೆ 'ಟಿಡ್ಢಾಣಞ್' ಎಂಬ ಸೂತ್ರದಿಂದ 'ಙೀಪ್' ಪ್ರತ್ಯಯವನ್ನು ವಿಧಿಸುವುದಕ್ಕಾಗಿ. ಒಂದು ವೇಳೆ ಲ್ಯುಡಂತವಾದದ್ದೆಲ್ಲಾ ನಪುಂಸಕಲಿಂಗವೆಂದೇ ಹೇಳುವುದಾದರೆ ಸ್ತ್ರೀತ್ವಕ್ಕೆ ನಿಮಿತ್ತಕವಾದ ಙೀಪ್‌ಪ್ರತ್ಯಯದ ವಿಧಾನ ವ್ಯರ್ಥವಾಗುತ್ತಿತ್ತು. ಇದರಿಂದ ಲ್ಯುಡಂತವಾದ ಶಬ್ದಗಳು ಮೂರು ಲಿಂಗಗಳಲ್ಲಿಯೂ ಇವೆಯೆಂದು ತಿಳಿಯುತ್ತದೆ. ಆದ್ದರಿಂದ ನಾರಾಯಣಶಬ್ದವು ಪುಲ್ಲಿಂಗವಾಗಲು ಏನೂ ಬಾಧಕವಿಲ್ಲ.

'ಟಿಡ್ಢಾಣಞ್' ಸೂತ್ರದಲ್ಲಿ 'ಟಿತ್' ಶಬ್ದವೆಂದರೆ ಲ್ಯುಟ್ ಮಾತ್ರ ಏಕೆ ಆಗಬೇಕು? ಲಟ್ ಏಕೆ ಆಗುವುದಿಲ್ಲ? ಎಂದರೆ 'ಲಟ್' ಎಂಬುದನ್ನು ಟಿತ್ ಮಾಡಿದರ ಫಲವು ಆತ್ಮನೇ ಪದದಲ್ಲಿ 'ಏತ್ವ' ಮಾಡುವಿಕೆ ಎಂದು ತೀರ್ಮಾನವಾಗಿದೆ. ಆದರೆ ಲ್ಯುಟ್ ಎಂಬಲ್ಲಿ ಅಂತಹ ಏನೂ ಪ್ರಯೋಜನ ಇಲ್ಲದಿಲ್ಲವಾದ್ದರಿಂದ ಲ್ಯುಟ್ ಪ್ರತ್ಯಯವನ್ನೇ ಇಟ್ಟುಕೊಳ್ಳಬೇಕು. ಲಟ್ ಮೊದಲಾದವುಗಳನ್ನು ಅಲ್ಲ. ಇಷ್ಟು ಪಾಣಿನಿಯ ಅಭಿಪ್ರಾಯ. ಭಾಷ್ಯಕಾರನಾದ ಪತಂಜಲಿಯೂ ಇದನ್ನು ಸಮ್ಮತಿಸುತ್ತಾನೆ - 'ಭೂವಾದಯೋ ಧಾತವಃ' ಎಂಬ ಸೂತ್ರಭಾಷ್ಯದಲ್ಲಿ 'ಕೋಸಾವನುಮಾನೋ ನಾಮ' ಎಂದು ಹೇಳಿದ್ದಾನೆ. ಇಲ್ಲಿ ಅನುಮಾನ ಶಬ್ದವು ಕರಣಾರ್ಥಕವಾದ ಲ್ಯುಡಂತವಾದ ಪುಲ್ಲಿಂಗಶಬ್ದವಾಗಿದೆ.

ವಾಸ್ತವಿಕವಾಗಿ 'ನಪುಂಸಕ' ಶಬ್ದವನ್ನು ಅನುವೃತ್ತಿ ಮಾಡಿಕೊಳ್ಳಬಾರದು ಎನ್ನಲು ಲ್ಯುಟ್ ಎಂಬುದನ್ನು 'ಟಿತ್' ಮಾಡಿದ್ದಾರೆಂಬ ಸಮಾಧಾನಕ್ಕಿಂತ ಸುಲಭವಾಗಿ ಹೀಗೆ ಹೇಳಬಹುದಿತ್ತು - ಕಾಶಿಕಾವೃತ್ತಿಯಲ್ಲಿ 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಲ್ಲಿ 'ನಪುಂಸಕ' ಶಬ್ದವನ್ನು ಅನುವೃತ್ತಿ ಮಾಡಿಕೊಂಡಿಲ್ಲ. ಮತ್ತು '-ಇಧ್ಮಪ್ರವ್ರಶ್ಚನಃ' (ಸೌದೆ ಕಡಿಯುವ ಸಾಧನ) ಎಂದು ಪುಲ್ಲಿಂಗದ ಉದಾಹರಣೆಯನ್ನೇ ಈ ಸೂತ್ರಕ್ಕೆ ಕೊಟ್ಟಿದ್ದಾನೆ. ಈ ಎರಡು ಕಾರಣಗಳಿಂದ ಸುಲಭವಾಗಿ ಉತ್ತರಿಸಬಹುದಿತ್ತು. ಆದರೂ ಸಹ ಅನುವೃತ್ತಿ ಮಾಡಿಕೊಳ್ಳಬಾರದೆಂಬ ಈ ವಿಚಾರವನ್ನೇ ಟಿತ್ ಕರಣದಿಂದಲೂ ತಿಳಿಸಿದ್ದರಿಂದ ದೋಷವಿಲ್ಲ. ಕಾಶಿಕಾಕಾರನಿಗೂ ಇದೇ ಮೂಲವಾಗಿದೆ.

ಅಥವಾ 'ಲ್ಯುಟ್' ಪ್ರತ್ಯಯಾಂತಶಬ್ದಗಳನ್ನು ಲೋಕರೂಢಿಗನುಸಾರಿಯಾಗಿ ಮೂರು ಲಿಂಗ-ದಲ್ಲಿಯೂ ಉಪಯೋಗಿಸಬಹುದೆಂದು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರವು ಹೇಳುತ್ತದೆ.

ಭಾಷ್ಯದಲ್ಲಿ 'ಗುರೂಂಶ್ಚಾಪಿ' ಗುರುಗಳನ್ನು ನಮಸ್ಕರಿಸುತ್ತೇನೆಂದು ಗುರುದೇವತಾ-ಸಮುಚ್ಚಯಕವಾಗಿ 'ಅಪಿ' ಶಬ್ದವು ಇದೆ. ಆದರೆ ಈ ಸಮುಚ್ಚಯವನ್ನು 'ಚ'ಕಾರವೇ ಹೇಳುವು-ದರಿಂದ 'ಅಪಿ' ಪದವು ವ್ಯರ್ಥವೆಂದರೆ 'ಅಪಿ' ಶಬ್ದಕ್ಕೆ ಇಲ್ಲಿ ಸಮುಚ್ಚಯ ಎಂಬರ್ಥವೇ ಅಲ್ಲ.

### *ಜಿಜ್ಞಾಸಾಧಿಕರಣ*

ಹೊರತಾಗಿ 'ತಮಗೆ ಗುರುಗಳು ಹಾಗು ದೇವತೆ ಒಬ್ಬರೇ ಆಗಿದ್ದಾರೆ ಬೇರೆ ಆಗಿಲ್ಲ' ಎಂಬುದು 'ಅಪಿ' ಶಬ್ದದಿಂದ ಗುರುದೇವತೆಗಳ ಭೇದದಲ್ಲಿ ಅರುಚಿಯನ್ನು ತೋರಿಸಿದ್ದಾರೆ.

ನಮಸ್ಕಾರದಿಂದ ವಿಘ್ನ ಪರಿಹಾರವಾಗುತ್ತದೆ. ಅಧಿಕಾರ್ಯಾದಿಗಳ ಸೂಚನೆಯಿಂದ ಶ್ರೋತೃಗಳ ಪ್ರವೃತ್ತಿಯಾಗುತ್ತದೆ. ಹೀಗೆ ಇವುಗಳ ಫಲವು ಅತ್ಯಂತ ಸ್ಪಷ್ಟವಾದ್ದರಿಂದ ಪುನಃ ಫಲದ ವರ್ಣನೆ ವ್ಯರ್ಥವೆಂಬ ಶಂಕೆ ಬಂದರೆ 'ವಿಘ್ನಾಭಾವಸ್ಯ' ಎಂಬ ಮಾತು ಹೊರಟಿದೆ.

ಇಲ್ಲಿಯತನಕ ನಾರಾಯಣ ಶಬ್ದದ ಸಮಾಸವಿಚಾರ ಮಾಡಿದ್ದಾಯಿತು. ಪ್ರಕೃತ ನಾರಾಯಣ ಎಂಬಲ್ಲಿ ಣತ್ವ ಹೇಗೆ ಬಂತು? ಎಂಬುದನ್ನು ವಿಚಾರ ಮಾಡಬೇಕಾಗಿದೆ.

ಪ್ರಶ್ನೆ :- ಭಾಷ್ಯದ ಮಂಗಳಶ್ಲೋಕದಲ್ಲಿ 'ನಾರಾಯಣಮ್' ಎಂದು ಹೇಳಿದ್ದಾರೆ. ಆದರೆ ವ್ಯಾಕರಣಸೂತ್ರಗಳು ಹೇಳುವಂತೆ 'ನಾರಾಯನಮ್' ಎಂದಾಗಬೇಕಲ್ಲವೆ?

ಉತ್ತರ :- 'ರಷಾಭ್ಯಾಂ ನೋಣಃ ಸಮಾನಪದೇ' ಎಂಬ ಸೂತ್ರದಿಂದ ನಕಾರಕ್ಕೆ ಣತ್ವ ಬರುತ್ತದೆ. ರೇಫ ಅಥವಾ ಷ ಕಾರದ ಪರದಲ್ಲಿ ನಕಾರವಿರುವುದರಿಂದ ಣತ್ವ ಬರಲು ಯಾವ ತೊಂದರೆಯೂ ಇಲ್ಲ. ಆದ್ದರಿಂದ ನಾರಾಯಣ ಶಬ್ದಪ್ರಯೋಗವು ಸಾಧುವೇ ಆಗಿದೆ.

ಪ್ರಶ್ನೆ :- ಣತ್ವ ಬರಲು ಪ್ರಸಕ್ತಿಯಿಲ್ಲ. ಅದೇ ಸೂತ್ರ 'ಸಮಾನಪದೇ' 'ಒಂದೇ ಪದವಾಗಿರಬೇಕು' ಎಂದು ನಿಯಮ ಮಾಡುತ್ತಿದೆ. 'ನಾರಾಯಣ' ಎಂಬಲ್ಲಿ ನಾರ ಮತ್ತು ಅಯನ ಎಂಬ ಎರಡು ಪದಗಳಿರುವುದರಿಂದ ಸಮಾನಪದವಾಗಿಲ್ಲ. ಣತ್ವಕ್ಕೆ ನಿಮಿತ್ತವಾದ ನಿಮಿತ್ತನಿಮಿತ್ತಿಗಳಿಗೆ ಸಾಮಾನಾಧಿಕರಣ್ಯವಿಲ್ಲ. ಆದ್ದರಿಂದ 'ರಷಾಭ್ಯಾಂ ನೋಣಃ ಸಮಾನಪದೇ' ಎಂಬ ಸೂತ್ರದಿಂದ ಣತ್ವವನ್ನು ಹೇಗೆ ಹೇಳುತ್ತೀರಿ?

ಉತ್ತರ :- ನಾರಾಯಣಶಬ್ದವು ಸಮಾಸ ಹೊಂದಿದ ಒಂದೇ ಪದ ಹೊರತು ಎರಡು ಪದವಾಗಿಲ್ಲ. ನಾರ ಮತ್ತು ಅಯನ ಎಂಬ ಎರಡು ಪದಗಳು ಸಮಾಸ ಹೊಂದಿದ ಮೇಲೆ ಒಂದೇ ಪದವಾಗುತ್ತದೆ. ಏಕೆಂದರೆ 'ಏಕಪದ್ಯಮೈಕಸ್ವರ್ಯಮೇಕವಿಭಕ್ತಿಕತ್ವಮ್ ಸಮಾಸಪ್ರಯೋಜನಮ್' ಎಂದು ವ್ಯಾಕರಣ ನಿಯಮ. ಈ ನಿಯಮದಿಂದ ಸಮಾಸವು ಭಿನ್ನಪದಗಳನ್ನು ಏಕಪದವನ್ನಾಗಿ ಭಿನ್ನಸ್ವರಗಳನ್ನು ಏಕವಿಭಕ್ತಿಯನ್ನಾಗಿ ಮಾಡುತ್ತದೆಂದು ತಿಳಿಯುತ್ತದೆ. ಆದ್ದರಿಂದ ನಾರಾಯಣಶಬ್ದವು ಸಮಾಸ ಹೊಂದಿ ಒಂದೇ ಪದವಾಗಿದೆ. 'ರಷಾಭ್ಯಾಂ ನೋ ಣಃ ಸಮಾನಪದೇ' ಎಂಬ ಸೂತ್ರದಿಂದ ಣತ್ವ ಬರಲು ಯಾವ ಬಾಧಕವಿಲ್ಲ.

ಪ್ರಶ್ನೆ :- ಅಖಂಡವಾದ ಒಂದೇ ಪದವು ಸಮಾನಪದ ಎನಿಸುತ್ತದೆ. ಅಖಂಡಪದವಲ್ಲದ ಸಮಸ್ತಪದವನ್ನು ವ್ಯಾವೃತ್ತಿಗೊಳಿಸುವುದಕ್ಕಾಗಿಯೇ 'ಸಮಾನ' ಎಂಬ ವಿಶೇಷಣವನ್ನು ಸೂತ್ರದಲ್ಲಿ ನೀಡಲಾಗಿದೆ. ಏಕೆಂದರೆ 'ಪದೇ' ಎಂದಷ್ಟೇ ಹೇಳಿದರೂ ಏಕಪದವೆಂದು ತಿಳಿಯುತ್ತದೆ. ಆದರೂ

ಸಮಾನ ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ ಅಖಂಡಪದವೇ ಆಗಿರಬೇಕು, ಯಾವ ಕಾಲದಲ್ಲಿಯೂ ಭಿನ್ನಪದವಾಗಿರಬಾರದೆಂದು ತಿಳಿಯುತ್ತದೆ.

'ನಾರಾಯಣ' ಪದವು ಸಮಾಸ ಹೊಂದಿದ ಪದವಾದ್ದರಿಂದ ಅಖಂಡಪದವಾಗಿಲ್ಲ. ಸಮಾಸ ಹೊಂದಿದ ಇಂತಹ ಪದಗಳಲ್ಲಿರುವ ನಕಾರಕ್ಕೆ 'ರಷಾಭ್ಯಾಂ ನೋಣಃ ಸಮಾನಪದೇ' ಎಂಬ ಸೂತ್ರವು ಣತ್ವವನ್ನು ಹೇಳುವುದಿಲ್ಲ.

ಒಂದುವೇಳೆ ಸಮಾಸಹೊಂದಿದ ಪದಗಳಲ್ಲಿರುವ ನಕಾರಕ್ಕೂ ಣತ್ವ ಬರುವುದಾದರೆ 'ದುರ್ನಾಮ' 'ರಾಮನಾಮ' ಇತ್ಯಾದಿ ಸ್ಥಳಗಳಲ್ಲಿಯೂ ಣತ್ವವು ಬರಬೇಕಾದೀತು. ಆದರೆ 'ದುರ್ಣಾಮ' 'ರಾಮಣಾಮ' ಇತ್ಯಾದಿ ಪ್ರಯೋಗಗಳು ಎಲ್ಲಿಯೂ ಕಂಡಿಲ್ಲ. ಅದರಂತೆ 'ನಾರಾಯಣ' ಪದದಲ್ಲಿಯೂ ಣತ್ವ ಬರುವುದಿಲ್ಲ.

ಉತ್ತರ :- 'ಪೂರ್ವಪದಾತ್ಸಂಜ್ಞಾಯಾಮಗಃ' ಎಂಬ ಸೂತ್ರದಿಂದ ಣತ್ವ ಬರುತ್ತದೆ. ಈ ಪೂರ್ವಪದದಲ್ಲಿರುವ ನಿಮಿತ್ತದ ದೆಸೆಯಿಂದ ಗಕಾರದ ತಡೆಯಿಲ್ಲದ ನಕಾರಕ್ಕೆ ಣತ್ವ ಬರುತ್ತದೆ. ಸಂಜ್ಞಾವಿಷಯದಲ್ಲಿ ಮಾತ್ರವೆಂದು ಈ ಸೂತ್ರದ ಅರ್ಥ. ಉದಾಹರಣೆ : - 'ಶೂರ್ಪಣಖಾ' ಎಂಬಲ್ಲಿ ನಿಮಿತ್ತವಾದ ರೇಫವು 'ಶೂರ್ಪ' ಎಂಬ ಪೂರ್ವಪದದಲ್ಲಿದೆ; ಆದ್ದರಿಂದ 'ಗ' ಕಾರದ ತಡೆಯಿಲ್ಲದ ಉತ್ತರಪದವಾದ 'ನಖಾ' ಎಂಬಲ್ಲಿನ ನಕಾರಕ್ಕೆ ಣತ್ವ ಬಂದರೆ 'ಶೂರ್ಪಣಖಾ' ಎಂದಾಗುತ್ತದೆ. ಅದರಂತೆ 'ನಾರಾಯಣ' ಎಂಬಲ್ಲಿಯೂ ಯಾವ ವಿಘ್ನವಿಲ್ಲದೆ ಣತ್ವ ಬಂದೇ ಬರುತ್ತದೆ.

ವಸ್ತುತಸ್ತು 'ರಾಮನಾಮ' ಎಂಬಲ್ಲಿ ಭಿನ್ನಪದವಿರುವುದರಿಂದ ಣತ್ವವು ಬರುತ್ತಿಲ್ಲ. ಆದರೆ 'ಶೂರ್ಪಣಖಾ' ಎಂಬಲ್ಲಿ ಭಿನ್ನಪದವಿದ್ದರೂ ಣತ್ವವು ಬರುತ್ತದೆ. ಈ ವ್ಯತ್ಯಾಸಕ್ಕೆ ಕಾರಣವೇನೆಂಬುದನ್ನು ವಿಮರ್ಶಿಸಬೇಕು. 'ಶೂರ್ಪಣಖಾ' ಎಂಬುದು ರೂಢಪದ. ರಾಮನಾಮ ಎಂಬುದು ಯೋಗಪದವಾದ್ದರಿಂದ ಣತ್ವವು ಬರುವುದಿಲ್ಲ ಪ್ರಕೃತ ನಾರಾಯಣಶಬ್ದವು ರೂಢಪದವಾದ್ದರಿಂದ ಣತ್ವವು ಬರುತ್ತದೆಂದು ತಿಳಿಯಬೇಕು. ಈ ಸೂಕ್ಷ್ಮವಿಷಯವನ್ನು 'ಪೂರ್ವಪದಾತ್ಸಂಜ್ಞಾಯಾಮಗಃ' ಎಂಬ ಸೂತ್ರವು ಹೇಳುತ್ತದೆ.

**ಪ್ರಾಸಂಗಿಕ ವಿಚಾರ** - ನಾರಾಯಣ ಶಬ್ದವು ರೂಢಪದವೆಂದು ಒಪ್ಪಿದಲ್ಲಿ ಮಾತ್ರ ಣತ್ವವನ್ನು ಹೇಳಲು ಸಾಧ್ಯ. ಆದ್ದರಿಂದಲೇ ಅಪ್ಪಯ್ಯದೀಕ್ಷಿತರು 'ಣತ್ವಂ ಪರಂ ಬಾಧತೇ' ಎಂದು ಹೇಳುತ್ತಾರೆ. ವಿಷ್ಣುಸಹಸ್ರನಾಮದಲ್ಲಿನ ಎಲ್ಲ ನಾಮಗಳನ್ನು ಶಿವಪರವಾಗಿಯೇ ಅಪ್ಪಯ್ಯದೀಕ್ಷಿತರು ಸಮನ್ವಯಮಾಡುತ್ತಾರೆ. ಆದರೆ ನಾರಾಯಣ ಶಬ್ದದ ಸಮನ್ವಯವನ್ನು ಯೋಗವೃತ್ತಿಯಿಂದ ಮಾಡಲು ಸೋತಿದ್ದಾರೆ. ಸೋತು ಅವರೇ ಹೇಳಿದ ಮಾತು - 'ಣತ್ವಂ ಪರಂ ಬಾಧತೇ' ಎಂದು ಶಿವನಲ್ಲಿ ನಾರಾಯಣಶಬ್ದದ ರೂಢಿಯಂತೂ ಇಲ್ಲ. ಇನ್ನು ಯೋಗವನ್ನು ಹೇಳಬೇಕು. ಆದರೆ ಯೋಗಾರ್ಥವನ್ನು ವಿವಕ್ಷಿಸಿದಾಗ ಣತ್ವವು ಬಾಧಿಸುತ್ತದೆ. ಆದ್ದರಿಂದ ನನ್ನಿಂದ ನಾರಾಯಣ ಶಬ್ದದ ಸಮನ್ವಯವನ್ನು ಮಾಡಲಾಗುತ್ತಿಲ್ಲ ಎನ್ನುತ್ತಾರೆ ದೀಕ್ಷಿತರು.

*ಜಿಜ್ಞಾಸಾಧಿಕರಣ*

## 'ನಾರಾಯಣಃ' ಇದು ಪುಲ್ಲಿಂಗವೇ?

ಪ್ರಶ್ನೆ :- ನಾರಾಯಣಶಬ್ದವು ಪುಲ್ಲಿಂಗವಲ್ಲ. ಕೋಶ ಮತ್ತು ವ್ಯಾಕರಣದ ಪ್ರಕಾ ನಪುಂಸಕಲಿಂಗವಾಗಬೇಕು. ಏಕೆಂದರೆ ಗಮನಾರ್ಥದಲ್ಲಿ 'ಅಯ' ಧಾತುವಿದೆ. ಇದಕ್ಕೆ 'ಕರಣಾ ಕರಣಯೋಶ್ಚ' ಎಂಬ ಸೂತ್ರವು ಅಧಿಕರಣಾರ್ಥದಲ್ಲಿ 'ಲ್ಯುಟ್' ಪ್ರತ್ಯಯವನ್ನು ವಿಧಿಸುತ್ತದೆ. ಈ ಸೂತ್ರದಲ್ಲಿ 'ನಪುಂಸಕೇ ಭಾವೇ ಕ್ತಃ' ಎಂಬ ಸೂತ್ರದಿಂದ 'ನಪುಂಸಕೇ' ಎಂಬುದನ್ನು ಅನುವೃ ಮಾಡಬೇಕು. 'ಲ್ಯುಟ್' ಪ್ರತ್ಯಯವಾದರೂ ನಪುಂಸಕಲಿಂಗದಲ್ಲಷ್ಟೇ ಬರುವುದರಿಂದ ನಾರಾಯಣ ಶಬ್ದವು ನಪುಂಸಕಲಿಂಗವಾಗಬೇಕಲ್ಲವೇ?

ಮತ್ತು ಅಮರಕೋಶದಲ್ಲಿ 'ಯದಾನಂತರ್ಯಮಕರ್ತರಿ' 'ಕರ್ತೃ' ಎಂಬ ಅರ್ಥವನ್ನು ಬಿ ಬೇರೆ ಅರ್ಥದಲ್ಲಿ 'ಅನ' ಪ್ರತ್ಯಯ ಬರುತ್ತದೆ. ತದಂತವಾದ ಶಬ್ದವು ತೃತೀಯಾವಿಭಕ್ತಿಯನ್ನು ಪ್ರ ನಪುಂಸಕಲಿಂಗವನ್ನು ಹೊಂದುತ್ತದೆಂದು ಹೇಳಲಾಗಿದೆ. ಆದ್ದರಿಂದ 'ಸಾಧ್ಯತೇऽನೇನ ಇತಿ ಸಾಧನಮ್' ಇತ್ಯಾದಿ ಸ್ಥಳದಲ್ಲಿ ನಪುಂಸಕಲಿಂಗವೇ ಬಂದದ್ದು ಕಂಡಿದೆ. ಹೇಗೆ ಸಾಧನಶಬ್ದವು ನಿತ್ಯನಪುಂಸಕಶಬ್ದವೋ ಅದರಂತೆ ನಾರಾಯಣಶಬ್ದವೂ ನಿತ್ಯನಪುಂಸಕಲಿಂಗವಾಗಬೇಕು. 'ಅಯನ' ಶಬ್ದಕ್ಕೆ ಅಧಿಕರಣ ಸಾಧನವೆಂಬರ್ಥವು ಪ್ರಸಿದ್ಧವೇ ಆಗಿದೆ. ಹೀಗಿರುವಾಗ 'ನಾರಾಯಣಃ' ಎಂದು ಪುಲ್ಲಿಂಗಪ್ರಯೋಗ ವನ್ನು ಹೇಗೆ ಮಾಡಿದಿರಿ? 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಲ್ಲಿ 'ನಪುಂಸಕೇ' ಎಂಬುದು ಅನುವೃತ್ತಿಯಾಗುವುದಿಲ್ಲ. ಏಕೆಂದರೆ 'ಸನ್ನಿಯೋಗವಿಶಿಷ್ಟಾನಾಂ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿಃ' ಜೊತೆ ಜೊತೆಯಾಗಿರುವ ಪದಗಳು ಮತ್ತೊಂದೆಡೆ ಅನುವೃತ್ತವಾಗುವಾಗ ಜೊತೆಯಾಗಿಯೇ ಅನುವೃತ್ತವಾಗುತ್ತವೆ. ಆ ಎರಡು ಪದಗಳಲ್ಲಿ ಒಂದನ್ನು ಅನುವೃತ್ತವಾಗುವುದು ಬೇಡವಾದರೆ ಜೊತೆಯಾಗಿಯೇ ಅನುವೃತ್ತವಾಗುವುದಿಲ್ಲ. ಪ್ರಕೃತ ಸೂತ್ರದಲ್ಲಿ 'ನಪುಂಸಕೇ ಭಾವೇ' ಎಂಬೆರಡು ಪದಗಳಿವೆ. ಇವೆರಡರಲ್ಲಿ ಯಾವ ಒಂದು ಪದವನ್ನೂ ಅನುವೃತ್ತವಾಗುವುದು ಬೇಡವಾದರೆ ಜೊತೆಯಾಗಿಯೇ ಅನುವೃತ್ತವಾಗುವುದಿಲ್ಲ. ನೀವು 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಲ್ಲಿ 'ಭಾವೇ' ಎಂಬುದನ್ನು ಅನುವೃತ್ತಿ ಮಾಡುವುದಿಲ್ಲವೆಂದರೆ ಅದರ ಜೊತೆಗಿರುವ 'ನಪುಂಸಕೇ' ಎಂಬುದೂ ಸಹ ಅನುವೃತ್ತವಾಗುವುದಿಲ್ಲ.

ಉತ್ತರ :- ಹಾಗಾದರೆ ಸಾಧನಾದಿಶಬ್ದಗಳಲ್ಲಿಯೂ 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಿಂದ ನಿತ್ಯನಪುಂಸಕತ್ವವು ಬಾರದಿರಬೇಕಾದೀತು. ನಿಯತಲಿಂಗವಿಲ್ಲದೇ ಪುಲ್ಲಿಂಗಾದಿಗಳಲ್ಲಿಯೂ ಸಾಧನಾ ದಿಶಬ್ದಗಳ ಪ್ರಯೋಗವನ್ನು ಮಾಡಬೇಕಾದೀತು. ಆದ್ದರಿಂದ ನಿಮ್ಮ ಸಮರ್ಥನೆ ಅಸಾಧುವಾಗಿದೆ.

ಅಷ್ಟೇ ಅಲ್ಲದೇ, 'ಯದಾನಂತರ್ಯಮಕರ್ತರಿ' ಎಂಬ ಕೋಶವಚನವೂ ವಿಶೇ ಪರಿಭಾಷೆಯನ್ನಾದರೂ ಕಡ್ಡಾಯವಾಗಿ ಅನುಸರಿಸಬೇಕಾಗಿಲ್ಲವೆಂದು ವ್ಯಾಕರಣದಲ್ಲೇ ಹೇಳಿದೆ. ಈ ಎಲ್ಲ ಆಧಾರಗಳಿಂದ 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಲ್ಲಿ 'ನಪುಂಸಕೇ' ಎಂಬುದನ್ನು ಅನುವೃತ್ತಿ ಮಾಡಬೇಕೆಂದು ತಿಳಿಯುತ್ತದೆ. ಆದ್ದರಿಂದ ನಾರಾಯಣ ಶಬ್ದವು ಪುಲ್ಲಿಂಗವಾಗಲು ಸಾಧ್ಯವಿಲ್ಲ. ಇಷ್ಟು ಆಕ್ಷೇಪ.

ಪರಿಪೂರ್ಣಚಂದ್ರಿಕಾ

ಸಮಾಧಾನ :- ಈ ಆಕ್ಷೇಪಕ್ಕೆ ಗ್ರಂಥಕಾರರೇ 'ಲ್ಯುಟಷ್ಟಿತ್‌ಕರಣಸಾಮರ್ಥ್ಯಾತ್' ಇತ್ಯಾದಿ ಮಾತುಗಳಿಂದ ಉತ್ತರಿಸುತ್ತಿದ್ದಾರೆ. 'ಲ್ಯುಟ್' ಪ್ರತ್ಯಯದಲ್ಲಿ ಲಕಾರ ಟಕಾರಗಳು ಇತ್ ಆದರೆ 'ಯು' ಎಂದಷ್ಟೇ ಉಳಿಯುತ್ತದೆ. ಪಾಣಿನಿಯು 'ಯು' ಎಂದಷ್ಟೇ ಹೇಳಿದ್ದರೂ ಸಾಕಾಗಿತ್ತು. ಆದರೂ 'ಲ್ಯುಟ್' ಎಂದು ಏಕೆ ಹೇಳಿದ? ಎಂದರೆ 'ಟಿಡ್ಢಾಣಞ್ದ್ವಯಸಚ್‌ದಘ್ನಚ್‌ಮಾತ್ರಚ್‌ತಯಪ್‌ಠಕ್‌ಟಞ್‌-ಕಞ್‌ಕ್ವರಪಃ' ಎಂಬ ಸೂತ್ರವು ಟಿತ್ತಾದ ಪ್ರತ್ಯಯಗಳಿಗೆ 'ಙೀಪ್' ಪ್ರತ್ಯಯವನ್ನು ಹೇಳುತ್ತದೆ. ಒಂದು ವೇಳೆ ಲ್ಯುಡಂತಶಬ್ದಗಳೆಲ್ಲವೂ ನಪುಂಸಕಲಿಂಗವೇ ಆದರೆ ಸ್ತ್ರೀತ್ವಕ್ಕೆ ನಿಮಿತ್ತವಾದ ಙೀಪ್‌ಪ್ರತ್ಯಯವನ್ನು ಈ ಸೂತ್ರದಲ್ಲಿ ವಿಧಿಸಬೇಕಾಗಿರಲಿಲ್ಲ. ಇದರಿಂದ ಲ್ಯುಡಂತವಾದ ಶಬ್ದಗಳು ಮೂರು ಲಿಂಗಗಳಲ್ಲಿಯೂ ಇರುತ್ತವೆಂದು ತಿಳಿಯುತ್ತದೆ. ಆದ್ದರಿಂದ ನಾರಾಯಣಶಬ್ದ ಪುಲ್ಲಿಂಗವಾಗಲು ಏನೂ ತೊಂದರೆ ಇಲ್ಲ.

ಪ್ರಶ್ನೆ :- 'ಟಿಡ್ಢಾಣಞ್' ಇತ್ಯಾದಿ ಸೂತ್ರದಲ್ಲಿ ಟಿತ್ ಪ್ರತ್ಯಯವೆಂದರೆ 'ಲ್ಯುಟ್' ಪ್ರತ್ಯಯವೇ ಏಕೆ? 'ಲಟ್' ಎಂಬುದನ್ನು ಟಿತ್ ಮಾಡಿದ್ದರಿಂದ ಪ್ರತ್ಯಯದ ಅಂತಿಮಸ್ವರಾಕ್ಷರವು ಏಕಾರವಾಗಿ ಪರಿಣಾಮವಾಗುತ್ತದೆಂಬ ಪ್ರಯೋಜನವು ಈಗಾಗಲೇ ಸಿದ್ಧವಾಗಿದೆ. ಆದರೆ 'ಲ್ಯುಟ್' ಎಂಬಲ್ಲಿ ಅಂತಹ ಬೇರೆ ಪ್ರಯೋಜನಗಳು ಕಂಡಿಲ್ಲ. ಆದ್ದರಿಂದ 'ಲ್ಯುಟ್' ಪ್ರತ್ಯಯವನ್ನೇ ಇಟ್ಟುಕೊಳ್ಳಬೇಕು. ಕೊರತು ಲಟ್ ಮೊದಲಾದ ಪ್ರತ್ಯಯಗಳನ್ನು ಇಟ್ಟುಕೊಳ್ಳಬಾರದೆಂದು ಪಾಣಿನಿಯ ಅಭಿಪ್ರಾಯ. ಭಾಷ್ಯಕಾರನಾದ ಪತಂಜಲಿಯೂ ಸಹ ಇದನ್ನು ಸಮ್ಮತಿಸುತ್ತಾನೆ. 'ಭೂವಾದಯೋ ಧಾತವಃ' ಎಂಬ ಸೂತ್ರದ ಭಾಷ್ಯದಲ್ಲಿ 'ಕೋಸಾವನುಮಾನೋ ನಾಮ' ಎಂದು ಹೇಳಿದ್ದಾನೆ. ಅನುಮಾನಶಬ್ದವು ಕರಣಾರ್ಥದಲ್ಲಿರುವ ಲ್ಯುಡಂತಶಬ್ದ. ಆದರೂ 'ಅನುಮಾನಃ' ಎಂದು ಪುಲ್ಲಿಂಗದಲ್ಲಿ ಬಳಸಿದ್ದಾನೆ.

ಇಲ್ಲಿ ಸುಲಭ ಸಮಾಧಾನವನ್ನು ಹೀಗೆ ಹೇಳಬಹುದಿತ್ತು. - ಕಾಶಿಕಾವೃತ್ತಿಯಲ್ಲಿ 'ನಪುಂಸಕೇ' ಎಂಬುದನ್ನು ಅನುವೃತ್ತಿ ಮಾಡಿಕೊಂಡಿಲ್ಲ. ಅಷ್ಟೇ ಅಲ್ಲದೇ, 'ಇಧ್ಮಪ್ರವ್ರಶ್ಚನಃ' (ಸೌದೆ ಕಡಿಯುವ ಸಾಧನ) ಎಂಬ ಪುಲ್ಲಿಂಗ ಶಬ್ದದ ಉದಾಹರಣೆಯನ್ನೂ 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಲ್ಲಿ ನೀಡಿದ್ದಾನೆ. ಈ ಎರಡು ಕಾರಣಗಳನ್ನು ನೀಡಿ ಸುಲಭವಾಗಿ ಉತ್ತರಿಸಬಹುದಿತ್ತು. ಆದರೂ ಅನುವೃತ್ತಿ ಮಾಡಿಕೊಳ್ಳಬಾರದೆಂಬ ವಿಷಯದಲ್ಲಿ ಟಿತ್‌ಕರಣವೂ ಕಾರಣವಾಗಿದೆಯೆಂದು ತಿಳಿಯುತ್ತದೆ. ಸೂತ್ರಕಾರನ ಸಮ್ಮತಿಯನ್ನೂ ಇದರಿಂದ ಸೂಚಿಸಿದಂತಾಗಿದೆ. ಮತ್ತು ಕಾಶಿಕಾಕಾರನ ಸಮ್ಮತಿಯನ್ನು ತಿಳಿಸಿದಂತಾಗಿದೆ.

ಅಥವಾ ಲೋಕರೂಢಿಗೆ ಅನುಸಾರಿಯಾಗಿ ಲ್ಯುಡಂತಶಬ್ದಗಳನ್ನು ಮೂರು ಲಿಂಗಗಳಲ್ಲಿಯೂ ಬಳಸಬಹುದೆಂದು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರವು ಹೇಳಿದೆ. ಈ ಸೂತ್ರವನ್ನು ಆಶ್ರಯಿಸಿದರೆ ಸುಲಭವಾಗಿ ತ್ರಿಲಿಂಗತ್ವವು ಸಿದ್ಧವಾಗುತ್ತದೆ. ಆದ್ದರಿಂದಲೇ 'ಕರಣಮ್' 'ಕರಣೀ' 'ಪ್ರಮಾಣೀ' ಇವೇ ಮೊದಲಾದ ವಿದ್ವತ್ ಪ್ರಯೋಗಗಳನ್ನು ಅನೇಕ ಕಡೆ ನಾವು ಕಾಣುತ್ತೇವೆ.

ಇಲ್ಲಿಗೆ 'ನಾರಾಯಣ' ಶಬ್ದದ ಪುಲ್ಲಿಂಗಪ್ರಯೋಗದ ಸಮರ್ಥನೆ ಮುಗಿಯಿತು. ಮತ್ತು 'ನಾರಾಯಣ' ಎಂದೂ ನಾರಾಯನಮ್ ಎಂದೂ ಆಗುವುದಿಲ್ಲ 'ನಾರಾಯಣಃ' ಎಂದೇ ಆಗುತ್ತದೆಂದು ನಿರ್ಣಯವಾಯಿತು.

ಜಿಜ್ಞಾಸಾಧಿಕರಣ




**ನಾರಾಯಣಶಬ್ದದಲ್ಲಿ ಣತ್ವ**

ರೇಫದ ಮುಂದೆ ಬರುವ ನಕಾರಕ್ಕೆ ಣಕಾರ ಬರುವುದು ಸಾಮಾನ್ಯವಾಗಿ ಅವೆರಡೂ ಒಂದು ಅಖಂಡಪದದಲ್ಲಿ ಬಂದಾಗ ಮಾತ್ರ. ಪ್ರಕೃತದಲ್ಲಿ 'ನಾರ ಅಯನ' ಎಂದು ಎರಡು ಪದ ಸೇರಿ ಬಂದಿದೆ ಅಖಂಡವಲ್ಲ. ಆದರೂ ರೂಢಿಯ ಹೆಸರುಗಳಲ್ಲಿ ಈ ನಿಯಮವಿಲ್ಲ. ಆದರಿಂದ ಣತ್ವ ಬರಬಹುದು. 'ಶೂರ್ಪ ನಖಾ' ಶೂರ್ಪಣಖಾ ಎಂದಾಗುತ್ತದೆ. ಹಾಗೇ ಇದು.

**ನಾರಾಯಣ ಶಬ್ದದ ಪುಲ್ಲಿಂಗ**

'ನಾರ ಅಯನ' ಎಂಬಲ್ಲಿ ಅಯನಶಬ್ದ ಲ್ಯುಟ್‌ಪ್ರತ್ಯಯಾಂತ, ನಪುಂಸಕವಾಗಬೇಕು. ಈ ಸಮಸ್ಯೆ ಪರಿಹಾರ – ಕರಣ, ಅಧಿಕರಣ ಅರ್ಥಗಳಲ್ಲಿ ಲ್ಯುಟ್ ವಿಧಾಯಕವಾದ ಸೂತ್ರದಲ್ಲಿ 'ನಪುಂಸಕೇ' ಎಂಬ ಅನುವೃತ್ತಿ ಇಲ್ಲ ಎಂದು ಒಂದು ಪರಿಹಾರ. 'ಲ್ಯುಟ್' ಎಂಬಲ್ಲಿ ಟಕಾರ ಇತ್ ಏಕೆ? 'ರಾಜಧಾನೀ' ಎಂಬ ಮುಂತಾಗಿ ಸ್ತ್ರೀಲಿಂಗ ಪ್ರತ್ಯಯ ಬರುವುದಕ್ಕಾಗಿ ಎನ್ನಬೇಕು. ಆಗ ನಪುಸಂಕಲಿಂಗ ನಿಯಮವಿಲ್ಲವೆಂದು ಹೇಳಿದಂತಾಯಿತು. ಆದರಿಂದಲೆ ಭಾಷ್ಯಕಾರನೂ 'ಅನುಮಾನ' ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿದ್ದಾರೆ. ಇದು ಇನ್ನೊಂದು ಪರಿಹಾರ. 'ಕೃತ್ಯಲ್ಯುಟೋ ಬಹುಲಂ' ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಲ್ಯುಟ್ ಪ್ರತ್ಯಯಾಂತ ಶಬ್ದಕ್ಕೆ ಲೋಕರೂಢಿಗನುಸಾರ ಯಾವ ಲಿಂಗವನ್ನೂ ಇಟ್ಟುಕೊಳ್ಳಬಹುದೆಂದಿದೆ. ಇದು ಮತ್ತೊಂದು ಪರಿಹಾರ.

● ● ● ● ●

## ಗುರುಗಳಿಗೆ ಮತ್ತು ನಾರಾಯಣನಿಗೆ ನಮಸ್ಕಾರ

**तात्पर्यचन्द्रिका –**

**''पृथङ्नतिरिति' इत्यत्र 'इति'शब्दस्य ''इत्यरुचिं सूचयति'' इति पूर्वेणान्वयः । विघ्नाभावस्य नमस्कारेणैव सिद्धेर्ग्रथनं व्यर्थम् । एवमधिकार्यादिसूचनस्य प्रवृत्त्यङ्गतया कर्तव्यत्वेऽपि न महाफलार्थं तत्कार्यं तत्स्मरणेनैव फलसिद्धेरित्यत आह – नमस्काराधिकार्यादिग्रथनसूचने इति ।।**

ಅನುವಾದ - 'ಟೀಕೆಯಲ್ಲಿ ಪೃಥಙ್‌ನತಿರಿತಿ' ಎಂದು 'ಇತಿ' ಶಬ್ದವಿದೆ. ಇದಕ್ಕೆ ಹಿಂದಿನ ವಾಕ್ಯದಲ್ಲಿರುವ 'ಇತ್ಯರುಚಿಂ ಸೂಚಯತಿ' ಎಂಬಲ್ಲಿ ಅನ್ವಯ.

ಗ್ರಂಥದ ಪ್ರಾರಂಭದಲ್ಲಿ ಮಾನಸಿಕವಾಗಿ ಅಥವಾ ಶಾರೀರಿಕವಾಗಿಯೇ ನಮಸ್ಕಾರ ಮಾಡಿದರೆ ಸಾಕು, ಗ್ರಂಥದಲ್ಲಿ ಉಲ್ಲೇಖಿಸುವ ಅವಶ್ಯಕತೆಯಿಲ್ಲ. ಅಷ್ಟರಿಂದಲೂ ವಿಘ್ನಗಳು ಪರಿಹಾರ

ವಾಗುತ್ತವೆ. ಹಾಗೆಯೇ ಪ್ರವೃತ್ತ್ಯಂಗವಾದ ಅನುಬಂಧಚತುಷ್ಟಯವನ್ನು ಗ್ರಂಥದ ಪ್ರಾರಂಭದಲ್ಲಿ ಸ್ಮರಣೆ ಮಾಡಿದರೆ ಸಾಕು, ಮಹಾಫಲವು ದೊರೆಯುತ್ತದೆ. ಹೀಗಿರುವಾಗ ಅದನ್ನು ಏಕೆ ಉಲ್ಲೇಖಿಸಬೇಕು? ಈ ಪ್ರಶ್ನೆಗೆ ಟೀಕೆಯಲ್ಲಿ 'ನಮಸ್ಕಾರಾಧಿಕಾರ್ಯಾದಿಗ್ರಥನಸೂಚನೇ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – भाष्ये गुरुदेवतासमुच्चायकचशब्दसत्त्वात् **'अपि'** इत्यस्य वैयर्थ्यं निरसितुं टीकायां **''स्वस्य गुरुदेवताभेदे''** इत्याद्युक्तम् । तत्र **'यद्यपि'** इत्यादेरन्वयाभावात् प्रकारार्थकेतिशब्देनान्वयमाह – **पृथगिति** ।। नमस्कारस्य विघ्नोत्सारणार्थं अधिकार्यादिसूचनस्य प्रवृत्त्यर्थं कार्यतया फलस्य स्पष्टत्वात् फलोक्तिरयुक्तेत्यत आह – **विघ्नाभावस्येति** ।। **'तत्कार्यं'** अधिकार्यादिसूचनं कार्यम् । **'तत्स्मरणेनैव'** अधिकार्यादिस्मरणेनैव । स्मरणस्यान्यथाऽपि सम्भवादिति भावः ।

**गुरुराजीय** – **''पृथङ्नतिरिति''** इत्यत्रत्यस्येतिशब्दस्य वैयर्थ्यमन्वयो-पदर्शनेन परिहरति – **पृथगिति** ।। ननु नमस्कारग्रथनं व्यर्थम् । नच विघ्नाभावार्थं तत् । नमस्कारादिमात्रेणैव तत्सिद्ध्या ग्रथनस्यातदर्थत्वात् । एवमधिकारादिसूचनमपि व्यर्थमेव । नच महाफलार्थं तत् । अधिकारादिस्मरणेनैव तत्सिद्ध्या तदर्थमधिकारादिसूचनस्यानावश्यकत्वादिति शङ्कते – **विघ्नाभावस्येति** ।। नन्वधिकारिसूचनविषये कथं वैयर्थ्यशङ्का? अधिकारादिसूचनस्य शिष्यप्रवृत्तिहेतुत्वेनार्थवत्त्वसम्भवादित्यत आह – **अधिकार्यादिसूचनस्येति** ।। नचाधिकारादिसूचनस्य महाफलार्थत्वानुक्तेः कथं तदाक्षेपः? इति वाच्यम् । तथा सति ग्रथनस्य विघ्नाभावार्थताया अपि टीकायामनुक्त्या तदाक्षेपस्याप्यनौचित्यप्रसङ्गात् । नच पूर्वग्रन्थात् तदलाभेऽपि सम्भावितत्वत् तदाशङ्क्य निराकरणमिति वाच्यम् । प्रकृतेऽपि साम्यात् । टीकायां तु महाफलसाधनस्मरणविषयत्वादधिकारादेः प्राधान्यं ततश्चावश्यसूचनीयत्वम्' इत्येवाभिमतम् । नतु सूचनस्य कर्तव्यतायां प्रवृत्त्यङ्गत्ववत् स्मरणस्य महाफलार्थत्वरूपहेत्वंतरपरत्वमपि । वैयधिकरण्यप्रसङ्गात् । वस्तुतस्तु ''तत्स्मरणस्य महाफल-हेतुत्वाच्च'' इति टीकास्वारस्यानुसारेण सूचनस्य स्मरणद्वारा महाफलार्थत्वोक्तेर्न किंचिदेतत् । ततश्च स्मरणसूचनयोः साध्यसाधनभावानवगत्या शङ्क्यम् । परिहारे तयोः साध्यसाधनभावस्य स्पष्टत्वादेव तदनुपपादनमित्यवधेयम् ।

ಜಿಜ್ಞಾಸಾಧಿಕರಣ

ವಿವರಣೆ - ಪ್ರಶ್ನೆ :- ವಸ್ತುತಃ ವೇದವ್ಯಾಸದೇವರು ಗುರುಗಳಿಂದ ಭಿನ್ನರಲ್ಲ. ಆದರೂ ವಿಶೇ ಅನುಗ್ರಹಕ್ಕೋಸ್ಕರ ನಮಿಸಿದ್ದಾರೆಂದು 'ಯದ್ಯಪಿ ಗುರುರ್ನದೇವತಾಭಿನ್ನಃ ತಥಾಪಿ ವಿಶೇಷಾನು- ಗ್ರಹಾರ್ಥಂ ಪೃಥಙ್‌ನತಿರಿತಿ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ವಾಕ್ಯದಲ್ಲಿ 'ಇತಿ' ಶಬ್ದ ಬೇಡ. ಇ ಶಬ್ದ ಹೇಳದಿದ್ದರೂ ವಾಕ್ಯವು ಪರಿಪೂರ್ಣವಾಗುತ್ತದೆ.

ಉತ್ತರ :- ಇಲ್ಲಿರುವ 'ಇತಿ' ಶಬ್ದವನ್ನು ಹಿಂದಿನ ವಾಕ್ಯದಲ್ಲಿ ಅನ್ವಯ ಮಾಡಬೇಕು. ಆಗ 'ಸ್ವಸ್ಯ ಗುರುದೇವತಾಭೇದೇ ಇತ್ಯರುಚಿಂ ಸೂಚಯತಿ ಅಪಿ ಪದೇನ' ಎಂದಾಗುತ್ತದೆ. 'ತಮ್ಮ ಗುರು ಮತ್ತು ದೇವತೆಗಳಿಗೆ ಭೇದವಿಲ್ಲ. ಈ ಪ್ರಕಾರವಾದ ಅರುಚಿಯನ್ನು 'ಅಪಿ' ಪದದಿಂದ ಭಾಷ್ಯಕಾರರು ಸೂಚಿಸುತ್ತಿದ್ದಾರೆ. ಹೀಗೆ ಪ್ರಕಾರಾರ್ಥದಲ್ಲಿರುವುದರಿಂದ ಇತಿ ಶಬ್ದವು ಸಾರ್ಥಕ.

ಆಕ್ಷೇಪ :- ಭಾಷ್ಯಕಾರರು ಮಂಗಳಶ್ಲೋಕದಲ್ಲಿ 'ನತ್ವಾ' ಎಂದು ಮಂಗಳವನ್ನು ಉಲ್ಲೇಖಿಸಿದ್ದಾರೆ ಹೀಗೆ ಉಲ್ಲೇಖ ಮಾಡದೆಯೂ ಕಾಯಿಕವಾದ ಅಥವಾ ಮಾನಸಿಕವಾದ ಮಂಗಳವನ್ನು ಆಚರಿಸಿದರೆ ಸಾಕು. ಆದರ ನಿಬಂಧನೆಯನ್ನು ಗ್ರಂಥದಲ್ಲಿ ಮಾಡಬೇಕಾಗಿಲ್ಲ. ಮತ್ತು ಅಧಿಕಾರಾದಿಗಳ ಸೂಚನೆಯೂ ವ್ಯರ್ಥ.

ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
ಸ್ಮೃತ್ವಾಪ್ರಾರಭತೋ ಗ್ರಂಥಂ ಕರೋತೀಶೋ ಮಹತ್‌ಫಲಮ್ ॥

ಈ ಪ್ರಮಾಣವಚನದಂತೆ ಅಧಿಕಾರ್ಯಾದಿಗಳ ಸ್ಮರಣೆಯು ಅತ್ಯಾವಶ್ಯಕವಾದ್ದರಿಂದ ಅಧಿ ಕಾರ್ಯಾದಿಗಳ ಸೂಚನೆಯು ಸಾರ್ಥಕವೆನ್ನಬೇಕು. ಆದರೆ ಮಹಾಫಲಕ್ಕೋಸ್ಕರ ಸ್ಮರಣೆ ಸಾಕು ಸೂಚನೆ ಬೇಕಾಗಿಲ್ಲ. ಸ್ಮರಣೆಯು ಸೂಚನೆಯಿಂದಲೇ ಬರಬೇಕೆಂದೇನೂ ನಿಯಮವಿಲ್ಲ. ಈ ಆಕ್ಷೇಪವನ್ನು 'ವಿಘ್ನಾಭಾವಸ್ಯ' ಇತ್ಯಾದಿ ವಾಕ್ಯವು ವಿವರಿಸುತ್ತದೆ.

ಗ್ರಂಥದಲ್ಲಿ ಮಾಡಿದ ಮಂಗಳನಿಬಂಧನೆಯು ವ್ಯರ್ಥವೆಂಬ ಆಕ್ಷೇಪವು ಸಾಧುವಾದರೂ ಅಧಿ ಕಾರ್ಯಾದಿಗಳ ಸೂಚನೆಯು ವ್ಯರ್ಥವೆಂಬ ಆಕ್ಷೇಪವು ಸಾಧುವಲ್ಲ. ಏಕೆಂದರೆ ಅಧಿಕಾರ್ಯಾದಿಗಳು ಶಿಷ್ಯಪ್ರವೃತ್ತಿಗೆ ಕಾರಣವೆಂದು ನಿರ್ಣಯವಾಗಿದೆ. ಒಂದು ವೇಳೆ ಗ್ರಂಥಾರಂಭದಲ್ಲಿ ಅಧಿಕಾರ್ಯಾದಿ- ಗಳನ್ನು ಹೇಳದಿದ್ದರೆ ಗ್ರಂಥಾಧ್ಯಯನದಲ್ಲಿ ಯಾರೂ ಪ್ರವೃತ್ತಿ ಮಾಡುವುದಿಲ್ಲವೆಂಬ ಪ್ರಶ್ನೆ ಬರದ ಇಷ್ಟು ಉತ್ತರ :- ಮಹಾಫಲಕ್ಕೋಸ್ಕರ ಅಧಿಕಾರ್ಯಾದಿಗಳ ಸೂಚನೆಯು ಅನಾವಶ್ಯಕ ಎಂದಷ್ಟೇ ಅಭಿಪ್ರಾಯ.

ಪ್ರಶ್ನೆ :- ಮಹಾಫಲಕ್ಕೋಸ್ಕರ ಅಧಿಕಾರ್ಯಾದಿಗಳ ಸೂಚನೆಯೆಂದು ಟೀಕೆಯಲ್ಲಿ ಹೇಳಿಯೇ ಇಲ್ಲವಲ್ಲ?

ಉತ್ತರ :- ಹಾಗಾದರೆ ವಿಘ್ನಾಭಾವಕ್ಕೋಸ್ಕರ ನಮಸ್ಕಾರದ ಗ್ರಥನವೆಂದು ಟೀಕೆಯಲ್ಲಿ ಹೇಳಿಯೇ ಇಲ್ಲ. ಈ ಆಕ್ಷೇಪವನ್ನು ಸರಿಯೆಂದು ನೀವು ಹೇಗೆ ಹೇಳಿದಿರಿ?

*ಪರಿಪೂರ್ಣಚಂದ್ರಿಕಾ*

ಪ್ರಶ್ನೆ:- ಟೀಕೆಯ ಹಿಂದಿನ ವಾಕ್ಯಗಳನ್ನು ನೋಡಿದಾಗ ನಮಸ್ಕಾರವು ವಿಘ್ನಾಭಾವಕ್ಕೋಸ್ಕರವೆಂದು ತಿಳಿಯುವುದಿಲ್ಲ. ಆದರೆ ಈ ವಿಷಯವು ಸಂಭಾವಿತವಾದ್ದರಿಂದ ಆಕ್ಷೇಪ ನಿರಾಕರಣೆಗಳನ್ನು ಸಾಧುವೆನ್ನುತ್ತೇವೆ.

ಉತ್ತರ:- ಹಾಗಾದರೆ ಅಧಿಕಾರ್ಯಾದಿಗಳ ಸೂಚನೆಯೂ ಸಹ ಮಹಾಫಲಕ್ಕೋಸ್ಕರ ಎಂಬುದೂ ಸಂಭಾವಿತವೆನ್ನುತ್ತೇವೆ.

ಟೀಕೆಯ ಅಭಿಪ್ರಾಯ ಹೀಗಿದೆ - ಮಹಾಫಲಕ್ಕೆ ಸಾಧನವಾದದ್ದು ಅಧಿಕಾರ್ಯಾದಿಗಳ ಸ್ಮರಣೆ, ಈ ಸ್ಮರಣೆಗೆ ಅಧಿಕಾರ್ಯಾದಿಗಳು ವಿಷಯವಾಗಿ ಪ್ರಧಾನವಾಗಿವೆ. ಆದ್ದರಿಂದ ಗ್ರಂಥಾರಂಭದಲ್ಲಿ ಇವುಗಳ ಸೂಚನೆಯನ್ನು ಅವಶ್ಯ ಮಾಡಬೇಕು.

'ಸೂಚನಂ ಕರ್ತವ್ಯಂ ಪ್ರವೃತ್ತ್ಯಂಗತ್ವಾತ್' ಎಂಬ ಅನುಮಾನದಂತೆ 'ಸೂಚನಂ ಕರ್ತವ್ಯಂ ಸ್ಮರಣಸ್ಯ ಮಹಾಫಲಾರ್ಥತ್ವಾತ್' ಎಂದು ಹೇಳಬಾರದು. ಏಕೆಂದರೆ ಹೇತುವು ಸ್ಮರಣೆಯಲ್ಲಿದೆ. ಕರ್ತವ್ಯತ್ವವು ಪಕ್ಷದಲ್ಲಿದೆ. ಹೀಗೆ ಹೇತುಸಾಧ್ಯಗಳಿಗೆ ವೈಯ್ಯಧಿಕರಣ್ಯ ಇರುವುದರಿಂದ ಹೇತುವು ಸಾಧ್ಯಸಾಧಕವಾಗದು. ಆದ್ದರಿಂದ ಪರಂಪರಯಾ ಕಾರಣವೆಂದಷ್ಟೇ ಟೀಕೆ ಹೇಳುತ್ತಿದೆ. ಅಧಿಕಾರ್ಯಾದಿಗಳ ಸೂಚನೆಯಿಂದ ಸ್ಮರಣೆ ಬರುತ್ತದೆ. ಸ್ಮರಣೆಯು ಮಹಾಫಲಸಾಧನವಾಗಿದೆ ಎಂದು.

ವಸ್ತುತಸ್ತು 'ಸ್ಮರಣಸ್ಯ ಮಹಾಫಲಹೇತುತ್ವಾಚ್ಚ' ಎಂಬ ಟೀಕಾಮಾತಿನಂತೆ ಸ್ಮರಣದ್ವಾರಾ ಸೂಚನೆಯು ಮಹಾಫಲಹೇತುವೆಂದು ಸ್ಪಷ್ಟವಾಗಿದೆ. ಹೀಗಿರುವಾಗ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಆದರೂ ಸ್ಮರಣೆ ಮತ್ತು ಸೂಚನೆಗಳಿಗೆ ಸಾಧ್ಯಸಾಧನಭಾವವನ್ನು ನಿರ್ಲಕ್ಷಿಸಿ ಆಕ್ಷೇಪಿಸಲಾಗಿದೆ. ಪರಿಹಾರದಲ್ಲಿ ಸಾಧ್ಯಸಾಧನಭಾವವು ಸ್ಪಷ್ಟವಾದ್ದರಿಂದ ಆಕ್ಷೇಪಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

## ಸಾರ

ಸರ್ವಜ್ಞರಾದ ಶ್ರೀವೇದವ್ಯಾಸದೇವರು ಗುರುಕುಲ ವಾಸವನ್ನು ಮಾಡದೆ ಅವತರಿಸಿದ ಕೂಡಲೆ ಗ್ರಂಥವನ್ನು ರಚಿಸಿದ್ದಾರೆ. ಸೃಷ್ಟಿಯ ಪ್ರಾರಂಭದಲ್ಲಿ ಮೂಲವೇದಗಳಿದ್ದವು. ಅವುಗಳಿಂದ ಉಪವೇದಗಳನ್ನು ಸಂಗ್ರಹಿಸಿ ನಾರಾಯಣನು ಉಪದೇಶಿಸಿದನು. ಆ ಉಪವೇದಗಳಿಂದ ವೇದವ್ಯಾಸದೇವರು ಅವಾಂತರ ವೇದಗಳನ್ನು ಸಂಗ್ರಹಿಸಿದರು.

**ಗುರುದೇವತಾ ನಮಸ್ಕಾರ**

ಶಿಷ್ಯರು ಮುಂದೆ ಗ್ರಂಥ ರಚನೆ ಮಾಡುವಾಗ ಗುರುದೇವತಾ ನಮಸ್ಕಾರ ಮಾಡಬೇಕು. ಗ್ರಂಥದ ವಿಷಯ ಪ್ರಯೋಜನಾದಿಗಳನ್ನು ಸ್ಮರಿಸಿ ಮೋಕ್ಷಾದಿ ಮಹಾಫಲಭಾಗಿಗಳಾಗಬೇಕು ಎಂಬ ಉದ್ದೇಶದಿಂದ ಶ್ರೀಮದಾಚಾರ್ಯರು ನಮಸ್ಕಾರವನ್ನೂ ವಿಷಯಪ್ರಯೋಜನಾದಿಗಳನ್ನೂ ಹೇಳಿದ್ದಾರೆ.

---

*ಜಿಜ್ಞಾಸಾಧಿಕರಣ*

ಟೀಕೆಯಲ್ಲಿ ಕೆಲವು ಗಂಭೀರ ಪದಗಳು

**तात्पर्यचन्द्रिका –**

**अनन्यार्थतयेति ।। प्रातीतिकार्थांतरपरं न भवतीत्यनेन प्रकारेणेत्यर्थः ।। प्रायस्तदेवोपादेयमिति ।। अप्रमाणत्वादिना निश्चितस्यापि ख्यात्यादेर्व्याख्यानदर्शनात् 'प्रायः' इत्युक्तम् ।**

**''अथेशानिष्ट'' इति भाष्ये 'अथ' इत्यस्य अवतारानन्तरमेव नतु परोपदेशमपेक्ष्य येन स्वतः सार्वज्ञं न स्यादित्यर्थः । ''वेदमुत्सन्नमित्यादेः' इत्यस्य 'इत्यर्थः' इति वक्ष्यमाणेनान्वयः – अवांतरवेदादिविभागकथनमिति ।। स्वत एव ऋङ्निगादादिरूपादेकैकस्मात् महावेदादुद्धृतस्यावान्तरस्य ऋगादिवेदस्य चतुर्विंशत्यादिशाखाभेदेन । 'आदि'पदेन शाखानां चोपशाखाभेदेन विभाग कथनमित्यर्थः । यद्वा, महावेदस्य अवान्तरवेदत्वेन आदिपदेन चतुर्विंशत्यादित्वेन च विभागकथनमित्यर्थः ।।**

ಅನುವಾದ - ಟೀಕೆಯಲ್ಲಿ 'ಅನನ್ಯಾರ್ಥತಯಾ' ಶಬ್ದಕ್ಕೆ 'ಮೇಲುನೋಟಕ್ಕೆ ತೋರುವ ಅಪಾರ್ಥದ ಗ್ರಹಿಕೆಯಾಗದಂತೆ' ಎಂಬುದಾಗಿ ಅರ್ಥೈಸಬೇಕು. 'ಪ್ರಾಯಸ್ತದೇವೋಪಾದೇಯಮ್' ಎಂಬಲ್ಲಿ 'ಪ್ರಾಯಃ' ಪದವನ್ನು ಕೊಟ್ಟಿದ್ದರಿಂದ, ಅಪ್ರಮಾಣವೆಂದು ನಿಶ್ಚಿತವಾಗಿದ್ದರೂ ಖ್ಯಾತಿ ಮೊದಲಾದವುಗಳಿಗಾಗಿ ಹೇಯಗ್ರಂಥಗಳನ್ನು ವ್ಯಾಖ್ಯಾನ ಮಾಡುವಂತಹದ್ದನ್ನು ವ್ಯಕ್ತ ಮಾಡಿದಂತಾಯಿತು. 'ಅಥೇಶಾನಿಷ್ಟ' ಎಂಬ ಭಾಷ್ಯದಲ್ಲಿ 'ಅಥ' ಶಬ್ದಕ್ಕೆ 'ಅವತಾರಮಾಡಿದ ಕೂಡಲೇ' ಎಂದರ್ಥ. ಆದ್ದರಿಂದ ಪರೋಪದೇಶವನ್ನು ಅಪೇಕ್ಷಿಸದೆ ವೇದವಿಭಾಗ ಮಾಡಿದಂತೆ ತಿಳಿಯುತ್ತದೆ. ಆದ್ದರಿಂದ ಸರ್ವಜ್ಞತ್ವಕ್ಕೆ ಭಂಗವಿಲ್ಲ. 'ವೇದಮುತ್ಸನ್ನಂ ವ್ಯಜಯಂಶ್ಚತುರ್ಧಾ ವ್ಯಭಜತ್' ಎಂಬುದಕ್ಕೆ 'ಇತ್ಯರ್ಥಃ' ಎಂಬ ಮುಂದಿನ ಪದದ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು.

ಟೀಕೆಯಲ್ಲಿ ಹೇಳಿದ ಅವಾಂತರ ವೇದವಿಭಾಗವನ್ನು ಎರಡು ರೀತಿಯಲ್ಲಿ ತಿಳಿಯಬೇಕು. ಮಹಾವೇದವು ಪೂರ್ವದಲ್ಲಿ ಋಕ್, ಯಜುಸ್, ಸಾಮ ಅಥರ್ವ ಎಂದು ನಾಲ್ಕು ಬಗೆಯಲ್ಲಿ ಇತ್ತು. ಆ ನಾಲ್ಕು ಮಹಾವೇದದಿಂದ ನಾಲ್ಕು ಉಪವೇದಗಳನ್ನು ಹಿಂದೆ ನಾರಾಯಣನೇ ಸಂಗ್ರಹಿಸಿ ಉಪದೇಶ ಮಾಡಿದ್ದನು. ವ್ಯಾಸಾವತಾರದಲ್ಲಿ ಪುನಃ ಆ ಉಪವೇದಗಳನ್ನು ಉಪದೇಶ ಮಾಡಿದ್ದಲ್ಲದೆ ಆ ಉಪವೇದಗಳಿಂದ ನಾಲ್ಕು ಅವಾಂತರ ವೇದಗಳನ್ನು ಸಂಗ್ರಹಿಸಿ ಆ ಅವಾಂತರ

ವೇದಗಳನ್ನು ಇಪ್ಪತ್ತಾಲ್ಕು ಶಾಖೆಗಳನ್ನಾಗಿ ವಿಭಾಗ ಮಾಡಿದನು. 'ಅಪಿ'ಪದದಿಂದಾಗಿ ಆ ಶಾಖೆಗಳನ್ನು ಉಪಶಾಖೆಗಳನ್ನಾಗಿಯೂ ವಿಭಾಗ ಮಾಡಿದನೆಂದು ತಿಳಿಯಬೇಕು. (ಶಾಖೆಗಳನ್ನು ಉಪಶಾಖೆಯನ್ನಾಗಿ ವಿಭಾಗ ಮಾಡಿದನೆನ್ನಲು ಎಲ್ಲಿಯೂ ಆಧಾರವಿಲ್ಲವೆಂದರೆ ಯದ್ವಾ ಎಂದು ಇನ್ನೊಂದು ಪಕ್ಷ) ಅಥವಾ ಮಹಾವೇದದಿಂದ ಅವಾಂತರವೇದವನ್ನು ಸಂಗ್ರಹಿಸಿ ಆ ಅವಾಂತರವೇದವನ್ನು ಶಾಖೆಗಳನ್ನಾಗಿ ವಿಭಾಗ ಮಾಡಿದನೆಂದು 'ಅಪಿ' ಪದದಿಂದ, ತಿಳಿಯಬೇಕು.

**ಕಠಿಣಪದಾರ್ಥ**

**ಪ್ರಾತೀತಿಕಾರ್ಥಾಂತರಪರಮ್** = ಮೇಲುನೋಟಕ್ಕೆ ತೋರುವ ಅಪಾರ್ಥದ

**ಜ್ಞಾನ. ಖ್ಯಾತ್ಯಾದ್ಯರ್ಥಮ್** = ಕೀರ್ತಿ ಹಣ ಮೊದಲಾದ ಅನಗೋಸ್ಕರ. **ಋಜ್ ನಿಗಾದಾದಿರೂಪಾತ್** = ಋಕ್, ಯಜುಸ್, ಸಾಮ, ಅಥರ್ವ ಎಂಬ ರೂಪದಲ್ಲಿದ್ದ.

**प्रकाशः** – "अनन्यार्थतया व्याख्येयम्" इत्यत्र स्वप्रयोजनार्थतया व्याख्येयमिति भाति । तदयुक्तं व्याख्यानस्यान्यार्थत्वादित्यतोऽर्थमाह – **प्रातीतिकेति** ।। "अनेन प्रकारेण" इति तृतीयार्थः । प्रायः पदव्यावर्त्यस्य दुर्गमत्वादाह – **अप्रमाणत्वादिनेति** ।। "अथेष्ट" इति भाष्ये अथशब्दस्य मङ्गलप्रश्नाद्यर्थकत्वायोगादानन्तर्यार्थत्वे चातिशयाभावेन वैयर्थ्यमित्यत आह – **अथेत्यस्येति** ।। अत एव प्रमेयदीपिकायां "व्यासोऽवततार । ततश्चेष्टानिष्टप्राप्तिपरिहार" इति भाष्यगतस्य 'ततश्च' इत्यस्यावतारानन्तरमेवेत्यर्थ उक्त इति भावः । एतेन "अथ अनन्तरमेव" इति तत्वप्रदीपवाक्यं विवृतं भवति । "वेदमुत्सन्नं" इत्यादेरन्वयाभावादाह – **वेदमुत्सन्नमित्यादेरित्यस्येति** ।। "अवान्तरवेदादि" इत्यस्य दुर्गमत्वाद् द्वेधाऽर्थमाह – **स्वत एवेति** ।।

**गुरुराजीय** – "**अनन्यार्थतया व्याख्येय**"मिति टीकायां स्वप्रयोजनतया व्याख्येयं नतु परप्रयोजनतयेति भाति । तदयुक्तम् । व्याख्यानस्य परप्रयोजनतया परप्रयोजनत्वनिषेधानुपपत्तेरित्यतोऽर्थमाह – **प्रातीतिकार्थांतरपरं न भवतीति** । अत्युपादेयत्वाभावादनन्यार्थतया न व्याख्येयानीति साधने अप्रयोजकत्वमाशङ्क्य व्यापकाभावेन व्याप्याभावसाधनत्वान्न तदित्यभिप्रेत्य अनन्यार्थतया व्याख्येयत्वात्युपादेयत्वयोर्व्याप्यव्यापकभावोप दर्शनपरे 'यदुपादेयम्'इतिग्रन्थे अत्युपादेयत्वाभावेन निश्चितेऽपि ख्यात्याद्यर्थं व्याख्यायमाने व्यभिचारपरिहारायानन्यार्थ-

तयेति व्याप्यकोटौ विशेषणम् । अत एव व्यापकाभावेन व्याप्याभावानुमानेऽपि तदर्थवदित्याशयवानन्यार्थतयेत्येतत्परिहारोपयुक्ततया व्याचष्टे – प्रातीतिकार्थान्तरपरं न भवतीत्यनेन प्रकारेणेति ।। अनेन ''अनन्यार्थतया'' इति प्रकारे तृतीयेत्युक्तं भवति ।

''यच्च प्रमाणत्वे सतीष्टसाधनतावबोधकं प्रायस्तदेवोपादेयम्'' इति टीकायां प्राय उपादेयत्वस्य प्रमाणत्वे सतीष्टसाधनतावबोधकत्वव्याप्यतालाभात् प्रमाणत्वं सतीष्टसाधनतावबोधकत्वाभावान्न प्राय उपादेयम् इति फलिते, अनुमाने प्रायः-पदव्यावर्त्यस्य दुर्गमत्वात् तद्वैयर्थ्यमाशङ्क्य परिहरति – अप्रमाणत्वादिनेति ।। यदुपादेयं तत्प्रमाणत्वे सतीष्टसाधनावबोधकमित्येवोक्तौ ख्यात्यर्थं व्याख्यायमाने अप्रमाणत्वादिना निश्चिते उपादेयत्वसत्त्वेऽपि प्रमाणत्वे सतीष्टसाधनताव-बोधकत्वाभावाद् व्यभिचारः स्यात् । तद्वारणाय प्रायः इत्युक्तम् । तदर्थश्च अतीति । ततश्च अत्युपादेयत्वस्यैव व्याप्यत्वेन ख्यात्याद्यर्थं व्याख्यायमाने यादृश-तादृशोपादेयत्वसत्त्वेऽप्यत्युपादेयत्वस्यैव व्याप्यत्वेन ख्यात्याद्यर्थं व्याख्यायमाने यादृशतादृशोपादेयत्वसत्त्वेऽप्यत्युपादेयत्वाभावान्न तत्र व्यभिचारः । अत एव तत्र व्यतिरेकानुमानेऽप्युक्तव्यभिचारपरिहारात् प्राय इत्युक्तम् । तस्य 'अत्यर्थत्वं च ब्रह्म सूत्राणामत्युपादेयत्वात्' इत्युत्तरटीकानुसारेण ज्ञातुं शक्यमिति प्राय इत्यस्योक्त-व्यभिचारपरिहारकत्वानुपपादनं न दोषायेति ज्ञातव्यम् ।

नतु परोपदेशमपेक्ष्येति ।। तथाच ''वेदमधीत्य स्नायात्'' इत्यत्रेव नानन्तर्य-मात्रमत्र विवक्षितम् । तस्य स्वतःसिद्धत्वात् । किन्तु ''सिद्धे सत्यारम्भो नियमार्थः'' इति न्यायादव्यवहितानन्तर्यमेव विवक्षितमिति न तदर्थकभाष्यस्याथ-शब्दवैयर्थ्यमिति भावः । व्यवहितत्वादन्वयं दर्शयति । 'वेदमुत्सन्नम् इत्यादेरित्यस्य 'इत्यर्थः' इति वक्ष्यमाणेनान्वय इति ।। 'अवान्तरवेदादि' इत्येतद् दुर्गमार्थत्वाद व्याचष्टे – स्वत एवेति ।। व्यासावतारमनपेक्ष्य नारायणरूपेण परमात्मना विभक्तादुपवेदाख्यादित्यर्थः । भाष्ये शाखानामुपशाखाभेदस्याकथितत्वात् टीकायां तत्परादिशब्दो न युक्त इत्यरुच्या प्रकारान्तरेण तद् व्याचष्टे – यद्वेति ।।

ವಿವರಣೆ - ಪ್ರಶ್ನೆ :- 'ನನು ಯದುಪಾದೇಯಂ ತದೇವ ಅನನ್ಯಾರ್ಥತಯಾ ವ್ಯಾಖ್ಯೇಯಮ್' 'ಯಾವುದು ಸ್ವೀಕಾರಾರ್ಹವಾದ ಗ್ರಂಥವೋ ಅದೇ ವ್ಯಾಖ್ಯಾನಕ್ಕೆ ಅರ್ಹವಾಗುತ್ತದೆ' ...

ಪರಿಪೂರ್ಣಚಂದ್ರಿಕಾ

ಟೀಕೆಯಲ್ಲಿ ಹೇಳಿದೆ. ಇಲ್ಲಿರುವ 'ಅನನ್ಯಾರ್ಥತಯಾ' ಎಂಬ ಶಬ್ದವನ್ನು ನೋಡಿದಾಗ ಬೇರೆಯವರ ಪ್ರಯೋಜನಕ್ಕಾಗಿ ಅಲ್ಲದೇ ತಮ್ಮ ಪ್ರಯೋಜನಕ್ಕೋಸ್ಕರ ವ್ಯಾಖ್ಯಾನ ಮಾಡಬೇಕು' ಎಂಬರ್ಥವು ತೋರುತ್ತದೆ. ಆದರೆ 'ಪರಪ್ರತ್ಯಯನಾಂಗಂ ಹಿ ವಾಕ್ಯಮ್' ಎಂಬಂತೆ ಪರರ ಪ್ರಯೋಜನಕ್ಕೋಸ್ಕರವೇ ವ್ಯಾಖ್ಯಾನ ಮಾಡುತ್ತಾರೆ. ಏಕೆಂದರೆ ಅನುಮಾನದಲ್ಲಿ ಸ್ವಾರ್ಥ, ಪರಾರ್ಥವೆಂಬ ಭೇದವಿದ್ದಂತೆ ವಾಕ್ಯದಲ್ಲಿ ಭೇದವಿಲ್ಲ. ಸ್ವಾರ್ಥಕ್ಕೋಸ್ಕರ ವಾಕ್ಯಪ್ರಯೋಗ ಎಲ್ಲಿಯೂ ಕಂಡಿಲ್ಲ. ಆದ್ದರಿಂದ 'ಅನನ್ಯಾರ್ಥತಯಾ' ಎಂಬ ಮಾತಿಗೆ ಏನರ್ಥ?

ಉತ್ತರ :- 'ಅನ್ಯಾರ್ಥ' ಶಬ್ದಕ್ಕೆ 'ಬೇರೆಯವರಿಗೋಸ್ಕರ' ಎಂಬರ್ಥ ಹೇಳಿದ್ದೇ ತಪ್ಪು. 'ಅಪಾರ್ಥ' ಎಂಬರ್ಥವನ್ನು ಹೇಳಬೇಕು. ಆದ್ದರಿಂದ 'ಅನನ್ಯಾರ್ಥತಯಾ' ಎಂಬ ಶಬ್ದಕ್ಕೆ 'ಅಪಾರ್ಥಗಳ ಗ್ರಹಿಕೆಯಾಗದಂತೆ' ಎಂದರ್ಥ. 'ಈ ಪ್ರಕಾರದಿಂದ' ಎಂದು ಪ್ರಕಾರಾರ್ಥದಲ್ಲಿ ತೃತೀಯಾವಿಭಕ್ತಿ ಇದೆ. ಈ ಅಭಿಪ್ರಾಯದಿಂದ ಗ್ರಂಥಕಾರರು 'ಪ್ರಾತೀತಿಕಾರ್ಥಾಂತರಪರಂ ನ ಭವತಿ ಇತ್ಯನೇನ ಪ್ರಕಾರೇಣ' ಎಂದು ಹೇಳಿದ್ದಾರೆ.

ಟೀಕೆಯಲ್ಲಿರುವ 'ಪ್ರಾಯಃ' ಶಬ್ದದ ಸ್ವಾರಸ್ಯ ಹೀಗಿದೆ - ಯಾವ ಗ್ರಂಥವು ಪ್ರಮಾಣವಾಗಿದ್ದು ಇಷ್ಟವಾದ ವಿಷಯಗಳನ್ನು ವರ್ಣಿಸುತ್ತದೋ, ಆ ಗ್ರಂಥವೇ ವ್ಯಾಖ್ಯಾನ ಮಾಡಲು ಅರ್ಹವಾಗಿರುತ್ತದೆ. ಬ್ರಹ್ಮಸೂತ್ರಗ್ರಂಥವು ಸ್ವತಃ ಪ್ರಮಾಣವಾಗಿದ್ದು ಮೋಕ್ಷಾದಿ ಪುರುಷಾರ್ಥದಾಯಕವಾದ್ದರಿಂದ ಅತ್ಯುಪಾದೇಯವಾಗಿದೆ. ಆದ್ದರಿಂದಲೇ ವ್ಯಾಖ್ಯಾನ ಮಾಡಲು ಅರ್ಹವಾಗಿದೆ.

ಕೆಲವು ಗ್ರಂಥಗಳು ಅಪ್ರಮಾಣಗಳೆಂದು ನಿಶ್ಚಯವಾಗಿರುತ್ತವೆ. ಆದರೂ ಕೀರ್ತಿ ಹಣ ಮೊದಲಾದ ಆಸೆಗಳಿಂದ ಆ ಗ್ರಂಥಗಳನ್ನೂ ವ್ಯಾಖ್ಯಾನ ಮಾಡುವುದು ಕಂಡಿದೆ. ಅಂತಹ ಅಪ್ರಾಮಾಣಿಕಗ್ರಂಥಗಳಲ್ಲಿಯೂ ವ್ಯಾಖ್ಯೇಯತ್ವ ಬರುತ್ತದೆಂಬ ಆಕ್ಷೇಪಕ್ಕೆ ಟೀಕೆಯಲ್ಲಿ 'ಪ್ರಾಯಃ' ಎಂಬ ಪದವನ್ನು ಹೇಳಿದ್ದಾರೆ. 'ಪ್ರಾಯಃ' ಎಂದರೆ 'ಅತ್ಯುಪಾದೇಯ' ಎಂದರ್ಥ. ಅಪ್ರಾಮಾಣಿಕಗ್ರಂಥಗಳು ಮೋಕ್ಷಾದಿಪುರುಷಾರ್ಥಗಳನ್ನು ನೀಡುವುದಿಲ್ಲ. ಆದ್ದರಿಂದ ಯಾದೃಶತಾದೃಶಉಪಾದೇಯತ್ವವು ಅವುಗಳಲ್ಲಿ ಬಂದರೂ ಅತ್ಯುಪಾದೇಯತ್ವವು ಬರುವುದಿಲ್ಲ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರವು ಮೋಕ್ಷಾದಿಮಹಾಫಲದಾಯಕವಾದ್ದರಿಂದ ಅತ್ಯುಪಾದೇಯವಾಗಿದೆ.

'ನತ್ವಾ ಸೂತ್ರಾರ್ಥ ಉಚ್ಯತೇ' ಎಂಬ ಮಾತಿನಿಂದ ಬ್ರಹ್ಮಸೂತ್ರಗಳು ವ್ಯಾಖ್ಯೇಯಗಳೆಂದು ತಿಳಿಯುತ್ತದೆ. ಆದರೆ ಉಪಾದೇಯವಾದ ಗ್ರಂಥವಷ್ಟೇ ವ್ಯಾಖ್ಯೇಯವಾಗುತ್ತದೆ. ಉಪಾದೇಯವಾಗಬೇಕಾದರೆ ಪ್ರಮಾಣವಾಗಿರಬೇಕು. ಈ ವಿಷಯದಲ್ಲಿ ಎರಡು ವ್ಯಾಪ್ತಿಗಳನ್ನು ಹೇಳಬಹುದು - 'ಯತ್ ಪ್ರಮಾಣಂ ತತ್ ಉಪಾದೇಯಮ್' 'ಯತ್ ಉಪಾದೇಯಂ ತತ್ ವ್ಯಾಖ್ಯೇಯಮ್' ಎಂದು ಬ್ರಹ್ಮಸೂತ್ರಗಳು ವ್ಯಾಖ್ಯೇಯವಾಗಬೇಕಾದರೆ ಉಪಾದೇಯವಾಗಿರಬೇಕು. ಉಪಾದೇಯವಾಗಬೇಕಾದರೆ ಪ್ರಮಾಣವಾಗಿರಬೇಕು. ಇದನ್ನು 'ನನು ಉಪಾದೇಯಮ್' ಇತ್ಯಾದಿ ಟೀಕಾಮಾತುಗಳು ವಿವರಿಸುತ್ತಿವೆ.

ಈ ಟೀಕಾಮಾತುಗಳ ಮಧ್ಯದಲ್ಲಿರುವ 'ಅನನ್ಯಾರ್ಥತಯಾ' ಎಂಬ ಪದದ ಅರ್ಥ... ಗ್ರಂಥಕಾರರು ಇಲ್ಲಿ ಬರೆಯುತ್ತಿದ್ದಾರೆ - 'ಬ್ರಹ್ಮಸೂತ್ರಾಣಿ ನ ವ್ಯಾಖ್ಯೇಯಾನಿ ಉಪಾದೇಯತ್ವಾ... ಭಾವಾತ್' ಈ ಅನುಮಾನದಿಂದ ಬ್ರಹ್ಮಸೂತ್ರಗಳು ವ್ಯಾಖ್ಯೇಯವಲ್ಲವೆಂಬ ಆಕ್ಷೇಪ ಬರುತ್ತದೆ ಹೇತುವಿದ್ದರೂ ವ್ಯಾಖ್ಯೇಯತ್ವಾಭಾವವೆಂಬ ಸಾಧ್ಯವು ಬೇಡವೆಂಬ ಅಪ್ರಯೋಜಕಶಂಕೆಯನ್ನು ಹೇಳಬಹುದು. ಆದರೆ "ಎಲ್ಲಿ ವ್ಯಾಪ್ಯವ್ಯಾಪಕಭಾವದ ನಿಶ್ಚಯವಿರುತ್ತದೋ ಅಲ್ಲಿ ವ್ಯಾಪಕಾಭಾವದಿಂದ ವ್ಯಾಪ್ಯಾಭಾವವನ್ನು ಸಾಧಿಸಬಹುದು. ಮತ್ತು ಅಪ್ರಯೋಜಕ ಶಂಕೆಯನ್ನು ಮಾಡಬಾರದು" ಈ ನಿಯಮವನ್ನು ಎಲ್ಲರೂ ಒಪ್ಪಿದ್ದಾರೆ. ಇಂತಹ ವ್ಯಾಪ್ಯವ್ಯಾಪಕಭಾವವನ್ನು ನಿರ್ಣಯಿಸಿ ಪೂರ್ವಪಕ್ಷಾನು ಮಾನವನ್ನು ದೃಢಗೊಳಿಸಲು ಟೀಕೆಯಲ್ಲಿ 'ನನು ಯದುಪಾದೇಯಮ್' ಇತ್ಯಾದಿ ಮಾತುಗಳು ಹೊರಟಿವೆ. ಪ್ರಕೃತ ಉಪಾದೇಯತ್ವವು ವ್ಯಾಪಕ. ವ್ಯಾಖ್ಯೇಯತ್ವವು ವ್ಯಾಪ್ಯ. ಆದ್ದರಿಂದ 'ಯತ್ರ ಯತ್ರ ವ್ಯಾಖ್ಯೇಯತ್ವಮ್ ತತ್ರ ತತ್ರ ಉಪಾದೇಯತ್ವಮ್' ಎಂಬ ವ್ಯಾಪ್ತಿಯನ್ನು ಹೇಳಿದಂತಾಯಿತು. ವಸ್ತುತಸ್ತು 'ವ್ಯಾಪ್ಯಸ್ಯ ವಚನಂ ಪೂರ್ವಂ ವ್ಯಾಪಕಸ್ಯ ತತಃ ಪರಮ್' ಎಂಬ ನಿಯಮದಂತೆ ವ್ಯಾಪ್ಯದ ಮಾತು ಮೊದಲಿರಬೇಕು. ಆದರೆ ಏವಕಾರವಿದ್ದ ವಾಕ್ಯದಲ್ಲಿ ಇದು ವ್ಯತ್ಯಾಸವಾಗುತ್ತದೆ. 'ಯಃ ಅಗ್ನಿಮಾನ್ ಸ ಏವ ಧೂಮವಾನ್' ಎಂಬಲ್ಲಿ ಏವಕಾರವು ಧೂಮಶಬ್ದದ ಜೊತೆಗಿದೆ. ಆದ್ದರಿಂದ ಇಲ್ಲಿ ಧೂಮವೇ ವ್ಯಾಪ್ಯವಾಗುತ್ತದೆ. ಅದರಂತೆ 'ಯದುಪಾದೇಯಮ್ ತದೇವ ಅನನ್ಯಾರ್ಥತಯಾ ವ್ಯಾಖ್ಯೇಯಮ್' ಎಂಬಲ್ಲಿಯೂ ಅನನ್ಯಾರ್ಥತ್ವವನ್ನು ವ್ಯಾಪ್ಯವನ್ನಾಗಿ ಉಪಾದೇಯತ್ವವನ್ನು ವ್ಯಾಪಕವನ್ನಾಗಿ ತಿಳಿಯಬೇಕು. ಆದ್ದರಿಂದ ಉಪಾದೇಯತ್ವಾಭಾವದಿಂದ ವ್ಯಾಖ್ಯೇಯತ್ವಾಭಾವವನ್ನು ಸುಲಭವಾಗಿ ಸಾಧಿಸಬಹುದು. ಅಪ್ರಯೋಜಕಶಂಕೆಗೆ ಆಸ್ಪದವಿಲ್ಲ. ಇಲ್ಲಿ ಅನ್ವಯವ್ಯಾಪ್ತಿ ಹೀಗಿದೆ - 'ಯತ್ ವ್ಯಾಖ್ಯೇಯಂ ತದೇವ ಉಪಾದೇಯಮ್' ಹೀಗೆ ಹೇಳಿದರೆ ಉಪಾದೇಯವಲ್ಲದ ಗ್ರಂಥಗಳೂ ವ್ಯಾಖ್ಯೇಯವಾದದ್ದು ಕಂಡಿದ್ದರಿಂದ ವ್ಯಭಿಚಾರ ಬರುತ್ತದೆ. ಇದರ ಪರಿಹಾರಕ್ಕಾಗಿ ವ್ಯಾಪ್ಯಕೋಟಿಯಲ್ಲಿ 'ಅನನ್ಯಾರ್ಥತ್ವ' ಎಂಬ ವಿಶೇಷಣವನ್ನು ಕೊಡಬೇಕು. 'ಯತ್ ಅನನ್ಯಾರ್ಥತಯಾ ವ್ಯಾಖ್ಯೇಯಂ ತತ್ ಉಪಾದೇಯಮ್' ಎಂದು ಹೇಳಿದಾಗ ಇಲ್ಲಿಯೂ ವ್ಯಭಿಚಾರ ಬರುವುದಿಲ್ಲ. ಆದ್ದರಿಂದಲೇ ವ್ಯಾಪಕಾಭಾವದಿಂದ ವ್ಯಾಪ್ಯಾಭಾವವನ್ನು ಸಾಧನೆ ಮಾಡುವಂತಹ ಅನುಮಾನದಲ್ಲಿಯೂ ಸಾಧ್ಯದಲ್ಲಿರುವ ಅನನ್ಯಾರ್ಥತ್ವವೆಂಬ ವಿಶೇಷಣವು ಸಾರ್ಥಕವಾಗಿದೆ. 'ಯತ್ ಉಪಾದೇಯಂ ನ ಭವತಿ ತತ್ ಅನನ್ಯಾರ್ಥತಯಾ ವ್ಯಾಖ್ಯೇಯಮ್ ನ ಭವತಿ' ಇಲ್ಲಿರುವ ಸಾಧ್ಯವಿಶೇಷಣವು ವ್ಯಭಿಚಾರವನ್ನು ಪರಿಹರಿಸುವುದರಿಂದ ಸಾರ್ಥಕವಾಗಿದೆ ಎಂದರ್ಥ.

'ಯಚ್ಚ ಪ್ರಮಾಣತ್ವೇ ಸತಿ ಇಷ್ಟಸಾಧನತಾವಬೋಧಕಂ ಪ್ರಾಯಃ ತದೇವೋಪಾದೇಯಮ್' ಎಂಬ ಟೀಕೆಯ ಮಾತಿನಿಂದ ತಿಳಿಯುವ ಅನುಮಾನದ ಆಕಾರ ಹೀಗಿದೆ - 'ಬ್ರಹ್ಮಸೂತ್ರಂ ನ ಪ್ರಾಯಃ ಉಪಾದೇಯಮ್ ಪ್ರಮಾಣತ್ವೇ ಸತಿ ಇಷ್ಟಸಾಧನತಾವಬೋಧಕತ್ವಾಭಾವಾತ್' ಎಂದು. ಸಾಧ್ಯದಲ್ಲಿ 'ಪ್ರಾಯಃ' ಎಂದು ಹೇಳಿದ್ದರಿಂದ ಅಪ್ರಮಾಣಗ್ರಂಥಗಳಲ್ಲಿ ವ್ಯಭಿಚಾರ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

## ಭಾಷ್ಯದ ಅಥ ಶಬ್ದಾರ್ಥವಿಚಾರ

'ಅಥೇಷ್ಟಾನಿಷ್ಟ' ಎಂಬ ಭಾಷ್ಯದಲ್ಲಿ 'ಅಥ' ಶಬ್ದಕ್ಕೆ ಮಂಗಳಾದ್ಯರ್ಥಗಳನ್ನು ಹೇಳಲು ಬರುವುದಿಲ್ಲ. ಮತ್ತು ಯಾವುದೇ ಅತಿಶಯವಿಲ್ಲದ್ದರಿಂದ ಆನಂತರ್ಯಾರ್ಥವೂ ಕೂಡುವುದಿಲ್ಲ. ಹಾಗಾಗಿ 'ಅಥ' ಶಬ್ದವನ್ನು ಹೇಳಿದ್ದೇ ವ್ಯರ್ಥವಲ್ಲವೆ? ಎಂಬ ಪ್ರಶ್ನೆಗೆ 'ಅಥೇತ್ಯಸ್ಯ' ಎಂದು ಉತ್ತರಿಸುತ್ತಿದ್ದಾರೆ. ಇಲ್ಲಿ 'ಅಥ' ಶಬ್ದಕ್ಕೆ 'ಅನಂತರ' ಎಂದೇ ಅರ್ಥ. ಬೇರೆ ಅರ್ಥ ಅಸಂಗತವಾಗುತ್ತದೆ. ಅನಂತರ ಎಂದರೆ (ವ್ಯಾಸರು) 'ಅವತರಿಸಿದ ಕೂಡಲೇ'; ಅಂದರೆ 'ಗುರೂಪದೇಶಾದಿಗಳ ಅವಶ್ಯಕತೆ ಇಲ್ಲದೆ' ಎಂದರ್ಥ. ಸಾಮಾನ್ಯವಾಗಿ ಎಲ್ಲರೂ ಹುಟ್ಟಿದ ಮೇಲೆ ಗುರೂಪದೇಶ ಪಡೆದು ಅನಂತರ ಗ್ರಂಥರಚನೆಯಲ್ಲಿ ತೊಡಗುತ್ತಾರೆ. ಆದರೆ ವ್ಯಾಸರು ವೇದವಿಭಾಗ ಮಾಡುವ ಮೊದಲು ಗುರುಗಳಲ್ಲಿ ವಿದ್ಯಾಭ್ಯಾಸ ಮಾಡುವ ಅವಶ್ಯಕತೆಯೇ ಇಲ್ಲವೆಂಬ ಸ್ವಾರಸ್ಯವನ್ನು ಅಥ ಶಬ್ದವು ತಿಳಿಸುತ್ತಿದೆ. ಈ ಅಭಿಪ್ರಾಯವನ್ನು ಸ್ವತಃ ಟೀಕಾರಾಯರೇ ಪ್ರಮೇಯದೀಪಿಕಾದಲ್ಲಿ ತಿಳಿಸಿದ್ದಾರೆ. ಗೀತಾಭಾಷ್ಯದಲ್ಲಿ 'ವ್ಯಾಸೋಽವತತಾರ ತತಶ್ಚೇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಂ' ಎಂದು ಹೇಳಿದ್ದಾರೆ. ಈ ವಾಕ್ಯಕ್ಕೆ ವ್ಯಾಖ್ಯಾನಿಸುತ್ತಾ ಪ್ರಮೇಯದೀಪಿಕಾದಲ್ಲಿ ಟೀಕಾರಾಯರು 'ತತಶ್ಚ' ಎಂದರೆ 'ಅವತರಿಸಿದ ಕೂಡಲೇ' ಎಂಬರ್ಥವನ್ನು ಬರೆದಿದ್ದಾರೆ. ಆ ಅರ್ಥದ ವಿವಕ್ಷೆ ಪ್ರಕೃತ ಅಥಶಬ್ದಕ್ಕೂ ಟೀಕಾರಾಯರಿಗೆ ಇದೆಯೆಂದು ಭಾವಿಸಬೇಕು. ತ್ರಿವಿಕ್ರಮಪಂಡಿತಾಚಾರ್ಯರಂತೂ ತತ್ವಪ್ರದೀಪದಲ್ಲಿ 'ಅಥ ಅನಂತರಮೇವ' ಎಂದು ಸ್ಪಷ್ಟವಾಗಿ ಬರೆದಿದ್ದಾರೆ.

ಪ್ರಶ್ನೆ :- 'ಗುರೂಪದೇಶಾದಿಗಳ ಅವಶ್ಯಕತೆ ಇಲ್ಲದೆ' ಎಂಬರ್ಥವು ಅಥಶಬ್ದದಿಂದ ಹೇಗೆ ತಿಳಿಯುತ್ತದೆ. ಎಲ್ಲಾದರೂ ದೃಷ್ಟಾಂತವಿದೆಯೇ?

ಉತ್ತರ :- ದೃಷ್ಟಾಂತವಿದೆ - 'ಅಥ' ಶಬ್ದಕ್ಕೆ ಸಮಾನಾರ್ಥವಾದ 'ಲ್ಯಪ್' ಪ್ರತ್ಯಯದ ದೃಷ್ಟಾಂತವಿದೆ. 'ವೇದಮಧೀತ್ಯ ಸ್ನಾಯಾತ್' 'ವೇದಾಧ್ಯಯನ ಮಾಡಿದ ಮೇಲೆ ಸ್ನಾತಕವ್ರತವನ್ನು ಆಚರಿಸಬೇಕು' ಎಂದು ವಿಧಿಯಿದೆ.

ಗುರುಕುಲವಾಸ ಮುಗಿಸಿ ಗುರುಗಳ ಅಪ್ಪಣೆ ಪಡೆದು ಸ್ನಾತಕನಾಗಬೇಕು - 'ನ ಜೀರ್ಣಮಲವದ್ವಾಸಃ ಸ್ನಾತಕಃ ಸ್ಯಾತ್' ಇತ್ಯಾದಿ ವಚನಗಳಂತೆ ಜೀರ್ಣವಾದ ಮಲಿನವಾದ ವಸ್ತ್ರಗಳನ್ನು ಧರಿಸದೆ ಶುಭ್ರವಾದ ವಸ್ತ್ರಗಳನ್ನು ಧರಿಸಿ ಅಲಂಕೃತನಾಗಬೇಕು. ಅನಂತರ ಕಾಶಿಯಾತ್ರೆಗೆ ಹೊರಡಬೇಕು. ಇದನ್ನು 'ಸಮಾವರ್ತನಸಂಸ್ಕಾರ' ಎಂದು ಕರೆಯುತ್ತಾರೆ. ಇದು ಷೋಡಶ ಸಂಸ್ಕಾರಗಳಲ್ಲಿ ಒಂದು ಸಂಸ್ಕಾರವಾಗಿದೆ. ಈ ಸಂಸ್ಕಾರವನ್ನು ವಿಧಿಸುವ 'ವೇದಮಧೀತ್ಯ ಸ್ನಾಯಾತ್' ಎಂಬ ವಾಕ್ಯದಲ್ಲಿ 'ಲ್ಯಪ್' ಪ್ರತ್ಯಯವಿದೆ. ಆನಂತರ್ಯಾರ್ಥವನ್ನು ಇದು ಹೇಳುತ್ತದೆ.

ಪ್ರಶ್ನೆ :- ಆನಂತರ್ಯವನ್ನು ಏಕೆ ಹೇಳಬೇಕು? 'ವೇದಾಧ್ಯಯನ ಮಾಡಬೇಕು; ಸ್ನಾತಕನಾಗಬೇಕು' ಎಂದಷ್ಟೇ ಸಾಕಾಗಿರುವಾಗ ಲ್ಯಪ್ ಪ್ರತ್ಯಯವು ವ್ಯರ್ಥವಲ್ಲವೇ?

ಉತ್ತರ :- ನಿಯಮಕ್ಕೋಸ್ಕರ ಲ್ಯಪ್ ಪ್ರತ್ಯಯವು ಸಾರ್ಥಕ. 'ಸಿದ್ಧೇ ಸತಿ ಆರಂಭ್ಯ: ನಿಯಮಾರ್ಥ:' ಸಿದ್ಧವಾದ್ದನ್ನೇ ಪುನಃ ಹೇಳಿದರೆ ನಿಯಮವು ಪ್ರಾಪ್ತವಾಗುತ್ತದೆ. ಅದಃ ಸ್ನಾತಕನಾಗಬೇಕೆಂದಷ್ಟೇ ಹೇಳಿದರೂ ವೇದಾಧ್ಯಯನದ ಅನಂತರ ಸ್ನಾತಕನಾಗಬೇಕೆಂದು ತಿಳಿ ತ್ತದೆ. ಆದರೆ ಪುನಃ ಲ್ಯಪ್ ಪ್ರತ್ಯಯವನ್ನು ಹೇಳಿದ್ದರಿಂದ ತಡಮಾಡದೆ ಕೂಡಲೇ ಸ್ನಾತಕವ್ರತವ ಕೈಗೊಳ್ಳಬೇಕೆಂಬ ನಿಯಮವು ಪ್ರಾಪ್ತವಾಗುತ್ತದೆ.

ಈ ದೃಷ್ಟಾಂತದಂತೆ ಪ್ರಕೃತ 'ವ್ಯಾಸೋಽವತತಾರ' ಎಂದಷ್ಟೇ ಹೇಳಿದ್ದರೂ ಸಾಕಾಗಿತ್ತು ಆನಂತರ್ಯಾರ್ಥಕವಾದ 'ಅಥ' ಶಬ್ದವನ್ನು ಹೇಳಬೇಕಾಗಿರಲಿಲ್ಲ. ಆದರೂ ನಿಯಮಕ್ಕೋಸ್ಕರ ಶಬ್ದವನ್ನು ಹೇಳಿದ್ದೆಂದು ತಿಳಿಯುತ್ತದೆ. - ವ್ಯಾಸರು ಅವತರಿಸಿದ ಕೂಡಲೆ ಅಂದರೆ ಗುರೂಪದೇಶಾದಿಗಳ ಇಲ್ಲದೆ ವೇದವಿಭಾಗವನ್ನು ಮಾಡಿದರೆಂಬ ನಿಯಮವನ್ನು ಅಥ ಶಬ್ದದಿಂದ ತಿಳಿಸುತ್ತದೆ.

ಟೀಕೆ - ವೇದಮುತ್ಸನ್ನಮಿತ್ಯಾದೇರಪಪಾಠಾದಿನಾ ತಿರೋಹಿತಂ ಪ್ರಾಗೇವ ಚತುರ್ಧಾ ವಿಭ: ವೇದಂ ಋಙ್ನಿಗದಾದಿರೂಪಂ ವ್ಯಕ್ತೀಕೃತ್ಯೇಕೈಕಕಸ್ಮಾತ್ ಏಕೈಕೋಭಾಗಃ ಇತಿ ಚತುರ್ಧಾ ವ್ಯಭಜದೇಕೈಕಂ ಚಾವಾಂತರಮೃಗಾದಿವೇದಂ ಚತುರ್ವಿಂಶತಿಶಾಖಾಭೇದೇನ ವ್ಯಭಜದಿತ್ಯರ್ಥ ಇಲ್ಲಿರುವ 'ವೇದಮುತ್ಸನ್ನಮಿತ್ಯಾದೇಃ' ಎಂಬುದಕ್ಕೆ 'ಅಪಪಾಠಾದಿನಾ' ಎಂಬ ಪದದ ಜೊತೆ ಅನ್ವಯಭ್ರಾಂತಿ ಬರುತ್ತದೆ. ಅದಕ್ಕೋಸ್ಕರ ಗ್ರಂಥಕಾರರು 'ಇತ್ಯರ್ಥಃ' ಎಂಬಲ್ಲಿ ಅನ್ವಯ ಮಾಡಬೇಕೆಂದು ಹೇಳುತ್ತಿದ್ದಾರೆ.

'ವೇದಮುತ್ಸನ್ನಂ ವ್ಯಂಜಯಂಶ್ಚತುರ್ಧಾ ವ್ಯಭಜತ್' ಎಂಬ ಸಂಪೂರ್ಣ ಭಾಷ್ಯವಾಕ್ಯಕ್ಕೆ ಟೀಕೆ 'ಅಪಪಾಠಾದಿನಾ' ಎಂಬಲ್ಲಿಂದ 'ಇತ್ಯರ್ಥಃ' ಎಂಬಲ್ಲಿಯ ತನಕ ಅರ್ಥ ಬರೆಯುತ್ತಿದ್ದಾರೆ 'ಅವಾಂತರವೇದಾದಿವಿಭಾಗಕಥನಂ ಚ ಜ್ಞಾನಾಕೂಲೀಭಾವಸಮರ್ಥನಾರ್ಥಮ್' 'ಅವಾಂತರ ವೇದಾದಿವಿಭಾಗ ಹೇಳಿದ್ದು ಜ್ಞಾನದಲ್ಲಿರುವ ವ್ಯಾಕುಲತ್ವವನ್ನು ಸಮರ್ಥಿಸುವುದಕ್ಕೋಸ್ಕರ' ಎಂದು ಟೀಕೆಯಲ್ಲಿ ಹೇಳಿದೆ. ಇಲ್ಲಿ ಅವಾಂತರವೇದಾದಿವಿಭಾಗಕಥನಶಬ್ದಕ್ಕೆ ಎರಡರ್ಥ.

೧) ಅವಾಂತರವೇದಾದಿಗಳ ವಿಭಾಗ = ಶಾಖಾವಿಭಾಗ

೨) ಅವಾಂತರವೇದಾದಿತ್ವೇನ ವಿಭಾಗ = ಅವಾಂತರವೇದಾದಿರೂಪದಿಂದ ವಿಭಾಗ.

ಶಾಖೆಗಳನ್ನು ಉಪಶಾಖೆಗಳನ್ನಾಗಿ ವಿಭಾಗ ಮಾಡಲಾಗಿದೆಯೆಂಬುದು ಮೊದಲನೆಯ ಪಕ್ಷದ ಅಭಿಪ್ರಾಯ. ಇದಕ್ಕೆ ಆಧಾರವಿಲ್ಲವೆಂಬ ಪ್ರಶ್ನೆ ಬರುತ್ತದೆ. ಶಾಖಾವಿಭಾಗವನ್ನು ಅರಿಪದರಿಂದ ಉಪಶಾಖಾವಿಭಾಗವನ್ನು ಮತ್ತು ಅವಾಂತರವಿಭಾಗವನ್ನು ನೀವು ಹೇಳಿದಿರಿ. ಆದರೆ ಭಾಷ್ಯಕಾರರು ಅವಾಂತರವಿಭಾಗವನ್ನು ಶಾಖಾವಿಭಾಗವನ್ನಷ್ಟೇ ಹೇಳಿದ್ದಾರಲ್ಲ? ಈ ಪ್ರಶ್ನೆಗೆ ಉತ್ತರ ರೂಪವಾಗಿ ಎರಡನೆಯ ಪಕ್ಷವನ್ನು ಹೇಳಿದ್ದಾರೆ. ಈ ಪಕ್ಷದಲ್ಲಿ ಉಪಶಾಖಾವಿಭಾಗವನ್ನು ಇಟ್ಟುಕೊಳ್ಳಬೇಕಾಗಿಲ್ಲ.

ಪರಿಪೂರ್ಣಚಂದ್ರಿಕಾ

## ಸಾರ

ಮೋಕ್ಷಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ಅವಶ್ಯ ಓದಬೇಕು. ಜೈಮಿನಿಸೂತ್ರಾದಿಗಳಿಗೆ ಬ್ರಹ್ಮಸೂತ್ರದಷ್ಟು ಪ್ರಾಧಾನ್ಯವಿಲ್ಲ. ಇದನ್ನು ತಿಳಿಸಲು ವಿಶೇಷಣವಿಲ್ಲದೆ ಸೂತ್ರಪದವನ್ನು ಪ್ರಯೋಗಿಸಿದ್ದಾರೆ. ಅಲ್ಪಾಕ್ಷರತ್ವಾದಿ ಸೂತ್ರಲಕ್ಷಣವು ಬ್ರಹ್ಮಸೂತ್ರದಲ್ಲಷ್ಟೇ ಪುಷ್ಕಳವಾಗಿದೆ.

ಬ್ರಹ್ಮಸೂತ್ರದ ಹಿರಿಮೆ

ಮೋಕ್ಷ ಸಂಪಾದನೆಗಾಗಿ ಅಧ್ಯಯನ ಮಾಡಬೇಕಾಗಿರುವ ಗ್ರಂಥ ಬ್ರಹ್ಮಸೂತ್ರ. ಅದರಿಂದ ಅದು ವಾಸ್ತವವಿಷಯಗಳನ್ನೇ ಹೇಳುತ್ತದೆ. ಗ್ರಂಥಕಾರರಾದ ಬಾದರಾಯಣರೂ ಸ್ವತಃ ಸರ್ವಜ್ಞರು. ಅವತರಣಿಕೆಯೊಡನೆಯೆ, ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡದೆಯೆ, ಗ್ರಂಥರಚನೆ ಮಾಡಿದ್ದಾರೆ.

• • • • •

## ಸೂತ್ರಲಕ್ಷಣ

**तात्पर्यचन्द्रिका –**

**तदल्पाक्षरत्वमिति ।। यावदक्षरतां विना विवक्षितार्थासिद्धिः तदर्थप्रतिपादनाय ततोऽधिकाक्षरानुपादानमल्पाक्षरत्वमित्यर्थः ।।**

**बहुशास्त्रानिर्णायकत्वमिति ।। सव्याकरणसूत्रादेरपि बहुशास्त्रागतपदार्थनिर्णायकत्वात् नाव्याप्तिरिति ज्ञेयम् ।। व्यर्थाक्षरादिराहित्यमिति ।। अर्थाप्रतिपादकत्वेऽपि साम्नि स्तोभाक्षारणां ऋगक्षराव्याप्तगानभागपरिपूरणायेव प्रयोजनान्तराय अक्षराप्रयोग इत्यर्थः ।। कारणान्तरसम्भवादित्यत आहेति ।। ''मुख्यस्य'' इति मूलग्रन्थे मुख्यस्य निर्विशेषणशब्दवाच्यत्वे ''इति वेदविदः प्राहुः'' इत्यनेन वेदस्य वृद्धव्यवहारस्य च प्रमाणीकृतत्वात् तेन शङ्कायाः परिहार इति भावः ।। शब्दसमूहैः क्रियमाण इति ।। 'शब्दजातस्य' इति षष्ठी कर्तरि नतु कर्मणीत्यर्थः।**

ಅನುವಾದ - ಭಾಷ್ಯದಲ್ಲಿ ಅಲ್ಪಾಕ್ಷರ ಶಬ್ದಕ್ಕೆ - 'ಎಷ್ಟು ಅಕ್ಷರಗಳಿಲ್ಲದೆ ವಿವಕ್ಷಿತವಾದ ಅರ್ಥವು ತಿಳಿಯುವುದಿಲ್ಲವೋ ಅಷ್ಟು ಅಕ್ಷರಗಳಿಗಿಂತ ಹೆಚ್ಚಿನ ಅಕ್ಷರಗಳನ್ನು ಹೇಳದಿರುವಿಕೆ' ಎಂದರ್ಥ. ಇನ್ನು ವಿಶ್ವತೋಮುಖ ಶಬ್ದಕ್ಕೆ ಬಹುಶಾಖಾನಿರ್ಣಾಯಕ ಎಂಬರ್ಥವನ್ನು ಹೇಳಲಾಗಿದೆ. ಹೀಗೆ ಹೇಳಿದ್ದರಿಂದ ದೈವೀಮೀಮಾಂಸಾ ಮೊದಲಾದ ಸೂತ್ರಗಳಲ್ಲಿ ಅವ್ಯಾಪ್ತಿ ಇಲ್ಲ. ಏಕೆಂದರೆ

ಅವುಗಳೂ ಸಹ ಅನೇಕ ಶಾಖೆಗಳ ಕೆಲವು ಪದಾರ್ಥಗಳನ್ನು ನಿರ್ಣಯ ಮಾಡುತ್ತಿವೆ. ಈ ಸೂತ್ರಲಕ್ಷಣ ಅಲ್ಲಿಯೂ ಬರುತ್ತದೆ. 'ಅಸ್ತೋಭ'ಶಬ್ದಕ್ಕೆ ವ್ಯರ್ಥಾಕ್ಷರಾದಿರಾಹಿತ್ಯವೆಂದು ಕ... ಲಾಗಿದೆ. ವಾಸ್ತವಿಕವಾಗಿ ಅಲ್ಪಾಕ್ಷರ ಶಬ್ದದಿಂದಲೇ ಈ ಅರ್ಥವು ಲಭಿಸುತ್ತದೆ. ಆದರೂ ... ಹೇಳಿದ್ದು? ಎಂದರೆ ಸಾಮವೇದದಲ್ಲಿ ಗಾನಕ್ಕಾಗಿ ಕೆಲವು ಸ್ತೋಭಾಕ್ಷರಗಳನ್ನು ಸೇರಿಸ ... ಬೇಕಾಗುತ್ತದೆ. ಹಾಗಾಗಿ 'ಅಸ್ತೋಭ' ಎಂದರೆ 'ಗಾನಾದಿಪ್ರಯೋಜನವೂ ಇಲ್ಲದ ವ್ಯರ್ಥ... ಅಧಿಕಾಕ್ಷರಗಳನ್ನು ಹೇಳಬಾರದೆಂದರ್ಥ'.

'ವಿಶೇಷಣವಿಲ್ಲದ ಶಬ್ದವು ಮುಖ್ಯಾರ್ಥವನ್ನೇ ಹೇಳುತ್ತದೆ. ವಿಶೇಷಣವಿರುವ ಶ... ಅಮುಖ್ಯವಾದ ಅರ್ಥವನ್ನೇ ಹೇಳುತ್ತದೆ' ಎಂದು ಮೂಲದಲ್ಲಿ ಹೇಳಲಾಗಿದೆ. ಆದ... ವಿಶೇಷಣವಿರುವಿಕೆ ಇಲ್ಲದಿರುವಿಕೆಯು ಮುಖ್ಯಾಮುಖ್ಯಗಳಿಗೆ ಹೇಗೆ ಕಾರಣವಾಗಲು ಸಾಧ್ಯ? ಎಂಬ ಶಂಕೆ ಬಂದರೆ ಮೂಲದಲ್ಲಿ 'ಇತಿ ವೇದವಿದಃ ಪ್ರಾಹುಃ' ಎಂದು ಉತ್ತರಿಸಲಾಗಿ... 'ವೇದಜ್ಞರು ಹೇಳುತ್ತಾರೆ'. ಇದರಿಂದ ವೇದವೂ ಪ್ರಮಾಣ, ಹಾಗು ವೃದ್ಧವ್ಯವಹಾರ ರೂಪವಾ... ರೂಢಿಯೂ ಪ್ರಮಾಣ ಎಂದಂತಾಯಿತು. ಹಾಗಾಗಿ ಹಿಂದಿನ ಶಂಕೆಗೆ ಅವಕಾಶವಿಲ್ಲ.

'ಶಬ್ದಗಳ ನಿರ್ಣಯವನ್ನು ಬ್ರಹ್ಮಸೂತ್ರವೇ ಮಾಡುತ್ತದೆ' ಎಂದು ಮೂಲದಲ್ಲಿ ಹೇಳಲಾಗಿ... ಇಲ್ಲಿ 'ಶಬ್ದಜಾತಸ್ಯ' ಎಂಬಲ್ಲಿರುವ ಷಷ್ಠೀವಿಭಕ್ತಿಯು ಕರ್ತರ್ಥದಲ್ಲಿ ಇದೆಯೇ ಹೊರ... ಕರ್ಮಾರ್ಥದಲ್ಲಿ ಇಲ್ಲ.

**ಕಠಿಣಪದಾರ್ಥ -**

ಸದ್ವ್ಯಾಕರಣಸೂತ್ರಾದೇರಪಿ = ದೈವೀಮೀಮಾಂಸಾ ಮೊದಲಾದ ಸೂತ್ರಗಳೂ ಕೂಡ. ಸ್ತೋಭಾಕ್ಷರಾಣಾಮ್ = ವ್ಯರ್ಥವಾದ ಅಕ್ಷರಗಳು.

**प्रकाशः** – 'तदल्पाक्षरत्वम् इत्यत्र विवक्षितार्थासिद्धिरेव अल्पाक्षरत्वमिति भाति । तच्चायुक्तम्' इति विवक्षितपूरणेन अर्थमाह – **यावदिति** ॥ यदि बहुशाखानिर्णायकत्वं विश्वतोमुखत्वं तर्हि शब्दान्वाख्यानपरे महाव्याकरणसूत्रे देवमीमांसासूत्रादौ चाव्याप्तिरित्यत आह – **सद्व्याकरणेति** ॥ 'अल्पाक्षरम्' इत्यनेनैव व्यर्थाक्षरराहित्यस्य लाभात् 'अस्तोभम्' इति व्यर्थमित्यतः अभिप्रायमाह – **अर्थेति** ॥ **'कारणान्तरसम्भवात्'** इत्यस्य ''मुख्यस्य निर्विशेषेण'' इत्यनेन कथमुत्तरमित्यतः, उत्तरार्धेन तल्लब्धमित्याह – **मुख्यस्येतीति** ॥ **वेदस्येति** ॥ अस्यार्थस्य वेदोक्तत्वाभावे तद्विदामेतदुक्तेरयोगात् 'वेदस्य प्रमाणीकृतत्वात्' इत्युक्तम् । ''शब्दजातस्य'' इति षष्ठ्यन्तेन कथमस्यार्थस्य लाभ इत्यत

आह – शब्दजातस्येति ।। ''कर्तृकर्मणोः कृति'' इति कर्तरि षष्ठीति भावः । शब्दानां करणत्वेऽपि अवान्तरव्यापारापेक्षया कर्तृत्वमिति ध्येयम् ।

गुरुराजीय – यावदक्षरतामिति ।। अत्र 'तदर्थप्रतिपादनाय' इति विशेषणाट्टीकायां 'तदल्पाक्षरत्वम्' इत्यत्र 'तच्छब्देन बुद्धिस्थमेव परामृश्यते कण्ठोक्तस्य परामर्शायोगादित्युक्तं भवति । सुधायां तु 'श्रुत्याऽर्थाद्वा योऽर्थः प्रतीयते तदप्रतिपादनमल्पाक्षरत्वम्' इत्युक्तम् । तदप्यनेन टीकैकवाक्यतया योजितं भवति । विवक्षितार्थासिद्धिः श्रुत्या अर्थाद्वेति तत्प्रतिपादनाय तदधिकानुपादानमेव तदप्रतिपादनमिति । तेन श्रुत्याऽर्थाद्वा प्रतीयमानस्य स्वेनैव श्रुत्याऽर्थाद्वा प्रतिपादनात् तदप्रतिपादनोक्तिर्व्याहतेति सुधायां शङ्कानवकाशः । सूत्रगतविवक्षितार्थप्रत्यायकश्रुत्यतिरिक्तश्रुत्या अप्रतिपादनस्यैव विवक्षितत्वादिति भावः ।। पर्यायेषु च लाघवगौरवचिन्ताभावाभिप्रायेण चैतल्लक्षणम् । अन्यथा 'आनन्दमयः' इत्यादावपि 'सुखमयः' इति 'कमयः' इति वा वक्तुं शक्यत्वेनाल्पाक्षरत्वाभावापत्तेः इत्यवधेयम् ।

अत्र टीकायां विश्वतोमुखत्वमेव सूत्रलक्षणतयाऽभिमतम् । अन्यत्तु स्वरूपकथनमात्रम् । अत एवेह टीकायां विश्वतोमुखत्वस्यैवाव्याप्त्यादिशङ्कापरिहारः कृत इत्यवधेयम् ।। अर्थाप्रतिपादकत्वेऽपीति । तेन न स्वरवर्णसाधारण्येन समन्वयोक्तिविरोधः ।। इत्यत आहेतीति ।। 'एतादृशीशङ्का कथमनेन परिहृता' इत्यर्थः ।। कर्तरीति ।। कर्तृकर्मणोः कृतीति कर्तरि षष्ठीति भावः । करणे कर्तृत्वोपचाराभिप्रायेणेदम् । शब्दस्य करणत्वेन कर्तृत्वाभावात् । यद्वा अवान्तरव्यापारवत एव कारणस्य करणत्वात् प्रधानक्रियां प्रति करणस्यापि स्वव्यापारं प्रति कर्तृत्वस्यापि सत्वात् तदभिप्रायेणायं ग्रन्थः । नच व्याख्यानस्य पश्चात्तनत्वनियमात् कथं जैमिन्यादिसूत्राण्यप्राक्तनब्रह्मसूत्रव्याख्यानानि स्युरिति वाच्यम् । मन्त्रब्राह्मणवद् व्याख्यातृबुद्धिविवक्षया पश्चात्तनत्वसम्भवात् ।

''व्यासचित्तस्थिताकाशादवच्छिन्नानि कानिचित् ।
अन्ये व्यवहरन्त्येतान्यूरीकृत्य गृहादिवत् ।।''

इति तन्मूलभूतानादिव्यासज्ञानविषयैकदेशविषयव्यासोपदेशजनितज्ञानमूलत्वाद्वा तेषां ब्रह्मसूत्रव्याख्यानरूपत्वमिति द्रष्टव्यम् ।

**ವಿವರಣೆ - ಟೀಕೆ** - 'ಯಾವದಕ್ಷರತಾಂ ವಿನಾ ವಿವಕ್ಷಿತಾರ್ಥಾಸಿದ್ಧಿಃ ತತ್ ಅಲ್ಪಾಕ್ಷರತ್ವಮ್' ಎಷ್ಟು ಅಕ್ಷರವಿಲ್ಲದೆ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ; ಅದು ಅಲ್ಪಾಕ್ಷರ' ಎನ್ನಲಾಗಿದೆ. ಇಲ್ಲಿ 'ತತ್' ಪದದಿಂದ ಯಾವುದನ್ನು ಪರಾಮರ್ಶಿಸಬೇಕು? ವಿವಕ್ಷಿತಾರ್ಥಾಸಿದ್ಧಿಯನ್ನು ಪರಾಮರ್ಶಿಸಿದರೆ ವಿವಕ್ಷಿತಾರ್ಥಾಸಿದ್ಧಿಯನ್ನೇ ಅಲ್ಪಾಕ್ಷರ ಎಂದಂತಾಯಿತು. ಈ ಅರ್ಥವು ಅನುಪಪನ್ನವಾದ್ದರಿಂದ ಗ್ರಂಥಕಾರರು ಹೀಗೆ ಹೇಳುತ್ತಿದ್ದಾರೆ- 'ಯಾವದಕ್ಷರತಾಂ ವಿನಾ ವಿವಕ್ಷಿತಾರ್ಥಾಸಿದ್ಧಿಃ ತದರ್ಥ ಪ್ರತಿಪಾದನಾಯ ತತೋಽಧಿಕಾಕ್ಷರಾನುಪಾದಾನಮ್ ಅಲ್ಪಾಕ್ಷರತ್ವಮಿತ್ಯರ್ಥಃ' ಎಂದು. ಅಭಿಪ್ರಾಯ ಹೀಗೆ - ತತ್‌ಪದದಿಂದ ಬುದ್ಧಿಸ್ಥವಾದದ್ದನ್ನೇ ಪರಾಮರ್ಶಿಸಬೇಕು, ಹೊರತು ಕಂಠೋಕ್ತವಾದದ್ದಲ್ಲ. ಆದ್ದರಿಂದ ಎಷ್ಟು ಅಕ್ಷರಗಳಿಲ್ಲದೆ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ ಅಂತಹ ಅರ್ಥದ ಪ್ರತಿಪಾದನೆ ಮಾಡುವುದಕ್ಕಾಗಿ ಹೆಚ್ಚಿನ ಅಕ್ಷರಗಳನ್ನು ಹೇಳದಿರುವಿಕೆಯೇ ಅಲ್ಪಾಕ್ಷರವೆಂದು.

ಸುಧೆಯಲ್ಲಿ ಅಲ್ಪಾಕ್ಷರತ್ವದ ಲಕ್ಷಣ ಹೀಗಿದೆ - 'ಶ್ರುತ್ಯಾ ಅರ್ಥಾದ್ವಾ ಯೋ ಅರ್ಥಃ ಪ್ರತೀಯತೇ ತದಪ್ರತಿಪಾದನಂ ಅಲ್ಪಾಕ್ಷರತ್ವಂ' 'ಶಬ್ದದಿಂದ ಅಥವಾ ಅರ್ಥಾಂತರದಿಂದ ಯಾವ ಅರ್ಥವು ತೋರುತ್ತದೋ, ಅದನ್ನು ಪ್ರತಿಪಾದನೆ ಮಾಡದಿರುವಿಕೆಯೇ ಅಲ್ಪಾಕ್ಷರವೆನಿಸುತ್ತದೆ' ಎಂದು

ಅಲ್ಪಾಕ್ಷರತ್ವದ ಲಕ್ಷಣವು ನಿಖರವಾಗಬೇಕೆಂದರೆ ಸುಧೆಯ ಮಾತನ್ನು ಟೀಕೆಯ ಮಾತಿನ ಜೊತೆ ಸೇರಿಸಬೇಕು. ಟೀಕೆಯಲ್ಲಿ ವಿವಕ್ಷಿತಾರ್ಥಾಸಿದ್ಧಿಃ ಎಂದಿದೆ. ಇದರ ಜೊತೆಗೆ ಸುಧೆಯಲ್ಲಿನ 'ಶ್ರುತ್ಯಾ ಅರ್ಥಾದ್ವಾ' ಎಂಬುದನ್ನು ಜೋಡಿಸಬೇಕು. ಅದರಂತೆ ಸುಧೆಯಲ್ಲಿರುವ 'ತದಪ್ರತಿಪಾದನಮ್' ಎಂಬುದರ ಜೊತೆಗೆ ಟೀಕೆಯಲ್ಲಿರುವ 'ತದರ್ಥಪ್ರತಿಪಾದನಾಯ ತತೋಽಧಿಕಾಕ್ಷರಾನುಪಾದಾನಮ್' ಎಂಬುದನ್ನು ಸೇರಿಸಬೇಕು. ಒಟ್ಟು ಹೀಗೆ ಹೇಳಿದಂತಾಯಿತು - 'ಯಾವದಕ್ಷರತಾಂ ವಿನಾ ಶ್ರುತ್ಯಾ ಅರ್ಥಾದ್ವಾ ವಿವಕ್ಷಿತಾರ್ಥಾಸಿದ್ಧಿಃ ತತ್‌ಪ್ರತಿಪಾದನಾಯ ತತೋಽಧಿಕಾಕ್ಷರಾನುಪಾದಾನಮ್ ಅಲ್ಪಾಕ್ಷರತ್ವಮ್' ಎಷ್ಟು ಅಕ್ಷರಗಳಿಲ್ಲದೆ ಶ್ರುತಿಯಿಂದ ಅಥವಾ ಅರ್ಥಾಂತರದಿಂದ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ; ಅಂತಹ ಅರ್ಥವನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಹೆಚ್ಚಿನ ಅಕ್ಷರಗಳನ್ನು ಹೇಳದಿರುವಿಕೆಯೇ ಅಲ್ಪಾಕ್ಷರತ್ವ ಎಂದು. ಹೀಗೆ ಹೇಳಿದ್ದರಿಂದ ಸುಧೆಯ ಲಕ್ಷಣಕ್ಕೆ ವ್ಯಾಹತಿದೋಷವನ್ನು ಪರಿಹರಿಸಿದಂತಾಯಿತು. ಶ್ರುತಿಯಿಂದ ಅಥವಾ ಅರ್ಥಾಂತರದಿಂದ ತೋರುವ ಅರ್ಥವನ್ನು ಪ್ರತಿಪಾದಿಸಬಾರದು ಎಂದು ಹೇಳಿದರೆ ವ್ಯಾಹತಿ ಸ್ಪಷ್ಟ. ಅರ್ಥವು ತೋರಿದಲ್ಲಿ ತೋರಬಾರದೆಂಬುದು ಹೇಗೆ ಕೂಡುತ್ತದೆ? ಅದಕ್ಕೋಸ್ಕರ 'ಯಾವ ಅರ್ಥವು ಶ್ರುತಿಯಿಂದ ಅಥವಾ ಅರ್ಥಾಂತರದಿಂದ ತಿಳಿದಿರುತ್ತದೋ ಅದನ್ನು ಅದಕ್ಕಿಂತ ಹೆಚ್ಚಿನ ಅಕ್ಷರಗಳಿಂದ ವಿವಕ್ಷಿಸಬಾರದೆಂದು ಹೇಳಬೇಕು. ಈ ವ್ಯಾಹತಿ ಬರುವುದಿಲ್ಲ.

ಅಲ್ಪಾಕ್ಷರತ್ವಲಕ್ಷಣದಲ್ಲಿ ಮತ್ತೊಂದು ಗಮನೀಯ ಅಂಶ - ಪರ್ಯಾಯಶಬ್ದಗಳಲ್ಲಿ ಲಾಘವ ಗೌರವವನ್ನು ವಿಚಾರ ಮಾಡಬಾರದು. ಆದ್ದರಿಂದಲೇ 'ಆನಂದಮಯೋಽಭ್ಯಾಸಾತ್' ಎಂಬಲ್ಲಿ ಸುಖಮಯವೆಂದೂ ಕಮಯವೆಂದೋ ಹೇಳಬೇಕಾಗಿತ್ತು. ಅದರಂತೆ 'ಆಕಾಶಸ್ತಲ್ಲಿಂಗಾತ್' ಎಂಬ

ತೆಗುವುದಕ್ಕಿಂತ 'ಖಂ ತಲ್ಲಿಂಗಾತ್' ಎಂದೇ ಹೇಳಬೇಕಿತ್ತು. ಇವೆಲ್ಲ ಆಕ್ಷೇಪಗಳು ಈಗ ಪರಿಹಾರವಾದವು.

'ಬಹುಶಾಖಾನಿರ್ಣಾಯಕತ್ವಮ್ ವಿಶ್ವತೋಮುಖತ್ವಮ್' ಈ ಬಹುಶಾಖಾನಿರ್ಣಾಯಕತ್ವವೆಂಬ ವಿಶ್ವತೋಮುಖತ್ವದ ಲಕ್ಷಣಕ್ಕೆ ದೈವೀಮೀಮಾಂಸಾ ಸೂತ್ರದಲ್ಲಿ ಅವ್ಯಾಪ್ತಿ ಬರುತ್ತದೆ. ಇದರ ಪರಿಹಾರಕ್ಕಾಗಿ 'ಬಹುಶಾಖಾಗತಪದಾರ್ಥನಿರ್ಣಾಯಕತ್ವಮ್' ಎಂದು ಪರಿಷ್ಕರಿಸಬೇಕು.

ಗಮನೀಯ ವಿಚಾರ - ಶ್ಲೋಕದಲ್ಲಿ ಅಲ್ಪಾಕ್ಷರತ್ವವೇ ಮೊದಲಾದ ಅನೇಕ ವಿಶೇಷಣಗಳನ್ನು ಸೂತ್ರಕ್ಕೆ ಹೇಳಿದ್ದಾರೆ. ಇವುಗಳಲ್ಲಿ ಬಹುಶಾಖಾನಿರ್ಣಾಯಕತ್ವ ಮಾತ್ರ ಸೂತ್ರದ ಲಕ್ಷಣವಾಗಿದೆ. ಆದ್ದರಿಂದಲೇ ಗ್ರಂಥಕಾರರು ಬಹುಶಾಖಾನಿರ್ಣಾಯಕತ್ವಲಕ್ಷಣಕ್ಕೆ ಮಾತ್ರ ಅವ್ಯಾಪ್ತಿ ಹೇಳಿ ಪರಿಹರಿಸುತ್ತಿದ್ದಾರೆ.

'ಮುಖ್ಯಸ್ಯೇತಿ ಮೂಲಗ್ರಂಥೇ' ಇತ್ಯಾದಿ ವಾಕ್ಯಗಳ ಅಭಿಪ್ರಾಯ ಹೀಗಿದೆ - ಬ್ರಹ್ಮಸೂತ್ರಾಣಿ, ಮುಖ್ಯಸೂತ್ರಾಣಿ, ನಿರುಪಪದಸೂತ್ರಶಬ್ದವಾಚ್ಯತ್ವಾತ್, ಯತ್ ನಿರುಪಪದ ಸೂತ್ರಶಬ್ದವಾಚ್ಯಂ ತತ್ ಸಜಾತೀಯೇ ಮುಖ್ಯಂ ಯಥಾ ವೇದವ್ಯಾಸಃ, ವೇದವ್ಯಾಸರು ನಿರುಪಪದವ್ಯಾಸಶಬ್ದದಿಂದ ವಾಚ್ಯವಾಗಿದ್ದಾರೆ. ಆದ್ದರಿಂದ ವ್ಯಾಸಜಾತಿಯಲ್ಲಿ ಅವರೇ ಪ್ರಧಾನರು. ಅದರಂತೆ ಬ್ರಹ್ಮಸೂತ್ರಗಳು ನಿರುಪಪದ ಸೂತ್ರಗಳಿಂದ ವಾಚ್ಯವಾದ್ದರಿಂದ ಜೈಮಿನ್ಯಾದಿಸೂತ್ರಗಳಿಗಿಂತಲೂ ಮುಖ್ಯವೆಂದು ಸಾಧಿಸಲಾಗುತ್ತದೆ.

ಈ ಅನುಮಾನದಲ್ಲಿ ಅಪ್ರಯೋಜಕಶಂಕೆಯನ್ನು ಟೀಕೆ ಹೇಳುತ್ತದೆ. "ನಿರ್ವಿಶೇಷಣವಿಶೇಷಣಾಭ್ಯಾಂ ಕುತೋ ಮುಖ್ಯಾಮುಖ್ಯಾತ್ವೇ ದೃಷ್ಟಾಂತೇ ಕಾರಣಾಂತರಸಂಭವಾತ್" ಎಂದು. ವೇದವ್ಯಾಸರು ನಿರುಪಪದವ್ಯಾಸಶಬ್ದದಿಂದ ವಾಚ್ಯರಾಗಲಿ ಆದರೆ ಮುಖ್ಯವ್ಯಾಸರು ಏಕಾಗಬೇಕು?

ಈ ಅಪ್ರಯೋಜಕಶಂಕೆಯನ್ನು ಪರಿಹರಿಸಲು 'ಮುಖ್ಯಸ್ಯ ನಿರ್ವಿಶೇಷೇಣ' ಇತ್ಯಾದಿ ಭಾಷ್ಯದ ಮಾತುಗಳು ಹೊರಟಿವೆಯೆಂದು ಟೀಕೆಯಲ್ಲಿ ವ್ಯಾಖ್ಯಾನಿಸಲಾಗಿದೆ.

"ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋಽನ್ಯೇಷಾಂ ವಿಶೇಷತಃ।
ಇತಿ ವೇದವಿದಃ ಪ್ರಾಹುಃ ಶಬ್ದತತ್ತ್ವಾರ್ಥವೇದಿನಃ ॥"

ಭಾಷ್ಯದ ಈ ಮಾತುಗಳಲ್ಲಿ ಮುಖ್ಯವಾದದ್ದು ನಿರ್ವಿಶೇಷಶಬ್ದದಿಂದ ವಾಚ್ಯವೆಂದು. ಮುಖ್ಯವಲ್ಲದ್ದು ವಿಶೇಷಣಸಹಿತವಾದ ಶಬ್ದದಿಂದ ಹೇಳಲ್ಪಡುತ್ತದೆಂದು ತಿಳಿಯುತ್ತದೆ. ಆದರೆ ಇದರಿಂದ ಅಪ್ರಯೋಜಕಶಂಕೆಗೆ ನೇರ ಉತ್ತರ ಹೇಗೆ ಬರುತ್ತದೆ. ಎಂಬ ಪ್ರಶ್ನೆಗೆ ಗ್ರಂಥಕಾರರು 'ಮುಖ್ಯಸ್ಯೇತಿ ಮೂಲಗ್ರಂಥೇ' ಇತ್ಯಾದಿ ಮಾತುಗಳಿಂದ ಉತ್ತರಿಸುತ್ತಿದ್ದಾರೆ. 'ಯತ್ ನಿರುಪಪದಶಬ್ದವಾಚ್ಯಂ ತತ್ ಸಜಾತೀಯೇ ಮುಖ್ಯಮ್' ಎಂಬ ವ್ಯಾಪ್ತಿಗೆ ಆಗಮವೇ ಪ್ರಮಾಣ. 'ಇತಿ ವೇದವಿದಃ ಪ್ರಾಹುಃ' ಎಂಬ ಭಾಷ್ಯದ ಮಾತಿನಿಂದ ಇದು ತಿಳಿಯುತ್ತದೆ. ವೇದಜ್ಞರು ಈ ವ್ಯಾಪ್ತಿಯನ್ನು ನಿಶ್ಚಯಿಸಿದ್ದಾರೆಂದರೆ ವೇದದಲ್ಲಿ ಹೇಳಿದೆ ಎಂದೇ ಅರ್ಥ. ಹೀಗೆ ವೇದದ ಆಧಾರವಿರುವುದರಿಂದ ಅಪ್ರಯೋಜಕಶಂಕೆಯನ್ನು

**ವಿವರಣೆ - ಟೀಕೆ -** 'ಯಾವದಕ್ಷರತಾಂ ವಿನಾ ವಿವಕ್ಷಿತಾರ್ಥಾಸಿದ್ಧಿಃ ತತ್ ಅಲ್ಪಾಕ್ಷರತ್ವಮ್' ಎಷ್ಟು ಅಕ್ಷರವಿಲ್ಲದೆ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ; ಅದು ಅಲ್ಪಾಕ್ಷರ' ಎನ್ನಲಾಗಿದೆ. ಇಲ್ಲಿ 'ತತ್' ಪದದಿಂದ ಯಾವುದನ್ನು ಪರಾಮರ್ಶಿಸಬೇಕು? ವಿವಕ್ಷಿತಾರ್ಥಾಸಿದ್ಧಿಯನ್ನು ಪರಾಮರ್ಶಿಸಿ ವಿವಕ್ಷಿತಾರ್ಥಾಸಿದ್ಧಿಯನ್ನೇ ಅಲ್ಪಾಕ್ಷರ ಎಂದಂತಾಯಿತು. ಈ ಅರ್ಥವು ಅನುಪಪನ್ನವಾದ್ದರಿಂದ ಗ್ರಂಥಕಾರರು ಹೀಗೆ ಹೇಳುತ್ತಿದ್ದಾರೆ- 'ಯಾವದಕ್ಷರತಾಂ ವಿನಾ ವಿವಕ್ಷಿತಾರ್ಥಾಸಿದ್ಧಿಃ ತದರ್ಥ **ಪ್ರತಿಪಾದನಾಯ ತತೋಽಧಿಕಾಕ್ಷರಾನುಪಾದಾನಮ್ ಅಲ್ಪಾಕ್ಷರತ್ವಮಿತ್ಯರ್ಥಃ'** ಎಂದು. ಅಭಿಪ್ರಾಯ ಹೀಗೆ - ತತ್‌ಪದದಿಂದ ಬುದ್ಧಿಸ್ಥವಾದದ್ದನ್ನೇ ಪರಾಮರ್ಶಿಸಬೇಕು, ಹೊರತು ಕಂಠೋಕ್ತವಾದದ್ದಲ್ಲ. ಆದ್ದರಿಂದ ಎಷ್ಟು ಅಕ್ಷರಗಳಿಲ್ಲದೆ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ ಅಂತಹ ಅರ್ಥದ ಪ್ರತಿಪಾದನೆ ಮಾಡುವುದಕ್ಕಾಗಿ ಹೆಚ್ಚಿನ ಅಕ್ಷರಗಳನ್ನು ಹೇಳದಿರುವಿಕೆಯೇ ಅಲ್ಪಾಕ್ಷರವೆಂದು.

ಸುಧೆಯಲ್ಲಿ ಅಲ್ಪಾಕ್ಷರತ್ವದ ಲಕ್ಷಣ ಹೀಗಿದೆ - **'ಶ್ರುತ್ಯಾ ಅರ್ಥಾದ್ವಾ ಯೋ ಅರ್ಥಃ ಪ್ರತೀಯತೇ ತದಪ್ರತಿಪಾದನಂ ಅಲ್ಪಾಕ್ಷರತ್ವಂ'** 'ಶಬ್ದದಿಂದ ಅಥವಾ ಅರ್ಥಾಂತರದಿಂದ ಯಾವ ಅರ್ಥವು ತೋರುತ್ತದೋ, ಅದನ್ನು ಪ್ರತಿಪಾದನೆ ಮಾಡದಿರುವಿಕೆಯೇ ಅಲ್ಪಾಕ್ಷರವೆನಿಸುತ್ತದೆ' ಎಂದು

ಅಲ್ಪಾಕ್ಷರತ್ವದ ಲಕ್ಷಣವು ನಿಖರವಾಗಬೇಕೆಂದರೆ ಸುಧೆಯ ಮಾತನ್ನು ಟೀಕೆಯ ಮಾತಿನ ಜೊತೆ ಸೇರಿಸಬೇಕು. ಟೀಕೆಯಲ್ಲಿ ವಿವಕ್ಷಿತಾರ್ಥಾಸಿದ್ಧಿಃ ಎಂದಿದೆ. ಇದರ ಜೊತೆಗೆ ಸುಧೆಯಲ್ಲಿನ 'ಶ್ರುತ್ಯಾ ಅರ್ಥಾದ್ವಾ' ಎಂಬುದನ್ನು ಜೋಡಿಸಬೇಕು. ಅದರಂತೆ ಸುಧೆಯಲ್ಲಿರುವ 'ತದಪ್ರತಿಪಾದನಮ್' ಎಂಬುದರ ಜೊತೆಗೆ ಟೀಕೆಯಲ್ಲಿರುವ 'ತದರ್ಥಪ್ರತಿಪಾದನಾಯ ತತೋಽಧಿಕಾಕ್ಷರಾನುಪಾದಾನಮ್' ಎಂಬುದನ್ನು ಸೇರಿಸಬೇಕು. ಒಟ್ಟು ಹೀಗೆ ಹೇಳಿದಂತಾಯಿತು - **'ಯಾವದಕ್ಷರತಾಂ ವಿನಾ ಶ್ರುತ್ಯಾ ಅರ್ಥಾದ್ವಾ ವಿವಕ್ಷಿತಾರ್ಥಾಸಿದ್ಧಿಃ ತತ್‌ಪ್ರತಿಪಾದನಾಯ ತತೋಽಧಿಕಾಕ್ಷರಾನುಪಾದಾನಮ್ ಅಲ್ಪಾಕ್ಷರತ್ವಮ್'** ಎಷ್ಟು ಅಕ್ಷರಗಳಿಲ್ಲದೆ ಶ್ರುತಿಯಿಂದ ಅಥವಾ ಅರ್ಥಾಂತರದಿಂದ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ; ಅಂತಹ ಅರ್ಥವನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಹೆಚ್ಚಿನ ಅಕ್ಷರಗಳನ್ನು ಹೇಳದಿರುವಿಕೆಯೇ ಅಲ್ಪಾಕ್ಷರತ್ವ ಎಂದು. ಹೀಗೆ ಹೇಳಿದ್ದರಿಂದ ಸುಧೆಯ ಲಕ್ಷಣಕ್ಕೆ ವ್ಯಾಹತಿದೋಷವನ್ನು ಪರಿಹರಿಸಿದಂತಾಯಿತು. ಶ್ರುತಿಯಿಂದ ಅಥವಾ ಅರ್ಥಾಂತರದಿಂದ ತೋರುವ ಅರ್ಥವನ್ನು ಪ್ರತಿಪಾದಿಸಬಾರದು ಎಂದು ಹೇಳಿದರೆ ವ್ಯಾಹತಿ ಸ್ಪಷ್ಟ. ಅರ್ಥವು ತೋರಿದಲ್ಲಿ ತೋರಬಾರದೆಂಬುದು ಹೇಗೆ ಕೂಡುತ್ತದೆ? ಅದಕ್ಕೋಸ್ಕರ 'ಯಾವ ಅರ್ಥವು ಶ್ರುತಿಯಿಂದ ಅಥವಾ ಅರ್ಥಾಂತರದಿಂದ ತಿಳಿದಿರುತ್ತದೋ ಅದನ್ನು ಅದಕ್ಕಿಂತ ಹೆಚ್ಚಿನ ಅಕ್ಷರಗಳಿಂದ ವಿವಕ್ಷಿಸಬಾರದೆಂದು ಹೇಳಬೇಕು. ಈ ವ್ಯಾಹತಿ ಬರುವುದಿಲ್ಲ.

ಅಲ್ಪಾಕ್ಷರತ್ವಲಕ್ಷಣದಲ್ಲಿ ಮತ್ತೊಂದು ಗಮನೀಯ ಅಂಶ - ಪರ್ಯಾಯಶಬ್ದಗಳಲ್ಲಿ ಲಾಘವ ಗೌರವವನ್ನು ವಿಚಾರ ಮಾಡಬಾರದು. ಆದ್ದರಿಂದಲೇ 'ಆನಂದಮಯೋಽಭ್ಯಾಸಾತ್' ಎಂಬಲ್ಲಿ ಸುಖಮಯವೆಂದೂ ಕಮಯವೆಂದೋ ಹೇಳಬೇಕಾಗಿತ್ತು. ಅದರಂತೆ 'ಆಕಾಶಸ್ತಲ್ಲಿಂಗಾತ್' ಎಂಬ

*ಪರಿಪೂರ್ಣಚಂದ್ರಿಕಾ*

ಹೇಳುವುದಕ್ಕಿಂತ 'ಖಂ ತಲ್ಲಿಂಗಾತ್' ಎಂದೇ ಹೇಳಬೇಕಿತ್ತು. ಇವೆಲ್ಲ ಆಕ್ಷೇಪಗಳು ಈಗ ಪರಿಹಾರವಾದವು.

'ಬಹುಶಾಖಾನಿರ್ಣಾಯಕತ್ವಮ್ ವಿಶ್ವತೋಮುಖತ್ವಮ್' ಈ ಬಹುಶಾಖಾನಿರ್ಣಾಯಕತ್ವವೆಂಬ ವಿಶ್ವತೋಮುಖತ್ವದ ಲಕ್ಷಣಕ್ಕೆ ದೈವೀಮೀಮಾಂಸಾ ಸೂತ್ರದಲ್ಲಿ ಅವ್ಯಾಪ್ತಿ ಬರುತ್ತದೆ. ಇದರ ಪರಿಹಾರಕ್ಕಾಗಿ 'ಬಹುಶಾಖಾಗತಪದಾರ್ಥನಿರ್ಣಾಯಕತ್ವಮ್' ಎಂದು ಪರಿಷ್ಕರಿಸಬೇಕು.

ಗಮನೀಯ ವಿಚಾರ - ಶ್ಲೋಕದಲ್ಲಿ ಅಲ್ಪಾಕ್ಷರತ್ವವೇ ಮೊದಲಾದ ಅನೇಕ ವಿಶೇಷಣಗಳನ್ನು ಸೂತ್ರಕ್ಕೆ ಹೇಳಿದ್ದಾರೆ. ಇವುಗಳಲ್ಲಿ ಬಹುಶಾಖಾನಿರ್ಣಾಯಕತ್ವ ಮಾತ್ರ ಸೂತ್ರದ ಲಕ್ಷಣವಾಗಿದೆ. ಆದ್ದರಿಂದರೇ ಗ್ರಂಥಕಾರರು ಬಹುಶಾಖಾನಿರ್ಣಾಯಕತ್ವಲಕ್ಷಣಕ್ಕೆ ಮಾತ್ರ ಅವ್ಯಾಪ್ತಿ ಹೇಳಿ ಪರಿಹರಿಸುತ್ತಿದ್ದಾರೆ.

'ಮುಖ್ಯಸ್ಯೇತಿ ಮೂಲಗ್ರಂಥೇ' ಇತ್ಯಾದಿ ವಾಕ್ಯಗಳ ಅಭಿಪ್ರಾಯ ಹೀಗಿದೆ - ಬ್ರಹ್ಮಸೂತ್ರಾಣಿ, ಮುಖ್ಯಸೂತ್ರಾಣಿ, ನಿರುಪಪದಸೂತ್ರಶಬ್ದವಾಚ್ಯತ್ವಾತ್, ಯತ್ ನಿರುಪಪದ ಸೂತ್ರಶಬ್ದವಾಚ್ಯಂ ತತ್ ಸ್ವಜಾತೀಯೇ ಮುಖ್ಯಂ ಯಥಾ ವೇದವ್ಯಾಸಃ, ವೇದವ್ಯಾಸರು ನಿರುಪಪದವ್ಯಾಸಶಬ್ದದಿಂದ ವಾಚ್ಯರಾಗಿದ್ದಾರೆ. ಆದ್ದರಿಂದ ವ್ಯಾಸಜಾತಿಯಲ್ಲಿ ಅವರೇ ಪ್ರಧಾನರು. ಅದರಂತೆ ಬ್ರಹ್ಮಸೂತ್ರಗಳು ನಿರುಪಪದ ಸೂತ್ರಗಳಿಂದ ವಾಚ್ಯವಾದ್ದರಿಂದ ಜೈಮಿನ್ಯಾದಿಸೂತ್ರಗಳಿಗಿಂತಲೂ ಮುಖ್ಯವೆಂದು ಸಾಧಿಸಲಾಗುತ್ತದೆ.

ಈ ಅನುಮಾನದಲ್ಲಿ ಅಪ್ರಯೋಜಕಶಂಕೆಯನ್ನು ಟೀಕೆ ಹೇಳುತ್ತದೆ. "ನಿರ್ವಿಶೇಷಣಸವಿಶೇಷಣತ್ವಾಭ್ಯಾಂ ಕುತೋ ಮುಖ್ಯಾಮುಖ್ಯತ್ವೇ ದೃಷ್ಟಾಂತೇ ಕಾರಣಾಂತರಸಂಭವಾತ್" ಎಂದು. ವೇದವ್ಯಾಸರು ನಿರುಪಪದವ್ಯಾಸಶಬ್ದದಿಂದ ವಾಚ್ಯರಾಗಲಿ ಆದರೆ ಮುಖ್ಯವ್ಯಾಸರು ಏಕಾಗಬೇಕು?

ಈ ಅಪ್ರಯೋಜಕಶಂಕೆಯನ್ನು ಪರಿಹರಿಸಲು 'ಮುಖ್ಯಸ್ಯ ನಿರ್ವಿಶೇಷೇಣ' ಇತ್ಯಾದಿ ಭಾಷ್ಯದ ಮಾತುಗಳು ಹೊರಟಿವೆಯೆಂದು ಟೀಕೆಯಲ್ಲಿ ವ್ಯಾಖ್ಯಾನಿಸಲಾಗಿದೆ.

"ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋಽನ್ಯೇಷಾಂ ವಿಶೇಷತಃ ।
ಇತಿ ವೇದವಿದಃ ಪ್ರಾಹುಃ ಶಬ್ದತತ್ತ್ವಾರ್ಥವೇದಿನಃ ॥"

ಭಾಷ್ಯದ ಈ ಮಾತುಗಳಲ್ಲಿ ಮುಖ್ಯವಾದದ್ದು ನಿರ್ವಿಶೇಷಶಬ್ದದಿಂದ ವಾಚ್ಯವೆಂದು. ಮುಖ್ಯವಲ್ಲದ್ದು ವಿಶೇಷಣಸಹಿತವಾದ ಶಬ್ದದಿಂದ ಹೇಳಲ್ಪಡುತ್ತದೆಂದು ತಿಳಿಯುತ್ತದೆ. ಆದರೆ ಇದರಿಂದ ಅಪ್ರಯೋಜಕಶಂಕೆಗೆ ನೇರ ಉತ್ತರ ಹೇಗೆ ಬರುತ್ತದೆ. ಎಂಬ ಪ್ರಶ್ನೆಗೆ ಗ್ರಂಥಕಾರರು 'ಮುಖ್ಯಸ್ಯೇತಿ ಮೂಲಗ್ರಂಥೇ' ಇತ್ಯಾದಿ ಮಾತುಗಳಿಂದ ಉತ್ತರಿಸುತ್ತಿದ್ದಾರೆ. 'ಯತ್ ನಿರುಪಪದಶಬ್ದವಾಚ್ಯಂ ತತ್ ಸ್ವಜಾತೀಯೇ ಮುಖ್ಯಮ್' ಎಂಬ ವ್ಯಾಪ್ತಿಗೆ ಆಗಮವೇ ಪ್ರಮಾಣ. 'ಇತಿ ವೇದವಿದಃ ಪ್ರಾಹುಃ' ಎಂಬ ಭಾಷ್ಯದ ಮಾತಿನಿಂದ ಇದು ತಿಳಿಯುತ್ತದೆ. ವೇದಜ್ಞರು ಈ ವ್ಯಾಪ್ತಿಯನ್ನು ನಿಶ್ಚಯಿಸಿದ್ದಾರೆಂದರೆ ವೇದದಲ್ಲಿ ಹೇಳಿದೆ ಎಂದೇ ಅರ್ಥ. ಹೀಗೆ ವೇದದ ಆಧಾರವಿರುವುದರಿಂದ ಅಪ್ರಯೋಜಕಶಂಕೆಯನ್ನು

ಮಾಡಬಾರದು. ಆದ್ದರಿಂದ 'ಯತ್ ನಿರುಪಪದಶಬ್ದವಾಚ್ಯಂ ತತ್ ತಜ್ಜಾತೀಯೇ ಮುಖ್ಯಮ್' ಎಂಬ ವ್ಯಾಪ್ತಿಯು ನಿರ್ದುಷ್ಟವಾಗಿದೆ.

'ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ' ಎಂದು ಭಾಷ್ಯದ ಮಾತು. ಇದರ ಅರ್ಥ ಹೀಗಿದೆ - 'ಸರ್ವೈಃ ಶಬ್ದಸಮೂಹೈಃ ಕ್ರಿಯಮಾಣಃ ನಿರ್ಣಯೋ ಯತ್ಪ್ರಮಾಣೋ ಯನ್ಮೂಲಃ' 'ಜಗತ್ತಿನಲ್ಲಿರುವ ಸಕಲ ಶಬ್ದಗಳಿಂದ ಮಾಡುವ ನಿರ್ಣಯಕ್ಕೆ ಬ್ರಹ್ಮಸೂತ್ರವೇ ಬೇಕು' ಎಂದು. 'ಶಬ್ದಜಾತಸ್ಯ' ಎಂಬಲ್ಲಿರುವ ಷಷ್ಠಿಯು ಕರ್ಮಾರ್ಥಕವಲ್ಲ. ಕರ್ತರ್ಥಕವಾಗಿದೆ. 'ಶಬ್ದಗಳನ್ನು ಮಾಡುವ ನಿರ್ಣಯ' ಎಂದರ್ಥವಲ್ಲ. 'ಶಬ್ದಗಳು ಮಾಡುವ ನಿರ್ಣಯ' ಎಂದರ್ಥ. ಜೈಮಿನಿಗಳು ಪೈಲಸೂತ್ರಗಳು ಮಾಡುವ ನಿರ್ಣಯಕ್ಕೆ ಬ್ರಹ್ಮಸೂತ್ರವೇ ಬೇಕು. ಹೀಗೆ ಕರ್ತರ್ಥದಲ್ಲಿ ಷಷ್ಠೀವಿಭಕ್ತಿಯಿದೆ.

'ಕರ್ತೃಕರ್ಮಣೋಃ ಕೃತಿ' ಎಂಬ ಸೂತ್ರವು ಕೃದಂತಶಬ್ದದ ಯೋಗವಿದ್ದಾಗ ಕರ್ತೃವಾಚಕಶಬ್ದಕ್ಕೂ ಕರ್ಮವಾಚಕಶಬ್ದಕ್ಕೂ ಷಷ್ಠಿವಿಭಕ್ತಿಯನ್ನು ವಿಧಿಸುತ್ತದೆ. ಪ್ರಕೃತ 'ನಿರ್ಣಯಃ' ಎಂಬುದು ಕೃದಂತಶಬ್ದ. 'ನಿರ್' ಉಪಸರ್ಗದ ಮುಂದೆ 'ಣೀಞ್' ಧಾತುವಿಗೆ 'ಅಪ್' ಪ್ರತ್ಯಯ ಬಂದಿದೆ. ಇದು ಕೃತ್ ಪ್ರತ್ಯಯವಾದ್ದರಿಂದ ನಿರ್ಣಯಶಬ್ದವು ಕೃದಂತವಾಯಿತು. ಇದರ ಯೋಗವಿರುವ 'ಶಬ್ದಜಾತ' ಎಂಬ ಶಬ್ದಕ್ಕೆ ಸೂತ್ರವು ಷಷ್ಠಿಯನ್ನು ವಿಧಿಸುತ್ತದೆ.

ಪ್ರಶ್ನೆ :- ಕರ್ತರ್ಥದಲ್ಲಿ ಷಷ್ಠಿಯು ತಪ್ಪಾಗುತ್ತದೆ. ಪುರುಷರು ನಿರ್ಣಯ ಮಾಡುತ್ತಾರೆ ಹೊರತು ಶಬ್ದಗಳು ನಿರ್ಣಯ ಮಾಡುವುದಿಲ್ಲ. ಜೈಮಿನ್ಯಾಚಾರ್ಯರು ಕರ್ಮಕಾಂಡದಿಂದ ನಿರ್ಣಯ ಮಾಡುತ್ತಾರೆ ಎನ್ನಬಹುದು. ಶಬ್ದಗಳು ಕರ್ಮಕಾಂಡದಿಂದ ನಿರ್ಣಯ ಮಾಡುತ್ತವೆ ಎಂಬುದು ತಪ್ಪಲ್ಲವೇ?

ಉತ್ತರ :- ಕರಣದಲ್ಲಿ ಕರ್ತೃತ್ವದ ಔಪಚಾರಿಕಪ್ರಯೋಗವಿದು. ಅಥವಾ ಅವಾಂತರ ವ್ಯಾಪಾರದಲ್ಲಿ ಕರ್ತೃತ್ವದ ವ್ಯಪದೇಶ ಎಂದು ತಿಳಿಯಬೇಕು - 'ಹಂತಾ ರಾಮಶರಃ' 'ರಾಮಬಾಣವು ಕೊಂದಿತು' ಇಲ್ಲಿ ಕರಣವಾದ ಬಾಣದಲ್ಲಿ ಕರ್ತೃತ್ವವ್ಯಪದೇಶವಿದೆ. ಅದರಂತೆ 'ದೇವದತ್ತಃ ಕುಠಾರೇಣ ಛಿನತ್ತಿ' ಎಂಬಂತೆ 'ಕುಠಾರಃ' 'ಛಿನತ್ತಿ' ಎಂಬ ಪ್ರಯೋಗವೂ ಲೋಕದಲ್ಲಿ ಇದೆ. ಕರಣದಲ್ಲಿರುವ ವ್ಯಾಪಾರಕ್ಕೆ ಕರಣವು ಆಶ್ರಯವಾದ್ದರಿಂದ ತಪ್ಪಲ್ಲ. ಪ್ರಕೃತ ಅರ್ಥಬೋಧನ ಎಂಬುದು ಅವಾಂತರವ್ಯಾಪಾರ. ಇದು ಶಬ್ದಗಳಲ್ಲಿ ಬರುವುದರಿಂದ ಕರ್ತೃತ್ವಪ್ರಯೋಗ ತಪ್ಪಲ್ಲ. ಕರ್ತರ್ಥದಲ್ಲಿನ ಷಷ್ಠಿಯು ಸಾಧುವೇ ಆಗಿದೆ.

ಪ್ರಶ್ನೆ :- ಬ್ರಹ್ಮಸೂತ್ರಗಳಿಗೆ ಜೈಮಿನ್ಯಾದಿಸೂತ್ರಗಳು ವ್ಯಾಖ್ಯಾನಗಳಾಗಿವೆಯೆಂದು ಹೇಳಿದ್ದು ಹೇಗೆ ಸರಿ? ಜೈಮಿನೀಸೂತ್ರಗಳೇ ಮೊದಲು ರಚಿತಗಳಾದ್ದರಿಂದ ಹೇಗೆ ವ್ಯಾಖ್ಯಾನಗಳಾಗುತ್ತವೆ?

ಉತ್ತರ :- ಬ್ರಾಹ್ಮಣದಲ್ಲಿ ಮಂತ್ರಭಾಗವನ್ನು ಪಠಿಸುವಂತೆ ವ್ಯಾಖ್ಯಾತೃಬುದ್ಧಿಯ ಅಪೇಕ್ಷೆಯಿಂದ ಪೌರ್ವಾಪರ್ಯವು ಗೌಣವಾಗುತ್ತದೆ. ಅಂದರೆ ವ್ಯಾಸರು ಜೈಮಿನಿಋಷಿಗಳಿಗೆ ಉಪದೇಶಿಸಿದ್ದು

ಬರೆದರು. ಅದೇ ವ್ಯಾಸರೇ ಬ್ರಹ್ಮಸೂತ್ರಗಳನ್ನು ಬರೆದದ್ದರಿಂದ ವ್ಯಾಖ್ಯಾತೃಬುದ್ಧಿಯಲ್ಲಿ ಎಲ್ಲವೂ ಒಟ್ಟಿಗೆ ಇರಬೇಕೆಂದಂತಾಯಿತು. ಹೀಗಿರುವಾಗ ಮೊದಲು ವಾಖ್ಯಾನ ಅನಂತರ ವಾಖ್ಯೇಯವಾದಲ್ಲಿ ಏನು ತಪ್ಪು?

ವ್ಯಾಸಚಿತ್ತಸ್ಥಿತಾಕಾಶ ಅವಚ್ಛಿನ್ನಾನಿ ಕಾನಿಚಿತ್ ।
ಅನ್ಯೇ ವ್ಯವಹರಂತ್ಯೇತಾನಿ ಊರೀಕೃತ್ಯ ಗೃಹಾದಿವತ್ ॥

ಆಕಾಶ ವ್ಯಾಪ್ತವಾಗಿದ್ದರೂ 'ನಮ್ಮ ಮನೆಯಲ್ಲಿರುವ ಆಕಾಶ ನಮ್ಮದು' ಎಂದು ಹೇಳುವಂತೆ ಶ್ರೀವೇದವ್ಯಾಸರ ಮನಸ್ಸಿನಲ್ಲಿರುವ ಅನೇಕ ಅಭಿಪ್ರಾಯವಿಶೇಷಗಳನ್ನು ಒಡೆದು ಶಿಷ್ಯರು ಸ್ವೀಕರಿಸಿ ತಮ್ಮ ಮತವನ್ನಾಗಿ ಹೇಳುತ್ತಾರೆ.

## ಸಾರ

ಮೋಕ್ಷಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ಅವಶ್ಯ ಓದಬೇಕು. ಜೈಮಿನಿಸೂತ್ರಾದಿಗಳಿಗೆ ಬ್ರಹ್ಮಸೂತ್ರದಷ್ಟು ಪ್ರಾಧಾನ್ಯವಿಲ್ಲ. ಇದನ್ನು ತಿಳಿಸಲು ವಿಶೇಷಣವಿಲ್ಲದೆ ಸೂತ್ರಪದವನ್ನು ಪ್ರಯೋಗಿಸಿದ್ದಾರೆ. ಅಲ್ಪಾಕ್ಷರತ್ವಾದಿ ಸೂತ್ರಲಕ್ಷಣವು ಬ್ರಹ್ಮಸೂತ್ರದಲ್ಲಷ್ಟೇ ಪುಷ್ಕಳವಾಗಿದೆ.

**ಸೂತ್ರಲಕ್ಷಣ**

ಸೂತ್ರಲಕ್ಷಣಗಳಲ್ಲಿ ಮುಖ್ಯವಾದ ಅಲ್ಪಾಕ್ಷರತ್ವ ವಿಶ್ವತೋಮುಖತ್ವಗಳನ್ನೂ ಅಸ್ತೋಭತ್ವವನ್ನೂ ಸ್ಪಷ್ಟಗೊಳಿಸಲಾಗಿದೆ. ಬ್ರಹ್ಮಸೂತ್ರದಲ್ಲಿಯೆ ಎಲ್ಲ ಸೂತ್ರಲಕ್ಷಣಗಳೂ ಪುಷ್ಕಳವಾಗಿ ಬರುವುದರಿಂದ ಅದೇ ಮುಖ್ಯವಾಗಿ 'ಸೂತ್ರ' ಎನಿಸುತ್ತದೆ. ಆದರಿಂದ 'ಸೂತ್ರ' ಎಂದರೆ ಬ್ರಹ್ಮಸೂತ್ರವೆ. ಬೇರೆ ಸೂತ್ರಗಳಿಗೆ ಜೈಮಿನಿಸೂತ್ರ ಪಾಣಿನಿಸೂತ್ರ ಎಂದು ಮುಂತಾಗಿ ವಿಶೇಷಣ ಕೊಟ್ಟೇ ಹೇಳಬೇಕಾಗುತ್ತದೆ.

● ● ● ● ●

## ನಾವು ಹೇಳುವುದೆಲ್ಲ ಶ್ರೀಮದಾಚಾರ್ಯರ ಭಾಷ್ಯದಲ್ಲಿರುವುದೇ

**तात्पर्यचन्द्रिका —**

**परोक्ते दूष्य एवांशो मितैः शब्दैरनूद्यते ।**
**दूषणं चापि हनुमद्भाष्यसूचितमुच्यते ।**

ಅನುವಾದ - ಪರಮತೀಯರ ಭಾಷ್ಯಗಳಲ್ಲಿರುವ ದೂಷ್ಯಾಂಶಗಳನ್ನು ಮಾತ್ರ ಮಿತವಾದ ಶಬ್ದಗಳಿಂದ ಅನುವಾದ ಮಾಡುತ್ತೇವೆ. ಪರಮತದಲ್ಲಿರುವ ದೋಷವನ್ನು ಹನುಮದ್‌ಭಾಷ್ಯದಲ್ಲಿ (ಶ್ರೀಮದಾಚಾರ್ಯರ ಭಾಷ್ಯದಲ್ಲಿ) ಸೂಚಿತವಾದನ್ನಷ್ಟೇ ಹೇಳುತ್ತೇವೆ.

**ಕಠಿಣಪದಾರ್ಥ**

**ಪರೋಕ್ತೇಃ** = ಅದ್ವೈತಿಗಳು ಹೇಳಿದ ಅಧಿಕರಣಶರೀರಗಳಲ್ಲಿ. **ಹನುಮದ್‌ಭಾಷ್ಯ-ಸೂಚಿತಮ್** = ಶ್ರೀಮದಾಚಾರ್ಯರು ರಚಿಸಿದ ಅನುವ್ಯಾಖ್ಯಾನ, ಬ್ರಹ್ಮಸೂತ್ರಭಾಷ್ಯ, ನ್ಯಾಯವಿವರಣಾಗ್ರಂಥಗಳಲ್ಲಿ ಸೂಚಿಸಿದ (ಮತುಪ್, ಪ್ರತ್ಯಯಕ್ಕೆ 'ಪೂರ್ಣ' ಎಂದು, 'ಹನು' ಶಬ್ದಕ್ಕೆ 'ಪ್ರಜ್ಞ' ಎಂದರ್ಥವಿರುವುದರಿಂದ 'ಪೂರ್ಣಪ್ರಜ್ಞ'-ವೆಂಬ ಅರ್ಥವನ್ನು ತಿಳಿಯಬೇಕು) 'ಚ' ಶಬ್ದಕ್ಕೆ 'ಏವ' ಎಂದರ್ಥ. ಶ್ರೀಮದಾಚಾರ್ಯರು ಸೂಚಿಸಿದ್ದನ್ನಷ್ಟೇ (ದೋಷ ಹೇಳುತ್ತೇವೆ).

**प्रकाशः** – **''तत्रादिसूत्रस्येदं सङ्गत्यादि''** इत्यत्र **'इदम्'शब्देन** परोदीरित-सङ्गत्यादिकमयुक्तमिति टीकायां सूचितम् । तद् विवरीतुं प्रतिजानीते – परोक्त इति । इदं तु शिष्यमनःसमाधानाय । उत्तरार्धेन दूषणानां परमाप्तोक्तिमूलत्व-बलवत्तामाह । तत्र **''हनुशब्दो ज्ञानवाची''** इति स्मृतेर्हनुः ज्ञानम् ।

**''भूमनिन्दाप्रशंसासु भवन्ति मतुबादयः ।**
**संसर्गेऽस्ति विवक्षायां नित्ययोगेऽतिशायने ।। १ ।।**

इत्युक्तेर्भूमार्थे मतुप् । **'पूर्णबोधः'** इत्यर्थः । यद्वा तस्य हनुमदैक्यात् तथोक्तिः । संज्ञापूर्वकविधेरनित्यत्वात् हनुशब्दे **''शरादीनां च''** इति न दीर्घः **''संज्ञायाम्''** इति सूत्रेण मतुपो मकारस्य वत्वाभावो यवादित्वादित्युक्तं धातुवृत्तौ । चोऽवधारणे । सूचितमेवेत्यर्थः । भाष्येति अनुभाष्यादिकं च ग्राह्यम्

गुरुराजीय – **''भाष्यसूचितम्''** इत्यत्र भाष्यपदं भाष्यानुव्याख्यानादि सूत्र-सम्बन्धिसमस्तग्रन्थपरम् । नतु भाष्यमात्रपरम् ।

**ವಿವರಣೆ** - 'ತತ್ರಾದಿಸೂತ್ರಸ್ಯೇದಂ ಸಂಗತ್ಯಾದಿ' ಎಂಬಲ್ಲಿ 'ಇದಂ' ಎಂದರೆ ಪರರ ಸಂಗತ್ಯಾದಿ ಅಯುಕ್ತವೆಂಬರ್ಥವನ್ನು ಟೀಕಾರಾಯರು ಹೇಳಿದ್ದಾರೆ. ಅದನ್ನು ವಿವರಿಸಲು 'ಪರೋಕ್ತೇಃ' ಎಂದು ಪ್ರತಿಜ್ಞೆ ಮಾಡುತ್ತಿದ್ದಾರೆ. ಪರರ ಗ್ರಂಥಗಳಲ್ಲಿರುವ ಪೂರ್ವಪಕ್ಷವನ್ನು ವಿವರವಾಗಿ ಇಲ್ಲಿ ಅನುವಾದ ಮಾಡಿಲ್ಲ. ಕೇವಲ ದೂಷ್ಯವಾದ ವಿಷಯಗಳನ್ನು ಮಿತವಾದ ಶಬ್ದಗಳಿಂದ ಅನುವಾದ ಮಾಡಿದ್ದಾರೆ. ಶಿಷ್ಯರು ಹೆದರಬೇಕಿಲ್ಲ.

ಹನುಮದ್‌ಭಾಷ್ಯದಲ್ಲಿ ಸೂಚಿಸಿದ ದೋಷಗಳನ್ನಷ್ಟೇ ಇಲ್ಲಿ ಹೇಳಲಾಗಿರುವುದರಿಂದ ಇಲ್ಲಿ ಹೇಳುವ ದೋಷಗಳು ಪರಮಾಪ್ತಮೂಲವಾಗಿವೆಯೆಂದು ಪ್ರಾಮಾಣ್ಯದಲ್ಲಿ ಬಲವತ್ವವನ್ನು ಸೂಚಿಸಿದಂತಾಯಿತು.

*ಪಂಪೂರ್ಣಚಂದ್ರಿಕಾ*

'ಹನುಮದ್‌ಭಾಷ್ಯ' ಎಂದರೆ 'ಪೂರ್ಣಪ್ರಜ್ಞರ ಭಾಷ್ಯ' ಎಂದರ್ಥ. ಹೇಗೆಂದರೆ 'ಹನುಶಬ್ದಃ ಜ್ಞಾನವಾಚೀ' ಎಂಬ ಸ್ಮೃತಿಯು 'ಹನು' ಎಂದರೆ 'ಜ್ಞಾನ' ಎಂಬರ್ಥವನ್ನು ಹೇಳುತ್ತಿದೆ. 'ಪೂರ್ಣ' ಎಂಬರ್ಥದಲ್ಲಿ 'ಮತುಪ್' ಪ್ರತ್ಯಯ ಬಂದಿದೆ. ಪೂರ್ಣತ್ವ, ನಿಂದೆ, ಪ್ರಶಂಸೆ, ಸಂಬಂಧ, ಅಸ್ತಿತ್ವವಿವಕ್ಷೆ, ನಿತ್ಯಸಂಬಂಧ, ಅತಿಶಯ ಇಷ್ಟು ಅರ್ಥಗಳಲ್ಲಿ 'ಮತುಪ್' ಮೊದಲಾದ ಪ್ರತ್ಯಯಗಳು ಬರುತ್ತವೆಂದು 'ಭೂಮನಿಂದಾ' ಇತ್ಯಾದಿ ವಾರ್ತಿಕದಲ್ಲಿರುವುದರಿಂದ ಇಲ್ಲಿ ಪೂರ್ಣತ್ವಾರ್ಥದಲ್ಲಿ ಮತುಪ್ ಪ್ರತ್ಯಯವು ಬಂದಿದೆಯೆಂದು ತಿಳಿಯಬೇಕು. ಹಾಗಾಗಿ ಪೂರ್ಣಪ್ರಜ್ಞರೆಂಬ ಅರ್ಥವು ಲಭ್ಯವಾಯಿತು.

ಅಥವಾ ಹನುಮಂತದೇವರೇ ಮಧ್ವಾಚಾರ್ಯರಾಗಿರುವುದರಿಂದ 'ಹನುಮದ್‌ಭಾಷ್ಯ' ಎಂದರೆ ಶ್ರೀಮದಾಚಾರ್ಯರ ಭಾಷ್ಯವನ್ನು ವಿವಕ್ಷಿಸಬಹುದು.

**ಶಂಕೆ** - ಇಲ್ಲಿ 'ಹನುಮತ್' ಎಂಬ ಪ್ರಯೋಗ ತಪ್ಪು. 'ಹನೂಮತ್' ಎಂದಾಗಬೇಕು. ರೂಢಿಯ ಹೆಸರುಗಳಲ್ಲಿ 'ಮತುಪ್' ಪ್ರತ್ಯಯದ ಹಿಂದಿನ ಪದದ ಕೊನೆಯ ಸ್ವರವು ದೀರ್ಘವಾಗಬೇಕೆಂದು 'ಶರಾದೀನಾಂ ಚ' ಎಂಬ ಸೂತ್ರವು ಹೇಳುತ್ತದೆ. ಉದಾಹರಣೆ - 'ಶರ' ಶಬ್ದದ ಮೇಲೆ 'ಮತುಪ್' ಪ್ರತ್ಯಯ ಬಂದರೆ 'ಶರಾವತಿ' ಎಂದಾಗುತ್ತದೆ, ಹೊರತು 'ಶರವತಿ' ಎಂದಾಗುವುದಿಲ್ಲ.

**ಸಮಾಧಾನ** - 'ಸಂಜ್ಞಾಪೂರ್ವಕವಿಧೇರನಿತ್ಯತ್ವಾತ್' ಎಂಬ ಪರಿಭಾಷೆಯು 'ಶರಾದೀನಾಂ ಚ' ಎಂಬ ದೀರ್ಘವಿಧಾಯಕಸೂತ್ರವನ್ನು ವಿಕಲ್ಪ ಮಾಡಿದೆ. ಅಂದರೆ ಹೆಸರನ್ನು ನಿರ್ದೇಶಿಸಿ ವಿಧಾನ ಮಾಡುವ ದೀರ್ಘಾದಿಕಾರ್ಯಗಳು ಅನಿತ್ಯವೆಂದು ಈ ಪರಿಭಾಷೆಯ ಅಭಿಪ್ರಾಯ. ಆದ್ದರಿಂದ 'ಹನೂಮತ್' ಎಂಬಂತೆ 'ಹನುಮತ್' ಎಂಬ ರೂಪವೂ ಆಗುತ್ತದೆ. ತಪ್ಪಲ್ಲ.

**ಶಂಕೆ** - ಹಾಗಾದರೆ 'ಸಂಜ್ಞಾಯಾಂ ಚ' ಎಂಬ ಸೂತ್ರದ ಪ್ರಕಾರ 'ಹನುಮತ್'ಎಂಬಲ್ಲಿರುವ 'ಮತುಪ್' ಪ್ರತ್ಯಯದ 'ಮ'ಕಾರಕ್ಕೆ ವಕಾರ ಬರಬೇಕಲ್ಲವೇ?

**ಸಮಾಧಾನ** - 'ಅಯವಾಯಾದಿಭ್ಯಃ' ಎಂಬ ಅದರ ಮುಂದಿನ ಸೂತ್ರವು ಯವಾದಿಗಣದಲ್ಲಿ ಸೇರಿರುವ ಶಬ್ದಗಳ 'ಮತುಪ್' ಪ್ರತ್ಯಯದ ಮಕಾರಕ್ಕೆ ವಕಾರಾದೇಶವು ಬರುವುದಿಲ್ಲವೆಂದು ನಿಷೇಧಿಸುತ್ತದೆ. ಪ್ರಕೃತ 'ಹನು' ಶಬ್ದವು ಯವಾದಿಗಣದಲ್ಲಿ ಸೇರಿರುವುದರಿಂದ ವಕಾರಾದೇಶವು ಬರುವುದಿಲ್ಲ. ಹಾಗಾಗಿ 'ಹನುಮತ್' ಎಂಬುದು ತಪ್ಪಲ್ಲ.

ಶ್ಲೋಕದಲ್ಲಿ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಆದ್ದರಿಂದ 'ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯ ಹಾಗು ಅನುವ್ಯಾಖ್ಯಾನದಲ್ಲಿ ಸೂಚಿತವಾದ ದೋಷವನ್ನಷ್ಟೇ ನಾನು ಹೇಳುತ್ತೇನೆ ಹೊರತು ಸ್ವತಂತ್ರವಾಗಿ ಏನನ್ನು ಹೇಳುವುದಿಲ್ಲ' ಎಂಬರ್ಥವು ಲಭಿಸುತ್ತದೆ.

* * * *

*ಜಿಜ್ಞಾಸಾಧಿಕರಣ*




**ಹನುಮದ್‌ಭಾಷ್ಯ**

ಹನು ಶಬ್ದದ ಮೇಲೆ ಮತುಪ್ ಬಂದಾಗ ಹನೂಮತ್ ಎಂದೇ ಆಗಬೇಕು. ರೂಢಿಯ ಹೆಸರುಗಳಲ್ಲಿ ದೀರ್ಘ ಬರುತ್ತದೆ. ಮತ್ತು ರೂಢಿಯ ಹೆಸರುಗಳಲ್ಲಿ ಮತುಪ್ ಪ್ರತ್ಯಯದ ಮಕಾರ ವಕಾರವೂ ಆಗುತ್ತ. ಶರಾವತಿ ಮುಂತಾದ ಶಬ್ದಗಳಲ್ಲಿ ಈ ಎರಡೂ ನಿಯಮಗಳು ಕಾಣುತ್ತವೆ. ಆದರೆ ಸಂಜ್ಞಾಪೂರ್ವಕ ಅನಿತ್ಯವಾದ್ದರಿಂದ ದೀರ್ಘದ ನಿಯಮವಿಲ್ಲ. 'ಹನುಮತ್' 'ಹನೂಮತ್' ಎರಡೂ ಸರಿಯೆ. ಹನು ಯವಾದಿಗಣದಲ್ಲಿ ಸೇರಿರುವುದರಿಂದ ಅದರ ಮುಂದಿನ ಮತುಪಿನಲ್ಲಿ ಮಕಾರಕ್ಕೆ ವಕಾರ ಬರುವುದು ಇಲ್ಲ.

● ● ● ● ●

## ಭಾಮತಿಯಲ್ಲಿ ಜಿಜ್ಞಾಸಾಧಿಕರಣ

**तात्पर्यचन्द्रिका –**

**तत्र भामत्युक्तमधिकरणम् । प्रत्यगात्मन एव ब्रह्मत्वात् तस्य चाहमिति प्रकाशमानत्वेनासन्दिग्धत्वान्न विषयत्वम् । नाप्यविद्यानिवृत्तिः प्रयोजनम् । उक्तरीत्या आत्मनि भासमानेऽपि तदनिवृत्तेः । नच वाच्यमहंप्रत्ययः 'स्थूलोऽहं कर्ता भोक्ता दुःखि' इति गृह्णाति तद्विपरीतश्च वेदान्तप्रतिपाद्यः सन्दिग्ध इति विषयादिसिद्धिरिति । वेदान्तानामध्ययनविध्यापादितप्रयोजनवदर्थावबोधानामपि प्रबलाहंप्रत्ययबाधितत्वेन जपमात्रोपयोगित्वेन अविवक्षितार्थत्वादुपचरितार्थत्वाद्वा । तथाच वेदान्तविचारो नारब्धव्य इति पूर्वः पक्षः[१] ।**

---

(१) भामती-

(ತಾತ್ಪರ್ಯಚಂದ್ರಿಕೆಯಲ್ಲಿ ಭಾಮತಿ ಮೊದಲಾದವುಗಳ ವಾಕ್ಯಗಳನ್ನೇ ಯಥಾವತ್ತಾಗಿ ಅನುವಾದಿಸದೆ ದೂಷ್ಯವಾದ ಅಂಶಗಳನ್ನು ಕೇವಲ ಅರ್ಥತಃ ಅನುವಾದ ಮಾಡಿದ್ದಾರೆ. ಆದ್ದರಿಂದ ಈ ಪುಸ್ತಕದ ಅಡಿಟಿಪ್ಪಣಿಯನ್ನು ಉಲ್ಲೇಖಿಸುವಾಗ ತಾತ್ಪರ್ಯಚಂದ್ರಿಕೆಯಿಂದ ಪ್ರತಿಬಿಂಬಿತವಾದ ವಾಕ್ಯಗಳನ್ನು ಉಲ್ಲೇಖಿಸಲಾಗಿದೆ. ಓದುಗರು ಯಥಾವತ್ತಾದ ವಾಕ್ಯಗಳಲ್ಲವೆಂದು ಗೊಂದಲ ಪಡಬಾರದು. ಮುಂದೆಯೂ ಹೀಗೆಯೇ ತಿಳಿಯಬೇಕು.)

इदमत्राकूतम् - भवेदेतदेवं यद्यहमित्यनुभवे आत्मतत्त्वं प्रकाशते । नत्वेतदस्ति । तथाहि - समस्तोपाध्यनवच्छिन्नानन्तानन्दचैतन्यैकरसमुदासीनमेकमद्वितीयमात्मतत्त्वं श्रुतिस्मृ-

तिहासपुराणेषु गीयते । न चैतान्युपक्रमपरामर्शोपसंहारैः क्रियासमभिहारेणेदृगात्मतत्त्वमभिदधति तत्पराणि सन्ति शक्यानि शक्रेणाप्युपचरितार्थानि कर्तुम् ।

ननु प्रत्येतु सर्वो जन आत्मानमहंकारास्पदं ब्रह्मणि तु किमायातमित्यत आह - आत्मा च ब्रह्म । तदस्त्वमा सामानाधिकरण्यात् । तस्मात्तत्पदार्थस्य शुद्धबुद्धत्वादेः शब्दतः, त्वंपदार्थस्य च जीवात्मनः प्रत्यक्षतः प्रसिद्धेः, पदार्थज्ञानपूर्वकत्वाच्च वाक्यार्थज्ञानस्य, त्वंपदार्थस्य ब्रह्मभावावगमः 'तत्त्वमसि' इति वाक्यादुपपद्यत इति भावः ।

इह तु ब्रह्मरूपस्योपाधिकलुषितस्य जीवस्य प्रागप्यपरोक्षत्वात् । नहि शुद्धबुद्धत्वादयो वस्तुतस्ततोऽतिरिच्यन्ते । जीव एव तु तत्तदुपाधिरहितः शुद्धबुद्धादिस्वभावो ब्रह्मेति गीयते ।

एतावानत्रार्थसंक्षेपः[१] - यद्यपि च स्वाध्यायाध्ययनविधिना स्वाध्यायपदवाच्यस्य वेदराशेः फलवदर्थावबोधपरतामापादयता कर्मविधिनिषेधानामिव वेदान्तानामपि स्वाध्यायशब्दवाच्यानां फलवदर्थावबोधपरत्वमापादितं, यद्यपि च 'अविशिष्टस्तु वाक्यार्थः' इति न्यायात् मन्त्राणामिव वेदान्तानामर्थपरत्वमौत्सर्गिकं, यद्यपि च वेदान्तेभ्यश्चैतन्यानन्दघनः कर्तृत्वभोक्तृत्वरहितो निष्प्रपञ्च एकः प्रत्यगात्माऽवगम्यते, तथापि कर्तृत्वभोक्तृत्वदुःखाशोकमोहमयमात्मानमवगाहमानेनाहंप्रत्ययेन संदेहबाधविरहिणा विरुध्यमाना वेदान्ताः स्वार्थात्प्रच्युता उपचरितार्था वा जपमात्रोपयोगिनो वेत्यविवक्षितस्वार्थाः । तथा च तदर्थविचारात्मिका चतुर्लक्षणी शारीरकमीमांसा नारब्धव्या । न च सर्वजनीनाहमनुभवसिद्ध आत्मा संदिग्धो वा सप्रयोजनो वा, येन जिज्ञास्यः सन् विचारं प्रयुञ्जीतेति पूर्वःपक्षः । सिद्धान्तस्तु भवेदेतदेवं यद्यहंप्रत्ययः प्रमाणम् । तस्य तूक्तेन क्रमेण श्रुत्यादिबाधकत्वानुपपत्तेः, श्रुत्यादिभिश्च समस्ततीर्थकरैश्च प्रामाण्यानभ्युपगमादध्यासत्वम् । एवं वेदान्ता नाविवक्षितार्थाः, नाप्युपचरितार्थाः किंतूक्तलक्षणाः । प्रत्यगात्मैव तेषां मुख्योऽर्थः । तस्य च वक्ष्यमाणेन क्रमेण संदिग्धत्वात्, प्रयोजनवत्त्वाच्च युक्ता जिज्ञासा, इत्यशयवान्सूत्रकारः तज्जिज्ञासामसूत्रयत्- अथातो ब्रह्मजिज्ञासेति ।

प्रत्यगात्मा स्वयंप्रकाशत्वादविषयोऽनंशश्च, तथाप्यनिर्वचनीयानाद्यविद्यापरिकल्पितबुद्धिमनः सूक्ष्मस्थूलशरीरेन्द्रियावाच्छेदेनानवच्छिन्नोऽपि वस्तुतोऽवच्छिन्न इव, अभिन्नोऽपि भिन्न इव, अकर्तापि कर्तेव, अभोक्तापि भोक्तेव, अविषयोऽप्यस्मत्प्रत्ययविषय इव, जीवभावमापन्नोऽवभासते, नभ इव घटमणिकमल्लिकाद्यवच्छेदभेदेन भिन्नमिवानेकविधधर्मकमिवेति । नहि चिदेकरसस्यात्मनः चिदंशे गृहीते अगृहीतं किंचिदस्ति । न खल्वानन्दनित्यत्वविभुत्वादयोऽस्य चिद्रूपाद्वस्तुतो भिद्यन्ते, येन तद्ग्रहे न गृह्येरन् । गृहीता एव तु कल्पितेन भेदेन न विवेचिता इत्यगृहीता इवाभान्ति । न चात्मनो बुद्ध्यादिभ्यो

**सिद्धान्तस्तु । वेदान्तवाक्यैर्ज्ञानानन्दैकरसाद्वितीयोदासीनस्वभाव आत्मा उपक्रमादिभिः प्रतिपाद्यते । नच क्रियासमभिहारेण वृगात्मतत्वमभिदधति तत्पराणि सन्ति युक्तमुपचरितार्थानीति वक्तुम् । प्रत्यक्षं तु सम्भावितदोषमपौरुषेयेण निर्दोषेणागमेन बाध्यते । तेन वेदान्तवेद्यः शुद्धोऽहंप्रत्यये न भातीति विषयादि-सिद्धिरिति ॥**

ಅನುವಾದ - ಭಾಮತಿಯಲ್ಲಿ ಜಿಜ್ಞಾಸಾಧಿಕರಣವನ್ನು ಹೀಗೆ ರಚಿಸಲಾಗಿದೆ - ಶರೀ ಒಳಗಿರುವ ಆತ್ಮನೇ ಬ್ರಹ್ಮನಾಗಿದ್ದಾನೆ. ಅವನು 'ಅಹಂ' ಎಂದು ನಿತ್ಯವಾಗಿ ಅನುಭೂತ-ನಾಗಿದ್ದಾನಾದ್ದರಿಂದ ಅವನ ವಿಷಯದಲ್ಲಿ ಯಾವ ಸಂದೇಹಕ್ಕೂ ಅವಕಾಶವ-ಸಂದಿಗ್ಧವಾದದ್ದಷ್ಟೇ ವಿಷಯವಾಗುತ್ತದೆ. ಇಂತಹ ಜೀವಾತ್ಮನಾದ ಬ್ರಹ್ಮನ ಬಗ್ಗೆ ಯಾ ಸಂಶಯವೂ ಇಲ್ಲವಾದ್ದರಿಂದ ಬ್ರಹ್ಮನು ವಿಷಯನಾಗಲಾರನು.

ಇನ್ನು ವೇದಾಂತವಿಚಾರಕ್ಕೆ ಪ್ರಯೋಜನವೂ ಕೂಡುವುದಿಲ್ಲ. ಅವಿದ್ಯಾನಿವೃತ್ತಿಯು

---

भेदस्तात्त्विकः,येन चिदात्मनि गृह्यमाणे सोऽपि गृहीतो भवेत्, बुद्ध्यादीनामनिर्वाच्यत्वं तद्भेदस्याप्यनिर्वचनीयत्वात् । तस्माच्चिदात्मनः स्वयंप्रकाशस्यैव अनवच्छिन्नस्य अवच्छिन्नेभ्यो बुद्ध्यादिभ्यो भेदाग्रहात्, तदध्यासेन जीवभाव इति । तस्य चानिदमि-मात्मनोऽस्मत्प्रत्ययविषयत्वमुपपद्यते । तथाहि – कर्ता भोक्ता चिदात्माऽहंप्रत्यये प्रत्यवभासते । न चोदासीनस्य तस्य क्रियाशक्तिर्भोगशक्तिर्वा संभवति । यस्य च बुद्ध्यादेः कार्यकारणसंघातस्य क्रियाभोगशक्ती न तस्य चैतन्यम् । तस्माच्चिदात्मैव कार्यकारण-संघातेन ग्रथितो लब्धक्रियाभोगशक्तिः, स्वयंप्रकाशोऽपि बुद्ध्यादिविषयविच्छुरणात्, कथंचिदस्मत्प्रत्ययविषयोऽहंकारास्पदं जीव इति च, जन्तुरिति च क्षेत्रज्ञ इति चाख्यायते । न खलु जीवश्चिदात्मनो भिद्यते । तथाच श्रुतिः- 'अनेन जीवेनात्मना' इति । तस्माच्चिदात्मनोऽव्यतिरेकाज्जीवः स्वयंप्रकाशोऽप्यहंप्रत्ययेन कर्तृभोक्तृतया व्यवहार-योग्यः क्रियत इत्यहंप्रत्ययालम्बनमुच्यते । न चाध्यासे सति विषयत्वं विषयत्वे चाध्यास इत्यन्योन्याश्रय (त्व) मिति सांप्रतं, बीजाङ्कुरवदनादित्वात्, पूर्वपूर्वाध्यासतद्वासना-विषयीकृतस्योत्तरोत्तराध्यासविषयत्वाविरोधादित्युक्तम् – 'नैसर्गिकोऽयं लोकव्यवहारः' इति भाष्यग्रन्थेन । तस्मात् सुष्ठूक्तम् – न तावदयमेकान्तेनाविषय इति । जीवो हि चिदात्मतया स्वयंप्रकाशतयाऽविषयोऽप्यौपाधिकेन रूपेण विषय इति भावः ।

(ಇಲ್ಲಿ ಉಲ್ಲೇಖಿಸಿದ ಭಾಮತಿಯ ವಾಕ್ಯಗಳು ಭಾಮತಿಯಲ್ಲಿ ಒಟ್ಟಿಗೆ ಇರುವುದಿಲ್ಲ. ಅಲ್ಲಲ್ಲಿ ಇದ್ದವನ್ನು ಸಂಗ್ರಹಿಸಿ ಉಲ್ಲೇಖಿಸಲಾಗಿದೆ. ಒಂದೊಂದು ವಾಕ್ಯಗಳು ಬೇರೆ ಬೇರೆ ಕಡೆ ಇರುವ ವಿಷಯವನ್ನು ಮುಂದೆಯೂ ಹೀಗೆಯೇ ತಿಳಿಯಬೇಕು. ಓದುಗರು ಇದನ್ನು ಅವಶ್ಯ ಗಮನಿಸಬೇಕು.)

ಸಂಪೂರ್ಣಚಂದ್ರಿಕಾ

ಪ್ರಯೋಜನವೆನ್ನಬೇಕು. ಇದು ಆತ್ಮಜ್ಞಾನದಿಂದಷ್ಟೇ ನಿವೃತ್ತವಾಗುತ್ತದೆ. ಆದರೆ ನಮಗೆ 'ಅಹಂ' ಎಂದು ನಿತ್ಯವಾಗಿ ಆತ್ಮಜ್ಞಾನ ಬರುತ್ತಿದ್ದರೂ ಅಜ್ಞಾನವು ನಿವೃತ್ತಿಯಾಗುತ್ತಿಲ್ಲ.

ಶಂಕೆ - 'ನಾನು ಕರ್ತಾ' ಭೋಕ್ತಾ, ಸ್ಥೂಲ, ದುಃಖೀ, ಇತ್ಯಾದಿಯಾಗಿ ಕರ್ತೃತ್ವ ಭೋಕ್ತೃತ್ವ ವಿಶಿಷ್ಟನಾದ ಆತ್ಮನ ಅನುಭವ ಬರುತ್ತಿದೆ. ಆದರೆ ವೇದಾಂತವು ಇದಕ್ಕೆ ವಿರುದ್ಧವಾಗಿ ಆತ್ಮನನ್ನು ಪ್ರತಿಪಾದಿಸುತ್ತಿರುವುದರಿಂದ ವೇದಾಂತಪ್ರತಿಪಾದ್ಯನು ಸಂದಿಗ್ಧನಾದ. ಹಾಗಾಗಿ ವಿಷಯಾದಿಗಳು ಸಿದ್ಧವಾಗುತ್ತವೆ.

ಸಮಾಧಾನ - ವೇದಾಂತಗಳು 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನವಿಧಿಯಿಂದ ತಿಳಿಯಲ್ಪಟ್ಟ ಅರ್ಥಜ್ಞಾನರೂಪಪ್ರಯೋಜನವುಳ್ಳವುಗಳಾಗಿದ್ದರೂ ಸಹ ಪ್ರತ್ಯಕ್ಷಬಾಧಿತವಾಗಿವೆ. ಆದ್ದರಿಂದ ವೇದಾಂತಗಳಿಗೆ ಯಾವ ವಿಷಯದಲ್ಲೂ ತಾತ್ಪರ್ಯವಿಲ್ಲ. ಕೇವಲ ಜಪದಲ್ಲಿ ಮಾತ್ರ ಅದರ ಉಪಯೋಗ. ಹಾಗಾಗಿ ವೇದಾಂತವಿಚಾರವನ್ನು ಆರಂಭಿಸ ಬೇಕಿಲ್ಲವೆಂದು ಪೂರ್ವಪಕ್ಷ.

ಸಿದ್ಧಾಂತ - ಕೇವಲ ಜ್ಞಾನಾನಂದಸ್ವರೂಪಿಯೂ, ಅದ್ವಿತೀಯನೂ, ಉದಾಸೀನಸ್ವಭಾವನೂ ಆದ ಆತ್ಮನು ವೇದಾಂತವಾಕ್ಯಗಳ ಉಪಕ್ರಮಾದಿಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ. ಉಪಕ್ರಮದಲ್ಲಿ ಮಾತ್ರವಲ್ಲದೆ ಪುನಃ ಪುನಃ ಮಧ್ಯ ಮಧ್ಯದಲ್ಲಿಯೂ ಇಂತಹ ಆತ್ಮನನ್ನೇ ವೇದಾಂತವಾಕ್ಯಗಳು ಪ್ರತಿಪಾದಿಸುತ್ತಿವೆ. ಈ ವಾಕ್ಯಗಳಿಗೆಲ್ಲ ಗೌಣಾರ್ಥ ಮಾಡುವುದು ಸೂಕ್ತವಲ್ಲ.

ಪ್ರತ್ಯಕ್ಷವಾದರೂ ಸಹ ದೋಷದ ಸಂಭಾವನೆಯನ್ನು ಹೊಂದಿದೆ. ಹಾಗಾಗಿ ಪ್ರತ್ಯಕ್ಷವು ಅಪೌರುಷೇಯವಾದ ನಿರ್ದುಷ್ಟಾಗಮದಿಂದ ಬಾಧ್ಯವಾಗುತ್ತದೆ. ಆದ್ದರಿಂದ ವೇದಾಂತವೇದ್ಯನಾದ ಶುದ್ಧಬ್ರಹ್ಮನು 'ಅಹಂ' ಪ್ರತ್ಯಯದಲ್ಲಿ ತೋರುವುದಿಲ್ಲವೆಂದು ವಿಷಯಾದಿಗಳು ಉಪಪನ್ನ-ವಾಗುತ್ತವೆ.

### ಕಠಿಣಪದಾರ್ಥ

**ತತ್ರ** = ದೂಷ್ಯವಾದ ಮತಗಳ ಮಧ್ಯದಲ್ಲಿ. **ಪ್ರತ್ಯಗಾತ್ಮನ ಏವ** = ದೇಹದ ಒಳಗಿರುವ ಆತ್ಮನೇ. **ಬ್ರಹ್ಮತ್ವಾತ್** = ಬ್ರಹ್ಮನಾಗಿರುವುದರಿಂದ. **ತಸ್ಯಚ** = ದೇಹದ ಒಳಗಿರುವ ಆತ್ಮನಾದರೂ. **ನ ವಿಷಯತ್ವಮ್** = ವಿಷಯನಾಗುವುದಿಲ್ಲ. (ಬೆಳಕಿನ ಮಧ್ಯದಲ್ಲಿರುವ ವಸ್ತುವಿನ ಬಗ್ಗೆ ಯಾರೂ ಜಿಜ್ಞಾಸೆ ಮಾಡುವುದಿಲ್ಲ.) **ಉಪಕ್ರಮಾದಿಭಿಃ** = ಉಪಕ್ರಮ, ಉಪಸಂಹಾರಗಳಿಂದ. **ಕ್ರಿಯಾಸಮಭಿಹಾರೇಣ** = ಪುನಃ ಪುನಃ (ಮತ್ತೆ ಮತ್ತೆ). **ದೃಗಾತ್ಮತತ್ತ್ವಂ** = ಜ್ಞಾನಾನಂದಾದಿಸ್ವರೂಪವಾದ 'ಆತ್ಮ' ಎಂಬ ತತ್ತ್ವವನ್ನು. **ಅಭಿದಧತಿ** = ಪ್ರತಿಪಾದಿಸುತ್ತಾ (ಶತೃಪ್ರತ್ಯಯಾಂತ ಶಬ್ದ). **ತತ್ಪರಾಣಿ ಸಂತಿ** = ಆತ್ಮತತ್ತ್ವವನ್ನು ಪ್ರತಿಪಾದಿಸುವುದರಿಂದಲೇ ಆತ್ಮತತ್ತ್ವದಲ್ಲಿ ತಾತ್ಪರ್ಯವುಳ್ಳವುಗಳಾಗಿವೆ.

*ಜಿಜ್ಞಾಸಾಧಿಕರಣ*

**प्रकाशः** – भाष्ये अधिकरणशरीरस्यास्पष्टत्वात् तद्विवरणपरयोः वाचस्पत्यविवरणयोः स्पष्टत्वेनादौ वाचस्पत्योक्तमधिकरणप्रकारं दूषयितुमनु- वदति – तत्रेति । दूष्येषु मध्य इत्यर्थः ।। प्रत्यगात्मन एवेति ।। अतिरिक्त-ब्रह्मसत्त्वं मानाभावादिति भावः ।। न विषयत्वमिति ।। नहि स्फीतालोकमध्य-मध्यासीनं कश्चिज्जिज्ञासत इति भावः ।

नाविवक्षितार्थत्वं वेदान्तानामाशङ्कितुं शक्यम् । ''स्वाध्यायोऽध्येतव्यः'' इत्यध्ययनविधेर्दृष्टार्थत्वेन तेन सर्वस्य वेदस्य फलवदर्थावबोधनपरत्वापादनस्य ''अथातो धर्मजिज्ञासा'' इत्यत्र निर्णीतत्वादित्यत आह – अध्ययनेत्यादि ।। अविवक्षितार्थत्वे अध्ययनं व्यर्थम्, इत्यत आह – जपमात्रेति ।। क्रियासमभिहारेण पौनःपुन्येन । ज्ञानानंदादिस्वरूपमात्मतत्वमभिदधानानि । अत एव तत्र तात्पर्यवत्त्वेन विद्यमानानीत्यर्थः ।

प्रत्यक्षबाधाद् युक्तमित्युक्तमित्यत[1] आह – प्रत्यक्षं त्विति ।। शुक्तिरूप्यादौ व्यभिचारदर्शनादिति भावः । बाधकत्वे हेतुः निर्दोषेणेति ।। तत्र हेतुः अपौरुषेयेणेति ।। नन्वत्र ''शुद्धो न भाति'' इत्यादिना सिद्धान्तांशस्यैवाग्रे दूष्यत्वेन तावन्मात्रमेवानुवदनीयम् । नतु पूर्वपक्षोऽपि । तथाच ''परोक्ते दूष्य एवांशः'' इति प्रतिज्ञाव्याकोप इति चेन्न । सिद्धान्तस्य पूर्वपक्षसापेक्षत्वेन तदननुवादे सिद्धांतमात्रानुवादायोगात् । यद्वा सिद्धान्ते दूषिते पूर्वपक्षोऽपि दूषितप्राय इत्यभिप्रेत्य तदनुवादः । ''निर्विशेषे स्वयं भाते किमज्ञानावृतं भवेत्'' इत्यनुव्याख्यानं हृदि कृत्वाऽनूदितं दूषयति ।

गुरुराजीय – प्रसिद्धेषु कुभाष्योक्तेष्वधिकरणेषु सत्सु तद्विरुद्धं स्वीयमधिकरणं बुद्धिस्थं न भवतीत्यतोऽनुवादपूर्वकं तानि निराकर्तुमुत्तरो ग्रन्थः । तत्र भामत्युक्त-मधिकरणशरीरं दर्शयति – तत्रेति ।। तत्र दूष्येषु मध्ये ।। प्रत्यगात्मन एवेति ।। तदतिरिक्तब्रह्मसत्त्वे मानाभावादिति भावः ।। न विषयत्वमिति ।। स्फीतालोक-मध्यवर्तिनो घटस्य जिज्ञास्यत्वादर्शनादिति भावः । ननु नाविक्षितार्थत्वं वेदान्तानां

---

(१) बाधादयुक्तमित्युक्तमित्यपि पाठः

शक्तुं शक्यम् । अध्ययनविधेर्दृष्टार्थत्वेन सर्ववेदस्यार्थज्ञानपर्यंततायाः सिद्धत्वादित्यत उक्तम् – अध्ययनविधीति ।। नन्वर्थज्ञानस्य सुखदुःखाभावेतरत्वान्न पुरुषार्थत्व-मित्यत उक्तम् । ''प्रयोजनवत्'' इत्यर्थावबोधविशेषणम् । नन्वविवक्षितार्थत्वे वेदान्तानां तदध्ययनवैयर्थ्यमित्यत उक्तम् – जपमात्रोपयोगितयेति ।। ननु च उप-क्रमादिलिङ्गैर्निर्णीततात्पर्यत्वाद् वेदान्तानां नाविवक्षितार्थत्वं युक्तमित्यत आह – उपचरितार्थत्वाद्वेति ।। प्रत्यक्षविपरीतार्थप्रतिपादनकल्पने प्रमाणाभावादुपक्रमादे-स्तात्पर्यमात्रनिश्चायकत्वेनार्थे तथात्वानिश्चायकत्वादिति भावः ।

प्रमाणलक्षणे प्रथमपादे प्रथमाधिकरणे चिन्तितम् ''अथातो धर्मजिज्ञासा । चोदनालक्षणोऽर्थो धर्मः'' इत्यारभ्य ''अन्वाहार्ये च दर्शनात्'' इत्येतदन्तं शास्त्रमस्य विषयः । तत्रैतन्मतद्वयम् । 'अध्ययनविधिरक्षरग्रहणमात्रपर्यवसायि' इति केचित् । अपरे तु 'अर्थज्ञानरूपदृष्टप्रयोजनायेदमध्ययनं विधीयते । अर्थज्ञानं च विचारमन्तरेण न सम्भवति । ततो विधिर्विचारशास्त्रस्य प्रयोजकः' इति ।

अत्र 'विचारशास्त्रमनारम्भणीयमारम्भणीयं वा' इति चिन्ता । तदर्थम् 'अधीत्य स्नातव्यम्' वा 'धर्मजिज्ञासया गुरुगृहेऽवस्थातव्यम्' वेति । तदर्थमपि 'स्वाध्या-याध्ययनविधिरदृष्टार्थमध्ययनं विधत्ते उत दृष्टार्थम्' इति । यद्यदृष्टार्थं स्वाध्यायाध्ययनं विधीयते ततस्तन्मात्रेणैव शास्त्रसमाप्तेः ''अधीत्य स्नायात्'' इति वचनबलेन समावर्तितव्यम् । अवैधश्चायं विचारो नारम्भणीयः । यदि च अक्षरग्रहणपरम्परोप-जायमानवाक्यार्थज्ञानायाध्ययनं विधीयते ततस्तस्य विचारमन्तरेणासम्भवाद-ध्ययनविधिनैवार्थाद् विचारो विहित इति विचारयितव्यो धर्म इति विचारशास्त्रमारम्भणीयम् ।

तत्र,

विनापि विधिना ज्ञानलाभान्न हि तदर्थता ।
कल्प्यस्तु विधिसामर्थ्यात् स्वर्गो विश्वजिदादिवत् ।।

तथाहि । अदृष्टार्थ एवायमध्ययनविधिर्न दृष्टार्थः । विनैव विधिनाऽध्य-यनस्यार्थज्ञानहेतुताया लोकसिद्धत्वेन विध्यनपेक्षिततयाऽपूर्वविधित्वानुपपत्तेः । नचावघातविधिवन्नियमार्थता । लिखितपाठादिनाऽर्थज्ञानसम्भवे गुरुपूर्वकाध्ययनेनैव एतत् कुर्यादिति तत्सम्भवादिति वाच्यम् । अवघातो हि दर्शाद्यपूर्वे नियम्यते

अवघातनिष्पन्नैरेव तण्डुलैरपूर्वं सिद्ध्यतीति । न तण्डुलस्वरूपे । विनाऽप्यवघातं तण्डुलस्वरूपसिद्धेर्मानान्तरगृहीतत्वेन तद्विरोधात् । नचेह तथा । विनाऽप्यध्ययनं लिखितपाठादिनापि ज्ञानदर्शनेन तत्स्वरूपे नियमासम्भवात् । नच तद्वदवघातस्य दर्शाद्यपूर्व इव क्रत्वपूर्वे नियमोऽस्तु 'अधीतैरेव वेदैरवगतानि कर्माणि फलवन्ति' इति तत्सम्भवादिति वाच्यम् । अनारभ्याधीततया अध्ययनस्याक्रत्वर्थत्वात् । नाप्यध्ययनस्य क्रत्वर्थत्वे श्रुत्यादिकं मानमस्ति । तस्माद् दृष्टार्थत्वेऽपूर्वं नियमनासम्भवान्न दृष्टार्थत्वम् ।

किञ्च "अधीत्य स्नायात्" इत्यध्ययनस्नानयोर्नैरन्तर्यं बोधयन्ती स्मृतिरन्तराऽर्थज्ञानसम्पादनायासंविरुणद्धि । ततोऽपूर्वद्वारा स्वर्गार्थमध्ययनं विधीयत इति विचारस्य वैधत्वाभावाद् विचारशास्त्रमनारम्भणीयम् । उच्यते ।

"लभ्यमाने फले दृष्टे नादृष्टपरिकल्पना ।
विधेश्च नियमार्थत्वान्नानर्थक्यं भविष्यति" इति ।

यदुक्तं 'ज्ञानस्वरूपे क्रत्वपूर्वे वा न नियमः सम्भवति' इति तदनुमन्यामहे । किन्तु 'योऽयमग्निहोत्रादिष्वधीतवेदानां त्रैवर्णिकानामेवाधिकारो नानधीतवेदानां शूद्राणाम्' इत्यधिकारनियमः सप्रयोजनमध्ययनविधेः । तथाहि । असत्यध्ययनविधावग्निहोत्रादिशास्त्राणि विद्वांसमलभमानान्यविद्वांसमेवाधिकृत्य विद्यामन्तरेणानुष्ठानासम्भवाद् विद्यामाक्षिपन्त्य विशेषाच्चतुरो वर्णानधिकुर्युः । सति त्वध्ययनविधौ त्रैवर्णिकानामेव विदुषामधिकारो भवति न तुरीयस्य ।

तथाहि । 'वसन्ते ब्राह्मणमुपनयीत' इत्यादौ द्वितीयानिर्देशादुपनयनसंस्कारकर्मत्वम् । संस्कृताश्च त्रैवर्णिकाः किमस्माभिः कर्तव्यमित्यपेक्षंते । शेषस्य परार्थत्वात् । तदाश्रयत्वात् तेषाम् । तत्संनिधौ चाध्ययनमनिर्दिष्टकर्तृकं विधीयमानं कर्तारमपेक्षते । तत्राकाङ्क्षासन्निधियोग्यत्वैरेवं ज्ञाप्यते त्रैवर्णिकैरेवोपनीतैरध्ययनेनाक्षरग्रहणादिपरंपरयाऽर्थज्ञानं कर्तव्यमिति । एवंच फलवदध्ययनकर्तृभूतमाणवकसंस्कारत्वादुपनयनमध्ययनाङ्गम् । अध्ययनमपि दृष्टफलज्ञानार्थम् । अर्थज्ञानं त्वनुष्ठानौपयिकत्वात् प्रसिद्धफलमेवेति सर्वेषां फलवत्त्वम् । एवंच त्रैवर्णिकेषु विद्वत्सु लब्धेषु न चतुर्थस्य विद्यामाक्षिपंत्यग्निहोत्रादीनि । किन्तु त्रैवार्णिकानेव

विदुषोऽधिकुर्वीति । ततोऽग्निहोत्रादिकर्मानुष्ठानौपयिकार्थज्ञानावसानमध्ययनमध्ययन-विधिना विधीयत इति विचारमन्तरेणार्थज्ञानानुपपत्तेरध्ययनविधिरेव विचारमाक्षि-पत्स्मार्तमध्ययनसमावर्तनयोर्नैरन्तर्यं बाधत इति सिद्धम् ।। अध्ययनानन्तरं वैधो विचारः कर्तव्य इति विचारशास्त्रमारम्भणीयमिति ।।

उपक्रमादिभिरिति ।। आदिपदेन परामर्शोपसंहारयोः परिग्रहः । परामर्शो नाम मध्ये निर्देशो बोध्यः ।। क्रियासमभिहारेणेति ।। क्रियासमभिहारः पौनःपुन्यम् । तेन ज्ञानानन्दादिस्वरूपमात्रमात्मतत्वमभिदधानानि अत एव तत्र तात्पर्यवत्त्वेन विषमानानि सन्तीत्यर्थः ।। उपचरितार्थानीति वक्तुमिति ।। अभ्यासे हि भूयस्त्व-मर्थस्य भवति । यथा 'अहो दर्शनीया अहो दर्शनीया' इति । न न्यूनत्वं नाल्पत्वमपीति भावः । ननु तथाप्यहंप्रत्ययबाधितत्वादुपचरितार्थत्वं वेदान्ता-नामस्त्येयम् इत्यत आह – प्रत्यक्षं त्विति ।। प्रत्यक्षस्य बाध्यत्वोपादनाय 'सम्भावितदोषम्' इत्युक्तम् । पौरुषेयतया सम्भावितेत्यर्थः । आगमस्य बाधकत्वोपपादनाय – निर्दोषेणेति ।। तत्र हेतुरपौरुषेयेणेति ।।

ननु 'यजमानः प्रस्तरः' इत्यादेरिव वेदान्तानामपि प्रबलाहंप्रत्ययबाधितत्वा-दुपचरितार्थत्वे शङ्किते कथं सिद्धान्ते वेदान्तानामेव प्रत्यक्षबाधकत्वाभिधानम् । वेदान्तवाक्येष्विव यजमानप्रस्तरादिवाक्येऽप्यपूर्वतादितात्पर्यलिङ्गसद्भावेन तस्यापि यजमानप्रस्तरभेदग्राहकप्रत्यक्षबाधकत्वापातादिति चेन्न । 'स्थूलोऽहम्' इत्यादिपरो-दाहृतप्रत्यक्षस्य 'नाहं स्थूलः' इत्यादिप्रत्यक्षेणैव बाधिततया तत्सजातीयस्य 'कर्ता भोक्ता सुखि' इत्यादिप्रत्यक्षस्यापि दोषशङ्काकलंकिततया वेदान्तानां तद्बाधकत्वोपपत्तावपि प्रस्तरयजमानभेदग्राहकप्रत्यक्षे कुत्रापि प्रत्यक्षेण बाधादृष्ट्याऽऽगममात्रेण प्रत्यक्षबाधयोगात् । "यजमानं सुवर्गं लोकं गमयति यदेतैः प्रस्तरं प्रहरति" इति वाक्यशेषपर्यालोचनयापि तत्रोपचारस्यैवावगमात् । वेदान्त-वत्तात्पर्यलिङ्गाभावाच्च युक्तः प्रत्यक्षेण तद्बाध इत्येवं वैषम्यस्यात्र सिद्धान्तेऽभि-प्रेतत्वात् । अत एव स्थूलोऽहमित्यादित्वेनैवोपन्यासः कृत इति ध्येयम् । विषयादिसिद्धिरितीति ।। तथाचाहंप्रत्यये सत्यपि विषयज्ञानाभावात् न फलानुपलंभबाध इति विषयसिध्यैव फलमपि सिध्यतीत्यर्थः । यद्यपि 'परोक्ते दूष्य एवांशः' इति प्रतिज्ञानुरोधेन सिद्धान्तमात्रमेवानुवदनीयम् । 'शुद्धो न भाति'

**इत्युत्तरग्रन्थेन सिद्धान्तांशस्यैव दूष्यत्वात् । तथापि सिद्धान्तस्य पूर्वपक्षसापेक्षत्वेन तदननुवादे सिद्धान्तमात्रानुवादायोगात् पूर्वपक्षांशोऽप्यनूदितो नतु तस्यापि दूषणीयत्वाभिप्रायेणेति ध्येयम् ।**

**ವಿವರಣೆ** - ಪರರು ಹೇಳುವ ಜಿಜ್ಞಾಸಾಧಿಕರಣದ ರಚನೆಯನ್ನು ಅನುವಾದಿಸಲು ಪ್ರಾರಂಭಿಸಿದ್ದಾ ವಾಸ್ತವಿಕವಾಗಿ ಶಾಂಕರಭಾಷ್ಯದಲ್ಲಿರುವ ಅಧಿಕರಣಶರೀರವನ್ನೇ ಅನುವಾದ ಮಾಡಬಹುದಿತ್ತು. ಆದ ಜಿಜ್ಞಾಸಾಧಿಕರಣಸ್ವರೂಪವು ಶಾಂಕರಭಾಷ್ಯದಲ್ಲಿ ಸ್ಪಷ್ಟವಾಗಿಲ್ಲ. ವಾಚಸ್ಪತ್ಯ,ವಿವರಣಗಳಲ್ಲಿ ಸ್ಪಷ್ಟವಾಗಿದೆ ಮೊದಲು ವಾಚಸ್ಪತ್ಯದಲ್ಲಿ ಹೇಳಿದ ಜಿಜ್ಞಾಸಾಧಿಕರಣದ ರಚನೆಯ ಪ್ರಕಾರವನ್ನು ಖಂಡಿಸಲು ಅನುವಾ ಮಾಡುತ್ತಿದ್ದಾರೆ. 'ತತ್ರ' ಎಂದರೆ ದೂಷ್ಯವಾದ ಅನೇಕ ಪಕ್ಷಗಳ ಮಧ್ಯದಲ್ಲಿ 'ಪ್ರತ್ಯಗಾತ್ಮನಃ ಏವ' ಇಲ್ಲಿರುವ 'ಏವ' ಕಾರದಿಂದ ಜೀವನಿಗಿಂತ ಅತಿರಿಕ್ತನಾದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಿಲ್ಲವೆಂದು ತಿಳಿಸಿದ್ದಾರೆ.

**ಶಂಕೆ** - ಪ್ರತ್ಯಗಾತ್ಮನು 'ಅಹಂ' ಎಂದು ನಿತ್ಯಸಿದ್ಧನಾದ್ದರಿಂದ ವಿಷಯನಾಗಲಾರ - ಬೆಳಕಿನ ಮಧ್ಯದಲ್ಲಿರುವ ಘಟದ ಬಗ್ಗೆ ಯಾರೂ ವಿಚಾರ ಮಾಡಲಾರರು. ಅದರಂತೆ ಆತ್ಮ ವಿಚಾರವೂ ಅನಾವಶ್ಯಕ.

**ಸಮಾಧಾನ** - ಎಲ್ಲರಿಗೂ 'ನಾನು ಕರ್ತಾ' 'ನಾನು ಭೋಕ್ತಾ' ಎಂಬ ಅನುಭವವಿದ್ದರೂ ವೇದಾಂತವು ಇದಕ್ಕೆ ವಿರುದ್ಧವಾಗಿ ಯಾವ ಧರ್ಮವೂ ಆತ್ಮನಲ್ಲಿಲ್ಲವೆನ್ನುತ್ತಿದೆ ಆದ್ದರಿಂದ ವಿರುದ್ಧವಾ ಮಾತುಗಳಿರುವುದರಿಂದ ಆತ್ಮನ ಸ್ವರೂಪದ ಬಗ್ಗೆ ಸಂಶಯ ಬರುವುದರಿಂದ ವೇದಾಂತಕ್ಕೆ ಆತ್ಮ ವಿಷಯನಾಗಬಹುದು. ಇಂತಹ ಆತ್ಮನು ವೇದಾಂತದ ವಿಷಯನಾಗಬಹುದು.

**ಶಂಕೆ** - ಅನುಭವವು ಪ್ರಬಲವಾದ್ದರಿಂದ ಅದರ ವಿರುದ್ಧವಾಗಿ ಹೇಳುವ ವೇದಾಂತವು ಬಾಧಿತವಾಗುತ್ತದೆ. ಹಾಗಾದರೆ ವೇದಾಂತವೇ ವ್ಯರ್ಥವೆನ್ನಬಾರದು. ಜಪಕ್ಕೆ ಉಪಯೋಗಿಯಾಗು-ವುದರಿಂದ ಸಾರ್ಥಕವಾಗುತ್ತದೆ.

**ಸಮಾಧಾನ** - 'ವೇದಾಂತಗಳು ವಿವಕ್ಷಿತಾರ್ಥ (ಮೇಲ್ನೋಟದ ಅರ್ಥ)ವುಳ್ಳವುಗಳಲ್ಲ, ಜಪಮಾತ್ರ ಉಪಯೋಗಿಯಾಗಿರುವಂತಹವು' ಎಂದು ಹೇಳಿದರೆ ಪೂರ್ವಮೀಮಾಂಸಾ ಸೂತ್ರದ ವಿರೋಧ ಬರುತ್ತದೆ. 'ಅಥಾತೋ ಧರ್ಮಜಿಜ್ಞಾಸಾ' ಎಂಬ ಪೂರ್ವಮೀಮಾಂಸಾಸೂತ್ರದಲ್ಲಿ ಧರ್ಮದ ಬಗ್ಗೆ ವಿಚಾರ ಮಾಡಬೇಕಾದರೆ ಮೊದಲು ವೇದಾಧ್ಯಯನ ಮಾಡಿರಲೇಬೇಕೆಂದು ಹೇಳಿದೆ - ವೇದಾಧ್ಯಯನ ಮಾಡಬೇಕೆಂದು 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬಲ್ಲಿ ಹೇಳಲಾಗಿದೆ. ಈ ಅಧ್ಯಯನವಿಧಿ ದೃಷ್ಟಫಲವನ್ನೇ ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪಿಸಬಾರದು. ದೃಷ್ಟಫಲವೆಂದರೆ ವೇದಾರ್ಥಗಳನ್ನು ತಿಳಿದುಕೊಳ್ಳುವಿಕೆ, ಇದನ್ನು ಬಿಟ್ಟು ಅದೃಷ್ಟಫಲಕವಾದ ಜಪದಲ್ಲಿ ಉಪಯೋಗ ಎಂದು ಹೇಳುವುದು ಸರಿಯಲ್ಲ.

*ಪರಿಪೂರ್ಣಚಂದ್ರಿಕಾ*

**ಶಂಕೆ** - ಏನೇ ಆಗಲಿ, ಪ್ರಬಲವಾದ ಅನುಭವವಿರೋಧವಿರುವುದರಿಂದ ವೇದಾಂತವು ಬಾಧಿತವೆಂದು ಹೇಳಲೇಬೇಕು. ವಿವಕ್ಷಿತಾರ್ಥದಲ್ಲಿ ತಾತ್ಪರ್ಯವನ್ನು ಹೇಳಬಾರದು. ಕೇವಲ ಜಪದಲ್ಲಿ ಉಪಯೋಗವೆಂದೇ ಹೇಳಬೇಕು.

## ಅಥಾತೋ ಧರ್ಮಜಿಜ್ಞಾಸಾ (೧-೧-೧)

ಪೂರ್ವಮೀಮಾಂಸಾಶಾಸ್ತ್ರಕ್ಕೆ ಆರಂಭಣೀಯತ್ವವನ್ನು ಈ ಸೂತ್ರವು ಸಮರ್ಥಿಸುತ್ತಿದೆ. ಆದ್ದರಿಂದ ಚೋದನಾಲಕ್ಷಣಾರ್ಥೋ ಧರ್ಮಃ ಎಂಬ ಎರಡನೆಯ ಸೂತ್ರದಿಂದ ಪ್ರಾರಂಭಿಸಿ 'ಅನ್ವಾಹಾರ್ಯ ಚ ದರ್ಶನಾತ್' ಎಂಬ ಸೂತ್ರದ ತನಕ ಇರುವ ಪೂರ್ವಮೀಮಾಂಸಾಶಾಸ್ತ್ರಕ್ಕೆ ಆರಂಭಣೀಯತ್ವವು ಈ ಸೂತ್ರದಿಂದ ಸಿದ್ಧವಾಗುತ್ತದೆ. ಉಪೋದ್ಘಾತರೂಪದಿಂದ ಆರಂಭಣೀಯತ್ವವು ನಿರ್ಣಯವಾದ ಮೇಲೆ ಮೀಮಾಂಸಾಶಾಸ್ತ್ರವು ಪ್ರಾರಂಭವಾಗುತ್ತದೆ[1].

---

(१) अथ श्रीराघवेन्द्रतीर्थयतिसार्वभौमविरचितः ।। भाट्टसंग्रहः ।।

मङ्गलाचरणम्

नत्वा धर्मं वेदगम्यं जैमिन्यादिमुनीनपि ।
करोमि बालबोधाय भाट्टोक्तन्यायसंग्रहम् ।। १ ।।

अथ प्रथमं धर्मजिज्ञासाधिकरणम्

इह खल्वध्ययनादिसम्पत्तिमदधिकारिणामनुष्ठानद्वारा निःश्रेयसहेतुवेदार्थभूतधर्मस्वरूपनिर्णयाय वेदेतिकर्तव्यतारूपन्यायनिबन्धनात्मकं शास्त्रं प्रणिनाय भगवान् जैमिनिः । तत्राध्याया द्वादश, तृतीयषष्ठदशमा अष्टपादाः, सहस्रमधिकरणानीति प्रसिद्धिः । एवमतिगहनात्मकैतच्छास्त्रस्य विषयादिमत्त्वोपपादनेनाऽरम्भणीयत्वसमर्थनार्थमिदमादिमं सूत्रम् ।

अथातो धर्मजिज्ञासा ।। १ ।।

अत्र अध्ययनविधिवाक्यं विचार्यते । लिङ्लोट्तव्यप्रत्ययलेटामन्यतमयुक्तं वाक्यं विधिवाक्यमुच्यते । लिङादिरूपविध्यर्थस्तु प्रवर्तनापरपर्यायभावना । सा च फलकरणेतिकर्तव्यतारूपांशत्रयवती । अत्र 'स्वाध्यायोऽध्येतव्यः' इत्यादिविधिवाक्यं विषयः । स्वाध्यायो नाम क्रमविशेषविशिष्टवर्णराशिः । तद्विषयकगुरूच्चारणानूच्चारणमध्ययनम् । तव्यप्रत्ययस्य भावनार्थः । तथाच स्वाध्यायगोचराध्ययनेन स्वर्गं भावयेदुत्पादयेदित्यर्थः उतार्थज्ञानं भावयेदुत्पादयेत् इत्यर्थः इति सन्देहः । पूर्वपक्षस्तु फलांशे भावनायास्तु प्रत्ययो न विधायकः इति भट्टोक्त्या वाक्यार्थज्ञानोद्देशेन अध्ययनं विधीयत इति वाच्यम् । तत्राध्ययनार्थज्ञानयोर्हेतुहेतुमद्भावस्यान्वयव्यतिरेकाभ्यां भारताध्ययनादौ दृष्टत्वेन विध्यनपेक्षणात् । नचापूर्वविधित्वाभावेऽप्यर्थज्ञानमध्ययनेनैव सम्पाद्यम्, न लिखितावलोकनादिनेत्येवंरूपनियमविधिरस्त्विति वाच्यम् । अध्ययनजन्येन वा लिखितपाठादिना वा जातेन

ಹೀಗೆ ಸಮಗ್ರಮೀಮಾಂಸಾಶಾಸ್ತ್ರವೇ ಈ ಅಧಿಕರಣಕ್ಕೆ ವಿಷಯ. ಅದರಲ್ಲಿ ಮೊದಲನೇ ಸೂತ್ರವೂ ಸೇರಿರುವುದರಿಂದ ತನಗೂ ಆರಂಭಣೀಯತ್ವವನ್ನು ತಾನೇ ಸಮರ್ಥಿಸುತ್ತದೆ ಎಂದಾಯಿತು. ವಿಚಾರ ಮಾಡಿದರೆ ಇದು ತಪ್ಪಲ್ಲ. ಯಾವ ರೀತಿಯಾಗಿ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಸಮಗ್ರವೇದದ ಅಧ್ಯಯನವನ್ನು ವಿಧಿಸುವಂತೆ ತನ್ನ ಅಧ್ಯಯನವನ್ನೂ ವಿಧಿಸುತ್ತದೆಯೋ ಅದರಂತೆ ಈ ಸೂತ್ರಕ್ಕೆ ಸಮಗ್ರಶಾಸ್ತ್ರವು ವಿಷಯವಾದಂತೆ ತಾನೂ ವಿಷಯವಾಗುತ್ತದೆ.

ಗಮನೀಯ ವಿಷಯ - ಪೂರ್ವಮೀಮಾಂಸೆಯ ಹನ್ನೆರಡು ಅಧ್ಯಾಯಗಳಲ್ಲಿ ಪ್ರಧಾನವಾಗಿ ಹನ್ನೆರಡು ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಈ ಹನ್ನೆರಡು ಅಧ್ಯಾಯಗಳಲ್ಲಿ ಬಿಟ್ಟು ಹೋದ

---

अर्थज्ञानेनानुष्ठानसिद्धेर्न नियमविधौ हेतुरस्तीति द्विरूपस्यापि विधेरयोगात् । किञ्च 'अधीत्य स्नायात्' इत्यध्ययनस्नातकव्रतयोः श्रुतमानन्तर्यमर्थज्ञानभाव्यकत्वपक्षे अर्थज्ञानायाध्ययनानन्तरमपि गुरुकुल एव वासप्रसक्त्या बाध्येत ।

अतोऽश्रुतस्यापि स्वर्गस्य चतुर्थे 'स स्वर्गः स्यात् सर्वान् प्रत्यविशिष्टत्वात्' इति वक्ष्यमाणन्यायेन विश्वजिदादाविव कल्प्यतया स्वर्गभाव्यकत्वमेव युक्तमित्यर्थज्ञानहेतोर्न्यायानुसन्धानरूपविचारस्याकर्तव्यत्वात् तद्धेतुन्यायनिबन्धनात्मकमिदं शास्त्रं नाऽरम्भणीयमिति फलम् ।

सिद्धान्तस्तु दृष्टे सम्भवत्यदृष्टकल्पनायोगात् दृष्टार्थज्ञानफलकत्वमेवाध्ययनस्य युक्तम् । प्रागुक्तरीत्या अपूर्वविधित्वायोगेऽपि नियमविधित्वसम्भवात् । अन्यथा विध्यानर्थक्यापत्तेः । येन केनापि जातेनार्थज्ञानेनानुष्ठानद्वारा अशेषक्रतुजन्यापूर्वासिद्धेश्च । 'अधीत्य' इति वाक्ये अध्ययनस्नातकव्रतयोः पौर्वापर्यमात्रश्रवणेन अव्यवधानस्याश्रवणात् । श्रवणे वा अधीत्येत्यधिगम्येति व्याख्याने त्वविरोधता इति भट्टोक्त्या अधीत्येत्यस्य अध्ययनेनार्थमवगम्येति व्याख्यानेऽप्युपपत्तेः । अर्थज्ञानस्य विना विचारेणायोगात् तदर्थं न्यायनिबन्धनरूपमिदं शास्त्रमारभ्यमेवेति फलं ज्ञेयम् ।

सूत्रार्थस्तु, अथ अध्ययनानन्तरं, अतः अध्ययनस्य वृत्तत्वात् धर्मजिज्ञासा कर्तव्येति । एतेन शास्त्रस्य धर्मो विषयः । अनुष्ठानद्वारा स्वर्गादिपुमर्थहेतुत्वात् धर्मज्ञानं फलम् । अध्ययनवांस्त्रैवर्णिकोऽधिकारीति सूचितम् ।। १ ।।

।। इति प्रथमं धर्मजिज्ञासाधिकरणम् ।।

ಪ್ರಕಾಶವ್ಯಾಖ್ಯಾನದಲ್ಲಿ ನೀಡಿದ ಪೂರ್ವಮೀಮಾಂಸಾದೃಷ್ಟಾಂತಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಭಾಟ್ಟಸಂಗ್ರಹವನ್ನು ಅವಶ್ಯ ಓದಲೇ ಬೇಕು. ಅದಕ್ಕೋಸ್ಕರ ಭಾಟ್ಟಸಂಗ್ರಹದಲ್ಲಿ ರಾಯರು ರಚಿಸಿದ ಆಯಾ ಅಧಿಕರಣಶರೀರಗಳನ್ನು ಅಡಿಟಿಪ್ಪಣಿಯಾಗಿ ಉಲ್ಲೇಖಿಸಲಾಗಿದೆ. ಆದರೆ ಇದರ ಯಥಾವತ್ತಾದ ಕನ್ನಡಾನುವಾದವನ್ನು ಮಾಡಿಲ್ಲ. ಪ್ರಕಾಶವಾಕ್ಯಕ್ಕೆ ಮಾಡಿದ ಕನ್ನಡಾನುವಾದವನ್ನು ಓದಿಕೊಂಡು ಅನಂತರ ಭಾಟ್ಟಸಂಗ್ರಹವನ್ನು ಓದಿದರೆ ಅರ್ಥವಾಗುತ್ತದೆ.

ಪರಿಪೂರ್ಣಚಂದ್ರಿಕಾ

ವಿಷಯಗಳ ನಿರ್ಣಯವನ್ನು ಉಳಿದ ನಾಲ್ಕು ಅಧ್ಯಾಯಗಳಲ್ಲಿ ಮಾಡಲಾಗಿದೆ. ಈ ನಾಲ್ಕು ಅಧ್ಯಾಯಕ್ಕೆ ಸಂಕರ್ಷಕಾಂಡವೆಂದು ಹೆಸರು. ಈ ನಾಲ್ಕು ಅಧ್ಯಾಯಗಳು ನಾಲ್ಕು ಪಾದಗಳಿಂದ ಕೂಡಿವೆ. 'ತತ್ರ ತತ್ರ ಅನುಕ್ತಾನ್ ವಿಷಯಾನ್ ಸಂಗೃಹ್ಯ (ಸಂಕೃಷ್ಯ) ಕಥ್ಯತೇ ಇತಿ ಸಂಕರ್ಷಃ' ಎಂದು ಸಂಕರ್ಷಶಬ್ದದ ಅರ್ಥ. ಸಂಕರ್ಷಕಾಂಡಭಾಷ್ಯದಲ್ಲಿ ಸಂಕರ್ಷಶಬ್ದದ ನಿಷ್ಪತ್ತಿಯನ್ನು ಹೀಗೆ ಹೇಳಿದ್ದಾರೆ -

> ಸಿದ್ಧ್ಯರೇತೈಃ ಪ್ರಸಂಗಾಂತ್ಯೈಃ ಶ್ರುತಿಯೋಗಂ ಚ ದರ್ಶಯನ್ ।
> ಲಕ್ಷಣಾನಿ ಶ್ರುತಿಶ್ಚೈವ ಸಂಕೃಷ್ಯಾಥ ಜಗೇ ಮುನಿಃ ॥

ಹನ್ನೆರಡು ಅಧ್ಯಾಯಗಳಲ್ಲಿ ಹೇಳಿದ ಶ್ರುತ್ಯರ್ಥಗಳನ್ನು ನ್ಯಾಯಗಳನ್ನು ಜೈಮಿನಿಋಷಿಗಳು ಪುನಃ ಸಂಗ್ರಹಿಸುತ್ತಿದ್ದಾರೆ. ಆದ್ದರಿಂದ ಪೂರ್ವಮೀಮಾಂಸಾಶಾಸ್ತ್ರವು ಹದಿನಾರು ಅಧ್ಯಾಯಗಳಿಂದ ಕೂಡಿದ ಗ್ರಂಥವಾಗಿದೆ. ಹದಿನಾರನೆಯ ಅಧ್ಯಾಯದ ಕೊನೆಯ ಸೂತ್ರ 'ಯಥಾ ಯಾಜ್ಯಾ ಸಂಪ್ರಯಿಷೋ ಯಥಾಯಾಜ್ಯಾ ಸಂಪ್ರಯಿಷಃ' ಎಂದು ಪ್ರಕೃತ ಪ್ರಥಮಸೂತ್ರಕ್ಕೆ ಹದಿನಾರು ಅಧ್ಯಾಯಗಳೂ ವಿಷಯವೆಂದು ತಿಳಿಯಬೇಕು. (ಸಾಯಣಮಾಧವಾಚಾರ್ಯರು 'ಜೈಮಿನೀಯನ್ಯಾಯಮಾಲಾವಿಸ್ತರ' ಎಂಬ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿರುವ ಪಂಕ್ತಿಗಳಿಗೆ ಅನುಸಾರಿಯಾಗಿ ಗುರುರಾಜೀಯ ಟಿಪ್ಪಣಿಯಲ್ಲಿ ವ್ಯಾಖ್ಯಾನಿಸಲಾಗಿದೆ.)

ಎರಡು ಮತವಿದೆ. - ೧) 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವಿಧಿವಾಕ್ಯವು ಅಧ್ಯಯನವನ್ನು ವಿಧಿಸುತ್ತದೆ. ಅಧ್ಯಯನವೆಂದರೆ ಗುರೂಚ್ಚಾರಣಪೂರ್ವಕಅನುಚ್ಚಾರಣೆ ಮಾಡಿ ಪಡೆಯುವ ಅಕ್ಷರಜ್ಞಾನ.

೨) ಅರ್ಥಜ್ಞಾನವೆಂಬ ಪ್ರಯೋಜನಕ್ಕೋಸ್ಕರ ಸ್ವಾಧ್ಯಾಯದ ಅಧ್ಯಯನ ಮಾಡಬೇಕು. ಅರ್ಥಜ್ಞಾನ ಬರಬೇಕಾದರೆ ವಿಚಾರ ಮಾಡಬೇಕು. ಆ ವಿಚಾರಕ್ಕೋಸ್ಕರ ಪೂರ್ವಮೀಮಾಂಸೆಯು ಹೊರಟಿದೆಯೆಂದು ಕೆಲವರ ಮತ.

ವೇದಾಧ್ಯಯನಕ್ಕೆ ಎರಡು ಪ್ರಯೋಜನ ೧) ದೃಷ್ಟಪ್ರಯೋಜನ ೨) ಅದೃಷ್ಟಪ್ರಯೋಜನ = ಮೋಕ್ಷಾದಿ ಪುರುಷಾರ್ಥ. ಪುನಃ ಎರಡು ವಿಧ ೧) ಅಕ್ಷರ ಗ್ರಹಣ ೨) ಅರ್ಥಜ್ಞಾನ ಎಂದು. ಇವೆರಡರಲ್ಲಿ ಅರ್ಥಜ್ಞಾನವು ಮುಖ್ಯಪ್ರಯೋಜನ. ಅಕ್ಷರಗ್ರಹಣವು ಅಮುಖ್ಯಪ್ರಯೋಜನ. ಯಾವರೀತಿಯಾಗಿ ತೋಟದ ಮಾಲಿಕನು ಮಾವಿನ ಮರದಿಂದ ಹಣ್ಣನ್ನು ಮುಖ್ಯಪ್ರಯೋಜನವನ್ನಾಗಿ ಪಡೆಯುತ್ತಾನೆ. ನೆರಳು ಸುವಾಸನೆ ಮೊದಲಾದ ಅಮುಖ್ಯ ಪ್ರಯೋಜನಗಳನ್ನು ಪಡೆಯುತ್ತಾನೆ. ಅದರಂತೆ ವೇದಾಧ್ಯಯನದಿಂದ ಅರ್ಥಜ್ಞಾನವು ಮುಖ್ಯಪ್ರಯೋಜನವಾಗಿ ಅಕ್ಷರಗ್ರಹಣವು ಅಮುಖ್ಯಪ್ರಯೋಜನವಾಗಿ ದೊರೆಯುತ್ತದೆ. ಅರ್ಥಜ್ಞಾನಕೋಸ್ಕರ ಪೂರ್ವಮೀಮಾಂಸೆಯ ಅಧ್ಯಯನವನ್ನು ಮಾಡಲೇಬೇಕು.

ಈ ಎರಡು ಮತಗಳು ವಿರುದ್ಧ ವಿಷಯಗಳನ್ನು ಹೇಳುತ್ತಿರುವುದರಿಂದ ನಮಗೆ ಸಂಶಯ ಬರುತ್ತದೆ. - ಪೂರ್ವಮೀಮಾಂಸಾಶಾಸ್ತ್ರದ ಅಧ್ಯಯನ ಮಾಡಬೇಕೋ? ಬೇಡವೋ? ಎಂದು. ಈ

*ಜಿಜ್ಞಾಸಾಧಿಕರಣ*

ಸಂಶಯ ಪರಿಹಾರವಾಗಬೇಕೆಂದರೆ ಮತ್ತೊಂದು ಸಂಶಯ ಪರಿಹಾರ ಆಗಬೇಕು. 'ಅಧೀತ್ಯ ಸ್ನಾಯಾತ್' ಎಂಬ ವಾಕ್ಯವು ವೇದಾಧ್ಯಯನದ ಅನಂತರ ಸ್ನಾತಕವ್ರತವನ್ನು ವಿಧಿಸುತ್ತಿದೆ. ಈ ವಾಕ್ಯ ಹೇಳುವಂತೆ ವೇದಾಧ್ಯಯನ ಮಾಡಿದ ಕೂಡಲೇ ಸ್ನಾತಕನಾಗಬೇಕೋ? ಅಥವಾ ಧರ್ಮಾನುಷ್ಠಾನ ಜಿಜ್ಞಾಸೆಯಿಂದ ಪುನಃ ಗುರುಕುಲವಾಸವನ್ನು ಮುಂದೋರೆಸಬೇಕೋ ಎಂದು. ಈ ಸಂಶಯ ಪರಿಹಾರಕ್ಕಾಗಿ ಮತ್ತೊಂದು ಬಗೆಯ ಸಂಶಯ ಪರಿಹಾರವಾಗಬೇಕು. 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವಾಕ್ಯವು ಅದೃಷ್ಟಫಲಕ್ಕೋಸ್ಕರ ಅಧ್ಯನಯವನ್ನು ವಿಧಿಸುತ್ತಿದೆಯೋ ಅಥವಾ ದೃಷ್ಟ ಪ್ರಯೋಜನಕ್ಕೋಸ್ಕರ ಅಧ್ಯಯನವನ್ನು ವಿಧಿಸುತ್ತಿದೆಯೋ? ಎಂದು .

ಒಂದು ವೇಳೆ ಅದೃಷ್ಟ ಪ್ರಯೋಜನಕ್ಕೋಸ್ಕರ ಅಧ್ಯಯನವು ವಿಹಿತವಾದಲ್ಲಿ ವೇದದ ಕಂಠಪಾಠದಿಂದಲೇ ಶಾಸ್ತ್ರಾಧ್ಯಯನವನ್ನು ಮಾಡಿದಂತಾಯಿತು. 'ಅಧೀತ್ಯ ಸ್ನಾಯತ್' ಎಂಬ ವಿಧಿಯು ಹೇಳುವಂತೆ ಅಧ್ಯಯನ ಮುಗಿದ ಕೂಡಲೇ ಸ್ನಾತಕನಾಗಬೇಕೆಂದಂತಾಯಿತು. ವಿಚಾರಶಾಸ್ತ್ರವನ್ನು ಪುನಃ ಅಧ್ಯಯನ ಮಾಡಬೇಕಿಲ್ಲ. ವಿಚಾರಶಾಸ್ತ್ರದ ಅಧ್ಯಯನವು ವಿಧಿವಾಕ್ಯದಿಂದ ಸಿದ್ಧವಾಗಲಿಲ್ಲ. ಅಂದರೆ ವೈಧವಾಗಲಿಲ್ಲ, ಅವೈಧವಾಯಿತು. ವಿಧಿವಾಕ್ಯದಿಂದ ಸಿದ್ಧವಾಗದ ಕಾರಣ ಪೂರ್ವ-ಮೀಮಾಂಸಾಶಾಸ್ತ್ರವು ಅನಾರಂಭಣೀಯವಾಯಿತು.

ಒಂದುವೇಳೆ ವಾಕ್ಯಾರ್ಥನಿರ್ಣಯಕ್ಕೋಸ್ಕರ ಅಧ್ಯಯನವನ್ನು ವಿಧಿಸುತ್ತಿದೆಯೆಂದರೆ ಪೂರ್ವ-ಮೀಮಾಂಸಾಶಾಸ್ತ್ರದ ಅಧ್ಯಯನವು ಶ್ರುತಿಸಿದ್ಧವಾಗುತ್ತದೆ. ಗುರೂಚ್ಚಾರಣಪೂರ್ವಕ ಉಚ್ಚಾರಣ ರೂಪವಾದ ಅಧ್ಯಯನವು ಗುರುಮುಖದಿಂದ ಆದಾಗ ಅಕ್ಷರಗ್ರಹಣವಾಗುತ್ತದೆ. ಅನಂತರ ಪದಪದಾರ್ಥಜ್ಞಾನ ವಾಕ್ಯಾರ್ಥಜ್ಞಾನ, ವಾಕ್ಯಾರ್ಥನಿರ್ಣಯವು ಕ್ರಮವಾಗಿ ಬರುತ್ತದೆ. ಈ ವಾಕ್ಯಾರ್ಥನಿರ್ಣಯಕ್ಕೋಸ್ಕರ ಪೂರ್ವಮೀಮಾಂಸಾಶಾಸ್ತ್ರದ ಅಧ್ಯಯನ ಮಾಡಬೇಕು. ಏಕೆಂದರೆ ವಿಚಾರ ಮಾಡದೆ ನಿರ್ಣಯ ಸಾಧ್ಯವಿಲ್ಲ. ಆದ್ದರಿಂದ ಸ್ವಾಧ್ಯಾಯೋಽಧ್ಯೇತವ್ಯಃ ಎಂಬ ಶ್ರುತಿವಾಕ್ಯದಿಂದಲೇ ಪೂರ್ವಮೀಮಾಂಸಾಶಾಸ್ತ್ರಾಧ್ಯಯನವೂ ಸಿದ್ಧವಾಗುತ್ತದೆ.

'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವಾಕ್ಯವು ಸಾಕ್ಷಾತ್ತಾಗಿ ಮೀಮಾಂಸಾಶಾಸ್ತ್ರಾಧ್ಯಯನವನ್ನು ವಿಧಿಸುತ್ತಿಲ್ಲ. ಹೊರತು ಅರ್ಥಾಪತ್ತಿ ವಿಧಿಸುತ್ತಿದೆ. ಉದಾಹರಣೆ - ಹಾರೆಯಿಂದ ಕುಟ್ಟ ಭತ್ತದ ಸಿಪ್ಪೆಯನ್ನು ಕಳಚಬೇಕು. ಒಂದು ಬಾರಿ ಕುಟ್ಟಿದರೆ ಸಿಪ್ಪೆಯು ಕಳಚುವುದಿಲ್ಲ. ಆದರೆ ಶ್ರುತಿಯು ಅನೇಕ ಬಾರಿ ಕುಟ್ಟಬೇಕೆಂದೇನು ಹೇಳಿಲ್ಲ. ಆದರೂ ದೃಷ್ಟಫಲ ಕಾಣಿಸುವ ತನಕ ಕುಟ್ಟುತ್ತಿರಲೇಬೇಕೆಂದು ಶ್ರುತಿಯಿಂದ ಅರ್ಥಾತ್ ಹೇಗೆ ತಿಳಿಯುತ್ತದೋ, ಅದರಂತೆ ಪ್ರಕೃತದಲ್ಲಿಯೂ ಅರ್ಥಜ್ಞಾನಕ್ಕೋಸ್ಕರ ವೇದಾಧ್ಯಯನ ಮಾಡಬೇಕೆಂದರೆ ಪೂರ್ವಮೀಮಾಂಸಾಶಾಸ್ತ್ರದ ಅಧ್ಯಯನ ಮಾಡಬೇಕೆಂದು ಸಿದ್ಧವಾಗುತ್ತದೆ. ಪೂರ್ವಮೀಮಾಂಸಾಶಾಸ್ತ್ರವು ಆರಂಭಣೀಯವೆಂದು ಸಿದ್ಧವಾಗುತ್ತದೆ.

ಗಮನೀಯ ವಿಚಾರ : - 'ಅಧೀತ್ಯ ಸ್ನಾಯಾತ್' ಎಂಬಲ್ಲಿ 'ಕ್ತ್ವ' ಪ್ರತ್ಯಯದ ಅರ್ಥದಲ್ಲಿ ಲ್ಯಪ್ ಪ್ರತ್ಯಯ ಬಂದಿದೆ. ಯಾವಾಗ ಎರಡು ಕ್ರಿಯೆಗಳು ಒಬ್ಬನೇ ವ್ಯಕ್ತಿಯಲ್ಲಿರುತ್ತವೋ, ಅವು

वृत्तेरेव अज्ञानविरोधित्वं वदन् प्रष्टव्यः 'किं परोक्षवृत्तिरेवाज्ञानिविरोधितया अभिमता? किं वाऽपारोक्षवृत्तिः? द्वितीयेऽपि अपरोक्षवृत्तिमात्रमुत तद्विशेषः । नाद्यः । तथा सति नित्यातीन्द्रियेऽपि परोक्षवृत्त्या तन्निवृत्तिप्रसङ्गेन अभिव्यक्तापरोक्षैकरसचैतन्यसम्बन्धेन तदापरोक्ष्यापातादित्यभिप्रेत्य द्वितीये आद्यं दूषयति – त्वन्मत इति ।। तथाच विरोधिन्यावृत्तेः सत्त्वात् नाविद्यावृतत्वं ब्रह्मण इत्यर्थः । नन्वयं घट इत्यपरोक्षवृत्त्या घटविषयिण्या घटाज्ञाननिवृत्तावपि चैतन्याविषयत्वात् कथं तया ब्रह्माज्ञाननिवृत्त्यापादनम्? इत्यत उक्तम् – घटावच्छिन्नचिद्विषयादिति ।। ननु नापरोक्षवृत्तिमात्रं अज्ञानविरोधितया इष्यते । किंतु तद्विशेष एव । नचैवमुक्तदोषावकाशः । 'अयं घटः' इत्यादिरूपवृत्तेरपरोक्षवृत्तित्वेऽपि श्रवणादिजनितसंस्कारसंस्कृतान्तःकरणवृत्तित्वाभावेन चैतन्याज्ञानानिवर्तकत्वादिति द्वितीयमाशङ्क्य निराकरोति – श्रवणादीति ।। प्रसङ्गाद्व्यतिरेकव्याप्त्युपपादनं 'मिथ्या' इति । तददर्शनात् । विशिष्टवृत्तिनाश्यत्वादर्शनात् । अन्वयव्याप्त्युपपादनं सत्य इति ।

ವಿವರಣೆ - 'ಅತ ಏವ' ಎಂಬ ವಾಕ್ಯದಿಂದ ಆತ್ಮಸ್ವರೂಪವೇ ತೋರುವುದಿಲ್ಲವೆಂಬ ಎರಡನೆಯ ಪಕ್ಷವನ್ನು ನಿರಾಕರಿಸುತ್ತಿದ್ದಾರೆ.

'ಸತ ಸ್ವರೂಪಚಿತಃ' ಎಂಬ ವಾಕ್ಯದ ಅಭಿಪ್ರಾಯವನ್ನು ಹೀಗೆ ಸ್ಪಷ್ಟವಾಗಿ ತಿಳಿಯಬೇಕು- ಶುದ್ಧಾತ್ಮನು ಭಾಸಮಾನನಾದರೂ ಅವಿದ್ಯಾವೃತನಾಗಿರುವುದರಿಂದ ವಿಷಯನಾಗುತ್ತನೆ. ಈ ಶುದ್ಧಾತ್ಮನು ಅಜ್ಞಾನಕ್ಕೆ ಸಾಧಕನೇ ಆಗಿದ್ದಾನೆ ಹೊರತು ಅಜ್ಞಾನನಿವರ್ತಕನಾಗಿಲ್ಲ. ಅಂತಃಕರಣವೃತ್ತಿಯು ಅಜ್ಞಾನನಿವರ್ತಕವಾಗಿದೆ. ನಿವರ್ತಕವಾದ ಈ ಅಂತಃಕರಣವೃತ್ತಿ ಬರುವ ತನಕ ಅವಿದ್ಯೆಯು ಆತ್ಮನಿಗೆ ಆವರಣವಾಗಿರುತ್ತದೆ. ಈ ವಿಷಯಕ್ಕೆ ಒಂದು ಉದಾಹರಣೆ - ಘಟವು ಸೂರ್ಯನ ಬೆಳಕಿನಲ್ಲಿ ಸ್ಪಷ್ಟವಾಗಿ ತೋರುತ್ತದೆ. ಅದೇ ಘಟವು ಜ್ಞಾನದಲ್ಲಿಯೂ ತೋರುತ್ತದೆ. ಹೀಗೆ ಬೆಳಕಿಗೂ ಜ್ಞಾನಕ್ಕೂ ಘಟವು ಒಂದೇ ವಿಷಯವಾಗಿದ್ದರೂ ಬೆಳಕು ಮಾತ್ರ ತಮೋನಿವರ್ತಕವಾಗಿದೆ. ಜ್ಞಾನವು ತಮೋನಿವರ್ತಕವಾಗಿಲ್ಲ. ಅದರಂತೆಯೇ ಆತ್ಮಪ್ರಕಾಶಕ್ಕೂ ಅವಿದ್ಯೆಯೇ ವಿಷಯ. ಅಂತಃಕರಣವೃತ್ತಿಗೂ ಅವಿದ್ಯೆಯೇ ವಿಷಯ. ಆದರೆ ಆತ್ಮಪ್ರಕಾಶವು ಅವಿದ್ಯಾನಿವರ್ತಕವಾಗಿಲ್ಲ. ಅಂತಃಕರಣವೃತ್ತಿಯೇ ಅವಿದ್ಯಾನಿವರ್ತಕವಾಗಿದೆ. ಹೀಗೆ ಅವರು ಆತ್ಮನಿಗೆ ಅವಿದ್ಯಾವರಣವನ್ನು ಸಮರ್ಥಿಸುತ್ತಾರೆ. ಆದರೆ ಇವರಿಗೆ 'ಆತ್ಮಪ್ರಕಾಶಾಧೀನವಾಗಿ ಪ್ರಕಾಶಮಾನವಾದ ದುಃಖಾದಿಗಳ ಅನುಭವವು ಬರದೇ ಇರಬೇಕಾದೀತು' ಎಂಬ ಆಕ್ಷೇಪ ತಪ್ಪಿದ್ದಲ್ಲ.

ಶಂಕೆ - ನಾವು ಕೇವಲ ವೃತ್ತಿಯು ಅಜ್ಞಾನನಿವರ್ತಕವೆಂದು ಹೇಳುವುದಿಲ್ಲ. ಹೊರತು ಅಂತಃ-

ಕರಣವೃತ್ತಿಯಲ್ಲಿ ಆತ್ಮನು ಪ್ರತಿಬಿಂಬಿಸಬೇಕು. ಆವಾಗ ಆ ವೃತ್ತಿಯು ಅಜ್ಞಾನನಿವರ್ತಕವಾಗು ಅಜ್ಞಾನವು ನಿವೃತ್ತಿಯಾದ ಮೇಲೆ ದುಃಖ ಮುಂತಾದುದರ ಅನುಭವವು ಬರುತ್ತದೆ.

ಸಮಾಧಾನ - ಹೀಗೆ ಹೇಳಿದರೆ ಅಲ್ಲಿಯ ತನಕ ದುಃಖದ ಅನುಭವ ಬಾರದಿರಬೇಕಾಗು ದುಃಖಾದಿಗಳೆಲ್ಲವೂ ಜ್ಞಾತೈಕಸತ್ ಆಗಿವೆ. ಅಂದರೆ ಸುಖದುಃಖಾದಿಗಳು, ಇರುವಾಗ ಮಾ ಗೋಚರಿಸುತ್ತವೆ. ಅನಂತರ, ಅಥವಾ ಮೊದಲು ಗೋಚರಿಸುವುದಿಲ್ಲ.

ಮತ್ತು ವೃತ್ತಿಜ್ಞಾನವಿರೋಧಿಯೆಂದು ನೀವು ಹೇಳಿದಿರಿ, ಅದೂ ಸರಿಯಲ್ಲ. ಏಕೆಂದರೆ ಇದ ಅರ್ಥವೇನು? ವೃತ್ತಿಸಾಮಾನ್ಯವು ಅಜ್ಞಾನವಿರೋಧಿಯೆಂದೋ? ವೃತ್ತಿವಿಶೇಷವು ಅಜ್ಞಾನವಿರೋಧಿ ಯೆಂದೋ? ಮೊದಲನೆಯ ಪಕ್ಷದಲ್ಲಿಯೂ ಪರೋಕ್ಷವೃತ್ತಿಯೋ? ಪ್ರತ್ಯಕ್ಷವೃತ್ತಿಯೋ? ಪರೋಕ್ಷ ವೃತ್ತಿಸಾಮಾನ್ಯವು ಅಜ್ಞಾನವಿರೋಧಿಯೆಂಬುದು ತಪ್ಪು. ಏಕೆಂದರೆ ನಿತ್ಯಾತೀಂದ್ರಿಯವಸ್ತುಗಳನ್ನು ಗ್ರಹಿಸುವ ಪರೋಕ್ಷವೃತ್ತಿಯು ಅಜ್ಞಾನವಿರೋಧಿಯಲ್ಲವೆಂದು ನೀವೇ ಒಪ್ಪಿದ್ದೀರಿ. ಹಾಗೆ ಅಪರೋಕ್ಷವೃತ್ತಿಯನ್ನಷ್ಟೇ ಅಜ್ಞಾನವಿರೋಧಿಯೆಂದು ಹೇಳಬೇಕು. ಆದರೆ 'ಅಯಂ ಘಟಃ' ಎಂ ಅಪರೋಕ್ಷವೃತ್ತಿಯು ಘಟಾವಚ್ಛಿನ್ನನಾದ ಆತ್ಮನನ್ನು ಗ್ರಹಿಸಿದರೂ ಅಜ್ಞಾನವು ನಿವೃತ್ತಿಯಾಗುತ್ತಿಲ್ಲ.

ಶಂಕೆ - ಅಪರೋಕ್ಷವೃತ್ತಿಯು 'ಘಟಾವಚ್ಛಿನ್ನಚೈತನ್ಯ'ವನ್ನು ವಿಷಯೀಕರಿಸಿದೆ. ಆದರೆ ಅಜ್ಞಾನ ಶುದ್ಧಾತ್ಮನನ್ನು ಆವರಿಸಿದೆ. ಹೀಗೆ ಎರಡಕ್ಕೂ ವಿಷಯಗಳು ಬೇರೆ ಬೇರೆಯಾದ್ದರಿಂದ ವಿರೋಧವಿಲ್ಲ

ಸಮಾಧಾನ - ದಂಡವಿಶಿಷ್ಟನಾದ ಚೈತ್ರನನ್ನು ತಿಳಿದರೆ ಹೇಗೆ ಚೈತ್ರನ ವಿಷಯದಲ್ಲಿರುವ ಅಜ್ಞಾನ ನಿವೃತ್ತಿಯಾಗುವುದೋ; ಅದರಂತೆ ಘಟಾವಚ್ಛಿನ್ನಚೈತನ್ಯದ ಜ್ಞಾನ ಬಂದರೆ ಶುದ್ಧಾತ್ಮನ ಜ್ಞಾನವು ಬಂದಂತಾಗಿ ಶುದ್ಧಾತ್ಮನಿಗೆ ಆವರಣವಾದ ಅಜ್ಞಾನವೂ ನಿವೃತ್ತಿಯಾಗಬೇಕಾದೀತು.

ಆತ್ಮನಲ್ಲಿರುವ ಅಜ್ಞಾನವು ಸಂಸ್ಕಾರಸಹಿತವಾದ ವೃತ್ತಿಯಿಂದ ನಾಶವಾಗುವುದಾದರೆ ಕೇವಲ ಸತ್ಯವಾಗಿರಬೇಕು. ಕೇವಲ ಅಂತಃಕರಣವೃತ್ತಿಯಿಂದಲೇ ಅಜ್ಞಾನಕ್ಕೆ ನಿವೃತ್ತಿಯನ್ನು ಹೇಳಲು ಬರು ಸಂಸ್ಕಾರದ ಸಹಾಯವನ್ನು ಅಂತಃಕರಣಕ್ಕೆ ಹೇಳುವ ಅವಶ್ಯಕತೆ ಇಲ್ಲ. ಭ್ರಮೆ ಇರುವ ಕಾಲದಲ್ಲಿ ಎಷ್ಟು ಆತ್ಮಜ್ಞಾನ ಇತ್ತೋ, ಅಷ್ಟೇ ಜ್ಞಾನವು ಮುಂದಿನ ಕಾಲದಲ್ಲಿಯೂ ಇದೆ. ಹಿಂದಿನ ಜ್ಞಾನಕ್ಕಿಂತ ಅಧಿಕವಾದ್ದನ್ನು ಗ್ರಹಿಸದಿರುವ ಮುಂದಿನ ಜ್ಞಾನವು ಸಂಸ್ಕಾರಸಹಿತವಾದ ಅಂತಃಕರಣದಿಂದ ಹುಟ್ಟಿದೆ ಎಂಬ ಒಂದೇ ಕಾರಣದಿಂದ ಅಜ್ಞಾನನಿವರ್ತಕವೆಂದು ಹೇಳುವುದು ತಪ್ಪಾಗುತ್ತದೆ. ಮೊದಲ ಜ್ಞಾನಕ್ಕಿಂತ ಗುರೂಪದೇಶರೂಪ ಶ್ರವಣಾದಿಗಳಿಂದ ಬಹುಶ್ರಮದಿಂದ ಸಂಪಾದಿಸಿದ ಜ್ಞಾನವು ಏನನ್ನೂ ಹೆಚ್ಚು ಗ್ರಹಿಸುವುದಿಲ್ಲ. ಹಾಗಾಗಿ ಪರಿಶ್ರಮದ ಶ್ರವಣಾದಿಗಳು ವ್ಯರ್ಥವೇ ಸರಿ.

ಅದ್ವೈತಿಗಳು :- ಚೈತನ್ಯವು ಚೈತನ್ಯದಿಂದಲೇ ಪ್ರಕಾಶವಾಗುತ್ತದೆ. ಇಂತಹ ಚೈತನ್ಯವಾದರೂ ಅಜ್ಞಾನಕ್ಕೆ ಸಾಧಕವೇ ಹೊರತು, ವಿರೋಧಿಯಲ್ಲ. ವೃತ್ತಿಯು ಅಜ್ಞಾನಕ್ಕೆ ವಿರೋಧಿಯಾಗಿದೆ. ವೃತ್ತಿಯಂತು ಈಗ ಇರುವುದಿಲ್ಲ. 'ಅಹಂ' ಎಂಬ ಚಿತ್‌ಪ್ರಕಾಶವು ಚಿತ್‌ನಿಂದಲೇ ಉಂಟಾಗುತ್ತ

ಒಂದುವೇಳೆ ಚಿತ್‌ಪ್ರಕಾಶವು ವೃತ್ತಿಯಿಂದ ಉಂಟಾದರೆ ಮಾತ್ರ ಅಜ್ಞಾನವು ಪರಿಹಾರವಾಗುತ್ತದೆ. ವೃತ್ತಿಯೆಂದರೆ ಶ್ರವಣಾದಿಗಳಿಂದ ಹುಟ್ಟಿದ ಚರಮವೃತ್ತಿ. ಇಂತಹ ವೃತ್ತಿಯು ಸಂಸಾರಕಾಲದಲ್ಲಿ ಇರುವುದಿಲ್ಲ. ಆದ್ದರಿಂದ ಸಂಸಾರಕಾಲದಲ್ಲಿ ಅವಿದ್ಯೆಯೂ ಇರುತ್ತದೆ. ಆತ್ಮನು ಪ್ರಕಾಶರೂಪನೂ ಆಗಿರುತ್ತಾನೆ. ಹೀಗಿರುವಾಗ ಸಂದಿಗ್ಧತ್ವ , ಶಾಸ್ತ್ರವಿಷಯತ್ವ ಎಲ್ಲವೂ ಉಪಪನ್ನವಾಗುತ್ತದೆ.

ದ್ವೈತಿಗಳು :- ಅಜ್ಞಾನಕ್ಕೆ 'ಚಿತ್' ಎಂಬುದು ವಿರೋಧಿಯಲ್ಲವೆಂದು ಹೇಳುತ್ತಿದ್ದೀರಿ. ಹಾಗಾದರೆ ದುಃಖಾದಿಗಳ ಅಜ್ಞಾನವು ಬರಬೇಕಾದೀತು. ಏಕೆಂದರೆ 'ಚಿತ್' ಸುಖದುಃಖಾದಿಗಳನ್ನು ಗ್ರಹಣ ಮಾಡಿದರೂ ಸಹ ಅಜ್ಞಾನಕ್ಕೆ ವಿರೋಧಿಯಲ್ಲವಾದ್ದರಿಂದ ದುಃಖಾದಿಗಳ ಅಜ್ಞಾನವೂ ಇರಬೇಕಾದೀತು. ಆದರೆ ಸುಖದುಃಖಾದಿಗಳೆಲ್ಲವೂ 'ಜ್ಞಾತೈಕಸತ್' ಆಗಿವೆ. ಸುಖದುಃಖಾದಿಗಳು ಇದ್ದಲ್ಲಿ ಗೊತ್ತಾಗಲೇಬೇಕು. ಗೊತ್ತಾಗದಿದ್ದರೆ ಇಲ್ಲವೆಂದೇ ಅರ್ಥ.

ಮತ್ತು ಆತ್ಮವಿಷಯಕವಾದ ಚರಮವೃತ್ತಿಯು ಸಂಸಾರಕಾಲದಲ್ಲಿ ಇಲ್ಲವೆಂದು ಹೇಳಿದಿರಿ. ಆದರೆ ಅಂತಹ ವೃತ್ತಿಯು ಸಂಸಾರಕಾಲದಲ್ಲಿ ಇದೆ. 'ಅಯಂ ಘಟಃ' ಎಂಬುದೇ ಆತ್ಮವಿಷಯಕವಾದ ವೃತ್ತಿಜ್ಞಾನವಾಗಿದೆ. ಘಟಾವಚ್ಛಿನ್ನಾತ್ಮವಿಷಯಕವಾದ ವೃತ್ತಿಜ್ಞಾನವು ಆತ್ಮನನ್ನು ಮತ್ತು ಘಟವನ್ನು ವಿಷಯೀಕರಿಸುತ್ತಿರುವುದರಿಂದ ಆತ್ಮನು ವಿಷಯನಾಗಿದ್ದಾನೆ. ಈ ವೃತ್ತಿಜ್ಞಾನದಿಂದ ಅವಿದ್ಯೆಯು ಪರಿಹಾರವಾಗಬೇಕು. ಅವಿದ್ಯೆಯು ಪರಿಹಾರವಾದರೆ ಸಂದಿಗ್ಧತ್ವ ಮತ್ತು ವಿಷಯತ್ವಗಳೆರಡೂ ಕೂಡುವುದಿಲ್ಲ.

ಅದ್ವೈತಿಗಳು :- 'ಅಯಂ ಘಟಃ' ಎಂಬ ಜ್ಞಾನವು ಆತ್ಮವಿಷಯಕವಾಗಿರಬಹುದು. ಆದರೆ ಇಂತಹ ವೃತ್ತಿಜ್ಞಾನದಿಂದ ಅವಿದ್ಯೆಯು ಹೋಗುವುದಿಲ್ಲ. ವೇದಾಂತಶ್ರವಣದಿಂದ ಹುಟ್ಟಿದ ಸಂಸ್ಕಾರದಿಂದ ಕೂಡಿದ ಅಂತಃಕರಣವೃತ್ತಿ ಮಾತ್ರ ಅವಿದ್ಯೆಯ ನಿವಾರಕವಾಗಿದೆ.

ದ್ವೈತಿಗಳು :- ಹಾಗಾದರೆ ಅಜ್ಞಾನವು ಸತ್ಯವೆಂದಂತಾಯಿತು. ಮಿಥ್ಯಾಭೂತವಾದ ಶುಕ್ತಿರಜತದಲ್ಲಿ ನೀವು ಹೇಳಿದ ವೃತ್ತಿನಾಶ್ಯತ್ವವು ಕಂಡಿಲ್ಲ. ಆದರೆ ಭ್ರಮರಧ್ಯಾನನಿವರ್ತ್ಯವಾದ ಕೀಟತ್ವದಲ್ಲಿ ಇಂತಹ ವೃತ್ತಿನಾಶ್ಯತ್ವವು ಕಂಡಿದೆ. ಇದರ ಅಭಿಪ್ರಾಯ ಹೀಗಿದೆ. - 'ಇಯಂ ಶುಕ್ತಿಃ' ಎಂಬ ಜ್ಞಾನ ಬಂದರೆ ರಜತಜ್ಞಾನವು ಮತ್ತು ಶುಕ್ತಿಯ ಅಜ್ಞಾನವು ಪರಿಹಾರವಾಗುತ್ತದೆ. ಇಂತಹ ಶುಕ್ತಿರಜತವು ಮಿಥ್ಯಾಭೂತವಾಗಿದೆ. ಇಲ್ಲಿ ನಿವಾರಕವಾದ ಶುಕ್ತಿಜ್ಞಾನವು ನೀವು ಹೇಳಿದಂತಹ ವೃತ್ತಿರೂಪವಾಗಿಲ್ಲ. ಆದರೆ ಭ್ರಮರಧ್ಯಾನವು ನೀವು ಹೇಳಿದಂತಹ ವೃತ್ತಿರೂಪವೇ ಆಗಿದೆ. ಏಕೆಂದರೆ ಧ್ಯಾನವು ಭ್ರಮರಾನುಭವಜನಿತಸಂಸ್ಕಾರ ಜನ್ಯವಾಗಿದೆ. ಇಂತಹ ಜ್ಞಾನವು ಕೀಟತ್ವಕ್ಕೆ ನಿವರ್ತಕವಾಗಿದೆ. ಆದರೆ ಆ ಕೀಟತ್ವವು ಶುಕ್ತಿರಜತದಂತೆ ಮಿಥ್ಯಾಭೂತವಲ್ಲ. ಸತ್ಯವೇ ಆಗಿದೆ. ಇದರಂತೆ ಶ್ರವಣಾದಿಜನ್ಯ-ಸಂಸ್ಕಾರಸಹಿತವಾದ ಅಂತಃಕರಣವೃತ್ತಿಯಿಂದ ಅಜ್ಞಾನವು ನಿವೃತ್ತವಾಗುತ್ತದೆಂದು ಹೇಳುತ್ತಿದ್ದೀರಿ. ಹಾಗಾದರೆ ಕೀಟತ್ವದಂತೆ ಅಜ್ಞಾನವೂ ಸತ್ಯವೆಂದಂತಾಯಿತು.

ಪ್ರಶ್ನೆ :- ಅದ್ವೈತಿಗಳಿಗೆ ಇದು ಇಷ್ಟಾಪತ್ತಿಯೇ ಆಗಿದೆ. ಏಕೆಂದರೆ ಅದ್ವೈತಿಗಳು ಅಜ್ಞಾನವನ್ನಾಗಲೀ ಕೀಟತ್ವವನ್ನಾಗಲೀ ವ್ಯಾವಹಾರಿಕಸತ್ಯ ಎಂದು ಹೇಳುತ್ತಾರೆ. ಆದ್ದರಿಂದ ನೀವು ಮಾಡಿದ್ದು ಅನಿಷ್ಟಾಪಾದನೆ ಆಗುವುದಿಲ್ಲ.

ಉತ್ತರ :- ನಾವು ಹೇಳಿದ 'ಸತ್ಯ' ಶಬ್ದಕ್ಕೆ 'ಅಧಿಷ್ಠಾನಸಮಸತ್ತಾಕ' ಎಂದರ್ಥ. ಕೀಟತ್ವಕ್ಕೆ ಕೀಟವೇ ಅಧಿಷ್ಠಾನವಾಗಿದೆ. ಅಂತಹ ಕೀಟದಲ್ಲಿ ವ್ಯಾವಹಾರಿಕಸತ್ಯತ್ವವಿದೆ. ಆದರೆ ಶುಕ್ತಿರಜತವು ಅಧಿಷ್ಠಾನ ಸಮಸತ್ತಾಕವಲ್ಲ. ಅಧಿಷ್ಠಾನವಾದ ಶುಕ್ತಿಯಲ್ಲಿ ವ್ಯಾಹಾರಿಕಸತ್ಯತ್ವವಿದೆ. ಆದರೆ ರಜತದಲ್ಲಿ ಪ್ರಾತಿಭಾಸಿಕಸತ್ಯತ್ವವಿದೆ. ಆದ್ದರಿಂದ ಅಧಿಷ್ಠಾನನ್ಯೂನಸತ್ತಾಕತ್ವವೇ ಶುಕ್ತಿರಜತದಲ್ಲಿ ಇದೆ ಹೊರತು ಅಧಿಷ್ಠಾನಸಮಸತ್ತಾಕತ್ವವು ಇರುವುದಿಲ್ಲ.

ಪ್ರಕೃತ 'ಅಜ್ಞಾನವು ಸತ್ಯವಾಗಲಿ' ಎಂಬ ನಮ್ಮ ಆಕ್ಷೇಪದ ಅಭಿಪ್ರಾಯವೇನೆಂದರೆ ಅಜ್ಞಾನಕ್ಕೆ ಅಧಿಷ್ಠಾನನಾದವನು ಆತ್ಮ. ಅವನಲ್ಲಿರುವ ಸತ್ತಾ ಎಂದರೆ ಪಾರಮಾರ್ಥಿಕಸತ್ತಾ. ಅದೇ ಸತ್ತೆ ಅಜ್ಞಾನಕ್ಕೂ ಬರಲಿ ಎಂದು. ಆದರೆ ಅದ್ವೈತಿಯು ಅಜ್ಞಾನದಲ್ಲಿ ಪಾರಮಾರ್ಥಿಕಸತ್ಯತ್ವವನ್ನು ಒಪ್ಪರು. ಈ ರೀತಿಯಾದ ಆಪಾದನೆಯು ಅದ್ವೈತಿಗೆ ಅನಿಷ್ಟವೇ ಆಗಿದೆ. ಆದ್ದರಿಂದ ಚಂದ್ರಿಕೆಯಲ್ಲಿರುವ 'ಮಿಥ್ಯಾರೂಪ್ಯಾದೌ' ಎಂಬಲ್ಲಿನ ಮಿಥ್ಯಾಶಬ್ದಕ್ಕೆ ಅಧಿಷ್ಠಾನನ್ಯೂನಸತ್ತಾಕ ಎಂದರ್ಥ. 'ಸತ್ಯೇ' ಎಂದರೆ ಅಧಿಷ್ಠಾನಸಮಸತ್ತಾಕವಾದ ಎಂದರ್ಥ. 'ಸತ್ಯತ್ವಂ' ಎಂದರೂ 'ಅಧಿಷ್ಠಾನಸಮಸತ್ತಾಕತ್ವಂ' ಎಂದು ಅರ್ಥ.

ಇಲ್ಲಿಗೆ ಆತ್ಮಸ್ವರೂಪವೇ ತೋರುವುದಿಲ್ಲವೆಂಬ ಎರಡನೆಯ ಪಕ್ಷದ ನಿರಾಕರಣೆ ಮುಗಿಯಿತು




ಅನುಭವಗೋಚರವಲ್ಲವೆಂದರೆ 'ನಾನು ಅಜ್ಞ' ಎಂದು ಅವಿದ್ಯೆ ಕಾಣುವುದು ಆತ್ಮಾನುಭವವು ಎಂದಾದೀತು. 'ಶುದ್ಧ ಚೈತನ್ಯವು ಅನುಭವವೇದ್ಯವೆ. ಆದರೂ ಅವಿದ್ಯೆಯ ಪ್ರಭಾವದಿಂದ ಅವೇದ್ಯತೆಯ ಭ್ರಮಿಸುತ್ತೇವೆ. ಹೀಗಾಗಿ ಆತ್ಮಾನುಭವದಲ್ಲಿ ಅವಿದ್ಯೆ ಕಾಣುವುದೂ ಕೂಡುತ್ತದೆ. ಅವೇದ್ಯತ್ವ ಭ್ರಮನಿರಸನಕ್ಕೆ ವೇದಾಂತ ವಿಚಾರವೂ ಕೂಡುತ್ತದೆ' - ಎಂದೂ ಕೆಲವರು ಹೇಳುತ್ತಾರೆ. ಇವರೂ ಕೂಡ ಆತ್ಮನ ನಿಜರೂಪ ಅನುಭವದಲ್ಲಿ ಕಾಣುತ್ತಿರುವಾಗ ಅವೇದ್ಯತ್ವಭ್ರಮೆ ಹೇಗೆ ಬರುತ್ತದೆ ಎನ್ನುವುದನ್ನು ಹೇಳಲಾರರು.

'ಅವೇದ್ಯತ್ವಭ್ರಮೆ ಬರುವುದು ಅವಿದ್ಯೆಯ ಪ್ರಭಾವದಿಂದ. ಅದನ್ನು ಓಡಿಸಲು ಅಂತಃಕರಣ ವೃತ್ತಿಬೇಕು. ಅದು ಹುಟ್ಟದ ತನಕ ಅವಿದ್ಯೆ ಇದ್ದೇ ಇರುತ್ತದೆ' ಎನ್ನುವುದು ಸರಿಯಲ್ಲ. ಘಟಪಟಾದಿಗಳನ್ನು ಪ್ರತ್ಯಕ್ಷ ಕಾಣುವ ಅಂತಃಕರಣವೃತ್ತಿ ಆ ಪದಾರ್ಥಗಳ ಜೊತೆಗೆ ಶುದ್ಧಚೈತನ್ಯವನ್ನೂ ಕಾಣುತ್ತಿದೆ ಎಂದು ಅದ್ವೈತಸಿದ್ಧಾಂತವಿದೆ. ಆದರಿಂದ ಅಂತಃಕರಣವೃತ್ತಿ ಹುಟ್ಟಿಲ್ಲ ಎನ್ನುವುದು ತಪ್ಪು. ಇನ್ನು ಈ ವೃತ್ತಿ ವೇದಾಂತಶ್ರವಣಾದಿಸಂಸ್ಕಾರದಿಂದ ಕೂಡಿಲ್ಲವಾದ್ದರಿಂದ ಅವಿದ್ಯೆಯನ್ನು ಓಡಿಸುತ್ತಿಲ್ಲ ಎನ್ನುವುದು ಅದ್ವೈತಿಗಳ

ವಿರುದ್ಧ. ಕೇವಲ ವೃತ್ತಿಯಿಂದ ದೂರವಾಗುವ ಶುಕ್ತಿಯ ಅಜ್ಞಾನ ಮಿಥ್ಯೆ. ಭ್ರಮರ ಧ್ಯಾನದಿಂದ ದೂರವಾಗುವ ಕೀಟತ್ವ ಸತ್ಯ. ಹಾಗೇ ಸಂಸ್ಕಾರ ಸಹಿತ ವೃತ್ತಿಯಿಂದಲೆ ಅವಿದ್ಯೆ ದೂರವಾಗುವುದಾದರೆ ಅದು ಸತ್ಯವಾಗಬೇಕಾದೀತು.

• • • • •

## ಆತ್ಮನ ಜೊತೆ ಬೇರೆ ಪದಾರ್ಥ ತೋರಿದರೂ ಆತ್ಮನು ಅಸಂದಿಗ್ಧ

**तात्पर्यचन्द्रिका –**

**न तृतीयः । अनात्मनोऽधिकस्य भानेऽप्यात्मनोऽसन्दिग्धत्वेना विषयत्वतादवस्थ्यात् । अधिष्ठाने तत्वतः स्फुरति अनात्मारोपायोगाच्च । एतेन यथा षड्जादयो गान्धर्वशास्त्राभ्यासात् प्रागपि स्फुरन्तः तद्रूपेणानुल्लिखिता न श्रोत्रेण व्यज्यन्ते । व्यज्यन्ते तु शास्त्रवासितेन तेन । एवं वेदान्तवाक्यजन्यब्रह्मैक्याकारवासनावासितान्तःकरणेन तद्भावाभिव्यक्तिः न प्रागिति भामत्युक्तं निरस्तम् । तत्र प्रागस्फुरतः पश्चाच्च स्फुरतः षड्जत्वादिजातिभेदस्येव प्रकृते तस्याभावात् । एतेनैव ''तत् त्वमसि'' इति वाक्यात् यद्यप्यात्मनो ब्रह्मत्वं ज्ञातम् । तथाऽपि वादिविप्रतिपत्त्या संशयात् तत्र जिज्ञासा इति भामत्युक्तं निरस्तम् । चिन्मात्रे धर्मिणि निश्चिते तन्मात्रैक्ये संशयायोगात् ।**

ಅನುವಾದ - ಆತ್ಮಸ್ವರೂಪದ ಜೊತೆಗೆ ಆತ್ಮಾತಿರಿಕ್ತವಸ್ತುಗಳೂ ತೋರುತ್ತವೆಂಬ ಮೂರನೆಯ ಪಕ್ಷವೂ ಸರಿಯಲ್ಲ. ಆತ್ಮನ ಜೊತೆಗೆ ಬೇರೆ ವಸ್ತುಗಳು ಕಂಡಮಾತ್ರಕ್ಕೆ ಆತ್ಮನು ಸಂದಿಗ್ಧನಾಗಲಾರ. ಅನುಭವದಿಂದ ನಿತ್ಯಸಿದ್ಧನಾದ ಆತ್ಮನು ಅಸಂದಿಗ್ಧನಾದ್ದರಿಂದ ವಿಷಯನಾಗುವುದಿಲ್ಲ. ಇನ್ನು 'ಬೇರೆ ವಸ್ತುಗಳು ಆತ್ಮನಲ್ಲಿ ಆರೋಪಿತವಾಗಿರುವುದರಿಂದ ಆತ್ಮನು ಶುದ್ಧರೂಪದಿಂದ ಕಾಣಿಸುತ್ತಿಲ್ಲ. ಹಾಗಾಗಿ ಶುದ್ಧಾತ್ಮನು ಸಂದಿಗ್ಧನಾಗಿದ್ದಾನೆ' ಎಂಬುದೂ ಸರಿಯಲ್ಲ. ಅಧಿಷ್ಠಾನಭೂತನಾದ ಆತ್ಮನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾಗಿರಬೇಕಾದರೆ ಅವನಲ್ಲಿ ಮತ್ತೊಂದರ ಆರೋಪ ಕೂಡುವುದಿಲ್ಲ. ಅಧಿಷ್ಠಾನತತ್ವಜ್ಞಾನವಿದ್ದಾಗ ಅಲ್ಲಿ ಯಾವ ಆರೋಪವು ಆಗುವುದಿಲ್ಲವೆಂಬ ವಿಷಯವನ್ನು ಹಿಂದೆಯೇ ಹೇಳಿದ್ದೇವೆ.

ಭಾಮತಿಯಲ್ಲಿ ಮತ್ತೊಂದು ಮಾತಿದೆ - ಸಂಗೀತಶಾಸ್ತ್ರವನ್ನು ಅಭ್ಯಾಸ ಮಾಡದವರಿಗೂ ಷಡ್ಜಾದಿ ಸಪ್ತಸ್ವರಗಳ ಅನುಭವ ಆಗುತ್ತದೆ. ಆದರೆ ಸಪ್ತಸ್ವರಗಳಲ್ಲಿ 'ಇದು ಷಡ್ಜ' ಇತ್ಯಾದಿಯಾಗಿ ಪರಸ್ಪರ ವೈಲಕ್ಷಣ್ಯಜ್ಞಾನ ಇರುವುದಿಲ್ಲ. ಶ್ರೋತ್ರೇಂದ್ರಿಯದಿಂದ ವ್ಯಕ್ತವಾಗುವುದಿಲ್ಲ. ಆದರೆ

ಸಂಗೀತಶಾಸ್ತ್ರವನ್ನು ಅಭ್ಯಾಸ ಮಾಡಿದ ಮೇಲೆ ಸಪ್ತಸ್ವರಗಳಲ್ಲಿ ಪರಸ್ಪರ ವೈಲಕ್ಷಣ್ಯಜ್ಞಾನ ಬರುತ್ತ: ಈ ವೈಲಕ್ಷಣ್ಯದ ಅನುಭವಕ್ಕಾಗಿ ಸಂಗೀತಶಾಸ್ತ್ರಜ್ಞಾನ ಬೇಕು. ಅದರಂತೆ ವೇದಾಂತಾಧ್ಯಯನ ಮುನ್ನವೂ ಆತ್ಮನ ಅನುಭವ ಬರುತ್ತದೆ. ಆದರೆ ಜೀವಬ್ರಹ್ಮೈಕ್ಯವು ವ್ಯಕ್ತವಾಗುವುದಿ. ವೇದಾಂತದ ಅಧ್ಯಯನ ಮಾಡಿದ ಮೇಲೆ ಶ್ರವಣಾದಿಸಂಸ್ಕಾರದಿಂದ ಜೀವಬ್ರಹ್ಮೈಕ್ಯ ಅಭಿವ್ಯಕ್ತವಾಗುತ್ತದೆಂದು ಹೇಳುತ್ತಾರೆ.

ಇದೂ ಸಹ ತಪ್ಪು . ನೀವು ಕೊಟ್ಟಿರುವ ದೃಷ್ಟಾಂತವೇ ಸರಿಯಿಲ್ಲ. ಸಪ್ತಸ್ವರಗಳಲ್ಲಿ ಷಡ್ಜತ್ವ ಜಾತಿಗಳಿವೆ, ಅವುಗಳ ಅನುಭವ ಮೊದಲು ಬಂದಿಲ್ಲ. ಸಂಗೀತಶಾಸ್ತ್ರಾಧ್ಯಯನದ ಅನಂತರ ಜಾತಿಗಳ ಜ್ಞಾನವು ಬರುತ್ತದೆ. ಆದರೆ ಪ್ರಕೃತ ಆತ್ಮನಲ್ಲಿ ಅಂತಹ ಯಾವ ಜಾತಿಯನ್ನೂ ನೀವು ಒಪ್ಪಿಲ್ಲವಾದ್ದರಿಂದ ವಿಷಯತ್ವವನ್ನು ನಿಮಗೆ ಕೂಡಿಸಲಾಗದು.

ಅದ್ವೈತಿಗಳ ಅಭಿಪ್ರಾಯ - 'ತತ್ತ್ವಮಸಿ' ಎಂಬ ವಾಕ್ಯದಿಂದ ಜೀವನಿಗೆ ಬ್ರಹ್ಮನ ಐಕ್ಯಜ್ಞಾನವು ಬಂದಿದೆ. ಆದರೂ ಸಹ ವಾದಿಪ್ರತಿವಾದಿಗಳ ವಿಪ್ರತಿಪತ್ತಿಯಿಂದ ಸಂದೇಹ ಬಂದಿದೆ ಆ ಸಂದೇಹ ಪರಿಹಾರಕ್ಕಾಗಿ ಜಿಜ್ಞಾಸೆಯು ಯುಕ್ತವೆಂದು ಭಾಮತೀಕಾರ ಹೇಳಿದ್ದಾನೆ. ಆದರೆ ಹಿಂದಿನ ದೋಷದಿಂದಲೇ ಇದೂ ಸಹ ತಪ್ಪೆಂದು ಗೊತ್ತಾಗುತ್ತದೆ. ಚಿನ್ಮಾತ್ರನು ಅನುಭೂತನಾಗಿ ನಿಶ್ಚಿತನಾಗಿರಬೇಕಾದರೆ ಅಂತಹ ಚಿನ್ಮಾತ್ರಸ್ವರೂಪವಾದ ಐಕ್ಯದ ವಿಷಯದಲ್ಲಿಯೂ ಸಹ ಸಂದೇಹ ಬರಲಾರದು.

### ಕಠಿಣಪದಾರ್ಥ

ಏತೇನ = ಶಾಸ್ತ್ರಗಮ್ಯನಾದ ಆತ್ಮನು ನಿಶ್ಚಿತನಾದ್ದರಿಂದ. ತದ್ರೂಪೇಣ = ಷಡ್ಜತ್ವಾದಿ ರೂಪದಿಂದ. ತೇನ = ಶಿವಿಯಿಂದ. ವೇದಾಂತ ವಾಕ್ಯಜನ್ಯಬ್ರಹ್ಮೈಕ್ಯಾಕಾರವಾಸನಾ ವಾಸಿತಾಂತಃಕರಣೇನ = ವೇದಾಂತವಾಕ್ಯದಿಂದ ಹುಟ್ಟಿದ ಬ್ರಹ್ಮೈಕ್ಯವಿಷಯಕವಾದ ವಾಸನಾದಿಂದ ಕೂಡಿರುವ ಅಂತಃಕರಣದಿಂದ. ತದ್ಭಾವಾಭಿವ್ಯಕ್ತಿಃ = ಬ್ರಹ್ಮಭಾವದ ಆವಿರ್ಭಾವವು. ಏತೇನೈವ = ಜಾತಿವಿಶೇಷವು ಇಲ್ಲವೆಂದು ಹೇಳಿದ್ದರಿಂದಲೇ. ಚಿನ್ಮಾತ್ರೇ ಧರ್ಮಿಣಿ = ಧರ್ಮಿಯಾದ ಚಿನ್ಮಾತ್ರನು. ತನ್ಮಾತ್ರೈಕ್ಯೇ = ಚಿನ್ಮಾತ್ರಸ್ವರೂಪವಾದ ಐಕ್ಯದಲ್ಲಿ.

प्रकाशः – तृतीये 'अङ्गुलिद्वयवदात्मानात्मानावेकज्ञाने भासेते, उत तादात्म्येन' इति विकल्पौ हृदि कृत्वा क्रमेण निराह – अनात्मन इति ।। आत्मनो भानेऽपि शास्त्रविषयत्वं सङ्घटीतीत्याशङ्कामुक्तातिदेशेनापि निरस्यति - एतेनेति ।। शास्त्रगम्यात्मनो निश्चितत्वेनेत्यर्थः । 'तद्रूपेण' षड्जत्वादिना

रूपेण । 'तेन' श्रोत्रेण । 'तद्भावाभिव्यक्तिः' ब्रह्मभावाभिव्यक्तिः । दृष्टान्तवैषम्यमाह - तत्रेति ।। ननु यथा घटे निश्चितेऽपि तज्ज्ञाने प्रामाण्यसन्देहेऽपि सः । तथाऽत्रापीत्याशङ्कां निरस्यति – एतेनैवेति ।। 'जातिविशेषाभावेनैव' इत्यर्थः । एवंच अहंप्रत्यये 'शुद्धो न भाति' इत्येतदयुक्तमिति स्थितम् ।

गुरुराजीय – अनात्मापि भाति इति तृतीयेऽपि किमात्मवत् अनात्मनोऽपि स्वातंत्र्येण अहं प्रत्यये भानमभिमतम्, किं वा तत्तादात्म्येन? इति विकल्पद्वयं मनसि निधाय आद्यं दूषयति – आत्मन इति ।। द्वितीयं प्रत्याह – अधिष्ठान इति ।। अन्यथा तदनुवृत्तिप्रसङ्गादिति भावः । 'आत्मनोऽभानेऽपि शास्त्रविषयत्व-मुपपन्नम्' इत्याशङ्कामुक्तातिदेशेन परिहरति – एतेनेति ।। षड्जादय इत्यादिपदेन निषादऋषभगान्धारमध्यमधैवतपरिग्रहः – तद्रूपेणेति ।। षड्जत्वादिरूपेणे-त्यर्थः । यद्यपि गान्धर्वशास्त्राभ्यासरहितैरपि सूक्ष्ममतिभिः श्रूयमाणाः स्वराः किंचित् परस्परवैलक्षण्येनानुभूयन्ते तदेव च षट्जत्वादिकमिति तैस्तदवगम्यत एव षट्जादि शब्दविशेषवाच्यत्वं परं न ज्ञायते तथापि ये स्थूलमतयः स्वरानाकर्णयन्तोऽपि समवर्णपरिणामान् केशादीनिव परस्परविविक्ततयाऽवगन्तुं न प्रभवन्ति तेषामपि गान्धर्वशास्त्रपरिचये सति क्रमेण विविक्तोल्लेखो दृश्यते स एवोदाहरणमत्रेति द्रष्टव्यम् । तेन श्रोत्रेण ।। तद्भावाभिव्यक्तिरिति ।। 'ब्रह्मभावाभिव्यक्तिः' इत्यर्थः ।

ननु धर्मधर्मिणोरैक्यस्य सिद्धान्तत्वात् कथं धर्मिभानेऽपि षड्जत्वादि-धर्माणामभानम्? इत्यत उक्तम् – जातिभेदस्येति ।। 'जातिविशेषस्य' इत्यर्थः । न वयं षड्जत्वादिधर्माः धर्मिणो निर्विशेषाभिन्ना इत्याचक्ष्महे किं तर्हि सविशेषाभिन्ना एवेति । तथाच भेदकार्यकारिविशेषशक्त्या उपपन्नं तेषां प्रागभानमिति भावः । ततश्च दृष्टान्तदार्ष्टान्तिकयोर्वैषम्यमिति हृदयम् । ननु 'निश्चितेऽप्यर्थे तज्ज्ञान-प्रामाण्यसन्देहादर्थसन्देहदर्शनादिहापि तथा स्यात्', इत्याशङ्क्य निरस्यति – एतेनेति ।। तन्मात्रैक्ये चिन्मात्रैक्ये ।

**ವಿವರಣೆ** - 'ಆತ್ಮಸ್ವರೂಪದ ಜೊತೆಗೆ ಆತ್ಮಾತಿರಿಕ್ತವಾದ ವಸ್ತುಗಳೂ ಸಹ ತೋರುತ್ತವೆ' ಎಂಬ ಮೂರನೆಯ ಪಕ್ಷವೂ ಸಮಂಜಸವಲ್ಲ. ಏಕೆಂದರೆ ಆತ್ಮ ಮತ್ತು ಅನಾತ್ಮಗಳು ಎರಡು ಬೇರೆಬೇರೆನಂತೆ ಬಿನ್ನವಾಗಿ ಒಂದು ಜ್ಞಾನದಲ್ಲಿ ತೋರುತ್ತವೆ ಎಂದೋ? ಅಥವಾ ಅಭಿನ್ನವಾಗಿ ತೋರುತ್ತವೆ ಎಂದೋ?

ಆತ್ಮನು ನಿತ್ಯಸಿದ್ಧನಾದ್ದರಿಂದ ಅವನ ಸಂದೇಹಕ್ಕೆ ಅವಕಾಶವಿಲ್ಲ. ಹಾಗು ಆತ್ಮಾತಿರಿಕ್ತವಾದ ವಸ್ತುಗಳು ಅಧಿಕವಾಗಿ ಆತ್ಮನಲ್ಲಿ ತೋರಿದ ಮಾತ್ರಕ್ಕೆ ಆತ್ಮವಿಷಯದಲ್ಲಿ ಸಂದೇಹ ಬರಬೇಕಾಗಿಲ್ಲ.

ಆತ್ಮಾತಿರಿಕ್ತವಸ್ತುಗಳು ಬೇರೆಯಾಗಿ ಕಾಣುವುದಿಲ್ಲ. ಆತ್ಮಸ್ವರೂಪವಾಗಿಯೇ ಕಾಣಿಸುತ್ತವೆ. ಹಾಗಿ ಆತ್ಮನು ಸಂದಿಗ್ಧನಾಗಿದ್ದಾನೆಂದು ಆಕ್ಷೇಪಿಸಿದರೆ ಇದಕ್ಕೆ ಹಿಂದೆಯೇ ಉತ್ತರ ಕೊಟ್ಟಿದ್ದೇವೆ. "ಅಧಿಷ್ಠಾನ ಭೂತನಾದ ಆತ್ಮನು ಸ್ವಪ್ರಕಾಶನಾದ್ದರಿಂದ ನಿತ್ಯವೇದ್ಯನಾಗಿದ್ದಾನೆ. ಇಂತಹ ನಿರ್ಧರ್ಮಕ ಆತ್ಮ ವಿಷಯದಲ್ಲಿ ಆರೋಪವಾದ ಭ್ರಮೆಗೆ ಅವಕಾಶವಿಲ್ಲ" ಎಂದು.

'ಏತೇನೈವ ತತ್ವಮಸೀತಿ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - 'ಇದು ಘಟ' ಎಂಬುದು' ನಮಗೆ ಘಟವಿಷಯದಲ್ಲಿ ನಿಶ್ಚಯವಿದ್ದರೂ ಸಹ. ನನಗೆ ಬಂದ ಈ ನಿಶ್ಚಯಜ್ಞಾನವು ಪ್ರಮಾಣವೋ? ಅಪ್ರಮಾಣವೋ? ಎಂದು ಸಂಶಯ ಬಂದರೆ ಸಹಜವಾಗಿ ಇದು ಘಟವೋ? ಅಲ್ಲವೋ? ಎಂಬ ಸಂಶಯವು ಘಟವಿಷಯದಲ್ಲಿ ಬಂದೇ ಬರುತ್ತದೆ. ಅದರಂತೆ 'ತತ್ವಮಸಿ' ಎಂಬ ವಾಕ್ಯದಿಂದ ಐಕ್ಯಜ್ಞಾನ ಬಂದಿದ್ದರೂ ಸಹ ವಾದಿವಿಪ್ರತಿಪತ್ತಿಯಿಂದ ಐಕ್ಯಜ್ಞಾನದ ಪ್ರಾಮಾಣ್ಯದಲ್ಲಿ ಸಂದೇಹ ಬರುತ್ತದೆ. ಆದರಿಂದ ಜೀವಬ್ರಹ್ಮೈಕ್ಯದ ವಿಷಯದಲ್ಲಿಯೂ ಸಂದೇಹ ಬರುವುದರಿಂದ ವೇದಾಂತವಿಚಾರವು ಆವಶ್ಯಕ ಎಂದು ಭಾಮತೀಕಾರನ ಅಭಿಪ್ರಾಯ.

ಇನ್ನು 'ಅನಾತ್ಮವೂ ತೋರುತ್ತದೆ' ಎಂಬ ಮೂರನೇ ಪಕ್ಷದ ನಿರಾಸ.

**ಅದ್ವೈತಿಗಳು** : - ಶುದ್ಧಾತ್ಮನು ತೋರುವುದಿಲ್ಲವೆಂದರೆ ಅನಾತ್ಮವಾದ ಪದಾರ್ಥವು ತೋರುತ್ತದೆಂದು ಅರ್ಥ. ಹೇಗೆಂದರೆ 'ಶುದ್ಧವಾದ ತುಪ್ಪ ಸಿಗುವುದಿಲ್ಲ' ಎಂದರೆ ಬೇರೆ ಪದಾರ್ಥದಿಂದ ಮಿಶ್ರಿತವಾದ ತುಪ್ಪ ಸಿಗುತ್ತದೆಂದು ಅರ್ಥ. ಅದರಂತೆ ಶುದ್ಧನಾದ ಆತ್ಮನು ತೋರುವುದಿಲ್ಲ ಎಂದರೆ ಅನಾತ್ಮವಾದ ಪದಾರ್ಥವೂ ತೋರುತ್ತದೆಂದು ಅರ್ಥ. ಅನಾತ್ಮಪದಾರ್ಥವು ಕೂಡ ತೋರುವುದರಿಂದ ಶುದ್ಧನಾದ ಆತ್ಮನು ತೋರುವುದಿಲ್ಲ. ಶುದ್ಧಾತ್ಮನ ವಿಷಯದಲ್ಲಿ ಸಂದಿಗ್ಧತ್ವ ಮತ್ತು ವಿಷಯತ್ವಗಳು ಉಪಪನ್ನವಾಗುತ್ತವೆ.

**ದ್ವೈತಿಗಳು** : - 'ಅಹಂ' ಎಂಬ ಜ್ಞಾನದಲ್ಲಿ ನೀವು ಹೇಳಿದಂತೆ ಅನಾತ್ಮವು ತೋರಲಿ. ಆದರೆ ಆತ್ಮನೂ ಸಹ ತೋರುತ್ತಲೇ ಇದ್ದಾನೆ. ಆತ್ಮವಿಷಯಕವಾದ ಜ್ಞಾನ ಬಂದ ಮೇಲೆ ಸಂದೇಹವಿರುವುದು ಹೇಗೆ ಸಾಧ್ಯ? ಸಂದೇಹವೇ ಕೂಡದಿದ್ದಾಗ ಶಾಸ್ತ್ರವಿಷಯತ್ವವೂ ಕೂಡುವುದಿಲ್ಲ. ಅನಾತ್ಮವು ಅಧಿಕವಾಗಿ ತೋರಿದ ಮಾತ್ರದಿಂದ ಆತ್ಮನ ವಿಷಯದಲ್ಲಿ ಸಂದೇಹ ಬರುವುದಿಲ್ಲ. ಉದಾಹರಣೆ:- 'ದಂಡೀ ಚೈತ್ರಃ' ಎಂಬ ಜ್ಞಾನದಲ್ಲಿ ಕೇವಲ ಚೈತ್ರನು ವಿಷಯನಾಗಿಲ್ಲ. ದಂಡವೂ ವಿಷಯವಾಗಿದೆ. ದಂಡವು ಅಧಿಕವಾಗಿ ವಿಷಯವಾದ ಮಾತ್ರದಿಂದ ಚೈತ್ರನ ವಿಷಯದಲ್ಲಿ ಸಂಶಯ ಪರಿಹಾರ ಆಗುವುದಿಲ್ಲ ಎಂದೇನಿಲ್ಲ. ಅದೇ ರೀತಿಯಾಗಿ ಪ್ರಕೃತದಲ್ಲಿ ಅನಾತ್ಮವು ಅಧಿಕವಾಗಿ ತೋರಲಿ ಆತ್ಮವಿಷಯಕವಾದ ಸಂಶಯವು ಪರಿಹಾರ ಆಗುತ್ತದೆ.

*ಪರಿಪೂರ್ಣಚಂದ್ರಿಕಾ*

ಅನಾತ್ಮ ಸತ್ಯವಲ್ಲವಾದ್ದರಿಂದ ಆತ್ಮನಲ್ಲಿ ಆರೋಪಿತವೆಂದು ಹೇಳಬೇಕು. ಆದರೆ ಮೊದಲೇ ಹೇಳಿದಂತೆ ಅಧಿಷ್ಠಾನನಾದ ಆತ್ಮನು 'ಅಹಂ' ಎಂದು ನಿತ್ಯಸಿದ್ಧನಾಗಿದ್ದಾನೆ. ಹೀಗಿರುವಾಗ ಅವನಲ್ಲಿ ಯಾವ ಆರೋಪವನ್ನು ಮಾಡಲಾಗದು.

ಇಲ್ಲಿಯ ತನಕ ಭಾಮತೀಕಾರ ಹೇಳಿದ 'ವೇದಾಂತವೇದ್ಯಃ ಶುದ್ಧಃ ಅಹಂ ಪ್ರತ್ಯಯೇ ನ ಭಾತಿ' ವೇದಾಂತಪ್ರತಿಪಾದ್ಯನಾದ ಶುದ್ಧಾತ್ಮನು ಅಹಂಪ್ರತ್ಯಯದಲ್ಲಿ ತೋರುವುದಿಲ್ಲವೆಂಬ ವಿಷಯವನ್ನು ನಿರಾಕರಿಸಿದ್ದಾಯಿತು.

## ಸಾರ

ಶುದ್ಧನು ಅಹಂ ಎಂಬ ಅನುಭವದಲ್ಲಿ ತೋರಲಾರ ಎಂದು ಹೇಳಿದ್ದು ತಪ್ಪು. ಶುದ್ಧಾತ್ಮನು ತೋರುವುದಿಲ್ಲವೆಂದರೆ ಶುದ್ಧನಲ್ಲಿ ಕೆಲವು ಭಾಗವಷ್ಟೇ ತೋರಿ ಮತ್ತೆ ಕೆಲವು ಭಾಗ ತೋರುವುದಿಲ್ಲವೆನ್ನಬೇಕು. ಆವಾಗ ಶುದ್ಧಚೈತನ್ಯಕ್ಕಿಂತ ಅತಿರಿಕ್ತವಾದದ್ದು ಯಾವುದೂ ಇಲ್ಲವೆಂಬ ಅದ್ವೈತವೇ ನಾಶವಾಗುತ್ತದೆ. ಇನ್ನು ಅತಿರಿಕ್ತವಾದದ್ದು ಅವಿದ್ಯಕಾ ಎನ್ನಬೇಕು. ಆದರೆ ಅಧಿಷ್ಠಾನಭೂತನಾದ ಶುದ್ಧಚೈತನ್ಯನು ಸ್ವಪ್ರಕಾಶನಾಗಿ ನಿತ್ಯ ಸಿದ್ಧನಾಗಿರುವಾಗ ಅವನ ವಿಷಯದಲ್ಲಿ ಭ್ರಾಂತಿಯನ್ನಾದರೂ ಹೇಳಲು ಹೇಗೆ ಸಾಧ್ಯ?

ಅನುಭವದಲ್ಲಿ ತೋರದ ಶುದ್ಧಚೈತನ್ಯನ ಆ ಭಾಗಗಳು ಕೇವಲ ಉಪಲಕ್ಷಕ. ಶುದ್ಧಚೈತನ್ಯನು ಅನುಭವಗೋಚರನಾದ್ದರಿಂದ ಇವನನ್ನು ತಿಳಿಸಲು ವೇದಾಂತಗಳು ಬೇಕಾಗಿಲ್ಲ. ಆದರೆ ಅನುಭವ ಗೋಚರನಲ್ಲದ ಉಪಲಕ್ಷಿತಚೈತನ್ಯನನ್ನು ತಿಳಿಸಲು ವೇದಾಂತಗಳು ಸಾರ್ಥಕವೆಂದು ಕೆಲವು ಅದ್ವೈತಿಗಳ ವಾದ. ಇದು ಸಹ ತಪ್ಪು. ದ್ವಿತೀಯಾಚಂದ್ರನು ಕಾಣದಿದ್ದಾಗ ಉಪಕ್ಷಣವಾಗಿ ಕೊಂಬೆಯನ್ನು ತೋರಿಸುತ್ತಾರೆ. ಹೊರತು ಚಂದ್ರನು ಸ್ಪಷ್ಟವಾಗಿ ಕಾಣುತ್ತಿರುವಾಗ ಯಾರೂ ಸಹ ಕೊಂಬೆಯ ಮೂಲಕ ಚಂದ್ರನನ್ನು ಪರಿಚಯಿಸುವುದಿಲ್ಲ. ಪ್ರಕೃತ ಶುದ್ಧಚೈತನ್ಯನು ಅನುಭವಗೋಚರನಾಗಿ ಮೊದಲೇ ತಿಳಿದಿರುವಾಗ ಅವನ ಪರಿಚಯಕ್ಕಾಗಿ ವೇದಾಂತಗಳು ಉಪಲಕ್ಷಣಗಳನ್ನ ಪರಿಚಯಿಸಬೇಕಿಲ್ಲ.

• • • • •

## ಪ್ರತ್ಯಕ್ಷ ವಿರುದ್ಧ ಆಗಮ ಅಪ್ರಮಾಣ

**तात्पर्यचन्द्रिका –**

**युक्तं च आपौरुषेयस्याप्यागमस्य शङ्कितातात्पर्यभ्रमरूपदोषस्य "यजमानः प्रस्तरः" इत्यादेरिव प्रत्यक्षविरोधेन प्रतीतार्थप्रच्यावनम् । उक्ता च त्वयाऽपि "तत् त्वमसि" इति वाक्ये प्रत्यक्षाविरोधाय लक्षणा । तस्मात् परमते स्वरूपमात्रस्य स्वप्रकाशत्वेन नित्यसिद्धत्वात्, अन्यस्य चाज्ञानकल्पितत्वेन**

**अज्ञानविषयत्वायोगेन अज्ञानासम्भवात्, अज्ञातो विषयः अज्ञाननिवृत्तिः फ अज्ञानी चाधिकारी न युक्त इति शास्त्रमनारम्भणीयमेव' इति,** भामतीमत **तावदयुक्तम् ।**

ಅನುವಾದ - ಪ್ರತ್ಯಕ್ಷವು ಅಪೌರುಷೇಯವಾದ ಆಗಮದಿಂದ ಬಾಧಿತವಾಗುತ್ತದೆ ಭಾಮತಿಯಲ್ಲಿ ಹೇಳಲಾಗಿತ್ತು. ಇದೂ ಸರಿಯಲ್ಲ. ಏಕೆಂದರೆ ಆಗಮವು ಅಪೌರುಷೇಯವಾಗಿದ್ದು ಅದರ ತಾತ್ಪರ್ಯವು ವಿಪರೀತವಾಗಿ ತಿಳಿದರೆ, ಆಪಾತತಃ ತೋರುವ ಅರ್ಥವನ್ನು ಬಿಡಬೇಕಾಗುತ್ತ 'ಯಜಮಾನಃ ಪ್ರಸ್ತರಃ' ಎಂಬಲ್ಲಿ ದರ್ಭೆಗೂ ಯಜಮಾನನಿಗೂ ಐಕ್ಯವು ತೋರಿದರೂ ಪ್ರತ್ಯ ವಿರುದ್ಧವಾಗಿದೆ. ಜೈಮಿನ್ಯಾಚಾರ್ಯರು ಇಲ್ಲಿ ಪ್ರತೀತಾರ್ಥವನ್ನು ಬಿಡಬೇಕೆಂದು ಪೂರ್ವಮೀಮಾಂ ಯಲ್ಲಿ ಹೇಳಿದ್ದಾರೆ. ಈ ವಿಷಯವು ನಿಮಗೂ ಸಮ್ಮತವಾಗಿದೆ. ತತ್ತ್ವಮಸಿವಾಕ್ಯದಲ್ಲಿ ಪ್ರತ್ಯಕ್ಷವಿರೋ ಬಾರದಂತೆ ಲಕ್ಷಣಾರ್ಥ ಮಾಡಬೇಕೆಂದು ನೀವೇ ಒಪ್ಪಿದ್ದೀರಿ.

ಆದ್ದರಿಂದ ಅದ್ವೈತಮತದಲ್ಲಿ ಆತ್ಮಸ್ವರೂಪವು ಸ್ವಪ್ರಕಾಶತ್ವೇನ ನಿತ್ಯಸಿದ್ಧವಾದ್ದರಿಂದ ಅಜ್ಞಾನಾ ವರಣವನ್ನು ಹೇಳಲಾಗುವುದಿಲ್ಲ. ಆತ್ಮಾತಿರಿಕ್ತವಾದದ್ದೆಲ್ಲಾ ಅಜ್ಞಾನಕಲ್ಪಿತವಾದ್ದರಿಂದ ಅಜ್ಞಾನಾವರಣ ಕೂಡುವುದಿಲ್ಲ. ಅಜ್ಞಾನವೇ ಇಲ್ಲವಾದ್ದರಿಂದ ಅಜ್ಞಾತವಾದದ್ದು ವಿಷಯ, ಅಜ್ಞಾನನಿವೃತ್ತಿಯು ಫ ಅಜ್ಞಾನಿಯು ಅಧಿಕಾರಿಯೆಂದೂ ಹೇಳಲು ಸಾಧ್ಯವಿಲ್ಲ. ಹೀಗೆ ಅದ್ವೈತಶಾಸ್ತ್ರವು ಅನಾರಂಭಣೀಯ ವೆಂದೇ ತೀರ್ಮಾನವಾಯಿತು. ಆದ್ದರಿಂದ ಭಾಮತೀಮತವು ಅಯುಕ್ತವಾಗಿದೆ.

**ಕಠಿಣಪದಾರ್ಥ**

ಶಂಕಿತತಾತ್ಪರ್ಯಭ್ರಮರೂಪದೋಷಸ್ಯ = ಸಂದಿಗ್ಧವಾದ ವೇದಾಂತತಾತ್ಪರ್ಯದ ಭ್ರಮೆಯೆಂಬ ದೋಷವುಳ್ಳ (ಆಗಮಕ್ಕೆ). ಪ್ರತೀತಾರ್ಥಪ್ರತ್ಯಾಖ್ಯಾನಮ್ = ಆಪಾತತಃ ತೋರುವ ಅರ್ಥವನ್ನು ಬಿಡಬೇಕು. ಪ್ರತ್ಯಕ್ಷಾವಿರೋಧಾಯ = ಪ್ರತ್ಯಕ್ಷ ವಿರೋಧ ಬರಬಾರದೆಂದು. ಸ್ವರೂಪ ಮಾತ್ರಸ್ಯ = ಕೇವಲ ಚೈತನ್ಯ ಸ್ವರೂಪವು.

**प्रकाशः** – यदप्यवादि प्रत्यक्षं सम्भावितदोषमपौरुषेयेणागमेन बाध्यत इति तदपि नेति भावेन,

> "यजमानप्रस्तरत्वं यथा नार्थः श्रुतेर्भवेत् ।
> ब्रह्मत्वमपि जीवस्य प्रत्यक्षस्याविशेषतः ।।"

इत्यनुव्याख्यानसूचितदूषणेन निरस्यति – **युक्तं चेति** ।। **किञ्चेति** 'चा'र्थः ।। **यजमान इति** ।। आद्यस्य चतुर्थे तत्सिद्धिपेटिकायां "यजमानः प्रस्तरः" इत्यत्राभेदस्य बाधात् प्रस्तरादिशब्दलक्षिते स्रुग्धारणादौ कार्ये यजमानक्षणगुणो

विधीयत इति प्राप्ते यजमानस्य प्रस्तरवत् सूक्तवाकेन प्रहरणादेककपालवच्च सर्वहुतकरणात् सर्वतन्त्रपरिलोपापातात् यजमानकार्यकरत्वं प्रस्तरेऽप्यस्तीति 'सिंहो माणवकः' इतिवद् गौण्या वृत्त्याऽयमभेदव्यपदेश इत्युक्तम् । तद्वदिहाप्युपचरितार्थत्वमिति – त्वयाऽपीति ।। सर्वज्ञत्वाल्पज्ञत्वविशिष्टयोरभेदस्य बाधेन चिन्मात्रलक्षणाया अङ्गीकारादिति भावः ।।

"अतोऽधिकारिविषयफलयोगादिवर्जितम् ।
अनन्तदोषदुष्टं च हेयं मायामतं शुभैः ।।"

इत्यनुव्याख्यानं हृदि कृत्वोपसंहरति ।। तस्मादिति ।। अन्यस्य चेति ।। "पूर्वसिद्धतमसो हि पश्चिमो नाश्रयो भवति नापि गोचरः ।" इति विवरणोक्तेरिति भावः ।। अज्ञानासम्भवादिति ।। आवरणभूताज्ञानस्याध्रियमाणेन व्याप्तत्वात् व्यापकाऽसम्भवे व्याप्यासम्भवादिति भावः । त्रयाणां निरासे सम्बन्धोऽपि निरस्तप्राय एवेति तन्नोक्तम् । उक्तं च "योगः शशनृशृङ्गयोः" इति ।

गुरुराजीय – एवं परोक्तमहंप्रत्यये शुद्धाभानं निरस्य तदुक्तं पौरुषेयतया सम्भावितदोषस्य प्रत्यक्षस्य अपौरुषेयतया निर्दोषेणागमेन बाधं निरस्यति – युक्तं चेति ।।

यजमानः प्रस्तर इत्यादेरिवेति ।। प्रथमस्य चतुर्थे त्रयोदशाधिकरणे चिन्तितम् । तत्सिद्धिजातिसारूप्यप्रशंसाभूमलिङ्गसमवायाः । "इदमाम्नायते 'यजमानः प्रस्तरो यजमान एककपाल' इत्यादि किं नामधेयं प्रस्तरशब्दो यजमानस्य यजमानशब्दो वा प्रस्तरस्येति किं वा गुणविधिरुतार्थवाद इति तत्रैकमपरस्य नामधेयं प्रस्तरशब्दो वा यजमानस्य यजमानशब्दो वा प्रस्तरस्य उद्भिदायागेनेत्यादाविव सामानाधिकरण्यात्" इत्येकः पूर्वपक्षः । 'गुणविधिः' इत्यपरः पूर्वपक्षः । गुणविधिपक्षे प्रथमलूनबर्हिर्मुष्टिविशेषत्वरूपप्रस्तरत्वस्य यजमाने यष्टृत्वरूपयजमानत्वस्य वा प्रस्तरे विधातुमशक्यतया तत्कार्ये गुणविधाने वाच्ये तत्रापि प्रस्तरस्याचेतनत्वेन यजमानकार्यजपादिकर्तृत्वानुपपत्त्या यजमानकार्ये प्रस्तररूपगुणविध्यनुपपत्तावपि 'प्रस्तरे जुहूं सादयति' इत्यादेः प्रस्तरकार्यतयाऽवधारितस्रुग्धारणादौ यजमानस्य शक्ततया प्रस्तरकार्ये यजमानरूपगुणविध्यङ्गीकारे

नानुपपत्तिः । नचायमर्थवाद एवास्त्विति वाच्यम् । अर्थान्तरवचनेनार्थान्तरस्य स्तुत्ययोगात् । नचावयवद्वारा अष्टाकपालवचनेन द्वादशकपालस्येव इहाप्यन्यतरवचनेनान्यतरस्तुतिरुपपन्नेति वाच्यम् । अष्टाकपालद्वादशकपालयोरिव प्रकृते अंशांशिभावाभावेनावयवद्वारा स्तुत्यनुपपत्तेः क्षिप्रत्वादिधर्मवत् कस्यचिदुत्कर्षस्याप्रतीत्या "वायुर्वै क्षेपिष्ठा देवता" इत्यादिवत् स्तुतिरूपत्वस्याप्ययोगाच्च । तस्मात् नामधेयगुणविध्योरन्यतरत्वम्' इति प्राप्ते ब्रूमः । गोमहिषयोरिवात्यन्तभिन्नार्थत्वेन प्रसिद्धः उभयानुगतप्रवृत्तिनिमित्ताभावादनेकशक्तिकल्पनाप्रसङ्गाच्च न तावदेकस्यैतन्नामधेयतोपपद्यते । नापि गुणविधिरिति द्वितीयः । प्रस्तरकार्यस्रुग्धारणादौ यजमानरूपगुणविधावन्तर्वेद्यां प्रस्तरवत् यजमानेऽपि स्रुगाद्यासादनापातेन "दक्षिणतो ब्रह्मयजमानावासाते" इत्यादिवाक्यप्रमापितयजमानकार्यविलोपापत्तेः । सूक्तवाकेन "प्रस्तरं प्रहरति" इति विहितहोमरूपकार्येऽपि यजमानस्य हविष्ट्वेन प्रस्तरवद्विधानाद् यजमाने प्रहृते सर्वकर्मविलोपापत्तेश्च । एककपालकार्ये यजमानरूपगुणविध्यङ्गीकारे "एककपालं सर्वं हुतं करोति" इति शास्त्रादेककपालवद् यजमानस्यापि सर्वहुतकरणापत्त्या प्रयोगपरिसमाप्त्यभावप्रसङ्गाच्च । तस्मात् "उत्तरं बर्हिषा प्रस्तरं सादयति", "एककपालं सर्वं हुतं करोति" इति विध्यन्तरैकवाक्यतया तत्स्तावकत्वादर्थवादत्वमेव वाच्यम् । 'सिंहो देवदत्तः' इत्यादौ हि सिंहगुणशौर्यादियुक्तदेवदत्तस्य सिंहपदेनेव यजमानगुणयागसाधनत्वयुक्तप्रस्तरस्य यजमानपदेन स्तुत्युपपत्तेः । नच गुणेऽशक्तत्वान्न तदभिधायकत्वम् । ततश्चाशब्दत्वान्न शाब्दप्रस्तरान्वयो युक्त इति वाच्यम् । बोधकत्वमात्राङ्गीकारेण शक्त्या तदभिधायकत्वानंगीकारात् । नचाशक्तत्वे बोधकत्वासम्भवः । लक्षितलक्षणारूपगौण्यैव तद्बोधकत्वात् । यजमानशब्दो हि स्वार्थं यजमानं शक्त्या प्रतिपादयति । स चाभिहितः स्वसमवेतकार्यकरत्वसम्बन्धाद् बोधयति । तच्च प्रस्तरेऽप्यस्तीति प्रस्तरावबोधो यजमानपदेनेति स्तावकत्वोपपत्तेरर्थवादत्वमेवेति ।

न केवलं निर्दोषतया प्रबलस्यापि वाक्यस्य प्रत्यक्षबाधेनाविवक्षितार्थत्वदर्शनमात्रेण तदापादयामः किं नाम परेणापि तथा स्वीकारात्? इत्याह – उक्ता चेति ॥ ननु न प्रत्यक्षविरोधात् तत्वंपदयोर्लक्षणोच्यते किं तर्हि किंचिज्ज्ञत्वसर्वज्ञत्वयोरैक्यासम्भवेन तद्विशिष्टयोरैक्यासम्भवेनान्वयानुपपत्त्यैवेति

चेत् अत्राहुः । विशिष्टैक्यरूपान्वयाभावस्यापि प्रत्यक्षेणैव ज्ञातत्वात् । नच शुद्धैक्ये तात्पर्यात् तदन्यथानुपपत्त्या लक्षणेति वाच्यम् । उपक्रमादिलिङ्गानां तत्त्वंपदार्थयोरैक्यमात्र एव तात्पर्यग्राहकत्वेनोपपत्तेः । नच विशेषणैक्यानुपपत्तिप्रतिसंधानसहकृतमुपक्रमादिकं शुद्धैक्ये तात्पर्यग्राहकमिति वाच्यम् । एवं वदता त्वयैव प्रत्यक्षविरोधेन लक्षणाऽङ्गीकृता स्यात् तादृशानुपपत्तिप्रतिसन्धानस्य प्रत्यक्षरूपत्वादिति । दोषान्तरं सूचयन्नेव प्रकृतमुपसंहरति – तस्मादिति ।। स्वरूपमात्रस्येति ।। 'चैतन्यस्वरूपमात्रस्य' इत्यर्थः ।। नित्यसिद्धत्वादिति ।। सिद्धप्रकाशविलोपासिद्धप्रकाशानुत्पत्त्यादिरूपावरणकृत्यस्य तस्मिन्ननिरूपणान्न तस्याज्ञानविषयत्वमिति भावः ।। अन्यस्य चेति ।। 'अन्योन्याश्रयापत्तेः' इति भावः ।। अज्ञानासम्भवादिति ।। अत्र 'अज्ञानमिति प्रतीत्याऽज्ञानस्य सविषयत्वनियमसिद्धेर्व्यापकीभूतसविषयत्वव्यावृत्त्या तद्व्याप्याज्ञानत्वस्याप्यसम्भवात्' इत्यर्थः ।

ವಿವರಣೆ - 'ಯುಕ್ತಂ ಚಾಪೌರುಷೇಯಸ್ಯ' ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - ಆಗಮವು ಅಪೌರುಷೇಯವಾಗಿದ್ದರೂ ಸಹ ಅದರ ತಾತ್ಪರ್ಯವನ್ನು ತಪ್ಪಾಗಿ ತಿಳಿದರೆ ಬರುವ ಜ್ಞಾನವು ಅಯಥಾರ್ಥವಾಗಿರುತ್ತದೆ. 'ಯಜಮಾನಃ ಪ್ರಸ್ತರಃ' ಎಂಬಲ್ಲಿ ಉಪಜೀವ್ಯವಾದ ಪ್ರತ್ಯಕ್ಷವಿರೋಧವಿರುವುದರಿಂದ ಆಪಾತತಃ ತೋರುವ ಅರ್ಥವನ್ನು ಶ್ರುತಿಗೆ ಇಟ್ಟುಕೊಳ್ಳಬಾರದೆಂದು ಪೂರ್ವಮೀಮಾಂಸೆಯಲ್ಲಿ ಸಮರ್ಥಿಸಲಾಗಿದೆ. 'ಯುಕ್ತಂ ಚ' ಎಂಬಲ್ಲಿರುವ 'ಚ' ಕಾರಕ್ಕೆ 'ಕಿಂಚ' ಎಂದರ್ಥ. ಪೂರ್ವಮೀಮಾಂಸಾದಲ್ಲಿರುವ 'ಯಜಮಾನ' ಶಬ್ದದ ಅರ್ಥ- ವಿಮರ್ಶೆಯನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು.

ಸೂತ್ರ - ತತ್ಸಿದ್ಧಿಜಾತಿಸಾರೂಪ್ಯಪ್ರಶಂಸಾಭೂಮಲಿಂಗಸಮವಾಯಾ ಗುಣಾಶ್ರಯಾಃ

ಶ್ರುತಿ - ಯಜಮಾನಃ ಪ್ರಸ್ತರಃ ಯಜಮಾನೋ ವಾ ಏಕಕಪಾಲಃ

ಸಂಶಯ - ಯಜಮಾನನು ಪ್ರಸ್ತರಾದಿಗಳ ಕಾರ್ಯವನ್ನು ಮಾಡುತ್ತಾನೆಂದು, ಪ್ರಸ್ತರಾದಿಗಳು ಯಜಮಾನನ ಕಾರ್ಯವನ್ನು ಮಾಡುತ್ತವೆಯೆಂದು ಶ್ರುತ್ಯರ್ಥ ಹೇಳುತ್ತೀರೋ? ಅಥವಾ ಯಜಮಾನಶಬ್ದವು ಕೇವಲ ಅರ್ಥವಾದ ಎಂದು ಹೇಳುತ್ತೀರೋ?

ಪೂರ್ವಪಕ್ಷ - ಯಜಮಾನಶಬ್ದದಿಂದ ಹೆಸರು ತಿಳಿಯುವುದರಿಂದ ಪ್ರಸ್ತರದ ಕಾರ್ಯವನ್ನು ಯಜಮಾನನು ಮಾಡಬೇಕು.

ಸಿದ್ಧಾಂತ - ಪ್ರತ್ಯಕ್ಷವಿರುದ್ಧವಾದ ಅರ್ಥವನ್ನು ಶ್ರುತಿಗೆ ಹೇಳಬಾರದಾದ್ದರಿಂದ ಪ್ರಶಂಸಾ: ವಾಗಿಯೇ ಯಜಮಾನಶಬ್ದಕ್ಕೆ ಅರ್ಥ ಹೇಳಬೇಕು.

ವಿವರಣೆ - ಮೊದಲನೆಯ ಅಧ್ಯಾಯದ ನಾಲ್ಕನೇ ಪಾದದಲ್ಲಿರುವ ಶಕ್ತ್ಯರ್ಥಾಧಿಕರಣ 'ಯಜಮಾನಃ ಪ್ರಸ್ತರಃ ಯಜಮಾನೋ ವಾ ಏಕಕಪಾಲಃ' ಎಂಬ ಶ್ರುತಿಗೆ ಯಾವ ರೀತಿಯಾಗಿ ಅ: ಮಾಡಬೇಕೆಂಬುದನ್ನು ವಿಮರ್ಶಿಸಿದ್ದಾರೆ.

ಶ್ರುತ್ಯರ್ಥ --

"ಯಜಮಾನಃ = ಯಾಗ ಮಾಡಿಸುವವನು, ಪ್ರಸ್ತರಃ = ಯಜ್ಞವೇದಿಕೆಯ ಮೇಲೆ ಸ್ರುಕ್ ಮುಂ: ಯಾಗೋಪಕರಣಗಳನ್ನು ಇಟ್ಟುಕೊಳ್ಳಲು ಹಾಸುವ ಮುಷ್ಟಿದರ್ಭೆ. ಯಜಮಾನೋ ವಾ : ಯಜಮಾನನಾದರೂ, ಏಕಕಪಾಲಃ = ಮಣ್ಣಿನ ಗಡಿಗೆಯೊಂದರಲ್ಲಿ ನಿರ್ಮಿಸಿದ ಹವಿಸ್ಸು".

ಶ್ರುತಿಯನ್ನು ನೋಡಿದಾಗ ಆಪಾತತಃ ಈ ಅರ್ಥವು ತೋರುತ್ತದೆ. ಇಲ್ಲಿ ಶ್ರುತಿ ಯಜಮಾನನಿಗೂ, ಪ್ರಸ್ತರಕ್ಕೂ, ಹಾಗು ಯಜಮಾನನಿಗೂ ಏಕಕಪಾಲಕ್ಕೂ ಅಭೇದವನ್ನು ಹೇಳುತ್ತ: ಆದರೆ ಅವುಗಳಿಗೆ ಅಭೇದವು ಪ್ರತ್ಯಕ್ಷ ವಿರುದ್ಧವಾದ್ದರಿಂದ ಬೇರೆ ಅರ್ಥವನ್ನು ಮಾಡಬೇಕಾಗುತ್ತ: ಆವಾಗ ಹೀಗೆ ಸಂಶಯ ಬರುತ್ತದೆ - ಯಜಮಾನನು ಪ್ರಸ್ತರ ಹಾಗು ಏಕಕಪಾಲಗಳ ಕಾರ್ಯವ: ಮಾಡುತ್ತಾನೆಂದು ಹೇಳಬೇಕೋ? ಅಥವಾ ಏಕಕಪಾಲಗಳು ಯಜಮಾನನ ಕಾರ್ಯವನ್ನು ಮಾಡು- ತ್ತವೆಂದು ಶ್ರುತ್ಯರ್ಥ ಹೇಳಬೇಕೋ? ಅಥವಾ ಎರಡನ್ನೂ ಹೇಳದೆ 'ಯಜಮಾನ'ಶಬ್ದವು ಕೇ: ಪ್ರಶಂಸಾಪರವಾಗಿ ಹೊರಟ ಅರ್ಥವಾದವೆಂದು ಶ್ರುತ್ಯರ್ಥ ಹೇಳಬೇಕೋ? ಎಂದು.

ಯಜಮಾನನು ಮಾಡಬೇಕಾದ ಜಪ ಪಾರಾಯಣಾದಿಕಾರ್ಯಗಳನ್ನು ಜಡವಾದ ಪ್ರಸ್ತರಕ್ಕಾಗಲೀ ಏಕಕಪಾಲಕ್ಕಾಗಲೀ ಮಾಡಲು ಸಾಧ್ಯವಿಲ್ಲ. ಹಾಗಾಗಿ ಯಜಮಾನನ ಕಾರ್ಯವನ್ನು ಪ್ರಸ್ತರಾದಿಗ: ಮಾಡುತ್ತವೆಯೆಂದು ಹೇಳಲಾಗದು. ಪ್ರಸ್ತರವನ್ನು ಹಾಸಿ ಅದರ ಮೇಲೆ ಸ್ರುಕ್‌ಸ್ರುವಾದಿಗಳ: ಇಡುವುದರಿಂದ ಪ್ರಸ್ತರದ ಕಾರ್ಯ ಸ್ರುಗಾದಿಧಾರಣ. ಈ ಸ್ರುಗಾದಿಧಾರಣಕಾರ್ಯವನ್ನು ಯ: ಮಾನನಿಗೆ ಮಾಡಲು ಸಾಧ್ಯವಿದೆ. ಇನ್ನು ಏಕಕಪಾಲದ ಕಾರ್ಯ ತನ್ನನ್ನು ಸಂಪೂರ್ಣವಾಗಿ ಅಗ್ನಿಯ: ಹೋಮಿಸಿಕೊಳ್ಳುವಿಕೆ. ಇದನ್ನು ಸಹ ಆತ್ಮಾರ್ಪಣೆ ಮಾಡಿಕೊಳ್ಳುವ ಮೂಲಕ ಯಜಮಾನ: ಮಾಡಬೇಕೆಂದು 'ಯಜಮಾನಃ ಪ್ರಸ್ತರಃ' ಇತ್ಯಾದಿ ವಾಕ್ಯಗಳು ಹೇಳುತ್ತಿವೆಯೆಂದು ಪೂರ್ವಪಕ್ಷ.

'ಪ್ರಸ್ತರಂ ಪ್ರಹರೇತ್' ಎಂದಿರುವುದರಿಂದ ಸೂಕ್ತರೂಪವಾದ ಮಂತ್ರದಿಂದ ಪ್ರಸ್ತರವ: ಅಗ್ನಿಯಲ್ಲಿ ಹೋಮಿಸಬೇಕು. ಹಾಗೆಯೇ ಏಕಕಪಾಲದ ಕಾರ್ಯ ಆತ್ಮಾರ್ಪಣೆ. ಒಂದು ವೇ: ಯಜಮಾನನಾದವನು ಪ್ರಸ್ತರದ ಹಾಗು ಏಕಕಪಾಲದ ಕಾರ್ಯದಂತೆ ತನ್ನನ್ನೇ ತಾನು ಅಗ್ನಿಯ: ಹೋಮಿಸಿಕೊಂಡರೆ ಯಜ್ಞಕಾರ್ಯಗಳೆಲ್ಲ ನಿಂತು ಹೋಗಿ ಅನರ್ಥವೇ ಆಗುತ್ತದೆ. ಆದ್ದ: ಯಜಮಾನನ ಕಾರ್ಯವನ್ನು ಪ್ರಸ್ತರಾದಿಗಳಿಗೆ ಮಾಡಲು ಹೇಗೆ ಸಾಧ್ಯವಿಲ್ಲವೋ; ಅದ:

ಪ್ರಸ್ತರಾದಿಗಳ ಕಾರ್ಯವನ್ನೂ ಯಜಮಾನನಿಗೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಈ ವಾಕ್ಯವು ಪ್ರಸ್ತರ ಹಾಗು ಏಕಕಪಾಲವನ್ನು ಯಜಮಾನನೆಂದು ಹೊಗಳುತ್ತಿದೆಯೆಂದು ಹೇಳಬೇಕು. ಹಾಗೆ ಹೇಳಿದರೂ ಪ್ರಸ್ತರ ಏಕಕಪಾಲಗಳೇ ಯಜಮಾನವಾಗದಿರುವುದರಿಂದ ಪುನಃ ಪ್ರತ್ಯಕ್ಷವಿರೋಧ ಬರುತ್ತದೆ. ಆದ್ದಾಗಿ ಹೇಗೆ 'ಸಿಂಹೋ ಮಾಣವಕಃ' ಎಂಬಲ್ಲಿ 'ಸಿಂಹದಂತೆ ಗಂಭೀರನಾದವನು ಬ್ರಹ್ಮಚಾರಿ' ಎಂದು ಗೌಣಾರ್ಥವನ್ನು ಮಾಡುತ್ತೇವೆಯೋ, ಅದರಂತೆ ಇಲ್ಲಿಯೂ 'ಯಜಮಾನ' ಶಬ್ದಕ್ಕೆ ಗೌಣಾರ್ಥವನ್ನು ಮಾಡಬೇಕು. ಹೇಗೆಂದರೆ, ಯಾಗಕ್ಕೆ ಯಜಮಾನನು ಎಷ್ಟು ಮುಖ್ಯನೋ ಅದರಂತೆಯೇ ಪ್ರಸ್ತರ ಹಾಗು ಏಕಕಪಾಲಗಳು ಯಾಗಕ್ಕೆ ಬಹಳ ಮುಖ್ಯವೆಂದು ಸಿದ್ಧಾಂತ.

ಹೀಗೆ ಪ್ರತ್ಯಕ್ಷದಿಂದಲೂ ಆಗಮವು ಬಾಧಿತವಾಗುತ್ತದೆ. ಹಾಗಾಗಿ ಆಗಮದಿಂದ ಪ್ರತ್ಯಕ್ಷವಷ್ಟೇ ಬಾಧಿತವಾಗುತ್ತದೆಂಬ ಭಾಮತಿಯ ಮಾತು ಸರಿಯಾದದ್ದಲ್ಲ.

ಅದ್ವೈತಿಗಳಿಗೂ ಇದು ಸಮ್ಮತವಾಗಿದೆ; ತತ್ತ್ವಮಸಿ ಎಂಬ ಶ್ರುತಿಗೆ ಅರ್ಥ ಹೇಳಬೇಕಾದರೆ 'ತತ್' ಎಂದರೆ 'ಸರ್ವಜ್ಞತ್ವವಿಶಿಷ್ಟ'ನಾದ ಬ್ರಹ್ಮ 'ತ್ವಂ'ಎಂದರೆ 'ಅಲ್ಪಜ್ಞತ್ವ ವಿಶಿಷ್ಟ' ನಾದ ಜೀವ. ವಿರುದ್ಧಧರ್ಮಾಧಿಕರಣರಾದ ಇವರಿಬ್ಬರಿಗೆ ಅಭೇದವು ಪ್ರತ್ಯಕ್ಷಬಾಧಿತವಾಗಿದೆಯೆಂದು 'ಚಿನ್ಮಾತ್ರ'ದಲ್ಲಿ ಎರಡೂ ಶಬ್ದಗಳಿಗೆ ಲಕ್ಷಣಾ ಮಾಡುತ್ತೀರಿ. ಹೀಗೆ ಶ್ರುತಿಗೆ ಪ್ರತ್ಯಕ್ಷಬಾಧವನ್ನು ಸ್ವತಃ ನೀವೇ ಅಂಗೀಕರಿಸಿದ್ದೀರಿ. ಈಗ ಪ್ರತ್ಯಕ್ಷಕ್ಕೆ ಬಾಧ ಹೇಳಿದರೆ ಅಪಸಿದ್ಧಾಂತದೋಷ ಬರುತ್ತದೆ.

'ಅತೋಽಧಿಕಾರಿವಿಷಯಫಲಯೋಗಾದಿವರ್ಜಿತಮ್ ।
ಅನಂತದೋಷದುಷ್ಟಂ ಚ ಹೇಯಂ ಮಾಯಾಮತಂ ಶುಭೈಃ ॥'

ಹೀಗೆ "ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧಗಳಿಲ್ಲದ ಅನೇಕ ದೋಷಗಳಿಂದ ತುಂಬಿದ ಮಾಯಾವಾದ ಮತವನ್ನು ಸಜ್ಜನರು ಧಿಕ್ಕರಿಸಬೇಕು" ಎಂಬ ಅನುವ್ಯಾಖ್ಯಾನದ ವಾಣಿಯನ್ನು ಹೃದಯದಲ್ಲಿ ಧರಿಸಿ 'ತಸ್ಮಾತ್' ಇತ್ಯಾದಿ ವಾಕ್ಯಗಳಿಂದ ಭಾಮತೀಕಾರನ ಖಂಡನೆಯನ್ನು ಉಪಸಂಹಾರ ಮಾಡುತ್ತಿದ್ದಾರೆ.

ಅದ್ವೈತಮತದಲ್ಲಿ ಆತ್ಮಸ್ವರೂಪವು ಸ್ವಪ್ರಕಾಶವಾದ್ದರಿಂದ ಅಜ್ಞಾನದಿಂದಲೇ ಕಲ್ಪಿತಗಳಾದ್ದರಿಂದ ಅವುಗಳಿಗೂ ಅಜ್ಞಾನಾವರಣವನ್ನು ಹೇಳಲಾಗದು. ಇದನ್ನು ಬೇರೆ ವಸ್ತುಗಳೆಲ್ಲವೂ ಅಜ್ಞಾನದಿಂದಲೇ ಕಲ್ಪಿತಗಳಾದ್ದರಿಂದ ಅವುಗಳಿಗೂ ಅಜ್ಞಾನಾವರಣವನ್ನು ಹೇಳಲಾಗದು. ಇನ್ನು 'ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ' ಎಂದು ವಿವರಣಕಾರ ಹೇಳಿದ್ದಾನೆ. 'ಆವರಣಂ ಹಿ ಅಪ್ರಿಯಮಾಣೇನ ವ್ಯಾಪ್ತಮ್' ಎಂದು ನಿಯಮವಿದೆ. ವ್ಯಾಪಕವಾದ ಆವರಣ ಹೊಂದಬಲ್ಲ ವಸ್ತುವೇ ಇಲ್ಲದಿದ್ದರೆ ವ್ಯಾಪ್ಯವಾದ ಆವರಣವೂ ಇರಲು ಸಾಧ್ಯವಿಲ್ಲ. ಹೀಗೆ ಅಜ್ಞಾನವಿಲ್ಲವಾದ್ದರಿಂದ ವಿಷಯ ಪ್ರಯೋಜನ ಅಧಿಕಾರಿಗಳು ಇಲ್ಲವೆಂದು ಸಿದ್ಧವಾಯಿತು. ಇವು ಮೂರೂ ಇಲ್ಲವೆಂದು ಸಿದ್ಧವಾದ ಮೇಲೆ ಇವುಗಳಿಗೆ ಸಂಬಂಧವೂ ಇಲ್ಲವೆಂದು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆ ಇಲ್ಲ. 'ಯೋಗಃ ಶಶನೃಶೃಂಗಯೋಃ' ನರವಿಷಾಣಕ್ಕೂ, ಶಶವಿಷಾಣಕ್ಕೂ ಇರುವ ಸಂಬಂಧದಂತೆ ಈ ವಿಷಯ ಪ್ರಯೋಜನಾದಿಗಳಿಗಿರುವ ಸಂಬಂಧವೂ ಅತ್ಯಂತ ಹಾಸ್ಯಾಸ್ಪದವಾಗಿದೆ.

*ಜಿಜ್ಞಾಸಾಧಿಕರಣ*

ಇಲ್ಲಿ ಗ್ರಂಥಕಾರರು ಅನುವ್ಯಾಖ್ಯಾನದಲ್ಲಿ ಸೂಚಿಸಿದ ದೋಷವನ್ನೇ ಹೇಳುತ್ತಾರೆ ... ವ್ಯಾಖ್ಯಾನಶ್ಲೋಕ ಹೀಗಿದೆ. -

'ಯಜಮಾನಪ್ರಸ್ತರತ್ವಂ ಯಥಾ ನಾರ್ಥಃ ಶ್ರುತೇರ್ಭವೇತ್ ।
ಬ್ರಹ್ಮತ್ವಮಪಿ ಜೀವಸ್ಯ ಪ್ರತ್ಯಕ್ಷಸ್ಯಾವಿಶೇಷತಃ' ॥

'ಯಜಮಾನಃ ಪ್ರಸ್ತರಃ' ಎಂಬ ಶ್ರುತಿಗೆ 'ಯಜಮಾನನೇ ದರ್ಭಮುಷ್ಟಿ' ಎಂದರ್ಥ... ಹಾಗಾದಲ್ಲಿ ಪ್ರತ್ಯಕ್ಷವಿರೋಧ ಬರುತ್ತದೆ. ಅದೇ ಕಾರಣದಿಂದಲೇ 'ಅಹಂ ಬ್ರಹ್ಮ' ... ಶ್ರುತಿಗಳಿಗೂ ಜೀವನೇ ಬ್ರಹ್ಮನೆಂಬ ಅರ್ಥವನ್ನು ಹೇಳಬಾರದು ಎಂದು. 'ಯುಕ್ತಂ ಚ' ಎಂಬಲ್ಲಿ... 'ಚ' ಕಾರಕ್ಕೆ 'ಕಿಂಚ' ಎಂದರ್ಥ ವಿವರವಾದ ಅಧಿಕರಣರಚನೆ ಹೀಗಿದೆ -

[1]॥ ಯಜಮಾನಶಬ್ದಸ್ಯ ಪ್ರಸ್ತರಾದಿಸ್ತುತ್ಯರ್ಥತಾಧಿಕರಣಮ್ ॥

**ಸೂತ್ರ : ತತ್ಸಿದ್ಧಿಜಾತಿಸಾರೂಪ್ಯ ಪ್ರಶಂಸಾಭೂಮಲಿಂಗಸಮವಾಯಾಃ ಗುಣಾಶ್ರಯಾಃ - (೧-೪-೧-೩.)**

**ಸೂತ್ರಾರ್ಥ** :- ಗೌಣೀವೃತ್ತಿಯನ್ನು ಆಶ್ರಯಿಸಲು ಇವು ಆರು ನಿಮಿತ್ತಗಳು. ೧) 'ತತ್ಸಿದ್ಧಿ = ತತ್ಕಾರ್ಯಸ್ಯ ಅನೇನ ಸಿದ್ಧಿ' ಯಜಮಾನನ ಕಾರ್ಯವು ಯಾವುದರಿಂ...

---

(१) तत्सिद्धिः –

अत्र अष्टकपालदिशब्दवत् कथंचिदपि स्तावकत्वायोगात् यजमानशब्दस्य नामत्व गुणविधित्वं वा आश्रयितव्यमिति शंकनात् सङ्गतिः । 'यजमानः प्रस्तरः' इत्यत्र यजमानशब्दः किं नाम, उत गुणपरः, अथ अर्थवाद इति सन्देहे सामानाधिकरण्याद्यजमानशब्द प्रस्तरनामेत्येकः पक्षः । गोमहिषपदयोरिव यजमानप्रस्तरशब्दयोर्भिन्नार्थकत्वेन प्रसिद्धत्वात् नामधेयपक्षो न युक्तः । किन्तु गुणविधिः । यजमानकार्ये यागादौ प्रस्तरस्याचेतनस्यासामर्थ्यात् प्रथमश्रुतशब्दे कार्यकारित्वलक्षकत्वायोगाच्च, प्रस्तरकार्ये स्रुग्धारणादौ यजमानस्य शक्तत्वाच्चरमश्रुते कार्यकारित्वलक्षणायामदोषाच्च प्रस्तरकार्ये यजमानरूपो गुणो विधीयत इति प्राप्ते 'प्रस्तरं प्रहरति' इत्युक्तस्याग्नौ प्रहरणस्यापि प्रस्तरकार्यत्वात् यजमानस्याप्यग्नौ प्रहरणे सति कर्मशेषपरिलोपप्रसङ्गाच्च गुणविधिपक्षो युक्तः । किन्तु यज्ञसाधनत्वरूपयजमानगुणयोगेन विधेयः प्रस्तरो यजमानपदेन स्तूयत इत्यर्थवाद इति सिद्धान्तः । तथा चाह सूत्रकारः ।। तत्सिद्धिरिति ।। गुणाश्रयपदं प्रत्येकमन्वेति । तस्य यजमानकार्यस्य यागादेः सिद्धिः निष्पादकत्वं, गुणाश्रयः गुणस्य गौणशब्दस्य प्रस्तरादावन्यत्र वृत्तौ आश्रयो निमित्तमिति ।। फलन्तु प्रस्तर एव स्रुगादिसादनं, न यजमान इति ।।

।। इति त्रयोदशं यजमानशब्दस्य प्रस्तरादिस्तुत्यर्थताधिकरणम् ।।

ಪಂಪೂರ್ಣಚಂದ್ರಿಕಾ

ಬದ್ಧವಾಗುತ್ತದೋ, ಅದು 'ತತ್‌ಸಿದ್ಧಿ' ೨) ಜಾತಿ ೩) ಸಾರೂಪ್ಯ ೪) ಪ್ರಶಂಸಾ ೫) ಭೂಮಾ ೬) ಲಿಂಗಸಮವಾಯಗಳು. ಶ್ರುತ್ಯುಕ್ತವಾದ ಪದಗಳಿಗೆ ಗೌಣೀವೃತ್ತಿಯನ್ನು ಆಶ್ರಯಿಸಲು ಇವು ಕಾರಣಗಳಾಗಿವೆ.

ಗೌಣೀವೃತ್ತಿನಿಮಿತ್ತಗಳು ಆರು ಇರುವುದರಿಂದ ಈ ಒಂದೇ ಸೂತ್ರದಲ್ಲಿ ಆರು ಅವಾಂತರ ಅಧಿಕರಣಗಳು ಇರುತ್ತವೆ. ಆದ್ದರಿಂದ 'ತತ್‌ಸಿದ್ಧಿಪೇಟಿಕಾ' ಎಂದೇ ಮೊದಲನೆಯ ಅಧಿಕರಣವು ಪ್ರಸಿದ್ಧವಾಗಿದೆ.

ವಿಷಯವಾಕ್ಯ :- 'ಉತ್ತರಂ ಬರ್ಹಿಷಃ ಪ್ರಸ್ತರಂ ಸಾದಯತಿ ಪ್ರಜಾ ವೈ ಬರ್ಹಿಃ ಯಜಮಾನಃ ಪ್ರಸ್ತರಃ' (ತೈತ್ತರೀಯಸಂಹಿತೆ, ದ್ವಿತೀಯಕಾಂಡ, ಆರನೆಯ ಪ್ರಶ್ನೆ, ಐದನೆಯ ಅನುವಾಕ)

ಬರ್ಹಿಷಃ = (ಯಜ್ಞವೇದಿಕೆಯಲ್ಲಿರುವ) ದರ್ಭೆಗಳ, ಉತ್ತರಮ್ = ಮೇಲೆ, ಪ್ರಸ್ತರಂ = ದರ್ಭೆ ಮುಷ್ಟಿಯನ್ನು, ಸಾದಯತಿ = ಸ್ಥಾಪನೆ ಮಾಡಬೇಕು. ಇದು ವಿಧಿವಾಕ್ಯ. ಈ ವಾಕ್ಯದ ಮುಂದಿರುವ 'ಯಜಮಾನಃ ಪ್ರಸ್ತರಃ' 'ಯಜಮಾನನೇ ದರ್ಭೆ ಮುಷ್ಟಿಯಾಗಿದ್ದಾನೆ' ಎಂಬ ವಾಕ್ಯವು ಅರ್ಥವಾದವಾಗಿದೆ.

ಸಂಶಯ :- ಈ ವಾಕ್ಯವನ್ನು ಹೇಳಿದಾಗ ಮೂರು ಬಗೆಯ ಸಂಶಯ ಬರುತ್ತದೆ. -

೧) ಯಜಮಾನಪದವು ಪ್ರಸ್ತರದ ಹೆಸರೋ? ಪ್ರಸ್ತರಪದವು ಯಜಮಾನನ ಹೆಸರೋ?

೨) ಯಜಮಾನನು ಮಾಡಬೇಕಾದ ಕಾರ್ಯದಲ್ಲಿ ಪ್ರಸ್ತರವನ್ನು ವಿಧಿಸಲಾಗಿದೆಯೋ? ಪ್ರಸ್ತರ ಮಾಡಬೇಕಾದ ಕಾರ್ಯದಲ್ಲಿ ಯಜಮಾನನ್ನು ವಿಧಿಸಲಾಗಿದೆಯೋ? ಇದು 'ಗುಣವಿಧಿ'.

೩) ಗೌಣೀವೃತ್ತಿಯನ್ನು ಆಶ್ರಯಿಸಿ ಕೇವಲ ಸ್ತೋತ್ರಪರವೆಂದು ಹೇಳಬೇಕೋ?

## ಪೂರ್ವಪಕ್ಷ

ಮೊದಲನೆಯ ಪೂರ್ವಪಕ್ಷ :- ಯಜಮಾನಪದವು ಪ್ರಸ್ತರದ ಹೆಸರೇ ಆಗಿದೆ. ಅಥವಾ ಪ್ರಸ್ತರಪದವು ಯಜಮಾನನ ಹೆಸರಾಗಿದೆ. ಯಥೇಚ್ಛವಾಗಿ ಹೇಗೆ ಹೇಳಿದರೂ ಬಾಧಕವಿಲ್ಲ. ಎರಡೂ ಪದಗಳು ಒಂದೇ ವಿಭಕ್ತಿಯಲ್ಲಿರುವುದರಿಂದ ಸಾಮಾನಾಧಿಕರಣ್ಯವೇ ಇಲ್ಲಿರುವ ಯುಕ್ತಿ. ಉದಾಹರಣೆ :- 'ಉದ್‌ಭಿದಾ ಯಜೇತ ಪಶುಕಾಮಃ' ಎಂಬ ವಾಕ್ಯಕ್ಕೆ 'ಉದ್‌ಭಿದಾ ಯಾಗೇನ ಪಶುಫಲಂ ಭಾವಯೇತ್' 'ಉದ್‌ಭಿತ್' ಎಂಬ ಸೋಮಯಾಗದಿಂದ ಪಶುಫಲವನ್ನು ಪಡೆಯಬೇಕು ಎಂದರ್ಥ. ಇಲ್ಲಿ 'ಉದ್‌ಭಿದಾ' 'ಯಾಗೇನ' ಎಂದು ಎರಡೂ ಪದಗಳು ಒಂದೇ ವಿಭಕ್ತಿಯಲ್ಲಿವೆ. ಹೀಗೆ ಸಾಮಾನಾಧಿಕರಣ್ಯವಿರುವುದರಿಂದ 'ಉದ್‌ಭಿತ್'ಶಬ್ದವು ಯಾಗದ ನಾಮಧೇಯವೇ ಆಗಿದೆಯೆಂದು ಉದ್‌ಭಿದಧಿಕರಣದಲ್ಲಿ ನಿರ್ಣಯಿಸಲಾಗಿದೆ. ಇದೇ ಯುಕ್ತಿಯಿಂದಲೇ ಪ್ರಕೃತದಲ್ಲಿಯೂ ಯಜಮಾನಪದಕ್ಕೂ ಪ್ರಸ್ತರಪದಕ್ಕೂ ಸಾಮಾನಾಧಿಕರಣ್ಯವಿರುವುದರಿಂದ ಯಜಮಾನಪದವು ಪ್ರಸ್ತರದ ನಾಮಧೇಯವಾಗುತ್ತದೆ. ಅಥವಾ ಪ್ರಸ್ತರಪದವು ಯಜಮಾನನ ನಾಮಧೇಯವಾಗುತ್ತದೆ. ಏನೂ ಬಾಧಕವಿಲ್ಲ.

ಎರಡನೆಯ ಪೂರ್ವಪಕ್ಷ - 'ಯಜಮಾನಃ ಪ್ರಸ್ತರಃ' ಎಂಬುದು ಗುಣವಿಧಿಯೆಂದೇ ಹೇ ಬಹುದು. ಗುಣವಿಧಿಪಕ್ಷದಲ್ಲಿ ಒಂದು ಪದಕ್ಕೆ ಕಾರ್ಯಕಾರಿತ್ವಾರ್ಥದಲ್ಲಿ ಲಕ್ಷಣಾ ಮಾಡಲಾ ಯಜಮಾನನು ಯಾವ ಕಾರ್ಯವನ್ನು ಮಾಡಬೇಕೋ, ಆ ಕಾರ್ಯವನ್ನು ಪ್ರಸ್ತರವು ಮಾಡಲೆಂ ಹೇಳಬೇಕು. ಅಥವಾ ಪ್ರಸ್ತರವು ಯಾವ ಕಾರ್ಯವನ್ನು ಮಾಡಬೇಕೋ ಆ ಕಾರ್ಯ ಯಜಮಾನನು ಮಾಡಬೇಕೆಂದು ಹೇಳಬೇಕು. ಹೇಗೆ ಹೇಳಿದರೂ ಸಹ ಒಂದು ಪದಕ್ಕೆ ಮತ್ತೊಂ ಕಾರ್ಯದಲ್ಲಿ ಲಕ್ಷಣಾ ಮಾಡಬೇಕು. ಉದಾಹರಣೆ : - 'ಯೋ ಹೋತಾ ಸಃ ಅಧ್ವರ್ಯುಃ' 'ಯಾ ಹೋತೃವೋ ಅವನೇ ಅಧ್ವರ್ಯು ಆಗಿದ್ದಾನೆ' ಎಂಬಲ್ಲಿ ಅಧ್ವರ್ಯುವಿನ ಕಾರ್ಯದಲ್ಲಿ ಹೋತೃ ವಿಧಿಸಿದ್ದಾರೆ. ಆದ್ದರಿಂದ ಒಂದು ಶಬ್ದಕ್ಕೆ ಮತ್ತೊಂದರ ಕಾರ್ಯದಲ್ಲಿ ಲಕ್ಷಣಾ ಮಾಡುವುದು ಶಾ ಅದರಂತೆ ಪ್ರಕೃತದಲ್ಲಿಯೂ ಎರಡು ಪದಗಳಲ್ಲಿ ಯಾವುದಾದರೂ ಒಂದು ಪದಕ್ಕೆ ಮತ್ತೊಂ ಕಾರ್ಯದಲ್ಲಿ ಲಕ್ಷಣಾವನ್ನು ಮಾಡಲೇಬೇಕು. ಪ್ರಥಮಲೂನಬರ್ಹಿಮುಷ್ಟಿವಿಶೇಷತ್ವರೂಪವಾ ಪ್ರಸ್ತರತ್ವವು (ಮೊದಲು ಕತ್ತರಿಸಿದ ಬರ್ಹಿ) ಯಜಮಾನನಲ್ಲಿ ಅತ್ಯಂತ ಅಸಂಭಾವಿತವಾಗಿ ಯಷ್ಟೃತ್ವರೂಪವಾದ ಯಜಮಾನತ್ವವೂ ಕೂಡ ಪ್ರಸ್ತರದಲ್ಲಿ ಅತ್ಯಂತ ಅಸಂಭಾವಿತವಾಗಿದೆ. ಆದ್ದರಿಂ ತತ್ತತ್ಕಾರ್ಯದಲ್ಲೇ ಲಕ್ಷಣಾವನ್ನು ಒಪ್ಪಿಕೊಳ್ಳಬೇಕು.

ಯಜಮಾನನ ಕಾರ್ಯವೆಂದರೆ ಜಪ ಮಾಡುವಿಕೆಯೇ ಮೊದಲಾದುದು. ಪ್ರಸ್ತರವು ಜಡವ ವಾಗಿರುವುದರಿಂದ ಯಜಮಾನನ ಕಾರ್ಯವನ್ನು ಮಾಡಲಾರದು. ಆದ್ದರಿಂದ ಯಜಮಾ ಕಾರ್ಯದಲ್ಲಿ ಪ್ರಸ್ತರರೂಪಗುಣವಿಧಿಯು ಕೂಡುವುದಿಲ್ಲ. ಹೊರತಾಗಿ ಪ್ರಸ್ತರದ ಕಾರ್ಯ ಯಜಮಾನತ್ವವೆಂಬ ಗುಣವಿಧಿಯೆಂದೇ ಹೇಳಬೇಕು. 'ಪ್ರಸ್ತರೇ ಜುಹೂಂ ಸಾದಯ 'ದರ್ಭೆಮುಷ್ಟಿಯ ಮೇಲೆ ಜುಹೂ ಎಂಬ ಪಾತ್ರವಿಶೇಷವನ್ನು ಇಡಬೇಕು.' ಎಂದು ಜುಹೂ ಧಾರಣವನ್ನು ಯಜಮಾನನೂ ಸಹ ಮಾಡಬಹುದು. ಆದ್ದರಿಂದ ಪ್ರಸ್ತರದ ಕಾರ್ಯ ಯಜಮಾನತ್ವವೆಂಬ ಗುಣವಿಧಿಯನ್ನು ಅಂಗೀಕರಿಸಿದರೆ ಯಾವ ಅನುಪಪತ್ತಿಯೂ ಇರುವು (ಒಂದರಲ್ಲಿ ಮತ್ತೊಂದರ ಕಾರ್ಯವನ್ನು ವಿಧಿಸುವುದೇ ಗುಣವಿಧಿ ಎನಿಸುತ್ತದೆ.)

**ಪ್ರಶ್ನೆ :-** ಪ್ರಸ್ತರ ಪದಕ್ಕೆ ಪ್ರಸ್ತರದ ಕಾರ್ಯದಲ್ಲಿ ಲಕ್ಷಣಾವನ್ನು ಮಾಡಿ ಅದರಲ್ಲಿ ಯಜಮಾನತ್ವ ಗುಣವನ್ನು ವಿಧಿಸುವುದು ಕ್ಲೇಶಕರವಾಗಿದೆ. ಅದಕ್ಕಿಂತ ಸ್ತುತಿಪರವಾಗಿದೆಯೆಂದು ಹೇಳುವು ಸುಲಭವಾಗಿದೆ. ಆದ್ದರಿಂದ ಇದನ್ನು ಅರ್ಥವಾದವಾಕ್ಯವೆಂದೇ ಹೇಳೋಣ.

**ಉತ್ತರ :-** ಅರ್ಥವಾದವಾಕ್ಯವೆಂದು ಹೇಳಲಾಗದು. ಏಕೆಂದರೆ ಒಂದು ಪದವನ್ನು ಮತ್ತೊಂ ವಸ್ತುವಿನ ಸ್ತುತಿಯೆಂದು ಹೇಳಲಾಗದು. ಪ್ರಸ್ತರಪದದಿಂದ ಯಜಮಾನನನ್ನಾಗಲೀ ಯಜಮಾನಪ ದಿಂದ ಪ್ರಸ್ತರವನ್ನಾಗಲೀ ಸ್ತೋತ್ರಮಾಡಲಾಗದು. ಮತ್ತು ಸ್ತುತಿಯೆಂದು ಹೇಳಬೇಕಾ ಗುಣವಾಚಕವಾದ ಶಬ್ದವು ಇರಬೇಕು. ಅಂತಹ ಯಾವುದೇ ಶಬ್ದಗಳು ಇಲ್ಲಿ ಕಾಣಸುತ್ತಿಲ್ಲ. ಆದ್ದರಿ ಈ ವಾಕ್ಯವು ಯಜಮಾನನ ಸ್ತುತಿಪರವೆಂದು ಹೇಳಲಾಗದು. ಪ್ರಸ್ತರಸ್ತುತಿಪರವೆಂದೂ ಸಹ ಹೇ ಲಾಗದು.

*ಪರಿಪೂರ್ಣಚಂದ್ರಿಕಾ*

ಅಥವಾ ಅಂಶಾಂಶಿಭಾವವಿದ್ದರೂ ಸಹ ಸ್ತುತಿಪರವೆಂದು ಹೇಳಬಹುದು. ಆದರೆ ಅಂತಹ ಅಂಶಾಂಶಿಭಾವವೂ ಸಹ ಇಲ್ಲಿ ಇರುವುದಿಲ್ಲ. ಅಂಶಾಂಶಿಭಾವವಿದ್ದಲ್ಲಿ ಸ್ತುತಿಪರವು ಹೇಗೆ? ಎಂಬುದನ್ನು ಹಿಂದಿನ ಅಧಿಕರಣದಿಂದ ತಿಳಿಯಬೇಕು.

ಹಿಂದಿನ ವೈಶ್ವಾನರಾಧಿಕರಣದಲ್ಲಿ ಹೀಗೆ ವಿಚಾರ ಮಾಡಲಾಗಿದೆ.

'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ ಪುತ್ರೇ ಜಾತೇ' ಪುತ್ರನು ಹುಟ್ಟಿದಾಗ ಮಾಡಬೇಕಾದ ಜಾತೇಷ್ಟಿಯನ್ನು ಇಲ್ಲಿ ವಿಧಿಸಲಾಗಿದೆ. ಈ ವಾಕ್ಯವೇ ವಿಷಯವಾಕ್ಯವೆನಿಸಿದೆ. ದ್ವಾದಶಕಪಾಲದಲ್ಲಿರುವ ಪುರೋಡಾಶ ಈ ಯಾಗದ ದ್ರವ್ಯವಾಗಿದೆ. ವೈಶ್ವಾನರನು ದೇವತೆ. ದ್ವಾದಶಕಪಾಲದ್ರವ್ಯವನ್ನು ಸ್ತೋತ್ರ ಮಾಡುವುದಕ್ಕಾಗಿ ಅದರ ಅವಯವಗಳನ್ನು ಸ್ತೋತ್ರ ಮಾಡಲಾಗಿದೆ 'ಯದಷ್ಟಾಕಪಾಲೋ ಭವತಿ ಗಾಯತ್ರೀ ಏವೈನಂ ಬ್ರಹ್ಮವರ್ಚಸೇನ ಪುನಾತಿ. ಯನ್ನವಕಪಾಲಃ ತ್ರಿವೃತೈವಾಸ್ಮಿನ್ ತೇಜೋ ದಧಾತಿ' ಇತ್ಯಾದಿಯಾಗಿ ಅಷ್ಟಾಕಪಾಲದಿಂದ ಬ್ರಹ್ಮವರ್ಚಸ್ವಿಯು ನವಕಪಾಲದಿಂದ ತೇಜಸ್ವಿಯಾಗುತ್ತಾನೆಂದು ಫಲವು ಹೇಳಲಾಗಿದೆ. ಅವಯವಗಳಿಗೆ ಇಷ್ಟೊಂದು ಫಲವು ಇರಬೇಕಾದರೆ ಇನ್ನು ದ್ವಾದಶಕಪಾಲದಿಂದ ಸರ್ವವು ಲಭ್ಯವಾಗುತ್ತದೆಂಬಲ್ಲಿ ಸಂಶಯವಿಲ್ಲ.

(ಪ್ರಾಸಂಗಿಕವಾಗಿ ತಿಳಿಯಬೇಕಾದ ವಿಚಾರ - ಕಪಾಲ ಎಂದು ಮಣ್ಣಿನಿಂದ ನಿರ್ಮಿಸಿದ ಒಂದು ಯಜ್ಞಸಾಧನ ಪಾತ್ರ. ಮಡಿಕೆಯನ್ನು ಅರ್ಧ ಮಾಡಿದರೆ ಅದರ ಆಕಾರವು ಹೇಗೆ ಇರುತ್ತದೋ ಕಪಾಲದ ಆಕಾರವು ಹಾಗೆಯೇ ಇರುತ್ತದೆ. ಒಟ್ಟು ಇಂತಹ ಹನ್ನೆರಡು ಕಪಾಲಗಳನ್ನು ಯಜ್ಞದಲ್ಲಿ ಉಪಯೋಗಿಸಲಾಗುತ್ತದೆ.

'ಪುರೋಡಾಶ' ಎಂದರೆ ಅಕ್ಕಿ ಅಥವಾ ಗೋಧಿಹಿಟ್ಟಿನಿಂದ ನಿರ್ಮಿಸಿದ ಒಂದು ಹವಿಷ್ಪದಾರ್ಥ. ಇದನ್ನು ಪಿಂಡಾಕಾರದಲ್ಲಿ ಮಾಡಿ ಕಪಾಲದೊಳಗೆ ಹಾಕಿ ಬೇಯಿಸಬೇಕು. ಅನಂತರ ಎರಡು ಬಾರಿ ಅವಧಾನವನ್ನು ಮಾಡಿ ಪುರೋಡಾಶಗಳನ್ನು ಸ್ವೀಕರಿಸಿ ಅಗ್ನಿಗೆ ಅರ್ಪಿಸಬೇಕು. ಪ್ರಕೃತ ಎಂಟರಿಂದ ಹನ್ನೆರಡು ಕಪಾಲಗಳಲ್ಲಿರುವ ಪುರೋಡಾಶವನ್ನು ಅರ್ಪಿಸಬೇಕೆಂದು ಹೇಳುತ್ತಿದ್ದಾರೆ. ದ್ವಾದಶಕಪಾಲದಲ್ಲಿರುವ ಪುರೋಡಾಶವನ್ನು ಆಹುತಿಯನ್ನಾಗಿ ಕೊಡುವುದರಿಂದ ಸರ್ವಫಲವೂ ಲಭಿಸುತ್ತದೆ. ಇದರ ಮಹಿಮೆಯನ್ನು ವರ್ಣಿಸಲು ಅಷ್ಟಾಕಪಾಲವೇ ಮೊದಲಾದವುಗಳಲ್ಲಿನ ಪುರೋಡಾಶವನ್ನು ತ್ಯಾಗ ಮಾಡುವುದರಿಂದ ಲಭಿಸುವ ಫಲವನ್ನು ಶ್ರುತಿಯು ವರ್ಣಿಸುತ್ತಿದೆ. ದ್ವಾದಶಸಂಖ್ಯೆಯುಲ್ಲಿ ಅಷ್ಟಾದಿಸಂಖ್ಯೆಗಳು ಅಂತರ್ಭೂತಗಳಾಗಿವೆ. ಆದ್ದರಿಂದ ಅಷ್ಟಾಕಪಾಲಾದಿಗಳು ಅವಯವಗಳೆಂದು ದ್ವಾದಶಕಪಾಲವು ಅವಯವಿಯೆಂದು ಪರಿಗಣಿಸಲಾಗಿದೆ. 'ಯದಷ್ಟಾಕಪಾಲೋ ಭವತಿ' ಇತ್ಯಾದಿ ಶ್ರುತಿವಾಕ್ಯವು ಅರ್ಥವಾದವೆನಿಸುತ್ತದೆ.)

ಇಷ್ಟು ಹಿಂದಿನ ವೈಶ್ವಾನರಾಧಿಕರಣದಲ್ಲಿ ನಿರ್ಣಯಿಸಿದ ವಿಚಾರ. ಇದನ್ನು ಇಲ್ಲಿ ಹೇಳಿದ್ದರಿಂದ ಪೂರ್ವಾಧಿಕರಣಸಂಗತಿಯನ್ನು ಹೇಳಿದಂತಾಯಿತು.

ವೈಶ್ವಾನರಾಧಿಕರಣದಲ್ಲಿ ಸಮರ್ಥಿಸಿದ ಪ್ರಕಾರದಂತೆ ಇಲ್ಲಿ 'ಯಜಮಾನಃ ಪ್ರಸ್ತರಃ' ಎಂಬುದನ್ನು ಅರ್ಥವಾದವೆಂದು ಹೇಳಲಾಗದು. ಅಲ್ಲಿ ಅಷ್ಟಾಕಪಾಲಗಳಿಗೂ ದ್ವಾದಶಕಪಾಲಕ್ಕೂ ಅವಯವ-ಅವಯವಿಭಾವವು ಇರುತ್ತದೆ. ಆದರೆ ಇಲ್ಲಿ ಯಜಮಾನನಿಗೂ ಪ್ರಸ್ತರಕ್ಕೂ ಅಂತಹ ಅವಯವ-

ಅವಯವಿಭಾವವು ಇರುವುದಿಲ್ಲ. ಹಾಗಿದ್ದಲ್ಲಿ ಅವಯವದ್ವಾರಾ ಸ್ತುತಿಯು ಉಪಪನ್ನವಾಗುವು ಆದ್ದರಿಂದ 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯವು ಅರ್ಥವಾದ ವಾಕ್ಯವಾಗುವುದಿಲ್ಲ.

ಪ್ರಶ್ನೆ :- ಅರ್ಥವಾದ ವಾಕ್ಯವೆನ್ನಲು ಅವಯವ ಅವಯವಿಭಾವವೇ ಇರಬೇಕಾಗಿಲ್ಲ. ಏಕೆಂದ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬುದು ಅರ್ಥವಾದವಾಕ್ಯವಾಗಿದೆ. ಆದರೆ ಇಲ್ಲಿ ಅವಯ ಅವಯವಿಭಾವವೇನು ಇರುವುದಿಲ್ಲ. ಅದರಂತೆ 'ಯಜಮಾನಃ ಪ್ರಸ್ತರಃ' ಎಂಬುದೂ ಸ ಅರ್ಥವಾದವಾಕ್ಯವಾಗಬಹುದು.

ಉತ್ತರ :- 'ವಾಯುವಿನಲ್ಲಿ ಕ್ಷಿಪ್ರಗಾಮಿತ್ವಗುಣವನ್ನು ಹೇಳುವ 'ಕ್ಷೇಪಿಷ್ಠಾ' ಎಂಬ ಪದ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬಲ್ಲಿದೆ. ಆದ್ದರಿಂದ ಅರ್ಥವಾದವೆಂದು ಹೇಳಬಹುದು. ಆದ ಅಂತಹ ಗುಣವಾಚಕವಾದ ಯಾವ ವಿಶೇಷಣಗಳೂ 'ಯಜಮಾನಃ ಪ್ರಸ್ತರಃ' ಎಂಬಲ್ಲಿ ಕಾಣುವು ಆದ್ದರಿಂದ ಅರ್ಥವಾದವಾಕ್ಯವಾಗಲು ಸಾಧ್ಯವಿಲ್ಲ. ಈ ಎಲ್ಲ ಕಾರಣಗಳಿಂದ 'ಯಜಮಾನಃ ಪ್ರಸ್ತರಃ' ಎಂಬುದನ್ನು ಅರ್ಥವಾದವೆನ್ನಲು ಸಾಧ್ಯವಿಲ್ಲ. ಅನಿವಾರ್ಯವಾಗಿ ನಾಮಧೇಯಪರವೆಂದು ಅಥವಾ ಗುಣವಿಧಿಯೆಂದು ಹೇಳಬೇಕು. ಇಷ್ಟು ಪೂರ್ವಪಕ್ಷ

|| ಸಿದ್ಧಾಂತ ||

'ಯಜಮಾನಃ ಪ್ರಸ್ತರಃ' ಎಂಬ ವಾಕ್ಯವು ಸ್ತುತಿಪರವಾದ್ದರಿಂದ ಅರ್ಥವಾದವೆಂದೇ ಹೇಳಬೇಕು ಪೂರ್ವಪಕ್ಷದಲ್ಲಿ ಹೇಳಿದ ಎರಡೂ ಪಕ್ಷಗಳು ಅಸಮಂಜಸವಾಗಿದೆ. ಯಜಮಾನಪದವು ಪ್ರಸ್ತ ನಾಮಧೇಯವೆಂದು ಪ್ರಸ್ತರ ಪದವು ಯಜಮಾನನ ನಾಮಧೇಯವೆಂದು ನೀವು ಮೊದಲು ಸಮರ್ಥಿಸಿದಿರಿ. ಆದರೆ ಇದು ಸರಿಯಲ್ಲ. ಯಾವರೀತಿಯಾಗಿ 'ಗೋ' ಮತ್ತು 'ಮಹಿಷ' ಎಂಬ ಪದಗಳು ಅತ್ಯಂತ ಭಿನ್ನವಾದ ಅರ್ಥವನ್ನು ಹೇಳುತ್ತವೆಯೋ, ಅದರಂತೆ 'ಯಜಮಾನ' ಮತ್ತು ಪ್ರಸ್ತ ಪದಗಳೂ ಸಹ ಅತ್ಯಂತ ಭಿನ್ನವಾದ ಅರ್ಥವನ್ನು ಹೇಳುತ್ತವೆ. ಒಂದು ವೇಳೆ ಎರಡರಲ್ಲಿಯೂ ಅನುಗತವಾದ ಪ್ರವೃತ್ತಿನಿಮಿತ್ತವು ಇದ್ದಿದ್ದರೆ ಪರಸ್ಪರವಾಗಿ ನಾಮಧೇಯಗಳಾಗುತ್ತಿದ್ದವು. ಮತ್ತು ಈಗಾಗಲೇ ಒಂದೊಂದು ಅರ್ಥದಲ್ಲಿ ರೂಢಗಳಾಗಿವೆ. ಈಗ ಮತ್ತೊಂದು ಅರ್ಥವನ್ನು ಹೇಳು ಒಂದೇ ಪದಕ್ಕೆ ಅನೇಕ ಶಕ್ತಿಗಳನ್ನು ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಒಂದು ಮತ್ತೊಂದ ನಾಮಧೇಯವೆಂಬ ಮೊದಲನೆಯ ಪೂರ್ವಪಕ್ಷವು ನಿರಸ್ತವಾಯಿತು.

ಇನ್ನು ಗುಣವಿಧಿಯೆಂದೂ ಹೇಳಬಹುದೆಂಬ ಎರಡನೆಯ ಪಕ್ಷವೂ ಸಮಂಜಸವಲ್ಲ. ಒಂದುವೇ ಪ್ರಸ್ತರಕಾರ್ಯದಲ್ಲಿ ಯಜಮಾನನನ್ನು ವಿಧಿಸಿದರೆ ಆವಾಗ ತನ್ನ ಕಾರ್ಯದಲ್ಲಿ ಯಜಮಾನ ಸಮರ್ಥನಾಗದಿರಬೇಕಾದೀತು. ಏಕೆಂದರೆ ಪ್ರಸ್ತರವು ವೇದಿಯಲ್ಲಿ ಇದ್ದುಕೊಂಡು ಸ್ರುಕ್ಕನ್ನು ಜುಹೂವನ್ನು ಧಾರಣ ಮಾಡುತ್ತದೆ. ಅದರಂತೆ ಯಜಮಾನನೂ ವೇದಿಯಲ್ಲಿ ಇದ್ದುಕೊಂಡು ಸ್ರುಗ್‌ಧಾರಣವನ್ನು ಮಾಡುತ್ತಾನೆಂದು ಹೇಳಬೇಕಾದೀತು. 'ಆಗಲಿ' ಎಂದು ಹೇಳಿದರೆ ಯಜಮಾನನ ಕಾರ್ಯವು ಲೋಪವಾಗಬೇಕಾದೀತು. ವೇದಿಯ ದಕ್ಷಿಣಭಾಗದಲ್ಲಿ ಬ್ರಹ್ಮ ಮತ್ತು ಯಜಮಾನರು ಕುಳಿತುಕೊ

ಬೇಕೆಂದು 'ದಕ್ಷಿಣತೋ ಬ್ರಹ್ಮ ಯಜಮಾನಾವಾಸಾತೇ' ಎಂಬ ವಿಧಿಯಿದೆ. ಈ ವಿಧಿವಾಕ್ಯದ ವಿರೋಧ ಬರುತ್ತದೆ.

ಅಷ್ಟೇ ಅಲ್ಲದೆ, ಮತ್ತೊಂದು ವಿರೋಧವೂ ಇದೆ. 'ಸೂಕ್ತವಾಕೇನ ಪ್ರಸ್ತರಂ ಪ್ರಹರತಿ' ಸೂಕ್ತವಾಕ್ ಎಂಬ ಮಂತ್ರದಿಂದ ಪ್ರಸ್ತರವನ್ನು ಹೋಮಿಸಬೇಕೆಂದು ವಿಧಿಯಿದೆ. ಪ್ರಸ್ತರದ ಕಾರ್ಯವನ್ನು ಯಜಮಾನನು ಮಾಡಬೇಕೆಂದು ನೀವು ಹೇಳಿದರೆ ಸೂಕ್ತರೂಪವಾದ ಮಂತ್ರದಿಂದ ಯಜಮಾನನನ್ನೂ ಸಹ ಅಗ್ನಿಗೆ ಹಾಕಬೇಕೆಂದಾಯಿತು. 'ಆಗಲಿ' ಎಂದರೆ ಸಕಲ ಕರ್ಮಗಳೇ ಹಾಳಾಗುತ್ತವೆ.

ಪ್ರಶ್ನೆ :- ಸರ್ವಕರ್ಮಗಳು ಲೋಪವಾಗುವುದಿಲ್ಲ. ಅಧ್ವರ್ಯು ಮೊದಲಾದವರು ಕರ್ಮಗಳನ್ನು ಪರಿಪೂರ್ಣ ಮಾಡುತ್ತಾರೆ. 'ಸರ್ವಸ್ವಾರ' ಎಂಬ ಯಾಗವಿದೆ. ಇದನ್ನು ಮರಣಕಾಮಿಯು ಮಾಡುತ್ತಾನೆ. ಈ ಯಾಗದ ಮಧ್ಯದಲ್ಲಿ ಯಜಮಾನನು ಬ್ರಾಹ್ಮಣಾದಿಗಳಿಗೆ ದಕ್ಷಿಣೆಯನ್ನೆಲ್ಲಾ ಕೊಟ್ಟು 'ಸಮಾಪಿತಂ ಮೇ ಯಜ್ಞಂ' ಎಂದು ಬ್ರಾಹ್ಮಣರಿಂದ ಅನುಜ್ಞೆ ಪಡೆದು ಅಗ್ನಿಯನ್ನು ಪ್ರವೇಶಿಸುತ್ತಾನೆ. ಅವಶಿಷ್ಟಯಾಗವನ್ನು ಋತ್ವಿಜರು ಪೂರೈಸುತ್ತಾರೆ. ಹಾಗೆಯೇ ಇಲ್ಲಿಯೂ ಹೇಳುತ್ತೇವೆ.

ಉತ್ತರ :- ಸರ್ವಸ್ವಾರಯಾಗದಲ್ಲಿ ವಿಧಿ ಇರುವುದರಿಂದ ಯುಕ್ತವಾಗಿದೆ. ಆದರೆ ಇಲ್ಲಿ ಅಂತಹ ವಿಧಿ ಇರುವುದಿಲ್ಲ. ಒಂದುವೇಳೆ ಯಜಮಾನನು ಅಗ್ನಿಪ್ರವೇಶ ಮಾಡಿದರೆ, ಅಂಗಹೀನತ್ವದೋಷವೇ ಬರುತ್ತದೆ. ಅನಂತರ ನಡೆಯಬೇಕಾದ ಯಜಮಾನನ ಕಾರ್ಯಗಳೆಲ್ಲವೂ ನಷ್ಟವಾಗಿ ವೈಗುಣ್ಯದೋಷವು ಇಲ್ಲಿ ಬಂದೇ ಬರುತ್ತದೆ.

ಇದರಂತೆ ಏಕಕಪಾಲದ ಕಾರ್ಯ ಸಂಪೂರ್ಣವಾಗಿ ಹೋಮಿಸಿಕೊಳ್ಳುವಿಕೆ, 'ಏಕಕಪಾಲಂ ಸರ್ವಂ ಹುತಂ ಕರೋತಿ' ಎಂಬ ವಿಧಿಯಂತೆ ಯಜಮಾನನು ಅಗ್ನಿಗೆ ಆಹುತಿಯಾದರೆ ಸರ್ವಕರ್ಮಗಳು ಲೋಪವಾಗಬೇಕಾದೀತೆಂಬ ದೋಷವು ಈ ಪಕ್ಷದಲ್ಲಿಯೂ ಇದೆ.

ಆದ್ದರಿಂದ ಇಲ್ಲಿ ಹೀಗೆ ಹೇಳಬೇಕು. -

'ಉತ್ತರಂ ಬರ್ಹಿಷಃ ಪ್ರಸ್ತರಂ ಸಾದಯ' ಎಂಬುದು ವಿಧಿವಾಕ್ಯ. ದರ್ಭೆಯ ಮೇಲೆ ಪ್ರಸ್ತರವನ್ನು ಇಡಬೇಕೆಂದು ಈ ವಿಧಿಯು ಹೇಳುತ್ತಿದೆ. ಯಜ್ಞದಲ್ಲಿ ಯಜಮಾನನ ಪಾತ್ರವು ಎಷ್ಟು ಪ್ರಮುಖವೋ ದರ್ಭೆಯ ಮೇಲೆ ಇಡಬೇಕಾದ ಪ್ರಸ್ತರದ ಪಾತ್ರವೂ ಸಹ ಅಷ್ಟೇ ಪ್ರಮುಖವೆಂದು ಹೇಳಲು 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯವು ಹೊರಟಿದೆ. ವಿಧಿವಾಕ್ಯದಿಂದ ಏಕವಾಕ್ಯತ್ವವು 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯಕ್ಕೆ ಇದೆ. ವಿಧಿಯನ್ನು ಪ್ರಶಂಸೆ ಮಾಡುವುದಕ್ಕಾಗಿ ಇದು ಹೊರಟಿದೆ. ಸ್ತುತಿಪರವಾದ್ದರಿಂದ ಅರ್ಥವಾದವಾಕ್ಯವಾಗಿದೆ.

'ಯಜಮಾನಃ ಪ್ರಸ್ತರಃ' ಎಂಬಲ್ಲಿ ಎರಡೂ ಪದಗಳು ಸಮಾನವಿಭಕ್ತಿಯಲ್ಲಿರುವುದರಿಂದ ಯಾವ ಪದವು 'ಸ್ತಾವಕ' ಎಂದು ತಿಳಿಯುವುದಿಲ್ಲ. ಹಿಂದೆ ಪ್ರಸ್ತರವು ವಿಧೇಯತ್ವೇನ ಪ್ರಸಕ್ತವಾಗಿದೆ. ವಿಧೇಯವಾದ ಪ್ರಸ್ತರದ ಸ್ತುತಿಯನ್ನು ಯಜಮಾನಪದವು ಮಾಡುತ್ತಿದೆಯೆಂದು ಹೇಳಬೇಕು.

***ಜಿಜ್ಞಾಸಾಧಿಕರಣ***

ಹಾಗಾದರೆ ಇಲ್ಲಿ ಪ್ರಸ್ತರಪದವು ಮುಖ್ಯವಾಗಿದೆ. ಯಜಮಾನಪದವು ಸ್ತಾವಕವೆಂದು ಸಿದ್ಧವಾಯಿತು. ಹಾಗಾದರೆ ಎರಡೂ ಪದಗಳಲ್ಲಿ ಸಾಮಾನ್ಯಾಧಿಕರಣ್ಯವು ಹೇಗೆ ಕೂಡುತ್ತದೆ? ಎಂದರೆ -

ಮೀಮಾಂಸಕರ ಮತ ಹೀಗಿದೆ - ಅರ್ಥವಾದವಾಕ್ಯದಲ್ಲಿ ಮೊದಲು ಶಾಬ್ದಬೋಧವು ಇರುತ್ತದೆ. ಅನಂತರ ಸ್ತುತಿಲಕ್ಷಣಾ ಇರುತ್ತದೆ. ಮೊದಲು ವಾಕ್ಯಾರ್ಥಬೋಧ ಬಂದು ಅನಂತರ ಅದು ತಾತ್ಪರ್ಯವಿಲ್ಲವೆಂದು ಪ್ರಾಶಸ್ತ್ಯದಲ್ಲಿ ಲಕ್ಷಣಾ ಮಾಡಲಾಗುತ್ತದೆ. ಅದರಂತೆ 'ಯಜಮಾನಃ ಪ್ರಸ್ತರಃ' ಎಂಬಲ್ಲಿಯೂ ಮೊದಲು ವಾಕ್ಯಾರ್ಥವರ್ಣನೆಯನ್ನು ಮಾಡಬೇಕು. ಅನಂತರ ಸ್ತುತಿಯಲ್ಲಿ ಲಕ್ಷಣಾ ಮಾಡಬೇಕು. ಆದರೆ ವಾಕ್ಯಾರ್ಥವರ್ಣನೆಯನ್ನೇ ಇಲ್ಲಿ ಮಾಡಲಾಗದು. 'ಗೌರಶ್ವಃ ಪುರುಷೋ ಹಸ್ತೀ' ಎಂಬ ವಾಕ್ಯದಂತೆ ನಿರಾಕಾಂಕ್ಷಿತವಾದ್ದರಿಂದ 'ಯಜಮಾನಃ ಪ್ರಸ್ತರಃ' ಎಂದು ಹೇಳಿದರೆ ಸಮ್ಯಕ್ ಶಾಬ್ದಬೋಧವೇ ಬರುವುದಿಲ್ಲ. ಆದ್ದರಿಂದ 'ಸಿಂಹೋ ದೇವದತ್ತಃ' ಎಂಬಲ್ಲಿ ಗೌಣೀವೃತ್ತಿಯನ್ನು ಹೇಗೆ ಆಶ್ರಯಿಸುತ್ತೇವೆಯೋ ಅದರಂತೆ 'ಯಜಮಾನಃ ಪ್ರಸ್ತರಃ' ಎಂಬಲ್ಲಿಯೂ ಗೌಣೀವೃತ್ತಿಯನ್ನು ಆಶ್ರಯಿಸಬೇಕು.

ಯಾವ ರೀತಿಯಾಗಿ ಗಂಗಾಪದವನ್ನು ಸ್ವಶಕ್ಯಸಂಬಂಧದಿಂದ ತೀರದಲ್ಲಿ ಪ್ರಯೋಗಿಸಲಾಗುತ್ತದೋ ಅದರಂತೆ 'ಸ್ವಶಕ್ಯಸಮವೇತಗುಣವತ್ವ'ಸಂಬಂಧದಿಂದ ದೇವದತ್ತನಲ್ಲಿ ಸಿಂಹಪದಪ್ರಯೋಗವನ್ನು ಮಾಡಲಾಗುತ್ತದೆ. ಗೌಣೀವೃತ್ತಿಯು ಎಲ್ಲೆಲ್ಲಿ ಇರುತ್ತದೋ, ಅಲ್ಲೆಲ್ಲಾ 'ಸ್ವಶಕ್ಯಸಮವೇತಗುಣವತ್ವ' ಸಂಬಂಧವನ್ನು ತಿಳಿಯಬೇಕು. ತದ್‌ವತ್ವ ಸಂಬಂಧವು ಕೆಲವೆಡೆ ಆರೋಪಿತತ್ವಸಂಬಂಧರೂಪವಾಗಿರುತ್ತದೆ. ಕೆಲವೆಡೆ ಸ್ವಸದೃಶಗುಣವತ್ವ ಸಂಬಂಧರೂಪವಾಗಿರುತ್ತದೆ. ಇದನ್ನೇ ಗೌಣೀವೃತ್ತಿ ಎನ್ನಲಾಗಿದೆ. ಗೌಣವೃತ್ತಿಯಿಂದ ಶಾಬ್ದಬೋಧ ಬಂದಮೇಲೆ ಲಕ್ಷಣಯಾ ಪ್ರಾಶಸ್ತ್ಯರೂಪವಾದ ಅರ್ಥಪ್ರತೀತಿಯು ಬರುತ್ತದೆ.

ಪ್ರಶ್ನೆ :- ಸಿಂಹಪದಕ್ಕೆ ಸಿಂಹದಲ್ಲಿರುವ ಗುಣದಲ್ಲಿ ಶಕ್ತಿಯಿಲ್ಲ. ಅದರಂತೆ ಯಜಮಾನಪದಕ್ಕೆ ಯಜಮಾನನಲ್ಲಿ ಶಕ್ತಿಯಿದೆ ಹೊರತು ಯಜಮಾನನಲ್ಲಿರುವ ಗುಣದಲ್ಲಿ ಶಕ್ತಿಯಿಲ್ಲ. ಹೀಗಿರುವಾಗ ಗುಣವಾಚಕತ್ವವನ್ನು ಹೇಗೆ ಹೇಳುತ್ತೀರಿ?

'ಶಾಬ್ದಂ ಹಿ ಶಾಬ್ದೇನ ಅನ್ವೇತಿ, ನಹಿ ಶಾಬ್ದಂ ಅಶಾಬ್ದೇನ ಅನ್ವೇತಿ' 'ಶಬ್ದಪ್ರತಿಪಾದ್ಯವಾದ ಅರ್ಥವು ಮತ್ತೊಂದು ಶಬ್ದ ಪ್ರತಿಪಾದ್ಯವಾದ ಅರ್ಥದೊಂದಿಗೆ ಅನ್ವಯವನ್ನು ಹೊಂದುತ್ತದೆ.' ಎಂದು ನ್ಯಾಯ. ಪ್ರಕೃತ ಸಿಂಹದಲ್ಲಿರುವ ಗುಣವು ಸಿಂಹಶಬ್ದದಿಂದ ಪ್ರತಿಪಾದ್ಯವಲ್ಲ. ಹೀಗಿರುವಾಗ ಉಪಸ್ಥಿತವಾದ ಸಿಂಹಗುಣವು ಅಶಾಬ್ದವೆಂದಾಯಿತು. ಇದು ಮತ್ತೊಂದು ಶಾಬ್ದದ ಜೊತೆಗೆ ಹೇಗೆ ಅನ್ವಯವಾಗುತ್ತದೆ?

ಉತ್ತರ :- ಯಾವ ಅರ್ಥವು ಅನ್ವಯವನ್ನು ಹೊಂದುತ್ತದೋ, ಆ ಅರ್ಥವು ಶಕ್ತಿವೃತ್ತಿಯಿಂದಲೇ ಉಪಸ್ಥಿತವಾಗಿರಬೇಕೆಂಬ ನಿಯಮವಿಲ್ಲ. ವೃತ್ತಿಸಾಮಾನ್ಯದಿಂದ ಬೋಧ್ಯವಾಗಿದ್ದರೆ ಸಾಕು. ಇತರ ಪದಾರ್ಥದ ಜೊತೆಗೆ ಅನ್ವಿತವಾಗುತ್ತದೆ.

*ಪರಿಪೂರ್ಣಚಂದ್ರಿಕಾ*

'ಶಾಬ್ದ' ಎಂದರೆ ಶಕ್ತ್ಯಾ ಬೋಧಿತವಾದದ್ದೆಂದು ಅರ್ಥವಲ್ಲ. ವೃತ್ತ್ಯಾ ಬೋಧಿತವಾದದ್ದು ಎಂದರ್ಥ. ಆದ್ದರಿಂದ ಶಕ್ತಿವೃತ್ತಿಯಿಂದಾಗಲೀ ಲಕ್ಷಣಾವೃತ್ತಿಯಿಂದಾಗಲೀ ಗೌಣೀವೃತ್ತಿಯಿಂದಾಗಲೀ ಯಾವ ಅರ್ಥವು ಉಪಸ್ಥಿತವಾಗುತ್ತದೋ; ಅದು ಇತರ ಪದಾರ್ಥದ ಜೊತೆಗೆ ಅನ್ವಯವನ್ನು ಹೊಂದುತ್ತದೆ. ಒಂದು ವೇಳೆ ಹೀಗೆ ಒಪ್ಪದಿದ್ದರೆ 'ಗಂಗಾಯಾಂ ಘೋಷಃ' ಎಂಬಲ್ಲಿಯೂ ಶಾಬ್ದಬೋಧವು ಬಾರದಿರಬೇಕಾದೀತು.

(ಟಿಪ್ಪಣಿಯಲ್ಲಿರುವ 'ಲಕ್ಷಿತ ಲಕ್ಷಣಾರೂಪಗೌಣ್ಯೇನ ತದ್‌ಬೋಧಕತ್ವಾತ್' 'ಲಕ್ಷಿತ ಲಕ್ಷಣಾರೂಪವಾದ ಗೌಣೀವೃತ್ತಿಯೇ ಬೋಧಕವಾಗುತ್ತದೆ' ಎಂಬ ಈ ಮಾತನ್ನು ವಿಚಾರ ಮಾಡಬೇಕು. ಗೌಣೀವೃತ್ತಿಯು ಲಕ್ಷಿತ-ಲಕ್ಷಣಾರೂಪವೆಂದು ಹೇಳಲಾಗಿದೆ. ತಾರ್ಕಿಕರು ಈ ಮಾತನ್ನು ಹೇಳಿರಬಹುದು. ಹೊರತು ಮೀಮಾಂಸಕರು ಹೇಳುವುದಿಲ್ಲ. ತಾರ್ಕಿಕರ ಮತದಂತೆ ಈ ಮಾತನ್ನು ಹೇಳಿರಬಹುದು.)

ಪ್ರಕೃತ 'ಯಜಮಾನಃ ಪ್ರಸ್ತರಃ' ಎಂಬಲ್ಲಿ ಯಜಮಾನಶಬ್ದವು 'ಯಜಮಾನ' ಎಂಬರ್ಥವನ್ನು ಶಕ್ತಿಯಿಂದ ಪ್ರತಿಪಾದಿಸುತ್ತದೆ. ಅನಂತರ ಯಜಮಾನನಲ್ಲಿ ಸಮವೇತವಾದ ಗುಣವೆಂದರೆ ಕಾರ್ಯ-ಪರತ್ವ. ಈ ಕಾರ್ಯಪರತ್ವಕ್ಕೆ ಸದೃಶವಾದ ಕಾರ್ಯಪರತ್ವವು ಪ್ರಸ್ತರದಲ್ಲಿದೆ. ಇಂತಹ ಸಂಬಂಧದಿಂದ ಯಜಮಾನಪದವು ಪ್ರಸ್ತರವನ್ನು ಬೋಧಿಸುತ್ತದೆ. ಆದ್ದರಿಂದ ಯಜಮಾನಪದವು ಸ್ತಾವಕವೆಂದು ಹೇಳಲು ಏನೂ ಬಾಧಕವಿಲ್ಲ. ಅರ್ಥವಾದವಾಕ್ಯವೆಂದು ಹೇಳಬಹುದು. ಗೌಣೀವೃತ್ತಿಯು ಲಕ್ಷಿತ-ಲಕ್ಷಣಾರೂಪವೆಂದಿಟ್ಟು ಕೊಂಡಾಗ ಹೀಗೆ ತಿಳಿಯಬೇಕು.

ಆದರೆ ಮೀಮಾಂಸಕರು ಹೀಗೆ ಹೇಳುತ್ತಾರೆ - ಮೊದಲು ಪ್ರಸ್ತರದ ಜೊತೆಗೆ ಅಭೇದಾನ್ವಯವನ್ನು ಹೇಳಬೇಕು. ಪ್ರಸ್ತರವು ಯಜಮಾನನ ಕಾರ್ಯವನ್ನು ಮಾಡುತ್ತದೆ, ಎಂಬ ಬೋಧ ಬಂದ ಮೇಲೆ ಪ್ರಶ್ನೆ ಬರುತ್ತದೆ. - 'ಪ್ರಸ್ತರವು ಯಜಮಾನನ ಕಾರ್ಯವನ್ನು ಹೇಗೆ ತಾನೆ ಮಾಡುತ್ತದೆ? ಎಂದು. ಅನಂತರ ವಿಧೇಯವಾದ ಪ್ರಸ್ತರದ ಪ್ರಶಂಸೆಗೋಸ್ಕರ ಹೇಳಿದ್ದೆಂದು ವಾಕ್ಯಕ್ಕೆ ಸ್ತುತಿಯಲ್ಲಿ ಲಕ್ಷಣಾ ಮಾಡಲಾಗುತ್ತದೆ.

## ಸೂತ್ರಾರ್ಥ

೨) ಜಾತಿ = ಜನ್ಮ, ಜನ್ಮಘಟಿತವಾದ ಸಾದೃಶ್ಯವನ್ನು ಸ್ವೀಕರಿಸಿ ಗೌಣೀವೃತ್ತಿಯು ಕೆಲವೆಡೆ ಇರುತ್ತದೆ.

ಅಗ್ನಿ ಮತ್ತು ಬ್ರಾಹ್ಮಣ ಇಬ್ಬರೂ ಪ್ರಜಾಪತಿಯ ಮುಖದಲ್ಲೇ ಹುಟ್ಟಿದವರು. ಆದ್ದರಿಂದ ಜನನಘಟಿತಸಾದೃಶ್ಯವನ್ನು ಸ್ವೀಕರಿಸಿ ಅಗ್ನಿ ಶಬ್ದವನ್ನು ಬ್ರಾಹ್ಮಣನಲ್ಲಿ ಉಪಯೋಗಿಸಲಾಗುತ್ತದೆ.

೩ ) ಸಾರೂಪ್ಯ = ಸಮಾನವಾದ ರೂಪವಿದ್ದಲ್ಲಿಯೂ ಗೌಣೀವೃತ್ತಿಯನ್ನು ಆಶ್ರಯಿಸಬೇಕು. ಆದಿತ್ಯೋ ಯೂಪಃ - ಉಜ್ವಲರೂಪವು ಎರಡರಲ್ಲಿಯೂ ಇದೆ.

೪ ) ಪ್ರಶಂಸಾ - 'ಅಪಶವೋ ವಾ ಅನ್ಯೇ ಗೋಽಶ್ವೇಭ್ಯಃ ಪಶವಃ ಪಶವೋ ಗೋ ಅಶ್ವ 'ಗೋ' ಮತ್ತು 'ಅಶ್ವ' ಕ್ಕಿಂತ ಹೊರತಾದ ಪಶುಗಳು ಪಶುಗಳೇ ಅಲ್ಲ. ಪಶುಗಳೆಂದರೆ ಗೋ ಅಶ್ವಗಳು ಮಾತ್ರ. ಹೀಗೆ ಹೇಳಿದಾಗ ಗೋ ಅಶ್ವಗಳಲ್ಲಿ ಪ್ರಾಶಸ್ತ್ಯ ಹೇಳಿದಂತಾಗುತ್ತ ಪ್ರಶಂಸಾಘಟಿತವಾದ ಗುಣವನ್ನು ಆಶ್ರಯಿಸಿ ಗೌಣೀ ವೃತ್ತಿಯನ್ನು ಮಾಡಲಾಗುತ್ತದೆ.

೫) ಭೂಮಾ = ಬಾಹುಲ್ಯ.

ಎಲ್ಲರೂ ಛತ್ರಿಗಳೇ ಇದ್ದಾರೆ. ಒಂದಿಬ್ಬರು ಅಛತ್ರಿಗಳು (ಛತ್ರಿ ಇಲ್ಲದವರು) ಇದ್ದರೂ 'ಛತ್ರಿಣೋ ಯಾಂತಿ' ಎಂಬ ಗೌಣಪ್ರಯೋಗವನ್ನು ಮಾಡಲಾಗುತ್ತದೆ.

೬) ಲಿಂಗಸಮವಾಯ = ಅಲ್ಪತ್ವ.

ಒಂದಿಬ್ಬರು ಛತ್ರಿಗಳು. ಉಳಿದವರು ಛತ್ರಿಯಿಲ್ಲದವರು ಇದ್ದಾಗ 'ಅಲ್ಪತ್ವ' ಎಂಬ ನಿಮಿತ್ತದಿ ಇಂತಹ ಸಂದರ್ಭದಲ್ಲಿಯೂ 'ಛತ್ರಿಣೋ ಯಾಂತಿ' ಎಂಬ ಪ್ರಯೋಗವು ಇರುತ್ತದೆ.

ಈ ಆರು ನಿಮಿತ್ತಗಳು ಇದ್ದಾಗ ವೇದದಲ್ಲಿ ಗೌಣೀವೃತ್ತಿಯನ್ನು ಆಶ್ರಯಿಸಲಾಗುತ್ತದೆ.

'ದಾರ್ಷ್ಟಾಂತಿಕದಲ್ಲಿ ಸಮನ್ವಯ'

ಅಪೌರುಷೇಯವಾದ ಆಗಮವು ದೋಷಸಂಭಾವನೆಯಿರುವ ಪ್ರತ್ಯಕ್ಷವನ್ನು ಬಾಧಿಸುತ್ತದೆಂದು ಭಾಮತಿಯಲ್ಲಿ ಹೇಳಿದೆ. ಭಾಮತಿಯ ಈ ಮಾತನ್ನು ಪೂರ್ವಮೀಮಾಂಸೆಯ ದೃಷ್ಟಾಂತದಿಂ ಗ್ರಂಥಕಾರರು ಖಂಡಿಸುತ್ತಿದ್ದಾರೆ. ವೇದವು ಅಪೌರುಷೇಯವಾದ ಮಾತ್ರದಿಂದ ಪ್ರತೀತಾರ್ಥದ ಪ್ರಮಾಣವೆಂದು ಹೇಳಬಾರದು. ಅಪೌರುಷೇಯವಾದರೂ ಸಹ ಪ್ರತೀತಾರ್ಥವನ್ನು ತ್ಯಾ ಮಾಡಬೇಕೆಂದು ಪೂರ್ವಮೀಮಾಂಸೆಯ ತತ್ಸಿದ್ಧ್ಯಧಿಕರಣದಲ್ಲಿ ನಿರ್ಣಯಿಸಲಾಗಿದೆ.

ಚಾತುರ್ಮಾಸ್ಯದ ವೈಶ್ವದೇವಪರ್ವದಲ್ಲಿ ಏಕಕಪಾಲಪುರೋಡಾಶವು ಪ್ರಸಕ್ತವಾಗುತ್ತದೆ. ಅಷ್ಟಾ ಕಪಾಲಾದಿಗಳಲ್ಲಿರುವ ಪುರೋಡಾಶದ ಸಂಪೂರ್ಣತ್ಯಾಗವು ವಿಹಿತವಲ್ಲ. ಕಿಂತು ದ್ವಿರವಧಾನ ಮಾಡಿ ಉಳಿದದ್ದನ್ನಷ್ಟೇ ತ್ಯಾಗಮಾಡಬೇಕು. ಆದರೆ ಏಕಕಪಾಲ ಪುರೋಡಾಶವಾಗಿದ್ದರೆ ಹಾಗಲ್ಲ ಸಂಪೂರ್ಣ ವಾಗಿ ತ್ಯಾಗ ಮಾಡಬೇಕು. ಅವಧಾನ ಮಾಡಬಾರದು. 'ಏಕಕಪಾಲಂ ಸರ್ವಹುತಂ ಭವತಿ' ಎಂ ವಿಧಿವಾಕ್ಯ ಇರುವುದರಿಂದ ಈ ವಾಕ್ಯದ ಅರ್ಥವಾದ ವಾಕ್ಯವೇ 'ಯಜಮಾನ ವೈ ಏಕಕಪಾಲಃ' ಎಂದು 'ಯಜಮಾನಃ ಪ್ರಸ್ತರಃ' ಎಂಬಂತೆ ಇಲ್ಲಿಯೂ ಎರಡೂ ಪ್ರಕಾರದ ಪೂರ್ವಪಕ್ಷಗಳನ್ನು ತಿಳಿಯಬೇಕು ಮತ್ತು 'ಯಜಮಾನ ವೈ' ಎಂಬ ವಾಕ್ಯವನ್ನು ಅರ್ಥವಾದ ವಾಕ್ಯವಲ್ಲವೆಂದು ಸಮರ್ಥಿಸಬೇಕು.

ಒಂದು ಸಣ್ಣ ವಿಮರ್ಶೆ - ಚಂದ್ರಿಕೆಯಲ್ಲಿ 'ಯಜಮಾನಃ ಪ್ರಸ್ತರಃ' ಇತ್ಯಾದೇರಿವ ಪ್ರತ್ಯಕ್ಷವಿರೋಧೇನ ಪ್ರತೀತಾರ್ಥಪ್ರಖ್ಯಾವನಮ್' ಎಂಬ ಮಾತಿದೆ. ಈ ಮಾತನ್ನು ನೋಡಿದಾಗ ಪ್ರತ್ಯಕ್ಷವಿರೋಧ ಬರು ಕಾರಣದಿಂದ ಪ್ರತೀತಾರ್ಥವನ್ನು ತ್ಯಾಗ ಮಾಡುವುದು ಕಂಡಿದೆ. ಎಂಬರ್ಥವು ತೋರುತ್ತದೆ. ಆದ ಪೂರ್ವಮೀಮಾಂಸೆಯ ತತ್ಸಿದ್ಧ್ಯಧಿಕರಣದಲ್ಲಿ ಹೀಗೆ ಹೇಳಿಯೇ ಇಲ್ಲ. ಆದ್ದರಿಂದ ದೃಷ್ಟಾಂತವನ್ನು ಹೀ

ಸಿಖಿದ್ದೇ ಅಸಂಗತವೆಂದನಿಸುತ್ತದೆ. ಇಲ್ಲಿ ಇಷ್ಟು ಉತ್ತರ ತಿಳಿಯಬೇಕು - ಪ್ರತೀತಾರ್ಥ- ಪ್ರತ್ಯಾಖ್ಯಾನದಲ್ಲಷ್ಟೇ ಇದು ದೃಷ್ಟಾಂತವಾಗಿದೆ. ಹೊರತು ಪ್ರತ್ಯಕ್ಷ ವಿರೋಧ ಬರುವ ಕಾರಣದಿಂದ ಪ್ರತೀತಾರ್ಥಪ್ರತ್ಯಾಖ್ಯಾನದಲ್ಲಿ ಇದು ದೃಷ್ಟಾಂತವಲ್ಲ. ವೇದವು ಅಪೌರುಷೇಯವಾದರೂ ಸಹ ಪ್ರತೀತಾರ್ಥದಲ್ಲಿ ಅಪ್ರಮಾಣವಾಗುತ್ತದೆಂದು ಈ ದೃಷ್ಟಾಂತದಿಂದ ತಿಳಿಯಬೇಕು.

## ಸಾರ

ಪ್ರತ್ಯಕ್ಷಾನುಭವ ಕೆಲವೊಮ್ಮೆ ತಪ್ಪಾಗುವುದರಿಂದ ದುರ್ಬಲ. ವೇದಾಂತ ಅಪೌರುಷೇಯವಾದುದರಿಂದ ನಿರ್ದೋಷವಾಗಿದ್ದು ಪ್ರಬಲವಾಗಿದೆ ಎಂಬುದೂ ಸರಿಯಲ್ಲ. ವೇದಾಂತ ಅಪೌರುಷೇಯವಾದರೂ ಅದರ ತಾತ್ಪರ್ಯವನ್ನು ತಪ್ಪಾಗಿ ತಿಳಿಯುವ ಸಾಧ್ಯತೆ ಇರುವುದರಿಂದ ಅದರಿಂದ ಬರುವ ಜ್ಞಾನ ತಪ್ಪಾಗಿರಬಹುದು. ಯಜಮಾನನಿಗೆ ಪ್ರತಿನಿಧಿಯಾಗಿ ಯಾಗಶಾಲೆಯಲ್ಲಿ ಇರಿಸುವ ಮುಷ್ಟಿದರ್ಭೆಯನ್ನು ಯಜಮಾನ ಎಂದೇ ವೇದವು ಕರೆದಿದೆ. ಪ್ರತ್ಯಕ್ಷವಿರೋಧವಿರುವುದರಿಂದಲೆ ದರ್ಭೆ ಯಜಮಾನನೇ ಅಲ್ಲ. ಅವನ ಪ್ರತಿನಿಧಿ ಎಂದು ಆ ವೇದ ವಾಕ್ಯಕ್ಕೆ ಬೇರೆ ಅರ್ಥ ಗ್ರಹಿಸುತ್ತಾರೆ. 'ತತ್ತ್ವಮಸಿ' ಎಂಬಲ್ಲಿ ಅಲ್ಪಜ್ಞ ಜೀವನು ನೀನು ಸರ್ವಜ್ಞ ಬ್ರಹ್ಮನೆ ಆಗಿರುವಿ ಎಂದು ಹೇಳುತ್ತಿದ್ದರೂ ಪ್ರತ್ಯಕ್ಷವಿರೋಧದಿಂದಲೇ ಈ ಮುಖ್ಯಾರ್ಥವನ್ನು ಬಿಟ್ಟು ಶುದ್ಧಚೈತನ್ಯಾಭೇದವೆಂಬ ಅಮುಖ್ಯಾರ್ಥ ಗ್ರಹಿಸುತ್ತಾರೆ ಅದ್ವೈತಿಗಳು. ಅದರಿಂದ ಪ್ರತ್ಯಕ್ಷ ಪ್ರಬಲವೆನ್ನುವುದು ಅವರ ಸಿದ್ಧಾಂತ. ಹೀಗಿದ್ದರೂ ಪ್ರತ್ಯಕ್ಷವನ್ನು ವೇದಾಂತ ಬಾಧಿಸುತ್ತದೆ ಎನ್ನುತ್ತಾರೆ. ಇದು ವಿರುದ್ಧ.

• • • • •

## ವಿವರಣದಲ್ಲಿ ಜಿಜ್ಞಾಸಾಧಿಕರಣ

**तात्पर्यचन्द्रिका –**

**एतेन – न प्रत्यग्ब्रह्मैक्यं विषयः । कर्तृत्वादेर्विरुद्धधर्मस्य सत्यत्वे-नैक्यायोगात् । नापि तन्निवृत्तिः प्रयोजनम् । ज्ञानस्याज्ञानमात्रनिवर्तकत्वेन सत्यस्य ज्ञानान्निवृत्त्ययोगादिति प्राप्ते, सत्यं कर्तृत्वभोक्तृत्वादिप्रपञ्चस्य सत्यत्वे विषयादिर्न सिद्ध्यतीति । प्रपञ्चस्तु मिथ्यैव । अत एव भाष्येऽध्यासवर्णनमिति विवरणाभिप्रेतमधिकरणमपि निरस्तम् ।**

ಅನುವಾದ - ಭಾಮತಿಯಂತೆ ವಿವರಣವು ಸೋತಿದೆ. ವಿವರಣಕಾರನು ರಚಿಸಿದ ಅಧಿಕರಣವು ಹೀಗಿದೆ -

*ಜಿಜ್ಞಾಸಾಧಿಕರಣ*

ಪೂರ್ವಪಕ್ಷ - ಶಾರೀರಿಕಬ್ರಹ್ಮನ (ಜೀವನ) ಐಕ್ಯವು ವಿಷಯವಾಗಲಾರದು. ಏಕೆಂದರೆ ಶಾರೀರಿಕನಾದ ಜೀವನಿಗೆ ಕರ್ತೃತ್ವ ಭೋಕ್ತೃತ್ವ, ಸುಖ, ದುಃಖ ಮೊದಲಾದ ಸಂಸಾರಬಂಧನವು ಸತ್ಯವಾಗಿ ಇದೆ. ಆದರೆ ಬ್ರಹ್ಮನಿಗೆ ಇಂತಹ ಬಂಧನವಿಲ್ಲ. ಹಾಗಾಗಿ ಅವರಿಬ್ಬರಿಗೆ ಐಕ್ಯವು ಕೂಡುವುದಿಲ್ಲ. ಮತ್ತು ಇಂತಹ ಸತ್ಯವಾದ ಕರ್ತೃತ್ವಾದಿಬಂಧದ ನಿವೃತ್ತಿಯನ್ನೇ ಪ್ರಯೋಜನವೆಂದು ಹೇಳಲಾಗದು. ಆದರೆ ಜ್ಞಾನದಿಂದ ಅಜ್ಞಾನ ಅಥವಾ ಅಜ್ಞಾನಕಲ್ಪಿತವಾದದ್ದು ಮಾತ್ರ ನಿವೃತ್ತಿಯಾಗುತ್ತದೆ. ಹೊರತು ಸತ್ಯವಾದದ್ದು ನಿವೃತ್ತಿಯಾಗುವುದಿಲ್ಲ. ಆದ್ದರಿಂದ ವಿಷಯ ವಿಷಯಾದಿಗಳು ಇಲ್ಲವೆಂದು ಪೂರ್ವಪಕ್ಷ.

ಸಿದ್ಧಾಂತ - ಒಂದು ವೇಳೆ ಕರ್ತೃತ್ವಾದಿಬಂಧವು ನೀವು ಹೇಳುವಂತೆ ಸತ್ಯವಾಗಿದ್ದರೆ ವಿಷಯಾದಿಗಳು ಸಿದ್ಧವಾಗುವುದಿಲ್ಲವೆಂದು ಹೇಳಬಹುದಿತ್ತು. ಆದರೆ ನಾವು ಅವುಗಳನ್ನು 'ಮಿಥ್ಯಾ' ಎಂದು ಹೇಳುತ್ತೇವೆ. ಬ್ರಹ್ಮಾತಿರಿಕ್ತವಾದ ಸಮಗ್ರ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಸಮರ್ಥಿಸುವುದಕ್ಕಾಗಿಯೇ ಶಂಕರಭಾಷ್ಯದ ಪ್ರಾರಂಭದಲ್ಲಿ ಅಧ್ಯಾಸವರ್ಣನೆಯನ್ನು ಮಾಡಲಾಗಿದೆ ಎಂದು ವಿವರಣದ ಮತ. ಆದರೆ ಹಿಂದಿನಂತೆಯೇ ಇದೂ ಸಹ ತಪ್ಪಾಗಿದೆ.

**ಕಠಿಣಪದಾರ್ಥ**

ಏತೇನ = ಭಾಮತಿಯ ಮತವನ್ನು ನಿರಾಕರಿಸಿದ್ದರಿಂದ. ಪ್ರತ್ಯಗ್‌ಬ್ರಹ್ಮೈಕ್ಯಮ್ = ಜೀವ ಬ್ರಹ್ಮರ ಐಕ್ಯವು. ತನ್ನಿವೃತ್ತಿಃ = ಸತ್ಯಭೂತವಾದ ಬಂಧದ ನಿವೃತ್ತಿಯನ್ನು. ಅತ ಏವ = ಕರ್ತೃತ್ವಾದಿಗಳು ಮಿಥ್ಯಾಭೂತವಾದಲ್ಲಿ ವಿಷಯಾದಿಗಳು ಯಾವ ಕಾರಣದಿಂದ ಸಿದ್ಧವಾಗುತ್ತವೋ ಆ ಕಾರಣದಿಂದಲೇ.

प्रकाशः – विवरणमतमप्युक्तातिदेशेन निराह – एतेनेति ।। आत्मभिन्नः सत्यश्चेदपसिद्धान्त इत्यादिदूषणजातेनेत्यर्थः । तथाहि ब्रह्मैक्यं हि विषय इति सिद्धांत्यभिमतम् । तच्चात्मस्वरूपमुत भिन्नम् । आद्ये तस्य स्वप्रकाशत्वेन शास्त्रवैयर्थ्यम् । नच भेदभ्रमनिरासार्थं शास्त्रम् । अधिष्ठानाप्रकाशं विना भेदभ्रमस्यैवायोगात् । स्वरूपे प्रकाशमानेऽप्यज्ञानविरोधिवृत्त्यभावाद् भ्रम इति त्वयुक्तम् । तद्वेद्ये दुःखादावज्ञानप्रसङ्गात् । द्वितीये सत्वेऽपसिद्धान्तः । अभावत्वेऽप्यभावद्वैतस्यान्यत्र निरासात् । मिथ्यात्वे तु न तत्वावेदकशास्त्रवेद्यता इत्यादि ।। प्रत्यगिति ।। जीवब्रह्मैक्यमित्यर्थः । विश्वकर्तृत्वसर्वज्ञत्वादेर्ब्रह्मधर्मस्याऽसर्वकर्तृत्वाल्पज्ञत्वादेर्जीवधर्मस्य सत्यत्वादित्यर्थः । यद्वा कर्तृत्वभोक्तृत्वदुःखित्वादिजीवधर्मस्य ब्रह्मधर्मविरुद्धस्य सत्यत्वादित्यर्थः । 'तन्निवृत्तिः' कर्तृत्व-

भोक्तृत्वादिबन्धनिवृत्तिः – ज्ञानस्येति ।। यद्विषयकं हि ज्ञानं तद्विषयकमज्ञानमेव साक्षान्निवर्तयति । यदिच कर्तृत्वादिकमज्ञानकार्यं तदा तद्द्वारा तन्निवर्तकं स्यात् । नहि तत् तथेत्यर्थः । 'सत्यस्य' अज्ञानाकार्यस्येति व्याख्येयम् । 'मिथ्यैव' आविद्यक एवेत्यर्थः । तथाच कर्तृत्वादिविरुद्धधर्माणां मिथ्यात्वेनैक्यस्य विषयत्वं अज्ञानकार्यत्वेन च ज्ञानान्निवृत्तियोगेन कर्तृत्वादिबन्धनिवृत्तिः फलमिति भावः ।।

अत एवेति ।। यतः कर्तृत्वादेर्मिथ्यात्वे विषयादिसिद्धिरत इत्यर्थः । अन्यथा "अस्मत्प्रत्ययगोचरे विषयिणि चिदात्मके युष्मत्प्रत्ययगोचरस्य तद्धर्माणां च अध्यासः" इत्यारभ्य "मिथ्याप्रत्ययरूपः कर्तृत्वभोक्तृत्वप्रवर्तनः सर्वलोकप्रत्यक्षः" इत्यन्तं भाष्यं व्यर्थमेव स्यादिति भावः ।

गुरुराजीय – ।। प्रत्यगिति ।। जीवब्रह्मैक्यमित्यर्थः ।। ऐक्यायोगादिति ।। पारमार्थिकविरुद्धधर्माधिकरणयोरैक्ये जलानलयोरपि तत्प्रसङ्गादिति भावः ।। तन्निवृत्तिरिति ।। कर्तृत्वादिरूपबन्धनिवृत्तिरित्यर्थः ।। ज्ञानस्येति ।। यतो ज्ञानमज्ञानस्यैव निवर्तकमिति व्याप्तेरिति भावः ।। प्रपञ्चस्त्विति ।। तथा कर्तृत्वादिरूपप्रपञ्चस्य मिथ्यात्वादैक्यस्य विषयत्वं मिथ्यात्वेनाज्ञानकार्यत्वात् ज्ञानेन तन्निवृत्त्या प्रयोजनं च सिद्धमित्यर्थः ।। अत एवेति ।। कर्तृत्व-भोक्तृत्वादिरूपप्रपंचस्य सत्यत्वे विषयाद्यसंभवादेवेत्यर्थः ।।

**ವಿವರಣೆ** - ವಿವರಣದ ಪೂರ್ವಪಕ್ಷಮಂಡನೆಯಾಗಲಿ ಸಿದ್ಧಾಂತಮಂಡನೆಯಾಗಲಿ, ಭಾಮತಿ-ಮಂತೆ ಅಸಂಬದ್ಧವಾಗಿದೆ. ಏಕೆಂದರೆ ಆತ್ಮಭಿನ್ನವಾದದ್ದು ಸತ್ಯವೋ? ಸುಳ್ಳೋ? ಎಂಬ ಮಾತಿಗೆ ಉತ್ತರ ಕೊಡಲಾಗುವುದಿಲ್ಲ. ಹೇಗೆಂದರೆ ಬ್ರಹ್ಮೈಕ್ಯವನ್ನೇ ವಿಷಯವೆಂದು ಸಿದ್ಧಾಂತ ಮಾಡಿದ್ದಾನೆ. ಆ ಬ್ರಹ್ಮೈಕ್ಯವು ಆತ್ಮಸ್ವರೂಪವೋ? ಅಥವಾ ಭಿನ್ನವೋ? ಆತ್ಮಸ್ವರೂಪವೆಂದರೆ, ಆತ್ಮವು ಸ್ವಪ್ರಕಾಶನಾಗಿ ನಿತ್ಯಸಿದ್ಧನಾದ್ದರಿಂದ ಅವನ ಸ್ವರೂಪವಾದ ಐಕ್ಯವೂ ಸಹ ಅನುಭವಸಿದ್ಧವಾದ ಮೇಲೆ ಶಾಸ್ತ್ರಗಳು ಏಕೆ ಬೇಕು? ಐಕ್ಯವಿದ್ದರೂ ಆರೋಪಿತವಾಗಿ ಭೇದಜ್ಞಾನ ಬಂದಿದೆ. ಆ ಭ್ರಾಂತಿಯ ನಿವೃತ್ತಿಗಾಗಿ ಶಾಸ್ತ್ರಗಳ ಪ್ರವೃತ್ತಿಯು ಸಾರ್ಥಕವಾಗಿದೆಯೆಂಬ ಶಂಕೆಗೂ ಅವಕಾಶವಿಲ್ಲ. ಏಕೆಂದರೆ ಭೇದಭ್ರಮೆ ಬರಬೇಕೆಂದರೆ ಅಧಿಷ್ಠಾನದ ಜ್ಞಾನವು ಇರಬಾರದು. ಆದರೆ ಸ್ವಪ್ರಕಾಶನಾದ ಆತ್ಮನೇ ಅಧಿಷ್ಠಾನನಾದ್ದರಿಂದ ಅವನ ಜ್ಞಾನ ನಿತ್ಯವಾಗಿ ಇರಬೇಕಾದರೆ ಅವನಲ್ಲಿ ಆರೋಪವನ್ನು ಸರ್ವಥಾ ಹೇಳಲಾಗದು.

*ಜಿಜ್ಞಾಸಾಧಿಕರಣ*

**ಕಠಿಣಪದಾರ್ಥ**

ವಿಂಶತಿಲಕ್ಷಣಮ್ = ಇಪ್ಪತ್ತು ಅಧ್ಯಾಯಗಳಿಂದ ಕೂಡಿರುವಂತಹದ್ದು. ಚತು-ರ್ಲಕ್ಷಣೀ = ನಾಲ್ಕು ಅಧ್ಯಾಯವುಳ್ಳ.

**प्रकाशः** – ननु कार्ये व्युत्पत्तेरनिरासे सिद्धे ब्रह्मणि प्रामाण्यायोगात् तन्निरासकस्यान्यस्याभावाद् भवद्भिरप्यस्मिन्नेव सूत्रे तन्निरासादगत्याऽत्रैव पूर्वःपक्षः कृत इत्यत आह – **किञ्चेति** ।। **विंशतिलक्षणमिति** ।। लक्षण-शब्दोऽध्यायपर्यायः । पूर्वतन्त्रे द्वादश लक्षणानि । दैवीमीमांसायां चत्वारि उत्तरस्यां चत्वारि चेत्यर्थः । अत एवेत्युक्तं हेतुं विशदयति – **त्वद्रीत्येति** ।। अगतिं परिहरति – **विचारेति** ।। 'हेत्वर्थेन' । हेतुबोधकेन ।। **सम्भव इति** ।। वक्ष्यमाणदिशेति भावः । ''तत्र'' विचारकर्तव्यतायाम् । त्वन्मते कर्मविचारस्यैव ब्रह्मविचारं प्रति हेतुत्वोक्त्या सिद्धे व्युत्पत्तेर्हेतुत्वस्यातःशब्देनाबोधनादिति भावः ।

यदाह कश्चित् -

''परीक्ष्य लोकान् कर्मचितान् ब्राह्मणो निर्वेदमायात् ।
नास्त्यकृतः कृतेन तद्विज्ञानार्थं स गुरुमेवाभिगच्छेत्''

इति मुण्डकवाक्यमुदाहृत्येदं शास्त्रमारम्भणीयं न वा? तदर्थं ब्रह्मज्ञानाय तद्विचाराङ्गभूतगुरूपसत्तिं ''परीक्ष्य लोकान्'' इत्यादिवाक्यं विधातुं शक्नोति नवेति । तदर्थं ब्रह्म विचारार्हं नेति सन्देहे ''अयमात्मा ब्रह्म'' इत्यादिश्रुत्या जीवस्यैव ब्रह्मत्वात् तस्य चाहंधीसिद्धत्वेनासन्दिग्धतया विचारानर्हत्वात् । नचैव श्रुतिरहंधीसिद्धेन विशिष्टेन अभेदं न बोधयति किन्तु चिन्मात्रेण तच्चेदानीमावृतत्वात् सन्दिग्धमिति वाच्यम् । श्रुतावयमिति प्रत्यक्षसिद्धं विशिष्टमेव परामृश्य ब्रह्मत्वोपदेशात् । ''मुष्टिलोपात्तु सङ्ख्यालोपस्तद्गुणत्वात् स्यात्'' इति दाशमिकाधिकरणन्यायेन प्राथमिकेदंशब्दस्वारस्यानुरोधेन चरमब्रह्मशब्दस्य देहबृंहणादिना कथंचित् तस्मिन्नेव नेयत्वात् । नच ''ध्यायतीव'' इत्यादिश्रुतेः कर्तृत्वादिकं मिथ्येति युक्तम् । प्रत्यक्षविरोधेन श्रुतेः पारतन्त्र्यमात्रपरत्वात्

अस्तु वा चिन्मात्रैक्यम् । तथाऽपि तस्य निर्विशेषत्वेन शब्देन प्रतिपादनासम्भवान्न तदयमात्मेत्यादिवाक्यबोध्यम् । किंतु विशिष्टैक्यमेव । तच्चासन्दिग्धम् । ब्रह्मणो जीवान्यत्वेऽपि तस्य साकल्येन ज्ञानासम्भवात् । एकदेशज्ञानं जातमपि न मोक्षहेतुः स्यादतो ब्रह्मणोऽविचार्यत्वाद् गुरूपसत्तिमिदं वाक्यं न विदधातीति शास्त्रमेतन्नारम्भणीयमिति प्राप्ते –

"त्रिषु धामसु यद् भोज्यं भोक्ता भोग्यश्च यद् भवेत् ।
तेभ्यो विलक्षणस्साक्षी चिन्मात्रोऽहं सदाशिवः ।
ज्ञाज्ञौ द्वावजावीशानीशौ ........ ......... "

इत्यादिश्रुतिभिः भेदस्याप्यावेदनेन द्विविधवाक्यदर्शनेन सन्दिग्धत्वसम्भवाद् विचारार्हं ब्रह्मेति शास्त्रमारम्भणीयमिति सिद्धान्त इति ।। यथोक्तम् – "आत्मा ब्रह्मेत्यधीतः स्फुरति स तु सदा निर्विशेषः स चेत् स्यात् तस्यातीतस्य बुद्धेः सरणिमिह नयैः का परिच्छेदवार्ता" इत्यादि ।

तन्न । यद्गतन्यायैः सूत्रनिबद्धैर्यद्वाक्यार्थो निर्णीयते तस्यैवोदाहरणत्वयोग्यतया 'परीक्ष्य' इति वाक्यस्यातथात्वेनानुदाहरणत्वात् । नहि "अथातो ब्रह्मजिज्ञासा" इति सूत्रे 'परीक्ष्य' इति वाक्यगततद्वाक्यार्थनिर्णायकन्यायनिबन्धनमस्ति । न वाऽत्र सूत्रे स्थित्वा सर्वतीर्थकरैरेतद्वाक्यार्थो निर्णीयते । यदपि – क्लेशेनास्य वाक्यस्य जिज्ञासासूत्रेणैकार्थतां व्युत्पाद्योदाहरणत्वकथनं तदपि न । साक्षाज्जिज्ञासावाक्यस्य जिज्ञासापदाद्युपेतस्यैवोदाहरणत्वसम्भवे क्लेशायोगात् । समानार्थत्वमात्रेणोदाहरणत्वायोगाच्च । निर्णयार्थकस्यैवोदाहरणत्वात् । पूर्वपक्षोऽप्ययुक्तः । 'अयमात्मा ब्रह्म' इत्यादौ ब्रह्मत्वं यादृशं तादृशं निरङ्कुशं वा । नाद्यः । ब्रह्मैक्यासिद्धेः । न द्वितीयः । प्रत्यक्षबाधात् । नहि मायावादिमत इव प्रत्यक्षमतत्वावेदकमिति पूर्वपक्षिणो मतम् । तस्य बलवत्त्वेन 'ध्यायतीव' इत्यादेरन्यार्थवर्णनात् । 'अयमात्मा' इत्यभेदवाक्यं पश्यतः पूर्वपक्षिणस्तद्भेदावेदकवाक्यादावान्ध्यस्यायुक्तत्वेन सर्वसामञ्जस्याय चन्द्रिकोक्तदिशाऽद्वैतिरीत्या इत्युक्तस्यैवानुसरणीयत्वाच्च । किञ्च जीवस्याहंधीसिद्धत्वेऽपि देहादिविविक्तत्वादिना

सन्दिग्धत्वात् तेन रूपेण जिज्ञासासम्भवेन शास्त्रानारम्भासिद्धेश्च । अन्यथा त्वन्मतेऽप्यग्रे जीवविचारो न स्यात् ।

यदपि – अस्तु वा इत्यादिना चिन्मात्रैक्यमङ्गीकृत्य "अयमात्मा" इत्यादिवाक्यबोध्यत्ववर्णनं तदप्यचारु । तस्य तादृशागमवाक्यं विनाऽङ्गीकारायोगेन आगमेन तदप्रतिपादनोक्तेर्व्याहतत्वात् । याऽपि ब्रह्मणो जीवान्यत्वमुपेत्य यथावत् तस्यापरिच्छेद्यत्वोक्तिः साऽप्ययुक्ता । सूत्रे तस्यासमाधानात् ब्रह्मणः साकल्येनापरिच्छेद्यमहामहिमत्वबोधकवचनसहस्रबलेनागत्या तस्य यथायोग्यमेकदेशपरिज्ञानस्यैव मुक्तिहेतुत्वस्य कल्प्यत्वात् । सिद्धान्तोऽप्ययुक्तः त्वदुक्तसन्देहोपपादकन्यायस्य सूत्रे केनापि पदेनाप्राप्तेरित्याद्यूह्यम् ।

गुरुराजीय – ननु कार्ये व्युत्पत्तेरनिराकरणे सिद्धे ब्रह्मणि प्रामाण्यायोगात् तन्निरासकस्यान्यस्याभावादगत्याऽत्रैवं पूर्वपक्षः कृत इत्यत आह – किंचेति ॥ विंशतिलक्षणमिति ॥ लक्षणशब्दोऽध्यायपरः । तस्याः सिद्धे व्युत्पत्तेः । तत्रैव देवमीमांसायामेव ॥ पुनरिति ॥ विशेषहेत्वनुक्तेर्न तदाक्षेपोऽपि सम्भवति । सूत्रं तूभयत्राप्यविशिष्टमेवेति भावः । नन्वतश्शब्दादिनाऽबोधनेऽपि सिद्धे व्युत्पत्तेर्हेतुत्वमस्त्वित्यत आह – विचारेति ॥ अथशब्दादिना सूचितस्येति ॥ 'मोक्षस्य' इति शेषः । अथशब्दस्य मुमुक्षानन्तर्यार्थत्वादिति भावः । तत्र विचारकर्तव्यतायाम् । सम्भवे 'वक्ष्यमाणरीत्या' इति शेषः ॥ तद्विपरीताया इति ॥ तन्मते अतश्शब्देन कर्मविचारस्यैव ब्रह्मविचारं प्रति हेतुताया उक्तत्वेन सिद्धे व्युत्पत्तेर्हेतुत्वस्याप्रतिपादनादिति भावः ।

ವಿವರಣೆ - ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವು ಬ್ರಹ್ಮನನ್ನು ಪ್ರತಿಪಾದಿಸಲು ಹೊರಟಿದೆ. ಆದ ಎಲ್ಲಿಯ ತನಕ ಶಬ್ದಗಳಿಗೆ ಕಾರ್ಯದಲ್ಲಿ ವ್ಯುತ್ಪತ್ತಿಯನ್ನು ನಿರಾಕರಣೆ ಮಾಡುವುದಿಲ್ಲವೋ; ಅಲ್ಲಿ ತನಕ ಈ ಶಾಸ್ತ್ರಕ್ಕೆ ಬ್ರಹ್ಮವಿಷಯದಲ್ಲಿ ಪ್ರಾಮಾಣ್ಯ ಕೊಡುವುದಿಲ್ಲ. ಏಕೆಂದರೆ ಕಾರ್ಯಪರ ನಿರಾಕರಣೆಯನ್ನು ಬೇರೆ ಎಲ್ಲೂ ಮಾಡಿಲ್ಲ. ಹಾಗಾಗಿ ಈ ಸೂತ್ರದಲ್ಲಿಯೇ ಕಾರ್ಯಪರ ನಿರಾಕರಣೆ ಮಾಡಬೇಕು. ಅದಕ್ಕಾಗಿ ಕಾರ್ಯಪರತ್ವದ ಪೂರ್ವಪಕ್ಷ ಮಾಡಿದ್ದು ಯುಕ್ತವೇ ಆಗಿ ಮತ್ತು ನೀವೂ ಸಹ ಈ ಸೂತ್ರದಲ್ಲಿಯೇ ಕಾರ್ಯಪರತ್ವದ ನಿರಾಕರಣೆಯನ್ನು ಮಾಡಿ ಕಾರ್ಯದಲ್ಲಿ ವ್ಯುತ್ಪತ್ತಿ ನಿರಾಕರಣೆ ಮಾಡದಿದ್ದರೆ ಸಿದ್ಧಬೋಧಕವಾದ ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರ ಅಪ್ರಾಮಾಣ್ಯ ಬರುತ್ತದೆ. ಎಂಬ ಆಕ್ಷೇಪಕ್ಕೆ 'ಕಿಂಚ' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಾ

ಚಂದ್ರಿಕೆಯಲ್ಲಿರುವ 'ವಿಂಶತಿಲಕ್ಷಣ' ಎಂಬಲ್ಲಿರುವ ಲಕ್ಷಣ ಶಬ್ದಕ್ಕೆ ಅಧ್ಯಾಯ ಎಂದು ಅರ್ಥ. ಪೂರ್ವಮೀಮಾಂಸೆಯಲ್ಲಿ ಹನ್ನೆರಡು ಅಧ್ಯಾಯಗಳು, ದೈವೀಮೀಮಾಂಸೆಯಲ್ಲಿ ನಾಲ್ಕು ಅಧ್ಯಾಯಗಳು, ಬ್ರಹ್ಮಮೀಮಾಂಸೆಯಲ್ಲಿ ನಾಲ್ಕು ಅಧ್ಯಾಯಗಳು ಎಂದು ಅರ್ಥ.

'ಅತ ಏವ ಸಿದ್ಧಾಂತೋಪ್ಯಯುಕ್ತಃ' ಎಂಬಲ್ಲಿರುವ 'ಅತ ಏವ' ಎಂಬುದರ ವಿವರಣೆಯನ್ನೇ 'ಸ್ವರೀತ್ಯಾ' ಇತ್ಯಾದಿ ವಾಕ್ಯಗಳಿಂದ ಮಾಡುತ್ತಿದ್ದಾರೆ. ನಿಮ್ಮ ಮತದಲ್ಲಿ ಕರ್ಮವಿಚಾರವು ಬ್ರಹ್ಮವಿಚಾರಕ್ಕೆ ಕಾರಣವೆಂದು ಹೇಳಿದ್ದೀರಿ. ಆದ್ದರಿಂದ 'ಸಿದ್ಧದಲ್ಲಿ ವ್ಯುತ್ಪತ್ತಿಯಿರುವುದರಿಂದ' ಎಂಬರ್ಥವು 'ಅತಃ' ಶಬ್ದದಿಂದ ತಿಳಿಯುತ್ತಿಲ್ಲವೆಂದು ತಿಳಿಯಬೇಕು.

ಮೊದಲನೆಯ ಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಸಿದ್ಧಾಂತ ಮಾಡಬೇಕಾಗಿದೆ. ಈ ಸಿದ್ಧಾಂತಪ್ರಮೇಯಕ್ಕೆ ಕಾರಣವನ್ನು ಅತಃ ಶಬ್ದವು ತಿಳಿಸುತ್ತದೆ. ಮತ್ತು ಬ್ರಹ್ಮ, ಅಥ ಮೊದಲಾದ ಶಬ್ದಗಳು ಸೂಚಿಸುತ್ತವೆ. ಇವುಗಳನ್ನೇ ಸಿದ್ಧಾಂತಯುಕ್ತಿಗಳೆಂದು ಹೇಳುವುದು ಸಮಂಜಸವಾಗಿದೆ. ಇದನ್ನು ಬಿಟ್ಟು ಯಾವ ಪದಗಳಿಂದಲೂ ಹೇಳದ ಸೂಚಿತವೂ ಆಗದ ಸಿದ್ಧಪರತ್ವವನ್ನು ಹೇತುವೆಂದು ನೀನು ಹೇಳುವುದು ಅಸಮಂಜಸವಾಗಿದೆ.

ದೈವೀಮೀಮಾಂಸೆಯ ವಿಷಯದಲ್ಲಿ ಒಂದು ವಿಮರ್ಶೆ - ಅನೇಕ ಕಡೆ 'ದೈವೀಮೀಮಾಂಸಾ' ಎಂಬ ಹೆಸರನ್ನು ಕೇಳುತ್ತೇವೆ. ಆದರೆ ಅಂತಹ ಗ್ರಂಥವನ್ನು ಎಲ್ಲಿಯೂ ನೋಡಲು ಸಾಧ್ಯವಿಲ್ಲ. ಆ ಗ್ರಂಥವು ಇಂದು ಉಪಲಬ್ಧವಾಗಿಲ್ಲ. ಆದರೆ ನಾವೆಲ್ಲರು ಅದನ್ನು ಪರಮಪ್ರಮಾಣವೆಂಬ ಭಾವನೆಯಿಂದ ಬ್ರಹ್ಮಯಜ್ಞದಲ್ಲಿ 'ಓಂ ಅಥಾತೋ ದೈವೀಮೀಮಾಂಸಾ ಓಂ' ಎಂದು ಹೇಳುತ್ತೇವೆ. ಟೀಕಾರಾಯರು ಜಿಜ್ಞಾಸಾಧಿಕರಣದ ಕೊನೆಯಲ್ಲಿ ಮತ್ತು ತತ್ವಪ್ರಕಾಶಿಕೆಯ ಪ್ರಾರಂಭದಲ್ಲಿ 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬ ಎರಡು ಸೂತ್ರಗಳು ದೈವೀಮೀಮಾಂಸೆಯ ಕೊನೆಯ ಸೂತ್ರಗಳಾಗಿವೆಯೆಂದು ಹೇಳುತ್ತಾರೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿ ಬ್ರಹ್ಮಪದದಿಂದ ವಿಷ್ಣುವನ್ನೇ ಏಕೆ ವಿವಕ್ಷಿಸಬೇಕು? ಎಂದರೆ ಇದರ ಹಿಂದಿನ ಶಾಸ್ತ್ರ ದೈವೀಮೀಮಾಂಸೆ ಆಗಿದೆ. ಅದರ ಕೊನೆಯ ಎರಡು ಸೂತ್ರಗಳಲ್ಲಿ ಬ್ರಹ್ಮನನ್ನೇ ವಿಷ್ಣುವೆಂದು ನಿರ್ಣಯಿಸಲಾಗಿದೆ. ಅದರ ಅನಂತರವೇ ಈ ಶಾಸ್ತ್ರ ಹೊರಟದ್ದರಿಂದ ಇಲ್ಲಿರುವ ಬ್ರಹ್ಮಪದದಿಂದ ವಾಚ್ಯನಾದವನು ವಿಷ್ಣುವೆಂಬುದರಲ್ಲಿ ಸಂಶಯವಿಲ್ಲ ಹೀಗೆ ಹೇಳಲಾಗಿದೆ. ದೈವೀಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡಿದ ಅನಂತರ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡಬೇಕೆಂದು ಅಭಿಪ್ರಾಯ.

ದೈವೀಮೀಮಾಂಸಾಶಾಸ್ತ್ರವು ಶೇಷಾವಿಷ್ಟರಾದ 'ಪೈಲ'ಋಷಿಗಳಿಂದ ರಚಿತವಾಗಿದೆಯೆಂದು ತಾತ್ಪರ್ಯನಿರ್ಣಯದ ಹತ್ತನೆಯ ಅಧ್ಯಾಯದಲ್ಲಿ ಹೇಳಿದ್ದಾರೆ. ಸಾಕ್ಷಾತ್ ವೇದವ್ಯಾಸದೇವರೇ ಮೊದಲನೆಯ ಸೂತ್ರವನ್ನು ಮತ್ತು ಕೊನೆಯ ಸೂತ್ರವನ್ನು ಬರೆದು ಉಳಿದ ಸಂಪೂರ್ಣಶಾಸ್ತ್ರವನ್ನು ಪೈಲರಿಗೆ ಬರೆಯಲು ಆದೇಶಿಸಿದರು ಎಂದು ಹೇಳಿದ್ದಾರೆ.

ಜೈಮಿನಿಂ ಕರ್ಮಮೀಮಾಂಸಾಕರ್ತಾರಮಕರೋತ್ ಪ್ರಭುಃ।

*ಜಿಜ್ಞಾಸಾಧಿಕರಣ*

**ದೇವಮೀಮಾಂಸಕಾದ್ಯಂತಂ ಕೃತ್ವಾ ಪೈಲಮಥಾದಿಶತ್ ।**
**ಶೇಷಂಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥**

ಎಂದು. ಮತ್ತು ಅನುವ್ಯಾಖ್ಯಾನದಲ್ಲಿಯೂ ಹೀಗೆ ಹೇಳಲಾಗಿದೆ.

**ಸ್ವಯಂ ಭಗವತಾ ವಿಷ್ಣುಬ್ರಹ್ಮೇತ್ಯೇತತ್ ಪುರೋದಿತಮ್ ।**
**ಸವಿಷ್ಣುರಾಹಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ॥**
**ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಮ್ ।**
**ಮಧ್ಯಂ ತದಾಜ್ಞಯಾ ಶೇಷಪೈಲಾಭ್ಯಾಂ ಕೃತಮಂಜಸಾ ।**
**ಅತಸ್ತತ್ರೈವ ವಿಷ್ಣುತ್ವಸಿದ್ಧೇಬ್ರಹ್ಮೇತ್ಯಸೂಚಯತ್ ॥**

ಬ್ರಹ್ಮಸೂತ್ರಕಾರರಾದ ಪೂಜ್ಯರಾದ ವೇದವ್ಯಾಸದೇವರೇ ದೈವೀಶಾಸ್ತ್ರದ ಕೊನೆಯಲ್ಲಿ ಹೀ ಹೇಳಿದ್ದಾರೆ - 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ವಿಷ್ಣುವೇ ಬ್ರಹ್ಮಶಬ್ದವಾಚ್ಯನಾಗಿ ಎಂದು. 'ದೈವೀಮೀಮಾಂಸಾಶಾಸ್ತ್ರದಲ್ಲಿರುವ ಅಥಾತೋ ದೈವೀಮೀಮಾಂಸಾ' ಎಂಬ ಮೊದಲ ಸೂತ್ರವು ಹಾಗು 'ಸವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ'ಎಂಬ ಕೊನೆಯ ಎರಡು ಸೂತ್ರ ಸ್ವತಃ ವೇದವ್ಯಾಸರಿಂದಲೇ ರಚಿತವಾಗಿವೆ. ಮಧ್ಯಭಾಗವು ವ್ಯಾಸರ ಆದೇಶಾನುಸಾರವಾಗಿ ವ್ಯಾ ಅಭಿಪ್ರಾಯಕ್ಕೆ ಅನುಗುಣವಾಗಿ ಶೇಷ ಹಾಗು ಪೈಲರಿಂದ ರಚಿತವಾಗಿದೆ. ಹೀಗೆ ದೈವೀಮೀಮಾಂ ಶಾಸ್ತ್ರದ ಕೊನೆಯಲ್ಲಿಯೇ ಬ್ರಹ್ಮಶಬ್ದವಾಚ್ಯನಾದವನು ವಿಷ್ಣುವೆಂದು ನಿರ್ಣಯವಾಗಿದೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಥಮಸೂತ್ರದಲ್ಲಿ ಬ್ರಹ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂಬುದರ ಸಂಶಯವಿಲ್ಲ. ಸೂತ್ರಕಾರರು ಇದೆಲ್ಲವನ್ನು ಸೂಚಿಸಿದ್ದಾರೆ. ಇಷ್ಟು ಸ್ಪಷ್ಟವಾಗಿ ಆಚಾರ್ಯ ಹೇಳಿರುವುದರಿಂದ ದೈವೀಮೀಮಾಂಸಾಶಾಸ್ತ್ರವು ಪ್ರಮಾಣವೆಂಬುದರಲ್ಲಿ ಸಂಶಯವೇ ಇಲ್ಲ.

ಈ ಶಾಸ್ತ್ರದಲ್ಲಿ ದೇವತೆಗಳ ಬಗ್ಗೆ ವಿಮರ್ಶೆಯು ಮಾಡಿರಬಹುದೆಂದು ತೋರುತ್ತದೆ. ಈ ಶಾಸ್ತ್ರ ಪ್ರಮಾಣವೆಂದು ರಾಮಾನುಜರೂ ಸಹ ಒಪ್ಪುತ್ತಾರೆ. ಅಷ್ಟೇ ಅಲ್ಲದೇ ರಾಮಾನುಜರು ವಿಂಶ ಲಕ್ಷಣಾತ್ಮಕವಾದ ಶಾಸ್ತ್ರವು ಒಂದೇ ಆಗಿದೆಯೆಂದು ಹೇಳುತ್ತಾರೆ. ಪೂರ್ವಮೀಮಾಂಸೆಯು ಹನ್ನೆರ ಅಧ್ಯಾಯವೆಂದು ಇವರ ಅಭಿಪ್ರಾಯ. ಆದರೆ ಈ ವಿಷಯವನ್ನು ಮಾತ್ರ ಬಹಳವಾಗಿ ವಿಮರ್ಶಿಸಬೇ ಏಕೆಂದರೆ ಪೂರ್ವಮೀಮಾಂಸಾಗ್ರಂಥವು ಹದಿನಾರು ಅಧ್ಯಾಯಗಳಿಂದ ಕೂಡಿರುವ ಮೀಮಾಂಸಕರೇ ಹೇಳುತ್ತಾರೆ. ಹನ್ನೆರಡು ಅಧ್ಯಾಯಗಳಲ್ಲಿ ಜೈಮಿನಿಋಷಿಗಳು ಕರ್ಮವಿಚಾರ ಮಾಡಿದ್ದಾರೆ. ಉಳಿದ ನಾಲ್ಕು ಅಧ್ಯಾಯಗಳಲ್ಲಿ ಪುನಃ ಕೆಲವು ವಿಚಾರಗಳನ್ನು ಹೇಳಿದ್ದಾರೆ. ಇದ 'ಸಂಕರ್ಷಕಾಂಡ' ವೆಂದು ಕರೆಯುತ್ತಾರೆ. ಹಾಗಾಗಿ ಹದಿನಾರು ಅಧ್ಯಾಯಗಳು. ದೈವೀಮೀಮಾಂ ಹಾಗು ಬ್ರಹ್ಮಮೀಮಾಂಸಾಶಾಸ್ತ್ರಗಳನ್ನು ಸೇರಿಸಿದರು ಇಪ್ಪತ್ನಾಲ್ಕು ಅಧ್ಯಾಯಗಳಾಗುತ್ತವೆ. ರಾಮಾನುಜ ವಿಂಶತಿಲಕ್ಷಣಾತ್ಮಕವಾದ ಒಂದು ಶಾಸ್ತ್ರವೆಂದು ಹೇಳಿದ್ದು ಯಾವ ರೀತಿಯಾಗಿಯೂ ಸರಿಹೊಂದುವುದಿ

ರಾಮಾನುಜರು ಮಾತ್ರ ಹೀಗೆ ಹೇಳುತ್ತಾರೆ. ದ್ವೈತಿಗಳಾದ ನಾವು ಹೀಗೆ ಹೇಳುವುದಿಲ್ಲ. ಆದ ದೈವೀಮೀಮಾಂಸಾ ಗ್ರಂಥವನ್ನು ಪ್ರಮಾಣವೆಂದು ಅಂಗೀಕರಿಸುತ್ತೇವೆ.

*ಪರಿಪೂರ್ಣಚಂದ್ರಿಕಾ*

ಅದ್ವೈತಿಗಳಂತೂ 'ದೈವೀಮೀಮಾಂಸಾಶಾಸ್ತ್ರ'ವನ್ನೇ ಒಪ್ಪುವುದಿಲ್ಲ. ನಮ್ಮಂತೆ ಅವರು ಬ್ರಹ್ಮಯಜ್ಞ-ದಲ್ಲಿ 'ಅಥಾತೋ ದೈವೀಮೀಮಾಂಸಾ' ಎಂದೂ ಹೇಳುವುದಿಲ್ಲ. ಈ ರೀತಿಯಾಗಿ ಮತತ್ರಯದಲ್ಲಿಯೂ ದೈವೀಮೀಮಾಂಸಾ ಶಾಸ್ತ್ರದ ವಿಷಯದಲ್ಲಿ ವಿಪ್ರತಿಪತ್ತಿ ಇದೆ.

ಚಂದ್ರಿಕೆಯಲ್ಲಿರುವ 'ವಿಚಾರಕರ್ತವ್ಯತಾ' ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಮೊದಲನೆಯ ಸೂತ್ರವು ಹೇಳುತ್ತಿದೆ. ಅದಕ್ಕೆ ಕಾರಣಗಳನ್ನು 'ಅತಃ' ಶಬ್ದವು ಹೇಳುತ್ತಿದೆ. ಬ್ರಹ್ಮಜಿಜ್ಞಾಸೆಯನ್ನು ಮಾಡಲು ಅನೇಕ ಕಾರಣಗಳನ್ನು ಸಿದ್ಧಾಂತದಲ್ಲಿ ಸಮರ್ಥಿಸಲಾಗಿದೆ. ಆ ಎಲ್ಲ ಹೇತುಗಳನ್ನು ಅತಃ ಶಬ್ದವು ಹೇಳುತ್ತಿದೆ. 'ಅಥ' ಶಬ್ದ 'ಬ್ರಹ್ಮ' ಶಬ್ದ 'ಓಂ' ಶಬ್ದಗಳು ಕಾರಣಗಳನ್ನು ಸೂಚಿಸುತ್ತಿವೆ. ಈಗ ನೀವು ಹೇಳುತ್ತಿರುವ ಸಿದ್ಧಪರತ್ವವು. 'ಅತಃ' ಶಬ್ದದಿಂದ ಹೇಳಿಯೂ ಇಲ್ಲ 'ಅಥ' ಮೊದಲಾದ ಶಬ್ದಗಳಿಂದ ಸೂಚಿತವೂ ಆಗಿಲ್ಲ. ಆದ್ದರಿಂದ ನೀವು ಮಾಡಿರುವ ಪೂರ್ವಪಕ್ಷವಾಗಲೀ ಸಿದ್ಧಾಂತವಾಗಲೀ ಅಸಾಧುವಾಗಿದೆ. ನಾವು ಸಿದ್ಧಪರತ್ವವನ್ನು ಹೇಳುತ್ತೇವೆ. ಆದರೆ ಅದು 'ಅತಃ' ಶಬ್ದದ ಅರ್ಥವೆಂದೂ ಸಹ ಹೇಳುತ್ತೇವೆ. ನಮ್ಮಂತೆ ನೀವು ಹೇಳುವುದಿಲ್ಲವಾದ್ದರಿಂದ ನಿಮ್ಮ ಸಿದ್ಧಾಂತ ಸೂತ್ರಾರೂಢವಾಗುವುದಿಲ್ಲ.

ನಾವು ಹೇಳುವ 'ಅತಃ' ಶಬ್ದಗಳ ಅರ್ಥವನ್ನು ಪ್ರಾಸಂಗಿಕವಾಗಿ ತಿಳಿಯಬೇಕು - ಜಿಜ್ಞಾಸಾ-ಧಿಕರಣದಲ್ಲಿ ಹೇಳಿದ ಎಲ್ಲ ವಿಷಯಗಳನ್ನು 'ಅತಃ' ಶಬ್ದದಿಂದ ಸಂಕ್ಷೇಪವಾಗಿ ಹೇಳಲಾಗಿದೆ. ಬ್ರಹ್ಮತರ್ಕದಲ್ಲಿ ವಿವರವಾಗಿ ಹೇಳಿದ್ದನ್ನೇ ಇಲ್ಲಿ ಅತಃ ಶಬ್ದದಿಂದ ಸಂಕ್ಷೇಪವಾಗಿ ಹೇಳಲಾಗಿದೆ.

ಗ್ರಂಥಗಳು ಎರಡು ವಿಧ - ೧) ಪ್ರಮಾಣಗ್ರಂಥ ೨) ಪ್ರಮೇಯಗ್ರಂಥ ಎಂದು. ಬ್ರಹ್ಮತರ್ಕವು ಪ್ರಮಾಣಗ್ರಂಥವೆನಿಸಿದೆ. ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಮೇಯ ಗ್ರಂಥವೆನಿಸಿದೆ. ಪ್ರಮಾಣಗ್ರಂಥದಲ್ಲಿ ಹೇಳಿದ ವಿಚಾರವನ್ನು ಇಲ್ಲಿ ಸಂಕ್ಷೇಪವಾಗಿ ಹೇಳಿದ್ದು ಸೂಕ್ತವೇ ಆಗಿದೆ. ಇದನ್ನೇ ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

> ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ ।
> ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ॥

ಜಿಜ್ಞಾಸಾಧಿಕರಣದಲ್ಲಿ ಹೇಳಿದ ಎಲ್ಲ ವಿಚಾರಗಳು ಬ್ರಹ್ಮತರ್ಕವೆಂಬ ತರ್ಕಶಾಸ್ತ್ರದಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಆ ಬ್ರಹ್ಮತರ್ಕವೇ ಬೇರೆ. ಈ ಬ್ರಹ್ಮಮೀಮಾಂಸಾಶಾಸ್ತ್ರವೇ ಬೇರೆ. ಆದ್ದರಿಂದ ಅಲ್ಲಿ ವಿಸ್ತಾರವಾಗಿ ಹೇಳಿದ ವಿಚಾರಗಳನ್ನು ಇಲ್ಲಿ ಸಂಕ್ಷೇಪವಾಗಿ 'ಅತಃ' ಶಬ್ದದಿಂದ ಸೂಚಿಸಲಾಗಿದೆ ಎಂದು. 'ಅತಃ' ಶಬ್ದಕ್ಕೆ ಒಟ್ಟು ಐದು ಅರ್ಥಗಳು-

೧) ಜಿಜ್ಞಾಸೋತ್ಥಜ್ಞಾನಜಾತ್ತತ್ಪ್ರಸಾದಾದೇವ ಮುಚ್ಯತೇ ।

ಜಿಜ್ಞಾಸೆಯಿಂದ ಜ್ಞಾನ, ಜ್ಞಾನದಿಂದ ಪ್ರಸಾದ, ಪ್ರಸಾದದಿಂದ ಮೋಕ್ಷ. ಇಂತಹ ಮೋಕ್ಷರೂಪವಾದ ಪ್ರಯೋಜನಕ್ಕೋಸ್ಕರ ಜಿಜ್ಞಾಸೆಯನ್ನು ಮಾಡಬೇಕು.

೨) ಇತ್ಯುಕ್ತೇಃ ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ ।

ಸಂಸಾರಬಂಧನವು ಮಿಥ್ಯಾಭೂತವಾಗಿದೆ. ಮಿಥ್ಯಾಭೂತವಾದ ಸಂಸಾರಬಂಧನದ ಪರಿಹಾ-ರಕ್ಕೋಸ್ಕರ ಭಗವಂತನ ಪ್ರಸಾದವಾದರು ಏಕೆ ಬೇಕು? ಪ್ರಸಾದವೇ ಬೇಡವಾದ್ದರಿಂದ ಪ್ರಸಾದಕ್ಕೋಸ್ಕ-ರ ಇರುವ ಜಿಜ್ಞಾಸೆಯೂ ಬೇಕಾಗಿಲ್ಲ. ಈ ರೀತಿಯಾದ ಆಕ್ಷೇಪವನ್ನು ಅತಃ ಶಬ್ದವು ಪರಿಹರಿಸುತ್ತ-ದೆ 'ಅತಃ' = ಬಂಧವು ಸತ್ಯವಾದುದರಿಂದ;

೩) ಕಾರ್ಯತಾ ಚ ನ ಕಾಚಿತ್ ಸ್ಯಾದಿಷ್ಟಸಾಧನತಾಂ ವಿನಾ ।

ವಾಕ್ಯವು 'ಕಾರ್ಯ'ಪರವಾದರೆ ಮಾತ್ರ ಪ್ರಮಾಣವಾಗುತ್ತದೆ. ವೇದವು ಪ್ರಮಾಣವಾಗಬೇಕಾದ-ರೆ ಕಾರ್ಯಪರವೆಂದು ಒಪ್ಪಿಕೊಳ್ಳಬೇಕು. ವೇದಪ್ರತಿಪಾದ್ಯವಾದ ಕಾರ್ಯವನ್ನು ಸಮಗ್ರಪೂರ್ವ-ಮೀಮಾಂಸಾಗ್ರಂಥದಲ್ಲಿ ವಿಮರ್ಶಿಸಲಾಗಿದೆ. ಬ್ರಹ್ಮನು ಸಿದ್ಧನಾಗಿದ್ದಾನೆ. ಇಂತಹ ಸಿದ್ಧನಾದ ಬ್ರಹ್ಮ-ನನ್ನು ಪ್ರತಿಪಾದಿಸಲು ಹೊರಟ ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವು ಅಪ್ರಮಾಣವಾಗಿದೆ; ಎಂಬ ಶಂ-ಕೆ ಬಂದರೆ ಅತಃ ಶಬ್ದವೇ ಪರಿಹರಿಸುತ್ತದೆ. ಅತಃ = ಸಿದ್ಧದಲ್ಲಿ ವ್ಯುತ್ಪತ್ತಿ ಇರುವುದರಿಂದ.

೪) ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ ।

ಶಬ್ದವು ಪ್ರಮಾಣವೇ ಆಗಲಾರದು. ಶಬ್ದಕ್ಕೇನೇ ಪ್ರಮಾಣ್ಯವು ದುರ್ಲಭವಾದಾಗ ವೇದಕ್ಕಂತೂ ಸುತರಾಂ ಪ್ರಾಮಾಣ್ಯವು ಕೂಡುವುದಿಲ್ಲ. ಆದ್ದರಿಂದ ವೇದಾರ್ಥಮೀಮಾಂಸಾರೂಪವಾದ ಈ ಗ್ರಂಥವು ಅನಾರಂಭಣೀಯ; ಎಂಬ ಶಂಕೆಗೂ ಅತಃ ಶಬ್ದವೇ ಉತ್ತರಿಸುತ್ತದೆ.

ಅತಃ = ವೇದವು ಪ್ರಮಾಣವಾದ್ದರಿಂದ;

೫) ಶಕ್ತಿಶ್ಚಾನ್ವಿತೇ ಸ್ವಾರ್ಥೇ ಶಬ್ದಾನಾಮನುಭೂಯತೇ ।

ವೇದವು ಪ್ರಮಾಣವಲ್ಲ. ಏಕೆಂದರೆ ಅರ್ಥವು ಮೊದಲೇ ತಿಳಿದಿರಬೇಕು. ಪ್ರಕೃತ ವೇದದಲ್ಲಿಷ್ಟ ವಾಕ್ಯಾರ್ಥವನ್ನು ಬೋಧಿಸಲು ಸಾಮಗ್ರಿ ಇರುವುದಿಲ್ಲ. ಆದ್ದರಿಂದ ವೇದವು ಏನನ್ನೂ ಬೋಧಿಸಲಾರದು. ಹೀಗೆ ವೇದವು ಅಪ್ರಮಾಣವಾದ್ದರಿಂದ ತದರ್ಥನಿರ್ಣಾಯಕವಾದ ಈ ಬ್ರಹ್ಮ-ಮೀಮಾಂಸಾಶಾಸ್ತ್ರವು ಅನಾರಂಭಣೀಯವಾಗಿದೆ. ಈ ಆಕ್ಷೇಪವನ್ನು ಅತಃ ಶಬ್ದವೇ ಪರಿಹರಿಸುತ್ತದೆ.

ಅತಃ = ವೇದವು ಅನ್ವಿತವಾದ ಅರ್ಥವನ್ನೇ ತಿಳಿಸುವುದರಿಂದ;

ಬೌದ್ಧರು ಪ್ರತ್ಯಕ್ಷ ಮತ್ತು ಯುಕ್ತಿಗಳನ್ನು ಮಾತ್ರ ಪ್ರಮಾಣವೆನ್ನುತ್ತಾರೆ. ವೇದವನ್ನು ಅಪ್ರಮಾಣವೆನ್ನುತ್ತಾರೆ. ವೇದವನ್ನಷ್ಟೇ ಅಪ್ರಮಾಣವೆಂದು ಹೇಳುವುದಲ್ಲದೆ ಸಕಲ ಶಬ್ದಗಳೂ ಸಹ ಅಪ್ರಮಾಣಗಳೇ ಆಗಿವೆ ಎನ್ನುತ್ತಾರೆ. ಶಬ್ದವನ್ನು ಅವರು ಅಪ್ರಮಾಣವೆನ್ನಲು ಮುಖ್ಯಕಾರಣವಿಂತು: ಶಬ್ದದಿಂದ ಅರ್ಥಜ್ಞಾನ ಬರಬೇಕಾದರೆ ಶಬ್ದಕ್ಕೂ ಅರ್ಥಕ್ಕೂ ಸಂಬಂಧವಾಗಬೇಕು. ಕಣ್ಣಿನಿಂ

ಪರಿಪೂರ್ಣಚಂದ್ರಿಕಾ

ರೂಪಜ್ಞಾನ ಬರಬೇಕಾದರೆ ಕಣ್ಣಿಗೂ ರೂಪಕ್ಕೂ ಸಂಬಂಧವಾಗುತ್ತದೆ. ಆದರೆ ಶಬ್ದಕ್ಕೂ ಅರ್ಥಕ್ಕೂ ಸನ್ನಿಕರ್ಷವಾಗಲು ಸಾಧ್ಯವೇ ಇಲ್ಲ. ಏಕೆಂದರೆ ಶಬ್ದವು ಆಕಾಶದಲ್ಲಿದೆ. ಅರ್ಥವು ಆಕಾಶದಲ್ಲಿರುವುದಿಲ್ಲ. ಹೀಗೆ ಬೇರೆ ಬೇರೆ ಕಡೆ ಇರುವ ಶಬ್ದ ಮತ್ತು ಅರ್ಥಗಳಿಗೂ ಸಂಪರ್ಕವಾಗಲು ಸಾಧ್ಯವಿಲ್ಲ. ಸಂಬಂಧಕ್ಕೆ ಸಾಮಾನಾಧಿಕರಣ್ಯವು ಪ್ರಯೋಜಕವೆಂಬುದು ಸರ್ವಾಂಗೀಕೃತವಾಗಿದೆ. ಎಂದು ಇವರ ವಾದ.

ಪ್ರಕೃತ ಟೀಕಾರಾಯರು 'ಪ್ರಮಾಣವಾರ್ತಿಕ' ಎಂಬ ಬೌದ್ಧಗ್ರಂಥದಲ್ಲಿರುವ ಮಾತುಗಳನ್ನೇ ಅನುವಾದ ಮಾಡುತ್ತಾ ಬೌದ್ಧಮತವನ್ನು ಅತ್ಯಂತ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಬೌದ್ಧರು ಅನುಮಾನದ ಮೂಲಕ ಶಬ್ದದ ಅಪ್ರಾಮಾಣ್ಯವನ್ನು ವಿವಿಧಭಂಗಿಯಲ್ಲಿ ಸಮರ್ಥಿಸಿದ್ದಾರೆ. ಅನುಮಾನವನ್ನು ಅವರು ಪ್ರಮಾಣವೆಂದು ಅಂಗೀಕರಿಸಿದರೂ ಉದಾಹರಣ ಉಪನಯ ಎಂಬ ಎರಡೇ ಅಂಗಗಳನ್ನು ಅನುಮಾನಕ್ಕೆ ಹೇಳುತ್ತಾರೆ. ಆದ್ದರಿಂದಲೇ ಟೀಕಾರಾಯರು ಎರಡೇ ಅಂಗಗಳನ್ನು ಹೇಳುತ್ತಾ ಪ್ರತಿಜ್ಞೆ ಮತ್ತು ಹೇತುಗಳನ್ನು ಹೇಳಿಲ್ಲ.

## ಶೈವಮತ ವಿಮರ್ಶೆ

ಶೈವಪಂಥಕ್ಕೆ ಮೂಲಕಾರಣರು ಶಂಕರಾಚಾರ್ಯರೇ ಆಗಿದ್ದಾರೆ. ಇದನ್ನು ಬೆಳೆಸಿದವರು ನೀಲಕಂಠದೀಕ್ಷಿತರು, ಮತ್ತು ಅಪ್ಪಯ್ಯದೀಕ್ಷಿತರು. ಶೈವರ ಸಿದ್ಧಾಂತಕ್ಕೂ ಅದ್ವೈತಸಿದ್ಧಾಂತಕ್ಕೂ ಏನೂ ವ್ಯತ್ಯಾಸವಿಲ್ಲ. ಬ್ರಹ್ಮನ ವಿಷಯದಲ್ಲಿ ಸಗುಣ ನಿರ್ಗುಣ ಎಂಬ ಪರಿಕಲ್ಪನೆ ಅದ್ವೈತಿಗಳಲ್ಲಿ ಹೇಗೆ ಇದೆಯೋ, ಅದರಂತೆ ಶೈವರು ಶಿವನ ವಿಷಯದಲ್ಲಿ ಹೇಳುತ್ತಾರೆ ಆದ್ದರಿಂದ ಇವರಿಬ್ಬರಿಗೂ ಬ್ರಹ್ಮ ಮತ್ತು ಶಿವ ಎಂಬ ಹೆಸರಿನಲ್ಲಷ್ಟೇ ವಿವಾದ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಸೇರಿದ ಶಿವನು ಸಗುಣ. ಇವನಿಗಿಂತ ಭಿನ್ನನಾದ ತುರೀಯನಾದ ಶಿವನು ನಿರ್ಗುಣ. ಈ ಮತಕ್ಕಿಂತ ಭಿನ್ನವಾದ ಮತ್ತೊಂದು ಮತ ಪಾಶುಪತಮತ. ಶೈವಮತಪ್ರವರ್ತಕರಾದ ಅಪ್ಪಯ್ಯದೀಕ್ಷಿತರು "ಶಿವಾರ್ಕ-ಮಣಿದೀಪಿಕಾ" ಎಂಬ ಗ್ರಂಥವನ್ನು ಬರೆದಿದ್ದಾರೆ. ಇದಕ್ಕೆ ಖಂಡನಾರೂಪವಾಗಿ ಶ್ರೀವಿಜಯೀಂದ್ರ-ಸ್ವಾಮಿಗಳು 'ತುರೀಯಶಿವಮತಖಂಡನಮ್' ಎಂಬ ಗ್ರಂಥವನ್ನು ಬರೆದಿದ್ದಾರೆ.

ಚಂದ್ರಿಕೆಯಲ್ಲಿ ಶೈವಮತವಿಮರ್ಶೆಯನ್ನು ಮಾಡದಿದ್ದರೂ ರಾಯರು ಪ್ರತಿಯೊಂದು ಅಧಿಕರಣ-ದಲ್ಲಿ ಮಾಡಿದ್ದಾರೆ. ಶೈವರು ಜಿಜ್ಞಾಸಾಧಿಕರಣದ ರಚನೆಯನ್ನು ಹೀಗೆ ಮಾಡುತ್ತಾರೆ. ಜಿಜ್ಞಾಸಾಧಿಕರಣದ ವಿಷಯವಾಕ್ಯ - 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' 'ಕರ್ಮಗಳಿಂದ ಸಂಪಾದಿಸಿದ ಲೋಕಗಳು ನಶ್ವರವೆಂದು ತಿಳಿದು ಬ್ರಹ್ಮನಿಷ್ಠನಾದವನು ವಿರಕ್ತಿ ತಾಳಬೇಕು. ಕರ್ಮಾಚರಣೆಯಿಂದ ಮೋಕ್ಷವು ಲಭಿಸದು ಎಂದು ಬ್ರಹ್ಮಜ್ಞಾನಕ್ಕಾಗಿ ಗುರೂಪಸತ್ತಿ ಮಾಡಬೇಕು' ಎಂಬ ಮಾಂಡೂಕೋಪನಿಷತ್ತಿನ ಶ್ರುತಿವಾಕ್ಯ.

*ಜಿಜ್ಞಾಸಾಧಿಕರಣ*

ಇಲ್ಲಿ ಸಂಶಯವನ್ನು ಹೀಗೆ ತಿಳಿಯಬೇಕು - ಈ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವೋ ಅಥವಾ ಅನಾರಂಭಣೀಯವೋ? ಎಂದು. ಇದನ್ನು ತೀರ್ಮಾನಿಸಲು 'ಪರೀಕ್ಷ್ಯ ಲೋಕಾನ್' ಇತ್ಯಾದಿ ಶ್ರುತಿಯು ಬ್ರಹ್ಮವಿಚಾರಕ್ಕೋಸ್ಕರ ಗುರೂಪಸತ್ತಿಯನ್ನು ಮಾಡಬೇಕು ಎಂದು ಹೇಳುತ್ತದೋ ಬೇಡವೆಂದು ಹೇಳುತ್ತದೊ? ಎಂಬುದನ್ನು ತೀರ್ಮಾನಿಸಬೇಕು. ಇದನ್ನು ತೀರ್ಮಾನಿಸಬೇಕಾದರೆ ಬ್ರಹ್ಮನು ವಿಚಾರಯೋಗ್ಯನೋ? ಅಲ್ಲವೋ? ಎಂಬುದನ್ನು ಮೊದಲು ತೀರ್ಮಾನಿಸಬೇಕು.

ಹಾಗಾಗಿ ಬ್ರಹ್ಮನು ವಿಚಾರಯೋಗ್ಯನೆಂದು ಸಮರ್ಥಿಸಲು ವಿಚಾರಯೋಗ್ಯನಲ್ಲವೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ.

**ಪೂರ್ವಪಕ್ಷ** - 'ಅಯಮಾತ್ಮಾ ಬ್ರಹ್ಮ' 'ಈ ಆತ್ಮನು ಬ್ರಹ್ಮ' ಎಂಬ ಶ್ರುತಿಯು ಜೀವನನ್ನು ಬ್ರಹ್ಮನೆಂದು ಹೇಳುತ್ತಿದೆ. ಆ ಜೀವನಾದರೂ ಸಹ 'ಅಹಂ' ಎಂಬ ಅನುಭವದಿಂದ ನಿತ್ಯಸಿದ್ಧನಾಗಿರುವುದರಿಂದ ಅವನ ವಿಷಯದಲ್ಲಿ ಸಂದೇಹವಿಲ್ಲ. ಸಂದೇಹವಿಲ್ಲದ್ದರಿಂದ ಬ್ರಹ್ಮನು ವಿಚಾರಾರ್ಹನಾಗುವುದಿಲ್ಲ.

**ಶಂಕೆ** - 'ಅಯಮಾತ್ಮಾ' ಎಂಬ ಶ್ರುತಿಯು 'ಅಹಂ' ಎಂಬ ಅನುಭವಸಿದ್ಧನಾದ ವಿಶಿಷ್ಟಾತ್ಮನ ಅಭೇದವನ್ನು ಹೇಳಲು ಹೊರಟಿಲ್ಲ. ಕಿಂತು ಚಿನ್‌ಮಾತ್ರನಿಂದ ಅಭೇದವನ್ನು ಹೇಳಲು ಹೊರಟಿದೆ. ಅಂತಹ ಚಿನ್‌ಮಾತ್ರನು ಅಜ್ಞಾನಾವೃತನಾದ್ದರಿಂದ ಸಂದಿಗ್ಧನಾಗಿದ್ದಾನೆ. ಆದ್ದರಿಂದ ಚಿನ್ಮಾತ್ರಸ್ವರೂಪನಾದ ಬ್ರಹ್ಮನು ವಿಚಾರಾರ್ಹನಾಗಿದ್ದಾನೆ.

**ಸಮಾಧಾನ** - ಶ್ರುತಿಯು ವಿಶಿಷ್ಟಾತ್ಮನಾದ ಜೀವನಿಂದಲೇ ಐಕ್ಯ ಹೇಳುತ್ತಿದೆ. ಏಕೆಂದರೆ ಪ್ರತ್ಯಕ್ಷಸಿದ್ಧವಾದದ್ದರಲ್ಲಷ್ಟೇ 'ಅಯಂ' ಶಬ್ದ ಪ್ರಯೋಗವಿರುವುದರಿಂದ ಪ್ರತ್ಯಕ್ಷಸಿದ್ಧನಾದ ಜೀವನನ್ನು ಬಿಟ್ಟು ಪ್ರತ್ಯಕ್ಷಸಿದ್ಧನಲ್ಲದ ಚಿನ್ಮಾತ್ರನನ್ನು ಶ್ರುತಿಯು ಹೇಳುವುದಿಲ್ಲ.

'ಅಯಮಾತ್ಮಾ ಬ್ರಹ್ಮ' ಎಂಬಲ್ಲಿ ಪ್ರಥಮಪ್ರತೀತವಾದದ್ದು 'ಇದಂ' ಶಬ್ದ. ಈ ಶಬ್ದದಿಂದ ಜೀವನೇ ಪ್ರಥಮಪ್ರತೀತನಾಗುತ್ತಾನೆ. ಅನಂತರ ಬ್ರಹ್ಮಶಬ್ದವಿದ್ದರೂ ಆ ಬ್ರಹ್ಮಶಬ್ದಕ್ಕೆ ದೇಹಬೃಂಹಣ (ದೇಹವನ್ನು ಧರಿಸಿದವನು) ಎಂಬರ್ಥವನ್ನು ಹೇಳಲು ಬರುತ್ತದೆ. ಪ್ರಥಮಪ್ರತೀತವಾದ ಅರ್ಥವನ್ನೇ ಸ್ವೀಕರಿಸಬೇಕು. ಈ ವಿಷಯದಲ್ಲಿ ಪೂರ್ವಮೀಮಾಂಸಾದೃಷ್ಟಾಂತವೂ ಕಂಡಿದೆ.

ವಾಜಪೇಯಯಾಗದಲ್ಲಿ 'ಬಾರ್ಹಸ್ಪತ್ಯ' ಎಂಬ ಇಷ್ಟಿಯನ್ನು ಹೇಳಿದ್ದಾರೆ. ಇಷ್ಟಿಯನ್ನು ವಿಧಿಸುವಾಗ 'ನೈವಾರಃ ಸಪ್ತದಶಶರಾವಃ ಕ್ಷೀರೇ ಚತುರ್ಭವತಿ' ಎಂದು ಹದಿನೇಳು ಮಡಿಕೆಗಳಲ್ಲಿ ಚರು ಮಾಡಬೇಕೆಂದು ಹೇಳಲಾಗಿದೆ. ಇದರ ಪ್ರಕೃತಿಯಾಗದಲ್ಲಿ 'ಚತುರೋ ಮುಷ್ಟೀನ್ನಿರ್ವಪತಿ' ಎಂದು ನಾಲ್ಕು ಮುಷ್ಟಿಯಿಂದಷ್ಟೇ ಚರು ಮಾಡಬೇಕೆಂದು ಹೇಳಿದೆ. 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂಬ ಚೋದಕದಂತೆ ಎರಡನ್ನೂ ಒಟ್ಟಿಗೆ ಸ್ವೀಕರಿಸಬೇಕು. ಆದರೆ ಹದಿನೇಳು ಮಡಿಕೆಗಳಲ್ಲಿ ಕೇವಲ ನಾಲ್ಕು ಮುಷ್ಟಿಧಾನ್ಯವನ್ನು ಹಾಕಿ ಚರು ಮಾಡಲು ಸಾಧ್ಯವಿಲ್ಲ. 'ಚತುರೋ ಮುಷ್ಟೀನ್ನಿರ್ವಪತಿ' ಎಂಬ

ನಾಲ್ಕು ಎಂಬ ಸಂಖ್ಯೆಯನ್ನು ಮುಷ್ಟಿ ಎಂಬ ಪರಿಮಾಣವನ್ನು ವಿವಕ್ಷಿಸಲಾಗಿದೆ. ಇಲ್ಲಿರುವ ಸಂಖ್ಯೆ ಮತ್ತು ಪರಿಮಾಣ ಇವೆರಡನ್ನೂ ಸ್ವೀಕರಿಸಬೇಕೋ? ಅಥವಾ ಎರಡನ್ನೂ ಸ್ವೀಕರಿಸಬಾರದೋ? ಅಥವಾ ಇತರಲ್ಲಿ ಒಂದನ್ನು ಮಾತ್ರ ಸ್ವೀಕರಿಸಬೇಕೋ? ಇತ್ಯಾದಿಯಾಗಿ ಆರುವಿಧದಲ್ಲಿ ಸಂದೇಹ ಬರುತ್ತದೆ. ಒಟ್ಟು ಐದು ಬಗೆಯ ಪೂರ್ವಪಕ್ಷವನ್ನು ಮಾಡಿ ಹೀಗೆ ಸಿದ್ಧಾಂತ ಮಾಡಲಾಗಿದೆ. -

ಹದಿನೇಳು ಮಡಿಕೆಗಳಲ್ಲಿ ನಾಲ್ಕು ಮುಷ್ಟಿ ನೀವಾರಧಾನ್ಯವನ್ನು ಹಾಕಲಾಗುವುದಿಲ್ಲ. ಆದ್ದರಿಂದ 'ಚತುರೋ ಮುಷ್ಟೀನ್ನಿರ್ವಪತಿ' ಎಂಬಲ್ಲಿ ಮುಷ್ಟಿಯನ್ನು ಬಾಧನ ಮಾಡಿ ಸಂಖ್ಯೆಯನ್ನು ಮಾತ್ರ ಇಟ್ಟುಕೊಳ್ಳಬೇಕು. ಇಲ್ಲಿ ವಿಧಿವಾಕ್ಯ ಹೇಳಿದಂತೆ ಮುಷ್ಟಿ ಹಾಗು ಸಂಖ್ಯೆ ಎರಡೂ ಯಾಗದ ಅಂಗಗಳೇ ಆಗಿವೆ. ಆದರೂ ಸಹ ಇಲ್ಲಿ 'ಚತುರಃ' ಎಂಬುದು ಪ್ರಥಮಪ್ರಾಪ್ತವಾಗಿದೆ. 'ಮುಷ್ಟಿ' ಎಂಬುದು ಅನಂತರ ಬಂದಿದೆ. ಪ್ರಥಮಪ್ರಾಪ್ತವಾದದ್ದೇ ಮುಖ್ಯವಾದ್ದರಿಂದ ಮುಷ್ಟಿ ಎಂಬುದನ್ನು ಇಲ್ಲಿ ವಿವಕ್ಷಿಸಬಾರದು. ಘಟಾದಿಗಳಲ್ಲಿ ಚರುವನ್ನು ಮಾಡಬೇಕು. ಚರು ಮಾಡಬೇಕಾದರೆ ಅವುಗಳಲ್ಲಿ ನೀವಾರಧಾನ್ಯವನ್ನು ಹಾಕಬೇಕು. ಆದರೆ ಅಷ್ಟೊಂದು ಪಾತ್ರೆಗಳಲ್ಲಿ ನಾಲ್ಕು ಮುಷ್ಟಿ ಕಮ್ಮಿ ಆಗುತ್ತದೆ. ಹಾಗಾಗಿ ನಾಲ್ಕು ಎಂಬ ಸಂಖ್ಯೆಯನ್ನು ಮಾತ್ರ ಸ್ವೀಕರಿಸಿ ಮುಷ್ಟಿಯನ್ನು ಪರಿಗಣಿಸಬಾರದು. ದೊಡ್ಡ ಮೊರದಲ್ಲಿ ನಾಲ್ಕು ಬಾರಿ ನೀವಾರವನ್ನು ಹಾಕಿದಾಗ ಚರು ಮಾಡಬಹುದು. ಹೀಗೆ ಪ್ರಥಮ ಪ್ರತೀತವಾದದ್ದನ್ನೇ ಸ್ವೀಕರಿಸಬೇಕೆಂದು ಮುಷ್ಟಿಲೋಪಾಧಿಕರಣದಲ್ಲಿ ಸಿದ್ಧಾಂತ ಮಾಡಲಾಗಿದೆ. ಅದರಂತೆ ಪ್ರಕೃತದಲ್ಲಿಯೂ 'ಅಯಮಾತ್ಮಾ ಬ್ರಹ್ಮ' ಎಂಬಲ್ಲಿ 'ಇದಂ' ಶಬ್ದದಿಂದ ಪ್ರಥಮಪ್ರತೀತನಾದ ಜೀವನನ್ನೇ ಇಟ್ಟುಕೊಳ್ಳಬೇಕು.

ಆತ್ಮಾ ಬ್ರಹ್ಮೇತ್ಯಧೀತಃ ಸ್ಫುರತಿ ಸ ತು ಸದಾ ನಿರ್ವಿಶೇಷಃ ಸ ಚೇತ್ ಸ್ಯಾತ್ ।
ತಸ್ಮಾತೀತಸ್ಯ ಬುದ್ಧೇಃ ಸರಣಿಮಿಹ ನಯೈಃ ಕಾ ಪರಿಚ್ಛೇದವಾರ್ತಾ ॥

ಈ ರೀತಿಯಾಗಿ ಶೈವರು ರಚಿಸಿದ ಜಿಜ್ಞಾಸಾಧಿಕರಣ ರಚನೆಯು ಸರಿಯಿಲ್ಲ. ಮೊಟ್ಟಮೊದಲಿಗೆ ಇವರು ಸ್ವೀಕರಿಸಿದ ಶ್ರುತಿವಾಕ್ಯವೇ ತಪ್ಪಾಗಿದೆ. ಏಕೆಂದರೆ ಸೂತ್ರದಲ್ಲಿ ಸೂಚಿಸುತ್ತಿರುವ ಯುಕ್ತಿಯು ಯಾವ ವಾಕ್ಯದಲ್ಲಿರುತ್ತದೊ, ಅದೇ ವಿಷಯವಾಕ್ಯವಾಗುತ್ತದೆ. ಆ ವಿಷಯವಾಕ್ಯದ ಅರ್ಥವನ್ನು ನಿರ್ಣಯಿಸಲು ಬೇಕಾದ ಯುಕ್ತಿಯು ವಾಕ್ಯದಲ್ಲಿಯೇ ಇದ್ದರೆ ಅರ್ಥನಿರ್ಣಯವು ಸುಲಭವಾಗುತ್ತದೆ. ಆದರೆ 'ಪರೀಕ್ಷ್ಯ ಲೋಕಾನ್' ಇತ್ಯಾದಿ ವ್ಯಾಕ್ಯವು ಹಾಗಿಲ್ಲವಾದ್ದರಿಂದ ಇದು ಉದಾಹರಣೆಯಾಗಲು ಅರ್ಹವಿಲ್ಲ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ 'ಪರೀಕ್ಷ್ಯ' ಇತ್ಯಾದಿವಾಕ್ಯದ ಅರ್ಥ-ನಿರ್ಣಯಕ್ಕೆ ಬೇಕಾದ ಯುಕ್ತಿಯು ಕಾಣಿಸುತ್ತಿಲ್ಲ. ಮತ್ತು ನಿಮ್ಮ ಹಿಂದಿನ ತೀರ್ಥಂಕರರು ಯಾರೂ ಸಹ ಈ ಶ್ರುತಿಯ ಅರ್ಥನಿರ್ಣಯವನ್ನು ಈ ಸೂತ್ರದಿಂದ ಮಾಡಲು ಹೊರಟಿಲ್ಲ. ನೀವು ಬಹಳ ಶ್ರಮಪಟ್ಟು ಈ ವಿಷಯವಾಕ್ಯಕ್ಕೂ ಸೂತ್ರಕ್ಕೂ ಒಂದೇ ಅಭಿಪ್ರಾಯವೆಂದು ಸಮರ್ಥಿಸಿ ಇದೇ ಉದಾಹರಣವಾಕ್ಯವೆಂದು ಹೇಳುತ್ತಿದ್ದೀರಿ. ಇದೂ ಸಹ ತಪ್ಪು. ಸಾಕ್ಷಾತ್ತಾಗಿ ಜಿಜ್ಞಾಸಾಪದದಿಂದ ಕೂಡಿರುವ ಅನೇಕ ಶ್ರುತಿಗಳು ಇರುವಾಗ ಅವೆಲ್ಲವನ್ನು ಬಿಟ್ಟು ಇದನ್ನೇ ವಿಷಯವಾಕ್ಯವೆಂದು ಕಷ್ಟಪಡುವುದರಲ್ಲಿ ಅರ್ಥವಿಲ್ಲ. ಹಾಗೆಯೇ ಸೂತ್ರಕ್ಕೂ ಶ್ರುತಿಗೂ ಸಮಾನವಾದ ಅರ್ಥವಿದ್ದರೆ

ಸಾಲದು. ಶ್ರುತ್ಯರ್ಥನಿರ್ಣಾಯಕವಾದ ಯುಕ್ತಿಯು ಸೂತ್ರದಲ್ಲಿರುವಾಗ ಮಾತ್ರ ಅದು ವಿಷಯ ವಾಕ್ಯವಾಗಲು ಸಾಧ್ಯ. ಹೀಗೆ ನೀವು ಹೇಳಿದ ವಿಷಯವಾಕ್ಯ ತಪ್ಪೆಂದು ತೀರ್ಮಾನವಾಯಿತು.

ಇದರಂತೆಯೇ ಪೂರ್ವಪಕ್ಷವೂ ಸರಿಯಿಲ್ಲ. ಏಕೆಂದರೆ 'ಅಯಮಾತ್ಮಾ ಬ್ರಹ್ಮ' ಎಂಬ ಶ್ರುತಿಯ ಬ್ರಹ್ಮಶಬ್ದಕ್ಕೆ ಏನರ್ಥ ಹೇಳುತ್ತೀರಿ? ಜೀವ, ಕಮಲಾಸನ ಇತ್ಯಾದಿ ಅರ್ಥ ಹೇಳಿದರೆ ಜೀವ ಬ್ರಹ್ಮೈಕ್ಯವು ಸಿದ್ಧವಾಗಿಲ್ಲ. ಇನ್ನು ವಿಷ್ಣುವೆಂದು ಹೇಳಿದರೆ ಅವನು ಸಕಲಗುಣಪೂರ್ಣನೆಂದು ಶ್ರುತಿಸಿದ್ಧನಾಗಿದ್ದಾನೆ. ಆದರೆ ಜೀವನು ಅಲ್ಪಗುಣನೆಂದು ಪ್ರತ್ಯಕ್ಷಸಿದ್ಧನಾದ್ದರಿಂದ ಪ್ರತ್ಯಕ್ಷಬಾಧ ಬರುತ್ತದೆ. ಮಾಯಾವಾದಿಗಳು ಹೇಳುವಂತೆ ಪ್ರತ್ಯಕ್ಷವು ಅತತ್ವಾವೇದಕವಾದ್ದರಿಂದ ದುರ್ಬಲವೆಂದೂ ಸಹ ಹೇಳಲಾಗದು. ಪ್ರತ್ಯಕ್ಷವು ಪ್ರಬಲವಾದ್ದರಿಂದ 'ಧ್ಯಾಯತೀವ' ಎಂಬ ಶ್ರುತಿಗೆ ಬೇರೆ ಅರ್ಥವನ್ನೇಕೆ ಹೇಳುತ್ತೀರಿ.

'ಅಯಮಾತ್ಮಾ' ಇವೇ ಮೊದಲಾದ ಅಭೇದವಾಕ್ಯಗಳನ್ನಷ್ಟೇ ನೋಡುತ್ತಾ ಪೂರ್ವಪಕ್ಷಿ ಭೇದವಾಕ್ಯಗಳನ್ನು ನೋಡಲೇ ಇಲ್ಲವೆಂದು ವಾದಿಸುವುದು ನಂಬಲಾಗದ ಮಾತು. ಆದ್ದರಿಂದ ಚಂದ್ರಿಕೆಯಲ್ಲಿ ಹೇಳಿದಂತೆ ಅದ್ವೈತವನ್ನು ಅನುಸರಿಸಿ ಪೂರ್ವಪಕ್ಷ ಮಾಡುವುದೇ ಸಮಂಜಸ.

ಮತ್ತು ಜೀವನು 'ಅಹಂ' ಎಂದು ಪ್ರತ್ಯಕ್ಷಸಿದ್ಧನೆಂದು ಪೂರ್ವಪಕ್ಷದಲ್ಲಿ ಹೇಳಲಾಗಿತ್ತು. ಆದರೆ 'ಅಹಂ' ಎಂದು ಜೀವನು ಸಿದ್ಧನಾಗಿದ್ದರೂ ಸಹ ದೇಹಾದಿವಿವಿಕ್ತನಾಗಿ ಸಿದ್ಧನಾಗಿಲ್ಲವಾದ್ದರಿಂದ ಸಂದಿಗ್ಧನಾಗಿದ್ದಾನೆ. ಆ ವಿಷಯದಲ್ಲಿ ಜಿಜ್ಞಾಸೆಯು ಕೂಡುತ್ತದಾದ್ದರಿಂದ ಶಾಸ್ತ್ರವು ಆರಂಭಣೀಯ ಆಗಿದೆ. ಒಂದು ವೇಳೆ ಜೀವನ ಬಗ್ಗೆ ವಿಚಾರವೇ ಬೇಡವೆಂದರೆ ಆವಾಗ ಮುಂದಿನ ಅಧಿಕರಣಗಳಲ್ಲಿಯೂ ನೀನು ಜೀವವಿಚಾರವನ್ನು ಮಾಡಬಾರದಿತ್ತು.

ಮತ್ತು ಪೂರ್ವಪಕ್ಷದಲ್ಲಿ 'ಅಸ್ತು ವಾ' ಇತ್ಯಾದಿವಾಕ್ಯಗಳಿಂದ ಚಿನ್ಮಾತ್ರಕ್ಕೆ ಐಕ್ಯವನ್ನು ಒಪ್ಪಿಕೊಂಡು ಆ ಚಿನ್ಮಾತ್ರನು ನಿರ್ವಿಶೇಷನಾದ್ದರಿಂದ ಶಬ್ದವೇದ್ಯನಲ್ಲ. ಹಾಗಾಗಿ 'ತದಯಮಾತ್ಮಾ' ಎಂಬ ಶ್ರುತಿಯು ಅವನನ್ನು ಪ್ರತಿಪಾದಿಸಲಾರದು ಎಂದು ಹೇಳಲಾಗಿತ್ತು. ಇದೂ ಸಹ ಸರಿಯಲ್ಲ. ಏಕೆಂದರೆ ಶುದ್ಧಚೈತನ್ಯಕ್ಕೆ ಐಕ್ಯವನ್ನು ಒಪ್ಪಿಕೊಂಡರೆ ಆಗಮದಿಂದಲೇ ಒಪ್ಪಿಕೊಂಡಂತಾಯಿತು. ಆಗಮ ಬಿಟ್ಟು ಬೇರೆ ಪ್ರಮಾಣದಿಂದ ಐಕ್ಯ ಸಿದ್ಧವಾಗಿಲ್ಲ. ಹಾಗಾಗಿ ವ್ಯಾಹತಿ ಬರುತ್ತದೆ. ಐಕ್ಯವನ್ನು ಒಪ್ಪಿದ್ದರಿಂದ ಆಗಮವು ಐಕ್ಯಬೋಧಕವೆಂದು ಒಪ್ಪಿದಂತಾಯಿತು. ಪುನಃ ಆಗಮವು ಐಕ್ಯವನ್ನು ತಿಳಿಸಿಲ್ಲವೆಂದರೆ ವ್ಯಾಹತಿಯು ಸ್ಪಷ್ಟ.

ಇದರಂತೆ ಪೂರ್ವಪಕ್ಷದಲ್ಲಿ 'ಬ್ರಹ್ಮಣಃ ಜೀವಾನ್ಯತ್ವೇऽಪಿ' ಇತ್ಯಾದಿ ವಾಕ್ಯಗಳಿಂದ ಜೀವನಿಗಿಂತ ಬ್ರಹ್ಮನು ಭಿನ್ನ ಎಂದೊಪ್ಪಿಕೊಂಡು ಬ್ರಹ್ಮನನ್ನು ಸಂಪೂರ್ಣ ತಿಳಿಯಲು ಸಾಧ್ಯವಿಲ್ಲ. ಸ್ವಲ್ಪ ತಿಳಿದ ಮೋಕ್ಷ ಸಿಗಲ್ಲವೆಂದು ಆಕ್ಷೇಪ ಮಾಡಿಕೊಂಡಿದ್ದೂ ಸಹ ಸರಿಯಲ್ಲ. ಏಕೆಂದರೆ ಈ ಆಕ್ಷೇಪಕ್ಕೆ ಸೂತ್ರಕ್ಕೆ ಉತ್ತರವೇ ಇಲ್ಲ. ಮತ್ತು ಬ್ರಹ್ಮನನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲವೆಂಬುದು ಭಗವಂತನ ದೊಡ್ಡ ಮಹಿಮೆ ಆಗುತ್ತದೆ. ಇಂತಹ ಮಹಾಮಹಿಮೆಗಳನ್ನು ಸಹಸ್ರಾರು ಶ್ರುತಿಗಳು ಏಕಕಂಠದಿಂದ

ಇರುತ್ತಿವೆ. ಹಾಗಾಗಿ ಭಗವಂತನ ಅಲ್ಪ ಸ್ವಲ್ಪ ಗುಣಗಳನ್ನು ತಿಳಿಯುವುದೇ ಮೋಕ್ಷಕ್ಕೆ ಕಾರಣ-ವಾಗುತ್ತದೆಂದು ಹೇಳಬೇಕು. ಇದನ್ನು ಅರ್ಥಮಾಡಿಕೊಳ್ಳದೆ ಪೂರ್ವಪಕ್ಷ ಮಾಡಿದ್ದು ತಪ್ಪು.

ಸಿದ್ಧಾಂತವೂ ಸಹ ಸರಿಯಲ್ಲ. ಭೇದ ಹಾಗು ಅಭೇದ ಎರಡನ್ನು ಶ್ರುತಿಯಲ್ಲಿ ಹೇಳುತ್ತಿರುವು-ದರಿಂದ ಬ್ರಹ್ಮನ ವಿಷಯದಲ್ಲಿ ಸಂದೇಹ ಬರುತ್ತದೆಂದು ನೀವು ಸಿದ್ಧಾಂತ ಮಾಡಿದಿರಿ. ಆದರೆ ಈ ಸಂದೇಹವನ್ನು ಉಪಪಾದಿಸುವ ಯುಕ್ತಿಯು ಸೂತ್ರದಲ್ಲಿ ಯಾವ ಪದದಿಂದಲೂ ತಿಳಿಯುತ್ತಿಲ್ಲ. ಹಾಗಾಗಿ ನೀವು ಹೇಳಿದ್ದು ಸಿದ್ಧಾಂತಯುಕ್ತಿ ಆಗಲಾರದು. ಹೀಗೆ ಶೈವಭಾಷ್ಯದಲ್ಲಿ ಸಮರ್ಥಿಸಿದ ಜಿಜ್ಞಾಸಾಧಿಕರಣಸ್ವರೂಪವೂ ಸಹ ಸಮಂಜಸವಾಗಿಲ್ಲವೆಂದು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.

## ಸಾರ

### ರಾಮಾನುಜರ ಅಧಿಕರಣ ಸೂತ್ರದಲ್ಲಿ ಇಲ್ಲ

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಕೃತ ಸೂತ್ರಕ್ಕೆ ಕರ್ಮವಿಚಾರ ಮಾಡಿದ ಬಳಿಕ, ಕರ್ಮವಿಚಾರ ಮಾಡಿ ಮುಗಿದಿರುವುದರಿಂದಲೆ ಬ್ರಹ್ಮವಿಚಾರ ಮಾಡಬೇಕು ಎಂದು ರಾಮಾನುಜರ ಪ್ರಕಾರ ಅರ್ಥ. ಇಲ್ಲಿ ಶಬ್ದಗಳು ಸಿದ್ಧಪರವಾಗುವುದರ ಬಗ್ಗೆ ಏನೂ ಹೇಳಿಲ್ಲ. ಆದರಿಂದ ಅಧಿಕರಣಕ್ಕೂ ಸೂತ್ರಕ್ಕೂ ಏನೂ ಸಂಬಂಧವಿಲ್ಲ. ಸಿದ್ಧಪರವಾದ ಬ್ರಹ್ಮಶಬ್ದ ಸೂತ್ರದಲ್ಲಿರುವುದರಿಂದಲೇ ಶಬ್ದಗಳು ಸಿದ್ಧಪರವೆಂದು ಸೂಚಿ-ತವಾಗುತ್ತದೆ ಎನ್ನುವುದೂ ಸರಿಯಲ್ಲ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು ವಿಷಯವಾಕ್ಯದಲ್ಲಾಗಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಸೂತ್ರದಲ್ಲಾಗಲೀ 'ಬ್ರಹ್ಮವಿಚಾರ ಮಾಡಬೇಕು' ಎಂದು ಕಾರ್ಯವನ್ನೇ ಹೇಳಿರುವುದರಿಂದ ಬ್ರಹ್ಮಶಬ್ದ ಕಾರ್ಯಪರವೇ ಎಂದು ಪೂರ್ವಪಕ್ಷಿ ಹೇಳಿದರೆ ಏನು ಉತ್ತರ?

ರಾಮಾನುಜಮತದಲ್ಲಿ ಕರ್ಮಮೀಮಾಂಸೆ ದೇವಮೀಮಾಂಸೆ ಬ್ರಹ್ಮಮೀಮಾಂಸೆ ಇವು ಮೂರು ಒಂದೇ ಗ್ರಂಥದ ಮೂರು ಭಾಗಗಳು. ಅವುಗಳನ್ನು ಕ್ರಮವಾಗಿಯೇ ಅಧ್ಯಯನ ಮಾಡಬೇಕು. ದೇವಮೀಮಾಂಸೆ ಸಿದ್ಧಬೋಧಕ. ಶಬ್ದಗಳಿಗೆ ಸಿದ್ಧಪರತ್ವವನ್ನು ಒಪ್ಪದೆ ದೇವಮೀಮಾಂಸೆ ನಡೆಯಲಾರದು ಎಂದ ಮೇಲೆ ಮುಂದೆ ಅಧ್ಯಯನ ಮಾಡುವ ಬ್ರಹ್ಮಮೀಮಾಂಸೆಯಲ್ಲಿ ಸಿದ್ಧಪರತ್ವದ ಬಗ್ಗೆ ವಿವಾದ ಸಂಗತವಾಗುವುದೆ?

### ಶೈವಭಾಷ್ಯೋಕ್ತ ಅಧಿಕರಣ ಅಸಂಗತ

ಶೈವಭಾಷ್ಯದಲ್ಲಿ 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' 'ವಿಚಾರಕ್ಕಾಗಿ ಗುರುವಿನ ಬಳಿಗೆ ಹೋಗಬೇಕು'ಎಂಬುದು ವಿಷಯವಾಕ್ಯ. 'ಅಯಮಾತ್ಮಾ ಬ್ರಹ್ಮ' ಎಂದು ವೇದಾಂತವು 'ನಾನು' ಎಂದು ಅನುಭವಸಿದ್ಧವಾದ ಜೀವಾತ್ಮನನ್ನೇ ಬ್ರಹ್ಮ ಎಂದು ಕರೆದಿದೆ. ಅದ್ವೈತಿಗಳು ಹೇಳುವ ಶುದ್ಧ ಚೈತನ್ಯಾಭೇದ ಇಲ್ಲಿ ಉಕ್ತವಾಗುವುದಿಲ್ಲ. ಅದನ್ನೊಪ್ಪಿದರೂ ಶುದ್ಧಚೈತನ್ಯ ನಿರ್ಧರ್ಮಕವಾದ್ದರಿಂದ ಅದನ್ನು ಶಬ್ದದಿಂದ ಹೇಳುವುದ ಅಶಕ್ಯ. ಮತ್ತು ಜೀವಾತ್ಮನಲ್ಲಿರುವ ಕರ್ತೃತ್ವಾದಿ ಧರ್ಮ ಮಿಥ್ಯೆ ಎನಿಸಲೂ ಸಾಧ್ಯವಿಲ್ಲ. ಸತ್ಯವೆಂದು ಪ್ರತ್ಯಕ್ಷಾನುಭವ ಹೇಳುತ್ತಿದೆ. ಆದರಿಂದ ಜೀವಬ್ರಹ್ಮಾಭೇದವನ್ನೇ ಶ್ರುತಿ ಹೇಳುತ್ತದೆ. ಜೀವಾತ್ಮನ ವಿಷಯದಲ್ಲಿ ಸಂಶಯವಿಲ್ಲದ್ದರಿಂದ ವಿಚಾರ ಬೇಡ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಯಾರಿಗೂ ಶಕ್ಯವಿಲ್ಲ. ಅಲ್ಪಸ್ವಲ್ಪ

ತಿಳಿದರೆ ಅದರಿಂದ ಮೋಕ್ಷಫಲವಿಲ್ಲ. ಅದರಿಂದಲೂ ಬ್ರಹ್ಮವಿಚಾರ ಬೇಡ. ಅದಕ್ಕಾಗಿ ಗುರುವಿ... ಹೋಗುವುದೂ ಬೇಡ ಎಂದು ಪೂರ್ವಪಕ್ಷ.

ಜೀವಬ್ರಹ್ಮ ಭೇದವನ್ನೂ ವೇದಾಂತದಲ್ಲಿ ಅಲ್ಲಲ್ಲಿ ಹೇಳಿರುವುದರಿಂದ ಭೇದವೇ ಅಭೇದವೇ ... ಸಂದೇಹ ಬರುವುದರಿಂದ ವಿಚಾರ ಬೇಕು ಎಂದು ಸಿದ್ಧಾಂತ.

ಇಲ್ಲಿ ವಿಷಯವಾಕ್ಯವನ್ನು ಆರಿಸಿಕೊಳ್ಳುವುದರಲ್ಲಿಯೆ ತಪ್ಪಿದೆ. ಈ ವಿಷಯ ವಾ... ಅರ್ಥನಿರ್ಣಯಕ್ಕೆ ಯುಕ್ತಿಯೆ ಇಲ್ಲ. ಸಾಕ್ಷಾತ್ 'ಜಿಜ್ಞಾಸಾ' ಶಬ್ದದಿಂದಲೇ ಕೂಡಿದ ವಾಕ್ಯಗಳು... ಅವನ್ನು ಬಿಟ್ಟು ಸಂಬಂಧವೇ ಇಲ್ಲದ ಈ ವಿಷಯವಾಕ್ಯವೆತ್ತಿಕೊಂಡಿರುವುದು ಅಯುಕ್ತ. ಶ್ರುತಿ ... ಬ್ರಹ್ಮೈಕ್ಯವನ್ನು ಹೇಳುವಾಗ ಪ್ರತ್ಯಕ್ಷವಿರೋಧ ಬಂದರೆ ಪ್ರತ್ಯಕ್ಷ ಅತತ್ವಾವೇದಕ, ದುರ್ಬಲ... ಅದ್ವೈತಿಗಳಂತೆ ಈ ಶೈವರು ಹೇಳುವುದಿಲ್ಲ. ಆಗ ಶ್ರುತಿ ಐಕ್ಯವನ್ನು ಹೇಗೆ ಹೇಳುವುದು ಸಾಧ್ಯ? ಅಭೇ... ವಾಕ್ಯಗಳನ್ನು ತೋರಿಸುವ ಪೂರ್ವಪಕ್ಷ ಭೇದವಾಕ್ಯಗಳನ್ನು ನೋಡಿಯೆ ಇಲ್ಲವೆ? ಅವುಗಳಿಗೆ ... ನಾನು ಎಂದು ಜೀವ ಅನುಭವಸಿದ್ಧನೇ ಆಗಿದ್ದರೂ ದೇಹಾದಿಗಳಿಗಿಂತ ಜೀವ ಭಿನ್ನನೇ ಅಭಿನ್ನನೇ ... ವಿಚಾರ ಮಾಡಬಹುದು. ಬೇಡ ಏಕೆ? 'ಶುದ್ಧಚೈತನ್ಯಾಭೇದ ಒಪ್ಪಿದರೂ ಶಬ್ದದಿಂದ ಅದನ್ನು ಹೇಳ... ಎನ್ನುವ ಮಾತೂ ಸ್ವವ್ಯಾಹತ. ಒಪ್ಪಬೇಕೆಂದರೆ ಅದನ್ನು ಹೇಳುವ ಶಬ್ದ ಬೇಕು. ಯಾವ ಶಬ್ದವೂ ಹೇಳ... ಹೇಳುವುದು ಸರಿಯಲ್ಲ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಅಶಕ್ಯವೆಂದರೆ ಶಕ್ಯವಿದ್ದಷ್ಟು ತಿಳಿದ... ಎಂದೇ ಒಪ್ಪಬೇಕಾಗುವುದರಿಂದ ಮೋಕ್ಷಫಲವಿಲ್ಲ ಎಂದುದೂ ಅಯುಕ್ತ. ಭೇದಾಭೇದ ಸಂದೇಹ... ಎಂಬ ಸಿದ್ಧಾಂತಯುಕ್ತಿಗೆ ಸೂಚಕವಾದ ಯಾವ ಶಬ್ದವೂ ಸೂತ್ರದಲ್ಲಿಲ್ಲ. ಅದರಿಂದ ಈ ಅಧಿಕರಣ ಸೂ... ಸಂಬಂಧಿಸಿಯೆ ಇಲ್ಲ - ಹೀಗೆ ಶೈವಭಾಷ್ಯದ ಅಧಿಕರಣವನ್ನು ಪ್ರಕಾಶದಲ್ಲಿ ವಿಮರ್ಶಿಸಲಾಗಿದೆ.

● ● ● ● ●

## ಸ್ವಮತದಲ್ಲಿ ಜಿಜ್ಞಾಸಾಧಿಕರಣ

**तात्पर्यचन्द्रिका –**

**तदेवं मतान्तरीयमधिकरणमयुक्तमिति हृदि निधाय स्वमतेन अधिकरणमारचयति – तत्रेदमित्यादिना ।। अध्यायपादसङ्गतिस्त्विति ।। यद्यप्येतदधिकरणाभावे शास्त्रस्येव तदेकदेशयोरध्यायपादयोरप्यारम्भासम्भवः तथाऽपि सिद्धे शास्त्रारम्भे पुनरध्यायाद्यारम्भाक्षेपस्यानेनासमाधानाच्छास्त्रेणेव न ताभ्यामौपोद्घातिकी सङ्गतिरित्यर्थः । यद्वा – यथा "तद् विजिज्ञासस्व" इत्यादि ब्रह्मविचारविधायकवाक्यार्थनिर्णायकन्यायव्युत्पादकत्वात् ब्रह्मविचाररूपेण शास्त्रेणान्तर्भावलक्षणा सङ्गतिः, न तथा अध्यायपादाभ्याम् । समन्वयतद्विशेष-प्रतिपादकत्वादित्यर्थः । यथोक्तम् – "सङ्गतिस्तावद् द्विविधा । अन्तर्भावलक्षण**

आनन्तर्यलक्षणा च'' इति । अत एवोक्तं सुधायाम् ''अत एवास्य सूत्रस्य न शास्त्रबहिर्भावः'' इति । एतेन ''प्रथमसूत्रस्य समन्वयापवादविचारहेतुत्वाच्छास्त्र-प्रथमाध्यायप्रथमपादसङ्गतयः'' इति कल्पतरूक्तं निरस्तम् । द्वितीयपादतो व्यावृत्तस्य शास्त्रसङ्गत्यतिरिक्तस्य प्रथमाध्यायादिना सङ्गतिविशेषस्यानुक्तत्वेन अध्यायपादपीठत्वमात्रस्य न्याय्यत्वात् ।

ಅನುವಾದ - ಈ ರೀತಿಯಾಗಿ ಇತರ ಮತೀಯರು ರಚಿಸಿದ ಜಿಜ್ಞಾಸಾಧಿಕರಣಸ್ವರೂಪವು ಅಸಮರ್ಪಕವೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ವಮತದ ಜಿಜ್ಞಾಸಾಧಿಕರಣ-ಶರೀರವನ್ನು ರಚಿಸುತ್ತಿದ್ದಾರೆ. 'ತತ್ರೇದಂ' ಇತ್ಯಾದಿ ವಾಕ್ಯಗಳಿಂದ.

ಶಂಕೆ - ಅಧ್ಯಾಯ ಹಾಗು ಪಾದಸಂಗತಿಗಳನ್ನು ಆನಂದಮಯಾಧಿಕರಣದಿಂದ ಮುಂದೆ ಮಾತ್ರ ಚಿಂತಿಸಬೇಕೆಂದು ಟೀಕೆಯಲ್ಲಿ ಹೇಳಲಾಗಿದೆ. ಆದರೆ ಈ ಜಿಜ್ಞಾಸಾಧಿಕರಣವೇ ಇಲ್ಲವಾದಲ್ಲಿ ಹೇಗೆ ಶಾಸ್ತ್ರವು ಹೊರಡಲು ಸಾಧ್ಯವಿಲ್ಲವೋ ಹಾಗೆಯೇ ಅಧ್ಯಾಯ ಮತ್ತು ಪಾದಗಳೂ ಸಹ ಹೊರಡಲು ಸಾಧ್ಯವಿಲ್ಲ. ಆದ್ದರಿಂದ ಶಾಸ್ತ್ರಸಂಗತಿ ಇದ್ದಂತೆ ಅಧ್ಯಾಯಸಂಗತಿ ಪಾದಸಂಗತಿಯೂ ಈ ಅಧಿಕರಣಕ್ಕೆ ಇದೆ. ಆದ್ದರಿಂದ ನೀವು ಶಾಸ್ತ್ರಸಂಗತಿಯನ್ನು ಮಾತ್ರ ಹೇಗೆ ಹೇಳಿದಿರಿ?

ಸಮಾಧಾನ - ಈ ಸೂತ್ರದಲ್ಲಿ ಶಾಸ್ತ್ರವು ಆರಂಭಣೀಯವೆಂದು ಸಾಧಿಸಿದ ಮೇಲೆ ಪುನಃ ಅಧ್ಯಾಯ ಮತ್ತು ಪಾದಗಳು ಅನಾರಂಭಣೀಯವೆಂದು ಆಕ್ಷೇಪ ಮಾಡಿಕೊಂಡು ಸಮಾಧಾನವನ್ನು ಈ ಸೂತ್ರದಲ್ಲಿ ನೀಡಿಲ್ಲ. ಆದ್ದರಿಂದ ಶಾಸ್ತ್ರದ ಉಪೋದ್ಘಾತಸಂಗತಿಯಂತೆ ಅಧ್ಯಾಯ ಪಾದಗಳಿಗೆ ಪ್ರತ್ಯೇಕವಾದ ಉಪೋದ್ಘಾತಸಂಗತಿಯಿಲ್ಲವೆಂದು ಟೀಕೆಯ ಅರ್ಥ. ಅಥವಾ 'ತದ್ವಿಜಿಜ್ಞಾಸಸ್ವ' ಇತ್ಯಾದಿ ಬ್ರಹ್ಮವಿಚಾರವಿಧಾಯಕವಾದ ಶ್ರುತ್ಯರ್ಥನಿರ್ಣಯಕ್ಕಾಗಿ ಈ ಸೂತ್ರದಲ್ಲಿ ಯುಕ್ತಿಯನ್ನು ಹೇಳಿದ್ದಾರೆ. ಆದ್ದರಿಂದ ಈ ಸೂತ್ರವು ಬ್ರಹ್ಮವಿಚಾರರೂಪವಾಗಿದೆ. ಶಾಸ್ತ್ರವೆಂದರೂ ಬ್ರಹ್ಮವೆಂದೇ ಅರ್ಥವಾದ್ದರಿಂದ ಈ ಸೂತ್ರಕ್ಕೆ ಶಾಸ್ತ್ರಾಂತರ್ಭಾವ ಸಂಗತಿಯಿದೆ. ಆದರೆ ಈ ರೀತಿಯಾದ ಸಂಗತಿಯನ್ನು ಸೂತ್ರಕ್ಕೆ ಹೇಳಲು ಸಾಧ್ಯವೇ ಇಲ್ಲ. ಯಾವಾಗ ಈ ಸೂತ್ರಕ್ಕೆ ಅಧ್ಯಾಯಾಂತರ್ಭಾವ ಸಂಗತಿ ಬರುತ್ತದೆ ಎಂದರೆ ಪ್ರಥಮಾಧ್ಯಾಯದ ಅರ್ಥವಾಗಿರುವ ಸಮನ್ವಯವನ್ನಾಗಲೀ ಅಥವಾ ಅದರ ಒಂದು ವಿಶೇಷವನ್ನಾಗಲೀ ಪ್ರತಿಪಾದಿಸುವುದರಿಂದ. ಇದಕ್ಕೆ ನ್ಯಾಯಸುಧೆಯ ಮಾತೇ ಸಮ್ಮತವಾಗಿದೆ.

'ಸಂಗತಿಯು ಎರಡುವಿಧ ಅಂತರ್ಭಾವಸಂಗತಿ ಅನಂತರ್ಯಸಂಗತಿ'ಯೆಂದು ಹೇಳಲಾಗಿದೆ. ಪುನಃ 'ಅಲ್ಲಿಯೇ ಈ ಮಾತೂ ಸಹ ಇದೆ. - 'ಅತ ಏವಾಸ್ಯ ಸೂತ್ರಸ್ಯ ನ ಶಾಸ್ತ್ರಬಹಿರ್ಭಾವಃ'

ವಿಚಾರ ವಿಧಾಯಕವಾದ ಶ್ರುತ್ಯರ್ಥನಿರ್ಣಯಕ್ಕಾಗಿ ಯುಕ್ತಿಯನ್ನು ಹೇಳುವುದರಿಂದಲೇ ಈ ಸೂತ್ರವು ಶಾಸ್ತ್ರಬಹಿರ್ಭೂತವಲ್ಲ ಎಂದು ಹೇಳಲಾಗಿದೆ. ಹೀಗೆ ಹೇಳಿದ್ದರಿಂದ ಮೊದಲನೇ ಸೂತ್ರವು ಸಮನ್ವಯವೇ ಮೊದಲಾದ ಎಲ್ಲ ವಿಚಾರಕ್ಕೂ ಕಾರಣವಾಗಿರುವುದರಿಂದ ಶಾಸ್ತ್ರಸಂಗತಿ ಪ್ರಥಮಾಧ್ಯಾಯಸಂಗತಿ, ಪ್ರಥಮಪಾದಸಂಗತಿಯನ್ನು ತಿಳಿಯಬೇಕೆಂದು ಕಲ್ಪತರುಕಾರ ಹೇಳಿದ್ದು ಸಹ ನಿರಾಕೃತವಾಯಿತು. ಏಕೆಂದರೆ ಈ ಸೂತ್ರಕ್ಕೂ ಎರಡನೆಯ ಮೂರನೆಯ ಅಧ್ಯಾಯಗಳಲ್ಲಿ ಯಾವ ಸಂಗತಿ ಇದೆಯೋ ಆ ಸಂಗತಿಯನ್ನೇ ನೀವು ಮೊದಲನೆಯ ಅಧ್ಯಾಯದಿಂದಲೂ ಹೇಳಿದ್ದೀರಿ. ನಾವು ಇದನ್ನೇ ಶಾಸ್ತ್ರಸಂಗತಿಯೆಂದು ಹೇಳಿದ್ದೇವೆ. ಆದ್ದರಿಂದ ಈ ಸೂತ್ರಕ್ಕೆ ಅಧ್ಯಾಯಕ್ಕೆ ಮತ್ತು ಪಾದಕ್ಕೆ ಪೀಠಿಕಾರೂಪವಾಗಿದೆಯೆಂದಷ್ಟೇ ಹೇಳಬೇಕು.

**ಕಠಿಣಪದಾರ್ಥ**

**ಸ್ವಮತೇನ** = ತತ್ತ್ವವಾದಿಗಳಿಂದ (ನಮ್ಮ ಸಿದ್ಧಾಂತದ ಪ್ರಕಾರ). **ತಾಭ್ಯಾಮ್** = ಅಧ್ಯಾಯ ಮತ್ತು ಪಾದಗಳಿಂದ. **ನ್ಯಾಯವ್ಯುತ್ಪಾದಕತ್ವಾತ್** = ಅಧಿಕಾರಿ ವಿಷಯಾದಿಗಳ ಇರುವಿಕೆಯೆಂಬ ನ್ಯಾಯವ್ಯುತ್ಪಾದಕವಾದ್ದರಿಂದ. **ಏತೇನ** = ಔಪೋದ್ಘಾತಿಕಿಯೆಂಬ ಸಂಗತಿಯಿಲ್ಲವೆಂದು ಹೇಳಿದ್ದರಿಂದ.

**प्रकाशः** – ननु टीकाव्याख्यार्थं प्रवृत्तस्य आदावेवन किं परमतनिरासेनेत्यतः तदुपयोगं दर्शयन् टीकामवतारयति – **तदेवमित्यादिना** ।। आदिसूत्रस्य इति पदं हित्वा इदंशब्दप्रतीकग्रहणं तु मतान्तरीयाधिकरणमयुक्तमिति ग्रन्थकर्तुर्हृदयमिति ज्ञापनाय । 'अस्य सूत्रस्य समन्वयाद्यशेषविचारहेतुत्वात् कथमध्यायाद्यसङ्गतिः!' इत्याक्षिप्य सङ्गतिशब्दस्यार्थद्वयमभिप्रेत्य समाधत्ते –**यद्यपीत्यादिना** ।। **औपोद्घातिकीति** ।। अनेन टीकायां शास्त्रसङ्गतिः इत्यस्य शास्त्रेणैवोपोद्घातिकीत्यर्थ उक्तः । ननु विचारकर्तव्यतासमर्थनेन शास्त्रारम्भसिद्धावपि समन्वयाध्यायं नारम्भणीय इति शङ्कायाः जीवभेदकगुणपूर्तिवाचिब्रह्मशब्देन समाधानमस्ति । अन्यथा गुणपूर्त्यर्थकसमन्वयानारम्भः स्यात् । तथाच कथमध्यायासङ्गतिः? इति चेन्न । तथा सत्युक्तरीत्याऽविरोधाध्यायारम्भप्रयोजकत्वस्यापि सत्त्वेन ततो व्यावृत्तस्याद्याध्यायेन सङ्गत्यन्तरस्याभावात्, (पाद)पदचतुष्टयद्वारैव अध्यायचतुष्टयारम्भप्रयोजकत्वेन तदात्मकशास्त्रारम्भप्रयोजकत्वात् । 'अस्य च न शास्त्रसङ्गत्यतिरिक्ताध्यायसङ्गतिरस्ति' इति सुधानुसारेण सङ्गतिपदमन्यथा व्याचष्टे - **यद्वेति** ।। **न्यायेति** ।। अधिकारिप्रयोजनविषयसत्त्वरूपन्यायव्युत्पादकत्वादि-

त्यर्थः ।। **यथोक्तमिति** ।। सुधायामाद्यस्य तृतीये पादे उक्तम् इत्यर्थः । **अत्रान्तर्भाव-सङ्गतिः टीकाभिमतेत्यत्रोपष्टम्भकमाह – अत एवोक्तमिति ।। अत एवास्येति ।।** जिज्ञासाविधायकवाक्यार्थनिर्णायकन्यायव्युत्पादकत्वादेवेत्यर्थः । **टीकास्थ 'तु'**-शब्दसूचितं परमतदूषणं व्यनक्ति – **एतेनेति ।। औपोद्घातिकीसङ्गतिर्नेत्यर्थ-**कथनेनेत्यर्थः । एतत् शब्दार्थं व्यनक्ति – **द्वितीयाध्यायत इति ।**

**गुरुराजीय** – टीकाव्याख्यानं प्रतिज्ञाय परमतखण्डनं कथं नासङ्गतम्? इत्यतस्तस्योपयोगमाह ।। **तदेवमिति ।। हृदि निधायेति** ।। अन्यथा सङ्गत्यादीत्येव वक्तव्यतया इदं सङ्गत्यादीति न ब्रूयादिति भावः ।। **तथापि सिद्धे शास्त्रारम्भ** इत्यादि ।। अत्र **'ब्रह्मजिज्ञासायाः कर्तव्यतासमर्थनादस्ति शास्त्रादिसङ्गतिः'** इति पूर्वटीकास्थेन ब्रह्मजिज्ञासाशब्देनोक्तस्य विचारस्याकारद्वयमस्ति प्रारिप्सितशास्त्रे वर्तिष्यमाणत्वेन विचारकर्तव्यतासाधकाद्यसूत्रसापेक्षत्वं **'तद् विजिज्ञासस्व'** इति ब्रह्मविचारविधायकवाक्यार्थनिर्णायकतया ब्रह्मविचारत्वं चेति । अत्राद्याकारविवक्षायां टीकास्थः सङ्गतिशब्द उपोद्घातपरः । **''अन्यथा शास्त्रस्यानारम्भणीयत्वप्रसङ्गात्''** इति टीकाऽप्युपोद्घातोपपादिका । द्वितीयाकारविवक्षायां तु सङ्गतिशब्दोऽन्तर्भाव-परः । **'अन्यथा'** इत्यादिटीकाऽप्यधिकरणप्रयोजनोक्तिपरा । तत्राद्यपक्षविवक्षया शास्त्रेणेव न ताभ्यामौपोद्घातिकी सङ्गतिरित्युक्तम् । द्वितीयपक्षविवक्षया तु यथा शास्त्रेणान्तर्भावलक्षणा सङ्गतिर्न तथाध्यायपादाभ्यामित्युक्तमिति ध्येयम् ।। **यथोक्तमिति** ।। आद्यस्य तृतीये **''अधिकारश्च तद्धानिः''** इत्येतद्व्याख्यानावसरे सुधायामुक्तमित्यर्थः ।। **आनन्तर्यलक्षणा चेतीति** ।। उपोद्घातादिकं तु तद्विशेष इति भावः । अन्तर्भावसङ्गतेष्टीकाभिमतत्वे उपष्टम्भकमाह – **अत एवेति ।। अत एवास्येति** ।। **'तद् विजिज्ञासस्व'** इति ब्रह्मविचारविधायकवाक्यार्थनिर्णायकतया ब्रह्मविचाररूपत्वादेवेत्यर्थः । टीकास्थतुशब्दसूचितं परमतदूषणं प्रकटयति – **एतेनेति** ।। औपोद्घातिकी सङ्गतिर्नेत्यर्थकथनेनेत्यर्थः । **'एतेन'** इत्युक्तं व्यनक्ति – **द्वितीयाध्याय इति ।। शास्त्रसङ्गत्यतिरिक्तस्येति ।।** शास्त्रसङ्गतिरूपैवेयमध्यायादि-सङ्गतिः । नतु विशेषाकारेणेयमध्यायादिसङ्गतिरिति भावः ।

**ವಿವರಣ** - ಟೀಕೆಗೆ ವ್ಯಾಖ್ಯಾನ ಮಾಡಲು ಹೊರಟ ನೀವು ಕೇವಲ ಪರಮತವನ್ನೇ ನಿರಾಕರಿಸುತ್ತಿದ್ದೀರಿ. ಟೀಕೆಗೆ ವ್ಯಾಖ್ಯಾನ ಮಾಡುವುದನ್ನೇ ಮರೆತಿದ್ದೀರಲ್ಲ? ಎಂಬ ಪ್ರಶ್ನೆ ಬಂದರ

ಪರಮತನಿರಾಕರಣೆಯ ಉಪಯೋಗವನ್ನು ತೋರಿಸುತ್ತಾ ಟೀಕೆಯನ್ನು ಅವತರಿಸುತ್ತಿದ್ದಾರೆ 'ಕಿಂ:' ಇತ್ಯಾದಿಯಾಗಿ.

ಟೀಕೆಯಲ್ಲಿ 'ತತ್ರಾದಿಸೂತ್ರಸ್ಯೇದಂ ಸಂಗತ್ಯಾದಿ' ಎಂದಿದೆ. ಆದರೆ ಇಲ್ಲಿ ವ್ಯಾಸತೀರ್ಥ: 'ತತ್ರೇದಂ' ಎಂದು ಪ್ರತೀಕ ಗ್ರಹಣ ಮಾಡಿ 'ಆದಿಸೂತ್ರಸ್ಯ' ಎಂಬ ಪದವನ್ನು ಬಿಟ್ಟಿದ್ದಾರೆ ಇ: ಸ್ವಾರಸ್ಯವೇನೆಂದರೆ - ಇದುವರೆಗೂ ನಾವು ಮಾಡಿದ ಪರಮತನಿರಾಕರಣೆಯು ಟೀಕೆಯನ್ನು ಬಿ. ಸ್ವತಂತ್ರವಾಗಿ ಮಾಡಿದ್ದಲ್ಲ. ಈ ಎಲ್ಲಾ ಪರಮತನಿರಾಕರಣೆಯನ್ನು ಟೀಕಾರಾಯರು ಕೇವಲ 'ಇ: ಶಬ್ದದಿಂದ ಮಾಡಿದ್ದಾರೆ. ಹೇಗೆಂದರೆ 'ಮೊದಲನೆಯ ಸೂತ್ರಕ್ಕೆ ಇದು ಸಂಗತಿ' ಎಂದು ಹೇ: ಉಳಿದವರು ಹೇಳಿದ್ದು ಸಂಗತಿಯಲ್ಲವೆಂದು ತಿಳಿಯುತ್ತದೆ. 'ಈ ಘಟವನ್ನು ತಾ' ಎಂದರೆ ಉ: ಘಟಗಳನ್ನು ತರಬೇಡವೆಂದು ಹೇಗೆ ಅರ್ಥವಾಗುತ್ತದೋ ಹಾಗೆಯೆ ಇಲ್ಲಿಯೂ ತಿಳಿಯಬೇಕು ಆದ್ದರಿಂದ ನಾವು ಇದುವರೆಗೂ ಟೀಕೆಗೆ ವ್ಯಾಖ್ಯಾನ ಮಾಡಿದ್ದೇವೆ ಹೊರತು ಸ್ವತಂತ್ರವಾಗಿ ಅಲ್ಲವೆ: ತಿಳಿಸಲು ವ್ಯಾಸತೀರ್ಥರು 'ತತ್ರೇದಂ' ಎಂದು ಪ್ರತೀಕಗ್ರಹಣ ಮಾಡಿದ್ದಾರೆ.

ಪ್ರಥಮಸೂತ್ರಕ್ಕೆ ಶಾಸ್ತ್ರಸಂಗತಿಯನ್ನು ಮಾತ್ರ ಹೇಳಬೇಕು; ಅಧ್ಯಾಯ ಪಾದಸಂಗತಿಗ: ಹೇಳಬೇಕಾಗಿಲ್ಲವೆಂದು ಚಂದ್ರಿಕೆಯಲ್ಲಿ ವಿವರಿಸಲಾಗಿದೆ. ಅದಕ್ಕಿಂತ ಮೊದಲು ತತ್ವಪ್ರಕಾಶ: ವ್ಯಾಖ್ಯಾನಿಸುತ್ತಾ, ರಾಯರು ಭಾವದೀಪದಲ್ಲಿ ವಿವರಿಸಿದ ಸಂಗತಿಗಳ ವಿಭಾಗವನ್ನು ಪ್ರಾಸಂಗಿಕ: ತಿಳಿಸಲಾಗಿದೆ -

ಸಂಗತಿಯು ಒಟ್ಟು ಎರಡುವಿಧ : ೧) ಅಂತರ್ಭಾವ ಲಕ್ಷಣಾ ೨) ಆನಂತರ್ಯಲಕ್ಷಣಾ ಎಂದು.

ಅಧಿಕರಣಗಳ ಅಂತರ್ಭಾವಲಕ್ಷಣಸಂಗತಿಯು ಮೂರುವಿಧ - ೧) ಶಾಸ್ತ್ರಸಂಗತಿ ೨) ಅಧ್ಯಾ: ಸಂಗತಿ ೩) ಪಾದಸಂಗತಿ ಎಂದು. ಇವುಗಳನ್ನೇ ಶಾಸ್ತ್ರಾಂತರ್ಭಾವಸಂಗತಿ, ಅಧ್ಯಾಯಾಂತರ್ಭಾವಸ: ಪಾದಾಂತರ್ಭಾವಸಂಗತಿ ಎನ್ನುತ್ತಾರೆ.

ಇವುಗಳ ಲಕ್ಷಣ ಹೀಗಿದೆ.-

೧) ಶಾಸ್ತ್ರಾಂತರ್ಭಾವಸಂಗತಿಃ ವೇದಾರ್ಥನಿರ್ಣಾಯನ್ಯಾಯಗ್ರಥನಾತ್ಮಕತ್ವಮ್ (ವ್ಯಕ್ತಿ: ಕತ್ವಮ್)

೨) ಅಧ್ಯಾಯಾಂತರ್ಭಾವಸಂಗತಿಃ - ತತ್ತದಧ್ಯಾಯಾರ್ಥಬೋಧಕತ್ವಮ್

೩) ಪಾದಾಂತರ್ಭಾವಸಂಗತಿಃ - ತತ್ತತ್ಪಾದಾರ್ಥಬೋಧಕತ್ವಮ್ ಎಂದು.

ಅಧಿಕರಣಗಳ ಆನಂತರ್ಯಸಂಗತಿಯು ಆರು ಅಥವಾ ಏಳುವಿಧ.

೧) ಆಕ್ಷೇಪಿಕೀ- ಪೂರ್ವಮಾಕ್ಷಿಪ್ಯತೇ ಯತ್ರ ತತ್ರ ಆಕ್ಷೇಪಿಕೀ (ಮತಾ)

ಪೂರ್ವಾಧಿಕರಣದಿಂದ ಆಕ್ಷೇಪ ಮಾಡಿಕೊಂಡು ಉತ್ತರಾಧಿಕರಣವು ಹೊರಡಬೇಕು.

*ಪರಿಪೂರ್ಣಚಂದ್ರಿಕಾ*

೨) ಅತಿದೇಶಿಕೀ - ಯತ್ರ ಪೂರ್ವಮೇವಾತಿದಿಶ್ಯತೇ ಕೃತ್ವಾ ಯತ್ರಾಧಿಕಾಂ ಶಂಕಾಂ ತತ್ರ ಅತಿದೇಶಿಕೀ

ಪೂರ್ವಾಧಿಕರಣದಿಂದ ಸಿದ್ಧವಾದ ವಿಷಯದಲ್ಲಿಯೇ ಅಧಿಕಾಶಂಕೆ ಮಾಡಿ ಪೂರ್ವಾಧಿಕರಣದಲ್ಲಿ ಹೇಳಿದ ಸಿದ್ಧಾಂತವನ್ನೇ ಅತಿದೇಶ ಮಾಡಿದರೆ ಅತಿದೇಶಿಕೀಸಂಗತಿ.

೩) ಉಪೋದ್ಘಾತಿಕೀ - ಚಿಂತಾಂ ಪ್ರಕೃತಿಸಿದ್ಧ್ಯರ್ಥಂ ಉಪೋದ್ಘಾತಂ ಪ್ರಚಕ್ಷತೇ ।

(ಪ್ರಕೃತಿ = ಶಾಸ್ತ್ರ) ಶಾಸ್ತ್ರಾರ್ಥಸಿದ್ಧಿಗಾಗಿ ಮೊದಲು ವಿಚಾರ ಮಾಡುವುದನ್ನೇ ಉಪೋದ್ಘಾತಿಕೀಸಂಗತಿ ಎನ್ನುತ್ತಾರೆ.

೪) ಪ್ರಾಸಂಗಿಕೀ - ಪ್ರಸಂಗಾತ್ ಚಿಂತ್ಯತೇ ಯತ್ರ ತತ್ರ ಪ್ರಾಸಂಗಿಕೀ ಮತಾ ।

ಪ್ರಸಂಗವಶಾತ್ ಸ್ಮರಣೆ ಬಂದದ್ದನ್ನು ವಿಚಾರ ಮಾಡಿದರೆ ಪ್ರಾಸಂಗಿಕೀ ಸಂಗತಿ.

೫) ಅಪವಾದಿಕೀ (ಪ್ರತ್ಯುದಾಹರಣ) ಪೂರ್ವನ್ಯಾಯಾತ್ಯಯೋ ಯತ್ರ ಪ್ರತ್ಯುದಾಹರಣಾ ತು ಸಾ

ಪೂರ್ವನ್ಯಾಯವನ್ನು ಬಿಟ್ಟು ಅದಕ್ಕೆ ಅಪವಾದ ಉದಾಹರಣೆ, ಹೇಳಿದರೆ ಪ್ರತ್ಯುದಾಹರಣ ಸಂಗತಿ, ಇದನ್ನು ಅಪವಾದಿಕೀಸಂಗತಿಯೆಂದು ಕರೆಯುತ್ತಾರೆ.

೬) ಬುದ್ಧಿಸ್ಥಾನಾ - ಬುದ್ಧಿಸ್ಥಾ ಚಿಂತ್ಯತೇ ಯತ್ರ ಬುದ್ಧಿಸ್ಥಾನಾತ್ಮಿಕಾ ತು ಸಾ ।

ಬುದ್ಧಿಯಲ್ಲಿರುವದನ್ನೇ ವಿಚಾರ ಮಾಡಿದರೆ ಬುದ್ಧಿಸ್ಥಾನಸಂಗತಿಯೆಂದು ತಿಳಿಯಬೇಕು.

(ಮೊದಲನೆಯ ಅಧ್ಯಾಯದ ಮೂರನೇ ಪಾದದ ಪರಿಮಳದಲ್ಲಿಯೂ ಈ ವಿಷಯ ವಿವರಿಸ-ಲಾಗಿದೆ.) ಪ್ರಕೃತ ಆರುವಿಧವಾದ ಸಂಗತಿಗಳಲ್ಲಿ ಮೊದಲನೆಯ ಸೂತ್ರಕ್ಕೆ ಉಪೋದ್ಘಾತಿಕೀಸಂಗತಿ ಮತ್ತು ಶಾಸ್ತ್ರಾಂತರ್ಭಾವಸಂಗತಿಯು ಇದೆ. ಉಳಿದ ಸಂಗತಿಗಳು ಇಲ್ಲವೆಂದು ಹೇಳುತ್ತಿದ್ದಾರೆ.

ಶಂಕೆ - ಈ ಸೂತ್ರಕ್ಕೆ ಶಾಸ್ತ್ರಸಂಗತಿ ಇರುವಂತೆ ಅಧ್ಯಾಯಸಂಗತಿ, ಪಾದಸಂಗತಿಯೂ ಇದೆ. ಶಾಸ್ತ್ರದ ಅವಶ್ಯಕತೆಯನ್ನು ಸಮರ್ಥಿಸಿದ್ದರಿಂದ ಶಾಸ್ತ್ರಸಂಗತಿ ಇದೆಯೆಂದು ನೀವು ಹೇಗೆ ಹೇಳಿದಿರೋ, ಹಾಗೆಯೇ ಸಮನ್ವಯಾಧ್ಯಾಯದ ಅವಶ್ಯಕತೆಯನ್ನೂ ಸಮರ್ಥಿಸುತ್ತಿರುವುದರಿಂದ ಈ ಸೂತ್ರಕ್ಕೆ ಅಧ್ಯಾಯಸಂಗತಿ ಮತ್ತು ಪಾದಸಂಗತಿಯು ಇದೆ. ಹೇಗೆಂದರೆ 'ಜೀವನಿಗಿಂತ ಬ್ರಹ್ಮನು ಭಿನ್ನನಾಗಿದ್ದಾನೆ' ಎಂಬುದನ್ನು ಸಮರ್ಥನೆ ಮಾಡಲು ಬ್ರಹ್ಮಶಬ್ದವು ಗುಣಪರಿಪೂರ್ಣತ್ವವನ್ನು ಹೇಳುತ್ತಿದೆ. ಇದನ್ನು ಸಮರ್ಥನೆ ಮಾಡುವುದಕ್ಕಾಗಿಯೇ ಸಮನ್ವಯಾಧ್ಯಾಯವು ಹೊರಟಿದೆ. ಒಂದು ವೇಳೆ ಪ್ರಥಮಸೂತ್ರ ಹೊರಡದಿದ್ದಲ್ಲಿ ಸಮನ್ವಯಾಧ್ಯಾಯವೇ ಅನಾರಂಭಣೀಯವಾಗುತ್ತಿತ್ತು. ಇದರಂತೆ ಪಾದಸಂಗತಿ-ಯನ್ನೂ ತಿಳಿಯಬೇಕು. ಹೀಗೆ ಅಧ್ಯಾಯಸಂಗತಿ ಮತ್ತು ಪಾದಸಂಗತಿಯು ಪ್ರತ್ಯೇಕವಾಗಿ ಇರಬೇಕಾ-ದರೆ ಇಲ್ಲವೆಂದು ಹೇಗೆ ಹೇಳಿದಿರಿ?

ಸಮಾಧಾನ - ಹೀಗೆ ಪ್ರಥಮಾಧ್ಯಾಯಕ್ಕೆ ಸಂಗತಿ ಹೇಳುವುದಾದರೆ ಇದರಂತೆ ದ್ವಿತೀಯಾದಿ ಅಧ್ಯಾಯಗಳಿಗೂ ಸಂಗತಿಗಳನ್ನು ಈ ಸೂತ್ರಕ್ಕೆ ಹೇಳಬೇಕಾದೀತು. ದ್ವಿತೀಯಾದಿ ಅಧ್ಯಾಯಗಳಿಂದ ಈ ಸೂತ್ರಕ್ಕೆ ಯಾವ ರೀತಿಯಾದ ಸಂಗತಿಯಿದೆಯೋ ಅದಕ್ಕಿಂತ ಹೊರತಾದ ಸಂಗತಿಯು ಮೊದಲನೆಯ

ಅಧ್ಯಾಯದಿಂದ ಇಲ್ಲವೆಂದಷ್ಟೇ ಅದರ ಅಭಿಪ್ರಾಯ. ಈ ಸೂತ್ರವೇ ಹೊರಡದಿದ್ದರೆ ಪ್ರಥಮ ನಾಲ್ಕು ಪಾದಗಳು, ನಾಲ್ಕುಪಾದಗಳ ಆಧಾರದಲ್ಲಿ ನಾಲ್ಕು ಅಧ್ಯಾಯಗಳು ಹೊರಡಲು ಸಾಧ್ಯವಿಲ್ಲ. ಹೀಗೆ ಸಮಗ್ರ ಶಾಸ್ತ್ರದ ಪ್ರವೃತ್ತಿಗೆ ಈ ಸೂತ್ರವು ಕಾರಣವಾಗಿದೆ. ಒಟ್ಟಾರೆ ಶಾಸ್ತ್ರದ ಗತಿ: ಅಧ್ಯಾಯದಪಾದಸಂಗತಿಗಳು ಪರ್ಯವಸಾನ ಹೊಂದುತ್ತವೆ.

ಪ್ರಶ್ನೆ :- ಪ್ರಥಮಸೂತ್ರದಲ್ಲಿ ಗುಣಪೂರ್ತಿವಾಚಕವಾದ ಬ್ರಹ್ಮಶಬ್ದವನ್ನು ಪ್ರಯೋಗಿಸಿದ: ಗುಣಪೂರ್ತಿಯ ಸಿದ್ಧಿಗೋಸ್ಕರವೇ ಸಮನ್ವಯಾಧ್ಯಾಯವು ಹೊರಟಿದೆ. ಆದ್ದರಿಂದ ಪ್ರಥಮ ಸೂತ್ರವಿಲ್ಲದಿದ್ದರೆ ಸಮನ್ವಯಾಧ್ಯಾಯವೂ ಹೊರಡಲಾರದು. ಈ ರೀತಿಯಾಗಿ ಉಪೋದ್ಘಾತಸಂಗತಿ ಯನ್ನು ಪ್ರಥಮಾಧ್ಯಾಯಕ್ಕೆ ಹೇಳಬಹುದು. ಇಲ್ಲವೆಂದು ಹೇಗೆ ಹೇಳಿದಿರಿ?

ಈ ಪ್ರಶ್ನೆಗೆ ಮೊದಲನೆಯ ಪರಿಹಾರ - ಬ್ರಹ್ಮಶಬ್ದವು ಗುಣಪೂರ್ಣತ್ವವಾಚಕವಾಗಿದೆ. ಅದನ್ನು ಪ್ರಥಮಾಧ್ಯಾಯವು ಸಮರ್ಥಿಸುತ್ತಿದೆ. ಇಷ್ಟು ಮಾತ್ರದಿಂದ ಪ್ರಥಮಾಧ್ಯಾಯದಿಂದ ಸಂಗತಿಯ ಯೆಂದು ಹೇಳುವುದಾದರೆ, ಅದೇ ಬ್ರಹ್ಮಶಬ್ದವು ನಿರ್ದೋಷತ್ವವನ್ನೂ ಹೇಳುತ್ತಿದೆ. ಅದನ್ನು ಎರಡನೆಯ ಅಧ್ಯಾಯವು ವಿವರಿಸುತ್ತದೆ. ಆದ್ದರಿಂದ ಉಪೋದ್ಘಾತಸಂಗತಿಯನ್ನು ದ್ವಿತೀಯಾ ಧ್ಯಾಯದಿಂದ ಈ ಸೂತ್ರಕ್ಕೆ ಹೇಳಬೇಕಾದೀತು. ಹಾಗೆ ಹೇಳಿದರೆ ದ್ವಿತೀಯಾಧ್ಯಾಯಕ್ಕೂ ಪ್ರಥಮಾಧ್ಯಾಯಕ್ಕೂ ಒಂದೇ ಸಂಗತಿಯನ್ನು ಹೇಳಿದಂತಾಯಿತು. ಪ್ರಥಮಾಧ್ಯಾಯದಲ್ಲಷ್ಟೇ ಇದು ಅಸಾಧಾರಣಸಂಗತಿಯನ್ನು ಹೇಳಿದಂತಾಗಲಿಲ್ಲ.

ಎರಡನೆಯ ಪರಿಹಾರ - ಪ್ರಥಮಸೂತ್ರದಲ್ಲಿ ನಾಲ್ಕು ಪದಗಳಿವೆ. ನಾಲ್ಕು ಪದಗಳ ಮುಖಾಂತರ ನಾಲ್ಕು ಅಧ್ಯಾಯಗಳಿಗೂ ಈ ಸೂತ್ರವು ಪ್ರಯೋಜಕವಾಗಿದೆ. 'ಅಥ' ಮತ್ತು 'ಜಿಜ್ಞಾಸಾ' ಪದಗಳು ತೃತೀಯಾಧ್ಯಾಯಕ್ಕೆ ಪ್ರಯೋಜಕವಾಗಿವೆ. 'ಅತಃ' ಎಂಬ ಶಬ್ದವು ನಾಲ್ಕನೆಯ ಅಧ್ಯಾಯಕ್ಕೆ. ಬ್ರಹ್ಮ ಪದವು ಪ್ರಥಮ ಮತ್ತು ದ್ವಿತೀಯ ಅಧ್ಯಾಯಗಳಿಗೆ ಈ ಸೂತ್ರವು ಪ್ರಯೋಜಕವಾಗಿದೆ. ಹೀಗೆ ಅಧ್ಯಾಯಚತುಷ್ಟಯಗಳಿಗೆ ಪ್ರಯೋಜಕವಾಗುವ ಮೂಲಕ ಸಮಸ್ತಶಾಸ್ತ್ರಕ್ಕೆ ಪ್ರಯೋಜಕವಾಗಿ ನಾಲ್ಕು ಅಧ್ಯಾಯವೆಂದರೆ ಸಮಸ್ತಶಾಸ್ತ್ರವೆಂದೇ ಆಯಿತು. ಆದ್ದರಿಂದ ಶಾಸ್ತ್ರಸಂಗತ್ಯತಿರಿಕ್ತವಾದ ಅಧ್ಯಾಯಸಂಗತಿಯನ್ನು ಪ್ರಥಮಸೂತ್ರಕ್ಕೆ ಹೇಳಲು ಸಾಧ್ಯವಿಲ್ಲ. (ರಾಯರ ಟಿಪ್ಪಣಿಯಲ್ಲಿ 'ಪಾದಚತುಷ್ಟಯದ್ವಾರೈವ' ಎಂಬ ಪಾಠವನ್ನು ಇಟ್ಟುಕೊಡಾಗ ಸ್ವರಸವಾಗಿ ಮೇಲೆ ಹೇಳಿದ ಅರ್ಥ ತಿಳಿಯಬಹುದು.)

'ಪಾದಚತುಷ್ಟಯ' ಎಂಬ ಪಾಠವನ್ನು ಇಟ್ಟುಕೊಂಡಾಗ ಮೇಲೆ ಹೇಳಿದ ಅರ್ಥವು ಕ್ಲಿಷ್ಟ ಕ್ಲೇಶಕರವಾಗಿದೆ. 'ಸುಧಾನುಸಾರೇಣ' ಇತ್ಯಾದಿವಾಕ್ಯವು 'ಯದ್ವಾ' ಎಂಬುದಕ್ಕೆ ಪೀಠಿಕಾರೂಪವಾದ ಬೇರೆ ವಾಕ್ಯವೆಂದು ರಾಯರ ಟಿಪ್ಪಣಿಯಲ್ಲಿ ತಿಳಿಯಬೇಕು. ನ್ಯಾಯಸುಧೆಯಲ್ಲಿ ಸಂಗತಿಗೆ ಅಂತರ್ಭಾವಸಂಗತಿಯೆಂಬ ಬೇರೆ ಅರ್ಥವನ್ನೇ ಹೇಳಿದ್ದಾರೆ. 'ಯದ್ವಾ' ಇತ್ಯಾದಿ ವಾಕ್ಯದಿಂದ ಈ ಪಕ್ಷವನ್ನು ಇಟ್ಟುಕೊಂಡು ಸಮರ್ಥಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

'ತದ್ವಿಜಿಜ್ಞಾಸಸ್ವ' ಇತ್ಯಾದಿ ಬ್ರಹ್ಮವಿಚಾರವಿಧಾಯಕವಾದ ವಾಕ್ಯಾರ್ಥನಿರ್ಣಯಕ್ಕಾಗಿ ಸೂತ್ರದಲ್ಲಿ ನ್ಯಾಯವನ್ನು ಹೇಳಿದ್ದಾರೆ ಎಂದು ಹೇಳಲಾಗಿದೆ. ಇಲ್ಲಿ 'ನ್ಯಾಯ' ಶಬ್ದಕ್ಕೆ 'ಅಧಿಕಾರಿ, ಪ್ರಯೋಜನ, ವಿಷಯ, ಸಂಬಂಧಗಳ ಇರುವಿಕೆ' ಎಂದು ಅರ್ಥೈಸಿಕೊಳ್ಳಬೇಕು.

ಶಾಸ್ತ್ರವು ವಿಚಾರರೂಪವಾಗಿದೆ - ವಿಚಾರವನ್ನು ವಿಧಿಸುವುದು 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿ. ಈ ಶ್ರುತ್ಯರ್ಥವನ್ನು ನಿರ್ಣಯ ಮಾಡುತ್ತಿರುವುದು ಪ್ರಥಮಸೂತ್ರ. ಆದ್ದರಿಂದ 'ಪ್ರಥಮಸೂತ್ರಕ್ಕೆ ಶಾಸ್ತ್ರಾಂತರ್ಭಾವಸಂಗತಿ ಇದೆ. ಆದರೆ ಅಧ್ಯಾಯ ಪಾದಗಳಿಂದ ಸಂಗತಿಯನ್ನು ಹೇಳಲಾಗದು'.

'ಯಥೋಕ್ತಂ' ಎಂದರೆ ಪ್ರಥಮಾಧ್ಯಾಯದ ತೃತೀಯಪಾದದಲ್ಲಿ 'ಅಧಿಕಾರಶ್ಚ ತದ್ವಾನಿಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುತ್ತಾ ನ್ಯಾಯಸುಧಾದಲ್ಲಿ ಹೇಳಿದ್ದಾರೆಂದು ಅರ್ಥ. ಅಂತರ್ಭಾವ-ಸಂಗತಿಯು ಟೀಕಾಕಾರರಿಗೆ ಸಮ್ಮತವಾಗಿದೆ ಎಂಬುದನ್ನು 'ಅತ ಏವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಅತ ಏವ ಅಸ್ಯ' ಎಂಬಲ್ಲಿ 'ಅತ ಏವ' ಎಂದರೆ "ಜಿಜ್ಞಾಸೆಯನ್ನು ವಿಧಿಸುವ 'ತದ್‌ವಿಜಿಜ್ಞಾಸಸ್ವ' ಇತ್ಯಾದಿ ವಾಕ್ಯಾರ್ಥನಿರ್ಣಾಯಕವಾದ ವಿಷಯಾದಿನ್ಯಾಯಗಳನ್ನು ಹೇಳಿರುವುದರಿಂದಲೇ" ಎಂದರ್ಥ. ಟೀಕೆಯಲ್ಲಿರುವ 'ತು' ಶಬ್ದದಿಂದ ಸೂಚಿತವಾದ ಪರಮತದೋಷವನ್ನು 'ಏತೇನ' ಎಂಬುದರಿಂದ ವಿವರಿಸುತ್ತಿದ್ದಾರೆ.




**ಜಿಜ್ಞಾಸಾಧಿಕರಣದ ಸಂಗತಿ**

ಬ್ರಹ್ಮವಿಚಾರವು ಶಾಸ್ತ್ರದಲ್ಲಿ ನಡೆಯಬೇಕಾದರೆ ಅದರ ಅವಶ್ಯಕತೆಯನ್ನು ಮೊದಲಿಗೆ ಸೂತ್ರವು ಸಮರ್ಥಿಸುವುದರಿಂದ ಶಾಸ್ತ್ರದ ಉಪೋದ್ಘಾತ ಸಂಗತಿ ಇದೆ. ಆದರೆ ಪ್ರಥಮಾಧ್ಯಾಯ ಪ್ರಥಮಪಾದಗಳ ಸಂಗತಿಗಳಿಲ್ಲ. ಈ ಸೂತ್ರದ ಬಲದಿಂದಲೆ ಪ್ರಥಮಾಧ್ಯಾಯ ಪ್ರಥಮ ಪಾದಗಳು ಪ್ರವೃತ್ತಿ ಮಾಡುವುದು ನಿಜವೆ. ಆದರೆ ಕ್ರಮವಾಗಿ ನಾಲ್ಕು ಪಾದಗಳೂ ಆ ಮೂಲಕ ನಾಲ್ಕು ಅಧ್ಯಾಯಗಳೂ ಈ ಸೂತ್ರದ ಬಲದಿಂದಲೆ ಪ್ರವೃತ್ತಿ ಮಾಡುವುದರಿಂದ ಪ್ರತ್ಯೇಕವಾಗಿ ಪ್ರಥಮಾಧ್ಯಾಯ ಪ್ರಥಮಪಾದಗಳ ಸಂಗತಿಗಳಿಲ್ಲ.

ಬ್ರಹ್ಮವಿಚಾರವಿಧಾಯಕವಾಕ್ಯದ ಅರ್ಥನಿರ್ಣಯಕ್ಕೆ ಯುಕ್ತಿಯನ್ನು ಹೇಳುವ ಮೂಲಕ ಈ ಸೂತ್ರ ಬ್ರಹ್ಮವಿಚಾರವನಿಸುವುದರಿಂದ ಬ್ರಹ್ಮವಿಚಾರರೂಪವಾದ ಶಾಸ್ತ್ರದ ಅಂತರ್ಭಾವ ಸಂಗತಿಯೂ ಈ ಸೂತ್ರಕ್ಕೆ ಇದೆ.

'ಕಲ್ಪತರು'ವಿನಲ್ಲಿ ಈ ಸೂತ್ರಕ್ಕೆ ಶಾಸ್ತ್ರಸಂಗತಿ ಪ್ರಥಮಾಧ್ಯಾಯಸಂಗತಿ ಪ್ರಥಮಪಾದ ಸಂಗತಿಗಳು ಮೂರು ಇವೆ ಎಂದಿದೆ. ಅದು ಸರಿಯಲ್ಲ ಎನ್ನುವುದು ಸ್ಪಷ್ಟ.

---

*ಜಿಜ್ಞಾಸಾಧಿಕರಣ*

### ಜಿಜ್ಞಾಸಾಸೂತ್ರಕ್ಕೆ ಸಂಗತಿ ವಿಚಾರ

**तात्पर्यचन्द्रिका –**

**एतेनैव – ''श्रोतव्यादिवाक्यानां स्वार्थे समन्वयस्य तद्द्वारेण विचार-माणवेदान्तवाक्यानामपि ब्रह्मणि समन्वयस्य च निमित्तत्वादाद्यं सूत्रं समन्वय-सङ्गतम्'' इति विवरणोक्तं निरस्तम् । तत्तद्वाक्यस्य स्वार्थे समन्वयप्रतिपादनमात्र समन्वयाध्यायसङ्गतौ तृतीयाध्यायादेरपि समन्वयसङ्गतिप्रसङ्गात् । विचार-कर्तव्यताप्रतिपादनेन ब्रह्मणि समन्वयनिमित्तत्वस्येवाविरोधादिनिमित्तत्वस्यापि सत्त्वेन द्वितीयादितो व्यावृत्तस्य प्रथमेन सङ्गतिविशेषस्यासिद्धेश्च । पाद-सङ्गत्यनुक्तेश्च ।**

ಅನುವಾದ - ಅಧ್ಯಾಯಪಾದಾಂತರ್ಭಾವ ಸಂಗತಿಯು ಈ ಸೂತ್ರಕ್ಕೆ ಹೇಳಬೇಕಾಗಿಲ್ಲ... ಕಲ್ಪತರುವನ್ನು ಖಂಡನೆ ಮಾಡಿದ್ದರಿಂದಲೇ ವಿವರಣವನ್ನು ಸಹ ಖಂಡನೆ ಮಾಡಿದಂತಾಯಿ... ವಿವರಣದ ಮಾತು ಹೀಗಿದೆ - "ಶ್ರೋತವ್ಯಃ ಮಂತವ್ಯಃ' ಇತ್ಯಾದಿ ವಾಕ್ಯಗಳು ಶ್ರವಣ ಮ... ಗಳನ್ನು ವಿಧಾನ ಮಾಡುತ್ತಿವೆ. ಈ ಸೂತ್ರವು ಶ್ರೋತವ್ಯಾದಿವಾಕ್ಯಗಳನ್ನು ಸ್ವಾರ್ಥದಲ್ಲಿ ಸಮನ್ವ... ಮಾಡುತ್ತಿದೆ. ಇದರ ಮುಖಾಂತರ ಸಮಗ್ರವೇದಾಂತವಾಕ್ಯಗಳನ್ನು ಬ್ರಹ್ಮನಲ್ಲಿ ಸಮನ್ವ... ಗೊಳ್ಳುತ್ತವೆ. ಆದ್ದರಿಂದ ಈ ಸೂತ್ರಕ್ಕೆ ಸಮನ್ವಯಾಧ್ಯಾಯದಿಂದ ಸಂಗತಿ ಇದೆ'' ಎಂದು.

ಇದು ತಪ್ಪು . ಏಕೆಂದರೆ ಆಯಾ ವಾಕ್ಯಗಳನ್ನು ಸ್ವಾರ್ಥದಲ್ಲಿ ಸಮನ್ವಯ ಮಾಡಿದ ಮಾತ್ರ... ಸಮನ್ವಯಾಧ್ಯಾಯದಿಂದ ಅಂತರ್ಭಾವಸಂಗತಿಯು ಪ್ರಾಪ್ತವಾಗುವುದಾದರೆ ತೃತೀಯಾ... ಅಧ್ಯಾಯಗಳಲ್ಲಿರುವ ಸೂತ್ರಗಳಿಗೂ ಸಹ ಸಮನ್ವಯಾಧ್ಯಾಯದ ಸಂಗತಿಯು ಬರಬೇಕಾಗು... ಮತ್ತು ಈ ಸೂತ್ರವು ವಿಚಾರಕರ್ತವ್ಯತ್ವವನ್ನು ಪ್ರತಿಪಾದಿಸುವ ಮೂಲಕ ಬ್ರಹ್ಮನಲ್ಲಿನ ... ಸಮನ್ವಯಕ್ಕೆ ನಿಮಿತ್ತವಾಗುವಂತೆ ವಿಚಾರಕರ್ತವ್ಯತ್ವವನ್ನು ಪ್ರತಿಪಾದಿಸುವ ಮೂಲಕ ಅವಿರೋ... ಮುಂತಾದವುಗಳಿಗೂ ನಿಮಿತ್ತವಾಗಿದೆ. ಆದ್ದರಿಂದ ಅವಿರೋಧಾದಿಗಳಿಗೆ ನಿಮಿತ್ತವಾ... ಸಮನ್ವಯಕ್ಕೆ ಮಾತ್ರ ನಿಮಿತ್ತವಾಗುವ ಯಾವ ಸಂಗತಿವಿಶೇಷವನ್ನೂ ಹೇಳಲ್ಲ... ಅಧ್ಯಾಯಾಂತರ್ಭಾವಸಂಗತಿಯಿಲ್ಲವೆಂದು ನಿಶ್ಚಯವಾಯಿತು. ಪಾದಾಂತರ್ಭಾವಸಂಗತಿಯನ್ನು ನೀವು ಹೇಳಲೇ ಇಲ್ಲ.

**ಕಠಿಣಪದಾರ್ಥ**

ಏತೇನೈವ = ಉಪೋದ್ಘಾತಕೀ ಮತ್ತು ಅಂತರ್ಭಾವರೂಪವಾದ ಸಂಗತಿಯನ್ನು ಇಲ್ಲವೆಂದು ಹೇಳಿದ್ದರಿಂದಲೇ. ಸ್ವಾರ್ಥೇ = ಬ್ರಹ್ಮಜ್ಞಾನಕ್ಕೋಸ್ಕರ ವೇದಾಂತವಿಚಾರ

*ಪರಿಪೂರ್ಣಚಂದ್ರಿಕಾ*

ಮಾಡಬೇಕೆಂಬ ಸ್ವಾರ್ಥದಲ್ಲಿ. ತದ್‌ದ್ವಾರೇಣ = ಸ್ವಾರ್ಥದಲ್ಲಿ ಸಮನ್ವಯಗೊಳಿಸುವ ಮೂಲಕ.

प्रकाशः – एतेनैवेति ।। 'औपोद्घातिकी अन्तर्भावलक्षणा वा सङ्गतिर्नेत्यर्थ-कथनेन' इत्यर्थः ।। स्वार्थ इति ।। श्रोतव्यादिवाक्यस्य ब्रह्मज्ञानाय वेदान्तविचारः कर्तव्य इति विचारकर्तव्यतारूपस्वार्थप्रतिपादकत्वरूपसमन्वयस्येत्यर्थः । स्वार्थे समन्वयेन समन्वयाध्यायसङ्गतिरिति पक्षमतिप्रसङ्गेन दूषयित्वा ब्रह्मणि वेदान्तसमन्वयस्य च निमित्तत्वादितीममंशमपि दूषयति – विचारेति ।। एवमपि पादसङ्गतिर्नोक्तेत्याह – पादेति ।।

गुरुराजीय – 'यद्वा' इति व्याख्यानं विवरणमतनिरासार्थमित्यभिप्रेत्य तदनूद्य दूषयति – एतेनैवेति ।। स्वार्थ इति ।। श्रोतव्यादिवाक्यानां ब्रह्मज्ञानाय वेदान्तविचारकर्तव्यतारूपार्थप्रतिपादकत्वरूपसमन्वयस्येत्यर्थः । श्रोतव्यादिवाक्यानां स्वार्थे समन्वयेन समन्वयाध्यायसङ्गतिपक्षं तावन्निराकरोति – तत्तद्वाक्यस्येति ।। ब्रह्मणि वेदान्तसमन्वयस्य निमित्तत्वादित्युक्तमप्यंशं निरस्यति – विचारेति ।। अविरोधादिनिमित्तत्वस्यापीति । विचारकर्तव्यताया असमर्थने अविरोधाध्यायस्याप्य-प्रवृत्तेरिति भावः । ननु मास्तु द्वितीयादिव्यावृत्तसङ्गतिलाभः । तत्साधारण्येनैव प्रथमाध्यायसङ्गतिरस्त्वित्यत आह – पादेति ।। तथा सत्यविशेषात् कल्पतरुवत् पादसङ्गतेरपि वक्तव्यतया ताम् अनभिधायास्या एव विशेषतो वचने कारणाभावाद् द्वितीयादिव्यावृत्तसङ्गत्यभिप्राये वाच्ये उक्तदोषतादवस्थ्यमिति भावः ।

ವಿವರಣೆ - 'ಔಪೋದ್ಘಾತಿಕೀ ಮತ್ತು ಅಂತರ್ಭಾವಲಕ್ಷಣರೂಪವಾದ ಸಂಗತಿಯು ಈ ಸೂತ್ರಕ್ಕೆ ಇಲ್ಲವೆಂದು ಹೇಳಿದ್ದರಿಂದ' ಎಂದು 'ಏತೇನ' ಪದದ ಅರ್ಥ.

ವಿವರಣದ ಅಭಿಪ್ರಾಯವನ್ನು ಅನುಮಾನದ ಮೂಲಕ ಹೀಗೆ ತಿಳಿಯಬೇಕು - 'ಆದ್ಯಂ ಸೂತ್ರಂ, ಸಮನ್ವಯಾಧ್ಯಾಯೇನ ಸಂಗತಮ್, ತತ್ತದ್ವಾಕ್ಯಾನಾಂ ಸ್ವಾರ್ಥೇ ಸಮನ್ವಯಪ್ರತಿಪಾದನಾತ್' ಎಂದು. ಈ ಅನುಮಾನಕ್ಕೆ ವ್ಯಭಿಚಾರದೋಷವು ಬರುತ್ತದೆ. ತೃತೀಯಾದಿ ಅಧ್ಯಾಯಗಳಲ್ಲಿರುವ ಸೂತ್ರಗಳಲ್ಲಿಯೂ ಸಹ ಆಯಾ ಶ್ರುತಿಗಳಿಗೆ ಸ್ವಾರ್ಥದಲ್ಲಿ ಸಮನ್ವಯ ಮಾಡುತ್ತಾರಾದ್ದರಿಂದ ಆ ಸೂತ್ರಗಳಲ್ಲಿ ಹೇತುವಿದೆ. ಆದರೆ ಸಮನ್ವಯಾಧ್ಯಾಯದಿಂದ ಆ ಸೂತ್ರಗಳಿಗೆ ಸಂಗತಿಯಿಲ್ಲವಾದ್ದರಿಂದ ಸಾಧ್ಯವಿಲ್ಲವೆಂದು ವ್ಯಭಿಚಾರ ಬರುತ್ತದೆ. 'ಸ್ವಾರ್ಥೇ' ಎಂಬಲ್ಲಿ 'ಸಪ್ತಮಿ'ಗೆ ಪ್ರತಿಪಾದಕತ್ವ ಎಂದು ಅರ್ಥ - ಆ ಪ್ರತಿಪಾದಕತ್ವವೇ ಸಮನ್ವಯ ಶಬ್ದದ ಅರ್ಥವೂ ಆಗಿದೆ. ಆದ್ದರಿಂದ 'ವಿಚಾರ-ಕರ್ತವ್ಯತ್ವರೂಪಸ್ವಾರ್ಥಪ್ರತಿಪ್ರತಿಪಾದಕತ್ವರೂಪಸಮನ್ವಯಸ್ಯ' ಎಂದು ಇದರರ್ಥ.

ಇನ್ನು 'ಆದ್ಯಂ ಸೂತ್ರಂ ಸಮನ್ವಯೇನ ಸಂಗತಮ್ ಬ್ರಹ್ಮಣಿ ವೇದಾಂತಸಮನ್ವಯಸ್ಯ ನಿಮಿತ್ತತ್ವಾತ್' ಎಂದು ಮತ್ತೊಂದು ಅನುಮಾನ ಮಾಡಿದರೆ ಖಂಡಿಸುತ್ತಿದ್ದಾರೆ. ಮೊದಲನೇ ಸೂತ್ರದಲ್ಲಿ ಸಮನ್ವಯದ ನಿಮಿತ್ತತ್ವ ಇದ್ದಂತೆ ಅವಿರೋಧಾದಿನಿಮಿತ್ತತ್ವವೂ ಸಹ ಇದೆ. ಹೀಗಿರುವಾಗ 'ಸಮನ್ವಯೇನ ಸಂಗತಮ್' ಎಂಬುದಕ್ಕೆ ವಿಶೇಷಕಾರಣವನ್ನು ಹೇಳದ ಕಾರಣ 'ಅಧ್ಯಾಯ ಸಂಗತಿಯಿಲ್ಲ'. ಇದರಿಂದ ಅವರ ಅನುಮಾನಕ್ಕೆ ಉಪಾಧಿ ದೋಷವನ್ನು ಹೇಳಿದಂತೆ ಆಯಿತು. 'ಆದ್ಯಂ ಸೂತ್ರಂ ಸಮನ್ವಯೇನ ಸಂಗತಮ್ ಬ್ರಹ್ಮಣಿ ವೇದಾಂತಸಮನ್ವಯಸ್ಯ ನಿಮಿತ್ತತ್ವಾತ್' ಎಂಬ ಅನುಮಾನಕ್ಕೆ 'ಅವಿರೋಧಾದಿನಿಮಿತ್ತತ್ವಾಭಾವ'ವು ಉಪಾಧಿಯಾಗುತ್ತದೆ. ಸಾಧ್ಯವು ಆನಂದಮಯಾಧಿಕರಣದ ಸೂತ್ರದಲ್ಲಿದೆ. ಅಲ್ಲಿ ಅವಿರೋಧಾದಿನಿಮಿತ್ತತ್ವ ಇಲ್ಲವಾದ್ದರಿಂದ ಉಪಾಧಿಯೂ ಇದೆ. ಇದರಿಂದ ಸಾಧ್ಯವ್ಯಾಪಕತ್ವವು ಬಂತು. ಇನ್ನು 'ಬ್ರಹ್ಮಣಿ ವೇದಾಂತಸಮನ್ವಯಸ್ಯ ನಿಮಿತ್ತತ್ವ' ಎಂಬ ಹೇತು ಇರುವಂತಹ ಪಕ್ಷದಲ್ಲಿ ಅವಿರೋಧಾದಿನಿಮಿತ್ತತ್ವವೇ ಇದೆ, ಹೊರತು ತದಭಾವವು ಇಲ್ಲವೆಂದು ಸಾಧನಾವ್ಯಾಪಕತ್ವವೂ ಉಪಾಧಿಯಲ್ಲಿ ಬಂತು. ಆದ್ದರಿಂದ 'ಆದ್ಯಂ ಸೂತ್ರಂ ನ ಸಮನ್ವಯೇನ ಸಂಗತಮ್ ಅವಿರೋಧಾದಿನಿಮಿತ್ತತ್ವಾತ್' ಎಂದು ಸತ್‌ಪ್ರತಿಪಕ್ಷಾನುಮಾನವನ್ನು ಪ್ರಯೋಗಿಸಿದಂತಾಯಿತು.

ಪ್ರಥಮಸೂತ್ರಕ್ಕೆ ಅಧ್ಯಾಯಸಂಗತಿ ಪಾದಸಂಗತಿಗಳು ಇಲ್ಲವೆಂಬುದರ ಅಭಿಪ್ರಾಯ 'ಶಾಸ್ತ್ರಸಂಗತಿಗಿಂತ ಅತಿರಿಕ್ತವಾದ ಅಧ್ಯಾಯಪಾದಸಂಗತಿಗಳಿಲ್ಲ' ಇದನ್ನು ಗಮನಿಸಬೇಕು ಎಂದು.




'ವಿವರಣ'ದಲ್ಲಿ ಈ ಸೂತ್ರ ವಿಷಯವಾಕ್ಯಕ್ಕೆ ಅದರ ಅರ್ಥದೊಂದಿಗೆ ಸಮನ್ವಯಗೊಳಿಸುವುದರ ಆ ಮೂಲಕ ಎಲ್ಲ ವೇದಾಂತವಾಕ್ಯಗಳಿಗೂ ಬ್ರಹ್ಮನೊಂದಿಗೆ ಸಮನ್ವಯಗೊಳಿಸಲು ದಾರಿ ಮಾಡಿಕೊಡುವುದರಿಂದ ಸಮನ್ವಯಾಧ್ಯಾಯದ ಸಂಗತಿ ಇದೆ ಎಂದಿದೆ. ಆದರೆ ಆಯಾ ವಾಕ್ಯಗಳ ಅವುಗಳ ಅರ್ಥಗಳೊಡನೆ ಸಮನ್ವಯಗೊಳಿಸಿದ ಮಾತ್ರಕ್ಕೆ ಸಮನ್ವಯಾಧ್ಯಾಯದಲ್ಲಿಯೇ ಆ ಎರಡು ಅಧ್ಯಾಯಗಳು ಸೇರಬೇಕಾದೀತು.



ಪಂಚಾಧಿಕರಣಗಳ ಸಂಗತಿ ವಿಚಾರ

**तात्पर्यचन्द्रिका –**

**ननु तथाऽपि आनन्दमयाधिकरणमारभ्येति कथम् । समन्वयसूत्रे साक्षात् समन्वयोक्तेः "समन्वयसूत्रेणाध्यायशेषस्य प्रपञ्च्यप्रपञ्चकभावसङ्गतिः" इति सुधाग्रन्थाच्च तत्राध्यायसङ्गतेः सत्त्वात् । ईक्षत्यधिकरणे समन्वयासाधारणहेतु-**

वाच्यत्वसमर्थनेन तस्मिन्नपि तस्याः सत्त्वात् । नचेक्षतौ वचनवृत्त्या जगत्कारणत्वादिना शास्त्रैकजन्यप्रमागोचरत्वरूपशास्त्रयोनित्वे अवाच्यत्वरूपं बाधकमेवोद्धृतम्, नतु समन्वये हेतुरुक्त इति वाच्यम् । ''तदभावे कुतोऽन्वयः'' इत्यनुव्याख्याने वाच्यत्वस्य समन्वयहेतुत्वेनोक्तत्वादिति । उच्यते । वैदिकशब्दानां ब्रह्मण्युपक्रमादिलिङ्गप्रमाणकः शक्तितात्पर्यलक्षणः सम्बन्धः समन्वयः । स च न समन्वयसूत्रव्युत्पाद्यः । तत्र तत्प्रमाणस्यानुक्तेः । किन्तु व्युत्पादयिष्यमाणः शास्त्रयोनित्वे हेतुत्वेन सिद्धवदुपन्यस्तः । ईक्षतावावाच्यत्वप्रयुक्ता समन्वयासम्भवाशङ्कैव निरस्ता, समन्वयस्तु न व्युत्पादित इति, न तयोरध्यायपादाभ्यामन्तर्भावलक्षणा सङ्गतिः । यद्वा – आनन्दमयाधिकरणमारभ्य सङ्गतिद्वयम् । ततोऽर्वाक् समन्वयेक्षत्योः पादमात्रेण सङ्गत्यभावः । अन्येषु त्वध्यायेनापीति सङ्गत्योरभावः पञ्चाधिकरणीसाधारणः । अत एवाध्यायपादसङ्गतिरिति समुदायैकवचनं प्रयुक्तमिति ॥

ಅನುವಾದ - ಆಕ್ಷೇಪ - ಆದರೂ ಸಹ ಆನಂದಮಯಾಧಿಕರಣದಿಂದ ಆರಂಭಿಸಿಯೇ ಅಧ್ಯಾಯಪಾದಸಂಗತಿಗಳೆಂದು ಹೇಳಿದ್ದು ಹೇಗೆ ತಾನೆ ಸರಿ? ಜಿಜ್ಞಾಸಾಧಿಕರಣಕ್ಕೆ ಅಧ್ಯಾಯಪಾದಸಂಗತಿಗಳು ಬೇಡ. ಆದರೆ 'ಸಮನ್ವಯಸೂತ್ರದಲ್ಲಿ ಸಾಕ್ಷಾತ್ತಾಗಿಯೇ ಸಮನ್ವಯವನ್ನು ಹೇಳಿದ್ದಾರೆ. ನ್ಯಾಯಸುಧಾದಲ್ಲಿ ಸಮನ್ವಯಸೂತ್ರದಿಂದ ಸಮಗ್ರ ಅಧ್ಯಾಯಕ್ಕೆ ಪ್ರಪಂಚ್ಯ ಪ್ರಪಂಚಕಭಾವಸಂಗತಿಯು ಇದೆ' ಎಂದು ಅಧ್ಯಾಯಸಂಗತಿಯನ್ನು ನಿಖರವಾಗಿಯೇ ಹೇಳಿದ್ದಾರೆ. ಈಕ್ಷತ್ಯಧಿಕರಣದಲ್ಲಿಯೂ ಸಹ ಸಮನ್ವಯಕ್ಕೆ ಪ್ರಧಾನಕಾರಣವಾದ ವಾಚ್ಯತ್ವವನ್ನು ಸಮರ್ಥಿಸಿರುವುದರಿಂದ ಅಲ್ಲಿಯೂ ಅಧ್ಯಾಯಾಂತರ್ಭಾವಸಂಗತಿ ಇದೆ.

ಜಗಜ್ಜನ್ಮಾದಿಕಾರಣನು ಭಗವಂತನೆಂಬ ವಿಷಯದಲ್ಲಿ ಶಾಸ್ತ್ರಗಳೇ ನಿರ್ಣಾಯಕಗಳು. ಆದ್ದರಿಂದ ಭಗವಂತನು ಶಾಸ್ತ್ರಯೋನಿ ಎಂದು ಸ್ಪಷ್ಟವಾಗಿ ವಚನವೃತ್ತಿಯನ್ನು ಹೇಳಿದ ಮೇಲೆ ಭಗವಂತನು ಶಬ್ದವಾಚ್ಯನೇ ಅಲ್ಲವೆಂದು ಪುನಃ ಪ್ರಶ್ನಿಸಿದರೆ ಈಕ್ಷತ್ಯಧಿಕರಣದಲ್ಲಿ ಅವಾಚ್ಯತ್ವರೂಪವಾದ ಬಾಧಕವನ್ನಷ್ಟೇ ಪರಿಹರಿಸುತ್ತಿದ್ದಾರೆ. ಹೊರತು ಸಮನ್ವಯದ ಹೇತುವನ್ನು ಇಲ್ಲಿ ಸಮರ್ಥಿಸಿಲ್ಲ. ಆದ್ದರಿಂದ ಅಧ್ಯಾಯಸಂಗತಿ ಇಲ್ಲವೆಂದು ಪ್ರಶ್ನಿಸಬಹುದು. 'ತದಭಾವೇ ಕುತೋಽನ್ವಯಃ' ಎಂಬ ಅನುವ್ಯಾಖ್ಯಾನದಲ್ಲಿ 'ವಾಚ್ಯತ್ವವಿಲ್ಲದಿದ್ದರೆ ಸಮನ್ವಯ ಹೇಗೆ'? ಎಂದು ಹೇಳಲಾಗಿದೆ. ಆದ್ದರಿಂದ ಸಮನ್ವಯಕ್ಕಾಗಿ ಇಲ್ಲಿ ವಾಚ್ಯತ್ವವನ್ನು ಸಮರ್ಥಿಸುತ್ತಿದ್ದಾರೆಂದು ಹೇಳಬೇಕು. ಆದ್ದರಿಂದ ಸಮನ್ವಯ ಸೂತ್ರಕ್ಕೆ ಅಧ್ಯಾಯಸಂಗತಿಯನ್ನು ಹೇಳಬೇಕಲ್ಲವೇ?

ಸಮಾಧಾನ :- ಸಮನ್ವಯಾಧಿಕರಣದಲ್ಲಿ ಶಬ್ದಸಮನ್ವಯವನ್ನು ಮಾಡಲು ಹೊರ... ಹೊರತಾಗಿ ಉಪಕ್ರಮವೇ ಮೊದಲಾದ ತಾತ್ಪರ್ಯಲಿಂಗಗಳಿಂದ ಬ್ರಹ್ಮನಲ್ಲಿಯೇ ಸಕಲ... ಶಬ್ದಗಳಿಗೆ ಶಕ್ತಿತಾತ್ಪರ್ಯಸಂಬಂಧವನ್ನು ಹೇಳಬೇಕಂದಷ್ಟೇ ಸಮರ್ಥಿಸಲಾಗಿದೆ. 'ಸಮನ್ವ... ವಿಷ್ಣುವಿನಲ್ಲಿ ಇರುವುದರಿಂದ ಅವನೇ ಶಾಸ್ತ್ರಯೋನಿ' ಎಂದು ಸಮನ್ವಯಸೂತ್ರದಲ್ಲಿ ಸಮನ್ವ... ವನ್ನು ಸಿದ್ಧವೆಂದಂತೆ ಹೇಳಿದ್ದು 'ಮುಂದೆ ಸಮನ್ವಯಾಧ್ಯಾಯಪೂರ್ತಿ ಈ ಸಮನ್ವಯವ... ಸಾಧಿಸುತ್ತೇವೆ' ಎಂಬ ಅಭಿಪ್ರಾಯದಿಂದ ಹೊರತು, ಅದನ್ನು ಸಾಧಿಸಿಲ್ಲ. ಅದಕ್ಕೆ ಉಪಪಾದಕವ... ಉಪಕ್ರಮ ಮುಂತಾದ ಯುಕ್ತಿಗಳನ್ನು ಇಲ್ಲಿ ಹೇಳಿಲ್ಲ. ಈಕ್ಷತ್ಯಧಿಕರಣದಲ್ಲಿಯೂ ... ಅವಾಚ್ಯತ್ವಪ್ರಯುಕ್ತವಾದ ಅಸಂಭಾವನಾಶಂಕೆಯನ್ನಷ್ಟೇ ನಿರಾಸ ಮಾಡಲಾಗಿದೆ; ಹೊರ... ವಾಚ್ಯತ್ವದ ಸಮನ್ವಯವನ್ನು ಸಮರ್ಥಿಸಿಲ್ಲ. ಆದ್ದರಿಂದ ಸಮನ್ವಯಾಧಿಕರಣಕ್ಕಾಗಲೀ ಈಕ್ಷ... ಧಿಕರಣಕ್ಕಾಗಲೀ ಅಧ್ಯಾಯಾಂತರ್ಭಾವ ಪಾದಾಂತರ್ಭಾವಲಕ್ಷಣರೂಪವಾದ ಸಂಗತಿಯು ಇ...

ಅಥವಾ ಆನಂದಮಯಾಧಿಕರಣದಿಂದ ಆರಂಭಿಸಿ ಮುಂದಿನ ಅಧಿಕರಣಗಳಲ್ಲಿ ಎರ... ಸಂಗತಿಗಳೂ ಇವೆ. ಅದಕ್ಕಿಂತ ಹಿಂದಿನ ಸಮನ್ವಯಾಧಿಕರಣ ಮತ್ತು ಈಕ್ಷತ್ಯಧಿಕರಣಗ... ಪಾದಾಂತರ್ಭಾವಸಂಗತಿ ಮಾತ್ರ ಇಲ್ಲ. ಅಧ್ಯಾಯಸಂಗತಿ ಇದೆ. ಆದರೆ ಉಳಿದ ಮೂರು ಅಧಿ... ಕರಣಗಳಿಗೆ ಅಧ್ಯಾಯಸಂಗತಿ ಪಾದಸಂಗತಿ ಎರಡೂ ಸಹ ಇಲ್ಲ. ಒಟ್ಟು ಈ ಸಂಗತಿದ್ವಯ... ಅಭಾವವು ಪಂಚಾಧಿಕರಣಸಾಧಾರಣವಾಗಿದೆ. ಆದ್ದರಿಂದಲೇ ಟೀಕೆಯಲ್ಲಿ 'ಅಧ್ಯಾಯಪಾದಸಂಗ... ಎಂಬಲ್ಲಿ ಸಮುದಾಯೈಕವಚನವನ್ನು ಪ್ರಯೋಗಿಸಿದ್ದಾರೆ.

**ಕಠಿಣಪದಾರ್ಥ**

ಸಮನ್ವಯಾಸಾಧಾರಣಹೇತುವಾಚ್ಯತ್ವ ಸಮರ್ಥನೇನ = ಸಮನ್ವಯ ಮಾಡಲು ಅಸಾಧಾರಣಕಾರಣವಾದ ವಾಚ್ಯತ್ವವನ್ನು ಸಮರ್ಥಿಸಿದ್ದರಿಂದ. ತಸ್ಮಿನ್ನಪಿ = ಈಕ್ಷತ್ಯ-ಧಿರಣದಲ್ಲಿಯೂ. ತಸ್ಯಾಃ = ಅಧ್ಯಾಯ ಸಂಗತಿಯ. ಅತ ಏವ = ಐದು ಅಧಿಕರಣಗಳಲ್ಲಿ ಯಾವ ಕಾರಣದಿಂದ ದ್ವೈರೂಪ್ಯವಿದೆಯೋ ಆ ಕಾರಣದಿಂದ.

**प्रकाशः – आद्याधिकरणस्याध्यायाद्यसङ्गतिमङ्गीकृत्य** आनन्दमयाधिकरणमारभ्य **इत्येतत् सुधाविरुद्धमिति भावेनाक्षिपति ।। नन्विति ।। तत्रेति ।। समन्वयाधिकरणे अध्यायान्तर्भावसङ्गतेः सत्त्वादित्यर्थः । नन्वीक्षत्यधिकरणे ब्रह्मणोऽवाच्यत्वात् कथं तत्र शास्त्रयोनित्वमिति चोद्यमेव निरस्तम् । अत एव सूत्रे** अशब्दमवाच्यं **नेत्येवोक्तमित्याशङ्क्य निरस्यति – नचेति ।। 'कारणत्वादिना' इति** प्रकारे **तृतीया । अनेन प्रकारेण शास्त्रजन्यप्रमागोचरत्वेत्यर्थः । तदभाव इति ।।** शब्द**गोचरत्वाभाव इत्यर्थः ।। शास्त्रयोनित्व इति ।। शास्त्रजन्यप्रमाविषयत्वे** साध्ये

''समन्वयात्'' इत्यनेनोपक्रमादिप्रमाणकशक्तितात्पर्यलक्षणसम्बन्धः सिद्धवदु-पन्यस्त इत्यर्थः । इदं तु सुधोक्तं 'सूत्रार्थमभिप्रेत्य' इति ध्येयम् । प्रपञ्च्य-प्रपञ्चकभावकथनसुधावाक्यं तु हेतुविवरणाभिप्रायमिति भावः ।। असम्भवा-शङ्केति ।। वाच्यत्वं समन्वयसम्भावकमेवोक्तम् । नतूपक्रमादिभिः स व्युत्पादितः । नापि तत्रोपक्रमादिहेतुर्निरूपितः । 'तदभावे कुतोऽन्वयः' इत्यनुव्याख्यानं तु कुतोऽन्वयसम्भावनेत्येवं परम् । अत एवेक्षती पूर्वपक्षटीकायां ''तच्च वाच्यत्व एव सम्भवति'' इति सम्भवशब्दप्रयोग इति भावः । यद्यप्यध्यायसङ्गतिरेव पूर्वपक्षिता, तथाऽपि यथा न पादेन सङ्गतिस्तथाऽध्यायेनापीति दृष्टान्ततया 'अध्याय-पादाभ्याम्' इति तदुक्तिः । उत्तरप्रस्थानानुरोधात् परिहारान्तरमाह ।। यद्वेति ।। पञ्चाधिकरणीति ।। ''द्विगोः''इति ङीप् । उक्तार्थे टीकासंमतिमाह ।। अत एवेति ।। यतो द्वैरूप्यं पञ्चस्वधिकरणेष्वत एवेत्यर्थः । यदि 'अध्यायपादसङ्गती' इति द्विवचनप्रयोगः स्यात् तदा पञ्चस्वधिकरणेषु ते न स्त इति धीः स्स्यात् । सङ्गतिरित्युक्तौ तु ततोऽर्वाक् त्रिषूभयसङ्गत्यभावः द्वयोः पादमात्रसङ्गत्यभाव इति ज्ञातुं शक्यत इति सङ्गतिद्वयसमुदायाभिप्रायेणैकवचनं प्रयुक्तमित्यर्थः ।

गुरुराजीय – ''अध्यायपादसङ्गतिस्त्वानन्दमयाधिकरणमारभ्यैव गवेषणीयः'' इत्यानन्दमयाधिकरणात् प्राक्तनानामधिकरणानामध्यायाद्यसङ्गतिवर्णनं सुधा-विरुद्धत्वादनुपपन्नमित्याक्षिपति ।। नन्विति ।। तत्रेति ।। समन्वयसूत्र इत्यर्थः। तस्या इति ।। अध्यायान्तर्भावरूपसङ्गतेरित्यर्थः ।। बाधकमेवोद्धृतमिति ।। सूत्रे अशब्दं नेत्युक्तत्वात् । अन्यथा वाच्यमित्यवक्ष्यदिति भावः । तदभावे शब्दगोचरत्वाभावे । तत्र समन्वयसूत्रे । तत्प्रमाणस्य उपक्रमादिरूपस्य शक्ति-तात्पर्यलक्षणसम्बन्दप्रमाणस्य । 'किन्तु' इत्यस्य 'हेतुत्वेनोपन्यस्त' इत्युत्तरेण सम्बन्धः । कथमसिद्धस्य हेतुत्वेनोपन्यासः? इत्यतोऽसिद्धस्यापि सिद्धत्वविवक्षयेति भावेनोक्तं सिद्धवदिति । अव्युत्पादितस्य कथं सिद्धत्वविवक्षाऽपि येन तद् विवक्षया हेतुत्वेनोपन्यासः सङ्गच्छेतेत्यतो न व्युत्पादितत्वमेव तद् विवक्षायां प्रयोजकं किं नाम व्युत्पादयिष्यमाणत्वमपि । तदिह समन्वयस्य प्रागव्युत्पादितत्वेति व्युत्पादयिष्यमाणत्वात् तत्प्रयुक्तसिद्धत्वविवक्षाया अप्रत्यूहत्वाद् युक्तस्तद्विवक्षया

हेतुत्वेनोपन्यास इत्याशयेनोक्तम् – व्युत्पाद-यिष्यमाण इति ।। सुधाटीकयोः प्रपञ्च्यप्रपञ्चकभावोऽपि समन्वयसूत्रे हेतुत्वेनोपन्यस्तसमन्वयविवरणाभिप्रायको द्रष्टव्यः ।। असम्भवाशङ्केति ।। वाच्यत्वं समन्वयसम्भावकतयैवोक्तम् । ननु हेतुत्वेन । तदभावे कुतोऽन्वय इत्यनुव्याख्यानं तु कुतोऽन्वयसम्भावनेत्येवंपरतया योज्यम् । अत एव पूर्वपक्षटीकायां तद्वाच्यत्व एव सम्भवतीति सम्भवशब्दप्रयोग इति ध्येयम् । ननु ईक्षत्यधिकरणेनान्तर्भावलक्षणसङ्गत्यभावेऽपि समन्वयहेतुभूत-वाच्यत्वसाधकत्वादौपोद्घातिकी सङ्गतिरस्त्येवेति सङ्गतिमात्रनिषेधिका टीकानु-पपन्नेत्यरुच्याह ।। यद्वेति ।। यद्वा ननु समन्वये साधकानां बाधकाभावानां चाग्रे वचनादत्र च तदभावात् पादविशेषानन्तर्भावेऽपि समन्वयसूत्रे साक्षात् समन्वयो-पयोगितत्प्रतिज्ञायाः कृतत्वात् ईक्षत्यधिकरणे च साक्षात्साधकवत्तत्सिद्ध्युपयोगि-बाधकोद्धारस्य कृतत्वात् समन्वयाध्यायान्तर्भावो वक्तव्य एव । नच प्रतिज्ञा-बाधकोद्धारयोर्वक्ष्यमाणसाधकयुक्तिसापेक्षत्वेन तदनपेक्षसाधकत्वाभावान्न समन्वय-साधकान्तर्भाव इति वाच्यम् । तथा सति एतत्प्रतिज्ञाबाधकोद्धारानुपजीवनेन वक्ष्यमाणहेतूनामपि समन्वयासाधकत्वेनोत्तरसूत्रसन्दर्भस्यापि तत्रान्तर्भावापातादि-त्यरुचेराह – यद्वेति ।। पञ्चाधिकरणीति ।। द्विगोरित्यनेन ङीपि यस्येति चेत्यकारलोपे पञ्चाधिकरणी शब्दनिष्पत्तिरिति भावः । उक्तार्थस्य टीकाकृत्संमततां दर्शयति – अत एवेति ।। यतस्ततोर्वाक्तनाधिकरणपञ्चके समन्वयेक्षत्योः पादमात्रेण सङ्गत्यभावोऽन्येषु त्रिष्वध्यायेनापीति वैरूप्यम्, अत एवेत्यर्थः ।। समुदायैक-वचनमिति ।। अन्यथा नाधिकरणश्रुतिसङ्गती इतिवदध्यायपादसङ्गती इति द्विवचनमेव ब्रूयादिति भावः ।

ವಿವರಣೆ - ಪ್ರಥಮಾಧಿಕರಣವಾದ ಜಿಜ್ಞಾಸಾಧಿಕರಣಕ್ಕೆ ಅಧ್ಯಾಯಪಾದಸಂಗತಿಗಳು ಇಲ್ಲದಿ ಅಂಗೀಕರಿಸೋಣ. ಆದರೆ ಪ್ರಾರಂಭದ ಐದೂ ಅಧಿಕರಣಗಳಿಗೆ ಅಧ್ಯಾಯಸಂಗತಿ ಮತ್ತು ಪಾದ ಎರಡೂ ಸಂಗತಿಗಳಿಲ್ಲವೆಂದು ಹೇಳುವುದು ಸುಧಾಕ್ಕೆ ವಿರುದ್ಧವಾಗಿದೆಯೆಂಬುದನ್ನು 'ನನು' ಇತ್ಯಾ ವಾಕ್ಯಗಳಿಂದ ಆಕ್ಷೇಪಿಸುತ್ತಿದ್ದಾರೆ. ಏಕೆಂದರೆ ಸಮನ್ವಯಾಧಿಕರಣಕ್ಕೆ ಮತ್ತು ಈಕ್ಷತ್ಯಧಿಕರಣಕ್ಕೆ ಅಧ್ಯಾಯಸಂಗತಿಯನ್ನು ಅನುವ್ಯಾಖ್ಯಾನದಲ್ಲಿ ಮತ್ತು ಸುಧಾದಲ್ಲಿ ಸ್ಪಷ್ಟ ಒಪ್ಪಿಕೊಳ್ಳಲಾಗಿದೆ.

ಈಕ್ಷತ್ಯಧಿಕರಣದಲ್ಲಿ ಬ್ರಹ್ಮನು ಅವಾಚ್ಯನಾದರೆ ಅವನು ಹೇಗೆ ಶಾಸ್ತ್ರಯೋನಿ ಆಗುತ್ತಾನೆ ಆಕ್ಷೇಪವನ್ನಷ್ಟೇ ನಿರಾಕರಿಸಿದ್ದಾರೆ. ಹೊರತು ವಾಚ್ಯತ್ವವನ್ನು ಸಮರ್ಥಿಸಿಲ್ಲ. ಆದ್ದರಿಂದಲೇ ಸೂ

'ನ ಅಶಬ್ದಂ' ಅವಾಚ್ಯನಲ್ಲ ಎಂದಷ್ಟೇ ಹೇಳಲಾಗಿದೆಯೆಂದು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ನಚ' ಇತ್ಯಾದಿ ವಾಕ್ಯಗಳಿಂದ.

'ಜಗತ್ಕಾರಣತ್ವಾದಿನಾ' ಎಂಬಲ್ಲಿ ತೃತೀಯಾವಿಭಕ್ತಿಯು ಪ್ರಕಾರವೆಂಬ ಅರ್ಥದಲ್ಲಿದೆ. ಅಂದರೆ ಶಾಸ್ತ್ರಜನ್ಯಪ್ರಮಾವಿಷಯತ್ವವೇ ಪ್ರಕಾರವಾಗಿದೆ. 'ತದಭಾವೇ' ಎಂದರೆ 'ಶಬ್ದಗೋಚರತ್ವಾಭಾವೇ' ಎಂದರ್ಥ. ಶಾಸ್ತ್ರಜನ್ಯಪ್ರಮಾವಿಷಯತ್ವವೇ ಸಾಧ್ಯವಾಗಿದೆ. 'ಸಮನ್ವಯಾತ್' ಎಂಬುದು ಹೇತು. ಉಪಕ್ರಮಾದಿ ಪ್ರಮಾಣಗಳಿಂದ ಶಕ್ತಿ ಹಾಗು ತಾತ್ಪರ್ಯವೆಂಬ ಸಂಬಂಧವಿದೆಯೆಂಬುದು ಸಿದ್ಧವಾಗಿದೆ ಎಂದರ್ಥ. ಸುಧಾನುಸಾರಿಯಾದ ಸೂತ್ರಾರ್ಥ. ನ್ಯಾಯಸುಧಾದ ಪ್ರಕಾರ ಸಮನ್ವಯಾಧಿಕರಣ ಮತ್ತು ಈಕ್ಷತ್ಯಧಿಕರಣಗಳಿಗೆ ಅಧ್ಯಾಯಸಂಗತಿಯು ಇದೆಯೆಂದು ತೋರುತ್ತದೆ. ಆದರೆ ಟೀಕೆಯಲ್ಲಿ ಸ್ಪಷ್ಟವಾಗಿ ಈ ಸಂಗತಿಯನ್ನು ಇಲ್ಲವೆಂದು ಹೇಳಿದ್ದಾರೆ. ಟೀಕಾರಾಯರ ಈ ಎರಡು ಗ್ರಂಥಗಳ ವಾಕ್ಯಗಳ ವಿರೋಧಪರಿಹಾರವನ್ನು ಚಂದ್ರಿಕೆಯಲ್ಲಿ ಮಾಡಿದ್ದಾರೆ. ಹೇಗೆಂದರೆ ಟೀಕೆಯಲ್ಲಿ ಹೇಳಿದಂತೆ ಈ ಎರಡೂ ಅಧಿಕರಣಗಳಿಗೆ ಅಧ್ಯಾಯಸಂಗತಿ ಇಲ್ಲವೆಂಬುದೇ ಸತ್ಯ. ಹಾಗಾದರೆ ಸುಧಾದಲ್ಲಿ ಹೇಳಿದರ ಅರ್ಥವೇನು? ಎಂದರೆ ಸುಧಾದ ಅಭಿಪ್ರಾಯ ಆನಂದಮಯಾಧಿಕರಣಗಳಲ್ಲಿ ಯಾವ ರೀತಿಯಾಗಿ ಉಪಕ್ರಮಾದಿಗಳಿಂದ ಶಬ್ದಗಳ ಶಕ್ತಿವೃತ್ತಿಯನ್ನು ಭಗವಂತನಲ್ಲಿ ಸಮನ್ವಯಗೊಳಿಸುತ್ತಾರೋ ಹಾಗೆ ಈ ಅಧಿಕರಣದಲ್ಲಿ ಸಮನ್ವಯ ಮಾಡಲು ಹೊರಟಿಲ್ಲ. ಸ್ಪಷ್ಟವಾಗಿ ಹೀಗೆ ತಿಳಿಯಬೇಕು. ಈಕ್ಷತ್ಯಧಿಕರಣದಲ್ಲಿ ವಿಷ್ಣುವು ಅವಾಚ್ಯನಲ್ಲವೆಂದು ಸಮನ್ವಯ ಸಾಧಕವಾದ ವಾಚ್ಯತ್ವನ್ನೇ ಸಮರ್ಥಿಸಿರುವುದರಿಂದ ಸಮನ್ವಯಾಧ್ಯಾಯದ ಉಪೋದ್ಘಾತ ಸಂಗತಿ ಇರುವುದರಲ್ಲಿ ಏನೂ ಬಾಧಕವಿಲ್ಲ. ಅಂತರ್ಭಾವ ಸಂಗತಿ ಇಲ್ಲವೆಂದ ಮಾತ್ರಕ್ಕೆ ಸಂಗತಿಯೆ ಇಲ್ಲವೆನ್ನುವುದೆ? ವಸ್ತುತಃ ಸಮನ್ವಯ ಈಕ್ಷತ್ಯಧಿಕರಣಗಳೆರಡಕ್ಕೂ ಸಮನ್ವಯಾಧ್ಯಾಯದ ಅಂತರ್ಭಾವ ಸಂಗತಿಯೂ ಇದೆ. ಸಮನ್ವಯ ಸೂತ್ರದಲ್ಲಿ ಸಮನ್ವಯದ ಸಮರ್ಥನೆ ಇಲ್ಲದಿದ್ದರೂ ಅದರ ಪ್ರಸ್ತಾವವಂತೂ ಇದೆ. ಈಕ್ಷತ್ಯಧಿಕರಣದಲ್ಲಿ ಅದಕ್ಕೆ ಬಾಧಕ ಪರಿಹಾರ ಮಾಡಿದೆ. ಈ ಪ್ರಸ್ತಾವ ಮತ್ತು ಬಾಧಕ ಪರಿಹಾರಗಳು ಸಾರ್ಥಕವಾಗುವುದು ಸಾಧಕ ಹೇತುಗಳನ್ನು ಹೇಳಿದರೆ ಮಾತ್ರ ಎಂಬುದೇನೋ ನಿಜವೆ. ಆದರೆ ಅಷ್ಟು ಮಾತ್ರಕ್ಕೆ ಈ ಅಧಿಕರಣಗಳಿಗೆ ಅಧ್ಯಾಯ ಸಂಗತಿಯನ್ನು ಅಲ್ಲಗಳೆಯಲಾಗುವುದಿಲ್ಲ. ಹಾಗೆ ಮಾಡಿದರೆ ಮುಂದೆ ಹೇಳುವ ಸಾಧಕ ಹೇತುಗಳೂ ಪ್ರಸ್ತಾವ ಬಾಧಕಪರಿಹಾರಗಳ ಬಲದಿಂದಲೇ ಸಾಫಲ್ಯ ಪಡೆಯಬೇಕಾಗಿರುವುದರಿಂದ ಮುಂದಿನ ಎಲ್ಲ ಸೂತ್ರಗಳಿಗೂ ಅಧ್ಯಾಯ ಸಂಗತಿ ಇಲ್ಲವೆನ್ನಬೇಕಾದೀತು.

ಈ ಆಕ್ಷೇಪಗಳಿಗೆ ಅವಕಾಶವಿಲ್ಲದಂತೆ ಅನುವ್ಯಾಖ್ಯಾನ ಸುಧೆಗಳಿಗನುಸಾರವಾಗಿ ಟೀಕೆಗೆ ಬೇರೆ ಅಭಿಪ್ರಾಯನ್ನಿಟ್ಟುಕೊಳ್ಳಲು ಶಕ್ಯವಿದೆ. ಆನಂದಮಯಾಧಿಕರಣದಿಂದಾರಂಭಿಸಿ ಮುಂದೆ ಅಧ್ಯಾಯ ಪಾದ ಸಂಗತಿಗಳೆರಡೂ ಇವೆ. ಹಿಂದಿನ ಅಧಿಕರಣಗಳಲ್ಲಿ 'ಎರಡೂ ಇವೆ' ಎನ್ನಲಾಗುವುದಿಲ್ಲ. ಒಂದು ಇಲ್ಲದಿರಬಹುದು, ಎರಡೂ ಇಲ್ಲದಿರಬಹುದು. ಏಕೆಂದರೆ ಸಮನ್ವಯ ಈಕ್ಷತ್ಯಧಿಕರಣಗಳಲ್ಲಿ ಅಧ್ಯಾಯಸಂಗತಿ ಇದೆ. ಪಾದಸಂಗತಿ ಒಂದು ಮಾತ್ರವಿಲ್ಲ. ಉಳಿದ ಅಧಿಕರಣಗಳಲ್ಲಿ ಅಧ್ಯಾಯ ಪಾದಸಂಗತಿಗಳೆರಡೂ ಇಲ್ಲ. ಈ ಅಭಿಪ್ರಾಯದಿಂದಲೇ ಟೀಕೆಯಲ್ಲಿ 'ಅಧ್ಯಾಯಪಾದಸಂಗತಿಯ

ವಿಚಾರವು ಆನಂದಮಯಾಧಿಕರಣದಿಂದ ತೊಡಗಿ ಮುಂದಿನ ಅಧಿಕರಣಗಳಲ್ಲಿ ಮಾತ್ರ ... 'ಸಂಗತಿ' ಶಬ್ದವನ್ನು ಏಕವಚನದಲ್ಲಿ ಪ್ರಯೋಗಿಸಿದ್ದಾರೆ. ಇದು ಸಮುದಾಯೈಕವಚನ. 'ಅಧ್ಯಾ... ಸಂಗತಿಯೂ ಇಲ್ಲ ಪಾದಸಂಗತಿಯೂ ಇಲ್ಲ' ಎನ್ನುವ ಅಭಿಪ್ರಾಯವಿರುತ್ತಿದ್ದರೆ ಜಿಜ್ಞಾಸಾಧಿಕ... ಅಧಿಕರಣಶ್ರುತಿಸಂಗತಿಗಳಿಲ್ಲ ಎನ್ನುವಂತೆ ಸ್ಪಷ್ಟವಾಗಿ ದ್ವಿವಚನದಲ್ಲಿಯೇ ಪ್ರಯೋಗಿಸಬಹುದಿತ್ತು.

### ಪಂಚಾಧಿಕರಣಗಳು ಅಧ್ಯಾಯಪಾದಪೀಠ

**तात्पर्यचन्द्रिका –**

**अध्यायपादपीठत्वादिति पञ्चाधिकरण्याः समन्वयविशेषाप्रतिपादकत्वात्... ध्यायाद्यन्तर्भावासम्भवेऽपि विचारकर्तव्यतायाः प्रथमं(म)प्रतिपाद्यत्वात् वक्ष्यमाणक्रमेण चतुरधिकरण्याः बद्धक्रमत्वात् तदनन्तरमेव समन्वये आकाङ्क्षोदयात् तदाकाङ्क्षोत्थापकतया समन्वयाध्यायस्य तदादिनामपादस्य चादौ निवेशो युक्त इत्यर्थः ॥ नाधिकरणश्रुतिसङ्गती इति ॥ पूर्वाधिकरणतद्विषयवाक्याभ्यां सङ्गती नेत्यर्थः । एतेन अध्ययनविधिना सामान्यतः प्रयोजनवदर्थावबोधपर्यन्ततां नीतैर्विशेषतश्च सन्दिह्यमानैर्वेदान्तैः विचाराकाङ्क्षेराक्षेपादस्याधिकरणस्य श्रुतिसङ्गतिः इति कल्पतरूक्तं निरस्तम् । श्रुतिमूलत्वातिरिक्तायाः श्रुतिसङ्गतेरनुक्तत्वादिति ।**

ಅನುವಾದ - ತತ್ವಪ್ರಕಾಶಿಕಾದಲ್ಲಿ 'ಅಧ್ಯಾಯಪಾದಪೀಠತ್ವಾತ್' ಈ ಐದು ಅಧಿಕರಣಗಳು ಪ್ರಥಮಾಧ್ಯಾಯಕ್ಕೆ ಹಾಗೂ ಪ್ರಥಮಪಾದಕ್ಕೆ ಪೀಠಿಕೆಗಳಾಗಿವೆ. ಎಂದು ಹೇಳಲಾಗಿದೆ. ಪ್ರಾರಂಭದ ಈ ಐದು ಅಧಿಕರಣಗಳು ಸಮನ್ವಯವನ್ನು ಮತ್ತು ಸಮನ್ವಯದ ವಿಶೇಷವನ್ನು ಪ್ರತಿಪಾದಿಸದಿರುವುದರಿಂದ ಪ್ರಥಮಾಧ್ಯಾಯದಲ್ಲಾಗಲೀ ಪ್ರಥಮಪಾದದಲ್ಲಾಗಲೀ ಸೇರಲು ಸಾಧ್ಯವಿಲ್ಲ. ಹೀಗಾದಲ್ಲಿ ಈ ಐದು ಅಧಿಕರಣಗಳು ಪ್ರಾರಂಭದಲ್ಲೇ ಏಕೆ ಸೇರಬೇಕು? ಗ್ರಂಥದ ಮಧ್ಯದಲ್ಲೋ ಕೊನೆಯಲ್ಲೋ ಸೇರಿಸಬಹುದಿತ್ತು? ಎಂಬ ಪ್ರಶ್ನೆ ಬಂದರೆ ಜಿಜ್ಞಾಸಾಧಿಕರಣವು ವಿಚಾರಕರ್ತವ್ಯತೆಯನ್ನು ಸಮರ್ಥಿಸುತ್ತಿರುವುದರಿಂದ ಪ್ರಾರಂಭದಲ್ಲೇ ಅದನ್ನು ಹೇಳಬೇಕು. ಇನ್ನು ಉಳಿದ ನಾಲ್ಕು ಅಧಿಕರಣಗಳು ಪರಸ್ಪರ ಸಂಬಂಧ ಹೊಂದಿ ಕ್ರಮಬದ್ಧವಾಗಿ ಒಂದರ ನಂತರ ಮತ್ತೊಂದು ಹೊರಟಿವೆ. ಈ ವಿಷಯವನ್ನು ನಾವು ಆಯಾ ಅಧಿಕರಣಗಳ ಪ್ರಾರಂಭದಲ್ಲಿ ಉಪಪಾದಿಸುತ್ತೇವೆ. ಹೀಗೆ ಈ ಅಧಿಕರಣಗಳು ಪೀಠಿಕಾರೂಪವಾಗಿ ಹೊರಟ ಮೇಲೆ ಸಮನ್ವಯದ ಬಗ್ಗೆ ಆಕಾಂಕ್ಷೆ ಉಂಟಾಗುತ್ತದೆ. ಆಕಾಂಕ್ಷಾನುಸಾರಿಯಾಗಿ ಸಮನ್ವಯಾಧ್ಯಾಯವು ಹೊರಟಿದೆ. ಹಾಗೆಯೇ ಸಮನ್ವಯಾಧ್ಯಾಯದ ಪ್ರಾರಂಭದ ನಾಮಪಾದವೂ ಸಹ ಆಕಾಂಕ್ಷಾನುಸಾರಿಯಾಗಿ ಪ್ರಾರಂಭದಲ್ಲಿ ನಿರ್ದಿಷ್ಟವಾಗಿದೆ.

ಪರಿಪೂರ್ಣಚಂದ್ರಿಕಾ

ತತ್ತ್ವಪ್ರಕಾಶಿಕಾದಲ್ಲಿ 'ಸಾಧಿಕರಣಶ್ರುತಿಸಂಗತೀ' ಅಧಿಕರಣಸಂಗತಿ ಹಾಗು ಶ್ರುತಿಸಂಗತಿಯೂ ಸಹ ಜಿಜ್ಞಾಸಾಧಿಕರಣಕ್ಕೆ ಇಲ್ಲವೆಂದು ಹೇಳಲಾಗಿದೆ. ಏಕೆಂದರೆ ಇದೇ ಪ್ರಾರಂಭದ ಅಧಿಕರಣವಾದ್ದರಿಂದ ಇದಕ್ಕಿಂತ ಮೊದಲು ಯಾವ ಅಧಿಕರಣಗಳೂ ಇಲ್ಲವಾದ್ದರಿಂದ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೇಳಲು ಬರುವುದಿಲ್ಲ. ಮತ್ತು ಹಿಂದಿನ ಅಧಿಕರಣದ ವಿಷಯವಾಕ್ಯದಿಂದಲೂ ಈ ಸೂತ್ರಕ್ಕೆ ಸಂಗತಿಯನ್ನು ಹೇಳಲಾಗದು ಆದ್ದರಿಂದ ಶ್ರುತಿಸಂಗತಿಯೂ ಇಲ್ಲವೆಂದರ್ಥ. ಟೀಕೆಯಲ್ಲಿ ಹೀಗೆ ಹೇಳಿದ್ದರಿಂದ ಕಲ್ಪತರುವನ್ನು ನಿರಾಕರಿಸಿದಂತಾಯಿತು.

ಕಲ್ಪತರುವಿನ ಆಕ್ಷೇಪ - 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ಶ್ರುತಿಯು ವೇದಾಧ್ಯಯನದಿಂದ ವೇದಾರ್ಥವನ್ನು ತಿಳಿಯಬೇಕೆಂದು ಸಾಮಾನ್ಯವಾಗಿ ವಿಧಿಸುತ್ತಿದೆ. ವೇದಾರ್ಥವನ್ನು ಹೇಗೆ ತಿಳಿಯಬೇಕು? ಎಂಬ ಸಂಶಯ ಬಂದರೆ ವಿಚಾರ ಮಾಡಿಯೇ ಅರ್ಥಜ್ಞಾನವನ್ನು ಪಡೆಯಬೇಕೆಂಬುದನ್ನು ಸಹ ವಿಚಾರದಿಂದಲೇ ನಿರ್ಣಯ ಮಾಡಬೇಕು. ಹೀಗೆ ವಿಚಾರವನ್ನು ಮಾಡಬೇಕೆಂದು ಶ್ರುತಿಯಿಂದಲೇ ತಿಳಿಯುತ್ತಿರುವುದರಿಂದ ಜಿಜ್ಞಾಸಾಧಿಕರಣಕ್ಕೂ ಶ್ರುತಿಸಂಗತಿ ಇದೆ.

ಸಮಾಧಾನ - ಇದು ತಪ್ಪು. ನೀವು ಶ್ರುತಿಮೂಲತ್ವವನ್ನು ಹೇಳಿದ್ದೀರೇ ಹೊರತು ಶ್ರುತಿಸಂಗತಿಯನ್ನು ಹೇಳಲಿಲ್ಲ.

### ಕಠಿಣಪದಾರ್ಥ

ಅಧ್ಯಾಯಪಾದಪೀಠತ್ವಾತ್ = ಅಧ್ಯಾಯಕ್ಕೂ ಮತ್ತು ಪಾದಕ್ಕೂ ಪೀಠದಂತೆ ಆಧಾರವಾದ್ದರಿಂದ. ಸಮನ್ವಯವಿಶೇಷಾಪ್ರತಿಪಾದಕತ್ವಾತ್ = ಯಾವುದೇ ಸಮನ್ವಯವನ್ನು ಪ್ರತಿಪಾದಿಸುತ್ತಿಲ್ಲ. ಚತುರಧಿಕರಣ್ಯಾ ಬದ್ಧಕ್ರಮತ್ವಾತ್ = ನಾಲ್ಕು ಅಧಿಕರಣಗಳು ಕ್ರಮಬದ್ಧವಾದ್ದರಿಂದ. ವಕ್ಷ್ಯಮಾಣಕ್ರಮೇಣ = ಆಯಾ ಅಧಿಕರಣಗಳ ಪ್ರಾರಂಭದಲ್ಲಿ ಹೇಳುವ ಪ್ರಕಾರ. ಏತೇನ = ಸಂಗತಿಯಿಲ್ಲವೆಂದು ತಿಳಿಸಿದ್ದರಿಂದ.

**प्रकाशः** – ननु पीठत्वं नामाधारत्वम् । नहि पञ्चाधिकरण्या अध्यायपादाधारताऽस्तीत्यतः, पीठवत् पीठमिति भावेन तदुपपादयति – **पञ्चाधिकरण्या** इति ।। यद्वा – पञ्चाधिकरण्या अध्यायाद्यनन्तर्भावे तदादौ निवेशो न युक्त इत्याशङ्कानिरासाय प्रवृत्तोऽयं ग्रन्थ इत्यभिप्रेत्य व्याचष्टे – **पञ्चाधिकरण्या** इति ।। **वक्ष्यमाणेति** ।। प्रत्यधिकरणं वक्ष्यमाणरीत्या ईक्षत्यधिकरणस्याऽऽदिभागे वा वक्ष्यमाणरीत्या युक्तक्रमत्वादित्यर्थः । उत्तराधिकरणेन तयोः सत्त्वात् कथं न स्त इत्यत आह – **पूर्वेति** ।। एतस्य स्पष्टत्वाट्टीकायामेतदुक्तिरयुक्तेत्याशङ्क्य,

परमतप्रतिक्षेपस्तत्फलमिति भावेनाह – एतेनेति ।। सङ्गत्यभावकथनेनेत्यर्थः "स्वाध्यायोऽध्येतव्यः" इत्यस्य दृष्टार्थत्वेन स्वाध्यायाध्ययनेन फलवदर्थावबोधं भावयेत् इत्यर्थस्य पूर्वतन्त्रे निर्णीतत्वेन वेदान्तानामपि स्वाध्यायशब्दवाच्यत्वेन वेदान्ताध्ययनेन फलवदर्थावबोधं भावयेदित्यर्थपर्यवसानादर्थज्ञानं च विना विचारं न सम्भवतीति विचाराक्षेपादित्यर्थः ।। विशेषत इति ।। कीदृशार्थावबोधः सम्पाद्य इति सन्दिह्यमानैरित्यर्थः।

गुरुराजीय – नन्वध्यायाद्यनाधारत्वात् पञ्चाधिकरण्याः कथमध्यायादिपीठत्वम्! इत्यतः पीठवत् पीठमिति गौणीमाश्रित्य तदुपपादयति – पञ्चाधिकरण्या इति ।। उत्तराधिकरणसङ्गतेः सत्त्वात् कथं तन्निषेध इत्यत आह ।। पूर्वाधिकरणेति ।। श्रुतिमूलत्वातिरिक्तेति ।। इह टीकायां पूर्वाधिकरणतद्विषयवाक्यसङ्गत्यभावस्यैवोक्तत्वेन तत्रास्याप्रतिपन्नत्वादिति भावः ।

ವಿವರಣೆ - ಪ್ರಾರಂಭದ ಐದು ಅಧಿಕರಣಗಳು ಅಧ್ಯಾಯಕ್ಕೆ ಮತ್ತು ಪಾದಕ್ಕೆ 'ಪೀಠ' ಎಂದು ಹೇಳಿದ್ದಾರೆ. 'ಪೀಠ' ಎಂದರೆ 'ಆಧಾರ' ಎಂದರ್ಥ. ಈ ಐದು ಅಧಿಕರಣಗಳು ಅಧ್ಯಾಯಕ್ಕೆ ಮತ್ತು ಪಾದಕ್ಕೆ ಹೇಗೆ ತಾನೆ ಆಧಾರವಾಗಲು ಸಾಧ್ಯ? ಎಂಬ ಪ್ರಶ್ನೆ ಬಂದರೆ ಇಲ್ಲಿ ಪೀಠಶಬ್ದಕ್ಕೆ ಆಧಾರವೆಂದು ಅರ್ಥವಲ್ಲ ಪೀಠದಂತೆ ಇರುವ 'ಪೀಠಿಕೆ' ಎಂದರ್ಥ. ಪ್ರತಿಮಾದಿಗಳಿಗೆ ಪೀಠವು ಹೇಗೆ ಆಧಾರವಾಗಿರುತ್ತದೋ, ಅದರಂತೆ ಇಲ್ಲಿಯೂ ಪಂಚಾಧಿಕರಣಗಳು ಸಮಗ್ರ ಮೀಮಾಂಸಾಶಾಸ್ತ್ರಕ್ಕೆ ಆಧಾರವಾಗಿದೆ. ಇಲ್ಲಿರುವ ಪೀಠಶಬ್ದಕ್ಕೆ 'ಪೀಠಿಕೆ' ಎಂದರ್ಥ.

ಅಥವಾ ಈ ಐದು ಅಧಿಕರಣಗಳು ಅಧ್ಯಾಯ ಮತ್ತು ಪಾದದಲ್ಲಿ ಸೇರದಿದ್ದರೆ ಅಧ್ಯಾಯ ಪಾದ ಪ್ರಾರಂಭದಲ್ಲಿ ಉಲ್ಲೇಖಿಸುವುದು ಅನಾವಶ್ಯವೆಂಬ ಆಶಂಕೆಯನ್ನು ಪರಿಹರಿಸಲು 'ಪಂಚಾಧಿ-ಕರಣ್ಯಾ' ಎಂಬ ಮಾತು ಹೊರಟಿದೆ. ಪೀಠವಾದ್ದರಿಂದ ಪ್ರಾರಂಭದಲ್ಲಿ ಹೇಳುವುದೇ ಸೂಕ್ತವಾಗಿದೆ.

ಅಧಿಕರಣಸಂಗತಿ ಹಾಗು ಶ್ರುತಿಸಂಗತಿಗಳು ಪ್ರಥಮಸೂತ್ರಕ್ಕೆ ಇಲ್ಲವೆಂದು ಹೇಗೆ ಹೇಳುತ್ತೀರಿ ಎಂದು ಆಶಂಕಿಸಿದರೆ 'ಪೂರ್ವಾಧಿಕರಣ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹಿಂದಿನ ಅಧಿಕರಣದಿಂದ ಹಾಗು ಹಿಂದಿನ ಅಧಿಕರಣದ ವಿಷಯವಾಕ್ಯದಿಂದ ಸಂಗತಿ ಇಲ್ಲವೆಂದಷ್ಟೇ ಅರ್ಥ.

ಇದು ಪ್ರಥಮಸೂತ್ರವಾದ್ದರಿಂದಲೇ ಹಿಂದಿನ ಅಧಿಕರಣದಿಂದ ಸಂಗತಿ ಇಲ್ಲವೆಂಬುದು ಸ್ಪಷ್ಟ. ಅದನ್ನು ಇಲ್ಲವೆಂದು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆ ಏನು? ಎಂದರೆ ಕಲ್ಪತರುವನ್ನು ನಿರಾಕರಿಸುವ ಉದ್ದೇಶದಿಂದ ಹೀಗೆ ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

ಕಲ್ಪತರುಕಾರನ ಅಭಿಪ್ರಾಯ ಹೀಗಿದೆ - ಮೊದಲನೇ ಸೂತ್ರದ ವಿಷಯವಾಕ್ಯ 'ಸ್ವಾಧ್ಯಾಯೋಽಧ್ಯೇತವ್ಯಃ'ಎಂಬ ಶ್ರುತಿಗೆ 'ವೇದಾಧ್ಯಯನ ಮಾಡಿ ವೇದಾರ್ಥಜ್ಞಾನವನ್ನು ಪಡೆಯಬೇಕು' ಎಂದರ್ಥ. ಏಕೆಂದರೆ ಅಧ್ಯಯನಕ್ಕೆ ದೃಷ್ಟಫಲ ಬಿಟ್ಟು ಅದೃಷ್ಟ ಫಲವನ್ನು ಅಂಗೀಕರಿಸಿಲ್ಲ. ನಿತ್ಯಕರ್ಮಾಚರಣೆಯಿಂದ ಪ್ರತ್ಯವಾಯದ ನಿವೃತ್ತಿ ಮಾತ್ರ ಫಲ ಹೊರತು ಅದೃಷ್ಟ ಫಲವನ್ನು ಒಪ್ಪಿಲ್ಲ. ಹಾಗಾಗಿ ಈ ಅಧ್ಯಯನ-ವಿಧಿಯೂ ನಿತ್ಯಕರ್ಮವಾದ್ದರಿಂದ ಅರ್ಥಜ್ಞಾನವೆಂಬ ದೃಷ್ಟಫಲವನ್ನು ಬಿಟ್ಟು ಬೇರೆ ಫಲವನ್ನು ಒಪ್ಪದಾರದೆಂದು ಪೂರ್ವಮೀಮಾಂಸೆಯಲ್ಲಿ ನಿಶ್ಚಯಿಸಿದ್ದಾರೆ. ವೇದಾಂತವು ವೇದವೇ ಆಗಿರುವು-ದರಿಂದ ವೇದಾಂತಾಧ್ಯಯನದಿಂದಲೂ ಅರ್ಥಜ್ಞಾನವನ್ನು ಪಡೆಯಬೇಕೆಂದು ವಿಧಿವಾಕ್ಯವು ಹೇಳಿದಂತಾಯಿತು. ಈ ಅರ್ಥಜ್ಞಾನವು ವಿಚಾರ ಮಾಡದೆ ಉಂಟಾಗದು. ಹೀಗೆ ಶ್ರುತಿಯು ವಿಚಾರವನ್ನು ಆವಶ್ಯಕವೆಂದು ಸಮರ್ಥಿಸಿದೆ. ಶ್ರುತಿಯಲ್ಲಿ ಹೇಳಿದ ವಿಚಾರವನ್ನೇ ಈ ಸೂತ್ರವು ವಿಧಾನ ಮಾಡುತ್ತಿರುವುದರಿಂದ ಈ ಸೂತ್ರಕ್ಕೆ ಶ್ರುತಿಸಂಗತಿ ಇದೆಯೆಂದು ಕಲ್ಪತರುವಿನ ಅಭಿಪ್ರಾಯವಾಗಿದೆ. ಆದರೆ ಇದರಿಂದ ಸೂತ್ರಮೂಲತ್ವವನ್ನು ತೋರಿಸಿದಂತಾಯಿತೇ ಹೊರತು ಶ್ರುತಿಮೂಲತ್ವವನ್ನು ತೋರಿಸಿದಂತಾಗಲಿಲ್ಲ.

## ಸಾರ

ಸಮನ್ವಯ ಸೂತ್ರದಲ್ಲಿ ಸಮನ್ವಯದ ಪ್ರಸ್ತಾವ ಇದೆ. ಈಕ್ಷತಿ ಸೂತ್ರದಲ್ಲಿ ಸಮನ್ವಯಕ್ಕೆ ಬಾಧಕವಾದ ಅವಾಚ್ಯತ್ವವನ್ನು ಪರಿಹಾರ ಮಾಡಿದೆ. ಆದರಿಂದ ಎರಡಕ್ಕೂ ಸಮನ್ವಯಾಧ್ಯಾಯದ ಸಂಗತಿ ಇದೆ. ಪಾದಸಂಗತಿ ಇಲ್ಲ. ಆನಂದಮಯಾಧಿಕರಣದಿಂದ ತೊಡಗಿ ಮುಂದಿನ ಎಲ್ಲ ಅಧಿಕರಣಗಳಿಗೂ ಅಧ್ಯಾಯ-ಪಾದಸಂಗತಿಗಳೆರಡೂ ಇವೆ. ಹೀಗಾಗಿ ಹಿಂದಿನ ಐದು ಅಧಿಕರಣಗಳು ಪ್ರಥಮಾಧ್ಯಾಯಕ್ಕೂ ಪೀಠಿಕಾರೂಪ-ವಾಗಿವೆ. ಮೊದಲನೆ ಅಧಿಕರಣ ವಿಚಾರದ ಅವಶ್ಯಕತೆಯನ್ನು ಸಮರ್ಥಿಸುತ್ತದೆ. ಮುಂದೆ ನಾಲ್ಕು ಅಧಿಕರಣಗಳು ಕ್ರಮದಿಂದ ಬರುತ್ತವೆ. ಬಳಿಕ ಸಮನ್ವಯ ಹೇಗೆ ಎಂಬ ಜಿಜ್ಞಾಸೆ ಬಂದಾಗ ಪ್ರಥಮಾಧ್ಯಾಯದ ಮತ್ತು ಅದರ ಆದಿಯ ನಾಮಪಾದಗಳ ಪ್ರವೃತ್ತಿ.

ಪ್ರಥಮಸೂತ್ರಕ್ಕೆ ಪೂರ್ವಾಧಿಕರಣದ ಮತ್ತು ಅದು ವಿಚಾರಿಸುವ ಶ್ರುತಿಯ ಸಂಗತಿ ಇರಲು ಶಕ್ಯವಿಲ್ಲ. ಆದರಿಂದ 'ಅಧಿಕರಣ ಶ್ರುತಿ ಸಂಗತಿಗಳಿಲ್ಲ' ಎಂದು ಟೀಕೆಯಲ್ಲಿ ಹೇಳಿದ್ದೇಕೆ ಎಂದರೆ 'ಕಲ್ಪತರು'ವಿನಲ್ಲಿ ಶ್ರುತಿ ಸಂಗತಿಯನ್ನು ಹೇಳಿದೆ. ಅದು ಸರಿಯಲ್ಲ -

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಶ್ರುತಿ ವೇದದಿಂದ ಅರ್ಥಜ್ಞಾನ ಪಡೆಯಬೇಕೆಂದಿದೆ. ವಿಚಾರವಿಲ್ಲದೆ ಅರ್ಥಜ್ಞಾನ ಬರಲಾರದೆಂದಮೇಲೆ ಶ್ರುತಿಯ ವಿಚಾರದ ಅವಶ್ಯಕತೆಯನ್ನು ನಿರ್ಣಯಮಾಡಿ ಹೇಳಿದಂತಾಯಿತು. ಈ ಅಧಿಕರಣವೂ ಅದೇ ಕಾರ್ಯಮಾಡುವುದರಿಂದ ಶ್ರುತಿಸಂಗತಿ ಬಂದಿತು ಎಂದು 'ಕಲ್ಪತರು' ಹೇಳಿದೆ. ಆದರೆ ಇದು ಶ್ರುತಿಮೂಲತ್ವವೆ ಹೊರತು ಶ್ರುತಿಸಂಗತಿಯಲ್ಲ.

ವಿಷಯ ಸಂದೇಹ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ ಇವು ಐದು ಸೇರಿದರೆ ಅಧಿಕರಣವೆನಿಸುತ್ತದೆ ಎಂದು ಪ್ರಸಿದ್ಧಿ. ಆದರೆ ಇದು ಪರಮತಾನುಸಾರಿ. ನಮ್ಮ ಸಿದ್ಧಾಂತದಲ್ಲಿ ಅಧಿಕರಣದೊಳಗೆ ಸಂದೇಹ-

ಬೀಜವನ್ನು ಸೇರಿಸಬೇಕು. ಪ್ರಯೋಜನವನ್ನು ಬಿಡಬೇಕು. ಏಕೆಂದರೆ ಪ್ರಯೋಜನ ಅಧಿಕರಣದ ... ಹೊರತು ಅಧಿಕರಣದ ಶರೀರದಲ್ಲಿ ಅದು ಸೇರುವುದಿಲ್ಲ.

• • • • •

## ಪೂರ್ವಪಕ್ಷ ಸಿದ್ಧಾಂತಗಳ ಉಪನ್ಯಾಸ

**तात्पर्यचन्द्रिका –**

**सन्देहबीजपूर्वस्य टीकादावेव कीर्तनात् ।**
**अस्माभिः पूर्वपक्षश्च सिद्धान्तश्च विविच्यते ॥**

**उपन्यासमुखेनैव टीकार्थोऽपि निरूप्यते ।**
**पूर्वपक्षादिमेयानामविक्षिप्तत्वसिद्धये ॥**

ಅನುವಾದ - ಸಂದೇಹಕಾರಣವೇ ಮೊದಲಾದವುಗಳನ್ನು ಭಾಷ್ಯ,ಟೀಕೆಯಲ್ಲಿಯೇ ಹೇಳು... ವುದರಿಂದ ನಾವು ಇಲ್ಲಿ ಪೂರ್ವಪಕ್ಷವನ್ನು ಮತ್ತು ಸಿದ್ಧಾಂತಗಳನ್ನು ವಿವೇಚನೆ ಮಾಡುತ್ತೇವೆ.

ಉಪನ್ಯಾಸಶೈಲಿಯಿಂದ ಟೀಕೆಯ ಅರ್ಥವನ್ನು ವರ್ಣಿಸುತ್ತೇವೆ. ಇದರಿಂದ ಪೂರ್ವಪ... ಹಾಗು ಸಿದ್ಧಾಂತ ಪ್ರಮೇಯಗಳನ್ನೆಲ್ಲಾ ಒಂದೇ ಕಡೆ ಸೇರಿಸಿಕೊಟ್ಟಂತಾಗುತ್ತದೆ. ತತ್ವಪ್ರಕಾ... ಮತ್ತು ಭಾಷ್ಯವನ್ನು ನೋಡಿದಾಗ ಅಧಿಕರಣರಚನೆಗೆ ಅವಶ್ಯಕವಾದ ವಿಷಯ ಪ್ರಯೋಜನಾ... ಗಳೆಲ್ಲವು ಸ್ಪಷ್ಟವಾಗಿಯೇ ತಿಳಿಯುತ್ತವೆ. ಪುನಃ ಇಲ್ಲಿ ಅದನ್ನು ಹೇಳುವ ಅವಶ್ಯಕತೆಯಿ... ಆದ್ದರಿಂದ ಪೂರ್ವಪಕ್ಷ ಸಿದ್ಧಾಂತಗಳನ್ನಷ್ಟೇ ಇಲ್ಲಿ ಹೇಳುತ್ತೇವೆ. ಅದನ್ನೂ ಟೀಕಾದ... ಹೇಳಿರಬೇಕಾದರೆ ಪುನಃ ನೀವು ಏನನ್ನು ಹೇಳುತ್ತೀರಿ? ಅಂದರೆ ನಾವು ಉಪನ್ಯಾಸಶೈಲಿಯ... ಹೇಳಲು ಹೊರಟಿದ್ದೇವೆ. ಹಾಗಾದರೆ ನೇರವಾಗಿಯೇ ಟೀಕಾವ್ಯಾಖ್ಯಾನವನ್ನು ಮಾಡಿ... ಪೂರ್ವಪಕ್ಷ ಸಿದ್ಧಾಂತಗಳ ಮೂಲಕ ಏಕೆ? ಎಂದರೆ ಸೂತ್ರಪ್ರಸ್ಥಾನಕ್ಕೆ ಸಂಬಂಧಪಟ್ಟ ಎಲ್ಲಾ ಭಾಷ್ಯ... ಟೀಕೆಗಳಲ್ಲಿ ಒಂದೊಂದು ಕಡೆ ಒಂದೊಂದು ವಿಚಾರಗಳು ವಿಕ್ಷಿಪ್ತವಾಗಿವೆ. ಅವೆಲ್ಲವನ್ನು ... ಸಂಗ್ರಹಿಸುತ್ತಿದ್ದೇವೆ. ಆದ್ದರಿಂದ ಸಾರ್ಥಕ.

### ಕಠಿಣಪದಾರ್ಥ

ಸಂದೇಹಬೀಜಪೂರ್ವಸ್ಯ = ಸಂದೇಹದ ಕಾರಣ ಮೊದಲಾದವುಗಳನ್ನು. ಉಪನ್ಯಾಸಮುಖೇನೈವ = ಟೀಕೆಯ ಅಭಿಪ್ರಾಯವನ್ನು ಉಪನ್ಯಾಸ ಶೈಲಿಯಿಂದ (ಪದಶಃ ಅರ್ಥವನ್ನು ಹೇಳದೆ). ಅವಿಕ್ಷಿಪ್ತತ್ವಸಿದ್ಧಯೇ = ಒಂದೇ ಕಡೆ ಸಿಗುವಂತೆ.

*ಪರಿಪೂರ್ಣಚಂದ್ರಿಕಾ*

**प्रकाशः** – शिष्यमनस्समाधानायाधिकरणरचनाप्रकारमाह – **सन्देहेति** ।। 'सन्देहस्य यद् बीजं कारणं तदेव पूर्वं यस्य तस्य' इत्यर्थः । शास्त्रादिसङ्गतिफलादिः पूर्वशब्दार्थः । आदिपदाद् भाष्ये । ननु व्याख्यानाय प्रवृत्तस्य किमनेन? इत्यत आह – **उपन्यासेति** ।। तत्र हेतुमाह – **पूर्वपक्षेति** ।।

**गुरुराजीय** – अधिकरणाङ्गतया पूर्वपक्षसिद्धान्तयोरिवावश्यं विवेचनीयस्य विषयादेरविवेचनेन प्रसक्तां न्यूनत्वशङ्कां तन्निमित्तोक्त्या परिहरन्नेव पूर्वपक्षादि-विवेचनं प्रतिजानीते – **सन्देहेति** ।। पूर्वशब्देन विषयादिपरिग्रहः । विषयादेरित्यनुक्त्वा सन्देहबीजपूर्वस्येतिवचनं विषयादिपञ्चकान्तर्गतं सन्देहबीजमेव न प्रयोजनम् । तस्याधिकरणफलत्वेन तदवयवत्वाभावादिति ज्ञापनार्थम् । यत्तु न्यायामृते अखण्डार्थत्वभङ्गे परमते विषयादिपञ्चकाभावादिति प्रतिज्ञातविषयाद्य-भावोपपादनावसरे अत्रापि च समन्वयाधिकरणे परमतनिरासावसरे प्रयोजना-भावप्रतिपादनं तत्तु प्रयोजनस्यविषयादिपञ्चकान्तर्भाव इत्येकदेशिमतमाश्रित्य कृतम् । अत एव तन्त्रचूडामण्यादिषु उक्तरूपमेकदेशिमतं प्रयोजनस्याधिकरण-फलतया तदङ्गत्वाभावादिति युक्त्या प्रदूष्य सन्देहबीजं पञ्चकान्तर्गतमिति मुख्यं मतमुपन्यस्तमिति द्रष्टव्यम् । टीकादौ इत्यादिपदेन भाष्यपरिग्रहः । उपन्यासमुखेनैव टीकार्थस्य कथने हेतुमाह – पूर्वपक्षेति ।। एवं टीकोक्ता सङ्गतिः समर्थिता ।

ವಿವರಣೆ - ಶಿಷ್ಯರ ಮನಸ್ಸನ್ನು ಸಮಾಧಾನ ಪಡಿಸಲು ಅಧಿಕರಣಗಳ ರಚನೆಯ ಪ್ರಕಾರವನ್ನು ಎರಡು ಶ್ಲೋಕಗಳಿಂದ ತೋರಿಸುತ್ತಿದ್ದಾರೆ -

ಒಂದು ಅಧಿಕರಣವಾಗಬೇಕಾದರೆ, ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ, ಇವು ಐದು ಇರಬೇಕೆಂಬುದು ಪ್ರಸಿದ್ಧವಾದ ವಿಷಯ. ಆದರೆ ಇದು ಪರರ ವಾದ. ನಮ್ಮ ಪ್ರಕಾರ ಪ್ರಯೋಜನವು ಈ ಐದರಲ್ಲಿ ಸೇರುವುದಿಲ್ಲ. ಅದರ ಬದಲು ಸಂದೇಹಬೀಜವನ್ನು ಹೇಳುತ್ತೇವೆ. ಏಕೆಂದರೆ ಪ್ರಯೋಜನವು ಅಧಿಕರಣದ ಫಲವೇ ಹೊರತು ಅಧಿಕರಣದ ಶರೀರದಲ್ಲಿ ಅದು ಸೇರುವುದಿಲ್ಲ.

ಪ್ರಶ್ನೆ :- ನ್ಯಾಯಾಮೃತದಲ್ಲಿ ಅಖಂಡಾರ್ಥವಾದದಲ್ಲಿ ಪರಮತವನ್ನು ನಿರಾಕರಿಸಬೇಕಾದರೆ ವಿಷಯಾದಿಪಂಚಕಗಳನ್ನು ಇಲ್ಲವೆನ್ನುತ್ತಾ ಪ್ರಯೋಜನವನ್ನು ಇಲ್ಲವೆಂದು ಹೇಳಲಾಗಿದೆ. ಮತ್ತು ಇಲ್ಲಿಯೇ ಮುಂದೆ ಸಮನ್ವಯಾಧಿಕರಣದಲ್ಲಿ ಪರಮತ ನಿರಾಕರಣೆ ಮಾಡುವಾಗ ನಿಮ್ಮಲ್ಲಿ ಪ್ರಯೋಜನವಿಲ್ಲವೆಂದು ನಿರಾಕರಿಸಲಾಗಿದೆ. ಹೀಗೆ ಪ್ರಯೋಜನವು ಅಂಗವಾಗದ ಕಾರಣ ಅದನ್ನೇಕೆ ನಿರಾಕರಿಸಬೇಕಿತ್ತು?

ಉತ್ತರ :- ಯಾರು ಪ್ರಯೋಜನವನ್ನು ವಿಷಯಾದಿಪಂಚಕಗಳಲ್ಲಿ ಸೇರಿಸುತ್ತಾರೋ, ... ಮತವನ್ನು ಅಂಗೀಕರಿಸಿ ಅಲ್ಲಿ ಪ್ರಯೋಜನದ ನಿರಾಕರಣೆ ಮಾಡಿದ್ದೇ, ಹೊರತು ನಮ್ಮ ... ಪ್ರಕಾರ ಅಲ್ಲಿ ನಿರಾಕರಿಸಿದ್ದಲ್ಲ. ಆದ್ದರಿಂದಲೇ ತಂತ್ರಚೂಡಾಮಣಿ ಮೊದಲಾದ ಗ್ರಂಥ... ಪ್ರಯೋಜನವು ಅಧಿಕರಣದ ಫಲವೇ ಹೊರತು ಅಧಿಕರಣದ ಅಂಗವಲ್ಲವೆಂದು ಸಮ... ಸಂದೇಹಬೀಜವನ್ನು ಅಧಿಕರಣದ ಅಂಗವನ್ನಾಗಿ ಸಮರ್ಥಿಸಿದ್ದಾರೆ.

ಆದ್ದರಿಂದಲೇ ವ್ಯಾಸತೀರ್ಥರು ಇಲ್ಲಿ 'ಸಂದೇಹಬೀಜಸ್ಯ' ಎಂದು ಹೇಳಿದರು. ಇಲ್ಲ... ವಿಷಯಾದಿಗಳು ಎಂದು ಹೇಳುತ್ತಿದ್ದರು. (ಅಥವಾ ರಾಯರು ಹೇಳುವಂತೆ 'ಸಂದೇಹಬೀಜಸ್ಯ' ... ಶಾಸ್ತ್ರಸಂಗತಿ,ಪ್ರಯೋಜನ ಮುಂತಾದವುಗಳು ಎಂದೂ ಅರ್ಥೈಸಬಹುದು.)

### ಜಿಜ್ಞಾಸಾಧಿಕರಣದಲ್ಲಿ ಸಂಶಯ ಮತ್ತು ವಿಷಯ

**तात्पर्यचन्द्रिका –**

**अत्र वेदार्थनिर्णायकन्यायग्रथनात्मकमिदं शास्त्रमनारम्भणीयम् उतारम्भणीयमिति चिन्ता । तदर्थं न्यायानुसन्धानरूपविचारो न कर्तव्य उत कर्तव्य इति । तदर्थं विचारविधेः विषयादिकं न सम्भवति उत सम्भवतीति । तदर्थं विषयभूतं ब्रह्म किं प्रत्यगर्थभूतजीव एव उत तदन्यदिति । यदि ब्रह्म प्रत्यगर्थ एव, तदा तस्य निश्चितत्वेन विषयाद्यसम्भवाच्छास्त्रमनारम्भणीयमिति पूर्वपक्षे फलफलिभावः । यदितु ब्रह्म प्रत्यगर्थादन्यत्, तदा प्रत्यगर्थस्य जीवस्य निश्चितत्वेऽपि ब्रह्मणो विषयत्वसम्भवात् शास्त्रमारम्भणीयमिति सिद्धान्ते फलफलिभावः । एवमुत्तरत्रापि फलफलिभाव ऊह्यः । यत्र त्वस्पष्टः तत्र वक्ष्यते ।**

ಅನುವಾದ - ಈ ಅಧಿಕರಣದಲ್ಲಿ ವೇದಾರ್ಥನಿರ್ಣಾಯಕವಾದ ನ್ಯಾಯಗ್ರಥನಾತ್ಮಕವಾದ ಈ ಶಾಸ್ತ್ರವು ಅನಾರಂಭಣಿಯವೋ, ಅಥವಾ ಆರಂಭಣೀಯವೋ? ಎಂಬುದೇ ಪ್ರಧಾನವಾ... ಸಂಶಯ. ಈ ಸಂಶಯವು ಪರಿಹಾರವಾಗಬೇಕೆಂದರೆ ನ್ಯಾಯಾನುಸಂಧಾನರೂಪವಾ... ವಿಚಾರವನ್ನು ಮಾಡಬೇಕೊ, ಬೇಡವೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯವು ಪರಿಹಾರವಾಗಬೇಕೆಂದರೆ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಿಧಿಗೆ ವಿಷಯ ಪ್ರಯೋಜನಾದಿಗಳು ಇವೆಯೋ? ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯ... ಪರಿಹಾರವಾಗಬೇಕೆಂದರೆ ವಿಷಯನಾದ ಬ್ರಹ್ಮನು ಶಾರೀರಕನಾದ ಜೀವನೊ? ಅಥವಾ ಜೀವನಿಗಿಂತ ಭಿನ್ನನೊ? ಎಂಬ ಸಂಶಯವು ಪರಿಹಾರವಾಗಬೇಕು. ಒಂದು ವೇಳೆ ಬ್ರಹ್ಮ...

ಜೀವನೇ ಆದಲ್ಲಿ ಜೀವನು ನಿಶ್ಚಿತನಾದ್ದರಿಂದ ಸಂಶಯ ವಿಷಯಗಳು ಕೂಡದ ಕಾರಣ ಶಾಸ್ತ್ರವು ಅನಾರಂಭಣೀಯವೆಂದು ಪೂರ್ವಪಕ್ಷದಲ್ಲಿ ಫಲಫಲಿಭಾವವನ್ನು ತಿಳಿಯಬೇಕು.

ಒಂದು ವೇಳೆ ಬ್ರಹ್ಮನು ಜೀವನಿಗಿಂತ ಭಿನ್ನನಾದಲ್ಲಿ ಆವಾಗ ಶಾರೀರಿಕನಾದ ಜೀವನು ನಿಶ್ಚಿತನಾಗಿದ್ದರೂ, ಅಶರೀರಿಯಾದ್ದರಿಂದ ಬ್ರಹ್ಮನು ವಿಷಯನಾಗಬಹುದು. ಆವಾಗ ಶಾಸ್ತ್ರವು ಆರಂಭಣೀಯವಾಗುತ್ತದೆ ಎಂದು ಸಿದ್ಧಾಂತದಲ್ಲಿ ಫಲಫಲಿಭಾವವನ್ನು ತಿಳಿಯಬೇಕು.

ಇದೇ ರೀತಿಯಾಗಿ ಮುಂದಿನ ಅಧಿಕರಣಗಳಲ್ಲಿಯೂ ಫಲಫಲಿಭಾವದ ಕ್ರಮವನ್ನು ತಿಳಿಯಬೇಕು. ಅಸ್ಪಷ್ಟವಾದ ಕಡೆ ನಾವೇ ಹೇಳುತ್ತೇವೆ.

### ಕಠಿಣಪದಾರ್ಥ

**ಅತ್ರ** = ಈ ಜಿಜ್ಞಾಸಾಧಿಕರಣದಲ್ಲಿ. **ವೇದಾರ್ಥನಿರ್ಣಾಯಕನ್ಯಾಯಗ್ರಥನಾತ್ಮಕಮ್** = ವೇದಾರ್ಥವನ್ನು ನಿರ್ಣಯಿಸುವ ನ್ಯಾಯಗಳ ಉಲ್ಲೇಖರೂಪವಾದ. **ಚಿಂತಾ** = ಸಂಶಯ, **ತದರ್ಥಮ್** = ಎರಡು ಕೋಟಿಗಳಲ್ಲಿ ಒಂದನ್ನು ನಿರ್ಣಯಿಸುವುದಕ್ಕಾಗಿ. **ವಿಚಾರವಿಧೇಃ** = ತದ್ವಿಜಿಜ್ಞಾಸಸ್ವ ಎಂಬ ವಿಚಾರ ವಿಧಿಗೆ.

**प्रकाशः** – अत्रेति ।। एतदधिकरण इत्यर्थः । ''शास्त्रम्'' इत्यन्तं विषयः । अत्र सर्वत्र पूर्वोक्ता पूर्वपक्षकोटिः । पश्चात्तनी सिद्धान्तकोटिरित्यवसेयम् । यद्यपि टीकायां ''जिज्ञासा विषयः'' इत्येवोक्तं, नतु शास्त्रम् । तथाऽपि सुधायां किमिदमारम्भणीयं नवा' इति शास्त्रं विषयतया स्वीकृत्य, तादर्थ्येन जिज्ञासा कर्तव्या नवेत्युक्तत्वात्, टीकायामपि ''प्रारिप्सिततया चित्तसङ्गतशास्त्रे प्रवर्तनीया'' इत्यनेन, प्रथमतः शास्त्र एव कर्तव्यत्वादि(आरम्भणीयत्वादि)कोटिकसन्देहस्य सूचितत्वात् पूर्वपक्षोपसंहारे च ''अतो न ब्रह्मजिज्ञासा कर्तव्येति नैतच्छास्त्रमारम्भणीयम्'' इति जिज्ञासाया अकर्तव्यत्वस्य शास्त्रानारम्भे हेतुत्वोक्त्या शास्त्रानारम्भोपसंहाराच्चैवमुक्तम् । जिज्ञासायाः साक्षाद्विषयत्वोक्तिस्तु टीकायां, सूत्रे तस्या एव प्राधान्येनोपादानात् । सूत्रे च श्रुत्यनुसारात् सैवोपात्ता । भाष्ये च तस्या एव कर्तव्यत्वसमर्थनाच्चेति । 'इदम्' प्रारिप्सिततया चित्तसङ्गतम् । 'वेदार्थ' इत्यादि तु वक्ष्यमाणनिर्विषयत्वरूपहेतुविशदीकरणायेति ध्येयम् । पूर्वपक्षादिप्रमेयस्य निष्कृष्टतया हृद्यारोहाय तदर्थचिन्तामाह – तदर्थमिति ।।

यद्यप्ययं सन्देहो न ग्रन्थकर्तुः । सर्वज्ञत्वात् तस्य । नापि परस्य शास्त्रस्यैवानाकलनात् । तथाऽपि शास्त्रनिर्वृत्त्यनन्तरं तद् दृष्ट्वा परः सन्दिहानं तदीयसन्देहप्रदर्शनमेतदिति सुधायामेवोक्तम् । 'विचारविधेः' 'तद् विजिज्ञासस्व' इत्यादिविधेरित्यर्थः । 'विषयादि' इत्यादिपदेन फलाधिकारसम्बन्धाः ग्राह्याः विषयभूतं ब्रह्मेति ।। विचारविधौ ब्रह्मपदश्रवणान्निर्धारणोक्तिः । पूर्वपूर्वकोटिद्वय प्रत्युत्तरोत्तरकोटिद्वयस्य हेतुत्वमाह ।। यदीति ।। ननु 'तदर्थं विषयभूतं ब्र' इत्यत्र, तदर्थं प्रयोजनभूतो मोक्षश्च किं कर्मसाध्यः? उत ज्ञानसाध्यः । यदि कर्मसाध्यः तदा ज्ञानहेतुविचारो न कर्तव्यः । यदि ज्ञानसाध्यः, तदा विचार कर्तव्य इति, साऽपि कुतो नोपदर्शितेति चेत्, विषयचिन्तोक्त्यैव सोक्तप्रायेति वा, स्पष्टत्वाद्वा, "विधैव तु" इत्यादावग्रे तद्विचारस्य सेत्स्यमानत्वाद्वा सा नोक्ता । यद्वा – यथा कर्मसाध्यत्वे विचारो व्यर्थः तथा ज्ञानसाध्यत्वेऽपि वक्ष्यमाणरीत्या ज्ञाने सत्यपि तदभावात् सा नोक्तेति । वस्तुतस्तु-ब्रह्मपदव्यावर्त्यपूर्वपक्षेऽतःपदव्यावृत्त्यानुपयिकत्वात् सा न वाच्यैवेति ।

गुरुराजीय – अधुना 'नैतच्छास्त्रमारम्भणीयम्' इति पूर्वपक्षोपसंहारटीका-सूचितां सुधायां किमिदं शास्त्रमारम्भणीयं न वा इति कण्ठोक्तां मूलचिन्तामाह - अत्राधिकरणे वेदार्थनिर्णायकेत्यादि ।। वेदत्वोपहितः सर्वोऽपीह विचार्यः । ननु 'परमत इवोपनिषद्भाग एव' इति भावेन वेदार्थेत्युक्तम् । यद्यप्ययं संशयो न परस्य भवितुं युक्तः परेण शास्त्रस्याद्याप्यनुपलब्धेः । अनुपलब्धे च धर्मिणि संशयानुदयात् । नापि सूत्रकर्तुः । तस्य विशेषनिर्णयात् । अन्यथा निर्णायकसूत्रप्रणयनानुपपत्तेः । तथापि शास्त्रनिष्पत्त्यनन्तरं यदीदं शास्त्रं परेणोपलभ्येत तदा विशेषस्मृतिमता एवं सन्दिह्येतेति सूत्रकर्तुरिव स्वस्मिन् परकीयसंशयाहरणोपपत्तेरित्यन्यत्र विस्तरः । उपक्रमे टीकोक्ता तु तदर्थचिन्ता, इत्याह – तदर्थमिति ।। 'सन्देहटीकास्थो जिज्ञासाशब्दो भामतीमत इव नेच्छापरः । किन्तु विचारपरः' इति दर्शयितुं विचारपदम् । विचारोऽपि विवरणमत इव न श्रवण किन्तु मननमित्याशयेनोक्तः ।। न्यायानुसन्धानरूपेति ।। टीकायां पूर्वं निर्दिष्टत्वात् कर्तव्यत्वं पूर्वपक्ष इति मन्दाशङ्कां निरस्यति – न कर्तव्य उत कर्तव्य इति ।।

ವಿವರಣೆ - ಜಿಜ್ಞಾಸಾಪದದಲ್ಲಿರುವ 'ಪ್ರಾರಿಪ್ಸಿತತಯಾ ಚಿತ್ರಸಂಗತಶಾಸ್ತ್ರೇ' ಎಂಬ ವಿಶೇಷಣ-ಪದದಿಂದ ಮೊದಲು ಶಾಸ್ತ್ರವು ಆರಂಭಣೀಯವೋ ಅನಾರಂಭಣೀಯವೋ? ಎಂಬ ಚಿಂತೆಯನ್ನು ಇಟ್ಟುಕೊಳ್ಳಬೇಕು. ಇದಾದ ಮೇಲೆ ಜಿಜ್ಞಾಸೆಯು ಕರ್ತವ್ಯವೋ? ಅಕರ್ತವ್ಯವೋ? ಎಂಬ ಸಂಶಯವನ್ನು ವಿವಕ್ಷಿಸಬೇಕೆಂದು ಸೂಚಿಸಿದ್ದಾರೆ. ಮತ್ತು ಟೀಕೆಯಲ್ಲಿ ಪೂರ್ವಪಕ್ಷದ ಉಪಸಂಹಾರದಲ್ಲಿ ಹೀಗೆ ಹೇಳಿದೆ 'ಅತೋ ನ ಬ್ರಹ್ಮಜಿಜ್ಞಾಸಾ ಕರ್ತವ್ಯೇತಿ ನೈತಚ್ಛಾಸ್ತ್ರಮಾರಂಭಣೀಯಮ್' 'ಬ್ರಹ್ಮಜಿಜ್ಞಾಸೆಯು ಅಕರ್ತವ್ಯವಾದ್ದರಿಂದ ಈ ಶಾಸ್ತ್ರವು ಅನಾರಂಭಣೀಯವೆಂದು' ಸ್ಪಷ್ಟವಾಗಿ ಹೇಳಿದ್ದಾರೆ. ಶಾಸ್ತ್ರದ ಅನಾರಾಂಭಣೀಯತ್ವಕ್ಕೆ ಜಿಜ್ಞಾಸೆಯ ಅಕರ್ತವ್ಯತ್ವವನ್ನು ಹೇತುವನ್ನಾಗಿ ಹೇಳಿದ್ದಾರೆ. ಮತ್ತು ಶಾಸ್ತ್ರವು ಅನಾರಂಭಣೀಯವೆಂದು ಉಪಸಂಹಾರ ಮಾಡಲಾಗಿದೆ. ಇದರಿಂದ ಏನು ತಿಳಿಯುತ್ತದೆಂದರೆ ಜಿಜ್ಞಾಸೆಯು ಕರ್ತವ್ಯವೋ? ಅಕರ್ತವ್ಯವೋ? ಎಂಬುದು ಪ್ರಧಾನವಾದ ಸಂಶಯ. ಈ ಸಂಶಯದ ಪರಿಹಾರಕ್ಕೋಸ್ಕರ ಶಾಸ್ತ್ರವು ಆರಂಭಣೀಯವೋ? ಅನಾರಂಭಣೀ- ಯವೋ? ಎಂಬ ಸಂಶಯದ ಪರಿಹಾರ ಆಗಬೇಕೆಂದು ಟೀಕೆಯ ಅಭಿಪ್ರಾಯವಾಗಿದೆ. ಆದ್ದರಿಂದ ಟೀಕೆಗೂ ಚಂದ್ರಿಕೆಗೂ ಯಾವ ವಿರೋಧವೂ ಇಲ್ಲ.

ಪ್ರಶ್ನೆ :- ತತ್ವಪ್ರಕಾಶಿಕೆಯಲ್ಲಿಯೂ ಸಹ ಸುಧೆಯಲ್ಲಿ ಹೇಳಿದಂತೆ ಶಾಸ್ತ್ರವು ಆರಂಭಣೀಯವೋ? ಅನಾರಂಭಣೀಯವೋ? ಎಂದೇ ಸಂದೇಹ ತೋರಿಸಬಹುದಿತ್ತು. ಜಿಜ್ಞಾಸೆಯು ಕರ್ತವ್ಯವೋ? ಅಕರ್ತವ್ಯವೋ? ಎಂದು ತೋರಿಸದೆ ಇರಲು ಏನು ಕಾರಣ?

ಉತ್ತರ :- ಕಾರಣವಿದೆ. ಸೂತ್ರದಲ್ಲಿ ಜಿಜ್ಞಾಸೆಯನ್ನೇ ವಿಷಯವನ್ನಾಗಿ ಸಾಕ್ಷಾತ್ ಹೇಳಿದ್ದಾರೆ. ಅದಕ್ಕೆ ಅನುಗುಣವಾಗಿ ಟೀಕೆಯಲ್ಲಿಯೂ ಜಿಜ್ಞಾಸೆಯನ್ನೇ ವಿಷಯವನ್ನಾಗಿ ಹೇಳಿದ್ದಾರೆ. ಅಷ್ಟೇ ಅಲ್ಲದೆ, ಭಾಷ್ಯದಲ್ಲಿಯೂ ಜಿಜ್ಞಾಸೆಯ ಕರ್ತವ್ಯತ್ವವನ್ನೇ ಚೆನ್ನಾಗಿ ಸಮರ್ಥಿಸಿದ್ದಾರೆ.

ಒಟ್ಟು ಇಷ್ಟು ಅಭಿಪ್ರಾಯ - ಟೀಕೆಯಲ್ಲಿ ಜಿಜ್ಞಾಸೆಯನ್ನೇ ವಿಷಯವನ್ನಾಗಿ ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆ ಬಂದರೆ, ಭಾಷ್ಯದಲ್ಲಿ ಜಿಜ್ಞಾಸೆಯನ್ನೇ ವಿಷಯವನ್ನಾಗಿ ಹೇಳಿರುವುದರಿಂದ ಎಂದು ಉತ್ತರಿಸುತ್ತೇವೆ. ಭಾಷ್ಯದಲ್ಲಿ ಏಕೆ ಹೇಳಿದ್ದಾರೆ? ಎಂದರೆ ಸೂತ್ರದಲ್ಲಿ ಹೇಳಿರುವುದರಿಂದ ಎಂದು ಉತ್ತರ. ಸೂತ್ರದಲ್ಲಿ ಏಕೆ ಹೇಳಿದ್ದಾರೆ? ಎಂದರೆ 'ತದ್‌ವಿಜಿಜ್ಞಾಸಸ್ವ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವದರಿಂದ ಎಂದು ಉತ್ತರ. ಶ್ರುತಿಯಲ್ಲಿ ಹಾಗೇಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಅಪೌರುಷೇಯವಾದ್ದರಿಂದ ಪ್ರಶ್ನೆಯೇ ತಪ್ಪಾಗುತ್ತದೆ.

ಪ್ರಶ್ನೆ :- ಚಂದ್ರಿಕೆಯಲ್ಲಿ 'ಇದಂ ಶಾಸ್ತ್ರಮನಾರಂಭಣೀಯಮುತಾರಂಭಣೀಯಮ್' ಎಂದಿಷ್ಟೇ ಸಾಕಾಗಿತ್ತು. 'ವೇದಾರ್ಥನಿರ್ಣಾಯಕನ್ಯಾಯಗ್ರಥನಾತ್ಮಕಂ' ಎಂಬ ವಿಶೇಷಣವು ಅನಾವಶ್ಯಕವಲ್ಲವೇ?

ಉತ್ತರ :- ಮುಂದೆ 'ವಿಚಾರವಿಧೇಃ ವಿಷಯಾದಿಕಂ ನ ಸಂಭವತಿ ಉತ ಸಂಭವತಿ' ಎಂದು ಹೇಳುತ್ತಾರೆ. ಅಲ್ಲಿರುವ 'ನಿರ್ವಿಷಯತ್ವ' ರೂಪವಾದ ಹೇತುವಿಗೆ ಪೂರಕವಾಗಿ ಇಲ್ಲಿ ಈ ವಿಶೇಷಣ-

ವನ್ನು ಹೇಳಲಾಗಿದೆ. ಈ ವಿಶೇಷಣದಿಂದ ವೇದದ ವಿಷಯವೇ ಶಾಸ್ತ್ರ ಮತ್ತು ವಿಚಾರ ವಿಷಯವೆಂದು ತಿಳಿಯುತ್ತದೆ.

ಪೂರ್ವಪಕ್ಷಪ್ರಮೇಯವಾಗಲೀ ಸಿದ್ಧಾಂತಪ್ರಮೇಯವಾಗಲೀ ನಿಷ್ಕೃಷ್ಟವಾಗಿ ಮನಸ್ಸಿಗೆ ಬರಬೇಕೆಂದರೆ ತದರ್ಥಚಿಂತೆಗಳನ್ನು ಮಾಡಬೇಕು. ಕೇವಲ ಒಂದು ಬಗೆಯ ಸಂಶಯವನ್ನು ತೋರಿಸಿದರೆ ಪೂರ್ವಪಕ್ಷದ ವಿಷಯದಲ್ಲಾಗಲೀ ಸಿದ್ಧಾಂತವಿಷಯದಲ್ಲಾಗಲೀ ಸ್ಪಷ್ಟತೆಯು ಬರುವು ದಿಲ್ಲ. ಆದಕಾರಣ ಪ್ರತಿಯೊಂದು ಅಧಿಕರಣಗಳಲ್ಲಿಯೂ ಚಂದ್ರಿಕಾಚಾರ್ಯರು ತದರ್ಥಚಿಂತೆಗಳನ್ನು ತೋರಿಸುತ್ತಾರೆ.

ಪ್ರಶ್ನೆ :- ಗ್ರಂಥದಲ್ಲಿ ಸಂದೇಹವನ್ನು ತೋರಿಸುವುದು ಏಕೆ? ಈ ಸಂದೇಹವು ಗ್ರಂಥಕಾರರಾದ ವೇದವ್ಯಾಸದೇವರಿಗೆ ಇರಲು ಸಾಧ್ಯವಿಲ್ಲ. ಸರ್ವಜ್ಞರಾದ್ದರಿಂದ ಅವರಿಗೆ ಯಾವ ವಿಷಯದಲ್ಲೂ ಸಂದೇಹವಿಲ್ಲ. ಇನ್ನೂ ಗ್ರಂಥಕಾರರನ್ನು ಬಿಟ್ಟು ಉಳಿದವರಿಗೆ ಸಂಶಯ ಬರುತ್ತದೆಂದು ಹೇಳಬೇಕು. ಆದರೆ ಬೇರೆಯವರಿಗೆ ಶಾಸ್ತ್ರದಲ್ಲಿ ಏನು ಹೇಳಿದ್ದಾರೆಂಬ ಪರಿಕಲ್ಪನೆಯೇ ಇಲ್ಲದಾಗ ಸಂಶಯ ಹೇಗೆ ತಾನೆ ಬರುತ್ತದೆ? ಆದ್ದರಿಂದ ಯಾವ ವ್ಯಕ್ತಿಗೆ ಬರುವ ಸಂಶಯವನ್ನು ಗ್ರಂಥದಲ್ಲಿ ತೋರಿಸುತ್ತಾರೆ?

ಉತ್ತರ :- ಗ್ರಂಥಕಾರರಿಗಂತೂ ಈ ಸಂಶಯವಿಲ್ಲ. ಉಳಿದವರಿಗೆ ಬಂದ ಸಂಶಯವನ್ನೇ ಇಲ್ಲಿ ತೋರಿಸಿದ್ದು. ಗ್ರಂಥಕಾರರು ಸಂಪೂರ್ಣವಾಗಿ ಗ್ರಂಥ ಬರೆದ ಮೇಲೆ ಮತ್ತೊಬ್ಬರು ಆ ಗ್ರಂಥವನ್ನು ನೋಡಿದಾಗ ಸಂಶಯ ಬರುತ್ತದೆ. ಅವರಿಗೆ ಬರುವ ಸಂದೇಹವನ್ನು ಇಲ್ಲಿ ತೋರಿಸಲಾಗಿದೆ. ಮತ್ತೊಬ್ಬರಿಗೆ ಬರುವ ಸಂಶಯಗಳ ಪ್ರಕಾರವನ್ನು ಸೂತ್ರಕಾರರೇ ಉಲ್ಲೇಖಿಸುತ್ತಿದ್ದಾರೆ. ಈ ವಿಷಯವನ್ನು ನ್ಯಾಯಸುಧೆಯಲ್ಲಿ ಹೇಳಿದ್ದಾರೆ.

ಪ್ರಶ್ನೆ :- ನಾಲ್ಕನೇ ಪ್ರಕಾರದ ಸಂಶಯದಲ್ಲಿ ವಿಷಯನಾದವನು ಬ್ರಹ್ಮನೋ? ಜೀವನೋ? ಎಂದು ಹೇಳಲಾಗಿದೆ. ಹಿಂದಿನ ಮೂರು ಪ್ರಕಾರಗಳಲ್ಲಿ ಈ ರೀತಿಯಾದ ನಿರ್ಧಾರವು ತೋರುತ್ತಿಲ್ಲ. ಸಾಧಾರಣವಾಗಿ ಸಂಶಯ ತೋರಿಸಿದ್ದಾರೆ. ಆದರೆ ಇಲ್ಲಿ ಮಾತ್ರ ಬ್ರಹ್ಮನೆಂದು ನಿರ್ಧಾರ ಮಾಡಿ ಹೇಳಿದರು?

ಉತ್ತರ :- ಈ ಅಧಿಕರಣದ ವಿಷಯವಾಕ್ಯ 'ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬುದು ಈ ವಾಕ್ಯದಲ್ಲಿ ಬ್ರಹ್ಮನೆಂದು ಸ್ಪಷ್ಟವಾಗಿಯೇ ಇರುವುದರಿಂದ ವಿಕಲ್ಪದಲ್ಲಿಯೂ ನಿರ್ಧಾರಮಾಡಿಯೇ ಹೇಳಿದ್ದಾರೆ.

ಪ್ರಶ್ನೆ :- 'ತದರ್ಥಂ ವಿಷಯಭೂತಂ ಕಿಂ ಬ್ರಹ್ಮ ಉತ ಪ್ರತ್ಯಗರ್ಥಭೂತಜೀವಃ'? ಎಂದು ನಾಲ್ಕನೇ ಪ್ರಕಾರದ ಸಂಶಯವನ್ನು ತೋರಿಸಿದಂತೆ ಮತ್ತೊಂದು ಸಂಶಯಪ್ರಕಾರವನ್ನು ತೋರಿಸಬಹುದಿತ್ತು. 'ಪ್ರಯೋಜನಭೂತೋ ಮೋಕ್ಷಶ್ಚ ಕಿಂ ಕರ್ಮಸಾಧ್ಯಃ? ಉತ ಜ್ಞಾನಸಾಧ್ಯಃ? ಯದಿ ಕರ್ಮಸಾಧ್ಯಸ್ತದಾ ಜ್ಞಾನಹೇತುವಿಚಾರೋ ನ ಕರ್ತವ್ಯಃ । ಯದಿ ಜ್ಞಾನಸಾಧ್ಯಸ್ತದಾ ವಿಚಾರಃ ಕಾರ್ಯಃ

ಪ್ರಯೋಜನಭೂತವಾದ ಮೋಕ್ಷವು ಕರ್ಮಸಾಧ್ಯವೋ? ಅಥವಾ ಜ್ಞಾನಸಾಧ್ಯವೋ? ಕರ್ಮಸಾಧ್ಯವೆಂದರೆ ಜ್ಞಾನಕ್ಕೆ ಕಾರಣವಾದ ವಿಚಾರವು ಅನಾವಶ್ಯಕ. ಜ್ಞಾನಸಾಧ್ಯವೆಂದರೆ ವಿಚಾರವು ಆವಶ್ಯಕವಾಗುತ್ತದೆ. ಹೀಗೆಯೂ ಸಂಶಯವನ್ನು ತೋರಿಸಲು ಬರುವಾಗ ಏಕೆ ಇದನ್ನು ಉಲ್ಲೇಖಿಸಿಲ್ಲ?

(ಗಮನಿಸಬೇಕಾದ ಅಂಶ - ಮೇಲೆ ಆಕ್ಷೇಪಿಸಿದ ಸಂಶಯಪ್ರಕಾರವು ಐದನೆಯ ತದರ್ಥಚಿಂತೆಯಾಗಲಿ ಎಂದು ಪ್ರಶ್ನೆಯ ಅಭಿಪ್ರಾಯವಲ್ಲ. ಹೊರತು ನಾಲ್ಕನೆಯ ತದರ್ಥಚಿಂತೆಯನ್ನೇ ಹೀಗೂ ಹೇಳಬಹುದೆಂದು ಅಭಿಪ್ರಾಯ. ಗ್ರಂಥಕಾರರೇ ಕೆಲವೆಡೆ - ಮೂರು ನಾಲ್ಕು ತದರ್ಥಚಿಂತೆಗಳನ್ನು ತೋರಿಸಿ, ಅನಂತರ ಒಂದೇ ತದರ್ಥಚಿಂತನೆಯಲ್ಲಿ ವಿಕಲ್ಪ ಮಾಡುತ್ತಾರೆ.)

ಉತ್ತರ :- ಈ ಪ್ರಶ್ನೆಗೆ ನಾಲ್ಕುವಿಧದಲ್ಲಿ ಉತ್ತರಿಸಬಹುದು ೧) ವಿಷಯಚಿಂತೆಯನ್ನು ಹೇಳಿದ್ದ-ರಿಂದಲೇ ಪ್ರಯೋಜನಚಿಂತೆಯನ್ನೂ ಹೇಳಿದಂತಾಯಿತು. ಪ್ರಯೋಜನವು ವಿಷಯದ ಅಧೀನವಾಗಿದೆ. ವಿಷಯದ ಚಿಂತೆಯಿಂದ ಪ್ರಯೋಜನದ ಚಿಂತೆಯು ಸ್ವತಃ ಬರುತ್ತದೆ.

ಅಥವಾ - ೨) ಪ್ರಯೋಜನದ ಚಿಂತೆಯು ಅತ್ಯಂತ ಸ್ಪಷ್ಟವಾದ್ದರಿಂದ ಹೇಳಿಲ್ಲ.

ಅಥವಾ - ೩) 'ವಿದ್ಯೈವ ತು ನಿರ್ಧಾರಣಾತ್' ಎಂಬ ಮೂರನೆಯ ಅಧ್ಯಾಯದ ಸೂತ್ರದಲ್ಲಿ ಇದನ್ನೇ ವಿಚಾರ ಮಾಡಲಾಗಿದೆ. ಜ್ಞಾನವೇ ಮೋಕ್ಷಸಾಧನವೆಂದು ಶ್ರುತಿಯು ನಿರ್ಧರಿಸಿದೆ. ಹೀಗೆ ಮುಂದೆ ಈ ವಿಚಾರವನ್ನು ಹೇಳುವುದರಿಂದ ಇಲ್ಲಿ ಹೇಳಿಲ್ಲ.

ಅಥವಾ - ೪) ಮೋಕ್ಷವು ಕರ್ಮಸಾಧ್ಯವೆಂದು ಹೇಳಿದರೆ ವಿಚಾರವು ವ್ಯರ್ಥ. ಜ್ಞಾನಸಾಧ್ಯವೆಂದು ಹೇಳಿದರೆ ವಿಚಾರವು ಸಾರ್ಥಕವೆಂದು ಹೇಳಬೇಕು. ಆದರೆ ಮುಂದೆ ಪೂರ್ವಪಕ್ಷದಲ್ಲಿ ಬ್ರಹ್ಮನೇ ಜೀವನೆಂದು ಹೇಳಲಾಗುತ್ತೆ. ನಮಗೆ 'ಅಹಂ' ಎಂಬ ಜ್ಞಾನ ಯಾವಾಗಲೂ ಇರುತ್ತದೆ. ಅಂದರೆ ಬ್ರಹ್ಮಜ್ಞಾನವಿದೆಯೆಂದಂತಾಯಿತು. ಆದರೂ ಮೋಕ್ಷವಾಗುತ್ತಿಲ್ಲ. ಆದ್ದರಿಂದ ಕರ್ಮಸಾಧ್ಯತ್ವಪಕ್ಷದಲ್ಲಿ ವಿಚಾರವು ಹೇಗೆ ಅನಾವಶ್ಯಕವೋ ಅದರಂತೆ ಗ್ರಂಥಕಾರರು ಈ ತದರ್ಥಚಿಂತೆಯನ್ನು ಹೇಳಲಿಲ್ಲ. ಈ ತದರ್ಥಚಿಂತೆಯಿಂದ ಫಲಫಲಿಭಾವವನ್ನು ಹೇಳಲಾಗುವುದಿಲ್ಲ.

ನಿಜವಾದ ಪರಿಹಾರ ಹೀಗಿದೆ - ಬ್ರಹ್ಮಪದದಿಂದ ವ್ಯಾವರ್ತ್ಯವಾಗುವ ಪೂರ್ವಪಕ್ಷಕ್ಕೆ ಉಪಯೋಗ-ವಾಗುವ ತದರ್ಥಚಿಂತೆಯನ್ನಷ್ಟೇ ಗ್ರಂಥಕಾರರು ಇಲ್ಲಿ ತೋರಿಸಿದ್ದಾರೆ. ಮೋಕ್ಷ ಕರ್ಮಸಾಧ್ಯವೋ? ಜ್ಞಾನಸಾಧ್ಯವೋ? ಎಂಬ ತದರ್ಥಚಿಂತೆಯು 'ಅತಃ' ಪದದಿಂದ ವ್ಯಾವರ್ತ್ಯವಾಗುವ ಪೂರ್ವಪಕ್ಷಕ್ಕೆ ಉಪಯುಕ್ತವಾಗಿದೆ. ಆದ್ದರಿಂದ ಅದನ್ನು ಇಲ್ಲಿ ಹೇಳಿಲ್ಲ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿರುವ ಬ್ರಹ್ಮ ಪದವು ವಿಷಯವನ್ನು ಹೇಳುತ್ತದೆ. 'ಅತಃ' ಎಂಬ ಪದವು ಪ್ರಯೋಜನವನ್ನು ಹೇಳುತ್ತದೆ. ಮೊದಲು ಈ ಎರಡು ಪದಗಳಿಂದ ವ್ಯಾವರ್ತ್ಯವಾಗುವ ಪೂರ್ವಪಕ್ಷವನ್ನು ಪ್ರತ್ಯೇಕವಾಗಿ ತೋರಿಸಿದ್ದಾರೆ. ಮೊದಲು ಬ್ರಹ್ಮಪದವ್ಯಾವರ್ತ್ಯ-ಪೂರ್ವಪಕ್ಷವನ್ನೇ ವಿಸ್ತಾರವಾಗಿ ತೋರಿಸಲಾಗಿದೆ. ಅನಂತರ 'ಅತಃ' ಪದವ್ಯಾವರ್ತ್ಯವಾಗುವ

ಪೂರ್ವಪಕ್ಷವನ್ನು ಸಂಕ್ಷೇಪವಾಗಿಯೇ ತೋರಿಸಿದ್ದಾರೆ. ಪ್ರಕೃತ ಬ್ರಹ್ಮಪದವ್ಯಾವರ್ತ್ಯಪೂರ್ವ... ಪೂರಕವಾದ ಸಂಶಯದ ಪ್ರಕಾರಗಳನ್ನು ತೋರಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಅಥ... ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಬೇಕಾದ ಸಂಶಯ ಪ್ರಕಾರವನ್ನು ತೋರಿಸುವುದು ಅಸಂಗತವಾಗು... ಆದ್ದರಿಂದ ಮೋಕ್ಷವು ಕರ್ಮಸಾಧ್ಯವೋ? ಜ್ಞಾನಸಾಧ್ಯವೋ? ಎಂಬ ತದರ್ಥಸಂಶಯನ್ನು ... ತೋರಿಸಬಾರದು.




**ಜಿಜ್ಞಾಸಾಧಿಕರಣದ ವಿಷಯ ಮತ್ತು ಸಂದೇಹ**

ಜಿಜ್ಞಾಸಾಧಿಕರಣಕ್ಕೆ ವಿಚಾರಶಾಸ್ತ್ರವೇ ವಿಷಯ. ಅದು ಬೇಕೆ ಬೇಡವೇ ಎಂದು ಸಂದೇಹ ... ಬ್ರಹ್ಮ ಜೀವನಿಗಿಂತ ಬೇರಲ್ಲವಾದರೆ ಅವನು ಅನುಭವವೇದ್ಯನಾಗಿರುವುದರಿಂದ ವಿಚಾರ ಬೇಡ. ವಿಚಾರಶಾಸ್ತ್ರ ಬೇಡ. ಬ್ರಹ್ಮ ಜೀವನಿಗಿಂತ ಬೇರೆಯೆಂದಾದರೆ ಅನುಭವವೇದ್ಯನಾದ ಜೀವನ ಬಗ್ಗೆ ಸಂದೇಹ... ಅವಕಾಶವಿಲ್ಲದಿದ್ದರೂ ಬ್ರಹ್ಮ ವಿಚಾರಯೋಗ್ಯನೆನಿಸಬಹುದು. ವಿಚಾರಶಾಸ್ತ್ರಬೇಕೆನ್ನಬಹುದು.

ವಿಷಯದ ಬಗ್ಗೆ ಸಂದೇಹದಂತೆ ಪ್ರಯೋಜನದ ಬಗ್ಗೆಯೂ ಸಂದೇಹವನ್ನು ಹೇಳಬಹುದು ... ಕರ್ಮಸಾಧ್ಯವೇ, ಜ್ಞಾನಸಾಧ್ಯವೇ? ಕರ್ಮಸಾಧ್ಯವಾದರೆ ಜ್ಞಾನಕ್ಕಾಗಿ ವಿಚಾರ ಮಾಡಬೇಕಾಗಿಲ್ಲ. ಶಾಸ್ತ್ರ ಬೇಡ. ಜ್ಞಾನಸಾಧ್ಯವೆಂದಾದರೆ ಜ್ಞಾನಕ್ಕಾಗಿ ವಿಚಾರಬೇಕು, ಶಾಸ್ತ್ರ ಬೇಕು ಎಂದು. ಆದರೆ ಈ ಸಂದೇಹವನ್ನು ತೋರಿಸದಿರಲು ಅನೇಕ ಕಾರಣಗಳಿವೆ. ವಿಷಯ ಸಂದೇಹವನ್ನು ತೋರಿಸಿದ್ದರಿಂದಲೇ ಪ್ರಯೋಜನ ಸಂದೇಹವನ್ನೂ ತೋರಿಸಿದಂತಾಯಿತು. ಅಥವಾ ಮುಂದೆ ವಿದ್ಯಾಧಿಕರಣದಲ್ಲಿ ಇದರ ... ವಿಚಾರವಿರುವುದರಿಂದ ಇಲ್ಲಿ ಕೈಬಿಡಲಾಗಿದೆ. ಅಥವಾ ಕರ್ಮದಿಂದ ಮೋಕ್ಷಲಭ್ಯವೆನ್ನುವ ಪಕ್ಷದಲ್ಲಿ ... ವಿಚಾರ ವ್ಯರ್ಥವೋ ಹಾಗೆಯೆ ಜ್ಞಾನದಿಂದ ಲಭ್ಯವೆನ್ನುವ ಪಕ್ಷದಲ್ಲಿಯೂ ವ್ಯರ್ಥವೇ. ಏಕೆಂದರೆ ... ಹೇಳುವಂತೆ ಜ್ಞಾನವಿದ್ದರೂ ಮೋಕ್ಷ ಲಭಿಸಬೇಕಿಲ್ಲ. ಆದ್ದರಿಂದ ಸಂದೇಹವೆ ಅನುಚಿತ. ವಸ್ತುತಃ ... ಬ್ರಹ್ಮಶಬ್ದದಿಂದ ನಿವಾರಣೆಯಾಗುವುದು ಈ ವಿಷಯಾಭಾವಪೂರ್ವಪಕ್ಷ. ಅತಃಶಬ್ದದಿಂದ ನಿವಾರಣೆ... ಪ್ರಯೋಜನಾಭಾವ ಪೂರ್ವಪಕ್ಷ ಈಗ ಅಪ್ರಸಕ್ತ ಎಂದು ಪ್ರಯೋಜನ ಸಂದೇಹವನ್ನು ತೋರಿಸಿಲ್ಲ

• • • • •

### ಪೂರ್ವಪಕ್ಷ - ಅದ್ವೈತಮತ ಪ್ರಕಾರ

**तात्पर्यचन्द्रिका –**

पूर्वपक्षस्तु । न शास्त्रमारम्भणीयम् । न्यायानुसन्धानात्मकविचाररूप- जिज्ञासाया एवाकर्तव्यत्वात् । तदकर्तव्यत्वं च निर्विषयत्वादिहेतुभ्यः । तत्र तावद् विषयत्वेन अभिमतं ब्रह्म न जीवचैतन्याद् भिन्नम् । मानाभावात् । कर्मकाण्डस्य

कर्मपरत्वात् । वेदान्तैश्चोपक्रमोपसंहारादिभिरद्वैतिरीत्याऽखण्डप्रत्यगात्ममात्र-प्रत्यायनात् । तस्य चाहमिति स्वप्रकाशतया भासमानत्वात् । अन्यस्य च सत्यस्याभावात् ।

ಅನುವಾದ - ಪೂರ್ವಪಕ್ಷ - ಈ ಶಾಸ್ತ್ರವನ್ನು ಆರಂಭಿಸುವುದೇ ಬೇಡ. ಏಕೆಂದರೆ ವೇದಾರ್ಥ-ವನ್ನು ನಿರ್ಣಯಿಸಲು ನ್ಯಾಯಾನುಸಂಧಾನಾತ್ಮಕವಿಚಾರವೆಂಬ ಜಿಜ್ಞಾಸೆಯನ್ನು ಮಾಡುವುದೇ ಅನಾವಶ್ಯಕವಾಗಿದೆ. ವಿಷಯಾದಿಗಳು ಇದ್ದರಷ್ಟೇ ಜಿಜ್ಞಾಸೆಯನ್ನು ಮಾಡಲು ಸಾಧ್ಯ. ಆದರೆ ಜಿಜ್ಞಾಸೆಯನ್ನು ಮಾಡಬೇಕಾಗಿಲ್ಲವೆನ್ನಲು ವಿಷಯಾಭಾವಾದಿ ನಾಲ್ಕು ಹೇತುಗಳಿವೆ.

ಮೊದಲು 'ವಿಷಯಾಭಾವ' ಎಂಬ ಹೇತುವನ್ನು ಉಪಪಾದಿಸಲಾಗಿದೆ. ಸಿದ್ಧಾಂತಿಗಳು ಯಾವ ಬ್ರಹ್ಮನನ್ನು ವಿಷಯನೆಂದು ಹೇಳುತ್ತಾರೋ ಆ ಬ್ರಹ್ಮನು ಜೀವಾತ್ಮನಿಗಿಂತ ಭಿನ್ನವೆನ್ನಲು ಪ್ರಮಾಣವಿಲ್ಲ. ಪ್ರಮಾಣವನ್ನು ಹೇಳುವುದಾದರೆ ವೇದವನ್ನೇ ಹೇಳಬೇಕು. ಆದರೆ ವೇದದ ಕರ್ಮಕಾಂಡವೆಲ್ಲವು ಕರ್ಮವನ್ನೇ ಬೋಧಿಸುತ್ತಿದೆ. ಇನ್ನು ಬ್ರಹ್ಮಕಾಂಡವೆನಿಸಿದ ವೇದವು ಅದ್ವೈತಿಗಳು ಹೇಳುವಂತೆ ನಿರ್ಧರ್ಮಕ ಆತ್ಮಸ್ವರೂಪವನ್ನು ಮಾತ್ರ ತಿಳಿಸುತ್ತಿದೆ. ಇಂತಹ ಆತ್ಮನು 'ಅಹಂ' ಎಂದು ನಿರಂತರವಾಗಿ ಸ್ವಪ್ರಕಾಶಾನುಭವದಲ್ಲಿ ಗೋಚರನೇ ಆಗಿದ್ದಾನೆ. ಆತ್ಮನು ಸ್ವರೂಪತಃ ಅನುಭವವೇದ್ಯನಾದರೂ ಸಹ ಅದ್ವಿತೀಯತ್ವಾದಿರೂಪದಿಂದ ಸಂದಿಗ್ಧನಾಗಿದ್ದಾನೆಂದರೆ ಅಂತಹ ಆತ್ಮನು ಮಿಥ್ಯಾಭೂತನಾಗಿದ್ದಾನೆ.

**ಕಠಿಣಪದಾರ್ಥ**

ನ್ಯಾಯಾನುಸಂಧಾನಾತ್ಮಕವಿಚಾರರೂಪಜಿಜ್ಞಾಸಾಯಾಃ = ನ್ಯಾಯಗಳ ಅನು-ಸಂಧಾನವೆಂಬ ವಿಚಾರರೂಪವಾದ ಜಿಜ್ಞಾಸೆಯು. **ತತ್ರ ತಾವತ್** = ವಿಷಯ ಪ್ರಯೋಜನಾದಿಗಳ ಮೊದಲು. **ಅಖಂಡಪ್ರತ್ಯಗಾತ್ಮಮಾತ್ರಪ್ರತ್ಯಾಯನಾತ್** = ಅಂತಃಕರಣಾದಿಗಳಿಂದ ರಹಿತನಾದ ಶುದ್ಧನಾದ ಶಾರೀರ ಆತ್ಮನ ಜ್ಞಾನ ಬರುವು-ದರಿಂದ. **ತಸ್ಯ ಚ** = ನಿರ್ಧರ್ಮಕಬ್ರಹ್ಮನಿಗಾದರೂ.

**प्रकाशः** – पूर्वपूर्वस्योत्तरोत्तरफलत्वं व्यञ्जयन् पूर्वपक्षटीकां विवरीतुमाह – पूर्वपक्षस्त्विति । निर्विषयत्वादीति ।। 'विषयप्रयोजनाधिकारिसम्बन्धशून्यत्व-रूपेभ्यष्टीकोक्तेभ्यश्चतुर्भ्यो हेतुभ्यः' इत्यर्थः । तत्राद्यहेतुमुपपादयितुं विषयभूतं ब्रह्म जीवाद् भिन्नमभिन्नं वा? इति विकल्पौ हृदि कृत्वाऽऽद्यं निरस्यति – तत्रेति ।। मानाभावमुपपादयितुं प्रत्यक्षानुमानयोस्तत्राप्रवृत्तेः, प्रवर्तमानो वेदश्च

ಪೂರ್ವಪಕ್ಷವನ್ನು ಸಂಕ್ಷೇಪವಾಗಿಯೇ ತೋರಿಸಿದ್ದಾರೆ. ಪ್ರಕೃತ ಬ್ರಹ್ಮಪದವ್ಯಾವರ್ತ್ಯಪೂರ್ವಪಕ್ಷ ಪೂರಕವಾದ ಸಂಶಯದ ಪ್ರಕಾರಗಳನ್ನು ತೋರಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಅತಃಪದ ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಬೇಕಾದ ಸಂಶಯ ಪ್ರಕಾರವನ್ನು ತೋರಿಸುವುದು ಅಸಂಗತವಾಗುತ್ತದೆ ಆದ್ದರಿಂದ ಮೋಕ್ಷವು ಕರ್ಮಸಾಧ್ಯವೋ? ಜ್ಞಾನಸಾಧ್ಯವೋ? ಎಂಬ ತದರ್ಥಚಿಂತೆಯನ್ನು ಇಲ್ಲಿ ತೋರಿಸಬಾರದು.



### ಜಿಜ್ಞಾಸಾಧಿಕರಣದ ವಿಷಯ ಮತ್ತು ಸಂದೇಹ

ಜಿಜ್ಞಾಸಾಧಿಕರಣಕ್ಕೆ ವಿಚಾರಶಾಸ್ತ್ರವೇ ವಿಷಯ. ಅದು ಬೇಕೆ ಬೇಡವೇ ಎಂದು ಸಂದೇಹ. ಏಕೆಂದರೆ ಬ್ರಹ್ಮ ಜೀವನಿಗಿಂತ ಬೇರಲ್ಲವಾದರೆ ಅವನು ಅನುಭವವೇದ್ಯನಾಗಿರುವುದರಿಂದ ವಿಚಾರ ಬೇಡ, ವಿಚಾರಶಾಸ್ತ್ರವೂ ಬೇಡ. ಬ್ರಹ್ಮ ಜೀವನಿಗಿಂತ ಬೇರೆಯೆಂದಾದರೆ ಅನುಭವವೇದ್ಯನಾದ ಜೀವನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲದಿದ್ದರೂ ಬ್ರಹ್ಮ ವಿಚಾರಯೋಗ್ಯನೆನಿಸಬಹುದು. ವಿಚಾರಶಾಸ್ತ್ರಬೇಕೆನ್ನಬಹುದು.

ವಿಷಯದ ಬಗ್ಗೆ ಸಂದೇಹದಂತೆ ಪ್ರಯೋಜನದ ಬಗ್ಗೆಯೂ ಸಂದೇಹವನ್ನು ಹೇಳಬಹುದು. ಮೋಕ್ಷ ಕರ್ಮಸಾಧ್ಯವೇ, ಜ್ಞಾನಸಾಧ್ಯವೇ? ಕರ್ಮಸಾಧ್ಯವಾದರೆ ಜ್ಞಾನಕ್ಕಾಗಿ ವಿಚಾರ ಮಾಡಬೇಕಾಗಿಲ್ಲ, ಶಾಸ್ತ್ರ ಬೇಡ. ಜ್ಞಾನಸಾಧ್ಯವೆಂದಾದರೆ ಜ್ಞಾನಕ್ಕಾಗಿ ವಿಚಾರಬೇಕು, ಶಾಸ್ತ್ರ ಬೇಕು ಎಂದು. ಆದರೆ ಈ ಸಂದೇಹವನ್ನು ತೋರಿಸದಿರಲು ಅನೇಕ ಕಾರಣಗಳಿವೆ. ವಿಷಯ ಸಂದೇಹವನ್ನು ತೋರಿಸಿದ್ದರಿಂದಲೇ ಪ್ರಯೋಜನ ಸಂದೇಹವನ್ನೂ ತೋರಿಸಿದಂತಾಯಿತು. ಅಥವಾ ಮುಂದೆ ವಿದ್ಯಾಧಿಕರಣದಲ್ಲಿ ಇದರ ಬಗ್ಗೆ ವಿಚಾರವಿರುವುದರಿಂದ ಇಲ್ಲಿ ಕೈಬಿಡಲಾಗಿದೆ. ಅಥವಾ ಕರ್ಮದಿಂದ ಮೋಕ್ಷಲಭ್ಯವೆನ್ನುವ ಪಕ್ಷದಲ್ಲಿ ಹೇಗೆ ವಿಚಾರ ವ್ಯರ್ಥವೋ ಹಾಗೆಯೆ ಜ್ಞಾನದಿಂದ ಲಭ್ಯವೆನ್ನುವ ಪಕ್ಷದಲ್ಲಿಯೂ ವ್ಯರ್ಥವೇ. ಏಕೆಂದರೆ ಮುಂದೆ ಹೇಳುವಂತೆ ಜ್ಞಾನವಿದ್ದರೂ ಮೋಕ್ಷ ಲಭಿಸಬೇಕಿಲ್ಲ. ಆದ್ದರಿಂದ ಸಂದೇಹವೆ ಅನುಚಿತ. ವಸ್ತುತಃ ಸೂತ್ರದ ಬ್ರಹ್ಮಶಬ್ದದಿಂದ ನಿವಾರಣೆಯಾಗುವುದು ಈ ವಿಷಯಾಭಾವಪೂರ್ವಪಕ್ಷ. ಅತಃಶಬ್ದದಿಂದ ನಿವಾರಣೆಯಾಗುವ ಪ್ರಯೋಜನಾಭಾವ ಪೂರ್ವಪಕ್ಷ ಈಗ ಅಪ್ರಸಕ್ತ ಎಂದು ಪ್ರಯೋಜನ ಸಂದೇಹವನ್ನು ತೋರಿಸಿಲ್ಲ.

• • • • •

### ಪೂರ್ವಪಕ್ಷ - ಅದ್ವೈತಮತ ಪ್ರಕಾರ

**तात्पर्यचन्द्रिका –**

**पूर्वपक्षस्तु । न शास्त्रमारम्भणीयम् । न्यायानुसन्धानात्मकविचाररूप-जिज्ञासाया एवाकर्तव्यत्वात् । तदकर्तव्यत्वं च निर्विषयत्वादिहेतुभ्यः । तत्र तावद् विषयत्वेन अभिमतं ब्रह्म न जीवचैतन्याद् भिन्नम् । मानाभावात् । कर्मकाण्डस्य**

र्मपरत्वात् । वेदान्तैश्चोपक्रमोपसंहारादिभिरद्वैतिरीत्याऽखण्डप्रत्यगात्ममात्र-प्रत्यायनात् । तस्य चाहमिति स्वप्रकाशतया भासमानत्वात् । अन्यस्य च सत्यस्याभावात् ।

ಅನುವಾದ - ಪೂರ್ವಪಕ್ಷ - ಈ ಶಾಸ್ತ್ರವನ್ನು ಆರಂಭಿಸುವುದೇ ಬೇಡ. ಏಕೆಂದರೆ ವೇದಾರ್ಥ-ವನ್ನು ನಿರ್ಣಯಿಸಲು ನ್ಯಾಯಾನುಸಂಧಾನಾತ್ಮಕವಿಚಾರವೆಂಬ ಜಿಜ್ಞಾಸೆಯನ್ನು ಮಾಡುವುದೇ ಅನಾವಶ್ಯಕವಾಗಿದೆ. ವಿಷಯಾದಿಗಳು ಇದ್ದರಷ್ಟೇ ಜಿಜ್ಞಾಸೆಯನ್ನು ಮಾಡಲು ಸಾಧ್ಯ. ಆದರೆ ಜಿಜ್ಞಾಸೆಯನ್ನು ಮಾಡಬೇಕಾಗಿಲ್ಲವೆನ್ನಲು ವಿಷಯಾಭಾವಾದಿ ನಾಲ್ಕು ಹೇತುಗಳಿವೆ.

ಮೊದಲು 'ವಿಷಯಾಭಾವ' ಎಂಬ ಹೇತುವನ್ನು ಉಪಪಾದಿಸಲಾಗಿದೆ. ಸಿದ್ಧಾಂತಿಗಳು ಯಾವ ಬ್ರಹ್ಮನನ್ನು ವಿಷಯನೆಂದು ಹೇಳುತ್ತಾರೋ ಆ ಬ್ರಹ್ಮನು ಜೀವಾತ್ಮನಿಗಿಂತ ಭಿನ್ನವೆನ್ನಲು ಪ್ರಮಾಣವಿಲ್ಲ. ಪ್ರಮಾಣವನ್ನು ಹೇಳುವುದಾದರೆ ವೇದವನ್ನೇ ಹೇಳಬೇಕು. ಆದರೆ ವೇದದ ಕರ್ಮಕಾಂಡವೆಲ್ಲವು ಕರ್ಮವನ್ನೇ ಬೋಧಿಸುತ್ತಿದೆ. ಇನ್ನು ಬ್ರಹ್ಮಕಾಂಡವೆನಿಸಿದ ವೇದವು ಅದ್ವೈತಿಗಳು ಹೇಳುವಂತೆ ನಿರ್ಧರ್ಮಕ ಆತ್ಮಸ್ವರೂಪವನ್ನು ಮಾತ್ರ ತಿಳಿಸುತ್ತಿದೆ. ಇಂತಹ ಆತ್ಮನು 'ಅಹಂ' ಎಂದು ನಿರಂತರವಾಗಿ ಸ್ವಪ್ರಕಾಶಾನುಭವದಲ್ಲಿ ಗೋಚರನೇ ಆಗಿದ್ದಾನೆ. ಆತ್ಮನು ಸ್ವರೂಪತಃ ಅನುಭವವೇದ್ಯನಾದರೂ ಸಹ ಅದ್ವಿತೀಯತ್ವಾದಿರೂಪದಿಂದ ಸಂದಿಗ್ಧನಾಗಿದ್ದಾನೆಂದರೆ ಅಂತಹ ಆತ್ಮನು ಮಿಥ್ಯಾಭೂತನಾಗಿದ್ದಾನೆ.

**ಕಠಿಣಪದಾರ್ಥ**

**ನ್ಯಾಯಾನುಸಂಧಾನಾತ್ಮಕವಿಚಾರರೂಪಜಿಜ್ಞಾಸಾಯಾಃ** = ನ್ಯಾಯಗಳ ಅನು-ಸಂಧಾನವೆಂಬ ವಿಚಾರರೂಪವಾದ ಜಿಜ್ಞಾಸೆಯು. **ತತ್ರ ತಾವತ್** = ವಿಷಯ ಪ್ರಯೋಜನಾದಿಗಳ ಮೊದಲು. **ಅಖಂಡಪ್ರತ್ಯಗಾತ್ಮಮಾತ್ರಪ್ರತ್ಯಾಯನಾತ್** = ಅಂತಃಕರಣಾದಿಗಳಿಂದ ರಹಿತನಾದ ಶುದ್ಧನಾದ ಶಾರೀರಕ ಆತ್ಮನ ಜ್ಞಾನ ಬರುವು-ದರಿಂದ. **ತಸ್ಯ ಚ** = ನಿರ್ಧರ್ಮಕಬ್ರಹ್ಮನಿಗಾದರೂ.

**प्रकाशः** – पूर्वपूर्वस्योत्तरोत्तरफलत्वं व्यञ्जयन् पूर्वपक्षटीकां विवरीतुमाह – पूर्वपक्षस्त्विति । निर्विषयत्वादीति ।। 'विषयप्रयोजनाधिकारिसम्बन्धशून्यत्व-रूपेभ्यष्टीकोक्तेभ्यश्चतुर्भ्यो हेतुभ्यः' इत्यर्थः । तत्राद्यहेतुमुपपादयितुं विषयभूतं ब्रह्म जीवाद् भिन्नमभिन्नं वा? इति विकल्पौ हृदि कृत्वाऽऽद्यं निरस्यति – तत्रेति ।। मानाभावमुपपादयितुं प्रत्यक्षानुमानयोस्तत्राप्रवृत्तेः, प्रवर्तमानो वेदश्च

कर्मकाण्डो ब्रह्मकाण्ड इति द्विविध इति हृदि निधायाद्यं निराह – **कर्मकाण्डस्येति** ।। द्वितीये त्वाह – **वेदान्तैरिति** ।। 'अद्वैतिरीत्या' इति प्रतिपादनाङ्गाशयोक्तम् । अनेन ''प्रमाणाभावेन'' इत्यादिटीका विवृता । यद्यप्यत्र कृत्स्नस्यापि वेदस्य कार्यपरत्वान्न जीवातिरिक्तब्रह्मणि मानमित्यपि वक्तुं शक्यम् । सुधायां तथैवोक्तेः । तथाऽपि सौत्रब्रह्मपदेन जीवभेदकपरेण व्यावर्त्यपूर्वपक्षस्यावश्यकतयैवमुक्तम् । सुधायां तथा प्रवृत्तेर्गतिर्वक्ष्यते ।

ननूपक्रमादिभिर्वेदान्तानामखण्डप्रत्यगात्मपरत्वसमर्थनपरस्य कस्यचिच्छास्त्रस्यानङ्गीकारे तत्सिद्धिरेव न स्यात् । तदङ्गीकारे तु तादृशं शास्त्रमङ्गीकृत्य विषयाभावेन पुनस्तस्यानारम्भणीयत्वेन पूर्वपक्षो व्याहत इति चेत् । मैवं । तादृशशास्त्रानङ्गीकारेऽपि वेदान्तानामुपक्रमादिभिर्वस्तुतः आपाततो जातां जीवचैतन्यमात्रपरत्वप्रतीतिमुपेत्य पूर्वपक्षसम्भवेन व्याघाताप्रसक्तेः । 'जीवस्य च' इत्यादेरर्थः **'तस्य च'** इति ।। प्रत्यगात्मन इत्यर्थः । तथाचासन्दिग्धत्वान्न शास्त्रवेद्यतेति भावः । एतेन – अभिन्नमिति द्वितीयोऽपि निरस्तः । ननु तस्य भानेऽपि ततोऽन्यदेव जडं वेद्यं स्यादित्यत आह – **अन्यस्य चेति** ।। अन्यथा शास्त्रस्यातत्त्वावेदकत्वेनाप्रामाण्यं स्यादिति भावः । यत्तु – अहमित्यात्मनि भासमानेऽपि वेदान्तवेद्यं शुद्धं न भातीति मूर्खप्रलपनम्! तन्न । ''अहंप्रत्यये शुद्धो न भातीति कोऽर्थः'' इत्यादिना भामतीमतनिरासप्रस्ताव एवास्य निरासात् । यदपि – स्वप्रकाशस्याप्यविद्यावशान्न भानमिति । यच्च – स्वप्रकाशत्वात् स्फुरतीत्यादिचोद्यं, तदपि तत्रोक्तरीत्यैव निरसनीयम् । अत एवास्य पूर्वं प्रपञ्चः । एतेनाक्षस्य बलवत्त्वात् तद्बाधिता वेदान्ताः नाखण्डचैतन्यं वेदयितुमलमिति निरस्तम् । 'अद्वैतिरीत्या' इत्युक्तत्वात् तन्मते तस्य दुर्बलत्वात् । यत्तु - सिद्धान्तिमते ब्रह्मतर्कस्य मीमांसाङ्गत्वात् तत्र चाक्षप्राबल्यं सिद्धमिति मूर्खप्रलपनं तदप्येतेनैव निरस्तम् । अद्वैतिमते तदभावात् तदाच्छादनेनापि पूर्वपक्षसम्भवाच्च । अत एव तत्सिद्धप्रामाण्याच्छादनेन पूर्वपक्षोऽग्रे स्फुटः । अत्र यद्यपि यद्यहंधीविरुद्धं शुद्धं प्रत्यगात्मानं बोधयेयुर्वेदान्तास्तर्हि बाधितार्था न विचार्या

इत्यपि पूर्वपक्षयितुं शक्यम् । अत एव सुधायां "नन्वहं कर्ता भोक्ता दोषसंसर्गी वाहंप्रत्यये प्रकाशते; तद्विपरीतस्तु श्रुतिप्रतिपादितः प्रतिपत्तव्योऽतो जिज्ञासेति चेदेवं तर्हि जरद्गवादिवाक्यवत् पावकशैत्यानुमानवच्च प्रतीतिविरोधेन श्रुतिजिज्ञासयोराभासतापातः" इत्युक्तम् । तथाच बाधितार्थत्वेन निर्विषयत्वं सूपपादम् । 'शुद्धो न भातीति कोऽर्थः' इत्याद्यनुसन्धानेन असन्दिग्धत्वोपपादनक्लेशोऽपि नास्ति । अक्षप्राबल्यं चानुकूलितं भवति । तथाऽप्यद्वैतिरीत्या प्रवृत्तन्यायविवरणानुसारिटीकारीत्यैवमुक्तम् । सुधायास्तु कथमपि न विचार आरम्भणीय इत्यभिप्रायः ।

गुरुराजीय – पूर्वपक्षस्त्वित्यनेन न कर्तव्येति पूर्वः पक्ष इति वाक्यं पूर्वपक्षस्तु न कर्तव्येतीति योजितं भवति । टीकोक्तमधिकार्यादिचतुष्टयशून्यत्वं न समुदितं हेतुः एकैकस्याव्यभिचारात् । किन्तु प्रत्येकमित्याह – हेतुभ्य इति ।। अधिकारिणः प्राधान्येऽपि निरधिकारिकत्वादेर्निर्विषयत्वाधीनत्वस्य वक्ष्यमाणत्वात् पूर्वपक्षन्यायविवरणोक्तत्वाच्च निर्विषयत्वादीत्युक्तम् । सूत्रे प्रथममथशब्देनाधिकारस्य सूचनाट्टीकायामधिकार्यादित्याधिकारिणः प्रथमं ग्रहणमिति गुरवः । न तावद् ब्रह्म विषय इति टीकायां ब्रह्माब्रह्मणोर्मध्ये ब्रह्म तावन्न विषय इत्यर्थो भाति नचासावुपपद्यते उत्तरत्र अब्रह्मणो विषयत्वानिरासादित्यत आह – तत्र तावदिति ।। तत्र विषयप्रयोजनयोर्मध्ये विषयस्तावन्न युक्त इत्येव टीकार्थः । ब्रह्मशब्दस्तु ब्रह्मण एव विषयत्वेनाभिमतत्वादिति भावः । 'जीवव्यतिरिक्तेश्वराभावात्' इति न्यायविवरणोक्तहेतुसाधनाय टीकोक्तः प्रमाणाभावोऽसिद्धः, 'प्रत्यक्षानुमानयोस्तत्राप्रवृत्तावपि मीमांस्यस्य वेदस्यैव प्रमाणत्वसम्भवात्' इत्यतः 'वेदोऽपि किं कर्मकाण्डरूपो वा तत्र प्रमाणमुत ब्रह्मकाण्डरूपो वा' इति विकल्पं मनसि निधाय क्रमेण दूषयति – कर्मकाण्डस्येत्यादिना ।। कथं भूयसां वाक्यानां निर्विशेषैकात्मबोधकत्वं सङ्गच्छते? इत्यत उक्तम् – अद्वैतिरीत्येति ।। युक्त्यसहमपि परैः सिद्धान्तितत्वादस्माभिः पूर्वपक्षितम् । नहि परेषां सिद्धान्तोऽस्मत्पूर्वपक्षत्वमपि नार्हतीत्यर्थः । 'जीवस्य च' इति टीकायां जीवशब्दो न तद्वाच्यविशिष्टपरः तस्यास्वप्रकाशत्वात् किन्तु तल्लक्ष्यचिन्मात्रपर इति दर्शयितुं प्रकृतात्ममात्रपरामर्शकस्तस्येति तच्छब्दः । टीकायाम् 'असंदिग्धत्वात्' इति हेतुर्ब्रह्म जीवाभिन्नमिति द्वितीयपक्षसिद्धवत् करणेनैवोक्तः विपर्यस्तत्वादिविरोधिभास-

**मानत्वस्योपलक्षकश्चेति दर्शयितुं द्वितीयपक्षदूषणपरा 'जीवस्य' इति या टीका तद्व्याख्यानरूपे 'तस्य च' इति वाक्य एव भासमानत्वादित्युक्तम् । ननु टीकोक्तं शुद्धचितः प्रकाशमानत्वमयुक्तम् । तस्याः स्वप्रकाशत्वेऽप्यविद्यावृतत्वादित्यत आह – अहमिति भासमानत्वादिति ।। अहमर्थस्य चिदचित्संवलनात्मकत्वात् तद्भाने चिदपि भाति । अन्यथा तदधीनमचितोऽपि भानं न स्यादिति भावः । एतेन अहम् इत्युत्तरटीकाऽत्रापि हेतुत्वेन योजितेति ज्ञातव्यम् । ननु स्वरूपेण प्रतीयमानोऽप्यात्मा अद्वितीयत्वादिना सन्दिग्धोऽस्तीत्यत आह – अन्यस्य च सत्यस्याभावादिति ।। अनेन टीकास्थसत्यरूपवस्तुवाचिनोऽर्थशब्दस्य तात्पर्यमुक्तमिति ज्ञेयम् ।**

**ವಿವರಣೆ** - ಈ ಅಧಿಕರಣದ ಪೂರ್ವಪಕ್ಷವನ್ನು ಟೀಕೆಯಲ್ಲಿ ಹೇಳಿದಂತೆ ವಿವರಿಸುತ್ತಿದ್ದಾರೆ. ಇಲ್ಲಿಯ ಪೂರ್ವಪಕ್ಷವು ಅದ್ವೈತಿಗಳ ಸಿದ್ಧಾಂತವನ್ನು ಅವಲಂಬಿಸಿ ಹೊರಟಿದೆ. ಸೂತ್ರದಲ್ಲಿರುವ ಬ್ರಹ್ಮಶಬ್ದಕ್ಕೆ 'ಬ್ರಹ್ಮನು ಸಕಲಗುಣಪರಿಪೂರ್ಣನಾದ್ದರಿಂದ ಜೀವನಿಗಿಂತ ಭಿನ್ನನಾಗಿದ್ದಾನೆ' ಎಂದರ್ಥ. ಈ ಬ್ರಹ್ಮಶಬ್ದದಿಂದ ನಿರಾಸವಾಗುವ ಪೂರ್ವಪಕ್ಷವನ್ನು ಇಲ್ಲಿ ಹೇಳಲಾಗಿದೆ. ಶಾಸ್ತ್ರವನ್ನು ಆರಂಭಿಸಬೇಕಿಲ್ಲವೆನ್ನುವುದಕ್ಕೆ ಕಾರಣವಾಗಿ ವಿಚಾರವನ್ನು ಮಾಡಬೇಕಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ವಿಚಾರವನ್ನು ಮಾಡಬೇಕಿಲ್ಲವೆನ್ನಲು ನಾಲ್ಕು ಹೇತುಗಳಿವೆ - 'ಬ್ರಹ್ಮವಿಚಾರಃ ನ ಕರ್ತವ್ಯಃ ವಿಷಯ-ಪ್ರಯೋಜನಾಧಿಕಾರಿಸಂಬಂಧಶೂನ್ಯತ್ವಾತ್' ಎಂದು. ಮೊದಲು ವಿಷಯಾಭಾವಾತ್ ಎಂಬ ಹೇತುವನ್ನು ಉಪಪಾದಿಸಲು ವಿಷಯನಾದ ಬ್ರಹ್ಮನು ಜೀವನಿಗಿಂತ ಭಿನ್ನನೋ? ಅಭಿನ್ನನೋ? ಎಂಬ ವಿಕಲ್ಪವನ್ನು ಹೃದಯಲ್ಲಿಟ್ಟುಕೊಡು 'ತತ್ರ' ಇತ್ಯಾದಿ ವಾಕ್ಯದಿಂದ ಮೊದಲನೆಯ ಪಕ್ಷವನ್ನು ನಿರಾಕರಿಸುತ್ತಿದ್ದಾರೆ.

ಬ್ರಹ್ಮನು ಜೀವನಿಗಿಂತ ಭಿನ್ನನೆನ್ನಲು ಪ್ರಮಾಣವಿಲ್ಲ. ಏಕೆಂದರೆ ಬ್ರಹ್ಮನನ್ನು ತಿಳಿಸುವ ವಿಷಯದಲ್ಲಿ ಪ್ರತ್ಯಕ್ಷ ಅನುಮಾನಗಳಿಗೆ ಸಾಮರ್ಥ್ಯವೇ ಇಲ್ಲ. ಹಾಗಾಗಿ ವೇದವೇ ಪ್ರವೃತ್ತಿ ಮಾಡಬೇಕು. ವೇದವು ಕರ್ಮಕಾಂಡ ಮತ್ತು ಬ್ರಹ್ಮಕಾಂಡವೆಂದು ಎರಡು ವಿಧವಾಗಿದೆ. ಕರ್ಮಕಾಂಡವು ಕರ್ಮವನ್ನಷ್ಟೇ ಹೇಳುತ್ತದೆ. ಬ್ರಹ್ಮಕಾಂಡವು ಅನುಭೂತನಾದ ಜೀವನನ್ನಷ್ಟೇ ಹೇಳುತ್ತದೆ. ಹಾಗಾಗಿ ಜೀವಬ್ರಹ್ಮ-ಭೇದವಿಷಯದಲ್ಲಿ ಯಾವ ಪ್ರಮಾಣಗಳೂ ಇಲ್ಲ. ಬ್ರಹ್ಮಸ್ವರೂಪನಾದ ಜೀವನ ಜ್ಞಾನ ಬಂದರೂ ನಮಗೆ ಮೋಕ್ಷ ದೊರಕುತ್ತಿಲ್ಲ. ಹಾಗಾಗಿ ವಿಚಾರವು ಅನಾವಶ್ಯಕವಾದ್ದರಿಂದ ಶಾಸ್ತ್ರದ ಆರಂಭವು ಅನಾವಶ್ಯಕವೆಂದು ಪೂರ್ವಪಕ್ಷದ ಆಶಯ.

**ಶಂಕೆ** - ಪೂರ್ವಪಕ್ಷವನ್ನು ಹೀಗೆಯೂ ಮಾಡಬಹುದಿತ್ತು. ಸಮಗ್ರ ವೇದವು ಕಾರ್ಯವನ್ನಷ್ಟೇ ಬೋಧಿಸುತ್ತದೆ. ಹಾಗಾಗಿ ಜೀವನಿಗಿಂತ ಅತಿರಿಕ್ತನಾದ ಬ್ರಹ್ಮನನ್ನು ಬೋಧಿಸಲಾರದು. ಬ್ರಹ್ಮನು

ಭ್ಯನಾದ್ದರಿಂದ ಸಿದ್ಧ ವಿಷಯದಲ್ಲಿ ವೇದವು ಪ್ರಮಾಣವಾಗಲಾರದು ಎಂದು ನ್ಯಾಯಸುಧಾದಲ್ಲಿ ಹೀಗೆಯೇ ಪೂರ್ವಪಕ್ಷ ಮಾಡಿಕೊಂಡಿದ್ದಾರೆ.

ಸಮಾಧಾನ - ಸೂತ್ರದಲ್ಲಿರುವ ಬ್ರಹ್ಮಶಬ್ದವು ಬ್ರಹ್ಮನು ಜೀವನಿಗಿಂತ ಭಿನ್ನನೆಂದು ಹೇಳುತ್ತಿದೆ. ಇಂತಹ ಬ್ರಹ್ಮಶಬ್ದದಿಂದ ನಿವೃತ್ತವಾಗುವ ಪೂರ್ವಪಕ್ಷವನ್ನಷ್ಟೇ ಇಲ್ಲಿ ಉಪಪಾದಿಸಲಾಗಿದೆ. ನ್ಯಾಯಸುಧಾದಲ್ಲಿ ಹೇಳಿದ ಕಾರ್ಯಪರತ್ವದ ಪೂರ್ವಪಕ್ಷವು 'ಅತಃ' ಶಬ್ದದಿಂದ ನಿರಸ್ತವಾಗುತ್ತದ್ದೆಂದು ಮುಂದೆ ಉಪಪಾದಿಸುವವರಿದ್ದೇವೆ.

ಶಂಕೆ - ನೀವು ಮಾಡಿದ ಪೂರ್ವಪಕ್ಷವು ವ್ಯಾಹತವಾಗಿದೆ. ಏಕೆಂದರೆ ಉಪಕ್ರಮ ಮೊದಲಾದ ತಾತ್ಪರ್ಯಲಿಂಗಗಳಿಂದ ವೇದಾಂತವು ಅಖಂಡ ಆತ್ಮಸ್ವರೂಪವನ್ನು ಬೋಧಿಸಲು ಸಮರ್ಥವಾಗಿದೆ, ಎಂದು ಉಪಪಾದಿಸುವ ಯಾವುದಾದರು ಶಾಸ್ತ್ರವು ಇದೆಯೋ? ಇಲ್ಲವೋ? ಇದೆ ಎಂದು ಅಂಗೀಕರಿಸದಿದ್ದರೆ, ಅಂತಹ ಅಖಂಡಆತ್ಮನನ್ನು ವೇದಾಂತವು ಬೋಧಿಸುತ್ತದೆ ಎಂಬುದೇ ಸಿದ್ಧವಾಗುವುದಿಲ್ಲ. ಅಂಗೀಕರಿಸಿದರೆ ಅಂತಹ ಶಾಸ್ತ್ರವನ್ನು ಆರಂಭಣೀಯವೆಂದೇ ಒಪ್ಪಿದಂತಾಯಿತು. ಪುನಃ ಅನಾರಂಭಣೀಯವೆಂದು ಪೂರ್ವಪಕ್ಷ ಮಾಡಿದರೆ ವ್ಯಾಹತಿ ದೋಷ ಬರುತ್ತದೆ.

ಸಮಾಧಾನ - ನಾವು ಅಂತಹ ಶಾಸ್ತ್ರವನ್ನು ಒಪ್ಪುವುದಿಲ್ಲ. ಆದರೂ ಉಪಕ್ರಮಾದಿಗಳಿಂದ ವೇದಾಂತವು ಅಖಂಡ ಆತ್ಮನನ್ನು ಬೋಧಿಸುತ್ತದೆಂದು ಆಪಾತತಃ ತೋರುತ್ತದೆಂದು ಪೂರ್ವಪಕ್ಷ ಮಾಡುತ್ತೇವೆ. ಹಾಗಾಗಿ ವ್ಯಾಹತಿ ಬರುವುದಿಲ್ಲ.

ಶಂಕೆ - ಜೀವಾತ್ಮನು ಅನುಭವವೇದ್ಯನಾಗಿದ್ದರೂ ಸಹ ಅವನಿಗಿಂತ ಭಿನ್ನವಾದ ಜಡವಸ್ತುವು ಶಾಸ್ತ್ರಕ್ಕೆ ವಿಷಯವಾಗಬಹುದಲ್ಲವೆ? ಆದ್ದರಿಂದ ವಿಷಯವಿಲ್ಲವಾದ್ದರಿಂದ ಶಾಸ್ತ್ರವು ಅನಾರಂಭಣೀಯ ಎಂದು ಹೇಗೆ ಹೇಳುತ್ತೀರಿ?

ಸಮಾಧಾನ -ಈ ಪ್ರಶ್ನೆಗೆ 'ಅನ್ಯಸ್ಯ ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಆತ್ಮನಿಗಿಂತ ಭಿನ್ನವಾದ ಯಾವುದೇ ವಸ್ತುವೂ ಸಹ ಸತ್ಯವಲ್ಲ. ಮತ್ತು ಶಾಸ್ತ್ರವೇದ್ಯವೂ ಅಲ್ಲ. ಮಿಥ್ಯಾಭೂತವಾದದ್ದನ್ನು ಶಾಸ್ತ್ರವು ಪ್ರತಿಪಾದಿಸಿದರೆ ಅತತ್ವಾವೇದಕವಾಗುತ್ತದೆ.

ಶಂಕೆ - ಜೀವಾತ್ಮನು 'ಅಹಂ' ಎಂದು ಅನುಭವಸಿದ್ಧನಾಗಿದ್ದರೂ ವೇದಾಂತವೇದ್ಯನಾದ ಶುದ್ಧನಾದ ಆತ್ಮನು ಅನುಭವಸಿದ್ಧನಲ್ಲ. (ಅಹಮರ್ಥವೇ ಬೇರೆ, ಶುದ್ಧಬ್ರಹ್ಮನೇ ಬೇರೆಯೆಂದು ಅಭಿಪ್ರಾಯ.) ಆದ್ದರಿಂದ ಶಾಸ್ತ್ರಕ್ಕೆ ಇದೇ ವಿಷಯವಾಗಿದೆ.

ಸಮಾಧಾನ - ಈ ಪ್ರಶ್ನೆಗೆ ಹಿಂದೆಯೇ ಭಾಮತ್ಯಧಿಕರಣವನ್ನು ನಿರಾಕರಿಸುವ ಸಂದರ್ಭದಲ್ಲಿ ಉತ್ತರಿಸಲಾಗಿದೆ - ಶುದ್ಧಾತ್ಮನು ತೋರುವುದಿಲ್ಲವೆಂದರೆ ಆತ್ಮಸ್ವರೂಪದಲ್ಲೇ ಸ್ವಲ್ಪಭಾಗ ತೋರುವುದಿಲ್ಲವೆಂದೋ? ಅಥವಾ, ಆತ್ಮಸ್ವರೂಪವೇ ತೋರುವುದಿಲ್ಲವೆಂದೋ? ಅಥವಾ ಅನಾತ್ಮನೂ ತೋರುತ್ತಾನೆ ಎಂದೋ? ಇತ್ಯಾದಿ ಯಾವ ವಿಕಲ್ಪಗಳಿಗೂ ನಿಮಗೆ ಉತ್ತರಿಸಲಾಗುವುದಿಲ್ಲ.

ಶಂಕೆ - ಆತ್ಮನು ಸ್ವಪ್ರಕಾಶನಾದರೂ ಕೂಡ ಅವಿದ್ಯೆಯ ಪ್ರಭಾವದಿಂದ ಅನುಭವಗೋಚರ-ನಾಗಿಲ್ಲವೆಂದು ಹೇಳುತ್ತೇವೆ. ಚೈತನ್ಯವು ಸ್ವಪ್ರಕಾಶನಾದ್ದರಿಂದ ಅನುಭವಗೋಚರನೂ ಆಗಿದ್ದಾನೆ, ಅವಿದ್ಯೆಯ ಪ್ರಭಾವದಿಂದ ಅಗೋಚರನೂ ಆಗಿದ್ದಾನೆ.

ಸಮಾಧಾನ - ಸ್ವಪ್ರಕಾಶನಾದರೂ ಬ್ರಹ್ಮನು ಅವಿದ್ಯೆಯ ಪ್ರಭಾವದಿಂದ ತೋರುವುದಿಲ್ಲವೆಂದರೆ ದುಃಖಾದಿಗಳೂ ತೋರದಿರಬೇಕಾದೀತು, ಇತ್ಯಾದಿ ಆಕ್ಷೇಪಗಳಿಂದ ಹಿಂದೆಯೇ ಉತ್ತರಿಸಿದ್ದೇವೆ.

(ಇಲ್ಲಿ ಗಮನಿಸಬೇಕಾದ ಅಂಶ - ಪ್ರತಿಯೊಂದು ಅಧಿಕರಣಗಳಲ್ಲಿ ಮೊದಲು ಸಿದ್ಧಾಂತರೀತ್ಯಾ ಅಧಿಕರಣರಚನೆ ಮಾಡುತ್ತಾರೆ. ಅನಂತರ ಪರರ ಅಧಿಕರಣರಚನೆಯ ನಿರಾಕರಣೆಯನ್ನು ಮಾಡುತ್ತಾರೆ. ಆದರೆ ಜಿಜ್ಞಾಸಾಧಿಕರಣದಲ್ಲಿ ಮಾತ್ರ ಮೊದಲು ಭಾಮತೀ ವಿವರಣಕಾರರ ಅಧಿಕರಣರಚನೆಯನ್ನು ನಿರಾಕರಿಸಿ ಅನಂತರ ಸಿದ್ಧಾಂತರೀತ್ಯಾ ಅಧಿಕರಣರಚನೆಯನ್ನು ಮಾಡುತ್ತಿದ್ದಾರೆ. ಕಾರಣವೇನೆಂದರೆ ಸಿದ್ಧಾಂತರೀತ್ಯಾ ಮಾಡುತ್ತಿರುವ ಅಧಿಕರಣರಚನೆಯ ಪೂರ್ವಪಕ್ಷದಲ್ಲಿ ಪರರ ಸಿದ್ಧಾಂತವಾಗಿದೆ. ಹಾಗಾಗಿ ಪರರ ಅಧಿಕರಣರಚನೆಯ ಅವಶ್ಯಕತೆಯು ಬಹಳವಿದೆ. ಅದರ ಅನುಕೂಲಕ್ಕಾಗಿ ಮೊದಲೇ ಹೇಳಿದ್ದಾರೆ. ಇಲ್ಲಿ ಪುನಃ ಆಕ್ಷೇಪ ಮಾಡಬಾರದೆಂಬ ಉದ್ದೇಶದಿಂದಲೇ ವಿಸ್ತಾರವಾಗಿ ಹಿಂದೆ ಉತ್ತರಿಸಿದ್ದಾಗಿದೆ. ಅದನ್ನೆಲ್ಲ ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.)

ಹೀಗೆ ಹೇಳಿದ್ದರಿಂದ ಪ್ರತ್ಯಕ್ಷವು ಪ್ರಬಲವಾದ್ದರಿಂದ ಪ್ರತ್ಯಕ್ಷಬಾಧಿತವಾದ ವೇದಾಂತವು ಶುದ್ಧಚೈತನ್ಯವನ್ನು ಬೋಧಿಸಲು ಸಮರ್ಥವಾಗುವುದಿಲ್ಲವೆಂಬ ಆಕ್ಷೇಪವನ್ನೂ ನಿರಾಕರಿಸಿದಂತಾಯಿತು ಅದ್ವೈತಿಗಳ ಮತಪ್ರಕಾರ ಇಲ್ಲಿ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಅವರು ಪ್ರತ್ಯಕ್ಷವನ್ನು ದುರ್ಬಲವೆಂದು ಹೇಳುತ್ತಾರೆ. ಅಥವಾ ಪ್ರತ್ಯಕ್ಷಪ್ರಾಬಲ್ಯವನ್ನು ಮುಚ್ಚಿಟ್ಟೂ ಸಹ ಪೂರ್ವಪಕ್ಷವನ್ನು ಮಾಡಬಹುದು. ಆದ್ದರಿಂದಲೇ ಬ್ರಹ್ಮತರ್ಕದಿಂದ ಪ್ರತ್ಯಕ್ಷಕ್ಕೆ ಪ್ರಾಬಲ್ಯವು ಸಿದ್ಧವಾಗಿದ್ದರೂ ಅದನ್ನು ಮುಚ್ಚಿಟ್ಟು ಪೂರ್ವಪಕ್ಷವನ್ನು ಮಾಡುವ ಕ್ರಮವನ್ನು ಮುಂದೆ ತೋರಿಸಲಾಗಿದೆ.

ವಸ್ತುತಃ ಹೀಗೂ ಪೂರ್ವಪಕ್ಷ ಮಾಡಬಹುದಿತ್ತು. ವೇದಾಂತಗಳು ಶುದ್ಧಾತ್ಮನನ್ನು ಬೋಧಿಸಿದರೆ ಅವನು 'ಅಹಂ' ಪ್ರತ್ಯಯಕ್ಕೆ ವಿರುದ್ಧನಾದ್ದರಿಂದ ವೇದಾಂತಗಳು ಬಾಧಿತಾರ್ಥಗಳಾಗುತ್ತವೆ. ಆದ್ದರಿಂದ ವಿಚಾರಕ್ಕೆ ಅನರ್ಹವಾಗುತ್ತದೆಂದು. ಪೂರ್ವಪಕ್ಷಕ್ಕೆ ನ್ಯಾಯಸುಧಾಸಮ್ಮತಿಯೂ ಇದೆ ನಾನು ಎಂಬ ಅನುಭವದಿಂದ ಆತ್ಮನು ಕರ್ತೃತ್ವ ಮೊದಲಾದ ದೋಷಗಳಿಂದ ಕೂಡಿದ್ದಾನೆಂದು ತಿಳಿಯುತ್ತದೆ. ಆದರೆ ಇದಕ್ಕೆ ವಿರುದ್ಧವಾಗಿ ಶ್ರುತಿಯು ಆತ್ಮನನ್ನು ಬೋಧಿಸುತ್ತಿದೆ. ಹೀಗೆ ಪ್ರತ್ಯಕ್ಷ ಮತ್ತು ಶ್ರುತಿಗಳಿಗೆ ಪರಸ್ಪರ ವಿರೋಧವಿರುವುದರಿಂದ ವಿಚಾರವು ಯುಕ್ತವೆಂದು ಪ್ರಶ್ನೆ ಬಂದರೆ ಜರದ್ಗವಾದಿವಾಕ್ಯದಂತೆ 'ಬೆಂಕಿಯು ತಣ್ಣಗಿದೆ' ಎಂಬ ಅನುಮಾನದಂತೆ ಪ್ರತೀತಿವಿರುದ್ಧವಾದ್ದರಿಂದ ಶ್ರುತಿ ಹಾಗು ವಿಚಾರ ಎರಡೂ ಅನುಭವಬಾಧಿತವಾಗಿ ಆಭಾಸವೆನಿಸುತ್ತವೆ. ಬಾಧಿತವಾದ್ದರಿಂದ ವಿಷಯವು ಇಲ್ಲವೆಂದು ತೀರ್ಮಾನವಾಗುತ್ತದೆ'' ಎಂದು. ಮತ್ತು ಹಿಂದೆ ಶುದ್ಧನು ತೋರುವುದಿಲ್ಲ ಎಂದರೆ ಏನರ್ಥ? ಎಂದು ವಿವರವಾಗಿ ಖಂಡಿಸಲಾಗಿತ್ತು. ಅದನ್ನೆಲ್ಲ ಈಗ ಅನುಸಂಧಾನ ಮಾಡಿಕೊಳ್ಳಬೇಕಾಗಿಲ್ಲ. ಅಷ್ಟೇ ಅಲ್ಲದೆ, ಈ ಪೂರ್ವಪಕ್ಷವನ್ನು ಅವಲಂಬಿಸಿದರೆ ಪ್ರತ್ಯಕ್ಷಪ್ರಾಬಲ್ಯವನ್ನೂ ಉದಾಸೀನ ಮಾಡಿದಂತಾಗುತ್ತದೆ.

*ಪರಿಪೂರ್ಣಚಂದ್ರಿಕಾ*

ಆದರೂ ನ್ಯಾಯವಿವರಣಕ್ಕೆ ಅನುಸಾರಿಯಾದ ತತ್ವಪ್ರಕಾಶಿಕಾದ ಪೂರ್ವಪಕ್ಷವನ್ನು ಚಂದ್ರಿಕೆಯಲ್ಲಿ ತೋರಿಸಲಾಗಿದೆ. 'ನ್ಯಾಯಸುಧಾದಲ್ಲಿ ಪ್ರತ್ಯಕ್ಷವಿರುದ್ಧವಾಗಿ ಶ್ರುತಿ ಏನೇ ಹೇಳಿದರೂ ನಿರರ್ಥಕವಾಗುತ್ತದೆ'. ಆದ್ದರಿಂದ ಯಾವುದೇ ರೀತಿಯಾಗಿ ನೋಡಿದರೂ ವಿಚಾರವು ಅನಾವಶ್ಯಕವೆಂದು ಪೂರ್ವಪಕ್ಷವಿದೆ. ಅದನ್ನು ಇಲ್ಲಿ ಇಟ್ಟುಕೊಂಡಿಲ್ಲ.




**ಜಿಜ್ಞಾಸಾಧಿಕರಣ ಪೂರ್ವಪಕ್ಷ-ಅದ್ವೈತಿರೀತಿಯಿಂದ**

ಸೂತ್ರದ ಬ್ರಹ್ಮಶಬ್ದಕ್ಕೆ ಬ್ರಹ್ಮನು ಗುಣಪೂರ್ಣನಾದ್ದರಿಂದ ಜೀವನಿಗಿಂತ ವಿಲಕ್ಷಣ ಎಂದು ತಿಳಿಸುವ ಅಭಿಪ್ರಾಯವಿರುವುದರಿಂದ ಆ ಶಬ್ದದಿಂದ ನಿವಾರಣೆಯಾಗುವ ಪೂರ್ವಪಕ್ಷವನ್ನು ಹೇಳಬೇಕು -

ವೇದದಲ್ಲಿ ಕರ್ಮಕಾಂಡ ಕರ್ಮವನ್ನು ಹೇಳಲು ಹೊರಟಿದೆ. ವೇದಾಂತಕ್ಕೆ ಅದ್ವೈತಿಗಳು ಹೇಳಿದಂತೆ ಉಪಕ್ರಮಾದಿ ಲಿಂಗಗಳಿಂದ ನಿರ್ಧರ್ಮಕ ಚೈತನ್ಯವನ್ನು ಹೇಳುವ ಅಭಿಪ್ರಾಯ ಮೇಲುನೋಟಕ್ಕೆ ಕಾಣುತ್ತದೆ. ಹೀಗಾಗಿ ಜೀವನಿಗಿಂತ ಬೇರೆ ಗುಣಪೂರ್ಣ ಬ್ರಹ್ಮನಿಲ್ಲ. ಜೀವ ಸ್ವಪ್ರಕಾಶನಾಗಿ ಸಿದ್ಧನಾಗಿದ್ದಾನೆ. ಆತ್ಮನಿಗಿಂತ ಬೇರೆ ಯಾವುದೂ ಸತ್ಯವಲ್ಲ. ಶಾಸ್ತ್ರವೇದ್ಯವೂ ಅಲ್ಲ. ಸತ್ಯವಲ್ಲದ್ದು ಶಾಸ್ತ್ರವೇದ್ಯವಾದರೆ ಶಾಸ್ತ್ರ ಅಪ್ರಮಾಣವಾದೀತು. ವೇದಾಂತವೇದ್ಯವಾದ ಶುದ್ಧಚೈತನ್ಯ ಅನುಭವದಲ್ಲಿ ಅವೇದ್ಯ ಎನ್ನುವ ವಾದವನ್ನು ಹಿಂದೆಯೆ ನಿರಾಕರಿಸಲಾಗಿದೆ. ವೇದ್ಯವೆ ಆದರೂ ಅವಿದ್ಯೆಯ ಪ್ರಭಾವದಿಂದ ಅವೇದ್ಯವೂ ಹೌದೆನ್ನುವುದನ್ನೂ ಹಿಂದೆ ನಿರಾಕರಿಸಲಾಗಿದೆ. ಪ್ರತ್ಯಕ್ಷವಿರೋಧವಿರುವಾಗ ವೇದಾಂತವು ಶುದ್ಧಚೈತನ್ಯವನ್ನು ಹೇಗೆ ಹೇಳುತ್ತದೆ ಎಂದರೆ ಅದ್ವೈತಿ ರೀತಿಯಿಂದ ಪ್ರತ್ಯಕ್ಷ ದುರ್ಬಲ.

ನ್ಯಾಯವಿವರಣಾನುಸಾರವಾಗಿ ಇಲ್ಲಿ ಟೀಕೆ ಹೀಗೆ ಹೇಳಿದೆ. ಸುಧೆಯಲ್ಲಿ ಯಾವ ರೀತಿಯಿಂದ ನೋಡಿದರೂ ವಿಚಾರ ಅನಾವಶ್ಯಕವೆನ್ನಲು ಪ್ರತ್ಯಕ್ಷ ವಿರುದ್ಧವಾಗಿ ಶ್ರುತಿ ಏನು ಹೇಳಿದರೂ ಅದು ನಿರರ್ಥಕ, ವಿಚಾರಕ್ಕೇ ಅಯೋಗ್ಯವೆಂದು ಪೂರ್ವಪಕ್ಷವಿದೆ.



● ● ● ● ●

## ನಿತ್ಯಸಿದ್ಧನ ಬಗ್ಗೆ ಜಿಜ್ಞಾಸೆ ಏಕೆ?

**तात्पर्यचन्द्रिका –**

**आत्मनश्च स्वप्रकाशत्वे तत्प्रकाशः किं तार्किकरीत्या मानसानुभवेन, किं वा प्राभाकररीत्या स्वप्रकाशसंविदाश्रयतया । नाद्यः । तस्यापि परप्रकाश्यत्वेन अनवस्थानात् । कस्यचिदनुभवस्य स्वप्रकाशत्वे च लाघवादात्मन एव तदस्तु । नच ज्ञानं जिज्ञासितग्राह्यम् । जिज्ञासा च न सर्वत्रेति नानवस्थेति वाच्यम् ।**

ज्ञानस्य सुखदुःखादिवत् जिज्ञासाभावेऽप्यनुभवात् । अन्यथा जिज्ञासायाः ज्ञाना-न्यधर्मिज्ञानसाध्यत्वानुभवादनवस्था स्यात् । नच जिज्ञासा न ज्ञानधर्मिका, किन्तु अहं ज्ञानी नवा घटो ज्ञातो नवेत्यात्मादिधर्मिकैवेति वाच्यम् । तादृशजिज्ञासाया अननुभवात् । ननु न ज्ञानमात्रमजिज्ञासितग्राह्यम्; येनान-वस्था । नापि जिज्ञासितग्राह्यम्, येनानुभवविरोधः । किन्तु किञ्चित् ज्ञानं कदापि न ज्ञायत एवेति न कोऽपि दोष इति चेत् न । कदाप्यज्ञायमानज्ञानस्यासत्त्वा-पातात् । न द्वितीयः । सुषुप्तावात्मातिरिक्तज्ञानाभावादात्मानुभवाभावेन 'एतावन्तं कालं सुखं सुप्तोऽस्मि' इत्यौत्तरिकानुस्मृत्यनुपपत्तेः । किञ्च – आत्मन औत्तरिका-नुस्मृत्यन्यथाऽनुपपत्त्या संविद्रूपत्वाच्च संविदाश्रयत्वम् ।

ಅನುವಾದ - ಆತ್ಮನನ್ನು ಅಸ್ವಪ್ರಕಾಶನೆಂದು ಹೇಳಿದರೆ, ಅವನ ಜ್ಞಾನ ಹೇಗೆ ಬರುತ್ತದೆ ಎಂದು ಹೇಳಬೇಕು. ತಾರ್ಕಿಕರು ಹೇಳುವಂತೆ ಮಾನಸಾನುಭವದಿಂದ ತಿಳಿಯು- ತ್ತಾನೋ ಅಥವಾ ಪ್ರಾಭಾಕರರು ಹೇಳುವಂತೆ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿ ತಿಳಿಯುತ್ತಾನೋ ತಾರ್ಕಿಕರ ಅಭಿಪ್ರಾಯ ತಪ್ಪು. ಏಕೆಂದರೆ ಆತ್ಮನು ಮಾನಸಾನುಭವವೇದ್ಯನೆಂದರೆ ಆ ಮಾನಸಾನುಭವವೂ ಅಸ್ವಪ್ರಕಾಶವಾದ್ದರಿಂದ ಇನ್ನೊಂದು ಮಾನಸಾನುಭವಕ್ಕೆ ವೇದ್ಯವೆಂದು ಹೇಳಬೇಕು. (ಆ ಮಾನಸಾನುಭವವೂ ಸಹ ಅಸ್ವಪ್ರಕಾಶವಾದ್ದರಿಂದ ಇನ್ನೊಂದು ಮಾನಸಾ- ನುಭವಕ್ಕೆ ವೇದ್ಯವೆಂದು ಹೇಳಬೇಕು.) ಹೀಗೆ ಅನಸ್ಥಾದೋಷವು ಬರುತ್ತದೆ. ಅನವಸ್ಥಾದೋಷದ ಪರಿಹಾರಕ್ಕಾಗಿ ಯಾವುದಾದರು ಒಂದು ಮಾನಸಾನುಭವವನ್ನು ಸ್ವಪ್ರಕಾಶವೆಂದು ಒಪ್ಪಬೇಕು. ಅದಕ್ಕಿಂತ ಆತ್ಮನನ್ನೇ ಸ್ವಪ್ರಕಾಶನೆಂದು ಒಪ್ಪುವುದರಲ್ಲಿ ಲಾಘವವಾಗಿದೆ.

ಶಂಕೆ - ಜಿಜ್ಞಾಸೆ ಬಂದಾಗ ಮಾತ್ರ ಜ್ಞಾನವು ಇನ್ನೊಂದು ಜ್ಞಾನಕ್ಕೆ ವಿಷಯವಾಗುತ್ತದೆ. ಎಲ್ಲಾ ಮಾನಸಜ್ಞಾನಗಳಲ್ಲಿ ಜಿಜ್ಞಾಸೆಯು ಉಂಟಾಗಬೇಕೆಂದೇನು ನಿಯಮವಿಲ್ಲ. ಆದ್ದರಿಂದ ಮಾನಸ- ಜ್ಞಾನಾನುಭವಕ್ಕೆ ಮತ್ತೊಂದು ಮಾನಸಾನುಭವದ ಅಪೇಕ್ಷೆ ಇಲ್ಲದ ಕಾರಣ ಅನವಸ್ಥಾದೋಷವು ಬರುವುದಿಲ್ಲ.

ಸಮಾಧಾನ - 'ಜಿಜ್ಞಾಸೆ ಬಂದಾಗ ಮಾತ್ರ ಜ್ಞಾನವು ಮತ್ತೊಂದು ಜ್ಞಾನಕ್ಕೆ ವಿಷಯವಾಗುತ್ತದೆ' ಎಂಬ ಮಾತೇ ಅನುಭವವಿರುದ್ಧವಾಗಿದೆ. ಜಿಜ್ಞಾಸೆ ಇಲ್ಲದಿದ್ದರೂ ಸುಖ ದುಃಖಗಳು ಯಾವ ರೀತಿಯಾಗಿ ಅನುಭವಕ್ಕೆ ವಿಷಯಗಳಾಗುತ್ತವೆಯೊ, ಹಾಗೆಯೇ ಜ್ಞಾನವೂ ಕೂಡ ಜಿಜ್ಞಾಸೆ ಇಲ್ಲದಿದ್ದರೂ ಅನುಭವಕ್ಕೆ ವಿಷಯವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಒಂದು ವೇಳೆ ಜಿಜ್ಞಾಸೆ ಬಂದರೆ ಮಾತ್ರ ಜ್ಞಾನವು ಮತ್ತೊಂದು ಜ್ಞಾನಕ್ಕೆ ತಿಳಿಯುತ್ತದೆಂದು ಒಪ್ಪಿದರೂ ಅನವಸ್ಥಾ ತಪ್ಪಿದ್ದಲ್ಲ. ಹೇಗೆಂದರೆ ಜಿಜ್ಞಾಸೆ ಎಂದರೆ ಜ್ಞಾನದ ಇಚ್ಛೆ , ಆ ಇಚ್ಛೆ ಹುಟ್ಟಲು ಮೊದಲು ಅದರ ಧರ್ಮಿಜ್ಞಾನ ಬೇಕು. ಜ್ಞಾನೇಚ್ಛೆಗೆ ಜ್ಞಾನವೇ ಧರ್ಮಿ. ಧರ್ಮಿಯಾದ ಜ್ಞಾನದ ಜ್ಞಾನ ಬಂದರಷ್ಟೇ ಜ್ಞಾನೇಚ್ಛೆ ಹುಟ್ಟಲು ಸಾಧ್ಯ. ಈಗ ಜ್ಞಾನೇಚ್ಛೆ (ಜಿಜ್ಞಾಸಾ) ಇದ್ದರೆ ಮಾತ್ರ ಜ್ಞಾನದ ಜ್ಞಾನವೆಂಬ ನಿಯಮ ಹೇಳಿದಗೆ ಜ್ಞಾನೇಚ್ಛೆಯಿಂದ ಧರ್ಮಿಜ್ಞಾನ, ಧರ್ಮಿಜ್ಞಾನದಿಂದ ಜ್ಞಾನೇಚ್ಛೆ ಹೀಗೆ ಕಲ್ಪಿಸುತ್ತಾ ಅನವಸ್ಥಾ ದೋಷ ಬರುತ್ತದೆ.

ಶಂಕೆ - ಜ್ಞಾನೇಚ್ಛೆಗೆ (ಜಿಜ್ಞಾಸಾಕ್ಕೆ) ಜ್ಞಾನವು ಧರ್ಮಿಯಲ್ಲ. ಹೊರತಾಗಿ ನಾನು ಜ್ಞಾನಿಯೋ? ಅಲ್ಲವೋ? ಎಂಬ ಸಂಶಯ ಬರುವುದರಿಂದ ನಾನು ಜ್ಞಾನಿಯೆಂದು ತಿಳಿಯಬೇಕೆಂಬ ಜಿಜ್ಞಾಸೆ ಬರುತ್ತದೆ. ಈ ಜಿಜ್ಞಾಸೆಯಲ್ಲಿ ಆತ್ಮನೇ ಧರ್ಮಿಯಾಗಿದ್ದಾನೆ. ಅದರಂತೆ ಘಟವು ಜ್ಞಾನಕ್ಕೆ ವಿಷಯವಾಗಿದೆಯೋ ಇಲ್ಲವೋ? ಎಂದು ಸಂಶಯ ಬರುತ್ತದೆ. ಈ ಸಂಶಯವೂ ಆತ್ಮಧರ್ಮಿಕವಾಗಿದೆ. ಆದ್ದರಿಂದ ಜಿಜ್ಞಾಸೆಗೆ ಜ್ಞಾನವು ಧರ್ಮಿಯಾಗುವುದಿಲ್ಲ. ಹೊರತಾಗಿ ಆತ್ಮನೇ ಧರ್ಮಿಯಾಗಿದ್ದಾನೆ. ಆತ್ಮನ ಹಾಗು ಘಟದ ಜ್ಞಾನ ಬರಲು ಜ್ಞಾನೇಚ್ಛೆ ಬೇಕಾಗಿಲ್ಲವಾದ್ದರಿಂದ ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ಸಮಾಧಾನ - ಈ ಆಕ್ಷೇಪವು ಅನುಭವವಿರುದ್ಧವಾಗಿದೆ. ಏಕೆಂದರೆ ಜ್ಞಾನೇಚ್ಛೆಗೆ ಜ್ಞಾನವೇ ಧರ್ಮಿ ಹೊರತು ಆತನು ಧರ್ಮಿ ಎಂಬುದು ಅನುಭವವಿರುದ್ಧವಾಗಿದೆ.

ಶಂಕೆ - ಎಲ್ಲಾ ಜ್ಞಾನಗಳನ್ನು ನಾವು ಅಜಿಜ್ಞಾಸಿತಗ್ರಾಹ್ಯವೆಂದು ಒಪ್ಪುವುದಿಲ್ಲ. ಹಾಗೆ ಒಪ್ಪಿದ್ದರೆ ಅನವಸ್ಥಾದೋಷವು ಬರುತ್ತಿತ್ತು. ಹಾಗೆಯೇ ಜಿಜ್ಞಾಸೆ ಬಂದರೆ ಮಾತ್ರ ಜ್ಞಾನವು ಮತ್ತೊಂದು ಜ್ಞಾನಕ್ಕೆ ವಿಷಯವಾಗುತ್ತದೆ ಎಂಬುದನ್ನೂ ಎಲ್ಲಾ ಜ್ಞಾನಗಳಲ್ಲಿ ನಿಯಮ ಮಾಡಲು ಹೋಗುವುದಿಲ್ಲ. ಹಾಗೆ ಮಾಡಿದ್ದಲ್ಲಿ ಅನುಭವವಿರೋಧವು ಬರುತ್ತಿತ್ತು. ಹೊರತಾಗಿ, ಕೆಲವು ಜ್ಞಾನಗಳು ಎಂದೂ ಸಹ ಗೋಚರವೇ ಆಗುವುದಿಲ್ಲವೆಂದು ಹೇಳುತ್ತೇವೆ. ಈಗ ಹಿಂದಿನ ಯಾವ ದೋಷಗಳೂ ಬರುವುದಿಲ್ಲ.

ಸಮಾಧಾನ - ಕೆಲವು ಜ್ಞಾನಗಳು ಎಂದೂ ಸಹ ಜ್ಞಾನಗೋಚರವಾಗುವುದಿಲ್ಲವೆನ್ನಲು ಪ್ರಮಾಣವೇ ಇಲ್ಲ. ಪ್ರಮಾಣವಿಲ್ಲದಿದ್ದರೂ ಅಂತಹ ಜ್ಞಾನಗಳು ಇವೆಯೆಂದರೆ ಅಂತಹ ಜ್ಞಾನಗಳನ್ನು 'ಅಸತ್' ಎಂದೇ ಒಪ್ಪಿದಂತಾಯಿತು. (ಜ್ಞಾನಗಳು ಜ್ಞಾತೈಕಸತ್ ಆದ್ದರಿಂದ).

ಇನ್ನು ಪ್ರಾಭಾಕರರು ಹೇಳುವಂತೆ ಸ್ವಪ್ರಕಾಶವಾದ ಜ್ಞಾನಕ್ಕೆ ಆತ್ಮನು ಆಶ್ರಯನಾಗಿ ತೋರುತ್ತಾನೆ ಎಂಬ ವಾದವೂ ಸರಿಯಲ್ಲ. ಏಕೆಂದರೆ ಸುಷುಪ್ತಿಯಲ್ಲಿ ನಮಗೆ ಆತ್ಮಾತಿರಿಕ್ತವಾದ ಜ್ಞಾನವಿಲ್ಲದಿದ್ದರೂ ಆತ್ಮನ ಅನುಭವ ಬರುವುದು ಕಂಡಿದೆ. ಒಂದು ವೇಳೆ ಜ್ಞಾನವಿಲ್ಲದೆ ಆತ್ಮನು

ತೋರಲಾರನೆಂದು ಹೇಳುವುದಾದರೆ ಸುಷುಪ್ತಿಯಲ್ಲಿ ಆತ್ಮಾತಿರಿಕ್ತವಾದ ಜ್ಞಾನವಿಲ್ಲದ ಕಾರಣ ಆತ್ಮನ ಅನುಭವವೂ ಇಲ್ಲವೆಂದಂತಾಗಿ ಉತ್ತರಕಾಲದಲ್ಲಿ 'ಏತಾವಂತಂ ಕಾಲಂ ಸುಖಂ ಸುಪ್ತೋಽಸ್ಮಿ' ಎಂಬ ಪರಾಮರ್ಶವೇ ಬರದೇ ಇರಬೇಕಾದೀತು. ಮತ್ತು ಆತ್ಮವಿಷಯಕವಾದ ಉತ್ತರಕಾಲದ ಪರಾಮರ್ಶದಿಂದ ಆತ್ಮನನ್ನು ಜ್ಞಾನರೂಪನೆಂದೇ ಹೇಳಬೇಕು. ಹೊರತು ಜ್ಞಾನಾಶ್ರಯನೆಂದು ಹೇಳಬಾರದೆಂದು ಅನ್ಯಥಾನುಪಪತ್ತಿ ಪ್ರಮಾಣದಿಂದ ಸಿದ್ಧವಾಗುತ್ತದೆ.

### ಕಠಿಣಪದಾರ್ಥ

**ತಸ್ಯಾಪಿ** = ಮಾನಸಾನುಭವವೂ ಕೂಡ. **ಕಸ್ಯಚಿದನುಭವಸ್ಯ** = ಯಾವುದಾದರೊಂದು ಮಾನಸಾನುಭವವನ್ನೂ. **ಜಿಜ್ಞಾಸಿತಗ್ರಾಹ್ಯಮ್** = ಜಿಜ್ಞಾಸೆ ಮಾಡಿದರಷ್ಟೇ ತಿಳಿಯುವಂತಹದ್ದು. **ಅನ್ಯಥಾ** = ಜಿಜ್ಞಾಸೆ ಮಾಡಿದರಷ್ಟೇ ತಿಳಿಯುವುದಾದಲ್ಲಿ. **ಆತ್ಮಾದಿಧರ್ಮಿಕೈವ** = ಆತ್ಮ ಅಥವಾ ಘಟ ಧರ್ಮಿಯಾಗಿರುವ. **ತಾದೃಶ-ಜಿಜ್ಞಾಸಾಯಾಃ** = ಆತ್ಮಧರ್ಮಿಕವಾದ ಅಥವಾ ಘಟಧರ್ಮಿಕವಾದ ಜಿಜ್ಞಾಸೆಯು. **ಕದಾಪಿ ಅಜ್ಞಾಯಮಾನಜ್ಞಾನಸ್ಯ** = ಎಂದೂ ತಿಳಿಯದ ಜ್ಞಾನಕ್ಕೆ. **ಔತ್ತರಿಕಾನು-ಸ್ಮೃತ್ಯನ್ಯಥಾನುಪಪತ್ತ್ಯಾ** = ಆತ್ಮನು ಸಂವಿದ್ರೂಪನಾಗದೆ ಎಚ್ಚರದ ಅನಂತರ ಬರುವ ಅನುಸ್ಮೃತಿಯು ಕೂಡದ ಕಾರಣ.

**प्रकाशः** – ''नचात्मनः स्वप्रकाशत्वे विवदितव्यतम्'' इत्यादिटीकां विवृणोति - **आत्मनश्चेति । तार्किकेति ।।** अनेन ''नचायं मानसः'' इत्यादिस्तार्किक-मतनिरासपर इत्युक्तं भवति । **'प्राभाकर'** इत्येतत् – 'नच स्वप्रकाशसंविदाश्रय-तया' इत्यस्य विवरणम् । 'तस्यापि' इत्यादेरर्थः – **तस्यापीति** । 'ज्ञानान्तरा-न्वेषणेन' इति शेषः । 'कस्यचित्' इत्यादेर्युक्तिं वदन्नर्थमाह – **कस्यचिदिति ।।** 'जिज्ञासायामेव' इति शङ्काग्रन्थं विवृणोति – **नचेति । न सर्वत्रेति ।।** धर्मिज्ञानाद्यभावादिनेति भावः । 'अनुभवविरोधात्' इति हेतुवाक्यं विवृणोति - **ज्ञानस्येति ।।** घटज्ञानानन्तरं घटज्ञानं ज्ञास्यामीतीच्छाया अभावेऽपि घटं जानामीत्यनुभवादित्यर्थः । अनुभवे विवदमानं प्रति बाधकमाह – **अन्यथेति ।।** जिज्ञासितग्राह्यत्व इत्यर्थः । जिज्ञासा हि ज्ञानेच्छा । सा यद्विषयिणी तज्ज्ञान-साध्या । धर्मिज्ञानसाध्यत्वात् तस्याः । धर्मि चेह ज्ञानमेव । तथाच धर्मिभूत-ज्ञानस्य ज्ञाने सति जिज्ञासा, तच्च ज्ञानं जिज्ञासापूर्वं, सा च ज्ञानपूर्वेति पूर्वपूर्वजिज्ञासा – ज्ञानव्यक्तिपरंपरया त्वदभिमतजिज्ञासितग्राह्यत्वमपि न

स्यादिति मूलक्षतेरनवस्थेत्यर्थः । 'ज्ञानसाध्यत्वानुभवात्' इत्युक्त्याऽनवस्था-निरासाय ज्ञानपूर्वकत्वानङ्गीकारे 'अनुभवविरोधात्' इत्यपि टीकागतहेतुवाक्यार्थ उक्तो भवति । अर्थान्तरमपि वक्तुमुक्तदोषपरिहाराय शङ्कामुद्भावयति – नचेति ॥ न ज्ञानधर्मिकेति ॥ तथाच न ज्ञानजिज्ञासाव्यक्तिपरंपरयाऽनवस्थेति भावः । आत्मादिधर्मिकजिज्ञासायाश्चात्मादिज्ञानपूर्वकत्वेऽप्यात्मादिज्ञानस्य जिज्ञासा-पूर्वकत्वाभावान्नानवस्था । ज्ञानवत् तस्य जिज्ञासितग्राह्यत्वाभावादिति भावः । अत्र यद्यपि 'अहं ज्ञानीति जिज्ञासे, घटो ज्ञात इति जिज्ञासे' इत्येवात्मादि-धर्मिकजिज्ञासाऽभिनयो युक्तः । नतु संशयाभिनयः । तथाऽपि यद्धर्मिकः संशयस्तद्धर्मिकैव जिज्ञासा युक्तेति युक्तिं सूचयितुं संशयप्रदर्शनमित्यदोषः । 'नवा' इत्यनन्तरं 'संशयवज्जिज्ञासाऽपि आत्मादिधर्मिकैव' इति योज्यम् ॥ अननुभवादिति ॥ एतेन – इत्थं नानुभवः किंतु अन्यथैवेत्येवमुक्तौ अनुभवविरोधः इति टीकार्थ उक्तो भवति । 'नहि' इति वाक्यस्य प्रकृतोपयोगादर्शनाच्छङ्कापूर्वं तद्वाक्यं विवृणोति – नन्विति ॥ 'नच स्वप्रकाश' इत्यादि विवृणोति – न द्वितीय इति ॥ 'औत्तरिक' इत्यादि विवृणोति – सुषुप्ताविति ॥ ज्ञानाभावा-दिति ॥ मनस उपरतत्वादिति भावः । 'संविदात्मकत्वाच्च' इति वाक्यं युक्तिं सूचयन् विवृणोति – किञ्चेति ॥ अन्यथानुपपत्त्येति ॥ आत्मातिरिक्तज्ञानाभावादिति भावः ।

गुरुराजीय – स्वप्रकाशत्वाभावोऽपि द्वेधा । प्रकाशस्यैवाभावेन परप्रकाश्यत्वेन वा । तत्राद्योऽहमित्यनुभवादिति टीकानुवादरूपेण तत्प्रकाशस्य सिद्धवत्करणेन निरस्तः । द्वितीयदूषणपरां 'न चायं मानस' इत्यादिटीकां विकल्पमुखेन व्याख्याति – किं तार्किकरीत्येत्यादिना ॥ टीकोक्तं ज्ञायमानत्वं परप्रकाश्यत्वमेव । अन्यथाऽनवस्थायोगादित्याह – परप्रकाश्यत्वेनेति ॥ 'अस्तु आत्मन एव तत्' इति टीकायां हेत्वनुक्तिमाशङ्क्य एवेत्यनेन ज्ञानान्तरं तस्मिन् स्वप्रकाशत्वं चेति कल्पनात् क्लृप्ते आत्मनि स्वप्रकाशत्वमात्रकल्पनं लघ्विति हेतुः सूचित इत्याह – लाघवादिति ॥ 'जिज्ञासायामेव' इति टीकोक्ता शङ्का न युक्ता । जिज्ञासाया अपि सार्वत्रिकत्वेऽनवस्थातादवस्थ्यादित्याशङ्क्य एवेत्यनेन तस्या असार्वत्रिकत्वं

सूचितमित्याह – **जिज्ञासा च न सर्वत्रेति** ।। **ज्ञानस्य सुखदुःखादिवदित्यादि** ।। अत्र **'जिज्ञासाभावेऽप्यनुभवात्'** इत्यनेन **'अनुभवविरोधात्'** इति टीका जिज्ञासाभावेऽपि ज्ञानानुभवविरोधादिति धर्मिज्ञानसाध्यत्वानुभवादित्यनेन जिज्ञासाया धर्मिज्ञानसाध्यत्वानुभवविरोधादिति तादृशजिज्ञासाया अननुभवादित्यनेन अहं ज्ञानी नवेत्यादिजिज्ञासाभावानुभवविरोधादिति त्रेधा व्याख्याता भवति । अनवस्था स्यादित्यनेन त्वनुभवान्तरान्वेषणेनावस्थानादिति पूर्वटीकातोऽन-वस्थानादित्यस्यानुभव विरोधादित्यत्रानुषङ्गो दर्शित इति ज्ञातव्यम् । **अन्यथेति** ।। ज्ञानस्य जिज्ञासितग्राह्यत्वे ज्ञानरूपधर्मिणो ज्ञानेन ज्ञानविषयकजिज्ञासा तस्यां च सत्यां धर्मिभूतज्ञानस्य ज्ञानमत्र व्यक्तिद्वयाङ्गीकारे अन्योन्याश्रयः । त्रयाङ्गीकृतौ चक्रकम् । परंपराङ्गीकारे अनवस्थेति द्रष्टव्यम् ।। **नच जिज्ञासा न ज्ञान-धर्मिकेति** ।। यद्यप्यत्रापि विशेषणीभूतज्ञानस्य ज्ञानमावश्यकम् । विशिष्टज्ञाने विशेषणज्ञानहेतुताया अन्वयव्यतिरेकाभ्यां प्राप्तत्वात् । तच्च ज्ञानस्य जिज्ञासितग्रा ह्यत्वाज्जिज्ञासायामेव सम्भवति । जिज्ञासा च तद्विषयकज्ञानसाध्येत्यन्योन्याश्रयादि स्यादेव । तथापि धर्मिज्ञानपरंपराप्रयुक्तानवस्थापरिहाराभिप्रायेणेयं शङ्केति ध्येयम् । वस्तुतो विशिष्टज्ञाने विशेषणज्ञानकारणताया अन्यत्र निरस्तत्वान्न तत्परंपरयाऽप्यनवस्थेति बोध्यम् । **'न ह्यज्ञायमाने'** इति टीकानुपपन्ना जिज्ञासिता जिज्ञासितग्राह्यत्वपक्षयोरनवस्थानुभवविरोधाभ्यां दूषितत्वात् पक्षान्तरस्याभावेन शङ्कानुदयात्, इत्यत आह ।। **ननु न ज्ञानमात्रमित्यादि** ।। न **किंचिन्मानम्** इति टीकोक्तः परिहारो न युक्तः कदाप्यज्ञायमानज्ञानस्य परं प्रतीष्टत्वात्, इत्यत आह – **असत्त्वापातादिति** ।। **'औत्तरिकानुस्मृति'** इत्यादिटीकायां प्रकृतोपयोगित्वात् 'सुषुप्तावात्मानुभवाभावप्रसङ्गात्' इति वक्तव्ये सौषुप्तिकानुभवाभावप्रसङ्गात् इति सामान्योक्तिः किमर्थम्? इत्याशङ्क्य कालाद्यनुभवाभावरूपानिष्टान्तरापादनार्थम् इत्याह – **एतावन्तं कालमित्यादिना** ।। **'संविदात्मकत्वाच्च'** इति टीकोक्त-हेतुसाधकत्वेनापि **'औत्तरिकानुस्मृति'** इत्यादिटीकां योजयति – **किंच आत्मन इत्यादि** ।।

ವಿವರಣೆ - ತತ್ವಪ್ರಕಾಶಿಕೆಯಲ್ಲಿ 'ನ ಚಾತ್ಮನಃ ಸ್ವಪ್ರಕಾಶತ್ವೇ ವಿವದಿತವ್ಯಮ್' 'ಆತ್ಮ ಸ್ವಪ್ರಕಾಶನೆಂಬ ವಿಷಯದಲ್ಲಿ ವಿವಾದವಿಲ್ಲ' ಎಂದು ಹೇಳಲಾಗಿದೆ. ಅದನ್ನು ಚಂದ್ರಿಕೆಯಲ್ಲಿ 'ಆತ್ಮ

ಇತ್ಯಾದಿ ವಾಕ್ಯಗಳಿಂದ ವಿವರಿಸುತ್ತಿದ್ದಾರೆ. ಚಂದ್ರಿಕೆಯಲ್ಲಿ 'ಕಿಂ ತಾರ್ಕಿಕರೀತ್ಯಾ ಮಾನಸಾನುಭವೇನ?' ಎಂದು ಹೇಳಿದ್ದರಿಂದ 'ನಚಾಯಂ ಮಾನಸಾನುಭವೇನ' ಎಂಬ ತತ್ವಪ್ರಕಾಶಿಕೆಯ ಮಾತು ತಾರ್ಕಿಕಮತನಿರಾಸಪರವಾದದ್ದೆಂದು ತಿಳಿಯುತ್ತದೆ. ಹಾಗೆಯೇ 'ಕಿಂ ವಾ ಪ್ರಾಭಾಕರರೀತ್ಯಾ ಸ್ವಪ್ರಕಾಶಸಂವಿದಾಶ್ರಯತಯಾ'? ಎಂದು ಚಂದ್ರಿಕೆಯಲ್ಲಿ ಹೇಳಿದ್ದರಿಂದ ತತ್ವಪ್ರಕಾಶಿಕಾದಲ್ಲಿರುವ 'ನ ಚ ಸ್ವಪ್ರಕಾಶಸಂವಿದಾಶ್ರಯತಯಾ' ಇತ್ಯಾದಿ ವಾಕ್ಯವು ಪ್ರಾಭಾಕರಮತ ನಿರಾಸಪರವಾದದ್ದೆಂದು ತಿಳಿಯುತ್ತದೆ. ಮತ್ತು ತಾರ್ಕಿಕಮತನಿರಾಸ ಸಂದರ್ಭದಲ್ಲಿ ತತ್ವಪ್ರಕಾಶಿಕಾದಲ್ಲಿ ಹೇಳಿದ 'ತಸ್ಯಾಪಿ' ಇತ್ಯಾದಿ ವಾಕ್ಯವನ್ನು ಚಂದ್ರಿಕೆಯಲ್ಲಿ 'ತಸ್ಯಾಪಿ' ಇತ್ಯಾದಿ ವಾಕ್ಯದಿಂದಲೇ ವಿವರಿಸುತ್ತಿದ್ದಾರೆ ಚಂದ್ರಿಕೆಯಲ್ಲಿ ಅನವಸ್ಥಾನಾತ್' ಎಂದಷ್ಟೇ ಇದೆ. 'ಮತ್ತೊಂದು ಜ್ಞಾನವನ್ನು ಅಪೇಕ್ಷಿಸುವುದರಿಂದ' ಎಂಬುದನ್ನು ಅಲ್ಲಿ ಸೇರಿಸಿಕೊಳ್ಳಬೇಕು. 'ಯಾವುದಾದರೂ ಒಂದು ಮಾನಸಾನುಭವವನ್ನು ಸ್ವಪ್ರಕಾಶವೆಂದು ಹೇಳುವು-ದಾದರೆ ಆತ್ಮನಿಗೆ ಸ್ವಪ್ರಕಾಶತ್ವವನ್ನು ಹೇಳಿ' ಎಂದಷ್ಟೇ ಟೀಕೆಯಲ್ಲಿದೆ. ಅದಕ್ಕೆ ಕಾರಣ 'ಲಾಘವ' ಎಂದು ಚಂದ್ರಿಕೆಯಲ್ಲಿ ಹೇಳಿದ್ದಾರೆ.

ಟೀಕೆಯಲ್ಲಿ 'ಜಿಜ್ಞಾಸಾಯಾಮೇವ' ಇತ್ಯಾದಿ ವಾಕ್ಯಗಳಿಂದ ಶಂಕೆ ಮಾಡಿದ್ದಾರೆ. ಅದನ್ನು ಇಲ್ಲಿ 'ನಚ ಜ್ಞಾನಂ' ಇತ್ಯಾದಿ ವಾಕ್ಯಗಳಿಂದ ವಿವರಿಸುತ್ತಿದ್ದಾರೆ. ಜಿಜ್ಞಾಸೆಯು ಎಲ್ಲಾಕಡೆ ಏಕೆ ಬರುವುದಿಲ್ಲ? ಎಂದರೆ ಧರ್ಮಿಜ್ಞಾನವಿಲ್ಲದ ಕಾರಣ ಎಂದು ತಿಳಿಯಬೇಕು. ಟೀಕೆಯಲ್ಲಿ ಹೇಳಿದ ಅನುಭವವಿರೋಧವನ್ನು 'ಜ್ಞಾನಸ್ಯ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಅಂದರೆ ಘಟಜ್ಞಾನ ಬಂದ ಮೇಲೆ 'ಘಟಜ್ಞಾನವಾನಹಂ' ಎಂದು ಘಟಜ್ಞಾನದ ಜ್ಞಾನವು ಬರುತ್ತದೆ. ಈ ಜ್ಞಾನದ ಜ್ಞಾನ ಬರಬೇಕಾದರೆ ಮೊದಲು 'ಘಟಜ್ಞಾನಂ ಜ್ಞಾಸ್ಯಾಮಿ' 'ಘಟಜ್ಞಾನವನ್ನು ತಿಳಿಯಲು ಇಚ್ಛಿಸುತ್ತೇನೆ' ಎಂಬ ಜಿಜ್ಞಾಸೆಯು ಬರಬೇಕಾಗಿಲ್ಲ. ಆದ್ದರಿಂದ ಜ್ಞಾನವು ಜಿಜ್ಞಾಸಿತಗ್ರಾಹ್ಯವಲ್ಲವೆಂದು ತಿಳಿಯಬೇಕು. ನೀವು ಹೇಳಿದ ಅನುಭವದಲ್ಲೇ ನಮಗೆ ವಿವಾದವಿದೆಯೆಂದರೆ 'ಅನ್ಯಥಾ' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ. ಅನ್ಯಥಾ = ಜಿಜ್ಞಾಸಾ ಬಂದರೆ ಮಾತ್ರ ಜ್ಞಾನದ ಜ್ಞಾನ ಬರಲು ಸಾಧ್ಯವೆಂದರೆ ಅನವಸ್ಥಾದೋಷ ಬರುತ್ತದೆ. ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ ಎಂದರ್ಥ. ಆ ಜ್ಞಾನೇಚ್ಛೆಯು ಯಾವ ವಿಷಯದಲ್ಲಿ ಬರುತ್ತದೋ; ಆ ಧರ್ಮಿಭೂತವಾದ ವಿಷಯದ ಜ್ಞಾನವು ಮೊದಲಿಗೆ ಇರಬೇಕು. ಇಲ್ಲಿ ಜ್ಞಾನವೇ ಧರ್ಮಿಯಾಗಿದೆ. ಆದ್ದರಿಂದ ಧರ್ಮಿಭೂತವಾದ ಜ್ಞಾನದ ಜ್ಞಾನ ಬಂದರೆ ಜಿಜ್ಞಾಸೆಯು ಬರುತ್ತದೆ. ಆ ಧರ್ಮಿಜ್ಞಾನವನ್ನು ನೀವು ಜಿಜ್ಞಾಸಿತಗ್ರಾಹ್ಯವೆಂದರೆ ಜ್ಞಾನೇಚ್ಛೆಯಿಂದ ಧರ್ಮಿಜ್ಞಾನ, ಧರ್ಮಿಜ್ಞಾನದಿಂದ ಜ್ಞಾನೇಚ್ಛೆ ಹೀಗೆ ಜ್ಞಾನವ್ಯಕ್ತಿಪರಂಪರೆಯನ್ನು ಕಲ್ಪಿಸುತ್ತಾ ಹೋದರೆ ನಿಮಗೆ ಅಭಿಮತವಾದ ಜಿಜ್ಞಾಸಿತಗ್ರಾಹ್ಯತ್ವವೇ ನಾಶವಾಗಿ ಹೋಗುತ್ತದೆ. ಮೂಲಕ್ಕೆ ಕೊಡಲಿ ಏಟು ಬಿದ್ದಿದ್ದರಿಂದ ಅನವಸ್ಥಾದೋಷ ಬರುತ್ತದೆ.

'ಜ್ಞಾನಸಾಧ್ಯತ್ವಾನುಭವಾತ್' ಎಂದು ಚಂದ್ರಿಕೆಯಲ್ಲಿ ಹೇಳಿದ್ದರಿಂದ ಅನವಸ್ಥಾಪರಿಹಾರಕ್ಕಾಗಿ 'ಜ್ಞಾನಪೂರ್ವಕತ್ವವನ್ನು ಅಂಗೀಕರಿಸದಿದ್ದರೆ ಅನುಭವವಿರೋಧ ಬರುತ್ತದೆ' ಎಂಬ ಟೀಕೆಯಲ್ಲಿರುವ ಟೀಕಾವಾಕ್ಯದ ಅರ್ಥವನ್ನು ವಿವರಿಸಿದಂತಾಯಿತು.

*ಜಿಜ್ಞಾಸಾಧಿಕರಣ*

ಅನುಭವವಿರೋಧವನ್ನು ಹೀಗೆ ತಿಳಿಯಬೇಕು. ಜ್ಞಾನವು ಜಿಜ್ಞಾಸಿತಗ್ರಾಹ್ಯವಾಗಿದೆ. ಜ್ಞಾನವನ್ನು ತಿಳಿಯಬೇಕೆಂಬ ಇಚ್ಛೆಯಿದ್ದರೆ ಮಾತ್ರ ತಿಳಿಯುತ್ತದೆ. ಇಚ್ಛೆಯಾದರೂ ಎಲ್ಲೆಡೆ ಇರದ ಕಾರಣ ಅನವಸ್ಥಾ ಬರುವುದಿಲ್ಲವೆಂದು ಪೂರ್ವಪಕ್ಷಿ ಹೇಳಿದರೆ ಅನುಭವವಿರೋಧವನ್ನು ಟೀಕೆಯಲ್ಲಿ ಹೇಳಿದೆ. ಅದರ ವಿವರಣೆಯನ್ನು ಚಂದ್ರಿಕೆಯಲ್ಲಿ ಮಾಡಿದೆ - ಸುಖದುಃಖಾದಿಗಳು ಯಾವರೀತಿಯಾಗಿ ಜಿಜ್ಞಾಸಿತಗಳಾಗದಿದ್ದರೂ ಗ್ರಾಹ್ಯವೇ ಆಗಿವೆಯೋ ಅದರಂತೆ ಜ್ಞಾನವೂ ಸಹ ಜಿಜ್ಞಾಸೆಯಿಲ್ಲದೆ ಹುಟ್ಟುತ್ತದೆ. ನಮ್ಮೆಲ್ಲರ ಅನುಭವವೂ ಹೀಗೆಯೇ ಇದೆ. ಇದಕ್ಕೆ ವಿರುದ್ಧವಾಗಿ ಹೇಳಿದರೆ ಅನುಭವವಿರೋಧ ತಪ್ಪಿದ್ದಲ್ಲ.

ಅನುಭವವಿರೋಧವನ್ನು ಮತ್ತೊಂದು ರೀತಿಯಲ್ಲಿ ಉಪಪಾದಿಸಲು ಹಿಂದಿನ ದೋಷಪರಿಹಾರ ಆಶಂಕೆಯನ್ನು 'ನ ಚ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಈ ಪಕ್ಷದಲ್ಲಿ ಜಿಜ್ಞಾಸೆಗೆ ಜ್ಞಾನವು ಧರ್ಮಿ ಆಗದ ಕಾರಣ ಜ್ಞಾನ ಮತ್ತು ಜಿಜ್ಞಾಸೆಗಳ ಪರಂಪರೆ ಇಲ್ಲವಾದ್ದರಿಂದ ಅನವಸ್ಥಾ ಇಲ್ಲ. ಈ ಜಿಜ್ಞಾಸೆಗೆ ಆತ್ಮಾದಿಗಳು ಧರ್ಮಿಯಾದರೂ ಆತ್ಮಜ್ಞಾನವು ಜಿಜ್ಞಾಸಾಪೂರ್ವಕವಲ್ಲದ್ದರಿಂದ ಅನವಸ್ಥೆಗೆ ಅವಕಾಶವಿಲ್ಲ. ಏಕೆಂದರೆ ಜ್ಞಾನದಂತೆ ಆತ್ಮನು ಜಿಜ್ಞಾಸಿತಗ್ರಾಹ್ಯನಲ್ಲ.

'ಜ್ಞಾನಂ ಅಸ್ತಿ ನವಾ' ಎಂದು ಜಿಜ್ಞಾಸಾ ಹೇಳುವುದಿಲ್ಲ. ಹೊರತು 'ಅಹಂ ಜ್ಞಾನೀ ನವಾ?' 'ಘಟೋ ಜ್ಞಾತೋ ನ ವಾ'? ಎಂದು ಹೇಳುತ್ತೇವೆ. ಈ ಜಿಜ್ಞಾಸೆಯಲ್ಲಿ ಆತ್ಮನು ಧರ್ಮಿಯಾಗಿದ್ದಾನೆ. ಮತ್ತು ಘಟವು ವಿಷಯವಾಗಿದೆ. ಧರ್ಮಿಭೂತನಾದ ಆತ್ಮನ ಜ್ಞಾನ ಬರಲು ಮತ್ತು ವಿಷಯಭೂತವಾದ ಘಟದ ಜ್ಞಾನ ಬರಲು ಮತ್ತೊಂದು ಜಿಜ್ಞಾಸೆಯು ಬೇಕಾಗಿಲ್ಲ. ಏಕೆಂದರೆ ಜ್ಞಾನವು ಹೇಗೆ ಜಿಜ್ಞಾಸಿತಗ್ರಾಹ್ಯವೋ ಹಾಗೆ ಆತ್ಮ ಮತ್ತು ಘಟದ ಜ್ಞಾನಗಳು ಜಿಜ್ಞಾಸಿತಗ್ರಾಹ್ಯಗಳಲ್ಲ.

ಪ್ರಶ್ನೆ :- ಗ್ರಂಥಕಾರರು ಜಿಜ್ಞಾಸೆಯ ಆಕಾರವನ್ನು 'ಅಹಂ ಜ್ಞಾನೀ ನವಾ' 'ಘಟೋ ಜ್ಞಾತೋ ನವಾ?' ಎಂಬುದಾಗಿ ತೋರಿಸಿದ್ದಾರೆ. ಆದರೆ ಇದು ಸರಿಯಲ್ಲ. 'ಅಹಂ ಜ್ಞಾನೀತಿ ಜಿಜ್ಞಾಸೇ' 'ಘಟೋ ಜ್ಞಾತಃ ಇತಿ ಜಿಜ್ಞಾಸೇ' ಎಂಬುದಾಗಿ ಆತ್ಮಧರ್ಮಿಕವಾದ ಜಿಜ್ಞಾಸೆಯನ್ನು ತೋರಿಸಬೇಕಿತ್ತು. ಗ್ರಂಥಕಾರರು ತೋರಿಸಿದ್ದು ಸಂಶಯದ ಅಭಿನಯವೇ ಆಗುತ್ತದೆ ಹೊರತು ಜಿಜ್ಞಾಸೆಯ ಅಭಿನಯವಲ್ಲ.

ಉತ್ತರ :- ಹೌದು; ಗ್ರಂಥಕಾರರು ಸಂಶಯದ ಅಭಿನಯವನ್ನೇ ಪ್ರದರ್ಶಿಸಿದ್ದಾರೆ. ಕಾರಣವೇನೆಂದರೆ ಸಂಶಯದಲ್ಲಿ ಯಾವುದು ಧರ್ಮಿಯಾಗಿರುತ್ತದೋ ಜಿಜ್ಞಾಸೆಯಲ್ಲಿಯೂ ಅದೇ ಧರ್ಮಿಯಾಗಿರುತ್ತದೆ. ಪ್ರಕೃತ ಸಂಶಯದಲ್ಲಿ ಆತ್ಮನು ಧರ್ಮಿಯಾದ್ದರಿಂದ ಜಿಜ್ಞಾಸೆಯಲ್ಲಿಯೂ ಅವನೇ ಧರ್ಮಿಯಾಗುತ್ತಾನೆ. ಈ ಯುಕ್ತಿಯನ್ನು ಸೂಚಿಸುವುದಕ್ಕಾಗಿ ಗ್ರಂಥಕಾರರು ಸಂಶಯದ ಅಭಿನಯವನ್ನು ಪ್ರದರ್ಶಿಸಿದ್ದಾರೆ. ಇದು ಸೂಕ್ತವೇ ಆಗಿದೆ. ಆದ್ದರಿಂದ ಗ್ರಂಥದಲ್ಲಿ ಘಟೋ ಜ್ಞಾತೋ ನವಾ? ಎಂಬುದರ ಅನಂತರ 'ಸಂಶಯವತ್ ಜಿಜ್ಞಾಸಾಪಿ ಆತ್ಮಾದಿಧರ್ಮಿಕೈವ' ಎಂಬುದಾಗಿ ಯೋಜನೆ ಮಾಡಿಕೊಳ್ಳಬೇಕು. ಹೀಗೆ ಯೋಜನೆ ಮಾಡಿದಾಗ ಸಂಶಯವು ಹೇಗೆ ಆತ್ಮಧರ್ಮಿಕವಾಗಿದೆಯೋ ಅದರಂತೆ ಜಿಜ್ಞಾಸೆಯೂ ಆತ್ಮಧರ್ಮಿಕವಾಗಿದೆಯೆಂಬುದು ಸ್ಪಷ್ಟವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಟೀಕೆಯಲ್ಲಿ 'ಅನುಭವವಿರೋಧಾತ್' ಎಂಬ ವಾಕ್ಯದ ಅನಂತರ 'ನಹಿ ಅಜ್ಞಾಯಮಾನಜ್ಞಾನ-ಸದ್ಭಾವೇ ಕಿಂಚನ್ಮಾನಮ್' 'ತಿಳಿಯದ ಜ್ಞಾನವಿರಲು ಪ್ರಮಾಣವಿಲ್ಲ.' ಎಂಬ ವಾಕ್ಯವಿದೆ. ಹಿಂದಿನ ವಾಕ್ಯಕ್ಕೂ ಈ ವಾಕ್ಯಕ್ಕೂ ಸಂಗತಿ ಸ್ಪಷ್ಟವಾಗಿ ತಿಳಿಯುವುದಿಲ್ಲ. ಸಂಗತಿಯನ್ನು ತೋರಿಸುವುದಕ್ಕಾಗಿ ಹಿಂದಿನ ವಾಕ್ಯದ ಮೇಲೆ ಬರುವ ಶಂಕೆಯನ್ನು 'ನನು' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಮತ್ತು 'ನಹಿ' ಇತ್ಯಾದಿ ಟೀಕೆಯ ವಾಕ್ಯವನ್ನು ಉತ್ತರರೂಪವಾಗಿ 'ಕದಾಚಿ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. 'ಸ್ವಪ್ರಕಾಶವಾದ ಜ್ಞಾನಕ್ಕೆ ಆತ್ಮನು ಆಶ್ರಯನಾಗಿ ತೋರುತ್ತಾನೆಂಬುದು ಅಯುಕ್ತವಾಗಿದೆ.' ಟೀಕೆಯ ಈ ಮಾತನ್ನೇ 'ನ ದ್ವಿತೀಯಃ' ಇತ್ಯಾದಿ ಮಾತುಗಳಿಂದ ವಿವರಿಸುತ್ತಿದ್ದಾರೆ. 'ನ ಚ ಸ್ವಪ್ರಕಾಶಸಂವಿದಾಶ್ರಯತಯಾ ಆತ್ಮಾವಭಾಸತೇ ಇತಿ ಯುಕ್ತಮ್' 'ಔತ್ತರಿಕಾನುಸ್ಮೃತಿಸಿದ್ಧ ಸೌಷುಪ್ತಿಕಾನುಭವಾಭಾವಪ್ರಸಂಗಾತ್' 'ಸುಷುಪ್ತಿಕಾಲದಲ್ಲಿ ಸುಖದ ಅನುಭವವಾಗುತ್ತದೆಂಬುದು ಎಚ್ಚರವಾದ ಮೇಲೆ ಬರುವ ಪರಾಮರ್ಶದಿಂದ ಸಿದ್ಧವಾಗಿದೆ. ಇದೇ ಇಲ್ಲವೆಂದಾಗಬೇಕಾದೀತು.' ಟೀಕೆಯ ಈ ಮಾತನ್ನೇ 'ಸುಷುಪ್ತೌ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

'ಸಂವಿದಾತ್ಮಕತ್ವಾಚ್ಚಾತ್ಮನೋ ನ ಸಂವಿದ ಇವ ಸಂವಿದಾಶ್ರಯತಯಾ ಪ್ರತೀತಿಃ' ಜ್ಞಾನವು ಜ್ಞಾನಕ್ಕೆ ಆಶ್ರಯವಾಗದು. ಆತ್ಮನೂ ಜ್ಞಾನರೂಪನಾದ್ದರಿಂದ ಜ್ಞಾನಕ್ಕೆ ಆಶ್ರಯನಾಗಿ ತೋರಲಾರ. ಟೀಕೆಯ ಈ ವಾಕ್ಯವನ್ನು ಯುಕ್ತಿಬದ್ಧವಾಗಿ 'ಕಿಂಚ' ಇತ್ಯಾದಿ ಮಾತುಗಳಿಂದ ಸಮರ್ಥಿಸುತ್ತಿದ್ದಾರೆ.

## ಸಾರ



ಆತ್ಮಸ್ವಪ್ರಕಾಶ 'ನಾನು' ಎಂಬುದು ತಾರ್ಕಿಕರು ಹೇಳುವಂತೆ ಮಾನಸಾನುಭವವೆಂದರೆ ಅದು ಇನ್ನೊಂದು ಮಾನಸಾನುಭವಕ್ಕೆ ವೇದ್ಯ ಅದೂ ಮತ್ತೊಂದಕ್ಕೆ ಎಂದು ಅನವಸ್ಥೆ. ಜಿಜ್ಞಾಸೆ ಬಂದರೆ ಮಾತ್ರ ಜ್ಞಾನಗೋಚರವಾಗಬೇಕು. ಇಲ್ಲದಿದ್ದರೆ ಇಲ್ಲ, ಅನವಸ್ಥೆ ಇಲ್ಲ ಎನ್ನಕೂಡದು. ಜ್ಞಾನಗೋಚರವಾಗದ ಜ್ಞಾನ ಎಂದರ ಅಸ್ತಿತ್ವದಲ್ಲಿ ಏನು ಪ್ರಮಾಣ? ಅದರಿಂದ 'ನಾನು' ಎಂಬುದು ಸ್ವಪ್ರಕಾಶಾತ್ಮಾನುಭವವೆನ್ನಬೇಕು. ಪ್ರಾಭಾಕರರ ಪ್ರಕಾರ ಜ್ಞಾನ ಸ್ವಪ್ರಕಾಶ. ಆತ್ಮನಲ್ಲ. ಜ್ಞಾನ ತನ್ನನ್ನು ತಾನು ಕಾಣುವಾಗ ತನಗೆ ಆಶ್ರಯನಾದ ಆತ್ಮನನ್ನೂ ಕಾಣುತ್ತದೆ ಎನ್ನುತ್ತಾರೆ. ಆದರೆ ನಿದ್ದೆಯಲ್ಲಿಯೂ 'ನಾನು' ಎಂಬ ಜ್ಞಾನವಿದೆ. ಅದು ಮಾನಸಜ್ಞಾನವಲ್ಲ. ಆಗಲೂ ಮಾನಸಜ್ಞಾನವಿದ್ದರೆ ಅದು ನಿದ್ದೆಯ ಅಲ್ಲ. ನಿದ್ದೆಯಿಂದ ಎದ್ದಾಗ ನಾನು ಇಷ್ಟು ಹೊತ್ತು ಸುಖವಾಗಿ ನಿದ್ದೆ ಮಾಡಿದ್ದೇನೆ ಎಂದು ನಮ್ಮ ನಿದ್ದೆಯನ್ನು ನಾವು ನೆನೆಯುವುದರಿಂದ ನಿದ್ದೆಯಲ್ಲಿ ಆತ್ಮಾನುಭವವಿದೆ. ಅದು ಸ್ವಪ್ರಕಾಶ. ಆತ್ಮನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲವೆನ್ನಲು ಯಾವುದಾದರೊಂದು ಬಗೆಯಿಂದ ಆತ್ಮನು ಪ್ರಕಾಶನೆಂದಾದರೆ ಸಾಕು. ವಸ್ತುಸ್ಥಿತಿ ಆತ ಸ್ವಪ್ರಕಾಶನೆಂದು.

• • • • •

ಅನುಭವವಿರೋಧವನ್ನು ಹೀಗೆ ತಿಳಿಯಬೇಕು. ಜ್ಞಾನವು ಜಿಜ್ಞಾಸಿತಗ್ರಾಹ್ಯವಾಗಿದೆ. ಜ್ಞಾನವನ್ನು ತಿಳಿಯಬೇಕೆಂಬ ಇಚ್ಛೆಯಿದ್ದರೆ ಮಾತ್ರ ತಿಳಿಯುತ್ತದೆ. ಇಚ್ಛೆಯಾದರೂ ಎಲ್ಲೆಡೆ ಇರದ ಕಾರಣ ಅನವಸ್ಥಾ ಬರುವುದಿಲ್ಲವೆಂದು ಪೂರ್ವಪಕ್ಷಿ ಹೇಳಿದರೆ ಅನುಭವವಿರೋಧವನ್ನು ಟೀಕೆಯಲ್ಲಿ ಹೇಳಿದೆ ಅದರ ವಿವರಣೆಯನ್ನು ಚಂದ್ರಿಕೆಯಲ್ಲಿ ಮಾಡಿದೆ - ಸುಖದುಃಖಾದಿಗಳು ಯಾವರೀತಿಯಾಗಿ ಜಿಜ್ಞಾಸಿತಗಳಾಗದಿದ್ದರೂ ಗ್ರಾಹ್ಯವೇ ಆಗಿವೆಯೋ ಅದರಂತೆ ಜ್ಞಾನವೂ ಸಹ ಜಿಜ್ಞಾಸೆಯಿಲ್ಲದೆ ಹುಟ್ಟುತ್ತದೆ. ನಮ್ಮೆಲ್ಲರ ಅನುಭವವೂ ಹೀಗೆಯೇ ಇದೆ. ಇದಕ್ಕೆ ವಿರುದ್ಧವಾಗಿ ಹೇಳಿದರೆ ಅನುಭವವಿರೋಧ ತಪ್ಪಿದ್ದಲ್ಲ.

ಅನುಭವವಿರೋಧವನ್ನು ಮತ್ತೊಂದು ರೀತಿಯಲ್ಲಿ ಉಪಪಾದಿಸಲು ಹಿಂದಿನ ದೋಷಪರಿಹಾರ ಆಶಂಕೆಯನ್ನು 'ನ ಚ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಈ ಪಕ್ಷದಲ್ಲಿ ಜಿಜ್ಞಾಸೆಗೆ ಜ್ಞಾನವು ಧರ್ಮಿ ಆಗದ ಕಾರಣ ಜ್ಞಾನ ಮತ್ತು ಜಿಜ್ಞಾಸೆಗಳ ಪರಂಪರೆ ಇಲ್ಲವಾದ್ದರಿಂದ ಅನವಸ್ಥಾ ಇಲ್ಲ. ಈ ಜಿಜ್ಞಾಸೆಗೆ ಆತ್ಮಾದಿಗಳು ಧರ್ಮಿಯಾದರೂ ಆತ್ಮಜ್ಞಾನವು ಜಿಜ್ಞಾಸಾಪೂರ್ವಕವಲ್ಲದ್ದರಿಂದ ಅನವಸ್ಥೆಗೆ ಅವಕಾಶವಿಲ್ಲ. ಏಕೆಂದರೆ ಜ್ಞಾನದಂತೆ ಆತ್ಮನು ಜಿಜ್ಞಾಸಿತಗ್ರಾಹ್ಯನಲ್ಲ.

'ಜ್ಞಾನಂ ಅಸ್ತಿ ನವಾ' ಎಂದು ಜಿಜ್ಞಾಸಾ ಹೇಳುವುದಿಲ್ಲ. ಹೊರತು 'ಅಹಂ ಜ್ಞಾನೀ ನವಾ' 'ಘಟೋ ಜ್ಞಾತೋ ನ ವಾ'? ಎಂದು ಹೇಳುತ್ತೇವೆ. ಈ ಜಿಜ್ಞಾಸೆಯಲ್ಲಿ ಆತ್ಮನು ಧರ್ಮಿಯಾಗಿದ್ದಾನೆ ಮತ್ತು ಘಟವು ವಿಷಯವಾಗಿದೆ. ಧರ್ಮಿಭೂತನಾದ ಆತ್ಮನ ಜ್ಞಾನ ಬರಲು ಮತ್ತು ವಿಷಯ-ಭೂತವಾದ ಘಟದ ಜ್ಞಾನ ಬರಲು ಮತ್ತೊಂದು ಜಿಜ್ಞಾಸೆಯು ಬೇಕಾಗಿಲ್ಲ. ಏಕೆಂದರೆ ಜ್ಞಾನವು ಹೇಗೆ ಜಿಜ್ಞಾಸಿತಗ್ರಾಹ್ಯವೋ ಹಾಗೆ ಆತ್ಮ ಮತ್ತು ಘಟದ ಜ್ಞಾನಗಳು ಜಿಜ್ಞಾಸಿತಗ್ರಾಹ್ಯಗಳಲ್ಲ.

ಪ್ರಶ್ನೆ :- ಗ್ರಂಥಕಾರರು ಜಿಜ್ಞಾಸೆಯ ಆಕಾರವನ್ನು 'ಅಹಂ ಜ್ಞಾನೀ ನವಾ' 'ಘಟೋ ಜ್ಞಾತೋ ನವಾ?' ಎಂಬುದಾಗಿ ತೋರಿಸಿದ್ದಾರೆ. ಆದರೆ ಇದು ಸರಿಯಲ್ಲ. 'ಅಹಂ ಜ್ಞಾನೀತಿ ಜಿಜ್ಞಾಸೇ' 'ಘಟೋ ಜ್ಞಾತಃ ಇತಿ ಜಿಜ್ಞಾಸೇ' ಎಂಬುದಾಗಿ ಆತ್ಮಧರ್ಮಿಕವಾದ ಜಿಜ್ಞಾಸೆಯನ್ನು ತೋರಿಸಬೇಕಿತ್ತು. ಗ್ರಂಥಕಾರರು ತೋರಿಸಿದ್ದು ಸಂಶಯದ ಅಭಿನಯವೇ ಆಗುತ್ತದೆ ಹೊರತು ಜಿಜ್ಞಾಸೆಯ ಅಭಿನಯವಲ್ಲ.

ಉತ್ತರ :- ಹೌದು; ಗ್ರಂಥಕಾರರು ಸಂಶಯದ ಅಭಿನಯವನ್ನೇ ಪ್ರದರ್ಶಿಸಿದ್ದಾರೆ. ಕಾರಣವೇನೆಂದರೆ ಸಂಶಯದಲ್ಲಿ ಯಾವುದು ಧರ್ಮಿಯಾಗಿರುತ್ತದೋ ಜಿಜ್ಞಾಸೆಯಲ್ಲಿಯೂ ಅದೇ ಧರ್ಮಿಯಾಗಿರುತ್ತದೆ ಪ್ರಕೃತ ಸಂಶಯದಲ್ಲಿ ಆತ್ಮನು ಧರ್ಮಿಯಾದ್ದರಿಂದ ಜಿಜ್ಞಾಸೆಯಲ್ಲಿಯೂ ಅವನೇ ಧರ್ಮಿಯಾಗುತ್ತಾನೆ ಈ ಯುಕ್ತಿಯನ್ನು ಸೂಚಿಸುವುದಕ್ಕಾಗಿ ಗ್ರಂಥಕಾರರು ಸಂಶಯದ ಅಭಿನಯವನ್ನು ಪ್ರದರ್ಶಿಸಿದ್ದಾರೆ. ಇದು ಸೂಕ್ತವೇ ಆಗಿದೆ. ಆದ್ದರಿಂದ ಗ್ರಂಥದಲ್ಲಿ ಘಟೋ ಜ್ಞಾತೋ ನವಾ? ಎಂಬುದರ ಅನಂತರ 'ಸಂಶಯವತ್ ಜಿಜ್ಞಾಸಾಪಿ ಆತ್ಮಾದಿಧರ್ಮಿಕೈವ' ಎಂಬುದಾಗಿ ಯೋಜನೆ ಮಾಡಿಕೊಳ್ಳಬೇಕು. ಹೀಗೆ ಯೋಜನೆ ಮಾಡಿದಾಗ ಸಂಶಯವು ಹೇಗೆ ಆತ್ಮಧರ್ಮಿಕವಾಗಿದೆಯೋ ಅದರಂತೆ ಜಿಜ್ಞಾಸೆಯೂ ಆತ್ಮಧರ್ಮಿಕವಾಗಿದೆಯೆಂಬುದು ಸ್ಪಷ್ಟವಾಗುತ್ತದೆ.

*ಸಂಪೂರ್ಣಚಂದ್ರಿಕಾ*

ಟೀಕೆಯಲ್ಲಿ 'ಅನುಭವವಿರೋಧಾತ್' ಎಂಬ ವಾಕ್ಯದ ಅನಂತರ 'ನಹಿ ಅಜ್ಞಾಯಮಾನಜ್ಞಾನ-ಸದ್ಭಾವೇ ಕಿಂಚಿನ್ಮಾನಮ್' 'ತಿಳಿಯದ ಜ್ಞಾನವಿರಲು ಪ್ರಮಾಣವಿಲ್ಲ.' ಎಂಬ ವಾಕ್ಯವಿದೆ. ಹಿಂದಿನ ವಾಕ್ಯಕ್ಕೂ ಈ ವಾಕ್ಯಕ್ಕೂ ಸಂಗತಿ ಸ್ಪಷ್ಟವಾಗಿ ತಿಳಿಯುವುದಿಲ್ಲ. ಸಂಗತಿಯನ್ನು ತೋರಿಸುವುದಕ್ಕಾಗಿ ಹಿಂದಿನ ವಾಕ್ಯದ ಮೇಲೆ ಬರುವ ಶಂಕೆಯನ್ನು 'ನನು' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಮತ್ತು 'ನಹಿ' ಇತ್ಯಾದಿ ಟೀಕೆಯ ವಾಕ್ಯವನ್ನು ಉತ್ತರರೂಪವಾಗಿ 'ಕದಾಪಿ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. 'ಸ್ವಪ್ರಕಾಶವಾದ ಜ್ಞಾನಕ್ಕೆ ಆತ್ಮನು ಆಶ್ರಯನಾಗಿ ತೋರುತ್ತಾನೆಂಬುದು ಅಯುಕ್ತವಾಗಿದೆ.' ಟೀಕೆಯ ಈ ಮಾತನ್ನೇ 'ನ ದ್ವಿತೀಯಃ' ಇತ್ಯಾದಿ ಮಾತುಗಳಿಂದ ವಿವರಿಸುತ್ತಿದ್ದಾರೆ. 'ನಚ ಸ್ವಪ್ರಕಾಶಸಂವಿದಾಶ್ರಯತಯಾ ಆತ್ಮಾऽವಭಾಸತೇ ಇತಿ ಯುಕ್ತಮ್' 'ಔತ್ತರಿಕಾನುಸ್ಮೃತಿಸಿದ್ಧ ಸೌಷುಪ್ತಿಕಾನುಭವಾಭಾವಪ್ರಸಂಗಾತ್' 'ಸುಷುಪ್ತಿಕಾಲದಲ್ಲಿ ಸುಖದ ಅನುಭವವಾಗುತ್ತದೆಂಬುದು ಎಚ್ಚರವಾದ ಮೇಲೆ ಬರುವ ಪರಾಮರ್ಶದಿಂದ ಸಿದ್ಧವಾಗಿದೆ. ಇದೇ ಇಲ್ಲವೆಂದಾಗಬೇಕಾದೀತು.' ಟೀಕೆಯ ಈ ಮಾತನ್ನೇ 'ಸುಷುಪ್ತೌ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

'ಸಂವಿದಾತ್ಮಕತ್ವಾಚ್ಚಾತ್ಮನೋ ನ ಸಂವಿದ ಇವ ಸಂವಿದಾಶ್ರಯತಯಾ ಪ್ರತೀತಿಃ' ಜ್ಞಾನವು ಜ್ಞಾನಕ್ಕೆ ಆಶ್ರಯವಾಗದು. ಆತ್ಮನೂ ಜ್ಞಾನರೂಪನಾದ್ದರಿಂದ ಜ್ಞಾನಕ್ಕೆ ಆಶ್ರಯನಾಗಿ ತೋರಲಾರ. ಟೀಕೆಯ ಈ ವಾಕ್ಯವನ್ನು ಯುಕ್ತಿಬದ್ಧವಾಗಿ 'ಕಿಂಚ' ಇತ್ಯಾದಿ ಮಾತುಗಳಿಂದ ಸಮರ್ಥಿಸುತ್ತಿದ್ದಾರೆ.

## ಸಾರ

ಆತ್ಮಸ್ವಪ್ರಕಾಶ 'ನಾನು' ಎಂಬುದು ತಾರ್ಕಿಕರು ಹೇಳುವಂತೆ ಮಾನಸಾನುಭವವೆಂದರೆ ಅದು ಇನ್ನೊಂದು ಮಾನಸಾನುಭವಕ್ಕೆ ವೇದ್ಯ ಅದೂ ಮತ್ತೊಂದಕ್ಕೆ ಎಂದು ಅನವಸ್ಥೆ. ಜಿಜ್ಞಾಸೆ ಬಂದರೆ ಮಾತ್ರ ಜ್ಞಾನಗೋಚರವಾಗಬೇಕು. ಇಲ್ಲದಿದ್ದರೆ ಇಲ್ಲ, ಅನವಸ್ಥೆ ಇಲ್ಲ ಎನ್ನಕೂಡದು. ಜ್ಞಾನಗೋಚರವಾಗದ ಜ್ಞಾನ ಒಂದರ ಅಸ್ತಿತ್ವದಲ್ಲಿ ಏನು ಪ್ರಮಾಣ? ಅದರಿಂದ 'ನಾನು' ಎಂಬುದು ಸ್ವಪ್ರಕಾಶಾತ್ಮಾನುಭವವೆನ್ನಬೇಕು. ಪ್ರಭಾಕರರ ಪ್ರಕಾರ ಜ್ಞಾನ ಸ್ವಪ್ರಕಾಶ. ಆತ್ಮನಲ್ಲ. ಜ್ಞಾನ ತನ್ನನ್ನು ತಾನು ಕಾಣುವಾಗ ತನಗೆ ಆಶ್ರಯನಾದ ಆತ್ಮನನ್ನೂ ಕಾಣುತ್ತದೆ ಎನ್ನುತ್ತಾರೆ. ಆದರೆ ನಿದ್ದೆಯಲ್ಲಿಯೂ 'ನಾನು' ಎಂಬ ಜ್ಞಾನವಿದೆ. ಅದು ಮಾನಸಜ್ಞಾನವಲ್ಲ. ಆಗಲೂ ಮಾನಸಜ್ಞಾನವಿದ್ದರೆ ಅದು ನಿದ್ದೆಯೆ ಅಲ್ಲ. ನಿದ್ದೆಯಿಂದ ಎದ್ದಾಗ ನಾನು ಇಷ್ಟು ಹೊತ್ತು ಸುಖವಾಗಿ ನಿದ್ದೆ ಮಾಡಿದ್ದೇನೆ ಎಂದು ನಮ್ಮ ನಿದ್ದೆಯನ್ನು ನಾವು ನೆನೆಯುವುದರಿಂದ ನಿದ್ದೆಯಲ್ಲಿ ಆತ್ಮಾನುಭವವಿದೆ. ಅದು ಸ್ವಪ್ರಕಾಶ. ಆತ್ಮನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲವೆನ್ನಲು ಮಾವುದಾದರೊಂದು ಬಗೆಯಿಂದ ಆತ್ಮನು ಪ್ರಕಾಶನೆಂದಾದರೆ ಸಾಕು. ವಸ್ತುಸ್ಥಿತಿ ಆತ ಸ್ವಪ್ರಕಾಶನೆಂದು.

• • • • •

## ಟೀಕೆಗೂ ಸುಧೆಗೂ ವಿರೋಧವಿಲ್ಲ

**तात्पर्यचन्द्रिका –**

**अस्तु वा तार्किकादिरीत्या अहमर्थप्रकाशः । तथाऽपि प्रत्यगात्मनः सन्दिग्धत्वादविषयता । टीकायां तु न्यायविवरणानुसारेण वस्तुस्थितिप्रदर्शनाय स्वप्रकाशतोक्ता । अत एव सुधायां – ''स्वप्रकाशतया वा स्वप्रकाशज्ञानाश्रयतया वा मानसप्रत्यक्षवेद्यतया वा सिद्धत्वेन' इत्युक्तम् ।**

ಅನುವಾದ - ವಿಚಾರವು ಅನಾವಶ್ಯಕವೆಂಬುದನ್ನು ಹೀಗೂ ಹೇಳಬಹುದು. ಆತ್ಮ ಅನುಭವವು ತಾರ್ಕಿಕರು ಹೇಳುವಂತೆ ಅಥವಾ ಪ್ರಭಾಕರರು ಹೇಳುವಂತೆ ಬೇಕಾದರೆ ಬರಲಿ. ಆತ್ಮನ ಜ್ಞಾನ ಬರುತ್ತದೆಂಬ ವಿಷಯದಲ್ಲಂತೂ ವಿವಾದವಿಲ್ಲ. ಆದ್ದರಿಂದ ಶಾಸ್ತ್ರದ ಅಪೇಕ್ಷೆ ಇಲ್ಲದೆಯೇ ಶಾರೀರಕನಾದ ಆತ್ಮನ ಜ್ಞಾನ ನಮಗೆಲ್ಲ ಇರುವುದರಿಂದ ಆತ್ಮನ ವಿಷಯದಲ್ಲಿ ಸಂದೇಹವಿಲ್ಲ. ಆದ್ದರಿಂದ ಅವನು ವಿಚಾರಕ್ಕೆ ವಿಷಯನಾಗಲಾರ. ಟೀಕೆಯಲ್ಲಿ ಸ್ವಪ್ರಕಾಶತ್ವವು ಸಮರ್ಥಿಸಿದ್ದು ನ್ಯಾಯವಿವರಣಾನುಸಾರಿಯಾಗಿ ವಸ್ತುಸ್ಥಿತಿಯನ್ನು ತೋರಿಸುವುದಕ್ಕಾಗಿ, ಹೊರತು ಸ್ವಪ್ರಕಾಶನಾದರೆ ಮಾತ್ರ ವಿಚಾರಾನರ್ಹನೆಂಬ ಅಭಿಪ್ರಾಯದಿಂದಲ್ಲ. ಆದ್ದರಿಂದಲೇ ಸುಧೆಯಲ್ಲಿ ಆತ್ಮನು ಸ್ವಪ್ರಕಾಶನಾಗಿಯೋ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿಯೋ ಮಾನಸಪ್ರತ್ಯಕ್ಷ ವೇದ್ಯನಾಗಿಯೋ ಸಿದ್ಧನಾಗಿದ್ದಾನೆಂದು ಹೇಳಲಾಗಿದೆ.

**ಕಠಿಣಪದಾರ್ಥ**

ವಸ್ತುಸ್ಥಿತಿಪ್ರದರ್ಶನಾಯ = ನಿಜಸಂಗತಿಯನ್ನು ತೋರಿಸಲು. ಅಸ್ತುವಾ = ಆತ್ಮನಿಗೆ ಸ್ವಪ್ರಕಾಶತ್ವವನ್ನು ಹೇಳುವುದು ಬೇಡ ಆದರೂ ಸಹ. ಪ್ರತ್ಯಗಾತ್ಮನಃ = ದೇಹದ ಒಳಗಿರುವ ಜೀವಾತ್ಮನು. ಅತ ಏವ = ಸ್ವಪ್ರಕಾಶತ್ವವನ್ನು ಹೇಳದೆಯೂ ಪೂರ್ವಪಕ್ಷ ಮಾಡಬಹುದಾದ್ದರಿಂದ.

**प्रकाशः** – यथाटीकं वर्णयित्वा सुधावाक्याभिप्रायं वक्तुं कल्पान्तरमाह – अस्तु वेति ।। तर्हि टीकाविरोधः, इत्यत आह – टीकायां त्विति ।। ''जीवव्यतिरिक्तेश्वराभावत् तस्य च स्वप्रकाशत्वान्न जिज्ञास्यता'' इति न्यायविवरणानुसारेणेत्यर्थः । 'वस्तुस्थिति' इति न्यायविवरणेऽपि तथोक्तेरभिप्रायोक्तिः । 'अस्तु वा' इत्यस्य मूलमाह – अत एवेति ।। अनेन पूर्वोत्तरप्रस्थानाविरोध उक्तो भवति ।

**गुरुराजीय** – नन्वत्र 'टीकायां पूर्वपक्षे परप्रकाश्यत्वनिषेधात्, सुधायां तु तदङ्गीकारात् टीकाद्वयस्य परस्परं विरोधः' इत्याशंक्य, अत्र वस्तुस्थितिप्रदर्शनपर-

न्यायविवरणानुसारेणात्यंतासन्दिग्धत्वोपपादकत्वात् स्वप्रकाशतोक्ता । सुधायां तु यत्किंचित्प्रकाशमात्रेण पूर्वपक्षनिर्वाहात् किं स्वप्रकाशतोपपादनक्लेशेन । न्यायविवरणे स्वप्रकाशपदं तु शास्त्रं विनापि प्रकाशपरम् । अतो न विरोध इत्यभिप्रायेणाह – अस्तु वेति ॥

ವಿವರಣೆ - ಇಲ್ಲಿಯ ತನಕ ಟೀಕೆಗೆ ಅನುಸಾರಿಯಾದ ಪೂರ್ವಪಕ್ಷವನ್ನು ರಚಿಸಿದ್ದಾಯಿತು. ಈಗ ಸುಧೆಗೆ ಅನುಸಾರಿಯಾದ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

ಪ್ರಶ್ನೆ :- ಹಾಗಾದರೆ ಟೀಕೆಗೂ ಸುಧೆಗೂ ಪರಸ್ಪರ ವಿರೋಧ ಬರುತ್ತದೆ. ಏಕೆಂದರೆ ಟೀಕೆಯ ಪೂರ್ವಪಕ್ಷದಲ್ಲಿ ಜೀವನಿಗೆ ಪರಪ್ರಕಾಶ್ಯತ್ವವನ್ನು ನಿಷೇಧ ಮಾಡಿದ್ದಾರೆ. ಸುಧೆಯಲ್ಲಿ ಪರಪ್ರಕಾಶ್ಯತ್ವವನ್ನು ಅಂಗೀಕರಿಸಿದ್ದಾರೆ. ಹಾಗಾಗಿ ಎರಡು ಟೀಕೆಗಳಿಗೂ ಪರಸ್ಪರ ವಿರೋಧ ಬರುತ್ತದಲ್ಲ?

ಉತ್ತರ :- ವಿರೋಧಕ್ಕೆ ಅವಕಾಶವಿಲ್ಲ. ಟೀಕೆಯು ನ್ಯಾಯವಿವರಣಕ್ಕೆ ಅನುಸಾರಿಯಾಗಿದೆ. 'ಜೀವವ್ಯತಿರಿಕ್ತೇಶ್ವರಾಭಾವಾತ್ತಸ್ಯ ಸ್ವಪ್ರಕಾಶತ್ವಾನ್ನ ಜಿಜ್ಞಾಸ್ಯತಾ' 'ಜೀವನಿಗಿಂತ ಭಿನ್ನನಾದ ಈಶ್ವರನು ಇಲ್ಲ. ಜೀವನಾದರೂ ಸ್ವಪ್ರಕಾಶನಾದ್ದರಿಂದ ಜಿಜ್ಞಾಸ್ಯನಾಗಲಾರ' ಎಂದು ನ್ಯಾಯವಿವರಣದಲ್ಲಿ ಸ್ವಪ್ರಕಾಶತ್ವವನ್ನು ಹೇಳಿದ್ದಾರೆ. ಜೀವನಲ್ಲಿ ಸ್ವಪ್ರಕಾಶತ್ವವು ವಾಸ್ತವವಾಗಿದೆ. ವಸ್ತುಸ್ಥಿತಿಯನ್ನು ಅನುಸರಿಸಿ ಜೀವನಿಗೆ ಸ್ವಪ್ರಕಾಶತ್ವವನ್ನು ನ್ಯಾಯವಿವರಣೆಯಲ್ಲಿ ಹೇಳಿದ್ದಾರೆ. ನ್ಯಾಯವಿವರಣೆಯಲ್ಲಿ ಹೇಳಿದ ಶ್ರೀಮದಾಚಾರ್ಯರ ಮಾತನ್ನೇ ಅವಲಂಬಿಸಿ ತತ್ತ್ವಪ್ರಕಾಶಿಕೆಯು ಹೊರಟಿದೆ. ಸುಧೆಯಲ್ಲಿ 'ಜೀವನು ಪ್ರಕಾಶರೂಪನಾದರೂ ಸಾಕು ಪೂರ್ವಪಕ್ಷವನ್ನು ನಿರ್ವಹಿಸಬಹುದು; ಸ್ವಪ್ರಕಾಶತ್ವದಿಂದಲೇ ಪೂರ್ವಪಕ್ಷವನ್ನು ನಿರ್ವಹಿಸಬೇಕಿಲ್ಲ' ಎಂಬ ಅಭಿಪ್ರಾಯದಿಂದ ವಾಕ್ಯಗಳು ಹೊರಟಿವೆ. ಜೀವನು ಸ್ವಪ್ರಕಾಶನಾಗಲಿ, ಅಥವಾ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಲಿ, ಅಥವಾ ಮಾನಸಪ್ರತ್ಯಕ್ಷಕ್ಕೆ ವೇದ್ಯನಾಗಲಿ ಹೇಗಾದರೂ ನಿತ್ಯಸಿದ್ಧನೇ ಆಗಿದ್ದಾನೆ. ಅವನ ವಿಷಯದಲ್ಲಿ ಯಾವ ಸಂದೇಹವೂ ಇಲ್ಲದ ಕಾರಣ ಶಾಸ್ತ್ರಕ್ಕೆ ವಿಷಯನಾಗಲಾರ ಎಂದು ಸುಧೆಯ ಅಭಿಪ್ರಾಯ. ಆದ್ದರಿಂದ ಪೂರ್ವಪ್ರಸ್ಥಾನವೆನಿಸಿದ ತತ್ತ್ವಪ್ರಕಾಶಿಕೆಗೂ ಉತ್ತರಪ್ರಸ್ಥಾನವೆನಿಸಿದ ಸುಧೆಗೂ ಯಾವ ವಿರೋಧವಿಲ್ಲ.

## ಸ್ವಪ್ರಕಾಶನಾದ ಆತ್ಮನ ಬಗ್ಗೆ ಮತ್ತು ಮಿಥ್ಯಾಭೂತವಾದ ದೇಹ ಭೇದಾದಿಗಳ ಬಗ್ಗೆ ವಿಚಾರ ಕೂಡದು

**तात्पर्यचन्द्रिका –**

एतेन – 'कर्मकाण्डस्येव ब्रह्मकाण्डस्याप्यर्थनिर्णयायायं विचार आवश्यकः' इति निरस्तम् । धर्मवद् ब्रह्मकाण्डार्थस्यात्मनः परप्रकाश्यत्वाभावात् । एतेनैव – 'जीवचैतन्यस्वरूपस्यासन्दिग्धत्वेऽपि देहादिभिन्नत्वानन्दाद्यात्मकत्वादिना

**सन्दिग्धत्वाद् विषयता । अन्यथा सिद्धान्तेऽपि उत्तरत्र जीवविचारो न युक्तः स्यात्' इति निरस्तम् । सिद्धान्त इव पूर्वपक्षे जीवचैतन्यातिरिक्तस्य देहादिभिन्नत्वादेः सत्यत्वाभावात् । केचितु – 'जीवस्याकारान्तरेण संदिग्धतया विचारसम्भवेऽपि सिद्धांत्यभिमतजीवान्यब्रह्मविचाराक्षेपः' इत्याहुः । तन्न । न्यायविवरणविरोधात् । तावता शास्त्रानारम्भासिद्धेश्च ।**

ಅನುವಾದ - ಹೀಗೆ ಹೇಳಿದ್ದರಿಂದ 'ಕರ್ಮಕಾಂಡದಂತೆ ಬ್ರಹ್ಮಕಾಂಡದ ಅರ್ಥನಿರ್ಣಯಕ್ಕಾಗಿ ವಿಚಾರವನ್ನು ಮಾಡಲೇಬೇಕು' ಎಂಬ ಆಕ್ಷೇಪವೂ ಪರಿಹಾರವಾಯಿತು. ಏಕೆಂದರೆ ಕರ್ಮಕಾಂಡ ಪ್ರತಿಪಾದಿಸುವ ಧರ್ಮವು ಪರಪ್ರಕಾಶ್ಯವಾಗಿರುವುದರಿಂದ ವಿಚಾರಯೋಗ್ಯವಾಗಿದೆ. ಆದರೆ ಬ್ರಹ್ಮಕಾಂಡ ಪ್ರತಿಪಾದಿಸುವ ಆತ್ಮನು ಪರಪ್ರಕಾಶ್ಯನಾಗಿಲ್ಲವಾದ್ದರಿಂದ ಆತ್ಮನ ವಿಷಯದಲ್ಲಿ ಸಂದೇಹಕ್ಕೆ ಅವಕಾಶವಿಲ್ಲ.

ಶಂಕೆ :- ಜೀವಚೈತನ್ಯಸ್ವರೂಪದಲ್ಲಿ ಸಂದೇಹವಿಲ್ಲದಿದ್ದರೂ ಆತ್ಮನ ಧರ್ಮವಾದ ದೇಹಾದಿಭೇದ, ಆನಂದಾದ್ಯಾತ್ಮಕತ್ವಾಂಶದಲ್ಲಿ ಸಂದೇಹವಿದೆ. ಆ ವಿಷಯದಲ್ಲಿ ವಿಚಾರ ಮಾಡಬಹುದು. ಒಂದುವೇಳೆ ಈ ವಿಷಯದಲ್ಲಿಯೂ ಸಂದೇಹ ಕೂಡದಿದ್ದರೆ ಆವಾಗ ಸಿದ್ಧಾಂತದಲ್ಲಿ 'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಜೀವಾತ್ಮನ ವಿಚಾರ ಮಾಡಿದ್ದೂ ಕೂಡ ತಪ್ಪಾಗುತ್ತದೆ.

ಸಮಾಧಾನ - ಈ ಆಕ್ಷೇಪವೂ ಸಹ ಈಗ ನಿರಾಕೃತವಾಯಿತು. ಏಕೆಂದರೆ ಅದ್ವೈತಮತದ ಸಿದ್ಧಾಂತದಂತೆ ಪೂರ್ವಪಕ್ಷವು ಬ್ರಹ್ಮವ್ಯತಿರಿಕ್ತವಾದುದು ಸತ್ಯವಲ್ಲವೆಂದು ಹೊರಟಿದೆ. ಅವರು ಚೈತನ್ಯಾತಿರಿಕ್ತವಾದ ದೇಹಾದಿಭೇದಗಳನ್ನು ಸತ್ಯವೆಂದು ಒಪ್ಪುವುದಿಲ್ಲ. ಮಿಥ್ಯಾಭೂತವಾದ ವಿಷಯದಲ್ಲಿ ವಿಚಾರವಾದರೂ ಹೇಗೆ ಕೂಡಲು ಸಾಧ್ಯ?

ಕೆಲವರು - ಜೀವನು ದೇಹಾದಿಭಿನ್ನನೆಂಬ ವಿಷಯದಲ್ಲಿ ಸಂದಿಗ್ಧನಾಗಿದ್ದಾನೆ. ಆದ್ದರಿಂದ ಜೀವನ ಜಿಜ್ಞಾಸೆ ಆವಶ್ಯಕ. ಆದ್ದರಿಂದ ಜೀವನಿಗಿಂತ ಭಿನ್ನನಾದ ಬ್ರಹ್ಮನೇ ಇಲ್ಲವಾದ್ದರಿಂದ ಸಿದ್ಧಾಂತಿ ಹೇಳುವ ಬ್ರಹ್ಮವಿಚಾರವು ಏಕೆ ಬೇಕು? ಹೀಗೆ ಪೂರ್ವಪಕ್ಷವೆಂದು ಹೇಳುತ್ತಾರೆ.

ಇವರ ಪೂರ್ವಪಕ್ಷಕ್ಕೆ ನ್ಯಾಯವಿವರಣದ ವಿರೋಧ ಬರುತ್ತದೆ. ಇಷ್ಟರಿಂದಲೇ ಶಾಸ್ತ್ರ ಅನಾರಂಭಣೀಯತ್ವವನ್ನು ಸಮರ್ಥಿಸಲಾಗದು.

**ಕಠಿಣಪದಾರ್ಥ**

ಏತೇನ = ಆತ್ಮನು ನಿತ್ಯಸಿದ್ಧನೆಂದು ಹೇಳಿದ್ದರಿಂದಲೇ. ಏತೇನೈವ = ಅದ್ವೈತಮತವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಮಾಡಿರುವದರಿಂದ. ಅನ್ಯಥಾ = ಜೀವನು

ಪರಿಪೂರ್ಣಚಂದ್ರಿಕಾ

ದೇಹಾದಿಭಿನ್ನತ್ವೇನ ಆನಂದಾದ್ಯಾತ್ಮಕತ್ವೇನಾಪಿ ಅಸಂದಿಗ್ಧನಾದ್ದರಿಂದ ಅವಿಚಾರ್ಯನೆಂದು ಹೇಳಿದರೆ. ಉತ್ತರತ್ರ = ಎರಡನೆಯ ಅಧ್ಯಾಯದಲ್ಲಿರುವ 'ಜ್ಞೋಽತ ಏವ' ಎಂಬಸೂತ್ರದಲ್ಲಿ. ಕೇಚಿತ್ತು = ಗ್ರಂಥಕಾರರೇ ಊಹಿಸಿಕೊಂಡ ಪಕ್ಷಾಂತರ. ತಾವತಾ = ಜೀವನು ವಿಚಾರ್ಯ. ಈಶ್ವರನು ಅವಿಚಾರ್ಯ ಎಂದು ಹೇಳಿದ ಮಾತ್ರದಿಂದ

प्रकाशः – प्रकारान्तरेण विचारकर्तव्यत्वमाशङ्क्य निरस्यति – एतेनेति ॥ 'एतेन' विषयाभावेन । एतच्छब्दार्थं व्यनक्ति – धर्मवदिति ॥ ननु जीवस्यासन्दिग्धत्वेऽपि देहादिविविक्तत्वेन विचार्यता स्यादेव । अत एव सुधायां जन्मादिसूत्रे – 'जीवस्य स्वरूपतः प्रसिद्धत्वेऽपि देहादितोऽतिविविक्ततया न प्रसिद्धिः इत्युक्तम्' इत्याशङ्कां निरस्यति – एतेनैवेति ॥ 'अद्वैतिरीत्या' इत्युक्तत्वेनेत्यर्थः ॥ उत्तरत्रेति ॥ "ज्ञोऽत एव" इत्यादौ द्वितीये ॥ सत्यत्वाभावादिति ॥ अन्यथा अतत्वावेदकं शास्त्रं स्यादिति भावः । जन्मादिसूत्रे च नाद्वैतिरीत्या पूर्वपक्ष इति सुधाशय इति भावः । ननु कुत एवम् ? "जीवस्य स्वरूपतः" इत्यादिसुधाऽनुसारात् अत्रापि जीवविचारो नाक्षेप्यः । किन्तु जीवस्य कथंचिद् विचार्यत्वेऽपि सिद्धान्त्यभिमतजीवान्यब्रह्मविचारो न सम्भवति । तस्यैवाभावात् इत्येवात्र पूर्वपक्षोऽस्तु । अत एव सुधायामाद्यसूत्रे "ईश्वरविषया जिज्ञासा भविष्यतीति चेन्न । तस्यैवाभावात्" इत्युक्तम्, इत्याशङ्कामुट्टङ्क्य निरस्यति – केचित्त्विति ॥ न्यायविवरणे 'तस्य स्वप्रकाशत्वान्न जिज्ञास्यता' इत्युक्त्या जीवस्य सर्वथाऽविचार्यत्वोक्तेरिति भावः । तथाच न्यायविवरणानुसारिटीकायां न तथा वर्णनं युक्तमिति । न्यायविवरणमपि तथैव कथंचिद् योज्यताम्, इत्यत आह – तावतेति ॥ जीवान्यब्रह्मविचाराक्षेपमात्रेणेत्यर्थः । अत एव सुधायामाद्यसूत्रे जीवविचारोऽपि प्रत्याख्यात इति भावः ।

गुरुराजीय – प्रकारान्तरेण विचारस्य कर्तव्यत्वं परिहरति – एतेनेति ॥ अत्र प्रमाणाश्रयणेन प्रवृत्तत्वाच्छङ्काया अधिकत्वमिति ज्ञेयम् । नहि प्रकाशमानेऽर्थे इति टीकाभिप्रेतां युक्तिमेतच्छब्दार्थतयाऽतिदिशति । ननु जीवस्यासन्दिग्धत्वेऽपि देहादिविविक्तत्वेन विचार्यता स्यादेव । अत एव सुधायां जन्मादिसूत्रे जीवस्य स्वरूपतः सिद्धत्वेऽपि देहादिविविक्ततया न सिद्धिरित्युक्तमित्याशङ्कां निरस्यति –

**एतेनैवेति** ।। अन्यथा जीवस्य देहादिभिन्नत्वानन्दाद्यात्मकत्वेनाप्यसंदिग्धत्वे ।। **उत्तरत्रेति** ।। **'ह्रोऽत एवेत्यादौ'** इत्यर्थः ।। **सत्यत्वाभावादिति** ।। तथा च तत्प्रतिपादकस्यातत्त्वावेदकत्वापातादिति भावः । स्वोत्प्रेक्षितं पक्षान्तरमाशङ्क्य निराकरोति – **केचित्त्विति** ।। जीवस्याकारान्तरेण विषयत्वाङ्गीकारे तदविषयत्वोप पादकस्वप्रकाशत्वोपपादकन्यायविवरणविरोधः स्यादित्याह – **न्यायविवरण-विरोधादिति** ।। 'न्यायविवरणमप्युक्ताभिप्रायेण कथंचिद् योज्यम्' इति वदन्तं प्रति बाधकान्तरमाह – **तावतेति** ।। सर्वथा निर्विषयत्वस्यैव शास्त्रानारम्भप्रयोजकत्वात् त्वत्पक्षे च जीवस्यैव विचार्यत्वसम्भवेन सर्वथा निर्विषयत्वाभावेन शास्त्रा-नारम्भासिद्धेरिति भावः ।

**ವಿವರಣೆ** - 'ಏತೇನ' ಇತ್ಯಾದಿ ವಾಕ್ಯದಿಂದ ಮತ್ತೊಂದು ಪ್ರಕಾರದಲ್ಲಿ ವಿಚಾರಶಾಸ್ತ್ರ ಆರಂಭಣೀಯತ್ವವನ್ನು ಆಶಂಕಿಸಿ ನಿರಾಕರಿಸುತ್ತಾರೆ.

**ಪ್ರಶ್ನೆ** :- ವೇದವು ಕರ್ಮಕಾಂಡವೆಂದು ಬ್ರಹ್ಮಕಾಂಡವೆಂದು ಎರಡು ವಿಧವಾಗಿದೆ. ಕರ್ಮಕಾಂಡದ ಅರ್ಥನಿರ್ಣಯವನ್ನು ಪೂರ್ವಮೀಮಾಂಸೆಯಲ್ಲಿ ಈಗಾಗಲೇ ಮಾಡಿದ್ದಾಗಿದೆ. ಕೇವಲ ಕರ್ಮಕಾಂಡದ ಅರ್ಥನಿರ್ಣಯವಾದರೆ ಸಾಲದು. ಬ್ರಹ್ಮಕಾಂಡದ ಅರ್ಥನಿರ್ಣಯವೂ ಸಹ ನಿರ್ಣಯವಾಗಲೇಬೇಕು. ಇದನ್ನು ಬ್ರಹ್ಮಸೂತ್ರಗಳು ಮಾಡುತ್ತಿವೆ. ಆದ್ದರಿಂದ ವಿಚಾರಶಾಸ್ತ್ರ ಆರಂಭಣೀಯ.

**ಉತ್ತರ** :- ಹಾಗೆ ಹೇಳಲಾಗದು. ಕರ್ಮಕಾಂಡ ಪ್ರತಿಪಾದ್ಯವಾದ ಧರ್ಮವು ಸ್ವಪ್ರಕಾಶವಲ್ಲ. ಶಾಸ್ತ್ರಾದಿಗಳಿಂದಷ್ಟೇ ಅದನ್ನು ತಿಳಿಯಬೇಕಾದ್ದರಿಂದ ಪರಪ್ರಕಾಶ್ಯವಾಗಿದೆ. ಆದ್ದರಿಂದ ಧರ್ಮವಿಚಾರ ಆವಶ್ಯಕ. ಆದರೆ ಬ್ರಹ್ಮಕಾಂಡ ಪ್ರತಿಪಾದ್ಯನಾದವನು ಆತ್ಮ. ಇವನನ್ನು ತಿಳಿಯಲು ಮತ್ತೊಂದರ ಅಪೇಕ್ಷೆ ಇಲ್ಲ. ಸ್ವತಃ 'ಅಹಂ' ಎಂದು ತಿಳಿಯುವುದರಿಂದ ಸ್ವಪ್ರಕಾಶನಾಗಿದ್ದಾನೆ. ಇಂತಹವನನ್ನು ತಿಳಿಯಲು ವಿಚಾರವು ಬೇಕಾಗಿಲ್ಲ.

**ಪ್ರಶ್ನೆ** :- ಜೀವನು 'ಅಹಂ' ಎಂದು ನಿತ್ಯಸಿದ್ಧನಾಗಿದ್ದಾನೆ. ಈ ಅಂಶದಲ್ಲಿ ಯಾರಿಗೂ ಸಂದೇಹವಿಲ್ಲ. ಆದರೆ 'ನಾನು ಕಪ್ಪಗಿದ್ದೇನೆ' 'ನಾನು ದಪ್ಪವಾಗಿದ್ದೇನೆ' ಇತ್ಯಾದಿಯಾಗಿ ದೇಹವನ್ನೇ ಜೀವನೆಂದು ತಿಳಿದಿದ್ದೇವೆ. ನಿಜವಾಗಿಯೂ ಕಪ್ಪಾಗಿರುವುದು ದೇಹವೇ ಹೊರತು ಜೀವನಲ್ಲ. ಆದರೂ ದೇಹದಿಂದ ಜೀವನಲ್ಲಿ ಭೇದವನ್ನು ತಿಳಿಯದೇ ಈ ರೀತಿಯಾದ ವ್ಯವಹಾರವು ಲೋಕದಲ್ಲಿ ಕಂಡಿದೆ. ದೇಹಭೇದಜ್ಞಾನವು ಶಾಸ್ತ್ರದಿಂದಷ್ಟೇ ಬರುತ್ತದೆ. ಇದಕ್ಕೆ ಸುಧೆಯ ಸಮ್ಮತಿಯೂ ಇದೆ. 'ಜೀವಸ್ಯ ಸ್ವರೂಪತಃ ಪ್ರಸಿದ್ಧತ್ವೇಽಪಿ ದೇಹಾದಿವಿವಿಕ್ತತ್ವೇನ ನ ಪ್ರಸಿದ್ಧಿಃ' 'ಜೀವನು ಸ್ವರೂಪತಃ ಸಿದ್ಧನಾಗಿದ್ದಾನೆ. ಆದರೂ ದೇಹಾದಿಭಿನ್ನನಾಗಿ ಸಿದ್ಧನಾಗಿಲ್ಲ' ಎಂದು. ಮತ್ತು ಎರಡನೇ ಅಧ್ಯಾಯದ ಮೂರನೇ ಪಾದದಲ್ಲಿ 'ಜ್ಞೋಽತ ಏವ' ಎಂಬ ಸೂತ್ರದಿಂದ ಆರಂಭಿಸಿ ಪಾದ ಮುಗಿಯುವ ತನಕ ಎಲ್ಲ ಅಧಿ

ಕರಣಗಳಲ್ಲಿ ಜೀವವಿಚಾರವನ್ನು ಮಾಡಲಾಗಿದೆ. ಆದ್ದರಿಂದ ದೇಹಾದಿಭಿನ್ನತ್ವ ವಿಚಾರದಲ್ಲಿ ಮತ್ತು ಆನಂದಾದ್ಯಾತ್ಮಕತ್ವ ವಿಚಾರದಲ್ಲಿ ಸಂದೇಹವಿದೆಯೆಂದು ಒಪ್ಪಿಕೊಳ್ಳಬೇಕು. ಸಂಶಯದ ಪರಿಹಾರ-ಕ್ಕೋಸ್ಕರ ವಿಚಾರಶಾಸ್ತ್ರವು ಆರಂಭಣೀಯವೇ ಆಗಿದೆ.

ಉತ್ತರ :- ಈ ಅಧಿಕರಣದ ರಚನೆಗೆ ಮಾಡುತ್ತಿರುವ ಪೂರ್ವಪಕ್ಷವು ಅದ್ವೈತಮತವನ್ನು ಅನುಸರಿಸಿ ಮಾಡಲಾಗಿದೆಯೆಂದು ಈ ಹಿಂದೆಯೇ ಹೇಳಿದ್ದೇವೆ. ಆದ್ದರಿಂದಲೇ ನೀವು ಮಾಡಿದ ಪ್ರಶ್ನೆಯು ಅಸಮಂಜಸವೆಂದು ನಿರ್ಣಯವಾಗುತ್ತದೆ. ಅದ್ವೈತಿಗಳು ದೇಹಾದಿಭೇದವೆಲ್ಲವನ್ನು ಮಿಥ್ಯವೆಂದು ಹೇಳುತ್ತಾರೆ. ಮಿಥ್ಯಾಭೂತವಾದ ವಿಚಾರವನ್ನು ಪ್ರತಿಪಾದಿಸಲು ಹೊರಟ ಶಾಸ್ತ್ರವು ಅತತ್ವಾವೇದಕವಾಗುತ್ತದೆ. ಆದ್ದರಿಂದ ದೇಹಾದಿಭೇದಜ್ಞಾನಕ್ಕೋಸ್ಕರ ಶಾಸ್ತ್ರವು ಆರಂಭಣೀಯವೆಂದು ಹೇಳಬಾರದು. ಹಾಗಾದರೆ ಜನ್ಮಾಧಿಕರಣದಲ್ಲಿ ದೇಹಾದಿಭೇದಜ್ಞಾನವು ಅಪ್ರಸಿದ್ಧವೆಂದು ಪೂರ್ವಪಕ್ಷ ಮಾಡಿಕೊಂಡದ್ದು ಹೇಗೆ ಕೂಡುತ್ತದೆ? ಎಂದರೆ ಅಲ್ಲಿ ಮಾಡಿಕೊಂಡ ಪೂರ್ವಪಕ್ಷವು ಅದ್ವೈತಮತವನ್ನು ಅವಲಂಬಿಸಿ ಹೊರಟಿಲ್ಲ. ಆದ್ದರಿಂದ ಸುಧೆಯ ಮಾತಿಗೆ ವಿರೋಧವಿಲ್ಲ.

ಪ್ರಶ್ನೆ :- ಇಲ್ಲಿಯ ತನಕ ತೋರಿಸಿದ ಪೂರ್ವಪಕ್ಷದಲ್ಲಿ ಯಾವ ವಿಚಾರವನ್ನೂ ಮಾಡಲು ಸಾಧ್ಯವಿಲ್ಲವೆಂದು ತೋರಿಸಲಾಯಿತು. ಬ್ರಹ್ಮನು ಜೀವಾಭಿನ್ನನಾದ್ದರಿಂದ ಅವನ ವಿಚಾರ ಅಯುಕ್ತ. ಜೀವನಾದರೂ ನಿತ್ಯಸಿದ್ಧನಾದ್ದರಿಂದ ಅವನ ವಿಚಾರವೂ ಅಯುಕ್ತ. ಜಡವು ಮಿಥ್ಯಾಭೂತವಾದ್ದರಿಂದ ಜಡದ ವಿಚಾರವೂ ಅಯುಕ್ತ. ದೇಹಾದಿವಿವೇಕವು ಭ್ರಾಂತ್ಯಾತ್ಮಕವಾದ್ದರಿಂದ ಅದರ ವಿಚಾರವೂ ಅಯುಕ್ತವೆಂದು ಉಪಪಾದಿಸಲಾಯಿತು.

ಆದರೆ ಪೂರ್ವಪಕ್ಷವನ್ನು ಹೀಗೆ ತೋರಿಸಬೇಕು ಜೀವನು ಕಥಂಚಿತ್ ವಿಚಾರ್ಯನಾಗಲಿ. ಆದರೆ ಸಿದ್ಧಾಂತಿಗೆ ಅಭಿಮತವಾದ ಜೀವಾನ್ಯನಾದ ಬ್ರಹ್ಮನ ವಿಚಾರವು ಕೂಡುವುದಿಲ್ಲ. ಏಕೆಂದರೆ ಜೀವನಿಗಿಂತ ಭಿನ್ನನಾಗಿ ಬ್ರಹ್ಮನೇ ಇರುವುದಿಲ್ಲ. ಇದಕ್ಕೆ ಸುಧೆಯ ಸಮ್ಮತಿಯೂ ಇದೆ. - 'ಈಶ್ವರವಿಷಯಾ ಜಿಜ್ಞಾಸಾ ಭವಿಷ್ಯತೀತಿ ಚೇನ್ನ. ತಸ್ಯೈವಾಭಾವಾತ್' 'ಈಶ್ವರನ ಜಿಜ್ಞಾಸೆಯು ಕೂಡುತ್ತದೆಂದು ಹೇಳಬೇಡಿ. ಈಶ್ವರನೇ ಇಲ್ಲ ಎಂದು. ಇಲ್ಲಿ ಈಶ್ವರನೇ ಇಲ್ಲ'ವೆಂದು ಹೇಳಿದ್ದರಿಂದ ಜೀವನು ಕಥಂಚಿತ್ ವಿಚಾರ್ಯನಾಗಬಹುದೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ಜೀವನ ವಿಷಯದಲ್ಲಿ ವಿಚಾರವು ಕೂಡುತ್ತದೆ. ಆದರೆ ಸಿದ್ಧಾಂತಿಯ ಅಭಿಪ್ರಾಯದಂತೆ ಬ್ರಹ್ಮನ ವಿಚಾರವು ಕೂಡುವುದಿಲ್ಲವೆಂದು ಪೂರ್ವಪಕ್ಷವನ್ನು ಮಾಡಬೇಕು.

ಉತ್ತರ :- ನೀವು ಮಾಡಿದ ಪೂರ್ವಪಕ್ಷವು ನ್ಯಾಯವಿವರಣಕ್ಕೆ ವಿರುದ್ಧವಾಗುತ್ತದೆ. ಜೀವನಿಗೆ ಪ್ರಕಾರಾಂತರದಿಂದ ವಿಚಾರವಿಷಯತ್ವವನ್ನು ಅಂಗೀಕರಿಸಿದಿರಿ. ಆದರೆ ನ್ಯಾಯವಿವರಣೆಯಲ್ಲಿ ಜೀವನಿಗೆ ವಿಚಾರವಿಷಯತ್ವವು ಇಲ್ಲವೆನ್ನಲು ಸ್ವಪ್ರಕಾಶತ್ವವನ್ನು ಉಪಪಾದಿಸಿದ್ದಾರೆ. 'ತಸ್ಯ ಸ್ವಪ್ರಕಾಶತ್ವಾನ್ನ ಜಿಜ್ಞಾಸ್ಯತಾ' ಜೀವನು ಸ್ವಪ್ರಕಾಶನಾದ್ದರಿಂದ ಜಿಜ್ಞಾಸ್ಯನಲ್ಲ' ಎಂದು ನ್ಯಾಯವಿವರಣೆಯಲ್ಲಿ ಹೇಳಿದೆ. ಇದರಿಂದ ಜೀವನು ಸರ್ವಥಾ ಅವಿಚಾರ್ಯನೆಂದು ತಿಳಿಯುತ್ತದೆ. ಆದರ ವಿರೋಧವು ಬರುತ್ತದೆ.

ಪ್ರಶ್ನೆ :- ನ್ಯಾಯವಿವರಣದ ವಾಕ್ಯವನ್ನು ನಾವು ಹೇಳಿದ ಅರ್ಥದಲ್ಲೇ ಯೋಜನೆ ಮಾಡಬಹುದು ನ್ಯಾಯವಿವರಣದಲ್ಲಿ ಬಂದ ವಾಕ್ಯವು ಅಭ್ಯುಗಮವಾದದಿಂದಲೋ ಅಥವಾ ಬೇರೆ ರೀತಿಯಿಂದಲೋ ಕೂಡಿಸಬಹುದು.

ಉತ್ತರ :- ನೀವು ಕಥಂಚಿತ್ ನ್ಯಾಯವಿವರಣದ ಮಾತನ್ನು ಯೋಜನೆ ಮಾಡಬಹುದು. ಆದರೆ ಪೂರ್ವಪಕ್ಷದ ಫಲವೇ ಸಿದ್ಧವಾಗುವುದಿಲ್ಲ. ಏಕೆಂದರೆ ಶಾಸ್ತ್ರವು ಅನಾರಂಭಣೀಯವೆಂಬುದು ಪೂರ್ವಪಕ್ಷದ ಫಲ. ಜೀವನು ಕಥಂಚಿತ್ ವಿಚಾರ್ಯನೆಂದು ಹೇಳಿದರೆ ಆ ಜೀವನ ಬಗ್ಗೆ ಗೊತ್ತಿಲ್ಲದಿರುವ ಅಂಶದ ವಿಚಾರಕ್ಕೋಸ್ಕರ ಶಾಸ್ತ್ರವು ಆರಂಭಣೀಯವೆಂದೇ ಆಗುತ್ತದೆ. ಅನಾರಂಭಣೀಯತ್ವವು ಸಿದ್ಧವಾಗುವುದಿಲ್ಲ.

ಜೀವನು ವಿಚಾರ್ಯನಲ್ಲವೆಂದು ಸುಧೆಯ ಜಿಜ್ಞಾಸಾಧಿಕರಣದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಹೀಗಿರುವಾಗ ಜೀವನಿಗೆ ವಿಚಾರ್ಯತ್ವವನ್ನು ಹೇಳುವುದು ಎಷ್ಟು ಮಾತ್ರಕ್ಕೂ ಸರಿಯಲ್ಲ.

## ವೇದಾಂತ ಅನುವಾದಕವಾದರೂ ವ್ಯರ್ಥವಲ್ಲ

**तात्पर्यचन्द्रिका –**

**सिद्धचैतन्यमात्रबोधने श्रुतेरनुवादकत्वं च, 'वायु क्षेपिष्ठा'दिवाक्यवद् विद्वद्वाक्यवच्च न्यायप्राप्तत्वात् सहम् । वेदान्ताध्ययनं तु जपार्थमस्तु ।**

ಅನುವಾದ - ಅನುಭವಸಿದ್ಧನಾದ ಆತ್ಮಸ್ವರೂಪವನ್ನೇ ತಿಳಿಸುವ ವೇದಾಂತವು ಅನುವಾದಕವಾಗುತ್ತದೆ. ಆದರೂ ವ್ಯರ್ಥವಲ್ಲ. ಪಾರಾಯಣ ಜಪಗಳಿಂದ ಪುಣ್ಯವನ್ನು ಹುಟ್ಟಿಸುವ ಮೂಲಕ ಸಾರ್ಥಕವಾಗುತ್ತದೆ.

ಉದಾಹರಣೆ :- 'ವಾಯುರ್ವೈ ಕ್ಷೇಪಿಷ್ಠಾ ದೇವತಾ' 'ವಾಯುವು ಶೀಘ್ರಗಾಮಿಯಾದ ದೇವತೆ' ಎಂಬ ಶ್ರುತಿಯು ನಾವು ತಿಳಿದಿರುವುದನ್ನೇ ಅನುವಾದ ಮಾಡುತ್ತಿದೆ. ಆದರೆ ವಾಯುದೇವತಾಕಾರ್ಯ ಯಾಗದ ಪ್ರಶಂಸೆಗಾಗಿ ಇರುವುದರಿಂದ ಸಾರ್ಥಕವಾಗಿದೆ. ಅದರಂತೆ 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ' 'ಯ ಏವಂ ವಿದ್ವಾನ್ ಅಮಾವಾಸ್ಯಾಯಾಂ ಯಜತೇ' ಎಂಬ ವಿದ್ವತ್‌ಪದಘಟಿತವಾದ ವಾಕ್ಯಗಳು ಹುಣ್ಣಿಮೆ ಮತ್ತು ಅಮಾವಸ್ಯೆಯಂದು ಮಾಡಬೇಕಾದ ಮೂರು ಯಾಗಗಳನ್ನು ಅನುವಾದ ಮಾಡುತ್ತಿವೆ. ಅನುವಾದ ಮಾಡಿದರೂ ವ್ಯರ್ಥವಲ್ಲ. 'ದರ್ಶ' ಹಾಗೂ 'ಪೂರ್ಣಮಾಸ' ಎಂಬ ಹೆಸರು ಅಮಾವಾಸ್ಯೆ ಹಾಗೂ ಹುಣ್ಣಿಮೆಗಳಲ್ಲಿ ಮಾಡುವ ಮೂರು ಮೂರು ಯಾಗಗಳ ಗುಂಪುಗಳಿಗೆ ಹೆಸರುಗಳೆಂದು ತಿಳಿಸಿ ಸಾರ್ಥಕಗಳಾಗುತ್ತದೆ. ಹೀಗೆ ಯುಕ್ತಿಯುಕ್ತವಾದ್ದರಿಂದ ವೇದಾಂತಗಳಿಗೆ ಅನುವಾದಕತ್ವವು ಸಹ್ಯವೇ ಆಗಿದೆ.

*ಪರಿಪೂರ್ಣಚಂದ್ರಿಕಾ*

**ಕಠಿಣಪದಾರ್ಥ**

**ಸಿದ್ಧಚೈತನ್ಯಮಾತ್ರಬೋಧನೇ** = ಅನುಭವಸಿದ್ಧನಾದ ಆತ್ಮನನ್ನಷ್ಟೇ ತಿಳಿಸುವುದಾದರೆ. **ನ್ಯಾಯಪ್ರಾಪ್ತತ್ವಾತ್** = ಯುಕ್ತಿಯುಕ್ತವಾದ್ದರಿಂದ. **ವೇದಾಂತಾಧ್ಯಯನಮ್** =ಉಪನಿಷತ್ತುಗಳ ಅಧ್ಯಯನವು. **ಜಪಾರ್ಥಮ್** = ಪಾರಾಯಣಕ್ಕೋಸ್ಕರ.

प्रकाशः – नन्वेवं वेदान्तानां सिद्धचैतन्यमात्रपरत्वे प्रागुक्तरीत्या ज्ञातज्ञापकत्वेन अप्रामाण्यं स्यात् । नच तद् युक्तम् । अपौरुषेयत्वेनादोषत्वात् । अतोऽतिरिक्तब्रह्मपरत्वमकामेनापि वाच्यमिति, तद्विषयकत्वेन विचार आरम्भणीय इत्याशङ्क्य वैदिकदृष्टान्तेन तदुपपादयति – सिद्धेति ।। वायुक्षेपिष्ठादिवाक्यवत् इति ।। "वायुर्वै क्षेपिष्ठा देवता, वायुमेव स्वेन भागधेयेनोपधावति, स एवैनं भूतिं गमयति" इत्याद्यर्थवादवाक्यस्य, क्षिप्रगामी वायुः स्वोचितेन भागेन तोषितो भागप्रदाय ऐश्वर्यं प्रयच्छतीति मानान्तरप्राप्तक्षिप्रगामित्वादिरूपार्थानुवादकत्वं यथा, तद्वदित्यर्थः । अत एवाद्ये अध्याये "आम्नायस्य क्रियार्थत्वात्" इति द्वितीयपादीयाद्याधिकरणेऽर्थवादानां भारतादिवद् भूतान्वाख्यानमात्रपर्यवसितानामक्रियार्थत्वेनाप्रामाण्यमाशङ्क्य, चेतनप्रवर्तनारूपस्य विधेः प्रवृत्तिप्रतिबन्धकाऽऽलस्यादिव्यावर्तनेन प्रवर्तनाशक्त्युत्तम्भनायापेक्षितस्य प्राशस्त्यस्य लक्षणया समर्पणेन, विध्येकवाक्यतया प्रामाण्यमित्युक्तमिति भावः ।

ननु वायुक्षेपिष्ठादिवाक्यस्य लक्षिते तात्पर्यविषयीभूते प्राशस्त्येऽर्थे न मानांतरावगतिरिति, न तत्परत्वेऽनुवादकत्वम् । वेदान्तानां तु तात्पर्यविषयस्य शुद्धस्य स्वप्रकाशतया सिद्धत्वेन तत्परत्वेऽनुवादकत्वमेवेति दृष्टान्तो विषम इति चेन्न । वायुक्षेपिष्ठत्वांशस्यैव दृष्टान्तत्वेनाभिमतत्वात् । अत एव अरुच्या विद्वदित्युदाहरणान्तरम् । अत एव "अग्नये पवमानाय पुरोडाशमष्टाकपालं निर्वपेत्" इत्यत्राग्नेः पवमानत्वरूपगुणवदत्र वायोः क्षेपिष्ठत्वरूपगुणविधानं किं न स्यादित्याशंकाव्यावर्तनाय, विध्युद्देशबहिर्भावप्रदर्शनरूपन्यायस्य, तद्बहिर्भावेऽपि "एतमेव सन्तं वायवे नियुत्वत आलभेत" इतिवद् वाक्यान्तरेण देवतागुणविधानं किं न स्यात्? इत्याशङ्काऽपनुत्तये विधायकाख्याताश्रवणरुपन्यायस्य चापेक्षणात् 'न्यायप्राप्तत्वात्' इत्युक्तम् – विद्वदिति ।। "य एवं विद्वान् पौर्णमासीं यजते । य

एवं विद्वानमावास्यां यजते'' इति वाक्ययोर्विद्वत्पदयुक्तत्वेन विद्वद्वाक्यशब्दितयो- दर्शपूर्णमासशब्दितप्रकृताग्नेयादित्रिकद्वयानुवादकत्वं यथा तथा, इत्यर्थः । तथाहि । द्वितीयेऽध्याये ''प्रकरणं तु पौर्णमास्यां रूपावचनात्'' इति द्वितीयपादीय- तृतीयाधिकरणे । ''य एवं विद्वान्'' इति वाक्यद्वयमुदाहृत्य, किं पौर्णमास्यमावास्या- शब्दितापूर्वकर्मद्वयविधायकम् । किं वा ''यदाग्नेयोऽष्टाकपालोऽमावास्यायां च पौर्णमास्यां चाच्युतो भवति । ''अग्नीषोमीयमेकादशकपालं पौर्णमासे प्रायच्छत्'' । ''उपांशु याजमन्तरा यजति'' । ''ऐन्द्रं दध्यमावास्यायाम्'' । ''ऐन्द्रं पयोऽमा- वास्यायाम्'' इति प्रकृतस्याग्नेयादित्रिकद्वयस्यानुवादकमिति संशये, ''सर्वस्मै वा एतद् यज्ञाय गृह्यते यद् ध्रुवायामाज्यम्'' इति वाचनिकस्य ध्रौवाज्यस्य द्रव्यस्य ''वार्त्रघ्नी पौर्णमास्यामनूच्येते, वृधन्वती अमावास्यायाम्'' इति वाक्याभ्यां पौर्णमास्य- मावास्यासंज्ञकयोः कर्मणोर्वार्त्रघ्न्यादिशब्दितानां ''अग्निर्वृत्राणि जङ्घनत्'' इत्यादिमन्त्राणां विधानान्मान्त्रवर्णिक्या देवतायाश्च लाभादनुवादकत्वे वैयर्थ्याद- पूर्वकर्मद्वयविधायकमित्याशङ्क्य, कथञ्चिद् द्रव्यलाभेऽपि 'वार्त्रघ्नी' इत्यादि- वाक्यद्वयस्याज्यभागयोर्लिङ्गक्रमाभ्यां पर्वद्वयेऽप्यव्यवस्थया प्राप्तानां मन्त्राणां व्यवस्थाऽर्थत्वेन मन्त्रवर्णाद् देवताया अलाभात् ''दर्शपूर्णमासाभ्यां स्वर्गकामो यजेत'' इति फलवाक्यगतयोर्दर्शपूर्णमासपदयोः प्रसिद्धार्थत्वसम्पादनेन प्रकृता- ग्नेयादित्रिकद्वयानुवादकस्य सफलत्वात् समुदायद्वयानुवाद इति सिद्धान्तितम् । तत्र यथा देवताऽभावादिन्यायप्राप्तमनुवादत्वं, तथा वेदान्तानाम् 'अन्यस्य सत्यस्याभावात्' इत्यादिन्यायप्राप्तमनुवादकत्वं सह्यमित्यर्थः ।

यत्तु – वायुक्षेपिष्ठादिवाक्यस्य विद्वद्वाक्यस्य चानुवादकत्वेऽपि विध्यपेक्षित- प्राशस्त्यसमर्पणेनाद्यस्य, फलवाक्यगतदर्शपूर्णमासपदप्रसिद्धार्थत्वसम्पादनेन द्वितीयस्य फलवत्त्वान्न वैयर्थ्यम् । वेदान्तानां शुद्धचैतन्यमात्रबोधनेनानुवादकत्वे तु न किञ्चित् फलमिति वैषम्यकथनं, तन्न । वेदान्ताध्ययनस्यादृष्टार्थत्वेनार्थप्रतिपादने फलाभावकथनस्यानुचितत्वात् । अन्यथोत्कर्षसमजात्युत्तरत्वापत्तेः । अत एव तदध्ययनं जपार्थमित्यग्रे स्पष्टम् । दृष्टे सत्यदृष्टायोगाद् वायुक्षेपिष्ठादौ

प्राशस्त्यादिफलमुक्तमिति । एतेन – "प्रमाणशिखामणीनां वेदान्तानां सिद्ध-बोधकत्वं सह्यं चेत् तदा पौरुषेयस्यास्य शास्त्रस्य सुतरां तत् सह्यमिति निर्विषयत्वेनानारम्भणीयत्वमयुक्तम्' इति मूर्खप्रलापो निरस्तः । तत्रैवात्रापि कस्यचिज्ज्ञातार्थज्ञापकस्या पौरुषेयस्य प्रेक्षावदुपादेयस्य दर्शनात् । अत एव 'श्रुतेः' इत्युक्तम् । किञ्च श्रुतेस्तथात्वेऽपि पौरुषेयस्य न तद् युक्तम् । उक्तं च सुधायाम् –

"प्रीत्या मोक्षपरत्वाच्च तात्पर्यं नैव दूषणे ।
तद्विरोधे न मानत्वं"

इत्यनुव्याख्याव्याख्याऽवसरे "पुरुषो हि परप्रयोजनेन प्रयुक्तो वाक्यमुच्चारयंस्तदीयहिताहितप्राप्तिपरिहारानुगुणार्थमेव वदेत् । तद्विरुद्धं तु वदन्ननवधेयवचनः स्यात् । अपौरुषेयं तु स्वभावादेवार्थं प्रतिपादयति, प्रत्यक्षादिवदेव" इति । "शक्तिश्चैवान्विते स्वार्थे" इत्येतद्व्याख्यावसरे चोक्तम्, "पुरुषदोषोऽयं, यत् ज्ञातज्ञापनाय शब्दोच्चारणम्" इत्यादि । वस्तुतस्तु न्यायनिबन्धनात्मकत्वाच्छास्त्रस्य सन्दिग्ध एव न्यायप्रवृत्तेः, असन्दिग्धे तत्फलाभावान्नेदमारम्भणीयमित्युक्तौ न कोऽपि दोषः । किञ्च ' "आत्मा ब्रह्मेत्यधीतः स्फुरति स तु सदा" इत्यादि वदता त्वयाऽप्यक्षागमयोरेकविषयत्वमुपेत्यैव विचारशास्त्रस्य निर्विषयत्वेनानारम्भस्य पूर्वपक्षितत्वेन स्वव्याहतत्वाच्च' इति । नन्वध्ययनविधिना कृत्स्नस्य वेदस्यार्थज्ञानपर्यन्तत्वस्य व्यवस्थापनात्, वेदान्तेष्वर्थज्ञानस्यान्यतो लाभादध्ययनं व्यर्थम्, इत्यत आह – वेदान्तेति ।। दृष्टस्यायोगाज्जपद्वाराऽदृष्टमेव फलमिति भावः ।

गुरुराजीय – ननु वेदान्तानां सिद्धचैतन्यमात्रबोधकत्वेऽनुवादत्वेन वैयर्थ्यं स्यात् । नच तद्युक्तम् । अपौरुषेयत्वेनादोषतया निश्चितप्रामाण्यस्यायोगात् । अतो विशिष्टार्थत्वमवश्यं कल्पनीयम् । ततश्च वेदस्यैव जीवव्यतिरिक्तेश्वरसद्भावे प्रमाणत्वेनातिरिक्तब्रह्मविषयत्वसम्भवेन विचारस्यारम्भणीयत्वं भविष्यतीत्यत आह - सिद्धेति ।। वायुर्क्षेपिष्ठादिवाक्यवदिति ।। "वायुर्वै क्षेपिष्ठा देवता वायुमेव स्वेन भागधेयेनोपधावति स एवैनं भूतिं गमयति" इत्याद्यर्थवादवाक्यस्य क्षिप्रगामी वायुः स्वोचितेन भागेन तोषितो भागप्रदाय ऐश्वर्यं प्रयच्छतीति मानान्तरप्राप्तक्षिप्र-

गामित्वादिरूपार्थानुवादकत्वं यथा तद्वत् – इत्यर्थः । अत एव प्रमाणलक्षणे अर्थवादपादे "आम्नायस्य क्रियार्थत्वादानर्थक्यमतदर्थानां तस्मादनित्यमुच्यते" इति प्रथमाधिकरणे विधिभावनातदंशत्रयातिरिक्तार्थानां 'वायुर्वै क्षेपिष्ठा देवता' इत्येवमादीनामर्थवादपदानाम् – किं "वायव्यं श्वेतमालभेत भूतिकामः" इत्यादिविध्युद्देशेनैकवाक्यतया धर्मप्रामाण्यम्, उत न इति चिन्तायां "चोदनालक्षणोऽर्थो धर्मः", "तस्य ज्ञानमुपदेशः" । "तद्भूतानां क्रियार्थेन समाम्नायः" इत्युपक्रममध्यपरामर्शोपसंहारैः सर्वस्याप्याम्नायस्य क्रियार्थत्वावधारणात् भारतादिवद्भूतान्वाख्यानमात्रपर्यवसितानामर्थवादानां करणेतिकर्तव्यताविशिष्टभावनामात्रविधानचरितार्थेन विध्युद्देशेन सह परस्परं नैराकाङ्क्ष्यादेकवाक्यत्वासम्भवेनाक्रियार्थत्वादप्रामाण्यमिति पूर्वपक्षं प्रापय्य अध्ययनविधिवशात् कृत्स्नस्य वेदस्य प्रयोजनवदर्थपर्यवसानेनार्थवादानां प्रयोजनाकाङ्क्षायाः विधेरपि चेतनप्रवर्तनारूपस्य प्रवृत्तिप्रतिबन्धकालस्यादिव्यावर्तनेन प्रवर्तनाशक्त्युत्तंभनाय प्राशस्त्यापेक्षायाश्च सत्त्वादर्थवादानां लक्षणया प्राशस्त्यसमर्पणेन विध्येकवाक्यतया प्रामाण्यमिति सिद्धान्तितम् ।

यद्यपि 'वायुर्वै क्षेपिष्ठा देवता' इत्यर्थवादवाक्यलक्षिततया तत्तात्पर्यविषयीभूतप्राशस्त्यस्य मानान्तरानवगतत्वान्न तेषां तत्रानुवादकत्वं तथापि तद्द्वारभूतस्य वायोः क्षेपिष्ठत्वस्य लौकिकप्रमाणावगततया मुखतोऽनुवादकत्वाभिप्रायेणानुवादकत्वोक्तिः । अत एव विद्वद्वाक्यवदित्युदाहरणान्तरम् । अत एव च "अग्नये पवमानायाष्टाकपालं पुरोडाशं निर्वपेत्" इत्यत्राग्नेः पवमानत्वरूपगुणविधिवद् वायोः क्षेपिष्ठत्वरूपस्य गुणस्य विधानं किं न स्यात्? इत्याशङ्कानिवर्तनाय विध्युद्देशबहिर्भावप्रदर्शनरूपस्य न्यायस्य तद् बहिर्भावेऽपि "एतमेव सन्ततं वायवे नियुत्वत आलभेत" इतिवद् वाक्यान्तरेण देवतागुणविधानं किं न स्यात्? इत्याशङ्काव्यवर्तनाय विधायकाख्याताश्रवणरूपन्यायस्य चापेक्षणान्न्यायप्राप्तत्वात्, इत्युक्तम् – विद्वदिति ।। "य एवं विद्वान् पौर्णमासीं यजते' 'य एवं विद्वानमावस्यां यजते" इति वाक्ययोर्विद्वत्पदयुक्तत्वेन विद्वद्वाक्यशब्दितयोर्दर्शपूर्णमासशब्दवाच्यप्रकृताग्नेयादित्रिकद्वयानुवादकत्वं यथा तथा' इत्यर्थः । भेदलक्षणे "प्रकरणं तु पौर्णमास्यां रूपावचनात्" इति द्वितीयपादीय-

चतुर्थाधिकरणे दर्शपौर्णमासप्रकरणस्थं य एवं विद्वानिति वाक्यद्वयं किमपूर्वकर्मद्वय-विधायकम्, किं वा प्रकृतस्याग्नेयादित्रिकद्वयस्यानुवादकम्? इति संशये अभ्यासाधिकरणन्यायेन विधिपुनश्श्रुत्याऽपूर्वकर्मद्वयविधायकम् । नच रूपालाभः शङ्कनीयः । "सर्वस्मै वा एतद् यज्ञाय गृह्यते यद् ध्रुवायामाज्यम्" इति वचन-विहितस्य ध्रौवाज्यद्रव्यस्य "वार्त्रघ्नीपौर्णमास्यामनूच्येते' 'वृधन्वती अमावास्या-याम्" इति वाक्याभ्यां पौर्णमास्यमावास्यासंज्ञकयोरनयोः कर्मणोर्मन्त्रविधाना-न्मान्त्रवर्णिक्या देवतायाश्च लाभात् ।

नच 'मन्त्राणां लिङ्गक्रमाभ्यामाज्यभागयोर्विधानान्नात्र विनियोगः सम्भवति' इति वाच्यम् । वाचनिकविनियोगसम्भवे लिङ्गक्रमाभ्यामाज्यभागयोर्विनियोगा-सम्भवात् । त्रिकद्वयानुवादकत्वपक्षे तु वाक्यद्वयमप्यनर्थकं स्यात् । तस्मादपूर्वकर्मद्वयविधायकम्' इति पूर्वपक्षे प्राप्ते, कथंचिद् द्रव्यलाभेऽपि देवताया अलाभान्नास्यापूर्वकर्मद्वयविधायकम् । नच मन्त्रवर्णात् तल्लाभः । 'वार्त्रघ्नी' इत्यादिवाक्यद्वयस्य आज्यभागयोर्लिङ्गक्रमाभ्यां पर्वद्वयेऽप्यव्यवस्थया प्राप्तमन्त्र-व्यवस्थार्थत्वेन लाघवाल्लिंगक्रमयोरबाधेनोपपत्तौ तद्बाधायोगात् । नचानुवाद-वैयर्थ्यम् । फलवाक्यगतयोर्दर्शपौर्णमासपदयोः प्रसिद्धार्थत्वसम्पादनेन सफलत्वात् । तत्सम्पादनस्य च फलं आग्नेयादीनां षण्णां प्राधान्यं समिदादीनां च तदङ्गत्वम् । तस्माद् विद्वद्वाक्यं समुदायानुवादकमेवेति सिद्धान्तः । अत्र च देवताऽभावादि-न्यायप्राप्तत्वाद् विद्वद्वाक्यस्य यथानुवादकत्वं तथा वेदान्तानामन्यस्य सत्यस्याभावादित्याद्युपदर्शितन्यायप्राप्तत्वादनुवादकत्वं सम्यमित्यर्थः । अत्र मीमांसकमते 'अर्थवादस्य पदत्वात् तं प्रति वाक्यस्यानुवादकत्वे नार्थवादवाक्यं दृष्टान्तः सम्भवतीति वाक्यस्यानुवादकत्वे दृष्टान्ततया विद्वद्वाक्यवदिति दृष्टान्तान्तरमुपन्यस्तम्' इति गुरवः । नन्वर्थवादविद्वद्वाक्ययोः सफलानु-वादकत्वादनुवादकत्वस्य तत्र दूषणत्वासम्भवेऽपि प्रकृते निष्फलानुवादकत्वा-दनुवादकत्वं दूषणम्, इत्यत आह – वेदान्ताध्ययनं त्विति ।। तथाचास्यापि सफलानुवादत्वमिति भावः ।

ವಿವರಣೆ - ಆತ್ಮನು ನಿತ್ಯಸಿದ್ಧನಾದ್ದರಿಂದ ವಿಚಾರವು ಅನಾವಶ್ಯಕ ಎಂದು ಇಲ್ಲಿಯ ತನಕ ಹೇಳಿದ್ದಾಯಿತು. ವಿಚಾರವೇ ಅನಾವಶ್ಯಕವಾದ್ದರಿಂದ ವಿಚಾರಪರವಾದ ವೇದಾಂತಗಳೆಲ್ಲವೂ

ಅನಾರಂಭಣೀಯಗಳೇ ಆದವು. ಏಕೆಂದರೆ ಚೈತನ್ಯಮಾತ್ರ ಪರತ್ವವನ್ನು ಹೇಳಬೇಕು. ಹಿಂದೆ ಹೇಳಿದಷ್ಟು ಚೈತನ್ಯನನು ಸಿದ್ಧನೇ ಆಗಿದ್ದಾನೆ. ಪುನಃ ವೇದಾಂತಗಳು ಜ್ಞಾತನಾದ ಆತ್ಮನನ್ನೇ ತಿಳಿಸುವುದರಿಂದ ಜ್ಞಾತಜ್ಞಾಪಕಗಳೆಂದಂತಾಯಿತು. ಆದ್ದರಿಂದ ಅಪ್ರಮಾಣಗಳಾಗುತ್ತವೆ. ಆದರೆ ವೇದಗಳಲ್ಲವು ಅಪೌರುಷೇಯಗಳಾದ್ದರಿಂದ ನಿರ್ದುಷ್ಟಗಳಾಗಿವೆ. ಇಂತಹ ವೇದಗಳಿಗೆ ನಿಶ್ಚಿತಪ್ರಾಮಾಣ್ಯವು ಸಿದ್ಧವಾಗಬೇಕೆಂದರೆ ಅಪೂರ್ವವಾದ ಅರ್ಥವನ್ನು ಹೇಳಬೇಕು. ಜೀವನಿಗಿಂತ ಅತಿರಿಕ್ತನಾದ ಈಶ್ವರನನ್ನು ಅಂಗೀಕರಿಸಿ, ಅಂತಹ ಈಶ್ವರನೇ ವೇದಪ್ರತಿಪಾದ್ಯನಾಗಿದ್ದಾನೆಂದು ಒಪ್ಪಿಕೊಂಡರೆ ಮಾತ್ರ ಅಪೂರ್ವವಾದ ಅರ್ಥವು ವೇದಗಳಿಗೆ ಸಿದ್ಧವಾಗುತ್ತದೆ. ಜೀವಾತಿರಿಕ್ತನಾದ ಈಶ್ವರನನ್ನು ಒಪ್ಪಿಕೊಳ್ಳುವುದು ನಿಮಗೆ ಇಷ್ಟವಿರಲಿ ಬಿಡಲಿ ವೇದಪ್ರಾಮಾಣ್ಯಕ್ಕೋಸ್ಕರ ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಅಂತಹ ಈಶ್ವರನ ವಿಚಾರಕ್ಕೋಸ್ಕರ ಶಾಸ್ತ್ರವು ಆರಂಭಣೀಯವೇ ಆಗುತ್ತದೆ.

ಈ ಶಂಕೆಗೆ ಉತ್ತರ ನೀಡುವ ಮೂಲಕ ಪೂರ್ವಪಕ್ಷವನ್ನು ದೃಢಪಡಿಸಲು ಈ ಮೂಲವು ಹೊರಟಿದೆ -

ಸಿದ್ಧಚೈತನ್ಯನನ್ನು ಪ್ರತಿಪಾದಿಸಿದರೆ ಶ್ರುತಿಗಳಿಗೆ ಅನುವಾದಕತ್ವವು ಬರುತ್ತದೆ. ಆದರೆ ಈ ಮಾತ್ರದಿಂದ ಅಪ್ರಾಮಾಣ್ಯವು ಬರುವುದಿಲ್ಲ. ಅನುವಾದಕವಾದರೂ ಪ್ರಾಮಾಣ್ಯವು ಉಪಪನ್ನವಾಗುತ್ತದೆಂಬುದು ಪೂರ್ವಮೀಮಾಂಸೆಯ ದೃಷ್ಟಾಂತದಿಂದ ನಿರ್ಣಯವಾಗುತ್ತದೆ.

## ಅರ್ಥವಾದಾಧಿಕರಣಂ

ಸೂತ್ರ :- "ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಂ
ತಸ್ಮಾದನಿತ್ಯಮುಚ್ಯತೇ" (೧-೨-೧)[१]

---

(१) भाट्टसङ्ग्रहः –

क आम्नायस्य क्रियार्थत्वादानर्थक्यमतदर्थानां, तस्मादनित्यमुच्यते ।।१।। काम्यपशुकाण्डे विध्यर्थवादौ श्रूयेते । 'वायव्यं श्वेतमालभेत भूतिकामः' इति विधिः । 'वायुर्वै क्षेपिष्ठा देवता, वायुमेव स्वेन भागधेयेनोपधावति, स एवैनं भूतिं गमयति' इत्यर्थवादः । क्षिप्रगामी वायुः स्वोचितेन भागेन हविषा तोषितः भागप्रदायैश्वर्यं प्रयच्छतीत्यर्थः । तत्रार्थवादः किं भावनाख्ये धर्मे प्रमाणमुत नेति सन्देहः । नेति पूर्वः पक्षः । लिङादेः विधिप्रत्ययस्याभावेन भावनास्वरूपस्य तदंशत्रयभूतफलकरणेतिकर्तव्यतानामन्यतमस्य वा अप्रतिपादकत्वेन भूतार्थमात्रकथनात् । नच विध्यपेक्षितार्थार्पणद्वारा विध्येकवाक्यतया धर्मे प्रामाण्यमिति युक्तम् । अन्योन्याकांक्षावशाद्ध्येकवाक्यत्वम् । नचेह तथा । विध्युद्देशस्य 'वायुदेवताकश्वेतपश्वालम्भनेन भूतिं भावयेत्' इत्यर्थबोधनेऽन्याकांक्षाभावात् । अर्थवादस्यापि यावदपेक्षितक्रियाकारकसत्त्वेन निराकांक्षत्वादिति ।

सिद्धान्तस्तु यद्यपि प्रयत्नापरपर्यायार्थभावनातदंशत्रयप्रतिपादनं नास्ति, तथापि

ಸೂತ್ರಾರ್ಥ :- ಆಮ್ನಾಯಸ್ಯ = ವೇದಕ್ಕೆ, ಕ್ರಿಯಾರ್ಥತ್ವಾತ್ = ಕ್ರಿಯಾರೂಪವಾದ ವಿಧಿಯಲ್ಲಿ ತಾತ್ಪರ್ಯವಿರುವುದರಿಂದ, ಅತದರ್ಥಾನಾಂ = ('ವಾಕ್ಯಾನಾಂ' ಎಂಬುದನ್ನು ಇಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು) ಯಾವ ವಾಕ್ಯಗಳು ಕ್ರಿಯೆಯನ್ನು ಪ್ರತಿಪಾದಿಸಲಾರವೋ ಅಂತಹ ವಾಕ್ಯಗಳಿಗೆ, ಆನರ್ಥಕ್ಯಂ = ವೈಯರ್ಥ್ಯವು ಇರುತ್ತದೆ. (ಪ್ರಾಮಾಣ್ಯವು ಇರುವುದಿಲ್ಲವೆಂದರ್ಥ.) ತಸ್ಮಾತ್ = ಆದ್ದರಿಂದ ಅನಿತ್ಯಮುಚ್ಯತೇ = ವೇದಪ್ರಾಮಾಣ್ಯವನ್ನು ಅನಿತ್ಯವೆಂದು ಹೇಳುತ್ತೇವೆ.

ಕ್ರಿಯಾವನ್ನು ಪ್ರತಿಪಾದಿಸದ ವಾಕ್ಯಗಳು ಯಾವ ಕಾರಣದಿಂದ ಅನರ್ಥಕಗಳೋ, ಆ ಕಾರಣದಿಂದ ಅವುಗಳ ಪ್ರಾಮಾಣ್ಯವು ಅನಿತ್ಯವಾಗಿದೆ. ವೇದತ್ವವಿದ್ದರೂ ಪ್ರಾಮಾಣ್ಯವು ಇಲ್ಲವೆಂದು ಸೂತ್ರದ ಅಭಿಪ್ರಾಯ.

ಇದು ಪೂರ್ವಪಕ್ಷಸೂತ್ರ. ಈ ಅಧಿಕರಣದಲ್ಲಿ ಒಟ್ಟು ೧೮ ಸೂತ್ರಗಳಿವೆ. ಅವುಗಳಲ್ಲಿ ಮೊದಲಿನ ೬ ಸೂತ್ರಗಳು ಕೇವಲ ಪೂರ್ವಪಕ್ಷ ಸೂತ್ರಗಳು. ಉಳಿದ ಸೂತ್ರಗಳು ಸಿದ್ಧಾಂತ ಸೂತ್ರಗಳು. ಅವುಗಳಲ್ಲಿ ಇದೂ ಸಹ ಒಂದು ಸೂತ್ರ - "ವಿಧಿನಾತ್ವೇಕವಾಕ್ಯತ್ವಾತ್ ಸ್ತುತ್ಯರ್ಥೇನ ವಿಧೀನಾಂಸ್ಯುಃ" ವಿಧಿವಾಕ್ಯದಿಂದ ಏಕವಾಕ್ಯತ್ವವು ಇರುವುದರಿಂದ ಸ್ತುತ್ಯರ್ಥೇನ = ಸ್ತುತಿರೂಪ ಪ್ರಯೋಜನವಿರುವುದರಿಂದ ಅರ್ಥವಾದ ವಾಕ್ಯಗಳಿಗೆ ಪ್ರಾಮಾಣ್ಯವು ಇರುತ್ತದೆಂದು ಸಿದ್ಧಾಂತಸೂತ್ರವು ಹೇಳುತ್ತದೆ.

* * *

---

लिङादिविधिप्रत्ययनिष्ठा पुरुषप्रवृत्तिहेतुभूता प्रवर्तनापरपर्याया विधिशब्दिता शाब्दभावना लिङादिरूपविधिप्रत्ययवाच्या अर्थभावनाभाव्यिका लिङादिरूपवाचकेन वाच्यवाचक-सम्बन्धबोधकरणिका प्राशस्त्यरूपेतिकर्तव्यताका सती पुरुषं कर्मानुष्ठाने प्रवर्तयतीति तदपेक्षितप्राशस्त्यरूपेतिकर्तव्यतासमर्पणेन विध्येकवाक्यतया प्रामाण्यमर्थवादस्य । नहि 'वायव्यश्वेतपश्वालम्भः प्रशस्तः' इत्यनुक्तौ स्वभावतोऽलसानां बहुवित्तव्ययायाससाध्ये प्रवृत्तिर्युज्यते । स्वाध्यायाध्ययनविधिना फलवदर्थावबोधपर्यवसानस्य आद्यसूत्रे निर्णीतत्त्वेन अर्थवादानां भूतार्थमात्रबोधने फलाभावेन फलवदर्थरूपप्राशस्त्यबोधने आकांक्षावत्त्वेन नष्टाश्वदग्धरथन्यायेन अन्योन्याकांक्षावत्तया 'यतः क्षिप्रगामिस्वभावतया शीघ्रफलप्रदो वायुरस्य पशोर्देवता अतः प्रशस्तं वायव्यं पशुमालभेत' इत्यन्वयेन विध्येकवाक्यत्वसम्भवाच्च धर्मे प्रामाण्यमिति । फलन्तु प्राक् सामान्येन सिद्धप्रामाण्यस्य समर्थनमिति ज्ञेयम् । विध्यर्थवादयोरविनाभावसिद्धिर्वा । सूत्रार्थस्तु, आम्नायस्य वेदस्य क्रियार्थत्वात् अतदर्थानामक्रियार्थानां भूतार्थानाम् आनर्थक्यं धर्माप्रतिपादकत्वं तस्मात् अनित्यं अनित्यमिव उच्यते अर्थवादजातमिति ।। १ ।।

इति प्रथममर्थवादाधिकरणम् (सूत्राणि १-१८)

*ಜಿಜ್ಞಾಸಾಧಿಕರಣ*

## ಪೀಠಿಕೆ

ಪೂರ್ವಮೀಮಾಂಸೆಯಲ್ಲಿ ಒಟ್ಟು ೧೨ ಅಧ್ಯಾಯಗಳಿವೆ. ಅವುಗಳಲ್ಲಿ ಮೊದಲನೆಯ ಅಧ್ಯಾಯವು ವೇದಪ್ರಾಮಾಣ್ಯವನ್ನು ಸಮರ್ಥಿಸುತ್ತದೆ. ಆದ್ದರಿಂದಲೇ ಈ ಅಧ್ಯಾಯಕ್ಕೆ ಪ್ರಮಾಣಾಧ್ಯಾಯವೆಂದು ಹೆಸರು. ಪ್ರಥಮಾಧ್ಯಾಯದಲ್ಲಿ ಒಟ್ಟು ೧) ವಿಧಿಪಾದ ೨) ಅರ್ಥವಾದ ಪಾದ ೩) ಸ್ಮೃತ್ಯಾಚಾರಪಾದ ೪) ನಾಮಧೇಯಪಾದ ಎಂದು ನಾಲ್ಕು ಪಾದಗಳಿವೆ. ಎರಡನೆಯ ಪಾದದಲ್ಲಿ ಅರ್ಥವಾದ ವಾಕ್ಯಗಳಿಗೆ ಮತ್ತು ಮಂತ್ರಗಳಿಗೆ ಪ್ರಾಮಾಣ್ಯವನ್ನು ನಿರೂಪಿಸಲಾಗಿದೆ. ನಾಲ್ಕೇ ಅಧಿಕರಣವುಳ್ಳ ಈ ಪಾದದಲ್ಲಿ ಮೂರು ಅಧಿಕರಣಗಳಿಂದ ಅರ್ಥವಾದ ವಾಕ್ಯಗಳ ಪ್ರಾಮಾಣ್ಯವನ್ನೇ ಸಮರ್ಥಿಸಲಾಗುತ್ತದೆ. ಇನ್ನು ಒಂದು ಅಧಿಕರಣದಲ್ಲಿ ಮಾತ್ರ ಮಂತ್ರಪ್ರಾಮಾಣ್ಯವನ್ನು ಸಮರ್ಥಿಸಲಾಗುತ್ತದೆ. ಹೆಚ್ಚು ಅರ್ಥವಾದ ವಿಚಾರ ಇರುವುದರಿಂದ ಮತ್ತು ಪ್ರಾರಂಭದಲ್ಲಿ ಅರ್ಥವಾದ ವಿಚಾರವೇ ಇರುವುದರಿಂದ ಈ ಪಾದಕ್ಕೆ 'ಅರ್ಥವಾದಪಾದ' ಎಂದೇ ಹೆಸರಿಸಲಾಗಿದೆ. ಮತ್ತು ಮೊದಲನೆಯ ಅಧಿಕರಣಕ್ಕೂ 'ಅರ್ಥವಾದಾಧಿಕರಣ' ಎಂದೇ ಹೆಸರಿಸಲಾಗಿದೆ.

## ಸಂಗತಿ

ಹಿಂದಿನ ಪಾದದಲ್ಲಿ 'ಅಪೌರುಷೇಯ' ಎಂಬ ಕಾರಣದಿಂದ ವೇದಪ್ರಾಮಾಣ್ಯವನ್ನು ಸಮರ್ಥಿಸಿದ್ದಾಯಿತು. ಮತ್ತು ವೇದದ ಮಧ್ಯದಲ್ಲಿರುವ ಕೆಲವು ವಿಧಿವಾಕ್ಯಗಳಿಗೆ 'ಧರ್ಮ' ವಿಷಯದಲ್ಲಿ ಪ್ರಾಮಾಣ್ಯವನ್ನೂ ಸಮರ್ಥಿಸಿದ್ದಾಯಿತು. ವೇದದ ಏಕದೇಶವಿಧಿವಾಕ್ಯಗಳು ಹೇಗೋ, ಅದರಂತೆ ಅರ್ಥವಾದ ಮತ್ತು ಮಂತ್ರವಾಕ್ಯಗಳೂ ಆಗಿವೆ. ವಿಧಿವಾಕ್ಯಗಳಿಗೆ ಅರ್ಥವಾದ ವಾಕ್ಯಗಳ ಮಂತ್ರಗಳ ಅಪೇಕ್ಷೆಯು ಇರುತ್ತದೆ. ಇಂತಹ ಅರ್ಥವಾದ ವಾಕ್ಯಗಳಿಗೆ ಮತ್ತು ಮಂತ್ರಗಳಿಗೆ ಅಪೌರುಷೇಯತ್ವ ಕಾರಣದಿಂದ ಸಾಮಾನ್ಯತಃ ಪ್ರಾಮಾಣ್ಯವು ಸಿದ್ಧವಾಗಿದ್ದರೂ, ಪುನಃ ಯಾವ ವಿಷಯದಲ್ಲಿ ಪ್ರಮಾಣಗಳೆಂದು ಜಿಜ್ಞಾಸೆಯು ಬಂದೇ ಬರುತ್ತದೆ. ಈ ಜಿಜ್ಞಾಸೆಯು ಉಪಶಮವಾಗದೆ ಆ ಪ್ರಾಮಾಣ್ಯವೂ ಸಿದ್ಧಿಸದು. ಆದ್ದರಿಂದ ಈ ಪಾದದಲ್ಲಿ ಅರ್ಥವಾದ ವಾಕ್ಯಗಳ ಮಂತ್ರಗಳ ಪ್ರಾಮಾಣ್ಯವನ್ನು ಸಮರ್ಥಿಸಲಾಗಿದೆ. ಮೊದಲನೆಯ ಅಧಿಕರಣದಲ್ಲಿ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬ ಅರ್ಥವಾದ ವಾಕ್ಯದಲ್ಲಿ ವೇದತ್ವವಿರಬಹುದು; ಆದರೆ ಪ್ರಾಮಾಣ್ಯವು ಇರಲಾರದೆಂದು ಪೂರ್ವಪಕ್ಷ ಮಾಡಿಕೊಂಡು ಉತ್ತರಿಸಲಾಗಿದೆ.

## ವಿಷಯವಾಕ್ಯ

ತೈತ್ತಿರೀಯಸಂಹಿತೆಯ ದ್ವಿತೀಯಕಾಂಡಕ್ಕೆ 'ಕಾಮ್ಯಪಶುಕಾಂಡ' ಎಂದು ಹೆಸರು ಈ ಕಾಂಡದಲ್ಲಿ ವಿಧಿ ಮತ್ತು ಅರ್ಥವಾದ ವಾಕ್ಯಗಳು ಕೇಳಿಸುತ್ತಿವೆ - 'ವಾಯವ್ಯಂ ಶ್ವೇತಮಾಲಭೇತ ಭೂತಿಕಾಮಃ' ಎಂಬುದು ವಿಧಿವಾಕ್ಯ. ''ವಾಯುರ್ವೈ ಕ್ಷೇಪಿಷ್ಠಾ ದೇವತಾ, ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ, ಸ ಏವೈನಂ ಭೂತಿಂ ಗಮಯತಿ'' ಇದು ಅರ್ಥವಾದ.

ಪರಿಪೂರ್ಣಚಂದ್ರಿಕಾ

'ವಾಯವ್ಯಂ ಶ್ವೇತಮಾಲಭೇತ ಭೂತಿಕಾಮಃ' ಈ ವಾಕ್ಯವು ವಾಯುದೇವತಾಕವಾದ ಶ್ವೇತಪಶುದ್ರವ್ಯಾಕವಾದ ಯಾಗವೊಂದನ್ನು ವಿಧಿಸುತ್ತಿದೆ. ಈ ವಿಧಿವಾಕ್ಯದ ಸಮೀಪದಲ್ಲೇ ವಾಯುವನ್ನು ಪ್ರಶಂಸೆ ಮಾಡುವ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ವಾಕ್ಯವಿದೆ. ''ವಾಯುದೇವನು ವೇಗವಾಗಿ ಚಲಿಸುವವನಾಗಿದ್ದಾನೆ. ತನಗೆ ಉಚಿತವಾದ ಹವಿಸ್ಸನ್ನು ನೀಡಿದರೆ ನಮಗೆ ಐಶ್ವರ್ಯವನ್ನು ನೀಡುತ್ತಾ''ನೆಂದು ಇದರರ್ಥ. 'ವಾಯುರ್ವೈ' ಇತ್ಯಾದಿ ಅರ್ಥವಾದ ವಾಕ್ಯವೇ ಈ ಅಧಿಕರಣದ ವಿಷಯವಾಕ್ಯವಾಗಿದೆ.

## ಸಂಶಯ

'ವಾಯವ್ಯಂ ಶ್ವೇತಮಾಲಭೇತ' ಎಂಬ ವಿಧಿವಾಕ್ಯಕ್ಕೆ 'ಧರ್ಮ' ವಿಷಯದಲ್ಲಿ ಪ್ರಾಮಾಣ್ಯವು ನಿಶ್ಚಯವಾಗಿದೆ. ಅಂತಹ ವಿಧಿವಾಕ್ಯದ ಜೊತೆಗೆ ಈ ಅರ್ಥವಾದ ವಾಕ್ಯವು ಪಠಿತವಾಗಿದೆ. ಆದ್ದರಿಂದ ವಿಧಿವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದಿ ಈ ಅರ್ಥವಾದ ವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೋ? ಅಥವಾ ಸ್ವತಂತ್ರವಾಗಿ ಪ್ರಾಮಾಣ್ಯವು ಸಿದ್ಧವಾಗುತ್ತದೋ? ಎಂದು ಸಂಶಯ.

## ಪೂರ್ವಪಕ್ಷ

ಪ್ರಥಮಪಾದದಲ್ಲಿ ಉಪಕ್ರಮದಲ್ಲಿ ಮಧ್ಯದಲ್ಲಿ ಮತ್ತು ಉಪಸಂಹಾರದಲ್ಲಿ ವಿಧಿವಾಕ್ಯಗಳಿಗಷ್ಟೇ ಪ್ರಾಮಾಣ್ಯವನ್ನು ಸಮರ್ಥಿಸಲಾಗಿದೆ. 'ಚೋದನಾಲಕ್ಷಣೋऽರ್ಥೋ ಧರ್ಮಃ' ಎಂಬುದು ಪ್ರಾರಂಭದಲ್ಲಿರುವ ಎರಡನೆಯ ಸೂತ್ರ. 'ಚೋದನಾ' ಎಂದರೆ ವಿಧಿವಾಕ್ಯ. 'ಲಕ್ಷಣ'ಶಬ್ದಕ್ಕೆ ಪ್ರಮಾಣ ಎಂದರ್ಥ. ಧರ್ಮವು ವಿಧಿವಾಕ್ಯದ ಪ್ರಾಮಾಣ್ಯವನ್ನು ತಂದುಕೊಡುತ್ತದೆಂದರ್ಥ. ಹೀಗೆ ಪ್ರಾರಂಭದಲ್ಲಿ ವಿಧಿವಾಕ್ಯಕ್ಕೆ ಪ್ರಾಮಾಣ್ಯವನ್ನು ಸಮರ್ಥಿಸಲಾಗಿದೆ.

ಪುನಃ ಮಧ್ಯದಲ್ಲಿ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧ ಸ್ತಸ್ಯ. ಜ್ಞಾನಮುಪದೇಶೋऽವ್ಯತಿರೇಕಶ್ಚಾರ್ಥೇನುಪಲಬ್ಧೇ ತತ್ ಪ್ರಮಾಣಂ ಬಾದರಾಯಣ ಸ್ಯಾನಪೇಕ್ಷತ್ವಾತ್' ಎಂಬ ಸೂತ್ರವಿದೆ. ಇಲ್ಲಿರುವ ಉಪದೇಶ ಶಬ್ದಕ್ಕೆ 'ಚೋದನಾ' ಎಂದರ್ಥ. 'ಚೋದನಾ ಚೋಪದೇಶಶ್ಚ ವಿಧಿಶ್ಚೈಕಾರ್ಥವಾಚಿನಃ' ಎಂಬ ಭಟ್ಟವಾರ್ತಿಕದ ಮಾತಿನಂತೆ ಚೋದನಾ, ಉಪದೇಶ, ವಿಧಿ, ಇವೆಲ್ಲವೂ ಪರ್ಯಾಯ ಪದಗಳಾಗಿವೆ. ತಸ್ಯ = ಧರ್ಮದ ಜ್ಞಾನಂ = ಪ್ರಾಮಾಣ್ಯನಿಶ್ಚಾಯಕವಾದದ್ದು. ಉಪದೇಶಃ = ವಿಧಿವಾಕ್ಯವೇ ಆಗಿದೆಯೆಂದು ಹೇಳಿದೆ. ಹೀಗೆ ಮಧ್ಯದಲ್ಲಿಯೂ ವಿಧಿವಾಕ್ಯಕ್ಕೆ ಪ್ರಾಮಾಣ್ಯವನ್ನು ಸಮರ್ಥಿಸಿದೆ.

ಪಾದದ ಕೊನೆಯಲ್ಲಿಯೂ ವಿಧಿಪ್ರಾಮಾಣ್ಯವನ್ನೇ ಸಮರ್ಥಿಸಲಾಗಿದೆ - 'ತದ್‌ಭೂತಾನಾಂ ಕ್ರಿಯಾರ್ಥೇನ ಸಮಾಮ್ನಾಯೋऽರ್ಥಸ್ಯ ತನ್ನಿಮಿತ್ತತ್ವಾತ್' ಈ ಸೂತ್ರವು ಕೊನೆಯ ಘಟ್ಟದಲ್ಲಿ ಬಂದಿದೆ (ಈ ಸೂತ್ರದ ನಂತರವೂ ಆರೇಳು ಸೂತ್ರಗಳಿವೆ). ಇಲ್ಲಿ 'ಕ್ರಿಯಾರ್ಥೇನ' ಎಂದು ಹೇಳಿದ್ದರಿಂದ ವಿಧಿವಾಕ್ಯಕ್ಕೆ ಮಾತ್ರ ಪ್ರಾಮಾಣ್ಯವೆಂದು ಹೇಳಿದಂತಾಯಿತು. ಹೀಗೆ ಸಕಲ ವೇದಕ್ಕೂ ವಿಧೇಯಾರ್ಥ-

ಪರತ್ವವನ್ನು ಸಮರ್ಥಿಸಲಾಗಿದೆ. ಆದ್ದರಿಂದ ಅರ್ಥವಾದ ವಾಕ್ಯಗಳಿಗೆ ಪ್ರಾಮಾಣ್ಯವು ಸಿದ್ಧವಾಗುವುದಿ ಯಾವ ರೀತಿಯಾಗಿ ಮಹಾಭಾರತಾದಿಗಳು ನಡೆದ ಘಟನೆಯನ್ನಷ್ಟೇ ಕಥಾರೂಪವಾಗಿ ಹೇಳುತ್ತವೆಯೋ ಅದರಂತೆ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದ ವಾಕ್ಯಗಳೂ ಸಹ ಕೇವಲ ವಾಯು ಮೊದಲಾದವರಲ್ಲಿ ಇದ್ದಂತಹ ಗುಣಗಳನ್ನಷ್ಟೇ ಪ್ರಶಂಸೆ ಮಾಡುತ್ತವೆ. ಸಿದ್ಧವಾದ ವಿಷಯವನ್ನ ಹೇಳುತ್ತಿರುವುದರಿಂದ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ.

ಇನ್ನು ವಿಧಿವಾಕ್ಯದಿಂದ ಏಕವಾಕ್ಯತ್ವವನ್ನು ಹೊಂದಿ ಪ್ರಮಾಣವಾಗುತ್ತದೆಂದು ಹೇಳಬೇಕು. ಆದ ಹೀಗೂ ಸಹ ಹೇಳಲಾಗದು. ಯಾವಾಗ ಎರಡೂ ವಾಕ್ಯಗಳಿಗೆ ಪರಸ್ಪರವಾಗಿ ಆಕಾಂಕ್ಷಾ ಇರುತ್ತದೆಯೋ ಆವಾಗ ಮಾತ್ರ ಏಕವಾಕ್ಯತ್ವವನ್ನು ಹೇಳಬಹುದು. ಆದರೆ ಇಲ್ಲಿ ವಿಧಿವಾಕ್ಯಕ್ಕೆ ಅರ್ಥವಾದ ವಾಕ್ಯ ಆಕಾಂಕ್ಷೆಯೇ ಇರುವುದಿಲ್ಲ. ಹೊರತು 'ಭಾವನಾ'ದ ಮೂರು ಅಂಶಗಳಾದ ಸಾಧ್ಯ, ಸಾಧನ, ಇತಿಕರ್ತವ್ಯತ್ವ, ಇವುಗಳ ಆಕಾಂಕ್ಷೆಯಷ್ಟೇ ಇದೆ. ಇದೆಲ್ಲವೂ ಪ್ರಕೃತದಲ್ಲಿರುವುದರಿಂದ ಆಕಾಂಕ್ಷೆಯು ಶಾಂತವಾಗುತ್ತದೆ. ಅದರಂತೆ ಅರ್ಥವಾದ ವಾಕ್ಯಕ್ಕೂ ಕೂಡ ವಿಧಿವಾಕ್ಯದ ಆಕಾಂಕ್ಷೆಯು ಇಲ್ಲ. ಹೀಗೆ ಪರಸ್ಪರವಾದ ನೈರಾಕಾಂಕ್ಷೆಯು ಇರುವುದರಿಂದ ಏಕವಾಕ್ಯತ್ವವು ಕೂಡುವುದಿಲ್ಲವಾದ್ದರಿಂದ ಪ್ರಾಮಾಣ್ಯದ ಸಮರ್ಥನೆಯು ಅಶಕ್ಯವೇ ಆಗಿದೆ. ಹೀಗಿರುವಾಗ "ವಾಯುರ್ವೈ ಕ್ಷೇಪಿಷ್ಠಾ ದೇವತಾ" ಇತ್ಯಾದಿ ಅರ್ಥವಾದ ವಾಕ್ಯಗಳಿಗೆ ಹೇಗೆ ತಾನೆ ಪ್ರಾಮಾಣ್ಯವನ್ನು ಸಮರ್ಥಿಸುತ್ತೀರಿ?

## ಸಿದ್ಧಾಂತ

ಪೂರ್ವಪಕ್ಷಿಯು ಹೇಳಿದ ನೈರಾಕಾಂಕ್ಷೆಯು ಸರಿಯಲ್ಲ. ಎರಡು, ವಾಕ್ಯಗಳಿಗೆ ಪರಸ್ಪರವಾಗಿ ಆಕಾಂಕ್ಷೆಯೇ ಇದೆ. ಅದು ಹೀಗೆ - 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ಅಧ್ಯಯನ ವಿಧಿಯು ವೇದದಲ್ಲಿರುವ ಸಕಲವಾಕ್ಯಗಳೂ ಸಾರ್ಥಕಗಳೆಂದು ತಿಳಿಸುತ್ತಿದೆ. ಎಲ್ಲ ವಾಕ್ಯಗಳೂ ಪ್ರಯೋಜನವುಳ್ಳವುಗಳಾಗಿವೆ. ಒಂದು ವಾಕ್ಯವೂ ನಿಷ್ಪ್ರಯೋಜನವಲ್ಲವೆಂದು ತಿಳಿಸುತ್ತದೆ. ಹಾಗಾದರೆ ಅರ್ಥವಾದ ವಾಕ್ಯಗಳಿಗೆ ಏನು ಪ್ರಯೋಜನವೆಂಬ ಆಕಾಂಕ್ಷೆಯು ಬರುತ್ತದೆ. ಮೇಲ್ನೋಟದ ಅರ್ಥವನ್ನಷ್ಟೇ ವಿವಕ್ಷಿಸಿದರೆ ಪ್ರಯೋಜನವು ತಿಳಿಯುವುದಿಲ್ಲ. ಆದ್ದರಿಂದ ಆಕಾಂಕ್ಷೆಯು ಹಾಗೆಯೇ ಉಳಿಯುತ್ತದೆ.

ಮತ್ತು ವಿಧಿವಾಕ್ಯದಲ್ಲಿಯೂ ಆಕಾಂಕ್ಷೆಯು ಇದೆ. ವಿಧಿವಾಕ್ಯವು ಚೇತನನನ್ನು ಪ್ರವರ್ತಿಸುತ್ತದೆ. ಪ್ರವರ್ತನಾ ಎಂದರೆ ಪ್ರವೃತ್ತ್ಯನುಕೂಲವ್ಯಾಪಾರವೆಂದರ್ಥ. ಪ್ರವೃತ್ತಿಯಾದರೂ ಚೇತನನಲ್ಲಿರುವ ಧರ್ಮವಾಗಿದೆ. ಆ ವಿಧಿವಾಕ್ಯವನ್ನು ಕೇಳಿದ ಮಾತ್ರಕ್ಕೆ ಚೇತನನು ಪ್ರವೃತ್ತಿಮಾಡಲಾರ. ಏಕೆಂದರೆ ಯಾಗದಲ್ಲಿ ಮಾಡುವ ಪ್ರವೃತ್ತಿಯು ಬಹಳ ಶ್ರಮದಾಯಕವಾಗಿದೆ. ಹೀಗೆ ಆಲೋಚಿಸಿ ಯಾರೂ ಸಹ ಶ್ರಮಸಾಧ್ಯವಾದ ಯಾಗದಲ್ಲಿ ಪ್ರವೃತ್ತಿ ಮಾಡಲಾರರು. ಪ್ರವೃತ್ತಿಮಾಡಿಸುವ ಸಾಮರ್ಥ್ಯವು ವಿಧಿವಾಕ್ಯಕ್ಕೂ ಸಹ ಇಲ್ಲ. ಕರ್ತೃವಿಗೆ ಬಂದಂತಹ ಈ ಆಲಸ್ಯವನ್ನು ಪರಿಹರಿಸಲು ಉತ್ಸಾಹವನ್ನು ಹುಟ್ಟಿಸಬೇಕು. ಪ್ರಾಶಸ್ತ್ಯವನ್ನು ಹೇಳುವ ಮೂಲಕ ಸ್ತೋತ್ರ ಮಾಡಬೇಕು. ರುಚಿಯನ್ನು ಹುಟ್ಟಿಸಬೇಕು. ಆವಾಗ ಆಲಸ್ಯದ ನಿವಾರಣೆಯಾಗುತ್ತದೆ. ಹೀಗೆ ವಿಧಿವಾಕ್ಯಕ್ಕೆ ಪ್ರಾಶಸ್ತ್ಯದ ಅಪೇಕ್ಷೆಯು ಇದ್ದೇ ಇದೆ.

ಆದ್ದರಿಂದ ದಗ್ಧಾಶ್ವರಥನ್ಯಾಯದಂತೆ ವಿಧಿವಾಕ್ಯಕ್ಕೆ ಅರ್ಥವಾದ ವಾಕ್ಯದ ಅಪೇಕ್ಷೆ ಇದೆ. ಅರ್ಥವಾದ ವಾಕ್ಯಕ್ಕೆ ವಿಧಿವಾಕ್ಯದ ಅಪೇಕ್ಷೆ. ಪರಸ್ಪರವಾಗಿ ಎರಡೂ ವಾಕ್ಯಕ್ಕೆ ಆಕಾಂಕ್ಷೆಯು ಇರುವುದರಿಂದ ಅರ್ಥವಾದವಾಕ್ಯಕ್ಕೆ ಏಕವಾಕ್ಯತ್ವವು ಬಂದೇ ಬರುತ್ತದೆ. ಅರ್ಥವಾದ-ವಿಧಿವಾಕ್ಯಗಳು ಸೇರಿ ಒಂದು ಮಹಾವಾಕ್ಯವೆನಿಸಿ ಧರ್ಮ ಅಧರ್ಮಗಳನ್ನು ಬೋಧಿಸುತ್ತವೆ. ಆದ್ದರಿಂದ ಅರ್ಥವಾದವಾಕ್ಯವೂ ಧರ್ಮ-ಅಧರ್ಮಗಳ ವಿಷಯದಲ್ಲಿ ಪ್ರಮಾಣವೆನಿಸುತ್ತದೆ. ಪ್ರಕೃತದಲ್ಲಿ "ವಾಯುರ್ವೈ ಕ್ಷೇಪಿಷ್ಠಾ ದೇವತಾ" ಎಂಬ ಅರ್ಥವಾದ ವಾಕ್ಯಕ್ಕೆ ವಿಧ್ಯಪೇಕ್ಷಿತವಾದ ಪ್ರಾಶಸ್ತ್ಯದಲ್ಲಿ ಲಕ್ಷಣಾವನ್ನು ಸ್ವೀಕರಿಸಬೇಕೆಂದು ಸಿದ್ಧಾಂತ.

## "ದಾರ್ಷ್ಟಾಂತಿಕದಲ್ಲಿ ಸಮನ್ವಯ"

'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬ ಶ್ರುತಿಯಲ್ಲಿ ಕ್ಷಿಪ್ರಗಾಮಿತ್ವ, ಐಶ್ವರ್ಯಪ್ರದತ್ವ ಗುಣವನ್ನು ವಾಯುವಿಗೆ ಹೇಳಿದ್ದಾರೆ. ವಾಯುವಿನಲ್ಲಿ ಹೇಳಿದ ಈ ಗುಣಗಳು ಈ ಶ್ರುತಿಯಿಂದಲೇ ತಿಳಿಯುವುದಲ್ಲ. ಮೊದಲೇ ಪ್ರತ್ಯಕ್ಷಾದಿ ಪ್ರಮಾಣದಿಂದ ಕ್ಷಿಪ್ರಗಾಮಿತ್ವಾದಿಗುಣಗಳು ನಮಗೆ ಜ್ಞಾತವೇ ಆಗಿದೆ. ಬೇರೆ ಪ್ರಮಾಣದಿಂದ ಜ್ಞಾತವಾದ ಗುಣಗಳನ್ನು ಈ ಶ್ರುತಿಯು ಕೇವಲ ಅನುವಾದ ಮಾಡುತ್ತಿದೆ. ಅನುವಾದಕವಾದರೂ ಪ್ರಮಾಣವಾಗುತ್ತದೆಂದು ಅರ್ಥವಾದಾಧಿಕರಣದಲ್ಲಿ ನಿರ್ಣಯ ಮಾಡಲಾಗಿದೆ.

ಅದರಂತೆ ಪ್ರಕೃತದಲ್ಲಿಯೂ ವೇದಾಂತಗಳು ಅನುಭವಸಿದ್ಧವಾದ ಆತ್ಮಸ್ವರೂಪವನ್ನು ವರ್ಣಿಸುವುದರಿಂದ ಶ್ರುತಿಯು ಅನುವಾದಕವಾಗುವುದಾದರೆ ಅದನ್ನು ಸಹಿಸಿಕೊಳ್ಳಬೇಕು. ಅನುವಾದಕವಾದ ಮಾತ್ರದಿಂದ ಪ್ರಾಮಾಣ್ಯಕ್ಕೇನು ಚ್ಯುತಿಯಿಲ್ಲವೆಂಬುದು ಪೂರ್ವಮೀಮಾಂಸೆಯ ಈ ಅಧಿಕರಣದಿಂದ ನಿರ್ಣಯವಾಗಿದೆ. ಆದ್ದರಿಂದ ಪ್ರಾಮಾಣ್ಯರಕ್ಷಣೆಗೋಸ್ಕರ ಜೀವಾತಿರಿಕ್ತನಾದ ಈಶ್ವರನನ್ನು ಒಪ್ಪಿಕೊಳ್ಳುವ ಅವಶ್ಯಕತೆಯು ಇಲ್ಲ.

## ದೃಷ್ಟಾಂತವು ವಿಷಮವೇ?

**ಶಂಕೆ :-** ಅರ್ಥವಾದ ದೃಷ್ಟಾಂತವು ಇಲ್ಲಿ ಸಮರ್ಪಕವೇ? ಎಂದು ವಿಚಾರ ಮಾಡಬೇಕಾಗಿದೆ. ಏಕೆಂದರೆ ಶುದ್ಧಾತ್ಮನು ಅನುಭವಸಿದ್ಧನಾಗಿದ್ದಾನೆ. ಅವನನ್ನೇ ವೇದಾಂತಗಳು ಪ್ರತಿಪಾದಿಸಿದರೆ ಅನುವಾದಕತ್ವವು ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ "ವಾಯುರ್ವೈ ಕ್ಷೇಪಿಷ್ಠಾ" ಎಂಬ ವಾಕ್ಯಕ್ಕೆ ಪ್ರಾಶಸ್ತ್ಯದಲ್ಲಿ ಲಕ್ಷಣಾ ಮಾಡಲಾಯಿತು. ಈ ಪ್ರಾಶಸ್ತ್ಯವಾದರೂ ಬೇರೆ ಪ್ರಮಾಣದಿಂದ ಜ್ಞಾತವಾಗಿಲ್ಲ. ಆದ್ದರಿಂದ ಅನುವಾದಕವೂ ಅಲ್ಲ. ಹೀಗಿರಬೇಕಾದರೆ ಅನುವಾದಕತ್ವ ವಿಷಯದಲ್ಲಿ ಅರ್ಥವಾದವಾಕ್ಯವು ಹೇಗೆ ತಾನೆ ದೃಷ್ಟಾಂತವಾಗುತ್ತದೆ?

**ಸಮಾಧಾನ :-** 'ವಾಯುರ್ವೈ' ಇತ್ಯಾದಿ ಅರ್ಥವಾದ ವಾಕ್ಯವು ಲಕ್ಷಣಾವೃತ್ತಿಯಿಂದ ಪ್ರಾಶಸ್ತ್ಯವನ್ನು ತಿಳಿಸುತ್ತದೆ ಎಂಬುದೇನೋ ಸರಿ. ಆದರೆ ಲಕ್ಷಣಾವೃತ್ತಿಯಿಂದ ಯಾಗದ ಪ್ರಾಶಸ್ತ್ಯವನ್ನು ಹೇಳುವ

ಮೊದಲು ವಾಚ್ಯವೃತ್ತಿಯಿಂದ 'ವಾಯುವು ಶೀಘ್ರಗಾಮೀ' ಎಂದು ತಿಳಿಯುತ್ತದೆ. ವಾಚ್ಯವೃತ್ತಿಯಿಂದ ತಿಳಿಸುವ ಸಂದರ್ಭದಲ್ಲಿ ಅನುವಾದಕ ಆಗಲೇಬೇಕು. ಈ ಅಂಶದಲ್ಲಷ್ಟೇ ದೃಷ್ಟಾಂತವನ್ನು ನೀಡಲಾಗಿದೆ. ಆದರೂ ಪ್ರಾಶಸ್ತ್ಯದಲ್ಲಿ ಲಕ್ಷಣಾವನ್ನು ಮಾಡಿದಾಗ ಅನುವಾದಕತ್ವವನ್ನು ಹೇಳಲಾಗದು ಎಂದು ಪ್ರಶ್ನಿಸಿದರೆ ಅದಕ್ಕೋಸ್ಕರವೇ ಗ್ರಂಥಕಾರರು ಮತ್ತೊಂದು ವಿದ್ವದ್ವಾಕ್ಯದ ದೃಷ್ಟಾಂತವನ್ನು ನೀಡಿದ್ದಾರೆ

## ನ್ಯಾಯಪ್ರಾಪ್ತತ್ವಾತ್ ಸಹ್ಯಮ್

ಪ್ರಶ್ನೆ:- 'ಅಗ್ನಯೇ ಪವಮಾನಾಯಾಷ್ಟಾಕಪಾಲಂ ನಿರ್ವಪೇತ್' 'ಪವಿತ್ರವಾದ ಅಗ್ನಿಗೆ ಎಂಟು ಪಾತ್ರಗಳಲ್ಲಿ ಹವಿಸ್ಸನ್ನು ಅರ್ಪಿಸಬೇಕು' ಎಂಬುದು ವಿಧಿವಾಕ್ಯ. ಇಲ್ಲಿ ಕೇವಲ ಅಗ್ನಿಯು ದೇವತೆಯಲ್ಲ. ಪವಮಾನತ್ವಗುಣವಿಶಿಷ್ಟನಾದ ಅಗ್ನಿಯು ಈ ಇಷ್ಟಿಯಲ್ಲಿ ದೇವತೆಯಾಗಿದ್ದಾನೆ. ಈ ವಿಧಿಯಲ್ಲಿ ಯಾವ ರೀತಿಯಾಗಿ ಅಗ್ನಿಗೆ 'ಪವಮಾನತ್ವ' ಎಂಬ ವಿಶೇಷಣವನ್ನು ನೀಡಲಾಗಿದೆಯೋ, ಅದರಂತೆ 'ವಾಯುರ್ವೈ' ಎಂಬಲ್ಲಿಯೂ ಕ್ಷೇಪಿಷ್ಠತ್ವರೂಪವಾದ ಗುಣವನ್ನು ವಾಯುವಿನಲ್ಲಿ ಹೇಳಬಹುದು. ಹೀಗಿರುವಾಗ ಲಕ್ಷಣಾವನ್ನು ಏಕೆ ಮಾಡುತ್ತಿದ್ದೀರಿ?

ಉತ್ತರ :- ದೇವತೆಯ ವಿಶೇಷಣವು ವಿಧಿವಾಕ್ಯದಲ್ಲಿಯೇ ಶ್ರುತವಾಗಿರಬೇಕು. 'ಅಗ್ನಯೇ ಪವಮಾನಾಯ' ಎಂಬಲ್ಲಿ ಪವಮಾನತ್ವರೂಪವಿಶೇಷಣವು ವಿಧಿವಾಕ್ಯದಲ್ಲಿಯೇ ಗರ್ಭಿತವಾಗಿದೆ. ಆದರೆ 'ವಾಯುವ್ಯಂ ಶ್ವೇತಮಾಲಭೇತ' ಎಂಬ ವಿಧಿವಾಕ್ಯದಲ್ಲಿ ಶೀಘ್ರಗಾಮಿತ್ವ ಗುಣವನ್ನು ಹೇಳುವ ಕ್ಷೇಪಿಷ್ಠತ್ವವು ಗರ್ಭಿತವಾಗಿಲ್ಲ. ಹೊರತಾಗಿ ಅರ್ಥವಾದ ವಾಕ್ಯದಲ್ಲಿ ಗರ್ಭಿತವಾಗಿದೆ. ವಿಧಿವಾಕ್ಯದಿಂದ ಬಹಿರ್ಭೂತವಾದ ಪದವು ವಿಧಿವಾಕ್ಯದಲ್ಲಿ ವಿಶೇಷಣವಾಗಲು ಸಾಧ್ಯವಿಲ್ಲ. ಆದ್ದರಿಂದ 'ಅಗ್ನಯೇ ಪವಮಾನಾಯ' ಎಂಬಂತೆ ಹೇಳಲಾಗದು.

ಪ್ರಶ್ನೆ :- 'ಏತಮೇವ ಸಂತಂ ವಾಯವೇ ನಿಯುತ್ವತ ಆಲಭೇತ' 'ಒಳ್ಳೆಯ ಕುದುರೆಯನ್ನು ಹೊಂದಿದ ವಾಯುವಿನ ಉದ್ದೇಶದಿಂದ ಪಶುವನ್ನು ಮುಟ್ಟಬೇಕು' ಎಂಬ ವಾಕ್ಯವು 'ವಾಯವ್ಯಂ ಶ್ವೇತಮಾಲಭೇತ' ಎಂಬ ವಿಧಿವಾಕ್ಯಕ್ಕಿಂತ ಬಹಿರ್ಭೂತವಾಗಿದೆ. ಆದರೂ ಸಹ 'ವಾಯುವು ಒಳ್ಳೆಯ ಕುದುರೆಯುಳ್ಳವನು' ಎಂದು ಗುಣವಿಧಾನ ಮಾಡುತ್ತಿದೆ. ಅದರಂತೆ ಪ್ರಕೃತದಲ್ಲಿಯೂ ಕ್ಷೇಪಿಷ್ಠತ್ವಗುಣವಿಧಾನವು ಏಕೆ ಕೂಡುವುದಿಲ್ಲ?

ಉತ್ತರ :- 'ಆಲಭೇತ' ಎಂಬಲ್ಲಿ ವಿಧಾಯಕವಾದ ಆಖ್ಯಾತಪ್ರತ್ಯಯವು ಇದೆ. ಆದರೆ 'ವಾಯುರ್ವೈ' ಎಂಬ ವಾಕ್ಯದಲ್ಲಿ ಅಂತಹ ಆಖ್ಯಾತಪ್ರತ್ಯಯವು ಇರುವುದಿಲ್ಲ. ಆದ್ದರಿಂದ ಇಲ್ಲಿ ನ್ಯಾಯವನ್ನು ಹೀಗೆ ತಿಳಿಯಬೇಕು - ವಿಧಾಯಕವಾದ ಆಖ್ಯಾತಪ್ರತ್ಯಯವು ಯಾವ ವಾಕ್ಯದಲ್ಲಿ ಇರುತ್ತದೋ, ಅಲ್ಲಿ ಮಾತ್ರ ಗುಣವಿಧಾನವನ್ನು ಹೇಳಬೇಕು - ''ಯಾವ ವಾಕ್ಯದಲ್ಲಿ ಆಖ್ಯಾತಪ್ರತ್ಯಯವು ಶ್ರುತವಾಗಿರುವುದಿಲ್ಲವೋ ಆ ವಾಕ್ಯದಲ್ಲಿ ಗುಣವಿಧಾನವು ಕೂಡುವುದಿಲ್ಲ'' ಎಂದು. ಪ್ರಕೃತ ಅರ್ಥವಾದ ವಾಕ್ಯದಲ್ಲಿ ಆಖ್ಯಾತಪ್ರತ್ಯಯವು ಕೇಳಿಸುತ್ತಿಲ್ಲ. ಆದ್ದರಿಂದ ಶೀಘ್ರಗಾಮಿತ್ವಗುಣವು ವಿಶೇಷಣವಾಗುವುದಿಲ್ಲ. ಲಕ್ಷಣಾ ಮಾಡಿ ಪ್ರಾಶಸ್ತ್ಯದಲ್ಲಷ್ಟೇ ತಾತ್ಪರ್ಯವನ್ನು ಒಪ್ಪಿಕೊಳ್ಳಬೇಕು.

*ಪರಿಪೂರ್ಣಚಂದ್ರಿಕಾ*

ಒಂದುವೇಳೆ ವಿಧಾಯಕ ಪ್ರತ್ಯಯ ಇದ್ದಲ್ಲೇ ಗುಣವಿಧಾನವೆಂಬ ನ್ಯಾಯವು ಇಲ್ಲದಿದ್ದಲ್ಲಿ ಈ ವಾಕ್ಯವೂ ಗುಣವಿಧಾಯಕ ಆಗುತ್ತಿತ್ತು. ಅನುವಾದಕತ್ವವು ಬರುತ್ತಿರಲಿಲ್ಲ. ಆದ್ದರಿಂದಲೇ ಗ್ರಂಥಕಾರರು 'ನ್ಯಾಯಪ್ರಾಪ್ತತ್ವಾತ್ ಸಹ್ಯಂ' ಎಂದು ಹೇಳಿದರು. ನ್ಯಾಯಯುಕ್ತವಾದ್ದರಿಂದ ವ್ಯರ್ಥವಾದವು ಅನುವಾದಕತ್ವವನ್ನು ಹೇಗೆ ಸಹಿಸಿಕೊಳ್ಳುತ್ತದೋ, ಅದರಂತೆ ಶುದ್ಧಾತ್ಮಸ್ವರೂಪವು ಅನುಭವಸಿದ್ಧವಾಗಿದ್ದರಿಂದ ಅನುವಾದಕವೆನ್ನುವುದು ಯುಕ್ತಿಯುಕ್ತವಾಗಿದೆ. ವಿದ್ವದ್ವಾಕ್ಯದ ದೃಷ್ಟಾಂತದಿಂದಲೂ ಶ್ರುತಿಗೆ ಅನುವಾದಕತ್ವವನ್ನು ಸಹಿಸಿಕೊಳ್ಳಬೇಕು.

## ॥ ವಿದ್ವದ್ವಾಕ್ಯಾಧಿಕರಣ ॥

### ಸೂತ್ರ - ಪ್ರಕರಣಂ ತು ಪೌರ್ಣಮಾಸ್ಯಾಂ ರೂಪಾವಚನಾತ್ (೨-೨-೪)[1]

---

(१) भाष्यदीपिका –

अथ तृतीयमाधाराग्नेयादीनामङ्गाङ्गिभावाधिकरणम् (सूत्राणि ३-७)

प्रकरणन्तु पौर्णमास्यां रूपावचनात् ।। ३ ।।

विशेषदर्शनाच्च सर्वेषां समेषु ह्यप्रवृत्तिः स्यात् ।।४।। गुणस्तु श्रुति संयोगात् ।।५।। चोदना वा गुणानां युगपच्छास्त्राच्चोदिते हि तदर्थत्वात् तस्य तस्योपदिश्येत ।।६।। व्यपदेशश्च तद्वत् ।।७।। लिङ्गदर्शनाच्च ।।८।।

पूर्वन्यायेन शङ्कनादापवादिकी सङ्गतिः । 'यदाग्नेयोऽष्टाकपालोऽमावास्यायां पौर्णमास्यां चाच्युतो भवति' 'तावब्रूतामग्नीषोमावाज्यस्यैव नावुपांशु पौर्णमास्यां यजन्' 'उपांशुयाजमन्तरा यजति' 'ताभ्यामेतमग्नीषोमीयमेकादशकपालं पौर्णमासे प्रायच्छत्' 'ऐन्द्रं दध्यमावास्यायाम्' 'ऐन्द्रं पयोऽमावास्यायाम्' इति षड्यागान् विधयाऽऽम्नाते 'य एवं विद्वान् पौर्णमासीं यजते' 'य एवं विद्वान् अमावास्यां यजते' इति । अत्र विद्वत्पदयुक्ते वाक्यद्वये पौर्णमास्यमावास्यानामके कर्मान्तरे विधीयते, उत प्रकृतषड्यागानां द्वौ समुदायौ यजिद्वयेनानूद्येते इति सन्देहः । पूर्वपक्षस्तु पुनःश्रवणरूपाभ्यासेन पूर्वत्रेव प्रकृताग्नेयादिभ्योऽन्ये पौर्णमास्यमावास्यानामके कर्मान्तरे 'यजत' इति लेडन्तशब्दाभ्यां विधीयेते । नच द्रव्यदेवतालक्षणयागरूपाश्रवणात् न कर्मान्तरविधिरिति युक्तम् । 'सर्वस्मै वा एतद् यज्ञाय गृह्यते यद्ध्रुवायामाज्यम्' इत्युक्तध्रौवाज्यस्य 'अग्निर्वृत्राणि जंघनत्' इत्यादिमन्त्रवर्णप्राप्तदेवतायाश्च सत्त्वादिति प्राप्ते द्रव्यलाभेऽपि देवतायाः सर्वथा अलाभः । 'अग्निर्वृत्राणि' इत्यादिमन्त्राणां 'आज्यभागौ यजति' इत्यादिवाक्यविहिताऽऽज्यभागाङ्गत्वेनैतत् कर्माङ्गत्वाभावात् । प्रकृताऽऽग्नेयादिषड्यागानां कालसंयुक्तानां समुदायद्वित्वकरणेन यजतिशब्दाभ्यां समुदायद्वयमनूद्य कालसम्बन्धनिमित्तनामसंबन्धः क्रियत इति युक्तम् । नचैतद् व्यर्थम् । 'दर्शपूर्णमासाभ्यां स्वर्गकामो यजेत' इति फलवाक्यापेक्षितद्विवचनान्तपदार्थभूतसमुदायद्वयसिद्धेः समुदायानुवादफलत्वादिति सिद्धान्तः । तथाच सूत्रम्,

### ಸೂತ್ರಾರ್ಥ

ಪೌರ್ಣಮಾಸ್ಯಾಂ = ಪೌರ್ಣಮಾಸೀವಾಕ್ಯದಲ್ಲಿ, (ಅಮಾವಾಸ್ಯಾವಾಕ್ಯದಲ್ಲಿಯೂ ಸಹ) ಅಪೂರ್ವಕರ್ಮವನ್ನು ವಿಧಿಸುತ್ತಿಲ್ಲ. ತು = ಹೊರತಾಗಿ ಪ್ರಕರಣಂ = ಅನುವಾದ ಮಾಡಲಾಗಿದೆ (ಪ್ರಕೃತಸ್ಯ ಕಥನಂ ಪ್ರಕರಣಂ) ಏಕೆಂದರೆ ರೂಪಾವಚನಾತ್ = ದ್ರವ್ಯವನ್ನಾಗಲೀ ದೇವತೆಯನ್ನಾಗಲೀ ಹೇಳದ ಕಾರಣದಿಂದ.

### ಸಂಗತಿ

ಎರಡನೆಯ ಅಧ್ಯಾಯವು ಕರ್ಮಭೇದವನ್ನು ಹೇಳುತ್ತದೆ. ಹಿಂದೆ ಹೇಳಿದ ಕರ್ಮವು ಈಗ ಹೇಳುತ್ತಿರುವ ಕರ್ಮಕ್ಕಿಂತ ಭಿನ್ನವೋ? ಅಭಿನ್ನವೋ? ಎಂದು ವಿಚಾರ ಮಾಡಲಾಗಿದೆ.

ಉದಾಹರಣೆ - 'ದಧ್ನಾ ಜುಹೋತಿ' 'ಮೊಸರಿನಿಂದ ಹೋಮಿಸಬೇಕು' ಎಂಬ ವಾಕ್ಯವು ಯಾಗದಲ್ಲಿ 'ದಧಿ' ಎಂಬ ಗುಣವನ್ನಷ್ಟೇ ವಿಧಿಸುತ್ತಿದೆ. ಹೊರತು ಮತ್ತೊಂದು ಹೋಮವನ್ನು ವಿಧಿಸುತ್ತಿಲ್ಲ. ಹಿಂದಿನ ಹೋಮಕ್ಕೂ ಪ್ರಕೃತ ಹೋಮಕ್ಕೂ ಅಭೇದವೇ ಇರುತ್ತದೆ. ಆದರೆ 'ಸಮಿಧೋ ಯಜತಿ' 'ತನೂನಪಾತಂ ಯಜತಿ' ಎಂಬಲ್ಲಿ 'ತನೂನಪಾತ್' ಎಂಬ ಯಾಗವು ಹಿಂದಿನ ಸಮಿದ್ ಯಾಗಕ್ಕಿಂತ ಭಿನ್ನವೇ ಆಗಿದೆ. ದಧಿಯಾಗದಂತೆ ಅಭೇದವಿರುವುದಿಲ್ಲ. ಇತ್ಯಾದಿ ವಿಚಾರವನ್ನು ಎರಡನೆಯ ಅಧ್ಯಾಯದಲ್ಲಿ ಮಾಡಲಾಗಿದೆ. ಇದರಿಂದ ಯಾವ ಯಾಗದಲ್ಲಿ ಕರ್ಮಭೇದವಿದೆ. ಯಾವ ಯಾಗದಲ್ಲಿ ಕರ್ಮಭೇದವಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಕರ್ಮಭೇದಕಗಳು ಬಹಳಷ್ಟು ಇವೆ. ಕರ್ಮೈಕ್ಯಕ್ಕೆ ಭೇದಕಪ್ರಮಾಣವು ಅಪವಾದವಾಗಿದೆ. ಅಪವಾದವು ಎಲ್ಲಿ ಇದೆ, ಎಲ್ಲಿ ಇಲ್ಲವೆಂಬ, ವಿಚಾರವನ್ನು ಈ ಎರಡನೆಯ ಪಾದದಲ್ಲಿ ಮಾಡಲಾಗಿದೆ.

### ವಿಷಯವಾಕ್ಯ

'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ ।
ಯ ಏವಂ ವಿದ್ವಾನ್ ಅಮಾವಾಸ್ಯಾಂ ಯಜತೇ' ॥

ವಿದ್ವತ್‌ಪದಘಟಿತವಾದ ಈ ಎರಡು ವಾಕ್ಯಗಳೇ ವಿಷಯವಾಕ್ಯಗಳಾಗಿವೆ.

ಈ ವಾಕ್ಯದ ಪ್ರಸಂಗ ಹೀಗಿದೆ - 'ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ' 'ತಾಭ್ಯಾಮೇತಮಗ್ನೀಷೋಮೀಯಮೇಕಾದಶಕಪಾಲಂ

---

पौर्णमास्यां पौर्णमासीवाक्ये । अमावास्यावाक्ये चेत्यपि ग्राह्यम् । नापूर्वकर्मविधिः । कुतः? रूपावचनात् । किन्तु प्रकरणं सहायीकृत्याऽग्नेयादीन्यत्रानूद्यन्त इति । फलन्तु आग्नेयादिषड्यागसंनिध्याम्नातानामपि प्रयाजादीनां प्रधानत्वाद् विकृतिष्वनतिदेशेन तत्राननुष्ठानं पूर्वपक्षे । सिद्धान्ते त्वङ्गत्वेन विकृतिष्वतिदेशादनुष्ठानमिति ।

॥ इति तृतीयमाग्नेयप्रयाजादीनामङ्गाङ्गिभावाधिकरणम् (सूत्रे ३-८) ॥

*ಪಂಪೂರ್ಣಚಂದ್ರಿಕಾ*

ಪೌರ್ಣಮಾಸೇ ಪ್ರಾಯಚ್ಛತ್' 'ಉಪಾಂಶುಯಾಜಮಂತರಾ ಯಜತಿ' 'ಐಂದ್ರಂ ದಧ್ಯಮಾಸ್ಯಾಯಾಂ' 'ಐಂದ್ರಂ ಪಯೋಽಮಾಸ್ಯಾಯಾಂ' ಈ ವಾಕ್ಯಗಳಿಂದ ಒಟ್ಟು ಆರುವಿಧವಾದ ಯಾಗಗಳನ್ನು ವಿಧಿಸಲಾಗಿದೆ - ಪೌರ್ಣಮಾಸೀಯಲ್ಲಿ ಮೂರು ಯಾಗಗಳು -

೧) ಆಗ್ನೇಯ ಪುರೋಡಾಶ

೨) ಉಪಾಂಶುಯಾಜ

೩) ಅಗ್ನೀಷೋಮೀಯಪುರೋಡಾಶ

ಅಮಾವಾಸ್ಯಾದಲ್ಲಿ ಮೂರು ಯಾಗಗಳು-

೧) ಆಗ್ನೇಯ ಪುರೋಡಾಶ

೨) ಐಂದ್ರದಧಿಯಾಗ

೩) ಐಂದ್ರಪಯೋಯಾಗ

ಈ ಆರು ಯಾಗಗಳನ್ನೇ ದರ್ಶಪೂರ್ಣಮಾಸಿಯಾಗಗಳೆಂದು ಕರೆಯಲಾಗುತ್ತದೆ. 'ಯದಾಗ್ನೇಯೋಷ್ಟಾಕಪಾಲೋಽಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ'.

ಅಗ್ನಿದೇವತೆಯನ್ನು ಉದ್ದೇಶಿಸಿ ಎಂಟು ಕಪಾಲಗಳಲ್ಲಿ ಪುರೋಡಾಶವನ್ನು ಬೇಯಿಸಬೇಕು. ಅದನ್ನು ಅಮಾವಾಸ್ಯಾ ಮತ್ತು ಪೌರ್ಣಮಾಸೀಯಲ್ಲಿ ನಡೆಸುವ ಎರಡು ಯಾಗಗಳಲ್ಲಿ ತ್ಯಾಗ ಮಾಡಿದಲ್ಲಿ ನಾಶವಿಲ್ಲದವನಾಗುತ್ತಾನೆ.

'ತಾವಬ್ರೂತಾಮಗ್ನೀಷೋಮೌ ಆಜ್ಯಸ್ಯೈವ ನಾವುಪಾಂಶು ಪೌರ್ಣಮಾಸ್ಯಾಂ ಯಜನ್' = ಅಗ್ನಿ ಮತ್ತು ಸೋಮರು ಹೀಗೆ ಹೇಳಿದರು- ಹುಣ್ಣಿಮೆಯ ದಿವಸ ಆಜ್ಯದಿಂದ ಹೋಮಿಸಬೇಕು.

'ತಾಭ್ಯಾಮೇತಮಗ್ನೀಷೋಮೀಯಮೇಕಾದಶಕಪಾಲಂ ಪೌರ್ಣಮಾಸೇ ಪ್ರಾಯಚ್ಛತ್' = ಅಗ್ನಿ, ಮತ್ತು ಸೋಮರನ್ನು ಉದ್ದೇಶಿಸಿ ಹನ್ನೊಂದು ಕಪಾಲಗಳಲ್ಲಿ ಪುರೋಡಾಶವನ್ನು ಬೇಯಿಸಬೇಕು. ಹುಣ್ಣಿಮೆಯ ದಿವಸ ಅದನ್ನು ಅಗ್ನಿಷೋಮರಿಗೆ ಹೋಮಿಸಬೇಕು. (ಯಜನ್ ಮತ್ತು ಪ್ರಾಯಚ್ಛತ್ ಎಂಬ ಧಾತುಗಳು ಲಿಙ್ ಲಕಾರದಲ್ಲಿ ಇಲ್ಲದಿದ್ದರೂ ಲಿಙರ್ಥವನ್ನೇ ಹೇಳಬೇಕು.)

'ಉಪಾಂಶುಯಾಜಮಂತರಾ ಯಜತಿ' ಹುಣ್ಣಿಮೆಯ ದಿವಸ ಮಾಡುವ ಆಗ್ನೇಯಪುರೋಡಾಶ ಮತ್ತು ಅಗ್ನಿಷೋಮೀಯಪುರೋಡಾಶ ಯಾಗಗಳ ಮಧ್ಯದಲ್ಲಿ ಉಪಾಂಶುಯಾಗವನ್ನು ಮಾಡಬೇಕು.

'ಐಂದ್ರಂ ದಧ್ಯಮಾವಾಸ್ಯಾಯಾಂ ಐಂದ್ರಂ ಪಯೋಽಮಾವಾಸ್ಯಾಯಾಂ' ಇಂದ್ರದೇವತಾಕವಾದ ದಧಿಯಿಂದ ಅಮಾವಾಸ್ಯಾದಂದು ಯಾಗ ಮಾಡಬೇಕು. ಇಂದ್ರದೇವತಾಕವಾದ ಹಾಲಿನಿಂದ ಅಮಾವಾಸ್ಯಾದಂದು ಯಾಗ ಮಾಡಬೇಕು. (ಪ್ರಕಾಶದಲ್ಲಿ ತಾವಬ್ರೂತಾಂ ಇತ್ಯಾದಿ ವಾಕ್ಯವು ಇಲ್ಲ. ಆದರೆ ಭಟ್ಟಸಂಗ್ರಹದಲ್ಲಿ ಈ ವಾಕ್ಯವನ್ನು ಉಲ್ಲೇಖಿಸಿರುವುದರಿಂದ ಬರೆಯಲಾಗಿದೆ) ಈ ಐದು ವಾಕ್ಯಗಳಿಂದ

ದರ್ಶಪೂರ್ಣಮಾಸಗಳಲ್ಲಿ ಆರು ಯಾಗಗಳನ್ನು ಮಾಡಬೇಕೆಂದು ವಿಧಿಸಲಾಗಿದೆ. ಪುನಃ ಮುಂದೆ 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ', ಯ ಏವಂ ವಿದ್ವಾನಮಾವಾಸ್ಯಾಂ ಯಜತೇ ಎಂಬ 'ವಿದ್ವತ್' ಪದಘಟಿತವಾದ ಎರಡು ವಾಕ್ಯಗಳು ಶ್ರುತವಾಗಿವೆ. 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' 'ಸ್ವರ್ಗವನ್ನು ಬಯಸುವವನು ದರ್ಶಪೂರ್ಣಮಾಸಯಾಗಗಳನ್ನು ಮಾಡಬೇಕು' ಎಂಬ ಫಲವಾಕ್ಯವೂ ಶ್ರುತವಾಗಿದೆ. ಪ್ರಕೃತ ವಿದ್ವತ್ ಪದಘಟಿತವಾದ ಎರಡು ವಾಕ್ಯಗಳ ಅರ್ಥವನ್ನಷ್ಟೇ ಈ ಅಧಿಕರಣದಲ್ಲಿ ವಿಚಾರಮಾಡಲಾಗಿದೆ.

**॥ ಸಂಶಯ ॥** 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ, ಯ ಏವಂ ವಿದ್ವಾನಮಾವಾಸ್ಯಾಂ ಯಜತೇ' ಎಂಬ ವಿದ್ವದ್‌ಪದಘಟಿತವಾದ ಎರಡು ವಾಕ್ಯಗಳು ಹೊಸದಾದ ಪೌರ್ಣಮಾಸೀ ಅಮಾವಾಸ್ಯಾಯಾಗಗಳನ್ನು ವಿಧಾನ ಮಾಡುತ್ತಿವೆಯೋ?

ಅಥವಾ, ಪೂರ್ವದಲ್ಲೇ ಹೇಳಿದ ದರ್ಶಪೂರ್ಣಮಾಸದ ಆರು ಯಾಗಗಳನ್ನು ಅನುವಾದ ಮಾಡುತ್ತಿವೆಯೋ? ಎಂದು ಸಂದೇಹ.

**॥ ಪೂರ್ವಪಕ್ಷ ॥** ಈ ವಿದ್ವದ್ವಾಕ್ಯವು ಭಿನ್ನಕರ್ಮವಿಧಾಯಕವೇ ಆಗಿದೆ. ಹೊರತಾಗಿ ಪೂರ್ವೋಕ್ತ-ವಾದ ಕರ್ಮವನ್ನು ಅನುವಾದ ಮಾಡುತ್ತಿಲ್ಲ.

**ಪ್ರಶ್ನೆ :-** ಅಪೂರ್ವಕರ್ಮವನ್ನು ವಿಧಿಸುತ್ತದೆ ಎಂದರೆ ದ್ರವ್ಯ ಮತ್ತು ದೇವತೆಯನ್ನು ಹೇಳಬೇಕು. ಆದರೆ ಈ ಎರಡೂ ವಾಕ್ಯಗಳಲ್ಲಿ ದ್ರವ್ಯವಾಗಲೀ ದೇವತೆಯಾಗಲೀ ಶ್ರುತವಾಗದ ಕಾರಣ ಕರ್ಮವಿಧಾಯಕವಾಗಲು ಸಾಧ್ಯವಿಲ್ಲ. ಯಾಗಸ್ವರೂಪವು ಸಿದ್ಧವಾಗಲು ದ್ರವ್ಯ ಮತ್ತು ದೇವತೆಯು ಅತ್ಯಂತ ಅನಿವಾರ್ಯ.

**ಉತ್ತರ :-** ದ್ರವ್ಯ ಮತ್ತು ದೇವತೆಗಳ ಲಾಭವು ಸುಲಭವಾಗಿಯೇ ಆಗುತ್ತದೆ. ಆದ್ದರಿಂದ ಅಪೂರ್ವಕರ್ಮವಿಧಾಯಕವೆಂದು ಹೇಳಲು ಏನು ಬಾಧಕವಿಲ್ಲ. ಮೊದಲು ದ್ರವ್ಯಲಾಭವನ್ನು ಹೀಗೆ ತಿಳಿಯಬೇಕು 'ಚತುರ್ಜುಹ್ವಾಂ ಗೃಹ್ಣಾತಿ' 'ಯಜ್ಜುಹ್ವಾಂ ಗೃಹ್ಣಾತಿ ಪ್ರಯಾಜೇಭ್ಯಸ್ತತ್' 'ಅಷ್ಟಾವುಪಭೃತಿ ಯದುಪಭೃತಿ ಪ್ರಯಾಜಾನುಯಾಜೇಭ್ಯಸ್ತತ್' 'ಚತುರ್ಧ್ರುವಾಯಾಂ' 'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ ಯದ್ಧ್ರುವಾಯಾಮಾಜ್ಯಮ್' ಜುಹೂ ಎಂಬ ಪಾತ್ರದಲ್ಲಿರುವ ಆಜ್ಯವನ್ನು ಸ್ವೀಕರಿಸಬೇಕು. ಜುಹೂದಿಂದ ತೆಗೆದ ಆಜ್ಯವಾದರೂ ಸಹ ಪ್ರಯಾಜಾದಿಯಾಗಗಳಿಗಾಗಿ ಉಪಭೃತ್ ಎಂಬ ಪಾತ್ರೆಯಲ್ಲಿ ಎಂಟು ಬಾರಿ ಆಜ್ಯವನ್ನು ಸ್ವೀಕರಿಸಬೇಕು. ಪ್ರಯಾಜ ಮತ್ತು ಅನುಯಾಜ- ಯಾಗಗಳಿಗೋಸ್ಕರ ಧ್ರುವ ಎಂಬ ಪಾತ್ರೆಯಿಂದ ಎಲ್ಲಾ ಯಜ್ಞಗಳಿಗಾಗಿ ನಾಲ್ಕು ಬಾರಿ ಆಜ್ಯವನ್ನು ತೆಗೆಯಬೇಕು.

ಇತ್ಯಾದಿ ವಾಕ್ಯದಲ್ಲಿ ಧ್ರೌವಾಜ್ಯವನ್ನು ಸಕಲಯಾಗಗಳ ಸಾಧಾರಣವಾಗಿ ಹೇಳಲಾಗಿದೆ. ಸಕಲಯಾಗಗಳಲ್ಲಿ ಸಾಧಾರಣ ಎಂದು ಹೇಳಿದ್ದರಿಂದ ಈ ಯಾಗದಲ್ಲಿಯೂ ಅದನ್ನೇ ದ್ರವ್ಯವನ್ನಾಗಿ ಸ್ವೀಕರಿಸಬೇಕು. ಪ್ರಕೃತ ದರ್ಶಪೂರ್ಣಮಾಸಯಾಗಗಳಲ್ಲಿ ದ್ರವ್ಯವನ್ನು ವಿದ್ವದ್ ವಾಕ್ಯವು ಹೇಳುತ್ತಿಲ್ಲ.

ಆದ್ದರಿಂದ ನಮಗೆ ದ್ರವ್ಯದ ಆಕಾಂಕ್ಷೆ ಬರುತ್ತದೆ. ಇದೇ ಸಂದರ್ಭದಲ್ಲಿ 'ಸರ್ವಸ್ಮೈ' ಇತ್ಯಾದಿ ವಾಕ್ಯವು ಸರ್ವಯಾಗಸಾಧಾರಣವಾಗಿ ಧ್ರುವಪಾತ್ರೆಯಲ್ಲಿರುವ ಆಜ್ಯವನ್ನು ವಿಧಿಸುತ್ತಿದೆ. ಪರಿಶೇಷತಃ ಈ ಯಾಗದಲ್ಲಿಯೂ ಅದೇ ದ್ರವ್ಯವೆಂದು ಲಾಭವಾಗುತ್ತದೆ.

ಈ ವಾಕ್ಯದಿಂದ ದ್ರವ್ಯದ ಲಾಭವಾಗುತ್ತದೆ ಹೊರತು ದೇವತೆಯ ಲಾಭವಾಗುತ್ತಿಲ್ಲ. ದೇವತೆಯ ಲಾಭವು ಹೇಗಾಯಿತು? ಎಂದರೆ ಹೀಗೆ - 'ವಾರ್ತ್ರಘ್ನೀ ಪೂರ್ಣಮಾಸೇಽನುಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಂ' ಎಂಬ ಬ್ರಾಹ್ಮಣವಾಕ್ಯದಿಂದ ವೃತ್ರಹನನಪ್ರಕಾಶಕವಾದ 'ವಾರ್ತ್ರಘ್ನೀ' ಎಂಬ ಎರಡು ಮಂತ್ರಗಳನ್ನು ಪೂರ್ಣಮಾಸದಲ್ಲಿ ಪಠಿಸಬೇಕೆಂದು ಹೇಳಲಾಗಿದೆ. ವೃದ್ಧಿಪ್ರತಿಪಾದಕವಾದ 'ವೃಧನ್ವತೀ' ಎರಡು ಮಂತ್ರಗಳನ್ನು ಅಮಾವಾಸ್ಯಾದಲ್ಲಿ ಪಠಿಸಬೇಕೆಂದು ಹೇಳಲಾಗಿದೆ.

'ಅಗ್ನಿರ್ವೃತ್ರಾಣಿ ಜಂಘನತ್' 'ತ್ವಂ ಸೋಮ' ಎಂಬ ಎರಡು ಮಂತ್ರಗಳನ್ನು ಪೌರ್ಣಮಾಸಿಯಲ್ಲಿ ಪಠಿಸಬೇಕೆಂದು 'ವಾರ್ತ್ರಘ್ನೀ ಪೌರ್ಣಮಾಸ್ಯಾಮನೂಚ್ಯೇತೇ' ಎಂಬ ಮಂತ್ರವು ಹೇಳುತ್ತಿದೆ. ಎರಡು ಮಂತ್ರಗಳಲ್ಲಿ ಅಗ್ನಿ ಮತ್ತು ಸೋಮದೇವತೆಗಳ ನಿರ್ದೇಶವಿದೆ.

ವೃದ್ಧಿಯ ಬಗ್ಗೆ ಹೇಳುವ 'ಅಗ್ನಿಃ ಪ್ರತ್ನೇನ' 'ಸೋಮ ಗೀರ್ಭಿಃ' ಎಂಬ ಎರಡು ಮಂತ್ರಗಳನ್ನು 'ವೃಧನ್ವತೀ ಅಮಾವಾಸ್ಯಾಯಾಂ' ಎಂಬ ಮಂತ್ರವು ಹೇಳುತ್ತಿದೆ. ಈ ಎರಡು ಮಂತ್ರಗಳಲ್ಲಿಯೂ ಅಗ್ನಿ ಸೋಮದೇವತೆಗಳ ಉಲ್ಲೇಖವೇ ಇದೆ. ಹೀಗೆ ಎರಡೂ ಕಡೆ ಸಾಧಾರಣವಾಗಿ ನಿರ್ದಿಷ್ಟರಾದ ಅಗ್ನಿ ಮತ್ತು ಸೋಮರೇ ಪ್ರಕೃತ ಪೌರ್ಣಮಾಸೀ ಅಮಾವಾಸ್ಯಾಯಾಗಗಳಿಗೆ ದೇವತೆಗಳಾಗಿದ್ದಾರೆ. ಯಾಗಕ್ಕೆ ಬೇಕಾಗುವ ದ್ರವ್ಯ- ದೇವತೆಗಳೆಂಬ ಎರಡು ರೂಪಗಳು ಸಿದ್ಧವಾಗುತ್ತವೆ. ಆದ್ದರಿಂದ ವಿದ್ವದ್ವಾಕ್ಯವು ಅಪೂರ್ವವಾದ ಯಾಗಾಂತರವಿಧಾಯಕವೆಂದೇ ಹೇಳಬೇಕು.

ಪ್ರಶ್ನೆ :- ಮಂತ್ರದಿಂದ ದೇವತಾಪ್ರಾಪ್ತಿಯಾಗಲು ಸಾಧ್ಯವಿಲ್ಲ. ಏಕೆಂದರೆ ಈ ಮಂತ್ರವು ಆಜ್ಯಭಾಗಯಾಗದ ಮಂತ್ರವಾಗಿದೆ. 'ಆಜ್ಯಭಾಗ' ಎಂಬ ಯಾವ ಯಾಗಗಳು ಇವೆಯೋ, ಆ ಯಾಗಗಳ ಕ್ರಮದಲ್ಲಿ ಈ ಮಂತ್ರವು ಹೇಳಲ್ಪಟ್ಟಿದೆ. ಆದ್ದರಿಂದ ಈ ಎರಡು ಮಂತ್ರಗಳು ಆಜ್ಯಭಾಗದ ಅಂಗವೇ ಆಗುತ್ತದೆ. ಹೊರತು ನೀವು ಹೇಳುತ್ತಿರುವ ದರ್ಶಪೂರ್ಣಮಾಸದ ಯಾಗಾಂಗವಲ್ಲ. ಆದ್ದರಿಂದ ದೇವತಾಪ್ರಾಪ್ತಿಯಾಗಲು ಸಾಧ್ಯವಿಲ್ಲ.

ಉತ್ತರ :- ಈ ಎರಡು ಮಂತ್ರಗಳಿಗೆ ಆಜ್ಯಭಾಗಾಂಗತ್ವವು ಕೂಡುವುದಿಲ್ಲ. ಏಕೆಂದರೆ ಈ ಎರಡು ಮಂತ್ರಗಳನ್ನು ಸಾಕ್ಷಾತ್ತಾಗಿ ಈ ಕರ್ಮದಲ್ಲಿಯೇ ಹೇಳಲಾಗಿದೆ. ಆದ್ದರಿಂದ ಲಿಂಗವಾಗಲೀ ಕ್ರಮವಾಗಲೀ ಆಜ್ಯಭಾಗಕ್ರಮದಲ್ಲಿ ಯಾವ ಮಂತ್ರವನ್ನು ಹೇಳಿದರೋ ಅದನ್ನು ಬಿಡಬೇಕು. ಪ್ರತ್ಯಕ್ಷವಚನವಿದ್ದಾಗ ಲಿಂಗವನ್ನು ಕ್ರಮವನ್ನೂ ಬಿಡಲೇಬೇಕು.

ಮತ್ತು ಈ ಎರಡು ವಿದ್ವದ್‌ವಾಕ್ಯಗಳು ಹಿಂದೆ ವಿಹಿತವಾದ ಆರುಯಾಗಗಳನ್ನೇ ಅನುವಾದ ಮಾಡುವುದಾದರೆ ವೈಯ್ಯರ್ಥದೋಷ ಬರುತ್ತದೆ. ಅನುವಾದ ಮಾಡುವಂತಹ ವಾಕ್ಯಗಳು

ದರ್ಶಪೂರ್ಣಮಾಸಗಳಲ್ಲಿ ಆರು ಯಾಗಗಳನ್ನು ಮಾಡಬೇಕೆಂದು ವಿಧಿಸಲಾಗಿದೆ. ಪುನಃ ಮುಂದೆ 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ', ಯ ಏವಂ ವಿದ್ವಾನಮಾವಾಸ್ಯಾಂ ಯಜತೇ ಎಂಬ 'ವಿದ್ವತ್' ಪದಘಟಿತವಾದ ಎರಡು ವಾಕ್ಯಗಳು ಶ್ರುತವಾಗಿವೆ. 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' 'ಸ್ವರ್ಗವನ್ನು ಬಯಸುವವನು ದರ್ಶಪೂರ್ಣಮಾಸಯಾಗಗಳನ್ನು ಮಾಡಬೇಕು' ಎಂಬ ಫಲವಾಕ್ಯವೂ ಶ್ರುತವಾಗಿದೆ. ಪ್ರಕೃತ ವಿದ್ವತ್ ಪದಘಟಿತವಾದ ಎರಡು ವಾಕ್ಯಗಳ ಅರ್ಥವನ್ನಷ್ಟೇ ಈ ಅಧಿಕರಣದಲ್ಲಿ ವಿಚಾರಮಾಡಲಾಗಿದೆ.

**॥ ಸಂಶಯ ॥** 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ, ಯ ಏವಂ ವಿದ್ವಾನಮಾವಾಸ್ಯಾಂ ಯಜತೇ' ಎಂಬ ವಿದ್ವದ್‌ಪದಘಟಿತವಾದ ಎರಡು ವಾಕ್ಯಗಳು ಹೊಸದಾದ ಪೌರ್ಣಮಾಸೀ ಅಮಾವಾಸ್ಯಾಯಾಗಗಳನ್ನು ವಿಧಾನ ಮಾಡುತ್ತಿವೆಯೋ?

ಅಥವಾ, ಪೂರ್ವದಲ್ಲೇ ಹೇಳಿದ ದರ್ಶಪೂರ್ಣಮಾಸದ ಆರು ಯಾಗಗಳನ್ನು ಅನುವಾದ ಮಾಡುತ್ತಿವೆಯೋ? ಎಂದು ಸಂದೇಹ.

**॥ ಪೂರ್ವಪಕ್ಷ ॥** ಈ ವಿದ್ವದ್ವಾಕ್ಯವು ಭಿನ್ನಕರ್ಮವಿಧಾಯಕವೇ ಆಗಿದೆ. ಹೊರತಾಗಿ ಪೂರ್ವೋಕ್ತವಾದ ಕರ್ಮವನ್ನು ಅನುವಾದ ಮಾಡುತ್ತಿಲ್ಲ.

ಪ್ರಶ್ನೆ :- ಅಪೂರ್ವಕರ್ಮವನ್ನು ವಿಧಿಸುತ್ತದೆ ಎಂದರೆ ದ್ರವ್ಯ ಮತ್ತು ದೇವತೆಯನ್ನು ಹೇಳಬೇಕು. ಆದರೆ ಈ ಎರಡೂ ವಾಕ್ಯಗಳಲ್ಲಿ ದ್ರವ್ಯವಾಗಲೀ ದೇವತೆಯಾಗಲೀ ಶ್ರುತವಾಗದ ಕಾರಣ ಕರ್ಮವಿಧಾಯಕವಾಗಲು ಸಾಧ್ಯವಿಲ್ಲ. ಯಾಗಸ್ವರೂಪವು ಸಿದ್ಧವಾಗಲು ದ್ರವ್ಯ ಮತ್ತು ದೇವತೆಯು ಅತ್ಯಂತ ಅನಿವಾರ್ಯ.

ಉತ್ತರ :- ದ್ರವ್ಯ ಮತ್ತು ದೇವತೆಗಳ ಲಾಭವು ಸುಲಭವಾಗಿಯೇ ಆಗುತ್ತದೆ. ಆದ್ದರಿಂದ ಅಪೂರ್ವಕರ್ಮವಿಧಾಯಕವೆಂದು ಹೇಳಲು ಏನು ಬಾಧಕವಿಲ್ಲ. ಮೊದಲು ದ್ರವ್ಯಲಾಭವನ್ನು ಹೀಗೆ ತಿಳಿಯಬೇಕು 'ಚತುರ್ಜುಹ್ವಾಂ ಗೃಹ್ಣಾತಿ' 'ಯಜ್ಜುಹ್ವಾಂ ಗೃಹ್ಣಾತಿ ಪ್ರಯಾಜೇಭ್ಯಸ್ತತ್' 'ಅಷ್ಟಾವುಪಭೃತಿ ಯದುಪಭೃತಿ ಪ್ರಯಾಜಾನುಯಾಜೇಭ್ಯಸ್ತತ್' 'ಚತುರ್ಧ್ರುವಾಯಾಂ' 'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ ಯದ್ಧ್ರುವಾಯಾಮಾಜ್ಯಮ್' ಜುಹೂ ಎಂಬ ಪಾತ್ರದಲ್ಲಿರುವ ಆಜ್ಯವನ್ನು ಸ್ವೀಕರಿಸಬೇಕು. ಜುಹೂದಿಂದ ತಗೆದ ಆಜ್ಯವಾದರೂ ಸಹ ಪ್ರಯಾಜಾದಿಯಾಗಗಳಿಗಾಗಿ ಉಪಭೃತ್ ಎಂಬ ಪಾತ್ರಯಲ್ಲಿ ಎಂಟು ಬಾರಿ ಆಜ್ಯವನ್ನು ಸ್ವೀಕರಿಸಬೇಕು. ಪ್ರಯಾಜ ಮತ್ತು ಅನುಯಾಜ- ಯಾಗಗಳಿಗೋಸ್ಕರ. ಧ್ರುವ ಎಂಬ ಪಾತ್ರೆಯಿಂದ ಎಲ್ಲಾ ಯಜ್ಞಗಳಿಗಾಗಿ ನಾಲ್ಕು ಬಾರಿ ಆಜ್ಯವನ್ನು ತೆಗೆಯಬೇಕು.

ಇತ್ಯಾದಿ ವಾಕ್ಯದಲ್ಲಿ ಧ್ರೌವಾಜ್ಯವನ್ನು ಸಕಲಯಾಗಗಳ ಸಾಧಾರಣವಾಗಿ ಹೇಳಲಾಗಿದೆ. ಸಕಲಯಾಗಗಳಲ್ಲಿ ಸಾಧಾರಣ ಎಂದು ಹೇಳಿದ್ದರಿಂದ ಈ ಯಾಗದಲ್ಲಿಯೂ ಅದನ್ನೇ ದ್ರವ್ಯವನ್ನಾಗಿ ಸ್ವೀಕರಿಸಬೇಕು. ಪ್ರಕೃತ ದರ್ಶಪೂರ್ಣಮಾಸಯಾಗಗಳಲ್ಲಿ ದ್ರವ್ಯವನ್ನು ವಿದ್ವದ್ ವಾಕ್ಯವು ಹೇಳುತ್ತಿ

ಆದ್ದರಿಂದ ನಮಗೆ ದ್ರವ್ಯದ ಆಕಾಂಕ್ಷೆ ಬರುತ್ತದೆ. ಇದೇ ಸಂದರ್ಭದಲ್ಲಿ 'ಸರ್ವಸ್ಮೈ' ಇತ್ಯಾದಿ ವಾಕ್ಯವು ಸರ್ವಯಾಗಸಾಧಾರಣವಾಗಿ ಧ್ರುವಪಾತ್ರೆಯಲ್ಲಿರುವ ಆಜ್ಯವನ್ನು ವಿಧಿಸುತ್ತಿದೆ. ಪರಿಶೇಷತಃ ಈ ಯಾಗದಲ್ಲಿಯೂ ಅದೇ ದ್ರವ್ಯವೆಂದು ಲಾಭವಾಗುತ್ತದೆ.

ಈ ವಾಕ್ಯದಿಂದ ದ್ರವ್ಯದ ಲಾಭವಾಗುತ್ತದೆ ಹೊರತು ದೇವತೆಯ ಲಾಭವಾಗುತ್ತಿಲ್ಲ. ದೇವತೆಯ ಲಾಭವು ಹೇಗಾಯಿತು? ಎಂದರೆ ಹೀಗೆ - 'ವಾರ್ತ್ರಘ್ನೀ ಪೂರ್ಣಮಾಸೇಽನುಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಂ' ಎಂಬ ಬ್ರಾಹ್ಮಣವಾಕ್ಯದಿಂದ ವೃತ್ರಹನನಪ್ರಕಾಶಕವಾದ 'ವಾರ್ತ್ರಘ್ನೀ' ಎಂಬ ಎರಡು ಮಂತ್ರಗಳನ್ನು ಪೂರ್ಣಮಾಸದಲ್ಲಿ ಪಠಿಸಬೇಕೆಂದು ಹೇಳಲಾಗಿದೆ. ವೃದ್ಧಿಪ್ರತಿಪಾದಕವಾದ 'ವೃಧನ್ವತೀ' ಎರಡು ಮಂತ್ರಗಳನ್ನು ಅಮಾವಾಸ್ಯಾದಲ್ಲಿ ಪಠಿಸಬೇಕೆಂದು ಹೇಳಲಾಗಿದೆ.

'ಅಗ್ನಿರ್ವೃತ್ರಾಣಿ ಜಂಘನತ್' 'ತ್ವಂ ಸೋಮ' ಎಂಬ ಎರಡು ಮಂತ್ರಗಳನ್ನು ಪೌರ್ಣಮಾಸಿಯಲ್ಲಿ ಪಠಿಸಬೇಕೆಂದು 'ವಾರ್ತ್ರಘ್ನೀ ಪೌರ್ಣಮಾಸ್ಯಾಮನೂಚ್ಯೇತೇ' ಎಂಬ ಮಂತ್ರವು ಹೇಳುತ್ತಿದೆ. ಎರಡು ಮಂತ್ರಗಳಲ್ಲಿ ಅಗ್ನಿ ಮತ್ತು ಸೋಮದೇವತೆಗಳ ನಿರ್ದೇಶವಿದೆ.

ವೃದ್ಧಿಯ ಬಗ್ಗೆ ಹೇಳುವ 'ಅಗ್ನಿಃ ಪ್ರತ್ನೇನ' 'ಸೋಮ ಗೀರ್ಭಿಃ' ಎಂಬ ಎರಡು ಮಂತ್ರಗಳನ್ನು 'ವೃಧನ್ವತೀ ಅಮಾವಾಸ್ಯಾಯಾಂ' ಎಂಬ ಮಂತ್ರವು ಹೇಳುತ್ತಿದೆ. ಈ ಎರಡು ಮಂತ್ರಗಳಲ್ಲಿಯೂ ಅಗ್ನಿ ಸೋಮದೇವತೆಗಳ ಉಲ್ಲೇಖವೇ ಇದೆ. ಹೀಗೆ ಎರಡೂ ಕಡೆ ಸಾಧಾರಣವಾಗಿ ನಿರ್ದಿಷ್ಟರಾದ ಅಗ್ನಿ ಮತ್ತು ಸೋಮರೇ ಪ್ರಕೃತ ಪೌರ್ಣಮಾಸೀ ಅಮಾವಾಸ್ಯಾಯಾಗಗಳಿಗೆ ದೇವತೆಗಳಾಗಿದ್ದಾರೆ. ಯಾಗಕ್ಕೆ ಬೇಕಾಗುವ ದ್ರವ್ಯ- ದೇವತೆಗಳೆಂಬ ಎರಡು ರೂಪಗಳು ಸಿದ್ಧವಾಗುತ್ತವೆ. ಆದ್ದರಿಂದ ವಿದ್ವದ್ವಾಕ್ಯವು ಅಪೂರ್ವವಾದ ಯಾಗಾಂತರವಿಧಾಯಕವೆಂದೇ ಹೇಳಬೇಕು.

ಪ್ರಶ್ನೆ :- ಮಂತ್ರದಿಂದ ದೇವತಾಪ್ರಾಪ್ತಿಯಾಗಲು ಸಾಧ್ಯವಿಲ್ಲ. ಏಕೆಂದರೆ ಈ ಮಂತ್ರವು ಆಜ್ಯಭಾಗಯಾಗದ ಮಂತ್ರವಾಗಿದೆ. 'ಆಜ್ಯಭಾಗ' ಎಂಬ ಯಾವ ಯಾಗಗಳು ಇವೆಯೋ, ಆ ಯಾಗಗಳ ಕ್ರಮದಲ್ಲಿ ಈ ಮಂತ್ರವು ಹೇಳಲ್ಪಟ್ಟಿದೆ. ಆದ್ದರಿಂದ ಈ ಎರಡು ಮಂತ್ರಗಳು ಆಜ್ಯಭಾಗದ ಅಂಗವೇ ಆಗುತ್ತದೆ. ಹೊರತು ನೀವು ಹೇಳುತ್ತಿರುವ ದರ್ಶಪೂರ್ಣಮಾಸದ ಯಾಗಾಂಗವಲ್ಲ. ಆದ್ದರಿಂದ ದೇವತಾಪ್ರಾಪ್ತಿಯಾಗಲು ಸಾಧ್ಯವಿಲ್ಲ.

ಉತ್ತರ :- ಈ ಎರಡು ಮಂತ್ರಗಳಿಗೆ ಆಜ್ಯಭಾಗಾಂಗತ್ವವು ಕೂಡುವುದಿಲ್ಲ. ಏಕೆಂದರೆ ಈ ಎರಡು ಮಂತ್ರಗಳನ್ನು ಸಾಕ್ಷಾತ್ತಾಗಿ ಈ ಕರ್ಮದಲ್ಲಿಯೇ ಹೇಳಲಾಗಿದೆ. ಆದ್ದರಿಂದ ಲಿಂಗವಾಗಲೀ ಕ್ರಮವಾಗಲೀ ಆಜ್ಯಭಾಗಕ್ರಮದಲ್ಲಿ ಯಾವ ಮಂತ್ರವನ್ನು ಹೇಳಿದಿರೋ ಅದನ್ನು ಬಿಡಬೇಕು. ಪ್ರತ್ಯಕ್ಷವಚನವಿದ್ದಾಗ ಲಿಂಗವನ್ನು ಕ್ರಮವನ್ನೂ ಬಿಡಲೇಬೇಕು.

ಮತ್ತು ಈ ಎರಡು ವಿದ್ವದ್‌ವಾಕ್ಯಗಳು ಹಿಂದೆ ವಿಹಿತವಾದ ಆರುಯಾಗಗಳನ್ನೇ ಅನುವಾದ ಮಾಡುವುದಾದರೆ ವೈಯರ್ಥ್ಯದೋಷ ಬರುತ್ತದೆ. ಅನುವಾದ ಮಾಡುವಂತಹ ವಾಕ್ಯಗಳು

ಪ್ರತ್ಯೇಕವಾಗಿಯೇ ಇರಬೇಕಾದರೆ ಈ ವಾಕ್ಯಗಳನ್ನು ಅನುವಾದವೆನ್ನುವುದರಲ್ಲಿ ಅರ್ಥವಿಲ್ಲ. ಮತ್ತು ಆ ಯಾಗಗಳನ್ನು ಅನುವಾದ ಮಾಡಿ ಏನನ್ನಾದರೂ ವಿಧಾನ ಮಾಡಬೇಕು. ಆ ರೀತಿಯಾಗಿ ಏನನ್ನೂ ವಿಧಿಸುತ್ತಿಲ್ಲ. ಆದ್ದರಿಂದ ವ್ಯರ್ಥವೇ ಆಗುತ್ತದೆ. ವ್ಯರ್ಥವಾಗಬಾರದೆಂದು ಕರ್ಮಾಂತರವಿಧಾಯಕವೆಂದು ನಾವು ಅಂಗೀಕರಿಸುತ್ತಿದ್ದೇವೆ.

ಮತ್ತು 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬಲ್ಲಿ ದ್ವಿವಚನದ ಪ್ರಯೋಗವಿದೆ. ಆರು ಯಾಗಗಳಲ್ಲಿ ಬಹುತ್ವವಿದೆ. ಅಂತಹ ಆರು ಯಾಗಗಳನ್ನು ಇದು ಅನುವಾದ ಮಾಡಲು ಹೊರಟರೆ ದ್ವಿವಚನವು ಅನುಪಪನ್ನವಾಗುತ್ತದೆ. ಆದ್ದರಿಂದ ವಿದ್ವದ್ವಾಕ್ಯಗಳು ಅಪೂರ್ವಕರ್ಮವಿಧಾಯಕಗಳೆಂದೇ ಅಂಗೀಕರಿಸಬೇಕೆಂದು ಪೂರ್ವಪಕ್ಷ.

"ಧ್ರೌವಂ ಸೌಧಾರಣಂ ದ್ರವ್ಯಂ ದೇವತಾ ಮಾಂತ್ರವರ್ಣಿಕೀ"

ಎಂದು ಪೂರ್ವಪಕ್ಷದ ಸಂಗ್ರಹ ಶ್ಲೋಕ.

## ॥ ಸಿದ್ಧಾಂತ ॥

'ಯ ಏವಂ ವಿದ್ವಾನ್' ಇತ್ಯಾದಿ ಎರಡು ವಿದ್ವದ್ವಾಕ್ಯಗಳಿಗೆ ಅಪೂರ್ವಕರ್ಮವಿಧಾಯಕತ್ವವನ್ನು ಸಮರ್ಥಿಸಲಾಗದು. ಹಾಗಾದಲ್ಲಿ ದ್ರವ್ಯ ಹಾಗು ದೇವತೆ ಎರಡನ್ನೂ ಹೇಳಬೇಕು. ನಿಮ್ಮಿಂದ ಎರಡನ್ನೂ ಸಮರ್ಥಿಸಲಾಗದು. 'ಚತುರ್ಧ್ರುವಾಯಾಂ' 'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ ಯದ್ಧ್ರುವಾಯಾಮಾಜ್ಯಂ' ಇತ್ಯಾದಿ ವಾಕ್ಯದಿಂದ ಆಜ್ಯದ್ರವ್ಯದ ಲಾಭವಾಗುತ್ತದೆಂದು ನೀವು ಹೇಳಬೇಕು. ಆದರೆ ಹಾಗೆ ಹೇಳಲಾಗುವುದಿಲ್ಲ. ಏಕೆಂದರೆ ಅಭಿಘಾರಣಾದಿ ಬೇರೆ ಯಾಗಗಳಲ್ಲಿ ಆಜ್ಯದ ಉಪಯೋಗವನ್ನು ಈ ವಾಕ್ಯವು ವಿಧಿಸುತ್ತಿದೆ. ಆದ್ದರಿಂದ ನೀವು ಹೇಳುವ ಅಪೂರ್ವಕರ್ಮಕ್ಕೆ ದ್ರವ್ಯವನ್ನು ಒದಗಿಸಲಾರದು.

ಕಥಂಚಿತ್ ದ್ರವ್ಯದ ಲಾಭವಾಗುತ್ತದೆಂದು ಒಪ್ಪಿಕೊಂಡರೂ ಸಹ ದೇವತೆಯ ಲಾಭವಾಗಲು ಸಾಧ್ಯವೇ ಇಲ್ಲ. ನೀವು ಹೇಳಿದ ಎರಡು ಯಾಗಗಳಲ್ಲಿ ವಾರ್ತ್ರಘ್ನೀ ವೃಧನ್ವತೀ ಮಂತ್ರಗಳನ್ನು ಹೇಳಬೇಕೆಂದದ್ದು ದೇವತಾಲಾಭಕ್ಕೋಸ್ಕರ ಅಲ್ಲ. ಹೊರತಾಗಿ ಪೌರ್ಣಮಾಸೀ ಮತ್ತು ದರ್ಶಯಾಗದಲ್ಲಿ ವಾರ್ತ್ರಘ್ನೀ ವೃಧನ್ವತೀ ಮಂತ್ರಗಳು ಅವ್ಯವಸ್ಥಿತವಾಗಿ ಪ್ರಾಪ್ತವಾಗಿವೆ. ಅದನ್ನು ವ್ಯವಸ್ಥೆ ಮಾಡಲು ವಿದ್ವದ್ವಾಕ್ಯಗಳು ಹೊರಟಿವೆ.

ಅದು ಹೀಗೆ - ಹೌತ್ರಕಾಂಡದಲ್ಲಿ ಸಾಮಿಧೇನೀ, ಆಹವನನಿಗದ, ಪ್ರಯಾಜ, ಈ ಎಲ್ಲಾ ಮಂತ್ರಗಳನ್ನು ಹೇಳಿ ಅನಂತರ ವಾರ್ತ್ರಘ್ನೀ ವೃಧನ್ವತೀ ಮಂತ್ರಗಳನ್ನು ಆಜ್ಯಭಾಗದಲ್ಲಿ ಹೇಳಿದ್ದಾರೆ. ಈ ಆಜ್ಯಭಾಗವನ್ನು ದರ್ಶಪೂರ್ಣಮಾಸಯಾಗಗಳಲ್ಲಿಯೂ ಹೇಳಲಾಗಿದೆ ಲಿಂಗ ಮತ್ತು ಕ್ರಮದಿಂದ ಮಂತ್ರಗಳು ಆಜ್ಯಭಾಗದಲ್ಲಿ ಅವ್ಯವಸ್ಥಿತವಾಗಿ ಪ್ರಾಪ್ತವಾಗಿವೆ.

ಲಿಂಗದಿಂದ ಉಂಟಾದ ಅವ್ಯವಸ್ಥೆ ಹೀಗಿದೆ - ಮಂತ್ರಗಳಲ್ಲಿ ಅಗ್ನಿ ಮತ್ತು ಸೋಮರನ್ನು ಹೇಳುವ ಲಿಂಗಗಳು ಇವೆ. ಈ ಲಿಂಗದ ಬಲದಿಂದ ಯಾವ ಮಂತ್ರವು ಯಾರನ್ನು ಬೇಕಾದರೂ ಹೇಳಬಹುದು.

ಅವ್ಯವಸ್ಥೆಯು ಬರುತ್ತದೆ. (ಪ್ರಾಸಂಗಿಕವಾಗಿ ತಿಳಿಯಬೇಕು ಮೀಮಾಂಸಕರಲ್ಲಿ ಲಿಂಗವು ಎರಡು ವಿಧವಾಗಿದೆ ೧) ಶಬ್ದಗತವಾದ ಲಿಂಗ ೨) ಅರ್ಥಗತವಾದ ಲಿಂಗ ಎಂದು. ಅರ್ಥಗತವಾದ ಲಿಂಗವೇ ಸಾಮರ್ಥ್ಯ ಎನಿಸುತ್ತದೆ. ಅರ್ಥಪ್ರಕಾಶನಸಾಮರ್ಥ್ಯರೂಪವಾದದ್ದು ಶಬ್ದಗತವಾದ ಲಿಂಗವಾಗಿದೆ. ಪ್ರಕೃತ ಶಬ್ದಗತವಾದ ಲಿಂಗದಿಂದಲೇ ಅವ್ಯವಸ್ಥೆಯು ಉಂಟಾಗುತ್ತಿದೆ. ವಾರ್ತ್ರಘ್ನೀ ವೃಧನ್ವತೀ ಋಕ್‌ಗಳಲ್ಲಿ ಅಗ್ನಿ ಮತ್ತು ಸೋಮ ಎಂಬ ಪದಗಳಿವೆ. ದೇವತೆ ಎಂಬ ಅರ್ಥವನ್ನು ಪ್ರಕಾಶನಮಾಡುವ ಸಾಮರ್ಥ್ಯವು ಅಗ್ನಿ ಮತ್ತು ಸೋಮ ಪದಗಳಿಗೆ ಇವೆ. ಎರಡೂ ಮಂತ್ರಗಳಲ್ಲಿ ಈ ಎರಡು ಪದಗಳಿರುವುದರಿಂದ ಆಜ್ಯಭಾಗದಲ್ಲಿ ಎಲ್ಲಿ ಬೇಕಾದರೂ ಏನನ್ನು ಬೇಕಾದರೂ ಹೇಳಬಹುದೆಂಬ ಅವ್ಯವಸ್ಥೆಯು ಪ್ರಾಪ್ತವಾಗುತ್ತದೆ. ಪೌರ್ಣಮಾಸಿಯಲ್ಲಿ ವೃಧನ್ವತೀಮಂತ್ರಗಳನ್ನೇ ಹೇಳಬೇಕು. ದರ್ಶದಲ್ಲಿ ವಾರ್ತ್ರಘ್ನೀಮಂತ್ರವನ್ನೇ ಹೇಳಬೇಕೆಂಬ ವ್ಯವಸ್ಥೆಗೋಸ್ಕರ 'ವಾರ್ತ್ರಘ್ನೀ ಪೂರ್ಣಮಾಸೇಽನುಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಂ' ಇತ್ಯಾದಿ ವಾಕ್ಯಗಳು ಹೊರಟಿವೆ. ಹೊರತು ದೇವತೆಯ ವಿಧಿಗೋಸ್ಕರ ಅಲ್ಲ.

ಇದರಂತೆ ಕ್ರಮದಿಂದಲೂ ಅವ್ಯವಸ್ಥೆಯು ಪ್ರಾಪ್ತವಾಗುತ್ತದೆ ಎರಡು ಆಜ್ಯಭಾಗಗಳಲ್ಲಿಯೂ ವಾರ್ತ್ರಘ್ನಿಯನ್ನು ವೃಧನ್ವತಿಯನ್ನು ಕ್ರಮವಾಗಿ ಹೇಳಿದ್ದಾರೆ. ಕ್ರಮವಾಗಿ ಹೇಳಿರುವುದರಿಂದಲೇ ಅವ್ಯವಸ್ಥೆಯು ಪ್ರಾಪ್ತವಾಗಿದೆ. ಅದರ ಪರಿಹಾರಕ್ಕೋಸ್ಕರ 'ವಾರ್ತ್ರಘ್ನೀ ವೃಧನ್ವತೀ ಮಂತ್ರಗಳು ಹೊರಟಿವೆ'.

ಒಟ್ಟು ಅಭಿಪ್ರಾಯ - 'ಅಗ್ನಿರ್ವೃತ್ರಾಣಿ' ಇತ್ಯಾದಿ ನಾಲ್ಕು ಮಂತ್ರಗಳನ್ನು ಎಲ್ಲಿ ಪಠಿಸಬೇಕು? ಎಂಬ ಪ್ರಶ್ನೆ ಬಂದರೆ ಲಿಂಗ ಹಾಗು ಕ್ರಮಗಳಿಂದ ಪೌರ್ಣಮಾಸೀ ಅಮಾವಾಸ್ಯಗಳೆಂಬ ಎರಡು ಪರ್ವಗಳಲ್ಲಿ ನಡೆಯುವ ಆಜ್ಯಹೋಮದಲ್ಲಿ ನಾಲ್ಕನ್ನೂ ಪಠಿಸಬೇಕಾದ ಪ್ರಸಂಗ ಬರುತ್ತದೆ. ಆ ಸಂದರ್ಭದಲ್ಲಿ 'ವಾರ್ತ್ರಘ್ನೀ ಪೌರ್ಣಮಾಸ್ಯಾಮನೂಚ್ಯೇತೇ' ಎಂಬ ಮಂತ್ರವು ವೃತ್ರಹನನದ ಬಗ್ಗೆ ಇರುವ ಮಂತ್ರಗಳನ್ನು ಪೌರ್ಣಮಾಸಿಯಾಗದಲ್ಲಿ ಹೇಳಬೇಕೆಂದು ನಿಯಮ ಮಾಡುತ್ತದೆ. 'ವೃಧನ್ವತೀ ಅಮಾವಾಸ್ಯಾಯಾಂ' ಎಂಬ ವಾಕ್ಯವು ವೃದ್ಧಿಯ ಬಗ್ಗೆ ಹೇಳುವ ಮಂತ್ರಗಳನ್ನು ಅಮಾವಾಸ್ಯಾಪರ್ವದಲ್ಲಿನ ಆಜ್ಯಭಾಗದಲ್ಲಿ ಪಠಿಸಬೇಕೆಂದು ನಿಯಮ ಮಾಡುತ್ತದೆ.

ಆದ್ದರಿಂದ ದ್ರವ್ಯ ಮತ್ತು ದೇವತೆಗಳ ಲಾಭವಾಗುವುದಿಲ್ಲ. ದ್ರವ್ಯ ದೇವತೆಗಳೇ ಇಲ್ಲವಾದ ಮೇಲೆ ಇದು ಅಪೂರ್ವ ಯಾಗವೆಂದು ಹೇಳಲಾಗದು. ಹೀಗಿರುವಾಗ ವಿದ್ವದ್ವಾಕ್ಯವು ಅಪೂರ್ವಯಾಗ ವಿಧಾಯಕವೆಂದು ನೀವು ಹೇಳಿದ್ದು ಯಾವ ಕಾರಣಕ್ಕೂ ಸರಿಯಲ್ಲ.

ಎರಡನೆಯ ಕಾರಣ - ವಿಧಾಯಕವಾದ ವಾಕ್ಯದಲ್ಲಿ 'ಯತ್' ಶಬ್ದವು ಇರುವುದಿಲ್ಲ. ಪ್ರಕೃತ 'ಯ ಏವಂ' ಎಂಬಲ್ಲಿ ಯತ್ ಶಬ್ದವು ಕಾಣಿಸುತ್ತಿದೆ. ಆದ್ದರಿಂದಲೂ ಅಪೂರ್ವಕರ್ಮವಿಧಾಯಕವಲ್ಲ.

ಪ್ರಶ್ನೆ :- 'ಯತ್' ಶಬ್ದವು ಪೂರ್ವದಲ್ಲಿ ಪ್ರಾಪ್ತವಾಗಿದೆಯೆಂದು ತಿಳಿಸುತ್ತದೆ. ಪೂರ್ವದಲ್ಲಿ ಪ್ರಾಪ್ತವಾದದ್ದನ್ನೇ ಅನುವಾದ ಮಾಡಿದರೆ ವಿದ್ವದ್ವಾಕ್ಯಕ್ಕೆ ಆನರ್ಥಕ್ಯ ಬರುತ್ತದೆ.

ಉತ್ತರ :- 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜತೇ' ಎಂಬ ಫಲ ಬೋಧಕ ವಾಕ್ಯಕ್ಕೋಸ್ಕರ ಇಲ್ಲಿ ಅನುವಾದ ಮಾಡಲಾಗಿದೆ. ಅದು ಹೀಗೆ - ಫಲವಾಕ್ಯದಲ್ಲಿ ದರ್ಶಪದವು ಪೂರ್ಣಮಾಸಪದವು ಇದೆ. ಈ ಪದಗಳಿಂದ ಯಾವ ಯಾಗಗಳನ್ನು ಸ್ವೀಕರಿಸಬೇಕೆಂಬ ಜಿಜ್ಞಾಸೆ ಬರುತ್ತದೆ. ಅನೇಕ ಯಾಗಗಳು ಪ್ರಸಕ್ತವಾದಾಗ ಉತ್ಪತ್ತಿವಾಕ್ಯದಲ್ಲಿ ಆರು ಯಾಗಗಳಲ್ಲಷ್ಟೇ ದರ್ಶ ಹಾಗು ಪೌರ್ಣಮಾಸೀ ಪದಗಳು ಇವೆ. ದರ್ಶಸಂಬಂಧ ಪೌರ್ಣಮಾಸಸಂಬಂಧವಿರುವ ಆರು ಯಾಗಗಳಷ್ಟೇ ಇಲ್ಲಿ ಸ್ವೀಕಾರಾರ್ಹಗಳಾಗಿವೆ. ಆದರೆ ದ್ವಿವಚನವು ವಿರುದ್ಧವಾಗುತ್ತದೆ. ಆರುಯಾಗಗಳನ್ನು ಹೇಳಬೇಕಾದರೆ ಬಹುವಚನವು ಇರಬೇಕು. ಆದರೆ ಇಲ್ಲಿ 'ದರ್ಶಪೂರ್ಣಮಾಸಾಭ್ಯಾಂ' ಎಂಬ ದ್ವಿವಚನವು ಇದೆ.

ಆರು ಯಾಗಗಳನ್ನು ದ್ವಿವಚನದಿಂದ ನಿರ್ದೇಶಿಸುವುದು ಅಸಂಗತವಾಗಿದೆ. ಆ ನಿರ್ದೇಶವು ಕೂಡಬೇಕಾದರೆ ಮೂರು ಮೂರು ಯಾಗಗಳ ಎರಡು ಸಮುದಾಯಗಳು ಸಿದ್ಧವಾಗಬೇಕು. 'ಯ ಏವಂ ವಿದ್ವಾನ್' ಇತ್ಯಾದಿ ಎರಡು ವಿದ್ವದ್ವಾಕ್ಯಗಳು ಎರಡು ಸಮುದಾಯಗಳನ್ನು ಸಿದ್ಧಮಾಡುತ್ತವೆ. ಸಿದ್ಧವಾದ ಮೇಲೆ ದ್ವಿವಚನದಿಂದ ಫಲವಾಕ್ಯವು ಫಲವನ್ನು ವಿಧಿಸುತ್ತಿದೆ.

ಪ್ರಶ್ನೆ :- ದರ್ಶಪದದಿಂದ ಮೂರು ಯಾಗಗಳನ್ನು ಪೌರ್ಣಮಾಸೀಶಬ್ದದಿಂದ ಮೂರುಯಾಗಗಳನ್ನು ಹೇಳಿದಾಗ ದ್ವಿವಚನವು ಉಪಪನ್ನವಾಗುತ್ತದೆ. ಆದರೆ ಮೂರು ಯಾಗಗಳನ್ನು ದರ್ಶ ಅಥವಾ ಪೌರ್ಣಮಾಸೀ ಎಂಬ ಒಂದೇ ಪದವು ಹೇಗೆ ತಾನೆ ಹೇಳುತ್ತದೆ?

ಉತ್ತರ :- 'ರಾಶಿ' 'ವನ' ಮೊದಲಾದ ಶಬ್ದಗಳು ಯಾವ ರೀತಿಯಾಗಿ ಸಮುದಾಯ ವಚನಗಳೋ, ಅದರಂತೆ 'ದರ್ಶ' 'ಪೌರ್ಣಮಾಸೀ' ಶಬ್ದಗಳೂ ಸಹ ಯಾಗಗಳ ಸಮುದಾಯವನ್ನು ಪ್ರತಿಪಾದಿಸುತ್ತವೆ.

ಪ್ರಶ್ನೆ :- ಸಮುದಾಯದ ಸಿದ್ಧಿಯು ಮೊದಲು ಆಗಿದ್ದಲ್ಲಿ ಮಾತ್ರ ಒಂದೇ ಪದವು ಸಮುದಾಯವನ್ನು ಪ್ರತಿಪಾದಿಸುತ್ತದೆ. ವನ ಮೊದಲಾದ ಶಬ್ದಗಳಲ್ಲಿ ಸಮುದಾಯದ ಸಿದ್ಧಿಯು ಮೊದಲೇ ಆಗಿರುವುದರಿಂದ ದೋಷವಿಲ್ಲ. ಆದರೆ ದರ್ಶಪದವಾಗಲೀ ಪೌರ್ಣಮಾಸೀಪದವಾಗಲೀ ಮೂರು ಯಾಗಗಳ ಸಮುದಾಯವನ್ನು ಪ್ರತಿಪಾದಿಸುವುದಾದರೆ ಮೂರು ಮೂರು ಯಾಗಗಳಲ್ಲಿ ಸಮುದಾಯತ್ವವು ಸಿದ್ಧವಾಗಿರಬೇಕು. ಆದರೆ ಇಂತಹ ಸಮುದಾಯತ್ವದ ಸಾಧನೆಯನ್ನು ಯಾವುದರಿಂದ ಮಾಡುತ್ತೀರಿ?

ಉತ್ತರ :- ವಿದ್ವದ್ವಾಕ್ಯವು 'ಯಜೇತ' ಎಂಬ ಒಂದೇ ಪದದಿಂದ ಮೊದಲು ಹೇಳಿದ ಮೂರು ಯಾಗಗಳನ್ನು ಅನುವಾದ ಮಾಡುತ್ತಿದೆ. ಆದ್ದರಿಂದ ಸಮುದಾಯತ್ವವು ಸಿದ್ಧವಾಗುತ್ತದೆ. ಒಂದೇ ಪದವು ಅನೇಕ ಅರ್ಥಗಳನ್ನು ಹೇಳಿದಾಗ ಮಾತ್ರ ಸಮುದಾಯವು ತಿಳಿಯುತ್ತದೆ. ಬೇರೆ ಬೇರೆ ಪದದಿಂದ ಅರ್ಥಗಳನ್ನು ಪ್ರತಿಪಾದಿಸಿದಾಗ ಸಮುದಾಯತ್ವವು ಸಿದ್ಧವಾಗುವುದಿಲ್ಲ. ಪ್ರಕೃತ 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ' ಎಂಬಲ್ಲಿರುವ 'ಯಜ್' ಧಾತುವು ಮೂರು ಯಾಗಗಳನ್ನು ಅನುವಾದ ಮಾಡುತ್ತಿದೆ. ಇದು ಒಂದು ಸಮುದಾಯ. ಅದರಂತೆ 'ಯ ಏವಂ ವಿದ್ವಾನಮಾವಾಸ್ಯಾಯಾಂ

ಯಜೇತ' ಎಂಬಲ್ಲಿರುವ 'ಯಜ್' ಧಾತುವು ಪುನಃ ಬೇರೆ ಮೂರು ಯಾಗಗಳನ್ನು ಅನುವಾದ ಮಾಡುತ್ತಿದೆ. ಇದು ಮತ್ತೊಂದು ಸಮುದಾಯ. ಈ ರೀತಿಯಾಗಿ ಆರು ಯಾಗಗಳಲ್ಲಿ ತ್ರಿಕದ್ವಯವು ಸಿದ್ಧವಾಯಿತು. ಅವುಗಳಲ್ಲಿರುವ ದ್ವಿತ್ವವನ್ನು ವಿವಕ್ಷಿಸಿ ಫಲವಾಕ್ಯದಲ್ಲಿ 'ದರ್ಶಪೂರ್ಣಮಾಸಾಭ್ಯಾಂ' ಎಂಬ ದ್ವಿವಚನವು ಉಪಪನ್ನವಾಗಿದೆ. ಒಂದು ವೇಳೆ ಮಧ್ಯದಲ್ಲಿ ವಿದ್ವದ್ವಾಕ್ಯಗಳೇ ಇರದಿದ್ದಲ್ಲಿ ಅವಾಗ ಸಮುದಾಯತ್ವದ ಸಿದ್ಧಿಯೇ ಆಗುತ್ತಿರಲಿಲ್ಲ. 'ದರ್ಶಪೂರ್ಣಮಾಸಾಭ್ಯಾಂ' ಎಂಬಲ್ಲಿ ಯಾವ ಎರಡು ಯಾಗಗಳನ್ನು ಹೇಳಲಾಗಿದೆ ಎಂಬ ಅರ್ಥವರ್ಣನವೇ ಅಶಕ್ಯವಾಗುತ್ತಿತ್ತು. ಆದ್ದರಿಂದ ಈ ವಿದ್ವದ್ವಾಕ್ಯವು ಅಪೂರ್ವಯಾಗವಿಧಾಯಕವಾಗಿಲ್ಲ, ಹೊರತಾಗಿ ಅನುವಾದಕವಾಗಿದೆ. ಅನುವಾದಕವಾದ್ದರಿಂದ ವ್ಯರ್ಥವೆಂದೂ ಹೇಳಬಾರದು. ಫಲವಾಕ್ಯದಲ್ಲಿ ಉಪಕರಿಸುವುದರಿಂದ ಸಾರ್ಥಕಗಳಾಗಿವೆ.

## ॥ ದಾರ್ಷ್ಟಾಂತಿಕದಲ್ಲಿ ಸಮನ್ವಯ ॥

'ಯ ಏವಂ' ಇತ್ಯಾದಿ ವಿದ್ವತ್‌ಪದಘಟಿತವಾದ ವಾಕ್ಯವು ಅನುವಾದಕವೇ ಆಗಿದೆ. ದ್ರವ್ಯ ಮತ್ತು ದೇವತೆಗಳು ಲಭ್ಯವಾಗದ ಕಾರಣ ಅಪೂರ್ವಯಾಗವಿಧಾಯಕವೆಂದು ಹೇಳಲಾಗದು. ಪೂರ್ವ-ಪ್ರಾಪ್ತವಾದ ಆರು ಯಾಗಗಳನ್ನೇ ಪುನಃ ಹೇಳುತ್ತದೆ ಎನ್ನುವುದು ನ್ಯಾಯಪ್ರಾಪ್ತವಾಗಿದೆ. ಆದ್ದರಿಂದ ವಿದ್ವದ್ವಾಕ್ಯಗಳು ಅನುವಾದಕವೆನ್ನುವುದನ್ನು ಸಹಿಸುತ್ತೇವೆ.

ಅದರಂತೆ ಪ್ರಕೃತದಲ್ಲಿ ಆತ್ಮಸ್ವರೂಪಾತಿರಿಕ್ತವಾದ ಸಕಲ ಪದಾರ್ಥಗಳೂ ಮಿಥ್ಯಾಭೂತಗಳಾಗಿವೆ. ಆದ್ದರಿಂದ ತತ್ತ್ವಾವೇದಕವಾದ ವೇದಾಂತವು ಸುಳ್ಳಾದ ಪದಾರ್ಥಗಳನ್ನು ಪ್ರತಿಪಾದಿಸಲಾರದು. ಆತ್ಮಸ್ವರೂಪಗಳನ್ನು ಪ್ರತಿಪಾದಿಸುತ್ತದೆಂದು ಹೇಳುವುದು ನ್ಯಾಯಪ್ರಾಪ್ತವಾಗಿದೆ. ಇಂತಹ ವೇದಾಂತವು ಅನುವಾದಕವೆನ್ನುವುದನ್ನು ಸಹಿಸಿಕೊಳ್ಳುತ್ತೇವೆ.

### ದೃಷ್ಟಾಂತವು ವಿಷಮವಾಗಿದೆಯೇ? (ಒಂದು ಸಣ್ಣ ವಿಮರ್ಶೆ)

ನೀವು ನೀಡುತ್ತಿರುವ ಎರಡೂ ದೃಷ್ಟಾಂತಗಳು ವಿಷಮಗಳಾಗಿವೆ. - 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬ ವಾಕ್ಯವು ಅನುವಾದಕವಾದರೂ ವ್ಯರ್ಥವಲ್ಲ. ಏಕೆಂದರೆ 'ವಾಯವ್ಯಂ ಶ್ವೇತಮಾಲಭೇತ' ಎಂಬ ವಿಧಿ ವಾಕ್ಯಕ್ಕೆ ಪೂರಕವಾದ ಪ್ರಶಂಸೆಯನ್ನು ಮಾಡುತ್ತಿದೆ.

ಇದರಂತೆ 'ವಿದ್ವದ್‌ವಾಕ್ಯಗಳೂ' ಸಹ ಅನುವಾದಕವಾದರೂ ವ್ಯರ್ಥವಲ್ಲ. ಏಕೆಂದರೆ 'ದರ್ಶ' ಮತ್ತು 'ಪೂರ್ಣಮಾಸ' ಪದಗಳ ಪರಿಚಯವನ್ನು ಮಾಡಿಕೊಟ್ಟು ಸಾರ್ಥಕಗಳಾಗುತ್ತವೆ.

ಆದರೆ ವೇದಾಂತವಾಕ್ಯಗಳಿಗೆ ಇಂತಹ ಬೇರೆ ಯಾವ ಪ್ರಯೋಜನವೂ ಇರುವುದಿಲ್ಲ. ಕೇವಲ ಆತ್ಮಸ್ವರೂಪವನ್ನು ಬೋಧಿಸಿ ವ್ಯರ್ಥವಾದ ಅನುವಾದಕಗಳಾಗಿವೆ. ಇದರಿಂದ ಯಾವ ಪ್ರಯೋಜನವೂ ಇರುವುದಿಲ್ಲ. ಆದ್ದರಿಂದ ನೀವು ನೀಡಿದ ದೃಷ್ಟಾಂತವು ವಿಷಮವಾಗಿದೆ. ಕೆಲವರ ಈ ಆಕ್ಷೇಪವು ಸಮೀಚೀನವಾಗಿದೆ.

ವೇದಾಂತಗಳು ವ್ಯರ್ಥವಲ್ಲ. ಜಪಕ್ಕಾಗಿ ಸಾರ್ಥಕಗಳಾಗಿವೆ. ಆದರಿಂದ ಅದೃಷ್ಟಫಲವು ಲಭಿಸುತ್ತ ಹೀಗೆ ವೇದಾಂತಗಳಿಗೂ ಅದೃಷ್ಟವಾದ ಫಲವು ಇರಬೇಕಾದರೆ ವ್ಯರ್ಥವೆಂದು ಹೇಗೆ ಹೇಳುತ್ತೀರಿ?

ಪ್ರಶ್ನೆ :- ಅಪೂರ್ವವಾದ ಅರ್ಥವನ್ನು ಪ್ರತಿಪಾದಿಸಿದರೆ ಮಾತ್ರ ವೇದಾಂತಗ ಸಾರ್ಥಕಗಳಾಗುತ್ತವೆ. ಕೇವಲ ಜಪಕ್ಕೋಸ್ಕರ ಎಂದು ನೀವು ಹೇಳಿದರೆ ವ್ಯರ್ಥವೇ ಆಗುತ್ತದೆ.

ಉತ್ತರ :- ಹೀಗೆ ಹೇಳಿದರೆ ನಿಮಗೆ 'ಉತ್ಕರ್ಷಸಮ' ಎಂಬ ಜಾತ್ಯುತ್ತರವು ಬರುತ್ತದೆ.

### - ಉತ್ಕರ್ಷಸಮ -

ವಾದಿಸಾಧನಸಾಮರ್ಥ್ಯೇನ ಸಾಧ್ಯಸ್ಯೈವ ವ್ಯಾಪ್ತಿಂ ವಿನಾ ಕಸ್ಯಚಿದನಿಷ್ಟಧರ್ಮಸ್ಯ ದೃಷ್ಟಾಂತ ಪಕ್ಷೇ ಉತ್ಕರ್ಷಃ ಉತ್ಕರ್ಷಸಮಃ

ವಾದಿಯು ಹೇಳುತ್ತಾನೆ - ಹೇತುವಿನ ಸಾಮರ್ಥ್ಯದಿಂದ ಸಾಧ್ಯವು ಪಕ್ಷದಲ್ಲಿದೆಯೆಂದು.

ಪ್ರತಿವಾದಿಯು ಹೇಳುತ್ತಾನೆ - ಸಾಧ್ಯದಂತೆ ಅನಿಷ್ಟವಾದ ಮತ್ತೊಂದು ಪದಾರ್ಥವು ಪಕ್ಷದಲ್ಲೇಕೆ ಇರಬಾರದು? ಉದಾಹರಣೆಯಲ್ಲಿ ಎರಡೂ ಸಮಾನವಲ್ಲವೇ? ಎಂದು.

ಉದಾಹರಣೆ ವಾದಿ :- ಧೂಮವು ಮತ್ತು ಅಗ್ನಿಯು ಜೊತೆಗೆ ಇರುವುದು ಅಡುಗೆ ಮನೆಯಲ್ಲಿ ಕಂಡಿದೆ. ಪ್ರಕೃತ ಪರ್ವತದಲ್ಲಿ ಧೂಮವು ಇರುವುದರಿಂದ ಅಗ್ನಿಯು ಇದೆ.

ಪ್ರತಿವಾದಿ :- ಧೂಮ ಮತ್ತು ಅಗ್ನಿಗಳು ಅಡುಗೆಮನೆಯಲ್ಲಿ ಹೇಗೆ ಒಟ್ಟಿಗೆ ಇವೆಯೆಂದು ನೀವು ಹೇಳಿದಿರೋ; ಆದರಂತೆ ಧೂಮ ಮತ್ತು ಪಾತ್ರಗಳು ಅಡುಗೆಮನೆಯಲ್ಲಿ ಒಟ್ಟಿಗೆ ಇವೆ. ಆದ್ದರಿಂದ ಪರ್ವತದಲ್ಲಿ ಧೂಮವಿರುವುದರಿಂದ ವಹ್ನಿಯು ಇದೆಯೆಂದು ನೀವು ಹೇಗೆ ಸಾಧಿಸುತ್ತೀರೋ ಆದರಂತೆ ಧೂಮವಿರುವುದರಿಂದ ಪಾತ್ರಗಳೂ ಪರ್ವತದಲ್ಲಿ ಏಕೆ ಇರಬಾರದೆಂದು ನಾವು ಸಾಧಿಸುತ್ತೇವೆ.

ಪ್ರತಿವಾದಿಯು ಸೋಲುವ ಸಂದರ್ಭದಲ್ಲಿ ಹೀಗೆ ಸ್ವವ್ಯಾಹತವಾದ ಮಾತುಗಳನ್ನಾಡುತ್ತಾನೆ ಆವಾಗ ಪ್ರತಿವಾದಿಗೆ ಉತ್ಕರ್ಷಸಮವೆಂಬ ನಿಗ್ರಹಸ್ಥಾನವನ್ನು ವಾದಿಯು ಹೇಳುತ್ತಾನೆ.

ಆದರಂತೆ ಪ್ರಕೃತದಲ್ಲಿ ವೇದಾಂತವು ಅನುವಾದಕವೆಂದು ಹೇಳಿದರೆ ಚಾರ್ವಾಕಗ್ರಂಥಗಳಂತೆ ನಿಷ್ಫಲವಾಗಬೇಕಾಗುತ್ತದೆಯೆಂದು ಪ್ರತಿವಾದಿಯು ಹೇಳುತ್ತಿದ್ದಾನೆ. ಇಂತಹ ಪ್ರತಿವಾದಿಗೆ 'ಉತ್ಕರ್ಷಸಮ' ಎಂಬ ನಿಗ್ರಹಸ್ಥಾನವು ಬರುತ್ತದೆ.

ಉತ್ಕರ್ಷಸಮವೆಂಬ ನಿಗ್ರಹಸ್ಥಾನವು ಬರುವುದರಿಂದ ಜಪಕ್ಕೋಸ್ಕರ ವೇದಾಂತಾಧ್ಯಯನವು ಸಾರ್ಥಕವಾಗಿದೆ ಎಂದು ಹೇಳಬಹುದು. ಯದ್ಯಪಿ ಪೂರ್ವಮೀಮಾಂಸೆಯು ಅರ್ಥಜ್ಞಾನಕ್ಕೋಸ್ಕರ ವೇದಾಂತಾಧ್ಯಯನವು ಸಾರ್ಥಕವೆಂದು ನಿರ್ಣಯಿಸಿದೆ. ಆದರೆ ವೇದಾಂತಾಧ್ಯಯನಕ್ಕೆ ಅದೃಷ್ಟ

ಫಲವೆಂದು ನಾವು ಮುಂದೆ ಸಮರ್ಥಿಸುತ್ತೇವೆ. ಆದ್ದರಿಂದ ಪೂರ್ವಮೀಮಾಂಸೆಯ ನಿರ್ಣಯವು ಯುಕ್ತವಲ್ಲ. ಆದರೆ 'ವಾಯುರ್ವೈ ಕ್ಷೇಪಿಷ್ಠಾ ದೇವತಾಃ' ಎಂಬಲ್ಲಿ ದೃಷ್ಟಫಲವನ್ನೇ ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪಿಸಬಾರದು. ವೇದಾಂತಗಳಲ್ಲಿ ದೃಷ್ಟಫಲವಿಲ್ಲದ್ದರಿಂದ ಅನಿವಾರ್ಯವಾಗಿ ಅದೃಷ್ಟ-ಫಲವನ್ನು ಹೇಳಬೇಕು ಎಂದಿದ್ದಾರೆ.

ದೃಷ್ಟಾಂತದಲ್ಲಿ ಮತ್ತು ದಾರ್ಷ್ಟಾಂತಿಕದಲ್ಲಿ ಫಲವಿರುವ ಅಂಶದಲ್ಲಷ್ಟೇ ದೃಷ್ಟಾಂತ ನೀಡಲಾಗಿದೆ. ಆದ್ದರಿಂದ ದೃಷ್ಟಾಂತವು ವಿಷಮವಾಗಿಲ್ಲವೆಂದು ತಿಳಿಯಬೇಕು.

### ॥ ಪೌರುಷೇಯ ಗ್ರಂಥಗಳಲ್ಲಿ ಅನುವಾದಕತ್ವವು ದೋಷವೇ ಆಗುತ್ತದೆ ॥

**ಆಕ್ಷೇಪ** :- ಪ್ರಮಾಣಗಳ ಶಿಖಾಮಣಿಯೆಂದರೆ ವೇದಾಂತಗಳು. ಅಂತಹ ವೇದಾಂತಗಳಿಗೆ ಅನುವಾದಕತ್ವವು ಸಹ್ಯವೆಂದು ಸಮರ್ಥಿಸಿದಿರಿ. ಹಾಗಾದರೆ ಪೌರುಷೇಯವಾದ ಬ್ರಹ್ಮಮೀಮಾಂಸಾ-ಶಾಸ್ತ್ರದಲ್ಲಿಯೂ ಅನುವಾದಕತ್ವವನ್ನು ಸಹ್ಯವೆಂದು ಹೇಳಿರಿ. ಸಿದ್ಧವಾದ ವಸ್ತುಪ್ರತಿಪಾದಕತ್ವವು ಬಂದರೂ ದೋಷವಿಲ್ಲವೆಂದು ಹೇಳಬೇಕಾದೀತು. ಹಾಗಾದಲ್ಲಿ ಅಪೂರ್ವವಾದ ವಿಷಯವೇ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇದೆಯೆಂದು ಹೇಳುವುದು ಬೇಡ. ಆದ್ದರಿಂದ ವಿಷಯವೇ ಇಲ್ಲವಾದ್ದರಿಂದ ಈ ಗ್ರಂಥವು ಅನಾರಂಭಣೀಯವೆಂದು ಹಿಂದೆ ನೀವು ಹೇಳಿದ್ದು ಸರಿಯಲ್ಲ. ವಿಷಯವಿಲ್ಲದಿದ್ದರೂ ಆರಂಭಣೀಯವಾಗಲು ಏನೂ ಬಾಧಕವಿಲ್ಲ.

ಸಮಾಧಾನ : - ಅರ್ಥವಿಲ್ಲದ ಮೂರ್ಖರ ಈ ಮಾತುಗಳಿಗೆ ಉತ್ತರಿಸುವುದಕ್ಕಾಗಿಯೇ 'ಶ್ರುತೇ' ಎಂದು ಗ್ರಂಥಕಾರರು ಹೇಳಿದರು. ಅಪೌರುಷೇಯಗ್ರಂಥಗಳಲ್ಲಿ ಮಾತ್ರ ಅನುವಾದಕತ್ವವು ದೋಷವಲ್ಲ. ಪೌರುಷೇಯಗ್ರಂಥಗಳಲ್ಲಿ ಅನುವಾದಕತ್ವ ದೋಷವೇ ಆಗುತ್ತದೆ. ಇದನ್ನು ಸುಧೆ-ಯಲ್ಲಿಯೂ ಹೇಳಿದ್ದಾರೆ.

'**ಪ್ರೀತ್ಯಾ ಮೋಕ್ಷಪರತ್ವಾಚ್ಚ ತಾತ್ಪರ್ಯಂ ನೈವ ದೂಷಣೇ ತದ್ವಿರೋಧೇನ ಮಾನತ್ವಮ್**' 'ಶ್ರುತಿಯ ಉದ್ದೇಶವೇನೆಂದರೆ - ಜೀವರಿಗೆ ಭಗವಂತನಲ್ಲಿ ಭಕ್ತಿ ಹುಟ್ಟಿಸುವಿಕೆ ಮತ್ತು ಅದರ ಮೂಲಕವಾಗಿ ಮೋಕ್ಷಸಾಧನೆಯನ್ನು ಮಾಡಿಸುವಿಕೆ. ಹೊರತು ಭಗವಂತನ ದೋಷಗಳನ್ನು ಹೇಳುವುದರಲ್ಲಿ ಉದ್ದೇಶವಿಲ್ಲ' 'ಇಂತಹ ಶ್ರುತಿಗಳ ಅಭಿಪ್ರಾಯಕ್ಕೆ ವಿರುದ್ಧವಾದ ಪುರಾಣಗಳು ಪ್ರಮಾಣಗಳೇ ಆಗಲಾರವು' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸುತ್ತಾ ಸುಧೆಯಲ್ಲಿ ಹೀಗೆ ಹೇಳಿದೆ - 'ಪುರುಷನು ಮತ್ತೊಬ್ಬರ ಪ್ರಯೋಜನಕ್ಕಾಗಿ ಗ್ರಂಥರಚನೆಯನ್ನು ಮಾಡುತ್ತಾನೆ. ಅಂತಹ ಗ್ರಂಥದಲ್ಲಿ ಪರಹಿತ-ಪ್ರಾಪ್ತಿಗೆ ಅಹಿತಪರಿಹಾರಕ್ಕೆ ಬೇಕಾದದ್ದನ್ನೇ ಹೇಳಬೇಕು. ಹೀಗೆ ಹೇಳದೆ ಬೇರೆ ಏನಾದರೂ ಹೇಳಲು ಹೊರಟರೆ ಅದನ್ನು ಯಾರೂ ಕೇಳುವುದಿಲ್ಲ. ಆದರೆ ಅಪೌರುಷೇಯವಾದ ಗ್ರಂಥದಲ್ಲಿ ಈ ರೀತಿಯಾಗಿ ಇರುವುದಿಲ್ಲ. ತನ್ನ ಸ್ವಭಾವಕ್ಕೆ ತಕ್ಕಂತೆ ಎಲ್ಲವನ್ನೂ ಹೇಳುತ್ತದೆ. ಮತ್ತೊಬ್ಬರ ಹಿತಾಹಿತಗಳನ್ನು ಅನುಸರಿಸಿ ಅದು ಹೇಳಲಾರದು. ಪ್ರತ್ಯಕ್ಷವು ಹೇಗೆ ಸ್ವಭಾವತಃ ಎಲ್ಲವನ್ನೂ ತಿಳಿಸುತ್ತದೋ ಅದರಂತೆ. ಅಷ್ಟೇ ಅಲ್ಲದೆ ಜಿಜ್ಞಾಸಾಧಿಕರಣದ ಸುಧೆಯಲ್ಲಿಯೂ ಹೇಳಿದೆ - 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ'

ಇತರಾನ್ವಿತಸ್ವಾರ್ಥದಲ್ಲಿಯೇ ಪದಗಳ ಶಕ್ತಿ ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಿಸುವ ಸಂದರ್ಭದಲ್ಲಿ 'ಪುರುಷದೋಷೋऽಯಂ ಯತ್ ಜ್ಞಾತಜ್ಞಾಪನಾಯ ಶಬ್ದೋಚ್ಚಾರಣಂ' ಜ್ಞಾತವಾದ ವಿಷಯವನ್ನೇ ಪುನಃ ತಿಳಿಸಲು ಶಬ್ದಪ್ರಯೋಗ ಮಾಡುವಿಕೆಯು ಪುರುಷನ ದೋಷವೆನಿಸುತ್ತದೆ. ಹೀಗೆ ಸುಧೆಯ ವಾಕ್ಯಗಳಿಂದ ಜ್ಞಾತಜ್ಞಾಪಕತ್ವವು (ಅನುವಾದವು) ಪೌರುಷೇಯಗ್ರಂಥಗಳಲ್ಲಿ ದೋಷವಾಗುತ್ತದೆಂದು ತಿಳಿಯುತ್ತದೆ.

ಮತ್ತು ವಿಚಾರಶಾಸ್ತ್ರವು ಅನಾರಂಭಣೀಯವಾಗಲಿ ಎಂದು ನಾವು ಆಕ್ಷೇಪ ಮಾಡಿಕೊಂಡದ್ದು ಸಮಂಜಸವೇ ಆಗಿದೆ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರವು ಯುಕ್ತಿಗಳನ್ನು ಹೇಳಲು ಹೊರಟಿದೆ 'ಸಂದಿಗ್ಧೇ ಏವ ನ್ಯಾಯಪ್ರಾಪ್ತೇಃ' ಸಂದೇಹ ಬಂದಾಗ ಮಾತ್ರ ಸಂದೇಹದ ಪರಿಹಾರಕ್ಕಾಗಿ ಯುಕ್ತಿಯ ಅವಶ್ಯಕತೆ ಇರುತ್ತದೆ. ಎಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲವೋ ಅಲ್ಲಿ ಯುಕ್ತಿಯ ಅವಶ್ಯಕತೆ ಇರುವುದಿಲ್ಲ. ತಿಳಿದ ವಿಷಯದಲ್ಲಿ ಸಂದೇಹವೇ ಇರದ ಕಾರಣ ವಿಚಾರಶಾಸ್ತ್ರವು ಅನಾರಂಭಣೀಯವೆಂದು ನಾವು ಆಕ್ಷೇಪಿಸಿಕೊಂಡರೆ ಯಾವ ದೋಷವೂ ಇಲ್ಲ.

ಮತ್ತು ನೀವೂ ನಮ್ಮಂತೆಯೇ ಹೇಳುತ್ತೀರಿ. 'ಆತ್ಮಾ ಬ್ರಹ್ಮೇತ್ಯಧೀತಃ ಸ್ಫುರತಿ ಸ ತು ಸದಾ' ಶ್ರುತಿಯು ಆತ್ಮನನ್ನು ಬ್ರಹ್ಮನೆಂದು ಹೇಳುತ್ತದೆ. ಅಂತಹ ಆತ್ಮನು ಅನುಭವಗೋಚರನಾಗಿದ್ದಾನೆ ಇತ್ಯಾದಿಯಾಗಿ ಶ್ರುತಿಯು ಹೇಳುವುದನ್ನೇ ಪ್ರತ್ಯಕ್ಷವು ಹೇಳುತ್ತದೆ. ಶ್ರುತಿ ಪ್ರತ್ಯಕ್ಷಗಳಿಗೆ ವಿಷಯವು ಒಂದೇ ಆಗಿರುವುದರಿಂದ ಶಾಸ್ತ್ರಕ್ಕೆ ಯಾವ ವಿಷಯವೂ ಇಲ್ಲ ಶಾಸ್ತ್ರವು ಅನಾರಂಭಣೀಯವಾಗಿದೆ ಎಂದು ಪೂರ್ವಪಕ್ಷವನ್ನು ಮಾಡಿದ್ದೀರಿ. ಈಗ ನಮಗೆ ಮಾತ್ರ ಆ ರೀತಿಯಾದ ಪೂರ್ವಪಕ್ಷವು ಸರಿಯಲ್ಲ ಎನ್ನುತ್ತಿದ್ದೀರಿ. ಇದು ಯಾವ ನ್ಯಾಯ? ನಿಮ್ಮ ಮಾತುಗಳು ಪರಸ್ಪರ ವ್ಯಾಹತವಾಗಿಲ್ಲವೇ?

ಆದ್ದರಿಂದ ಅಪೌರುಷೇಯಗ್ರಂಥಗಳಲ್ಲಿ ಮಾತ್ರ ಅನುವಾದಕತ್ವ ದೋಷವಲ್ಲ. ಪೌರುಷೇಯ ಗ್ರಂಥಗಳಲ್ಲಿ ದೋಷವೇ ಆಗಿದೆ. 'ಸ್ವಾಧ್ಯಾಯೋऽಧ್ಯೇತವ್ಯಃ' ಎಂಬ ಅಧ್ಯಯನವಿಧಿಯಿಂದ ಅರ್ಥಜ್ಞಾನಕ್ಕೋಸ್ಕರ ಸಮಗ್ರವೇದಾಧ್ಯಯನವನ್ನು ಮಾಡಬೇಕೆಂದು ತಿಳಿಯುತ್ತದೆ. ಆದರೆ ವೇದಾಂತಗಳ ಅಧ್ಯಯನವು ವ್ಯರ್ಥ. ಅವುಗಳಿಂದ ತಿಳಿಯುವ ಅರ್ಥಜ್ಞಾನವು ಬೇರೆ ಪ್ರಮಾಣದಿಂದಲೇ ತಿಳಿದಿರುವಾಗ ಪುನಃ ವೇದಾಂತಾಧ್ಯಯನದ ಅವಶ್ಯಕತೆಯು ಇರುವುದಿಲ್ಲವೆಂಬ ಆಕ್ಷೇಪಕ್ಕೆ 'ವೇದಾಂತಾಧ್ಯಯನಂ ಜಪಾರ್ಥಮಸ್ತು' ಎಂದು ಉತ್ತರಿಸುತ್ತಿದ್ದಾರೆ. ದೃಷ್ಟವಾದ ಅಹಮರ್ಥಜ್ಞಾನಾದಿಗಳನ್ನು ವೇದಾಂತವು ಹುಟ್ಟಿಸುವುದಿಲ್ಲ. ಹೊರತಾಗಿ ಜಪಪಾರಾಯಣಾದಿಗಳ ಮೂಲಕ ಅದೃಷ್ಟ ಪ್ರಯೋಜನವನ್ನು ಹುಟ್ಟಿಸುತ್ತದೆಂದು ಅಭಿಪ್ರಾಯ.




**ವೇದಾಂತವು ಅನುವಾದಕ**

ವಾಯುಯಾಗವನ್ನು ಪ್ರಶಂಸಿಸಲು 'ವಾಯು ಕ್ಷೇಪಿಷ್ಠಾ ದೇವತಾ' ಎಂದು ನಾವು ತಿಳಿದಿರುವುದನ್ನೇ ಶ್ರುತಿ ಅನುವಾದ ಮಾಡುತ್ತದೆ. ಹುಣ್ಣಿಮೆಯಂದು ಮಾಡುವ ಮೂರು ಯಾಗಗಳನ್ನು 'ಯ ಏವಂ ವಿದ್ವಾನ್

ಪೌರ್ಣಮಾಸೀಂ ಯಜತೇ' ಎಂದೂ ಅಮಾವಾಸ್ಯೆಯಲ್ಲಿ ಮಾಡುವ ಮೂರು ಯಾಗಗಳನ್ನು 'ಯ ಏವಂ ವಿದ್ವಾನ್ ಅಮಾವಾಸ್ಯಾಂ ಯಜತೇ' ಎಂದೂ ಶ್ರುತಿ ಅನುವಾದಿಸುತ್ತದೆ. 'ವಾಯು ಶೀಘ್ರಗಾಮಿ' ಎನ್ನುವುದು ವಾಯುಯಾಗ ಪ್ರಶಂಸೆಗಾಗಿರುವುದರಿಂದ ಸಾರ್ಥಕ. ಎರಡು ವಿದ್ವದ್‌ವಾಕ್ಯಗಳು, 'ದರ್ಶ' ಪೂರ್ಣಮಾಸ'ಗಳೆಂಬ ಯಾಗನಾಮಗಳು ಅಮಾವಾಸ್ಯೆ ಹುಣ್ಣಿಮೆಗಳಲ್ಲಿ ಮಾಡುವ ಮೂರು ಮೂರು ಯಾಗಗಳ ಗುಂಪುಗಳಿಗೆ ಹೆಸರುಗಳೆಂದು ತಿಳಿಸಿ ಸಾರ್ಥಕವೆನಿಸುವುವು. ಹಾಗೇ ಅನುಭವಸಿದ್ಧವಾದ ಆತ್ಮಸ್ವರೂಪವನ್ನು ಅನುವಾದ ಮಾಡುವ ವೇದಾಂತವು ಪಾರಾಯಣ ಜಪಗಳಿಂದ ಪುಣ್ಯ ಉಂಟುಮಾಡಿ ಸಾರ್ಥಕವೆನಿಸುವುದು.

'ಪ್ರಮಾಣ ಶಿಖಾಮಣಿ' ಎನಿಸಿದ ವೇದಾಂತ ಅನುವಾದಕವಾಗುವುದಾದರೆ ಪೌರುಷೇಯವಾದ ವಿಚಾರಶಾಸ್ತ್ರ ಹಾಗಾದರೆ ತಪ್ಪೇನು ಎನ್ನಬಾರದು. ಪೌರುಷೇಯ ಗ್ರಂಥ ಏನಾದರೂ ಅಪೂರ್ವವಿಷಯವನ್ನು ಹೇಳಬೇಕು. ತಿಳಿದಿದ್ದನ್ನೇ ಹೇಳಿದರೆ ಯಾರೂ ಕೇಳುವುದಿಲ್ಲ. ಅಪೌರುಷೇಯಗ್ರಂಥ ಹಾಗಲ್ಲ. ಪ್ರತ್ಯಕ್ಷಾದಿಗಳಂತೆ ಸ್ವಾಭಾವಿಕವಾಗಿ ತಾನು ಹೇಳುವುದನ್ನು ಹೇಳಿಬಿಡುತ್ತದೆ. ಅದು ದೋಷವಲ್ಲ. ತಿಳಿದ ವಿಷಯವನ್ನೆ ತಿಳಿಸಲು ವಾಕ್ಯಪ್ರಯೋಗ ಮಾಡುವುದು ಪುರುಷನ ದೋಷ. ವಿಚಾರಶಾಸ್ತ್ರ ಅಪೂರ್ವಯುಕ್ತಿಗಳನ್ನು ಹೇಳಲು ಹೊರಟ ಗ್ರಂಥ. ಸಂದೇಹ ಬಂದಾಗ ಮಾತ್ರ ನಿರ್ಣಯಕ್ಕಾಗಿ ಯುಕ್ತಿ ಬೇಕು. ಅಸಂದಿಗ್ಧವಾದ ವಿಷಯದಲ್ಲಿ ಯುಕ್ತಿಯನ್ನು ಹೇಳುವುದು ವ್ಯರ್ಥ, ಅಗ್ರಾಹ್ಯ.

---

## ಅನುವಾದಕವು ವಿಚಾರಾನರ್ಹವೆಂಬ ಪೂರ್ವಪಕ್ಷ ಹೊಸತಲ್ಲ

**तात्पर्यचन्द्रिका –**

**एवंच यथा अर्थवादाधिकरणे अपौरुषेयत्वेऽप्यर्थवादानां अक्रियार्थत्वेन विध्येकवाक्यत्वाभावादानर्थक्यमिति भाट्टमते पूर्वपक्षः । प्राभाकरमते च – अर्थवादानां विध्येकवाक्यत्वेऽपि हेतुसमर्पकत्वात् हेतुसापेक्षचोदनानामप्रामाण्य-मिति पूर्वपक्षः । यथा वा परमते – शास्त्रयोनिसूत्रे कारणवाक्यमनुमानप्राप्त-कारणानुवादीति, ईक्षत्यधिकरणे च साङ्ख्यस्मृतिप्राप्तकारणानुवादि' इति पूर्वपक्षः, तथेहापि 'स्वतः सिद्धप्रत्यगात्मानुवादका वेदान्ता न विचार्या' इति पूर्वपक्षः ।**

ಅನುವಾದ - ಅನುಭವದಿಂದ ನಿತ್ಯಸಿದ್ಧನಾದ ಆತ್ಮನನ್ನು ವೇದಾಂತಗಳು ಪ್ರತಿಪಾದಿಸಲು ಹೊರಟರೆ ಅನುವಾದಕಗಳಾದ್ದರಿಂದ ವಿಚಾರಕ್ಕೆ ಅಯೋಗ್ಯಗಳಾಗಿವೆ. ಈ ರೀತಿಯಾದ ಪೂರ್ವಪಕ್ಷವನ್ನು ನಾವೇನು ಹೊಸದಾಗಿ ಮಾಡುತ್ತಿಲ್ಲ.

ಪೂರ್ವಮೀಮಾಂಸೆಯ ಅರ್ಥವಾದಾಧಿಕರಣದಲ್ಲಿ ಭಾಟ್ಟರೂ ಸಹ ಈ ರೀತಿಯಾದ ಪೂರ್ವಪಕ್ಷ ಮಾಡಿದ್ದು ಕಾಣಿಸುತ್ತದೆ. 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದ

ವಾಕ್ಯಗಳು ಧರ್ಮಾಧರ್ಮಗಳನ್ನು ಬೋಧಿಸುತ್ತಿಲ್ಲ. ವಿಧಿವಾಕ್ಯದ ಜೊತೆಗೆ ಏಕವಾಕ್ಯತ್ವವಿಲ್ಲದ ಕಾರಣ ಅರ್ಥವಾದವಾಕ್ಯವು ವ್ಯರ್ಥವೆಂದು ಪೂರ್ವಪಕ್ಷ ಮಾಡಿದ್ದಾರೆ.

ಇದೇ ಅಧಿಕರಣಕ್ಕೆ ವ್ಯಾಖ್ಯಾನಿಸುವ ಪ್ರಾಭಾಕರರ ಪೂರ್ವಪಕ್ಷವೂ ಹೀಗೆಯೇ ಇದೆ. ಅರ್ಥವಾದವಾಕ್ಯಗಳಿಗೆ ವಿಧಿವಾಕ್ಯದಿಂದ ಏಕವಾಕ್ಯತ್ವವೇನೋ ಇದೆ. ಆದರೆ 'ವಾಯವ್ಯಂ ಶ್ವೇತ-ಮಾಲಭೇತ' ಎಂಬ ವಿಧಿವಾಕ್ಯವು ಅರ್ಥವಾದವಾಕ್ಯದಿಂದ ತಿಳಿಯುವ ಹೇತುವನ್ನು ಅಪೇಕ್ಷಿಸು-ತ್ತದೆ. ಯಾವುದು ಹೇತುಸಾಪೇಕ್ಷವೋ ಅದು ಅಪ್ರಮಾಣವಾಗುವುದರಿಂದ ವಿಧಿವಾಕ್ಯವು ಅಪ್ರಮಾಣವಾಗುತ್ತದೆಂದು ಪೂರ್ವಪಕ್ಷ ಮಾಡಿದ್ದಾರೆ.

ರಾಮಾನುಜರಿಗೂ ಇದು ಸಮ್ಮತವೇ ಆಗಿದೆ - ಜಗತ್ಕಾರಣತ್ವ ಪ್ರತಿಪಾದಕಗಳಾದ ಶ್ರುತಿವಾಕ್ಯಗಳು ಅನುಮಾನದಿಂದ ತಿಳಿದ ಕಾರಣತ್ವವನ್ನೇ ಅನುವಾದಿಸುತ್ತಿವೆ. ಅನುವಾದಕ-ಗಳಾದ್ದರಿಂದ ಅಪ್ರಮಾಣಗಳಾಗಿವೆಯೆಂದು ಶಾಸ್ತ್ರಯೋನಿತ್ವಾಧಿಕರಣದಲ್ಲಿ ರಾಮಾನುಜರು ಪೂರ್ವಪಕ್ಷ ಹೀಗೆ ಮಾಡಿದ್ದಾರೆ.

ಶಂಕರರು ಮತ್ತು ರಾಮಾನುಜರಿಬ್ಬರೂ ಈಕ್ಷತ್ಯಧಿಕರಣದ ಪೂರ್ವಪಕ್ಷವನ್ನು ಹೀಗೆ ಮಾಡಿದ್ದಾರೆ - ಸಾಂಖ್ಯಸ್ಮೃತಿಯಿಂದ ಪ್ರಕೃತಿಗೆ ಜಗತ್ಕಾರಣತ್ವವು ನಿಶ್ಚಯವಾಗಿದೆ. ಅದನ್ನೇ ಜಗತ್ಕಾರಣತ್ವ ಪ್ರತಿಪಾದಕವಾದ ಶ್ರುತಿಗಳು ಅನುವಾದ ಮಾಡುತ್ತಿವೆ. ಆದ್ದರಿಂದ ಅಪ್ರಮಾ-ಣಗಳಾಗಿವೆ ಎಂದು ಪೂರ್ವಪಕ್ಷ ಮಾಡಿದ್ದಾರೆ.

ಇದೇ ರೀತಿಯಾಗಿ ನಾವೂ ಸಹ ಈಗ ಪೂರ್ವಪಕ್ಷ ಮಾಡುತ್ತಿದ್ದೇವೆ - ಸ್ವತಃ ಅನುಭವಸಿದ್ಧ-ನಾದ ಜೀವಾತ್ಮನನ್ನೇ ವೇದಾಂತಗಳು ಪ್ರತಿಪಾದಿಸಲು ಹೊರಟರೆ ಅಪ್ರಮಾಣಗಳಾಗುತ್ತವೆ. ಆದ್ದರಿಂದ ವೇದಾಂತಗಳು ವಿಚಾರಕ್ಕೆ ಅರ್ಹವಾಗಿಲ್ಲವೆಂಬ ಪೂರ್ವಪಕ್ಷವು ಸಮಂಜಸವೇ ಆಗಿದೆ (ವೇದಾಂತಗಳು ಅನುವಾದಕವಾದ್ದರಿಂದ ವಿಚಾರಕ್ಕೆ ಅನರ್ಹಗಳಾಗಿವೆ ಎಂದೇ ನಮ್ಮ ಪೂರ್ವಪಕ್ಷ. ಹೊರತು ಅಪ್ರಮಾಣಗಳಾಗಲಿ ಎಂದು ಅಭಿಪ್ರಾಯವಲ್ಲ. ಈ ಸೂಕ್ಷ್ಮವು ಗಮನೀಯ).

**ಕಠಿಣಪದಾರ್ಥ**

ಏವಂ ಚ = ಹೀಗೆ ವಿಷಯವಿಲ್ಲದ ಕಾರಣದಿಂದ. ಅಕ್ರಿಯಾರ್ಥತ್ವೇನ = ಧರ್ಮಾ-ಧರ್ಮಗಳನ್ನು ತಿಳಿಸದ ಕಾರಣ. ವಿಧ್ಯೇಕವಾಕ್ಯತ್ವಾಭಾವಾತ್ = ವಿಧಿವಾಕ್ಯದ ಜೊತೆ ಸೇರದ ಕಾರಣ. ಚೋದನಾನಾಮ್ = ವಿಧಿವಾಕ್ಯಗಳಿಗೆ. ಪರಮತೇ = ರಾಮಾನುಜಮತದಲ್ಲಿ. ಸಾಂಖ್ಯಸ್ಮೃತಿ = ಸಾಂಖ್ಯಕಾರಿಕೆ. ಇಹಾಪಿ = ಜಿಜ್ಞಾಸಾ-ಧಿಕರಣದಲ್ಲಿಯೂ.

**ಪ್ರಕಾಶಃ** – अपौरुषेयतया प्राप्तप्रामाण्यानां कथमेवं ज्ञातज्ञापकत्वेना-विचार्यत्वम्? इत्यतः पूर्वपक्षप्रमेयं दृष्टान्तपूर्वमुपपादयन्नुपसंहरति – एवंचेति ॥

*ಪರಿಪೂರ್ಣಚಂದ್ರಿಕಾ*

विषयाभावे सतीत्यर्थः ।। अपौरुषेयत्वेऽपीति ।। 'तर्कपादांत्याधिकरणन्यायेन' इति भावः । 'अक्रियार्थत्वेन' धर्माधर्माबोधकत्वेन ।। भाट्टमत इति ।। दर्शितः पूर्वपक्षः ।। प्राभाकरमते चेति ।। चोदनाप्रामाण्यनिरूपणस्याध्यायार्थतया सर्वेष्वधिकरणेषु तदप्रमाण्यपर्यन्ताः पूर्वपक्षा इति अर्थवादानां विध्येकवाक्यतामुपेत्य, 'यस्माद् वायुः क्षेपिष्ठा देवता, तस्माद् वायव्यश्वेतालम्भः कार्यः' इति हेतुसमर्पकतयाऽन्वयाद्धेतुसापेक्षत्वेन चोदनानामप्रामाण्यमित्यर्थः । 'चोदनानां' विधिवाक्यानाम् ।। अनुमानेति ।। कार्यत्वाद्यनुमानेत्यर्थः ।। ईक्षत्यधिकरण इति ।। "सदेव सोम्येदमग्रे" इत्यादिवाक्यप्रतीतं जगत्कारणं किं ब्रह्मोत प्रधानम्? इति सन्देहे, "बहु स्याम्" इति बहुभावश्रवणात् प्रधानमेव । तथाच 'सांख्यस्मृतिसिद्धजगत्कारणानुवादीनि कारणवाक्यानि' इति पूर्वपक्षो यथेत्यर्थः ।

यत्तु – 'वेदान्तानां चैतन्यज्ञापकत्वेऽपि प्रामाण्यमङ्गीकृत्य विचारशास्त्रस्य चैतन्यविषयत्वे ज्ञातज्ञापकत्वेनाप्रामाण्यवादो गुरुनतिविषयस्य शिष्यनत्यविषयत्ववादमनुकरोति' इति कस्यचित् प्रलपनम् । तत् तुच्छम् । अनुक्तोपालम्भात् । नहि वेदान्तानां चैतन्यबोधकत्वेऽप्यनधिगतार्थत्वेन प्रामाण्यमुपेत्य विचारशास्त्रस्याधिगतार्थत्वेनाप्रामाण्यमुक्तम् । किन्तु – वेदान्तानां तद्विचारशास्त्रस्य च शुद्धबोधकत्वे निश्चितार्थतयाऽर्थज्ञानाय प्रेक्षावदनुपादेयत्वमेव । अत एव 'स्वतःसिद्धप्रत्यगात्मानुवादका वेदान्ता न विचार्याः' इत्युक्तम् । वस्तुतस्तु 'वेदान्तानामगत्या चैतन्यबोधकत्वेन याथार्थ्यरूपप्रमाण्यसम्भवेऽपि स्वार्थस्य निश्चिततया तत्र सन्देहविपर्यययोरभावेन तन्निरासकविचारशास्त्रानपेक्षणात्, विचारशास्त्रमिदं न कर्तव्यम्' इति युक्तः पन्थाः ।

गुरुराजीय – नन्वध्ययनस्य जपार्थत्वेन सफलत्वेऽप्यपौरुषेयत्वेन प्रमाणस्य वेदान्तस्य कथमर्थासंस्पर्श इत्याशङ्क्याऽपौरुषेयत्वेऽपि निमित्तांतरादर्थासंस्पर्शेन पूर्वपक्षे दृष्टान्तचतुष्टयमाह – एवंचेत्यादिना ।। तत्र प्राभाकरोक्तावाद्यौ दृष्टान्तावर्थासंस्पर्शमात्रे । अद्वैत्युक्तावंत्यौ तु प्रस्तुतेऽनुवादकत्वेनार्थासंस्पर्शो इति ज्ञेयम् ।

ಜಿಜ್ಞಾಸಾಧಿಕರಣ

**ವಿವರಣೆ - ಶಂಕೆ :-** ವೇದಾಂತವು ಅಪೌರುಷೇಯವಾದ್ದರಿಂದ ಪ್ರಮಾಣವಾಗಿದೆಯೆಂಬ ನಿರ್ಣಯವಾಗಿದೆ. ಇಂತಹ ವೇದಾಂತವು ತಿಳಿದದ್ದನ್ನೇ ತಿಳಿಸಲು ಹೊರಟರೆ ಅನುವಾದಕವಾಗುವುದರಿಂದ ಅಪ್ರಮಾಣವಾಗುತ್ತದೆ. ಎಂದು ನೀವು ಮಾಡಿದ ಪೂರ್ವಪಕ್ಷವು ಹೇಗೆ ಸಮಂಜಸವಾಗುತ್ತದೆ? ಅಪೌರುಷೇಯವಾದ ವೇದದ ವಿಷಯದಲ್ಲಿ ನೀವು ಮಾಡಿದ ಶಂಕೆ ಅಸಾಧುವಾಗಿದೆ.

**ಸಮಾಧಾನ :-** ಅಪೌರುಷೇಯವಾದ ವೇದವು ಅನುವಾದಕ ಮತ್ತು ವಿಚಾರಾನರ್ಹ ಎಂದು ಆಕ್ಷೇಪಿಸಿಕೊಂಡು ಪೂರ್ವಪಕ್ಷ ಮಾಡಿದ್ದು ಹೊಸದಲ್ಲ. ಇತರರೂ ಈ ರೀತಿಯಾಗಿ ಪೂರ್ವಪಕ್ಷ ಮಾಡಿದ್ದು ಕಂಡಿದೆ. ಈ ವಿಷಯದಲ್ಲಿ ಅನೇಕ ಉದಾಹರಣೆಗಳಿವೆ -

ಭಾಟ್ಟರು ಹೀಗೆಯೇ ಪೂರ್ವಪಕ್ಷ ಮಾಡಿದ್ದಾರೆ. ವೇದದಲ್ಲಿ ಬರುವ ಅರ್ಥವಾದ ವಾಕ್ಯಗಳು ಅಪೌರುಷೇಯಗಳೇ ಆಗಿವೆ. ಆದರೂ ಸಹ ಧರ್ಮವನ್ನಾಗಲೀ ಅಧರ್ಮವನ್ನಾಗಲೀ ಪ್ರತಿಪಾದಿಸುವುದಿಲ್ಲ. ಆದ ಕಾರಣ ವಿಧಿವಾಕ್ಯಗಳ ಜೊತೆಗೆ ಅರ್ಥವಾದ ವ್ಯಾಕ್ಯಗಳು ಸೇರುವುದಿಲ್ಲ (ಏಕವಾಕ್ಯತ್ವ ಇರುವುದಿಲ್ಲ) ಆದ್ದರಿಂದ ಅರ್ಥವಾದವಾಕ್ಯಗಳು ವ್ಯರ್ಥವಾಗಿವೆ. ಎಂದು ತರ್ಕಪಾದದ ಕೊನೆಯ ಅಧಿಕರಣವಾದ ಅರ್ಥವಾದಾಧಿಕರಣದಲ್ಲಿ ಭಾಟ್ಟರು ಹೀಗೆ ಪೂರ್ವಪಕ್ಷ ಮಾಡಿದ್ದಾರೆ.

ಪ್ರಭಾಕರರು ಸಹ ಅಪೌರುಷೇಯವೇದಕ್ಕೆ ಅಪ್ರಾಮಾಣ್ಯಪೂರ್ವಪಕ್ಷವನ್ನು ಮಾಡಿದ್ದಾರೆ. ಅದು ಹೀಗೆ - ವಿಧಿವಾಕ್ಯಗಳಿಗೆಲ್ಲಾ ಪ್ರಾಮಾಣ್ಯವನ್ನು ಸಮರ್ಥಿಸುವುದೇ ಪೂರ್ವಮೀಮಾಂಸಾ ಪ್ರಥಮಾಧ್ಯಾಯದ ಉದ್ದೇಶ. ಆದ್ದರಿಂದ ಪ್ರಥಮಾಧ್ಯಾಯದಲ್ಲಿರುವ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷವನ್ನು ವಿಧಿವಾಕ್ಯದ ಅಪ್ರಾಮಾಣ್ಯದಲ್ಲಿಯೇ ಪರ್ಯವಸಾನ ಮಾಡಬೇಕು. ಅರ್ಥವಾದಾಧಿಕರಣವು ಪ್ರಥಮಾಧ್ಯಾಯದಲ್ಲೇ ಹೇಳಿರುವುದರಿಂದ ಈ ಅಧಿಕರಣದ ಪೂರ್ವಪಕ್ಷವನ್ನು ಸಹ ವೇದದ ಅಪ್ರಾಮಾಣ್ಯದಲ್ಲಿಯೇ ಪರ್ಯವಸಾನ ಮಾಡಬೇಕೆಂದಂತಾಯಿತು. 'ವಾಯುರ್ವೈ ಕ್ಷೇಪಿಷ್ಠಾ ದೇವತಾ' 'ವಾಯುವು ಶೀಘ್ರಗಾಮಿಯಾದ ದೇವತೆಯು' ಎಂಬ ಅರ್ಥವಾದ ವಾಕ್ಯವನ್ನು 'ವಾಯವ್ಯಂ ಶ್ವೇತಮಾಲಭೇತ ಭೂತಿಕಾಮಃ' 'ವಾಯುವುವಿಗೆ ಬಿಳಿಬಣ್ಣದ ಪಶುವನ್ನು ಸ್ಪರ್ಶ ಮಾಡಬೇಕು' ಎಂಬ ವಿಧಿವಾಕ್ಯದ ಜೊತೆಗೆ ಅನ್ವಯವನ್ನು ಮಾಡಬೇಕು. ಅನ್ವಯ ಮಾಡಿದಾಗ ನಮಗೆ ಈ ರೀತಿಯಾದ ಬೋಧವು ಬರುತ್ತದೆ. 'ಯಾವ ಕಾರಣದಿಂದ ವಾಯುವು ಶೀಘ್ರಫಲದಾಯಕನಾಗಿರುವನೋ, ಆ ಕಾರಣದಿಂದ ವಾಯುದೇವತಾಕಯಾಗವನ್ನು ಮಾಡಬೇಕು' ಎಂದು. ಹಾಗಾದರೆ ಅರ್ಥವಾದ ವಾಕ್ಯವು ವಿಧಿವಾಕ್ಯಕ್ಕೆ ಹೇತುಸಮರ್ಪಕ ಎಂದಂತಾಯಿತು.

ಒಂದು ನಿಯಮವಿದೆ - 'ಯಾವ ವಿಧಿವಾಕ್ಯವು ಹೇತುವನ್ನು ಅಪೇಕ್ಷೆ ಪಡುತ್ತದೋ, ಅದು ಅಪ್ರಮಾಣವಾಗುತ್ತದೆ' ಎಂದು. ಪ್ರಕೃತ 'ವಾಯವ್ಯಂ ಶ್ವೇತಮಾಲಭೇತ' ಎಂಬ ವಿಧಿವಾಕ್ಯವು ಹೇತುವನ್ನು ಅಪೇಕ್ಷಿಸುತ್ತಿರುವುದರಿಂದ ಅಪ್ರಮಾಣವಾಯಿತು ಎಂದು ಪೂರ್ವಪಕ್ಷ ಮಾಡಿದ್ದಾರೆ.

ರಾಮಾನುಜರೂ ಕೂಡ ವೇದದ ಅಪ್ರಾಮಾಣ್ಯವನ್ನು ಪೂರ್ವಪಕ್ಷ ಮಾಡಿದ್ದಾರೆ. ಜಗತ್ ಕಾರಣತ್ವವನ್ನು ಪ್ರತಿಪಾದಿಸುವ ವಾಕ್ಯಗಳು ನಮಗೆ ತಿಳಿದಿರುವ ವಿಷಯಗಳನ್ನೇ ತಿಳಿಸುತ್ತವೆ

'ಕ್ಷ್ಮಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಕಾರ್ಯಭೂತವಾದ ಘಟಕ್ಕೆ ಕಾರಣನೊಬ್ಬನಿರುವಂತೆ ಭೂಮಿ ಮೊದಲಾದವುಗಳೂ ಕಾರ್ಯವಾದ್ದರಿಂದ ಇವುಗಳಿಗೆ ಕಾರಣನೊಬ್ಬನು ಇರಲೇಬೇಕೆಂದು ಅನುಮಾನ ಮಾಡುತ್ತೇವೆ. ಇಂತಹ ಅನುಮಾನಗಳಿಂದ ಜಗತ್ ಕಾರಣನಿದ್ದಾನೆಂದು ನಿರ್ಣಯವಾಗಿದೆ. ಈ ಅನುಮಾನದಿಂದ ನಿಶ್ಚಯವಾದ ವಿಷಯವನ್ನೇ ಶ್ರುತಿಯು ಪ್ರತಿಪಾದಿಸುವುದರಿಂದ ಅನುವಾದಕವಾಯಿತು. ಅನುವಾದಕವಾದ್ದರಿಂದ ಶ್ರುತಿಯು ಅಪ್ರಮಾಣವಾಗುತ್ತದೆ. ಹೀಗೆ ಶಾಸ್ತ್ರಯೋನಿತ್ವಾಧಿಕರಣದಲ್ಲಿ ರಾಮಾನುಜರು ಪೂರ್ವಪಕ್ಷವನ್ನು ಮಾಡಿದ್ದಾರೆ.

ಈಕ್ಷತ್ಯಧಿಕರಣದ ಪೂರ್ವಪಕ್ಷದಲ್ಲಿ ಶಂಕರರು ಮತ್ತು ರಾಮಾನುಜರು ಇಬ್ಬರೂ ಸಹ ವೇದದ ಅಪ್ರಾಮಾಣ್ಯವನ್ನು ಒಪ್ಪಿದ್ದಾರೆ - 'ಸದೇವ ಸೋಮ್ಯೇದಮಗ್ರ ಆಸೀತ್' 'ಸೋಮ್ಯನೇ ಸೃಷ್ಟಿಯ ಮೊದಲು ಸತ್‌ಪದಾರ್ಥ ಒಂದೇ ಇತ್ತು' ಎಂಬ ಶ್ರುತಿಯಲ್ಲಿ ಹೇಳಿದ ಮೂಲಕಾರಣವು ಬ್ರಹ್ಮನೋ, ಅಥವಾ ಮೂಲಪ್ರಕೃತಿಯೋ? ಎಂದು ಸಂದೇಹ. 'ಬಹುಸ್ಯಾಂ' 'ನಾನು ಅನೇಕರೂಪಗಳನ್ನು ಧರಿಸುತ್ತೇನೆ' ಎಂದು ಪ್ರಕೃತಿಯ ಬಹುಭವನವನ್ನು ಅಲ್ಲಿಯೇ ಹೇಳಿದ್ದಾರೆ. ಆದ್ದರಿಂದ ಪ್ರಕೃತಿಯೇ ಜಗತ್‌ಕಾರಣವೆಂದು ಶ್ರುತಿಯು ಹೇಳುತ್ತದೆ. ಆದರೆ ಸಾಂಖ್ಯಶಾಸ್ತ್ರದಲ್ಲಿ ಪ್ರಕೃತಿಗೆ ಜಗತ್ ಕಾರಣತ್ವವನ್ನು ಹೇಳಲಾಗಿದೆ. ಸಾಂಖ್ಯಸ್ಮೃತಿಯಲ್ಲಿ ಹೇಳಿದ ಜಗತ್‌ಕಾರಣತ್ವವನ್ನೇ ಶ್ರುತಿಯು ಹೇಳುತ್ತಿರುವುದರಿಂದ ಶ್ರುತಿಯು ಅನುವಾದಕವಾಯಿತು. ಆದ್ದರಿಂದ ಅಪ್ರಮಾಣವಾಯಿತು. ಹೀಗೆ ಪೂರ್ವಪಕ್ಷವನ್ನು ನೀವೇ ಮಾಡಿದ್ದೀರಿ.

ಇವೇ ಮೊದಲಾದ ದೃಷ್ಟಾಂತಗಳಿರುವುದರಿಂದ ಸ್ವಪ್ರಕಾಶಾನುಭವಸಿದ್ಧವಾದ ಆತ್ಮಸ್ವರೂಪವನ್ನೇ ವೇದಾಂತಗಳು ಪ್ರತಿಪಾದಿಸಿದರೆ ವೇದಾಂತಗಳು ಅನುವಾದಕಗಳಾದ್ದರಿಂದ ಅಪ್ರಮಾಣಗಳಾಗುತ್ತವೆಂದು ನಾವು ಮಾಡಿದ ಪೂರ್ವಪಕ್ಷದಲ್ಲಿ ತಪ್ಪೇನಿದೆ?

ಕೆಲವರ ಆಕ್ಷೇಪ :- ಅನುವಾದಕತ್ವವು ವೇದಾಂತದಲ್ಲಿ ದೋಷವೇ ಆಗುವುದಿಲ್ಲ. ಆದರೆ ವಿಚಾರಶಾಸ್ತ್ರದಲ್ಲಿ ದೋಷವಾಗುತ್ತದೆ. ಆದ್ದರಿಂದ ಅನುಭವಸಿದ್ಧನಾದ ಆತ್ಮನನ್ನು ಪ್ರತಿಪಾದಿಸುವ ವೇದಾಂತವು ಪ್ರಮಾಣ. ಅಂತಹ ಆತ್ಮನನ್ನೇ ವಿಚಾರ ಮಾಡುವ ವಿಚಾರಶಾಸ್ತ್ರವು ಅಪ್ರಮಾಣ ಎಂದು ಹೇಳುತ್ತಿದ್ದೀರಿ. ಇದು ಹೇಗಾಯಿತೆಂದರೆ 'ಗುರು ಯಾರಿಗೆ ನಮಸ್ಕರಿಸುತ್ತಾನೋ ಅಂತಹವನನ್ನು ಶಿಷ್ಯನು ನಮಸ್ಕರಿಸಬಾರದು' ಎಂಬಂತೆ ಅಪಹಾಸಕ್ಕೀಡಾಯಿತು. ಗುರುವು ಅವನ ಹಿರಿಯರಿಗೆ ನಮಸ್ಕರಿದ ಮೇಲೆ ಶಿಷ್ಯನಾದವನೂ ಸಹ ಅವರಿಗೆಲ್ಲ ನಮಸ್ಕಾರ ಮಾಡಲೇಬೇಕು. ಅದರಂತೆ ಗುರುವಿನ ಸ್ಥಾನದಲ್ಲಿರುವ ವೇದಾಂತಗಳು ಪ್ರಮಾಣವಾದರೆ ವೇದಾಂತಗಳನ್ನು ಅನುಸರಿಸಿ ಇರುವ ಶಿಷ್ಯನ ಸ್ಥಾನದಲ್ಲಿರುವ ವಿಚಾರಶಾಸ್ತ್ರವೂ ಸಹ ಪ್ರಮಾಣ ಆಗಲೇಬೇಕು.

ಸಮಾಧಾನ :- ಇವರ ಆಕ್ಷೇಪವು ಅತ್ಯಂತ ತುಚ್ಛವಾಗಿದೆ. ಇವರಿಗೆ 'ಅನುಕ್ತೋಪಾಲಂಭ' ಎಂಬ ನಿಗ್ರಹಸ್ಥಾನ ಬರುತ್ತದೆ. ವೇದಾಂತಗಳು ಜ್ಞಾತನಾದ ಚೈತನ್ಯಬೋಧಕವಾಗಿದ್ದರೂ ಅಪೂರ್ವವಾಗಿರುವ ವಿಷಯವನ್ನು ತಿಳಿಸುತ್ತದೆಂಬ ಕಾರಣದಿಂದ ಪ್ರಮಾಣವಾಗಿದೆ. ಆದರೆ ವಿಚಾರಶಾಸ್ತ್ರವು ಚೈತನ್ಯನನ್ನು

ತಿಳಿಸಿದರೆ ತಿಳಿದ ವಿಷಯವನ್ನೇ ತಿಳಿಸಿದಂತಾಗುತ್ತದಾದ್ದರಿಂದ ಅಪ್ರಮಾಣವಾಗುತ್ತದೆಂದು ನಾವು ಕೇಳ ಇಲ್ಲ. ಒಂದು ವೇಳೆ ನಾವು ಹೇಳಿದ್ದರೆ ನೀವು ಅಪಹಾಸ್ಯ ಮಾಡಬಹುದಿತ್ತು. ಆದರಿಂದ ನಮಗೆ 'ಅನುಕ್ತೋಪಾಲಂಭ' ಎಂಬ ನಿಗ್ರಹಸ್ಥಾನ ಬರುತ್ತದೆ.

ನಾವು ಏನು ಹೇಳುತ್ತಿದ್ದೇವೆ? ಎಂದರೆ ಮೊದಲೇ ತಿಳಿದ ಆತ್ಮನನ್ನು ವೇದಾಂತಗಳಾಗಲೀ ವಿಚಾರಶಾಸ್ತ್ರವಾಗಲೀ ತಿಳಿಸಲು ಅಥವಾ ವಿಚಾರ ಮಾಡಲು ಹೊರಟರೆ ಅಂತಹ ಶಾಸ್ತ್ರದಲ್ಲಿ ಪ್ರೇಕ್ಷಾವಂತರು ಪ್ರವೃತ್ತಿ ಮಾಡಲಾರರು. ಏಕೆಂದರೆ ಹೊಸ ಹೊಸ ವಿಷಯಗಳಲ್ಲಷ್ಟೇ ಪ್ರೇಕ್ಷಾವಂತರು ಪ್ರವೃತ್ತಿಸುತ್ತಾರೆ. ಆದ್ದರಿಂದಲೇ ಸ್ವತಃಸಿದ್ಧವಾದ ಆತ್ಮಸ್ವರೂಪವನ್ನು ಅನುವಾದ ಮಾಡುವ ವೇದಾಂತಗಳು ವಿಚಾರಯೋಗ್ಯವಲ್ಲ. ಎಂದು ಹಿಂದೆ ಹೇಳಿದ್ದೇವೆ.

ವಸ್ತುತಸ್ತು ವೇದಾಂತಗಳು ಸಿದ್ಧಚೈತನ್ಯಬೋಧಕವಾದರೂ ಸಹ ಪ್ರಮಾಣಗಳೇ ಆಗಿವೆ. ಏಕೆಂದರೆ 'ಅನಧಿಗತಾರ್ಥಗಂತೃತ್ವ' 'ತಿಳಿಯದ ವಿಷಯವನ್ನು ತಿಳಿಸುವಿಕೆ' ಎಂದು ಪ್ರಮಾಣಲಕ್ಷಣವನ್ನು ಹೇಳಲಾರೆವು. ಹೊರತಾಗಿ 'ಯಥಾವಸ್ಥಿತಜ್ಞೇಯವಿಷಯಕಾರಿತ್ವಂ' ಇದ್ದ ವಸ್ತುವನ್ನು ಇರುವ ಹಾಗೆ ತಿಳಿಸುವುದನ್ನೇ ಪ್ರಮಾಣವೆಂದು ಹೇಳುತ್ತೇವೆ. ಪ್ರಕೃತ ಯಥಾರ್ಥನಾದ ಚೈತನ್ಯನನ್ನು ವೇದಾಂತಗಳು ಪ್ರತಿಪಾದಿಸುವುದರಿಂದ ಪ್ರಮಾಣಗಳೇ ಆಗಿವೆ. ಆದರೆ ಇಂತಹ ಚೈತನ್ಯನ ವಿಷಯದಲ್ಲಿ ಸಂದೇಹವಾಗಲೀ ವಿಪರೀತಜ್ಞಾನವಾಗಲೀ ಇರುವುದಿಲ್ಲ. ಆದ್ದರಿಂದ ತನ್ನಿರಾಸಕವಾದ ವಿಚಾರಶಾಸ್ತ್ರದ ಅವಶ್ಯಕತೆಯು ಪ್ರೇಕ್ಷಾವಂತರಿಗೆ ಇರುವುದಿಲ್ಲ. ಅಂತಹವರನ್ನು ಕುರಿತು ವಿಚಾರಶಾಸ್ತ್ರವು ಅನಾರಂಭಣೀಯವೇ ಆಗಿದೆ. ಪ್ರಮಾಣವಾಗಿದ್ದರೂ ಅನಾರಂಭಣೀಯವಾಗಲೀ ಎಂಬ ನಮ್ಮ ಅಭಿಪ್ರಾಯದಲ್ಲಿನ ಸೂಕ್ಷ್ಮತೆಯನ್ನು ಅರ್ಥಮಾಡಿಕೊಳ್ಳಬೇಕು. ಇದೇ ಸರಿಯಾದ ಮಾರ್ಗ.

## ಸಾರ

ಅಪೌರುಷೇಯವಾದ ವೇದವನ್ನೂ ಅದು ಅನುವಾದಕ, ವಿಚಾರಕ್ಕೆ ಅಯೋಗ್ಯವೆಂದು ಆಕ್ಷೇಪ ಪೂರ್ವಪಕ್ಷ ಮಾಡುವುದು ಹೊಸತೇನಲ್ಲ. ಧರ್ಮಾದಿಗಳನ್ನು ಬೋಧಿಸದ ಅರ್ಥವಾದ ವ್ಯರ್ಥವೆಂದು ಭಾಟ್ಟರು ಪೂರ್ವಪಕ್ಷ ಮಾಡಿದ್ದುಂಟು. ವಾಯು ಕ್ಷೇಪಿಷ್ಠಗಾಮಿಯಾದ್ದರಿಂದ ಕ್ಷಿಪ್ರಫಲಕಾಂಕ್ಷಿಯು ವಾಯುಯಾಗವನ್ನು ಮಾಡಬೇಕು ಎಂದು ವಿಧಿವಾಕ್ಯವು ಅರ್ಥವಾದದಿಂದ ಸಮರ್ಥನೆಯನ್ನು ಅಪೇಕ್ಷಿ ಅಪ್ರಮಾಣವೆನಿಸುತ್ತದೆ ಎಂದು ಪ್ರಾಭಾಕರರು ಪೂರ್ವಪಕ್ಷ ಮಾಡಿದ್ದಾರೆ. ಜಗತ್ತಿಗೆ ಕಾರಣ ಒಂದಿರಬೇಕೆಂದು ನಾವು ಊಹಿಸಿರುವುದನ್ನೇ ಶ್ರುತಿ ಹೇಳುವುದರಿಂದ ಶ್ರುತಿ ಅನುವಾದಕ, ಅಪ್ರಮಾಣವೆಂದು ರಾಮಾನುಜರು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಈಕ್ಷತ್ಯಧಿಕರಣದಲ್ಲಿ ಶಂಕರ ರಾಮಾನುಜರಿಬ್ಬರೂ ಸಾಂಖ್ಯರ ಮೂಲಪ್ರಕೃತಿಯನ್ನು ಶ್ರುತಿ ಹೇಳಿ ಅನುವಾದಕವೆನಿಸಿದೆ ಎಂದು ಪೂರ್ವಪಕ್ಷ ತೋರಿಸಿದ್ದಾರೆ. ಆದರಿಂದ ನಾವೂ ಪೂರ್ವಪಕ್ಷದಲ್ಲಿ ಹೇಳುತ್ತೇವೆ - 'ವೇದಾಂತವೂ ಅದನ್ನು ವಿಚಾರಿಸುವ ಶಾಸ್ತ್ರವೂ ಶುದ್ಧಚೈತನ್ಯ ಬೋಧಕವಾದರೆ ಅವುಗಳ ಅರ್ಥಜ್ಞಾನಕ್ಕೆ ವಿವೇಕಿಗಳು ಪ್ರವೃತ್ತಿ ಮಾಡಲಾರರು' ಎಂದು

## ಅದ್ವೈತರೀತಿಯ ಪೂರ್ವಪಕ್ಷದಲ್ಲಿ ತಪ್ಪಿಲ್ಲ

**तात्पर्यचन्द्रिका –**

**यद्वा – 'प्रमाणभूतवेदान्तवाक्यगतिर्न पूर्वपक्षिणा वाच्या । तदाच्छादनेन तत्प्रवृत्तेः । किन्तु प्रमेयस्य ब्रह्मणोऽद्वैतिरीत्या स्वप्रकाशप्रत्यगात्माभेदान्न विचार्यता' इति प्रमेयाश्रयणेनैव पूर्वः पक्षः । अत्र चाद्ये पक्षे प्रमाणभूतवेदविचार-रूपेणापि विचारस्याकर्तव्यताऽभिप्रेता । द्वितीये तु प्रमेयभूतब्रह्मविचाररूपेणैव ॥ केचित्तु – 'वेदमात्रस्य कार्यपरत्वान्न जीवादन्यत् ब्रह्माऽस्ति । जीवस्त्वसन्दिग्धः' इति पूर्वपक्ष इत्याहुः । तन्न । प्राभाकररीत्या पूर्वपक्षकरणे न्यायविवरणे आत्मनः स्वप्रकाशत्वोक्त्ययोगात् । जीवस्य देहादिभिन्नत्वेन विचार्यत्वसम्भवेन शास्त्राना-रम्भासिद्धेश्च । सुधायां त्वनुव्याख्याने सिद्धे व्युत्पत्त्यादेरतश्शब्दार्थत्वेनोक्तत्वात् तद्व्यावर्त्यपूर्वपक्षे कार्ये व्युत्पत्तिरुक्ता । इह तु टीकायां न्यायविवरणोक्तब्रह्मशब्द-व्यावर्त्यपूर्वपक्ष उच्यत इति, नेह सा वक्तव्या ।**

ಅನುವಾದ - ಅಥವಾ ಮತ್ತೊಂದು ರೀತಿಯಲ್ಲಿ ನಾವು ಮಾಡಿದ ಪೂರ್ವಪಕ್ಷವು ಸಮಂಜಸವಾಗುತ್ತದೆ. - ವೇದಾಂತವು ಅನುವಾದಕವಾಗುವುದಾದರೆ ಮುಂದೇನು ಗತಿ? ಎಂಬುದರ ಬಗ್ಗೆ ವಿಚಾರವೇ ಬೇಡ. ಅದನ್ನು ಮುಚ್ಚಿ ಪೂರ್ವಪಕ್ಷ ಮಾಡಬಹುದು. ಅದ್ವೈತಿಗಳ ಮತದಂತೆ ಬ್ರಹ್ಮನು ಜೀವನಿಗಿಂತ ಅಭಿನ್ನನಾಗಿದ್ದಾನೆ. ಜೀವನಾದರೂ ಸ್ವಪ್ರಕಾಶತಯಾ ಸ್ವತಸಿದ್ಧನಾಗಿದ್ದಾನೆ. ಆದ್ದರಿಂದ ಬ್ರಹ್ಮನ ವಿಚಾರವು ಅನಾವಶ್ಯಕ ಹೀಗೆ ಪ್ರಮೇಯವನ್ನಷ್ಟೇ ಆಶ್ರಯಿಸಿ ಪೂರ್ವಪಕ್ಷವನ್ನು ಮಾಡಬಹುದು.

ಹೀಗೆ ಎರಡು ರೀತಿಯಲ್ಲಿ ಪೂರ್ವಪಕ್ಷವನ್ನು ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ಪ್ರಮಾಣಭೂತವಾದ ವೇದಾಂತದ ವಿಚಾರವು ಅನಾವಶ್ಯಕವೆಂಬಭಿಪ್ರಾಯದಿಂದ ವಿಚಾರದ ಅಕರ್ತವ್ಯತ್ವದ ಉದ್ದೇಶವಿದೆ.

ಎರಡನೆಯ ಪಕ್ಷದಲ್ಲಿ ಪ್ರಮೇಯಭೂತನಾದ ಬ್ರಹ್ಮನ ವಿಚಾರರೂಪದಲ್ಲಿ ವಿಚಾರವು ಅನಾವಶ್ಯಕವೆಂಬ ಉದ್ದೇಶ.

ಕೆಲವರು ಹೀಗೆ ಹೇಳುತ್ತಾರೆ - ಪ್ರಾಭಾಕರಮತವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಮಾಡಬೇಕು. ನೀವು ಅದ್ವೈತಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡುತ್ತಿದ್ದೀರಿ. ಇದು

ತಪ್ಪು. ಏಕೆಂದರೆ ಸುಧೆಯಲ್ಲಿ ಸಕಲವೇದಕ್ಕೆ ಕಾರ್ಯಪರತ್ವವನ್ನು ಆಕ್ಷೇಪಿಸಲಾಗಿದೆ - ಸಮಗ್ರ ವೇದವು ಕಾರ್ಯಪರವಾದ್ದರಿಂದ ಜೀವನಿಗಿಂತ ಭಿನ್ನನಾದ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ.

ಜೀವನಾದರೂ ಅಸಂದಿಗ್ಧನಾದ್ದರಿಂದ ವಿಚಾರಶಾಸ್ತ್ರವು ಅನಾವಶ್ಯಕ. ಹೀಗೆಯೇ ಪೂರ್ವಪಕ್ಷವನ್ನು ಮಾಡಲು ಬರುವಾಗ ಅದ್ವೈತಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡಿದ್ದು ಸರಿಯಲ್ಲ.

ಈ ಆಕ್ಷೇಪ ತಪ್ಪು - ಪ್ರಾಭಾಕರರ ಮತದಂತೆ ಪೂರ್ವಪಕ್ಷ ಮಾಡಿದರೆ 'ಆತ್ಮನು ಸ್ವಪ್ರಕಾಶನಾಗಿದ್ದಾನೆ' ಎಂಬ ನ್ಯಾಯವಿವರಣದ ಮಾತಿಗೆ ವಿರೋಧ ಬರುತ್ತದೆ. ಅಷ್ಟೇ ಅಲ್ಲದೆ ಪ್ರಾಭಾಕರರ ರೀತಿಯಿಂದ ವಿಷಯವೇ ಇಲ್ಲವೆಂದು ಸಮರ್ಥಿಸಲಾಗದು. ದೇಹಾದಿಭೇದವು ಪ್ರಾಭಾಕರರ ಮತದಲ್ಲಿ ಸತ್ಯವೇ ಆಗಿರುವುದರಿಂದ ಆ ವಿಷಯದಲ್ಲಿ ಸಂದೇಹವು ಕೂಡುತ್ತದೆ ಆದ್ದರಿಂದ ಶಾಸ್ತ್ರಕ್ಕೆ ಅನಾರಂಭಣೀಯತ್ವವನ್ನು ಸಮರ್ಥಿಸಲಾಗದು. ಸುಧೆಯಲ್ಲಿ ಕಾರ್ಯಪರತ್ವವನ್ನು ಏಕೆ ಹೇಳಿದ್ದಾರೆಂದರೆ ಆಗಮವು ಸಿದ್ಧಪರವಾಗಿದೆಯೆಂದು ಅತಃ ಶಬ್ದವು ಹೇಳುತ್ತದೆ. ಇದರಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ತಿಳಿಸಲು ಕಾರ್ಯದಲ್ಲಿ ವ್ಯುತ್ಪತ್ತಿಪಕ್ಷ ಹೇಳಲಾಗಿದೆ.

ಪ್ರಕೃತ ಟೀಕೆಯಲ್ಲಿ ಬ್ರಹ್ಮಶಬ್ದದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಹೇಳಲಾಗಿದೆ. ಇದು ನ್ಯಾಯವಿವರಣವನ್ನು ಅನುಸರಿಸಿ ಹೊರಟಿದೆ. ಆದ್ದರಿಂದ ಬ್ರಹ್ಮಶಬ್ದವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಏಕೆ ಹೇಳುತ್ತಿಲ್ಲ? ಎಂಬ ಆಕ್ಷೇಪವು ಬಾಲಿಶವಾದದು.

**ಕಠಿಣಪದಾರ್ಥ**

**ತದಾಚ್ಛಾದನೇನ** = ವೇದಾಂತದ ಅನುವಾದವಿಷಯವನ್ನು ಮುಚ್ಚಿಟ್ಟು; **ತತ್ ಪ್ರವೃತ್ತೇಃ** = ಪೂರ್ವಪಕ್ಷವು ಪ್ರವೃತ್ತವಾಗುತ್ತದೆ.

**प्रकाशः – तदाच्छादनेनेति ।।** नच ''नच तदाच्छादनेन''इत्यग्रेतनग्रन्थविरोध इति वाच्यम् । तत्रोक्तबाधकस्यात्राभावात् । स्पष्टतायै पक्षयोर्भेदमाह – अत्र चेति ।। ननु सुधायां ''आगमस्तु कार्यनिष्ठो न निष्पन्नस्वरूपमीश्वरं शक्नोत्यवगमयितुम्'' इत्यादिना 'वेदस्य कृत्स्नस्य कार्यपरत्वान्नेश्वरे मानम्' इत्युक्तत्वेन प्राभाकररीत्या पूर्वपक्ष उक्तः । ''प्रमाणाभावेन'' इति टीकायां स्वोक्तो हेतुरप्येवंरूपेण विवृत इति भाति । अत्र तूच्यते चिन्मात्रपरत्वादित्यद्वैतिरीत्या इति तद् विरुद्धम् । एवंच 'वेदान्तानां अननुवादकत्वं चानुकूलितं भवति' इत्याशङ्कां सुधावाक्यतात्पर्यापरिज्ञानविजृम्भितां बाधकोक्तिपूर्वमभिप्रायकथनेन

निरस्यति – **केचित्त्विति** ।। **स्वप्रकाशत्वेति** ।। तन्मते वृत्तेरेव स्वप्रकाशत्वे-नात्मनस्तदभावादिति भावः । ननु तत्र स्वप्रकाशत्वं वास्तवाभिप्रायेणोक्तम्, नतु तन्मतत्वेन । अत एव सुधायां "स्वप्रकाशसंविदाश्रयतया वा" इत्युक्तम् । नतु तत्रैव भार इत्याशङ्क्य बाधकान्तरमाह – **जीवस्येति** ।। यदि प्राभाकररीत्या पूर्वपक्षः तर्हि तन्मते अद्वैतिमत इव देहादिभिन्नत्वादेर्मिथ्यात्वाभावेन, जीवस्यासन्दिग्धत्वेऽपि देहादिभिन्नत्वस्य सत्यस्य विषयस्य सम्भवेन निर्विषयत्वेन शास्त्रानारम्भो न सिद्धः स्यादिति भावः । ननु सुधायां – "नन्वात्मा शरीराद्य-तिरिक्तोऽहमित्यसन्दिग्धाविपर्यस्तसाक्षिप्रतीत्यैव निश्चीयत इति चेदेवं तर्हि तत एव न जिज्ञास्यः" इत्युक्त्या 'देहादिभिन्नत्वस्यापि निश्चितत्वेन तेनाप्यविचार्यत्वात् शास्त्रानारम्भसिद्धिः' इति चेन्न । प्राभाकरमते तथाऽनङ्गीकारात् । वास्तवाभिप्रायेण वा देहाद् विविक्तत्वेनात्मनो ज्ञानाज्ञानाभ्यामविचार्यत्वमिति भावेन वा सुधो-पपत्तेः । अत एव सुधायां जन्मादिसूत्रे – "जीवस्य स्वरूपतः प्रसिद्धत्वेऽपि देहादितोऽतिविविक्ततया न प्रसिद्धिः" इति तेन रूपेण सन्दिग्धत्वोक्तिः स्पष्टेति भावः । आनन्दाद्यात्मकत्वाणुत्वमहत्त्वादिना विचार्यत्वसम्भवाच्च । एवं बाधक-मुक्त्वा सुधाकृतमाह – **सुधायां त्विति** ।। सैव रीतिरत्राप्याश्रीयतामित्यत आह - **इह त्विति** ।। अद्वैतिरीत्या अभेद एव ब्रह्मशब्दव्यावर्त्य इति भावः ।

**ವಿವರಣೆ** - ವೇದಾಂತವು ಅನುವಾದಕವಾದರೆ ವಿಚಾರಾನರ್ಹವಾಗುತ್ತದೆ. ಇತರ ಮತದವರೂ ಈ ರೀತಿಯಾದ ಪೂರ್ವಪಕ್ಷವನ್ನು ಮಾಡಿದ್ದಾರೆಂದು ಇಲ್ಲಿಯ ತನಕ ಸಮರ್ಥಿಸಲಾಯಿತು.

ಪ್ರಕೃತ 'ಯದ್ವಾ' ಇತ್ಯಾದಿ ವಾಕ್ಯಗಳಿಂದ ಮತ್ತೊಂದು ರೀತಿಯಲ್ಲಿ ಸಮಾಧಾನವನ್ನು ಹೇಳುತ್ತಿದ್ದಾರೆ. ವೇದಾಂತವಾಕ್ಯಗಳು ಅನುವಾದಕಗಳಾದರೆ ವಿಚಾರಾನರ್ಹಗಳಾಗುತ್ತವೆಂದು ಹೇಳುವ ಅವಶ್ಯಕತೆಯೇ ಇಲ್ಲ. ಅದ್ವೈತಮತದಂತೆ ಬ್ರಹ್ಮನು ಜೀವಾಭಿನ್ನನಾದ್ದರಿಂದ ವಿಚಾರಾನರ್ಹನಾಗಿ-ದ್ದಾನೆಂದಷ್ಟೇ ಸಾಕು. ಅವನನ್ನು ಪ್ರತಿಪಾದಿಸುವ ವೇದಾಂತಗಳು ಏನು ಹೇಳುತ್ತವೆ? ಎಂಬ ವಿಚಾರವೇ ಬೇಡ. ಹೀಗೆ ಹೇಳಿದಾಗ ಅಪೌರುಷೇಯವಾದ ವೇದಾಂತಗಳಿಗೆ ಅನುವಾದಕತ್ವವನ್ನು ವಿಚಾರಾ-ನರ್ಹತ್ವವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ.

ಒಟ್ಟು ಎರಡು ಪಕ್ಷವನ್ನು ಆಶ್ರಯಿಸಿ ಪೂರ್ವಪಕ್ಷವನ್ನು ಮಾಡಿದಂತಾಯಿತು. ಮೊದಲಿನ ಪಕ್ಷಕ್ಕೂ ಎರಡನೆಯ ಪಕ್ಷಕ್ಕೂ ಇಷ್ಟು ವ್ಯತ್ಯಾಸ - ಮೊದಲಿನ ಪಕ್ಷದಲ್ಲಿ ಪ್ರಮೇಯನಾದ ಬ್ರಹ್ಮ ಹಾಗು

ಪ್ರಮಾಣವಾದ ವೇದಾಂತಗಳು ಎರಡೂ ಪೂರ್ವಪಕ್ಷಕ್ಕೆ ವಿಷಯಗಳಾಗಿವೆ. ಎರಡನೆಯ ಪಕ್ಷದಲ್ಲಿ ಪ್ರಮೇಯನಾದ ಬ್ರಹ್ಮನು ಮಾತ್ರ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆ.

ಎರಡನೆಯ ಪಕ್ಷವು ನ್ಯಾಯವಿವರಣದಲ್ಲಿ 'ಜೀವನಿಗಿಂತ ಭಿನ್ನನಾದ ಈಶ್ವರನಿಲ್ಲ' ಎಂದಷ್ಟೇ ಹೇಳಿದೆ. ಹೊರತು ಪ್ರಮಾಣದ ಬಗ್ಗೆ ಏನೂ ಹೇಳಿಲ್ಲ. ಇನ್ನು ಟೀಕೆಯಲ್ಲಿ 'ಈಶ್ವರನ ಅಸ್ತಿತ್ವದ ವಿಷಯದಲ್ಲಿ' ಪ್ರಮಾಣವಿಲ್ಲವೆಂದು ಹೇಳಿದೆ ಆದರೆ ಆ ವಾಕ್ಯಕ್ಕೆ 'ಪ್ರಮಾಣದ ಬಗ್ಗೆ ಏನೂ ಹೇಳಬೇಕಾಗಿಲ್ಲ' ಎಂದು ಅರ್ಥೈಸಬಹುದು. ಆದ್ದರಿಂದ ಎರಡನೆಯ ಪಕ್ಷಕ್ಕೆ ಅನುಕೂಲವಾಗಿಯೇ ಟೀಕೆಯ ವಾಕ್ಯವನ್ನು ಹೊಂದಿಸಬಹುದು. ಆದ್ದರಿಂದ ಯಾವ ವಿರೋಧವೂ ಇಲ್ಲ.

ಕೆಲವರ ಆಕ್ಷೇಪ - ಇಲ್ಲಿಯ ತನಕ ನೀವು ಮಾಡಿದ ಪೂರ್ವಪಕ್ಷವು ಸುಧೆಗೆ ವಿರುದ್ಧವಾಗಿದೆ. ನೀವು ಅದ್ವೈತಮತವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಮಾಡುತ್ತಿದ್ದೀರಿ. ಆದರೆ ಸುಧೆಯಲ್ಲಿ ಪ್ರಾಭಾಕರರ ಮತವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಮಾಡಲಾಗಿದೆ. ಸುಧೆಯ ಮಾತು ಹೀಗಿದೆ. 'ಆಗಮಸ್ತು ಕಾರ್ಯನಿಷ್ಠೊ ನ ನಿಷ್ಪನ್ನಸ್ವರೂಪಮೀಶ್ವರಂ ಶಕ್ನೋತ್ಯವಗಮಯಿತುಮ್' 'ಕಾರ್ಯಪರವಾದ ವೇದವು ಸಿದ್ಧನಾದ ಈಶ್ವರನನ್ನು ಬೋಧಿಸಲಾರದು' ಇತ್ಯಾದಿಯಾಗಿ ಹೇಳುತ್ತಾ 'ವೇದಸ್ಯ ಕೃತ್ಸ್ನಸ್ಯ ಕಾರ್ಯಪರತ್ವಾನ್ನೇಶ್ವರೇ ಮಾನಮ್' 'ಸಮಗ್ರವೇದವು ಕಾರ್ಯಪರವಾದ್ದರಿಂದ ಈಶ್ವರನ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ' ಎಂದು ಹೇಳಿದೆ. ಆದ್ದರಿಂದ ಸುಧೆಯ ಅಭಿಪ್ರಾಯ ಹೀಗಿದೆ - ವೇದಗಳೆಲ್ಲವೂ ಕಾರ್ಯಪರಗಳಾದ್ದರಿಂದ ಕಾರ್ಯವನ್ನಷ್ಟೇ ಪ್ರತಿಪಾದಿಸುತ್ತವೆ. ಬ್ರಹ್ಮನಾದರೂ ಸಿದ್ಧನಾದ್ದರಿಂದ ಕಾರ್ಯರೂಪನಲ್ಲದ ಕಾರಣ ವೇದಗಳು ಪ್ರತಿಪಾದಿಸಲಾರವು. ಆದ್ದರಿಂದ ಬ್ರಹ್ಮನ ಬಗ್ಗೆ ವಿಚಾರ ಮಾಡಲು ಪ್ರಸಕ್ತಿಯೇ ಇಲ್ಲ. ಹೀಗಿರುವಾಗ ಈ ವಿಚಾರಶಾಸ್ತ್ರವು ಆರಂಭಣೀಯವಾಗಲು ಸಾಧ್ಯವಿಲ್ಲ. ಹೀಗೆ ಪ್ರಾಭಾಕರ ಮತವನ್ನು ಅವಲಂಬಿಸಿ ಸುಧೆಯಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಇಲ್ಲಿ ನೀವು ಅದ್ವೈತಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡಿದರೆ ಪರಸ್ಪರ ವಿರೋಧ ಬರುತ್ತದೆ. (ಕೆಲವರು ಆಕ್ಷೇಪ ಮಾಡುತ್ತಾರೆಂದು ಗ್ರಂಥಕಾರರು ಹೇಳಿದ್ದಾರೆ ಆದರೆ ಗ್ರಂಥಕಾರರೇ ಊಹಿಸಿಕೊಂಡಿರುವ ಪಕ್ಷವಿರಬಹುದು.)

ಸಮಾಧಾನ :- ಈ ಆಕ್ಷೇಪವು ಹುರುಳಿಲ್ಲದ್ದು. ಸುಧೆಯ ವಾಕ್ಯದ ಅಭಿಪ್ರಾಯವನ್ನು ತಿಳಿಯದೆ ಆಡಿದ ಬಾಲಿಶಮಾತುಗಳಿವು. ಒಂದು ವೇಳೆ ಪ್ರಾಭಾಕರ ಮತದಂತೆ ಪೂರ್ವಪಕ್ಷ ಮಾಡಿದರೆ ನ್ಯಾಯವಿವರಣದ ವಿರೋಧ ಬರುತ್ತವೆ. ನ್ಯಾಯವಿವರಣದಲ್ಲಿ ಆತ್ಮನನ್ನು ಸ್ವಪ್ರಕಾಶನೆಂದು ಹೇಳಿದ್ದಾರೆ. ಒಂದು ವೇಳೆ ವೇದಾಂತಗಳೆಲ್ಲವೂ ಕಾರ್ಯಪರವೆಂದು ಅಂಗೀಕರಿಸಿ ಪೂರ್ವಪಕ್ಷ ಮಾಡಿದ್ದರೆ ಇದನ್ನು ಏಕೆ ಹೇಳಬೇಕಿತ್ತು? ಕೇವಲ ಜೀವನಿಗಿಂತ ಅತಿರಿಕ್ತನಾದ ಬ್ರಹ್ಮನಿಲ್ಲವೆನ್ನಲು ಬೇಕಾಗುವ ಕಾರ್ಯಪರತ್ವದಿಂದಲೇ ಜೀವನ ಬಗ್ಗೆ ವೇದಾಂತವಿಚಾರವು ಬೇಡವೆನ್ನಲು ಸಾಧ್ಯವಿಲ್ಲವೇ? ಆತ್ಮನು ಸ್ವಪ್ರಕಾಶನೆಂಬ ಮಾತನ್ನು ಪ್ರಾಭಾಕರರ ಪ್ರಕ್ರಿಯೆಗೆ ಸರಿಹೊಂದಿಸಲು ಬರುವುದಿಲ್ಲ. ಪ್ರಾಭಾಕರರು ಅಂತಃಕರಣವೃತ್ತಿಯನ್ನೇ ಸ್ವಪ್ರಕಾಶವೆಂದು ಹೇಳುತ್ತಾರೆ. ಆತ್ಮನನ್ನು ಸ್ವಪ್ರಕಾಶನೆಂದು ಹೇಳುವುದಿಲ್ಲ.

ಪ್ರಶ್ನೆ : - ನ್ಯಾಯವಿವರಣದಲ್ಲಿ ಹೇಳಿದ ಸ್ವಪ್ರಕಾಶತ್ವವು ಏನೂ ಬಾಧಕವಾಗಲಾರದು. ನಮ್ಮ ಸಿದ್ಧಾಂತದಂತೆ ವಸ್ತುಸ್ಥಿತಿಯನ್ನಷ್ಟೇ ನ್ಯಾಯವಿವರಣ ಹೇಳುತ್ತಿದೆ. ಪ್ರಾಭಾಕರಮತ ಹಾಗಿದೆ ಎಂದಭಿಪ್ರಾಯದಿಂದಲ್ಲ. ಆದ್ದರಿಂದ ಸುಧೆಯಲ್ಲಿ 'ಸ್ವಪ್ರಕಾಶಸಂವಿದಾಶ್ರಯತಯಾ ವಾ' 'ಅಥವಾ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿ' ಎಂದು ಹೇಳಿದೆ. ಅಥವಾ ಎಂದು ಹೇಳಿದ್ದರಿಂದ ಅದರಲ್ಲಿ ಆಗ್ರಹವಿಲ್ಲವೆಂದು ತಿಳಿಯುತ್ತದೆ.

ಸಮಾಧಾನ : - ನಿಮ್ಮ ಪ್ರಶ್ನೆಗೆ ಗ್ರಂಥಕಾರರು ಮತ್ತೊಂದು ಬಾಧಕವನ್ನು ಹೇಳುತ್ತಿದ್ದಾರೆ. ಅದ್ವೈತಿಗಳ ಮತದಲ್ಲಿ ಜೀವಾತಿರಿಕ್ತವಾದ ದೇಹಾದಿಭೇದವೂ ಸುಳ್ಳು. ಆದ್ದರಿಂದ ಶಾಸ್ತ್ರಕ್ಕೆ ಜೀವಾತಿರಿಕ್ತವಾದ ದೇಹಾದಿಭೇದವು ವಿಷಯವಾಗಬೇಕು. ಜೀವನಾದರೂ ಸ್ವಪ್ರಕಾಶತ್ವೇನ ನಿತ್ಯಸಿದ್ಧ-ನಾದ್ದರಿಂದ ವಿಷಯನಾಗಲಾರ. ಅಂತಹವನನ್ನು ಪ್ರತಿಪಾದಿಸಲು ಶಾಸ್ತ್ರದ ಆರಂಭವು ಅನಾವಶ್ಯಕವೆಂದು ಪೂರ್ವಪಕ್ಷ ಮಾಡಬಹುದು.

ಆದರೆ ಪ್ರಾಭಾಕರರು 'ಜೀವಾತಿರಿಕ್ತವಾದದ್ದೆಲ್ಲವೂ ಸುಳ್ಳು' ಎಂದು ಹೇಳುವುದಿಲ್ಲ. ಜೀವಾತಿರಿಕ್ತ-ವಾದ ದೇಹಾದಿಭೇದವನ್ನು ಸತ್ಯವೆಂದೇ ಹೇಳುತ್ತಾರೆ. ಜೀವನು ಸ್ವಪ್ರಕಾಶನಾದ್ದರಿಂದ ನಿತ್ಯಸಿದ್ಧನೆಂದು ನ್ಯಾಯವಿವರಣದಂತೆ ನೀವು ಇಟ್ಟುಕೊಂಡರೂ ದೇಹಾದಿಭೇದವಿಷಯದಲ್ಲಿ ವಿಚಾರವು ಯುಕ್ತವೇ ಆಗುತ್ತದೆ. ದೇಹಾದಿಭೇದವು ಸತ್ಯವೂ ಸಂದಿಗ್ಧವೂ ಆಗಿರುವುದರಿಂದ ವಿಚಾರಶಾಸ್ತ್ರಕ್ಕೆ ವಿಷಯವಾಗಲು ಏನೂ ತೊಂದರೆ ಇಲ್ಲ. ಆದ್ದರಿಂದ ವಿಷಯವಿಲ್ಲವೆಂದು ಶಾಸ್ತ್ರದ ಅನಾರಂಭಣೀಯತ್ವವನ್ನು ಸಮರ್ಥಿಸಲಾಗದು.

ಆದ್ದರಿಂದ ಅದ್ವೈತಮತವನ್ನು ಅವಲಂಬಿಸಿಯೇ ಪೂರ್ವಪಕ್ಷ ಮಾಡಬೇಕು. ಪ್ರಾಭಾಕರ ಮತವನ್ನು ಅವಲಂಬಿಸಿ ಪೂರ್ವಪಕ್ಷವನ್ನು ಮಾಡಲಾಗಿದೆ ಎಂದು ತಿಳಿಯಬೇಕು.

ಪ್ರಶ್ನೆ: - ಪ್ರಾಭಾಕರ ಮತವನ್ನು ಅವಲಂಬಿಸಿಯೇ ಪೂರ್ವಪಕ್ಷ ಮಾಡಲು ಏನೂ ತೊಂದರೆಯಿಲ್ಲ. ಶರೀರಾದಿಭೇದವು ಸತ್ಯವಾದರೂ ಶಾಸ್ತ್ರಾನಾರಂಭಣೀಯತ್ವವನ್ನು ಸಮರ್ಥಿಸಬಹುದು. ಸುಧೆಯಲ್ಲಿ ಹೀಗಿದೆ - 'ನನ್ವಾತ್ಮಾ ಶರೀರಾದ್ಯತಿರಿಕ್ತೋಽಹಮಿತ್ಯಸಂದಿಗ್ಧಾವಿಪರ್ಯಸ್ತಸಾಕ್ಷಿಪ್ರತೀತ್ಯೈವ ನಿಶ್ಚಿತ ಇತಿ ಚೇದೇವಂ ತರ್ಹಿ ತತ ಏವ ನ ಜಿಜ್ಞಾಸ್ಯಃ' 'ಜೀವನು ಶರೀರಾದಿಗಳಿಗಿಂತ ಭಿನ್ನನಾಗಿದ್ದಾನೆಂಬ ಅಂಶವು ನಾನು ಎಂಬ ಸಾಕ್ಷಿಪ್ರತ್ಯಕ್ಷದಿಂದಲೇ ನಿಶ್ಚಯವಾಗಿದೆ. ಆದ್ದರಿಂದ ಶರೀರಾದಿ ಭೇದವಿಷಯದಲ್ಲಿ ಸಂಶಯವಾಗಲೀ ಭ್ರಮೆಯಾಗಲೀ ಕೂಡುವುದಿಲ್ಲ ಎಂದು ಹೇಳಿದರೆ ಅಷ್ಟರಿಂದಲೇ ವಿಚಾರಶಾಸ್ತ್ರವು ಅನಾವಶ್ಯಕ ಎಂದು ಹೇಳಬಹುದು' ಎಂದು ಸುಧೆಯ ಈ ಮಾತಿನಂತೆ ಶರೀರಾದಿಭೇದವೂ ಸಹ ತಿಳಿದ ವಿಷಯವೇ ಆಗಿದೆ. ಈ ವಿಷಯದಲ್ಲಿ ವಿಚಾರಶಾಸ್ತ್ರವು ಹೊರಡಬೇಕಾಗಿಲ್ಲ ಎಂದು ಪ್ರಬಲ-ವಾಗಿಯೇ ಪೂರ್ವಪಕ್ಷವನ್ನು ಮಾಡಬಹುದು.

ಸಮಾಧಾನ : - ಸುಧೆಯಲ್ಲಿ ಹೇಳಿದ್ದು ಸತ್ಯ. ಆದರೆ ಅದನ್ನು ಪ್ರಾಭಾಕರರ ಮತಕ್ಕೆ ಅನ್ವಯಿಸಲು ಆಗುವುದಿಲ್ಲ. ಸುಧೆಯಲ್ಲಿ ಹೇಳಿದ್ದನ್ನು ಪ್ರಾಭಾಕರರು ಅಂಗೀಕರಿಸುವುದೇ ಇಲ್ಲ. ವಸ್ತುಸ್ಥಿತಿಯನ್ನಷ್ಟೇ

ಅನುಸರಿಸಿ ಸುಧೆಯಲ್ಲಿ ಹಾಗೆ ಹೇಳಿದೆ. ಅಥವಾ ಆತ್ಮನು ಶರೀರಾದಿ ವಿಲಕ್ಷಣನಾಗಿದ್ದಾನೆಂಬ ಜ್ಞಾನವು ಇದೆಯೋ? ಇಲ್ಲವೋ? ಶರೀರಾದಿ ವಿಲಕ್ಷಣನಾಗಿದ್ದಾನೆಂಬ ಜ್ಞಾನವು ಇರುವುದಾದರೆ ವಿಚಾರವು ಅನಾವಶ್ಯಕ. ಇಲ್ಲವಾದರೆ ಸಾಮಾನ್ಯಜ್ಞಾನವೇ ಇಲ್ಲದೇ ವಿಶೇಷಜ್ಞಾನಕ್ಕೋಸ್ಕರ ವಿಚಾರವು ಅನಾವಶ್ಯಕ ಎಂಬ ಅಭಿಪ್ರಾಯದಿಂದಲೂ ಸುಧೆಯ ಮಾತುಗಳು ಹೊರಟಿರಬಹುದು.

ಆದ್ದರಿಂದಲೇ ಜನ್ಮಾಧಿಕರಣದಲ್ಲಿ ಸುಧೆಯು ಹೀಗೆ ಹೇಳಿದೆ - 'ಜೀವಸ್ಯ ಸ್ವರೂಪತಃ ಪ್ರಸಿದ್ಧತ್ವೇಽಪಿ ದೇಹಾತಿರಿಕ್ತೋಽವಿವಿಕ್ತತಯಾ ನ ಪ್ರಸಿದ್ಧಿಃ' 'ಜೀವನು ಸ್ವರೂಪತಃ ಸ್ಪಷ್ಟವಾಗಿ ತಿಳಿದಿದ್ದಾನೆ. ಆದರೆ ಶರೀರಾದಿಗಳಿಗಿಂತ ಭಿನ್ನನಾಗಿದ್ದಾನೆಂದು ತಿಳಿದಿಲ್ಲ' ಎಂದು. ಇದರಿಂದ ಏನು ಗೊತ್ತಾಗುತ್ತದೆಂದರೆ ಜೀವನು ಶರೀರಾದಿ ವಿಲಕ್ಷಣನೆಂಬ ವಿಷಯದಲ್ಲಿ ಸಂದೇಹಕ್ಕೆ ಅವಕಾಶವಿದೆ ಎಂದು ಸ್ಪಷ್ಟವಾಗುತ್ತದೆ.

ಅಥವಾ ಶರೀರಾದಿಭೇದವಿಷಯದಲ್ಲಿ ಮೌನ ವಹಿಸೋಣ. ಆದರೆ ಜೀವನು ಆನಂದ-ರೂಪನೋ? ಜ್ಞಾನರೂಪನೋ? ಅಣುವೋ? ಮಹತ್ತೋ? ಇತ್ಯಾದಿ ವಿಷಯವು ವಿಚಾರಯೋಗ್ಯ-ವಾಗಲು ಏನು ಬಾಧಕ?

ಆದ್ದರಿಂದ ಸುಧೆಯ ಅಭಿಪ್ರಾಯದಂತೆ ಶರೀರಾದಿಭೇದವು ತಿಳಿದ ವಿಷಯವೇ ಆಗಿದೆ ಎಂದು ನೀವು ಮಾಡಿದ ಶಂಕೆ ಅಸಮಂಜಸವಾಗಿದೆ. ಸುಧೆಯ ಅಭಿಪ್ರಾಯ ಹಾಗಿಲ್ಲವೆಂದು ತಿಳಿಯಬೇಕು. ಏನೇ ಆದರೂ ಪ್ರಾಭಾಕರ ಮತದಂತೆ ಪೂರ್ವಪಕ್ಷವನ್ನು ಮಾಡಲಾಗದು.

ಪ್ರಶ್ನೆ :- ಪ್ರಾಭಾಕರ ಹಾಗು ಅದ್ವೈತಿ ಇಬ್ಬರ ಮತವನ್ನೂ ಅವಲಂಬಿಸಿ ಪೂರ್ವಪಕ್ಷ ಮಾಡೋಣ. 'ವೇದವೆಲ್ಲವೂ ಕಾರ್ಯಪರವಾದ್ದರಿಂದ ಜೀವವಿಲಕ್ಷಣನಾದ ಬ್ರಹ್ಮನ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ' ಎಂಬುದನ್ನು ಪ್ರಾಭಾಕರರಂತೆ ಹೇಳೋಣ 'ಶರೀರಾದಿಭೇದ, ಅಣುತ್ವ ಮುಂತಾದ ಜೀವಾತಿರಿಕ್ತವಸ್ತುವು ಸತ್ಯವಲ್ಲ' ಎಂಬಂಶವನ್ನು ಅದ್ವೈತಮತವನ್ನು ಅವಲಂಬಿಸಿ ಹೇಳೋಣ. ಹೀಗೆ ಎರಡೂ ಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡಿದರೆ ಸುಧೆಯನ್ನೂ ಅನುಸರಿಸಿದಂತಾಗುತ್ತದೆ.

ಸಮಾಧಾನ :- ಇದೂ ಸರಿಯಲ್ಲ. ಜೀವವಿಲಕ್ಷಣನಾದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಿಲ್ಲವೆಂಬ ಅಂಶವನ್ನೂ ಅದ್ವೈತ ಮತದಂತೆಯೇ ಹೇಳಬಹುದು. ಅರ್ಧವನ್ನು ಮಾತ್ರ ಬಿಟ್ಟು ಪ್ರಾಭಾಕರರನ್ನು ಅನುಸರಿಸಿದರೆ ಅರ್ಧಜರತೀಯವಾಗುತ್ತದೆ.

ಪ್ರಶ್ನೆ :- ಹಾಗಾದರೆ ಸುಧೆಯಲ್ಲಿ ಕಾರ್ಯಪರತ್ವವನ್ನು ವೇದಕ್ಕೆ ಹೇಳಿದ್ದರ ಪ್ರಯೋಜನವೇನು? ವ್ಯರ್ಥವೇ?

ಸಮಾಧಾನ :- ಖಂಡಿತವಾಗಿಯೂ ವ್ಯರ್ಥವಲ್ಲ. ಅತಃ ಶಬ್ದಕ್ಕೆ ವ್ಯಾಖ್ಯಾನ ಮಾಡುವಂತಹ ಪ್ರಯೋಜನವಿದೆ. ಅತಃ ಶಬ್ದದ ಐದು ಅರ್ಥಗಳಲ್ಲಿ 'ಆಗಮವು ಸಿದ್ಧಪರವಾದ್ದರಿಂದ' ಎಂಬುದೂ ಒಂದು ಅರ್ಥ. ಈ ಅರ್ಥವನ್ನು ಏಕೆ ಹೇಳಬೇಕು? ಈ ಅರ್ಥವನ್ನು ಹೇಳಿದಾಗ ಯಾವ ಪೂರ್ವಪಕ್ಷದ ಪರಿಹಾರವಾಗುತ್ತದೆ? ಎಂಬುದರ ಸಮರ್ಥನೆಗಾಗಿ ಆಗಮಕ್ಕೆ ಕಾರ್ಯಪರತ್ವವನ್ನು ಹೇಳಿದ್ದಾರೆ. ಈ ಆಕ್ಷೇಪವು ಅತಃ ಶಬ್ದಾರ್ಥದಿಂದ ಪರಿಹಾರವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಟೀಕೆಯು ಬ್ರಹ್ಮಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ವರ್ಣಿಸಿದೆ, ಏಕೆಂದರ ಬ್ರಹ್ಮಶಬ್ದವು ಗುಣಪೂರ್ಣತ್ವವೆಂಬ ಅರ್ಥವನ್ನು ಹೇಳುವುದರಿಂದ ಅದ್ವೈತಿಗಳು ಹೇಳುವ ಜೀವಬ್ರಹ್ಮೈಕ್ಯವನ್ನು ನಿರಾಕರಿಸುತ್ತದೆ. ನ್ಯಾಯವಿವರಣೆಯನ್ನು ಅನುಸರಿಸಿ ಟೀಕೆಯಲ್ಲಿ ಹೀಗೆ ಹೇಳಲಾಗಿದೆ. ಆದ್ದರಿಂದ 'ಅತಃ' ಶಬ್ದದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವೇ ಬೇರೆ ಬ್ರಹ್ಮಶಬ್ದದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವೇ ಬೇರೆ. ಹೀಗಿರುವಾಗ ಎರಡನ್ನೂ ಒಂದೇ ಎಂದು ತಿಳಿದು ನೀವು ಮಾಡಿದ ಆಕ್ಷೇಪವು ಅತ್ಯಂತ ಅಸಮರ್ಪಕವಾಗಿದೆ. ಹೀಗೆ ಹೇಳಿದಾಗ ಸುಧೆಗೂ ಟೀಕೆಗೂ ಯಾವ ವಿರೋಧವೂ ಬರುವುದಿಲ್ಲ. ನ್ಯಾಯವಿವರಣದ ಮಾತಿಗೂ ಸ್ಪಷ್ಟವಾಗಿ ಅರ್ಥವಾಗುತ್ತದೆ.

ಇಲ್ಲಿಯ ತನಕ ಅದ್ವೈತಮತದಂತೆ ಪೂರ್ವಪಕ್ಷ ಮಾಡಬೇಕೆಂದು ಸಮರ್ಥಿಸಲಾಯಿತು. ಮುಂದ ಒಂದಂಶದಲ್ಲಷ್ಟೇ ಅದ್ವೈತಮತವನ್ನು ಅನುಸರಿಸಲಾಗಿದೆಯೆಂದು ಸಮರ್ಥಿಸುತ್ತಾರೆ.

## ಸಾರ

ಅಥವಾ ವೇದಾಂತ ಅನುವಾದಕವಾದರೆ ಏನು ಗತಿ ಎಂಬುದರ ಬಗ್ಗೆ ಪೂರ್ವಪಕ್ಷಿ ಸುಮ್ಮನಿರಲೂ ಸಾಧ್ಯವಿದೆ. ಪ್ರಮಾಣವಾದ ವೇದಾಂತದ ಬಗ್ಗೆ ಏನೂ ಹೇಳದೆ, 'ಬ್ರಹ್ಮನು ಅದ್ವೈತರೀತಿಯಿಂದ ಸ್ವಪ್ರಕಾಶಾತ್ಮ ಸ್ವರೂಪನಾದ್ದರಿಂದ ವಿಚಾರ ಯೋಗ್ಯನಲ್ಲ' ಎಂದು ಪ್ರಮೇಯದ ಬಗ್ಗೆ ಮಾತ್ರ ತನ್ನ ವಾದವನ್ನು ಮಂಡಿಸಬಹುದು.

### ಪೂರ್ವಪಕ್ಷ ಪ್ರಾಭಾಕರರೀತಿಯಿಂದಲ್ಲ

ಪ್ರಾಭಾಕರ ರೀತಿಯಿಂದ ಪೂರ್ವಪಕ್ಷವೆಂದರೆ ನ್ಯಾಯವಿವರಣ ವಿರೋಧ. ಅಲ್ಲಿ ಆತ್ಮ ಸ್ವಪ್ರಕಾಶ ಎಂದಿದೆ. ಅದು ವಸ್ತುಸ್ಥಿತಿಯ ಅಭಿಪ್ರಾಯದಿಂದ ಹೇಳಿದ್ದೆಂದರೂ ಪ್ರಾಭಾಕರ ರೀತಿಯಿಂದ ಪೂರ್ವಪಕ್ಷ ಮಾಡುವುದಾದರೆ ಜೀವಸ್ವರೂಪದ ಬಗ್ಗೆ ಸಂದೇಹವಿಲ್ಲದಿದ್ದರೂ ಶರೀರಾದಿ ವಿಲಕ್ಷಣತ್ವದಂಥ ಸತ್ಯವಸ್ತುಗಳು ವಿಚಾರ ವಿಷಯವಾಗುವ ಸಂಭವವಿದೆ. ಜೀವ ಆನಂದರೂಪನೆ ಅಲ್ಲವೆ? ಜ್ಞಾನರೂಪನೆ ಅಲ್ಲವೆ, ಅಣುವೆ, ಮಹತ್ತೆ ಎಂದು ಮುಂತಾಗಿ ವಿಚಾರ ಶಕ್ಯವಿದೆ. ವೇದವೆಲ್ಲ ಕಾರ್ಯಪರವಾದ್ದರಿಂದ ಜೀವವಿಲಕ್ಷಣನಾದ ಬ್ರಹ್ಮನ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ ಎಂಬ ಅಂಶದಲ್ಲಿ ಪ್ರಾಭಾಕರ ರೀತಿ. ಶರೀರಾದಿ ವಿಲಕ್ಷಣತ್ವಾದಿ ವಿಷಯದಲ್ಲಿ ಅವು ಸತ್ಯವಲ್ಲ, ತತ್ವಾವೇದಕವಾದ ವೇದಾಂತದಲ್ಲಿ ಅವುಗಳ ವಿಚಾರ ಶಕ್ಯವಿಲ್ಲವೆಂದು ಅದ್ವೈತರೀತಿ ಎಂದರೆ ಅರ್ಧಜರತೀಯನ್ಯಾಯವಾಗುತ್ತದೆ.

ಸುಧೆಯಲ್ಲಿ ಕಾರ್ಯಪರತ್ವ ಪೂರ್ವಪಕ್ಷವಿದೆ. ಆದರೆ ಅದು ಸೂತ್ರದ ಅತಃಶಬ್ದದಿಂದ ಪರಿಹಾರವಾಗುವ ಬೇರೆಯ ಒಂದು ಪೂರ್ವಪಕ್ಷ. ಪ್ರಕೃತ ಟೀಕೆಯಲ್ಲಿ ನ್ಯಾಯವಿವರಣಕ್ಕೆ ಅನುಸಾರವಾಗಿ ಬ್ರಹ್ಮಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ತೋರಿಸಲಾಗಿದೆ. ಏಕೆಂದರೆ ಬ್ರಹ್ಮಶಬ್ದ ಅದ್ವೈತಿಗಳು ಹೇಳುವ ಜೀವಬ್ರಹ್ಮೈಕ್ಯಕ್ಕೆ ವಿರೋಧಿ.

## ಅದ್ವೈತಮತಕ್ಕೆ ಜೋತುಬಿದ್ದ ಪೂರ್ವಪಕ್ಷವಲ್ಲ

**तात्पर्यचन्द्रिका –**

**अन्ये तु – 'आत्मनः स्वतःसिद्धत्वेऽपि प्रमाणतः सिद्ध्यभावात् तत्सिद्ध्यविषयत्वाद्वा तत्प्रत्यायकानां वेदान्तानां नानुवादकता' इत्याहुः । तदपि न । तत एवात्मनो विषयत्वस्यापि सम्भवेन निर्विषयत्वपूर्वपक्षायोगात् ।**

ಅನುವಾದ - ಇನ್ನು ಕೆಲವರು ಹೀಗೆ ಆಕ್ಷೇಪಿಸುತ್ತಾರೆ - ಶುದ್ಧಚಿನ್ಮಾತ್ರನು ಸ್ವತಃ ಸಿದ್ಧನಾಗಿದ್ದರೂ ಅಂತಃಕರಣವೃತ್ತಿಯಿಂದ ಸಿದ್ಧನಾಗಿಲ್ಲ. ಆದ್ದರಿಂದ ವೇದಾಂತಗಳು ಜ್ಞಾತಜ್ಞಾಪಕಗಳಾಗುವುದಿಲ್ಲ. ಅಥವಾ ಕರ್ತೃಕರ್ಮಭಾವಕ್ಕೆ ವಿರೋಧ ಬರುವುದರಿಂದ ಸ್ವರೂಪಜ್ಞಾನಕ್ಕೂ ಆತ್ಮನು ವಿಷಯನಾಗುವುದಿಲ್ಲ. ಹೀಗೆ ಮೊದಲು ತಿಳಿಯದ ಆತ್ಮನನ್ನು ವೇದಾಂತಗಳು ತಿಳಿಸುತ್ತವೆ. ಅನುವಾದಕತ್ವದೋಷವು ಬರುವುದಿಲ್ಲ. ಆದ್ದರಿಂದ ವೇದಾಂತಗಳು ಅನುವಾದಕಗಳಾಗುತ್ತವೆ ಎಂದು ಪೂರ್ವಪಕ್ಷದಲ್ಲಿ ಹೀಗೆ ಹೇಳಿದಿರಿ.

ಸಮಾಧಾನ - ಹೀಗೆ ಹೇಳಿದರೆ ವಿಚಾರವು ಅಕರ್ತವ್ಯ ಎಂಬ ಪೂರ್ವಪಕ್ಷವನ್ನು ಮಾಡಿಕೊಳ್ಳಲಾಗುವುದಿಲ್ಲ. ಮೊದಲು ತಿಳಿಯದ ಆತ್ಮನನ್ನು ತಿಳಿಸಲು ಹೊರಟ ವೇದಾಂತಗಳು ಆರಂಭಣೀಯವೇ ಆಗುತ್ತವೆ. ಆದರೆ ಟೀಕೆಯಲ್ಲಿ ವಿಷಯವಿಲ್ಲವಾದ್ದರಿಂದ ವೇದಾಂತಗಳು ಮತ್ತು ವಿಚಾರಶಾಸ್ತ್ರವು ಅನಾರಂಭಣೀಯಗಳಾಗುತ್ತವೆಂದು ಪೂರ್ವಪಕ್ಷ ಮಾಡಲಾಗಿದೆ. ನಿಮ್ಮ ಹೇಳಿದ ರೀತಿಯಲ್ಲಿ ನಿರ್ವಿಷಯತ್ವವನ್ನೇ ಸಮರ್ಥಿಸಲಾಗದು.

### ಕಠಿಣಪದಾರ್ಥ

**ಸ್ವತಃಸಿದ್ಧತ್ವೇಪಿ** = ಇತರ ಪ್ರಮಾಣಗಳ ಸಹಾಯವಿಲ್ಲದೆ 'ಅಹಂ' ಎಂದು ಸಿದ್ಧನಾಗಿದ್ದರೂ. **ತತ್ಸಿದ್ಧ್ಯವಿಷಯತ್ವಾತ್** = ಸ್ವರೂಪಜ್ಞಾನಕ್ಕೆ ವಿಷಯನಾಗದ ಕಾರಣ. **ಪ್ರಮಾಣತಃ ಸಿದ್ಧ್ಯಭಾವತ್** = ಸಾಕ್ಷಿ ಬಿಟ್ಟು ಇತರ ಪ್ರಮಾಣಗಳಿಂದ ಸಿದ್ಧನಾಗದ ಕಾರಣ. **ತತ್ಪ್ರತ್ಯಾಯಕಾನಾಮ್** = ಆತ್ಮನ ಜ್ಞಾನವನ್ನು ಹುಟ್ಟಿಸುವ. **ತತ ಏವ** = ಆತ್ಮನು ಅಜ್ಞಾತನಾದ್ದರಿಂದಲೇ.

**प्रकाशः –** ननु यद्यद्वैतरीत्या पूर्वपक्षः, तर्हि नानुवादकत्वं वेदान्तानाम् । पूर्वं शुद्धगोचरान्तःकरणवृत्तेरभावात् । स्वप्रकाशत्वेऽपि स्वरूपज्ञानविषयत्वस्य कर्तृकर्मत्वविरोधेन अनङ्गीकारात् ज्ञातज्ञापकत्वाभावात् । अन्यथा भामतीमते जिज्ञासाधिकरणसिद्धान्तानुन्मेषः स्यात् । तथाच अननुवादकत्वं वेदान्तानामभ्यु-

पेत्यैव पूर्वपक्षो वाच्य इत्युत्तानदृशां चोद्यमुद्भाव्य बाधकोक्त्या निरस्यति – अन्ये त्विति ।। 'स्वतः सिद्धत्वेऽपि' । स्वरूपज्ञानविषयत्वेऽपीत्यर्थः ।। तत्सिद्धीति ।। स्वरूपसिद्धीत्यर्थः ।। तत एवेति ।। आत्मनोऽज्ञातत्वादेवेत्यर्थः । ननु तन्मतेऽवेद्यत्वं स्वप्रकाशत्वमित्यङ्गीकारात् श्रुतितन्मीमांसयोर्निर्विषयत्वं युज्यते । अत एवोत्तरत्र –

> "यत् सत्यं नैव तद् वेद्यं यद् वेद्यं तन्न नैव सत् ।
> इति ते समयस्तत्र कुत्रार्थे शास्त्रमानता"

इति भवतामेव वचनम् । अत एव मायावादखण्डनटीकायाम् 'अवेद्यत्वं स्वप्रकाशत्वम्' इत्यङ्गीकाराद् वेदान्तानां वैयर्थ्यमित्युक्तम् । तथाच चैतन्यादन्यस्यासत्यत्वाच्चैतन्यस्य च सत्यस्यावेद्यत्वान्निर्विषयत्वेन वेदान्तानामविचार्यतया, नेदं शास्त्रमारम्भणीयमित्येव पूर्वपक्षः साधीयानिति चेन्न । टीकायामात्मनः स्वप्रकाशत्वेन असन्दिग्धत्वोपपादनविरोधात् । अवेद्यत्वे चैतन्यमवेद्यमित्यादिव्यवहारस्य स्वक्रियाविरोधेनायोगाच्च । कथं तर्ह्यनुवादकत्वसमर्थनमिति चेत् । अयमाशयः । यदुक्तं 'स्वतः सिद्धत्वेऽपि प्रमाणवृत्त्यभावात्' इति, तन्न अनुवादकत्वे हि ज्ञातमात्रज्ञापकत्वं तन्त्रं, नतु सजातीयाप्रमाणेन । तथाच स्वरूपज्ञानविषयत्वेन सिद्धशुद्धपरत्वेऽनुवादकत्वं स्यादेव । अन्यथा वायुक्षेपिष्ठादीनामनुवादकत्वं न स्यात् । परमते शास्त्रयोन्याद्यधिकरणपूर्वपक्षायोगापाताच्च । यदपि 'तत्सिद्ध्यविषयत्वात्' इति, तदपि न । मामहं जानामीत्यनुभवविरोधात् । अन्यस्य च मिथ्यात्वेन तद्विषयत्वे भ्रान्तित्वापत्तेः, मुक्तौ तदभावेन तद्विषयत्वायोगाच्च, स्वरूपविषयत्वावश्यंभावात् । अन्यथा स्वरूपचितो ज्ञानत्वस्य दुर्घटत्वात् । विस्तृतं चैतज्जडत्वहेतुभङ्गे । ननु तर्हि नेयमद्वैतिरीतिः । तन्मते स्वरूपचितः स्वविषयत्वानङ्गीकारात् । तथाच कथम् 'अद्वैतिरीत्या' इत्युक्तिः? इति चेत् । अत्राहुः । न सर्वांशे अद्वैतिरीतिरिति तस्याभिप्रायः । किन्तु वेदान्तानां चिन्मात्रपरत्व एव । अत एव पूर्वं तथैवोक्तम् । स्वप्रकाशसिद्धत्वोक्तिस्तु सिद्धान्तिदिशा वा न्यायप्राप्ततया वा वास्तवाभि-

प्रायेण वा युक्ता । अत एव सुधायां त्रेधाऽपि सिद्धत्वमुक्तम् । अत एव चात्र, (अन्यथा) श्रवणविधेः विचारविधित्वमद्वैत्यभिमतं प्रत्याख्याय, मननविधेर्विचारविधित्वमुपेत्य गतिर्वक्ष्यते । अन्यथा श्रवणविधेरेव सा वक्तव्या स्यात् ।

ननु चैवं प्राभाकररीत्या वेदस्य कार्यपरत्वमुपेत्य, स्वप्रकाशत्वोक्तेर्वास्तवत्वाभाववर्णनं क्रियताम् । एवंच सुधानुकूलिता भवति । अननुवादकत्वं चानुगृहीतं भवति । तथाच कृत्स्नस्य वेदस्य कार्यपरत्वेन जीवान्यब्रह्मणि मानाभावाज्जीवचैतन्यस्य च सिद्धान्तिदिशा वस्तुतो न्यायतो वा स्वप्रकाशत्वान्न जिज्ञास्यतेति पूर्वपक्षो युक्त इति चेन्न । एतावता अतश्शब्दव्यावर्त्यपूर्वपक्षलाभेऽपि ब्रह्मशब्दव्यावर्त्यपूर्वपक्षालाभात् । कार्यपरत्वनिरासस्य ब्रह्मशब्देनालाभात् । न च जीवान्यब्रह्मानङ्गीकाराद् ब्रह्मशब्दव्यावर्त्योऽपि पूर्वपक्षः सेत्स्यतीति वाच्यम् । एवं तर्हि जीवस्य देहादिभिन्नत्वेन विचार्यत्वसंभवेन शास्त्रानारम्भासिद्धेश्चेत्युक्तत्वादिति ।। यद्वा – परैरपि स्वव्यवहारनिर्वाहकत्वं शुद्धचितोऽङ्गीकृतम् । तद्व्यवहारहेतुत्वमेव तद्विषयत्वमिति वा, "चित्सुखेन तत्स्वभावस्यापि स्फुरणस्य तद्विषयत्वमित्युक्तत्वेन" इत्यादिना न्यायामृते स्वप्रकाशत्वभङ्गादौ, स्वविषयत्वस्य चितोऽपि चित्सुखमतत्वेनोक्ततया, तद्रीत्या तद्विषयत्वमिति वा पूर्वपक्ष्याशयः । यथोक्तं भावप्रकाशिकायां ग्रन्थकृतैव "अनतिरेके स्वप्रकाशत्वादात्मनः सिद्धसाधनता" इत्येतद्व्याख्यावसरे "यद्यपि परैः स्वग्रन्थेषु" 'स्वप्रकाशात्ममात्रस्य स्वतस्सिद्धिसम्भवेन" इति "स्वतस्सिद्धतायामपि तदुपपत्तेः" इति, "विज्ञानमेव स्वप्रकाशस्वभावं प्रकाशते" इति, "स्वभावभेदादेव च स्वात्मनि व्यवहारं कुर्यात्" इति च तत्रतत्र वदद्भिः स्वप्रकाशस्यात्मनः स्वकर्मत्वाभावेऽपि स्वजन्यव्यवहारविषयत्वयोग्यत्वलक्षणा स्वतस्सिद्धिरिष्यते । तादृशात्माभिन्नाद्वैतं बोधयतः शास्त्रस्य सिद्धसाधनत्वं परगीत्यैव वक्तुं शक्यम्" इत्यादि ।। तथाचैवं निष्कर्षः – अद्वैतिरीत्या वेदान्तानां अखण्डप्रत्यगात्मपरत्वं, प्रत्यगात्मनश्च स्वप्रकाशसिद्धत्वं सिद्धान्त्यभिमताद्यभिप्रायेणेति, निर्विषयत्वादिति हेतुर्युक्त एवेति ।

ವಿವರಣೆ - ಪ್ರಶ್ನೆ :- 'ವೇದಾಂತಗಳು' ಅನುವಾದಕಗಳಾದ್ದರಿಂದ ವಿಚಾರಾನರ್ಹ' ಎಂದು ಪೂರ್ವಪಕ್ಷ ಮಾಡಿದಿರಿ. ಆದರೆ ಅದ್ವೈತಮತವನ್ನು ಅವಲಂಬಿಸಿ ಪೂರ್ವಪಕ್ಷ ಮಾಡುವುದಕ್ಕೆ

ಅನುವಾದಕತ್ವವನ್ನು ಹೇಳಲಾಗದು. ಅದ್ವೈತಮತದಂತೆ ಶುದ್ಧಾತ್ಮನು ಅನುಭವವೇದ್ಯನಾಗಲು ಸಾಧ್ಯವೇ ಇಲ್ಲ. ಶುದ್ಧಾತ್ಮನನ್ನು ಚರಮವೃತ್ತಿಯಿಂದಷ್ಟೇ ತಿಳಿಯಬೇಕು. ಚರಮವೃತ್ತಿಯಾದರೂ ಈಗ ಇರುವುದಿಲ್ಲ. ಈಗ ಇರುವ ಆತ್ಮನ ಅನುಭವದಿಂದಲೂ ತಿಳಿಯಲು ಆಗುವುದಿಲ್ಲ. ಸ್ವಪ್ರಕಾಶವಾದ ಅನುಭವದಿಂದ ತಿಳಿಯುತ್ತಾನೆಂದರೆ ತನ್ನನ್ನು ತಾನೇ ಗ್ರಹಿಸಿದಂತಾಗುತ್ತದೆ. ಹಾಗಾದಲ್ಲಿ ಒಂದು ಕ್ರಿಯೆಗೆ ಕರ್ತೃ ಹಾಗು ಕರ್ಮಗಳನ್ನು ಒಂದೇ ಎಂದಂತಾಗುತ್ತದೆ. ಒಂದೇ ಕಡೆ ಕರ್ತೃಕರ್ಮಭಾವವು ವಿರುದ್ಧವಾಗಿದೆ. ಆದರಿಂದ ಆತ್ಮಸ್ವರೂಪವು ಮೊದಲೇ ತಿಳಿದಿರಲು ಸಾಧ್ಯವಿಲ್ಲ. ಅದನ್ನು ವರ್ಣಿಸುವ ವೇದಾಂತವು ಅನುವಾದಕವಾಗಲೂ ಸಾಧ್ಯವಿಲ್ಲ.

ಶುದ್ಧಾತ್ಮನು ಸಂಸಾರದಶೆಯಲ್ಲಿ ಭಾಸಮಾನನಾಗುವುದಿಲ್ಲವೆಂದು ಭಾಮತೀಕಾರ ಸ್ಪಷ್ಟವಾಗಿ ಹೇಳಿದ್ದಾನೆ. (ಈ ವಿಚಾರವು ಹಿಂದೆ ಭಾಮತಿಯನ್ನು ಖಂಡಿಸುವಾಗ ಪ್ರಸಕ್ತವಾಗಿತ್ತು) ಈಗ ನೀವು ಅದಕ್ಕೆ ವಿರುದ್ಧವಾಗಿ ಹೇಳಿದರೆ ಭಾಮತಿಯ ಜಿಜ್ಞಾಸಾಧಿಕರಣಸಿದ್ಧಾಂತ ಹೊರಡಲು ಸಾಧ್ಯವಿಲ್ಲ. ಆದ್ದರಿಂದ ವೇದಾಂತಗಳಿಗೆ ಅನುವಾದಕತ್ವವನ್ನು ಹೇಳದೆ ಪೂರ್ವಪಕ್ಷವನ್ನು ಮಾಡಬೇಕು. ಹೀಗೆ ಕೆಲವರು ಆಕ್ಷೇಪಿಸುತ್ತಾರೆ. (ಇಲ್ಲಿಯೂ ಸಹ 'ಅನ್ಯೇ ತು' ಎಂದು ಗ್ರಂಥಕಾರರೇ ಊಹಿಸಿದ ಪಕ್ಷವೆಂದು ತಿಳಿಯಬೇಕು)

ಉತ್ತರ :- ಕೆಲವರ ಈ ಆಕ್ಷೇಪವೂ ಅರ್ಥವಿಲ್ಲದ್ದು. ಇವರ ಮಾತು ಮೇಲ್ನೋಟಕ್ಕಷ್ಟೇ ರಮಣೀಯವಾಗಿದೆ. ('ಉತ್ತಾನದೃಶಾಂ' ಎಂದರೆ ಮೇಲಿನ ಅರ್ಥದಲ್ಲಷ್ಟೇ ದೃಷ್ಟಿಯುಳ್ಳವರು ಎಂದರ್ಥ)

ಆತ್ಮನು ಸಂಸಾರದಶೆಯಲ್ಲಿ ತಿಳಿದಿಲ್ಲವೆಂದರೆ ಆ ಕಾರಣದಿಂದಲೇ ಆತ್ಮನು ವಿಚಾರಕ್ಕೆ ಯೋಗ್ಯನಾಗುತ್ತಾನೆ. ವೇದಾಂತಗಳಿಗೆ ಆತ್ಮನು ವಿಷಯನಾಗುತ್ತಾನೆ. ವಿಷಯವೇ ಇಲ್ಲವೆಂಬ ಪೂರ್ವಪಕ್ಷವನ್ನು ಹೇಗೆ ತಾನೆ ಮಾಡಲು ಸಾಧ್ಯ?

ಪ್ರಶ್ನೆ :- ಪೂರ್ವಪಕ್ಷದ ಸಿದ್ಧಿಗೋಸ್ಕರ ಅದ್ವೈತಿಗಳಿಗೆ ವಿರುದ್ಧವಾದ್ದನ್ನು ಸಮರ್ಥಿಸುವುದು ಅಪ್ರಾಮಾಣಿಕಮಾರ್ಗ. ಹಾಗೆ ಒಪ್ಪಿದರೂ ಪೂರ್ವಪಕ್ಷವನ್ನು ಬೇರೆ ರೀತಿಯಲ್ಲಿ ಮಾಡಬಹುದು. ಅದ್ವೈತಿಗಳು ಸ್ವಪ್ರಕಾಶವೆಂದರೆ ಅವೇದ್ಯವೆಂದು ಹೇಳುತ್ತಾರೆ. ಆತ್ಮನು ಸ್ವಪ್ರಕಾಶನೆಂದರೆ ವೇದಾಂತದಿಂದಾಗಲೀ ವಿಚಾರಶಾಸ್ತ್ರದಿಂದಾಗಲೀ ತಿಳಿಯಲಾರ ಎಂದರ್ಥ. ಆದ್ದರಿಂದ ಆತ್ಮನು ವಿಷಯನಾಗುವುದಿಲ್ಲ. ವಿಷಯವಿಲ್ಲವೆಂಬ ಪೂರ್ವಪಕ್ಷವನ್ನು ಸುಲಭವಾಗಿ ಮಾಡಬಹುದು. ನೀವೇ ಮುಂದೆ ಹೀಗೆ ಹೇಳುತ್ತೀರಿ -

> 'ಯತ್ ಸತ್ಯಂ ನೈವ ತದ್ವೇದ್ಯಂ ಯದ್ ವೇದ್ಯಂ ತಚ್ಚ ನೈವ ಸತ್ ।
> ಇತಿ ತೇ ಸಮಯಸ್ತತ್ರ ಕುತ್ರಾರ್ಥೇ ಶಾಸ್ತ್ರಮಾನತಾ' ॥

'ಯಾವುದು ಸತ್ಯವೋ ಅದು ವೇದ್ಯವಲ್ಲವೆಂದು ನೀವು ಹೇಳುತ್ತೀರಿ. ಹೀಗಿರುವಾಗ ಶಾಸ್ತ್ರವು ಯಾವ ವಿಷಯದಲ್ಲಿ ಪ್ರಮಾಣವೆನಿಸುತ್ತದೆ'? ಎಂದು. ಇದನ್ನೇ ಮಾಯಾವಾದಖಂಡನದ

ಟೀಕೆಯಲ್ಲಿಯೂ ಹೇಳಿದೆ - 'ಅವೇದ್ಯತ್ವಂ ಸ್ವಪ್ರಕಾಶತ್ವತ್ವಮಿತ್ಯಂಗೀಕಾರಾದ್ ವೇದಾಂತಾನಾಂ ವೈಯರ್ಥ್ಯಮ್' 'ಸ್ವಪ್ರಕಾಶತ್ವವೆಂದರೆ ಅವೇದ್ಯತ್ವ ಎಂದು ನೀವು ಅಂಗೀಕರಿಸಿರುವುದರಿಂದ ವೇದಾಂತಗಳೆಲ್ಲವೂ ವ್ಯರ್ಥವಾಗುತ್ತವೆ' ಎಂದು. ಆದ್ದರಿಂದ ಆತ್ಮನು ಅವೇದ್ಯನೆಂದು ಸಿದ್ಧ-ವಾಯಿತು. ಸತ್ಯನಾದ ಆತ್ಮನು ಅವೇದ್ಯನಾದ್ದರಿಂದ ಶಾಸ್ತ್ರಪ್ರತಿಪಾದ್ಯನಾಗಲಾರನು. ಆಕಾಶಾದಿಪ್ರಪಂ-ದ್ದಲ್ಲವೂ ಮಿಥ್ಯಾಭೂತಗಳಾದ್ದರಿಂದ ಶಾಸ್ತ್ರಪ್ರತಿಪಾದ್ಯವಾಗಲಾರವು. ಹೀಗೆ ಆತ್ಮನಾಗಲಿ ಆಕಾಶಾದಿಪ್ರಪಂ ಜಗತ್ತಾಗಲೀ ವಿಷಯಗಳಾಗದಿರುವುದರಿಂದ ವೇದಾಂತಕ್ಕೆ ಮತ್ತು ವಿಚಾರಶಾಸ್ತ್ರಕ್ಕೆ ವಿಷಯವೇ ಇಲ್ಲವೆಂದಂತಾಯಿತು. ವಿಷಯವೇ ಇಲ್ಲದಿದ್ದಾಗ ಶಾಸ್ತ್ರವನ್ನಾದರೂ ಏಕೆ ಪ್ರಾರಂಭ ಮಾಡಬೇಕು? ಹೀಗೆ ಶಾಸ್ತ್ರದ ಅನಾರಂಭಣೀಯತ್ವವನ್ನು ಸಮರ್ಥಿಸಲು ಬರುತ್ತದೆ.

ಉತ್ತರ :- ನೀವು ಹೇಳಿದ ಪ್ರಕಾರ ಪೂರ್ವಪಕ್ಷ ಮಾಡಿದರೆ ಟೀಕೆಗೆ ವಿರೋಧ ಬರುತ್ತದೆ ಟೀಕೆಯಲ್ಲಿ ಆತ್ಮನು ಸ್ವಪ್ರಕಾಶನಾದ್ದರಿಂದ ನಿತ್ಯಸಿದ್ಧನಾಗಿದ್ದಾನೆಂದು ಸ್ಪಷ್ಟವಾಗಿ ಹೇಳಲಾಗಿದೆ. ಅದಕ್ಕೆ ವಿರುದ್ಧವಾಗಿ ನೀವು ಆತ್ಮನನ್ನು ಸಿದ್ಧನಲ್ಲವೆಂದರೆ ವಿರೋಧ ಬರುತ್ತದೆ. ಮತ್ತು ಸ್ವಪ್ರಕಾಶತ್ವವೆಂದರೆ ಅವೇದ್ಯತ್ವ ಎಂದು ಹೇಳಿದಿರಿ. ಇದು ಸರಿಯಲ್ಲ. 'ಅವೇದ್ಯ' ಎಂದರೆ ತಿಳಿಯಲಾಗದು ಎಂದರ್ಥ. ತಿಳಿಯಲಾಗದ್ದನ್ನು ತಿಳಿಯಲಾಗದು ಎಂಬ ಮಾತಿನಿಂದ ತಿಳಿಸಲು ಹೊರಟರೆ ಸ್ವಕ್ರಿಯಾವಿರೋಧ ಬರುತ್ತದೆ.

ಪ್ರಶ್ನೆ :- ಆತ್ಮಸ್ವರೂಪವು ಸ್ವಪ್ರಕಾಶಸಿದ್ಧವೆಂದು ಒಪ್ಪಿದರೂ ಅದರ ವಿಷಯದಲ್ಲಿ ಅಂತಃಕರಣವೃತ್ತಿ ಇನ್ನೂ ಬಂದಿಲ್ಲ. ಪ್ರಮಾಣದಿಂದಲೂ ಸಿದ್ಧವಾಗಿಲ್ಲ. ಹೀಗಿರುವಾಗ ವೇದಾಂತಗಳಿಗೆ ಪ್ರಮಾಣಸಿದ್ಧತ್ವವನ್ನು ಸಮರ್ಥಿಸಲಾಗದು, ಎಂಬ ನಮ್ಮ ಹಿಂದಿನ ಪ್ರಶ್ನೆಗೆ ಏನು ಉತ್ತರ?

ಉತ್ತರ :- ಅನುವಾದಕವಾಗಬೇಕಾದರೆ ಜ್ಞಾತಜ್ಞಾಪಕವಾದರೆ ಸಾಕು. ಸಜಾತೀಯ ಪ್ರಮಾಣದಿಂದಲೇ ಸಿದ್ಧವಾಗಿರಬೇಕೆಂದೇನು ನಿಯಮವಿಲ್ಲ. ಪ್ರಕೃತ ಸ್ವಪ್ರಕಾಶವಾದ ಅನುಭವದಿಂದ ಆತ್ಮಸ್ವರೂಪವು ಸಿದ್ಧವಾಗಿದೆ. ಅದನ್ನೇ ವೇದಾಂತವು ಪ್ರತಿಪಾದಿಸುತ್ತಿರುವುದರಿಂದ ಅನುವಾದಕ-ವಾಯಿತು. ಹೀಗೆ ಒಪ್ಪದಿದ್ದರೆ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇವೇ ಮೊದಲಾದ ಅರ್ಥವಾದ-ವಾಕ್ಯಗಳೂ ಸಹ ಅನುವಾದಕಗಳಾಗದಿರಬೇಕಾದೀತು. ಆದರೆ ಮೀಮಾಂಸಕರು ಇದನ್ನು ಅನುವಾದಕ-ವೆಂದು ಅಂಗೀಕರಿಸಿದ್ದಾರೆ. ಹಿಂದೆ ಹೇಳಿದಂತೆ ರಾಮಾನುಜಮತದಲ್ಲಿ ಮಾಡಿದ ಶಾಸ್ತ್ರಯೋನಿತ್ವಾಧಿ-ಕರಣದ ಪೂರ್ವಪಕ್ಷವೂ ಸಹ ಅಸಮಂಜಸವೆಂದಾದೀತು.

ಮತ್ತು ಹಿಂದೆ 'ಕರ್ತೃಕರ್ಮಗಳಿಗೆ ಐಕ್ಯವನ್ನು ಹೇಳಿದಂತಾಗುತ್ತದೆ ಇದು ವಿರುದ್ಧ' ಎನ್ನಲಾಗಿತ್ತು ಇದೂ ಸಹ ಸರಿಯಲ್ಲ 'ಮಾಮಹಂ ಜಾನಾಮಿ' 'ನಾನು ನನ್ನನ್ನು ತಿಳಿದಿದ್ದೇನೆ' ಎಂದು ಎಲ್ಲರಿಗೂ ಅನುಭವವಿದೆ. ತನ್ನ ಅನುಭವಕ್ಕೆ ತಾನೆ ವಿಷಯನಾಗಬೇಕು. ಉಳಿದೆಲ್ಲವೂ ಮಿಥ್ಯಾಭೂತಗಳಾದ್ದರಿಂದ ಅವುಗಳನ್ನು ವಿಷಯವೆಂದು ಹೇಳಿದರೆ ಸ್ವರೂಪಜ್ಞಾನವು ಭ್ರಾಂತ್ಯಾತ್ಮಕವಾಗಬೇಕಾದೀತು. ಅಷ್ಟೇ ಅಲ್ಲದೇ ಮುಕ್ತರಾದ ಮೇಲೆ ಯಾವ ವಸ್ತುಗಳೂ ಇರುವುದಿಲ್ಲ. ಈಗ ಸ್ವರೂಪಜ್ಞಾನಕ್ಕೆ ಆಗ

ಪದಾರ್ಥಗಳು ವಿಷಯಗಳಾಗಿವೆ ಎಂದೊಪ್ಪಿದರೆ ಮುಕ್ತಿಯಲ್ಲಿ ಈ ಅನುಭವವನ್ನು ಉಪಪಾದಿಸಲಾಗದು. ಆದ್ದರಿಂದ ಅನಿವಾರ್ಯವಾಗಿ ಆತ್ಮನನ್ನೇ ವಿಷಯನೆಂದು ಒಪ್ಪಿಕೊಳ್ಳಬೇಕು. ಒಂದುವೇಳೆ ಯಾವುದೂ ವಿಷಯವಲ್ಲವೆಂದರೆ ಅದು ಜ್ಞಾನವೆನಿಸಲಾರದು. ನ್ಯಾಯಾಮೃತದ ಜಡತ್ವಹೇತುಭಂಗ ಪ್ರಕರಣದಲ್ಲಿ ಇದರ ವಿಸ್ತಾರವಿದೆ.

ಪ್ರಶ್ನೆ :- ಹಾಗಾದರೆ ಆತ್ಮನ ಜ್ಞಾನಕ್ಕೆ ಆತ್ಮನೇ ವಿಷಯನೆಂದು ನೀವು ಹೇಳಿದಂತಾಯಿತು. ಅದು ಅದ್ವೈತಮತವಲ್ಲ. ಅದ್ವೈತಿಗಳು ತನ್ನ ಅನುಭವಕ್ಕೆ ತಾನೇ ವಿಷಯನೆಂದು ಹೇಳುವುದಿಲ್ಲ. ಸಂಪೂರ್ಣ ಅದ್ವೈತಮತದಂತೆ ಪೂರ್ವಪಕ್ಷವನ್ನು ಮಾಡಿದಂತಾಗಲಿಲ್ಲ.

ಉತ್ತರ :- ವೇದಾಂತಗಳು ಚಿನ್‌ಮಾತ್ರಪರ ಎಂಬಂಶದಲ್ಲಷ್ಟೇ ಅದ್ವೈತಮತವನ್ನು ಅನುಸರಿಸಿದ್ದೇವೆ. ಹೊರತು ಸಂಪೂರ್ಣವಾಗಿ ಅದ್ವೈತಮತವನ್ನು ಇಟ್ಟುಕೊಂಡೇ ಇಲ್ಲ. ಗ್ರಂಥಕಾರರೂ ಹಿಂದೆ ಹೀಗೆಯೇ ಹೇಳಿದ್ದಾರೆ. ಆದ್ದರಿಂದ ಆತ್ಮನಿಗೆ ಸ್ವಪ್ರಕಾಶತ್ವೇನ ನಿತ್ಯಸಿದ್ಧತ್ವವನ್ನು ಸಿದ್ಧಾಂತರೀತಿಯಿಂದ ಹೇಳಲಾಗಿದೆ.

ಅಥವಾ ಸ್ವಪ್ರಕಾಶತ್ವವನ್ನು ಒಪ್ಪಿದ ಮೇಲೆ ನಿತ್ಯಸಿದ್ಧತ್ವವು ಯುಕ್ತಿಯುಕ್ತವಾಗಿರುವುದರಿಂದ ವಾಸ್ತವವಾಗಿದೆ. ಇದನ್ನು ಅದ್ವೈತಿಗಳೂ ಒಪ್ಪಿಕೊಳ್ಳಬೇಕು. ಅದ್ವೈತಿಗಳು ಹೇಳದ ಅಂಶವನ್ನು ಸೇರಿಸಿದ್ದೇವೆ. ಆದ್ದರಿಂದಲೇ ಸುಧೆಯಲ್ಲಿ ಮೂರು ಪ್ರಕಾರಗಳಲ್ಲಿ ಅನುಭವಸಿದ್ಧತ್ವವನ್ನು ಉಪಪಾದಿಸಲಾಗಿದೆ. ಇದೇ ಗ್ರಂಥದಲ್ಲಿಯೂ ಕೂಡ ಮುಂದೆ ಶ್ರವಣವಿಧಿಯೇ ವಿಚಾರವಿಧಿ ಎಂದು ಸಮರ್ಥಿಸುವ ಅದ್ವೈತಮತವನ್ನು ನಿರಾಕರಿಸಿ ಮನನವಿಧಿಗೆ ವಿಚಾರವಿಧಿತ್ವವನ್ನು ಸಮರ್ಥಿಸಲಾಗುತ್ತದೆ.

ಪ್ರಶ್ನೆ :- ಕೆಲವಂಶಗಳಲ್ಲಷ್ಟೇ ಅದ್ವೈತಮತವನ್ನು ಅನುಸರಿಸುವುದಾದರೆ, ಕೆಲವಂಶಗಳನ್ನಷ್ಟೇ ಅನುಸರಿಸಿ ಪ್ರಾಭಾಕರರ ಮತದಂತೆಯೂ ಪೂರ್ವಪಕ್ಷ ಮಾಡಬಹುದು. ವೇದಗಳಿಗೆ ಕಾರ್ಯಪರತ್ವವನ್ನು ಅಂಗೀಕರಿಸಿ ವೇದಾಂತಕ್ಕೆ ಅನಾರಂಭಣೀಯತ್ವವನ್ನು ಸಮರ್ಥಿಸಿ, ಸ್ವಪ್ರಕಾಶತ್ವವನ್ನು ಹೇಳಿದ ಟೀಕೆಯು ವಾಸ್ತವಸಿದ್ಧಾಂತದೃಷ್ಟಿಯಿಂದ ಹೊರಟಿದೆ ಎನ್ನೋಣ ಏನು ತಪ್ಪು? ಹೀಗೆ ಹೇಳಿದಾಗ ಸುಧೆಯ ಮಾತುಗಳೂ ಅನುಕೂಲಗಳಾಗುತ್ತವೆ. ವೇದಾಂತಗಳು ಅನುವಾದಕಗಳೆಂದು ಹೇಳುವ ಕ್ಲೇಶವೂ ಇಲ್ಲ.

ಸಮಗ್ರವೇದಗಳು ಕಾರ್ಯಪರವಾದ್ದರಿಂದ ಜೀವನಿಗಿಂತ ಭಿನ್ನನಾದ ಬ್ರಹ್ಮನ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಜೀವಚೈತನ್ಯನಾದರೂ ಸಿದ್ಧಾಂತದಂತೆ ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಜಿಜ್ಞಾಸ್ಯನಲ್ಲ ಎಂಬ ಪೂರ್ವಪಕ್ಷವು ಸಮಂಜಸವೇ ಆಗಿದೆ.

ಉತ್ತರ :- ಇದೂ ಸಹ ತಪ್ಪು. ಹಾಗೆ ಮಾಡಿದರೆ ಅಸಂಗತವಾಗುತ್ತದೆ. ಪ್ರಕೃತ 'ಅತಃ' ಶಬ್ದದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನಷ್ಟೇ ಹೇಳಬೇಕು. ಕಾರ್ಯಪರತ್ವವು ಬ್ರಹ್ಮಶಬ್ದದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವಾಗಿದೆ. ಈ ಪೂರ್ವಪಕ್ಷವು ಬ್ರಹ್ಮಶಬ್ದದಿಂದ ಪರಿಹಾರವಾಗದಿದ್ದಾಗ ಇಲ್ಲೇಕೆ ಹೇಳಬೇಕು?

ಪ್ರಶ್ನೆ :- ವೇದಗಳ ಕಾರ್ಯಪರತ್ವವೂ ಸಹ ಬ್ರಹ್ಮಶಬ್ದದಿಂದ ಪರಿಹಾರವಾಗುತ್ತದೆ. ಹೇಗೆಂದರೆ - ಒಂದು ವೇಳೆ ವೇದವು ಕಾರ್ಯಪರವಾದರೆ ಬ್ರಹ್ಮನು ಜೀವಾತಿರಿಕ್ತ ಎಂದು ಪ್ರಮಾಣದಿಂದ ಸಿದ್ಧವಾಗುವುದಿಲ್ಲ. ಯಾವಾಗ ಸೂತ್ರದಲ್ಲಿನ ಬ್ರಹ್ಮಶಬ್ದವು ಬ್ರಹ್ಮನನ್ನು ಸಮರ್ಥಿಸುತ್ತದೋ, ಆವಾಗ ವೇದವು ಕಾರ್ಯಪರವಾಗಲು ಸಾಧ್ಯವಿಲ್ಲ. ಹೀಗೆ ಕಾರ್ಯಪರತ್ವದ ಪೂರ್ವಪಕ್ಷವೂ ಸಹ ಬ್ರಹ್ಮಶಬ್ದದಿಂದಲೇ ಪರಿಹಾರವಾಗುತ್ತದೆ.

ಉತ್ತರ :- ಆದರೂ ಸಹ ದೇಹಾದಿಗಳಿಗಿಂತ ಜೀವನು ಭಿನ್ನನೋ? ಅಭಿನ್ನನೋ? ಎಂಬ ವಿಷಯದಲ್ಲಿ ವಿಚಾರವು ಕೂಡಬಹುದು. ಶಾಸ್ತ್ರವು ಅನಾರಂಭಣೀಯವೆಂದು ಪೂರ್ವಪಕ್ಷವನ್ನ ಮಾಡಲಾಗುವುದಿಲ್ಲ. ಈ ವಿಷಯವನ್ನು ಈ ಹಿಂದೆಯೇ ಹೇಳಿದ್ದೇವೆ.

ಅಥವಾ ಮತ್ತೊಂದು ಪ್ರಕಾರ ಪೂರ್ವಪಕ್ಷವನ್ನು ಚಿಂತಿಸಬಹುದು - ಇಲ್ಲಿಯ ತನಕ ವೇದಾಂತಗಳಿಗೆ ಅನುವಾದಕತ್ವವನ್ನು ನಮ್ಮ ಸಿದ್ಧಾಂತದಿಂದ ಸಮರ್ಥಿಸಿ ಒಂದಂಶದಲ್ಲಷ್ಟೇ ಅದ್ವೈತಮತವನ್ನು ಅನುಸರಿಸಲಾಗಿತ್ತು. ಪ್ರಕೃತ ಅನುವಾದಕತ್ವವನ್ನೂ ಅದ್ವೈತಿಗಳಂತೆ ಸಮರ್ಥಿಸಬಹುದು. ಆತ್ಮನು ಸ್ವಪ್ರಕಾಶವಾದ ಅನುಭವಕ್ಕೆ ವಿಷಯನಾಗಿದ್ದಾನೆ. ಇಲ್ಲಿ ವಿಷಯತ್ವ ಎಂದರೆ 'ವ್ಯವಹಾರನಿರ್ವಾಹಕತ್ವ' ಎಂದು ತಿಳಿಯಬೇಕು. 'ಆತ್ಮವಿಷಯಕವಾದ ವ್ಯವಹಾರವನ್ನು ನಿರ್ವಾಹ ಮಾಡತಕ್ಕದ್ದು' ಎಂದು ಇದರರ್ಥ. ಇಂತಹ ವಿಷಯತ್ವವನ್ನು ಅದ್ವೈತಿಗಳು ಶುದ್ಧಾತ್ಮನಲ್ಲಿಯೂ ಒಪ್ಪಿದ್ದಾರೆ. ಆದ್ದರಿಂದ ಶುದ್ಧಾತ್ಮನು ಸಿದ್ಧನೆಂದಂತಾಯಿತು. ಇದನ್ನೇ ವೇದಾಂತಗಳು ಪ್ರತಿಪಾದಿಸಲು ಹೊರಟರೆ ಅನುವಾದಕತ್ವವು ಅವಶ್ಯವಾಗಿ ಬರುತ್ತದೆ.

ಅಥವಾ 'ವ್ಯವಹಾರಹೇತುತ್ವ'ವನ್ನೇ ವಿಷಯತ್ವವೆಂದು ಹೇಳಬಹುದು. ಅಂದರೆ ವ್ಯವಹಾರಕ್ಕೆ ಯಾವುದು ವಿಷಯವೋ ಅನುಭವಕ್ಕೂ ಅದೇ ವಿಷಯವೆಂದರ್ಥ. ಈ ಅರ್ಥವನ್ನು ಇಟ್ಟುಕೊಂಡಾಗಲೂ ಆತ್ಮನು ತನ್ನ ಸ್ವಪ್ರಕಾಶಾನುಭವಕ್ಕೆ ವಿಷಯನಾಗುತ್ತಾನೆ. ಇದನ್ನೇ ನ್ಯಾಯಾಮೃತದ ಸ್ವಪ್ರಕಾಶತ್ವಭಂಗಪ್ರಕರಣದಲ್ಲಿ ಹೀಗೆ ಹೇಳಿದೆ - 'ಚಿತ್ಸುಖೇನ ತತ್ಸ್ವಭಾವಸ್ಯಾಪಿ ಸ್ಫುರಣಸ್ಯ ತದ್ವಿಷಯತ್ವಮಿತ್ಯುಕ್ತತ್ವೇನ' 'ಸ್ಫುರಣವು ಆತ್ಮನ ಸ್ವಭಾವವಾಗಿದ್ದರೂ ಈ ಸ್ಫುರಣಕ್ಕೆ ಆತ್ಮನು ವಿಷಯನಾಗುತ್ತಾನೆಂದು ಚಿತ್ಸುಖನೇ ಹೇಳಿದ್ದಾನೆ' ಎಂದು. ಆದ್ದರಿಂದ ಸ್ವಪ್ರಕಾಶವಿಷಯತ್ವವನ್ನು ಆತ್ಮನಿಗೆ ಕೂಡಿಸುವುದು ಅದ್ವೈತಿಗಳ ಮತದಲ್ಲೇನು ಕಷ್ಟವಿಲ್ಲ. ಗ್ರಂಥಕಾರರೇ ಸ್ವತಃ ಮಾಯಾವಾದಖಂಡನೆಯ ಮಂದಾರಮಂಜರಿಯಲ್ಲಿ ಹೇಳಿದ್ದಾರೆ - 'ಅನತಿರೇಕೇ ಸ್ವಪ್ರಕಾಶತ್ವಾದಾತ್ಮನಸ್ಸಿದ್ಧಸಾಧನತಾ' 'ಐಕ್ಯವು ಆತ್ಮಸ್ವರೂಪವೆಂಬ ಪಕ್ಷದಲ್ಲಿ ಆತ್ಮನು ಸ್ವಪ್ರಕಾಶನಾದ್ದರಿಂದ ಶಾಸ್ತ್ರವು ಅನುವಾದಕವಾದೀತು' ಎಂಬ ಟೀಕೆಯ ಮಾತಿಗೆ ವ್ಯಾಖ್ಯಾನಿಸುತ್ತಾ ಅದ್ವೈತಿಗಳ ಹಲವು ಮಾತುಗಳನ್ನು ಉದಾಹರಿಸಲಾಗಿದೆ.

೧) 'ಸ್ವಪ್ರಕಾಶಚೈತನ್ಯರೂಪವಾದದ್ದು ಸ್ವತಃ ಸಿದ್ಧವಾಗುವ ಸಂಭವವಿರುವುದರಿಂದ'

೨) ಆತ್ಮನು ಸ್ವತಃಸಿದ್ಧನಾಗುತ್ತಾನೆ. ಎಂಬ ಪಕ್ಷದಲ್ಲಿಯೂ ಉಪಪನ್ನವಾಗುತ್ತದೆ.

ಪರಿಪೂರ್ಣಚಂದ್ರಿಕಾ

೩) ಸ್ವಪ್ರಕಾಶಸ್ವಭಾವರೂಪವಾದ ವಿಜ್ಞಾನವು ಪ್ರಕಾಶಿಸುತ್ತದೆ.

೪) ಸ್ವಭಾವವೈಚಿತ್ರ್ಯದಿಂದಲೇ ತನ್ನನ್ನು ಹೇಳುವ ಶಬ್ದಪ್ರಯೋಗಕ್ಕೆ ತಾನೇ ಕಾರಣವಾಗುತ್ತದೆ.

ಇವೇ ಮೊದಲಾದ ಮಾತುಗಳನ್ನು ಅದ್ವೈತಿಗಳು ತಮ್ಮ ಗ್ರಂಥಗಳಲ್ಲಿ ಅಲ್ಲಲ್ಲಿ ಹೇಳಿದ್ದಾರೆ. ಆದ್ದರಿಂದ ಆತ್ಮನು ಸ್ವಪ್ರಕಾಶನಾಗಿದ್ದರೂ ತನ್ನ ಸ್ವರೂಪವಾದ ಪ್ರಕಾಶಕ್ಕೆ ಕರ್ಮನಾಗಲಾರ. ಆದರೂ ಸಹ ತನ್ನಿಂದ ಉಂಟಾಗುವ ಶಬ್ದಪ್ರಯೋಗಕ್ಕೆ ತಾನೇ ವಿಷಯನಾಗುತ್ತಾನೆ. ಈ ರೀತಿಯಾದ ಅರ್ಥದಲ್ಲಿ ಆತ್ಮನು ಸ್ವತಃ ಸಿದ್ಧನಾಗುತ್ತಾನೆಂದು ಅದ್ವೈತಿಗಳೇ ಒಪ್ಪಿಕೊಂಡಿದ್ದಾರೆ. ಹೀಗೆ ಐಕ್ಯವು ಸ್ವತಃಸಿದ್ಧವಾದ ಆತ್ಮನ ಸ್ವರೂಪವೇ ಆಗಿದೆ. ಈ ಐಕ್ಯವನ್ನು ಶಾಸ್ತ್ರವು ಪ್ರತಿಪಾದಿಸಲು ಹೊರಟರೆ ಅನುವಾದಕವಾಗುತ್ತದೆಂದು ಅದ್ವೈತಮತದಂತೆ ಸುಲಭವಾಗಿ ಹೇಳಬಹುದು.

ಒಟ್ಟು ಇಷ್ಟು ತಿಳಿಯಬೇಕು - ವೇದಾಂತಗಳಿಗೆ ಅಖಂಡಾತ್ಮಸ್ವರೂಪಪರತ್ವವು ಅದ್ವೈತಮತದಂತೆ. ಆತ್ಮನಿಗೆ ಸ್ವಪ್ರಕಾಶನುಭವಸಿದ್ಧತ್ವವು ಸಿದ್ಧಾಂತರೀತಿಯಿಂದ ಎಂದು.

ಅಥವಾ ಎರಡಂಶವನ್ನೂ ಅದ್ವೈತಮತದಂತೆಯೇ ಹೇಳಬಹುದು. ಏನೇ ಆದರೂ ವೇದಾಂತವಿಚಾರಕ್ಕೆ ವಿಷಯವಿಲ್ಲವೆಂದು ಸಿದ್ಧವಾಯಿತು. ವಿಷಯವಿಲ್ಲವಾದ್ದರಿಂದ ವಿಚಾರಶಾಸ್ತ್ರವು ಅನಾರಂಭಣೀಯವೆಂಬ ಪೂರ್ವಪಕ್ಷ ದೃಢವಾಯಿತು.




**ಪೂರ್ವಪಕ್ಷ ಪೂರ್ತಿ ಅದ್ವೈತ ರೀತಿಯಲ್ಲ**

'ಸ್ವಪ್ರಕಾಶ ಶುದ್ಧ ಆತ್ಮಸ್ವರೂಪ ಸಿದ್ಧವಾಗಿರುವುದರಿಂದ ಅದನ್ನು ವರ್ಣಿಸುವ ವೇದಾಂತ ಅನುವಾದಕ'ವೆನ್ನುವುದು ಅದ್ವೈತ ರೀತಿಯಲ್ಲ. ಅದ್ವೈತಿಗಳು ಅದನ್ನು ಒಪ್ಪಿದರೆ ಅವರ ಜಿಜ್ಞಾಸಾಧಿಕರಣಸಿದ್ಧಾಂತ ಹೊರಡಲಾರದು. ಸ್ವಪ್ರಕಾಶ ಎಂದರೆ ಅದ್ವೈತದಲ್ಲಿ ಕರ್ತೃಕರ್ಮವಿರೋಧಭಯದಿಂದ ಅವೇದ್ಯ ಎಂದು ಅರ್ಥ ಹೇಳುತ್ತಾರೆ. ಆದರಿಂದ ವೇದಾಂತವು ಅಖಂಡ ಆತ್ಮಸ್ವರೂಪಮಾತ್ರಪರ ಎಂಬ ವಿಷಯದಲ್ಲಿ ಮಾತ್ರ ಅದ್ವೈತರೀತಿ. ಆತ್ಮನಿಗೆ ಸ್ವಪ್ರಕಾಶಾನುಭವಸಿದ್ಧತ್ವವು ಸಿದ್ಧಾಂತ ರೀತಿಯಿಂದ.

ಅಥವಾ ಆತ್ಮ ಸ್ವಪ್ರಕಾಶಾನುಭವಕ್ಕೆ ವಿಷಯನೂ ಆಗುತ್ತಾನೆ. ಇಲ್ಲಿ 'ವಿಷಯ'ವೆಂದರೆ ಅನುಭವವನ್ನು ಮಾತಿನಲ್ಲಿ ವ್ಯಕ್ತಗೊಳಿಸಲು ನಿಮಿತ್ತವೆಂದರ್ಥ. ಆತ್ಮನೂ ಇಂಥ ವಿಷಯನೆಂದು ಅದ್ವೈತಿಗಳು ಒಪ್ಪಿದ್ದಾರೆ. ಆತ್ಮ ತನ್ನ ಸ್ವರೂಪವೆ ಆದ ಪ್ರಕಾಶಕ್ಕೆ ತಾನು ಕರ್ಮ ಎನಿಸದಿದ್ದರೂ ತನ್ನಿಂದ ಉಂಟಾಗುವ ಶಬ್ದಪ್ರಯೋಗಕ್ಕೆ ತಾನು ವಿಷಯನಾಗಲು ಯೋಗ್ಯ. ಈ ಅರ್ಥದಲ್ಲಿ ಅವನು ಸ್ವತಃಸಿದ್ಧ. ಅಂಥ ಆತ್ಮನ ಸ್ವರೂಪಭೂತವಾದ ಐಕ್ಯವನ್ನು ವೇದಾಂತವು ಬೋಧಿಸಿದರೆ ಅದು ಅನುವಾದಕವೆಂದು ಅದ್ವೈತರೀತಿಯಿಂದಲೆ ಹೇಳಲು ಬರುತ್ತದೆ.

---

## ವಿಷಯದಂತೆ ಪ್ರಯೋಜನಾದಿಗಳೂ ಇಲ್ಲ

**तात्पर्यचन्द्रिका –**

**नापि जिज्ञासायाः प्रयोजनमस्ति । प्रत्यग्रूपे ब्रह्मणि अहमिति ज्ञायमानेऽपि मोक्षानुपलम्भात् । विषयाद्यभावादेव नाधिकारी । नापि सम्बन्धः ।**

ಅನುವಾದ - ಜಿಜ್ಞಾಸೆಗೆ ವಿಷಯವು ಹೇಗಿಲ್ಲವೋ ಹಾಗೆಯೇ ಪ್ರಯೋಜನವೂ ಇಲ್ಲ. ಶರೀರದ ಒಳಗಿರುವ ಬ್ರಹ್ಮನು 'ಅಹಂ' ಎಂದು ನಿತ್ಯವೇದ್ಯನಾದರೂ ನಮಗೆ ಮೋಕ್ಷ ದೊರಕುತ್ತಿಲ್ಲ. ವಿಷಯ ಪ್ರಯೋಜನಗಳು ಇಲ್ಲದಿರುವುದರಿಂದಲೇ ಅಧಿಕಾರಿಯೂ ಇಲ್ಲ. ಸಂಬಂಧವೂ ಇಲ್ಲ.

**प्रकाशः –** निष्प्रयोजनत्वादिति हेतुमादिपदोक्तं समर्थयते ।। नापीति ।। अभ्युदयस्य कर्मादिलघूपायसाध्यत्वान्मोक्ष एव जिज्ञासाफलत्वेन वाच्यः । स च न साक्षात् तत्फलम् । श्रुतत्यागाश्रुतकल्पनापत्तेः । किन्तु ज्ञानद्वारा । तस्मिंश्च ज्ञाने सत्यपीदानीं मोक्षानुपलम्भान्न जिज्ञासाफलमित्यर्थः । एतेन 'नच जिज्ञासायाः' इत्यादिटीका विवृता । 'विषयाद्यभावात्' इति हेतुरुत्तर-साध्यद्वयेऽप्यन्वेति । तेन 'विषय' इत्यादिटीका विवृता ।

**गुरुराजीय –** नापीति ।। अनेन टीकायां ''नच जिज्ञासायाः प्रयोजनं'' इत्यत्र चशब्दोऽप्यर्थ इत्युक्तं भवति । ब्रह्मणः सिद्धत्वोपपादनार्थं प्रत्यग्रूप इति ।

**ವಿವರಣೆ** - ಹಿಂದೆ ಪೂರ್ವಪಕ್ಷರಚನೆಯ ಪ್ರಾರಂಭದಲ್ಲಿ ಹೀಗೆ ಹೇಳಲಾಗಿತ್ತು - 'ವಿಷಯ ಪ್ರಯೋಜನ ಅಧಿಕಾರಿ ಸಂಬಂಧಗಳೆಂಬ ಅನುಬಂಧಚತುಷ್ಟಯ ಇಲ್ಲದ ಕಾರಣ ವಿಚಾರಶಾಸ್ತ್ರ ಅನಾರಂಭಣೀಯವಾಗಿದೆಂದು'. ಅವುಗಳಲ್ಲಿ ವಿಷಯಾಭಾವವನ್ನು ಇಲ್ಲಿಯತನಕ ಸಮರ್ಥಿಸಿದರು. ಪ್ರಕೃತ ಶಾಸ್ತ್ರಗಳ ಅಧ್ಯಯನಕ್ಕೆ ಪ್ರಯೋಜನವೂ ಇಲ್ಲವೆಂದು ಸಮರ್ಥಿಸುತ್ತಾ ಶಾಸ್ತ್ರದ ಅನಾರಂಭಣೀಯತ್ವವನ್ನು ಸಮರ್ಥಿಸುತ್ತಿದ್ದಾರೆ. ಸುಲಭವಾದ ಕರ್ಮಾಚರಣೆಯಿಂದಲೇ ಸ್ವರ್ಗಾದಿಗಳು ಲಭ್ಯವಾಗುವಾಗ ಸ್ವರ್ಗಾದಿಗಳನ್ನು ಪ್ರಯೋಜನವೆನ್ನಲಾಗದು. ಆದ್ದರಿಂದ ಜಿಜ್ಞಾಸೆಗೆ ಮೋಕ್ಷವನ್ನೇ ಪ್ರಯೋಜನವೆಂದು ಹೇಳಬೇಕು. ಆದರೆ ಜಿಜ್ಞಾಸೆಯಿಂದ ಸಾಕ್ಷಾತ್ತಾಗಿ ಮೋಕ್ಷವು ಸಿಗುವುದಿಲ್ಲ. ಒಂದು ವೇಳೆ ಸಾಕ್ಷಾತ್ತಾಗಿ ಸಿಗುತ್ತದೆಂದು ಹೇಳಿದರೆ 'ಜ್ಞಾನದಿಂದಲೇ ಮೋಕ್ಷ ಸಿಗುತ್ತದೆ' ಎಂದು ಹೇಳುವ ಶ್ರುತ್ಯರ್ಥತ್ಯಾಗ ಮಾಡಿದಂತಾಗುತ್ತದೆ. ಹಾಗು ಶ್ರುತಿಯಲ್ಲಿ ಎಲ್ಲೂ ಹೇಳದಿರುವ ಮೋಕ್ಷಫಲಕತ್ವವನ್ನು ಜಿಜ್ಞಾಸೆಗೆ ಕಲ್ಪಿಸುವುದರಿಂದ ಅಶ್ರುತಕಲ್ಪನಾದೋಷವೂ ಬರುತ್ತದೆ. ಹಾಗಾಗಿ ಜಿಜ್ಞಾಸೆಯಿಂದ ಬ್ರಹ್ಮಜ್ಞಾ

ಬರುತ್ತದೆ. ಆ ಬ್ರಹ್ಮಜ್ಞಾನದಿಂದ ಮೋಕ್ಷ ದೊರಕುತ್ತದೆಂದೇ ಹೇಳಬೇಕು. ಹೀಗೆ ಹೇಳಿದರೆ ಶಾಶ್ವತನಾದ ಬ್ರಹ್ಮನು 'ಅಹಂ' ಎಂದು ನಿರಂತರವಾಗಿ ತಿಳಿಯುತ್ತಿದ್ದಾನೆ. ಆದರೂ ಮೋಕ್ಷವು ಸಿಗುತ್ತಿಲ್ಲ. ಆದ್ದರಿಂದ ಮೋಕ್ಷವು ಜಿಜ್ಞಾಸೆಯ ಫಲವಾಗಲಾರದು. ಹೀಗೆ ಹೇಳಿದ್ದರಿಂದ ತತ್ವಪ್ರಕಾಶಿಕಾ-ದಲ್ಲಿರುವ 'ನಚ ಜಿಜ್ಞಾಸಾಯಾಃ ಪ್ರಯೋಜನಮಸ್ತಿ' ಎಂಬ ವಾಕ್ಯವನ್ನೂ ವಿವರಿಸಿದಂತಾಯಿತು. ಯಾವ ಶಾಸ್ತ್ರದಲ್ಲಿ ವಿಷಯವೇ ಇಲ್ಲವೋ, ಮತ್ತು ಯಾವ ಶಾಸ್ತ್ರದ ಅಧ್ಯಯನದಿಂದ ಮೋಕ್ಷ-ಪ್ರಯೋಜನವೂ ದೊರೆಯಲಾರದೋ ಆ ಶಾಸ್ತ್ರವನ್ನು ಯಾರೂ ಸಹ ಅಧ್ಯಯನ ಮಾಡುವುದಿಲ್ಲ. ಹೀಗೆ ವಿಷಯ ಪ್ರಯೋಜನಗಳಿಲ್ಲದಿರುವುದರಿಂದಲೇ ಅಧಿಕಾರಿ ಇಲ್ಲವೆಂದು ನಿರ್ಣಯವಾಯಿತು. ಅಧಿಕಾರಿಯು ಇಲ್ಲದಿರುವುದರಿಂದ ಈ ವಿಚಾರಶಾಸ್ತ್ರವು ಅನಾರಂಭಣೀಯವಾಗಿದೆ.

ಅದರಂತೆ ಸಂಬಂಧವೂ ಇಲ್ಲ. ವಿಷಯ ಪ್ರಯೋಜನಾದಿಗಳೆಂಬ ಸಂಬಂಧಿಗಳು ಇದ್ದರಷ್ಟೇ ಸಂಬಂಧವು ಕೂಡುತ್ತದೆ. ಆದರೆ ಸಂಬಂಧಿಗಳೇ ಇಲ್ಲವೆಂದು ಇದುವರೆಗೂ ಸಮರ್ಥಿಸಿದ್ದರಿಂದ ಸಂಬಂಧವೂ ಇಲ್ಲ. ಸಂಬಂಧವು ಇರದ ಕಾರಣ ಈ ವಿಚಾರಶಾಸ್ತ್ರವು ಅನಾರಂಭಣೀಯವಾಗಿದೆ.

'ವಿಷಯಾದ್ಯಭಾವಾತ್' ಎಂಬ ಹೇತುವು ಮುಂದೆ ಇರುವ 'ವಿಚಾರಃ ನ ಕರ್ತವ್ಯಃ' ಎಂಬ ಸಾಧ್ಯದ ಜೊತೆಗೆ ಮತ್ತು 'ಶಾಸ್ತ್ರಮನಾರಂಭಣೀಯಮ್' ಎಂಬ ಸಾಧ್ಯದ ಜೊತೆಗೂ ಅನ್ವಯ ಹೊಂದುತ್ತದೆ. ಆದ್ದರಿಂದ 'ವಿಷಯಪ್ರಯೋಜನ' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು.

## ಲಿಙಾದಿ ಪ್ರತ್ಯಯಗಳು ಎಲ್ಲೆಡೆ ವಿಧಾಯಕಗಳಲ್ಲ

**तात्पर्यचन्द्रिका –**

**ननु कथं तर्हि 'श्रोतव्यः' इति विचारविधानम् । नच तदाच्छादनेन पूर्वः पक्षः । विचारविधिवाक्यार्थनिर्णायकन्यायव्युत्पादकत्वादस्याधिकरणस्य तदाच्छादनायोगादिति चेन्न । वक्ष्यमाणरीत्या श्रवणस्य विचाररूपत्वाभावात् । "मन्तव्यः सोऽन्वेष्टव्यः" इत्यादेश्च ब्रह्मपरतयाऽभिप्रेतवाक्यमध्यस्थतया "विष्णुरुपांशु यष्टव्यः" इत्यादिवत् कृत्यप्रत्ययस्यार्हार्थत्वेनाप्युपपत्तेरविधायकत्वात् । नापि "आत्मन्येवात्मानं पश्येत्" इति, "तद् विजिज्ञासस्व" इति वा विधिः । मुख्यार्थयोर्ज्ञानेच्छयोरविधेयत्वात् । विधौ च लक्षणाया अन्याय्यत्वात् । अनयोरपि ब्रह्मपरतया "यदभिघारयेद् रुद्रायास्ये पशून् निदध्यात्" इतिवत्, लिङो विधिशक्तिप्रतिबन्धाच्च ।**

ಅನುವಾದ - ಶಂಕೆ - ವಿಷಯಾದಿಗಳು ಇಲ್ಲದಿರುವುದರಿಂದ ಬ್ರಹ್ಮವಿಚಾರವನ್ನು ಮಾಡಬಾರದೆಂದು ಹೇಳಿದರೆ 'ಶ್ರೋತವ್ಯಃ' 'ವಿಚಾರ ಮಾಡಬೇಕು' ಎಂಬ ವಿಚಾರವಿಧಿಗೆ

ಏನರ್ಥ? ಇಲ್ಲಿ "ವಿಚಾರವಿಧಿಯನ್ನೇ ಮುಚ್ಚಿಟ್ಟು 'ವಿಚಾರಃ ನ ಕರ್ತವ್ಯಃ' ಎಂದು ಪೂರ್ವ-ಪಕ್ಷವನ್ನು ಮಾಡುತ್ತೇವೆನ್ನಬಾರದು. ಏಕೆಂದರೆ ವಿಚಾರವನ್ನು ವಿಧಾನ ಮಾಡುವ ಶ್ರುತಿವಾಕ್ಯಗಳ ಅರ್ಥವನ್ನು ನಿರ್ಣಯಿಸುವ ವಿಷಯಾದಿಗಳ ಸಮರ್ಥನೆಗಾಗಿಯೇ ಈ ಅಧಿಕರಣ ಹೊರಟಿದೆ ಹಾಗಾಗಿ ಆ ವಿಚಾರವಿಧಿಯನ್ನು ಮುಚ್ಚಿಡಲು ಬರುವುದಿಲ್ಲ.

ಸಮಾಧಾನ - 'ಜಿಜ್ಞಾಸಾ' ಪದಕ್ಕೆ ಮುಂದೆ ಅರ್ಥನಿರೂಪಣೆ ಮಾಡುವಾಗ ಶ್ರವಣವು ವಿಚಾರರೂಪವಾಗಿಲ್ಲವೆಂದು ಸಮರ್ಥಿಸುತ್ತೇವೆ. ಹಾಗಾಗಿ 'ಶ್ರೋತವ್ಯಃ' ಎಂಬುದು ವಿಚಾರವಿಧಿ ಆಗುವುದಿಲ್ಲ.

'ಮಂತವ್ಯಃ' 'ಆತ್ಮನ ಬಗ್ಗೆ ಮನನ ಮಾಡಬೇಕು.' 'ಸೋऽನ್ವೇಷ್ಟವ್ಯಃ' 'ಆತ್ಮನನ್ನು ವೇದಾಂತದಿಂದ ವಿಚಾರ ಮಾಡಬೇಕು.' ಇತ್ಯಾದಿ ವಾಕ್ಯಗಳು 'ತವ್ಯ' ಪ್ರತ್ಯಯಾಂತ-ವಾಗಿರುವುದರಿಂದ ವಿಧಿಪರವಾಗಿವೆ ಎಂದು ತಿಳಿಯಬಾರದು. ಏಕೆಂದರೆ ಬ್ರಹ್ಮಪರವೆಂದೇ ಪ್ರಸಿದ್ಧವಾದ ಬೃಹದಾರಣ್ಯಕ ಮತ್ತು ಛಾಂದೋಗ್ಯ ಉಪನಿಷತ್ತುಗಳಲ್ಲಿ ಬ್ರಹ್ಮಪರವಾದ ವಾಕ್ಯಗಳ ನಡುವೆ ಈ ವಾಕ್ಯಗಳು ಬಂದಿವೆ. ಆದ್ದರಿಂದ 'ವಿಷ್ಣುರುಪಾಂಶು ಯಷ್ಟವ್ಯಃ' ಎಂಬ ವಾಕ್ಯದಲ್ಲಿರುವ 'ಕೃತ್ಯ' ಎಂದು ಕರೆದಿರುವ 'ತವ್ಯ' ಪ್ರತ್ಯಯಕ್ಕೆ 'ಅರ್ಹ'ವೆಂಬರ್ಥವು ಪ್ರಸಿದ್ಧವಾಗಿದೆ. ಹಾಗೆ ಇಲ್ಲಿಯೂ 'ತವ್ಯ' ಪ್ರತ್ಯಯಕ್ಕೆ ಅರ್ಹವೆಂಬ ಅರ್ಥ ಹೇಳಿದಾಗ 'ಮಂತವ್ಯಃ' ಇತ್ಯಾದಿವಾಕ್ಯಗಳು ವಿಧಿಪರಗಳಾಗಲಾರವು.

ಇನ್ನು ಲಿಙ್ ಮೊದಲಾದ ವಿಧಿ ಪ್ರತ್ಯಯಗಳಿಂದ ಕೂಡಿದ 'ಆತ್ಮನ್ಯೇವಾತ್ಮಾನಂ ಪಶ್ಯೇತ್' 'ತದ್ವಿಜಿಜ್ಞಾಸಸ್ವ' ಇತ್ಯಾದಿವಾಕ್ಯಗಳೂ ಸಹ ವಿಧಿವಾಕ್ಯಗಳಾಗಲಾರವು. 'ಪಶ್ಯೇತ್' ಎಂಬಲ್ಲಿ ಪ್ರಕೃತಿಭಾಗಕ್ಕೆ ಜ್ಞಾನವು ಮುಖ್ಯಾರ್ಥವಾಗಿದೆ. 'ವಿಜಿಜ್ಞಾಸಸ್ವ' ಎಂಬಲ್ಲಿ ಸನ್ ಪ್ರತ್ಯಯಕ್ಕೆ ಇಚ್ಛೆಯು ಮುಖ್ಯಾರ್ಥವಾಗಿದೆ. ಜ್ಞಾನ ಮತ್ತು ಇಚ್ಛೆಗಳು ಅವಿಧೇಯಗಳಾದ್ದರಿಂದ ವಿಧಾನ ಮಾಡಲು ಬರುವುದಿಲ್ಲ. ಹಾಗಾಗಿ ಇವುಗಳೂ ಸಹ ವಿಧಿಪರಗಳಾಗಲಾರವು. 'ಎರಡು ಕಡೆಗಳಲ್ಲಿಯೂ ವಿಚಾರದಲ್ಲಿ ಲಕ್ಷಣಾ ಮಾಡಿ ವಿಧಿಪರತ್ವವನ್ನು ಸಮರ್ಥಿಸುತ್ತೇವೆ'. ಎಂದರೆ ವಿಧಿವಾಕ್ಯದಲ್ಲಿ ಲಕ್ಷಣಾ ಮಾಡುವುದು ನ್ಯಾಯಸಮ್ಮತವಾಗಿಲ್ಲ. ಹಾಗಾಗಿ ಲಿಙ್ ಮೊದಲಾದ ವಿಧಿಪ್ರತ್ಯಯ-ಗಳಿದ್ದರೂ ಅವುಗಳ ವಿಧಿಶಕ್ತಿಯು ಕುಂಠಿತವಾಗುತ್ತದೆ. ಈ ವಾಕ್ಯಗಳಾದರೂ ಬ್ರಹ್ಮನನ್ನೇ ಬೋಧಿಸುತ್ತವೆ. ಆದ್ದರಿಂದ 'ಯದಭಿಘಾರಯೇದ್ರುದ್ರಾಯಾಸ್ಯೇ ಪಶೂನ್ ನಿದಧ್ಯಾತ್' 'ಅಭಿಘಾರಣ ಮಾಡಿದಲ್ಲಿ ರುದ್ರನ ಬಾಯಿಯಲ್ಲಿ ಪಶುಗಳನ್ನಿಟ್ಟಂತೆ' ಎಂಬ ವಾಕ್ಯದಲ್ಲಿ 'ಅಭಿಘಾರಯೇತ್' ಎಂಬ ಲಿಙ್ ಪ್ರಶಂಸಾಪರವಾಗಿದೆಯೇ ಹೊರತು ವಿಧಿಪರವಾಗಿಲ್ಲ. ಅದರಂತೆ 'ಆತ್ಮನ್ಯೇವಾತ್ಮಾನಂ ಪಶ್ಯೇತ್' ಮುಂತಾದ ಕಡೆಯಲ್ಲಿರುವ ಲಿಙ್ ಪ್ರತ್ಯಯಾದಿಗಳು

ಷಡ ವಿಧಿಪರಗಳಾಗಿಲ್ಲ. ಹೀಗೆ ಸಮರ್ಥಿಸಿದ್ದರಿಂದ 'ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಮ್ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್' 'ಹಾಗಾಗಿ ಬ್ರಾಹ್ಮಣನಾದವನು ಶ್ರವಣ ಮಾಡಿ ಮನನ ಮಾಡಲು ತೊಡಗಬೇಕು' ಎಂಬ ವಾಕ್ಯವೂ ವಿಧಿಪರವಲ್ಲವೆಂದು ಸ್ಪಷ್ಟವಾಗುತ್ತದೆ. ಏಕೆಂದರೆ ಈ ವಾಕ್ಯಕ್ಕೆ ರ್ಥವನ್ನು ಬೋಧಿಸುವುದರಲ್ಲಿಯೇ ತಾತ್ಪರ್ಯವಿರುವುದರಿಂದ ಲಿಜ್ ಪ್ರತ್ಯಯದ ವಿಧಿಶಕ್ತಿಯು ಬಾಧಿತವಾಗುತ್ತದೆ.

ವಿಚಾರ ಮಾಡಿದರೆ ಜ್ಞಾನ ಬರುತ್ತದೆ, ವಿಚಾರ ಮಾಡದಿದ್ದರೆ ಜ್ಞಾನ ಬರುವುದಿಲ್ಲ, ಎಂಬ ಅನ್ವಯವ್ಯತಿರೇಕದಿಂದ ವಿಚಾರದಿಂದಲೇ ನಿರ್ಣಯವು ಸಾಧ್ಯವೆಂದು ಮೊದಲು ಸಿದ್ಧವಾದ್ದರಿಂದ, ಸಿದ್ಧವಾದ ವಿಷಯದಲ್ಲಿ ವಿಧಿಯ ಅಪೇಕ್ಷೆ ಇರಲಾರದು.

ಇಲ್ಲಿ ವಿಧಿಯೆಂದರೆ ನಿಯಮವಿಧಿಯನ್ನಾಗಲೀ ಪರಿಸಂಖ್ಯಾವಿಧಿಯನ್ನಾಗಲೀ ಇಟ್ಟುಕೊಳ್ಳಲು ಬರುವುದಿಲ್ಲ. ಏಕೆಂದರೆ ಆತ್ಮನು ಪ್ರತ್ಯಕ್ಷ ಅನುಮಾನಗಳಿಗೆ ಗೋಚರನಾಗದೆ ಶಬ್ದದಿಂದಷ್ಟೇ ಗೋಚರನಾಗುತ್ತಾನೆ.

**ಕಠಿಣಪದಾರ್ಥ**

**ತದಚ್ಛಾದನೇನ** = 'ಶ್ರೋತವ್ಯಃ' ಇತ್ಯಾದಿ ಶ್ರುತ್ಯರ್ಥವನ್ನು ಮುಚ್ಚಿ . ವಿಚಾರವಿಧಿ **ವಾಕ್ಯಾರ್ಥನಿರ್ಣಾಯಕ- ನ್ಯಾಯವ್ಯುತ್ಪಾದಕತ್ವಾತ್** = 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ವಿಚಾರವಿಧಿಯ ವಾಕ್ಯಾರ್ಥವನ್ನು ನಿರ್ಣಯಿಸುವ ನ್ಯಾಯಗಳನ್ನು ಸಮರ್ಥಿಸುವುದರಿಂದ. **ನ್ಯಾಯ** = ವಿಷಯಾದಿಗಳು. **ಕೃತ್ಯಪ್ರತ್ಯಯಸ್ಯ** = 'ಣ್ವುಲ್' ಪ್ರತ್ಯಯಕ್ಕಿಂತ ಮೊದಲಿರುವ ಪ್ರತ್ಯಯಗಳೆಲ್ಲವೂ ಕೃತ್ಯಪ್ರತ್ಯಯಗಳು.

**प्रकाशः** – एवं जिज्ञासाया निर्विषयत्वादिनाऽकर्तव्यत्वमुक्त्वा, सुधावाक्यं विवरीतुं तद्विधीनां गतिद्वयं वक्तुमाक्षिपति ।। **नन्विति** ।। परैश्श्रवणविधेर्विचार-विधित्वमङ्गीकृतम् । तद्रीत्या वा, श्रवणादिरूपजिज्ञासा कर्तव्येति सिद्धान्त-टीकातात्पर्यापरिज्ञानिनो वाऽऽशङ्केति तदुदाहृतम् ।

ननु यथा प्रमाणभूतवेदान्तवाक्यगतिमनुक्त्वा तदाच्छादनेन पूर्वपक्षः, तथेहाप्यस्तु । अत एव टीकायां तस्य गत्यनुक्तिरित्याशङ्क्य निरस्यति **नचेति** ।। 'न्यायाः' विषयादिः । अत्रैव प्रमाणभूतवेदान्तवाक्यप्रामाण्याच्छादने बाधकाभावा-दिति भावः । एतेन – विचारविधेराच्छादनस्य निरासात् प्रमाणभूतवेदान्त-वाक्यप्रामाण्याच्छादनमपि न युक्तमिति, कस्यचिन्मूर्खस्य प्रलपनं दूरीकृतं बोध्यम् ।। **वक्ष्यमाणेति** ।। जिज्ञासापदार्थनिरूपणप्रस्ताव इति भावः ।

*ಜಿಜ್ಞಾಸಾಧಿಕರಣ*

ननु ''मन्तव्यः सोऽन्वेष्टव्यः स विजिज्ञासितव्यः'' इत्यादौ ''तव्यत्तव्यानीयरः'' इति विधौ स्मृततव्यप्रत्ययान्तस्य, तथा ''आत्मन्येवात्मानं पश्येत्'' इत्यादि लिङन्तस्य च ''तद् विजिज्ञासस्व''इति ''तमेवैकं जानथ'' इत्यादि लिङन्तस्य च विधायकत्वसम्भवादित्याशङ्क्य तव्यप्रत्ययान्तस्य गतिं तावदाह – मन्तव्य इति ॥ 'इत्यादेः' इति षष्ठ्यन्तस्य 'मध्यस्थतया' इत्यनेनान्वयः । ब्रह्मपरत्वेन प्रसिद्धबृहदारण्यकच्छान्दोग्याद्युपनिषन्मध्यगतत्वेन वा, तत्तदवान्तरप्रकरणगत-ब्रह्मपरवाक्यगतत्वेन वा बाधकेन तव्यप्रत्ययस्य विधिशक्तिप्रतिबन्धात्, ''अर्हे कृत्यतृचश्च'' इत्यर्हार्थे कृत्यप्रत्ययस्य विधानात्, ''कृत्याः प्राङ्ण्वुलः'' इति कृत्यसंज्ञकस्य तव्यस्यार्हार्थत्वसम्भवात् । तत्र दृष्टान्तो – विष्णुरिति ॥ द्वितीयाध्याये द्वितीयपादे ''पौर्णमासीवदुपांशुयाजः स्यात्'' इति चतुर्थेऽधिकरणे ''जामि वा एतद्यज्ञस्य क्रियते यदन्वञ्चौ पुरोडाशावुपांशुयाजमन्तरा यजति । विष्णुरुपांशु यष्टव्योऽजामित्वाय'', ''प्रजापतिरुपांशु यष्टव्योऽजामित्वाय'', ''अग्नीषोमावुपांशु यष्टव्यावजामित्वाय'' इति दर्शपूर्णमासयोः श्रुतं वाक्यमुदाहृत्य, ''उपांशुयाजमन्तरा यजति'' इत्ययं किं ''विष्णुरुपांशु यष्टव्यः'' इत्यादिवाक्य-विहितयागत्रयसमुदायानुवादः उत स्वातन्त्र्येण यागविधिः[(१)] इति संशये, देवताया अलाभेन यागविधित्वायोगात्, तव्यप्रत्ययान्तविष्ण्वादिवाक्यविहितयागत्रय-समुदायानुवाद इति प्राप्ते, आग्नेयाग्नीषोमीयपुरोडाशद्वयनैरन्तर्यकृतस्य जामितादोषस्य वाक्योपक्रमे उपन्यासात्, पुरोडाशयोरन्तराले किञ्चिद् विधास्यत इत्यवगमात्, आग्नेयाग्नीषोमीयपुरोडाशयाज्यानुवाक्यायुगलयोर्मध्ये वैष्णवप्राजा-पत्याग्नीषोमीययाज्यानुवाक्यायुगलानां शाखाभेदेनाम्नानात्, क्रमविनियुक्तमन्त्रवशेन देवताया लाभात् अन्तराशब्दघटितमेव वाक्यं विधायकम् । अजामित्वप्रशंसा च तत्रैवावकल्पते । विष्ण्वादिवाक्यं तु, जामितादोषोपक्रमतन्निर्हरणान्तैकवाक्य-मध्यस्थतया विधित्वे प्रतीतैकवाक्यताभङ्गप्रसङ्गादर्थवादः । तव्यप्रत्ययस्त्वर्हार्थ इति सिद्धान्तितम् । तद्वदत्राप्युपक्रमोपसंहारैकरूप्यावगतैकवाक्यतानिर्वाहायार्हार्थो न विधिस्तव्यप्रत्यय इति भावः ।

---

(१) स्वतन्त्रयागविधिः इत्यपि पाठः

ಪಂಪೂರ್ಣಚಂದ್ರಿಕಾ

ननु तव्यस्यार्हेऽपि स्मरणात् तदन्तमविधायकमस्तु । लिङाद्यन्तं तु स्यादेव विधिरित्याशङ्क्य निरस्यति – नापीति ।। "पश्येत्" इत्यत्र प्रकृतिभागस्य ज्ञानं, "विजिज्ञासस्व" इत्यत्र च सन्प्रत्ययस्येच्छा मुख्योऽर्थः । "धातोः कर्मणः समानकर्तृकादिच्छायां वा" इति सन्विधानादिति भावः ।

ननु मुख्यार्थाभ्यां ज्ञानेच्छाभ्यां विचारं लक्षयित्वा तद्विधिरभ्युपगम्यतामित्यत आह – विधौ चेति ।। अत एव शबरस्वामिना "न विधौ परः शब्दार्थ" इत्युक्तमिति भावः ।। ब्रह्मपरतयेति ।। ब्रह्मतात्पर्यकत्वेनेत्यर्थः ।। यदभिघारयेदिति ।। दशमे "पूर्वैश्च तुल्यकालत्वात्" इत्यष्टमपादीयपञ्चमाधिकरणे त्र्यम्बकनामकपुरोडाशानधिकृत्य "अभिघार्या नाभिघार्या इति मीमांसन्ते । यदभिघारयेद् रुद्रायास्ये पशून् निदध्याद्[१] यन्नाभिघारयेन्न रुद्रायास्ये" पशून् निदध्यात् । अथो खल्वाहुरभिघार्या एव" इति चातुर्मास्येषु श्रुतं वचनमुदाहृत्य, किमभिघारणानभिघारणयोः विकल्पः उताभिघारणमेवेति संशये, "अभिघार्याः" इति विधिः । "यदभिघारयेत्" इति विध्यन्वयानर्हनिन्दाश्रवणाच्च "नाभिघार्याः" इति प्रतिषेधः । अतस्तयोर्विकल्पः । सति चैवं प्रयोगदशायामन्यतरपरिग्रहायापतंती मीमांसा "मीमांसन्ते" इत्यनूद्यत इति प्राप्ते, मीमांसावरुद्धत्वेनाद्यः "अभिघार्याः" इत्येष न विधिः । अन्त्यस्त्वनन्यपरत्वाद् विधिः । आद्यवाक्यं तु तच्छेषत्वादर्थवादः । तत्समभिव्याहारात् । "यदभिघारयेत्" इति निन्दाश्रवणमपि, "अभिघार्या एव" इत्यस्य विधेः शेषत्वात् तत्रार्थवादः । एवमिदमभिघारणं प्रशस्तम्, यत् सन्तमपि दोषमविगणय्य कर्तव्यमित्येवं, निन्दाया अपि प्रशस्ततरत्वज्ञापनार्थत्वात् । तस्मादभिघारणमेव न विकल्प इति सिद्धान्तितम् । अत्र "अभिघारयेत्" इति लिङो विधिशक्तिः, अभिघारणविधौ प्राशस्त्यसमर्पणपरत्वेन यथा प्रतिबध्यते, तथा "पश्येत्" इति लिङो विधिशक्तिः ब्रह्मपरत्वेन प्रतिबध्यत इत्यर्थः ।

---

(१) पशूनभिदध्यात् इत्यपि पाठः

गुरुराजीय – एवं पूर्वटीकां तात्पर्यतो व्याख्याय इदानीं टीकोक्तपूर्वपक्षस्यानुत्थानमाशंक्य निरस्यति – ननु कथमिति ।। ननु श्रवणस्य विचाररूपत्वाभावेन श्रोतव्य इत्यस्य श्रवणविधित्वेन विचारविधित्वाभावात् कथं विचारविधायकत्वेन श्रोतव्य इति वाक्योदाहरणमात्रेति चेन्न । पूर्वपक्षित्वेन सम्प्रतिपन्नेनाद्वैतिना विचारस्यैव श्रवणरूपत्वाङ्गीकारेण तन्मतानुसारेणैव तद्वाक्यस्य विचारविधायकत्वशङ्कनेनादोषात् ।

ವಿವರಣೆ - ಇಲ್ಲಿಯ ತನಕ ವಿಷಯಾದಿ ಅನುಬಂಧಚತುಷ್ಟಯ ಇರುವುದಿಲ್ಲ. ಆದ್ದರಿಂದ ಈ ವಿಚಾರ ಶಾಸ್ತ್ರವು ಅನಾರಂಭಣೀಯವಾಗಿದೆಯೆಂದು ಸಮರ್ಥಿಸಿದ್ದಾಯಿತು. ಪ್ರಕೃತ ಸುಧಾ ಪೂರ್ವಪಕ್ಷದ ಮಾತುಗಳನ್ನು ವಿವರಿಸಲಾಗಿದೆ. ಮತ್ತು ವಿಚಾರವನ್ನು ಮಾಡಬೇಕೆನ್ನುವ ವಿಧಿವಾಕ್ಯಗಳ ಎರಡು ಬಗೆಯ ಗತಿಯನ್ನು ತೋರಿಸಲು ಹೊರಟಿದ್ದಾರೆ. ಹೀಗೆ ಪೂರ್ವಪಕ್ಷವನ್ನು ದೃಢಗೊಳಿಸಿ 'ನನು' ಇತ್ಯಾದಿ ವಾಕ್ಯದಿಂದ ಶಂಕಿಸಿ ಉತ್ತರಿಸಲಾಗಿದೆ.

ಆಕ್ಷೇಪ :- ವಿಷಯಾದಿಗಳಿಲ್ಲದಿರುವದರಿಂದ ವಿಚಾರಶಾಸ್ತ್ರವು ಅನಾರಂಭಣೀಯವೆಂದು ಹೇಳಿದಿ ಆದರೆ 'ಶ್ರೋತವ್ಯಃ' 'ವಿಚಾರ ಮಾಡಬೇಕು' ಎಂಬ ವಿಧಿವಾಕ್ಯವು ವಿಚಾರವನ್ನು ವಿಧಿಸುತ್ತಿದೆ. 'ಈ ವಿಧಿವಾಕ್ಯವನ್ನೇ ಮುಚ್ಚಿಟ್ಟು ಆಕ್ಷೇಪಿಸುತ್ತೇವೆ' ಎಂದೂ ನಿಮಗೆ ಹೇಳಲಾಗದು. ಈ ಅಧಿಕರಣಕ್ಕೆ 'ಆತ್ಮಾವಾ ಅರೇ ! ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ' 'ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ ಎಂಬ ವಾಕ್ಯವೇ ವಿಷಯವಾಕ್ಯವಾಗಿದೆ. ಈ ವಾಕ್ಯದ ಅರ್ಥನಿರ್ಣಯ ಮಾಡುವುದಕ್ಕಾಗಿಯೇ ನ್ಯಾಯವ್ಯುತ್ಪಾದನೆಯನ್ನು ಜಿಜ್ಞಾಸಾಧಿಕರಣದಲ್ಲಿ ಮಾಡುತ್ತಿದ್ದಾರೆ. ಹೀಗಿರುವಾಗ ಈ ವಿಷಯವಾಕ್ಯವನ್ನೇ ಮುಚ್ಚಿಟ್ಟು ಪೂರ್ವಪಕ್ಷ ಮಾಡಲು ಸಾಧ್ಯವೇ ಇಲ್ಲ.

ಇಲ್ಲಿ ನ್ಯಾಯ ಎಂದರೆ ವಿಷಯಾದಿಗಳೆಂದರ್ಥ. ಅಂದರೆ 'ತದ್‌ವಿಜಿಜ್ಞಾಸಸ್ವ' ಎಂಬುದು ವಿಷಯವಾಕ್ಯ. ಇದರ ಅರ್ಥನಿರ್ಣಯಕ್ಕೆ ಹೇಳುವ ನ್ಯಾಯ ಎಂದರೆ 'ಶ್ರುತ್ಯುಕ್ತಜಿಜ್ಞಾಸಾ, ಕರ್ತವ್ಯಾ, ವಿಷಯಾದಿಸದ್‌ಭಾವಾತ್' ಎಂಬ ಅನುಮಾನವನ್ನು ತಿಳಿಯಬೇಕು.

ಪ್ರಶ್ನೆ :- 'ಮಂತವ್ಯಃ' ಎಂಬುದೇ ವಿಚಾರವಿಧಾಯಕವಾಗಿದೆ. 'ಶ್ರೋತವ್ಯಃ' ಎಂಬುದು ಶ್ರವಣವನ್ನಷ್ಟೇ ವಿಧಿಸುತ್ತಿದೆ. ಹೀಗಿರುವಾಗ ಗ್ರಂಥಕಾರರು 'ಶ್ರೋತವ್ಯಃ' ಎಂಬುದನ್ನು ವಿಚಾರವಿಧಾಯಕವೆಂದು ಹೇಗೆ ಹೇಳಿದರು?

ಉತ್ತರ :- ಪರರೀತ್ಯಾ ಹಾಗೆ ಹೇಳಿದ್ದಾರೆ. 'ಶ್ರೋತವ್ಯಃ' ಎಂಬುದನ್ನು ವಿಚಾರವಿಧಾಯಕವೆಂದು ನಾವು ಹೇಳದಿದ್ದರೂ ಅದ್ವೈತಿಗಳು ಹೇಳಿದ್ದಾರೆ. ಅದ್ವೈತಮತದಂತೆ ಪೂರ್ವಪಕ್ಷದ ರಚನೆ ಮಾಡುತ್ತಿರುವುದರಿಂದ ಅವರ ಸಿದ್ಧಾಂತದಂತೆ ಹೇಳುವುದೇ ಸೂಕ್ತವಾಗಿದೆ.

ಪರಿಪೂರ್ಣಚಂದ್ರಿಕಾ

ಅಥವಾ ಟೀಕೆಯ ಸಿದ್ಧಾಂತಭಂಗದಲ್ಲಿ ಈ ಮಾತಿದೆ. 'ಶ್ರವಣಾದಿರೂಪಾ ಜಿಜ್ಞಾಸಾ ಕರ್ತವ್ಯಾ' 'ಶ್ರವಣರೂಪವಾದ ವಿಚಾರವನ್ನು ಮಾಡಬೇಕು' ಎಂದು. ಈ ಮಾತನ್ನು ನೋಡಿದಾಗ ಶ್ರವಣವೇ ವಿಚಾರವೆಂದು ಆಪಾತತಃ ತೋರುತ್ತದೆ. ಟೀಕೆಯ ಅಭಿಪ್ರಾಯವನ್ನು ಸರಿಯಾಗಿ ತಿಳಿಯದವರು ಮಾಡುವ ಶಂಕೆಯೆಂದು ತಿಳಿಯಬೇಕು.

ಪ್ರಶ್ನೆ :- ಹಿಂದೆ ಹೀಗೆ ಹೇಳಿದ್ದಿರಿ - 'ಪ್ರಮಾಣಭೂತವಾದ ವೇದಾಂತಗಳೆಲ್ಲವೂ ಅನುವಾದಕಗಳಾದ್ದರಿಂದ ಅಪ್ರಮಾಣಗಳಾಗಿವೆ' ಎಂದು. ಹೀಗೆ ಹೇಳಿ ಆ ವಾಕ್ಯಗಳಿಗೆ ಗತಿಕಲ್ಪನೆಯನ್ನು ನೀವು ಮಾಡಲೇ ಇಲ್ಲ. ಅದರಂತೆ ಇಲ್ಲಿಯೂ ಸಹ ವಿಧಿವಾಕ್ಯಗಳನ್ನು ಆಚ್ಛಾದನೆಮಾಡಿ ಪೂರ್ವಪಕ್ಷ ಮಾಡಿದರೆ ಏನು ತಪ್ಪು?

ಉತ್ತರ :- ಇಲ್ಲಿ ಬಾಧಕವಿದೆ. ಒಂದು ವೇಳೆ 'ಶ್ರೋತವ್ಯಃ' ಇತ್ಯಾದಿ ವಿಧಿವಾಕ್ಯಗಳನ್ನೇ ಆಚ್ಛಾದನ ಮಾಡಿದರೆ ಈ ಅಧಿಕರಣ ಹೇಗೆ ತಾನೆ ಹೊರಡಲು ಸಾಧ್ಯ? ಆದ್ದರಿಂದ ಇಲ್ಲಿ ವಿಷಯ ವಾಕ್ಯವಾಗಿರುವುದೇ ಬಾಧಕ ! ಆದರೆ ವೇದಾಂತವಾಕ್ಯಗಳು ಅನುವಾದಕಗಳೆಂದು ಆಕ್ಷೇಪಿಸುವಾಗ ಇಂತಹ ಬಾಧಕವಿರಲಿಲ್ಲ. ಆದ್ದರಿಂದ ಅಲ್ಲಿ ಗತಿಕಲ್ಪನೆಯ ಆವಶ್ಯಕತೆ ಇಲ್ಲ.

ಹೀಗೆ ಹೇಳಿದ್ದರಿಂದ ಕೆಲವು ಮೂರ್ಖರ ಶಂಕೆಯನ್ನು ನಿರಾಕರಿಸಿದಂತಾಯಿತು - 'ವಿಚಾರವಿಧಿವಾಕ್ಯಗಳನ್ನು ಆಚ್ಛಾದನೆ ಮಾಡಬಾರದೆಂದು ಹೇಳಿದರೆ ಪ್ರಮಾಣಭೂತವಾದ ವೇದಾಂತವಾಕ್ಯಗಳ ಪ್ರಾಮಾಣ್ಯಾಚ್ಛಾದನೆಯೂ ಸಹ ಯುಕ್ತವಲ್ಲ' ಎಂದು. ಆದರೆ ಇಲ್ಲಿ ಬಾಧಕವಿರುವಂತೆ ವೇದಾಂತವಾಕ್ಯಗಳಲ್ಲಿ ಬಾಧಕವಿಲ್ಲವಾದ್ದರಿಂದ ವೇದಾಂತವಾಕ್ಯಗಳಲ್ಲಿ ಪ್ರಾಮಾಣ್ಯಾಚ್ಛಾದನೆಯನ್ನು ಮಾಡಬಹುದು.

ಆದ್ದರಿಂದ ವಿಚಾರವಾಕ್ಯಗಳು ವಿಚಾರವನ್ನು ವಿಧಿಸುತ್ತಿರುವಾಗ ಶಾಸ್ತ್ರವು ಅನಾರಂಭಣೀಯವೆಂದು ಹೇಗೆ ಪೂರ್ವಪಕ್ಷ ಮಾಡುತ್ತೀರಿ?

ಸಮಾಧಾನ :- ''ಶ್ರೋತವ್ಯಃ'' ಎಂಬುದು ವಿಚಾರವಿಧಾಯಕವೆಂದಾಗಿದ್ದಲ್ಲಿ ನೀವು ಮಾಡಿದ ಆಕ್ಷೇಪವು ಸರಿಯಾಗುತ್ತಿತ್ತು. ಆದರೆ ಅದು ವಿಧಾಯಕವೇ ಆಗಿಲ್ಲವೆಂದು 'ಜಿಜ್ಞಾಸಾ' ಪದಾರ್ಥದ ನಿರೂಪಣೆಯಲ್ಲಿ ಹೇಳುವವರಿದ್ದೇವೆ. ಆದ್ದರಿಂದ ಯಾವ ವಾಕ್ಯಗಳೂ ವಿಚಾರವನ್ನು ವಿಧಿಸುತ್ತಿಲ್ಲ. ಅನುಬಂಧಚತುಷ್ಟಯವಿಲ್ಲದ ಕಾರಣ ಶಾಸ್ತ್ರವು ಅನಾರಂಭಣೀಯವಾಗಿದೆಯೆಂಬ ಪೂರ್ವಪಕ್ಷವು ಸಮಂಜಸವೇ ಆಗಿದೆ.

ಬ್ರಹ್ಮವಿಚಾರಕ್ಕೆ ವಿಷಯಪ್ರಯೋಜನಾದಿಗಳೇ ಇಲ್ಲದಿರುವುದರಿಂದ ವಿಚಾರವನ್ನು ಮಾಡಬೇಕಾಗಿಲ್ಲ. ಹಾಗಾದರೆ 'ಶ್ರೋತವ್ಯಃ' ಎಂಬಲ್ಲಿ ವಿಚಾರವಿಧಿ ಮಾಡಿದ್ದಾರಲ್ಲ? ಎಂದು ಪ್ರಶ್ನಿಸಬಾರದು. ಅಲ್ಲಿ ಶ್ರವಣವು ವಿಚಾರರೂಪವಾಗಿದ್ದರೆ 'ಶ್ರೋತವ್ಯಃ' ಎಂಬುದು ವಿಚಾರವಿಧಿಪರವಾಗುತ್ತಿತ್ತು. ಆದರೆ ಶ್ರವಣ ವಿಚಾರರೂಪವಲ್ಲವೆಂದು ಮುಂದೆ ಸಮರ್ಥಿಸುತ್ತೇವೆ.

**ಶಂಕೆ** - '**ಶ್ರೋತವ್ಯಃ**' ಎಂಬುದು ವಿಚಾರವಿಧಿಪರವಾಗದಿದ್ದರೂ 'ಮಂತವ್ಯಃ' 'ಸೋऽನ್ವೇಷ್ಟವ್ಯಃ' 'ಸ ವಿಜಿಜ್ಞಾಸಿತವ್ಯಃ' ಇತ್ಯಾದಿ ವಾಕ್ಯಗಳು ವಿಧಿಪರಗಳಾಗಿವೆ. ಏಕೆಂದರೆ ಈ ವಾಕ್ಯಗಳಲ್ಲಿ 'ತವ್ಯ' ಪ್ರತ್ಯಯವಿದೆ. 'ತವ್ಯತ್ತವ್ಯಾನೀಯರಃ' ಎಂಬ ಸೂತ್ರದಿಂದ 'ತವ್ಯತ್' ಮತ್ತು 'ತವ್ಯ' 'ಅನೀಯರ್' ಪ್ರತ್ಯಯಗಳು ವಿಧ್ಯರ್ಥದಲ್ಲಿ ಬಂದಿವೆ. 'ಆತ್ಮನ್ಯೇವಾತ್ಮಾನಂ ಪಶ್ಯೇತ್' 'ಆತ್ಮನಲ್ಲಿಯೇ ಆತ್ಮನನ್ನು ಕಾಣಬೇಕು. ಇತ್ಯಾದಿ ವಾಕ್ಯಗಳಲ್ಲಿ ವಿಧ್ಯರ್ಥದಲ್ಲಿ ಲಿಙ್ ಪ್ರತ್ಯಯ ಬಂದಿದೆ. ಇನ್ನು 'ತದ್ವಿಜಿಜ್ಞಾಸಸ್ವ' 'ಅವನ ಜಿಜ್ಞಾಸೆಯನ್ನು ಮಾಡು' 'ತಮೇವೈಕಂ ಜಾನಥ' 'ಅವನೊಬ್ಬನನ್ನೇ ತಿಳಿ' ಇತ್ಯಾದಿ ವಾಕ್ಯಗಳಲ್ಲಿ ವಿಧ್ಯರ್ಥಕವಾದ 'ಲೋಟ್' ಪ್ರತ್ಯಯ ಬಂದಿದೆ. ಹೀಗೆ ವಿಧ್ಯರ್ಥದಲ್ಲಿಯೇ ಪ್ರಸಿದ್ಧವಾದ ಲಿಙ್ ಲೋಟ್ ತವ್ಯ ಪ್ರತ್ಯಯಗಳು ಈ ವಾಕ್ಯಗಳಲ್ಲಿರಬೇಕಾದರೆ, ವಿಚಾರವಿಧಿಯನ್ನು ಇವುಗಳು ಹೇಳಲಾರವೆಂದು ಹೇಗೆ ಹೇಳುತ್ತೀರಿ? ಹಾಗಾಗಿ ಬ್ರಹ್ಮವಿಚಾರವು ಕೂಡುತ್ತದೆ.

**ಸಮಾಧಾನ** - ಲಿಙಾದಿ ಪ್ರತ್ಯಯಗಳು ಇದ್ದಮಾತ್ರಕ್ಕೆ ವಿಧಿಶಕ್ತಿಯು ಇರಲೇ ಬೇಕೆಂದೇನೂ ನಿಯಮವಿಲ್ಲ. ಯಾವ ಪ್ರಕರಣದಲ್ಲಿ ವಾಕ್ಯವಿದೆಯೆಂದು ನೋಡಿ ಪ್ರತ್ಯಯಗಳಿಗೆ ಏನರ್ಥ ಎಂಬುದನ್ನು ವಿಚಾರಮಾಡಿ ತೀರ್ಮಾನ ಮಾಡಬೇಕು. 'ಮಂತವ್ಯಃ' ಎಂಬ ವಾಕ್ಯ ಹಾಗು 'ಸೋನ್ವೇಷ್ಟವ್ಯಃ' ಇತ್ಯಾದಿ ವಾಕ್ಯಗಳು ಬೃಹದಾರಣ್ಯಕ ಹಾಗು ಛಾಂದೋಗ್ಯ ಉಪನಿಷತ್ತುಗಳಲ್ಲಿ ಬಂದಿವೆ. ಬೃಹದಾರಣ್ಯಕ ಹಾಗು ಛಾಂದೋಗ್ಯ ಉಪನಿಷತ್ತುಗಳು ಕರ್ಮಪರವಾಗದೆ ಬ್ರಹ್ಮಪರವೆಂದು ಪ್ರಸಿದ್ಧವಾಗಿವೆ. ಯಾಜ್ಞವಲ್ಕ್ಯರು ತನ್ನ ಪತ್ನಿಗೆ ಉಪದೇಶಿಸುವ ಪ್ರಕರಣದಲ್ಲಿ 'ಮಂತವ್ಯಃ' ಹಾಗು 'ಸೋನ್ವೇಷ್ಟವ್ಯಃ' ಎಂಬ ವಾಕ್ಯಗಳು ಬಂದಿರುತ್ತವೆ. ಇಲ್ಲಿ ಸಂದಂಶನ್ಯಾಯವನ್ನು ಉಪಯೋಗಿಸಬೇಕು. ಪೂರ್ವವಾಕ್ಯಗಳು ಉತ್ತರವಾಕ್ಯಗಳು ಬ್ರಹ್ಮಪರವೆಂದು ಸಂದಷ್ಟವಾಗಿವೆ. (ಅರ್ಥೈಕತ್ವಾತ್ ಏಕಂ ವಾಕ್ಯಂ ಎಂದು.) ಆದ್ದರಿಂದ ಮಧ್ಯದಲ್ಲಿರುವ ಈ ವಾಕ್ಯಗಳೂ ಬ್ರಹ್ಮಪರವೇ ಆಗಬೇಕು. ಹಾಗಾಗಿ ಇಲ್ಲಿರುವ ತವ್ಯಪ್ರತ್ಯಯವು ವಿಚಾರವನ್ನು ವಿಧಿಸುತ್ತಿದೆ ಎಂದು ಹೇಳಬಾರದು. 'ತವ್ಯ' ಪ್ರತ್ಯಯದ ವಿಧಿಶಕ್ತಿಯು ಕುಂಠಿತವಾಗುತ್ತದೆ. ಹಾಗಾದರೆ ತವ್ಯ ಪ್ರತ್ಯಯಕ್ಕೆ ಏನರ್ಥ ಹೇಳಬೇಕು? ಎಂಬ ಪ್ರಶ್ನೆ ಬಂದರೆ 'ಅರ್ಹ' ಎಂಬ ಅರ್ಥ ಹೇಳುತ್ತೇವೆ. ಇದಕ್ಕೆ ಪಾಣಿನಿಯ ಸಮ್ಮತಿಯೂ ಇದೆ. 'ಅರ್ಹೇ ಕೃತ್ಯತೃಚಶ್ಚ' ಎಂಬ ಸೂತ್ರವು 'ಅರ್ಹ' ಎಂಬರ್ಥದಲ್ಲಿ 'ಕೃತ್ಯ' ಮತ್ತು 'ತೃಚ್' ಪ್ರತ್ಯಯಗಳು ಬರುತ್ತವೆಂದು ಹೇಳುತ್ತದೆ. ಈ ತವ್ಯ ಪ್ರತ್ಯಯಕ್ಕೆ 'ಕೃತ್ಯ' ಎಂಬ ಸಂಜ್ಞೆಯನ್ನು 'ಕೃತ್ಯಾಃ ಪ್ರಾಙ್ಣ್ವುಲಃ' ಎಂಬ ಸೂತ್ರವು ವಿಧಿಸುತ್ತಿದೆ. 'ಣ್ವುಲ್' ಪ್ರತ್ಯಯಕ್ಕಿಂತ ಪೂರ್ವದಲ್ಲಿ ಹೇಳಲ್ಪಟ್ಟ ಪ್ರತ್ಯಯಗಳು ಕೃತ್ಯಪ್ರತ್ಯಯಗಳು. ತವ್ಯಪ್ರತ್ಯಯವು 'ಣ್ವುಲ್' ಪ್ರತ್ಯಯಕ್ಕಿಂತ ಪೂರ್ವದಲ್ಲಿದೆ 'ತವ್ಯತ್ತವ್ಯಾನೀಯರಃ' (೩-೧-೪) ಹಾಗಾಗಿ 'ಅರ್ಹ' ಎಂಬರ್ಥವು ತವ್ಯಪ್ರತ್ಯಯಕ್ಕೆ ಸಿದ್ಧವಾಯಿತು.

ಲಿಙಾದಿಪ್ರತ್ಯಯಗಳಿದ್ದರೂ ಅವುಗಳಿಗೆ ಪ್ರಕರಣವನ್ನು ನೋಡಿಯೇ ಅರ್ಥ ಮಾಡಬೇಕು. ಹೊರತು ವಿಧಿಯೆಂದೇ ಅರ್ಥ ಮಾಡಬೇಕಾಗಿಲ್ಲ, ಎನ್ನುವುದಕ್ಕೆ ಪೂರ್ವಮೀಮಾಂಸಾದೃಷ್ಟಾಂತವನ್ನು ಕೊಡುತ್ತಿದ್ದಾರೆ.

ಸಂಪೂರ್ಣಚಂದ್ರಿಕಾ

[1]ಸೂತ್ರ - **ಪೌರ್ಣಮಾಸೀವದುಪಾಂಶುಯಾಜಃ ಸ್ಯಾತ್** (೨-೨-೯)

ಸೂತ್ರಾರ್ಥ - 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ' 'ಹೀಗೆ ತಿಳಿದು ಯಾರು ಪೌರ್ಣಮಾಸೀಯಾಗ ಮಾಡುವನೋ' ಎಂಬ ವಾಕ್ಯದಂತೆ 'ಉಪಾಂಶುಯಾಜಮಂತರಾ ಯಜತಿ' 'ಮಧ್ಯದಲ್ಲಿ ಉಪಾಂಶುಯಾಗ ಮಾಡುತ್ತಾನೆ' ಎಂಬ ವಾಕ್ಯವೂ ಸಹ ಬೇರೆ ವಾಕ್ಯಗಳಿಂದ ವಿಹಿತವಾದ ಯಾಗಸಮೂಹವನ್ನೇ ಹೇಳುತ್ತಿದೆ.

ವಿಚಾರ ವಾಕ್ಯ - ಜಾಮಿವಾ ಏತದ್ಯಜ್ಞಸ್ಯ ಕ್ರಿಯತೇ ಯದನ್ವಂಚೌ ಪುರೋಽಡಾಶಾವುಪಾಂಶು-ಯಾಜಮಂತರಾ ಯಜತಿ । ವಿಷ್ಣುರುಪಾಂಶು ಯಷ್ಟವ್ಯೋಽಜಾಮಿತ್ವಾಯ । ಪ್ರಜಾಪತಿರುಪಾಂಶು ಯಷ್ಟವ್ಯೋಽಜಾಮಿತ್ವಾಯ । ಅಗ್ನೀಷೋಮಾವುಪಾಂಶು ಯಷ್ಟವ್ಯಾವಜಾಮಿತ್ವಾಯ ।

---

(१) भाट्टसङ्ग्रहः –

अथ तुरीयमुपांशुयाजापूर्वताधिकरणम् (सूत्राणि ९-१२)

**पौर्णमासीवदुपांशुयाजः स्यात् ॥ ९ ॥**

**(चोदना वाऽप्रकृतत्वात् ॥ १० ॥ गुणोपबन्धात् ॥ ११ ॥ प्रायवचनाच्च ॥ १२ ॥)**

एतदादित्रिभिर्नयैः पूर्वत्रैव समुदायानुवादत्वमाशंक्यापोद्यत इत्यापवादिकी सङ्गतिः । दर्शपूर्णमासयोः श्रूयते 'जामि वा एतद्यज्ञस्य क्रियते यदन्वंचौ पुरोडाशौ । उपांशुयाजमन्तरा यजति । विष्णुरुपांशु यष्टव्योऽजामित्वाय प्रजापतिरुपांशु यष्टव्योऽजामित्वाय अग्नीषोमावुपांशु यष्टव्यावजामित्वाय' इति । जामि आलस्यहेतुः । अन्वञ्चावव्यवहितौ । तत्रान्तरालवाक्ये विष्ण्वादिवाक्यविहितयागत्रयानुवादो यजिरुतापूर्वकर्मविधिरिति सन्देहः । पूर्वपक्षस्तु विष्ण्वादिवाक्ये विधिशक्तिप्रतिबन्धकयच्छब्दाद्यनुपहतप्रत्यक्षविधिश्रवणात् अन्तरालवाक्ये वर्तमाननिर्देशेन विधेरश्रवणात् द्रव्यदेवतालक्षणयागरूपाभावाच्च याग-विध्ययोगात् विष्ण्वादिवाक्यविहितयागत्रयसमुदायानुवादो यजिरिति । तथाच सूत्रम्, पौर्णमासीवाक्यवत् उपांशुयाजवाक्यमप्यनुवादः स्यादिति । सिद्धान्तस्तु विष्ण्वादिवाक्यैर्यागविधावङ्गीकृते सति 'जामि वा एतद्यज्ञस्य क्रियते' इति जामितादोषोप-क्रमतन्निर्हरणोपसंहाराभ्यां प्रतीतैकवाक्यताभङ्गप्रसङ्गात् पुरोडाशनैरन्तर्यकृतजामिता-दोषाभिधानोपक्रम एवान्तराले किञ्चिद्विधित्सितमित्यवगमात् यजतीत्यस्य लेट्त्वेन विधित्वसंभवात् आग्नेयाग्नीषोमीययाज्यानुवाक्यायुगलयोर्मध्ये वैष्णवप्राजापत्याग्नीषोमीय-याज्यानुवाक्यायुगलयोः शाखाभेदेनाऽऽम्नाततया विष्ण्वादिदेवताया ध्रौवाज्यद्रव्यस्य च सम्भवादन्तरालवाक्य एव यागविधिः । विष्ण्वादिवाक्यानि त्वर्थवादः । तव्यप्रत्ययस्य अर्हार्थेऽपि स्मरणादिति । फलन्तु यागत्रयानुष्ठानं पूर्वपक्षे । सिद्धान्ते तु विकल्पिततत्तद्देवताकस्यैकस्यैवेति ।

इति तुरीयमुपांशुयाजापूर्वताधिकरणम् (सूत्रे १-१२)

*ಆಘಾರಾಧಿಕರಣ*

### ಕಠಿಣಪದಾರ್ಥ

**ಅನ್ತರಿತೌ = ಅವ್ಯವಹಿತವಾದ. ಅಂತರಾ = ಮಧ್ಯದಲ್ಲಿ. ಅಜಾಮಿತ್ವಾಯ : ಆಲಸ್ಯ ಪರಿಹಾರಕ್ಕಾಗಿ. ಉಪಾಂಶು = ಮೆಲ್ಲಗೆ (ಸ್ವರವಿಶೇಷ).**

ಶ್ರುತ್ಯರ್ಥ - ನಿರಂತರವಾಗಿ ಎರಡು ಪುರೋಡಾಶ ಯಾಗಗಳನ್ನು ಮಾಡಿದರೆ ಆಗ್ನಿಗೆ ದೋಷ ಬರುತ್ತದೆ. ಆದಕ್ಕಾಗಿ ಮಧ್ಯದಲ್ಲಿ ತುಪ್ಪದ 'ಉಪಾಂಶುಯಾಜ' ಯಾಗವನ್ನು ಮಾಡುತ್ತಾನೆ. ವಿಷ್ಣುವಿಗೆ ಉಪಾಂಶುಯಾಜ ಯಾಗ ಮಾಡಬೇಕು ಬೇಸರ ಕಳೆಯುವುದಕ್ಕಾಗಿ, ಪ್ರಜಾಪತಿಗೆ ಉಪಾಂಶುಯಾಜ ಯಾಗ ಮಾಡಬೇಕು, ಬೇಸರ ಕಳೆಯುವುದಕ್ಕಾಗಿ ಅಗ್ನಿ - ಸೋಮರಿಗೆ ಉಪಾಂಶುಯಾಜ ಯಾಗ ಮಾಡಬೇಕು ಬೇಸರ ಕಳೆಯುವುದಕ್ಕಾಗಿ.

ಸಂಶಯ - ದರ್ಶಪೂರ್ಣಮಾಸಯಾಗ ಪ್ರಕರಣದಲ್ಲಿ ಈ ವಾಕ್ಯವು ಬಂದಿದೆ. ಈ ವಾಕ್ಯದಲ್ಲಿರುವ 'ಉಪಾಂಶುಯಾಜಮಂತರಾ ಯಜತಿ' ಎಂಬುದು ಮುಂದಿರುವ 'ವಿಷ್ಣುರುಪಾಂಶು ಯಷ್ಟವ್ಯಃ' ಇತ್ಯಾದಿ ವಾಕ್ಯಗಳಲ್ಲಿ ವಿಹಿತವಾದ ಮೂರು ಯಾಗಗಳನ್ನೇ ಅನುವಾದ ಮಾಡುತ್ತಿದೆಯೋ? ಅಥವಾ ಸ್ವತಂತ್ರವಾಗಿ ಮತ್ತೊಂದು ಯಾಗವನ್ನೇ ವಿಧಿಸುತ್ತಿದೆಯೋ?

'ಉಪಾಂಶುಯಾಜಮಂತರಾ ಯಜತಿ' ಎಂಬ ವಾಕ್ಯವೇ ವಿಧಾಯಕವೆಂದು ಹೇಳಿದರೆ 'ವಿಷ್ಣುರುಪಾಂಶು ಯಷ್ಟವ್ಯಃ' ಇತ್ಯಾದಿ ಮೂರು ವಾಕ್ಯಗಳು ಅರ್ಥವಾದಗಳಾಗುತ್ತವೆಂದು ಹೇಳಬೇಕು. ಈ ಪಕ್ಷದಲ್ಲಿ ಉಪಾಂಶುಯಾಗಕ್ಕೆ ಆಜ್ಯವನ್ನೇ ದ್ರವ್ಯವೆಂದು ತಿಳಿಯಬೇಕು. ವಿಷ್ಣು, ಪ್ರಜಾಪತಿ, ಅಗ್ನೀಷೋಮರು ವಿಕಲ್ಪವಾಗಿ ದೇವತೆಗಳಾಗುತ್ತಾರೆ.

ಇನ್ನು 'ವಿಷ್ಣುರುಪಾಂಶು ಯಷ್ಟವ್ಯೋ' ಎಂಬುದನ್ನು ವಿಧಾಯಕವೆಂದು ಹೇಳಿದರೆ 'ಉಪಾಂಶು-ಯಾಜಮಂತರಾ ಯಜತಿ' ಎಂಬುದು ಅನುವಾದಕವಾಗುತ್ತದೆ. ಇಲ್ಲಿ ವಿಷ್ಣ್ವಾದಿಯಾಗಗಳಿಗೆ ಆಜ್ಯವೇ ದ್ರವ್ಯ. ವಿಷ್ಣ್ವಾದಿಗಳೇ ದೇವತೆಗಳಾಗುತ್ತಾರೆ.

ಪೂರ್ವಪಕ್ಷ - 'ಉಪಾಂಶುಯಾಜಮಂತರಾ ಯಜತಿ' ಎಂಬುದು ಕೇವಲ ಅನುವಾದಕವಾಗಿದೆ ಹೊರತು ವಿಧಾಯಕವಾಗಿಲ್ಲ. ದ್ರವ್ಯ ಅಥವಾ ದೇವತೆಯು ಶ್ರುತವಾಗಿದ್ದರೆ ಮಾತ್ರ ಅದನ್ನು ವಿಧಿಯೆಂದು ಕರೆಯಬೇಕು. ಈ ವಾಕ್ಯದಲ್ಲಿ ದ್ರವ್ಯವಾಗಲೀ ದೇವತೆಯಾಗಲೀ ಶ್ರುತವಾಗಿಲ್ಲವಾದ್ದರಿಂದ ಇದನ್ನು ವಿಧಿಯೆನ್ನಲು ಬರುವುದಿಲ್ಲ. ಯಾಗದಲ್ಲಿ ಯಾವ ದ್ರವ್ಯವನ್ನೂ ಹೇಳದಿದ್ದರೆ ಧ್ರೌವಾಜ್ಯವನ್ನು ಇಟ್ಟುಕೊಳ್ಳಬೇಕೆಂಬ ವಿಧಿಯಿದೆ. ಆದ್ದರಿಂದ ದ್ರವ್ಯದ ಲಾಭವೇನೋ ಆಗಬಹುದು. ಆದರೆ ದೇವತೆಯ ಲಾಭವಾಗಲು ಸಾಧ್ಯವಿಲ್ಲ.

ಇನ್ನು ವಿಧಿಬೋಧಕವಾದ ಲಿಙ್ ಲೋಟ್ ತವ್ಯ ಪ್ರತ್ಯಯಗಳೂ ಸಹ ಇಲ್ಲಿ ಇಲ್ಲ. 'ಯಜತಿ' ಎಂಬುದನ್ನು ವಿನಾ ಕಾರಣ 'ಲೇಟ್' ಎಂದು ಹೇಳುವುದೂ ತಪ್ಪಾಗುತ್ತದೆ. ಆದಕಾರಣ ಈ ವಾಕ್ಯವು ಯಾವ ಯಾಗವನ್ನೂ ಸಹ ವಿಧಾನ ಮಾಡುತ್ತಿಲ್ಲ. ಹಾಗಾದರೆ 'ಉಪಂಶುಯಾಜಮಂತರಾ ಯಜತಿ

ಎಂದು ಹೇಳಿದ್ದೇ ವ್ಯರ್ಥವಾಯಿತಲ್ಲವೆಂದರೆ, ಹಾಗಲ್ಲ. ಮುಂದೆ ಮೂರು ಯಾಗಗಳು ವಿಹಿತವಾಗಿವೆ. ಆ ಮೂರು ಯಾಗಗಳನ್ನು ಈ ವಾಕ್ಯವು ಅನುವಾದ ಮಾಡುತ್ತಿದೆ. ಹೀಗೆ ಈ ವಾಕ್ಯವು ಅನುವಾದಕವಾದ್ದರಿಂದ ಸಾರ್ಥಕವಾಗಿದೆ. ಹಿಂದೆ ಪ್ರಸಕ್ತವಾದದ್ದನ್ನು ಹೇಗೆ ಅನುವಾದ ಮಾಡುತ್ತಿವೆಯೋ ಅದರಂತೆ ಮುಂದೆ ಬರುವುದನ್ನೂ ಸಹ ಅನುವಾದ ಮಾಡಲು ಬರುತ್ತದೆ. ಹಾಗಾದರೆ ಇದರಂತೆ 'ವಿಷ್ಣುರುಪಾಂಶು ಯಷ್ಟವ್ಯಃ' ಇತ್ಯಾದಿ ವಾಕ್ಯಗಳನ್ನೇ ಅನುವಾದಕವೆನ್ನೋಣ-ವೆಂದು ಆಕ್ಷೇಪಿಸಬಾರದು. ಏಕೆಂದರೆ ಇಲ್ಲಿ ವಿಷ್ಣುವೇ ಮೊದಲಾದ ದೇವತೆಗಳು ಶ್ರುತರಾಗಿದ್ದಾರೆ. ಮತ್ತು ವಿಧಿಬೋಧಕವಾದ 'ತವ್ಯ' ಪ್ರತ್ಯಯವೂ ಸಹ ಇದೆ. ಆದ್ದರಿಂದ ಈ ವಾಕ್ಯಗಳು ಮೂರು ಯಾಗಗಳನ್ನು ವಿಧಾನ ಮಾಡುತ್ತಿವೆಯೆಂದು ಒಪ್ಪಿಕೊಳ್ಳಲೇಬೇಕು. ಇದರಲ್ಲಿ ವಿಹಿತವಾದ ಮೂರು ಯಾಗಗಳನ್ನು 'ಉಪಾಂಶುಯಾಜಮಂತರಾ ಯಜತಿ' ಎಂಬ ವಾಕ್ಯವು ಅನುವಾದ ಮಾಡುತ್ತಿದೆ.

ಸಿದ್ಧಾಂತ - ಇದು ತಪ್ಪು. ಆಗ್ನೇಯ ಅಗ್ನೀಷೋಮೀಯಗಳೆಂಬ ಎರಡು ಪುರೋಡಾಶ ಯಾಗಗಳನ್ನು ದರ್ಶಪೂರ್ಣಮಾಸಯಾಗಪ್ರಕರಣದಲ್ಲಿ ಮೊದಲು ಹೇಳಿದ್ದಾರೆ. ಅನಂತರ ಈ ಎರಡು ಪುರೋಡಾಶಯಾಗಗಳನ್ನು ಒಟ್ಟಿಗೆ ಮಾಡಿದರೆ ಯಜಮಾನನಿಗೆ ಜಾಢ್ಯ ಬರುತ್ತದೆ ಎಂದು 'ಜಾಮಿವಾ ಏತದ್ಯಜ್ಞಸ್ಯ' ಎಂಬ ವಾಕ್ಯದ ಪ್ರಾರಂಭದಲ್ಲಿ ಹೇಳಿದ್ದಾರೆ. ಈ ಉಪಕ್ರಮವಾಕ್ಯವನ್ನು ನೋಡಿದಾಗ ಜಾಮಿತಾದೋಷಪರಿಹಾರಕ್ಕಾಗಿ ಏನೋ ಒಂದು ಹೊಸ ಯಾಗವನ್ನು ವಿಧಾನ ಮಾಡಲಾಗಿದೆಯೆಂದು ತಿಳಿದು ಬರುತ್ತದೆ. ಈ ಆಕಾಂಕ್ಷೆ ನಮಗೆ ಇರಬೇಕಾದರೆ ಅಪ್ರಸಕ್ತವಾಗಿ 'ಉಪಾಂಶುಯಾಜಮಂತರಾ ಯಜತಿ' ಎಂಬ ವಾಕ್ಯವು ಯಾವುದೋ ಯಾಗಗಳನ್ನು ಅನುವಾದ ಮಾಡಿದರೆ ತಪ್ಪಾಗುತ್ತದೆ. ಆದ್ದರಿಂದ ಈ ವಾಕ್ಯವು ಆಕಾಂಕ್ಷಾನುಸಾರಿಯಾಗಿ ಸ್ವತಂತ್ರಯಾಗವೊಂದನ್ನು ವಿಧಾನ ಮಾಡುತ್ತಿದೆ- ಯೆಂದೇ ಒಪ್ಪಿಕೊಳ್ಳಬೇಕು.

ಹಾಗಾದರೆ ದ್ರವ್ಯ ಮತ್ತು ದೇವತೆಯನ್ನು 'ಉಪಾಂಶುಯಾಜಮಂತರಾ ಯಜತಿ' ಎಂಬ ವಾಕ್ಯದಲ್ಲಿ ಹೇಳಿಲ್ಲ. ಆದ್ದರಿಂದ ವಿಧಿಯಾಗಲು ಸಾಧ್ಯವಿಲ್ಲವೆಂದು ಹಿಂದೆ ಹೇಳಿದ ದೋಷ ಬರುತ್ತದಲ್ಲ? ಎಂದರೆ ಆಜ್ಯವೆಂಬ ದ್ರವ್ಯದ ಲಾಭವಂತೂ ಆಗುತ್ತದೆ. ಇನ್ನು ಕ್ರಮ ಎಂಬ ಪ್ರಮಾಣದಿಂದ ದೇವತೆಯ ಲಾಭವೂ ಆಗುತ್ತದೆ. ಹೇಗೆಂದರೆ ತೈತ್ತಿರೀಯ ಐತರೇಯ ಮೊದಲಾದ ಮೂರು ಶಾಖೆಗಳಲ್ಲಿ ಇದರ ಉಲ್ಲೇಖವಿದೆ. ಒಂದರಲ್ಲಿ ಆಗ್ನೇಯಪುರೋಡಾಶಯಾಗದ ಯಾಜ್ಯಾ-ಅನುವಾಕ್ಯಾ ಮಂತ್ರಗಳನ್ನು ಹೇಳಿದ್ದಾರೆ. ಇವೆರಡರ ಮಧ್ಯದಲ್ಲಿ ವಿಷ್ಣುವಿಗೆ ಸಂಬಂಧಪಟ್ಟ ಯಾಜ್ಯಾ-ಅನುವಾಕ್ಯಾ ಮಂತ್ರಗಳನ್ನು ಹೇಳಿದ್ದಾರೆ.

ಹಾಗೆಯೇ ಮತ್ತೊಂದು ಶಾಖೆಯಲ್ಲಿ ಆಗ್ನೇಯ ಪುರೋಡಾಶಯಾಗದ ಯಾಜ್ಯಾ-ಅನುವಾಕ್ಯಾ ಮಂತ್ರಗಳನ್ನು ಹೇಳಿ ಮುಂದೆ ಅಗ್ನೀಷೋಮೀಯಯಾಗದ ಯಾಜ್ಯಾ-ಅನುವಾಕ್ಯಾ-ಮಂತ್ರಗಳನ್ನು ಹೇಳಿ ಇವೆರಡರ ಮಧ್ಯದಲ್ಲಿ ಪ್ರಜಾಪತಿಗೆ ಸಂಬಂಧಪಟ್ಟ ಯಾಜ್ಯಾ-ಅನುವಾಕ್ಯಾ ಮಂತ್ರಗಳನ್ನು ಹೇಳಿದ್ದಾರೆ. ಇದರಂತೆಯೇ ಮತ್ತೊಂದು ಶಾಖೆಯಲ್ಲಿಯೂ ಸಹ ಎರಡು ಯಾಗದ ಯಾಜ್ಯಾ-ಅನುವಾಕ್ಯಾಮಂತ್ರಗಳ ಮಧ್ಯದಲ್ಲಿ ಅಗ್ನೀಷೋಮೀಯಾ ಯಾಜ್ಯಾ-ಅನುವಾಕ್ಯಾ

ಮಂತ್ರಗಳನ್ನು ಹೇಳಿದ್ದಾರೆ. ಹೀಗೆ ಬೇರೆ ಬೇರೆ ಶಾಖೆಯಲ್ಲಿ ಎರಡು ಮಂತ್ರಗಳ ನಡುವ ಕ್ರಮವು ವಿಷ್ಣು, ಪ್ರಜಾಪತಿ, ಅಗ್ನಿ-ಸೋಮ ಮಂತ್ರಗಳು ಪ್ರಸಕ್ತವಾಗಿವೆ. ಈ ಕ್ರಮಕ್ಕೆ ಅನುಸಾರವಾಗಿ ಮಧ್ಯದಲ್ಲಿ ಬರುವ, ವಿಷ್ಣು-ಪ್ರಜಾಪತಿ ಅಗ್ನಿ-ಸೋಮ ಮಂತ್ರಗಳು ನಡುವೆ ಮಾಡಬೇಕಾಗಿರುವ ಉಪಾಂಶುಯಾಗಕ್ಕೇನೇ ಸಂಬಂಧಪಟ್ಟವೆಯೆಂದು ಸ್ಪಷ್ಟವಾಗುತ್ತದೆ. ಹೀಗೆ ಹೇಳದಿದ್ದರೆ ಮಧ್ಯದಲ್ಲಿ ಹೇಳಿದ ವಿಷ್ವಾದಿ ಯಾಜ್ಯಾ - ಅನುವಾಕ್ಯಾ- ಮಂತ್ರಗಳು ವ್ಯರ್ಥವಾಗುತ್ತಿದ್ದವು. ಮೀಮಾಂಸಕರು ಮಂತ್ರವನ್ನೇ ದೇವತೆಯೆಂದು ಹೇಳುವುದರಿಂದ ಉಪಾಂಶುಯಾಗಕ್ಕೆ ವಿಷ್ವಾದಿ ಯಾಜ್ಯಾಮಂತ್ರ - ಅನುವಾಕ್ಯಾಮಂತ್ರಗಳು ದೇವತೆಯೆಂದು ಪ್ರಾಪ್ತವಾಯಿತು. ಕ್ರಮ ಎಂಬ ಪ್ರಮಾಣದಿಂದ ದೇವತೆಯು ಲಾಭವಾಗುತ್ತದೆ. ಹೇಗೆಂದರೆ ಮಂತ್ರದಲ್ಲಿ ಯಾವ ಸಂಖ್ಯಾಕ್ರಮವಿದೆಯೋ, ಅದೇ ಕ್ರಮದಿಂದ ಕರ್ಮವನ್ನೂ ಸಹ ಹೇಳಿದ್ದಾರೆ. ಒಂದೊಂದು ಕರ್ಮಕ್ಕೆ ಒಂದೊಂದು ಮಂತ್ರವು ಸರಿಹೊಂದುತ್ತದೆ. ಮೊದಲು ಆಗ್ನೇಯ ಪುರೋಡಾಶ, ಅನಂತರ ಅಗ್ನೀಷೋಮೀಯ ಪುರೋಡಾಶಮಂತ್ರಗಳಿವೆ. ಈ ಎರಡರ ಮಧ್ಯದಲ್ಲಿ ವೈಷ್ಣವ ಪ್ರಾಜಾಪತ್ಯ ಅಗ್ನಿಷೋಮೀಯ ಮಂತ್ರಗಳಿವೆ. ಒಂದೊಂದು ಶಾಖೆಯವರಿಗೆ ಒಂದೊಂದು ಮಂತ್ರಗಳು ಎಂದು ವಿಕಲ್ಪವಾಗಿ ಪ್ರಾಪ್ತವಾಗುತ್ತವೆ. ಯಾಜ್ಯಾ ಅನುವಾಕ್ಯಾ ಎಂದು ಹೆಸರುಳ್ಳ ಎರಡೆರಡು ಮಂತ್ರಗಳನ್ನು ಒಂದೊಂದು ಶಾಖೆಯವರಿಗೆ ಹೇಳಿದ್ದಾರೆ. ಮಂತ್ರದಲ್ಲಿ ಈ ರೀತಿಯಾದ ಕ್ರಮವಿದೆ.

ಕರ್ಮದಲ್ಲಿಯೂ ಹೀಗೆಯೇ ಕ್ರಮವಿದೆ. ಆಗ್ನೇಯ ಪುರೋಡಾಶ ಅಗ್ನೀಷೋಮೀಯ-ಪುರೋಡಾಶಯಾಗಗಳನ್ನು ಹೇಳಿ ಇವುಗಳ ಮಧ್ಯದಲ್ಲಿ ಉಪಾಂಶುಯಾಗವನ್ನು ಹೇಳಿದ್ದಾರೆ. ಈ ಅನುಗುಣ್ಯದಿಂದ ವೈಷ್ಣವ ಪ್ರಜಾಪತ್ಯ ಅಗ್ನೀಷೋಮೀಯಮಂತ್ರಗಳು ಉಪಾಂಶುಯಾಗಕ್ಕೆ ಸಂಬಂಧ-ಪಟ್ಟಿರುವವುಗಳೆಂದು ತಿಳಿಯುತ್ತದೆ. ಮಂತ್ರವೇ ದೇವತೆಯಾದ್ದರಿಂದ ವಿಷ್ಣು, ಪ್ರಜಾಪತಿ ಉಪಾಂಶು ಯಾಗಕ್ಕೆ ದ್ರವ್ಯ ಮತ್ತು ದೇವತೆಯ ಲಾಭವಾಗುತ್ತದಾದ್ದರಿಂದ ಅಪೂರ್ವಕರ್ಮವಿಧಾಯಕವೆಂದು ಹೇಳಬೇಕು.

ಹಾಗಾದರೆ 'ವಿಷ್ಣುರುಪಾಂಶು ಯಷ್ಟವ್ಯೋಽಜಾಮಿತ್ವಾಯ' ಇತ್ಯಾದಿ ವಾಕ್ಯಗಳು ವ್ಯರ್ಥವಾಗುತ್ತ-ವೆಯೇ? ಎಂದರೆ, ವ್ಯರ್ಥವಾಗಲ್ಲ. ಇವು ಪ್ರಶಂಸಾಪರವಾದ ಅರ್ಥವಾದ ವಾಕ್ಯಗಳಾಗಿವೆ. ಒಂದು ವೇಳೆ ಅರ್ಥವಾದವೆಂದು ಒಪ್ಪದಿದ್ದರೆ ಉಪಕ್ರಮಕ್ಕೆ ಅನುಗುಣವಾಗಿ 'ಉಪಾಂಶುಯಾಜಮಂತರಾ ಯಜತಿ' ಎಂಬುದು ಒಂದು ಯಾಗವನ್ನು ವಿಧಿಸುತ್ತಿದೆ. ಅನಂತರ 'ವಿಷ್ಣುರುಪಾಂಶು' ಇತ್ಯಾದಿ ವಾಕ್ಯಗಳು ಅದಕ್ಕೆ ವಿರುದ್ಧವಾಗಿ ಮೂರು ಯಾಗಗಳನ್ನು ವಿಧಿಸಿದರೆ ವಾಕ್ಯಭೇದದೋಷಬರುತ್ತದೆ. ಆದ್ದರಿಂದ ಜಾಡ್ಯ ಪರಿಹಾರಕ್ಕಾಗಿ ವಿಷ್ಣು ಪ್ರಜಾಪತಿ ಅಗ್ನೀಷೋಮರಿಗೆ ತುಪ್ಪದ ಆಹುತಿಯ ಮೂಲಕ ಒಂದು ಯಾಗವನ್ನು ಮಾಡಬೇಕು ಎಂದಷ್ಟೇ ಈ ವಾಕ್ಯ ಹೇಳುತ್ತಿದೆ. 'ವಿಷ್ಣುರುಪಾಂಶು' ಇತ್ಯಾದಿವಾಕ್ಯವು ಪೂರ್ವಪ್ರಸಕ್ತವಾದ ಯಾಗವನ್ನೇ 'ಜಾಡ್ಯಪರಿಹಾರಕ್ಕಾಗಿ' ಎಂದು ಪ್ರಶಂಸೆ ಮಾಡುತ್ತಿದೆ. ಮಾಡುವ ಯಾಗ ಒಂದೇ ಆಗಿದ್ದರೂ ಅಲ್ಲಿ ವಿಷ್ಣು ಉದ್ದೇಶದಿಂದ ಪ್ರಜಾಪತಿಯ ಉದ್ದೇಶದಿಂದ, ಅಥವಾ ಅಗ್ನೀಷೋಮರ ಉದ್ದೇಶದಿಂದ ಯಾಗ ಮಾಡಬಹುದು. ಎಂಬುದನ್ನೇ 'ವಿಷ್ಣುರುಪಾಂಶು' ಇತ್ಯಾದಿ ಮೂರು ವಾಕ್ಯಗಳು ಹೇಳಲು ಹೊರಟವೆ.

ಪರಿಪೂರ್ಣಚಂದ್ರಿಕಾ

ಉಪಕ್ರಮದಲ್ಲಿ ಜಾಮಿತಾದೋಷ ಬರುತ್ತದೆಂದು ಹೇಳಿ ಉಪಸಂಹಾರದಲ್ಲಿ ಜಾಮಿತಾದೋಷದ ಪರಿಹಾರ ಹೇಳಲಾಗಿದೆ. ಉಪಕ್ರಮ ಮತ್ತು ಉಪಸಂಹಾರಗಳಿಂದ ಏಕವಾಕ್ಯತ್ವವು ಗೊತ್ತಾಗುತ್ತದೆ. ಆದ್ದರಿಂದ ಜಾಡ್ಯದ ಪರಿಹಾರಕ್ಕೇನೆ ಉಪಾಂಶುಯಾಗವನ್ನು ಮಧ್ಯದಲ್ಲಿ ಹೇಳಿದ್ದಾರೆಂದು ತಿಳಿಯಬೇಕು. ಸಂದಂಶನ್ಯಾಯದಿಂದ ಏಕವಾಕ್ಯತ್ವ ಬರುತ್ತದೆ. ಉಪಾಂಶುಯಾಗವನ್ನು ಅನುವಾದಕವೆಂದು ಹೇಳಿದರೆ ಏಕವಾಕ್ಯತ್ವವು ಭಂಗವಾಗಿ ಉಪಕ್ರಮ ಉಪಸಂಹಾರಗಳಿಗೆ ಪರಸ್ಪರ ವಿರೋಧ ಬರುತ್ತದೆ. ಆದ್ದರಿಂದ 'ಯಷ್ಟವ್ಯಃ' ಎಂಬಲ್ಲಿರುವ ತವ್ಯ ಪ್ರತ್ಯಯಕ್ಕೆ 'ವಿಷ್ಣುಯಾಗಾರ್ಹ' ಎಂದು 'ಅರ್ಹ' ಎಂದಷ್ಟೇ ಅರ್ಥ. ಆದ್ದರಿಂದ ಲಿಙ್ ಲೋಟ್ ತವ್ಯ ಪ್ರತ್ಯಯಗಳಿಗೆ ಯಾವಾಗಲೂ ವಿಧಿಯೆಂಬ ಅರ್ಥವೇ ಇರುತ್ತದೆಂಬ ನಿಯಮವಿಲ್ಲ. ಪ್ರಕರಣವನ್ನು ಗಮನಿಸಿ ಅರ್ಥ ಮಾಡಬೇಕಾಗುತ್ತದೆ.

ವಿಶೇಷ ವಿಚಾರ - ತಂತ್ರವಾರ್ತಿಕದ ವ್ಯಾಖ್ಯಾನವಾದ 'ನ್ಯಾಯಸುಧಾ' ಎಂಬ ಹೆಸರಿನ ರಾಣಕ ವ್ಯಾಖ್ಯಾನದಲ್ಲಿ 'ಜಾಮಿ ವಾ ಏತದ್ ಯಜ್ಞಸ್ಯ ಕ್ರಿಯತೇ ಯದನ್ವಂಚೌ ಪುರೋಡಾಶಾವುಪಾಂಶು-ಯಾಜಮಂತರಾ ಯಜತ್ಯಜಾಮಿತ್ವಾಯಾಥೋ ಮಿಥುನತ್ವಾಯ' ಎಂಬ ತೈತ್ತಿರೀಯಶಾಖಾದಲ್ಲಿರುವ ಈ ಮಂತ್ರವನ್ನು ಉದಾಹರಿಸಲಾಗಿದೆ. ಈ ಶ್ರುತಿಯಲ್ಲಿ ವಿಷ್ಣ್ವಾದಿಗಳ ಹೆಸರುಗಳನ್ನು ಪಠಿಸಿಲ್ಲ. ಆದರೆ ಭಾಷ್ಯಕಾರ ಉದಾಹರಿಸಿದ ಶ್ರುತಿಯಲ್ಲಿ ವಿಷ್ಣ್ವಾದಿನಾಮಗಳನ್ನು ಪಠಿಸಲಾಗಿದೆ. ಇಲ್ಲಿ ಭಾಷ್ಯಕಾರ ಉದಾಹರಿಸಿದ ಶ್ರುತಿಯನ್ನೇ ಇಟ್ಟುಕೊಳ್ಳಬೇಕು ಹೊರತು ರಾಣಕ ಉದಾಹರಿಸಿದ್ದನ್ನು ಇಟ್ಟುಕೊಳ್ಳ-ಬಾರದು.

ಇಲ್ಲಿ ಪ್ರಾಸಂಗಿಕವಾಗಿ ಕೆಲವು ವಿಚಾರಗಳನ್ನು ತಿಳಿದರೆ ಸ್ಪಷ್ಟವಾಗುತ್ತದೆ.

ವಿವಾಹಿತನಾದವನು ಆಹಿತಾಗ್ನಿಕನಾಗಬೇಕು. ಇಂತಹ ಆಹಿತಾಗ್ನಿಕನು ಪ್ರತಿನಿತ್ಯ ಬೆಳಗ್ಗೆ ಮಧ್ಯಾಹ್ನ ಮತ್ತು ಸಾಯಂಕಾಲ ಅಗ್ನಿಹೋತ್ರವನ್ನು ಆಚರಿಸಬೇಕು. ಹುಣ್ಣಿಮೆ ಅಮಾವಾಸ್ಯೆಗಳ ಮರುದಿವಸದಂದು ದರ್ಶಪೂರ್ಣಮಾಸಯಾಗವನ್ನು, ವಸಂತಕಾಲದಲ್ಲಿ ಸೋಮಯಾಗವನ್ನು ಚಾತುರ್ಮಾಸ್ಯದಲ್ಲಿ ಚಾತುರ್ಮಾಸ್ಯಯಾಗವನ್ನು ತಪ್ಪದೇ ಆಚರಿಸಬೇಕು. ಇಷ್ಟು ನಿತ್ಯಕರ್ಮಗಳನ್ನು ಆಚರಿಸಿ ಅನಂತರ ಕಾಮನೆಗಳ ಪೂರೈಕೆಗಾಗಿ ಉಳಿದ ಯಾಗಗಳನ್ನು ಮಾಡಿದರಷ್ಟೇ ಸರಿಯಾದ ಫಲ ಸಿಗುತ್ತದೆ. ಇಲ್ಲಿ ದರ್ಶಪೂರ್ಣಮಾಸಯಾಗವೆಂದರೆ ಒಟ್ಟು ಆರು ಯಾಗಗಳು. ಪೂರ್ಣಮಾಸದಲ್ಲಿ ೧) ಆಗ್ನೇಯ ೨) ಉಪಾಂಶು ೩) ಅಗ್ನೀಷೋಮೀಯ ಎಂದು ಮೂರು ಯಾಗಗಳು. ದರ್ಶದಲ್ಲಿ ೧) ಆಗ್ನೇಯ ೨) ಐಂದ್ರಂಪಯ ೩) ಐಂದ್ರಂದಧಿ ಎಂದು ಮೂರು ಯಾಗಗಳು.

ಪ್ರಕೃತ ಪೂರ್ಣಮಾಸಯಾಗದಲ್ಲಿನ ಉಪಾಂಶುಯಾಗದ ವಿಚಾರವು ಪ್ರಸಕ್ತವಾಗಿದೆ. 'ಉಪಾಂಶು' ಎಂದರೆ ಬೇರೆ ಯಾರಿಗೂ ಕೇಳಿಸದಂತೆ ಮೆಲ್ಲನೆ ಹೇಳುವುದು ಎಂದರ್ಥ. ಮಂದಸ್ವರದಲ್ಲಿ ಮಂತ್ರಗಳನ್ನು ಹೇಳಿ ಮಾಡುವ ಯಾಗವೇ ಉಪಾಂಶುಯಾಗವೆನಿಸುತ್ತದೆ. 'ಯಾಜ' ಎಂದರೆ 'ಯಾಗ' ಎಂದರ್ಥ.

ಪೂರ್ಣಮಾಸಯಾಗಗಳಲ್ಲಿ 'ಆಗ್ನೇಯ' 'ಅಷ್ಟಾಕಪಾಲ' ಮತ್ತು 'ಅಗ್ನೀಷೋಮೀಯ ಏಕಾದಶಕಪಾಲ' ಎಂಬ ಎರಡು ಯಾಗಗಳಿವೆ. ಈ ಎರಡೂ ಯಾಗಗಳಿಗೆ ಪುರೋಡಾಶವೇ ದ್ರವ್ಯ.

ಇವೆರಡರ ಮಧ್ಯದಲ್ಲಿ ಉಪಾಂಶುಯಾಗವಿದೆ. ಈ ಯಾಗಕ್ಕೆ 'ಆಜ್ಯ'ವೇ ದ್ರವ್ಯವಾಗಿದೆ. ಎರಡು ಪುರೋಡಾಶ ಯಾಗಗಳನ್ನು ಉಚ್ಚಸ್ವರದಲ್ಲಿ ಮಂತ್ರಗಳನ್ನು ಹೇಳುತ್ತಾ ಮಾಡಬೇಕು. ಹಾಗೆ ಘಟ್ಟಿಯಾಗಿ ಹೇಳಿದಾಗ ಸಹಜವಾಗಿ ಔದಾಸೀನ್ಯ ಬರುತ್ತದೆ. ಔದಾಸೀನ್ಯದ ಪರಿಹಾರಕ್ಕೋಸ್ಕರ ಮಂದಸ್ವರದಲ್ಲಿ ಉಪಾಂಶುಯಾಗವನ್ನು ಮಾಡಬೇಕೆಂದು ಶ್ರುತಿಯು ಹೇಳುತ್ತದೆ. ಔದಾಸೀನ್ಯ ಬರುತ್ತದೋ ಬಿಡುತ್ತದೋ, ಅದು ಪ್ರಧಾನವಲ್ಲ. ಉಪಾಂಶುಯಾಗವನ್ನು ಮಾಡಲೇಬೇಕೆಂದು ಬುದ್ಧಿ ಹುಟ್ಟಿಸುವುದಕ್ಕಾಗಿ 'ವಿಷ್ಣುರುಪಾಂಶು ಯಷ್ಟವ್ಯಃ' ಇತ್ಯಾದಿ ವಾಕ್ಯಗಳು ಹೊರಟವೆ.

ಯಾಜ್ಯಾನುವಾಕ್ಯಾಯುಗಲ - ಇದರರ್ಥ ಹೀಗಿದೆ - ಹವಿಸ್ಸನ್ನು ತ್ಯಾಗ ಮಾಡುವ ಸಂದರ್ಭದಲ್ಲಿ ಹೇಳಬೇಕಾದ ಮಂತ್ರಗಳೇ ಯಾಜ್ಯಾ ಮಂತ್ರಗಳು ಹಾಗೂ ಪುರೋನುವಾಕ್ಯ ಮಂತ್ರಗಳು. ಯಾವ ಹವಿಸ್ಸನ್ನು ತ್ಯಾಗಮಾಡಬೇಕೋ ಅದಕ್ಕಿಂತ ಮೊದಲು ಹೋತೃವನ್ನು ಕುರಿತು ಅಧ್ವರ್ಯುವು ಉಚ್ಚಸ್ವರದಲ್ಲಿ 'ಅಗ್ನಯೇ ಅನುಬ್ರೂಹಿ' ಎಂದು ಹೇಳುತ್ತಾನೆ. (ಇಂತಹ ಹವಿಸ್ಸಿನ ತ್ಯಾಗವು ಆಗುತ್ತದೆ ನೀನು ಅಗ್ನಿಗೆ ತಿಳಿಸು ಎಂದು ಇದರರ್ಥ.) ಆವಾಗ ಹೋತೃವು ಹೇಳುವ ಮಂತ್ರಗಳಿಗೆ 'ಪುರೋನುವಾಕ್ಯಾ' ಎಂದು ಹೆಸರು. ಅನಂತರ ಪುನಃ ಅಧ್ವರ್ಯುವು 'ಆಶ್ರಾವಯ ಅಸ್ತು ಶ್ರೌಷಟ್ ಯಜ' ಎಂದು. ಹೇಳುತ್ತಾನೆ. ಆವಾಗ ಹೋತೃವು ಹೇಳುವ ಮಂತ್ರಗಳಿಗೆ 'ಯಾಜ್ಯಾ' ಎಂದು ಹೆಸರು. ಅನಂತರ ಹವಿಸ್ಸಿನ ಪ್ರಕ್ಷೇಪವಾಗುತ್ತದೆ. ಆದ್ದರಿಂದ ಹವಿಸ್ಸನ್ನು ತ್ಯಾಗ ಮಾಡುವ ಮೊದಲು 'ಅನುಬ್ರೂಹಿ' ಎಂಬುದರ ಅನಂತರ ಹೇಳುವುದು ಪುರೋನುವಾಕ್ಯ. 'ಯಜ' ಎಂಬುದರ ಅನಂತರ ಹೇಳುವುದು 'ಯಾಜ್ಯಾ' ಮಂತ್ರಗಳೆಂದು ತಿಳಿಯಬೇಕು.

'ವಿಷ್ಣುರುಪಾಂಶು ಯಷ್ಟವ್ಯಃ' ಎಂಬಲ್ಲಿ ಯಾವ ರೀತಿಯಾಗಿ ಏಕವಾಕ್ಯತಾಭಂಗ ಬರಬಾರದೆಂದು ತವ್ಯ ಪ್ರತ್ಯಯಕ್ಕೆ 'ಅರ್ಹ'ವೆಂಬ ಅರ್ಥವನ್ನು ಸ್ವೀಕರಿಸುತ್ತೇವೆಯೋ; ಅದರಂತೆ ಪ್ರಕೃತದಲ್ಲಿಯೂ ಉಪಕ್ರಮ ಮತ್ತು ಉಪಸಂಹಾರಗಳಲ್ಲಿ ಬ್ರಹ್ಮನ ವಿಚಾರವೇ ಪ್ರಾಪ್ತವಾಗಿರುವುದರಿಂದ 'ಮಂತವ್ಯ' ಎಂಬಲ್ಲಿನ ತವ್ಯ ಪ್ರತ್ಯಯಕ್ಕೆ ವಿಧಿಯೆಂಬ ಅರ್ಥ ಹೇಳದೆ ಅರ್ಹವೆಂಬ ಅರ್ಥವನ್ನೇ ಹೇಳಬೇಕು.

'ತವ್ಯ' ಪ್ರತ್ಯಯಕ್ಕೆ ವಿಧಿಯೆಂಬ ಅರ್ಥವಿದ್ದಂತೆ ಅರ್ಹವೆಂಬ ಅರ್ಥವೂ ಸೂತ್ರಸಮ್ಮತವಾಗಿದೆ. ಹಾಗಾಗಿ ಅರ್ಹವೆಂಬ ಅರ್ಥದಲ್ಲಿತಪ್ಪಿಲ್ಲ. ಆದರೆ ಲಿಙಾದಿಗಳಿಗೆ ಕೇವಲ ವಿಧಿಯೆಂಬ ಅರ್ಥವಷ್ಟೇ ಇದೆ. ಹಾಗಾಗಿ 'ಆತ್ಮನ್ಯೇವಾತ್ಮಾನಂ ಪಶ್ಯೇತ್' ಎಂಬಲ್ಲಿ ವಿಚಾರ ವಿಧಿಯು ಪ್ರಾಪ್ತವಾಗಿದೆಯೆಂದು ಆಕ್ಷೇಪ ಮಾಡಿದರೆ 'ನಾಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಪಶ್ಯೇತ್' ಎಂಬಲ್ಲಿ ಪ್ರಕೃತಿಭಾಗಕ್ಕೆ ಜ್ಞಾನವು ಮುಖ್ಯಾರ್ಥವಾಗಿದೆ. ಜ್ಞಾನವನ್ನು ವಿಧಾನ ಮಾಡಲು ಬರುವುದಿಲ್ಲ. ಹಾಗೆಯೇ 'ತದ್ವಿಜಿಜ್ಞಾಸಸ್ವ' ಎಂಬಲ್ಲಿಯೂ ಸನ್ ಪ್ರತ್ಯಯಕ್ಕೆ ಇಚ್ಛೆಯೆ ಮುಖ್ಯಾರ್ಥವಾಗಿದೆ. ಏಕೆಂದರೆ 'ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ' ಇಷುಧಾತುವಿಗೆ ಕರ್ಮವಾಗಿ ಮತ್ತೊಂದು ಧಾತು ಇದ್ದಾಗ ಇಚ್ಛಾರ್ಥದಲ್ಲಿ 'ಸನ್' ಪ್ರತ್ಯಯ ವಿಕಲ್ಪವಾಗಿ ಬರುತ್ತದೆಂದು ಈ ಸೂತ್ರ ಹೇಳುತ್ತದೆ. ಇಚ್ಛೆಯು ಸಹ ವಿಧಾನಯೋಗ್ಯವಲ್ಲದ್ದರಿಂದ 'ತದ್ವಿಜಿಜ್ಞಾಸಸ್ವ' ಎಂಬುದು ವಿಧಿವಾಕ್ಯವಾಗ- ಲಾರದು.

ಪರಿಪೂರ್ಣಚಂದ್ರಿಕಾ

ಶಂಕೆ - 'ಪಶ್ಯೇತ್' ಎಂಬಲ್ಲಿ ಜ್ಞಾನವು ಮುಖ್ಯಾರ್ಥವಾಗಲಿ 'ತದ್ವಿಜಿಜ್ಞಾಸಸ್ವ' ಎಂಬಲ್ಲಿ ಇಚ್ಛೆಯು ಮುಖ್ಯಾರ್ಥವಾಗಲಿ, ಆದರೆ ಎರಡೂ ಕಡೆ ಲಕ್ಷಣಾ ಮಾಡಿ ಅಮುಖ್ಯಾರ್ಥವಾದ ವಿಚಾರವನ್ನು ವಿಧಾನ ಮಾಡಲು ಏನು ತೊಂದರೆ?

ಸಮಾಧಾನ - ವಿಧಿವಾಕ್ಯದಲ್ಲಿ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದು ನ್ಯಾಯಸಮ್ಮತವಾಗಿಲ್ಲ. ಆದ್ದರಿಂದಲೇ ಜೈಮಿನಿಸೂತ್ರದ ಭಾಷ್ಯಕಾರನಾದ ಶಬರಸ್ವಾಮಿಯು ಹೇಳುತ್ತಾನೆ. 'ನ ವಿಧೌ ಪರಃ ಶಬ್ದಾರ್ಥಃ' 'ವಿಧಿವಾಕ್ಯದಲ್ಲಿ ಅಮುಖ್ಯಾರ್ಥವನ್ನು ಇಟ್ಟುಕೊಳ್ಳಬಾರದು' ಎಂದು. ಆದರೆ ಅನೇಕ ಕಡೆ ವಿಧಿಯಲ್ಲಿಯೂ ಲಕ್ಷಣಾವನ್ನು ಸ್ವೀಕರಿಸಲಾಗಿದೆ. 'ಸೋಮೇನ ಯಜೇತ' ಎಂಬಲ್ಲಿ ಸೋಮಪದಕ್ಕೆ ಮತ್ವರ್ಥದಲ್ಲಿ ಲಕ್ಷಣಾ ಮಾಡಲಾಗಿದೆ. ಇದು ವಿಧಿವಾಕ್ಯವಾಗಿದೆ. ಅದರಂತೆ 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬಲ್ಲಿ 'ಆಲಭೇತ' ಎಂಬ ಪದಕ್ಕೆ ಯಾಗದಲ್ಲಿ ಲಕ್ಷಣಾ ಮಾಡಲಾಗಿದೆ. ಮತ್ತು 'ಔದುಂಬರೋ ಯೂಪೋ ಭವತಿ' ಎಂಬಲ್ಲಿ ಭಾವನಾದಲ್ಲಿ ಲಕ್ಷಣಾ ಮಾಡಲಾಗಿದೆ. ಹೀಗೆ ಅನೇಕ ಕಡೆ ವಿಧಿವಾಕ್ಯವಾಕ್ಯಕ್ಕೂ ಲಕ್ಷಣಾವನ್ನು ಆಶ್ರಯಿಸಲಾಗಿದೆ. ಆದ್ದರಿಂದ ವಿಧಿವಾಕ್ಯವಾದ ಮಾತ್ರದಿಂದ ಲಕ್ಷಣಾ ಮಾಡಬಾರದೆಂದು ಇದರರ್ಥವಲ್ಲ. ಹೊರತಾಗಿ ಲಕ್ಷಣಾವನ್ನು ಮಾಡದೆಯೂ ಅರ್ಥೈಸಲು ಬರುವಾಗ ವ್ಯರ್ಥವಾಗಿ ಲಕ್ಷಣಾವನ್ನು ಆಶ್ರಯಿಸಬಾರದೆಂದು ಶಬರಮಾತಿನರ್ಥ.

ಪ್ರಕೃತದಲ್ಲಿ ವೇದಾಂತವಾಕ್ಯಗಳಿಗೆ ಬ್ರಹ್ಮತಾತ್ಪರ್ಯವು ನಿಶ್ಚಯವಾಗಿದೆ. ತಾತ್ಪರ್ಯಾನು-ಪಪತ್ತಿಯೆಂಬ ಲಕ್ಷಣಾಬೀಜವು ಇರುವುದಿಲ್ಲ. ಆದ್ದರಿಂದ 'ಪಶ್ಯೇತ್' ಎಂಬುದಕ್ಕೆ ವಿಧಿಯಲ್ಲಿ ತಾತ್ಪರ್ಯವಿಲ್ಲ. ಲಕ್ಷಣಾದಿಂದ ವಿಧಿಪರತ್ವವನ್ನು ಅಂಗೀಕರಿಸಬಾರದು. ಹೀಗೆ ಬ್ರಹ್ಮತಾತ್ಪರ್ಯವೇ ವಿಧಿಶಕ್ತಿಗೆ ಪ್ರತಿಬಂಧಕವಾಗಿದೆ. ಕೇವಲ ಲಿಙ್‌ಪ್ರತ್ಯಯವು ಶ್ರುತವಾಗಿದೆ ಎಂಬ ಮಾತ್ರದಿಂದ ಎಲ್ಲವೂ ವಿಧಿಯೆನಿಸುವುದಿಲ್ಲ. ಕಿಂತು ವಿಧಿಶಕ್ತಿಪ್ರತಿಬಂಧಕವಿಲ್ಲದಿದ್ದಾಗ ಮಾತ್ರ ವಿಧಿತ್ವವನ್ನು ಸ್ವೀಕರಿಸಬೇಕು.

ಹಾಗಾಗಿ 'ಪಶ್ಯೇತ್' ಇತ್ಯಾದಿ ಕಡೆ ಲಿಙ್ ಮೊದಲಾದ ವಿಧಿಪ್ರತ್ಯಯಗಳಿದ್ದರೂ ಸಹ ಅವುಗಳ ವಿಧಿಶಕ್ತಿಯು ಕುಂಠಿತವಾಗಿದೆ. ಏಕೆಂದರೆ ಅವುಗಳಿಗೆ ಬ್ರಹ್ಮನನ್ನು ಬೋಧಿಸುವುದರಲ್ಲಷ್ಟೇ ತಾತ್ಪರ್ಯ-ವಿದೆ.

ಈ ವಿಚಾರದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತವೊಂದನ್ನು ನೋಡಿದರೆ ಸ್ಪಷ್ಟವಾಗುತ್ತದೆ.

(೧)ಪೂರ್ವೈಶ್ಚ ತುಲ್ಯಕಾಲತ್ವಾತ್ ಸೂತ್ರ (೧೦-೮-೫)

---

(१) भाट्टसङ्ग्रहः –

अथ पञ्चमं त्रैयम्बकादावभिघारणानभिघारणादीनामर्थवादताधिकरणम्(सूत्रम् ८)

सूत्रम् – पूर्वैश्च तुल्यकालत्वात् ॥ ८ ॥

पूर्ववैषम्येण शङ्कनात् सङ्गतिः । आधाने श्रूयते ''होतव्यमग्निहोत्रं न होतव्यं वेति मीमांसन्ते ब्रह्मवादिनः । यद्यजुषा जुहुयाद्यथापूर्वमाहुतीर्जुहुयाद्यन्न जुहुयादग्निः पराभवत् तूष्णीमेव .

ಸೂತ್ರಾರ್ಥ - ಹಿಂದೆ ಹೇಳಿದ ನಿಷೇಧವಾಕ್ಯಗಳಂತೆ 'ಅಭಿಘಾರ್ಯಾಃ ನಾಭಿಘಾರ್ಯಾಃ' ... ವಾಕ್ಯಗಳು ಅರ್ಥವಾದಗಳಾಗಿವೆ. ಏಕೆಂದರೆ ಅವುಗಳಿಗೆ ಪ್ರಶಂಸೆ ಮಾಡುವುದರಲ್ಲಿಯೇ ತಾತ್ಪರ್ಯ. ವಿರುವುದರಿಂದ ಅಭಿಘರಣವನ್ನು ಮಾಡಲೇಬೇಕೆಂದು ಸಿದ್ಧಾಂತ. ಕೊನೆಯಲ್ಲಿರುವ "ಅಥೋ ಖಲ್ವಾಹುರಭಿಘಾರ್ಯಾ ಏವ" ಎಂಬ ವಾಕ್ಯವೇ ಅನನ್ಯಪರವಾದ ವಿಧಿಯೆನಿಸಿದೆ. ಹೊರತು ಪ್ರಾ... -ದಲ್ಲಿರುವ 'ಅಭಿಘಾರ್ಯಾ' ಎಂಬುದು ವಿಧಿಯಲ್ಲ. 'ನಾಭಿಘಾರ್ಯಾ'ಎಂಬುದು ನಿಷೇಧವೂ ಅ...

ವಿಷಯ ವಾಕ್ಯ :- "ಅಭಿಘಾರ್ಯಾ ನಾಭಿಘಾರ್ಯಾ ಇತಿ ಮೀಮಾಂಸತೇ ಯದಭಿಘಾರಯೇ- ದ್ರುದ್ರಾಯಾಸ್ಯೇ ಪಶೂನ್ನಿದಧ್ಯಾತ್. ಅಥೋ ಖಲ್ವಾಹುರಭಿಘಾರ್ಯಾ ಏವ".

---

होतव्यम्'' इति । तथा चातुर्मास्येषु त्र्यम्बकमन्त्रसंबन्धेन त्र्यम्बकनामका बह एककपालपुरोडाशा विहिताः । तत्र श्रूयते ''अभिघार्या अनभिघार्या इति मीमांसन्ते ब्रह्मवादिनः । यदभिघारयेद् रुद्रायास्ये पशून्निदध्यात् । यन्नाभिघारयेन्न रुद्रायास्ये पशून्निदध्यादथो खल्वाहुरभिघार्या एव'' इति । तत्र किं होमाघारणयोर्विकल्पः, उत नियमेनानुष्ठानमिति सन्देहे, पूर्वत्रविधेयान्तरश्रवणेन जर्तिलादिवाक्यस्य स्तावकतया तद्विध्येकवाक्यत्वेऽपि प्रकृते विधेयान्तराश्रवणेन प्राथमिकस्य होमाभिघारश्रवणस्य विध्यन्तरशेषत्वासंभवेन विधिपरत्वमेवोपेयम् । न मीमांसाविशेषणत्वम् । विधिंसमवे तदयोगात् । एवञ्च 'न होतव्यम्' 'नाभिघार्या' इति तु नञ्प्रतिषेधार्थ एव । न मीमांसाविशेषणम् । तन्मात्रकोटिकमीमांसाऽयोगात् । अतो जर्तिलादिवाक्यवन्नार्थवादत्व- मपीति विहितप्रतिषिद्धत्वाद्धोमाभिघारणयोर्विकल्पः । एवञ्च सति विकल्पेऽन्यतरपक्ष- परिग्रहायानुष्ठानकाले प्राप्ता मीमांसाऽनूद्यते । अन्ते ''तूष्णीं होतव्यम्'' इति वाक्यं पूर्वविहितहोमानुवादेन तूष्णींभावरूपगुणविध्यर्थम् । ''अभिघार्या'' इत्यन्तिमवाक्यन्त्वनुवाद इति प्राप्ते सिद्धान्तः, ''होतव्यम्, न होतव्यम्'' । ''अभिघार्या'' ''नाभिघार्या'' इति वचनानि न विधिप्रतिषेधपराणि । होमाभिघारणतन्निषेधयोर्मीमांसासंबन्धित्वेन तद्विशेषणपरत्वस्य इतिशब्दबलेन स्पष्टत्वात् । अन्ते श्रुतं तूष्णीमेवेत्यादिवाक्यं त्वन्यपरत्वाद् विधायकम् । एवंच मीमांसाविशेषविषयतया प्रशस्तमित्येवं तत्स्तावकत्वेन सर्वोऽयं तच्छेषतयाऽर्थवादः । नच ''यदभिघारयेद् रुद्रायास्ये पशून्निदध्यात्'' इत्यभि- घारणानिन्दाऽर्थवादयोगः । तेन प्रतिषेधस्यावगमादिति शंक्यम् । ''एवमिदमभिघारणं प्रशस्तं यत् सन्तमपि दोषमनादृत्य कर्तव्यम्'' इत्येवं निन्दावचनस्यापि प्रशस्ततरत्वज्ञापनार्थत्वादिति । तदाह सूत्रे, पूर्वैः जर्तिलादिवाक्यैर्होमाभिघारणवाक्ययो- रप्यन्यार्थतया तुल्यत्वात् तद्वदेवार्थवादतेति । फलं तु, नियमेन होमाभिघारणयोर- नुष्ठानम् ।

इति पञ्चमं त्रैयम्बकादावभिघारणानभिघारणादीनामर्थवादताधिकरणम् (सूत्रे ८)

ಸಂಪೂರ್ಣಚಂದ್ರಿಕಾ

ಶ್ರುತ್ಯರ್ಥ :- ಅಭಿಘರಣವನ್ನು ಮಾಡಬೇಕೋ? ಮಾಡಬಾರದೋ, ಎಂದು ಜ್ಞಾನಿಗಳು ವಿಚಾರ ಮಾಡುತ್ತಾರೆ. ಅಭಿಘರಣವನ್ನು ಮಾಡಿದರೆ ರುದ್ರನ ಬಾಯಿಯಲ್ಲಿ ಪಶುಗಳನ್ನು ಇಟ್ಟಂತಾಗುತ್ತದೆ. ಅಭಿಘರಣ ಮಾಡದಿದ್ದರೆ ರುದ್ರನ ಬಾಯಿಯಲ್ಲಿ ಪಶುಗಳನ್ನು ಇಟ್ಟಂತೆ ಆಗುವುದಿಲ್ಲ. ಆದ್ದರಿಂದ ಅಭಿಘರಣವನ್ನು ಮಾಡಲೇಬೇಕು.

ಸಂಶಯ :- ಅಭಿಘರಣವನ್ನು ಮಾಡದಿದ್ದರೆ ದೋಷವಿಲ್ಲ. ಪ್ರಾರಂಭದಲ್ಲಿ ಅಭಿಘರಣ ಮಾಡಿದರೆ ದೋಷವನ್ನು ಹೇಳಿದ್ದರೂ ಸಹ ಕೊನೆಯಲ್ಲಿ ನಿಶ್ಚಯವಾಗಿ ಹೇಳಿದ್ದಾರೆ. ಅಭಿಘರಣವನ್ನು ಮಾಡಲೇಬೇಕೆಂಬ ನಿಶ್ಚಯವನ್ನು ಬ್ರಹ್ಮವಾದಿಗಳು ಮಾಡುತ್ತಾರೆ. ಹೀಗೆ ವಿರುದ್ಧವಾದ ಹೇಳಿಕೆಯಿಂದ ಸಂಶಯ ಬರುತ್ತದೆ. ಅಭಿಘರಣವನ್ನು ಮಾಡಲೂಬಹುದು ಬಿಡಲೂಬಹುದು ಎಂಬ ವಿಕಲ್ಪವೋ? ಅಥವಾ ಅಭಿಘರಣವನ್ನು ಮಾಡಲೇಬೇಕೋ?

ಪೂರ್ವಪಕ್ಷ:- ವಿಕಲ್ಪವೆಂದೇ ಹೇಳಬೇಕು ಹೊರತು ವಿಧಿಯೆನ್ನಬಾರದು. "ಅಥೋ ಖಲ್ವಾಹು-ರಭಿಘಾರ್ಯಾ ಏವ" ಎಂಬ ಕೊನೆಯ ಮಾತು 'ಏವ'ಕಾರದಿಂದ ವಿಕಲ್ಪವನ್ನು ನಿಷೇಧಿಸುತ್ತಾ ಅಭಿಘರಣವನ್ನೇ ವಿಧಿಸುತ್ತಿದೆ ಎಂದು ತೋರುತ್ತದೆ. ಆದರೆ ಈ ವಾಕ್ಯವು ಕೇವಲ ಅನುವಾದಕವೇ ಹೊರತು ವಿಧಾಕಯವಲ್ಲ. ಇದು ವಿಧಾಯಕವೆಂದಾಗಿದ್ದಲ್ಲಿ ವಿಕಲ್ಪವೆಂದು ಹೇಳಲು ಬರುತ್ತಿರಲಿಲ್ಲ. ಅಥವಾ ಪ್ರಾರಂಭದಲ್ಲಿರುವ "ಅಭಿಘಾರ್ಯಃ" ಎಂಬುದು ಕೃತ್ಯಪ್ರತ್ಯಯದಿಂದ ಕೂಡಿದೆ. ಆದ್ದರಿಂದ ವಿಧೇಯವಾಗಿದೆ. "ಅಭಿಘಾರ್ಯಾ ಏವ" ಎಂಬುದು ವಾಕ್ಯಶೇಷರೂಪವಾಗಿ ಪ್ರಾರಂಭದಲ್ಲಿ ಹೇಳಿದ್ದನ್ನೇ ಉಪೋದ್‌ಬಲಿಸುತ್ತಿದೆ. ವಿಕಲ್ಪದ ಪ್ರಾಪ್ತಿಯನ್ನು ಹೀಗೆ ತಿಳಿಯಬೇಕು -

"ಅಭಿಘಾರ್ಯಾ ನಾಭಿಘಾರ್ಯಾ ಇತಿ ಮೀಮಾಂಸಂತೇ" ಎಂದು ಪ್ರಾರಂಭದಲ್ಲಿ ಹೇಳಿದ ಅಭಿಘಾರ್ಯಾ ಎಂಬುದು ವಿಧಿಯೇ ಆಗಿದೆ. ಅನಂತರ ಹೇಳಿದ ನಾಭಿಘಾರ್ಯಾ ಎಂಬುದು ನಿಷೇಧವೇ ಆಗಿದೆ. "ಯದಭಿಘಾರಯೇದ್ರುದ್ರಾಯಾಸ್ಯೇ ಪಶೂನ್ನಿದಧ್ಯಾತ್" ಎಂದು ಅಭಿಘಾರಣ-ವನ್ನು ನಿಂದಿಸಲಾಗಿದೆ. ನಾಭಿಘಾರ್ಯಾ ಎಂಬುದರಿಂದ ವಿಹಿತವಾದ ಅಭಿಘರಣಾಭಾವದ ಶೇಷವೆಂದು ಹೇಳಬೇಕು. ಹೀಗೆ ಅಭಿಘರಣವಿಧಿ ಹಾಗೂ ಅಭಿಘರಣನಿಷೇಧ ಇವುಗಳಿಗೆ ಪರಸ್ಪರ ವಿರೋಧ ಬರುತ್ತದೆ. ಈ ವಿರೋಧದ ಪರಿಹಾರಕ್ಕಾಗಿ ವಿಕಲ್ಪವನ್ನು ಅವಶ್ಯ ಆಶ್ರಯಿಸಬೇಕು. ಹೀಗೆ ವಿಕಲ್ಪದಿಂದ ಪ್ರಾಪ್ತವಾದ ಅಭಿಘರಣ ಹಾಗೂ ಅಭಿಘರಣಾಭಾವಗಳಲ್ಲಿ ಯಾವುದಾದರೂ ಒಂದು ಪಕ್ಷವನ್ನು ಆಶ್ರಯಿಸಬೇಕೆಂದು ಬ್ರಹ್ಮವಾದಿಗಳು ವಿಚಾರಮಾಡುತ್ತಾರೆ. ಅನುಷ್ಠಾನಕಾಲದಲ್ಲಿಯೇ ಈ ವಿಮರ್ಶೆಯು ಪ್ರಸಕ್ತವಾಗುತ್ತದೆ. ಹೊರತು ಶಾಬ್ದಬೋಧಕಾಲದಲ್ಲಿ ಅಲ್ಲ. ಹೀಗೆ ಪ್ರಸಕ್ತವಾದ ವಿಮರ್ಶೆಯನ್ನೇ "ಅಭಿಘಾರ್ಯಾ ನಾಭಿಘಾರ್ಯಾ ಇತಿ ಮೀಮಾಂಸತೇ" ಎಂಬಲ್ಲಿ ಮೀಮಾಂಸಾ ಪದದಿಂದ ಅನುವಾದ ಮಾಡಲಾಗಿದೆ.

ಆದ್ದರಿಂದ ವಿಕಲ್ಪವೆಂದೇ ಪೂರ್ವಪಕ್ಷ. ಶಾಖಾಭೇದೇನ ಒಬ್ಬೊಬ್ಬ ಅಧಿಕಾರಿಗಳಿಗೆ ಒಂದೊಂದು ರೀತಿಯಾಗಿ ಭಾವಿಸಬೇಕು. ಯಾವ ರೀತಿಯಾಗಿ "ಉದಿತೇ ಜುಹೋತಿ ಅನುದಿತೇ ಜುಹೋತಿ" ಎಂಬ

ವಿಧಿಯು ಉದಿತಹೋಮ ಕೆಲವು ಶಾಖೆಯವರಿಗೆ ಅನುದಿತ ಹೋಮ ಇನ್ನು ಕೆಲವು ಶಾಖೆಯವರಿಗೆ ಎಂದು ವಿಧಿಸುತ್ತದೋ ಅದರಂತೆ ಇಲ್ಲಿಯೂ ತಿಳಿಯಬೇಕು.

### ಸಿದ್ಧಾಂತ

ಪ್ರಶ್ನೆ :- ಪ್ರಾರಂಭದಲ್ಲಿರುವ ಕೃತ್ಯಪ್ರತ್ಯಯಾಂತವಾದ ಅಭಿಘಾರ್ಯಾ ಎಂಬುದನ್ನು ವಿಧಿಯೆಂದು ಹೇಳಬೇಕೋ? ಅಥವಾ ಕೊನೆಯಲ್ಲಿರುವ "ಅಥೋ ಖಲ್ವಾಹುಃ" ಇತ್ಯಾದಿಯನ್ನು ವಿಧಿಯೆಂದು ಹೇಳಬೇಕೋ? ಎರಡರಲ್ಲಿ ಯಾವುದೇ ಒಂದನ್ನು ನಿರ್ಣಯಿಸಲು ವಿನಿಗಮಕವಿಲ್ಲ. ಹೀಗಿರುವಾಗ ಕೊನೆಯಲ್ಲಿರುವ "ಅಥೋ ಖಲ್ವಾಹುಃ" ಎಂಬುದನ್ನೇ ವಿಧಿಯೆಂದು ಹೇಗೆ ಸಿದ್ಧಾಂತ ಮಾಡುತ್ತಿದ್ದೀರಿ.

ಉತ್ತರ :- ಪ್ರಾರಂಭದ ವಾಕ್ಯವು ಮೀಮಾಂಸಾಪದದಿಂದ ಅವರುದ್ಧವಾಗಿದೆ. "ಇತಿ ಮೀಮಾಂಸಂತೇ" ಎಂದು ಸ್ಪಷ್ಟವಾಗಿ ಇರುವುದರಿಂದ ಈ ವಾಕ್ಯವು ವಿಧಾಯಕವಲ್ಲ. ಹೊರತು 'ವಿಚಾರ ಮಾಡುತ್ತಾರೆ' ಎಂದು ವಿಚಾರದ ವಿಷಯದಲ್ಲಿ ತಾತ್ಪರ್ಯವುಳ್ಳದ್ದಾಗಿದೆ. ಕೊನೆಯಲ್ಲಿರುವ ಅಥೋ ಖಲ್ವಾಹುಃ ಎಂಬ ಅಭಿಘಾರಣವನ್ನು ಮಾಡಲೇಬೇಕೆನ್ನುವ ಮಾತು ವಿಧಿಯಾಗಿದೆ. ಪ್ರಾರಂಭದಲ್ಲಿ ಹೇಳಿರುವುದು ಅದರ ಅರ್ಥವಾದವಾಗಿದೆ. ಆದ್ದರಿಂದ ಅಭಿಘಾರವನ್ನು ಮಾಡಲೂಬಹುದು ಮಾಡದಿರಲೂಬಹುದು ಎಂಬ ವಿಕಲ್ಪಕ್ಕೆ ಅವಕಾಶವೇ ಇಲ್ಲ. ಎಲ್ಲರೂ ಸಹ ಅಭಿಘಾರವನ್ನು ಮಾಡಲೇಬೇಕು.

ಪ್ರಶ್ನೆ :- ಅಭಿಘಾರವು ನಿತ್ಯವಿಧಿಯೆಂದು ಹೇಳಿದಿರಿ. ಆದರೆ "ಯದಭಿಘಾರಯೇತ್" ಇತ್ಯಾದಿಯಾಗಿ ಅಭಿಘಾರವನ್ನು ಮಾಡಿದರೆ ರುದ್ರನ ಬಾಯಿಯಲ್ಲಿ ಪಶುಗಳನ್ನಿಟ್ಟಂತಾಗುವುದು ಎಂದು ನಿಂದನೆಯು ಕೇಳುತ್ತಿದೆ. ಆದ್ದರಿಂದ ನಿತ್ಯವಿಧಿಯೆಂದು ಹೇಗೆ ಹೇಳುತ್ತೀರಿ?

ಉತ್ತರ :- 'ಯದಭಿಘಾರಯೇತ್' ಎಂಬಲ್ಲಿ ವಾಕ್ಯಕ್ಕೆ ನಿಂದನೆ ಮಾಡುತ್ತಿಲ್ಲ. ಹೊರತು ನಿಂದಾರೂಪವಾದ ಅರ್ಥವಾದವಾಗಿದೆ. ಅರ್ಥವಾದವು ಸ್ತುತಿನಿಂದಾ ಇತ್ಯಾದಿಯಾಗಿ ಬಹುವಿಧವಾಗಿದೆ. ಪ್ರಕೃತ ಈ ವಾಕ್ಯವು ನಿಂದಾರೂಪವಾಗಿದೆ. ಅಭಿಘಾರವನ್ನು ಮಾಡಿದರೆ ರುದ್ರನ ಬಾಯಿಯಲ್ಲಿ ಪಶುಗಳನ್ನು ಇಟ್ಟಂತಾಗುತ್ತದೆ. ಅಂದರೆ ಸರ್ವನಾಶವಾಗುತ್ತದೆ. ಆದರೂ ಸಹ ಇದನ್ನು ಗಣನೆ ಮಾಡಬಾರದು. ಈ ದೋಷವನ್ನೂ ಲೆಕ್ಕಿಸದೆ ಅಭಿಘಾರವನ್ನು ಮಾಡಿದರೆ ಬಹಳವಾದ ಫಲವು ಲಭಿಸುತ್ತದೆ. ಇದರಿಂದ ಹೆಚ್ಚಿನ ಪ್ರಾಶಸ್ತ್ಯವನ್ನೇ ತಿಳಿಸಿದಂತಾಗುತ್ತದೆ.

ಪ್ರಶ್ನೆ :- 'ಯದಭಿಘಾರಯೇತ್' ಎಂಬಲ್ಲಿ ವಿಧಿಬೋಧಕವಾದ ಲಿಙ್ ಪ್ರತ್ಯಯವಿದೆ. ಆದ್ದರಿಂದ ಇದನ್ನು ವಿಧಾಯಕವೆಂದು ಹೇಳಬೇಕು. ಅರ್ಥವಾದವೆಂದು ಹೇಗೆ ಹೇಳುತ್ತೀರಿ?

ಉತ್ತರ :- ಹಿಂದೆ ಹೇಳಿದಂತೆ 'ಯದಭಿಘಾರಯೇತ್' ಎಂಬುದಕ್ಕೆ ಪ್ರಾಶಸ್ತ್ಯದಲ್ಲೇ ತಾತ್ಪರ್ಯವಿದೆ

ವಿಧಿಯಲ್ಲಿ ತಾತ್ಪರ್ಯವಿಲ್ಲ. ಆದ್ದರಿಂದ ಅದರ ವಿಧಿಶಕ್ತಿಯು ಕುಂಠಿತವಾಗಿದೆ ಆದ್ದರಿಂದ ವಿಧಿಯಾಗಲು ಸಾಧ್ಯವಿಲ್ಲ.

### ದಾರ್ಷ್ಟಾಂತಿಕದಲ್ಲಿ ಸಮನ್ವಯ

"ಆತ್ಮನ್ಯೇವಾತ್ಮಾನಂ ಪಶ್ಯೇತ್" "ತದ್ ವಿಜಿಜ್ಞಾಸಸ್ವ" ಇವೇ ಮೊದಲಾದ ಸ್ಥಳದಲ್ಲಿ ಲಿಙಾದಿಪ್ರತ್ಯಯಗಳಿವೆ. ಆದರೆ ಇವು ವಿಧಿಗಳಲ್ಲ. ಬ್ರಹ್ಮಪ್ರಕರಣದಲ್ಲಿ ಬಂದಿರುವುದರಿಂದ ಬ್ರಹ್ಮನಲ್ಲೇ ತಾತ್ಪರ್ಯವುಳ್ಳವುಗಳಾಗಿವೆ. ಹೊರತು ವಿಚಾರವಿಧಿಯಲ್ಲಿ ತಾತ್ಪರ್ಯವುಳ್ಳವುಗಳಾಗಿಲ್ಲ. ಬ್ರಹ್ಮನಲ್ಲೇ ತಾತ್ಪರ್ಯವಿರುವುದರಿಂದ ಇವುಗಳ ವಿಧಿಶಕ್ತಿಯು ಕುಂಠಿತವಾಗಿದೆ. ಆದ್ದರಿಂದ ಬ್ರಹ್ಮವಿಚಾರವು, ಅನಾವಶ್ಯಕ ಶಾಸ್ತ್ರಾರಂಭವು ಅನಾವಶ್ಯಕ.




**ವಿಚಾರವಿಧಿಗೆ ಏನು ಗತಿ?**

ಆತ್ಮವಿಚಾರ ಮಾಡಬೇಕೆಂದು ವಿಧಿಸುವ ವಾಕ್ಯಗಳಿಗೆ ಏನು ಗತಿ? ಬ್ರಹ್ಮನ ಬಗ್ಗೆ ಹೇಳುವ ವೇದಾಂತ ವಾಕ್ಯಗಳಿಗೆ ಗತಿ ಹೇಳಬೇಕಾಗಿಲ್ಲ, ಸುಮ್ಮನಿರಬಹುದು. ಆದರೆ ವಿಚಾರವಿಧಿವಾಕ್ಯಗಳ ಅರ್ಥನಿರ್ಣಯ ಮಾಡುವುದೆ ಈ ಅಧಿಕರಣದ ಉದ್ದೇಶ. ಅವುಗಳ ಬಗ್ಗೆ ಏನೂ ಹೇಳದೆ ಮೌನವಹಿಸಲು ಶಕ್ಯವೆ  ಈ ಪ್ರಶ್ನೆಗೆ ಹೀಗೆ ಸಮಾಧಾನ -

'ಮಂತವ್ಯಃ' 'ಸೋಽನ್ವೇಷ್ಟವ್ಯಃ' ಎಂದು ಮುಂತಾಗಿ ತವ್ಯಪ್ರತ್ಯಯವಿದ್ದರೂ ಅದು ಬ್ರಹ್ಮಪರ ವಾಕ್ಯಗಳ ನಡುವೆ ಬರುವುದರಿಂದ ವಿಚಾರವನ್ನು ವಿಧಿಸುವ ತಾತ್ಪರ್ಯ ಅದಕ್ಕೆ ಇಲ್ಲ. 'ವಿಷ್ಣುರುಪಾಂಶು ಯಷ್ಟವ್ಯಃ ಪ್ರಜಾಪತಿರುಪಾಂಶು ಯಷ್ಟವ್ಯಃ' ಎಂದು ಮುಂತಾಗಿ ಮೂರು ವಾಕ್ಯಗಳಲ್ಲಿ ಮೂರು ತವ್ಯಪ್ರತ್ಯಯಗಳಿದ್ದರೂ ಅವುಗಳಿಗೆ ಯಾಗವಿಧಾನ ಮಾಡುವ ತಾತ್ಪರ್ಯವಿಲ್ಲ ಎಂದು ಮೀಮಾಂಸಕರು ಅಂಗೀಕರಿಸಿದ್ದಾರೆ. ಏಕೆಂದರೆ ದರ್ಶಪೂರ್ಣಮಾಸದ ಆಗ್ನೇಯ ಅಗ್ನೀಷೋಮೀಯಗಳೆಂಬ ಎರಡು ಪುರೋಡಾಶ ಯಾಗಗಳ ನಡುವೆ ದೇರೊಂದು ಯಾಗದ ವ್ಯವಧಾನವಿಲ್ಲದಿದ್ದರೆ ಬೇಸರ ಉಂಟಾಗುವುದೆಂದು ಮೊದಲಿಗೆ ಹೇಳಿ, ಉಪಾಂಶುಯಾಗ ಮಾಡಬೇಕೆಂದು ಹೇಳಿ, ವಿಷ್ಣುಉಪಾಂಶುಯಾಗವನ್ನೂ ಪ್ರಜಾಪತಿಉಪಾಂಶುಯಾಗವನ್ನೂ ಅಗ್ನೀಷೋಮ-ಉಪಾಂಶುಯಾಗವನ್ನೂ ಮಾಡಬೇಕೆಂದು ತವ್ಯಪ್ರತ್ಯಯದಿಂದ ಹೇಳಿ, ಹೀಗೆ ಮಾಡಿದರೆ ಬೇಸರ ಕಳೆಯುವುದೆಂದು ಉಪಸಂಹಾರ ಮಾಡಿದೆ. ಇಲ್ಲಿ ಬೇಸರ ಕಳೆಯುವ ಬಗ್ಗೆ ಇರುವ ಪ್ರಕರಣದಲ್ಲಿ ಪ್ರಕರಣಾನುಗುಣವಾಗಿ ಒಂದು ಯಾಗವನ್ನು ವಿಧಾನ ಮಾಡಬೇಕು. ಮೂರು ಯಾಗಗಳನ್ನು ಮೂರು ತವ್ಯಪ್ರತ್ಯಯಗಳು ವಿಧಿಸಿದರೆ ಪ್ರಕರಣಕ್ಕೆ ಅನುಗುಣವಾಗುವುದಿಲ್ಲ. ಅದರಿಂದ ತವ್ಯಪ್ರತ್ಯಯಗಳಿಗೆ ಯಾಗವನ್ನು ವಿಧಿಸುವ ಅಭಿಪ್ರಾಯವಿಲ್ಲ.

'ಪಶ್ಯೇತ್' ಎಂಬಲ್ಲಿ ಜ್ಞಾನವನ್ನು ವಿಧಾನ ಮಾಡಲು ಲಿಙ್ಪ್ರತ್ಯಯಕ್ಕೆ ಶಕ್ತಿ ಇಲ್ಲ. ಏಕೆಂದರೆ ಜ್ಞಾನ ವಿಧಾನಕ್ಕೆ ಯೋಗ್ಯವಲ್ಲ. 'ವಿಜಿಜ್ಞಾಸಸ್ವ' ಎಂಬಲ್ಲಿ ಲೋಟ್ ಪ್ರತ್ಯಯಕ್ಕೂ ವಿಧಿ ಶಕ್ತಿ ಇಲ್ಲ. ಏಕೆಂದರ

ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ. ಇಚ್ಛೆ ವಿಧಾನಯೋಗ್ಯವಲ್ಲ. ವಿಚಾರವೆಂಬ ಅಮುಖ್ಯಾರ್ಥವಿಟ್ಟುಕೊಂಡು ವಿಧಿ ಕೂಡಬಹುದು. ನಿಜ. ಆದರೆ ವಿಧಿವಾಕ್ಯದಲ್ಲಿ ಅಮುಖ್ಯಾರ್ಥವಿಟ್ಟುಕೊಳ್ಳಕೂಡದೆಂದು ನಿಯಮವಿದೆ ಬ್ರಹ್ಮಪರ ವಾಕ್ಯಗಳ ನಡುವೆ ಬರುವುದರಿಂದ ವಿಧಿ ಪ್ರತ್ಯಯಗಳಿಗೆ ವಿಧಿಶಕ್ತಿ ಕುಂಠಿತವೂ ಆಗ 'ಅಭಿಘಾರಣ ಮಾಡಬೇಕು ಬೇಡ ಎಂದು ವಿಚಾರ ಮಾಡುತ್ತಾರೆ' ಎಂಬಲ್ಲಿ 'ಮಾಡಬೇಕು' ಎನ್ನುವ ವಿಧಿಯಲ್ಲ. ಬೇಕು ಬೇಡವೆಂದು ವಿಚಾರ ಮಾಡುತ್ತಾರೆ ಎನ್ನುವಲ್ಲಿ ಅದಕ್ಕೆ ತಾತ್ಪರ್ಯ. ಕೊನೆಯ 'ಅಭಿಘಾರಣ ಮಾಡಲೇಬೇಕು' ಎನ್ನುವುದು ವಿಧಿ. ಮೊದಲಿಗೆ ಹೇಳಿದುದು ಪ್ರಶಂಸೆಗಾಗಿ ಹೊಂದಿದ ಅರ್ಥವಾದ. ಹಾಗೇ ಪ್ರಕೃತದಲ್ಲಿ ವಿಧಿಪ್ರತ್ಯಯಗಳಿಗೆ ವಿಧಿಯಲ್ಲಿ ತಾತ್ಪರ್ಯವಿಲ್ಲ.

• • • • •

## ಯಾವ ವಾಕ್ಯಗಳೂ ವಿಚಾರವಿಧಾಯಕವಲ್ಲ

**तात्पर्यचन्द्रिका –**

**एतेन "तस्माद् ब्राह्मणः पाण्डित्यम्" इत्यादेरपि विचारविधित्वं** निरस्तम्। **विचारस्य ज्ञानहेतुताया अन्वयव्यतिरेकप्राप्तत्वेन विध्यनपेक्षणाच्च** । नियम-**परिसङ्ख्ययोश्च आत्मनः शब्दैकगम्यतया साधनान्तरप्राप्त्यभावेनायोगात्** । एतेन - **अन्यपरतया प्रतीतस्यापि "उपरि हि देवेभ्यो धारयति" इत्यादेरिव "तद् विजिज्ञासस्व" इत्यादेरपि विधित्वमस्त्विति निरस्तम् । प्रकृतस्य त्वत्पक्षे वस्तुतोऽन्यपरत्वात् । तद्वत् प्रकृते अप्राप्तेरभावाच्च ।**

ಅನುವಾದ :- ಇಲ್ಲಿಯ ತನಕ ಮಾಡಿದ ವಿಮರ್ಶೆಯಿಂದ ಮತ್ತೊಂದು ವಿಷಯ ನಿರ್ಣಯವಾಯಿತು. 'ಆದ್ದರಿಂದ ಬ್ರಾಹ್ಮಣನಾದವನು ಶ್ರವಣವನ್ನು ಹೊಂದಿ ಮನನವನ್ನು ಮಾಡಬೇಕು' ಎಂಬ ಶ್ರುತಿವಾಕ್ಯವೂ ಸಹ ವಿಚಾರವಿಧಾಯಕವಲ್ಲವೆಂದು ತಿಳಿಯಿತು. ಹಿಂದೆ ಹೇಳಿದಂತೆ ಬ್ರಹ್ಮನನ್ನು ತಿಳಿಸುವುದರಲ್ಲಿಯೇ ಈ ವಾಕ್ಯಕ್ಕೆ ತಾತ್ಪರ್ಯವಿರುವುದರಿಂದ ಲಿಙ್ ಪ್ರತ್ಯಯದ ವಿಧಿಶಕ್ತಿಯು ಕುಂಠಿತವಾಯಿತು.

ಮತ್ತು ವಿಚಾರವಿಧಿಗಳೆಲ್ಲವೂ ವ್ಯರ್ಥವಾಗಿವೆ. ಅಸಿದ್ಧವಾದ ವಿಷಯದಲ್ಲಷ್ಟೇ ವಿಧಿಗೆ ಸಾರ್ಥಕ್ಯ. ಆದರೆ 'ವಿಚಾರ ಮಾಡಿದರಷ್ಟೇ ನಿಶ್ಚಯಜ್ಞಾನ ಬರುತ್ತದೆ. ವಿಚಾರ ಮಾಡದಿದ್ದರೆ ಬರುವುದಿಲ್ಲ' ಎಂಬ ಅನ್ವಯವ್ಯತಿರೇಕವ್ಯಾಪ್ತಿಯಿಂದಲೇ ವಿಚಾರಕ್ಕೆ ನಿರ್ಣಯಕಾರಣತ್ವವು ಮೊದಲೇ ತಿಳಿದಿದ್ದರಿಂದ ವಿಚಾರವಿಧಿಗಳು ವ್ಯರ್ಥ.

ವಿಚಾರವಿಧಿಯನ್ನು ಅಪೂರ್ವವಿಧಿಯೆಂದು ಹೇಳಲಾಗದು. ಆದರೆ ನಿಯಮವಿಧಿಯೆಂದೂ ಪರಿಸಂಖ್ಯಾವಿಧಿಯೆಂದೂ ಹೇಳಬಹುದೆಂದು ಶಂಕಿಸಬಹುದು. ಆದರೆ ಮತ್ತೊಂದು ಸಾಧನ-

ಯಿಂದಲೂ ಪಡೆಯಬಹುದು ಎಂಬ ಸಾಧಾನಾಂತರದ ಪ್ರಾಪ್ತಿಯಿದ್ದಲ್ಲಿ ಮಾತ್ರ ನಿಯಮಪರಿಸಂಖ್ಯಾವಿಧಿಗಳನ್ನು ಹೇಳಲು ಸಾಧ್ಯ. ಆತ್ಮನಾದರೂ ಶಬ್ದೈಕಗಮ್ಯನಾದ್ದರಿಂದ ಆತ್ಮಜ್ಞಾನಕ್ಕೆ ಪ್ರತ್ಯಕ್ಷಾದಿ ಸಾಧನಾಂತರಗಳ ಪ್ರಾಪ್ತಿಯಿಲ್ಲ. ಆದ್ದರಿಂದ ವಿಚಾರವಿಧಿಯನ್ನು ನಿಯಮವಿಧಿ, ಪರಿಸಂಖ್ಯಾವಿಧಿಯೆಂದು ಹೇಳಲಾಗದು.

"ಉಪರಿ ಹಿ ದೇವೇಭ್ಯೋ ಧಾರಯತಿ" ಎಂಬ ವಾಕ್ಯವು ಪ್ರಶಂಸಾರೂಪವಾಗಿದ್ದರೂ ವಿಧಿಯೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಲಾಗಿದೆ. ಅದರಂತೆ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಾಕ್ಯಗಳು ಬ್ರಹ್ಮಪ್ರಕರಣದಲ್ಲಿ ಬಂದಿದ್ದರೂ ವಿಚಾರವಿಧಿಯೆಂದು ಏಕೆ ಆಗಬಾರದು?

ಈ ಶಂಕೆಗೂ ಈಗ ಅವಕಾಶವಿಲ್ಲ. ಏಕೆಂದರೆ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಾಕ್ಯವು ಬ್ರಹ್ಮನನ್ನು ಬೋಧಿಸುವುದರಲ್ಲಿಯೇ ನಿಜವಾದ ತಾತ್ಪರ್ಯ ಹೊಂದಿದೆಯೆಂದು ಅದ್ವೈತಮತದಲ್ಲಿ ಒಪ್ಪಲಾಗಿದೆ. ಆದರೆ 'ಉಪರಿ ಹಿ' ಎಂಬ ವಾಕ್ಯವು ಪ್ರಶಂಸಾಪರವಾಗಿ ತೋರಿದರೂ ಅದರಲ್ಲಿ ನಿಜವಾದ ತಾತ್ಪರ್ಯವಿಲ್ಲ. ಹೀಗೆ ವ್ಯತ್ಯಾಸವಿರುವುದರಿಂದ ವಿಚಾರವಿಧಿತ್ವವನ್ನು ಯಾವ ವಾಕ್ಯಗಳಿಗೂ ಸಮರ್ಥಿಸಲಾಗದು.

**ಕಠಿಣಪದಾರ್ಥ**

**ಏತೇನ** = ಬ್ರಹ್ಮಪರವಾದ್ದರಿಂದ ವಿಧಿಶಕ್ತಿಯು ಕುಂಠಿತವಾಗಿದೆಯೆಂದು ಹೇಳಿದ್ದರಿಂದ. **ವಿಧ್ಯನಪೇಕ್ಷಣಾತ್** = ವಿಚಾರವಿಧಿಯನ್ನು ಅಪೇಕ್ಷಿಸದ ಕಾರಣ. **ಏತೇನ** = ಬ್ರಹ್ಮಪರತ್ವನ್ನು ಹೇಳಿದ್ದರಿಂದ. ಜ್ಞಾನಕಾರಣವಾಗಿ ವಿಚಾರವು ಪ್ರಾಪ್ತವಾಗುತ್ತದೆಂದು ಹೇಳಿದ್ದರಿಂದ. **ಪ್ರಕೃತಸ್ಯ** = 'ಉಪರಿ ಹಿ' ಎಂಬ ವಾಕ್ಯಕ್ಕೆ. **ತದ್ವತ್** = 'ಉಪರಿ ಹಿ' ಎಂಬಲ್ಲಿ ಇರುವಂತೆ. **ಪ್ರಕೃತೇ** = 'ತದ್ವಿಜಿಜ್ಞಾಸಸ್ವ' ಎಂಬಲ್ಲಿ.

**प्रकाशः** – ननु "तस्माद् ब्राह्मणः पाण्डित्यं निर्विद्य बाल्येन तिष्ठासेत्" इत्यादौ, श्रवणं लब्ध्वा 'बाल्येन' मननेन 'तिष्ठासेत्' स्थातुमिच्छेत् मननं कुर्यादिति, अस्ति विचारविधिरित्यत आह – एतेनेति ।। ब्रह्मपरतया विधिशक्तिप्रतिबन्धादित्युक्तत्वेनेत्यर्थः । विचारविधित्वेन शङ्काऽर्हस्य सर्वस्यापि वाक्यस्य साधारणं दूषणमाह – विचारस्येति ।। गान्धर्वादिविचारस्य षड्जादिज्ञानहेतुत्वदर्शनादिति भावः ।। विधीति ।। अप्राप्त एव विध्यपेक्षेति भावः ।

नन्वपूर्वविधेरयोगेऽपि, यथा "व्रीहीनवहन्ति" इत्यादौ नखविदलनादिसाधनान्तरप्रयुक्तपाक्षिकत्वनिवृत्तिफलकनियमविधिः । यथाच "अश्वाभिधानी-

मादत्ते'' इत्यादावन्यनिवृत्तिफलकपरिसङ्ख्याविधिः । तथा विचारेणैव ब्रह्मज्ञानं सम्पादयेदिति नियमादिविधिः स्यादित्यत आह – **नियमेति** ।। सत्यं, यदि तत्रैव ब्रह्मज्ञाने विचारवत् साधनान्तरमपि स्यात् । नच तदस्ति । रूपादिहीनस्यात्मनः प्रत्यक्षाद्यविषयतया शब्दैकगम्यत्वादित्यर्थः ।

नन्वपूर्वसाधनेषु व्रीहिषु नखविदलनादेरप्राप्तावपि व्रीहिमात्रे तत्प्राप्त्या ''व्रीहीनवहन्ति'' इति यथा नियमः, तथा निर्विशेषात्मनि मानान्तराप्राप्तावपि आत्ममात्रे तत्प्राप्त्या नियम इति चेन्न । ''व्रीहीन्'' इत्यत्र व्रीहिशब्दोऽपूर्वीयद्रव्यपरः । नतु व्रीहिपरः । अन्यथा यवेष्ववघात औपदेशिको न स्यात् । नीवारेषु च व्रीहिरूपद्वाराभावेनातिदिष्टो बाध्येत, इति नवमे स्थापितत्वेनापूर्वीयद्रव्य एव नखविदलनादिप्राप्तेर्वाच्यत्वात् । किञ्च – व्रीहिसामान्य इवापूर्वीयेष्वपि व्रीहिषु नियमादृष्टाजनकस्यापि नखविदलनस्य सम्भवोऽस्ति । इह च निर्विशेषसविशेषरूपविशिष्टद्वयानुगते विशेषाभावादिद्वारा वेदान्तवेद्ये चिन्मात्रे मानान्तरप्राप्तिर्नेति कथं नियमादिविधिः । तदेतदुक्तम् ।। **शब्दैकगम्यतयेति** ।। ननुच यथा मन्त्रार्थज्ञानस्य तन्मूलककल्पसूत्रात्मीयग्रहणकवाक्यादिप्राप्त्या पक्षेऽप्राप्तमन्त्रसाध्यत्वं नियम्यते ''मन्त्रैरेव स्मृतिः साध्या'' इति । तथा वेदान्तमूलकस्त्रीशूद्रसाधारणस्मृतिपुराणादिप्राप्त्या पक्षेऽप्राप्तविचारपरिपूरणार्थो नियम इति चेन्न । विना विचारं स्वातन्त्र्येण स्मृतिपुराणादिना तज्ज्ञानासिद्ध्या साधनान्तरत्वासिद्धेर्न नियमविधिः । तदेतदाह – **साधनान्तरेति** ।। एतेन – श्रुत्यादिविचारस्यापातप्रतीतब्रह्मतदन्यज्ञानसाधनत्वे प्राप्ते, ''इत्यश्वाभिधानीमादत्ते'' इति वेदकस्योभयसम्बन्धप्राप्तावन्यसम्बन्धनिवृत्तिफलकपरिसङ्ख्येति निरस्तम् । श्रुत्यादिना आपाततोऽन्यप्रतीतावपि श्रुत्यादिविचारस्यान्यज्ञानसाधनत्वाप्राप्तेरित्यलमियता ।

ननु ''उपरि हि देवेभ्यो धारयति'' इत्यादेरधोधारणस्तुतिपरतया प्रतीयमानस्यापि विधिपरत्वं यथा, तथा ''तद् विजिज्ञासस्व'' इत्यादेः ब्रह्मपरतया

प्रतीयमानस्यापि तदस्त्वित्याशङ्कां निरस्यति – **एतेनेति** ।। ब्रह्मपरत्वकथनेन, ज्ञानहेतुतया विचारप्राप्तिकथनेन चेत्यर्थः । तृतीयेऽध्याये ''विधिस्तु धारणेऽपूर्वत्वात्'' इति चतुर्थपादीयपञ्चमाधिकरणे ''अधस्तात् समिधं धारयन्ननुद्रवेत्, उपरि हि देवेभ्यो धारयति'' इति मृताग्निहोत्रे श्रुतं वाक्यमुदाहृत्य, ''उपरि हि देवेभ्यः'' इति किं जीवदग्निहोत्रे उपरिधारणविधिः उतानुवादः इति सन्देहे, सर्वमभ्यर्हितं द्रव्यं प्रच्छाद्यैव देशान्तरं नेतव्यमित्याच्छादनस्याचारप्राप्तत्वात्, हविर्गार्हपत्यादाहवनीयं नीयमानमासाधनमपेक्षत इति, तत्रोच्यमानं उपरि समिद्धारणं दृष्टार्थतालाभादाच्छादनार्थं विज्ञायत इति, अधस्ताद् धारणस्य स्तुत्यर्थतयाऽनुवाद इति प्राप्ते, ''स्रुग्दण्डेन समिधमुपसङ्गृह्य'' इति श्रवणाद् दण्डप्रदेशे धार्यमाणया समिधा हविः – प्रच्छादनायोगात् तद्धारणस्यादृष्टार्थत्वेनार्थवशप्राप्तमुपरिधारणमत्र विधीयत इति सिद्धांतितम् । एतच्छब्दार्थं द्वेधा विवृणोति - **प्रकृतस्येति** ।। ''उपरि हि'' इति वाक्यस्यान्यपरतया प्रतीतावपि न वस्तुतोऽन्यपरत्वम् । विचारवाक्यस्य तु वस्तुतो ब्रह्मपरत्वेन वैषम्यादित्यर्थः ।

**गुरुराजीय** – एतेन **तस्माद् ब्रह्मण इत्यादि** ।। अत्र आत्मन्येवात्मानं पश्येत्, तद् विजिज्ञासस्वेत्यादाविव ज्ञानेच्छयोर्विधानाभावेन तत्प्रयुक्तदोषस्याभावात् विचारश्च लक्षणां विनाऽङ्गीक्रियत इति तत्प्रयुक्तस्य विधौ लक्षणाया अन्याय्यत्वस्य चाभावादभ्यधिकाशङ्क्येयमिति ध्येयम् । तर्हि कथमतिदेश इति चेन्न । प्रतीतैकवाक्यताभङ्गरूपपूर्वोक्तबाधकस्यात्रापि समानत्वेनातिदेशोपपत्तेरिति भावः । साधारणदोषमप्याह – **विचारस्येति** ।। ''विधिरत्यन्तमप्राप्तौ'' इति वचनात् ज्योतिष्टोमेन स्वर्गकामो यजेतेत्यादेरिवापूर्वविधित्वासम्भवेऽपि 'व्रीहीन् अवहन्ति' इत्यादेरिव नियमविधिर्वा 'पञ्चपञ्चनखा भक्ष्याः इमामगृभ्णन् रशनामृतस्य' इत्यादेरिव परिसंख्याविधिर्वा किं न स्यादित्यत आह – **नियमेति** ।। पाक्षिकप्राप्तस्य विधिर्नियमविधिः नित्यप्राप्ते निषेध्यानिषेध्ययोः साधारण्ये विधिः परिसंख्या विधिरित्यर्थः ।। **वस्तुतोऽन्यपरत्वादिति** ।। ''उपरि हि देवेभ्य'' इत्यस्य चान्यपरतया प्रतीतिमात्रं नतु वस्तुतोऽन्यपरत्वं तद् विजिज्ञासास्वेत्यादेश्च वस्तुतोऽन्यापरत्वमिति वैषम्यमिति भावः ।

ಜಿಜ್ಞಾಸಾಧಿಕರಣ

**ವಿವರಣೆ** :- ಇಲ್ಲಿಯ ತನಕ ವಿಚಾರವನ್ನು ವಿಧಿಸುವ 'ಪಶ್ಯೇತ್' 'ಮಂತವ್ಯಃ' ಮೊದಲಾದ ವಾಕ್ಯಗಳಿಗೆ ವಿಚಾರವಿಧಿಯಲ್ಲಿ ತಾತ್ಪರ್ಯವಿಲ್ಲ. ಬ್ರಹ್ಮಪ್ರತಿಪಾದನೆಯಲ್ಲೇ ತಾತ್ಪರ್ಯವಿದೆಯೆಂದು ಸಮರ್ಥಿಸಿದ್ದಾಯಿತು. ಈಗ 'ಬಾಲ್ಯೇನ ತಿಷ್ಠಾಸೇತ್'(೧) ಇತ್ಯಾದಿ ವಾಕ್ಯಗಳೂ ಕೂಡ ವಿಚಾರವನ್ನು ವಿಧಿಸುತ್ತಿಲ್ಲವೆಂದು ಸಮರ್ಥಿಸಬೇಕಾಗಿದೆ.

**ಶಂಕೆ** :- ಈ ಶ್ರುತಿಯು ಸ್ಪಷ್ಟವಾಗಿ ವಿಚಾರವನ್ನು ವಿಧಿಸುತ್ತಿದೆ. ಆದ್ದರಿಂದ ವಿಚಾರವು ಕರ್ತವ್ಯ ಆಗಿರುವಾಗ ಶಾಸ್ತ್ರವು ಅನಾರಂಭಣೀಯವೆಂದು ಹೇಗೆ ಹೇಳುತ್ತೀರಿ?

**ಸಮಾಧಾನ** - ಇದು ತಪ್ಪು. ಇದುವರೆಗೂ ಹೇಳಿದ ಮಾತುಗಳಿಂದಲೇ ಈ ಶಂಕೆ ಪರಿಹಾರವಾಯಿತು. 'ಬ್ಯಾಲ್ಯೇನ ತಿಷ್ಠಾಸೇತ್' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿರುವುದರಿಂದ ಬ್ರಹ್ಮನಲ್ಲಿ ತಾತ್ಪರ್ಯವುಳ್ಳದ್ದಾಗಿದೆ. ಆದ್ದರಿಂದ 'ತಿಷ್ಠಾಸೇತ್' ಎಂಬಲ್ಲಿರುವ ಲಿಙ್‌ಪ್ರತ್ಯಯದ ವಿಧಿಶಕ್ತಿಯು ಕುಂಠಿತವಾಗುತ್ತದೆ.

**ಪ್ರಶ್ನೆ** :- ಹಿಂದೆ ಉದಾಹರಿಸಿದ ಶ್ರುತಿವಾಕ್ಯಗಳಿಗೂ ಈಗ ಉದಾಹರಿಸುತ್ತಿರುವ ಶ್ರುತಿವಾಕ್ಯಕ್ಕೂ ವೈಲಕ್ಷಣ್ಯವಿದೆ. 'ಪಶ್ಯೇತ್' ಎಂಬಲ್ಲಿ ಜ್ಞಾನವು ಮುಖ್ಯಾರ್ಥವಾಗಿದೆ. 'ವಿಜಿಜ್ಞಾಸಸ್ವ' ಎಂಬಲ್ಲಿ ಇಚ್ಛೆಯು ಮುಖ್ಯಾರ್ಥವಾಗಿದೆ. ಜ್ಞಾನೇಚ್ಛೆಗಳನ್ನು ವಿಧಾನ ಮಾಡಲು ಬಾರದ ಕಾರಣ ವಿಚಾರದಲ್ಲಿ ಲಕ್ಷಣಾ ಮಾಡುವ ಪ್ರಸಂಗವಿದೆ. ಆದರೆ ಈಗ ಹಾಗಿಲ್ಲ. ಇಲ್ಲಿ 'ತಿಷ್ಠಾಸೇತ್' ಎಂದಿರುವುದರಿಂದ ಜ್ಞಾನವಾಗಲೀ ಇಚ್ಛೆಯಾಗಲೀ ವಿಧೇಯವಾಗಿಲ್ಲ. ತತ್‌ಪ್ರಯುಕ್ತವಾದ ದೋಷವಿಲ್ಲದ್ದರಿಂದ ವಿಚಾರ ಮಾಡುವ ಪ್ರಸಂಗವೂ ಇಲ್ಲ. ಲಕ್ಷಣಾ ಮಾಡದೆ ಶಕ್ತಿವೃತ್ತಿಯಿಂದಲೇ 'ತಿಷ್ಠಾಸೇತ್' ಎಂಬ ಪದಕ್ಕೆ ವಿಚಾರವೆಂಬ ಅರ್ಥವನ್ನು ಹೇಳುತ್ತೇವೆ. ಹಾಗಾಗಿ ಹಿಂದಿನ ಯಾವ ದೋಷಗಳಿಗೂ ಇಲ್ಲಿ ಅವಕಾಶವಿಲ್ಲ. ಅಷ್ಟೇ ಅಲ್ಲದೇ 'ಹಿಂದಿನ ಶಂಕೆಯನ್ನು ನಿರಾಕರಿಸಿದ್ದರಿಂದಲೇ' ಈ ಶಂಕೆಯೂ ಸಹ ನಿರಾಕೃತವಾಯಿತು' ಎಂದು ನಿಮಗೆ ಹೇಳಲು ಬರುವುದಿಲ್ಲ. ಆದ್ದರಿಂದ ಗ್ರಂಥಕಾರರು 'ಏತೇನ ನಿರಸ್ತಮ್'ಎಂದು ಅತಿದೇಶವನ್ನು ಹೇಗೆ ಮಾಡಿದರು? ಹಿಂದಿನ ಶ್ರುತಿಗಳಿಗಿಂತ ವೈಲಕ್ಷಣ್ಯವಿಲ್ಲದಿದ್ದಲ್ಲಿ ಮಾತ್ರ ಅತಿದೇಶ ಮಾಡಬಹುದಿತ್ತು.

**ಉತ್ತರ** :- ಅತಿದೇಶ ಮಾಡಿದ್ದು ತಪ್ಪಲ್ಲ. 'ತಿಷ್ಠಾಸೇತ್' ಎಂಬ ವಿಧಿಯು ಜ್ಞಾನೇಚ್ಛೆಗಳನ್ನು ವಿಧಿಸದ ಕಾರಣ ಹಿಂದಿನ ಶ್ರುತಿಗಿಂತ ವೈಲಕ್ಷಣ್ಯವೇನೋ ಇದೆ. ಆದರೆ ಪ್ರತೀತ್ಯೈಕವಾಕ್ಯತಾಭಂಗರೂಪವಾದ ಬಾಧಕವು ಇಲ್ಲಿಯೂ ಸಮಾನವಾಗಿದೆ. ಬ್ರಹ್ಮಪ್ರಕರಣದಲ್ಲಿರುವ ಪ್ರತಿಯೊಂದು ವಾಕ್ಯಗಳೂ ಬ್ರಹ್ಮನಲ್ಲೇ ತಾತ್ಪರ್ಯವಿರುತ್ತದೆ. ಅವುಗಳ ಮಧ್ಯದಲ್ಲಿರುವ ವಿಧಿವಾಕ್ಯಗಳಿಗೂ ಬ್ರಹ್ಮನಲ್ಲೇ ತಾತ್ಪರ್ಯ ಹೇಳಬೇಕು. ಹಾಗೆ ಹೇಳದಿದ್ದರೆ ಏಕವಾಕ್ಯತ್ವಕ್ಕೆ ಭಂಗ ಬರುತ್ತದೆ. ಯಾವ ರೀತಿಯಾಗಿ 'ಪಶ್ಯೇತ್' ಇತ್ಯಾದಿ ವಾಕ್ಯಗಳು ಬ್ರಹ್ಮಪ್ರಕರಣದಲ್ಲಿ ಇವೆಯೋ ಅದರಂತೆ 'ತಿಷ್ಠಾಸೇತ್' ಎಂಬ ವಾಕ್ಯವೂ ಬ್ರಹ್ಮಪ್ರಕರಣದಲ್ಲೇ ಇರುತ್ತದೆ. ಒಂದುವೇಳೆ ಬ್ರಹ್ಮಪ್ರಕರಣದಲ್ಲಿದ್ದರೂ ಇದಕ್ಕೆ ಮಾತ್ರ ಬ್ರಹ್ಮಪರತ್ವವನ್ನು

(೧) ತಸ್ಮಾತ್ = ಆದಕಾರಣ, ಬ್ರಾಹ್ಮಣಃ = ಬ್ರಹ್ಮಜ್ಞಾನಿಯು, ಪಾಂಡಿತ್ಯಂ = ಶ್ರವಣಾದಿಗಳನ್ನು, ನಿರ್ವಿದ್ಯ = ಪಡೆದು, ಬಾಲ್ಯೇನ = ಮನನದಿಂದ, ತಿಷ್ಠಾಸೇತ್ = ನಿಲ್ಲಬೇಕು.

ಕೆಳದ ವಿಚಾರಪರತ್ವವನ್ನು ಹೇಳಿದರೆ ಏಕವಾಕ್ಯತ್ವಕ್ಕೆ ಭಂಗ ಬರುತ್ತದೆ. ಆದ್ದರಿಂದ ಗ್ರಂಥಕಾರರು 'ಏತೇನ ನಿರಸ್ತಂ' ಎಂಬುದಾಗಿ ಮಾಡಿದ ಅತಿದೇಶವು ಸಮಂಜಸವೇ ಆಗಿದೆ.

ಅಷ್ಟೇ ಅಲ್ಲದೇ ಸರ್ವವಾಕ್ಯಗಳಲ್ಲಿಯೂ ಸಾಧಾರಣವಾದ ದೋಷವಿದೆಯೆಂದು 'ವಿಚಾರಸ್ಯ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ. ನಿರ್ಣಯವನ್ನು ಕುರಿತು ವಿಚಾರವು ಕಾರಣವಾಗಿದೆಯೆಂದು ಶಾಸ್ತ್ರದಿಂದ ಪ್ರತಿಪಾದಿಸುವ ಅವಶ್ಯಕತೆಯಿಲ್ಲ. ಕೇವಲ ಅನ್ವಯ ವ್ಯತಿರೇಕಬಲದಿಂದ ಈ ವಿಷಯವು ತಿಳಿಯುತ್ತದೆ. 'ವಿಚಾರ ಮಾಡಿದರಷ್ಟೇ ನಿರ್ಣಯವಾಗುತ್ತದೆ' ಎಂಬ ಅನ್ವಯ ವ್ಯಾಪ್ತಿಯಿಂದ ಮತ್ತು "ವಿಚಾರ ಮಾಡದಿದ್ದರೆ ನಿರ್ಣಯವು ಉಂಟಾಗುವುದಿಲ್ಲ'' ಎಂಬ 'ವ್ಯತಿರೇಕವ್ಯಾಪ್ತಿಯ ಬಲದಿಂದ ಶಾಸ್ತ್ರದ ಪೂರ್ವದಲ್ಲೇ ನಿರ್ಣಯಕ್ಕೆ ವಿಚಾರಕಾರಣತ್ವವು ನಿರ್ಣೀತವಾಗಿದೆ.' ಸಂಗೀತಶಾಸ್ತ್ರದ ವಿಚಾರದಿಂದಷ್ಟೇ ಷಡ್ಜಮುಂತಾದ ಸ್ವರಗಳನ್ನು 'ಇದಮಿತ್ಥಂ' ಎಂದು ತಿಳಿಯಲು ಸಾಧ್ಯವೆಂದು ನಮಗೆ ಮೊದಲೇ ನಿಶ್ಚಯವಾಗಿದೆ. 'ವಿಧಿರತ್ಯಂತಮಪ್ರಾಪ್ತೌ' ಅಸಿದ್ಧವಾದ ವಿಷಯದಲ್ಲಿ ಮಾತ್ರ ವಿಧಿಗೆ ಸಾರ್ಥಕ್ಯ. ಆದ್ದರಿಂದ ವಿಚಾರವಿಧಿಯು ವ್ಯರ್ಥವಾಗಿದೆ. ಹೀಗಿದ್ದಾಗ ಯಾವುದೇ ಶ್ರುತಿಗಳಿಗೂ ವಿಚಾರವಿಧಿಪರವಾಗಿ ಅರ್ಥೈಸಲು ಬರುವುದಿಲ್ಲ.

ಶಂಕೆ :- ನೀವು ಹೇಳಿದಂತೆ 'ಸ್ವರ್ಗಕಾಮೋ ಯಜೇತ' ಎಂಬಂತೆ ಅಪೂರ್ವವಿಧಿಯನ್ನು ವಿಚಾರದ ಬಗ್ಗೆ ಹೇಳಲು ಬರುವುದಿಲ್ಲ. ಆದರೂ ನಿಯಮವಿಧಿಯನ್ನಾಗಲೀ ಪರಿಸಂಖ್ಯಾವಿಧಿಯನ್ನಾಗಲೀ ಹೇಳಬಹುದಲ್ಲವೇ?

ನಿಯಮವಿಧಿ :- ಯಜ್ಞದಲ್ಲಿ ಪುರೋಡಾಶವೆಂಬ ಹವಿಸ್ಸನ್ನು ಅರ್ಪಿಸಬೇಕು ಆ ಪುರೋಡಾಶವಾದರೂ ಅಕ್ಕಿಹಿಟ್ಟಿನಿಂದ ಸಿದ್ಧವಾಗಿರುತ್ತದೆ. ಭತ್ತದ ಸಿಪ್ಪೆಯನ್ನು ತೆಗೆದು ಅಕ್ಕಿಯನ್ನು ಸಿದ್ಧಗೊಳಿಸಬೇಕು. ಭತ್ತದ ಸಿಪ್ಪೆಯನ್ನು ತೆಗೆಯುವ ಕ್ರಮವನ್ನು ಶಾಸ್ತ್ರದಲ್ಲಿ ಹೇಳಲಾಗಿದೆ. ಉಗುರುನಿಂದ ಬಿಡಿಸಿ ತೆಗೆಯಬಹುದೋ (ಈಗಿನ ಕಾಲದಲ್ಲಿ ಯಂತ್ರಗಳಿಂದ ತೆಗೆದದ್ದು ನಡೆಯುತ್ತದೋ?) ಅಥವಾ ಹಾರೆಯಿಂದ ಕುಟ್ಟಿಯೇ ತೆಗೆಯಬೇಕೋ? ಎಂದು ಸಂಶಯ ಬರುತ್ತದೆ. ಬೇರೆ ಉಪಾಯಗಳಿಂದಲೂ ಸಿಪ್ಪೆಯನ್ನು ತಗೆಯಲು ಬರುವಾಗ ಕುಟ್ಟಿಯೇ ತೆಗೆಯುವ ಅವಶ್ಯಕತೆ ಇಲ್ಲವೆಂಬ ಪ್ರಸಂಗ ಬರುತ್ತದೆ. ಆವಾಗ ಇಂತಹ ಪಾಕ್ಷಿಕತ್ವಪಕ್ಷವನ್ನು ನಿರಾಕರಿಸಲು 'ವ್ರೀಹೀನವಹಂತಿ' 'ಭತ್ತವನ್ನು ಕುಟ್ಟಬೇಕು'ಎಂದು ನಿಯಮ ಮಾಡಲಾಗಿದೆ. ಇದೇ ನಿಯಮವಿಧಿ ಎನಿಸಿದೆ.

ಪರಿಸಂಖ್ಯಾವಿಧಿ - ಕುದುರೆಗೆ ಕಟ್ಟಿದ ಹಗ್ಗವನ್ನು ಎತ್ತಿ ಹಿಡಿದುಕೊಳ್ಳುವ ಪ್ರಸಂಗದಲ್ಲಿ ಬೇರೆ ಹಗ್ಗವನ್ನು ಎತ್ತಿ ಹಿಡಿದುಕೊಳ್ಳುವ ಪ್ರಸಂಗ ಬರುತ್ತದೆ. ಅದನ್ನು ನಿರಾಕರಿಸಲು 'ಅಶ್ವಾಭಿಧಾನೀಮಾದತ್ತೇ' 'ಕುದುರೆಯ ಹಗ್ಗವನ್ನು ಎತ್ತಿಕೊಳ್ಳಬೇಕು' ಎಂದು ವಿಧಿಸಲಾಗಿದೆ. ಇದೇ ಪರಿಸಂಖ್ಯಾವಿಧಿ ಎನಿಸಿದೆ.

ನಿಯಮವಿಧಿಯಲ್ಲಾಗಲೀ ಪರಿಸಂಖ್ಯಾವಿಧಿಯಲ್ಲಾಗಲೀ ಯಾವ ರೀತಿಯಾಗಿ ಬೇರೆ ವಿಧಾನವನ್ನು ನಿವಾರಿಸಲಾಗುತ್ತದೋ; ಅದರಂತೆ ಇಲ್ಲಿಯೂ ಕೂಡ ಬ್ರಹ್ಮಜ್ಞಾನವನ್ನು ವಿಚಾರದಿಂದಲೇ ಪಡೆಯಬೇಕು.

ಬೇರೆ ವಿಧಾನದಿಂದಲ್ಲವೆಂದು ಹೇಳಿದೆ. ಆದ್ದರಿಂದ ವಿಚಾರ ವಿಧಿಯು ನಿಯಮವಿಧಿ ಅಥವಾ ಪರಿಸಂಖ್ಯಾವಿಧಿ ಆಗಬಹುದು. ಹೀಗಿರುವಾಗ ವಿಚಾರವಿಧಿ ಇರುವುದಿಲ್ಲವೆಂದು ನೀವು ಹೇಗೆ ಹೇಳಿದಿ?

ಸಮಾಧಾನ :- ನೀವು ಹೇಳಿದ ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ಬಹಳ ವ್ಯತ್ಯಾಸವಿದೆ. ಭತ್ತ ಸಿಪ್ಪೆಯನ್ನು ಉಗುರಿನಿಂದಲೂ ಬಿಡಿಸಬಹುದು. ಕುಟ್ಟುವುದರಿಂದಲೂ ಬಿಡಿಸಬಹುದು. ಹೀಗೆ ಬೇರೆ ಸಾಧನವು ಪ್ರಾಪ್ತವಾಗಿದೆ. ಪರಿಸಂಖ್ಯೆಯಲ್ಲಿಯೂ ಬೇರೆಯಾದ ಹಗ್ಗವು ಪ್ರಾಪ್ತವಾಗಿದೆ. ಅದರಂತೆ ಇಲ್ಲಿಯೂ ಬೇರೆ ಸಾಧನವು ಪ್ರಾಪ್ತವಾಗಿದ್ದರೆ ನಿಯಮವಿಧಿಯೆಂದೋ ಪರಿಸಂಖ್ಯಾವಿಧಿಯೆಂದೋ ಹೇಳಬಹುದಿತ್ತು. ಆದರೆ ಬ್ರಹ್ಮಜ್ಞಾನಕ್ಕೆ ವಿಚಾರದಂತೆ ಬೇರೆ ಸಾಧನವು ಪ್ರಾಪ್ತವೇ ಆಗಿಲ್ಲ. ಆತ್ಮನಿಗೆ ಮಹತ್ವವೂ ಇಲ್ಲ. ರೂಪವೂ ಇಲ್ಲ. ಆದ್ದರಿಂದ ಪ್ರತ್ಯಕ್ಷದಿಂದಾಗಲೀ ಅನುಮಾನದಿಂದಾಗಲೀ ಆತ್ಮನು ತಿಳಿಯಲಾರ. ಕೇವಲ ಆಗಮದಿಂದಷ್ಟೇ ತಿಳಿಯುತ್ತಾನೆ. ಆದ್ದರಿಂದ ನಿಯಮವಿಧಿಯೆಂದಾಗಲೀ ಪರಿಸಂಖ್ಯಾವಿಧಿಯೆಂದಾಗಲೀ ಹೇಳಲಾಗುವುದಿಲ್ಲ. ಅಪೂರ್ವವಿಧಿಯೂ ಅಲ್ಲವಾದ್ದರಿಂದ ವಿಚಾರ-ವಿಧಿಗಳನ್ನು ವಿಧಿಗಳೆಂದೇ ಹೇಳಬಾರದು.

ಆಕ್ಷೇಪ :- 'ವ್ರೀಹೀನವಹಂತಿ' ಎಂಬ ನಿಯಮವಿಧಿಗೂ ವಿಚಾರವಿಧಿಗೂ ಏನೂ ವ್ಯತ್ಯಾಸವಿಲ್ಲ. ಯಾಗೋಪಯುಕ್ತವಾದ ವ್ರೀಹಿಗಳಷ್ಟೇ ಅಪೂರ್ವಸಾಧನಗಳಾಗಿವೆ. ಅಪೂರ್ವಸಾಧನವಾದ ಆ ವ್ರೀಹಿಗಳಲ್ಲಿ ನಖವಿದಲನವು ಪ್ರಾಪ್ತವೇ ಆಗಿಲ್ಲ. ನಖವಿದಲನವನ್ನು ಮಾಡಿದರೆ ಆ ವ್ರೀಹಿಗಳು ಅಪೂರ್ವಸಾಧನಗಳೇ ಆಗಲಾರವು. ಆದರೂ ಸಹ 'ವ್ರೀಹೀನವಹಂತಿ' ಎಂದು ಕುಟ್ಟಿಯೇ ತುಷವಿಮೋಕ ಮಾಡಬೇಕೆಂದು ವಿಧಿಸಲಾಗಿದೆ. ಏಕೆಂದರೆ ಅಪೂರ್ವಸಾಧನ ವ್ರೀಹಿಯಲ್ಲಿ ನಖವಿದಲನದ ಪ್ರಾಪ್ತಿಯಿಲ್ಲದಿದ್ದರೂ ಇತರ ವ್ರೀಹಿಯಲ್ಲಿ ನಖವಿದಲನದ ಪ್ರಾಪ್ತಿಯಿದೆ. ಆದಕಾರಣ ಅವಹನನವನ್ನು ಅಪೂರ್ವವ್ರೀಹಿಯಲ್ಲೂ ವಿಧಿಸಲಾಗಿದೆ. ಈ ಅಭಿಪ್ರಾಯದಿಂದಲೇ ಇದು ನಿಯಮವಿಧಿ ಎನಿಸುತ್ತದೆ.

ಇದರಂತೆ ಪ್ರಕೃತದಲ್ಲಿಯೂ ಹೇಳಬಹುದು. ಅಖಂಡನಾದ (ನಿರ್ಗುಣನಾದ) ಆತ್ಮನಷ್ಟೇ ಇತರ ಯಾವ ಪ್ರಮಾಣಗಳಿಂದಲೂ ತಿಳಿಯಲಾರ. ಆದರೆ ಆತ್ಮಸಾಮಾನ್ಯಜ್ಞಾನವು ಪ್ರತ್ಯಕ್ಷಾನುಮಾನಗಳಿಂದಲೂ ಬರುತ್ತದೆ. ಆದ್ದರಿಂದ ನಿಯಮ ಮಾಡಬಹುದು.

ಸಮಾಧಾನ - ನಿಮ್ಮ ಆಕ್ಷೇಪ ಕೇವಲ ಆಪಾತತಃ ರಮಣೀಯವಾಗಿದೆ. ನಿಯಮವಿಧಿಯನ್ನು ಸ್ಪಷ್ಟವಾಗಿ ತಿಳಿದರೆ ಆಕ್ಷೇಪ ಪರಿಹಾರವಾಗುತ್ತದೆ.

'ವ್ರೀಹೀನವಹಂತಿ' ಎಂಬಲ್ಲಿ ವ್ರೀಹಿ ಶಬ್ದವು ವ್ರೀಹಿಸಾಮಾನ್ಯವನ್ನು ಹೇಳುವುದೇ ಇಲ್ಲ. ಅಪೂರ್ವಸಾಧನವಾದ ವ್ರೀಹಿಯನ್ನೇ ಹೇಳುತ್ತದೆ. ಕಾರಣವೇನಂದರೆ 'ವ್ರೀಹಿನಿರ್ವಾಹ ಯವನಿರ್ವಾಹ' ಎಂದು ವಿಕಲ್ಪ ಮಾಡಿದ್ದಾರೆ. ವ್ರೀಹಿಯಿಂದ ಯಜ್ಞ ಮಾಡಬೇಕು. ವ್ರೀಹಿ ಸಿಗದಿದ್ದರೆ ಯವದಿಂದಲೂ ಯಜ್ಞ ಮಾಡಬಹುದೆಂದು ವಿಕಲ್ಪದ ಆಶಯ. ಒಂದು ವೇಳೆ ವ್ರೀಹಿಯನ್ನಷ್ಟೆ ತೆಗೆದುಕೊಂಡರೆ ಯವಕ್ಕಾಗಲೀ ಅವಘಾತವನ್ನು ಹೇಳಲೇಬೇಕು. 'ವ್ರೀಹೀನವಹಂತೀ' ಎಂಬ ವಿಧಿಯೇ ಇದನ್ನು ಹೇಳಬೇಕು. ಪುರೋಡಾಶದ್ರವ್ಯದ ನಿರ್ಮಾಣಕ್ಕೆ ಉಪಯುಕ್ತವಾದದ್ದು ಯಾವುದು ಬೇಕಾದರೂ

ಆಗಲೀ, ಆ ದ್ರವ್ಯಕ್ಕೆ ಅವಹನನವನ್ನು ಈ ವಾಕ್ಯವು ವಿಧಿಸುತ್ತದೆ. ಹೀಗೆ ಹೇಳದಿದ್ದರೆ ಯವಕ್ಕೆ ಅವಘಾತವು ಔಪದೇಶಿಕವಾಗದಿರಬೇಕಾದೀತು. (ವಿಧಿಸಿದ್ಧವಾಗದಿರಬೇಕಾದೀತು)

ಮತ್ತೊಂದು ಕಾರಣ - ಜ್ಯೋತಿಷ್ಟೋಮಯಾಗದಲ್ಲಿ ವ್ರೀಹಿಯನ್ನು ಹೇಳಿದ್ದಾರೆ. ಇನ್ನೊಂದು ಯಾಗದಲ್ಲಿ ನೀವಾರವನ್ನು ಹೇಳಿದ್ದಾರೆ. ನೀವಾರದಲ್ಲಿಯೂ ಇದರ ಅತಿದೇಶವಿದೆ. ವ್ರೀಹಿಯನ್ನು ಪ್ರಕೃತಿಯಾಗದಲ್ಲಿ ಹೇಳಿದೆ. ನೀವಾರವನ್ನು ವಿಕೃತಿಯಾಗದಲ್ಲಿ ಹೇಳಿದೆ. ಪ್ರಕೃತಿಯಾಗದಲ್ಲಿ ವ್ರೀಹಿಯನ್ನು ಹೇಳಿ ಜೊತೆಗೆ ಅವಹನನವನ್ನೂ ಹೇಳಲಾಗಿದೆ. ಆದರೆ ವಿಕೃತಿಯಾಗದಲ್ಲಿ ನೀವಾರವನ್ನಷ್ಟೇ ಹೇಳಿದೆ, ಅವಹನನವನ್ನು ಹೇಳಿಲ್ಲ. ಪ್ರಕೃತಿಯಲ್ಲಿ ವ್ರೀಹಿಗೆ ಹೇಳಿದ ಅವಹನನವನ್ನೇ ಇಲ್ಲಿಯೂ ಇಟ್ಟುಕೊಳ್ಳಬೇಕು. ಒಂದು ವೇಳೆ ವ್ರೀಹಿ ಶಬ್ದದಿಂದ ಅಪೂರ್ವಭಕ್ತವನ್ನಷ್ಟೇ ಇಟ್ಟುಕೊಂಡರೆ ಇದೂ ಬಾಧಿತವಾಗಬೇಕಾದೀತು.

'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' 'ಪ್ರಕೃತಿಯಂತೆ ವಿಕೃತಿಯನ್ನು ಮಾಡಬೇಕು' ಎಂಬ ನಿಯಮದ ಬಗ್ಗೆ ಹೀಗೆ ಸ್ಪಷ್ಟವಾಗಿ ತಿಳಿಯಬೇಕು. - ವೇದದಲ್ಲಿ ಯಾಗಗಳನ್ನು ಹೇಳುವಾಗ ಯಾಗಗಳ ಸಕಲಾಂಗಗಳನ್ನು ಹೇಳಿರುವುದಿಲ್ಲ. ಸಕಲಾಂಗಗಳು ಉಕ್ತವಾಗಿದ್ದರೆ ಪ್ರಕೃತಿಯಾಗವೆಂದು, ಸಕಲಾಂಗಗಳು ಉಕ್ತವಾಗದಿದ್ದರೆ ವಿಕೃತಿಯಾಗವೆಂದು ತಿಳಿಯಬೇಕು. ವಿಕೃತಿಯಾಗದ ಹೆಚ್ಚಿನ ಅಂಶಗಳು ಪ್ರಕೃತಿಯಾಗದ ಅಂಶಗಳಿಗೆ ಸಮಾನವಾಗಿರುತ್ತವೆ. ಈ ಅಭಿಪ್ರಾಯದಿಂದ ಅವುಗಳ ವಿವರವನ್ನು ಪೂರ್ತಿಯಾಗಿ ಹೇಳಿರುವುದಿಲ್ಲ. ಇದನ್ನೇ 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' 'ಪ್ರಕೃತಿಯಂತೆ ವಿಕೃತಿಯನ್ನು ಮಾಡಬೇಕು' ಎಂಬ ಮಾತು ನಿಯಮಿಸುತ್ತಿದೆ. ಈ ನಿಯಮವನ್ನು ಚೋದಕವೆಂದು ಕರೆಯುತ್ತಾರೆ.

ಪ್ರಕೃತ ಚೋದಕ ಹೇಳುವಂತೆ ಪ್ರಕೃತಿಯಂತೆ ವಿಕೃತಿಯಲ್ಲಿಯೂ ವ್ರೀಹಿಯ ಅವಹನನವನ್ನು ಮಾಡಬೇಕೆಂದಂತಾಗುತ್ತದೆ. ಆದರೆ ವಿಕೃತಿಯಲ್ಲಿ ವ್ರೀಹಿಯು ವಿಹಿತವೇ ಆಗಿಲ್ಲ. ಅದರ ಬದಲು ನೀವಾರವು ಉಕ್ತವಾಗಿದೆ. ಹೀಗಿದ್ದಾಗ ವಿಕೃತಿಯಲ್ಲಿ ವ್ರೀಹಿಯು ಅವಹನನವು ಹೇಗೆ ಕೂಡುತ್ತದೆ? ಆದ್ದರಿಂದ ವ್ರೀಹಿಶಬ್ದಕ್ಕೆ ಅಪೂರ್ವೀಯದ್ರವ್ಯವೆಂದು ಅರ್ಥೈಸಬೇಕು. ಹೀಗೆ ಪೂರ್ವಮೀಮಾಂಸೆಯ (೯-೨-೧೨)ನವಮಾಧ್ಯಾಯದಲ್ಲಿ ನಿರ್ಣಯಿಸಲಾಗಿದೆ. ಇದರಿಂದ ಏನು ತಿಳಿಯುತ್ತದೆಂದರೆ ಅಪೂರ್ವದ್ರವ್ಯವಾದ ವ್ರೀಹಿಗೇನೇ ನಖವಿದಲನಾದಿ ಸಾಧನಾಂತರಗಳು ಪ್ರಾಪ್ತವಾಗುತ್ತವೆ, ಹೊರತು ವ್ರೀಹಿಸಾಮಾನ್ಯಕ್ಕೆ ಅಲ್ಲ. ಆದ್ದರಿಂದ ಹಿಂದೆ ಆಕ್ಷೇಪ ಮಾಡಿದ್ದು ತಪ್ಪಾಯಿತು. ಅಪೂರ್ವಸಾಧನವಾದ ವ್ರೀಹಿಗೆ ಸಾಧನಾಂತರದ ಪ್ರಾಪ್ತಿಯೇ ಇಲ್ಲ. ಲೌಕಿಕವಾದ ಮಾತು ಪೂರ್ವಮೀಮಾಂಸೆಗೆ ವಿರುದ್ಧವಾಗಿದೆ.

ಪ್ರಶ್ನೆ :- ನಖವಿದಲನಾದಿಗಳನ್ನು ಮಾಡಿದರೆ ಅಂತಹ ವ್ರೀಹಿಯಿಂದ ಅಪೂರ್ವವೇ ಹುಟ್ಟಲು ಸಾಧ್ಯವಿಲ್ಲ. ಹೀಗಿರುವಾಗ ಆ ವ್ರೀಹಿಯು ಅಪೂರ್ವದ್ರವ್ಯವೆಂದೇ ಆಗುವುದಿಲ್ಲವಲ್ಲವೇ?

ಉತ್ತರ :- ನಖವಿದಲನಾದಿಗಳಿಂದ ಅಪೂರ್ವವು ಹುಟ್ಟದಿರಬಹುದು. ನಖವಿದಲನಪ್ರಾಪ್ತಿಯಂತೂ ಇದ್ದೇ ಇರುತ್ತದೆ. ಅಪೂರ್ವದ ಉತ್ಪತ್ತಿಯಿಲ್ಲವೆಂಬ ಮಾತ್ರದಿಂದ ಸಾಧನಾಂತರದ ಪ್ರಾಪ್ತಿಯನ್ನೇ ಅಲ್ಲಗಳೆಯಬಾರದು.

*ಜಿಜ್ಞಾಸಾಧಿಕರಣ*

ಪ್ರಕೃತ ಹಾಗೆ ಹೇಳಲು ಬರುವುದಿಲ್ಲ. ಅಖಂಡ ಆತ್ಮ (ನಿರ್ಗುಣ ಆತ್ಮ)ನಲ್ಲಿ ಮತ್ತು ಸಗುಣ ಆತ್ಮನಲ್ಲಿ ಅನುಗತನಾದವನು ಶುದ್ಧಾತ್ಮ. ಸಗುಣತ್ವ ನಿರ್ಗುಣತ್ವಜ್ಞಾನಗಳ ಮೂಲಕವಾಗಿ ಇವನು ವೇದಾಂತವೇದ್ಯನಾಗಿದ್ದಾನೆ. ಇಂತಹ ಶುದ್ಧಾತ್ಮನು ವೇದಾಂತಗಳನ್ನು ಬಿಟ್ಟು ಉಳಿದ ಯಾವ ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ ತಿಳಿಯಲಾರ. ಮಾನಾಂತರಪ್ರಾಪ್ತಿಯಿದ್ದಲ್ಲಿ 'ವ್ರೀಹೀನವಹಂತಿ' ಎಂಬುದು ನಿಯಮವಿಧಿಯೆಂದು ಹೇಳಬಹುದಿತ್ತು. ಆದರೆ ಅಲ್ಲಿಗೂ ಇಲ್ಲಿಗೂ ಬಹಳಷ್ಟು ವೈಲಕ್ಷಣ್ಯವಿರುವುದರಿಂದ ವಿಚಾರವಿಧಿಯನ್ನು ನಿಯಮವಿಧಿಯೆಂದು ಹೇಳಲಾಗದು.

ಆಕ್ಷೇಪ :- ನಿಯಮವಿಧಿಯೆಂದು ಹೇಳಬಹುದು. ಮೀಮಾಂಸಕರು ಮಂತ್ರಗಳನ್ನು ಅನುಷ್ಠೇಯಾರ್ಥಜ್ಞಾಪಕಗಳೆಂದು ಹೇಳುತ್ತಾರೆ. ಯಾಗದಲ್ಲಿ ಏನೇನು ಮಾಡಬೇಕೆಂಬ ಜ್ಞಾಪಕಗಳು ಮಂತ್ರಗಳಲ್ಲಿರುತ್ತವೆ. ಉದಾಹರಣೆ - 'ಇಮಾಮಗೃಭ್ಣನ್' ಎಂದು ರಶನಾಗ್ರಹಣವನ್ನು ಮಂತ್ರವು ಹೇಳಿದರೆ ಕುದುರೆಯ ಹಗ್ಗವನ್ನು ಗ್ರಹಣ ಮಾಡಬೇಕೆಂಬ ಸ್ಮರಣೆ ಬರುತ್ತದೆ, ನಾವು ಮಾಡುವ ಪೂಜೆಯಲ್ಲಿ ಪುರುಷಸೂಕ್ತ ಹೇಳಿದರೆ ಅಭಿಷೇಕ ಮಾಡಬೇಕೆಂದು ಸ್ಮರಣೆ ಬರುತ್ತದೆ, ಅದರಂತೆ. ಆದರೆ ಮಂತ್ರಾರ್ಥಜ್ಞಾನವು ಮಂತ್ರದಿಂದಲೇ ಬರಬೇಕೆಂಬ ನಿಯಮವಿಲ್ಲ. ಅನುಷ್ಠಾನಕ್ಕೋಸ್ಕರ ಮಂತ್ರಾರ್ಥಜ್ಞಾನ ಬೇಕಾಗುತ್ತದೆ. ಮಂತ್ರಾರ್ಥಜ್ಞಾನವು ಕಲ್ಪಸೂತ್ರಗಳಿಂದ ಅಥವಾ ಆಶ್ವಲಾಯಗ್ರಹಣಕವಾಕ್ಯಗಳಿಂದಲೂ ಬರಬಹುದು. ಹೀಗೆ ಬೇರೆ ಸಾಧನೆಯಿಂದಲೇ ಮಂತ್ರಾರ್ಥಜ್ಞಾನ ಬರುವುದರಿಂದ ಯಾಗದಲ್ಲಿ ಮಂತ್ರವನ್ನು ಹೇಳಬೇಕಾಗಿಲ್ಲ. ಮಂತ್ರಗಳು ಪಾಕ್ಷಿಕವಾಗಿ ಅಪ್ರಾಪ್ತವಾದವು. ಇದರ ಪರಿಹಾರಕ್ಕೋಸ್ಕರ 'ಮಂತ್ರೈರೇವ ಸ್ಮೃತಿಃ ಸಾಧ್ಯಾ' 'ಮಂತ್ರದಿಂದಲೇ ಅರ್ಥಸ್ಮರಣೆಯನ್ನು ತಂದುಕೊಳ್ಳಬೇಕು' ಎಂಬ ನಿಯಮ ಹೊರಟಿದೆ. ಕಲ್ಪಸೂತ್ರಾದಿಗಳಿಂದ ಅರ್ಥಸ್ಮರಣೆ ಬಂದರೂ ಮಂತ್ರವನ್ನು ಹೇಳಲೇಬೇಕು.

ಇದರಂತೆ ಪ್ರಕೃತದಲ್ಲಿ ವೇದಾಂತದಿಂದಲೇ ಬ್ರಹ್ಮನನ್ನು ತಿಳಿಯಬೇಕೆಂದೇನೂ ಇಲ್ಲ. ಸ್ತ್ರೀ ಶೂದ್ರರೂ ಅಧ್ಯಯನ ಮಾಡಬಹುದಾದ ಸ್ಮೃತಿಪುರಾಣಾದಿಗಳಿಂದಲೂ ತಿಳಿಯಬಹುದು. ಹೀಗಿರುವಾಗ ಬ್ರಹ್ಮನನ್ನು ತಿಳಿಯಲು ವೇದಾಂತವೇ ಏಕೆ ಬೇಕು? ಆದ್ದರಿಂದ ವೇದಾಂತವಿಚಾರವು ಪಾಕ್ಷಿಕವಾಗಿ ಅಪ್ರಾಪ್ತವಾಯಿತು ಇದರ ಪರಿಹಾರಕ್ಕೋಸ್ಕರ ವೇದಾಂತವಿಚಾರದಿಂದಲೇ ಬ್ರಹ್ಮಜ್ಞಾನವನ್ನು ಪಡೆಯಬೇಕೆಂಬ ನಿಯಮದ ಆವಶ್ಯಕತೆ ಇದೆ. ಇಲ್ಲವಾದರೆ ಪರಿಪೂರ್ಣತೆಯು ಬರಲಾರದು.

ಸಮಾಧಾನ - ವಿಚಾರವಿಲ್ಲದೆ ಕೇವಲ ಸ್ಮೃತಿಪುರಾಣಾದಿಗಳಿಂದ ಬ್ರಹ್ಮಜ್ಞಾನ ಬರಲು ಸಾಧ್ಯವೇ ಇಲ್ಲ. ಬ್ರಹ್ಮಜ್ಞಾನಕ್ಕೆ ವಿಚಾರವೊಂದೇ ಕಾರಣವಾಗಿದೆ. ಸ್ಮೃತಿಪುರಾಣಾದಿಗಳಿಂದ ಬ್ರಹ್ಮಜ್ಞಾನ ಬರಬೇಕಾದರೂ ಸಹ ವಿಚಾರವು ಬೇಕು. ವಿಚಾರವಿಲ್ಲದೆ ಸ್ವತಂತ್ರವಾಗಿ ಸ್ಮೃತಿ ಪುರಾಣಾದಿಗಳಿಂದ ಬ್ರಹ್ಮಜ್ಞಾನ ಬರುತ್ತಿದ್ದಲ್ಲಿ ವಿಚಾರವು ಪಾಕ್ಷಿಕವಾಗುತ್ತಿತ್ತು. ಅದರ ಪರಿಹಾರಕ್ಕೋಸ್ಕರ ನಿಯಮದ ಆವಶ್ಯಕತೆಯೂ ಇರುತ್ತಿತ್ತು. ಆದರೆ ಹಾಗಿಲ್ಲವಾದ್ದರಿಂದ ನಿಯಮವಿಧಿಯೆಂದು ಹೇಳಲಾಗದು.

ಆಕ್ಷೇಪ - ಹಾಗಾದರೆ ನಿಯಮವಿಧಿಯೆಂದು ಹೇಳುವುದಿಲ್ಲ. ಪರಿಸಂಖ್ಯಾವಿಧಿಯೆಂದು ಹೇಳುತ್ತೇವೆ. 'ಇಮಾಮಗೃಭ್ಣನ್' ಎಂಬ ಮಂತ್ರದಲ್ಲಿ ಕುದುರೆಯ ಹಗ್ಗವನ್ನು ಎತ್ತಿಕೊಳ್ಳಬೇಕೆಂದು ಹೇಳಿದೆ. ಇಲ್ಲಿ ಹಗ್ಗವು ಕುದುರೆ ಮತ್ತು ಕತ್ತೆ ಎರಡಕ್ಕೂ ಸಂಬಂಧಪಟ್ಟಿದೆ. ಉಭಯಸಂಬಂಧವಿರುವುದರಿಂದ

ಕುದುರೆಯ ಹಗ್ಗವನ್ನೇ ಎತ್ತಬೇಕೆಂದು ನಿಯಮ ಮಾಡಲಾಗಿದೆ. ಇದು ಪರಿಸಂಖ್ಯಾವಿಧಿಯೆನಿಸುತ್ತದೆ. ಅದರಂತೆ ಇಲ್ಲಿಯೂ ಸಹ ಒಂದೇ ಮಂತ್ರದ ವಿಚಾರವು ಎರಡಕ್ಕೂ ಸಂಬಂಧಪಟ್ಟಿದೆ. ಆಪಾತತಃ ಇತರ ಪದಾರ್ಥದ ಜ್ಞಾನವೂ ಬರುತ್ತದೆ. ಆ ಸಂದರ್ಭದಲ್ಲಿ ಒಂದೇ ಶ್ರುತಿವಿಚಾರವು ಇತರ ಪದಾರ್ಥಜ್ಞಾನಕ್ಕೆ ಮತ್ತು ಬ್ರಹ್ಮಜ್ಞಾನಕ್ಕೆ ಸಂಬಂಧಪಟ್ಟಂತಾಯಿತು. ಇದರ ಪರಿಹಾರಕ್ಕೋಸ್ಕರ ಮಾಡುವ ನಿಯಮವೇ ಪರಿಸಂಖ್ಯೆ ಎಂದು ಕರೆಸಿಕೊಳ್ಳುತ್ತದೆ.

ಸಮಾಧಾನ - ವಿಚಾರ ಎರಡಕ್ಕೂ ಸಂಬಂಧಪಡಲು ಸಾಧ್ಯವಿಲ್ಲ. ಶ್ರುತಿಯಿಂದ ಆಪಾತತಃ ಇತರ ಪದಾರ್ಥದ ಜ್ಞಾನ ಬರುತ್ತದೆ ಆದರೆ ಅಲ್ಲಿ ವಿಚಾರಕ್ಕೆ ಪ್ರಸಕ್ತಿ ಇರುವುದಿಲ್ಲ. ಆದ್ದರಿಂದ ಇತರ ಪದಾರ್ಥಜ್ಞಾನಕ್ಕೆ ವಿಚಾರವು ಕಾರಣವೇ ಆಗುವುದಿಲ್ಲ. ಕೇವಲ ಬ್ರಹ್ಮಜ್ಞಾನಕ್ಕಷ್ಟೇ ಸಾಧನವಾಗುತ್ತದೆ. ಉಭಯಸಂಬಂಧವನ್ನು ವಿಚಾರಕ್ಕೆ ಹೇಳಲಾಗುವುದಿಲ್ಲ. ಆದ್ದರಿಂದ ಪರಿಸಂಖ್ಯಾವಿಧಿಯೆಂದೂ ಕೂಡ ಹೇಳಲಾಗದು.

### (೧)'ವಿಧಿಸ್ತು ಧಾರಣೇ ಅಪೂರ್ವತ್ವಾತ್' (೩-೪-೫)

---

(१) भाट्टसङ्ग्रहः –

**अथ पञ्चमं समिद्धारणस्य विधिताधिकरणम्**

विधिस्तु धारणेऽपूर्वत्वात् ।। १९ ।।

अत्र प्रागुक्तस्यापवादादापवादिकी सङ्गतिः । मृताग्निहोत्र एव 'अधस्तात् समिधं धारयन्ननुद्रवेत् । उपरि हि देवेभ्यो धारयति' इति श्रूयते । पित्र्यं हविर्होतुं गार्हपत्यदेशादाहवनीयदेशं प्रति हविर्नयनकाले स्रुचोऽग्निहोत्रहवण्या अधस्तात् समिधं धारयन् गच्छेत् । देवार्थं हविर्नयनकाले उपरि हि धारयतीति तदर्थः । तत्रोपरिधारणं जीवदग्निहोत्रे विधीयते, उतानूद्यत इति सन्देहे, हिशब्दोपबन्धादिपूर्वोक्तन्यायेन अधस्तात् समिद्धारणस्तुत्यर्थमनूद्यत इति प्राप्तम् । सर्वमभ्यर्हितं द्रव्यमाच्छाद्यैव देशान्तरे नेतव्यमित्याचारतो हविराच्छादनस्य प्राप्त्या केनेत्यकांक्षायां हस्तादिनाप्याच्छादनसम्भवेऽपि उपरि समिद्धारणं विधीयमानमाच्छादनार्थं सत् नियमादृष्टार्थं भवति 'समिधैव प्रच्छादयेत्' इति । सा चोपरि धार्यमाणा प्रच्छादनक्षमा नान्यथेति प्राप्तमुपरि धारणमिति । सिद्धान्तस्तु, आचारादाच्छादनस्य प्राप्तत्वेऽपि समिधा आच्छादनस्य सर्वथा प्राप्त्यभावात् 'स्रुग्दण्डे समिधमुपगृह्यानुद्रवति' इति श्रवणेन दण्डप्रदेशे धार्यमाणस्य हविराच्छादनाक्षमत्वात् अप्राप्तत्वात् हिशब्दत्यागेन विधिरेवायमुपरि धारणस्येति । तथाच सूत्रम् ।। विधिस्त्वि-त्यादि ।। निगदव्याख्यानमेतत् । फलन्तु, पूर्वपक्षे समिद्धविष उपरि धारणीया । सिद्धान्ते तु स्रुग्दण्डस्योपरीति ज्ञेयम् ।

**इति पञ्चमं समिद्धारणस्य विधिताधिकरणम्**

'ಉಪರಿ ಹಿ ದೇವೇಭ್ಯೋ ಧಾರಯತಿ' ಎಂಬುದು ವಿಧಿ ಏಕೆಂದರೆ ಅದು ಹೇಳುವಂತೆ ಸಮಿತ್ತನ್ನು ಮೇಲ್ಗಡೆ ಧರಿಸಬೇಕೆನ್ನುವುದು ಬೇರೆ ಪ್ರಮಾಣದಿಂದ ತಿಳಿದು ಬರುವುದಿಲ್ಲ' ಎಂಬ ಅಧಿಕರಣದಲ್ಲಿ ಹೀಗೆ ವಿಚಾರವಿದೆ - 'ಅಧಸ್ತಾತ್ ಸಮಿಧಂ ಧಾರಯನ್ನನುದ್ರವೇತ್ ಉಪರಿ ಹಿ ದೇವೇಭ್ಯೋ ಧಾರಯತಿ' ಕೆಳಗಡೆ ಸಮಿತ್ತನ್ನು ಧರಿಸಿಕೊಂಡು ನಡೆಯಬೇಕು. ಏಕೆಂದರೆ ದೇವತೆಗಳಿಗೆ ಹವಿಸ್ಸನ್ನೊಯ್ಯುವಾಗ ಮೇಲ್ಗಡೆ ಧಾರಣ ಮಾಡುತ್ತಾನೆ' ಎಂಬ ಶ್ರುತಿವಾಕ್ಯವು ಮೃತಾಗ್ನಿಹೋತ್ರ ಪ್ರಕರಣದಲ್ಲಿ ಇದೆ. ಇದರಲ್ಲಿ 'ದೇವತೆಗಳಿಗೆ ಹವಿಸ್ಸನ್ನೊಯ್ಯುವಾಗ ಮೇಲ್ಗಡೆ ಧಾರಣ ಮಾಡುತ್ತಾನೆ' ಎಂಬ ಅಂಶವು ಜೀವದಗ್ನಿ ಹೋತ್ರದಲ್ಲಿ ಒಂದು ವಿಧಿ ಎನ್ನಬೇಕೆ? ಅಥವಾ ಅದು ಅನುವಾದವೆ ಎಂಬ ಸಂದೇಹ.

ಉತ್ತಮ ವಸ್ತುಗಳನ್ನು ಮುಚ್ಚಿಟ್ಟುಕೊಂಡೆ ಬೇರೆ ಕಡೆಗೆ ಒಯ್ಯುವುದು ರೂಢಿ. ದೇವತೆಗಳಿಗೆ ನೀಡಬೇಕಾಗಿರುವ ಉತ್ತಮವಾದ ಹವಿಸ್ಸನ್ನು ಗಾರ್ಹಪತ್ಯದಿಂದ ಆಹವನೀಯದ ಕಡೆಗೆ ಒಯ್ಯುವಾಗ ಮುಚ್ಚಿಟ್ಟುಕೊಂಡಿರಬೇಕು. ಆದ್ದರಿಂದ ಸಮಿತ್ತನ್ನು ಮೇಲ್ಗಡೆ ಹಿಡಿದು ಕೊಳ್ಳಬೇಕೆನ್ನುವುದು ಹವಿಸ್ಸನ್ನು ಮುಚ್ಚುವುದಕ್ಕಾಗಿ ಎಂದು ಊಹಿಸಬಹುದು. ಹೀಗೆ ಹೇಳಿದರೆ ಮೇಲ್ಗಡೆ ಧಾರಣ ಮಾಡುವುದಕ್ಕೆ ದೃಷ್ಟ -ಪ್ರಯೋಜನ ಸಿಗುವಂತಾಗುತ್ತದೆ. ಆದ್ದರಿಂದ ಮೃತಾಗ್ನಿಹೋತ್ರದಲ್ಲಿ ಪಿತೃಗಳಿಗಾಗಿ ಹವಿಸ್ಸನ್ನೊಯ್ಯುವಾಗ ಸ್ರುಕ್ ದಂಡದ ಕೆಳಗಡೆ ಸಮಿತ್ತನ್ನು ಧರಿಸಿಕೊಂಡಿರಬೇಕು ಎಂಬುದರ ಪ್ರಶಂಸೆ ಇದು ಎಂದು ಪೂರ್ವಪಕ್ಷ.

'ಸ್ರುಗ್‌ದಂಡೇ ಸಮಿಧಮುಪಸಂಗೃಹ್ಯ' 'ಸ್ರುಗ್‌ದಂಡದೊಂದಿಗೆ ಸಮಿತ್ತನ್ನು ಹಿಡಿದು' ಎಂದು ಶ್ರುತಿ ಇದೆ. ಆದಕ್ಕೆ ಅನುಸಾರವಾಗಿ ಸ್ರುಗ್ ದಂಡದ ಭಾಗದಲ್ಲಿಯೆ ಸಮಿತ್ತನ್ನು ಧರಿಸಬೇಕು. ಇದರಿಂದ ಹವಿಸ್ಸನ್ನು ಮುಚ್ಚಲು ಆಗುವುದಿಲ್ಲ. ಈ ದೃಷ್ಟಪ್ರಯೋಜನ ಅಸಂಭವವೆಂದ ಮೇಲೆ ಅದೃಷ್ಟಪ್ರಯೋಜನ -ವನ್ನೆ ಹೇಳಬೇಕೆಂದಾಯಿತು. ಇದು ಬೇರೆ ಪ್ರಮಾಣದಿಂದ ತಿಳಿಯಲಾಗದ್ದು. ವಿಧಾನ ಮಾಡಲು ಯೋಗ್ಯವಾದದ್ದು; ಆದ್ದರಿಂದ 'ಮೇಲ್ಗಡೆ ಧಾರಣ ಮಾಡುತ್ತಾನೆ ಎನ್ನುವುದು ವಿಧಿ' ಎಂದು ಸಿದ್ಧಾಂತ

ಇಲ್ಲಿ 'ಮೇಲ್ಗಡೆ ಧಾರಣ ಮಾಡುತ್ತಾನೆ' ಎನ್ನುವುದು 'ಪೂರ್ವಪಕ್ಷದಲ್ಲಿ ಹೇಳಿದಂತೆ ಕೆಳಗಡೆ ಸಮಿದ್ಧಾರಣ ಮಾಡಬೇಕೆಂಬ ವಿಧಿಯನ್ನು ಪ್ರಶಂಸಿಸುವುದಕ್ಕಾಗಿ ಹೇಳಿದುದೆಂದು ತೋರಿದರೂ ಅದು ವಿಧಿ ಎಂದು ಹೇಳಲಾಗಿದೆ. ಹಾಗೆ 'ತದ್ವಿಜಿಜ್ಞಾಸಸ್ವ' 'ಅದನ್ನು ಜಿಜ್ಞಾಸೆ ಮಾಡು' ಎಂದು ಮುಂತಾದುವು ಬ್ರಹ್ಮನನ್ನು ಬೋಧಿಸುವ ಸಂದರ್ಭದಲ್ಲಿ ಹೇಳಿದುದ ಆಗಿದ್ದರೂ ವಿಚಾರವಿಧಿ ಏಕೆ ಆಗಕೂಡದು? - ಈ ಪ್ರಶ್ನೆಗೆ ಹೀಗೆ ಉತ್ತರ - 'ಮೇಲ್ಗಡೆ ಧಾರಣ ಮಾಡುತ್ತಾನೆ' ಎನ್ನುವುದು ಕೆಳಗಡೆ ಸಮಿದ್ಧಾರಣ ಮಾಡಬೇಕೆಂಬ ವಿಧಿಯ ಪ್ರಶಂಸೆ ಎಂದು ತೋರಿದರೂ ವಸ್ತುತಃ ಅದು ಹಾಗೆ ಇಲ್ಲ. ಆದರೆ 'ಅದನ್ನು ಜಿಜ್ಞಾಸೆ ಮಾಡು' ಎಂಬ ವಾಕ್ಯಕ್ಕೆ ವಸ್ತುತಃ ಬ್ರಹ್ಮನನ್ನು ಬೋಧಿಸುವುದರಲ್ಲಿಯೆ ತಾತ್ಪರ್ಯವಿದೆ. ಮೇಲ್ಗಡೆ ಧಾರಣ ಮಾಡುವುದಕ್ಕೆ ಅದೃಷ್ಟಫಲ ಸಾಧನತ್ವವಿದೆ ಎಂಬುದು ಬೇರೆ ಪ್ರಮಾಣಗಳಿಂದ ತಿಳಿದ ವಿಷಯವಲ್ಲ. ಆದ್ದರಿಂದ ಆ ವಿಷಯದಲ್ಲಿ ವಿಧಿ ಇದೆ ಎನ್ನುವುದು ನ್ಯಾಯ. ಪ್ರಕೃತದಲ್ಲಿ ಹೀಗೆ ಹೇಳಿದಂತೆ ವಿಚಾರವು ಜ್ಞಾನಸಾಧನವೆನ್ನುವುದು ಸಿದ್ಧವಾದ ವಿಷಯ. ವಿಧಿಗೆ ಇಲ್ಲಿ ಅವಕಾಶವಿಲ್ಲ

*ಪರಿಪೂರ್ಣಚಂದ್ರಿಕಾ*

"ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನವಿಧಿಯು ವಸ್ತುತಃ ವಿಚಾರವಿಧಿಯೂ ಹೌದು. ಏಕೆಂದರೆ ಈ ವಾಕ್ಯಕ್ಕೆ ವೇದಾಧ್ಯಯನದಿಂದ ಸಫಲವಾದ ಅರ್ಥಜ್ಞಾನವನ್ನು ಪಡೆಯಬೇಕೆಂಬ ಅರ್ಥದಲ್ಲಿ ತಾತ್ಪರ್ಯವಿದೆ ಎಂದು ಪೂರ್ವಮೀಮಾಂಸೆಯ ನಿರ್ಣಯವಿದೆ. ವೇದವು ಅರ್ಥಜ್ಞಾನಕ್ಕೆ ಸಾಧನವಾಗಬೇಕಾದರೆ ವಿಚಾರವಿಲ್ಲದೆ ಅದು ಶಕ್ಯವಿಲ್ಲ. ಆದ್ದರಿಂದ ವಿಚಾರವು ಆವಶ್ಯಕವೆಂಬುದು ಅರ್ಥಾತ್ ಸಿದ್ಧವಾಗುತ್ತದೆ.' ಹೀಗೆ ವಾದಿಸುವುದೂ ಸರಿಯಲ್ಲ. 'ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ' ಎಂಬ ಸೂತ್ರಭಾಷ್ಯದಲ್ಲಿ ಅದ್ವೈತಿಗಳು ಹೇಳುವಂತೆ ಅಧ್ಯಯನ ವಿಧಿಯು ನಿತ್ಯ. ಅಧ್ಯಯನ ಮಾಡಿದರೆ ಫಲವಿಲ್ಲ; ಮಾಡದಿದ್ದರೆ ಮಾತ್ರ ದೋಷವೆಂಬುದು ಅದರ ಅಭಿಪ್ರಾಯ. ಅಧ್ಯಯನವು ಅರ್ಥಜ್ಞಾನಸಾಧನವೆಂದು ಹೇಳುವ ತಾತ್ಪರ್ಯವೆ ಅದಕ್ಕೆ ಇರಲು ಶಕ್ಯವಿಲ್ಲ.




ವಿಚಾರದಿಂದ ನಿರ್ಣಯವಾಗುವುದು ಅನುಭವಸಿದ್ಧವಾಗಿರುವಾಗ ನಿರ್ಣಯಕ್ಕಾಗಿ ವಿಚಾರ ಮಾಡಬೇಕು ಎಂದು ವಿಧಿಸುವುದೂ ವ್ಯರ್ಥ. ವಿಚಾರ ಮಾಡಿಯೆ ನಿರ್ಣಯ ಮಾಡಬೇಕು ಎನ್ನುವುದು ವಿಧಿಗೆ ತಾತ್ಪರ್ಯವೆನ್ನುವುದು ವಿಚಾರವಿಲ್ಲದೆಯೂ ನಿರ್ಣಯ ಶಕ್ಯವಿದ್ದಾಗ ಹೇಳಬಹುದಾದ ಮಾತು. ಭತ್ತವನ್ನು ಕುಟ್ಟಿಯೆ ಹೊಟ್ಟು ತೆಗೆಯಬೇಕು ಎನ್ನುವುದು ಸರಿ. ಏಕೆಂದರೆ ಕುಟ್ಟದೆಯೂ ಉಗುರಿನಿಂದ ಸುಲಿದು ಹೊಟ್ಟು ತೆಗೆಯುವುದು ಶಕ್ಯವಿದೆ. ಕುದುರೆಯ ಹಗ್ಗ ಒಂದನ್ನೇ ಎತ್ತಿಕೊಳ್ಳಬೇಕು, ಜೊತೆಗೆ ಕತ್ತೆಯ ಹಗ್ಗವನ್ನು ಎತ್ತಿಕೊಳ್ಳಬಾರದು ಎನ್ನುವುದು ಸರಿಯಾಗುತ್ತದೆ. ಪ್ರಕೃತದಲ್ಲಿ ಬ್ರಹ್ಮಜ್ಞಾನ ಬರಬೇಕಾದರೆ ವಿಚಾರ ಒಂದೇ ಸಾಧನವಾಗಿರುವಾಗ ವಿಚಾರದಿಂದಲೇ ನಿರ್ಣಯ ಮಾಡಬೇಕೆನ್ನುವುದೂ ಅಸಂಗತ.

'ಯಾಗದಲ್ಲಿ ಉಪಯೋಗವಾಗುವ ಭತ್ತದ ಹೊಟ್ಟು ತೆಗೆಯಲು ಉಗುರು ಸಾಧನವಲ್ಲದಿದ್ದರೂ ಸಾಮಾನ್ಯ ಭತ್ತದ ಹೊಟ್ಟು ತೆಗೆಯಲು ಉಗುರೂ ಸಾಧನವಾಗಬಹುದು. ಯಾಗದಲ್ಲಿ ಅದು ಕೂಡದೆಂದು ಕುಟ್ಟಿಯೆ ಹೊಟ್ಟು ತೆಗೆಯಬೇಕೆಂದು ನಿಯಮ ಮಾಡಲಾಗಿದೆ. ಹಾಗೆಯೆ ಅಖಂಡ ಶುದ್ಧ ಚೈತನ್ಯ ವಿಷಯದಲ್ಲಿ ನಿರ್ಣಯಕ್ಕೆ ವಿಚಾರ ಒಂದೇ ಸಾಧನವಾದರೂ ಸಾಮಾನ್ಯವಾಗಿ ಚೈತನ್ಯ ವಿಷಯದಲ್ಲಿ ನಿರ್ಣಯಕ್ಕೆ ವಿಚಾರವೇ ಬೇಕಾಗಿಲ್ಲ. ಬೇರೆ ರೀತಿಯಿಂದಲೂ ಸಾಧ್ಯವಿದೆ. ಅದರಿಂದ ಶುದ್ಧ ಚೈತನ್ಯ ಜ್ಞಾನವನ್ನು ವಿಚಾರದಿಂದಲೆ ಪಡೆಯಬೇಕೆಂದು ನಿಯಮ ಮಾಡಬಹುದು'-ಎಂದು ಆಕ್ಷೇಪವಿದೆ. ಇದಕ್ಕೆ ಸಮಾಧಾನ ಹೀಗೆ - 'ಭತ್ತವನ್ನು ಕುಟ್ಟಬೇಕು' ಎನ್ನುವಲ್ಲಿ 'ಭತ್ತ' ಎಂದರೆ ಭತ್ತವೆ ವಿವಕ್ಷಿತವಲ್ಲ. 'ಯಾಗದಲ್ಲಿ ಉಪಯೋಗವಾಗುವ ಧಾನ್ಯ' ಎಂದು ವಿವಕ್ಷಿತ. ಇಲ್ಲದಿದ್ದರೆ ಭತ್ತದ ಸ್ಥಾನದಲ್ಲಿ ಯವೆಯನ್ನು ಕೆಲವು ಯಾಗಗಳಲ್ಲಿ ಕುಟ್ಟುವುದು 'ಭತ್ತವನ್ನು ಕುಟ್ಟಬೇಕು' ಎನ್ನುವ ವಿಧಿಗೆ ಸಮ್ಮತವಾಗದೆ ಹೋದೀತು. ಅದರಿಂದ ಯಾಗದಲ್ಲಿ ಉಪಯೋಗವಾಗುವ ಭತ್ತದ ಹೊಟ್ಟು ತೆಗೆಯಲು ಉಗುರು ಸಾಧನವಾಗಬಲ್ಲುದೆಂದೇ ಅದನ್ನು ನಿವಾರಿಸಲು ಕುಟ್ಟುವ ನಿಯಮವಿದೆ. ಹಾಗೇ ಪ್ರಕೃತದಲ್ಲಿ ಶುದ್ಧಚೈತನ್ಯದ ಜ್ಞಾನಕ್ಕೇ ವಿಚಾರ ಹೊರತು ಬೇರೆ ಸಾಧನವಿದ್ದರೆ ವಿಚಾರನಿಯಮ ಯುಕ್ತವಾದೀತು. ಸ್ತ್ರೀಶೂದ್ರಾದಿಗಳೂ ಓದಬಹುದಾದ ಸ್ಮೃತಿ ಪುರಾಣಗಳು ಸಾಧನವಾಗಬಹುದು ಎನ್ನುವುದೂ ಸರಿಯಲ್ಲ. ಸ್ಮೃತಿಪುರಾಣಗಳಲ್ಲಿಯೂ ವಿಚಾರದಿಂದಲೆ ನಿರ್ಣಯ ಪಡೆಯಬೇಕು.

---

ಜಿಜ್ಞಾಸಾಧಿಕರಣ

## ಆಕ್ಷೇಪದಿಂದಲೂ ವಿಚಾರ ವಿಧಾಯಕಗಳಾಗಲ್ಲ (ಪೂರ್ವಪಕ್ಷದ ಉಪಸಂಹಾರ)

**तात्पर्यचन्द्रिका –**

**नाप्यध्ययनविधेरर्थज्ञानपर्यन्ततया तदाक्षिप्तो विचार इति युक्तम् । स्वमते तस्य नित्यत्वेनार्थज्ञानपर्यन्तत्वायोगात् । यद्वा – स्वर्गकामाधिकरणपूर्वपक्षे, विश्वजिदधिकरणपूर्वपक्षे च फलाभावेन नियोज्याभावेन वा ''स्वर्गकामो यजेत'' ''विश्वजिता यजेत'' इत्यादिवाक्यमिव उक्तरीत्या विषयाद्यभावेनोपपत्तिविरोधात् ''तद् विजिज्ञासस्व'' इत्यादिकमप्रमाणम् । अत एव, उक्तं विचारविधायकवाक्यानां गतिद्वयमभिप्रेत्य सुधायां 'तद् विजिज्ञासस्व इति श्रुत्यर्थस्याद्याप्यनिर्णीतत्वेन' इत्युक्तम् । केचित्तु – 'तद् विजिज्ञासस्व इत्यादिकं जीवात्मनो विचारविधायकं, नतु ब्रह्मण इति सुधाभिप्रायः' इत्याहुः । तन्न । जीवस्यासन्दिग्धत्वप्रतिपादक-न्यायविवणविरोधस्य, विचारमात्राक्षेपकपूर्वपक्षानानुगुण्यस्य चोक्तत्वात् । तदेतदभिप्रेत्योक्तं न्यायविवरणे –''जीवव्यतिरिक्तेश्वराभावात् तस्य च स्वप्रकाशत्वात् न जिज्ञास्यता'' इति ।**

ಅನುವಾದ :- ''ಸ್ವಾಧ್ಯಾಯೋಽಧ್ಯೇತವ್ಯಃ'' ಎಂಬ ಅಧ್ಯಯನವಿಧಿಯು ವೇದಾರ್ಥ-ಜ್ಞಾನವನ್ನು ಪಡೆಯಬೇಕೆನ್ನುತ್ತಿದೆ. ವೇದಾರ್ಥಜ್ಞಾನ ಬರಬೇಕಾದರೆ ವಿಚಾರವನ್ನು ಮಾಡಲೇಬೇಕು ಹೀಗೆ ಈ ವಿಧಿಯು ವಿಚಾರವನ್ನು ಅರ್ಥಾತ್ ವಿಧಿಸುತ್ತಿದೆಂದು ಹೇಳಬಾರದು. ಯಾಕಂದರೆ ನಿತ್ಯವಿಧಿಯೋ, ಅದಕ್ಕೆ ಫಲವಿರುವುದಿಲ್ಲವೆಂದು ಅದ್ವೈತಿಗಳ ಸಿದ್ಧಾಂತ. ಅಧ್ಯಯನ ವಿಧಿಯು ನಿತ್ಯವಿಧಿಯಾದ್ದರಿಂದ ಅರ್ಥಜ್ಞಾನವೆಂಬ ಫಲವನ್ನು ಹೇಳಬಾರದು.

ಅಥವಾ ವಿಚಾರವಿಧಿಗಳೆಲ್ಲವೂ ಅಪ್ರಮಾಣಗಳಾಗಿವೆ. ಫಲವಿಲ್ಲದಾಗ ಶ್ರುತಿಗೆ ಅಪ್ರಮಾಣ್ಯ-ವನ್ನು ಪೂರ್ವಮೀಮಾಂಸೆಯಲ್ಲಿಯೂ ಒಪ್ಪಲಾಗಿದೆ. ಅದು ಹೀಗೆ - ''ಸ್ವರ್ಗಕಾಮೋ ಯಜೇತ'' ಎಂಬ ವಾಕ್ಯವು ಯಾಗವನ್ನು ವಿಧಿಸುತ್ತಿದೆ. 'ಯಜೇತ' ಎಂಬಲ್ಲಿರುವ 'ಲಿಜ್'ಪ್ರತ್ಯಯವು ಧಾತ್ವರ್ಥಯಾಗವನ್ನೇ ಬೋಧಿಸುತ್ತದೆ, ಹೊರತು ದೂರದ ಸ್ವರ್ಗಕಾಮಪದದಲ್ಲಿರುವ ಸ್ವರ್ಗಫಲವನ್ನು ವಿಧಿಸುವುದಿಲ್ಲ.

ಆದ್ದರಿಂದ ಯಾಗ ಮಾಡಿ ಏನೂ ಫಲವಿಲ್ಲದ್ದರಿಂದ ಯಾಗವಿಧಿಯು ಅಪ್ರಮಾಣವೆಂದು ಸ್ವರ್ಗಕಾಮಾಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಅದರಂತೆ 'ವಿಶ್ವಜಿತಾ ಯಜೇತ' ಎಂಬ

ಯಾಗದ ಫಲವನ್ನು ಹೇಳಿಲ್ಲ. ಆದ್ದರಿಂದ ವಿಶ್ವಜಿತ್‌ಯಾಗವೇ ಫಲವೆಂದು ಅನ್ವಯವಾಗುತ್ತದೆ. ಬೇರೆ ಫಲವಿಲ್ಲದ ಕಾರಣ ಪುರುಷನು ಪ್ರವೃತ್ತಿ ಮಾಡಲಾರ. ಪುರುಷಪ್ರವೃತ್ತಿ ರೂಪವಾದ ಫಲವಿಲ್ಲದ್ದರಿಂದ ಯಾಗವಿಧಿಯು ಅಪ್ರಮಾಣವೆಂದು ವಿಶ್ವಭೇದಾಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಪ್ರಕೃತದಲ್ಲಿಯೂ ಸಹ ವಿಚಾರವಿಧಿಯು ಅಪ್ರಮಾಣವೆಂದು ಪೂರ್ವಪಕ್ಷ ಮಾಡಬಹುದು. ಹಿಂದೆ ಹೇಳಿದ ಪ್ರಕಾರ ವಿಷಯಾದಿಗಳು ಇಲ್ಲವೆಂಬ ಉಪಪತ್ತಿ ವಿರೋಧ-ವಿರುವುದರಿಂದ "ತದ್‌ವಿಜಿಜ್ಞಾಸಸ್ವ" ಇತ್ಯಾದಿ ವಿಚಾರವಿಧಾಯಕವಾಕ್ಯಗಳು ಅಪ್ರಮಾಣ-ಗಳಾಗಿವೆ. ಆದ್ದರಿಂದಲೇ ವಿಚಾರವಿಧಾಯಕವಾಕ್ಯಗಳಿಗೆ ಮೇಲೆ ಹೇಳಿದ ಎರಡು ಗತಿಗಳನ್ನು ಅಂಗೀಕರಿಸಿ ಸುಧೆಯಲ್ಲಿ ಹೀಗೆ ಹೇಳಿದ್ದಾರೆ. - "ತದ್‌ವಿಜಿಜ್ಞಾಸಸ್ವ" ಇತ್ಯಾದಿ ಶ್ರುತಿಗಳ ಅರ್ಥವು ಇನ್ನೂ ನಿರ್ಣಯವಾಗಿಲ್ಲ ಎಂದು.

ಕೆಲವರು ಹೀಗೆ ಆಕ್ಷೇಪಿಸುತ್ತಾರೆ - 'ತದ್‌ವಿಜಿಜ್ಞಾಸಸ್ವ' ಇತ್ಯಾದಿವಾಕ್ಯಗಳು ಜೀವಾತ್ಮನ ವಿಚಾರವನ್ನಷ್ಟೇ ವಿಧಿಸುತ್ತಿವೆ, ಹೊರತು ಬ್ರಹ್ಮನ ವಿಚಾರವನ್ನಲ್ಲ. ಇದೇ ಸುಧೆಯ ಅಭಿಪ್ರಾಯವೆಂದು. ಇದು ಸರಿಯಲ್ಲ. ಏಕೆಂದರೆ ನ್ಯಾಯವಿವರಣೆಯಲ್ಲಿ ಜೀವನನ್ನು ಅಸಂದಿಗ್ಧ-ವೆಂದು ಒಪ್ಪಿ ಪೂರ್ವಪಕ್ಷ ಮಾಡಿದ್ದಾರೆ. ಅದಕ್ಕೆ ವಿರೋಧ ಬರುತ್ತದೆ. ಮತ್ತು ವಿಚಾರವೇ ಬೇಡವೆಂದು ಪೂರ್ವಪಕ್ಷದ ಅಭಿಪ್ರಾಯ. ಈ ಜೀವವಿಚಾರವನ್ನು ವಿಧಿಸಿದರೆ ಪೂರ್ವಪಕ್ಷದ ಅಭಿಪ್ರಾಯಕ್ಕೆ ಅನನುಗುಣವಾಗುತ್ತದೆ.

ಟೀಕೆಯಲ್ಲಿ ಹೇಳಿದ ಈ ಪೂರ್ವಪಕ್ಷವೆಲ್ಲವೂ ನ್ಯಾಯವಿವರಣಾನುಸಾರಿಯಾಗಿದೆ. ನ್ಯಾಯ-ವಿವರಣದ ಮಾತು ಹೀಗಿದೆ - "ಜೀವನಿಗಿಂತ ಭಿನ್ನನಾದ ಈಶ್ವರನಿಲ್ಲ. ಅಂತಹ ಜೀವನು ಸ್ವಪ್ರಕಾಶನಾದ್ದರಿಂದ ಜಿಜ್ಞಾಸೆ ಮಾಡಬೇಕಿಲ್ಲ" ಎಂದು.

ಇಲ್ಲಿಗೆ ಜಿಜ್ಞಾಸಾಧಿಕರಣದ ಪೂರ್ವಪಕ್ಷವು ಮುಗಿಯಿತು.

### ಕಠಿಣಪದಾರ್ಥ

**ತದಾಕ್ಷಿಪ್ತೋ** = ವಿಧಿಯಿಂದ ಆಕ್ಷಿಪ್ತವಾದ. **ತಸ್ಯ** = ಅಧ್ಯಯನ ವಿಧಿಯು. **ಅರ್ಥಜ್ಞಾನಪರ್ಯಂತತಯಾ** = ಅರ್ಥಜ್ಞಾನವೆಂಬ ಫಲವನ್ನು. **ನಿಯೋಜ್ಯಾಭಾವೇನ** = ಕಾರ್ಯದಿಂದ ಬದ್ಧನಾದವನು ಇಲ್ಲದ ಕಾರಣ. **ಉಪಪತ್ತಿ ವಿರೋಧಾತ್** = ವಿಷಯಾದಿಗಳಿಲ್ಲವೆಂಬ ಯುಕ್ತಿ ವಿರೋಧದಿಂದ. **ಅತ ಏವ** = ತದ್‌ವಿಜಿಜ್ಞಾಸಸ್ವ ಇತ್ಯಾದಿಗಳು ಅಪ್ರಮಾಣವಾದ್ದರಿಂದಲೇ. **ವಿಚಾರಮಾತ್ರಾಕ್ಷೇಪಕ ಪೂರ್ವಪಕ್ಷಾನಾನುಗುಣ್ಯಸ್ಯ** = ಯಾವ ವಿಚಾರವನ್ನೂ ಮಾಡಬಾರದೆಂಬ ಆಕ್ಷೇಪರೂಪವಾದ ಪೂರ್ವಪಕ್ಷಕ್ಕೆ ಅನನುಗುಣವಾದ. **ತಸ್ಯ ಚ** = ಜೀವನಾದರೂ.

*ಜಿಜ್ಞಾಸಾಧಿಕರಣ*

**प्रकाशः** – ननु ''स्वाध्यायोऽध्येतव्यः'' इत्यध्ययनविधेः स्वाध्यायाध्ययनेन फलवदर्थज्ञानं भावयेदित्यर्थज्ञानपर्यन्तत्वस्य निर्णीतत्वात्, स्वाध्यायस्यार्थज्ञान-करणत्वं विचारमन्तरा न सम्भवतीत्याक्षेपात् विचारस्यावश्यकतेत्याशङ्क्य विवरणाभिमतं परिहारमाह ''नापीति ।। स्वमत इति ।। अद्वैतिमते ''स्वाध्यायस्य तथात्वेन हि समाचारेऽधिकाराच्च'' इति सूत्रे तदीयभाष्ये तस्य नित्यत्वोक्तेरिति भावः । एवं विचारवाक्यानामभ्युपेत्य मानत्वं गतिरुक्ता । अधुना सौत्रातश्शब्देन वेदप्रामण्यस्यापि सूचनात् तदनुरोधेनाप्रामाण्येनैव पूर्वपक्षमाह ।। यद्वेति ।। षष्ठे ''द्रव्याणां कर्मसंयोगे गुणत्वेनाभिसम्बन्धः'' इत्याद्याधिकरणे ''स्वर्गकामं यजेत'' इत्यादिषु फलभोक्तृत्वरूपाधिकारोऽस्त्युत नेति विशये, प्रत्ययोपात्तभावनाया भाव्याकाङ्क्षायामेकपदश्रुत्या धात्वर्थस्य भाव्यत्वेनान्वये, पदान्तरोपात्तस्वर्गस्य वाक्यप्रमाणकान्वयायोगात् । लोकप्रयोगात् स्वर्गशब्दितस्य चन्दनादेः क्रियासाधनत्वोपपत्तेः । साधने चार्जनप्राप्तकामानुवादसम्भवाच्च याग एव भाव्यो न फलमिति, फलाभावादप्रमाणमेवमादीति प्राप्ते, पदश्रुतेरपि प्रबलया प्रत्ययश्रुत्या भावनाया विध्युपरोधात् तस्य च चेतनप्रवर्तनारूपस्य पुमर्थभाव्यतां विनाऽनुपपत्तेः । फले च कामनास्वारस्यात् स्वर्गशब्दस्य प्रतिवचनत्वेन चन्दनादिषु गौणत्वादत्र तद्ग्रहणे मानाभावाच्च, स्वर्ग एव भाव्यो न याग इति, अस्त्यधिकार इति सिद्धान्तितम् । तथा चतुर्थे ''चोदनायां फलाश्रुतेः कर्ममात्रं विधीयेत नह्यशब्दं प्रतीयते'' इति तृतीयपादीयपञ्चमाधिकरणे ''विश्वजिता यजेत'' इत्येवमादिषु फलमस्ति नेति संशये, फलस्याश्रवणात् यागभाव्यताप्रतिपादनेन वाक्यस्य परिपूर्णतयाऽध्याहारानपेक्षणाच्च नास्ति फलमिति पुरुषप्रवृत्त्ययोगेन विध्यानर्थक्यादप्रमाणमेवमादीति प्राप्ते, चेतनप्रवर्तनात्मकविध्यवरुद्धायां भावनायामपुमर्थस्य यागस्यान्वयायोगात् तदंशे वाक्यस्य साकाङ्क्षत्वात् तत्पूरणाय फलपदाध्याहारादस्ति विश्वजिदादीनां फलमिति सिद्धान्तितम् । अत्रोभयत्रापि यथाऽप्रामाण्यपर्यवसायी पूर्वपक्षः । तथा ''तद् विजिज्ञासस्व'' इत्यादावपीत्यर्थः । भट्टमते स्वर्गकामशब्दस्य फलसमर्पकता.

प्राभाकरमते नियोज्य पुरुषसमर्पकतेत्युभयाभिप्रायेण ''फलाभावेन नियोज्याभावेन च'' इत्युक्तम् । विचारवाक्यानां गतिद्वयस्य टीकायामनुक्तेः कथमेवमित्यत आह - अत एवेति ।। 'उक्तम्' इति गतिद्वयविशेषणम् । अस्माभिः इति शेषः । वाक्यानां प्रामाण्येऽपि लिङादीनामविधायकत्वमप्रामाण्यमेव वेत्युक्तं गतिद्वयमित्यर्थः । सुधावाक्यस्यायमाशयः । विचारवाक्यगतलिङादीनां चन्द्रिकोक्तदिशा विधिशक्तिप्रतिबन्धेनाविधायकत्वादिति वा, तत्र वक्ष्यमाणदिशा विषयाद्यभावेनाप्रामाण्येनाप्युपपत्तेरिति वेति । अत एव, तत्र पूर्वपक्षोपसंहारे – ''तदेवं विषयाद्यनुबन्धविधुरत्वान्न जिज्ञासा कर्तव्या, तद्विधयोऽपि न प्रमाणम् इत्युक्तमिति भावः । यद्वा – ''श्रुत्यर्थस्य'' इत्यादि वाक्योपादानमुपलक्षणम्, ''तद्विधयोऽपि न प्रमाणम्'' इत्यपि वाक्यं ग्राह्यम् । तथाचाद्यवाक्येनाद्या गतिः, उपसंहारवाक्येन द्वितीया गतिरुक्ता भवतीति भावः । यद्वा – अंत्यानुसारादाद्यस्यार्थद्वयमाद्यानुसारादन्त्यस्यार्थद्वयम् । प्रामाण्यपक्षे 'तद्विधयो न प्रमाणं' न विचारविधायका इत्यर्थ इति भावः । यद्यपि ''विना विचारं श्रुत्यर्थस्य'' इत्याद्येव सुधावाक्यं तथापि ''ननु तद् विजिज्ञासस्व'' इति शाङ्करग्रन्थे सैव श्रुतिरुपात्तेति प्रकृतत्वात् बुद्धिसौकर्याय ''तद् विजिज्ञासस्व इति श्रुत्यर्थस्य'' इत्याद्यनुवादः कृत इति न दोषः ।। ननु सुधावाक्यस्य नायं भावः, वक्ष्यमाणदिशा विषयाद्यभावेनाप्रामाण्येनाप्युपपत्त्या श्रुत्यर्थो न निर्णीत इति । किं तर्हि, जीवविचारविधायकत्वेनाप्युपपत्त्या, ब्रह्मविचारविधायकत्वेनानिर्णीतत्वादित्येव । उपसंहारवाक्यमपि, ब्रह्मविचारविधायकं नेत्यभिप्रायम् । अत एव सुधायां जन्माधिकरणे तथैव स्पष्टं विभावयिष्यतीत्युत्तानदृशां भ्रममुट्टंक्य निरस्यति - केचित्त्विति ।। उक्तमेव पुनः स्मारयति ।। जीवस्येति ।। अत्र टीकोक्तं पूर्वपक्षप्रमेयं न्यायविवरणानुसारीत्याह ।। तदेतदिति ।।

गुरुराजीय – श्रोतव्य इत्यादिवाक्यानां प्रत्येकं किं जपार्थत्वाद् युक्तिक्लेशेन वेदान्तानामिव तेषामप्यप्रामाण्यमेव पूर्वपक्षोऽस्त्वित्याह – यद्वा स्वर्गकामेत्यादिना ।। फलाभावेनेति ।। भट्टमतेन । नियोज्याभावेनेति । प्राभाकरमतेनेति ध्येयम् ।।

**गतिद्वयमभ्युपेत्येति** ।। सुधायां जिज्ञासा कर्तव्या नवेति संशयोत्थापक श्रुत्यर्थस्याबाध्यनिर्णीतत्वेनेत्युक्तत्वात् पूर्वपक्षावसरे गतिद्वयेनाविधायकत्वनिश्चय एव विवक्षित इति भावः । विचारविधिवाक्यानां नित्यविधितया अदृष्टार्थत्वेना-प्रामाण्येन वा पूर्वपक्षस्तथोत्थापकत्वेन न कार्यः । तस्या अन्यपरत्वादिति केचिन्मतमुपन्यस्य निराकरोति ।। **केचित्त्विति** ।।

**ವಿವರಣೆ** - ಇಲ್ಲಿಯ ತನಕ ಹೇಳಿದ ವಿಚಾರ - "ಸೋಽನ್ವೇಷ್ಟವ್ಯಃ, ಪಶ್ಯೇತ್, ಶ್ರೋತವ್ಯಃ, ತದ ವಿಜಿಜ್ಞಾಸಸ್ವ," ಈ ಎಲ್ಲಾ ವಾಕ್ಯಗಳು ನೇರವಾಗಿ ವಿಚಾರವಿಧಾಯಕಗಳಾಗಿವೆ. ಎಂದು ಪ್ರಶ್ನಿಸಿಕೊಂಡು ಉತ್ತರಿಸಿದರು. ಪ್ರಕೃತ ನೇರವಾಗಿ ವಿಚಾರವಿಧಾಯಕವಿಧಿಗಳು ಬೇಡ, ಆಕ್ಷೇಪದಿಂದ ವಿಚಾರವಿಧಿಯು ಸಿದ್ಧವಾಗಲಿದೆಯೆಂದು ಪ್ರಶ್ನಿಸಿಕೊಂಡು ಉತ್ತರಿಸುತ್ತಿದ್ದಾರೆ.

"ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ವಾಕ್ಯವು ಅಧ್ಯಯನವನ್ನು ವಿಧಿಸುತ್ತಿದೆ. ಸ್ವಾಧ್ಯಾಯ ಎಂದರೆ ವೇದವೆಂದರ್ಥ. ಅಧ್ಯಯನ ಎಂದರೆ ಕೇವಲ ಅಕ್ಷರಗ್ರಹಣವಲ್ಲ. ಅರ್ಥಜ್ಞಾನವನ್ನು ಪಡೆಯಬೇಕೆಂದರ್ಥ ಕರ್ಮಾನುಷ್ಠಾನಕ್ಕೋಸ್ಕರ ಅರ್ಥಜ್ಞಾನ ಸಂಪಾದಿಸಬೇಕು. ಅರ್ಥಜ್ಞಾನ ಹೊಂದಬೇಕಾದರೆ ವಿಚಾರವನ್ನು ಮಾಡಲೇಬೇಕು. ವಿಚಾರವಿಲ್ಲದೆ ಅರ್ಥಜ್ಞಾನ ಬರಲಾರದು. ಆದ್ದರಿಂದ "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ವಿಧಿಯಿಂದ ವಿಚಾರವು ಆಕ್ಷೇಪದಿಂದ ಸಿದ್ಧವಾಗುತ್ತದೆ. ಹೀಗೆ "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬುದು ಅಧ್ಯಯನವಿಧಿಯೂ ಆಗುತ್ತದೆ. ವಿಚಾರವಿಧಿಯೂ ಆಗುತ್ತದೆ. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ ವಿಷಯ.

ಈ ಆಕ್ಷೇಪಕ್ಕೆ ವಿವರಣಕಾರ ಹೇಳಿದ ಸಮಾಧಾನವನ್ನು ಗ್ರಂಥಕಾರರು ಹೇಳುತ್ತಿದ್ದಾರೆ. "ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ" ಎಂಬ ಸೂತ್ರದಲ್ಲಿ ಅಧ್ಯಯನವಿಧಿಯನ್ನು ನಿತ್ಯವೆಂದು ಅದ್ವೈತಿಗಳು ಹೇಳಿದ್ದಾರೆ. ನಿತ್ಯವಿಧಿಯಾದ್ದರಿಂದ ಅಧ್ಯಯನ ಮಾಡಿದರೆ ಫಲವಿಲ್ಲ. ಮಾಡದಿದ್ದರೆ ದೋಷ ಬರುತ್ತದೆ. ಪ್ರಕೃತ ನೀವು ಅರ್ಥಜ್ಞಾನವೆಂಬ ಫಲವನ್ನು ಹೇಳುತ್ತಿದ್ದೀರಿ. ಇದು ಅದ್ವೈತಭಾಷ್ಯಕ್ಕೆ ವಿರುದ್ಧವಾಗಿದೆ.

ಇಲ್ಲಿಯ ತನಕ ವಿಷಯಾದಿಗಳಿಲ್ಲದಿರುವುದರಿಂದ ಶಾಸ್ತ್ರವು ಅನಾರಂಭಣೀಯವೆಂದು ಸಾಧಿಸ-ಲಾಯಿತು. ಅದಕ್ಕೆ ಪೂರಕವಾಗಿ ಶ್ರುತಿಗಳಲ್ಲಿರುವ ವಿಚಾರವಿಧಿಗೆ ಏನು ಗತಿ? ಎಂದು ಪ್ರಶ್ನಿಸಿಕೊಂಡು ವಿಧಿಪ್ರತ್ಯಯಗಳಿಗೆ ಅರ್ಹತ್ವಾದ್ಯರ್ಥಗಳನ್ನು ಹೇಳಬೇಕೆಂದು ಹೇಳಿದ್ದಾಯಿತು. ಈಗ ವಿಧಿವಾಕ್ಯಗಳೆಲ್ಲವೂ ಅಪ್ರಮಾಣಗಳಾಗಿವೆಯೆಂದು ಧೈರ್ಯವಾಗಿ ಪೂರ್ವಪಕ್ಷ ಮಾಡಲಾಗಿದೆ. ವಿಧಿವಾಕ್ಯಗಳಿಗೆ ಏನು ಗತಿ? ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ. ಈ ರೀತಿಯಾದ ಪೂರ್ವಪಕ್ಷವು ಯುಕ್ತವೇ ಆಗಿದೆ. ಏಕೆಂದರೆ ಸೂತ್ರದಲ್ಲಿರುವ ಅತಃ ಶಬ್ದಕ್ಕೆ ಇರುವ ಐದು ಅರ್ಥಗಳಲ್ಲಿ 'ವೇದವು ಪ್ರಮಾಣವಾಗಿರುವುದರಿಂದ' ಎಂಬರ್ಥವೂ ಒಂದಾಗಿದೆ. ಅದಕ್ಕೆ ಅನುಗುಣವಾಗಿ ವಿಚಾರವಿಧಿವಾಕ್ಯಗಳು ಅಪ್ರಾಮಾಣಗಳಾಗಿವೆಯೆಂಬ ಪೂರ್ವಪಕ್ಷ ಸಂಗತವೇ ಆಗುತ್ತದೆ.

ಪರಿಪೂರ್ಣಚಂದ್ರಿಕಾ

ಯಾವ ಶ್ರುತಿಯು ಯುಕ್ತಿವಿರುದ್ಧವಾಗಿರುತ್ತದೋ, ಅದು ಅಪ್ರಮಾಣವಾಗಿರುತ್ತದೆ. 'ವಿಚಾರಃ ನ ಕರ್ತವ್ಯಃ ವಿಷಯಾದಿಶೂನ್ಯತ್ವಾತ್' ಎಂಬ ಯುಕ್ತಿಯಿಂದ ವಿರೋಧವಿರುವುದರಿಂದ ಶ್ರುತಿಗೆ ಅಪ್ರಾಮಾಣ್ಯ ಹೇಳಬೇಕು. ಪೂರ್ವಮೀಮಾಂಸೆಯ ಸ್ವರ್ಗಕಾಮಾಧಿಕರಣದ ಪೂರ್ವಪಕ್ಷದಲ್ಲಿ ಮತ್ತು ವಿಶ್ವಜಿದಧಿಕರಣದ ಪೂರ್ವಪಕ್ಷದಲ್ಲಿ ಯುಕ್ತಿವಿರೋಧ ಬಂದಾಗ ಶ್ರುತಿಗೆ ಅಪ್ರಾಮಾಣ್ಯ ಹೇಳಬೇಕೆಂದು ಸಮರ್ಥಿಸಲಾಗಿದೆ. ಅದರಂತೆ ಇಲ್ಲಿಯೂ ಯುಕ್ತಿವಿರೋಧವಿರುವುದರಿಂದ ಶ್ರುತಿಗೆ ಅಪ್ರಾಮಾಣ್ಯ ಹೇಳುವುದು ಅತ್ಯಂತ ಸಂಗತವಾಗಿದೆ.

## ಸ್ವರ್ಗಕಾಮಾಧಿಕರಣಮ್

**ಸೂತ್ರ - ದ್ರವ್ಯಾಣಾಮ್ ಕರ್ಮಸಂಯೋಗೇ ಗುಣತ್ವೇನಾಭಿಸಂಬಂಧಃ (೬-೧-೧)[೧]**

---

(१) भाट्टसङ्ग्रहः

द्रव्याणां कर्मसंयोगे गुणत्वेनाभिसम्बन्धः ।।६।।१।।१।।

(असाधकन्तु तादर्थ्यात् ।। २ ।। प्रत्यर्थञ्चाभिसंयोगात् कर्मतो ह्यभिसम्बन्धस्तस्मात् कर्मोपदेशः स्यात् ।। ३ ।।)

उत्तरचिन्तोपयुक्ततयाऽत्र कर्तुरधिकारोऽस्ति न वेति चिन्तनादौपोद्घातिकी सङ्गतिरस्य ज्ञेया । ''दर्शपूर्णमासाभ्यां स्वर्गकामो यजेत'' ''चित्रया यजेत पशुकामः'' इत्यादिषु यागक्रियानिष्पादकत्वरूपकर्तृत्ववतः कर्मजन्यफलभोक्तृत्वरूपोऽधिकारोऽस्त्युत नेति सन्देहः । पूर्वपक्षस्तु, यजेतेत्यत्र प्रत्ययेन भावनाऽभिधीयते । तस्याश्च धात्वर्थो भाव्यः । एकपदोपात्तत्वात् । स्वर्गस्तु पदान्तरोपात्तत्वात् पदान्तरसमभिव्याहाररूपवाक्येन भाव्यतया अन्वेतव्यः । तच्च वाक्यमेकपदरूपया श्रुत्या दुर्बलत्वाद् बाध्यते । किञ्च स्वर्गशब्दस्य सुखसाधनादौ लोके प्रयोगात् तस्य च सिद्धरूपस्य साध्यरूपयागं प्रति साधनत्वमुचितम् । तेन याग एव साध्यात्मा भाव्यः ''स्वर्गेण चन्दनादिना यागं कुर्यात्'' इति । नतु '' यानेग स्वर्गं कुर्यात्'' इति । भाव्यस्य भूतसाधनत्वायोगात् । कामपदन्तु साधनार्जनकामनानुवादः । यद्वा स्वर्गकामना यागाङ्गतया स्वर्गकामपदेनोच्यते । तथाचैवमादिषु फलाभावेन तद्भोक्तृत्वरूपाधिकाराभावानारम्भणीयमधिकारलक्षणमिति । तदाह सूत्रे, द्रव्याणां स्वर्गपश्वादिद्रव्याणां कर्मभिः संयोगे श्रूयमाणे पदश्रुत्यपेक्षया वाक्यस्य दुर्बलत्वात् सामर्थ्याच्च गुणत्वेन साधनत्वेनैव सम्बन्धः । न भाव्यतयेति । सिद्धान्तस्तु, यजेतेत्यत्र आख्यातत्वं लिङादिविधिप्रत्ययरूपत्वमिति द्वैरूप्यमस्ति । तत्राऽऽख्यातत्वेन प्रयत्नापरपर्यायभावनामाचष्टे । विधित्वेन रूपेण कर्तव्यत्वं बोधयति । भावनां कुर्विति प्रवर्तयति पुरुषमिति यावत् । प्रवर्तनात्मा विधिः प्रवृत्तिशब्दितप्रयत्नापरपर्यायभावनायाः पुमर्थभाव्यकत्वाभावे पुरुषं न प्रवर्तयितुमलमिति पदश्रुतितोऽन्तरङ्गविधिश्रुत्याऽऽख्यात-

'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳಿಂದ ಕರ್ಮಗಳನ್ನು ವಿಧಾನ ಮಾಡಿದ್ದಾರೆ. ಈ ಕರ್ಮಗಳಿಂದ ಯಾವ ಫಲ ಹುಟ್ಟುತ್ತದೋ, ಆ ಫಲಭೋಕ್ತೃತ್ವವೆಂಬ ಅಧಿಕಾರ ಯಾರಿಗಾದರೂ ಇದೆಯೋ? ಇಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ** : - 'ಯಜೇತ' ಎಂಬಲ್ಲಿ 'ತ' ಪ್ರತ್ಯಯದಿಂದ ಭಾವನಾವು (ಪ್ರವೃತ್ತಿಯು) ಸ್ಪಷ್ಟವಾಗಿದೆ. ಭಾವನಾಕ್ಕೆ ಭಾವ್ಯಾಕಾಂಕ್ಷೆ ಇರುತ್ತದೆ. ಭಾವ್ಯವಾದದ್ದು ಯಾವುದು? 'ಯಜೇತ' ಎಂಬ ಪದದಲ್ಲೇ ಇರುವ 'ಯಜ್' ಧಾತ್ವರ್ಥವಾದ ಯಾಗವು ಭಾವ್ಯತ್ವೇನ ಅನ್ವಯ ಹೊಂದುತ್ತದೋ? ಅಥವಾ ಬೇರೆ ಪದವಾದ ಸ್ವರ್ಗಪದದಿಂದ ತಿಳಿಯುವ ಸ್ವರ್ಗವು ಭಾವ್ಯತ್ವೇನ ಅನ್ವಯ ಹೊಂದುತ್ತದೋ? ಎಂದು ಸಂಶಯ ಬರುತ್ತದೆ. ಯಜೇತ ಎಂಬ ಒಂದೇ ಪದದಿಂದ ಉಪಾತ್ತವಾದ ಯಾಗವನ್ನು ಸಾಧ್ಯತಯಾ ಅನ್ವಯ ಮಾಡಬೇಕೆಂದು ಏಕಪದಶ್ರುತಿಯಿಂದ ತಿಳಿಯುತ್ತದೆ. ಸ್ವರ್ಗವು ಪದಾಂತರೋಪಾತ್ತವಾದ್ದರಿಂದ ಭಾವ್ಯತ್ವೇನ ಅನ್ವಯ ಮಾಡಬಾರದು. ಇನ್ನು ಸ್ವರ್ಗವನ್ನು ಭಾವ್ಯತ್ವೇನ ಅನ್ವಯ ಮಾಡಲು 'ಸ್ವರ್ಗಕಾಮೋ ಯಜೇತ' ಎಂಬ ಸ್ವರ್ಗಕಾಮಪದ ಮತ್ತು ಯಜ್‌ಪದಗಳ ಸಮಭಿವ್ಯಾಹಾರರೂಪವಾದ ವಾಕ್ಯವನ್ನು ಪ್ರಮಾಣವನ್ನಾಗಿ ಹೇಳಬೇಕು. ಆದರೆ ವಾಕ್ಯಕ್ಕಿಂತ ಶ್ರುತಿಯು ಪ್ರಬಲವಾದ್ದರಿಂದ ಏಕಪದಶ್ರುತಿಯಿಂದ ಯಾಗವೇ ಭಾವ್ಯವಾಗಿದೆಯೆಂದು ಅಂಗೀಕರಿಸಬೇಕು.

ಆದ್ದರಿಂದ 'ಯಜೇತ' ಎಂದರೆ 'ಯಾಗಂ ಭಾವಯೇತ್' ಎಂದಷ್ಟೇ ಹೊರತು 'ಯಾಗೇನ ಸ್ವರ್ಗಂ ಭಾವಯೇತ್' ಎಂದರ್ಥವಲ್ಲ. ಆದ್ದರಿಂದ ಜ್ಯೋತಿಷ್ಟೋಮಯಾಗಕ್ಕೆ ಯಾವ ಫಲವೂ ಇಲ್ಲ.

ಪ್ರಶ್ನೆ :- 'ಸ್ವರ್ಗಕಾಮಃ' ಎಂದು ಮುಂದೆ ಹೇಳಿರುವುದರಿಂದ ಜ್ಯೋತಿಷ್ಟೋಮಯಾಗಕ್ಕೆ ಸ್ವರ್ಗವೇ ಫಲವಾಗುತ್ತದಲ್ಲ ?

ಉತ್ತರ :- ಇಲ್ಲಿರುವ ಸ್ವರ್ಗಪದವು ಸ್ವರ್ಗವೆಂಬ ಲೋಕವನ್ನು ಹೇಳುತ್ತಲೇ ಇಲ್ಲ. ಹೊರತಾಗಿ ಸುಖಸಾಧನವಾದ ಸ್ರಕ್‌ಚಂದನಾದಿಗಳನ್ನು ಲಕ್ಷಣಯಾ ಹೇಳುತ್ತದೆ. ಸ್ರಕ್‌ಚಂದನಾದಿಗಳು ಯಾಗಫಲವಲ್ಲ. ಹೊರತು ಯಾಗಸಾಧನಗಳಿವೆ. ಹೀಗೆ ಯಾಗಸಾಧನವಾದ ಸ್ರಕ್‌ಚಂದನಾದಿಗಳು ಯಾಗಫಲವಾಗಲು ಹೇಗೆ ಸಾಧ್ಯ? ಆದ್ದರಿಂದ 'ಯಜೇತ' ಎಂಬ ಶಬ್ದಕ್ಕೆ 'ಯಾಗಂ ಭಾವಯೇತ್' ಎಂದರ್ಥ. 'ಯಾಗೇನ ಚಂದನಾದಿಕಂ ಭಾವಯೇತ್' ಎಂದು ಅರ್ಥೈಸಬಾರದು.

---

त्वाकारेण स्वोक्तभावनायाः पुमर्थभाव्यकत्वबोधनाद् भिन्नपदोपात्तोऽपि स्वर्गादिविधिश्रुतिबलात् भाव्यत्वेनान्वेति । कामपदंच सुखविशेषरूपफल एव स्वरसम् । न साधन इति स्वर्गादिरेव भाव्यो न यागः । स तु द्रव्येण निष्पन्नस्सन् साधनतामर्हतीति करणमेव । तथाच ''यागेन स्वर्गं भावयेत्'' इति वाक्यार्थलाभेन फलसत्त्वादस्ति तद्भोक्तृत्वरूपोऽधिकारो यागकर्तुरित्यारभ्य एवाधिकाराध्याय इति । फलन्तु, उत्तरसन्दर्भारम्भ इति ।

इति प्रथमं यागादिकर्मणां स्वर्गादिफलसाधनताधिकरणम् (सूत्राणि १-३)

ಪರಿಪೂರ್ಣಚಂದ್ರಿಕಾ

ಪ್ರಶ್ನೆ :- ಸ್ವರ್ಗವು ಯಾಗದ ಫಲವಲ್ಲವೆಂದು ಹೇಳಿದರೆ ಕಾಮಶಬ್ದವನ್ನೇಕೆ ಹೇಳಿದರು?

ಉತ್ತರ :- ಕಾಮಶಬ್ದವು ಕೇವಲ ಅನುವಾದಕ. 'ಯಾಗಸಾಧನವಾದ ಚಂದನಾದಿಗಳನ್ನು ಸಂಪಾದಿಸಬೇಕೆಂಬ ಕಾಮನೆಯು ಯಾವ ಪುರುಷನಿಗಿರುತ್ತದೋ, ಅಂತಹವನು' ಎಂದು ಅನುವಾದ ಮಾಡುತ್ತಿದೆ.

ಹಾಗಾಗಿ ಅದೃಷ್ಟವಾದ ಸ್ವರ್ಗವೆಂಬ ಫಲವನ್ನು ಕಲ್ಪಿಸಬೇಕಾಗಿಲ್ಲ. ಈ ರೀತಿ ಫಲವಿಲ್ಲದ ಯಾಗವನ್ನು ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ. ನಿಷ್ಪ್ರಯೋಜಕವಾದ ಇಂತಹ ಯಾಗದಲ್ಲಿನ ಪುರುಷರ ಪ್ರವೃತ್ತಿ ವ್ಯರ್ಥವೇ ಆಗಿದೆ. ಆದ್ದರಿಂದ ಕರ್ಮಗಳನ್ನು ವಿಧಿಸುವ 'ಸ್ವರ್ಗಕಾಮೋ ಯಜೇತ' ಇತ್ಯಾದಿ ವಿಧಿಗಳೆಲ್ಲವೂ ಅಪ್ರಮಾಣವಾಗಿವೆ.

ಸಿದ್ಧಾಂತ :- ಸ್ವರ್ಗವೇ ಭಾವ್ಯ ಹೊರತು ಯಾಗವಲ್ಲ. ಯಾಗವನ್ನು ಭಾವ್ಯವೆನ್ನಲು ಪದಶ್ರುತಿ ಪ್ರಬಲವಾಗಿದೆಯೆಂದು ಪೂರ್ವಪಕ್ಷಿಗಳ ಅಭಿಪ್ರಾಯ. ಆದರೆ ಪದಶ್ರುತಿಗಿಂತ ಪ್ರತ್ಯಯಶ್ರುತಿ ಪ್ರಬಲವಾಗಿದೆ. ಅದು ಹೀಗೆ - 'ಯಜೇತ' ಎಂಬಲ್ಲಿ 'ತ' ಪ್ರತ್ಯಯವಿದೆ. ಇದರಲ್ಲಿ 'ಆಖ್ಯಾತತ್ವ' ಮತ್ತು 'ಲಿಙ್ತ್ವ' ಎಂಬ ಎರಡಂಶವಿದೆ. ಆಖ್ಯಾತಕ್ಕೆ ಭಾವನಾ ಎಂದರ್ಥ. 'ಲಿಙ್'ಗೆ ವಿಧಿಯೆಂದರ್ಥ. ಹಾಗಾಗಿ ಭಾವನಾವು ಹೇಗೆ ಪ್ರತ್ಯಯಾರ್ಥವೋ ಅದರಂತೆ ವಿಧಿಯೂ ಪ್ರತ್ಯಯಾರ್ಥವಾಗಿದೆ. ಈಗ 'ಕಿಂ ಭಾವಯೇತ್?' ಎಂದು ಆಕಾಂಕ್ಷೆ ಬಂದರೆ ಯಾಗವನ್ನು ಭಾವ್ಯತ್ವೇನ ಸ್ವೀಕರಿಸಲಾಗದು. ಏಕೆಂದರೆ ಭಾವನಾ ಜೊತೆಗೆ ವಿಧಿಯೂ ಸೇರಿದೆ. ವಿಧಿಯು ಚೇತನಪ್ರವರ್ತಕರೂಪವಾಗಿದೆ. ಚೇತನನನ್ನು ಪ್ರವೃತ್ತಿ ಮಾಡಿಸಬೇಕಾದರೆ ಭಾವ್ಯವಾದದ್ದು ಪುರುಷಾರ್ಥರೂಪವೇ ಆಗಿರಬೇಕು. ಪೂರ್ವಪಕ್ಷಿ ಹೇಳುವಂತೆ ಕ್ಲೇಶರೂಪವಾದ ಯಾಗವನ್ನು ಭಾವ್ಯವಾಗಿ ತೆಗೆದುಕೊಂಡರೆ ಚೇತನಪ್ರವೃತ್ತಿ ಆಗುವುದಿಲ್ಲ. ಚೇತನಪ್ರವರ್ತನರೂಪವಾದ ವಿಧಿ ಕೂಡಬೇಕಾದರೆ ಪುರುಷಾರ್ಥರೂಪವಾದ ಸ್ವರ್ಗವೇ ಭಾವ್ಯವಾಗಬೇಕು. ಯಾಗವು ಭಾವ್ಯವಾಗುವುದಿಲ್ಲ.

ಹೀಗೆ ಪದಶ್ರುತಿಗಿಂತ ಪ್ರತ್ಯಯಶ್ರುತಿ ಪ್ರಬಲವಾಗಿದೆ. ಪ್ರತ್ಯಯಶ್ರುತಿಯಾದರೂ ವಿಧಿಯೆಂದು ಸಿದ್ಧವಾಗಿದೆ. ವಿಧಿಯಾದರೂ ಚೇತನಾಪ್ರವರ್ತಕನಾರೂಪವಾದ್ದರಿಂದ ಭಾವ್ಯವಾದದ್ದು ಪುರುಷಾರ್ಥರೂಪವಾದ ಸ್ವರ್ಗವೇ ಆಗಬೇಕು. (ಇಲ್ಲಿಯ ತನಕ 'ಯಜೇತ' ಎಂಬ ಶಬ್ದದಿಂದ ಸಮರ್ಥಿಸಿದರು).

ಇನ್ನು ಸ್ವರ್ಗಕಾಮ ಎಂಬ ಪದದಲ್ಲಿ ಕಾಮನಾಪದವಿದೆ. ಸ್ವರ್ಗಶಬ್ದದಿಂದ ನೀವು ಇಷ್ಟಸಾಧನವಾದ ಚಂದನಾದಿಗಳನ್ನು ವಿವಕ್ಷಿಸಿದರೆ 'ಕಾಮನಾ' ಶಬ್ದವು ಅಸ್ವರಸವಾಗುತ್ತದೆ. ನಮಗೆ ಫಲಸಾಧನಕ್ಕಿಂತ ಫಲದಲ್ಲೇ ಹೆಚ್ಚು ಕಾಮನಾ ಇರುತ್ತದೆ. ಸ್ವರ್ಗಶಬ್ದದಿಂದ ಸ್ವರ್ಗಲೋಕವನ್ನೇ ವಿವಕ್ಷಿಸಿದರೆ ಆವಾಗ ಕಾಮನಾ ಶಬ್ದವು ಸ್ವರಸವಾಗುತ್ತದೆ. ಮತ್ತು 'ಸ್ವರ್ಗ' ಶಬ್ದವು ಪ್ರೀತಿ = ಸುಖ, ಎಂಬರ್ಥದಲ್ಲಿ ಮುಖ್ಯವಾಗಿದೆ. ಸುಖಸಾಧನವಾದ ಚಂದನಾದಿಗಳಲ್ಲಿ ಗೌಣಪ್ರಯೋಗವಾಗುತ್ತದೆ. ಇನ್ನೊಂದು ಕಾರಣ

- ಇಲ್ಲಿ ಚಂದನಾದಿಗಳನ್ನು ಸ್ವರ್ಗಶಬ್ದದಿಂದ ಗ್ರಹಣ ಮಾಡಲು ಯಾವ ಪ್ರಮಾಣವೂ ಇಲ್ಲ. ಈ ಎ ಕಾರಣಗಳಿಂದ ಭಾವ್ಯವಾದದ್ದು ಸ್ವರ್ಗವೇ ಆಗುತ್ತದೆ, ಯಾಗವಲ್ಲ.

ಆದ್ದರಿಂದ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂದರೆ ಸ್ವರ್ಗಸುಖದ ಕಾಮನೆಯ ಅಧಿಕಾರಿಯು ಜ್ಯೋತಿಷ್ಟೋಮವೆಂಬ ಯಾಗದಿಂದ ಸ್ವರ್ಗಸಂಪಾದನೆಯ ಪ್ರಯತ್ನವನ್ನು ಮಾಡಲಿ. (ಜ್ಯೋತಿಷ್ಟೋಮನಾಮಕಯಾಗೇನ ಸ್ವರ್ಗಸ್ಯ ಭಾವನಾ ತ್ವಯಾ ಕರ್ತವ್ಯಾ) ಎಂದು ಹೇಳಿದಂತಾಯಿತು. ಹೀಗೆ ಹೇಳಿದಾಗ ಪುರುಷಪ್ರವೃತ್ತಿ ಹೇಳಿದಂತಾಯಿತು. ಫಲವೂ ಇದೆ. ಫಲಭೋಕ್ತೃರೂಪವಾದ ಅ ಕಾರವೂ ಇದೆ. ಇಷ್ಟು ಸಿದ್ಧಾಂತ.

## ವಿಶ್ವಜಿದಧಿಕರಣ

**ಸೂತ್ರ -- ಚೋದನಾಯಾಂ ಫಲಾಶ್ರುತೇಃ ಕರ್ಮಮಾತ್ರಂ ಪ್ರತೀಯೇತ ನಹ್ಯಶಬ್ದಂ ಪ್ರತೀಯತೇ (೪-೩-೫)(೧)**

---

(१) भाट्टसङ्ग्रहः –

**अथ पञ्चमं विश्वजिदादीनां सफलत्वाधिकरणम्**

**चोदनायां फलाश्रुतेः कर्ममात्रं प्रतीयेत, नह्यशब्दं प्रतीयते ॥४॥३॥५॥**

(अपि वाऽऽम्नानसामर्थ्याच्चोदनार्थेन गम्यते, अर्थानां ह्यर्थवत्त्वेन वचनानि प्रतीयन्ते, अर्थतो ह्यसमर्थानामानन्तर्येऽप्यसम्बन्धः तस्माच्छ्रुत्येकदेशः सः । वाक्यार्थश्च गुणार्थवत् ॥ १२ ॥)

पूर्वन्यायेनात्र शङ्कनात् सङ्गतिः । "विश्वजिता अतिरात्रेण सर्वपृष्ठेन सर्वस्तोमेन सर्ववेतसदक्षिणेन यजेत" इति श्रूयते । तत्र सन्देहः, विश्वजिदादिचोदनासु फलमस्त्युत नेति । पूर्वपक्षस्तु यथा हि पूर्वत्र पयोव्रतादेः फलाश्रवणादपुरुषार्थता तथेहापि विश्वजिदादेः फलाश्रवणादपुमर्थतैव । नच व्रतस्येव क्रत्वर्थता शंक्या । श्रुतिलिङ्गाद्यन्यतमस्यापि तत्कल्पकस्याभावात् । नच विश्वजिन्नामकयागेन कुर्यात्" इत्युक्ते किमित्याकांक्षोदयात् तन्निवृत्तये स्वर्गादिरूपं किञ्चित्फलं कल्प्यमिति वाच्यम् । "यागेन कुर्यात्" इति वचनव्यक्तौ हि स्यादेवं फलाध्याहारः । नचैवम् । किन्तु "यागं कुर्यात्" इत्येव । एकपदोपात्तधात्वर्थस्यैव प्रत्ययोपात्तभावनां प्रत्यन्वयसम्भवे तत्त्यागायोगात् । नचैवं क्लेशात्मनो यागस्यैव कर्तव्यत्वोक्तौ न कोऽपि तत्र प्रवर्तेतेति विध्यानर्थक्यात् तद्वाक्यममानतामाप्नोतीति वाच्यम् । न्यायप्राप्तस्य केनाप्यनिवारणेनाप्रामाण्यस्यौचित्यादिति । तदुक्तं सूत्रे, चोदनायां विधिवाक्ये फलाश्रुतेः कर्ममात्रमेव भाव्यतया प्रतीयते । न फलम् । नच कल्प्यतां फलमिति वाच्यम् । नह्यशब्दं शब्दाप्रतिपाद्यं शाब्दप्रतीतिविषय इति युक्तमिति । सिद्धान्तस्तु, लिङाद्यर्थभूतशब्दभावना हि चेतनप्रवर्तनात्मिका । सा

ಒಂದು ದಿವಸದಲ್ಲಿ ಮಾಡಬೇಕಾದ ಸೋಮಯಾಗದ ವಿಶೇಷವೇ 'ವಿಶ್ವಜಿತ್' ಯಾಗ. ಈ ವಾಕ್ಯದಲ್ಲಿ ಯಾವುದೇ ಫಲವನ್ನು ಹೇಳದೆ ಯಾಗವನ್ನಷ್ಟೇ ವಿಧಾನ ಮಾಡಿದ್ದಾರೆ. ಆದ್ದರಿಂದ ಈ ಯಾಗವನ್ನು ಮಾಡುವುದರಿಂದ ಫಲ ಇದೆಯೋ? ಇಲ್ಲವೋ? ಎಂದು ಸಂಶಯ.

ಪೂರ್ವಪಕ್ಷ :- 'ವಿಶ್ವಜಿತಾ ಯಜೇತ' ಎಂಬಲ್ಲಿ ಫಲಬೋಧಕವಾದ ಪದವನ್ನು ಅಧ್ಯಾಹಾರ ಮಾಡಲೂ ಸಾಧ್ಯವಿಲ್ಲ. ಏಕೆಂದರೆ ವಾಕ್ಯ ಅಪೂರ್ಣವಾಗಿದ್ದರಷ್ಟೇ ಅಧ್ಯಾಹಾರ ಮಾಡಬೇಕು. ಅಪೂರ್ಣತ್ವವೆಂದರೆ ಸಾಕಾಂಕ್ಷತ್ವಮ್. 'ವಿಶ್ವಜಿತಾ ಯಜೇತ' ಯಾಗಭಾವ್ಯತಯಾ ವಾಕ್ಯವು ನಿರಾಕಾಂಕ್ಷವಾಗಿ ಪೂರ್ಣವಾಗಿದೆ. ಪುನಃ ಅಧ್ಯಾಹಾರ ಮಾಡಿಕೊಳ್ಳುವ ಅವಶ್ಯಕತೆ ಇಲ್ಲ. ಫಲವೇ ಇಲ್ಲದ ಕಾರಣ ಪುರುಷಪ್ರವೃತ್ತಿ ಕೊಡುವುದಿಲ್ಲ. ಪುರುಷಪ್ರವೃತ್ತಿ ಇಲ್ಲದ ಕಾರಣ 'ವಿಶ್ವಜಿತಾ ಯಜೇತ' ಇತ್ಯಾದಿ ವಾಕ್ಯಗಳು ಅಪ್ರಮಾಣವಾಗುತ್ತವೆ. ಮೀಮಾಂಸಕರ ಮತದಲ್ಲಿ ಕಾರ್ಯತಾಬೋಧಕವಾದರೆ ಮಾತ್ರ ವಾಕ್ಯ ಪ್ರಮಾಣವಾಗುತ್ತದೆ. 'ವಿಶ್ವಜಿತಾ ಯಜೇತ' ಎಂಬುದು ಪುರುಷರನ್ನು ಪ್ರವರ್ತನೆ ಮಾಡುತ್ತಿಲ್ಲ, ಆದ್ದರಿಂದ ಅಪ್ರಮಾಣವಾಗಿದೆ.

ಸಿದ್ಧಾಂತ :- "ಸ್ವರ್ಗಕಾಮಃ" ಎಂದು ಫಲಬೋಧಕಪದವನ್ನು ಅಧ್ಯಾಹಾರ ಮಾಡಬೇಕಾದ್ದರಿಂದ 'ವಿಶ್ವಜಿತಾ ಯಜೇತ' ಎಂಬುದು ಪ್ರಮಾಣವೇ ಆಗಿದೆ. ಏಕೆಂದರೆ ಸ್ವರ್ಗಕಾಮಾಧಿಕರಣದಲ್ಲಿ ಹೇಳಿದಂತೆ ಭಾವನಾವು ವಿಧಿಯಿಂದ ಅವರುದ್ಧವಾಗಿದೆ. ಆದ್ದರಿಂದ ಅಪುಮರ್ಥವಾದ ಯಾಗವು ಭಾವ್ಯತ್ವೇನ ಅನ್ವಯವಾಗಿಲ್ಲ. ಆದ್ದರಿಂದ ವಿಧ್ಯಂಶದಲ್ಲಿ ವಾಕ್ಯವು ಸಾಕಾಂಕ್ಷವಾಗಿದೆ. 'ತ' ಪ್ರತ್ಯಯಾರ್ಥವಾದ ವಿಧಿಯು ಸಾರ್ಥಕವಾಗಬೇಕಾದರೆ ವಿಧಿಯಿಂದ ಅವರುದ್ಧವಾದ ಭಾವನದಲ್ಲಿ ಸ್ವರ್ಗವನ್ನೇ ಭಾವ್ಯತ್ವೇನ ಅನ್ವಯ ಮಾಡಬೇಕು. ಅದಕ್ಕೋಸ್ಕರ ಫಲಬೋಧಕವಾದ ಯಾವುದಾದರೊಂದು ಪದವನ್ನು ಅಧ್ಯಾಹಾರ ಮಾಡಲೇಬೇಕು. ಆ ಫಲ ಯಾವುದೆಂದು ಮುಂದಿನ 'ಸಃ ಸ್ವರ್ಗಃ ಸ್ಯಾತ್ ಸರ್ವಾನ್ ಪ್ರತಿ ಅವಿಶಿಷ್ಟತ್ವಾತ್' ಎಂಬಧಿಕರಣದಲ್ಲಿ ಸ್ವರ್ಗವೇ ಫಲವೆಂದು ನಿರ್ಣಯಿಸಿದ್ದಾರೆ. ಇಷ್ಟು ಸಿದ್ಧಾಂತ.

ಹೀಗೆ ಸ್ವರ್ಗಕಾಮಾಧಿಕರಣದಲ್ಲಿ ಮತ್ತು ವಿಶ್ವಜಿದಧಿಕರಣದಲ್ಲಿ ಫಲ ಮತ್ತು ಅಧಿಕಾರಿಯಿಲ್ಲದ ಕಾರಣ ಅಪ್ರಾಮಾಣ್ಯವನ್ನೇ ಹೇಳಿ ಪೂರ್ವಪಕ್ಷ ಮಾಡಿದ್ದಾರೆ. ಅದರಂತೆ ಇಲ್ಲಿಯೂ ವಿಷಯಾದಿಗಳಿಲ್ಲದ ಕಾರಣ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಾಕ್ಯಗಳು ಅಪ್ರಮಾಣಗಳಾಗಿವೆ.

---

चापुरुषेष्टसाधनेषु पुरुषं प्रवर्तयितुमसमर्था सती, सामान्यतः कमपि पुमर्थमाक्षिप्य, विशेषसमर्पणमन्यतो गवेषमाणा, समानपदोपात्तमपि धात्वर्थमपुमर्थतयोल्लंघ्य, तं करणतयोपादाय, दर्शादिविधिवद् वाक्यान्तरादपि पुमर्थं भाव्यमलभमाना साकांक्षैवास्त इति, पुमर्थभूतभाव्याध्याहारेणैवाऽकांक्षाशान्त्या वाक्यपूर्तिर्नान्यथेति फलपदाध्याहारो युक्त इति, पुमर्थत्वाम्नानमेवंजातीयकमपीति । फलन्तु, पूर्वपक्षे फलाभावादननुष्ठानम् विश्वजिदादेः । सिद्धान्ते तु फलभावादनुष्ठानमिति ।

इति पञ्चमं विश्वजिदादीनां सफलत्वाधिकरणम्

*ಜಿಜ್ಞಾಸಾಧಿಕರಣ*

ವಿಚಾರವಿಧಾಯಕವಾಕ್ಯಗಳಿಗೆ ಒಟ್ಟು ಎರಡು ಗತಿಯನ್ನು ಹೇಳಿದ್ದಾಯಿತು. ೧) ಲಿಙಾದಿ ಪ್ರತ್ಯಯಗಳ ವಿಧಿಶಕ್ತಿಯು ಕುಂಠಿತವಾಗುತ್ತದೆ. ೨) ವಿಧಿವಾಕ್ಯಗಳಿಗೆ ಅಪ್ರಾಮಾಣ್ಯ ಹೇಳಬೇಕು, ಎಂದು. ಚಂದ್ರಿಕೆಯಲ್ಲಿ ಹೇಳಿದ ಈ ಎರಡು ಗತಿಗಳನ್ನು ಟೀಕೆಯಲ್ಲಿ ಹೇಳಿಯೇ ಇಲ್ಲವೆಂಬ ಶಂಕೆ ಬಂದರೆ ಟೀಕೆಯಲ್ಲಿ ಹೇಳದಿದ್ದರೂ ಸುಧೆಯಲ್ಲಿ ಹೇಳಿದೆ.

ನ್ಯಾಯಸುಧಾ :- ನನು ಚ ತದ್‌ವಿಜಿಜ್ಞಾಸಸ್ವ ಇತಿ ಜಿಜ್ಞಾಸಾಯಾಃ ಶ್ರುತಿವಿಹಿತತ್ವಾತ್ ಕಥಂ ವಿಶೇಷಾದರ್ಶನಮ್ । ನೈವಮ್ ವಿನಾ ವಿಚಾರೇಣ ಶ್ರುತ್ಯರ್ಥಸ್ಯ ಅದ್ಯಾಪ್ಯನಿರ್ಣೀತತ್ವೇನ ಸಂಶಯಾಸ್ಪದತ್ವಾತ್ ॥ ಈ ವಾಕ್ಯದ ತಾತ್ಪರ್ಯ ಹೀಗಿದೆ - "ತದ್‌ವಿಜಿಜ್ಞಾಸಸ್ವ" ಎಂಬ ವಾಕ್ಯದಲ್ಲಿ ವಿಚಾರವು ವಿಹಿತಯಾಗಿದೆಯಲ್ಲ? ಎಂದು ಆಕ್ಷೇಪಿಸಿ ವಿಚಾರವಿಲ್ಲದೆ ಶ್ರುತ್ಯರ್ಥವು ಇನ್ನೂ ನಿರ್ಣಯವಾಗಿಲ್ಲವೆಂದು ಉತ್ತರಿಸಲಾಗಿದೆ.

ಸುಧೆಯ ಈ ವಾಕ್ಯಕ್ಕೆ ಎರಡು ಅರ್ಥ :-

೧) ವಿಚಾರ ವಿಧಾಯಕ ವಾಕ್ಯಗಳು ಪ್ರಮಾಣಗಳು ಈ ಪಕ್ಷದಲ್ಲಿ ಲಿಙಾದಿ ಪ್ರತ್ಯಯಗಳ ವಿಧಿಶಕ್ತಿಯು ಕುಂಠಿತವಾಗಿರುವುದರಿಂದ ಶ್ರುತ್ಯರ್ಥವು ನಿರ್ಣಯವಾಗಿಲ್ಲ.

೨) 'ವಿಚಾರವಿಧಿಯು' ಅಪ್ರಮಾಣ ಎಂಬ ಎರಡನೆಯ ಪಕ್ಷದಲ್ಲಿ ವಿಷಯಾದಿಗಳು ಇಲ್ಲದ್ದರಿಂದ ವಿಚಾರವಿಧಿಯು ಅಪ್ರಮಾಣವಾಗಿದೆ. ಆದ್ದರಿಂದ ಶ್ರುತ್ಯರ್ಥವು ನಿರ್ಣಯವಾಗಿಲ್ಲ ಎಂದು ಅರ್ಥ.

ಈ ಎರಡು ಅರ್ಥಗಳು ಸುಧಾಕಾರರಿಗೆ ಸಮ್ಮತವೆಂದು ಹೇಗೆ ತಿಳಿಯುತ್ತದೆ? ಎಂದರೆ ಅಲ್ಲಿ ಸುಧೆಯ ಪೂರ್ವಪಕ್ಷದ ಉಪಸಂಹಾರಭಾಗದಲ್ಲಿ ಹೀಗೆ ಹೇಳಿದ್ದಾರೆ. - 'ತದೇವಂ ವಿಷಯಾದ್ಯನುಬಂಧವಿಧುರತ್ವಾತ್ - ಜಿಜ್ಞಾಸಾಽಕರ್ತವ್ಯಾತ್ವತ್ ತದ್‌ವಿಧಯೋಽಪಿ ನ ಪ್ರಮಾಣಮ್' 'ವಿಷಯಾದಿಗಳು ಇಲ್ಲದಿರುವುದರಿಂದ ವಿಚಾರವು ಮಾಡಬೇಕಾಗಿಲ್ಲ. ವಿಚಾರವಿಧಿವಾಕ್ಯಗಳೂ ಸಹ ಪ್ರಮಾಣವಾಗಲು ಸಾಧ್ಯವಿಲ್ಲ' ಎಂದು. ಅಥವಾ ಸುಧೆಯಲ್ಲಿರುವ "ಶ್ರುತ್ಯರ್ಥಸ್ಯ ಅದ್ಯಾಪ್ಯನಿರ್ಣೀತತ್ವೇನ" ಎಂಬ ವಾಕ್ಯದ ಜೊತೆಗೆ "ತದ್ವಿಧಯೋಽಪಿ ನ ಪ್ರಮಾಣಂ" "ವಿಚಾರವಿಧಿವಾಕ್ಯಗಳೂ ಪ್ರಮಾಣವಲ್ಲ" ಎಂಬ ವಾಕ್ಯವನ್ನೂ ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. ಈಗ ಚಂದ್ರಿಕೆಯಲ್ಲಿ ಹೇಳಿದ ಎರಡು ಗತಿಗಳಲ್ಲಿ ಮೊದಲನೆಯ ಗತಿಯನ್ನು "ಶ್ರುತ್ಯರ್ಥಸ್ಯ" ಇತ್ಯಾದಿ ವಾಕ್ಯದಿಂದ ಸುಧಾಕಾರರು ಹೇಳಿದಂತಾಯಿತು. ಚಂದ್ರಿಕೆಯಲ್ಲಿ ಹೇಳಿದ ಎರಡನೆಯ ಗತಿಯನ್ನು "ತದ್‌ವಿಧಯೋಽಪಿ" ಇತ್ಯಾದಿ ವಾಕ್ಯದಿಂದ ಸುಧಾಕಾರರು ಹೇಳಿದಂತಾಯಿತು.

ಅಥವಾ ಉಪಲಕ್ಷಣಯಾ ಇಟ್ಟುಕೊಂಡ ಸುಧೆಯ ಎರಡನೆಯ ವಾಕ್ಯಕ್ಕೆ ಅನುಸಾರಿಯಾಗಿ ಮೊದಲನೆಯ ವಾಕ್ಯಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ಮೊದಲನೆಯ ವಾಕ್ಯಕ್ಕೆ ಅನುಸಾರಿಯಾಗಿ ಎರಡನೆಯ ವಾಕ್ಯಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ಈಗ ವಿಚಾರವಾಕ್ಯಗಳು ಪ್ರಮಾಣ ಎಂಬ ಪಕ್ಷದಲ್ಲಿ 'ತದ್‌ವಿಧಯಃ ನ ಪ್ರಮಾಣಂ' ಎಂದರೆ ವಿಧಿರೂಪವಾಗಿ ಪ್ರಮಾಣವಲ್ಲ ಎಂದೇ ಅರ್ಥ

ಹೊರತು ಪ್ರಮಾಣವೇ ಅಲ್ಲವೆಂದರ್ಥವಲ್ಲ. ಆದ್ದರಿಂದ ವಿಚಾರವಿಧಾಯಕವಲ್ಲ ಎಂಬರ್ಥವನ್ನು ತಿಳಿಯಬೇಕು. ಹೀಗೆ ಟೀಕಾರೂಢವಾಗಿಲ್ಲವೆಂಬ ಆಕ್ಷೇಪಕ್ಕೆ ಮೂರು ಬಗೆಯ ಸಮಾಧಾನವನ್ನು ಅನುಸಂಧಾನ ಮಾಡಿಕೊಳ್ಳಬೇಕು.

(ರಾಯರ ಅದ್ಭುತ ವ್ಯಾಖ್ಯಾನಕೌಶಲ್ಯಗಳನ್ನು ಈ ರೀತಿಯಾಗಿ ಅಲ್ಲಲ್ಲಿ ಕಾಣಬಹುದು. ಸುಮಾರು ಹತ್ತು ಬಾರಿ ಚಂದ್ರಿಕಾಗ್ರಂಥವನ್ನು ಪಾಠ ಮಾಡಿ ಅನಂತರ ರಾಯರು ವ್ಯಾಖ್ಯಾನವನ್ನು ಬರೆದರೆಂಬ ಪ್ರತೀತಿಯಿದೆ. ಏನೇ ಆಗಲಿ ರಾಯರ ವ್ಯಾಖ್ಯಾನವಿರದಿದ್ದಲ್ಲಿ ಚಂದ್ರಿಕೆಯನ್ನು ಅರ್ಥೈಸಿಕೊಳ್ಳಲು ಆಗುತ್ತಲೇ ಇರಲಿಲ್ಲವೆಂಬುದು ಅಕ್ಷರಶಃ ಸತ್ಯ.)

ಪ್ರಶ್ನೆ :- ಚಂದ್ರಿಕೆಯಲ್ಲಿ ತಪ್ಪಾಗಿ ಸುಧೆಯನ್ನು ಅನುವಾದಿಸಿದ್ದಾರೆ. ಏಕೆಂದರೆ ಚಂದ್ರಿಕೆಯಲ್ಲಿ 'ತದ್ ವಿಜಿಜ್ಞಾಸಸ್ವೇತಿ ಶ್ರುತ್ಯರ್ಥಸ್ಯ' ಇತ್ಯಾದಿಯಾಗಿ ಸುಧೆಯನ್ನು ಅನುವಾದಿಸಿದ್ದಾರೆ. ಆದರೆ ಸುಧೆಯಲ್ಲಿ ಹೀಗೆ ಇಲ್ಲವೇ ಇಲ್ಲ. ಕೇವಲ 'ವಿನಾ ವಿಚಾರಂ ಶ್ರುತ್ಯರ್ಥಸ್ಯ' ಎಂದು ಇದೆ. ಯಾವ ಶ್ರುತಿಯೆಂದು ಸುಧೆಯಲ್ಲಿ ಹೇಳದಿರುವಾಗ ನೀವು 'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿಯೆಂದು ಹೇಗೆ ಹೇಳಿದಿರಿ?

ಉತ್ತರ :- ಹೌದು, ಚಂದ್ರಿಕೆಯಲ್ಲಿ ಅನುವಾದಿಸಿದ ವಾಕ್ಯ ಸುಧೆಯ ವಾಕ್ಯವಲ್ಲ. ಆದರೆ ಸುಧಾಕಾರರ ಅಭಿಪ್ರಾಯವು ಹಾಗಿರುವುದರಿಂದ ಅನುವಾದಿಸಲಾಗಿದೆ. ಸುಧೆಯಲ್ಲಿ ಮಾಡಿಕೊಂಡ ಶಂಕಾಭಾಗದಲ್ಲಿ 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಆದ್ದರಿಂದ ಅದಕ್ಕೆ ಸಮಾಧಾನ ನೀಡುವ ವಾಕ್ಯದಲ್ಲಿ ಪುನಃ ಹೇಳುವ ಅವಶ್ಯಕತೆಯಿಲ್ಲದೆ ಕೇವಲ ಶ್ರುತ್ಯರ್ಥವೆಂದು ಹೇಳಿದರು. ಪೂರ್ವ-ಪ್ರಸಕ್ತವಾದ್ದರಿಂದ ಇಲ್ಲಿರುವ ಶ್ರುತಿಪದದಿಂದ 'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿಯನ್ನೇ ತೆಗೆದುಕೊಳ್ಳಬೇಕು. (ಸುಧೆಯಲ್ಲಿರುವ ಎಲ್ಲಾ ವಾಕ್ಯಗಳನ್ನು ಹಿಂದೆ ಬರೆಯಲಾಗಿದೆ.) ಪ್ರಕೃತ ಸುಧೆಯಲ್ಲಿರುವ ಎಲ್ಲಾ ವಾಕ್ಯಗಳನ್ನು ಅನುವಾದ ಮಾಡಿದರೆ ಗೌರವ ಬರುತ್ತದೆ. ಕೊನೆಯದ್ದಷ್ಟೇ ಹೇಳಿದರೆ ಶಿಷ್ಯರಿಗೆ ಅರ್ಥವಾಗುವುದಿಲ್ಲ. ಆದ್ದರಿಂದ ಸುಧಾಕಾರರಿಗೆ ಅಭಿಪ್ರೇತವಾದ ಅರ್ಥವನ್ನು ಇಲ್ಲ ವಿವಕ್ಷಿಸಿ ಹಾಗೆ ಹೇಳಿದ್ದಾರೆ. ಏನೂ ತಪ್ಪಿಲ್ಲ.

ಆಕ್ಷೇಪ :- ಇಲ್ಲಿಯ ತನಕ ನೀವು ಹೇಳಿದ್ದು ಸುಧೆಯ ಅಭಿಪ್ರಾಯವೇ ಅಲ್ಲ. ಸುಧೆಯ ವಾಕ್ಯಗಳನ್ನು ನೋಡಿದರೆ ನೀವು ಹೇಳಿದ ಅರ್ಥಗಳು ತೋರುವುದೇ ಇಲ್ಲ. ಏಕೆಂದರೆ- 'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿಯು ಜೀವನ ಜಿಜ್ಞಾಸೆಯನ್ನು ವಿಧಿಸುತ್ತಿದೆ ಎಂದು ಇಟ್ಟುಕೊಂಡರೂ ಶ್ರುತಿವಾಕ್ಯವು ಸರಿಹೊಂದುತ್ತದೆ. ಶ್ರುತಿಯು ಬ್ರಹ್ಮವಿಚಾರವಿಧಾಯಕವೆಂದು ಇನ್ನೂ ನಿರ್ಣಯವಾಗಿಲ್ಲವೆಂದೇ ಸುಧೆಯ ಅಭಿಪ್ರಾಯ. ಉಪಸಂಹಾರದಲ್ಲಿರುವ 'ನ ಪ್ರಮಾಣಂ' ಎಂಬ ವಾಕ್ಯಕ್ಕೆ 'ಬ್ರಹ್ಮವಿಚಾರವನ್ನು ವಿಧಿಸುವುದಿಲ್ಲ' ಎಂದೇ ಅರ್ಥ. ಈ ಅರ್ಥಕ್ಕೆ ಸುಧಾಕಾರರ ಸಮ್ಮತಿಯಿದೆ. 'ಜನ್ಮಾಧಿಕರಣದಲ್ಲಿ ಈ ವಿಷಯವು ಸ್ಪಷ್ಟವಾಗುತ್ತದೆ' ಎಂದು ಸುಧೆಯಲ್ಲಿಯೇ ಹೇಳಿದೆ. ಅದೃಷ್ಟದ್ವಾರಾ ಜೀವನೇ ಸಮಸ್ತಜಗತ್ಕಾರಣನಾಗಿದ್ದಾನೆಂದು ಜನ್ಮಾಧಿಕರಣದಲ್ಲಿ ಹೇಳಿದೆ.

ಸಮಾಧಾನ :- ಸುಧೆಯಲ್ಲಂತೂ ಜೀವಪರತ್ವವನ್ನು ಸ್ಪಷ್ಟವಾಗಿ ಹೇಳಿಲ್ಲ. ಇನ್ನು ಆ ಅರ್ಥವನ್ನು ಊಹಿಸಿದರೆ ನ್ಯಾಯವಿವರಣಕ್ಕೆ ವಿರೋಧ ಬರುತ್ತದೆ. ಜೀವನ ವಿಷಯದಲ್ಲಿ ಸಂದೇಹಕ್ಕೆ ಅವಕಾಶವೇ

ಇಲ್ಲವೆಂದು ನ್ಯಾಯವಿವರಣದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಅಷ್ಟೇ ಅಲ್ಲದೇ ವಿಚಾರವೇ ಬೇಡವೆಂದು ಪೂರ್ವಪಕ್ಷಿಯ ಅಭಿಪ್ರಾಯ. ಹೀಗಿರುವಾಗ ಜೀವವಿಚಾರವನ್ನು ವಿಧಿಸುವುದು ತಪ್ಪಾಗುತ್ತದೆ. ಇಲ್ಲಿ ಗ್ರಂಥಕಾರರು ಸ್ವತಃ ಊಹಿಸಿದ ಪಕ್ಷವನ್ನು ಕೇಟಿತ್ತು ಎಂದು ಹೇಳಿದ್ದಾರೆ. ಇಷ್ಟು ಪೂರ್ವಪಕ್ಷ.

## ಸಾರ

ವಿಚಾರವಿಲ್ಲದೆ ವೇದದಿಂದ ಅರ್ಥಜ್ಞಾನ ಶಕ್ಯವಿಲ್ಲದುದರಿಂದ ವೇದಾಧ್ಯಯನವಿಧಿಯ ಅರ್ಥಾತ್ ವಿಚಾರವನ್ನೂ ವಿಧಿಸುತ್ತದೆ ಎನ್ನುವುದೂ ಸರಿಯಲ್ಲ. ಅಧ್ಯಯನವಿಧಿ ನಿತ್ಯ. ಅರ್ಥಜ್ಞಾನಕ್ಕಾಗಿ ಅಲ್ಲ ಎಂದು ಅದ್ವೈತಭಾಷ್ಯದಲ್ಲಿ ಹೇಳಿದೆ.

**ವಿಚಾರವಿಧಿ ಅಪ್ರಮಾಣ**

ಅಥವಾ ವಿಚಾರವಿಧಿ ಅಪ್ರಮಾಣವೆಂದೆ ಪೂರ್ವಪಕ್ಷಿ ವಾದಿಸಬಹುದು. ಸೂತ್ರದ ಅತಃ ಶಬ್ದಕ್ಕೆ ವೇದ ಪ್ರಮಾಣವಾಗಿರುವುದರಿಂದ ಎಂದೂ ಅರ್ಥವಿರುವುದರಿಂದ ಅದಕ್ಕೆ ಅನುಗುಣವಾಗಿ ಈ ಪೂರ್ವಪಕ್ಷವನ್ನು ಮಾಡಬಹುದು. 'ಸ್ವರ್ಗಕಾಮೋಯಜೇತ' ಎಂಬಲ್ಲಿ ಯಾಗಪ್ರವೃತ್ತಿ ಮಾಡಬೇಕು, ಅದಕ್ಕೆ ಏನು ಫಲವೆಂದರೆ ಯಾಗವೆ. ಪ್ರವೃತ್ತಿಯನ್ನು ಪ್ರತ್ಯಯದಿಂದ ಬೋಧಿಸುವ 'ಯಜೇತ' ಪದವೆ ಧಾತುವಿನಿಂದ ಯಾಗವನ್ನು ಬೋಧಿಸುವುದರಿಂದ ಸಮೀಪದ ಯಾಗವನ್ನು ಬಿಟ್ಟು ದೂರದ 'ಸ್ವರ್ಗಕಾಮ' ಎಂಬ ಬೇರೆ ಪದದಲ್ಲಿರುವ ಸ್ವರ್ಗ ಫಲವೆನ್ನಬಾರದು. ಅದರಿಂದ ಯಾಗಮಾಡಿ ಏನೂ ಫಲವಿಲ್ಲದ್ದರಿಂದ ಯಾಗಪ್ರವೃತ್ತಿ ಮಾಡಲು ವಿಧಿಸುತ್ತಿರುವ ಯಾಗವಿಧಿ ಅಪ್ರಮಾಣ ಎಂದು ಪೂರ್ವಮೀಮಾಂಸೆಯಲ್ಲಿ ಪೂರ್ವಪಕ್ಷವಿದೆ. 'ವಿಶ್ವಜಿತಾ ಯಜೇತ' ಎಂಬಲ್ಲಿ ಫಲವನ್ನು ಹೇಳದಿರುವುದರಿಂದ ವಿಶ್ವಜಿತ್ ಯಾಗ ಪ್ರವೃತ್ತಿಗೆ ಆ ಯಾಗವೆ ಫಲವೆಂದು ಅನ್ವಯವಾಗುತ್ತದೆ. ಹೀಗಾಗಿ ಯಾಗಕ್ಕೆ ಫಲವಿಲ್ಲ. ಫಲವಿಲ್ಲದ ಯಾಗದಲ್ಲಿ ಪುರುಷನು ಪ್ರವೃತ್ತಿ ಮಾಡಲಾರ. ಪುರುಷ ಪ್ರವೃತ್ತಿರೂಪವಾದ ಫಲವಿಲ್ಲದ್ದರಿಂದ ಯಾಗವಿಧಿ ಅಪ್ರಮಾಣ ಎಂದೂ ಪೂರ್ವಪಕ್ಷವಿದೆ. ಅದರಂತೆ ನಾವೂ ವಿಚಾರವಿಧಿ ಅಪ್ರಮಾಣವೆಂದು ಪೂರ್ವಪಕ್ಷವನ್ನಿಟ್ಟುಕೊಳ್ಳಬಹುದು.

**ಪೂರ್ವಪಕ್ಷಸಿದ್ಧಾಂತ ಸಂಕ್ಷೇಪ**

ಜೀವನಿಗಿಂತ ಬೇರೆ ಈಶ್ವರ ಎಂಬುವನಿಲ್ಲ. ಜೀವ ಸ್ವಪ್ರಕಾಶನಾದ್ದರಿಂದ ವಿಚಾರ ಯೋಗ್ಯನಲ್ಲ. ಜ್ಞಾನದಿಂದ ಮೋಕ್ಷವು ಬರುತ್ತಿಲ್ಲವಾದ್ದರಿಂದ ಮೋಕ್ಷವು ಫಲವೂ ಅಲ್ಲ. ಅದರಿಂದ ವಿಚಾರಬೇಡ ಎಂದು ಪೂರ್ವಪಕ್ಷ. ಜೀವ ಅಲ್ಪಗುಣ. ಪೂರ್ಣಗುಣನಾದ ಭಗವಂತ ಬೇರೆಯೆ ಇದ್ದಾನೆ. ಅವನ ಬಗ್ಗೆ ವಿಚಾರಬೇಕು. ಅವನ ಜ್ಞಾನದಿಂದ ಮೋಕ್ಷ ಸಿಗುವುದರಿಂದ ಫಲವೂ ಇದೆ ಎಂದು ಸಿದ್ಧಾಂತ.

• • • • •

### ಸಿದ್ಧಾಂತ – ಬ್ರಹ್ಮನು ಜೀವಭಿನ್ನನಾದ್ದರಿಂದ ಜಿಜ್ಞಾಸ್ಯನಾಗಿದ್ದಾನೆ

**ತಾत्पर्यचन्द्रिका – एवं प्राप्ते सिद्धान्तितं भगवता सूत्रकारेण ।। ''ओं अथातो ब्रह्मजिज्ञासा'' इति ।। सिद्धान्तसंक्षेपस्तु ।**

*ಸಂಪೂರ್ಣಚಂದ್ರಿಕಾ*

जिज्ञास्यं ब्रह्मशब्देन गुणपूर्त्यभिधायिना ।
अपूर्णत्वेनानुभूताज्जीवाद् भिन्नं प्रतीयते ।।

जिज्ञास्यमेव ब्रह्म । "तद् विजिज्ञासस्व तद् ब्रह्म" इत्यादिश्रुतेः । श्रौतब्रह्मशब्दोक्तया गुणपूर्त्या अल्पगुणत्वेनानुभूयमानाज्जीवाद् भिन्नत्वेन संदिग्धत्वाच्च,

निर्दोषश्रुतिसाक्षिभ्यां प्रमिते ब्रह्मजीवयोः ।
गुणपूर्त्यल्पगुणते मिथ्येति च न युज्यते ।।

न केवलम् "अथ कस्मादुच्यते ब्रह्मेति बृहंतो ह्यस्मिन् गुणाः" इति श्रुत्या गुणपूर्तिर्ब्रह्मशब्दार्थः । किंतु ब्रह्मशब्दावयवशक्त्याऽपि । अपरिच्छेदे हि तस्याऽवयवशक्तिः परस्याऽपि सम्मता । गुणापरिच्छेदोऽपि चाऽपरिच्छेद एव । नच सङ्कोचे हेतुरस्ति । अन्यथा कालमात्राऽपरिच्छेदस्तस्यार्थः स्यात् । वक्ष्यते चैतत् सौत्रब्रह्मशब्दव्याख्यानावसरे । टीकायां तु, देशमात्रापरिच्छेदार्थत्वेऽपि तावतैवाणोर्जीवाद् भेदसिद्धेस्तदुपेत्योक्तम् ।

ಅನುವಾದ - ಈ ರೀತಿಯಾಗಿ ಪೂರ್ವಪಕ್ಷವು ಪ್ರಾಪ್ತವಾಗಿರಬೇಕಾರದ ಸೂತ್ರಕಾರರಾದ ಭಗವಾನ್ ವೇದವ್ಯಾಸದೇವರು ಸಿದ್ಧಾಂತ ಮಾಡುತ್ತಿದ್ದಾರೆ. - 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂದು. ಮುಂದೆ ವಿವರಿಸುವ ಸಿದ್ಧಾಂತಪ್ರಮೇಯದ ಸಂಕ್ಷೇಪ ಹೀಗಿದೆ - "ಬ್ರಹ್ಮಶಬ್ದವು ಗುಣಪೂರ್ತಿಯನ್ನು ಹೇಳುತ್ತಿದೆ. ಅನುಭವವು ಜೀವನು ಗುಣಗಳಿಂದ ಅಪೂರ್ಣನೆಂದು ಹೇಳುತ್ತಿದೆ. ಇಂತಹ ಜೀವನ ದೆಸೆಯಿಂದ ಜಿಜ್ಞಾಸ್ಯನು ಭಿನ್ನನೆಂದು ತಿಳಿಯುತ್ತದೆಂದು ಬ್ರಹ್ಮಶಬ್ದದ ಆಧಾರದಿಂದ ತೀರ್ಮಾನವಾಗುತ್ತದೆ."

"ತದ್‌ವಿಜಿಜ್ಞಾಸಸ್ವ ತದ್ ಬ್ರಹ್ಮ" 'ಅವನನ್ನು ಜಿಜ್ಞಾಸೆ ಮಾಡು ಅವನು ಬ್ರಹ್ಮ' ಇತ್ಯಾದಿ ಶ್ರುತಿಪ್ರಮಾಣದಿಂದ ಬ್ರಹ್ಮನು ವಿಚಾರಕ್ಕೆ ಯೋಗ್ಯನೇ ಆಗಿದ್ದಾನೆಂದು ತಿಳಿಯುತ್ತದೆ. ಶ್ರುತಿಯಲ್ಲಿ ಬ್ರಹ್ಮಶಬ್ದ ಹೇಳಿದ್ದರಿಂದ ಗುಣಪೂರ್ತಿಯೆ ತಿಳಿಯುತ್ತದೆ. ಅನುಭವವು ಅಲ್ಪಗುಣವನ್ನು ಹೇಳುತ್ತಿದೆ. ಇಂತಹ ಬ್ರಹ್ಮನು ಜೀವನಿಗಿಂತ ಭಿನ್ನನಾದ್ದರಿಂದ ಸಂದಿಗ್ಧನಾಗಿದ್ದಾನೆ. ಆದ್ದರಿಂದಲೇ ಬ್ರಹ್ಮನು ವಿಷಯನಾಗುತ್ತಾನೆ. ಅನಾದಿಯಾದ್ದರಿಂದ ನಿರ್ದುಷ್ಟವಾದ ಶ್ರುತಿಯು 'ಬ್ರಹ್ಮನನ್ನು ಗುಣಪೂರ್ಣ'-ನೆಂದು ಅನಾದಿಯಾದ್ದರಿಂದ ನಿರ್ದುಷ್ಟವಾದ ಸಾಕ್ಷಿಯು 'ಜೀವನನ್ನು ಅಲ್ಪಗುಣ'ನೆಂದು ಹೇಳುತ್ತಿದೆ. ಪ್ರಮಿತವಾದದ್ದನ್ನು 'ಮಿಥ್ಯಾ' ಎಂದು ಹೇಳಬಾರದು.

''ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ'' ''ಅವನು ಬ್ರಹ್ಮನೆಂದು ಏ ಕರೆಯಲ್ಪಡುತ್ತಾನೆ? ಎಂದರೆ ಅವನಲ್ಲಿ ಗುಣಗಳು ತುಂಬಿರುವುದರಿಂದ'' ಎಂಬ ಶ್ರುತಿಬಲದಿಂದ ಬ್ರಹ್ಮಶಬ್ದವು 'ಗುಣಪೂರ್ತಿ' ಎಂಬರ್ಥದಲ್ಲಿ ರೂಢವಾಗಿದೆ ಎಂದು ತಿಳಿಯುತ್ತದೆ. ರೂಢಿಯಿಂದ ಮಾತ್ರ ಗುಣಪೂರ್ಣವೆಂಬ ಅರ್ಥವು ತಿಳಿಯುತ್ತಿರುವುದಲ್ಲ. ಅವಯವಶಕ್ತಿಯಿಂದಲೂ ತಿಳಿಯುತ್ತಿದೆ. ಹೇಗೆಂದರೆ ಬ್ರಹ್ಮಶಬ್ದಕ್ಕೆ 'ಅಪರಿಚ್ಛೇದ' 'ಪೂರ್ಣ' ಎಂಬರ್ಥದಲ್ಲಿ ಶಕ್ತಿಯಿದೆ-ಯೆಂದು ಅವನೂ ಒಪ್ಪಿದ್ದಾನೆ. ಗುಣಗಳಿಂದ 'ಪರಿಚ್ಛೇದ' 'ಪರಿಮಿತಿ' ಇಲ್ಲವೆಂಬುದೂ ಅಪರಿಚ್ಛೇದವೇ ಆಗಿದೆ. ಇಲ್ಲಿ ಗುಣಗಳಿಂದ ಪೂರ್ಣತ್ವವನ್ನು ಬಿಟ್ಟು ಕೇವಲ ದೇಶಕಾಲಗಳಿಂದ ಪೂರ್ಣತ್ವ ಹೇಳಿ ಸಂಕೋಚ ಮಾಡಲು ಕಾರಣವಿಲ್ಲ. ನಿಷ್ಕಾರಣವಾಗಿ ಗುಣಪೂರ್ಣತ್ವವನ್ನು ಬಿಡುವುದಾದರೆ ಕೇವಲ ಕಾಲದಿಂದ ಪೂರ್ಣತ್ವವನ್ನೇ ಬ್ರಹ್ಮಶಬ್ದದ ಅರ್ಥವೆಂದು ಹೇಳಬೇಕಾ-ದೀತು. ಸೂತ್ರದ ಬ್ರಹ್ಮಶಬ್ದಕ್ಕೆ ಮುಂದೆ ವ್ಯಾಖ್ಯಾನ ಮಾಡುವಾಗ ಇದನ್ನು ವಿವರಿಸುತ್ತೇವೆ.

ಟೀಕೆಯಲ್ಲಿ 'ಬ್ರಹ್ಮನು ದೇಶದಿಂದ ಪೂರ್ಣನಾದ್ದರಿಂದ ಜೀವನಿಗಿಂತ ಭಿನ್ನ' ಎಂದು ಸಿದ್ಧವಾಗುತ್ತದೆಂದು ಹೇಳಿದ್ದು ಪ್ರಕೃತಕ್ಕೆ ವಿರುದ್ಧವಲ್ಲ. ಏಕೆಂದರೆ ದೇಶದಲ್ಲಿ ಪೂರ್ಣನಾದ ಬ್ರಹ್ಮನು ಅಣುಸ್ವರೂಪನಾದ ಜೀವನಿಗಿಂತ ಭಿನ್ನ ಎಂದು ತಿಳಿಸುವ ಅಭಿಪ್ರಾಯದಿಂದಷ್ಟೇ ಹಾಗೆ ಹೇಳಿದ್ದಾರೆ.

**ಕಠಿಣಪದಾರ್ಥ**

ನಿರ್ದೋಷಶ್ರುತಿಸಾಕ್ಷಿಭ್ಯಾಂ = ನಿರ್ದುಷ್ಟವಾದ 'ಅಥಕಸ್ಮಾತ್' ಎಂಬ ಶ್ರುತಿ ಮತ್ತು ಸಾಕ್ಷಿಯಿಂದ. ತಸ್ಯ = ಬ್ರಹ್ಮಶಬ್ದಕ್ಕೆ. ಪರಸ್ಯಾಪಿ = ಪೂರ್ವಪಕ್ಷಿಗೂ (ಅದ್ವೈತಿಗೂ). ಸಂಕೋಚೇ = ಗುಣಾಪರಿಚ್ಛೇದವನ್ನು ಬಿಟ್ಟು ದೇಶಕಾಲಾಪರಿಚ್ಛೇದವನ್ನಷ್ಟೇ ಹೇಳಲು. ಅನ್ಯಥಾ = ಸಂಕೋಚ ಮಾಡಲು ಕಾರಣವಿಲ್ಲದಿದ್ದರೂ ಗುಣಾಪರಿಚ್ಛೇದವನ್ನು ಬಿಡುವುದಾದರೆ. ತದರ್ಥಃ = ಬ್ರಹ್ಮ ಶಬ್ದದ ಅರ್ಥವು. ವಕ್ಷ್ಯತೇ ಚ ಏತತ್ = ಗುಣಾಪರಿಚ್ಛೇದವನ್ನೂ ಹೇಳಬೇಕೆಂಬುದನ್ನು ಬ್ರಹ್ಮಶಬ್ದಾರ್ಥವನ್ನು ಹೇಳುವಾಗ ವಿವರಿಸುತ್ತೇವೆ.

प्रकाशः – सङ्ग्रहस्तु –

जीवान्यब्रह्मणोऽभावात् तस्य च स्वप्रभत्वतः ।
तज्ज्ञानान्मुक्त्यभावाच्च जिज्ञासा नावकल्पते ।

''तथाहि'' इत्यादि ''अल्पगुणत्वेनानुभवात्'' इत्यन्तटीकां न्याय विवरणपरां व्याख्यातुं, पूर्वपक्षोपमर्दकं सिद्धांतप्रमेयं सङ्गृह्णाति ॥ जिज्ञास्यमिति ॥ 'जीवाद

भिन्नं प्रतीयते' इत्यन्वयः । यद्यपि ब्रह्मशब्दः पूर्णतामात्रवाची । तथापि योग्यतया गुणानामन्वयः । अपूर्णत्वेनेति ।। 'गुणैः' इति सम्बन्धः । साध्यहेत्वोरप्रतीतेः, कुत्रत्येन ब्रह्मशब्देनेत्यप्रतीतेः, भिन्नत्वोक्तेरुपयोगादृष्टेश्च कारिकां व्याचष्टे ।। जिज्ञास्यमेवेति ।। श्रुत्युक्ताऽपि जिज्ञासा न कार्या । असन्दिग्धत्वेनाविषयत्वादित्युक्तमित्यत आह ।। श्रौतेति ।। अयमर्थः । ब्रह्मशब्दो गुणपूर्तिनिमित्तकः सन्, तद्योग्यमपूर्वं वस्तु बोधयन्, जीवापूर्णत्वानुभवसाहित्येन जीवाद् भिन्नमेव बोधयति यदा, तदानीमेव अपूर्णत्वेन जीवं गृह्णन्ननुभवः ब्रह्मशब्दोक्ताद् गुणपरिपूर्णाद् वस्तुनो भिन्नमेव गृह्णाति ।

''शास्त्रगम्यपरेशानाद् भेदः स्वात्मन ईयते ।
अनुभूतिविरोधेन कथमेकत्वमुच्यते''

इति द्वितीयेऽनुव्याख्यानोक्तेः । एवंच श्रुतिसाक्षिभ्यां भेदे सिद्धे, तदुपजीविनः, जीवेशौ भिन्नौ विरुद्धधर्मकत्वात् जलानलवदित्यनुमानस्यापि सम्भवात् प्रत्यक्षानुमानशब्दरूपप्रमाणत्रितयेन भेदावगतेः, जीवस्य स्वप्रकाशत्वेन सिद्धत्वेऽपि, तद्भिन्नस्य ब्रह्मणः तदभावेनागुणत्वाद्गुणत्वादिना वादिविप्रतिपत्त्या सन्दिग्धत्वाज्जिज्ञास्यमेव ब्रह्मेति ।। ननु गुणपूर्त्यादिविरुद्धधर्मस्य मिथ्यात्वात् तेन मिथ्याभेदसिद्धावपि, वास्तवभेदाप्रतिबन्धान्न विषयत्वं ब्रह्मण इत्याशङ्कानिवृत्त्यै प्राप्ता ''नच ब्रह्मणि गुणाध्यासः'' इत्यादिटीका । तदभिप्रायं सङ्गृह्णाति ।। निर्दोषेति ।। एतच्च श्रुतिसाक्षिणोर्विशेषणम् । एतच्चानादित्वेन ध्येयम् । 'श्रुतिः' ब्रह्मपदरूपा । ''ब्रह्मजीवयोः'' इत्युक्त्या टीका उपलक्षणमित्युक्तं भवति । टीकायाम् ''अथ कस्मादुच्यते'' इति श्रुतिमुदाहृत्य गुणपूर्णत्वं ब्रह्मशब्दार्थः इत्युक्तम् । सुधायामवयवशक्त्या । तद् विरुध्यत इत्याशङ्क्य द्वयमप्यभिप्रेतमित्याह - न केवलमिति ।। ''बृहि वृद्धौ'' इति धातोः ''बृंहेरम् नलोपश्च'' इति मनिन्प्रत्यये अमागमे नलोपे च ब्रह्मेति रूपम् । वृद्धिश्च देशकालाभ्यामिव गुणतोऽपि ग्राह्या । सङ्कोचकाभावादित्यर्थः । अन्ययेति ।। सङ्कोचकाभावेऽपि गुणापरिच्छेदस्य त्यागे इत्यर्थः । ननु देशकालाभ्यामिव वस्तुतोऽपरिच्छेद

एवापरिच्छेदशब्दार्थः, नतु गुणापरिच्छेद इत्यत आह ।। वक्ष्यत इति ।। तर्हि "देशापरिच्छेदेन च जीवभेदसिद्धेः" इति टीकाविरोध इत्यत आह ।। टीकायां त्विति ।। अत्र यत् केनचित् प्रलपितं – सर्वेषां वेदान्तानां निर्विशेषजीवचैतन्यरूपे ब्रह्मणि तात्पर्यमाश्रित्य कृतस्य पूर्वपक्षस्य निरासाय, सर्ववेदान्तप्रतिभटत्वेन प्रयुक्तोऽयं ब्रह्मशब्दो गुणपूर्तिनिमित्तः सन्नपि, सर्वानपि वेदान्तानुपक्रमादिदृढ-न्यायनिर्णीतादद्वैततात्पर्यात् प्रच्यावयितुं कथं शक्नुयात् । प्रत्युत स्वयमेव तद्गुणभूतत्वात् तदनुगुणमेवाऽद्वैतवाद्यभिमतत्रिविधपरिच्छेदराहित्यरूपमर्थमव-लम्बेत । अत एव "न स्थानतोऽपि" इति सूत्रे सुधायां – "सकलश्रुतिस्मृती-तिहासपुराणानां परमेश्वरस्याऽशेषदोषदूरत्वे महातात्पर्यात् 'कार्यकारणबद्धौ तौ' इत्यादिवाक्यं भगवतो दोषित्वे मानं न" इत्युक्तमिति । तदयुक्तम् । सकलवेदस्य विचारविधायकवाक्यानुगुण्येनैव अर्थस्य वाच्यतया, सर्वस्य तदधीनत्वेन राजाध्ययनविधिवत् तस्य प्राधान्येन तद्गततया विध्युद्देशगततया च श्रुतिरूपत्वाच्च ब्रह्मपदस्य बलवत्त्वात् । श्रुतेश्चाद्वैतबोधकवाक्येभ्यः तदनुगुणोपक्रमादिलिङ्गेभ्यश्च प्राबल्यस्य "श्रुतिलिङ्गवाक्यप्रकरणस्थानसमाख्यानां समवाये परदौर्बल्यमर्थ-विप्रकर्षात्" इति पूर्वतन्त्रसूत्रे "शब्दादेव प्रमितः" इति ब्रह्मसूत्रे च वक्ष्यमाण-दिशा सिद्धत्वात् एकस्याऽपि ब्रह्मशब्दस्य धर्मिसमर्पकतया उपजीव्यत्वाच्च । उक्तं च विष्णुतत्वविनिर्णये ।

"द्विविधं बलवत्त्वं च बहुत्वाच्च स्वभावतः ।
तयोः स्वभावो बलवान् उपजीव्यादिकश्च सः" इति ।

वस्त्वभेदो ब्रह्मशब्दार्थ इत्यस्याऽग्रे निरसिष्यमाणत्वेन निरवकाशत्वाच्च । अद्वैतवाक्यानां तदनुगुणोपक्रमादीनां च सावकाशत्वं चाऽन्यत्र न्यायामृतादौ स्पष्टम् । किञ्च विचारविधायकनानावाक्येषु ॐब्रह्मात्मनारायणादियौगिकशब्दानां सहस्रशः सत्त्वेन ब्रह्मपदस्य तादृशानेकश्रुतिसध्रीचीनत्वाच्च । एकैकस्याऽपि शब्दस्य "नारायणं महाज्ञेयं" "नारायणोऽसौ परमो विचिन्त्यः", "तद् विजिज्ञासस्व तद् ब्रह्म" "तपसा ब्रह्म विजिज्ञासस्व" इत्यादिविचारविधायकनानावाक्येषु

बहुशः श्रवणेन प्रत्येकं बाहुल्याच्च । नह्येकस्मिन् सूत्रे एकमेवोदाहरणम् । विश्वतोमुखत्वभङ्गप्रसङ्गात् । वक्ष्यति च ''युक्त्यन्तरसूचकत्वात्'' इति । अपिच गुणपूर्त्यर्थकेन ब्रह्मपदेन विषयसिद्धिं वदता सूत्रकृता श्रुत्यनुभवानुमानानां भेदप्रमापकत्वस्य प्रागुक्तदिशोक्तत्वाच्च । प्रत्यक्षानुभवस्य च न वचनसहस्रमपि बाधकमित्यन्यत्र विस्तर इति यत्किञ्चिदेतदित्यास्तां विस्तरः । विस्तरस्तु गुरुपादकृतकण्टकोद्धारे द्रष्टव्यः । एतेन – विषयाद्यभावेनोपपत्तिविरोधात् ''तद् विजिज्ञासस्व'' इत्यादिकमप्रमाणमिति प्रागुक्तं निरस्तम् । विषयसिद्धेरुक्तत्वत् तदुक्त्यैव फलाधिकारिसम्बन्धानां सत्त्वलाभाच्चेति ।

गुरुराजीय – एवं पूर्वपक्षमुज्जीव्य अधिकरणशरीरस्य सुग्रहत्वाय पूर्वपक्षसंदृब्धतया सिद्धान्तं वक्तुं सौत्राथशब्दादिव्याख्यानरूपां टीकामुल्लंघ्य सिद्धान्तोक्तिरूपायाः तद् ब्रह्मपदप्रयोगेण परास्तमित्यादिटीकाया निष्ठामाह ।। जिज्ञास्यं ब्रह्मशब्देन इत्यादिना ।। अत्र जिज्ञास्यमित्यनेन श्रुतिसिद्धेन जिज्ञास्यजिज्ञासुभावेनापि भेद इति सौत्रजिज्ञासाशब्देन सूचितमिति दर्शितम् । ब्रह्मशब्देनेत्यनेन ब्रह्मेतिशब्द इति ब्रह्मणो वाचकः शब्द इति चार्थद्वयस्य विवक्षितत्वात् ''आत्मा वा अरे द्रष्टव्यः'' इत्यादिवाक्यस्यात्मशब्दैरपि गुणपूर्तिसिद्धिरिति दर्शितम् । न केवलं जीवस्य गुणपूर्त्या भेदः । किंतु देशापूर्त्यापीति भावेन सामान्यतो पूर्णत्वेनेत्युक्तम् ।

ननु भेदसिद्ध्यर्थं ब्रह्मणो गुणपूर्तिरिव सूत्रकृता जीवस्याल्पगुणतापि वक्तव्येत्याशंक्यानुभवसिद्धत्वान्न वक्तव्येति भावेनानुभूतादित्युक्तम् । पूर्तिभेदयोः श्रुत्यर्थाभ्यां ब्रह्मशब्दार्थत्वान्नानेकार्थताऽपीति भावेन पूर्त्यभिधायिनेति भिन्नं प्रतीयते इति चोक्तमिति ज्ञेयम् । तद् ब्रह्मेति जिज्ञास्ये ब्रह्मशब्दश्रवणादिति टीकया न केवलं विचारस्य कर्तव्यत्वेऽसंदिग्धत्वरूपं बाधकमुद्धृतं किंतु तद् विजिज्ञासस्वेति साधकं चोक्तमिति दर्शयितुं श्रुतेस्संदिग्धत्वाच्चेत्युक्तम् । टीकोक्तः परमार्थतोऽब्रह्मत्वप्रसङ्गः श्रुत्यक्तमपि ब्रह्मत्वमध्यस्तमिति वदन्तं प्रतीष्ट एवेति शङ्का ''निर्दोषश्रुतिसाक्षिभ्याम्'' इति श्लोकस्यायाः श्रुतेः निर्दोषतोक्त्याऽपास्ता । तर्हि जीवे अल्पगुणत्वमध्यस्तमस्तीति शङ्का तु न्यायविवरणटीकयोरनुभवपदसूचितस्य साक्षिनिर्दोषत्वस्योक्त्याऽपास्तेति द्रष्टव्यम् । टीकोक्तो गुणापरिच्छेदस्य

**ब्रह्मशब्दार्थत्वाभावे श्रुतिविरोधः ब्रह्मावयवशक्तित्यागप्रसङ्गस्याप्युपलक्षक इत्याह - न केवलमित्यादिना ।। 'वक्ष्यते चैतत्' इत्यनेन पूर्वोक्तं सिद्धांतसंक्षेपत्वमुपपादितमिति द्रष्टव्यम् । देशाद्यपरिच्छेदेनेति टीकायां जीवाणुत्वस्येत्युत्तरवाक्यानुसारेण देशमात्रापरिच्छेद एव हेतुर्विवक्षितः । आदिपदं तु जीवाद् भेदमात्रार्थं किमसंमतगुणापरिच्छेदोक्त्या संमतदेशाद्यपरिच्छेदेऽपि देशाद्यपरिच्छेद एव हेतुरिति दर्शयितुमित्याह – देशमात्रेति ।।**

**ವಿವರಣೆ** - ಇದುವರೆಗೂ ಮಾಡಿದ ಪೂರ್ವಪಕ್ಷದ ಸಂಗ್ರಹ ಹೀಗಿದೆ. - 'ಜೀವನಿಗಿಂತ ಭಿನ್ನನಾದ ಬ್ರಹ್ಮನು ಇಲ್ಲ. ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾಗಿದ್ದಾನೆ. ಜೀವಾಭಿನ್ನನಾದ ಬ್ರಹ್ಮನ ಜ್ಞಾನ ಬಂದರೂ ಸಹ ಮುಕ್ತಿಯು ಆಗುವುದಿಲ್ಲ. ಹಾಗಾಗಿ ಜಿಜ್ಞಾಸೆಯು ಅನಾವಶ್ಯಕ'.

ಟೀಕೆಯಲ್ಲಿರುವ 'ತಥಾಹಿ' 'ಎಂಬುದರಿಂದ ಆರಂಭಿಸಿ' ಅಲ್ಪಗುಣತ್ವೇನಾನುಭವಾತ್' ಎಂಬಲ್ಲಿಯ ತನಕ ಇರುವ ವಾಕ್ಯಗಳಿಗೆ ನ್ಯಾಯವಿವರಣಾನುಸಾರಿಯಾಗಿ ವ್ಯಾಖ್ಯಾನಿಸಲು ಪೂರ್ವಪಕ್ಷ ಯುಕ್ತಿಗಳನ್ನೆಲ್ಲಾ ಖಂಡಿಸುವಂತಹ ಸಿದ್ಧಾಂತಪ್ರಮೇಯವನ್ನು 'ಜಿಜ್ಞಾಸ್ಯಂ' ಇತ್ಯಾದಿಯಾಗಿ ಸಂಗ್ರಹಿಸಿ ಹೇಳುತ್ತಿದ್ದಾರೆ.

ವಾಸ್ತವಿಕವಾಗಿ ಬ್ರಹ್ಮಶಬ್ದಕ್ಕೆ 'ಪೂರ್ಣ' ಎಂದಷ್ಟೇ ಅರ್ಥ. ಆದರೂ ಯೋಗ್ಯತಯಾ ಗುಣಗಳಿಂದ ಪೂರ್ಣ ಎಂದು ಅರ್ಥೈಸಿಕೊಳ್ಳಬೇಕು. ಆದ್ದರಿಂದಲೇ 'ಗುಣಪೂರ್ತ್ಯಭಿಧಾಯಿನಾ' ಎಂದು ಹೇಳಿದ್ದು ಯುಕ್ತವಾಗುತ್ತದೆ. ಶ್ಲೋಕದಲ್ಲಿ ಜೀವನು ಅಪೂರ್ಣನೆಂದಷ್ಟೇ ಇದ್ದರೂ. ಗುಣಗಳಿಂದ ಅಪೂರ್ಣನೆಂದು ತಿಳಿಯಬೇಕು. ಶ್ಲೋಕವನ್ನು ನೋಡಿದಾಗ ಮೂರು ಆಕ್ಷೇಪಗಳು ಬರುತ್ತವೆ -

೧) ಸಾಧ್ಯ ಯಾವುದು? ಹೇತು ಯಾವುದು? ಗೊತ್ತಾಗುತ್ತಿಲ್ಲ.

೨) ಎಲ್ಲಿರುವ ಬ್ರಹ್ಮಶಬ್ದದಿಂದ ಎಂದು ಹೇಳಿಲ್ಲ.

೩) ಹೀಗೆ ಹೇಳಿದ್ದರಿಂದ ಯಾವುದೇ ಉಪಯೋಗ ಕಾಣಿಸುತ್ತಿಲ್ಲ.

ಈ ಮೂರು ಆಕ್ಷೇಪಗಳಿಗೂ 'ಜಿಜ್ಞಾಸ್ಯಮೇವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅದು ಹೀಗೆ - ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತ ಗುಣಪೂರ್ಣತ್ವ. ಈ ಪ್ರವೃತ್ತಿನಿಮಿತ್ತವುಳ್ಳ ಒಂದು ಅಪೂರ್ವವಸ್ತುವನ್ನು ಬ್ರಹ್ಮಶಬ್ದವು ಬೋಧಿಸುತ್ತಿದೆ. ನಮಗೆಲ್ಲ ಜೀವನು ಅಪೂರ್ಣನೆಂಬ ಅನುಭವವೂ ಇದೆ. ಇಂತಹ ಜೀವನಿಗಿಂತ ಬ್ರಹ್ಮಶಬ್ದವು ಹೇಳುವ ಅಪೂರ್ವವಸ್ತುವು ಭಿನ್ನವೆಂದು ತಿಳಿಯುತ್ತದೆ. ಹಾಗೆಯೇ ಜೀವನನ್ನು ಅಪೂರ್ಣನೆಂದು ಗ್ರಹಿಸುವ ಅನುಭವವೂ ಸಹ ಬ್ರಹ್ಮಪದದಿಂದ ಉಕ್ತವಾದ, ಗುಣಪೂರ್ಣವಾದ ಅಪೂರ್ವವಸ್ತುವಿಗಿಂತ, ಭಿನ್ನವೆಂದೇ ಗ್ರಹಿಸುತ್ತದೆ. ಇದನ್ನೇ ಅನುವ್ಯಾಖ್ಯಾನದ ಎರಡನೆಯ ಅಧ್ಯಾಯದಲ್ಲಿ ಹೀಗೆ ಹೇಳಲಾಗಿದೆ. - "ಶಾಸ್ತ್ರವೇದ್ಯನಾದ ಬ್ರಹ್ಮನಿಗಿಂತ ತನ್ನಲ್ಲಿ ಭೇದವು ಅನುಭೂತವಾಗಿ

ಅನುಭವವಿರೋಧ ಬರುವಾಗ ನೀವು ಜೀವಬ್ರಹ್ಮೈಕ್ಯವನ್ನಾದರೂ ಹೇಗೆ ಹೇಳುತ್ತೀರಿ'' ಎಂದು. ಹೀಗೆ ಶ್ರುತಿ ಮತ್ತು ಸಾಕ್ಷಿಯಿಂದ ಭೇದವು ಸಿದ್ಧವಾಯಿತು. ಆದ್ದರಿಂದಲೇ ಇವೆರಡನ್ನು ಉಪಜೀವಿಸಿದ ಅನುಮಾನವೂ ಭೇದವನ್ನೇ ಸಾಧಿಸುತ್ತದೆ - 'ಜೀವೇಶೌ ಭಿನ್ನೌ ವಿರುದ್ಧಧರ್ಮಕತ್ವಾತ್ ಜಲಾನಲವತ್' 'ಜೀವಪರಮಾತ್ಮರು ಭಿನ್ನರಾಗಿದ್ದಾರೆ. ವಿರುದ್ಧವಾದ ಸ್ವಭಾವವುಳ್ಳವರಾದ್ದರಿಂದ ನೀರು ಮತ್ತು ಬೆಂಕಿಯಂತೆ' ಎಂದು. ಹೀಗೆ ಪ್ರತ್ಯಕ್ಷ, ಅನುಮಾನ, ಆಗಮಗಳು ಜೀವಭೇದವಿಷಯದಲ್ಲಿ ಪ್ರಮಾಣಗಳಾಗಿವೆ. ಆದ್ದರಿಂದ ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾದರೂ ಸಹ ಬ್ರಹ್ಮನು ಅನುಭವಸಿದ್ಧನಾಗಿಲ್ಲ. ಅಷ್ಟೇ ಅಲ್ಲದೇ, ''ಬ್ರಹ್ಮನಲ್ಲಿ ಯಾವ ಗುಣಗಳೂ ಇಲ್ಲ, ಅಥವಾ ಕೇವಲ ಎಂಟೇ ಗುಣಗಳಿವೆ'' ಇತ್ಯಾದಿಯಾಗಿ ವಾದಿವಿಪ್ರತಿಪತ್ತಿ ಇರುವುದರಿಂದ ಬ್ರಹ್ಮನು ಸಂದಿಗ್ಧನಾದ. ಹಾಗಾಗಿ ಬ್ರಹ್ಮನು ಜಿಜ್ಞಾಸ್ಯನೇ ಆಗಿದ್ದಾನೆ ಎಂದು ಸಿದ್ಧಾಂತದ ಪ್ರಮೇಯ.

**ಶಂಕೆ** - ಬ್ರಹ್ಮನ ಗುಣಪೂರ್ಣತ್ವಾದಿ ಗುಣಗಳು - ಮತ್ತು ಜೀವನ ಅಲ್ಪಗುಣತ್ವಾದಿಗಳು ಮಿಥ್ಯಾಭೂತವಾಗಿವೆ. ಇದರಿಂದ ಮಿಥ್ಯಾಭೂತವಾದ ಭೇದವೇ ಸಿದ್ಧಿಸುತ್ತದೆ ಹೊರತು ಸತ್ಯವಾದ ಭೇದ ಸಿದ್ಧಿಸದು. ವಾಸ್ತವ ಅಭೇದಕ್ಕೆ, ಅವಾಸ್ತವವಾದ ಭೇದವು ಪ್ರತಿಬಂಧಕವಾಗದು. ಆದ್ದರಿಂದ ಅಭೇದವಿರುವುದರಿಂದ ಬ್ರಹ್ಮನು ವಿಷಯನಾಗಲಾರ.

**ಸಮಾಧಾನ** - ಈ ಶಂಕೆಯನ್ನು ಪರಿಹರಿಸಲು 'ನ ಚ ಬ್ರಹ್ಮಣಿ ಗುಣಾಧ್ಯಾಸಃ' 'ಬ್ರಹ್ಮನಲ್ಲಿರುವ ಗುಣಪೂರ್ಣತ್ವಾದಿಗಳು ಅವಾಸ್ತವವಲ್ಲ' ಎಂಬ ಟೀಕೆಯು ಹೊರಟಿದೆ. ಟೀಕೆಯ ಅಭಿಪ್ರಾಯ ಹೀಗಿದೆ - ಬ್ರಹ್ಮಶಬ್ದಬಲದಿಂದ ಗುಣಪರಿಪೂರ್ಣತ್ವವು ಬ್ರಹ್ಮನಲ್ಲಿ ಸಿದ್ಧವಾಗಿದೆ. ಜೀವನು ಅಪರಿಪೂರ್ಣನೆಂಬುದು ಸಾಕ್ಷಿಯಿಂದ ಸಿದ್ಧವಾಗಿದೆ. ಶ್ರುತಿ ಹಾಗು ಸಾಕ್ಷಿ ಎರಡೂ ಅನಾದಿಯಾದ್ದರಿಂದ ನಿರ್ದುಷ್ಟವಾಗಿದೆ. ಆದ್ದರಿಂದ ಅವು ಹೇಳುವ ಗುಣಗಳು ಅವಾಸ್ತವವಾಗಲು ಸಾಧ್ಯವೇ ಇಲ್ಲ.

**ಶಂಕೆ** - ಟೀಕೆಯಲ್ಲಿ 'ಅಥ ಕಸ್ಮಾದುಚ್ಯತೇ' ಇತ್ಯಾದಿ ಶ್ರುತಿಯನ್ನು ಉದಾಹರಿಸಿ ರೂಢಿಯಿಂದ ಗುಣಪೂರ್ಣತ್ವವು ಬ್ರಹ್ಮಶಬ್ದಾರ್ಥವೆಂದು ಹೇಳಲಾಗಿದೆ. ಆದರೆ ನ್ಯಾಯಸುಧಾದಲ್ಲಿ ಅವಯವಶಕ್ತಿಯಿಂದ ಗುಣಪೂರ್ಣತ್ವವು ಬ್ರಹ್ಮಶಬ್ದಾರ್ಥವೆಂದು ಹೇಳಲಾಗಿದೆ. ಆದ್ದರಿಂದ ಪರಸ್ಪರ ವಿರೋಧ ಬರುತ್ತದೆ.

**ಸಮಾಧಾನ** - ವಿರೋಧ ಬರಲು ಸಾಧ್ಯವಿಲ್ಲ. ಶ್ರುತಿ ಮಾತ್ರವಲ್ಲ ಅವಯವಶಕ್ತಿಯಿಂದಲೂ ಗುಣಪೂರ್ಣತ್ವವೆಂಬ ಅರ್ಥವು ಬ್ರಹ್ಮಶಬ್ದದಿಂದ ತಿಳಿಯಬೇಕೆನ್ನುವುದು ಟೀಕಾರಾಯರ ಅಭಿಪ್ರಾಯವಾಗಿದೆ. ಅವಯವಶಕ್ತಿ ಹೇಗೆಂದರೆ 'ವೃದ್ಧಿ' ಎಂಬ ಅರ್ಥದಲ್ಲಿ 'ಬೃಹಿ' ಎಂಬ ಧಾತುವಿದೆ. ಅದಕ್ಕೆ 'ಬೃಂಹೇರಮ್ ನಲೋಪಶ್ಚ' ಎಂಬ ಸೂತ್ರದಿಂದ 'ಮನಿನ್' ಪ್ರತ್ಯಯ ಬರುತ್ತದೆ. 'ಅಮ್' ಆಗಮ ಬಂದು ನಕಾರ ಲೋಪ ಆದರೆ 'ಬ್ರಹ್ಮ' ಎಂಬ ರೂಪವಾಗುತ್ತದೆ. ಇಲ್ಲಿ 'ವೃದ್ಧಿ' ಶಬ್ದಕ್ಕೆ 'ಪೂರ್ಣ' ಎಂಬರ್ಥವಿದೆ. ದೇಶ ಮತ್ತು ಕಾಲಗಳಿಂದ ಹೇಗೆ ಪೂರ್ಣನೋ; ಹಾಗೆಯೇ ಗುಣದಿಂದಲೂ ಪೂರ್ಣನೆಂಬ ಅರ್ಥವನ್ನು ಇಟ್ಟುಕೊಳ್ಳಬೇಕು.

**ब्रह्मशब्दार्थत्वाभावे श्रुतिविरोधः ब्रह्मावयवशक्तित्यागप्रसङ्गस्याप्युपलक्षक इत्याह - न केवलमित्यादिना ।।** 'वक्ष्यते चैतत्' इत्यनेन पूर्वोक्तं सिद्धांतसंक्षेपत्वमुपपादितमिति द्रष्टव्यम् । देशाद्यपरिच्छेदेनेति टीकायां जीवाणुत्वस्येत्युत्तरवाक्यानुसारेण देशमात्रापरिच्छेद एव हेतुर्विवक्षितः । आदिपदं तु जीवाद् भेदमात्रार्थं किमसंमतगुणापरिच्छेदोक्त्या संमतदेशाद्यपरिच्छेदेऽपि देशाद्यपरिच्छेद एव हेतुरिति दर्शयितुमित्याह – **देशमात्रेति ।।**

**ವಿವರಣೆ** - ಇದುವರೆಗೂ ಮಾಡಿದ ಪೂರ್ವಪಕ್ಷದ ಸಂಗ್ರಹ ಹೀಗಿದೆ. - 'ಜೀವನಿಗಿಂತ ಭಿನ್ನನಾದ ಬ್ರಹ್ಮನು ಇಲ್ಲ. ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾಗಿದ್ದಾನೆ. ಜೀವಾಭಿನ್ನನಾದ ಬ್ರಹ್ಮನ ಜ್ಞಾನ ಬಂದರೂ ಸಹ ಮುಕ್ತಿಯು ಆಗುವುದಿಲ್ಲ. ಹಾಗಾಗಿ ಜಿಜ್ಞಾಸೆಯು ಅನಾವಶ್ಯಕ'.

ಟೀಕೆಯಲ್ಲಿರುವ 'ತಥಾಹಿ' 'ಎಂಬುದರಿಂದ ಆರಂಭಿಸಿ' ಅಲ್ಪಗುಣತ್ವೇನಾನುಭವಾತ್' ಎಂಬಲ್ಲಿಯ ತನಕ ಇರುವ ವಾಕ್ಯಗಳಿಗೆ ನ್ಯಾಯವಿವರಣಾನುಸಾರಿಯಾಗಿ ವ್ಯಾಖ್ಯಾನಿಸಲು ಪೂರ್ವಪಕ್ಷ ಯುಕ್ತಿಗಳನ್ನೆಲ್ಲಾ ಖಂಡಿಸುವಂತಹ ಸಿದ್ಧಾಂತಪ್ರಮೇಯವನ್ನು 'ಜಿಜ್ಞಾಸ್ಯಂ' ಇತ್ಯಾದಿಯಾಗಿ ಸಂಗ್ರಹಿಸಿ ಹೇಳುತ್ತಿದ್ದಾರೆ.

ವಾಸ್ತವಿಕವಾಗಿ ಬ್ರಹ್ಮಶಬ್ದಕ್ಕೆ 'ಪೂರ್ಣ' ಎಂದಷ್ಟೇ ಅರ್ಥ. ಆದರೂ ಯೋಗ್ಯತಯಾ ಗುಣಗಳಿಂದ ಪೂರ್ಣ ಎಂದು ಅರ್ಥೈಸಿಕೊಳ್ಳಬೇಕು. ಆದ್ದರಿಂದಲೇ 'ಗುಣಪೂರ್ತ್ಯಭಿಧಾಯಿನಾ' ಎಂದು ಹೇಳಿದ್ದು ಯುಕ್ತವಾಗುತ್ತದೆ. ಶ್ಲೋಕದಲ್ಲಿ ಜೀವನು ಅಪೂರ್ಣನೆಂದಷ್ಟೇ ಇದ್ದರೂ. ಗುಣಗಳಿಂದ ಅಪೂರ್ಣನೆಂದು ತಿಳಿಯಬೇಕು. ಶ್ಲೋಕವನ್ನು ನೋಡಿದಾಗ ಮೂರು ಆಕ್ಷೇಪಗಳು ಬರುತ್ತವೆ -

೧) ಸಾಧ್ಯ ಯಾವುದು? ಹೇತು ಯಾವುದು? ಗೊತ್ತಾಗುತ್ತಿಲ್ಲ.

೨) ಎಲ್ಲಿರುವ ಬ್ರಹ್ಮಶಬ್ದದಿಂದ ಎಂದು ಹೇಳಿಲ್ಲ.

೩) ಹೀಗೆ ಹೇಳಿದ್ದರಿಂದ ಯಾವುದೇ ಉಪಯೋಗ ಕಾಣಿಸುತ್ತಿಲ್ಲ.

ಈ ಮೂರು ಆಕ್ಷೇಪಗಳಿಗೂ 'ಜಿಜ್ಞಾಸ್ಯಮೇವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅದು ಹೀಗೆ - ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತ ಗುಣಪೂರ್ಣತ್ವ. ಈ ಪ್ರವೃತ್ತಿನಿಮಿತ್ತವುಳ್ಳ ಒಂದು ಅಪೂರ್ವವಸ್ತುವನ್ನು ಬ್ರಹ್ಮಶಬ್ದವು ಬೋಧಿಸುತ್ತಿದೆ. ನಮಗೆಲ್ಲ ಜೀವನು ಅಪೂರ್ಣನೆಂಬ ಅನುಭವವೂ ಇದೆ. ಇಂತಹ ಜೀವನಿಗಿಂತ ಬ್ರಹ್ಮಶಬ್ದವು ಹೇಳುವ ಅಪೂರ್ವವಸ್ತುವು ಭಿನ್ನವೆಂದು ತಿಳಿಯುತ್ತದೆ. ಹಾಗೆಯೇ ಜೀವನನ್ನು ಅಪೂರ್ಣನೆಂದು ಗ್ರಹಿಸುವ ಅನುಭವವೂ ಸಹ ಬ್ರಹ್ಮಪದದಿಂದ ಉಕ್ತವಾದ, ಗುಣಪೂರ್ಣವಾದ ಅಪೂರ್ವವಸ್ತುವಿಗಿಂತ, ಭಿನ್ನವೆಂದೇ ಗ್ರಹಿಸುತ್ತದೆ. ಇದನ್ನೇ ಅನುವ್ಯಾಖ್ಯಾನದ ಎರಡನೆಯ ಅಧ್ಯಾಯದಲ್ಲಿ ಹೀಗೆ ಹೇಳಲಾಗಿದೆ. - "ಶಾಸ್ತ್ರವೇದ್ಯನಾದ ಬ್ರಹ್ಮನಿಗಿಂತ ತನ್ನಲ್ಲಿ ಭೇದವು ಅನುಭೂತವಾಗಿ

ಅನುಭವವಿರೋಧ ಬರುವಾಗ ನೀವು ಜೀವಬ್ರಹ್ಮೈಕ್ಯವನ್ನಾದರೂ ಹೇಗೆ ಹೇಳುತ್ತೀರಿ'' ಎಂದು. ಹೀಗೆ ಶ್ರುತಿ ಮತ್ತು ಸಾಕ್ಷಿಯಿಂದ ಭೇದವು ಸಿದ್ಧವಾಯಿತು. ಆದ್ದರಿಂದಲೇ ಇವೆರಡನ್ನು ಉಪಜೀವಿಸಿದ ಅನುಮಾನವೂ ಭೇದವನ್ನೇ ಸಾಧಿಸುತ್ತದೆ - 'ಜೀವೇಶೌ ಭಿನ್ನೌ ವಿರುದ್ಧಧರ್ಮಕತ್ವಾತ್ ಜಲಾನಲವತ್' 'ಜೀವಪರಮಾತ್ಮರು ಭಿನ್ನರಾಗಿದ್ದಾರೆ. ವಿರುದ್ಧವಾದ ಸ್ವಭಾವವುಳ್ಳವರಾದ್ದರಿಂದ ನೀರು ಮತ್ತು ಬೆಂಕಿಯಂತೆ' ಎಂದು. ಹೀಗೆ ಪ್ರತ್ಯಕ್ಷ, ಅನುಮಾನ, ಆಗಮಗಳು ಜೀವಭೇದವಿಷಯದಲ್ಲಿ ಪ್ರಮಾಣಗಳಾಗಿವೆ. ಆದ್ದರಿಂದ ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾದರೂ ಸಹ ಬ್ರಹ್ಮನು ಅನುಭವಸಿದ್ಧನಾಗಿಲ್ಲ. ಅಷ್ಟೇ ಅಲ್ಲದೇ, ''ಬ್ರಹ್ಮನಲ್ಲಿ ಯಾವ ಗುಣಗಳೂ ಇಲ್ಲ, ಅಥವಾ ಕೇವಲ ಎಂಟೇ ಗುಣಗಳಿವೆ'' ಇತ್ಯಾದಿಯಾಗಿ ವಾದಿವಿಪ್ರತಿಪತ್ತಿ ಇರುವುದರಿಂದ ಬ್ರಹ್ಮನು ಸಂದಿಗ್ಧನಾದ. ಹಾಗಾಗಿ ಬ್ರಹ್ಮನು ಜಿಜ್ಞಾಸ್ಯನೇ ಆಗಿದ್ದಾನೆ ಎಂದು ಸಿದ್ಧಾಂತದ ಪ್ರಮೇಯ.

ಶಂಕೆ - ಬ್ರಹ್ಮನ ಗುಣಪೂರ್ಣತ್ವಾದಿ ಗುಣಗಳು - ಮತ್ತು ಜೀವನ ಅಲ್ಪಗುಣತ್ವಾದಿಗಳು ಮಿಥ್ಯಾಭೂತವಾಗಿವೆ. ಇದರಿಂದ ಮಿಥ್ಯಾಭೂತವಾದ ಭೇದವೇ ಸಿದ್ಧಿಸುತ್ತದೆ ಹೊರತು ಸತ್ಯವಾದ ಭೇದ ಸಿದ್ಧಿಸದು. ವಾಸ್ತವ ಅಭೇದಕ್ಕೆ, ಅವಾಸ್ತವವಾದ ಭೇದವು ಪ್ರತಿಬಂಧಕವಾಗದು. ಆದ್ದರಿಂದ ಅಭೇದವಿರುವುದರಿಂದ ಬ್ರಹ್ಮನು ವಿಷಯನಾಗಲಾರ.

ಸಮಾಧಾನ - ಈ ಶಂಕೆಯನ್ನು ಪರಿಹರಿಸಲು 'ನ ಚ ಬ್ರಹ್ಮಣಿ ಗುಣಾಧ್ಯಾಸಃ' 'ಬ್ರಹ್ಮನಲ್ಲಿರುವ ಗುಣಪೂರ್ಣತ್ವಾದಿಗಳು ಅವಾಸ್ತವವಲ್ಲ' ಎಂಬ ಟೀಕೆಯು ಹೊರಟಿದೆ. ಟೀಕೆಯ ಅಭಿಪ್ರಾಯ ಹೀಗಿದೆ - ಬ್ರಹ್ಮಶಬ್ದಬಲದಿಂದ ಗುಣಪರಿಪೂರ್ಣತ್ವವು ಬ್ರಹ್ಮನಲ್ಲಿ ಸಿದ್ಧವಾಗಿದೆ. ಜೀವನು ಅಪರಿಪೂರ್ಣನೆಂಬುದು ಸಾಕ್ಷಿಯಿಂದ ಸಿದ್ಧವಾಗಿದೆ. ಶ್ರುತಿ ಹಾಗು ಸಾಕ್ಷಿ ಎರಡೂ ಅನಾದಿಯಾದ್ದರಿಂದ ನಿರ್ದುಷ್ಟವಾಗಿದೆ. ಆದ್ದರಿಂದ ಅವು ಹೇಳುವ ಗುಣಗಳು ಅವಾಸ್ತವವಾಗಲು ಸಾಧ್ಯವೇ ಇಲ್ಲ.

ಶಂಕೆ - ಟೀಕೆಯಲ್ಲಿ 'ಅಥ ಕಸ್ಮಾದುಚ್ಯತೇ' ಇತ್ಯಾದಿ ಶ್ರುತಿಯನ್ನು ಉದಾಹರಿಸಿ ರೂಢಿಯಿಂದ ಗುಣಪೂರ್ಣತ್ವವು ಬ್ರಹ್ಮಶಬ್ದಾರ್ಥವೆಂದು ಹೇಳಲಾಗಿದೆ. ಆದರೆ ನ್ಯಾಯಸುಧಾದಲ್ಲಿ ಅವಯವಶಕ್ತಿಯಿಂದ ಗುಣಪೂರ್ಣತ್ವವು ಬ್ರಹ್ಮಶಬ್ದಾರ್ಥವೆಂದು ಹೇಳಲಾಗಿದೆ. ಆದ್ದರಿಂದ ಪರಸ್ಪರ ವಿರೋಧ ಬರುತ್ತದೆ.

ಸಮಾಧಾನ - ವಿರೋಧ ಬರಲು ಸಾಧ್ಯವಿಲ್ಲ. ಶ್ರುತಿ ಮಾತ್ರವಲ್ಲ ಅವಯವಶಕ್ತಿಯಿಂದಲೂ ಗುಣಪೂರ್ಣತ್ವವೆಂಬ ಅರ್ಥವು ಬ್ರಹ್ಮಶಬ್ದದಿಂದ ತಿಳಿಯಬೇಕೆನ್ನುವುದು ಟೀಕಾರಾಯರ ಅಭಿಪ್ರಾಯವಾಗಿದೆ. ಅವಯವಶಕ್ತಿ ಹೇಗೆಂದರೆ 'ವೃದ್ಧಿ' ಎಂಬ ಅರ್ಥದಲ್ಲಿ 'ಬೃಹಿ' ಎಂಬ ಧಾತುವಿದೆ. ಅದಕ್ಕೆ 'ಬೃಂಹೇರಮ್ ನಲೋಪಶ್ಚ' ಎಂಬ ಸೂತ್ರದಿಂದ 'ಮನಿನ್' ಪ್ರತ್ಯಯ ಬರುತ್ತದೆ. 'ಅಮ್' ಆಗಮ ಬಂದು ನಕಾರ ಲೋಪ ಆದರೆ 'ಬ್ರಹ್ಮ' ಎಂಬ ರೂಪವಾಗುತ್ತದೆ. ಇಲ್ಲಿ 'ವೃದ್ಧಿ' ಶಬ್ದಕ್ಕೆ 'ಪೂರ್ಣ' ಎಂಬರ್ಥವಿದೆ. ದೇಶ ಮತ್ತು ಕಾಲಗಳಿಂದ ಹೇಗೆ ಪೂರ್ಣನೋ; ಹಾಗೆಯೇ ಗುಣದಿಂದಲೂ ಪೂರ್ಣನೆಂಬ ಅರ್ಥವನ್ನು ಇಟ್ಟುಕೊಳ್ಳಬೇಕು.

ದೇಶತಃ ಕಾಲತಃ ವಸ್ತುತಃ ಪೂರ್ಣತ್ವವು ಬ್ರಹ್ಮಶಬ್ದದ ಅರ್ಥವೆಂದು ಅದ್ವೈತಿಗಳು ಹೇಳುತ್ತಾ ಗುಣದಿಂದ ಪೂರ್ಣತ್ವವನ್ನು ಹೇಳಬಾರದೆಂದು ಅವರು ಆಗ್ರಹಿಸುತ್ತಾರೆ. ಆದರೆ ಅದ್ವೈತಿಗಳು ದೇಶತಃ ಮತ್ತು ಕಾಲತಃ ಪೂರ್ಣತ್ವಕ್ಕೆ ಒಂದು ಬಗೆಯ ಅರ್ಥ ಹೇಳಿ, ಪೂರ್ಣತ್ವಕ್ಕೆ ಬೇರೆ ಬಗೆಯಾದ ಅರ್ಥ ಹೇಳುತ್ತಾರೆ. ಇದು ತಪ್ಪಾಗುತ್ತದೆಂದು ಮುಂದೆ ನಾವು ನಿರಾಕರಿಸುವವರಿದ್ದೇವೆ.

ಕೆಲವರ ಆಕ್ಷೇಪ - ಸಮಸ್ತ ವೇದಾಂತಗಳೆಲ್ಲವು ನಿರ್ವಿಶೇಷಚೈತನ್ಯವನ್ನು ಬೋಧಿಸುವುದರಲ್ಲಿಯೇ ಚರಿತಾರ್ಥಗಳಾಗಿವೆ. ನಮ್ಮ ಈ ಪೂರ್ವಪಕ್ಷಕ್ಕೆ ಉತ್ತರವಾಗಿ ಸಮಸ್ತವೇದಾಂತಕ್ಕೆ ಪ್ರತಿಸ್ಪರ್ಧಿಯಾಗಿ ಒಂದು 'ಬ್ರಹ್ಮ' ಶಬ್ದವನ್ನು ಹೇಳುತ್ತಿದ್ದೀರಿ. ನಿಮ್ಮ ಈ ಮಾತು ಅತ್ಯಂತ ಹಾಸ್ಯಾಸ್ಪದವಾಗಿದೆ. ಮತ್ತು ಬ್ರಹ್ಮಶಬ್ದವು ಗುಣಪೂರ್ಣವೆಂಬ ಅರ್ಥವನ್ನೂ ಹೇಳಬಾರದು. ಕಥಂಚಿತ್ ಹೇಳುತ್ತದೆಂದು ಇಟ್ಟುಕೊಂಡರೂ, ಸಹ ಸಮಗ್ರವೇದಾಂತಕ್ಕೆ ಉಪಕ್ರಮಾದಿ ಷಡ್ವಿಧತಾತ್ಪರ್ಯಲಿಂಗಗಳಿಂದ ಅದ್ವೈತದಲ್ಲೇ ತಾತ್ಪರ್ಯವೆಂದು ತೀರ್ಮಾನವಾಗಿದೆ. ಅಂತಹ ಅದ್ವೈತತಾತ್ಪರ್ಯವನ್ನು ಈ ಒಂದು ಬ್ರಹ್ಮಶಬ್ದವು ನಿರಾಕರಿಸಲು ಹೇಗೆ ತಾನೆ ಸಮರ್ಥವಾದೀತು? ಹೊರತು ಬ್ರಹ್ಮಶಬ್ದವೇ ಅದ್ವೈತವನ್ನು ಹೇಳುವ ಸಮಸ್ತವೇದಾಂತಕ್ಕೆ ತಲೆಬಾಗಬೇಕು. ತಾನೂ ವೇದಾಂತದ ಒಂದು ಭಾಗವಾಗಿ ವೇದಾಂತಕ್ಕೆ ವಿರೋಧ ಬಾರದಂತೆ ಅದ್ವೈತಿಗಳು ಹೇಳುವ ದೇಶತಃ ಕಾಲತಃ ವಸ್ತುತಃ ಪೂರ್ಣತ್ವವೆಂಬ ಮೂರುವಿಧ ಪೂರ್ಣತ್ವವನ್ನೇ ಹೇಳಬೇಕು. ಗುಣತಃ ಪೂರ್ಣತ್ವವನ್ನು ಹೇಳಬಾರದು.

ಪ್ರಸಂಗಕ್ಕೆ ಅನುಸಾರಿಯಾಗಿ ಅರ್ಥ ಮಾಡಬೇಕೆಂಬುದನ್ನು ದ್ವೈತಿಗಳೂ ಒಪ್ಪಿದ್ದೀರಿ 'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' 'ಸ್ಥಾನಗಳು ಬೇರೆ ಬೇರೆ ಇದ್ದರೂ ಅಲ್ಲಿರುವ ಭಗಂತನ ರೂಪಗಳು ಬೇರೆ ಬೇರೆ ಅಲ್ಲ' ಎಂಬ ಸೂತ್ರಕ್ಕೆ ವ್ಯಾಖ್ಯಾನಿಸುತ್ತಾ ನ್ಯಾಯಸುಧಾದಲ್ಲಿ ಹೀಗೆ ಹೇಳಲಾಗಿದೆ - ಎಲ್ಲಾ ಶ್ರುತಿಸ್ಮೃತಿಪುರಾಣ ಇತಿಹಾಸಗಳು ಭಗವಂತನು ಸಕಲದೋಷದೂರನಾಗಿದ್ದಾನೆ ಎಂಬುವುದರಲ್ಲಿಯೇ ಮುಖ್ಯವಾದ ತಾತ್ಪರ್ಯ ಉಳ್ಳವುಗಳಾಗಿವೆ. ಆದರೆ ಆ ಶ್ರುತಿಸ್ಮೃತಿಗಳ ಮಧ್ಯದಲ್ಲಿ ಕೆಲವು 'ಕಾರ್ಯಕಾರಣಬದ್ಧೌ ತೌ' 'ಅವರಿಬ್ಬರೂ ಕಾರ್ಯಕಾರಣ ಬದ್ಧರು' ಇತ್ಯಾದಿ ವಾಕ್ಯಗಳು ಭಗವಂತನಿಗೆ ದೋಷವನ್ನು ಹೇಳುತ್ತಿವೆಯೆಂದು ತೋರುತ್ತದೆ. ಆದರೆ ಆ ಸಕಲ ವಾಕ್ಯಗಳಿಗೆ ವಿರುದ್ಧವಾದ ಅರ್ಥವನ್ನು ಹೇಳಲು ಈ ಅಲ್ಪವಾಕ್ಯಗಳು ಕ್ಷೀಣಶಕ್ತಿಗಳಾಗುತ್ತವೆ. ಭಗವಂತನಲ್ಲಿ ದೋಷವನ್ನು ಹೇಳಲು ಅಸಮರ್ಥಗಳಾಗುತ್ತವೆಯೆಂದು ನೀವೂ ಹೇಳಿದ್ದೀರಿ.

ಸಮಾಧಾನ - ಕೆಲವರ ಈ ಆಕ್ಷೇಪ ಹುರುಳಿಲ್ಲದ್ದು. ನಾವು ಹೇಳಿದ ಬ್ರಹ್ಮಶಬ್ದವು ಬಹಳ ಬಲಿಷ್ಠವೇ ಆಗಿದೆ - ಹೇಗೆಂದರೆ ಸಮಗ್ರವೇದಕ್ಕೆ ವಿಚಾರವಿಧಾಯಕವಾದ ವಾಕ್ಯದ ಅನುಸಾರಿಯಾಗಿಯೇ ಅರ್ಥವನ್ನು ಮಾಡಬೇಕು. ಏಕೆಂದರೆ ಎಲ್ಲ ಪ್ರಜೆಗಳಿಗೆ ರಾಜನು ಹೇಗೆ ಪ್ರಧಾನನಿಯಾಮಕನೋ, ರಾಜನಂತೆ ಅಧ್ಯಯನವಿಧಿಯು ಪ್ರಧಾನವೆಂದು ಎಲ್ಲರಿಗೂ ಸಮ್ಮತವಾಗಿದೆ. ಅದರಂತೆ ಎಲ್ಲಾ ವೇದಾಂತಗಳಿಗೂ ವಿಚಾರವಿಧಾಯಕ ಶ್ರುತಿಯು ಪ್ರಧಾನ ನಿಯಾಮಕವಾಗಿದೆ. ಇದಕ್ಕೆ ಅನುಗುಣವಾದ ಅರ್ಥವನ್ನೇ ಸಮಸ್ತವೇದಾಂತವು ಹೇಳುತ್ತದೆ. ಇಂತಹ ವಿಚಾರವಿಧಾಯಕ ವಾಕ್ಯದಲ್ಲಿ ಬ್ರಹ್ಮಶಬ್ದವು

ಸಿರಿದೆ. ಆದ್ದರಿಂದ ಇದು ಪ್ರಬಲವಾಗಿದೆ. ಹೀಗೆ ವಿಧಾಯಕವಾಕ್ಯದಲ್ಲಿ ಸೇರಿರುವುದರಿಂದ ಮತ್ತು ಸ್ವಯಂ ಶ್ರುತಿರೂಪವಾದ್ದರಿಂದಲೂ ಬ್ರಹ್ಮಪದವು ಬಲಿಷ್ಠವಾಗಿದೆ.

ಹಿಂದೆ ಅದ್ವೈತಿಗಳು ಮತ್ತೊಂದು ಆಕ್ಷೇಪ ಮಾಡಿದ್ದರು - 'ಸಮಸ್ತವೇದಾಂತಕ್ಕೆ ಅದ್ವೈತದಲ್ಲಿಯೇ ತಾತ್ಪರ್ಯವಿರುವುದರಿಂದ ಬ್ರಹ್ಮಶಬ್ದಕ್ಕೂ ಹಾಗೆಯೇ ಅರ್ಥೈಸಬೇಕು' ಎಂದು. ಇದೂ ಸಹ ತಪ್ಪು. ಏಕೆಂದರೆ ಅದ್ವೈತಬೋಧಕವಾಕ್ಯಗಳಿಗಿಂತ ಶ್ರುತಿರೂಪವಾದ ಈ ಬ್ರಹ್ಮ ಶಬ್ದವೇ ಪ್ರಬಲವಾಗಿದೆ. ಅದ್ವೈತಬೋಧಕವಾದ ವೇದಾಂತವು ವಾಕ್ಯರೂಪವಾಗಿ ಪ್ರಮಾಣವಾಗಿದೆ. ಉಪಕ್ರಮ ಮುಂತಾದವು ಲಿಂಗರೂಪವಾಗಿ ಪ್ರಮಾಣವಾಗಿವೆ. ವಾಕ್ಯ ಮತ್ತು ಲಿಂಗಗಳಿಗಿಂತ ಶ್ರುತಿಯೇ ಪ್ರಬಲವೆಂದು ಪೂರ್ವಮೀಮಾಂಸೆಯಲ್ಲಿ ತೀರ್ಮಾನವಾಗಿದೆ. - 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪರದೌರ್ಬಲ್ಯಮರ್ಥವಿಪ್ರಕರ್ಷಾತ್. (೩-೩-೧೪) 'ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಇವುಗಳು ವಿರುದ್ಧವಾಗಿ ಒಂದೇ ಕಡೆ ಸೇರಿದಾಗ ಹಿಂದಿನದಕ್ಕಿಂತ ಮುಂದಿನದ್ದೇ ದುರ್ಬಲವಾಗುತ್ತದೆ. ಏಕೆಂದರೆ ಮುಂದಿನವುಗಳಿಂದ ಅರ್ಥಜ್ಞಾನವು ವಿಲಂಬವಾಗಿ ಬರುವುದರಿಂದ' ಎಂದು ಹೇಳಲಾಗಿದೆ. ಪ್ರಕೃತ ಈ ಸೂತ್ರದಿಂದ ಬ್ರಹ್ಮಶಬ್ದಕ್ಕೆ ಪ್ರಾಬಲ್ಯ ನಿಶ್ಚಯವಾಯಿತು.

ಮತ್ತು 'ಶಬ್ದಾದೇವ ಪ್ರಮಿತಃ' ಎಂಬ ಮುಂದಿನ ಬ್ರಹ್ಮಸೂತ್ರದಿಂದಲೂ ಈ ವಿಷಯ ತೀರ್ಮಾನವಾಗುತ್ತದೆ. ಸರ್ವದೇವೋಸ್ಯನಾದವನು ಯಾರೆಂದು ಪ್ರಶ್ನೆ ಬಂದರೆ ವಾಮನಶಬ್ದ ಇರುವುದರಿಂದ ವಿಷ್ಣುವನ್ನೇ ಸರ್ವದೇವೋಪಾಸ್ಯನೆಂದು ಹೇಳಬೇಕು ಎಂದು ಹೇಳಲಾಗಿದೆ. ಮತ್ತು ಬ್ರಹ್ಮಶಬ್ದವು ಒಂದೇ ಆಗಿದ್ದರೂ ಸಹ ಸಮಸ್ತ ವೇದಾಂತಕ್ಕೆ ಧರ್ಮಿಸಮರ್ಪಕವಾಗಿ ಉಪಜೀವ್ಯವಾಗಿದೆ. ಏಕೆಂದರೆ ವೇದಾಂತವು ಅದ್ವೈತವನ್ನು ಹೇಳಬೇಕೆಂದರೆ ಮೊದಲು ಬ್ರಹ್ಮನನ್ನು ಹೇಳಿ ಅನಂತರ ಅವನಲ್ಲಿ ಜೀವೈಕ್ಯವನ್ನು ವಿಧಿಸಬೇಕು. ಹಾಗಾಗಿ ಬ್ರಹ್ಮಶಬ್ದವು ಉಪಜೀವ್ಯವಾಗಿದೆ. ಈ ವಿಷಯದಲ್ಲಿ ವಿಷ್ಣುತತ್ವನಿರ್ಣಯದ ಸಮ್ಮತಿಯೂ ಇದೆ - 'ಪ್ರಾಬಲ್ಯವು ಎರಡು ವಿಧ - ಸಂಖ್ಯೆಯಿಂದ ಮತ್ತು ಸ್ವಭಾವದಿಂದ. ಇವೆರಡರಲ್ಲಿ ಸ್ವಭಾವದಿಂದ ಪ್ರಬಲವಾದದ್ದು ಪ್ರಧಾನ. ಅದೇ ಉಪಜೀವ್ಯವೆಂದು ಕರೆಸಿಕೊಳ್ಳುತ್ತದೆ.' ಎಂದು.

ಹಿಂದೆ ಮತ್ತೊಂದು ಆಕ್ಷೇಪ ಮಾಡಿದ್ದರು - ಬ್ರಹ್ಮಶಬ್ದದ ಮೂರು ಬಗೆಯ ಅರ್ಥದಲ್ಲಿ 'ವಸ್ತುತಃ ಪೂರ್ಣತ್ವವನ್ನು ಹೇಳಬೇಕು' ಎಂದು. ಅದೂ ಸಹ ತಪ್ಪು. ಏಕೆಂದರೆ 'ವಸ್ತುತಃ ಪೂರ್ಣ' ಎಂಬರ್ಥವನ್ನು ನಾವು ಮುಂದೆ ನಿರಾಕರಿಸುತ್ತೇವೆ. ಹಾಗಾಗಿ ಬೇರೆ ಅರ್ಥ ಅವರಿಗೆ ಹೇಳಲಾಗದು. ಗುಣಪೂರ್ಣತ್ವಾರ್ಥವನ್ನು ಅವರು ಒಪ್ಪಿಕೊಳ್ಳಲೇಬೇಕಾಗುತ್ತದೆ.

ಮತ್ತು ಅದ್ವೈತವಾಕ್ಯಗಳಿಗೆ ಅದ್ವೈತಪರವಾದ ಉಪಕ್ರಮಾದಿಗಳಿಗೆ ದ್ವೈತಪರವಾಗಿಯೇ ಅರ್ಥ ಹೇಳುವುದು ಸುಲಭವೆಂದು ನ್ಯಾಯಾಮೃತಾದಿಗ್ರಂಥಗಳಲ್ಲಿ ಉಪಪಾದಿಸಲಾಗಿದೆ.

ವಿಚಾರ ಮಾಡಿದರೆ ವಿಚಾರವಿಧಾಯಕವಾಕ್ಯ 'ತದ್ವಿಜಿಜ್ಞಾಸಸ್ವ' ಮಾತ್ರವಲ್ಲ. ಇಂತಹ ವಿಧಿವಾಕ್ಯಗಳು ವೇದರಾಶಿಯಲ್ಲಿ ಸಾವಿರಾರು ಇವೆ. ಅವುಗಳಲ್ಲಿ ಓಂ, ಬ್ರಹ್ಮ, ಆತ್ಮ, ನಾರಾಯಣ ಮೊದಲಾದ ಯೌಗಿಕ

ಶಬ್ದಗಳು ಸಾವಿರಾರು ಇವೆ. ಈ ಎಲ್ಲಾ ಶಬ್ದಗಳೂ ಗುಣಪೂರ್ಣತ್ವವೆಂಬರ್ಥವನ್ನೇ ಹೇಳುತ್ತಿವೆ. ಅನೇಕ ಅನೇಕ ಶ್ರುತಿಗಳ ಸಮ್ಮತಿಯೂ ಈ ಬ್ರಹ್ಮಶಬ್ದಕ್ಕೆ ಇದೆ. ಅಷ್ಟೇ ಅಲ್ಲ, ಒಂದೊಂದು ಶಬ್ದವೂ ಸಹ ಅನೇಕ ಕಡೆ ಬಂದಿದೆ - 'ನಾರಾಯಣಂ ಮಹಾಜ್ಞೇಯಂ' 'ನಾರಾಯಣನು ಮುಖ್ಯವಾಗಿ ವಿಚಾರಯೋಗ್ಯ' 'ನಾರಾಯಣೋಸೌ ಪರಮೋ ವಿಚಿಂತ್ಯಃ' 'ಈ ನಾರಾಯಣನನ್ನು ಮುಖ್ಯವಾಗಿ ವಿಚಾರಮಾಡಬೇಕು' ಇತ್ಯಾದಿ ಕಡೆಯಲ್ಲಿ ನಾರಾಯಣಶಬ್ದವು ಪುನಃ ಪುನಃ ಬಂದಿದೆ. ಹಾಗೆಯೇ 'ತದ್ವಿಜಿಜ್ಞಾಸಸ್ವ ತದ್‌ಬ್ರಹ್ಮ' 'ಅದನ್ನು ಜಿಜ್ಞಾಸೆ ಮಾಡು, ಅದು ಬ್ರಹ್ಮ' 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' 'ತಪಸ್ಸಿನಿಂದ ಬ್ರಹ್ಮಜಿಜ್ಞಾಸೆ ಮಾಡು' ಈ ಶ್ರುತಿಗಳಲ್ಲೆಲ್ಲಾ ಬ್ರಹ್ಮಶಬ್ದವೇ ಬಂದಿದೆ. ಹೀಗೆ ಒಂದೊಂದು ಶಬ್ದಗಳು ವೇದರಾಶಿಯಲ್ಲಿ ಅನೇಕ ಕಡೆ ಬಂದಿರುವುದರಿಂದ ಸಂಖ್ಯೆಯಿಂದಲೂ ಸ್ವಭಾವದಿಂದಲೂ ಈ ಎಲ್ಲಾ ಶಬ್ದಗಳು ಪ್ರಬಲವಾಗಿವೆ. ಆದ್ದರಿಂದ ಇಲ್ಲಿರುವ ಒಂದೊಂದು ಶಬ್ದಗಳೂ ಸಮಸ್ತ ಅದ್ವೈತವೇದಾಂತಕ್ಕೆ ಪ್ರತಿಸ್ಪರ್ಧಿಯಾಗಿ ನಿಲ್ಲಬಲ್ಲವು.

ಮತ್ತು ಈ ಸೂತ್ರದಲ್ಲಿ 'ತದ್ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬುದು ಮಾತ್ರ ವಿಷಯವಾಕ್ಯವಲ್ಲ. ವಿಚಾರ ವಿಧಾಯಕವಾದ ಸಾವಿರಾರು ವಿಧಿವಾಕ್ಯಗಳೆಲ್ಲವೂ ಈ ಸೂತ್ರದ ವಿಷಯವಾಕ್ಯಗಳಾಗಿವೆ. ಹೀಗೆ ಒಪ್ಪದಿದ್ದರೆ ಒಂದು ಸೂತ್ರ ಒಂದೇ ಶ್ರುತಿಯನ್ನು ಸಮನ್ವಯ ಮಾಡಿದಂತಾಗುವುದರಿಂದ ವಿಶ್ವತೋಮುಖತ್ವ ಭಂಗವಾಗಬೇಕಾದೀತು. ಆದ್ದರಿಂದ ಅನೇಕ ವಿಚಾರವಿಧಾಯಕ ವಾಕ್ಯಗಳು ವೇದಾಂತಕ್ಕೆ ಅದ್ವೈತತಾತ್ಪರ್ಯವನ್ನು ಹೊಡೆದೋಡಿಸಲು ಸಮರ್ಥವಾಗಿವೆ. ಅನೇಕ ವಿಷಯವಾಕ್ಯಗಳಿರುತ್ತವೆ ವಿಚಾರವನ್ನು ಓಂಕಾರವು ಸೂಚಿಸುತ್ತದೆಂದು ಮುಂದೆ ಹೇಳುವವರಿದ್ದೇವೆ.

ಭೇದಕ್ಕೆ ಉಪಪಾದಕವಾದ ವಿರುದ್ಧಗುಣಗಳಲ್ಲಿ ಶ್ರುತಿ ಮಾತ್ರ ಪ್ರಮಾಣವಲ್ಲ. ಪ್ರತ್ಯಕ್ಷ ಮತ್ತು ಅನುಮಾನಗಳೂ ಪ್ರಮಾಣವಾಗಿವೆ, ಎಂದು ತಿಳಿಯಬೇಕು. ಇದನ್ನು ಸೂತ್ರಕಾರರೇ ಸ್ವತಃ ಗುಣಪೂರ್ಣವೆಂಬ ಅರ್ಥ ಹೇಳುವ ಬ್ರಹ್ಮಶಬ್ದದಿಂದ ತಿಳಿಸಿದ್ದಾರೆ. ಅವುಗಳಲ್ಲಿ 'ಪ್ರತ್ಯಕ್ಷಾನುಭವಕ್ಕೆ ವಿರೋಧಿಯಾಗಿ ಸಾವಿರ ಮಾತುಗಳನ್ನು ಹೇಳಿದರೂ ಅವು ಬಾಧಕಗಳಾಗಲಾರವು' ಎಂಬ ವಿಷಯವನ್ನು ನ್ಯಾಯಾಮೃತಾದಿಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಆದ್ದರಿಂದ ಒಂದೇ ಬ್ರಹ್ಮಶಬ್ದವು ಸಮಸ್ತ ವೇದಾಂತಕ್ಕೆ ಹೇಗೆ ತಾನೆ ಪ್ರತಿಸ್ಪರ್ಧಿಯಾಗುತ್ತದೆ? ಎಂದು ನೀವು ಮಾಡಿದ ಆಕ್ಷೇಪವು ಹುರುಳಿಲ್ಲ ಎಂಬುದು ನಿರ್ಣಯವಾಯಿತು.

ಇಲ್ಲಿಗೆ ಈ ಚರ್ಚೆ ಮುಗಿಸೋಣ. ಇದರ ವಿವರಣೆ ಬೇಕಾದಲ್ಲಿ ಗುರುಗಳಾದ ವಿಜಯೀಂದ್ರರ 'ಕಂಠಕೋದ್ಧಾರ' ಗ್ರಂಥವನ್ನು ನೋಡಬಹುದು.

ಬ್ರಹ್ಮನ ವಿಷಯದಲ್ಲಿ ಸಂದೇಹವಿಲ್ಲದ್ದರಿಂದ ವಿಷಯವಿಲ್ಲ. ಆದ್ದರಿಂದಲೇ ಪ್ರಯೋಜನಗಳೂ ಇಲ್ಲ. ಹೀಗೆ ವಿಷಯಾದ್ಯಭಾವವೆಂಬ ಯುಕ್ತಿಯಿಂದ 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿ ಅಪ್ರಮಾಣವಾಗುತ್ತದೆಂಬ ಹಿಂದಿನ ಆಕ್ಷೇಪವು ಈಗ ನಿರಾಕೃತವಾಯಿತು. ಏಕೆಂದರೆ ಬ್ರಹ್ಮನು ಗುಣಪೂರ್ಣ. ಜೀವನು ಅಲ್ಪಗುಣ ಈ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. ಆದ್ದರಿಂದ ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾಗಿದ್ದರೂ

ಬ್ರಹ್ಮನು ಸಂದಿಗ್ಧನಾಗಿದ್ದಾನೆ. ಆದ್ದರಿಂದ ಈ ಶಾಸ್ತ್ರಕ್ಕೆ ಬ್ರಹ್ಮನೇ ವಿಷಯ. ಆದ್ದರಿಂದಲೇ ಫಲವೂ ಇದೆ. ಯೋಗ್ಯಜಿಜ್ಞಾಸುಗಳಾದ ಅಧಿಕಾರಿಗಳೂ ಇದ್ದಾರೆ. ಇವೆಲ್ಲವುಗಳಿಗೆ ಪರಸ್ಪರ ಸಂಬಂಧವೂ ಇದೆ. ಆದ್ದರಿಂದ 'ತದ್ವಿಜಿಜ್ಞಾಸಸ್ವ' ಶ್ರುತಿಯು ಪ್ರಮಾಣವಾಗುತ್ತದೆ. ಶಾಸ್ತ್ರವು ಆರಂಭಣೀಯವಾಗುತ್ತದೆ. ಯಾವ ಆಕ್ಷೇಪಗಳಿಗೂ ಅವಕಾಶವಿಲ್ಲ.

## ಸಾರ

### ಜಿಜ್ಞಾಸಾಧಿಕರಣ ಸಿದ್ಧಾಂತ

ಬ್ರಹ್ಮಶಬ್ದವು 'ಗುಣಪೂರ್ಣ' ಎಂಬ ಅರ್ಥವನ್ನು ಕೊಡುತ್ತದೆ. 'ನಾನು' ಎಂದು ಅನುಭವದಲ್ಲಿ ತಿಳಿಯುವ ಜೀವ 'ಅಪೂರ್ಣಗುಣ' ಎಂದೇ ಸಿದ್ಧನಾಗಿದ್ದಾನೆ. ಆದರಿಂದ ಬ್ರಹ್ಮಶಬ್ದವು ಹೇಳುವ ಗುಣಪೂರ್ಣನು ಜೀವನಿಗಿಂತ ಬೇರೆ ಎಂದು ತಿಳಿಯುತ್ತದೆ. ಅನುಭವವೂ ಜೀವನನ್ನು ಗ್ರಹಿಸುವಾಗ ಬ್ರಹ್ಮಶಬ್ದವು ಹೇಳುವ ಗುಣಪೂರ್ಣನಿಗಿಂತ ಜೀವನು ಬೇರೆ ಎಂದೇ ಗ್ರಹಿಸುತ್ತದೆ. ಬ್ರಹ್ಮಜಿಜ್ಞಾಸೆ ಮಾಡೆಂದು ಶ್ರುತಿ ವಿಧಿಸುತ್ತಿದೆ. ಬ್ರಹ್ಮ ಜಿಜ್ಞಾಸ್ಯ. ಜೀವ ಜಿಜ್ಞಾಸು. ಇವರಿಬ್ಬರೂ ಬೇರೆಯೆ ಆಗಿರಬೇಕು. 'ಜೀವ ಪರಮಾತ್ಮರು ಬೇರೆ. ಅವರ ಸ್ವಭಾವ ಬೇರೆಯಾದ್ದರಿಂದ ನೀರು ಬೆಂಕಿಗಳಂತೆ' ಎಂದು ಅನುಮಾನವೂ ಇದೆ. ಹೀಗೆ ಬ್ರಹ್ಮ ಬೇರೆಯೆ ಇರುವುದರಿಂದ ಅವನು 'ನಾನು' ಎಂಬ ಸ್ವಪ್ರಕಾಶಾನುಭವದಲ್ಲಿ ಜೀವನಿಗೆ ಗೋಚರನಲ್ಲ. ಅವನು ನಿರ್ಗುಣ, ಎಂಬು ಗುಣವುಳ್ಳವನೆಂದು ಮುಂತಾಗಿ ವಿವಾದವೂ ಇರುವುದರಿಂದ ಸಂದೇಹವಿದೆ. ವಿಚಾರಕ್ಕೆ ಯೋಗ್ಯನೇ ಆಗಿದ್ದಾನೆ. ಪೂರ್ಣತ್ವ ಅಪೂರ್ಣತ್ವಗಳು ಅವಾಸ್ತವವಾದ್ದರಿಂದ ಭೇದವಿಲ್ಲ ಎನ್ನಬಾರದು. ಪೂರ್ಣತ್ವ ಶ್ರುತಿಸಿದ್ಧ. ಅಪೂರ್ಣತ್ವ ಸಾಕ್ಷಿವೇದ್ಯ. ಶ್ರುತಿ ಸಾಕ್ಷಿಗಳೆರಡೂ ಅನಾದಿ ನಿರ್ದೋಷ. ಅವುಗಳಿಂದ ಸಿದ್ಧವಾದುದು ಅವಾಸ್ತವವಾಗಲಾರದು.

· ಸಮಸ್ತ ವೇದಾಂತವು ಉಪಕ್ರಮ ಮುಂತಾದ ಬಲವಾದ ಯುಕ್ತಿಗಳಿಂದ ಅದ್ವೈತಪರವೆಂದು ಸಿದ್ಧವಾಗಿರುವಾಗ ಒಂದು ಬ್ರಹ್ಮಶಬ್ದ ಅದಕ್ಕೆ ವಿರುದ್ಧವಾಗಿ ಗುಣಪೂರ್ಣತ್ವವನ್ನು ಹೇಳೀತೆ? ಅದ್ವೈತಿಗಳು ಹೇಳುವಂತೆ ವಸ್ತುಪೂರ್ಣತ್ವರೂಪವಾದ ಅದ್ವೈತವನ್ನೆ ಬ್ರಹ್ಮಶಬ್ದ ಹೇಳಬೇಕು'- ಈ ಆಕ್ಷೇಪ ಸರಿಯಲ್ಲ. ಸಮಸ್ತ ವೇದಾಂತವು ವಿಚಾರವಿಧಿಗೆ ಅಧೀನ. ವಿಚಾರವಿಧಿ ಪ್ರಧಾನ. ಅದರಲ್ಲಿರುವ ಬ್ರಹ್ಮಶಬ್ದ ಪ್ರಬಲ. ಅದ್ವೈತ ಬೋಧಕವಾದ ವೇದಾಂತ ವಾಕ್ಯಪ್ರಮಾಣ. ಉಪಕ್ರಮಾದಿಗಳು ಲಿಂಗಪ್ರಮಾಣ. ಬ್ರಹ್ಮಶಬ್ದ ಶ್ರುತಿಪ್ರಮಾಣ. ವಾಕ್ಯಲಿಂಗಗಳಿಗಿಂತ ಶ್ರುತಿ ಪ್ರಬಲ ಎಂದು ಪೂರ್ವ ಮೀಮಾಂಸೆಯಲ್ಲಿ ನಿರ್ಣಯವಾಗಿದೆ. ಇಲ್ಲಿಯೂ ಮುಂದೆ ವಾಮನಾಧಿಕರಣದಲ್ಲಿ ಅದು ಸ್ಪಷ್ಟವಿದೆ. ವೇದಾಂತ ಐಕ್ಯವನ್ನು ಹೇಳಲು ಮೊದಲಿಗೆ ಬ್ರಹ್ಮಶಬ್ದದಿಂದ ಬ್ರಹ್ಮನನ್ನು ಹೇಳಬೇಕು. ಆದರಿಂದ ಬ್ರಹ್ಮಶಬ್ದ ಉಪಜೀವ್ಯವೂ ಹೌದು. ಹೀಗಾಗಿ ಸಂಖ್ಯೆಯಲ್ಲಿ ಬ್ರಹ್ಮಶಬ್ದ ಒಂದೇ ಆಗಿದ್ದರೂ ಸ್ವಭಾವದಿಂದ ಪ್ರಬಲವೆ ಆಗಿದೆ. ಸಂಖ್ಯಾಪ್ರಾಬಲ್ಯಕ್ಕಿಂತಲೂ ಸ್ವಭಾವಪ್ರಾಬಲ್ಯ ಮೇಲು. ಬ್ರಹ್ಮಶಬ್ದಕ್ಕೆ ವಸ್ತುಪೂರ್ಣತ್ವ ಅರ್ಥಹೇಳಲು ಬರುವುದಿಲ್ಲವೆಂದು ಮುಂದೆ ಹೇಳುತ್ತೇವೆ. ಆದರಿಂದ ಅದು ನಿರವಕಾಶ. ಉಪಕ್ರಮಾದಿಗಳು ದ್ವೈತಪರವಾಗಬಲ್ಲುವು. ಆದರಿಂದ ಸಾವಕಾಶ. ವಸ್ತುತಃ ವಿಚಾರವಿಧಾಯಕವಾಕ್ಯಗಳು ಸಾವಿರಾರು. ಅವುಗಳಲ್ಲಿರುವ ಓಂ ಬ್ರಹ್ಮ ಆತ್ಮ ನಾರಾಯಣಾದಿ ಶಬ್ದಗಳೂ ಸಾವಿರಾರು. ಅವುಗಳಲ್ಲಿ ಒಂದೊಂದು ಶಬ್ದವೂ ನಾನಾವಿಧ ವಿಚಾರ ವಿಧಿಗಳಲ್ಲಿ

ಬರುವುದರಿಂದ ಸಂಖ್ಯೆಯಲ್ಲಿಯೂ ಅಪರಿಮಿತವೆ. ಬ್ರಹ್ಮಶಬ್ದವು ಜೀವಬ್ರಹ್ಮ ಭೇದದ ವಿಷಯದಲ್ಲಿ ಪ್ರತ್ಯಕ್ಷ ಅನುಮಾನ ಆಗಮ ಎಂಬ ಮೂರು ಪ್ರಮಾಣಗಳನ್ನು ಸೂಚಿಸುತ್ತಿದೆ. ಅವುಗಳಲ್ಲಿ ಪ್ರತ್ಯಕ್ಷಾನುಭವ ... ಸಾವಿರ ಆಗಮ ವಾಕ್ಯಗಳಿದ್ದರೂ ಅವು ಬಾಧಕವಾಗಲಾರವು. ಆದರಿಂದ ವಿಷಯಾದಿಗಳಿರುವುದ... ವಿಚಾರ ಯುಕ್ತವೆ.

• • • • •

## ವಿಚಾರವಿಧಿವಾಕ್ಯಗಳ ಶಕ್ತಿ ಕ್ಷೀಣವಾಗಿಲ್ಲ

**तात्पर्यचन्द्रिका –**

**नच "मन्तव्यः" इत्यादेः "विष्णुरुपांशु यष्टव्यः" इत्यादिवदविधित्वमिति वाच्यम् । तत्र जामितादोषोपक्रमतन्निर्हरणान्तैकवाक्यमध्यस्थानां विष्ण्वादिवाक्यानां विधित्वे प्रतीतैकवाक्यताभङ्गादेरिव, प्रकृते बाधकस्याऽभावात् । अन्यथा 'स्वाध्यायोऽध्येतव्यः' इत्यत्राप्यर्हार्थत्वप्रसङ्गात् । प्रयाजादिवाक्यस्य स्वयमवान्तरवाक्यतया विधायकस्याऽपि पुनर्दर्शपूर्णमासादिवाक्येन वाक्यैकवाक्यतावत् प्रकृतेऽपि पृथग्विधायकस्यापि ब्रह्मपरवाक्येन वाक्यैकवाक्यतोपपत्तेश्च । "यदभिघारयेत्" इत्यादौ "अभिघार्यातैयम्बका नाभिघार्या इति मीमांसन्ते" इति मीमांसासमभिव्याहारेणेव "यस्योभयं हविरार्तिमार्च्छेत्" इत्यादौ निमित्तत्वाभिधायकयच्छब्धादिनेव, "तद् विजिज्ञासस्व" इत्यादौ केनचिद् विधिशक्तिप्रतिबन्धाभावाच्च । "आत्मन्येवाऽऽत्मानं पश्येत्" इत्यादावपि दर्शनस्य लक्षितस्य विचारस्य वा विधिसम्भवाच्च । सति बाधके विधावपि लक्षणायाः स्वीकृतत्वाच्च । अध्ययनविधेरपि विचाराक्षेपकताया विचारविधेरपूर्वविधित्वादेश्च अन्यत्रोक्तत्वाच्चेति । तदेतदभिप्रेत्योक्तं न्यायविवरणे –"तद् विजिज्ञासस्व, 'तद् ब्रह्मेति' ब्रह्मशब्देन गुणपूर्णत्वोक्तेर्नानुभवसिद्धाल्पगुणजीवाभेदः" इति ।**

ಅನುವಾದ - ಶಂಕೆ - 'ತದ್ವಿಜಿಜ್ಞಾಸ್ವ' ಇತ್ಯಾದಿ ವಿಚಾರವಿಧಾಯಕವಾಕ್ಯಗಳು ಪ್ರಮಾಣವಾದರೂ ಸಹ ವಿಧಿಶಕ್ತಿಯನ್ನು ಕಳೆದುಕೊಂಡಿವೆ. ಯಾವ ರೀತಿಯಾಗಿ 'ವಿಷ್ಣುರುಪಾಂಶು ಯಷ್ಟವ್ಯಃ' ಎಂಬ ಶ್ರುತಿಯಲ್ಲಿರುವ 'ತವ್ಯ' ಪ್ರತ್ಯಯವು ವಿಧಿಶಕ್ತಿಯನ್ನು ಕಳೆದುಕೊಂಡಿದೆಯೋ ಹಾಗೆಯೇ ಇಲ್ಲಿಯೂ 'ಲೋಟ್' ಪ್ರತ್ಯಯವು ವಿಧಿಶಕ್ತಿಯನ್ನು ಕಳೆದುಕೊಂಡಿದೆ.

*ಪರಿಪೂರ್ಣಚಂದ್ರಿಕಾ*

ಸಮಾಧಾನ - ಪ್ರಾರಂಭದಲ್ಲಿ ಬೇಸರ ಉಂಟಾಗುತ್ತದೆಂದು ಹೇಳಲಾಗಿದೆ. ಕೊನೆಯಲ್ಲಿಯೂ ಬೇಸರ ಕಳೆಯುವುದಕ್ಕಾಗಿ ಎನ್ನಲಾಗಿದೆ. ಹೀಗೆ ಈ ಮಹಾವಾಕ್ಯವು ಬೇಸರ ಕಳೆಯುವುದಕ್ಕಾಗಿ ಯಾವುದೋ ಒಂದು ಹೊಸ ಯಾಗವನ್ನು ವಿಧಿಸುತ್ತಿದೆಂದು ತಿಳಿಯುತ್ತದೆ. ಒಂದು ವೇಳೆ ವಿಷ್ಣ್ವಾದಿವಾಕ್ಯಗಳು ಮೂರು ಯಾಗಗಳನ್ನು ವಿಧಿಸಿದರೆ ಏಕವಾಕ್ಯತ್ವಕ್ಕೆ ಭಂಗ ಬರುತ್ತದೆ. ಆದ್ದರಿಂದ 'ಯಷ್ಟವ್ಯಃ' ಎಂಬಲ್ಲಿನ ತವ್ಯ ಪ್ರತ್ಯಯವು ವಿಧ್ಯರ್ಥವಾಗಲು ಸಾಧ್ಯವಿಲ್ಲ. ಈ ರೀತಿಯಾದ ಬಾಧಕವು ಪ್ರಕೃತದಲ್ಲಿ ಇಲ್ಲ. ಬಾಧಕವಿಲ್ಲದಿದ್ದರೂ ವಿಧ್ಯರ್ಥವನ್ನು ಸ್ವೀಕರಿಸಬಾರದೆಂದು ಹೇಳಿದರೆ "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬಲ್ಲಿಯೂ 'ತವ್ಯ' ಪ್ರತ್ಯಯಕ್ಕೆ 'ಯಷ್ಟವ್ಯಃ' ಎಂಬಂತೆ ಅರ್ಹ ಎಂಬರ್ಥವನ್ನು ಹೇಳಬೇಕಾದೀತು. ಆದ್ದರಿಂದ ಇದೂ ವಿಧಿ ವಾಕ್ಯವಾಗದಿರಬೇಕಾದೀತು.

ಶಂಕೆ - ವೇದಾಂತಗಳೆಲ್ಲವೂ ಸಿದ್ಧಬ್ರಹ್ಮಪರಗಳಾಗಿವೆ. ಅವುಗಳ ಮಧ್ಯದಲ್ಲಿ ಬರುವ 'ಮಂತವ್ಯಃ' ಎಂಬಲ್ಲಿನ ತವ್ಯ ಪ್ರತ್ಯಯಕ್ಕೆ ವಿಧಿ ಎಂಬ ಅರ್ಥವನ್ನು ಹೇಳಿದರೆ ಬ್ರಹ್ಮಪರಮಹಾ-ವಾಕ್ಯದ ಏಕವಾಕ್ಯತ್ವಕ್ಕೆ ಭಂಗ ಬರುತ್ತದೆ.

ಸಮಾಧಾನ - ಪ್ರಯಾಜಾದಿವಾಕ್ಯಗಳು ಸ್ವತಃ ಅವಾಂತರವಾಕ್ಯಗಳಾಗಿದ್ದರೂ ಅಂಗಯಾಗವನ್ನು ಪ್ರತ್ಯೇಕವಾಗಿ ವಿಧಿಸುತ್ತಿವೆ. ಆದರೂ ಸಹ ಪ್ರಧಾನಯಾಗವನ್ನು ವಿಧಿಸುವ ದರ್ಶಪೂರ್ಣಮಾಸಾದಿ ವಾಕ್ಯದಿಂದ ಏಕವಾಕ್ಯತ್ವವೂ ಇದೆ. ಅದರಂತೆ ಪ್ರಕೃತದಲ್ಲಿ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಾಕ್ಯಗಳು ವಿಚಾರವನ್ನು ವಿಧಿಸಿದರೂ ಸಹ ಬ್ರಹ್ಮಪರವಾದ ಮಹಾವಾಕ್ಯದಿಂದ ಏಕವಾಕ್ಯತ್ವ ಬರಲು ಏನೂ ಬಾಧಕವಿಲ್ಲ.

ಶಂಕೆ - ತವ್ಯಪ್ರತ್ಯಯಾಂತವಾದ ವಾಕ್ಯವಿಚಾರ ಸರಿ, ಆದರೆ ಲಿಙ್, ಲೋಟ್ ಮೊದಲಾದ ಪ್ರತ್ಯಯಗಳ ವಿಧಿಶಕ್ತಿಯು ಕುಂಠಿತವಾಗುತ್ತದೆಂದು ಹಿಂದೆ ಆಕ್ಷೇಪಿಸಲಾಗಿದೆ.

ಸಮಾಧಾನ - 'ಯದಭಿಘಾರಯೇತ್' ಇತ್ಯಾದಿ ವಾಕ್ಯದಲ್ಲಿ 'ಲಿಙ್' ಪ್ರತ್ಯಯದ ವಿಧಿಶಕ್ತಿಯು ಕುಂಠಿತವಾಗಿದೆ. ಏಕೆಂದರೆ 'ಅಭಿಘಾರ್ಯಾಸ್ತ್ರ್ಯಂಬಕಾ ನಾಭಿಘಾರ್ಯಾ ಇತಿ ಮೀಮಾಂಸಂತೇ' ಎಂಬಲ್ಲಿನ ಮೀಮಾಂಸಾಶಬ್ದದ ಸಮಭಿವ್ಯಾಹಾರ ಇರುವುದರಿಂದ 'ಲಿಙ್' ಪ್ರತ್ಯಯವು 'ವಿಧಿ'ಯನ್ನು ಹೇಳಲಾರದು. ಹಾಗೆಯೇ "ಯಸ್ಯೋಭಯಂ ಹವಿರಾರ್ತಿ-ಮಾರ್ಚ್ಛೇತ್" ಎಂಬಲ್ಲಿಯೂ 'ಯತ್' ಶಬ್ದದ ಸಮಭಿವ್ಯಾಹಾರ ಇರುವುದರಿಂದ ಇಲ್ಲಿರುವ ಆಖ್ಯಾತದ ವಿಧಿಶಕ್ತಿಯು ಕುಂಠಿತವಾಗಿದೆ. ಇದರಂತೆ ವಿಧಿಶಕ್ತಿಪ್ರತಿಬಂಧಕವಾದ ಯಾವ ಶಬ್ದಗಳೂ ಪ್ರಕೃತ ಇಲ್ಲ. ಆದ್ದರಿಂದ 'ತದ್ವಿಜಿಜ್ಞಾಸಸ್ವ' ಎಂಬಲ್ಲಿನ 'ಲೋಟ್' ಪ್ರತ್ಯಯವು ವಿಧಾಯಕವಾಗಲು ಏನೂ ತೊಂದರೆಯಿಲ್ಲ.

*ಜಿಜ್ಞಾಸಾಧಿಕರಣ*

**ಶಂಕೆ** - 'ಆತ್ಮನ್ಯೇವಾತ್ಮಾನಂ ಪಶ್ಯೇತ್' ಎಂಬ ವಾಕ್ಯವು ಜ್ಞಾನವನ್ನು ವಿಧಿಸಲಾರದು. ಇನ್ನು ವಿಚಾರದಲ್ಲಿ ಲಕ್ಷಣಾ ಮಾಡಬೇಕು. ಆದರೆ ವಿಧಿವಾಕ್ಯಗಳಿಗೆ ಲಕ್ಷಣಾ ಮಾಡಲು ಬರುವುದಿಲ್ಲ ಎಂಬ ಹಿಂದಿನ ಆಕ್ಷೇಪ ನಿಮಗೆ ತಪ್ಪಿದ್ದಲ್ಲ.

**ಸಮಾಧಾನ** - ಜ್ಞಾನವೂ ಸಹ ವಿಧೇಯವಾಗಬಹುದು. ಆದ್ದರಿಂದ 'ಪಶ್ಯೇತ್' ಎಂಬುದು ಜ್ಞಾನವನ್ನು ವಿಧಿಸುತ್ತಿದೆಂದು ಹೇಳಿದರೆ ಏನೂ ಬಾಧಕವಿಲ್ಲ. ಅಥವಾ ವಿಚಾರದಲ್ಲಿ ಲಕ್ಷಣಾ ಮಾಡಿ ವಿಚಾರವನ್ನು ವಿಧೇಯ ಎಂದೂ ಹೇಳಬಹುದು. ಏಕೆಂದರೆ ಬಾಧಕವಿದ್ದಾಗ ವಿಧಿಯಲ್ಲಿಯೂ ಲಕ್ಷಣಾ ಮಾಡಬಹುದೆಂದು ಮೀಮಾಂಸಕರೂ ಒಪ್ಪಿಕೊಂಡಿದ್ದಾರೆ.

**ಶಂಕೆ** - ಅಧ್ಯಯನ ವಿಧಿಯು ನಿತ್ಯವಿಧಿಯಾಗಿರುವುದರಿಂದ ಅದಕ್ಕೆ ಅರ್ಥಜ್ಞಾನ ಎಂಬ ಫಲ -ವನ್ನು ಹೇಳಬೇಕಾಗಿಲ್ಲ. ಆದ್ದರಿಂದ ವಿಚಾರವು ಆಕ್ಷೇಪದಿಂದ ಸಿದ್ಧಿಸುವುದಿಲ್ಲ. ಮತ್ತು ವಿಚಾರವು ಜ್ಞಾನಕ್ಕೆ ಸಾಧನವೆಂದು ಮೊದಲೇ ತಿಳಿದಿರುವದರಿಂದ ಅದನ್ನು ಹೇಳಲು ವಿಧಿವಾಕ್ಯ ಬೇಕಾಗಿಲ್ಲ.

**ಸಮಾಧಾನ** - ಅಧ್ಯಯನವಿಧಿಯಿಂದ ವಿಚಾರವು ಆಕ್ಷೇಪದಿಂದ ಸಿದ್ಧಿಸುತ್ತದೆ. ಮತ್ತು ವಿಚಾರವಿಧಿಯು ಅಪೂರ್ವವಿಧಿ ಆಗಿದೆ ಎಂಬುದನ್ನು ನ್ಯಾಯಾಮೃತಾದಿಗ್ರಂಥಗಳಲ್ಲಿ ವಿವರಿಸಲಾಗಿದೆ. ಈ ಎಲ್ಲಾ ಸಿದ್ಧಾಂತಪ್ರಮೇಯಗಳನ್ನು ನ್ಯಾಯವಿವರಣವಾಕ್ಯದಲ್ಲಿ ಸೂಚಿಸಲಾಗಿದೆ - 'ಅದನ್ನು ಜಿಜ್ಞಾಸೆಮಾಡು ಅದು ಬ್ರಹ್ಮ' ಎಂಬಲ್ಲಿ ಬ್ರಹ್ಮಶಬ್ದವು ಗುಣಪೂರ್ಣವೆಂಬ ಅರ್ಥದಲ್ಲಿದೆ. ಆದರೆ ಅನುಭವವು ಜೀವನನ್ನು ಅಲ್ಪಗುಣನೆಂದು ಹೇಳುತ್ತಿದೆ. ಆದ್ದರಿಂದ ಐಕ್ಯವಿಲ್ಲ' ಎಂದು. ನ್ಯಾಯವಿವರಣದ ಈ ಮಾತನ್ನೇ ಪ್ರಕೃತ ಟೀಕೆಯಲ್ಲಿ ವಿವರಿಸಲಾಗಿದೆ.

**ಕಠಿಣಪದಾರ್ಥ**

**ವಿಷ್ಣುರುಪಾಂಶು ಯಷ್ಟವ್ಯಃ** = ವಿಷ್ಣುವನ್ನು ಕುರಿತು ಉಪಾಂಶು ಮಂತ್ರಗಳಿಂದ ಯಾಗ ಮಾಡಲ್ಪಡಬೇಕು. **ಜಾಮಿತಾದೋಷೋಪಕ್ರಮತನ್ನಿರ್ಹರಣಾತ್ಮೈಕವಾಕ್ಯಮಧ್ಯಸ್ಥಾನಾಮ್** = ಜಾಮಿತಾ ದೋಷದ ಪ್ರಾರಂಭದಿಂದ ಉಪಸಂಹಾರದ ತನಕ ಏಕವಾಕ್ಯವಾಗುತ್ತದೆ. ಆ ಏಕವಾಕ್ಯದ ಮಧ್ಯದಲ್ಲಿ 'ವಿಷ್ಣುರುಪಾಂಶುಃ' ಎಂಬ ವಾಕ್ಯಗಳು ಪಠಿತವಾಗಿವೆ. ಇವುಗಳ **ಪ್ರತೀತೈಕವಾಕ್ಯತಾಭಂಗಾದೇರಿವ** = ಪ್ರತೀತವಾದ ಏಕವಾಕ್ಯತ್ವಕ್ಕೆ ಭಂಗ ಬರುವಂತೆ. **ಅನ್ಯಥಾ** = ಬಾಧಕವಿಲ್ಲದಿದ್ದರೂ ಅಹಾರ್ಥತ್ವವನ್ನು ಹೇಳುವುದಾದರೆ. **ವಾಕ್ಯೈಕವಾಕ್ಯತಾವತ್** = ಬ್ರಹ್ಮಪರವಾಕ್ಯದಿಂದ ಏಕವಾಕ್ಯತಾ ಬರುವುದರಿಂದ (ಟೀಕೆಯಲ್ಲಿ ಬ್ರಹ್ಮಪರವಾಕ್ಯೈಕವಾಕ್ಯತಾ ಎಂದಿದೆ). **ದರ್ಶನಸ್ಯ** = ಜ್ಞಾನದ. **ವಿಚಾರಾಕ್ಷೇಪಕತಾಯಾಃ** = ವಿಚಾರವನ್ನು ಆಕ್ಷೇಪಿಸುತ್ತದೆ ಎಂಬುದನ್ನು. **ಅನ್ಯತ್ರ** = ನ್ಯಾಯಾಮೃತದ ತೃತೀಯ ಪರಿಚ್ಛೇದದಲ್ಲಿ. **ತದೇತತ್** = ಈ ಸಿದ್ಧಾಂತ ಪ್ರಮೇಯವನ್ನಲ್ಲ.

*ಪರಿಪೂರ್ಣಚಂದ್ರಿಕಾ*

प्रकाशः - ननु प्रामाण्येऽपि तव्यादेरविधायकत्वमुक्तमित्यतस्तदुद्धरति ।। नच मन्तव्य इत्यादेरिति ।। "जामि वा एतद् यज्ञस्य क्रियते" इत्यादिवाक्ये जामितादोषोपक्रमात्, "अग्नीषोमावुपांशु यष्टव्यावाजामित्वाय" इत्यन्ते जामितादोषनिर्हरणस्योपसंहाराच्च । तदन्तमेकं वाक्यमिति निर्णीतत्वेन, मध्ये विष्ण्वादिवाक्यानां विधायकत्वे प्रतीतैकवाक्यता भज्येत । नह्येवं प्रकृते बाधकमस्तीति भावः ।। अन्यथेति ।। बाधकाभावेऽप्यर्हार्थत्वे । नन्वत्राऽपि सर्वस्य ब्रह्मपरतया प्रतीतैकवाक्यताभङ्ग एव बाधक इत्यतः, दृष्टान्त-पूर्वमेकवाक्यतामाह – प्रयाजादीति ।। तृतीये "असंयुक्तं प्रकरणादिति कर्तव्यताऽर्थित्वात्" इति तृतीयपादीयचतुर्थाधिकरणे दर्शपूर्णमासयोः श्रुतानां समिदादिपञ्चप्रयाजानां परस्पराकाङ्क्षादिरूपेण प्रकरणेन विनियोगोऽस्त्युत नेति विशये, स्वर्गकामस्य दर्शपूर्णमासौ कर्तव्यावित्यर्थपर्यवसानान्निरपेक्षं प्रधान-वाक्यम् । "समिधो यजति" इत्यादेः फलाकाङ्क्षायामपि "स स्वर्गः स्यात्" इति न्यायेन तल्लाभान्नैराकांक्ष्याच्च प्रकरणेन विनियोग इति प्राप्ते, यदि दर्शपूर्णमासौ कर्तव्यौ इति वाक्यार्थः स्यात्, तदा यागक्रियाया निर्ज्ञातप्रकारत्वात् स्यान्नैराकाङ्क्ष्यम् । दर्शपूर्णमासाभ्यां स्वर्गः कार्य इति हि वाक्यार्थः । तत्र न ज्ञायते केन प्रकारेण ताभ्यां स्वर्गः कार्य इति । तेनास्तीतिकर्तव्यताकाङ्क्षा । प्रयाजादेस्तु फलाकाङ्क्षा स्पष्टैवेति, साकाङ्क्षयोः सन्निहितयोः अप्रत्यक्षैकवाक्यत्व-मात्रकल्पनं फलान्तरकल्पनाल्लघीयः । अतः प्रकरणेन समिदादीनां विनियोग इति सिद्धान्तितम् ।

अत्र यथा प्रधानवाक्यैकवाक्यता अङ्गवाक्यानां विधायकत्वाविरोधिनी, तथा ब्रह्मपरवाक्यैकवाक्यताऽपि न विचारविधित्वविरोधिनीत्यर्थः । मोक्षहेतुब्रह्मोत्कर्ष-ज्ञानाय प्रवृत्तानामखिलवेदान्तानां विचारापेक्षणाद् विचारविधिवाक्यैश्च ब्रह्मज्ञानोद्देशेन तत्करणवेदानुग्राहकतया विचारविधानाद् ब्रह्मपरवाक्यैकवाक्यत्वं द्रष्टव्यम् । यदपि लिङादेरविधायकत्वमुक्तं, तदप्युद्धरति – यदभिघारयेदिति ।।

व्याख्यातप्रायमेतत् ।। यस्योभयमिति ।। द्वितीये "विधिमन्त्रयोरैकार्थ्यमैक-शब्द्यात्" इति आद्यपादीयसप्तमाधिकरणे "यस्योभयं हविरार्तिमार्च्छेत्" "ऐन्द्रं पञ्चशरावमोदनं निर्वपेत्" इत्यादिषु निमित्तप्रतिपादनेनाऽऽख्यातान्तरैक-वाक्यतामागतेष्वाख्यातेषु विधायकत्वमस्त्युत नेति सन्देहे, प्रसिद्धविधायका-ख्यातकैरूप्याद् विधायकत्वमिति प्राप्ते, निमित्तत्वावगमकेन यच्छब्देन विधिशक्तिप्रतिबन्धान्न विधायकत्वमिति सिद्धान्तितम् । अत्रोभयत्र यथा 'मीमांसन्ते' इति 'यस्य' इति च विधिशक्तिप्रतिबन्धनपरशब्दश्रवणं दृश्यते, न तथा "तद् विजिज्ञासस्व" इत्यादावित्यर्थः । यद्यपि "अग्नीदग्नीन् विहर" इत्यादाविवाभिमुखानभिमुखसाधारणविधिविरुद्धस्वभावेनाभिमुखमात्रविषयेण मन्त्रेण न विधिशक्तिप्रतिबन्धो ज्ञायते, तथाऽपि क्रतुप्रयोगमध्यपातिषु प्रैषेष्वेव प्रतिबन्धकत्वम् । प्रकृते तु पुराकल्पस्वरूपार्थवादेन विध्युन्नयनान्न कश्चित् प्रतिबन्ध इति भावः ।। दर्शनस्येति ।। "पत्न्यवेक्षितमाज्यं भवति" । "विदुषा कर्म कर्तव्यम्" । "तस्मात् पश्येत नित्यशः" इत्यादौ ज्ञानविधिदर्शनान्न प्रागुक्तदोषः । समर्थितं चैतन्न्यायामृते तृतीयपरिच्छेदे इति भावः ।। लक्षितस्येति ।। ननु 'विधौ न लक्षणा' इत्युक्तमित्यत आह ।। सतीति ।। अत एव "सोमेन यजेत" इत्यादौ सोमेन यागं, यागेन स्वर्गं कुर्यादिति वैयधिकरण्येनान्वये उद्देश्यत्वोपादेयत्वानुवाद्यत्व विधेयत्वप्रधानत्वगुणत्वरूपविरुद्धत्रिकद्वयापत्तिरूप-बाधकेन सोमवता यागेनेति सामानाधिकरण्येनान्वयाय मत्वर्थलक्षणाया अङ्गी-कृतत्वात्, अन्वयानुपपत्तेस्तात्पर्यानुपपत्तेर्वा लक्षणाबीजस्य विध्यविधि-साधारण्याच्च, शाबरवचनस्याप्यनुवादकमुख्यार्थत्वाय विधौ लक्षणा न न्याय्येत्येवं-परत्वादिति भावः । यदप्यध्ययनविधेर्नित्यत्वेन विचारानापेक्षकत्वं, विचारस्य ज्ञानहेतुत्वप्राप्त्या विध्यनपेक्षत्वमुक्तम्, तद्द्वयमप्युद्धरति ।। अध्ययनविधेरिति ।। न्यायामृते तृतीयपरिच्छेदे उक्तत्वादित्यर्थः । विस्तरभयान्नास्माभिरपि लिख्यत इति तत्रैवानुसन्धेयम् । उक्तं सिद्धान्तटीकाप्रमेयं न्यायविवरणमूलमित्याह ।। तदेतदिति ।। व्याख्यातप्रायमेतत् ।।

ಪಂಪೂರ್ಣಚಂದ್ರಿಕಾ

गुरुराजीय – सिद्धान्ते तद् विजिज्ञासस्वेति वाक्यस्यस्वपक्षसाधक-ब्रह्मशब्दोपेतत्वेन प्रथममुदाहरणस्य कृतत्वेपि पूर्वपक्षिकृततन्निराकरणक्रमानुसारेणैव तत्समर्थनं कर्तव्यमिति भावेन तत्र श्रोतव्य इत्यस्य विचारविधायकत्वेनानभि-प्रेतत्वात् तस्य विचारविधायकत्वमसमर्थ्यैव मन्तव्य इत्यादेस्तत् समर्थयितुं शङ्कते ।। नच मन्तव्य इति ।। मध्यस्थानामिति ।। यद्यपि राणकोदाहृते 'जामिवा एतद्यज्ञस्य क्रियते यदन्वंचौ पुरोडाशावुपांशुयाजमन्तरा यजत्यजामित्वायायो मिथुनत्वाय' इति तैत्तरीयशाखागते उपांशुयाजवाक्ये मध्ये विष्ण्वादयो न पठ्यंते तथापि भाष्यकाररीत्याऽत्रोदाहृते वाक्येऽपि विष्ण्वादयो मध्ये पठ्यंत एवेति तथोक्तमिति न कोपि दोष इति ध्येयम् ।। अन्यथेति ।। बाधकाभावेऽपि विधायकत्वानङ्गीकार इत्यर्थः । ननु मन्तव्य इत्यादेरपि पूर्वोत्तरब्रह्मवाक्यमध्यस्थतया विधायकत्वे प्रतीतैकवाक्यताभङ्ग एव बाधक इत्यत आह – प्रयाजादिवाक्यस्येति ।। विधिशक्तीति ।। एकवाक्यताभङ्गस्य निरस्तत्वादिति भावः ।। अन्यत्रेति ।। न्यायामृते तृतीयपरिच्छेद इत्यर्थः । एवमधिकरणशरीरं निर्णीतम् ।

ವಿವರಣೆ - 'ವಿಚಾರವಿಧಿಯು ಪ್ರಮಾಣವೆಂದೊಪ್ಪಿದರೂ ಅದರಲ್ಲಿ ಬರುವ ಮಂತವ್ಯ ಎಂದು ಮುಂತಾದ ಶಬ್ದಗಳ ತವ್ಯಪ್ರತ್ಯಯವು 'ವಿಷ್ಣುರುಪಾಂಶು ಯಷ್ಟವ್ಯಃ' ಎಂದು ಮುಂತಾದವುಗಳಂತೆ ವಿಧಿ-ಶಕ್ತಿಯನ್ನು ಕಳೆದುಕೊಂಡಿದೆ' ಎನ್ನುವವರಿಗೆ ಇದು ಸಮಾಧಾನ - 'ಜಾಮಿ ವಾ ಏತದ್ಯಜ್ಞಸ್ಯ ಕ್ರಿಯತೇ ಯದನ್ವಂಚೌ ಪುರೋಡಾಶೌ' 'ಎಡೆಬಿಡದೆ ಒಂದಾದ ಮೇಲೆ ಇನ್ನೊಂದರಂತೆ ಎರಡು ಪುರೋಡಾಶಯಾಗಗಳನ್ನು ನಡೆಸುವುದು ಬೇಸರ ಉಂಟು ಮಾಡುತ್ತದೆ' ಎಂದು ಪ್ರಾರಂಭದಲ್ಲಿ ಬೇಸರ ಉಂಟಾಗುವುದರ ಪ್ರಸ್ತಾಪವಿದೆ. ಕೊನೆಯಲ್ಲಿಯೂ 'ಅಗ್ನೀಷೋಮಾ ವುಪಾಂಶು ಯಷ್ಟವ್ಯಾವ-ಜಾಮಿತ್ವಾಯ' 'ಅಗ್ನಿಸೋಮರಿಗೆ ಉಪಾಂಶುಯಾಗ ಮಾಡಬೇಕು, ಬೇಸರ ಕಳೆಯುವುದಕ್ಕಾಗಿ' ಎಂದು ಬೇಸರ ಕಳೆಯುವುದರ ಬಗ್ಗೆ ಹೇಳಿದೆ. ಆದ್ದರಿಂದ ಪ್ರಾರಂಭದಿಂದ ಕೊನೆಯವರೆಗೂ ಒಂದು ಮಹಾವಾಕ್ಯ ಬೇಸರ ಕಳೆಯುವುದಕ್ಕಾಗಿ ಯಾವುದೋ ಒಂದು ಹೊಸ ಯಾಗವನ್ನು ಎರಡು ಯಾಗಗಳ ನಡುವೆ ಮಾಡಬೇಕೆಂದು ಹೇಳುವುದು ನಿಶ್ಚಿತ. ಆದರೂ ಮಧ್ಯದಲ್ಲಿ ವಿಷ್ಣುರುಪಾಂಶು ಯಷ್ಟವ್ಯಃ ವಿಷ್ಣುವಿಗೆ ಉಪಾಂಶು ಯಾಗ ಮಾಡಬೇಕು ಎಂದು ಮುಂತಾಗಿ ಮೂರು ಯಾಗಗಳನ್ನು ವಿಧಾನ ಮಾಡಿದರೆ ಏಕವಾಕ್ಯತ್ವಕ್ಕೆ ಭಂಗ ಬಂದೀತೆಂಬ ಭಯದಿಂದ ಯಷ್ಟವ್ಯಃ ಎಂಬಲ್ಲಿರುವ ತವ್ಯ ಪ್ರತ್ಯಯವು ವಿಧಿಶಕ್ತಿಯನ್ನು ಕಳೆದುಕೊಳ್ಳುತ್ತದೆ. 'ಅರ್ಹ' ಎಂಬ ಅರ್ಥವನ್ನು ಹೇಳುತ್ತದೆ. ಇಂಥ ಬಾಧಕವು ವಿಚಾರವಿಧಿಯಲ್ಲಿರುವ 'ಮಂತವ್ಯ' ಎಂದು ಮುಂತಾದ ತವ್ಯಪ್ರತ್ಯಯಕ್ಕೆ ಇಲ್ಲ. ಬಾಧಕವಿಲ್ಲದಿದ್ದರೂ ತವ್ಯಪ್ರತ್ಯಯಕ್ಕೆ ಅರ್ಹ ಎಂಬ ಅರ್ಥವನ್ನು ಹೇಳಿದರೆ 'ಸ್ವಾಧ್ಯಾಯೋ ಅಧ್ಯೇತವ್ಯಃ' ವೇದಾಧ್ಯಯನ ಮಾಡಬೇಕು ಎಂಬಲ್ಲಿಯೂ ತವ್ಯಪ್ರತ್ಯಯಕ್ಕೆ ಅರ್ಹ ಎಂಬ ಅರ್ಥವನ್ನು ಹೇಳಬೇಕಾದೀತು.

ವೇದಾಧ್ಯಯನವು ವಿಧಿವಿಹಿತವಲ್ಲವೆಂದಾದೀತು. ವೇದಾಂತವಾಕ್ಯಗಳೆಲ್ಲವೂ ಬ್ರಹ್ಮಪರವಾಗಿರುವುದರಿಂದ ಅವುಗಳ ಮಧ್ಯದಲ್ಲಿ 'ಮಂತವ್ಯಃ' ಎಂಬ ತವ್ಯಪ್ರತ್ಯಯವು ವಿಚಾರವಿಧಿ ಪರವೆಂದರೆ ಬ್ರಹ್ಮಪರ ಮಹಾವಾಕ್ಯದ ಏಕತೆಗೆ ಭಂಗ ಬರುತ್ತದೆ ಎಂಬ ಬಾಧಕವು ಪ್ರಕೃತದಲ್ಲಿ ಇದೆ' - ಇದು ಸರಿಯಲ್ಲ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತವಿದೆ.

### (1)ಪ್ರಕರಣೇನ ಪ್ರಯಾಜಾದೀನಾಮಂಗತಾಧಿಕರಣಮ್

**ಸೂತ್ರ - 'ಅಸಂಯುಕ್ತಂ ಪ್ರಕರಣಾದಿತಿಕರ್ತವ್ಯತಾರ್ಥಿತ್ವಾತ್' (೩-೩-೪)**

ಚಾತುರ್ಮಾಸ್ಯಕಾಲದಲ್ಲಿ ದರ್ಶ ಹಾಗು ಪೂರ್ಣಮಾಸಯಾಗಗಳನ್ನು ಆಚರಿಸಬೇಕು. ಇವೇ ಮುಖ್ಯವಾದ ಇಷ್ಟಿಗಳು. ಇವುಗಳಿಗೆ ಐದು ಪ್ರಯಾಜಾದಿಯಾಗಗಳು ಅಂಗಗಳಾಗಿವೆ.

೧) ಸಮಿಧೋ ಯಜತಿ　　೨) ತನೂನಪಾತಂ ಯಜತಿ
೩) ಇಡೋ ಯಜತಿ　　೪) ಬರ್ಹಿರ್ಯಜತಿ
೫) ಸ್ವಾಹಾಕಾರಂ ಯಜತಿ

---

(१) भाट्टसङ्ग्रहः –

**अथ तुरीयं प्रकरणस्य विनियोजकताधिकरणम्**

**असंयुक्तं प्रकरणादितिकर्तव्यतार्थित्वात् ।।३-३-४।।**

पूर्वत्र वाक्यविनियोगचिन्तां तत्प्रसङ्गप्राप्तस्वरचिन्तां च त्रिभिर्नयैः कृत्वा अधुना वाक्योपजीविप्रकरणेन विनियोगश्चिन्त्यत इति सङ्गतिः । दर्शपूर्णमासौ प्रकृत्य श्रुतं 'समिधो यजति, तनूनपातं यजति, इडो यजति, बर्हिर्यजति, स्वाहाकारं यजति' इति । तत्र सन्देहः किमेते समिधादयः प्रयाजा दर्शपूर्णमासयोरङ्गं न वेति । दर्शपूर्णमासयोरङ्गशेषत्वे विनियोजकश्रुत्यादित्रयान्यतमप्रमाणाभावात्, फलाकांक्षाणामपि समिधादीनां स्वर्गफलकत्वेन निराकांक्षत्वसंभवादिति प्राप्ते 'दर्शपूर्णमासाभ्यां स्वर्गकामो यजेत' इत्यत्र 'दर्शपूर्णमासाख्यकर्मणा स्वर्गं कुर्यात्' इत्यर्थकतया यागेन स्वर्गसम्पादनप्रकारस्यानिर्ज्ञाततया कथं? इतीतिकर्तव्यताकांक्षाया दर्शपूर्णमासकर्मणः सत्त्वात् समिधादेश्च फलासंयुक्तत्वेन प्रयोजनाकांक्षायाः फलान्तरकल्पनादपि क्रतूपकाररूपदृष्टफलकल्पनस्य लघुत्वात् प्रधानस्येतिकर्तव्यताकांक्षारूपप्रकरणवशात् प्रयाजादीनां दर्शपूर्णमासाङ्गत्वमिति सिद्धान्तः । एवंच सूत्रम्, असंयुक्तं श्रुतिलिङ्गवाक्यैरविनियुक्तं प्रकरणाद् विनियुज्यते । कुतः? प्रधानस्येतिकर्तव्यतार्थित्वादिति । फलन्तु, पूर्वपक्षे समिधादेर्विश्वजिदादिवद् फलकल्पनात् पृथक्फलकामेनानुष्ठानम् । सिद्धान्ते तु दर्शाद्यर्थमेवेति ज्ञेयम् ।

**इति तुरीयं प्रकरणस्ये विनियोजकताधिकरणम्**

ಪರಿಪೂರ್ಣಚಂದ್ರಿಕಾ

ಈ ಅಧಿಕರಣದಲ್ಲಿ ಪಂಚಪ್ರಯಾಜಾದಿಗಳು ದರ್ಶಪೂರ್ಣಮಾಸಯಾಗಗಳಿಗೆ ಅಂಗವೋ? ಅಲ್ಲವೋ? ಎಂದು ವಿಚಾರ ಮಾಡುತ್ತಿದ್ದಾರೆ.

ಸಂಶಯ :- ಪರಸ್ಪರವಾದ ಆಕಾಂಕ್ಷೆಯೇ ಪ್ರಕರಣ ಎನಿಸುತ್ತದೆ. ಈ ಪ್ರಕರಣದ ಬಲದಿಂದ ದರ್ಶಪೂರ್ಣಮಾಸಯಾಗಗಳಿಗೂ ಮತ್ತು ಪಂಚಪ್ರಯಾಜಾದಿಯಾಗಗಳಿಗೂ ಪರಸ್ಪರ ಆಕಾಂಕ್ಷಾ-ರೂಪವಾದ ಅಂಗಾಂಗಿಭಾವ ಇದೆಯೋ? ಇಲ್ಲವೋ? ಎಂದು.

ಪೂರ್ವಪಕ್ಷ :- ಅಂಗಾಂಗಿಭಾವ ಹೇಳಬೇಕಾದರೆ ಪರಸ್ಪರ ಆಕಾಂಕ್ಷೆ ಇರಬೇಕು. ಆದರೆ 'ದರ್ಶಪೂರ್ಣ-ಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬ ವಾಕ್ಯ ಕೇಳಿದಾಗ ಸ್ವರ್ಗವನ್ನು ಬಯಸಿದವನು ದರ್ಶಪೂರ್ಣಮಾಸಯಾಗವನ್ನು ಮಾಡಬೇಕೆಂದು ತಿಳಿಯುತ್ತದೆ. ಪುನಃ ಫಲದ ಆಕಾಂಕ್ಷೆಯಾಗಲೀ, ಅಧಿಕಾರಿಯ ಆಕಾಂಕ್ಷೆಯಾಗಲೀ ಬರುವುದಿಲ್ಲ. ಆದ್ದರಿಂದ ಪ್ರಧಾನವಾಕ್ಯವು ನಿರಾಕಾಂಕ್ಷಿತವಾಗಿದೆ. ಇನ್ನು 'ಸಮಿಧೋ ಯಜತಿ' ಇತ್ಯಾದಿ ಅಂಗವಾಕ್ಯಗಳನ್ನು ಕೇಳಿದಾಗ ಫಲಾಕಾಂಕ್ಷೆ ಬರುತ್ತದಲ್ಲ? ಎಂದು ಪ್ರಶ್ನಿಸಬಹುದು. ಆದರೆ ವಿಶ್ವಜಿದಧಿಕರಣದಲ್ಲಿ ಹೇಳಿದ 'ಸಃ ಸ್ವರ್ಗಃ ಸ್ಯಾತ್' ಎಂಬ ನ್ಯಾಯದಂತೆ ಫಲವಾಚಕಶಬ್ದವನ್ನು ಅಧ್ಯಾಹಾರ ಮಾಡಬೇಕು. 'ಸಮಿಧೋ ಯಜತಿ' ಇತ್ಯಾದಿ ವಾಕ್ಯಗಳಲ್ಲಿ 'ಸ್ವರ್ಗಕಾಮಃ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಹೀಗೆ ಅಧ್ಯಾಹಾರ ಮಾಡಿದಾಗ ಫಲಾಭವಾಯಿತಾದ್ದರಿಂದ ಈ ವಾಕ್ಯಗಳೂ ನಿರಾಕಾಂಕ್ಷಿತಗಳಾಗುತ್ತವೆ. ಹೀಗೆ ಪ್ರಧಾನವಾಕ್ಯ ಮತ್ತು ಅಂಗವಾಕ್ಯವನ್ನು ಹೇಳಲು ಸಾಧ್ಯವೇ ಇಲ್ಲ. ಆದ ಕಾರಣ 'ಸಮಿಧೋ ಯಜತಿ' ಇತ್ಯಾದಿ ಪಂಚಪ್ರಯಾಜಾದಿಗಳಿಗೆ ದರ್ಶಪೂರ್ಣಮಾಸಯಾಗದಲ್ಲಿ ಅಂಗತ್ವೇನ ವಿನಿಯೋಗವಿಲ್ಲ.

ಸಿದ್ಧಾಂತ : - ಎರಡೂ ಕಡೆ ಆಕಾಂಕ್ಷೆ ಇದೆ. ಅದು ಹೀಗೆ - ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬ ವಾಕ್ಯಕ್ಕೆ 'ದರ್ಶಪೂರ್ಣಮಾಸಯಾಗಗಳನ್ನು ಮಾಡಬೇಕು' ಎಂದು ಅರ್ಥವಾಗಿದ್ದರೆ ನೀವು ಹೇಳಿದಂತೆ ಏನು ಮಾಡಬೇಕೆಂದು ತಿಳಿಯದ ಕಾರಣ ನಿರಾಕಾಂಕ್ಷಿತವಾಗುತ್ತಿತ್ತು. ಆದರೆ ಆ ವಾಕ್ಯಕ್ಕೆ ಹಾಗರ್ಥವಲ್ಲ. 'ದರ್ಶಪೂರ್ಣಮಾಸಯಾಗಗಳಿಂದ ಸ್ವರ್ಗವನ್ನು ಸಂಪಾದಿಸಬೇಕು' ಎಂದರ್ಥ. ಏಕೆಂದರೆ ಲಿಙ್ ಲೋಟ್ ತವ್ಯ ಪ್ರತ್ಯಯಗಳಿಗೆ ಭಾವನಾ ಎಂದರ್ಥ. 'ಅಲ್ಲಿ ಭಾವ್ಯತ್ವೇನ ಸ್ವರ್ಗವೇ ಅನ್ವಯವಾಗುತ್ತದೆ ಯಾಗವಲ್ಲ'ವೆಂದು ಸ್ವರ್ಗಕಾಮಾಧಿಕರಣದಲ್ಲಿ ಸಮರ್ಥಿಸಿದ್ದೇವೆ. ಆದ್ದರಿಂದ ದರ್ಶಪೂರ್ಣಮಾಸಯಾಗಗಳನ್ನು ಹೇಗೆ ಮಾಡಬೇಕೆಂದು ಗೊತ್ತಿದೆ. ಆದರೆ ಆ ದರ್ಶಪೂರ್ಣ-ಮಾಸಯಾಗಗಳಿಂದ ಸ್ವರ್ಗವನ್ನು ಹೇಗೆ ಸಂಪಾದಿಸುವುದು? ಎಂಬ ಆಕಾಂಕ್ಷೆ ಹಾಗೆಯೇ ಇದೆ. ಈ ಆಕಾಂಕ್ಷೆಯನ್ನು ಶಾಂತವಾಗಿಸಲು ಪಂಚಪ್ರಯಾಜಾದಿವಾಕ್ಯಗಳು ಅವಶ್ಯ ಬೇಕು. 'ಕೇನ ಪ್ರಕಾರೇಣ ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಃ ಭಾವ್ಯಃ?' ಎಂಬ ಇತಿಕರ್ತವ್ಯತಾಕಾಂಕ್ಷೆಯು ಪ್ರಧಾನವಾಕ್ಯಕ್ಕೂ ಅಂಗವಾಕ್ಯಕ್ಕೂ ಇದೆಯೆಂದು ತಿಳಿಯಬೇಕು.

ಪ್ರಶ್ನೆ :- 'ಸಃ ಸ್ವರ್ಗಃ ಸ್ಯಾತ್' ಎಂಬ ನ್ಯಾಯದಂತೆ ಪಂಚಪ್ರಯಾಜಾದಿಗಳಲ್ಲಿ ಫಲಾಕಾಂಕ್ಷೆಯಂತೆ ಸ್ವರ್ಗಶಬ್ದವನ್ನು ಅಧ್ಯಾಹಾರ ಮಾಡುತ್ತೇವೆ. ಆದ್ದರಿಂದ ಪ್ರಧಾನವಾಕ್ಯದಿಂದಲೇ ಆಕಾಂಕ್ಷೆ ಹೇಳಬೇಕಾಗಿಲ್ಲ.

ಉತ್ತರ :- ಹಾಗೆ ಹೇಳಿದರೆ ಕಲ್ಪನಾಗೌರವ ಬರುತ್ತದೆ. ಎರಡಕ್ಕೂ ಪರಸ್ಪರ ಆಕಾಂಕ್ಷೆ ಇದ್ದ ಅವುಗಳಿಗೆ ಏಕವಾಕ್ಯತ್ವವನ್ನು ಹೇಳುವುದು ಲಘುವಾಗುತ್ತದೆ. ಆದರೆ ಅಶ್ರುತವಾದ ಫಲವನ್ನು ಅಧ್ಯಾಹಾ ಮಾಡುವುದು ಗುರುವಾಗುತ್ತದೆ. ಪ್ರಕೃತ 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬುದು 'ಸಮಿಧೋ ಯಜತಿ' ಇತ್ಯಾದಿ ವಾಕ್ಯಗಳು ಪರಸ್ಪರ ಸಾಕಾಂಕ್ಷಿತಗಳಾಗಿವೆ. ಮತ್ತು ಆ ವಾಕ್ಯದ ಪಕ್ಕದಲ್ಲೇ ಈ ವಾಕ್ಯವಿದೆ. ಇವುಗಳಿಗೆ ನಾವು ಏಕವಾಕ್ಯತ್ವವನ್ನಷ್ಟೇ ಕಲ್ಪಿಸಿದರೆ ಸಾಕು. ಇದನ್ನು ಬಿಟ್ಟು ನೀವು ಫಲಾಂತರ ವನ್ನು ಕಲ್ಪಿಸಿದರೆ ಕಲ್ಪನಾಗೌರವ ತಪ್ಪಿದ್ದಲ್ಲ.

ಆದ್ದರಿಂದ ಪ್ರಕರಣಪ್ರಮಾಣದಿಂದ (ಪರಸ್ಪರಆಕಾಂಕ್ಷಾಕ್ರಮದಿಂದ) ದರ್ಶಪೂರ್ಣಮಾಸ ಯಾಗಗಳಲ್ಲಿ ಸಮಿಧಾದಿಗಳ ವಿನಿಯೋಗ ಇದ್ದೇ ಇದೆ. ಅಂಗಾಂಗಿಭಾವ ಹೇಳಲು ಯಾವ ಬಾಧಕವೂ ಇಲ್ಲ. ಇಷ್ಟು ಸಿದ್ಧಾಂತ.

ಪ್ರಯಾಜಾದಿ ಅಂಗವಾಕ್ಯಗಳು ಪ್ರಧಾನವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದುತ್ತವೆ. ಆ ಕಾಲದಲ್ಲೇ ವಿಧಾಯಕಗಳೂ ಆಗಿರುತ್ತವೆ. ಅದರಂತೆ 'ಶ್ರೋತವ್ಯಃ' ಇತ್ಯಾದಿವಾಕ್ಯಗಳೂ ಸಹ ಬ್ರಹ್ಮಪರವಾದ ಪ್ರಧಾನವಾಕ್ಯಗಳ ಜೊತೆಗೆ ಏಕವಾಕ್ಯತಾ ಹೊಂದಿದ್ದರೂ ವಿಧಾಯಕಗಳೂ ಆಗುತ್ತವೆ ಮತ್ತು ಬ್ರಹ್ಮಜ್ಞಾನಕ್ಕೋಸ್ಕರ ವಿಚಾರವನ್ನು ವಿಧಾನ ಮಾಡುತ್ತವೆ.

ಆದರೆ ಸ್ವತಂತ್ರವಾಗಿ ಬ್ರಹ್ಮವಿಚಾರ ಮಾಡಬೇಕೆಂದು ಅವು ಹೇಳುತ್ತಿಲ್ಲ. ಬ್ರಹ್ಮಜ್ಞಾನಕ್ಕೆ ಕಾರಣವಾದವುಗಳು ವೇದಗಳು. ಆ ವೇದಗಳಿಗೆ ಅನುಗ್ರಾಹಕವಾಗಿ ವಿಚಾರವನ್ನು ವಿಧಾನ ಮಾಡುತ್ತವೆ ಹೀಗೆ ಬ್ರಹ್ಮಪರವಾದ ವಾಕ್ಯಗಳಿಂದ ಏಕವಾಕ್ಯತ್ವವನ್ನು ವಿಧಿವಾಕ್ಯಗಳಿಗೆ ತಿಳಿಯಬೇಕು.

### ಯಸ್ಯೋಭಯಂ ಹವಿರಾರ್ತಿಮಾರ್ಚ್ಛೇದಧಿಕರಣಮ್

### ಸೂತ್ರ - ವಿಧಿಮಂತ್ರಯೋರೈಕಾರ್ಥ್ಯಮೈಕಶಬ್ದಾತ್ ( ೨- ೧-೭ )[೧]

(१) भाट्टसङ्ग्रहः –

अथ सप्तमं मन्त्राविधायकत्वाधिकरणम् (सूत्रे ३०-३१)

विधिमन्त्रयोरैकार्थ्यमैकशब्द्यात् ।। ३० ।।

(अपि वा प्रयोगसामर्थ्यान्मन्त्रोऽभिधानवाची स्यात् ।। ३१ ।।)

प्रधानकर्मविधायकं गुणकर्मविधायकञ्चेति द्विविधमाख्यातमुक्तं पूर्वत्र । नैतावदेव । किन्त्वभिधायकमपि तृतीयमाख्यातमस्तीतीहोच्यत इति प्रासङ्गिकी सङ्गतिः । 'देवांश्च याभिर्यजते ददाति च ज्योगित्ताभिः सचते गोपतिः सह' इति श्रूयते । अस्यार्थः, 'गोपतिः यजमानः याभिः गोभिः देवान् यजते याश्च गाः ब्राह्मणेभ्यो ददाति चिरमेव ताभिः परलोकेऽवतिष्ठते' इति । तत्र सन्देहः यजते ददाति इत्याद्याख्यातानि विधायकानि, उत अभिधायकानि इति । विध्युद्देशगताख्यातमिव मन्त्रगताख्यातमपि विधायकमेव

'ಯಸ್ಯೋಭಯಂ ಹವಿರಾರ್ತಿಮಾರ್ಚ್ಛೇತ್ ಐಂದ್ರಂ ಪಂಚಶರಾವಮೋದನಂ ನಿರ್ವಪೇತ್' ಯಸ್ಯ : ಯಾವ ಯಜಮಾನನ ಎರಡು ಹವಿಸ್ಸುಗಳು, ಆರ್ತೀ = ನಾಶವನ್ನು , ಆರ್ಚ್ಛೇತ್ = ಹೊಂದುತ್ತವೋ ಅಂತಹ ಯಜಮಾನನು ಘಟದಂತೆ ಇರುವ ಐದು ಶರಾವಗಳ ಅನ್ನದಿಂದ ಇಂದ್ರನನ್ನು ಕುರಿತು ಯಾಗ ಮಾಡಬೇಕು. (ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು) ಎಂದು ಮಂತ್ರದ ಅರ್ಥ. ಈ ಮಂತ್ರದಲ್ಲಿ 'ಆರ್ಚ್ಛೇತ್' ಎಂಬಲ್ಲಿ ಮತ್ತು 'ನಿರ್ವಪೇತ್' ಎಂಬಲ್ಲಿರುವ 'ಲಿಙ್' ಎಂಬುದಂತೂ ವಿಧಿಯಾಗಿದೆ. 'ಆರ್ಚ್ಛೇತ್' ಎಂಬಲ್ಲಿರುವ ಲಿಙ್, ವಿಧಾಯಕವೋ ಅಲ್ಲವೋ? ಎಂದು ಇಲ್ಲಿ ವಿಮರ್ಶಿಸಲಾಗಿದೆ. ಏಕೆಂದರೆ ಈ ಮಂತ್ರದಿಂದ ನೈಮಿತ್ತಿಕಕರ್ಮವನ್ನು ವಿಧಿಸಲಾಗಿದೆ. ಅದಕ್ಕೆ ನಿಮಿತ್ತವನ್ನು 'ಯಸ್ಯೋಭಯಂ ಹವಿರಾರ್ತಿಮಾರ್ಚ್ಛೇತ್' ಎಂಬುದು ಅರ್ಪಿಸುತ್ತಿದೆ. ಆದ್ದರಿಂದ ನಿರ್ವಪೇತ್ ಎಂಬುದರ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದೆ. ಆದರೂ ಸಹ ಆರ್ತಿವಿಧಾಯಕವೋ? ಅಲ್ಲವೋ? ಎಂದು ಸಂದೇಹ ಬರುತ್ತದೆ.

**ಪೂರ್ವಪಕ್ಷ** : - ಪ್ರಸಿದ್ಧವಾದ ಎಲ್ಲಾ ಆಖ್ಯಾತಗಳಂತೆ 'ಆರ್ಚ್ಛೇತ್' ಎಂಬುದೂ ಸಹ ಒಂದು ಆಖ್ಯಾತವಾಗಿದೆ. ಉಳಿದ ಆಖ್ಯಾತಗಳಂತೆ ಈ ಆಖ್ಯಾತವೂ ಆರ್ತಿವಿಧಾಯಕವಾಗಿದೆ.

**ಸಿದ್ಧಾಂತ** :- 'ಯತ್' ಶಬ್ದವಿರುವುದರಿಂದ ಇದು ವಿಧಾಯಕವಲ್ಲ. 'ಯಸ್ಯೋಭಯಮ್' ಎಂಬಲ್ಲಿರುವ ಯತ್‌ಶಬ್ದವೂ ನಿಮಿತ್ತತ್ವವನ್ನು ತಿಳಿಸುತ್ತಿದೆ. ಈ ಯತ್ ಶಬ್ದದಿಂದ ಯಾವ ವ್ಯಕ್ತಿಯ ಎರಡು ಹವಿಸ್ಸು ನಾಶವಾಗುವವೋ ಅವನು ಇಂದ್ರನನ್ನು ಪಂಚಶರಾವಗಳಲ್ಲಿರುವ ಅನ್ನದಿಂದ ಯಾಗ ಮಾಡಬೇಕೆಂದು ತಿಳಿಯುತ್ತದೆ. ಆದ್ದರಿಂದ ಯಚ್ಛಬ್ದವು ನಿಮಿತ್ತತ್ವಸೂಚಕವಾಗಿದೆ. ಆದ್ದರಿಂದಲೇ 'ಆರ್ಚ್ಛೇತ್' ಎಂಬಲ್ಲಿರುವ ಆಖ್ಯಾತದ ವಿಧಿಶಕ್ತಿಯು ಕುಂಠಿತವಾಗಿದೆ, ವಿಧಾಯಕವಾಗುವುದಿಲ್ಲ. ಇಷ್ಟು ಸಿದ್ಧಾಂತ.

'ನಾಭಿಘಾಯಾರ್ಥ ಇತಿ ಮೀಮಾಂಸತೇ' ಎಂಬಲ್ಲಿ ಮೀಮಾಂಸಾಶಬ್ದ, 'ಯಸ್ಯೋಭಯಂ' ಎಂಬಲ್ಲಿರುವ, ಯತ್‌ಶಬ್ದ ವಿಧಿಶಕ್ತಿಗೆ ಪ್ರತಿಬಂಧಕವಾಗಿದೆ. ಅದರಂತೆ ಪ್ರಕೃತ 'ಯಥಾ ವಾ' ಎಂಬ ವಾಕ್ಯದಲ್ಲಿ ವಿಧಿಶಕ್ತಿ ಪ್ರತಿಬಂಧಕವಾದ ಯಾವ ಶಬ್ದಗಳೂ ಇಲ್ಲ. ಅಷ್ಟೇ ಅಲ್ಲದೇ ವಿಧಿಯನ್ನು ಉತ್ತೇಜನ ಮಾಡುವ ಅರ್ಥವಾದವೇ ಇಲ್ಲದೆ. ಸ್ತುತಿ, ನಿಂದಾ, ಪರಕೃತಿ, ಪುರಾಕಲ್ಪ ಎಂದು ಅರ್ಥವಾದ

---

अविशेषात् । इति प्राप्तम् । उक्तं च सूत्रे, विधिवाक्यमन्त्रवाक्ययोराख्यातानां विधायकत्वरूपमेकार्थत्वम्, ऐकशब्द्यात् विधायकशब्दैकरूपत्वादिति । सिद्धान्तस्तु यच्छब्दयोगेनानुवादत्वप्रतीत्या विधिशक्तिप्रतिबन्धान्न विधायकत्वम् । किन्तु अभिधायकत्वमेव । एवं 'बर्हिर्देवसदनं दामि' इत्युत्तमपुरुषयोगे 'अग्नीदग्नीन् विहर' इत्यामन्त्रणादौ च विधिशक्तिप्रतिबन्धेनाभिधायकत्वं ध्येयम् । फलन्तु मन्त्रविहितकर्मणां पृथगनुष्ठानं पूर्वपक्षे, सिद्धान्ते तु नेति व्यक्तम् ।

इति सप्तमं मन्त्राविधायकत्वाधिकरणम् (सूत्रे ३०-३१)

ಜಿಜ್ಞಾಸಾಧಿಕರಣ

ನಾಲ್ಕುವಿಧವಾಗಿದೆ. ಪ್ರಕೃತ 'ತದ್‌ವಿಜಿಜ್ಞಾಸಸ್ವ' ಎಂಬ ವಿಚಾರವಾಕ್ಯವು 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯಾವುದರಿಂದ ಜೀವಿಗಳು ಹುಟ್ಟುತ್ತವೋ' ಇತ್ಯಾದಿಯಾಗಿ ಪುರಾಕಲ್ಪವೂ ಅರ್ಥವಾದವಿದೆ. ಈ ಅರ್ಥವಾದದ ಬಲದಿಂದ ವಿಧಿಯೆಂದು ಒಪ್ಪಿಕೊಳ್ಳಬೇಕು. ವಿಧಿಯೇ ಇಲ್ಲದಿದ್ದರೆ ಅರ್ಥವಾದವು ಏನನ್ನು ಪ್ರಶಂಸೆ ಮಾಡಬೇಕು? ಹಾಗಾಗಿ 'ತದ್‌ವಿಜಿಜ್ಞಾಸಸ್ವ' ಇತ್ಯಾದಿ ವಿಧಿವಾಕ್ಯಗಳಲ್ಲಿರುವ ವಿಧಿಶಕ್ತಿಯು ಯಾವುದರಿಂದಲೂ ಕುಂಠಿತವಾಗದು.

ಪ್ರಶ್ನೆ : - 'ಅಗ್ನೀದಗ್ನೀನ್ ವಿಹರ' 'ಅಗ್ನಿಯನ್ನು ಉರಿಸುವ ಅಗ್ನೀಧ್ರನೇ ! ನೀನು ಅಗ್ನಿಯನ್ನು ಒಯ್ಯು' ಎಂಬ ವಾಕ್ಯದಲ್ಲಿ ಸಂಬೋಧನೆಯು ವಿಧಿಶಕ್ತಿಗೆ ಪ್ರತಿಬಂಧಕವಾಗಿದೆ. ಅದರಂತೆ ಭೃಗುಮುನಿಯನ್ನು ಸಂಬೋಧಿಸಿ 'ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ' 'ಅದನ್ನು ಜಿಜ್ಞಾಸೆ ಮಾಡು ಅದು ಬ್ರಹ್ಮ' ಎಂದು ಹೇಳಲಾಗಿದೆ. ಈ ಸಂಬೋಧನೆಯು ವಿಧಿಶಕ್ತಿಗೆ ಪ್ರತಿಬಂಧಕವಾಗುತ್ತದೆ.

ಉತ್ತರ :- ವಿಧಿ ಹಾಗು ಸಂಬೋಧನೆಗಳು ಒಂದೇ ವಾಕ್ಯದಲ್ಲಿ ಬರುವುದಿಲ್ಲ. ಶ್ರೋತೃಗಳು ಅಭಿಮುಖರಾಗುವುದಾದರೆ ಮಾತ್ರ ಸಂಬೋಧನೆಗೆ ಅವಕಾಶ ; ವಿಧಿ ಮಾತ್ರ ಹಾಗಲ್ಲ. ಶ್ರೋತೃಗಳು ಅಭಿಮುಖರಾಗಲಿ ಆಗದಿರಲಿ ವಿಧಿಯು ಪ್ರವೃತ್ತಿ ಮಾಡುತ್ತದೆ. ಹೀಗೆ ವಿರುದ್ಧಸ್ವಭಾವಗಳಾದ್ದರಿಂದ ವಿಧಿ ಮತ್ತು ಸಂಬೋಧನೆಗಳು ಒಂದೇ ವಾಕ್ಯದಲ್ಲಿರಲು ಸಾಧ್ಯವಿಲ್ಲ. ಆದರೆ ಯಾಗ ಮಾಡುವಾಗ ಮಧ್ಯದಲ್ಲಿ 'ಅಗ್ನಿದಗ್ನೀನ್ ವಿಹರ' ಇತ್ಯಾದಿ ಪ್ರೈಷಮಂತ್ರಗಳು ಬರುತ್ತವೆ. ಇವುಗಳಲ್ಲಿರುವ ಸಂಬೋಧನೆಯು ವಿಧಿಗೆ ವಿರೋಧಿಯಾಗುತ್ತದೆ. ಹೊರತು ಪ್ರಕೃತ 'ತದ್‌ವಿಜಿಜ್ಞಾಸಸ್ವ' ಎಂಬಲ್ಲಿರುವ ಸಂಬೋಧನೆಯು ವಿಧಿಗೆ ಪ್ರತಿಬಂಧಕವಾಗುವುದಿಲ್ಲ. ಏಕೆಂದರೆ ಹಿಂದೆ ಹೇಳಿದಂತೆ ಅರ್ಥವಾದದ ಬಲದಿಂದ ಇದನ್ನು ವಿಧಿಯೆಂದು ಒಪ್ಪಿಕೊಳ್ಳಲೇಬೇಕು. ವಿಧಿಯಾಗದಿದ್ದರೆ ಅರ್ಥವಾದವೇ ವ್ಯರ್ಥವಾಗುತ್ತದೆ.

'ಆತ್ಮನ್ಯೇವಾತ್ಮಾನಂ ಪಶ್ಯೇತ್' 'ಆತ್ಮನಲ್ಲಿಯೇ ಆತ್ಮನನ್ನು ಕಾಣಬೇಕು' ಇತ್ಯಾದಿ ವಾಕ್ಯಗಳು ಜ್ಞಾನವನ್ನಾಗಲೀ ಲಕ್ಷಿತವಾದ ವಿಚಾರವನ್ನಾಗಲೀ ಬೋಧಿಸಲಾರವು ಎಂದು ಹಿಂದೆ ಆಕ್ಷೇಪಿಸಲಾಗಿತ್ತು. ಆದರೆ ಇದು ಸರಿಯಲ್ಲ. ಜ್ಞಾನವಿಧಿಯು ಅನೇಕ ಕಡೆ ಕಂಡಿದೆ.

೧) ಪತ್ನ್ಯವೇಕ್ಷಿತಮಾಜ್ಯಂ ಭವತಿ - ಯಜಮಾನನ ಪತ್ನಿಯು ತುಪ್ಪ ನೋಡಬೇಕು.

೨) ವಿದುಷಾ ಕರ್ಮ ಕರ್ತವ್ಯಮ್ - ಕರ್ಮವನ್ನು ತಿಳಿದು ಆಚರಿಸಬೇಕು.

೩) ತಸ್ಮಾತ್ ಪಶ್ಯೇತ ನಿತ್ಯಶಃ - ಆದ್ದರಿಂದ ನಿತ್ಯವೂ ನೋಡಬೇಕು.

ಇವೇ ಮೊದಲಾದ ಅನೇಕ ಸ್ಥಳಗಳಲ್ಲಿ ಜ್ಞಾನವನ್ನು ವಿಧಾನ ಮಾಡಿದ್ದು ಕಂಡಿದೆ. ಇದರ ಸಮರ್ಥನೆಯನ್ನು ನ್ಯಾಯಾಮೃತದ ಮೂರನೆಯ ಪರಿಚ್ಛೇದದಲ್ಲಿ ನೋಡಬೇಕು. ಬಾಧಕವಿದ್ದರೆ ವಿಧಿವಾಕ್ಯಗಳಲ್ಲಿ ಲಕ್ಷಣಾ ಮಾಡುವುದೂ ಸಹ ತಪ್ಪಲ್ಲವೆಂದು ಮೀಮಾಂಸಕರೇ ಒಪ್ಪಿಕೊಂಡಿದ್ದಾರೆ. ಅದು ಹೀಗೆ -

'ಸೋಮೇನ ಯಜೇತ' ಎಂಬಲ್ಲಿ ಲಿಙ್ ಇದೆ. ಯಾಗವು ಭಾವ್ಯತ್ವೇನ ಅನ್ವಯವಾಗುವುದಿಲ್ಲ. ಸ್ವರ್ಗವೇ ಅನ್ವಯವಾಗುತ್ತದೆಂದು ಸ್ವರ್ಗಕಾಮಾಧಿಕರಣದಲ್ಲಿ ಹೇಳಿದೆ. ಆದ್ದರಿಂದ 'ಯಜೇತ' ಎಂದರೆ 'ಯಾಗೇನ ಸ್ವರ್ಗಂ ಭಾವಯೇತ್ (ಕುರ್ಯಾತ್) ಎಂದರ್ಥ. ಪುನಃ 'ಸೋಮೇನ' ಎಂಬಲ್ಲಿಯೂ ತೃತೀಯಾ ವಿಭಕ್ತಿ ಇರುವುದರಿಂದ 'ಸೋಮೇನ ಯಾಗಂ ಭಾವಯೇತ್' ಎಂದೂ ಹೇಳಬೇಕು. ಹೀಗೆ ಹೇಳಿದರೆ 'ಸೋಮೇನ ಯಾಗಂ, ಯಾಗೇನ ಸ್ವರ್ಗಂ ಕುರ್ಯಾತ್' ಎಂದು ವೈಯ್ಯಧಿಕರಣ್ಯದಿಂದ ಅನ್ವಯ ಮಾಡಿದಂತಾಗುತ್ತದೆ. ಹೀಗೆ ಹೇಳಿದರೆ ವಿರುದ್ಧತ್ರಿಕದ್ವಯಾಪತ್ತಿಯೆಂಬ ದೋಷ ಬರುತ್ತದೆ. ಉದ್ದೇಶ್ಯತ್ವ ಹಾಗು ಉಪಾದೇಯತ್ವ ಇವೆರಡೂ ಪರಸ್ಪರ ವಿರುದ್ಧ. ಮತ್ತು ಅನುವಾದ್ಯತ್ವ ವಿಧೇಯತ್ವಗಳು ಹಾಗೂ ಪ್ರಧಾನತ್ವ ಗುಣತ್ವ ಇವುಗಳೂ ಪರಸ್ಪರ ವಿರುದ್ಧ. ಪ್ರಕೃತ 'ಸೋಮೇನ ಯಾಗಂ ಕುರ್ಯಾತ್' ಎಂದು ಹೇಳಿದಾಗ ಯಾಗವು ಉಪಾದೇಯವಾಗುತ್ತದೆ. 'ಯಾಗವೇ ಉದ್ದೇಶ್ಯವಾಗುತ್ತದೆ. ಹೀಗೆ ಒಂದೇ ಯಾಗದಲ್ಲಿ ವಿರುದ್ಧವಾದ ಉಪಾದೇಯತ್ವ ಉದ್ದೇಶ್ಯತ್ವಗಳು ಬಂದವು. ಹಾಗೆಯೇ 'ಸೋಮೇನ ಯಾಗಂ ಕುರ್ಯಾತ್' ಎಂಬಲ್ಲಿ ಯಾಗವು ವಿಧೇಯವಾಗಿದೆ. 'ಯಾಗೇನ ಸ್ವರ್ಗಂ ಕುರ್ಯಾತ್' ಎಂಬಲ್ಲಿ ಯಾಗವು ಅನುವಾದ್ಯವಾಗಿದೆ. ಅದರಂತೆ 'ಸೋಮೇನ ಯಾಗಂ ಕುರ್ಯಾತ್' ಎಂಬಲ್ಲಿ ಯಾಗವು ಪ್ರಧಾನವಾಗಿದೆ. 'ಯಾಗೇನ ಸ್ವರ್ಗಂ ಕುರ್ಯಾತ್' ಎಂಬಲ್ಲಿ ಗುಣವಾಗಿದೆ. ಹೀಗೆ ಒಂದೇ ಯಾಗಕ್ಕೆ ವಿರುದ್ಧವಾದ ತ್ರಿಕದ್ವಯಗಳು ಬರಬೇಕಾದೀತು. ಹೀಗೆ ಬಾಧಕವಿರುವುದರಿಂದ 'ಸೋಮ' ಶಬ್ದಕ್ಕೆ 'ಸೋಮದಿಂದ ಮಾಡುವ' ಎಂಬರ್ಥದಲ್ಲಿ ಲಕ್ಷಣಾ ಮಾಡಬೇಕು. ಆದ್ದರಿಂದ 'ಸೋಮೇನ ಯಜೇತ' ಎಂದರೆ ಸೋಮದಿಂದ ಮಾಡುವ ಯಾಗ' ಎಂದು ಅರ್ಥೈಸಬೇಕು.

ಮತ್ತು ವಿಧಿವಾಕ್ಯದಲ್ಲಿ ಲಕ್ಷಣಾ ಮಾಡಬಾರದೆಂದು ಆಕ್ಷೇಪಿಸಲು ಏನು ಕಾರಣ? ಅನ್ವಯಾನುಪಪತ್ತಿ ಹಾಗೂ ತಾತ್ಪರ್ಯಾನುಪಪತ್ತಿಗಳು ಲಕ್ಷಣಾ ಮಾಡಲು ಕಾರಣಗಳು. ಈ ಕಾರಣಗಳು ಬೇರೆ ಸ್ಥಳದಲ್ಲಿರುವಂತೆ ವಿಧಿವಾಕ್ಯದಲ್ಲಿಯೂ ಇರುವುದು ಕಂಡಿದೆ. ಹೀಗಿರುವಾಗ ನೀವು ವಿಧಿವಾಕ್ಯದಲ್ಲಿ ಮಾತ್ರ ಲಕ್ಷಣಾವನ್ನು ಬೇಡವೆನ್ನಲು ಕಾರಣವಿಲ್ಲ.

ವಿಧಿವಾಕ್ಯದಲ್ಲಿ ಲಕ್ಷಣಾವೃತ್ತಿ ಕೂಡುವುದಿಲ್ಲವೆಂಬ ಶಬರಸ್ವಾಮಿಯ ಮಾತಿಗೆ 'ಅನುವಾದಕವಾಕ್ಯಕ್ಕೆ ಮುಖ್ಯಾರ್ಥವನ್ನು ಇಟ್ಟುಕೊಳ್ಳುವುದು ತಪ್ಪು.' ಎಂದರ್ಥ.

ಅಧ್ಯಯನವಿಧಿಯು ನಿತ್ಯವಾದ್ದರಿಂದ ಅಧ್ಯಯನವು ಅರ್ಥಜ್ಞಾನಸಾಧನವೆಂದು ಹೇಳುವ ತಾತ್ಪರ್ಯ ಅದಕ್ಕಿಲ್ಲ. ಆದ್ದರಿಂದ ವಿಚಾರವನ್ನು ಅರ್ಥಾತ್ ವಿಧಿಸುತ್ತದೆ. ಎನ್ನುವುದು ಶಕ್ಯವಿಲ್ಲವೆಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ವಿಚಾರವು ಜ್ಞಾನಕ್ಕೆ ಸಾಧನವಾಗುತ್ತದೆ. ಎನ್ನುವುದು ಮೊದಲೇ ತಿಳಿದ ವಿಷಯವಾದ್ದರಿಂದ ಅದನ್ನು ಹೇಳಲು ವಿಧಿವಾಕ್ಯ ಬೇಕಾಗಿಲ್ಲವೆಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಇದರ ವಿವರ ನ್ಯಾಯಾಮೃತದ ಮೂರನೆಯ ಪರಿಚ್ಛೇದದಲ್ಲಿದೆ. ಗ್ರಂಥವಿಸ್ತಾರದ ಭಯದಿಂದ ಇಲ್ಲಿ ಬರೆದಿಲ್ಲ.

ಜಿಜ್ಞಾಸಾಧಿಕರಣ

ನಾಲ್ಕುವಿಧವಾಗಿದೆ. ಪ್ರಕೃತ 'ತದ್ವಿಜಿಜ್ಞಾಸಸ್ವ' ಎಂಬ ವಿಚಾರವಾಕ್ಯವು 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯಾವುದರಿಂದ ಜೀವಿಗಳು ಹುಟ್ಟುತ್ತವೋ' ಇತ್ಯಾದಿಯಾಗಿ ಪುರಾಕಲ್ಪವೆಂಬ ಅರ್ಥವಾದವಿದೆ. ಈ ಅರ್ಥವಾದದ ಬಲದಿಂದ ವಿಧಿಯೆಂದು ಒಪ್ಪಿಕೊಳ್ಳಬೇಕು. ವಿಧಿಯೇ ಇಲ್ಲದಿದ್ದರೆ ಅರ್ಥವಾದವು ಏನನ್ನು ಪ್ರಶಂಸೆ ಮಾಡಬೇಕು? ಹಾಗಾಗಿ 'ತದ್ವಿಜಿಜ್ಞಾಸಸ್ವ' ಇತ್ಯಾದಿ ವಿಧಿವಾಕ್ಯಗಳಲ್ಲಿರುವ ವಿಧಿಶಕ್ತಿಯು ಯಾವುದರಿಂದಲೂ ಕುಂಠಿತವಾಗದು.

ಪ್ರಶ್ನೆ : - 'ಅಗ್ನೀದಗ್ನೀನ್ ವಿಹರ' 'ಅಗ್ನಿಯನ್ನು ಉರಿಸುವ ಅಗ್ನೀಧ್ರನೇ ! ನೀನು ಅಗ್ನಿಯನ್ನು ಒಯ್ಯು' ಎಂಬ ವಾಕ್ಯದಲ್ಲಿ ಸಂಬೋಧನೆಯು ವಿಧಿಶಕ್ತಿಗೆ ಪ್ರತಿಬಂಧಕವಾಗಿದೆ. ಅದರಂತೆ ಭೃಗುಮುನಿಯನ್ನು ಸಂಬೋಧಿಸಿ 'ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ' 'ಅದನ್ನು ಜಿಜ್ಞಾಸೆ ಮಾಡು ಅದು ಬ್ರಹ್ಮ' ಎಂದು ಹೇಳಲಾಗಿದೆ. ಈ ಸಂಬೋಧನೆಯು ವಿಧಿಶಕ್ತಿಗೆ ಪ್ರತಿಬಂಧಕವಾಗುತ್ತದೆ.

ಉತ್ತರ :- ವಿಧಿ ಹಾಗು ಸಂಬೋಧನೆಗಳು ಒಂದೇ ವಾಕ್ಯದಲ್ಲಿ ಬರುವುದಿಲ್ಲ. ಶ್ರೋತೃಗಳು ಅಭಿಮುಖರಾಗುವುದಾದರೆ ಮಾತ್ರ ಸಂಬೋಧನೆಗೆ ಅವಕಾಶ ; ವಿಧಿ ಮಾತ್ರ ಹಾಗಲ್ಲ. ಶ್ರೋತೃಗಳು ಅಭಿಮುಖರಾಗಲಿ ಆಗದಿರಲಿ ವಿಧಿಯು ಪ್ರವೃತ್ತಿ ಮಾಡುತ್ತದೆ. ಹೀಗೆ ವಿರುದ್ಧಸ್ವಭಾವಗಳಾದ್ದರಿಂದ ವಿಧಿ ಮತ್ತು ಸಂಬೋಧನೆಗಳು ಒಂದೇ ವಾಕ್ಯದಲ್ಲಿರಲು ಸಾಧ್ಯವಿಲ್ಲ. ಆದರೆ ಯಾಗ ಮಾಡುವಾಗ ಮಧ್ಯದಲ್ಲಿ 'ಅಗ್ನಿದಗ್ನೀನ್ ವಿಹರ' ಇತ್ಯಾದಿ ಪ್ರೈಷಮಂತ್ರಗಳು ಬರುತ್ತವೆ. ಇವುಗಳಲ್ಲಿರುವ ಸಂಬೋಧನೆಯು ವಿಧಿಗೆ ವಿರೋಧಿಯಾಗುತ್ತದೆ. ಹೊರತು ಪ್ರಕೃತ 'ತದ್ವಿಜಿಜ್ಞಾಸಸ್ವ' ಎಂಬಲ್ಲಿರುವ ಸಂಬೋಧನೆಯು ವಿಧಿಗೆ ಪ್ರತಿಬಂಧಕವಾಗುವುದಿಲ್ಲ. ಏಕೆಂದರೆ ಹಿಂದೆ ಹೇಳಿದಂತೆ ಅರ್ಥವಾದದ ಬಲದಿಂದ ಇದನ್ನು ವಿಧಿಯೆಂದು ಒಪ್ಪಿಕೊಳ್ಳಲೇಬೇಕು. ವಿಧಿಯಾಗದಿದ್ದರೆ ಅರ್ಥವಾದವೇ ವ್ಯರ್ಥವಾಗುತ್ತದೆ.

'ಆತ್ಮನ್ಯೇವಾತ್ಮಾನಂ ಪಶ್ಯೇತ್' 'ಆತ್ಮನಲ್ಲಿಯೇ ಆತ್ಮನನ್ನು ಕಾಣಬೇಕು' ಇತ್ಯಾದಿ ವಾಕ್ಯಗಳು ಜ್ಞಾನವನ್ನಾಗಲೀ ಲಕ್ಷಿತವಾದ ವಿಚಾರವನ್ನಾಗಲೀ ಬೋಧಿಸಲಾರವು ಎಂದು ಹಿಂದೆ ಆಕ್ಷೇಪಿಸಲಾಗಿತ್ತು. ಆದರೆ ಇದು ಸರಿಯಲ್ಲ. ಜ್ಞಾನವಿಧಿಯು ಅನೇಕ ಕಡೆ ಕಂಡಿದೆ.

೧) ಪತ್ನ್ಯವೇಕ್ಷಿತಮಾಜ್ಯಂ ಭವತಿ - ಯಜಮಾನನ ಪತ್ನಿಯು ತುಪ್ಪ ನೋಡಬೇಕು.

೨) ವಿದುಷಾ ಕರ್ಮ ಕರ್ತವ್ಯಮ್ - ಕರ್ಮವನ್ನು ತಿಳಿದು ಆಚರಿಸಬೇಕು.

೩) ತಸ್ಮಾತ್ ಪಶ್ಯೇತ ನಿತ್ಯಶಃ - ಆದ್ದರಿಂದ ನಿತ್ಯವೂ ನೋಡಬೇಕು.

ಇವೇ ಮೊದಲಾದ ಅನೇಕ ಸ್ಥಳಗಳಲ್ಲಿ ಜ್ಞಾನವನ್ನು ವಿಧಾನ ಮಾಡಿದ್ದು ಕಂಡಿದೆ. ಇದರ ಸಮ್ಮತಿಯನ್ನು ನ್ಯಾಯಾಮೃತದ ಮೂರನೆಯ ಪರಿಚ್ಛೇದದಲ್ಲಿ ನೋಡಬೇಕು. ಬಾಧಕವಿದ್ದಾಗ ವಿಧಿವಾಕ್ಯಗಳಲ್ಲಿ ಲಕ್ಷಣಾ ಮಾಡುವುದೂ ಸಹ ತಪ್ಪಲ್ಲವೆಂದು ಮೀಮಾಂಸಕರೇ ಒಪ್ಪಿಕೊಂಡಿದ್ದಾರೆ. ಅದು ಹೀಗೆ -

'ಸೋಮೇನ ಯಜೇತ' ಎಂಬಲ್ಲಿ ಲಿಙ್ ಇದೆ. ಯಾಗವು ಭಾವ್ಯತ್ವೇನ ಅನ್ವಯವಾಗುವುದಿಲ್ಲ. ಸ್ವರ್ಗವೇ ಅನ್ವಯವಾಗುತ್ತದೆಂದು ಸ್ವರ್ಗಕಾಮಾಧಿಕರಣದಲ್ಲಿ ಹೇಳಿದೆ. ಆದ್ದರಿಂದ 'ಯಜೇತ' ಎಂದರೆ 'ಯಾಗೇನ ಸ್ವರ್ಗಂ ಭಾವಯೇತ್ (ಕುರ್ಯಾತ್) ಎಂದರ್ಥ. ಪುನಃ 'ಸೋಮೇನ' ಎಂಬಲ್ಲಿಯೂ ತೃತೀಯಾ ವಿಭಕ್ತಿ ಇರುವುದರಿಂದ 'ಸೋಮೇನ ಯಾಗಂ ಭಾವಯೇತ್' ಎಂದೂ ಹೇಳಬೇಕು. ಹೀಗೆ ಹೇಳಿದರೆ 'ಸೋಮೇನ ಯಾಗಂ, ಯಾಗೇನ ಸ್ವರ್ಗಂ ಕುರ್ಯಾತ್' ಎಂದು ವೈಯ್ಯಧಿಕರಣ್ಯದಿಂದ ಅನ್ವಯ ಮಾಡಿದಂತಾಗುತ್ತದೆ. ಹೀಗೆ ಹೇಳಿದರೆ ವಿರುದ್ಧತ್ರಿಕದ್ವಯಾಪತ್ತಿಯೆಂಬ ದೋಷ ಬರುತ್ತದೆ. ಉದ್ದೇಶ್ಯತ್ವ ಹಾಗು ಉಪಾದೇಯತ್ವ ಇವೆರಡೂ ಪರಸ್ಪರ ವಿರುದ್ಧ. ಮತ್ತು ಅನುವಾದ್ಯತ್ವ ವಿಧೇಯತ್ವಗಳು ಹಾಗೂ ಪ್ರಧಾನತ್ವ ಗುಣತ್ವ ಇವುಗಳೂ ಪರಸ್ಪರ ವಿರುದ್ಧ. ಪ್ರಕೃತ 'ಸೋಮೇನ ಯಾಗಂ ಕುರ್ಯಾತ್' ಎಂದು ಹೇಳಿದಾಗ ಯಾಗವು ಉಪಾದೇಯವಾಗುತ್ತದೆ. 'ಯಾಗವೇ ಉದ್ದೇಶ್ಯವಾಗುತ್ತದೆ. ಹೀಗೆ ಒಂದೇ ಯಾಗದಲ್ಲಿ ವಿರುದ್ಧವಾದ ಉಪಾದೇಯತ್ವ ಉದ್ದೇಶ್ಯತ್ವಗಳು ಬಂದವು. ಹಾಗೆಯೇ 'ಸೋಮೇನ ಯಾಗಂ ಕುರ್ಯಾತ್' ಎಂಬಲ್ಲಿ ಯಾಗವು ವಿಧೇಯವಾಗಿದೆ. 'ಯಾಗೇನ ಸ್ವರ್ಗಂ ಕುರ್ಯಾತ್' ಎಂಬಲ್ಲಿ ಯಾಗವು ಅನುವಾದ್ಯವಾಗಿದೆ. ಅದರಂತೆ 'ಸೋಮೇನ ಯಾಗಂ ಕುರ್ಯಾತ್' ಎಂಬಲ್ಲಿ ಯಾಗವು ಪ್ರಧಾನವಾಗಿದೆ. 'ಯಾಗೇನ ಸ್ವರ್ಗಂ ಕುರ್ಯಾತ್' ಎಂಬಲ್ಲಿ ಗುಣವಾಗಿದೆ. ಹೀಗೆ ಒಂದೇ ಯಾಗಕ್ಕೆ ವಿರುದ್ಧವಾದ ತ್ರಿಕದ್ವಯಗಳು ಬರಬೇಕಾದೀತು. ಹೀಗೆ ಬಾಧಕವಿರುವುದರಿಂದ 'ಸೋಮ' ಶಬ್ದಕ್ಕೆ 'ಸೋಮದಿಂದ ಮಾಡುವ' ಎಂಬರ್ಥದಲ್ಲಿ ಲಕ್ಷಣಾ ಮಾಡಬೇಕು. ಆದ್ದರಿಂದ 'ಸೋಮೇನ ಯಜೇತ' ಎಂದರೆ ಸೋಮದಿಂದ ಮಾಡುವ ಯಾಗ' ಎಂದು ಅರ್ಥೈಸಬೇಕು.

ಮತ್ತು ವಿಧಿವಾಕ್ಯದಲ್ಲಿ ಲಕ್ಷಣಾ ಮಾಡಬಾರದೆಂದು ಆಕ್ಷೇಪಿಸಲು ಏನು ಕಾರಣ? ಅನ್ವಯಾನುಪಪತ್ತಿ ಹಾಗೂ ತಾತ್ಪರ್ಯಾನುಪಪತ್ತಿಗಳು ಲಕ್ಷಣಾ ಮಾಡಲು ಕಾರಣಗಳು. ಈ ಕಾರಣಗಳು ಬೇರೆ ಸ್ಥಳದಲ್ಲಿರುವಂತೆ ವಿಧಿವಾಕ್ಯದಲ್ಲಿಯೂ ಇರುವುದು ಕಂಡಿದೆ. ಹೀಗಿರುವಾಗ ನೀವು ವಿಧಿವಾಕ್ಯದಲ್ಲಿ ಮಾತ್ರ ಲಕ್ಷಣಾವನ್ನು ಬೇಡವೆನ್ನಲು ಕಾರಣವಿಲ್ಲ.

ವಿಧಿವಾಕ್ಯದಲ್ಲಿ ಲಕ್ಷಣಾವೃತ್ತಿ ಕೊಡುವುದಿಲ್ಲವೆಂಬ ಶಬರಸ್ವಾಮಿಯ ಮಾತಿಗೆ 'ಅನುವಾದಕವಾಕ್ಯಕ್ಕೆ ಮುಖ್ಯಾರ್ಥವನ್ನು ಇಟ್ಟುಕೊಳ್ಳುವುದು ತಪ್ಪು.' ಎಂದರ್ಥ.

ಅಧ್ಯಯನವಿಧಿಯು ನಿತ್ಯವಾದ್ದರಿಂದ ಅಧ್ಯಯನವು ಅರ್ಥಜ್ಞಾನಸಾಧನವೆಂದು ಹೇಳುವ ತಾತ್ಪರ್ಯ ಅದಕ್ಕಿಲ್ಲ. ಆದ್ದರಿಂದ ವಿಚಾರವನ್ನು ಅರ್ಥಾತ್ ವಿಧಿಸುತ್ತದೆ. ಎನ್ನುವುದು ಶಕ್ಯವಿಲ್ಲವೆಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ವಿಚಾರವು ಜ್ಞಾನಕ್ಕೆ ಸಾಧನವಾಗುತ್ತದೆ. ಎನ್ನುವುದು ಮೊದಲೇ ತಿಳಿದ ವಿಷಯವಾದ್ದರಿಂದ ಅದನ್ನು ಹೇಳಲು ವಿಧಿವಾಕ್ಯ ಬೇಕಾಗಿಲ್ಲವೆಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಇದರ ವಿವರ ನ್ಯಾಯಾಮೃತದ ಮೂರನೆಯ ಪರಿಚ್ಛೇದದಲ್ಲಿದೆ. ಗ್ರಂಥವಿಸ್ತಾರದ ಭಯದಿಂದ ಇಲ್ಲಿ ಬರೆದಿಲ್ಲ.




'ಮಂತವ್ಯಃ' ಇತ್ಯಾದಿ ವಾಕ್ಯಗಳಲ್ಲಿ ತವ್ಯಪ್ರತ್ಯಯಕ್ಕೆ ವಿಚಾರವಿಧಿಯಲ್ಲಿ ತಾತ್ಪರ್ಯವಿಲ್ಲ ಬ್ರಹ್ಮಪರವಾಕ್ಯಗಳ ನಡುವೆ ಬರುವುದರಿಂದ ಎನ್ನಕೂಡದು. ದರ್ಶಪೂರ್ಣಮಾಸ ಯಾಗಗಳಿಂದ ಸ್ವರ್ಗ ಸಂಪಾದಿಸಬೇಕು ಹೀಗೆ ಎಂದು ಇತಿ ಕರ್ತವ್ಯತಾಕಾಂಕ್ಷೆ ಇದೆ. ಪ್ರಯಾಜಾದಿಗಳಿಗೆ ಏನು ಫಲ ಎಂದು ಫಲಾಕಾಂಕ್ಷೆ ಇದೆ. ಅದರಿಂದ ಎರಡಕ್ಕೂ ಏಕವಾಕ್ಯತೆ ಬರುವುದರಿಂದ ಪ್ರಯಾಜಗಳು ಅಂಗಯಾಗಗಳಾಗುತ್ತವೆ. ಪರಸ್ಪರ ವಿರೋಧವಿಲ್ಲ. ಹಾಗೆಯೆ ವೇದಾಂತಕ್ಕೆ ವಿಚಾರದ ಅಪೇಕ್ಷೆ ಇದೆ. ವಿಚಾರವಿಧಿಗೆ ಬ್ರಹ್ಮಜ್ಞಾನ ಉಂಟುಮಾಡುವುದೇ ಉದ್ದೇಶ. ಹೀಗಾಗಿ ಬ್ರಹ್ಮಜ್ಞಾನ ಸಾಧನವಾದ ವೇದಾಂತಕ್ಕೆ ಸಹಾಯವಾಗಲೆಂದು ವಿಚಾರವನ್ನು ವಿಚಾರವಿಧಿ ವಿಧಿಸುತ್ತದೆ ಎಂದು ಏಕವಾಕ್ಯತೆ ಇರುವುದರಿಂದ ವಿಚಾರವಿಧಿಯಲ್ಲಿ ಬರುವ ತವ್ಯಾದಿ ಪ್ರತ್ಯಯಗಳಿಗೆ ವಿಧಿಶಕ್ತಿಗೆ ಪ್ರತಿಬಂಧವಾಗುವುದಿಲ್ಲ.

'ಅಭಿಚಾರ ಮಾಡಬೇಕು ಬೇಡ ಎಂದು ವಿಚಾರ ಮಾಡುತ್ತಾರೆ' ಎಂಬಲ್ಲಿ ವಿಧಿ ಇಲ್ಲ; ಏಕೆಂದರೆ ವಿಚಾರವನ್ನು ಹೇಳುವ ಅಭಿಪ್ರಾಯ ಪ್ರತಿಬಂಧಕವಾಗಿದೆ. ಪ್ರಕೃತದಲ್ಲಿ ಅಂಥ ಪ್ರತಿಬಂಧಕ ವಿಲ್ಲ.

'ಭೃಗುಮುನಿಯೆ, ಬ್ರಹ್ಮವಿಚಾರ ಮಾಡು' ಎಂದು ಸಂಬೋಧನವಿದೆ. ಶ್ರೋತೃಗಳು ಅಭಿಮುಖ-ರಾಗುವಂತಿದ್ದರೆ ಮಾತ್ರ ಸಂಬೋಧನೆಗೆ ಅವಕಾಶ. ವಿಧಿಯು ಹಾಗಲ್ಲ, ಶೋತೃಗಳು ಅಭಿಮುಖರಾಗಲಿ ಆಗದಿರಲಿ, ವಿಧಿಯು ಪ್ರವೃತ್ತಿ ಮಾಡುತ್ತದೆ. ಹೀಗೆ ವಿರುದ್ಧ ಸ್ವಭಾವದ ವಿಧಿ ಸಂಬೋಧನಗಳು ಒಂದೇ ವಾಕ್ಯದಲ್ಲಿ ಇರಲಾರವು ಎಂದು ಆಕ್ಷೇಪ ಬರಬಹುದು. ಆದರೆ ಮಂತ್ರಗಳಲ್ಲಿ ಸಂಬೋಧನೆ ವಿಧಿಗೆ ವಿರುದ್ಧ ಎನ್ನಬಹುದು. ಪ್ರಕೃತ ಭೃಗುಮುನಿಯನ್ನು ಸಂಬೋಧಿಸಿದುದು ಅರ್ಥವಾದದಲ್ಲಿ. ಅರ್ಥವಾದದ ಬಲದಿಂದಲೇ ವಿಧಿ ಇದೆ ಎಂದೆನಿಸುತ್ತದೆ. ವಿಧಿ ಒಂದಿಲ್ಲದಿದ್ದರೆ ಅರ್ಥವಾದ ಪ್ರಶಂಸೆ ಮಾಡುವುದೇನನ್ನು? ಅದರಿಂದ ಇಲ್ಲಿ ವಿಧಿ ಸಿದ್ಧವಾಗುತ್ತಿರುವುದರಿಂದ ಸಂಬೋಧನೆ ಪ್ರತಿಬಂಧಕವಾಗುವುದಿಲ್ಲ.

ಜ್ಞಾನವು ವಿಧಾನಕ್ಕೆ ಯೋಗ್ಯವಲ್ಲ ಎಂಬ ಆಕ್ಷೇಪವೂ ಸರಿಯಲ್ಲ. ತಸ್ಮಾತ್ ಪಶ್ಯೇತ ನಿತ್ಯಶಃ ಎಂದು ಮುಂತಾಗಿ ಜ್ಞಾನವನ್ನು ವಿಧಿಸಿದ್ದು ಕಂಡಿದೆ. ವಿಧಿವಾಕ್ಯದಲ್ಲಿ ಅಮುಖ್ಯಾರ್ಥವಿಟ್ಟುಕೊಳ್ಳಲಾಗದೆಂದೂ ಮೀಮಾಂಸಾಶಾಸ್ತ್ರಕ್ಕೆ ವಿರುದ್ಧ 'ಸೋಮೇನ ಯಜೇತ' ಎಂಬಲ್ಲಿ 'ಸೋಮ' ಎಂದರೆ ಸೋಮದಿಂದ ಮಾಡುವ ಯಾಗ' ಎಂದು ಅಮುಖ್ಯಾರ್ಥ ಸ್ವೀಕರಿಸಿದ್ದಾರೆ. ಮುಖ್ಯಾರ್ಥ ಕೂಡದಿರುವುದು ಮತ್ತು ತಾತ್ಪರ್ಯಕ್ಕೆ ಅನನುಗುಣವಾಗುವುದು ಅಮುಖ್ಯಾರ್ಥ ಸ್ವೀಕರಿಸಲು ಕಾರಣ. ಇದು ಬೇರೆ ಕಡೆ ಇರುವಂತೆ ವಿಧಿವಾಕ್ಯದಲ್ಲಿಯೂ ಇರುವುದು ಅಸಂಭವವಲ್ಲ. ಆದ್ದರಿಂದ ಅನುವಾದಕ ವಾಕ್ಯಕ್ಕೆ ಮುಖ್ಯಾರ್ಥ ಬರಬೇಕೆಂದು ವಿಧಿವಾಕ್ಯಕ್ಕೆ ಅಮುಖ್ಯಾರ್ಥ ಹೇಳಬಾರದು ಎಂಬುದೇ ಮೀಮಾಂಸಕರ ಅಭಿಪ್ರಾಯ.

* * * *

ಪರಿಪೂರ್ಣಚಂದ್ರಿಕಾ

## ಓಂಕಾರವಾದ

**तात्पर्यचन्द्रिका –**

**नन्वत्रानुव्याख्याने "तत्र तारादमूलत्वम्" इत्योङ्कारस्य सूत्रादित्वमुक्त्वा "ओतत्ववाची त्वोङ्कारः" इति स व्याख्यातः । सुधायाञ्च "स्रवत्यनोङ्कृतं ब्रह्म परस्ताच्च विशीर्यते' इति श्रुतिबलात् प्रतिसूत्रं ब्रह्मविद्यात्वादाद्यन्तयोरोङ्कारस्योहः कार्यः । नचोह्यमानं वाक्यात् पृथक् । मन्त्रेष्वप्यूह्यमानस्य तदनवयवत्वप्रसङ्गात् । ओङ्कारार्थस्य प्रथमसूत्रवाक्यार्थे समन्वयेनावयवत्वनिश्चयाच्च । असंहिततया निर्देशस्तु सर्वसूत्रेष्वनुगतिसूचनार्थः" इत्युक्तम् । तत् कथम्? 'सूर्याय' इत्यूहं प्रति 'अग्नये' इत्यादेरिव, प्रकृते स्थानिनोऽभावात् । यथोक्तम् –**

**"प्राकृतस्थानपतितपदार्थान्तरकार्यतः ।**
**ऊहः प्रयोगो विकृत ऊह्यमानतयोदितः"**

**इति ।। नचोहशब्देन अध्याहारो लक्ष्यत इति वाच्यम् । "सं यज्ञपतिराशिषा, इषे त्वा" इत्यादाविव साकाङ्क्षत्वाभावात् ।**

ಅನುವಾದ - ಆಕ್ಷೇಪ - ಅನುವ್ಯಾಖ್ಯಾನದಲ್ಲಿ 'ಓಂಕಾರ ಮತ್ತು ಅಥಶಬ್ದಗಳು ಎಲ್ಲ ಶಾಸ್ತ್ರಗಳ ಪ್ರಾರಂಭದಲ್ಲಿ ಇರಬೇಕು.' ಎಂದು ಹೇಳಲಾಗಿದೆ. ಮತ್ತು 'ಓಂಕಾರವು 'ಪೂರ್ಣ' ಎಂಬ ಅರ್ಥದಲ್ಲಿದೆ' ಎಂದು ಓಂಕಾರದ ಅರ್ಥವಿವರಣೆಯನ್ನೂ ಅಲ್ಲಿಯೇ ಮಾಡಲಾಗಿದೆ. ನ್ಯಾಯಸುಧಾದಲ್ಲಿ ಹೀಗೆ ಹೇಳಿದೆ - 'ಪ್ರತಿಯೊಂದು ಸೂತ್ರವೂ ಬ್ರಹ್ಮವಿದ್ಯೆಯಾಗಿದೆ. ಬ್ರಹ್ಮವಿದ್ಯೆಯ ಆದಿಯು ಓಂಕಾರರಹಿತವಾದರೆ ಫಲವು ಹುಟ್ಟುವುದಿಲ್ಲ. ಅಂತ್ಯವು ಓಂಕಾರರಹಿತವಾದರೆ ಇದ್ದ ಫಲವೂ ನಷ್ಟವಾಗುತ್ತದೆ' ಈ ಶ್ರುತಿಯ ಬಲದಿಂದ ಬ್ರಹ್ಮವಿದ್ಯಾತ್ಮಕವಾದ ಪ್ರತಿಯೊಂದು ಸೂತ್ರಗಳ ಆದ್ಯಂತಗಳಲ್ಲಿ ಓಂಕಾರವನ್ನು ಊಹೆ ಮಾಡಿಕೊಳ್ಳಬೇಕು. ಊಹಿಸಿಕೊಂಡ ಓಂಕಾರವು ವಾಕ್ಯಕ್ಕಿಂತ ಭಿನ್ನವಾಗಲು ಸಾಧ್ಯವಿಲ್ಲ. ಭಿನ್ನವಾದರೆ ಮಂತ್ರಗಳಲ್ಲಿ ಊಹೆ ಮಾಡಿಕೊಂಡ ಶಬ್ದಗಳೂ ಸಹ ಮಂತ್ರಗಳ ಭಾಗ ಆಗದಿರಬೇಕಾದೀತು.

ಮತ್ತು ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಓಂಕಾರದ ಅರ್ಥಕ್ಕೆ ಅನ್ವಯ ಮಾಡಲಾಗುತ್ತದೆ. ಆದ್ದರಿಂದಲೂ ಓಂಕಾರವು ಸೂತ್ರದ ಅವಯವವೆಂದು ನಿರ್ಣಯವಾಗುತ್ತದೆ. ಅವಯವವಾದಲ್ಲಿ

ಅಥಶಬ್ದದಂತೆ ಇತರ ಪದಗಳ ಜೊತೆಗೆ ಸೇರಿಸಿ ಹೇಳಬೇಕಿತ್ತು? ಎಂದರೆ ಮುಂದಿನ ಎಲ್ಲಾ ಸೂತ್ರಗಳಲ್ಲಿಯೂ ಓಂಕಾರವನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಅದನ್ನು ಬಿಡಿಸಿ ಪ್ರತ್ಯೇಕವಾಗಿ ಹೇಳಲಾಗಿದೆ. ಇಷ್ಟು ವಿಚಾರವನ್ನು ನ್ಯಾಯಸುಧಾದಲ್ಲಿ ಹೇಳಲಾಗಿದೆ. ಇದರ ಮೇಲೆ ಒಟ್ಟು ಆರು ಆಕ್ಷೇಪಗಳು ಬರುತ್ತವೆ.

ಪ್ರಕೃತಿಯಾಗಕ್ಕೆ ಸಂಬಂಧಿಸಿದ 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬ ಮಂತ್ರವನ್ನು ವಿಕೃತಿಯಾಗದಲ್ಲಿ ಅಗ್ನಿ ಶಬ್ದ ತೆಗೆದು ಸೂರ್ಯಶಬ್ದವನ್ನು ಊಹಿಸಿ ಉಚ್ಚರಿಸಬೇಕೆಂದು ಹೇಳಲಾಗಿದೆ. ಇಲ್ಲಿ ಅಗ್ನಿ ಪದದ ಸ್ಥಾನದಲ್ಲಿ ಸೂರ್ಯಪದವನ್ನು ಊಹೆ ಮಾಡಿಕೊಳ್ಳುವಾಗ ಅದಕ್ಕೆ ಅಗ್ನಿಪದವು ಸ್ಥಾನಿಯಾಗಿದೆ. ಹಾಗೆ ಪ್ರಕೃತದಲ್ಲಿ ಊಹೆ ಮಾಡಿಕೊಳ್ಳಲು ಸ್ಥಾನಿ ಇಲ್ಲ. ಈ ಊಹೆಯ ಬಗ್ಗೆ ತಂತ್ರವಾರ್ತಿಕದಲ್ಲಿ ಹೀಗೆ ಹೇಳಿದೆ - ಪ್ರಕೃತಿಯಾಗದ ದೇವತೆಯ ಸ್ಥಾನದಲ್ಲಿ ವಿಕೃತಿಯಾಗಕ್ಕೆ ಸಂಬಂಧಿಸಿದ ದೇವತೆಯ ಯಾವ ಕಾರ್ಯವಿದೆಯೋ ಅದು ಪ್ರಕೃತಿಯಾಗಕ್ಕೆ ಸಮಾನವಾದಾಗ ಯಾವ ದೇವತೆಯನ್ನು ವ್ಯತ್ಯಾಸಮಾಡಿ ಹೇಳುತ್ತೇವೆಯೋ ಅದೇ ಊಹೆ. ಊಹೆಗೆ ವಿಷಯವಾದ್ದರಿಂದ ಇದನ್ನು ಊಹೆ ಎಂದು ಕರೆಯುತ್ತಾರೆ.

ಈ ಆಕ್ಷೇಪ ಪರಿಹಾರಕ್ಕಾಗಿ 'ಊಹೆ ಎಂದರೆ ಲಕ್ಷಣಯಾ ಅಧ್ಯಾಹಾರ ಎಂಬರ್ಥವನ್ನು ಇಟ್ಟುಕೊಳ್ಳುತ್ತೇವೆ' ಎಂದು ಹೇಳಬಾರದು. ಅಧ್ಯಾಹಾರ ಮಾಡಿಕೊಳ್ಳಬೇಕಾದರೆ ಸೂತ್ರದಲ್ಲಿ ಅದರ ಆಕಾಂಕ್ಷೆ ಇರಬೇಕು. ಇದಕ್ಕೆ ಮೀಮಾಂಸೆಯಲ್ಲಿ ದೃಷ್ಟಾಂತವೂ ಇದೆ. 'ಸಃ ಯಜ್ಞಪತಿರಾಶಿಷಾ' ಎಂಬ ಮಂತ್ರದಲ್ಲಿ ಕ್ರಿಯೆಯ ಆಕಾಂಕ್ಷೆ ಇರುವುದರಿಂದ 'ಕೂಡಿಕೊಳ್ಳಲಿ' ಎಂಬ ಪದವನ್ನು ಅಧ್ಯಾಹಾರ ಮಾಡುವುದು ಕಂಡಿದೆ. ಹಾಗೆಯೇ 'ಇಷೇ ತ್ವಾ' ಎಂಬಲ್ಲಿಯೂ ಕ್ರಿಯೆಯ ಆಕಾಂಕ್ಷೆ ಬರುವುದರಿಂದ 'ಚ್ಛಿನತ್ತಿ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ಕಂಡಿದೆ. ಆದರೆ ಪ್ರಕೃತ ಯಾವ ಸೂತ್ರದಲ್ಲಿಯೂ ಓಂಕಾರದ ಆಕಾಂಕ್ಷೆ ಇಲ್ಲದಿರುವುದರಿಂದ ಇದರ ಅಧ್ಯಾಹಾರ ಅನಾವಶ್ಯಕ.

**ಕಠಿಣಪದಾರ್ಥ**

**ಪ್ರತಿಸೂತ್ರಮ್** = ಪ್ರತಿಯೊಂದು ಸೂತ್ರಗಳು. **ಊಹ್ಯಮಾನಮ್** = ಊಹಿಸಲ್ಪಟ್ಟದ್ದು. **ತದನವಯವತ್ವಪ್ರಸಂಗಾತ್** = ಮಂತ್ರದ ಅವಯವ ಆಗದಿರಬೇಕಾದೀತು. **ಅಸಂಹಿತತಯಾ** = ಬಿಡಿಸಿ (ಸೂತ್ರದಲ್ಲಿ ಸೇರಿಸದ). **ಊಹ್ಯಮಾನತಯಾ** = ಊಹೆಗೆ ವಿಷಯವಾದ್ದರಿಂದ.

**प्रकाशः** – एवं सूत्राभिप्रेतं सिद्धान्तं समर्थ्येदानीं सूत्रावयवभूतान्योङ्कारादीनि पञ्च पदानि व्याचिकीर्षुः, ओङ्कारं तावद् व्याकर्तुं तस्यादित्वे सम्मतिं वदन्,

सुधाशयं स्फुटीचिकीर्षुस्तद्ग्रन्थमाक्षेप्तुमनुवदति ।। नन्वित्यादिना ।। सुधायाश्च इति ।। "सर्वत्रानुगतत्वेन पृथगोङ्क्रियतेऽखिलैः ।" इत्येतद्व्याख्यावसर इति भावः । सुधावाक्यानां विक्षिप्तानां सङ्ग्रहेण कचिच्छब्दतः कचिदर्थतोऽनुवादोऽयम् । अवयवत्वे युक्त्यन्तरमाह – ओङ्कारार्थस्येति ।। नन्ववयवत्वे अथशब्दवत् संहिततया निर्देशः स्यादित्यत आह – असंहिततयेति ।। विश्लिष्टतयेत्यर्थः । "अग्नस्य" इति पाणिनिसूत्रवदिति भावः – सूर्यायेति ।। नवमे "प्रकृतौ यथोत्पत्तिवचनमर्थानाम्" इति तृतीयपादीयाधिकरणे दर्शपूर्णमासयोः श्रुतः "अग्नये जुष्टं निर्वपामि" इति मन्त्रः "सौर्यं चरुं निर्वपेत्" इति विकृतौ चोदकप्राप्तः । तत्राग्निपदस्थाने सूर्यपदप्रक्षेपेणोहितव्य उत नेति सन्देहे, यथाऽवस्थितस्वरूपस्यैव मन्त्रस्य चोदकेन प्रापितत्वादग्निपदेनैन्द्रीवद् गुणवृत्त्या सूर्यप्रकाशनसम्भवान्नोह इति प्राप्ते, प्रकृतावग्निशब्दो न स्वरूपविवक्षयाऽऽम्नातः । अदृष्टार्थत्वापत्तेः । किन्तु देवतापदविवक्षया । दृष्टार्थतालाभात् । अतस्तेनैव रूपेण विकृतौ चोदकेन प्रापणात्, अग्निपदस्य वैकृतदेवतापरत्वाभावात् तदुद्धारेण सूर्यपदप्रक्षेपेण चोहितव्यो मन्त्रः । ऐन्द्री तु स्वरूपेण गार्हपत्ये विनियुक्तेति वैषम्यमिति सिद्धान्तितम् । तत्र यथा सौर्ययागे चोदकेन प्राप्ते "देवस्य त्वा" इति मन्त्रे 'अग्नये' इति पदं स्थानिरूपं विद्यते, नतु तथा प्रतिसूत्रमोङ्कारोहस्य स्थान्यस्तीत्यर्थः । 'इत्यादेः' इत्यादिपदेन 'नीवाराणाम्' इत्यूहं प्रति "व्रीहीणां मेध सुमनस्यमानः" इति मन्त्रे 'व्रीहीणां' इत्यस्येवेति ग्राह्यम् ।।

यथोक्तमिति ।। तन्त्रवार्तिके इति भावः । प्राकृतः प्रकृतियागीयो यः पदार्थः व्रीह्यग्निलक्षणद्रव्यदेवतारूपं, तस्य स्थाने पतितं यत् पदार्थान्तरं विकृतियागसम्बन्धि नीवारसूर्यलक्षणद्रव्यदेवतारूपं, तस्य यत् कार्यं प्राकृतकार्यतुल्यं होमादि, तदर्थं विकृतो यः प्रयोगः 'सूर्याय' इत्यादिरूपः, स ऊह इत्युच्यते । कुतः, 'ऊह्यमानतया' ऊहविषयत्वादित्यर्थः ।। सं यज्ञपतिरिति ।। द्वितीये "व्यवायान्नानुषज्येत" इत्याद्यपादीयांतिमाधिकरणे "सं ते प्राणो वायुना गच्छताम्, सं यजत्रैरङ्गानि, सं यज्ञपतिराशिषा" इति मन्त्रेषु 'गच्छताम्'

इत्यस्य "सं यजत्रैरङ्गानि" इत्यत्र वचनभेदादननुषङ्गे, "सं यज्ञपतिराशिषा" इत्यत्रापि किं तस्यैवानुषङ्गः उताध्याहार इति सन्देहे, बुद्धिविपरिवृत्तेः अनुषङ्गः इति प्राप्ते, "सं यजत्रैरङ्गानि" इत्यत्र असम्बन्धेन बुद्धिविपरिवृत्तिभङ्गादनुषङ्गायोगे साकाङ्क्षत्वादध्याहार इति सिद्धान्तितम् । तथा तत्रैवाद्यपादे "समेषु वाक्यभेदः स्यात्" इति षोडशोऽधिकरणे "इषे त्वोर्जे त्वा" इत्यादिषु किमेकमन्त्रत्वमुत मन्त्रभेद इति संशये अनुष्ठेयार्थाप्रकाशनाद् अदृष्टार्थत्वे चानेकादृष्टकल्पनापत्तेर्मन्त्रैक्यमिति प्राप्ते, "इषे त्वा इति छिनत्ति' ऊर्जे त्वा इति अनुमार्ष्टि" इत्यादिना शाखाच्छेदनादिषु करणत्वेन विनियोगादर्थप्रकाशनरूपक्रियानिर्वर्तनेनैव करणत्वस्य निर्वाह्यत्वेन च्छेदनादिकं प्रति साकाङ्क्षत्वात्, 'छिनद्मि' इत्याद्यध्याहारेण वाक्यं पूरणीयमिति मन्त्रभेद इति सिद्धान्तितम् । अत्रोभयत्र क्रियापदाश्रवणात् तदाकाङ्क्षायामध्याहारः स्वीकृतः । नैवं सूत्रेष्वाकाङ्क्षेति, अध्याहारो न युक्त इत्यर्थः ॥

गुरुराजीय – अधुना यद्यपि पूर्वमुल्लिखितटीका व्याख्येया तथापि अनुव्याख्यानसुधयोः सूत्रस्याथशब्दादप्योङ्कार आद्यावयव इत्युक्त्वा तस्य च व्याख्यातत्वात् तत्रानुपपत्तिमाशङ्क्य परिहर्तुं तदुक्तमनुवदति – नन्वत्रानुव्याख्यान इति ॥ व्याख्यातत्वमात्रं नावयवत्वनिश्चायकं अतथाभूतानां भर्गादिशब्दानामपि व्याख्यातत्वात् । अन्यथा तेषामपि सूत्रावयवत्वं स्यादित्यत उक्तम् - सूत्रादित्वमुक्त्वेति ॥ सं यज्ञपतिरिति ॥ सं यज्ञपतिराशिषेत्यत्र सं ते वायुर्वातेन गच्छतामिति पूर्वत्र श्रुतस्य एकवचनान्तस्य गच्छतामित्यस्य स्वान्वयायोग्यत्वेन सं यजत्रैरङ्गानीति मध्ये श्रुतेन बहुवचनान्तेन व्यवहिततयाऽनुषङ्गासम्भवेनाध्याहारात् श्रुताध्याहारः । 'इषे त्वा' इत्यत्र तु छेदने मन्त्रस्य विनियोगादश्रुतस्यैव छिनद्मीति यस्याध्याहारादश्रुताध्याहारः । अत्राद्योऽनुषङ्गमात्रे दृष्टान्तः । द्वितीयस्तु प्रस्तुते अश्रुताध्याहारे द्वयमपि क्रियायां साकाङ्क्षम् । जिज्ञासासूत्रं तु ओङ्कारे निराकाङ्क्षमिति भावः ॥

ವಿವರಣೆ - ಸೂತ್ರದಿಂದ ತಿಳಿಯುವ ಸಿದ್ಧಾಂತಪ್ರಮೇಯವನ್ನು ಇದುವರೆಗೂ ಸಮರ್ಥಿಸಿದ್ದಾಯಿತು. ಈಗ ಸೂತ್ರದ ಒಂದೊಂದೇ ಪದಗಳನ್ನು ವ್ಯಾಖ್ಯಾನಿಸುತ್ತಿದ್ದಾರೆ. ಸೂತ್ರದಲ್ಲಿ ಒಟ್ಟು, 'ಓಂ, ಅಥ, ಅತ

ಬ್ರಹ್ಮ, ಜಿಜ್ಞಾಸಾ' ಎಂದು ಐದು ಪದಗಳಿವೆ. ಇವುಗಳಲ್ಲಿ ಓಂಕಾರವನ್ನು ಮೊದಲು ವ್ಯಾಖ್ಯಾನಿಸಲು ಹೊರಟಿದ್ದಾರೆ. ಅದಕ್ಕಿಂತ ಮೊದಲು ಓಂಕಾರವನ್ನು ಸೂತ್ರದ ಮೊದಲು ಹೇಳಲು ಕಾರಣ ತಿಳಿಸುವುದಕ್ಕಾಗಿ ಮತ್ತು ನ್ಯಾಯಸುಧಾದ ಅಭಿಪ್ರಾಯವನ್ನು ಸ್ಪಷ್ಟಪಡಿಸುವುದಕ್ಕಾಗಿ 'ನನು' ಇತ್ಯಾದಿ ವಾಕ್ಯದಿಂದ ಆಕ್ಷೇಪ ಮಾಡಿಕೊಳ್ಳುತ್ತಿದ್ದಾರೆ.

"ಸರ್ವಶಾಸ್ತ್ರಾನುಗತತ್ವೇನ ಪೃಥಗೋಂಕ್ರಿಯತೇऽಖಿಲೈಃ" ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನ್ಯಾಯಸುಧಾದಲ್ಲಿ ಹೀಗೆ ಹೇಳಿದ್ದಾರೆ - ಇಲ್ಲಿ ಹೇಳಿರುವ ಸುಧಾಭಿಪ್ರಾಯವನ್ನು ಸುಧಾದಲ್ಲಿ ಇದೇ ವಾಕ್ಯಗಳಲ್ಲಿ ಕಾಣಲು ಸಾಧ್ಯವಿಲ್ಲ. ಅಲ್ಲಿ ಈ ಅಭಿಪ್ರಾಯವು ವಿಕ್ಷಿಪ್ತವಾಗಿ ಹೇಳಲಾಗಿದೆ. ಇಲ್ಲಿ ಅದನ್ನೆಲ್ಲಾ ಸಂಗ್ರಹಿಸಿ, ಕೆಲವೊಂದು ಅಭಿಪ್ರಾಯಗಳನ್ನು ಅದೇ ಶಬ್ದದಿಂದಲೇ ಇನ್ನು ಕೆಲವನ್ನು ಅರ್ಥದಿಂದ ಇಲ್ಲಿ ಅನುವಾದ ಮಾಡಲಾಗಿದೆ.

ಓಂಕಾರವು ಸೂತ್ರದ ಅವಯವವಾಗಿದೆ ಎನ್ನಲು ಊಹೆಯೇ ಕಾರಣವೆಂದು ಹೇಳಿದರು. ಸೂತ್ರಾರ್ಥದಲ್ಲಿ ಅನ್ವಯ ಹೊಂದುವುದರಿಂದಲೂ ಅದು ಸೂತ್ರದ ಅವಯವವಾಗಿದೆ ಎನ್ನಲು 'ಓಂಕಾರಾರ್ಥಸ್ಯ' ಇತ್ಯಾದಿ ವಾಕ್ಯದಿಂದ ಮತ್ತೊಂದು ಕಾರಣವನ್ನು ನೀಡುತ್ತಿದ್ದಾರೆ.

ಓಂಕಾರವು ಸೂತ್ರದ ಭಾಗವೇ ಆಗಿದ್ದಲ್ಲಿ 'ಅಥ' ಶಬ್ದವು ಹೇಗೆ 'ಅತಃ' ಪದದಿಂದ ಸೇರಿಕೊಂಡಿದೆಯೋ ಹಾಗೆಯೇ ಓಂಕಾರವೂ 'ಅಥ' ಎಂಬ ಶಬ್ದದಿಂದ ಕೂಡಿಕೊಂಡಿರಬೇಕಿತ್ತು? ಎಂಬ ಪ್ರಶ್ನೆಗೆ 'ಅಸಂಹಿತತಯಾ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಓಂಕಾರವನ್ನು ವಿಶ್ಲಿಷ್ಟವಾಗಿ (ಬಿಡಿಸಿ) ಹೇಳಲು ಕಾರಣವೇನೆಂದರೆ ಮುಂದಿನ ಎಲ್ಲ ಸೂತ್ರಗಳಲ್ಲಿಯೂ ಇದನ್ನು ಇಟ್ಟುಕೊಳ್ಳಬೇಕು ಎಂದು. ಹೇಗೆ 'ಅಂಗಸ್ಯ' 'ಅಂಗಕ್ಕೆ' ಎಂಬ ಪಾಣಿನೀಸೂತ್ರವು ಅಂಗಾಧಿಕಾರದಲ್ಲಿರುವ ಎಲ್ಲಾ ಸೂತ್ರಗಳಲ್ಲಿ ಅನುವೃತ್ತವಾಗುತ್ತದೋ, ಹಾಗೆಯೇ ಈ ಓಂಕಾರವೂ ಸಹ ಮುಂದಿನ ಎಲ್ಲಾ ಸೂತ್ರಗಳಲ್ಲಿ ಅನುವೃತ್ತ-ವಾಗುತ್ತದೆಂದು ಅಭಿಪ್ರಾಯ.

## ಸೂರ್ಯಾಯೇತ್ಯೂಹಾಧಿಕರಣ

## ಸೂತ್ರ - ಪ್ರಕೃತೌ ಯಥೋತ್ಪತ್ತಿವಚನಮರ್ಥಾನಾಮ್ ( ೯- ೩ -೧)[೧]

---

(१) भाट्टसङ्ग्रहः

अथ प्रथमं विकृतौ मन्त्रगतव्रीह्यादिशब्दानामूहाधिकरणम् (सूत्रे १-२)
प्रकृतौ यथोत्पत्तिवचनमर्थानां तथोत्तरस्यां ततौ तत्प्रकृतिकत्वादर्थे च कार्यत्वात् ।। १ ।। (लिङ्गदर्शनाच्च ।। २ ।।)

दर्शपूर्णमासयोः "अग्नये जुष्टं निर्वपामि" इति श्रुतो मन्त्रः "सौर्यं चरुं निर्वपेत्" इत्यादिविकृतावूहितव्यः, उत नेति सन्देहे, नोहितव्य इति प्राप्तम् । प्रकृतौ पठितस्य यथाश्रुतमन्त्रस्वरूपस्य विकृतौ चोदकेन प्रापणात् । नचाद्यपादे फलदेवतयोश्चेत्यत्र इत्यत्र

'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬ ಮಂತ್ರವು ದರ್ಶಪೂರ್ಣಮಾಸಯಾಗದಲ್ಲಿ ಶ್ರುತವಾಗಿದೆ ಇದೇ ಮಂತ್ರವನ್ನು ವಿಕೃತಿಯಾಗದಲ್ಲಿ ಸೂರ್ಯನಿಗೋಸ್ಕರ ಉಪಯೋಗಿಸಬೇಕು.

ಪ್ರಕೃತಿ ಎಂದರೆ 'ಯತ್ ಸಕಲಾಂಗಯುತಂ ಪಠ್ಯತೇ ತತ್‌ಕರ್ಮ ಪ್ರಕೃತಿಃ' ಯತ್ ಅಂಗವಿಹೀನಂ ಪಠ್ಯತೇ ತತ್‌ಕರ್ಮ ವಿಕೃತಿಃ' ಯಾವ ಯಾಗವನ್ನು ಹೇಳುವಾಗಲೇ ಸಕಲಾಂಗಗಳು ಪಠಿತವಾಗಿದ್ದರೆ ಅದು ಪ್ರಕೃತಿಯಾಗ. ಅಂಗಗಳನ್ನು ಸರಿಯಾಗಿ ಹೇಳದೇ ಯಾಗವನ್ನಷ್ಟೇ ಹೇಳಿದ್ದರೆ ಅದು ವಿಕೃತಿಯಾಗ ಹೀಗಿರುವಾಗ ವಿಕೃತಿಯಾಗವನ್ನು ಹೇಗೆ ಮಾಡಬೇಕೆಂಬ ಕಥಂಭಾವಾಕಾಂಕ್ಷೆ ಶಾಂತವಾಗುವುದಿಲ್ಲ. ಆಕಾಂಕ್ಷೆಯನ್ನು ಪರಿಹರಿಸಲು 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂಬ ಚೋದಕ ಹೊರಟಿದೆ. ಈ ನಿಯಮದಂತೆ ಪ್ರಕೃತಿಯಾಗದ ಅಂಗಗಳನ್ನು ವಿಕೃತಿಯಾಗದಲ್ಲಿ ಉಪಯೋಗಿಸಬೇಕೆಂದು ತಿಳಿಯುತ್ತದೆ ಇದನ್ನೇ ಊಹ ಎನ್ನುತ್ತಾರೆ.

**ಉದಾಹರಣೆ** :- 'ಸೌರ್ಯಂ ಚರುಂ ನಿರ್ವಪೇತ್' ಎಂಬ ಮಂತ್ರದಿಂದ ಸೂರ್ಯದೇವತಾಕವಾದ ಯಾಗವು ವಿಹಿತವಾಗಿದೆ. ಆದರೆ ಈ ವಿಕೃತಿಯಾಗದಲ್ಲಿ ಮಂತ್ರದೇವತೆಗಳನ್ನು ಹೇಳಿಲ್ಲ. ಆದ್ದರಿಂದ

---

''अग्नेरहमुज्जितिमनूज्जेषम्'' इत्यादिमन्त्रा नाग्न्यादिस्वरूपमात्रप्रकाशनार्थाः । व्यर्थतापा वा अदृष्टार्थतायां वा प्रसङ्गात् । किन्त्वपूर्वीयदेवताप्रकाशनार्थतया तथाऽभिप्रेताः सन्तोऽपूर्वीयदेवताप्रकाशनरूपकार्यार्थतया विकृतौ चोदकेन प्रापिताः । अतः कथमग्निपदमनूहे सति सूर्यदेवतां प्रकाशयेदिति शङ्क्यम् । ऐन्द्या गार्हपत्यस्येवाग्निपदेनैव तेजोरूपत्वगुणयोगेन सूर्यप्रकाशनसम्भवात् । अन्यथा ''कदा च नस्तरीरसिनेन्द्र'' इति मन्त्रगतेन्द्रपदस्यानेऽग्निपदस्यापि गार्हपत्ये ऊहप्रसङ्गात् । तथाच वचनात् त्वयथार्थमैन्द्री इति सूत्रविरोध इति । तदाह सूत्रे, प्रकृतौ यथोत्पत्ति मन्त्रे अर्थानां वचनमभिधानं कृतं तथैव यथोत्पत्त्येवोत्तरस्यां ततौ विकृतिसमूहेऽप्यर्थाभिधानं कर्तव्यम् । कुतः? तत्प्रकृतिकत्वादिति । सिद्धान्तस्तु, प्रकृतौ यद्रूपं मन्त्राणां विवक्षितं तद्रूपमेव विकृतौ चोदकेन प्रापणीयम् । प्रकृतौ देवतावाचिपदत्वेनाग्निपदं विवक्षितमिति विकृतावपि तथैव भाव्यत्वात् तस्याग्निपदस्थाने सूर्यपदप्रक्षेपेण विनाऽनुपपत्तेरूहितव्यो मन्त्रः । ऐन्द्यास्तु प्रत्यक्षवचनेन स्वरूपेणैव विनियोगान्न तत्रोह इति । तदाह, अर्थे च कार्यत्वात् इति सूत्रखण्डेन सिद्धान्तं भाष्यकारः । चशब्दः पूर्वपक्षनिरासकः । अर्थे अर्थाभिधानस्य मन्त्रकार्यत्वादग्निपदस्य विकृतिदेवताभिधायकत्वायोगान्न यथोत्पत्तिमन्त्रैरर्थाभिधानं विकृताविति सूर्यायेत्यूहितव्यमिति । एवं ''व्रीहीणां मेध सुमनस्यमानः'' इति प्रकृतौ हविःप्रकृतिद्रव्यप्रकाशनार्थतया प्रकृतमन्त्रस्य विकृतौ चरुरूपहविःप्रकृतिद्रव्यनीवारेषु ''नीवाराणां मेध'' इत्यूहसिद्धिर्ध्येया ।

**इति प्रथमं विकृतौ मन्त्रगतव्रीह्यादिशब्दानामूहाधिकरणम् (सूत्रे १-२)**

*ಪರಿಪೂರ್ಣಚಂದ್ರಿಕಾ*

ಇದರ ಪ್ರಕೃತಿಯಾಗವಾಗಿರುವ ದರ್ಶಪೂರ್ಣಮಾಸಯಾಗದಲ್ಲಿ ಹೇಳಿದ್ದನ್ನೇ ಇಲ್ಲಿಯೂ ಇಟ್ಟುಕೊಳ್ಳಬೇಕು. ದರ್ಶಪೂರ್ಣಮಾಸಯಾಗದಲ್ಲಿ 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬ ಮಂತ್ರವು ವಿಹಿತವಾಗಿದೆ. ಈ ಮಂತ್ರವೇ 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂಬ ಚೋದಕದಂತೆ ವಿಕೃತಿಯಾಗದಲ್ಲೂ ಪ್ರಾಪ್ತವಾಗುತ್ತದೆ.

ಆವಾಗ ಅಗ್ನಿಪದದ ಸ್ಥಾನದಲ್ಲಿ ಸೂರ್ಯಪದವನ್ನು ಊಹೆ ಮಾಡಿಕೊಳ್ಳಬೇಕೋ? ಬೇಡವೋ? ಎಂದು ಸಂದೇಹ.

ಪೂರ್ವಪಕ್ಷ :- ಸೂರ್ಯಪದವನ್ನು ಊಹೆ ಮಾಡಿಕೊಳ್ಳಬಾರದು. ಏಕೆಂದರೆ 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂಬ ಚೋದಕವು ಪ್ರಕೃತಿಯಾಗದಲ್ಲಿ ಯಾವ ಮಂತ್ರವು ವಿನಿಯೋಗಿಸಲ್ಪಟ್ಟಿದೆಯೋ, ಆ ಮಂತ್ರವೇ ಏನೂ ವ್ಯತ್ಯಾಸವಿಲ್ಲದೆ ವಿಕೃತಿಯಾಗದಲ್ಲಿ ವಿನಿಯೋಗಿಸಲ್ಪಡಬೇಕೆಂದು ಹೇಳುತ್ತಿದೆ. ಅಗ್ನಿಪದಘಟಿತವಾದ ಮಂತ್ರದಿಂದ ಸೂರ್ಯನು ಹೇಗೆ ಪ್ರತಿಪಾದ್ಯನಾಗುತ್ತಾನೆ? ಎಂಬ ಪ್ರಶ್ನೆ ಬರುತ್ತದೆ. ಆದರೆ ಅಗ್ನಿಪದದಿಂದ ಗೌಣವಾಗಿ ಸೂರ್ಯನೂ ವಾಚ್ಯನಾಗುತ್ತಾನೆ ಯಾವ ರೀತಿಯಾಗಿ 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬ ವಿಧಿಯಂತೆ 'ಕದಾಚನ ಸ್ತರೀರಸಿನೇಂದ್ರಸಶ್ಚಸಿ' ಎಂಬಲ್ಲಿರುವ ಇಂದ್ರಪದದಿಂದ ಯೌಗಿಕಾರ್ಥಯನ್ನು ಅವಲಂಬಿಸಿ ಐಶ್ವರ್ಯವಿಶಿಷ್ಟವಾದ ಗಾರ್ಹಪತ್ಯಾಗ್ನಿಯನ್ನೇ ಇಟ್ಟುಕೊಳ್ಳುತ್ತೇವೋ, ಅದರಂತೆ 'ಅಗ್ನಯೇ ಜುಷ್ಟಂ' ಎಂಬಲ್ಲಿಯೂ ಅಗ್ನಿಪದದಿಂದ ಯೌಗಿಕಾರ್ಥವನ್ನಷ್ಟೇ ವಿವಕ್ಷಿಸಿ ಅಗ್ರಗಾಮಿಯಾದ್ದರಿಂದ ಸೂರ್ಯನೂ ಅಗ್ನಿಶಬ್ದವಾಚ್ಯನಾಗಬಹುದು. ಆದ್ದರಿಂದ 'ಸೂರ್ಯಾಯ' ಎಂದು ಊಹೆ ಮಾಡಿಕೊಳ್ಳಬೇಕಾಗಿಲ್ಲ.

ಸಿದ್ಧಾಂತ :- 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬಲ್ಲಿ ಅಗ್ನಿಶಬ್ದ ಹೇಳಿದ್ದು ಆ ಶಬ್ದವನ್ನೇ ಉಚ್ಚರಿಸಬೇಕೆಂದಲ್ಲ. ಯಾಗದ ದೇವತೆಯನ್ನು ಹೇಳುವ ಯಾವುದಾದರೂ ಒಂದು ಶಬ್ದವನ್ನು ಉಚ್ಚರಿಸಬೇಕೆಂದು. ಹೀಗೆ ಹೇಳಿದರಷ್ಟೇ ಮಂತ್ರವು ದೃಷ್ಟಾರ್ಥವಾಗುತ್ತದೆ. ಇಲ್ಲವಾದರೆ ಅದೃಷ್ಟಾರ್ಥವಾಗುತ್ತದೆ. ಮೀಮಾಂಸಕರು ಮಂತ್ರಗಳನ್ನೆಲ್ಲವನ್ನು ಅನುಷ್ಠೇಯಸ್ಮರಣೆಯೆಂಬ ದೃಷ್ಟಪ್ರಯೋಜನಕ್ಕೋಸ್ಕರವೆಂದು ಅಂಗೀಕರಿಸಿದ್ದಾರೆ. ಇದು ಕೂಡಬೇಕಾದರೆ ಅಗ್ನಿಪದದಿಂದ ಅಗ್ನಿಶಬ್ದವನ್ನು ಮತ್ತು ಅರ್ಥವನ್ನೂ ವಿವಕ್ಷಿಸಬೇಕು. ಅರ್ಥವಿವಕ್ಷೆ ಮಾಡಿದರೆ ಮಾತ್ರ ಅಗ್ನಿಪದದಿಂದ ದೇವತಾಸ್ಮರಣೆ ಬರಲು ಸಾಧ್ಯ. ಇದರಿಂದ ದೃಷ್ಟಪ್ರಯೋಜನವನ್ನು ಹೇಳಿದಂತಾಗುತ್ತದೆ.

ಆದ್ದರಿಂದ ಸೌರ್ಯಯಾಗದಲ್ಲೂ ಆ ಯಾಗದ ದೇವತೆಯ ಸ್ಮರಣೆಗಾಗಿ 'ಸೂರ್ಯ' ಪದವನ್ನು ಊಹೆ ಮಾಡಿಕೊಳ್ಳಬೇಕು. 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬುದನ್ನು 'ಸೂರ್ಯಾಯ ಜುಷ್ಟಂ ನಿರ್ವಪಾಮಿ' ಎಂದು ವ್ಯತ್ಯಾಸ ಮಾಡಿಕೊಂಡು ಯಾಗ ಮಾಡಬೇಕು.

'ಕದಾಚನಸ್ತರೀರಸಿನೇಂದ್ರ' ಎಂಬಲ್ಲಿ ಇಂದ್ರಪದವನ್ನು ತೆಗೆಯದೆ ಗಾರ್ಹಪತ್ಯಾಗ್ನಿಯನ್ನು ಸ್ತುತಿಸಬೇಕೆಂದು ವಿಶೇಷವಿಧಿಯಿರುವುದರಿಂದ ಇದು ದೃಷ್ಟಾಂತವಾಗುವುದಿಲ್ಲ. ಅಲ್ಲಿ ವಿಶೇಷವಿಧಿ

ಇರುವಂತೆ ಇಲ್ಲಿ ವಿಶೇಷವಿಧಿಯಿಲ್ಲ. ಹಾಗಾಗಿ 'ಅಗ್ನಯೇ' ಎಂಬ ಸ್ಥಾನದಲ್ಲಿ 'ಸೂರ್ಯಾಯ' ಎಂದು ಊಹೆ ಮಾಡಿಕೊಳ್ಳಬೇಕು.

ಈ ಅಧಿಕರಣದಲ್ಲಿ 'ಅಗ್ನಯೇ' ಎಂದು ಸ್ಥಾನಿ ಇರುವುದರಿಂದ ಅಲ್ಲಿ ಸೂರ್ಯಾಯ ಎಂದು ಊಹೆ ಮಾಡಿಕೊಳ್ಳಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಆದರೆ ಪ್ರಕೃತದಲ್ಲಿ ಸ್ಥಾನಿಯೇ ಇಲ್ಲ. ಆದ್ದರಿಂದ ಪ್ರತಿಯೊಂದು ಸೂತ್ರದಲ್ಲಿ ಓಂಕಾರವನ್ನು ಊಹೆ ಮಾಡಿಕೊಳ್ಳಬೇಕೆಂದು ನಿಮಗೆ ಹೇಳಲಾಗದು.

ಮತ್ತೊಂದು ದೃಷ್ಟಾಂತ - 'ವ್ರೀಹೀಣಾಂ ಮೇಧ ಸುಮನಸ್ಯಮಾನಃ' ಎಂಬ ಮಂತ್ರವನ್ನು ಹಿಂದೆ ಹೇಳಿದಂತೆ ಚೋದಕದ ಆಧಾರದಿಂದ ವಿಕೃತಿಯಾಗದಲ್ಲೂ ಹೇಳಬೇಕು. ಪ್ರಕೃತಿಯಲ್ಲಿ ವ್ರೀಹಿಯು ವಿಹಿತವಾಗಿದೆ. ವಿಕೃತಿಯಲ್ಲಿ ನೀವಾರವು ವಿಹಿತವಾಗಿದೆ. ಆದ್ದರಿಂದ ವ್ರೀಹಿ ಪದದ ಸ್ಥಾನದಲ್ಲಿ 'ನೀವಾರ' ಎಂಬ ಪದವನ್ನು ಊಹೆ ಮಾಡಿಕೊಳ್ಳಬೇಕು (ಪೂ-ಮೀ -೯-೩-೨೩) ಇಲ್ಲಿಯೂ ವ್ರೀಹಿಯೆಂಬ ಸ್ಥಾನಿ ಇರುವುದನ್ನು ಗಮನಿಸಬೇಕು.

ಊಹೆ ಬಗ್ಗೆ ತಂತ್ರವಾರ್ತಿಕದಲ್ಲಿ ಹೀಗೆ ಹೇಳಿದೆ -

**ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ**
**ಊಹಃ ಪ್ರಯೋಗೋ ವಿಕೃತಃ ಊಹ್ಯಮಾನತಯೋದಿತಃ ॥**

ಪ್ರಾಕೃತ = ಪ್ರಕೃತಿಯಾಗದ ಭಕ್ತವೆಂಬ ದ್ರವ್ಯ ಮತ್ತು ಅಗ್ನಿ ಎಂಬ ದೇವತೆಗಳ ಸ್ಥಾನೇ = ಸ್ಥಾನದಲ್ಲಿ ಪತಿತ = ಇರುವ, ಯತ್‌ಪದಾರ್ಥಾಂತರಮ್ ಕಾರ್ಯತಃ = ವಿಕೃತಿಯಾಗದ ನೀವಾರವೆಂಬ ದ್ರವ್ಯ ಮತ್ತು ಸೂರ್ಯನೆಂಬ ದೇವತೆಗಳಿಂದ ಆಗಬೇಕಾಗಿರುವ ಪ್ರಕೃತಿಯ ದ್ರವ್ಯದೇವತೆಗಳ ಕಾರ್ಯಕ್ಕೆ ಸಮಾನವೂ ಆಗಿರುವ ಕಾರ್ಯಕ್ಕಾಗಿ, 'ನೀವಾರ' 'ಸೂರ್ಯ' ಎಂದು ವ್ಯತ್ಯಾಸವಾಗಿ ಪ್ರಯೋಗ ಮಾಡುವುದೇ ಊಹೆ. ಊಹೆಗೆ ವಿಷಯವಾದ್ದರಿಂದ ಇದನ್ನು ಊಹೆ ಎನ್ನುತ್ತಾರೆ.

### ಸಂ ಯಜ್ಞಪತಿರಾಶಿಷಾ ಇತ್ಯಧಿಕರಣಮ್

### ಸೂತ್ರ – ವ್ಯವಾಯಾನ್ನಾನುಷಜ್ಯತೇ (೨- ೧-೧೮)[೮]

(१) भाट्टसङ्ग्रहः –

**अथाष्टादशं व्यवेताननुषङ्गाधिकरणम्**

**व्यवायान्नानुषज्यते ।। ४९।।**

**अत्र पूर्वोक्तापवादादापवादिकी सङ्गतिः । अग्नीषोमीयपशौ 'सं ते प्राणो वायुना गच्छतां' 'सं यजत्रैरङ्गानि', 'सं यज्ञपतिराशिषां' इति श्रुतम् । तत्र 'सङ्गच्छतां' इति पदं 'आशिषा' इत्यनन्तरमनुषज्यते, अथाध्याहार इति सन्देहे पूर्वत्रेव साकांक्षत्वादनुषङ्ग इति प्राप्ते संयजत्रैः यागविशेषैः 'सङ्गच्छन्ताम्' इति बहुवचनान्ततया अन्वयेनैकवचनान्तस्य बुद्धिविपरिवृत्तिभङ्गान्नानुषङ्गः । किन्त्वध्याहार इति सिद्धान्तः । तथाच सूत्रम्.**

**ಸಂತೇ ಪ್ರಾಣೋ ವಾಯುನಾ ಗಚ್ಛತಾಂ।**

**ಸಂ ಯಜತ್ರೈರಂಗಾನಿ ಸಂ ಯಜ್ಞಪತಿರಾಶಿಷಾ।**

'ಎಲೈ ಛಾಗಪಶುವೇ ! ನಿನ್ನ ಪ್ರಾಣವು ವಾಯುವಿನ ಜೊತೆಗೆ ಸೇರಿಕೊಳ್ಳಲಿ. ನಿನ್ನ ದೇಹದ ಪ್ರತಿಯೊಂದು ಅಂಗಗಳು ಯಜ್ಞದೊಡನೆ ಸೇರಲಿ. ಯಜಮಾನನು ತನ್ನ ಆಸೆಯನ್ನು ಹೊಂದಲಿ.'

ಈ ಮಂತ್ರದಲ್ಲಿ ಮೂರುಕಡೆ 'ಸಂ' ಎಂಬ ಉಪಸರ್ಗವಿದೆ. ಇದಕ್ಕೆ ಕ್ರಿಯಾಪದದ ಜೊತೆಗೆ ಅನ್ವಯ ಮಾಡಬೇಕು. ಮೊದಲನೆಯ ವಾಕ್ಯದಲ್ಲಿ 'ಗಚ್ಛತಾಮ್' ಎಂದಿರುವುದರಿಂದ ಸಮಸ್ಯೆಯಿಲ್ಲ. ಅದರ ಜೊತೆಗೆ ಅನ್ವಯ ಮಾಡಬಹುದು. (ಪಾಣಿನಿಯ ಪ್ರಕಾರ ಗಚ್ಛತು ಎಂದಾಗಬೇಕು. ಆದರೆ ಇದು ವೈದಿಕಪ್ರಯೋಗವಾದ್ದರಿಂದ ಆತ್ಮನೇಪದದ ಈ ಪ್ರಯೋಗ ತಪ್ಪಾಗಲ್ಲ.) ಆದರೆ ಎರಡನೆಯ ಮತ್ತು ಮೂರನೆಯ ವಾಕ್ಯಗಳಲ್ಲಿ ಕ್ರಿಯಾಪದವೇ ಇಲ್ಲ. ಆದ್ದರಿಂದ ಅಲ್ಲಿರುವ 'ಸಂ' ಎಂಬ ಉಪಸರ್ಗಕ್ಕೆ ಬೇರೆ ಕಡೆಯಿರುವ ಕ್ರಿಯಾಪದದಲ್ಲಿ ಅನ್ವಯ ಮಾಡಬೇಕು. ಮೊದಲನೆಯ ವಾಕ್ಯದಲ್ಲಿರುವ 'ಗಚ್ಛತಾಂ' ಎಂಬುದನ್ನು ಎರಡನೆಯ ವಾಕ್ಯದಲ್ಲಿ ಅನುಷಂಗ ಮಾಡಲಾಗದು. ಏಕೆಂದರೆ 'ಸಂ ಯಜತ್ರೈರಂಗಾನಿ' ಎಂಬಲ್ಲಿ ಬಹುವಚನವಿರುವುದರಿಂದ ಬಹುವಚನಾಂತವಾದ ಕ್ರಿಯಾಪದವೇ ಬೇಕು. ಮೊದಲಿನ ವಾಕ್ಯದಲ್ಲಿರುವ 'ಗಚ್ಛತಾಮ್' ಎಂಬುದು ಏಕವಚನಾಂತವಾದ್ದರಿಂದ ಅದರ ಅನುಷಂಗ ಅಸಾಧ್ಯ. ಆದ್ದರಿಂದ 'ಗಚ್ಛಂತಾಮ್' ಎಂದು ಬಹುವಚನಾಂತಕ್ರಿಯಾಪದವನ್ನು ಅಧ್ಯಾಹಾರವೇ ಮಾಡಿಕೊಳ್ಳಬೇಕು. (ಹಿಂದಿನ ವಾಕ್ಯದಲ್ಲಿರುವದನ್ನೇ ಇಟ್ಟುಕೊಂಡರೆ ಅನುಷಂಗವೆನ್ನುತ್ತಾರೆ.) ಆದರೆ ಮೂರನೆಯ ವಾಕ್ಯದಲ್ಲಿ ಈ ಸಮಸ್ಯೆಯಿಲ್ಲ. 'ಸಂ ಯಜ್ಞಪತಿರಾಶಿಷಾ' ಎಂದು ಏಕವಚನಪ್ರಯೋಗ ಇದೆ. ಆದ್ದರಿಂದ ಇಲ್ಲಿ ಪ್ರಥಮವಾಕ್ಯದಲ್ಲಿರುವ 'ಗಚ್ಛತಾಮ್' ಎಂಬುದನ್ನೇ ಅನುಷಂಗ ಮಾಡಿಕೊಳ್ಳಬೇಕೋ? ಅಥವಾ ಅಧ್ಯಾಹಾರ ಮಾಡಿಕೊಳ್ಳಬೇಕೋ? ಎಂದು ಸಂಶಯ.

ಪೂರ್ವಪಕ್ಷ :- ಮೊದಲನೆಯ ವಾಕ್ಯದಲ್ಲಿರುವ 'ಗಚ್ಛತಾಮ್' ಎಂಬುದಕ್ಕೆ 'ಸಂ ಯಜತ್ರೈರಂಗಾನಿ' ಎಂಬ ಎರಡನೆಯ ವಾಕ್ಯದ ಜೊತೆಗಂತೂ ಅನ್ವಯ ಹೇಳಲು ಬರುವುದಿಲ್ಲ. ಆದರೆ ಮೂರನೆಯ 'ಸಂ ಯಜ್ಞಪತಿರಾಶಿಷಾ' ಎಂಬ ವಾಕ್ಯದ ಜೊತೆಗೆ ಅನ್ವಯ ಹೇಳಬಹುದು. ಆದ್ದರಿಂದ ಶ್ರುತಿಯಲ್ಲಿಯೇ ಇದ್ದು ಬುದ್ಧಿಸ್ಥವಾದ 'ಗಚ್ಛತಾಮ್' ಎಂಬುಕ್ಕೆ ಮುಂದಿನ ವಾಕ್ಯದಲ್ಲಿ ಸೇರಿಸುವುದು ಉಚಿತವಾದ್ದರಿಂದ ಅನುಷಂಗಪಕ್ಷವೇ ಸರಿ.

ಸಿದ್ಧಾಂತ :- ಅನುಷಂಗಪಕ್ಷ ಸರಿಯಲ್ಲ. ಅಧ್ಯಾಹಾರಪಕ್ಷವೇ ಸರಿ. ಏಕೆಂದರೆ ಮೊದಲನೆಯ ವಾಕ್ಯದಲ್ಲಿರುವ 'ಗಚ್ಛತಾಮ್' ಎಂಬುದಕ್ಕೆ ಮೂರನೆಯ ವಾಕ್ಯದಲ್ಲಿ ಯಾವಾಗ ಅನ್ವಯ ಹೇಳಬಹುದೆಂದರೆ ಎರಡನೆಯ ವಾಕ್ಯದಲ್ಲಿ ಅನ್ವಯ ಮಾಡಲು ಬಂದಿದ್ದರೆ ಮಾತ್ರ ಬುದ್ಧಿಯಲ್ಲಿ ಸನ್ನಿಹಿತವಾಗುತ್ತಿತ್ತು. ಆದರೆ 'ಸಂ ಯಜತ್ರೈರಂಗಾನಿ' ಎಂಬ ಬಹುವಚನಪ್ರಯೋಗದ ಜೊತೆಗೆ

---

व्यवायाद्मानुषज्यत इति । फलन्तु तद्भ्रंशे प्रायश्चित्तं नेति व्यक्तम् ।

इत्यष्टादशं व्यवेताननुषङ्गाधिकरणम्

ಜಿಜ್ಞಾಸಾಧಿಕರಣ

'ಗಚ್ಛತಾಮ್' ಎಂಬುದಕ್ಕೆ ಅನ್ವಯವೇ ಕೂಡುವುದಿಲ್ಲ. ಹೀಗೆ ಸಂಬಂಧ ಹೊಂದದ ಎರಡನೆಯ ವಾಕ್ಯವು ಮಧ್ಯದಲ್ಲಿರುವವುದರಿಂದ ಮೂರನೇ ವಾಕ್ಯದಲ್ಲಿ ಅದರ ಸಂಬಂಧವಾಗುವುದಿಲ್ಲ. ಪ್ರಥಮವಾಕ್ಯದಲ್ಲಿರುವ ಕ್ರಿಯಾಪದವು ಬುದ್ಧಿಯಲ್ಲಿ ಸನ್ನಿಹಿತವಾಗದ ಕಾರಣ ಆಕಾಂಕ್ಷೆ ಹಾಗೆಯೇ ಉಳಿಯುತ್ತದೆ. ಆ ಸಂದರ್ಭದಲ್ಲಿ ವಾಕ್ಯಪೂರ್ತಿಗಾಗಿ 'ಗಚ್ಛತಾಮ್' ಎಂಬ ಕ್ರಿಯಾಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕು ಇಷ್ಟು ಸಿದ್ಧಾಂತ.

ಹೀಗೆ 'ಸಂ ಯಜ್ಞಪತಿರಾಶಿಷಾ' ಎಂಬಲ್ಲಿ ಕ್ರಿಯಾಪದದ ಆಕಾಂಕ್ಷೆ ಇದೆ. ಆಕಾಂಕ್ಷೆಯ ಕಾರಣ 'ಗಚ್ಛತಾಮ್' ಎಂಬುದನ್ನು ಅಧ್ಯಾಹಾರ ಮಾಡಿಕೊಂಡಿದ್ದಾರೆ. ಪ್ರಕೃತ ನೀವು 'ಊಹ' ಎಂದರೆ 'ಅಧ್ಯಾಹಾರ' ಎಂಬರ್ಥವನ್ನು ಹೇಳಿದರೆ ಓಂಕಾರವನ್ನು ಅಧ್ಯಾಹಾರ ಮಾಡಿಕೊಳ್ಳಲು ಆಕಾಂಕ್ಷೆಯಿಲ್ಲ. ಆದ್ದರಿಂದ ಓಂಕಾರದ ಅಧ್ಯಾಹಾರ ಪ್ರತಿಸೂತ್ರಗಳಲ್ಲಿಯೂ ಮಾಡಿಕೊಳ್ಳಬೇಕೆಂದು ಹೇಗೆ ಹೇಳುತ್ತೀರಾ?

## ಎರಡನೆಯ ಆಕ್ಷೇಪ - ಇಷೇ ತ್ವಾ ಇತ್ಯಧಿಕರಣಮ್
## ಸಮೇಷು ವಾಕ್ಯಭೇದಃ ಸ್ಯಾತ್ (೨- ೧-೧೬)[1]

'ಇಷೇ ತ್ವಾ ಊರ್ಜೇ ತ್ವಾ' ಎಂಬುದು ಒಂದೇ ಮಂತ್ರವೋ? ಅಥವಾ ಬೇರೆ ಬೇರೆ ಮಂತ್ರವೋ? ಎಂದು ಸಂದೇಹ.

---

(१) अथ षोडशं वाक्यभेदाधिकरणम् ।

समेषु वाक्यभेदः स्यात् ।। ४७ ।।

पूर्वन्यायेन शङ्कनात् सङ्गतिः । 'इषे त्वोर्जे त्वा' इति, तथा 'आयुर्यज्ञेन कल्पतां, प्राणो यज्ञेन 'कल्पतां' इत्यादि च श्रूयते । तत्र 'इषे त्वोर्जे त्वा' इत्येकं वाक्यं, उत नानेति । 'आयुर्यज्ञेन कल्पताम्' इत्यादावपि तथैव सन्देहः । निर्वापवत् कर्मसमवेतार्थप्रकाशकत्वाभावेन दृष्टप्रयोजनाभावेनादृष्टे कल्प्ये लाघवादेकमेव तत् कल्प्यते । तस्यैकत्वादेकार्थत्वाच्चादृष्टमवयवतो न निष्पद्यत इति विभागे साकांक्षत्वेत्येकवाक्यमेवैवमादिकमिति प्राप्ते स्यादेवमदृष्टार्थत्वे कथञ्चिदुक्तदिशैकवाक्यता । नचैवम् । शाखाच्छेदनादिप्रकाशनेन दृष्टार्थत्वात् । 'इषे त्वा' इति छिनत्ति, 'ऊर्जे त्वा' इत्यनुमार्ष्टि इति वाचनिकविनियोगानुसारेण 'इषे त्वा छिनद्मि' इति 'ऊर्जे त्वा अनुमार्ज्मि' इति अध्याहारेण पलाशशाखाच्छेदनानुमार्जनरूपार्थप्रकाशनेऽन्योन्यं निरपेक्षत्वात् भिन्नभिन्नं वाक्यम् । तथा 'क्लृप्तीर्वाचयति' इति क्लृप्तिबहुत्वस्य चोदितत्वात् तत्संपत्त्यर्थम् । आयुरादिविशिष्टक्लृप्तिभेदप्रकाशनपरत्वादर्थभेदेन मन्त्रभेद इति सिद्धान्तः । तथाच सूत्रम्, समेषु अन्योन्यनिरपेक्षेषु 'इषे त्वा' इत्यादिषु वाक्यभेदः स्यात् इति । फलन्तु, मन्त्रैक्यपक्षे एकदेशभ्रेषे सति सर्वस्यावृत्तिः । सिद्धान्ते तु यस्य मन्त्रस्य भ्रंशः तस्यैवावृत्तिरिति ।

इति षोडशं वाक्यभेदाधिकरणम्

*ಪರಿಪೂರ್ಣಚಂದ್ರಿಕಾ*

**ಪೂರ್ವಪಕ್ಷ** :- ಒಂದೇ ಮಂತ್ರ, ಹೊರತು ಬೇರೆ ಬೇರೆ ಮಂತ್ರವಲ್ಲ. ಏಕೆಂದರೆ ಮಂತ್ರದ ಉಚ್ಚಾರಣೆಗೆ ದೃಷ್ಟಪ್ರಯೋಜನವಿಲ್ಲ. ಕರ್ಮಸಮವೇತಾರ್ಥಪ್ರಕಾಶನ (ಕರ್ಮದಲ್ಲಿ ಸಂಬಧಪಟ್ಟಿರುವ ದ್ರವ್ಯ ಅಥವಾ ದೇವತಾ ಪ್ರಕಾಶನ) ಆಗಿರಬೇಕು. ಆವಾಗ ದೃಷ್ಟಪ್ರಯೋಜನ ಹೇಳಬಹುದು. ಈ ಮಂತ್ರ ಹಾಗಿಲ್ಲ. ಆದ್ದರಿಂದ ಅದೃಷ್ಟಕ್ಕೋಸ್ಕರವೆಂದು ಹೇಳಬೇಕು. ಬೇರೆ ಬೇರೆ ಮಂತ್ರಗಳೆಂದು ಹೇಳಿದರೆ ಆವಾಗ ಅನೇಕ ಮಂತ್ರಗಳಾದ್ದರಿಂದ ಒಂದು ಅದೃಷ್ಟವನ್ನು ಕಲ್ಪಿಸುವುದು ನ್ಯಾಯ.

**ಸಿದ್ಧಾಂತ** :- ಎರಡೂ ಬೇರೆ ಬೇರೆ ಮಂತ್ರಗಳು 'ಇಷೇತ್ವಾ' 'ಊರ್ಜೇ ತ್ವಾ' ಎಂಬ ಎರಡೂ ಮಂತ್ರಗಳು ಕ್ರಿಯಾಪದವಿಲ್ಲದ ಕಾರಣ ಸಾಕಾಂಕ್ಷಿತವಾಗಿವೆ. ಆಕಾಂಕ್ಷೆಯ ಪರಿಹಾರಕ್ಕಾಗಿ ಯಾವುದಾದರೂ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆವಾಗ ಬ್ರಾಹ್ಮಣವಾಕ್ಯವು 'ಇಷೇ ತ್ವಾ ಇತಿ ಛಿನತ್ತಿ' ಎಂದು ಛೇದನದಲ್ಲಿ 'ಇಷೇ ತ್ವಾ' ಎಂಬ ಮಂತ್ರವನ್ನು ವಿನಿಯೋಗಿಸಬೇಕೆಂದು ಹೇಳುತ್ತದೆ. ಆದ್ದರಿಂದ ನಾವು 'ಇತಿ ಛಿನದ್ಮಿ' ಎಂದು 'ಛಿನದ್ಮಿ' ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಹೀಗೆ ಛೇದನ-ಪ್ರಕಾಶಕತ್ವ ಇರುವುದರಿಂದ 'ಊರ್ಜೇ ತ್ವಾ' ಎಂಬುದಕ್ಕಿಂತ 'ಇಷೇ ತ್ವಾ' ಎಂಬುದು ಭಿನ್ನವೆಂದು ಗೊತ್ತಾಗುತ್ತದೆ. ಅದರಂತೆ 'ಊರ್ಜೇ ತ್ವೇತಿ ಅನುಮಾರ್ಷ್ಟಿ' ಎಂದು ಬ್ರಹ್ಮವಾಕ್ಯವು ವಿಧಿಸುತ್ತಿದೆ. ಆದ್ದರಿಂದ ವಿನಿಯೋಗಕಾಲದಲ್ಲಿ 'ಊರ್ಜೇ ತ್ವಾ ಇತ್ಯನುಮಾರ್ಜ್ಮಿ' ಎಂದು ಅನುಮಾರ್ಜ್ಮಿ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಹೀಗೆ 'ಊರ್ಜೇ ತ್ವಾ' ಎಂಬುದೂ ಸಹ ಅನುಮಾರ್ಜನ ಪ್ರಕಾಶಕವಾಗಿರುವುದರಿಂದ 'ಇಷೇತ್ವಾ' ಎಂಬ ಮಂತ್ರಕ್ಕಿಂತ ಬೇರೆಯೆಂದು ತಿಳಿಯುತ್ತದೆ.

(ಇಷೇ ತ್ವಾ ಛಿನದ್ಮಿ = ಮಳೆಗೋಸ್ಕರ ನಿನ್ನನ್ನು = ಪಲಾಶವೃಕ್ಷವನ್ನು ಕತ್ತರಿಸುತ್ತೇನೆ. ಊರ್ಜೇ ತ್ವಾ ಅನುಮಾರ್ಜ್ಮಿ = ಅನ್ನರಸಕ್ಕಾಗಿ ನಿನ್ನನ್ನು ಶುದ್ಧೀಕರಿಸುತ್ತೇನೆ.)

'ಇಷೇ ತ್ವಾ' ಇತ್ಯಾದಿ ಮಂತ್ರಗಳಲ್ಲಿ ಕ್ರಿಯಾಪದವಿಲ್ಲದ ಕಾರಣ ಸಾಕಾಂಕ್ಷತ್ವ ಇದೆ. ಆದ್ದರಿಂದ 'ಇತಿ ಛಿನದ್ಮಿ' 'ಇತಿ ಅನುಮಾರ್ಜ್ಮಿ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಆದರೆ ಪ್ರತಿಯೊಂದು ಸೂತ್ರಗಳಲ್ಲಿ ಓಂಕಾರವನ್ನು ಅಧ್ಯಾಹಾರ ಮಾಡಿಕೊಳ್ಳಲು ಸಾಕಾಂಕ್ಷತ್ವ ಇಲ್ಲ. ಹಾಗಾಗಿ ಓಂಕಾರವನ್ನು ಅಧ್ಯಾಹಾರ ಮಾಡಬಾರದು.

## ಓಂಕಾರವಿಷಯದಲ್ಲಿ
## ಆರು ಆಕ್ಷೇಪಗಳಿಗೆ ಅವಕಾಶವಿಲ್ಲ

### तात्पर्यचन्द्रिका –

**किञ्च मन्त्रेष्वप्यूह्यमानस्य तदनवयवत्वमिष्टमेव । ऊहप्रवरनामधेयानाममन्त्रत्वस्य द्वितीये सिद्धान्तितत्वात् । अपिच – ओतत्वस्य न वाक्यार्थेऽन्वयः । ब्रह्मणः शब्दत उपसर्जनस्य पदान्तरोपात्तौ तत्वान्वयानुपपत्तेः । अपिच –**

अर्थप्रतीत्यर्थत्वे आदावेव प्रयोगेण चरितार्थत्वादन्ते प्रयोगवैयर्थ्यम् । किंच - ओङ्कारस्योत्तरत्रानुषङ्गे अनुषक्तस्य "ङ्याप् प्रातिपदिकात्" इत्यादेः "अच्छिद्रेण पवित्रेण" इत्यादेः, "तनूर्वर्षिष्ठा" इत्यादेश्च तत्रतत्रार्थान्वयदर्शनात् प्रकृतेऽप्योङ्कारार्थस्य जन्मादिसूत्रेष्वन्वयो वाच्यः । स चाशक्य इति । उच्यते ।

नात्रोहशब्दो "मन्त्रसामसंस्कारोहः" इत्यादाविव कर्मव्युत्पत्त्या विचारपरः । किन्तु "अध्याहारस्तर्क ऊहः" इति प्रसिद्धेः भावव्युत्पत्त्याऽध्याहारवाचकः । अत एव टुप्टीकायां नवमे "ऊहो नाम तर्कणा सा चैकरूपा मन्त्रसामसंस्कारेषु क्रियमाणा" इत्यादिना तर्क एव मुख्य ऊहः । तद्विषयत्वान्मन्त्रादेरन्यथात्वमप्यूह इत्युक्तम् । तत्रच "स्रवत्यनोङ्कृतं" इति श्रुतिरेव मानम् । यद्यप्यत्र स्रवण-विशरणपरिहाररूपादृष्टफलार्थत्वं श्रुतम् । तथाऽपि दृष्टस्यापेक्षितस्य अर्थप्रत्यय-स्यापि फलत्वसम्भावात्र तत्त्यागः । एवंच स्विष्टकृदादिवदोङ्कारोच्चारणमुभयार्थम् ।

ಅನುವಾದ - ಅಲ್ಲದೆ, 'ಮಂತ್ರಗಳಲ್ಲಿ ಊಹಿಸಿಕೊಂಡ ಶಬ್ದಗಳು ಅದರ ಭಾ ಆಗದಿರಬೇಕಾದೀತು' ಎಂದು ಆಕ್ಷೇಪಿಸಿದರೆ ಅದು ನಮಗೆ ಇಷ್ಟವೇ ಆಗಿದೆ. ಏಕೆಂದ ಎರಡನೆಯ ಅಧ್ಯಾಯದ ಮೊದಲ ಪಾದದಲ್ಲಿ ಊಹೆ, ಪ್ರವರ, ನಾಮಧೇಯಗಳ ಮಂತ್ರಗಳಲ್ಲವೆಂದು ಸಿದ್ಧಾಂತ ಮಾಡಲಾಗಿದೆ.

ಮತ್ತು ಓಂಕಾರದ ಅರ್ಥಕ್ಕೆ ಸೂತ್ರಾರ್ಥದಲ್ಲಿ ಅನ್ವಯ ಎಂದು ಹೇಳಿದ್ದಿರಿ. ಇದೂ ಸ ಕೂಡಲ್ಲ. 'ಬ್ರಹ್ಮಜಿಜ್ಞಾಸಾ' ಎಂಬುದು ಸಮಸ್ತಪದವಾಗಿದೆ. ಅದರ ಏಕದೇಶವಾ ಬ್ರಹ್ಮಪದಾರ್ಥದಲ್ಲಿ ಓಂಕಾರಾರ್ಥವು ಅನ್ವಯ ಹೊಂದಲು ಸಾಧ್ಯವಿಲ್ಲ.

ಮತ್ತು ಓಂಕಾರಕ್ಕೆ ಅರ್ಥವಿವಕ್ಷೆಯಿದೆ ಎಂದು ಹೇಳಿದ್ದೇ ತಪ್ಪು, ಹಾಗಾದಲ್ಲಿ ಸೂತ್ರ ಮೊದಲಷ್ಟೇ ಅದರ ಉದ್ದೇಶ ಈಡೇರುವುದರಿಂದ ಕೊನೆಗೆ ಅದನ್ನು ಉಚ್ಚರಿಸುವುದು ಅನಾವಶ್ಯ

ಪ್ರಶ್ನೆ :- ಸೂತ್ರದ ಮೊದಲು ಓಂಕಾರವನ್ನು ಬಿಡಿಸಿ ಹೇಳಿದ್ದರಿಂದ ಮುಂದಿನ ಸೂತ್ರಗಳಲ್ಲಿಯೂ ಈ ಓಂಕಾರವನ್ನು ಇಟ್ಟುಕೊಳ್ಳಬೇಕೆಂದು ತಿಳಿಯುತ್ತದೆ.

ಉತ್ತರ :- ಇದು ಸರಿಯಲ್ಲ. ಹಾಗಾದರೆ ಓಂಕಾರಾರ್ಥಕ್ಕೆ ಜನ್ಮಾದಿಸೂತ್ರಗಳಲ್ಲಿ ಅನ್ವಯವನ್ನು ಹೇಳಬೇಕಾಗುತ್ತದೆ. ಉದಾಹರಣೆ - ವ್ಯಾಕರಣದಲ್ಲಿ 'ಸ್ವೌಜಸಮೌಟ್' ಇತ್ಯಾದಿ ಸೂತ್ರದ

ಹಿಂದಿನ 'ಙ್ಯಾಪ್‌ಪ್ರಾತಿಪದಿಕಾತ್' ಎಂಬ ಸೂತ್ರವು ಅನುವೃತ್ತವಾಗುತ್ತದೆ. ಆ ಸೂತ್ರದಲ್ಲಿ ಅನ್ವಯ ಹೊಂದುವುದರಿಂದ ಅನುವೃತ್ತಿಯು ಸಂಗತವಾಗಿದೆ. ಅದರಂತೆ ಪೂರ್ವಮೀಮಾಂಸೆಯಲ್ಲಿಯೂ ಹೀಗೆ ಹೇಳಿದೆ. - 'ಅಚ್ಛಿದ್ರೇಣ ಪವಿತ್ರೇಣ' ಇತ್ಯಾದಿ ವಾಕ್ಯಶೇಷವು ಮೊದಲಿನ ಎರಡು ಮಂತ್ರಗಳಲ್ಲಿ ಅನುವೃತ್ತವಾದಾಗ ಅದರ ಅರ್ಥದಲ್ಲಿ ಅನ್ವಯ ಹೊಂದಿದೆ. ಅದರಂತೆ 'ತನೂವರ್ಷಿಷ್ಠಾ' ಇತ್ಯಾದಿ ವಾಕ್ಯಶೇಷವು ಮುಂದಿನ ಎರಡು ಮಂತ್ರಗಳಲ್ಲಿ ಅನುವೃತ್ತವಾದಾಗ ಅವುಗಳ ಅರ್ಥದಲ್ಲಿ ಅನ್ವಯ ಹೊಂದುತ್ತದೆ ಎಂದು. ಇದರಂತೆ ಇಲ್ಲಿಯೂ ಸಹ ಜನ್ಮಾದಿಸೂತ್ರಗಳಲ್ಲಿ ಅನುವೃತ್ತವಾಗುವ ಓಂಕಾರವು ಅವುಗಳ ಅರ್ಥದಲ್ಲಿ ಅನ್ವಯವಾಗಬೇಕು. ಆದರೆ ಜನ್ಮಾದಿಸೂತ್ರಗಳಲ್ಲಿ ಓಂಕಾರದ ಅನ್ವಯವು ಅಶಕ್ಯವಾಗಿದೆ.

ಹೀಗೆ ಓಂಕಾರದ ವಿಷಯದಲ್ಲಿ ಸುಧೆಯ ಮೇಲೆ ಒಟ್ಟು ಆರು ಆಕ್ಷೇಪಗಳು ಬರುತ್ತವೆ.

ಈ ಆರು ಆಕ್ಷೇಪಗಳೂ ಸರಿಯಲ್ಲ. ಮೊದಲು ಮುಂದಿನ ಸೂತ್ರಗಳಲ್ಲಿ ಓಂಕಾರವನ್ನು ಊಹಿಸಿಕೊಳ್ಳಲು ಸ್ಥಾನಿ ಬೇಕು. ಸ್ಥಾನಿಯೇ ಇಲ್ಲವಾದ್ದರಿಂದ ಊಹೆಯು ಅಸಾಧ್ಯವೆಂದು ಆಕ್ಷೇಪಿಸಿದಿರಿ. ಇದು ಸರಿಯಲ್ಲ. ಸುಧೆಯಲ್ಲಿ ಹೇಳಿದ ಊಹೆಯು ಮೀಮಾಂಸಕರು ಹೇಳುವ ಮಂತ್ರೋಹ, ಸಾಮೋಹ, ಸಂಸ್ಕಾರೋಹರೂಪವಾದದ್ದಲ್ಲ ಹೊರತಾಗಿ 'ಅಧ್ಯಾಹಾರಸ್ತರ್ಕಃ ಊಹಃ'ಎಂಬ ಕೋಶದಂತೆ ಅಧ್ಯಾಹಾರರೂಪವಾದದ್ದು 'ಊಹ' ಧಾತುವಿಗೆ ಭಾವಾರ್ಥದಲ್ಲಿ 'ಘಞ್' ಪ್ರತ್ಯಯವು ಬಂದಾಗ ಅಧ್ಯಾಹಾರ ಎಂಬರ್ಥವು ದೊರೆಯುತ್ತದೆ. ಮೀಮಾಂಸಕರು ಕರ್ಮಾರ್ಥದಲ್ಲಿ 'ಘಞ್' ಪ್ರತ್ಯಯ ಮಾಡಿ 'ಊಹಿಸಲ್ಪಡುವಂತಹದ್ದು' ಎಂಬರ್ಥವನ್ನು ಹೇಳುತ್ತಾರೆ. ಅದು ಇಲ್ಲಿ ಸಮ್ಮತವಲ್ಲ. ಕಿಂತು 'ಊಹಿಸುವುದು' ಎಂಬರ್ಥವನ್ನು ತಿಳಿಯಬೇಕು. ಇದನ್ನೇ ಟುಪ್‌ಟೀಕೆಯ ಒಂಬತ್ತನೆಯ ಅಧ್ಯಾಯದಲ್ಲಿ ಹೀಗೆ ಹೇಳಿದೆ - 'ಊಹಿಸುವುದೇ ಊಹೆಯಾದಲ್ಲಿ ಮಂತ್ರ ಸಾಮ ಸಂಸ್ಕಾರೋಹಗಳಲ್ಲಿ ಅದು ಒಂದೇ ವಿಧವಾಗಿದೆ ಎಂಬ ಆಕ್ಷೇಪಕ್ಕೆ ಹೀಗೆ ಉತ್ತರ - ಊಹವನ್ನು ಅನೇಕವಿಧವೆಂದು ನಾವು ಹೇಳುತ್ತಿಲ್ಲ. ಅದರ ವಿಷಯದ ಬಗ್ಗೆ ಹೇಳುತ್ತಿದ್ದೇವೆ. ಅದು ಮೂರುವಿಧವಾಗಿದೆ. ಆದ್ದರಿಂದ ಊಹಿಸುವುದೇ ಮುಖ್ಯವಾಗಿ ಊಹೆ ಎನಿಸಿದೆ. ಊಹೆಗೆ ವಿಷಯವಾದ್ದರಿಂದ ಮಂತ್ರ ಸಾಮ ಮುಂತಾದವುಗಳನ್ನು ಊಹೆಯೆಂದು ವ್ಯವಹರಿಸುತ್ತೇವೆ' ಎಂದು.

ಪ್ರಶ್ನೆ :- ಅಧ್ಯಾಹಾರ ಮಾಡಬೇಕಾದರೆ ಆಕಾಂಕ್ಷೆ ಇರಬೇಕು. ಸೂತ್ರದಲ್ಲಿ ಓಂಕಾರದ ಅಧ್ಯಾಹಾರಕ್ಕೆ ಆಕಾಂಕ್ಷೆಯೇ ಇಲ್ಲ.

ಉತ್ತರ : - ಆಕಾಂಕ್ಷೆ ಇಲ್ಲದಿದ್ದರೂ ಸಹ ವಿಧಿಯ ಬಲದಿಂದ ಅಧ್ಯಾಹಾರ ಮಾಡಬೇಕು. 'ಪ್ರವತ್ಯನೋಂಕೃತಂ ಬ್ರಹ್ಮ' ಎಂಬ ವಿಧಿಯಿಂದ ಪ್ರತಿಯೊಂದು ಸೂತ್ರದಲ್ಲಿ ಓಂಕಾರದ ಅಧ್ಯಾಹಾರವನ್ನು ಮಾಡಬೇಕೆಂದು ತಿಳಿಯುತ್ತದೆ.

ವಸ್ತುತಸ್ತು 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ವಿಧಿಯಂತೆ ಸ್ರವಣ ಹಾಗು ವಿಶರಣಗಳ ಪರಿಹಾರವೆಂಬ ಅದೃಷ್ಟಫಲವನ್ನು ಓಂಕಾರದ ಉಚ್ಚಾರಣೆಗೆ ಹೇಳಿದಂತಾಯಿತು. ಆದರೂ ಸಹ 'ಅರ್ಥಬೋಧನ' ಎಂಬ ದೃಷ್ಟಫಲವನ್ನು ಹೇಳಿದರೆ ತಪ್ಪೇನಿಲ್ಲ. ದೃಷ್ಟಫಲವನ್ನೇನು ಬಿಡಬೇಕಿಲ್ಲ. ಒಂದೇ ಮಂತ್ರೋಚ್ಚಾರಣೆಗೆ ದೃಷ್ಟ ಮತ್ತು ಅದೃಷ್ಟಫಲಗಳನ್ನು ಒಪ್ಪಬಹುದೆಂದು ಸ್ಪಷ್ಟಪ್ರಕರಣದಲ್ಲಿ ನಿರ್ಣಯಿಸಿದ್ದಾರೆ. ಅದರಂತೆ ದೃಷ್ಟ ಮತ್ತು ಅದೃಷ್ಟಫಲವಿರುವುದರಿಂದ ಪ್ರತಿಯೊಂದು ಸೂತ್ರಗಳ ಆದಿಯಲ್ಲಿ ಮತ್ತು ಅಂತ್ಯದಲ್ಲಿ ಓಂಕಾರದ ಉಚ್ಚಾರಣೆಯನ್ನು ಅವಶ್ಯ ಮಾಡಬೇಕು. ಆದ್ದರಿಂದ ಸುಧೆಯಲ್ಲಿ ಹೇಳಿದ್ದೆಲ್ಲವೂ ಸಮಂಜಸವೇ ಆಗಿದೆ.

**ಕಠಿಣಪದಾರ್ಥ**

**ಊಹ** = ತರ್ಕ. **ಪ್ರವರ** = ತ್ರ್ಯಾರ್ಷೇಯಾದಿಗಳು. **ನಾಮಧೇಯ** = ದೇವದತ್ತ ಮೊದಲಾದ ಹೆಸರುಗಳು. **ಓತತ್ವಸ್ಯ** = ಓಂಕಾರದ ಅರ್ಥವಾದ ಪೂರ್ಣತ್ವಕ್ಕೆ. **ವಾಕ್ಯಾರ್ಥೇ** = ಬ್ರಹ್ಮನ ಜಿಜ್ಞಾಸೆ ಎಂಬ ವಾಕ್ಯಾರ್ಥದಲ್ಲಿ. **ಬ್ರಹ್ಮಣಃ** = ಬ್ರಹ್ಮಜಿಜ್ಞಾಸಾ ಎಂಬಲ್ಲಿರುವ ಬ್ರಹ್ಮಶಬ್ದವು. **ಶಬ್ದತಃ ಉಪಸರ್ಜನಸ್ಯ** = ಶಬ್ದದಿಂದಷ್ಟೇ ಗೌಣನಾಗಿರುವ. **ಪದಾಂತರೋಪಾತ್ತತ್ವಾನ್ವಯಾನುಪಪತ್ತೇಃ** = ಬ್ರಹ್ಮಜಿಜ್ಞಾಸಾ ಎಂಬ ಪದದ ಹೊರಗಿರುವ ಓಂಕಾರಾರ್ಥವಾದ ಓತತ್ವವು, ಪದದ ಏಕದೇಶವಾದ ಬ್ರಹ್ಮ ಶಬ್ದಾರ್ಥದ ಜೊತೆಗೆ ಅನ್ವಯವಾಗದ ಕಾರಣ. **ಅರ್ಥಪ್ರತೀತ್ಯರ್ಥತ್ವೇ** = (ಓಂಕಾರಕ್ಕೆ) ಅರ್ಥ ವಿವಕ್ಷೆಯಿದೆ ಎನ್ನುವುದಾದರೆ. **ಆದಾವೇವ** = ಸೂತ್ರದ ಆದಿಯಲ್ಲಷ್ಟೇ. **ಚರಿತಾರ್ಥತ್ವಾತ್** = ಉದ್ದೇಶ ಈಡೇರುವುದರಿಂದ. **ಅಂತೇ** = ಸೂತ್ರದ ಕೊನೆಯಲ್ಲಿ. **ಕರ್ಮವ್ಯುತ್ಪತ್ತ್ಯಾ** = ಊಹಿಸಲ್ಪಡುವಂತಹದ್ದು. **ತತ್ರಚ** = ಅಧ್ಯಾಹಾರವಿಷಯದಲ್ಲಿ. **ಸ್ರವಣವಿಶರಣಪರಿಹಾರರೂಪಾದೃಷ್ಟಫಲಾರ್ಥತ್ವಮ್** = ಸ್ರವಣ ಹಾಗೂ ವಿಶರಣವೆಂಬ ದೋಷದ ಅದೃಷ್ಟಫಲಕ್ಕೋಸ್ಕರ. **ನ ತತ್ತ್ಯಾಗಃ** = ಅದೃಷ್ಟಫಲವನ್ನೇನು ಬಿಡಬೇಕಾಗಿಲ್ಲ. **ಉಭಯಾರ್ಥಮ್** = ದೃಷ್ಟ ಮತ್ತು ಅದೃಷ್ಟ ಫಲಕ್ಕೋಸ್ಕರ.

**प्रकाशः – ऊहेत्यादि ।। उक्तः ऊहः । 'प्रवरः' त्र्यार्षेयादिः ।** 'नामधेयं' **देवदत्तादि ।। द्वितीय इति ।। द्वितीये आद्यपादे । ''अनाम्नातेष्वमन्त्रत्वमाम्नातेषु हि विभागः स्यात्'' इति दशमाधिकरणे, ऊहप्रवरनामधेयानां** मन्त्रत्वमस्त्युत **नेति संशये, मन्त्रैकवाक्यत्वेन तन्मध्यनिवेशान्मन्त्रकार्यकरत्वाच्च** मन्त्रत्वमिति **प्राप्ते, ''रथघोषेण (म)महेन्द्रस्तोत्रमुपाकरोति'' इत्यादौ, रथघोषादे**रमन्त्रत्वेऽपि **मन्त्रकार्यकरत्वेनानैकांत्यात्, मन्त्रत्वस्याध्येतृप्रसिद्ध्यधीनत्वात्** तस्याश्चाध्ययनकाले **समाम्नातविषयत्वेन मन्त्रैकवाक्यताया अप्रयोजकत्वाद**मन्त्रत्वमिति

सिद्धान्तितत्वादित्यर्थः । यद्यप्यत्रोह्यमानस्य मन्त्रैकवाक्यतया तदवयवत्वमभ्युपेत्यैव तदपराधस्य ''यदृक्तो यज्ञभ्रेषमागच्छेद्यद्यजुष्टो यज्ञभ्रेषमागच्छेत्'' इत्यादिमन्त्रवैकल्यप्रायश्चित्तानापादकत्वसिद्ध्यर्थममन्त्रत्वं व्यवस्थापितं, सुधायां तु तदनवयवत्वमेवापादितम्, नत्वमन्त्रत्वमपीति नेष्टापादनं युक्तम् । तथाऽप्यमन्त्रत्वेन तदनवयवत्वं सुधावाक्याभिप्रेतमिति शङ्कितुर्हृदयमिति ध्येयम् ।

यदप्युक्तं ''ओङ्कारार्थस्य प्रथमसूत्रवाक्यार्थे समन्वयेन'' इत्यादि, तदपि नेत्याह ।। अपिचेति ।। अधिकारानन्तरं फलवत्त्वाद् ब्रह्मविचारः कार्य इति वाक्यार्थे ओतत्वस्यान्वयाप्रतीतेरित्यर्थः । ननु वाक्यार्थे प्रतियोगिसमर्पकत्वेनान्वयायोगेऽपि ओतं यद् ब्रह्म तद्विचार इति ब्रह्मविशेषणत्वं स्यादित्यत आह – ब्रह्मण इति ।। 'उपसर्जनस्य' जिज्ञासाविशेषणस्य । यदि 'ॐ ब्रह्मजिज्ञासा' इति समस्तं स्यात् यदिवा ब्रह्मणो जिज्ञासा इति ब्रह्मपदं व्यस्तं स्यात् तदा ओतत्वस्य कथंचिद्ब्रह्मपदार्थान्वयः स्यात्, नचैवमस्तीति भावः । यदपि ''स्रवत्यनोङ्कृतं'' इत्यादि तदपि विरुध्यत इत्याह ।। अपिचेति ।। यच्चोक्तं ''असंहिततया निर्देशस्तु सर्वसूत्रेष्वनुषङ्गसूचनार्थः'' इति, तच्च नेत्याह ।। किञ्चेति ।। ''ङ्याप् प्रातिपदिकात्'' इत्यादेरिति ।। व्याकरणे तुर्याध्याये ''स्वौजसमौट्छष्टाभ्यां भिस्ङे भ्यां भ्यस्'' इत्याद्युत्तरसूत्रे अनुवृत्तस्य 'ङ्याप् प्रातिपदिकात्'' इत्यस्य ङ्यन्तादाबन्तात् प्रातिपदिकाच्च स्वादयः प्रत्ययाः भवन्तीत्यर्थो यथा दृश्यते इत्यर्थः ।।

अच्छिद्रेणेति ।। द्वितीयाद्यपादे ''सर्वेषु'' इत्युपान्त्याधिकरणे ''चित्पतिस्त्वा पुनातु, वाक्पतिस्त्वा पुनातु, देवस्त्वा सविता पुनातु'' इति मन्त्रत्रयानन्तरमाम्नातः । ''अच्छिद्रेण पवित्रेण वसोः सूर्यस्य रश्मिभिः'' इत्ययं शेषः किं पूर्वयोरनुषज्यते किं वा परस्यैव शेष इति संशये, शेषस्याव्यवहितसम्बन्धमात्रेण नैराकाङ्क्ष्यात्, पूर्वयोश्च स्वत एव आकाङ्क्षाविरहात् नानुषङ्ग इति प्राप्ते, पुनातुशब्दैकवाक्यतामापन्नस्य 'अच्छिद्रेण' इत्यादेः पवनक्रियाकरणपवित्रद्वारेण पवनक्रियाप्रकाशनार्थत्वात्, तस्या एव पूर्वमन्त्राभ्यामपि प्रकाश्यत्वात्,

प्रधानवशेनानुकर्षस्य न्याय्यत्वादनुषङ्ग इति सिद्धान्तितम् । तथा तत्रैव "अनुषङ्गो वाक्यसमाप्तिः सर्वेषु तुल्ययोगित्वात्" इति सप्तदशेऽधिकरणे "या ते अग्नेऽयाशया तनूर्वर्षिष्ठा गह्वरेष्ठोग्रं वचो अपावधीं त्वेषं वचो अपावधीᳬस्वाहा । या ते अग्ने रजाशया या ते अग्ने हराशया" इति ज्योतिष्टोमे श्रुतं मन्त्रत्रयमुदाहृत्य तत्रोत्तरयोः लौकिकः शेषोऽध्याहार्यः किं वा पूर्वमन्त्रान्तरपठितः "तनूर्वर्षिष्ठा" इत्यादिरनुषञ्जनीय इति संशये, समाम्नायेन पूर्वत्रैव निबद्धस्य शेषस्यान्यत्र नयनायोगात् सकृदाम्नातस्य सर्वार्थत्वानुपपत्तेः, आनन्तर्यदेशविशेषाभ्यां विशेषग्रहणेन पूर्वशेषत्वावसायादनुषङ्गयोगे लौकिकस्य काप्यनिबद्धत्वेन सर्वार्थत्वादध्याहार इति प्राप्ते, सर्वानन्तर्येण सकृत् पठितुमशक्यो बुद्धिविपरिवृत्तिमात्रेण साकाङ्क्षैः सर्वैः सम्बन्धसिद्धेः पुनःपुनरनाम्नातोऽयं शेषः सर्वार्थेनैवाम्नात इत्यवगमादनुषङ्गो न लौकिकस्याध्याहार इति सिद्धान्तितम् ।

अत्र यथा "अच्छिद्रेण पवित्रेण" इत्यादेः पूर्वत्रानुषक्तस्य "चित्पतिस्त्वा पुनातु" इति पवनक्रियायां पवित्ररूपकरणसमर्पकतया, "तनूर्वर्षिष्ठा" इत्यादेश्च पश्चादनुषक्तस्य रजाशयाहराशयाशब्दितयोः रजतमयत्वहिरण्मयत्वविशेषणयोः तनूलक्षणविशेष्यार्पकतयाऽन्वयो दृष्टः तथा "जन्माद्यस्य" इत्यादिसूत्रेष्वोङ्कारस्यान्वयो वाच्य इत्यर्थः ।

एवं पूर्ववाद्युक्तान् षडपि दोषानुद्दिधीर्षुः, यत् तावदुक्तं प्राकृतस्यानिनोऽभावान्नोहत्वमिति, तदुद्धरति – नात्रोहेति ।। "अग्नये जुष्टं" इत्यादौ "सूर्याय जुष्टं" इत्यादिः मन्त्रोहः । "यद्योन्यां तदुत्तरयोर्गायति" इति "कवतीषु रथन्तरं गायति" इत्यादिषु प्रकृतिग्रन्थे योनावाम्नातानां साम्नामुत्तरादिषु तत्तदानुगुण्येनान्यथागानं सामोहः । व्रीहिषु श्रुतानामवहननादीनां वैकृतेषु नीवारादिषु औचित्येनानुष्ठानं संस्कारोहः, इत्येतेषां निर्देशके "मन्त्रसामसंस्कारोहः" इत्यादौ मीमांसकव्यवहारे ऊह्यत इति व्युत्पत्त्या यथा प्रयोगविकारपर ऊहशब्दः न तथा प्रकृते, "ऊह वितर्के" इत्यस्माद् धातोर्भावे घञि लघूपधत्वाभावेन गुणाभावे चोह इति सिद्धेरध्याहारपर इत्यर्थः ।

वार्तिककृत्सम्मतिमाह ।। अत एवेति ।। यदत्रोक्तं साकाङ्क्षत्वाभावादध्याहारे न मानमिति, तत्राह ।। तत्र चेति ।। अध्याहारे इत्यर्थः । ओङ्कारानुच्चारणे निन्दाश्रवणात् तदन्यथाऽनुपपत्त्या तदुच्चारणविधेरुन्नयनादाकाङ्क्षाया अभावेऽपि विधिबलादध्याहार इति भावः । नन्वेवमदृष्टार्थतैव स्यान्नार्थप्रत्यायकत्वम् । तथाच सुधाविरोध इत्याशङ्कामुपक्षिप्य निरस्यति ।। यद्यपीति ।। दृष्टस्येति ।। ओङ्कारादेतत्स्वरूपार्थप्रत्ययदर्शनादिति भावः ।। अपेक्षितस्येति ।। "ओमित्येतदक्षरम्" इत्यादिवक्ष्यमाणदिशेति भावः ।। स्विष्टकृदिति ।। चतुर्थे "आश्रयिष्वविशेषेण भावोऽर्थः प्रतीयेत" इत्याद्यपादीयसप्तमाधिकरणे स्विष्टकृदुत्तमप्रयाजपशुपुरोडाशादीनां दृष्टार्थत्वमेवोतादृष्टार्थत्वमपीति विशये, प्रकृतदेवतास्मरणेन द्रव्यप्रतिपत्त्या च दृष्टार्थतालाभादेकेन प्रयोजनेन नैराकाङ्क्ष्यान्नादृष्टार्थत्वकल्पनावकाश इति प्राप्ते । मन्त्रप्रक्षेपांशयोः दृष्टार्थत्वेऽपि, त्यागांशस्य दृष्टप्रयोजनाभावाददृष्टार्थत्वमावश्यकमित्यंशभेदेनोभयार्थत्वमिति सिद्धान्तितम् । तद्वदोङ्कारोच्चारणस्यापि श्रुतिबलात् सामर्थ्याच्चोभयार्थत्वमित्यर्थः ।

ननु स्विष्टकृदादौ प्रक्षेपत्यागाद्यवच्छेदकभेदेनोभयार्थत्वं दृष्टम् । नैवमोङ्कारोच्चारणेऽवच्छेदकभेदः सम्भवति । येनोभयार्थत्वं स्यात् । किञ्च – यत्रादृष्टार्थत्वं कल्प्यं, तत्र दृष्टार्थत्वे सम्भवति नादृष्टार्थत्वमिष्यते । यथा "स्वाध्यायोऽध्येतव्यः" इत्यादौ । यत्र मानांतरवशाददृष्टार्थत्वमावश्यकम्, तत्र सम्भवदपेक्षितमपि दृष्टार्थत्वंनाद्रियते, । यथा "स्तौति शंसति" इत्यादौ । अत एव द्वितीयाद्यपादे "स्तुतशस्त्रयोस्तु संस्कारो याज्यावद्देवताभिधानत्वात्" इति षष्ठे अधिकरणे तथैवोक्तम् । तथाच प्रकृते "स्रवत्यनोङ्कृतम्" इति श्रुत्याऽदृष्टार्थत्वे आवश्यके प्रत्यायनार्थत्वानवकाशः । अतः कथमोङ्कारोच्चारणस्योभयार्थत्वमिति चेदुच्यते । "स्तौति शंसति" इत्यादौ देवताप्रकाशनरूपदृष्टप्रयोजनस्वीकारे गुणसम्बन्धाभिधानलक्षणस्तुतिरूपं विहन्येत इति श्रुतिबाधः स्यात् । अतस्तद्बलाददृष्टार्थत्वं युक्तम् । उक्तं च –

"सत्यं दृष्टार्थता युक्ता श्रुतिश्चेन्न विरुध्यते ।
देवतास्मरणार्थत्वे स्तुतिरूपं विहन्यते" इति ।

**प्रकृते तु दृष्टार्थत्वाभ्युपगमे न काचित् श्रुतिर्बाध्यत इति । नच सामर्थ्यस्य दौर्बल्यमिति युक्तम् । नहि सूत्रेष्वाद्यन्तयोरोङ्कारमुच्चारयेदिति प्रत्यक्षो विधिरस्ति, येन दौर्बल्यं सामर्थ्यस्य स्यात् । किंत्वनुच्चारणे निन्दाश्रवणान्यथाऽनुपपत्त्योङ्कारोच्चारणविधिरुन्नेयः । सामर्थ्यं तु प्रत्यक्षम् । अतः श्रुतिसामर्थ्ययोस्तुल्यबलत्वादविरोधाच्चोभयार्थत्वम् । स्विष्टकृदाद्युदाहरणं तूभयार्थत्वसम्भवमात्र इति न कोऽपि दोषः ।**

गुरुराजीय – **ङ्याप् प्रातिपदिकादिति ।।** अत्राद्योऽनुषङ्गः । स्वरितेनाधिकार इति परिभाषासापेक्षोऽनुषङ्गमात्रे दृष्टान्तः । अन्त्यौ तु तन्निरपेक्षौ । तत्राप्युत्तरस्य शब्दस्य पूर्वत्रानुषङ्गरूपो द्वितीयो निरपेक्षानुषङ्गमात्रे । तृतीयस्तु प्रस्तुते निरपेक्षे पूर्वस्योत्तरत्रानुषङ्गे इति ज्ञेयम् ।। **स चाशक्य इति ।।**

अयं भावः । प्रातिपदिकादित्यत्रास्य शेषस्य स्वौजसमौडित्यादेः शेषिणश्चाकाङ्क्षा । अच्छिद्रेण पवित्रेण वसोः सूर्यस्येत्यत्र अस्य शेषस्यैव क्रियायामाकाङ्क्षा । चित्पतिस्त्वा पुनात्विति शेषिणो निराकाङ्क्षत्वात् । अपावधीं स्वाहेति स्वाहान्तपूर्वमन्त्रान्वितस्य विशेष्यसमर्पकस्य अयाशयेति विशेषणान्तरान्वितस्य शेषिण एवाकाङ्क्षा । तनूरिति शेषस्य निराकाङ्क्षत्वात् । प्रकृते तु जिज्ञासासूत्रान्वितस्य ओङ्काररूपशेषस्य जन्मादिसूत्ररूपशेषिणश्च निराकाङ्क्षत्वेनार्थान्वयोऽशक्य इति । अध्याहारापरपर्यायतर्कस्यैव मुख्योहत्वं टुप्टीकाकारस्यापि संमतमित्याह ।। **अत एवेति ।। त्रिविधश्चोह इत्येतदयुक्तम् । कथम् । ऊहो नाम तर्कणा । सा चैकरूपा मन्त्रसामसंस्कारेषु क्रियामाणा । सैव सा । न तस्याः कश्चिद् विशेषः । सामग्रहणानर्थक्यं च मन्त्रग्रहणेन संस्कारग्रहणेन चोक्तत्वात् । अत्र वर्णयन्ति । नैव वयमूहभेदं प्रतिजानीमः । किन्तु विषयमस्य निरूपयामः एषु त्रिषु वक्ष्यमाणेषु सम्भवतीति । तस्माद् विषयभेदः प्रदर्श्यते नतु रूपभेद** इत्यन्तवाक्यसङ्ग्रहाय **क्रियमाणेत्यादिनेत्यादिपदमिति द्रष्टव्यम् ।।**

ವಿವರಣೆ - ಮೂರನೆಯ ಆಕ್ಷೇಪ :- ಮಂತ್ರಗಳಲ್ಲಿ ಯಾವ ಶಬ್ದವನ್ನು ಊಹಿಸಿಕೊಳ್ಳುತ್ತೇವೋ ಆ ಶಬ್ದವು ಮಂತ್ರಗಳ ಅವಯವ ಆಗದಿರಬೇಕಾದೀತೆಂದು ಆಕ್ಷೇಪಿಸಿದರೆ ಇದು ನಮಗೆ ಇಷ್ಟವೇ ಆಗಿದೆ ಅದು ಹೀಗೆ -

## ಊಹಾದೀನಾಮಮಂತ್ರತ್ವಾಧಿಕರಣಮ್

### ಅನಾಮ್ನಾತೇಷ್ವಮಂತ್ರತ್ವಮಾಮ್ನಾತೇಷು ವಿಭಾಗಃ ಸ್ಯಾತ್ (೨-೧-೧೧)[೧]

ಅಗ್ನಿಪದಸ್ಥಾನದಲ್ಲಿ ಸೂರ್ಯಪದಪ್ರಯೋಗವೆಂಬ ಊಹೆ ತ್ರ್ಯಾರ್ಷೇಯ ಮೊದಲಾದ ಪ್ರವರಗಳು ದೇವದತ್ತ ಮೊದಲಾದ ನಾಮಧೇಯಗಳು ಇವೆಲ್ಲವೂ ಮಂತ್ರಗಳೋ? ಅಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ** - ಊಹ, ಪ್ರವರ, ನಾಮಧೇಯಗಳು ಮಂತ್ರದ ಜೊತೆ ಏಕವಾಕ್ಯತ್ವ ಹೊಂದಿವೆ. ಹಾಗು ಮಂತ್ರಕಾರ್ಯಕಾರಿಯಾಗಿವೆ. ಆದ್ದರಿಂದ ಮಂತ್ರಗಳೆಂದೇ ಒಪ್ಪಬೇಕು. ಮಂತ್ರೈಕವಾಕ್ಯತಾ ಎಂದರೆ ಮಂತ್ರೇಣ ಸಹ ವಿಶಿಷ್ಟೈಕಾರ್ಥಪ್ರತ್ಯಾಯಕತ್ವಮ್' ಎಂದರ್ಥ. ಮಂತ್ರಗಳಿಗೆ ಹೇಗೆ ವಿಶಿಷ್ಟೈಕಾರ್ಥ-ಪ್ರತ್ಯಾಯಕತ್ವ ಇರುತ್ತದೋ, ಅದರಂತೆ ಊಹೆ ಮೊದಲಾದವುಗಳಿಗೂ ಇರುತ್ತದೆ. ಅದರಂತೆ ಮಂತ್ರಗಳು ಮೊದಲಾದವೂ ಸಹ ಅವುಗಳ ಜೊತೆಗೆ ಸೇರಿಕೊಂಡು ತಾವೂ ಕಾರ್ಯವನ್ನು ನಿರ್ವಹಿಸುವುದರಿಂದ ಇವುಗಳನ್ನು ಮಂತ್ರವೆಂದು ಒಪ್ಪಬೇಕು.

**ಸಿದ್ಧಾಂತ** :- ಮಂತ್ರಕಾರ್ಯಕಾರಿತ್ವವಿದ್ದಲ್ಲಿ ಮಂತ್ರತ್ವವಿರಬೇಕೆಂಬ ವ್ಯಾಪ್ತಿಯನ್ನು ಹೇಳಿದಿರಿ. ಇದಕ್ಕೆ ವ್ಯಭಿಚಾರದೋಷವಿದೆ. ವಾಜಪೇಯಯಾಗದಲ್ಲಿ ರಥ ಓಡಿಸಿ ಶಬ್ದ ಮಾಡಬೇಕು. ಈ ಶಬ್ದದ ಜೊತೆಗೆ ಮಹೇಂದ್ರಸ್ತೋತ್ರವನ್ನು ಪಠಿಸಬೇಕೆಂದು 'ರಥಘೋಷೇಣ ಮಾಹೇಂದ್ರಸ್ತೋತ್ರಮುಪಾಕರೋತಿ'

---

(१) **अथ दशममूहाद्यमन्त्रताधिकरणम्**

**अनाम्नातेष्वमन्त्रत्वमाम्नातेषु विभागः स्यात् ॥ ३४ ॥**

स्वाध्यायकालीनयोर्मन्त्रब्राह्मणयोर्लक्षणोक्तौ । तत्प्रसङ्गात् क्रतुप्रयोगकालीनानामूहादीनां मन्त्रत्वमस्ति, नेति चिन्तनात् सङ्गतिः । विधिप्रयोजनकरत्वाभावेन ब्राह्मणत्वमशक्य-शङ्कम् । अत्र 'अग्नये त्वा जुष्टं निर्वपामि' इत्यस्य सौर्यचरौ 'सूर्याय' इति पदान्तरप्रक्षेप ऊहः । त्र्यार्षेयादिः प्रवरः । 'सुब्रह्मण्यायामुको यजते' इति नामधेयम् । तेषु ऊहप्रवरनामधेयेषु मन्त्रत्वमस्ति, उत नेति सन्देहे मन्त्रेण सह एकवाक्यत्वापन्नत्वान्नियमा दृष्टानुविद्धापूर्वीयदेवताप्रकाशनरूपमन्त्रकार्यकरत्वाच्च मन्त्रत्वे प्राप्ते मन्त्रकार्यकरत्वस्य 'चोदना लिङ्गसंयोग' इति दशमचतुर्थपादे वक्ष्यमाणदिशा 'रथघोषेण माहेन्द्रस्तोत्र-मुपाकरोति' इति विहिते रथघोषे मन्त्रस्थानापत्त्या मन्त्रकार्यकरे व्यभिचारादभियुक्तानां अध्ययनादिकाले मन्त्रत्वप्रसिद्धेरेव मन्त्रत्वप्रयोजकत्वेन मन्त्रैकवाक्यताया मन्त्रत्वा-प्रयोजकत्वात् नास्ति मन्त्रत्वमिति सिद्धान्तः । तथाच सूत्रम् स्वाध्यायकाले अनाम्नातेषु अमन्त्रत्वं । कुतः? आम्नातेषु हि 'मन्त्रानध्यापयामः' इत्याद्यभियुक्तोक्त्या मन्त्रविभागो मन्त्रविवेकः स्यादिति । फलन्तु ऊह्यमानपदभ्रेषे न मन्त्रभ्रेषप्रायश्चित्तमित्यादि ध्येयम् ।

**इति दशममूहाद्यमन्त्रताधिकरणम्**

*ಜಿಜ್ಞಾಸಾಧಿಕರಣ*

ರಥಘೋಷದ ಜೊತೆಗೆ ಮಹೇಂದ್ರಸ್ತೋತ್ರವನ್ನು ಸೇರಿಸಿ ಹೇಳಬೇಕು' ಎಂದು ವಿಧಿಯಿದೆ. ಇಲ್ಲಿ ರಥಘೋಷವು ಮಂತ್ರದ ಕಾರ್ಯವಾದ ಸ್ತೋತ್ರಕ್ಕೆ ಸಹಕಾರಿಯಾದ್ದರಿಂದ ಮಂತ್ರಕಾರ್ಯಕಾರಿಯಾಗಿದೆ. ಆದರೆ ಮಂತ್ರವಲ್ಲ. ಆದ್ದರಿಂದ ರಥಘೋಷದಲ್ಲಿ ಮಂತ್ರಕಾರ್ಯಕಾರಿತ್ವವೆಂಬ ಹೇತುವಿದೆ. ಆದರೆ ಮಂತ್ರತ್ವವೆಂಬ ಸಾಧ್ಯವಿಲ್ಲದ ಕಾರಣ ವ್ಯಭಿಚಾರದೋಷ ಬರುತ್ತದೆ. ಆದ್ದರಿಂದ ನಿಮ್ಮ ನಿಯಮ ಸಾಧುವಲ್ಲ.

ಆದ್ದರಿಂದ ಗುರುಶಿಷ್ಯರು ಯಾವುದನ್ನು ಮಂತ್ರಗಳೆಂದು ತಿಳಿದು ಅಧ್ಯಯನ ಮಾಡುತ್ತಾರೋ ಅವುಗಳಷ್ಟೇ ಮಂತ್ರ ಎನಿಸುತ್ತವೆ. ಹೊರತು ಮಂತ್ರಗಳ ಮಧ್ಯದಲ್ಲಿ ಸೇರಿದ ಮಾತ್ರದಿಂದ ಅಥವಾ ಮಂತ್ರದ ಕಾರ್ಯವನ್ನು ನಿರ್ವಹಿಸಿದ ಮಾತ್ರದಿಂದ ಮಂತ್ರಗಳೆನಿಸಲಾರವು. ಆದ್ದರಿಂದ ಊಹ, ಪ್ರವರ, ನಾಮಧೇಯಗಳು ಮಂತ್ರಗಳಲ್ಲವೆಂದು ಸಿದ್ಧಾಂತ.

ಪ್ರಶ್ನೆ :- ಸುಧೆಯಲ್ಲಿ ಆಪಾದಿಸಿದ್ದನ್ನು ಇಷ್ಟಾಪತ್ತಿಯೆಂದು ಶಂಕಿಸಲಾಗಿದೆ. ಆದರೆ ಇದು ತಪ್ಪು. ಏಕೆಂದರೆ ಊಹ ಪ್ರವರಾದಿಗಳು ಮಂತ್ರವಲ್ಲವೆಂದಷ್ಟೇ ಹೇಳಿದ್ದಾರೆ. ಮಂತ್ರದ ಭಾಗಗಳಲ್ಲವೆಂದಲ್ಲ. ಕಾರಣವೇನೆಂದರೆ ಮಂತ್ರಗಳಲ್ಲಿ ಕೆಲವು ಪ್ರಾಯಶ್ಚಿತ್ತಗಳಿವೆ. ಆದರೆ ಊಹಪ್ರವರಗಳಲ್ಲಿ ಏನಾದರೂ ತಪ್ಪಾದರೆ ಆವಾಗ ಈ ಪ್ರಾಯಶ್ಚಿತ್ತ ಮಾಡಬೇಕಾಗಿಲ್ಲ. ಊಹಾದಿಗಳು ಅಮಂತ್ರವೆಂದರೆ ಊಹ್ಯಮಾನ ವಿಷಯದಲ್ಲಿ ಏನು ಅಪರಾಧ ನಡೆಯುತ್ತದೋ, ಅದಕ್ಕೆ 'ಯದೃಕ್ತೋ ಯಜ್ಞಭ್ರೇಷಮಾಗಚ್ಛೇತ್ ಯದ್ಯಜುಷ್ಟೋ, ಯಜ್ಞಭ್ರೇಷಮಾಗಚ್ಛೇತ್' ಇತ್ಯಾದಿಯಾಗಿ ವಿಹಿತವಾದ ಪ್ರಾಯಶ್ಚಿತ್ತ ಮಾಡಬೇಕಾಗಿಲ್ಲ. ಈ ಪ್ರಾಯಶ್ಚಿತ್ತ ಕೇವಲ ಮಂತ್ರಲೋಪದ ವಿಷಯದಲ್ಲಷ್ಟೇ ತಿಳಿಯಬೇಕು. ಸುಧೆಯಲ್ಲಿ ಊಹವನ್ನು ಮಂತ್ರದ ಭಾಗವಲ್ಲವೆಂದು ಆಪಾದಿಸಿದ್ದಾರೆ, ಹೊರತು ಮಂತ್ರವಲ್ಲವೆಂದು ಆಪಾದಿಸಿಲ್ಲ. ಆದ್ದರಿಂದ ಈ ಆಕ್ಷೇಪ ಸರಿಯಲ್ಲ.

ಉತ್ತರ :- ಸುಧೆಯ ಅಭಿಪ್ರಾಯವನ್ನು ಶಂಕೆ ಮಾಡುವವನು ಊಹ್ಯಮಾನವಾದದ್ದು ಅಮಂತ್ರವಾದ್ದರಿಂದ ಮಂತ್ರದ ಅವಯವವಲ್ಲವೆಂದು ತಿಳಿದಿದ್ದಾನೆ. ಆದ್ದರಿಂದ ತಪ್ಪಿಲ್ಲ.

ನಾಲ್ಕನೆಯ ಆಕ್ಷೇಪ - ಓಂಕಾರದ ಅರ್ಥ ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಅನ್ವಯ ಹೊಂದುತ್ತದೆಂದು ಸುಧೆಯಲ್ಲಿ ಹೇಳಿದ್ದಾರೆ. ಇದೂ ಸಹ ಸರಿಯಲ್ಲವೆಂದು 'ಅಪಿ ಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಅಧಿಕಾರ ಸಂಪಾದಿಸಿದ ಮೇಲೆ ಪ್ರಯೋಜನವಿರುವುದರಿಂದ ಬ್ರಹ್ಮವಿಚಾರ ಮಾಡಬೇಕು ಎಂದು ಸೂತ್ರದ ಅರ್ಥ. ಈ ವಾಕ್ಯಾರ್ಥದಲ್ಲಿ ಓಂಕಾರದ ಅರ್ಥವಾದ ಪೂರ್ಣತ್ವಕ್ಕೆ ಎಲ್ಲಿಯೂ ಅನ್ವಯ ಕಾಣಿಸುತ್ತಿಲ್ಲ.

ಪ್ರಶ್ನೆ :- ವಾಕ್ಯಾರ್ಥದಲ್ಲಿ ಪ್ರತಿಯೋಗಿ ಸಮರ್ಪಕವಾಗಿ ಅನ್ವಯ ಹೇಳಲು ಬಾರದಿರಬಹುದು. ಆದರೆ 'ಪೂರ್ಣನಾದ ಯಾವ ಬ್ರಹ್ಮನಿದ್ದಾನೊ ಅವನ ವಿಚಾರ'ವೆಂದು ಬ್ರಹ್ಮನಿಗೆ ವಿಶೇಷಣವಾಗಿ ಹೇಳಬಹುದು.

ಪರಿಪೂರ್ಣಚಂದ್ರಿಕಾ

ಉತ್ತರ :- ಈ ಪ್ರಶ್ನೆಗೆ 'ಬ್ರಹ್ಮಣಃ ಶಬ್ದತಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಬ್ರಹ್ಮಪದವು ಜಿಜ್ಞಾಸಾಪದದ ಜೊತೆಗೆ ಸಮಾಸ ಹೊಂದಿರುವುದರಿಂದ ವಿಶೇಷಣವಾಗಿ ಗೌಣವಾಗಿದೆ. ಇದರಲ್ಲಿ ತತ್ವಕ್ಕೆ ಅನ್ವಯ ಹೇಳಲು ಆಗುವುದಿಲ್ಲ. ಒಂದು ವೇಳೆ 'ಓಂಬ್ರಹ್ಮಜಿಜ್ಞಾಸಾ' ಎಂದು ಸಮಸ್ತವಾಗಿ ಇದ್ದಿದ್ದರೂ ಓಂ' ಎಂಬುದು ಬ್ರಹ್ಮಪದದ ಜೊತೆಗೆ ಅನ್ವಯ ಹೊಂದುತ್ತಿತ್ತು. ಆದರೆ ಸೂತ್ರವಿನ್ಯಾಸ ಹಾಗಿಲ್ಲದ ಕಾರಣ ಓತತ್ವಕ್ಕೆ ಅನ್ವಯ ಕೂಡುವುದಿಲ್ಲ.

ಐದನೆಯ ಆಕ್ಷೇಪ :- 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ಪ್ರಮಾಣದಂತೆ ಸೂತ್ರಗಳ ಮೊದಲು ಮತ್ತು ಕೊನೆಯಲ್ಲಿ ಓಂಕಾರವನ್ನು ಹೇಳಬೇಕೆಂದು ಹೇಳಿದ್ದೂ ಸರಿಯಲ್ಲ. ಅರ್ಥಪ್ರತೀತಿಗೋಸ್ಕರ ಓಂಕಾರವಿರುವುದೆಂದು ನೀವು ಹೇಳುತ್ತಿರುವುದರಿಂದ 'ಮೊದಲು ಹೇಳಿದರೆ ಸಾಕು'. ಕೊನೆಯಲ್ಲೇಕೆ ಹೇಳಬೇಕು? ಎಂದು 'ಅಪಿ ಚ' ಇತ್ಯಾದಿಗ್ರಂಥದಿಂದ ಹೇಳುತ್ತಿದ್ದಾರೆ.

ಆರನೆಯ ಆಕ್ಷೇಪ - ಸೂತ್ರದ ಅವಯವವಾದ್ದರಿಂದ ಓಂಕಾರವನ್ನೂ ಸೂತ್ರದ ಜೊತೆಗೆ ಸೇರಿಸಿ ಹೇಳಬೇಕಿತ್ತು. ಆದರೆ ಬಿಡಿಸಿ (ಅಸಂಹಿತತಯಾ) ಏಕೆ ಹೇಳಿದ್ದೆಂದರೆ 'ಪ್ರತಿಯೊಂದು ಸೂತ್ರಗಳಲ್ಲಿಯೂ ಅನುಷಂಗವಾಗುತ್ತದೆಂದು ಸೂಚಿಸುವುದಕ್ಕಾಗಿ' ಹೀಗೆ ಹೇಳಿರುವುದೂ ಸರಿಯಲ್ಲವೆಂದು 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಹಾಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಓಂಕಾರವನ್ನು ಅನುಷಂಗ ಮಾಡಿಕೊಳ್ಳುವುದಾದರೆ ಆ ಎಲ್ಲ ಸೂತ್ರಾರ್ಥದಲ್ಲಿ ಓಂಕಾರದ ಅರ್ಥಕ್ಕೆ ಅನ್ವಯ ಹೇಳಬೇಕಾಗಿತ್ತು. ಏಕೆಂದರೆ ಯಾವ ಸೂತ್ರದಲ್ಲಿ ಯಾವ ಪದವನ್ನು ಅನುಷಂಗ ಮಾಡಲಾಗುತ್ತದೋ ಆ ಪದದ ಅರ್ಥವೂ ಸಹ ಸೂತ್ರಾರ್ಥದಲ್ಲಿ ಅನ್ವಯವಾಗುವುದು ಕಂಡಿದೆ. ವ್ಯಾಕರಣದಲ್ಲಿ ಮತ್ತು ಪೂರ್ವಮೀಮಾಂಸೆಯಲ್ಲಿ ಎರಡೂ ಕಡೆ ಇದಕ್ಕೆ ದೃಷ್ಟಾಂತ ಕಂಡಿದೆ.

'ಸ್ವೌಜಸಮೌಟ್ಛಷ್ಟಾಭ್ಯಾಂ' ಇತ್ಯಾದಿ ಸೂತ್ರದಲ್ಲಿ 'ಙ್ಯಾಪ್ಪ್ರಾತಿಪದಿಕಾತ್' ಎಂಬ ಸೂತ್ರವನ್ನು ಅನುಷಂಗ ಮಾಡಿಕೊಳ್ಳಬೇಕು. ಆವಾಗ 'ಙೀ' ಪ್ರತ್ಯಯಾಂತವಾದ ಆಪ್‌ಪ್ರತ್ಯಯಾಂತವಾದ ಶಬ್ದಗಳ ಮುಂದೆ ಮತ್ತು ಪ್ರಾತಿಪದಿಕಗಳ ಮುಂದೆ ಸು, ಔ, ಜಸ್, ಮೊದಲಾದ ಪ್ರತ್ಯಯಗಳು ಬರುತ್ತವೆಂದು 'ಙ್ಯಾಪ್ ಪ್ರಾತಿಪದಿಕಾತ್' ಎಂಬ ಸೂತ್ರದ ಅರ್ಥವೂ ಅನ್ವಯವಾಗುವುದು ಕಂಡಿದೆ.

'ಅಚ್ಛಿದ್ರೇಣ ಪವಿತ್ರೇಣ ಇತ್ಯಧಿಕರಣಮ್'

ಅನುಷಂಗೋ ವಾಕ್ಯಸಮಾಪ್ತಿಃ ಸರ್ವೇಷು ತುಲ್ಯಯೋಗಿತ್ವಾತ್ (೨- ೧-೧೭)

'ಚಿತ್‌ಪತಿಸ್ತ್ವಾ ಪುನಾತು ವಾಕ್‌ಪತಿಸ್ತ್ವಾ ಪುನಾತು । ದೇವಸ್ತ್ವಾ ಸವಿತಾ ಪುನಾತು ।' 'ಚಿತ್‌ಪತಿಯು ನಿನ್ನನ್ನು ಪವಿತ್ರಗೊಳಿಸಲಿ ವಾಕ್‌ಪತಿಯು ನಿನ್ನನ್ನು ಪವಿತ್ರಗೊಳಿಸಲಿ ಸೂರ್ಯದೇವನು ನಿನ್ನನ್ನು ಪವಿತ್ರಗೊಳಿಸಲಿ' ಈ ಮೂರು ಮಂತ್ರಗಳ ಅನಂತರ ಇನ್ನೊಂದು ಮಂತ್ರವಿದೆ. 'ಅಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ' ಎಂದು 'ಚಿತ್‌ಪತಿಸ್ತ್ವಾ' ಇತ್ಯಾದಿ ಮೂರು ಮಂತ್ರಗಳಲ್ಲಿ

ಕ್ರಿಯಾಪದವಿರುವುದರಿಂದ ನಿರಾಕಾಂಕ್ಷಿತವಾಗಿದೆ. ಆದರೆ 'ಅಚ್ಛಿದ್ರೇಣ' ಇತ್ಯಾದಿ ಮಂತ್ರಕ್ಕೆ ಕ್ರಿಯಾಪದವಿಲ್ಲದ ಕಾರಣ ಆಕಾಂಕ್ಷೆ ಇದೆ. ಆದ್ದರಿಂದ ಸಾಕಾಂಕ್ಷಿತವಾದ 'ಅಚ್ಛಿದ್ರೇಣ' ಎಂಬ ಮಂತ್ರ ಅವ್ಯವಹಿತ ಪೂರ್ವದಲ್ಲಿರುವ 'ದೇವಸ್ತ್ವಾ ಸವಿತಾ' ಎಂಬುದರ ಜೊತೆಗೆ ಮಾತ್ರ ಅನ್ವಯ ಹೇಳಬೇಕೋ? ಅಥವಾ 'ಚಿತ್‌ಪತಿಸ್ತ್ವಾ' ಇತ್ಯಾದಿ ಮೊದಲ ಮೂರು ಮಂತ್ರಗಳ ಜೊತೆಗೂ ಅನ್ವಯ ಹೇಳಬೇಕೋ? ಎಂದು ಸಂಶಯ.

ಪೂರ್ವಪಕ್ಷ :- 'ಅಚ್ಛಿದ್ರೇಣ ಪವಿತ್ರೇಣ' ಇತ್ಯಾದಿಯಾಗಿ ತೃತೀಯಾವಿಭಕ್ತಿ ಕೇಳಿಸುತ್ತಿದೆ. ಆದರೆ ಕ್ರಿಯಾಪದವಿಲ್ಲದ ಕಾರಣ ಸಾಕಾಂಕ್ಷವಾಗಿಯೇ ಉಳಿಯುತ್ತದೆ. ಆಕಾಂಕ್ಷೆಯ ಪರಿಹಾರಕ್ಕಾಗಿ 'ದೇವಸ್ತ್ವಾ ಸವಿತಾ' ಎಂಬುದರ ಜೊತೆಗೆ ಅನ್ವಯ ಮಾಡಿದರೆ ಸಾಕು. ಒಮ್ಮೆ ಆಕಾಂಕ್ಷೆ ಪರಿಹಾರವಾದ ಮೇಲೆ ಪುನಃ ಆಕಾಂಕ್ಷೆ ಬರುವುದಿಲ್ಲ. ಆದ್ದರಿಂದ 'ಚಿತ್‌ಪತಿಸ್ತ್ವಾ' ಇತ್ಯಾದಿ ಎರಡು ಮಂತ್ರಗಳಲ್ಲಿ ಅನುಷಂಗ ಮಾಡಬೇಕಾಗಿಲ್ಲ. ಮತ್ತು ಇವೆರಡು ವಾಕ್ಯಗಳು ನಿರಾಕಾಂಕ್ಷಿತವಾದ್ದರಿಂದ ಸ್ವಯಂ ಪೂರ್ಣವಾಗಿ ಇವುಗಳೊಡನೆ ವಾಕ್ಯಶೇಷ ಸೇರುವುದು ಅನಾವಶ್ಯಕ.

ಸಿದ್ಧಾಂತ - 'ಅಚ್ಛಿದ್ರೇಣ ಪವಿತ್ರೇಣ' ಎಂಬುದು ತೃತೀಯಾವಿಭಕ್ತ್ಯಂತವಾದ್ದರಿಂದ 'ಪುನಾತು' ಎಂಬ ಕ್ರಿಯಾಪದದ ಜೊತೆಗೆ ಅನ್ವಯ ಹೇಳಲೇಬೇಕು. ಏಕೆಂದರೆ ತೃತೀಯಾವಿಭಕ್ತಿಯು ಪವಿತ್ರೀಕರಣತ್ವವನ್ನು ಹೇಳುತ್ತಿದೆ. ಇದಕ್ಕೆ ಕ್ರಿಯಾಪದದ ಅವಶ್ಯಕತೆ ಇದ್ದೇ ಇದೆ. ಹಾಗಾಗಿ 'ಪುನಾತು' ಎಂಬುದರ ಜೊತೆ ಏಕವಾಕ್ಯತ್ವ ಹೇಳಲೇಬೇಕು. ಚಿತ್‌ಪತಿಸ್ತ್ವಾ ಇತ್ಯಾದಿ ಮಂತ್ರಗಳು ಪವಿತ್ರಕ್ರಿಯೆಯನ್ನು ಪ್ರಕಾಶಿಸುತ್ತವೆ. ಅಚ್ಛಿದ್ರೇಣ ಎಂಬ ವಾಕ್ಯಶೇಷವು ಪವಿತ್ರಗೊಳಿಸುವ ಸಾಧನವನ್ನು ಬೋಧಿಸಿ ತನ್ಮೂಲಕ ಪವಿತ್ರಗೊಳಿಸುವ ಕ್ರಿಯೆಯನ್ನು ಬೋಧಿಸುತ್ತದೆ.

ಆದ್ದರಿಂದ 'ಚಿತ್‌ಪತಿಸ್ತ್ವಾ' ಇತ್ಯಾದಿ ಮೂರು ವಾಕ್ಯಗಳಲ್ಲಿ ಪ್ರಧಾನವಾದ ಕ್ರಿಯೆ ಇದೆ. ಆದರೆ ತೃತೀಯಾವಿಭಕ್ತಿ ಇಲ್ಲದ ಕಾರಣ ಕರಣ ಇಲ್ಲ. ಇನ್ನು 'ಅಚ್ಛಿದ್ರೇಣ' ಇತ್ಯಾದಿ ವಾಕ್ಯಶೇಷದಲ್ಲಿ ಅಂಗವಾದ ಸಾಧನಬೋಧಕ ಪದಗಳಿವೆ ಕರಣವಿದೆ ಕ್ರಿಯೆ ಇಲ್ಲ. ಪ್ರಧಾನಕ್ರಿಯೆಯಿದ್ದಲ್ಲಿ ಅಪ್ರಧಾನವಾದ (ಅಂಗವಾದ) ಕರಣವೂ ಇರಬೇಕು. ಆದ್ದರಿಂದ 'ಚಿತ್‌ಪತಿಸ್ತ್ವಾ' ಇತ್ಯಾದಿ ಎರಡು ವಾಕ್ಯಗಳಲ್ಲಿಯೂ ಸಾಧನಬೋಧಕಪದಗಳಿರುವ 'ಅಚ್ಛಿದ್ರೇಣ' ಎಂಬ ವಾಕ್ಯಶೇಷವನ್ನು ಸೇರಿಸಿಕೊಳ್ಳುವುದು ನ್ಯಾಯಸಮ್ಮತವಾಗಿದೆ.

### 'ಯಾತೇ ಅಗ್ನೇಽಯಾಶಯಾ' ಇತ್ಯಧಿಕರಣಮ್ । (೨- ೧- ೧೬)

[1]ಜ್ಯೋತಿಷ್ಟೋಮಯಾಗದ ಸಂದರ್ಭದಲ್ಲಿ ಮೂರು ಮಂತ್ರಗಳು ಶ್ರುತವಾಗುತ್ತಿವೆ -

---

(१) (भाट्टसङ्ग्रहः–) अथ सप्तदशोऽनुषङ्गाधिकरणे प्रथमं वर्णकम्

अनुषङ्गो वाक्यसमाप्तिः सर्वेषु तुल्ययोगित्वात् ॥ ४८ ॥

अत्रापि यजुःपरिमाणचिन्तनात् प्रासङ्गिकी सङ्गतिः । ज्योतिष्टोमे आग्नेयी सौम्या वैष्णवीति

'ಯಾ ತೇ ಅಗ್ನೇ ಅಯಾಶಯಾ ತನೂರ್ವರ್ಷಿಷ್ಠಾ ಗಹ್ವರೇಷ್ಠಾ ಉಗ್ರಂ ವಚೋ ಅಪಾವಧೀತ್

---

तिस्र उपसदः श्रुताः । तत्राऽग्नेयीसन्निधौ श्रूयते । 'या ते अग्ने अयाशया तनूर्वर्षिष्ठा गह्वरेष्ठा, उग्रं वचो अपावधीं त्वेषं वचो अपावधीं स्वाहा' 'या ते अग्ने रजाशया' 'या ते अग्ने हराशया' इति । अयाशया रजाशया हराशयेति भूम्यन्तरिक्षद्युलोकस्थास्तनव इत्येके । अयसा रजतेन हिरण्येन च निर्मितं तनुत्रयमित्यन्ये । 'उग्रं वचः' इति अशनायापिपासे । अपावधीं अपहन्मि, या ते तनूः । तयेति शेषः । 'त्वेषं वचः' इति एनश्च वैरहत्यञ्चे-त्यर्थः । तत्र रजाशयाहराशयेतिपदयोः साकांक्षयोः शेषिणोराकांक्षापूरणाय लौकिकः शेषोऽध्याहर्तव्यस्तनूरित्यादिः, पूर्व एवानुषञ्जनीयो वेति सन्देहः । एकत्र निबद्धो वैदिकः शेषो नान्यत्र नेतुं शक्यते । लौकिकस्तु न क्वाप्युपनिबद्ध इति लौकिको वाक्यशेष आकांक्षापूरणायाध्याहर्तव्य' इति प्राप्ते सर्वानन्तरं सकृत् पठितुमशक्यो बुद्धिस्थत्वमात्रेण च सर्वैः साकांक्षैः संबन्धसिद्धेः पुनरनाम्नातोऽप्ययं शेषः सर्वार्थेनाऽम्नात इति युक्तमङ्गीकर्तुम् । एतावतैव वेदसमर्पितेन शेषेण नैराकांक्ष्यसिद्धेर्निष्प्रमाणको लौकिकोऽध्याहारः । अतः 'तनूर्वर्षिष्ठा' इत्यादिशेष उत्तरयोरप्यनुषञ्जनीय इति सिद्धान्तः । तदुक्तं सूत्रे अनुषज्यत इति अनुषङ्गः वाक्यशेषः वाक्यसमाप्तिः वाक्यसमापकः सर्वेषु शेषिषु तुल्ययोगित्वात् तुल्यसम्बन्धादिति । फलन्तु-पूर्वपक्षे अध्याहृतस्य ऊहादिवदमन्त्रत्वात् तद्भ्रंशे न मन्त्रभ्रंशप्रायश्चित्तम् । सिद्धान्ते तद्भ्रंशप्रायश्चित्तम् ।

इति सप्तदशेऽनुषङ्गाधिकरणे प्रथमं वर्णकम्

***

### अथ सप्तदशेऽनुषङ्गाधिकरणे द्वितीयं वर्णकम् ।

अस्य सूत्रस्य वर्णकान्तरन्तु । पूर्ववैषम्येण शङ्कनात् सङ्गतिः । 'चित्पतिस्त्वा पुनातु' 'वाक्पतिस्त्वा पुनातु' 'देवस्त्वा सविता पुनातु अच्छिद्रेण पवित्रेण वसोः सूर्यस्य रश्मिभिः' इति श्रुते वाक्ये 'अच्छिद्रेण' इत्यादिशेषः पूर्वयोरप्यनुषज्यते, किं वा परस्यैव मन्त्रस्य शेष इति सन्देहः । पूर्वस्मिन् वर्णके एकेन शेषिणा अन्वयेन नैराकांक्ष्येऽपीतरयोः शेषिणोः साकांक्षत्वात् पुनर्वाक्यशेषस्य आकांक्षामुत्थाप्यानुषङ्गोक्तिर्युक्ता । अत्र तु शेषिणां पुनात्वन्तानां निराकांक्षत्वात् शेषस्य चैकान्वयेनापि नैराकांक्ष्यसिद्धेर्नानुषङ्गो युक्त इति प्राप्ते सिद्धान्तः । पुनातुशब्दैकवाक्यतामुपगतोऽच्छिद्रादिः शेषः करणद्वारेण पावनक्रियाप्रकाशनार्थः । सैव क्रिया पूर्वाभ्यामपि प्रकाश्यते । तदर्थश्च वाक्यशेषः प्रधानवशात् तत्राऽकृष्यत इत्यनुषङ्गसिद्धिरिति । फलन्तु वाक्यशेषस्य चरममन्त्रेणैव सहोच्चारणं पूर्वपक्षे । सिद्धान्ते तु पूर्वाभ्यामपीति व्यक्तम् ।

इति सप्तदशेऽनुषङ्गाधिकरणे द्वितीयं वर्णकम्

ಜಿಜ್ಞಾಸಾಧಿಕರಣ

ತ್ವೇಷಂ ವಚೋ ಅಪಾವಧೀತ್ ಸ್ವಾಹಾ' 'ಯಾ ತೇ ಅಗ್ನೇ ರಜಾಶಯಾ' 'ಯಾ ತೇ ಅಗ್ನೇ ಹರಾಶಯಾ' ಅಗ್ನಿಯೇ ನಿನ್ನ ಕಬ್ಬಿಣದ ಶರೀರವು ಎಲ್ಲ ಅಭೀಷ್ಟಗಳನ್ನು ಕೊಡುತ್ತದೆ. ನಮ್ಮ ಹೃದಯ ಗುಹೆಯಲ್ಲಿರುತ್ತದೆ. ಹಸಿವು ತೃಷೆಗಳನ್ನು ಅಡಗಿಸುತ್ತದೆ. ಎಲ್ಲ ಪಾಪಗಳನ್ನು ಹೃದಯ ಗುಹೆಯಲ್ಲಿಡುತ್ತದೆ. ಹಸಿವು ತೃಷೆಗಳನ್ನು ಅಡಗಿಸುತ್ತದೆ. ಎಲ್ಲ ಪಾಪಗಳನ್ನು ಪರಿಹರಿಸುತ್ತದೆ. ನಿನಗಿದೊ ಆಹುತಿ'. 'ಅಗ್ನಿಯೇ ನೀನು ರಜತಮಯ' 'ಅಗ್ನಿಯೆ ನೀನು ಸುವರ್ಣಯ' ಎಂದು.

(ಅಯಾಶಯಾ = ಭೂಮಿಯಲ್ಲಿರುವ ರೂಪಗಳು, ರಜಾಶಯಾ = ಅಂತರಿಕ್ಷದಲ್ಲಿರುವ ರೂಪಗಳು, ಹರಾಶಯಾ = ದ್ಯುಲೋಕದಲ್ಲಿರುವ ರೂಪಗಳೆಂದು ಕೆಲವರು ವ್ಯಾಖ್ಯಾನಿಸುತ್ತಾರೆ.)

ಅವುಗಳಲ್ಲಿ ಕೊನೆಯ ಎರಡು ಮಂತ್ರಗಳಲ್ಲಿ ವಾಕ್ಯಪೂರ್ತಿಯಾಗಿಲ್ಲ, 'ತನೂರ್ವರ್ಷಿಷ್ಠಾ' ಇತ್ಯಾದಿ ಮೊದಲನೆ ಮಂತ್ರದಲ್ಲಿರುವ ವಾಕ್ಯಶೇಷವನ್ನು ಮುಂದಿನ ಎರಡು ಮಂತ್ರಗಳಿಗೆ ತಂದು ಸೇರಿಸಬೇಕೊ? ಅಥವಾ ಬೇರೆ ವಾಕ್ಯಶೇಷಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೊ? ಎಂದು ಸಂದೇಹ.

ವೇದವಾಕ್ಯದಲ್ಲಿ ಒಂದು ಕಡೆ ಇರುವ ವಾಕ್ಯಶೇಷವನ್ನು ಇನ್ನೊಂದು ಕಡೆಗೆ ಒಯ್ಯುವುದು ಅಶಕ್ಯ. ಅದು ಇದ್ದಲ್ಲಿಯೇ ಮೂರು ಮಂತ್ರಗಳಿಗೂ ಏಕಕಾಲದಲ್ಲಿ ಸಂಬಂಧಪಡುವುದು ಶಕ್ಯವಿಲ್ಲ. ಯಾವುದಾದರೊಂದು ಮಂತ್ರಕ್ಕೆ ಸಂಬಂಧಿಸಿರಬೇಕು. ಮೂರನೆಯ ಮಂತ್ರವು ಇದಕ್ಕೆ ದೂರದಲ್ಲಿದೆ. ಎರಡನೆ ಮಂತ್ರವು ಸಮೀಪದಲ್ಲಿದ್ದರೂ ಅದಕ್ಕೆ ಈ ವಾಕ್ಯಶೇಷದ ಸಂಬಂಧವಿಲ್ಲ. ಏಕೆಂದರೆ ವಾಕ್ಯಶೇಷವು ಶೇಷಿಯ ಬಳಿಯಲ್ಲಿ ಅದರ ಕೊನೆಯಲ್ಲಿ ಬರಬೇಕು. ಪ್ರಕೃತದಲ್ಲಿ ವಾಕ್ಯಶೇಷವು ಮೊದಲಿನ ಮಂತ್ರಕ್ಕೆ ಸಂಬಂಧಿಸಿದೆಯೆಂದು ನಿಶ್ಚಯಿಸಬಹುದು. ಅದನ್ನು ಮುಂದಿನ ಎರಡು ಮಂತ್ರಗಳಿಗೆ ಸೇರಿಸಲಾಗುವುದಿಲ್ಲ. ನಾವೇ ಅಧ್ಯಾಹಾರದಿಂದ ಇಟ್ಟುಕೊಳ್ಳುವ ವಾಕ್ಯಶೇಷಗಳು ಯಾವುದೇ ಒಂದು ಮಂತ್ರಕ್ಕೆ ಸಂಬಂಧಿಸಿದಂತೆ ವೇದದಲ್ಲಿ ಬಂದಿಲ್ಲದಿರುವುದರಿಂದ ಅವುಗಳಿಗೆ ಈ ಸಮಸ್ಯೆ ಇಲ್ಲ. ಎಲ್ಲ ಮಂತ್ರಗಳಿಗೂ ಅವುಗಳನ್ನು ಸೇರಿಸಿಕೊಳ್ಳಲು ಶಕ್ಯವಿದೆ. ಆದ್ದರಿಂದ ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಪೂರ್ವಪಕ್ಷ.

ವೇದದಲ್ಲಿ ಒಂದು ವಾಕ್ಯಶೇಷವನ್ನು ಎಲ್ಲ ಶೇಷಿಗಳಿಗೂ ಸಂಬಂಧಿಸಿದಂತೆ ಒಮ್ಮೆಲೆ ಪಠಿಸಲು ಶಕ್ಯವಿಲ್ಲ. ಬುದ್ಧಿಸ್ಥವಾಗಿರುವ ಮಾತ್ರದಿಂದಲೇ ಆಕಾಂಕ್ಷೆ ಇದ್ದರೆ ಎಲ್ಲ ವಾಕ್ಯಗಳೊಡನೆ ಪುನಃ ಪುನಃ ಪಠಿಸುವುದೂ ಇಲ್ಲ. ಪ್ರಕೃತದಲ್ಲಿ ವಾಕ್ಯಶೇಷವು ಮೂರು ಮಂತ್ರಗಳಿಗೂ ಸಂಬಂಧಿಸಿದಂತೆ ಒಮ್ಮೆ ಪಠಿತವಾಗಿದೆ ಎಂದರೆ ತಪ್ಪಾಗುವುದಿಲ್ಲ. ಬೇರೆ ಅಧ್ಯಾಹಾರದ ಅವಶ್ಯಕತೆ ಇಲ್ಲ ಎಂದು ಸಿದ್ಧಾಂತ.

ಮೇಲಿನ ಎರಡು ಉದಾಹರಣೆಗಳಲ್ಲಿಯೂ ಒಂದು ವಾಕ್ಯಶೇಷವು ಅನೇಕ ಶೇಷಿಗಳೊಡನೆ ಸೇರಿದಾಗ ಅನ್ವಯವಿರುವುದು ಕಂಡುಬರುತ್ತದೆ. 'ಅಚ್ಛಿದ್ರೇಣ ಪವಿತ್ರೇಣ' ಇತ್ಯಾದಿ ಮೂರನೆ ಮಂತ್ರದ ವಾಕ್ಯಶೇಷವು ಮೊದಲಿನ ಎರಡು ಮಂತ್ರಗಳೊಡನೆ ಸೇರಿದಾಗ ಎಂಬಲ್ಲಿ ಹೇಳಿದ ಪವಿತ್ರೀಕರಣಕ್ರಿಯೆಗೆ ಸಾಧನವೇನೆಂಬುದನ್ನು ಹೇಳುತ್ತದೆ. 'ಚಿತ್‌ಪತಿಸ್ತ್ವಾ ಪುನಾತು' 'ವಾಕ್‌ಪತಿಸ್ತ್ವಾ ಪುನಾತು' ಎಂಬಲ್ಲಿ

ಕಳದ ಪವಿತ್ರೀಕರಣಕ್ರಿಯೆಗೆ ಸಾಧನವೇನೆಂಬುದನ್ನು ಹೇಳುತ್ತದೆ. 'ಎಲ್ಲಿಯೂ ಎಡಬಿಡದೆ ಬೀಸುವ ಪವಿತ್ರವಾಯುವಿನಿಂದಲೂ ಪ್ರಪಂಚದ ಉಳಿವಿಗೆ ಕಾರಣನಾದ ಸೂರ್ಯನ ಕಿರಣಗಳಿಂದಲೂ ಚಿಚ್ಛಕ್ತಿವಾಕ್ಯಗಳು ನಿನ್ನನ್ನು ಪವಿತ್ರಗೊಳಿಸಲಿ' ಎಂದು ಅನ್ವಯ ಹೊಂದುತ್ತದೆ. 'ಶರೀರವು ಎಲ್ಲ ಅಭೀಷ್ಟಗಳನ್ನು ಕೊಡುತ್ತದೆ' ಎಂದು ಮುಂತಾದ ಮೊದಲನೆ ಮಂತ್ರದ ವಾಕ್ಯಶೇಷವು ಮುಂದಿನ ಎರಡು ಮಂತ್ರಗಳಿಗೆ ಸಂಬಂಧಿಸಿದಾಗ 'ರಜತಮಯ' 'ಸುವರ್ಣಮಯ' ಎಂಬ ವಿಶೇಷಣಗಳಿಗೆ ಶರೀರವು ವಿಶೇಷ್ಯವೆಂದು ಹೇಳುತ್ತ ರಜತಮಯವಾದ ಶರೀರವು ಸುವರ್ಣಮಯವಾದ ಶರೀರವು ಎಂದು ಅನ್ವಯ ಹೊಂದುತ್ತದೆ. ಹಾಗೆಯೇ ಪ್ರಕೃತದಲ್ಲಿಯೂ ಪ್ರಥಮಸೂತ್ರದ ಓಂಕಾರವು 'ಜನ್ಮಾದ್ಯಸ್ಯ ಯತಃ' 'ಈ ಪ್ರಪಂಚದ ಉತ್ಪತ್ತಿ ಮುಂತಾದವು ಯಾರಿಂದ ಉಂಟಾಗುತ್ತವೋ', ಎಂದು ಮುಂತಾದ ಮುಂದಿನ ಸೂತ್ರಗಳಲ್ಲಿ ಓಂಕಾರವು ಸೇರಬೇಕಾದರೆ ಅಲ್ಲಿ ಅನ್ವಯವಿರಬೇಕು. ಆದರೆ ನೀವು ಅನ್ವಯ ಹೇಳುವುದಿಲ್ಲ.

ಹೀಗೆ ಓಂಕಾರದ ವಿಷಯದಲ್ಲಿ ಸುಧೆಯ ಮೇಲೆ ಆರು ಆಕ್ಷೇಪಗಳು ಬಂದಿವೆ. ಅವುಗಳಲ್ಲಿ ಮೊದಲನೆಯ ಆಕ್ಷೇಪವನ್ನು 'ನಾತ್ರ' ಇತ್ಯಾದಿಯಾಗಿ ಪರಿಹರಿಸುತ್ತಿದ್ದಾರೆ.

ಸುಧೆಯಲ್ಲಿ 'ಊಹ' ಎಂದಿರುವುದು ಮೀಮಾಂಸಕರು ಹೇಳುವ ಊಹವನ್ನಲ್ಲ. ಮೀಮಾಂಸಕರು ಊಹವನ್ನು ಮಂತ್ರೋಹ ಸಾಮೋಹ ಸಂಸ್ಕಾರೋಹ ಎಂದು ಮೂರು ವಿಧವೆನ್ನುತ್ತಾರೆ. 'ಅಗ್ನಯೇ ಜುಷ್ಟಂ' ಎಂಬ ಮಂತ್ರವನ್ನು 'ಸೂರ್ಯಾಯ ಜುಷ್ಟಂ' ಎಂದು ವ್ಯತ್ಯಾಸ ಮಾಡಿ ಹೇಳುವುದು ಮಂತ್ರೋಹ.

'ಯದ್ಯೋನ್ಯಾಂ ತದುತ್ತರಯೋರ್ಗಾಯತಿ' 'ಯಾವ ಸಾಮವನ್ನು ತನ್ನ ಉತ್ಪತ್ತಿಸ್ಥಾನವಾದ ಋಚೆಯಲ್ಲಿ ಹಾಡಬೇಕಾಗಿದೆಯೊ ಆದನ್ನೇ ಉತ್ತರಾಗ್ರಂಥದಲ್ಲಿ ಪಠಿಸಿರುವ ಇನ್ನೆರಡು ಋಚೆಗಳಲ್ಲಿಯೂ ಹಾಡಬೇಕು'. 'ಕವತೀಷು ರಥಂತರಂ ಗಾಯತಿ' 'ಕಕಾರದಿಂದ ಕೂಡಿದ ಋಚೆಗಳಲ್ಲಿ ರಥಂತರ ಸಾಮವನ್ನು ಹಾಡಬೇಕು' ಎಂದು ಮುಂತಾಗಿ ಹೇಳಿದಂತೆ ವೇದಸಾಮಗ್ರಂಥದಲ್ಲಿ ಉತ್ಪತ್ತಿಸ್ಥಾನವಾದ ಋಚೆಯಲ್ಲಿ ಹೇಳಿದ ಸಾಮವನ್ನು ಉತ್ತರಾಗ್ರಂಥದಲ್ಲಿ ಪಠಿತವಾದ ಋಚೆಗಳಲ್ಲಿ ಅವುಗಳಿಗೆ ಅನುಗುಣವಾಗಿ ಸ್ವಲ್ಪ ವ್ಯತ್ಯಾಸದಿಂದ ಹಾಡುವುದು ಸಾಮೋಹ.

ಪ್ರಕೃತಿಯಲ್ಲಿ 'ಭತ್ತವನ್ನು ಕುಟ್ಟಬೇಕೆಂದು' ಹೇಳಿದ ಸಂಸ್ಕಾರವನ್ನು ವಿಕೃತಿಯಲ್ಲಿ ನೀವಾರದಂಥ ಬೇರೆ ಧಾನ್ಯಗಳಿಗೆ ಉಚಿತ ರೀತಿಯಲ್ಲಿ ಅನುಷ್ಠಾನ ಮಾಡುವುದು ಸಂಸ್ಕಾರೋಹ.

ಈ ಎಲ್ಲ ಕಡೆಗಳಲ್ಲಿಯೂ ಊಹ ಎಂಬ ಶಬ್ದವು ಊಹಿಸಲ್ಪಡುವಂತಹುದು ಎಂಬ ಅರ್ಥದಲ್ಲಿ ಕರ್ಮಾರ್ಥಕ ಪ್ರತ್ಯಯದಿಂದ ನಿಷ್ಪನ್ನವಾದುದು. ಆದಕ್ಕೆ ಅನುಷ್ಠಾನಕ್ರಮದ ವ್ಯತ್ಯಾಸದಿಂದ ವ್ಯತ್ಯಾಸ ಹೊಂದಿರುವ ಮಂತ್ರ ಸಾಮ ಮುಂತಾದುದು ಅರ್ಥ. ಆದರೆ ಸುಧೆಯಲ್ಲಿ ಈ ಅರ್ಥವನ್ನಿಟ್ಟುಕೊಂಡಿಲ್ಲ. ಊಹವೆಂದರೆ ಊಹಿಸುವುದು, ಅಧ್ಯಾಹಾರ ಎಂದರ್ಥ. ಊಹಿಸುವುದು ಎಂಬ ಅರ್ಥದ

ಊಹಧಾತುವಿಗೆ ಭಾವಾರ್ಥಕ ಘಞ್ ಪ್ರತ್ಯಯ. ಧಾತುವಿನ ಕೊನೆಯ ಹಿಂದಿನ ಅಕ್ಷರ ಊಕಾರವು ಹ್ರಸ್ವವಲ್ಲದುದರಿಂದ ಅದಕ್ಕೆ ಗುಣಾದೇಶವಿಲ್ಲ. ಹೀಗೆ ನಿಷ್ಪನ್ನವಾದ 'ಊಹ' ಶಬ್ದಕ್ಕೆ ಅಧ್ಯಾಹಾರವು ಅರ್ಥ ಎಂಬುದು 'ಅಧ್ಯಾಹಾರಸ್ತರ್ಕ ಊಹಃ' ಎಂದು ಕೋಶಗಳಲ್ಲಿ ಪ್ರಸಿದ್ಧವಾಗಿದೆ. ವಾರ್ತಿಕಕಾರರಿಗೂ ಇದು ಸಮ್ಮತವೆಂದು 'ಅತ ಏವ ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಮುಂದಿನ ಸೂತ್ರಗಳಲ್ಲಿ ಆಕಾಂಕ್ಷೆ ಇಲ್ಲದುದರಿಂದ ಓಂಕಾರದ ಅಧ್ಯಾಹಾರ ಅಯುಕ್ತ' ... ಎರಡನೆ ಆಕ್ಷೇಪಕ್ಕೆ 'ತತ್ರ ಚ' ಎಂದು ಸಮಾಧಾನ ಹೇಳುತ್ತಿದ್ದಾರೆ.

ಸೂತ್ರದಲ್ಲಿ ಓಂಕಾರ ಇಲ್ಲದಿದ್ದರೆ ವಾಕ್ಯಸಮಾಪ್ತಿ ಆಗುವುದಿಲ್ಲವೆಂದೇನಿಲ್ಲ. ಬ್ರಹ್ಮಶಬ್ದದಿಂದಲೇ ವಾಕ್ಯಸಮಾಪ್ತಿ ಮಾಡಬಹುದು. ಆದರೆ 'ಸ್ರವತ್ಯನೋಂಕೃತಂ' ಎಂಬ ವಿಧಿಬಲದಿಂದ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕು. ಸ್ಪಷ್ಟವಾಗಿ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂಬ ವಿಧಿ ಇಲ್ಲದಿದ್ದರೂ ಓಂಕಾರದ ಉಚ್ಚಾರಣೆ ಮಾಡದಿದ್ದರೆ ನಿಂದೆ ಮಾಡಿದ್ದಾರೆ. ಆದ್ದರಿಂದ 'ಓಂಕಾರೋಚ್ಚಾರಣಃ ಅನ್ಯಥಾ ನಿಂದಾಶ್ರವಣಂ ನೋಪಪದ್ಯತೇ' ಎಂಬ ಅನ್ಯಥಾನುಪತ್ತಿಯಿಂದ ಓಂಕಾರವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಆಕಾಂಕ್ಷೆ ಇಲ್ಲದಿದ್ದರೂ ವಿಧಿಯ ಬಲದಿಂದ ಓಂಕಾರದ ಅಧ್ಯಾಹಾರ ಮಾಡಿಕೊಳ್ಳುವುದಾದರೆ ಅದು ಅದೃಷ್ಟಫಲಕ್ಕಾಗಿ ಹೊರತು ಅರ್ಥವಿವಕ್ಷೆ ಇದೆ ಎಂಬ ದೃಷ್ಟಫಲವನ್ನು ಹೇಳಲಾಗದು. ಆದ್ದರಿಂದ ಸುಧಾವಿರೋಧ ಬರುತ್ತದೆಂಬ ಐದನೆ ಆಕ್ಷೇಪವನ್ನು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ಓಂಕಾರವು ಪೂರ್ಣತ್ವವೆಂಬ ಅರ್ಥವನ್ನು ಹೇಳುವುದರಲ್ಲಿ ಸಂದೇಹವಿಲ್ಲ. 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಎಂದು ಮುಂತಾದ ವಿಷಯ ವಾಕ್ಯಗಳಲ್ಲಿ ಸಿದ್ಧಾಂತ ಯುಕ್ತಿ ಸೂಚನೆಗಾಗಿ ಸೂತ್ರದಲ್ಲಿ ಅಪೇಕ್ಷಿತವಾಗಿದೆ. ಇದನ್ನು ಮುಂದಿನ ಮೂಲದಲ್ಲಿ ವಿವರಿಸುತ್ತೇವೆ.

ಒಂದು ಓಂಕಾರೋಚ್ಚಾರಣೆಗೆ ದೃಷ್ಟ ಅದೃಷ್ಟವೆಂಬ ಎರಡುವಿಧದ ಫಲಗಳಿರಬಹುದೆನ್ನಲು ಮೀಮಾಂಸಾದೃಷ್ಟಾಂತವಿದೆ -

'ಆಶ್ರಯಿಷ್ವವಿಶೇಷೇಣ ಭಾವಾರ್ಥಃ ಪ್ರತೀಯತೇ'

(ಅಧ್ಯಾಯ ೪ - ಪಾದ ೧ -ಅಧಿಕರಣ ೭)[೧]

---

(१) आश्रयिष्वविशेषेण भावार्थः प्रतीयते ॥१८॥

(चोदनायान्त्वनारम्भो विभक्तत्वान्न ह्यन्येन विधीयते ॥१९॥ स्याद्वा द्रव्यचिकीर्षायां भावोऽर्थे च गुणभूतताऽऽश्रयाद्धि गुणीभावः ॥२०॥)

पूर्वन्यायेन शक्यनात्सङ्गतिः । अत्रैकदेशेन परकीयद्रव्यं देवतामुभयं वा संस्कुर्वन्तः पदार्थाः स्विष्टकृदुत्तमप्रयाजपशुपुरोडाशा उदाहरणम् । स्विष्टकृद्याग इष्टदेवता मन्त्रांशेन, प्रक्षेपांशेन त्विष्टिशिष्टद्रव्यञ्च संस्करोति । उत्तमप्रयाजपशुपुरोडाशयागौ च यक्ष्यमाणदेवताः

ಸ್ವಿಷ್ಟಕೃತ್ ಸ್ವಾಹಾಕಾರ ಪಶುಪುರೋಡಾಶ ಮುಂತಾದ ಯಾಗಗಳಿಗೆ ಕೇವಲ ದೃಷ್ಟಫಲವೋ? ಅಥವಾ ಅದೃಷ್ಟಫಲವೂ ಇದೆಯೋ? ಎಂದು ಸಂದೇಹ.

ಪ್ರಕೃತಯಾಗದ ದೇವತೆಗಳ ಸ್ಮರಣೆ, ಕೊನೆಯಲ್ಲಿ ಉಳಿದ ಹವಿಸ್ಸಿನ ವಿಯೋಗಗಳಂಥ ದೃಷ್ಟಫಲಗಳು ಸಿಗುವಾಗ ಅದರಿಂದಲೇ ಫಲವೇನೆಂಬ ಆಕಾಂಕ್ಷೆ ಪರಿಹಾರವಾಗುವಾಗ ಜೊತೆಗೆ ಅದೃಷ್ಟಫಲವನ್ನು ಏಕೆ ಕಲ್ಪಿಸಬೇಕು ಎಂದು ಪೂರ್ವಪಕ್ಷ.

ಮಂತ್ರೋಚ್ಚಾರಣೆಯಿಂದ ಪ್ರಕೃತಯಾಗದ ದೇವತೆಗಳ ಸ್ಮರಣೆಯಿಂದ ಹವಿಸ್ಸಿನ ಅಗ್ನಿಯಲ್ಲಿ ಅರ್ಪಿಸುವುದರಿಂದ ಹವಿಸ್ಸಿನ ವಿನಿಯೋಗದಿಂದ ದೃಷ್ಟಪ್ರಯೋಜನವನ್ನು ಅಂಗೀಕರಿಸಬಹುದು. ಆದರೆ ಹವಿಸ್ಸನ್ನು 'ಇದಂ ನ ಮಮ' ಎಂದು ಮನಸ್ಸಿನಲ್ಲಿ ತ್ಯಾಗ ಮಾಡುವುದಕ್ಕೆ ಯಾವುದೇ ದೃಷ್ಟಪ್ರಯೋಜನವಿಲ್ಲ. ಅದೃಷ್ಟಫಲವನ್ನೇ ಹೇಳಬೇಕು. ಯಾಗದಲ್ಲಿ ಒಟ್ಟು ಮೂರು ಅಂಶಗಳು-

೧) ಮಂತ್ರ, ೨) ದ್ರವ್ಯಪ್ರಕ್ಷೇಪ, ೩) ದ್ರವ್ಯತ್ಯಾಗ ಎಂದು. ಇವುಗಳ ಮಧ್ಯ ಮಂತ್ರ ಮತ್ತು ದ್ರವ್ಯಪ್ರಕ್ಷೇಪಗಳಿಗೆ ದೃಷ್ಟಪ್ರಯೋಜನವಿದ್ದರೂ ದ್ರವ್ಯತ್ಯಾಗಕ್ಕೆ ಅದೃಷ್ಟಪ್ರಯೋಜನವನ್ನೇ ಹೇಳಬೇಕು. ಹೀಗೆ ಬೇರೆ ಬೇರೆ ಅಂಶಗಳನ್ನಿಟ್ಟುಕೊಂಡು ಒಂದು ಯಾಗಕ್ಕೆ ದೃಷ್ಟ ಅದೃಷ್ಟ ಎಂಬ ಎರಡು ವಿಧದ ಫಲಗಳನ್ನೂ ಹೇಳಬಹುದು ಎಂದು ಸಿದ್ಧಾಂತ.

(ಸ್ವಿಷ್ಟಕೃದ್ಯಾಗವನ್ನು ಎಲ್ಲ ಯಾಗಗಳ ಕೊನೆಯಲ್ಲಿ ಮಾಡಲಾಗುತ್ತದೆ. ಈ ಯಾಗದಲ್ಲಿ ಉಳಿದ ಎಲ್ಲ ಹವಿಸ್ಸನ್ನು ಅಗ್ನಿಗೆ ಸಮರ್ಪಿಸಲಾಗುತ್ತದೆ. ಅಗ್ನಿಗೆ ಸಮರ್ಪಿಸುವಾಗ ದೇವತಾಸ್ಮರಣೆಯನ್ನು ಮಾಡಬೇಕು.)

---

संस्कृतः । तत्र सन्देहः, ते किं द्रव्यदेवतयोः संस्कारमात्रार्था उतापूर्वार्था अपीति । पूर्वपक्षस्तु, देवताप्रकाशनद्रव्यप्रक्षेपरूपदृष्टप्रयोजनवत्त्वेऽवश्यंभाविनि तावतैव स्विष्टकृदादियागः कृतार्थो नापूर्वप्रयोजनकोऽपि भवितुमर्हति । एकस्य कर्मण एकप्रयोजनकत्वस्यैव युक्तत्वात् । पूर्वत्र लिङ्गसंख्ययोर्दृष्टेन द्रव्यावच्छेदेन क्रियार्थतेव स्विष्टकृदादेर्दृष्टद्रव्यादिसंस्कारद्वारेणैव क्रियार्थत्वसम्भवान्नापूर्वार्थतेति । सिद्धान्तस्तु कर्मण एकत्वेप्यंशभेदेन प्रयोजनभेदो न विरुद्ध्यते । मन्त्रपाठो द्रव्यप्रक्षेपो देवतोद्देशेन त्यागश्चेति त्रयोंऽशाः । तत्र मन्त्रप्रक्षेपांशाभ्यां देवतास्मरणद्रव्यप्रतिपत्तिरूपदृष्टप्रयोजनत्त्वेऽपि त्यागांशस्य तु न किञ्चिद्दृष्टमस्तीत्यदृष्टमेव प्रयोजनं कल्प्यमित्युभयार्थाः स्विष्टकृदादय इति । तदाह सूत्रे, एकदेशेन परकीयद्रव्यं देवतामुभयं वाऽऽश्रयन्ति संस्कुर्वन्ति एते आश्रयिणस्तेषु आश्रयिषु भावार्थः अपूर्वरूपोऽर्थः प्रतीयेत् । कुतः? अविशेषेण 'समिधो यजति' इत्योाख्याताविशषणेति । फलन्तु, द्रव्यनाशे स्विष्टकृतो लोपः पूर्वपक्षे । सिद्धान्ते त्याज्येन समापनम् ।

इति सप्तममाश्रयिणामदृष्टार्थताधिकरणम् (सूत्राणि १८-२०)

ಜಿಜ್ಞಾಸಾಧಿಕರಣ

ಸ್ವಿಷ್ಟಕೃದ್ಯಾಗದಲ್ಲಿ ದೃಷ್ಟ ಅದೃಷ್ಟವೆಂಬ ಎರಡು ಪ್ರಯೋಜನಗಳಿಲ್ಲವೇ? ಅದರಂತೆ ಓಂಕಾರಕ್ಕೂ ಎರಡು ಪ್ರಯೋಜನಗಳನ್ನು ಹೇಳಬಹುದು. ಗುಣಪೂರ್ಣತ್ವವೆಂಬ ಅರ್ಥವನ್ನು ಪ್ರತಿಪಾದಿಸುವುದರಿಂದ ದೃಷ್ಟಪ್ರಯೋಜನವಿದೆ. 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ಶ್ರುತಿಯಂತೆ ಸ್ರವಣವಿಶರಣ ದೋಷವನ್ನು ಪರಿಹರಿಸುವುದರಿಂದ ಅದೃಷ್ಟಪ್ರಯೋಜನವೂ ಇದೆ.

ಆಕ್ಷೇಪ :- ಹೀಗೆ ಹೇಳಿದರೆ ಪ್ರಧಾನವಾಗಿ ಮೂರು ಆಕ್ಷೇಪಗಳಿವೆ.

೧) ಸ್ವಿಷ್ಟಕೃತ್ ಮುಂತಾದ ಯಾಗಗಳಿಗೆ ಬೇರೆ ಬೇರೆ ಅಂಶಗಳಲ್ಲಿ ದೃಷ್ಟ ಅದೃಷ್ಟ ಎಂಬ ಎರಡು ವಿಧದ ಪ್ರಯೋಜನಗಳಿವೆ. ಓಂಕಾರೋಚ್ಚಾರಣೆಗೆ ಬೇರೆ ಬೇರೆ ಅಂಶಗಳಿಲ್ಲ. ಆದ್ದರಿಂದ ಉದಾಹರಣೆ ಸರಿಯಲ್ಲ.

೨) ಎರಡನೆಯ ಆಕ್ಷೇಪ : - ಅದೃಷ್ಟ ಫಲವನ್ನು ಕಲ್ಪಿಸಬೇಕಾಗಿರುವಲ್ಲಿ ದೃಷ್ಟ ಫಲವೆ ಸಿಗುವಾಗ ಅದೃಷ್ಟಫಲವನ್ನು ಕಲ್ಪಿಸುವುದು ಸರಿಯಲ್ಲ. ಯಾವರೀತಿಯಾಗಿ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಮುಂತಾದ ವಿಧಿಗಳಲ್ಲಿ ಅದೃಷ್ಟಫಲವು ಬೇರೆ ಪ್ರಮಾಣಗಳಿಂದ ಮೊದಲೆ ಸಿದ್ಧವಾಗಿರುವಾಗ ದೃಷ್ಟಫಲವನ್ನು ಕಲ್ಪಿಸುವುದಿಲ್ಲವೋ ಅದರಂತೆ

೩) ಮೂರನೆಯ ಆಕ್ಷೇಪ :- ಪ್ರಮಾಣಾಂತರದ ಬಲದಿಂದ ಎಲ್ಲಿ ಅದೃಷ್ಟಾರ್ಥತ್ವವು ಆವಶ್ಯಕವೋ ಅಲ್ಲಿ ದೃಷ್ಟಫಲದ ಸಂಭವವಿದ್ದರೂ ದೃಷ್ಟಫಲವನ್ನು ಅಂಗೀಕರಿಸಬಾರದು. ಉದಾಹರಣೆ - 'ಸ್ತೌತಿ' 'ಹಾಡುತ್ತಾ ಹೊಗಳಬೇಕು' 'ಶಂಸತಿ' 'ಹೊಗಳಬೇಕು' ಎಂದು ಮುಂತಾಗಿ ವಿಹಿತವಾದ ಸ್ತೋತ್ರ-ಶಸ್ತ್ರಗಳಿಗೆ ದೃಷ್ಟಪ್ರಯೋಜನ ಸಿಗುತ್ತಿದ್ದರೂ ಅದನ್ನು ಅಂಗೀಕರಿಸಿಲ್ಲ. 'ಸ್ತುತಶಸ್ತ್ರಯೋಸ್ತು ಸಂಸ್ಕಾರೋ ಯಾಜ್ಯಾವದ್ದೇವತಾಭಿಧಾನತ್ವಾತ್' 'ಗಾನಸಹಿತವಾದ ಸ್ತುತಿಗೂ ಗಾನರಹಿತವಾದ ಸ್ತುತಿಗೂ ಯಾಜ್ಯಾಮಂತ್ರಗಳಂತೆ ದೇವತಾಸಂಸ್ಕಾರವೆ ಪ್ರಯೋಜನ. ಏಕೆಂದರೆ ಅವು ದೇವತಾಪ್ರತಿಪಾದಕಗಳು' ಎಂಬ ಅಧಿಕರಣ (ಅಧ್ಯಾಯ ೨-೧-೬)ದಲ್ಲಿ ಹಾಗೆ ನಿರ್ಣಯವಿದೆ. ಪ್ರಕೃತದಲ್ಲಿಯೂ ಓಂಕಾರೋ-ಚ್ಚಾರಣೆಗೆ 'ಸ್ರವತ್ಯನೋಂಕೃತಂ' ಎಂಬ ಶ್ರುತಿಯ ಬಲದಿಂದ ಅದೃಷ್ಟ ಫಲವು ಮೊದಲೆ ಸಿದ್ಧವಾಗಿರುವಾಗ ಅರ್ಥಬೋಧನೆ ಎಂಬ ದೃಷ್ಟಫಲವು ಅಪೇಕ್ಷಿತವಾಗಿದ್ದರೂ ಅದನ್ನೊಪ್ಪುವುದು ನ್ಯಾಯವಲ್ಲ.

ಇಲ್ಲಿ ಮೊದಲನೆಯ ಆಕ್ಷೇಪ ಸರಿಯಲ್ಲ. ಒಂದು ಓಂಕಾರೋಚ್ಚಾರಣೆಗೆ ದೃಷ್ಟ - ಅದೃಷ್ಟವೆಂಬ ಎರಡು ವಿಧದ ಪ್ರಯೋಜನಗಳಿವೆಯೆಂಬ ಅಂಶದಲ್ಲಿ ಮಾತ್ರ ಸ್ವಿಷ್ಟಕೃತ್ ಮುಂತಾದ ಉದಾಹರಣೆಗಳನ್ನು ಕೊಡಲಾಗಿದೆ. ಹೊರತು ಬೇರೆ ಬೇರೆ ಅಂಶಗಳಲ್ಲಿ ಬೇರೆ ಬೇರೆ ಪ್ರಯೋಜನಗಳು ಎಂಬ ಅಂಶದಲ್ಲಿ ಅಲ್ಲ.

ಎರಡನೆ ಆಕ್ಷೇಪವೂ ಸಹ ಸರಿಯಲ್ಲ. ಸ್ತೋತ್ರ - ಶಸ್ತ್ರಗಳಿಗೆ ದೃಷ್ಟಪ್ರಯೋಜನವನ್ನೊಪ್ಪದಿರುವುದು ಅದೃಷ್ಟಪ್ರಯೋಜನವು ಮೊದಲೆ ಸಿದ್ಧವಾಗಿದೆ ಎಂಬ ಕಾರಣದಿಂದಲ್ಲ. ಸ್ತೋತ್ರ - ಶಸ್ತ್ರಗಳೆಂದರೆ ಗಾನಸಹಿತ - ಗಾನರಹಿತಸ್ತುತಿಗಳು. ಅವುಗಳಿಗೆ ದೇವತಾಬೋಧನ ಎಂಬ ಅಥವಾ ಪ್ರಕಾಶನರೂಪ-

ಲಿಂಗದಿಂದ ದೃಷ್ಟಪ್ರಯೋಜನವನ್ನು ಅಂಗೀಕರಿಸಿದರೆ ಅವು ಸ್ತುತಿಗಳೇ ಆಗಲಾರವು. ವ್ಯಕ್ತಿಯ ಗುಣಗಳನ್ನು ಹೇಳುವುದೇ ಸ್ತುತಿ. ಗುಣಗಳನ್ನು ಹೇಳುವುದರಲ್ಲಿಯೆ ಅದಕ್ಕೆ ತಾತ್ಪರ್ಯ. ವ್ಯಕ್ತಿಯನ್ನು ಹೇಳುವುದರಲ್ಲಿ ತಾತ್ಪರ್ಯವಿದ್ದರೆ ಅದು ಸ್ತುತಿಯಾಗಲಾರದು. ಆದ್ದರಿಂದ ಸ್ತೋತ್ರಶಸ್ತ್ರಗಳು ದೇವತಾ-ಸ್ಮರಣೆ ಉಂಟುಮಾಡುವ ಉದ್ದೇಶವಿಟ್ಟುಕೊಂಡರೆ ಅವು ಸ್ತುತಿಗಳೆನಿಸಲಾರವು. ಸ್ತುತಿಮಾಡಬೇಕೆಂದು ಹೇಳುವ ಶ್ರುತಿಗೂ ಅರ್ಥವಿಲ್ಲವೆಂದಾದೀತು. ಶ್ರುತಿ ವಿರೋಧವಿಲ್ಲದಿರುತ್ತಿದ್ದರೆ ದೃಷ್ಟಪ್ರಯೋಜನವನ್ನು ಸ್ವೀಕರಿಸಬಹುದಾಗಿತ್ತು. ಆದರೆ ದೇವತಾಸ್ಮರಣೆ ಉದ್ದೇಶವಿಟ್ಟುಕೊಂಡರೆ ಸ್ತುತಿಯ ಲಕ್ಷಣವೆ ಇಲ್ಲದಂತಾದೀತು' ಎಂಬ ವಚನವು ಇದನ್ನೇ ಹೇಳುತ್ತದೆ. ಪ್ರಕೃತದಲ್ಲಿ ಓಂಕಾರೋಚ್ಚಾರಣೆಗೆ ದೃಷ್ಟಪ್ರಯೋಜನವನ್ನು ಅಂಗೀಕರಿಸಿದರೆ ಯಾವ ಬಾಧಕವೂ ಇಲ್ಲ.

ಓಂಕಾರದಲ್ಲಿರುವ ಅರ್ಥಬೋಧನ ಸಾಮರ್ಥ್ಯದ ಬಲದಿಂದ ದೃಷ್ಟಪ್ರಯೋಜನವನ್ನೂ ಸ್ರವತ್ಯ-ನೋಂಕೃತಂ ಎಂಬ ಶ್ರುತಿಯ ಬಲದಿಂದ ಅದೃಷ್ಟ ಪ್ರಯೋಜನವನ್ನೂ ಒಪ್ಪುವಾಗ ಶ್ರುತಿಗಿಂತ ಸಾಮರ್ಥ್ಯವು ದುರ್ಬಲವೆಂದು ಭಯಪಡಬೇಕಾಗಿಲ್ಲ. 'ಸ್ರವತ್ಯನೋಂಕೃತಂ' ಎಂಬುದು ಪ್ರತ್ಯಕ್ಷವಿಧಿಯಲ್ಲ. ಓಂಕಾರೋಚ್ಚಾರಣೆ ಮಾಡದಿದ್ದರೆ ಉಂಟಾಗುವ ಅನಿಷ್ಟಪರಿಣಾಮವನ್ನು ಹೇಳುವುದರ ಮೂಲಕ ಓಂಕಾರೋಚ್ಚಾರಣ ವಿಧಿಯನ್ನು ಊಹಿಸಲು ಅದು ಕಾರಣವಾಗುತ್ತದೆ. ಊಹಿಸಬೇಕಾಗಿರುವ ವಿಧಿ ಮತ್ತು ಪ್ರತ್ಯಕ್ಷವಾಗಿರುವ ಸಾಮರ್ಥ್ಯ ಇವೆರಡರ ಬಲ ಸಮಾನ. ವಿರೋಧವೂ ಇಲ್ಲ. ಆದ್ದರಿಂದ ಎರಡು ಪ್ರಯೋಜನಗಳನ್ನೂ ಒಪ್ಪಬಹುದು.

## ಆದಿ ಓಂಕಾರದ ಮಹಿಮೆ

### तात्पर्यचन्द्रिका –

अत एव नान्ते प्रयोगवैयर्थ्यम् । नाप्युत्तरसूत्रेष्वोङ्कारार्थस्य अनन्वय दोषः । तत्र दृष्टासम्भवेन केवलादृष्टार्थत्वोपपत्तेः । नचैकस्यैकत्रोच्चारणे दृष्टार्थे अन्यत्रापि तथात्वनियमः । मन्त्राणां प्रयोगकाले उच्चारणस्य दृष्टार्थत्वेऽपि जपकाले तस्या-दृष्टार्थत्वदर्शनात् । "अन्वेनं माता" इत्यादावेकवचनस्य एकपशुके दृष्टार्थत्वेऽपि बहुपशुके अदृष्टार्थत्वदर्शनाच्च । "न माता वर्धते" इति श्रुत्या मात्रादिशब्दे ऊहनिषेधात् । अध्याह्रियमाणस्यापादितममन्त्रावयवत्वं च मन्त्रेण सहैककार्य-कारित्वाभाव इति नेष्टापत्तिः । जिज्ञासान्विततया प्रथमं प्रतीतस्यौतत्वस्य तत्रासम्भवेन, "सप्तदशारत्निर्वाजपेयस्य यूपः" इत्यादाविव अङ्गावतारन्यायेन तदुपसर्जनब्रह्मान्वयसम्भवाच्च । अर्थवादार्थप्राशस्त्यस्य 'यजेत' इत्यत्रोपसर्जनी-भूतयागविशेषणत्वदर्शनाच्च । "दण्डी प्रैषानन्वाह" इत्यादौ दण्डस्योपसर्जनस्य

**विध्यन्वयदर्शनाच्च । उक्तं हि वार्तिके –**

**"विशेषणपरत्वं च वण्डीत्यादिषु दर्शितम्" इति ।।**

**नच ब्रह्मशब्देनैव विषयसूचनादोङ्कारवैयर्थ्यम् । न केवलं जिज्ञास्ये "तद् विजिज्ञासस्व, तद् ब्रह्म" इत्यादौ ब्रह्मपदश्रवणात् तस्य जीवादिभिन्नत्वेन जिज्ञास्यता । किन्तु "ओमित्येतदक्षरमुद्गीथमुपासीत" इत्यादौ जीवेष्व-सम्भावितगुणपूर्तिवाचकोङ्कारादिश्रवणादपीति युक्त्यन्तरसूचकत्वात् । अदृष्टार्थमारा-ववश्यं प्रयोक्तव्यत्वात् च । यत्तु – अध्ययनोपक्रमादावुच्चार्यमाणस्याप्योङ्कारस्य तदवयवत्वं सुधायामेवोक्तं, तदपि तदुच्चारणस्यार्थानुसन्धानद्वारैवाङ्गत्वमित्य-भिप्रेत्य ।**

ಅನುವಾದ - ಸೂತ್ರದಲ್ಲಿರುವ ಓಂಕಾರಕ್ಕೆ ಅದೃಷ್ಟಪ್ರಯೋಜನವಿದೆಯೆಂದು ಹೇಳಿದ್ದರಿಂದಲೇ ಸೂತ್ರದ ಕೊನೆಯಲ್ಲಿನ ಓಂಕಾರವು ವ್ಯರ್ಥವಾಗುವುದಿಲ್ಲ.

ಮುಂದಿನ ಸೂತ್ರಗಳಲ್ಲೆಲ್ಲ ಓಂಕಾರವನ್ನಿಟ್ಟುಕೊಳ್ಳುವುದಾದರೆ ಆ ಸೂತ್ರಗಳ ಅರ್ಥದಲ್ಲಿಯೂ ಓಂಕಾರಕ್ಕೆ ಅನ್ವಯ ಮಾಡಬೇಕೆಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಮುಂದಿನ ಸೂತ್ರಗಳಲ್ಲಿ ಮಾಡಿದ ಓಂಕಾರದ ಅನುಷಂಗಕ್ಕೆ ದೃಷ್ಟಪ್ರಯೋಜನವಿಲ್ಲ. ಕೇವಲ ಅದೃಷ್ಟಪ್ರಯೋಜನವನ್ನೇ ಹೇಳಬೇಕು. ಶಬ್ದದ ಉಚ್ಚಾರಣೆಗೆ ಒಂದು ಕಡೆ ದೃಷ್ಟಪ್ರಯೋಜನವಿದ್ದ ಮಾತ್ರದಿಂದ ಬೇರೆ ಕಡೆಯೂ ದೃಷ್ಟಪ್ರಯೋಜನವೇ ಇರಬೇಕೆಂಬ ನಿಯಮವಿಲ್ಲ. ಏಕೆಂದರೆ ಮಂತ್ರಗಳ ಉಚ್ಚಾರಣೆಗೆ ಕರ್ಮವನ್ನು ಆಚರಿಸುವ ಸಮಯದಲ್ಲಿ ದೃಷ್ಟಪ್ರಯೋಜನವಿದೆ. ಆದರೆ 'ತ್ರಿಭಿರಸ್ಯ ಪಾರಾಯಣೈಃ ಪೂತೋ ಭವತಿ' ಇತ್ಯಾದಿಯಾಗಿ ಜಪವನ್ನು ವಿಧಿಸಿದ್ದರಿಂದ ಜಪದ ಸಮಯದಲ್ಲಿ ಮಾಡುವ ಮಂತ್ರೋಚ್ಚಾರಣೆಗೆ ಅದೃಷ್ಟಫಲವಿರುವುದು ಕಂಡಿದೆ.

ಇದಕ್ಕೆ ಪೂರ್ವಮೀಮಾಂಸೆಯ ದೃಷ್ಟಾಂತವಿದೆ. 'ಅನ್ವೇನಂ ಮಾತಾ' ಎಂಬಲ್ಲಿ ಏಕವಚನಾಂತ-ವಾದ 'ಮಾತಾ ಪಿತಾ' ಎಂಬುದಕ್ಕೆ ಏಕಪಶುಕಯಾಗದಲ್ಲಿ ಅನ್ವಯ ಕೊಡುವುದರಿಂದ ದೃಷ್ಟಾರ್ಥತ್ವವಿದೆ. ಆದರೆ ಬಹುಪಶುಕಯಾಗದಲ್ಲಿ ಅನ್ವಯ ಕೊಡದಿರುವುದರಿಂದ ಅದೃಷ್ಟಾರ್ಥತ್ವವನ್ನು ಅಂಗೀಕರಿಸಲಾಗಿದೆ. 'ನ ಮಾತಾ ವರ್ಧತೇ' ಎಂದು ನಿಷೇಧವಿರುವುದರಿಂದ 'ಮಾತಾ' ಮೊದಲಾದವುಗಳನ್ನು ಬಹುವಚನಾಂತವಾಗಿ ಮಾರ್ಪಾಡು ಮಾಡಿಕೊಳ್ಳಲೂ ಸಹ ಬರುವುದಿಲ್ಲ.

*ಪರಿಪೂರ್ಣಚಂದ್ರಿಕಾ*

ಮತ್ತು ಸೂತ್ರದಲ್ಲಿ ಓಂಕಾರವನ್ನು ಅಧ್ಯಾಹಾರ ಮಾಡಿಕೊಂಡರೆ ಸೂತ್ರದ ಅವಯವ ಆಗದಿರಬೇಕಾದೀತೆಂದು ಸುಧೆಯಲ್ಲಿ ಆಪಾದಿಸಲಾಗಿದೆ. ಅಂದರೆ ಊಹೆ ಮಾಡಿಕೊಂಡ ಶಬ್ದಗಳು ಮಂತ್ರದ ಅವಯವ ಆಗದಿರಬೇಕಾದೀತು ಎಂದು. ಮಂತ್ರದ ಅವಯವವೆಂದರೆ ಮಂತ್ರದ ಜೊತೆಗೆ ಏಕಕಾರ್ಯಕಾರಿತ್ವವೆಂದರ್ಥ. ಆದರೆ ಊಹೆ ಮಾಡಿಕೊಂಡ ಶಬ್ದಗಳು ಮಂತ್ರದ ಜೊತೆ ಸೇರಿ ಅದರ ಕಾರ್ಯವನ್ನು ನಿರ್ವಹಿಸುವುದರಿಂದ ಏಕಕಾರ್ಯಕಾರಿಯಲ್ಲವೆಂದು ಹೇಳಲಾಗದು. ಮಂತ್ರದ ಅವಯವವಲ್ಲವೆಂಬುದನ್ನು ಇಷ್ಟಾಪತ್ತಿ ಎನ್ನಲಾಗದು.

ಓಂಕಾರದ ಅರ್ಥಕ್ಕೆ ಪ್ರಥಮಸೂತ್ರದ ಅರ್ಥದಲ್ಲಿ ಅನ್ವಯವಿಲ್ಲವೆಂದೂ ಸಹ ಹೇಳಲಾಗದು. ಗುಣಪೂರ್ಣತ್ವವೆಂಬ ಓಂಕಾರದ ಅರ್ಥಕ್ಕೆ ಬ್ರಹ್ಮಜಿಜ್ಞಾಸೆಯಲ್ಲಿ ಅನ್ವಯವೆಂದು ಪ್ರಥಮಪ್ರತೀತವಾಗುತ್ತದೆ. ಆದರೆ ಜಿಜ್ಞಾಸೆಯಲ್ಲಿ ಗುಣಪೂರ್ಣತ್ವವು ಅಸಂಭಾವಿತ. ಜಿಜ್ಞಾಸೆಯಲ್ಲಿ ವಿಶೇಷಣವಾದ ಬ್ರಹ್ಮನಲ್ಲಿ ಅನ್ವಯ ಹೇಳಬಹುದು. ಈ ರೀತಿಯಾದ ಅನ್ವಯ ತಪ್ಪಲ್ಲ. ಪ್ರಧಾನದಲ್ಲಿ ಅನ್ವಯ ಕೂಡದಿದ್ದಾಗ ಅದರ ಅಂಗದಲ್ಲಿ ಅನ್ವಯ ಹೇಳಬಹುದೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. 'ಸಪ್ತದಶಾರತ್ನಿರ್ವಾಜಪೇಯಸ್ಯ ಯೂಪಃ' ಎಂಬ ಶ್ರುತಿಯಲ್ಲಿ ಅಂಗಾವತಾರನ್ಯಾಯದಿಂದ ಅಂಗದಲ್ಲೇ ಅನ್ವಯ ಮಾಡಲಾಗಿದೆ.

ಮತ್ತು ಅರ್ಥವಾದವಾಕ್ಯಕ್ಕೆ ಪ್ರಾಶಸ್ತ್ಯವೇ ಅರ್ಥವಾಗಿದೆ. ಈ ಪ್ರಾಶಸ್ತ್ಯವು 'ಯಜೇತ' ಎಂಬಲ್ಲಿ ಉಪಸರ್ಜನೀಭೂತವಾದ ಯಾಗದಲ್ಲಿ ವಿಶೇಷಣವಾಗಿದೆ. 'ದಂಡೀ ಪ್ರೈಷಾನನ್ವಾಹ' ಎಂಬಲ್ಲಿ ದಂಡವು ಉಪಸರ್ಜನವಾದ ವಿಧಿಯಲ್ಲಿ ಅನ್ವಯ ಹೊಂದಿದೆ. ವಾರ್ತಿಕದಲ್ಲಿಯೂ ಇದನ್ನೇ ಹೇಳಿದ್ದಾರೆ - ವಿಧಿಯ ವಿಶೇಷಣದಲ್ಲಿ ಅನ್ವಯವಾಗುತ್ತದೆಂದು 'ದಂಡೀ ಪ್ರೈಷಾನನ್ವಾಹ' ಎಂಬ ವಾಕ್ಯದಲ್ಲಿ ತೋರಿಸಿದ್ದೇವೆ ಎಂದು. ಆದ್ದರಿಂದ ಓಂಕಾರಾರ್ಥಕ್ಕೆ ಬ್ರಹ್ಮನಲ್ಲಿ ಅನ್ವಯ ಮಾಡಬಹುದು.

ಓಂಕಾರವು ಗುಣಪೂರ್ಣ ಎಂಬರ್ಥವನ್ನು ಹೇಳುತ್ತಾ ವಿಷಯವನ್ನು ಸೂಚಿಸುತ್ತಿದೆ. ಆದರೆ ಬ್ರಹ್ಮಶಬ್ದದಿಂದಲೇ ಇದು ತಿಳಿಯುವಾಗ ಓಂಕಾರವು ವ್ಯರ್ಥವೆಂಬ ಆಕ್ಷೇಪ ಬರುತ್ತದೆ. ಇದು ಸರಿಯಲ್ಲ. ವಿಚಾರವಿಷಯವಾದ ಬ್ರಹ್ಮನು ಜೀವನಿಗಿಂತ ಭಿನ್ನನಾದ್ದರಿಂದ ವಿಚಾರಯೋಗ್ಯನೆಂದು 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿ ಹೇಳುತ್ತಿದೆ. ಅದಕ್ಕೋಸ್ಕರವೇ ಗುಣಪೂರ್ಣತ್ವ-ವಾಚಕವಾದ ಬ್ರಹ್ಮಶಬ್ದವನ್ನು ಹೇಳಿದೆ. ಇದೊಂದೇ ಕಾರಣವಲ್ಲ. 'ಓಮಿತ್ಯೇತದಕ್ಷರ-ಮುದ್ಗೀಥಮುಪಾಸೀತ' ಇತ್ಯಾದಿ ಶ್ರುತಿಯಲ್ಲಿ ಜೀವನಲ್ಲಿ ಅಸಂಭಾವಿತವಾದ ಗುಣಪೂರ್ಣತ್ವವನ್ನೇ ಹೇಳುವ ಓಂಕಾರವನ್ನು ಹೇಳಿದ್ದು ಮತ್ತೊಂದು ಕಾರಣ.

ಅದೃಷ್ಟಕ್ಕೋಸ್ಕರವಾಗಿಯೂ ಓಂಕಾರವನ್ನು ಅವಶ್ಯ ಪ್ರಯೋಗಿಸಬೇಕು. ಇದು ಮೂರನೆಯ ಪ್ರಯೋಜನ.

ಜಿಜ್ಞಾಸಾಧಿಕರಣ

ವೇದಾಧ್ಯಯನವನ್ನು ಮಾಡುವಾಗ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಓಂಕಾರವನ್ನು ಉಚ್ಚರಿಸುತ್ತೇವೆ. ಈ ಓಂಕಾರವೂ ಕೂಡ ಮಂತ್ರದ ಅವಯವವೆಂದು ಸುಧೆಯಲ್ಲಿ ಹೇಳಿದ್ದಾರೆ. ವಸ್ತುತಃ ವಿಚಾರ ಮಾಡಿದರೆ ಈ ಓಂಕಾರವು ಮಂತ್ರದ ಅವಯವವಲ್ಲ. ಆದರೂ ಅಧ್ಯಯನ ಮಾಡುವ ಮಂತ್ರದ ಅರ್ಥದೊಡನೆ ಓಂಕಾರದ ಅರ್ಥಕ್ಕೆ ಅನ್ವಯವಿರುವುದನ್ನು ಅನುಸಂಧಾನ ಮಾಡಿಕೊಂಡಾಗ ಮಂತ್ರದ ಅವಯವವಾಗುತ್ತದೆಂದು ಸುಧೆಯ ಅಭಿಪ್ರಾಯ.

### ಕಠಿಣಪದಾರ್ಥ

**ಅತ ಏವ** = (ಓಂಕಾರವು) ಅದೃಷ್ಟಕ್ಕೋಸ್ಕರ ಸಾರ್ಥಕವಾದ್ದರಿಂದಲೇ. **ತತ್ರ** = ಮುಂದಿನ ಸೂತ್ರಗಳಲ್ಲಿ. **ತಥಾತ್ವನಿಯಮಃ** = ದೃಷ್ಟ ಪ್ರಯೋಜನವೇ ಇರಬೇಕೆಂಬ ನಿಯಮವು. **ಪ್ರಯೋಗಕಾಲೇ** = ಯಾಗಕಾಲದಲ್ಲಿ. **ಅಧ್ಯಾಹ್ರಿಯಮಾಣಸ್ಯ** = ಅಧ್ಯಾಹ್ಯಾರ ಮಾಡಲ್ಪಟ್ಟ 'ಗಚ್ಛತಾಮ್' ಎಂಬ ಪದಕ್ಕೆ. **ಆಪಾದಿತಮ್** = ಆಪಾದಿತವಾದ. **ಪ್ಪೈಷಾನಾಹ** = ಪ್ರೈಷ ಮಂತ್ರಗಳನ್ನು ಹೇಳುತ್ತಾನೆ.

**प्रकाशः – यच्चोक्तं अर्थप्रतीत्यर्थत्वे अन्ते प्रयोगवैयर्थ्यमिति,** तत्राह ।। अत एवेति ।। अदृष्टार्थमावश्यकत्वादेवेत्यर्थः । यदप्योङ्कारस्योत्तरत्रानुषङ्ग इत्यादि, तदुद्धरति ।। नापीति ।। नन्वादौ दृष्टार्थत्वेनोच्चरितस्यान्ते द्वितीयादौ चादृष्टार्थत्वे वैरूप्यं स्यादित्याशङ्क्याह ।। नचेति ।। मन्त्राणामिति ।। प्रथमे ''तदर्थशास्त्रात्'' इति द्वितीयपादीयान्तिमाधिकरणे क्रत्वङ्गभूतानां मन्त्राणां किमर्थप्रकाशनं दृष्टद्वारमुतादृष्टद्वारमिति संशये, उपायान्तरेणापि प्रयोगवेलायामर्थप्रकाशन-सम्भवात् तादर्थ्ये मन्त्राणां नित्यवदाम्नानानर्थक्यापत्तेः । मन्त्रप्रत्यायनाददृष्ट-कल्पनायामुच्चारण एव तत्कल्पनौचित्यात्, पुरुषव्यापारगोचरत्वेन तत्रैव फलाकाङ्क्षायाः सत्त्वाददृष्टार्था मन्त्रा इति प्राप्ते, मन्त्रोच्चारणादनुष्ठेयस्मरणं, तत्स्मरणात् प्रयोगः, तस्मात् फलमित्येवं दृष्टप्रयोजनलाभाच्चादृष्टकल्पनावसरः । यस्तु मन्त्रेणैव स्मर्तव्यमिति नियमः, तस्य न दृष्टं किञ्चित् फलमित्यदृष्टं कल्प्यते । उच्चारणस्य तु दृष्टमेव फलम् । जपादौ विनियुक्तानां मन्त्राणामर्थ-प्रत्यायनानपेक्षतयाऽदृष्टार्थमुच्चारणमस्त्विति सिद्धान्तितम् । अत्र यथा कर्मणि विनियुक्तानां मन्त्राणामुच्चारणस्य तदनुष्ठानकाले दृष्टार्थत्वं, ''त्रिभिरनश्नन् पारायणैः पूतो भवति'' इत्यादिना पारायणादिषु विनियुक्तानां तेषामेवोच्चा-

रणस्यादृष्टार्थत्वम्, एवमोङ्कारोच्चारणस्यापि श्रुतिबलाददृष्टार्थत्वमित्यर्थः ।। अन्वेनं मातेति ।। मन्त्राधिकरण एव ''ऊहः'' इति गुणसूत्रेण अग्नीषोमीयाच्चोदकेन पशुगणं प्राप्ते ''अन्वेनं माता मन्यतामनु पिताऽनु भ्राता'' इत्यधिगुप्रैषगते वाक्ये मात्रादिपदानामूहप्रतिषेधपरमेकवचनान्तं मात्रादिपदं न बहुवचनान्तरूप-वृद्धिमाप्नुयादित्यर्थकं ''न माता वर्धते'' इति वचनमन्यत्रोहास्तित्वावगमकतया मन्त्राणामर्थविवक्षायां लिङ्गमुपन्यस्तम् । अत्र यथा पशुगणे मात्रादिपदानामेक-वचनान्तानामसमवेतार्थतयोच्चारणमदृष्टार्थमेकस्मिन् पशौ दृष्टार्थमित्येकस्यैव प्रयोगभेदेनोभयार्थत्वं, तथा प्रकृतेऽपीत्यर्थः ।

अत्र यत् कश्चिदाह । पशुगणे मात्रादिपदानामेकवचनान्तानामसमवेतार्थत्वे स्यात् तदुच्चारणमदृष्टार्थम् । नत्वेतदस्ति । तेषां पशुपरेण 'एनम्' इति शब्देन सहान्वयाभावात् । किं त्वनुमन्यतामित्यनेनान्वयः । स च तत्प्रतिसम्बन्धित्वा-भिप्रायेण,

''ये मानवा विगतरागपरावरज्ञाः
नारायणं सुरगुरुं सततं स्मरन्ति ।
ध्यानेन तेन हतकिल्बिषचेतनास्ते
मातुः पयोधररसं न पुनः पिबन्ति''

इति श्लोक इवैकवचनान्तत्वेऽप्यविरुद्धः । अतोऽर्थसमवायान्न तदुच्चारण-मदृष्टार्थम् । ''न माता वर्धते'' इति वचनं न्यायप्राप्तानूहानुवादमात्रपरम्, न प्राप्तोहप्रतिषेधार्थम् । उक्तं च राणके – ''एकमात्रादिसम्बन्धे पशुभेदेऽपि मात्रादिशब्दोहस्यानाशङ्क्यत्वात् मात्रादिभेदेऽप्येकपशुसम्बन्धाभावात् सम्बन्धि-भेदादेव तद्भेदसिद्धेर्न्यायादेवानूहावगतेः'' इति । अतो वचनबलादप्यदृष्टार्थत्वा-सम्भवात् कथमयं दृष्टान्त इति । अत्र ब्रूमः । साक्षात् पशुपरेदंशब्दान्वया-भावेऽपि बहुत्वेनावगततत्कर्मिकायामनुमतिक्रियायामेकस्य मात्रादेरन्वयासम्भवात् तदन्वयघटनाय बहुवचनान्तत्वेन तेषां पदानामूहावश्यंभावात् । ''मातुः पयोधररसं'' इत्यादिकं तु गौणतयाऽप्युपपन्नम् । नेह तदाश्रयणे प्रमाणमस्ति ।

एवंचात्र वचनबलादेवानूहोऽङ्गीकार्यः । तस्मादेकवचनान्तानां तेषामुच्चारणं पशुगणे अदृष्टार्थमित्यकामेनाप्याश्रयणीयमिति नादृष्टार्थताऽनुपपत्तिरिति । राणकोक्तिस्तु अभ्युपगमवादादिना कथञ्चिन्नेया ।

ननु बहुपशुके 'अन्वेनान्(अन्वेनम्) मातरो मन्यन्ताम्' इति बहुवचनान्ततयोहे सति नादृष्टार्थत्वमित्यत आह ।। न मातेति ।। एकवचनान्तो 'माता' इति शब्दो 'मातरः' इति बहुवचनान्ततया न वर्धत इति श्रुत्यर्थः । अत एव महाभाष्ये "बहुगणवतुडति सङ्ख्या' इत्यत्र संज्ञार्थकोऽपि सङ्ख्याशब्दः "ष्णान्ता षट्" इत्यत्रानुषक्तः संज्ञिपर इत्युक्तम् । अत ओङ्कारस्योभयार्थत्वं युक्तमिति । यच्चोक्तमूह्यमानस्य तदनवयवत्वमिष्टमेवेति, तदुद्धरति ।। अध्याह्रियमाणस्येति ।। वाक्यार्थप्रतीतिरूपैककार्यकारित्वाभावो वाऽदृष्टरूपैककार्यकारित्वाभावो वेत्यर्थः । अन्यथा "सं यज्ञपतिराशिषा" इत्यादावध्याहृतस्य "गच्छताम्' इत्यस्य तेन सहैककार्यकारित्वं न स्यादिति भावः । एतेन – 'मन्त्रेषूह्यमानस्य' 'सं यज्ञपतिराशिषा' इत्यादवध्याह्रियमाणस्य, 'तदनवयवत्वप्रसङ्गात्' तेन सहैककार्यकारित्वाभावप्रसङ्गात् इति सुधावाक्यार्थः उक्तो भवति ।। यद्यपि सुधायां मन्त्रानवयवत्वमात्रमापादितं, नामन्त्रत्वमितीष्टापादनं सुपरिहरम् । तथाऽप्यापादनस्यामन्त्रत्वपर्यन्तत्वेऽपि नानुपपत्तिरिति प्रौढ्या परिहारान्तरमवोचदिति ध्येयम् ।

यदप्यवादि ओतत्वस्य न वाक्यार्थेऽन्वय इत्यादि तदयुक्तमित्याह ।। जिज्ञासेति ।। तृतीये "आनर्थक्यात् तदङ्गेषु" इत्याद्यपादीयाष्टमाधिकरणे "सप्तदशारत्निर्वाजपेयस्य यूपः" इत्यत्रारत्निसाप्तदश्यं किमूर्ध्वपात्रद्वारा वाजपेयाङ्गमुत यूपद्वारा पशुयागाङ्गमिति संशये, अव्यवधानात् प्रधानत्वात् प्रकरणानुग्रहाच्च वाजपेयस्याङ्गम् । परिमाणस्य साक्षात्कर्मण्यनन्वयेऽपि तत्साधनीभूतोर्ध्वपात्रद्वारा तन्निर्वाहः । यूपशब्दोऽपि सादृश्यादूर्ध्वपात्रमात्रपर इति प्राप्ते, 'देवदत्तस्य नप्ता' इतिवत् परंपरासम्बन्धेऽपि षष्ठ्युपपत्त्या वाजपेयशब्देन पशुयागलक्षणानाश्रयणेऽपि "वाजपेयस्य यूपः" इति

व्यपदेशसम्भवात्, श्रुतिसम्भवे यूपशब्दे ऊर्ध्वपात्रमात्रलक्षणाया अन्याय्यत्वाच्च, श्रुत्यनुग्रहायाव्यवहितसम्बन्धादित्रयमनादृत्य, यूपद्वारा पश्वङ्गत्वमेवाङ्गीकर्तुं युक्तमिति सिद्धान्तितम् । अत्र यथा अरत्निसाप्तदश्यस्य प्रधानभूतवाजपेयाङ्गत्वेन प्रतीयमानस्यापि तत्रान्वयासम्भवात् तदुपसर्जनीभूते पशुयागे अन्वयः । एवमोतत्वस्यापि जिज्ञासाविशेषणतया प्रतीतस्यापि तत्रान्वयायोगेन तदुपसर्जनब्रह्मान्वय इत्यर्थः ।

नन्वयं न्यायोऽङ्गाङ्गिभावविषयतया द्वितीये रेवत्यधिकरणेऽभिहित इति चेत्, अत्रापि विशेषणस्य विशेष्यभूतजिज्ञासाङ्गतया तदङ्गभूतब्रह्मण्यन्वयादङ्गत्वस्य तदुपकारकत्वरूपत्वादिति भावः । अत एव 'अर्थवाद' इत्याद्युदाहरणान्तरमित्येके ।। अर्थवादेति ।। प्रत्ययोपात्तायां भावनायां करणत्वेनोपसर्जनीभूते यागे प्रशस्तो याग इति विशेषणत्वेनान्वयदर्शनाच्चेत्यर्थः ।। दण्डी प्रैषानिति ।। मैत्रावरुणो दण्डी भूत्वा मन्त्रविशेषाननुवदेदित्यर्थः । अत्र दण्डमैत्रावरुणसम्बन्धस्य प्रैषानुवचन-सम्बन्धस्य च प्रतीयमानस्य "क्रीते सोमे मैत्रावरुणाय दण्डं प्रयच्छति" "मैत्रावरुणः प्रेष्यति चानु चाह" इति वाक्याभ्यां प्राप्तत्वेनाविधेयत्वात्, स्थित्वोच्चैरनवलम्बनं प्रैषानुवचनं कुर्वतो मैत्रावरुणस्यावलम्बनापेक्षायां, मैत्रावरुणार्थत्वेनावगतस्य दण्डस्य तदुपकारद्वाराऽपेक्षायाः सत्वाच्च, "लोहितोष्णीषा ऋत्विजः प्रचरन्ति" इत्यत्रेव प्रकृत्यर्थत्वेनोपसर्जनीभूते दण्डे प्रैषानुवचनसम्बन्धित्वेन विध्यन्वयदर्शनाच्चेत्यर्थः । विशेषणपरत्वं 'विधेः' इति शेषः ।। गुणपूर्तिवाचकोङ्कारादीति ।।

"ओतत्ववाची ह्योङ्कारो वक्त्यसौ तद्गुणोतताम्"

इत्यनुव्याख्यानरीत्येति भावः । आदिपदोपादानेन, ओङ्कार उपलक्षणं, नारायणादिपदादपीत्यपि सूचयति ।

नन्वोङ्कारस्य गुणपूर्तिवाचित्वे कथं ब्रह्मपदेनान्वयः । तस्यापि गुणपूर्तिवाचित्वेन गुणपूर्णं गुणपूर्णमित्यनन्वयादिति चेन्न । "आत्मेति

तूपगच्छन्ति ग्राहयन्ति च'' इत्यत्रात्मशब्दस्य आवृत्तिमाश्रित्य एकस्य यौगिकत्व-मपरस्य रूढिं चोपेत्य 'आत्मा' विष्णुः, 'आत्मा' स्वामीत्यर्थस्य सुधायां चतुर्थाद्यपादे उक्ततया, तद्वदिहापि ओंब्रह्मशब्दयोरेकस्य यौगिकत्वमपरस्य रूढत्वमाश्रित्य 'ओं' गुणपूर्णस्य, 'ब्रह्मणः' विष्णोः, जिज्ञासेत्युक्तौ दोषा-भावात् । नच (अनुव्याख्याने) द्वयोर्यौगिकत्वोक्तिविरोधः, द्वाभ्यां विषयलाभोक्ति-विरोधश्चेति वाच्यम् । द्वयोर्विष्णौ योगरूढत्वेनैकैकस्य योगांशं रूढ्यंशमुपादाय तथोक्त्युपपत्तेः । ननुच सूत्रे ब्रह्मपदवदोंपदेन जिज्ञासायां कर्मकारकार्पणे इत्थं युक्त्यन्तर सूचनं स्यान्नान्यथेति चेन्न । अन्योन्यविशेषणविशेष्यभावेन ओंब्रह्म-पदयोर्जिज्ञासायां कर्मकारकार्पणेनापि विशिष्टे जिज्ञास्यतान्वयेनैतत्सूचनोपपत्तेः । 'इति युक्त्यन्तर' इत्युपलक्षणम् ।

''ओतत्ववाची ह्योङ्कारो वक्त्यसौ तद्गुणोततताम् ।
स एव ब्रह्मशब्दार्थो नारायणपदोदितः ।
स एव भर्गशब्दार्थो व्याहृतीनां च भूमतः ।
भावनाच्चैव सुत्वाच्च सोऽयं पुरुष इत्यपि ।
स एव सर्ववेदार्थो जिज्ञास्योऽयं विधीयते''

इत्यनुव्याख्यानोक्तरीत्या व्याहृतिगायत्रीपुरुषसूक्तद्वारा वा, ''तद्यथा सर्वाणि पर्णानि शङ्कुना सन्तृण्णान्येवमोङ्कारेणैव सर्वा वाक् सन्तृण्णा'' इत्यादिश्रुत्या सुधोक्तरीत्या साक्षादेव वा, ओङ्कारव्याख्यानरूपमीमांसानुग्राह्यसर्ववेदरूपप्रमाणो-क्त्यर्थत्वादित्यपि ग्राह्यम् ।

नन्वेवं ''नारायणोऽसौ परमो विचिन्त्यः'' इत्यादौ श्रुतनारायणादिपदं हित्वा ओंङ्कारप्रयोगे किं बीजमित्यत आह ।। अदृष्टार्थमिति ।। नैवं नारायणादिशब्द इति भावः । यदपि सुधायाम् ''अखिलैर्वेदपाठकैः'' इत्यादिना ''दृष्टान्तस्य साध्यविकलता'' इत्यन्तेनाध्ययनोपक्रमे उच्चार्यमाणस्योङ्कारस्य तदवयवत्वमुक्तम्. तदयुक्तं भाति । अध्ययनोपक्रमविरतिवैचित्र्येण तत्तत्स्थानपरित्यागेन अन्यान्य-स्थानेऽखिलैः पठ्यमानस्य तस्य वेदवाक्यानवयवतायाः सुप्रसिद्धत्वात् । अन्यथा

अध्ययनोपक्रमविरतिवैचित्र्येऽपि "ओमिति ब्रह्म" इत्यादिवत् नियतस्थानतया पाठप्रसङ्ग इत्यत आह ।। यत्त्विति ।। ओङ्कारार्थस्यौतत्वादेरधीयमानमन्त्रार्थेऽन्वयानुसन्धानद्वारैवेत्यर्थः । यद्वा "ओमिति ब्राह्मणः प्रवक्ष्यन्नाह" इत्यत्र तैत्तिरीये "एवं स्वाध्यायकृच्चाह" इति भाष्योक्तदिशाऽर्थानुसन्धानद्वारैवेत्यर्थः ।

गुरुराजीय – ननु स्विष्टकृद्यागस्य मन्त्रपाठहविःप्रक्षेपत्यागरूपांशत्रयवत्त्वेन तत्र मन्त्रपाठहविःप्रक्षेपयोर्द्रव्यदेवतासंस्कारकत्वेन त्यागस्य चादृष्टार्थत्वेनेत्यंशभेदेनैव दृष्टादृष्टार्थत्वेन विरोधाभावेऽपि प्रकृते एकस्यैवोङ्कारस्य दृष्टार्थत्वे तद्वदंशभेदाभावाद् विरोध एवेत्यरुचेराह – मन्त्राणामिति ।। नच एवमपि वैषम्यम् । तंत्र विरोधपरिहारकस्य कालभेदस्येव प्रकृते कस्यापि तस्याभावादिति वाच्यम् । ब्रह्मशब्दान्वितत्वदशायां दृष्टार्थत्वस्य तदनन्वितत्वदशायामदृष्टार्थत्वस्य चाङ्गीकारेण विरोधादिति भावः ।। ब्रह्मान्वयसम्भवाच्चेति ।।

नन्वेवमुभयोरपि पूर्णत्वार्थत्वात् पूर्णं पूर्णमित्युक्तौ पौनरुक्त्यमिति चेन्न । एकस्य संज्ञात्वस्यान्यस्य च पूर्णार्थत्वस्याङ्गीकारेणापौनरुक्त्यात् । तथाचोक्तमृग्भाष्यटीकायाम् । 'परि यदिन्द्र रोदसी उभे अबुभोजीर्महिना विश्वतस्सीमि'ति ऋग्व्याख्यानावसरे एक इन्द्रशब्दः संज्ञा द्वितीयः परमैश्वर्यवचन इति । वाजपेयस्य यूप इत्यादाविवेति ।। अत्र यूप उपसर्जनस्यान्यान्वये दृष्टान्तः । यागः शब्दत उपसर्जनस्यान्वये दण्डस्तु प्रस्तुते शब्दत उपसर्जनस्य प्रातिपदिकार्थस्यान्वय इति द्रष्टव्यम् ।

ವಿವರಣೆ - ಸೂತ್ರದಲ್ಲಿರುವ ಓಂಕಾರವು ಅರ್ಥಪ್ರತೀತಿಗೋಸ್ಕರವೆಂದು ಹೇಳಿದರೆ ಸೂತ್ರದ ಮೊದಲಷ್ಟೇ 'ಓಂ' ಎಂದು ಹೇಳಿದರೆ ಸಾಕು. ಸೂತ್ರದ ಕೊನೆಗೇಕೆ ಹೇಳಬೇಕು? ಎಂದು ಹಿಂದೆ ಆಕ್ಷೇಪಿಸಲಾಗಿತ್ತು. ಅದನ್ನು 'ಅತ ಏವ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ಅರ್ಥಪ್ರತೀತಿಗೋಸ್ಕರ ಮಾತ್ರ ಓಂಕಾರ ಇರುವುದಲ್ಲ. ಅದೃಷ್ಟಪ್ರಯೋಜನವೂ ಅದಕ್ಕಿದೆ. ಆದ್ದರಿಂದ ಸೂತ್ರದ ಕೊನೆಯಲ್ಲಿ ಉಚ್ಚರಿಸುವ ಓಂಕಾರಕ್ಕೆ ವೈಯರ್ಥ್ಯವಿಲ್ಲ.

ಇನ್ನು ಮುಂದಿನ ಎಲ್ಲಾ ಸೂತ್ರಗಳಲ್ಲಿಯೂ ಓಂಕಾರವನ್ನು ಅನುಷಂಗ ಮಾಡುವುದಾದರೆ ಆ ಎಲ್ಲಾ ಸೂತ್ರಗಳ ಅರ್ಥದಲ್ಲಿ ಓಂಕಾರಕ್ಕೆ ಅನ್ವಯ ಮಾಡಬೇಕಾದೀತು ಎಂದು ಆಕ್ಷೇಪಿಸಲಾಗಿತ್ತು. ಈ ಆಕ್ಷೇಪಕ್ಕೂ ಈಗ ಅವಕಾಶವಿಲ್ಲವೆಂದು 'ನಾಪಿ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

ಪ್ರಥಮಸೂತ್ರದಲ್ಲಿ ಗುಣಪೂರ್ಣತ್ವವೆಂಬ ಅರ್ಥದ ಲಾಭಕ್ಕಾಗಿ ದೃಷ್ಟಪ್ರಯೋಜನವನ್ನು ಅವಶ್ಯ ಹೇಳಬೇಕು. ಮುಂದಿನ ಸೂತ್ರಗಳಲ್ಲಿ ಹಾಗಿಲ್ಲವಾದ್ದರಿಂದ ದೃಷ್ಟಪ್ರಯೋಜನವನ್ನು ಹೇಳಬೇಕಾಗಿಲ್ಲ.

ಪ್ರಶ್ನೆ :- ಪ್ರಥಮಸೂತ್ರದಲ್ಲಿ ದೃಷ್ಟಪ್ರಯೋಜನಕ್ಕೋಸ್ಕರ ಓಂಕಾರವನ್ನು ಹೇಳಿದ ಮೇಲೆ ಮುಂದಿನ ಸೂತ್ರಗಳಲ್ಲಿಯೂ ದೃಷ್ಟಪ್ರಯೋಜನವನ್ನು ಹೇಳಲೇಬೇಕು. ಪ್ರಥಮಸೂತ್ರದಲ್ಲಿ ದೃಷ್ಟಪ್ರಯೋಜನ ಕ್ಕೋಸ್ಕರ ಉಚ್ಚರಿಸಿದ ಓಂಕಾರಕ್ಕೆ ಮುಂದಿನ ಸೂತ್ರಗಳಲ್ಲಿ ಕೇವಲ ಅದೃಷ್ಟಪ್ರಯೋಜನವೆಂದು ಹೇಳಿದರೆ ವೈಷಮ್ಯದೋಷ ಬರುತ್ತದಲ್ಲವೇ?

ಉತ್ತರ :- ಹಾಗೇನು ನಿಯಮವಿಲ್ಲ. ಒಂದು ಕಡೆ ದೃಷ್ಟಪ್ರಯೋಜನವಿರುವ ಶಬ್ದಕ್ಕೆ ಬೇರೆ ಕಡೆಯೂ ದೃಷ್ಟಪ್ರಯೊಜನವಿರಬೇಕೆಂಬ ನಿಯಮವಿದ್ದಿದ್ದರೆ ವೈಷಮ್ಯದೋಷ ಬರುತ್ತಿತ್ತು. ಆದರೆ ಈ ನಿಯಮಕ್ಕೆ ವ್ಯಭಿಚಾರದೋಷವಿದೆ. ಒಂದೇ ಮಂತ್ರದ ಉಚ್ಚಾರಣೆಗೆ ಕರ್ಮವನ್ನು ಆಚರಿಸುವಾಗ ದೃಷ್ಟಫಲವನ್ನು ಜಪ ಮಾಡುವಾಗ ಅದೃಷ್ಟಫಲವನ್ನು ಅಂಗೀಕರಿಸಲಾಗಿದೆ. ಈ ವಿಷಯವನ್ನು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಅದು ಹೀಗೆ -

### ಮಂತ್ರಾಣಾಂ ದೃಷ್ಟಾದೃಷ್ಟಾರ್ಥತ್ವಾಧಿಕರಣಮ್

### ತದರ್ಥಶಾಸ್ತ್ರಾತ್ (೧-೨-೪)(೧)

---

(१) अथ तुरीयं मन्त्रलिङ्गाधिकरणम् (सूत्राणि ३१-५३)

तदर्थशास्त्रात् ।। ३१ ।।

(वाक्यनियमात् ।। ३२ ।। बुद्धशास्त्रात् ।। ३३ ।। अविद्यमानवचनात् ।। ३४ ।। अचेतनेऽर्थबन्धनात् ।। ३५ ।। अर्थविप्रतिषेधात् ।। ३६ ।। स्वाध्यायवदवचनात् ।। ३७ ।। अविज्ञेयात् ।। ३८ ।। अनित्यसंयोगान्मन्त्रानर्थक्यम् ।। ३९ ।। अविशिष्टस्तु वाक्यार्थः ।। ४० ।। गुणार्थेन पुनः श्रुतिः ।। ४१ ।। परिसंख्या ।। ४२ ।। अर्थवादो वा ।। ४३ ।। अविरुद्धं परम् ।। ४४ ।। सम्प्रैषेकर्मगर्हानुपलम्भः संस्कारत्वात् ।। ४५ ।। अभिधानेऽर्थवादः ।। ४६।। गुणादप्रतिषेधः स्यात् ।। ४७ ।। विद्यावचनमसंयोगात् ।। ४८ ।। सतः परमविज्ञानम् ।। ४९ ।। उक्तश्चानित्यसंयोगः ।। ५० ।। लिङ्गोपदेशश्च तदर्थत्वात् ।। ५१ ।। ऊहः ।। ५२ ।। विधिशब्दाश्च ।। ५३।।)

एवं त्रिभिर्नयैर्विधिसमभिव्याहृतार्थवादचिन्ता कृता । अधुना विधिबहिर्भूतमन्त्रविषयचिन्ता क्रियत इति वा विध्येकवाक्यत्वेनार्थवादशब्दानां धर्मे प्रामाण्येऽपि मन्त्राणां तदभावान प्रामाण्यमित्याक्षेपाद्वा सङ्गतिः । 'उरु प्रथस्व' इत्यादिर्मन्त्रो यागप्रयोगेषूच्चार्यमाणः किमदृष्टार्थः, उत अर्थप्रकाशनेन दृष्टार्थः इति सन्देहः । 'हे पुरोडाश त्वं उरु विशालता यथा प्रथस्व प्रसर' इति मन्त्रार्थः । मन्त्रो यागप्रयोगेषूच्चार्यमाणोऽदृष्टमेव जनयति ।

ಕರ್ಮಪ್ರಯೋಗಕಾಲದಲ್ಲಿ ಮಂತ್ರಗಳನ್ನು ಉಚ್ಚರಿಸಬೇಕು. ಇದರಿಂದ ದ್ರವ್ಯದೇವತಾಸ್ಮರಣೆಯೆಂಬ ದೃಷ್ಟಪ್ರಯೋಜನವಷ್ಟೇ ಉಂಟಾಗುತ್ತದೋ? ಅಥವಾ ಅದೃಷ್ಟಪ್ರಯೋಜನವುಂಟಾಗುತ್ತದೋ? ಎಂದು ಸಂಶಯ.

ಪೂರ್ವಪಕ್ಷ :- ದ್ರವ್ಯದೇವತೆಗಳ ಸ್ಮರಣೆಗೋಸ್ಕರ ಮಂತ್ರೋಚ್ಚಾರಣೆ ಬೇಕಾಗಿಲ್ಲ. ಬೇರೆ ರೀತಿಯಿಂದಲೂ ದ್ರವ್ಯದೇವತೆಗಳನ್ನು ಸ್ಮರಣೆ ಮಾಡಲು ಬರುತ್ತದೆ. ಅದಕ್ಕಾಗಿ ಮಂತ್ರವೇ ಬೇಕೆಂದು ವಿಧಿಸುವುದು ವ್ಯರ್ಥ. ಆದ್ದರಿಂದ ದೃಷ್ಟಪ್ರಯೋಜನವನ್ನು ಹೇಳಲಾಗದು.

ಪ್ರಶ್ನೆ :- ದ್ರವ್ಯದೇವತೆಗಳನ್ನು ಮಂತ್ರದ ಮೂಲಕವೇ ಸ್ಮರಿಸಬೇಕು. ಆವಾಗ ಮಾತ್ರ ಅದೃಷ್ಟ ಹುಟ್ಟುತ್ತದೆ. ಬೇರೆ ರೀತಿಯಿಂದ ಉಂಟಾಗುವ ಮಂತ್ರದೇವತೆಗಳ ಸ್ಮರಣೆಯಿಂದ ಅದೃಷ್ಟ ಹುಟ್ಟುವುದಿಲ್ಲ.

ಉತ್ತರ :- ಈ ನಿಯಮವೂ ಯುಕ್ತಿಯುಕ್ತವಲ್ಲ. ಮಂತ್ರಗಳ ಉಚ್ಚಾರಣೆಯಿಂದ ದ್ರವ್ಯದೇವತೆಗಳ ಸ್ಮರಣೆ. ದ್ರವ್ಯದೇವತೆಗಳ ಸ್ಮರಣೆಯಿಂದ ಅದೃಷ್ಟದ ಉತ್ಪತ್ತಿ ಎಂದಂತಾಯಿತು. ಇದಕ್ಕಿಂತ ಮಂತ್ರಗಳ ಉಚ್ಚಾರಣೆಯಿಂದ ಅಪೂರ್ವದ ಉತ್ಪತ್ತಿಯೆಂದು ಹೇಳುವುದು ಲಾಘವ. ಪರಂಪರೆಯಿಂದ ಅದೃಷ್ಟದ ಉತ್ಪತ್ತಿಯನ್ನು ಕಲ್ಪಿಸುವುದಕ್ಕಿಂತ ನೇರವಾಗಿಯೇ ಮಂತ್ರೋಚ್ಚಾರಣೆಯಿಂದ ಅದೃಷ್ಟೋತ್ಪತ್ತಿಯನ್ನು ಹೇಳುವುದು ಉಚಿತ.

ಮತ್ತು ಪುರುಷನ ಕಾರ್ಯ ಮಂತ್ರೋಚ್ಚಾರಣೆ. ಇದಕ್ಕಷ್ಟೇ ಫಲಾಕಾಂಕ್ಷೇ ಇರುವುದರಿಂದ ಫಲವನ್ನಂಗೀಕರಿಸಬೇಕು. ದ್ರವ್ಯದೇವತಾಸ್ಮರಣೆಗೆ ಅದೃಷ್ಟವನ್ನು ಫಲವೆಂದಂಗೀಕರಿಸಬಾರದು.

ಆದ್ದರಿಂದ ಮಂತ್ರೋಚ್ಚಾರಣೆಗೆ ಅರ್ಥಜ್ಞಾನವೆಂಬ ದೃಷ್ಟಫಲವನ್ನು ಹೇಳಬೇಕು. ತನ್ಮೂಲಕ ಯಾಗಕ್ಕೆ ಅಂಗವಾಗುತ್ತದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತ :- ಮಂತ್ರೋಚ್ಚಾರಣೆಗೆ ದ್ರವ್ಯದೇವಾತಾಸ್ಮರಣೆಯೆಂಬ ದೃಷ್ಟಫಲ ಸಿಗುವಾಗ ಅದೃಷ್ಟಫಲವನ್ನು ಕಲ್ಪಿಸುವುದು ನ್ಯಾಯವಲ್ಲ. 'ದೃಷ್ಟಫಲೇ ಸಂಭವತಿ ಸತಿ ಅದೃಷ್ಟಫಲಕಲ್ಪನಾ ಅನ್ಯಾಯ್ಯಾ'

---

नत्वर्थप्रकाशनमपि । नच कर्मानुष्ठानोपयुक्तपदार्थानां ज्ञानाय मन्त्रैरर्थप्रकाशनं कार्यमिति वाच्यम् । ''उरु प्रथस्वेति पुरोडाशं प्रथयति'' इति विनियोजकब्राह्मणवाक्यादिनापि तज्ज्ञानसम्भवात् अदृष्टार्थ एव मन्त्र इति पूर्वपक्षः । सिद्धान्तस्तु अर्थप्रत्यायनस्य दृष्टप्रयोजनस्य सम्भवे केवलादृष्टकल्पनायोगादनुष्ठेयपदार्थस्मरणस्य अन्यतः सम्भवेऽपि मन्त्रेणैव पदार्थस्मरणं सम्पाद्य तदनुष्ठाने अदृष्टविशेषकल्पनादर्थप्रत्यायका एव मन्त्राः प्रयोगेषूच्चार्यमाणा इति । फलन्तु मन्त्रैरेव मन्त्रार्थस्मृतिपूर्वकमनुष्ठानसिद्धिरित्येके । प्रागुक्तस्य धर्मे प्रामाण्यस्य सिद्धिरित्यन्ये । सूत्रार्थस्तु, तदर्थे मन्त्रप्रकाश्ये अर्थे ''उरु प्रथस्वेति पुरोडाशं प्रथयति'' इति शास्त्रस्य सत्त्वात् अदृष्टार्था मन्त्रा इति ।। ३१ ।।

इति तुरीयं मन्त्रलिङ्गाधिकरणम् (सूत्रे ३१-५३)

ಜಿಜ್ಞಾಸಾಧಿಕರಣ

ಎಂಬ ನ್ಯಾಯದಂತೆ ಮಂತ್ರೋಚ್ಚಾರಣೆಗೆ ದೃಷ್ಟಫಲವಿಲ್ಲದಿದ್ದಲ್ಲಿ ಅದೃಷ್ಟವನ್ನೇ ಫಲವೆಂದಂಗೀಕರಿಸಬಹುದಿತ್ತು. ಆದರೆ ಹಾಗಿಲ್ಲ. ಆದ್ದರಿಂದ ಮಂತ್ರೋಚ್ಚಾರಣೆಯಿಂದ ಯಾಗವಿಧಾನಸ್ಮರಣೆ. ಅದರಿಂದ ಯಾಗದ ಅನುಷ್ಠಾನ. ಅದರಿಂದ ಫಲವೆಂದು ಹೇಳಬೇಕು. ವಸ್ತುತಃ ಮಂತ್ರೋಚ್ಚಾರಣದಿಂದಷ್ಟೇ ದ್ರವ್ಯದೇವತೆಗಳನ್ನು ಸ್ಮರಣೆ ಮಾಡಿಕೊಳ್ಳಬೇಕೆಂಬ ನಿಯಮಕ್ಕೆ ಯಾವುದೇ ದೃಷ್ಟಪ್ರಯೋಜನವಿಲ್ಲ. ಹಾಗಾಗಿ ಆ ನಿಯಮಕ್ಕೆ ಅದೃಷ್ಟವೇ ಫಲವಾಗಿದೆ. ಮಂತ್ರೋಚ್ಚಾರಣೆಗಂತೂ ದೃಷ್ಟಫಲವನ್ನೇ ಹೇಳಬೇಕು.

ಇದೇ ಮಂತ್ರೋಚ್ಚಾರಣೆಗೆ ಕರ್ಮಾಚರಣೆಯ ಸಮಯ ಬಿಟ್ಟು ಬೇರೆ ಯಾವ ಪಾರಾಯಣಾದಿಕಾಲದಲ್ಲಿ ದೃಷ್ಟಪ್ರಯೋಜನವಿರುವುದಿಲ್ಲ. 'ತ್ರಿಭಿರನಶ್ನನ್ ಪಾರಾಯಣ್ಯೈಃ ಪೂತೋ ಭವತಿ' 'ಉಪವಾಸವಿದ್ದು ಮೂರು ಬಾರಿ ಈ ಮಂತ್ರವನ್ನು ಪಾರಾಯಣ ಮಾಡಿ ಶುದ್ಧನಾಗಬೇಕು' ಇತ್ಯಾದಿಯಾಗಿ ಪಾರಾಯಣವನ್ನು ವಿಧಿಸಲಾಗಿದೆ.

ಊಹಃ (೧-೨-೪-೫೨) ಮಂತ್ರಾಧಿಕರಣದಲ್ಲೇ ಬರುವ ಗುಣಸೂತ್ರವಿದು. ಇದೂ ಸಹ ಪ್ರಕೃತ ಉದಾಹರಣೆಯಾಗಿದೆ.

ಅಗ್ನಿಷೋಮೀಯಯಾಗದಲ್ಲಿ ಪಶುವನ್ನು ವಧೆ ಮಾಡಬೇಕು. ಆವಾಗ 'ಅಧ್ರಿಗುಪ್ರೈಷ' ಎಂಬ ಮಂತ್ರವನ್ನು ಹೇಳಬೇಕು. ಅದರ ಮಧ್ಯದಲ್ಲಿ 'ಅನ್ವೇನಂ ಮಾತಾ ಮನ್ಯತಾಮನು ಪಿತಾ ಅನು ಭ್ರಾತಾ' ಈ ಪಶುವಿನ ತಾಯಿ, ತಂದೆ ಸೋದರ ಎಲ್ಲರೂ ವಧೆಗೆ ಅನುಮತಿಸಲಿ' ಎಂಬ ಮಂತ್ರವಿದೆ. ಒಂದೇ ಪಶುವನ್ನು ಕೊಲ್ಲುವುದರಿಂದ ಪಿತಾ, ಮಾತಾ ಎಂಬ ಏಕವಚನಪ್ರಯೋಗವು ಯುಕ್ತವೇ ಆಗಿದೆ. ಆದರೆ ಈ ಮಂತ್ರವನ್ನೇ ಪಶುಗಣದಲ್ಲಿಯೂ (ಬಹುಪಶುಯಾಗಗಳಲ್ಲಿಯೂ) ಹೇಳಬೇಕೆಂದು ಚೋದಕದಿಂದ ಪ್ರಾಪ್ತವಾಗಿದೆ. ಆವಾಗ ಏಕವಚನಪ್ರಯೋಗ ತಪ್ಪಾಗುತ್ತದೆ. ಅನೇಕ ಪಶುಗಳ ವಧಕ್ಕೆ ಅನುಗುಣವಾಗಿ ಮಾತಾಪಿತೃಶಬ್ದಗಳನ್ನು ಬಹುವಚನಾಂತವಾಗಿ ಮಾಡಿಕೊಳ್ಳಬೇಕು. ಆದರೆ 'ನ ಮಾತಾ(ಸಾ) ವರ್ಧತೇ ನ ಪಿತಾ' ಎಂಬ ವಿಧಿವಾಕ್ಯವು ಮಾತಾಪಿತೃಶಬ್ದಗಳನ್ನು ಬಹುವಚನಾಂತವಾಗಿ ವ್ಯತ್ಯಾಸ ಮಾಡಿಕೊಳ್ಳಬಾರದೆಂದು ಹೇಳುತ್ತಿದೆ. ಆದ್ದರಿಂದ ಬಹುವಚನಾಂತವಾಗಿ ವ್ಯತ್ಯಾಸ ಮಾಡಬಾರದು ಈ ಮಂತ್ರದಲ್ಲಿ ಊಹವನ್ನು ನಿಷೇಧ ಮಾಡಿದ್ದರಿಂದ ಬೇರೆ ಮಂತ್ರಗಳಲ್ಲಿ ಊಹವಿದೆಯೆಂದು ಸಿದ್ಧವಾಗುತ್ತದೆ. ಇದರಿಂದಲೇ ಮಂತ್ರಗಳಿಗೆ ಅರ್ಥವಿವಕ್ಷೆ ಇದೆಯೆಂದೂ ಸಿದ್ಧವಾಗುತ್ತದೆ.

ಏಕಪಶುಕಯಾಗದಲ್ಲಿ ಮಾತಾಪಿತೃಶಬ್ದಗಳು ಅನ್ವರ್ಥಕಗಳಾಗಿವೆ. ಆದರೆ ಬಹುಪಶುಕಯಾಗದಲ್ಲಿ ನಿರರ್ಥಕವಾಗಿವೆ. ನಿರರ್ಥಕವಾದರೂ ಉಚ್ಚರಿಸಬೇಕೆಂದು ವಿಧಿಯಿದೆ. ಅನಿವಾರ್ಯವಾಗಿ ಅದೃಷ್ಟಫಲವನ್ನು ಒಪ್ಪಲೇಬೇಕು. ಆದ್ದರಿಂದ 'ಅನ್ವೇನಂ ಮಾತಾ' ಇತ್ಯಾದಿ ಒಂದೇ ಮಂತ್ರಕ್ಕೆ ಒಂದು ಯಾಗದಲ್ಲಿ ದೃಷ್ಟಫಲವನ್ನು ಇನ್ನೊಂದು ಯಾಗದಲ್ಲಿ ಅದೃಷ್ಟಫಲವನ್ನು ಅಂಗೀಕರಿಸಬೇಕು.

ಅದರಂತೆ ಪ್ರಕೃತದಲ್ಲಿಯೂ ಓಂಕಾರಕ್ಕೆ ಪ್ರಥಮಸೂತ್ರದಲ್ಲಿ ದೃಷ್ಟಫಲವನ್ನು ಮುಂದಿನ ಸೂತ್ರಗಳಲ್ಲಿ ಅದೃಷ್ಟಫಲವನ್ನು ಅಂಗೀಕರಿಸಬಹುದು.

*ಪರಿಪೂರ್ಣಚಂದ್ರಿಕಾ*

ಕೆಲವರ ಆಕ್ಷೇಪ :- ಪಶುಗಣದಲ್ಲಿ ಏಕವಚನಾಂತವಾದ ಮಾತಾಪಿತೃಶಬ್ದಗಳಿಗೆ ಅನ್ವಯವಿಲ್ಲ-ವೆಂಬುದೇ ತಪ್ಪು. ಒಂದು ವೇಳೆ ಪಶುಗಣದಲ್ಲಿ ಅನ್ವಯವಾಗದಿದ್ದಲ್ಲಿ 'ಅನ್ವೇನಂ ಮಾತಾ' ಎಂಬ ಶ್ರುತಿಯ ಉಚ್ಚಾರಣೆ ಅದೃಷ್ಟಕ್ಕೋಸ್ಕರ ಎಂದು ಹೇಳಬಹುದಿತ್ತು. ಆದರೆ ಪಶುವನ್ನು ಹೇಳುವ 'ಏನಂ' ಎಂಬ ಪದದ ಜೊತೆ 'ಮಾತಾ ಪಿತಾ' ಇತ್ಯಾದಿ ಶಬ್ದಗಳಿಗೆ ಅನ್ವಯವಿಲ್ಲ. 'ಅನುಮನ್ಯತಾಮ್' ಎಂಬ ಪದದ ಜೊತೆ ಅನ್ವಯ ಹೊಂದಿದೆ. ಇದರ ಜೊತೆ ಅನ್ವಯ ಹೇಳಿದಾಗ ಯಾವ ಬಾಧಕವೂ ಇಲ್ಲ. ಇದಕ್ಕೆ ದೃಷ್ಟಾಂತವೂ ಕಂಡಿದೆ -

**ಯೇ ಮಾನವಾ ವಿಗತರಾಗಪರಾಪರಜ್ಞಾಃ**
**ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।**
**ಧ್ಯಾನೇನ ತೇನ ಹತಕಿಲ್ಬಿಷಚೇತನಾಸ್ತೆ**
**ಮಾತುಃ ಪಯೋಧರರಸಂ ನ ಪುನಃ ಪಿಬಂತಿ ॥**

ಯಾವ ಮಾನವರು ವಿರಕ್ತರಾಗಿ ಪರಾಪರತತ್ವಗಳನ್ನು ಸರಿಯಾಗಿ ತಿಳಿದು ದೇವತೆಗಳಿಗೂ ಗುರುವಾದ ನಾರಾಯಣನನ್ನು ನಿರಂತರವಾಗಿ ಸ್ಮರಣೆ ಮಾಡುತ್ತಾರೋ, ಅವರು ಧ್ಯಾನದಿಂದ ನಿರ್ಮಲಚಿತ್ತರಾಗುತ್ತಾರೆ. ಪುನಃ ತಾಯಿಯ ಎದೆಹಾಲನ್ನು ಅವರು ಕುಡಿಯುವುದಿಲ್ಲ.

ಇಲ್ಲಿ 'ಮಾತುಃ' 'ತಾಯಿಯ' ಎಂಬ ಪದವು ಏಕವಚನಾಂತವಾಗಿದ್ದರೂ ಆಯಾ ಮಾನವನ ತಾಯಿ ಎಂಬರ್ಥದಲ್ಲಿ ಅದೂ ಸರಿಯೆ. ಹಾಗೆಯೆ 'ಅನ್ವೇನಂ ಮಾತಾ' ಎಂಬಲ್ಲಿಯೂ ಆಯಾ ಪಶುವಿನ ತಾಯಿ ಎಂಬ ಅರ್ಥದಲ್ಲಿ ಏಕವಚನಾಂತವಾದ 'ಮಾತಾ' ಎಂಬ ಪದವು ಸರಿಯೆ. ಆದ್ದರಿಂದ ಅದಕ್ಕೆ ಅದೃಷ್ಟಫಲವನ್ನು ಕಲ್ಪಿಸುವ ಅವಶ್ಯಕತೆ ಇಲ್ಲ.

ಬಹುವಚನಾಂತವಾಗಿ ಊಹ ಮಾಡದಿರುವುದು ಯುಕ್ತಿಯುಕ್ತವಾಗಿದ್ದು ಸಿದ್ಧವೆ ಆಗಿರುವುದರಿಂದ 'ನ ಮಾತಾ ವರ್ಧತೇ' ಎಂಬ ವಚನವೂ ಊಹ ನಿಷೇಧ ಮಾಡಲು ಹೊರಟಿಲ್ಲ. ಊಹ ಮಾಡದಿರುವುದು ಯುಕ್ತಿಯುಕ್ತವೆಂಬುದೆ ಅದರ ಅಭಿಪ್ರಾಯ. ರಾಣಕದಲ್ಲಿಯೂ ಹೀಗೆ ಹೇಳಿದೆ - 'ಒಬ್ಬಳು ತಾಯಿಗೆ ಅನೇಕ ಮಕ್ಕಳಿದ್ದರೆ 'ಮಾತಾ' ಎಂಬ ಪದಕ್ಕೆ ಊಹದ ಪ್ರಸಕ್ತಿ ಇಲ್ಲ. ಅನೇಕ ಪಶುಗಳಿಗೆ ತಾಯಂದಿರಿದ್ದರೂ ಒಂದು ಪಶುವಿನ ಸಂಬಂಧವೆಂದಿಟ್ಟುಕೊಳ್ಳಬೇಕಾಗಿಲ್ಲ. ಪಶುಗಳು ಅನೇಕ ಎಂದ ಮೇಲೆ ತಾಯಂದಿರು ಅನೇಕ ಎಂದು ತಿಳಿಯಲು ಶಕ್ಯವಿರುವುದರಿಂದ ಊಹೆ ಬೇಕಾಗಿಲ್ಲ ಎಂಬುದು ಯುಕ್ತಿಯಿಂದಲೇ ಸಿದ್ಧವಾಗುತ್ತದೆ.' ಹೀಗೆ ಏಕವಚನಾಂತವಾದ ಮಾತಾ ಪಿತಾ ಮುಂತಾದ ಶಬ್ದಗಳಿಗೆ ವಚನಬಲದಿಂದಲೂ ಅದೃಷ್ಟಫಲವು ಸಿದ್ಧವಾಗದಿರುವಾಗ ಅದನ್ನು ಉದಾಹರಣೆಯಾಗಿ ಕೊಡುವುದು ಸರಿಯಲ್ಲ.

ಸಮಾಧಾನ - ಏಕವಚನಾಂತವಾದ 'ಮಾತಾ' ಎಂಬ ಪದಕ್ಕೆ ಸಾಕ್ಷಾತ್ತಾಗಿ ಪಶುವನ್ನು ಹೇಳುವ 'ಏನಂ' ಎಂಬ ಪದದೊಡನೆ ಅನ್ವಯವಿಲ್ಲವೆನ್ನುವುದು ನಿಜ. ಆದರೂ 'ಅನುಮತಿಸಲಿ' ಎಂಬ ಕ್ರಿಯಾಪದದೊಡನೆ ಅನ್ವಯವಿದೆ. ಅನೇಕ ಪಶುಗಳಿಗೆ ನೀಡುವ ಅನುಮತಿಯ ಈ ಕ್ರಿಯಾಪದದ

ಅರ್ಥ. ಆದಕ್ಕೆ ಒಬ್ಬಳು ತಾಯಿ ಅನ್ವಯ ಹೊಂದುವುದು ಅಶಕ್ಯ. ಬಹುವಚನಾಂತವಾಗಿ ಊಹ ಮಾಡಲೇಬೇಕು. 'ಮಾತುಃ ಪಯೋಧರರಸಂ' ಎಂಬುದು ಗೌಣಪ್ರಯೋಗ ಎಂದಿಟ್ಟುಕೊಳ್ಳಬೇಕು. ಪ್ರಕೃತದಲ್ಲಿ ಪ್ರಯೋಗ ಎಂದಿಟ್ಟುಕೊಳ್ಳಲು ಪ್ರಮಾಣವಿಲ್ಲ. ವಚನಬಲದಿಂದಲೆ ಊಹ ಮಾಡದಿರಬೇಕು. ಆಗ ಅದಕ್ಕೆ ಅದೃಷ್ಟಫಲವೆಂದೊಪ್ಪದೆ ಬೇರೆ ಗತಿ ಇಲ್ಲ. ಇಷ್ಟವಿಲ್ಲದಿದ್ದರೂ ಒಪ್ಪಬೇಕು. ಟೀಕೆಯಲ್ಲಿ ಹೇಳಿರುವುದು 'ಹಾಗೆ ಒಪ್ಪಿದರೂ ಮಂತ್ರಕ್ಕೆ ಅರ್ಥವಿವಕ್ಷೆ ಇದೆ ಎಂಬ ಸಿದ್ಧಾಂತಕ್ಕೆ ಭಂಗವಿಲ್ಲ' ಎಂಬ ಅಭಿಪ್ರಾಯದಿಂದ ಹೊರತು ವಸ್ತುಸ್ಥಿತಿ ಎಂಬ ಅಭಿಪ್ರಾಯದಿಂದಲ್ಲ.

ಇದಕ್ಕೆ ವ್ಯಾಕರಣದಲ್ಲಿಯೂ ಉದಾಹರಣೆ ಕಂಡಿದೆ - 'ಬಹು ಗಣ ವತು ಡತಿ ಸಂಖ್ಯಾ' ('ಬಹು' 'ಗಣ' ಶಬ್ದಗಳಿಗೂ ವತುಪ್ರತ್ಯಯಾಂತ ಡತಿಪ್ರತ್ಯಯಾಂತ ಶಬ್ದಗಳಿಗೂ 'ಸಂಖ್ಯಾ' ಎಂದು ಹೆಸರು) ಸೂತ್ರದಲ್ಲಿ 'ಸಂಖ್ಯಾ' ಶಬ್ದಕ್ಕೆ ಈ ಹೆಸರು ಅರ್ಥ. ಈ ಶಬ್ದವೆ ಮುಂದೆ 'ಷ್ಣಾಂತಾಃ ಷಟ್' ಎಂಬ ಸೂತ್ರದಲ್ಲಿ ಬಂದು ಸೇರಿದಾಗ ಸಂಖ್ಯಾ ಎಂಬ ಹೆಸರಿನ ಶಬ್ದಗಳನ್ನು ಹೇಳುತ್ತದೆಂದು ಮಹಾಭಾಷ್ಯದಲ್ಲಿ ಹೇಳಿದೆ ಆದ್ದರಿಂದ ಓಂಕಾರಕ್ಕೆ ಬೇರೆ ಬೇರೆ ಸೂತ್ರಗಳಲ್ಲಿ ಬೇರೆ ಬೇರೆ ಪ್ರಯೋಜನಗಳಿರುವುದು ಅಯುಕ್ತವಲ್ಲ.

'ಮಂತ್ರಗಳಲ್ಲಿ ಊಹ ಮಾಡಿಕೊಂಡ ಶಬ್ದಗಳು ಮಂತ್ರದ ಭಾಗವಲ್ಲವೆಂಬುದು ನಮಗೆ ಸಮ್ಮತ' ಎಂಬ ಮೂರನೆ ಆಕ್ಷೇಪವನ್ನು 'ಅಧ್ಯಾಹ್ರಿಯಮಾಣಸ್ಯ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಅಧ್ಯಾಹಾರ ಮಾಡಿಕೊಂಡು ಶಬ್ದಗಳು ಮಂತ್ರವಾಕ್ಯದ ಜೊತೆ ಸೇರಿ ವಾಕ್ಯಾರ್ಥಪ್ರತೀತಿರೂಪವಾದ ಏಕಕಾರ್ಯಕಾರಿಯಾದದ್ದು ಕಂಡಿದೆ. ಮತ್ತು ಮಂತ್ರವಾಕ್ಯವು ಯಾವ ಅದೃಷ್ಟಕ್ಕೆ ಜನಕವಾಗಿರಯೊ ಅದೇ ಊಹೆ ಮಾಡಿಕೊಂಡು ಶಬ್ದವೂ ಜನಕವಾಗಿರುವುದು ಕಂಡಿದೆ. ಹೀಗೆ ಒಪ್ಪದಿದ್ದರೆ 'ಸಂ ಯಜ್ಞಪತಿರಾಶಿಷಾ' ಎಂಬಲ್ಲಿ ಅಧ್ಯಾಹೃತವಾದ 'ಗಚ್ಛತಾಮ್' ಮಂತ್ರದ ಜೊತೆಗೆ ಏಕಕಾರ್ಯಕಾರಿತ್ವ ಇಲ್ಲದಿರಬೇಕಾದೀತು.

ಸುಧಾವಾಕ್ಯಕ್ಕೂ ಕೂಡ ಹೀಗೆಯೇ ಅರ್ಥೈಸಬೇಕು. - ಮಂತ್ರೇಷು ಊಹ್ಯಮಾನಸ್ಯ : 'ಸಂ ಯಜ್ಞಪತಿಃ ಇತ್ಯಾದಿವಾಕ್ಯದಲ್ಲಿ ಅಧ್ಯಾಹಾರ ಮಾಡುವ ಶಬ್ದಕ್ಕೆ, ತದನವಯವತ್ವಪ್ರಸಂಗಾತ್ : ಮಂತ್ರದ ಜೊತೆ ಏಕಕಾರ್ಯಕಾರಿತ್ವ ಬಾರದಿರಬೇಕಾದೀತು - ಎಂದು.

ಸುಧೆಯಲ್ಲಿ ಕೇವಲ ಮಂತ್ರದ ಅವಯವ ಆಗದಿರಬೇಕಾದೀತು ಎಂದಷ್ಟೇ ಆಪಾದಿಸಿದ್ದಾರೆ. ಅಮಂತ್ರತ್ವವನ್ನು ಆಪಾದಿಸಿಲ್ಲ. ಮಂತ್ರ ಆಗದಿದ್ದರೂ ಮಂತ್ರಾವಯವ ಆಗಬಹುದು. ಆದ್ದರಿಂದ ಜೈಮಿನ್ಯಾಚಾರ್ಯರಿಗೆ ಅಮಂತ್ರತ್ವ ಇಷ್ಟವೇ ಹೊರತು ಮಂತ್ರಾವಯತ್ವ ಇಷ್ಟವಿಲ್ಲ. ಆದ್ದರಿಂದ ಇಷ್ಟಾಪತ್ತಿ ಎನ್ನಲಾಗದು ಆದರೂ ಸಹ 'ಮಂತ್ರವಲ್ಲವೆಂದಾದೀತು' ಎಂಬುದರಲ್ಲೇ ಪರ್ಯವಸಾನವೆಂದಿಟ್ಟು-ಕೊಂಡರೂ ಅನುಪಪತ್ತಿಯಿಲ್ಲವೆಂದು ಪ್ರೌಢಿವಾದ ಮಾಡಿ ಪರಿಹಾರವನ್ನು ಹೇಳಿದ್ದಾರೆ.

ಪೂರ್ಣತ್ವವೆಂಬ ಓಂಕಾರದ ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಅನ್ವಯವಾಗುತ್ತಿಲ್ಲ ಎಂಬ ನಾಲ್ಕನೆ ಆಕ್ಷೇಪವನ್ನು 'ಜಿಜ್ಞಾಸಾ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. 'ಗುಣಪೂರ್ಣವಾದ ಬ್ರಹ್ಮಜಿಜ್ಞಾಸೆ

ಎಂದು ಮೊದಲಿಗೆ ಕಾಣುವ ಅನ್ವಯವು ಅಸಂಭಾವಿತವಾದರೂ, ಜಿಜ್ಞಾಸೆಗೆ ವಿಶೇಷಣರೂಪದಿಂದ ಅಂಗವಾದ ಬ್ರಹ್ಮನಲ್ಲಿ 'ಗುಣಪೂರ್ಣವಾದ ಬ್ರಹ್ಮ' ಎಂದು ಅನ್ವಯವಾಗಬಹುದು. ಪೂರ್ವಮೀಮಾಂಸೆಯಲ್ಲಿ 'ಆನರ್ಥಕ್ಯಾತ್ತದಂಗೇಷು' 'ಪ್ರಧಾನದಲ್ಲಿ ಅನ್ವಯ ಕೂಡದಿದ್ದಾಗ ಅದರ ಅಂಗಗಳಲ್ಲಿ ಅನ್ವಯ ಹೇಳಬಹುದು' ಎಂಬ ಅಂಗಾವತಾರನ್ಯಾಯವು (ಅಧ್ಯಾಯ ೩, ಪಾದ ೧, ಅಧಿಕರಣ ೯) ಹೀಗೆ ಹೇಳುತ್ತದೆ. 'ಸಪ್ತದಶಾರತ್ನಿರ್ವಾಜಪೇಯಸ್ಯ ಯೂಪಃ' 'ಹದಿನೇಳು ಮೊಳದಷ್ಟು ಎತ್ತರ ವಾಜಪೇಯದ ಯೂಪವಿರಬೇಕು' ಎಂದು ಶ್ರುತಿ ಇದೆ. ವಾಜಪೇಯಯಾಗದಲ್ಲಿ ಯೂಪವೇ ಇಲ್ಲ. ಅದು ಹದಿನೇಳು ಮೊಳದಷ್ಟು ಎತ್ತರವಾಗಿರಬೇಕು ಎನ್ನುವುದು ಹೇಗೆ? ವಾಜಪೇಯದ ಅಂಗವಾದ ಪಶುಯಾಗದಲ್ಲಿ ಯೂಪವಿದೆ. ಆದರೆ ಅದು ನೇರವಾಗಿ ವಾಜಪೇಯಕ್ಕೆ ಸಂಬಂಧಿಸಿದುದಲ್ಲ. ವಾಜಪೇಯದಲ್ಲಿ ಎತ್ತರವಾದ ಪಾತ್ರೆ ಇರಬಹುದು. ಅದು ಯೂಪದಂತೆ ಎತ್ತರವೆಂಬ ಅಭಿಪ್ರಾಯದಿಂದ 'ಯೂಪವೆಂದು ಅದನ್ನೆ ಶ್ರುತಿಯು ಹೇಳಿರಬಹುದು. ಆದ್ದರಿಂದ 'ಹದಿನೇಳುಮೊಳ ಎತ್ತರ' ಎಂಬ ಲಕ್ಷಣವು ಎತ್ತರದ ಪಾತ್ರೆಯಲ್ಲಿ ಅನ್ವಯಿಸಿ ಆ ಮೂಲಕ ವಾಜಪೇಯಕ್ಕೆ ಸಂಬಂಧಿಸಬೇಕೆ? ಅಥವಾ ಈ ಪ್ರಕರಣವೂ ಕೂಡ ವಾಜಪೇಯಕ್ಕೆ ಸಂಬಂದಿಸಿದೆಯೇ? ಅಷ್ಟೇ ಅಲ್ಲದೇ ಪಶುಯಾಗವು ವಾಜಪೇಯದ ಒಂದು ಅಂಗಯಾಗ. ಪ್ರಧಾನವಾದ ವಾಜಪೇಯವನ್ನು ಬಿಟ್ಟು ಅಂಗವಾದ ಪಶುಯಾಗದಲ್ಲಿ ಸಪ್ತದಶಾರತ್ನಿತ್ವಕ್ಕೆ ಅನ್ವಯ ಹೇಳುವುದು ಯುಕ್ತವೂ ಆಗುವುದಿಲ್ಲ. ಹೀಗೆ ಸಾಮೀಪ್ಯ, ಪ್ರಕರಣ, ಪ್ರಾಧಾನ್ಯ ಈ ಮೂರು ದೃಷ್ಟಿಯಿಂದಲೂ ಹದಿನೇಳು ಅರತ್ನಿ ಎಂಬ ಪರಿಮಾಣವು ವಾಜಪೇಯಕ್ಕೇ ಸಂಬಂಧಿಸಬೇಕು. ಪರಿಮಾಣವು ಕರ್ಮದಲ್ಲಿ ನೇರವಾಗಿ ಅನ್ವಯ ಹೊಂದುವಂತಿಲ್ಲ. ಒಂದು ಎತ್ತರದ ಪಾತ್ರೆಯಲ್ಲಿ ಮೊದಲು ಅನ್ವಯಿಸಿ ಆ ಮೂಲಕ ವಾಜಪೇಯದಲ್ಲಿ ಅನ್ವಯಿಸಬಹುದು ಶ್ರುತಿಯಲ್ಲಿ 'ಯೂಪ' ಎಂದರೆ ಯೂಪದಂತೆ ಎತ್ತರವಾದ ಪಾತ್ರೆ ಎಂದು ಅರ್ಥೈಸಬೇಕು. ಇಷ್ಟು ಪೂರ್ವಪಕ್ಷ.

ಸಿದ್ಧಾಂತ :- ಯೂಪ ಶಬ್ದಕ್ಕೆ ಯೂಪದಂತೆ ಎತ್ತರವಾದ ಪಾತ್ರೆ ಎಂದು ಲಕ್ಷಣಾ ವೃತ್ತಿಯನ್ನಿಟ್ಟುಕೊಳ್ಳುವುದು ಯುಕ್ತವಾಗುವುದಿಲ್ಲ. ಮುಖ್ಯಾರ್ಥವನ್ನೇ ಇಟ್ಟುಕೊಂಡು ವಾಕ್ಯಕ್ಕೆ ಅರ್ಥ ಹೇಳಬೇಕು. ವಾಜಪೇಯದಲ್ಲಿ ಯೂಪವಿಲ್ಲದಿದ್ದರೂ ವಾಜಪೇಯದ ಅಂಗವಾದ ಪಶುಯಾಗದ ಯೂಪವನ್ನು ವಾಜಪೇಯದ ಯೂಪ ಎನ್ನಬಹುದು. ವಾಜಪೇಯದ ಯೂಪ 'ದೇವದತ್ತನ ಮೊಮ್ಮಗ' ಎಂಬಲ್ಲಿ ಮೊಮ್ಮಗನಿಗೆ ದೇವದತ್ತನ ನೇರಸಂಬಂಧವಿಲ್ಲದಿದ್ದರೂ ಅವನ ಮಗನ ಮೂಲಕ ಸಂಬಂಧವಿದೆ. ಈ ರೀತಿಯ ಸಂಬಂಧವನ್ನೆ ಶ್ರುತಿಯಲ್ಲಿರುವ ಷಷ್ಠೀವಿಭಕ್ತಿ ಹೇಳುತ್ತದೆ. ವಾಜಪೇಯಶಬ್ದಕ್ಕೆ ಪಶುಯಾಗವೆಂಬ ಅರ್ಥದಲ್ಲಿ ಲಕ್ಷಣಾವೃತ್ತಿಯನ್ನು ಮಾಡಬೇಕಾಗಿಲ್ಲ. ಹೀಗೆ ಮುಖ್ಯಾರ್ಥವನ್ನಿಟ್ಟುಕೊಳ್ಳಲು ಶಕ್ಯವಿರುವುದರಿಂದ ಪೂರ್ವಪಕ್ಷದಲ್ಲಿ ಹೇಳಿದ ಸಾಮೀಪ್ಯ ಪ್ರಕರಣ ಪ್ರಾಧಾನ್ಯಗಳನ್ನು ಪರಿಗಣಿಸದೆ ಪರಿಮಾಣವು ಯೂಪದ ಮೂಲಕ ಹದಿನೇಳು ಅರತ್ನಿ ಎಂಬ ಪಶುಯಾಗಕ್ಕೆ ಸಂಬಂಧಿಸಿದೆ ಇಷ್ಟು ಸಿದ್ಧಾಂತ.

ಇಲ್ಲಿ ಶ್ರುತಿಯನ್ನು ನೋಡಿದಾಗ ಮೊದಲಿಗೆ ಹದಿನೇಳು ಮೊಳ ಎತ್ತರದ ಪರಿಮಾಣವು ಪ್ರಧಾನವಾದ ವಾಜಪೇಯಕ್ಕೆ ಸಂಬಂಧಿಸಿದಂತೆ ಕಾಣುತ್ತದೆ. ಅದು ಅಶಕ್ಯವಾದುದರಿಂದ ಅಂಗವಾದ ಪಶುಯಾಗಕ್ಕೆ

ಅನ್ವಯಿಸುತ್ತದೆಂದು ಕೊನೆಗೆ ನಿರ್ಣಯವಾಗುತ್ತದೆ. ಹಾಗೆಯೇ ಪ್ರಕೃತದಲ್ಲಿ ಪ್ರಧಾನವಾದ ಜಿಜ್ಞಾಸೆ ಗುಣಪೂರ್ಣವೆನಿಸದಿರುವುದರಿಂದ ಅಂಗವಾದ ಬ್ರಹ್ಮನು ಗುಣಪೂರ್ಣನೆಂದು ಓಂಕಾರದ ಅನ್ವಯವನ್ನು ನಿರ್ಣಯಿಸಲು ಶಕ್ಯವಿದೆ.

## ಸಪ್ತದಶಾರತ್ನಿರ್ವಾಜಪೇಯಾಧಿಕರಣ
## ಆನರ್ಥಕ್ಯಾತ್ತದಂಗೇಷು (೩-೧-೯)[೧]

'ಸಪ್ತದಶಾರತ್ನಿರ್ವಾಜಪೇಯಸ್ಯ ಯೂಪಃ' ಎಂಬ ಶ್ರುತಿಯು ವಾಜಪೇಯಯಾಗದ ಯೂಪ-ಸಂಬಂಧವು ಹದಿನೇಳು ಅರತ್ನಿಪರಿಮಾಣವುಳ್ಳದ್ದಾಗಿರಬೇಕೆಂದು ಹೇಳುತ್ತದೆ. (ಅರತ್ನಿಪರಿಮಾಣವೆಂದರೆ ಒಂದು ಇಂಚು ಕಮ್ಮಿ ಇರುವ ಗೇಣು)

ಈ ಶ್ರುತಿಯಲ್ಲಿರುವ 'ಸಪ್ತದಶಾರತ್ನಿಃ' ಎಂಬುದಕ್ಕೆ ವಾಜಪೇಯದಲ್ಲಿ ಅನ್ವಯವೋ? ಯೂಪದಲ್ಲಿ ಅನ್ವಯವೋ? ವಾಜಪೇಯದಲ್ಲಿ ಅನ್ವಯ ಮಾಡಿದರೆ ವಾಜಪೇಯಯಾಗದಲ್ಲಿ ಉಪಯೋಗಿಸುವ ಪಾತ್ರಗಳು ಹದಿನೇಳು ಅರತ್ನಿಪರಿಮಾಣವುಳ್ಳವುಗಳೆಂದಂತಾಗುತ್ತದೆ. ತನ್ಮೂಲಕ ಹದಿನೇಳು ಅರತ್ನಿಪರಿಮಾಣಕ್ಕೆ ವಾಜಪೇಯಾಂಗತ್ವ ಬರುತ್ತದೆ. ಯೂಪದಲ್ಲಿ ಅನ್ವಯ ಹೇಳಿದರೆ ವಾಜಪೇಯಯಾಗಕ್ಕೆ ಅಂಗವಾದ ಪಶುಯಾಗದ ಯೂಪವು ಹದಿನೇಳು ಅರತ್ನಿ ಪರಿಮಾಣವುಳ್ಳದ್ದಾಗಿರಬೇಕೆಂದಂತಾಗುತ್ತದೆ.

---

(१) (भाट्टसङ्ग्रहः –) अथ नवमं सप्तदशारत्नितायाः पशुधर्मताधिकरणम्
आनर्थक्यात् तदङ्गेषु ॥ १८ ॥

अत्र पूर्ववैषम्येण शङ्कनात् सङ्गतिः । वाजपेये 'सप्तदशारत्निर्वाजपेयस्य यूपो भवति' इति श्रुतम् । सप्तदशारत्नित्वं वाजपेयाङ्गम्, उत यूपद्वारा वाजपेयगतपश्वङ्गं इति सन्देहः । तत्र वाजपेयस्याव्यवधानेन श्रवणात् प्रधानकर्मत्वात् प्रकरणबलाच्च वाजपेयाङ्गं सप्तदशारत्नित्वम् न यूपद्वारा पश्वङ्गम् उक्तहेतुत्रयान्यतमस्याप्यभावात् । वाजपेयशब्दस्य वाजपेयाङ्ग-पशुयागपरत्वे लक्षणाप्रसङ्गाच्च । सप्तदशारत्नित्वस्य साक्षात् कर्मण्ययोगेऽपि तदङ्गषोडशिनामकग्रहरूपपात्रद्वारा कर्माङ्गं भविष्यति । यूपशब्दश्च ऊर्ध्वत्वसारूप्याद् ग्रहपरः स्यात् । पूर्वत्र ग्रहश्रुतिविवक्षायामवाक्यभेदावान्तरापूर्वभेदरूपहेत्वोरिव यूपश्रुतिविवक्षायां हेत्वभावात्, प्रत्युताविवक्षायामेव हेतूनामुक्तेश्चेति प्राप्ते अभिधीयते 'सप्तदशारत्निर्यूपः' इति सामानाधिकरण्याद् वाजपेयशब्दस्य सम्बन्धसामान्यवाचिषष्ठ्यन्ततया परम्परासम्बन्धेन 'वाजपेयाङ्गपश्वङ्गं यूपः' इति लक्षणां विनैव पशुयागपरत्वेन सन्निधानादेरविरोधात् यूपपदस्य गौणवृत्त्यनापत्तेश्च यूपद्वारा पश्वङ्गं सप्तदशारत्नित्वमिति सिद्धान्तः । तथाच सूत्रम्, आनर्थक्यात् प्रधानान्वयबाधात् विधीयमानो धर्मस्तदङ्गेष्ववतरतीति । फलन्तु, पूर्वपक्षे सप्तदशारत्निपरिमाणो ग्रहः कार्य इति । सिद्धान्ते यूप इति ।

इति नवमं सप्तदशारत्नितायाः पशुधर्मताधिकरणम्

ಕನಮೂಲಕ ಹದಿನೇಳು ಅರತ್ನಿಪರಿಮಾಣಕ್ಕೆ ಪಶುಯಾಗಾಂಗತ್ವ ಬರುತ್ತದೆ. ಆದ್ದರಿಂದ ಅರತ್ನತ್ವವು ಪಾತ್ರೆಯಲ್ಲಿ ಅನ್ವಯ ಹೊಂದಿ ವಾಜಪೇಯಕ್ಕೆ ಅಂಗವಾಗಿದೆಯೊ? ಅಥವಾ ಯೂಪದಲ್ಲಿ ಅನ್ವಯ ಹೊಂದಿ ಪಶುಯಾಗಕ್ಕೆ ಅಂಗವಾಗಿದೆಯೊ? ಎಂದು ಸಂಶಯ.

ಪೂರ್ವಪಕ್ಷ :- 'ಸಪ್ತದಶಾರತ್ನಿರ್ವಾಜಪೇಯಸ್ಯ' ಎಂಬ ಶ್ರುತಿಯಲ್ಲಿ 'ಸಪ್ತದಶಾರತ್ನಿಪದದ ಸಮೀಪದಲ್ಲೇ ವಾಜಪೇಯಪದವಿದೆ. ಆದ್ದರಿಂದ ಸಪ್ತದಶಾರತ್ನಿ ಎಂಬುದಕ್ಕೆ ವಾಜಪೇಯಸ್ಯ ಎಂಬಲ್ಲೇ ಅನ್ವಯ ಮಾಡಬೇಕು .

ಪ್ರಶ್ನೆ :- ಪೂರ್ವಮೀಮಾಂಸೆಯ ಈ ದೃಷ್ಟಾಂತವೇ ಸರಿಹೊಂದುವುದಿಲ್ಲ. ಪೂರ್ವಮೀಮಾಂಸಾ ಅಂಗಾಂಗಿಭಾವವಿಷಯಕವಾಗಿದೆ. ಈ ಅಂಗಾವಕಾರನ್ಯಾಯಕ್ಕೆ ಅಂಗಾಂಗಿಭಾವಸ್ಥಳದಲ್ಲಷ್ಟೇ ಅವಕಾಶವೆಂದು ರೇವತ್ಯಧಿಕರಣದಲ್ಲಿ ಹೇಳಲಾಗಿದೆ. ಆದರೆ ದಾರ್ಷ್ಟಾಂತಿಕವಾದ ಓಂಕಾರವು ವಿಶೇಷಣವಿಶೇಷ್ಯಭಾವವಿಷಯಕವಾಗಿದೆ.

ಉತ್ತರ :- ಓಂಕಾರಕ್ಕೂ ಬ್ರಹ್ಮನಿಗೂ ವಿಶೇಷಣವಿಶೇಷ್ಯಭಾವವಿದ್ದರೂ ಕೂಡ ಅಂಗಾಂಗಿಭಾವವನ್ನು ಹೇಳಬಹುದು. 'ಬ್ರಹ್ಮಜಿಜ್ಞಾಸೆ' ಎನ್ನುವಾಗ ಜಿಜ್ಞಾಸೆಯಲ್ಲಿ ಬ್ರಹ್ಮನು ವಿಶೇಷಣ. ವಿಶೇಷಣವು ವಿಶೇಷ್ಯಕ್ಕೆ ಉಪಕಾರಕವಾಗಿದ್ದು ಅಂಗವೆನಿಸುವುದರಿಂದ ಬ್ರಹ್ಮನು ಜಿಜ್ಞಾಸೆಗೆ ಅಂಗನಾಗಿದ್ದಾನೆ. ಆದ್ದರಿಂದ ಈ ನ್ಯಾಯಕ್ಕೆ ಇಲ್ಲಿ ಅವಕಾಶವಿದೆ. ವಿಶೇಷಣವು ವಿಶೇಷ್ಯಕ್ಕೆ ಅಂಗವೆನ್ನುವ ವಿಷಯದಲ್ಲಿ ಭಗವತ್ಪಾದರ ಅಭಿಪ್ರಾಯವಿದೆಯೆಂದು ಮತ್ತೊಂದು ಉದಾಹರಣೆಯನ್ನು ಕೊಟ್ಟಿದ್ದಾರೆಂದು ಕೆಲವರು ಹೇಳುತ್ತಾರೆ.

## ಪ್ರಾಶಸ್ತ್ಯಸ್ಯ ಯಾಗಾನ್ವಯಾಧಿಕರಣಮ್

'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದವಾಕ್ಯಗಳಿಗೆ ಪ್ರಾಶಸ್ತ್ಯವೇ ಅರ್ಥವೆಂದು ಅರ್ಥವಾದಾಧಿಕರಣದಲ್ಲಿ ನಿರ್ಣಯಿಸಲಾಗಿದೆ. ಪ್ರಾಶಸ್ತ್ಯಕ್ಕೆ ಎಲ್ಲಿ ಅನ್ವಯ? ಎಂದು ಪ್ರಶ್ನೆ ಬಂದರೆ ಯಜೇತ ಎಂಬಲ್ಲಿ ಅನ್ವಯ ಹೇಳಬೇಕು. 'ಯಜೇತ' ಎಂದರೆ 'ಯಾಗೇನ ಸ್ವರ್ಗಂ ಭಾವಯೇತ್' ಎಂದರ್ಥ. ಇಲ್ಲಿ ಯಾಗವು ಭಾವನಾದಲ್ಲಿ ಕರಣವಾದ್ದರಿಂದ ಉಪಸರ್ಜನವಾಗಿದೆ. ಉಪಸರ್ಜನವಾದ ಯಾಗವು ವಿಶೇಷಣವಾಗಿದೆ.

ಇದು ವಿಶೇಷಣವಿಶೇಷ್ಯಭಾವಕ್ಕೆ ಸ್ಪಷ್ಟವಾದ ದೃಷ್ಟಾಂತ. ಇದರಂತೆ ಓಂಕಾರಾರ್ಥವಾದ ಗುಣಪೂರ್ಣತ್ವಕ್ಕೆ ಜಿಜ್ಞಾಸಾಪದಾರ್ಥದಲ್ಲಿ ವಿಶೇಷಣನಾದ ಬ್ರಹ್ಮನಲ್ಲಿ ಅನ್ವಯ ಹೇಳಬಹುದು.

## ದಂಡೀ ಪ್ರೈಷಾಧಿಕರಣ

ಇನ್ನೊಂದು ಉದಾಹರಣೆ - 'ದಂಡೀಪ್ರೈಷಾನನ್ವಾಹ' 'ಮೈತ್ರಾವರುಣನೆಂಬ ಋತ್ವಿಜನು ದಂಡ ಉಳ್ಳವನಾಗಿ ಪ್ರೈಷಮಂತ್ರಗಳನ್ನೂ ಪುರೋನುವಾಕ್ಯಾಮಂತ್ರಗಳನ್ನು ಪಠಿಸಬೇಕು' ಎಂಬಲ್ಲಿ ಮೈತ್ರಾವರುಣನು ದಂಡ ಉಳ್ಳವನಾಗಬೇಕೆಂದು ವಿಧಿಸುತ್ತಿಲ್ಲ. 'ಕ್ರೀತೇ ಸೋಮೇ ಮೈತ್ರಾವರುಣಾಯ

ದಂಡಂ ಪ್ರಾಯಚ್ಛತಿ' 'ಸೋಮವನ್ನು ಕ್ರಯಕ್ಕೆ ಕೊಂಡ ಬಳಿಕ ಮೈತ್ರಾವರುಣನಿಗೆ ದಂಡವನ್ನು ಕೊಡಬೇಕು' ಎಂಬ ವಾಕ್ಯದಲ್ಲಿ ಅದನ್ನು ವಿಧಿಸಲಾಗಿದೆ. ಮೈತ್ರಾವರುಣನು ಪ್ರೈಷ ಮತ್ತು ಪುರೋನುವಾಕ್ಯಗಳನ್ನು ಪಠಿಸಬೇಕೆಂದು ವಿಧಿಸುವುದಕ್ಕೂ "ಮೈತ್ರಾವರುಣಃ ಪ್ರೇಷ್ಯತಿ ಚಾನು ಚಾಹ" 'ಮೈತ್ರಾವರುಣನು ಪ್ರೈಷಮಂತ್ರಗಳನ್ನು ಪಠಿಸಬೇಕು ಮತ್ತು ಪುರೋನುವಾಕ್ಯಗಳನ್ನು ಪಠಿಸಬೇಕು' ಎಂಬ ವಾಕ್ಯವಿದೆ. ಹಾಗಾದರೆ ಇಲ್ಲಿ ವಿಧಿಸುವುದೇನನ್ನು? ಮೈತ್ರಾವರುಣನು ದಂಡ ಉಳ್ಳವನಾಗಿಯೆ ಪ್ರೈಷಪುರೋನುವಾಕ್ಯಗಳನ್ನು ಪಠಿಸಬೇಕು. ಪ್ರೈಷಪುರೋನುವಾಕ್ಯಗಳ ಪಠನಕ್ಕೆ ದಂಡವು ಸಂಬಂಧಿಸಿರಬೇಕು, ಎಂದು ಇಲ್ಲಿ ವಿಧಿಸಲಾಗುತ್ತದೆ. ಏಕೆಂದರೆ ನಿಂತು ಗಟ್ಟಿಯಾಗಿ ಯಾವ ಆಲಂಬನವೂ ಇಲ್ಲದೆ ಬಹಳ ದೀರ್ಘವಾದ ಪ್ರೈಷಪುರೋನುವಾಕ್ಯಗಳನ್ನು ಪಠಿಸುವ ಮೈತ್ರಾವರುಣನಿಗೆ ಒಂದು ಆಲಂಬನ ಬೇಕಾಗಿದೆ. ಮೈತ್ರಾವರುಣನಿಗೆ ಕೊಟ್ಟಿರುವ ದಂಡವು ಅವನಿಗೆ ಯಾವ ವಿಧದಲ್ಲಿ ಉಪಯುಕ್ತವಾಗದೇ?' ಎಂಬ ಪ್ರಶ್ನೆಯೂ ಇದೆ. ಆದ್ದರಿಂದ ಪ್ರೈಷಪುರೋನುವಾಕ್ಯಗಳನ್ನು ಪಠಿಸುವಾಗ ಮೈತ್ರಾವರುಣನಿಗೆ ದಂಡವು ಆಲಂಬನವಾಗಿರಬೇಕೆಂದು ಶ್ರುತಿಯು ಇಲ್ಲಿ ವಿಧಿಸುತ್ತಿದೆ. 'ದಂಡಿ' 'ದಂಡ ಉಳ್ಳವನು' ಎಂಬಲ್ಲಿ ಪ್ರಕೃತ್ಯರ್ಥವಾದ ದಂಡವು ಪ್ರತ್ಯಯಾರ್ಥಕ್ಕೆ ವಿಶೇಷಣವಾಗಿದ್ದರೂ ಅದರಲ್ಲಿ ವಿಧಿ ಪ್ರತ್ಯಯದ ಅನ್ವಯವಾಗುತ್ತದೆ. 'ಲೋಹಿತೋಷ್ಣೀಷಾ ಋತ್ವಿಜಃ ಪ್ರಚರಂತಿ' 'ಕೆಂಪು ರುಮಾಲು ಉಳ್ಳ ಋತ್ವಿಜರು ಸಂಚರಿಸಬೇಕು' ಎಂಬಲ್ಲಿ ವಿಧಿಪ್ರತ್ಯಯವು 'ಕೆಂಪು ರುಮಾಲು' ಎಂಬ ವಿಶೇಷಣದಲ್ಲಿ ಅನ್ವಯಿಸುವುದರಿಂದ ಕೆಂಪು ರುಮಾಲು ಧರಿಸಿಕೊಂಡೇ ಋತ್ವಿಜರು ಸಂಚರಿಸಬೇಕು ಎಂದು ವಿಹಿತವಾಗುವುದು ಇದಕ್ಕೆ ಉದಾಹರಣೆ. ಆದ್ದರಿಂದ ಓಂಕಾರದ ಅರ್ಥವಾದ ಪೂರ್ಣತ್ವವು 'ಬ್ರಹ್ಮಜಿಜ್ಞಾಸೆ' ಎಂಬಲ್ಲಿ ವಿಶೇಷಣವಾದ ಬ್ರಹ್ಮನಲ್ಲಿ ಅನ್ವಯಿಸುವುದು ಅಯುಕ್ತವಾಗಲಾರದು.

ಪೂರ್ಣತ್ವವಾಚಕವಾದ ಓಂಕಾರವು ನಾರಾಯಣನು ಗುಣಪೂರ್ಣನೆಂಬುದನ್ನು ಹೇಳುತ್ತದೆ ಎಂಬ ಅನುವ್ಯಾಖ್ಯಾನರೀತಿಯಿಂದ ಓಂಕಾರವು ಗುಣಪೂರ್ಣತ್ವವಾಚಕವೆಂದು ತಿಳಿಯಬೇಕು. ಇನ್ನು ಕೆಲವು ವಿಚಾರವಿಧಿಗಳಲ್ಲಿ ಈ ಗುಣಪೂರ್ಣತ್ವವನ್ನೆ ಹೇಳುವ 'ನಾರಾಯಣ' ಮುಂತಾದ ಶಬ್ದಗಳಿವೆ. ಹೀಗೆ ವಿಚಾರ ವಿಧಾಯಕ ಶ್ರುತಿಗಳಲ್ಲಿ ಬ್ರಹ್ಮನು ವಿಚಾರಯೋಗ್ಯನೆಂದು ಸಮರ್ಥಿಸುವ ಅನೇಕ ಸಿದ್ಧಾಂತ ಯುಕ್ತಿಗಳಿವೆ ಎಂದು ಸೂಚಿಸುವುದಕ್ಕಾಗಿ ಸೂತ್ರದಲ್ಲಿ ಓಂಕಾರವಿದೆ.

ಪ್ರಶ್ನೆ:- 'ಓಂ' ಎಂದರೂ ಗುಣಪೂರ್ಣನೆಂದರ್ಥ, 'ಬ್ರಹ್ಮ' ಎಂದರೂ ಗುಣಪೂರ್ಣ ಎಂದರ್ಥ. ಪರಸ್ಪರ ಅನ್ವಯ ಮಾಡಿದರೆ ಗುಣಪೂರ್ಣವಾದ ಗುಣಪೂರ್ಣ ಎಂದಂತಾಗುವುದು. ಈ ಅನ್ವಯ ತಪ್ಪಲ್ಲವೇ?

ಉತ್ತರ :- 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' 'ಆತ್ಮನು ಆತ್ಮ ಎಂದು ತಿಳಿಯುತ್ತಾರೆ ಮತ್ತು ಉಪದೇಶಿಸುತ್ತಾರೆ' ಎಂಬ ಸೂತ್ರದಲ್ಲಿ ಆತ್ಮಶಬ್ದವನ್ನು ಎರಡು ಬಾರಿ ಇಟ್ಟುಕೊಂಡು ಒಂದು ಯೌಗಿಕ, ಇನ್ನೊಂದು ರೂಢ ಎಂದೊಪ್ಪಬೇಕು. 'ಆತ್ಮನು ಆತ್ಮನೆಂದು' ಎಂದರೆ 'ವಿಷ್ಣುವು ಎಲ್ಲರಿಗೂ ಒಡೆಯನೆಂದು' ಎಂದರ್ಥ. ಹೀಗೆ ಸುಧೆಯ ನಾಲ್ಕನೇ ಅಧ್ಯಾಯದ ಮೊದಲನೆ ಪಾದದಲ್ಲಿ ಹೇಳಿ

'ಪರಿ ಯದಿಂದ್ರ ರೋದಸೀ ಉಭೇ ಅಬುಭೋಜೀರ್ಮಹಿನಾ ವಿಶ್ವತಃ ಸೀಂ' ಇಂದ್ರನಾದ ಇಂದ್ರನೆ, ನೀನು ಭೂಮಿ ಅಂತರಿಕ್ಷಗಳೆರಡನ್ನೂ ಸ್ವಶಕ್ತಿಯಿಂದ ಸದಾ ರಕ್ಷಿಸುತ್ತಿರುವೆ' ಎಂಬ ಋಚೆಯ ವ್ಯಾಖ್ಯಾನ ಮಾಡುವಾಗ ಋಗ್‌ಭಾಷ್ಯ ಟೀಕೆಯಲ್ಲಿ ಒಂದು ಇಂದ್ರಶಬ್ದವು ರುದ್ರ, ಇನ್ನೊಂದು ಐಶ್ವರ್ಯ ಉಳ್ಳವನೆಂಬ ಅರ್ಥದಲ್ಲಿ ಯೌಗಿಕವೆಂದು ಹೇಳಿದೆ. ಹಾಗೆಯೆ ಪ್ರಕೃತದಲ್ಲಿ ಓಂ ಬ್ರಹ್ಮಶಬ್ದಗಳಲ್ಲಿ ಒಂದು ರೂಢ, ಇನ್ನೊಂದು ಯೌಗಿಕ. ಗುಣಪೂರ್ಣನಾದ ಬ್ರಹ್ಮ ಎಂದು ಅನ್ವಯ ಹೇಳಬಹುದು.

ಆದರೆ ಎರಡೂ ಯೌಗಿಕ, ಎರಡೂ ವಿಷಯ ಸೂಚಕ ಎಂದು ಹೇಳಿರುವುದು ಹೇಗೆ ಎಂಬ ಪ್ರಶ್ನೆ ಬರುತ್ತದೆ. ಎರಡು ಶಬ್ದಗಳೂ ವಿಷ್ಣು ಎಂಬರ್ಥದಲ್ಲಿ ಯೋಗರೂಢ. ಒಂದರ ಯೋಗಾಂಶ, ಇನ್ನೊಂದರ ರೂಢ್ಯಂಶಗಳನ್ನಿಟ್ಟುಕೊಂಡು ಅನ್ವಯ ಹೇಳಲು ಬರುತ್ತದೆ. ಒಂದು ರೂಢವಾದರೆ ಮತ್ತೊಂದು ಯೋಗವಾಗುತ್ತದೆ ಎಂದು ಸಮಾಧಾನ ಹೇಳಬೇಕು. 'ಸೂತ್ರದ ಬ್ರಹ್ಮಶಬ್ದವು ಜಿಜ್ಞಾಸೆಯಲ್ಲಿ ಕರ್ಮರೂಪದಿಂದ ಅನ್ವಯ ಹೊಂದುವಂತೆ ಓಂಕಾರವೂ ಪ್ರತ್ಯೇಕವಾಗಿ ಕರ್ಮರೂಪದಿಂದ ಅಲ್ಲಿ ಅನ್ವಯ ಹೊಂದಬೇಕು. ಆವಾಗ ಮಾತ್ರ ವಿಚಾರವಿಧಾಯಕ ಶ್ರುತಿಗಳಲ್ಲಿ ಬ್ರಹ್ಮನನ್ನು 'ಬ್ರಹ್ಮ' ಎಂದು ಕರೆದಿದೆ. ಓಂ ಎಂದು ಕರೆದಿದೆ ಎಂದು ಮುಂತಾಗಿ ಅನೇಕ ಯುಕ್ತಿಗಳನ್ನು ಸೂತ್ರವು ಸೂಚಿಸಬಲ್ಲುದು. ಈಗ ಓಂಕಾರವು ಬ್ರಹ್ಮಶಬ್ದಕ್ಕೆ ವಿಶೇಷಣ. ಬ್ರಹ್ಮಶಬ್ದವು ಮಾತ್ರ ಕರ್ಮರೂಪದಿಂದ ಜಿಜ್ಞಾಸೆಯಲ್ಲಿ ಅನ್ವಯ ಹೊಂದುತ್ತದೆಂದು ಹೇಳಿದರೆ ಓಂಕಾರಕ್ಕೆ ಅನ್ವಯ ದೊರೆತರೂ ಅನೇಕ ಯುಕ್ತಿಸೂಚನೆಯೆಂಬ ಉದ್ದೇಶ ನೆರವೇರುವುದಿಲ್ಲ.'

ಓಂಕಾರವು ಬ್ರಹ್ಮಶಬ್ದಕ್ಕೆ ವಿಶೇಷಣವೆ. ವಿಶಿಷ್ಟವೆ ಕರ್ಮರೂಪದಿಂದ ಜಿಜ್ಞಾಸೆಯಲ್ಲಿ ಅನ್ವಯ ಹೊಂದಲಿ. 'ಶುಕ್ಲಾಂ ಗಾಮಾನಯ' ಎಂಬಲ್ಲಿ ಶುಕ್ಲತ್ವವಿಶೇಷಣವು ಕರ್ಮಕಾರಕಾರ್ಥವಲ್ಲ. ವಿಶೇಷಣಗತವಿಭಕ್ತಿಗೆ ಪ್ರತ್ಯೇಕವಾಗಿ ಅನ್ವಯವಿಲ್ಲ. ಅದರಂತೆ ವಿಶಿಷ್ಟವು ಕರ್ಮವೆಂದಾದಾಗ ವಿಶೇಷಣ ವಿಶೇಷ್ಯಗಳೆರಡೂ ಕರ್ಮವೆಂದು ಸಿದ್ಧವಾಗುವುದು. ಅನೇಕ ಯುಕ್ತಿಸೂಚನೆಯೂ ಸಾಧ್ಯವಾಗುವುದು.

ಓಂ ಕಾರವು ಸೂತ್ರದಲ್ಲಿರುವುದಕ್ಕೆ ಮೇಲೆ ಹೇಳಿದ ಅನೇಕ ಯುಕ್ತಿಸೂಚನೆಯ ಜೊತೆಗೆ ಬೇರೆ ಪ್ರಯೋಜನವೂ ಇದೆ.

**ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್‌ಗುಣೋತತಾಮ್ ।**
**ಸ ಏವ ಬ್ರಹ್ಮಶಬ್ದಾರ್ಥೋ ನಾರಾಯಣಪದೋದಿತಃ ।**
**ಸ ಏವ ಭರ್ಗಶಬ್ದಾರ್ಥೋ ವ್ಯಾಹೃತೀನಾಂ ಚ ಭೂಮತಃ ।**
**ಭಾವನಾಚ್ಚೈವ ಸುತ್ವಾಚ್ಚ ಸೋಽಯಂ ಪುರುಷ ಇತ್ಯಪಿ ।**
**ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧಿಯತೇ ॥**

'ಪೂರ್ಣತ್ವವಾಚಕವಾದ ಓಂಕಾರವು ನಾರಾಯಣನ ಗುಣಪೂರ್ಣತ್ವವನ್ನು ಹೇಳುತ್ತದೆ. ಅದೇ ಬ್ರಹ್ಮಶಬ್ದದ ಅರ್ಥ. ನಾರಾಯಣಶಬ್ದವು ಹೇಳುವುದೂ ಅದನ್ನೇ. ವ್ಯಾಹೃತಿಗಳೂ ಅವನನ್ನೆ ಹೇಳುತ್ತವೆ. ಏಕೆಂದರೆ ಅವನು ಗುಣಪೂರ್ಣ, ಸೃಷ್ಟಿಕರ್ತ, ಸುಖಸ್ವರೂಪಿ ಭರ್ಗನೆಂದರೂ ಅವನೆ. ಪುರುಷನೆಂದರೂ

ಅವನೆ ಸಮಸ್ತ ವೇದಪ್ರತಿಪಾದ್ಯ. ಅಂಥ ನಾರಾಯಣನನ್ನು ಜಿಜ್ಞಾಸೆ ಮಾಡಬೇಕೆಂದು ವಿಧಿಯು ಹೇಳುತ್ತದೆ.' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ.

ಇದರಿಂದ ವ್ಯಾಹೃತಿ ಪುರುಷಸೂಕ್ತಗಳ ಮೂಲಕ ಸಮಸ್ತವೇದಗಳೂ ಈ ವಿಚಾರ ಶಾಸ್ತ್ರದಲ್ಲಿ ವಿಚಾರಕ್ಕೊಳಪಡುವ ಪ್ರಮಾಣಗಳು ಎಂದು ಓಂಕಾರವು ಸೂಚಿಸಿದಂತಾಗುತ್ತದೆ. ಸುಧೆಯು ಹೇಳುತ್ತ 'ತದ್ಯಥಾ ಸರ್ವಾಣಿ ಪರ್ಣಾನಿ ಶಂಕುನಾ ಸಂತೃಣ್ಣಾನಿ ಏವಮೋಂಕಾರೇಣೈವ ಸರ್ವಾವಾಕ್ ಸಂತೃಣ್ಣಾ ಎಂಬ ಶ್ರುತಿಯ ಬಲದಿಂದ 'ಸಮಸ್ತವೇದಗಳೂ ಇಲ್ಲಿ ವಿಚಾರಿಸಲ್ಪಡುತ್ತವೆ' ಎಂದು ಓಂಕಾರವು ಸಾಕ್ಷಾತ್ತಾಗಿಯೇ ಹೇಳುತ್ತಿದೆ. 'ನಾರಾಯಣೋಽಸೌ ಪರಮೋ ವಿಚಿಂತ್ಯಃ' ಈ ನಾರಾಯಣನು ಮುಖ್ಯವಾಗಿ ವಿಚಾರಯೋಗ್ಯ' ಇತ್ಯಾದಿ ವಿಚಾರವಿಧಿವಾಕ್ಯಗಳಲ್ಲಿ 'ನಾರಾಯಣ' ಮುಂತಾದ ಅನೇಕ ಶಬ್ದಗಳಿದ್ದರೂ ಓಂಕಾರವನ್ನೇ ಏಕೆ ಪ್ರಯೋಗಿಸಿದರು? ಎಂಬ ಪ್ರಶ್ನೆಗೆ 'ಅದೃಷ್ಟಾರ್ಥಂ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಪ್ರಶ್ನೆ :- ಸುಧೆಯಲ್ಲಿ 'ಅಖಿಲೈರ್ವೇದಪಾಠಕೈಃ' ಎಂದು ಆರಂಭಿಸಿ 'ದೃಷ್ಟಾಂತಸ್ಯ ಸಾಧ್ಯವಿಕಲತಾ' ಎಂಬಲ್ಲಿಯವರೆಗೆ ವೇದಾಧ್ಯಯನದ ಪ್ರಾರಂಭದಲ್ಲಿ ಎಲ್ಲರೂ ಉಚ್ಚರಿಸುವ ಓಂಕಾರವು ಮಂತ್ರದ ಭಾಗವೆಂದು ಸಮರ್ಥಿಸಲಾಗಿದೆ. ಇದು ಸರಿಯಲ್ಲ. ಅಧ್ಯಯನದ ಪ್ರಾರಂಭ ಸಮಾಪ್ತಿಸ್ಥಳಗಳು ಒಂದೊಂದು ಇರುವುದರಿಂದ ಆಯಾ ಸ್ಥಾನಗಳನ್ನು ಬಿಟ್ಟು ಬೇರೆ ಬೇರೆ ಸ್ಥಾನಗಳಲ್ಲಿ ಪಠಿಸುತ್ತಾರೆ. ಹಾಗಾಗಿ ಈ ಓಂಕಾರವು ವೇದದ ಭಾಗವಲ್ಲ. ಹೀಗೆ ಇವತ್ತು 'ಅಗ್ನಿಮೀಳೇ' ಎಂಬಲ್ಲಿ ಓಂಕಾರವನ್ನು ನಾಳೆ 'ವಾಯವಾ ಯಾಹಿ' ಎಂಬಲ್ಲಿ ಓಂಕಾರವನ್ನು ಪಠಿಸುವುದರಿಂದ 'ಓಂಕಾರಃ ನ ಮಂತ್ರಾವಯವಃ ಅಸಂಹಿತತಯಾ ಪಠ್ಯಮಾನತ್ವಾತ್' ಎಂದು ಸಾಧಿಸಬಹುದು. ವೇದದ ಭಾಗವೆ ಆಗಿದ್ದರೆ ಅಧ್ಯಯನ ಪ್ರಾರಂಭ ಸಮಾಪ್ತಿ ಸ್ಥಳಗಳು ಬೇರೆ ಬೇರೆಯಾಗಿದ್ದರೂ 'ಓಮಿತಿ ಬ್ರಹ್ಮ' ಎಂಬಂತೆ ಕ್ಲೃಪ್ತ ಸ್ಥಾನಗಳಲ್ಲಿಯೂ ಅದನ್ನು ಪಠಿಸಬೇಕಾದೀತು.

ಉತ್ತರ :- ಅಧ್ಯಯನ ಮಾಡುವ ಮಂತ್ರದ ಅರ್ಥದೊಡನೆ ಓಂಕಾರ ಹೇಳುವ ಪೂರ್ಣತ್ವ ಮುಂತಾದ ಅರ್ಥಕ್ಕೆ ಅನ್ವಯವಿರುವುದನ್ನು ಮನಸ್ಸಿನಲ್ಲಿ ತಂದುಕೊಡುವುದರ ಮೂಲಕ ಓಂಕಾರೋಚ್ಚಾರಣವು ಅಧ್ಯಯನ ಪ್ರಾರಂಭ ಸಮಾಪ್ತಿಗಳಿಗೆ ಅಂಗ ಅಥವಾ 'ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ' 'ಬ್ರಾಹ್ಮಣನು ಪ್ರವಚನದ ಆದಿಯಲ್ಲಿ ಓಂಕಾರವಾಚ್ಯನಾದ ಬ್ರಹ್ಮನ ಪ್ರಾಪ್ತಿ ನನಗಾಗಲಿ ಎಂಬ ಅಭಿಪ್ರಾಯದಿಂದ ಓಂ ಎಂದು ಉಚ್ಚರಿಸುತ್ತಾನೆ' ಎಂಬ ತೈತ್ತಿರೀಯೋಪನಿಷತ್ತಿನ ವಾಕ್ಯಕ್ಕೆ ವ್ಯಾಖ್ಯಾನ ಮಾಡುತ್ತಾ 'ಹೀಗೆ ವೇದಪ್ರವಚನ ಮಾಡುವವನೂ ಹೇಳುತ್ತಾನೆ' ಎಂದು ಭಾಷ್ಯದಲ್ಲಿ ಹೇಳಿದಂತೆ ಓಂಕಾರೋಚ್ಚಾರಣ ಮಾಡುವುದು ಅರ್ಥಾನುಸಂಧಾನದ ಮೂಲಕ ಅಧ್ಯಯನ ಪ್ರವಚನಗಳಿಗೆ ಅಂಗ ಎಂಬುದು ಸುಧೆಯ ಅಭಿಪ್ರಾಯ. ವೇದದ ಭಾಗವೆಂದಲ್ಲ. ಸ್ನಾನಾದಿಗಳನ್ನು 'ಓಂ' ಎಂದು ಅನುಮತಿ ನೀಡಿದರೆ ಓಂಕಾರವಾಚ್ಯನಾದವನು ನಿರ್ವಿಘ್ನವಾಗಿ ಕಾರ್ಯ ಮಾಡಿಸಲಿ ಎಂದರ್ಥ. ಅದರಂತೆ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

ಹೀಗೆ ಸೂತ್ರದ ಆದಿಯಲ್ಲಿ ಉಚ್ಚರಿಸಿದ ಓಂಕಾರಕ್ಕೆ ಅನೇಕ ಪ್ರಯೋಜನಗಳನ್ನು ಹೇಳಿದಂತಾಯಿತು.

* ಬ್ರಹ್ಮನು ವಿಚಾರಯೋಗ್ಯನೆಂಬುದಕ್ಕಾಗಿ ಅನೇಕ ಯುಕ್ತಿಗಳನ್ನು ಸೂಚಿಸುತ್ತಿದೆ.
* ವಿಷಯವಾಕ್ಯಗಳನ್ನು ಸೂಚಿಸುತ್ತಿದೆ.
* ಅದೃಷ್ಟಾರ್ಥವನ್ನು ಸೂಚಿಸುತ್ತಿದೆ.

ಹಾಗಾಗಿ ಪ್ರತಿಯೊಂದು ಸೂತ್ರಗಳ ಮೊದಲು ಮತ್ತು ಕೊನೆಯಲ್ಲಿ ಅವಶ್ಯವಾಗಿ ಓಂಕಾರವನ್ನು ಪಠಿಸಬೇಕು. ಪ್ರಥಮಸೂತ್ರದ ಮೊದಲಿರುವ ಓಂಕಾರಮಾತ್ರ ಅನೇಕ ಪ್ರಯೋಜನವುಳ್ಳದ್ದಾಗಿದೆ.




### ಓಂಕಾರ ಸೂತ್ರ ಘಟಕ

'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ವಚನಾನುಸಾರ ಬ್ರಹ್ಮಸೂತ್ರದಲ್ಲಿ ಪ್ರತಿಸೂತ್ರವೂ ಬ್ರಹ್ಮವಿದ್ಯೆಯಾಗಿರುವುದರಿಂದ ಆದ್ಯಂತಗಳಲ್ಲಿ ಓಂಕಾರ ಊಹಮಾಡಿಕೊಳ್ಳಬೇಕು. ಯದ್ಯಪಿ ಪೂರ್ವಮೀಮಾಂಸೆಯಲ್ಲಿ ಮಂತ್ರ ಸಾಮ ಸಂಸ್ಕಾರಗಳನ್ನು ಒಂದು ಬಗೆಯಾಗಿ ಪ್ರಕೃತಿಯಾಗದಲ್ಲಿ ಹೇಳಿದ್ದರೆ ವಿಕೃತಿಯಾಗದಲ್ಲಿ ಇನ್ನೊಂದು ಬಗೆಯಾಗಿ ಅನುಷ್ಠಾನ ಮಾಡುವುದನ್ನು 'ಊಹ' ಎಂದು ಕರೆಯಲಾಗಿದೆ. ಉದಾ: 'ಅಗ್ನಿ' ಪದಯುಕ್ತವಾದ ಮಂತ್ರ ಪ್ರಕೃತಿಯಾಗದಲ್ಲಿ ಇದೆ. ಅಲ್ಲಿ ಅಗ್ನಿ ದೇವತೆ. ಸೂರ್ಯದೇವತಾಕ ವಿಕೃತಿಯಾಗದಲ್ಲಿ ಆ ಮಂತ್ರವನ್ನೇ 'ಅಗ್ನಿ' ಪದದ ಸ್ಥಾನದಲ್ಲಿ 'ಸೂರ್ಯ' ಪದವನ್ನಿಟ್ಟು ಹೇಳಬೇಕು. ಹೀಗೆ ಪ್ರಕೃತದಲ್ಲಿ ಓಂಕಾರ ಊಹಕ್ಕೆ ಅದರ ಸ್ಥಾನದಲ್ಲಿ ಬೇರೆ ಶಬ್ದವಿಲ್ಲ ಎಂಬ ಸಮಸ್ಯೆ ಬರಬಹುದು. ಆದರೆ ಇಲ್ಲಿ 'ಊಹ' ಎಂದರೆ ಅಧ್ಯಾಹಾರ. ಊಹ ಧಾತುವಿನ ಮೇಲೆ ಭಾವಾರ್ಥದಲ್ಲಿ ಪ್ರತ್ಯಯ ಬಂದಿದೆ. ಕರ್ಮಾರ್ಥದಲ್ಲಿ ಅಲ್ಲ.

ಅಧ್ಯಾಹಾರಕ್ಕೂ ಆಕಾಂಕ್ಷೆ ಬೇಕಲ್ಲವೆ? 'ಸಂ ಯಜ್ಞಪತಿರಾಶಿಷಾ' ಎಂಬಲ್ಲಿ 'ಯಜಮಾನನಿಗೆ ಅಭೀಷ್ಟ' ಎಂದಿಷ್ಟೇ ಹೇಳಿದೆ. 'ಸಿದ್ಧಿಸಲಿ' ಎಂದು ಅಧ್ಯಾಹಾರ ಮಾಡದಿದ್ದರೆ ಆಕಾಂಕ್ಷೆ ಶಾಂತವಾಗುವುದಿಲ್ಲ. ಇಲ್ಲಿ ಸೂತ್ರದಲ್ಲಿ ಓಂಕಾರದ ಅಧ್ಯಾಹಾರಕ್ಕೆ ಆಕಾಂಕ್ಷೆ ಇಲ್ಲ ಎಂದು ಆಕ್ಷೇಪ ಬಂದರೆ ಆಕಾಂಕ್ಷೆ ಇಲ್ಲದಿದ್ದರೂ 'ಸ್ರವತ್ಯನೋಂಕೃತಂ ಬ್ರಹ್ಮ' ಎಂಬ ವಚನದಲ್ಲಿ ವಿಹಿತವಾದ್ದರಿಂದ ಅಧ್ಯಾಹಾರ ಮಾಡುತ್ತೇವೆ ಎಂದು ಸಮಾಧಾನ.

ಅಧ್ಯಾಹಾರ ಮಾಡಿದ ಶಬ್ದಕ್ಕೆ ವಾಕ್ಯದಲ್ಲಿ ಅನ್ವಯ ಬೇಕು. ಓಂ ಎಂದರೆ ಗುಣಪೂರ್ಣ ಎಂದರ್ಥ. ಇದನ್ನು ಬ್ರಹ್ಮಶಬ್ದದೊಂದಿಗೇ ಅನ್ವಯ ಮಾಡಬೇಕು. 'ಗುಣಪೂರ್ಣನಾದ ಬ್ರಹ್ಮ' ಎಂದು. ಆದರೆ 'ಬ್ರಹ್ಮಜಿಜ್ಞಾಸಾ' ಎಂಬ ಸಮಾಸದಲ್ಲಿ ಸೇರಿ ಹೋಗಿರುವ ಬ್ರಹ್ಮಶಬ್ದದೊಡನೆ ಹೊರಗಿರುವ ಓಂಕಾರದ ಅನ್ವಯವಾಗಲು ಶಕ್ಯವಿಲ್ಲ ಎಂದು ಆಕ್ಷೇಪ ಬರುತ್ತದೆ. ಆದರೆ 'ಹದಿನೇಳು ಮೊಳ ವಾಜಪೇಯದ ಯೂಪ' ಎಂದು ಶ್ರುತಿಯು ಹೇಳಿದಾಗ ವಾಜಪೇಯದಲ್ಲಿ ಯೂಪವೇ ಇಲ್ಲ. ಅದರ ಅಂಗವಾದ ಪಶುಯಾಗದಲ್ಲಿ ಇದೆ. ಆದರಿಂದ ಅನ್ವಯ ಕೂಡುವುದಿಲ್ಲ. ಆದರೂ 'ದೇವದತ್ತನ ಮೊಮ್ಮಗ'. ಇಲ್ಲಿ ಮೊಮ್ಮಗನಿಗೆ ದೇವದತ್ತನ ನೇರ ಸಂಬಂಧವಿಲ್ಲದಿದ್ದರೂ ಮಗನ ಮೂಲಕ ಇದೆ. ಹಾಗೇ ಯೂಪಕ್ಕೆ ವಾಜಪೇಯದ ಸಂಬಂಧ ಅದರ

ಅಂಗವಾದ ಪಶುಯಾಗದ ಮೂಲಕ ಇದೆ. ಆದರಿಂದ ಹದಿನೇಳು ಮೊಳ ಎತ್ತರ ಪ್ರಮಾಣ ಪ್ರಧಾನವಾದ ವಾಜಪೇಯಕ್ಕೆ ಸಂಬಂಧಿಸಿದಂತೆ ಮೊದಲಿಗೆ ಕಂಡರೂ ಅದು ಅಶಕ್ಯವಾದ್ದರಿಂದ ಅಂಗವಾದ ಪಶುಯಾಗಕ್ಕೆ ಸಂಬಂಧಿಸುತ್ತದೆ. ಹಾಗೆಯೆ ಸಮಾಸದಲ್ಲಿ ಪ್ರಧಾನವಾದ ಜಿಜ್ಞಾಸೆ ಗುಣಪೂರ್ಣವೆನಿಸದಿರುವುದರಿಂದ ಅಂಗವಾದ ಬ್ರಹ್ಮ ಗುಣಪೂರ್ಣ ಎಂದು ಅನ್ವಯ ಹೊಂದುತ್ತದೆ. 'ಯಜೇತ' 'ಯಾಗದಿಂದ ಇಷ್ಟ ಸಂಪಾದಿಸಬೇಕು' ಇಲ್ಲಿ ಅರ್ಥವಾದವು ಹೇಳುವ ಪ್ರಾಶಸ್ತ್ಯ ಅಪ್ರಧಾನವಾದ ಯಾಗಕ್ಕೆ ಸಂಬಂಧಿಸುತ್ತದೆ. 'ದಂಡವನ್ನು ಹಿಡಿದ ಮೈತ್ರಾವರುಣನು ಪ್ರೈಷ ಅನುವಾಕ್ಯಗಳನ್ನು ಪಠಿಸಬೇಕು' ಇಲ್ಲಿ ಮೈತ್ರಾವರುಣ ದಂಡ ಹಿಡಿಯಬೇಕೆನ್ನುವುದೂ ಅವನು ಪ್ರೈಷಾದಿಮಂತ್ರ ಪಠಿಸಬೇಕೆನ್ನುವುದೂ ಬೇರೆ ವಿಧಿ ವಾಕ್ಯಗಳಿಂದ ಸಿದ್ಧವಾಗಿದೆ. ಪಠನ ಕಾಲದಲ್ಲಿ ದಂಡ ಹಿಡಿಯಬೇಕೆಂದು ವಿಧಿಸುವ ಅಭಿಪ್ರಾಯ ಈ ವಾಕ್ಯಕ್ಕೆ ಇದೆ. ಆದರಿಂದ 'ದಂಡಿ' ಎಂಬಲ್ಲಿ ದಂಡ ವಿಶೇಷಣವಾಗಿದ್ದರೂ ಅದಕ್ಕೇ ವಿಧಿಯ ಅನ್ವಯವಾಗುತ್ತದೆ ಪ್ರಕೃತದಲ್ಲಿಯೂ ಓಂಕಾರ ಸಮಾಸದಲ್ಲಿ ವಿಶೇಷಣವಾದ ಬ್ರಹ್ಮನಿಗೆ ಅನ್ವಯಿಸುತ್ತವೆ.

ಬ್ರಹ್ಮಶಬ್ದಕ್ಕೂ ಗುಣಪೂರ್ಣ ಎಂದೇ ಅರ್ಥ. ಓಂಕಾರಕ್ಕೂ ಅದೇ ಅರ್ಥವೆಂದರೆ ವ್ಯರ್ಥವಾಗುವುದಿಲ್ಲವೆ? ಎಂದರೆ, ಬ್ರಹ್ಮ ಜೀವನಿಗಿಂತ ಭಿನ್ನನಾಗಿದ್ದು ವಿಚಾರಯೋಗ್ಯನೆನ್ನಲು 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬಲ್ಲಿ ಗುಣಪೂರ್ಣ ಎಂಬ ಅರ್ಥದ ಬ್ರಹ್ಮಶಬ್ದವಿರುವಂತೆ 'ಓಮಿತ್ಯೇತದಕ್ಷರ ಮುದ್ಗೀಥಮುಪಾಸೀತ' ಎಂಬಲ್ಲಿ ಅದೇ ಅರ್ಥದ ಓಂಕಾರವಿದೆ. ಇದು ಉಪಲಕ್ಷಣ. 'ನಾರಾಯಣಂ ಮಹಾಜ್ಞೇಯಂ' ಎಂಬಲ್ಲಿ ಅದೇ ಅರ್ಥದ ನಾರಾಯಣ ಶಬ್ದವಿದೆ. ಹೀಗೆ ಅನೇಕ ವಿಚಾರವಿಧಿ ವಾಕ್ಯಗಳಲ್ಲಿ ಅನೇಕ ಸಿದ್ಧಾಂತ ಯುಕ್ತಿಗಳಿವೆ ಎಂದು ಸೂಚಿಸಲು ಓಂಕಾರ ಸೂತ್ರದಲ್ಲಿ ಬೇಕು.

ಒಂದೇ ಅರ್ಥದ ಎರಡು ಶಬ್ದಗಳಿಗೆ ಅನ್ವಯ ಹೇಳಿದರೆ 'ಗುಣಪೂರ್ಣನಾದ ಗುಣಪೂರ್ಣ' ಎಂದಾದೀತೆಂಬ ಸಮಸ್ಯೆ ಬಂದರೆ ಎರಡೂ ವಿಷ್ಣು ಎಂಬರ್ಥದಲ್ಲಿ ಯೋಗರೂಢವಾಗಿರುವುದರಿಂದ ಒಂದರ ಯೋಗಾಂಶವನ್ನು ಇನ್ನೊಂದರ ರೂಢ್ಯಂಶವನ್ನೂ ಇಟ್ಟುಕೊಂಡು ಅನ್ವಯ ಹೇಳಬೇಕು. 'ಆತ್ಮೇತಿ ತೂಪಗಚ್ಛಂತಿ' ಸೂತ್ರದಲ್ಲಿ ಸುಧೆಯಲ್ಲಿ ಎರಡು ಆತ್ಮ ಶಬ್ದಗಳಿಗೆ ಹಾಗೇ ಅನ್ವಯವೆಂದು ಹೇಳಿದೆ. 'ಪ... ಯದಿಂದ್ರ ರೋದಸೀ ಉಭೇ' ಎಂಬ ಮಂತ್ರವ್ಯಾಖ್ಯಾನದಲ್ಲಿ ಋಗ್ಭಾಷ್ಯ ಟೀಕೆಯಲ್ಲಿ ಎರಡು ಇಂದ್ರಶಬ್ದಗಳಿಗೆ ಹಾಗೇ ಅನ್ವಯ ಉಕ್ತವಾಗಿದೆ.

ಓಂಕಾರಪ್ರತಿಪಾದ್ಯನಾದ ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕೆಂದು ಹೇಳುವುದಕ್ಕೆ ಇನ್ನೊಂದು ಪ್ರಯೋಜನವಿದೆ. ಓಂಕಾರಾರ್ಥವೆ ವ್ಯಾಹೃತಿ ಗಾಯತ್ರಿ ಪುರುಷಸೂಕ್ತಗಳ ಮೂಲಕ ಸಮಸ್ತವೇದಾರ್ಥ ಆದರಿಂದ ಸಮಸ್ತವೇದಗಳು ಈ ವಿಚಾರಶಾಸ್ತ್ರದಲ್ಲಿ ವಿಚಾರಕ್ಕೊಳಪಡುವ ಪ್ರಮಾಣಗಳು ಎಂದು ಸೂಚಿಸಿದಂತಾಗುತ್ತದೆ. 'ಸ್ರವತ್ಯನೋಂಕೃತಂ ಬ್ರಹ್ಮ' ಎನ್ನುವಂತೆ ಅದೃಷ್ಟಫಲಕ್ಕಾಗಿಯೂ ಓಂಕಾರ ಬೇಕು.

ಹೀಗೆ ಪ್ರಥಮಸೂತ್ರದ ಆದಿಯ ಓಂಕಾರಕ್ಕೆ ಅನ್ವಯವಿರುವುದರಿಂದ ದೃಷ್ಟಫಲವೂ ಇದೆ, 'ಸ್ರವತಿ' ಎಂಬಂತೆ ಅದೃಷ್ಟ ಫಲವೂ ಇದೆ. ಸ್ವಿಷ್ಟಕೃತ್ ಮುಂತಾದ ಯಾಗಗಳಲ್ಲಿ ಮಂತ್ರೋಚ್ಚಾರಣೆಯ ಅಂಶದಲ್ಲಿ ದೇವತಾಸ್ಮರಣ, ಹವಿಸ್ಸನ್ನು ಹಾಕುವ ಅಂಶದಲ್ಲಿ ಹವಿಸ್ಸಿನ ವಿನಿಯೋಗಗಳೆಂದು ದೃಷ್ಟಫಲಗಳಿರುವಾಗಲೇ ಜೊತೆಗೆ ತ್ಯಾಗಾಂಶದಲ್ಲಿ ಅದೃಷ್ಟಫಲವೂ ಇದೆ. ಸೂತ್ರದ ಕೊನೆಯಲ್ಲಿ ಓಂಕಾರಕ್ಕೆ ಕೇವಲ ಅದೃಷ್ಟ ಫಲ. ಹಾಗೆ ಮುಂದಿನ ಸೂತ್ರಗಳಲ್ಲಿಯೂ ಕೇವಲ ಅದೃಷ್ಟ ಫಲ. ಒಂದು ಕಡೆ ದೃಷ್ಟ ಫಲವಿದ್ದ ಮಾತ್ರಕ್ಕೇ ಬೇರೆ ಕಡೆಯೂ

ಪರಿಪೂರ್ಣಚಂದ್ರಿಕಾ

ದೃಷ್ಟ ಫಲವೆ ಇರಬೇಕೆಂದಿಲ್ಲ. ಕರ್ಮಾಂಗ ಮಂತ್ರಗಳಿಗೆ ಕರ್ಮಕಾಲದಲ್ಲಿ ದೇವತಾಸ್ಮರಣ ರೂಪ ದೃಷ್ಟ ಫಲ. ಪಾರಾಯಣ ಜಪಾದಿ ಕಾಲದಲ್ಲಿ ಅದೃಷ್ಟ ಫಲವಿರುವುದುಂಟು. ಏಕಪಶುಕ ಯಾಗದಲ್ಲಿ 'ಅನ್ವೇನಂ ಮಾತಾ ಮನ್ಯತಾಂ' ಎಂದು ಏಕವಚನಾಂತ ಮಾತೃ ಶಬ್ದ ದೃಷ್ಟ ಫಲಕವಾದರೂ ಅನೇಕ ಪಶುಕವಾದ ಯಾಗಗಳಲ್ಲಿ ಅದೃಷ್ಟ ಫಲಕವಾಗುತ್ತದೆ. ಅಲ್ಲಿ ಮಾತೃ ಶಬ್ದವನ್ನು ಬಹುವಚನಾಂತವಾಗಿ ಪರಿಣಾಮ ಮಾಡಿಕೊಳ್ಳುವುದಿಲ್ಲ. 'ಮಾತುಃ ಪಯೋಧರರಸಂ ನ ಪುನಃ ಪಿಬಂತಿ' ಎಂಬಲ್ಲಿ ಮಾತೃಶಬ್ದಕ್ಕೆ 'ಆಯಾ ಮಾನವನ ತಾಯಿ' ಎಂದರ್ಥ. ಹಾಗೇ 'ಅನ್ವೇನಂ ಮಾತಾ' ಎಂಬಲ್ಲಿಯೂ 'ಆಯಾ ಪಶುವಿನ ತಾಯಿ' ಎಂದು ಅರ್ಥ ಕೊಡುವುದರಿಂದ ದೃಷ್ಟ ಫಲಕವೆ ಆಗಿದೆ ಎಂದು ಆಕ್ಷೇಪಿಸುವುದು ಸರಿಯಲ್ಲ. ಅನೇಕ ತಾಯಂದಿರು ನೀಡುವ ಅನುಮತಿಯನ್ನು ಒಬ್ಬಳು ನೀಡಲಾರರು. ಅದಕ್ಕೆ ಬಹುವಚನಾಂತವಾಗಿಯೆ ಮಾಡಬೇಕಾಗುತ್ತದೆ. ಮಾತುಃ ಪಯೋಧರ ರಸಂ ಎಂಬುದು ಗೌಣಪ್ರಯೋಗವೆ. 'ಬಹುಗಣ ವತುಡತಿ ಸಂಖ್ಯಾ' ಎಂಬಲ್ಲಿ 'ಸಂಖ್ಯಾ'ಎಂಬುದು ಒಂದು ಹೆಸರು. 'ಷ್ಣಾಂತಾಃ ಷಟ್' ಎಂಬಲ್ಲಿ ಬರುವ ಅದೇ ಶಬ್ದಕ್ಕೆ ಆ ಹೆಸರಿನ ಶಬ್ದಗಳು ಎಂದರ್ಥ. ಹೀಗೆ ಓಂಕಾರಕ್ಕೆ ಬೇರೆ ಬೇರೆ ಸೂತ್ರಗಳಲ್ಲಿ ಬೇರೆ ಬೇರೆ ಪ್ರಯೋಜನಗಳಿರಬಹುದು.

ಹೀಗೆ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳುವ ಈ ಓಂಕಾರ ಸೂತ್ರದ ಭಾಗವೆ. ಅಂದರೆ ಸೂತ್ರದೊಡನೆ ಸೇರಿ ವಾಕ್ಯಾರ್ಥ ಬೋಧವನ್ನಾಗಲಿ ಅದೃಷ್ಟ ಫಲವನ್ನಾಗಲಿ ಮಾಡಿಕೊಡಬಹುದು, ಅಥವಾ ಎರಡನ್ನೂ ಮಾಡಿಕೊಡಬಹುದು. ಇದನ್ನು ಒಪ್ಪದಿದ್ದರೆ 'ಸಂ ಯಜ್ಞಪತಿರಾಶಿಷಾ' ಎಂಬಲ್ಲಿ ಅಧ್ಯಾಹಾರ ಮಾಡಿಕೊಳ್ಳುವ 'ಗಚ್ಛತಾಂ' ಎಂಬ ಪದ ಅನನ್ವಿತವೆನ್ನಬೇಕಾದೀತು. ಈ ಅಭಿಪ್ರಾಯದಿಂದ ಸುಧಾದಲ್ಲಿ 'ಅಧ್ಯಾಹೃತವಾದ ಶಬ್ದವಾಕ್ಯಘಟಕವಲ್ಲವೆನ್ನುವಂತಿಲ್ಲ' ಎನ್ನಲಾಗಿದೆ.

• • • • •

## ಓಂಕಾರ ವಿಷಯದಲ್ಲಿ ಸುಧೆಗೂ ಸನ್ನ್ಯಾಯರತ್ನಾವಳಿಗೂ ವಿರೋಧ ಪರಿಹಾರ

**तात्पर्यचन्द्रिका –**

**सन्न्यायरत्नावल्यां तु ''ओङ्कारस्तु पृथगुच्चारितो वेदितव्यः । नाथशब्दवत् सूत्रोपनिबद्धः'' इति सूत्रात् पार्थक्यमेवोक्तम् । तत्रानुव्याख्याने ''ओतत्ववाची'' इत्यादिना तदर्थकथनं, सर्ववेदव्याख्येयोङ्कारार्थवाचकश्रीनारायणपदवाच्यस्य सर्ववेदार्थत्वात् शास्त्रविषयत्वमित्यभिप्रेत्य । नतु सूत्रार्थतया । अन्यथा भर्गादिपदानामपि सूत्रावयवत्वं स्यात् । ''स एव भर्गशब्दार्थः'' इति तदर्थस्यापि कथनादिति भावः । यद्वा – माऽस्तु ''स्रवत्यनोङ्कृतं'' इत्यनेन साधारणोङ्कारस्याय-सूत्रावयवता । तथापि –**

"ओङ्कारश्चाथशब्दश्च तस्मात् प्राथमिकौ क्रमात् ।
तद्धेतुत्वं वदंश्चापि तृतीयोऽत उदाहृतः ।
अतश्च पूर्वमुच्चार्याः सर्व एते सतां मताः" ।। इति

**भाष्योदाहृतस्मृत्या अथातश्शब्दतुल्यतया आद्यसूत्रावयवताया उक्तत्वात्, अनुव्याख्याने "तत्र ताराद्यमूलत्वम्" इत्यथशब्दतुल्यतयोङ्कारस्य आद्यसूत्रावयवत्वोक्तिर्युक्ता । एवंच सन्न्यायरत्नावली "स्रवति" इत्यादि श्रुतिप्रापितसाधारणोङ्कारविषया । सुधा तु "ओङ्कारश्च" इत्यादिस्मृतिप्रापितासाधारणोङ्कारविषयेति द्रष्टव्यम् । यद्वा – सन्न्यायरत्नावल्युक्तं पृथक्त्वमूलमानत्वं, नतु वाक्येऽनन्वय इत्यविरोध इत्यादि द्रष्टव्यम् ।**

ಅನುವಾದ - ಸನ್ನ್ಯಾಯರತ್ನಾವಲಿಯಲ್ಲಾದರೂ 'ಪೃಥಗೋಂಕ್ರಿಯತೇ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಿಸುತ್ತಾ ಹೀಗೆ ಹೇಳಲಾಗಿದೆ - 'ಓಂಕಾರವನ್ನು ಸೂತ್ರದಲ್ಲಿ ಸೇರಿಸದೆ ಭಿನ್ನವಾಗಿ ಉಚ್ಚರಿಸಲಾಗಿದೆ ಎಂದು ತಿಳಿಯಬೇಕು. ಹೊರತು 'ಅಥ' ಶಬ್ದದಂತೆ ಅದನ್ನು ಸೂತ್ರದಲ್ಲಿ ಸೇರಿಸಿಲ್ಲ' ಎಂದು. ಸನ್ನ್ಯಾಯರತ್ನಾವಲಿಯ ಈ ಮಾತಿನಿಂದ ಓಂಕಾರವು ಸೂತ್ರದ ಅವಯವವಲ್ಲವೆಂದೇ ತಿಳಿಯುತ್ತದೆ. ಹಾಗಾದರೆ 'ಪೂರ್ಣತ್ವವಾಚಿಯಾಗಿದೆ ಓಂಕಾರವು' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡಿದ್ದು ಅಸಂಗತವಾಯಿತು. ಆದ್ದರಿಂದ ಸನ್ನ್ಯಾಯರತ್ನಾವಲಿಯ ಅಭಿಪ್ರಾಯ ಸರಿಯಲ್ಲ. ಹೀಗೆ ಹೇಳಬಾರದು. ಅನುವ್ಯಾಖ್ಯಾನದಲ್ಲಿ ಓಂಕಾರದ ಅರ್ಥವನ್ನು ಏಕೆ ಹೇಳಿದ್ದು? ಎಂದರೆ ಓಂಕಾರದ ವ್ಯಾಖ್ಯಾನವೇ ಎಲ್ಲಾ ವೇದಗಳು ಈ ಓಂಕಾರ ಹೇಳುವ ಅರ್ಥವನ್ನೇ ನಾರಾಯಣಶಬ್ದವೂ ಹೇಳುತ್ತಿದೆ. ಹೀಗೆ ನಾರಾಯಣಪದದಿಂದ ವಾಚ್ಯನಾದವನೇ ಸರ್ವವೇದಪ್ರತಿಪಾದ್ಯನಾದ್ದರಿಂದ ಅವನೇ ಶಾಸ್ತ್ರಪ್ರತಿಪಾದ್ಯನೂ ಆಗಿದ್ದಾನೆ ಎಂಬ ವಿಷಯವನ್ನು ತಿಳಿಸುವುದಕ್ಕಾಗಿ ಓಂಕಾರಕ್ಕೆ ವ್ಯಾಖ್ಯಾನ ಮಾಡಲಾಗಿದೆ. ಹೊರತು ಓಂಕಾರವು ಸೂತ್ರದ ಅವಯವವೆಂಬ ಅಭಿಪ್ರಾಯದಿಂದ ವ್ಯಾಖ್ಯಾನಿಸಿದ್ದಲ್ಲ.

ಒಂದು ವೇಳೆ ಅನುವ್ಯಾಖ್ಯಾನದಲ್ಲಿ ಓಂಕಾರವನ್ನು ವ್ಯಾಖ್ಯಾನಿಸಿದ್ದಾರೆ. ಎಂಬಷ್ಟೇ ಕಾರಣದಿಂದ ಸೂತ್ರದ ಅವಯವವೆಂದು ಹೇಳುವುದಾದರೆ 'ಭರ್ಗ' ಮೊದಲಾದ ಶಬ್ದಗಳನ್ನೂ ಅಲ್ಲಿಯೇ ವ್ಯಾಖ್ಯಾನಿಸಿದ್ದಾರೆ. ಹಾಗಾಗಿ ಅವುಗಳೂ ಸಹ ಸೂತ್ರದ ಅವಯವವೆಂದೇ ಆಗಬೇಕಾದೀತು. 'ಅವನೇ ಭರ್ಗಶಬ್ದಪ್ರತಿಪಾದ್ಯನೂ ಆಗಿದ್ದಾನೆ' ಇತ್ಯಾದಿಯಾಗಿ ವ್ಯಾಖ್ಯಾನಿಸಲಾಗಿದೆ.

ಅಥವಾ ಮತ್ತೊಂದು ಬಗೆಯಲ್ಲಿಯೂ ಸಮಸ್ಯೆಯನ್ನು ಪರಿಹರಿಸಬಹುದು - ಪ್ರಥಮ

ಸೂತ್ರದಲ್ಲಿ ಒಟ್ಟು ಮೂರು ಓಂಕಾರಗಳಿವೆ. ಮೊದಲ ಎರಡು ಓಂಕಾರಗಳಲ್ಲಿ ಮೊದಲನೆಯದು 'ಪ್ರವಕ್ಯನೋಂಕೃತಂ' ಇತ್ಯಾದಿ ಶ್ರುತಿವಿಹಿತವಾದದ್ದು. ಈ ಓಂಕಾರವು ಎಲ್ಲಾ ಸೂತ್ರಗಳಿಗೂ ಸಂಬಂಧಪಟ್ಟಿದೆ. ಹಾಗಾಗಿ ಇದು ಸೂತ್ರದ ಭಾಗವಾಗಲಾರದು. ಆದರೆ ಎರಡನೆಯ ಓಂಕಾರವು ಸೂತ್ರದ ಭಾಗವೆಂದೇ ಸ್ಮೃತಿಸಿದ್ಧವಾಗಿದೆ. ಸ್ಮೃತಿಯು ಹೀಗಿದೆ - ಸೂತ್ರದ ಪ್ರಾರಂಭದಲ್ಲಿ ಓಂಕಾರ ಮತ್ತು 'ಅಥ' ಶಬ್ದಗಳು ಕ್ರಮವಾಗಿ ಬರಬೇಕು. ಬ್ರಹ್ಮವಿಚಾರಕ್ಕೆ ಮೋಕ್ಷಪ್ರಯೋಜನವನ್ನು ಹೇಳುವ 'ಅತಃ' ಶಬ್ದವು ಮೂರನೆಯದಾಗಿ ಹೇಳಬೇಕು. ಏಕೆಂದರೆ ಸೃಷ್ಟಿಯ ಪ್ರಾರಂಭದಲ್ಲಿ ಪರಮಾತ್ಮನು 'ಓಂ' ಮತ್ತು 'ಅಥ' ಶಬ್ದಗಳನ್ನು ಕ್ರಮವಾಗಿ ಉಚ್ಚರಿಸಿ ಅನಂತರ 'ಅತಃ' ಎಂಬ ಶಬ್ದವನ್ನು ಮೂರನೆಯದಾಗಿ ಉಚ್ಚರಿಸಿದ್ದಾನೆ. ಆದ್ದರಿಂದ ಸೂತ್ರದ ಪ್ರಾರಂಭದಲ್ಲಿ 'ಓಂ' 'ಅಥ' 'ಅತಃ' ಈ ಮೂರು ಶಬ್ದಗಳನ್ನು ಕ್ರಮವಾಗಿ ಉಚ್ಚರಿಸಬೇಕೆಂಬ ವಿಚಾರವು ಸಜ್ಜನರಿಗೆ ಸಮ್ಮತವಾದದ್ದು ಎಂದು. ಹೀಗೆ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಿಂದ ಅಥ ಮತ್ತು ಅತಃ ಶಬ್ದಗಳಂತೆ ಓಂಕಾರವೂ ಮೊದಲನೆಯ ಸೂತ್ರದ ಅವಯವವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ತತ್ರ ತಾರಾಥಮೂಲತ್ವಂ' ಎಂದು ಅಥ ಶಬ್ದದಂತೆ ಓಂಕಾರವೂ ಸೂತ್ರದ ಅವಯವವೆಂದು ಹೇಳಿದ್ದು ಕೂಡುತ್ತದೆ. ಹಾಗಾಗಿ ಸನ್ನ್ಯಾಯರತ್ನಾವಲಿಯು 'ಪ್ರವಕ್ಯನೋಂಕೃತಂ' ಇತ್ಯಾದಿ ಶ್ರುತಿವಿಹಿತವಾದ ಮೊದಲನೆಯ ಓಂಕಾರವನ್ನು ಸೂತ್ರದ ಅವಯವವಲ್ಲವೆಂದು ಹೇಳುತ್ತಿದೆ. ಈ ಓಂಕಾರವು ಸಕಲಸೂತ್ರಸಾಧಾರಣವಾಗಿದೆ. ನ್ಯಾಯಸುಧೆಯು 'ಓಂಕಾರಶ್ಚಾಥ' ಇತ್ಯಾದಿ ಸ್ಮೃತಿಸಿದ್ಧವಾದ ಎರಡನೆಯ ಓಂಕಾರವನ್ನು ಸೂತ್ರದ ಅವಯವವೆಂದು ಹೇಳುತ್ತಿದೆ. ಹಾಗಾಗಿ ಎರಡೂ ಗ್ರಂಥಕ್ಕೆ ವಿರೋಧ ಬರಲು ಸಾಧ್ಯವೇ ಇಲ್ಲ.

ಅಥವಾ ಸನ್ನ್ಯಾಯರತ್ನಾವಲಿಯ 'ಪೃಥಗುಚ್ಚಾರಿತಃ' ಎಂಬ ಶಬ್ದಕ್ಕೆ ಹೀಗೂ ವ್ಯಾಖ್ಯಾನಿಸಬಹುದು - ''ಅಥ ಶಬ್ದವು ಹೇಗೆ ಈ ಸೂತ್ರಕ್ಕೆ ಮಾತ್ರ ಸಂಬಂಧಿಸಿದೆಯೋ ಹಾಗೆ ಓಂಕಾರವು ಈ ಸೂತ್ರಕ್ಕೆ ಮಾತ್ರ ಸಂಬಂಧಪಟ್ಟಿದ್ದಲ್ಲ. ಎಲ್ಲಾ ಸೂತ್ರಗಳಿಗೂ ಸಂಬಂಧಿಸುವಂತೆ ಪ್ರತ್ಯೇಕವಾಗಿ ಉಚ್ಚರಿಸಲಾಗಿದೆ'' ಇಷ್ಟೇ ಅರ್ಥ ಹೊರತು ಸೂತ್ರಾರ್ಥದಲ್ಲಿ ಓಂಕಾರಾರ್ಥಕ್ಕೆ ಅನ್ವಯವಿಲ್ಲವೆಂದು ಅರ್ಥವಲ್ಲ. ಹೀಗೆ ಅವಿರೋಧವನ್ನು ಅನೇಕ ರೀತಿಯಾಗಿ ತಿಳಿಯಬೇಕು.

**ಕಠಿಣಪದಾರ್ಥ**

**ಪೃಥಗುಚ್ಚಾರಿತಃ** = ಸೂತ್ರದಿಂದ ಪ್ರತ್ಯೇಕವಾಗಿ ಉಚ್ಚರಿಸಲ್ಪಟ್ಟದೆಂದು. **ಸೂತ್ರೋಪನಿಬದ್ಧಃ** = ಸೂತ್ರದಲ್ಲಿ ಸೇರಿದ್ದು. **ತತ್ರ** = ಇವರ ಪ್ರಕಾರ. **ತದರ್ಥಕಥನಮ್** = ಓಂಕಾರದ ಅರ್ಥವನ್ನು ಹೇಳಿದ್ದು. **ಅನ್ಯಥಾ** = ಸೂತ್ರದ ಅವಯವವಾದ್ದರಿಂದಲೇ ಅರ್ಥ ಹೇಳಿದ್ದಾರೆಂದು. **ಊಹ್ಯಮಾನತ್ವಮ್** = ಎಲ್ಲ ಸೂತ್ರಗಳಲ್ಲಿ ಊಹಿಸಿಕೊಳ್ಳಲು. **ಅನನ್ವಯಃ** = ಸೂತ್ರಾರ್ಥದಲ್ಲಿ ಅನ್ವಯವಿಲ್ಲ.

*ಜಿಜ್ಞಾಸಾಧಿಕರಣ*

**प्रकाशः** – एवं सुधोक्तमवयवत्वं समर्थ्य प्राचीनानुव्याख्यानटीकाऽऽशयमाह ।। **सन्न्यायरत्नावल्यां त्विति** ।। तुशब्दसूचितं सुधातो विशेषमाह ।। **ओङ्कारस्त्विति** ।। ''पृथगोङ्क्रियते'' इत्यस्यार्थः – 'पृथगुच्चरितो वेदितव्यः' इति । ननु सूत्रानवयवत्वे ''ओतत्ववाची ह्योङ्कारः'' इत्योङ्कारार्थोक्तिरसङ्गतेत्यत आह ।। **तत्रेति** ।। एतन्मत इत्यर्थः । वेदव्याख्येयो ह्योङ्कारः प्रसिद्धः । ''ओङ्कारेणैव सर्वा वाक् सन्तृण्णा'' इत्यादेः । तस्य च योऽयं गुणौतत्वरूपोऽर्थः, तस्य वाचको नारायणशब्दः । तदर्थस्य सर्ववेदार्थत्वान्नारायणस्यैव शास्त्रविषयत्वमिति भावेनेत्यर्थः ।। **अन्यथेति** ।। सूत्रावयवस्यैव अर्थकथने । ननु तर्हि वचनद्वयस्य प्रामाण्यादेकस्यैव अवयवत्वानवयवत्वे कथं स्याताम् । नच व्रीहियववद् विकल्पः । वस्तुनि विकल्पायोगात् । नच ''विप्रतिषेधे परम्'' इति परस्य प्राबल्यम् । पूर्वस्यापि नुटः नुमचिरतृज्वद्भावेभ्यः प्राबल्यदर्शनादित्याशङ्क्य, भिन्नविषयतया न विरोध इत्याह ।। **यद्वेति** ।। अयमर्थः । यथा ह्यष्टाक्षरादावेक ओङ्कारस्तदवयवः अन्यौ च द्वावदृष्टार्थौ, एवमाद्यसूत्रेऽप्येकस्तदवयवोऽन्यौ चाद्यन्तयोरदृष्टार्थाविति त्रय ओङ्काराः । तत्राद्यस्यादृष्टार्थस्य तदनवयवत्वम्, अन्यस्य तु ओतत्वरूपार्थबोधनेन तदवयवत्वमिति । अदृष्टार्थकोङ्कारसत्त्वे मानमाह ।। **स्रवतीति** ।। दृष्टार्थकतत्सत्त्वे मानमाह ।। **ओङ्कारश्चेति** ।। ननु श्रुतिप्रापितस्यैवोङ्कारस्य स्मृतिविषयत्वसम्भवान्नोङ्कारद्वयं कल्प्यमिति भावेन, एकविषयत्वेऽप्यविरोधमाह ।। **यद्वेति** ।। 'पृथगुच्चरितो वेदितव्यः' इत्यस्य सर्वसूत्रेषूहनीयः, नत्वेतत्सूत्रमात्रसम्बद्ध इत्यर्थः । नत्वेतत्सूत्रे अन्वयप्रतियोगि-समर्पको नेत्यर्थः । एवंचानुव्याख्याने ओतत्वरूपार्थोक्तिरपि सङ्गच्छत इति भावः । ननु –

> ''अथातश्शब्दपूर्वाणि सूत्राणि निखिलान्यपि''

इति भाष्योदाहृतस्मृतौ अथातःशब्दयोरेव प्राथम्यं सिद्धवत्कृत्य ''कश्चार्थश्च तयोर्विद्वन्'' इत्यादिना तयोरेव प्रश्नपरिहारयोः प्रवृत्तेः,

> ''सूत्रेषु तु महाप्राज्ञास्तावेवादौ प्रयुञ्जते''

इत्यवधारणेनोङ्कारव्यवच्छेदपूर्वं तयोरेवादित्वोपसंहाराच्च, कथमोङ्कारस्यादित्वमुपेत्यानुव्याख्याने व्याख्यातमिति चेन्न । उपक्रमादिना तयोः सूत्रावयवत्वस्यैव सिद्ध्या ओङ्कारस्याव्यवच्छेदादोङ्कारस्य माङ्गलिकत्वादिनाऽऽदित्वं "ओङ्कारश्चाथशब्दश्च" "सिसृक्षोः परमाद् विष्णोः" "स्रवत्यनोङ्कृतं ब्रह्म" इत्याद्यनेकमानसिद्धमिति निश्चिन्वता, अथातश्शब्दमात्रविषयकप्रश्ने कृते तत्रैव परिहार इत्युपपत्तेः । अत एव टीकायां "मङ्गलोक्त्यादेः शब्दान्तरेण सम्भवात्" इत्युक्तम् । "तावेवादौ" इत्युपसंहारस्यावधारणस्यापि ब्रह्मशब्दादिव्यवच्छेदकत्वोपपत्तेः । ब्रह्मशब्दाद्यपेक्षया 'तावेव' इति, 'तावादौ प्रयुञ्जत एव' इति वा भिन्नक्रमेणाप्युपपत्तेः । विरोधाधिकरणन्यायेनोक्तश्रुतिविरोधेन 'तावेव" इत्युपसंहारस्योक्तार्थानुसरणावश्यंभावाच्च । ओङ्कारव्यवच्छेदभ्रान्तिनिरासायैव "सिसृक्षोः" इति स्मृत्योङ्कारस्य मुख्यादित्वमथातःशब्दयोरमुख्यादित्वं चाभिधाय "अतश्च पूर्वमुच्चार्याः" इति पूर्वोच्चारणविधानाच्च ।

ननु ओङ्कारस्य सूत्रावयवत्वे सूत्रव्याख्यार्थं प्रवृत्तो भगवान् भाष्यकारः किमित्योङ्कारं हित्वा अथादिपदान्येव व्याचख्याविति चेदत्राहुः । उत्तरप्रस्थाने व्याकरिष्यमाणत्वादिह त्यक्तम् । अत एवेहानुक्तमपि वर्णकान्तरं सूत्राणां तत्रोच्यत इति वा, ओङ्कारार्थस्य छान्दोग्याद्युपनिषद्भाष्योदाहृतवचनैः व्याख्यातत्वाद्वा नेह व्याख्यायत इति । यद्वा – पूर्वपक्षप्रापकाधिकार्याद्यभावरूपहेतुचतुष्टनिरासस्य अथादिपदैरेव करणात् तेषामेवेह व्याख्यानम् । तावत एवोपयोगात् । ओङ्कारस्य त्वदृष्टार्थतया आवश्यकस्य दृष्टार्थोऽपि सम्भवतीत्यभिप्रेत्य अनुव्याख्याने व्याख्यानमिति । अथशब्दादिवैलक्षण्यज्ञापनायेह अव्याख्यानमित्यप्याहुः । यदत्र केनचित् प्रलपितं –ओङ्कारस्यादित्वे, सूत्रावयवत्वे, गुणपूर्त्यर्थत्वे, "स्रवत्यनोङ्कृतं ब्रह्म" इत्यत्र ब्रह्मपदेन सूत्रग्रहणे च मानं नेत्यादि, तत्सर्वस्य खण्डनं गुरुपादकृतन्यायमौक्तिकमालायां द्रष्टव्यम् ।

गुरुराजीय – सन्न्यायरत्नावलीमतमुपपादयितुमनुवदति । सन्न्यायरत्नेति ॥
नन्वेवमनुव्याख्याने तत्र तारायमूलत्वमित्यादिना सूत्रावयवत्वोक्तेः का गतिरित्यत

उक्तम् ।। **सर्ववेदव्याख्येयेति** ।। अनेन ताराथी मूले व्याख्येयतया यस्येति ताराथमूलं तद्भावस्ताराथमूलत्वमित्यनुव्याख्यानं व्याख्यातम् । अस्मिन् पक्षे सुधासन्न्यायरत्नावल्योर्विरोध इत्यरुच्याह ।। **यद्वेति** ।। नन्वस्मिन् पक्षे सुधायाम् ओङ्कारश्चाथशब्दश्चेत्यादिस्मृत्युदाहरणमकृत्वा स्रवत्यनोङ्कृतमिति स्मृत्युदाहरणमसङ्गतम् ओङ्कारद्वयकल्पने गौरवं चेत्यरुचेराह ।। **यद्वेति** ।। तयाच सुधायाः सन्न्यायरत्नावलीव्याख्यानरूपत्वान्न विरोध इति भावः । एवमोङ्कारस्यानुव्याख्यानोक्तं सूत्रावयवत्वं समर्थितम् ।

**ವಿವರಣೆ** - ಓಂಕಾರವನ್ನು ಪ್ರಥಮಸೂತ್ರದ ಅವಯವವೆಂದು ಸುಧಾದಲ್ಲಿ ಹೇಳಲಾಗಿದೆಯೆಂದು ಇದುವರೆಗೂ ಸಮರ್ಥಿಸಿದ್ದಾಯಿತು. ಆದರೆ ಪ್ರಾಚೀನ ಟೀಕಾಕಾರರು ಸನ್ನ್ಯಾಯರತ್ನಾವಲಿಯಲ್ಲಿ ಓಂಕಾರವು ಸೂತ್ರದ ಅವಯವ ಅಲ್ಲವೆಂದು ಹೇಳಿದ್ದಾರೆ. ಆದ್ದರಿಂದ ಸುಧಾಗ್ರಂಥಕ್ಕೂ ಸನ್ನ್ಯಾಯರತ್ನಾವಲಿಗೂ ಪರಸ್ಪರ ವಿರೋಧ ಬಂದಂತೆ ತೋರುತ್ತದೆ. ಈ ವಿರೋಧವನ್ನು ಪರಿಹರಿಸಲು ಮೊದಲು ಸನ್ನ್ಯಾಯರತ್ನಾವಲಿಯ ಅಭಿಪ್ರಾಯವನ್ನು 'ಸನ್ನ್ಯಾಯರತ್ನವಲ್ಯಾಂ ತು' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಇಲ್ಲಿರುವ 'ತು' ಶಬ್ದವು ಸುಧೆಗಿಂತ ವ್ಯತ್ಯಾಸವಿದೆ ಎನ್ನುವದನ್ನು ಸೂಚಿಸುತ್ತಿದೆ. ಆ ವ್ಯತ್ಯಾಸವನ್ನು 'ಓಂಕಾರಸ್ತು' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಅನುವ್ಯಾಖ್ಯಾನದಲ್ಲಿ "ಪೃಥಗೋಂಕ್ರಿಯತೇऽಖಿಲೈಃ' ಎಲ್ಲರೂ ಓಂಕಾರವನ್ನು ಪ್ರತ್ಯೇಕವಾಗಿ ಉಚ್ಚರಿಸುತ್ತಾರೆ. ಎಂದು ಹೇಳಲಾಗಿದೆ. ಈ ವಾಕ್ಯಕ್ಕೆ ಸನ್ನ್ಯಾಯರತ್ನಾವಲಿಯಲ್ಲಿ 'ಓಂಕಾರವನ್ನು ಪ್ರತ್ಯೇಕವಾಗಿಯೇ ಉಚ್ಚರಿಸಲಾಗಿದೆ ಹೊರತು ಅಥ ಶಬ್ದದಂತೆ ಸೂತ್ರದಲ್ಲಿ ಅದನ್ನು ಸೇರಿಸಿಲ್ಲ" ಎಂದು ವ್ಯಾಖ್ಯಾನಿಸಲಾಗಿದೆ. ಇದನ್ನು ನೋಡಿದಾಗ ಓಂಕಾರವು ಸೂತ್ರದ ಭಾಗವಲ್ಲವೆಂದು ತಿಳಿಯುತ್ತದೆ.

ಓಂಕಾರವು ಸೂತ್ರದ ಅವಯವ ಅಲ್ಲವೆಂದರೆ 'ಓತತ್ವಾಚೀ' ಓಂಕಾರವು ಪೂರ್ಣತ್ವಾರ್ಥಕವಾಗಿದೆ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಓಂಕಾರಕ್ಕೆ ವ್ಯಾಖ್ಯಾನ ಮಾಡಿದ್ದು ಅಸಂಗತವಾಯಿತೆ ಎಂಬ ಪ್ರಶ್ನೆಗೆ 'ತತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ತತ್ರ' ಎಂದರೆ ಸನ್ನ್ಯಾಯರತ್ನಾವಲಿಕಾರರ ಮತದಲ್ಲಿ ಎಂದರ್ಥ. "ಓಂಕಾರೇಣೈವ ಸರ್ವಾ ವಾಕ್ ಸಂತೃಣ್ಣಾ" ಎಲ್ಲಾ ವೇದಗಳು ಓಂಕಾರದಿಂದಲೇ ಅಭಿವ್ಯಕ್ತವಾಗಿವೆ ಎಂಬ ಪ್ರಮಾಣದಂತೆ ಎಲ್ಲಾ ವೇದಗಳು ಓಂಕಾರಕ್ಕೆ ವ್ಯಾಖ್ಯಾನಗಳಾಗಿವೆ. ಆದ್ದರಿಂದ ಓಂಕಾರವು ವ್ಯಾಖ್ಯೇಯವೆಂದು ಸಮಗ್ರ ವೇದಗಳು ವ್ಯಾಖ್ಯಾನವೆಂದು ಸ್ಪಷ್ಟವಾಯಿತು. ಇಂತಹ ಓಂಕಾರಕ್ಕೆ ಗುಣಪೂರ್ಣತ್ವವೆಂದು ಅರ್ಥ. ನಾರಾಯಣಶಬ್ದವೂ ಸಹ ಗುಣಪೂರ್ಣತ್ವವೆಂಬ ಅರ್ಥವನ್ನೇ ಹೇಳುತ್ತಿದೆ. ಆದ್ದರಿಂದ ಓಂಕಾರಪ್ರತಿಪಾದ್ಯನು ಸರ್ವವೇದಪ್ರತಿಪಾದ್ಯನಾದ ಮೇಲೆ ನಾರಾಯಣ ಶಬ್ದಪ್ರತಿಪಾದ್ಯನೂ ಸಹ ಸರ್ವವೇದಪ್ರತಿಪಾದ್ಯನಾಗಲೇಬೇಕು.

ಪರಿಪೂರ್ಣಚಂದ್ರಿಕಾ

ಹೀಗೆ ಸರ್ವವೇದಪ್ರತಿಪಾದ್ಯನಾದ ನಾರಾಯಣನೇ ಪ್ರಕೃತ ಈ ಶಾಸ್ತ್ರದಿಂದಲೂ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಈ ವಿಷಯವನ್ನು ತಿಳಿಸುವುದಕ್ಕಾಗಿ ಅನುವ್ಯಾಖ್ಯಾನದಲ್ಲಿ ಓಂಕಾರಕ್ಕೆ ಗುಣಪೂರ್ಣತ್ವ ಎಂಬುದಾಗಿ ವ್ಯಾಖ್ಯಾನಿಸಲಾಗಿದೆ. ಹೊರತು ಸೂತ್ರದ ಭಾಗವೆಂಬ ಅಭಿಪ್ರಾಯದಿಂದ ವ್ಯಾಖ್ಯಾನಿಸಿದ್ದಲ್ಲ. ಅನ್ಯಥಾ = ಸೂತ್ರದ ಅವಯವಕ್ಕೆ ಮಾತ್ರ ಅರ್ಥವನ್ನು ಹೇಳುವುದು, ಎಂದರೆ 'ಭರ್ಗ' 'ಪುರುಷ' ಮೊದಲಾದ ಶಬ್ದಗಳಿಗೂ ಅರ್ಥವನ್ನು ಹೇಳಿರುವುದರಿಂದ ಅವುಗಳೂ ಸೂತ್ರದ ಅವಯವವೆಂದಾಗಬೇಕಾದೀತು.

ಆದ್ದರಿಂದ ಸನ್ನ್ಯಾಯರತ್ನಾವಲಿಯ ಪ್ರಕಾರ ಓಂಕಾರವು ಸೂತ್ರದ ಅವಯವ ಅಲ್ಲವೆಂದು ಸ್ಪಷ್ಟವಾಯಿತು. ಆದರೆ ನ್ಯಾಯಸುಧಾದಲ್ಲಿ ಓಂಕಾರವು ಸೂತ್ರದ ಅವಯವವೆಂದು ಹೇಳಲಾಗಿದೆ. ಎರಡೂ ಗ್ರಂಥಗಳು ನಮಗೆ ಪರಮಪ್ರಮಾಣವಾಗಿವೆ. ಹಾಗಾಗಿ ಒಂದೇ ಓಂಕಾರವನ್ನು ಅವಯವ ಎಂದು ಹೇಳಬೇಕೊ? ಅವಯವ ಅಲ್ಲವೆಂದು ಹೇಳಬೇಕೋ? ಎಂದು ಸಂಶಯ ಬರುತ್ತದೆ.

**ಶಂಕೆ** - ಈ ವಿರೋಧವನ್ನು ವಿಕಲ್ಪ ಎಂದು ಪರಿಹರಿಸುತ್ತೇವೆ. ಹೇಗೆಂದರೆ ಭತ್ತದಿಂದಲೂ ಯಾಗ ಮಾಡಬಹುದು ಯವೆಯಿಂದಲೂ ಯಾಗ ಮಾಡಬಹುದು. ಅದರಂತೆ ಒಂದೇ ಓಂಕಾರವನ್ನು ಸೂತ್ರದ ಅಯವವೆಂದೂ ಹೇಳಬಹುದು. ಅವಯವ ಅಲ್ಲವೆಂದೂ ಹೇಳಬಹುದು. ವಿಕಲ್ಪವಾದ್ದರಿಂದ ವಿರೋಧವಿಲ್ಲ.

**ಸಮಾಧಾನ** - ಒಂದು ಕಾರ್ಯವನ್ನು ಹೀಗೂ ಮಾಡಬಹುದು. ಅಥವಾ ಹಾಗೂ ಮಾಡಬಹುದು ಎಂದು ವಿಕಲ್ಪ ಹೇಳಿದರೆ ತಪ್ಪಾಗುವುದಿಲ್ಲ. ಆದರೆ ಸಿದ್ಧವಾದ ವಸ್ತುವಿನಲ್ಲಿ ವಿಕಲ್ಪ ಕೂಡುವುದಿಲ್ಲ. ಒಂದು ವಸ್ತು ಹೀಗೆ ಇದೆಯೆಂದರೆ ಹೀಗೆಯೇ ಇರುತ್ತದೆ ಹೊರತು ಮತ್ತೊಂದು ರೀತಿಯಲ್ಲಿ ಇರಲಾರದು. ಹಾಗಾಗಿ ವಿರುದ್ಧವಾಗಿ ಹೇಳುವ ಎರಡು ಗ್ರಂಥಗಳಲ್ಲಿ ಯಾವುದನ್ನು ಪ್ರಮಾಣವೆಂದು ಒಪ್ಪಬೇಕು ಎಂಬ ಸಮಸ್ಯೆ ಇದ್ದೇ ಇದೆ.

**ಶಂಕೆ** - 'ವಿಪ್ರತಿಷೇಧೇ ಪರಂ ಕಾರ್ಯಂ' 'ಪರಸ್ಪರ ಎರಡರಲ್ಲಿ ವಿರೋಧ ಬಂದಾಗ ಪೂರ್ವಕ್ಕಿಂತ ಪರವೇ ಪ್ರಬಲವಾಗುತ್ತದೆ.' ಈ ನಿಯಮದಂತೆ ಪ್ರಕೃತ ಸನ್ನ್ಯಾಯರತ್ನಾವಳಿಗಿಂತ ನ್ಯಾಯಸುಧೆಯು ಅನಂತರದ ಗ್ರಂಥವಾದ್ದರಿಂದ ಪರವಾಗಿದೆ. ಆದ್ದರಿಂದ ಓಂಕಾರವನ್ನು ಸೂತ್ರದ ಭಾಗವೆಂದೇ ಹೇಳಬೇಕೆಂದು ಈ ನಿಯಮದಿಂದ ಸಿದ್ಧವಾದರೂ ಇದಕ್ಕೆ ವಿರುದ್ಧವಾಗಿ ಮತ್ತೊಂದು ನಿಯಮವಿದೆ. 'ನುಮಚಿರತೃಜ್ವದ್ ಭಾವೇಭ್ಯೋ ನುಟ್ ಪೂರ್ವವಿಪ್ರತಿಷೇಧೇನ ಎಂದು. ನುಮ್, ರೇಫ, ತೃಜ್ವದ್ ಭಾವ ಇವುಗಳಿಗಿಂತ ಪೂರ್ವದಲ್ಲಿರುವ 'ನುಟ್' ಪ್ರತ್ಯಯವೇ ಪ್ರಬಲವಾಗುತ್ತದೆ. ಹೀಗೆ ಈ ಸೂತ್ರದಲ್ಲಿ ಪರಕ್ಕಿಂತ ಪೂರ್ವಕ್ಕೆ ಪ್ರಾಬಲ್ಯ ಹೇಳಿದ್ದಾರೆ. ಪ್ರಕೃತ 'ಪರ' ಎಂದು ಹೇಳಿದ ನ್ಯಾಯಸುಧೆಗಿಂತ ಪೂರ್ವದಲ್ಲಿರುವ ಸನ್ನ್ಯಾಯರತ್ನಾವಲಿಯನ್ನೇ ಪ್ರಬಲವೆಂದು ಹೇಳಿದಾಗ ಓಂಕಾರವನ್ನು ಸೂತ್ರದ ಅವಯವವೆಂದು ಹೇಳಿದಂತಾಗುತ್ತದೆ.

ಆದ್ದರಿಂದ 'ವಿಪ್ರತಿಷೇಧೇ ಪರಂ ಕಾರ್ಯಂ' ಎಂಬಂತೆ ಸುಧಾವನ್ನು ಪ್ರಮಾಣವೆಂದು ಒಪ್ಪಬೇಕೋ ಅಥವಾ 'ನುಮಚಿರ' - ಇತ್ಯಾದಿ ಸೂತ್ರ ಹೇಳುವಂತೆ ಸನ್ನ್ಯಾಯರತ್ನಾವಲಿಯನ್ನು ಪ್ರಮಾಣವೆಂದು ಹೇಳಬೇಕೊ?

ಸಮಾಧಾನ - ಎರಡು ಗ್ರಂಥಗಳೂ ಒಂದೇ ಓಂಕಾರದ ಬಗ್ಗೆ ಹೇಳಲು ಹೊರಟಿದ್ದರೆ ನೀವು ಹೇಳಿದ ವಿರೋಧ ಬರುತ್ತಿತ್ತು. ಆದರೆ ಬೇರೆ ಬೇರೆ ಓಂಕಾರದ ಬಗ್ಗೆ ಹೇಳುತ್ತಿರುವುದರಿಂದ ವಿರೋಧವಿಲ್ಲವೆಂದು 'ಯದ್ವಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ವಿರೋಧಪರಿಹಾರವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - "ಓಂ ಓಂ ನಮೋ ನಾರಾಯಣಾಯ ಓಂ" ಎಂಬ ನಾರಾಯಣಾಕ್ಷರ ಮಂತ್ರದಲ್ಲಿ ಒಂದು ಓಂಕಾರವು ಮಂತ್ರದ ಬೀಜಾಕ್ಷರವಾಗಿ ಪರಿಗಣಿತವಾದ್ದರಿಂದ ಮಂತ್ರದ ಅವಯವವಾಗಿದೆ. ಮೊದಲನೆಯ ಮತ್ತು ಕೊನೆಯ ಓಂಕಾರವು ಅದೃಷ್ಟಾರ್ಥಕ್ಕೋಸ್ಕರ ಇರುವವುಗಳಾಗಿವೆ. ಇದರಂತೆಯೇ ಮೊದಲನೆಯ ಸೂತ್ರದಲ್ಲಿಯೂ ಸಹ 'ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂದು ಮೂರು ಓಂಕಾರಗಳಿವೆಯೆಂದು ತಿಳಿಯಬೇಕು. ಮೊದಲ ಎರಡು ಓಂಕಾರಗಳಲ್ಲಿ ಮೊದಲನೆಯದ್ದು 'ಸ್ರವತ್ಯನೋಂಕೃತಂ' ಎಂಬ ಶ್ರುತಿಯಿಂದ ಸಿದ್ಧವಾದದ್ದು. ಇದಕ್ಕೆ ಅದೃಷ್ಟಮಾತ್ರ ಪ್ರಯೋಜನವಾಗಿದೆ. ಹಾಗಾಗಿ ಪ್ರತಿಯೊಂದು ಸೂತ್ರದಲ್ಲೂ ಉಚ್ಚರಿಸಬೇಕು. ಇ ಸೂತ್ರದ ಅವಯವವಾಗುವುದಿಲ್ಲ. ಎರಡನೆಯ ಓಂಕಾರವು ಪೂರ್ಣತ್ವಾರ್ಥಕವಾಗಿ ಸೂತ್ರದ ಭಾಗವೇ ಆಗಿದೆ. 'ಓಂಕಾರಶ್ಚಾಥಶಬ್ದಶ್ಚ' ಎಂಬ ಸ್ಮೃತಿಯಿಂದ ಓಂಕಾರ, ಅಥ ಮತ್ತು ಅತಃ ಶಬ್ದಗಳು ಕ್ರಮವಾಗಿ ಸೂತ್ರದಲ್ಲಿ ಉಚ್ಚರಿಸಲ್ಪಟ್ಟಿವೆ. ಆದ್ದರಿಂದ ಅಥ ಮತ್ತು ಅತಃ ಶಬ್ದದಂತೆ ಎರಡನೆಯ ಓಂಕಾರವು ಸೂತ್ರದ ಭಾಗವೇ ಆಗಿದೆ. ಈ ರೀತಿಯಾಗಿ ತಿಳಿದಾಗ ನ್ಯಾಯಸುಧೆಗೂ ಸನ್ನ್ಯಾಯರತ್ನಾವಳಿಗೂ ಪರಸ್ಪರ ವಿರೋಧ ಬರಲು ಸಾಧ್ಯವೇ ಇಲ್ಲ. ಏಕೆಂದರೆ ಸನ್ನ್ಯಾಯರತ್ನಾವಳಿಯು ಮೊದಲನೆಯ ಓಂಕಾರದ ಬಗ್ಗೆ ಹೇಳುತ್ತಿದೆ ನ್ಯಾಯಸುಧೆಯು ಎರಡನೆಯ ಓಂಕಾರದ ಬಗ್ಗೆ ಹೇಳುತ್ತಿದೆ.

ಶಂಕೆ - 'ಸ್ರವತ್ಯನೋಂಕೃತಂ' ಎಂಬ ಶ್ರುತಿವಿಹಿತವಾದ ಓಂಕಾರವನ್ನೇ 'ಓಂಕಾರಶ್ಚಾಥಶಬ್ದಶ್ಚ' ಎಂಬ ಸ್ಮೃತಿಯೂ ಹೇಳುತ್ತಿದೆ ಎಂದು ಹೇಳೋಣ, ಏಕೆ ಎರಡು ಓಂಕಾರಗಳನ್ನು ಕಲ್ಪನೆ ಮಾಡಬೇಕು?

ಸಮಾಧಾನ - ಹೀಗೆ ಹೇಳಿದರೂ ವಿರೋಧವಿಲ್ಲವೆಂದು 'ಯದ್ವಾ' ಇತ್ಯಾದಿ ವಾಕ್ಯದಿಂದ ಪಕ್ಷಾಂತರವನ್ನು ಹೇಳುತ್ತಿದ್ದಾರೆ.

ಈ ಪಕ್ಷದಲ್ಲಿ 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂದು ಎರಡೇ ಓಂಕಾರಗಳು. ಸುಧಾ ಮತ್ತು ಸನ್ನ್ಯಾಯರತ್ನಾವಳಿಯು ಒಂದೇ ಓಂಕಾರದ ಬಗ್ಗೆ ಹೇಳುತ್ತಿದೆ. ಹಾಗಾದರೆ ಸನ್ನ್ಯಾಯರತ್ನಾವಳಿಯಲ್ಲಿ 'ಓಂಕಾರಸ್ತು ಪೃಥಗುಚ್ಚಾರಿತಃ' ಎಂದು ಓಂಕಾರವು ಪ್ರತ್ಯೇಕವಾಗಿ ಉಚ್ಚರಿಸಲ್ಪಟ್ಟಿದೆಯೆಂದು ಹೇಳಿದೆಯಲ್ಲ? ಎಂದರೆ ಇದಕ್ಕೆ ಬೇರೆ ಅರ್ಥವನ್ನೇ ಹೇಳಬೇಕು ಏನೆಂದರೆ "ಓಂಕಾರವನ್ನು ಪ್ರತ್ಯೇಕವಾಗಿ ಎಲ್ಲಾ ಸೂತ್ರಗಳಲ್ಲಿಯೂ ಊಹೆ ಮಾಡಿಕೊಳ್ಳುವಂತೆ ಉಚ್ಚರಿಸಲಾಗಿದೆ. ಹೊರತು ಅಥಶಬ್ದದಂತೆ ಈ ಸೂತ್ರಕ್ಕೆ ಮಾತ್ರ ಸಂಬಂಧಿಸಿದಂತೆ ಉಚ್ಚರಿಸಿದ್ದಲ್ಲ" ಈ ಅಭಿಪ್ರಾಯದಿಂದ 'ಪೃಥಗುಚ್ಚಾರಿತಃ' ಎಂದು

ಹೇಳಿದ್ದೇ ಹೊರತು ಓಂಕಾರಾರ್ಥವು ಸೂತ್ರದಲ್ಲಿ ಅನ್ವಯ ಹೊಂದಲಾರದೆಂಬ ಅಭಿಪ್ರಾಯದಿಂದಲ್ಲ. ಈ ಅರ್ಥ ಇಟ್ಟುಕೊಂಡಾಗ ನ್ಯಾಯಸುಧೆಯು ಸನ್ನ್ಯಾಯರತ್ನಾವಳಿಗೆ ವ್ಯಾಖ್ಯಾನವನ್ನೇ ಮಾಡಿದಂತಾಗುತ್ತದೆ. ಮತ್ತು ಅನುವ್ಯಾಖ್ಯಾನದಲ್ಲಿ ಪೂರ್ಣತ್ವವೆಂಬುದಾಗಿ ಓಂಕಾರಕ್ಕೆ ವ್ಯಾಖ್ಯಾನ ಮಾಡಿದ್ದೂ ಕೂಡ ಸಂಗತವಾಗುತ್ತದೆ.

ಶಂಕೆ - ನ್ಯಾಯಸುಧಾ ಮತ್ತು ಸನ್ನ್ಯಾಯರತ್ನಾವಳಿಗೆ ವಿರೋಧ ಪರಿಹಾರವಾದರೂ ಭಾಷ್ಯ ಮತ್ತು ಅನುವ್ಯಾಖ್ಯಾನಗಳಿಗೆ ವಿರೋಧ ಬರುತ್ತದೆ. ಏಕೆಂದರೆ ಭಾಷ್ಯದಲ್ಲಿ ಅಥ ಶಬ್ದವೇ ಮೊದಲನೆಯದ್ದೆಂದು ಹೇಳಿದೆ. ಅನುವ್ಯಾಖ್ಯಾನದಲ್ಲಿ ಓಂಕಾರವನ್ನು ಮೊದಲನೆಯದ್ದೆಂದು ಹೇಳಿದೆ. ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿ ಹೀಗಿದೆ ''ಅಥಾತಃ ಶಬ್ದಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ'' ಅಥ ಮತ್ತು ಅತಃ ಶಬ್ದಗಳಿಂದಲೇ ಎಲ್ಲಾ ಸೂತ್ರಗಳು ಪ್ರಾರಂಭವಾಗುತ್ತವೆಂದು 'ಅಥಾತಃ' ಶಬ್ದಗಳೇ ಪ್ರಾರಂಭದ ಶಬ್ದಗಳೆಂದು ನಿಶ್ಚಯಿಸಿಕೊಂಡು 'ಕಸ್ತಾರ್ಥಶ್ಚ ತಯೋರ್ವಿದ್ವನ್' ಆದಿಕವಿಯಾದ ಚತುರ್ಮುಖನೇ ಅಥ ಮತ್ತು ಅತಃ ಶಬ್ದಗಳಿಗೆ ಏನು ಅರ್ಥ? ಎಂದು ಅಥಾತಃ ಶಬ್ದಗಳ ವಿಷಯದಲ್ಲಿಯೇ ಪ್ರಶ್ನೆ ಮತ್ತು ಉತ್ತರವನ್ನು ಮಾಡಲಾಗಿದೆ. ಕೊನೆಗೆ 'ಸೂತ್ರೇಷು ತು ಮಹಾಪ್ರಾಜ್ಞಾಸ್ತಾವೇವಾದೌ ಪ್ರಯುಂಜತೇ' ಮಹಾಪ್ರಾಜ್ಞರಾದ ಸೂತ್ರಕಾರರು ಸೂತ್ರಗ್ರಂಥಗಳಲ್ಲಿ 'ಅಥ' 'ಅತಃ' ಶಬ್ದಗಳನ್ನೇ ಮೊದಲಿಗೆ ಉಚ್ಚರಿಸುತ್ತಾರೆಂದು ಏವಕಾರದಿಂದ ಓಂಕಾರವನ್ನು ಆದಿಯಲ್ಲಿ ನಿಷೇಧಿಸಲಾಗಿದೆ. ಹೀಗೆ ಭಾಷ್ಯದಲ್ಲಿ ಪ್ರಾರಂಭದಿಂದ ಕೊನೆಯ ತನಕ ಅಥಾತಃ ಶಬ್ದಗಳೇ ಸೂತ್ರದ ಆದಿಯೆಂದು ತಿಳಿಯುತ್ತದೆ. ಆದರೆ ಅನುವ್ಯಾಖ್ಯಾನದಲ್ಲಿ ಓಂಕಾರವೇ ಸೂತ್ರದ ಆದಿಭಾಗವೆಂದು ಹೇಳಿ ಓಂಕಾರಕ್ಕೆ ವ್ಯಾಖ್ಯಾನ ಮಾಡಲಾಗಿದೆ. ಆದ್ದರಿಂದ ಭಾಷ್ಯಕ್ಕೂ ಅನುವ್ಯಾಖ್ಯಾನಕ್ಕೂ ಪರಸ್ಪರ ವಿರೋಧ ಬಂದಿತು.

ಸಮಾಧಾನ - ಆದಿಯಲ್ಲಿ ಓಂಕಾರದ ಉಚ್ಚಾರಣೆಯನ್ನು ಭಾಷ್ಯವು ನಿಷೇಧಿಸುತ್ತಲೇ ಇಲ್ಲ. ಹೊರತಾಗಿ ಓಂಕಾರದ ಬಗ್ಗೆ ಏನೂ ಮಾತನಾಡದೆ ಕೇವಲ ಅಥ, ಅತಃ, ಶಬ್ದಗಳ ಬಗ್ಗೆ ಪ್ರಶ್ನೋತ್ತರವನ್ನು ನಡೆಸುತ್ತಿದೆ. ಭಾಷ್ಯೋದಾಹೃತಸ್ಮೃತಿಯು ಉಪಕ್ರಮ ಉಪಸಂಹಾರಾದಿಗಳಿಂದ ಅಥ ಅತಃ ಶಬ್ದಗಳು ಸೂತ್ರದ ಆದಿಯಲ್ಲಿರಬೇಕಂದಷ್ಟೇ ಸಮರ್ಥಿಸುತ್ತಿವೆ. ಓಂಕಾರವು ಅಥ ಅತಃ ಶಬ್ದಗಳಿಗಿಂತ ಪ್ರಾರಂಭದಲ್ಲಿರಬೇಕೆಂಬ ವಿಷಯ ಭಾಷ್ಯಕ್ಕೆ ಚೆನ್ನಾಗಿ ಗೊತ್ತು. ಏಕೆಂದರೆ 'ಓಂಕಾರಶ್ಚಾಥ ಶಬ್ದಶ್ಚ' 'ಸಿಸೃಕ್ಷೋಃ ಪರಮಾದ್ ವಿಷ್ಣೋಃ' 'ಸ್ರವತ್ಯನೋಂಕೃತಂ ಬ್ರಹ್ಮ' ಇತ್ಯಾದಿ ಅನೇಕ ಪ್ರಮಾಣಗಳಿಂದ ಓಂಕಾರವು ಸೂತ್ರದ ಪ್ರಾರಂಭದಲ್ಲೇ ಇರಬೇಕೆಂದು ಸಿದ್ಧವೆಂಬ ಅಭಿಪ್ರಾಯದಿಂದ ಅಥ ಅತಃ ಶಬ್ದಗಳ ವಿಷಯದಲ್ಲಿ ಮಾತ್ರ ಭಾಷ್ಯೋಕ್ತಸ್ಮೃತಿಯು ಪ್ರಶ್ನೋತ್ತರ ನಡೆಸಿದೆ. ಆದ್ದರಿಂದಲೇ ತತ್ವಪ್ರಕಾಶಿಕಾವೂ ಸಹ 'ಮಂಗಲಾಚರಣಾದೇಃ ಶಬ್ದಾಂತರೇಣಾऽಪಿ ಸಂಭವಾತ್'' ಎಂದು ಹೇಳಿದೆ.

ಇನ್ನು 'ತಾವೇವಾದೌ' ಎಂದು 'ಏವ' ಕಾರದಿಂದ ಸ್ಮೃತಿಯು ಓಂಕಾರವನ್ನು ನಿಷೇಧಿಸುತ್ತಿದೆ ಎಂಬ ಪ್ರಶ್ನೆಯೂ ತಪ್ಪು. ಏಕೆಂದರೆ ಏವ ಕಾರದಿಂದ 'ಬ್ರಹ್ಮ' ಮೊದಲಾದ ಶಬ್ದಗಳು ಮೊದಲು ಇರಬಾರದೆಂದು ನಿಷೇಧಿಸುತ್ತಿದೆಯೇ ಹೊರತು ಓಂಕಾರವನ್ನು ನಿಷೇಧಿಸುತ್ತಿಲ್ಲ. ಅಥವಾ ಏವಕಾರಕ್ಕೆ ಬೇರೆ ಕಡೆಯೇ

ಅನ್ವಯ ಹೇಗೆಂದರೆ 'ತಾವಾದೌ ಪ್ರಯುಂಜತೇ ಏವ' ಎಂದು. ಅಂದರೆ ಬ್ರಹ್ಮಶಬ್ದಕ್ಕಿಂತ ಮೊದಲು ಅಥ ಅತಃ ಶಬ್ದಗಳನ್ನೇ ಉಚ್ಚರಿಸುತ್ತಾರೆ ಎಂದೂ ಹೇಳಬಹುದು.

ಹೀಗೆ ಓಂಕಾರದ ಬಗ್ಗೆ ಸಿದ್ಧವತ್ಕೃತ್ಯ ಶ್ರುತಿವಿರೋಧ ಬಾರದಂತೆ ಕೇವಲ ಅಥ ಅತಃ ಶಬ್ದಗಳ ಬಗ್ಗೆ ಮಾತ್ರ ಭಾಷ್ಯವು ವಿಚಾರ ನಡೆಸಿದೆ ಎಂಬ ಸಮಾಧಾನವು ಪೂರ್ವಮೀಮಾಂಸೆಯ ವಿರೋಧಾಧಿಕರಣನ್ಯಾಯದಿಂದ ಹೇಳಲಾಗಿದೆ. ಈ ನ್ಯಾಯವನ್ನು ಅನುಸರಿಸಿದಾಗ 'ಸ್ರವತ್ಯನೋಂಕೃತಂ' ... ಶ್ರುತಿಗೆ ವಿರೋಧ ಬಾರದಂತೆ ಸ್ಮೃತಿಗೆ ಬೇರೆ ಅರ್ಥವನ್ನು ಇಟ್ಟುಕೊಳ್ಳಬೇಕೆಂದು ತಿಳಿಯುತ್ತದೆ 'ತಾವೇವಾದೌ' ಎಂಬ ಸ್ಮೃತಿಯು ಓಂಕಾರವನ್ನು ಮೊದಲು ನಿಷೇಧಿಸುತ್ತಿದೆ ಎಂಬ ಭ್ರಾಂತಿಯನ್ನು ಪರಿಹರಿಸುವುದಕ್ಕಾಗಿಯೇ ಸಿಸೃಕ್ಷೋಃ ಪರಮಾದ್ವಿಷ್ಣೋಃ ಎಂಬ ಸ್ಮೃತಿಯು ಓಂಕಾರಕ್ಕೆ ಮೊದಲಿನ ಸ್ಥಾನವನ್ನು ನಂತರ ಅಥ ಅತಃ ಶಬ್ದಗಳಿಗೆ ಅಮುಖ್ಯವಾದ ಸ್ಥಾನ ನೀಡಿದೆ. ಹೀಗೆ ಹರಿ ಅನಂತರ ಓಂ ಮತ್ತು ಅಥ ಅತಃ ಎಂಬ ಮೂರು ಶಬ್ದಗಳನ್ನು ಆದಿಯಲ್ಲಿ ಉಚ್ಚರಿಸಬೇಕೆಂದು ವಿಧಿಸಿದೆ

ಶಂಕೆ - ಓಂಕಾರವೂ ಸೂತ್ರದ ಭಾಗವಾಗಿದ್ದರೆ ಭಾಷ್ಯದಲ್ಲಿ ಅದನ್ನು ಏಕೆ ವ್ಯಾಖ್ಯಾನಿಸಿಲ್ಲ? ಸೂತ್ರವ್ಯಾಖ್ಯಾನಕ್ಕೆ ತೊಡಗಿದ ಶ್ರೀಮದಾಚಾರ್ಯರು ಓಂಕಾರವನ್ನು ಬಿಟ್ಟು ಅಥ ಅತಃ ಶಬ್ದಗಳ ವ್ಯಾಖ್ಯಾನ ಮಾಡಲು ಹೊರಟದ್ದು ಎಷ್ಟರ ಮಟ್ಟಿಗೆ ಸರಿ?

ಸಮಾಧಾನ - ಅನುವ್ಯಾಖ್ಯಾನದಲ್ಲಿ ಓಂಕಾರಕ್ಕೆ ವ್ಯಾಖ್ಯಾನ ಮಾಡಲಿದ್ದೇವೆಂದು ಇಲ್ಲಿ ಬಿಟ್ಟಿದ್ದಾರೆ. ಆದ್ದರಿಂದ ಭಾಷ್ಯದಲ್ಲಿ ವ್ಯಾಖ್ಯಾನಿಸದ ಕೆಲವರ್ಥಗಳನ್ನು ಸೂತ್ರಗಳಿಗೆ ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನಿಸುತ್ತಾರೆ. ಅಥವಾ ಛಾಂದೋಗ್ಯೋಪನಿಷತ್ತೇ ಮೊದಲಾದ ಉಪನಿಷತ್ತುಗಳಲ್ಲಿನ ಭಾಷ್ಯದ ಮಾತುಗಳಿಂದ ಓಂಕಾರವನ್ನು ವ್ಯಾಖ್ಯಾನಿಸಲಾಗಿದೆಯೆಂದು ಇಲ್ಲಿ ವ್ಯಾಖ್ಯಾನಿಸಿಲ್ಲ. ಅಥವಾ ಪೂರ್ವಪಕ್ಷದಲ್ಲಿ ವಿಷಯ ಪ್ರಯೋಜನಾದಿಗಳು ಇಲ್ಲವೆಂಬ ಆಕ್ಷೇಪ ಬಂದಿತ್ತು. ಅದರ ನಿರಾಸವು ಈಗ ಪ್ರಸಕ್ತವಾದ್ದರಿಂದ ಅಥ ಅತಃ ಶಬ್ದಗಳೇ ಆ ಆಕ್ಷೇಪವನ್ನು ಪರಿಹರಿಸುವುದರಿಂದ ಅಥ ಅತಃ ಶಬ್ದಗಳ ವ್ಯಾಖ್ಯಾನವನ್ನೇ ಭಾಷ್ಯದಲ್ಲಿ ಮಾಡಲಾಗಿದೆ. ಆದ್ದರಿಂದ ಅಥ ಅತಃ ಶಬ್ದಗಳ ವ್ಯಾಖ್ಯಾನವೇ ಭಾಷ್ಯದಲ್ಲಿ ಉಪಯುಕ್ತವಾಗಿದೆ.

ಹಾಗಾದರೆ ಅನುವ್ಯಾಖ್ಯಾನದಲ್ಲೂ ಅಷ್ಟೇ ಸಾಕಿತ್ತು ಓಂಕಾರದ ವ್ಯಾಖ್ಯಾನ ಏಕೆ ಬೇಕಿತ್ತು? ಎಂದರೆ ಅದೃಷ್ಟಫಲಕ್ಕೋಸ್ಕರ ಇರುವ ಓಂಕಾರವು ದೃಷ್ಟಫಲಕ್ಕಾಗಿಯೂ ನಿಯುಕ್ತವಾಗಿದೆ ಎಂದು ತೋರಿಸಲು ಅನುವ್ಯಾಖ್ಯಾನದಲ್ಲಿ ಓಂಕಾರಕ್ಕೆ ವ್ಯಾಖ್ಯಾನ ಮಾಡಲಾಗಿದೆ.

ಅಥ ಅತಃ ಶಬ್ದಗಳಿಗಿಂತ ಓಂಕಾರವು ವಿಲಕ್ಷಣವಾಗಿದೆಯೆಂದು ತಿಳಿಸಲು ಓಂಕಾರ ವ್ಯಾಖ್ಯಾನವನ್ನು ಭಾಷ್ಯದಲ್ಲಿ ಮಾಡಿಲ್ಲವೆಂದೂ ಕೆಲವರು ವ್ಯಾಖ್ಯಾನಿಸುತ್ತಾರೆ.-

ಕೆಲವರ ಆಕ್ಷೇಪ - ಓಂಕಾರವು ಸೂತ್ರದ ಆದಿಯಲ್ಲಿದೆ, ಸೂತ್ರದ ಅವಯವವಾಗಿದೆ. ಗುಣಪೂರ್ಣತ್ವಾರ್ಥಕವಾಗಿದೆ 'ಸ್ರವತ್ಯನೋಂಕೃತಂ ಬ್ರಹ್ಮ ಎಂಬಲ್ಲಿನ ಬ್ರಹ್ಮಪದಕ್ಕೆ ಸೂತ್ರವ... ಅರ್ಥವಿದೆ, ಹೀಗೆಲ್ಲಾ ಹೇಳಲು ಯಾವುದೇ ಪ್ರಮಾಣಗಳೂ ಇಲ್ಲ ಎಂದು ಕೆಲವರು ಆಕ್ಷೇಪಿಸುತ್ತಾರೆ

ಪರಿಪೂರ್ಣಚಂದ್ರಿಕಾ

ಇವುಗಳ ಖಂಡನೆಯನ್ನು ಗುರುಗಳಾದ ವಿಜಯೀಂದ್ರಶ್ರೀಪಾದರ ನ್ಯಾಯಮೌಕ್ತಿಕ ಮಾಲೆಯಲ್ಲಿ ತಿಳಿಯಬೇಕು. (ಕೆಲವು ಈ ಆಕ್ಷೇಪವನ್ನು ಸುಧೆಯ ವ್ಯಾಖ್ಯಾನದಲ್ಲಿ ಕಾಶಿಕಾಚಾರ್ಯರೂ ಅನುವಾದ ಮಾಡಿಕೊಂಡು ನಿರಾಕರಿಸಿದ್ದಾರೆ.) ಇಲ್ಲಿಗೆ ಓಂಕಾರವಾದ ಮುಗಿಯಿತು.

## ಸಾರ

### ಸನ್ಯಾಯರತ್ನಾವಳಿಯಲ್ಲಿ ಓಂಕಾರವಿಚಾರ

'ಪೃಥಗೋಂಕ್ರಿಯತೇऽಖಿಲೈಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುತ್ತ ಸನ್ಯಾಯರತ್ನಾವಳಿಯಲ್ಲಿ 'ಓಂಕಾರವು ಸೂತ್ರದಲ್ಲಿ ಅಥಶಬ್ದದಂತೆ ಸೇರಿಕೊಂಡಿಲ್ಲ. ಪ್ರತ್ಯೇಕವಾಗಿ ಉಚ್ಚರಿಸಬೇಕು' ಎಂದಿದೆ. ಈ ಸಮಸ್ಯೆಗೆ ಪರಿಹಾರ - ಅಷ್ಟಾಕ್ಷರ ಮಂತ್ರದಲ್ಲಿ ಒಂದು ಓಂಕಾರ ಮಂತ್ರಘಟಕ. ಇನ್ನೆರಡು ಆದ್ಯಂತಗಳಲ್ಲಿ ಅದೃಷ್ಟಫಲಕ್ಕಾಗಿ. ಹೀಗೆ ಮೂರು ಓಂಕಾರಗಳು. ಹಾಗೇ ಪ್ರಥಮ ಸೂತ್ರದಲ್ಲಿಯೂ ಮೂರು ಓಂಕಾರಗಳು. 'ಓಂಕಾರಶ್ಚಾಥಶಬ್ದಶ್ಚ' ಎಂದು ಸ್ಮೃತಿ ಇರುವುದರಿಂದ ಅಥಶಬ್ದದ ಮೊದಲಿಗೆ ಒಂದು ಓಂಕಾರ, ಅಥಶಬ್ದದಂತೆಯೆ ಸೂತ್ರಘಟಕವಾಗಿದೆ. ಅಂದರೆ ಗುಣಪೂರ್ಣತ್ವವನ್ನು ಹೇಳಿ ಅನ್ವಯ ಹೊಂದುತ್ತದೆ. ಇದನ್ನು ಸುಧೆಯಲ್ಲಿ ಹೇಳಿದೆ. ಇನ್ನೆರಡು ಓಂಕಾರಗಳು ಆದ್ಯಂತಗಳಲ್ಲಿ 'ಸ್ರವತ್ಯನೋಂಕೃತಂ' ಎಂದು ಶ್ರುತಿವಿಹಿತವಾದವುಗಳು. ಇವು ಸೂತ್ರಘಟಕವಲ್ಲ. ಸನ್ಯಾಯರತ್ನಾವಳಿ ಹೇಳುವುದು ಇದನ್ನೆ.

ಅಥವಾ ಆದಿಯಲ್ಲಿ ಶ್ರುತಿವಿಹಿತವಾದ ಓಂಕಾರವನ್ನೆ ಸ್ಮೃತಿಯೂ ಹೇಳುತ್ತದೆ. ಒಂದೇ ಓಂಕಾರ. ಅದನ್ನು ಒಮ್ಮೆ ಉಚ್ಚರಿಸಿದರೂ ಎಲ್ಲಾ ಸೂತ್ರಗಳಿಗೂ ಸಂಬಂಧಿಸುವಂತೆ ಬಿಡಿಸಿ ಉಚ್ಚಾರ ಮಾಡಿದೆ. ಅಥಶಬ್ದದಂತೆ ಸೇರಿಸಿ ಅಲ್ಲ ಎಂಬುದು ಸನ್ಯಾಯರತ್ನಾವಳಿಯ ಅಭಿಪ್ರಾಯ. ತನ್ನ ಅರ್ಥವನ್ನು ಬೋಧಿಸಿ ಅನ್ವಯ ಹೊಂದುವುದರಿಂದ ಸೂತ್ರ ಘಟಕವಾಗಿದೆ ಎಂದು ಸುಧೆ ಹೇಳುತ್ತದೆ. ಪರಸ್ಪರ ವಿರೋಧವಿಲ್ಲ.

ಭಾಷ್ಯದಲ್ಲಿ 'ಅಥ ಅತಃ ಶಬ್ದಗಳನ್ನೇ ಆದಿಯಲ್ಲಿ ಹೇಳುತ್ತಾರೆ' 'ತಾವೇವಾದೌ ಪ್ರಯುಂಜತೇ' ಎಂದಿದ್ದು ಓಂಕಾರ ಇಲ್ಲವೆಂಬ ಅಭಿಪ್ರಾಯದಿಂದಲ್ಲ. ಬ್ರಹ್ಮಜಿಜ್ಞಾಸಾದಿ ಪದಗಳು ಆದಿಯಲ್ಲಿ ಬರುವುದಿಲ್ಲ ಎಂದರ್ಥ. ಅಥವಾ ಏವಕಾರಕ್ಕೆ 'ಅಥ ಅತಃಶಬ್ದಗಳು ಆದಿಯಲ್ಲಿ ಬಂದೇ ಬರುತ್ತವೆ' ಎಂದು ಅರ್ಥ. ಅಥವಾ ಆದಿಯಲ್ಲಿ ಎಂದರೆ ಬ್ರಹ್ಮಶಬ್ದದ ಆದಿಯಲ್ಲಿ ಅಥ ಅತಃ ಶಬ್ದಗಳೇ ಬರುತ್ತವೆ ಎಂದರ್ಥ. ಭಾಷ್ಯದಲ್ಲಿ ಓಂಕಾರಕ್ಕೆ ವ್ಯಾಖ್ಯಾನ ಮಾಡದಿರುವುದು, ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡಲಿದ್ದೇವೆ. ಛಾಂದೋಗ್ಯಾದಿ ಭಾಷ್ಯಗಳಲ್ಲಿ ಮಾಡಿದ್ದೇವೆ ಮತ್ತು ಪೂರ್ವಪಕ್ಷದ ಎಲ್ಲ ಯುಕ್ತಿಗಳನ್ನೂ ಅಥಾದಿ ಶಬ್ದಗಳೆ ಸೂಚಿಸುವುದರಿಂದ ಅವುಗಳಿಗೆ ವ್ಯಾಖ್ಯಾನ ಮಾಡಿದರೆ ಸಾಕು ಎಂಬ ಅಭಿಪ್ರಾಯದಿಂದ. ಅದೃಷ್ಟಫಲಕ್ಕಾಗಿ ಉಚ್ಚರಿಸುವ ಓಂಕಾರಕ್ಕೆ ವಾಕ್ಯಾರ್ಥದಲ್ಲಿ ಅನ್ವಯವೂ ಇದೆ ಎಂದು ತೋರಿಸಲು ಅನುವ್ಯಾಖ್ಯಾನ ವ್ಯಾಖ್ಯಾನ ಮಾಡಿದೆ.

• • • • •

*ಜಿಜ್ಞಾಸಾಧಿಕರಣ*

## तात्पर्यचन्द्रिका

ननु प्रतिवचनाद्यभावेन प्रश्नाद्यर्थत्वासम्भवेऽपि "अथ शब्दानुशासनम्" इत्यादाविव आरम्भरूपाधिकारार्थोऽथशब्दः कस्मान्न स्यात् । अत्र परेषां भाष्यं - "ब्रह्मजिज्ञासाया अनधिकार्यत्वात्" इति[१] । तन्न । इच्छाया आरभ्यत्वासम्भवेऽपि, विवरणरीत्या जिज्ञासाशब्दस्य विचारलक्षकत्वेन तस्यारभ्यत्वसम्भवात् ।

ननु आनन्तर्याभिधानमुखेन शास्त्रीयस्याधिकारिणः न्यायतः समर्पणाभावे विचारो निरधिकारिकोऽननुष्ठेयः स्यादित्यधिकारितद्विशेषणप्रयोजनलाभायानन्तर्यार्थतेति चेत् । न तावद् विचारविधौ त्वत्पक्षे मुमुक्षुरधिकारी मोक्षश्च फलमिति युक्तम् । विचारो मोक्षसाधनतया न प्राप्त इति तद्विधेरपूर्वविधित्वापातात् । मुमुक्षोरपि ज्ञानकामनां विना विचारेऽप्रवृत्तेः । त्वन्मते च वक्ष्यमाणरीत्या ज्ञानकामनाऽनुपपत्तेश्च । नापि विचारविधौ ज्ञानकामोऽधिकारी, ज्ञानं च फलमिति युक्तम् । अध्ययनविधेः ज्ञानकामाधिकारं निषेधता त्वया, अज्ञाते ज्ञाने कामनायोगात् ज्ञानज्ञाने च तदवच्छेदकविषयस्यापि ज्ञातत्वात् पुनस्तज्ज्ञानं कामनाऽयोगादिति युक्त्या ज्ञानकामनानिषेधात् ।

---

(१) शङ्करभाष्यम् – तत्राथशब्द आनन्तर्यार्थः परिगृह्यते नाधिकारार्थः, ब्रह्मजिज्ञासाया अनधिकार्यत्वात् ।

भामती – न च तस्या अधिकार्यत्वम्, अप्रस्तूयमानत्वात्, येन तत्समभिव्याहृतोऽथशब्दोऽधिकारार्थः स्यात् । जिज्ञासाविशेषणं तु ब्रह्मतज्ज्ञानमधिकार्यं भवेत् । न च तदप्यथशब्देन संबध्यते, प्राधान्याभावात् । न च जिज्ञासा मीमांसा, येन योगानुशासनवदधिक्रियेत, नान्तत्वं निपात्य 'माङ् माने' इत्यस्माद्वा 'मान पूजायाम्' इत्यस्माद्वाधातोः 'मान्बध –' इत्यादिनाऽनिच्छार्थे सनि व्युत्पादितस्य मीमांसाशब्दस्य पूजितविचारवचनत्वात् । ज्ञानेच्छावाचकत्वाज्जिज्ञासापदस्य, प्रवर्तिका हि मीमांसायां जिज्ञासा स्यात् । न च प्रवर्त्यप्रवर्तकयोरैक्यम्, एकत्वे तद्भावानुपपत्तेः । न च स्वार्थपरत्वस्योपपत्तौ सत्यामन्यार्थपरत्वकल्पना युक्ता, अतिप्रसङ्गात् । तस्मात् सुष्ठूक्तं 'जिज्ञासाया अनधिकार्यत्वात्' इति ।

**ननु परोक्षज्ञाने कामनाऽयोगेऽपि, परोक्षेण प्रतिबद्धापरोक्षेण वा ज्ञानेन ज्ञातब्रह्मावच्छिन्नेऽपरोक्षज्ञानेऽप्रतिबद्धापरोक्षज्ञाने वा कामना श्रवणरूपविचार-विध्यधिकारिविशेषणमिति चेन्न । इच्छाया अपरोक्षत्वात् तदवच्छेदकज्ञानावच्छेदक विषयस्याप्यपरोक्षत्वादिच्छासमानकालवर्त्यपरोक्षज्ञानस्यापि विचारसाध्यत्वा-नुपपत्तेः । अन्यानवच्छेदेन अपरोक्षज्ञानस्य विचारसाध्यत्वे च, तादृशपरोक्षज्ञाने कामना, तस्य विचारसाध्यत्वं चास्तु ।**

ಅನುವಾದ - ಪ್ರಶ್ನೆ - ಸೂತ್ರದಲ್ಲಿರುವ 'ಅಥ' ಶಬ್ದಕ್ಕೆ 'ಅರ್ಹತೆಯನ್ನು ಪಡೆದ ಅನಂತರ' ಎಂಬರ್ಥವನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಆದರೆ ಅಥ ಶಬ್ದಕ್ಕೆ 'ಪ್ರಶ್ನೆ' ಇತ್ಯಾದಿ ಅರ್ಥಗಳನ್ನೂ ಸಹ ಹೇಳಲು ಬರುವಾಗ 'ಅಧಿಕಾರತ್ವದ ಅನಂತರ' ಎಂಬರ್ಥವನ್ನೇ ಏಕೆ ಹೇಳಬೇಕು?

ಉತ್ತರ - ಪ್ರಶ್ನೆ ಇದ್ದರೆ ಮುಂದೆ ಉತ್ತರವಿರಬೇಕು. ಆದರೆ ಉತ್ತರವಿಲ್ಲದ್ದರಿಂದ ಪ್ರಶ್ನಾರ್ಥದಲ್ಲಿ 'ಅಥ' ಶಬ್ದವಿದೆಯೆಂಬುದು ತಪ್ಪು .

ಶಂಕೆ - 'ಅಥ ಶಬ್ದಾನುಶಾಸನಮ್' ಎಂಬಲ್ಲಿ 'ಆರಂಭ' ಎಂಬರ್ಥದಲ್ಲಿ 'ಅಥ' ಶಬ್ದವು ಪ್ರಸಿದ್ಧವಾಗಿದೆ. ಅದರಂತೆ ಪ್ರಕೃತದಲ್ಲಿಯೂ ಪ್ರಶ್ನೆ ಮೊದಲಾದ ಅರ್ಥಗಳು ಕೂಡದಿದ್ದರೂ ಆರಂಭ ಎಂಬರ್ಥವನ್ನು ಏಕೆ ಹೇಳಬಾರದು? ಶಂಕರಭಾಷ್ಯದಲ್ಲಿಯೂ 'ಬ್ರಹ್ಮಜಿಜ್ಞಾಸಾಯಾಃ ಅನಧಿಕಾರ್ಯತ್ವಾತ್' "ಬ್ರಹ್ಮಜಿಜ್ಞಾಸೆಯು ಆರಂಭಿಸಲು ಯೋಗ್ಯವಲ್ಲದ್ದರಿಂದ" 'ಅನಂತರ' ಎಂಬರ್ಥವನ್ನೇ ಇಟ್ಟುಕೊಳ್ಳಬೇಕೆಂದು ಹೇಳಲಾಗಿದೆ.

ಉತ್ತರ - ಜಿಜ್ಞಾಸೆ ಎಂದರೆ 'ಜ್ಞಾನೇಚ್ಛೆ' ಎಂಬ ಮುಖ್ಯಾರ್ಥವನ್ನು ಇಟ್ಟುಕೊಂಡರೆ, ಅದು ಯತ್ನಸಾಧ್ಯವಲ್ಲದ್ದರಿಂದ ಆರಂಭಿಸಲು ಆಗುವದಿಲ್ಲ. ಆದರೆ ವಿವರಣಕಾರ ಹೇಳುವಂತೆ 'ಜಿಜ್ಞಾಸಾ' ಪದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡಲು ಬರುತ್ತದೆ. ವಿಚಾರವು ಯತ್ನಸಾಧ್ಯವಾದ್ದರಿಂದ ಅದರಲ್ಲಿ ಆರಂಭವು ಉಪಪನ್ನವಾಗುತ್ತದೆ.

ಶಂಕೆ - 'ಆರಂಭ' ಎಂಬರ್ಥ ಹೇಳಬಹುದು. ಆದರೆ 'ಅನಂತರ' ಎಂಬರ್ಥವನ್ನು ಹೇಳುವು-ದರಿಂದ ಶಾಸ್ತ್ರಕ್ಕೆ ಅಧಿಕಾರವನ್ನು ಹೇಳಿದಂತಾಗುತ್ತದೆ. ಹೀಗೆ ಅಧ್ಯಯನ ಮಾಡಬೇಕಾದವನು ಯಾರು ಎಂದು ಸೂತ್ರದಿಂದ ಹೇಳದಿದ್ದರೆ. ಅಧಿಕಾರಿಗಳು ತಿಳಿಯದಿರುವುದರಿಂದ ಯಾರೂ ಪ್ರವೃತ್ತಿ ಮಾಡಲಾರರು. ಆದ್ದರಿಂದ ಅಧಿಕಾರಿ ಮತ್ತು ಅಧಿಕಾರಿವಿಶೇಷಣವಾದ ಪ್ರಯೋಜನದ ಲಾಭಕ್ಕಾಗಿ "ಅನಂತರ" ಎಂಬರ್ಥವನ್ನೇ ಅಥಶಬ್ದಕ್ಕೆ ಹೇಳಬೇಕು

तात्पर्यचन्द्रिका

ननु प्रतिवचनाद्यभावेन प्रश्नाद्यर्थत्वासम्भवेऽपि "अथ शब्दानुशासनम्" इत्यादाविव आरम्भरूपाधिकारार्थोऽथशब्दः कस्मान्न स्यात् । अत्र परेषां भाष्यं - "ब्रह्मजिज्ञासाया अनधिकार्यत्वात्" इति(१) । तन्न । इच्छाया आरभ्यत्वासम्भवेऽपि, विवरणरीत्या जिज्ञासाशब्दस्य विचारलक्षकत्वेन तस्यारभ्यत्वसम्भवात् ।

ननु आनन्तर्याभिधानमुखेन शास्त्रीयस्याधिकारिणः न्यायतः समर्पणाभावे विचारो निरधिकारिकोऽननुष्ठेयः स्यादित्यधिकारितद्विशेषणप्रयोजनलाभायानन्तर्यार्थतेति चेत् । न तावद् विचारविधौ त्वत्पक्षे मुमुक्षुरधिकारी मोक्षश्च फलमिति युक्तम् । विचारो मोक्षसाधनतया न प्राप्त इति तद्विधेरपूर्वविधित्वापातात् । मुमुक्षोरपि ज्ञानकामनां विना विचारेऽप्रवृत्तेः । त्वन्मते च वक्ष्यमाणरीत्या ज्ञानकामनाऽनुपपत्तेश्च । नापि विचारविधौ ज्ञानकामोऽधिकारी, ज्ञानं च फलमिति युक्तम् । अध्ययनविधेः ज्ञानकामाधिकारं निषेधता त्वया, अज्ञाते ज्ञानं कामनायोगात् ज्ञानज्ञाने च तदवच्छेदकविषयस्यापि ज्ञातत्वात् पुनस्तज्ज्ञानं कामनाऽयोगादिति युक्त्या ज्ञानकामनानिषेधात् ।

---

(१)शङ्करभाष्यम् – तत्राथशब्द आनन्तर्यार्थः परिगृह्यते नाधिकारार्थः, ब्रह्मजिज्ञासाया अनधिकार्यत्वात् ।

भामती – न च तस्या अधिकार्यत्वम्, अप्रस्तूयमानत्वात्, येन तत्समभिव्याहृतोऽथशब्दोऽधिकारार्थः स्यात् । जिज्ञासाविशेषणं तु ब्रह्मतज्ज्ञानमधिकार्यं भवेत् ; न च तदप्यथशब्देन संबध्यते, प्राधान्याभावात् । न च जिज्ञासा मीमांसा, येन योगानुशासनवदधिक्रियेत, नान्तत्वं निपात्य 'माङ् माने' इत्यस्माद्वा 'मान पूजायाम्' इत्यस्माद्वाधातोः 'मान्बध –' इत्यादिनाऽनिच्छार्थे सनि व्युत्पादितस्य मीमांसाशब्दस्य पूजितविचारवचनत्वात् । ज्ञानेच्छावाचकत्वाज्जिज्ञासापदस्य, प्रवर्तिका हि मीमांसायां जिज्ञासा स्यात् । न च प्रवर्त्यप्रवर्तकयोरैक्यम्, एकत्वे तद्भावानुपपत्तेः । न च स्वार्थपरत्वस्योपपत्तौ सत्यामन्यार्थपरत्वकल्पना युक्ता, अतिप्रसङ्गात् । तस्मात् सुष्ठूक्तं 'जिज्ञासाया अनधिकार्यत्वात्' इति ।

ननु परोक्षज्ञाने कामनाऽयोगेऽपि, परोक्षेण प्रतिबद्धापरोक्षेण वा ज्ञानेन ज्ञातब्रह्मावच्छिन्नेऽपरोक्षज्ञानेऽप्रतिबद्धापरोक्षज्ञाने वा कामना श्रवणरूपविचार-विध्यधिकारिविशेषणमिति चेन्न । इच्छाया अपरोक्षत्वात् तदवच्छेदकज्ञानावच्छेदक विषयस्याप्यपरोक्षत्वादिच्छासमानकालवर्त्यपरोक्षज्ञानस्यापि विचारसाध्यत्वा-नुपपत्तेः । अन्यानवच्छेदेन अपरोक्षज्ञानस्य विचारसाध्यत्वे च, तादृशपरोक्षज्ञाने कामना, तस्य विचारसाध्यत्वं चास्तु ।

ಅನುವಾದ - ಪ್ರಶ್ನೆ - ಸೂತ್ರದಲ್ಲಿರುವ 'ಅಥ' ಶಬ್ದಕ್ಕೆ 'ಅರ್ಹತೆಯನ್ನು ಪಡೆದ ಅನಂತರ' ಎಂಬರ್ಥವನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಆದರೆ ಅಥ ಶಬ್ದಕ್ಕೆ 'ಪ್ರಶ್ನೆ' ಇತ್ಯಾದಿ ಅರ್ಥಗಳನ್ನೂ ಸಹ ಹೇಳಲು ಬರುವಾಗ 'ಅಧಿಕಾರತ್ವದ ಅನಂತರ' ಎಂಬರ್ಥವನ್ನೇ ಏಕೆ ಹೇಳಬೇಕು?

ಉತ್ತರ - ಪ್ರಶ್ನೆ ಇದ್ದರೆ ಮುಂದೆ ಉತ್ತರವಿರಬೇಕು. ಆದರೆ ಉತ್ತರವಿಲ್ಲದ್ದರಿಂದ ಪ್ರಶ್ನಾರ್ಥದಲ್ಲಿ 'ಅಥ' ಶಬ್ದವಿದೆಯೆಂಬುದು ತಪ್ಪು.

ಶಂಕೆ - 'ಅಥ ಶಬ್ದಾನುಶಾಸನಮ್' ಎಂಬಲ್ಲಿ 'ಆರಂಭ' ಎಂಬರ್ಥದಲ್ಲಿ 'ಅಥ' ಶಬ್ದವು ಪ್ರಸಿದ್ಧವಾಗಿದೆ. ಅದರಂತೆ ಪ್ರಕೃತದಲ್ಲಿಯೂ ಪ್ರಶ್ನೆ ಮೊದಲಾದ ಅರ್ಥಗಳು ಕೂಡದಿದ್ದರೂ ಆರಂಭ ಎಂಬರ್ಥವನ್ನು ಏಕೆ ಹೇಳಬಾರದು? ಶಂಕರಭಾಷ್ಯದಲ್ಲಿಯೂ 'ಬ್ರಹ್ಮಜಿಜ್ಞಾಸಾಯಾಃ ಅನಧಿಕಾರ್ಯತ್ವಾತ್' ''ಬ್ರಹ್ಮಜಿಜ್ಞಾಸೆಯು ಆರಂಭಿಸಲು ಯೋಗ್ಯವಲ್ಲದ್ದರಿಂದ'' 'ಅನಂತರ' ಎಂಬರ್ಥವನ್ನೇ ಇಟ್ಟುಕೊಳ್ಳಬೇಕೆಂದು ಹೇಳಲಾಗಿದೆ.

ಉತ್ತರ - ಜಿಜ್ಞಾಸೆ ಎಂದರೆ 'ಜ್ಞಾನೇಚ್ಛೆ' ಎಂಬ ಮುಖ್ಯಾರ್ಥವನ್ನು ಇಟ್ಟುಕೊಂಡರೆ, ಅದು ಯತ್ನಸಾಧ್ಯವಲ್ಲದ್ದರಿಂದ ಆರಂಭಿಸಲು ಆಗುವದಿಲ್ಲ. ಆದರೆ ವಿವರಣಕಾರ ಹೇಳುವಂತೆ 'ಜಿಜ್ಞಾಸಾ' ಪದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡಲು ಬರುತ್ತದೆ. ವಿಚಾರವು ಯತ್ನಸಾಧ್ಯವಾದ್ದರಿಂದ ಅದರಲ್ಲಿ ಆರಂಭವು ಉಪಪನ್ನವಾಗುತ್ತದೆ.

ಶಂಕೆ - 'ಆರಂಭ' ಎಂಬರ್ಥ ಹೇಳಬಹುದು. ಆದರೆ 'ಅನಂತರ' ಎಂಬರ್ಥವನ್ನು ಹೇಳುವು-ದರಿಂದ ಶಾಸ್ತ್ರಕ್ಕೆ ಅಧಿಕಾರವನ್ನು ಹೇಳಿದಂತಾಗುತ್ತದೆ. ಹೀಗೆ ಅಧ್ಯಯನ ಮಾಡಬೇಕಾದವನು ಯಾರು ಎಂದು ಸೂತ್ರದಿಂದ ಹೇಳದಿದ್ದರೆ. ಅಧಿಕಾರಿಗಳು ತಿಳಿಯದಿರುವುದರಿಂದ ಯಾರೂ ಪ್ರವೃತ್ತಿ ಮಾಡಲಾರರು. ಆದ್ದರಿಂದ ಅಧಿಕಾರಿ ಮತ್ತು ಅಧಿಕಾರಿವಿಶೇಷಣವಾದ ಪ್ರಯೋಜನದ ಲಾಭಕ್ಕಾಗಿ ''ಅನಂತರ'' ಎಂಬರ್ಥವನ್ನೇ ಅಥಶಬ್ದಕ್ಕೆ ಹೇಳಬೇಕು

ಉತ್ತರ :- ನಮ್ಮ ಸಿದ್ಧಾಂತದಲ್ಲಿ ಹೀಗೆ ಹೇಳಬಹುದು. ಆದರೆ ಅದ್ವೈತ ಸಿದ್ಧಾಂತದಲ್ಲಿ ಹೀಗೆ ಹೇಳಲಾಗದು. ವಿಚಾರಶಾಸ್ತ್ರವನ್ನು ಅಧ್ಯಯನ ಮಾಡಬೇಕಾದವನು ಯಾರು? ವಿಚಾರವಿಧಿ ಯಾರಿಗೆ? ವಿಚಾರಶಾಸ್ತ್ರಕ್ಕೆ ಏನು ಪ್ರಯೋಜನ? ಎಂಬ ಪ್ರಶ್ನೆಗೆ ಅದ್ವೈತಿಗಳಿಂದ ಉತ್ತರಿಸಲಾಗದು.

ಪ್ರಶ್ನೆ - ಮುಮುಕ್ಷುವೇ ಅಧ್ಯಯನಕ್ಕೆ ಅಧಿಕಾರಿ. ಅವನಿಗಾಗಿಯೇ ವಿಚಾರವಿಧಿಯು [illegible] ಹೊರಟಿದೆ. ಮೋಕ್ಷವೇ ಅದಕ್ಕೆ ಪ್ರಯೋಜನ.

ಉತ್ತರ :- ವಿಚಾರವಿಧಿಯನ್ನು ಅದ್ವೈತಮತದಲ್ಲಿ ನಿಯಮವಿಧಿಯೆಂದು ಅಂಗೀಕರಿಸಲಾಗಿದೆ. ಈಗ ನೀವು ವಿಚಾರವನ್ನು ಮೋಕ್ಷಸಾಧನವೆಂದು ಹೇಳಿದರೆ, ಬೇರೆ ಪ್ರಮಾಣದಿಂದ ತಿಳಿದಿಲ್ಲವಾದ್ದರಿಂದ ಅಪೂರ್ವವಿಷಯವಾಯಿತು. ಆದ್ದರಿಂದ ವಿಚಾರವಿಧಿಯು ಅಪೂರ್ವವಿಧಿ ಯೆಂದು ಹೇಳಿದಂತಾಯಿತು. ಮತ್ತು ಮುಮುಕ್ಷುವು ಅಧಿಕಾರಿ ಎಂದು ಹೇಳಿದ್ದೂ ಸಹ ತಪ್ಪು. ಮುಮುಕ್ಷುವು ಮೋಕ್ಷಸಾಧನವಾದ ಜ್ಞಾನದಲ್ಲಿ ಇಚ್ಛೆ ಮಾಡಬೇಕು. ಜ್ಞಾನದಲ್ಲಿ ಇಚ್ಛೆ ಪಡದೆ ವಿಚಾರದಲ್ಲಿ ಪ್ರವೃತ್ತಿಯೆ ಕೂಡುವುದಿಲ್ಲ. ಆದರೆ ನಾವು ಮುಂದೆ ಹೇಳುವಂತೆ ನಿಮ್ಮ ಮತದಲ್ಲಿ ಜ್ಞಾನದಲ್ಲಿ ಇಚ್ಛೆಯನ್ನೇ ಹೇಳಲಾಗದು.

ಪ್ರಶ್ನೆ - ವಿಚಾರವಿಧಿ ಇರುವುದು ಜ್ಞಾನವನ್ನು ಅಪೇಕ್ಷಿಸುವವನಿಗೆ ಮಾತ್ರ. ಆದ್ದರಿಂದ ವಿಚಾರವಿಧಿಗೆ ಜ್ಞಾನವೇ ಫಲವಲ್ಲವೆ?

ಉತ್ತರ :- ಇದೂ ಸಹ ತಪ್ಪು. 'ಜ್ಞಾನಕಾಮನೆ ಉಳ್ಳವನಿಗಾಗಿ ಅಧ್ಯಯನ ವಿಧಿಯು ಹೊರಟಿದೆ' ಎಂದು ಹೇಳಿದರೆ ಅಧ್ಯಯನವಿಧಿಯು ನಿತ್ಯವಿಧಿ ಎಂದು ಹೇಳಲಾಗದು. ಅಧ್ಯಯನವಿಧಿಗೆ ಜ್ಞಾನಕಾಮಿಯು ಅಧಿಕಾರಿ ಆಗಲಾರನೆಂದು ನೀವೇ ಹೇಳಿದ್ದೀರಿ. ಅದ್ವೈತಿಗಳು ಸಮರ್ಥಿಸಿದ ಯುಕ್ತಿ ಹೀಗಿದೆ - ಜ್ಞಾನಕಾಮನೆ ಯಾರಿಗೂ ಸಹ ಬರಲಾರದು. ಏಕೆಂದರೆ ಜ್ಞಾನದಲ್ಲಿ ಇಚ್ಛೆ ಹುಟ್ಟಬೇಕಾದರೆ ಮೊದಲು ಜ್ಞಾನದ ಜ್ಞಾನ ಇರಬೇಕು. ಜ್ಞಾನದ ಜ್ಞಾನ ಇದೆಯೆಂದರೆ ವಿಷಯವಿಲ್ಲದೆ ಜ್ಞಾನ ತೋರಲಾರದಾದ್ದರಿಂದ ವಿಷಯದ ಜ್ಞಾನವು ಮೊದಲೇ ಇದೆ ಎಂದಂತಾಯಿತು. ಇಂತಹ ಜ್ಞಾನದಲ್ಲಿ ಕಾಮನೆಯು ಕೂಡುವುದಿಲ್ಲ. ಹೀಗೆ ಯುಕ್ತಿಯಿಂದ ಜ್ಞಾನಕಾಮನೆಯು ಕೂಡುವುದಿಲ್ಲವೆಂದು ಅದ್ವೈತಿಗಳು ಹೇಳಿರುವುದರಿಂದ, ಪ್ರಕೃತ ಜ್ಞಾನಕಾಮನೆ ಉಳ್ಳವನನ್ನು ಅಧಿಕಾರಿ ಎಂದು ಅದ್ವೈತಿಗಳಿಗೆ ಹೇಳಲಾಗದು. ಬ್ರಹ್ಮನ ಪರೋಕ್ಷಜ್ಞಾನದಲ್ಲಿ ಕಾಮನಾ ಹುಟ್ಟದಿದ್ದರೂ ಅಪರೋಕ್ಷಜ್ಞಾನದಲ್ಲಿ ಕಾಮನಾ ಹುಟ್ಟಬಹುದು. ಏಕೆಂದರೆ ಪರೋಕ್ಷಜ್ಞಾನವಷ್ಟೆ ಬಂದಿರುತ್ತದೆ. ಮತ್ತು ಪ್ರತಿಬದ್ಧ ಅಪರೋಕ್ಷಜ್ಞಾನ ಬಂದಾಗ ಅಪ್ರತಿಬದ್ಧ ಅಪರೋಕ್ಷಜ್ಞಾನದ ಬಗ್ಗೆ ಇಚ್ಛೆಯು ಹುಟ್ಟಬಹುದು. ಆದ್ದರಿಂದ ಶ್ರವಣರೂಪವಾದ ವಿಚಾರ ವಿಧಿಯು ಅಧಿಕಾರಿಯಲ್ಲಿ ವಿಶೇಷಣವಾಗಬಹುದಲ್ಲವೆ?

ಪರಿಪೂರ್ಣಚಂದ್ರಿಕಾ

ಈ ಪ್ರಶ್ನೆಗೆ ಅವಕಾಶವಿಲ್ಲ - ಇಚ್ಛೆಯು ಅಪರೋಕ್ಷವಾದ್ದರಿಂದ ಇಚ್ಛೆಗೆ ವಿಷಯವಾದ ಜ್ಞಾನದ ಅಪರೋಕ್ಷವೂ ಇದೆ ಎಂದಂತಾಯಿತು. ಜ್ಞಾನಕ್ಕೆ ವಿಷಯನಾದ ಬ್ರಹ್ಮನ ಅಪರೋಕ್ಷವೂ ಇದೆ ಎಂದಂತಾಯಿತು. ಅಂದರೆ ಇಚ್ಛೆ ಇರುವ ಕಾಲದಲ್ಲಿಯೇ ಬ್ರಹ್ಮನ ಅಪರೋಕ್ಷಜ್ಞಾನವಿದೆಯೆಂದು ಹೇಳಿದಂತಾಯಿತು. ಹೀಗೆ ಇಚ್ಛೆಯ ಸಮಕಾಲದಲ್ಲಿರುವ ಅಪರೋಕ್ಷಜ್ಞಾನವಾಗಲೀ ಅಪ್ರತಿಪಬದ್ಧ ಅಪರೋಕ್ಷಜ್ಞಾನವಾಗಲೀ ವಿಚಾರಸಾಧ್ಯವಾಗುವುದಿಲ್ಲ. ಬೇರೆನನ್ನೂ ವಿಷಯೀಕರಿಸದ ಅಪರೋಕ್ಷಜ್ಞಾನವನ್ನು ವಿಚಾರಸಾಧ್ಯವೆನ್ನಬೇಕು. ಅವಾಗ ಬೇರೆನನ್ನೂ ವಿಷಯೀಕರಿಸದ ಪರೋಕ್ಷಜ್ಞಾನದಲ್ಲಿಯೇ ಇಚ್ಛೆಯನ್ನು ವಿಚಾರಸಾಧ್ಯತ್ವವನ್ನು ಏಕೆ ಹೇಳಬಾರದು? ಎಂಬ ನಮ್ಮ ಪ್ರಶ್ನೆಗೆ ನಿಮ್ಮಿಂದ ಉತ್ತರಿಸಲಾಗದು.

### ಕಠಿಣಪದಾರ್ಥ

**ಪ್ರತಿವಚನಾದ್ಯಭಾವೇನ** = ಉತ್ತರ ನೀಡುವ ಮಾತುಗಳಿಲ್ಲದ ಕಾರಣ. **ಆರಂಭರೂಪಅಧಿಕಾರಾರ್ಥಃ** = ಆರಂಭವೆಂಬ ಅಧಿಕಾರವು ಅಥಶಬ್ದದ ಅರ್ಥ (ಹೊರತು ಶಮದಮಾದಿಗಳಲ್ಲ). **ಅನಧಿಕಾರ್ಯತ್ವಾತ್** = ಆರಂಭಿಸಲು ಯೋಗ್ಯವಲ್ಲ. **ನ್ಯಾಯತಃ ಸಮರ್ಥನಾಭಾವೇ** = ಸೂತ್ರದಿಂದ ತಿಳಿಯದ ಕಾರಣ. **ವಿಚಾರವಿಧೌ** = 'ತದ್ವಿಜಿಜ್ಞಾಸಸ್ವ' ಎಂಬ ವಿಚಾರ ವಿಧಿಯಲ್ಲಿ. **ತದ್ವಿಧೇಃ** = ವಿಚಾರವಿಧಿಗೆ. **ಜ್ಞಾನಕಾಮಾಧಿಕಾರಮ್** = ಜ್ಞಾನದಲ್ಲಿ ಬರುವ ಕಾಮನಾವೆಂಬ ಅಧಿಕಾರವನ್ನು. **ಜ್ಞಾನಜ್ಞಾನೇ** = ಬ್ರಹ್ಮಜ್ಞಾನದ ಜ್ಞಾನದಲ್ಲಿ. **ತದವಚ್ಛೇದಕವಿಷಯಸ್ಯಾಪಿ** = ಬ್ರಹ್ಮಜ್ಞಾನದಲ್ಲಿ ವಿಶೇಷಣವಾಗಿರುವ ಬ್ರಹ್ಮರೂಪವಿಷಯಕ್ಕೂ ಪರೋಕ್ಷಜ್ಞಾನೇ ಕಾಮನಾಽಧಿಯೋಗೇಪಿ ಪರೋಕ್ಷೇಣ ಜ್ಞಾನೇನ ಬ್ರಹ್ಮಾವಚ್ಛಿನ್ನೇ ಅಪರೋಕ್ಷಜ್ಞಾನೇ ಕಾಮನಾ ಪರೋಕ್ಷಜ್ಞಾನೇ ಕಾಮನಾಽಧಿಯೋಗೇಪಿ ಪ್ರತಿಬದ್ಧಾಪರೋಕ್ಷೇಣ ಜ್ಞಾನೇನ ಅಪ್ರತಿಬದ್ಧಾಪರೋಕ್ಷಜ್ಞಾನೇ ವಾ ಕಾಮನಾ ಎಂದು ಅನ್ವಯ. **ಪ್ರತಿಬದ್ಧ ಅಪರೋಕ್ಷೇಣ** = ತಡೆಯಿಲ್ಲದ ಅಪರೋಕ್ಷಜ್ಞಾನದಿಂದ **ಜ್ಞಾತಬ್ರಹ್ಮಾವಚ್ಛಿನ್ನೇ** = ಪರೋಕ್ಷವಾಗಿ ಜ್ಞಾತವಾದ ಬ್ರಹ್ಮನಿಂದ ಕೂಡಿದ. **ತದವಚ್ಛೇದಕಜ್ಞಾನಾವಚ್ಛೇದಕವಿಷಯಸ್ಯಾಪಿ** = ಇಚ್ಛೆಗೆ ಅವಚ್ಛೇದಕವಾದ ಜ್ಞಾನಕ್ಕೆ ಅವಚ್ಛೇದಕವಾದ ವಿಷಯಕ್ಕೂ ಕೂಡ. **ಇಚ್ಛಾಸಮಕಾಲವೃತ್ತ್ಯಪರೋಕ್ಷಜ್ಞಾನಸ್ಯ** = ಇಚ್ಛೆಯ ಸಮಾನ ಕಾಲದಲ್ಲಿಯೇ ಇರುವ ಅಪರೋಕ್ಷಜ್ಞಾನಕ್ಕೆ. **ಅನ್ಯಾನವಚ್ಛೇದೇನ** = ಬೇರೆ ಅವಚ್ಛೇದಕವೂ ಇಲ್ಲದ. **ತಸ್ಯ** = ಬೇರೆ ಯಾವ ಅವಚ್ಛೇದಕವಿಲ್ಲದ ಪರೋಕ್ಷಜ್ಞಾನಕ್ಕೆ

**प्रकाशः** - एवमोङ्कारव्याख्यानं समर्थ्य अधिकारानन्तर्यार्थोऽयमथशब्द इत्यथशब्दव्याख्यानं समर्थयितुमाक्षिपति ।। नन्विति ।।

''मङ्गलानन्तरारम्भप्रश्नकार्त्स्न्येष्वथो अथ''

*ಜಿಜ್ಞಾಸಾಧಿಕರಣ*

इत्यभिधानात् प्रतिवचनाभावेन ''अथ भागवतं ब्रूते'' इत्यादाविव प्रश्नार्थत्वायोगेऽपि, कात्स्न्र्येन ब्रह्मविचारकरणस्य बाधेन तदर्थकत्वायोगेऽपि, मङ्गलस्य वक्ष्यमाणदिशा वाच्यार्थत्वाभावेऽप्यारम्भार्थत्वं किं न स्यादित्यर्थः। आदिपदात् ''अथ योगानुशासनम्'' इत्यादेर्ग्रहणम् ।

एवमाक्षिप्तस्य स्वयं समाधानं करिष्यन्, यदत्राद्वैतिनां परिहारभाष्यं - ''तत्राथशब्द आनन्तर्यार्थः परिगृह्यते । नाधिकारार्थः । ब्रह्मजिज्ञासाया अनधिकार्यत्वात् । मङ्गलस्य च वाक्यार्थे समन्वयाभावादर्थान्तरप्रयुक्त एव ह्यथशब्दः, श्रुत्या मङ्गलप्रयोजनो भवति । पूर्वप्रकृतापेक्षायाश्च फलत आनन्तर्या-व्यतिरेकात्'' इत्यन्तं, तत् क्रमेण दुदूषयिषुः, 'अनधिकार्यत्वात्' इत्युक्तं तावद् दूषयितुमनुवदति ।। अत्रेति ।। इच्छाया इति ।। जिज्ञासापदमुख्यार्थभूत-ज्ञानेच्छाया इत्यर्थः । अत एव भामत्यां लक्षितविचारारम्भार्थत्वमथशब्दस्य भविष्यतीति मत्वा, ''नच स्वार्थपरत्वस्योपपत्तौ सत्यामन्यार्थकल्पना युक्ता'' इति तल्लक्षकत्वमेव निरस्तम् । अवतारितं च कल्पतरौ तथैवेति ।

परभाष्यस्याभिप्रायान्तरमाशङ्कते ।। नन्विति ।। सत्यमेवं, तथाऽपि मन्मत एवेदं युज्यते, नतु त्वन्मत इति भावेन तन्मतं दूषयितुं, किं मुमुक्षुरधिकारी, मोक्षः फलम्, उत ब्रह्मज्ञानकामोऽधिकारी, ब्रह्मज्ञानं च फलम्, अथापरोक्ष-ज्ञानकामोऽधिकारी, ब्रह्मापरोक्षज्ञानं च फलम्, यद्वा – अप्रतिबद्धब्रह्मा-परोक्षज्ञानकामोऽधिकारी, तादृशज्ञानं च फलम्, अथवा ब्रह्मेतरानवच्छिन्नब्रह्मा-परोक्षज्ञानकामोऽधिकारी, तादृशज्ञानं च फलमिति पञ्च पक्षान् हृदि निधायाद्यं तावद् दूषयति ।। न तावदिति ।। ज्ञानहेतुत्वेन विचारस्य लोकतोऽवगमेऽपि मोक्षोद्देशेन विचारविधावपूर्वविधित्वमेव स्यात् । नचेष्टापत्तिः । त्वया नियमविधित्वाङ्गीकारादिति भावः । मोक्षः फलमित्यंशं निरस्य, मुमुक्षुरधिकारीत्यंशं निरस्यति ।। मुमुक्षोरिति ।। विचारस्य ज्ञानद्वारेणैव मोक्षहेतुत्वादिति भावः ।

द्वितीयं निरस्यति ।। नापीति ।। अध्ययनेति ।। ''स्वाध्यायोऽध्येतव्यः'' इत्यस्य ज्ञानकामाधिकारिकत्वे ज्योतिष्टोमादिवत् काम्यतैव स्यात् । इष्यते च

नित्यत्वम् । अतो ज्ञानकामाधिकारिकत्वं यया युक्त्या निरस्यते, तयैव ब्रह्मविचारविधावपि तदधिकारिकत्वस्य निरासादित्यर्थः । तामेव युक्तिमाह ।। अज्ञात इति ।। कामनायां धर्मिभूतज्ञानस्य अज्ञाने कारणीभूतधर्मिज्ञानाभावात् कामनाया अयोगः । धर्मिभूतज्ञानस्य च ज्ञाने विषयमगृहीत्वा तदवच्छिन्नज्ञान-ग्रहणायोगात् ज्ञानज्ञानेन विषयभूतधर्मादेरपि ग्रहणात् सिद्धे इच्छाविरहेण धर्मज्ञानादौ न कामना सम्भवतीत्यर्थः ।

उक्तदोषपरिजिहीर्षया तृतीयतुरीयौ शङ्कते ।। नन्विति ।। यदा परोक्षज्ञानेन ज्ञातं ब्रह्म, तदा तदवच्छिन्नापरोक्षज्ञाने कामना, यदात्वपरोक्षज्ञानेन ज्ञातं, तदा तदवच्छिन्नाप्रतिबद्धापरोक्षज्ञाने कामना । एवंच धर्मिभूतज्ञानस्य परोक्षत्वे वा न कश्चिद्दोष इति भावः । 'श्रवणरूप' इति पररीत्या । एतच्च 'श्रवणसाध्यस्य' इत्यादिवक्ष्यमाणदूषणसौकर्याय । पक्षद्वयमप्येकेन दोषेण निराह ।। इच्छाया इति ।। कामनाया इच्छात्वादिति भावः । एवंच इच्छाविषयकमपरोक्षज्ञानं स्वविषयमिच्छां गृह्णत्, इच्छाविषयं ज्ञानं तदवच्छेदकं ब्रह्म चाविषयीकृत्य, नेच्छां विषयीकर्तुमलमिति, इच्छाविषयापरोक्षज्ञानस्यैव, ब्रह्मापरोक्षज्ञानतया, स्वविषये अप्रतिबद्धत्वेन ब्रह्मविषयकाप्रतिबद्धापरोक्षतया च, इच्छासमसमयवर्तिनो विचारसाध्यत्वानुपपत्तेरिति भावः । न केवलं परोक्षज्ञानस्येत्यपेरर्थः । पञ्चमं कल्पमाशङ्क्य दोषमाह ।। अन्येति ।। तथाच नोक्तदोष इति भावः ।। तादृशेति ।। अत्रापि न पूर्वोक्तो दोषः पततीति भावः ।

नन्वस्तु तर्हि ब्रह्मान्यानवच्छिन्नपरोक्षज्ञानकामोऽधिकारी, तादृशं परोक्षज्ञानं फलमिति चेन्न । अध्ययनविधावप्येतादृशार्थज्ञानकामाधिकारिकत्वसम्भवे तत्खण्डनानुपपत्तेः । अध्ययनविधेः नित्यत्वायोगाच्चेति भावः ।

गुरुराजीय – इदानीमथशब्दाभिधेयोक्तिपरमानन्तर्यार्थश्चेतिभाष्यं व्यर्थम-भिधेयान्तरप्रसक्तेस्तत्रानु-पपत्तेश्चाभावादित्याशङ्क्य तत्र प्रसक्तिं तत्र परोक्तानुप-पत्तिनिरासपूर्वकमनुपपत्तिमाह ।। ननु प्रतिवचनादीति ।। जिज्ञासाप्रारम्भ

एवाथशब्दार्थः किं न स्यादिति वदन् प्रष्टव्यः इच्छायाः प्रारम्भो नाम कर्तव्यता उत प्रतिपाद्यता नाद्य इत्याह ।। **जिज्ञासाया इति** ।। इच्छाया विषयसौन्दर्यलभ्यत्वेना-कर्तव्यत्वादित्यर्थः । न द्वितीय इत्याह ।। **जिज्ञासाया इति** ।। पूर्वपक्ष-सिद्धान्ताभ्यामिच्छाप्रतिपादनस्य प्रत्यधिकरणमदृष्टेरित्यर्थः । इच्छाया आरभ्यत्वा सम्भवेऽपीत्येतदप्येवमेव व्याख्येयम् ।। **आरभ्यत्वसम्भवादिति** ।। विचारस्यानन्त्र शास्त्रेण प्रतिपाद्यमानत्वात् तत्रारम्भस्याथशब्दार्थत्वोपपत्तेरिति भावः ।

नन्वानन्तर्यार्थत्वेऽपि कथमधिकारिविशेषणप्रयोजनलाभ इत्यत उक्तम् **आनन्तर्याभिधानमुखेनेति** ।। आनन्तर्येऽथशब्देनोक्ते योग्यतया तत्प्रतियोगित्वेना-धिकारलाभो नान्यथेत्यर्थः । **न्यायतः** सूत्रतः ।। **न तावदिति** ।। तथाचा-धिकारि तद्विशेषणप्रयोजनलाभायाङ्गीकृतमप्यानन्तर्यार्थत्वं परस्य व्यर्थमेव । वक्ष्य-माणरीत्याऽधिकारितद्विशेषणयोरेवासम्भवेनाथशब्देन तत्सूचनासम्भवादित्यर्थः ।। **अपूर्वविधित्वापातादिति** ।। तथाच विचारविधिर्नियमविधिरिति सिद्धान्तभङ्ग इति भावः ।। **वक्ष्यमाणेति** ।। ज्ञाते वा ज्ञाने कामनाऽज्ञाते वेत्यादिवक्ष्यमाण-रीत्येत्यर्थः ।

ननु न विचारविधौ मोक्षकामस्याधिकारित्वं मोक्षस्य च प्रयोजनत्वमङ्गीकुर्मो येन विचारस्य मोक्षसाधनताया अप्राप्तत्वेन तद्विधेरपूर्वविधित्वापत्त्यापसिद्धान्तः स्यात् । किन्तु ज्ञानकामोऽधिकारी ज्ञानं च प्रयोजनमित्येवाङ्गीकुर्मः । तत्रच विचारस्य ज्ञानहेतुताया अन्वयव्यतिरेकाभ्यामेव प्राप्तत्वेन नापूर्वविधित्वमिति नापसिद्धान्त इत्यत आह – **नापीति** ।। अध्ययनविधेर्ज्ञानकामाधिकारित्वा-निषेधकत्वादुक्तयुक्त्यैव विचारविधेरपि ज्ञानकामाधिकारिकत्वस्य निषेद्धुं शक्यत्वान्न तत्कामस्याधिकारित्वं ज्ञानस्य च प्रयोजनत्वमित्याह – **अध्ययनविधेरिति** ।।

नन्वध्ययनविधौ ज्ञानकामनाया अधिकारिविशेषणत्वासम्भवेऽपि विचारविधावधि कारिविशेषणत्वं सम्भवत्येव । नच ज्ञानकामनायास्त्वया निषिद्धत्वात् कथं तदङ्गीकार इति वाच्यम् । मया परोक्षज्ञानकामनाया एव निषिद्धत्वात् । नच परोक्षज्ञानकामनानिषेधे तन्न्यायेनापरोक्षज्ञानकामनापि दूषयितुं शक्येति वाच्यम् । ज्ञात एवापरोक्षज्ञाने कामनाङ्गीकारात् । नच ज्ञानावच्छेदकत्वेन

विषयस्यापि ज्ञातत्वात् पुनः कामनानुपपत्तिरेवेति वाच्यम् । अपरोक्षज्ञानस्य परोक्षतो ज्ञातस्यैव कामनाविषयत्वाङ्गीकारेण परोक्षज्ञानावच्छेदकब्रह्मणोऽपि परोक्षत एव ज्ञानप्राप्त्या तदापरोक्ष्याभावात् । यद्वा अप्रतिबद्धापरोक्षज्ञान-कामनाया अधिकारिविशेषणत्वमप्रतिबद्धापरोक्षज्ञानस्यैव च प्रयोजनत्व-मभ्युगच्छामः । नच धर्मिज्ञानाभावेनाज्ञाते अप्रतिबद्धापरोक्षज्ञाने कामनाया अयोगात् तज्ज्ञाने च तदवच्छेदकविषयस्यापि ज्ञातत्वात् पुनः कामनानुप-पत्तिरेवेति वाच्यम् । प्रतिबद्धापरोक्षज्ञानेनैव ज्ञाते अप्रतिबद्धापरोक्षज्ञाने कामनाङ्गीकारात् तदवच्छेदकविषयस्य प्रतिबद्धापरोक्षज्ञानप्राप्तावप्यप्रतिबद्धापरोक्षज्ञा नस्यासिद्ध्या कामनोपपत्तेरिति पूर्वोक्तदोषपरिजिहीर्षया तृतीयचतुर्थी शङ्कते – नन्विति ।। यदा परोक्षज्ञानेन ज्ञातं तदा तदवच्छिन्नापरोक्षज्ञाने कामना । यदात्वपरोक्षज्ञानेन ज्ञातं तदा तदवच्छिन्नापरोक्षज्ञाने कामना । यदात्वपरोक्षज्ञानेन ज्ञातं तदा तदवच्छिन्नाप्रतिबद्धापरोक्षज्ञाने कामना । एवंच धर्मिभूतज्ञानस्य परोक्षत्वे वा न कश्चिद्दोष इति योजना ।। इच्छाया इति ।। ब्रह्मापरोक्षतो जानीयामित्येवंरूपेच्छाया इत्यर्थः । ज्ञानस्यापि वस्तुतोऽपरोक्षत्वेऽपि भट्टमते ज्ञाततानुमेयत्वात् परेण व्यवहारे भट्टनय इत्यङ्गीकुर्वता ज्ञानस्याऽऽपरोक्ष्या-नभ्युपगमात् इच्छाया आपरोक्ष्यस्य सर्वाविवादात् प्रकृतज्ञानपरित्यागेनेच्छा-ग्रहणमेव कृतमिति ज्ञेयम् । प्रतिबद्धेत्यादिनोक्तं दूषयति – अन्यानवच्छेदेनेति ।। तादृशेति ।। अन्यानवच्छिन्नेत्यर्थः ।

ವಿವರಣೆ - ಇಲ್ಲಿಯ ತನಕ ಪ್ರಥಮಸೂತ್ರದಲ್ಲಿರುವ ಓಂಕಾರದ ವ್ಯಾಖ್ಯಾನವನ್ನು ಸಮರ್ಥಿಸಿದರು. ಪ್ರಕೃತ 'ಅಥ' ಶಬ್ದಕ್ಕೆ 'ಅರ್ಹತೆಯನ್ನು ಪಡೆದ ಅನಂತರ' ಎಂಬರ್ಥವನ್ನು ಹೇಳಬೇಕೆಂದು ಭಾಷ್ಯದಲ್ಲಿ ಹೇಳಲಾಗಿದೆ. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ 'ನನು' ಇತ್ಯಾದಿ ವಾಕ್ಯದಿಂದ ಆಕ್ಷೇಪವನ್ನು ಮಾಡಿಕೊಳ್ಳುತ್ತಿದ್ದಾರೆ.

'ಮಂಗಲಾನಂತರಾರಂಭಪ್ರಶ್ನಕಾರ್ತ್ಸ್ನ್ಯೇಷ್ವಥೋ ಅಥ' ಎಂಬುದಾಗಿ ಕೋಶದಲ್ಲಿ ಅಥೋ ಮತ್ತು ಅಥ ಶಬ್ದಕ್ಕೆ ಮಂಗಳ, ಅನಂತರ, ಆರಂಭ, ಪ್ರಶ್ನೆ, ಕಾರ್ತ್ಸ್ನ್ಯ ಇಷ್ಟು ಅರ್ಥಗಳನ್ನು ಹೇಳಲಾಗಿದೆ. ಇಷ್ಟು ಅರ್ಥಗಳಲ್ಲಿ ಅನಂತರವೆಂಬರ್ಥವನ್ನೇ ಇಟ್ಟುಕೊಳ್ಳಬೇಕಾಗಿಲ್ಲ. ಆರಂಭ ಎಂಬರ್ಥವನ್ನು ಇಟ್ಟುಕೊಳ್ಳಲು ಬರುತ್ತದೆಂದು ಆಕ್ಷೇಪ ಬರುತ್ತದೆ. ಈ ಆಕ್ಷೇಪಕ್ಕೆ ಭಾಮತೀಕಾರನ ಸಮಾಧಾನವನ್ನು ಮೊದಲು ತೋರಿಸಿ, ಅನಂತರ ಶ್ರೀಮದಾಚಾರ್ಯರು ಹೇಳಿದ ಅರ್ಥವನ್ನೇ ಸಮಂಜಸವೆಂದು ಸಮರ್ಥಿಸಲಾಗಿದೆ.

ಅಥಶಬ್ದಕ್ಕಿರುವ ಅನೇಕ ಅರ್ಥಗಳಲ್ಲಿ ಪ್ರಶ್ನೆ ಎಂಬರ್ಥವನ್ನು ಇಟ್ಟುಕೊಳ್ಳಲು ಬರುವುದಿಲ್ಲ. ''ಅಥ ಭಗವಂತಂ ಬ್ರೂತ?'' ಭಗವಂತನನ್ನು ಹೇಳುತ್ತದೆಯೇ? ಎಂಬಲ್ಲಿ ಅಥಶಬ್ದವು ಪ್ರಶ್ನಾರ್ಥದಲ್ಲಿದೆ. ಏಕೆಂದರೆ ಮುಂದೆ ಉತ್ತರ ನೀಡುವ ವಾಕ್ಯಗಳಿವೆ. ಹಾಗೆ ಈ ಸೂತ್ರದಲ್ಲಿರುವ 'ಅಥ' ಶಬ್ದಕ್ಕೆ ಪ್ರಶ್ನಾರ್ಥವನ್ನು ಹೇಳಲಾಗದು ಏಕೆಂದರೆ ಮುಂದೆ ಉತ್ತರ ನೀಡುವ ವಾಕ್ಯವಿಲ್ಲ. ಇನ್ನು ಕಾರ್ತ್ಸ್ನ್ಯ ಎಂಬರ್ಥವನ್ನೂ ಹೇಳಲಾಗದು. ಏಕೆಂದರೆ ಸಮಗ್ರವಾಗಿ ಬ್ರಹ್ಮವಿಚಾರವನ್ನು ಮಾಡಲು ಸಾಧ್ಯವೇ ಇಲ್ಲ. ಆದ್ದರಿಂದ ' ಕಾರ್ತ್ಸ್ನ್ಯ' ಎಂಬ ಅರ್ಥವು ಕೂಡುವುದಿಲ್ಲ. ಇನ್ನು 'ಮಂಗಳ' ಎಂಬ ಅರ್ಥವನ್ನು ಶಕ್ತಿವೃತ್ತಿಯಿಂದ ಹೇಳಲಾಗದೆಂದು ಮುಂದೆ ಹೇಳಲಾಗುತ್ತದೆ. ಇನ್ನು ಅನಂತರ ಮತ್ತು ಆರಂಭ ಎಂಬ ಎರಡು ಅರ್ಥಗಳಲ್ಲಿ ಅನಂತರವೆಂಬ ಅರ್ಥವನ್ನೇ ಹೇಳಲು ಕಾರಣವಿಲ್ಲವಾದ್ದರಿಂದ ಆರಂಭ ಎಂಬರ್ಥವನ್ನು ಹೇಳಬಹುದೆಂದು ಪೂರ್ವಪಕ್ಷ. ಪತಂಜಲಿ ಮಹರ್ಷಿಯು ಮಹಾಭಾಷ್ಯದ ಪ್ರಾರಂಭದಲ್ಲಿ 'ಅಥ ಶಬ್ದಾನುಶಾಸನಂ' ಎಂದು, ಯೋಗಶಾಸ್ತ್ರದ ಪ್ರಾರಂಭದಲ್ಲಿ 'ಅಥ ಯೋಗಾನುಶಾಸನಂ' ಎಂದು ಅಥ ಶಬ್ದವನ್ನು ಆರಂಭ ಎಂಬರ್ಥದಲ್ಲಿ ಉಪಯೋಗಿಸಿದ್ದಾರೆ. ಅದರಂತೆಯೇ ಪ್ರಕೃತದಲ್ಲಿಯೂ ಸಹ ಆರಂಭ ಎಂಬರ್ಥವನ್ನು ಹೇಳಬಹುದು.

ಈ ಆಕ್ಷೇಪಕ್ಕೆ ನಮ್ಮ ಸಿದ್ಧಾಂತದ ಪ್ರಕಾರ ಸಮಾಧಾನವನ್ನು ಮುಂದೆ ಹೇಳುತ್ತೇವೆ. ಅದಕ್ಕಿಂತ ಮೊದಲು ಅದ್ವೈತ ಭಾಷ್ಯವನ್ನು ನಿರಾಕರಿಸಲಾಗಿದೆ - ಶಂಕರಭಾಷ್ಯವು ಈ ಆಕ್ಷೇಪಕ್ಕೆ ಹೀಗೆ ಸಮಾಧಾನ ಹೇಳಿದೆ - 'ಅಥ' ಶಬ್ದಕ್ಕೆ 'ಅನಂತರ' ಎಂಬರ್ಥವನ್ನು ಹೇಳಬೇಕು. ಆರಂಭವೆಂಬರ್ಥವನ್ನು ಹೇಳ-ಬಾರದು. (ಅಧಿಕಾರಶಬ್ದಕ್ಕೆ ಆರಂಭವೆಂಬರ್ಥವನ್ನು ಇಟ್ಟುಕೊಳ್ಳಲಾಗಿದೆ) ಏಕೆಂದರೆ ಬ್ರಹ್ಮಜಿಜ್ಞಾಸೆಯು ಆರಂಭಿಸಲು ಅನರ್ಹವಾಗಿದೆ. ಬ್ರಹ್ಮಜ್ಞಾನದಲ್ಲಿನ ಇಚ್ಛೆಯೇ ಬ್ರಹ್ಮಜಿಜ್ಞಾಸೆ. ಈ ಇಚ್ಛೆಯು ಪ್ರಯತ್ನದಿಂದ ಸಾಧ್ಯವಲ್ಲ. ಏಕೆಂದರೆ ವಿಷಯವು ಆಕರ್ಷಕವಾಗಿದ್ದರೆ ಇಚ್ಛೆಯು ಸ್ವತಃ ಹುಟ್ಟುತ್ತದೆ. ಮತ್ತು ಶಾಸ್ತ್ರದಲ್ಲಿ ಮುಂದೆ ಬ್ರಹ್ಮಜ್ಞಾನೇಚ್ಛೆಯ ಪ್ರತಿಪಾದನೆ ಇಲ್ಲದಿರುವುದರಿಂದ ಈ ಅರ್ಥದಲ್ಲಿಯೂ ಬ್ರಹ್ಮಜಿಜ್ಞಾಸೆಯು ಆರಂಭ ಯೋಗ್ಯವಲ್ಲ. ಇನ್ನು ಮಂಗಳ ಎಂಬರ್ಥವನ್ನು ಇಟ್ಟುಕೊಂಡರೆ ಅದು ವಾಕ್ಯಾರ್ಥದಲ್ಲಿ ಅನ್ವಯ ಹೊಂದುವುದಿಲ್ಲ. ಆದ್ದರಿಂದ 'ಅನಂತರ' ಎಂಬರ್ಥದಲ್ಲಿರುವ 'ಅಥ' ಶಬ್ದವು ಕಿವಿಗೆ ಬಿದ್ದಮಾತ್ರದಿಂದ ಅನಂತರ ಎಂಬ ಅರ್ಥದಲ್ಲಿಯೇ ಪರ್ಯವಸಾನವಾಗುತ್ತದೆ.

ಹೀಗೆ ಇರುವ ಭಾಷ್ಯವನ್ನು `ಕ್ರಮವಾಗಿ ನಿರಾಕರಿಸುತ್ತಾರೆ. ಮೊದಲು ಆರಂಭವೆಂಬ ಅರ್ಥವನ್ನು ಹೇಳಲಾಗದೆಂದು ಶಂಕರಭಾಷ್ಯದಲ್ಲಿ ಹೇಳಿದ ಅಂಶವನ್ನು ದೂಷಿಸಲು 'ಅತ್ರ ಪರೇಷಾಂ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ.

'ಬ್ರಹ್ಮಜಿಜ್ಞಾಸಾಯಾಃ ಅನಧಿಕಾರ್ಯತ್ವಾತ್' ಎಂಬ ಶಂಕರಭಾಷ್ಯದಲ್ಲಿ ಆರಂಭ ಎಂಬರ್ಥವನ್ನು 'ಅರ್ಥ' ಶಬ್ದಕ್ಕೆ ಅಂಗೀಕರಿಸದೆ ಅನಂತರ ಎಂಬ ಅರ್ಥವನ್ನು ಅಂಗೀಕರಿಸಲಾಗಿದೆ. ಆದರೆ ಇದು ಸರಿಯಲ್ಲ. ಏಕೆಂದರೆ ಜಿಜ್ಞಾಸಾಶಬ್ದಕ್ಕೆ 'ಜ್ಞಾನೇಚ್ಛೆ' ಎಂಬರ್ಥವನ್ನು ಇಟ್ಟುಕೊಂಡರೆ ಇಚ್ಛೆಯನ್ನು ಆರಂಭಿಸಲು ಅಶಕ್ಯವಾದ್ದರಿಂದ 'ಅಥ' ಶಬ್ದಕ್ಕೆ 'ಆರಂಭ'ವೆಂಬ ಅರ್ಥವನ್ನು ಹೇಳಲು ಬರುವುದಿಲ್ಲ.

ಆದರೂ ವಿವರಣಕಾರ ಹೇಳುವಂತೆ 'ಜಿಜ್ಞಾಸಾ' ಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡಿದಾಗ ವಿಚಾರವನ್ನು ಆರಂಭಿಸಲು ಸಾಧ್ಯವಿದೆ. ಈ ಪಕ್ಷದಲ್ಲಿ ಅಥಶಬ್ದಕ್ಕೆ 'ಆರಂಭ' ಎಂಬರ್ಥವನ್ನು ಹೇಳಬಹುದು.

ವಿಚಾರವು ಪ್ರಯತ್ನದಿಂದ ಸಾಧ್ಯವಾಗಿದೆ. ವಿಚಾರದ ಪ್ರತಿಪಾದನೆಯು ಶಾಸ್ತ್ರದಲ್ಲಿ ಇದೆ. ಹೀಗೆ ಉಚಿತವಾದ 'ವಿಚಾರದ ಆರಂಭ' ಎಂಬರ್ಥವು ಅಥಶಬ್ದಕ್ಕೆ ಸರಿಹೊಂದುತ್ತದೆಂಬ ಅಭಿಪ್ರಾಯದಿಂದಲೇ ಭಾಮತಿಯಲ್ಲಿ ಕಲ್ಪನೆ ಮಾಡಬಾರದೆಂದು ಹೇಳಲಾಗಿದೆ. ಕಲ್ಪತರುವಿನಲ್ಲೂ 'ಶಬ್ದಗಳಿಗೆ ಸ್ವಾರ್ಥ-ಪರತ್ವವನ್ನೇ ಕೊಡಿಸಲು ಬರುವಾಗ ಬೇರೆ ಅಮುಖ್ಯಾರ್ಥವನ್ನು ಕಲ್ಪನೆ ಮಾಡಬಾರದು' ಎಂದು ಹೇಳಿದ್ದಾರೆ. ಕಲ್ಪತರುವಿನಲ್ಲಿಯೂ ಸಹ ಭಾಮತಿಯ ವಾಕ್ಯಕ್ಕೆ ಅವತಾರಿಕೆ ಕೊಡಬೇಕಾದರೆ - 'ವಿವರಣ ಹೇಳುವ ವಿಚಾರವೆಂಬ ಅಮುಖ್ಯಾರ್ಥವನ್ನು ಜಿಜ್ಞಾಸಾಪದಕ್ಕೆ ಇಟ್ಟುಕೊಳ್ಳದೆ ಭಾಮತಿವಾಕ್ಯವು ಹೊರಟಿದೆ' ಎಂದು ಹೇಳಲಾಗಿದೆ. ಆದ್ದರಿಂದ ವಿವರಣದ ಅಭಿಪ್ರಾಯವನ್ನು ಭಾಮತೀ ಒಪ್ಪಿಲ್ಲ. ಭಾಮತಿಯ ಅಭಿಪ್ರಾಯವೂ ಸರಿಯಲ್ಲ. ಏಕೆಂದರೆ ವಿಚಾರವು ಅಮುಖ್ಯಾರ್ಥವಾದರೂ ಅದನ್ನು ಇಟ್ಟುಕೊಂಡು ಅಥಶಬ್ದಾರ್ಥವು ಆರಂಭವೆಂದು ಹೇಳಿ ಅದನ್ನು ಸೂತ್ರಾರ್ಥದಲ್ಲಿ ಏಕೆ ಅನ್ವಯಿಸಬಾರದು? ಎಂಬ ಪ್ರಶ್ನೆಗೆ ಏನು ಉತ್ತರ?

ಭಾಮತಿಯ ಆಕ್ಷೇಪ - ಶಂಕರಭಾಷ್ಯದ ಅಭಿಪ್ರಾಯವೇ ಬೇರೆ ಇದೆ. ಅಥ ಶಬ್ದಕ್ಕೆ 'ಆರಂಭ' ಎಂಬರ್ಥವು ಅಯುಕ್ತವೆಂದು ಭಾಷ್ಯದಲ್ಲಿ ಹಾಗೆ ಹೇಳಿದ್ದಲ್ಲ. ಹೊರತಾಗಿ ಅಧಿಕಾರಿಯನ್ನು ಸೂಚನೆ ಮಾಡುವುದಕ್ಕಾಗಿ ಆರಂಭ ಎಂಬರ್ಥವನ್ನು ಬಿಟ್ಟು ಅನಂತರ ಎಂಬರ್ಥವನ್ನು ಸ್ವೀಕರಿಸಲಾಗಿದೆ.

ಉತ್ತರ :- ನೀವು ಹೇಳಿದ ಸಮಾಧಾನವು ನಮ್ಮ ಮತದಲ್ಲಿ ಕೂಡುತ್ತದೆ ಹೊರತು ನಿಮ್ಮ ಮತದಲ್ಲಿ ಕೂಡುವುದಿಲ್ಲ. ಎಂಬುದನ್ನು ದೂಷಿಸಲು ಮೊದಲು ಐದು ವಿಕಲ್ಪಗಳನ್ನು ಮಾಡಲಾಗಿದೆ. ಮುಮುಕ್ಷುವು ಅಧಿಕಾರಿ, ಮೋಕ್ಷವು ಫಲ, ಎಂದು ಹೇಳುತ್ತೀರೋ? ಅಥವಾ ಬ್ರಹ್ಮಜ್ಞಾನದಲ್ಲಿ ಕಾಮನೆಯುಳ್ಳವನು ಅಧಿಕಾರಿ, ಬ್ರಹ್ಮಜ್ಞಾನವು ಫಲ, ಎಂದು ಹೇಳುತ್ತೀರೋ? ಅಥವಾ ಅಪರೋಕ್ಷಜ್ಞಾನದಲ್ಲಿ ಕಾಮನೆ-ಯುಳ್ಳವನು ಅಧಿಕಾರಿ, ಬ್ರಹ್ಮಾಪರೋಕ್ಷಜ್ಞಾನವು ಫಲ, ಎಂದು ಹೇಳುತ್ತೀರೋ? ಅಥವಾ ಅಪ್ರತಿಬದ್ಧವಾದ ಬ್ರಹ್ಮಾಪರೋಕ್ಷಜ್ಞಾನದಲ್ಲಿ ಕಾಮನೆಯುಳ್ಳವನು ಅಧಿಕಾರಿ, ಅಪ್ರತಿಬದ್ಧವಾದ ಬ್ರಹ್ಮಾಪರೋಕ್ಷಜ್ಞಾನವು ಫಲವೆಂದು ಹೇಳುತ್ತೀರೋ? ಅಥವಾ ಬ್ರಹ್ಮನನ್ನು ಬಿಟ್ಟು ಬೇರೆ ಏನೂ ತೋರದ ಬ್ರಹ್ಮಾಪರೋಕ್ಷಜ್ಞಾನ ಕಾಮನೆಯುಳ್ಳವನು ಅಧಿಕಾರಿ, ಅಂತಹ ಜ್ಞಾನವು ಫಲವೆಂದು ಹೇಳುತ್ತೀರೋ?

ಮುಮುಕ್ಷುವು ಅಧಿಕಾರಿ ಮೋಕ್ಷವೇ ಫಲವೆಂಬ ಮೊದಲನೆಯ ಪಕ್ಷವನ್ನು 'ನ ತಾವತ್' ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. - 'ವಿಚಾರವು ಜ್ಞಾನಸಾಧನವೆಂಬುದು ಸಿದ್ಧವಿಷಯ-ವಾದ್ದರಿಂದ 'ಶ್ರೋತವ್ಯಃ ಮಂತವ್ಯಃ' ಇತ್ಯಾದಿ ವಿಚಾರವಿಧಿಯು ನಿಯಮವಿಧಿಯಾಗಿದೆ ಎಂಬುದಾಗಿ ಅದ್ವೈತಿಗಳು ಒಪ್ಪಿಕೊಂಡಿದ್ದಾರೆ. ಈಗ ವಿಚಾರವಿಧಿಗೆ ಮೋಕ್ಷವು ಫಲವೆಂದು ಹೇಳಿದರೆ ವಿಚಾರವು

ಮೋಕ್ಷಸಾಧನವೆಂದು ಹೇಳಿದಂತಾಯಿತು. ಇದು ಬೇರೆ ಪ್ರಮಾಣದಿಂದ ಅಪ್ರಾಪ್ತವಾಗಿದೆ. 'ಪ್ರಮಾಣಾಂತರೇಣಾಪ್ರಾಪ್ತೋ ವಿಧಿಃ ಅಪೂರ್ವವಿಧಿಃ.' ಆದ್ದರಿಂದ ಇದು ಅಪೂರ್ವವಿಧಿ ಯೆಂದಾಗಬೇಕಾದೀತು. ಇಷ್ಟಾಪತ್ತಿಯೆಂದು ಹೇಳಲು ಬರುವುದಿಲ್ಲ. ನೀವು ನಿಯಮವಿಧಿಯೆಂದು ಅಂಗೀಕರಿಸಿದ್ದೀರಿ.

ಹಾಗೆಯೇ 'ಮುಮುಕ್ಷುವು ಅಧಿಕಾರಿಯೆಂಬ ಅಂಶವೂ ತಪ್ಪು' ಎಂದು 'ಮುಮುಕ್ಷೋಃ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಮುಮುಕ್ಷುವು ಅಧಿಕಾರಿಯಲ್ಲ. ಮುಮುಕ್ಷುವು ಮೋಕ್ಷಸಾಧನವಾದ ಜ್ಞಾನದಲ್ಲಿ ಇಚ್ಛೆ ಮಾಡಬೇಕು. ಆದರೆ ಜ್ಞಾನದಲ್ಲಿ ಇಚ್ಛೆಯು ಕೂಡುವುದಿಲ್ಲ. ಏಕೆಂದರೆ ಜ್ಞಾನದ ಬಗ್ಗೆ ಜ್ಞಾನವಿಲ್ಲದೆ ಅದರಲ್ಲಿ ಇಚ್ಛೆಯು ಉಂಟಾಗುವುದಿಲ್ಲ. ಜ್ಞಾನದ ಜ್ಞಾನ ಇದೆಯೆಂದು ಹೇಳಿದರೆ ಜ್ಞಾನಕ್ಕೆ ವಿಷಯವಾದ ವಸ್ತುವಿನ ಬಗ್ಗೆಯೂ ಜ್ಞಾನವಿದೆಯೆಂದು ಹೇಳಿದಂತಾಯಿತು. ಆದ್ದರಿಂದ ಮೊದಲೇ ಯಾವ ವಸ್ತುವಿನ ಜ್ಞಾನವಿದೆಯೋ ಅಂತಹ ಜ್ಞಾನದಲ್ಲಿ ಪುನಃ ಇಚ್ಛೆಯು ಹುಟ್ಟಲಾರದು.

ಹೀಗೆ ಮೊದಲನೆಯ ಪಕ್ಷವನ್ನು ನಿರಾಕರಿಸಿದ್ದರಿಂದಲೇ ವಿಚಾರವಿಧಿ ಇರುವುದು ಜ್ಞಾನಕಾಮನೆ-ಯುಳ್ಳವನಿಗಾಗಿ ಜ್ಞಾನವೇ ಫಲ ಎಂಬ ಎರಡನೆಯ ಪಕ್ಷವನ್ನು ಸಹ ನಿರಾಕರಿಸಿದಂತಾಯಿತು. ಹೇಗೆಂದರೆ 'ಸ್ವಾಧ್ಯಾಯೋಽಧ್ಯೇತವ್ಯಃ' ಅಧ್ಯಯನವಿಧಿ ಇರುವುದು ಜ್ಞಾನಕಾಮನೆಯುಳ್ಳವನಿಗೆ ಎಂದು ಹೇಳಿದರೆ ಜ್ಯೋತಿಷ್ಟೋಮಾದಿಯಾಗಗಳಂತೆ ಅಧ್ಯಯನವೂ ಒಂದು ಕಾಮ್ಯಕರ್ಮವಾಯಿತು. ಆದರೆ ನಿಮ್ಮ ಅಧ್ಯಯನವನ್ನು ನಿತ್ಯಕರ್ಮವೆಂದು ಒಪ್ಪಿದ್ದೀರಿ. ಆದ್ದರಿಂದ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಜ್ಞಾನಕಾಮನೆಯುಳ್ಳವನಿಗೆ ಹೊರಟಿದೆ ಎಂದು ಹೇಳಬಾರದೆಂದು ಸಮರ್ಥಿಸಲು ನಿಮ್ಮ ಜ್ಞಾನಕಾಮನಾವೇ ಕೂಡುವುದಿಲ್ಲವೆಂದು ಯುಕ್ತಿಯಿಂದ ಸಮರ್ಥಿಸುತ್ತೀರಿ. ಯಾವ ಯುಕ್ತಿ ಎಂದರೆ - ಜ್ಞಾನದಲ್ಲಿ ಕಾಮನಾ ಕೂಡಬೇಕಾದರೆ ಮೊದಲು ಜ್ಞಾನದ ಜ್ಞಾನ ಇರಬೇಕು. ಜ್ಞಾನದ ಜ್ಞಾನವಿಲ್ಲದಿದ್ದರೆ ಜ್ಞಾನೇಚ್ಛೆ ಹುಟ್ಟಲು ಸಾಧ್ಯವೇ ಇಲ್ಲ. ಜ್ಞಾನದ ಜ್ಞಾನ ಇದೆಯೆಂದರೆ ಜ್ಞಾನವು ನಿರ್ವಿಷಯಕವಾಗಿ ಇರಲಾರದಾದ್ದರಿಂದ ಜ್ಞಾನವಿಷಯದ ಜ್ಞಾನವೂ ಮೊದಲೇ ಇದೆ ಎಂದಂತಾಯಿತು. ಹೀಗೆ ಯಾವ ವಿಷಯದ ಬಗ್ಗೆ ಜ್ಞಾನವಿದೆಯೋ ಆ ಜ್ಞಾನದಲ್ಲಿ ಪುನಃ ಇಚ್ಛೆಯು ಬರಲಾರದು. ಈ ಯುಕ್ತಿಯಿಂದ ನೀವು ಜ್ಞಾನಕಾಮನಾ ಉಳ್ಳವನಿಗೆ ಅಧ್ಯಯನ ವಿಧಿ ಎಂಬುದನ್ನು ನಿರಾಕರಿಸುತ್ತೀರಿ. ಇದೇ ಯುಕ್ತಿಯಿಂದಲೇ ವಿಚಾರವಿಧಿ ಇರುವುದೂ ಸಹ ಜ್ಞಾನಕಾಮನಾ ಉಳ್ಳವನಿಗೆ ಎನ್ನುವುದನ್ನು ತಪ್ಪೆಂದು ನಿರಾಕರಿಸಿದಂತಾಯಿತು.

ಹಿಂದಿನ ದೋಷವನ್ನು ಪರಿಹರಿಸಿಕೊಳ್ಳುವ ಅಪೇಕ್ಷೆಯಿಂದ ಮೂರು ಮತ್ತು ನಾಲ್ಕನೆಯ ಪಕ್ಷವನ್ನು ಸ್ವೀಕರಿಸಿ ಆಕ್ಷೇಪ ಮಾಡುತ್ತಿದ್ದಾರೆ -

ಶಂಕೆ - ಧರ್ಮಿಭೂತವಾದ ಜ್ಞಾನದ ಜ್ಞಾನ ಇದೆಯೆಂದರೆ ಬ್ರಹ್ಮನೂ ಸಹ ಮೊದಲೇ ತಿಳಿದಂತಾಯಿತು. ಆದ್ದರಿಂದ ಬ್ರಹ್ಮಜ್ಞಾನವಿಷಯದಲ್ಲಿ ಕಾಮನೆ ಕೂಡುವುದಿಲ್ಲವೆಂದು ನೀವು ಹೇಳಿದಿರಿ. ಆದರೆ ಬ್ರಹ್ಮನ ವಿಷಯದಲ್ಲಿ ಪರೋಕ್ಷಜ್ಞಾನ ಬಂದಿದ್ದರೂ ಅಪರೋಕ್ಷಜ್ಞಾನದ ಬಗ್ಗೆ ಇಚ್ಛೆಯು

ಹುಟ್ಟಬಹುದು. ಹಾಗೆಯೇ ಪ್ರತಿಬದ್ಧ ಅಪರೋಕ್ಷಜ್ಞಾನ ಬಂದಾಗ ಅಪ್ರತಿಬದ್ಧ ಅಪರೋಕ್ಷ ಜ್ಞಾನದ ಬಗ್ಗೆ ಇಚ್ಛೆಯು ಹುಟ್ಟುತ್ತದೆ. ಆದ್ದರಿಂದ ಧರ್ಮಿಭೂತವಾದ ಜ್ಞಾನದ ಜ್ಞಾನವು ಪರೋಕ್ಷವಾಗಲಿ ಅಥವಾ ಅಪರೋಕ್ಷವಾಗಲೀ ಯಾವುದೇ ದೋಷವೂ ಇಲ್ಲ.

ಸಮಾಧಾನ - 'ಜ್ಞಾನವಿಷಯಕ ಇಚ್ಛಾ' ಎಂದು ನೀವು ಹೇಳುತ್ತಿದ್ದೀರಿ. ಇಚ್ಛೆಯು ಜ್ಞಾತೈಕಸತ್ ಆಗಿರುವುದರಿಂದ ಇಚ್ಛೆಯ ಅಪರೋಕ್ಷವಿದೆಯೆಂದು ನೀವು ಹೇಳಬೇಕು. ಇಚ್ಛೆಯ ಅಪರೋಕ್ಷವಿದೆಯೆಂದರೆ ಇಚ್ಛೆಗೆ ವಿಷಯವಾದ ಜ್ಞಾನದ ಅಪರೋಕ್ಷವೂ ಇದೆಯೆಂದಂತಾಯಿತು. ಜ್ಞಾನದ ಅಪರೋಕ್ಷ ಇದೆಯೆಂದರೆ ಜ್ಞಾನಕ್ಕೆ ವಿಷಯನಾದ ಬ್ರಹ್ಮನ ಅಪರೋಕ್ಷವೂ ಇಚ್ಛೆಯ ಸಮಕಾಲದಲ್ಲಿಯೇ ಇದೆಯೆಂದಂತಾಯಿತು. ಆದ್ದರಿಂದ ಅಪರೋಕ್ಷಜ್ಞಾನವಾಗಲೀ ಅಪ್ರತಿಬದ್ಧಅಪರೋಕ್ಷಜ್ಞಾನವಾಗಲೀ ಇಚ್ಛೆ ಇರುವ ಕಾಲದಲ್ಲಿಯೇ ಇರುವುದರಿಂದ ವಿಚಾರಸಾಧ್ಯವಾಗಲಾರದು.

ಹಿಂದಿನ ದೋಷಪರಿಹಾರಕ್ಕಾಗಿ ಐದನೆಯ ಕಲ್ಪವನ್ನು ಶಂಕಿಸುತ್ತಿದ್ದಾನೆ.

ಶಂಕೆ - ಎಂತಹ ಅಪರೋಕ್ಷಜ್ಞಾನದಲ್ಲಿ ಕಾಮನೆ ಮಾಡುತ್ತಾನೆ? ಎಂದರೆ ಬ್ರಹ್ಮಜ್ಞಾನವನ್ನು ಬ್ರಹ್ಮಜ್ಞಾನದ ಇಚ್ಛೆಯನ್ನೂ ವಿಷಯೀಕರಿಸದೆ ಕೇವಲ ಬ್ರಹ್ಮನನ್ನು ಮಾತ್ರ ವಿಷಯೀಕರಿಸುವ ಅಪರೋಕ್ಷಜ್ಞಾನದಲ್ಲಿಯೇ ಕಾಮನೆ ಮಾಡುತ್ತಾನೆ. ಅಂತಹ ಅಪರೋಕ್ಷ ಜ್ಞಾನವೇ ವಿಚಾರಸಾಧ್ಯವೆಂದು ಹೇಳುತ್ತೇವೆ.

ಸಮಾಧಾನ - ಹಾಗಾದಲ್ಲಿ ಬ್ರಹ್ಮನನ್ನು ಬಿಟ್ಟು ಬೇರೇನನ್ನೂ ವಿಷಯೀಕರಿಸದ ಅಂತಹ ಪರೋಕ್ಷಜ್ಞಾನದಲ್ಲಿಯೇ ಇಚ್ಛೆಯನ್ನು ಮತ್ತು ವಿಚಾರಸಾಧ್ಯತ್ವವನ್ನು ಏಕೆ ಹೇಳಬಾರದು? ಒಟ್ಟು ನಿಮಗೆ ಹಿಂದಿನ ದೋಷಗಳೆಲ್ಲವೂ ಪರಿಹಾರವಾಗಬೇಕು. ಹೀಗೆ ಹೇಳಿದಾಗಲೂ ದೋಷಗಳು ಪರಿಹಾರವಾಗುತ್ತವೆ.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನವಿಧಿಗೂ ಇಂತಹ ಅರ್ಥಜ್ಞಾನವೇ ಫಲವೆಂದು ಹೇಳಲು ಬರುವಾಗ ಅದನ್ನು ಖಂಡನೆ ಮಾಡಿದ್ದು ತಪ್ಪು. ಮತ್ತು ಅಧ್ಯಯನವಿಧಿಯನ್ನು ನಿತ್ಯವಿಧಿ ಎಂದು ಹೇಳಿದ್ದೂ ಕೂಡ ತಪ್ಪು.

## ಭಾಮತಿಯಲ್ಲಿ ಅಥ ಶಬ್ದಾರ್ಥ

### तात्पर्यचन्द्रिका

**किञ्च – श्रवणसाध्यस्य परोक्षज्ञानस्य, प्रतिबद्धापरोक्षज्ञानस्य वा तस्मात् प्रागसत्त्वेन तदधीनायाः अपरोक्षज्ञानादौ कामनायाः श्रवणविध्यधिकारिविशेषणत्वायोगः । नच कामनाहेतुपरोक्षज्ञानादिकं श्रवणात् प्रागापातप्रतीतिदशायामेव**

ಮೋಕ್ಷಸಾಧನವೆಂದು ಹೇಳಿದಂತಾಯಿತು. ಇದು ಬೇರೆ ಪ್ರಮಾಣದಿಂದ ಅಪ್ರಾಪ್ತವಾಗಿದೆ. 'ಪ್ರಮಾಣಾಂತರೇಣಾಪ್ರಾಪ್ತೋ ವಿಧಿಃ ಅಪೂರ್ವವಿಧಿಃ.' ಆದ್ದರಿಂದ ಇದು ಅಪೂರ್ವವಿಧಿಯೆಂದಾಗಬೇಕಾದೀತು. ಇಷ್ಟಾಪತ್ತಿಯೆಂದು ಹೇಳಲು ಬರುವುದಿಲ್ಲ. ನೀವು ನಿಯಮವಿಧಿಯೆಂದು ಅಂಗೀಕರಿಸಿದ್ದೀರಿ.

ಹಾಗೆಯೇ 'ಮುಮುಕ್ಷುವು ಅಧಿಕಾರಿಯೆಂಬ ಅಂಶವೂ ತಪ್ಪು' ಎಂದು 'ಮುಮುಕ್ಷೋಃ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಮುಮುಕ್ಷುವು ಅಧಿಕಾರಿಯಲ್ಲ. ಮುಮುಕ್ಷುವು ಮೋಕ್ಷಸಾಧನವಾದ ಜ್ಞಾನದಲ್ಲಿ ಇಚ್ಛೆ ಮಾಡಬೇಕು. ಆದರೆ ಜ್ಞಾನದಲ್ಲಿ ಇಚ್ಛೆಯು ಕೂಡುವುದಿಲ್ಲ. ಏಕೆಂದರೆ ಜ್ಞಾನದ ಬಗ್ಗೆ ಜ್ಞಾನವಿಲ್ಲದೆ ಅದರಲ್ಲಿ ಇಚ್ಛೆಯು ಉಂಟಾಗುವುದಿಲ್ಲ. ಜ್ಞಾನದ ಜ್ಞಾನ ಇದೆಯೆಂದು ಹೇಳಿದರೆ ಜ್ಞಾನಕ್ಕೆ ವಿಷಯವಾದ ವಸ್ತುವಿನ ಬಗ್ಗೆಯೂ ಜ್ಞಾನವಿದೆಯೆಂದು ಹೇಳಿದಂತಾಯಿತು. ಆದ್ದರಿಂದ ಮೊದಲೇ ಯಾವ ವಸ್ತುವಿನ ಜ್ಞಾನವಿದೆಯೋ ಅಂತಹ ಜ್ಞಾನದಲ್ಲಿ ಪುನಃ ಇಚ್ಛೆಯು ಹುಟ್ಟಲಾರದು.

ಹೀಗೆ ಮೊದಲನೆಯ ಪಕ್ಷವನ್ನು ನಿರಾಕರಿಸಿದ್ದರಿಂದಲೇ ವಿಚಾರವಿಧಿ ಇರುವುದು ಜ್ಞಾನಕಾಮನೆಯುಳ್ಳವನಿಗಾಗಿ ಜ್ಞಾನವೇ ಫಲ ಎಂಬ ಎರಡನೆಯ ಪಕ್ಷವನ್ನು ಸಹ ನಿರಾಕರಿಸಿದಂತಾಯಿತು. ಹೇಗೆಂದರೆ 'ಸ್ವಾಧ್ಯಾಯೋಽಧ್ಯೇತವ್ಯಃ' ಅಧ್ಯಯನವಿಧಿ ಇರುವುದು ಜ್ಞಾನಕಾಮನೆಯುಳ್ಳವನಿಗೆ ಎಂದು ಹೇಳಿದರೆ ಜ್ಯೋತಿಷ್ಟೋಮಾದಿಯಾಗಗಳಂತೆ ಅಧ್ಯಯನವೂ ಒಂದು ಕಾಮ್ಯಕರ್ಮವಾಯಿತು. ಆದರೆ ನೀವು ಅಧ್ಯಯನವನ್ನು ನಿತ್ಯಕರ್ಮವೆಂದು ಒಪ್ಪಿದ್ದೀರಿ. ಆದ್ದರಿಂದ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಜ್ಞಾನಕಾಮನೆಯುಳ್ಳವನಿಗೆ ಹೊರಟದೆ ಎಂದು ಹೇಳಬಾರದೆಂದು ಸಮರ್ಥಿಸಲು ನೀವು ಜ್ಞಾನಕಾಮನಾವೇ ಕೂಡುವುದಿಲ್ಲವೆಂದು ಯುಕ್ತಿಯಿಂದ ಸಮರ್ಥಿಸುತ್ತಿರಿ. ಯಾವ ಯುಕ್ತಿ ಎಂದರೆ - ಜ್ಞಾನದಲ್ಲಿ ಕಾಮನಾ ಕೂಡಬೇಕಾದರೆ ಮೊದಲು ಜ್ಞಾನದ ಜ್ಞಾನ ಇರಬೇಕು. ಜ್ಞಾನದ ಜ್ಞಾನವಿಲ್ಲದಿದ್ದರೆ ಜ್ಞಾನೇಚ್ಛೆ ಹುಟ್ಟಲು ಸಾಧ್ಯವೇ ಇಲ್ಲ. ಜ್ಞಾನದ ಜ್ಞಾನ ಇದೆಯೆಂದರೆ ಜ್ಞಾನವು ನಿರ್ವಿಷಯಕವಾಗಿ ಇರಲಾರದಾದ್ದರಿಂದ ಜ್ಞಾನವಿಷಯದ ಜ್ಞಾನವೂ ಮೊದಲೇ ಇದೆ ಎಂದಂತಾಯಿತು. ಹೀಗೆ ಯಾವ ವಿಷಯದ ಬಗ್ಗೆ ಜ್ಞಾನವಿದೆಯೋ ಆ ಜ್ಞಾನದಲ್ಲಿ ಪುನಃ ಇಚ್ಛೆಯು ಬರಲಾರದು. ಈ ಯುಕ್ತಿಯಿಂದ ನೀವು ಜ್ಞಾನಕಾಮನಾ ಉಳ್ಳವನಿಗೆ ಅಧ್ಯಯನ ವಿಧಿ ಎಂಬುದನ್ನು ನಿರಾಕರಿಸುತ್ತೀರಿ. ಇದೇ ಯುಕ್ತಿಯಿಂದಲೇ ವಿಚಾರವಿಧಿ ಇರುವುದೂ ಸಹ ಜ್ಞಾನಕಾಮನಾ ಉಳ್ಳವನಿಗೆ ಎನ್ನುವುದನ್ನು ತಪ್ಪೆಂದು ನಿರಾಕರಿಸಿದಂತಾಯಿತು.

ಹಿಂದಿನ ದೋಷವನ್ನು ಪರಿಹರಿಸಿಕೊಳ್ಳುವ ಅಪೇಕ್ಷೆಯಿಂದ ಮೂರು ಮತ್ತು ನಾಲ್ಕನೆಯ ಪಕ್ಷವನ್ನು ಸ್ವೀಕರಿಸಿ ಆಕ್ಷೇಪ ಮಾಡುತ್ತಿದ್ದಾರೆ -

ಶಂಕೆ - ಧರ್ಮಿಭೂತವಾದ ಜ್ಞಾನದ ಜ್ಞಾನ ಇದೆಯೆಂದರೆ ಬ್ರಹ್ಮನೂ ಸಹ ಮೊದಲೇ ತಿಳಿದಂತಾಯಿತು. ಆದ್ದರಿಂದ ಬ್ರಹ್ಮಜ್ಞಾನವಿಷಯದಲ್ಲಿ ಕಾಮನೆ ಕೂಡುವುದಿಲ್ಲವೆಂದು ನೀವು ಹೇಳಿದಿರಿ. ಆದರೆ ಬ್ರಹ್ಮನ ವಿಷಯದಲ್ಲಿ ಪರೋಕ್ಷಜ್ಞಾನ ಬಂದಿದ್ದರೂ ಅಪರೋಕ್ಷಜ್ಞಾನದ ಬಗ್ಗೆ ಇಚ್ಛೆಯು

ಹುಟ್ಟಬಹುದು. ಹಾಗೆಯೇ ಪ್ರತಿಬದ್ಧ ಅಪರೋಕ್ಷಜ್ಞಾನ ಬಂದಾಗ ಅಪ್ರತಿಬದ್ಧ ಅಪರೋಕ್ಷ ಜ್ಞಾನದ ಬಗ್ಗೆ ಇಚ್ಛೆಯು ಹುಟ್ಟುತ್ತದೆ. ಆದ್ದರಿಂದ ಧರ್ಮಿಭೂತವಾದ ಜ್ಞಾನದ ಜ್ಞಾನವು ಪರೋಕ್ಷವಾಗಲಿ ಅಥವಾ ಅಪರೋಕ್ಷವಾಗಲೀ ಯಾವುದೇ ದೋಷವೂ ಇಲ್ಲ.

ಸಮಾಧಾನ - 'ಜ್ಞಾನವಿಷಯಕ ಇಚ್ಛಾ' ಎಂದು ನೀವು ಹೇಳುತ್ತಿದ್ದೀರಿ. ಇಚ್ಛೆಯು ಜ್ಞಾತೈಕಸತ್ ಆಗಿರುವುದರಿಂದ ಇಚ್ಛೆಯ ಅಪರೋಕ್ಷವಿದೆಯೆಂದು ನೀವು ಹೇಳಬೇಕು. ಇಚ್ಛೆಯ ಅಪರೋಕ್ಷವಿದೆಯೆಂದರೆ ಇಚ್ಛೆಗೆ ವಿಷಯವಾದ ಜ್ಞಾನದ ಅಪರೋಕ್ಷವೂ ಇದೆಯೆಂದಂತಾಯಿತು. ಜ್ಞಾನದ ಅಪರೋಕ್ಷ ಇದೆಯೆಂದರೆ ಜ್ಞಾನಕ್ಕೆ ವಿಷಯನಾದ ಬ್ರಹ್ಮನ ಅಪರೋಕ್ಷವೂ ಇಚ್ಛೆಯ ಸಮಕಾಲದಲ್ಲಿಯೇ ಇದೆಯೆಂದಂತಾಯಿತು. ಆದ್ದರಿಂದ ಅಪರೋಕ್ಷಜ್ಞಾನವಾಗಲೀ ಅಪ್ರತಿಬದ್ಧಅಪರೋಕ್ಷಜ್ಞಾನವಾಗಲೀ ಇಚ್ಛೆ ಇರುವ ಕಾಲದಲ್ಲಿಯೇ ಇರುವುದರಿಂದ ವಿಚಾರಸಾಧ್ಯವಾಗಲಾರದು.

ಹಿಂದಿನ ದೋಷಪರಿಹಾರಕ್ಕಾಗಿ ಐದನೆಯ ಕಲ್ಪವನ್ನು ಶಂಕಿಸುತ್ತಿದ್ದಾನೆ.

ಶಂಕೆ - ಎಂತಹ ಅಪರೋಕ್ಷಜ್ಞಾನದಲ್ಲಿ ಕಾಮನೆ ಮಾಡುತ್ತಾನೆ? ಎಂದರೆ ಬ್ರಹ್ಮಜ್ಞಾನವನ್ನು ಬ್ರಹ್ಮಜ್ಞಾನದ ಇಚ್ಛೆಯನ್ನೂ ವಿಷಯೀಕರಿಸದೆ ಕೇವಲ ಬ್ರಹ್ಮನನ್ನು ಮಾತ್ರ ವಿಷಯೀಕರಿಸುವ ಅಪರೋಕ್ಷಜ್ಞಾನದಲ್ಲಿಯೇ ಕಾಮನೆ ಮಾಡುತ್ತಾನೆ. ಅಂತಹ ಅಪರೋಕ್ಷ ಜ್ಞಾನವೇ ವಿಚಾರಸಾಧ್ಯವೆಂದು ಹೇಳುತ್ತೇವೆ.

ಸಮಾಧಾನ - ಹಾಗಾದಲ್ಲಿ ಬ್ರಹ್ಮನನ್ನು ಬಿಟ್ಟು ಬೇರೇನನ್ನೂ ವಿಷಯೀಕರಿಸದ ಅಂತಹ ಪರೋಕ್ಷಜ್ಞಾನದಲ್ಲಿಯೇ ಇಚ್ಛೆಯನ್ನು ಮತ್ತು ವಿಚಾರಸಾಧ್ಯತ್ವವನ್ನು ಏಕೆ ಹೇಳಬಾರದು? ಒಟ್ಟು ನಿಮಗೆ ಹಿಂದಿನ ದೋಷಗಳೆಲ್ಲವೂ ಪರಿಹಾರವಾಗಬೇಕು. ಹೀಗೆ ಹೇಳಿದಾಗಲೂ ದೋಷಗಳು ಪರಿಹಾರವಾಗುತ್ತವೆ.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನವಿಧಿಗೂ ಇಂತಹ ಅರ್ಥಜ್ಞಾನವೇ ಫಲವೆಂದು ಹೇಳಲು ಬರುವಾಗ ಅದನ್ನು ಖಂಡನೆ ಮಾಡಿದ್ದು ತಪ್ಪು. ಮತ್ತು ಅಧ್ಯಯನವಿಧಿಯನ್ನು ನಿತ್ಯವಿಧಿ ಎಂದು ಹೇಳಿದ್ದೂ ಕೂಡ ತಪ್ಪು.

## ಭಾಮತಿಯಲ್ಲಿ ಅಥ ಶಬ್ದಾರ್ಥ

### तात्पर्यचन्द्रिका

**किञ्च – श्रवणसाध्यस्य परोक्षज्ञानस्य, प्रतिबद्धापरोक्षज्ञानस्य वा तस्मात् प्रागसत्त्वेन तदधीनायाः अपरोक्षज्ञानादौ कामनायाः श्रवणविध्यधिकारिविशेषणत्वायोगः । नच कामनाहेतुपरोक्षज्ञानादिकं श्रवणात् प्रागापातप्रतीतिदशायामेव**

सिद्धमिति वाच्यम् । तस्यां दशायां निश्चयरूपस्य तस्याभावात् । नहि वेदान्तवेद्यं सर्वं परोक्षज्ञानादिना निश्चित्यापरोक्षाद्यर्थं मीमांसायां प्रवर्तन्ते । सन्देहरूपस्य च तस्य तस्यां दशायां भावेऽपि सन्देहेन ज्ञातब्रह्मावच्छिन्नपरोक्षनिश्चय एव कामनोपपत्तिः । निश्चिते निश्चयकामनाया अदर्शनेन तस्यां निश्चयविषयविषयक-सन्देहस्यैव हेतुत्वात् । किञ्च – त्वत्पक्षे धर्मविचारस्योत्तरक्रतुविधिप्रयुक्तत्वेऽपि, तज्ज्ञानकामनाहीनस्य तद्विचारे अप्रवृत्तेः, धर्मादौ चापरोक्षज्ञानकामनाऽनुपपत्तेः परोक्षज्ञाने च त्वया कामनाऽनङ्गीकारात् धर्मादिविचारे न प्रवृत्तिः स्यात् । किञ्च – सन्दिग्धस्थाण्वादिविशेषापरोक्षज्ञानकामना तद्विशेषपरोक्षधीपूर्विका स्यात् । तस्मात् सामान्यतो ज्ञाते विशेषज्ञानकामनायाः दर्शनात् तां प्रति तदेव हेतुः । अवच्छिन्नज्ञाने अवच्छेदकज्ञानस्य हेतुताऽपि हि दर्शनादेवेति, तदुल्लङ्घने साऽपि न स्यात् । तस्मात् परोक्षज्ञाने कामनां निषेधतः परस्य मते, ज्ञाने मोक्षे वा विचारप्रवृत्तिपर्यन्तं कामनाऽयोगात्, तत्कामस्याधिकारिणः तस्य फलस्य च सूचनं नानन्तर्यार्थेनाप्यथशब्देन ।

ಅನುವಾದ - ಪರೋಕ್ಷಜ್ಞಾನ ಮತ್ತು ಪ್ರತಿಬದ್ಧ ಅಪರೋಕ್ಷಜ್ಞಾನವು ಶ್ರವಣರೂಪ ವಿಚಾರದಿಂದ ಲಭ್ಯವಾಗಿದೆ. ಆದ್ದರಿಂದ ವಿಚಾರಕ್ಕಿಂತ ಮೊದಲು ಇರಲು ಸಾಧ್ಯವಿಲ್ಲ. ಯಾವಾಗ ಪರೋಕ್ಷಜ್ಞಾನ ಮತ್ತು ಪ್ರತಿಬದ್ಧಅಪರೋಕ್ಷಜ್ಞಾನವೇ ಇಲ್ಲವೋ ಆವಾಗ ಇದರ ಅಧೀನವಾಗಿ ಇರುವ ಅಪರೋಕ್ಷಜ್ಞಾನದಲ್ಲಿ ಕಾಮನೆಯೂ ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದ ಅಪರೋಕ್ಷಜ್ಞಾನದಲ್ಲಿನ ಕಾಮನೆಯು ಶ್ರವಣವಿಧಿಗೆ ಅಧಿಕಾರಿವಿಶೇಷಣವಾಗಲು ಸಾಧ್ಯವಿಲ್ಲ.

ಶಂಕೆ - ಅಪರೋಕ್ಷಜ್ಞಾನದ ಕಾಮನೆಗೆ ಕಾರಣವಾದ ಪರೋಕ್ಷಜ್ಞಾನವು ವಿಚಾರಕ್ಕಿಂತ ಮೊದಲು ಮೇಲುನೋಟದಿಂದ ಸಿದ್ಧವಾಗಿದೆ. ಇಂತಹ ಮೇಲುನೋಟದಿಂದ ಬಂದ ಪರೋಕ್ಷಜ್ಞಾನದಿಂದ ಅಪರೋಕ್ಷಜ್ಞಾನಕಾಮನೆಯು ಬರಬಹುದು.

ಸಮಾಧಾನ - ಮೇಲುನೋಟದ ಈ ಜ್ಞಾನವು ನಿಶ್ಚಯರೂಪವಾಗಲು ಸಾಧ್ಯವಿಲ್ಲ. ಏಕೆಂದರೆ ವೇದಾಂತವೇದ್ಯವಾದ ಎಲ್ಲ ವಿಷಯವನ್ನೂ ಮೊದಲು ಪರೋಕ್ಷಜ್ಞಾನದಿಂದ ನಿಶ್ಚಯಿಸಿ ಅನಂತರ ಅಪರೋಕ್ಷಕ್ಕೋಸ್ಕರ ವಿಚಾರದಲ್ಲಿ ಪ್ರವೃತ್ತಿ ಮಾಡುವುದು ಎಲ್ಲಿಯೂ ಕಂಡಿಲ್ಲ. ಇನ್ನು ಮೇಲುನೋಟದ ಜ್ಞಾನವು ಸಂದೇಹರೂಪವೆಂದರೆ ಈ ಸಂದೇಹಪರಿಹಾರಕ್ಕಾಗಿ ಅವನು

ಪರೋಕ್ಷನಿಶ್ಚಯದಲ್ಲೇ ಇಚ್ಛೆ ಪಡುತ್ತಾನೆ, ಹೊರತು ಅಪರೋಕ್ಷದಲ್ಲಿ ಇಚ್ಛೆ ಮಾಡಲಾರ. ಏಕೆಂದರೆ ಯಾವ ವಿಷಯದಲ್ಲಿ ನಿಶ್ಚಯ ಇರುತ್ತದೋ ತದ್‌ವಿಷಯಕನಿಶ್ಚಯದಲ್ಲಿ ಕಾಮನಾ ಕೂಡುವುದಿಲ್ಲ. ನಿಶ್ಚಯದಲ್ಲಿ ಕಾಮನಾ ಬರಬೇಕಾದರೆ ನಿಶ್ಚಯ ಎಂಬ ವಿಷಯದಲ್ಲೇ ಸಂದೇಹವಿರಬೇಕು. ನಿಶ್ಚಯವಿಷಯವಿಷಯಕಸಂದೇಹವೇ ನಿಶ್ಚಯವಿಷಯಕ ಕಾಮನೆಗೆ ಕಾರಣವೆಂದು ಅನ್ವಯವ್ಯತಿರೇಕದಿಂದ ಸಿದ್ಧವಾಗಿದೆ.

ಮತ್ತು ಪರೋಕ್ಷಜ್ಞಾನದಲ್ಲಿ ಕಾಮನಾವನ್ನು ಒಪ್ಪದೆ ಅಪರೋಕ್ಷಜ್ಞಾನದಲ್ಲಿ ಮಾತ್ರ ನೀನು ಕಾಮನಾವನ್ನು ಒಪ್ಪುವುದಾದರೆ ಧರ್ಮವಿಚಾರದಲ್ಲಿ ಯಾರಿಗೂ ಪ್ರವೃತ್ತಿ ಆಗದಿರಬೇಕಾದೀತು. ಏಕೆಂದರೆ ಧರ್ಮವು ಕೇವಲ ಪರೋಕ್ಷಜ್ಞಾನದಿಂದ ಮಾತ್ರ ವೇದ್ಯವಾದ್ದರಿಂದ ಧರ್ಮದ ಅಪರೋಕ್ಷಜ್ಞಾನಕಾಮನಾವೇ ಕೂಡುವುದಿಲ್ಲ.

ಶಂಕೆ - ಧರ್ಮದಲ್ಲಿ ಪ್ರವೃತ್ತಿಯು ಕಾಮನಾದಿಂದ ಅಲ್ಲ. ಹೊರತಾಗಿ 'ಜ್ಞಾತ್ವಾ ಕರ್ಮ ಸಮಾಚರ' ಎಂಬ ವಿಧಿಯಿಂದ, ಅಥವಾ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವಿಧಿಯಿಂದ ವಿಚಾರದಲ್ಲಿ ಪ್ರವೃತ್ತಿ ಮಾಡುತ್ತಾನೆ.

ಸಮಾಧಾನ - ಈ ವಿಧಿಗಳು ಪ್ರೇರಕಗಳಾಗಿದ್ದರೂ ಪ್ರವೃತ್ತಿ ಮಾಡಬೇಕಾದರೆ ಮೊದಲು ಧರ್ಮಜ್ಞಾನದ ಕಾಮನೆಯು ಅವಶ್ಯವಾಗಿ ಬೇಕು. ಮತ್ತು ಪರೋಕ್ಷನಿಶ್ಚಯದ ಅನಂತರವೆ ಅಪರೋಕ್ಷ ನಿಶ್ಚಯವೆಂದು ಹೇಳುವುದಾದರೆ ಸ್ಥಾಣುವಿನ ಬಗ್ಗೆ ಸಂದೇಹ ಬಂದಾಗ ಮೊದಲು ಪರೋಕ್ಷನಿಶ್ಚಯವನ್ನು ಹೊಂದಿ ಅನಂತರ ಅದರ ಅಪರೋಕ್ಷಜ್ಞಾನದಲ್ಲಿ ಕಾಮನಾ ಮಾಡಬೇಕಾದೀತು. ಇದು ಅನುಭವವಿರುದ್ಧ.

ಆದ್ದರಿಂದ ಒಂದು ವಸ್ತುವನ್ನು ಸಾಮಾನ್ಯವಾಗಿ ತಿಳಿದ ಅನಂತರ ಆ ವಸ್ತುವಿನ ವಿಶೇಷವಾದ ಜ್ಞಾನದ ಬಗ್ಗೆ ಕಾಮನೆಯು ಹುಟ್ಟುವುದು ನಮ್ಮೆಲ್ಲರ ಅನುಭವಸಿದ್ಧವಾಗಿದೆ. ಆದ್ದರಿಂದ ವಿಶೇಷಜ್ಞಾನಕಾಮನೆಗೆ ಸಾಮಾನ್ಯಜ್ಞಾನೇಚ್ಛೆಯೇ ಕಾರಣವೆಂದು ಹೇಳಬೇಕು.

ಅವಚ್ಛಿನ್ನಜ್ಞಾನ ಬರಬೇಕಾದರೆ ಅವಚ್ಛೇದಕಜ್ಞಾನವು ಕಾರಣವಾಗಿರುವುದು ಅನುಭವಸಿದ್ಧವಾಗಿದೆ ಎಂದು ನೀವೂ ಸಹ ಹೇಳುತ್ತೀರಿ. ಈಗ ಅನುಭವವನ್ನು ಉಲ್ಲಂಘನೆ ಮಾಡುವುದಾದರೆ ಅವಚ್ಛಿನ್ನಜ್ಞಾನಕ್ಕೆ ಅವಚ್ಛೇದಕಜ್ಞಾನವು ಕಾರಣ ಎಂಬುದನ್ನೂ ಸಹ ಒಪ್ಪಬಾರದು.

ಆದ್ದರಿಂದ ಪರೋಕ್ಷಜ್ಞಾನದಲ್ಲಿ ಕಾಮನೆಯು ಕೂಡುವುದಿಲ್ಲವೆಂದು ನಿಷೇಧ ಮಾಡುವ ವಿವರಣಮತದಲ್ಲಿ ಜ್ಞಾನ ಅಥವಾ ಮೋಕ್ಷದ ಇಚ್ಛೆಯಿಂದ ವಿಚಾರದಲ್ಲಿ ಪ್ರವೃತ್ತಿಯು

ಉಂಟಾಗುತ್ತದೆಂದು ಸಮರ್ಥಿಸಲು ಆಗುವುದಿಲ್ಲ. ಹೀಗೆ ಕಾಮನಾವೇ ಕೂಡುವುದಿಲ್ಲವಾದ್ದರಿಂದ ಕಾಮನಾ ಉಳ್ಳವನು ಅಧಿಕಾರೀ, ಅಪರೋಕ್ಷಜ್ಞಾನವೇ ಫಲ, ಎಂಬ ಸೂಚನೆಯು ಅಥಶಬ್ದದಿಂದ ಸಿಗಲು ಸಾಧ್ಯವಿಲ್ಲ. ಈ ಸೂಚನೆಗೋಸ್ಕರ 'ಅಥ' ಶಬ್ದಕ್ಕೆ ಆರಂಭ ಎಂಬರ್ಥವನ್ನು ಇಟ್ಟುಕೊಳ್ಳದೆ 'ಅನಂತರ' ಎಂಬರ್ಥವನ್ನು ಇಟ್ಟುಕೊಂಡಿದ್ದಕ್ಕೆ ಏನೂ ಪ್ರಯೋಜನವಿಲ್ಲ.

### ಕಠಿಣಪದಾರ್ಥ

**ತಸ್ಮಾತ್** = ಶ್ರವಣಕ್ಕಿಂತ. **ತದಧೀನಾಯಾಃ** = ಪರೋಕ್ಷಬ್ರಹ್ಮಜ್ಞಾನದ ಅಧೀನವಾದ. **ಶ್ರವಣವಿಧ್ಯಧಿಕಾರಿವಿಶೇಷಣತ್ವಾಯೋಗಃ** = 'ಶ್ರೋತವ್ಯಃ' ಇತ್ಯಾದಿ ವಿಧಿಯ ಅಧಿಕಾರಿಯಾದವನಲ್ಲಿ ಅಪರೋಕ್ಷ ಜ್ಞಾನಕಾಮನಾ ಎಂಬ ಅಧಿಕಾರವೆಂಬ ವಿಶೇಷಣವು ಕೂಡುವುದಿಲ್ಲ. **ಕಾಮನಾಹೇತುಪರೋಕ್ಷಜ್ಞಾನಾದಿಕಮ್** = ಅಪರೋಕ್ಷ ಜ್ಞಾನದ ಕಾಮನೆಗೆ ಕಾರಣವಾದ ಪರೋಕ್ಷಜ್ಞಾನಾದಿಗಳು. **ಮೀಮಾಂಸಾಯಾಮ್** = ವಿಚಾರದಲ್ಲಿ. **ತಸ್ಯಾಂ ದಶಾಯಾಂ** = ಆಪಾತಪ್ರತೀತ ದಶೆಯಲ್ಲಿ. **ಸಂದೇಹೇನ ಜ್ಞಾತಬ್ರಹ್ಮಾವಚ್ಛಿನ್ನಪರೋಕ್ಷ ನಿಶ್ಚಯೇ** = ಸಂದೇಹದಿಂದ ತಿಳಿಯಲ್ಪಟ್ಟ ಬ್ರಹ್ಮನಿಂದ ಕೂಡಿ ಬ್ರಹ್ಮನ ಪರೋಕ್ಷಜ್ಞಾನ ನಿಶ್ಚಯದಲ್ಲಿ. **ನಿಶ್ಚಯವಿಷಯವಿಷಯಕಸಂದೇಹಸ್ಯೈವ** = ಬ್ರಹ್ಮನ ಪರೋಕ್ಷ ಜ್ಞಾನನಿಶ್ಚಯವನ್ನೇ ವಿಷಯವನ್ನಾಗಿ ಹೊಂದಿರುವ ಸಂದೇಹಕ್ಕಷ್ಟೇ. **ಉತ್ತರಕ್ರತುವಿಧಿಪ್ರಯುಕ್ತತ್ವೇಪಿ** = 'ಜ್ಞಾತ್ವಾ ಕರ್ಮ ಸಮಾಚರ' ಎಂಬ ಜ್ಞಾನೋತ್ತರದಲ್ಲಿನ ಕರ್ಮವು ವಾಕ್ಯದಿಂದ ವಿಧೇಯವಾಗಿದ್ದರೂ. **ತಜ್ ಜ್ಞಾನಕಾಮನಾಹೀನಸ್ಯ** = ಧರ್ಮದ ಅಪರೋಕ್ಷಜ್ಞಾನಕಾಮನಾ ಇಲ್ಲದ ಪುರುಷನಲ್ಲಿ, **ಸಂದಿಗ್ಧಸ್ಥಾಣ್ವಾದಿವಿಶೇಷಪರೋಕ್ಷಜ್ಞಾನಕಾಮನಾ** = ಸ್ಥಾಣುವೋ? ಪುರುಷನೋ? ಎಂಬ ಸಂದೇಹಕ್ಕೆ ವಿಷಯವಾದ ವಸ್ತುವಿನ ಅಪರೋಕ್ಷ ಜ್ಞಾನದಲ್ಲಿ ಕಾಮನೆಯು. **ತದ್ವಿಶೇಷಪರೋಕ್ಷಧೀಪೂರ್ವಿಕಾ** = ಸ್ಥಾಣುವೋ? ಪುರುಷನೋ ಎಂಬ ಸಂದೇಹಕ್ಕೆ ವಿಷಯವಾದ ವಸ್ತುವಿನ ಪರೋಕ್ಷಜ್ಞಾನದ ಅಧೀನ, **ತಸ್ಮಾತ್** = ಕಾಮನಾವು ಕಾಮ್ಯಮಾನವಾದ ಜ್ಞಾನವನ್ನೇ ವಿಷಯವನ್ನಾಗಿ ಹೊಂದಿರುವ ಮತ್ತೊಂದು ನಿಶ್ಚಯಜ್ಞಾನದ ಅಧೀನವಾಗದ ಕಾರಣ, **ತಾಂ ಪ್ರತಿ** = ವಿಶೇಷಜ್ಞಾನಕಾಮನೆಯನ್ನು ಕುರಿತು, **ತದೇವ** = ಸಾಮಾನ್ಯ ಜ್ಞಾನವೇ, **ತದುಲ್ಲಂಘನೇ** = ಅನುಭವವನ್ನು ಮೀರಿದರೆ, **ಸಾ** = ಅವಚ್ಛೇದಕ ಜ್ಞಾನಕ್ಕೆ ಹೇತುತ್ವವು, **ತಸ್ಮಾತ್** = ಈ ಎಲ್ಲ ದೋಷಗಳಿರುವುದರಿಂದ.

**प्रकाशः** - अन्यानवच्छिन्नब्रह्मापरोक्षे कामना, तादृशाप्रतिबद्धापरोक्षे वा कामना श्रवणरूपविचारविध्यधिकारिविशेषणमित्यत्र दोषान्तरमाह ।। **किञ्चेति** ।। 'तस्मात्' श्रवणादित्यर्थः । 'तदधीनायाः' परोक्षज्ञानाद्यधीनायाः अवच्छेदकस्य ब्रह्मणोऽज्ञाने तदवच्छिन्नापरोक्षज्ञानादौ कामनाऽयोगादिति भावः ।

*ಸಂಪೂರ್ಣಚಂದ್ರಿಕಾ*

ननु श्रवणात् प्रागापातधीदशायां तादृशं ज्ञानमस्तीत्याशङ्क्य निरस्यति ।। नचेति ।। तादृशं ज्ञानं निश्चयरूपमुत सन्देहरूपमिति विकल्पौ हृदि निधाय आद्य आह ।। तस्यामिति ।। आपातधीदशायामित्यर्थः । तदेवोपपादयति ।। नहीति ।। द्वितीये त्वाह ।। सन्देहेति ।। तदुपपादयति ।। निश्चित इति ।। 'तस्यां' निश्चितकामनायाम् । किञ्च यदि परोक्षज्ञाने कामनां निषिध्यापरोक्षज्ञान एव कामनोच्येत, तर्हि धर्ममीमांसायां न कोऽपि प्रवर्तेत । धर्मापरोक्षज्ञान-कामनाऽयोगात् ।

नच "ज्ञात्वा कर्म समाचरेत्" इति ज्ञानोत्तरकर्मविधायकेन विधिना, विचारं विना वेदार्थज्ञानासम्भवाद् विचारस्य कर्तव्यत्वं बोधितमिति, तत एव तत्र प्रवृत्तिर्नतु धर्मज्ञानकामनाधीनेति वाच्यम् । एवमपि तज्ज्ञानकामना आवश्यकीति भावेनाह ।। किञ्चेति ।। अवच्छिन्नज्ञानकामनायामवच्छेदकज्ञानस्यावश्यकतया परोक्षेणावच्छेदके निश्चिते, अपरोक्ष एव कामना युक्तेत्याशङ्कां दोषान्तरेण निरस्यति ।। किंचेति ।। नचेष्टापत्तिरनुभवविरोधादिति भावः । कथं तर्हि कामनेत्यत आह ।। तस्मादिति ।। कामनायाः काम्यमानज्ञानविषयविषयकनिश्चय पूर्वकत्वायोगादित्यर्थः । 'तां प्रति' विशेषज्ञानकामनां प्रति । 'तदेव' सामान्यज्ञानमेव । 'तदुल्लङ्घने' दर्शनातिक्रमणे । 'सा' अवच्छेदकज्ञानस्य हेतुता । विवरणमतदूषणमुपसंहरति ।। तस्मादिति ।। उक्तदूषणगणादित्यर्थः ।। ज्ञान इति ।। परोक्षे अपरोक्षे वेत्यर्थः ।। मोक्ष इति ।। ज्ञानकामनापूर्वकत्वात् मोक्षकामनाया इति भावः ।। विचारेति ।। यावद् विचारे न प्रवर्तते, तावत् विचारसाध्यपरोक्षादिनिश्चयाभावात् तदधीनाया अपरोक्षज्ञानकामनाया अयोगा-दित्यर्थः । तथाच विचारे प्रवृत्त्यनन्तरं परोक्षादिनिश्चयः, तस्मिंश्च सत्यपरोक्षादौ, कामनया तत्र प्रवृत्तिरित्यन्योन्याश्रयः सूचितो भवति । 'तत्कामस्य' ज्ञानादिकामस्य । 'तस्य' ज्ञानादेः । तथाच नाधिकारादिसूचनायानन्तर्यार्थत्वमथ शब्दस्येत्यधिकारार्थत्वमेव विवरणमते युक्तमिति ।

गुरुराजीय – पक्षद्वयमसाधारणदूषणेन दूषयित्वा साधारणदोषेणापि दूषयति ।। **किञ्चेति** ।। ननु श्रवणसाध्यपरोक्षज्ञानस्य प्रतिबद्धापरोक्षज्ञानस्य वा श्रवणात् प्रागसत्त्वेऽपि विचारात् प्राक् सत्त्वं सम्भवत्येव । श्रवणस्य विचाररूपत्वा-भावात् । तथाच तदधीनाया अपरोक्षज्ञानकामनाया विचारविध्यधिकारि-विशेषणत्वं भविष्यतीति नोक्तदोष इति चेन्न । स्यादेतत् यद्येवं श्रवणविचारयोर्भेदः परेणाभ्युपगतः स्यात् । नैतदस्ति । यतः श्रवणमेव विचार इत्येव हि परेणाभ्युपगम्यते । अत एव पूर्वं श्रवणरूपविचारविध्यधिकारिविशेषण-मित्युक्तम् । तथाच न काऽप्यनुपपत्तिरिति भावः । श्रवणात् प्रागापातप्रतीतिदशायां सिद्धं परोक्षज्ञानादिकं किं निश्चयरूपं वा सन्देहरूपं वा । नाद्य इत्याह ।। **तस्यां दशायामिति** ।। निश्चयस्य साधकबाधकभावाभावसाध्यत्वेन तत्सत्त्वे तस्यैव विचारत्वापत्त्या तदभावे च साधकबाधकभावाभावेन संशयस्य न्यायप्राप्तत्वेन निश्चयरूपस्य तस्यासम्भवादिति भावः । अत एव **तस्यां दशायामि**त्युक्तम् ।

न द्वितीय इत्याह ।। **सन्देहरूपस्येति** ।। किंच परोक्षज्ञाने कामनान-ङ्गीकारेऽध्ययनविधेरर्थज्ञानार्थत्वाभावेनादृष्टार्थत्वापत्त्या धर्मविचारस्याध्ययन-प्रयुक्तत्वाभावादकर्तव्यत्वं स्यादित्याह – **किञ्चेति** ।। नन्वध्ययनस्यादृष्टार्थत्वेन धर्मविचारस्य तत्प्रयुक्तत्वाभावेऽपि नाकर्तव्यत्वम् । उत्तरविधिवाक्यै-स्तावज्ज्योतिष्टोमादेः स्वर्गादिसाधनत्वं प्रतिपाद्यते । तथाचाननुष्ठितानां स्वर्गादिसाधनत्वानुपपत्त्या तदनुष्ठानमावश्यकम् । तच्च ज्ञानाभावे न सम्भ-वति । ज्ञानं च विचारमन्तराऽनुपपन्नं तमाक्षिपतीति धर्मविचारस्य कर्तव्यत्वसिद्धिरित्यत आह – **उत्तरेति** ।। ज्योतिष्टोमेनेत्यादेरुत्तरविधित्वं च स्वाध्यायोऽध्येतव्य इत्यध्ययनविध्यपेक्षया ज्ञेयम् । ननु नहि वेदान्तवेद्यं सर्वमित्युक्तमयुक्तं बाधकाभावेन तथा नियमसम्भवात् । तथाच परोक्षनिश्चयेन ज्ञातब्रह्मावच्छिन्नेऽपरोक्षज्ञाने कामनायाः सम्भवेऽपि निश्चयज्ञातधर्मावच्छिन्न-परोक्षज्ञानकामनैव निषिध्यत इत्यत आह ।। **किञ्चेति** ।।

ननु ज्ञानकामस्य वा मोक्षकामस्य वाऽधिकारित्वस्य मोक्षस्य ज्ञानस्य वा प्रयोजनत्वस्य भवत्सिद्धान्तेऽङ्गीकारात् तन्निराकरणेऽपसिद्धान्त इत्याशङ्कामुप-संहारव्याजेन परिहरति ।। **तस्मादिति** ।। ननु विशेषज्ञाने ज्ञाते वा कामनाऽज्ञाते

**वा । नाद्यः । ज्ञानावच्छेदकत्वेन विशेषाणामपि ज्ञातत्वेन कामनानुपपत्तेः । तथा दर्शनात् । अन्यथा ज्ञानस्य ज्ञातत्वेऽपि विषयस्यानवगतत्वस्यैव वक्तुं शक्यत्वेन ज्ञात एव ज्ञाने कामनोपपत्तेः । तत्रावच्छिन्नज्ञानेऽवच्छेदकज्ञानस्य हेतुत्वस्यापि दर्शनबलेनैव कल्प्यत्वेनैकत्र दर्शनोल्लङ्घने इतरत्रापि तदापत्तेरित्याह – अवच्छिन्न-ज्ञान इति ।। प्रकृतायशब्दार्थविचारासङ्गतिमाशङ्क्य पूर्वप्रकृत- मुपसंहरति ।। तस्मादिति ।। विचारप्रवृत्तिपर्यन्तेति ।। मोक्षमात्रकामनायाः सत्त्वेऽपि ज्ञान-कामनांतरिततदविनाभूतविचारे प्रवृत्तेरसम्भवेन विचारसाध्यज्ञानसाध्यो मोक्षो मे भूयादिति विशिष्टकामनाऽसम्भवादित्यर्थः ।**

ವಿವರಣೆ - ಬ್ರಹ್ಮನನ್ನು ಬಿಟ್ಟು ಬೇರೆ ಏನೂ ತೋರದಂತಹ ಪರೋಕ್ಷಜ್ಞಾನದಲ್ಲಿ ಯಾವ ಕಾಮನೆಯು ಇದೆಯೋ, ಅಥವಾ ಅಂತಹ ಅಪ್ರತಿಬದ್ಧಾಪರೋಕ್ಷದಲ್ಲಿ ಯಾವ ಕಾಮನೆಯು ಇದೆಯೋ, ಅದು ಶ್ರವಣರೂಪವಾದ ವಿಚಾರವಿಧಿಗೆ ವಿಷಯನಾದ ಅಧಿಕಾರಿಗೆ ವಿಶೇಷಣವಾಗಿದೆ ಎಂದು ಅದ್ವೈತಿಗಳು ಹೇಳಿದ್ದರು. ಅದಕ್ಕೆ ಹಿಂದೆ ಒಂದು ದೋಷ ಹೇಳಲಾಗಿತ್ತು. ಈಗ 'ಕಿಂಚ' ಇತ್ಯಾದಿ ವಾಕ್ಯದಿಂದ ಮತ್ತೊಂದು ದೋಷವನ್ನು ಹೇಳುತ್ತಿದ್ದಾರೆ.

ವಿಚಾರದಲ್ಲಿ ಪ್ರವೃತ್ತಿ ಮಾಡಲು ಮೊದಲು ಅಧಿಕಾರಿತ್ವವನ್ನು ಸಂಪಾದಿಸಬೇಕು. ಅಧಿಕಾರಿತ್ವವನ್ನು ಸಂಪಾದಿಸಬೇಕಾದರೆ ಅಪರೋಕ್ಷಜ್ಞಾನದ ಕಾಮನಾ ಬೇಕು. ಆದರೆ ಅಪರೋಕ್ಷಜ್ಞಾನದ ಜ್ಞಾನವಿಲ್ಲದೆ ಅದರಲ್ಲಿ ಕಾಮನಾವು ಹುಟ್ಟಲು ಸಾಧ್ಯವಿಲ್ಲ. ಆ ಅಪರೋಕ್ಷಜ್ಞಾನದ ಜ್ಞಾನವು ಪರೋಕ್ಷಜ್ಞಾನವೆಂದಾಗಲೀ ಪ್ರತಿಬದ್ಧ ಅಪರೋಕ್ಷಜ್ಞಾನವೆಂದಾಗಲೀ ಹೇಳಬೇಕು. ಆದರೆ ಪರೋಕ್ಷಜ್ಞಾನಾದಿಗಳು ಬರಬೇಕಾದರೆ ಮೊದಲು ವಿಚಾರ ಇರಬೇಕು. ಏಕೆಂದರೆ ಈ ಪರೋಕ್ಷಜ್ಞಾನ ಹಾಗು ಪ್ರತಿಬದ್ಧ ಅಪರೋಕ್ಷಜ್ಞಾನವು ವಿಚಾರದಿಂದಲೇ ಸಾಧ್ಯವಾಗಿದೆ. ಆದ್ದರಿಂದ ಯಾವ ವಿಚಾರಸಿದ್ಧಿಗಾಗಿ ಹೊರಟಿದ್ದೀರೋ ಆ ವಿಚಾರವೇ ಮೊದಲು ಸಿದ್ಧವಾಗಿರಬೇಕು.

ಹೀಗೆ ವಿಚಾರವು ಸಿದ್ಧವಾಗದೆ ಪರೋಕ್ಷಜ್ಞಾನಾದಿಗಳು ಉಂಟಾಗಲು ಸಾಧ್ಯವಿಲ್ಲ. ಯಾವಾಗ ಬ್ರಹ್ಮ-ಪರೋಕ್ಷಜ್ಞಾನಾದಿಗಳೇ ಇಲ್ಲವೋ ಆವಾಗ ಅಪರೋಕ್ಷಜ್ಞಾನದಲ್ಲಿ ಕಾಮನಾವೂ ಹುಟ್ಟಲು ಸಾಧ್ಯವಿಲ್ಲ. ಹುಟ್ಟದ ಇಂತಹ ಅಪರೋಕ್ಷಜ್ಞಾನಕಾಮನಾವು ಶ್ರವಣರೂಪವಿಚಾರವಿಧಿಗೆ ಯಾರು ಅಧಿಕಾರಿಯೋ ಅವನಿಗೆ ವಿಶೇಷಣವಾಗಲೂ ಸಹ ಸಾಧ್ಯವಿಲ್ಲ.

ನಮ್ಮ ಸಿದ್ಧಾಂತದಲ್ಲಿ ವಿಚಾರಕ್ಕಿಂತ ಮೊದಲು ಶ್ರವಣದಿಂದ ಬ್ರಹ್ಮನ ಬಗ್ಗೆ ಪರೋಕ್ಷಜ್ಞಾನ ಬಂದಿರುತ್ತದೆ. ಆದರೆ ಅದ್ವೈತಸಿದ್ಧಾಂತದಲ್ಲಿ ಶ್ರವಣವನ್ನೇ ವಿಚಾರವೆಂದು ಅಂಗೀಕರಿಸಿರುವುದರಿಂದ ಪರೋಕ್ಷಜ್ಞಾನದ ಮೊದಲೇ ವಿಚಾರ ಸಿದ್ಧವಾಗಬೇಕಾದೀತು ಎಂಬ ಆಕ್ಷೇಪ ಅವರಿಗೆ ಇದ್ದೇ ಇದೆ.

ಶ್ರವಣರೂಪ ವಿಚಾರಕ್ಕಿಂತ ಮೊದಲು ಆಪಾತತಃ ಪ್ರತೀತಿ ಬರುವ ದಶೆಯಲ್ಲಿ ಪರೋಕ್ಷಜ್ಞಾನವು ಮತ್ತು ಪ್ರತಿಬದ್ಧಾಪರೋಕ್ಷಜ್ಞಾನವು ಬರುತ್ತದೆ. ಆದ್ದರಿಂದ ಅಪರೋಕ್ಷಜ್ಞಾನದಲ್ಲಿ ಮತ್ತು ಅಪ್ರತಿಬದ್ಧ ಅಪರೋಕ್ಷಜ್ಞಾನದಲ್ಲಿ ಕಾಮನೆಯು ಹುಟ್ಟುತ್ತದೆ ಎಂಬ ಶಂಕೆಯನ್ನು 'ನ ಚ ಕಾಮನಾಹೇತು' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಆಪಾತತಃ ಪ್ರತೀತಿಯಾದ ಪರೋಕ್ಷಜ್ಞಾನವು ನಿಶ್ಚಯರೂಪವೋ? ಅಥವಾ ಸಂಶಯರೂಪವೋ? ಎಂಬ ಎರಡು ವಿಕಲ್ಪಗಳನ್ನು ಹೃದಯದಲ್ಲಿಟ್ಟುಕೊಂಡು ನಿಶ್ಚಯರೂಪವೆಂಬ ಮೊದಲನೆಯ ಪಕ್ಷವನ್ನು 'ತಸ್ಯಾಂ ದಶಾಯಾಂ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಆಪಾತತಃ ಪ್ರತೀತಿಯ ದೆಶೆಯಲ್ಲಿ ಎಂದೂ ನಿಶ್ಚಯಾತ್ಮಕಜ್ಞಾನವು ಬರಲು ಸಾಧ್ಯವಿಲ್ಲ. ಏಕೆಂದರೆ ಕೂಲಂಕುಷವಾಗಿ ವಿಮರ್ಶೆ ಮಾಡಿದಾಗಲೇ ನಿಶ್ಚಯಾತ್ಮಕಜ್ಞಾನವು ಬರಲು ಸಾಧ್ಯ. ಮತ್ತು ಈ ಆಪಾತತಃಪ್ರತೀತಿಯಾದ ಪರೋಕ್ಷಜ್ಞಾನವನ್ನು ನೀವು ನಿಶ್ಚಯಾತ್ಮಕವಾದ ಜ್ಞಾನವೆಂದು ಹೇಳಿದರೆ, ಇಂತಹ ನಿಶ್ಚಯಾತ್ಮಕಪರೋಕ್ಷಜ್ಞಾನ ಬಂದ ಅನಂತರ ವಿಚಾರದಲ್ಲಿ ಪ್ರವೃತ್ತಿ ಎಂದು ಹೇಳಿದಂತಾಯಿತು. ಆದರೆ ವೇದಾಂತದಲ್ಲಿ ಹೇಳಿದ ಎಲ್ಲ ವಿಷಯವನ್ನು ಪರೋಕ್ಷಜ್ಞಾನದಿಂದ ಅಥವಾ ಪ್ರತಿಬದ್ಧಾಪರೋಕ್ಷಜ್ಞಾನದಿಂದ ನಿಶ್ಚಯವಾಗಿ ತಿಳಿದ ನಂತರವೇ ವಿಚಾರದಲ್ಲಿ ಪ್ರವೃತ್ತಿ ಮಾಡುವುದು ಎಲ್ಲಿಯೂ ಕಂಡಿಲ್ಲ.

ಇನ್ನು ಆಪಾತತಃ ಪ್ರತೀತಿಯ ದಶೆಯಲ್ಲಿ ತೋರುವ ಪರೋಕ್ಷಜ್ಞಾನವು ಸಂದೇಹರೂಪವಾಗಿದೆ ಎಂಬ ಎರಡನೆಯ ಪಕ್ಷವನ್ನು 'ಸಂದೇಹರೂಪಸ್ಯ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಪರೋಕ್ಷಜ್ಞಾನವು ಸಂದೇಹರೂಪವೆಂದು ಹೇಳಿದರೆ ಈ ಸಂದೇಹಪರಿಹಾರಕ್ಕಾಗಿ ಅವನು ಈ ಪರೋಕ್ಷನಿಶ್ಚಯಕ್ಕಾಗಿಯೋ ಪ್ರವೃತ್ತಿಸುತ್ತಾನೆ, ಹೊರತು ಇನ್ನ್ಯಾವುದೋ ನಿಶ್ಚಯಕ್ಕಾಗಿ ಪ್ರವೃತ್ತಿ ಮಾಡುವುದು ತಪ್ಪಾಗುತ್ತದೆ.

ನೀವು ಪರೋಕ್ಷಜ್ಞಾನದಲ್ಲಿ ಕಾಮನಾವೇ ಹುಟ್ಟುವುದಿಲ್ಲ ಅಪರೋಕ್ಷಜ್ಞಾನದಲ್ಲಿ ಮಾತ್ರ ಕಾಮನಾ ಹುಟ್ಟುತ್ತದೆಂದು ಹೇಳುತ್ತಿದ್ದೀರಿ. ಹಾಗಾದರೆ ಧರ್ಮಮೀಮಾಂಸೆಯಲ್ಲಿ ಯಾರೂ ಪ್ರವೃತ್ತಿಯನ್ನೇ ಮಾಡದೇ ಇರಬೇಕಾದೀತು. ಏಕೆಂದರೆ ಧರ್ಮವು ಕೇವಲ ಪರೋಕ್ಷಜ್ಞಾನಕ್ಕೆ ಮಾತ್ರ ವಿಷಯವಾಗಿದೆ ಹೊರತು ಅಪರೋಕ್ಷಜ್ಞಾನಕ್ಕೆ ವಿಷಯವಾಗಿಲ್ಲ. ಆದ್ದರಿಂದ ಧರ್ಮದ ಅಪರೋಕ್ಷದಲ್ಲಿ ಇಚ್ಛೆ ಮಾಡಲು ಸಾಧ್ಯವಿಲ್ಲ. ಯಾವಾಗ ಧರ್ಮಜ್ಞಾನದಲ್ಲಿ ಇಚ್ಛೆಯೇ ಕೂಡುವುದಿಲ್ಲವೋ, ಆವಾಗ ಪೂರ್ವಮೀಮಾಂಸಾ ಹೊರಟದ್ದೇ ವ್ಯರ್ಥವಾಗುತ್ತದೆ.

ಶಂಕೆ - ಧರ್ಮಮೀಮಾಂಸೆಯಲ್ಲಿ ಪ್ರವೃತ್ತಿ ಮಾಡಲು ಧರ್ಮಜ್ಞಾನದಲ್ಲಿ ಕಾಮನಾವೇ ಇರಬೇಕೆಂಬ ನಿಯಮವೇನು ಇಲ್ಲ. ಬೇರೆ ರೀತಿಯಿಂದಲೂ ಪ್ರವೃತ್ತಿ ಕೂಡುತ್ತದೆ. ಹೇಗೆಂದರೆ 'ಜ್ಞಾತ್ವಾ ಕರ್ಮ ಸಮಾಚರೇತ್' ಎಂಬ ವಿಧಿವಾಕ್ಯವು ವೇದದ ಅರ್ಥಜ್ಞಾನವನ್ನು ಪಡೆದು ಕರ್ಮಾನುಷ್ಠಾನವನ್ನು ಮಾಡಬೇಕೆಂದು ಹೇಳುತ್ತಿದೆ. ವೇದದ ಅರ್ಥಜ್ಞಾನ ಬರಬೇಕಾದರೆ ವಿಚಾರ ಮಾಡಬೇಕು. ಹೀಗೆ ಈ

ವಿಧಿಯು ವಿಚಾರದ ಕರ್ತವ್ಯತ್ವವನ್ನು ತಿಳಿಸುತ್ತಿರುವುದರಿಂದಲೇ ಧರ್ಮಮೀಮಾಂಸೆಯಲ್ಲಿ ಪ್ರವೃತ್ತಿಯು ಉಂಟಾಗುತ್ತದೆ.

ಅಥವಾ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನವಿಧಿಯು ನಿತ್ಯವಿಧಿ ಆಗಿರುವುದರಿಂದ ಇದಕ್ಕೆ ಅದೃಷ್ಟಾರ್ಥತ್ವ ಮಾತ್ರ ಇದೆ. ಈ ವಿಧಿಯಿಂದ ಜ್ಞಾನಸಂಪಾದನೆ ಮಾಡಬೇಕೆಂದಾಗಲೀ ವಿಚಾರ ಮಾಡಬೇಕೆಂದಾಗಲೀ ತಿಳಿಯುವುದಿಲ್ಲ. ಆದರೆ ಈ ವಾಕ್ಯದ ಮುಂದಿರುವ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವಾಕ್ಯವು ಜ್ಯೋತಿಷ್ಟೋಮಯಾಗಕ್ಕೆ ಸ್ವರ್ಗಸಾಧನತ್ವವನ್ನು ವಿಧಿಸುತ್ತಿದೆ. ಯಾಗವು ಸ್ವರ್ಗಸಾಧನವಾಗಬೇಕಾದರೆ ಅದನ್ನು ಅನುಷ್ಠಾನ ಮಾಡಬೇಕು. ಅನುಷ್ಠಾನ ಮಾಡಬೇಕಾದರೆ ಅದರ ಜ್ಞಾನ ಬೇಕು. ಜ್ಞಾನ ಲಭಿಸಲು ವಿಚಾರ ಬೇಕು. ಹೀಗೆ ಈ ಯಾಗವಿಧಿಯೇ ವಿಚಾರವಿಧಿಯಾಗಿದೆ. ಆದ್ದರಿಂದಲೂ ಧರ್ಮಮೀಮಾಂಸೆಯಲ್ಲಿ ಪ್ರವೃತ್ತಿ ಕೂಡುತ್ತದೆ. ಆದ್ದರಿಂದ ಧರ್ಮಜ್ಞಾನದಲ್ಲಿ ಕಾಮನೆಯೇ ಇರಬೇಕೆಂಬ ನಿಯಮವಿಲ್ಲ.

ಸಮಾಧಾನ - ಈ ಉತ್ತರವೂ ಸರಿಯಲ್ಲ . ಏಕೆಂದರೆ 'ಜ್ಞಾತ್ವಾ ಕರ್ಮ ಸಮಾಚರ' ಎಂಬ ವಿಧಿಯಾಗಲಿ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವಿಧಿಯಾಗಲೀ ಪ್ರೇರಕಗಳಾಗಿದ್ದಾವೆ. ಈ ವಾಕ್ಯದಿಂದ ಪುರುಷನು ಪ್ರವೃತ್ತಿ ಮಾಡಬೇಕಾದರೆ ಮೊದಲು ಅವನು ಧರ್ಮಜ್ಞಾನದಲ್ಲಿ ಇಚ್ಛೆಯನ್ನು ಹೊಂದಿರಲೇಬೇಕು. ಆದರೆ ನಿಮಗೆ ಧರ್ಮಜ್ಞಾನದಲ್ಲಿ ಕಾಮನೆಯನ್ನೇ ಉಪಪಾದಿಸಲು ಆಗುವುದಿಲ್ಲ.

ಅವಚ್ಛಿನ್ನಜ್ಞಾನದಲ್ಲಿ ಕಾಮನಾ ಬರಬೇಕಾದರೆ ಮೊದಲು ಅವಚ್ಛೇದಕಜ್ಞಾನವು ಬಂದಿರಬೇಕು. ಅವಚ್ಛೇದಕನಾದವನು ಬ್ರಹ್ಮ. ಅವನ ಬಗ್ಗೆ ಪರೋಕ್ಷನಿಶ್ಚಯಾತ್ಮಕಜ್ಞಾನ ಬಂದ ಅನಂತರ ಅವನ ಪರೋಕ್ಷಜ್ಞಾನದಲ್ಲಿಯೇ ಕಾಮನಾ ಬರುತ್ತದೆ ಹೊರತು ಅವನ ಅಪರೋಕ್ಷಜ್ಞಾನದಲ್ಲಿ ಕಾಮನಾ ಬರಲು ಸಾಧ್ಯವಿಲ್ಲವೆಂಬ ಆಶಂಕೆಯನ್ನು ಮತ್ತೊಂದು ದೋಷದಿಂದ 'ಕಿಂಚ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ. ಬ್ರಹ್ಮನನ್ನು ಪರೋಕ್ಷಜ್ಞಾನದಿಂದ ನಿಶ್ಚಯವಾಗಿ ತಿಳಿದ ಮೇಲಷ್ಟೇ ಅವನ ಅಪರೋಕ್ಷಕ್ಕಾಗಿ ವಿಚಾರದಲ್ಲಿ ಪ್ರವೃತ್ತಿ ಮಾಡಬೇಕೆಂದು ನೀವು ಹೇಳುವುದಾದರೆ ಸ್ಥಾಣುವಿನ ಬಗ್ಗೆ ಸಂದೇಹ ಬಂದಾಗ ಪ್ರತ್ಯಕ್ಷವಾಗಿ ಅದರ ನಿಶ್ಚಯ ಜ್ಞಾನ ಪಡೆಯಬೇಕೆಂಬ ಇಚ್ಛೆಯ ಮೊದಲು ಪರೋಕ್ಷದ ನಿಶ್ಚಯಜ್ಞಾನವನ್ನು ಅವನು ಹೊಂದಿರಬೇಕಾದೀತು. ಆದರೆ ಯಾರಿಗೂ ಸಹ ಮೊದಲು ಸ್ಥಾಣುವಿನ ಬಗ್ಗೆ ಪರೋಕ್ಷನಿಶ್ಚಯ ಬಂದು ಅನಂತರ ಅಪರೋಕ್ಷಜ್ಞಾನದಲ್ಲಿ ಕಾಮನೆ ಬರುವುದು ಅನುಭವವಿರುದ್ಧವಾಗಿದೆ.

ನಮ್ಮ ಸಿದ್ಧಾಂತದ ಪ್ರಕಾರ ಕಾಮನಾವನ್ನು ಹೇಗೆ ಕೂಡಿಸಬೇಕೆಂಬುದನ್ನು 'ತಸ್ಮಾತ್' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಸಾಮಾನ್ಯವಾಗಿ ಒಂದು ವಸ್ತುವನ್ನು ತಿಳಿದ ಮೇಲೆ ಆ ವಸ್ತುವಿನ ವಿಶೇಷ -ಜ್ಞಾನದಲ್ಲಿ ಕಾಮನೆಯು ಬರುತ್ತದೆ. ಹಾಗಾಗಿ ವಿಶೇಷಜ್ಞಾನೇಚ್ಛೆಗೆ ಸಾಮಾನ್ಯಜ್ಞಾನವೇ ಕಾರಣವಾಗಿದೆ ಎಂಬುದನ್ನು ಒಪ್ಪಿಕೊಳ್ಳಬೇಕು.

ಹೀಗೆ ವಿವರಣಕಾರನು ಪರೋಕ್ಷಜ್ಞಾನದಲ್ಲಿ ಇಚ್ಛೆಯಿಲ್ಲವೆಂದು ವಾದಿಸುತ್ತಾನೆ. ಆದರೆ ಎಲ್ಲಿಯ ತನಕ ವಿಚಾರದಲ್ಲಿ ಪ್ರವೃತ್ತಿ ಮಾಡುವುದಿಲ್ಲವೋ ಅಲ್ಲಿಯ ತನಕ ವಿಚಾರಸಾಧ್ಯವಾದ

ಪರೋಕ್ಷಾದಿನಿಶ್ಚಯವು ಆಗಲು ಸಾಧ್ಯವಿಲ್ಲ. ಯಾವಾಗ ಪರೋಕ್ಷನಿಶ್ಚಯವಾಗುವುದಿಲ್ಲವೋ ಆವಾಗ ಇದರ ಅಧೀನವಾದ ಅಪರೋಕ್ಷಜ್ಞಾನದ ಕಾಮನಾ ಬರಲು ಸಾಧ್ಯವಿಲ್ಲ. ಆದ್ದರಿಂದ ವಿಚಾರದಲ್ಲಿ ಪ್ರವೃತ್ತಿ ಮಾಡಿದ ಮೇಲೆ ಪರೋಕ್ಷಾದಿನಿಶ್ಚಯವು ಆಗುತ್ತದೆ. ಪರೋಕ್ಷಾದಿನಿಶ್ಚಯವಾದ ಮೇಲೆ ಅಪರೋಕ್ಷದ ಕಾಮನಾದಿಂದ ವಿಚಾರದಲ್ಲಿ ಪ್ರವೃತ್ತಿ. ಹೀಗೆ ವಿಚಾರದಲ್ಲಿ ಪ್ರವೃತ್ತಿ ಮಾಡದೆ ಪರೋಕ್ಷ ನಿಶ್ಚಯವಿಲ್ಲ. ಪರೋಕ್ಷ ನಿಶ್ಚಯವಿಲ್ಲದೆ ಅಪರೋಕ್ಷದಲ್ಲಿ ಇಚ್ಛೆ ಮತ್ತು ವಿಚಾರದಲ್ಲಿ ಪ್ರವೃತ್ತಿ ಕೂಡಲ್ಲ. ಹೀಗೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ.

ಹೀಗೆ ಅಪರೋಕ್ಷಕಾಮನಾವೇ ಕೂಡುವುದಿಲ್ಲವಾದ್ದರಿಂದ ಅಧಿಕಾರಿಯ ಸೂಚನೆಗೋಸ್ಕರ ಹೇಳಿದ 'ಅನಂತರ' ಎಂಬ ಅರ್ಥವನ್ನು 'ಅಥ' ಶಬ್ದಕ್ಕೆ ಹೇಳಬೇಕಾಗಿಲ್ಲ. ಆರಂಭ ಎಂಬ ಅರ್ಥವನ್ನೇ ಅಥ ಶಬ್ದಕ್ಕೆ ಹೇಳಬಹುದು ಎಂಬ ಪ್ರಶ್ನೆಗೆ ವಿವರಣಮತದಲ್ಲಿ ಪರಿಹಾರವೇ ಇಲ್ಲ.

ಭಾಮತೀಕಾರನ ಈ ಅಭಿಪ್ರಾಯ ಸರಿಯಿಲ್ಲ ಸೂತ್ರದಲ್ಲಿರುವ 'ಆರಂಭ' ಎಂಬ ಅರ್ಥದಲ್ಲಿರುವ ಅಥ ಶಬ್ದದ ಜೊತೆಗೆ ಅನ್ವಯ ಮಾಡಲು ಬರುವಾಗ ಸೂತ್ರದಲ್ಲಿಲ್ಲದ 'ಕರ್ತವ್ಯ' ಪದದಲ್ಲಿ ಅನ್ವಯ ಹೇಳುವುದು ಅಯುಕ್ತವಾಗಿದೆ.

ಕರ್ತವ್ಯ ಪದದಲ್ಲಿ ಅನ್ವಯವೆಂಬುದನ್ನು ಭಾಮತೀಕಾರ ಸ್ಪಷ್ಟವಾಗಿ ಹೇಳದೇ ಇದ್ದರೂ ಕಲ್ಪತರುಕಾರ ಸ್ಪಷ್ಟವಾಗಿ ಹೇಳಿದ್ದಾನೆ ''ತಾತ್ಪರ್ಯಾರ್ಥವಾದ ವಿಚಾರಕ್ಕೆ ಅನ್ವಯ ಮಾಡಲು 'ಕರ್ತವ್ಯಾ' ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು'' ಎಂದು.

ಶಂಕೆ - ತಾತ್ಪರ್ಯಾರ್ಥಕ್ಕೆ ಅಧ್ಯಾಹೃತ ಶಬ್ದದಲ್ಲಿ ಮಾತ್ರ ಅನ್ವಯ ಹೇಳಬೇಕು. ಹೊರತು ಶ್ರುತವಾದ ಶಬ್ದದಲ್ಲಿ ಹೇಳಬಾರದು.

ಸಮಾಧಾನ - ಹೀಗೆ ಹೇಳಲು ನಿಯಾಮಕ ಪ್ರಮಾಣವಿಲ್ಲ. ಹೊರತಾಗಿ ತಾತ್ಪರ್ಯಾರ್ಥಕ್ಕೆ ಶ್ರುತವಾದದ್ದರ ಜೊತೆಗೆ ಅನ್ವಯವಿರುವುದು ಕಂಡಿದೆ - ''ಸೌರ್ಯಂ ಚರುಂ ನಿರ್ವಪೇತ್ ಬ್ರಹ್ಮವರ್ಚಸಕಾಮಃ'' ''ಬ್ರಹ್ಮವರ್ಚಸ್ಸನ್ನು ಬಯಸುವವನು ಸೂರ್ಯನಿಗೆ ಚರುವನ್ನು ನಿರ್ವಾಪ ಮಾಡಬೇಕು'' ಎಂಬಲ್ಲಿ 'ಸೌರ್ಯಂ ಚರುಂ' ದ್ರವ್ಯ ಮತ್ತು ದೇವತೆಯನ್ನು ನಿರ್ದೇಶ ಮಾಡಿರುವುದರಿಂದ ಯಾಗವು ಊಹೆಯಿಂದ ಲಭ್ಯವಾಗಿದೆ. ಹೀಗೆ ಊಹೆಯಿಂದ ಪ್ರಾಪ್ತವಾದ ಯಾಗದಲ್ಲಿ 'ನಿರ್ವಪೇತ್' ಎಂಬಲ್ಲಿ ಶ್ರುತವಾದ ವಿಧಿಪ್ರತ್ಯಯದಿಂದ ಅನ್ವಯವು ವಿಹಿತವಾಗಿದೆ. ಹಾಗೆಯೇ ''ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ'' ''ಅಗ್ನಿಗೆ ಅಷ್ಟಾಕಪಾಲ-ಪುರೋಡಾಶಯಾಗವು ಅಮಾವಾಸ್ಯೆಯಲ್ಲಿಯೂ ಪೌರ್ಣಮಾಸಿಯಲಿಯೂ ತಪ್ಪದೆ ನಡೆಯಬೇಕು'' ಎಂಬಲ್ಲಿ ಕರ್ತೃವಾಚಕಪದವಿಲ್ಲ. ಆದರೂ 'ನಡೆಯಬೇಕು' ಎಂಬುದರಿಂದ ಕರ್ತೃವಿನ ಪ್ರಯತ್ನವನ್ನು ಊಹಿಸಿಕೊಳ್ಳಬೇಕು. ಅದಕ್ಕೆ 'ಭವತಿ' ಎಂಬಲ್ಲಿ ಶ್ರುತವಾದ ವಿಧಿಪ್ರತ್ಯಯದ ಜೊತೆಗೆ ಅನ್ವಯವು ವಿಹಿತವಾಗಿದೆ. ಹೀಗೆ ಪೂರ್ವಮೀಮಾಂಸೆಯಲ್ಲಿ ಆಕ್ಷಿಪ್ತಾರ್ಥಕ್ಕೆ (ಅಶ್ರುತವಾದ ಅರ್ಥಕ್ಕೆ) ಶ್ರುತವಾದದ್ದರಲ್ಲಿ ಅನ್ವಯ ಮಾಡುವುದು ಕಂಡಿದೆ.

*ಪರಿಪೂರ್ಣಚಂದ್ರಿಕಾ*

ಆದ್ದರಿಂದ ಪ್ರಕೃತ 'ಆರಂಭ' ಎಂಬರ್ಥದಲ್ಲಿರುವ 'ಅಥ' ಶಬ್ದದ ಜೊತೆಗೆ ಜಿಜ್ಞಾಸಾಶಬ್ದಕ್ಕೆ ಅನ್ವಯ ಮಾಡಬಹುದು. 'ಅಥ' ಶಬ್ದಕ್ಕೆ ಆರಂಭ ಎಂಬರ್ಥವನ್ನು ಏಕೆ ಇಟ್ಟುಕೊಳ್ಳಬಾರದು? ಎಂಬ ಪ್ರಶ್ನೆಗೆ ಭಾಮತಿಯಲ್ಲಿ ಉತ್ತರವಿಲ್ಲ.




**ಅಥಶಬ್ದಾರ್ಥ-ಆರಂಭವಲ್ಲ**

'ಭಾಮತಿ'ಯಲ್ಲಿ ಹೀಗೆ ಹೇಳಿದೆ. 'ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ ಮುಖ್ಯಾರ್ಥ. ಅದು ಯತ್ನಸಾಧ್ಯವಲ್ಲ. ಅದನ್ನು ಆರಂಭಿಸಲಾಗುವುದಿಲ್ಲ. 'ವಿವರಣ'ವು ಹೇಳುವಂತೆ ಅಮುಖ್ಯಾರ್ಥವಾದ ವಿಚಾರವನ್ನಿಟ್ಟುಕೊಳ್ಳುವುದು ಮುಖ್ಯಾರ್ಥಸಂಭವವಿರುವಾಗ ಸಲ್ಲದು'. ಇದು ಸರಿಯಲ್ಲ. ಅಮುಖ್ಯಾರ್ಥವಾದ ವಿಚಾರವನ್ನಾದರೂ ಇಟ್ಟುಕೊಂಡು ಅಥ ಶಬ್ದಾರ್ಥವಾದ ಆರಂಭವನ್ನು ಅನ್ವಯಿಸಬಾರದೇಕೆ?

ಈ ಪ್ರಶ್ನೆಗೆ ಭಾಮತಿ ಹೀಗೆ ಹೇಳುತ್ತದೆ - 'ಅಥ ಶಬ್ದಕ್ಕೆ ಆರಂಭಾರ್ಥ ಅಯುಕ್ತವೆಂದಲ್ಲ. ಅನಂತರ ಎಂಬ ಅರ್ಥವಿಟ್ಟುಕೊಂಡು ಅಧಿಕಾರಿ ಸೂಚನೆಯನ್ನು ತೋರಿಸುವ ಉದ್ದೇಶದಿಂದ ಆರಂಭಾರ್ಥವನ್ನು ಕೈಬಿಡಲಾಗಿದೆ. ಇದೂ ಸರಿಯಲ್ಲ. ಅದ್ವೈತ ಸಿದ್ಧಾಂತದ ಪ್ರಕಾರ ಅಧಿಕಾರಿ ಪ್ರಯೋಜನಗಳು ಎರಡೂ ಅಸಂಭವ. ಏಕೆಂದರೆ 'ವಿಚಾರವು ಜ್ಞಾನಸಾಧನವೆಂಬುದು ಸಿದ್ಧವಿಷಯವಾದ್ದರಿಂದ ವಿಚಾರವಿಧಿ ನಿಯಮವಿಧಿ' ಎನ್ನುವ ಅದ್ವೈತಮತದಲ್ಲಿ ವಿಚಾರ ಮೋಕ್ಷಸಾಧನವಲ್ಲ. ಸಾಧನವೆಂದರೆ ವಿಚಾರವಿಧಿ ಅಪೂರ್ವವಿಧಿ ಎನಿಸೀತು ಮೋಕ್ಷ ಪ್ರಯೋಜನವಲ್ಲ. ಮುಮುಕ್ಷು ಅಧಿಕಾರಿಯಲ್ಲ. ಮುಮುಕ್ಷು ಮೋಕ್ಷಸಾಧನವಾದ ಜ್ಞಾನದಲ್ಲಿ ಇಚ್ಛೆ ಮಾಡಬೇಕು. ಜ್ಞಾನದಲ್ಲಿ ಇಚ್ಛೆ ಕೂಡಲಾರದು. ಜ್ಞಾನದ ಬಗ್ಗೆ ಜ್ಞಾನವಿಲ್ಲದೆ ಅದರಲ್ಲಿ ಇಚ್ಛೆ ಉಂಟಾಗುವುದಿಲ್ಲ. ಜ್ಞಾನದ ಜ್ಞಾನವಿದ್ದರೆ ಜ್ಞಾನದ ವಿಷಯದ ಬಗ್ಗೆಯೂ ಜ್ಞಾನವಿರಲೇಬೇಕು. ಆದರಿಂದ ಮೊದಲೆ ಇರುವ ಜ್ಞಾನದಲ್ಲಿ ಇಚ್ಛೆ ಶಕ್ಯವಿಲ್ಲ.

ಬ್ರಹ್ಮನ ಬಗ್ಗೆ ಪರೋಕ್ಷಜ್ಞಾನ ಬಂದಾಗ ಅಪರೋಕ್ಷದ ಇಚ್ಛೆ ಬರಬಹುದು. ಆದರೆ ಆ ಇಚ್ಛೆಯನ್ನು ಅಪರೋಕ್ಷಾನುಭವ ಗ್ರಹಿಸುವಾಗ ಇಚ್ಛೆಯ ವಿಷಯವಾದ ಜ್ಞಾನದ ಜೊತೆಗೆ ಅದರ ವಿಷಯವಾದ ಬ್ರಹ್ಮನನ್ನೂ ಗ್ರಹಿಸಲೇಬೇಕು. ಆದರಿಂದ ಮೊದಲೇ ಇರುವ ಅಪರೋಕ್ಷಕ್ಕಾಗಿ ವಿಚಾರ ಅಸಂಭವ. 'ಇದು ಬ್ರಹ್ಮಜ್ಞಾನವನ್ನು ಗ್ರಹಿಸುವ ಅಪರೋಕ್ಷ, ಕೇವಲ ಬ್ರಹ್ಮನನ್ನು ಗ್ರಹಿಸುವ ಅಪರೋಕ್ಷದಲ್ಲಿ ಇಚ್ಛೆ ಎನ್ನುವುದಾದರೆ ಕೇವಲ ಬ್ರಹ್ಮನನ್ನು ಗ್ರಹಿಸುವ ಪರೋಕ್ಷದಲ್ಲಿ ಇಚ್ಛೆಯನ್ನು ಏಕೆ ಒಪ್ಪಬಾರದು? ಪರೋಕ್ಷದಲ್ಲಿ ಇಚ್ಛೆ ಬರಲಾರದೆಂದರೆ ಧರ್ಮವಿಚಾರದಲ್ಲಿ ಪ್ರವೃತ್ತಿ ಹೇಗೆ? ಧರ್ಮ ಅಪರೋಕ್ಷವಾಗದು ಹಾನೆ? ಧರ್ಮದ ಅಪರೋಕ್ಷದಲ್ಲಿ ಇಚ್ಛೆ ಹೇಗೆ ಉಂಟಾದೀತು? ಧರ್ಮ ಸದಾ ಪರೋಕ್ಷವೆ. ಅಪರೋಕ್ಷ ವಿಷಯದಲ್ಲಿ ಮಾತ್ರ ಮೊದಲಿಗೆ ಪರೋಕ್ಷದಿಂದ ನಿಶ್ಚಯಿಸಿಕೊಂಡ ಅಪರೋಕ್ಷಕ್ಕಾಗಿ ವಿಚಾರ ಮಾಡಬೇಕು ಎನ್ನುವುದಾದರೆ ಮೋಟುಮರದ ಬಗ್ಗೆ ಅದೇನೆಂದು ಸಂದೇಹ ಬಂದಾಗ ಪ್ರತ್ಯಕ್ಷ ಕಾಣಲು ಬಯಸುವುದಕ್ಕೆ ಮುನ್ನ ಪರೋಕ್ಷದಿಂದ ನಿಶ್ಚಯಿಸಿಕೊಳ್ಳಬೇಕಾದೀತು. ಇದು ಅನುಭವ ವಿರುದ್ಧ.

ಆದರಿಂದ ಸಾಮಾನ್ಯವಾಗಿ ತಿಳಿದುದನ್ನು ವಿಶೇಷವಾಗಿ ತಿಳಿಯಲು ಇಚ್ಛೆ ಉಂಟಾಗುವುದನ್ನು ಒಪ್ಪಬೇಕು. ಅದನ್ನು ಒಪ್ಪದ ವಿವರಣಮತದಲ್ಲಿ ವಿಚಾರ ಪ್ರವೃತ್ತಿಮಾಡದ ಪರೋಕ್ಷನಿಶ್ಚಯವಿಲ್ಲ. ಪರೋಕ್ಷ

ನಿಶ್ಚಯವಿಲ್ಲದೆ ಅಪರೋಕ್ಷೇಚ್ಛೆಯಿಂದ ವಿಚಾರ ಪ್ರವೃತ್ತಿ ಕೂಡುವುದಿಲ್ಲ ಎಂದು ಅನ್ಯೋನ್ಯಾಶ್ರಯ ಆದರಿಂದ ಅಥ ಶಬ್ದಕ್ಕೆ 'ಅನಂತರ' ಎಂದು ಅರ್ಥವಿಟ್ಟುಕೊಂಡರೂ ಮುಮುಕ್ಷುವಿಗಾಗಿ ವಿಚಾರವಿಧಿ. ಅಪರೋಕ್ಷ ಅಥವಾ ಮೋಕ್ಷ ಫಲ ಎನ್ನುವ ಸೂಚನೆ ಸಿಗಲಾರದು. ಹಾಗಾದರೆ ಅಥ ಶಬ್ದಕ್ಕೆ ಆರಂಭ ಎಂದೇ ಅರ್ಥ ಏಕೆ ಇಟ್ಟುಕೊಳ್ಳಬಾರದು?

• • • • •

## ಅಥ ಶಬ್ದವು ಆರಂಭಾರ್ಥಕವಲ್ಲ ಏಕೆ?
## (ಭಾಮತಿ ವಿಮರ್ಶೆ)

### तात्पर्यचन्द्रिका –

भामतीरीत्या जिज्ञासाशब्दस्येच्छावाचकत्वेऽप्यार्थिकार्थेन विचारेणाध्याहृतस्य कर्तव्यपदस्येव श्रुतस्याधिकारार्थाथ-शब्दस्याप्यन्वयोऽस्तु । यथोक्तं कल्पतरौ "आर्थिके चास्मिन्नर्थे कर्तव्यपदाध्याहारः" इति । नचार्थिकार्थेन अध्याहृतस्यैवान्वयो नतु श्रुतस्येत्यत्र नियामकमस्ति । "सौर्यं चरुं निर्वपेद् ब्रह्मवर्चसकामः" इत्यादौ द्रव्यदेवतासम्बन्धाक्षिप्तेन यागेन, "यदाग्नेयोऽष्टाकपालो भवति" इत्यादौ भावनाक्षिप्तभावनया च विधिप्रत्ययान्वयदर्शनाच्च । तस्मादधिकारार्थ एवाथशब्दोऽस्त्विति । उच्यते । 'आरभ्यते' इत्यनुक्त्वाऽप्यारब्धे इदमनेनारब्धमिति ज्ञातुं शक्यत्वादधिकार्थायसूचनापाताच्च नारम्भार्थः । "अथ शब्दानुशासनम्" इत्यादौ तु व्याकरणे अङ्गान्तरव्यावृत्तस्याधिकारिविशेषणस्याभावेन तदानन्तर्यार्थत्वासम्भवात् मङ्गलप्रयोजनकोऽथशब्दोऽगत्याऽऽरम्भार्थः ।

ಅನುವಾದ - ಸೂತ್ರದಲ್ಲಿರುವ ಜಿಜ್ಞಾಸಾಶಬ್ದಕ್ಕೆ 'ಜ್ಞಾನೇಚ್ಛೇ' ಎಂಬರ್ಥವು ಶಕ್ತಿವೃತ್ತಿಯಿಂದ ಲಭಿಸಿದರೂ, ತಾತ್ಪರ್ಯಾರ್ಥ ವಿಚಾರವೇ ಆಗಿದೆ. ಈ ವಿಚಾರಕ್ಕೆ 'ಕರ್ತವ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಅನ್ವಯ ಹೇಳಬೇಕು ಎಂದು ಭಾಮತಿಯ ಅಭಿಪ್ರಾಯ.

ಭಾಮತಿಯ ಈ ಅಭಿಪ್ರಾಯ ಸರಿಯಿಲ್ಲ. 'ಆರಂಭ' ಎಂಬರ್ಥದಲ್ಲಿರುವ 'ಅಥ' ಶಬ್ದದ ಜೊತೆಗೆ ಅನ್ವಯ ಮಾಡಲು ಬರುವಾಗ ಸೂತ್ರದಲ್ಲಿಲ್ಲದ 'ಕರ್ತವ್ಯ' ಪದದಲ್ಲಿ ಅನ್ವಯ ಹೇಳುವುದು ಅಯುಕ್ತವಾಗಿದೆ.

ಸಂಪೂರ್ಣಚಂದ್ರಿಕಾ

ಕರ್ತವ್ಯಾ ಪದದಲ್ಲಿ ಅನ್ವಯವೆಂಬುದನ್ನು ಭಾಮತಿಯಲ್ಲಿ ಸ್ಪಷ್ಟವಾಗಿ ಹೇಳದೇ ಇದ್ದರೂ ಕಲ್ಪತರುವಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. 'ತಾತ್ಪರ್ಯಾರ್ಥವಾದ ವಿಚಾರಕ್ಕೆ ಅನ್ವಯ ಮಾಡಲು 'ಕರ್ತವ್ಯಾ' ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು' ಎಂದು.

ಶಂಕೆ - ತಾತ್ಪರ್ಯಾರ್ಥಕ್ಕೆ ಅಧ್ಯಾಹೃತ ಶಬ್ದದಲ್ಲಿ ಮಾತ್ರ ಅನ್ವಯ ಹೇಳಬೇಕು. ಹೊರತು ಶ್ರುತವಾದ ಶಬ್ದದಲ್ಲಿ ಹೇಳಬಾರದು.

ಸಮಾಧಾನ - ಹೀಗೆ ಹೇಳಲು ನಿಯಾಮಕ ಪ್ರಮಾಣವಿಲ್ಲ. ಹೊರತಾಗಿ ತಾತ್ಪರ್ಯಾರ್ಥಕ್ಕೆ ಶ್ರುತವಾದದ್ದರ ಜೊತೆಗೆ ಅನ್ವಯವಿರುವುದು ಕಂಡಿದೆ - ''ಸೌರ್ಯಂ ಚರುಂ ನಿರ್ವಪೇತ್ ಬ್ರಹ್ಮವರ್ಚಸಕಾಮಃ'' ''ಬ್ರಹ್ಮವರ್ಚಸ್ಸನ್ನು ಬಯಸುವುದು ಸೂರ್ಯನಿಗೆ ಚರುವನ್ನು ನಿರ್ವಾಪ ಮಾಡಬೇಕು'' ಎಂಬಲ್ಲಿ 'ಸೌರ್ಯಂ ಚರುಂ' ದ್ರವ್ಯ ಮತ್ತು ದೇವತೆಯನ್ನು ನಿರ್ದೇಶ ಮಾಡಿರುವುದರಿಂದ ಯಾಗವು ಊಹೆಯಿಂದ ಲಭ್ಯವಾಗಿದೆ. ಹೀಗೆ ಊಹೆಯಿಂದ ಪ್ರಾಪ್ತವಾದ ಯಾಗದಲ್ಲಿ 'ನಿರ್ವಪೇತ್' ಎಂಬಲ್ಲಿ ಶ್ರುತವಾದ ವಿಧಿಪ್ರತ್ಯಯದಿಂದ ಅನ್ವಯವು ವಿಹಿತವಾಗಿದೆ. ಹಾಗೆಯೇ ''ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ'' ''ಅಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವು ಅಮಾವಾಸ್ಯೆಯಲ್ಲಿಯೂ ಪೌರ್ಣಮಾಸಿಯಲ್ಲಿಯೂ ತಪ್ಪದೆ ನಡೆಯಬೇಕು'' ಎಂಬಲ್ಲಿ ಕರ್ತೃವಾಚಕಪದವಿಲ್ಲ. ಆದರೂ 'ನಡೆಯಬೇಕು' ಎಂಬುದರಿಂದ ಕರ್ತೃವಿನ ಪ್ರಯತ್ನವನ್ನು ಊಹಿಸಿಕೊಳ್ಳಬೇಕು. ಅದಕ್ಕೆ ಭವತಿ ಎಂಬಲ್ಲಿ ಶ್ರುತವಾದ ವಿಧಿಪ್ರತ್ಯಯದ ಜೊತೆಗೆ ಅನ್ವಯವು ವಿಹಿತವಾಗಿದೆ. ಹೀಗೆ ಪೂರ್ವಮೀಮಾಂಸೆಯಲ್ಲಿ ಆಕ್ಷಿಪ್ತಾರ್ಥಕ್ಕೆ (ಅಶ್ರುತವಾದ ಅರ್ಥಕ್ಕೆ) ಶ್ರುತವಾದದ್ದರಲ್ಲಿ ಅನ್ವಯ ಮಾಡುವುದು ಕಂಡಿದೆ. ಆದ್ದರಿಂದ ಪ್ರಕೃತದಲ್ಲಿ 'ಆರಂಭ' ಎಂಬರ್ಥದಲ್ಲಿರುವ 'ಅಥ' ಶಬ್ದದ ಜೊತೆಗೆ ಜಿಜ್ಞಾಸಾಶಬ್ದಕ್ಕೆ ಅನ್ವಯ ಮಾಡಬಹುದು.

'ಅಥ' ಶಬ್ದಕ್ಕೆ ಆರಂಭ ಎಂಬರ್ಥವನ್ನು ಏಕೆ ಇಟ್ಟುಕೊಳ್ಳಬಾರದು? ಎಂಬ ಪ್ರಶ್ನೆಗೆ ಭಾಮತಿಯಲ್ಲಿ ಉತ್ತರವಿಲ್ಲ. ಆದರೆ ನಮ್ಮ ಸಿದ್ಧಾಂತದ ಪ್ರಕಾರ ಹೀಗೆ ಉತ್ತರ - 'ಆರಂಭ' ಎಂಬರ್ಥವನ್ನು ಅಥಶಬ್ದಕ್ಕೆ ಹೇಳಿದರೆ ಅನ್ವಯಕ್ಲೇಶವಿಲ್ಲ. ಆದರೂ 'ಆರಂಭಿಸುತ್ತಿದ್ದೇವೆ' ಎಂದು ಹೇಳದೆ ಇದ್ದರೂ ಆರಂಭ ಮಾಡಿರುವುದನ್ನು ನೋಡಿಯೇ ಆರಂಭವಾದುದನ್ನು ಸುಲಭವಾಗಿ ತಿಳಿಯಬಹುದು. ಮತ್ತು ಅಧಿಕಾರಾದಿಗಳನ್ನು ಸೂಚಿಸಲು ಬೇರೆ ಶಬ್ದವಿಲ್ಲ. ಆದ್ದರಿಂದ ಅಥ ಶಬ್ದಕ್ಕೆ ಆರಂಭ ಎಂಬರ್ಥವನ್ನು ಹೇಳಬಾರದು.

ವ್ಯಾಕರಣಮಹಾಭಾಷ್ಯದಲ್ಲಿರುವ ''ಅಥ ಶಬ್ದಾನುಶಾಸನಮ್'' ಎಂಬಲ್ಲಿ ಅಥ ಶಬ್ದಕ್ಕೆ ಆರಂಭ ಎಂಬ ಅರ್ಥವನ್ನು ಹೇಳಲಾಗಿದೆ. ಏಕೆಂದರೆ ಶಿಕ್ಷಾ, ಕಲ್ಪ ಮೊದಲಾದ ವೇದಾಂಗಗಳ

ಅಧ್ಯಯನಕ್ಕೆ ಬೇಕಾದ ಅರ್ಹತೆಗಳೇ ವ್ಯಾಕರಣ ಅಧ್ಯಯನದ ಜಿಜ್ಞಾಸುವಿಗೂ ಇರಬೇಕು. ಬೇರೆ ಅಲ್ಲವಾದ್ದರಿಂದ 'ಅಥ' ಶಬ್ದವು ಅರ್ಹತೆಯನ್ನು ತಿಳಿಸಬೇಕಾಗಿಲ್ಲ. ಹಾಗಾಗಿ ಮಂಗಳವನ್ನೇ ಪ್ರಯೋಜನವಾಗಿವುಳ್ಳ 'ಆರಂಭ' ಎಂಬರ್ಥವನ್ನು ಹೇಳುವುದು ಅನಿವಾರ್ಯವಾಗಿದೆ.

**ಕಠಿಣಪದಾರ್ಥ**

ನಿರ್ವಪೇತ್ = ಯಾಗಕ್ಕೋಸ್ಕರ ಚರುವನ್ನು ಭಾಗಿಸಬೇಕು.
ಭವನಾಕ್ಷಿಪ್ತಭಾವನಾಯಾಃ = ಭೂಧಾತ್ವರ್ಥದಿಂದ ಆಕ್ಷಿಪ್ತವಾದ ಪ್ರಯತ್ನಕ್ಕೆ.

**प्रकाशः – भामतीमतेऽप्यधिकारार्थत्वं युक्तमित्याह ॥ भामतीति ॥** तन्मते ह्येवमर्थः । ब्रह्मजिज्ञासा ब्रह्मज्ञानेच्छा भवितुं युक्तेति श्रौतोऽर्थः । ज्ञानेच्छा हि सन्दिग्धे विषये निश्चयाय भवति, निश्चयश्च विचारसाध्य इति, विचारकर्तव्यत्वमार्थिकोऽर्थ इति । तथाच 'विचारः कर्तव्यः' इतिवत् 'आरभ्यते' इत्यन्वयः सम्भवतीत्यर्थः । भामत्यामदृष्टेराह ॥ **यथोक्तमिति** ॥ कर्तव्यपदवैषम्यमाशङ्क्य हेत्वभावेन निरस्यति ॥ **नचेति** ॥ न केवलं नियामकाभावः, दृश्यते च तथाऽन्वय इत्याह ॥ **सौर्यमिति** ॥ द्वितीये "संस्कारश्चाप्रकरणेऽकर्मशब्दत्वात्" इति तृतीयपादीयपञ्चमाधिकरणे, "सौर्यं चरुं निर्वपेद् ब्रह्मवर्चसकामः" इत्यत्र दार्शपौर्णमासिके निर्वापे चरुगुणविधिः किं वा निर्वापरूपकर्मान्तरविधिः, उत यागविधिरिति सन्देहे, गौरवान्न कर्मान्तरविधिः । अश्रुतत्वान्न यागविधिः । असति यागे देवतासम्बन्धायोगात् 'सौर्यम्' इति तेजोदैवत्यत्वादाग्नेयस्यानुवादः । चरुशब्दः स्थालीवचनः । स्थाल्यां निर्वपेदित्यर्थः । 'ब्रह्मवर्चसकामः' इति सर्वकाम्यवाक्यप्राप्तफलानुवादः । अतो दार्शपौर्णमासिके निर्वापे चरुगुणविधिरिति प्राप्ते, नित्यवच्छ्रुतस्य फलपदस्य पाक्षिकानुवादत्वानर्थक्ययोरयोगात् फलविशिष्टं कर्मान्तरं यावदुक्तं विधीयत इत्याद्याशङ्कानिरासपूर्वकं, द्वितीयशङ्कामुत्थाप्य, निर्वापे देवतान्वयायोगेन तत्पदवैयर्थ्यप्रसङ्गात् द्रव्यदेवतासम्बन्धानुमितो यागो विधीयते, निर्वपतिस्तु तत्र चोदकप्राप्तानुवाद इति सिद्धान्तितम् । अत्र यथा 'निर्वपेत्' इति श्रुतस्य विधिप्रत्ययस्य 'सौर्यम्' इति द्रव्यदेवतासम्बन्धाक्षिप्तेन यागेनान्वयस्तथा प्रकृतेऽपीत्यर्थः ॥

**ಪರಿಪೂರ್ಣಚಂದ್ರಿಕಾ**

यदाग्नेय इति ।। "यदाग्नेयोऽष्टाकपालोऽमावास्यायां च पौर्णमास्यां चाच्युतो भवति" इत्यत्र, भावयितुर्व्यापारं विना स्वयमेव भवनायोगात् 'भवति' इत्युक्तभवनेन प्रयोजककर्तृव्यापारभूतभावनाया आक्षेपात् तया च 'भवति' इति लट्प्रत्ययरूपविधेरन्वयदर्शनादित्यर्थः । अत्राह ।। आक्षिप्तेन श्रुतस्यान्वये न सौर्यवाक्यमुदाहरणम् । तत्राक्षिप्तस्य यागस्य भावनाविशेषणत्वेन आक्षिप्तविधि-विधेयत्वावश्यंभावात् श्रुतविध्यन्वयानभ्युपगमाद् विशिष्टविधिस्थले प्रत्ययार्थतया श्रुतस्य विधेस्तदर्थभूतायां सकलविशेषणविशिष्टायां भावनायामेवान्वये विशेषणानि तदाक्षिप्तैः विधिभिर्विधीयन्त इति वार्तिककारमतानुवर्तिनां पन्थाः । अत एवानेकेषामर्थानां विधिसंस्पर्शावश्यंभावेऽपि विशिष्टविधिस्थले न वाक्यभेदः । प्राप्तकर्मानुवादेन गुणविधानस्थले अनेकगुणश्रवणे श्रुतस्य विधेरेकत्र सङ्क्रान्तौ जाताया अर्थापत्तिपरिक्षयेणेतरविध्याक्षेपानुन्मेषात्, तत्रापि श्रुतस्य विधेर्व्यापारस्य वाच्यतया वाक्यभेद इति व्यवस्था सङ्गच्छते । एवंच सकलस्य भावनाविशेषण-स्याक्षिप्तविधिविधेयत्वनियमान्न श्रुतस्याक्षिप्तेन सहान्वये सौर्यवाक्यमुदाहरणम् । अधिकरणं त्वाक्षिप्तविधिविधेयत्वाभिप्रायमस्तु । यदपि "यदाग्नेयः" इत्यादि, तदपि न, भवत्युक्तभवनाक्षिप्तभावनायाः विध्यन्वयानर्हत्वात् । प्रयोजककर्तृव्यापारे हि प्रयोज्यकर्तुर्भाव्यत्वनियमेन भवनकर्तुराग्नेयाष्टाकपालशब्दाभ्यामुक्तस्य पुरोडाशस्य, द्रव्यदेवतासम्बन्धाक्षिप्तस्य यागस्य वा अपुमर्थस्यैव तस्यां भावनायामन्वयो वाच्यः । नह्यपुमर्थभाव्यका भावना विधावन्वयमर्हति । चेतनप्रवर्तनात्मकस्य पुमर्थभाव्यकभावनान्वयापेक्षितत्वादिति । उच्यते । श्रुतस्यैव विधेर्विशेषणेष्ववश्यं व्यापारो वाच्यः । तेषामाक्षिप्तविधिविधेयत्वे आक्षेपेण विशेषणविधौ सिद्धे विशिष्टविधिसिद्धिः, तत्सिद्धौ च विशेषणविध्याक्षेपसिद्धि-रित्यन्योन्याश्रयापत्तिरिति भामत्युक्तेस्तद्रीत्या आद्योदाहरणस्य युक्तत्वात् । पश्चात् कल्प्यस्यापि विशेषणविधेः प्राक्प्रवृत्तत्वेनाकल्प्यत्वान्नेतरेतराश्रयत्वापत्तिरिति पौर्णमास्यधिकरणराणकोक्तरीत्या आक्षिप्तविधिविधेयत्वेऽपि न दोषः । 'यागेन विध्यन्वयदर्शनात्' इत्यस्य, विधिप्रत्ययार्थभूतप्रवर्तनारूपविध्यन्वयदर्शनादिति

नार्थः, किंतु तदर्थभूतायां भावनायां विध्यविरुद्धायामवच्छेदकत्वेनान्वयदर्शना-दिति । अङ्गीकृतश्चायमन्वयः सौर्यवाक्ये । तत्रहि प्रत्ययार्थीभूताया भावनायाः धात्वर्थानवच्छेदे, विध्यन्वयायोगात् तदर्थमवच्छेदकधात्वर्थाकाङ्क्षायां, समान-पदोपात्तस्य निर्वापस्यान्वये, तत्र देवताऽन्वयायोगेन तत्पदवैयर्थ्यापत्तेः तत्सार्थकत्वाय द्रव्यदेवतासम्बन्धाक्षिप्तो यागस्तत्रावच्छेदकत्वेनान्वीयते ततश्च तद्विशिष्टा भावना श्रुतेन विधिना विधीयते । तदाक्षिप्तेन विधिना यागो विधीयत इति । यदपि यदाग्नेयोदाहरणे दूषणं, तन्न कृत्स्नस्वाध्यायप्रयोजनपर्यवसाना-पादकाध्ययनविधिप्रसादलब्धफलभावनाक्षिप्तयागभावनया 'भवति' इति पञ्चमल-काररूपविधिप्रत्ययार्थभूतप्रवर्तनात्मकविध्यन्वयदर्शनादित्यर्थादिति दिक् ॥

तस्मादिति ॥ परोक्तपरिहारासम्भवादित्यर्थः । स्वयं समाधत्ते ॥ उच्यत इत्यादिना ॥ अधिकार्यादीति ॥ आनन्तर्यार्थ एव तत्सूचनादिति भावः । एतेन –

"त्वामस्मि वच्मि विदुषां समवायोऽत्र तिष्ठति ।
आत्मीयां मतिमास्थाय स्थितिमत्र विधेहि तत् "

(काव्यप्रकाशे ४ उल्लासे)

इत्यादौ प्रतिज्ञापूर्वं वचनदर्शनेनोच्यमानस्यावश्यं कर्तव्यत्वमभिव्यनक्तीत्या-लङ्कारिकरीत्याऽत्र प्रारम्भवचनं प्रारम्भोपयुक्ताधिकार्यादिसद्भावमभिव्यनक्तीति प्रारम्भार्थत्वेऽप्यथशब्दोऽर्थवानिति केनचिदुक्तं निरस्तम् । आनन्तर्याभिधानमुखेन विशिष्याधिकार्यादिलाभे सति सामान्यतस्तल्लाभोक्तययोगात् । "आनन्तर्येऽ-धिकारस्य" इति स्मृतिविरोधाच्चेति ॥ कथं तर्हि महाभाष्ये आरम्भार्थत्वमथ-शब्दस्योक्तमत आह ॥ अथशब्देति ॥ अङ्गान्तरेति ॥ शिक्षाकल्पादितः ॥ अगत्येति ॥ तद्वाच्यार्थान्तराभावेनेत्यर्थः॥

गुरुराजीय – भामतीरीत्येति ॥ अनेनेच्छाया आरभ्यत्वासम्भवेऽपीति पूर्व-मभ्युपगम्योक्तमिति ज्ञेयम् ॥ अधिकार्याद्यसूचनापातादिति ॥ आनन्तर्याभि-धानमुखेन शास्त्रीयस्याधिकारिणो न्यायतः समर्पणाभावे विचारो निरधिकारिकोऽ-

ननुश्रेयः स्यादित्यर्थः ॥ **अङ्गान्तरव्यावृत्तस्येति** ॥ अङ्गान्तरव्यावृत्तायशब्दग्रहण-प्रयोजकविशेषस्येत्यर्थः । अथापि स्यान्मङ्गलार्थ एवायमथशब्द इत्यत आह ॥ **मङ्गलेति** ॥

ವಿವರಣೆ - 'ಅಥ' ಶಬ್ದಕ್ಕೆ ಆರಂಭ ಎಂಬರ್ಥವನ್ನೇ ಹೇಳಲು ಬರುವಾಗ 'ಅನಂತರ' ಎಂಬರ್ಥವನ್ನು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ ವಿವರಣದಲ್ಲಿರುವ ಉತ್ತರವನ್ನು ಇದುವರೆಗೂ ಖಂಡಿಸಿದರು. ಈಗ ಭಾಮತಿಯಲ್ಲಿರುವ ಉತ್ತರವನ್ನು ಖಂಡನೆ ಮಾಡಲು ತೊಡಗಿದ್ದಾರೆ.

ವಿವರಣದಲ್ಲಿ 'ಜಿಜ್ಞಾಸಾ' ಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡಿ 'ಅಥ' ಶಬ್ದಕ್ಕೆ ಅನಂತರ ಎಂಬರ್ಥವನ್ನು ಅಂಗೀಕರಿಸಲಾಗಿದೆ. ಆದರೆ ಭಾಮತಿಯಲ್ಲಿ ಇದನ್ನು ಒಪ್ಪಿಲ್ಲ. ಏಕೆಂದರೆ ವಿಚಾರದಲ್ಲಿ ಲಕ್ಷಣಾ ಮಾಡಿದರೆ ವಿಚಾರವನ್ನು ಆರಂಭಿಸಲು ಶಕ್ಯವಿರುವುದರಿಂದ 'ಅಥ' ಶಬ್ದಕ್ಕೆ ಆರಂಭ ಎಂಬರ್ಥವನ್ನು ಹೇಳಬೇಕಾಗುತ್ತದೆಂದು 'ಜಿಜ್ಞಾಸಾ' ಶಬ್ದಕ್ಕೆ ಜ್ಞಾನೇಚ್ಛೆಯಲ್ಲಿ ಶಕ್ತಿಯನ್ನು ಅಂಗೀಕರಿಸಲಾಗಿದೆ. ಆದರೆ ಇಚ್ಛೆಯನ್ನು ವಿಧಿಸುವುದು ಅಶಕ್ಯವಾದ್ದರಿಂದ ಜ್ಞಾನೇಚ್ಛೆಯಲ್ಲಿ ಶಕ್ತಿಯನ್ನು ಅಂಗೀಕರಿಸಿದ್ದರೂ ಇದರ ತಾತ್ಪರ್ಯಾರ್ಥ ವಿಚಾರವೇ ಆಗಿದೆ. ಹೇಗೆಂದರೆ ಒಂದು ವಿಷಯದಲ್ಲಿ ಸಂದೇಹ ಬಂದಾಗ ಅದರ ನಿರ್ಣಯಕ್ಕಾಗಿ ಜ್ಞಾನದಲ್ಲಿ ಇಚ್ಛೆಯು ಉದಿಸುತ್ತದೆ. ನಿರ್ಣಯವು ವಿಚಾರದಿಂದಷ್ಟೇ ಲಭ್ಯವಾಗುತ್ತದೆ. ಹೀಗೆ ವಿಚಾರದ ಕರ್ತವ್ಯತೆಯು ಸೂತ್ರದಿಂದ ತಿಳಿಯುತ್ತಿದೆ. ಆದ್ದರಿಂದ ಜಿಜ್ಞಾಸಾ ಶಬ್ದದ ತಾತ್ಪರ್ಯಾರ್ಥವಾದ ವಿಚಾರಕ್ಕೆ ಅಧ್ಯಾಹೃತವಾದ ಕರ್ತವ್ಯಪದದ ಜೊತೆಗೆ ಅನ್ವಯ ಮಾಡಬೇಕೆಂದು ಭಾಮತಿಯ ಅಭಿಪ್ರಾಯ.

ಇದು ತಪ್ಪು. ಏಕೆಂದರೆ ಕರ್ತವ್ಯಾ ಪದವನ್ನು ಅಧ್ಯಾಹಾರ ಮಾಡಿಕೊಳ್ಳುವ ಅವಶ್ಯಕತೆಯೇ ಇಲ್ಲ. ಸೂತ್ರದಲ್ಲಿರುವ 'ಅಥ' ಶಬ್ದಕ್ಕೆ ಆರಂಭ ಎಂಬರ್ಥವನ್ನು ಇಟ್ಟುಕೊಂಡು ಅದರಲ್ಲೇ ಅನ್ವಯ ಮಾಡಬಹುದು. ಯಾವ ರೀತಿಯಾಗಿ 'ವಿಚಾರವು ಕರ್ತವ್ಯ' ಎಂಬ ಅನ್ವಯವು ಸಮಂಜಸವಾಗಿದೆಯೋ, ಹಾಗೆಯೇ 'ವಿಚಾರವು ಆರಂಭವಾಗುತ್ತದೆ' ಎಂಬ ಅನ್ವಯವೂ ಸಮಂಜಸವಾಗಿದೆ. ವಾಸ್ತವಿಕವಾಗಿ ಭಾಮತಿಯಲ್ಲಿ ವಿಚಾರಕ್ಕೆ ಅಧ್ಯಾಹೃತವಾದ 'ಕರ್ತವ್ಯಾ' ಎಂಬ ಶಬ್ದದಲ್ಲಿ ಅನ್ವಯ ಎಂಬುದನ್ನು ಸ್ಪಷ್ಟವಾಗಿ ಹೇಳಿಲ್ಲ. ಆದರೆ ಅದಕ್ಕೆ ವ್ಯಾಖ್ಯಾನಿಸುತ್ತಾ ಕಲ್ಪತರುವಿನಲ್ಲಿ ತಾತ್ಪರ್ಯಾರ್ಥವಾದ ವಿಚಾರಕ್ಕೆ ಅಧ್ಯಾಹೃತವಾದ ಕರ್ತವ್ಯಾ ಎಂಬಲ್ಲಿಯೇ ಅನ್ವಯವೆಂದು ಸ್ಪಷ್ಟವಾಗಿ ನಿರೂಪಿಸಲಾಗಿದೆ.

## ಸೌರ್ಯಂ ಚರುಂ ನಿರ್ವಪೇದಿತ್ಯಧಿಕರಣಮ್

## [1]ಸಂಸ್ಕಾರಶ್ಚಾಪ್ರಕರಣೇಽಕರ್ಮಶಬ್ದತ್ವಾತ್ (೧-೩-೫)

(१) **अथ पञ्चमं द्रव्यदेवतायुक्तानां यागान्तरताधिकरणम्**

**(सूत्राणि १२-१५)**

**संस्कारश्चाप्रकरणेऽकर्मशब्दत्वात् ॥ १२ ॥**

'ಸೌರ್ಯಂ ಚರುಂ ನಿರ್ವಪೇದ್ ಬ್ರಹ್ಮವರ್ಚಸಕಾಮಃ' ಎಂಬ ವಾಕ್ಯದ ಬಗ್ಗೆ ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ.

ಈ ವಾಕ್ಯವು 'ನಿರ್ವಪೇತ್' ಎಂದು ದರ್ಶಪೂರ್ಣಮಾಸಸಂಬಂಧಿಯಾದ ಮುಷ್ಟಿನಿರ್ವಾಪವೆಂಬ ಕರ್ಮದಲ್ಲಿ ಚರುವೆಂಬ ಗುಣವನ್ನು ವಿಧಾನ ಮಾಡುತ್ತಿದೆಯೋ? ಅಥವಾ ಸೂರ್ಯದೇವತಾಕಚರುನಿರ್ವಾಪವೆಂಬ ಬೇರೊಂದು ಕರ್ಮವನ್ನು ವಿಧಾನ ಮಾಡುತ್ತಿದೆಯೋ? ಅದ

---

**(यावदुक्तं वा कर्मणः श्रुतिमूलत्वात् ।। १३ ।। यजतिस्तु द्रव्यफलभोक्तृसंयोगादेतेषां कर्मसम्बन्धात् ।। १४ ।। लिंगदर्शनाच्च ।। १५ ।।**

पूर्वत्रेवात्रापि गुणविधिरिति शङ्कनात् सङ्गतिः। दर्शपौर्णमासप्रकरणे 'ईषामालभेत' इति 'चतुरो मुष्टीर्निर्वपति' इति च श्रुतम् । ईषेति शकटगतो लाङ्गलवद् दीर्घः काष्ठविशेषः । तथा 'वायव्यं श्वेतमालभेत भूतिकामः' इति 'सौर्यं चरुं निर्वपेद् ब्रह्मवर्चसकामः' इति चानारभ्य वाक्यद्वयं श्रूयते । तत्र सन्देहः वायव्यसौर्यवाक्ययोः ईषावाक्यनिर्वापवाक्यगतालम्भनिर्वापावनूद्य क्रमात् श्वेतत्वगुणचरुरूपगुणौ विधीयेते, उत यावदुक्तमालम्भनमात्रं निर्वापमात्रं च विधीयते, उत द्रव्यदेवताविशिष्टं कर्मान्तरमिति । पूर्वपक्षस्तु ईषावाक्यस्थस्पर्शशब्दितमालम्भनमनूद्याऽलम्यायामीषायां श्वेतत्वगुणो विधीयते 'श्वेतामीषामालभेत' इति । तस्य श्वेतकाष्ठस्य वायुना स्पृश्यमानत्वात् वायव्यता सम्भवति । तथा मुष्टिवाक्यस्थनिर्वापमनूद्य चरुगुणो विधीयते । 'निर्वपेत्' इति यत् तत् चरुम्, चरौ स्थाल्यामिति सप्तम्यर्थे द्वितीया । निरुप्तस्य हविष आग्नेयतया तेजोदैवत्यत्वसाम्यात् सौर्यत्वं च युक्तम् । भूतिब्रह्मवर्चसकामशब्दौ सार्वकामिकदर्शपूर्णमासयोः पक्षे प्राप्तैकदेशफलानुवादावित्येकः । यथोक्तं सूत्रे, अप्रकरणे 'आलभेत' इत्यादिना प्रकृतः संस्कार एवानूद्यते । न यागान्तरं विधीयते । कुतः? अकर्मशब्दत्वात् अपूर्वकर्मविधायकशब्दत्वाभावादिति । अन्यस्तु फलपदयोः नित्यवच्छ्रुतयोः सम्भवत्प्रयोजनयोश्च पाक्षिकानुवादत्वरूपमानर्थक्यं न युक्तमिति गुणफलविशिष्टे आलंभननिर्वापरूपे यथोक्तकर्मान्तरे विधीयेते इति । सिद्धान्तस्तु श्वेतपशुचरुद्रव्ययोस्तद्धितान्तशब्दार्थयोर्वायुसूर्यदेवतयोश्च स्पष्टं प्रतीत्या द्रव्यदेवतालक्षणरूपवतोर्यागयोरर्थात् प्राप्तयोर्निरासायोगात्, द्रव्यदेवताफलविशिष्टयागयोर्विधिर्युक्तः । 'भूतिकामो वायव्येन श्वेतेन पशुना यजेत' इति 'ब्रह्मवर्चसकामः सौर्येण चरुणा यजेत, इति द्रव्यदेवतासम्बन्धकल्पितस्य यागस्य 'आलभेत' इत्यादौ श्रुतलिङ्प्रत्ययेन कर्तव्यतोक्तौ आलम्भनिर्वापौ विना यागासिद्धेरर्थात् प्राप्तालम्भनिर्वापयोरनुवादकावालम्भनिर्वापधातू इति । फलन्तु कर्मान्तरानुष्ठानं सिद्धान्ते । पूर्वपक्षे तन्नेति व्यक्तम् ।

**इति पञ्चमं द्रव्यदेवतायुक्तानां यागान्तरत्वाधिकरणम् (सूत्रे १३-१५)**

ಪಂಪೂರ್ಣಚಂದ್ರಿಕಾ

ಸೂರ್ಯದೇವತಾಕವಾದ ಚರುದ್ರವ್ಯಕಯಾಗಾಂತರವನ್ನೇ ವಿಧಾನ ಮಾಡುತ್ತಿದೆಯೋ? ಎಂದು ಸಂದೇಹ.

**ಪೂರ್ವಪಕ್ಷ** : - ನಿರ್ವಾಪವೆಂಬ ಬೇರೆ ಕರ್ಮವನ್ನು ವಿಧಾನ ಮಾಡುತ್ತದೆ ಎನ್ನುವುದು ಗೌರವ. ಬೇರೆ ಯಾಗವನ್ನೇ ವಿಧಾನ ಮಾಡುತ್ತಿದೆ ಎನ್ನುವುದಂತೂ ಅಸಾಧ್ಯ. ಏಕೆಂದರೆ ಯಾಗಾಂತರವಿಧಾನಕ್ಕೆ ಉಪಯುಕ್ತವಾದ ಶಬ್ದಗಳು ಶ್ರುತಿಯಲ್ಲಿ ಕೇಳಿಸುತ್ತಲೇ ಇಲ್ಲ. ಆದ್ದರಿಂದ ಹಿಂದೆ ಹೇಳಿದ ದರ್ಶಪೂರ್ಣಮಾಸದ ಮುಷ್ಟಿನಿರ್ವಾಪವೆಂಬ ಕರ್ಮದಲ್ಲಿ ಚರುವೆಂಬ ಗುಣವನ್ನು ವಿಧಾನ ಮಾಡುತ್ತಿದೆ -ಯೆಂದು ಹೇಳಬೇಕು. ಹೀಗೆ ಹೇಳಿದಾಗ ಲಾಘವವಿದೆ. ಅದು ಹೀಗೆ -

ಯಾಗವೇ ಇಲ್ಲದಿದ್ದರೆ ಸೂರ್ಯಮೊದಲಾದ ದೇವತೆಗಳ ಸಂಬಂಧವನ್ನೇ ಹೇಳಲಾಗದು. ಆದ್ದರಿಂದ ಹಿಂದೆ ದರ್ಶಪೂರ್ಣಮಾಸಯಾಗ ಪ್ರಸಕ್ತವಾಗಿದೆ. ಆ ದರ್ಶಪೂರ್ಣಮಾಸಯಾಗದಲ್ಲಿ ವ್ರೀಹಿಯಿಂದ ತಯಾರಾದ ಪುರೋಡಾಶವು ಪ್ರಸಕ್ತವಾಗಿದೆ. ಆ ಪುರೋಡಾಶಕ್ಕೆ ದರ್ಶಪೂರ್ಣಮಾಸದ ಅಗ್ನಿಯು ದೇವತೆ. ಅಗ್ನಿಗೆ ಹೇಳಿದ ಮಾತು ತೇಜೋಮಯನಾಗಿದ್ದರಿಂದ ಸೂರ್ಯನಿಗೂ ಸಂಬಂಧಿಸುತ್ತದೆ. ಆದ್ದರಿಂದ ಆಗ್ನೇಯಪುರೋಡಾಶವನ್ನೇ ಉಪಚಾರಕವಾಗಿ ಸೌರ್ಯ ಎನ್ನಲಾಗಿದೆ. ಹಾಗಾಗಿ 'ಸೌರ್ಯಂ ಚರುಂ ನಿರ್ವಪೇತ್' ಎಂಬಲ್ಲಿ 'ಸೌರ್ಯ' ಪದವು ಪ್ರತ್ಯೇಕ ದೇವತೆಯನ್ನು ವಿಧಿಸುತ್ತಿಲ್ಲ. ಪುರೋಡಾಶ-ದಲ್ಲಿ ಹಿಂದೆ ಪ್ರಸಕ್ತವಾದ ಅಗ್ನಿದೇವತಾಕತ್ವವನ್ನೇ ಅನುವಾದ ಮಾಡುತ್ತಿದೆ. ಚರುಶಬ್ದವು 'ಪಾತ್ರೆ' ಎಂಬರ್ಥವನ್ನು ಹೇಳುತ್ತಿದೆ. ಪಾತ್ರೆಯಲ್ಲಿ ಚರುನಿರ್ವಾಪ ಮಾಡಬೇಕೆಂದು ತಾತ್ಪರ್ಯ. ಅದರಂತೆ 'ಬ್ರಹ್ಮವರ್ಚಸಕಾಮಃ', ಎಂಬುದೂ ಸಹ ಬ್ರಹ್ಮವರ್ಚಸ್ಸೆಂಬ ಫಲವನ್ನು ನಿರ್ವಾಪದಲ್ಲಿ ವಿಧಾನ ಮಾಡುತ್ತಿಲ್ಲ. ಹೊರತಾಗಿ ದರ್ಶಪೂರ್ಣಮಾಸಯಾಗದಲ್ಲಿ ಸಕಲವನ್ನೂ ಫಲವನ್ನಾಗಿ ಹೇಳಿದ್ದಾರೆ. ಸಕಲಫಲಗಳಲ್ಲಿ ಬ್ರಹ್ಮವರ್ಚಸ್ಸೆಂಬ ಫಲವೂ ಸೇರಿದೆ.

ಈ ಬ್ರಹ್ಮವರ್ಚಸ್ಸೆಂಬ ಫಲವನ್ನು ಮುಷ್ಟಿನಿರ್ವಾಪಕ್ಕೆ ಶ್ರುತಿಯು ಅನುವಾದ ಮಾಡುತ್ತಿದೆ. ಆದ್ದರಿಂದ 'ಸೌರ್ಯಂ ಚರುಂ ನಿರ್ವಪೇತ್ ಬ್ರಹ್ಮವರ್ಚಸಕಾಮಃ' ಎಂಬ ವಾಕ್ಯವು ಚರುವೆಂಬ ಗುಣವನ್ನು ಮುಷ್ಟಿನಿರ್ವಾಪದಲ್ಲಿ ವಿಧಿಸುತ್ತಿದೆ. ಹಾಗಾಗಿ ಈ ವಾಕ್ಯವು ಗುಣವಿಧಿಯೆಂದು ಮೊದಲನೆಯ ಪೂರ್ವಪಕ್ಷ.

ಎರಡನೆಯ **ಪೂರ್ವಪಕ್ಷ** :- ಶ್ರುತಿಯಲ್ಲಿ 'ಬ್ರಹ್ಮವರ್ಚಸಕಾಮಃ' ಎಂದು ಬ್ರಹ್ಮವರ್ಚಸ್ಸೆಂಬ ಫಲವನ್ನು ಹೇಳಿದ್ದಾರೆ. ಹೀಗೆ ಬ್ರಹ್ಮವರ್ಚಸ್ಸೇ ಫಲ ಎಂದು ತೋರುತ್ತಿರುವಾಗ 'ಬ್ರಹ್ಮವರ್ಚಸ್ಸು' ಒಂದೇ ಫಲವಲ್ಲ. ಅನೇಕ ಫಲಗಳಲ್ಲಿ ಇದೂ ಒಂದು ಎಂಬ ಕಲ್ಪನೆ ಸರಿಯಲ್ಲ. ಈ ರೀತಿಯಾಗಿ ಹೇಳುವುದರಿಂದ ಪ್ರಯೋಜನವೂ ಇಲ್ಲ. ಆದ್ದರಿಂದ ಬ್ರಹ್ಮವರ್ಚಸ್ಸಿಗಾಗಿ ನಿರ್ವಾಪವೆಂಬ ಬೇರೆಯೇ ಕರ್ಮ ಶ್ರುತಿಯಲ್ಲಿ ವಿಹಿತವಾಗಿದೆ.

**ಸಿದ್ಧಾಂತ** :- ನಿರ್ವಾಪಕರ್ಮಕ್ಕೂ ದ್ರವ್ಯಕ್ಕೂ ಪರಸ್ಪರಸಂಬಂಧವಿದ್ದರೂ ನಿರ್ವಾಪಕರ್ಮಕ್ಕೂ ದೇವತೆಗೂ ಯಾವ ಸಂಬಂಧವಿಲ್ಲ. ಏಕೆಂದರೆ ಆಹುತಿ ಯಾರಿಗೆ ಸೇರುತ್ತದೋ ಅವನು ಯಾಗಕ್ಕೆ

ದೇವತೆಯಾದ್ದರಿಂದ ಯಾಗಕ್ಕೂ ದೇವತೆಗೂ ಸಂಬಂಧ ಹೊರತು ನಿರ್ವಾಪಕರ್ಮಕ್ಕೆ ದೇವತೆಯ ಸಂಬಂಧವಿಲ್ಲ. ಆದ್ದರಿಂದ ನಿರ್ವಾಪಕರ್ಮ ಈ ವಾಕ್ಯದಲ್ಲಿ ವಿಹಿತವಾಗಿಲ್ಲ. ಯಾಗಬೋಧಕವಾದ ಪದವು ಸ್ಪಷ್ಟವಾಗಿಲ್ಲದಿದ್ದರೂ ದ್ರವ್ಯದೇವತಾಬೋಧಕಪದಗಳಿರುವುದರಿಂದ ಯಾಗಾಂಶದ ವಿಧಾಯಕವೆಂದು ಹೇಳಲೇಬೇಕು. ಅರ್ಥಾಪತ್ತಿಪ್ರಮಾಣದಿಂದ ನಿರ್ವಾಪವು ಸಿದ್ಧವಾಗಿದೆ. ಅದನ್ನು 'ನಿರ್ವಪೇತ್' ಎಂಬುದು ಅನುವಾದ ಮಾಡುತ್ತಿದೆ. ಇಷ್ಟು ಸಿದ್ಧಾಂತ.

ಈ ಅಧಿಕರಣದಲ್ಲಿ ದ್ರವ್ಯದೇವತಾಸಂಬಂಧದಿಂದ ಆಕ್ಷಿಪ್ತವಾದ ಯಾಗಕ್ಕೆ ವಿಧಿಯಲ್ಲಿ ಅನ್ವಯ ಹೇಳಿದ್ದಾರೆ. ಅದರಂತೆ ಜಿಜ್ಞಾಸಾಶಬ್ದಾರ್ಥದ ಆರ್ಥಿಕಾರ್ಥವಾದ ವಿಚಾರಕ್ಕೆ ಅಥಶಬ್ದದ ಅರ್ಥದಲ್ಲಿ ಅನ್ವಯ ಹೇಳಬಹುದು.

## ಯದಾಗ್ನೇಯ ಇತ್ಯಧಿಕರಣಮ್

'ಯದಾಗ್ನೇಯೋಷ್ಟಾಕಪಾಲೋಽಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ' 'ಅಮಾವಾಸ್ಯೆಯಲ್ಲಿ ಮತ್ತು ಪೌರ್ಣಮಾಸಿಯಲ್ಲಿ ಆಗ್ನೇಯಪುರೋಡಾಶದ್ರವ್ಯಕಯಾಗವನ್ನು ಮಾಡಬೇಕು. ಅದರಿಂದ ಅಕ್ಷಯಫಲವನ್ನು ಹೊಂದುತ್ತಾನೆ'. ಈ ವಾಕ್ಯವು ಅಮಾವಾಸ್ಯೆ ಮತ್ತು ಪೂರ್ಣಮಾಸಗಳಲ್ಲಿ ಆಗ್ನೇಯ ಪುರೋಡಾಶದ್ರವ್ಯಕಯಾಗವನ್ನು ವಿಧಿಸುತ್ತದೆ. ಆದರೆ ಲಿಙ್ ಲೋಟ್ ತವ್ಯ ಪ್ರತ್ಯಯಗಳಿಲ್ಲದ ಕಾರಣ ಇದನ್ನು ವಿಧಾಯಕವೆಂದು ಹೇಗೆ ಹೇಳುವುದು? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಹೀಗೆ ಉತ್ತರಿಸಬೇಕು - ಭಾವಯಿತೃವಿನ (ಯಾಗಕರ್ತೃವಿನ) ಪ್ರಯತ್ನವಿಲ್ಲದೆ ಯಾಗವು ತಾನಾಗಿಯೇ ನಡೆಯುವುದಿಲ್ಲ. ಆದ್ದರಿಂದ 'ಭವತಿ' ಎಂಬುದರಿಂದ ಪ್ರಯೋಜಕಪುರುಷವ್ಯಾಪಾರವು ಆಕ್ಷಿಪ್ತವಾಗುತ್ತದೆ. 'ಭವತಿ' ಎಂಬುದು ಲೇಟ್‌ಲಕಾರವೆಂದು ತಿಳಿಯಬೇಕು. ಇದು ವಿಧಾಯಕವಾಗಲು ತೊಂದರೆಯಿಲ್ಲ. ಲೇಟ್‌ಲಕಾರದ ಅರ್ಥವಾದ ವಿಧಿಯಲ್ಲಿ ಆಕ್ಷಿಪ್ತವಾದ ಪುರುಷಪ್ರವೃತ್ತಿಯೆಂಬ ಭಾವನಾಕ್ಕೆ ಅನ್ವಯ ಮಾಡಬೇಕು.

ಈ ಅಧಿಕರಣದಲ್ಲಿ ಆಕ್ಷಿಪ್ತಾರ್ಥದ ಜೊತೆ ಅನ್ವಯ ಮಾಡಿದ್ದು ಕಂಡಿದೆ. ಅದರಂತೆ ಜಿಜ್ಞಾಸಾಶಬ್ದದ ಆರ್ಥಿಕಾರ್ಥವಾದ ವಿಚಾರಕ್ಕೆ ಶ್ರುತವಾದ ಅಥಶಬ್ದದ ಅರ್ಥವಾಗಿರುವ ಅಧಿಕಾರದಲ್ಲಿ ಅನ್ವಯ ಮಾಡಬಹುದು. ಯಾವ ಬಾಧಕವೂ ಇಲ್ಲ.

ಕೆಲವರ ಆಕ್ಷೇಪ :- ಮೇಲಿನ ಎರಡು ಮೀಮಾಂಸಾ ದೃಷ್ಟಾಂತಗಳೂ ವಿಷಮವಾಗಿವೆ. ಆಕ್ಷಿಪ್ತವಾದ ಅರ್ಥದ ಜೊತೆಗೆ ಶ್ರುತವಾದ ಅರ್ಥಕ್ಕೆ ಅನ್ವಯ ಮಾಡಲು ಸೌರ್ಯವಾಕ್ಯವು ಉದಾಹರಣ ಆಗುವುದಿಲ್ಲ. ಏಕೆಂದರೆ ಅಲ್ಲಿ ದ್ರವ್ಯದೇವತಾ ಸಂಬಂಧದಿಂದ ಯಾಗವು ಆಕ್ಷಿಪ್ತವಾಗಿದೆ. ಆ ಯಾಗವು ಭಾವನಾದಲ್ಲಿ ವಿಶೇಷಣವಾಗಿರುವುದರಿಂದ ಆಕ್ಷಿಪ್ತವಾದ ವಿಧಿಗೆ ವಿಧೇಯವಾಗುತ್ತದೆ. ಹೊರತು ಶ್ರುತವಾದ ವಿಧಿಗೆ ವಿಧೇಯವಾಗುವುದಿಲ್ಲ.

ಇದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು 'ಸೌರ್ಯಂ ಚರುಂ ನಿರ್ವಪೇತ್' ಎಂದು ಹೇಳಿದಾಗ ಯಾಗವು ಆಕ್ಷಿಪ್ತವಾಯಿತು. 'ಯಾಗೇನ ಸ್ವರ್ಗಂ ಭಾವಯೇತ್' ಎಂದು ಯಾಗವು ಭಾವನಾದಲ್ಲಿ

ವಿಶೇಷಣವಾಗಿದೆ. 'ಸೂರ್ಯದೇವತಾಕಚರುದ್ರವ್ಯಕ- ನಿರ್ವಾಪಾಂಗಕಯಾಗೇನ ಸ್ವರ್ಗಂ ಭಾವಯೇತ್' ಎಂದು ಶಾಬ್ದಬೋಧ. ಇಲ್ಲಿ ಶ್ರುತವಾದ ವಿಧಿಯೆಂದರೆ 'ನಿರ್ವಪೇತ್' ಎಂಬಲ್ಲಿ ಕೇಳಿಸುತ್ತಿರುವ ವಿಧಿ. ಅದರ ಜೊತೆಗೆ ಯಾಗಕ್ಕೆ ಅನ್ವಯವಿಲ್ಲ. ಹೊರತಾಗಿ ಇದರಿಂದಲೇ ಆಕ್ಷಿಪ್ತವಾದ ಮತ್ತೊಂದು ವಿಧಿ ಇದೆ. ಆದ್ದರಿಂದ 'ಯಕ್ಷಾನುರೂಪೋ ಬಲಿಃ' ಎಂಬಲ್ಲಿ ಶ್ರುತವಾದ ಅರ್ಥಕ್ಕೆ ಶ್ರುತವಾದ ವಿಧಿಯಲ್ಲಿ ಅನ್ವಯ. ಆಕ್ಷಿಪ್ತವಾದ ಅರ್ಥಕ್ಕೆ ಆಕ್ಷಿಪ್ತವಾದ ವಿಧಿಯಲ್ಲಿ ಅನ್ವಯ. ಪ್ರಕೃತ ಆಕ್ಷಿಪ್ತವಾದ ಯಾಗಕ್ಕೆ ಆಕ್ಷಿಪ್ತವಾದ ಭಾವನಾದಲ್ಲೇ ಅನ್ವಯ ಮಾಡಲಾಗಿದೆ.

ಮೀಮಾಂಸಾವಾರ್ತಿಕಕಾರರ ಅನುಯಾಯಿಗಳ ಸಿದ್ಧಾಂತ ಹೀಗಿದೆ - ವಿಶಿಷ್ಟವಿಧಿಯ ಸ್ಥಳದಲ್ಲಿ ಪ್ರತ್ಯಯಾರ್ಥವಾಗಿ ಶ್ರುತವಾದ ವಿಧಿಯು ಪ್ರತ್ಯಯಾರ್ಥವೇ ಆದ ಸಕಲವಿಶೇಷಣವಿಶಿಷ್ಟವಾದ ಭಾವನಾದಲ್ಲಿ ಅನ್ವಯ ಹೊಂದುತ್ತದೆ. ಆ ವಿಶೇಷಣಗಳು ಆಕ್ಷಿಪ್ತವಾದ ವಿಧಿಯಿಂದ ವಿಧೇಯವಾಗಿವೆ. ಹೀಗೆ ವ್ಯಾಪ್ತಿ ಹೇಳಬಹುದು. 'ಯದ್ಯತ್ ಭಾವನಾವಿಶೇಷಣಮ್, ತತ್‌ಸರ್ವಂ ಆಕ್ಷಿಪ್ತವಿಧಿವಿಧೇಯಮ್ ನ ತು ಶ್ರುತವಿಧಿವಿಧೇಯಮ್' ಎಂದು.

ಪ್ರಕೃತ 'ಸೌರ್ಯಂ ಚರುಂ ನಿರ್ವಪೇತ್' ಎಂಬಲ್ಲಿ ಯಾಗವು ಆಕ್ಷಿಪ್ತವಾಗಿ ಭಾವನಾದಲ್ಲಿ ವಿಶೇಷಣವಾಗಿರುವುದರಿಂದ ಆಕ್ಷಿಪ್ತವಿಧಿಯಿಂದಲೇ ವಿಧೇಯವಾಗಬೇಕು, ಹೊರತು ಶ್ರುತಿವಿಧಿಯಿಂದ ವಿಧೇಯವಾಗುವುದಿಲ್ಲ. ಆದ್ದರಿಂದಲೇ ವಿಶಿಷ್ಟವಿಧಿಸ್ಥಳದಲ್ಲಿ ವಾಕ್ಯಭೇದ ದೋಷ ಬರುವುದಿಲ್ಲ. ಶ್ರುತವಾದ ವಿಧಿ ಅನೇಕಾರ್ಥದ ಜೊತೆ ಅನ್ವಯ ಹೊಂದಿದರೆ ಮಾತ್ರ ವಾಕ್ಯಭೇದ ಬರುತ್ತದೆ. ಆದರೆ ಶ್ರುತವಾದ ವಿಧಿ ಕೇವಲ ಶ್ರುತವಾದ ಭಾವನಾದಲ್ಲಿ ಅನ್ವಯ ಹೊಂದಿದರೆ ವಾಕ್ಯಭೇದ ಬರಬೇಕಾಗಿಲ್ಲ. ಉಳಿದ ಎಲ್ಲ ವಿಶೇಷಣಗಳಿಗೆ ಆಕ್ಷಿಪ್ತವಾದ ವಿಧಿಯ ಜೊತೆ ಅನ್ವಯ ಮಾಡಬೇಕು. ವಾಕ್ಯಭೇದ ಎಲ್ಲಿ ಬರುತ್ತದೆಂದರೆ ಕರ್ಮವನ್ನು ಒಂದು ಕಡೆ ವಿಧಾನ ಮಾಡಿರುತ್ತಾರೆ. ಪೂರ್ವದಲ್ಲೇ ಪ್ರಾಪ್ತವಾದ ಕರ್ಮವನ್ನು ಅನುವಾದ ಮಾಡಿ ಅದರಲ್ಲಿ ಗುಣವಿಧಾನ ಮಾಡಿದರೆ ಅಂತಹ ಕಡೆ ವಾಕ್ಯಭೇದ ಬರುತ್ತದೆ. 'ದಧ್ನಾ ಜುಹೋತಿ' ಎಂಬಲ್ಲಿ ಹೋಮವನ್ನು ಪೂರ್ವದಲ್ಲೇ ವಿಧಾನ ಮಾಡಿದ್ದಾಗಿದೆ. ಪೂರ್ವಪ್ರಾಪ್ತವಾದ ಹೋಮವನ್ನು ಅನುವಾದ ಮಾಡಿ ದಧಿಯೆಂಬ ಗುಣವನ್ನು 'ದಧ್ನಾ ಜುಹೋತಿ' ಎಂದು ವಿಧಾನ ಮಾಡಲಾಗಿದೆ. ಇಲ್ಲಿ ಒಂದೇ ಗುಣದ ವಿಧಾನ. ಆದರೆ ಪ್ರಾಪ್ತವಾದ ಕರ್ಮವನ್ನು ಅನುವಾದ ಮಾಡಿ ಅನೇಕ ಗುಣಗಳನ್ನು ವಿಧಾನ ಮಾಡಿದರೆ ವಾಕ್ಯಭೇದ ಬರುತ್ತದೆ. ಏಕೆಂದರೆ ಅಲ್ಲಿ ಶ್ರುತವಾದ ವಿಧಿಯ ಅನುವಾದವಾಗಿರುವ ಭಾವನಾದಲ್ಲಿ ಅನ್ವಯವಿಲ್ಲ. ಭಾವನಾ ವಿಧೇಯವಲ್ಲ. ಅಂಗವಷ್ಟೇ ವಿಧೇಯವಾಗಿದೆ. ಒಂದು ಅಂಗದಲ್ಲಿ ಶ್ರುತವಾದ ವಿಧಿಗೆ ಸಂಕ್ರಾಂತಿಯಾಗುವ ಮಾತ್ರದಿಂದಲೇ (ಅನ್ವಯ ಮಾಡುವ ಕಾರಣದಿಂದಲೇ) ಅರ್ಥಾಪತ್ತಿಪರೀಕ್ಷೆಯಿಂದ ಇನ್ನೊಂದು ವಿಧಿಯ ಆಕ್ಷೇಪ ಬರುವುದಿಲ್ಲ. ಶ್ರುತವಾದ ವಿಧಿಗೆ ಎಲ್ಲೆಡೆ ಅನ್ವಯ ಹೇಳಿದಾಗ ವಾಕ್ಯಭೇದ ಬರುತ್ತದೆ. ಆದ್ದರಿಂದ ವಿಶಿಷ್ಟವಿಧಿಸ್ಥಳದಲ್ಲಿ ವಾಕ್ಯಭೇದವಿಲ್ಲ. ಅಂಗವಿಧಿಸ್ಥಳದಲ್ಲಿ ವಾಕ್ಯಭೇದವಿದೆ. ಈ ವ್ಯವಸ್ಥೆಯನ್ನು ಕೊಡಿಸಬೇಕೆಂದರೆ ಭಾವನಾವು ಶ್ರುತವಿಧಿಯಲ್ಲಿ ಅನ್ವಯವಾಗುತ್ತದೆ. ಭಾವನಾದಲ್ಲಿ ವಿಶೇಷಣವಾದದ್ದೆಲ್ಲ ಆಕ್ಷಿಪ್ತವಿಧಿಯಿಂದ ವಿಧೇಯ-ವಾಗಿದೆಯೆಂದು ಒಪ್ಪಬೇಕು.

*ಜಿಜ್ಞಾಸಾಧಿಕರಣ*

ಭಾವನಾದಲ್ಲಿ ವಿಶೇಷಣವಾದ ಸಕಲವೂ ಸಹ ಆಕ್ಷಿಪ್ತವಿಧಿಯಿಂದ ವಿಧೇಯವಾಗುತ್ತದೆಂಬ ನಿಯಮವಿರುವುದರಿಂದ ಪ್ರಕೃತ 'ಸೌರ್ಯಂ ಚರುಂ ನಿರ್ವಪೇತ್' ಎಂಬಲ್ಲಿ ಯಾಗವು ಆಕ್ಷಿಪ್ತವಿಧಿಯಿಂದ ವಿಧೇಯವಾಗುತ್ತದೆ ಹೊರತು ಶ್ರುತವಿಧಿಯಿಂದ ವಿಧೇಯವಲ್ಲ. ಹೀಗಿರುವಾಗ ಆಕ್ಷಿಪ್ತವಾದದ್ದಕ್ಕೆ ಶ್ರುತವಾದದ್ದರ ಜೊತೆ ಹೇಳುವ ಅನ್ವಯಕ್ಕೆ ಇದು ಹೇಗೆ ದೃಷ್ಟಾಂತವಾಗುತ್ತದೆ? ಪೂರ್ವಮೀಮಾಂಸೆಯ ಈ ಅಧಿಕರಣವಾದರೂ ಆಕ್ಷಿಪ್ತವಿಧಿಯ ವಿಧೇಯಕ್ಕೋಸ್ಕರ ಹೊರಟಿದೆಯೆಂದು ತಿಳಿಯಬೇಕು. ಆದ್ದರಿಂದ ದೃಷ್ಟಾಂತವೇ ಸರಿಯಲ್ಲ.

ಇನ್ನು 'ಯದಾಗ್ನೇಯೋऽಷ್ಟಾಕಪಾಲಃ' ಎಂಬಲ್ಲಿ ಆಕ್ಷಿಪ್ತವಾದ ಭಾವನಾಕ್ಕೆ ವಿಧ್ಯನ್ವಯವಿದೆಯೆಂದು ಹೇಳಿದ್ದೂ ಕೂಡ ಸರಿಯಲ್ಲ. ಏಕೆಂದರೆ 'ಅಷ್ಟಾಕಪಾಲೋ ಭವತಿ' ಎಂದು ಹೇಳಿದಾಗ ಭವತಿ ಎಂಬಲ್ಲಿ ಹೇಳಿದ ಭವನದಿಂದ ಭಾವನಾವು ಆಕ್ಷಿಪ್ತವಾಗಿದೆ. ಎಲ್ಲಿ ಣಿಚ್ ಪ್ರಯೋಗವಿರುತ್ತದೋ ಅಲ್ಲಿ ಪ್ರಯೋಜಕಕರ್ತಾ, ಮತ್ತು ಸ್ವತಂತ್ರಕರ್ತಾ ಇರಲೇಬೇಕು. ಉದಾಹರಣೆ - 'ದಶರಥಃ ರಾಮಂ ವನಂ ಗಮಯತಿ' ಎಂಬಲ್ಲಿ ದಶರಥನು ಪ್ರಯೋಜಕಕರ್ತಾ, ರಾಮನು ಸ್ವತಂತ್ರಕರ್ತಾ. ಪ್ರಯೋಜಕಕರ್ತೃವಿನ ವ್ಯಾಪಾರದಲ್ಲಿ ಸ್ವತಂತ್ರಕರ್ತೃವು ಕರ್ಮನಾಗಿದ್ದಾನೆ. ಪ್ರಕೃತ 'ಆಗ್ನೇಯೋಷ್ಟಾಕಪಾಲೋ ಭವತಿ' ಎಂಬಲ್ಲಿ ಭವನ ಎಂಬುದು ಕ್ರಿಯಾ. ಈ ಕ್ರಿಯೆಯಲ್ಲಿ ಆಗ್ನೇಯಾऽಷ್ಟಾಕಪಾಲ ಎಂಬುದು ಸ್ವತಂತ್ರಕರ್ತಾ. ಯಜಮಾನನು ಪ್ರಯೋಜಕಕರ್ತಾ = ಭಾವಯಿತಾ. ಆದ್ದರಿಂದ 'ಯಜಮಾನಃ ಆಗ್ನೇಯಾऽಷ್ಟಾಕಪಾಲಂ ಭಾವಯೇತ್' ಎಂದಂತಾಯಿತು. ಯಜಮಾನನ ವ್ಯಾಪಾರವೇ ಭಾವನಾ. ಭವನದಲ್ಲಿ ಸ್ವತಂತ್ರಕರ್ತೃವಾದ ಅಷ್ಟಾಕಪಾಲವೇ ಭಾವನಾವೆಂಬ ಈ ವ್ಯಾಪಾರದಲ್ಲಿ ಕರ್ಮವಾಗಬೇಕು. ಯಾವರೀತಿಯಾಗಿ 'ರಾಮಃ ವನಂ ಗಚ್ಛತಿ' ಎಂಬಲ್ಲಿ ಗಮನದಲ್ಲಿ ಕರ್ತೃನಾದ ರಾಮನೇ 'ದಶರಥಃ ರಾಮಂ ವನಂ ಗಮಯತಿ' ಎಂಬಲ್ಲಿ ದಶರಥನ ವ್ಯಾಪಾರದಲ್ಲಿ ಕರ್ಮನಾಗಿದ್ದಾನೋ. ಅದರಂತೆ 'ಆಗ್ನೇಯೋऽಷ್ಟಾಕಪಾಲೋ ಭವತಿ' ಎಂಬಲ್ಲಿ ಭವನದಲ್ಲಿ ಕರ್ತೃವಾದ ಅಷ್ಟಾಕಪಾಲವೇ 'ಯಜಮಾನಃ ಆಗ್ನೇಯಾऽಷ್ಟಾಕಪಾಲಂ ಭಾವಯತಿ' ಎಂಬಲ್ಲಿರುವ ಯಜಮಾನನ ವ್ಯಾಪಾರದಲ್ಲಿ ಕರ್ಮವಾಗಬೇಕು. (ಅಷ್ಟಾಕಪಾಲವೆಂದರೆ ಅಷ್ಟಾಕಪಾಲಗಳಲ್ಲಿ ಬೇಯಿಸಿದ ಪುರೋಡಾಶ) ಕರ್ಮವಾಗಬೇಕೆಂದರೆ ಭಾವ್ಯವಾಗಬೇಕೆಂದರ್ಥ. ಅಥವಾ ಯಾಗವೂ ಕರ್ಮವಾಗಬಹುದು. ಆದ್ದರಿಂದ ಭವನದಿಂದ ಆಕ್ಷಿಪ್ತವಾದ ಭಾವನಾದಲ್ಲಿ ಅಷ್ಟಾಕಪಾಲವಾಗಲೀ ಯಾಗವಾಗಲೀ ಅನ್ವಯ ಹೊಂದಬೇಕು. ಆದರೆ ಎರಡೂ ಕೂಡ ಅಪುರುಷಾರ್ಥಗಳಾಗಿವೆ. ಭಾವನಾದಲ್ಲಿ ಅನ್ವಯ ಹೊಂದುವಂತಹದ್ದು ಪುರುಷಾರ್ಥರೂಪವಾಗಿರಬೇಕು. ಇಂತಹ ಅಪುರುಷಾರ್ಥರೂಪವಾದ ಯಾಗ ಅಥವಾ ಪುರೋಡಾಶದಿಂದ ಅನ್ವಯ ಹೊಂದಿದ ಭಾವನಾವು ವಿಧಿಯಲ್ಲಿ ಅನ್ವಯ ಹೊಂದಲು ಸಾಧ್ಯವೇ ಇಲ್ಲ. ಆದ್ದರಿಂದ 'ಆಗ್ನೇಯೋ' ಇತ್ಯಾದಿ ಸ್ಥಳದಲ್ಲಿಯೂ ಕೂಡ ಭಾವನಾ ಆಕ್ಷಿಪ್ತವಾಗಿದ್ದರೂ ಅದಕ್ಕೆ ವಿಧ್ಯನ್ವಯವಿಲ್ಲ. ಇದನ್ನೇ ದೃಷ್ಟಾಂತವನ್ನಾಗಿಟ್ಟುಕೊಂಡು ಆಕ್ಷಿಪ್ತಭಾವನಾಕ್ಕೆ ಶ್ರುತವಾದ ವಿಧಿಯಲ್ಲಿ ಅನ್ವಯವಿದೆಯೆಂದು ನಿಮಗೆ ಸಮರ್ಥಿಸಲಾಗದು. ಹಾಗಾಗಿ ನೀವು ನೀಡಿದ ಎರಡೂ ದೃಷ್ಟಾಂತಗಳು ವಿಷಮಗಳಾಗಿವೆ.

ಸಮಾಧಾನ :- 'ಸೌರ್ಯಂ ಚರುಂ' ಎಂಬ ಮೊದಲನೆಯ ದೃಷ್ಟಾಂತ ಕೊಟ್ಟದ್ದು ಭಾಮತಿಯ ಪ್ರಕಾರ. ಭಾಮತಿಯ ಮಾತು ಹೀಗಿದೆ - 'ಶ್ರುತವಾದ ವಿಧಿ ಭಾವನಾದಲ್ಲಿ ಮಾತ್ರ ಅನ್ವಯ ಹೊಂದುತ್ತದೆ

ವಿಶೇಷಣಗಳಲ್ಲಿ ಆಕ್ಷಿಪ್ತವಿಧಿ ಅನ್ವಯ ಹೊಂದುತ್ತದೆಂದು ಆಕ್ಷೇಪಿಸಲಾಗಿತ್ತು. ಆದರೆ ಇದು ತಪ್ಪು. ಶ್ರುತವಾದ ವಿಧಿಯೇ ವಿಶೇಷಣಗಳಲ್ಲೂ ಅನ್ವಯ ಹೊಂದುತ್ತದೆ. ಆ ವಿಶೇಷಣಗಳನ್ನು ಶ್ರುತವಿಧಿವಿಧೇಯವೆಂದೇ ಹೇಳಬೇಕು. ಆಕ್ಷಿಪ್ತವಿಧಿವಿಧೇಯವೆಂದು ಹೇಳಬಾರದು. ಹಾಗೆ ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ. ಆಕ್ಷಿಪ್ತವಿಧಿವಿಧೇಯವೆಂದು ಸಿದ್ಧವಾದರೆ ವಿಶೇಷಣವಿಧಿ ಸಿದ್ಧವಾಗುತ್ತದೆ. ವಿಶೇಷಣಗಳ ವಿಧಿ ಸಿದ್ಧವಾದರೆ ವಿಶಿಷ್ಟಗಳ ವಿಧಿ ಸಿದ್ಧವಾಗುತ್ತದೆ. ವಿಶಿಷ್ಟವಿಧಿ ಸಿದ್ಧವಾದರೆ ವಿಶೇಷಣವಿಧಿಯ ಆಕ್ಷೇಪ ಸಿದ್ಧವಾಗುತ್ತದೆ. ಈ ಅನ್ಯೋನ್ಯಾಶ್ರಯವನ್ನು ತಪ್ಪಿಸಲು ಶ್ರುತವಾದ ವಿಧಿಯೇ ವಿಶೇಷಣಗಳಲ್ಲೂ ಅನ್ವಯ ಹೊಂದುತ್ತದೆಂದು ಒಪ್ಪಬೇಕು. ಇಷ್ಟು ಭಾಮತಿಯಲ್ಲಿ ಹೇಳಿದ ವಿಚಾರ. ಭಾಮತಿಯ ಪ್ರಕಾರ ಮೊದಲನೆಯ ಪಕ್ಷದಲ್ಲಿ ದೋಷವಿಲ್ಲ.

ರಾಣಕಗ್ರಂಥದಲ್ಲಿ ಹೇಳಿದಂತೆಯೂ ಅನ್ಯೋನ್ಯಾಶ್ರಯ ಪರಿಹರಿಸಬಹುದು. ಭಾವನಾವಿಶೇಷಣವಾದ ಯಾಗವು ಶ್ರುತವಿಧಿವಿಧೇಯವಲ್ಲ. ಆಕ್ಷಿಪ್ತವಿಧಿವಿಧೇಯವೆಂದಿಟ್ಟುಕೊಂಡರೂ ಗ್ರಂಥಕಾರರು ಹೇಳಿದ್ದನ್ನು ಕೂಡಿಸಬಹುದು. ಗ್ರಂಥಕಾರರು 'ವಿಧಿಪ್ರತ್ಯಯಾನ್ವಯದರ್ಶನಾತ್' ಎಂದು ಹೇಳಿದ್ದಾರೆ. ಇದಕ್ಕೆ ಹೀಗರ್ಥ. 'ನಿರ್ವಪೇತ್' ಎಂಬಲ್ಲಿರುವ ವಿಧಿಪ್ರತ್ಯಯಕ್ಕೆ ಭಾವನಾ ಎಂದರ್ಥ. ಈ ಭಾವನಾವು ವಿಧಿಯಿಂದ ಅವರುದ್ಧವಾಗಿದೆ. (ಕೂಡಿದೆ) ಅಂತಹ ಭಾವನಾದಲ್ಲಿ ಯಾಗವು ಅವಚ್ಛೇದಕತ್ವೇನ (ವಿಶೇಷಣವಾಗಿ) ಅನ್ವಯ ಹೊಂದಿದೆ. ಆದ್ದರಿಂದ 'ವಿಧಿಪ್ರತ್ಯಯಾನ್ವಯದರ್ಶನಾತ್' ಎಂಬ ಮಾತಿಗೆ ವಿಧಿಪ್ರತ್ಯಯದ ಅರ್ಥವಾಗಿರುವ ಭಾವನಾದಲ್ಲಿ ಯಾಗವು ಅವಚ್ಛೇದಕತ್ವೇನ ಅನ್ವಯ ಹೊಂದಿದೆ ಎಂದರ್ಥ. ಒಟ್ಟು ಆಕ್ಷಿಪ್ತಕ್ಕೆ ಒಂದು ಶ್ರುತವಾದದ್ದರ ಜೊತೆ ಅನ್ವಯ ಬೇಕು. ಶ್ರುತವಾದ ವಿಧಿಯ ಜೊತೆಗೆ ಅನ್ವಯ ಬೇಕೆಂದೇನು ಇಲ್ಲ. ಶ್ರುತವಿಧಿವಿಧೇಯತ್ವ ಬಂದರೂ ತೊಂದರೆಯಿಲ್ಲ, ಆಕ್ಷಿಪ್ತವಿಧಿವಿಧೇಯತ್ವ ಬಂದರೂ ತೊಂದರೆಯಿಲ್ಲ. ಇಂತಹ ಅನ್ವಯವನ್ನು 'ಸೌರ್ಯಂ ಚರುಂ ನಿರ್ವಪೇತ್' ಎಂಬಲ್ಲಿ ಮೀಮಾಂಸಕರು ಅಂಗೀಕರಿಸಿದ್ದಾರೆ. 'ನಿರ್ವಪೇತ್' ಎಂಬಲ್ಲಿರುವ ಲಿಙ್ ಪ್ರತ್ಯಯದ ಅರ್ಥಭೂತವಾದ ಭಾವನಾಕ್ಕೆ ಯಾವ ಧಾತ್ವರ್ಥದಿಂದಲೂ ಅವಚ್ಛೇದಕತ್ವ ಹೇಳದಿದ್ದರೆ ವಿಧ್ಯನ್ವಯ ಮಾಡಲಾಗದು. ಆದ್ದರಿಂದ ಯಾವುದಾದರೂ ಒಂದು ಅವಚ್ಛೇದಕತ್ವವನ್ನು ಹೇಳಲೇಬೇಕು. ಸಮಾನಪದೋಪಾತ್ತವಾದ ನಿರ್ವಾಪದ ಅನ್ವಯ ಹೇಳಲು ಬರುವಾಗ ದೇವತೆಯ ಅನ್ವಯ ಕೂಡುವುದಿಲ್ಲ. ದೇವತಾವಾಚಿಯಾದ ಸೌರ್ಯಪದ ವ್ಯರ್ಥವಾಗುತ್ತದೆ. ಎಲ್ಲೆಡೆ ಸಾಕಾಂಕ್ಷಿತಪದವಷ್ಟೇ ಸಾರ್ಥಕವಾಗುತ್ತದೆ. ನಿರಾಕಾಂಕ್ಷಿತವಾದ ಪದವು ವ್ಯರ್ಥವಾಗುತ್ತದೆ. ಆದ್ದರಿಂದ ದೇವಾತಾವಾಚಿಯಾದ ಪದವು ಸಾರ್ಥಕವಾಗಬೇಕೆಂದರೆ ದ್ರವ್ಯದೇವತಾಸಂಬಂಧದಿಂದ ಆಕ್ಷಿಪ್ತವಾದ ಯಾಗವೇ ಅವಚ್ಛೇದಕತ್ವೇನ ಅನ್ವಯ ಹೊಂದಬೇಕು. ಹಾಗಾಗಿ ಯಾಗದಿಂದ ಅವಚ್ಛಿನ್ನವಾದ (ವಿಶಿಷ್ಟವಾದ) ಭಾವನಾವು ಶ್ರುತವಾದ ವಿಧಿಯಿಂದ ವಿಧೇಯವಾಯಿತು. ಆಕ್ಷಿಪ್ತವಾದ ವಿಧಿಯಿಂದ ಯಾಗವು ವಿಧೇಯವಾಯಿತು. ಆಕ್ಷಿಪ್ತಕ್ಕೆ ಶ್ರುತವಾದ ವಿಧಿಯಿಂದ ಅನ್ವಯವು ಕಥಂಚಿತ್ ಬಂದಿತು. ಈ ನಿಟ್ಟಿನಿಂದ ವಿಚಾರ ಮಾಡಿದಾಗ ಗ್ರಂಥಕಾರರು ಹೇಳಿದ ಮಾತು ಸಮಂಜಸವಾಗುತ್ತದೆ.

ಇನ್ನು ಎರಡನೆಯ ಉದಾಹರಣೆಯೂ ಸಮಂಜಸವಾಗಿದೆ. 'ಯದಾಗ್ನೇಯೋ' ಎಂಬಲ್ಲಿ ಯಾಗವನ್ನೇ ಭಾವ್ಯವೆಂದು ಹೇಳುತ್ತೇವೆ. ಯಾಗ ಅಪುರುಷಾರ್ಥರೂಪವಾಗಿದೆಯೆಂದು ಹೇಳಿದರೆ ಯಾಗಭಾವನಾವು

ಫಲಭಾವನಾದಿಂದ ಆಕ್ಷಿಪ್ತವಾಗಿದೆ. ಇಲ್ಲಿ ಸ್ವರ್ಗಾದಿಪದಗಳಿಲ್ಲದ ಕಾರಣ ಫಲಭಾವನಾ ಹೇಗೆ ಬಂತು? ಎಂದರೆ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯದಲ್ಲಿ ವಿಹಿತವಾದ ಕೃತ್ಸ್ನಸ್ವಾಧ್ಯಾಯದ ವಿಧಿಪ್ರಯೋಜನ ಸ್ವರ್ಗವೇ ಆಗಿದೆ. ವೇದದಲ್ಲಿ ಯಾವುದೇ ಭಾವನಾವನ್ನು ವಿಧಾನ ಮಾಡಿದರೂ ಆ ಭಾವನಾಕ್ಕೆ ಸ್ವರ್ಗವೇ ಪ್ರಯೋಜನ. ಆ ವೇದವಾಕ್ಯಗಳ ಮಧ್ಯದಲ್ಲೇ ಈ ವಾಕ್ಯವೂ ಇರುವುದರಿಂದ ಈ ವಾಕ್ಯಕ್ಕೂ ಸ್ವರ್ಗಭಾವನಾವೇ ಫಲ. ಈ ಫಲಭಾವನಾದಿಂದ ಯಾಗಭಾವನಾವು ಆಕ್ಷಿಪ್ತವಾಗಿದೆ. ಈ ಯಾಗಭಾವನಾವು 'ಭವತಿ' ಎಂಬಲ್ಲಿರುವ ಲೇಟ್‌ಲಕಾರವೆಂಬ ವಿಧಿಪ್ರತ್ಯಯದ ಅರ್ಥವಾಗಿರುವ ಪ್ರವರ್ತನಾತ್ಮಕ ವಿಧಿಯಲ್ಲಿ ಅನ್ವಯ ಹೊಂದುತ್ತದೆ. ಆದ್ದರಿಂದ ಎರಡನೆಯ ದೃಷ್ಟಾಂತವೂ ವಿಷಯವಾಗಿಲ್ಲ. ಇಷ್ಟು ಸಾಕು. ಇದು ಕೇವಲ ದಿಕ್‌ಪ್ರದರ್ಶನ. ಇನ್ನೂ ಸೂಕ್ಷ್ಮವಿಚಾರ ಬಹಳವಿದೆ.

ಆರಂಭ ಎಂಬರ್ಥವನ್ನು ಅಥ ಶಬ್ದಕ್ಕೆ ಹೇಳಿದರೆ ಅಧಿಕಾರಿಯಲ್ಲಿರಬೇಕಾದ ಅರ್ಹತೆಗಳನ್ನು ಹೇಳ-ದಂತಾಗುವುದಿಲ್ಲ.

ಕೆಲವರ ಆಕ್ಷೇಪ - 'ಆರಂಭ' ಎಂಬರ್ಥವನ್ನು ಹೇಳಿದರೂ ಅಧಿಕಾರಿಯಲ್ಲಿರಬೇಕಾದ ಅರ್ಹತೆಗಳನ್ನು ಹೇಳಿದಂತಾಗುತ್ತದೆ.

**"ತ್ವಾಮಸ್ಮಿ ವಚ್ಮಿ ವಿದುಷಾಂ ಸಮವಾಯೋಽತ್ರ ತಿಷ್ಠತಿ ।**
**ಆತ್ಮೀಯಾಂ ಮತಿಮಾಸ್ಥಾಯ ಸ್ಥಿತಿಮತ್ರ ವಿಧೇಹಿ ತತ್ ॥ (ಕಾವ್ಯಪ್ರಕಾಶ, ೪ ಉಲ್ಲಾಸ)**

'ನಾನು ನಿನಗೆ ಹೇಳುತ್ತಿದ್ದೇನೆ. ನಿನ್ನ ಮುಂದೆ ವಿದ್ವಾಂಸರ ಸಮೂಹವೇ ನಿಂತಿದೆ. ನಿನ್ನ ಸಹಜ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಂಡು ಈ ವಿಷಯದಲ್ಲಿ ಮುಂದುವರಿ' ಎಂಬಲ್ಲಿ 'ಅವಶ್ಯ ನೆನಪಿಟ್ಟುಕೊ' ಎಂಬ ಅಭಿಪ್ರಾಯವನ್ನು ಸೂಚನೆ ಮಾಡುವುದಕ್ಕಾಗಿ 'ತ್ವಾಮಸ್ಮಿ ವಚ್ಮಿ' ಎಂದು ಆಲಂಕಾರಿಕರು ಹೇಳುತ್ತಾರೆ. ಇಲ್ಲಿ 'ನಿನಗೆ ಹೇಳುತ್ತಿದ್ದೇನೆ' ಎಂಬ ಮಾತಿನಿಂದಲೇ ಹೇಗೆ ಅವಶ್ಯ ಕರ್ತವ್ಯತ್ವವು ತಿಳಿಯುತ್ತಿದೆಯೋ, ಹಾಗೆಯೇ ಪ್ರಕೃತದಲ್ಲಿ 'ಆರಂಭ ಮಾಡುತ್ತಿದ್ದೇನೆ' ಎಂದು ಹೇಳು-ವುದರಿಂದಲೇ ಜಿಜ್ಞಾಸುವಿನಲ್ಲಿರಬೇಕಾದ ಅರ್ಹತೆಯೂ ಶಿಷ್ಯರಲ್ಲಿ ಇದೆಯೆಂದು ಸೂಚಿಸಿದಂತಾಗುತ್ತದೆ. ಆದ್ದರಿಂದ 'ಅಥ' ಶಬ್ದಕ್ಕೆ 'ಆರಂಭ' ಎಂಬರ್ಥವನ್ನು ಹೇಳಬಹುದು. ಯಾವುದೇ ಬಾಧಕವಿಲ್ಲ.

ಸಮಾಧಾನ - 'ಅಥ' ಶಬ್ದಕ್ಕೆ ಅನಂತರ ಎಂಬ ಅರ್ಥವನ್ನು ಹೇಳಿದರೆ ಅರ್ಹತೆಗಳನ್ನು ಶ್ರುತಿಸ್ಮೃತಿಯಲ್ಲಿ ಹೇಳಿದಂತೆ ಸ್ಪಷ್ಟವಾಗಿ ಹೇಳಿದಂತಾಗುತ್ತದೆ. ಆದರೆ 'ಆರಂಭ' ಎಂಬ ಅರ್ಥವನ್ನು ಇಟ್ಟುಕೊಂಡರೆ ಸ್ಪಷ್ಟವಾಗಿ ಅರ್ಹತೆಯನ್ನು ಹೇಳಿದಂತಾಗುವುದಿಲ್ಲ. ಅಸ್ಪಷ್ಟವಾಗಿ ಹೇಳಿದಂತಾಗುತ್ತದೆ. ಸ್ಪಷ್ಟವಾಗಿ ಹೇಳಲು ಬರುವಾಗ ಅಸ್ಪಷ್ಟವಾಗಿ ಹೇಳುವ ಪಕ್ಷವನ್ನು ಆದರಿಸಬಾರದು.

ಮತ್ತು 'ಆನಂತರ್ಯೇಽಧಿಕಾರಸ್ಯ' ಎಂಬ ಸ್ಮೃತಿಯು "ಅರ್ಹತೆಯನ್ನು ಪಡೆದ ಅನಂತರ" ಎಂಬ ಅರ್ಥವನ್ನು ಅಥ ಶಬ್ದಕ್ಕೆ ಹೇಳಬೇಕೆಂದು ಹೇಳುತ್ತಿದೆ. ಪ್ರಾರಂಭ ಎಂಬ ಅರ್ಥವನ್ನೂ ಇಟ್ಟುಕೊಂಡರೆ ಈ ಸ್ಮೃತಿಯನ್ನೂ ಕಡೆಗಾಣಿಸಿದಂತಾಗುತ್ತದೆ.

*ಪರಿಪೂರ್ಣಚಂದ್ರಿಕಾ*

## 'ಅಥ' ಶಬ್ದದ ಶ್ರವಣವೇ ಪರಮ ಮಂಗಳ

**तात्पर्यचन्द्रिका –**

**मङ्गलप्रत्यायकत्वं तु अथशब्दस्य, 'अथ' इत्यनेन मङ्गलस्याप्रतीतेरधिकार्यासूचनापातात्, "तस्मान्माङ्गलिकावुभौ" इति स्मृतावोङ्कारायशब्दयोः मङ्गलफलकत्वोक्तेश्चायुक्तम् ।**

ಅನುವಾದ - ಮಂಗಳವು 'ಅಥ' ಶಬ್ದದ ಉಚ್ಚಾರಣೆಯಿಂದ ಆಗುವ ಪ್ರಯೋಜನವೇ ಹೊರತು ಶಕ್ತಿಯಿಂದ ಅಥವಾ ಲಕ್ಷಣಾದಿಂದ ತಿಳಿಯುವಂತಹದ್ದಲ್ಲ. ಅಥ ಶಬ್ದದಿಂದ ಮಂಗಳವು ವಿವಕ್ಷಿತವೂ ಅಲ್ಲ. ವಿವಕ್ಷೆ ಮಾಡಿದರೆ ಅಧಿಕಾರಾದಿಗಳ ಬಗ್ಗೆ ಸೂತ್ರದಲ್ಲಿ ಸೂಚನೆ ಮಾಡಿದಂತೆ ಆಗುವುದಿಲ್ಲ. ಮತ್ತು 'ತಸ್ಮಾನ್ಮಾಂಗಲಿಕಾವುಭೌ' ಎಂಬ ಸ್ಮೃತಿಯಲ್ಲಿ ಓಂಕಾರ ಮತ್ತು ಅಥ ಶಬ್ದಗಳು ಮಂಗಳವೇ ಪ್ರಯೋಜನವಾಗಿ ಉಳ್ಳವುಗಳು ಎಂದು ಹೇಳಿರುವುದರಿಂದ ಅಥ ಶಬ್ದವು ಮಂಗಳಾರ್ಥಕವಾಗಿಲ್ಲ.

**प्रकाशः – नन्वारम्भार्थत्वासम्भवेऽपि मङ्गलार्थकत्वं स्यादित्याशङ्क्य निरस्यति ।। मङ्गलेति ।। 'अयुक्तम्' इत्यन्वयः । प्रयोगप्रत्ययाभ्यां हि शब्दार्थयोः सम्बन्धः । नचाथशब्दोच्चारणे शक्त्या लक्षणया वा मङ्गलं प्रतीयते । येन तत्प्रत्यायकत्वमथशब्दस्य स्यादित्यर्थः ।। तस्मादिति ।।**

**"ओङ्कारश्चाथशब्दश्च द्वावेतौ ब्रह्मणः पुरा ।**
**कण्ठं भित्त्वा विनिर्यातौ तस्मान्माङ्गलिकावुभौ"**

**इति स्मृतौ प्रयोजनार्थकठञ्प्रत्ययान्तप्रयोगेण मङ्गलफलकत्वोक्तेरित्यर्थः ।**

ವಿವರಣೆ - 'ಅಥ' ಶಬ್ದಕ್ಕೆ ಆರಂಭ ಎಂಬರ್ಥವು ಕೂಡದೇ ಇದ್ದರೂ 'ಮಂಗಲ' ಎಂಬರ್ಥವನ್ನು ಹೇಳಬಹುದೆ ಎಂದು ಆಶಂಕಿಸಿ ಉತ್ತರವನ್ನು ನೀಡುತ್ತಿದ್ದಾರೆ.

'ಅಥ' ಶಬ್ದಕ್ಕೆ ಮಂಗಳ ಎಂಬರ್ಥವು ಸಿಗಲಾರದು. ಏಕೆಂದರೆ ಶಬ್ದದ ಪ್ರಯೋಗ ಮತ್ತು ಶಬ್ದದಿಂದ ಉಂಟಾಗುವ ಅರ್ಥಪ್ರತೀತಿಯಿಂದಷ್ಟೇ ಶಬ್ದಕ್ಕೆ ಅರ್ಥನಿರ್ಣಯವು ಆಗುತ್ತದೆ. ಪ್ರಕೃತ 'ಅಥ' ಶಬ್ದಕ್ಕೆ ಶಕ್ತಿವೃತ್ತಿಯಿಂದಾಗಲೀ ಲಕ್ಷಣಾವೃತ್ತಿಯಿಂದಾಗಲೀ 'ಮಂಗಳ' ಎಂಬರ್ಥವು ತಿಳಿಯುತ್ತಿಲ್ಲ. ಹಾಗೆ ತಿಳಿದಿದ್ದರೆ 'ಅಥ' ಶಬ್ದಕ್ಕೆ ಮಂಗಳ ಎಂಬರ್ಥವನ್ನು ಹೇಳಬಹುದಿತ್ತು. ಮತ್ತು 'ಅಥ' ಶಬ್ದದಿಂದ ಮಂಗಳವು ಸೂಚಿತವಾಗುತ್ತಿದೆಂದು ಹೇಳಿದರೆ ಅಧಿಕಾರಾದಿಗಳು ಸೂಚಿತವಾಗದೆ ಇರಬೇಕಾದೀತು.

ಆದ್ದರಿಂದ 'ಅಥ' ಶಬ್ದವನ್ನು ಕೇಳಿದ ಮಾತ್ರದಿಂದ ಮಂಗಳವು ಉಂಟಾಗುತ್ತದೆಂದು ಮಂಗಳವೇ ಪ್ರಯೋಜನವಾಗಿದೆಯೆಂದು ಹೇಳಬೇಕು. ಹೊರತು ಮಂಗಳ ಎಂಬ ಅರ್ಥವುಳ್ಳದ್ದೆಂದು ಅಥವಾ ವಿವಕ್ಷಿತವಾದ ಮಂಗಳವುಳ್ಳದ್ದೆಂದು ಹೇಳುವುದು ತಪ್ಪು. ಮಂಗಳವೇ ಪ್ರಯೋಜನವಾಗಿ ಉಳ್ಳದೆಂದು ಸ್ಮೃತಿಯು ಹೇಳುತ್ತಿದೆ.

> ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।
> ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥

ಓಂಕಾರ ಮತ್ತು ಅಥ ಶಬ್ದಗಳೆರಡು ಮೊದಲು ಬ್ರಹ್ಮನ ಕಂಠದಿಂದ ಹೊರಹೊಮ್ಮಿದವುಗಳು. ಆದ್ದರಿಂದ ಎರಡೂ ಶಬ್ದಗಳು ಮಾಂಗಲಿಕಗಳಾಗಿವೆ.

ಈ ಸ್ಮೃತಿಯಲ್ಲಿ ಓಂಕಾರ ಮತ್ತು ಅಥ ಶಬ್ದಗಳು ಮಂಗಳವೆಂಬ ಪ್ರಯೋಜನವುಳ್ಳವುಗಳೆಂದು 'ಮಾಂಗಲಿಕ' ಎಂಬಲ್ಲಿರುವ 'ಠಕ್' ಪ್ರತ್ಯಯದಿಂದ ತಿಳಿಯುತ್ತಿದೆ. ಏಕೆಂದರೆ 'ಠಕ್' ಪ್ರತ್ಯಯವು ಪ್ರಯೋಜನ ಎಂಬರ್ಥದಲ್ಲಿಯೇ ಬರುತ್ತದೆ. ಹೀಗೆ ನಮ್ಮ ಸಿದ್ಧಾಂತದ ಪ್ರಕಾರ 'ಅಥ' ಶಬ್ದಕ್ಕೆ ಮಂಗಳ ಎಂಬ ಪ್ರಯೋಜನವನ್ನು ಸಮರ್ಥಿಸಿದ್ದಾಯಿತು.

## ಸಾರ

ಭಾಮತೀಮತದಲ್ಲಿ 'ಬ್ರಹ್ಮಜಿಜ್ಞಾಸೆ ಅಂದರೆ ಬ್ರಹ್ಮಜ್ಞಾನೇಚ್ಛೆ ಉಂಟಾಗುವುದು ಯುಕ್ತ' ಎಂದು ಸೂತ್ರಾರ್ಥ. ವಿಚಾರ ತಾತ್ಪರ್ಯಾರ್ಥ. ಇದರ ಅನ್ವಯಕ್ಕಾಗಿ 'ಕರ್ತವ್ಯಾ' ಎಂಬ ಪದದ ಅಧ್ಯಾಹಾರ ಎನ್ನುತ್ತಾರೆ ಆದರೆ ವಿಚಾರಕ್ಕೆ ಅಧ್ಯಾಹೃತ ಕರ್ತವ್ಯ ಪದಾನ್ವಯ ಹೇಳುವುದಾದರೆ ಅದಕ್ಕೆ ಸೂತ್ರದಲ್ಲಿ ಮೊದಲೆ ಇರುವ ಆರಂಭಾರ್ಥದ ಅಥಪದದಿಂದ ಅನ್ವಯ ಏಕೆ ಹೇಳಬಾರದು? ತಾತ್ಪರ್ಯಾರ್ಥಕ್ಕೆ ಅಧ್ಯಾಹೃತದೊಂದಿಗೇ ಅನ್ವಯವೆಂದು ನಿಯಮ ಉಂಟೆ? 'ಸೌರ್ಯಚರು ನಿರ್ವಾಪ ಮಾಡಬೇಕು' ಎಂಬಲ್ಲಿ ತಾತ್ಪರ್ಯಾರ್ಥವಾದ ಯಾಗಕ್ಕೆ ಪ್ರತ್ಯಕ್ಷವಿಧಿಯ ಅನ್ವಯವಿದೆ. ಅಂದರೆ ವಿಧಿಪ್ರತ್ಯಯ ಹೇಳುವ ಪ್ರಯತ್ನಕ್ಕೆ ವಿಶೇಷಣವಾಗಿ ಯಾಗದ ಅನ್ವಯವಿದೆ. ಪ್ರಯತ್ನ ಮಾಡು ಎಂದು ಮಾತ್ರ ವಿಧಿಸಲಾಗುವುದಿಲ್ಲ. ಯಾವುದರ ಪ್ರಯತ್ನ ಎಂದು ಹೇಳಬೇಕು ತಾನೆ? ದ್ರವ್ಯ ದೇವತೆಗಳ ಬಲದಿಂದ ಊಹಿಸಿದ ಯಾಗವನ್ನು ವಿಶೇಷಣವಾಗಿ ಅನ್ವಯಿಸಬೇಕು.

ಅದರಿಂದ ಅಥ ಶಬ್ದಕ್ಕೆ ಆರಂಭಾರ್ಥತ್ವವನ್ನು ಹೇಳಿದರೆ ಅನ್ವಯ ಕ್ಲೇಶವಿಲ್ಲ. ಅದರೂ ಆರಂಭಿಸುತ್ತೇವೆ ಎಂದು ಹೇಳದೆ ಆರಂಭಿಸಿದರೂ ಆರಂಭವಾಗುವುದನ್ನು ತಿಳಿಯುವುದು ಕಷ್ಟವೇನಲ್ಲ ಅದರಿಂದ ಹೇಳಬೇಕಾಗಿಲ್ಲ ಎನ್ನಬೇಕು. ಮತ್ತು ಅಧಿಕಾರಾದಿಗಳನ್ನು ಅವಶ್ಯ ಹೇಳಬೇಕಾಗಿದೆ. ಹೇಳಲು ಬೇರೆ ಶಬ್ದವಿಲ್ಲ. ಅಥ ಶಬ್ದ ಹೇಳಬಲ್ಲುದು ಅದರಿಂದ ಅಥ ಶಬ್ದಕ್ಕೆ 'ಅಧಿಕಾರ ಪ್ರಾಪ್ತಿಯಾದ ಅನಂತರ' ಎಂದೇ ಅರ್ಥ.

• • • • •

ಅಥ ಶಬ್ದವು ಮಂಗಳಾರ್ಥಕವಲ್ಲ
(ಅದ್ವೈತಭಾಷ್ಯ ವಿಮರ್ಶೆ)

तात्पर्यचन्द्रिका –

अन्येषां भाष्ये तु "मङ्गलस्य च वाक्यार्थे समन्वयाभावात्" इत्युक्तम्[१]। तन्न । अपदार्थत्वहेतौ समन्वयाभावे, भामत्यां "पदार्थ एव हि वाक्यार्थे समन्वीयते । स च वाच्यो लक्ष्यो वा । नचेह मङ्गलमथशब्दस्य वाच्यं लक्ष्यं वा" इत्युक्तस्यापदार्थत्वस्य हेतुत्वे अन्योन्याश्रयापातात् । नापि "न तावज्जिज्ञासायां मङ्गलं कर्त्रादिभावेन वैयधिकरण्येनान्वेति । कर्त्रादिभावे मानाभावात् । कर्त्रायन्तर-भावाच्च । नापि सामानाधिकरण्येन । जिज्ञासा मङ्गलमित्यर्थवादत्वप्रसङ्गात्" इति विवरणोक्तो हेतुः । 'सधूमो गिरिः साग्निकः' इतिवत् "ईक्षतेर्नाशब्दम्" इत्यत्र त्वत्पक्षे 'अशब्दम्' इतिवच्च मङ्गलत्वात् कर्तव्येति हेतुत्वेनान्वयोपपत्तेः । एतेन – ब्रह्मजिज्ञासायां मङ्गलत्वं प्रसिद्धतरत्वान्न वक्तव्यमिति निरस्तम् । प्रसिद्धस्यैव हेतूकर्तव्यत्वात् ।

---

(१)शङ्करभाष्यम् – मङ्गलस्य च वाक्यार्थे समन्वयाभावात् । अर्थान्तरप्रयुक्त एव ह्यथशब्दः श्रुत्या मङ्गलप्रयोजनो भवति ।

भामती – अथ मङ्गलार्थोऽथशब्दः कस्मान्न भवति । तथा च मङ्गलहेतुत्वात् प्रत्यहं ब्रह्मजिज्ञासा कर्तव्येति सूत्रार्थः संपद्यत इत्यत आह - मङ्गलस्य च वाक्यार्थे समन्वयाभावात् ।

पदार्थ एव हि वाक्यार्थे समन्वीयते, स च वाच्यो वा लक्ष्यो वा । न चेह मङ्गलमथशब्दस्य वाच्यं वा लक्ष्यं वा, किंतु मृदङ्गशङ्खध्वनिवदथशब्दश्रवणमात्रकार्यम् । न च कार्यज्ञाप्ययोर्वाक्यार्थे समन्वयः शब्दव्यवहारे दृष्ट इत्यर्थः । तत्किमिदानीं मङ्गलार्थोऽथ-शब्दस्तेषु तेषु न प्रयोक्तव्यः । तथा च 'ओंकारश्चाथशब्दश्च द्वावेतौ ब्रह्मणः पुरा । कण्ठं भित्त्वा विनिर्यातौ तस्मान्माङ्गलिकावुभौ ॥' इति स्मृतिव्याकोप इत्यत आह – अर्थान्तरप्रयुक्त एव ह्यथशब्दः श्रुत्यामङ्गलप्रयोजनो भवति । अर्थान्तरेष्वानन्तर्यादिषु प्रयुक्तोऽथशब्दः श्रुत्या श्रवणमात्रेण वेणुवीणाध्वनिवन्मङ्गलं कुर्वन्, मङ्गलप्रयोजनो भवति, अन्यार्थमानीयमानोदकुम्भदर्शनवत् । तेन न स्मृतिव्याकोपः । न चेहानन्तर्यार्थस्य सतो न श्रवणमात्रेण मङ्गलार्थतेत्यर्थः ।

ಅನುವಾದ - ಅದ್ವೈತಿಗಳ ಭಾಷ್ಯದಲ್ಲಿ ''ಅಥ ಶಬ್ದವು ಮಂಗಳಾರ್ಥಕವಲ್ಲ ಏಕೆಂದರೆ ಅದಕ್ಕೆ ವಾಕ್ಯಾರ್ಥದಲ್ಲಿ ಸಮನ್ವಯವಿಲ್ಲ'' ಎಂದು ಹೇಳಲಾಗಿದೆ ಇದು ತಪ್ಪು. ಮಂಗಳವು ಅಥಶಬ್ದಾರ್ಥವಲ್ಲ ಎನ್ನಲು ಸಮನ್ವಯಾಭಾವವನ್ನು ಹೇತುವನ್ನಾಗಿ ಹೇಳಿದ್ದಾರೆ. ಏಕೆ ಸಮನ್ವಯ ಆಗುವುದಿಲ್ಲ? ಎಂಬ ಪ್ರಶ್ನೆಗೆ ಭಾಮತಿಯಲ್ಲಿ ಹೀಗೆ ಉತ್ತರಿಸಲಾಗಿದೆ - ವಾಕ್ಯಾರ್ಥದಲ್ಲಿ ಪದಾರ್ಥವಾದದ್ದು ಮಾತ್ರ ಅನ್ವಯ ಹೊಂದುತ್ತದೆ. ಪದಾರ್ಥ ಎಂದರೆ ಪದದ ವಾಚ್ಯಾರ್ಥ ಅಥವಾ ಲಕ್ಷ್ಯಾರ್ಥ ಆಗಿರಬೇಕು. ಮಂಗಳವು ಅಥಶಬ್ದದ ವಾಚ್ಯಾರ್ಥವೂ ಆಗಿಲ್ಲ. ಲಕ್ಷ್ಯಾರ್ಥವೂ ಆಗಿಲ್ಲ. ಏಕೆಂದರೆ ''ವಾಚ್ಯಾರ್ಥದಲ್ಲಿ ಅದಕ್ಕೆ ಸಮನ್ವಯವಿಲ್ಲ'' ಎಂದು ಭಾಷ್ಯ ಹೇಳುತ್ತಿದೆ. ಆದ್ದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ.

ಸಮನ್ವಯ ಏಕಿಲ್ಲ?ಎಂಬ ಭಾಷ್ಯದ ಮೇಲಿರುವ ಪ್ರಶ್ನೆಗೆ ವಿವರಣಕಾರರ ಸಮಾಧಾನ ಹೀಗಿದೆ - ಮಂಗಳವು ಜಿಜ್ಞಾಸೆಗೆ ಕರ್ತೃ ಅಥವಾ ಕರ್ಮ ಆಗಿದೆ ಎನ್ನಲು ಪ್ರಮಾಣವಿಲ್ಲ. ಆದ್ದರಿಂದ ಭೇದಸಂಬಂಧದಿಂದ ಅನ್ವಯ ಹೇಳಿದರೆ ''ಜಿಜ್ಞಾಸೆಯೇ ಮಂಗಳ'' ಎಂದಂತಾಗುತ್ತದೆ. ಇದು ಕೇವಲ ಪ್ರಶಂಸೆಯಾಗುತ್ತದೆ ಎಂದು.

ಆದರೆ ಇದೂ ಸಹ ತಪ್ಪು. ''ವಿಚಾರವು ಮಂಗಳ'' ಎಂದು ಅಭೇದಸಂಬಂಧದಿಂದ ಅನ್ವಯ ಹೇಳಿದಾಗ ದೋಷವೇನೂ ಇಲ್ಲ. 'ಸಧೂಮೋ ಗಿರಿಃ ಸಾಗ್ನಿಕಃ' ''ಹೊಗೆಯುಳ್ಳ ಪರ್ವತವು ಬೆಂಕಿ ಉಳ್ಳದ್ದಾಗಿರಬೇಕು''. ಎಂಬಲ್ಲಿ ಅಭೇದ ತೋರಿದರೂ ಧೂಮ ಮತ್ತು ಅಗ್ನಿಗೆ ಕಾರ್ಯಕಾರಣಭಾವವೂ ತೋರುತ್ತಿದೆ. ಹಾಗೆಯೇ 'ಈಕ್ಷತೇರ್ನಾಶಬ್ದಂ' ಎಂಬ ಸೂತ್ರಕ್ಕೆ ವ್ಯಾಖ್ಯಾನಿಸುತ್ತಾ ಅದ್ವೈತಿಗಳು 'ಅಭೇದ ತೋರಿದರೂ ಶಬ್ದಬೋಧ್ಯವಲ್ಲದುದರಿಂದ' ಎಂದು ಕಾರ್ಯಕಾರಣಭಾವ ಹೇಳಿದ್ದಾರೆ. ಹಾಗೆಯೇ ಪ್ರಕೃತದಲ್ಲಿಯೂ ಮಂಗಳರೂಪವಾದುದರಿಂದ ವಿಚಾರವು ಕರ್ತವ್ಯ ಎಂದು ಹೇಳಬಹುದು.

'ಬ್ರಹ್ಮಜಿಜ್ಞಾಸೆಯು ಮಂಗಳಕರವೆಂಬುದು ಪ್ರಸಿದ್ಧವಾಗಿರುವುದರಿಂದ ಅದನ್ನು ಹೇಳಬೇಕಾಗಿಲ್ಲ'' ಎಂಬ ಆಕ್ಷೇಪವೂ ನಿರಸ್ತವಾಯಿತು. ಏಕೆಂದರೆ ಹೇತುವು ಯಾವತ್ತೂ ಪ್ರಸಿದ್ಧವೇ ಆಗಿರಬೇಕು ತಾನೇ !

**ಕಠಿಣಪದಾರ್ಥ**

ಅಪದಾರ್ಥತ್ವಹೇತೌ = ಪದಾರ್ಥವೇ ಅಲ್ಲವೆಂಬ ಹೇತುವಿನಲ್ಲಿ, ಕರ್ತ್ರಾದಿಭಾವೇನ = ಕರ್ತೃತ್ವಾದಿಗಳಿಂದ, ಸಧೂಮ = ಧೂಮದಿಂದ ಕೂಡಿದ್ದರಿಂದ.

**ಪ್ರಕಾಶः – स्वयं समाधायान्योक्तं निरस्यति ।। अन्येषामिति ।। भाष्योक्तसमन्वयाभावे व्याख्यातृद्वयोक्तं हेतुद्वयमपि क्रमेण निराह ।। अपदार्थत्वेति ।।**

भाष्ये हि **मङ्गलस्यापदार्थत्वं** साध्यं कृत्वा, वाक्यार्थे समन्वयाभावो हेतूकृतः । भामत्यां तु समन्वयाभावं साध्यं कृत्वा अपदार्थत्वं हेतूकृतम् । तथाच **हेतुसिद्धौ** साध्यसिद्धिः, साध्यसिद्धौ हेतुसिद्धिरित्यन्योन्याश्रय इत्यर्थः ।। नापीति ।। **'विवरणोक्तो हेतुः'** इत्यन्वयः ।। **कर्त्राद्यन्तरेति** ।। ''शान्तो दान्तः'' इत्यादिश्रुत्या शमादिमतोऽधिकारिणो ब्रह्मणश्च कर्मणः सत्त्वादित्यर्थः ।। **अर्थवादत्वेति** ।। तस्य **वैय्यर्थ्यादिति** भावः ।। **सधूम इति** ।। सधूमत्वादित्यर्थः ।। **ईक्षतेरिति** ।। प्रधानं न जगत्कारणम्, अशब्दं हि तत् कारणवाक्याप्रतिपाद्यत्वादित्यर्थोक्तेरिति भावः ।। **अन्वयेति** ।। जिज्ञासाकर्तव्यत्वे हेतुसमर्पकत्वेन मङ्गलस्यान्वयसम्भवादथशब्दार्थत्वं मङ्गलस्य स्यादेवेति । ''वाक्यार्थे समन्वयाभावात्'' इति भाष्योक्तो हेतुरसिद्ध इति भावः । अत एव भामत्यां 'मङ्गलहेतुत्वात् प्रत्यहं ब्रह्मजिज्ञासेति सूत्रार्थः सम्पद्यत' इत्युक्तम् ।

गुरुराजीय – **अन्योन्याश्रयादिति** ।। ननु मङ्गलस्याथशब्दवाच्यत्व लक्ष्यत्वयोरभावेनापदार्थत्वान्न वाक्यार्थे समन्वय इत्येव विवक्षितत्वान्नान्योन्याश्रय इति चेन्न । वाक्यार्थे समन्वयाभावादिति हेतुपरत्वेन भाष्योक्त्यस्वारस्यादिति भावः ।। **कर्त्रादिभावेनेति** ।। कर्तृत्वादिनेत्यर्थः । एवमुत्तरत्रापि द्रष्टव्यम् । ननु जिज्ञासायाः क्रियारूपत्वात् क्रियायाश्च कर्त्रादिसापेक्षत्वात् प्रकृते च कर्त्राद्यन्तराभावेन क्रियात्वान्यथानुपपत्त्यैव मङ्गलस्यैव कर्त्रादित्वं कल्पनीयमिति कथं मानाभावः? इत्यत आह ।। **कर्त्राद्यन्तरेति** ।। तथाचान्यथैवोपपत्त्या नान्यथानुपपत्तिर्मानमिति भावः । आकाङ्क्षाभावान्न कर्त्रादिभावेनान्वय इत्यभिप्रेत्य वाह ।। **कर्त्राद्यन्तरेति** ।। **जिज्ञासा मङ्गलमितीति** ।। जिज्ञासा मङ्गलमिति प्रशंसापरतयाऽर्थवादत्वप्रसङ्गादित्यर्थः । नचार्थवादताऽस्येयम् । सूत्रस्य वाक्यार्थनिर्णयापेक्षितन्यायसूचकत्वादित्यर्थः । विवरणोक्तहेतुरित्यस्य नापीति पूर्वेणान्वयः ।

**ವಿವರಣೆ** - ಈಗ ಅದ್ವೈತಿಗಳ ಮತವನ್ನು 'ಅನ್ಯೇಷಾಂ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ.

ಶಂಕರಭಾಷ್ಯದಲ್ಲಿ ''ಮಂಗಲಸ್ಯ ಚ ವಾಕ್ಯಾರ್ಥೇ ಸಮನ್ವಯಾಭಾವಾತ್'' ''ಅಥ ಶಬ್ದಕ್ಕೆ ಮಂಗಳವೆಂಬರ್ಥ ಹೇಳಿದರೆ ಸೂತ್ರಾರ್ಥದಲ್ಲಿ ಅನ್ವಯ ಹೇಳಲು ಬರುವುದಿಲ್ಲ'' ಎಂದು ಹೇಳಲಾಗಿದೆ.

ಮಂಗಲ ಎಂಬ ಪದಾರ್ಥಕ್ಕೆ ಸೂತ್ರಾರ್ಥದಲ್ಲಿ ಏಕೆ ಅನ್ವಯ ಮಾಡಲು ಬರುವುದಿಲ್ಲ? ಎಂಬ ಪ್ರಶ್ನೆಗೆ ಶಂಕರಭಾಷ್ಯದಲ್ಲಿ ಉತ್ತರ ನೀಡಿಲ್ಲ. ಆದರೆ ಭಾಮತಿ ಮತ್ತು ವಿವರಣದಲ್ಲಿ ಉತ್ತರಿಸಲಾಗಿದೆ. ಭಾಮತಿಯ ಪ್ರಕಾರ ಉತ್ತರ ಇಟ್ಟುಕೊಂಡರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - ಪದಾರ್ಥವಾದದ್ದು ಮಾತ್ರ ವಾಕ್ಯಾರ್ಥದಲ್ಲಿ ಅನ್ವಯ ಹೊಂದುತ್ತದೆ. ಮಂಗಳವು ಸೂತ್ರಾರ್ಥದಲ್ಲಿ ಅನ್ವಯ ಹೊಂದಬೇಕಾದರೆ ಪದಾರ್ಥವಾಗಬೇಕು. ಪದಾರ್ಥವಾಗಬೇಕಾದರೆ ವಾಚ್ಯಾರ್ಥ ಆಗಬೇಕು. ಅಥವಾ ಲಕ್ಷ್ಯಾರ್ಥ ಆಗಬೇಕು. ಆದರೆ ಮಂಗಳವು 'ಅಥ' ಶಬ್ದದ ವಾಚ್ಯಾರ್ಥವೂ ಅಲ್ಲ. ಲಕ್ಷ್ಯಾರ್ಥವೂ ಅಲ್ಲವೆಂದು ಶಂಕರಭಾಷ್ಯದಲ್ಲಿ ಮಂಗಲವು ಪದಾರ್ಥವಲ್ಲ ಎನ್ನಲು ಸಮನ್ವಯಾಭಾವವನ್ನು ಕಾರಣವನ್ನಾಗಿ ಹೇಳಿದ್ದಾರೆ. ಭಾಮತಿಯಲ್ಲಿ ಮಂಗಳವು ಸಮನ್ವಯವಾಗದಿರಲು ಪದಾರ್ಥವಲ್ಲವೆಂದು ಕಾರಣ ಹೇಳಲಾಗಿದೆ. ಆದ್ದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ. 'ಸಮನ್ವಯವಿಲ್ಲ' ಎಂಬ ಹೇತು ಸಿದ್ಧವಾದರೆ 'ಪದಾರ್ಥವಲ್ಲ' ಎಂಬ ಸಾಧ್ಯವು ಸಿದ್ಧವಾಗುತ್ತದೆ. 'ಪದಾರ್ಥವಲ್ಲ' ಎಂಬ ಸಾಧ್ಯವು ಸಿದ್ಧವಾದರೆ 'ಸಮನ್ವಯವಿಲ್ಲ' ಎಂಬ ಹೇತುವು ಸಿದ್ಧವಾಗುತ್ತದೆ. ಆದ್ದರಿಂದ ಭಾಮತಿ ನೀಡುವ ಸಮಾಧಾನವು ದುಷ್ಟವಾಗಿದೆ.

ವಿವರಣದ ಸಮಾಧಾನ ಹೀಗಿದೆ - ''ಅಥ'' ಶಬ್ದಕ್ಕೆ ಮಂಗಳವೆಂಬರ್ಥವನ್ನು ಹೇಳಬಾರದು. ಮಂಗಳವೆಂಬರ್ಥವನ್ನು ಹೇಳಿದರೆ ಅದಕ್ಕೆ ವಿಚಾರದಲ್ಲಿ ಅನ್ವಯ ಹೇಳಬೇಕು. ಆದರೆ ಅನ್ವಯ ಹೇಳಲು ಬರುವುದಿಲ್ಲವೆಂದು ಭಾಷ್ಯವು ಹೇಳುತ್ತಿದೆ. ಅನ್ವಯವು ಏಕೆ ಕೂಡುವುದಿಲ್ಲ? ಎಂದರೆ ಅನ್ವಯವನ್ನು ಭೇದಸಂಬಂಧದಿಂದ ಅಥವಾ ಅಭೇದ ಸಂಬಂಧದಿಂದ ಹೇಳಬೇಕು. ಭೇದಸಂಬಂಧ ಎಂದರೆ ಕರ್ತೃ ಅಥವಾ ಕರ್ಮ ಸಂಬಂಧ. ಮಂಗಳವು ವಿಚಾರಕ್ಕೆ ಕರ್ತೃವೂ ಆಗಿಲ್ಲ. ಕರ್ಮವೂ ಆಗಿಲ್ಲ. ಏಕೆಂದರೆ ಮಂಗಳವು ಕರ್ತೃ ಅಥವಾ ಕರ್ಮ ಎಂದು ಹೇಳಲು ಯಾವುದೇ ಪ್ರಮಾಣವೂ ಇಲ್ಲ. ಅಷ್ಟೇ ಅಲ್ಲ, ಶಮದಮಾದಿಗುಣಗಳುಳ್ಳ ಅಧಿಕಾರಿಯು ಕರ್ತೃ ಆಗಿದ್ದಾನೆ. ಬ್ರಹ್ಮನು ಕರ್ಮನಾಗಿದ್ದಾನೆ ಎಂದು 'ಶಾಂತೋ ದಾಂತಃ' ಇತ್ಯಾದಿ ಶ್ರುತಿಯು ಮಂಗಳಕ್ಕಿಂತ ಬೇರೆಯಾದದ್ದಕ್ಕೆ ಕರ್ತೃತ್ವ ಕರ್ಮತ್ವವನ್ನು ಹೇಳುತ್ತಿದೆ. ಆದ್ದರಿಂದ ಭೇದಸಂಬಂಧದಿಂದ ಅನ್ವಯವನ್ನು ಹೇಳಿದರೆ 'ವಿಚಾರವು ಮಂಗಳ' ಎಂದು ಹೇಳಿದಂತಾಯಿತು. ಹೀಗೆ ಹೇಳಿದರೆ ವಿಚಾರವನ್ನು ಹೊಗಳಿದಂತೆ ಆಯಿತೇ ಹೊರತು ಶ್ರುತ್ಯರ್ಥವನ್ನು ನಿರ್ಣಯಿಸಲು ಯಾವ ಯುಕ್ತಿಯನ್ನೂ ಹೇಳಿದಂತಾಗಲಿಲ್ಲ. ಪ್ರತಿಯೊಂದು ಸೂತ್ರಗಳು ಹಾಗೂ ಸೂತ್ರದಲ್ಲಿರುವ ಪದಗಳು ಶ್ರುತ್ಯರ್ಥನಿರ್ಣಾಯಕವಾದ ಯುಕ್ತಿಗಳನ್ನೇ ಹೇಳಬೇಕು. ಹಾಗಾಗಿ 'ವಿಚಾರವು ಮಂಗಳ' ಎಂಬರ್ಥವು ಅಸಮಂಜಸವಾಗಿದೆ. ಹೀಗೆ ವಿವರಣದಲ್ಲಿ ಶಂಕರಭಾಷ್ಯವನ್ನು ವ್ಯಾಖ್ಯಾನಿಸಲಾಗಿದೆ.

ಆದರೆ ಈ ಸಮಾಧಾನವೂ ಸಹ ಅಸಮಂಜಸವಾಗಿದೆ. ಏಕೆಂದರೆ ಭೇದಸಂಬಂಧದಿಂದ ಅನ್ವಯ ಮಾಡುವುದು ಅಶಕ್ಯವಾದರೂ ಸಹ ಅಭೇದಸಂಬಂಧದಿಂದ ಅನ್ವಯ ಮಾಡಲು ಯಾವುದೇ ಬಾಧಕವಿಲ್ಲ. 'ವಿಚಾರವು ಮಂಗಳ' ಎಂದು ಅಭೇದವು ತೋರಿದ ಮಾತ್ರಕ್ಕೆ ಪ್ರಶಂಸಾಪರವೇ ಆಗಬೇಕಾಗಿಲ್ಲ. ಮಂಗಳರೂಪವಾದ್ದರಿಂದ ವಿಚಾರವು ಕರ್ತವ್ಯವಾಗಿದೆಯೆಂದು ಕಾರ್ಯಕಾರಣ-

ಭಾವವನ್ನು ಇಲ್ಲಿ ಹೇಳಲು ಬರುತ್ತದೆ. ಹೇಗೆಂದರೆ 'ಸಧೂಮೋ ಗಿರಿಃ ಸಾಗ್ನಿಕಃ' 'ಧೂಮವುಳ್ಳ ಪರ್ವತವು ಬೆಂಕಿ ಉಳ್ಳದ್ದು' ಎಂಬ ಪ್ರಯೋಗವಿದೆ. ಇಲ್ಲಿ 'ಸಧೂಮಃ' ಎಂದರೆ ಧೂಮವಿರುವುದರಿಂದ ಎಂದರ್ಥ. ಆದ್ದರಿಂದ ಇಲ್ಲಿ ಅಭೇದವು ತೋರಿದರೂ ಕಾರ್ಯಕಾರಣಭಾವವನ್ನು ಹೇಳುವುದು ಕಂಡಿದೆ.

ಅಭೇದಪ್ರಯೋಗವಿದ್ದಲ್ಲಿ ಈ ರೀತಿ ಕಾರ್ಯಕಾರಣಭಾವವಿರುವುದನ್ನು ನೀವೂ ಸಹ ಅಂಗೀಕರಿಸಿದ್ದೀರಿ. 'ಈಕ್ಷತೇರ್ನಾಶಬ್ದಂ' ಎಂಬ ಸೂತ್ರದಲ್ಲಿ ಪ್ರಧಾನವು ಜಗತ್ಕಾರಣವಲ್ಲವೆಂದು ಇಧಿಸಲು 'ಅಶಬ್ದಂ' ಎಂದು ಹೇಳಲಾಗಿದೆ. 'ಅಶಬ್ದಂ' ಎಂದರೆ ಜಗತ್ಕಾರಣವಾಕ್ಯಗಳಿಂದ ಪ್ರತಿಪಾದ್ಯವಲ್ಲದುದರಿಂದ ಎಂದು ಅದ್ವೈತಿಗಳ ವ್ಯಾಖ್ಯಾನವಿದೆ.

ಇದರಂತೆ ಪ್ರಕೃತದಲ್ಲಿಯೂ 'ವಿಚಾರವು ಮಂಗಳ' ಎಂದರೆ 'ಮಂಗಳರೂಪವಾದುದರಿಂದ ವಿಚಾರವು ಕರ್ತವ್ಯ' ಎಂದು ಹೇಳಬಹುದು. ಆದ್ದರಿಂದ ಅಭೇದಸಂಬಂಧದಿಂದ ಅನ್ವಯವನ್ನು ಮಾಡಿದರೂ ಹೇತುವಾಚಕವಾಗಿ ಸಾರ್ಥಕವಾಗಬಹುದು. 'ಅಥ' ಶಬ್ದಕ್ಕೆ ಮಂಗಳ ಎಂಬರ್ಥ ಹೇಳಿದರೆ ಯಾವುದೇ ಬಾಧಕವೂ ಇರಲಾರದು.

ಆದ್ದರಿಂದ ಮಂಗಳವನ್ನು ಅಥ ಶಬ್ದದ ಅರ್ಥವೆಂದು ಹೇಳಿದರೆ ಅದಕ್ಕೆ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೇಳಲಾಗದೆಂದು ಶಂಕರಭಾಷ್ಯದಲ್ಲಿ ಹೇಳಿದ ಹೇತುವು ಅಸಮಂಜಸವೆಂದು ಸ್ಪಷ್ಟವಾಯಿತು. ಏಕೆಂದರೆ ಭಾಮತಿಯಲ್ಲಿ - "ಮಂಗಳಕರವಾದ್ದರಿಂದ ಪ್ರತಿನಿತ್ಯವೂ ಬ್ರಹ್ಮವಿಚಾರ ಮಾಡಬೇಕೆಂದು ಸೂತ್ರದ ಅರ್ಥ" ಎಂದು ಹೇಳಲಾಗಿದೆ. ಭಾಮತಿಯ ಈ ಮಾತನ್ನು ನೋಡಿದಾಗ ಮಂಗಳಕ್ಕೆ ಸೂತ್ರಾರ್ಥದಲ್ಲಿ ಅನ್ವಯವಿದೆಯೆಂದು ತೋರುತ್ತದೆ. ಆದ್ದರಿಂದ ಶಂಕರಭಾಷ್ಯದಲ್ಲಿ ಹೇಳಿದ ಹೇತುವು ಅಸಿದ್ಧವಾಗಿದೆ.

ಬ್ರಹ್ಮವಿಚಾರವು ಮಂಗಳಕರವಾಗಿದೆ ಎಂಬುದು ಪ್ರಸಿದ್ಧವಾಗಿದೆ. ಆದ್ದರಿಂದ ಎಲ್ಲರಿಗೂ ತಿಳಿದಿರುವುದನ್ನೇ ಪುನಃ ಹೇಳಬೇಕಾಗಿಲ್ಲ. ಬ್ರಹ್ಮವಿಚಾರಕ್ಕೆ ಕರ್ತವ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಮಂಗಳಕರತ್ವವನ್ನು ಹೇತುವನ್ನಾಗಿ ಹೇಳಲಾಗಿದೆ. ಹೇತುವಾದದ್ದು ಯಾವತ್ತೂ ಪ್ರಸಿದ್ಧವೇ ಆಗಿರಬೇಕಾದ್ದರಿಂದ ದೋಷವಿಲ್ಲ.




**ಅಥಶಬ್ದಕ್ಕೆ ಮಂಗಳ ಅರ್ಥವಲ್ಲ**

ಮಂಗಳ ಅಥಶಬ್ದೋಚ್ಚಾರಣದಿಂದಾಗುವ ಪ್ರಯೋಜನವ ಹೊರತು ಶಕ್ತಿಯಿಂದಾಗಲಿ ಲಕ್ಷಣೆಯಿಂದಾಗಲಿ ಅಥಶಬ್ದದಿಂದ ಮಂಗಳದ ಪ್ರತೀತಿ ಉಂಟಾಗುವುದಿಲ್ಲ. ಸೂತ್ರದಲ್ಲಿ ಅಥಶಬ್ದದಿಂದ ಮಂಗಳ ವಿವಕ್ಷಿತವೂ ಅಲ್ಲ. ವಿವಕ್ಷೆ ಮಾಡಿದರೆ ಅಧಿಕಾರದ ಬಗ್ಗೆ ಸೂತ್ರದಲ್ಲಿ ಏನೂ ಹೇಳಿದಂತಾಗುವುದಿಲ್ಲ ಎಂಬ ಪ್ರಸಂಗವೂ ಇದೆ.

ಅದ್ವೈತ ಭಾಷ್ಯದಲ್ಲಿಯೂ ಮಂಗಳವು ಅಥಶಬ್ದಾರ್ಥವಲ್ಲ ಎಂದಿದೆ. ಆದರೆ ಏಕೆ ಎಂದರೆ ಮಂಗಳಕ್ಕೆ ವ್ಯಾಕ್ಯಾರ್ಥದಲ್ಲಿ ಸಮನ್ವಯವಿಲ್ಲ. ಸಮನ್ವಯ ಏಕೆ ಇಲ್ಲ ಎಂದರೆ ಮಂಗಳವು ಅಥಶಬ್ದಾರ್ಥವಲ್ಲದ್ದರಿಂದ ಎಂದು ಭಾಮತಿ ಹೇಳುತ್ತದೆ. ಇದು ಅನ್ಯೋನ್ಯಾಶ್ರಯ. ವಿವರಣದಲ್ಲಿ 'ಮಂಗಳಕ್ಕೆ ವಾಕ್ಯಾರ್ಥದಲ್ಲಿ ಸಮನ್ವಯ ಏಕೆ ಇಲ್ಲ?' ಎಂಬ ಪ್ರಶ್ನೆಗೆ ಮಂಗಳ ವಿಚಾರಕ್ಕೆ ಕರ್ತೃವೂ ಅಲ್ಲ, ಕರ್ಮವೂ ಅಲ್ಲ. ಭೇದ ಸಂಬಂಧದಿಂದಲೂ ಅನ್ವಯ ಶಕ್ಯವಿಲ್ಲ. ಅಭೇದ ಸಂಬಂಧದಿಂದ ಅನ್ವಯ ಹೇಳಿದರೆ, 'ವಿಚಾರವು ಮಂಗಳ' ಎಂದರೆ, ಕೇವಲ ಪ್ರಶಂಸೆಯಾದೀತು. ಶ್ರುತ್ಯರ್ಥ ನಿರ್ಣಯಕ್ಕೆ ಬೇಕಾದ ಯುಕ್ತಿಯನ್ನು ಹೇಳಿದಂತಾಗುವುದಿಲ್ಲ ಎಂದಿದೆ. ಆದರೆ 'ವಿಚಾರವು ಮಂಗಳ' ಎಂದರೆ, ಮಂಗಳವಾದ್ದರಿಂದ ಕರ್ತವ್ಯ ಎಂದು ಹೇತುವನ್ನು ಹೇಳಿ ಸಾರ್ಥಕವಾಗಬಹುದು. 'ಮಂಗಳಕರವಾದ್ದರಿಂದ ಪ್ರತಿದಿನ ಬ್ರಹ್ಮವಿಚಾರ ಮಾಡಬೇಕು' ಎಂದು ಭಾಮತಿಯಲ್ಲಿ ಹೇಳಿದ್ದುಂಟು.

● ● ● ● ●

## ಪೂರ್ವಪ್ರಕೃತಾಪೇಕ್ಷೆ ಎಂಬರ್ಥವೂ ಅಸಾಧು

**तात्पर्यचन्द्रिका –**

**यदपि "पूर्वप्रकृतापेक्षायाश्च फलत आनन्तर्याव्यतिरेकात्" इति** परेषां **भाष्यम्, तस्य भामत्यनुसारेण, अथशब्दस्य पूर्वप्रकृतापेक्षार्थत्वाशङ्कानिरासाया-नन्तर्यार्थ इव पूर्वप्रकृतापेक्षार्थत्वेऽपि जिज्ञासाहेतुभूतस्य पूर्वप्रकृतस्य** लाभात् **फलाभेदाद् व्यर्थ आनन्तर्यार्थत्वाग्रहोऽस्माकमिति यदर्थः, तर्हि** भाष्ये **"आनन्तर्यार्थः" इत्युक्त्ययुक्तिः**[१] **। सूत्रे कल्पान्तरानुपन्यासेन पूर्वप्रकृतापेक्षार्थत्व-मशक्यशङ्कं च । किञ्च – 'किं नित्यः शब्दः अथानित्यः' इत्यादिकल्पान्तरोप-**

---

(१) **शङ्करभाष्यम् – पूर्वप्रकृतापेक्षायाश्च फलत आनन्तर्याव्यतिरेकात् ।** सति चानन्तर्यार्थत्वे यथा धर्मजिज्ञासा पूर्ववृत्तं वेदाध्ययनं नियमेनापेक्षत एवं ब्रह्मजिज्ञासापि यत्पूर्ववृत्तं नियमेनापेक्षते, तद्वक्तव्यम् । स्वाध्यायानन्तर्यं तु समानम् ।

**भामती** – न च प्रकृतानपेक्षा, तदनपेक्षस्य तद्विषयत्वाभावेनासमानविषयतया विकल्पानुपपत्तेः । न हि जातु भवति किं नित्य आत्मा, अथ अनित्या बुद्धिरिति । तस्मादानन्तर्यं विना पूर्वप्रकृतापेक्ष इहाथशब्दः कस्मान्न भवतीत्यत आह - **पूर्वप्रकृतापेक्षायाश्च फलत आनन्तर्याव्यतिरेकात् ।** अस्यार्थः – न वयमानन्तर्यार्थतां व्यसनितया रोचयामहे किंतु ब्रह्मजिज्ञासाहेतुभूतपूर्वप्रकृतसिद्धये । सा च पूर्वप्रकृतार्था-पेक्षत्वेऽप्यथशब्दस्य सिध्यतीति व्यर्थ आनन्तर्यार्थत्वावधारणाग्रहोऽस्माकमिति । तदिदमुक्तं 'फलतः' इति । परमार्थतस्तु कल्पान्तरोपन्यासे पूर्वप्रकृतापेक्षा ।

**न्यासेऽपि, सामानाधिकरण्यार्थमनुषक्तस्य धर्मिणः 'अनित्यः' इत्यत्रापेक्षायामपि, न साऽथशब्दार्थः । अन्यथा 'उतानित्यः' इत्यादावुतादेरपि पूर्वप्रकृतापेक्षार्थत्वं स्यात् ।**

ಅನುವಾದ - ಶಂಕರಭಾಷ್ಯದಲ್ಲಿ ಇರುವ ಮತ್ತೊಂದು ಮಾತು - "ಪೂರ್ವಪ್ರಕೃತಾಪೇಕ್ಷೆಯೂ ಪರ್ಯವಸಾನದಲ್ಲಿ 'ಅನಂತರ' ಎಂಬರ್ಥಕ್ಕಿಂತ ವಿಲಕ್ಷಣವಾಗಿಲ್ಲ" ಎಂದು. ಈ ಭಾಷ್ಯಮಾತಿಗೆ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - ಅಥ ಶಬ್ದಕ್ಕೆ ಪೂರ್ವಪ್ರಕೃತಾಪೇಕ್ಷೆಯೆಂಬರ್ಥವನ್ನು ಏಕೆ ಇಟ್ಟುಕೊಳ್ಳಬೇಕು? ಎಂಬ ಆಶಂಕೆ ಬಂದರೆ ಇದನ್ನು ನಿರಾಸ ಮಾಡಲು, 'ಅನಂತರ' ಎಂಬರ್ಥದಂತೆ ಪೂರ್ವಪ್ರಕೃತಾಪೇಕ್ಷೆ ಎಂಬ ಅರ್ಥವಿಟ್ಟುಕೊಂಡರೂ, ಬ್ರಹ್ಮವಿಚಾರದ ಪೂರ್ವದಲ್ಲಿ ಹೇತುರೂಪವಾಗಿ ಪೂರ್ವಪ್ರಕೃತವಾದ್ದನ್ನು ಇಟ್ಟುಕೊಳ್ಳಬೇಕೆಂಬ ನಮ್ಮ ಉದ್ದೇಶ ಈಡೇರುತ್ತದೆ. ಆದ್ದರಿಂದ 'ಅನಂತರ' ಎಂಬರ್ಥದಲ್ಲಿ ನಾವು ಆಗ್ರಹ ಮಾಡುವುದು ವ್ಯರ್ಥವಾಗುತ್ತದೆ.

ಈ ರೀತಿಯಾದ ಭಾಮತಿಯ ವ್ಯಾಖ್ಯಾನವು ಭಾಷ್ಯಕ್ಕೆ ವಿರುದ್ಧವಾಗಿದೆ. ಭಾಷ್ಯದಲ್ಲಿ 'ಆನಂತರ್ಯಾರ್ಥಃ' ಎಂದು ಅನಂತರ ಎಂಬರ್ಥವನ್ನೇ ಹೇಳಲಾಗಿದೆ. ಭಾಷ್ಯ ವಿರೋಧ ಬರಬಾರದೆಂದೇ ಭಾಮತಿಯು ಪುನಃ ಹೀಗೆ ಹೇಳಿದೆ - "ಒಂದು ಪಕ್ಷವನ್ನು ಹೇಳಿ ಪಕ್ಷಾಂತರವನ್ನು ಹೇಳುವಾಗ ಪೂರ್ವಪ್ರಕೃತದ ಅಪೇಕ್ಷೆ ಇರುತ್ತದೆ. ಪ್ರಕೃತದಲ್ಲಿ ಹಾಗೆ ಇಲ್ಲವಾದ್ದರಿಂದ ಅನಂತರ ಎಂಬರ್ಥವನ್ನೇ ಇಟ್ಟುಕೊಳ್ಳಬೇಕು" ಎಂದು. ಆದರೆ ಭಾಮತಿಯು ಈ ರೀತಿಯಾಗಿ ಕಾರಣವಿಲ್ಲದೇ ಶಂಕೆ ಮಾಡಿಕೊಂಡಿದ್ದೇ ಅಸಮಂಜಸವಾಗಿದೆ.

ಮತ್ತು 'ನಿತ್ಯಃ ಶಬ್ದೋಽಥಾನಿತ್ಯಃ' ಎಂಬಲ್ಲಿಯೂ ಅಥ ಶಬ್ದಕ್ಕೆ ಪೂರ್ವಪ್ರಕೃತಾಪೇಕ್ಷೆ ಎಂಬ ಅರ್ಥವಲ್ಲ. 'ಶಬ್ದವು ಅನಿತ್ಯ' ಎಂಬ ಎರಡನೆಯ ಪಕ್ಷವನ್ನು ಹೇಳಲು ಮೊದಲು ಪ್ರಸಕ್ತವಾದ ಶಬ್ದವೆಂಬ ಧರ್ಮಿಯ ಅಪೇಕ್ಷೆಯಿದ್ದರೂ ಇದು 'ಅಥ' ಶಬ್ದದ ಅರ್ಥವಲ್ಲ. ಇಲ್ಲದಿದ್ದರೆ 'ಉತ' 'ಆಹೋಸ್ವಿತ್' ಮುಂತಾದ ಶಬ್ದಗಳಿಗೂ ಪೂರ್ವಪ್ರಕೃತಾಪೇಕ್ಷೆಯೆಂಬರ್ಥವನ್ನೇ ಹೇಳಬೇಕಾದೀತು.

**ಕಠಿಣಪದಾರ್ಥ**

**ಪೂರ್ವಪ್ರಕೃತಾಪೇಕ್ಷಾಯಾಶ್ಚ ಫಲತಃ ಆನಂತರ್ಯಾವ್ಯತಿರೇಕಾತ್** = ಪೂರ್ವಪ್ರಕೃತಾಪೇಕ್ಷೆಯಾದರೂ ಕೂಡ ಆನಂತರ್ಯ ಎಂಬ ಅರ್ಥಕ್ಕಿಂತ ಭಿನ್ನವಲ್ಲ. **ಫಲಭೇದಾತ್** = ಪೂರ್ವಪ್ರಕೃತಾಪೇಕ್ಷೆ ಮತ್ತು ಆನಂತರ್ಯ ಎಂಬರ್ಥಕ್ಕೂ ಫಲದಲ್ಲಿ ವ್ಯತ್ಯಾಸವಿರುವುದರಿಂದ. **ತರ್ಹಿ** = ಆನಂತರ್ಯವೆಂಬ ಅರ್ಥದಲ್ಲಿ ಆಗ್ರಹವಿಲ್ಲದಿದ್ದರೆ. **ಅನುಷಕ್ತಸ್ಯ** = ಅನ್ವಿತವಾದ ಶಬ್ದಕ್ಕೆ. **ಅನ್ಯಥಾ** = ಪೂರ್ವಪ್ರಕೃತದ ಅರ್ಥಕ್ಕಿಂತ ಭಿನ್ನವಾದ ಅರ್ಥವನ್ನು ಅಥ ಶಬ್ದಕ್ಕೆ ಹೇಳಿದ್ದರೆ.

*ಜಿಜ್ಞಾಸಾಧಿಕರಣ*

**प्रकाशः** – प्रकृतापेक्षार्थत्वं वा प्रकृतादर्थादर्थान्तरपरत्वं वाऽथशब्दस्य किं नस्यादित्याशङ्क्य स्वयं समाधास्यन्परोक्तं समाधिमनूद्य निरस्यति ।। **यद्यपीत्यादिना** ।। तस्येत्यस्य भामत्यनुसारेण यद्यर्थ इत्यन्वयः । एवं हि भामत्यां व्याख्यातं "अयमथशब्दो विनैवानन्तर्यार्थत्वं पूर्वप्रकृतापेक्षार्थो भविष्यति । यथा शब्दो नित्योथानित्य इत्यादौ पूर्वप्रकृतं शब्द इति पदमपेक्ष्य प्रथमपक्षोपन्यासपूर्वकं पक्षान्तरोपन्यासे पूर्वप्रकृतापेक्षोथशब्द इत्याशङ्कानिरासकमिदं भाष्य"मित्यवतार्य न वयमानन्तर्यार्थतां व्यसनितया रोचयामहे । किं तु ब्रह्मजिज्ञासाहेतुभूतपूर्वप्रकृतसिद्धये । सा च पूर्वप्रकृतापेक्षत्वेप्यथशब्दस्य सिद्ध्यतीति व्यर्थ आनन्तर्यार्थत्वावधशरणाग्रहोऽस्माकमिति ।। **तर्हीति** ।। आनन्तर्यार्थत्वाग्रहाभाव इत्यर्थः । पूर्वप्रकृतापेक्षो वाऽऽनन्तर्यार्थो वेत्येवोक्तिस्स्यादिति भावः । नन्वत एवारुच्या भामत्यां "परमार्थतस्तु कल्पान्तरोपन्यासे पूर्वप्रकृतापेक्षा । न चेह कल्पान्तरोपन्यास इति पारिशेष्यादानन्तर्यार्थ एव युक्त" इत्युक्तमित्यत आह ।। **सूत्र इति** ।। **अशक्यशङ्कमिति** ।। अनेनैतच्छङ्कानिरासाय प्रवृत्तो भाष्यकारस्तद्भाष्यव्याख्यार्थं प्रवृत्तो भवांश्चात्यन्तानभिज्ञ इत्युक्तं भवति । किंचाथशब्दस्य पूर्वप्रकृतापेक्षार्थत्वस्य क्वाप्यभावात्प्रकृते तच्छङ्कात्यन्तानुचितेत्यभिप्रेत्याह ।। **किं च किं नित्य इति** ।। सा पूर्वप्रकृतापेक्षा किन्तु पूर्वप्रकृतादर्थादर्थान्तरत्वमिति भावः । कुत एवमित्यत आह ।। **अन्यथेति** ।। आदिपदात् आहोस्वित् यद्वा इत्यादिग्रहः ।।

> **भावदीपिका** – **सूत्रे कल्पान्तरानुपन्यासेनेति** ।। किं नित्यः शब्दः अथानित्यः? इत्यादावनित्य इत्यादेरिव 'अथातो ब्रह्मजिज्ञासा' इतिसूत्रे उत्तरत्र कल्पान्तरानुपन्यासात् अतो ब्रह्मजिज्ञासेत्यादिशब्दैरप्रतीतेः कल्पान्तराभावे च तत्सम्बन्धिन्याः प्रकृतापेक्षाया एवायोगादित्यर्थः ।

**ವಿವರಣೆ** - ಅಥ ಶಬ್ದಕ್ಕೆ 'ಪ್ರಕೃತಾಪೇಕ್ಷೆ'ಯೆಂಬರ್ಥವನ್ನೋ 'ಪ್ರಕೃತವಾದುದಕ್ಕಿಂತ ಭಿನ್ನ ಎಂಬರ್ಥವನ್ನೋ ಏಕೆ ಇಟ್ಟುಕೊಳ್ಳಬಾರದು? ಎಂಬ ಶಂಕೆಗೆ ಸಿದ್ಧಾಂತರೀತ್ಯಾ ಸಮಾಧಾನ ಹೇಳುವ ಮೊದಲು ಅದ್ವೈತಿಗಳು ಹೇಳಿದ ಸಮಾಧಾನವನ್ನು ಅನುವಾದ ಮಾಡಿ ಖಂಡನೆ ಮಾಡುತ್ತಿದ್ದಾರೆ. 'ಯದಪಿ' ಇತ್ಯಾದಿ ವಾಕ್ಯದಿಂದ.

ಪರಿಪೂರ್ಣಚಂದ್ರಿಕಾ

ಶಂಕರಭಾಷ್ಯದಲ್ಲಿ ಅಥ ಶಬ್ದಕ್ಕೆ ಅನಂತರವೆಂಬರ್ಥವನ್ನು ಸಮರ್ಥಿಸುವ ಸಂದರ್ಭದಲ್ಲಿ "ಪೂರ್ವಪ್ರಕೃತಾಪೇಕ್ಷಾಯಾಶ್ಚ ಫಲತ ಆನಂತರ್ಯಾವ್ಯತಿರೇಕಾತ್" ಪೂರ್ವಪ್ರಕೃತದ ಅಪೇಕ್ಷೆಯೂ ಪರ್ಯವಸಾನದಲ್ಲಿ 'ಅನಂತರ'ಎಂಬರ್ಥಕ್ಕಿಂತ ವಿಲಕ್ಷಣವಲ್ಲ, ಎಂಬ ಮಾತನ್ನು ಹೇಳಲಾಗಿದೆ. ಇದಕ್ಕೆ ಭಾಮತೀ ಹಾಗು ವಿವರಣದಲ್ಲಿ ಬೇರೆ ಬೇರೆ ರೀತಿಯಾಗಿಯೇ ವ್ಯಾಖ್ಯಾನಿಸಲಾಗಿದೆ. ಯಾವ ವ್ಯಾಖ್ಯಾನವನ್ನು ಇಟ್ಟುಕೊಂಡರೂ ಭಾಷ್ಯದ ಈ ಮಾತು ಅಸಂಗತವಾಗುತ್ತದೆ. ಆದ್ದರಿಂದ ಅಥ ಶಬ್ದಕ್ಕೆ ಪೂರ್ವಪ್ರಕೃತಾಪೇಕ್ಷೇ ಎಂಬ ಅರ್ಥವನ್ನು ಏಕೆ ಇಟ್ಟುಕೊಳ್ಳಬಾರದೆಂಬ ಪ್ರಶ್ನೆಗೆ ಕೊನೆಗೆ ನಾವೇ ಸಮಾಧಾನ ಹೇಳಬೇಕಾಗುತ್ತದೆ.

ಭಾಮತಿಯ ವ್ಯಾಖ್ಯಾನ ಹೀಗಿದೆ - "ಈ ಅಥ ಶಬ್ದಕ್ಕೆ ಅನಂತರವೆಂಬರ್ಥವನ್ನೇ ಹೇಳಬೇಕಾಗಿಲ್ಲ. 'ಪೂರ್ವಪ್ರಕೃತಾಪೇಕ್ಷೆ' ಎಂಬರ್ಥವನ್ನೂ ಹೇಳಬಹುದು. ಹೇಗೆಂದರೆ - "ಶಬ್ದೋ ನಿತ್ಯೋಽಥಾನಿತ್ಯಃ" ಎಂಬಲ್ಲಿ ಶಬ್ದವು ನಿತ್ಯವೆಂಬುದು ಒಂದು ಪಕ್ಷ. ಶಬ್ದವು ಅನಿತ್ಯವೆಂಬುದು ಮತ್ತೊಂದು ಪಕ್ಷ. ಇಲ್ಲಿ ಮೊದಲನೆಯ ಪಕ್ಷದಲ್ಲಿ ಪ್ರಕೃತವಾದ ಶಬ್ದವೆಂಬ ಪದವನ್ನೂ ಎರಡನೆಯ ಪಕ್ಷದಲ್ಲಿಯೂ ಇಟ್ಟುಕೊಳ್ಳಬೇಕು. ಆವಾಗ ಶಬ್ದವು ನಿತ್ಯವೋ? ಅನಿತ್ಯವೋ? ಎಂದು ವಿಕಲ್ಪ ತೋರಿಸಿದಂತಾಗುತ್ತದೆ. ಇಲ್ಲಿ ಪೂರ್ವಪ್ರಕೃತವಾದ 'ಶಬ್ದ' ಎಂಬ ಪದದ ಅಪೇಕ್ಷೆ ಎರಡನೆಯ ಪಕ್ಷದಲ್ಲಿ ಇರುತ್ತದೆ. 'ಪೂರ್ವ-ಪ್ರಕೃತಾಪೇಕ್ಷೆ' ಎಂಬರ್ಥವನ್ನು 'ಅಥ' ಶಬ್ದವು ಹೇಳುತ್ತಿದೆ. ಇಲ್ಲಿ ಯಾವರೀತಿಯಾಗಿ 'ಪೂರ್ವಪ್ರಕೃತಾಪೇಕ್ಷೆ' ಎಂಬರ್ಥವನ್ನು ಅಥ ಶಬ್ದವು ಹೇಳುತ್ತಿದೆಯೋ ಹಾಗೆಯೇ ಸೂತ್ರದಲ್ಲಿರುವ ಅಥ ಶಬ್ದವೂ ಈ ಅರ್ಥವನ್ನೇ ಹೇಳುತ್ತಿದೆಂದು ಏಕೆ ಹೇಳಬಾರದು? ಎಂಬ ಶಂಕೆಯ ಪರಿಹಾರಕ್ಕಾಗಿ ಭಾಷ್ಯದ ಈ ಮಾತು ಹೊರಟಿದೆ - ಅಥ ಶಬ್ದಕ್ಕೆ ಅನಂತರವೆಂಬರ್ಥವನ್ನು ಇಟ್ಟುಕೊಳ್ಳಬೇಕೆಂದು ನಮಗೇನು ಚಟವಿಲ್ಲ, ಕಿಂತು, ಬ್ರಹ್ಮವಿಚಾರ ಮಾಡುವ ಮೊದಲು ಹೇತುರೂಪದಿಂದ ಪ್ರಕೃತವಾದ್ದನ್ನೂ ಅಥ ಶಬ್ದದಿಂದ ತಿಳಿಯಬೇಕಾಗಿದೆ. ಈ ನಮ್ಮ ಉದ್ದೇಶವು ಅನಂತರ ಎಂಬರ್ಥವನ್ನು ಇಟ್ಟುಕೊಂಡರೂ ನೆರವೇರುತ್ತದೆ ಪೂರ್ವಪ್ರಕೃತಾಪೇಕ್ಷೆಯೆಂಬರ್ಥವನ್ನು ಇಟ್ಟುಕೊಂಡರೂ ನೆರವೇರುತ್ತದೆ. ಆದ್ದರಿಂದ ಅನಂತರ ಎಂಬರ್ಥವನ್ನೇ ಅಥ ಶಬ್ದಕ್ಕೆ ಹೇಳಬೇಕೆಂಬ ಆಗ್ರಹವು ವ್ಯರ್ಥ.

ಹೀಗೆ ಭಾಮತಿಯು ಭಾಷ್ಯದ ವಾಕ್ಯಕ್ಕೆ ವ್ಯಾಖ್ಯಾನಿಸಿದೆ. ಆದರೆ 'ಭಾಷ್ಯದಲ್ಲಿ' ಅನಂತರ ಎಂಬರ್ಥವನ್ನೇ ಇಟ್ಟುಕೊಳ್ಳಬೇಕೆಂದು ಹೇಳಲಾಗಿದೆ. ಭಾಷ್ಯದ ಈ ಮಾತಿಗೂ ಭಾಮತಿಯ ವ್ಯಾಖ್ಯಾನಕ್ಕೂ ಪರಸ್ಪರ ಅಸಂಗತಿ ತೋರುತ್ತಿದೆ. ಭಾಮತಿಯ ವ್ಯಾಖ್ಯಾನದ ಪ್ರಕಾರ 'ಪೂರ್ವಪ್ರಕೃತಾಪೇಕ್ಷೆ' ಅಥವಾ 'ಅನಂತರ' ಎಂಬರ್ಥವನ್ನು ಅಥ ಶಬ್ದಕ್ಕೆ ಇಟ್ಟುಕೊಳ್ಳಬಹುದೆಂದು ಭಾಷ್ಯದಲ್ಲಿ ಇರಬೇಕಿತ್ತು.

ಈ ಅಸಂಗತಿಯನ್ನು ಗಮನಿಸಿಯೇ ಭಾಮತಿಯಲ್ಲಿ ಪುನಃ ಹೀಗೆ ಹೇಳಲಾಗಿದೆ - ವಾಸ್ತವಿಕವಾಗಿ ಒಂದು ಕಲ್ಪವನ್ನೂ ಹೇಳಿ ಮತ್ತೊಂದು ಕಲ್ಪವನ್ನು ಹೇಳುವಾಗ ಪೂರ್ವಪ್ರಕೃತದ ಅಪೇಕ್ಷೆ ಇದೆ. ಪ್ರಕೃತದಲ್ಲಿ ಹಾಗೆ ಕಲ್ಪಾಂತರವನ್ನು ಹೇಳಿಲ್ಲ. ಆದ್ದರಿಂದ ಕೊನೆಗೆ ಅನಂತರ ಎಂಬರ್ಥವನ್ನು ಒಪ್ಪಿಕೊಳ್ಳುವುದೇ ಸೂಕ್ತವಾಗಿದೆ, ಎಂದು.

*ಜಿಜ್ಞಾಸಾಧಿಕರಣ*

ಭಾಮತಿಯ ಈ ವ್ಯಾಖ್ಯಾನವನ್ನು ಆಶ್ರಯಿಸಿದರಂತೂ, ಭಾಷ್ಯಕಾರ ಹಾಗೂ ಭಾಷ್ಯಕ್ಕೆ ವ್ಯಾಖ್ಯಾನಿಸಲು ಹೊರಟ ಇಬ್ಬರೂ ಅತ್ಯಂತ ಮೂರ್ಖರೆಂದು ಸ್ಪಷ್ಟವಾಗುತ್ತದೆ. ಏಕೆಂದರೆ ಸೂತ್ರದಲ್ಲಿ ಬ್ರಹ್ಮವಿಚಾರ ಮಾಡಬೇಕೆಂಬುದನ್ನೂ ಬಿಟ್ಟು ಬೇರೆ ಯಾವ ಪಕ್ಷವನ್ನೂ ಹೇಳಿಲ್ಲ. ಒಂದು ವೇಳೆ ಬೇರೆ ಪಕ್ಷವನ್ನು ಹೇಳಿದ್ದರೆ ಪೂರ್ವಪ್ರಕೃತಾಪೇಕ್ಷೆ ಎಂಬರ್ಥವು ವಿವಕ್ಷಿತವಿರಬಹುದೇ ಎಂಬ ಸಂದೇಹಕ್ಕೆ ಅವಕಾಶವಿರುತ್ತಿತ್ತು. ಆದ್ದರಿಂದ ಸಂದೇಹಕ್ಕೆ ಇಲ್ಲಿ ಅವಕಾಶವೇ ಇಲ್ಲ. ಆದರೂ ಸಂದೇಹದ ಪರಿಹಾರಕ್ಕಾಗಿ ಹೊರಟ ಭಾಷ್ಯದ ಮಾತುಗಳು ಭಾಷ್ಯಕ್ಕೆ ವ್ಯಾಖ್ಯಾನಿಸಲು ಹೊರಟ ಭಾಮತಿಯ ಮಾತುಗಳು ಅತ್ಯಂತ ಅಸಂಗತಗಳಾಗಿವೆ.

ಮತ್ತು 'ಅಥ' ಶಬ್ದಕ್ಕೆ 'ಪೂರ್ವಪ್ರಕೃತಾಪೇಕ್ಷೆ' ಎಂಬರ್ಥವಿರುವುದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಪ್ರಕೃತದಲ್ಲಿ ಆ ರೀತಿಯಾಗಿ ಶಂಕೆ ಮಾಡಿಕೊಂಡಿದ್ದೇ ಅತ್ಯಂತ ಅನುಚಿತವಾಗಿದೆ. 'ಶಬ್ದೋ ನಿತ್ಯೋಽಥಾನಿತ್ಯಃ' ಎಂಬಲ್ಲಿಯೂ ಅಥ ಶಬ್ದಕ್ಕೆ ಪೂರ್ವಪ್ರಕೃತಾಪೇಕ್ಷೆ ಎಂಬರ್ಥ ಹೇಳಿದ್ದು ತಪ್ಪಾಗಿದೆ. ಹೊರತು ಪೂರ್ವಪ್ರಕೃತವಾದ 'ನಿತ್ಯ' ಎಂಬ ಪಕ್ಷಕ್ಕಿಂತ ಬೇರೆಯಾದುದು 'ಅನಿತ್ಯ' ಎಂಬ ಮತ್ತೊಂದು ಪಕ್ಷ ಎಂಬರ್ಥದಲ್ಲಿ ಅಥ ಶಬ್ದದ ಪ್ರಯೋಗವೆಂದು ಹೇಳಬೇಕು. ಒಂದು ವೇಳೆ ಅಥ ಶಬ್ದಕ್ಕೆ ಪೂರ್ವಪ್ರಕೃತಾಪೇಕ್ಷೆ ಎಂಬರ್ಥವನ್ನೇ ಹೇಳುವುದಾದರೆ ಉತ, ಆಹೋಸ್ವಿತ್, ಯದ್ವಾ, ಮೊದಲಾದ ಶಬ್ದಗಳಿಗೂ ಪೂರ್ವಪ್ರಕೃತಾಪೇಕ್ಷೆ ಎಂಬರ್ಥವನ್ನೇ ಹೇಳಬೇಕಾದೀತು. ಆದರೆ ಯಾರೂ ಸಹ ಈ ಅರ್ಥವನ್ನು ಹೇಳುವುದಿಲ್ಲ.

ಹೀಗೆ ಎಲ್ಲಿಯೂ ಇಲ್ಲದ ಪೂರ್ವಪ್ರಕೃತಾಪೇಕ್ಷೆ ಎಂಬರ್ಥವನ್ನು 'ಅಥ' ಶಬ್ದದ ಅರ್ಥವೆಂದು ವಿಚಾರ ಮಾಡುವುದು ಅತ್ಯಂತ ಅಸಂಗತವಾಗಿದೆ. ಹೀಗೆ ಭಾಷ್ಯಕ್ಕೆ ವ್ಯಾಖ್ಯಾನ ಮಾಡಲು ಹೊರಟ ಭಾಮತಿಯೂ ಅಸಂಬದ್ಧವಾಗಿದೆ.




**ಅಥಶಬ್ದಾರ್ಥ ಪೂರ್ವಪ್ರಕೃತಾಪೇಕ್ಷೆಯಲ್ಲ**

ಅದ್ವೈತಭಾಷ್ಯದಲ್ಲಿ 'ಪೂರ್ವಪ್ರಕೃತಾಪೇಕ್ಷೆಯೂ ಪರ್ಯವಸಾನದಲ್ಲಿ 'ಅನಂತರ' ಎಂಬ ಅರ್ಥಕ್ಕಿಂತ ವಿಲಕ್ಷಣವಲ್ಲ' ಎಂದಿದೆ. ಇದಕ್ಕೆ ಭಾಮತಿ ಕೊಡುವ ವಿವರಣೆ-'ಬ್ರಹ್ಮವಿಚಾರಕ್ಕೆ ಪೂರ್ವದಲ್ಲಿ ಹೇತುರೂಪದಿಂದ ಪ್ರಕೃತವಾದುದನ್ನು ಅಥಶಬ್ದದಿಂದ ತಿಳಿಯಬೇಕಾಗಿದೆ. ಅಥಶಬ್ದಕ್ಕೆ ಅನಂತರ ಎಂಬ ಅರ್ಥದಂತೆ ಪೂರ್ವಪ್ರಕೃತಾಪೇಕ್ಷೆ ಎಂಬ ಅರ್ಥವಿಟ್ಟುಕೊಂಡರೂ ಈ ಉದ್ದೇಶ ನೆರವೇರುತ್ತದೆ. ಅನಂತರ ಎಂಬ ಅರ್ಥದಲ್ಲಿ ನಾವು ಆಗ್ರಹಪಡುವುದು ವ್ಯರ್ಥ'. ಈ ವಿವರಣೆ ಭಾಷ್ಯಕ್ಕೆ ವಿರುದ್ಧ. ಭಾಷ್ಯದಲ್ಲಿ 'ಅನಂತರ ಎಂಬ ಅರ್ಥವನ್ನೇ ಅಥಶಬ್ದಕ್ಕೆ ಇಟ್ಟುಕೊಳ್ಳುತ್ತೇವೆ' ಎಂದಿದೆ. ಇದಕ್ಕೆ ಭಾಮತಿ ಹೇಳುತ್ತದೆ. 'ವಸ್ತುತಃ ಒಂದು ಪಕ್ಷವನ್ನು ಹೇಳಿ ಇನ್ನೊಂದು ಪಕ್ಷವನ್ನು ಹೇಳುವಾಗ ಪೂರ್ವಪ್ರಕೃತದ ಅಪೇಕ್ಷೆ. ಪ್ರಕೃತದಲ್ಲಿ ಅದಕ್ಕೆ ಅವಕಾಶವಿಲ್ಲ. ಕೊನೆಗೂ ಅಥಶಬ್ದಕ್ಕೆ ಅನಂತರ ಎಂಬ ಅರ್ಥವನ್ನೇ ಹೇಳಬೇಕು'. ಈಗ

ಭಾಷ್ಯ ಇನ್ನಷ್ಟು ಅಸಂಗತವಾಗುವುದು. ಸೂತ್ರದಲ್ಲಿ ಬ್ರಹ್ಮಜಿಜ್ಞಾಸೆ ಕರ್ತವ್ಯ ಎಂದಿಷ್ಟೇ ಹೇಳಿದೆ. ಬೇರೆ ಪಕ್ಷವನ್ನು ಹೇಳಿಲ್ಲ. ಆದರಿಂದ ಪೂರ್ವಪ್ರಕೃತಾಪೇಕ್ಷ ಅಥಶಬ್ದಾರ್ಥವಿರಬಹುದೆ? ಎಂಬ ಸಂದೇಹಕ್ಕೇ ಅವಕಾಶವಿಲ್ಲ. ಆದರೂ ಸಂದೇಹ ಪರಿಹಾರಕ್ಕೆ ಭಾಷ್ಯ ಹೊರಟಿದೆ. ಅದರ ವ್ಯಾಖ್ಯಾನಕ್ಕೆ ಭಾಮತಿ ಹೊರಟಿದೆ.

● ● ● ● ●

## ವಿವರಣಕಾರರ ವಿವರಣೆ ವ್ಯರ್ಥ

**तात्पर्यचन्द्रिका –**

**नापि – प्रकृतादर्थादर्थान्तरत्वाशङ्कानिरासाय[1] । अर्थान्तरत्वं हि यतः कुतश्चित् प्रकृताच्चेत् व्यर्थम्, पुष्कलकारणाच्चेदानन्तर्याभिधानं विना कारणत्वासिद्धिः। आनन्तर्याभिधाने च प्रकृतादर्थादर्थान्तरत्वस्यान्तर्णीततया सिद्धिरिति विवरणोक्तोऽभिप्रायः । आनन्तर्यानभिधानेऽपि, वैयर्थ्यपरिहारार्थमेव प्रकृतस्य हेतुत्वसिद्धेः । अन्यथा आनन्तर्यार्थत्वेऽपि तत्प्रतियोगिनो हेतुत्वासिद्धिः ।**

**ननु कारणादानन्तर्यं मुख्यं, अव्यवधेरव्यभिचाराच्चेति, तदेवाथशब्दवाच्यमिति चेन्न । अव्यवधेरकारणादानन्तर्येऽपि सम्भवात् । अव्यभिचारित्वं तु न मुख्यत्वे हेतुः । 'चैत्रो गतः अनन्तरमेव मैत्र आगतः' इत्यादावमुख्यत्वाभिमानाभावात् । अनन्यथासिद्धनियतानन्तरभावित्वादिरूपे कार्यलक्षणादौ नियतपदानर्थक्यप्रसङ्गाच्च । कारणस्य प्रकृतत्वं मुख्यमित्यपि सुवचत्वाच्च । पूर्वप्रकृतादर्थान्तरत्वाभिधानेऽप्यानन्तर्यस्य अन्तर्णीततया सिद्धेश्च । तस्मादस्यैव आदिसूत्रत्वेन पूर्वप्रकृतार्थसाङ्कर्यशङ्कानुदयात् ''आनन्तर्येऽधिकारस्य'' इति भाष्योदाहृतस्मृतिविरोधादधिकार्यार्थसूचनप्रसङ्गाच्च, न प्रकृतादर्थादर्थान्तरमथशब्दस्यार्थः ।**

ಅನುವಾದ - ಭಾಷ್ಯಕ್ಕೆ ವಿವರಣವ್ಯಾಖ್ಯಾನ ಹೀಗಿದೆ - 'ಅಥ' ಶಬ್ದಕ್ಕೆ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂಬರ್ಥವು ಏಕೆ ವಿವಕ್ಷಿತವಾಗಬಾರದು? ಎಂಬ ಆಕ್ಷೇಪವನ್ನು ಭಾಷ್ಯಕಾರರು ಹೀಗೆ ಪರಿಹರಿಸುತ್ತಾರೆ - ಪ್ರಕೃತಕ್ಕೆ ಅನುಪಯುಕ್ತವಾದ ಯಾವುದಾದರೊಂದು ಪೂರ್ವಪ್ರಕೃತಕ್ಕಿಂತ

(१) अर्थान्तरपरत्वाशङ्कानिरासाय इत्यपि पाठः ।

ಭಿನ್ನವೆಂದು ಹೇಳುವುದು ವ್ಯರ್ಥ. ಹೇಳದಿದ್ದರೂ ಭಿನ್ನವೆಂದು ತಿಳಿಯುತ್ತದೆ. ಇನ್ನು ಪ್ರಕೃತಕ್ಕೆ ಉಪಯುಕ್ತವಾದ ವಿಚಾರದ ಕಾರಣಸಾಮಗ್ರಿರೂಪವಾದ ಪೂರ್ವಪ್ರಕೃತಕ್ಕಿಂತ ಭಿನ್ನವೆಂದು ಹೇಳುವುದಾದರೆ ಅನಂತರ ಎಂಬರ್ಥ ಹೇಳದೆ ಪೂರ್ವಪ್ರಕೃತವು ಕಾರಣವೆಂದು ನಿರ್ಣಯವಾಗಲಾರದು. ಅಥ ಶಬ್ದಕ್ಕೆ 'ಪೂರ್ವಪ್ರಕೃತಕ್ಕಿಂತ ಅನಂತರ' ಎಂಬರ್ಥವನ್ನು ಹೇಳಿದಾಗ ಪೂರ್ವಪ್ರಕೃತಕ್ಕಿಂತ ಭಿನ್ನವೆಂಬ ಅರ್ಥವೂ ದೊರಕುತ್ತದೆ. ಇಷ್ಟು ವಿವರಣದ ಅಭಿಪ್ರಾಯ.

ಈ ವಿವರಣ ವ್ಯಾಖ್ಯಾನ ಸರಿಯಿಲ್ಲ. ಆನಂತರ್ಯ ಎಂಬ ಅರ್ಥವನ್ನೂ ಹೇಳದೇ ಇದ್ದರೂ ಸಹ ವೈಯ್ಯರ್ಥ್ಯಪರಿಹಾರಕ್ಕಾಗಿ ಪೂರ್ವಪ್ರಕೃತಕ್ಕೆ ಕಾರಣತ್ವವು ಸಿದ್ಧವಾಗುತ್ತದೆ. ಇಲ್ಲದಿದ್ದಲ್ಲಿ ಆನಂತರ್ಯವೆಂಬರ್ಥವನ್ನು ಹೇಳಿದರೂ ಪೂರ್ವಪ್ರಕೃತಕ್ಕೆ ಕಾರಣತ್ವವು ಸಿದ್ಧವಾಗುವುದಿಲ್ಲ.

ಆಕ್ಷೇಪ - ಆನಂತರ್ಯವು ಎರಡರಿಂದ ಬರುತ್ತದೆ. ಕಾರಣಾದಾನಂತರ್ಯ ಮತ್ತು ಅಕಾರಣಾದಾನಂತರ್ಯ ಎಂದು. ಇವೆರಡರಲ್ಲಿ ಕಾರಣಾದಾನಂತರ್ಯವೇ ಮುಖ್ಯ. ಏಕೆಂದರೆ ಅವ್ಯವಧಾನ ಮತ್ತು ಅವ್ಯಭಿಚಾರವಿಚಾರವುದರಿಂದ. ಅದೇ ಅಥ ಶಬ್ದದ ಅರ್ಥವೂ ಆಗಿದೆ.

ಸಮಾಧಾನ - ಅವ್ಯವಧಾನವು ಮುಖ್ಯಕಾರಣತ್ವಕ್ಕೆ ಪ್ರಯೋಜಕವಲ್ಲ. ಘಟಕ್ಕೆ ಗಗನದ ಅವ್ಯವಧಾನ ಇದೆ. ಆದರೆ ಗಗನವು ಘಟಕ್ಕೆ ಕಾರಣವಾಗಿಲ್ಲ. ಹಾಗೆಯೇ ಅವ್ಯಭಿಚಾರಿತ್ವವೂ ಮುಖ್ಯಕಾರಣತ್ವಕ್ಕೆ ಪ್ರಯೋಜಕವಲ್ಲ. 'ಚೈತ್ರನು ಹೋದ ಅನಂತರದಲ್ಲಿಯೇ ಮೈತ್ರನು ಬಂದನು' ಎಂಬಲ್ಲಿ ಅವ್ಯಭಿಚರಿತತ್ವವು ಇಲ್ಲದಿದ್ದರೂ ನಮಗೇನು ಅಮುಖ್ಯವೆಂದು ಅನಿಸುತ್ತಿಲ್ಲ. ಮತ್ತು ಅನನ್ಯಥಾಸಿದ್ಧನಿಯತಾನಂತರಭಾವಿತ್ವವೆಂಬ ಕಾರ್ಯಲಕ್ಷಣದಲ್ಲಿ ನಿಯತಪದವು ವ್ಯರ್ಥವಾಗುತ್ತದೆ. ರಾಸಭಾದಿಗಳಲ್ಲಿ ಬರುವ ಅತಿವ್ಯಾಪ್ತಿಯನ್ನು ಮುಖ್ಯಕಾರಣತ್ವವೆಂಬರ್ಥವನ್ನು ಹೇಳುವ ಅನಂತರ ಶಬ್ದದಿಂದಲೇ ನಿವಾರಿಸಲು ಬರುತ್ತದೆ.

ಮತ್ತು ಕಾರಣದ ಆನಂತರ್ಯವೇ ಮುಖ್ಯವೆಂದು ವಾದಿಸುವುದಾದರೆ 'ಕಾರಣಕ್ಕಿಂತ ಬೇರೆ' ಎನ್ನುವುದೇ ಮುಖ್ಯವೆಂದು ನಾವು ವಾದಿಸಿದರೆ ನಿಮಗೆ ಉತ್ತರ ನೀಡಲು ಬರುವುದಿಲ್ಲ.

'ಪೂರ್ವಪ್ರಕೃತಕ್ಕಿಂತ ಅನಂತರ' ಎಂಬರ್ಥದಲ್ಲಿಯೇ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂಬುದು ಸೇರಿಕೊಂಡಿದೆ ಎಂದರೆ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂಬರ್ಥದಲ್ಲಿಯೇ ಪೂರ್ವಪ್ರಕೃತಕ್ಕಿಂತ ಅನಂತರ ಎಂಬುದು ಸೇರಿಕೊಂಡಿದೆ ಎಂದು ನಾವು ಹೇಳುತ್ತೇವೆ. ಆದ್ದರಿಂದ ಪೂರ್ವಪ್ರಕೃತಕ್ಕಿಂತ ಭಿನ್ನವೆಂಬರ್ಥವನ್ನು ಹೇಳಬಾರದೆಂದು ವಿವರಣಕಾರನಿಗೆ ಸಮರ್ಥಿಸಲು ಆಗುವುದಿಲ್ಲ.

ನಮ್ಮ ಸಮರ್ಥನೆ ಹೀಗಿದೆ - ಇದೇ ಮೊದಲನೆಯ ಸೂತ್ರವಾದ್ದರಿಂದ ಪೂರ್ವಪ್ರಕೃತವಾದ ಅರ್ಥವೇ ಇಲ್ಲ. ಅದನ್ನು ಈ ಸೂತ್ರದ ಅಥ ಶಬ್ದವು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಆ

ಶಂಕೆಯೇ ಕೂಡಲ್ಲ. ಮತ್ತು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ ಅಧಿಕಾರದ ಆನಂತರ್ಯ ಎಂಬರ್ಥ ಹೇಳಲಾಗಿದೆ. ಅದರ ವಿರೋಧ ಬರುತ್ತದೆ. ಮತ್ತು ಅಧಿಕಾರ್ಯಾದಿಗಳನ್ನು ಸೂಚಿಸದೇ ಇರುವ ಪ್ರಸಂಗ ಬರುವುದರಿಂದ ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನ ಎಂಬರ್ಥವನ್ನು ಹೇಳಬಾರದು.

**ಕಠಿಣಪದಾರ್ಥ**

> **ತತ್ ಪ್ರತಿಯೋಗಿನಃ** = ಆನಂತರ್ಯ ಪ್ರತಿಯೋಗಿಯಾದ, **ಅನನ್ಯಥಾಸಿದ್ಧನಿಯತಾನಂತರಭಾವಿತ್ವಾದಿರೂಪೇ** = ಬೇರೆ ಕಾರಣದಿಂದ ಸಿದ್ಧವಾಗದಿರುವ ಮತ್ತು ತನಗಿಂತ ಪೂರ್ವದಲ್ಲಿ ತಪ್ಪದೇ ಇರುವ ವಸ್ತುವಿನ ಅನಂತರ ಹುಟ್ಟುವುದು ಕಾರ್ಯದ ಲಕ್ಷಣ, **ಅಂತರ್ಗತತಯಾ** = ಒಳಗಡೆ ಸೇರಿಕೊಂಡಿರುವುದರಿಂದ, **ತಸ್ಮಾತ್** = ಪರನು ಹೇಳಿದ ಪರಿಹಾರವು ಸಮಂಜಸವಲ್ಲದ ಕಾರಣ

**प्रकाशः – नापीति ॥ 'पूर्वप्रकृतादर्थादर्थान्तरत्वाशङ्कानिरासाय विवरणोक्तोऽभिप्रायः' इत्यन्वयः । प्रकृतादर्थान्तरत्वं हि यस्मात्कस्माचित् प्रकृतानुपयुक्तादर्थान्तरपरत्वं[१] वा, उत विचारकर्तव्यतायामुपयुक्तात् पुष्कलकारणरूपात् प्रकृताद्वेति विकल्प्य, आद्ये व्यर्थमित्युत्तरम्। तस्यावचनेनापि सिद्धत्वादिति भावः ।**

**द्वितीये त्वाह ॥ आनन्तर्याभिधानमिति ॥ पूर्वप्रकृतस्य कारणत्वं हि अथशब्दस्यानन्तर्यार्थत्वे सत्येव लभ्यते । आनन्तर्यस्य कारणानन्तर्ये मुख्यत्वेनानन्तर्यप्रतियोगिनः प्रकृतस्य कारणत्वलाभादिति भावः ।**

**ननु प्रकृतादर्थादर्थान्तरत्वस्यापि वक्तव्यत्वादावृत्तिः स्यादित्यत आह ॥ आनन्तर्याभिधाने चेति ॥ 'एतदनन्तरमिदम्' इत्युक्त्यैव अर्थान्तरत्वस्य लाभात् पूर्वापरभावस्यार्थभेदप्रयुक्तत्वादित्यर्थः । आनन्तर्यार्थे अथशब्दस्योक्ते, यथा आनन्तर्यप्रतियोगिनः प्रकृतस्य कारणत्वलाभस्तथा प्रकृतादर्थादर्थान्तरपरत्वेऽपि यतः कुतश्चित् प्रकृतादर्थादर्थान्तरपरत्वे प्रकृतानुपयोगेन वैयर्थ्यादेव, विचारकर्तव्यतायामुपयुक्तात् पुष्कलकारणादेवार्थान्तरत्वस्य प्राप्त्या प्रकृतस्य हेतुत्वं लभ्यत इति, तदर्थं नानन्तर्यार्थत्वाग्रहः कार्य इत्याह ॥ आनन्तर्यानभिधानेऽ-**

(१) अर्थान्तरत्वमित्यपि पाठः ।

पीति ।। अयं च निर्वाहस्तवापि तुल्य इत्याह ।। अन्यथेति ।। एवमवचन इत्यर्थः । आनन्तर्यमपि द्वेधा । यस्मात्कस्माश्चित्, विचारकर्तव्यतोपयुक्त-कारणकलापाद्वा । तत्राद्यस्य वैयर्थ्यमेवोत्तरम् । सर्वस्यापि लोकस्य किञ्चित् करणानन्तरमेव किञ्चित्करणस्य स्वभावसिद्धत्वात् । अतो वैयर्थ्यपरिहारार्थमेव द्वितीयमेष्टव्यमित्याशयः । ननु नास्माकमेवं निर्वाहः । साक्षादेव हेतुत्वलाभात् । कारणानन्तर्यं हि मुख्यानंतर्यम् । कार्ये कारणानन्तर्यस्याव्यभिचारित्वात् । विजातीयेनाव्यवहितत्वाच्च । तथाच ''मुख्यामुख्ययोर्मुख्ये कार्यसम्प्रत्ययः'' इति न्यायेनानन्तर्यं वदन्नथशब्दः मुख्यं कारणानन्तर्यमेव वदतीत्यानन्तर्यार्थकेनैवाथशब्देन प्रकृतस्य हेतुत्वं लभ्यत इति शङ्कते ।। नन्विति ।। सत्यमव्यवहितमानन्तर्यं मुख्यानन्तर्यमिति । तद् यदि कार्यकारणयोरेव स्यात्, तदा स्यादेवं त्वदुक्तम् । नचैवम् । 'चैत्रो गतोऽथ मैत्र आगतः' इत्यादावकारणकार्ययोः चैत्रगमनमैत्रा-गमनयोरपि अव्यवहितानन्तर्यदर्शनेन मुख्यमानंतर्यं वदन्नप्ययमथशब्दो न कारणानन्तर्यं वक्तुं शक्नोतीति भावेन परिहरति ।। अव्यवधेरिति ।। 'अकारणात्' चैत्रगमनात्, 'तदकार्ये' मैत्रागमनादौ, यदानन्तर्यं, तत्राप्यव्यवधानस्य सम्भवादित्यर्थः । अत एव ''हलोऽनन्तराः संयोगः'' इत्यादौ 'अनन्तराः अव्यवहिताः' इत्यव्यवहितानन्तर्यं हलामाहेति भावः ।। अमुख्यत्वेति ।। यद्यव्यभिचारित्वमव्यवधानवत् मुख्यत्वे हेतुस्तर्हि व्यवहितानन्तर्ये यथा अमुख्यत्वाभिमानः, तथा 'चैत्रो गतः' इत्यादौ स्यादित्यर्थः ।। नियतपदेति ।। अव्यभिचरितानन्तर्यरूपमुख्यानन्तर्यस्यैव ग्रहणसम्भवेनानियतानन्तर्यवति रासभादावतिव्याप्त्यभावादिति भावः । नचेष्टापत्तिः । सर्वतान्त्रिकविरोधादिति भावः । किञ्च – यद्येवमपि काराणनन्तर्यं मुख्यमित्युच्येत, तर्ह्यर्थान्तरत्वमपि न यतः कुतश्चित् प्रकृतान्मुख्यं, किन्त्वर्थान्तरं प्रति कारणभूतात् प्रकृतादेवेति, साक्षादेव प्रकृतस्य हेतुत्वं सुवचमित्याह ।। कारणस्येति ।। तथाच पूर्वप्रकृतादर्थादर्थान्तरपरत्वेऽप्यथशब्दस्यानन्तर्यार्थत्वं विनैव, पूर्वप्रकृतस्य विचारकर्तव्यतायां हेतुत्वं लभ्यत इति भावः । यदप्यानन्तर्याभिधानेऽर्थान्तरत्व-

स्यांतर्णीततया सिद्धिरिति, तदपि सममित्याह ।। पूर्वेति ।। कथं तर्हि प्रकृतादर्थादर्थान्तरपरत्वस्य निरास इत्यतः, त्रिभिर्हेतुभिस्तमाह ।। तस्मादिति।। परोक्तपरिहारस्यायोगादित्यर्थः ।। अधिकार्यादीति ।। आनन्तर्य एव तत्सूचनादिति भावः ।

गुरुराजीय – एवं भामत्यभिहितं भाष्याभिप्रायं प्रदूष्य विवरणोक्तमपि दूषयितुमाह ।। नापीति ।। प्रकृतादर्थादर्थान्तरपरत्वशङ्कानिरासायेति शङ्काग्रन्थस्यायमर्थः । नानन्तर्यमथशब्दार्थः । प्रकृतादर्थादर्थान्तरस्यापि तदर्थत्वात् । नच तस्य तदर्थत्वे मानाभावः । यत्रार्थान्तरेऽभिहितेऽर्थान्तरविवक्षया ब्रवीति अथैवं मन्यस इति तत्रार्थान्तरत्वविवक्षयाऽप्यथशब्दः किं न स्यादिति ।। अर्थान्तरत्वं हीति ।। यत्किञ्चित् पूर्वप्रकृतं प्रकृतशब्दार्थः किं वा कार्यानियतप्राक्क्षणवृत्तितया प्रकृतप्रकृतशब्दार्थ इति विकल्पार्थः ।। व्यर्थमिति ।। अथशब्दस्य तदर्थत्वमिति शेषः । तावतापि तस्य हेतुत्वाभावादिति भावः ।। आनन्तर्याभिधानमिति ।। नियतप्राक्क्षणवर्तीदमिति ज्ञानं तदा स्यात् यदा तदनन्तरं नियमेनार्थान्तरमुत्पद्यते । तथाचावश्यापेक्षितमानन्तर्यमथशब्देनाभिधीयताम् । अर्थान्तरस्य चार्थात् सिद्धिरिति न तद्ग्रहणं युक्तमिति भावः ।। अन्तर्णीततयेति ।। स्वस्य स्वानन्तर्यासम्भवेनान्तर्यधर्मिप्रतियोगिनोर्भेदसिद्धिरिति भावः । विवरणोक्तोऽभिप्राय इत्यस्य नापीति पूर्वेणान्वयः ।। अन्यथेति ।। अथशब्दस्यानन्तर्यार्थत्वेऽपि न पुष्कलकारणानन्तर्यं सिध्यति । पुष्कलकारणानन्तर्यस्याथशब्दादप्रतीतेरिति भावः ।।

ननु कारणादानन्तर्यमिति ।। पुष्कलकारणात् फलस्यानन्तर्यमित्यर्थः । सामग्रीक्षणादुत्तरक्षणे कार्यस्यावश्यंभावनियमान्न कालव्यवहितत्वं व्यभिचरितत्वं च । अहेतुफलयोस्त्वानन्तर्यं कदाचिद् व्यभिचरति कदाचिद् व्यवधीयते चेति गौणमेव स्यात् । तथाच हेतुफलयोरेवानन्तर्यस्य मुख्यत्वात् तदेवाथशब्देनोत्सर्गतः प्रतीयते । गौणमुख्ययोर्मुख्ये सम्प्रत्ययादिति भावः ।। नियतपदानर्थक्यप्रसङ्गादिति ।। आनन्तर्यशब्दस्य कारणानन्तर्य एव मुख्यत्वेनातिव्याप्तेरेवाभावात् । अमुख्यार्थमादाय लक्षणस्यातिव्याप्तिमाशङ्क्य तत्परिहारे पदान्तरोपादानस्य चासाम्प्रदायिकत्वान्नियतपदवैयर्थ्यमिति भावः । किञ्च प्रकृतादर्थादर्थान्तरपरत्वं प्रदूष्यानन्तर्यार्थवर्णनमयुक्तम् । व्यर्थत्वात् । नच तस्य हेतुत्वलाभार्थमानंत-

**पर्यार्थत्वग्रहः । आनन्तर्यार्थत्वेऽपि तस्य हेतुत्वालाभात् । नच कारणानन्तर्यमेव मुख्यमिति तल्लाभ इति वाच्यम् । तथा सति कारणस्य प्रकृतत्वं मुख्यमित्यपि वक्तुं शक्यत्वेन प्रकृतत्वोक्त्यैव तस्य हेतुत्वलाभेनार्थान्तरत्वस्यैव सम्भवादित्याह ॥ कारणस्य प्रकृतत्वमिति ॥ तथाचानन्तर्याभिधानेऽपि प्रकृतादर्थादर्थान्तर-परत्वमात्रोक्त्या कारणत्वसिद्धेर्व्यर्थ आनन्तर्यार्थत्वग्रह इति भावः । यद्यानन्तर्याभिधाने प्रकृतादर्थादर्थान्तरत्वस्यांतर्णीततया सिद्धेर्नार्थान्तरत्वं तर्हि प्रकृते तस्य पूर्वत्वोक्त्यैव तदपेक्षयाऽर्थान्तरस्य तदानन्तर्यलाभः तदभावे प्रकृतस्य पूर्वत्वायोगादित्यानन्तर्यस्या-प्यन्तर्णीतत्वेन सिद्धत्वान्न तदर्थत्वमित्याह ॥ पूर्वप्रकृतादिति ॥ नन्वेवं भवतामपि पक्षे अथशब्दस्य प्रकृतादर्थादर्थान्तरपरत्वस्यैव सम्भवेन तत्परित्यागेनानन्तर्यार्थत्वो क्तेर्भाष्यकारीयाया अयुक्तत्वापत्त्या तदर्थत्वं निराकर्तव्यम् । तच्च ममापि सममित्याशङ्कामुपसंहारव्याजेन परिहरति ॥ तस्मादिति ॥**

**ವಿವರಣೆ** - ವಿವರಣದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ - ಅಥ ಶಬ್ದಕ್ಕೆ "ಪೂರ್ವಪ್ರಕೃತವಾದುದಕ್ಕಿಂತ ಬೇರೆ" ಎಂಬರ್ಥವನ್ನು ಏಕೆ ಹೇಳಬಾರದು? ಎಂಬ ಶಂಕೆಗೆ ಭಾಷ್ಯಕಾರರ ಉತ್ತರ ಹೀಗಿದೆ - ಪೂರ್ವಪ್ರಕೃತಕ್ಕಿಂತ ಬೇರೆ ಎಂದರೆ ಯಾವುದಾದರೊಂದು ಪೂರ್ವಪ್ರಕೃತಕ್ಕಿಂತ ಭಿನ್ನವೆಂದೋ? ಅಥವಾ ಕಾರಣರೂಪವಾದ ಪೂರ್ವಪ್ರಕೃತಕ್ಕಿಂತ ಭಿನ್ನವೆಂದೋ? ಮೊದಲನೆಯ ಪಕ್ಷವನ್ನು ಅಂಗೀಕರಿಸುವುದು ವ್ಯರ್ಥ. ಏಕೆಂದರೆ ಈಗ ಪ್ರಕೃತವಾದದ್ದು ಹಿಂದೆ ಪ್ರಕೃತವಾದ ವಿಷಯಕ್ಕಿಂತ ಭಿನ್ನವೆಂಬುದು ತಿಳಿದ ವಿಚಾರವೇ ಆಗಿರುವುದರಿಂದ ಅದನ್ನು ಅಥ ಶಬ್ದವು ಹೇಳಬೇಕಾಗಿಲ್ಲ. ಎರಡನೆಯ ಪಕ್ಷದಲ್ಲಿ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದು ಹೇಳಿದ ಮಾತ್ರದಿಂದ ಪ್ರಕೃತವಾದದ್ದಕ್ಕೆ ಪೂರ್ವಪ್ರಕೃತವು ಕಾರಣ-ವೆಂದು ನಿರ್ಣಯವಾಗುವುಲ್ಲ. ಅದಕ್ಕೋಸ್ಕರ 'ಅಥ' ಶಬ್ದಕ್ಕೆ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬರ್ಥವನ್ನು ಬಿಟ್ಟು ಪೂರ್ವಪ್ರಕೃತವಾದುದರ ಅನಂತರ ಎಂಬರ್ಥವನ್ನು ಹೇಳಬೇಕು. ಹೀಗೆ ಹೇಳಿದಾಗ ಕಾರಣದ ಅನಂತರ ಎಂಬರ್ಥವು ಲಭಿಸುತ್ತದೆ. ಏಕೆಂದರೆ ಅನಂತರ ಶಬ್ದವು ಕಾರಣದ ಅನಂತರ ಎಂಬರ್ಥದಲ್ಲಿಯೇ ಮುಖ್ಯವಾಗಿ ಪ್ರಸಿದ್ಧವಾಗಿದೆ. ಆದ್ದರಿಂದ ಪೂರ್ವಪ್ರಕೃತವು ಕಾರಣವೆಂದು ತೀರ್ಮಾನವಾಗುತ್ತದೆ. ಹೀಗೆ ಹೇಳಿದರೆ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದು ತಿಳಿಯಲು 'ಅಥ' ಶಬ್ದವನ್ನು ಆವೃತ್ತಿ ಮಾಡಿಕೊಂಡು 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬರ್ಥವನ್ನು ಹೇಳಬೇಕಾಗುತ್ತದೆ. ಅದಕ್ಕೋಸ್ಕರ 'ಪೂರ್ವಪ್ರಕೃತಕ್ಕಿಂತ ಅನಂತರ' ಎಂಬರ್ಥವನ್ನು ಹೇಳಬಾರದು ಎಂಬ ಶಂಕೆಗೂ ಈಗ ಅವಕಾಶವಿಲ್ಲ. ಏಕೆಂದರೆ ಪೂರ್ವಪ್ರಕೃತಕ್ಕಿಂತ ಅನಂತರ ಎಂದು ತಿಳಿದ ಮಾತ್ರದಿಂದಲೇ ಪೂರ್ವಪ್ರಕೃತಕ್ಕಿಂತ ಬೇರೆ ಎಂಬರ್ಥವೂ ಲಭಿಸುತ್ತದೆ. ಏಕೆಂದರೆ ಪೂರ್ವಪ್ರಕೃತವಾದುದರ ಅನಂತರ ಪ್ರಕೃತವಾಗುವ ವಿಷಯವು ಪೂರ್ವಪ್ರಕೃತವಾದ ವಿಷಯಕ್ಕಿಂತ ಭಿನ್ನವೇ ಆಗಿರುತ್ತದೆ. ಆದ್ದರಿಂದ ಅಥ ಶಬ್ದದ ಆವೃತ್ತಿಗೂ ಅವಕಾಶವಿಲ್ಲ. ಇಷ್ಟು ವಿವರಣಕಾರರ ವ್ಯಾಖ್ಯಾನ.

*ಪರಿಪೂರ್ಣಚಂದ್ರಿಕಾ*

ವಿವರಣಕಾರರ ಈ ವ್ಯಾಖ್ಯಾನವು ಸಮಂಜಸವಲ್ಲ. 'ಪೂರ್ವಪ್ರಕೃತಕ್ಕಿಂತ ಅನಂತರ' ಎಂಬರ್ಥವನ್ನು ಹೇಳಿದಾಗ ಪೂರ್ವಪ್ರಕೃತವು ಕಾರಣವೆಂದು ತಿಳಿಯುತ್ತದೆ ಎಂದರೆ ಪೂರ್ವಪ್ರಕೃತಕ್ಕಿಂತ ಬೇರೆ ಅರ್ಥ ಹೇಳಿದಾಗಲೂ ಪೂರ್ವಪ್ರಕೃತವು ಕಾರಣವೆಂದು ತಿಳಿಯುತ್ತದೆ. ಏಕೆಂದರೆ 'ಪೂರ್ವಪ್ರಕೃತಕ್ಕಿಂತ ಅನಂತರ' ಎಂಬರ್ಥವನ್ನು ಹೇಳಿದ ಮಾತ್ರದಿಂದ ಪೂರ್ವಪ್ರಕೃತವು ಕಾರಣವೆಂದು ನಮಗೆ ತಿಳಿಯುವುದಿಲ್ಲ. ಹೊರತಾಗಿ ವಿಚಾರ ಮಾಡಿದ ಮೇಲೆ ತಿಳಿಯುತ್ತದೆ. ಹೇಗೆಂದರೆ ಅಥಶಬ್ದವು ಪೂರ್ವಪ್ರಕೃತಕ್ಕಿಂತ ಅನಂತರ ಎಂದಷ್ಟೇ ಅರ್ಥವನ್ನು ಹೇಳುತ್ತಿದೆ. ಆ ಪೂರ್ವಪ್ರಕೃತವಾದ ವಸ್ತುವು ಯಾವುದಾದರೂ ಒಂದು ವಸ್ತುವಾಗಿದೆಯೋ ಅಥವಾ ವಿಚಾರಕ್ಕೆ ಕಾರಣವಾದ ವಸ್ತುವಾಗಿದೆಯೋ? ಪೂರ್ವಪ್ರಕೃತವಾದ ಯಾವುದಾದರೂ ಒಂದು ವಸ್ತುವಿನ ಅನಂತರ ಎಂಬ ಮೊದಲನೆಯ ಪಕ್ಷವನ್ನು ಅಂಗೀಕರಿಸಿದರೆ 'ಅತಃ' ಶಬ್ದವು 'ಪೂರ್ವಪ್ರಕೃತದ ಅನಂತರ' ಎಂಬರ್ಥವನ್ನು ಹೇಳುವುದೇ ವ್ಯರ್ಥವಾಗುತ್ತದೆ. ಏಕೆಂದರೆ ಒಂದು ಕ್ರಿಯೆ ನಡೆಯಬೇಕಾದರೆ ಅದರ ಹಿಂದೆ ಏನಾದರೂ ಒಂದು ಕ್ರಿಯೆ ನಡೆದಿರಲೇಬೇಕು. ಹೀಗೆ ವ್ಯವಹಾರದಿಂದಲೇ ಸಿದ್ಧವಾಗಿರಬೇಕಾದರೆ ಇದನ್ನು ತಿಳಿಸಲು ಸೂತ್ರದಲ್ಲಿ 'ಅಥ' ಶಬ್ದವನ್ನು ಹೇಳಬೇಕಾಗಿಲ್ಲ. ಮತ್ತು ವಿಚಾರಕರ್ತವ್ಯತ್ವಕ್ಕೆ ಅನುಪಯುಕ್ತವೂ ಆಗಿದೆ. ಆದ್ದರಿಂದ ಮೊದಲನೆಯ ಪಕ್ಷವು ತಪ್ಪು.

ಹೀಗೆ ವಿಚಾರಕರ್ತವ್ಯತ್ವಕ್ಕೆ ಉಪಯುಕ್ತವಾದ ಕಾರಣ ಸಾಮಗ್ರಿಯ ಅನಂತರ ಎಂಬ ಎರಡನೆಯ ಪಕ್ಷವನ್ನೇ ಅಂಗೀಕರಿಸಬೇಕು. ಹೀಗೆ ಹೇಳಿದಾಗ ಪೂರ್ವಪ್ರಕೃತವು ಕಾರಣವೆಂದು ತಿಳಿಯುವಂತೆ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬರ್ಥವನ್ನು ಹೇಳಿದಾಗಲೂ ಇದೇ ರೀತಿಯಾಗಿ ವಿಚಾರ ಮಾಡಿ ಪೂರ್ವಪ್ರಕೃತವು ಕಾರಣವೆಂದು ತಿಳಿಯಬಹುದು. ಹೇಗೆಂದರೆ - ಯಾವುದಾದರೂ ಒಂದು ಪೂರ್ವ-ಪ್ರಕೃತಕ್ಕಿಂತ ಭಿನ್ನ ಎಂದು ತಿಳಿಯುವುದು ವ್ಯರ್ಥ. ಹಾಗಾಗಿ ವಿಚಾರದ ಕರ್ತವ್ಯತ್ವಕ್ಕೆ ಉಪಯುಕ್ತವಾದ ಕಾರಣ ಕಲಾಪಕ್ಕಿಂತ ಭಿನ್ನ ಎಂದೇ ಅರ್ಥ ಹೇಳಬೇಕು. ಹೀಗೆ ಹೇಳಿದಾಗಲೂ ಪೂರ್ವಪ್ರಕೃತವು ಕಾರಣವಾಗಿದೆಯೆಂದು ತಿಳಿಯುತ್ತದೆ. ಆದ್ದರಿಂದ ಅನಂತರ ಎಂಬ ಅರ್ಥ ಹೇಳಿದರೆ ಮಾತ್ರ ಪೂರ್ವಪ್ರಕೃತವು ಕಾರಣವಾಗುತ್ತದೆಂಬ ನಿಯಮವೇನಿಲ್ಲ.

ಪೂರ್ವಪಕ್ಷ - ನೀವು ಹೇಳಿದಂತೆ ಪೂರ್ವಪ್ರಕೃತವು ಕಾರಣವೆಂದು ತಿಳಿಯಲು ಅಷ್ಟೆಲ್ಲಾ ಕಷ್ಟ ಪಡಬೇಕಿಲ್ಲ. ಸಾಕ್ಷಾತ್ತಾಗಿಯೇ ಪೂರ್ವಪ್ರಕೃತವು ಕಾರಣವೆಂದು ತಿಳಿಯಬಹುದು. ಹೇಗೆಂದರೆ ಕಾರಣದ ಅನಂತರವೇ ಮುಖ್ಯ ಅನಂತರವಾಗಿದೆ. ಏಕೆಂದರೆ ಕಾರಣದ ಅನಂತರದಲ್ಲಿ ಕಾರ್ಯವು ನಿಯಮೇನ ಬರುತ್ತದೆ. ಮಧ್ಯದಲ್ಲಿ ವಿಜಾತೀಯವಾದ ಮತ್ತೊಂದರ ವ್ಯವಧಾನವು ಇರುವುದಿಲ್ಲ. ಆದ್ದರಿಂದ "ಮುಖ್ಯ ಅಮುಖ್ಯಗಳಲ್ಲಿ ಮುಖ್ಯವೇ ಕಾರ್ಯಯೋಗ್ಯವಾಗಿರುತ್ತದೆ'' ಎಂಬ ನ್ಯಾಯದಂತೆ ಅನಂತರ ಎಂಬರ್ಥವುಳ್ಳ ಅಥಶಬ್ದವು ಕಾರಣದ ಆನಂತರ್ಯವನ್ನೇ ಹೇಳುತ್ತದೆ. ಹೀಗೆ ಆನಂತರ್ಯಾರ್ಥಕವಾದ ಅಥಶಬ್ದದಿಂದಲೇ ಪೂರ್ವಪ್ರಕೃತವಾದದ್ದಕ್ಕೆ ಕಾರಣತ್ವವು ಸುಲಭವಾಗಿ ತಿಳಿಯುತ್ತದೆ. ಆದರೆ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂಬರ್ಥವನ್ನು ಇಟ್ಟುಕೊಂಡಾಗ ಪೂರ್ವಪ್ರಕೃತವು ಕಾರಣವೆಂದು ಇಷ್ಟು ಸುಲಭವಾಗಿ ತಿಳಿಯುವುದಿಲ್ಲವೆಂದು 'ನನು' ಇತ್ಯಾದಿ ವಾಕ್ಯಗಳಿಂದ ಶಂಕಿಸಲಾಗಿದೆ.

**ಸಮಾಧಾನ** - ಕಾರಣದ ಆನಂತರ್ಯವೇ ಮುಖ್ಯವೆನ್ನಲು ವ್ಯವಧಾನವಿಲ್ಲದಿರುವುದು, ಹಾಗೂ ವ್ಯಭಿಚಾರವಿಲ್ಲದಿರುವುದು ಎಂದು ಎರಡು ಕಾರಣವನ್ನು ನೀಡಲಾಯಿತು. ಆದರೂ ಈ ಎರಡು ಕಾರಣಗಳು ಸರಿಯಿಲ್ಲ.

ವ್ಯವಧಾನವಿಲ್ಲದ ಆನಂತರ್ಯವೇ ಮುಖ್ಯವಾದದ್ದೆಂದು ನೀವು ಹೇಳಿದ್ದು ಸತ್ಯವೇ ಆಗಿದೆ. ಆದರೆ ಇದರಿಂದ ಪೂರ್ವಪ್ರಕೃತಕ್ಕೆ ಕಾರಣತ್ವವು ತೀರ್ಮಾನವಾಗುವುದಿಲ್ಲ. ಒಂದು ವೇಳೆ ವ್ಯವಧಾನವಿಲ್ಲದ ಆನಂತರ್ಯವು ಕಾರ್ಯಕಾರಣಗಳಿಗೆ ಮಾತ್ರ ಇರುತ್ತಿದ್ದರೆ ಆವಾಗ ನೀವು ಹೇಳಿದಂತೆ ಪೂರ್ವಪ್ರಕೃತಕ್ಕೆ ಕಾರಣತ್ವವು ಸಿದ್ಧವಾಗುತ್ತಿತ್ತು. ಆದರೆ ವ್ಯವಧಾನವಿಲ್ಲದ ಆನಂತರ್ಯವು ಕಾರಣವಲ್ಲದ ವಸ್ತುವಿನ ಆನಂತರ್ಯದಲ್ಲಿಯೂ ಕಂಡಿದೆ. ಉದಾಹರಣೆ - ''ಚೈತ್ರೋ ಗತಃ ಅಥ ಮೈತ್ರಃ ಆಗತಃ'' ಚೈತ್ರನು ಹೋದನು ಆನಂತರ ಮೈತ್ರನು ಬಂದನು'' ಇಲ್ಲಿ ಚೈತ್ರನ ಗಮನಕ್ಕೂ ಮೈತ್ರನ ಆಗಮನಕ್ಕೂ ಮಧ್ಯದಲ್ಲಿ ವ್ಯವಧಾನವಿಲ್ಲದ ಕಾರಣ ಆನಂತರ್ಯವಿದೆ. ಆದರೆ ಇವುಗಳಲ್ಲಿ ಕಾರ್ಯಕಾರಣಭಾವವು ಕಂಡಿಲ್ಲ. ಆದ್ದರಿಂದ ಅಥಶಬ್ದವು ಮುಖ್ಯವಾದ ಆನಂತರ್ಯವನ್ನು ಹೇಳಿದರೂ ಸಹ ಕಾರಣದ ಆನಂತರ್ಯವನ್ನು ಹೇಳಲು ಸಮರ್ಥವಾಗಿಲ್ಲ ಎಂಬುದನ್ನು 'ಅವ್ಯವಹಾನೇನ' ಇತ್ಯಾದಿ ವಾಕ್ಯಗಳಿಂದ ಪರಿಹರಿಸುತ್ತಿದ್ದಾರೆ.

ಈ ವಿಷಯದಲ್ಲಿ ವ್ಯಾಕರಣದ ಮತ್ತೊಂದು ಉದಾಹರಣೆ - 'ಹಲೋಽನಂತರಾಃ ಸಂಯೋಗಃ' (೧-೧-೭) ಎಂಬ ಪಾಣಿನೀಸೂತ್ರದಲ್ಲಿ ವ್ಯವಧಾನವಿಲ್ಲದೆ ಅನೇಕ 'ಹಲ್' ಅಕ್ಷರಗಳು ಸೇರಿದರೆ ಅದಕ್ಕೆ 'ಸಂಯೋಗ' ಎಂಬ ಸಂಜ್ಞೆ ಬರುತ್ತದೆಂದು ಹೇಳಲಾಗಿದೆ. ಇಲ್ಲಿ ಹಲಕ್ಷರಗಳು ವ್ಯವಧಾನವಿಲ್ಲದೆ ಒಂದರ ನಂತರ ಮತ್ತೊಂದು ಇದ್ದರೂ ಸಹ ಇವುಗಳಿಗೆ ಪರಸ್ಪರ ಕಾರ್ಯಕಾರಣಭಾವವು ಇಲ್ಲ. ಆದ್ದರಿಂದ ವ್ಯವಧಾನವಿಲ್ಲದ ಕಾರಣದಿಂದಷ್ಟೇ ಕಾರ್ಯಕಾರಣಭಾವವು ತೀರ್ಮಾನವಾಗುವುದಿಲ್ಲ. ಆದ್ದರಿಂದ ಕಾರಣದ ಆನಂತರ್ಯವೇ ಮುಖ್ಯವೆನ್ನಲು ಅವ್ಯವಧಾನವು ಕಾರಣವಾಗಲಾರದು.

**ಪೂರ್ವಪಕ್ಷ** - ನಾವು ಕೇವಲ ವ್ಯವಧಾನವಿಲ್ಲದಿರುವಿಕೆಯನ್ನು ಕಾರಣವೆಂದು ಹೇಳುವುದಿಲ್ಲ. ಹೊರತಾಗಿ ವ್ಯಭಿಚಾರವಿಲ್ಲದೆ ಎಲ್ಲಿ ಅವ್ಯವಧಾನ ಇರುತ್ತದೊ, ಅಲ್ಲಿ ಕಾರಣದ ಆನಂತರ್ಯವೇ ಮುಖ್ಯವಾಗಿ ಇರುತ್ತದೆಂದು ಹೇಳುತ್ತೇವೆ.

ಸಿದ್ಧಾಂತ - ಇದೂ ಸಹ ಸರಿಯಲ್ಲ. ಏಕೆಂದರೆ ವ್ಯವಧಾನವಿಲ್ಲದೆ ಅವ್ಯಭಿಚಾರಿತವಾಗಿ ಒಂದರ ನಂತರ ಮತ್ತೊಂದು ಎಂದು ಹೇಳಲಾಗದಿದ್ದ ಮಾತ್ರದಿಂದ ಆನಂತರ್ಯವು ಅಮುಖ್ಯವೆಂದು ತಿಳಿಯುವುದಿಲ್ಲ. 'ಚೈತ್ರನು ಹೋದಮೇಲೆ ಮೈತ್ರನು ಬಂದನು' ಎಂಬಲ್ಲಿ ಆನಂತರ್ಯವು ಅಮುಖ್ಯವೆಂದು ಅನಿಸುವುದಿಲ್ಲ.

ಕಾರಣದ ಆನಂತರ್ಯವೇ ಮುಖ್ಯವೆಂದು ವಾದಿಸುವವರಿಗೆ ಮತ್ತೊಂದು ದೋಷ ಬರುತ್ತದೆ. 'ಅನನ್ಯಥಾಸಿದ್ಧನಿಯತಾನಂತರಭಾವಿತ್ವಮ್' ಎಂದು ಕಾರ್ಯದ ಲಕ್ಷಣ. ಅಂದರೆ ತನ್ನ ಉತ್ಪತ್ತಿಗೆ ಅತ್ಯಂತ ಆವಶ್ಯಕವಾಗಿದ್ದು ತನಗಿಂತ ಪೂರ್ವದಲ್ಲಿ ನಿಮಯೇನ ಇರುವ ವಸ್ತುವಿನ ಅನಂತರ ತಾನು ಹುಟ್ಟುವುದು ಎಂದು ಇದರ ಅಭಿಪ್ರಾಯ. ಅನಂತರ ಎಂದರೆ ಕಾರಣದಆನಂತರ್ಯವೇ ಮುಖ್ಯವೆಂದು

ಹೇಳುವುದಾದರೆ ಕಾರ್ಯಲಕ್ಷಣದಲ್ಲಿ 'ನಿಯತ'ಪದ ಕೊಟ್ಟದ್ದು ವ್ಯರ್ಥ. ಏಕೆಂದರೆ ಅನಂತರ ಎಂಬ ಪದದಿಂದಲೇ ನಿಯಮೇನ ಪೂರ್ವಭಾವಿಯಾಗಿರುತ್ತದೆಂದು ತಿಳಿಯಬೇಕಾದರೆ ನಿಯತಪದದ ಅವಶ್ಯಕತೆ ಇಲ್ಲ. ನಿಯತಪದ ಕೊಡದಿದ್ದರೆ ಪೂರ್ವದಲ್ಲಿರುವ ಒಂದು ವಸ್ತುವಿನಿಂದ ಯಾವುದು ಹುಟ್ಟುತ್ತದೊ, ಅದು ಕಾರ್ಯವೆಂದಾಗುತ್ತದೆ. ಹೀಗೆ ಹೇಳಿದರೆ ಕತ್ತೆಯು ಹುಟ್ಟುವ ಮೊದಲು ದಂಡವು ತಪ್ಪದೇ ಇರದಿದ್ದರೂ ಕೆಲವೊಮ್ಮೆ ಇರುವುದರಿಂದ ದಂಡದ ಕಾರ್ಯ ಕತ್ತೆ ಎಂದಾಗಬೇಕಾದೀತೆಂದು ಅತಿವ್ಯಾಪ್ತಿ ಬರುತ್ತದೆ. ಆದರೆ ದಂಡದ ಕಾರ್ಯ ಘಟವೇ ಹೊರತು ಕತ್ತೆಯಲ್ಲ. ಈ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಪ್ರಾಚೀನರು 'ನಿಯತ' ಎಂಬ ಪದವನ್ನು ಕಾರ್ಯಲಕ್ಷಣದಲ್ಲಿ ಸೇರಿಸಿದ್ದಾರೆ. ಕತ್ತೆಯು ಹುಟ್ಟುವ ಮೊದಲು ದಂಡವು ನಿಯಮೇನ ಪೂರ್ವಭಾವಿಯಾಗಿರದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ. ಆದರೆ 'ಅನಂತರ' ಎಂಬ ಪದಕ್ಕೆ ನಿಯತಪದದ ಅರ್ಥವನ್ನು ಹೇಳುವುದಾದರೆ 'ಅನಂತರ' ಎಂಬ ಪದದಿಂದಲೇ ಕತ್ತೆಯಲ್ಲಿ ಅತಿವ್ಯಾಪ್ತಿ ಪರಿಹಾರಕ್ಕಾಗಿ ನಿಯತಪದ ಕೊಟ್ಟದ್ದು ವ್ಯರ್ಥವಾಗಬೇಕಾದೀತು. ಆದ್ದರಿಂದ ಕಾರಣದಆನಂತರ್ಯವೇ ಮುಖ್ಯವೆನ್ನಲು ಅವ್ಯಭಿಚರಿತತ್ವವನ್ನು (ಕಾರಣದ ಅನಂತರ ಕಾರ್ಯವು ತಪ್ಪದೇ ಬರುತ್ತದೆ ಎಂಬುದನ್ನು) ಕಾರಣವನ್ನಾಗಿ ನೀಡಿದ್ದು ಸರಿಯಲ್ಲ.

ಹೀಗೆ ಕಾರಣದಆನಂತರ್ಯಕ್ಕೂ ಮುಖ್ಯತ್ವ ಇದೆ. ಅಕಾರಣದಆನಂತರ್ಯಕ್ಕೂ ಮುಖ್ಯತ್ವ ಇದೆಯೆಂದು ಹೇಳಬೇಕು. ಹೀಗೆ ಹೇಳದೆ ಕೇವಲ ಅಕಾರಣದಆನಂತರ್ಯಕ್ಕೇ ಮುಖ್ಯತ್ವ ಇದೆಯೆಂದು ಹೇಳುವುದಾದರೆ ಪ್ರಕೃತಾದರ್ಥಾತ್ ಅರ್ಥಾಂತರತ್ವ ಎಂಬ ಅರ್ಥವನ್ನು ಇಟ್ಟುಕೊಂಡಾಗಲೂ 'ಕಾರಣಕ್ಕಿಂತ ಬೇರೆ' ಎನ್ನುವುದೇ ಮುಖ್ಯವೆಂದು ಏಕೆ ಹೇಳಬಾರದು? ಏಕೆಂದರೆ ಪೂರ್ವಪ್ರಕೃತವಾದ ಯಾವುದಾದರೂ ಒಂದು ವಸ್ತುಗಿಂತ ಭಿನ್ನವೆಂದು ಹೇಳುವುದು ಅಮುಖ್ಯ. ಏಕೆಂದರೆ ಅಕಾರಣಕ್ಕೆ ಪ್ರಕೃತತ್ವವು ಆಕಸ್ಮಿಕವಾಗಿದೆ. ಕಾರಣಭೂತವಾದ ಪೂರ್ವಪ್ರಕೃತವಸ್ತುವಿಗಿಂತ ಭಿನ್ನ ಎಂಬುದು ಮುಖ್ಯ. ಹೀಗೆ ಪೂರ್ವಪ್ರಕೃತವು ಕಾರಣವೆಂದು ನಿರ್ಣಯ ಮಾಡಲು ಬರುತ್ತದೆ. ಹಾಗಾಗಿ 'ಪೂರ್ವಪ್ರಕೃತದ ಅನಂತರ' ಎಂಬರ್ಥವನ್ನೇ ಅಥ ಶಬ್ದಕ್ಕೆ ಹೇಳಬೇಕಾಗಿಲ್ಲ. ಅನಂತರ ಎಂಬರ್ಥ ಹೇಳದಿದ್ದರೂ ಸಹ ವಿಚಾರಕರ್ತವ್ಯಕ್ಕೆ ಪೂರ್ವಪ್ರಕೃತವು ಕಾರಣವೆಂದು ನಿಶ್ಚಯವಾಗುತ್ತದೆ.

ವಿವರಣದಲ್ಲಿ ಹಿಂದೆ ಮತ್ತೊಂದು ದೋಷ ಹೇಳಲಾಗಿತ್ತು. ಪೂರ್ವಪ್ರಕೃತದ ಅನಂತರ ಎಂಬರ್ಥವನ್ನು ಹೇಳಿದಾಗ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಯಾವುದು ಅನಂತರದಲ್ಲಿರುತ್ತದೋ, ಅದು ಪೂರ್ವಪ್ರಕೃತಕ್ಕಿಂತ ಭಿನ್ನವೇ ಆಗಿರುತ್ತದೆ ಎಂದು. ವಿವರಣಕಾರ ಹೇಳಿದಂತೆ ಇದೂ ನಮಗೂ ಸಮಾನ. ಹೇಗೆಂದರೆ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂದು ಹೇಳಿದಾಗ 'ಪೂರ್ವಪ್ರಕೃತಕ್ಕಿಂತ ಅನಂತರ' ಎಂಬರ್ಥವನ್ನು ಹೇಳಬೇಕಾಗಿಲ್ಲ. ಹೇಗೆಂದರೆ ಪೂರ್ವಪ್ರಕೃತವು ಯಾವಾಗ ಪೂರ್ವವೆನಿಸುತ್ತದೆ ಅಂದರೆ ಪೂರ್ವಪ್ರಕೃತವಾದ ವಸ್ತುವಿಗಿಂತ ಭಿನ್ನವಾದ ವಸ್ತುವಿನ ಅನಂತರ ಬಂದಾಗಷ್ಟೇ ಪೂರ್ವಪ್ರಕೃತವು ಪೂರ್ವಭಾವಿಯಾಗುತ್ತದೆ. ಆದ್ದರಿಂದ ಪೂರ್ವಪ್ರಕೃತಕ್ಕಿಂತ ಭಿನ್ನ ಎಂಬರ್ಥ ಹೇಳಿದಾಗಲೂ ಅನಂತರ ಎಂಬರ್ಥವನ್ನೂ ಹೇಳಿದಂತೆಯೇ ಆಗುತ್ತದೆ.

*ಜಿಜ್ಞಾಸಾಧಿಕರಣ*

ಆದ್ದರಿಂದ ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನ ಎಂಬರ್ಥವನ್ನು ಏಕೆ ಇಟ್ಟುಕೊಳ್ಳಬಾರದು? ಎಂಬ ಪ್ರಶ್ನೆಗೆ ವಿವರಣಕಾರರಿಗೆ ಉತ್ತರ ನೀಡಲು ಸಾಧ್ಯವಾಗಿಲ್ಲ. ಆದರೆ ಮೂರು ಕಾರಣಗಳಿಂದ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂಬರ್ಥವನ್ನು ಇಟ್ಟುಕೊಳ್ಳಲು ಬರುವುದಿಲ್ಲವೆಂದು 'ತಸ್ಮಾತ್' ಇತ್ಯಾದಿ ವಾಕ್ಯದಿಂದ ಸಿದ್ಧಾಂತ ರೀತ್ಯಾ ಸಮಾಧಾನ ನೀಡಲಾಗಿದೆ. ಈ ಸೂತ್ರವೇ ಪ್ರಾರಂಭದ ಸೂತ್ರವಾದ್ದರಿಂದ ಇದಕ್ಕಿಂತ ಮೊದಲು ಯಾವುದೇ ವಿಷಯವೂ ಪ್ರಸಕ್ತವಾಗಿಲ್ಲ. ಆದ್ದರಿಂದ ಈ ಸೂತ್ರದಲ್ಲಿ ಪ್ರಸ್ತಾಪ ಮಾಡಿದ ವಿಷಯವು ಪೂರ್ವಪ್ರಕೃತವಾಗಿದೆಯೇ? ಇಲ್ಲವೇ? ಎಂಬ ಸಂಶಯಕ್ಕೆ ಅವಕಾಶವೇ ಇಲ್ಲ.

ಮತ್ತೊಂದು ಕಾರಣವೇನೆಂದರೆ - ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನವೆಂಬ ಅರ್ಥವನ್ನು ಹೇಳಿದರೆ 'ಅರ್ಹತೆಯನ್ನು ಪಡೆದ ಅನಂತರ' ಎಂದು ಭಾಷ್ಯದಲ್ಲಿ ಹೇಳಿದ ಸ್ಮೃತಿಗೆ ವಿರೋಧ ಬರುತ್ತದೆ.

ಮೂರನೆಯ ಕಾರಣ - ಅಧಿಕಾರ್ಯಾದಿಗಳನ್ನು ಅಥ ಶಬ್ದವೇ ಸೂಚಿಸಬೇಕು. ಒಂದು ವೇಳೆ ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನವೆಂಬ ಅರ್ಥ ಹೇಳಿದರೆ ಅಧಿಕಾರ್ಯಾದಿಗಳನ್ನು ಸೂಚಿಸಿದಂತೆಯೂ ಆಗುತ್ತದೆ. ಆದ್ದರಿಂದ ಪೂರ್ವಪ್ರಕೃತಕ್ಕಿಂತ ಭಿನ್ನ ಎಂಬರ್ಥವನ್ನು ಅಥ ಶಬ್ದಕ್ಕೆ ಹೇಳಲು ಬರುವುದಿಲ್ಲ.

## ಸಾರ

ವಸ್ತುತಃ ಬೇರೆ ಪಕ್ಷವನ್ನು ಹೇಳುವಾಗ, ಮೊದಲಿನ ಪಕ್ಷವನ್ನು ಹೇಳುವಾಗ ಪ್ರಕೃತವಾದ ಶಬ್ದದ ಅಪೇಕ್ಷೆ ಇದ್ದರೂ ಅದು ಅಥಶಬ್ದಾರ್ಥವಲ್ಲ. ಅದು ಸೂತ್ರದಲ್ಲಿ ವಿವಕ್ಷಿತವೆ ಅಲ್ಲವೆ ಎಂಬ ವಿಚಾರವೆ ಅಯುಕ್ತ. ವಿವರಣದಲ್ಲಿ ಇದಕ್ಕೆ ಸಮಾಧಾನವಾಗಿ ಹೀಗೆ ಹೇಳಿದೆ - 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬುದು ಅಥಶಬ್ದದ ಅರ್ಥವಾಗುವುದುಂಟು. ಆದರೆ ಯಾವುದಾದರೊಂದು ಪೂರ್ವಪ್ರಕೃತಕ್ಕಿಂತ ಬೇರೆ ಎನ್ನುವುದು ಸಿದ್ಧವೆ ಆಗಿರುವುದರಿಂದ ಹೇಳುವುದು ವ್ಯರ್ಥ. ಕಾರಣಸಾಮಗ್ರೀ ರೂಪದಿಂದ ಪೂರ್ವಪ್ರಕೃತಕ್ಕಿಂತ ಬೇರೆ ಎನ್ನಬೇಕು. ಈ ಅಭಿಪ್ರಾಯದಲ್ಲಿ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದಿಷ್ಟೇ ಹೇಳಿದರೆ ಸಾಲದು 'ಪೂರ್ವಪ್ರಕೃತದ ಅನಂತರ' ಎನ್ನಬೇಕು. ಆಗ 'ಕಾರಣದ ಅನಂತರ' ಎಂಬುದು ಮುಖ್ಯವಾದ್ದರಿಂದ ಅದನ್ನೇ ಹೇಳಿದಂತಾಗುವುದು. ಇದಕ್ಕಿಂತ ಅಥಶಬ್ದಕ್ಕೆ 'ಅನಂತರ' ಎಂಬ ಅರ್ಥವಿಟ್ಟುಕೊಳ್ಳುವುದೆ ಮೇಲು ಎಂದು. ಈ ವಿವರಣೆ ಸರಿಯಲ್ಲ. 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದು ಹೇಳಿದರೂ 'ಕಾರಣ ಸಾಮಗ್ರಿಗಿಂತ ಬೇರೆ' ಎನ್ನುವುದೆ ಮುಖ್ಯವೆಂದು ತಿಳಿಯಬಹುದು. 'ಯಾವುದಾದರೊಂದು ವಸ್ತುವಿಗಿಂತ ಬೇರೆ' ಎಂಬುದು 'ವಿಚಾರವು ಕರ್ತವ್ಯ' ಎಂಬುದರ ಸಮರ್ಥನೆಗೆ ಉಪಯುಕ್ತವಾಗಲಾರದು ತಾನೆ? 'ಬೇರೆ' ಎಂದರೆ ವಿಷ್ಣು 'ಕಾರಣಕ್ಕಿಂತ ಬೇರೆ' ಮುಖ್ಯವಾಗಬೇಕಿಲ್ಲ, 'ಅನಂತರ' ಎಂದರೆ 'ಕಾರಣದ ಅನಂತರ' ಮುಖ್ಯವಾಗುತ್ತದೆ ಎಂದು ವಿವರಣಕಾರರು ಹೇಳಬಹುದು. ಆನಂತರ್ಯಗಳಲ್ಲಿ ಅವ್ಯವಹಿತ ಆನಂತರ್ಯ ಮುಖ್ಯವೆನ್ನುವುದು ನಿಜ. ಆದರೂ ಅವ್ಯವಹಿತ ಆನಂತರ್ಯ ಕಾರಣದ ಆನಂತರ್ಯವೆ ಆಗಬೇಕೆಂದಿಲ್ಲ. ಚೈತ್ರನ ಗಮನಕ್ಕೂ ಮೈತ್ರನ ಆಗಮನಕ್ಕೂ ನಡುವೆ ವ್ಯವಧಾನವಿಲ್ಲದಿದ್ದಾಗ ಅವುಗಳಲ್ಲಿ ಒಂದು ಇನ್ನೊಂದಕ್ಕೆ ಕಾರಣವಲ್ಲದಿದ್ದರೂ ಆ ಆನಂತರ್ಯ ಮುಖ್ಯವೆ ಆಗಿರುತ್ತದೆ. ಅದು ಅಮುಖ್ಯವೆಂದು ಯಾರಿಗೂ ಅನಿಸುವುದಿಲ್ಲ. ಕಾರಣಾನಂತರ್ಯವೆ ಮುಖ್ಯವಾಗಿದ್ದರೆ ಕಾರ್ಯಲಕ್ಷಣದಲ್ಲಿ 'ತನಗಿಂತ ಪೂರ್ವದಲ್ಲಿ ತಪ್ಪದ ಇರು

ವಸ್ತುವಿನ ಅನಂತರ ತಾನು ಹುಟ್ಟುವುದು ಕಾರ್ಯಲಕ್ಷಣ' ಎಂದು 'ಪೂರ್ವದಲ್ಲಿ ತಪ್ಪದೆ ಇರುವ' ಎಂಬ ವಿಶೇಷಣವನ್ನು ಸೇರಿಸಬೇಕಾಗಿರಲಿಲ್ಲ.

• • • • •

## ಅಧ್ಯಯನದ ಅಥವಾ ಕರ್ಮವಿಚಾರದ ಆನಂತರ್ಯವಲ್ಲ

**तात्पर्यचन्द्रिका –**

**एवमानन्तर्यार्थत्वे स्थिते, न तावत् तदानन्तर्यमध्ययनमात्रात् । "शान्तो दान्तः" इत्यादिश्रुतिविरोधात् । नापि कर्मविचारात् । तदनन्तरं ब्रह्मजिज्ञासेत्यत्र क्रमे श्रुत्यर्थपठनस्थानमुख्यप्रवृत्तिक्रमाणां तत्प्रमाणानामन्यतमस्याभावात् । विस्तृतं चैतदन्यत्र ।**

ಅನುವಾದ - 'ಸೂತ್ರದಲ್ಲಿರುವ ಅಥ ಶಬ್ದವು ಅನಂತರ ಎಂಬರ್ಥವನ್ನೇ ಹೇಳುತ್ತಿದೆ' ಎಂದು ಇದುವರೆಗಿನ ವಿಚಾರದಿಂದ ಸಿದ್ಧವಾಯಿತು. ಯಾವುದರ ಅನಂತರ? ಎಂಬ ಪ್ರಶ್ನೆ ಬಂದರೆ ಅಧ್ಯಯನದ ಅನಂತರ ಎಂಬುದು ಸರಿಯಲ್ಲ. 'ಶಾಂತೋ ದಾಂತಃ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. ಕರ್ಮವಿಚಾರದ ಅನಂತರ ಬ್ರಹ್ಮವಿಚಾರವನ್ನು ಮಾಡಬೇಕು ಎಂಬ ಅರ್ಥವೂ ಸರಿಯಲ್ಲ. ಏಕೆಂದರೆ ಈ ವಿಷಯದಲ್ಲಿ ಮೀಮಾಂಸಕರು ಹೇಳುವ ಶ್ರುತಿ, ಅರ್ಥ, ಪಠನ, ಸ್ಥಾನ, ಮುಖ್ಯ, ಪ್ರವೃತ್ತಿಕ್ರಮಗಳೆಂಬ ಆರುವಿಧ ಪ್ರಮಾಣಗಳಲ್ಲಿ ಯಾವುದನ್ನೂ ಹೇಳಲು ಬರುವುದಿಲ್ಲ. ತರ್ಕತಾಂಡವಾದಿಗ್ರಂಥಗಳಲ್ಲಿ ಇದನ್ನು ಇನ್ನೂ ಹೆಚ್ಚು ವಿವರಿಸಲಾಗಿದೆ.

**ಕಠಿಣಪದಾರ್ಥ**

ಆನಂತರ್ಯಾऽರ್ಥತ್ವೇ ಸ್ಥಿತೇ = 'ಅರ್ಹತೆಯನ್ನು ಸಂಪಾದಿಸಿದ ಅನಂತರ' ಎಂಬರ್ಥವನ್ನು ಸೂತ್ರದ ಅಥಶಬ್ದ ಹೇಳುತ್ತದೆಂದು ಸಮರ್ಥಿಸಿದ್ದರಿಂದ, ಅನ್ಯತ್ರ = ತರ್ಕತಾಂಡವಾದಿಗಳಲ್ಲಿ

**प्रकाशः** – एवम् "अधिकारानन्तर्यार्थश्च" इति भाष्ये "आनन्तर्यार्थः" इत्यंशं समर्थ्य, "अधिकार' इत्यंशमपि समर्थयितुं प्रसक्तं प्रतिक्षिपति ।। एवमिति ।। मात्रपदेन शमादिव्युदासः ।। शान्त इति ।। "तस्मादेवंविच्छान्तो दान्त उपरतस्तितिक्षुः समाहितो भूत्वाऽऽत्मन्येवात्मानं पश्येत्" इति श्रुतौ शान्तादिर्भूत्वा परमात्मानं स्वस्थितं विद्यादिति शमादीनां ब्रह्मज्ञानशेषतोक्तेरिति

ಆದ್ದರಿಂದ ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನ ಎಂಬರ್ಥವನ್ನು ಏಕೆ ಇಟ್ಟುಕೊಳ್ಳಬಾರದು? ಎಂಬ ಪ್ರಶ್ನೆಗೆ ವಿವರಣಕಾರರಿಗೆ ಉತ್ತರ ನೀಡಲು ಸಾಧ್ಯವಾಗಿಲ್ಲ. ಆದರೆ ಮೂರು ಕಾರಣಗಳಿಂದ 'ಪೂರ್ವಪ್ರಕೃತಕ್ಕಿಂತ ಭಿನ್ನ' ಎಂಬರ್ಥವನ್ನು ಇಟ್ಟುಕೊಳ್ಳಲು ಬರುವುದಿಲ್ಲವೆಂದು 'ತಸ್ಮಾತ್' ಇತ್ಯಾದಿ ವಾಕ್ಯದಿಂದ ಸಿದ್ಧಾಂತ ರೀತ್ಯಾ ಸಮಾಧಾನ ನೀಡಲಾಗಿದೆ. ಈ ಸೂತ್ರವೇ ಪ್ರಾರಂಭದ ಸೂತ್ರವಾದ್ದರಿಂದ ಇದಕ್ಕಿಂತ ಮೊದಲು ಯಾವುದೇ ವಿಷಯವೂ ಪ್ರಸಕ್ತವಾಗಿಲ್ಲ. ಆದ್ದರಿಂದ ಈ ಸೂತ್ರದಲ್ಲಿ ಪ್ರಸ್ತಾಪ ಮಾಡಿದ ವಿಷಯವು ಪೂರ್ವಪ್ರಕೃತವಾಗಿದೆಯೇ? ಇಲ್ಲವೇ? ಎಂಬ ಸಂಶಯಕ್ಕೆ ಅವಕಾಶವೇ ಇಲ್ಲ.

ಮತ್ತೊಂದು ಕಾರಣವೇನೆಂದರೆ - ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನವೆಂಬ ಅರ್ಥವನ್ನು ಹೇಳಿದರೆ 'ಅರ್ಹತೆಯನ್ನು ಪಡೆದ ಅನಂತರ' ಎಂದು ಭಾಷ್ಯದಲ್ಲಿ ಹೇಳಿದ ಸ್ಮೃತಿಗೆ ವಿರೋಧ ಬರುತ್ತದೆ

ಮೂರನೆಯ ಕಾರಣ - ಅಧಿಕಾರ್ಯಾದಿಗಳನ್ನು ಅಥ ಶಬ್ದವೇ ಸೂಚಿಸಬೇಕು. ಒಂದು ವೇಳೆ ಅಥ ಶಬ್ದಕ್ಕೆ ಪೂರ್ವಪ್ರಕೃತಕ್ಕಿಂತ ಭಿನ್ನವೆಂಬ ಅರ್ಥ ಹೇಳಿದರೆ ಅಧಿಕಾರ್ಯಾದಿಗಳನ್ನು ಸೂಚಿಸಿದಂತೆಯೂ ಆಗುತ್ತದೆ. ಆದ್ದರಿಂದ ಪೂರ್ವಪ್ರಕೃತಕ್ಕಿಂತ ಭಿನ್ನ ಎಂಬರ್ಥವನ್ನು ಅಥ ಶಬ್ದಕ್ಕೆ ಹೇಳಲು ಬರುವುದಿಲ್ಲ.




ವಸ್ತುತಃ ಬೇರೆ ಪಕ್ಷವನ್ನು ಹೇಳುವಾಗ, ಮೊದಲಿನ ಪಕ್ಷವನ್ನು ಹೇಳುವಾಗ ಪ್ರಕೃತವಾದ ಶಬ್ದದ ಅಪೇಕ್ಷೆ ಇದ್ದರೂ ಅದು ಅಥಶಬ್ದಾರ್ಥವಲ್ಲ. ಅದು ಸೂತ್ರದಲ್ಲಿ ವಿವಕ್ಷಿತವೆ ಅಲ್ಲವೆ ಎಂಬ ವಿಚಾರವೆ ಅಯುಕ್ತ. ವಿವರಣದಲ್ಲಿ ಇದಕ್ಕೆ ಸಮಾಧಾನವಾಗಿ ಹೀಗೆ ಹೇಳಿದೆ - 'ಪೂರ್ವಪ್ರಕೃತಕ್ಕಿಂತ ಬೇರೆ' ಎಂಬುದು ಅಥಶಬ್ದದ ಅರ್ಥವಾಗುವುದುಂಟು. ಆದರೆ ಯಾವುದಾದರೊಂದು ಪೂರ್ವಪ್ರಕೃತಕ್ಕಿಂತ ಬೇರೆ ಎನ್ನುವುದು ಸಿದ್ಧವೆ ಆಗಿರುವುದರಿಂದ ಹೇಳುವುದು ವ್ಯರ್ಥ. ಕಾರಣಸಾಮಗ್ರೀ ರೂಪದಿಂದ ಪೂರ್ವಪ್ರಕೃತಕ್ಕಿಂತ ಬೇರೆ ಎನ್ನಬೇಕು. ಈ ಅಭಿಪ್ರಾಯದಲ್ಲಿ 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದಿಷ್ಟೇ ಹೇಳಿದರ ಸಾಲದು 'ಪೂರ್ವಪ್ರಕೃತದ ಅನಂತರ' ಎನ್ನಬೇಕು. ಆಗ 'ಕಾರಣದ ಅನಂತರ' ಎಂಬುದು ಮುಖ್ಯವಾದ್ದರಿಂದ ಅದನ್ನೇ ಹೇಳಿದಂತಾಗುವುದು. ಇದಕ್ಕಿಂತ ಅಥಶಬ್ದಕ್ಕೆ 'ಅನಂತರ' ಎಂಬ ಅರ್ಥವಿಟ್ಟುಕೊಳ್ಳುವುದೆ ಮೇಲು ಎಂದು. ಈ ವಿವರಣೆ ಸರಿಯಲ್ಲ. 'ಪೂರ್ವಪ್ರಕೃತಕ್ಕಿಂತ ಬೇರೆ' ಎಂದು ಹೇಳಿದರೂ 'ಕಾರಣ ಸಾಮಗ್ರಿಗಿಂತ ಬೇರೆ' ಎನ್ನುವುದೆ ಮುಖ್ಯವೆಂದು ತಿಳಿಯಬಹುದು. 'ಯಾವುದಾದರೊಂದು ವಸ್ತುವಿಗಿಂತ ಬೇರೆ' ಎಂದರೆ 'ವಿಚಾರವು ಕರ್ತವ್ಯ' ಎಂಬುದರ ಸಮರ್ಥನೆಗೆ ಉಪಯುಕ್ತವಾಗಲಾರದು ತಾನೆ? 'ಬೇರೆ' ಎಂದರೆ ವಿಷ್ಣು 'ಕಾರಣಕ್ಕಿಂತ ಬೇರೆ' ಮುಖ್ಯವಾಗಬೇಕಿಲ್ಲ, 'ಅನಂತರ' ಎಂದರೆ 'ಕಾರಣದ ಅನಂತರ' ಮುಖ್ಯವಾಗುತ್ತದೆ ಎಂದು ವಿವರಣಕಾರರು ಹೇಳಬಹುದು. ಆನಂತರ್ಯಗಳಲ್ಲಿ ಅವ್ಯವಹಿತ ಆನಂತರ್ಯ ಮುಖ್ಯವೆನ್ನುವುದು ನಿಜ. ಆದರೂ ಅವ್ಯವಹಿತ ಆನಂತರ್ಯ ಕಾರಣದ ಆನಂತರ್ಯವೆ ಆಗಬೇಕೆಂದಿಲ್ಲ. ಚೈತ್ರನ ಗಮನಕ್ಕೂ ಮೈತ್ರನ ಆಗಮನಕ್ಕೂ ನಡುವೆ ವ್ಯವಧಾನವಿಲ್ಲದಿದ್ದಾಗ ಅವುಗಳಲ್ಲಿ ಒಂದು ಇನ್ನೊಂದಕ್ಕೆ ಕಾರಣವಲ್ಲದಿದ್ದರೂ ಆ ಆನಂತರ್ಯ ಮುಖ್ಯವೆ ಆಗಿರುತ್ತದೆ. ಅದು ಅಮುಖ್ಯವೆಂದು ಯಾರಿಗೂ ಅನಿಸುವುದಿಲ್ಲ. ಕಾರಣಾನಂತರ್ಯವೆ ಮುಖ್ಯವಾಗಿದ್ದರೆ ಕಾರ್ಯಲಕ್ಷಣದಲ್ಲಿ 'ತನಗಿಂತ ಪೂರ್ವದಲ್ಲಿ ತಪ್ಪದೆ ಇರುವ

ವಸ್ತುವಿನ ಅನಂತರ ತಾನು ಹುಟ್ಟುವುದು ಕಾರ್ಯಲಕ್ಷಣ' ಎಂದು 'ಪೂರ್ವದಲ್ಲಿ ತಪ್ಪದೆ ಇರುವ' ಎಂಬ ವಿಶೇಷಣವನ್ನು ಸೇರಿಸಬೇಕಾಗಿರಲಿಲ್ಲ.

● ● ● ● ●

## ಅಧ್ಯಯನದ ಅಥವಾ ಕರ್ಮವಿಚಾರದ ಆನಂತರ್ಯವಲ್ಲ

**तात्पर्यचन्द्रिका –**

**एवमानन्तर्यार्थत्वे स्थिते, न तावत् तदानन्तर्यमध्ययनमात्रात् । "शान्तो दान्तः" इत्यादिश्रुतिविरोधात् । नापि कर्मविचारात् । तदनन्तरं ब्रह्मजिज्ञासेत्यत्र क्रमे श्रुत्यर्थपठनस्थानमुख्यप्रवृत्तिक्रमाणां तत्प्रमाणानामन्यतमस्याभावात् । विस्तृतं चैतदन्यत्र ।**

ಅನುವಾದ - 'ಸೂತ್ರದಲ್ಲಿರುವ ಅಥ ಶಬ್ದವು ಅನಂತರ ಎಂಬರ್ಥವನ್ನೇ ಹೇಳುತ್ತಿದೆ' ಎಂದು ಇದುವರೆಗಿನ ವಿಚಾರದಿಂದ ಸಿದ್ಧವಾಯಿತು. ಯಾವುದರ ಅನಂತರ? ಎಂಬ ಪ್ರಶ್ನೆ ಬಂದರೆ ಅಧ್ಯಯನದ ಅನಂತರ ಎಂಬದು ಸರಿಯಲ್ಲ. 'ಶಾಂತೋ ದಾಂತಃ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. ಕರ್ಮವಿಚಾರದ ಅನಂತರ ಬ್ರಹ್ಮವಿಚಾರವನ್ನು ಮಾಡಬೇಕು ಎಂಬ ಅರ್ಥವೂ ಸರಿಯಲ್ಲ. ಏಕೆಂದರೆ ಈ ವಿಷಯದಲ್ಲಿ ಮೀಮಾಂಸಕರು ಹೇಳುವ ಶ್ರುತಿ, ಅರ್ಥ, ಪಠನ, ಸ್ಥಾನ, ಮುಖ್ಯ, ಪ್ರವೃತ್ತಿಕ್ರಮಗಳೆಂಬ ಆರುವಿಧ ಪ್ರಮಾಣಗಳಲ್ಲಿ ಯಾವುದನ್ನೂ ಹೇಳಲು ಬರುವುದಿಲ್ಲ. ತರ್ಕತಾಂಡವಾದಿಗ್ರಂಥಗಳಲ್ಲಿ ಇದನ್ನು ಇನ್ನೂ ಹೆಚ್ಚು ವಿವರಿಸಲಾಗಿದೆ.

**ಕಠಿಣಪದಾರ್ಥ**

ಆನಂತರ್ಯಾಽರ್ಥತ್ವೇ ಸ್ಥಿತೇ = 'ಅರ್ಹತೆಯನ್ನು ಸಂಪಾದಿಸಿದ ಅನಂತರ' ಎಂಬರ್ಥವನ್ನು ಸೂತ್ರದ ಅಥಶಬ್ದ ಹೇಳುತ್ತದೆಂದು ಸಮರ್ಥಿಸಿದ್ದರಿಂದ. ಅನ್ಯತ್ರ = ತರ್ಕತಾಂಡವಾದಿಗಳಲ್ಲಿ

**प्रकाशः** – एवम् "अधिकारानन्तर्यार्थश्च" इति भाष्ये "आनन्तर्यार्थः" इत्यंशं समर्थ्य, "अधिकार' इत्यंशमपि समर्थयितुं प्रसक्तं प्रतिक्षिपति ।। एवमिति ।। मात्रपदेन शमादिव्युदासः ।। शान्त इति ।। "तस्मादेवंविच्छान्तो दान्त उपरतस्तितिक्षुः समाहितो भूत्वाऽऽत्मन्येवात्मानं पश्येत्" इति श्रुतौ शान्तादिर्भूत्वा परमात्मानं स्वस्थितं विद्यादिति शमादीनां ब्रह्मज्ञानशेषतोक्तेरिति

भावः ॥ **कर्मविचारादिति** ॥ 'आनन्तर्यम्' इत्यस्यानुषङ्गः । 'तदनन्तरम्' कर्मविचारानन्तरम् ॥ **श्रुतीति** ॥ पूर्वतन्त्रे पञ्चमे आद्ये पादे श्रुत्यादीनि क्रमेण षट् प्रमाणानि निरूपितानि । तथाहि । "श्रुतिलक्षणमानुपूर्व्यं तत्प्रमाणत्वात्" इत्याद्यनये "हृदयस्याग्रेऽवद्यति अथ जिह्वायाः अथ वक्षसः" । "वेदं कृत्वा वेदिं करोति" । "अध्वर्युर्गृहपतिं दीक्षयित्वा ब्रह्माणं दीक्षयति" इत्यादौ अथादिश्रुतिः हृदयावदानाद्यानन्तर्ये मानमित्युक्तम् । तथा –"अर्थाच्च" इति द्वितीयनये "अग्निहोत्रं जुहोति यवागूं पचति" इत्यादावग्निहोत्रस्य यवागूसाध्यत्वेन यवागूपाकानन्तरमेव अग्निहोत्रकरणे सामर्थ्यशब्दितमर्थरूपं मानमुक्तम् । तथा - "क्रमेण वा नियम्येत क्रत्वेकत्वे तद्गुणत्वात्" इति चतुर्थनये "समिधो यजति, तनूनपातं यजति, इडो यजति, बर्हिर्यजति, स्वाहाकारं यजति" इत्यादौ पाठक्रम एवानुष्ठानक्रमे मानमुक्तम् । तथा – "स्थानाच्चोत्पत्तिसंयोगात्" इति षष्ठनये ज्योतिष्टोमविकृतिभूते साद्यस्कनामके यागविशेषे "सह पशूनालभते" इति श्रुत्या सहानुष्ठेयस्याग्नीषोमीयसवनीयानुबन्ध्यरूपपशुत्रयस्य मध्ये पूर्वं सवनीयस्यानुष्ठाने "आश्विनं ग्रहं गृहीत्वा सवनीयं पशुमुपाकरोति" इत्युत्पत्तिवाक्यावगताश्विन-ग्रहणसामीप्यरूपं स्थानं प्रमाणमुक्तम् । तथा – "मुख्यक्रमेण वाऽङ्गानां तदर्थत्वात्" इति सप्तम नये "सारस्वतौ भवतः" इति विहिते "पुमान् स्त्रिया" इत्येकशेषेण सरस्वतीदेवताकसरस्वद्देवताकरूपकर्मद्वये निर्वापाद्यनुष्ठाने प्रधान-क्रमापरपर्यायो मुख्यक्रमो मानमुक्तम् । तथा – "प्रवृत्त्या तुल्यकालानां गुणानां तदुपक्रमात्" इति पञ्चमनये "सप्तदश प्राजापत्यान् पशूनालभते" इति वाक्ये विहितसप्तदशपशुद्रव्यकसप्तदशयागाङ्गपश्वङ्गतया विहितेषु प्रोक्षणोपाकरणपर्यग्नि-करणादिधर्मेषु सप्तदशपशुमध्ये प्रथममत्र पशौ प्रोक्षणमनन्तरमत्रेति विशेषे मानाभावेनेच्छयैव कचित् पशावादौ प्रोक्षणेऽनुष्ठिते, प्रथमप्रवृत्तप्रोक्षणानुरोधेन तत्रैवोपाकरणाद्यनुष्ठाने नियामकः प्रोक्षणप्रवृत्तिक्रम इत्युक्तम् । तेषु नैकमपि कर्मविचारानन्तरं ब्रह्मविचार इत्यत्रास्तीत्यर्थः । **विस्तरस्तु गुरुपादकृतन्याय-मौक्तिकमालायां ध्येयः** ॥

ಪಂಪ್ಲಾರ್ಚಂದ್ರಿಕಾ

विस्तृतमिति ।। तर्कताण्डवादाविति भावः । अतोऽधिकारानन्तर्यमेवाथ-शब्दार्थ इति स्थितम् ।

ವಿವರಣೆ - ಭಾಷ್ಯದಲ್ಲಿ ಶ್ರೀಮದಾಚಾರ್ಯರು 'ಅಥಶಬ್ದಃ ಅಧಿಕಾರಾನಂತರ್ಯಾರ್ಥಃ' ಎಂದು ಹೇಳಿದ್ದಾರೆ. ಇದರಲ್ಲಿರುವ ಆನಂತರ್ಯವೆಂಬ ಅಂಶವನ್ನು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಈಗ ಅಧಿಕಾರವೆಂಬ ಅಂಶವನ್ನು ಸಮರ್ಥಿಸಲು ಹೊರಟಿದ್ದಾರೆ. 'ಅಥ' ಶಬ್ದಕ್ಕೆ 'ಅನಂತರ' ಎಂದರ್ಥ. ಆರಂಭ, ಮಂಗಳ, ಪೂರ್ವಪ್ರಕೃತಾಪೇಕ್ಷೆ, ಮೊದಲಾದ ಯಾವ ಅರ್ಥವನ್ನೂ ಹೇಳಲಾಗದೆಂದು ಇದುವರೆಗೂ ಸಮರ್ಥಿಸಿದ್ದೇವೆ. ಆದ್ದರಿಂದ ಅನಂತರಶಬ್ದಕ್ಕೆ 'ಅರ್ಹತೆಯನ್ನು ಪಡೆದ ಅನಂತರ' ಎಂಬರ್ಥವನ್ನು ಹೇಳಬೇಕು. ವೇದಾಧ್ಯಯನದ ಅನಂತರ ಎಂದಾಗಲೀ ಕರ್ಮವಿಚಾರ ಮಾಡಿದ ಅನಂತರ ಎಂದಾಗಲೀ ಹೇಳಲಾಗದೆಂದು 'ಏವಮ್' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ವೇದಾಧ್ಯಯನದ ಅನಂತರ ಬ್ರಹ್ಮವಿಚಾರ ಮಾಡಬೇಕು ಶಮದಮಾದಿಗಳ ಅವಶ್ಯಕತೆ ಇಲ್ಲವೆಂದು ಹೇಳಿದರೆ ಶ್ರುತಿವಿರೋಧ ಬರುತ್ತದೆ. -

ತಸ್ಮಾದೇವಂ ವಿಚ್ಛಾಂತೋ ದಾಂತ ಉಪರತಸ್ತಿತಿಕ್ಷುಃ।
ಸಮಾಹಿತೋ ಭೂತ್ವಾSತ್ಮನ್ಯೇವಾತ್ಮಾನಂ ಪಶ್ಯೇತ್ ॥

'ಆದ್ದರಿಂದ ಹೀಗೆ ತಿಳಿದುಕೊಂಡವನು ಶಮ, ದಮ, ವೈರಾಗ್ಯ, ಸಹನೆ, ತತ್ವಜ್ಞಾನಗಳನ್ನು ಸಂಪಾದಿಸಿ ತನ್ನೊಳಗೆ ಪರಮಾತ್ಮನನ್ನು ಕಾಣಬೇಕು.' ಈ ಶ್ರುತಿಯಲ್ಲಿ ಬ್ರಹ್ಮಜ್ಞಾನವನ್ನು ಹೊಂದುವ ಮೊದಲು ಶಮದಮಾದಿಗಳನ್ನು ಸಂಪಾದಿಸಬೇಕೆಂದು ಹೇಳಲಾಗಿದೆ.

ಇನ್ನು ಕರ್ಮವಿಚಾರದ ಅನಂತರ ಬ್ರಹ್ಮಜ್ಞಾನವನ್ನು ಸಂಪಾದಿಸಬೇಕೆಂಬುದೂ ಸಹ ಸರಿಯಲ್ಲ. ಹೀಗೆ ಹೇಳಲು ಪ್ರಮಾಣವಿಲ್ಲ. ಕರ್ಮವಿಚಾರದ ಅನಂತರ ಬ್ರಹ್ಮವಿಚಾರವೆಂದಾಗ ಕ್ರಮವನ್ನು ಹೇಳಿದಂತಾಯಿತು. ಈ ರೀತಿ ಕ್ರಮವನ್ನು ಹೇಳಲಾಗದು. ಕ್ರಮವಿಷಯದಲ್ಲಿ ಪೂರ್ವಮೀಮಾಂಸೆಯಲ್ಲಿ ಸಮರ್ಥಿಸಿದ ಶ್ರುತಿ, ಅರ್ಥ, ಪಠನ, ಸ್ಥಾನ, ಮುಖ್ಯ ಪ್ರವೃತ್ತಿಕ್ರಮಗಳೆಂಬ ಆರುವಿಧಪ್ರಮಾಣಗಳಲ್ಲಿ ಯಾವುದೊಂದನ್ನು ಕೂಡ ಪ್ರಮಾಣವನ್ನಾಗಿ ಹೇಳಲಾಗದು. ಈ ಆರು ಪ್ರಮಾಣಗಳನ್ನು ಪಂಚಮಾಧ್ಯಾಯದ ಪ್ರಥಮಪಾದದಲ್ಲಿ ವಿವರಿಸಲಾಗಿದೆ. ಅದು ಹೀಗೆ -

### ಶ್ರುತ್ಯರ್ಥಪಾಠಾಧಿಕರಣ

### (೧)ಶ್ರುತಿಲಕ್ಷಣಮಾನುಪೂರ್ವ್ಯಂ ತತ್ಪ್ರಮಾಣತ್ವಾತ್ ( ೫- ೧ - ೧ )

(१) (भाट्टसङ्ग्रहः) –

श्रुतिलक्षणमानुपूर्व्यं तत्प्रमाणत्वात् ।। १ ।।

वेदे पदार्थानां यः क्रमो विहितः स एव क्रम आश्रयणीयः, उतानियम इति सन्देहे, वेदविहितक्रमानुसरणेन तदनुसन्धानव्यग्रतया प्रयोगप्राशुभावानापत्तेरनियतक्रमेण

'ಹೃದಯಸ್ಯಾಗ್ರೇವದ್ಯತಿ ಅಥ ಜಿಹ್ವಾಯಾ ಅಥ ವಕ್ಷಸಃ'

'ಯಜ್ಞಪಶುವಿನ ಹೃದಯಭಾಗವನ್ನು ಮೊದಲು ಕತ್ತರಿಸಬೇಕು. ಅನಂತರ ನಾಲಿಗೆಯನ್ನು ಕತ್ತರಿಸಬೇಕು' ಎಂದು ಶ್ರುತ್ಯರ್ಥ. ಅನಂತರ ಹೃದಯವನ್ನು ಕತ್ತರಿಸಬೇಕೆಂದು ಶ್ರುತ್ಯರ್ಥ. ಈ ಶ್ರುತಿಯಲ್ಲಿರುವ ಅಥಶಬ್ದದಿಂದಲೇ 'ಕ್ರಮ' ಗೊತ್ತಾಗುತ್ತಿದೆ. ಹೃದಯಚ್ಛೇದನದ ಅನಂತರ ಜಿಹ್ವಾಚ್ಛೇದನವೆಂಬ ಕ್ರಮವನ್ನು ಅಥಶಬ್ದ ಹೇಳುತ್ತಿದೆ. ಈ ಕ್ರಮಕ್ಕೆ ಶ್ರುತಿಯಲ್ಲಿರುವ ಅಥಶಬ್ದವೇ ಪ್ರಮಾಣವಾಗಿದೆ.

ಇದರಂತೆ 'ವೇದಂ ಕೃತ್ವಾ ವೇದಿಂ ಕರೋತಿ' 'ಒಂದು ಮುಷ್ಟಿದರ್ಭೆಯನ್ನು ಸಿದ್ಧಪಡಿಸಿ ಅದನ್ನು ಬಿಡಿಸಿ ಇಡಲು ಸ್ಥಳವನ್ನು ಸಿದ್ಧಪಡಿಸಬೇಕು' ಎಂಬ ಶ್ರುತಿಯಲ್ಲೂ ಆನಂತರ್ಯ ತಿಳಿಯುತ್ತಿದೆ. ಇಲ್ಲಿರುವ

---

पदार्थानामनुष्ठानमिति **प्राप्ते, वेदस्याप्रवृत्तप्रवर्तकत्वरूपविधायकत्वोपेतत्वात्** तादृशवेद-विहितक्रमस्यानादरे वेदस्याननुष्ठापनलक्षणाप्रामाण्यापत्तेस्तद्विहित एव क्रम आश्रयणीय इति **सिद्धान्तः । तदाह सूत्रे, श्रुतिलक्षणं वेदविहितमेव आनुपूर्व्यं** क्रम आश्रयणीयः । कुतः? **तत्प्रमाणत्वात् वेदस्य प्रमाणत्वादिति । फलन्तु,** प्रयोगप्राशुभावोऽपि प्रमाणप्राप्तक्रम-विशेषानुसारेणैव कर्तव्य इति ।

वर्णकान्तरम्

**वर्णकान्तरन्तु,** क्रमः किं विधेयः? उताविधेय इति **सन्देहः । पूर्वपक्षस्तु,** किं क्रमो यज्यादिवद् भावार्थत्वेन विधेयः, किं वा सोमादिवद् भावार्थविशेषणत्वेन, अथ 'वायव्यं श्वेतम्' इत्यादौ श्वेतादिवत् विधेयद्रव्यादिधर्मत्वेन । नाद्यद्वितीयौ । तदभावात् । तृतीयेऽपि किमेकैकपदार्थधर्मः क्रमः, किं वा पदार्थसङ्घातधर्मः । नाद्यः । एकैकपदार्थधर्मत्वेना-प्रतीतेः । नान्त्यः । सङ्घातस्याविधेयत्वात् । अतो विध्यन्वयासंभवादविधेयः क्रम इति । **सिद्धान्तस्तु,** क्रमस्य भावार्थत्वाभावेन स्वरूपेण याज्यादेरिवाविधेयत्वेऽपि दध्यादिवत् क्रियाविशेषणत्वेन विधेयत्वं भविष्यति । तदा जुहोतीत्यादावक्रियारूपदध्यादिद्रव्यं क्रियाविशेषणं सद् विधीयते ''दधिसाधनकं होमं कुर्यात्'' इति । एवं ''अनेन क्रमेण चरुं कुर्यात्'' इति क्रमोपलक्षिताः पदार्था एव क्रियाविशेषणत्वेन विधीयन्ते । पदार्थानां प्रत्येकं क्रमभाक्त्वाभावेऽप्यन्योन्यं मिलिताः संयोगादिवद् विततिरूपेण क्रमभाक्त्वमस्त्येवेति विधेय एव क्रमः । **तदाह सूत्रे, आनुपूर्व्यं क्रमः श्रुतिलक्षणं** श्रुतिविधेयः । नच केनापि शब्देनानभिहितत्वेनानुपस्थितत्वादविधेयतेति वाच्यम् । **तत्प्रमाणकत्वात्** क्त्वाप्रत्ययादिश्रुतिप्रमाणकत्वादिति । **फलन्तु, पूर्वपक्षे** येन केनापि क्रमेणानुष्ठानसिद्धेरविहितस्यानङ्गत्वेन तद्वैगुण्येऽपि क्रतोरवैगुण्यात् क्रमाध्यायोऽनारभ्य इति । **सिद्धान्ते** विहितस्य क्रमस्य त्यागे क्रतोर्वैगुण्येन क्रमस्यावश्यकत्वात् निरूपणार्थं क्रमलक्षणारम्भो युक्त इति ।

इति प्रथमं श्रुतिबलीयस्त्वाधिकरणम् (क्रमनियमाधिकरणम्)

ಪರಿಪೂರ್ಣಚಂದ್ರಿಕಾ

ಕ್ತ್ವಾ ಪ್ರತ್ಯಯದಿಂದ ವೇದಿಕರಣಕ್ಕೆ ಪೂರ್ವಭಾವಿತ್ವವು ವೇದಿಕರಣ ಪಶ್ಚಾದ್ಭಾವಿತ್ವವು ತಿಳಿಯುತ್ತದೆ. ಈ ಕ್ರಮಕ್ಕೆ ಕ್ತ್ವಾ ಪ್ರತ್ಯಯವೇ ಪ್ರಮಾಣವಾಗಿದೆ.

'ಅಧ್ವರ್ಯುಃ ಗೃಹಪತಿಂ ದೀಕ್ಷಯಿತ್ವಾ ಬ್ರಹ್ಮಾಣಂ ದೀಕ್ಷಯತಿ' 'ಅಧ್ವರ್ಯು ಆದವನು ಮೊದಲು ಯಜಮಾನನಿಗೆ ದೀಕ್ಷೆ ಕೊಟ್ಟು ಅನಂತರ ಬ್ರಹ್ಮನಿಗೆ ದೀಕ್ಷೆ ಕೊಡಬೇಕು' ಇಲ್ಲಿರುವ ಕ್ತ್ವಾ ಪ್ರತ್ಯಯದಿಂದಲೂ ಪೌರ್ವಾಪರ್ಯವೆಂಬ ಕ್ರಮ ಗೊತ್ತಾಗುತ್ತದೆ. ಇವೇ ಮೊದಲಾದ ಸ್ಥಳಗಳಲ್ಲಿ 'ಅಥ' 'ಕ್ತ್ವಾ' ಮೊದಲಾದ ಪ್ರತ್ಯಯಗಳಿಂದ ಕ್ರಮವು ತಿಳಿಯುತ್ತದೆ. ಕ್ರಮವಿಷಯದಲ್ಲಿ ಅಥಾದಿಶ್ರುತಿಗಳೇ ಪ್ರಮಾಣಗಳಾಗಿವೆ. (೫-೧-೧)

೨) ಅರ್ಥಕ್ರಮ : - ಅರ್ಥಾಚ್ಚ - (೫-೧-೨) (೧) 'ಅರ್ಥಶಬ್ದಕ್ಕೆ ಸಾಮರ್ಥ್ಯ' ಎಂದರ್ಥ. ಸಾಮರ್ಥ್ಯದಿಂದಲೂ ಕ್ರಮವನ್ನು ತಿಳಿಯಬಹುದು. 'ಅಗ್ನಿಹೋತ್ರಂ ಜುಹೋತಿ ಯವಾಗೂಂ ಪಚತಿ' 'ಅಗ್ನಿಹೋತ್ರಹೋಮ ಮಾಡಬೇಕು ಯವಾಗುವನ್ನು (ಗಂಜಿಯನ್ನು) ಬೇಯಿಸಬೇಕು' ಎಂಬೆರಡು ಶ್ರುತಿಗಳು ಕ್ರಮವಾಗಿ ಪ್ರಾಪ್ತವಾಗಿವೆ. ಶ್ರುತಿಯನ್ನು ನೋಡಿದಾಗ ಮೊದಲು ಅಗ್ನಿಹೋತ್ರ ಮಾಡಬೇಕು. ಅನಂತರ ಯವಾಗುಪಚನ ಮಾಡಬೇಕೆಂದೆನಿಸುತ್ತದೆ. ಆದರೆ ಯವಾಗುವೆಂಬ ಯಜ್ಞದ ಆಹುತಿಯೇ ಇಲ್ಲದೆ ಅಗ್ನಿಹೋತ್ರ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಸಾಮರ್ಥ್ಯಬಲದಿಂದ ಮೊದಲು ಯವಾಗುಪಚನ ಮಾಡಬೇಕು. ಅನಂತರ ಅಗ್ನಿಹೋತ್ರ ಮಾಡಬೇಕೆಂದು ತಿಳಿಯಬೇಕು. ಯವಾಗುಪಚನದ ಅನಂತರ ಅಗ್ನಿಹೋತ್ರವೆಂಬ ಪೌರ್ವಾಪರ್ಯಕ್ರಮವಿಷಯದಲ್ಲಿ ಅರ್ಥಕ್ರಮವೇ ಪ್ರಮಾಣವಾಗಿದೆ. (೫-೧-೨)

೩) ಪಠನಕ್ರಮ :- 'ಕ್ರಮೇಣ ವಾ ನಿಯಮ್ಯೇತ ಕ್ರತ್ವೇಕತ್ವೇ ತದ್ಗುಣತ್ವಾತ್'(೨) (೫-೧-೪)

---

(१) अथ द्वितीयं क्रमस्य क्वचिदार्थिकत्वाधिकरणम् अर्थाच्च ।। २ ।।

पूर्ववैषम्येण शङ्कनात् सङ्गतिः । "अग्निहोत्रं जुहोति" "यवागूं पचति" इत्यत्र होमयवागूपाकयोः किं क्रमानियमः, किं वा पूर्वं पाकस्ततो होम इति नियम इति सन्देहे, पूर्वत्रेवेह श्रुतिरूपनियामकप्रमाणाभावात् पाकहोमविध्योस्तावन्मात्रे विधिपर्यवसानान्नात्र क्रमविधिरित्यनियम इति प्राप्ते, यवाग्वा होमद्रव्यत्वं तावत् "यवाग्वा अग्निहोत्रं जुहोति" इति तृतीययाऽवगम्यते । नच होमानन्तरं क्रियमाणो यावगूपाकोऽर्थवान् । न वा यवागू-द्रव्येण विना होमनिष्पत्तिरस्ति । तस्मात् पक्त्वा होमः कार्य इति सिद्धान्तः । तदाह सूत्रे अर्थाच्चेति । आनुपूर्व्यमित्यस्ति । न केवलं श्रुतिलक्षणम् । किन्त्वार्थात् क्रतुनिर्वृत्तिरूप-प्रयोजनवशाच्चाऽनुपूर्व्यं गम्यत इत्यर्थः । फलन्तु, होमार्थं यवागूपाकः पूर्वमनुष्ठेय इति ।

इति द्वितीयं क्रमस्य क्वचिदार्थिकत्वाधिकरणम्

(२) अथ तृतीयं क्रमस्य क्वचिदनियमाधिकरणम्

अनियमोऽन्यत्र ।। ३ ।।

पूर्वन्यायेनात्र शङ्कनात् सङ्गतिः । दर्शपूर्णमासप्रकरणे यजमानकाण्डे पञ्चप्रयाजानामनु-

ಜಿಜ್ಞಾಸಾಧಿಕರಣ

ಈ ಸೂತ್ರದಲ್ಲಿ ಅನುಷ್ಠಾನಕ್ರಮಕ್ಕೆ ಪಠನಕ್ರಮವನ್ನು ಪ್ರಮಾಣವನ್ನಾಗಿ ಹೇಳಲಾಗಿದೆ. ಅದು ಹೀಗೆ

ಸಮಿಧೋ ಯಜತಿ ತನೂನಪಾತಂ ಯಜತಿ

ಇಡೋ ಯಜತಿ ಬರ್ಹಿರ್ಯಯಜತಿ

ಸ್ವಾಹಾಕಾರಂ ಯಜತಿ

ಸಮಿದ್ಯಾಗ ಮಾಡಬೇಕು. ತನೂನಪಾದ್ಯಾಗ ಮಾಡಬೇಕು. ಇಡ್ಯಾಗ ಮಾಡಬೇಕು. ಬರ್ಹಿರ್ಯಾಗ ಮಾಡಬೇಕು, ಸ್ವಾಹಾಕಾರಯಾಗ ಮಾಡಬೇಕು. ಹೀಗೆ ಬ್ರಾಹ್ಮಣದಲ್ಲಿ ಕ್ರಮವಾಗಿ ಪಠಿತವಾಗಿದೆ. ಇದನ್ನು ಪಠನಕ್ರಮವೆಂದು, ಅಥವಾ ಪಾಠಕ್ರಮವೆಂದು ಕರೆಯುತ್ತಾರೆ. ಇದು ಅನುಷ್ಠಾನಕ್ರಮವಿಷಯದಲ್ಲಿ ಪ್ರಮಾಣವಾಗಿದೆ.

೪) ಸ್ಥಾನಕ್ರಮ - ಸ್ಥಾನಾಚ್ಚೋತ್ಪತ್ತಿಸಂಯೋಗಾತ್ (೫-೧-೬)[೧]

---

मन्त्रणमन्त्राः क्रमेण पठिताः "वसन्तमृतूनां प्रीणामि । स मा प्रीतः प्रीणातु । ग्रीष्ममृतूनां प्रीणामि । स मा प्रीतः प्रीणातु" इत्यादि तैत्तिरीयशाखायाम् । शाखान्तरे च "एको ममैका तस्य, योऽस्मान् द्वेष्टि यं च वयं द्विष्मः" "द्वौ मम द्वे तस्य, योऽस्मान् द्वेष्टि यं च वयं द्विष्मः" इत्यादि । तत्र शाखाद्वयाम्नातानामपि मन्त्राणामदृष्टार्थत्वात् समुच्चयोऽङ्गीकृतः । तत्र येन यजमानेन तैत्तिरीयगतेन "वसन्तमृतूनां प्रीणामि" इत्यनेन प्रथममनुमन्त्रितः, पश्चाच्च "एको मम" इत्यनेनानुमन्त्रितस्तेन यजमानेन तनूनपादपि द्वितीयः प्रयाजः तैत्तिरीयगतेनैव "ग्रीष्ममृतूनाम्" इत्यनेनानुमन्त्र्य पश्चाच्छाखान्तरगतेन "द्वौ मम" इत्यनेनानुमन्त्रणीय इति नियमः, उत "द्वौ मम" इत्यनेनापि प्रथममनुमन्त्र्य पश्चात् "ग्रीष्ममृतूनां प्रीणामि" इत्यनेनानुमन्त्रयितुं शक्यत इत्यनियम इति सन्देहः । पूर्वपक्षस्तु, पूर्वत्र यथा प्रयोजनवशात् क्रमस्तथात्रापि श्रुत्यर्थपाठादिप्रमाणाभावेऽपि प्रजापत्यपशुषु यस्य पशोः पूर्वमुपाकरणं तस्यैव पूर्वं नियोजनादीति वक्ष्यमाणप्रमाण-प्रवृत्तिक्रमरूपप्रमाणादस्तु पूर्वोक्ता नियमकोटिरिति प्राप्ते, पश्वङ्गानामुपाकरणादीनां प्रयोगवचनावगतान्योन्यप्रत्यासत्त्यनुग्रहाय प्रवृत्तिक्रमाश्रयणेऽपीहैकशाखागतानुमन्त्रण-मन्त्राणां न प्रत्यासत्तिबोधकमानमस्ति । तेषां भिन्नभिन्नप्रयाजाङ्गत्वेनैकत्र समावेशा-भावात् । तस्मान्नियामकाभावादनियम इति सिद्धान्तः । तदाह सूत्रे, अन्यत्र श्रुत्यादिनियामकहीनस्थले अनियम इति । फलन्त्वनियमेनानुमन्त्रणम् ।

इति तृतीयं क्रमस्य क्वचिदनियमाधिकरणम्

(१) अथ चतुर्थं क्रमस्य क्वचित् पाठानुसारिताधिकरणम्

(पाठक्रमन्यायः सूत्राणि ४-७)

*ಪರಿಪೂರ್ಣಚಂದ್ರಿಕಾ*

ಈ ಸೂತ್ರದಲ್ಲಿ ಸ್ಥಾನಕ್ರಮಕ್ಕೆ ಪ್ರಾಮಾಣ್ಯವನ್ನು ಸಾಧಿಸಿದ್ದಾರೆ. ಜ್ಯೋತಿಷ್ಟೋಮವೆಂಬ ಸೋಮ-ಯಾಗದ ವಿಕೃತಿಯಾಗವೇ 'ಸಾದ್ಯಸ್ಕ' ಎಂಬ ಯಾಗ (ಒಂದೇ ದಿನದಲ್ಲಿ ಮಾಡಿ ಮುಗಿಸುವ ಯಾಗಕ್ಕೆ ಸಾದ್ಯಸ್ಕ ಎನ್ನುತ್ತಾರೆ.) ಈ ಸಾದ್ಯಸ್ಕದಲ್ಲಿ ಮೂರು ಪಶುಯಾಗಗಳನ್ನು ಮಾಡಬೇಕು. ೧) ಅಗ್ನೀಷೋಮೀಯ ೨) ಸವನೀಯ ೩) ಅನುಬಂಧ್ಯವೆಂಬ ಮೂರು ಯಾಗಗಳು ಪ್ರಕೃತಿಯಾಗದಲ್ಲಿ ವಿಹಿತವಾಗಿವೆ. ಇದು ವಿಕೃತಿಯಾಗವಾದ್ದರಿಂದ ಪ್ರಕೃತಿಯಾಗದಲ್ಲಿ ಪ್ರಾಪ್ತವಾದಂತೆ ಕ್ರಮವಾಗಿ ಈ ಯಾಗಗಳನ್ನು ಆಚರಿಸಬೇಕೋ? ಅಥವಾ ಸ್ವತಂತ್ರವಾಗಿ ಆಚರಿಸಬಹುದೋ? ಎಂದು ಇಲ್ಲಿ ವಿಮರ್ಶಿಸಲಾಗಿದೆ. 'ಸಹ ಪಶೂನಾಲಭತೇ' ಎಂಬ ವಿಧಿಯಂತೆ 'ಅಗ್ನೀಷೋಮೀಯ, ಸವನೀಯ, ಅನುಬಂಧ್ಯವೆಂಬ ಮೂರೂ ಯಾಗಗಳನ್ನು ಏಕಕಾಲದಲ್ಲಿ ಅನುಷ್ಠಾನ ಮಾಡಬೇಕು. ಆದರೆ ಸವನೀಯವನ್ನೇ ಮೊದಲು ಆಚರಿಸಬೇಕು. ಹೊರತು ಪ್ರಕೃತಿಯಾಗದಂತೆ ಅಗ್ನೀಷೋಮೀಯವನ್ನು ಮೊದಲು ಆಚರಿಸಬಾರದು. ಏಕೆಂದರೆ "ಆಶ್ವಿನಗ್ರಹಂ ಗೃಹೀತ್ವಾ ಸವನೀಯಮ್ ಪಶುಮುಪಾಕರೋತಿ" ಎಂದು ಪ್ರಕೃತಿಯಾಗದಲ್ಲಿ ಆಶ್ವಿನಪಾತ್ರಗ್ರಹಣದ ಅನಂತರ ಸವನೀಯಪಶುಯಾಗ ಮಾಡಬೇಕೆಂದು ಹೇಳಲ್ಪಟ್ಟಿದೆ. ಅದರಂತೆ ವಿಕೃತಿಯಾಗದಲ್ಲಿಯೂ ಆಶ್ವಿನಪಾತ್ರೆಯನ್ನು ಎತ್ತಿಕೊಂಡ ಅನಂತರಕಾಲದಲ್ಲಿಯೇ ಸವನೀಯಯಾಗವನ್ನು ಮಾಡಬೇಕು. ಇಲ್ಲಿ ಸ್ಥಾನಶಬ್ದಕ್ಕೆ ಸಾಮೀಪ್ಯ ಎಂದರ್ಥ. ಆಶ್ವಿನಪಾತ್ರಗ್ರಹಣಕಾಲದ ಸಾಮೀಪ್ಯ ಸವನೀಯಪಶುವಿಗೆ ಪ್ರಕೃತಿಯಾಗದಲ್ಲಿ ನಿಶ್ಚಯವಾಗಿದೆ. ಇದೇ ಸಾಮೀಪ್ಯ ವಿಕೃತಿಯಲ್ಲಿಯೂ

---

**क्रमेण वा नियम्येत क्रत्वेकत्वे तद्गुणत्वात् ।। ४ ।। (अशाब्द इति चेत् स्याद्वाक्यशब्दत्वात् ।। ५ ।। अर्थकृते वाऽनुमानं स्यात्, क्रत्वेकत्वे परार्थत्वात् स्वेन त्वर्थेन सम्बन्धस्तस्मात् स्वशब्दमुच्येत ।। ६ ।। तथाचान्यार्थदर्शनम् ।। ७ ।।**

पूर्वन्यायेनात्र शङ्कनात् सङ्गतिः । दर्शपूर्णमासयोः "समिधो यजति" "तनूनपातं यजति" "इडो यजति" "बर्हिर्यजति" "स्वाहाकारं यजति" इति क्रमेण पठितानां पञ्च-प्रयाजानामनियमेनानुष्ठानमुत पाठक्रमेणेति सन्देहे, पूर्वत्रेव श्रुत्यर्थादिरूपक्रमनियामक-प्रमाणाभावात् पाठक्रमस्य च प्रमाणधर्मत्वेन स्वयमप्रमाणत्वेनाविधायकत्वात्, यजतीत्याख्यातानाञ्च समिदादिपदार्थमात्रविधिपर्यवसानादनियमेनानुष्ठानमिति प्राप्ते सिद्धान्तः, अनुष्ठानक्रमो हि पदार्थावगतिक्रमाधीनः । तत्क्रमश्च वाक्यावगतिक्रमाधीनः । तत्क्रमश्च पाठक्रमाधीन इति भवति पाठक्रमादप्यनुष्ठानक्रमः । पाठक्रमादध्ययनकाले जातपदार्थप्रतिपत्तिक्रमस्यानुष्ठानकालेऽननुवृत्तावप्यध्ययनकालीनक्रमानुभवजन्यस्मरणानां क्रमभाविनां सम्भवात् । स्वाध्यायविधिविहितश्च क्रमो विध्यवस्थायामनुपयुक्तोऽपि स्मृतिकाल उपयुज्यत इति यथापाठक्रममनुष्ठाननियम इति । तदाह सूत्रे, क्रत्वेकत्वे क्रतोरेकत्वे, कर्तुरप्येकत्वात् क्रमाकांक्षायां पाठक्रमेणैवानुष्ठानक्रमो नियम्येत । कुतः? तद्गुणत्वात् पाठक्रमस्य अनुष्ठानक्रमार्थत्वादिति । फलन्तु क्रमेणानुष्ठानम् ।

**इति चतुर्थं क्रमस्य क्वचित् पाठानुसारिताधिकरणम् (पाठक्रमन्यायः सूत्राणि ४-७)**

*ಪಾಠಕ್ರಮಾಧಿಕರಣ*

ಇದೆ. ವಿಕೃತಿಯಾಗದಲ್ಲಿ ಅನುಷ್ಠಾನ ಮಾಡಬೇಕಾಗಿರುವ ಮೂರು ಪಶುಯಾಗಗಳ ಮಧ್ಯ ಮೊದಲು ಸವನೀಯಪಶುಯಾಗವನ್ನೇ ಮಾಡಬೇಕೆನ್ನಲು ಸಾಮೀಪ್ಯವು (ಸ್ಥಾನಕ್ರಮವು) ಪ್ರಮಾಣವಾಗಿದೆ.

೫) ಮುಖ್ಯಕ್ರಮ - ಮುಖ್ಯಕ್ರಮೇಣ ವಾಽಂಗಾನಾಂ ತದರ್ಥತ್ವಾತ್ (೫-೧-೭)[೧]

---

(१) अथ पञ्चमं क्रमस्य कचित् प्रथमप्रवृत्त्यनुसारिताधिकरणम्

(प्रावर्तिकक्रमन्यायः सूत्राणि ८-१२)

**प्रवृत्त्या तुल्यकालानां गुणानां तदुपक्रमात् ॥ ८ ॥**

**(सर्वमिति चेत् ॥ ९ ॥ नाकृतत्वात् ॥ १० ॥ क्रत्वन्तरवदिति चेत् ॥ ११ ॥ नासमवायात् ॥ १२ ॥**

**पूर्वत्रेवात्र क्रमनियमे श्रुत्याद्यन्यतमप्रमाणाभावादनियम इति शङ्कनात् सङ्गतिः ।** वाजपेये ''सप्तदश प्राजापत्यान् पशूनालभते'' इति श्रुतम् । ते च पशवः ''वैश्वदेवीं कृत्वा प्राजपत्यैश्चरन्ति'' इति एककालकर्तव्यतया चोदिता इति सह क्रियन्ते । तत्राऽरादुपकारकाणां प्रयाजादीनां सकृदनुष्ठानेऽपि न सन्निपातिनां इति सन्निपाते प्रधानानामित्येकादशे वक्ष्यमाणतयोपाकरणादयः सन्निपातित्वात् प्रतिपश्वावर्तनीयाः । तेषाञ्चावृत्तिरेकस्मिन् पशौ कात्स्न्र्येन कृत्वाऽन्यस्यापि तथैव क्रियन्त इति न भवति । किन्तु सर्वेषामुपाकरणं कृत्वा ततो नियोजनमित्येवमुत्तरपादीयाद्यनये वक्ष्यते । तत्रास्मिन् पशावादावुपाकरणमुपक्रम्यस्मिन् पशौ समाप्यमित्यत्र नियामकप्रमाणाभावादिच्छया यत्र क्वच पशावुपाकरणमुपक्रम्य सर्वेषु तत् कृत्वा कचित् पशौ समाप्यत इति स्थितिः । तत्र नियोजनादिसंस्कारेषु सन्देहः, येन क्रमेणोपाकरणं प्रवृत्तं तेनैव क्रमेण नियोजनादिकं कार्यमुतानियम इति । तेनैव क्रमेण नियोजनादि कार्यमित्यत्र श्रुत्यर्थपाठेष्वन्यतमस्यापि प्रमाणस्याभावान्नास्ति नियम इति प्राप्ते सिद्धान्तः, एकैकस्य पशोरुपाकरणादयः संस्काररूपाः प्रयोगवचनानुसारात् प्रत्यासन्नाः कार्याः । तत्राध्यपशावनुष्ठितोपाकरणस्यान्यपशुसम्बन्धिभिः षोडशभिरुपाकरणैर्व्यवधानं ''प्राजापत्यैश्चरन्ति'' इति पशुसाहित्यवचनात् सह्यमपि । पश्वन्तरेषु नियोजनं कृत्वा पश्चादुपक्रान्तपशौ नियोजने कृते तत्रानुष्ठितस्योपाकरणस्यातिव्यवधानं स्यात् । तच्च प्रयोगविध्यवगतप्रत्यासत्तिभङ्गापातादसह्यम् । उपाकरणे प्रवृत्त्या बुद्धिस्थक्रमस्य त्यागे कारणञ्च नेति येन क्रमेणोपाकरणं तेनैव यूपे नियोजनादिति प्रवृत्तिक्रम एव नियोजनाद्यनुष्ठानक्रमे मानमिति । तदाह सूत्रे, तुल्यकालानाम् एकस्मिन् काले विहितानां गुणानां उपाकरणादीनां क्रमः प्रवृत्त्या नियम्येत । कुतः? तदुपक्रमात् प्रवृत्तिक्रमस्य प्रत्यासत्यानुग्रहाय प्रयोगविधिनोपक्रमादुपसंग्रहादिति । फलन्तु, उपाकरणक्रमेण नियोजनादीति व्यक्तम् ।

इति पञ्चमं क्रमस्य कचित् प्रथमप्रवृत्त्यनुसारिताधिकरणम्

ಪಂಪೂರ್ಣಚಂದ್ರಿಕಾ

'ಸಾರಸ್ವತೌ ಭವತಃ' ಎಂಬ ವಿಧಿವಾಕ್ಯ ಶ್ರುತವಾಗಿದೆ. ಇಲ್ಲಿ 'ಸಾರಸ್ವತೌ' ಶಬ್ದದ ವಿಗ್ರಹವನ್ನು ಹೀಗೆ ಹೇಳಬೇಕು - 'ಸರಸ್ವತೀ ಚ ಸರಸ್ವಾಂಶ್ಚ ಸರಸ್ವಂತೌ, ಸರಸ್ವತೋಃ ಇಮೌ ಸಾರಸ್ವತೌ' ಎಂದು. ಸ್ತ್ರೀವಾಚಕಶಬ್ದಕ್ಕೂ ಪುಂವಾಚಕಶಬ್ದಕ್ಕೂ ದ್ವಂದ್ವಸಮಾಸವಾದಾಗ ಪುಂವಾಚಕಶಬ್ದವೇ ಉಳಿಯುತ್ತದೆಂದು 'ಪುಮಾಂಸ್ತ್ರಿಯಾ' ಎಂಬ ಸೂತ್ರ ಹೇಳುತ್ತಿದೆ. 'ಮಾತಾ ಚ ಪಿತಾ ಚ ಪಿತರೌ' ಎಂಬಂತೆ, ಇಲ್ಲಿಯೂ 'ಸರಸ್ವತೌ' ಎಂದಾಗುತ್ತದೆ. ಆದ್ದರಿಂದ 'ಸಾರಸ್ವತೌ' ಎಂದರೆ ಸ್ವರಸ್ವತೀ ದೇವತೆಯ ಯಾಗ ಮತ್ತು ಸರಸ್ವತ್ ದೇವತೆಯ ಯಾಗಗಳೆಂದು ಅರ್ಥ. ಈ ಯಾಗಗಳ ಅಂಗಗಳನ್ನು ಅನುಷ್ಠಾನ ಮಾಡುವಾಗ ಸರಸ್ವತೀದೇವತಾಕಯಾಗದ ಅಂಗವಾದ ನಿರ್ವಾಪಾದಿಗಳನ್ನು ಮೊದಲು ಮಾಡಬೇಕು. ಅನಂತರ ಸರಸ್ವತ್‌ದೇವತಾಕಯಾಗದ ಅಂಗವಾದ ನಿರ್ವಾಪಾದಿಗಳನ್ನು ಮಾಡಬೇಕು. ಅನಂತರ ಸರಸ್ವತೀಯಾಗವನ್ನು ಅದರ ನಂತರ ಸರಸ್ವತ್‌ಯಾಗವನ್ನು ಅನುಷ್ಠಾನ ಮಾಡಬೇಕು. ಹೀಗೆ ಪ್ರಧಾನದ ಕ್ರಮವನ್ನು ಅನುಸರಿಸಿ ಅಂಗಕ್ರಮವನ್ನು ತಿಳಿಯಬೇಕು. ಆದ್ದರಿಂದ ಪ್ರಧಾನಕ್ರಮವು ಅಂಗಕ್ರಮವಿಷಯದಲ್ಲಿ ಪ್ರಮಾಣವಾಗುತ್ತದೆ. ಇದೇ ಮುಖ್ಯಕ್ರಮ.

೬) ಪ್ರವೃತ್ತಿಕ್ರಮ -

**ಪ್ರವೃತ್ತ್ಯಾ ತುಲ್ಯಕಾಲಾನಾಂ ಗುಣಾನಾಂ ತದುಪಕ್ರಮಾತ್ (೫ -೧ -೫) (೧)**

---

**(प्रावर्तिकक्रमन्यायः सूत्राणि ८-१२)**

**(१) अथ षष्ठं क्रमस्य क्वचित् स्थानानुसारिताधिकरणम्**

**स्थानाच्चोत्पत्तिसंयोगात् ॥ १३ ॥**

पूर्वन्यायेनात्र शङ्कनात् सङ्गतिः । साद्यस्क्राख्यः कश्चित् सोमयागः । स च ज्योतिष्टोमप्रकृतिकत्वात् ततश्चोदकप्राप्तत्रिपशुकः । तच्च पशुत्रयं "सह पशूनालभते" इति वचनात् सह क्रियते । सहकरणञ्च सवनीयस्थान एवेति तृतीयान्त्यपादीयोपान्त्याधिकरणे तत्काले वा लिङ्गदर्शनादित्यत्र स्थितम् । तत्र चोदकप्राप्तोपाकरणादयः प्रतिपशु कर्तव्यतया पूर्वोक्तदिशा प्राप्ताः । तत्रोपाकरणं किमनियमेन यत्र क्व च पशावदौ कार्यमुत अग्नीषोमीयपशावादावथ सवनीयपशाविति त्रेधा सन्देहः । पूर्वपक्षस्तु, यथाहि पूर्वत्र प्राजापत्यपशुषूपाकरण-मादावत्रैव पशाविति नियामकाभावादिच्छया यत्र क्व च पशौ कृतं तथेहापि सहाऽ-लम्भ्येष्वग्नीषोमीयसवनीयानुबन्ध्याख्यपशुष्वप्यादावत्रैवेत्यत्र नियामकाभावादनियम इत्येकः । यथाहि पूर्वत्र प्राजापत्यपशुषु प्रवृत्त्या नियोजनादिनियमस्तथात्रापि प्रकृतावग्नीषोमीयपशावादावुपाकरणानुष्ठानस्य दर्शनात् तस्यैव नियामकत्वात् प्रकृतिगतप्रवृत्त्या अग्नीषोमीयपशावादावुपाकरणमित्यन्यः । सिद्धान्तस्तु, सवनीयपशुर्हि "आश्विनं ग्रहं गृहीत्वा आग्नेयं सवनीयं पशुमुपाकरोति" इति स्वस्थान एवाश्विनग्रहसमीपे वर्तते । अन्यौ तु पशुसहालम्भवचनात् सवनीयपशुस्थाने प्राप्तौ । तथाचाऽश्विनग्रहानन्तरं

'ಸಪ್ತದಶಪ್ರಾಜಾಪತ್ಯಾನ್ ಪಶೂನಾಲಭೇತ' ಎಂಬ ಮಂತ್ರದಲ್ಲಿ ಹದಿನೇಳು ಪ್ರಾಜಾಪತ್ಯಯಾಗಗಳನ್ನು ವಿಧಿಸಿದ್ದಾರೆ. ಹದಿನೇಳು ಪಶುಗಳ ಹದಿನೇಳು ಯಾಗಗಳನ್ನು ಒಟ್ಟಿಗೆ ಮಾಡಬೇಕು. ಪಶುಗಳನ್ನು ತ್ಯಾಗಮಾಡುವ ಮೊದಲು ಆ ಪಶುಗಳಿಗೆ ಪ್ರೋಕ್ಷಣ, ಸ್ಪರ್ಶನ, ಪರ್ಯಗ್ನಿಕರಣ ಮೊದಲಾದ ಅಂಗಗಳನ್ನು ಆಚರಿಸಬೇಕು. ಹದಿನೇಳು ಪಶುಗಳಲ್ಲಿ ಮೊದಲು ಯಾವ ಪಶುವಿಗೆ ಈ ಪ್ರೋಕ್ಷಣವನ್ನು ಆಚರಿಸಬೇಕೆನ್ನಲು ಪ್ರಮಾಣವಿಲ್ಲ. ಆದ್ದರಿಂದ ಇಚ್ಛೆ ಬಂದಂತೆ ಯಾವುದಾದರೊಂದು ಪಶುವನ್ನು ಸ್ವೀಕರಿಸಿ ಪ್ರೋಕ್ಷಣವನ್ನು ಆಚರಿಸಬೇಕು. ಎರಡನೇ ಮತ್ತು ಮೂರನೆಯ ಪಶುಗಳನ್ನು ಕೂಡ ಪ...

---

सवनीयपशुरेवोपस्थाप्यते । प्रकृतौ तदानन्तर्यस्य क्लृप्तत्वात् । ततः सवनीयस्य प्राथम्यं स्थानान्निश्चिते स्थानभ्रष्टयोरग्नीषोमीयानुबन्ध्ययोः प्रकृताविव यथाक्रमं पौर्वापर्यमिति । तदाह सूत्रे, सवनीय आदावनुष्ठेयः । स्थानात् तस्य आश्विनग्रहानन्तरस्थानत्वात् । तस्य तत्कालता च "आश्विनं ग्रहं गृहीत्वा" इत्युत्पत्तावेव तेन कालेन संयोगादिति । फलन्तु सवनीयस्यादावनुष्ठानं व्यक्तम् ।

इति षष्ठं क्रमस्य क्वचित् स्थानानुसरिताधिकरणम्

अथ सप्तममङ्गक्रमस्य मुख्यक्रमानुसारिताधिकरणम्

मुख्यक्रमेण वाऽङ्गानां तदर्थत्वात् ।। १४ ।।

पूर्ववैषम्येणात्र शङ्कनात् सङ्गतिः । चित्रायागे सप्तानां हविषां मध्ये चतुर्थपञ्चमे समाम्नायेते "सारस्वतौ भवतः । एतद्वै दैव्यं मिथुनं यत् सरस्वती सरस्वांश्च" इति । "सरस्वती च सरस्वांश्च" इति विगृह्य समासे कृते "पुमान् स्त्रिया" इत्येकशेषे सरस्वन्ताविति भवति । ते देवते ययोर्यागयोस्तौ सारस्वतौ यागौ । एतच्च मिथुनमिति वाक्यशेषादवसीयते । तयोर्यागयोर्निर्वापादयश्चोदकतः प्राप्ताः । तत्र निर्वापः किमनियमेन कर्तव्य उत स्त्रीदैवत्यं पूर्वं निरुप्य पश्चात् पुंदैवत्यं निर्वप्तव्यमिति सन्देहे, पूर्वत्र सवनीयपशोः प्रकृताविव विकृतावपि साद्यस्क्रे आश्विनानन्तर्यरूपस्वस्थानत्वेनाऽश्विनग्रहानन्तरं तस्यैवोपस्थित्या तस्मिन्नेवादावुपाकरणानुष्ठानेऽपीह स्त्रीदैवत्यस्य पुंदैवत्यस्य वा आदौ निर्वाप इत्यत्र पूर्वोक्तश्रुत्यर्थपाठस्थानादिप्रमाणेषु कस्याप्यभावादनियम इति प्राप्ते सिद्धान्त्यते, होत्रकाण्डे स्त्रीदेवतायाः पूर्वं याज्यानुवाक्ये समाम्नाते "प्र णो देवी सरस्वती" इति । पश्चात् पुंदेवतायाः "पीपिवांसं सरस्वतः" इति । तेन याज्यानुवाक्याक्रमेण स्त्रीदैवत्ययागस्य प्राथम्यावगतेः, धर्माणां मुख्ययागार्थत्वात्, मुख्यशब्दितप्रधानक्रमेणैव क्रमे नियते सति स्त्रीयागस्यैव मुख्यस्य पूर्वं निर्वापः कार्य इति । तदाह सूत्रे, मुख्यस्य क्रमेणैव प्रधानक्रमेणैवाङ्गानां क्रमः । कुतः? तदर्थत्वात् तेषां प्रधानार्थत्वेन प्रधानप्रत्यासत्त्या-वश्यंभावादिति । फलन्तु, सरस्वतीदैवत्यस्य प्राङ् निर्वाप इति व्यक्तम् ।

इति सप्तममङ्गक्रमस्य मुख्यक्रमानुसारिताधिकरणम्

ಪರಿಪೂರ್ಣಚಂದ್ರಿಕಾ

ಬಂದಂತೆ ಸ್ವೀಕರಿಸಿ ಪ್ರೋಕ್ಷಣವನ್ನು ಆಚರಿಸಬೇಕು. ಹೀಗೆ ಹದಿನೇಳು ಪಶುಗಳಿಗೆ ಪ್ರೋಕ್ಷಣಸಂಸ್ಕಾರವನ್ನು ಆಚರಿಸಬೇಕು. ಅನಂತರ ಸ್ಪರ್ಶನಸಂಸ್ಕಾರ ಮಾಡಲು ಪ್ರಾರಂಭಿಸಬೇಕು. ಆದರೆ ಈ ಸಂಸ್ಕಾರವನ್ನು ಮನ ಬಂದಂತೆ ಮಾಡಲು ಬರುವುದಿಲ್ಲ. ಹೊರತಾಗಿ ಪ್ರೋಕ್ಷಣ ಮಾಡಿದ ಪಶುಗಳ ಕ್ರಮವನ್ನು ಅನುಸರಿಸಿ ಆಚರಿಸಬೇಕು. ಆದ್ದರಿಂದ ಸ್ಪರ್ಶನಕ್ರಮದ ನಿರ್ಧಾರಕ್ಕೆ ಪ್ರೋಕ್ಷಣಕ್ರಮದ ಅನುಷ್ಠಾನವು ಪ್ರಮಾಣವಾಗಿದೆ.

ಪ್ರಕೃತ. ದಾರ್ಷ್ಟಾಂತಿಕದಲ್ಲಿ ಕರ್ಮವಿಚಾರದ ಅನಂತರ ಬ್ರಹ್ಮವಿಚಾರವೆಂಬ ಕ್ರಮದಲ್ಲಿ ಈ ಆರು ಕ್ರಮಬೋಧಕಪ್ರಮಾಣಗಳ ಮಧ್ಯ ಒಂದನ್ನೂ ಕೂಡ ಹೇಳಲು ಬರುವುದಿಲ್ಲ. ಇದರ ಬಗ್ಗೆ ಇನ್ನೂ ಹೆಚ್ಚಿನ ವಿಚಾರಗಳನ್ನು ಗುರುಗಳಾದ ವಿಜಯೀಂದ್ರತೀರ್ಥರ ನ್ಯಾಯಮೌಕ್ತಿಕಮಾಲೆಯನ್ನು ನೋಡಿ ತಿಳಿಯಬೇಕು.

### ಸಾರ

**ಅಥಶಬ್ದಾರ್ಥ ಕರ್ಮವಿಚಾರಾನಂತರ್ಯವಲ್ಲ**

ರಾಮಾನುಜಮತದಲ್ಲಿ ಕರ್ಮವಿಚಾರಾನಂತರ ಬ್ರಹ್ಮವಿಚಾರ ಮಾಡಬೇಕು ಎಂದು ಸೂತ್ರದ ಅರ್ಥ. ಆದರೆ ಈ ವಿಷಯದಲ್ಲಿ ಶ್ರುತಿ, ಅರ್ಥ, ಪಠನ, ಸ್ಥಾನ, ಮುಖ್ಯ ಪ್ರವೃತ್ತಿಕ್ರಮಗಳೆಂಬ ಆರು ಪ್ರಮಾಣಗಳಲ್ಲಿ ಒಂದೂ ಸಿಗುವುದಿಲ್ಲ.

## 'ನಾಲ್ಕುವಿಧ ಸಾಧನಗಳ ಅನಂತರ' ಎಂಬರ್ಥವೂ ತಪ್ಪು

### तात्पर्यचन्द्रिका –

**नापि परेषां भाष्योक्तात् ''नित्यानित्यवस्तुविवेकः इहामुत्रार्थभोगविरागः । शमदमादिसम्पत्तिः मुमुक्षुत्वं च'' इति साधनचतुष्टयसम्पद्रूपादधिकारात्[1] ।**

---

(१) शाङ्करभाष्यम् – उच्यते – नित्यानित्यवस्तुविवेकः, इहामुत्रार्थभोगविरागः, शमदमादिसाधनसंपत्, मुमुक्षुत्वं च । तेषु हि सत्सु धर्मजिज्ञासाया ऊर्ध्वं च शक्यते ब्रह्म जिज्ञासितुं ज्ञातुं च न विपर्यये । तस्मादथशब्देन यथोक्तसाधनसंपत्त्यानन्तर्यमुपदिश्यते ।
भामती – तदाह - उच्यते – नित्यानित्यवस्तुविवेक इत्यादि । नित्यः प्रत्यगात्मा, अनित्या देहेन्द्रियविषयादयः । तद्विषयश्चेद्विवेको निश्चयः, कृतमस्य ब्रह्मजिज्ञासया, ज्ञातत्वाद्ब्रह्मणः । अथ विवेको ज्ञानमात्रं न निश्चयः, तथा सत्येष विपर्यासादन्यः संशयः स्यात्, तथा च न वैराग्यं भावयेत्, अभावयन्कथं ब्रह्मजिज्ञासाहेतुः, तस्मादेवं

**तथाहि नित्यानित्यवस्तुविवेको नाम किं ब्रह्मैव नित्यमन्यदनित्यमिति** विवेकः, **किं वा आत्मानात्मसमुदाये नित्यत्वानित्यत्वे स्तः, तौ च धर्मौ, तयोश्च** धर्मिभ्यां **भवितव्यमिति निश्चयः । यद्वा अनित्यस्य संसारस्य किञ्चिदधिष्ठानमस्तीति** निश्चयो **नतु ब्रह्मेति । नाद्यः । ज्ञातव्यस्य प्रागेव ज्ञाततया विचारवैफल्यात् । नच सगुणनिर्गुणविवेकाखण्डसमन्वयार्थं शास्त्रमिति युक्तम् । भामत्यां नित्यानित्य-शब्दयोः सत्यानृतपरत्वेनोक्ततया, ब्रह्मैव सत्यमन्यदनृतमिति विवेकस्य** प्रागेव **सिद्धौ, तदर्थस्य सगुणनिर्गुणविवेकादेरप्यनपेक्षितत्वात् । नहि** श्रुतितात्पर्यधीः **स्वरूपेणापेक्षिता, । किन्तु ज्ञेयनिश्चायकतया । नचोक्तादन्यत् मुमुक्षुज्ञेयमस्ति । जीवब्रह्मभेदस्यापि ब्रह्मातिरिक्ततया तन्मिथ्यात्वस्य, तदभेदस्यापि ब्रह्ममात्रतया तत्सत्त्वस्यापि तेनैव निश्चितत्वाच्च। न द्वितीयः । तन्मात्रेणानात्मप्रहाणेन आत्मविचारे प्रवृत्त्ययोगात् । ऐहिकामुष्मिकभोगे विरागायोगाच्च । नान्त्यः । ब्रह्मशब्दार्थत्वादेः प्रकारस्याज्ञानेऽपि, वस्तुतो ब्रह्मणः अनात्माधिष्ठानस्य** शास्त्र-**वेद्यस्य ज्ञातत्वेन शास्त्रवैयर्थ्यात् ।**

ಅನುವಾದ - ಅದ್ವೈತಭಾಷ್ಯದಲ್ಲಿ ಅಥ ಶಬ್ದಕ್ಕೆ ನಿತ್ಯಾನಿತ್ಯವಸ್ತು ವಿವೇಕ, ಐಹಿಕಪಾರತ್ರಿಕ ಸುಖಭೋಗಗಳಲ್ಲಿ ವೈರಾಗ್ಯ, ಶಮದಮಾದಿಗಳ ಸಂಪತ್ತು, ಮೋಕ್ಷಾಭಿಲಾಷೆ ಎಂಬ ನಾಲ್ಕುವಿಧವಾದ ಸಾಧನ ಸಂಪತ್ತುಗಳೇ ಜಿಜ್ಞಾಸುವಿನಲ್ಲಿರಬೇಕಾದ ಅಧಿಕಾರಗಳು ಇಂತಹ ಅಧಿಕಾರದ ಆನಂತರ್ಯವನ್ನು ಅಥಶಬ್ದವು ಹೇಳುತ್ತದೆಂದು ಹೇಳಲಾಗಿದೆ.

ಆದರೆ ಇದು ಸರಿಯಲ್ಲ. ಏಕೆಂದರೆ ನಿತ್ಯಾನಿತ್ಯವಸ್ತುವಿವೇಕ ಶಬ್ದಕ್ಕೆ ಬ್ರಹ್ಮನೇ ನಿತ್ಯ ಉಳಿದದ್ದು ಅನಿತ್ಯ ಎಂಬರ್ಥವೋ? ಅಥವಾ ಆತ್ಮಾನಾತ್ಮಸಮುದಾಯದಲ್ಲಿ ನಿತ್ಯತ್ವ ಮತ್ತು ಅನಿತ್ಯತ್ವ

---

व्याख्येयम् । नित्यानित्ययोर्वसतीति नित्यानित्यवस्तु तद्धर्मः, नित्यानित्ययोर्धर्मिणो-स्तद्धर्माणां च विवेको नित्यानित्यवस्तुविवेकः । एतदुक्तं भवति – मा भूदिदं तदृतं नित्यं, इदं तदनृतमनित्यमिति धर्मिविशेषयोर्विवेकः, धर्मिमात्रयोर्नित्यानित्ययोस्तद्धर्मयोश्च विवेकं निश्चिनोत्येव । नित्यत्वं सत्यत्वं तद्यस्यास्ति तन्नित्यं सत्यं, तथा चास्यागोचरः । अनित्यत्वमसत्यत्वं तद्यस्यास्ति तदनित्यमनृतं, तथा चानास्थागोचरः । तदेतेष्वनुभूयमानेषु युष्मदस्मत्प्रत्ययगोचरेषु विषयविषयिषु यदृतं नित्यं सुखं व्यवस्थास्यते तदास्थागोचरो भविष्यति, यत्त्वनित्यमनृतं भविष्यति तापत्रयपरीतं तत्त्यक्ष्यत इति ।

ಪರಿಪೂರ್ಣಚಂದ್ರಿಕಾ

ಎಂಬೆರಡು ಧರ್ಮಗಳಿವೆ. ಅವುಗಳಿಗೆ ಪ್ರತ್ಯೇಕವಾಗಿ ಒಂದೊಂದು ಧರ್ಮಿ ಇರಬೇಕು ಎಂಬ ನಿಶ್ಚಯವೋ? ಅಥವಾ ಅನಿತ್ಯವಾದ ಸಂಸಾರವು ಯಾವುದೋ ಒಂದು ಅಧಿಷ್ಠಾನದಲ್ಲಿ ಆರೋಪಿತವಾಗಿದೆ. ಆ ಅಧಿಷ್ಠಾನವು ಬ್ರಹ್ಮನಲ್ಲ ಎಂಬ ನಿಶ್ಚಯವೋ?

ಇವುಗಳಲ್ಲಿ ಮೊದಲನೆಯ ಪಕ್ಷ ಸರಿಯಿಲ್ಲ. ವಿಚಾರಶಾಸ್ತ್ರದಿಂದ ತಿಳಿಯುವುದು 'ಬ್ರಹ್ಮ ಒಂದೇ ನಿತ್ಯ' ಎಂಬುದು. ಇದು ವಿಚಾರಣಾಶಾಸ್ತ್ರಕ್ಕಿಂತ ಮೊದಲೇ ತಿಳಿದಿದ್ದರೆ ಈ ವಿಚಾರಶಾಸ್ತ್ರವೇ ವ್ಯರ್ಥವಾಗುತ್ತದೆ.

ಶಂಕೆ - ನಿತ್ಯಾನಿತ್ಯವಸ್ತುವಿವೇಕವು ವಿಚಾರಕ್ಕಿಂತ ಮೊದಲು ಇರುತ್ತದೆ. ವಿಚಾರದ ನಂತರ ಸಗುಣ ನಿರ್ಗುಣಗಳ ವಿವೇಕವು ಮತ್ತು ನಿರ್ಗುಣಬ್ರಹ್ಮನಲ್ಲಿಯೇ ಶಾಸ್ತ್ರಗಳ ತಾತ್ಪರ್ಯವೆಂಬ ಜ್ಞಾನವು ಬರುತ್ತದೆ. ಇದೇ ವಿಚಾರದ ಪ್ರಯೋಜನ.

ಸಮಾಧಾನ - ಭಾಮತಿಯಲ್ಲಿ ನಿತ್ಯಶಬ್ದಕ್ಕೆ ಸತ್ಯವೆಂದು ಅನಿತ್ಯ ಶಬ್ದಕ್ಕೆ ಸುಳ್ಳು ಎಂದು ಅರ್ಥೈಸಲಾಗಿದೆ. ಈ ಸಗುಣನಿರ್ಗುಣವಿವೇಕದ ಪ್ರಯೋಜನ - ಬ್ರಹ್ಮಮಾತ್ರ ಸತ್ಯ ಉಳಿದದ್ದೆಲ್ಲವೂ ಸುಳ್ಳು ಎಂಬ ಅರಿವು. ಈ ಪ್ರಯೋಜನವು ವಿಚಾರಕ್ಕಿಂತ ಮೊದಲೇ ಸಿದ್ಧವಾಗಿರಬೇಕಾದರೆ ಈ ಪ್ರಯೋಜನಕ್ಕಾಗಿ ಸಗುಣನಿರ್ಗುಣವಿವೇಕದ ಅವಶ್ಯಕತೆ ಇಲ್ಲ. ಶಾಸ್ತ್ರವು ವ್ಯರ್ಥ.

'ನಿರ್ಗುಣ ಬ್ರಹ್ಮನಲ್ಲಿಯೇ ಶಾಸ್ತ್ರಗಳ ತಾತ್ಪರ್ಯ ಎಂಬ ಜ್ಞಾನಕ್ಕಾಗಿ ವಿಚಾರ ಶಾಸ್ತ್ರಬೇಕು' ಎನ್ನುವುದೂ ತಪ್ಪು. ಏಕೆಂದರೆ ಕೇವಲ ಶ್ರುತಿತಾತ್ಪರ್ಯಜ್ಞಾನವನ್ನು ಯಾರೂ ಅಪೇಕ್ಷಿಸುವುದಿಲ್ಲ. ಯಾವುದಾದರೂ ಒಂದು ಪ್ರಮೇಯದ ನಿಶ್ಚಯಕ್ಕಾಗಿ ಶ್ರುತಿ ತಾತ್ಪರ್ಯಜ್ಞಾನವು ಬೇಕಾಗುತ್ತದೆ. ಪ್ರಕೃತದಲ್ಲಿ 'ಬ್ರಹ್ಮಮಾತ್ರ ಸತ್ಯ ಉಳಿದೆಲ್ಲವೂ ಮಿಥ್ಯಾ' ಎಂಬ ಹಿಂದೆ ಹೇಳಿದ ವಿಷಯವೇ ಪ್ರಮೇಯವಾಗಿದೆ. ಇದು ಮೊದಲೇ ತಿಳಿದಿರುವುದರಿಂದ ವಿಚಾರಶಾಸ್ತ್ರವು ವ್ಯರ್ಥವೆಂಬ ದೋಷವು ಇದ್ದೇ ಇದೆ.

ಶಂಕೆ - 'ಜೀವಬ್ರಹ್ಮಭೇದವು ಸುಳ್ಳು, ಜೀವಬ್ರಹ್ಮರ ಅಭೇದವು ಸತ್ಯ' ಎಂಬುದನ್ನೇ ಪ್ರಮೇಯವನ್ನಾಗಿ ಹೇಳುತ್ತೇವೆ.

ಸಮಾಧಾನ - ಜೀವಬ್ರಹ್ಮಭೇದವೂ ಸಹ ಬ್ರಹ್ಮಾತಿರಿಕ್ತವಾಗಿರುವುದರಿಂದ ಮಿಥ್ಯಾಭೂತವಾಗಿದೆ. ಜೀವಬ್ರಹ್ಮರ ಅಭೇದವು ಬ್ರಹ್ಮಸ್ವರೂಪವಾಗಿರುವುದರಿಂದ ಸತ್ಯವಾಗಿದೆ ಎಂಬುದೂ ಸಹ ನಿತ್ಯಾನಿತ್ಯವಿವೇಕದಲ್ಲಿಯೇ ಸೇರುತ್ತದೆ. ಹಾಗಾಗಿ ಇದೂ ಸಹ ಶಾಸ್ತ್ರಕ್ಕಿಂತ ಮೊದಲೇ ತಿಳಿದಿದೆ.

ಇನ್ನು ಆತ್ಮ ಮತ್ತು ಅನಾತ್ಮಸಮುದಾಯದಲ್ಲಿ ನಿತ್ಯತ್ವ ಮತ್ತು ಅನಿತ್ಯತ್ವ ಎಂಬೆರಡು ಧರ್ಮಗಳಿವೆ. ಇವುಗಳಿಗೆ ಆಶ್ರಯವಾದದ್ದನ್ನು ತಿಳಿದುಕೊಳ್ಳುವಿಕೆಯೇ ನಿತ್ಯಾನಿತ್ಯವಿವೇಕವೆಂಬ ಎರಡನೆಯ ಪಕ್ಷವೂ ಸರಿಯಲ್ಲ.

**ಕಠಿಣಪದಾರ್ಥ**

**ಸಗುಣನಿರ್ಗುಣವಿವೇಕಾಖಂಡಸಮನ್ವಯಾದ್ಯರ್ಥಮ್** = ಸಗುಣ ನಿರ್ಗುಣ ವಿವೇಕಕ್ಕೂ 'ಬ್ರಹ್ಮ ಒಂದೇ ಸತ್ಯ ಉಳಿದದ್ದೆಲ್ಲ ಮಿಥ್ಯಾ' ಎಂಬ ವಿವೇಕವೇ ಪ್ರಯೋಜನ. **ತನ್ಮಿಥ್ಯಾತ್ವಸ್ಯ** = ಜೀವಬ್ರಹ್ಮಭೇದದ ಮಿಥ್ಯಾತ್ವವು, **ತದಭೇದಸ್ಯಾಪಿ** = ಜೀವಬ್ರಹ್ಮಾಭೇದವಾದರೂ, ಬ್ರಹ್ಮಮಾತ್ರತಯಾ = ಬ್ರಹ್ಮಸ್ವರೂಪವಾದ್ದರಿಂದ, **ತತ್ ಸತ್ವಸ್ಯಾಪಿ** = ಜೀವಬ್ರಹ್ಮಾಭೇದದ ಸತ್ಯತ್ವವೂ ಕೂಡ, **ತೇನೈವ** = ನಿತ್ಯಾನಿತ್ಯವಸ್ತುವಿವೇಕದಿಂದಲೇ.

**प्रकाशः** – तत्राधिकारोऽपि "भक्तिमान् परमे विष्णौ" इत्यादिभाष्यकारोक्त एव नान्य इति समर्थयितुं परोक्तमनूद्य दूषयति ।। नापीति ।। 'भाष्योक्तात् अधिकारात्' इत्यन्वयः । 'आनन्तर्यम्' इत्यनुषङ्गः । नित्यानित्य विवेकं तावद् दूषयितुं भामत्यनुसारेण त्रेधा विकल्पयति ।। नित्येति ।। विचारेति ।। तेनापि ब्रह्मैकमेव नित्यमिति ज्ञानस्यैव सम्पाद्यत्वादिति भावः । ननु विचारो नोक्तज्ञानार्थः । किंत्विदं निर्गुणमिदं सगुणमिति विवेकार्थः अखण्डे ब्रह्मणि समन्वयार्थो वा, भेदभ्रमनिवृत्त्याद्यर्थो वेत्याशङ्क्य निराह ।। नचेति ।। तदर्थस्येति ।। सगुणनिर्गुणविवेकादिर्हि ब्रह्मैकमेव सत्यमिति ज्ञानाय । तद् यदि विचारात् प्रागेव सिद्धं, तदा तदर्थकसगुणनिर्गुणविवेकाद्यर्थं विचारो व्यर्थ इत्यर्थः । तदुपपादयति ।। नहीति ।। विचारो हि तात्पर्यावधारणाय । तच्च ज्ञेयनिश्चयाय । ज्ञेयं च ब्रह्मैकमेव सत्यमन्यन्मिथ्येत्येतदेव । तच्च प्रागेव ज्ञातमिति विचारो व्यर्थ इति । ननु भेदासत्यत्वमभेदसत्यत्वं च ज्ञेयम् । तच्च प्राक् न ज्ञातमित्यत आह ।। जीवेति ।। 'तदभेदस्य' जीवब्रह्माभेदस्य ।। तन्मात्रेणेति ।। यद्यन्यदनित्यं ब्रह्मैकमेव नित्यमिति निश्चिनुयत् तदा ह्यन्यपरित्यागेन ब्रह्मविचारे प्रवृत्ति-र्युज्येत । यदातु नित्यत्वानित्यत्वरूपं धर्मद्वयमस्ति, तदाश्रयौ च द्वाविति निश्चयमात्रं, तदा कथमात्मविचारे प्रवृत्तिः । किन्तु किं नित्यत्वधिष्ठानं किं

वाऽनित्यत्वाधिष्ठानमिति सन्दिहानो न क्वापि प्रवर्तेतेति भावः । किञ्च – भामतीमते विवेकस्य विरागहेतुतोक्तेः, उक्तविवेकवतः पुंसः पशुपुत्राद्यैहिकभोगे स्वर्गाद्यामुष्मिकभोगे च कथं विरागः स्यादित्याह ।। ऐहिकेति ।। तत्र विरागस्य तदनित्यताज्ञानसाध्यत्वादिति भावः ।। शास्त्रवैयर्थ्यादिति ।। विचारशास्त्रमप्य-सत्यसंसाराधिष्ठानस्य सत्यस्य ब्रह्मणो न ब्रह्मत्वप्रकारकज्ञानजनकम्, अखण्डार्थत्वहानेः, किंत्वधिष्ठानमात्रज्ञानजनकम् । तच्च ज्ञानं शास्त्रात् प्रागेवा-स्तीति, व्यर्थं शास्त्रमित्यर्थः ।

गुरुराजीय – एवमथशब्दस्यारम्भार्थत्वं निरस्यानन्तर्यार्थत्वं स्थापयित्वा तदानन्तर्यं न परोक्ताध्ययनादिभ्यः किन्तु भाष्यकृदुक्ताधिकारादेवेति वक्तुमाह ।। एवमिति ।। तथाहीति ।। अत्र धर्मविशिष्टधर्मिनिर्णयाभिप्रायेण प्रथमः कल्पः धर्ममात्रनिर्णयाभिप्रायेण द्वितीयः एकधर्मविशिष्टधर्मिनिर्णये सत्यन्यधर्ममात्रनिर्णया-भिप्रायेण तृतीय इति परप्रातिकूल्यौत्कट्यानुरोधेन विकल्पक्रम इति ध्येयम् । सगुणनिर्गुणविवेकार्थं वा अखण्डे समन्वयार्थं वाऽन्यार्थं वा शास्त्रमिति सङ्क्षीर्णोक्तं पक्षत्रयं साधारणदोषेण निराकृत्य द्वितीयमसाधारणदोषेणापि दूषयति ।। नहीति ।। तृतीयमसाधारणदोषेण दूषयति ।। नचेति ।। ननु च जीवब्रह्मभेदस्य मिथ्यात्वं वा जीवब्रह्माभेदस्य सत्यत्वं वा तिष्ठत्येवेति कथं मुमुक्षुत्वेयमन्यत्ना-स्तीत्युच्यत इत्यत आह ।। जीवब्रह्मभेदस्यापीति ।।

ವಿವರಣೆ - 'ಅರ್ಹತೆಯನ್ನು ಪಡೆದ ನಂತರ ಬ್ರಹ್ಮವಿಚಾರ' ಮಾಡಬೇಕು ಎಂದು ಹೇಳಿದಾಗ ಅರ್ಹತೆ ಎಂದರೆ ಏನು? ಎಂಬ ಪ್ರಶ್ನೆ ಬರುತ್ತದೆ. ಅರ್ಹತೆಯ ವಿವರಣೆಯನ್ನು ಭಾಷ್ಯದಲ್ಲಿ "ಭಕ್ತಿಮಾನ್ ಪರಮೇ ವಿಷ್ಣೌ" ಇತ್ಯಾದಿಯಾಗಿ ಹೇಳಿದ್ದಾರೆ. ಅರ್ಹತೆಯನ್ನು ಹೀಗೆಯೇ ಹೇಳಬೇಕು ಹೊರತು ಪರರು ನಿರೂಪಿಸಿರುವಂತಹ ಅರ್ಹತೆಯು ಅಸಮಂಜಸವಾಗಿದೆ; ಎಂಬುದನ್ನು ಸಮರ್ಥಿಸಲು ಪರರು ಹೇಳಿದ್ದನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. 'ನಾಪಿ' ಇತ್ಯಾದಿ ವಾಕ್ಯಗಳಿಂದ

'ಭಾಷ್ಯೋಕ್ತಾತ್' ಎಂಬುದನ್ನು 'ಅಧಿಕಾರಾತ್' ಎಂಬಲ್ಲಿ ಅನ್ವಯ ಮಾಡಿಕೊಳ್ಳಬೇಕು. 'ಅನಂತರ್ಯಂ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ಹೀಗೆ ಅರ್ಥವಾಗುತ್ತದೆ - ಪರಭಾಷ್ಯದಲ್ಲಿ ಹೇಳಿದ ನಾಲ್ಕು ವಿಧವಾದ ಅಧಿಕಾರವನ್ನು ಪಡೆದ ಅನಂತರ ವಿಚಾರದಲ್ಲಿ ತೊಡಗಬೇಕು ಎಂದು.

ಪರರು ಹೇಳಿದ ನಾಲ್ಕುವಿಧವಾದ ಅಧಿಕಾರಗಳಲ್ಲಿ ಮೊದಲನೆಯದಾದ 'ನಿತ್ಯಾನಿತ್ಯವಸ್ತುವಿವೇಕ'ವನ್ನು ದೂಷಿಸಲು ಭಾಮತಿಯಲ್ಲಿ ಹೇಳಿದಂತೆ ಮೂರು ಬಗೆಯಲ್ಲಿ ವಿಕಲ್ಪಿಸುತ್ತಿದ್ದಾರೆ - 'ನಿತ್ಯಾನಿತ್ಯ' ಇತ್ಯಾದಿ ವಾಕ್ಯದಿಂದ.

ಈ ಮೂರು ವಿಕಲ್ಪಗಳಲ್ಲಿ ಬ್ರಹ್ಮಮಾತ್ರ ನಿತ್ಯ ಉಳಿದದ್ದೆಲ್ಲವೂ ಅನಿತ್ಯ ಎಂಬ ಮೊದಲನೆಯದು ಸರಿಯಲ್ಲ. ಏಕೆಂದರೆ ವಿಚಾರದಿಂದ ಸಂಪಾದಿಸಬೇಕಾದದ್ದು 'ಬ್ರಹ್ಮ ಮಾತ್ರ ನಿತ್ಯ' ಎಂಬ ಜ್ಞಾನವೇ ಆಗಿದೆ. ಈ ಜ್ಞಾನವು ವಿಚಾರಕ್ಕಿಂತ ಮೊದಲೇ ಇರುವುದಾದರೆ ವಿಚಾರಶಾಸ್ತ್ರವು ವ್ಯರ್ಥ.

ವಿಚಾರದಿಂದ ಲಭಿಸುವಂತಹದ್ದು 'ಬ್ರಹ್ಮ ಮಾತ್ರ ನಿತ್ಯ' ಎಂಬ ಪ್ರಯೋಜನ ಅಲ್ಲ. ಹೊರತಾಗಿ 'ಇದು ನಿರ್ಗುಣ ಇದು ಸಗುಣ' ಎಂಬ ವಿವೇಕ. ಅಥವಾ ಅಖಂಡ (ನಿರ್ಗುಣ) ಬ್ರಹ್ಮನನ್ನು ಬೋಧಿಸುವುದರಲ್ಲಿಯೇ ಶಾಸ್ತ್ರಗಳಿಗೆ ತಾತ್ಪರ್ಯವೆಂಬ ಅರಿವು. ಅಥವಾ ಜೀವಬ್ರಹ್ಮ ಭೇದಭ್ರಮದ ನಿವೃತ್ತಿ. ಇವುಗಳಲ್ಲಿ ಯಾವುದೇ ಒಂದೂ ಸಹ ವಿಚಾರಕ್ಕಿಂತ ಮೊದಲು ಸಿದ್ಧವಾಗಿಲ್ಲ. ಆದ್ದರಿಂದ 'ಬ್ರಹ್ಮ ಮಾತ್ರ ನಿತ್ಯ ಉಳಿದದ್ದೆಲ್ಲವೂ ಅನಿತ್ಯ' ಎಂಬ ಜ್ಞಾನವು ವಿಚಾರಕ್ಕಿಂತ ಮೊದಲೇ ಇದ್ದರೂ ಈ ಜ್ಞಾನಗಳು ಮೊದಲು ಇಲ್ಲದ ಕಾರಣ ವಿಚಾರಶಾಸ್ತ್ರವು ವ್ಯರ್ಥವಾಗಲಾರದೆಂಬ ಶಂಕೆ ಬಂದರೆ ಸಮಾಧಾನವನ್ನು 'ನಚ ಸಗುಣ' ಇತ್ಯಾದಿ ವಾಕ್ಯಗಳಿಂದ ಹೇಳುತ್ತಿದ್ದಾರೆ. 'ತದರ್ಥಸ್ಯ' ಎಂಬುದಕ್ಕೆ ಹೀಗೆ ಅರ್ಥ - ಸಗುಣ ನಿರ್ಗುಣಗಳ ವಿವೇಕವು 'ಬ್ರಹ್ಮ ಮಾತ್ರ ಸತ್ಯ' ಎಂಬ ಜ್ಞಾನಕ್ಕೋಸ್ಕರ ಇರುವಂತಹದ್ದು. ಈ ಬ್ರಹ್ಮ ಮಾತ್ರ ಸತ್ಯ (ಇಲ್ಲಿ ಸತ್ಯ ಶಬ್ದಕ್ಕೆ ನಿತ್ಯ ಎಂದು ಅರ್ಥ - ಭಾಮತೀ) ಎಂಬ ಜ್ಞಾನವು ವಿಚಾರಕ್ಕಿಂತ ಮೊದಲೇ ಇರುವುದಾದರೆ ಬ್ರಹ್ಮಮಾತ್ರ ಸತ್ಯ ಎಂಬ ಜ್ಞಾನಕ್ಕೋಸ್ಕರ ಇರುವ ಸಗುಣನಿರ್ಗುಣಗಳ ವಿವೇಕವನ್ನು ಏಕೆ ಸಂಪಾದಿಸಬೇಕು? ಆ ವಿವೇಕಕ್ಕೋಸ್ಕರ ವಿಚಾರಶಾಸ್ತ್ರದಲ್ಲಿಯಾದರೂ ಏಕೆ ತೊಡಗಬೇಕು. ಈ ವಿಷಯವನ್ನು ಉಪಪಾದಿಸುವುದಕ್ಕಾಗಿಯೇ 'ನಹಿ' ಇತ್ಯಾದಿ ವಾಕ್ಯವು ಹೊರಟಿದೆ. ಈ ವಾಕ್ಯದ ಅಭಿಪ್ರಾಯ ಹೀಗಿದೆ - ನಿರ್ಗುಣಬ್ರಹ್ಮನನ್ನು ಬೋಧಿಸುವುದರಲ್ಲಿಯೇ ಶಾಸ್ತ್ರಗಳಿಗೆ ತಾತ್ಪರ್ಯ ಎಂಬುದನ್ನೂ ಏತಕ್ಕಾಗಿ ತಿಳಿಯಬೇಕು? ಎಂದರೆ 'ಬ್ರಹ್ಮ ಮಾತ್ರ ಸತ್ಯ' ಎಂಬ ಪ್ರಮೇಯದ ನಿಶ್ಚಯಕ್ಕಾಗಿ ತಿಳಿಯಬೇಕು. ಏಕೆಂದರೆ ವಿಚಾರಶಾಸ್ತ್ರವು ತಾತ್ಪರ್ಯಜ್ಞಾನಕ್ಕಾಗಿ ಇರುವುದು. ಈ ಶಾಸ್ತ್ರತಾತ್ಪರ್ಯಜ್ಞಾನವು ಸ್ವಯಂ ಅಪೇಕ್ಷಿತವಲ್ಲ. ಪ್ರಮೇಯದ ನಿಶ್ಚಯಜ್ಞಾನಕ್ಕಾಗಿ ಅದು ಬೇಕಾಗುತ್ತದೆ. "ಬ್ರಹ್ಮ ಮಾತ್ರ ಸತ್ಯ ಬೇರೆಲ್ಲವೂ ಸುಳ್ಳು" ಎಂಬ ಪ್ರಮೇಯವು ಅವಶ್ಯ ತಿಳಿಯಬೇಕಾಗಿದೆ. ಇದೇ ನಿತ್ಯಾನಿತ್ಯವಿವೇಕ. ಈ ನಿತ್ಯಾನಿತ್ಯವಿವೇಕವು ವಿಚಾರಕ್ಕಿಂತ ಮೊದಲೇ ಇರುವುದರಿಂದ ವಿವೇಕಿಯು ತಾತ್ಪರ್ಯಜ್ಞಾನವನ್ನು ಏಕೆ ಬಯಸಬೇಕು. ಅಂತಹವನಿಗೆ ವಿಚಾರಶಾಸ್ತ್ರವಾದರೂ ಏಕೆ ಬೇಕು?

ಇನ್ನು ಪೂರ್ವಪಕ್ಷ ಮಾಡಬೇಕಾದರೆ ಹಿಂದೆ ಭೇದಭ್ರಮನಿವೃತ್ತಿಯು ವಿಚಾರದ ಪ್ರಯೋಜನವೆಂದು ಹೇಳಲಾಗಿತ್ತು. ಅದರ ಅಭಿಪ್ರಾಯ ಹೀಗಿದೆ - ಜೀವಬ್ರಹ್ಮಭೇದವು ಸುಳ್ಳು ಅಭೇದವು ಮಾತ್ರ ಸತ್ಯ ಎಂಬುದೇ ಪ್ರಮೇಯ. ಇದು ನಿತ್ಯಾನಿತ್ಯವಿವೇಕವುಳ್ಳ ಪುರುಷನಿಗೆ ವಿಚಾರಕ್ಕಿಂತ ಮೊದಲು ತಿಳಿದಿಲ್ಲ. ಹಾಗಾಗಿ ವಿಚಾರವು ಸಾರ್ಥಕವೆಂಬ ಆಕ್ಷೇಪ ಬಂದರೆ 'ಜೀವಬ್ರಹ್ಮಭೇದಸ್ಯಾಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**ಪರಿಪೂರ್ಣಚಂದ್ರಿಕಾ**

ಹೀಗೆ ಮೂರು ವಿಕಲ್ಪಗಳಲ್ಲಿ ಮೊದಲನೆಯ ವಿಕಲ್ಪವನ್ನು ನಿರಾಕರಿಸಿ 'ನ ದ್ವಿತೀಯಃ' ಇತ್ಯಾದಿ ವಾಕ್ಯದಿಂದ ಎರಡನೆಯ ವಿಕಲ್ಪವನ್ನು ಖಂಡನೆ ಮಾಡುತ್ತಿದ್ದಾರೆ. 'ತನ್ಮಾತ್ರೇಣ' ಎಂಬುದಕ್ಕೆ ಹೀಗೆ ಅರ್ಥ. ಒಂದು ವೇಳೆ ಬ್ರಹ್ಮಾತಿರಿಕ್ತವಾದದ್ದೆಲ್ಲವೂ ಅನಿತ್ಯ ಬ್ರಹ್ಮ ಮಾತ್ರ ನಿತ್ಯ ಎಂಬ ನಿಶ್ಚಯಜ್ಞಾನವು ಯಾರಿಗೆ ಇರುತ್ತದೊ. ಅವನು ಇತರ ಎಲ್ಲಾ ವಿಚಾರಗಳನ್ನೂ ಪರಿತ್ಯಾಗ ಮಾಡಿ ನಿತ್ಯವಾದ ಬ್ರಹ್ಮವಿಚಾರದಲ್ಲೇ ಪ್ರವೃತ್ತಿಯನ್ನು ಮಾಡುತ್ತಾನೆ. ಇದನ್ನು ಬಿಟ್ಟು ನಿತ್ಯತ್ವ ಅನಿತ್ಯತ್ವ ಎಂಬ ಎರಡು ಧರ್ಮಗಳಿವೆ. ಈ ಎರಡು ಧರ್ಮಗಳಿಗೆ ಎರಡು ಆಶ್ರಯಗಳಿವೆ ಎಂಬ ನಿಶ್ಚಯ ಇದ್ದವನು ಹೇಗೆ ತಾನೆ ಬ್ರಹ್ಮವಿಚಾರದಲ್ಲಿ ಪ್ರವೃತ್ತಿ ಮಾಡಿಯಾನು? ಹಾಗೆಯೇ ಇತರವಾದ ವಿಚಾರವನ್ನೆಲ್ಲಾ ಅನಿತ್ಯವೆಂದು ತಿಳಿದು ಹೇಗೆ ತಾನೆ ಅವುಗಳಲ್ಲಿ ಪ್ರವೃತ್ತಿ ಮಾಡಲಾರನು? ಹೊರತಾಗಿ ನಿತ್ಯತ್ವಕ್ಕಾಗಲೀ ಅನಿತ್ಯತ್ವಕ್ಕಾಗಲೀ ಅಧಿಷ್ಠಾನವಾದದ್ದು ಯಾವುದು? ಎಂಬುದಾಗಿ ಸಂದೇಹದಿಂದ ಎಲ್ಲಿಯೂ ಪ್ರವೃತ್ತಿ ಮಾಡಲಾರನು : ಇಷ್ಟು ಅಭಿಪ್ರಾಯವನ್ನು ಈ ವಾಕ್ಯಕ್ಕೆ ತಿಳಿದುಕೊಳ್ಳಬೇಕು.

ಮತ್ತು ಭಾಮತೀಮತದಲ್ಲಿ ವಿವೇಕವು ವೈರಾಗ್ಯಕ್ಕೆ ಹೇತುವೆಂದು ಹೇಳಲಾಗಿದೆ. ಹಿಂದೆ ಹೇಳಿದಂತಹ ವಿವೇಕವು ಯಾವನಿಗೆ ಇರುತ್ತದೋ ಅಂತಹವನಿಗೆ ಪಶುಪುತ್ರಾದಿ ಐಹಿಕ ಭೋಗದಲ್ಲಿ ಮತ್ತು ಸ್ವರ್ಗಾದಿ ಆಮುಷ್ಮಿಕ ಭೋಗದಲ್ಲಿ ವೈರಾಗ್ಯವು ಹೇಗೆ ತಾನೆ ಬರಲು ಸಾಧ್ಯ? ಏಕೆಂದರೆ ಐಹಿಕ ಆಮುಷ್ಮಿಕ ಭೋಗ ಪದಾರ್ಥಗಳು ಅನಿತ್ಯವೆಂದು ತಿಳಿದರೆ ಮಾತ್ರ ಅವುಗಳಲ್ಲಿ ವೈರಾಗ್ಯ ಬರಲು ಸಾಧ್ಯ. ಆದರೆ ನೀವು ಹೇಳಿದಂತೆ ನಿತ್ಯತ್ವಕ್ಕಾಗಲೀ ಅನಿತ್ಯತ್ವಕ್ಕಾಗಲೀ ಆಶ್ರಯವಾದದ್ದು ಯಾವುದು? ಎಂದು ನಿಶ್ಚಯವಿಲ್ಲದ ಕಾರಣ ವೈರಾಗ್ಯವು ಬರಲು ಸಾಧ್ಯವಿಲ್ಲ.

ಶಂಕೆ - ''ಸಂಸಾರವು ಯಾವುದೋ ಒಂದು ಅಧಿಷ್ಠಾನದಲ್ಲಿ ಆರೋಪಿತವಾಗಿದೆ. ಆ ಅಧಿಷ್ಠಾನವು ಬ್ರಹ್ಮನಲ್ಲ ಎಂಬ ನಿಶ್ಚಯವು'' ಈ ಮೂರನೆಯ ವಿಕಲ್ಪವನ್ನೇ ನಿತ್ಯಾನಿತ್ಯವಿವೇಕವೆಂದು, ಮತ್ತು ಈ ರೀತಿಯಾದ ನಿತ್ಯಾನಿತ್ಯವಿವೇಕವುಳ್ಳವನೇ ವಿಚಾರದಲ್ಲಿ ತೊಡಗಲು ಅರ್ಹನಾಗುತ್ತಾನೆ ಎಂದು ಹೇಳುತ್ತೇವೆ.

ಸಮಾಧಾನ - ಇದೂ ಸಹ ತಪ್ಪು. ಮಿಥ್ಯಾಭೂತವಾದ ಸಂಸಾರಕ್ಕೆ ಅಧಿಷ್ಠಾನವಾದದ್ದು ಇದೆಯೆಂದು ತಿಳಿದ ಮೇಲೆ ತಿಳಿಯಬೇಕಾದ ಹೊಸ ವಿಚಾರವಾದರೂ ಏನೂ ಇರುವುದಿಲ್ಲ. ವಿಚಾರಶಾಸ್ತ್ರವೂ ಸಹ ಅಸತ್ಯವಾದ ಸಂಸಾರಕ್ಕೆ ಅಧಿಷ್ಠಾನವೊಂದಿದೆಯೆಂದು ಅಧಿಷ್ಠಾನಸ್ವರೂಪವನ್ನಷ್ಟೇ ತಿಳಿಸುತ್ತದೆ, ಹೊರತು ಬೇರೇನನ್ನೂ ತಿಳಿಸಲಾರದು. ಒಂದು ವೇಳೆ ವಿಚಾರಶಾಸ್ತ್ರವು ಬ್ರಹ್ಮತ್ವಪ್ರಕಾರಜ್ಞಾನಜನಕವಾದಲ್ಲಿ ಅಖಂಡಾರ್ಥತ್ವಕ್ಕೆ ಹಾನಿ ಬರುತ್ತದೆ. ಇಂತಹ ಅಧಿಷ್ಠಾನಜ್ಞಾನವು ವಿಚಾರಕ್ಕಿಂತ ಮೊದಲೇ ಇರುವುದರಿಂದ ಈ ವಿಚಾರಶಾಸ್ತ್ರವು ವ್ಯರ್ಥ. 'ಶಾಸ್ತ್ರವೈಯರ್ಥ್ಯಾತ್' ಎಂಬುದಕ್ಕೆ ಇಷ್ಟು ಅರ್ಥವನ್ನು ತಿಳಿದುಕೊಳ್ಳಬೇಕು.

* * *




ಜಿಜ್ಞಾಸುವಿನ ಅರ್ಹತೆಗಳು

'ಭಕ್ತಿಮಾನ್ ಪರಮೇ ವಿಷ್ಣೌ' ಎಂದು ಮುಂತಾಗಿ ನಮ್ಮ ಭಾಷ್ಯದಲ್ಲಿ ಹೇಳಿದ ವಿಷ್ಣುಭಕ್ತಿಪೂರ್ವಕ ಅಧ್ಯಯನ ಮುಂತಾದುವೆ ಜಿಜ್ಞಾಸುವನಲ್ಲಿರಬೇಕಾದ ನಿಜವಾದ ಅರ್ಹತೆಗಳು. ಪರಭಾಷ್ಯಕಾರರು ಹೇಳಿದುದಲ್ಲ.

ಅದ್ವೈತಭಾಷ್ಯದಲ್ಲಿ 'ನಿತ್ಯಾನಿತ್ಯವಸ್ತುವಿವೇಕ, ಐಹಿಕಾಮುಷ್ಮಿಕ ಸುಖಭೋಗಗಳಲ್ಲಿ ವೈರಾಗ್ಯ, ಶಮ ದಮ ಮುಂತಾದ ಗುಣಸಂಪತ್ತು ಮತ್ತು ಮೋಕ್ಷಭಿಲಾಷೆ - ಈ ಸಾಧನ ಚತುಷ್ಟಯವೆ ಅರ್ಹತೆ ಎಂದಿದೆ ಇಲ್ಲಿ ನಿತ್ಯಾನಿತ್ಯವಸ್ತು ವಿವೇಕವೆಂದರೆ ಭಾಮತಿ ಪ್ರಕಾರ 'ಬ್ರಹ್ಮ ಒಂದೇ ನಿತ್ಯ' ಎನ್ನುವ ಅರಿವು. ಈ ವಿವೇಕ ಮೊದಲೆ ಇದ್ದರೆ ವಿಚಾರ ವ್ಯರ್ಥ. ವಿಚಾರದಿಂದ ತಿಳಿಯಬೇಕಾದುದೂ ಬ್ರಹ್ಮ ಒಂದೇ ನಿತ್ಯವೆಂದು ತಾನೆ? ಸಗುಣನಿರ್ಗುಣ ವಿವೇಕ ವಿಚಾರದ ಪ್ರಯೋಜನ ಎನ್ನುತ್ತಾರೆ. ಆದರೆ ಈ ಸಗುಣನಿರ್ಗುಣ ವಿವೇಕಕ್ಕೂ 'ಬ್ರಹ್ಮ ಒಂದೇ ಸತ್ಯ ಬೇರೆ ಎಲ್ಲವೂ ಮಿಥ್ಯಾ, ಎಂಬ ಜ್ಞಾನವೆ ಪ್ರಯೋಜನ. ಬ್ರಹ್ಮ ಒಂದೆ ನಿತ್ಯ ಬೇರೆ ಎಲ್ಲವೂ ಅನಿತ್ಯವೆಂದರೂ ಇದುವೆ. ಭಾಮತಿಯಲ್ಲಿ 'ನಿತ್ಯ, ಅನಿತ್ಯ' ಎಂದರೆ 'ಸತ್ಯ, ಮಿಥ್ಯಾ' ಎಂದೇ ವ್ಯಾಖ್ಯಾನಿಸಿದೆ. 'ನಿರ್ಗುಣವನ್ನು ಬೋಧಿಸುವುದೆ ಶಾಸ್ತ್ರಗಳ ತಾತ್ಪರ್ಯ' ಎಂಬುದನ್ನು ಅರಿಯುವುದು ವಿಚಾರದ ಪ್ರಯೋಜನವೆಂದೂ ಹೇಳುತ್ತಾರೆ. ಆದರೆ ಈ ತಾತ್ಪರ್ಯವನ್ನು ಅರಿಯುವುದೂ ಕೂಡ 'ಬ್ರಹ್ಮ ಒಂದೇ ಸತ್ಯ' ಎನ್ನುವ ಪ್ರಮೇಯದ ನಿಶ್ಚಯಕ್ಕಾಗಿ ಎಂದಮೇಲೆ ಪ್ರಮೇಯನಿಶ್ಚಯ ಇರುವವನಿಗೆ ಶಾಸ್ತ್ರತಾತ್ಪರ್ಯಜ್ಞಾನ ಸಂಪಾದಿಸುವ ಅವಶ್ಯಕತೆ ಇಲ್ಲ. 'ಜೀವಬ್ರಹ್ಮಭೇದ ಮಿಥ್ಯಾ, ಅಭೇದ ಸತ್ಯ' ಎಂಬುದನ್ನು ಅರಿಯುವುದು ವಿಚಾರದ ಪ್ರಯೋಜನ ಎಂದೂ ಹೇಳುತ್ತಾರೆ. ಆದರೆ ಬ್ರಹ್ಮ ಒಂದೇ ಸತ್ಯ, ಬೇರೆ ಎಲ್ಲವೂ ಮಿಥ್ಯಾ ಎಂಬ ಜ್ಞಾನವಿದ್ದರೆ 'ಬ್ರಹ್ಮನಿಗಿಂತ ಬೇರೆಯಾಗಿರುವ ಭೇದ ಮಿಥ್ಯಾ, ಬ್ರಹ್ಮ ಸ್ವರೂಪವೆ ಆದ ಅಭೇದ ಸತ್ಯ' ಎಂದು ತಿಳಿಯುವುದು ಶಕ್ಯವೆ? ಅದಕ್ಕೆ ವಿಚಾರವೇಕೆ?

• • • • •

## ಅದ್ವೈತಮತದಲ್ಲಿ ನಿತ್ಯಾನಿತ್ಯವಸ್ತುವಿವೇಕವೇ ಕೂಡಲ್ಲ

**तात्पर्यचन्द्रिका –**

**नच विवरणरीत्या नित्यानित्यशब्दौ ध्वंसप्रतियोग्यप्रतियोगिपरौ । ततश्च ब्रह्मज्ञानफलं स्थायि, कर्मादिफलं त्वस्थायीति विवेको नित्यानित्यविवेक इति युक्तम्**[१] **। प्रतिपन्नोपाधावत्यन्ताभावप्रतियोगित्वरूपबाध्यत्ववतोऽनात्मनः ध्वंस-**

---

(१) **पञ्चपादिकाविवरणम्**

उच्यते नित्यानित्यवस्तुविवेक इत्यतः प्राक्तनो ग्रन्थः स्पष्टार्थः । शास्त्रीयस्य विधेः

प्रतियोगित्वायोगात् । पारमार्थिकत्वाकारेणात्यन्ताभावः, स्वरूपेण तु ध्वंस इति चेन्न । पारमार्थिकत्वस्याबाध्यत्वरूपत्वेनान्योन्याश्रयात् । तथाऽत्यन्ताभावप्रतियोगित्वस्य निराकारे ब्रह्मण्यपि सम्भवाच्च । अतात्त्विके रूप्यादावनित्यत्वाव्यवहाराच्च । "गौरनाद्यन्तवती", "एषोऽश्वत्थः सनातनः" इत्यादिश्रुत्यनुसाराय, मोक्षेऽपि अतात्त्विकी अनुवृत्तिः निवृत्तिस्तु तात्त्विकी । मुक्तेर्बन्धाद् वैषम्यं तु तात्त्विकनिवृत्तिमत्तामात्रेणेत्यप्यापाताच्च । किञ्च – विवेको भेदस्य तद्भासस्य वा ज्ञानं, तस्य च भ्रमत्वे ब्रह्मविचारो न नित्यफलकः स्यात् । प्रमात्वे तु भेदः सत्यः स्यात् । तस्मात् परमते न नित्यानित्यवस्तुविवेको युक्तः ।

ಅನುವಾದ - ವಿವರಣದ ಪ್ರಕಾರ ನಿತ್ಯಾನಿತ್ಯವಿವೇಕ ಎಂಬಲ್ಲಿ ನಿತ್ಯ ಶಬ್ದಕ್ಕೆ ನಾಶವಿಲ್ಲದ್ದು ಎಂದು ಅನಿತ್ಯ ಶಬ್ದಕ್ಕೆ ನಾಶವುಳ್ಳದ್ದು ಎಂಬರ್ಥವನ್ನು ಹೇಳಿ ಅದ್ದರಿಂದಲೇ ಬ್ರಹ್ಮಜ್ಞಾನದಿಂದ ಸಿಗುವ ಫಲವು ನಾಶವಿಲ್ಲದ್ದು. ಕರ್ಮ ಮೊದಲಾದವುಗಳಿಂದ ಸಿಗುವ ಸ್ವರ್ಗಾದಿಫಲವು ನಾಶವುಳ್ಳದ್ದು ಎಂದು ಹೇಳಲಾಗಿದೆ.

ಆದರೆ ಇದು ಸರಿಯಲ್ಲ. ಏಕೆಂದರೆ ಅದ್ವೈತಮತದಲ್ಲಿ ಕರ್ಮಫಲಕ್ಕೆ ನಾಶವಿದೆಯೆಂದು ಹೇಳಲಾಗದು. ಅವರು ಅನಾತ್ಮವಾದ ವಸ್ತುವನ್ನು ತಾನಿಲ್ಲದ ಸ್ಥಳದಲ್ಲಿ ಇರುವಂತೆ ತೋರುವಂತಹದ್ದು ಎಂದು ಹೇಳುತ್ತಾರೆ. ಇಂತಹ ಬಾಧ್ಯತ್ವರೂಪವಾದ ಮಿಥ್ಯಾತ್ವವು ಕರ್ಮಫಲವಾದ ಸ್ವರ್ಗದಲ್ಲಿಯೂ ಇರುವುದರಿಂದ ಕರ್ಮಕ್ಕೆ ನಾಶವನ್ನು ಒಪ್ಪಲು ಸಾಧ್ಯವಿಲ್ಲ. ಯಾವುದು ಅಸತ್ಯವೊ ಅದಕ್ಕೆ ನಾಶವಿಲ್ಲ.

---

शास्त्रीयमेवाधिकारनिमित्तं वक्तव्यमित्यभिप्रेत्याह – नित्यानित्यवस्तुविवेक इत्यादि ।। "सोऽन्वेष्टव्य" इति विधिप्रकरणे – "तद्यथेह कर्मचितो लोकः क्षीयत एवमेवामुत्र पुण्यजितो लोकः क्षीयते" इति नित्यानित्यवस्तुविवेको दर्शितः; "परीक्ष्य लोकान् कर्मचितान्" आत्मनस्तु कामाय सर्वं प्रियं भवती"ति च ज्ञानश्रवणविधिप्रकरणे इहामुत्रार्थभोगविरागो दर्शितः; "शान्तो दान्तः" इति च दर्शनविधिप्रकरणे शमादयो दर्शिताः; "तद् विजिज्ञासस्वे"ति विचारविधिप्रकरणे "वरुणं पितरमुपससारे"ति गुरूपसदनं दर्शितम्; सर्वत्र च फलश्रुतयः कामनोत्पादनद्वारेण मुमुक्षोरधिकारप्रदर्शनार्थाः; अन्यथा साधनानुष्ठानादेव फलसिद्धौ सङ्कीर्तनवैफल्यात् ।
उच्यते नित्यानित्यवस्तुविवेकः, इहामुत्रार्थफलभोगविरागः, शम-दमादिसाधनसम्पत्, मुमुक्षुत्वं चेति ।।

ಬಾಧ್ಯವೆಂದರೆ ತಾನಿರುವಂತೆ ತೋರುವ ಸ್ಥಳದಲ್ಲಿ ಪಾರಮಾರ್ಥಿಕವಾಗಿ ತಾನು ಇಲ್ಲದಿರುವುದು ಎಂದರ್ಥ. ಇದು ಸಂಪೂರ್ಣ ಅಸತ್ಯವಲ್ಲ ಸ್ವರೂಪತಃ ನಾಶವಿದೆ. ಎಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಪಾರಮಾರ್ಥಿಕವೆಂದರೆ ಅಬಾಧ್ಯವೆಂದರ್ಥ. ಆದ್ದರಿಂದ ಬಾಧ್ಯತ್ವ ತಿಳಿಯಲು ಅಬಾಧ್ಯತ್ವವನ್ನು ತಿಳಿಯಬೇಕು. ಅಬಾಧ್ಯತ್ವವನ್ನು ತಿಳಿಯಲು ಬಾಧ್ಯತ್ವವನ್ನು ತಿಳಿಯಬೇಕು. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ.

ಮತ್ತು ನಿರಾಕಾರನಾದ ಬ್ರಹ್ಮನಲ್ಲಿ ಇಂತಹ ಪಾರಮಾರ್ಥಿಕತ್ವವು ಇಲ್ಲ. ಆದ್ದರಿಂದ ಪಾರಮಾರ್ಥಿಕತ್ವಾಧಿಕಾರೇಣ ಅತ್ಯಂತಭಾವಪ್ರತಿಯೋಗಿತ್ವವು ಶುದ್ಧಬ್ರಹ್ಮನಲ್ಲಿಯೂ ಬರುವುದರಿಂದ ಅವನೂ ಸಹ ಮಿಥ್ಯಾ ಎಂದಾಗಬೇಕಾದೀತು. ಮತ್ತು ಪಾರಮಾರ್ಥಿಕರೂಪದಿಂದ ಇಲ್ಲವೆಂಬ ಮಾತ್ರಕ್ಕೆ ನಾಶ ಹೇಳುವುದಾದರೆ ಶುಕ್ತಿರೂಪ್ಯಕ್ಕೂ ನಾಶವನ್ನು ಹೇಳಬೇಕಾದೀತು. ಆದರೆ ಯಾರೂ ಸಹ ಹಾಗೆ ವ್ಯವಹರಿಸುವುದಿಲ್ಲ.

'ಗೌರನಾದ್ಯಂತವತೀ', ಅವಿದ್ಯೆಯು ಉತ್ಪತ್ತಿ ನಾಶವಿಲ್ಲದ್ದು 'ಏಷೋಽಶ್ವತ್ಥಃ ಸನಾತನಃ' ಈ ಪ್ರಪಂಚವು ನಿತ್ಯವಾದುದು. ಇತ್ಯಾದಿ ಶ್ರುತಿಗಳ ಅನುಕೂಲಕ್ಕೋಸ್ಕರ ಮೋಕ್ಷದಲ್ಲಿಯೂ ಅತಾತ್ವಿಕವಾಗಿ ಸಂಸಾರವಿದೆ. ಸಂಸಾರದ ನಿವೃತ್ತಿಯು ತಾತ್ವಿಕವೆಂದಾಗಬೇಕಾದೀತು. ಹಾಗಾದರೆ ಸಂಸಾರಕ್ಕೂ ಮೋಕ್ಷಕ್ಕೂ ಏನು ವ್ಯತ್ಯಾಸ? ಎಂದರೆ ಸಂಸಾರದಲ್ಲಿ ಮೋಕ್ಷದಲ್ಲಿರುವಂತೆ ಅಪಾರಮಾರ್ಥಿಕವಾದ ಪ್ರಪಂಚವಿದೆ; ಪಾರಮಾರ್ಥಿಕವಾದ ನಿವೃತ್ತಿ ಮಾತ್ರ ಇರುವುದಿಲ್ಲ. ಮೋಕ್ಷದಲ್ಲಿ ಇದು ಇರುತ್ತದೆಯೆಂದಷ್ಟೇ ವ್ಯತ್ಯಾಸ ಹೇಳಬಹುದು.

ಮತ್ತು ವಿವೇಕವೆಂದರೆ ಭೇದವೆಂದೋ? ಭೇದ ಸಾಧಕವಾದ ವೈಲಕ್ಷಣ್ಯಜ್ಞಾನವೆಂದೂ ಹೇಳಬೇಕು. ಆ ಜ್ಞಾನವು ಭ್ರಾಂತಿಯೆಂದು ಹೇಳಿದರೆ ಬ್ರಹ್ಮಜ್ಞಾನವು ನಿತ್ಯಫಲಕ ಆಗಲಾರದು. ಯಥಾರ್ಥವೆಂದು ಹೇಳಿದರೆ ಆ ಜ್ಞಾನಕ್ಕೆ ವಿಷಯವಾದ ಭೇದವು ಸತ್ಯವೆಂದಾಯಿತು. ಆದ್ದರಿಂದ ಅದ್ವೈತಮತದಲ್ಲಿ ನಿತ್ಯಾನಿತ್ಯವಸ್ತುವಿವೇಕವು ಕೂಡುವುದಿಲ್ಲ.

**ಕಠಿಣಪದಾರ್ಥ**

ಧ್ವಂಸಪ್ರತಿಯೋಗ್ಯಪ್ರತಿಯೋಗಿಪರೌ = ನಾಶವಿಲ್ಲದ್ದು ನಾಶವುಳ್ಳದ್ದು, ಸ್ಥಾಯಿ = ನಾಶವಿಲ್ಲದ್ದು, ತಥಾ = ಪಾರಮಾರ್ಥಿಕತ್ವಾಕಾರದಿಂದ, ಗೌಃ = ಅವಿದ್ಯೆಯು, ಅನಾದ್ಯಂತವತೀ = ಆದ್ಯಂತಗಳಿಲ್ಲದ್ದು, ಅಶ್ವತ್ಥಃ = ಸಂಸಾರವು, ಸನಾತನಃ = ಸದಾ ಇರುವಂತಹದ್ದು, ತದ್‌ವ್ಯಾಪ್ತಸ್ಯ = ಭೇದಸಾಧಕವಾದ ವೈಲಕ್ಷಣ್ಯದ

**प्रकाशः – नचेति ।।** एतन्मते चानात्मप्रहाणेनात्मविचारे प्रवृत्तिरैहिकादिभोगविरागश्च युज्यत इति भावः ।। **प्रतिपन्नेति ।।** ''प्रतिपन्नोपाधावभावप्रतियोगि

त्वलक्षणस्य मिथ्यात्वस्य'' इति विवरणोक्तेस्तादृशस्य चासत्त्वापत्त्या शशशृङ्गादेरिव ध्वंसायोगादिति भावः।। अन्योन्याश्रयादिति ।। अबाध्यत्वं हि बाध्यत्वाभावः, बाध्यत्वं चाबाध्यत्वाभाव इत्यन्योन्याश्रयादित्यर्थः ।। तथेति ।। पारमार्थिकत्वाकारेणेत्यर्थः ।। अतात्त्विक इति ।। तथाच कर्मादिफलस्य त्वया अतात्त्विकत्वेनाङ्गीकृतस्य न नित्यत्वं युक्तमिति भावः । ननु ''भूयश्चान्ते विश्वमायानिवृत्तिः'' इति निवृत्तिवाक्यस्य ''नेह नाना'' इत्यत्यन्ताभाववाक्यस्य च सत्त्वादेव द्वयमप्यङ्गीक्रियत इति चत् तर्हि वचनान्तरमप्यनुसर्तव्यमिति भावेनाह ।। गौरिति ।। अविद्या आद्यन्तवती नेत्यर्थः । 'अश्वत्थः' संसारः ।। निवृत्तिरिति ।। तद्बोधकश्रुत्यनुसारयेति भावः ।। मुक्तेरिति ।। बन्धदशायामतात्त्विकानुवृत्तौ सत्यामपि न तात्त्विकी निवृत्तिरिति विशेषः इत्यर्थः ।। भ्रमत्व इति ।। यदि ब्रह्मज्ञानफलं नित्यमन्यफलमनित्यमिति ज्ञानं भ्रमः, तर्हि ब्रह्मज्ञानफलं न नित्यं स्यादिति कथं तद्विचारे प्रवर्तेत । इदं नित्यमिदमनित्यमिति भेदज्ञानस्य प्रमात्वे तद्विषयस्य सत्यत्वनियमेन भेदस्तात्त्विकः स्यादित्यर्थः । उपलक्षणमेतत् । तद्व्याप्तो धर्मो वा सत्यः स्यादित्यपि ग्राह्यम् ।

गुरुराजीय – **प्रतिपन्नोपाधाविति** ।। यदत्यन्ताभावप्रतियोगि न तद् ध्वंसप्रतियोगि न तदत्यन्ताभावप्रतियोगीति व्याप्तेर्विद्यमानत्वेन कर्मादिफलस्यापि नित्यत्वमेवाङ्गीकर्तव्यमिति ब्रह्मज्ञानफलं नित्यं कर्मादिज्ञानफलमनित्यमिति विवेको नित्यानित्यविवेको नेत्यर्थः । ननु स्वरूपेणात्यन्ताभावप्रतियोगित्वे स्वरूपेण ध्वंसप्रतियोगित्वस्य विरुद्धत्वेऽपि तेन रूपेणात्यन्ताभावप्रतियोगित्वस्यानङ्गीकारात् स्वरूपेण ध्वंसप्रतियोगित्वसम्भवेन उक्तनित्यानित्यवस्तुविवेकोपपत्तिरित्यभिप्रायेण शङ्कते ।। **पारमार्थिकत्वाकारेणेति** ।। **तथेति** ।। पारमार्थिकत्वेनेत्यर्थः ।। **निराकार इति** ।। तथाच ब्रह्मणोऽपि स्वरूपेण ध्वंसप्रतियोगित्वोपपत्त्या पारमार्थिकत्वाकारेणात्यन्ताभावप्रतियोगित्वाविरोधे ब्रह्मज्ञानफलवत् कर्मादिफलस्य नित्यत्वापत्त्या तद्वद् ब्रह्मज्ञानफलस्य वाऽनित्यत्वापत्त्या ब्रह्मज्ञानफलं नित्यं कर्मादिज्ञानफलमनित्यमिति विवेकानुपपत्तिरेवेति भावः ।। **अतात्त्विक इति** ।। तथाच पारमार्थिकत्वेनात्यन्ताभावप्रतियोगित्वेन वाच्यमिति पुनरुक्तविवेकानुप-

पत्तिरित्यर्थः । यद्वा तात्त्विकब्रह्मान्यस्य अतात्त्विकरूप्यादेरनित्यत्वाभावान्न ब्रह्मान्यत्सर्वमनित्यमिति विवेकानुपपत्तिरित्यर्थः ।

ननुच मिथ्यात्वस्यापि प्रमाणसिद्धत्वात् ''तद्धास्यान्ततः क्षीयत एव''इत्यादि-प्रमाणैर्निवृत्तेरपि सिद्धत्वात् तदुभयान्यथानुपपत्त्या पारमार्थिकाकारेणात्यन्ता-भावप्रतियोगित्वं स्वरूपेण तद्ध्वंस इत्यवश्यमङ्गीकार्यमिति ब्रह्मज्ञानफलं नित्यं कर्मादिज्ञानफलमनित्यमिति विवेको युक्त एवेत्यत आह – **गौरिति** ।। विद्येते आद्यन्तौ यस्या असावाद्यन्तवती । न आद्यन्तवती । इदमुक्तं भवति यद्युभय-विधप्रमाणानुसारेण स्वरूपेण निवृत्तिः पारमार्थिकत्वाकारेणात्यन्ताभावप्रति-योगित्वं चेदमङ्गीक्रियते । तर्हि मुक्तौ निवृत्तिरनुवृत्तिश्चेत्यप्यङ्गीकार्यम् । श्रुत्योरविशेषात् । श्रुत्यवैशेष्ये तच्छ्रुत्यनादरणे कर्मफलक्षयश्रुतेरप्यनादरणापत्त्योक्त-विवेकानुपपत्तिरेवेति । नच विरोधः । निवृत्तेस्तात्त्विकत्वेनानुवृत्तेश्चातात्त्विक-त्वेनाविरोधात् । तदेतदाह ।। **अतात्त्विकीत्यादि** ।। नन्वेवं तात्त्विकातात्त्विका-निवृत्त्यनुवृत्त्योर्बन्धमोक्षयोः साधारण्यान्मुक्तेर्बन्धाद् विशेषो न स्यादित्यत आह ।। **मुक्तेरिति** ।। बन्धदशायां तात्त्विकनिवृत्तिर्नेति भावः ।। **किञ्चेति** ।। प्रमात्वपक्षस्याद्वैतिनाऽङ्गीकर्तुमशक्यत्वात् भ्रमत्वे वाच्ये विपरीत एवोक्तविवेकः स्यादित्यर्थः ।। **तस्मादिति** ।। पारमार्थिकत्वेनेति विशेषणे उक्तरीत्या ब्रह्मणोऽपि तदापत्त्याऽत्यन्ताभावप्रतियोगित्वमात्रस्यैव वक्तव्यत्वेन तादृशस्य च ध्वंस-प्रतियोगित्वासम्भवेन ब्रह्मज्ञानफलवत् कर्मज्ञानफलस्यापि नित्यत्वेन ब्रह्मज्ञानफलं स्थायि कर्मफलं त्वस्थायीति विवेकानुपपत्तिरेवेति भावः ।

ವಿವರಣೆ - ಮೋಕ್ಷಸಾಧನಚತುಷ್ಟಯಗಳಲ್ಲಿ ನಿತ್ಯಾನಿತ್ಯವಸ್ತುವಿವೇಕವೆಂದರೆ ಏನು? ಎಂಬ ಪ್ರಶ್ನೆ ಭಾಮತೀಕಾರನ ವಿಶ್ಲೇಷಣೆಯು ಅಸಮಂಜಸವೆಂದು ಸಮರ್ಥಿಸಿದ್ದಾಯಿತು. ಪ್ರಕೃತ ವಿವರಣಕಾರನು ನಿತ್ಯಾನಿತ್ಯವಸ್ತುವಿವೇಕವೆಂದರೆ ಏನು ಹೇಳುತ್ತಾನೆಂಬುದನ್ನು 'ನಚ' ಇತ್ಯಾದಿ ವಾಕ್ಯಗಳಿಂದ ಖಂಡಿಸು-ತ್ತಿದ್ದಾರೆ.

ನಿತ್ಯಾನಿತ್ಯವಿವೇಕಶಬ್ದಕ್ಕೆ ವಿವರಣನ ವಿವರಣೆ ಹೀಗಿದೆ - 'ನಿತ್ಯ' ಎಂದರೆ ಧ್ವಂಸಾಪ್ರತಿಯೋಗಿ ಎಂದರ್ಥ. ಅಂದರೆ ಯಾವ ವಸ್ತುವಿಗೆ ನಾಶವೇ ಇಲ್ಲವೋ ಆ ವಸ್ತುವು ಧ್ವಂಸಕ್ಕೆ ಅಪ್ರತಿಯೋಗಿ ಆಗುತ್ತದೆ. ಆದ್ದರಿಂದ ನಿತ್ಯವೆಂದರೆ ನಾಶವಿಲ್ಲದ್ದು ಎಂದರ್ಥ. ಇನ್ನು 'ಅನಿತ್ಯ' ಎಂದರೆ ಧ್ವಂಸಪ್ರತಿಯೋಗಿ ಎಂದರ್ಥ. ಅಂದರೆ ಯಾವ ವಸ್ತುವಿಗೆ ಧ್ವಂಸವಿದೆಯೋ ಅದು ಧ್ವಂಸಕ್ಕೆ ಪ್ರತಿಯೋಗಿ ಆಗುತ್ತದೆ ಆದ್ದರಿಂದಲೇ ಅನಿತ್ಯವೆಂದರೆ ನಾಶವುಳ್ಳದ್ದು ಎಂದರ್ಥ.

*ಪರಿಪೂರ್ಣಚಂದ್ರಿಕಾ*

ಪ್ರಕೃತ ಬ್ರಹ್ಮಜ್ಞಾನದಿಂದ ದೊರೆಯುವ ಫಲವು ನಾಶವಿಲ್ಲದ್ದು. ಕರ್ಮ ಮೊದಲಾದವುಗಳಿಂದ ದೊರೆಯುವ ಫಲವು ನಾಶವುಳ್ಳದ್ದು; ಎಂಬ ವಿವೇಕವೇ ನಿತ್ಯಾನಿತ್ಯವಸ್ತುವಿವೇಕವೆಂದು ವಿವರಣದ ಅಭಿಪ್ರಾಯ.

ಭಾಮತಿಗೆ ಇದ್ದ ದೋಷ ವಿವರಣಗ್ರಂಥಕ್ಕಿಲ್ಲ - ಬ್ರಹ್ಮಾತಿರಿಕ್ತವಾದದ್ದೆಲ್ಲವೂ ಅನಿತ್ಯ ಬ್ರಹ್ಮಮಾತ್ರ ನಿತ್ಯ ಎಂಬ ನಿಶ್ಚಯಜ್ಞಾನವಿರುವುದರಿಂದ ಇತರ ಎಲ್ಲಾ ಅನಾತ್ಮವಿಚಾರಗಳಲ್ಲಿ ಪ್ರವೃತ್ತಿ ಮಾಡದೇ ಬ್ರಹ್ಮವಿಚಾರದಲ್ಲಿಯೇ ಪ್ರವೃತ್ತಿ ಮಾಡುತ್ತಾನೆ. ಮತ್ತು ಐಹಿಕವಾದ ಭೋಗಗಳಲ್ಲಿ ವೈರಾಗ್ಯವೂ ಉಂಟಾಗುತ್ತದೆ ಆದರೆ ವಿವರಣಮತದವರಿಗೆ ನಿತ್ಯಾನಿತ್ಯವಸ್ತುವಿವೇಕವನ್ನೇ ಸಮರ್ಥಿಸಲಾಗದು. ಏಕೆಂದರೆ ಯಾವ ವಸ್ತುವು ನಿತ್ಯವೋ ಅದಕ್ಕೆ ಮಾತ್ರ ನಾಶವಿರಲು ಸಾಧ್ಯ. ಯಾವ ವಸ್ತುವಿಗೆ ಅಸ್ತಿತ್ವವೇ ಇಲ್ಲವೋ ಅದು ನಾಶವಾಗುವುದಾದರೂ ಹೇಗೆ ಸಾಧ್ಯ? ಅದ್ವೈತಿಗಳು ಆತ್ಮಾತಿರಿಕ್ತವಾದದ್ದನ್ನೆಲ್ಲ ಸುಳ್ಳೆಂದು ಹೇಳುತ್ತಾರೆ. ಕರ್ಮವೂ ಆತ್ಮಾತಿರಿಕ್ತವಾದ್ದರಿಂದ ಸುಳ್ಳೆಂದಾಯಿತು. ಇದಕ್ಕೆ ನಾಶ ಹೇಳಲೂ ಸಾಧ್ಯವಿಲ್ಲ. ಆದ್ದರಿಂದ ಕರ್ಮಜ್ಞಾನಫಲವು ನಾಶವುಳ್ಳದ್ದು ಬ್ರಹ್ಮಜ್ಞಾನ ಫಲವು ನಾಶವಿಲ್ಲದ್ದು ಎಂಬ ವಿವೇಕ ಹುಟ್ಟಲು ಸಾಧ್ಯವಿಲ್ಲ.

ಇಲ್ಲಿ ಮಿಥ್ಯಾತ್ವ ಎಂದರೆ ಬಾಧ್ಯತ್ವ ಎಂದರ್ಥ. ಬಾಧ್ಯತ್ವ ಎಂದರೆ 'ಪ್ರತಿಪನ್ನೋಪಾಧಾವತ್ಯಂತಾಭಾವ ಪ್ರತಿಯೋಗಿತ್ವಮ್' ಎಂದರ್ಥ. ಯಾವ ಅಧಿಷ್ಠಾನದಲ್ಲಿ ಇದೆಯೆಂದು ತೋರುತ್ತದೆಯೋ ಅಲ್ಲೇ ಅದಿಲ್ಲದಿದ್ದಲ್ಲಿ ಬಾಧ್ಯವೆಂದು ಕರೆಯಲಾಗುತ್ತದೆ. ಇದನ್ನೇ ವಿವರಣದಲ್ಲಿ ಹೀಗೆ ಹೇಳಲಾಗಿದೆ. 'ಪ್ರತಿಪನ್ನೋಪಾಧಾವಭಾವಪ್ರತಿಯೋಗಿತ್ವ ಲಕ್ಷಣಸ್ಯ' ಎಂದು. ಇಂತಹ 'ಮಿಥ್ಯಾತ್ವವು ಮೊಲದ ಕೊಂಬಿನಂತೆ ಅಸತ್ಯವಾಗಿದೆ'. ಯಾವುದು ಅತ್ಯಂತಾಭಾವಪ್ರತಿಯೋಗಿಯೋ ಅದು ಧ್ವಂಸಪ್ರತಿಯೋಗಿಯಾಗಲಾರದು. ಯಾವುದು ಧ್ವಂಸಪ್ರತಿಯೋಗಿಯೋ ಅದು ಅತ್ಯಂತಾಭಾವಪ್ರತಿಯೋಗಿಯಾಗಲಾರದು. ಕರ್ಮವು ಅತ್ಯಂತಾಭಾವಪ್ರತಿಯೋಗಿಯಾಗಿರುವುದರಿಂದ ಧ್ವಂಸಪ್ರತಿಯೋಗಿಯಾಗಲಾರದು. ಆದ್ದರಿಂದ ಕರ್ಮಾದಿಫಲವನ್ನೂ ನಿತ್ಯವೆಂದೇ ಅಂಗೀಕರಿಸಬೇಕು. ಆದ್ದರಿಂದ ಬ್ರಹ್ಮಜ್ಞಾನಫಲವು ನಿತ್ಯ, ಕರ್ಮಾದಿಜ್ಞಾನಫಲವು ಅನಿತ್ಯವೆಂಬ ವಿವೇಕವನ್ನು ನಿತ್ಯಾನಿತ್ಯವಿವೇಕವೆಂದು ಹೇಳಲಾಗದು.

ಶಂಕೆ - ಯಾವ ಅಧಿಷ್ಠಾನದಲ್ಲಿ ಇದೆಯೆಂದು ತೋರುತ್ತದೂ, ಅಲ್ಲೇ ಪಾರಮಾರ್ಥಿಕರೂಪದಿಂದ ಇಲ್ಲದಿದ್ದಲ್ಲಿ ಮಾತ್ರ ಬಾಧ್ಯವೆಂದು ಕರೆಯುತ್ತೇವೆ. ಒಂದು ವೇಳೆ ಸ್ವರೂಪತಃ ಅತ್ಯಂತಾಭಾವಪ್ರತಿಯೋಗಿತ್ವವನ್ನು ಹೇಳಿದ್ದಲ್ಲಿ ಸ್ವರೂಪತಃ ಧ್ವಂಸವನ್ನು ಹೇಳುವುದು ವಿರುದ್ಧವಾಗುತ್ತಿತ್ತು. ಆದರೆ ನಾವು ಸ್ವರೂಪತಃ ಅತ್ಯಂತಾಭಾವಪ್ರತಿಯೋಗಿತ್ವವನ್ನು ಅಂಗೀಕರಿಸುತ್ತಿಲ್ಲ. ಆದ್ದರಿಂದ ಪಾರಮಾರ್ಥಿಕರೂಪದಿಂದ ಇಲ್ಲದಿರುವ ವಸ್ತುವಿಗೆ ಸ್ವರೂಪತಃ ನಾಶವನ್ನೂ ಹೇಳುತ್ತಿದ್ದೇವೆ. ಈಗ ಯಾವ ವಿರೋಧವೂ ಇಲ್ಲ.

ಸಮಾಧಾನ - ಹೀಗೆ ಹೇಳಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಏಕೆಂದರೆ ಪಾರಮಾರ್ಥಿಕಶಬ್ದಕ್ಕೆ ಅಬಾಧ್ಯವೆಂದರ್ಥ. ಅಬಾಧ್ಯವೆಂದರೆ ಬಾಧ್ಯವಲ್ಲದ್ದು ಎಂದರ್ಥ. ಬಾಧ್ಯ ಎಂದರೆ

ಅಬಾಧ್ಯವಲ್ಲದ್ದು ಎಂದರ್ಥ. ಆದ್ದರಿಂದ ಅಬಾಧ್ಯತ್ವದ ಜ್ಞಾನ ಬರಬೇಕಾದರೆ ಬಾಧ್ಯತ್ವದ ಜ್ಞಾನ ಬರಬೇಕು. ಬಾಧ್ಯತ್ವದ ಜ್ಞಾನ ಬರಬೇಕಾದರೆ ಅಬಾಧ್ಯತ್ವದ ಜ್ಞಾನ ಬರಬೇಕು. ಅಬಾಧ್ಯತ್ವದ ಜ್ಞಾನ ಬರದೆ ಬಾಧ್ಯತ್ವದ ಜ್ಞಾನ ಬರುವುದಿಲ್ಲ. ಬಾಧ್ಯತ್ವದ ಜ್ಞಾನ ಬರದೆ ಅಬಾಧ್ಯತ್ವದ ಜ್ಞಾನ ಬರುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ.

ಮತ್ತು ಬ್ರಹ್ಮನೂ ಬಾಧ್ಯನಾಗಲಿ ಎಂಬ ಮತ್ತೊಂದು ದೋಷ ಬರುತ್ತದೆ. ಏಕೆಂದರೆ ಬ್ರಹ್ಮನನ್ನು ನೀವು ನಿರಾಕಾರನೆಂದು ಒಪ್ಪಿರುವುದರಿಂದ ಪಾರಮಾರ್ಥಿಕರೂಪವೂ ಅವನಲ್ಲಿಲ್ಲ. ಆದ್ದರಿಂದ ಪಾರಮಾರ್ಥಿತ್ವಾಕಾರೇಣ ಅತ್ಯಂತಾಭಾವಪ್ರತಿಯೋಗಿತ್ವವೆಂಬ ಬಾಧ್ಯತ್ವವು ಬ್ರಹ್ಮನಲ್ಲಿ ಬರುವುದರಿಂದ ಅವನೂ ಬಾಧ್ಯನಾಗಬೇಕಾದೀತು.

ಮತ್ತೂ ಒಂದು ದೋಷ ಬರುತ್ತದೆ - ಪಾರಮಾರ್ಥಿಕರೂಪದಿಂದ ಇಲ್ಲದಿರುವ ವಸ್ತುಗಳಿಗೆ ನಾಶವಿದೆ ಎಂದು ಹೇಳುವುದಾದರೆ ಶುಕ್ತಿರಜತಕ್ಕೂ ನಾಶವನ್ನೂ ಹೇಳಬೇಕಾದೀತು.

ಶಂಕೆ - 'ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ' ''ಕೊನೆಗೆ ಎಲ್ಲ ಮಾಯೆಯು ನಾಶವಾಗುತ್ತದೆ'' ಈ ಶ್ರುತಿಯು ಪ್ರಪಂಚಕ್ಕೆ ನಾಶವನ್ನು ಹೇಳುತ್ತಿದೆ. ಅದರಂತೆಯೇ 'ನೇಹ ನಾನಾಸ್ತಿ ಕಿಂಚನ' 'ಬ್ರಹ್ಮನಲ್ಲಿ ಭೇದ ಪ್ರಪಂಚವಿಲ್ಲ' ಎಂಬ ಶ್ರುತಿಯು ಪ್ರಪಂಚವೇ ಇಲ್ಲವೆಂದು ಹೇಳುತ್ತಿದೆ. ಹೀಗೆ ಒಂದು ಶ್ರುತಿಯು ಪ್ರಪಂಚಕ್ಕೆ ನಾಶ ಹೇಳುತ್ತಿದೆ. ಮತ್ತೊಂದು ಶ್ರುತಿಯು ಪ್ರಪಂಚವನ್ನೇ ಇಲ್ಲವೆನ್ನುತ್ತಿದೆ. ಈ ಎರಡೂ ಶ್ರುತಿಯನ್ನು ಕೂಡಿಸಬೇಕಾದರೆ ಪಾರಮಾರ್ಥಿಕ ರೂಪದಿಂದ ಅತ್ಯಂತಾಭಾವವನ್ನು ಸ್ವರೂಪದಿಂದ ನಾಶವನ್ನು ಎರಡನ್ನೂ ಅಂಗೀಕರಿಸಬೇಕು.

ಸಮಾಧಾನ - ಹಾಗಾದರೆ ಪ್ರಪಂಚಕ್ಕೆ ಸದಾ ಅಸ್ತಿತ್ವವನ್ನು ಹೇಳುವ ಶ್ರುತಿಗಳಿಗೂ ನೀವು ಗೌರವ ಕೊಡಬೇಕು. 'ಗೌರನಾದ್ಯಂತವತೀ' 'ಅವಿದ್ಯೆಗೆ ಆದ್ಯಂತಗಳಿಲ್ಲ' 'ಏಷೋಽಶ್ವತ್ಥಃ ಸನಾತನಃ' 'ಈ ಪ್ರಂಪಚವು ಸದಾ ಇರುತ್ತದೆ' ಇತ್ಯಾದಿ ಶ್ರುತಿಗಳೂ ಇರುವುದರಿಂದ ಮೋಕ್ಷದಲ್ಲಿಯೂ ಪ್ರಪಂಚವಿದೆಯೆಂದು ಅಂಗೀಕರಿಸಬೇಕಾದೀತು. ಆದರೆ ನೀವು ಅದನ್ನು ಅಂಗೀಕರಿಸುವುದಿಲ್ಲ.

ಶಂಕೆ - ಮೋಕ್ಷದಲ್ಲಿಯೂ ಪ್ರಪಂಚಕ್ಕೆ ಅಸ್ತಿತ್ವವನ್ನು ಅಂಗೀಕರಿಸಿದಲ್ಲಿ 'ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ' ಎಂದು ಮೋಕ್ಷದಲ್ಲಿ ಪ್ರಪಂಚನಿವೃತ್ತಿಯನ್ನು ಹೇಳುವ ಶ್ರುತಿಗೆ ಹೇಗೆ ಅರ್ಥೈಸಬೇಕು?

ಸಮಾಧಾನ - ಆ ಶ್ರುತಿಗೆ ಹೇಗೆ ಅರ್ಥೈಸಬೇಕೆಂದು ನೀವು ಹೆದರಬೇಕಿಲ್ಲ. ಅಪಾರಮಾರ್ಥಿಕವಾದ ಸಂಸಾರವು ಇದೆಯೆಂದು 'ಏಷೋಽಶ್ವತ್ಥಃ ಸನಾತನಃ' ಎಂಬ ಶ್ರುತಿಯು ಹೇಳುತ್ತಿದೆ. 'ಭೂಯಶ್ಚಾಂತೇ' ಎಂಬ ಶ್ರುತಿಯು ಪಾರಮಾರ್ಥಿಕವಾದ ಸಂಸಾರನಿವೃತ್ತಿಯನ್ನು ಮೋಕ್ಷದಲ್ಲಿ ಹೇಳುತ್ತಿದೆ.

ಶಂಕೆ - ಮೋಕ್ಷದಲ್ಲಿಯೂ ಅಪಾರಮಾರ್ಥಿಕವಾದ ಸಂಸಾರವನ್ನು ಅಂಗೀಕರಿಸಿದಲ್ಲಿ ಮೋಕ್ಷಕ್ಕೂ ಸಂಸಾರಕ್ಕೂ ವ್ಯತ್ಯಾಸವೇ ಇಲ್ಲವಾಗಬೇಕಾದೀತು.

*ಸಂಪೂರ್ಣಚಂದ್ರಿಕಾ*

ಸಮಾಧಾನ - ವ್ಯತ್ಯಾಸವನ್ನು ಹೇಳಲು ಬರುತ್ತದೆ. ಹೇಗೆಂದರೆ ಅಪಾರಮಾರ್ಥಿಕವಾದ ಸಂಸಾರವು ಮೋಕ್ಷದಲ್ಲಿ ಮತ್ತು ಸಂಸಾರದಲ್ಲಿ ಸಮಾನ. ಆದರೆ ಪಾರಮಾರ್ಥಿಕವಾದ ನಿವೃತ್ತಿಯು ಮೋಕ್ಷದಲ್ಲಿ ಮಾತ್ರ ಇರುತ್ತದೆ. ಸಂಸಾರಕಾಲದಲ್ಲಿ ಇರುವುದಿಲ್ಲ. ಹೀಗೆ ವ್ಯತ್ಯಾಸ ಹೇಳಲು ಬರುತ್ತದೆ. ಶ್ರುತಿವಿರೋಧದ ಹೆದರಿಕೆಯೂ ಇಲ್ಲ. ಆದ್ದರಿಂದ 'ಗೌರನಾದ್ಯಂತವತೀ' ಇತ್ಯಾದಿ ಶ್ರುತಿಗಳ ಅನುಕೂಲಕ್ಕೋಸ್ಕರ ಮೋಕ್ಷಕಾಲದಲ್ಲಿಯೂ ಅತಾತ್ತ್ವಿಕವಾದ ಸಂಸಾರವಿದೆ. ಸಂಸಾರನಿವೃತ್ತಿಯು ತಾತ್ತ್ವಿಕವೆಂದು ನೀವು ಅಂಗೀಕರಿಸಬೇಕಾದೀತು.

ಹೀಗೆ ಪಾರಮಾರ್ಥಿಕತ್ವರೂಪದಿಂದ ಅತ್ಯಂತಾಭಾವವನ್ನು, ಸ್ವರೂಪದಿಂದ ಧ್ವಂಸವನ್ನು ಹೇಳಿದರೆ ಪ್ರಧಾನವಾಗಿ ಈ ನಾಲ್ಕು ದೋಷಗಳು ಬರುತ್ತವೆ.

ಮತ್ತು ನಿತ್ಯಾನಿತ್ಯವಿವೇಕವೆಂದರೆ ಭೇದಜ್ಞಾನವೆಂದೋ, ಭೇದಸಾಧಕವಾದ ವೈಲಕ್ಷಣ್ಯ ಜ್ಞಾನವೆಂದೋ ಹೇಳಬೇಕು. ಒಂದು ವೇಳೆ ಬ್ರಹ್ಮಜ್ಞಾನಫಲವು ನಿತ್ಯ, ಉಳಿದದ್ದೆಲ್ಲವೂ ಅನಿತ್ಯ ಎಂಬ ಜ್ಞಾನವು ಭ್ರಮವೆಂದು ಹೇಳುವುದಾದರೆ ಆವಾಗ ಬ್ರಹ್ಮಜ್ಞಾನಫಲವು ನಿತ್ಯವಲ್ಲವೆಂದಂತಾಯಿತು. ಹಾಗಾಗಿ ಬ್ರಹ್ಮವಿಚಾರದಲ್ಲಿ ಯಾರೂ ಪ್ರವೃತ್ತಿ ಮಾಡಲಾರರು. ಒಂದು ವೇಳೆ ಬ್ರಹ್ಮಜ್ಞಾನಫಲವು ನಿತ್ಯ ಉಳಿದದ್ದೆಲ್ಲವೂ ಅನಿತ್ಯ ಎಂಬ ಜ್ಞಾನವು ಪ್ರಮಾಣವೆಂದು ಹೇಳುವುದಾದರೆ, ಆ ಜ್ಞಾನಕ್ಕೆ ವಿಷಯವಾದದ್ದು ಸತ್ಯವೆಂದಂತಾಯಿತಾದ್ದರಿಂದ ಭೇದವನ್ನು ತಾತ್ತ್ವಿಕವೆಂದು ಒಪ್ಪಿಕೊಂಡಂತಾಯಿತು. ಮತ್ತು ಉಪಲಕ್ಷಣಯಾ ಭೇದವ್ಯಾಪ್ತವಾದ ವೈಲಕ್ಷಣ್ಯವನ್ನೂ ಸತ್ಯವೆಂದು ಅಂಗೀಕರಿಸಿದಂತಾಯಿತು.

ಆದ್ದರಿಂದ ಅದ್ವೈತಮತದಲ್ಲಿ ಜಿಜ್ಞಾಸುವಿನಲ್ಲಿರಬೇಕಾದ ನಾಲ್ಕುವಿಧ ಅರ್ಹತೆಗಳಲ್ಲಿ ಒಂದಾದ ನಿತ್ಯಾನಿತ್ಯವಸ್ತುವಿವೇಕವನ್ನು ಸಮರ್ಥಿಸಲು ಬರುವುದಿಲ್ಲ. ಭಾಮತೀಕಾರ ಹಾಗೂ ವಿವರಣಕಾರ ಇಬ್ಬರ ಪ್ರಯತ್ನವೂ ವ್ಯರ್ಥವಾಗಿದೆ.

## ಸಾರ

ಪ್ರಪಂಚದಲ್ಲಿ ನಿತ್ಯ ಅನಿತ್ಯ ಎಂದು ಎರಡು ಬಗೆಯ ಪದಾರ್ಥಗಳುಂಟು ಎಂದು ತಿಳಿಯುವುದು ನಿತ್ಯಾನಿತ್ಯವಿವೇಕ ಎಂದು ಇನ್ನೊಂದು ವಿವರಣೆ. ಇಂಥ ವಿವೇಕವುಳ್ಳವನು ನಿತ್ಯ ಯಾವುದು ಅನಿತ್ಯ ಯಾವುದೆಂದು ತಿಳಿಯದೆ ಸಂದೇಹಪಟ್ಟು ಬ್ರಹ್ಮವಿಚಾರಕ್ಕೇ ತೊಡಗಲಾರ. ಬ್ರಹ್ಮ ಒಂದೇ ನಿತ್ಯವೆಂದು ತಿಳಿದರೆ ಮಾತ್ರ ಬ್ರಹ್ಮ ವಿಚಾರದಲ್ಲಿ ಪ್ರವೃತ್ತಿ ಸಾಧ್ಯವಾದೀತು.

ಈ ಅನಿತ್ಯಪ್ರಪಂಚ ನಿತ್ಯವಸ್ತು ಒಂದರಲ್ಲಿ ಆರೋಪಿತವಾಗಿದೆ ಎಂದು ತಿಳಿಯುವುದೇ ನಿತ್ಯಾನಿತ್ಯವಿವೇಕ ಎಂಬುದು ಮತ್ತೊಂದು ವಿವರಣೆ. ಆದರೆ ಇಂಥ ವಿವೇಕ ಉಳ್ಳವನು ವಿಚಾರದಿಂದ ತಿಳಿಯಬೇಕಾದುದು ಬೇರೆ ಏನಿದೆ? ನಿತ್ಯವಸ್ತುವನ್ನು 'ಬ್ರಹ್ಮ' ಎಂದು ತಿಳಿಯದಿದ್ದರೂ ಬ್ರಹ್ಮಸ್ವರೂಪವನ್ನು ಅವನು ತಿಳಿದಿದ್ದಾನೆ. ಬ್ರಹ್ಮಸ್ವರೂಪವನ್ನು ತಿಳಿಸುವುದೆ ವೇದಾಂತದ ಉದ್ದೇಶ. ಬ್ರಹ್ಮ ಎಂಬ ಹೆಸರನ್ನು ತಿಳಿಸಲು ಹೊರಟರೆ ಸ್ವರೂಪವನ್ನು ತಿಳಿಸುವ ತಾತ್ಪರ್ಯಕ್ಕೆ ವಿರುದ್ಧವಾಗುತ್ತದೆ.

ವಿವರಣಮತದಲ್ಲಿ ಕರ್ಮಫಲ ಅನಿತ್ಯ ಬ್ರಹ್ಮಜ್ಞಾನಫಲ ನಿತ್ಯ ಎನ್ನುವುದೇ ನಿತ್ಯಾನಿತ್ಯವಿವೇಕ. 'ಅನಿತ್ಯ ನಿತ್ಯ' ಎಂದರೆ ವಿನಾಶಿ ಅವಿನಾಶಿ ಎಂದರ್ಥ. ಆದರೆ ಕರ್ಮಫಲ ಅದ್ವೈತಮತದಲ್ಲಿ ವಿನಾಶಿಯಾಗಲು ಸಾಧ್ಯವಿಲ್ಲ. ಏಕೆಂದರೆ ಅದು ಮಿಥ್ಯಾ. ಮೊಲದ ಕೊಂಬಿನಂತೆ ಮೂರುಕಾಲದಲ್ಲಿಯೂ ಇಲ್ಲದುದು. ಅದಕ್ಕೆ ನಾಶ ಎಂಬುದಿದೆಯೆ?

ಮಿಥ್ಯೆ ಎಂದರೆ ಮೊಲದ ಕೊಂಬಿನಂತೆ ಅಲ್ಲ. ಪಾರಮಾರ್ಥಿಕವಾಗಿ ಇಲ್ಲ ಎನ್ನುತ್ತೀವೆ ಎಂದರೆ ಕೇಳುತ್ತೇವೆ. ಪಾರಮಾರ್ಥಿಕವೆಂದರೇನು? ಮಿಥ್ಯೆಯಲ್ಲದುದು. ಮಿಥ್ಯೆ ಎಂದರೇನು? ಪಾರಮಾರ್ಥಿಕವಲ್ಲವಾದುದು ಇದು ಅನ್ಯೋನ್ಯಾಶ್ರಯ.

ಪ್ರಪಂಚ ಮಿಥ್ಯೆ ಎಂದು ಹೇಳುವ ವೇದಾಂತವೆ ಅದಕ್ಕೆ ನಾಶವನ್ನು ಹೇಳುವುದರಿಂದ ಅದನ್ನು ಒಪ್ಪಬೇಕು ಎನ್ನುವವರು 'ಗೌರನಾದ್ಯಂತವತೀ' 'ಏಷೋಽಶ್ವತ್ಥಃ ಸನಾತನಃ' ಎಂದು ಮುಂತಾಗಿ ಪ್ರಪಂಚ ನಿತ್ಯತ್ವವನ್ನೂ ವೇದಾಂತ ಹೇಳುವುದನ್ನು ಗಮನಿಸಬೇಕು. ಮೋಕ್ಷದಲ್ಲಿಯೂ ಪ್ರಪಂಚವಿದೆ ಎನ್ನಬೇಕು. 'ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ' ಎಂದು ಮೋಕ್ಷದಲ್ಲಿ ಪ್ರಪಂಚ ನಿವೃತ್ತಿಯನ್ನು ವೇದಾಂತ ಹೇಳಿದರೆ ಅದರ ಅಭಿಪ್ರಾಯ - 'ಮೋಕ್ಷದಲ್ಲಿ ಪ್ರಪಂಚನಿವೃತ್ತಿ ಪಾರಮಾರ್ಥಿಕ. ಅಪಾರಮಾರ್ಥಿಕವಾಗಿ ಪ್ರಪಂಚವಿರುತ್ತದೆ. ವಿರೋಧವಿಲ್ಲ' ಎಂದು. ಹಾಗಾದರೆ ಸಂಸಾರಕ್ಕೂ ಮೋಕ್ಷಕ್ಕೂ ಏನು ವ್ಯತ್ಯಾಸ ಎಂದರೆ, ಸಂಸಾರದಲ್ಲಿ ಮೋಕ್ಷದಲ್ಲಿರುವಂತೆಯೆ ಅಪಾರಮಾರ್ಥಿಕ ಪ್ರಪಂಚವಿದೆ. ಪಾರಮಾರ್ಥಿಕ ನಿವೃತ್ತಿ ಮಾತ್ರವಿರುವುದಿಲ್ಲ. ಮೋಕ್ಷದಲ್ಲಿ ಅದೂ ಇರುತ್ತದೆ !

## ವೈರಾಗ್ಯ ಶಮದಮಾದಿಗಳೂ ಸಹ ಕೂಡಲ್ಲ

**तात्पर्यचन्द्रिका –**

**नापीहामुत्रार्थभोगविरागः । विवरणे – विषयैरपि नित्यमात्मस्वरूपसुखमेवाभिव्यज्यते, नतु जन्यं सुखमस्ति इत्युक्तत्वेन वैषयिकसुखेऽपि विरागायोगात् । मोक्षे रागवतः तत्वतस्ततो भेदहीने भोगे विरागायोगाच्च । तत्वतस्तद्भेदहीनत्वेऽपि तदभेदहीनत्वमात्रेण विराग इति चेन्न[१] । उभयाभावस्य व्याहतत्वात् । दृश्यते**

(१) ननु तादात्म्ये ''अहं सुख''मित्यनुभवः स्यात्, 'नाहं सुखी'ति; अहं सुखीति चानुभवो लोके पुरुषार्थ इति? नैष दोषः; सुकापरोक्ष्यमात्रस्य पुरुषार्थत्वात् । ननु स्वाश्रयं सुखमेव पुरुषार्थो न सुखापरोक्ष्यमिति? न; उपलब्धानामेव सुखसाधनानां पुरुषार्थत्वादिष्टत्वाविशेषात् सुखमप्युपलभ्यमानमेव पुरुषार्थ इति गम्यते । तत्र साधनपारतन्त्र्यानित्यत्वादिवद् विषयसुखस्यात्मनो भेदोऽप्यानुषङ्गिकोऽवभासते'ऽहं सुखी'ति, न पुरुषार्थतया, इत्यतो ब्रह्मानन्दोऽप्यपरोक्षावभासः पुरुषार्थ इति । ननु नास्ति नित्यं

**चापारमर्थिकस्यापि रूप्यस्य नेदं रूप्यमिति शुक्तिधर्मिकलौकिकपारमार्थिकभेद-प्रतियोगित्वम् ।'शमदमादिसम्पत्तिः' इत्यत्र च आदिशब्दो न युक्तः । तेन तितिक्षादेरेव ग्रहणं नतु विवेकादेरिति नियमहेतोः तितिक्षाद्यनुगतस्य विवेकादि-व्यावृत्तस्य चोपसङ्ग्राहकधर्मस्याभावात् ।**

ಅನುವಾದ - ಐಹಿಕ ಆಮುಷ್ಮಿಕ ಸುಖಭೋಗದಲ್ಲಿ ವೈರಾಗ್ಯ ಹೊಂದಿರುವಿಕೆಯು ಜಿಜ್ಞಾಸುವಿನಲ್ಲಿರಬೇಕಾದ ಮತ್ತೊಂದು ಅರ್ಹತೆಯೆಂದು ಶಂಕರಭಾಷ್ಯದಲ್ಲಿ ಹೇಳಲಾಗಿದೆ. ಆದರೆ ಇದೂ ಸಹ ಸರಿಯಲ್ಲ. ಏಕೆಂದರೆ ವಿವರಣದಲ್ಲಿ ವಿಷಯಪದಾರ್ಥಗಳಿಂದ ನಿತ್ಯವಾದ ಆತ್ಮಸ್ವರೂಪಭೂತವಾದ ಸುಖವೇ ಅಭಿವ್ಯಕ್ತವಾಗುತ್ತದೆ, ಹೊರತು ಆತ್ಮಸ್ವರೂಪಭೂತವಲ್ಲದ ಸುಖವು ಹುಟ್ಟಲಾರದು, ಎಂದು ಹೇಳಲಾಗಿದೆ.

ವಿವರಣದಲ್ಲಿ ಹೀಗೆ ಹೇಳಿರುವುದರಿಂದ ನಿತ್ಯವಾದ ವೈಷಯಿಕಸುಖದಲ್ಲಿ ವೈರಾಗ್ಯ ಬರಲು ಕಾರಣವೇ ಇಲ್ಲ. ಮತ್ತು ಮೋಕ್ಷಸುಖದಲ್ಲಿ ಅನುರಾಗವಿರುವ ವ್ಯಕ್ತಿಗೆ ಮೋಕ್ಷಸುಖಕ್ಕಿಂತ ತಾತ್ವಿಕವಾಗಿ ಅಭೇದವಿರುವ ವೈಷಯಿಕಭೋಗದಲ್ಲಿ ವೈರಾಗ್ಯ ಬರಲೂ ಸಾಧ್ಯವಿಲ್ಲ.

ಶಂಕೆ - ವಾಸ್ತವಿಕವಾಗಿ ಭೇದವಿಲ್ಲದೆ ಇದ್ದರೂ ವೈಷಯಿಕಸುಖಕ್ಕೂ ಮೋಕ್ಷಸುಖಕ್ಕೂ ಭೇದಭ್ರಮ ಇರುವುದರಿಂದ ವೈಷಯಿಕಸುಖದಲ್ಲಿ ವೈರಾಗ್ಯ ಬರುತ್ತದೆ.

ಸಮಾಧಾನ - ಮೋಕ್ಷಸುಖ ವಿಷಯಸುಖಗಳಲ್ಲಿ ಭೇದಭ್ರಮ ಇದ್ದರೂ ವಾಸ್ತವಿಕವಾದ ಭೇದವಿಲ್ಲದ ಕಾರಣ ಮೋಕ್ಷಸುಖದಂತೆ ವಿಷಯಸುಖವೂ ಇಷ್ಟವಾಗಬೇಕು. ಅದರಲ್ಲಿವ ವೈರಾಗ್ಯ ಬರಲು ಕಾರಣವಿಲ್ಲ.

ಶಂಕೆ - ಮೋಕ್ಷಸುಖ ವಿಷಯಸುಖಗಳಲ್ಲಿ ವಾಸ್ತವಭೇದವಿಲ್ಲದಿದ್ದರೂ ಅವಾಸ್ತವ ಅಭೇದವೂ ಇರುವುದಿಲ್ಲ. ಅಭೇದವಿಲ್ಲದ ಕಾರಣದಿಂದ ವಿಷಯಸುಖದಲ್ಲಿ ವೈರಾಗ್ಯ ಬರಬಹುದಲ್ಲವೇ?

ಸಮಾಧಾನ - ಎರಡು ವಸ್ತುಗಳೊಳಗೆ ವಾಸ್ತವ ಭೇದವೂ ಇಲ್ಲ, ಅಭೇದವೂ ಇಲ್ಲವೆನ್ನುವುದು ಪರಸ್ಪರ ವ್ಯಾಹತವಾಗಿದೆಯೆಂದು ಲೋಕದಲ್ಲಿ ಕಂಡಿದೆ - ಶುಕ್ತಿಯಲ್ಲಿ ಕಾಣುವ

---

सुखमिति नैयायिकादयः? सत्यम् ; नास्त्येव जन्यमपि सुखम् । ननु साधनोपादानाद् जन्यताऽवगम्यते? न; सिद्धस्यैव सुखस्याभिव्यक्तिहेतुत्वात्, अन्यथा सुखसन्तानजन्म-प्रतिभासयोग्यत्वयोः साधनाधीनताकल्पनागौरवात् साध्यान्तराशेषतया वाऽव्यभिचारित्वेन वा (नित्य)निरुपाधिकप्रेमास्पदत्वेन वा सुखदुःखावस्थयोरविशेषेण सुखरूप आत्मा प्रत्यक्षेणावभासते ।

ಬೆಳ್ಳಿಯು ಅವಾಸ್ತವವಾಗಿದೆ. ಆದರೂ 'ಇದು ಬೆಳ್ಳಿಯಲ್ಲ' ಎಂಬ ಬಾಧಜ್ಞಾನ ಬಂದಾಗ ಶುಕ್ತಿಯಲ್ಲಿ ಬೆಳ್ಳಿಯ ಭೇದವು ಶುಕ್ತಿಯಂತೆಯೇ ವಾಸ್ತವವಾಗಿದೆ. ವಾಸ್ತವ-ಅವಾಸ್ತವಗಳಿಗೆ ಭೇದವನ್ನು ಒಪ್ಪಲೇಬೇಕು. ಅದ್ವೈತಹಾನಿಯೆಂದು ಹೆದರಿದರೆ ಅಭೇದವನ್ನಾದರೂ ಒಪ್ಪಬೇಕು. ಪರಸ್ಪರವಿರುದ್ಧ ಧರ್ಮಗಳಲ್ಲಿ ಬಂದಿಲ್ಲದಿದ್ದರೆ ಇನ್ನೊಂದು ಇರಲೇಬೇಕು. ಹೀಗೆ ವಾಸ್ತವ ಅಭೇದವನ್ನೊಪ್ಪಿದರೆ ಮೋಕ್ಷಸುಖದಲ್ಲಿ ಅಭಿಲಾಷೆ ವಿಷಯಸುಖದಲ್ಲಿ ವೈರಾಗ್ಯ ಎನ್ನುವುದು ಅರ್ಥಶೂನ್ಯವಾಗುತ್ತದೆ.

ಶಮದಮಾದಿಸಂಪತ್ತು ಜಿಜ್ಞಾಸುವಿನ ಮತ್ತೊಂದು ಅರ್ಹತೆಯೆಂದು ಹೇಳಲಾಗಿತ್ತು. ಆದರೆ ಇದೂ ಸರಿಯಲ್ಲ, ಏಕೆಂದರೆ ಇಲ್ಲಿ ಆದಿ ಶಬ್ದದಿಂದ ಯಾವುದನ್ನು ಇಟ್ಟುಕೊಳ್ಳಬೇಕೆಂದು ಸಮರ್ಥಿಸಲಾಗದು. ನೀವು ಆದಿಪದದಿಂದ ತಿತಿಕ್ಷಾ (ಸಹನೆ) ಮೊದಲಾದವುಗಳನ್ನು ಇಟ್ಟುಕೊಳ್ಳಬೇಕು. ವಿವೇಕಾದಿಗಳನ್ನು ಇಟ್ಟುಕೊಳ್ಳಬಾರದು ಎನ್ನಲು ಕಾರಣವಿಲ್ಲ. ತಿತಿಕ್ಷಾದಿಗಳಲ್ಲಿರುವ ವಿವೇಕಾದಿಗಳಲ್ಲಿಲ್ಲದ ಅಸಾಧಾರಣ ಧರ್ಮವೊಂದು ಇರುತ್ತಿದ್ದರೆ, ವಿವೇಕಾದಿಗಳನ್ನು ಇಟ್ಟುಕೊಳ್ಳಬಾರದೆಂದು ತಿಳಿಯುತ್ತಿತ್ತು. ಆದರೆ ಅಂತಹ ಉಪಸಂಗ್ರಾಹಕಧರ್ಮವು ಇಲ್ಲದ ಕಾರಣ ಆದಿಪದದ ಅರ್ಥವನ್ನು ನಿಮಗೆ ಹೇಳಲಾಗದು.

**ಕಠಿಣಪದಾರ್ಥ**

ಮೋಕ್ಷೇ = ಸ್ವರೂಪಸುಖರೂಪವಾದ ಮೋಕ್ಷದಲ್ಲಿ, ತತ್ತ್ವತಃ ತದ್‌ಭೇದಹೀನತ್ವೇಽಪಿ = ವಿಷಯಸುಖ ಮೋಕ್ಷಸುಖಗಳಲ್ಲಿ ತಾತ್ವಿಕವಾದ ಭೇದವಿಲ್ಲದಿದ್ದರೂ, ಉಭಯಾಭಾವಸ್ಯ = ಭೇದವೂ ಇಲ್ಲ ಅಭೇದವೂ ಇಲ್ಲವೆಂದಲ್ಲಿ, ತಿತಿಕ್ಷಾ = ಸಹನೆ.

**प्रकाशः** – एवं विवेकभाष्यं मतद्वयानुरोधेन निरस्य "इहामुत्रार्थभोगविरागः" इति भाष्यं निराह ।। **नापीति** ।। नन्वात्मरूपात् सुखाद् वैषयिकसुखस्याभेदेऽपि, कल्पितभेदाद् विरागोपपत्तिरित्यत आह ।। **मोक्ष इति** ।। स्वरूपसुखरूपे मोक्षे इत्यर्थः । अधिष्ठानाध्यस्तयोरुभयाभावोपलम्भाच्च व्याहतिरित्यत आह ।। दृश्यत इति ।। यद्वा अध्यस्तरूप्ये सत्यामपीच्छायां तद्भेदहीने शुक्तिशकले रागादर्शनेन, तद्वन्मोक्षे रागवतोऽपि भोगे विरागो युज्यत इत्यतः, तत्रापि भेदाभावोऽसिद्ध इत्याह ।। **दृश्यते चेति** ।। एवमुक्तरीत्या 'मोक्षे' इत्यादिविवरणदूषणतयैव योज्यम् । यद्वा – स्वरूपसुखमेव वैषयिकमिति विवरणमते दोषमुक्त्वा, ये तु विषयैरन्तःकरणवृत्तिरूपं सुखं दुःखमिवातात्त्विकमेवोत्पद्यत इत्यङ्गीकुर्वते,

तत्पक्षेऽपि दोषमाह ।। **मोक्ष इति** ।। अविद्यानिवृत्त्यादिरूपे मोक्ष इत्यर्थः । विरागायोगे हेतुमाह ।। **तत्वत इति** ।। मोक्षाद् भोगस्याविद्यकभेदसत्त्वेऽपि तात्विकभेदस्य मिथ्यावादिनाऽनङ्गीकारादित्यर्थः । वह्नावयं न वह्निः किन्तु गुञ्जापुञ्ज इति मिथ्याभेदसत्त्वेऽपि, तात्विकभेदाभावेन दाहस्यैव दृष्टेरिति भावः । नन्वग्नौ तात्विकभेदाभावेऽपि तात्विकस्याग्निभेदस्य सत्त्वाद् दाहो युक्तः । मोक्षस्य तु तात्विकस्यातात्विकेन वैषयिकसुखेन तत्वतोऽभेदायोगान्मोक्ष एव रागो न भोगे सम्भवतीति शङ्कते ।। **तत्त्वत इति** ।। ननूभयाभावस्य व्याहत्या भेदाभेदयोरन्यतरेण भाव्यमित्येतत् तात्विकधर्मि विषयं, सुखं त्वतात्विकमतो न दोष इत्यत आह ।। **दृश्यत इति** ।। **लौकिकेति** ।। शुक्तिसत्तासमानसत्ताको व्यावहारिक इत्यर्थः । तथाच तद्वदेव मोक्षसत्तासमानसत्ताकमोक्षगततात्विक-भेदप्रतियोगित्वं वैषयिकसुखस्यैष्टव्यम् । तच्च त्वया सदद्वैतभङ्गभिया नेष्यत इति तदभेदस्यैवापत्त्या विरागायोगो युक्त इति भावः । यद्वा –'सुखे न विरागः किन्तु भोग एवेत्यत आह – **मोक्ष इति**' इत्यवतार्य, विवरणदूषणपरतयैव योज्यो 'मोक्षे' इत्यादिग्रन्थः ।

एवं परमते विरागानुपपत्तिमुक्त्वा, अन्यदपि भाष्योक्तं निराह ।। **शमेति** ।। ननु "शान्तो दान्त उपरतस्तितिक्षुः समाहितो भूत्वाऽऽत्मन्येवात्मानं पश्येत्" इत्येकश्रुत्युपात्तत्वमेव सङ्ग्राहकधर्म इति चेन्न । 'पश्येत्' इत्यात्मज्ञानस्यापि ग्रहणापत्तेः । नचात्मज्ञानाङ्गतया उपात्तत्वं, तच्च 'भूत्वा' इत्यनेन शमादि-पञ्चकस्यैवेति वाच्यम् । 'उपरतो विषयालंबुद्धिमान्' इत्यनेन विरागस्य 'समाहितो यथावस्तुतत्वज्ञानी' इत्यनेन नित्यानित्यविवेकस्य च प्राप्त्या तयोः पार्थक्या-योगादिति भावः । अत एव "तितिक्षाद्यनुगतस्य" इत्याद्याह । कथं तर्हि भाष्ये "शमादिसंयुक्तो मध्यमः समुदाहृतः" इति आदिशब्द इति चेन्न । श्रुत्युक्तशमादि सर्वाशयेनोपपत्तेः । नह्यत्र नित्यानित्यविवेकादि पृथगुपादाय आदिशब्दः प्रयुक्तोऽस्ति । "आब्रह्मस्तंबपर्यन्तम्" इत्यादिना वैराग्यस्य पृथगुक्तिस्तु, वैराग्यस्यप्राचुर्येणोत्तयोत्तमाधिकार्युपपत्तेः । तथा शान्तादिश्रुत्या नित्यानित्य-

विवेकस्य स्पष्टमप्रतीतेर्वैराग्यहेतुत्वालाभाच्च । सारासारविवेकादौ ''परीक्ष्य लोकान्'' इति श्रुत्यन्तरोदाहरणं भाष्ये युक्तम् । कथं तर्हि ''एवं – भूतैः प्रमाणैः पदार्थानां नित्यत्वादिकं निश्चित्य विषयेषु विरक्तस्य शमादमादिसम्पत्तिमतः'' इत्यादिप्रमाणपद्धत्यादिप्रकरणे तत्रतत्र विवेकादिकं पृथगुक्त्वाऽपि 'शमदमादि' इत्यादिशब्दोक्तिरिति चेन्न । हेतुहेतुमद्भावाभिव्यक्त्यर्थतया वा परप्रसिद्ध्या स्पष्टार्थतया वा ''शमदमाद्युपेतः स्यात्'' इत्यत्र ''शान्तो भवेद् दान्तो भवेदनुकूलो भवेदाचार्यं परिचरेत्'' इति भाष्योदाहृतश्रुत्यन्तरोपात्तधर्माभिप्रायेण वोपपत्तेरिति दिक् ।

गुरुराजीय – नन्वाश्रयाभेदेनोभयाभावविरोधः । अन्यथा वंध्यासुतस्य श्यामत्वाभावे गौरवप्राप्तेरुभयाभावस्य विरुद्धत्वेनासम्भवादित्यत आह ।। दृश्यते चेति ।। विपरीतेति ।। मम विनाशो मास्त्विति विपरीतेच्छाया एव दर्शनेनेत्यर्थः ।

**ವಿವರಣೆ** - ನಿತ್ಯಾನಿತ್ಯವಸ್ತುವಿವೇಕವು ಮೋಕ್ಷಸಾಧಕನ ಅರ್ಹತೆಯಲ್ಲವೆಂದು ಭಾಮತಿ ಹಾಗೂ ವಿವರಣಮತವನ್ನು ಅನುಸರಿಸಿ ಇದುವರೆಗೂ ನಿರಾಕರಿಸಲಾಯಿತು. ಈಗ ಇಹಾಮುತ್ರಾರ್ಥ-ಭೋಗವಿರಾಗವು ಮತ್ತೊಂದು ಅರ್ಹತೆಯೆಂಬ ಭಾಷ್ಯವನ್ನು 'ನಾಪಿ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ.

**ಶಂಕೆ** - ಆತ್ಮಸ್ವರೂಪಭೂತವಾದ ಸುಖಕ್ಕಿಂತ ವೈಷಯಿಕಸುಖವು ಅಭಿನ್ನವಾಗಿದ್ದರೂ ಭೇದಭ್ರಮವಿದೆ, ಆದ್ದರಿಂದ ವೈಷಯಿಕಸುಖದಲ್ಲಿ ವೈರಾಗ್ಯವು ಕೂಡುತ್ತದೆ. ಸಂಸಾರಕಾಲದಲ್ಲಿ ಸ್ವರೂಪಸುಖವೇ ಅಭಿವ್ಯಕ್ತವಾಗುತ್ತದೆಂದು ವಿವರಣದ ಅಭಿಪ್ರಾಯ. ಈ ಶಂಕೆಗೆ 'ಮೋಕ್ಷೇ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**ಸಮಾಧಾನ** - ಮೋಕ್ಷಸುಖಕ್ಕೂ ವೈಷಯಿಕಸುಖಕ್ಕೂ ಭೇದಭ್ರಮವಿದ್ದರೂ, ವಾಸ್ತವಿಕವಾದ ಭೇದವಿಲ್ಲ. ಆದ್ದರಿಂದ ಮೋಕ್ಷಸುಖದಲ್ಲಿ ಅನುರಾಗ ಬಂದಂತೆ ವೈಷಯಿಕಸುಖದಲ್ಲಿಯೂ ಅನುರಾಗ ಬಂದೇ ಬರುತ್ತದೆ. ಅದರಲ್ಲಿ ವೈರಾಗ್ಯ ಬರಲು ಕಾರಣವಿಲ್ಲ.

**ಶಂಕೆ** - ಮೋಕ್ಷಸುಖಕ್ಕೂ ವೈಷಯಿಕಸುಖಕ್ಕೂ ಹೇಗೆ ವಾಸ್ತವಿಕವಾದ ಭೇದವಿಲ್ಲವೆಂದು ಹೇಳುತ್ತೀರೊ, ಹಾಗೆಯೇ ವಾಸ್ತವಿಕವಾದ ಅಭೇದವೂ ಇಲ್ಲ. ವಾಸ್ತವಿಕವಾದ ಅಭೇದವಿಲ್ಲದ ಕಾರಣದಿಂದ ವೈಷಯಿಕಸುಖದಲ್ಲಿ ವೈರಾಗ್ಯವು ಕೂಡುತ್ತದೆ.

*ಸಂಪೂರ್ಣಚಂದ್ರಿಕಾ*

ಸಮಾಧಾನ - ವಾಸ್ತವಿಕವಾದ ಭೇದವಿಲ್ಲವೆಂದರೆ ಅಭೇದವಿದೆಯೆಂದರ್ಥ, ಪುನಃ ವಾಸ್ತವಿಕವಾದ ಅಭೇದ ಇಲ್ಲವೆಂದರೂ ನಿಮ್ಮ ಮಾತಿಗೆ ವಿರೋಧ ಬರುತ್ತದೆ.

ಶಂಕೆ - ಪರಸ್ಪರವಿರೋಧ ಬರಲು ಅವಕಾಶವಿಲ್ಲ. ಪರಸ್ಪರ ವಿರುದ್ಧವಾದ ಧರ್ಮಗಳಲ್ಲಿ ಒಂದನ್ನು ನಿಷೇಧ ಮಾಡಿದರೆ ಮತ್ತೊಂದನ್ನು ವಿಧಿಸಿದಂತಾಗುವುದೆಂಬ ನಿಯಮವು ವಾಸ್ತವವಾದ ಪ್ರಪಂಚದ ವಿಷಯದಲ್ಲಿ ಮಾತ್ರ.

ಪ್ರಕೃತದಲ್ಲಿ ವಿಷಯಸುಖವು ಅವಾಸ್ತವ. ಅದಕ್ಕೂ ಅದರ ಆರೋಪಾಧಿಷ್ಠಾನವೆನಿಸಿರುವ ವಾಸ್ತವವಾದ ಮೋಕ್ಷಸುಖಕ್ಕೂ ಪರಸ್ಪರವಾಗಿ ವಾಸ್ತವಭೇದವೂ ಇಲ್ಲ, ಅಭೇದವೂ ಇಲ್ಲ. ಆದ್ದರಿಂದ ಇಲ್ಲಿ ಆ ನಿಯಮವು ಸಮನ್ವಯವಾಗುವುದಿಲ್ಲ.

ಸಮಾಧಾನ - ಇದು ಬೆಳ್ಳಿಯಲ್ಲ ಎಂಬ ಬಾಧಜ್ಞಾನವು ಬಂದಾಗ ಶುಕ್ತಿಯಲ್ಲಿ ತೋರಿದ ಬೆಳ್ಳಿಯ ಭೇದವೂ ಸತ್ಯವೇ ಆಗಿರುತ್ತದೆ. ಏಕೆಂದರೆ ತೋರಿದ ಬೆಳ್ಳಿಯು ಅವಾಸ್ತವವಾಗಿದೆ. ಅಧಿಷ್ಠಾನವಾದ ಶುಕ್ತಿಯು ವಾಸ್ತವವಾಗಿದೆ. ವಾಸ್ತವವಸ್ತುವಿಗೂ ಅವಾಸ್ತವವಸ್ತುವಿಗೂ ಭೇದವನ್ನು ಅಂಗೀಕರಿಸಲೇಬೇಕು. ಆದ್ದರಿಂದ ಮೋಕ್ಷಸುಖದಲ್ಲಿ ವಿಷಯಸುಖಭೇದವು ವಾಸ್ತವ ಎಂದು ಒಪ್ಪಬೇಕು. ಭೇದವನ್ನು ಸತ್ಯವೆಂದೊಪ್ಪಿದರೆ ಅದ್ವೈತಕ್ಕೆ ಭಂಗಬರುತ್ತದೆಂದು ಹೇಳಿದರೆ ಮೋಕ್ಷಸುಖಕ್ಕೂ ವೈಷಯಿಕಸುಖಕ್ಕೂ ವಾಸ್ತವಾಭೇದವನ್ನು ನೀವು ಒಪ್ಪಿದಂತಾಗುತ್ತದೆ. ಏಕೆಂದರೆ ಪರಸ್ಪರ ವಿರುದ್ಧವಾದ ಭೇದ ಅಭೇದಗಳಲ್ಲಿ ಒಂದನ್ನು ಒಪ್ಪದಿದ್ದರೆ ಮತ್ತೊಂದನ್ನು ಒಪ್ಪಿದಂತಾಗುತ್ತದೆ. ನೀವು ಭೇದವನ್ನು ವಾಸ್ತವವೆಂದು ಒಪ್ಪದಿದ್ದರೆ ಅಭೇದವನ್ನು ವಾಸ್ತವವೆಂದೇ ಒಪ್ಪಿದಂತಾಯಿತು. ಆದ್ದರಿಂದ ಮೋಕ್ಷಸುಖಕ್ಕೂ ವೈಷಯಿಕಸುಖಕ್ಕೂ ಅಭೇದವಿದ್ದ ಮೇಲೆ ವೈರಾಗ್ಯವನ್ನು ನಿಮಗೆ ಸಮರ್ಥಿಸಲಾಗದು.

'ಐಹಿಕ ಆಮುಷ್ಮಿಕ ಸುಖಭೋಗದಲ್ಲಿ ವೈರಾಗ್ಯ ಹೊಂದಿರುವುದು. ಬ್ರಹ್ಮವಿಚಾರಕ್ಕೆ ಬೇಕಾಗುವ ಅರ್ಹತೆಗಳಲ್ಲಿ ಇನ್ನೊಂದು' ಎಂದು ಅದ್ವೈತಭಾಷ್ಯದಲ್ಲಿ ಇದೆ. ಆದರೆ ವಿವರಣದಲ್ಲಿ ವಿಷಯ ಪದಾರ್ಥಗಳಿಂದಲೂ ನಿತ್ಯವಾದ ಆತ್ಮ ಸ್ವರೂಪ ಸುಖವೆ ಅಭಿವ್ಯಕ್ತಿಗೊಳ್ಳುತ್ತದೆ. ಬೇರೆ ಸುಖವೇನೂ ಉತ್ಪನ್ನವಾಗುವುದಿಲ್ಲ ಎಂದಿರುವುದರಿಂದ ಮೋಕ್ಷವನ್ನು ಬಯಸುವವನು ವಿಷಯಸುಖದಲ್ಲಿ ವೈರಾಗ್ಯ ಹೊಂದಲು ಕಾರಣವಿಲ್ಲ. ಮೋಕ್ಷದಲ್ಲಿ ಸಿಗುವ ಆತ್ಮಸ್ವರೂಪ ಸುಖವೂ ವಿಷಯ ಸುಖವೂ ಒಂದೇ ತಾನೆ !

'ಆದರೂ ಮೋಕ್ಷಸುಖ - ವಿಷಯಸುಖಗಳಲ್ಲಿ ಭೇದಭ್ರಮವಿರುವುದರಿಂದ ವಿಷಯಸುಖದಲ್ಲಿ ವೈರಾಗ್ಯ ಬರಬಹುದು' ಎಂದು ಹೇಳುವುದು ಸರಿಯಲ್ಲ. ಬೆಂಕಿಯನ್ನು ಕಂಡಾಗ 'ಇದು ಬೆಂಕಿಯಲ್ಲ, ಗುಲಗುಂಜಿಯ ರಾಶಿ' ಎಂದು ಭ್ರಮೆ ಬಂದರೂ ವಸ್ತುತಃ ಬೆಂಕಿಯಲ್ಲಿ ಬೆಂಕಿಯ ಭೇದವಿಲ್ಲದಿರುವುದರಿಂದ ಅದು ಸುಟ್ಟೇ ಸುಡುತ್ತದೆ. ಹಾಗೆಯೆ ಮೋಕ್ಷಸುಖ ವಿಷಯಸುಖಗಳಲ್ಲಿ ಭೇದಭ್ರಮ ಇದ್ದರೂ ವಸ್ತುತಃ ಭೇದವಿಲ್ಲದಿರುವುದರಿಂದ ಮೋಕ್ಷಸುಖದಂತೆ ವಿಷಯ ಸುಖವೂ ಇಷ್ಟವೆನಿಸಬೇಕು. ಅದರಲ್ಲಿ ವೈರಾಗ್ಯ ಬರಲು ಕಾರಣವಿಲ್ಲ.

*ಜಿಜ್ಞಾಸಾಧಿಕರಣ*

'ಚಿಪ್ಪಿನಲ್ಲಿ ಭಾಸಮಾನವಾಗುವ ಅವಾಸ್ತವವಾದ ಬೆಳ್ಳಿಯಲ್ಲಿ ಅಭಿಲಾಷೆ ಹುಟ್ಟಿದರೂ ವಾಸ್ತವವಾಗಿ ಅದರ ಭೇದವಿಲ್ಲದ ಚಿಪ್ಪಿನಲ್ಲಿ ಅಭಿಲಾಷೆ ಹುಟ್ಟುವುದಿಲ್ಲ. ಹಾಗೆಯೆ ಮೋಕ್ಷಸುಖದಲ್ಲಿ ಅಭಿಲಾಷೆ ಇದ್ದರೂ ವಾಸ್ತವವಾಗಿ ಅದರ ಭೇದವಿಲ್ಲದ ವಿಷಯ ಸುಖದಲ್ಲಿ ಅಭಿಲಾಷೆ ಹುಟ್ಟಬೇಕೆಂದಿಲ್ಲ' - ಎಂದು ವಾದಿಸುವುದುಂಟು. ಆದರೆ ಇಲ್ಲಿ ಕೊಟ್ಟ ಉದಾಹರಣೆ ಸಮರ್ಪಕವಲ್ಲ. 'ಚಿಪ್ಪಿನಲ್ಲಿ ವಾಸ್ತವವಾಗಿ ಬೆಳ್ಳಿಯ ಭೇದವಿಲ್ಲ' ಎಂದುದೆ ತಪ್ಪು. 'ಇದು ಬೆಳ್ಳಿಯಲ್ಲ' ಎಂದು ಜ್ಞಾನೋದಯವಾದಾಗ ಚಿಪ್ಪಿನಲ್ಲಿ ಬೆಳ್ಳಿಯ ಭೇದ ಕಾಣುವುದು ಅನುಭವಸಿದ್ಧ. ಈ ಭೇದವು ಚಿಪ್ಪಿನಂತೆ ವಾಸ್ತವವೂ ಹೌದು.

'ಬೆಂಕಿಯ ದೃಷ್ಟಾಂತವೂ ಸರಿಯಲ್ಲ. ಬೆಂಕಿ ಸುಡುವುದು ಅದರಲ್ಲಿ ಬೆಂಕಿಯ ವಾಸ್ತವ ಭೇದವಿಲ್ಲವೆಂಬ ಕಾರಣದಿಂದಲ್ಲ. ವಾಸ್ತವ ಅಭೇದವಿದೆ ಎಂಬ ಕಾರಣದಿಂದ. ಪ್ರಕೃತದಲ್ಲಿ ವಿಷಯ-ಸುಖವು ವಿಷಯ ಪದಾರ್ಥ ಸಂಸರ್ಗದಿಂದ ಅಂತಃಕರಣದಲ್ಲಿ ಉಂಟಾಗುವ ಪರಿಣಾಮ, ದುಃಖದಂತೆ ಈ ಸುಖವೂ ಅವಾಸ್ತವವೆಂದೊಪ್ಪುವ ಭಾಮತೀಕಾರರ ಮತದಲ್ಲಿ ಮೋಕ್ಷಸುಖ ವಿಷಯಸುಖಗಳೊಳಗೆ ವಾಸ್ತವ ಭೇದವಿಲ್ಲದಿದ್ದರೂ ಅದರಂತೆ ವಾಸ್ತವ ಅಭೇದವೂ ಇಲ್ಲ. ವಾಸ್ತವವಾದ ಮೋಕ್ಷಸುಖಕ್ಕೂ ಅವಾಸ್ತವವಾದ ವಿಷಯಸುಖಕ್ಕೂ ಅಭೇದವಿರುವುದು ಶಕ್ಯವಿಲ್ಲ. ಆದ್ದರಿಂದ ಮೋಕ್ಷಸುಖದಂತೆ ವಿಷಯಸುಖವೂ ಇಷ್ಟವೆನಿಸಬೇಕೆಂದಿಲ್ಲ' - ಈ ವಾದಕ್ಕೆ ನಾವು ಹೇಳುವುದಿಷ್ಟು - ಎರಡು ವಸ್ತುಗಳೊಳಗೆ ವಾಸ್ತವ ಭೇದವೂ ಇಲ್ಲ, ವಾಸ್ತವ ಅಭೇದವೂ ಇಲ್ಲ ಎನ್ನುವುದು ಪರಸ್ಪರವಿರುದ್ಧ, ಅರ್ಥಶೂನ್ಯ.

'ಪರಸ್ಪರ ವಿರುದ್ಧವಲ್ಲ. ಪರಸ್ಪರ ವಿರುದ್ಧವಾದ ಭೇದ ಅಭೇದಗಳಲ್ಲಿ ಒಂದಿಲ್ಲದಿದ್ದರೆ ಇನ್ನೊಂದು ಬೇಕೆಂಬ ನಿಯಮವು ವಾಸ್ತವ ಪ್ರಪಂಚದಲ್ಲಿ ಮಾತ್ರ ನಡೆದೀತು. ಪ್ರಕೃತದಲ್ಲಿ ವಿಷಯಸುಖವು ಅವಾಸ್ತವ. ಅದಕ್ಕೂ ಅದರ ಆರೋಪಾಧಿಷ್ಠಾನವೆನಿಸಿರುವ ವಾಸ್ತವವಾದ ಮೋಕ್ಷಸುಖಕ್ಕೂ ಪರಸ್ಪರವಾಗಿ ವಾಸ್ತವ ಭೇದವೂ ಇಲ್ಲ ಅಭೇದವೂ ಇಲ್ಲ'.- ಈ ವಾದಕ್ಕೆ ಉತ್ತರವನ್ನು ನಾವು ಹಿಂದೆಯೇ ಹೇಳಿದ್ದೇವೆ. 'ಇದು ಬೆಳ್ಳಿಯ ಎಂದು ಜ್ಞಾನೋದಯವಾದಾಗ ಚಿಪ್ಪಿನಲ್ಲಿ ಕಾಣುವ ಬೆಳ್ಳಿಯ ಭೇದವು ಚಿಪ್ಪಿನಂತೆಯೆ ವಾಸ್ತವ. ವಾಸ್ತವ - ಅವಾಸ್ತವಗಳಿಗೆ ಭೇದವಿಲ್ಲವೆನ್ನುವುದನ್ನು ನಂಬಲಾಗದು. ಆದ್ದರಿಂದ ಮೋಕ್ಷಸುಖದಲ್ಲಿಯೂ ಅದರಂತೆ ವಾಸ್ತವವಾದ ವಿಷಯಸುಖಭೇದವಿದೆ ಎಂದೊಪ್ಪ ಬೇಕು. ಅದ್ವೈತಕ್ಕೆ ಭಂಗಬಂದೀತೆಂದು ಹೆದರಿ ಹಿಂಜರಿಯುವುದಾದರೆ ವಾಸ್ತವ ಅಭೇದವನ್ನೆ ಒಪ್ಪಬೇಕು. ಪರಸ್ಪರವಿರುದ್ಧವಾದ ಭೇದ ಅಭೇದಗಳಲ್ಲಿ ಒಂದಿಲ್ಲದಿದ್ದರೆ ಇನ್ನೊಂದಿರಬೇಕು. ಹೀಗೆ ವಾಸ್ತವ ಅಭೇದವನ್ನೊಪ್ಪುವುದಾದರೆ 'ಮೋಕ್ಷಸುಖದ ಅಭಿಲಾಷೆ ವಿಷಯ ಸುಖದಲ್ಲಿ ವೈರಾಗ್ಯ' ಎನ್ನುವುದು ಅರ್ಥಶೂನ್ಯವೆ ಆಗುವುದು.

ಇದುವರೆಗೂ ಅದ್ವೈತಮತದಲ್ಲಿ ವೈರಾಗ್ಯವನ್ನು ಸಮರ್ಥಿಸಲಾಗದೆಂದು ಸಮರ್ಥಿಸಿದ್ದಾಯಿತು. ಈಗ ಶಮದಮಾದಿಸಂಪತ್ತು ಜಿಜ್ಞಾಸುವಿನಲ್ಲಿರಬೇಕಾದ ಮತ್ತೊಂದು ಅರ್ಹತೆಯೆಂದು ಅದ್ವೈತಮತದಲ್ಲಿ ಹೇಳಲಾಗಿದೆ. ಅದನ್ನು ಈಗ 'ಶಮ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಶಮದಮಾದಿಸಂಪತ್ತುಗಳು ಜಿಜ್ಞಾಸುವಿನ ಅರ್ಹತೆಯೆಂದು ಹೇಳಿದಾಗ ಆದಿಶಬ್ದದ ಅರ್ಥವನ್ನು ನಿಮಗೆ ಹೇಳಲಾಗದು.

*ಪರಿಪೂರ್ಣಚಂದ್ರಿಕಾ*

ಶಂಕೆ - 'ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾऽತ್ಮನ್ಯೇವಾತ್ಮಾನಂ ಪಶ್ಯೇತ್' ಎಂಬ ಶ್ರುತಿಯಲ್ಲಿ ಹೇಳಿರುವ ಧರ್ಮಗಳನ್ನಷ್ಟೇ ಆದಿಪದದಿಂದ ತೆಗೆದುಕೊಳ್ಳಬೇಕು. ಶಮದಮಗಳ ಜೊತೆಗೆ ವೈರಾಗ್ಯ, ಸಹನೆ, ತತ್ತ್ವಜ್ಞಾನಗಳನ್ನು ತೆಗೆದುಕೊಳ್ಳಬೇಕು. ಈ ಉಪಸಂಗ್ರಾಹಕವಾದ ಧರ್ಮವು ವಿವೇಕ ಮುಂತಾದವುಗಳಲ್ಲಿ ಇಲ್ಲದೆ ಕೇವಲ ಸಹನೆ ಮೊದಲಾದವುಗಳಲ್ಲಿ ಮಾತ್ರ ಇದೆ.

ಸಮಾಧಾನ - ಈ ಶ್ರುತಿಯಲ್ಲಿ ಹೇಳಿದ ಧರ್ಮಗಳನ್ನೆಲ್ಲ ಆದಿಪದದಿಂದ ಅಂಗೀಕರಿಸುವುದಾದರೆ 'ಆತ್ಮನ್ಯೇವಾತ್ಮಾನಂ ಪಶ್ಯೇತ್' 'ತನ್ನಲ್ಲಿ ಆತ್ಮನನ್ನು ಕಾಣಬೇಕು' ಎಂಬುದನ್ನೂ ಅಂಗೀಕರಿಸಬೇಕಾಗುತ್ತದೆ.

ಶಂಕೆ - ಆತ್ಮಜ್ಞಾನವನ್ನು ಇಟ್ಟುಕೊಳ್ಳುತ್ತೇವೆ. ಈ ಆತ್ಮಜ್ಞಾನಕ್ಕೆ ಅಂಗವಾಗಿ ಉಳಿದ ಧರ್ಮಗಳನ್ನು ಇಟ್ಟುಕೊಳ್ಳುತ್ತೇವೆ. ಆ ಧರ್ಮಗಳು ಯಾವುದು ಎಂದರೆ 'ಭೂತ್ವಾ ' ಎಂದಿರುವುದರಿಂದ ಶಮಾದಿಪಂಚಕಗಳನ್ನೇ ಇಟ್ಟುಕೊಳ್ಳುತ್ತೇವೆ.

ಸಮಾಧಾನ - ಶ್ರುತಿಯು ವೈರಾಗ್ಯವನ್ನು ಹೇಳುತ್ತಿದೆ. ಈ ವೈರಾಗ್ಯವು ನಿತ್ಯಾನಿತ್ಯವಸ್ತುವಿವೇಕವೇ ಆಗಿದೆ. ಹೇಗೆಂದರೆ 'ಉಪರತಃ' ಎಂದರೆ ವಿಷಯಾಲಂಬುದ್ಧಿಯುಳ್ಳವನು ಎಂದರ್ಥ. ಆದ್ದರಿಂದ ವೈರಾಗ್ಯವು ಪ್ರಾಪ್ತವಾಯಿತು. 'ಸಮಾಹಿತಃ' ಎಂದರೆ ಯಥಾರ್ಥವಾದ ತತ್ತ್ವಜ್ಞಾನ ಉಳ್ಳವನು ಎಂದರ್ಥ. ಇದರಿಂದ ನಿತ್ಯಾನಿತ್ಯವಸ್ತುವಿವೇಕವು ಪ್ರಾಪ್ತವಾಯಿತು. ಆದ್ದರಿಂದ ನಿತ್ಯಾನಿತ್ಯವಿವೇಕಾದಿಗಳಲ್ಲಿಲ್ಲದ ಶಮಾದಿಗಳಲ್ಲಿ ಮಾತ್ರ ಇರುವ ಸಂಗ್ರಾಹಕಧರ್ಮವನ್ನು ನಿಮಗೆ ಹೇಳಲಾಗದು. ಆದ್ದರಿಂದಲೇ ನಾವು ಹಿಂದೆ ಸಹನೆ ಮೊದಲಾದವುಗಳಲ್ಲಿ ಮಾತ್ರ ಇರುವ ವಿಶೇಷತೆ ಏನು? ಎಂದು ಆಕ್ಷೇಪಿಸಿದ್ದೇವೆ.

ಶಂಕೆ - ಈ ಆಕ್ಷೇಪ ನಿಮಗೂ ಇದೆ. ಏಕೆಂದರೆ 'ಶಮಾದಿಸಂಯುಕ್ತಃ ಮಧ್ಯಮಃ' 'ಶಮಾದಿಗಳಿಂದ ಕೂಡಿದವನು ಮಧ್ಯಮಾಧಿಕಾರಿ' ಎಂದು ಭಾಷ್ಯದಲ್ಲಿ ಹೇಳಲಾಗಿದೆ. ಅಲ್ಲಿ ಆದಿಪದದಿಂದ ಏನನ್ನು ಇಟ್ಟುಕೊಳ್ಳುತ್ತೀರಿ ಎಂಬ ಆಕ್ಷೇಪ ನಿಮಗೂ ಸಮಾನ.

ಸಮಾಧಾನ - ನಿಮಗೆ ಬಂದ ಸಮಸ್ಯೆ ನಮಗೆ ಇಲ್ಲ. ಶ್ರುತಿಯಲ್ಲಿ ಹೇಳಿದ ಶಮದಮಾದಿ ಎಲ್ಲಾ ಗುಣಗಳನ್ನು ಆದಿಪದದಿಂದ ತೆಗೆದುಕೊಳ್ಳುತ್ತೇವೆ. ಏಕೆಂದರೆ ಅದ್ವೈತಿಗಳಂತೆ ನಾವು ನಿತ್ಯಾನಿತ್ಯವಸ್ತುವಿವೇಕವನ್ನು ಪ್ರತ್ಯೇಕವಾಗಿ ಹೇಳಿ ಪುನಃ 'ಆದಿ' ಶಬ್ದವನ್ನು ಪ್ರಯೋಗ ಮಾಡಿಲ್ಲ. ಹಾಗೆ ಮಾಡಿದ್ದಲ್ಲಿ ಅದ್ವೈತಿಗಳಿಗೆ ಬಂದ ಸಮಸ್ಯೆ ನಮಗೂ ಬರುತ್ತಿತ್ತು.

ಶಂಕೆ - 'ಆಬ್ರಹ್ಮಸ್ತಂಬಪರ್ಯಂತಂ ಅಸಾರಂ ಚಾಪ್ಯನಿತ್ಯಕಮ್' ಎಂದು ಮುಂದೆ ಅದೇ ಭಾಷ್ಯದಲ್ಲಿಯೇ ವೈರಾಗ್ಯವನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

ಸಮಾಧಾನ - ವೈರಾಗ್ಯವನ್ನು ಪ್ರತ್ಯೇಕವಾಗಿ ಹೇಳಿದ್ದರೂ ಅದರ ಅಭಿಪ್ರಾಯ ಬೇರೆ ಇದೆ. ಏನೆಂದರೆ ಮೂರುವಿಧವಾದ ಅಧಿಕಾರಿಗಳಲ್ಲಿ ಉತ್ತಮಾಧಿಕಾರಿಗಳಲ್ಲಿ ಅಧಮರಾದ ಅಧಿಕಾರಿಗಳಿಗಿಂತ ಅಧಿಕವಾದ ವೈರಾಗ್ಯವಿರಬೇಕೆಂದು ಸೂಚಿಸುವುದಕ್ಕಾಗಿ ಇದನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಅದೇ ರೀತಿಯಾಗಿ

'ಶಾಂತೋ ದಾಂತಃ' ಎಂಬ ಶ್ರುತಿಯಲ್ಲಿ ನಿತ್ಯಾನಿತ್ಯವಸ್ತುವಿವೇಕವನ್ನು ಹೇಳಿದ್ದರೂ ಸಹ ಸ್ಪಷ್ಟವಾಗಿ ಹೇಳಿಲ್ಲ. ಮತ್ತು ಆ ನಿತ್ಯಾನಿತ್ಯವಿವೇಕವು ವೈರಾಗ್ಯಕ್ಕೆ ಕಾರಣ ಎಂಬುದನ್ನೂ ಸಹ ಹೇಳಿಲ್ಲ. ಆದ್ದರಿಂದಲೇ 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್' 'ಕರ್ಮದಿಂದ ಸಂಪಾದಿಸಿದ ಲೋಕಗಳು ಅಸಾರ ಅನಿತ್ಯಗಳೆಂದು ತಿಳಿದು ಬ್ರಹ್ಮನಿಷ್ಠನಾದವನು ವೈರಾಗ್ಯವನ್ನು ಹೊಂದಬೇಕು' ಎಂಬ ಮತ್ತೊಂದು ಶ್ರುತಿಯನ್ನು ಭಾಷ್ಯಕಾರರು ನಿತ್ಯಾನಿತ್ಯವಿವೇಕವು ಬೇಕೆನ್ನುವ ವಿಷಯದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ಶಂಕೆ - ಮೇಲೆ ಹೇಳಿದ ಕಾರಣಗಳನ್ನು ಹೇಳಲು ಬಾರದಿದ್ದರೂ ವಿವೇಕಾದಿಗಳನ್ನು ಪ್ರತ್ಯೇಕವಾಗಿ ಹೇಳಿ ಆದಿಪದವನ್ನು ಉಲ್ಲೇಖಿಸಲಾಗಿದೆ. 'ಈ ರೀತಿಯಾದ ಪ್ರಮಾಣಗಳಿಂದ ಪದಾರ್ಥಗಳ ನಿತ್ಯತ್ವ ಅನಿತ್ಯತ್ವವನ್ನು ಸರಿಯಾಗಿ ತಿಳಿದು ವಿಷಯದಲ್ಲಿ ವಿರಕ್ತನಾಗಿ ಶಮಾದಿಸಂಪದ್ಭರಿತನಾಗಬೇಕು.' ಎಂದು ಪ್ರಮಾಣಪದ್ಧತ್ಯಾದಿ ಪ್ರಕರಣದಲ್ಲಿ ಅಲ್ಲಲ್ಲಿ ವಿವೇಕಾದಿಗಳನ್ನು ಪ್ರತ್ಯೇಕವಾಗಿ ಹೇಳಿದ್ದರೂ ಶಮದಮಾದಿ ಇತ್ಯಾದಿಯಾಗಿ ಆದಿ ಶಬ್ದವನ್ನು ಹೇಳಲಾಗಿದೆ.

ಸಮಾಧಾನ - ಈ ರೀತಿಯಾಗಿ ಹೇಳಲೂ ಅಲ್ಲಿ ಕಾರಣವಿದೆ. ನಿತ್ಯಾನಿತ್ಯವಿವೇಕ, ವೈರಾಗ್ಯ ಮೊದಲಾದವುಗಳಿಗೆ ಕಾರ್ಯಕಾರಣಭಾವವನ್ನು ಹೇಳುವುದಕ್ಕಾಗಿ ಹಾಗೆ ಹೇಳಲಾಗಿದೆ. ಅಥವಾ ಪರಮತದಲ್ಲಿ ವಿವೇಕಾದಿಗಳನ್ನು ಪ್ರತ್ಯೇಕವಾಗಿ ಹೇಳಿ ಆದಿಪದದಿಂದ ಪುನಃ ಹೇಳುವ ವಾಡಿಕೆಯಿದೆ. ಅದೇ ರೀತಿಯಾಗಿ ನಾವು ಹೇಳಿದರೆ ಪರರಿಗೆ ಸ್ಪಷ್ಟವಾಗುತ್ತದೆಂಬ ಅಭಿಪ್ರಾಯದಿಂದ ಹಾಗೆ ಹೇಳಲಾಗಿದೆ.

ಅಥವಾ ಇಲ್ಲಿ ಆದಿಪದದಿಂದ 'ಶಾಂತೋ ದಾಂತಃ' ಎಂಬುದನ್ನು ಸ್ವೀಕರಿಸಿಯೇ ಇಲ್ಲ. ಹೊರತಾಗಿ 'ಶಮಾದ್ಯುಪೇತಃ ಸ್ಯಾತ್' 'ಅಪರೋಕ್ಷಜ್ಞಾನಿಯು ಶಮದಮಾದಿಗಳನ್ನು ಹೊಂದಿರಬೇಕು' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಶಾಂತೋ ಭವೇದ್ದಾಂತೋ ಭವೇದನುಕೂಲೋ ಭವೇದಾಚಾರ್ಯಂ ಪರಿಚರೇತ್' 'ಶಮವನ್ನು ಹೊಂದಿರಬೇಕು, ದಮವನ್ನು ಹೊಂದಿರಬೇಕು ಜನರಿಗೆ ಅನುಕೂಲ ಮಾಡಿಕೊಡಬೇಕು, ಆಚಾರ್ಯರ ಸೇವೆ ಮಾಡಬೇಕು' ಎಂಬ ಶ್ರುತಿಯಲ್ಲಿ ಹೇಳಿದ ಗುರುಸೇವೆ ಮೊದಲಾದ ಧರ್ಮಗಳನ್ನೇ ಆದಿಪದದಿಂದ ಗ್ರಹಿಸಬೇಕೆಂಬ ಅಭಿಪ್ರಾಯದಿಂದ ಹಾಗೆ ಹೇಳಲಾಗಿದೆ.

ಆದ್ದರಿಂದ ಮೋಕ್ಷಸಾಧಕನ ಅರ್ಹತೆಗಳಲ್ಲಿ ಶಮದಮಾದಿಸಂಪತ್ತು ಸಹ ಇರಬೇಕು. ಎಂಬಲ್ಲಿ ಆದಿಪದದ ಗ್ರಾಹ್ಯತಾವಚ್ಛೇದಕವನ್ನು ಅದ್ವೈತಿಗಳಿಗೆ ಹೇಳಲಾಗದು. ಆದ್ದರಿಂದ ಶಮದಮಾದಿ ಸಂಪತ್ತನ್ನು ಮೋಕ್ಷಸಾಧಕ ಸಾಮಗ್ರಿ ಎಂದು ಅವರಿಗೆ ಹೇಳಲಾಗದು.




ಅದ್ವೈತಮತದಲ್ಲಿ ವಿಷಯಸುಖವೈರಾಗ್ಯವೂ ಜಿಜ್ಞಾಸುವಿಗೆ ಬರಲು ಶಕ್ಯವಿಲ್ಲ. ವಿವರಣದಲ್ಲಿ ಹೇಳಿದಂತ ವಿಷಯಪದಾರ್ಥಗಳಿಂದಲೂ ನಿತ್ಯವಾದ ಆತ್ಮಸ್ವರೂಪ ಸುಖವೆ ವ್ಯಕ್ತವಾಗುತ್ತದೆ. ಬೇರೇನೂ ಸುಖ

*ಪರಿಪೂರ್ಣಚಂದ್ರಿಕಾ*

ಉತ್ಪನ್ನವಾಗುವುದಿಲ್ಲ. ಆದರಿಂದ ವಿಷಯಸುಖವೇ ಮೋಕ್ಷದಲ್ಲಿ ಸಿಗುವ ಬ್ರಹ್ಮಾನಂದವಾಗಿರುವಾಗ ಅದರಲ್ಲಿ ವೈರಾಗ್ಯ ಹೇಗೆ ತಾನೆ ಬಂದೀತು? ವಿಷಯಸುಖ ಮೋಕ್ಷಸುಖಗಳಲ್ಲಿ ಭೇದಭ್ರಮವಿರುವುದರಿಂದ ವಿಷಯಸುಖದಲ್ಲಿ ವೈರಾಗ್ಯ ಎನ್ನುವುದು ಸರಿಯಲ್ಲ. ಬೆಂಕಿಯಲ್ಲ, ಗುಲಗಂಜಿ ಎಂದು ಭ್ರಮಿಸಿದರೂ ಬೆಂಕಿ ಸುಡುವಂತೆ ಮೋಕ್ಷಸುಖವಲ್ಲ ಎಂದು ಭ್ರಮಿಸಿದರೂ ವಿಷಯಸುಖ ಇಷ್ಟವೆನಿಸಲೇ ಬೇಕು. ಆದರಲ್ಲಿ ವೈರಾಗ್ಯ ಬರಲಾರದು.

'ವಿಷಯಸುಖ ಅಂತಃಕರಣದಲ್ಲಿ ಹುಟ್ಟುವ ಮಿಥ್ಯಾಪದಾರ್ಥ. ಅದಕ್ಕೂ ಮೋಕ್ಷಸುಖಕ್ಕೂ ವಾಸ್ತವ ಭೇದವಿಲ್ಲದಿದ್ದರೂ ಅದರಂತೆ ವಾಸ್ತವ ಅಭೇದವೂ ಇಲ್ಲ. ಅದರಿಂದ ಮೋಕ್ಷ ಸುಖದಂತೆ ವಿಷಯಸುಖ ಇಷ್ಟವೆನಿಸದಿರಬಹುದು. ಬೆಂಕಿ ಸುಡುವುದು ಬೆಂಕಿಯ ವಾಸ್ತವ ಅಭೇದವಿರುವುದರಿಂದ. ಪ್ರಕೃತದಲ್ಲಿ ಮಿಥ್ಯಾ ಸತ್ಯಗಳಿಗೆ ವಾಸ್ತವ ಅಭೇದವಿರಲು ಶಕ್ಯವಿಲ್ಲ' ಎಂದು ಭಾಮತಿಮತವಿದೆ. ಆದರೆ ಎರಡು ವಸ್ತುಗಳೊಳಗೆ ವಾಸ್ತವ ಭೇದವೂ ಇಲ್ಲ. ವಾಸ್ತವ ಅಭೇದವೂ ಇಲ್ಲ ಎನ್ನುವುದು ವಿರುದ್ಧ. ವಾಸ್ತವ ಅವಾಸ್ತವಗಳೊಳಗೆ ವಾಸ್ತವ ಭೇದವಿಲ್ಲವೆನ್ನುವುದೂ ಅರ್ಥಶೂನ್ಯ. ಅದ್ವೈತಕ್ಕೆ ಭಂಗಬಂದೀತೆಂದು ಹೆದರಿ ವಾಸ್ತವ ಭೇದವನ್ನು ಒಪ್ಪದಿದ್ದಲ್ಲಿ ವಾಸ್ತವ ಅಭೇದವನ್ನೆ ಒಪ್ಪಿರಿ. ಆಗ ಮೋಕ್ಷ ಸುಖದಲ್ಲಿ ಅಭಿಲಾಷೆ, ವಿಷಯ ಸುಖದಲ್ಲಿ ವೈರಾಗ್ಯ ಎನ್ನುವುದು ಅರ್ಥಶೂನ್ಯವಾಗುವುದು.

ಶಮದಮಾದಿ ಸಂಪತ್ತು ಎಂಬಲ್ಲಿ ಆದಿ ಪದದಿಂದ ವಿವೇಕ ವೈರಾಗ್ಯಗಳನ್ನು ಬಿಟ್ಟು ಬೇರೆಯ ಗುಣಗಳನ್ನು ಗ್ರಹಿಸಲು ನಿಯಾಮಕವೇನು? ವಿವೇಕ ವೈರಾಗ್ಯಗಳಲ್ಲಿಲ್ಲದ, ಸಹನೆ ಮುಂತಾದವುಗಳಲ್ಲಿ ಮಾತ್ರವಿರುವ ವಿಶೇಷತೆ ಒಂದಿದ್ದರೆ ಆ ವಿಶೇಷತೆ ಉಳ್ಳವುಗಳನ್ನೆಲ್ಲ ಆದಿಪದದಿಂದ ಗ್ರಹಿಸಲು ಶಕ್ಯವಿದೆ. ಅಂಥ ವಿಶೇಷತೆ ವಿನಿಲ್ಲ.

ನಮ್ಮ ಭಾಷ್ಯದಲ್ಲಿಯೂ 'ಶಮಾದಿಸಂಯುಕ್ತಃ ಮಧ್ಯಮಃ' ಎಂದು ಆದಿಪದವಿದೆ. ಆದರೆ ಬ್ರಹ್ಮಜ್ಞಾನಸಾಧನವೆಂದು ಶ್ರುತ್ಯುಕ್ತವಾದ ಎಲ್ಲ ಗುಣವನ್ನೂ ಆದಿಪದದಿಂದ ಗ್ರಹಿಸುತ್ತೇವೆ. ಅದ್ವೈತಭಾಷ್ಯದಂತೆ ನಾವು ವಿವೇಕ ಮುಂತಾದುವನ್ನು ಪ್ರತ್ಯೇಕ ಹೇಳಿ ಆದಿಪದವನ್ನು ಪ್ರಯೋಗಿಸಿಲ್ಲ. ಆಬ್ರಹಸ್ತಂಬ ಪರ್ಯಂತಂ ಎಂದು ವಿವೇಕ ವೈರಾಗ್ಯಗಳನ್ನು ಹೇಳಿದುದು ಪ್ರಕೃತ ಮಧ್ಯಮಾಧಿಕಾರಿಗಳ ವಿಷಯದಲ್ಲಿ ಅಲ್ಲ. ಅದು ಉತ್ತಮಾಧಿಕಾರಿಗಳಿಗೆ ಹೇಳಿದುದು. ಅದು ಉತ್ತಮಾಧಿಕಾರಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿರಬೇಕೆಂದು ತಿಳಿಸುವ ಅಭಿಪ್ರಾಯದಿಂದ.

• • • • •

## ಮೋಕ್ಷಾಭಿಲಾಷೆಯನ್ನು ಕೂಡಿಸಲಾಗದು

### तात्पर्यचन्द्रिका –

मुमुक्षा च न परपक्षे युक्ता । मोक्षस्य नित्यसिद्धात्ममात्रत्वेन तत्रेच्छा-योगात् । वृत्त्युपलक्षितस्याप्यात्मनो वृत्तेः पश्चादिव पूर्वमपि सत्त्वाच्च । किञ्च किमहं मुक्तः स्यामितीच्छा मुमुक्षा, चिन्मात्रं मुक्तं स्यादिति वा । नाद्यः ।

**त्वन्मतेऽहमर्थस्य मुक्त्यनन्वयात् । नान्त्यः । जातेष्ट्यधिकारिणः पितुः पुत्रस्य स्वार्थत्वात् पुत्रः पूतादिः स्यादितीच्छावत् प्रकृते चिन्मात्रस्येच्छाश्रयाहमर्थार्थत्वाभावेन तादृशेच्छाया अदर्शनेन, विपरीतेच्छाया एव च दर्शनेन, ज्ञानस्यानिष्फलत्वापातात् ।**

**ಅನುವಾದ** - ಅದ್ವೈತಭಾಷ್ಯದಲ್ಲಿ ಹೇಳಿದ ಜಿಜ್ಞಾಸುವಿನ ಮತ್ತೊಂದು ಅರ್ಹತೆಯೆಂದರೆ ಮೋಕ್ಷಾಭಿಲಾಷೆ. ಆದರೆ ಇದನ್ನೂ ಅವರಿಗೆ ಸಮರ್ಥಿಸಲು ಆಗುವುದಿಲ್ಲ. ಏಕೆಂದರೆ ಆತ್ಮಸ್ವರೂಪವನ್ನೇ ಅವರು ಮೋಕ್ಷವೆನ್ನುತ್ತಾರೆ. ಈ ಆತ್ಮಸ್ವರೂಪವು ನಿತ್ಯಸಿದ್ಧವಾದ್ದರಿಂದ ಸಿದ್ಧವಿಷಯದಲ್ಲಿ ಯಾರಿಗೂ ಇಚ್ಛೆ ಹುಟ್ಟಲು ಸಾಧ್ಯವಿಲ್ಲ.

ವೇದಾಂತಜನ್ಯಚರಮವೃತ್ತಿಜ್ಞಾನಕ್ಕೆ ಗೋಚರವಾದ ಜ್ಞಾನದಿಂದ ಉಪಲಕ್ಷಿತವಾದ ಆತ್ಮಸ್ವರೂಪವನ್ನೇ ಮೋಕ್ಷವೆನ್ನಲು ಸಾಧ್ಯವಿಲ್ಲ. ಈ ಜ್ಞಾನ ಬರುವ ಮೊದಲೂ ಆತ್ಮನು ಇರುವುದರಿಂದ ಅವನ ವಿಷಯದಲ್ಲಿ ಇಚ್ಛೆಯು ಕೂಡುವುದಿಲ್ಲ.

ಮತ್ತು ಮೋಕ್ಷದಲ್ಲಿ ಅಭಿಲಾಷೆ ಎಂದರೆ ಏನು? ನಾನು ಮುಕ್ತನಾಗಬೇಕೆಂಬ ಅಭಿಲಾಷೆಯೇ ಅಥವಾ ಚಿನ್ಮಾತ್ರನು ಮುಕ್ತನಾಗಲಿ ಎಂಬ ಅಭಿಲಾಷೆಯೇ? ಮೊದಲನೆಯ ಪಕ್ಷ ತಪ್ಪು. ಏಕೆಂದರೆ ಅದ್ವೈತ ಮತದಲ್ಲಿ 'ಅಹಮರ್ಥ'ವು ಮಿಥ್ಯಾವಾದ್ದರಿಂದ ಅದು ಮೋಕ್ಷದಲ್ಲಿ ಬರಲು ಸಾಧ್ಯವಿಲ್ಲ. 'ಅಹಮರ್ಥ'ವು ನಾಶವಾದರಷ್ಟೇ ಮೋಕ್ಷವಾಗಲು ಸಾಧ್ಯ.

ಎರಡನೆಯ ಪಕ್ಷವೂ ತಪ್ಪು. ಚಿನ್ಮಾತ್ರನಿಗೆ ಮೋಕ್ಷ ಸಿಗಲಿ ಎಂಬ ಅಭಿಲಾಷೆಯು ಶುದ್ಧ ಚೈತನ್ಯಕ್ಕೋ? ಅಥವಾ ಅಹಮರ್ಥಕ್ಕೋ? ಎಂದು ಹೇಳಬೇಕು. ಶುದ್ಧಚೈತನ್ಯನಿಗೆ ಆ ಅಭಿಲಾಷೆ ಬರಲು ಸಾಧ್ಯವಿಲ್ಲ. ಇನ್ನು ಅಹಮರ್ಥಕ್ಕೆ ಆ ಅಭಿಲಾಷೆ ಎಂದು ಹೇಳಿದರೆ ಇನ್ನೊಬ್ಬನಿಗೆ ಫಲ ಸಿಗಲಿ ಎಂಬ ಉದ್ದೇಶದಿಂದ ಕಷ್ಟಕರಶಾಸ್ತ್ರದಲ್ಲಿ ಪ್ರವೃತ್ತಿ ಮಾಡುವುದು ಅನುಚಿತ.

**ಶಂಕೆ** - ಮತ್ತೊಬ್ಬನಿಗೆ ಫಲ ಸಿಗಲಿ ಎಂಬ ಉದ್ದೇಶದಿಂದ ಕಷ್ಟಕಾರ್ಯದಲ್ಲಿ ಪ್ರವೃತ್ತಿ ಮಾಡುವುದು ಕಂಡಿದೆ - ಪೂರ್ವಮೀಮಾಂಸೆಯಲ್ಲಿ ಮಗನು ಶುದ್ಧನಾಗಲೆಂದು ಬಯಸಿ ತಂದೆಯು ಜಾತೇಷ್ಟಿಯನ್ನು ಮಾಡುತ್ತಾನೆ.

**ಸಮಾಧಾನ** - ದೃಷ್ಟಾಂತವೇ ಸರಿಯಿಲ್ಲ. ಅಲ್ಲಿ ಮಗನಿಂದ ತಂದೆಗೆ ಅನೇಕ ರೀತಿಯ ಪ್ರಯೋಜನಗಳಿರುವುದರಿಂದ ಮಗನಿಗಾಗಿ ತಂದೆಯು ಜಾತೇಷ್ಟಿಯಲ್ಲಿ ಪ್ರವೃತ್ತಿ ಮಾಡುತ್ತಾನೆ. ಪ್ರಕೃತದಲ್ಲಿ ಹಾಗಿಲ್ಲ.

ಪರಿಪೂರ್ಣಚಂದ್ರಿಕಾ

**ಕಠಿಣಪದಾರ್ಥ**

**ನಿತ್ಯಸಿದ್ಧಾತ್ಮಮಾತ್ರತ್ವೇನ** = 'ಅಹಂ' ಎಂದು ನಿತ್ಯಸಿದ್ಧನಾದ ಆತ್ಮಸ್ವರೂಪವಾದ್ದರಿಂದ, **ತತ್ರ** = ನಿತ್ಯಸಿದ್ಧವಾದ ಅಂತಹ ಮೋಕ್ಷದಲ್ಲಿ, **ವೃತ್ತ್ಯುಪಲಕ್ಷಿತಸ್ಯಾಪಿ** = ವೇದಾಂತಜನ್ಯವಾದ ಚರಮವೃತ್ತ್ಯುಪಲಕ್ಷಿತವಾದ, **ಇಚ್ಛಾಶ್ರಯಾಹಮರ್ಥಾರ್ಥತ್ವಾಭಾವೇನ** = ಇಚ್ಛೆಗೆ ಆಶ್ರಯವಾದ ಅಹಮರ್ಥವಲ್ಲದ ಕಾರಣ. **ತಾದೃಶೇಚ್ಛಾಯಾಃ** = ಚಿನ್ಮಾತ್ರನಿಗೆ ಮುಕ್ತಿ ಸಿಗಲಿಯೆಂಬ ಇಚ್ಛೆಗೆ, **ವಿಪರೀತೇಚ್ಛಾಯಾಃ** = ನಾನು ಮುಕ್ತನಾಗಬೇಕೆಂಬ ಇಚ್ಛೆಯೇ.

**प्रकाशः** – भाष्योक्तमन्यदपि निराह ।। **मुमुक्षा चेति** ।। ननु नात्ममात्रं मोक्षः । येनोक्तदोषः । किंत्वखण्डाकारवेदान्तजन्यचरमवृत्त्युपलक्षित एव । स च पूर्वं न सिद्ध इतीच्छा युक्तेत्यत आह ।। **वृत्तीति** ।। तथाच नेच्छोपपत्तिरिति भावः । ननु नात्ममात्रं मोक्षः किंत्वविद्यानिवृत्तिलक्षणः पञ्चमप्रकार आत्माऽन्यः । अतो न सदद्वैतभङ्गः । उक्तं च –

''न सन्नासन्न सदसन्नानिर्वाच्यश्च तत्क्षयः ।''

इतीति चेन्न । चतुर्थप्रकारस्यैवायोगेन पञ्चमप्रकारस्याप्ययोगात् । यदप्यविद्यानिवृत्तिरूपो मोक्षः आत्मान्यः सत्य एव । नचाद्वैतभङ्गः । अभावद्वैतस्याङ्गीकारात् । अतो मोक्षेच्छा युक्तेति, तदप्यभावद्वैतस्य न्यायामृते निरासान्निरस्तम् । विस्तरस्तु चतुर्थपरिच्छेदे बोध्य इति भावः । एतन्मतसाधारण्येन दोषान्तरमाह ।। **किञ्चेति** ।। अहमर्थस्य मुक्तिः स्यादितीच्छा, उताहमर्थविशेष्यभूतस्य चिन्मात्रस्य मुक्तिः स्यात् इतीच्छा वेत्यर्थः ।। **मुक्त्यनन्वयादिति** ।। अहमर्थस्यानात्मत्वेन तद्विलयस्यैव मोक्षत्वादिति भावः ।। **अनिष्टेति** ।। चिन्मात्रं मुक्तं स्यादितीच्छा ह्यहमर्थस्य वाच्या । चिन्मात्रस्येच्छाश्रयत्वायोगात् । तथाचान्यगतफलेच्छया अन्यस्य श्रवणादौ प्रवृत्त्ययोगेन न तथेच्छा सम्भवतीत्यहमर्थार्जितज्ञानस्याकाम्यमानचिन्मात्रमुक्तिफलकत्वेऽनिच्छाविषयफलकत्वं स्यादित्यर्थः ।

ननु जातेष्ट्यादौ पुत्रगतपूतत्वोद्देशेन पितुः प्रवृत्तिवद् भविष्यतीत्यतस्तद्वैषम्यमाह ।। **जातेष्टीति** ।। चतुर्थस्य तृतीयपादे ''फलसंयोगस्त्वचोदिते न

ಜಿಜ್ಞಾಸಾಧಿಕರಣ

स्यादशेषभूतत्वात्'' इति सप्तदशेऽधिकरणे, ''वैश्वानरं द्वादशकपालं निर्वपेत् पुत्रे जाते'' इति विधाय श्रुते ''यस्मिन् जात एतामिष्टिं निर्वपति पूत एव तेजस्व्यन्नाद इन्द्रियावी पशुमान् भवति'' इति फलवाक्ये किं पूतत्वादिकमिष्टिकर्तुः पितुः फलम्, उत पुत्रस्य इति विशये, अन्यफलकर्मणाऽन्यस्य प्रवर्तनायोगात् पितुरेव प्रवर्त्यत्वेन विधिविरोधात् ''अग्नीनादधीत'' इत्याधानवाक्यगतात्मने-पदेनाग्निसाध्यकर्मफलानामाधातृगामित्वनियमात् पितुरेव फलमिति प्राप्ते, ''यस्मिन् जाते निर्वपति स पूतो भवति'' इति स्पष्टं पुत्रगामित्वावगमात् पुत्रफलमपि पितुरभिलषितमेवेति, विधेरात्मनेपदस्य चाविरोधात् पुत्रस्यैव फलमिति सिद्धान्तितम् । अत्र पुत्रस्य पितुरुपकारकत्वेन पित्रर्थत्वात् पुत्रगत-पूतत्वादीच्छा पितुः यथा सम्भवति, न तथा प्रकृते । चिन्मात्रस्याहमर्थोप-कारकत्वाभावेनाहमर्थार्थत्वाभावाच्चिन्मात्रगतमुक्तीच्छा नाहमर्थस्य युक्तेत्यर्थः । किञ्च–चिन्मात्रं मुक्तं स्यादितीच्छाया अननुभवेन, अहं मुक्तः स्यामितीच्छाया एवानुभूयमानत्वेनाकाम्यमानफलत्वं स्यादित्याह ।। तादृशेति ।।

ವಿವರಣೆ - ಅದ್ವೈತಭಾಷ್ಯದಲ್ಲಿ ಹೇಳಿದ ಮತ್ತೊಂದು ಜಿಜ್ಞಾಸುವಿನ ಅರ್ಹತೆಯನ್ನು 'ಮುಮುಕ್ಷುತ್ವ' ಇತ್ಯಾದಿಯಾಗಿ ಖಂಡಿಸುತ್ತಿದ್ದಾರೆ.

ಮೋಕ್ಷ ಎಂದರೆ ಆತ್ಮಸ್ವರೂಪವೆಂದು ನೀವು ಹೇಳುತ್ತೀರಿ. ಆ ಆತ್ಮಸ್ವರೂಪವು ನಿತ್ಯಸಿದ್ಧವಾದ್ದರಿಂದ ಅದರಲ್ಲಿ ಅಭಿಲಾಷೆಯು ಕೂಡುವುದಿಲ್ಲ.

ಶಂಕೆ - ನಾವು ಕೇವಲ ಆತ್ಮಸ್ವರೂಪವನ್ನು ಮೋಕ್ಷವೆಂದು ಹೇಳುವುದಿಲ್ಲ. ಹಾಗೆ ಹೇಳಿದ್ದರೆ ನೀವು ಹೇಳಿದ ದೋಷ ಬರುತ್ತಿತ್ತು. ಹೊರತಾಗಿ ಅಖಂಡೈಕರಸನಾದ ವೇದಾಂತಜನ್ಯವಾದ ಚರಮವೃತ್ತಿಯಿಂದ ಉಪಲಕ್ಷಿತವಾದ ಆತ್ಮಸ್ವರೂಪವನ್ನೇ ಮೋಕ್ಷವೆಂದು ಹೇಳುತ್ತೇವೆ. ಇದು ವೇದಾಂತವಿಚಾರದ ಮೊದಲು ಸಿದ್ಧವಾಗಿರುವುದಿಲ್ಲ. ಆದ್ದರಿಂದ ಇಂತಹ ಮೋಕ್ಷದ ವಿಷಯದಲ್ಲಿ ಅಭಿಲಾಷೆಯು ಉಂಟಾಗಬಹುದೆಂಬ ಪ್ರಶ್ನೆಗೆ 'ವೃತ್ತ್ಯುಪಲಕ್ಷಿತಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಚರಮವೃತ್ತಿಜ್ಞಾನಕ್ಕೆ ವಿಷಯನಾದ ಆತ್ಮನು ಈ ಜ್ಞಾನ ಬರುವ ಮೊದಲು ಇರುವುದರಿಂದ ಅಂತಹ ಆತ್ಮನ ವಿಷಯದಲ್ಲಿ ಇಚ್ಛೆಯು ಕೂಡುವುದಿಲ್ಲವೆಂದು ಅಭಿಪ್ರಾಯ.

ಶಂಕೆ - ಕೇವಲ ಆತ್ಮಸ್ವರೂಪವು ಮೋಕ್ಷವಲ್ಲ. ಹೊರತಾಗಿ ಅಜ್ಞಾನನಿವೃತ್ತಿರೂಪವಾದ ಆತ್ಮನಿಗಿಂತ ಭಿನ್ನವಾದ ಪಂಚಮಪ್ರಕಾರವನ್ನೇ ಮೋಕ್ಷವೆಂದು ಹೇಳುತ್ತೇವೆ. ಅವಿದ್ಯಾನಿವೃತ್ತಿಯು ಸತ್ಯವಲ್ಲ-

ಪರಿಪೂರ್ಣಚಂದ್ರಿಕಾ

ವಾದುದರಿಂದ ಅದ್ವೈತಭಂಗಕ್ಕೆ ಅವಕಾಶವಿಲ್ಲ. ಅಸತ್ಯವೂ ಅಲ್ಲವಾದ್ದರಿಂದ ಮೋಕ್ಷವೇ ಇಲ್ಲವೆಂಬ ವಾದಕ್ಕೂ ಅವಕಾಶವಿಲ್ಲ. ಸತ್ಯಾಸತ್ಯ ಉಭಯರೂಪವೂ ಅಲ್ಲದುದರಿಂದ ವಿರೋಧಕ್ಕೆ ಅವಕಾಶವಿಲ್ಲ. ಸತ್ಯಾಸತ್ಯ ಉಭಯವಿಲಕ್ಷಣವೂ ಅಲ್ಲ. ಈ ನಾಲ್ಕಕ್ಕಿಂತ ವಿಲಕ್ಷಣವಾದ ಐದನೆಯ ಪ್ರಕಾರವೇ ಮೋಕ್ಷ.

ಸಮಾಧಾನ - ಸತ್ಯಾಸತ್ಯಉಭಯವಿಲಕ್ಷಣವೆಂಬ ನಾಲ್ಕನೆಯ ಪ್ರಕಾರವೇ ಅಪ್ರಸಿದ್ಧವಾಗಿರುವಾಗ ಐದನೆಯ ಪ್ರಕಾರವಂತೂ ಸರ್ವಥಾ ಕೂಡುವುದಿಲ್ಲ.

ಶಂಕೆ - ಅವಿದ್ಯಾನಿವೃತ್ತಿಯನ್ನೇ ನಾವು ಮೋಕ್ಷವೆಂದು ಹೇಳುತ್ತೇವೆ. ಅದನ್ನು ಪಂಚಮಪ್ರಕಾರವೆಂದು ಹೇಳಲಾರೆವು. ಹೊರತಾಗಿ ಅದು ಸತ್ಯವೇ ಆಗಿದೆ. ಸತ್ಯ ಆಗಿದ್ದರೂ ಅದ್ವೈತಕ್ಕೆ ಭಂಗವಿಲ್ಲ. ಏಕೆಂದರೆ ಅಭಾವದ್ವೈತವನ್ನು ಅಂಗೀಕರಿಸಿದ್ದೇವೆ. ಅಜ್ಞಾನನಿವೃತ್ತಿಯು ಅಭಾವರೂಪವಾಗಿರುವುದರಿಂದ ಬ್ರಹ್ಮಾತಿರಿಕ್ತವಾಗಿ ಸತ್ಯವಾದರೂ ನಮಗೇನೂ ಬಾಧಕವಿಲ್ಲ. ಆದ್ದರಿಂದ ಮೋಕ್ಷದಲ್ಲಿ ಅಭಿಲಾಷೆಯು ಕೂಡುತ್ತದೆ.

ಸಮಾಧಾನ - ಕೆಲವರ ಈ ವಾದವೂ ಅಸಮೀಚೀನವಾಗಿದೆ. ಅಭಾವದ್ವೈತವು ನಿಮ್ಮ ಮತದಲ್ಲಿ ಕೂಡುವುದಿಲ್ಲವೆಂದು ನ್ಯಾಯಾಮೃತಾದಿಗ್ರಂಥಗಳಲ್ಲಿ ನಿರಾಸ ಮಾಡಲಾಗಿದೆ. ನ್ಯಾಯಾಮೃತದ ಚತುರ್ಥ-ಪರಿಚ್ಛೇದದಲ್ಲಿ ಇದರ ವಿಸ್ತಾರವನ್ನು ತಿಳಿಯಬೇಕು. ಅಭಾವದ್ವೈತವನ್ನು ನೀವು ಒಪ್ಪಿದರೂ ಬಾಧಕವಿದೆ-ಯೆಂಬುದನ್ನೂ 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಮೋಕ್ಷದಲ್ಲಿ ಅಭಿಲಾಷೆ ಎಂದರೆ ಅಹಮರ್ಥಕ್ಕೆ ಮುಕ್ತಿ ಆಗಲಿ ಎಂಬ ಅಭಿಲಾಷೆಯೋ? ಅಥವಾ ಅಹಮರ್ಥ ಎಂಬ ವಿಶೇಷಪದಾರ್ಥದಲ್ಲಿ ವಿಶೇಷ್ಯಭೂತವಾದ ಚಿನ್ಮಾತ್ರಕ್ಕೆ ಮುಕ್ತಿ ಆಗಲಿ ಎಂಬ ಇಚ್ಛೆಯೋ? ಮೊದಲನೆಯ ಪಕ್ಷವು ಸರಿಯಲ್ಲ. ಏಕೆಂದರೆ ಅಹಮರ್ಥವು ಅನಾತ್ಮವಾದ್ದರಿಂದ ಮಿಥ್ಯಾಭೂತವಾಗಿದೆ. ಆದ್ದರಿಂದ ಅದು ಮೋಕ್ಷದಲ್ಲಿ ಇರಲು ಸಾಧ್ಯವೇ ಇಲ್ಲ. ಇನ್ನು ಎರಡನೆಯ ಪಕ್ಷದಲ್ಲಿ ಚಿನ್ಮಾತ್ರಕ್ಕೆ ಮುಕ್ತಿ ಸಿಗಲಿ ಎಂಬ ಇಚ್ಛೆಯನ್ನು ಚಿನ್ಮಾತ್ರನಿಗೆ ಹೇಳಲಾಗದು. ಅಹಮರ್ಥಕ್ಕೆ ಹೇಳಬೇಕು. ಮತ್ತೊಬ್ಬನಿಗೆ ಫಲ ಸಿಗಲಿ ಎಂದು ಕಷ್ಟಕರವಾದ ಶ್ರವಣಾದಿಗಳಲ್ಲಿ ಯಾರೂ ಪ್ರವೃತ್ತಿ ಮಾಡಲಾರರು. ಆದ್ದರಿಂದ ಅಹಮರ್ಥನು ಕಷ್ಟದಿಂದ ಸಂಪಾದಿಸಿದ ತತ್ತ್ವಜ್ಞಾನಕ್ಕೆ ಅವನು ಬಯಸದ ಚಿನ್ಮಾತ್ರನ ಮುಕ್ತಿಯು ಫಲವೆಂಬುದು ಅತ್ಯಂತ ಅನ್ಯಾಯ !

ಜಾತೇಷ್ಟ್ಯಾದಿಗಳಲ್ಲಿ 'ಪುತ್ರನು ಶುದ್ಧನಾಗಲಿ' ಎಂಬ ಬಯಕೆಯಿಂದ ತಂದೆಯ ಪ್ರವೃತ್ತಿ ಕಂಡಿದೆ. ಆದ್ದರಿಂದ ನೀವು ಹೇಳಿದ್ದು ವಿಷಮವಾಗಿದೆ. ಪೂರ್ವಮೀಮಾಂಸೆಯಲ್ಲಿರುವ ಜಾತೇಷ್ಟ್ಯಧಿಕರಣ ಹೀಗಿದೆ

### ಜಾತೇಷ್ಟ್ಯಧಿಕರಣ

### ಫಲಸಂಯೋಗಸ್ತ್ವಚೋದಿತೇ ನ ಸ್ಯಾದಶೇಷಭೂತತ್ವಾತ್ (೪-೩-೧೮)

'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ ಪುತ್ರೇ ಜಾತೇ' ಮಗ ಹುಟ್ಟಿದರೆ ದ್ವಾದಶ-ಕಪಾಲಚರುವಿನಿಂದ ವೈಶ್ವಾನರೇಷ್ಟಿಯನ್ನು ಮಾಡಬೇಕೆಂದು ಶ್ರುತಿಯು ವಿಧಾನ ಮಾಡುತ್ತಿದೆ. ಈ

ಶ್ರುತಿವಾಕ್ಯದ ಮುಂದಿನವಾಕ್ಯ ಜಾತೇಷ್ಟಿಯನ್ನು ಆಚರಿಸುವುದರಿಂದ ಬರುವ ಫಲವನ್ನು ಹೇಳುತ್ತಿದೆ 'ಯಸ್ಮಿನ್ ಜಾತ ಏತಾಮಿಷ್ಟಿಂ ನಿರ್ವಪತಿ ಪೂತ ಏವ ಸ ತೇಜಸ್ವ್ಯನ್ನಾದ ಇಂದ್ರಿಯಾವೀ ಪಶುಮಾನ್ ಭವತಿ' ಮಗ ಹುಟ್ಟಿದಾಗ ಯಾರು ಈ ಜಾತೇಷ್ಟಿಯನ್ನು ಆಚರಿಸುತ್ತಾನೋ, ಅವನು ಶುದ್ಧನೂ, ತೇಜಸ್ವಿಯೂ ಭೋಜನಶಕ್ತಿಯುಳ್ಳವನೂ ಇಂದ್ರಿಯಪಾಟವವುಳ್ಳವನೂ ಪಶುಸಂಪತ್ತುಳ್ಳವನೂ ಆಗುತ್ತಾನೆ. ಎಂದು ಫಲವನ್ನು ಹೇಳಿದ್ದಾರೆ(೧).

ಈ ಫಲವು ಜಾತೇಷ್ಟಿಯನ್ನು ಆಚರಿಸುವ ತಂದೆಗೆ ಬರುತ್ತದೋ? ಮಗನಿಗೆ ಬರುತ್ತದೋ? ಎಂದು ಸಂದೇಹ.

**ಪೂರ್ವಪಕ್ಷ :-** ತನಗೆ ಪ್ರಯೋಜನವಿದ್ದರೆ ಮಾತ್ರ ಕಾರ್ಯದಲ್ಲಿ ಸಹಜ ಪ್ರವೃತ್ತಿ ಉಂಟಾಗುತ್ತದೆ. ಮತ್ತೊಬ್ಬನಿಗೆ ಫಲ ಬರುವುದಾದರೆ ಆಯಾಸಸಾಧ್ಯ ಕಾರ್ಯದಲ್ಲಿ ಯಾರೂ ಸಹ ಪ್ರವೃತ್ತಿ ಮಾಡುವುದಿಲ್ಲ. ಆದ್ದರಿಂದ ಜಾತೇಷ್ಟಿಯನ್ನು ಆಚರಿಸುವುದರಿಂದ ತಂದೆಗೆ ಫಲ ಬರುತ್ತದೆಂದೇ

---

(१) भाट्टसङ्ग्रहः –

**।। अथ सप्तदशं वैश्वानरेष्टेः पुत्रगतफलकत्वाधिकरणम् ।।**

**।। फलसंयोगस्त्वचोदिते न स्याच्छेषभूतत्वात् ।।३८।।**

उत्तरचिन्तोपयुक्ततयेदमारभ्यते । तदाह तन्त्ररत्ने 'तस्य चायमुपोद्घातः' इति । काम्येष्टिकाण्डे 'वैश्वानरं द्वादशकपालं निर्वपेत् पुत्रे जाते' इति प्रकृत्य श्रूयते 'यस्मिन् जात एतामिष्टिं निर्वपति स पूत एव तेजस्व्यन्नाद इन्द्रियावी पशुमान् भवति' इति । तदिदमर्थवादगतं पूतत्वादिकं, 'क्रतौ फलार्थवादम्' इत्यत्र 'प्रागुक्तरात्रिसत्रप्रतिष्ठावत् फलम्' इति स्थिते, तत् किमिष्टिकर्तुः पितुः फलम् उत पुत्रस्येति सन्देहे,

'प्रवर्तनारूपविधिना विद्धदुद्देश एव कर्तरीष्टसाधनत्वबोधनद्वारा तस्यैव प्रेर्यत्वादन्यफले कर्मण्यन्यस्य प्रेरणायोगात्, 'अग्नीनादधीत' इत्याधानगतात्मनेपदेन कर्तृगामिफलबोधनादग्निसाध्यकर्मफलानामाधातृगामित्वनियमावगमात् पितुरेव फलम्' इति प्राप्ते,

सिद्धान्तः ''यस्मिन् जात एतामिष्टिं निर्वपति स पूतः इति फलसमर्पकादर्थवाद एव 'सः' इति जातमेव निर्दिश्य तस्यैव फलोक्तेः स्पष्टत्वात्, पुत्रपूतत्वस्यापि पितुरभिलाषितत्वेन आधानगतात्मनेपदाविरोधाच्च पुत्रफलमेव पूतत्वादिकम्'' इति ।

तदाह सूत्रे – फलसंयोगस्त्विति । अचोदिते वाक्यशेषे अनुक्ते पितरि फलसंयोगे न स्यात् । वाक्यशेषस्य पितृगतफलप्रतीतौ शेषभूतत्वाभावादिति । फलन्तु, पुत्रगतपूतत्वाद्युद्देशेनानुष्ठानम् । एषा वैश्वानरेष्टिर्विधिवाक्ये पुत्रजन्मनिमित्तकत्वस्य आर्थवादिकफलस्य च श्रवणान्नैमित्तिककाम्येष्टिरित्याहुः ।

**।। इति सप्तदशो वैश्वानरेष्टेः पुत्रगतफलकत्वाधिकरणम् ।।**

*ಸಂಪೂರ್ಣಚಂದ್ರಿಕಾ*

ಕೇಳಬೇಕು. ಇಲ್ಲವಾದರೆ ವಿಧಿವಿರೋಧ ಬರುತ್ತದೆ. ಮತ್ತು 'ಅಗ್ನೀನಾದಧೀತ' 'ಆಹಿತಾಗ್ನಿಯನ್ನು ಸ್ವೀಕರಿಸಬೇಕು' ಎಂಬಲ್ಲಿ 'ಆದಧೀತ' ಎಂದು ಆತ್ಮನೇಪದಪ್ರಯೋಗವಿದೆ. ಇದರಿಂದ ಕ್ರಿಯಾಜನ್ಯವಾದ ಫಲವು ಕರ್ತೃವಿಗಷ್ಟೇ ದೊರೆಯುತ್ತದೆಂದು ತಿಳಿಯುತ್ತದೆ. ಆದ್ದರಿಂದ ಜಾತೇಷ್ಟಿಯ ಫಲ ತಂದೆಗೆ ಬರುತ್ತದೆ.

ಸಿದ್ಧಾಂತ :- 'ಯಸ್ಮಿನ್ ಜಾತೇ' ಎಂದು ಸಪ್ತಮೀವಿಭಕ್ತ್ಯಂತವಾದ ಪದದಿಂದ ಪುತ್ರನಿಗೆ ಫಲ ಬರುತ್ತದೆಂದು ಸ್ಪಷ್ಟವಾಗಿ ಕೇಳಿಸುತ್ತಿದೆ. ಮಗನಿಗೆ ಫಲ ಬರಲಿಯೆಂಬ ಉದ್ದೇಶದಿಂದ ತಂದೆ ಇಷ್ಟಿಯನ್ನು ಆಚರಿಸುತ್ತಾನೆ. ಆದ್ದರಿಂದ ಮಗನಿಗೆ ಫಲ ಸಿಕ್ಕರೆ ತಂದೆಗೆ ಫಲ ಸಿಕ್ಕಂತೆ. ಮತ್ತು ಮಗನಿಂದ ತಂದೆಗೆ ಬಹಳಷ್ಟು ಪ್ರಯೋಜನವಿರುವುದರಿಂದ ಮಗನಿಗೆ ಫಲ ಸಿಗುವುದರಿಂದ ತಂದೆಗೆ ಫಲ ಸಿಕ್ಕಂತೆ ಎಂದು ನಿಶ್ಚಯವಾಗುತ್ತದೆ. ಆದ್ದರಿಂದಲೇ 'ಆದಧೀತ' ಆತ್ಮಗಾಮಿಯಾದ ಆತ್ಮನೇಪದಪ್ರಯೋಗವೂ ಕೂಡ ಸಾಧುವಾಗುತ್ತದೆ. ಆದ್ದರಿಂದ ಜಾತೇಷ್ಟಿಯ ಫಲ ಮಗನಿಗೆ ಎಂದು ಸಿದ್ಧಾಂತ.

ಹೀಗೆ ಪುತ್ರನಿಗೆ ಫಲ ಸಿಗಲಿ ಎಂಬ ಇಚ್ಛೆ ತಂದೆಗೆ ಬರುವಂತೆ ಪ್ರಕೃತ ಚಿನ್ಮಾತ್ರಕ್ಕೆ ಮೋಕ್ಷವಾಗಲಿ ಎಂಬ ಇಚ್ಛೆ ಅಹಮರ್ಥಕ್ಕೆ ಬರಬಹುದಲ್ಲವೇ?

ಈ ದೃಷ್ಟಾಂತವು ವಿಷಮವಾಗಿದೆ. ಅಲ್ಲಿ ಮಗನಿಂದ ತಂದೆಗೆ ಬಹಳಷ್ಟು ಪ್ರಯೋಜನವಿದೆ. ಆದ್ದರಿಂದ ತಂದೆಯು ಮಗನಿಗೆ ಫಲ ಬರುವಂತೆ ಇಷ್ಟಿಯಾಗ ಮಾಡುವುದು ಸೂಕ್ತವಾಗಿದೆ. ಆದರೆ ಅಹಮರ್ಥಕ್ಕೆ ಚಿನ್ಮಾತ್ರನಿಂದ ಯಾವ ಪ್ರಯೋಜನವೂ ಇಲ್ಲ. ಹೀಗಿರುವಾಗ ಚಿನ್ಮಾತ್ರನಿಗೆ ಮೋಕ್ಷವಾಗಲಿ ಎಂದು ಅಹಮರ್ಥ ಶ್ರಮಿಸುವುದು ಕೂಡುವುದಿಲ್ಲ.

ಮತ್ತು ಯಾರೊಬ್ಬರಿಗೂ 'ಚಿನ್ಮಾತ್ರನು ಮುಕ್ತನಾಗಲಿ ಎಂಬ ಅನುಭವವೇ ಇಲ್ಲ. ಹೊರತಾಗಿ 'ನಾನು ಮುಕ್ತನಾಗಬೇಕು' ಎಂದೇ ಅನುಭವವಿದೆ.

ಆದ್ದರಿಂದ ಅದ್ವೈತಿಗಳಿಗೆ ಮುಮುಕ್ಷುತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲ.

## ಸಾರ

ಅದ್ವೈತಮತದಲ್ಲಿ ಮೋಕ್ಷಾಭಿಲಾಷೆ ಸಲ್ಲದು

ಅದ್ವೈತದಲ್ಲಿ ಮೋಕ್ಷವೆಂದರೇನು? ನಿತ್ಯಸಿದ್ಧವಾದ ಆತ್ಮಸ್ವರೂಪವೆ? ಅದು ಸಂಸಾರದಲ್ಲಿಯೂ ಇದೆ. ತತ್ವಜ್ಞಾನದಿಂದ ಉಪಲಕ್ಷಿತವಾದ ಆತ್ಮಸ್ವರೂಪವೆ? ಅದೂ ಕೂಡ ತತ್ವಜ್ಞಾನ ಬರುವುದಕ್ಕೆ ಮೊದಲು ಇದ್ದೇ ಇದೆ. 'ಅಜ್ಞಾನ ನಿವೃತ್ತಿಯೇ ಮೋಕ್ಷ. ಅದು ಆತ್ಮಸ್ವರೂಪವಲ್ಲ. ಆದರೆ ಸತ್ಯವೂ ಅಲ್ಲ, ಮಿಥ್ಯೆಯೂ ಅಲ್ಲದ ಪದಾರ್ಥ' ಎಂದರೆ ಅಂಥ ಪದಾರ್ಥವನ್ನು ಒಪ್ಪುವುದ ಅಸಂಗತ. ಅಜ್ಞಾನನಿವೃತ್ತಿ ಅಭಾವರೂಪವಾದ್ದರಿಂದ ಸತ್ಯವೆಂದೊಪ್ಪಿದರೆ ಅದ್ವೈತ ಭಂಗವಿಲ್ಲ ಎನ್ನುತ್ತಾರೆ ಕೆಲವರು. ಇದರ ನಿರಾಕರಣ ನ್ಯಾಯಾಮೃತದಲ್ಲಿ ಇದೆ. ಅಭಾವ ಸತ್ಯವೆಂದೊಪ್ಪಿದರೂ ಇಂಥ ಮೋಕ್ಷದ ಅಭಿಲಾಷ 'ನಾನು

ಮುಕ್ತನಾಗಬೇಕೆ'ಂಬ ಅಭಿಲಾಷೆಯೆ? ಅಥವಾ 'ಶುದ್ಧ ಚೈತನ್ಯಕ್ಕೆ ಮೋಕ್ಷವಾಗಲಿ'ಂದೆ? 'ನಾನು ಮಿಥ್ಯಾಪದಾರ್ಥ. ಅದಕ್ಕೆ ತತ್ವಜ್ಞಾನದಿಂದ ನಾಶವೆ ಹೊರತು ಮೋಕ್ಷದಲ್ಲಿ ಅದಕ್ಕೆ ಅಸ್ತಿತ್ವವಿಲ್ಲ. ಶುದ್ಧ ಚೈತನ್ಯಕ್ಕೆ ಮೋಕ್ಷಸಿಗಲೆಂದು ಅಭಿಲಾಷೆ ಯಾರಿಗೆ? ಶುದ್ಧಚೈತನ್ಯಕ್ಕಂತೂ ಅಲ್ಲ. 'ನಾನು' ಎಂಬ ಪದಾರ್ಥಕ್ಕೆ ಬರಲು ಶಕ್ಯವಿಲ್ಲ. ಇನ್ನೊಬ್ಬರಿಗೆ ಫಲ ಸಿಗಲಿ ಎಂದು ಬ್ರಹ್ಮವಿಚಾರದಂಥ ದುಷ್ಕರವಾದ ಕಾರ್ಯದಲ್ಲಿ ಯಾರು ಪ್ರವೃತ್ತಿ ಮಾಡುತ್ತಾರೆ? ಮಗನಿಗೆ ಒಳ್ಳೆಯದಾಗಲಿ ಎಂದು ತಂದೆ ಜಾತೇಷ್ಟಿ ಮಾಡುವುದಕ್ಕೆ ಮಗನು ತಂದೆಗೆ ಆನಂದ ಉಂಟುಮಾಡುವವನು ಪ್ರೀತಿಪಾತ್ರನೆಂಬ ಕಾರಣವಿದೆ. ಶುದ್ಧ ಚೈತನ್ಯ ಹಾಗೆ 'ನಾನು' ಎಂಬ ಪದಾರ್ಥಕ್ಕೆ ಉಪಕಾರಿಯಲ್ಲ ಪ್ರೀತಿಪಾತ್ರವಲ್ಲ. ನಾನು ನಾಶವಾಗಬಾರದು. ನಾನು ಮುಕ್ತನಾಗಬೇಕು ಎಂದು ತಾನೆ ಎಲ್ಲರ ಮುಖ್ಯ ಅಭಿಲಾಷೆ?

• • • • •

## ಅದ್ವೈತಿಗಳಿಗೆ ನಾಲ್ಕುವಿಧ ಅರ್ಹತೆಗಳೂ ಇಲ್ಲ
## (ಮತ್ತೊಂದು ಮುಖದ ವಿಮರ್ಶೆ)

**तात्पर्यचन्द्रिका –**

**किञ्च – किं भामतीरीत्या साधनचतुष्टये पूर्वपूर्वस्य उत्तरोत्तरहेतुत्वेन मुमुक्षैवाधिकारिविशेषणमन्यत् तद्धेतुभूतं[१], किं वा विवरणैकदेशोक्तरीत्या मुमुक्षा-**

---

(१) **भामती –**

तापत्रयपरीतमात्मानं च जीवलोकं चावलोक्य अस्मिन्संसारमण्डले अनित्याशुचिदुःखात्मकं प्रसंख्यानमुपावर्तते; ततोऽस्यैतादृशान्नित्यानित्यवस्तुविवेकलक्षणात्प्रसंख्यानात् – **इहामुत्रार्थभोगविरागः** । भवति । अर्थ्यते प्रार्थ्यत इत्यर्थः । फलमिति यावत् । तस्मिन्विरागोऽनाभोगात्मिकोपेक्षाबुद्धिः । ततः **शमदमादिसाधनसंपत्** । रागादिकषायमदिरामत्तं हि मनस्तेषु तेषुं विषयेषूच्चावचमिन्द्रियाणि प्रवर्तयत्, विविधाश्च प्रवृत्तीः पुण्यापुण्यफला भावयत्, पुरुषमतिघोरे विविधदुःखज्वालाजटिले संसारहुतभुजि जुहोति । प्रसंख्यानाभ्यासलब्धवैराग्यपरिपाकभग्नरागादिकषायमदिरामदं तु मनः पुरुषेणावजीयते वशीक्रियते, सोऽयमस्य वैराग्यहेतुको मनोविजयः शम इति वशीकारसंज्ञ इति चाख्यायते । विजितं च मनस्तत्त्वविषयविनियोगयोग्यतां नीयते, सेयमस्य योग्यता दमः । यथा दान्तोऽयं वृषभयुवा हलशकटादिवहनयोग्यः कृत इति गम्यते । आदिग्रहणेन च विषयतितिक्षातदुपरमतत्त्वश्रद्धाः संगृह्यन्ते । अत एव श्रुतिः – 'तस्माच्छान्तो दान्त उपरतस्तितिक्षुः श्रद्धावित्तो भूत्वात्मन्येवात्मानं पश्येत् सर्वमात्मनि पश्यति' इति । तदेतस्य शमदमादिरूपस्य साधनस्य संपत्प्रकर्षः शमदमादिसाधनसंपत् । ततोऽस्य संसार बन्धनान्मुमुक्षाभवतीत्याह – **मुमुक्षुत्वं च** । तस्य च नित्यशुद्धमुक्तसत्यस्वभावब्रह्मज्ञानं

वद्विवेकादिरप्यधिकारिविशेषणम् । आद्ये मुमुक्षानन्तर्यमेव अथशब्दार्थः स्यात्, न चतुष्टयानन्तर्यम् । अन्यथा विवेकहेत्वानन्तर्यमपि तदर्थः स्यात् । अन्त्येऽपि तत् किं सामर्थ्यादेरिवान्वयव्यतिरेकाभ्यां गम्यं, किं वा गृहदाहादेरिव शास्त्रात् । नाद्यः । शमाद्यभावेऽपि मुमुक्षामात्रेण विचारदर्शनात् । ननु स विचारः शूद्र-यागवन्न फलपर्यन्तः, तत्पर्यंतस्तु शमाद्यभावे नास्तीति चेन्न, । तथाऽपि विरागशमदमादिमुमुक्षासु सतीषु, विवेकाभावेन फलपर्यन्तं विचाराभावादर्शनात् ।

नान्त्यः । श्रुत्याद्यवगतशेषत्वस्यापि मन्त्रस्य वस्तुसामर्थ्यापरपर्याय लिङ्गेनानुष्ठेयप्रकाशनद्वारैव शेषत्ववत् आरुण्यादेरेकहान्यादिद्रव्यावच्छेदद्वारेव क्रय-शेषत्ववच्च, विवेकादेरपि वैराग्यादिद्वारैव विचारहेतुत्वस्य न्याय्यत्वात् । "परीक्ष्य लोकान्" इति श्रुतिसिद्धत्वाच्च, मुमुक्षावदधिकारिविशेणत्वायोगात् । नहि यागे स्वर्गकामनावत् तद्धेतुभूतमप्यधिकारिविशेषणम् । अस्माकं तु मते यथा शास्त्रं विवेकादेरधिकारिविशेषणवैराग्यादिहेतुत्वं, शमादेस्त्वधिकारिविशेषणत्वमिति, विशेषणानां चतुष्कमिति परोक्तं न युक्तम् ।

ಅನುವಾದ - ಅಲ್ಲದೇ ಅದ್ವೈತಮತರೀತ್ಯಾ ನಾಲ್ಕುವಿಧದ ಅರ್ಹತೆಗಳು ಸರಿಯಲ್ಲ. (ಭಾಮತಿ+ವಿವರಣ) ನಿತ್ಯಾನಿತ್ಯವಿವೇಕವೇ ಮೊದಲಾದ ಸಾಧನಚತುಷ್ಟಯಗಳಲ್ಲಿ ಹಿಂದಿನವುಗಳು ಮುಂದಿನವುಗಳಿಗೆ ಕಾರಣವಾಗಿವೆ. ಕೊನೆಯದ್ದಾದ ಮೋಕ್ಷಾಭಿಲಾಷೆ ಮಾತ್ರ ಅಧಿಕಾರಿಗೆ ಇರಬೇಕಾದ ಅರ್ಹತೆ. ಉಳಿದವುಗಳೆಲ್ಲ ಅದಕ್ಕೆ ಕಾರಣಗಳಾಗಿವೆ ಎಂದು ಭಾಮತಿಯ ಪ್ರಕಾರ ಹೇಳುತ್ತೀರೋ? ಅಥವಾ ವಿವರಣಮತಾನುಯಾಯಿಗಳಲ್ಲಿ ಕೆಲವರು ಹೇಳುವಂತೆ ಮೋಕ್ಷಾಭಿ-ಲಾಷೆಯಂತೆ ನಿತ್ಯಾನಿತ್ಯವಿವೇಕಾದಿಗಳೂ ಅಧಿಕಾರಿಗೆ ಇರಬೇಕಾದ ಅರ್ಹತೆಗಳಾಗಿವೆ ಎಂದು ಹೇಳುತ್ತೀರೋ? ಇಬ್ಬರ ಅಭಿಪ್ರಾಯವೂ ಸರಿಯಿಲ್ಲ.

ಭಾಮತಿಯ ಪ್ರಕಾರ 'ಅಥ' ಶಬ್ದಕ್ಕೆ ಮೋಕ್ಷಾಭಿಲಾಷೆ ಹೊಂದಿದ ಅನಂತರ ಎಂದೇ ಅರ್ಥವಾಗುತ್ತದೆ. ಹೊರತು ನಾಲ್ಕು ರೀತಿಯ ಸಾಧನ ಸಂಪತ್ತುಗಳನ್ನು ಹೊಂದಿದ ಅನಂತರ

---

मोक्षस्य कारणमित्युपश्रुत्य तज्जिज्ञासा भवति धर्मजिज्ञासायाः प्रागूर्ध्वं च, तस्मात्तेषामेवानन्तर्यं न धर्मजिज्ञासाया इत्याह । तेषु हीति । न केवलं जिज्ञासामात्रमपि तु ज्ञानमपीत्याह – ज्ञातुं च । उपसंहरति – तस्मादिति ।

ಎಂಬರ್ಥವಾಗುವುದಿಲ್ಲ. ಹಾಗೆ ಅರ್ಥ ಆಗುವುದಾದರೆ ವಿವೇಕ ಮೊದಲಾದವುಗಳ ಕಾರಣದ ಆನಂತರ್ಯವನ್ನೂ ಅಥ ಶಬ್ದವು ಹೇಳಬೇಕಾದೀತು.

ವಿವರಣಮತದವರು ಹೇಳಿದ ವಿಷಯಕ್ಕೆ ಸರಿಯಾದ ಆಧಾರವಿಲ್ಲ. ಏಕೆಂದರೆ ಪೂರ್ವಮೀಮಾಂಸಾದಲ್ಲಿ ಹೇಳುವಂತೆ ಕರ್ಮಾನುಷ್ಠಾನಕ್ಕೆ ಸಾಮರ್ಥ್ಯಾದಿಗಳನ್ನು ಕಾರಣವೆಂದು ಹೇಳುವಂತೆ ಅನ್ವಯವ್ಯತಿರೇಕದಿಂದ ಸಮರ್ಥಿಸುತ್ತೀರೋ? ಅಥವಾ, ಮನೆಯು ಸುಟ್ಟು ಹೋದಾಗ ಮಾಡಬೇಕಾದ ಪ್ರಾಯಶ್ಚಿತ್ತವು ಶಾಸ್ತ್ರದಿಂದ ತಿಳಿಯುವಂತೆ ಇಲ್ಲಿಯೂ ಶಾಸ್ತ್ರದಿಂದ ತಿಳಿಯುತ್ತದೆಂದು ಹೇಳುತ್ತೀರೊ?

ಮೊದಲನೆಯ ಪಕ್ಷ ಸರಿಯಲ್ಲ, ಶಮದಮ ಮೊದಲಾದವು ಇಲ್ಲದಿದ್ದರೂ ಕೇವಲ ಮೋಕ್ಷಾಭಿಲಾಷೆಯಿಂದ ಬ್ರಹ್ಮವಿಚಾರ ನಡೆಯುವುದು ಕಂಡಿದೆ.

ಶಂಕೆ - ಮೋಕ್ಷಾಭಿಲಾಷೆಯಿಂದಷ್ಟೇ ಮಾಡುವ ಬ್ರಹ್ಮವಿಚಾರವು ಶೂದ್ರಯಾಗದಂತೆ ಫಲಕಾರಿಯಾಗುವುದಿಲ್ಲ. ಫಲಕಾರಿಯಾಗುವ ವಿಚಾರವು ಶಮದಮಾದಿಗಳಿಲ್ಲದೆ ನಡೆಯುವುದಿಲ್ಲ.

ಸಮಾಧಾನ - ವೈರಾಗ್ಯ ಶಮ, ದಮ, ಮೋಕ್ಷಾಭಿಲಾಷೆಗಳು ಇದ್ದು ಕೇವಲ ವಿವೇಕ ಇಲ್ಲವೆನ್ನುವ ಕಾರಣದಿಂದ ಫಲಪರ್ಯಂತವಾದ ಬ್ರಹ್ಮವಿಚಾರವು ಉಂಟಾಗದಿರುವುದು ಎಲ್ಲಿಯೂ ಕಂಡಿಲ್ಲ.

**ಕಠಿಣಪದಾರ್ಥ**

**ಅನ್ಯತ್** = ಮೋಕ್ಷಾಭಿಲಾಷೆ ಬಿಟ್ಟು ಉಳಿದ ಮೂರು, **ತದ್ಧೇತುಭೂತಮ್** = ಮೋಕ್ಷಾಭಿಲಾಷೆಗೆ ಕಾರಣವಾದ. **ಅನ್ಯಥಾ** = ಮೋಕ್ಷಾಭಿಲಾಷೆಯಂತೆ ಉಳಿದ ಮೂರು ಅಥ ಶಬ್ದದ ಅರ್ಥವಾಗುವುದಾದರೆ. **ಗೃಹದಾಹಾದೇರಿವ** = ಮನೆ ಸುಟ್ಟು ಹೋದಾಗ ಮಾಡಬೇಕಾದ ಪ್ರಾಯಶ್ಚಿತ್ತವು ಶಾಸ್ತ್ರದಿಂದ ತಿಳಿಯುವಂತೆ. **ಶೂದ್ರಯಾಗವತ್** = ಶೂದ್ರನ ಯಾಗದಂತೆ. **ತದ್ಧೇತುಭೂತಮಪಿ** = ಮೋಕ್ಷಾಭಿಲಾಷೆಗೆ ಕಾರಣವಾದದ್ದೂ ಕೂಡ. **ಚತುಷ್ಟಯತ್ವಮ್** = ನಾಲ್ಕು ಬಗೆಯ ಸಾಧನ ಸಂಪತ್ತು.

**प्रकाशः** – एवं साधनचतुष्टयं भाष्यकारीयं पृथङ् निरस्य, प्रकारान्तरेणापि निरसितुं मतद्वयानुरोधेन विकल्पयति ।। **किञ्च किमिति** ।। **मुमुक्षानन्तर्यमेवेति** ।। तथाच ''**अथशब्देन यथोक्तसाधनसम्पत्त्यानन्तर्यमुपदिश्यते**'' इति तदीयभाष्यविरोध इति भावः । **मुमुक्षानन्तर्योक्तौ तद्धेत्वानन्तर्यमपि लभ्यत इत्यत** आह ।। **अन्यथेति** ।। तथाच भाष्ये आनन्तर्यप्रतियोगित्वेन साधनचतुष्टयोक्ति-

रयुक्तेति भावः ।। **सामर्थ्यादेरिति** ।। "अर्थी समर्थो विद्वानधिक्रियते" इति न्यायेन सामर्थ्यादौ सति कर्माद्यनुष्ठानमन्यथा नेत्यन्वयव्यतिरेकाभ्यां अर्थित्वादेरधिकारिविशेषणत्वं यथा, एवं साधनचतुष्टयस्याप्यधिकारिविशेषणत्वं गम्यं किमित्यर्थः ।। **गृहदाहादेरिति** ।। "यस्य गृहान् दहत्यग्रये क्षामवते पुरोडाशमष्टाकपालं निर्वपेत्" इति क्षामवत्यामिष्टौ गृहदाहो निमित्तमधिकारिविशेषणं यथा शास्त्रादवगन्यते, तथा मुमुक्षावद् विवेकादिरप्यधिकारिविशेषणं किं शास्त्राद् गम्यमित्यर्थः ।। **मुमुक्षामात्रेणेति** ।। तथाच व्यतिरेकव्यभिचारान्न शमादेरधिकारिविशेषणत्वमिति भावः ।। **स विचार इति** ।। मुमुक्षामात्रवत् कृतः ।। **विवेकाभावेनेति** ।। तथाच नित्यानित्यविवेकस्य नाधिकारिविशेषणत्वमिति भावः । नच तदभावे वैराग्यादिकमेव नेति वाच्यम् । तद्धेतुत्वस्य त्वयाऽनङ्गीकारादिति भावः ।।

**श्रुतीति** ।। तृतीये "लिङ्गक्रमसमाख्यानात् काम्ययुक्तं समाम्नानम्" इति द्वितीयपादीयसप्तमेऽधिकरणे "काम्ययाज्यानुवाक्याकाण्डम्" इति समाख्याते मन्त्रकाण्डे समाम्नातानाम् "इन्द्राग्नी रोचना दिवः" इत्यादीनां मन्त्राणां किं लिङ्गेन सर्वत्र विनियोगः किं वा क्रमसमाख्याभ्यां 'काम्येष्टिकाण्डम्' इति समाख्याते इष्टिकाण्डे क्रमेणाम्नातास्विष्टिषु इति संशये, श्रुतिवदर्थप्रकाशनसामर्थ्य रूपलिङ्गस्यापि प्रमाणान्तरानपेक्षस्यैव विनियोजकत्वात्, क्रमसमाख्याभ्यां बलवत्त्वाच्च, तद्वाधेनार्थवशेन सर्वत्र विनियोग इति प्राप्ते, मन्त्रप्रकाश्यानामिन्द्रादीनां कर्मणोऽन्यत्रापि प्रतीतेः, तत्स्वरूपमात्रप्रकाशनेन मन्त्राणां फलाप्राप्तेः, तत्प्राप्तये कर्मसम्बन्धापादकं प्रमाणान्तरमपेक्ष्य द्वारविशेषे लिङ्गविशेषस्य विनियोजकत्वमिति क्रमसमाख्यानुसारेण काम्येष्टिष्वेव विनियोग इति सिद्धान्तितम् । तथा – तत्रैव "अर्थैकत्वे द्रव्यगुणयोरैककर्म्यान्नियमः स्यात्" इत्याद्यपादीयषष्ठेऽधिकरणे ज्योतिष्टोमे श्रुतं "अरुणया पिङ्गाक्ष्यैकहायन्या सोमं क्रीणाति" इति वाक्यमुदाहृत्य किमारुण्यं वाक्यभेदाश्रयणेन[1] प्राकरणिकसर्वद्रव्येषु निविशते, किं

(१) वाक्यभङ्गाश्रयणेन इत्यपि पाठः ।

वा क्रयेण सम्बन्ध्यैकहायन्यां निविशते इति संशये, तृतीयया करणत्वावगमादमूर्तस्य गुणस्य क्रियाविनिर्वर्तनाशक्तेः क्रयसम्बन्धायोगाद् वाक्यभेदेन प्राकरणिकसर्वद्रव्ये निवेश इति प्राप्ते, गुणस्य साक्षात् क्रियानिर्वर्तकत्वायोगेऽपि, साधनीभूतद्रव्यावच्छेदद्वारा तत्सम्भवान्न वाक्यभेदो न्याय्य इत्येकहायन्यामेव निवेश इति सिद्धान्तितम् । अत्र लैङ्गिकविनियोगस्य सामान्यसम्बन्धघटक-प्रमाणान्तरसापेक्षतया श्रुतिप्रकरणादिना सिद्धे तस्मिन् लिङ्गेनानुष्ठेयविशेष-प्रकाशनद्वारा यथा मन्त्राणां कर्मशेषत्वं, यथावा तृतीयाश्रुत्या अवगत-क्रयशेषत्वस्याप्यारुण्यादेः क्रयसाधनैकहायनीद्रव्यावच्छेदद्वारेण तच्छेषत्वं, तथा विवेकादेर्विचारहेतुत्वश्रवणेऽपि वैराग्यादिद्वारैव विचारहेतुत्वं न्याय्यम् । विवेकादेर्वैराग्यजनन एव सामर्थ्यादिति भावः । विचारविधिवाक्य एव विवेकादेः साक्षाद्धेतुत्वावगमेऽपि, पारम्पर्यं न्याय्यमिति वक्तुं द्वितीयदृष्टान्तः ।

न केवलमिदं न्यायप्राप्तं श्रुतं चेत्याह ।। परीक्ष्येति ।। ''परीक्ष्य लोकान् कर्मचितान् ब्राह्मणो निर्वेदमायात्'' इत्यत्र लोकान् विष्णुलोकेतरान् कर्मापा-दितानसाराननित्यतया परीक्ष्य वैराग्यं प्राप्नुयादिति श्रुत्या विवेकस्य हेतुत्व-लाभात् । समानकर्तृकयोः पूर्वकाले त्त्वाप्रत्ययस्मरणादिति भावः । ननु परम्परयाऽपि विशेषणत्वलाभात् कथमयोग इत्यत आह ।। मुमुक्षावदिति ।। न साक्षादिति भावः । 'तद्धेतुभूतं' कामनाहेतुभूतम् । अयं च दोषस्तवापि सम इत्यत आह ।। अस्माकमिति ।। 'परीक्ष्य' इति श्रुतेर्विवेकस्य वैराग्यादिहेतुत्व-मित्यर्थः । वक्ष्यमाणदिशा निदिध्यासनाङ्गत्वमेवेति भ्रान्तिं निरस्यति ।। शमादेस्त्विति ।।

गुरुराजीय – अधिकारिविशेषणहेतुस्तद्विशेषणं न भवतीत्यत्र व्याप्तौ दृष्टान्त-माह ।। नहि याग इति ।। यथा शास्त्रमिति ।। तथाचान्वयव्यतिरेकपक्षोक्तदोषान्नोक्त-श्रुतिविरोधो वाऽस्मदभिमतप्रमाणाभावो वा नेति भावः । विवेकादेरित्यत्रादिशब्देन वैराग्यग्रहणम् । वैराग्यादिहेतुत्वमित्यत्र विष्णुपादैकसंश्रयत्वपरिग्रहः । इतिहास-पुराणादिना इत्यत्रादिपदेन श्रुतिमूलहितैषिपित्रादिवाक्यश्रवणानां सङ्ग्रहः ।।

ಪಂಚಪೂರ್ಣಚಂದ್ರಿಕಾ

ವಿವರಣೆ - ಇದುವರೆಗೂ ಅದ್ವೈತಭಾಷ್ಯದಲ್ಲಿ ಹೇಳಿದ ಸಾಧನಚತುಷ್ಟಯಗಳು ಅಸಂಬದ್ಧವೆಂದು ಭಾಮತೀ ಹಾಗೂ ವಿವರಣರ ಅಭಿಪ್ರಾಯವನ್ನು ಪ್ರತ್ಯೇಕವಾಗಿ ನಿರಾಕರಿಸಲಾಯಿತು. ಈಗ ಮತ್ತೊಂದು ಪ್ರಕಾರದಿಂದ ನಿರಾಸ ಮಾಡಲು ಇಬ್ಬರ ಮತವನ್ನು ಅನುಸರಿಸಿ 'ಕಿಂಚ' ಇತ್ಯಾದಿ ವಾಕ್ಯಗಳಿಂದ ವಿಕಲ್ಪ ಮಾಡುತ್ತಿದ್ದಾರೆ.

ಭಾಮತಿಯ ಮತ ಪ್ರಕಾರ ಮೋಕ್ಷಾಭಿಲಾಷೆ ಮಾತ್ರ ಸಾಕ್ಷಾತ್ತಾಗಿ ಬ್ರಹ್ಮವಿಚಾರಕ್ಕೆ ಕಾರಣವಾಗುತ್ತದೆ. ಉಳಿದ ಮೂರರಲ್ಲಿ ಹಿಂದಿನವುಗಳು ಮುಂದಿನವುಗಳಿಗೆ ಕಾರಣವಾಗುತ್ತವೆ ಎಂಬ ಅಭಿಪ್ರಾಯ ಇರುವುದರಿಂದ 'ಅಥ' ಶಬ್ದಕ್ಕೆ ಮೋಕ್ಷಾಭಿಲಾಷೆ ಹೊಂದಿದ ಅನಂತರ ಎಂದಷ್ಟೇ ಅರ್ಥವಾಗುತ್ತದೆ 'ನಾಲ್ಕು ರೀತಿಯ ಸಾಧನೆ ಸಂಪತ್ತುಗಳನ್ನು ಹೊಂದಿದ ಅನಂತರ' ಎಂದು ಅರ್ಥವಾಗುವುದಿಲ್ಲ. ಆದರೆ ಅದ್ವೈತಭಾಷ್ಯದಲ್ಲಿ 'ನಾಲ್ಕು ಪ್ರಕಾರದ ಸಾಧನಾಸಂಪತ್ತುಗಳನ್ನು ಪಡೆದ ಅನಂತರ' ಎಂಬರ್ಥವನ್ನು ಅಥ ಶಬ್ದಕ್ಕೆ ಹೇಳಲಾಗಿದೆ. ಈಗ ಮೋಕ್ಷಾಭಿಲಾಷೆಯ ಅನಂತರ ಎಂಬರ್ಥವನ್ನಷ್ಟೇ ಅಥ ಶಬ್ದಕ್ಕೆ ಹೇಳಿದರೆ ಭಾಷ್ಯ ವಿರೋಧ ಬರುತ್ತದೆಂದು ಅಭಿಪ್ರಾಯ.

ಶಂಕೆ - ಮೋಕ್ಷಾಭಿಲಾಷೆಯ ಅನಂತರ ಬ್ರಹ್ಮವಿಚಾರ ಮಾಡಬೇಕೆಂದಷ್ಟೇ ಹೇಳುವುದರಿಂದ ಮೋಕ್ಷಾಭಿಲಾಷೆಗೆ ಕಾರಣವಾದ ವಿವೇಕ ಮೊದಲಾದವುಗಳ ಆನಂತರ್ಯವನ್ನೂ ಬ್ರಹ್ಮವಿಚಾರಕ್ಕೆ ಹೇಳಿದಂತಾಗುತ್ತದೆಂದು ಅದ್ವೈತಭಾಷ್ಯದ ಅಭಿಪ್ರಾಯ. ಆದ್ದರಿಂದ ಭಾಷ್ಯಕ್ಕೂ ಭಾಮತಿಗೂ ವಿರೋಧ ಬರುವುದಿಲ್ಲ ಎಂಬ ಶಂಕೆಗೆ 'ಅನ್ಯಥಾ' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ.

ಸಮಾಧಾನ - ಮೋಕ್ಷಾಭಿಲಾಷೆಗೆ ಕಾರಣವಾದವುಗಳೂ ಆನಂತರ್ಯವನ್ನೂ ಅಥ ಶಬ್ದವು ಹೇಳುವುದಾದಲ್ಲಿ ನಿತ್ಯಾನಿತ್ಯವಿವೇಕ, ವೈರಾಗ್ಯಾದಿಗಳಿಗೆ ಯಾವುದು ಕಾರಣಗಳಾಗಿದ್ದಾವೆಯೋ, ಅವುಗಳ ಆನಂತರ್ಯವನ್ನೂ ಅಥ ಶಬ್ದವು ಹೇಳಬೇಕಾದೀತು. ಆದ್ದರಿಂದ ಭಾಷ್ಯದಲ್ಲಿ ಸಾಧನಚತುಷ್ಟಯಗಳ ಆನಂತರ್ಯವನ್ನಷ್ಟೇ ಹೇಳಿದ್ದು ಅಯುಕ್ತವಾಗುತ್ತದೆ. ಆದ್ದರಿಂದ ಭಾಷ್ಯಕ್ಕೂ ಭಾಮತಿಗೂ ವಿರೋಧ ಪರಿಹಾರವಾಗಲಾರದು.

ವಿವರಣಮತಾನುಯಾಯಿಗಳಲ್ಲಿ ಕೆಲವರು ನಾಲ್ಕು ಸಾಧನಸಂಪತ್ತುಗಳೂ ಬ್ರಹ್ಮವಿಚಾರಕ್ಕೆ ಆವಶ್ಯಕವೆಂದು ಹೇಳುತ್ತಾರೆ. ಆದರೆ ಇದರ ಸಮರ್ಥನೆಯನ್ನು ಅವರು ಅನ್ವಯವ್ಯತಿರೇಕದಿಂದ ಅಥವಾ ಶಾಸ್ತ್ರದಿಂದ ಮಾಡಬೇಕು. ಆದರೆ ಈ ಎರಡರಿಂದಲೂ ಅವರಿಗೆ ಸಮರ್ಥಿಸಲಾಗದು. ಮೀಮಾಂಸಾದಲ್ಲಿ ಕರ್ಮಾನುಷ್ಠಾನದ ಆವಶ್ಯಕಗಳ ಬಗ್ಗೆ ಚಿಂತಿಸಬೇಕಾದರೆ ಮೂರನ್ನೂ ಅತ್ಯವಶ್ಯ ಎಂದು ಹೇಳಿದ್ದಾರೆ. 'ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ' ಎಂಬ ನ್ಯಾಯದಂತೆ ಕರ್ಮಾನುಷ್ಠಾನಕ್ಕೆ ಫಲಾಪೇಕ್ಷೆ, ಅನುಷ್ಠಾನದ ಸಾಮರ್ಥ್ಯ, ವಿಧಿಗಳ ಬಗ್ಗೆ ಸರಿಯಾದ ಅರಿವು ಇವು ಮೂರೂ ಸಹ ಅತ್ಯವಶ್ಯವಾಗಿದೆ. ಇವು ಮೂರು ಇದ್ದರಷ್ಟೇ ಕರ್ಮಾನುಷ್ಠಾನವು ಪರಿಪೂರ್ಣವಾಗುತ್ತದೆ. ಇವು ಮೂರು ಇಲ್ಲದಿದ್ದರೆ ಕರ್ಮಾನುಷ್ಠಾನವು ಪರಿಪೂರ್ಣವಾಗುವುದಿಲ್ಲವೆಂದು ಅನ್ವಯ ವ್ಯತಿರೇಕಗಳ ಆಧಾರದಿಂದ ಸಮರ್ಥಿಸಿದ್ದಾರೆ. ಹಾಗೆಯೇ ಪ್ರಕೃತದಲ್ಲಿ ಸಾಧನ ಚತುಷ್ಟಯಗಳು ಬ್ರಹ್ಮವಿಚಾರಕ್ಕೆ ಆವಶ್ಯಕವೆನ್ನಲು ಆ

ರೀತಿಯಾದ ಅನ್ವಯವ್ಯತಿರೇಕವನ್ನು ಪ್ರಮಾಣವನ್ನಾಗಿ ನೀಡಲು ಬರುವುದಿಲ್ಲ. ಏಕೆಂದರೆ ಶಮದಮ ಮುಂತಾದವುಗಳು ಇಲ್ಲದಿದ್ದರೂ ಕೇವಲ ಮೋಕ್ಷಾಭಿಲಾಷೆಯಿಂದ ಬ್ರಹ್ಮವಿಚಾರವು ನಡೆಯುತ್ತದೆ ಆದ್ದರಿಂದ ಶಮದಮಾದಿಗಳು ಇಲ್ಲದಿದ್ದರೆ ಬ್ರಹ್ಮವಿಚಾರವು ನಡೆಯುವುದಿಲ್ಲವೆಂಬ ವ್ಯತಿರೇಕವನ್ನು ಹೇಳಲು ಬರುವುದಿಲ್ಲ.

**ಶಂಕೆ** - ಅನ್ವಯವ್ಯತಿರೇಕವನ್ನು ಪ್ರಮಾಣವನ್ನಾಗಿ ಹೇಳಲು ಬರದಿದ್ದರೂ ಕೂಡ, ಶಾಸ್ತ್ರಪ್ರಮಾಣದಿಂದ ಸಾಧನಚತುಷ್ಟಯಗಳು ಕಾರಣವೆಂದು ಸಮರ್ಥಿಸುತ್ತೇವೆ - ಈ ರೀತಿಯಾಗಿ ಸಮರ್ಥಿಸಿದ್ದು ಪೂರ್ವಮೀಮಾಂಸಾದಲ್ಲಿ ಕಂಡಿದೆ - ಮನೆಯು ಸುಟ್ಟು ಹೋದರೆ ಮನೆಯ ಯಜಮಾನನು ಕ್ಷಾಮವತೀಇಷ್ಟಿಯನ್ನೂ ಮಾಡಬೇಕೆಂದು ಅನ್ವಯವ್ಯತಿರೇಕ ಇಲ್ಲದಿದ್ದರೂ ಕೇವಲ ಶಾಸ್ತ್ರಪ್ರಮಾಣದಿಂದ ಸಮರ್ಥಿಸಲಾಗಿದೆ. "ಯಸ್ಯ ಗೃಹಾನ್ ದಹತ್ಯಗ್ನಯೇ ಕ್ಷಾಮವತೇ ಪುರೋಡಾಶಮಷ್ಟಾಕಪಾಲಂ ನಿರ್ವಪೇತ್" "ಯಾರ ಮನೆಯನ್ನು ಬೆಂಕಿಯು ಸುಡುವುದೊ ಅವನು ಅಷ್ಟಾಕಪಾಲಪುರೋಡಾಶದಿಂದ ಕ್ಷಾಮವತೀಇಷ್ಟಿಯನ್ನು ಮಾಡಬೇಕು" ಎಂಬ ಶ್ರುತಿಯ ಪ್ರಮಾಣದಿಂದ ವಿಧಿಯು ಸಿದ್ಧವಾಗಿದೆ.

**ಸಮಾಧಾನ** - ಕ್ಷಾಮವತೀಇಷ್ಟಿಯಂತೆ ನಿಮಗೆ ಸಮರ್ಥಿಸಲಾಗದು. ಶಾಸ್ತ್ರದಿಂದ ನಿತ್ಯಾನಿತ್ಯವಿವೇಕಗಳು ಬ್ರಹ್ಮವಿಚಾರಕ್ಕೆ ಆವಶ್ಯಕವೆಂದು ತಿಳಿದರೂ ಅವುಗಳು ಸಾಕ್ಷಾತ್ತಾಗಿ ಕಾರಣವೆಂದು ಶಾಸ್ತ್ರದಿಂದ ತಿಳಿಯುವುದಿಲ್ಲ. ಆದ್ದರಿಂದ ನೀವೂ ಸಹ ಅನಿವಾರ್ಯವಾಗಿ ಭಾಮತೀ ಹೇಳುವಂತೆ ನಿತ್ಯಾನಿತ್ಯವಿವೇಕವು ವೈರಾಗ್ಯಕ್ಕೆ ಕಾರಣ ವೈರಾಗ್ಯವು ಶಮದಮಾದಿಗಳಿಗೆ ಕಾರಣ. ಶಮದಮಾದಿಗಳು ಮೋಕ್ಷಾಭಿಲಾಷೆಗೆ ಕಾರಣವೆಂದು ಪರಂಪರಯಾ ಹೇಳಬೇಕು. ಹೀಗೆ ಹೇಳಿದಾಗ ಭಾಷ್ಯ ವಿರೋಧ ತಪ್ಪಿದ್ದಲ್ಲ. ಒಟ್ಟು ಶಂಕರ ಭಾಷ್ಯದ ಮಾತು ವ್ಯಾಖ್ಯಾನಿಸಲು ಅನರ್ಹವಾಗಿದೆ ಎಂದು ಸಿದ್ಧವಾಯಿತು.

## ಕಾಮ್ಯಮಾತ್ರಾಂಗತಾಧಿಕರಣಮ್

### (೧)ಲಿಂಗಕ್ರಮಸಮಾಖ್ಯಾನಾತ್ ಕಾಮ್ಯಯುಕ್ತಂ ಸಮಾಮ್ನಾನಮ್ (೩-೨ - ೭)

---

(१) भाट्टसङ्ग्रहः – **अथ सप्तमं काम्ययाज्यानुवाक्यानां काम्यमात्राङ्गताधिकरणम्**

**लिङ्गक्रमसमाख्यानात् काम्ययुक्तं समाम्नानम् ॥ १९ ॥**

अत्र पूर्वन्यायेन शङ्कनाद्वा, पूर्वं लिङ्गस्य विनियोजकत्वमुक्तम् । तच्च मानान्तरसापेक्षस्यैव, न निरपेक्षस्येति चिन्तनाद्वा सङ्गतिः । काम्येष्टिकाण्डे हि 'ऐन्द्राग्नमेकादशकपालं निर्वपेत्' इत्यादयः काम्येष्टय उक्ताः । तथा 'काम्ययाज्यानुवाक्याकाण्डम्' इति समाख्यातं मन्त्रकाण्डमाम्नातम् । तत्र मन्त्रकाण्डे 'इन्द्राग्नी रोचना दिवः' इत्यादयो मन्त्रा ऐन्द्राग्नादिष्टिक्रमेणाऽऽम्नाताः । तत्र किमिमे मन्त्रा यथासामर्थ्यं सर्वेष्वेतद्देवतेषु काम्याकाम्यकर्मसु विनियोज्यन्ते, उत एतास्वेव काम्यास्विष्टिषु यथाक्रमं वा इति सन्देहः । पूर्वपक्षस्तु लिङ्गस्य श्रुतिवन्निरपेक्षस्यैव विनियोजकत्वाद् यथासामर्थ्यं सर्वत्र विनियोगः ।

'ಕಾಮ್ಯಯಾಜ್ಯಾನುವಾಕ್ಯಾಕಾಂಡ' ಎಂಬ ಮಂತ್ರಕಾಂಡದಲ್ಲಿ 'ಇಂದ್ರಾಗ್ನೀ ರೋಚನಾ ದಿವಃ' ಇತ್ಯಾದಿ ಮಂತ್ರಗಳಿವೆ. ಈ ಮಂತ್ರಗಳು ಇಂದ್ರಾದಿರೂಪ ಅರ್ಥಬೋಧಕಗಳಾಗಿವೆ. ಇಂದ್ರಾದ್ಯರ್ಥ-ಪ್ರಕಾಶನವೆಂಬ ಲಿಂಗದ ಬಲದಿಂದ ಪ್ರತಿಯೊಂದು ಮಂತ್ರಗಳನ್ನು ಯಾಗಗಳಲ್ಲಿಯೂ ಉಪಯೋಗಿಸಬೇಕೋ? ಅಥವಾ ಕ್ರಮ ಮತ್ತು ಸಮಾಖ್ಯಾಗಳ ಆಧಾರದಿಂದ ಕ್ರಮವಾಗಿ ಪ್ರಾಪ್ತವಾದ ಕಾಮ್ಯೇಷ್ಟಿಕಾಂಡವೆಂಬ ಐಂದ್ರಾಗ್ನಿಕಾಮ್ಯೇಷ್ಟಿಗಳಲ್ಲಿ ಮಾತ್ರ ಉಪಯೋಗಿಸಬೇಕೋ? ಎಂದು ಸಂದೇಹ.

ಪೂರ್ವಪಕ್ಷ : - ಕ್ರಮ = ಸ್ಥಾನ ಮತ್ತು ಸಮಾಖ್ಯಾಗಳಿಗಿಂತ ಲಿಂಗವೇ ಪ್ರಬಲವಾಗಿದೆ. ಪ್ರಕೃತ ಇಂದ್ರಾದ್ಯರ್ಥಪ್ರಕಾಶನವು ಲಿಂಗರೂಪವಾಗಿ ಪ್ರಮಾಣವಾಗಿದೆ. ಶ್ರುತಿಯು ಯಾವ ರೀತಿಯಾಗಿ ಮತ್ತೊಂದು ಪ್ರಮಾಣದ ಅಪೇಕ್ಷೆ ಇಲ್ಲದೆ ಸ್ವತಂತ್ರವಾಗಿ ಅರ್ಥವನ್ನು ನಿರ್ಧರಿಸುತ್ತದೋ, ಅದರಂತೆ ಲಿಂಗವೂ ಕೂಡ ಮತ್ತೊಂದು ಪ್ರಮಾಣವನ್ನು ಅಪೇಕ್ಷೆ ಪಡದೆ 'ಇಂದ್ರಾಗ್ನೀ ರೋಚನಾದಿವಃ' ಎಂಬ ಮಂತ್ರವನ್ನು ಯಾಗಸಾಧನವೆಂದು ನಿರ್ಣಯಿಸುತ್ತದೆ. ಅಷ್ಟೇ ಅಲ್ಲದೇ, ಕ್ರಮ = ಸ್ಥಾನ ಸಮಾಖ್ಯೆಗಳಿಗಿಂತಲೂ ಅದು ಪ್ರಬಲವಾದ್ದರಿಂದ ಅವುಗಳನ್ನೂ ಬಾಧಿಸಿ ಸಕಲಯಾಗಗಳಿಗೆ ಮಂತ್ರವು ಸಾಧನವಾಗಿದೆಯೆಂದು ನಿರ್ಣಯಿಸುತ್ತದೆ.

ಸಿದ್ಧಾಂತ :- ಲಿಂಗವು ಇಂದ್ರಾದಿಪ್ರಕಾಶನರೂಪವಾದ್ದರಿಂದ ದ್ವಾರವಿಶೇಷಬೋಧಕತ್ವ ಅದರಲ್ಲಿದೆ. ಆದರೆ ಕಾಮ್ಯೇಷ್ಟಿಸಂಬಂಧಬೋಧಕತ್ವವಿಲ್ಲ. ಮಂತ್ರವು ಬೋಧಿಸುತ್ತಿರುವ ಇಂದ್ರಾಗ್ನಿ ದೇವತೆಗಳಿಗೆ ಯಾಗಗಳ ಜೊತೆಗೆ ಮಾತ್ರ ಸಂಬಂಧವಿದೆ. ಯಾಗಗಳಲ್ಲದೆ ಬೇರೆ ಕಡೆಗಳಲ್ಲಿಯೂ ಅವರ ಸಂಬಂಧವಿದೆ.

---

नचैवं क्रमसमाख्याविरोधः । लिङ्गात् तयोर्दुर्बलत्वात् । यथाहि पूर्वत्र सूक्तवाकशब्दगता-वयवशक्तिबलाल्लिङ्गादध्येतृप्रसिद्धकृत्स्नानुवाकविषयक-समाख्याबाधस्तथाऽत्रापि लिङ्गाद् याज्ञिकप्रसिद्धकाम्यमन्त्रकाण्डमिति-समाख्यादेर्बाधसम्भवादिति । सिद्धान्तस्तु देवता-स्वरूपमात्रप्रकाशनरूपलिङ्गमात्रेण कर्माङ्गत्वं न ज्ञातुं शक्यम् । किन्तु कर्मापूर्वसाधन-भूतप्रकाशनेनैव । तच्च कर्मसम्बन्धबोधकप्रमाणे सति । तस्मात् समाख्याबलान्मन्त्रकाण्ड-कर्मकाण्डयोः सम्बन्धावगतिवशेन मन्त्रकर्मणोरपि सामान्येन सम्बन्धे ज्ञाते विशेषतस्तस्मिन् प्रथमे कर्मण्ययं प्रथमो मन्त्र इति क्रमादवगम्यते । पश्चाल्लिङ्गाद् विनियोग इत्युपजीव्यत्वात् क्रमसमाख्ययोर्न लिङ्गेन बाधः शक्य इति यथाक्रममेतास्वेवेष्टिषु विनियोगः । नचैन्द्राग्नेष्टावैन्द्राग्नो मन्त्रो, न वैश्वानरादिरिति लिङ्गादेव ज्ञायत इति वाच्यम् । 'ऐन्द्राग्नमेकादशकपालं निर्वपेद् भ्रातृव्यवान्' इति द्वितीयेष्टावपि प्राप्तिनिरासाय क्रमस्यावश्यापेक्षणादिति । तथाच सूत्रम्, काम्येनैन्द्राग्न्यादिकर्मणा युक्तं याज्यानुवाक्या-काण्डस्याऽऽम्नानं, न सर्वकर्मयुक्तम् । कुतः? लिङ्गक्रमसमाख्यानात् । द्वन्द्वैकवद्भावः । क्रमसमाख्यानुगृहीताल्लिङ्गादिति । फलन्तु काम्यनित्ययोः कर्मणोर्विनियोगः पूर्वपक्षे । सिद्धान्ते तु काम्य एवेति व्यक्तम् ।

ಬರ್ಹಿಸಾಧಿಕರಣ

ಒಂದು ವೇಳೆ ಯಾಗಗಳ ಜೊತೆಗೆ ಮಾತ್ರ ಸಂಬಂಧವಿದ್ದಲ್ಲಿ ಇಂದ್ರಾದಿದೇವತೆಗಳ ಸ್ಮರಣೆ ಬಂದಾಗ ಅವರಿಗೆ ಯಾಗಸಂಬಂಧವು ತಿಳಿಯುತ್ತಿತ್ತು. ಆದರೆ ಇತಿಹಾಸಾದಿಗಳ ಜೊತೆಗೂ ಸಂಬಂಧ ಇರುವು-ದರಿಂದ ನಿಯತವಾಗಿ ಅವರಿಗೆ ಯಾಗ ಸಂಬಂಧವಿಲ್ಲ. ಆದ್ದರಿಂದ ಲಿಂಗವು ಕಾಮ್ಯೇಷ್ಟಿಸಂಬಂಧಬೋಧಕ ಆಗುವುದಿಲ್ಲ. ಇಂದ್ರಾದಿ ದೇವತೆಗಳ ಮಂತ್ರವನ್ನು ಹೇಳಿದ ಮಾತ್ರದಿಂದ ಯಾಗಗಳಿಗೆ ಮಂತ್ರವು ಸಾಧನವೆಂದು ನಿರ್ಣಯವಾಗುವುದಿಲ್ಲ. ಮಂತ್ರಗಳಿಗೆ ಯಾಗಸಂಬಂಧವಿದೆ ಎಂದು ತಿಳಿಯಬೇಕಾದರೆ ಸ್ಥಾನ, ಸಮಾಖ್ಯ ಮೊದಲಾದ ಬೇರೆ ಪ್ರಮಾಣಗಳನ್ನು ಆಶ್ರಯಿಸಲೇ ಬೇಕು. ಈ ಸ್ಥಾನಸಮಾಖ್ಯ-ಪ್ರಮಾಣಗಳಿಗೆ ಅನುಸಾರಿಯಾಗಿ, ಕಾಮ್ಯೇಷ್ಟಿಗಳಲ್ಲಿ ಮಾತ್ರ ಮಂತ್ರಗಳು ಉಪಯೋಗವಾಗುತ್ತವೆಂದು ತಿಳಿಯುತ್ತದೆ. ಆದ್ದರಿಂದ ಲಿಂಗವು ಪ್ರಬಲವಾಗಿದ್ದರೂ ಸ್ಥಾನ, ಸಮಾಖ್ಯಾಗಳನ್ನು ಆಶ್ರಯಿಸಲೇ ಬೇಕು. ಹಾಗಾಗಿ ಪ್ರಬಲವಾದ ಸ್ಥಾನ, ಸಮಾಖ್ಯಾಗಳಿಂತ ಮಂತ್ರಗಳಿಗೆ ಕಾಮ್ಯೇಷ್ಟಿಗಳಲ್ಲಿ ಮಾತ್ರ ಉಪಯೋಗವೆಂದು ಸಿದ್ಧಾಂತ. ಇಲ್ಲಿ ಸ್ಥಾನ, ಸಮಾಖ್ಯಾ ಮೊದಲಾದ ಪ್ರಮಾಣಗಳು ಮಂತ್ರಗಳನ್ನು ಯಾಗಸಾಧನವೆಂದು ಹೇಳುತ್ತಿವೆ. ಇಷ್ಟು ಮಾತ್ರದಿಂದ ಯಾಗಕ್ಕೆ ಮಂತ್ರಗಳು ನೇರವಾಗಿ ಸಾಧನವಾಗಿವೆ ಎಂದು ನಿರ್ಣಯವಾಗುವುದಿಲ್ಲ. ಹೊರತಾಗಿ ಲಿಂಗದ ಮೂಲಕ ಅನುಷ್ಠೇಯಾರ್ಥಪ್ರಕಾಶನದ್ವಾರ ಯಾಗಸಾಧನವೆಂದು ನಿರ್ಣಯವಾಗುತ್ತವೆ. ಅಥವಾ ಯಾಗಕ್ಕೆ ಸಂಬಂಧಿಸಿದ ದ್ರವ್ಯದೇವತೆಗಳನ್ನು ಬೋಧಿಸುವ ಮೂಲಕ ಯಾಗಸಾಧನವೆಂದು ತಿಳಿಸುತ್ತವೆ.

ಅದರಂತೆ ವಿವೇಕಾದಿಗಳು ವೈರಾಗ್ಯಾದಿಗಳ ಮೂಲಕವೇ ವಿಚಾರಕ್ಕೆ ಕಾರಣಗಳಾಗುತ್ತವೆ ಹೊರತು ನೇರವಾಗಿ ವಿಚಾರಕ್ಕೆ ಕಾರಣಗಳಾಗುವುದಿಲ್ಲ.

## ಆರುಣ್ಯಸ್ಯ ಕ್ರಯಾಂಗತ್ವಾಧಿಕರಣಮ್

(೧)ಅರ್ಥೈಕತ್ವೇ ದ್ರವ್ಯಗುಣಯೋರೈಕಕರ್ಮ್ಯಾನ್ನಿಯಮಃ ಸ್ಯಾತ್ (೩ -೧ -೬ )

---

(१) भाट्टसङ्ग्रहः – अथ षष्ठमारुण्यादिगुणानामसङ्कीर्णताधिकरणम्

अर्थैकत्वे द्रव्यगुणयोरैककर्म्यान्नियमः स्यात् ।। १२ ।।

अत्रापि पूर्ववैषम्येण शङ्कनात् सङ्गतिः । यद्वा पूर्वत्र 'स्फचेन' इत्यादितृतीयाश्रुत्या द्रव्यस्य विनियोग उक्तः । अत्र तु गुणस्येति सङ्गतिः । ज्योतिष्टोमे 'अरुणया पिंगाक्ष्या एकहायन्या सोमं क्रीणाति' इति श्रुतम् । अरुणाशब्दोऽत्राऽकृत्यधिकरणन्यायेन गुणमात्रवाची । तत्र स किं वाक्यात् पृथक्कृतः प्रकरणेन क्रत्वङ्गसर्वद्रव्येषु निविशते, उत क्रीणातिना सम्बध्य तदङ्गः सन् एकहायन्यां निविशत इति सन्देहः । पूर्वपक्षस्तु युक्तः स्फचादेर्द्रव्यस्य व्यवस्थया उद्धननादावेवैकत्र विनियोगः । 'स्फचेनोद्धन्ति' इत्यादिविशेषसंयोगबोधकबहुवाक्यानां वैय्यर्थ्यरूपहेतोः । इह 'क्रयेणैवारुण्यगुणस्य सम्बन्धो नान्येन' इति व्यवस्थापकहेतोर-भावात् । नच 'अरुणया' इति वाक्यमेव व्यवस्थाहेतुरिति युक्तं । आरुण्यगुणस्य तृतीयाश्रुत्या करणकारकत्वेनावगतस्यामूर्तत्वेन क्रयसाधनत्वायोगेन क्रीणातिना अन्वया-

'ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯಾ ಸೋಮಂ ಕ್ರೀಣಾತಿ' ಎಂಬ ಶ್ರುತಿಯು ಜ್ಯೋತಿಷ್ಟೋಮ-ಪ್ರಕರಣದಲ್ಲಿ ಪ್ರಸಕ್ತವಾಗಿದೆ. 'ಕೆಂಪು ಬಣ್ಣದ ಕಂದುಗಣ್ಣಿನ ಒಂದು ವರ್ಷ ವಯಸ್ಸಿನ ಹಸುವನ್ನು ಕೊಟ್ಟು ಸೋಮವನ್ನು ಕ್ರಯಕ್ಕೆ ತೆಗೆದುಕೊಳ್ಳಬೇಕೆಂದು ಶ್ರುತಿ ಹೇಳುತ್ತಿದೆ. ಈ ಶ್ರುತಿಯಲ್ಲಿರುವ 'ಅರುಣಯಾ' ಎಂಬುದನ್ನು ಬೇರೆ ವಾಕ್ಯವೆಂದು ಪರಿಗಣಿಸಿ ಸೋಮಯಾಗಕ್ಕೆ ಸಾಧನವಾದ ಎಲ್ಲ ಪಾತ್ರೆಗಳಲ್ಲಿ ಮತ್ತು ದ್ರವ್ಯಗಳಲ್ಲಿ ಅನ್ವಯ ಮಾಡಬೇಕೋ? ಅಥವಾ ಕ್ರಯವೆಂಬ ಕ್ರಿಯೆಯಲ್ಲಿ ಅರುಣ್ಯಕ್ಕೆ ಅನ್ವಯ ಮಾಡಬೇಕೋ? ಎಂದು ಸಂದೇಹ.

**ಪೂರ್ವಪಕ್ಷ** :- ಪ್ರತಿಯೊಂದು ದ್ರವ್ಯಗಳಲ್ಲಿಯೂ ಅನ್ವಯ ಮಾಡಬೇಕು. 'ಕ್ರೀಣಾತಿ' ಎಂಬಲ್ಲಿರುವ ಕ್ರಿಯೆಯಲ್ಲಿ ಅನ್ವಯ ಮಾಡಲಾಗದು. 'ಅರುಣಯಾ' ಎಂಬಲ್ಲಿ ತೃತೀಯಾವಿಭಕ್ತಿ ಇರುವುದರಿಂದ ಕೆಂಪುಬಣ್ಣಕ್ಕೆ ಕ್ರಿಯಾಸಂಬಂಧ ಶ್ರುತವಾಗಿದೆ. ಆದರೆ ಕೆಂಪುಬಣ್ಣವು ಅಮೂರ್ತವಾದ್ದರಿಂದ ಕ್ರಿಯಾ-ಸಾಧನವಾಗಲಾರದು. ಆದ್ದರಿಂದ 'ಅರುಣಯಾ' ಎಂಬುದನ್ನು ಪ್ರತ್ಯೇಕವಾಕ್ಯವೆಂದು ಪರಿಗಣಿಸಿ ಸಕಲದ್ರವ್ಯಗಳ ಜೊತೆಗೆ ಅನ್ವಯ ಮಾಡಬೇಕು. ಯಾಗದಲ್ಲಿ ಉಪಯೋಗಿಸುವ ಸಕಲದ್ರವ್ಯಗಳು ಕೆಂಪುಬಣ್ಣದವುಗಳಾಗಬೇಕೆಂದು ಪೂರ್ವಪಕ್ಷ.

**ಸಿದ್ಧಾಂತ** :- 'ಅರುಣಯಾ' ಎಂಬುದಕ್ಕೆ ಸಾಕ್ಷಾತ್ತಾಗಿ ಕ್ರಯಣವೆಂಬ ಕ್ರಿಯೆಯಲ್ಲಿ ಅನ್ವಯ ಬರುತ್ತಿರುವುದರಿಂದ ಅದನ್ನು ಬಿಡಲು ಕಾರಣವಿಲ್ಲ. ಅಮೂರ್ತವಾದ ಗುಣಕ್ಕೆ ಕ್ರಿಯಾನ್ವಯ ಹೇಗೆಂಬ ಪ್ರಶ್ನೆ ಬರಬಹುದು ಆದರೆ ಏಕಹಾಯನಿಯೆಂಬ ದ್ರವ್ಯದ ಮೂಲಕ ಕ್ರಯಸಾಧನತ್ವವನ್ನು ಹೇಳಬಹುದು. ಆದ್ದರಿಂದ ವಾಕ್ಯಭೇದವನ್ನು ಆಶ್ರಯಿಸಬೇಕಾಗಿಲ್ಲ. ಹೊರತಾಗಿ ಸೋಮವನ್ನು ಕೊಂಡುಕೊಳ್ಳುವಾಗ ಸಾಧನವಾದ ಹಸು ಮಾತ್ರ ಕೆಂಪು ಬಣ್ಣದ್ದಾಗಿರಬೇಕೆಂದು ಶ್ರುತಿ ಹೇಳುತ್ತಿದೆ. ಯಾಗಸಾಧನವಾದ ಸಕಲದ್ರವ್ಯಗಳೂ ಕೆಂಪಾಗಬೇಕಿಲ್ಲವೆಂದು ಸಿದ್ಧಾಂತ.

---

**सम्भवात् । तस्माद् वाक्यात् पृथग्भूतप्रातिपदिकार्थोऽरुणिमा तृतीयया प्राकरणिकानेक-करणद्रव्याण्यनूद्य तत्परिच्छेदकतया विधीयते 'यानि ज्योतिष्टोमसाधनद्रव्याणि तानि सर्वाण्यरुणानि कर्तव्यानि' इति । यद्वा अरुणाप्रातिपदिकमेव लक्षणया प्राकरणिकद्रव्यपरं सत् तृतीयायुक्तत्वेन करणतया तान्यनूद्य तत्र गुणविधिपरं सेत्स्यतीति । सिद्धान्तस्तु तृतीयाश्रुत्या 'क्रीणाति' इत्युक्तक्रयं प्रति अवगतकरणभावस्याऽरुण्यगुणस्यामूर्तत्वेन साक्षात् क्रियासाधनत्वायोगेऽपि द्रव्यपरिच्छेदमुखेन तत् सम्भवति । 'आरुण्यगुणपरिच्छिन्नेन द्रव्येण क्रयं कुर्यात्' इत्येवं श्रुत्यैव गुणस्य क्रयैकवाक्यत्वे सम्भवति वाक्यभेदस्य लक्षणाश्रयणस्य वा अयोगात् । एवंच गुणस्य क्रयार्थत्वे सिद्धे अस्य तदीयैकहायनीद्रव्ये निवेशः । न वासःप्रभृतिद्रव्ये निवेशः । तेषां क्रयान्तरसाधनत्वादिति । तथाच सूत्रम्, अर्थैकत्वे एकवाक्यतासम्भवस्थले द्रव्यगुणयोः मिथोऽन्वयनियमः स्यात् । कुतः? ऐककर्म्यात् क्रयरूपैककर्मार्थत्वादिति । फलन्तु, पूर्वपक्षे यज्ञाङ्गद्रव्यमात्रमरुणं सम्पाद्यम् । सिद्धान्ते तु एकहायनी गौरेवेति ।**

**इति बहुमारुण्यादिगुणानामसङ्कीर्णताधिकरणम्**

*ಬಹ್ವಾಸಾಧಿಕರಣ*

ಒಂದು ವೇಳೆ ಯಾಗಗಳ ಜೊತೆಗೆ ಮಾತ್ರ ಸಂಬಂಧವಿದ್ದಲ್ಲಿ ಇಂದ್ರಾದಿದೇವತೆಗಳ ಸ್ಮರಣೆ ಬಂದಾಗ ಅವರಿಗೆ ಯಾಗಸಂಬಂಧವು ತಿಳಿಯುತ್ತಿತ್ತು. ಆದರೆ ಇತಿಹಾಸಾದಿಗಳ ಜೊತೆಗೂ ಸಂಬಂಧ ಇರುವುದರಿಂದ ನಿಯತವಾಗಿ ಅವರಿಗೆ ಯಾಗ ಸಂಬಂಧವಿಲ್ಲ. ಆದ್ದರಿಂದ ಲಿಂಗವು ಕಾಮ್ಯೇಷ್ಟಿಸಂಬಂಧಬೋಧಕ ಆಗುವುದಿಲ್ಲ. ಇಂದ್ರಾದಿ ದೇವತೆಗಳ ಮಂತ್ರವನ್ನು ಹೇಳಿದ ಮಾತ್ರದಿಂದ ಯಾಗಗಳಿಗೆ ಮಂತ್ರವು ಸಾಧನವೆಂದು ನಿರ್ಣಯವಾಗುವುದಿಲ್ಲ. ಮಂತ್ರಗಳಿಗೆ ಯಾಗಸಂಬಂಧವಿದೆ ಎಂದು ತಿಳಿಯಬೇಕಾದರೆ ಸ್ಥಾನ, ಸಮಾಖ್ಯ ಮೊದಲಾದ ಬೇರೆ ಪ್ರಮಾಣಗಳನ್ನು ಆಶ್ರಯಿಸಲೇ ಬೇಕು. ಈ ಸ್ಥಾನಸಮಾಖ್ಯಾಪ್ರಮಾಣಗಳಿಗೆ ಅನುಸಾರಿಯಾಗಿ, ಕಾಮ್ಯೇಷ್ಟಿಗಳಲ್ಲಿ ಮಾತ್ರ ಮಂತ್ರಗಳು ಉಪಯೋಗವಾಗುತ್ತವೆಂದು ತಿಳಿಯುತ್ತದೆ. ಆದ್ದರಿಂದ ಲಿಂಗವು ಪ್ರಬಲವಾಗಿದ್ದರೂ ಸ್ಥಾನ, ಸಮಾಖ್ಯಾಗಳನ್ನು ಆಶ್ರಯಿಸಲೇ ಬೇಕು. ಹಾಗಾಗಿ ಪ್ರಬಲವಾದ ಸ್ಥಾನ, ಸಮಾಖ್ಯಾಗಳಿಂತ ಮಂತ್ರಗಳಿಗೆ ಕಾಮ್ಯೇಷ್ಟಿಗಳಲ್ಲಿ ಮಾತ್ರ ಉಪಯೋಗವೆಂದು ಸಿದ್ಧಾಂತ. ಇಲ್ಲಿ ಸ್ಥಾನ, ಸಮಾಖ್ಯಾ ಮೊದಲಾದ ಪ್ರಮಾಣಗಳು ಮಂತ್ರಗಳನ್ನು ಯಾಗಸಾಧನವೆಂದು ಹೇಳುತ್ತಿವೆ. ಇಷ್ಟು ಮಾತ್ರದಿಂದ ಯಾಗಕ್ಕೆ ಮಂತ್ರಗಳು ನೇರವಾಗಿ ಸಾಧನವಾಗಿವೆ ಎಂದು ನಿರ್ಣಯವಾಗುವುದಿಲ್ಲ. ಹೊರತಾಗಿ ಲಿಂಗದ ಮೂಲಕ ಅನುಷ್ಠೇಯಾರ್ಥಪ್ರಕಾಶನದ್ವಾರ ಯಾಗಸಾಧನವೆಂದು ನಿರ್ಣಯವಾಗುತ್ತವೆ. ಅಥವಾ ಯಾಗಕ್ಕೆ ಸಂಬಂಧಿಸಿದ ದ್ರವ್ಯದೇವತೆಗಳನ್ನು ಬೋಧಿಸುವ ಮೂಲಕ ಯಾಗಸಾಧನವೆಂದು ತಿಳಿಸುತ್ತವೆ.

ಅದರಂತೆ ವಿವೇಕಾದಿಗಳು ವೈರಾಗ್ಯಾದಿಗಳ ಮೂಲಕವೇ ವಿಚಾರಕ್ಕೆ ಕಾರಣಗಳಾಗುತ್ತವೆ ಹೊರತು ನೇರವಾಗಿ ವಿಚಾರಕ್ಕೆ ಕಾರಣಗಳಾಗುವುದಿಲ್ಲ.

## ಆರುಣ್ಯಸ್ಯ ಕ್ರಯಾಂಗತ್ವಾಧಿಕರಣಮ್

(೧)ಅರ್ಥೈಕತ್ವೇ ದ್ರವ್ಯಗುಣಯೋರೈಕಕರ್ಮ್ಯಾನ್ನಿಯಮಃ ಸ್ಯಾತ್ (೩ -೧ -೬ )

---

(१) भाट्टसङ्ग्रहः – अथ षष्ठमारुण्यादिगुणानामसङ्कीर्णताधिकरणम्

अर्थैकत्वे द्रव्यगुणयोरैककर्म्यान्नियमः स्यात् ।। १२ ।।

अत्रापि पूर्ववैषम्येण शङ्कनात् सङ्गतिः । यद्वा पूर्वत्र 'स्फ्येन' इत्यादितृतीयाश्रुत्या द्रव्यस्य विनियोग उक्तः । अत्र तु गुणस्येति सङ्गतिः । ज्योतिष्टोमे 'अरुणया पिंगाक्ष्या एकहायन्या सोमं क्रीणाति' इति श्रुतम् । अरुणाशब्दोऽत्राऽकृत्यधिकरणन्यायेन गुणमात्रवाची । तत्र स किं वाक्यात् पृथक्कृतः प्रकरणेन क्रत्वङ्गसर्वद्रव्येषु निविशते, उत क्रीणातिना सम्बध्य तदङ्गः सन् एकहायन्यां निविशत इति सन्देहः । पूर्वपक्षस्तु युक्तः स्फ्यादेर्द्रव्यस्य व्यवस्थया उद्धननादावेकैकत्र विनियोगः । 'स्फ्येनोद्धन्ति' इत्यादिविशेषसंयोगबोधकबहुवाक्यानां वैय्यर्थ्यरूपहेतोः । इह 'क्रयेणैवारुण्यगुणस्य सम्बन्धो नान्येन' इति व्यवस्थापकहेतोरभावात् । नच 'अरुणया' इति वाक्यमेव व्यवस्थाहेतुरिति युक्तं । आरुण्यगुणस्य तृतीयाश्रुत्या करणकारकत्वेनावगतस्यामूर्तत्वेन क्रयसाधनत्वायोगेन क्रीणातिना अन्वया-

'ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯಾ ಸೋಮಂ ಕ್ರೀಣಾತಿ' ಎಂಬ ಶ್ರುತಿಯು ಜ್ಯೋತಿಷ್ಟೋಮ-ಪ್ರಕರಣದಲ್ಲಿ ಪ್ರಸಕ್ತವಾಗಿದೆ. 'ಕೆಂಪು ಬಣ್ಣದ ಕಂದುಗಣ್ಣಿನ ಒಂದು ವರ್ಷ ವಯಸ್ಸಿನ ಹಸುವನ್ನು ಕೊಟ್ಟು ಸೋಮವನ್ನು ಕ್ರಯಕ್ಕೆ ತೆಗೆದುಕೊಳ್ಳಬೇಕೆಂದು ಶ್ರುತಿ ಹೇಳುತ್ತಿದೆ. ಈ ಶ್ರುತಿಯಲ್ಲಿರುವ 'ಅರುಣಯಾ' ಎಂಬುದನ್ನು ಬೇರೆ ವಾಕ್ಯವೆಂದು ಪರಿಗಣಿಸಿ ಸೋಮಯಾಗಕ್ಕೆ ಸಾಧನವಾದ ಎಲ್ಲ ಪಾತ್ರಗಳಲ್ಲಿ ಮತ್ತು ದ್ರವ್ಯಗಳಲ್ಲಿ ಅನ್ವಯ ಮಾಡಬೇಕೋ? ಅಥವಾ ಕ್ರಯವೆಂಬ ಕ್ರಿಯೆಯಲ್ಲಿ ಆರುಣ್ಯಕ್ಕೆ ಅನ್ವಯ ಮಾಡಬೇಕೋ? ಎಂದು ಸಂದೇಹ.

**ಪೂರ್ವಪಕ್ಷ** :- ಪ್ರತಿಯೊಂದು ದ್ರವ್ಯಗಳಲ್ಲಿಯೂ ಅನ್ವಯ ಮಾಡಬೇಕು. 'ಕ್ರೀಣಾತಿ' ಎಂಬಲ್ಲಿರುವ ಕ್ರಿಯೆಯಲ್ಲಿ ಅನ್ವಯ ಮಾಡಲಾಗದು. 'ಅರುಣಯಾ' ಎಂಬಲ್ಲಿ ತೃತೀಯಾವಿಭಕ್ತಿ ಇರುವುದರಿಂದ ಕೆಂಪುಬಣ್ಣಕ್ಕೆ ಕ್ರಿಯಾಸಂಬಂಧ ಶ್ರುತವಾಗಿದೆ. ಆದರೆ ಕೆಂಪುಬಣ್ಣವು ಅಮೂರ್ತವಾದ್ದರಿಂದ ಕ್ರಿಯಾ-ಸಾಧನವಾಗಲಾರದು. ಆದ್ದರಿಂದ 'ಅರುಣಯಾ' ಎಂಬುದನ್ನು ಪ್ರತ್ಯೇಕವಾಕ್ಯವೆಂದು ಪರಿಗಣಿಸಿ ಸಕಲದ್ರವ್ಯಗಳ ಜೊತೆಗೆ ಅನ್ವಯ ಮಾಡಬೇಕು. ಯಾಗದಲ್ಲಿ ಉಪಯೋಗಿಸುವ ಸಕಲದ್ರವ್ಯಗಳು ಕೆಂಪುಬಣ್ಣದವುಗಳಾಗಬೇಕೆಂದು ಪೂರ್ವಪಕ್ಷ.

**ಸಿದ್ಧಾಂತ** :- 'ಅರುಣಯಾ' ಎಂಬುದಕ್ಕೆ ಸಾಕ್ಷಾತ್ತಾಗಿ ಕ್ರಯಣವೆಂಬ ಕ್ರಿಯೆಯಲ್ಲಿ ಅನ್ವಯ ಕಾಣಿಸುತ್ತಿರುವುದರಿಂದ ಅದನ್ನು ಬಿಡಲು ಕಾರಣವಿಲ್ಲ. ಅಮೂರ್ತವಾದ ಗುಣಕ್ಕೆ ಕ್ರಿಯಾನ್ವಯ ಹೇಗೆಂಬ ಪ್ರಶ್ನೆ ಬರಬಹುದು ಆದರೆ ಏಕಹಾಯನಿಯೆಂಬ ದ್ರವ್ಯದ ಮೂಲಕ ಕ್ರಯಸಾಧನತ್ವವನ್ನು ಹೇಳಬಹುದು. ಆದ್ದರಿಂದ ವಾಕ್ಯಭೇದವನ್ನು ಆಶ್ರಯಿಸಬೇಕಾಗಿಲ್ಲ. ಹೊರತಾಗಿ ಸೋಮವನ್ನು ಕೊಂಡುಕೊಳ್ಳುವಾಗ ಸಾಧನವಾದ ಹಸು ಮಾತ್ರ ಕೆಂಪು ಬಣ್ಣದ್ದಾಗಿರಬೇಕೆಂದು ಶ್ರುತಿ ಹೇಳುತ್ತಿದೆ. ಯಾಗಸಾಧನವಾದ ಸಕಲದ್ರವ್ಯಗಳೂ ಕೆಂಪಾಗಬೇಕಿಲ್ಲವೆಂದು ಸಿದ್ಧಾಂತ.

---

सम्भवात् । तस्माद् वाक्यात् पृथग्भूतप्रातिपदिकार्थोऽरुणिमा तृतीयया प्राकरणिकानेक-करणद्रव्याण्यनूद्य तत्परिच्छेदकतया विधीयते 'यानि ज्योतिष्टोमसाधनद्रव्याणि तानि सर्वाण्यरुणानि कर्तव्यानि' इति । यद्वा अरुणाप्रातिपदिकमेव लक्षणया प्राकरणिकद्रव्यपरं सत् तृतीयायुक्तत्वेन करणतया तान्यनूद्य तत्र गुणविधिपरं सेत्स्यतीति । सिद्धान्तस्तु तृतीयाश्रुत्या 'क्रीणाति' इत्युक्तक्रयं प्रति अवगतकरणभावस्याऽरुण्यगुणस्यामूर्तत्वेन साक्षात् क्रियासाधनत्वायोगेऽपि द्रव्यपरिच्छेदमुखेन तत् सम्भवति । 'आरुण्यगुणपरिच्छिन्नेन द्रव्येण क्रयं कुर्यात्' इत्येवं श्रुत्यैव गुणस्य क्रयैकवाक्यत्वे सम्भवति वाक्यभेदस्य लक्षणाश्रयणस्य वा अयोगात् । एवंच गुणस्य क्रयार्थत्वे सिद्धे अस्य तदीयैकहायनीद्रव्ये निवेशः । न वासःप्रभृतिद्रव्ये निवेशः । तेषां क्रयान्तरसाधनत्वादिति । तथाच सूत्रम्, अर्थैकत्वे एकवाक्यतासम्भवस्थले द्रव्यगुणयोः मिथोऽन्वयनियमः स्यात् । कुतः? ऐककर्म्यात् क्रयरूपैककर्मार्थत्वादिति । फलन्तु, पूर्वपक्षे यज्ञाङ्गद्रव्यमात्रमरुणं सम्पाद्यम् । सिद्धान्ते तु एकहायनी गौरेवेति ।

इति षष्ठमारुण्यादिगुणानामसङ्कीर्णताधिकरणम्

*ಜಿಜ್ಞಾಸಾಧಿಕರಣ*

ಇಲ್ಲಿ 'ಅರುಣಯಾ' ಎಂದು ಸೋಮಕ್ರಯಣಕ್ಕೆ ಸಾಕ್ಷಾತ್‌ಸಾಧನತ್ವವನ್ನು ಹೇಳಿದ್ದರೂ ಕೂಡ ಅದನ್ನು ಅಂಗೀಕರಿಸದೆ ಆರುಣ್ಯವು ಸಾಧನವಾಗುವ ಬಗೆಯನ್ನು ಆಲೋಚಿಸಿ ಸೋಮವನ್ನು ಕೊಳ್ಳಲು ಎಂತಹ ಹಸು ಸಾಧನವಾಗುತ್ತದೆಂದು ವಿಚಾರ ಮಾಡಿ ತಾನೂ ಸಹ ಅದಕ್ಕೆ ಸಾಧನವಾಗುತ್ತದೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯ ಮಾಡಲಾಗಿದೆ. ಅದರಂತೆ ವಿಚಾರವಿಧಿವಾಕ್ಯದಲ್ಲಿಯೂ 'ಶಾಂತೋ ದಾಂತ ಉಪರತಸ್ತಿತಿಕ್ಷುಃ ಆತ್ಮನ್ಯೇವಾತ್ಮಾನಂ ಪಶ್ಯೇತ್' 'ಶಮದಮಾದಿಗಳನ್ನು ಹೊಂದಿ ಆತ್ಮವಿಚಾರ ಮಾಡಬೇಕು' ಎಂದು ಸಾಕ್ಷಾತ್ತಾಗಿಯೇ ವಿವೇಕಾದಿಗಳನ್ನು ಬ್ರಹ್ಮವಿಚಾರಸಾಧನವೆಂದು ಅಂಗೀಕರಿಸಲಾಗಿದೆ. ಅದನ್ನು ಹಾಗೆಯೇ ಅಂಗೀಕರಿಸುವುದು ಸಮಂಜಸವಲ್ಲ. ವಿವೇಕಾದಿಗಳ ಸಾಮರ್ಥ್ಯವನ್ನು ಆಲೋಚಿಸಿ ಬ್ರಹ್ಮವಿಚಾರಕ್ಕೆ ವೈರಾಗ್ಯಾದಿಗಳ ಮೂಲಕವೇ ವಿವೇಕಾದಿಗಳು ಕಾರಣಗಳಾಗುತ್ತವೆಂದು ಅಂಗೀಕರಿಸಬೇಕು.

## ಸಾರ

### ಸಾಧನಚತುಷ್ಟಯ ಅದ್ವೈತದಲ್ಲಿ ಅಯುಕ್ತ

ವಿವೇಕ ವೈರಾಗ್ಯಾದಿ ನಾಲ್ಕು ಸಾಧನಗಳೂ ಸ್ವತಂತ್ರವಾಗಿ ಬ್ರಹ್ಮವಿಚಾರಕ್ಕೆ ಕಾರಣವಾಗುವುದಿಲ್ಲ. ಅವುಗಳನ್ನು ಹಿಂದಿನವು ಮುಂದಿನವುಗಳನ್ನು ಉಂಟುಮಾಡಬೇಕು ಎನ್ನುತ್ತದೆ ಭಾಮತಿ. ಹಾಗಾದರೆ 'ಮೋಕ್ಷಾಭಿಲಾಷೆಯ ಅನಂತರ ಬ್ರಹ್ಮವಿಚಾರ' ಎನ್ನಬೇಕಾಗಿತ್ತು ಭಾಷ್ಯದಲ್ಲಿ. ಆದರೆ 'ವಿವೇಕಾದಿಗಳ ಅನಂತರ ಎಂದು ಅಲ್ಲಿ ಹೇಳಿದೆ. ಅಥಶಬ್ದವು 'ಮೋಕ್ಷಾಭಿಲಾಷೆಯ ಅನಂತರ' ಎಂದರೂ ಅದರ ಕಾರಣಗಳ ಆನಂತರ್ಯವೂ ಅಭಿಪ್ರೇತವಾಗಿದೆ. ಆ ಅಭಿಪ್ರಾಯದಿಂದ ಭಾಷ್ಯ ಹೊರಟಿದೆ ಎಂದರೆ ಅಥಶಬ್ದವು ವಿವೇಕಾದಿಗಳ ಆನಂತರ್ಯವನ್ನು ಹೇಳಿದಾಗ ಅವುಗಳ ಕಾರಣಗಳ ಆನಂತರ್ಯವೂ ಅಭಿಪ್ರೇತವೆಂದಾಗುತ್ತದೆ. ಆಗ ಕೇವಲ ವಿವೇಕಾದಿಗಳ ಆನಂತರ್ಯವನ್ನು ಭಾಷ್ಯ ಹೇಳಿದ್ದು ಯುಕ್ತವಾಗಲಾರದು. ನಾಲ್ಕು ಸಾಧನಗಳೂ ಸ್ವತಂತ್ರವಾಗಿ ಬ್ರಹ್ಮವಿಚಾರಕ್ಕೆ ಕಾರಣ ಎಂದು ವಿವರಣ ಮತದಲ್ಲಿ ಕೆಲವರು ಹೇಳುತ್ತಾರೆ. ಆದರೆ ಶಮದಮಾದಿಗಳಿಲ್ಲದಿದ್ದರೂ ಕೇವಲ ಮೋಕ್ಷಾಭಿಲಾಷೆಯಿಂದ ಬ್ರಹ್ಮವಿಚಾರ ಮಾಡುವುದು ಕಂಡಿರುವುದರಿಂದ ನಾಲ್ಕು ಸಾಧನಗಳೂ ಕಾರಣವೆನ್ನಲಾಗದು. ಆ ಬ್ರಹ್ಮವಿಚಾರ ಸಫಲವಾಗದಿರಬಹುದು. ಆದರೆ ವೈರಾಗ್ಯಾದಿಗಳು ಮೂರು ಇದ್ದರೆ ಸಫಲವಾದ ಬ್ರಹ್ಮವಿಚಾರ ನಡೆಯುವುದರಿಂದ ವಿವೇಕ ಬೇಕಾಗಿಲ್ಲ. ವಿವೇಕವಿಲ್ಲದವನಿಗೆ ವೈರಾಗ್ಯಾದಿಗಳೇ ಉಂಟಾಗಲಾರವು ಎಂದು ಹೇಳಕೂಡದು. ವಿವರಣ ಮತದಲ್ಲಿ ವಿವೇಕ ವೈರಾಗ್ಯಾದಿಗಳಿಗೆ ಕಾರಣವೆಂದೊಪ್ಪಿಲ್ಲ. ವಿವೇಕವು ಬ್ರಹ್ಮವಿಚಾರಕ್ಕೆ ಅವಶ್ಯಕವೆಂದು ಶಾಸ್ತ್ರದಲ್ಲಿ ಹೇಳಿದ ಮಾತ್ರಕ್ಕೆ ಅದು ಸ್ವತಂತ್ರವಾಗಿ ವಿಚಾರ ಕಾರಣ ಎಂದು ಸಿದ್ಧವಾಗುವುದಿಲ್ಲ. ಮಂತ್ರಗಳು ಯಾಗಸಾಧನವೆಂದು ಶ್ರುತಿ, ಪ್ರಕರಣ ಮುಂತಾದ ಪ್ರಮಾಣಗಳು ಹೇಳಿದ ಮಾತ್ರಕ್ಕೆ ಅವು ಯಾಗಕ್ಕೆ ಸಾಕ್ಷಾತ್ತಾಗಿ ಸಾಧನವೆಂದಾಗುವುದಿಲ್ಲ. ಯಾಗದ ದ್ರವ್ಯದೇವತೆಗಳನ್ನು ಬೋಧಿಸುವ ಮೂಲಕ ಯಾಗ ಸಾಧನವಾಗುವುವು. ಸೋಮವನ್ನು ಕೊಳ್ಳಲು ಕೆಂಪು ಹಸು ಸಾಧನವೆಂದಾಗ ಹಸುವಿನಂತೆ ಅದರ ಕೆಂಪು ಬಣ್ಣವೂ ಕ್ರಯ ಸಾಧನವಾದರೂ ಸಾಕ್ಷಾತ್ತಾಗಿ ಸಾಧನವಲ್ಲ. ಎಂಥ ಹಸು ಸಾಧನವೆಂಬುದನ್ನು ನಿರ್ಧರಿಸುವ ಮೂಲಕವೆ ಸಾಧನವಾಗುತ್ತದೆ. ಹಾಗೇ ವಿವೇಕ ಮುಂತಾದವು ಶಮಾದಿಗಳನ್ನು ಉಂಟು ಮಾಡುವ ಮೂಲಕ ವಿಚಾರ ಸಾಧನಗಳಾಗುತ್ತವೆ ಎನ್ನಬೇಕು. ಹೀಗೆ ಅದ್ವೈತಮತದಲ್ಲಿ ಸಾಧನ ಚತುಷ್ಟಯ ಹೇಗೆ ವಿಚಾರ ಕಾರಣವಾಗುತ್ತದೆ ಎನ್ನುವುದನ್ನು ಹೇಳಲಾರರು.

---

ಪರಿಪೂರ್ಣಚಂದ್ರಿಕಾ

## ಅದ್ವೈತಿಗಳನ್ನು ಸೋಲಿಸಲು ರಾಮಾನುಜರಿಗೆ ಸಾಮರ್ಥ್ಯವಿಲ್ಲ

तात्पर्यचन्द्रिका –

केचित्तु – नित्यानित्यवस्तुविवेकादीनि न ब्रह्ममीमांसाधिकारिविशेषणानि । तेषां तत्साध्यत्वेन अन्योन्याश्रयात् । नच ब्रह्मज्ञानफलमेव नित्यमन्यदनित्यमिति विवेको वैशेषिकादिशास्त्रान्तरात् । प्रथममेव अध्ययनविधिवश्यतया पुरुषस्य शास्त्रान्तरानवकाशात् । तत्रोक्तनित्यानित्यविवेकस्य वेदान्तविरुद्धत्वाच्च । नापि इतिहासपुराणादिना । विचारात् प्राक् तेन तदनिश्चयात् । अन्यथा ब्रह्मनिश्चयोऽपि तेनैव स्यात् ।

शमदमादीनि तु निदिध्यासनाङ्गानि । "तस्मादेवंविच्छान्तो दान्त उपरतस्तितिक्षुः समाहितो भूत्वाऽऽत्मन्येवात्मानं पश्येत्" इति श्रुतौ एवंविच्छब्देन शास्त्रजन्यज्ञानमनूद्य 'पश्येत्' इति निदिध्यासनाङ्गतया तेषां विधानात् । नतु विचाराङ्गानि । इहैव विचारशास्त्रे "शमदमाद्युपेतः स्यात्" इत्यत्र तद्विधानादित्याहुः । तन्न । 'यत्त्वादौ श्रद्धया सिद्धं पुनर्न्यायेन साधितम्' इति न्यायेन –

"अनित्यत्वात् सदुःखत्वान्न धर्माद्याः परं सुखम् ।
मोक्ष एव परानन्दः ................."

इत्यादीतिहासादिना वा, "नास्त्यकृतः कृतेन" इत्यादिश्रुतित आपाततो वा, श्रुतिमूलहितैषिपित्रादिवाक्येन वा, श्रवणेन वा, मननात्मकविचारात् प्रागपि श्रद्धामात्रेण नित्यानित्यविवेकसिद्धेः । अन्यथा त्वन्मतेऽपि अपशूद्रमधिकारे ज्ञाते अशूद्रस्यैतच्छास्त्रविचारे प्रवृत्तिः प्रवृत्तौ, चैतच्छास्त्रेणापशूद्रमधिकार इत्यन्योन्याश्रयः स्यात् । तथा – अध्ययनविधावपि अधीते स्वाध्याये "अष्टवर्षं ब्राह्मणमुपनयीत" इत्यादिवाक्येन अष्टवर्षत्वादेरधिकारिविशेषणत्व-ज्ञापनम्, तज्ज्ञाने च अध्ययने प्रवृत्तिरिति अन्योन्याश्रयः स्यात् । तथा – ब्रह्मज्ञानस्य अनन्तस्थिरफलत्वनिश्चये तदर्थिनो ब्रह्मविचारे निश्शङ्कप्रवृत्तिः विचारेण च तन्निश्चय इत्यन्योन्याश्रयः स्यात् ।

फलज्ञानं सम्भावनात्मकं चेत्, विवेकोऽपि तथाऽस्तु । यद्यपि त्वन्मते पूर्वप्रवृत्तेन कर्मविचारेण कर्मणामल्पास्थिरफलत्वं निश्चितम् तथाऽपि न तन्निश्चय एव नित्यफलार्थिनो ब्रह्मविचारे प्रवृत्तिहेतुः । भिन्नविषयत्वात् । अतिप्रसङ्गाच्च । नापि – कर्मणामल्पास्थिरफलत्वनिश्चयसहितो ब्रह्मज्ञानस्यापाततोऽनन्तस्थिरफलत्वसन्देहस्तद्धेतुः । अन्यस्यानुपायत्वनिश्चयेन ततो निवृत्तिमात्रसिद्धावपि, तस्योपायत्वानिश्चये तदुपेयार्थिनः तत्र निश्शङ्कप्रवृत्तेः । "एवंवित्" इति वाक्येन शमादीनां निदिध्यासनाङ्गत्वेऽपि "प्रशान्तचित्ताय शमान्विताय प्रोवाच तां तत्वतो ब्रह्मविद्याम्" इत्यादिवाक्यावगतं श्रवणाङ्गत्वं च न विरुद्धम् । किञ्च – "परीक्ष्य लोकान् कर्मचितान् ब्राह्मणो निर्वेदमायान्नास्त्यकृतः कृतेन । तद्विज्ञानार्थं स गुरुमेवाभिगच्छेत्" इत्यादौ विवेकादीनां श्रवणाङ्गोपसत्तेः पूर्वभावश्रुतेः कथं श्रवणानन्तरभावित्वम् । नच नित्यानित्यविवेकमात्रं विचारफलं, येन तद्वैयर्थ्यं स्यात् । तस्मादथशब्दस्याधिकारानन्तर्यमेवार्थः, तदर्थत्वं च स्वमत एव युक्तं नतु परमते इत्यभिप्रेत्याह भाष्यकारः ।। अधिकारानन्तर्यार्थश्चेति ।।

ಅನುವಾದ - ರಾಮಾನುಜರು ಹೀಗೆ ಹೇಳುತ್ತಾರೆ - ನಿತ್ಯಾನಿತ್ಯ ವಸ್ತುವಿವೇಕ, ವೈರಾಗ್ಯ ಮೊದಲಾದವು ಅಧಿಕಾರಿಯಲ್ಲಿರಬೇಕಾದ ಅರ್ಹತೆಗಳಲ್ಲ. ಏಕೆಂದರೆ ನಿತ್ಯಾನಿತ್ಯವಸ್ತುವಿವೇಕ, ವೈರಾಗ್ಯ ಮೊದಲಾದವು ಈ ಬ್ರಹ್ಮಮೀಮಾಂಸಾಶಾಸ್ತ್ರದಿಂದಲೇ ಬರಬೇಕಾದ್ದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ.

ಶಂಕೆ - ಬ್ರಹ್ಮಜ್ಞಾನಫಲ ಮಾತ್ರ ನಿತ್ಯವಾಗಿದೆ. ಉಳಿದದ್ದು ಅನಿತ್ಯವಾಗಿದೆ ಎಂಬ ವಿವೇಕವು ವೈಶೇಷಿಕ ಶಾಸ್ತ್ರಗಳಿಂದಲೂ ಬರುತ್ತದೆ. ಆದ್ದರಿಂದ ಅನ್ಯೋನ್ಯಾಶ್ರಯಕ್ಕೆ ಅವಕಾಶವಿಲ್ಲ.

ಸಮಾಧಾನ - ಇದು ಸರಿಯಲ್ಲ, ಉಪನೀತನಾದ ವಟುವು ವಿಧಿಪ್ರಕಾರದಂತೆ ಸ್ವಾಧ್ಯಾಯಾಧ್ಯಯನದಲ್ಲೇ ತೊಡಗುತ್ತಾನೆ; ಹೊರತು ವೈಶೇಷಿಕ ಮೊದಲಾದ ಗ್ರಂಥಗಳನ್ನು ಓದಲು ಅವನಿಗೆ ಅವಕಾಶವೇ ಇರುವುದಿಲ್ಲ. ಮತ್ತು ಅಲ್ಲಿ ಹೇಳಿದ ನಿತ್ಯಾನಿತ್ಯವಿವೇಕವು ವೇದಾಂತವಿರುದ್ಧವೂ ಆಗಿದೆ.

ಶಂಕೆ - ವಿವೇಕವು ಇತಿಹಾಸ ಪುರಾಣಾದಿಗಳಿಂದ ಬರುತ್ತದೆ. ಹೀಗೆ ಹೇಳಿದಾಗಲೂ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ.

ಸಮಾಧಾನ - ವಿಚಾರಕ್ಕಿಂತ ಮೊದಲು ಇತಿಹಾಸ ಪುರಾಣಗಳಿಂದಲೂ ನಿತ್ಯಾನಿತ್ಯವಿವೇಕಾದಿಗಳ ನಿಶ್ಚಯಾತ್ಮಕಜ್ಞಾನವು ಬರಲಾರದು. ವಿಚಾರ ಮಾಡದೇ ಇದ್ದರೂ ಅವುಗಳಿಂದ ನಿಶ್ಚಯಾತ್ಮಕಜ್ಞಾನವು ಬರುವುದಾದರೆ ಅದೇ ರೀತಿಯಿಂದ ವಿಚಾರವಿಲ್ಲದೆ ಬ್ರಹ್ಮನ ನಿಶ್ಚಯಾತ್ಮಕಜ್ಞಾನವೂ ಬರಬೇಕಾದೀತು.

ಪರಿಪೂರ್ಣಚಂದ್ರಿಕಾ

ಶಂಕೆ - ಶಮದಮಾದಿಗಳು ನಿದಿಧ್ಯಾಸನದ ಅಂಗಗಳೇ ಹೊರತು ವಿಚಾರದ ಅಂಗಗಳಲ್ಲ. ಶ್ರುತಿಯು ಇದನ್ನೇ ಹೇಳುತ್ತಿದೆ - "ತಸ್ಮಾದೇವಂವಿಚ್ಛಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ-ತ್ಮನ್ಯೇವಾತ್ಮಾನಂ ಪಶ್ಯೇತ್" ಆದ್ದರಿಂದ ಯಾರು ಹೀಗೆ ತಿಳಿಯುತ್ತಾನೋ, ಅವನು ಶಮದಮಾದಿಗಳನ್ನು ಹೊಂದಿ ತನ್ನಲ್ಲೇ ಆತ್ಮನನ್ನು ಕಾಣಬೇಕು" ಎಂಬ ಶ್ರುತಿಯಲ್ಲಿ 'ಏವಂವಿತ್' ಎಂಬ ಪದವನ್ನು ಹೇಳಲಾಗಿದೆ. ಇದರಿಂದ ಶಾಸ್ತ್ರದಿಂದ ಪರೋಕ್ಷಜ್ಞಾನವನ್ನು ಪಡೆದ ನಂತರ ಅಪರೋಕ್ಷ ಜ್ಞಾನಕ್ಕಾಗಿ ಮಧ್ಯದಲ್ಲಿ ಶಮದಮಾದಿಗಳ ಅವಶ್ಯಕತೆಯನ್ನು ಸಮರ್ಥಿಸುತ್ತಿದ್ದಾರೆ. 'ಪಶ್ಯೇತ್' ಎಂದರೆ ನಿಧಿಧ್ಯಾಸನ ಮಾಡಬೇಕೆಂದರ್ಥ. ಈ ನಿಧಿಧ್ಯಾಸನಕ್ಕೆ ಅವುಗಳು ಅಂಗವೆಂದು ತಿಳಿಯುತ್ತದೆ. ಹೊರತು ವಿಚಾರಕ್ಕೆ ಅಂಗವೆಂದು ತಿಳಿಯುವುದಿಲ್ಲ. ಮತ್ತು ಈ ವಿಚಾರ ಶಾಸ್ತ್ರದಲ್ಲೇ "ಶಮದಮಾದ್ಯುಪೇತಃ ಸ್ಯಾತ್" ಎಂಬಲ್ಲಿ ಶಮದಮಾದಿಗಳನ್ನು ವಿಧಿಸಲಾಗಿದೆ. ಈ ಶಾಸ್ತ್ರಕ್ಕಿಂತ ಮೊದಲು ಅವುಗಳು ಇರಬೇಕೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ.

ಸಮಾಧಾನ - ನೀವು ಹೇಳಿದ್ದು ತಪ್ಪು, ಏಕೆಂದರೆ "ಯತ್ಪ್ರಾದೌ ಶ್ರದ್ಧಯಾ ಸಿದ್ಧಂ ಪುನರ್ನ್ಯಾಯೇನ ಸಾಧಿತಮ್" "ಮೊದಲು ಶ್ರದ್ಧೆಯಿಂದಷ್ಟೇ ಸಿದ್ಧವಾದ ವಿಷಯವನ್ನು ಮುಂದೆ ಯುಕ್ತಿಯ ಬಲದಿಂದ ದೃಢೀಕರಿಸಲಾಗಿದೆ" ಎಂಬ ನ್ಯಾಯದಂತೆ ವಿಚಾರಕ್ಕಿಂತ ಮೊದಲೇ ಕೇವಲ ಶ್ರುತಿಯಲ್ಲಿನ ಶ್ರದ್ಧೆಯಿಂದ ನಿತ್ಯಾನಿತ್ಯವಸ್ತುವಿವೇಕವು ಹುಟ್ಟಬಹುದು.

ಅಥವಾ "ಅನಿತ್ಯತ್ವಾತ್ ಸುದುಃಖಾತ್ವಾನ್ನ ಧರ್ಮಾದ್ಯಾಃ ಪರಂ ಸುಖಮ್ ಮೋಕ್ಷ ಏವ ಪರಾನಂದಃ' 'ಧರ್ಮ ಮೊದಲಾದ ಪುರುಷಾರ್ಥಗಳು ಅನಿತ್ಯವಾಗಿವೆ ದುಃಖಮಿಶ್ರಿತವಾಗಿವೆ. ಉತ್ತಮಸುಖಸಾಧನಗಳಲ್ಲಿ ಮೋಕ್ಷವೇ ಉತ್ತಮ ಸಾಧನ' ಇತ್ಯಾದಿ ಇತಿಹಾಸ ಪುರಾಣಗಳ ಮಾತುಗಳಿಂದ ನಿತ್ಯಾನಿತ್ಯವಿವೇಕ ಬರುತ್ತದೆ.

ಅಥವಾ "ನಾಸ್ತ್ಯಕೃತಃ ಕೃತೇನ" 'ನಶ್ವರವಾದ ಕರ್ಮದಿಂದ ನಿತ್ಯವಾದ ಫಲವು ಸಿಗುವುದಿಲ್ಲ' ಇತ್ಯಾದಿ ಶ್ರುತಿಗಳ ಆಪಾತವಾದ ಅರ್ಥದಿಂದ ನಿತ್ಯಾನಿತ್ಯವಿವೇಕವು ಉಂಟಾಗಬಹುದು.

ಅಥವಾ ಶಾಸ್ತ್ರಾಧ್ಯಯನ ನಡೆಸಿರುವ ಹಿತೈಷಿಗಳಾದ ತಂದೆ ಗುರು ಹಿರಿಯರ ಉಪದೇಶದಿಂದ ನಿತ್ಯಾನಿತ್ಯವಿವೇಕವು ಬರುತ್ತದೆ. ಅವರ ಉಪದೇಶವು ಶ್ರುತಿ ಮೂಲವಾಗಿರುವುದರಿಂದ ಸಂಶಯಕ್ಕೆ ಅವಕಾಶವಿಲ್ಲ. ಅಥವಾ ವಿಚಾರವು ಮನನರೂಪವಾದ್ದರಿಂದ ಶ್ರವಣಕಾಲದಲ್ಲಿ ಬಂದ ನಿತ್ಯಾನಿತ್ಯವಿವೇಕವು ವಿಚಾರಕ್ಕೆ ಸಾಧನವಾಗಬಹುದು. ಹೀಗೆ ಅನೇಕ ರೀತಿಯಾದ ಸಮಾಧಾನವನ್ನು ಹೇಳಲು ಬರುವುದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ.

ಈ ರೀತಿಯಾಗಿ ಅನ್ಯೋನ್ಯಾಶ್ರಯದೋಷವನ್ನು ಪರಿಹಾರ ಮಾಡದಿದ್ದರೆ ನಿಮ್ಮ ಮತದಲ್ಲಿಯೂ ಅನೇಕ ಸಮಸ್ಯೆಗಳು ಇವೆ. ಅಪಶೂದ್ರಾಧಿಕರಣದಲ್ಲಿ ಶೂದ್ರನು ವಿಚಾರಶಾಸ್ತ್ರದ ಅಧ್ಯಯನಕ್ಕೆ ಅನರ್ಹನೆಂದು ಹೇಳಲಾಗಿದೆ. ಇದನ್ನು ಶಾಸ್ತ್ರಾಧ್ಯಯನದಿಂದಲೇ ತಿಳಿಯಬೇಕು. ಶಾಸ್ತ್ರಾಧ್ಯಯನದಿಂದ

ಶೂದ್ರೇತರರು ಮಾತ್ರ ಅಧ್ಯಯನಕ್ಕೆ ಅರ್ಹರೆಂದು ತಿಳಿದು ಅಧ್ಯಯನದಲ್ಲಿ ಪ್ರವೃತ್ತಿ ಮಾಡಬೇಕೆಂದು ಅನ್ಯೋನ್ಯಾಶ್ರಯ ಬರುತ್ತದೆ.

ಅದೇ ರೀತಿಯಾಗಿ ಅಧ್ಯಯನವಿಧಿಯಲ್ಲಿಯೂ ಅನ್ಯೋನ್ಯಾಶ್ರಯದೋಷ ಬರುತ್ತದೆ. ಸ್ವಾಧ್ಯಾಯಾಧ್ಯಯನ ಮಾಡಿದ ಮೇಲೆ "ಅಷ್ಟವರ್ಷಂ ಬ್ರಾಹ್ಮಣಮುಪನೀಯತ" "ಎಂಟು ವರ್ಷದ ಬ್ರಾಹ್ಮಣ ಮಗುವಿಗೆ ಉಪನಯನ ಮಾಡಬೇಕು" ಇತ್ಯಾದಿ ಶ್ರುತಿಯಿಂದ ವೇದಾಧ್ಯಯನಕ್ಕೆ ಎಂಟು ವರ್ಷವು ಅರ್ಹತೆಯೆಂದು ತಿಳಿಯುತ್ತದೆ. ಅರ್ಹತೆ ತಿಳಿದ ಮೇಲೆ ಅಧ್ಯಯನದಲ್ಲಿ ಪ್ರವೃತ್ತಿ ಎಂದು ಅನ್ಯೋನ್ಯಾಶ್ರಯ ಬರುತ್ತದೆ.

ಮತ್ತು ಬ್ರಹ್ಮಜ್ಞಾನವು ಅನಂತಫಲಕವೂ ಶಾಶ್ವತಫಲಕವೂ ಆಗಿದೆ ಎಂಬ ನಿಶ್ಚಯಜ್ಞಾನ ಬಂದ ಮೇಲೆ ಅಂತಹ ಫಲಕಾಮಿಯು ಬ್ರಹ್ಮವಿಚಾರದಲ್ಲಿ ನಿಃಶಂಕಾಪ್ರವೃತ್ತಿ ಮಾಡುತ್ತಾನೆ. ಆದರೆ ಈ ಶಾಸ್ತ್ರವು ಅನಂತ ಶಾಶ್ವತ ಫಲಕವೆಂದು ಈ ಗ್ರಂಥಾಧ್ಯಯನದಿಂದಲೇ ತಿಳಿಯಬೇಕೆಂದು ಅನ್ಯೋನ್ಯಾಶ್ರಯ ಬರುತ್ತದೆ.

**ಶಂಕೆ** - ಬ್ರಹ್ಮಜ್ಞಾನವು ಶಾಶ್ವತಸುಖಸಾಧನವೆಂಬ ನಿಶ್ಚಯಜ್ಞಾನವೇ ಬರಬೇಕಾಗಿಲ್ಲ. ಕೇವಲ ಸಂಭಾವನಾತ್ಮಕ ಜ್ಞಾನವು ಬಂದರೆ ಸಾಕು.

**ಸಮಾಧಾನ** - ನಿತ್ಯಾನಿತ್ಯವಿವೇಕದ ವಿಷಯದಲ್ಲಿಯೂ ಹೀಗೆ ಸಮಾಧಾನ ಹೇಳಬಹುದಾದ್ದರಿಂದ ನಮಗೂ ಅನ್ಯೋನ್ಯಾಶ್ರಯ ಬರುವುದಿಲ್ಲ.

**ಶಂಕೆ** - ನಮ್ಮ ಮತದಲ್ಲಿ ಇದುವರೆಗೂ ನಡೆಸಿದ ಕರ್ಮವಿಚಾರದಿಂದ ಕರ್ಮಗಳು ಅಲ್ಪಫಲಕವೂ ಅಸ್ಥಿರಫಲಕವೂ ಎಂದು ನಿಶ್ಚಯವಾಗಿದೆ. ಇದರಿಂದಲೇ ಬ್ರಹ್ಮಜ್ಞಾನವು ಶಾಶ್ವತಫಲವೆಂದು ಪ್ರವೃತ್ತಿ ಉಂಟಾಗುತ್ತದೆ.

**ಸಮಾಧಾನ** - ಕರ್ಮವಿಚಾರವು ಅನಿತ್ಯಫಲಕವೆಂದು ತಿಳಿದ ಮಾತ್ರದಿಂದ ನಿತ್ಯಫಲಕ್ಕಾಗಿ ಯಾರೂ ಬ್ರಹ್ಮವಿಚಾರದಲ್ಲಿ ಭಿನ್ನ ವಿಷಯಕವಾದ್ದರಿಂದ ಪ್ರವೃತ್ತಿ ಮಾಡಲಾರರು.'. ಇದನ್ನು ಅಂಗೀಕರಿಸದೇ ಇದ್ದರೆ ಕಾಮಶಾಸ್ತ್ರದಲ್ಲಿಯೂ ಪ್ರವೃತ್ತಿ ಮಾಡಬೇಕಾದೀತು.

**ಶಂಕೆ** - ಕರ್ಮಗಳು ಅಸ್ಥಿರ ಫಲಕ ಎಂಬ ನಿಶ್ಚಯದ ಜೊತೆಗೆ ಬ್ರಹ್ಮಜ್ಞಾನವು ಸ್ಥಿರ ಫಲಕವೆಂಬ ನಿಶ್ಚಯವೂ ಇದೆ. ಇದರಿಂದ ಬ್ರಹ್ಮವಿಚಾರದಲ್ಲಿ ಪ್ರವೃತ್ತಿ ಉಂಟಾಗುತ್ತದೆ.

**ಸಮಾಧಾನ** - ಕರ್ಮವು ಇಷ್ಟಸಾಧನವಲ್ಲ ಎಂಬ ನಿಶ್ಚಯದಿಂದ ಕರ್ಮವು ಬೇಡವಾಗುತ್ತದೆ. ಬ್ರಹ್ಮಜ್ಞಾನವು ಇಷ್ಟಸಾಧನವೆಂಬ ನಿಶ್ಚಯವಿಲ್ಲದಿದ್ದರೆ ನಿಃಶಂಕಾಪ್ರವೃತ್ತಿಯು ಕೂಡುವುದಿಲ್ಲ. ಬ್ರಹ್ಮಜ್ಞಾನವು ಅನಂತರಸ್ಥಿರಫಲಕವೆಂಬ ಜ್ಞಾನಮಾತ್ರ ಇದ್ದಲ್ಲಿ ಸಂದೇಹದಿಂದಲೇ ಪ್ರವೃತ್ತಿ ಆಗುತ್ತದೆ ಹೊರತು, ನಿಶ್ಚಯದಿಂದ ಪ್ರವೃತ್ತಿ ಆಗಲಾರದು.

ಹೀಗೆ ನಿತ್ಯಾನಿತ್ಯವಿವೇಕವು ಬ್ರಹ್ಮವಿಚಾರಕ್ಕೆ ಹೇಗೆ ಆವಶ್ಯಕವೋ ಹಾಗೆಯೇ ಶಮದಮಾದಿಗಳು ವಿಚಾರಕ್ಕೆ ಆವಶ್ಯಕವಾಗಿವೆ. 'ತಸ್ಮಾದೇವಂ ವಿಚ್ಛಾಂತಃ' - ಇತ್ಯಾದಿ ಶ್ರುತಿಯಲ್ಲಿ ಶಮದಮಾದಿಗಳು

ನಿದಿಧ್ಯಾಸನಕ್ಕೆ ಅಂಗವೆಂದು ಹೇಳಲಾಗಿದೆ. ಆದರೂ ಶ್ರವಣ ಮನನಗಳಿಗೂ ಶಮದಮಾದಿಗಳು ಅಂಗವಾಗಬಹುದು. ಏಕೆಂದರೆ ''ಪ್ರಶಾಂತಚಿತ್ತಾಯ ಶಮಾನ್ವಿತಾಯ'' ಇತ್ಯಾದಿ ಶ್ರುತಿಯು ಶಮದಮಾದಿಗಳು ಶ್ರವಣಕ್ಕೆ ಕಾರಣವೆಂದು ಹೇಳಲಾಗಿದೆ. ಆದ್ದರಿಂದ ಶಮಾದಿಗಳು ನಿದಿಧ್ಯಾಸನಕ್ಕೂ ಅಂಗವಾಗಿವೆ. ವಿಚಾರಕ್ಕೂ ಅಂಗವಾಗಿವೆ. ಮತ್ತು 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' ''ಕರ್ಮದಿಂದ ಸಂಪಾದಿಸಲ್ಪಟ್ಟ ಎಲ್ಲ ಲೋಕಗಳೂ ಅಸಾರ ಎಂದು ವೈರಾಗ್ಯ ಹೊಂದಬೇಕು. ಅಶಾಶ್ವತವಾದ ಕರ್ಮದಿಂದ ಶಾಶ್ವತವಾದ ಮೋಕ್ಷವು ದೊರೆಯಲಾರದು. ಆದ್ದರಿಂದ ಬ್ರಹ್ಮಜ್ಞಾನಕ್ಕಾಗಿ ಗುರುವನ್ನೇ ಆಶ್ರಯಿಸಬೇಕು.'' ಹೀಗೆ ಶ್ರುತಿಯಲ್ಲಿ ಶ್ರವಣಕ್ಕೆ ಅಂಗವಾದ ಗುರೂಪಸತ್ತಿಗೆ ನಿತ್ಯಾನಿತ್ಯವಿವೇಕವು ಅವಶ್ಯವೆಂದು ಹೇಳಲಾಗಿದೆ. ಇಂತಹ ನಿತ್ಯಾನಿತ್ಯವಿವೇಕವು ವಿಚಾರದಿಂದ ಲಭ್ಯವೆಂದು ಹೇಳುವುದು ಎಷ್ಟು ಮಾತ್ರಕ್ಕೂ ಸರಿಯಲ್ಲ. ಒಂದು ವೇಳೆ ವಿಚಾರಫಲವಾಗಿದ್ದರೆ ನಿತ್ಯಾನಿತ್ಯವಿವೇಕವು ವ್ಯರ್ಥವಾಗುತ್ತಿತ್ತು.

ಆದ್ದರಿಂದ ಅಥ ಶಬ್ದಕ್ಕೆ ಅಧಿಕಾರದ ಆನಂತರ್ಯ ಎಂಬರ್ಥವನ್ನೇ ಹೇಳಬೇಕು. ಈ ಅರ್ಥವು ನಮ್ಮ ಮತದಲ್ಲಿ ಮಾತ್ರ ಕೂಡುತ್ತದೆ, ಹೊರತು ಪರಮತದಲ್ಲಿ ಕೂಡುವುದಿಲ್ಲ ಎಂಬ ಅಭಿಪ್ರಾಯದಿಂದ ಭಾಷ್ಯಕಾರರಾದ ಶ್ರೀಮದಾಚಾರ್ಯರು 'ಅಧಿಕಾರಾನಂತರ್ಯಾರ್ಥಶ್ಚ' ಎಂದು ಹೇಳಿದ್ದಾರೆ.

### ಕಠಿಣಪದಾರ್ಥ

**ತೇಷಾಮ್** = ನಿತ್ಯಾನಿತ್ಯವಸ್ತುವಿವೇಕ ವೈರಾಗ್ಯ ಮೊದಲಾದವು, **ತತ್‌ಸಾಧ್ಯತ್ವೇನ** = ಬ್ರಹ್ಮಮೀಮಾಂಸಾ ಶಾಸ್ತ್ರದಿಂದ ಬರುವುದರಿಂದ, **ಅಧ್ಯಯನವಿಧಿವಶ್ಯತಯಾ** = ವೇದಾಧ್ಯಯನ ವಿಧಿಗೆ ವಶನಾದ್ದರಿಂದ, **ಪುರುಷಸ್ಯ** = ವಟುವಿಗೆ, **ತತ್ರೋಕ್ತ** = ವೈಶೇಷಿಕಶಾಸ್ತ್ರಗಳಲ್ಲಿ ಹೇಳಿದ, **ತೇನ** = ಇತಿಹಾಸ ಪುರಾಣಗಳಿಂದ, **ತದನಿಶ್ಚಯಾತ್** = ನಿತ್ಯಾನಿತ್ಯವಿವೇಕಾದಿಗಳ ನಿಶ್ಚಯಾತ್ಮಕ ಜ್ಞಾನ ಬರುವುದಿಲ್ಲ, **ಅನ್ಯಥಾ** = ಇತಿಹಾಸ ಪುರಾಣಗಳಿಂದ ನಿಶ್ಚಯಾತ್ಮಕ ಜ್ಞಾನ ಬರುವುದಾದರೆ. **ತೇಷಾಮ್** = ಶಮದಮಾದಿಗಳು, **ಅನ್ಯಥಾ** = ಹೀಗೆ ಅನ್ಯೋನ್ಯಾಶ್ರಯವನ್ನು ಪರಿಹರಿಸದಿದ್ದರೆ, **ಅಪಶೂದ್ರಮ್** = 'ಶುಗಸ್ಯ ತದನಾದರಶ್ರವಣಾತ್ ತಾದಾದ್ರವಣಾತ್ ಸೂಚ್ಯತೇ ಹಿ' ಎಂಬ ಅಧಿಕರಣದಲ್ಲಿ ಶೂದ್ರನಿಗೆ ಅಧಿಕಾರವನ್ನು ನಿಷೇಧಿಸಿದ್ದಾರೆ. **ಅಧಿಕಾರ** = ಅಧಿಕಾರ ಜ್ಞಾನ, **ಅತಿಪ್ರಸಂಗಾತ್** = ವಾತ್ಸ್ಯಾಯನಾದಿ ಶಾಸ್ತ್ರಗಳಲ್ಲಿಯೂ ಪ್ರವೃತ್ತಿ ಉಂಟಾಗಲಿ, **ತಸ್ಮಾತ್** = ಪ್ರಾರಂಭಾದ್ಯರ್ಥಗಳು ಅಸಮಂಜಸವಾದ್ದರಿಂದ

**प्रकाशः – नित्यानित्येति ।। आदिपदाच्छमादिग्रहः ।। अन्योन्याश्रयादिति ।। ब्रह्मज्ञानफलं नित्यमन्यफलमनित्यमिति विवेको विचारशास्त्रसम्पाद्य इति हेतोः, विवेके सति अधिकारसम्पत्त्या शास्त्रे प्रवृत्तिः, तत्प्रवृत्त्यनन्तरं च विवेकसम्पत्तिरिति**

अन्योन्याश्रयादित्यर्थः ।। शास्त्रान्तरादिति । 'सिद्ध्यति' इति शेषः । येन नान्योन्याश्रय इति भावः । 'विवेकः' इत्येव वक्तव्ये 'ब्रह्मज्ञान' इत्यादिना तद्विवरणं तद्विरोधस्फोरणाय । अत एवाह ।। तत्रोक्तेति ।। नापीति ।। 'विवेकः' इत्यनुषङ्गः । निरस्यति ।। विचारादिति ।। तथाच विचारे प्रवृत्त्यनन्तरं तेनेतिहासाद्यर्थनिर्णये ततो विवेकसिद्धिः, तत्सिद्ध्यनन्तरं च विचारे प्रवृत्तिरित्यन्योन्याश्रय एवेति भावः ।। अन्यथेति ।। विचारं विनैवापाततो विवेकसिद्धावित्यर्थः।

शमादेरपि विचाराङ्गत्वं प्रागादिपदेन निरस्तमपि स्पष्टं निरस्यति– शमेति ।। यद्वा – प्रागधिकारिविशेषणत्वं निरस्तम् । तदेव कुत इत्यतोऽनङ्गत्वादिति भावेन अङ्गत्वं निरस्यति ।। शमेति ।। शास्त्रजन्येति ।। विचारजन्येत्यर्थः ।। शमेति ।। ''शमदमाद्युपेतः स्यात् तथाऽपि तु तद्विधेस्तदङ्गतया तेषामवश्यानुष्ठेयत्वात्'' इति सूत्रे तृतीये विधानादित्यर्थः । तथाच शास्त्रे प्रवृत्त्यनन्तरं शमादिविधिदृष्ट्या तत्सम्पादनं, तत्सम्पत्त्यनन्तरं च शास्त्रे प्रवृत्तिरित्यन्योन्याश्रय इति भावः । 'श्रद्धया' आस्तिक्यबुद्ध्या । 'न्यायेन' इत्यादितृतीयान्तानां 'विवेकसिद्धेः' इत्यन्वयः । धर्मादीनां परमसुखत्वाभावे हेतुद्वयम् – अनित्यत्वादित्यादि । तथाच सयुक्तिकत्वान्निश्चायकत्वमस्येति भावः । ''संसारे परिवर्तताम्'' इति वाक्यशेषः । 'अकृतः' नित्यपुमर्थो मोक्षः, 'कृतेन' कर्मणा न सिद्ध्यतीत्यर्थः ।

ननु विना विचारं श्रुत्यर्थो न निर्णीत इत्यत उक्तम् – आपातत इति । वाक्येऽप्रामाण्यव्युदासायोक्तम् – श्रुतीति । 'श्रवणेन' औपदेशिकवाक्यार्थग्रहणरूपेण ।। सिद्धेरिति ।। तथाच नान्योन्याश्रय इति भावः ।। अपशूद्रमिति ।। ''अपपरिबहिरञ्चवः पञ्चम्या' इत्यव्ययीभावः । ''शुगस्य तदनादरश्रवणात्'' इति नये शूद्रस्याधिकारनिषेधादिति भावः ।। अधिकार इति ।। अधिकारज्ञानमित्यर्थः । अत उक्तैव रीतिरुपेयेति भावः ।

ननु ब्रह्मज्ञानं नित्यफलमिति निश्चित्य तत्र न प्रवर्तते । येनोक्तदोषः । किन्तु प्रायेण नित्यफलं भवितुमर्हतीत्युत्कटकोटिकसंशयादेवेत्याशङ्क्य, मोक्षोऽपि

नित्यो भवितुमर्हतीत्येवंरूपादेव ज्ञानादत्रापि प्रवृत्तिः स्यादित्याह ।। फलेति ।। भिन्नेति ।। कर्मणामनित्यफलत्वनिश्चयेन नित्यपुमर्थिनः ततो निवृत्तावपि, यावद् ब्रह्मज्ञानस्य न नित्यफलत्वं निश्चितं, तावद् ब्रह्मविचारे प्रवृत्तिर्न युक्तेत्यर्थः ।। अतिप्रसङ्गाच्चेति ।। वात्स्यायनादावपि प्रवृत्तिप्रसङ्गात् । कृषेर्धान्यफलकत्वनिश्चयेन ज्योतिष्टोमादौ स्वर्गार्थिनः प्रवृत्तिप्रसङ्गादित्यर्थः ।।

निश्चयसहित इति ।। अतो न भिन्नविषयत्वमिति भावः । 'अन्यस्य' कर्मणः । 'तस्य' ब्रह्मज्ञानस्य । 'तत्र' ब्रह्मज्ञानजनकविचारे । एतदुक्तं भवति । ब्रह्मज्ञानस्यानन्तस्थिरफलत्वसन्देहेन ब्रह्मविचारे सशङ्कप्रवृत्तौ सम्भवन्त्यामपि, न निश्शङ्कप्रवृत्तिः । तस्याश्च तथाविधफलहेतुत्वनिश्चयसाध्यत्वात् । तस्य च विचार मन्तरेणासिद्धेरन्योन्याश्रयो दुर्वार इत्युक्तैव रीतिराश्रयणीयेति । एवं नित्यानित्यवस्तुविवेकस्य ब्रह्मविद्याधिकारिविशेषणत्वं समर्थ्य शमादेरपि तत्वं समर्थयते ।। एवंविदितीति ।। यथाह्येकस्यैव दध्यादेर्वचनात् क्रत्वर्थत्वं पुरुषार्थत्वं च तद्वदिति भावः ।। परीक्ष्येति ।। कर्मापादितान् विष्णुलोकेतरान् लोकान-सारानित्यतया निश्चित्य ब्राह्मणो वैराग्यं सम्पादयेत्, यतोऽकृतो मोक्षः कृतेन कर्मणा न सिद्ध्यति किन्तु ज्ञानेन, तस्माद् विज्ञानार्थं गुरुमुपगच्छेदित्यर्थः ।। श्रवणेति ।। 'विचारानन्तरभावित्वम्' इति वाच्येऽप्येवमुक्तिः, तस्य श्रवणाङ्गत्वमप्यस्तीति वक्तुम् । ननु विवेकादेर्विचारात् प्राक् सिद्धत्वेन विचारोऽनर्थक इत्यत आह ।। नचेति ।। वासुदेवमहामहिमादेरपि वर्णनादिति भावः । ''प्रतिवचनाद्यभावेऽपि'' इत्यादिना प्रतिपादितमर्थमुपसंहरन् भाष्यारूढं करोति ।। तस्मादिति ।। प्रारम्भाद्यर्थकत्वासम्भवादित्यर्थः ।

गुरुराजीय – यत्त्वादाविति ।। अस्मिन् पक्षे ब्रह्मविचारवैयर्थ्यमिति परोक्तदोषपरिहाराय पुनर्न्यायेनेति न्यायांशोऽप्युदाहृतः ।। अन्यथेति ।। उक्तप्रकारैः परिहारानादरेण अधिकारिविशेषणानां शास्त्रसाध्यत्वमात्रेणोक्तान्योन्याश्रय इत्यर्थः । शास्त्रसाध्यस्य शास्त्रप्रवर्तकत्वं नेत्येवोक्तावन्योन्याश्रये व्याप्त्यङ्गीकारे आद्यस्तर्कः । तत्र व्याप्तिभङ्गश्च । अधिकारिविशेषणत्वे न विशेषणे त्वाह ।। तथेति ।। ब्रह्म-

**विचाराधिकारिविशेषणत्वे** त्वाह ।। **तयेति** ।। शमादीनां श्रवणाङ्गत्वं किं बाधकसद्भावान्नाङ्गीक्रियते साधकाभावाद्वा । नाद्यः । तदभावात् । नच शमादे-र्निदिध्यासनाङ्गत्वप्रतिपादकैवंविच्छान्तोदान्त उपरतो भवेदिति श्रुतिरेव बाधिकेति वाच्यम् । तस्याः शमादेर्निदिध्यासनाङ्गत्वमात्रसाधकत्वेनान्याङ्गत्वनिषेधकत्वाभावा-दित्याह – **एवंविदिति** ।। न द्वितीय इत्याह – **प्रशान्तेति** ।। एवं श्रवणाङ्गत्वं प्रसाध्य तदनङ्गीकारे बाधकमाह ।। **किञ्चेति** ।। नन्वेवं विचारवय्यर्थ्यम् । तत्फलस्य ज्ञातत्वात् । तस्मात् श्रुतमप्यङ्गत्वं विचारवैय्यर्थ्यान्नाङ्गीकार्यमित्यत आह - **नचेति** ।।

**ವಿವರಣೆ** - 'ನಿತ್ಯಾನಿತ್ಯವಿವೇಕಾದೀನಿ' ಎಂಬಲ್ಲಿ 'ಆದಿ' ಪದದಿಂದ ವೈರಾಗ್ಯ ಶಮದಮಾದಿಗಳನ್ನು ಇಟ್ಟುಕೊಳ್ಳಬೇಕು. ನಿತ್ಯಾನಿತ್ಯವಿವೇಕವು ಈ ಶಾಸ್ತ್ರದ ಅಧ್ಯಯನಕ್ಕೆ ಬೇಕಾದ ಅರ್ಹತೆಯೆಂದು ಹೇಳಿದರೆ ರಾಮಾನುಜರು ಅನ್ಯೋನ್ಯಾಶ್ರಯ ದೋಷವನ್ನು ಹೇಳುತ್ತಾರೆ - ಬ್ರಹ್ಮಜ್ಞಾನಫಲವು ನಿತ್ಯ, ಬೇರೆ ಫಲವು ಅನಿತ್ಯ ಎಂಬ ನಿತ್ಯಾನಿತ್ಯವಿವೇಕವು ಈ ವಿಚಾರ ಶಾಸ್ತ್ರದಿಂದಲೇ ಬರಬೇಕಾದ್ದರಿಂದ ನಿತ್ಯಾನಿತ್ಯವಿವೇಕ ಇದ್ದರೆ ಅಧಿಕಾರ ಸಂಪತ್ತಿನಿಂದ ಶಾಸ್ತ್ರದಲ್ಲಿ ಪ್ರವೃತ್ತಿ ಕೂಡುತ್ತದೆ. ಶಾಸ್ತ್ರದಲ್ಲಿ ಪ್ರವೃತ್ತಿಯಿಂದ ನಿತ್ಯಾನಿತ್ಯವಿವೇಕವು ಕೂಡುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ.

ವೈಶೇಷಿಕಶಾಸ್ತ್ರದಿಂದ ಬರುವ ನಿತ್ಯಾನಿತ್ಯವಿವೇಕವು ವೇದಾಂತವಿರುದ್ಧವಾಗಿದೆ. ಈ ವಿರೋಧವನ್ನು ತೋರಿಸುವುದಕ್ಕಾಗಿ ವಿವೇಕ ಎಂದಷ್ಟೇ ಹೇಳದೆ 'ಬ್ರಹ್ಮಜ್ಞಾನಫಲಮೇವ ನಿತ್ಯಂ' ಇತ್ಯಾದಿಯಾಗಿ ಹೇಳಿದ್ದಾರೆ. ವೈಶೇಷಿಕಶಾಸ್ತ್ರದಲ್ಲಿ ಹೇಳಿದ ಪರಮಾಣ್ವಾದಿಗಳ ನಿತ್ಯಾನಿತ್ಯತ್ವ ವಿಚಾರವು ವೇದಾಂತ-ವಿರುದ್ಧವಾಗಿದೆ.

ಇನ್ನು ಇತಿಹಾಸಪುರಾಣಾದಿಗಳಿಂದ ನಿತ್ಯಾನಿತ್ಯವಿವೇಕವು ಲಭಿಸುತ್ತದೆಂದು ಹೇಳಿದರೆ ಅನ್ಯೋನ್ಯಾ-ಶ್ರಯ ಬರುತ್ತದೆ. ಏಕೆಂದರೆ ವಿಚಾರದಲ್ಲಿ ಪ್ರವೃತ್ತಿ ಮಾಡಿದ ಮೇಲೆ ಇತಿಹಾಸ ಪುರಾಣಾದಿಗಳ ಅರ್ಥವು ನಿರ್ಣಯವಾಗುತ್ತದೆ. ಅದರಿಂದ ನಿತ್ಯಾನಿತ್ಯವಿವೇಕವು ಸಿದ್ಧವಾಗುತ್ತದೆ. ನಿತ್ಯಾನಿತ್ಯವಿವೇಕವು ಸಿದ್ಧಿಸಿದ ಅನಂತರ ವಿಚಾರದಲ್ಲಿ ಪ್ರವೃತ್ತಿ, ಹೀಗೆ ಅನ್ಯೋನ್ಯಾಶ್ರಯ ದೋಷವನ್ನು ತಿಳಿಯಬೇಕು. 'ಅನ್ಯಥಾ' ಎಂದರೆ ವಿಚಾರ ಇಲ್ಲದೆ ಆಪಾತಪ್ರತೀತಿಯಿಂದಷ್ಟೇ ವಿವೇಕವು ಬರುವುದಾದರೆ ಎಂದರ್ಥ.

ನಿತ್ಯಾನಿತ್ಯವಸ್ತುವಿವೇಕವು ಹೇಗೆ ವಿಚಾರಕ್ಕೆ ಅಂಗವಲ್ಲವೋ ಅದರಂತೆ ಶಮದಮಾದಿಗಳೂ ವಿಚಾರಕ್ಕೆ ಅಂಗವಲ್ಲವೆಂದು 'ಶಮದಮಾದೀನಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ವಾಸ್ತವಿಕವಾಗಿ ಹಿಂದೆ 'ಕೇಚಿತ್ತು ನಿತ್ಯಾನಿತ್ಯವಸ್ತುವಿವೇಕಾದೀನಿ ನ ಬ್ರಹ್ಮಮೀಮಾಂಸಾಧಿಕಾರಿವಿಶೇಷಣಾನಿ' ಎಂಬ ವಾಕ್ಯದಲ್ಲಿರುವ ಆದಿ ಪದದಿಂದ ಶಮಾದಿಗಳೂ ವಿಚಾರಾಂಗವಲ್ಲವೆಂದು ನಿರಾಕರಿಸಲಾಗಿತ್ತು. ಆದರೂ ಸಹ ಈಗ ಸ್ಪಷ್ಟವಾಗಿ 'ಶಮ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಅಥವಾ ಹಿಂದೆ ಶಮಾದಿಗಳು ಅಧಿಕಾರಿ

ವಿಶೇಷಣವಾಗಲು ಸಾಧ್ಯವಿಲ್ಲವೆಂದು ನಿರಾಕರಿಸಲಾಗಿತ್ತು. ಏಕೆ ಅಧಿಕಾರಿವಿಶೇಷಣ ಆಗಲಾರದು? ಎಂಬ ಪ್ರಶ್ನೆ ಬಂದರೆ ಶಮಾದಿಗಳು ವಿಚಾರಕ್ಕೆ ಅಂಗವಾಗಿಲ್ಲವೆಂದು 'ಶಮ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ.

ಶಮದಮಾದಿಗಳು ವಿಚಾರಕ್ಕೆ ಅಂಗವೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಏಕೆಂದರೆ ಈ ವಿಚಾರಶಾಸ್ತ್ರದಲ್ಲಿಯೇ ಮುಂದೆ "ಶಮದಮಾದ್ಯುಪೇತಃ ಸ್ಯಾತ್ ತಥಾಪಿ ತು ತದ್ವಿಧೇಸ್ತದಙ್ಗತಯಾ ತೇಷಾಮವಶ್ಯಾನುಷ್ಠೇಯತ್ವಾತ್" "ಗೃಹಸ್ಥನು ಕರ್ಮಾಚರಣೆಯ ವಿಧಿಗೆ ಬದ್ಧನಾಗಿದ್ದರೂ ಶಮದಮ ಮೊದಲಾದವುಗಳನ್ನು ಸಂಪಾದಿಸಬೇಕು. ಏಕೆಂದರೆ 'ಶಾಂತೋ ದಾಂತಃ' ಇತ್ಯಾದಿ ಶ್ರುತಿಯು ಹಾಗೆಯೇ ವಿಧಿಸಿದೆ, ಮತ್ತು ಬ್ರಹ್ಮಜ್ಞಾನದ ಉದ್ದೇಶದಿಂದ ಏಕಾಗ್ರತೆಯನ್ನು ಸಂಪಾದಿಸುವುದಕ್ಕಾಗಿ ಕರ್ಮಾಚರಣೆಯಂತೆ ಶಮದಮಾದಿಗಳೂ ಅವಶ್ಯಕವೇ ಆಗಿದೆ" (ಬ್ರಹ್ಮಸೂತ್ರ ಅಧ್ಯಾಯ ೩ - ಪಾದ - ೪ - ಸೂತ್ರ ೨೭) ಈ ಸೂತ್ರದಲ್ಲಿ ಶಮದಮಾದಿಗಳನ್ನೂ ವಿಧಿಸಲಾಗಿದೆ. ಇದನ್ನು ತಿಳಿಯಬೇಕಾದರೆ ವಿಚಾರಶಾಸ್ತ್ರವನ್ನು ಅಧ್ಯಯನ ಮಾಡಬೇಕು. ಅಧ್ಯಯನದಿಂದ ಶಮದಮಾದಿಗಳನ್ನು ಸಂಪಾದಿಸಬೇಕು. ಶಮದಮಾದಿಗಳು ಇದ್ದರಷ್ಟೇ ಅಧ್ಯಯನವೆಂದು ನೀವು ಹೇಳಿದರೆ ಅಧ್ಯಯನಕ್ಕೆ ಶಮದಮಾದಿಗಳು ಬೇಕು. ಶಮದಮಾದಿಗಳಿಗೆ ಅಧ್ಯಯನ ಬೇಕೆಂದು ಅನ್ಯೋನ್ಯಾಶ್ರಯದೋಷ ಬರುತ್ತದೆ.

"ಯತ್ತ್ವಾದೌ ಶ್ರದ್ಧಯಾ" - ಇತ್ಯಾದಿ ನ್ಯಾಯದಲ್ಲಿ 'ಶ್ರದ್ಧಯಾ' ಎಂಬ ಶಬ್ದಕ್ಕೆ ಆಸ್ತಿಕ ಬುದ್ಧಿಯಿಂದ ಎಂದರ್ಥ. ಆದ್ದರಿಂದ "ಮೊದಲು ಆಸ್ತಿಕಬುದ್ಧಿಯಿಂದಷ್ಟೇ ಒಪ್ಪಿಕೊಂಡಿರುವ ವಿಷಯವನ್ನು ಮುಂದೆ ಯುಕ್ತಿಯ ಬಲದಿಂದ ಸಾಧಿಸಲಾಗುತ್ತದೆ" ಎಂಬುದಾಗಿ ನ್ಯಾಯದ ಅಭಿಪ್ರಾಯವನ್ನು ತಿಳಿಯಬೇಕು. 'ನ್ಯಾಯೇನ, ಇತಿಹಾಸಾದಿನಾ, ಶ್ರುತಿತಃ, ಪಿತ್ರಾದಿವಾಕ್ಯೇನ, ಶ್ರವಣೇನ, ಶ್ರದ್ಧಾಮಾತ್ರೇಣ' ಇತ್ಯಾದಿ ತೃತೀಯಾಂತವಾದದ್ದಕ್ಕೆಲ್ಲ 'ವಿವೇಕಸಿದ್ಧಿಃ' ಎಂಬಲ್ಲಿ ಪ್ರತ್ಯೇಕವಾಗಿ ಅನ್ವಯವನ್ನು ತಿಳಿದುಕೊಳ್ಳಬೇಕು.

"ಅನಿತ್ಯತ್ವಾತ್ ಸದುಃಖತ್ವಾನ್ನ ಧರ್ಮಾದ್ಯಾಃ ಪರಂ ಸುಖಮ್" ಎಂಬಲ್ಲಿ ಧರ್ಮಾದಿಗಳು ಪರಮಸುಖಸಾಧನವಲ್ಲವೆನ್ನಲು ಅನಿತ್ಯವಾಗಿದೆ, ದುಃಖಮಿಶ್ರಿತವಾಗಿದೆ ಎಂದು ಎರಡು ಕಾರಣಗಳನ್ನು ತಿಳಿಯಬೇಕು. ಎರಡು ಕಾರಣಗಳನ್ನು ಕೊಟ್ಟಿರುವುದರಿಂದ ನಿಶ್ಚಿತವಾದ ವಿವೇಕಜ್ಞಾನವು ಬರುತ್ತದೆ. 'ಮೋಕ್ಷ ಏವ ಪರಾನಂದಃ' ಮೋಕ್ಷವೇ ಉತ್ತಮ ಸುಖಸಾಧನವೆಂದು ಹೇಳಲಾಗಿದೆ. ಇಲ್ಲಿ ಯಾರಿಗೆ ಎಂದು ಹೇಳಿಲ್ಲ. 'ಸಂಸಾರದಲ್ಲಿ ಬಳಲುವರಿಗೆ' ಎಂದು ಸೇರಿಸಿಕೊಳ್ಳಬೇಕು.

'ನಾಸ್ತ್ಯಕೃತಃ ಕೃತೇನ' ಎಂಬ ಶ್ರುತಿಗೆ ಹೀಗೆ ಅರ್ಥ - ಅಕೃತಃ = ನಿತ್ಯಪುರುಷಾರ್ಥವಾದ ಮೋಕ್ಷವು, ಕೃತೇನ = ಮಾಡಲ್ಪಟ್ಟ (ಅನಿತ್ಯವಾದ) ಕರ್ಮದಿಂದ, ನಾಸ್ತಿ = ದೊರೆಯಲಾರದು ಎಂದು. ವಿಚಾರ ಮಾಡದೆ 'ನಾಸ್ತ್ಯಕೃತಃ ಕೃತೇನ' ಎಂಬ ಶ್ರುತಿಯ ಅರ್ಥವನ್ನು ನಿಶ್ಚಯಿಸಲಾಗದಲ್ಲವೇ? ಎಂಬ ಪ್ರಶ್ನೆಗೆ 'ಆಪಾತತಃ' ಎಂದು ಉತ್ತರಿಸುತ್ತಿದ್ದಾರೆ. ಅಂದರೆ ಈ ಶ್ರುತಿಯ ಮೇಲ್ನೋಟದ ಅರ್ಥಜ್ಞಾನದಿಂದ ನಿತ್ಯಾನಿತ್ಯವಿವೇಕವು ಬರುತ್ತದೆ. ಈ ವಾಕ್ಯವೇ ಅಪ್ರಮಾಣವೆಂಬ ಪ್ರಶ್ನೆಗೆ ಉತ್ತರವಾಗಿ 'ಶ್ರುತಿ' ಎಂದು ಹೇಳಿದ್ದಾರೆ.

'ಶ್ರವಣೇನ' ಎಂಬುದಕ್ಕೆ ಹೀಗೆ ಅರ್ಥ - ವಿಚಾರವು ಮನನರೂಪವಾದ್ದರಿಂದ ಮನನ ಮಾಡುವುದಕ್ಕಿಂತ ಮೊದಲು ಉಪದೇಶವಾಕ್ಯದ ಅರ್ಥವನ್ನು ತಿಳಿಯುವ ಸಂದರ್ಭದಲ್ಲಿ (ವಿದ್ವಾಂಸರ ಪ್ರವಚನದಲ್ಲಿ ಭಾಗವಹಿಸುವುದರಿಂದ) ಎಂದು. ಹೀಗೆ ಅನೇಕ ಬಗೆಯಲ್ಲಿ ಅನ್ಯೋನ್ಯಾಶ್ರಯವು ಪರಿಹಾರವಾಗುತ್ತದೆಂದು ತಿಳಿಯಬೇಕು.

'ಅಪಶೂದ್ರಮ್' ಎಂದು 'ಅಪಪರಿಬಹಿರಂಚವಃ ಪಂಚಮ್ಯಾ' ಎಂಬ ಸೂತ್ರದಿಂದ ಅವ್ಯಯೀಭಾವಸಮಾಸವಾಗಿದೆ. 'ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ' ಎಂದು ಅಪಶೂದ್ರಾಧಿಕಾರಣದಲ್ಲಿ ಶೂದ್ರನಿಗೆ ಅಧಿಕಾರವನ್ನು ನಿಷೇಧಿಸಿದ್ದಾರೆ. ಸೂತ್ರದ ಅಭಿಪ್ರಾಯ ಹೀಗಿದೆ - ಬ್ರಹ್ಮಜ್ಞಾನ ಬಂದಿಲ್ಲವೆಂಬ ದುಃಖವು ಶಿಷ್ಯನಿಗೆ ಉಂಟಾಗಿದೆ. ಇದನ್ನು ಶೂದ್ರ ಶಬ್ದದಿಂದ ಸೂಚಿಸಿದ್ದಾರೆ. ಶೂದ್ರ! ಎಂಬ ಸಂಬೋಧನೆಯು ಶೂದ್ರಜಾತಿಯವನೆಂಬ ಅಭಿಪ್ರಾಯದಿಂದಲ್ಲ. ಅವನು ಬ್ರಹ್ಮವಿದ್ಯೆ ಇಲ್ಲದವನೆಂದು ಹಂಸವು ತಿರಸ್ಕರಿಸಿದುದನ್ನು ಕೇಳಿ ಗುರುವಿನ ಬಳಿಗೆ ಓಡಿ ಬಂದನು ಎಂದು. ಇದರಿಂದ ಶೂದ್ರನಿಗೆ ಅಧಿಕಾರವಿಲ್ಲ; ಶೂದ್ರೇತರರಿಗೆ ಮಾತ್ರ ಅಧಿಕಾರ. ತಾನು ಶೂದ್ರೇತರನಾದ್ದರಿಂದ ಅಧ್ಯಯನ ಮಾಡಬಹುದೆಂದು ತಿಳಿಯುತ್ತದೆ. ಆದ್ದರಿಂದ ಅನ್ಯೋನ್ಯಾಶ್ರಯ ಬರುತ್ತದೆ.

ಶಂಕೆ - ಬ್ರಹ್ಮಜ್ಞಾನವು ನಿತ್ಯಫಲಕವೆಂಬ ನಿಶ್ಚಯಜ್ಞಾನದಿಂದ ಇಲ್ಲಿ ಪ್ರವೃತ್ತಿ ಮಾಡಬೇಕಾಗಿಲ್ಲ. ಹಾಗಾದಲ್ಲಿ ಹಿಂದೆ ಹೇಳಿದಂತೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಹೊರತಾಗಿ ಕೇವಲ ಸಂಭಾವನೆಯಿಂದ ಪ್ರವೃತ್ತಿ ಉಂಟಾಗುತ್ತದೆ. ಸಂಭಾವನೆ ಎಂದರೆ 'ಪ್ರಾಯೇಣ ನಿತ್ಯಫಲಂ ಭವಿತುಮರ್ಹತಿ' ಎಂಬ ಉತ್ಕಟೇಕತರಕೋಟಿಕಸಂಶಯ ಎಂದರ್ಥ. ಮೋಕ್ಷವು ನಿತ್ಯಫಲಕವೆಂಬ ಸಂಭಾವನೆಯಿಂದ ಪ್ರವೃತ್ತಿ ಉಂಟಾಗುತ್ತದೆಂದು 'ಫಲಜ್ಞಾನಂ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಭಿನ್ನವಿಷಯತ್ವಾತ್' ಎಂಬ ಮಾತಿಗೆ ಹೀಗೆ ಅರ್ಥ - ಕರ್ಮಫಲವು ಅನಿತ್ಯವೆಂಬ ನಿಶ್ಚಯಜ್ಞಾನದಿಂದ ನಿತ್ಯಫಲಾಪೇಕ್ಷಿಯು ಕರ್ಮವಿಚಾರದಲ್ಲಿ ಪ್ರವೃತ್ತಿ ಮಾಡಲಾರನು. ಹೊರತು ಬ್ರಹ್ಮವಿಚಾರದಲ್ಲಿ ಪ್ರವೃತ್ತಿ ಮಾಡುತ್ತಾನೆ. ಬ್ರಹ್ಮವಿಚಾರದಲ್ಲಿ ಆವಾಗಲೇ ಪ್ರವೃತ್ತಿ ಉಂಟಾಗುತ್ತದೆ. ಯಾವಾಗ ಬ್ರಹ್ಮಜ್ಞಾನವು ನಿತ್ಯಫಲಕವೆಂದು ನಿಶ್ಚಯವಾಗುತ್ತದೋ ಆವಾಗ,

'ಅತಿಪ್ರಸಂಗಾಚ್ಚ' = ಕರ್ಮಫಲವು ಅನಿತ್ಯವೆಂಬ ಜ್ಞಾನದಿಂದ ಬ್ರಹ್ಮವಿಚಾರದಲ್ಲಿ ತೊಡಗುತ್ತಾನೆ ಎಂದರೆ ವಾತ್ಸ್ಯಾಯನನ ಕಾಮವಿಚಾರದಲ್ಲಿ ಏಕೆ ಪ್ರವೃತ್ತಿ ಮಾಡಲಾರನೆಂದು ಅತಿಪ್ರಸಂಗ ಬರುತ್ತದೆ. ಅದೇ ರೀತಿಯಾಗಿ ಸ್ವರ್ಗಾಪೇಕ್ಷಿಯು ಕೃಷಿಯು ಧಾನ್ಯಫಲಕವೆಂಬ ನಿಶ್ಚಯಜ್ಞಾನದಿಂದ ಜ್ಯೋತಿಷ್ಟೋಮದಲ್ಲಿ ಪ್ರವೃತ್ತಿ ಮಾಡಬೇಕಾದೀತು.

ಕರ್ಮಗಳು ಅಲ್ಪ ಅಸ್ಥಿರ ಫಲಗಳಿಗೆ ಸಾಧನವೆಂಬ ನಿಶ್ಚಯದ ಜೊತೆಗೆ ಬ್ರಹ್ಮಜ್ಞಾನವು ಅನಂತ ಸ್ಥಿರಫಲಸಾಧನವೆಂಬ ಸಂಶಯಜ್ಞಾನವು ಇದ್ದಲ್ಲಿ ಬ್ರಹ್ಮವಿಚಾರದಲ್ಲಿ ಪ್ರವೃತ್ತಿ ಉಂಟಾಗುತ್ತದೆ, ಹೀಗೆ ಹೇಳಿದಾಗ ಭಿನ್ನವಿಷಯವೆಂಬ ದೋಷವಿಲ್ಲ. 'ಅನ್ಯಸ್ಯ' ಎಂಬ ಪದಕ್ಕೆ 'ಕರ್ಮಕ್ಕೆ' ಎಂದರ್ಥ. 'ತಸ್ಯ' = ಬ್ರಹ್ಮಜ್ಞಾನ ಜನಕ ವಿಚಾರದಲ್ಲಿ.

*ಪರಿಪೂರ್ಣಚಂದ್ರಿಕಾ*

ಇಲ್ಲಿ ಒಟ್ಟು ಇಷ್ಟು ಅಭಿಪ್ರಾಯ - ಬ್ರಹ್ಮಜ್ಞಾನವು ಅನಂತ ಸ್ಥಿರಫಲಕವೆಂಬ ಸಂದೇಹವು ಇದೆಯೆಂದು ನೀವು ಹೇಳಿದಿರಿ. ಹಾಗೆ ಹೇಳಿದರೆ. ಬ್ರಹ್ಮವಿಚಾರದಲ್ಲಿ ಸಶಂಕಾಪ್ರವೃತ್ತಿ ಉಂಟಾದರೂ ನಿಃಶಂಕಾಪ್ರವೃತ್ತಿಯು ಉಂಟಾಗಲಾರದು. ಆ ರೀತಿಯಾದ ಪ್ರವೃತ್ತಿ ಉಂಟಾಗಬೇಕಾದರೆ ನಿತ್ಯಫಲಕವೆಂಬ ನಿಶ್ಚಯಜ್ಞಾನ ಬರಬೇಕು. ಆ ನಿಶ್ಚಯಜ್ಞಾನವು ವಿಚಾರದಿಂದಷ್ಟೆ ಬರಲು ಸಾಧ್ಯ - ಆದ್ದರಿಂದ ನಿಃಶಂಕಾಪ್ರವೃತ್ತಿಗೆ ವಿಚಾರವು ಕಾರಣ. ವಿಚಾರಕ್ಕೆ ನಿಃಶಂಕಾಪ್ರವೃತ್ತಿಯು ಕಾರಣವೆಂದು ಅನ್ಯೋನ್ಯಾಶ್ರಯ-ದೋಷ ಬಂದೇ ಬರುತ್ತದೆ. ಈ ಅನ್ಯೋನ್ಯಾಶ್ರಯ ದೋಷಗಳನ್ನು ನಾವು ಹೇಳಿದ ಕ್ರಮದಲ್ಲಿಯೇ ಪರಿಹರಿಸಿಕೊಳ್ಳಬೇಕು ಹೊರತು ಬೇರೆ ಮಾರ್ಗವಿಲ್ಲ. ನಮ್ಮ ಮಾರ್ಗವನ್ನೇ ನೀವು ಅನುಸರಿಸಿದ ಮೇಲೆ ನಮಗೆ ಅನ್ಯೋನ್ಯಾಶ್ರಯದೋಷವನ್ನು ಹೇಗೆ ಹೇಳುತ್ತೀರಿ. ಆದ್ದರಿಂದ ನಿತ್ಯಾನಿತ್ಯವಿವೇಕವು ಕೇವಲ ನಿದಿಧ್ಯಾಸನದ ಅಂಗವೇ ಹೊರತು ವಿಚಾರದ ಅಂಗವಲ್ಲ ಎಂಬ ನಿಮ್ಮ ಮಾತು ತಪ್ಪಾಯಿತು. ನಿತ್ಯಾನಿತ್ಯವಿವೇಕವು ವಿಚಾರದ ಅಂಗವೆಂದಾಗ ಯಾವ ದೋಷವೂ ಇಲ್ಲ. ಬ್ರಹ್ಮವಿದ್ಯಾಧಿಕಾರಿಗೆ ವಿಶೇಷಣವಾಗಬಹುದು.

ಹಾಗೆಯೇ ಶಮದಮಾದಿಗಳೂ ನಿದಿಧ್ಯಾಸನಕ್ಕೆ ಅಂಗವೆಂದ ಮಾತ್ರಕ್ಕೆ ವಿಚಾರಕ್ಕೆ ಅಂಗವಾಗಬಾರದೆಂದೇನೂ ಇಲ್ಲ. ಇದನ್ನು 'ಏವಂವಿತ್' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಏವಂವಿತ್' ಎಂಬ ವಾಕ್ಯದಿಂದ ಶಮಾದಿಗಳು ನಿಧಿಧ್ಯಾಸನದ ಅಂಗವೆಂದು ತಿಳಿಯುತ್ತಿದೆ 'ಪ್ರಶಾಂತಚಿತ್ತಾಯ' ಎಂಬ ಶ್ರುತಿಯಿಂದ ವಿಚಾರದ ಅಂಗವೆಂದು ತಿಳಿಯುತ್ತಿದೆ. ಪರಸ್ಪರಶ್ರುತಿಗಳಿಗೆ ವಿರೋಧವಿಲ್ಲ. ಯಾವ ರೀತಿಯಾಗಿ ಮೊಸರು, ಶ್ರುತಿ ಹೇಳುವಂತೆ ಯಾಗಸಾಧನವಾಗಿದೆ, ಅನುಭವ ಹೇಳುವಂತೆ ಸುಖಸಾಧನವಾಗಿದೆಯೋ, ಅದರಂತೆ ಶಮಾದಿಗಳು ನಿದಿಧ್ಯಾಸನಕ್ಕೂ ಅಂಗವಾಗಿವೆ. ವಿಚಾರಕ್ಕೂ ಸಾಧನವಾಗಿವೆ ಎಂದು ತಿಳಿಯಬೇಕು.

'ಪರೀಕ್ಷ್ಯ ಲೋಕಾನ್' ಎಂಬ ಶ್ರುತಿಗೆ ಹೀಗೆ ಅರ್ಥ - ಕರ್ಮಚಿತಾನ್ = ವಿಷ್ಣುಲೋಕಕ್ಕಿಂತ ಇತರವಾದ ಲೋಕಗಳನ್ನು ಅಸಾರಾನ್ = ಅನಿತ್ಯವೆಂದು ತಿಳಿದು. ಬ್ರಾಹ್ಮಣನು ವೈರಾಗ್ಯವನ್ನು ಸಂಪಾದಿಸಬೇಕು, ಏಕೆಂದರೆ ಅಕೃತಃ = ಮೋಕ್ಷವು ಕೃತೇನ = ಕರ್ಮದಿಂದ ನಾಸ್ತಿ = ಕೊಡುವುದಿಲ್ಲ. ಆದ್ದರಿಂದ ನಿತ್ಯಫಲಕವಾದ ಬ್ರಹ್ಮಜ್ಞಾನಕ್ಕೋಸ್ಕರ ಗುರುವನ್ನೇ ಆಶ್ರಯಿಸಬೇಕು.

ಶಂಕೆ - ನೀವು ಹೇಳಿದ 'ಪರೀಕ್ಷ್ಯ ಲೋಕಾನ್' ಇತ್ಯಾದಿ ಶ್ರುತಿಯಲ್ಲಿ ವಿಚಾರಕ್ಕಿಂತ ಮೊದಲು ಮಾಡಬೇಕಾದ ಗುರೂಪಸತ್ತಿಗೆ ನಿತ್ಯಾನಿತ್ಯವಿವೇಕ, ವೈರಾಗ್ಯಾದಿಗಳು ಆವಶ್ಯಕವೆಂದು ಹೇಳಲಾಗಿದೆ. ಆದ್ದರಿಂದ ನಿತ್ಯಾನಿತ್ಯವಿವೇಕಾದಿಗಳು ವಿಚಾರ ಮಾಡಿದ ಮೇಲೆ ತಿಳಿಯುತ್ತವೆಂದು ಹೇಗೆ ಹೇಳುತ್ತೀರಿ? ವಿಚಾರಕ್ಕಿಂತ ಮೊದಲೇ ವಿವೇಕಾದಿಗಳು ಇರುವುದಾದಲ್ಲಿ ವಿಚಾರ ಮಾಡುವುದು ವ್ಯರ್ಥವಲ್ಲವೆ?

ಸಮಾಧಾನ - ವಿಚಾರಕ್ಕಿಂತ ಮೊದಲು ನಿತ್ಯಾನಿತ್ಯವಿವೇಕಾದಿಗಳು ಇವೆ ಎಂದ ಮಾತ್ರಕ್ಕೆ ವಿಚಾರವು ವ್ಯರ್ಥವಾಗಬೇಕಾಗಿಲ್ಲ. ಏಕೆಂದರೆ ವಿಚಾರದ ಫಲ ನಿತ್ಯಾನಿತ್ಯವಿವೇಕಾದಿಗಳು ಮಾತ್ರವಲ್ಲ. ವಾಸುದೇವನ ಮಹಾಮಹಿಮೆಯನ್ನೂ ವಿಚಾರಶಾಸ್ತ್ರವು ವರ್ಣಿಸುತ್ತಿದೆ.

*ಜಿಜ್ಞಾಸಾಧಿಕರಣ*

ಹೀಗೆ 'ಪ್ರತಿವಚನಾದ್ಯಭಾವೇಽಪಿ' ಎಂಬುದರಿಂದ ಪ್ರಾರಂಭಿಸಿ ಇಲ್ಲಿಯ ತನಕ ಪ್ರತಿಪಾದಿಸಿದ ವಿಚಾರವನ್ನು ಉಪಸಂಹಾರ ಮಾಡುತ್ತಾ ತಾವು ಹೇಳಿದ ಎಲ್ಲಾ ವಿಷಯಗಳನ್ನು ಭಾಷ್ಯಾರೂಢ ಮಾಡುತ್ತಿದ್ದಾರೆ 'ತಸ್ಮಾತ್' ಇತ್ಯಾದಿ ವಾಕ್ಯದಿಂದ. ಸೂತ್ರದ 'ಅಥ' ಶಬ್ದಕ್ಕೆ 'ಪ್ರಾರಂಭ' ಮೊದಲಾದ ಅರ್ಥಗಳು ಸರಿಹೊಂದುವುದಿಲ್ಲ. ಆದ್ದರಿಂದ "ಬ್ರಹ್ಮವಿಚಾರಕ್ಕೆ ಆವಶ್ಯಕವಾದ ಅರ್ಹತೆಯನ್ನು ಸಂಪಾದಿಸಿದ ಅನಂತರ" ಎಂದೇ ಅರ್ಥವನ್ನು ಹೇಳಬೇಕು. ಈ ಅರ್ಥವು ಸ್ವಸಿದ್ಧಾಂತದಲ್ಲಿ ಯುಕ್ತವಾಗುತ್ತದೆ; ಹೊರತು ಪರಮತದಲ್ಲಿ ಯುಕ್ತವಾಗುವುದಿಲ್ಲ. ಹೀಗೆ ಪರಮತವನ್ನೆಲ್ಲಾ ನಿರಾಕರಿಸುವ ಉದ್ದೇಶದಿಂದ ಭಾಷ್ಯಕಾರರು, 'ಅಥಶಬ್ದಃ ಅಧಿಕಾರಾನಂತರ್ಯಾರ್ಥಶ್ಚ ಎಂದಿದ್ದಾರೆ.

## ಸಾರ

### ಸಾಧನ ಚತುಷ್ಟಯ ನಿರಾಕರಣೆ ರಾಮಾನುಜರಿಗೆ ಅಶಕ್ಯ

'ನಿತ್ಯಾನಿತ್ಯವಿವೇಕ ಈ ಶಾಸ್ತ್ರದಿಂದಲೆ ಬರಬೇಕು. ವೈಶೇಷಿಕ ಮುಂತಾದ ಬೇರೆ ಶಾಸ್ತ್ರಗಳನ್ನು ಓದಲು ಉಪನೀತನಾದ ವಟುವಿಗೆ ಕಾಲಾವಕಾಶವಿಲ್ಲ. ಅವನು ವೇದಾಧ್ಯಯನವನ್ನೆ ಮಾಡಬೇಕು. ಮತ್ತು ಬ್ರಹ್ಮಜ್ಞಾನದ ಫಲ ನಿತ್ಯ ಬೇರೆಲ್ಲವೂ ಅನಿತ್ಯವೆಂಬ ವಿವೇಕ ವೈಶೇಷಿಕಾದಿ ಶಾಸ್ತ್ರದಿಂದ ಬರಲಾರದು. ಇತಿಹಾಸಪುರಾಣದಿಂದಲೂ ವಿಚಾರವಿಲ್ಲದೆ ನಿಶ್ಚಯರೂಪವಾದ ವಿವೇಕ ಬರಲಾರದು. ಶಮಾದಿಗಳು ವಿಚಾರಕ್ಕೆ ಅವಶ್ಯಕವಲ್ಲ. ನಿದಿಧ್ಯಾಸನಕ್ಕೆ ಅವಶ್ಯಕ. ವಿಚಾರಕ್ಕೆ ಅವಶ್ಯಕವೆಂದರೆ ಶಮಾದಿಗಳಿಂದ ವಿಚಾರ. ವಿಚಾರದಿಂದ ಶಮಾದಿಗಳೆಂದು ಅನ್ಯೋನ್ಯಾಶ್ರಯ. ಏಕೆಂದರೆ ಮುಂದೆ ಬ್ರಹ್ಮಸೂತ್ರದಲ್ಲಿ ಶಮದಮಾದ್ಯುಪೇತಃ ಸ್ಯಾತ್ ಎಂದು ಶಮಾದಿಗಳನ್ನು ವಿಧಿಸಲಾಗಿದೆ. ಅದನ್ನು ತಿಳಿಯಲು ಶಾಸ್ತ್ರವಿಚಾರ ಮಾಡಬೇಕಾಗುತ್ತದೆ'. - ಹೀಗೆ ರಾಮಾನುಜಮತದಲ್ಲಿ ವಿಚಾರವಿದೆ. ಆದರೆ ಇದು ಸರಿಯಲ್ಲ. ಶ್ರುತಿಯನ್ನು ನಂಬುವ ಜಿಜ್ಞಾಸುವಿಗೆ ವಿಚಾರವಿಲ್ಲದೆಯೆ ಶ್ರುತಿಯಿಂದ ನಿತ್ಯಾನಿತ್ಯವಿವೇಕ ಬರಬಹುದು. ಮುಂದೆ ವಿಚಾರದಿಂದ ಇದನ್ನೆ ದೃಢೀಕರಿಸಬಹುದು. ಇತಿಹಾಸ ಪುರಾಣಗಳಿಂದಲೂ ಈ ವಿವೇಕ ಬರಬಹುದು. ಹಿತೈಷಿಗಳಾದ ಗುರುಗಳ ಉಪದೇಶದಿಂದಲೂ ಬರಬಹುದು. ಅಥವಾ ವಿಚಾರವು ಮನನರೂಪವಾದ್ದರಿಂದ ಶ್ರವಣಕಾಲದಲ್ಲಿ ಬಂದ ನಿತ್ಯಾನಿತ್ಯವಿವೇಕ ವಿಚಾರಕ್ಕೆ ಸಾಧನವಾಗಬಹುದು. ಅನ್ಯೋನ್ಯಾಶ್ರಯ ದೋಷವಿಲ್ಲ. ಇಲ್ಲದಿದ್ದರೆ, ಶೂದ್ರೇತರರು ಶಾಸ್ತ್ರದ ಅಧ್ಯಯನಕ್ಕೆ ಅರ್ಹರೆಂದು ಅಪಶೂದ್ರಾಧಿಕರಣದಲ್ಲಿ ಶಾಸ್ತ್ರದಿಂದಲೇ ತಿಳಿಯಬೇಕು. ಎಂಟು ವರ್ಷದ ಬ್ರಾಹ್ಮಣವಟು ವೇದಾಧ್ಯಯನ ಮಾಡಬೇಕೆಂದು ವೇದದಿಂದಲೇ ತಿಳಿಯಬೇಕು ಎಂದು ಅನ್ಯೋನ್ಯಾಶ್ರಯ. ನಿಶ್ಚಯವಾಗಿಯೆ ತಿಳಿಯಬೇಕಾಗಿಲ್ಲವಾದ್ದರಿಂದ ಅನ್ಯೋನ್ಯಾ-ಶ್ರಯವಿಲ್ಲ ಎನ್ನಕೂಡದು. ನಿಶ್ಚಯವಾಗಿ ತಿಳಿಯದೆ ನಿಃಶಂಕೆಯಿಂದ ಶಾಸ್ತ್ರವಿಚಾರದಲ್ಲಿ ಪ್ರವೃತ್ತಿ ಉಂಟಾಗದು. ಶಮಾದಿಗಳು ನಿದಿಧ್ಯಾಸನಕ್ಕೆ ಅವಶ್ಯಕವೆಂದ ಮಾತ್ರಕ್ಕೆ ವಿಚಾರಕ್ಕೆ ಅನಾವಶ್ಯಕವೆಂದಾಗುವುದಿಲ್ಲ ಎರಡೂ ಶ್ರುತಿಸಿದ್ಧವೆ ಆಗಿವೆ. ಅವುಗಳಿಗೆ ಪರಸ್ಪರ ವಿರೋಧವೂ ಇಲ್ಲ. ಮೊಸರು ಶಾಸ್ತ್ರದಲ್ಲಿ ಹೇಳಿದಂತೆ ಯಾಗ ಸಾಧನವಾಗಬಹುದು. ಅನುಭವ ಹೇಳಿದಂತೆ ಭೋಗಸಾಧನವೂ ಆಗಬಹುದು. 'ಪರೀಕ್ಷ್ಯ ಲೋಕಾನ್' ಎಂಬ ಶ್ರುತಿ ಗುರೂಪಸತ್ತಿಗೆ ವಿವೇಕ ಅವಶ್ಯಕವೆಂದಿದೆ. ವಿಚಾರದಿಂದಲೆ ವಿವೇಕ ಬರಬೇಕೆನ್ನುವುದು ಸರಿಯೆ? ವಿಚಾರಕ್ಕೆ ಮೊದಲು ವಿವೇಕವಿದ್ದ ಮಾತ್ರಕ್ಕೆ ವಿಚಾರ ವ್ಯರ್ಥವಾಗಬೇಕಿಲ್ಲ. ವಿವೇಕ ಒಂದೇ

ವಿಚಾರಫಲವಲ್ಲ. ಭಗವಂತನ ಮಹಿಮೆಯನ್ನೂ ವಿಚಾರಶಾಸ್ತ್ರ ತಿಳಿಸುತ್ತದೆ. ಹೀಗೆ ಸೂತ್ರದ ಅಥಶಬ್ದಕ್ಕೆ ಅಧಿಕಾರಾನಂತರ್ಯವೆಂದೇ ಅರ್ಥ ಹೇಳಬೇಕು. ಅದೂ ನಮ್ಮ ಸಿದ್ಧಾಂತದಲ್ಲಿ ಹೊರತು ಪರಮತದಲ್ಲಿ ಅಲ್ಲ.

• • • • •

## 'ತತ್ಫಲತಯಾ' ಎಂಬುದೇ ಶುದ್ಧಪಾಠ

**तात्पर्यचन्द्रिका –**

**टीकायां "तत्फलतया" इति पाठः साधुः । नतु "तत्परतया" इति । विघ्नोत्सारणासाधारणकारणरूपस्य विष्णुस्मरणाथशब्दोच्चारणादेर्मङ्गलस्याशब्दार्थत्वेन तत्परत्वायोगात् । प्रशस्तरूपमङ्गलात्मकस्य ब्रह्मणः अथशब्दावयवाकारार्थत्वेऽपि, तस्येहाप्रस्तुतत्वात् । "तस्याभिधेयमर्थमाह" इत्युत्तरग्रन्थाननुगुणत्वात् । "मङ्गलप्रयोजनकः" इति सुधाग्रन्थविरोधाच्च । "मङ्गलोत्त्यादेः" इति टीकाया अपि विघ्ननिवर्तकशब्दोच्चारणादेरित्येवार्थः । अन्यथा "शङ्खवीणावेणुध्वनिवत् श्रुतितो माङ्गलिकत्वात्" इति सुधाविरोधात् । "तत्परतया" इति पाठेऽप्ययमेवार्थोऽनुसन्धेयः । एवंच 'अथशब्दो मङ्गलार्थः' इति भाष्यस्य, अथशब्दो विघ्नोत्सारणासाधारणकारणात्मकानुष्ठेयविष्णुस्मरणाथशब्दोच्चारणरूपमङ्गलप्रयोजनकः प्रशस्तरूपाननुष्ठेयविष्ण्वभिधायकश्चेत्यर्थद्वयं द्रष्टव्यम् ।**

ಅನುವಾದ - ತತ್ತ್ವಪ್ರಕಾಶಿಕಾದಲ್ಲಿ 'ತತ್ಫಲತಯಾ' 'ಅಥ ಶಬ್ದವು ಮಂಗಳ ಫಲಕವಾದ್ದರಿಂದ' ಎಂದು ಹೇಳಲಾಗಿದೆ. ಕೆಲವು ಪ್ರತಿಗಳಲ್ಲಿ 'ತತ್ಪರತಯಾ' 'ಅಥ ಶಬ್ದಕ್ಕೆ ಮಂಗಳವೆಂಬ ಅರ್ಥದಲ್ಲಿ ತಾತ್ಪರ್ಯವಿರುವುದರಿಂದ' ಎಂಬ ಪಾಠಾಂತರವಿದೆ. ಆದರೆ ಇದು ಸರಿಯಲ್ಲ. ಗ್ರಂಥದ ಆರಂಭದಲ್ಲಿ ಆವಶ್ಯಕವಾದ ವಿಘ್ನನಿವಾರಣೆಗೆ ಅಸಾಧಾರಣಕಾರಣವಾದ ವಿಷ್ಣುಸ್ಮರಣೆ, 'ಅಥ' ಶಬ್ದದ ಉಚ್ಚಾರಣೆ, ಇವು ಮಂಗಳಸ್ವರೂಪಗಳಾದ್ದರಿಂದ 'ಅಥ' ಶಬ್ದದ ಅರ್ಥವಲ್ಲ, ಹೀಗೆ 'ಅಥ' ಶಬ್ದಕ್ಕೆ ಮಂಗಳಾರ್ಥದಲ್ಲಿ ತಾತ್ಪರ್ಯವಿರಲು ಸಾಧ್ಯವಿಲ್ಲ. ಪರಬ್ರಹ್ಮನು ಮಂಗಳಸ್ವರೂಪನಾಗಿರುವುದು ಪ್ರಶಸ್ತ ಎಂಬರ್ಥದಲ್ಲಿ, ಇಂತಹ ಪರಬ್ರಹ್ಮನು 'ಅಥ' ಶಬ್ದದ ಅವಯವವಾದ ಅಕಾರದಿಂದ ಪ್ರತಿಪಾದ್ಯನಾಗಿದ್ದರಿಂದ 'ಅಥ' ಶಬ್ದವು ಮಂಗಳದಲ್ಲಿ ತಾತ್ಪರ್ಯ ಉಳ್ಳದ್ದೆಂದು ಹೇಳುತ್ತೇವೆಂದರೆ, ಇದು ಸರಿಯಲ್ಲ. ಮಂಗಳ ಸ್ವರೂಪನಾಗಿರುವುದು ಪ್ರಶಸ್ತ ಎಂಬರ್ಥದಲ್ಲಿ. ಗ್ರಂಥಾರಂಭದಲ್ಲಿ ಇಂತಹ ಮಂಗಳವು ಅಪ್ರಸ್ತುತವಾಗಿದೆ.

ಮಂಗಳವು 'ಅಥ' ಶಬ್ದದ ವಾಚ್ಯಾರ್ಥವೆಂದು ಹೇಳಿದರೆ ಮುಂದಿನ ಟೀಕೆಯಲ್ಲಿ 'ತಸ್ಯಾಭಿಧೇಯ-ಮರ್ಥಮಾಹ' ಎಂದು ಹೇಳಲಾಗಿದೆ. ಅಂದರೆ ಅಥ ಶಬ್ದದ ವಾಚ್ಯಾರ್ಥವನ್ನು ಇನ್ನು ಮುಂದೆ ಹೇಳುತ್ತಾರೆಂದು. ಅಂದರೆ ಹಿಂದೆ ಹೇಳಿದ್ದು ಅಲ್ಲವೆಂದಾಯಿತು. ಈ ಉತ್ತರ ಗ್ರಂಥದ ಅನಾನುಗುಣ್ಯ ಬರುತ್ತದೆ.

ಮತ್ತು ಸುಧಾದಲ್ಲಿ 'ಮಂಗಳಪ್ರಯೋಜನಕಃ' ಮಂಗಳವು ಅಥ ಶಬ್ದದ ಪ್ರಯೋಜನವೆಂದು ಹೇಳಲಾಗಿದೆ. ಅದರ ವಿರೋಧವು ಬರುತ್ತದೆ.

'ಮಂಗಳೋಕ್ತ್ಯಾದೇಃ ಶಬ್ದಾಂತರೇಣಾಪಿ ಸಂಭವಾತ್' ಮಂಗಲವನ್ನು ಬೇರೆ ಶಬ್ದದಿಂದಲೂ ಹೇಳಬಹುದು' ಎಂಬ ಟೀಕಾವಾಕ್ಯಕ್ಕೂ ಮಂಗಳವು ಅಥಶಬ್ದದ ಅರ್ಥವೆಂದು ಅರ್ಥವಲ್ಲ. ಮಂಗಲವನ್ನು ಹೇಳುವುದು ಎಂದರೆ ವಿಘ್ನನಿವರ್ತಕವಾದ ಮಂಗಳಕರ ಶಬ್ದವನ್ನು ಉಚ್ಚರಿಸುವುದು ಎಂದರ್ಥ. ಇಲ್ಲವಾದರೆ 'ಶಂಖವೀಣಾವೇಣುಧ್ವನಿವತ್ ಶ್ರುತಿತೋ ಮಂಗಲಿಕತ್ವಾತ್' ಶಂಖ ವೀಣೆ, ಕೊಳಲುಗಳ ಧ್ವನಿಯಂತೆ ಅಥ ಶಬ್ದವು ಕೇಳಿಸಿದರೆ ಸಾಕು ಮಂಗಳವಾಗುತ್ತದೆಂಬ ಸುಧಾವಾಕ್ಯದ ವಿರೋಧ ಬರುತ್ತದೆ.

'ತತ್ಪರತಯಾ' ಎಂಬ ಪಾಠವು ಪ್ರಾಮಾಣಿಕವೆಂದಿಟ್ಟುಕೊಳ್ಳುವುದಾದರೆ 'ಪರ' ಶಬ್ದಕ್ಕೆ ಮುಖ್ಯಪ್ರಯೋಜನವೆಂಬರ್ಥವನ್ನು ಇಟ್ಟುಕೊಂಡು ಅಥ ಶಬ್ದಕ್ಕೆ ಮಂಗಳ ಉಂಟುಮಾಡುವುದೇ ಮುಖ್ಯ ಪ್ರಯೋಜನವೆಂದು ತಿಳಿಯಬೇಕು.

'ಅಥಶಬ್ದೋ ಮಂಗಲಾರ್ಥಃ' ಎಂಬ ಭಾಷ್ಯದಲ್ಲಿ ಈ ಎರಡೂ ಅರ್ಥವು ವಿವಕ್ಷಿತವಾಗಿದೆಯೆಂದು ತಿಳಿಯಬೇಕು - ವಿಷ್ಣುಸ್ಮರಣೆ ಅಥಶಬ್ದೋಚ್ಚಾರಣಗಳಂತಹ ಮಂಗಳವು ಅಥ ಶಬ್ದದ ಅರ್ಥ = ಪ್ರಯೋಜನ. ಹಾಗೆಯೇ ಪ್ರಶಸ್ತನಾದ್ದರಿಂದ ಮಂಗಳನೆನಿಸಿದ ವಿಷ್ಣುವು ನಮ್ಮಿಂದ ಅನನುಷ್ಠೇಯ-ನಾಗಿದ್ದಾನೆ. ಇಂತಹ ವಿಷ್ಣುವು 'ಅರ್ಥ' ಎಂದರೆ ವಾಚ್ಯಾರ್ಥನಾಗಿದ್ದಾನೆ. ಹೀಗೆ ಎರಡು ಅರ್ಥಗಳು.

**ಕಠಿಣಪದಾರ್ಥ**

**ತತ್‌ಫಲತಯಾ** = ಮಂಗಲಫಲಕವಾದ್ದರಿಂದ. **ತತ್‌ಪರತಯಾ** = ಮಂಗಳಾರ್ಥಕವಾದ್ದರಿಂದ. **ಇಹ** = ಗ್ರಂಥಾರಂಭದಲ್ಲಿ, **ಅನ್ಯಥಾ** = ವಿಘ್ನನಿವರ್ತಕ ಮಂಗಳಕರ ಶಬ್ದವೆಂದು ಹೇಳದಿದ್ದರೆ. **ಸಮಾನಾಧಿಕರಣಾನಾಮ್** = ಒಬ್ಬನೇ ವ್ಯಕ್ತಿಯಲ್ಲಿರುವ.

**प्रकाशः** – एवमथशब्दार्थं समर्थ्य "यतो नारायणप्रसादमृते न मोक्षः" इत्यन्ताथशब्दार्थप्रपञ्चनपरभाष्यटीकाक्षराणि दुर्घटार्थानि योजयति ।। टीकाया-मिति ।। 'तत्परतया' इति काचित्कपाठस्य लेखकदोषत्वं मन्वान आह ।। तत्फलतयेति ।। योगरूढिगौणीलक्षणाभेदभिन्नमुख्यामुख्यवृत्तिव्यतिरेकेण तात्पर्य-

वृत्यभावस्य कर्मनिर्णयादौ समर्थिततत्वेन, शब्दवृत्तिविषयस्यैव तात्पर्य-वृत्तिविषयतया मङ्गलस्य पूर्वोक्तरीत्या शब्दार्थत्वाभावेनाथशब्दस्य तत्परताऽसम्भवादित्यर्थः । ननु ''अकारः परब्रह्माभिधायकः'' इति भाष्योदाहृतस्मृतेरकारस्य विष्णुवाचित्वात् तस्य च ''मङ्गलानां च मङ्गलम्'' इति स्मृत्या परममङ्गलरूपत्वात् 'तत्परतया' इति पाठ उपपद्यत इत्यत आह ।। प्रशस्तेति ।। नन्वेवं ''सिसृक्षोः'' इति भाष्यावतारिकायां 'मङ्गलोक्त्यादेः' इत्ययुक्तम् । तत्र मङ्गलस्योक्तिरभिधानं तस्य शब्दान्तरेणापि सम्भवादित्यर्थप्रतीतेरित्यत आह ।। मङ्गलोक्त्यादेरिति ।। इति पाठेऽपीति ।। तन्मङ्गलं परं मुख्यं फलं यस्य तत्वेनेत्यर्थ उक्तो भवति । भाष्ये उदाहरिष्यमाणप्रमाणानुसारात् ''मङ्गलार्थः'' इति भाष्यं द्वेधा व्याचष्टे ।। एवं चेति ।। मङ्गलस्य फलत्वे सतीत्यर्थः ।। अनुष्ठेयेति ।। अथशब्देन जायमानविष्णुस्मृत्यादेः कृतिसाध्यत्वादिति भावः ।। अननुष्ठेयेति ।। विष्णोरकृतिसाध्यत्वादिति भावः । विष्णुवाचत्वोक्तिश्च मङ्गलफलकत्वोपपादनायेति ध्येयम् । उक्तं च तत्वप्रदीपे –''अथशब्दः श्रवणकीर्तनाभ्यां मङ्गलफलः । विष्णोः परममङ्गलस्य वाचकत्वेनातिप्रियत्वात्''इति । एतेन – क्वचित् 'तत्परतया' इति पाठस्य 'मङ्गलरूपविष्णुपरतया' इत्यर्थः क्वचित् 'तत्फलतया' इति पाठस्य मङ्गलफलकतयेत्यर्थ उक्तो भवतीति केचिदाहुः । एतेन – यत्तु केनचिदुक्तं – भाष्ये ''मङ्गलार्थोऽधिकारानन्तर्यार्थश्च'' इति चशब्दोऽनुपपन्नः । तुल्यार्थे हि समुच्चयः । यथा गोशब्दः सास्नावदर्थो जलार्थश्चेति । नचेह मङ्गलं वाच्यम् । येन चकारोपपत्तिः । 'मङ्गलफलक आनन्तर्यवाचकः' इत्येतावत एव सामञ्जस्यादिति, तन्निरस्तम् । मङ्गलरूपविष्ण्वर्थकत्वस्यापि वर्णनात् । सकृत् श्रुतस्याप्यथशब्दस्य तन्त्रावृत्त्येकशेषाणामन्यतमाश्रयणेनार्थद्वयोपपत्तेः । न केवलं मङ्गलफलकः किंत्वानन्तर्यवाचकश्चेति चशब्दोपपत्तेश्चेति ।

गुरुराजीय – अशब्दार्थत्वेनेति ।। अथेत्युक्ते अथशब्दोच्चारणत्वप्रकारकस्य विष्णुस्मरणत्वप्रकारकस्य बोधस्याजननेन तस्याथशब्दवाच्यत्वाभावेनेत्यर्थः ।। अकारेति ।। ''अ इति ब्रह्म''इति श्रुतिमभिप्रेत्यैतदुक्तमिति न ''तथौ प्राणात्मकौ

**प्रोक्तौ**''इत्यादिविरोधः । तस्य पशस्तरूपमङ्गलात्मकस्य विष्णोः । इह ग्रन्थे विघ्नोत्सारणासाधारणकारणत्वस्य ग्रन्थारम्भे प्रस्तुतत्वेन प्रशस्तरूपमङ्गलात्मकस्याप्रस्तुतत्वादित्यर्थः । ननु साधारणस्यापि विष्णोर्मङ्गलादिनिष्ठस्य विघ्नोत्सारणासाधारणकारणत्वस्यापि सत्त्वात्कथं तस्याप्रस्तुतत्वम् । तथाच तत्परतयेति पाठोऽपि युक्त एवेत्यत आह ।। **तस्याभिधेयमिति** ।। न तावतापि तस्याभिधेयत्वनिषेधः विशेषविधेः शेषनिषेधेनानन्तरीयकत्वं च विष्णावेवाथशब्दार्थत्वप्रतिपादक अः इत्यादि श्रुतिविरोधादयुक्तमित्यत आह ।। **मङ्गलप्रयोजनक इतीति** ।।

ननु तत्परतयेति पाठः साधुः टीकायामेवोत्तरत्राथशब्दस्य मङ्गलप्रतिपादकताया वक्ष्यमाणत्वादित्यत आह ।। **मङ्गलोक्त्यादेरिति टीकाया अपीति** ।। नन्वेवं तत्परतयेत्यपि मूलकोशेषु पाठो दृश्यते तस्य का गतिरित्यत आह ।। **तत्परतयेति पाठेपीति** ।। **अयमेवेति** ।। परशब्द उद्देश्यपर इति भावः ।

नन्वेवं भाष्ये उत्तरत्र ब्रह्मणोऽथशब्दार्थत्वस्य वक्ष्यमाणत्वात् तद्विरोध इत्यतः सुधादेरनुष्ठेयमङ्गलाभिप्रायकत्वात् भाष्यस्य चाननुष्ठेयमङ्गलपरत्वात् न विरोध इति भावेनाह ।। **एवं चेति** ।। सुधायां तु प्रसिद्धलौकिकमङ्गलस्यैवाथशब्दवाच्यत्वमभिप्रेतमिति भावः । एवंच ''**तथौ प्राणात्मकौ प्रोक्तौ**'' इत्यादिप्रमाणार्थस्यापि ''**अथशब्दो मङ्गलार्थः**'' इति भाष्येण ''**परस्य ब्रह्मणो विष्णोः प्रसादा**''दिति प्रमाणार्थस्यापि '**अतः शब्दो हेत्वर्थः**'' इति भाष्येण सङ्ग्रह इत्यप्युक्तं भवति ।

**ವಿವರಣೆ** - ಇಲ್ಲಿಯ ತನಕ 'ಅಥ' ಶಬ್ದದ ಅರ್ಥವೇನೆಂದು ಸಮರ್ಥಿಸಿದರು. ಪ್ರಕೃತ ಅಥ ಶಬ್ದಾರ್ಥವನ್ನು ವಿವರಣೆ ಮಾಡಲು ಹೊರಟ 'ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ' ಎಂಬ ಭಾಷ್ಯದವರೆಗಿನ ಭಾಗವನ್ನು ವ್ಯಾಖ್ಯಾನಿಸಲು ಹೊರಟಿದ್ದಾರೆ. ಭಾಷ್ಯದ ಹಾಗೂ ಟೀಕೆಯ ಕೆಲವು ಅಕ್ಷರಗಳು ದುರ್ಘಟಾರ್ಥವುಳ್ಳವುಗಳಾಗಿದ್ದಾವೆ. ಅದನ್ನು ಯೋಚನೆ ಮಾಡಲು 'ಟೀಕಾಯಾಂ' ಇತ್ಯಾದಿ ವಾಕ್ಯವು ಹೊರಟಿದೆ. ಟೀಕೆಯಲ್ಲಿ 'ತತ್ಫಲತಯಾ' ಎಂಬ ಪಾಠವೇ ಸಾಧುವಾಗಿದೆ. 'ತತ್ಪರತಯಾ' ಎಂಬ ಪಾಠವು ಲೇಖಕರ ಪ್ರಮಾದದಿಂದ ಸೇರಿರಬಹುದು. 'ಅಥ' ಶಬ್ದವನ್ನು ಉಚ್ಚಾರಣೆ ಮಾಡುವುದರಿಂದ ಮಂಗಳವಾಗುತ್ತದೆ. ಆದ್ದರಿಂದ 'ತತ್ಫಲತಯಾ' ಮಂಗಳವನ್ನುಂಟುಮಾಡುವುದರಿಂದ ಎಂಬ ಅರ್ಥವು ಸರಿಹೊಂದುತ್ತದೆ. ಆದರೆ 'ಅಥ' ಶಬ್ದಕ್ಕೆ ಮಂಗಳವೆಂಬರ್ಥವಾಗಲಿ ತಾತ್ಪರ್ಯವಾಗಲಿ ಕೊಡುವುದಿಲ್ಲ.

*ಪರಿಪೂರ್ಣಚಂದ್ರಿಕಾ*

ಆದ್ದರಿಂದ 'ತತ್ಪರತಯಾ' 'ಮಂಗಳವೆಂಬರ್ಥದಲ್ಲಿ ತಾತ್ಪರ್ಯವಿರುವುದರಿಂದ' ಎಂಬರ್ಥವನ್ನು ಇಟ್ಟುಕೊಂಡರೆ ಅನುಚಿತವಾಗುತ್ತದೆ. 'ಮಂಗಳ' ಎಂಬರ್ಥವು ಅಥ ಶಬ್ದಕ್ಕೆ ಏಕೆ ಕೂಡವುದಿಲ್ಲ? ಎಂದರೆ ಶಬ್ದದಲ್ಲಿ ಯೋಗ ರೂಢಿಗಳೆಂದು ಮುಖ್ಯವೃತ್ತಿಗಳು ಎರಡು ವಿಧ. ರೂಢಿ - ಲಕ್ಷಣಾ ಅಮುಖ್ಯವೃತ್ತಿಗಳು. ಇಷ್ಟು ವೃತ್ತಿಗಳನ್ನು ಬಿಟ್ಟು ಬೇರೆ ವೃತ್ತಿಗಳು ಶಬ್ದಗಳಲ್ಲಿ ಇರಲಾರವೆಂದು ಕರ್ಮನಿರ್ಣಯಾದಿ ಗ್ರಂಥಗಳಲ್ಲಿ ಸಮರ್ಥಿಸಿದ್ದಾರೆ. ಯಾವುದು ಶಬ್ದವೃತ್ತಿಗೆ ವಿಷಯವಾಗಿರುತ್ತದೊ, ಅದಷ್ಟೇ ತಾತ್ಪರ್ಯವೃತ್ತಿಗೆ ವಿಷಯವಾಗುತ್ತದೆ. ಪ್ರಕೃತ ಅಥಶಬ್ದಕ್ಕೆ 'ಮಂಗಳ' ಎಂಬರ್ಥವು ಯಾವ ವೃತ್ತಿಯಿಂದಲೂ ಕೂಡುವುದಿಲ್ಲ. ಆದ್ದರಿಂದ ಅಥಶಬ್ದಕ್ಕೆ ಮಂಗಳಾರ್ಥದಲ್ಲಿ ತಾತ್ಪರ್ಯವೂ ಇರಲು ಸಾಧ್ಯವಿಲ್ಲ.

**ಶಂಕೆ** - 'ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ' 'ಎಲ್ಲಾ ಅಕ್ಷರಗಳಿಗೂ ಅಕಾರವೇ ಮೂಲ. ಇದು ಪರಬ್ರಹ್ಮವಾಚಕವಾಗಿದೆ' ಎಂದು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯು ಅಕಾರವನ್ನು ವಿಷ್ಣುವಾಚಿಯೆನ್ನುತ್ತಿದೆ. ಅಕಾರವಾಚ್ಯನಾದ ವಿಷ್ಣುವಾದರೂ 'ಮಂಗಳಾನಾಂ ಚ ಮಂಗಳಂ' 'ಮಂಗಳ-ವಸ್ತುಗಳಿಗೂ ಮಂಗಳನಾಗಿದ್ದಾನೆ' ಎಂಬ ಸ್ಮೃತಿ ಹೇಳುವಂತೆ ಪರಮಮಂಗಳಸ್ವರೂಪನಾಗಿದ್ದಾನೆ. ಹೀಗೆ ಅಥ ಶಬ್ದದಲ್ಲಿ ಅಕಾರ ವಿಷ್ಣುವಾಚಕ, ವಿಷ್ಣುವು ಮಂಗಳಸ್ವರೂಪನಾಗಿದ್ದಾನೆ. ಆದ್ದರಿಂದ ಮಂಗಲ-ಪರತ್ವವನ್ನು ಅಥ ಶಬ್ದಕ್ಕೆ ಏಕೆ ಹೇಳಬಾರದು? ಈ ಪ್ರಶ್ನೆಗೆ 'ಪ್ರಶಸ್ತ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**ಸಮಾಧಾನ** - ಅಕಾರವಾಚ್ಯನಾದ ವಿಷ್ಣುವು ಮಂಗಳಸ್ವರೂಪನೆಂದು ಪ್ರಸಿದ್ಧನಾಗಿರುವುದು ಪ್ರಶಸ್ತ ಎಂಬರ್ಥದಲ್ಲಿ. ಇಂತಹ ಪ್ರಶಸ್ತಾರ್ಥಕ ಮಂಗಳವು ಗ್ರಂಥಾರಂಭದಲ್ಲಿ ಅಪ್ರಸ್ತುತವಾಗಿದೆ. ಪ್ರಕೃತದಲ್ಲಿ ಬೇಕಾದುದು ವಿಘ್ನನಿವಾರಕವಾದ ವಿಷ್ಣುಸ್ಮರಣೆ, ಅಥಶಬ್ದೋಚ್ಚಾರಣೆ ಮೊದಲಾದುದು. ಇಂತಹ ಮಂಗಳವು ಅಥ ಶಬ್ದದ ಅರ್ಥವಲ್ಲ. ಆದ್ದರಿಂದ ಅಥ ಶಬ್ದವು ಯಾವ ಮಂಗಳವನ್ನು ಹೇಳುತ್ತದೋ ಅದು ಅಪ್ರಸ್ತುತವಾದ್ದರಿಂದ ನಮಗೆ ಬೇಡ. ಯಾವ ರೂಪವಾದ ಮಂಗಳವು ನಮಗೆ ಬೇಕೋ ಅದನ್ನು ಅಥಶಬ್ದವು ಹೇಳುತ್ತಿಲ್ಲ. ಆದ್ದರಿಂದ ಅಥ ಶಬ್ದವು ಮಂಗಳಾರ್ಥಕವಲ್ಲ ಎಂಬ ಮಾತು ಸರಿಯೇ ಆಗಿದೆ.

**ಶಂಕೆ** - 'ಸಿಸೃಕ್ಷೋಃ ಪರಮಾದ್ವಿಷ್ಣೋಃ' 'ಸೃಷ್ಟಿ ಮಾಡಲು ಬಯಸಿದ ಮಹಾವಿಷ್ಣುವಿನಿಂದ' ಎಂಬ ಭಾಷ್ಯದ ಅವತಾರಿಕೆಯ ಸಂದರ್ಭದಲ್ಲಿ ಟೀಕೆಯಲ್ಲಿ ಹೀಗೆ ಹೇಳಲಾಗಿದೆ. - 'ಮಂಗಳೋಕ್ತ್ಯಾದೇಃ ಶಬ್ದಾಂತರೇಣಾಪಿ ಸಂಭವಾತ್' 'ಮಂಗಳವನ್ನು ಬೇರೆ ಶಬ್ದದಿಂದಲೂ ಹೇಳಲು ಸಂಭವವಿರುವುದರಿಂದ' ಎಂದು ಹೇಳಲಾಗಿದೆ. ಮಂಗಳವು ಅಥ ಶಬ್ದದ ಅರ್ಥವಲ್ಲವೆಂದು ನೀವು ಹೇಳಿದರೆ ಟೀಕೆಯ ಈ ಮಾತು ತಪ್ಪಾಗುತ್ತದೆ. ಏಕೆಂದರೆ ಟೀಕಾಮಾತಿನ ಅಭಿಪ್ರಾಯ ಹೀಗಿದೆ - ಮಂಗಳವನ್ನು ಅಥ ಶಬ್ದ ಬಿಟ್ಟು ಬೇರೆ ಶಬ್ದದಿಂದಲೂ ಹೇಳಲು ಬರುವಾಗ ಅಥ ಶಬ್ದದಿಂದಲೇ ಏಕೆ ಹೇಳುತ್ತೀರಿ? ಎಂದು. ಈ ರೀತಿಯಾಗಿ ಪ್ರಶ್ನೆ ಮಾಡಿಕೊಳ್ಳಬೇಕಾದರೆ ಮಂಗಳವು ಅಥ ಶಬ್ದದ ಅರ್ಥವೆಂದು ಒಪ್ಪಿಕೊಂಡಿದ್ದಾರೆಂದೇ ಹೇಳಬೇಕು. ಒಂದು ವೇಳೆ ಮಂಗಳವು ಅಥ ಶಬ್ದದ ಅರ್ಥವೆಂದು ಒಪ್ಪಿಕೊಳ್ಳದಿದ್ದರೆ 'ಶಬ್ದಾಂತರೇಣಾಪಿ ಸಂಭವಾತ್' ಎಂಬ ಆಕ್ಷೇಪವಾದರೂ ಹೇಗೆ ಕೊಡಲು ಸಾಧ್ಯ? ಈ ಪ್ರಶ್ನೆಗೆ ಮಂಗಳೋಕ್ತ್ಯಾದೇಃ ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

**ಸಮಾಧಾನ** - 'ಮಂಗಳೋಕ್ತ್ಯಾದೇಃ ಶಬ್ದಾಂತರೇಣಾಪಿ ಸಂಭವಾತ್' ಎಂಬ ಟೀಕೆಯಲ್ಲಿರುವ 'ಮಂಗಳೋಕ್ತಿ' ಎಂಬ ಮಾತಿಗೆ ಮಂಗಳಸ್ವರೂಪವಾಗಿದ್ದು ವಿಘ್ನನಿವಾರಣೆ ಮಾಡಬಲ್ಲ ಶಬ್ದದ ಉಚ್ಚಾರಣೆ ಎಂದಷ್ಟೇ ಅರ್ಥ, ಹೊರತು ಮಂಗಳ ಎಂಬರ್ಥವುಳ್ಳ ಶಬ್ದದ ಉಕ್ತಿ ಎಂದರ್ಥವಲ್ಲ. ಈ ರೀತಿಯಾದ ಅರ್ಥವು ಟೀಕಾರಾಯರಿಗೆ ಸಮ್ಮತವೆಂದು ಒಪ್ಪಿಕೊಳ್ಳಲೇಬೇಕು. ಇಲ್ಲವಾದಲ್ಲಿ 'ಶಂಖ, ವೀಣೆ, ವೇಣುಗಳ ಧ್ವನಿಯು ಕೇಳಿದ ಮಾತ್ರದಿಂದ ಹೇಗೆ ಮಂಗಳವಾಗುತ್ತದೆ?' ಎಂದು ಸುಧಾದಲ್ಲಿ ಹೇಳಿದ ಮಾತಿಗೆ ವಿರೋಧ ಬರುತ್ತದೆ. ಆದ್ದರಿಂದ ಮಂಗಳವು ಅಥ ಶಬ್ದದ ಅರ್ಥವಾಗಲಾರದು. ಇದರಿಂದ 'ತತ್ಪರತಯಾ' ಎಂಬ ಪಾಠವು ಅಸಾಧುವೆಂದು ತಿಳಿಯುತ್ತದೆ. ಅಥವಾ ಕೆಲವು ಪ್ರತಿಗಳಲ್ಲಿರುವಂತೆ 'ತತ್ಪರತಯಾ' ಎಂಬ ಪಾಠವನ್ನೂ ಇಟ್ಟುಕೊಳ್ಳಬಹುದು. ಈ ಪಾಠವನ್ನಿಟ್ಟುಕೊಂಡಾಗ ಮೇಲೆ ಹೇಳಿದ ಅರ್ಥವನ್ನೇ ವಿವಕ್ಷಿಸಿಕೊಳ್ಳಬೇಕು. ಪರ ಎಂದರೆ 'ಮುಖ್ಯ ಪ್ರಯೋಜನ' ಎಂದರ್ಥ. ಆವಾಗ ತತ್ = ಮಂಗಳವೇ, ಪರಂ = ಮುಖ್ಯವಾದ ಪ್ರಯೋಜನವು ಯಾವುದಕ್ಕೆ ಇದೆಯೊ ಅದರಿಂದ ಎಂದು. ಅಂದರೆ ಮಂಗಳವೇ ಅಥಶಬ್ದಕ್ಕೆ ಮುಖ್ಯ ಪ್ರಯೋಜನವಾಗಿರುವುದರಿಂದ ಎಂಬರ್ಥವನ್ನು ಇಟ್ಟುಕೊಳ್ಳಬೇಕು.

'ಅಥಶಬ್ದೋ ಮಂಗಳಾರ್ಥಃ' ಎಂಬ ಭಾಷ್ಯವಾಕ್ಯಕ್ಕೆ ಮುಂದೆ ಉದಾಹರಿಸುವ ಪ್ರಮಾಣಗಳಿಗೆ ಅನುಸಾರವಾಗಿ ಎರಡು ಅರ್ಥಗಳನ್ನು ವಿವಕ್ಷಿಸಿಕೊಳ್ಳಬೇಕೆಂದು 'ಏವಂ ಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ವಿಘ್ನನಿವಾರಣೆಗೆ ಅಸಾಧಾರಣಕಾರಣವಾಗಿದ್ದು ನಮ್ಮಿಂದ ಅನುಷ್ಠೇಯವಾದದ್ದು ವಿಷ್ಣುಸ್ಮರಣೆ ಮತ್ತು ಅಥ ಶಬ್ದದ ಉಚ್ಚಾರಣೆ. ಈ ಅರ್ಥದಲ್ಲಿ 'ಅಥ' ಶಬ್ದಕ್ಕೆ ಪ್ರಯೋಜನ ಎಂದರ್ಥ. ಇನ್ನು ಪ್ರಶಸ್ತರೂಪನಾದ ಅನನುಷ್ಠೇಯನಾದ ವಿಷ್ಣುವನ್ನು ಅಥ ಶಬ್ದದ ಅರ್ಥವೆಂದಿಟ್ಟುಕೊಂಡಾಗ 'ಅರ್ಥ' ಶಬ್ದಕ್ಕೆ ವಾಚ್ಯ ಎಂದರ್ಥ. ಹೀಗೆ ಭಾಷ್ಯದ ಮಾತಿಗೆ ಎರಡು ರೀತಿಯಾದ ಅರ್ಥವನ್ನು ತಿಳಿಯಬೇಕು.

'ಏವಂಚ' ಎಂದರೆ 'ಮಂಗಳವು ಫಲವಾಗಿರುವುದರಿಂದ' ಎಂದರ್ಥ. 'ಅನುಷ್ಠೇಯ' ಎಂದರೆ ಅಥ ಶಬ್ದದಿಂದ ವಿಷ್ಣುಸ್ಮೃತಿಯು ಹುಟ್ಟುತ್ತದೆ. ಆ ವಿಷ್ಣುಸ್ಮೃತಿಯು ಪ್ರಯತ್ನಸಾಧ್ಯವಾಗಿದೆ. ಆದ್ದರಿಂದ 'ಅನುಷ್ಠೇಯವಾಗಿದೆ' ಎಂದರ್ಥ.

ವಿಷ್ಣುವು ಪ್ರಯತ್ನಸಾಧ್ಯವಲ್ಲವಾದ್ದರಿಂದ ಅನನುಷ್ಠೇಯನೆಂದು ತಿಳಿಯಬೇಕು. ವಿಷ್ಣುವಾಚಕತ್ವವು ಅಥಶಬ್ದಕ್ಕಿರುವುದರಿಂದ ಮಂಗಲಫಲಕವೆಂದು ತಿಳಿಯಬೇಕು. ವಿಷ್ಣುವಾಚಕವಾದ ಅಥಶಬ್ದವು ವಿಷ್ಣುಸ್ಮರಣೆಗೆ ಕಾರಣವಾಗುವುದು ಯುಕ್ತವೆಂದು ತತ್ವಪ್ರದೀಪದ ಮಾತಿನಿಂದ ಸ್ಪಷ್ಟವಾಗುತ್ತದೆ. 'ಅಥಶಬ್ದಃ ಶ್ರವಣಕೀರ್ತನಾಭ್ಯಾಂ ಮಂಗಲಫಲಕಃ ವಿಷ್ಣೋಃ ಪರಮಮಂಗಲಸ್ಯ ವಾಚಕತ್ವೇನಾತಿಪ್ರಿಯತ್ವಾತ್' ಎಂದು. ಅಥ ಶಬ್ದವು ಪರಮ ಮಂಗಳನಾದ ವಿಷ್ಣುವಾಚಕವಾಗಿದೆ. ಅವನಿಗೆ ಅತಿಪ್ರಿಯವಾಗಿದೆ. ಇಂತಹ ಅತಃ ಶಬ್ದವನ್ನು ಉಚ್ಚಾರಣೆ ಮಾಡುವುದರಿಂದ, ಶ್ರವಣಮಾಡುವುದರಿಂದ ಮಂಗಳವಾಗುತ್ತದೆ.

*ಪರಿಪೂರ್ಣಚಂದ್ರಿಕಾ*

ಇದನ್ನು ಗಮನಿಸಿ ಕೆಲವರು ಟೀಕೆಯಲ್ಲಿರುವ ತತ್‌ಫಲತಯಾ ಮತ್ತು ತತ್‌ಪರತಯಾ ಎಂಬೆರಡು ಪಾಠಗಳನ್ನು ಸರಿಯೆನ್ನುತ್ತಾರೆ. ''ತತ್‌ಫಲತಯಾ'' ಎಂಬ ಪಾಠವನ್ನು ಇಟ್ಟುಕೊಂಡಾಗ ಅಥಶಬ್ದವು ''ವಿಷ್ಣುಸ್ಮರಣೆ'' ಮತ್ತು ಅಥಶಬ್ದೋಚ್ಚಾರಣೆರೂಪ ಮಂಗಲವೆಂಬ ಅರ್ಥವನ್ನು ಹೇಳುತ್ತದೆ. ತತ್ ಫರತಯಾ ಎಂಬ ಪಾಠವನ್ನು ಇಟ್ಟುಕೊಂಡಾಗ ಮಂಗಲಸ್ವರೂಪನಾದ ವಿಷ್ಣುವು ಅಥಶಬ್ದದ ಅರ್ಥವೆನಿಸುತ್ತಾನೆ. ವಿಷ್ಣುವಾಚಕವಾದ್ದರಿಂದ ಅಥಶಬ್ದವು ವಿಷ್ಣುಸ್ಮರಣೆಯನ್ನು ಉಂಟುಮಾಡುತ್ತಾ ಮಂಗಲ ಪ್ರಯೋಜನಕವಾಗುತ್ತದೆಂದು ಇವರ ಅಭಿಪ್ರಾಯ.

ತತ್ವಪ್ರದೀಪ ಹೇಳುವಂತೆ ಮಂಗಲವೂ ಅಥ ಶಬ್ದದ ಅರ್ಥವೆಂದೇ ನಿರ್ಣಯವಾಯಿತು. ಇದರಿಂದ ಕೆಲವರ ಆಕ್ಷೇಪವು ನಿರಸ್ತವಾಯಿತು.

ಕೆಲವರ ಆಕ್ಷೇಪ - ''ಅಥಶಬ್ದಃ ಮಂಗಲಾರ್ಥೋಽಧಿಕಾರಾನಂತರ್ಯಾರ್ಥಶ್ಚ'' ''ಅಥ ಶಬ್ದಕ್ಕೆ 'ಮಂಗಲ' ಎಂದೂ ಅರ್ಥ. 'ಅಧಿಕಾರದ ಅನಂತರ' ಎಂದೂ ಅರ್ಥ.'' ಹೀಗೆ ಭಾಷ್ಯದಲ್ಲಿ ಸಮುಚ್ಚಯ-ವನ್ನು ಮಾಡಿದ್ದಾರೆ. ಇದು ಸರಿಯಲ್ಲ. ಒಂದು ಪದಕ್ಕೆ ಸಮಾನವಾದ ಎರಡು ಅರ್ಥಗಳಿದ್ದಾಗ ಸಮುಚ್ಚಯ ಮಾಡುವುದು ಸಮಂಜಸವಾಗುತ್ತದೆ. ಉದಾಹರಣೆ - ಗೋ ಶಬ್ದಕ್ಕೆ ಹಸು ಎಂದೂ ಅರ್ಥವಿದೆ. ನೀರು ಎಂದೂ ಅರ್ಥವಿದೆ. ಹಸು ಹಾಗೂ ನೀರು ಎರಡೂ ವಾಚ್ಯಾರ್ಥಗಳೇ ಆಗುತ್ತವೆ. ಇಂತಹ ಸ್ಥಳದಲ್ಲಿ ''ಗೋಶಬ್ದಃ ಸಾಸ್ನಾವದರ್ಥೋ ಜಲಾರ್ಥಶ್ಚ'' ಎಂದು 'ಚ' ಕಾರದಿಂದ ಸಮುಚ್ಚಯ ಮಾಡಬಹುದು. ಆದರೆ ಪ್ರಕೃತದಲ್ಲಿ ಹಾಗೆ ಹೇಳಲಾಗದು. 'ಅಥ' ಶಬ್ದಕ್ಕೆ 'ಆನಂತರ್ಯ' ಎಂಬುದಷ್ಟೇ ಅರ್ಥವಾಗಿದೆ, ಹೊರತು ಮಂಗಲವು ಅರ್ಥವಾಗಿಲ್ಲ. ಒಂದು ವೇಳೆ ಮಂಗಲವೂ ಸಹ 'ಅಥ' ಶಬ್ದದ ಅರ್ಥವಾಗಿದ್ದಲ್ಲಿ 'ಚ' ಕಾರದಿಂದ ಸಮುಚ್ಚಯ ಮಾಡುವುದು ಸೂಕ್ತವಾಗುತ್ತಿತ್ತು. ಆದ್ದರಿಂದ ಭಾಷ್ಯದಲ್ಲಿ ಸಮುಚ್ಚಯ ಮಾಡುವ ಬದಲು ''ಮಂಗಲ ಫಲತಃ ಆನಂತರ್ಯವಾಚಕಃ'' ಅಥಶಬ್ದವು ಮಂಗಲವೇ ಪ್ರಯೋಜನವಾಗಿವುಳ್ಳದ್ದು 'ಆನಂತರ್ಯ' ಎಂಬ ಅರ್ಥವುಳ್ಳದೆಂದಷ್ಟೇ ಹೇಳಿದರೆ ಸಾಕು ಸಮಂಜಸವಾಗುತ್ತದೆ. ಸಮುಚ್ಚಯ ಮಾಡಿದ್ದು ಸರಿಯಲ್ಲ.

ಪರಿಹಾರ :- ಈ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. 'ಆನಂತರ್ಯ' ಎಂಬುದು ಹೇಗೆ ಅಥ ಶಬ್ದದ ಅರ್ಥವೋ ಅದರಂತೆ ಮಂಗಲ ಎಂಬುದೂ ಸಹ ಅಥಶಬ್ದದ ಅರ್ಥವಾಗುತ್ತದೆಂದು ಈಗಾಗಲೇ ಸಮರ್ಥಿಸಿದ್ದೇವೆ. ಮಂಗಳರೂಪನಾದ ವಿಷ್ಣುವು ಅಥಶಬ್ದದ ವಾಚ್ಯಾರ್ಥನಾದ್ದರಿಂದ ಒಂದೇ ಅಥಶಬ್ದಕ್ಕೆ ಎರಡರ್ಥವು ಸಾಧುವಾಗುತ್ತದೆ. ಆದ್ದರಿಂದ ಭಾಷ್ಯದಲ್ಲಿ ಸಮುಚ್ಚಯ ಮಾಡಿದ್ದೂ ತಪ್ಪಲ್ಲ. ಒಮ್ಮೆ ಮಾತ್ರ ಶ್ರುತವಾದ ಅಥ ಶಬ್ದವನ್ನು ಎರಡು ಬಾರಿ ಆವೃತ್ತಿ ಮಾಡಿಕೊಂಡಾಗ ಎರಡರ್ಥವು ಉಪಪನ್ನವಾಗುತ್ತದೆ. ಅಥವಾ ಒಮ್ಮೆ ಉಚ್ಚರಿತವಾದ 'ಅಥ' ಶಬ್ದವು ತಂತ್ರದಿಂದ ಎರಡು ಅರ್ಥವನ್ನು ಹೇಳುತ್ತದೆ. ಅಥವಾ ಏಕಶೇಷದಿಂದಲೂ ಎರಡರ್ಥವನ್ನು ಹೇಳುತ್ತದೆ. ಹಾಗಾಗಿ ಮಂಗಲಪ್ರಯೋಜನವಷ್ಟೇ ಅಲ್ಲ ಆನಂತರ್ಯ ಎಂಬರ್ಥವುಳ್ಳದ್ದೂ ಆಗಿದೆ. ಹೀಗೆ ಚಕಾರದಿಂದ ತಿಳಿಯುವ ಸಮುಚ್ಚಯವು ಸಮಂಜಸ-ವಾಗಿದೆ.

*ಜಿಜ್ಞಾಸಾಧಿಕರಣ*




**ಟೀಕಾಪಾಠ ಶೋಧನೆ**

ಅಥಶಬ್ದಾರ್ಥ ವಿವರಣೆಗೆ ಹೊರಟ ಟೀಕಾಪಂಕ್ತಿಯಲ್ಲಿ 'ತತ್ಫಲತಯಾ' 'ಅಥಶಬ್ದ ಮಂಗಳವನ್ನು ಉಂಟುಮಾಡುವುದರಿಂದ' ಎಂದಿದೆ. 'ತತ್ಪರತಯಾ' 'ಮಂಗಳವೆಂಬ ಅರ್ಥದಲ್ಲಿ ಅಥಶಬ್ದಕ್ಕೆ ತಾತ್ಪರ್ಯವಿದೆ' ಎಂದೂ ಪಾಠವಿದೆ. ಇದು ಸರಿಯಲ್ಲ. ಅಥಶಬ್ದದಲ್ಲಿ ಅಕಾರ ವಿಷ್ಣುವಾಚಕ. ವಿಷ್ಣು ಮಂಗಳಸ್ವರೂಪ. ಅದರಿಂದ ಮಂಗಳಪರತ್ವವನ್ನು ಅಥಶಬ್ದಕ್ಕೆ ಏಕೆ ಹೇಳಬಾರದು? ಎಂದರೆ ಗ್ರಂಥಾರಂಭದಲ್ಲಿ ಇಂಥ ಮಂಗಳ ಪ್ರಸಕ್ತವಲ್ಲ. ವಿಘ್ನ ನಿವಾರಣೆ ಮಾಡಬಲ್ಲ ವಿಷ್ಣುಸ್ಮರಣೆ ಅಥಶಬ್ದೋಚ್ಚಾರಣೆಗಳು ಮಂಗಳಗಳು. ಇವು ಅಥಶಬ್ದಾರ್ಥವಲ್ಲ. 'ಮಂಗಲೋಕ್ತ್ಯಾದೇಃ ಶಬ್ದಾಂತರೇಣಾಪಿ ಸಂಭವಾತ್' 'ಮಂಗಲವನ್ನು ಹೇಳುವುದು ಬೇರೆ ಶಬ್ದದಿಂದಲೂ ಶಕ್ಯ' ಎಂಬ ಟೀಕಾವಾಕ್ಯಕ್ಕೂ ಮಂಗಳ ಅಥಶಬ್ದದ ಅರ್ಥ ಎಂದರ್ಥವಲ್ಲ. 'ಮಂಗಲವನ್ನು ಹೇಳುವುದು' ಎಂದರೆ ಮಂಗಳಕರವಾದ ಅಥಶಬ್ದಾದಿಗಳನ್ನು ಉಚ್ಚರಿಸುವುದು ಎಂದರ್ಥ. 'ತತ್ಪರತಯಾ' ಎಂಬ ಪಾಠ ಪ್ರಾಮಾಣಿಕವಾಗಿರುವುದಾದರೆ 'ಪರ' ಎಂದರೆ ಮುಖ್ಯಪ್ರಯೋಜನ, ಅಥಶಬ್ದಕ್ಕೆ ಮಂಗಳ ಉಂಟುಮಾಡುವುದೆ ಮುಖ್ಯಪ್ರಯೋಜನ ಎಂದು ಅಭಿಪ್ರಾಯ ಹೇಳಬೇಕು.

'ಅಥಶಬ್ದೋ ಮಂಗಲಾರ್ಥಃ' ಎಂಬ ಭಾಷ್ಯದಲ್ಲಿ ಎರಡೂ ಅರ್ಥ ವಿವಕ್ಷಿತವೆನ್ನಬಹುದು. ವಿಷ್ಣುಸ್ಮರಣ ಅಥಶಬ್ದೋಚ್ಚಾರಣರೂಪ ಮಂಗಲವು ಅಥಶಬ್ದಕ್ಕೆ 'ಅರ್ಥ', ಅಂದರೆ ಪ್ರಯೋಜನ ಎಂದು. ಮತ್ತು ಮಂಗಲಸ್ವರೂಪನಾದ ವಿಷ್ಣು ಅಥಶಬ್ದಕ್ಕೆ 'ಅರ್ಥ' ಅಂದರೆ ವಾಚ್ಯ ಎಂದು. ವಿಷ್ಣುವಾಚಕವಾದ್ದರಿಂದ ಅಥಶಬ್ದ ವಿಷ್ಣುಸ್ಮರಣೆ ಉಂಟುಮಾಡುತ್ತ ಮಂಗಲಪ್ರಯೋಜನಕವಾಗುತ್ತದೆ ಎಂದು ತತ್ವಪ್ರದೀಪ ಹೇಳಿದೆ.



• • • • •

**ದ್ವಿತೀಯಮಾಕ್ಷಿಪತಿ**

**तात्पर्यचन्द्रिका –**

**द्वितीयमाक्षिपतीति ।। अवश्यवक्तव्यार्थत्वार्थाधिक्ययोस्तदभावयोश्च लोके शब्दान्तरेषु दर्शनादथशब्दे तत्सन्देहेन प्रश्नमात्रमाद्यतृतीययोः । द्वितीये तु स्वरूपाधिक्यस्य शब्दान्तरेष्वदर्शनात् अथशब्दे तदाक्षेप इति भावः ।**

**कथंशब्दमाक्षेपपरतया व्याख्याय, प्रश्नपरतयाऽपि व्याचष्टे – तृतीयेऽपि पृच्छतीति ।। इति न्याय इति ।। सामान्यव्याप्तिरेवानुसन्धेया । ''यथा देवेषु चतुर्मुखः'' इति दृष्टान्तसम्भवात् । नतु 'यः शब्दः' इति विशेषव्याप्तिः । दृष्टान्ताभावादिति भावः । 'अतः' इत्यस्य अतःशब्दपरत्वं, हेतुपरत्वम्,**

**असकृदावृत्तिं, 'तृतीयः' 'उदाहृतः' इत्यनयोरावृत्तिं, 'प्राथमिकौ' इत्यस्य वचन-व्यत्ययेनानुषङ्गं चाभिप्रेत्य व्याचष्टे – अतश्च तृतीयतयेति ।।**

ಅನುವಾದ - 'ದ್ವಿತೀಯಮಾಕ್ಷಿಪತಿ' ಎಂಬುದಾಗಿ ಟೀಕೆಯಲ್ಲಿದೆ. ಎರಡನೆಯ ಪಕ್ಷದಲ್ಲಿ ಮಾತ್ರ 'ಆಕ್ಷಿಪತಿ' ಎಂಬ ಶಬ್ದವನ್ನು ಬಳಸಲು ಒಂದು ಕಾರಣವಿದೆ.

ಪ್ರತಿಯೊಂದು ಸೂತ್ರಗ್ರಂಥಗಳ ಪ್ರಾರಂಭದಲ್ಲಿ 'ಅಥ' ಮತ್ತು 'ಅತಃ' ಶಬ್ದಗಳನ್ನು ತಪ್ಪದೆ ಬಳಸಲು ಮೂರು ಕಾರಣಗಳಿವೆ ೧) ಅವಶ್ಯ ಹೇಳಬೇಕಾದ್ದನ್ನು ಹೇಳುವುದು ೨) ಶಬ್ದಗಳ ಸ್ವರೂಪದಲ್ಲಿಯೇ ಒಂದು ಶಕ್ತಿ ಇರುವುದು ೩) ಅತ್ಯಂತ ಪ್ರಶಸ್ತವಾದ ವಸ್ತುಗಳನ್ನು ಪ್ರತಿಪಾದಿಸುವುದು ಎಂದು. ಇವುಗಳಲ್ಲಿ ಅವಶ್ಯವಕ್ತವ್ಯಾರ್ಥತ್ವ ಮತ್ತು ಅರ್ಥಾಧಿಕ್ಯ ಎಂಬ ಮೊದಲನೆಯದ್ದು ಮತ್ತು ಮೂರನೆಯದ್ದು ಬೇರೆ ಶಬ್ದಗಳಲ್ಲಿ ಇರುತ್ತವೆ. ಆದ್ದರಿಂದ 'ಅಥ' ಶಬ್ದದಲ್ಲಿ ಇವೆರಡು ಇವೆಯೋ? ಇಲ್ಲವೋ? ಎಂದು ಸಂಶಯ ಇರುವುದರಿಂದ ಪ್ರಶ್ನೆ ಬರುತ್ತದೆ. ಆದರೆ ಸ್ವರೂಪಾಧಿಕ್ಯವೆಂಬ ಎರಡನೆಯದ್ದು ಬೇರೆ ಯಾವ ಶಬ್ದದಲ್ಲಿಯೂ ಕಾಣದಿರುವುದರಿಂದ 'ಅಥ' ಶಬ್ದದಲ್ಲಿ ಮಾತ್ರ ಹೇಗೆ? ಎಂದು ಆಕ್ಷೇಪ ಮಾಡಿದ್ದು ಯುಕ್ತವೇ ಆಗಿದೆ. ಎರಡನೆಯ ಪಕ್ಷದಲ್ಲಿ 'ಕಥಂ' ಶಬ್ದಕ್ಕೆ ಆಕ್ಷೇಪಪರವಾಗಿ ವ್ಯಾಖ್ಯಾನ ಮಾಡಿ ಅದೇ 'ಕಥಂ' ಶಬ್ದಕ್ಕೆ ಮೂರನೆಯ ಪಕ್ಷದಲ್ಲಿ ಪ್ರಶ್ನಪರವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ - 'ತೃತೀಯೇಽಪಿ ಪೃಚ್ಛತಿ' ಎಂಬುದರಿಂದ,

ಟೀಕೆಯಲ್ಲಿ 'ಇತಿ ನ್ಯಾಯಃ' ಎಂದು ಇದೆ. ಇಲ್ಲಿ ನ್ಯಾಯ ಶಬ್ದಕ್ಕೆ 'ಸಾಮಾನ್ಯವ್ಯಾಪ್ತಿ' ಎಂಬರ್ಥ-ವನ್ನಿಟ್ಟುಕೊಳ್ಳಬೇಕು. ದೇವತೆಗಳಲ್ಲಿ ಚತುರ್ಮುಖನು ಶ್ರೇಷ್ಠನು ಎಂಬ ದೃಷ್ಟಾಂತವನ್ನು ಕೊಡಬಹುದು. ಯಾವ ಶಬ್ದವು ಶ್ರೀಹರಿಯಿಂದ ಮೊದಲು ಹುಟ್ಟಿದೆಯೋ ಅದು ಎಲ್ಲಾ ಶಬ್ದಗಳಲ್ಲಿಯೂ ಶ್ರೇಷ್ಠ ಎಂಬ ವಿಶೇಷವ್ಯಾಪ್ತಿಯನ್ನು ಹೇಳಬಾರದು. ಹಾಗೆ ಹೇಳಲು ದೃಷ್ಟಾಂತವಿಲ್ಲವೆಂದು ತಿಳಿಯಬೇಕು.

ಸೂತ್ರದಲ್ಲಿರುವ 'ಅತಃ' ಶಬ್ದವು ಮೂರನೆಯದಾಗಿ ವ್ಯಕ್ತವಾಗಿದೆ. ಆದ್ದರಿಂದ ಅದು ಉತ್ತಮ-ವಾಗಿದೆಯೆಂಬರ್ಥವು ಭಾಷ್ಯದ ವಾಕ್ಯದಿಂದ ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆ ಬಂದರೆ ಭಾಷ್ಯದಲ್ಲಿರುವ 'ಅತಃ' ಎಂಬ ಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು. ಉಕ್ತವಾಗಿದೆ, ಮತ್ತು ಉತ್ತಮವಾಗಿದೆ ಎಂದು ಎರಡೂ ಕಡೆಗಳಲ್ಲಿ 'ಅತಃ' ಶಬ್ದವನ್ನೂ ಇಟ್ಟುಕೊಳ್ಳಬೇಕು. 'ತೃತೀಯ, ಉದಾಹೃತಃ' ಎಂಬುದನ್ನೂ ಆವೃತ್ತಿ ಮಾಡಿಕೊಳ್ಳಬೇಕು. 'ತಸ್ಮಾತ್ ಪ್ರಾಥಮಿಕೌ' ಎಂಬ ಹಿಂದಿನ ಭಾಷ್ಯವಚನದಿಂದ 'ಪ್ರಾಥಮಿಕೌ' ಎಂಬ ದ್ವಿವಚನಾಂತಶಬ್ದವನ್ನು ಇಲ್ಲಿ ಏಕವಚನಾಂತವಾಗಿ ಪರಿವರ್ತಿಸಿ ಅನ್ವಯ ಮಾಡಿಕೊಳ್ಳಬೇಕು. ಹೀಗೆಲ್ಲ ಅನ್ವಯ ಮಾಡಿಕೊಂಡು 'ಅತಶ್ಚ ತೃತೀಯತಯಾ' ಎಂದು ಹೇಳಲಾಗಿದೆ.

**प्रकाशः** – आद्यतृतीययोः 'आक्षिपति' इत्यनुक्त्वा द्वितीये तयोक्तौ को हेतुरत आह ।। अवश्येति ।। ''कथमुत्तमता'' इति भाष्यस्य कथंशब्दस्याक्षेपार्थत्वेन व्याख्यानात् ''तृतीये पृच्छति'' इति कस्यार्थ इति न ज्ञायते, अत आह ।।

**कथंशब्दमिति** ।। ''सिसृक्षोः'' इति भाष्यव्याख्यावसरे ''यत् स्वजातौ प्रथमं हरेर्निस्सरति, तत् तत्रोत्तमम् इति न्यायोऽनुसन्धेयः'' इत्युक्तम् । तत्रैवमेव व्याप्त्यनुसन्धानेऽभिप्रायमाह ।। **इति न्याय इतीति** ।।

**''तद्धेतुत्वं वदंश्चापि तृतीयोऽत उदाहृतः ।''**

इति भाष्ये 'अतश्च तृतीयोऽपि प्राथमिकः' इत्यादिटीकोक्ताशेषार्थाप्रतीते-राह ।। **अत इत्यस्येति** ।। यद्यपि 'अतः' इत्यस्यातःशब्दपरत्वं हेतुपरत्वं चेति सकृदावृत्तिरेव भाति, तथाऽपि ''यतस्तृतीयतयोदाहृतः'' इत्यत्र ''उत्तमः'' इत्यत्र च विशेष्याकाङ्क्षायामतश्शब्दपरस्य 'अतः' इत्यस्यान्वयात् ''असकृदा-वृत्तिम्'' इत्युक्तम् ।। **वचनेति** ।। एकवचनान्तत्वेनेत्यर्थः ।

**गुरुराजीय** – शब्दान्तरस्य स्वरूपोत्तमत्वादर्शनादित्युक्त्या अवश्यवक्तव्या-र्थत्वार्थाधिक्ययोर्दर्शनादिति सूचितं तत् स्पष्टयति ।। **अवश्यवक्तव्यार्थत्वेति** ।। अयं भावः । प्रश्नस्य सन्देहमूलत्वेन सन्देहस्य च कोटिद्वयप्रसिध्यादिमूलकत्वेन शब्दान्तरेऽवश्यवक्तव्यार्थत्वार्थाधिक्ययोस्तदभावयोश्च दर्शनेन कोटिप्रसिद्धिसत्वेन तन्मूलकसन्देहसम्भवेन तन्मूलकप्रश्नसम्भवेऽपि स्वरूपोत्तमत्वतदभावयोरदृष्टत्वेन कोट्यप्रसिध्या सन्देहासम्भवेन तन्मूलकप्रश्नस्यासम्भवेन द्वितीये आक्षेपः प्रथमतृतीययोः प्रश्नमात्रमिति । मूले कथमित्यस्यैकस्यैव शब्दस्य श्रवणात् तस्य च द्वितीयमाक्षिपतीत्यादिनाऽवतारितत्वात् तृतीये पृच्छतीत्यवतार्यं न प्रतीयते । नच तदेव पुनरपि व्याख्यायत इति वाच्यम् । व्याख्यानान्तरज्ञापकाथशब्दादेरभावात्, इत्यतः तदुपपादयति – **कथंशब्दमिति** ।। ननु 'यत् स्वजातौ प्रथमं निस्सरति तत् तत्रोत्तममिति सामान्यव्याप्तिरेवानुसन्धेया' इति टीकायामुक्तम् । तत् कुतः? विशेषव्याप्तेरेव सम्भवात् । नच विशेषव्याप्तौ दृष्टान्ताभावः । आगमगम्यव्याप्तौ दृष्टान्तानपेक्षणात् । सामान्यव्याप्त्यभिधावपि 'तदभावाच्च' इत्यतस्तद्वाक्यं व्याचष्टे – **सामान्यव्याप्तिरेवेति** ।।

ವಿವರಣೆ - ಪ್ರಶ್ನೆ :- 'ಅಥ' 'ಅತಃ' ಶಬ್ದಗಳ ವಿಷಯದಲ್ಲಿ ಟೀಕೆಯಲ್ಲಿ ಮೂರು ವಿಕಲ್ಪಗಳನ್ನು ಮಾಡಿದ್ದಾರೆ. ಈ ವಿಕಲ್ಪಗಳಿಗೆ ಉತ್ತರಿಸುವಾಗ ಎರಡನೆಯ ವಿಕಲ್ಪದಲ್ಲಿ ಮಾತ್ರ ''ಆಕ್ಷಿಪತಿ'' 'ಆಕ್ಷೇಪ

ಮಾಡಲಾಗಿದೆ' ಎಂದು ಹೇಳಿದ್ದಾರೆ. ಮೊದಲನೆಯ ಮತ್ತು ಕೊನೆಯ ವಿಕಲ್ಪಗಳಲ್ಲಿ "ಪೃಚ್ಛತಿ" "ಪ್ರಶ್ನಿಸಲಾಗಿದೆ" ಎಂದು ಹೇಳಿದ್ದಾರೆ. ಈ ತರಹದ ವ್ಯತ್ಯಾಸಕ್ಕೆ ಏನು ಕಾರಣ?

ಉತ್ತರ :- 'ಅಥ' 'ಅತಃ' ಶಬ್ದಗಳಲ್ಲಿ ಮೂರುವಿಧವಾದ ವೈಶಿಷ್ಟ್ಯವಿದೆ. ಈ ಮೂರು ವೈಶಿಷ್ಟ್ಯಗಳಲ್ಲಿ ಎರಡನೆಯ ವೈಶಿಷ್ಟ್ಯವು ಬೇರೆ ಎಲ್ಲಿಯೂ ಕಂಡಿಲ್ಲ. ಎಲ್ಲಿಯೂ ಕಾಣದ್ದನ್ನು ಇಲ್ಲಿ ಮಾತ್ರ ಹೇಗೆ ಹೇಳುತ್ತಿದ್ದೀರೆಂಬುದು "ಆಕ್ಷಿಪತಿ" ಶಬ್ದದ ಅರ್ಥ. ಮೊದಲನೆಯ ಮತ್ತು ಮೂರನೆಯ ವೈಶಿಷ್ಟ್ಯಗಳು ಬೇರೆಡೆ ಕಂಡಿದ್ದರಿಂದ "ಪ್ರಕೃತದಲ್ಲಿ ಹೇಗೆ?" ಎಂಬ ಸಂದೇಹವಷ್ಟೇ ಬರುತ್ತದೆ. ಈ ಅಭಿಪ್ರಾಯದಿಂದ "ಪೃಚ್ಛತಿ" ಎಂದು ಹೇಳಿದ್ದಾರೆ.

ವಿಷಯದ ಸ್ಪಷ್ಟತೆಗಾಗಿ ಪುನಃ ವಿವರಿಸಲಾಗಿದೆ. ಇಲ್ಲಿ ಟೀಕೆ ಹೀಗಿದೆ - ನಿಯಾಮಕಂ ಚ ಭವತ್ ದ್ವಿವಿಧಂ ಭವೇತ್ । ಅವಶ್ಯವಕ್ತವ್ಯಾರ್ಥತ್ವಮಾಧಿಕ್ಯಂ ಚೇತಿ । ಆಧಿಕ್ಯಂ ಚ ಸ್ವರೂಪತೋಽರ್ಥತಶ್ಚೇತಿ ದ್ವೇಧಾ ಭವತಿ । ತತ್ರಾದಿಪಕ್ಷೇ ಪೃಚ್ಛತಿ ॥ಕಶ್ಚೇತಿ॥ ಕೋಽಸಾವವಶ್ಯವಕ್ತವ್ಯೋಽರ್ಥೋ ಯೇನ ಪ್ರಾಥಮ್ಯಮಿತ್ಯರ್ಥಃ । ದ್ವಿತೀಯಮಾಕ್ಷಿಪತಿ ॥ ಕಥಮಿತಿ ॥ ಶಬ್ದಾಂತರಸ್ಯ ಸ್ವರೂಪೋತ್ತಮತ್ವಾದರ್ಶನಾತ್ಕಥನಯೋಸ್ತದಿತಿ ಭಾವಃ । ತೃತೀಯೇ ಪೃಚ್ಛತಿ ॥ ಕಥಮಿತಿ ॥

ಯಾವುದೇ ಸೂತ್ರಗ್ರಂಥಗಳ ಪ್ರಾರಂಭದಲ್ಲಿ 'ಅಥ' ಮತ್ತು 'ಅತಃ' ಶಬ್ದಗಳು ತಪ್ಪದೇ ಬರುತ್ತವೆ. ಹೀಗೆ ತಪ್ಪದೇ ಬರಲು ಒಟ್ಟು ಮೂರು ಕಾರಣಗಳಿವೆ -

೧) ಅವಶ್ಯವಾಗಿ ಹೇಳಲೇಬೇಕಾದ ಅರ್ಥವನ್ನು ಹೇಳುವಿಕೆ.

೨) ಶಬ್ದಗಳ ಸ್ವರೂಪದಲ್ಲಿಯೇ ಏನೋ ಒಂದು ಶಕ್ತಿಯ ಅಡಗಿರುವಿಕೆ.

೩) ಶ್ರೇಷ್ಠವಾದ ಅರ್ಥವನ್ನು ಪ್ರತಿಪಾದಿಸುವಿಕೆ.

ಈ ಮೂರರಲ್ಲಿ ಯಾವುದೇ ಒಂದು ವೈಶಿಷ್ಟ್ಯವಿದ್ದರೂ 'ಅಥಃ' "ಅತಃ" ಶಬ್ದಗಳನ್ನು ಪ್ರಾರಂಭದಲ್ಲಿ ಹೇಳುವುದು ಸೂಕ್ತವಾಗುತ್ತದೆ. ಪ್ರಕೃತ ಬ್ರಹ್ಮಮೀಮಾಂಸಾಗ್ರಂಥದ ಪ್ರಾರಂಭದಲ್ಲಿ ಹೇಳಲ್ಪಟ್ಟ 'ಅಥ' 'ಅತಃ' ಶಬ್ದಗಳಲ್ಲಿ ಮೂರೂ ವಿಧವಾದ ವೈಶಿಷ್ಟ್ಯವಿದೆ. ಇದನ್ನು ಸಮರ್ಥಿಸುವ ಮೊದಲು ಪ್ರಶ್ನಿಸಿಕೊಳ್ಳುತ್ತಿದ್ದಾರೆ. ಪ್ರಶ್ನಿಸಬೇಕಾದರೆ ಎರಡನೆಯ ವಿಕಲ್ಪವನ್ನು ಮಾತ್ರ "ಆಕ್ಷಿಪತಿ" ಎಂದಿದ್ದಾರೆ. ಇದಕ್ಕೆ ಕಾರಣ ಹೀಗಿದೆ -

ಮೂರು ವೈಶಿಷ್ಟ್ಯಗಳಲ್ಲಿ ಮೊದಲನೆಯ ಮತ್ತು ಕೊನೆಯ ವೈಶಿಷ್ಟ್ಯಗಳು "ಅಥಾತಃ" ಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳಲ್ಲಿಯೂ ಕಂಡಿದೆ. ಹಾಗೆಯೇ ಇನ್ನು ಕೆಲವು ಶಬ್ದಗಳಲ್ಲಿ ಅಂತಹ ವೈಶಿಷ್ಟ್ಯವು ಇಲ್ಲದಿರುವುದೂ ಕಂಡಿದೆ. ಹೀಗೆ ಉಭಯತ್ರ ಸಾಧಾರಣವಾದ "ಪ್ರಯೋಗಿಸುವಿಕೆ" ಎಂಬ ಸಾಧಾರಣಧರ್ಮವು ಪ್ರಕೃತ 'ಅಥಾತಃ' ಶಬ್ದಗಳಲ್ಲಿಯೂ ಇದೆ. ಆದ್ದರಿಂದ ಆ ವೈಶಿಷ್ಟ್ಯಗಳು ಅಥ ಅತಃ ಶಬ್ದಗಳಲ್ಲಿ ಇದೆಯೋ? ಇಲ್ಲವೋ? ಎಂಬ ಸಂಶಯ ಬರುತ್ತದೆ. ಈ ಸಂಶಯದ ಪರಿಹಾರಕೋಸ್ಕರ ಪ್ರಶ್ನೆ ಮಾಡುವುದು ಉಚಿತವೇ ಆಗಿದೆ. ಆದ್ದರಿಂದ ಮೊದಲನೆಯ ಮತ್ತು ಮೂರನೆಯ ವಿಕಲ್ಪಗಳಲ್ಲಿ "ಪೃಚ್ಛತಿ" ಎಂಬ ಪದಪ್ರಯೋಗವು ಅತ್ಯಂತ ಸಾಧುವಾಗಿದೆ.

ಆದರೆ ಎರಡನೆಯ ವೈಶಿಷ್ಟ್ಯವು ಅಥ ಅತಃ ಶಬ್ದಗಳನ್ನು ಬಿಟ್ಟು ಬೇರೆ ಯಾವ ಶಬ್ದಗಳಲ್ಲಿಯೂ ಕಂಡಿಲ್ಲ. ಎಲ್ಲಿಯೂ ಕಾಣದ ವಿಷಯದಲ್ಲಿ ಸಂದೇಹವಾದರೂ ಬರಲು ಹೇಗೆ ಸಾಧ್ಯ? ಸಂದೇಹವೇ ಬಾರದಿದ್ದಾಗ ಪ್ರಶ್ನೆಯೂ ಸಹ ಬರುವುದಿಲ್ಲ. ಆದ್ದರಿಂದ ಬೇರೆ ಎಲ್ಲಿಯೂ ಕಾಣದ್ದು ಪ್ರಕೃದಲ್ಲಿ ಹೇಗೆ? ಎಂಬ ಆಕ್ಷೇಪವು ಬಂದೇ ಬರುತ್ತದೆ.

''ಕಶ್ಚಾರ್ಥಶ್ಚ ತಯೋರ್ವಿದ್ವನ್ ಕಥಮುತ್ತಮತಾ ತಯೋಃ'' ಎಂದು ಗರುಡಪುರಾಣದ ಮಾತು. ಇಲ್ಲಿರುವ 'ಕಃ' ಎಂಬ ಪದವು ಪ್ರಶ್ನಾರ್ಥದಲ್ಲಿದೆ. 'ಕಥಂ' ಶಬ್ದವು ಆಕ್ಷೇಪಾರ್ಥದಲ್ಲಿದೆ. 'ಕಃ' ಎಂಬ ಪದಕ್ಕೆ ''ಪೃಚ್ಛತಿ'' ''ಮೊದಲನೆಯ ಪಕ್ಷವನ್ನು ಪ್ರಶ್ನಿಸುತ್ತಾನೆ'' ಎಂದು ಟೀಕೆಯಲ್ಲಿ ವ್ಯಾಖ್ಯಾನಿಸಲಾಗಿದೆ. 'ಕಥಂ' ಶಬ್ದಕ್ಕೆ ''ಎರಡನೆಯದ್ದನ್ನು ಆಕ್ಷೇಪಿಸುತಾನೆ'' ಎಂದು ವ್ಯಾಖ್ಯಾನಿಸಲಾಗಿದೆ. ''ಮೂರನೆಯದ್ದನ್ನು ಪ್ರಶ್ನಿಸುತ್ತಾನೆ'' ಎಂದು ವ್ಯಾಖ್ಯಾನಿಸಲು ಮತ್ತೊಂದು ''ಕಥಂ'' ಶಬ್ದವು ಇರುವುದಿಲ್ಲ. ಆದರೂ ಸಹ ''ಕಥಮುತ್ತಮತಾ ತಯೋಃ'' ಎಂಬಲ್ಲಿರುವ 'ಕಥಂ' ಶಬ್ದವನ್ನೇ ಪುನಃ ಆವೃತ್ತಿ ಮಾಡಿಕೊಳ್ಳಬೇಕು. ವಸ್ತುತಸ್ತು ಈಗಾಗಲೆ 'ಕಥಂ' ಎರಡನೆಯದ್ದನ್ನು ಆಕ್ಷೇಪಿಸುತ್ತಾನೆ ಎಂದು ವ್ಯಾಖ್ಯಾನಿಸಿದ್ದಾಗಿದೆ. ಆದರೂ ಅದೇ 'ಕಥಂ' ಶಬ್ದಕ್ಕೆ 'ಮೂರನೆಯದ್ದನ್ನು ಪ್ರಶ್ನಿಸುತ್ತಾನೆ' ಎಂಬ ವ್ಯಾಖ್ಯಾನ ಮಾಡುವುದೇನು ತಪ್ಪಾಗುವುದಿಲ್ಲ.

''ಸಾಮಾನ್ಯವ್ಯಾಪ್ತಿಯನ್ನೇ ಹೇಳಬೇಕು''

''ಸಿಸೃಕ್ಷೋಃ ಪರಮಾದ್‌ವಿಷ್ಣೋಃ'' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನಿಸುತ್ತಾ ಟೀಕೆಯಲ್ಲಿ ಸಾಮಾನ್ಯ-ಮುಖವ್ಯಾಪ್ತಿಯನ್ನು ಹೇಳಿದ್ದಾರೆ. - ''ಯಸ್ತು ಅಜಾತೌ ಪ್ರಥಮಂ ಹರೇರ್ನಿಸ್ಸರತಿ ತತ್ ತತ್ರೋತ್ತಮಮ್'' ''ಯಾವುದು ತನ್ನ ಸಮಾನಜಾತೀಯವಸ್ತುಗಳಲ್ಲಿ ಶ್ರೀಹರಿಯಿಂದ ಮೊದಲು ಹುಟ್ಟಿ ಬಂದಿದೆಯೋ ಅದು ಆ ಜಾತೀಯ ವಸ್ತುಗಳಲ್ಲೆಲ್ಲಾ ಅತ್ಯುತ್ತಮವಾಗಿರುತ್ತದೆ'' ಈ ಸಾಮಾನ್ಯಮುಖವ್ಯಾಪ್ತಿಗೆ ದೃಷ್ಟಾಂತ ಹೀಗಿದೆ - ''ಚತುರ್ಮುಖಬ್ರಹ್ಮದೇವರು ತನ್ನ ಸಜಾತೀಯರಾದ ದೇವತೆಗಳಲ್ಲಿ ಶ್ರೀಹರಿಯಿಂದ ಮೊದಲು ಹುಟ್ಟಿದ್ದಾರೆ. ಹಾಗಾಗಿ ಚತುರ್ಮುಖಬ್ರಹ್ಮದೇವರು ದೇವತೆಗಳಲ್ಲೆಲ್ಲಾ ಅತ್ಯುತ್ತಮರಾಗಿದ್ದಾರೆ.

ಪ್ರಶ್ನೆ :- ವಿಶೇಷವ್ಯಾಪ್ತಿಯನ್ನೇ ಹೇಳಲು ಬರುವಾಗ ಸಾಮಾನ್ಯಮುಖವ್ಯಾಪ್ತಿಯನ್ನು ಏಕೆ ಹೇಳಿದ್ದು? ವಿಶೇಷವ್ಯಾಪ್ತಿಗೆ ದೃಷ್ಟಾಂತವಿಲ್ಲವೆನ್ನಬಾರದು. ಆಗಮಗಮ್ಯವ್ಯಾಪ್ತಿಗೆ ದೃಷ್ಟಾಂತದ ಅಪೇಕ್ಷೆ ಇಲ್ಲ. ಸಾಮಾನ್ಯವ್ಯಾಪ್ತಿ ಹೇಳಿದರೆ ಅದಕ್ಕೂ ಸಹ ದೃಷ್ಟಾಂತ ಸಿಗುವುದಿಲ್ಲ.

ಉತ್ತರ :- ವಿಶೇಷವ್ಯಾಪ್ತಿಯನ್ನಾದರೂ ಹೀಗೆ ಹೇಳಬೇಕು - ''ಯಃ ಶಬ್ದಃ ಪ್ರಥಮಂ ಹರೇರ್ನಿಸ್ಸರತಿ ಸಶಬ್ದಃ ತೇಷು ಉತ್ತಮಃ'' ''ಯಾವ ಶಬ್ದವು ಸಕಲಶಬ್ದಗಳಲ್ಲೆಲ್ಲ ಮೊದಲು ಶ್ರೀಹರಿಯಿಂದ ಹುಟ್ಟಿ ಬಂದಿದೆಯೋ ಆ ಶಬ್ದವು ಉಳಿದ ಎಲ್ಲ ಶಬ್ದಗಳಿಂದ ಉತ್ತಮವಾಗಿದೆ'' ಎಂದು. ಈ ರೀತಿಯಾಗಿ ವಿಶೇಷವ್ಯಾಪ್ತಿಯನ್ನು ಹೇಳಿದರೆ ದೃಷ್ಟಾಂತವೇ ದೊರೆಯುವುದಿಲ್ಲ. ಆದರೆ ಸಾಮಾನ್ಯವ್ಯಾಪ್ತಿಗೆ ದೃಷ್ಟಾಂತವು ಲಭಿಸುತ್ತದೆ. ಹೀಗೆ ದೃಷ್ಟಾಂತದಿಂದ ಸುಲಭವಾಗಿ ಸಾಮಾನ್ಯವ್ಯಾಪ್ತಿಯಿಂದಲೇ ತಿಳಿಯಲು

ಬರುವಾಗ ವಿಶೇಷವ್ಯಾಪ್ತಿಯನ್ನು ಅನುಸರಿಸುವುದರಲ್ಲಿ ಅರ್ಥವಿಲ್ಲ. ಆದಕಾರಣ ಟೀಕೆಯಲ್ಲಿ ಸಾಮಾನ್ಯ-ವ್ಯಾಪ್ತಿಯನ್ನು ಹೇಳಿದ್ದು ಸೂಕ್ತವಾಗಿದೆ.

ಅತಃ ಶಬ್ದದ ಅರ್ಥ - "ತದ್ಧೇತುತ್ವಂ ವದಂಶ್ಚಾಪಿ ತೃತೀಯೋऽತ ಉದಾಹೃತಃ" ವಿಷ್ಣುವು ವಿಚಾರಹೇತುವಾಗಿದ್ದಾನೆ. ವಿಚಾರವಾದರೂ ಮೋಕ್ಷಕ್ಕೆ ಹೇತುವಾಗಿದೆ" ಎಂದು ಹೇಳುವ ಅತಃ ಶಬ್ದವು ಸೂತ್ರದಲ್ಲಿ ಮೂರನೆಯದ್ದಾಗಿ ಹೇಳಲ್ಪಟ್ಟಿದೆ ; ಎಂದು ಭಾಷ್ಯದಲ್ಲಿ ಹೇಳಿದೆ. ಟೀಕೆಯಲ್ಲಿ ಇದಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ - "ಅತಶ್ಚ ತೃತೀಯತಯಾ ಪ್ರಾಥಮಿಕ ಉದಾಹೃತಃ ಯತಃ ತೃತೀಯತಯೋऽ-ದಾಹೃತೋ ವಿಷ್ಣುನೇತ್ಯತ ಉತ್ತಮ ಇತ್ಯರ್ಥಃ" "ವಿಷ್ಣುವಿನಿಂದ ಮೊದಲು ಉಚ್ಚರಿತವಾದ ಶಬ್ದಗಳಲ್ಲಿ "ಅತಃ" ಶಬ್ದವು ಮೂರನೆಯದ್ದಾಗಿ ಉಚ್ಚರಿತವಾಗಿದೆ. ಆ ಕಾರಣದಿಂದ ಉತ್ತಮವಾಗಿದೆ" ಎಂದು.

ಇಷ್ಟು ಅರ್ಥವು ಭಾಷ್ಯದ ಮಾತಿನಿಂದ ಹೇಗೆ ದೊರೆಯುತ್ತದೆ? ಎಂದರೆ 'ಅತಃ' ಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು. "ಯಾವ ಕಾರಣದಿಂದ ಉಕ್ತವಾಗಿದೆಯೋ" "ಉತ್ತಮವಾಗಿದೆಯೋ" ಎಂಬೆರಡೂ ಕಡೆಗಳಲ್ಲಿ ವಾಕ್ಯದ ಪೂರ್ಣತೆಗಾಗಿ "ಅತಃ ಶಬ್ದವು" ಎಂಬ ವಿಶೇಷ್ಯಪದವು ಬೇಕು. ಅದಕ್ಕೋಸ್ಕರ ಅತಃ ಶಬ್ದವನ್ನು ಆವೃತ್ತಿಯಿಂದ ಎರಡು ಬಾರಿ ಇಟ್ಟುಕೊಂಡು ಎರಡಕ್ಕೂ 'ಅತಃಶಬ್ದ' ಎಂದರ್ಥ ಹೇಳಬೇಕು. ಆ ಕಾರಣದಿಂದ ಎಂದು ಹೇಳಲು ಅದೇ ಅರ್ಥದಲ್ಲಿ 'ಅತಃ ಶಬ್ದವನ್ನು ಪುನಃ ಅನುವೃತ್ತಿ ಮಾಡಿಕೊಳ್ಳಬೇಕು. ಮತ್ತು "ತೃತೀಯತಯಾ ಉದಾಹೃತಃ" ಮೂರನೆಯದಾಗಿ ಉಕ್ತವಾಗಿದೆ' ಎಂಬುದನ್ನು ಆವೃತ್ತಿಯಿಂದ ಎರಡು ಸಲ ವಿವಕ್ಷಿಸಬೇಕು. ಇಷ್ಟೇ ಅಲ್ಲದೇ "ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ" ಎಂಬಲ್ಲಿರುವ ದ್ವಿವಚನಾಂತವಾದ "ಪ್ರಾಥಮಿಕೌ" ಎಂಬುದನ್ನು ಏಕವಚನಾಂತವಾಗಿ ವಿಪರಿಣಮಿಸಿ ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಇಷ್ಟೆಲ್ಲಾ ಸೇರಿಸಿದಾಗ ಆಗುವ ವಾಕ್ಯವಿನ್ಯಾಸ ಹೀಗಿದೆ - 'ಅತಶ್ಚ ತೃತೀಯತಯಾ ಪ್ರಾಥಮಿಕ ಉದಾಹೃತಃ ಯತಃ 'ಅತಃ ಶಬ್ದಃ ತೃತೀಯತಯಾ ಉದಾಹೃತಃ ವಿಷ್ಣುನಾ. ಅತಃ ಅತಃಶಬ್ದಃ ಉತ್ತಮಃ ' ಎಂದು.

ಹೀಗೆ 'ಪ್ರಾಥಮಿಕ' ಶಬ್ದವನ್ನು ಒಂದು ಬಾರಿ 'ತೃತೀಯಃ ಉದಾಹೃತಃ' ಎಂಬೆರಡು ಶಬ್ದಗಳನ್ನು ಒಂದುಬಾರಿ ಅತಃ ಶಬ್ದವನ್ನು ಮೂರುಬಾರಿ ಅನುವೃತ್ತಿ ಮಾಡಬೇಕು. ಆವಾಗ "ತೃತೀಯೋऽಥ ಉದಾಹೃತಃ" ಎಂಬ ಭಾಷ್ಯಮಾತಿಗೆ ಮೇಲೆ ಹೇಳಿದ ದೀರ್ಘವಾದ ಅರ್ಥವು ಲಭ್ಯವಾಗುತ್ತದೆ.

## ಸಾರ

**ಅಥಾತಃ ಶಬ್ದಗಳ ವೈಶಿಷ್ಟ್ಯ**

ಎಲ್ಲ ಸೂತ್ರಗ್ರಂಥಗಳಲ್ಲಿ ಅಥ ಅತಃ ಶಬ್ದಗಳು ಪ್ರಾರಂಭದಲ್ಲಿ ತಪ್ಪದೆ ಬರಲು ಮೂರು ಕಾರಣಗಳಿವೆ. ೧. ಅವಶ್ಯ ಹೇಳಬೇಕಾಗಿರುವುದನ್ನು ಅವು ಹೇಳುತ್ತವೆ. ೨. ಆ ಶಬ್ದಗಳ ಸ್ವರೂಪದಲ್ಲಿಯೆ ಏನೋ ಶಕ್ತಿ ಅಡಗಿದೆ. ೩. ಅತ್ಯಂತ ಪ್ರಶಸ್ತವಾದ ಅರ್ಥಗಳು ಅವುಗಳಿಗೆ ಇವೆ.

---

'ಮಹತ್ತತ್ತ್ವ' ಶಬ್ದಪ್ರಯೋಗವು ಸಾಧುವೇ?

**तात्पर्यचन्द्रिका –**

**महतश्चतुर्मुखादिति ।। महत्तत्वाभिमानिनश्चतुर्मुखादित्यर्थः ।। अयं वै लोकः प्रथमा महानाम्नीति ।। ''विदा मघवन्'' इत्यादिका ऋक् पृथिवीलोकस्य-विष्णुवाचिकेत्यर्थः ।।**

ಅನುವಾದ - 'ಮಹತಶ್ಚತುರ್ಮುಖಾತ್' ಎಂದರೆ 'ಮಹತ್' ತತ್ತ್ವಕ್ಕೆ ಅಭಿಮಾನಿಯಾದ ಚತುರ್ಮುಖನ ದೆಸೆಯಿಂದ ಎಂದರ್ಥ. 'ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನಿ' 'ಈ ಲೋಕವೇ ಮೊದಲನೆಯ ಮಹಾನಾಮ್ನಿ' ಎಂಬ ಪ್ರಯೋಗದಲ್ಲಿ ವಾಚ್ಯವಾಚಕಗಳಿಗೆ ಅಭೇದ ವ್ಯವಹಾರ ತೋರುತ್ತಿದೆ.' ಎಂದು ಟೀಕೆಯಲ್ಲಿ ಹೇಳಲಾಗಿದೆ. ಇಲ್ಲಿ 'ವಿದಾ ಮಘವನ್' ಮೊದಲಾದ 'ಋಕ್'ಗಳು 'ಅಯಂ ಲೋಕಃ' ಎನಿಸುವ ವಿಷ್ಣುವಾಚಕಗಳು.

**प्रकाशः –** 'महतः' महत्त्वगुणयुक्तादिति भ्रान्तिं निरस्यति ।। **महत्तत्वेति** ।। यद्यपि ''आन्महतः समानाधिकरणजातीययोः'' इति स्मृतेर्महातत्वेति वाच्यम् । तथाऽपि प्रमेयदीपिकायां 'महत आत्' इति स्थानिनः पूर्वमुद्देशे कार्ये ''आन्महतः'' इति निर्देशाद्वा, 'जातीयसमानाधिकरणयोः' इत्यल्पाच्तरस्य पूर्वमुद्देशे कार्ये व्यत्यासेन निर्देशाद्वा ज्ञापकादात्त्वमनित्यम्'' इत्युक्ततया वा, द्वितीये ''चक्षिङः ख्याञ्'' इत्यत्र ''संज्ञाच्छन्दसोर्बहुलम्'' इति वचनाद्वा 'महत्तत्व' इति साधु । तथैव सुधोक्तेः । वाच्यवाचकभावस्य स्फुटमप्रतीतेराह ।। **विदा मघवन्नित्यादिकेति** ।। परमैश्वर्यादिसम्पन्नमहार्थप्रतिपादकत्वेन महच्छब्दिते-न्द्रादिनामास्यामस्तीति महानाम्नीसंज्ञिता ''विदा मघवन्'' इत्यादिका ऋक् अयं लोकशब्दाभ्यामभिधीयमानविष्णुवाचिकेति भावेन, ''अयं वै लोकः प्रथमा महानाम्नी' इत्यादि ब्राह्मणं प्रवृत्तमित्यर्थः ।

**गुरुराजीय – महत्तत्वाभिमानिन इति** ।। नचात्र महच्छब्दः पूज्यत्वार्थकः किं न स्यादिति वाच्यम् । तत्वप्रकरणविरोधात् । तत्वोत्पत्त्यसिद्ध्यापाताच्चेति भावः ।।

ವಿವರಣೆ - ಟೀಕೆ - "ಅಭಿಮಾನಿ ಅಭಿಮನ್ಯಮಾನಯೋಃ ಐಕ್ಯವ್ಯಪದೇಶೋ ಮಹತಶ್ಚತು-ರ್ಮುಖಾತ್ ಇತ್ಯಾದೌ ಪ್ರಸಿದ್ಧಃ" ಅಭಿಮಾನಿಯಾದ ಪ್ರಾಣ ಮತ್ತು ವಿಷ್ಣುವಿಗೂ ಅಭಿಮನ್ಯಮಾನಗಳಾದ

'ತ' 'ಥ' ಅಕ್ಷರಗಳಿಗೂ ಭಾಷ್ಯದಲ್ಲಿ ಐಕ್ಯ ಹೇಳಲಾಗಿದೆ. ಈ ರೀತಿಯಾದ ಐಕ್ಯವ್ಯಪದೇಶವು ತಪ್ಪೇನಲ್ಲ. "ಮಹತಶ್ಚತುರ್ಮುಖಾತ್" ಇತ್ಯಾದಿ ಸ್ಥಳದಲ್ಲಿ ಕಂಡಿದೆ.

"ಅಂತರಾ ವಿಜ್ಞಾನಮನಸೀ ಇತ್ಯತ್ರ ವಿಜ್ಞಾನತತ್ತ್ವಂ ಮಹತಸ್ಸಮುತ್ಪನ್ನಂ ಚತುರ್ಮುಖಾತ್" ಎಂಬ ಸ್ಮೃತಿಯನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ. ಇಲ್ಲಿ "ಮಹತ್ತತ್ತ್ವಾಭಿಮಾನಿಚತುರ್ಮುಖಾತ್" ಎಂಬರ್ಥದಲ್ಲಿ "ಮಹತಃ ಚತುರ್ಮುಖಾತ್" ಎಂದು ಪ್ರಯೋಗಿಸಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ "ತಥೌ ಪ್ರಾಣಾತ್ಮಕೌ ಪ್ರೋಕ್ತೌ" ಎಂಬ ಐಕ್ಯಪದೇಶವು ಸಾಧುವಾಗುತ್ತದೆ.

ಪ್ರಶ್ನೆ :- ಟೀಕೆಯಲ್ಲಿ "ಮಹತಶ್ಚತುರ್ಮುಖಾತ್" ಎಂದು ಉದಾಹರಿಸಿದ್ದಾರೆ. ಈ ಮಾತಿನ ಅರ್ಥವೇನು? ಮಹಾತ್ಮನಾದ (ಪೂಜ್ಯನಾದ) ಚತುರ್ಮುಖನಿಂದ ಎಂದರ್ಥವಲ್ಲ. ಪ್ರಕೃತಿ ಮೊದಲಾದ ತತ್ತ್ವಗಳನ್ನು ಹೇಳುವ ಪ್ರಕರಣದಲ್ಲಿ ಚತುರ್ಮುಖಬ್ರಹ್ಮನ ವಿಚಾರ ಅಪ್ರಸ್ತುತವಾಗುತ್ತದೆ. ತತ್ತ್ವಗಳಿಂದ ನಡೆಯುವ ಸೃಷ್ಟಿಯನ್ನು ಹೇಳಿದಂತಾಗುವುದಿಲ್ಲ. ಆದ್ದರಿಂದ ಅಭೇದವನ್ನು ವಿವಕ್ಷಿಸುವ ಬಗೆ ಹೇಗೆ?

ಉತ್ತರ :- ಈ ಪ್ರಶ್ನೆಗೆ ಉತ್ತರರೂಪವಾಗಿ ಗ್ರಂಥದಲ್ಲಿ ಹೀಗೆ ಹೇಳಿದರು - "ಮಹತ್ತತ್ತ್ವಾಭಿಮಾನಿನಶ್ಚತುರ್ಮುಖಾತ್ ಇತ್ಯರ್ಥಃ" 'ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನ ದೆಸೆಯಿಂದ' ಎಂದರ್ಥ

ಪ್ರಶ್ನೆ :- 'ಮಹತ್ತತ್ತ್ವ' ಎಂಬ ಪ್ರಯೋಗವು ವ್ಯಾಕರಣದಂತೆ ಸರಿಯಾಗುವುದಿಲ್ಲ. "ಆನ್‌ಮಹತಃ ಸಮಾನಾಧಿಕರಣಜಾತೀಯಯೋಃ" (೬-೩-೪೬) ಎಂಬ ಪಾಣಿನೀಸೂತ್ರದಲ್ಲಿ 'ಮಹತ್' ಶಬ್ದದ ಮುಂದೆ ಮತ್ತೊಂದು ಸಮಾನವಿಭಕ್ತ್ಯಂತವಾದ ಪದವು ಸಮಾಸ ಹೊಂದಿದರೆ, ಅಥವಾ 'ಜಾತೀಯ' ಎಂಬ ಪದವು ಸಮಾಸ ಹೊಂದಿದರೆ 'ಮಹತ್' ಶಬ್ದದ ಮುಂದೆ 'ಆ' ಕಾರವು ಬರುತ್ತದೆಂದು ಹೇಳಲಾಗಿದೆ. ಅಂದರೆ 'ಮಹತ್' ಎಂಬ ಪದದ ಕೊನೆಯಲ್ಲಿರುವ 'ತ್' ಅಕ್ಷರವು ಹೋಗಿ 'ಆ'ಕಾರವು ಬರುತ್ತದೆ. 'ಮಹಾ' ಎಂದಾಗುತ್ತದೆಂದು ಅಭಿಪ್ರಾಯ. ಪಾಣಿನಿಯ ಈ ಸೂತ್ರದ ಅಭಿಪ್ರಾಯದಂತೆ "ಮಹಾತತ್ತ್ವ" ಎಂದೇ ಆಗಬೇಕು. ಮಹತತ್ತ್ವ ಎಂದು ಆಗುವುದಿಲ್ಲ. ಹೀಗಿರಬೇಕಾದರೆ, 'ಮಹತ್ತತ್ತ್ವಾಭಿಮಾನಿನಃ' ಎಂದು ಗ್ರಂಥಕಾರರು ಹೇಗೆ ಪ್ರಯೋಗಿಸಿದರು?

ಉತ್ತರ :- ಪಾಣಿನಿಯ ಸೂತ್ರದಲ್ಲಿ ಹೇಳಿರುವ ಈ ನಿಯಮವು ಸಾಪವಾದವಾಗಿದೆ. ಅಂದರೆ ಎಲ್ಲೆಡೆ ಅನ್ವಯಿಸಬೇಕೆಂಬ ನಿಯಮವಿಲ್ಲ. ಈ ವಿಷಯವನ್ನು ಪಾಣಿನಿಯೇ ಸೂತ್ರದಲ್ಲಿ ಸೂಚಿಸಿದ್ದಾನೆ ಅದು ಹೀಗೆ - ಸೂತ್ರದಲ್ಲಿ ಆದೇಶ ಅಕ್ಷರವನ್ನು ವಿಧಿಸುವಾಗ ಅದರ ಸ್ಥಾನವನ್ನು ಮೊದಲು ನಿರ್ದೇಶಿಸುವುದು ಸೂತ್ರದ ನಿಯಮ. ಅದರಂತೆ ಈ ಸೂತ್ರದಲ್ಲಿಯು 'ಮಹತಃ' 'ಆತ್' ಎಂದೇ ಹೇಳಬೇಕು. ಹೊರತು "ಆನ್‌ಮಹತಃ" ಎಂದಲ್ಲ.

ಅದರಂತೆ ಕಡಿಮೆ ಅಕ್ಷರಗಳ ಪದವನ್ನು ಮೊದಲು ಹೇಳಬೇಕೆಂದು ದ್ವಂದ್ವಸಮಾಸದ ನಿಯಮ. "ಸಮಾನಾಧಿಕರಣಜಾತೀಯಯೋಃ" ಎಂಬುದು ದ್ವಂದ್ವಸಮಾಸವಾಗಿದೆ. ಸಮಾನಾಧಿಕರಣಪದಕ್ಕಿಂತ ಜಾತೀಯಪದದಲ್ಲಿ ಕಡಿಮೆ ಅಕ್ಷರಗಳಿವೆ. ದ್ವಂದ್ವಸಮಾಸದಲ್ಲಿ ಪಾಣಿನಿ ಮಾಡಿದ ನಿಯಮದಂತೆ ಕಡಿಮೆ

ಅಕ್ಷರಗಳಲ್ಲಿ ಜಾತೀಯಪದವೇ ಮೊದಲು ಬರಬೇಕು. ಹಾಗಾಗಿ "ಜಾತೀಯಸಮಾನಾಧಿಕರಣಯೋಃ" ಎಂದೇ ಸೂತ್ರದಲ್ಲಿ ಹೇಳಬೇಕು. ಆದರೂ ಸಹ "ಸಮಾನಾಧಿಕರಣಜಾತೀಯಯೋಃ" ಎಂದೇ ಪಾಣಿನಿ ಹೇಳಿದ್ದಾನೆ. ಹೀಗೆ "ಮಹತಃ ಆತ್" ಎಂದು ಹೇಳದೆ, "ಆನ್‌ಮಹತಃ ಸಮಾನಾಧಿಕರಣ-ಜಾತೀಯಯೋಃ" ಎಂದು ಹೇಳಿ ತನ್ನ ಆದೇಶವನ್ನು ತಾನೇ ಮೀರಿದ್ದರಿಂದ ಏನೋ ಒಂದು ಸಾರ್ಥಕ್ಯ-ವನ್ನು ಸೂತ್ರಕಾರನು ತಿಳಿಸಿದ್ದಾನೆ. ಏನೆಂದರೆ ಈ ಸೂತ್ರದಲ್ಲಿ ಹೇಳಿದ ಆಕಾರಾದೇಶದ ನಿಯಮವು ಎಲ್ಲೆಡೆ ಅನ್ವಯಿಸುವುದಿಲ್ಲ. ಈ ಪ್ರಮೇಯವನ್ನು ಟೀಕಾರಾಯರು ಗೀತಾಭಾಷ್ಯದ ಪ್ರಮೇಯದೀಪಿಕಾದಲ್ಲಿ ಹೇಳಿದ್ದಾರೆ. ನ್ಯಾಯಸುಧೆಯಲ್ಲಿ ಅವರೇ ಮತ್ತೊಂದು ಸಮಾಧಾನವನ್ನು ಹೀಗೆ ಹೇಳುತ್ತಾರೆ - ಸೂತ್ರದ ಪ್ರಕಾರ "ಮಹತ್ತತ್ತ್ವ" ಎಂಬ ಪ್ರಯೋಗವು ಅಸಾಧುವಾಗಿದ್ದರೂ ಸಹ ವಾರ್ತಿಕದ ಪ್ರಕಾರ ಸಾಧುವಾಗುತ್ತದೆ. ಅದು ಹೇಗೆ - "ಚಕ್ಷಿಙಃ ಖ್ಯಾಞ್" (೨-೪-೫೪) ಎಂಬ ಸೂತ್ರದಲ್ಲಿ "ಚಕ್ಷಿಙ್" ಧಾತುವಿಗೆ ಆರ್ಧಧಾತುಕ ಪ್ರತ್ಯಯವು ಬಂದಾಗ "ಖ್ಯಾಞ್" ಎಂಬ ಆದೇಶವು ಬರುತ್ತದೆಂದು ಹೇಳಲಾಗಿದೆ. ಇದೇ ಸೂತ್ರದಲ್ಲಿ " ಸಂಜ್ಞಾಛಂದಸೋರ್ಬಹುಲಮ್" ರೂಢಾತ್ಮಕವಾದ ಶಬ್ದಗಳಲ್ಲಿ ಮತ್ತು ವೈದಿಕಪ್ರಯೋಗಗಳಲ್ಲಿ ವ್ಯಾಕರಣ ನಿಯಮವು ನಿಯಮೇನ ಅನ್ವಯಿಸುವುದಿಲ್ಲ. ಆದ್ದರಿಂದ ಪ್ರಕೃತ 'ಮಹತ್ತತ್ತ್ವ' ಎಂಬ ಪ್ರಯೋಗವು ಸಾಧುವೇ ಆಗುತ್ತದೆ, ವ್ಯಾಕರಣವಿರುದ್ಧವಾಗುವುದಿಲ್ಲ.

**ವಾಚ್ಯವಾಚಕಗಳಿಗೆ ಐಕ್ಯ ಕಂಡಿದೆ - ವಾಚ್ಯವಾಚಕಯೋರೈಕ್ಯವ್ಯಪದೇಶೋ "ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನೀ" ಇತ್ಯಾದೌ ದೃಷ್ಟಃ,** ವಾಚ್ಯವಾಚಕಗಳಿಗೆ ಐಕ್ಯವ್ಯವಹಾರವಿರುವುದು ಕಂಡಿದೆ - " ಈ ಲೋಕವೇ ಮೊದಲನೆಯ ಮಹಾನಾಮ್ನೀ" ಈ ಪ್ರಯೋಗದಲ್ಲಿ ವಾಚ್ಯವಾಚಕಗಳಿಗೆ ಅಭೇದವ್ಯವಹಾರವಿದೆ. ಇಲ್ಲಿ ವಾಚ್ಯವಾದದ್ದು ಯಾವುದು? ವಾಚಕವಾದದ್ದು ಯಾವುದು? ಎಂದು ತಿಳಿಯುವುದಿಲ್ಲ. ಅದಕ್ಕೋಸ್ಕರ ಗ್ರಂಥಕಾರರು "ವಿದಾ ಮಘವನ್ ಇತ್ಯಾದಿಕಾ ಋಕ್" ಇತ್ಯಾದಿ ವಾಕ್ಯದಿಂದ ವಾಚ್ಯವಾಚಕಗಳ ಪರಿಚಯವನ್ನು ಮಾಡುತ್ತಿದ್ದಾರೆ. ಪರಮೈಶ್ವರ್ಯಶಾಲಿಯಾದ ಮಹಾಪುರುಷನೊಬ್ಬನನ್ನು ಹೇಳುವ 'ಇಂದ್ರ' ಮೊದಲಾದ ಹೆಸರು 'ಮಹಾನಾಮ' ಇಂತಹ ಹೆಸರಿನಿಂದ ಕೂಡಿದ "ವಿದಾ ಮಘವನ್ ವಿದಾ" ಇತ್ಯಾದಿ ಋಕ್ ಮಹಾನಾಮ್ನೀ ಎಂದನಿಸುತ್ತದೆ. 'ಅಯಂ ಲೋಕಃ' 'ಈಲೋಕ' ಎಂಬೆರಡು ಶಬ್ದಗಳಿಂದ ವಾಚ್ಯನಾದವನು ವಿಷ್ಣು. ಇಂತಹ ವಿಷ್ಣುವನ್ನು 'ಮಹಾನಾಮ್ನಿ' ಎನಿಸಿದ ಋಕ್‌ಗಳು ಪ್ರತಿಪಾದಿಸುತ್ತವೆ.

ಐತರೇಯೋಪನಿಷತ್ತಿನಲ್ಲಿ "ವಿದಾ ಮಘವನ್ ವಿದಾ" ಎಂಬ ಋಕ್ ಮೊದಲು ಬರುತ್ತದೆ. ಅನಂತರ "ಅಭಿಷ್ಟುಮಭಿಷ್ಟಿಭಿಃ" ಎಂಬುದು. ಅನಂತರ "ರಾಯಃ" ಇತ್ಯಾದಿ ಋಕ್ ಬರುತ್ತದೆ. ಮಹಾನಾಮ್ನಿ ಹೆಸರಿನಿಂದ ಈ ಮೂರು ಋಕ್‌ಗಳನ್ನು ಇಲ್ಲಿ ವಿವಕ್ಷಿಸಬೇಕು. ಈ ಮಹಾನಾಮ್ನಿ ಮಂತ್ರಗಳಿಂದ ಪ್ರತಿಪಾದ್ಯನಾದವನು ಪೃಥಿವಿಯಲ್ಲಿರುವ ವಿಷ್ಣು. ಇದನ್ನೇ ಕರ್ಮನಿರ್ಣಯದಲ್ಲಿ ಹೇಳಿದ್ದಾರೆ -

**"ತ್ರ್ಯೃಚವಿಭಾಗೇನ ತಿಸ್ರೋ ಮಹಾನಮ್ನ್ಯಃ" ಎಂದು.**

*ಪರಿಪೂರ್ಣಚಂದ್ರಿಕಾ*

ಮತ್ತು 'ಪ್ರಥಮಾ ಯಾ ಮಹಾನಾಮ್ನೀ ತದ್ವಾಚ್ಯಃ ಪಾರ್ಥಿವೋ ಹರಿಃ।
ದ್ವಿತೀಯಾಯಾಸ್ತ್ವಂತರಿಕ್ಷಸ್ತೃತೀಯಾಯಾದ್ಯುಗಃ ಪ್ರಭುಃ' ॥

ಹೀಗೆ ವಿಷ್ಣುವಿಗೆ 'ಋಕ್' ನಿಂದ ಐಕ್ಯವು ಉಕ್ತವಾಗಿದೆ. "ಅಯಂ ಲೋಕಃ" ಎಂದರೆ ವಿಷ್ಣು. ಇವನೇ ಮೊದಲನೆಯ ಮಹಾನಾಮ್ನಿ ಎಂದರೆ 'ವಿದಾ ಮಘವನ್' ಇತ್ಯಾದಿ ಮಹಾನಾಮ್ನಿಮಂತ್ರಗಳಿಂದ ಪ್ರತಿಪಾದ್ಯನೆಂದರ್ಥ. ವಾಚ್ಯನಾದವನು ವಿಷ್ಣು ವಾಚಕವಾದದ್ದು ಮಹಾನಾಮ್ನಿಮಂತ್ರ ಹೀಗೆ ವಾಚ್ಯವಾಚಕಗಳಿಗೆ ಐಕ್ಯವ್ಯಪದೇಶವು ಕಂಡಿದೆ. ವಾಚ್ಯವಾಚಕಗಳ ಐಕ್ಯಾಭಿಪ್ರಾಯದಿಂದಲೇ "ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನೀ" ಎಂಬ ಮಾತು ಹೊರಟಿದೆ. ಅದರಂತೆ ಪ್ರಕೃತದಲ್ಲಿ ವಾಚ್ಯರಾದ ಪ್ರಾಣದೇವರಿಗೂ ವಾಚಕಗಳಾದ 'ತ' 'ಥ' ಅಕ್ಷರಗಳಿಗೂ ಐಕ್ಯವ್ಯಪದೇಶವು ಸಮಂಜಸವೇ ಆಗುತ್ತದೆ. ಅಸಾಧುವಲ್ಲ.

### ಸಾರ

**'ಮಹತ್ತತ್ತ್ವ' ಶಬ್ದಪ್ರಯೋಗ**

'ಮಹತ್‌ತತ್ತ್ವ' 'ಮಹಾತತ್ತ್ವ'ವಾಗಬೇಕೆಂದು 'ಆನ್‌ಮಹತಃ ಸಮಾನಾಧಿಕರಣ ಜಾತೀಯಯೋಃ' ಎಂಬ ಪಾಣಿನಿಸೂತ್ರ ಹೇಳುತ್ತದೆ. 'ಮಹತ್ತತ್ತ್ವ' ಎಂಬ ಪ್ರಯೋಗ ಸರಿಯೆ? ಈ ಪ್ರಶ್ನೆಗೆ ಸಮಾಧಾನ - ಈ ಸೂತ್ರದಲ್ಲಿ ಪದಗಳ ಜೋಡಣೆಯಲ್ಲಿ ವೈಚಿತ್ರ್ಯವಿರುವುದರಿಂದ ಈ ಸೂತ್ರದಲ್ಲಿ ಹೇಳಿದ ಆಕಾರಾದೇಶ ನಿಯಮ ಎಲ್ಲ ಕಡೆ ಅನ್ವಯಿಸುವುದಿಲ್ಲ ಎಂದು ಸೂಚಿತವಾಗುತ್ತದೆ - 'ಮಹತಃ ಆತ್' ಎಂದು ಸ್ಥಾನವನ್ನು ಮೊದಲಿಗೆ ಹೇಳಿ ಬಳಿಕ ಆದೇಶವನ್ನು ಹೇಳಬೇಕಾಗಿತ್ತು. ವ್ಯತ್ಯಾಸ ಮಾಡಿ 'ಆನ್ಮಹತಃ' ಎಂದಿದೆ. ದ್ವಂದ್ವಸಮಾಸದಲ್ಲಿ ಕಡಿಮೆ ಸ್ವರಾಕ್ಷರ ಉಳ್ಳಶಬ್ದ ಮೊದಲಿಗೆ ಬರಬೇಕು. ಆದರೆ ಇಲ್ಲಿ ವ್ಯತ್ಯಾಸ ಮಾಡಿ 'ಸಮಾನಾಧಿಕರಣ ಜಾತೀಯಯೋಃ' ಎಂದಿದೆ. 'ಸಂಜ್ಞಾಛಂದಸೋರ್ಬಹುಲಂ' ಎಂಬ ವಾರ್ತಿಕವೂ ರೂಢಿಯ ಹೆಸರಾದ 'ಮಹತ್ತತ್ತ್ವ' ಶಬ್ದದಲ್ಲಿ ಆಕಾರಾದೇಶ ಮಾಡದಿರುವುದನ್ನು ಸಮ್ಮತಿಸುತ್ತದೆ.

• • • • •

## ಬ್ರಹ್ಮವಿದ್ಯೆಯ ಅಧಿಕಾರಿಗಳು

**तात्पर्यचन्द्रिका –**

**अरुच्येति ।। सच्छूद्रस्य देहान्तरे वैदिकब्रह्मविद्याधिकारेऽपि नैतद्देहेऽधिकारः। देहान्तरेऽधिकारश्च नेदानीं प्रवृत्त्युपयोगीत्यरुच्येत्यर्थः । अध्ययनलब्धाऽपीति ।। "अवैष्णवस्य वेदेऽपि ह्यधिकारो न विद्यते" इत्यादेरित्यर्थः ।। अन्याय्याध्ययनेति ।। अभक्तानधिकारिकृतत्वमन्याय्यत्वम् । भक्तिपूर्वकाध्ययन(वत्त्व)-**

**मिति ।। शमादिकमप्यत्र विवक्षितम् । उत्तरोक्ताप्राचुर्येणेति ।। 'पूर्वपूर्वस्मिन्' इति शेषः । ततश्चायमर्थः – समानाधिकरणानां वेदाध्ययनशमादिविष्णुपादैकसंश्रयत्वादीनां मध्ये यस्य शमादिविष्णुपादैकसंश्रयत्वादिके अप्रचुरे, अध्ययनं तु प्रचुरं, सोऽधमः । यस्य विष्णुपादैकसंश्रयत्वादिकमेव अप्रचुरम्, अध्ययनशमादिकं तु प्रचुरे, स मध्यमः । यस्य तु विष्णुपादैकसंश्रयत्वादिकं प्रचुरम्, अध्ययनशमादिकं त्वप्रचुरे, स उत्तम इति ।। यतो नारायणप्रसादमृते न मोक्ष इत्यादि ।।**

ಅನುವಾದ - 'ಅರುಟ್ಯಾ' ಎಂಬ ಟೀಕಾವಾಕ್ಯಕ್ಕೆ ಹೀಗರ್ಥ - ಸಜ್ಜನನಾದ ಶೂದ್ರನಿಗೆ ಜನ್ಮಾಂತರದಲ್ಲಿ ವೈದಿಕಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದರೂ ಈ ದೇಹದಲ್ಲಿ ಅಧಿಕಾರವಿರುವುದಿಲ್ಲ. ದೇಹಾಂತರದಲ್ಲಿರುವ ಅಧಿಕಾರವು ಈ ಜನ್ಮದ ವಿಚಾರ ಪ್ರವೃತ್ತಿಗೆ ಉಪಯೋಗವಾಗುವುದಿಲ್ಲ, ಎಂದು.

'ಅಧ್ಯಯನಬ್ದಾಪಿ' ಎಂಬ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ವೇದಾಧ್ಯಯನ ಮಾಡಿದವನು ಬ್ರಹ್ಮವಿಚಾರಕ್ಕೆ ಅರ್ಹನಾಗುತ್ತಾನೆಂದು ಹೇಳಿದ್ದರೂ ವಿಷ್ಣುಭಕ್ತಿಯೂ ಬೇಕೆಂದು ಹೇಳಲಾಗಿದೆ. 'ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ' ವಿಷ್ಣುಭಕ್ತಿರಹಿತನಿಗೆ ವೇದಾಧಿಕಾರವಿಲ್ಲ ಇತ್ಯಾದಿಯಾಗಿ ತಿಳಿಯಬೇಕು.

'ಅನ್ಯಾಯ್ಯಾಧ್ಯಯನ' ಎಂದರೆ ಭಕ್ತಿ ಇಲ್ಲದವನ ಅನರ್ಹನಾದವನ ಅಧ್ಯಯನ ಎಂದರ್ಥ. ಇದು ಜಿಜ್ಞಾಸುವಿನ ಲಕ್ಷಣವಲ್ಲ. 'ಭಕ್ತಿಪೂರ್ವಕ ಅಧ್ಯಯನ'ದ ಜೊತೆಗೆ ಶಮದಮಾದಿಗಳೂ ಇಲ್ಲಿ ವಿವಕ್ಷಿತಗಳಾಗಿವೆ. ಉತ್ತರೋಕ್ತಾಪ್ರಾಚುರ್ಯೇಣ' ಎಂಬಲ್ಲಿ 'ಪೂರ್ವಪೂರ್ವಸ್ಮಿನ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಒಟ್ಟು ಇಷ್ಟು ಅಭಿಪ್ರಾಯ - ಒಬ್ಬ ವ್ಯಕ್ತಿಯಲ್ಲಿಯೇ ಇರುವ ವೇದಾಧ್ಯಯನ ಶಮದಮಾದಿಗಳು ವಿಷ್ಣುಪಾದೈಕನಿಷ್ಠತ್ವಗಳಲ್ಲಿ ಯಾರಿಗೆ ಶಮಾದಿಗಳು ವಿಷ್ಣುಪಾದೈಕ ಸಂಶ್ರಯತ್ವಾದಿಗಳು ಅಪ್ರಚುರವಾಗಿ ಇದ್ದು ಅಧ್ಯಯನವು ಪ್ರಚುರವಾಗಿ ಇರುತ್ತದೋ ಅವರು ಅಧಮಾಧಿಕಾರಿಗಳು. ಯಾರಿಗೆ ವಿಷ್ಣುಪಾದೈಕಸಂಶ್ರಯತ್ವಾದಿಗಳೇ ಅಪ್ರಚುರವಾಗಿ ಇದ್ದು ಅಧ್ಯಯನಶಮಾದಿಗಳು ಪ್ರಚುರವಾಗಿ ಇರುತ್ತವೋ ಅವನು ಮಧ್ಯಮಾಧಿಕಾರಿಯು. ಇನ್ನು ಯಾರಿಗೆ ವಿಷ್ಣುಪಾದೈಕಸಂಶ್ರಯತ್ವಾದಿಗಳು ಪ್ರಚುರವಾಗಿ ಇದ್ದು ಅಧ್ಯಯನ ಶಮಾದಿಗಳು ಅಪ್ರಚುರವಾಗಿ ಇರುತ್ತವೋ ಅಂತಹವನು ಉತ್ತಮಾಧಿಕಾರಿಯೆಂದು ಕರೆಸಿಕೊಳ್ಳುತ್ತಾನೆ.

**प्रकाशः** – **सच्छूद्रस्य** मोक्षहेतुज्ञानावश्यंभावेन ब्रह्मविद्याधिकारित्वात् कथमरुचिरित्यत आह ।। **सच्छूद्रस्येति** ।। 'देहान्तरे' विप्रदेहे । कथमध्ययनेन विष्णुभक्तेर्लाभ इत्यत आह ।। **अवैष्णवस्येति** ।। भक्तिपूर्वकाध्ययनमुपलक्षण-

मित्याह ।। शमादिकमिति ।। आकाङ्क्षितं पूरयति ।। पूर्वपूर्वस्मिन्निमितीती ।। निष्कर्षति ।। ततश्चेति ।।

**गुरुराजीय – नैतदेह इति ।।** अनेन प्रायिकत्वादित्यत्राधिकारस्येति शेष उक्तो भवति । उत्तरोक्तस्य शमादेरुत्तरस्मिन् मध्यमादौ प्राचुर्यसत्त्वादाह ।। **पूर्वपूर्वस्मिन्निति ।।** अधमनिष्ठाध्ययनापेक्षया मध्यमादावध्ययनादेः प्राचुर्यात् कथं तस्य तत्राप्राचुर्यमित्यत आह ।। **ततश्चेति ।।** एतेन पूर्वस्मिन्नधमे उत्तरोक्तयोः पूर्वस्मिन् मध्यमे उत्तरोक्तस्योत्तरस्मिन्नुत्तमे चोक्तयोः पूर्वोक्तयोः अप्राचुर्यमिति उत्तरोक्तात् पूर्वोक्तयोरप्राचुर्यमिति वा तन्त्रेण योजनोक्ता भवति । अत्रोत्तरोक्तेति ग्रन्थस्वारस्येनास्यार्थस्याभिधानादधमोत्तमयोस्तत्रोक्तमात्रप्राचुर्येऽपि सङ्गृहीताद्य-प्राचुर्येण मध्यमे तु सङ्गृहीतोक्तयोः प्राचुर्येणानुत्कृष्टस्याप्राचुर्येण वचनमुपपन्नमिति द्रष्टव्यम् । एवमथशब्दस्य परोक्तार्थनिरासेन भाष्यकृदुक्तोऽर्थः साधितः ।

**ವಿವರಣೆ** - **ಟೀಕಾ** - "ಅನೇನ ಮೋಕ್ಷಯೋಗ್ಯತ್ವಂ ಸಾಮಾನ್ಯಲಕ್ಷಣಂ ಅಭಿಪ್ರೇತಮ್. ಅಸ್ಯ ಚ ಸಚ್ಛೂದ್ರಾದೌ ವ್ಯಾಪ್ತೇಃ ಪ್ರಾಯಿಕತ್ವಾದರುಚ್ಯಾ ಪ್ರಕಾರಾಂತರೇಣಾಧಿಕಾರಿಣಃ ಸ್ವರೂಪಮಾಹ ॥ ತಥೇತಿ ॥"

"ಬ್ರಹ್ಮವಿದ್ಯೆಗೆ ಯಾರು ಅಧಿಕಾರಿಗಳು? ಅವರ ಲಕ್ಷಣವೇನು? ಎಂಬ ಪ್ರಶ್ನೆಗೆ "ಮೋಕ್ಷದಲ್ಲಿ ಅಪೇಕ್ಷೆ ಇರುವಿಕೆ" ಯನ್ನೇ ಸಾಮಾನ್ಯಲಕ್ಷಣವೆಂದು ಹೇಳಿದರು.

ಆದರೆ ಈ ಲಕ್ಷಣವು ಸಾತ್ವಿಕರಾದ ಶೂದ್ರಾದಿಗಳಲ್ಲಿಯೂ ಬರುತ್ತದೆ. ಹೀಗೆ ಅತೃಪ್ತಿ ಇರುವುದರಿಂದ ಭಾಷ್ಯಕಾರರು ಮತ್ತೊಂದು ಬಗೆಯಲ್ಲಿ ಬ್ರಹ್ಮವಿದ್ಯಾಧಿಕಾರಿಗಳ ಲಕ್ಷಣವನ್ನು ಹೇಳುತ್ತಿದ್ದಾರೆಂದು ಟೀಕೆಯಲ್ಲಿ ಹೇಳಿದೆ.

ಪ್ರಶ್ನೆ :- ಅತೃಪ್ತಿಗೆ ಕಾರಣವೇನು? ಏಕೆಂದರೆ ಶೂದ್ರನು ಸಾತ್ವಿಕನಾಗಿದ್ದಲ್ಲಿ ಜನ್ಮಾಂತರದಲ್ಲಿ ಬ್ರಾಹ್ಮಣದೇಹವನ್ನು ಹೊಂದುತ್ತಾನೆ. ಆವಾಗ ಬ್ರಹ್ಮವಿದ್ಯೆಯಲ್ಲಿ ಅವನೂ ಅಧಿಕಾರಿಯಾಗುತ್ತಾನೆ. ಹಾಗಾಗಿ 'ಮೋಕ್ಷಾಭಿಲಾಷೆ' ಎಂಬ ಸಾಮಾನ್ಯಲಕ್ಷಣವನ್ನು ಹೇಳಿದರೆ ಏನು ತಪ್ಪು?

ಉತ್ತರ :- ಆದರೂ ಸಹ ಆ ಶೂದ್ರನಿಗೆ ಈ ಜನ್ಮದಲ್ಲಿ ಅಧಿಕಾರವಿಲ್ಲ. ಜನ್ಮಾಂತರದಲ್ಲಿ ದೊರೆಯುವ ಅಧಿಕಾರವು ಈ ಜನ್ಮದಲ್ಲಿ ಉಪಯುಕ್ತವಾಗುವುದಿಲ್ಲ. ಈ ಅತೃಪ್ತಿ ಇರುವುದರಿಂದ ಈಗಿನ ಜನ್ಮದಲ್ಲಿಯೇ ಉಪಯುಕ್ತವಾಗುವ ಅರ್ಹತೆಯ ಸ್ವರೂಪವನ್ನು ಬೇರೆ ರೀತಿಯಿಂದ ವರ್ಣಿಸುತ್ತಾರೆ.

**ಟೀಕಾ - 'ಅತ್ರ ಅಧ್ಯಯನಲಬ್ಧಾಽಪಿ ವಿಷ್ಣುಭಕ್ತಿಃ ಅನ್ಯಾಯ್ಯಾಧ್ಯಯನನಿವೃತ್ತ್ಯರ್ಥಂ ಪೃಥಗುಕ್ತಾ. ತಥಾ ಚ ಹರಿಭಕ್ತಿಪೂರ್ವಕಾಧ್ಯಯನವತ್ವಂ ಸಾಮಾನ್ಯತೋ ಬ್ರಹ್ಮವಿದ್ಯಾಧಿಕಾರ ಇತ್ಯುಕ್ತಂ ಭವತಿ'.**

ಬ್ರಹ್ಮವಿದ್ಯಾಧಿಕಾರಿಗಳು ಮೂರುವಿಧರಾಗಿದ್ದಾರೆ. ಆ ಮೂರುವಿಧರಲ್ಲಿ ಅಧಮಾಧಿಕಾರಿಗಳ ಲಕ್ಷಣವನ್ನು "ಭಕ್ತಿಮಾನ್ ಪರಮೇ ವಿಷ್ಣೌ ಯಸ್ತು ಅಧ್ಯಯನವಾನ್ನರಃ ಅಧಮಃ" ಸರ್ವೋತ್ತಮನಾದ ವಿಷ್ಣುವಿನಲ್ಲಿ ಭಕ್ತಿಯುಳ್ಳವನು ವೇದಾಧ್ಯಯನ ಮಾಡಿದವನು ಯಾರು ಇರುತ್ತಾನೋ ಅಂತಹವನು ಬ್ರಹ್ಮವಿದ್ಯೆಯಲ್ಲಿ ಅಧಮಾಧಿಕಾರಿಯಾಗುತ್ತಾನೆ" ಎಂದು ಭಾಷ್ಯದಲ್ಲಿ ಹೇಳಿದ್ದಾರೆ.

"ವಿಷ್ಣುಭಕ್ತಿಮತ್ವೇ ಸತಿ ವೇದಾಧ್ಯಯನವತ್ವಂ" ಎಂದು ಅಧಮಾಧಿಕಾರಿಯ ಲಕ್ಷಣವನ್ನು ಹೇಳಿದಂತಾಯಿತು. ಇಲ್ಲಿ "ವೇದಾಧ್ಯಯನವತ್ವಂ" ಎಂದಷ್ಟೇ ಲಕ್ಷಣ ಹೇಳಿದರೆ ಸಾಕು. ವಿಷ್ಣುಭಕ್ತಿಯೂ ಇರಬೇಕೆಂದು ತಿಳಿಯುತ್ತದೆ. ಪುನಃ "ವಿಷ್ಣುಭಕ್ತಿಮತ್ವಂ" ಎಂದು ಹೇಳುವ ಆವಶ್ಯಕತೆ ಇಲ್ಲ. ಏಕೆಂದರೆ -

ಅವೇಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ।
ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ॥

"ಯಾವ ವ್ಯಕ್ತಿಯಲ್ಲಿ ವಿಷ್ಣುಭಕ್ತಿ, ಗುರುಭಕ್ತಿ, ಶಮದಮಾದಿಗುಣಗಳು ಇರುವುದಿಲ್ಲವೋ ಅಂತಹ ವ್ಯಕ್ತಿಯು ವೇದವಿದ್ಯೆಯಲ್ಲಿ ಅಧಿಕಾರನಲ್ಲ." ಎಂಬ ಪ್ರಮಾಣವಚನದಂತೆ ವೇದಾಧ್ಯಯನ ಮಾಡುವಂತಹ ವ್ಯಕ್ತಿಯಲ್ಲಿ ವಿಷ್ಣುಭಕ್ತಿಯೇ ಮೊದಲಾದ ಗುಣಗಳು ಇದ್ದೇ ಇರುತ್ತವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ "ವೇದಾಧ್ಯಯನಶೀಲನಾಗಿರಬೇಕು" ಎಂಬಷ್ಟೇ ಲಕ್ಷಣದಿಂದ ವಿಷ್ಣುಭಕ್ತಿ ಮೊದಲಾದ ಗುಣಗಳಿರುತ್ತವೆಂದು ತಿಳಿಯುವಾಗ ಪುನಃ ಆಚಾರ್ಯರು ಭಾಷ್ಯದಲ್ಲಿ "ಭಕ್ತಿಮಾನ್ ಪರಮೇ ವಿಷ್ಣೌ" ಎಂದೇಕೆ ಹೇಳಿದರು? ಹೀಗೆ ಹೇಳುವ ಅವಶ್ಯಕತೆಯಾದರೂ ಏನಿತ್ತು? ಈ ಪ್ರಶ್ನೆಗೆ ಉತ್ತರ ನೀಡಲು ಟೀಕೆಯಲ್ಲಿ "ಅತ್ರ ಅಧ್ಯಯನಲಬ್ಧಾಪಿ" ಇತ್ಯಾದಿ ಮಾತುಗಳನ್ನು ಹೇಳಿದರು.

"ವೇದಾಧ್ಯಯನಶೀಲನಾಗಿರಬೇಕು" ಎಂದಷ್ಟೇ ಹೇಳಿದರೂ ವಿಷ್ಣುಭಕ್ತಿಯೂ ಇರಬೇಕೆಂದು ತಿಳಿಯುತ್ತದೆ. "ಅನ್ಯಾಯಾಧ್ಯಯನವು ಯೋಗ್ಯಾಧಿಕಾರಿಯ ಲಕ್ಷಣವಲ್ಲ" ಎಂದು ತಿಳಿಸಲು ಭಾಷ್ಯದಲ್ಲಿ "ಭಕ್ತಿಮಾನ್ ಪರಮೇ ವಿಷ್ಣೌ" ಎಂದು ಹೇಳಿದ್ದಾರೆ.

ಈ "ಅನ್ಯಾಯಾಧ್ಯಯನ" ಶಬ್ದದ ಅರ್ಥವನ್ನು ಚಂದ್ರಿಕೆಯಲ್ಲಿ ಹೀಗೆ ವಿವರಿಸಿದ್ದಾರೆ - "ಅಭಕ್ತಾಽನಧಿಕಾರಿಕೃತತ್ವಮ್ ಅನ್ಯಾಯತ್ವಮ್" "ಭಕ್ತಿಯಿಲ್ಲದೆ ಅನಧಿಕಾರಿಯು ನಡೆಸುವ ಅಧ್ಯಯನವೇ ಅನ್ಯಾಯಾಧ್ಯಯನ" ಎಂದು.

ಉತ್ತರದ ಅಭಿಪ್ರಾಯವಿಷ್ಟು - ಹೇಳಿದ್ದನ್ನೇ ಪುನಃ ಹೇಳಿದ್ದರಿಂದ ವಿಷ್ಣುಭಕ್ತಿಯು ಇರಲೇಬೇಕೆಂದು ತಿಳಿಯುತ್ತದೆ. ಕೆಲವರು ವಿಷ್ಣುಭಕ್ತಿ ಇಲ್ಲದೆ ಕೇವಲ ಡಂಬಾಚಾರದಿಂದ ವೇದಾಧ್ಯಯನವನ್ನು ಮಾಡುತ್ತಾರೆ. ಅಂತಹವರನ್ನು ಈಗ ನಿಷೇಧಿಸಿದಂತಾಯಿತು. "ಅಧ್ಯಯನವಾನ್ ನರಃ", ಎಂದಷ್ಟೇ ಹೇಳಿದ್ದಲ್ಲಿ ಈ ನಿವೃತ್ತಿಯು ತಿಳಿಯುತ್ತಿರಲಿಲ್ಲ. ಆದ್ದರಿಂದ "ಭಕ್ತಿಮಾನ್ ಪರಮೇ ವಿಷ್ಣೌ ಯಸ್ತು ಅಧ್ಯಯನವಾನ್ನರಃ" ಎಂದು ಶ್ರೀಮದಾಚಾರ್ಯರು ಹೇಳಿದ್ದು ಅತ್ಯಂತ ಸಾರ್ಥಕವಾಗಿದೆ.

ಪರಿಪೂರ್ಣಚಂದ್ರಿಕಾ

ಶಮದಮಾದಿಗುಣಗಳನ್ನು ಸಹ ಅಧಮಾಧಿಕಾರಿಯಲ್ಲಿ ವಿವಕ್ಷಿಸಬೇಕು. ಆದ್ದರಿಂದ ಹರಿಭಕ್ತಿಯನ್ನು ಶಮದಮ ಮೊದಲಾದ ಸದ್ಗುಣಗಳನ್ನು ಹೊಂದಿ ವೇದಾಧ್ಯಯನವನ್ನು ಮಾಡಿದರೆ ಅದು ಬ್ರಹ್ಮವಿಚಾರಕ್ಕೆ ಬೇಕಾಗುವ ಸಾಮಾನ್ಯಯೋಗ್ಯತೆ ಎನಿಸುತ್ತದೆ. ಇಷ್ಟು ಅಧಮಾಧಿಕಾರಿಯ ಲಕ್ಷಣ.

ಟೀಕಾ :- "ಶಮಾದಿಸಂಯುಕ್ತ ಇತ್ಯಾದೌ ಪೂರ್ವಸಂಗ್ರಹಃ ಪೂರ್ವತ್ರ ಚ ಉತ್ತರೋಕ್ತಾನುಕರ್ಷಶ್ಚ ಕರ್ತವ್ಯಃ ನ ಚೈವಂ ಸಾಂಕರ್ಯಮ್. ಉತ್ತರೋಕ್ತಾಪ್ರಾಚುರ್ಯೇಣ ಅಸಾಂಕರ್ಯಾತ್"

ಭಾಷ್ಯದಲ್ಲಿ ಬ್ರಹ್ಮವಿದ್ಯಾಧಿಕಾರಿಗಳನ್ನು ಮೂರು ಬಗೆಯಲ್ಲಿ ವಿಂಗಡಿಸಿದ್ದಾರೆ. - ಅದು ಹೀಗೆ -

೧) ಭಕ್ತಿಪೂರ್ವಕ ಅಧ್ಯಯನವು ಕನಿಷ್ಠಾ ಅರ್ಹತೆ.

೨) ಶಮದಮಾದಿಗುಣಗಳು - ಮಧ್ಯಮಾರ್ಹತೆ.

೩) ವಿವೇಕ, ವೈರಾಗ್ಯ, ವಿಷ್ಣು ಒಬ್ಬನೇ ಸರ್ವೋತ್ತಮನೆಂದು ನಂಬಿರುವುದು ಉತ್ತಮಾರ್ಹತೆ .

ಭಾಷ್ಯದಲ್ಲಿ ಹೇಳಿದ ಈ ವಿಭಾಗಗಳನ್ನು ಯಥಾವತ್ತಾಗಿ ಇಟ್ಟುಕೊಳ್ಳಬಾರದು. ಮೊದಲಿನ ವಿಭಾಗಗಳಲ್ಲಿ ಮುಂದಿನ ವಿಭಾಗಗಳನ್ನೂ ಸೇರಿಸಿಕೊಳ್ಳಬೇಕು. ಅದರಂತೆ ಮುಂದಿನ ವಿಭಾಗಗಳಲ್ಲಿ ಮೊದಲಿನ ವಿಭಾಗದ ಗುಣಗಳನ್ನು ಅನ್ವಯಿಸಿಕೊಳ್ಳಬೇಕು. ಈ ವಿಷಯವನ್ನು ಟೀಕೆಯಲ್ಲಿ ಹೇಳಿದ್ದಾರೆ.

ಹಾಗಾದರೆ ಮೂರು ವಿಭಾಗಗಳೆಂಬ ಪರಿಕಲ್ಪನೆಯೇ ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಟೀಕೆಯಲ್ಲಿ ಹೀಗೆ ಉತ್ತರಿಸಿದ್ದಾರೆ - "ಉತ್ತರೋಕ್ತಾಪ್ರಾಚುರ್ಯೇಣ ಅಸಾಂಕರ್ಯಾತ್" ಎಂದು. ಮುಂದಿನ ವಿಭಾಗಗಳಲ್ಲಿರುವ ಗುಣಗಳು ಹಿಂದಿನ ವಿಭಾಗದಲ್ಲಿ ಕಡಿಮೆ ಪ್ರಮಾಣದಲ್ಲಿರುತ್ತವೆ. ಆದ್ದರಿಂದ ಎಲ್ಲಾ ವಿಭಾಗಗಳೂ ಒಂದೇ ಎಂಬ ಸಾಂಕರ್ಯ ದೋಷಕ್ಕೆ ಅವಕಾಶವಿಲ್ಲ.

ಇದನ್ನು "ತತಶ್ಚಾಯಮರ್ಥಃ" ಇತ್ಯಾದಿ ವಾಕ್ಯಗಳಿಂದ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಮೂರು ವಿಭಾಗಗಳನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು -

| ಅಧಿಕಾರಿವರ್ಗ | ಹೆಚ್ಚು ಗುಣಗಳು | ಕಡಿಮೆ ಗುಣಗಳು |
|---|---|---|
| ಅಧಮಾಧಿಕಾರಿ- | ವೇದಾಧ್ಯಯನ | ವಿಷ್ಣುಪಾದೈಕಸಂಶ್ರಯತ್ವ<br>ಶಮದಮಾದಿಗುಣಗಳು |
| ಮಧ್ಯಮಾಧಿಕಾರಿ - | ವೇದಾಧ್ಯಯನ<br>ಶಮದಮಾದಿ ಗುಣಗಳು | ವಿಷ್ಣುಪಾದೈಕಸಂಶ್ರಯತ್ವ |
| ಉತ್ತಮಾಧಿಕಾರಿ - | ವಿಷ್ಣುಪಾದೈಕಸಂಶ್ರಯತ್ವ | ವೇದಾಧ್ಯಯನ<br>ಶಮದಮಾದಿಗುಣಗಳು |

ಹೀಗೆ ವಿಭಾಗಿಸಿದಾಗ ಯಾವ ಅಸಾಂಕರ್ಯವೂ ಬರಲಾರದು. ಇಷ್ಟು ವಿಷಯವು "ಉತ್ತರೋಕ್ತಾಪ್ರಾಚುರ್ಯೇಣ ಅಸಾಂಕರ್ಯಾತ್" ಎಂಬ ಟೀಕೆಯಿಂದ ಹೇಗೆ ಸಿಗುತ್ತದೆ.

ಕೊನೆಯ ವಿಭಾಗದಲ್ಲಿ 'ಉತ್ತರೋಕ್ತ ಅಪ್ರಾಚುರ್ಯೇಣ' ಎಂಬ ಪದಕ್ಕೆ ಹಿಂದಿನ ವಿಭಾಗದ ಗುಣಗಳು ಅಲ್ಪಪ್ರಮಾಣದಲ್ಲಿರುತ್ತವೆಂದು ಅರ್ಥ. ವಾಕ್ಯಯೋಜನೆಯನ್ನು ಸ್ಪಷ್ಟವಾಗಿ ಮೂರು ವಿಭಾಗಗಳಲ್ಲಿಯೂ ಹೀಗೆ ತಿಳಿಯಬೇಕು -

೧) ಪೂರ್ವಸ್ಮಿನ್ ಅಧಮೇ ಉತ್ತರೋಕ್ತಯೋಃ ಅಪ್ರಾಚುರ್ಯೇಣ ಅಸಾಂಕರ್ಯಾತ್ (ಮೊದಲನೆಯ ಪಕ್ಷದಲ್ಲಿ)

೨) ಪೂರ್ವಸ್ಮಿನ್ ಮಧ್ಯಮೇ ಉತ್ತರೋಕ್ತಸ್ಯ ಅಪ್ರಾಚುರ್ಯೇಣ ಅಸಾಂಕರ್ಯಾತ್ (ಎರಡನೆಯ ಪಕ್ಷದಲ್ಲಿ)

೩) ಉತ್ತರಸ್ಮಿನ್ ಉತ್ತಮೇ ಉಕ್ತಯೋಃ = ಪೂರ್ವೋಕ್ತಯೋಃ ಅಪ್ರಾಚುರ್ಯಮ್ (ಮೂರನೆಯ ಪಕ್ಷದಲ್ಲಿ)

ಹೀಗೆ ವಾಕ್ಯಯೋಜನೆಯನ್ನು ಮಾಡಬೇಕು. ಹೀಗೆ ಮಾಡಿದಾಗ ಯಾವ ದೋಷಕ್ಕೂ ಅವಕಾಶವಿಲ್ಲ. ಇಷ್ಟು ಸೂತ್ರದಲ್ಲಿರುವ 'ಅಥ' ಶಬ್ದದ ವ್ಯಾಖ್ಯಾನವು ಮುಗಿಯಿತು.




**ಯೋಗ್ಯಜಿಜ್ಞಾಸುಗಳ ಲಕ್ಷಣ**

ಹರಿಭಕ್ತಿಯನ್ನೂ ಶಮದಮಾದಿಗಳನ್ನೂ ಸಂಪಾದಿಸಿ ವೇದಾಧ್ಯಯನ ಮಾಡಿದರೆ ಅದು ಬ್ರಹ್ಮವಿಚಾರಕ್ಕೆ ಬೇಕಾಗುವ ಕನಿಷ್ಠ ಅರ್ಹತೆ ಎನಿಸುವುದು. ಅಂದರೆ ಒಬ್ಬ ವ್ಯಕ್ತಿಯಲ್ಲಿರುವ ಅಧ್ಯಯನ ಶಮದಮಾದಿ ಮತ್ತು ವಿಷ್ಣುಪಾದಶರಣಾಗತಿ ಇವುಗಳಲ್ಲಿ ಶಮದಮಾದಿ ಮತ್ತು ವಿಷ್ಣುಪಾದಶರಣಾಗತಿಗಳು ಅಧ್ಯಯನಕ್ಕಿಂತ ಕಡಿಮೆ ಪ್ರಮಾಣದಲ್ಲಿದ್ದರೆ ಅದು ಕನಿಷ್ಠ ಅರ್ಹತೆ. ವಿಷ್ಣುಪಾದಶರಣಾಗತಿಯೊಂದ ಅಧ್ಯಯನ ಶಮದಮಾದಿಗಳಿಗಿಂತ ಕಡಿಮೆ ಇದ್ದರೆ ಅದು ಮಧ್ಯಮ ಅರ್ಹತೆ. ಅಧ್ಯಯನ ಶಮದಮಾದಿಗಳು ವಿಷ್ಣುಪಾದ ಶರಣಾಗತಿಗಿಂತ ಕಡಿಮೆ ಇದ್ದರೆ ಅದು ಉತ್ತಮ ಅರ್ಹತೆ.



● ● ● ● ●

**ಅತಃ ಶಬ್ದಾರ್ಥ ವಿಚಾರ**

**तात्पर्यचन्द्रिका –**

**ननु प्रकृतस्य हेतुत्ववाचकेनातःशब्देन कथमिदं लभ्यम् । अधिकारिविशेषणत्वेन मोक्षस्य प्रकृतत्वेऽपि तं प्रति नारायणप्रसादस्य साधनत्वादेरप्रकृतत्वेन तस्य**

'अतः' इत्यत्र प्रातिपदिकेन परामर्शासम्भवेन तस्य विचारकर्तव्यतायां हेतुत्वस्य विभक्त्योक्त्ययोगात् । मैवम् । ''यमेवैष वृणुते'' इत्यादिश्रुत्या प्रयोजनाभाव-प्रयुक्तानारम्भणीयत्वशङ्कानिरासहेतोरन्यस्याभावात्, सुवेणावपति'' इत्यादौ 'द्रव-द्रव्यम्' 'यतः' इत्यादिभाष्योक्ताध्याहारेण शब्दतः प्रकृतत्वसम्भवात् । अत एव ''यत्रानवसरः'' इति श्लोके 'यतः' इत्याद्यध्याहारसमर्थनपरतयाऽपि व्याख्येयः ।

यद्वा – जन्मादिसूत्रे प्रामाणिकत्वाज्जगत इदंशब्देन परामर्शवदत्रापि प्रसादादेर्मोक्षहेतुत्वादेः प्रामाणिकत्वादेतच्छब्देन परामर्शः । बुद्धिसंनिधानमेव हि प्रकृतत्वम् । अत एव ''तमेवं विद्वान्'' इत्यादिना तस्य प्रामाणिकता दर्शिता भाष्ये ।

यद्वा – एतत्सूत्रनिर्णेतव्येन ''नारायणोऽसौ परमो विचिंत्यो मुमुक्षुभिः कर्मपाशादमुष्मात्'' इत्यादिविचारविधिवाक्येन उपस्थापितत्वात् विचारस्य मोक्ष-प्रयोजनकत्वमतःशब्दार्थः । व्याख्येये प्रकृतस्य व्याख्याने 'अतः' इति परामर्श-सम्भवात् ।

यद्वा – अनुव्याख्यानोक्तरीत्या मीमांसाङ्गभूतब्रह्मतर्के प्रकृतत्वात् सिद्धे व्युत्पत्त्यादिकमिव, विचारस्य मोक्षहेतुत्वमतःशब्दार्थः । यद्वा – जन्मादिसूत्रे ब्रह्मणो विचारसाध्यज्ञानजन्यप्रसादद्वारा मोक्षदत्वस्य वक्ष्यमाणत्वात् , ''अथैष ज्योतिः'' इत्यादौ वक्ष्यमाणेऽप्येतच्छब्ददर्शनात्, भगवत उक्तद्वारेण मोक्षदत्वस्य अतःशब्दार्थत्वोपपत्तिः । यद्वा – मुमुक्षारूपाधिकारानन्तरं विचारः कर्तव्य इत्यथ-ब्रह्मजिज्ञासापदाभ्यामुक्ते विचारविध्यधिकारिविशेषणेच्छा-विषयत्वेन लब्धं मोक्षस्य प्रयोजनत्वम् 'अतः' इति हेतूक्रियते ।

ಅನುವಾದ - ಸೂತ್ರದಲ್ಲಿರುವ "ಅತಃ" ಶಬ್ದಕ್ಕೆ ಇಷ್ಟು ಅರ್ಥ "ಮೋಕ್ಷಕ್ಕೆ ನಾರಾಯಣನ ಅನುಗ್ರಹ ಕಾರಣ. ಅನುಗ್ರಹಕ್ಕೆ ಜ್ಞಾನವು ಕಾರಣ. ಜ್ಞಾನಕ್ಕೆ ಬ್ರಹ್ಮವಿಚಾರವು ಕಾರಣ ಆದ್ದರಿಂದ" ಎಂದು.

ಪ್ರಶ್ನೆ :- ಇಷ್ಟು ಅರ್ಥವು ಅತಃ ಶಬ್ದದಿಂದ ಹೇಗೆ ಲಭಿಸುತ್ತದೆ? ಏಕೆಂದರೆ ಹಿಂದೆ ಪ್ರಕೃತವಾದದ್ದನ್ನು ಮನಸ್ಸಿನಲ್ಲಿಟ್ಟುಕೊಂಡು "ಆದ್ದರಿಂದ" ಎಂಬ ಸರ್ವನಾಮವನ್ನು ಪ್ರಯೋಗಿಸುತ್ತೇವೆ. ಆದ್ದರಿಂದ ಪೂರ್ವಪ್ರಕೃತವಾದದ್ದಕ್ಕೆ ಕಾರಣತ್ವವನ್ನು ಹೇಳುವಂತಹದ್ದು ಅತಃ ಶಬ್ದವೆಂದಂತಾಯಿತು. ಹಿಂದಿರುವ

'ಅಥ' ಶಬ್ದದಿಂದ ಮೋಕ್ಷವಷ್ಟೇ ಇಲ್ಲಿ ಪ್ರಕೃತವಾಗುತ್ತದೆ. ಹೇಗೆಂದರೆ 'ಅಥ' ಶಬ್ದಕ್ಕೆ 'ಅಧಿಕಾರಪ್ರಾಪ್ತಿಯಾದ ಅನಂತರ' ಎಂದರ್ಥ. ಅಧಿಕಾರದಲ್ಲಿ ಮೋಕ್ಷೇಚ್ಛೆಯೂ ಒಂದಾಗಿದೆ. ಅಧಿಕಾರಿಯಲ್ಲಿ ವಿಶೇಷಣವಾದ ಇಚ್ಛೆಗೆ ಮೋಕ್ಷವು ಪ್ರಕೃತವಾಗುತ್ತದೆ.ಆದರೆ ಅಂತಹ ಮೋಕ್ಷಕ್ಕೆ ನಾರಾಯಣನ ಪ್ರಸಾದವು ಕಾರಣ. ನಾರಾಯಣನ ಪ್ರಸಾದಕ್ಕೆ ಅಪರೋಕ್ಷಜ್ಞಾನವು ಕಾರಣ. ಜ್ಞಾನಕ್ಕೆ ವಿಚಾರವು ಕಾರಣ ಇಷ್ಟು ಅರ್ಥವು ಪೂರ್ವಪ್ರಕೃತವೇ ಆಗಿಲ್ಲ. ಹೀಗಿರುವಾಗ ವಿಚಾರವನ್ನು ಮಾಡಬೇಕೆನ್ನಲು ಇವುಗಳನ್ನು ಕಾರಣವನ್ನಾಗಿ ಹೇಳಲು ಬರುವುದೇ ಇಲ್ಲ. 'ಅತಃ' ಎಂಬಲ್ಲಿ ಏತದ್ ಶಬ್ದದ ಮುಂದೆ ಪಂಚಮೀವಿಭಕ್ತಿಗೆ 'ತಸಿಲ್' ಪ್ರತ್ಯಯವು ಆದೇಶವಾಗಿ ಬಂದಿದೆ. ಇಂತಹ ಪಂಚಮೀವಿಭಕ್ತ್ಯರ್ಥಕದಲ್ಲಿರುವ 'ತಸಿಲ್' ಪ್ರತ್ಯಯದಿಂದ ಮೋಕ್ಷರೂಪಪ್ರಯೋಜನವಿರುವುದರಿಂದ ಎಂದಷ್ಟೇ ಅರ್ಥವನ್ನು ಹೇಳಬೇಕು. ನೀವು ಹೇಳಿದ ಅರ್ಥವು ಕೂಡುವುದಿಲ್ಲ.

ಉತ್ತರ :- ಈ ಪ್ರಶ್ನೆಗೆ ಒಟ್ಟು ಏಳು ಬಗೆಯ ಉತ್ತರವಿದೆ -

೧) "ಯಾವ ಪ್ರಯೋಜನವೂ ಇಲ್ಲದ ಈ ವಿಚಾರಶಾಸ್ತ್ರವು ಅನಾರಂಭಣೀಯವಾಗಿದೆ" ಈ ಆಕ್ಷೇಪವನ್ನು ಪರಿಹರಿಸುವಂತಹ ಶಬ್ದವು ಸೂತ್ರದಲ್ಲಿ ಯಾವುದೂ ಇಲ್ಲ. ಆದ್ದರಿಂದ "ಯಮೇವೈಷ ವೃಣುತೇ ತೇನ ಲಭ್ಯಃ" "ನ ತಾದೃಶೀ ಪ್ರೀತಿಃ" "ಆತ್ಮಾವಾಽರೇ" ಇವೇ ಮೊದಲಾದ ಶ್ರುತಿಗಳ ಬಲದಿಂದ "ಅತಃ" - ಶಬ್ದಕ್ಕೆ ಹೇಳಿದ ಎಲ್ಲ ಅರ್ಥವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಹೀಗೆ ಶ್ರುತಿಗಳಿಂದ ಪ್ರಕೃತವಾದದ್ದನ್ನು ಅತಃ ಶಬ್ದವು ಹೇಳುತ್ತದೆ.

ಉದಾಹರಣೆ - "ಸ್ರುವದಿಂದ ಬೇರ್ಪಡಿಸಿ ತೆಗೆಯಬೇಕು" ಎಂದಷ್ಟೇ ಶ್ರುತಿವಾಕ್ಯವಿದೆ. ಏನನ್ನು ತೆಗೆಯಬೇಕು? ಎಂಬುದನ್ನು ಶ್ರುತಿಯಲ್ಲಿ ಹೇಳಿಲ್ಲ. ಆದ್ದರಿಂದ "ದ್ರವದ್ರವ್ಯವನ್ನು" ಎಂದು ಅನುವೃತ್ತಿ ಮಾಡಬೇಕು. ಅದರಂತೆ ಪ್ರಕೃತದಲ್ಲಿಯೂ "ಯತೋ ನಾರಾಯಣ" ಇತ್ಯಾದಿ ಭಾಷ್ಯದಲ್ಲಿ ಹೇಳಿದ ಪ್ರಮಾಣವಚನಗಳನ್ನು ಸೂತ್ರದಲ್ಲಿ ಅಧ್ಯಾಹಾರ ಮಾಡಬೇಕು. ಹೀಗೆ ಮಾಡಿದಾಗ ಜ್ಞಾನ ಪ್ರಸಾದಾದಿಗಳು ಶಬ್ದದಿಂದಲೇ ಪ್ರಕೃತವಾಗುತ್ತವೆ. ಶಬ್ದದಿಂದ ಪ್ರಕೃತವಾದ್ದನ್ನು ಅತಃ ಎಂಬುದರಿಂದ ಪರಾಮರ್ಶಿಸಬಹುದು.

ವಾಕ್ಯಗಳನ್ನು ಅಧ್ಯಾಹಾರ ಮಾಡಬಹುದೆಂದು ಭಾಷ್ಯಕಾರರೇ ತಿಳಿಸಿದ್ದಾರೆ - "ಯತ್ರಾಽನವಸರೋಽನ್ಯತ್ರ" ಇತ್ಯಾದಿ ಪ್ರಮಾಣವಚನದಿಂದ 'ಕರ್ತವ್ಯಾ' ಪದದ ಅಧ್ಯಾಹಾರವನ್ನು ಮಾಡಬೇಕೆಂದು ಹೇಳುತ್ತಾ ವಾಕ್ಯದ ಅಧ್ಯಾಹಾರವನ್ನೂ ಈ ಪ್ರಮಾಣವಚನವೇ ಹೇಳುತ್ತದೆಂದು ವ್ಯಾಖ್ಯಾನಿಸಿದ್ದಾರೆ. ಇದರಿಂದ ಅತಃ ಶಬ್ದಕ್ಕೆ ಅಪೇಕ್ಷಿತವಾದ ವಾಕ್ಯದ ಅಧ್ಯಾಹಾರವನ್ನು ಮಾಡಿಕೊಳ್ಳಬೇಕೆಂದು ಗೊತ್ತಾಗುತ್ತದೆ.

೨) 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ 'ಅಸ್ಯ' ಎಂಬ ಪದವಿದೆ. "ಈ ಅನುಭವ ಸಿದ್ಧವಾದ ಪ್ರಪಂಚದ" ಎಂದು ಇದರರ್ಥ. ಅದರಂತೆ "ಮೋಕ್ಷ ಭಗವದನುಗ್ರಹ ಮೊದಲಾದ ಪ್ರಮಾಣಪ್ರಮಿತ ಪ್ರಯೋಜನಗಳಿರುವುದರಿಂದ" ಎಂದು ಅತಃ ಶಬ್ದಾರ್ಥವನ್ನು ಹೇಳಬಹುದು. 'ಅಸ್ಯ' ಎಂಬಲ್ಲಿ ಪ್ರಮಾಣಸಿದ್ಧವಾದ್ದರಿಂದ ಜಗತ್ತನ್ನು 'ಇದಂ' ಶಬ್ದದಿಂದ ಪರಾಮರ್ಶ ಮಾಡುತ್ತೇವೆ. ಅದರಂತೆ

ಪ್ರಸಾದಾದಿಗಳಿಗೂ ಮೋಕ್ಷಕಾರಣತ್ವವು ಪ್ರಮಾಣಪ್ರಮಿತವಾಗಿದೆ. ಆದ್ದರಿಂದ 'ಅತಃ' ಎಂಬಲ್ಲಿರುವ ಏತಚ್ಛಬ್ದದಿಂದ ಪರಾಮರ್ಶವು ಯುಕ್ತವೇ ಆಗಿದೆ. ಪ್ರಕೃತವಾಗುವುದೆಂದರೆ ಬುದ್ಧಿಸ್ಥವಾಗಿರುವುದು ಎಂದೇ ಅರ್ಥ. ಪ್ರಮಾಣದ ಬಲದಿಂದಷ್ಟೇ ಸನ್ನಿಹಿತವಾಗಿರುತ್ತದೆ. ಆದ್ದರಿಂದಲೇ "ತಮೇವಂ ವಿದ್ವಾನ್" ಇವೇ ಮೊದಲಾದ ಮಾತುಗಳಿಂದ ಜ್ಞಾನಪ್ರಸಾದಾದಿಗಳಿಗೆ ಪ್ರಮಾಣಸಿದ್ಧತ್ವವನ್ನು ಭಾಷ್ಯದಲ್ಲಿ ತೋರಿಸಿದ್ದಾರೆ.

೩) ಅಥವಾ ಮೊದಲನೆಯ ಸೂತ್ರಕ್ಕೆ "ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ" ಎಂಬುದು ಹೇಗೆ ವಿಷಯವಾಕ್ಯವಾಗುತ್ತದೋ, ಅದರಂತೆ "ನಾರಾಯಣೋಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾತ್" ಇವೇ ಮೊದಲಾದವು ವಿಷಯವಾಕ್ಯಗಳಾಗಿವೆ. ಇವುಗಳಲ್ಲಿ ವಿಚಾರಾದಿಗಳಿಗೆ ಮೋಕ್ಷ-ಸಾಧನತ್ವವನ್ನು ಹೇಳಿದ್ದಾರೆ. ವ್ಯಾಖ್ಯೇಯವಾದ ವಿಷಯವಾಕ್ಯದಲ್ಲಿ ಪ್ರಕೃತವಾದದ್ದನ್ನು ವ್ಯಾಖ್ಯಾನದಲ್ಲಿ ಪರಾಮರ್ಶ ಮಾಡುವುದೇನು ತಪ್ಪಲ್ಲ.

೩) ಅಥವಾ, ವಿಚಾರವು ಜ್ಞಾನ ಭಗವದನುಗ್ರಹಗಳಿಗೆ ಕಾರಣವಾಗುವುದೆಂದು ಬ್ರಹ್ಮತರ್ಕದಲ್ಲಿ ಹೇಳಿದ್ದಾರೆ. ಬ್ರಹ್ಮತರ್ಕವು ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಂಗವಾಗಿದೆ. ಸಮಗ್ರವೇದಕ್ಕೆ ಸಿದ್ಧಪರತ್ವವನ್ನು ಬ್ರಹ್ಮತರ್ಕದಲ್ಲಿ ಹೇಳಿದೆ. ಅದನ್ನೇ ಸಂಕ್ಷೇಪವಾಗಿ 'ಅತಃ' ಎಂದು ಸೂತ್ರವು ಹೇಳುತ್ತಿದೆಯೆಂದು ಅನುವ್ಯಾಖ್ಯಾನದಲ್ಲಿ ಸಮರ್ಥಿಸಿದ್ದಾರೆ. ಅದರಂತೆ ಇಲ್ಲಿಯೂ ಬ್ರಹ್ಮತರ್ಕದಲ್ಲಿ ಹೇಳಿದೆ. ಅದನ್ನೇ ಸಂಕ್ಷೇಪವಾಗಿ 'ಅತಃ' ಎಂದು ಸೂತ್ರವು ಹೇಳುತ್ತಿದೆಯೆಂದು ಅನುವ್ಯಾಖ್ಯಾನದಲ್ಲಿ ಸಮರ್ಥಿಸಿದ್ದಾರೆ. ಅದರಂತೆ ಇಲ್ಲಿಯೂ ಬ್ರಹ್ಮತರ್ಕದಲ್ಲಿ ಹೇಳಿದ್ದನ್ನು ಪರಾಮರ್ಶಿಸಬಹುದು. ಮತ್ತು ಬ್ರಹ್ಮತರ್ಕವನ್ನು ಬರೆದ ವೇದವ್ಯಾಸರೇ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಬರೆದಿರುವುದರಿಂದ ವಿಚಾರವು ಮೋಕ್ಷಕಾರಣ-ವಾಗಿದೆಯೆಂಬುದನ್ನು 'ಅತಃ' ಶಬ್ದದ ಅರ್ಥವೆಂದು ಹೇಳಬಹುದು.

೫) ಅಥವಾ, ಮುಂದಿನ ಜನ್ಮಾದಿಸೂತ್ರದಿಂದಲೇ ಪರಾಮರ್ಶಿಸಬಹುದು. ಬ್ರಹ್ಮನು ವಿಚಾರದಿಂದ ದೊರೆಯುವ ಜ್ಞಾನಜನ್ಯವಾದ ಪ್ರಸಾದದ್ವಾರಾ ಮೋಕ್ಷವನ್ನು ನೀಡುತ್ತಾನೆಂದು ಎರಡನೆಯ ಸೂತ್ರಕ್ಕೆ ಮಾಡಿದ ಮತ್ತೊಂದು ವ್ಯಾಖ್ಯಾನ. ಮುಂದಿನ ಸೂತ್ರದಲ್ಲಿ ಹೇಳುವುದನ್ನು ಮೊದಲು ಪರಾಮರ್ಶಿಸುವುದು ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಆದರೆ ಪೂರ್ವಮೀಮಾಂಸೆಯಲ್ಲಿ ಹೀಗೆ ಮಾಡಿದ ದೃಷ್ಟಾಂತ ಕಾಣುತ್ತದೆ. 'ಅಥೈಷ ಜ್ಯೋತಿಃ ಅಥೈಷ ವಿಶ್ವಜ್ಯೋತಿಃ' ಎಂಬಲ್ಲಿ 'ಏಷಃ' 'ಈ ಯಾಗವು' ಎಂಬ ಪದವಿದೆ. ಈ ಪದದಿಂದ ಮುಂದೆ ಬರುವ ಯಾಗವನ್ನು ಪರಾಮರ್ಶಿಸಬೇಕೆಂದು ನಿರ್ಣಯಿಸಲಾಗಿದೆ. ಅದರಂತೆ ಇಲ್ಲಿಯೂ ಮುಂದಿನ ಸೂತ್ರದಲ್ಲಿ ಹೇಳುವ ಜ್ಞಾನ ಪ್ರಸಾದಾದಿಗಳನ್ನು ಇಲ್ಲಿ ಪರಾಮರ್ಶ ಮಾಡಬೇಕು.

೬) ಅಥವಾ, ಈ ಸೂತ್ರದಲ್ಲಿರುವ ಅಥ ಶಬ್ದದಲ್ಲಿ ಪ್ರಸಕ್ತವಾದದ್ದನ್ನೇ ಪರಾಮರ್ಶಿಸಲು ಬರುತ್ತದೆ. "ಮೋಕ್ಷಾಭಿಲಾಷೆಯನ್ನು ಹೊಂದಿದ ಬಳಿಕ" ಎಂಬುದೂ ಅಥಶಬ್ದದ ಅರ್ಥವಾಗಿದೆ. ಮೋಕ್ಷವಾದರೂ ಸಹ ಜ್ಞಾನ ಭಗವದನುಗ್ರಹಗಳಿಂದಲೇ ಲಭ್ಯವಾಗುತ್ತದೆಂದು ಪ್ರಮಾಣಗಳಿಂದ ಸಿದ್ಧವಾಗಿದೆ. ಹೀಗೆ

ಮುಮುಕ್ಷಾರೂಪವಾದ ಅಧಿಕಾರದ ಅನಂತರ ವಿಚಾರವನ್ನು ಮಾಡಬೇಕೆಂದು 'ಅಥ' ಮತ್ತು 'ಬ್ರಹ್ಮಜಿಜ್ಞಾಸಾ' ಎಂಬ ಎರಡು ಪದಗಳಿಂದ ತಿಳಿಯುತ್ತದೆ. ಈ ವಿಚಾರವಿಧಿಗೆ ಅಧಿಕಾರಿಯಾದವನಲ್ಲಿ ವಿಶೇಷಣವಾದದ್ದು ಇಚ್ಛಾ, ಆ ಇಚ್ಛೆಗೆ ವಿಷಯವಾದದ್ದು ಮೋಕ್ಷ. ಈ ಮೋಕ್ಷವೇ ಪ್ರಯೋಜನವಾಗಿವುಳ್ಳ ವಿಚಾರ ಮೊದಲಾದವುಗಳನ್ನು 'ಅತಃ' ಎಂಬ ಪದದಿಂದ ಪರಾಮರ್ಶಿಸಬಹುದು.

### ಕಠಿಣಪದಾರ್ಥ

**ಇದಮ್** = ಮೋಕ್ಷಸಾಧನವಾದದ್ದು ಪ್ರಸಾದ, ಪ್ರಸಾದಕ್ಕೆ ಸಾಧನವಾದದ್ದು ಜ್ಞಾನ, ಆ ಜ್ಞಾನಕ್ಕೆ ಹೇತುವಾಗಿದೆ ವಿಚಾರ, **ಅಧಿಕಾರಿವಿಶೇಷಣತ್ವೇನ** = ಅಧಿಕಾರ ಪ್ರಾಪ್ತಿಯಾದ ಅನಂತರ ಎಂದು ಅಥಶಬ್ದದ ಅರ್ಥ. ಅಧಿಕಾರದಲ್ಲಿ ಮೋಕ್ಷೇಚ್ಛೆಯೂ ಒಂದಾಗಿದೆ. ಅದರಲ್ಲಿ ವಿಶೇಷಣವಾದದ್ದು ಇಚ್ಛೆ. ಇಚ್ಛೆಗೆ ವಿಷಯವಾದದ್ದು ಮೋಕ್ಷ, ಹೀಗೆ ವಿಶೇಷಣವಾದ್ದರಿಂದ. **ಸಾಧನತ್ವಾದೇಃ** = ಆದಿಪದದಿಂದ ಜ್ಞಾನಸಾಧ್ಯತ್ವವನ್ನು ವಿವಕ್ಷಿಸಬೇಕು. ಆದ್ದರಿಂದ ನಾರಾಯಣಪ್ರಸಾದವು ಮೋಕ್ಷಸಾಧನವೆಂದು ಪ್ರಕೃತವಾಗಲಿಲ್ಲ. ಮತ್ತು ಆ ನಾರಾಯಣಪ್ರಸಾದವು ಜ್ಞಾನಸಾಧ್ಯವೆಂದೂ ಪ್ರಕೃತವಾಗಲಿಲ್ಲ ಎಂದರ್ಥವಾಗುತ್ತದೆ. **ವಿಭಕ್ತ್ಯೋಕ್ತ್ಯಯೋಗಾತ್** = 'ವಿಭಕ್ತ್ಯಾ' ಎಂದರೆ ಪಂಚಮಿವಿಭಕ್ತಿಗೆ ಬಂದಿರುವ ತಸಿಲ್ ಪ್ರತ್ಯಯದಿಂದ ಎಂದರ್ಥ. ಈ ತಸಿಲ್ ಪ್ರತ್ಯಯದಿಂದ ಜ್ಞಾನ ಮತ್ತು ಪ್ರಸಾದಗಳಿಗೆ ವಿಚಾರಹೇತುತ್ವವನ್ನು ಹೇಳಲಾಗುವುದಿಲ್ಲ ಎಂದು ತಿಳಿಯಬೇಕು. ಏಕೆಂದರೆ ಪ್ರತ್ಯಯವು ಪ್ರಕೃತ್ಯರ್ಥದಿಂದ ಅನ್ವಿತವಾದ ಸ್ವಾರ್ಥವನ್ನಷ್ಟೇ ಹೇಳುತ್ತದೆ. ಜ್ಞಾನಾದಿಗಳು ಪ್ರಕೃತ್ಯರ್ಥವೇ 'ಶ್ರುತ್ಯಾ - ಅಧ್ಯಾಹಾರೇಣ' - ಶ್ರುತ್ಯಾ ಎಂಬುದಕ್ಕೆ ಅಧ್ಯಾಹಾರೇಣ ಎಂಬಲ್ಲಿ ಅನ್ವಯ ಮಾಡಬೇಕು. ಅಧ್ಯಾಹಾರ ಮಾಡಲು ಶ್ರುತಿಯು ಕಾರಣವಾಗಿದೆಯೆಂದು ಇದರರ್ಥ. ಇದನ್ನು ವ್ಯಧಿಕರಣತೃತೀಯಾ ಎನ್ನುತ್ತಾರೆ.

**ಅತ ಏವ** = ಯಾವ ಕಾರಣದಿಂದ 'ಯತೋ ನಾರಾಯಣಪ್ರಸಾದಮೃತೇ' ಇತ್ಯಾದಿ ವಾಕ್ಯಗಳನ್ನು ಅಧ್ಯಾಹಾರ ಮಾಡಿಕೊಳ್ಳದೆ ವಿಚಾರಕರ್ತವ್ಯತ್ವವು ಸಿದ್ಧವಾಗುವುದಿಲ್ಲವೋ, ಆದ್ದರಿಂದಲೇ **ಅಪಿ** = ಕೇವಲ 'ಕರ್ತವ್ಯಾ' ಪದದ ಅಧ್ಯಾಹಾರಕ್ಕಾಗಿ ಹೇಳಿದ್ದಲ್ಲ. ಮೇಲೇ ಹೇಳಿದ ವಾಕ್ಯದ. **ಅಧ್ಯಾಹಾರಕ್ಕಾಗಿಯೂ** = ಪ್ರಮಾಣದಿಂದ ಬುದ್ಧಿಯಲ್ಲಿ ಸನ್ನಿಹಿತವಾಗಿವುದರಿಂದ. **ಬುದ್ಧಿಸನ್ನಿಧಾನಮೇವ** = ಬುದ್ಧಿಯಲ್ಲಿ ಸನ್ನಿಹಿತವಾಗಿರುವಿಕೆಯೇ ಬುದ್ಧಿಯಲ್ಲಿ ಸನ್ನಿಹಿತವನ್ನಾಗಿ ಮಾಡುವಂತಹದ್ದು ಪ್ರಮಾಣವೇ ಆಗಿದೆ. **ಅತ ಏವ** = ಬುದ್ಧಿಯಲ್ಲಿ ಸನ್ನಿಹಿತವಾದದ್ದನ್ನು ಪರಾಮರ್ಶ ಮಾಡಬಹುದಾದ್ದರಿಂದಲೇ. **ಮೋಕ್ಷಪ್ರಯೋಜನಕತ್ವಮ್** = ಪ್ರಸಾದದ್ವಾರಾ ಮೋಕ್ಷವೇ ಪ್ರಯೋಜನವಾಗಿ ಇರುವಿಕೆಯು. **ಪ್ರಕೃತಸ್ಯ** = ಬುದ್ಧಿಯಲ್ಲಿ ಸನ್ನಿಹಿತವಾದದ್ದರ. **ಅತಃಶಬ್ದಾರ್ಥತ್ವೋಪಪತ್ತಿಃ** = 'ಅತಃ' ಶಬ್ದವೆಂಬ ಪ್ರಾತಿಪದಿಕದ ಅರ್ಥವೆಂದು ಉಪಪನ್ನವಾಗುತ್ತದೆ

**प्रकाशः** – **एवमथशब्दव्याख्यानपरभाष्यटीकाभिप्रायं तत्तदक्षरयोजनां च स्फुटीकृत्यातःशब्दार्थविवरणपरभाष्याभिप्रायं स्फोरयितुमाक्षिपति ।। नन्विति ।।**

*ಪರಿಪೂರ್ಣಚಂದ್ರಿಕಾ*

'इदं मोक्षसाधनप्रसाधनज्ञानहेतुत्वम् । तदेव व्यनक्ति ।। अधिकारीति ।। अधिकारिविशेषणेच्छाविषयत्वेनेत्यर्थः । ज्ञानसाध्यत्वमादिपदार्थः ।। प्रातिपदिकेनेति ।। एतच्छब्दात् परपश्चम्यास्तसिलादेशे "एतदोऽश्"[१] इति प्रकृतिभागस्य एतच्छब्दस्य 'अश्' इत्यादेशे 'अतः' इति रूपम् । तथाच प्रकृतपरामर्श्येतच्छब्दादेशेन अकारेण प्रकृतमुद्दिश्य, तस्य तसिला हेतुत्वमुच्यते । नच प्रसादस्य मोक्षसाधनत्वं ज्ञानस्य प्रसादसाधनत्वं च प्रकृतम् । येन हेतुत्वमभिदध्यादित्यर्थः ।। विभक्त्येति ।। विभक्त्यादेशेन तसिलेत्यर्थः । उक्तशङ्कायाः सप्तधा परिहारमाह ।। यमित्यादिना ।। यमात्मा प्रसन्नस्सन् वृणुते, तेनैव प्राप्य इति श्रुत्या, 'न तादृशी प्रीतिः' इति श्रुत्या, "द्रष्टव्यः" इति श्रुत्या च प्रसादादिगतमोक्षादिहेतुत्वस्य 'शब्दतः प्रकृतत्वसम्भवात्' इत्यन्वयः । बुद्धिस्थस्य हि परामर्शः। बुद्धिस्थत्वं च श्रुत्युक्तत्वात् सम्भवतीति भावः । यद्वा – 'अध्याहारेण' 'शब्दतः प्रकृतत्वसम्भवात्' इत्येवान्वयः । अध्याहारस्य निरङ्कुशत्वाद् वैपरीत्येनाध्याहारः किं न स्यादित्यत उक्तम् – इत्यादिश्रुत्येति । तथाच 'श्रुत्याऽध्याहारेण' इति अध्याहारे श्रुतिर्मूलमित्याशयेन व्यधिकरणे तृतीये । अध्याहारमूलभूतामर्थापत्तिं चाह ।। प्रयोजनेति ।।

यद्वा – 'शङ्कानिरासहेतोरन्यस्याभावात्' इत्येतत् कुत इत्यतः 'इत्यादिश्रुत्या' इत्यन्वेति । तथाचार्थापत्तिरेकैवाध्याहारे बीजमिति ध्येयम् । तत्र श्रौतं दृष्टान्तमाह ।। स्रुवेणेति ।। आद्ये "अर्थाद्वा कल्पनैकदेशत्वात्" इति चतुर्थपादीयांतिमाधिकरणे "स्रुवेणावद्यति, स्वधितिनाऽवद्यति, हस्तेनावद्यति" इत्युदाहृत्य, द्रवद्रव्येष्वाज्यादिषु संहतेषु मांसादिषु पुरोडाशादिषु च किमविशेषेण विनियोगः किं वा यथासामर्थ्यम् इति विशये, विशेषाश्रवणादनियमे प्राप्ते, अशक्यार्थे विध्ययोगादवश्यं विधायकस्य शक्तिः सहकारिणीत्युपेयत्वाच्छक्तिसहायो विधिरेव यथासामर्थ्यं विधेयं व्यवस्थापयतीति, द्रवद्रव्यादिषु स्रुवादीनां विनियोग इति

---

१ काशिकानुसार्ययं सूत्रपाठः । "शकारः सर्वादेशार्थः" इति तत्रोक्तेः । "एतदोऽन्" इति तु कौमदीधृतः पाठः ।

सिद्धान्तितम् । तत्र यथा सामर्थ्यानुसारेण विनियोगे सिद्धे 'स्रुवेण द्रवद्रव्यमवद्यति' इत्याद्यध्याहारेण वाक्यं पूर्यते, तथेहापि ''यमेव'' इत्यादिश्रुत्युक्तशङ्कानिरास-हेतोरन्यस्याभावान्मोक्षहेतुप्रसादजनकज्ञानकारणत्वस्यैवोक्तशङ्कानिरसनसमर्थतया स एव भाष्योक्ताध्याहारेण पूर्यत इत्यर्थः । उक्तं च सुधायाम् – ''जिज्ञासोत्थ-ज्ञानजात् तत्प्रसादादेव मुच्यते'' इत्यत्र ''यद्यपि न सूत्राक्षरेभ्यो भगवत्प्रसादो लभ्यते । तथाऽप्यन्यथाऽनुपपत्त्याऽङ्गीकरणीयः'' इति । अन्यथाऽनुपपत्त्याऽध्याहार इत्यत्र भाष्योदाहृतवचनं संवादयति ।। अत एवेति ।। यस्मात् ''यतः'' इत्यादिवाक्याध्याहारं विना विचारकर्तव्यत्वरूपार्थानुपपत्त्या ''यतः'' इत्याद्याहारः, अत एवेत्यर्थः । न केवलं कर्तव्यपदाध्याहारसमर्थनपरतयेत्यपेरर्थः । अत एव तत्र ''वाक्यं वा'' इत्युक्तिरिति भावः । श्लोकार्थस्तु टीकायां स्पष्टः । 'प्रामाणिकत्वात्' प्रमाणेन बुद्धौ सन्निहितत्वात् । 'इदंशब्देन' 'अस्य' इत्यनेन ।

ननु तत्र 'अस्य' इति प्रामाणिकत्वान्न जगत्परामर्शः । किन्तु ''यतो वा इमानि भूतानि'' इति विषयवाक्यगतस्य जगद्वाचिनः 'इमानि' इत्यस्य विपरिणामेन निर्देशः । नच तत्र 'जीवन्ति' इति श्रवणाद् भूतपदस्य चेतनमात्रपरत्वेन कृत्स्नजगत् तत्र न प्राप्तमिति वाच्यम् । भूतशब्दस्य सर्वचेतनपरत्वे तदभिमन्यमानमहदादिजडस्यापि प्राप्तेः । तेन विना तेषां जन्मायुक्तेः । अन्यथा कृत्स्नहेतुत्वस्य श्रुतावप्राप्तौ, तद्व्याख्यारूपे सूत्रे 'अस्य' इत्यनेन कृत्स्नलाभायोगादिति चेन्न । 'इमानि' इत्यनेनापि प्रामाणिकत्वादेव जगत्परामर्शस्य वाच्यतया सूत्रेऽपि स एव न्यायोऽनुसर्तव्य इति तात्पर्यात् । अत एव सुधायाम् – ''अस्य प्रत्यक्षादिप्रमाणसिद्धतया प्रमितस्य समस्तप्रपञ्चस्य'' इत्युक्तम् । ज्ञानप्रसादहेतुत्वे क्रमेण आदिपदद्वयग्राह्ये । प्रामाणिकत्वेऽप्यप्रकृतस्य कथं परामर्श इत्यत आह ।। बुद्धीति ।। प्रमाणमेव बुद्धौ सन्निधापकमिति भावः । किं तत् प्रमाणमित्याशङ्कामुक्तार्थे भाष्यसंवादप्रदर्शनेन निरस्यति ।। अत एवेति ।। बुद्धिस्थपरामर्शकत्वादेवेत्यर्थः । प्रमाणार्थस्तु टीकायां स्पष्टः । एवं

भाष्यपर्यालोचनया लब्धं समाधिद्वयमुक्तम् । तत्राऽपि 'यतः' इत्याद्यन्तरङ्ग-भाष्यलब्धमादावुक्तम् । उक्तार्थस्य प्रामाणिकत्वोक्तिपरबहिरङ्गभाष्यलब्धं पश्चात् ।

इदानीं बहिरङ्गतः प्राप्त्या तदाह ।। एतत्सूत्रेति ।। मोक्षप्रयोजनकत्वमिति ।। 'प्रसादद्वारा' इति शेषः । ''यस्य प्रसादात् परमार्तिरूपादस्मात् संसारान्मुच्यते नापरेण'' इति पूर्वार्धेन तत्प्राप्तेः । यद्यप्यत्र ''तद् विजिज्ञासस्व'' इति श्रुतिरेवोदाहृता, तथाऽपि सूत्रस्यानेकशाखानिर्णायकत्वान्नानाशाखागत-विचारविधायकबहुवाक्यव्याख्यारूपत्वादेवमुक्तम् । एकस्योदाहरणं तु उपलक्षण-तयेति भावः । प्रकृतस्येति ।। बुद्धौ सन्निहितस्येत्यर्थः । ततोऽपि बहिरङ्गात् तत्प्राप्तिमाह ।। अनुव्याख्यानेति ।। ''कार्यता च न काचित् स्यात्'' इत्यादिना वेदस्य कार्यपरत्वादिकं निरस्य सिद्धे व्युत्पत्त्यादिसमर्थनेन ब्रह्मपरत्वं समर्थ्य,

''एतत् सर्वं तर्कशास्त्रे ब्रह्मतर्के हि विस्तरात् ।
उक्तं विद्यापृथक्त्वात्तु सङ्क्षेपेणाऽत्र सूचितम् ।।''

इत्यादिना ब्रह्मतर्के सिद्धम् 'अतः' इति परामृश्यत इत्युक्तम् । तद्वज्ज्ञानप्रसादद्वारा मोक्षप्रयोजनकत्वं विचारस्य तत्रैव सिद्धमिति 'अतः' इति परामर्शोपपत्तिरित्यर्थः ।

ग्रन्थान्तरोक्तस्य ग्रन्थान्तरे कथं परामर्शः अतिप्रसङ्गादित्यत उक्तम् – मीमांसाङ्गेति ।। तदङ्गत्वं च –

''प्रमाणन्यायसच्छिक्षा क्रियते तर्कशास्त्रतः ।
मानन्यायैस्तु तत्सिद्धैर्मीमांसा मेयशोधनम्'' ।।

इत्यनुव्याख्यानोक्तरीत्या ध्येयम् । तस्य च सूत्रकृतैव कृतत्वात् तत्रोक्तस्य 'अतः' इति परामर्शो युक्त इति भावः । इदानीमन्तरङ्गभूतसूत्रादेव प्रकृतत्वमाह ।। यद्वा – जन्मादीति ।। वक्ष्यमाणत्वादिति ।। मोचकत्वेन विष्णुर्जिज्ञास्यश्चेत्, बन्धकत्वेनाऽजिज्ञास्योऽपि स्यादिति प्राप्तेऽप्रसन्नस्य बन्धकत्वं प्रसादहेतोः

जिज्ञासायाः कर्तव्यत्वानुकूलमेव नतु प्रतिकूलमिति, वर्णकान्तरस्य१ मोक्षदत्वात् जिज्ञास्यमित्यनुव्याख्यानरीत्या वक्ष्यमाणत्वादित्यर्थः ।

**अथैष इति** ।। ''अथैष ज्योतिरथैष विश्वज्योतिःरथैष सर्वज्योतिः'' इत्युक्त्वा ''एतेन सहस्रदक्षिणेन यजेत'' इत्युच्यते । तत्र ''एष ज्योतिः'' इत्येतच्छब्दो वक्ष्यमाणसहस्रदक्षिणाकयागपरामर्शको यथा, तथेत्यर्थः । अत एव द्वितीयस्य द्वितीये ''संज्ञा चोत्पत्तिसंयोगात्'' इत्यष्टमेऽधिकरणे ''अथैष ज्योतिः'' इत्याद्युदाहृत्य, किं प्रकृतज्योतिष्टोम एव ज्योतिरादिशब्दैरुच्यते, अथ कर्मान्तरमिति सन्दिह्यैतच्छब्दस्य प्रकृतगामित्वाज्ज्योतिष्टोम एवै तैः शब्दैरुच्यते इति प्राप्ते, एतच्छब्दस्य वक्ष्यमाणपरतयाऽप्युपपत्त्या संज्ञाभेदात् कर्मान्तराण्येवंनामकानीति सिद्धान्तितमिति भावः ।।

**अतःशब्देति** ।। अतः शब्दप्रातिपदिकार्थत्वोपपत्तिरित्यर्थः । भिन्नसूत्रादप्यन्तरङ्गेणाऽथशब्देन प्रकृतत्वमाह ।। **यद्वा – मुमुक्षेति** ।। एवं चेच्छाविषयत्वेन लब्धं मोक्षफलं प्रातिपदिकेन परामृश्य विभक्त्या हेतुत्वोक्तौ ''यमेवैषः'' इत्यादिभाष्योक्तश्रुत्यादिबलात् ज्ञानजन्यप्रसादद्वारैव तत् सेत्स्यति । यथा यागस्य स्वर्गहेतुत्वं श्रुतमपूर्वद्वारा, यथावा ''व्रीहिभिर्यजेत'' इति श्रुतं करणत्वं प्रोक्षणावघातादिद्वारा निर्वाह्यते, तद्वत् । आद्यपक्षे सर्वस्य सामर्थ्यलभ्यत्वमुक्तम् । अत्रतु ज्ञानप्रसादयोरेवेति भेद इति बोध्यम् । उक्तं च सुधायाम् ''अधिकारिविशेषणत्वेन प्रकृतो मोक्षः सम्बध्यते'' इति । तत्वप्रदीपे चोक्तं – ''निश्शेषदुःखनिवृत्तिः परमसुखावाप्तिश्चेच्छाविषयत्वेन सदा हृदि कृता अत इत्युच्यते'' इति ।।

**गुरुराजीय** – इदानीं स्वीयेऽतःशब्दव्याख्यानेऽनुपपत्तिमाशङ्क्य परिहरति ।। **नन्विति** ।। **विभक्त्योत्त्ययोगादिति** ।। प्रत्ययानां प्रकृत्यर्थान्वितस्वार्थाभिधायकत्वादिति भावः ।। **प्रयोजनाभावप्रयुक्तेति** ।। विषयाभावप्रयुक्तप्रयोजनाभाव-

---

१ 'मोक्षदत्वात् जिज्ञास्यमिति वर्णकान्तरस्य' इत्यन्वयः ।

शङ्कयाः विषयसमर्पकब्रह्मशब्देन निरासेऽपि एवं सत्यपि विषय इत्यादिवक्ष्यमाण-स्वतन्त्रप्रयोजनाभावप्रयुक्तानारम्भणीयत्वशङ्कानिरासहेतोरतःशब्दान्यसौत्रपदस्य तत्-सूचितयुक्तेर्वाऽभावादतःशब्दस्यैवापेक्षितत्वात्तस्याध्याहार्यत्वादिति भावः । अत्र शब्दतः प्रकृतत्वस्य बुद्धिप्रकृतत्वापेक्षया बहिरङ्गत्वात् प्रथमतस्तस्य अनन्तरं तु बुद्धिप्रकृतत्वस्योक्तिः । प्रामाणिकत्वेन बुद्धिस्थत्वस्य प्रमाणाकाङ्क्षस्य प्रथम-सूत्रनिर्णयविचारविधिवाक्योपस्थितत्वापेक्षया बहिरङ्गत्वात् तदनन्तरं तस्योक्तिः कारणीभूतविचारविधिवाक्यप्रकृतत्वापेक्षया मीमांसाङ्ग एव प्रकृतत्वस्य मुख्यत्वात् तदनन्तरस्योक्तिः अङ्गप्रकृतत्वापेक्षया अङ्गिप्रकृतत्वं मुख्यमित्यभिप्रायेण तदनन्तरं तस्योक्तिः उत्तरसूत्रप्रकृतत्वापेक्षयाऽस्मिन् सूत्र एवार्थतो लब्धत्वात् तदनन्तरं तस्योक्तिः अर्थतो लब्धत्वापेक्षया साक्षादथशब्देनैवोपस्थापितत्वस्य मुख्यत्वात् तदन्ते तदुक्तिरिति पूर्वापेक्षयोत्तरोत्तरस्यां तदङ्गत्वाभिप्रायेण पक्षभेद इति ध्येयम् ॥ लब्धं मोक्षप्रयोजनत्वमिति ॥ विचारस्य मोक्षफलकत्वे लब्धे साक्षादसम्भवेनार्था-पत्तिसिद्धप्रसादादेरप्यतःशब्देन हेतुत्वोक्तिसम्भवान्नास्य पक्षस्य प्रकृतासङ्गतिरिति ।

**ವಿವರಣೆ** - "ಓಂ ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದಲ್ಲಿರುವ 'ಅಥ' ಶಬ್ದದ ವ್ಯಾಖ್ಯಾನಪರವಾದ ಭಾಷ್ಯ ಹಾಗು ಟೀಕೆಗಳ ಅಭಿಪ್ರಾಯವನ್ನು ಇಲ್ಲಿಯ ತನಕ ಸ್ಪಷ್ಟಪಡಿಸಿದ್ದಾಯಿತು. ಮತ್ತು ಪದಗಳ ಯೋಜನೆಯನ್ನು ಹೇಗೆ ಮಾಡಬೇಕೆಂಬುದನ್ನೂ ಸ್ಪಷ್ಟಪಡಿಸಿದ್ದಾಯಿತು. ಸೂತ್ರದಲ್ಲಿರುವ 'ಓಂ' ಪದದ ವ್ಯಾಖ್ಯಾನವನ್ನು 'ಅಥ' ಶಬ್ದದ ವ್ಯಾಖ್ಯಾನವನ್ನೂ ಮಾಡಿದಂತಾಯಿತು. ಪ್ರಕೃತ ಮೂರನೆಯ 'ಅತಃ' ಪದದ ವ್ಯಾಖ್ಯಾನವನ್ನು ಮಾಡಲು ಪ್ರಾರಂಭಿಸಿದ್ದಾರೆ. ಮುಂದೆ 'ಅತಃ' ಶಬ್ದದ ವಿಷಯದಲ್ಲಿ ಪರರ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ. ಈಗ ನಮ್ಮ ವ್ಯಾಖ್ಯಾನವನ್ನು ಭಾಷ್ಯದಲ್ಲಿ ಮಾಡಿದ ವ್ಯಾಖ್ಯಾನವನ್ನು ಸಮರ್ಥಿಸಲು ಮೊದಲು "ನನು" ಇತ್ಯಾದಿ ವಾಕ್ಯದಿಂದ ಆಶಂಕೆ ಮಾಡಿಕೊಳ್ಳುತ್ತಿದ್ದಾರೆ.

## ಅತಃ ಶಬ್ದದ ಬಗ್ಗೆ ಭಾಷ್ಯ, ಟೀಕೆ

ಭಾಷ್ಯ -"ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ ನಚ ಜ್ಞಾನಂ ವಿನಾಽತ್ಯರ್ಥಪ್ರಸಾದಃ ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ"

"ಯಾವ ಕಾರಣದಿಂದ ನಾರಾಯಣನ ಪ್ರಸಾದವು ದೊರೆಯುವುದಿಲ್ಲವೋ, ಆದ್ದರಿಂದ ಮೋಕ್ಷವೂ ಆಗುವುದಿಲ್ಲ. ನಾರಾಯಣನ ಪ್ರಸಾದವಾದರೂ ಸಹ ತತ್ವಜ್ಞಾನವಿಲ್ಲದೆ ದೊರೆಯಲು ಸಾಧ್ಯವಿಲ್ಲ. ಅಂತಹ ತತ್ವಜ್ಞಾನಕ್ಕೋಸ್ಕರ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು" ಎಂದು ಭಾಷ್ಯದಲ್ಲಿದೆ.

**ಟೀಕೆ - ಸುಖಮೇವ ಮೇ ಸ್ಯಾದ್ ದುಃಖಂ ಮನಾಗಪಿ ಮಾಭೂದಿತಿ ಸರ್ವಾಭಿಮತಮೋಕ್ಷಸ್ಯ ನಾರಾಯಣಾತ್ಯರ್ಥಪ್ರಸಾದಮಂತರೇಣಾಸಂಭವಾದತ್ಯರ್ಥಪ್ರಸಾದದ್ವಾರಾ ಮೋಕ್ಷಸಾಧನ ಅಪರೋಕ್ಷ-ಜ್ಞಾನೋತ್ಪಾದಿಕಾ ಬ್ರಹ್ಮಜಿಜ್ಞಾಸಾ ಕರ್ತವ್ಯಾ ಇತ್ಯರ್ಥಃ।**

''ಪ್ರತಿಯೊಬ್ಬರಿಗೂ ''ಸುಖವೇ ನನಗೆ ಬರಲಿ ದುಃಖವು ಸ್ವಲ್ಪವೂ ಬೇಡ''ವೆಂಬ ಮೋಕ್ಷದ ಆಸೆಯು ಇರುತ್ತದೆ. ಇಂತಹ ಮೋಕ್ಷವಾದರೂ ನಾರಾಯಣನ ಪರಮಪ್ರಸಾದವಾಗದೆ ದೊರೆಯು-ವುದಿಲ್ಲ. ಆದ್ದರಿಂದ ನಾರಾಯಣನ ಪರಮಪ್ರಸಾದ ದ್ವಾರಾ ಮೋಕ್ಷಸಾಧನವಾದ ಅಪರೋಕ್ಷಜ್ಞಾನವನ್ನು ಹುಟ್ಟಿಸುವ ಬ್ರಹ್ಮಜಿಜ್ಞಾಸೆಯು ಅವಶ್ಯ ಕರ್ತವ್ಯವಾಗಿದೆ'' ಹೀಗೆ ಟೀಕೆಯಲ್ಲಿ ಹೇಳಿದ್ದಾರೆ.

## 'ಅತಃ' ಶಬ್ದಕ್ಕೆ ಏನು ಅರ್ಥ?

ಪ್ರಶ್ನೆ :- ''ಮೋಕ್ಷಕ್ಕೆ ನಾರಾಯಣನ ಅನುಗ್ರಹವು ಕಾರಣ. ಅನುಗ್ರಹಕ್ಕೆ ಜ್ಞಾನವು ಕಾರಣ ಜ್ಞಾನಕ್ಕೆ ಬ್ರಹ್ಮವಿಚಾರವು ಕಾರಣ ಆದ್ದರಿಂದ'' ಎಂಬಿಷ್ಟು ಅರ್ಥವು 'ಅತಃ' ಶಬ್ದದಿಂದ ಹೇಗೆ ದೊರೆಯುತ್ತದೆ? 'ಅಥ' ಶಬ್ದದಿಂದ ಹಿಂದೆ ಪ್ರಕೃತವಾದದ್ದು ಮೋಕ್ಷ. ಪೂರ್ವಪ್ರಕೃತವಾದ್ದರಿಂದ ಮೋಕ್ಷವಷ್ಟೇ ಲಭ್ಯವಾಗುತ್ತದೆ. ಉಳಿದೆಲ್ಲ ಅರ್ಥವು ಪ್ರಕೃತವೇ ಅಲ್ಲವಾದ್ದರಿಂದ ಅದನ್ನು ಅತಃ ಶಬ್ದದ ಅರ್ಥವೆಂದು ಹೇಗೆ ಹೇಳುವುದು?

ಪೂರ್ವಪ್ರಕೃತವಾದ್ದನ್ನೇ 'ಅತಃ' ಶಬ್ದದಿಂದ ಏಕೆ ಇಟ್ಟುಕೊಳ್ಳಬೇಕು? ಎಂದರೆ 'ಅತಃ'ಶಬ್ದವು ಸರ್ವನಾಮಶಬ್ದವಾಗಿದೆ. 'ಅತಃ' ಶಬ್ದದ ನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು - 'ಏತದ್' ಶಬ್ದವು ಸರ್ವನಾಮಶಬ್ದವಾಗಿದೆ. ಈ 'ಏತದ್' ಶಬ್ದದ ಮೇಲೆ ಪಂಚಮೀ ವಿಭಕ್ತಿ ಬಂದು, ಆ ಪಂಚಮೀವಿಭಕ್ತಿಗೆ 'ತಸಿಲ್' ಪ್ರತ್ಯಯವು ಆದೇಶವಾಗಿ ಬರುತ್ತದೆ. ತಸಿಲ್ ಪ್ರತ್ಯಯವು ಪ್ರಾಗ್‌ದಿಶೀಯಪ್ರತ್ಯಯವಾದ್ದರಿಂದ ''ಏತದೋಶ್''ಎಂಬ ಸೂತ್ರದಿಂದ ''ಏತದ್'' ಎಂಬ ಪ್ರಕೃತಿಭಾಗಕ್ಕೆ ''ಅಶ್'' ಪ್ರತ್ಯಯವು ಬರುತ್ತದೆ. 'ಅಶ್' ಪ್ರತ್ಯಯದಲ್ಲಿ 'ಶ್' ಕಾರವು ಇತ್ತಾಗಿ 'ಅ' ಎಂದಷ್ಟೇ ಉಳಿಯುತ್ತದೆ. ಇದರ ಮುಂದಿರುವ 'ತಸಿಲ್' ಪ್ರತ್ಯಯದಲ್ಲಿ 'ತಸ್' ಎಂದಷ್ಟೇ ಉಳಿಯುತ್ತದೆ. 'ಅತಸ್' ಎಂಬ ರೂಪನಿಷ್ಪತ್ತಿಯು ಆಗುತ್ತದೆ. ಆದ್ದರಿಂದ ''ಅತಃ' ಎಂಬುದು ಸರ್ವನಾಮಶಬ್ದವೇ ಆಗಿದೆ. ''ಸರ್ವನಾಮ್ನಾಂ ಪೂರ್ವಪ್ರಕೃತಪ್ರಧಾನಸ್ಯೈವ ಪರಾಮರ್ಶಃ'' ಎಂಬ ನಿಯಮದಂತೆ ಸರ್ವನಾಮಶಬ್ದಗಳಿಂದ ಪೂರ್ವಪ್ರಕೃತವಾದ ಪ್ರಧಾನವನ್ನೇ ಪರಾಮರ್ಶ ಮಾಡಬೇಕು. ಹೀಗಿದ್ದಾಗ ಭಗವಂತನ ಪ್ರಸಾದ ಜ್ಞಾನ ಇವುಗಳು ಪೂರ್ವಪ್ರಕೃತವೇ ಆಗಿಲ್ಲ. ಅಥಶಬ್ದದಿಂದ ಮೋಕ್ಷವಷ್ಟೇ ಪ್ರಕೃತವಾಗಿದೆ. ಆದ್ದರಿಂದ ''ಮೋಕ್ಷಕ್ಕೆ ನಾರಾಯಣನ ಅನುಗ್ರಹವು ಕಾರಣ, ಆದ್ದರಿಂದ'' ಎಂಬರ್ಥವನ್ನು ''ಅತಃ'' ಶಬ್ದಕ್ಕೆ ಹೇಗೆ ಹೇಳುತ್ತೀರಿ?

## ಅಧ್ಯಾಹಾರದಿಂದ ಪೂರ್ವಪ್ರಕೃತವಾಗಿದೆ. (ಮೊದಲನೆಯ ಸಮಾಧಾನ)

ಉತ್ತರ :- ಈ ಪ್ರಶ್ನೆಗೆ ಒಟ್ಟು ಏಳು ಬಗೆಯಲ್ಲಿ ಸಮಾಧಾನ ನೀಡಬಹುದು. ಮೊದಲನೆಯ ಸಮಾಧಾನ ಹೀಗಿದೆ - ಮೋಕ್ಷಕ್ಕೆ ನಾರಾಯಣನ ಅನುಗ್ರಹವು ಕಾರಣವೆಂದು ಸೂತ್ರದಲ್ಲಿ ಹೇಳದಿದ್ದರೂ ಅಧ್ಯಾಹಾರ ಮಾಡಿಕೊಳ್ಳಬೇಕು. -

*ಪರಿಪೂರ್ಣಚಂದ್ರಿಕಾ*

**ಯಮೇವೈಷ ವೃಣುತೇ ತೇನ ಲಭ್ಯಃ**

"ಪರಮಾತ್ಮನು ಯಾರನ್ನು ಮೆಚ್ಚಿ ತನ್ನ ಭಕ್ತನೆಂದು ಸ್ವೀಕರಿಸುತ್ತಾನೋ, ಅಂತಹವನಿಗೆ ಮಾತ್ರ ಪರಮಾತ್ಮನು ದೊರೆಯುತ್ತಾನೆ" ಈ ಶ್ರುತಿಯಿಂದ ಪ್ರಕೃತವಾಗುತ್ತದೆ. ಪರಮಾತ್ಮನ ಅನುಗ್ರಹಕ್ಕೆ ಜ್ಞಾನವು ಕಾರಣವೆನ್ನುವುದೂ ಸಹ ಶ್ರುತಿಯಿಂದಲೆ ಪ್ರಕೃತವಾಗುತ್ತದೆ. ಶ್ರುತಿ ಹೀಗಿದೆ -

**"ನ ತಾದೃಶೀ ಪ್ರೀತಿರೀಢ್ಯಸ್ಯ ವಿಷ್ಣೋಃ ಸ್ವಪೂರ್ಣತ್ವಜ್ಞಾತರಿ ಯಾದೃಶೀ ಸ್ಯಾತ್"**

"ವಿಷ್ಣುವಿಗೆ ತನ್ನ ಗುಣಪರಿಪೂರ್ಣತ್ವವನ್ನು ತಿಳಿದವರಲ್ಲಿ ಎಂತಹ ಪ್ರೀತಿಯು ಇರುತ್ತದೋ, ಅಂತಹ ಪ್ರೀತಿ ಬೇರೆ ಯಾರಲ್ಲಿಯೂ ಇರುವುದಿಲ್ಲ" ಈ ಶ್ರುತಿಯಿಂದ ಜ್ಞಾನವು ಅನುಗ್ರಹಕ್ಕೆ ಕಾರಣವೆನ್ನುವೆಂದು ಪ್ರಕೃತವಾಗಿದೆ. ಅಂತಹ ಜ್ಞಾನಕ್ಕೆ ಬ್ರಹ್ಮವಿಚಾರವು ಕಾರಣವಾಗಿದೆಯೆಂಬುದೂ ಶ್ರುತಿಯಿಂದಲೇ ಪ್ರಸಕ್ತವಾಗಿದೆ -

**"ಆತ್ಮಾ ವಾऽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯಃ"**

"ಪರಮಾತ್ಮನನ್ನು ಕಾಣಬೇಕಾದರೆ ಅವನ ವಿಷಯದಲ್ಲಿ ಶ್ರವಣ ಮನನ ಮೊದಲಾದವುಗಳನ್ನು ಮಾಡಬೇಕು."

ಈ ಶ್ರುತಿಯಿಂದ ಜ್ಞಾನಕ್ಕೋಸ್ಕರ ಮನನರೂಪವಾದ ಬ್ರಹ್ಮವಿಚಾರವನ್ನು ಮಾಡಬೇಕೆಂದು ತಿಳಿಯುತ್ತದೆ. ಗ್ರಂಥದಲ್ಲಿ "ಭಾಷ್ಯೋಕ್ತ ಅಧ್ಯಾಹಾರೇಣ ಶಬ್ದತಃ ಪ್ರಕೃತತ್ವಸಂಭವಾತ್" ಎಂದು ಇದೆ. ಈ ಮಾತಿಗೆ ಎರಡು ಬಗೆಯಲ್ಲಿ ಅನ್ವಯ ಮಾಡಿ ಅರ್ಥೈಸಲು ಬರುತ್ತದೆ. -

ಅನುಗ್ರಹಕ್ಕೆ ಜ್ಞಾನವು ಕಾರಣ. ಜ್ಞಾನಕ್ಕೆ ವಿಚಾರವು ಕಾರಣವೆಂದು ಶ್ರುತಿಯಿಂದ ಪ್ರಕೃತವಾಗಿದೆ. ಪ್ರಸಾದವು ಮೋಕ್ಷಕಾರಣವೆಂದು 'ಅಥ' ಎಂಬ ಶಬ್ದದಿಂದಲೇ ಪ್ರಕೃತವಾಗಿದೆ.

ಪ್ರಶ್ನೆ :- ಅನುಗ್ರಹಾದಿಗಳು ಶ್ರುತಿಯಲ್ಲಿ ಹೇಳಿದ ಮಾತ್ರದಿಂದ ಪ್ರಕೃತವಾಗಲು ಹೇಗೆ ಸಾಧ್ಯ ?

ಉತ್ತರ :- ಬುದ್ಧಿಯಲ್ಲಿ ಪ್ರಸಕ್ತವಾದ್ದನ್ನೂ ಅಧ್ಯಾಹಾರ ಮಾಡಬಹುದು. ಶ್ರುತಿಯನ್ನು ನೋಡಿದಾಗ ಅನುಗ್ರಹಾದಿಗಳು ಬುದ್ಧಿಸ್ಥವಾಗುತ್ತವೆ. ಬುದ್ಧಿಸ್ಥವಾದ ಅಂತಹ ಅನುಗ್ರಹಾದಿಗಳನ್ನು ಪರಾಮರ್ಶಿಸಲು ಯಾವ ಬಾಧಕವೂ ಇಲ್ಲ. ಶಬ್ದತಃ ಪೂರ್ವಪ್ರಕೃತವಾದದ್ದು ಹೇಗೆ ಅಧ್ಯಾಹಾರ ಮಾಡಿಕೊಳ್ಳಲು ಯೋಗ್ಯವಾಗಿರುತ್ತದೋ, ಅದರಂತೆ ಬುದ್ಧಿಯಲ್ಲಿ ಪ್ರಕೃತವಾದದ್ದೂ ಅಧ್ಯಾಹಾರಕ್ಕೆ ಯೋಗ್ಯವಾಗಿರುತ್ತದೆ. ಮೇಲೆ ಹೇಳಿದ ಶ್ರುತಿಗಳಿಂದ ಅನುಗ್ರಹಾದಿಗಳು ಬುದ್ಧಿಯಲ್ಲಿ ಪ್ರಸಕ್ತಗಳಾಗಿವೆ.

ಅಥವಾ - "ಶಬ್ದತಃ ಪ್ರಕೃತತ್ವಸಂಭವಾತ್" ಎಂದರೆ ಅಧ್ಯಾಹಾರ ಮಾಡುವ ಮೂಲಕ ಎಲ್ಲವೂ ಶಬ್ದದಿಂದಲೇ ಪೂರ್ವಪ್ರಕೃತಗಳಾಗಿವೆ. ಎಂದರ್ಥ.

ಪ್ರಶ್ನೆ :- ಹಾಗಾದರೆ ವಿಪರೀತವಾಗಿ ಏಕೆ ಅಧ್ಯಾಹಾರ ಮಾಡಬಾರದು? ಅಧ್ಯಾಹಾರವು ನಿರಂಕುಶವಾದ್ದರಿಂದ ಅನುಗ್ರಹವನ್ನೇ ಮೊದಲು ಅಧ್ಯಾಹಾರ ಮಾಡಬೇಕೆನ್ನಲು ಕಾರಣವಿಲ್ಲ.

ಉತ್ತರ :- ಆಕಾಂಕ್ಷೆಗೆ ಅನುಸಾರಿಯಾಗಿ ಅಧ್ಯಾಹಾರ ಮಾಡಬೇಕು. ಆದ್ದರಿಂದ ಆಕಾಂಕ್ಷಾಕ್ರಮಾನುಸಾರಿಯಾಗಿ ಅಧ್ಯಾಹಾರ ಮಾಡಿದ್ದೇನು ತಪ್ಪಲ್ಲ.

ಆಕಾಂಕ್ಷಾ ಬರುವ ಕ್ರಮವು ಹೀಗಿದೆ - ಪ್ರಯೋಜನವೇ ಇಲ್ಲದ ಕಾರಣ ಈ ವಿಚಾರಶಾಸ್ತ್ರವು ಅನಾರಂಭಣೀಯವಾಗಿದೆ ಎಂಬ ಪೂರ್ವಪಕ್ಷಕ್ಕೆ 'ಅಥ' ಶಬ್ದವು ಮೋಕ್ಷರೂಪ ಪ್ರಯೋಜನವಿದೆಯೆಂದು ಉತ್ತರಿಸುತ್ತದೆ. ಪುನಃ ಇದರ ಮೇಲೆ ಪೂರ್ವಪಕ್ಷ ಬರುತ್ತದೆ - ಅಂತಹ ಮೋಕ್ಷವು ಬ್ರಹ್ಮಮೀಮಾಂಸಾಶಾಸ್ತ್ರದಿಂದ ಹೇಗೆ ದೊರೆಯುತ್ತದೆ? ಎಂದು. ಇದಕ್ಕೆ ಶ್ರುತಿಗಳ ಆಧಾರದಿಂದ ಉತ್ತರಿಸಬೇಕು: ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಿಂದ ಪ್ರಸಾದವಾಗುತ್ತದೆ. ಭಗವಂತನ ಪ್ರಸಾದದಿಂದ ಮೋಕ್ಷವು ದೊರೆಯುತ್ತದೆ. ಹೀಗೆ ಮೋಕ್ಷರೂಪ ಪ್ರಯೋಜನಕ್ಕಾಗಿ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡಲೇಬೇಕೆಂದು ಆಕಾಂಕ್ಷಾಕ್ರಮದಂತೆ ತಿಳಿಯಬೇಕು. ಮೇಲೆ ಉದಾಹರಿಸಿದ ಶ್ರುತಿಗಳಿಂದಷ್ಟೇ ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಸಿಗಲು ಸಾಧ್ಯ. ಬೇರೆ ಯಾವುದರಿಂದಲೂ ಸಿಗುವುದಿಲ್ಲ. ಮತ್ತು ಈ ಪೂರ್ವಪಕ್ಷಕ್ಕೆ ಸಮಾಧಾನ ಹೇಳುವ ಶಬ್ದವು ಸೂತ್ರದಲ್ಲಿ ಬೇರೆ ಯಾವುದೂ ಇಲ್ಲ. ಆದ್ದರಿಂದ ಶೃತಿಯಲ್ಲಿ ಹೇಳಿದಂತೆ ಭಾಷ್ಯೋಕ್ತ ಅಧ್ಯಾಹಾರ ಮಾಡುವುದು ಅತ್ಯಂತ ಆವಶ್ಯಕ. ಹೀಗೆಯೇ ಅಧ್ಯಾಹಾರ ಮಾಡಬೇಕೆನ್ನಲು ಮೇಲೆ ಹೇಳಿದ ಶ್ರುತಿಗಳೇ ಆಧಾರ. ಅಧ್ಯಾಹಾರದಿಂದ ಪ್ರಕೃತವಾಗುವುದನ್ನು ಸರ್ವನಾಮಶಬ್ದವಾದ "ಅತಃ" ಶಬ್ದದಿಂದ ಪರಾಮರ್ಶ ಮಾಡಬಹುದು. "ಅತಃ" ಎಂಬಲ್ಲಿರುವ ಪಂಚಮೀವಿಭಕ್ತಿಯು ಹೇತ್ವರ್ಥವನ್ನು ಹೇಳುತ್ತದೆ. ಇಲ್ಲಿ ಅಧ್ಯಾಹಾರ ಮಾಡಲಿಕ್ಕೆ ಅರ್ಥಾಪತ್ತಿಯೇ ಮುಖ್ಯ ಪ್ರಮಾಣವೆಂದು ತಿಳಿಯಬೇಕು.

ಅರ್ಥಾಪತ್ತಿ ಎಂಬ ಒಂದೇ ಪ್ರಮಾಣದಿಂದ ಅಧ್ಯಾಹಾರ ಮಾಡಿಕೊಳ್ಳಬೇಕೆಂದು. ಅಂತಹ ಅಧ್ಯಾಹಾರದಿಂದ ವಾಕ್ಯಪೂರ್ತಿ ಮಾಡುವುದು ಪೂರ್ವಮೀಮಾಂಸೆಯಲ್ಲಿಯೂ ಕಂಡಿದೆ.

## ಸ್ರುವೇಣಾವದ್ಯತ್ವಾಧಿಕರಣಮ್
## 'ಅರ್ಥಾದ್ವಾ ಕಲ್ಪನೈಕದೇಶತ್ವಾತ್' (೧-೪-೨೦)[1]

१ भाट्टसङ्ग्रहः –

**अथ विंशं सामर्थ्येनाव्यवस्थितानां व्यवस्थाधिकरणम्**

**अर्थाद्वा कल्पनैकदेशत्वात् ॥२०॥**

पूर्ववैषम्येणेह शङ्कनात् प्रत्युदाहरणसङ्गतिः ।

**'स्रुवेणावद्यति, स्वधितिनाऽवद्यति, हस्तेनावद्यति'** इत्यवदानाङ्गत्वेन विहितस्रुवादीनि किमाज्यमांसपुरोडाशाख्यहविष्षु अविशेषेण प्राप्नुवन्ति उत यथासामर्थ्यम्' इति सन्देहे, 'पूर्वत्रेव वाक्यशेषरूपव्यवस्थापकाभावादव्यवस्थया प्राप्नुवन्ति' इति प्राप्ते,

''अशक्यार्थविधेरसम्भवात् 'विधायकस्य शक्तिः सहकारिणी' इत्यस्य अवश्यमुपेयत्वात् शक्तिसहायो विधिरेव यथासामर्थ्यं स्रुवेणाऽज्यम्, स्वधितिना मांसं, हस्तेन पुरोडाशमिति

'ಸ್ರುವೇಣಾವದ್ಯತಿ ಸ್ವಧಿತಿನಾ ಅವದ್ಯತಿ ಹಸ್ತೇನ ಅವದ್ಯತಿ' ಎಂಬ ಶ್ರುತಿಯಲ್ಲಿ 'ಸ್ರುವದಿಂದ ವಿಭಾಗ (ಅವಧಾನ) ಮಾಡುತ್ತಾನೆ. ಮರದಿಂದ ತಯಾರಿಸಿದ ಕತ್ತಿಯಿಂದ ವಿಭಾಗಿಸುತ್ತಾನೆ. ಕೈಯಿಂದ ವಿಭಾಗಿಸುತ್ತಾನೆ'ಂದು ಹೇಳಲಾಗಿದೆ.

ಆಜ್ಯ, ಮಾಂಸ, ಅನ್ನಗಳು ವಿಭಾಗಕ್ಕೆ ವಿಷಯಗಳಾಗಿವೆ. ಯಾವುದೇ ಸಾಧನೆಗಳಿಂದ ಯಾವುದನ್ನು ಬೇಕಾದರೂ (ಅವಧಾನ) ವಿಭಾಗ ಮಾಡಬಹುದೋ? ಅಥವಾ ಸ್ರುವಾದಿಗಳ ಸಾಮರ್ಥ್ಯಕ್ಕೆ ತಕ್ಕಂತೆ ಸ್ರುವದಿಂದ ಆಜ್ಯವನ್ನು ಸ್ವಧಿತಿಯಿಂದ ಮಾಂಸವನ್ನು ಕೈಯಿಂದ ಅನ್ನವನ್ನು ಈ ಕ್ರಮದಲ್ಲಿ ವಿಭಾಗ ಮಾಡಬೇಕೋ? ಎಂದು ಸಂಶಯ.

**ಪೂರ್ವಪಕ್ಷ** :- ಶ್ರುತಿಯು 'ಸ್ರುವೇಣ ಅವದ್ಯತಿ' ಎಂದು ವಿಭಾಗ ಮಾಡಬೇಕಂದಷ್ಟೇ ಹೇಳುತ್ತಿದೆ ಹೊರತು ಸ್ರುವದಿಂದ ಆಜ್ಯವನ್ನೇ ವಿಭಾಗ ಮಾಡಬೇಕೆಂದೇನು ಹೇಳುತ್ತಿಲ್ಲ. ಆದ್ದರಿಂದ ಸ್ರುವಾದಿಗಳಿಂದ ಇಷ್ಟ ಬಂದಂತೆ ಯಾವುದನ್ನು ಬೇಕಾದರೂ ವಿಭಾಗ ಮಾಡಬಹುದು.

**ಸಿದ್ಧಾಂತ** :- ಅಶಕ್ಯವಾದದ್ದನ್ನು ಶ್ರುತಿಯು ವಿಧಾನ ಮಾಡುವುದಿಲ್ಲ. ಸ್ರುವದಿಂದ ಆಜ್ಯವನ್ನು ವಿಭಾಗ ಮಾಡಬಹುದೇ ಹೊರತು ಮಾಂಸವನ್ನು ವಿಭಾಗ ಮಾಡಲು ಹೇಗೆ ತಾನೇ ಸಾಧ್ಯ? ಆದ್ದರಿಂದ ಆಯಾ ಸಾಧನಗಳ ಸಾಮರ್ಥ್ಯಕ್ಕನುಗುಣವಾಗಿ ಶ್ರುತಿಯನ್ನು ಅರ್ಥೈಸಬೇಕು. - ಸ್ರುವದಿಂದ ಆಜ್ಯವನ್ನು ವಿಭಾಗ ಮಾಡಬೇಕು. ಚೂಪಾದ ಮರದಿಂದ (ಸ್ವಧಿತಿಯಿಂದ) ಮಾಂಸವನ್ನು ವಿಭಾಗ ಮಾಡಬೇಕು. ಕೈಯಿಂದ ಅನ್ನವನ್ನು ವಿಭಾಗ ಮಾಡಬೇಕು. ಮನ ಬಂದಂತೆ ವಿಭಾಗಮಾಡಬಾರದೆಂದು ಸಿದ್ಧಾಂತ ಮಾಡಲಾಗಿದೆ.

ಇಲ್ಲಿ ಯಾವ ರೀತಿಯಾಗಿ ಸಾಮರ್ಥ್ಯವನ್ನು ಅನುಸರಿಸಿ ವಿನಿಯೋಗ ಮಾಡಬೇಕೆಂದು ಸಿದ್ಧವಾದ ಮೇಲೆ 'ಸ್ರುವದಿಂದ ದ್ರವದ್ರವ್ಯವನ್ನು ವಿಭಾಗ ಮಾಡಬೇಕೆಂದು ವಾಕ್ಯವನ್ನು ಪೂರ್ಣ ಮಾಡುತ್ತೇವೋ ಅದರಂತೆ ನಾರಾಯಣಪ್ರಸಾದವಿಲ್ಲದೆ ಮೋಕ್ಷವಾಗುವುದಿಲ್ಲವೆಂದರೆ ಸಾಮರ್ಥ್ಯಕ್ಕನುಸಾರಿಯಾಗಿ 'ಯತೋ ನಾರಾಯಣಪ್ರಸಾದಂ ಋತೇ ನ ಮೋಕ್ಷಃ ನ ಚ ಜ್ಞಾನಂ ವಿನಾ ಅತ್ಯರ್ಥಪ್ರಸಾದಃ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಹೀಗೆ ಪ್ರಕೃತವಾದ 'ಮೋಕ್ಷಂ ಪ್ರತಿ ನಾರಾಯಣ ಪ್ರಸಾದಸ್ಯ ಸಾಧನತ್ವ'ವನ್ನು ಸೂತ್ರದಲ್ಲಿರುವ 'ಅತಃ' ಪದದಿಂದ ಪರಾಮರ್ಶಮಾಡಿಕೊಳ್ಳಬಹುದು.

ಈ ರೀತಿಯಾದ ಅಧ್ಯಾಹಾರವು ಆವಶ್ಯಕ ಎಂಬುದನ್ನು ಸುಧೆಯಲ್ಲಿಯೂ ಹೇಳಿದ್ದಾರೆ - "ಜಿಜ್ಞಾಸೋತ್ಥಜ್ಞಾನಜಾತ್ ತತ್‌ಪ್ರಸಾದಾದೇವ ಮುಚ್ಯತೇ" "ವಿಚಾರದಿಂದ ಜ್ಞಾನವು ಹುಟ್ಟುತ್ತದೆ.

---

विधेयं व्यवस्थापयति'' इति सिद्धान्तः ।
तथा च सूत्रम् – 'अर्थात् विधिसामर्थ्यात्, कल्पनानि स्रुवेणाज्यम् इत्यादिकल्पितवाक्यमपि श्रुतशब्दैकदेशत्वात् सन्दिग्धार्थनिर्णायकतया प्रमाणम्' इति ।
फलन्तु व्यवस्थैवेति वक्तव्यम् ॥

॥ इति विंशं सामर्थ्येनाव्यवस्थितानां व्यवस्थाधिकरणम् ॥

ಜಿಜ್ಞಾಸಾಧಿಕರಣ

ಜ್ಞಾನದಿಂದ ನಾರಾಯಣನಾನುಗ್ರಹವಾಗುತ್ತದೆ. ಅನುಗ್ರಹದಿಂದ ಮೋಕ್ಷವಾಗುತ್ತದೆ'' ಎಂಬ ಅನು-ವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುತ್ತಾ ಹೀಗೆ ಹೇಳಿದ್ದಾರೆ - ''ಯದ್ಯಪಿ ನ ಸೂತ್ರಾಕ್ಷರೇಭ್ಯೋ ಭಗವತ್ ಪ್ರಸಾದೋ ಲಭ್ಯತೇ. ತಥಾಪ್ಯನ್ಯಥಾನುಪಪತ್ತ್ಯಾ ಅಂಗೀಕರಣೀಯಮ್'' ಮೋಕ್ಷಕ್ಕಾಗಿ ನಾರಾಯಣನ ಅನುಗ್ರಹ ಬೇಕೆಂದು ಸೂತ್ರದಲ್ಲಿ ಯಾವ ಶಬ್ದವೂ ಹೇಳುತ್ತಿಲ್ಲ. ಆದರೆ ಈ ವಿಚಾರಶಾಸ್ತ್ರವು ಏಕೆ? ಎಂಬ ಪ್ರಶ್ನೆಗೆ ಬೇರೆ ಪರಿಹಾರವಿಲ್ಲ. ಆದ್ದರಿಂದ ಶಾಸ್ತ್ರವು ಭಗವಂತನ ಅನುಗ್ರಹವನ್ನು ತಂದುಕೊಡುವ ಮೂಲಕ ಸಫಲವಾಗುತ್ತದೆ. ಇದು ಅರ್ಥಾಪತ್ತಿಯಿಂದ ಸಿದ್ಧವಾಗುತ್ತದೆಂದು ಸುಧೆಯಲ್ಲಿ ಹೇಳಲಾಗಿದೆ

ಹೀಗೆ ಅರ್ಥಾಪತ್ತಿಪ್ರಮಾಣದಿಂದ ಅಧ್ಯಾಹಾರ ಮಾಡಬೇಕೆಂಬುದಕ್ಕೆ ಭಾಷ್ಯದಲ್ಲಿ ಉದಾಹರಿಸಿದ ಮಾತನ್ನು ಸಂವಾದಿಯಾಗಿ 'ಅತ ಏವ' ಇತ್ಯಾದಿಯಾಗಿ ಗ್ರಂಥದಲ್ಲಿ ಉದಾಹರಿಸುತ್ತಿದ್ದಾರೆ.

ಯತ್ರಾಽನವಸರೋಽನ್ಯತ್ರ ಪದಂ ತತ್ರ ಪ್ರತಿಷ್ಠಿತಮ್ ।
ವಾಕ್ಯಂ ವೇತಿ ಸತಾಂ ನೀತಿಃ ಸಾವಕಾಶೇನ ತದ್ ಭವೇತ್ ॥

ಒಂದು ವಾಕ್ಯದಲ್ಲಿ ಯಾವ ಒಂದು ಪದವು ಇಲ್ಲದಿದ್ದರೆ ಇತರ ಪದಗಳಿಂದ ಬೋಧವೇ ಬರುವುದಿಲ್ಲವೋ, ಅಂತಹ ವಾಕ್ಯದಲ್ಲಿ ಆ ಪದವನ್ನು ಅಧ್ಯಾಹಾರ ಮಾಡಲೇಬೇಕು. ಅದರಂತೆ ಮಹಾವಾಕ್ಯದಲ್ಲಿ ನಿವಾರ್ಯವಾದ ವಾಕ್ಯವನ್ನು ಅಧ್ಯಾಹಾರ ಮಾಡಬೇಕು. ಭಾಷ್ಯದಲ್ಲಿ ಉದಾಹರಿಸಿದ ಈ ವಚನದಂತೆ ಅರ್ಥಾಪತ್ತಿಯಿಂದ ಅಧ್ಯಾಹಾರ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ.

ಈ ವಚನದಿಂದ ಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಅಷ್ಟೇ ಅಲ್ಲ ''ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ'' ಇತ್ಯಾದಿ ವಾಕ್ಯಗಳ ಅಧ್ಯಾಹಾರವನ್ನು ಮಾಡಿಕೊಳ್ಳಬೇಕು. ಏಕೆಂದರೆ ''ಯತೋ ನಾರಾಯಣ ಪ್ರಸಾದಮೃತೇ'' ಇತ್ಯಾದಿ ವಚನವು ವಾಕ್ಯಗಳ ಅಧ್ಯಾಹಾರವನ್ನೂ ಅರ್ಥಾಪತ್ತಿಯಿಂದ ಮಾಡಿಕೊಳ್ಳಬೇಕೆಂದು ತಿಳಿಸುತ್ತದೆ. ಪ್ರಕೃತದಲ್ಲಿ ಅದರ ಸಮತ್ವಯವನ್ನು ಹೀಗೆ ಮಾಡಬೇಕು - ''ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ'' ಇತ್ಯಾದಿ ವಾಕ್ಯಗಳು ಇಲ್ಲದಿದ್ದರೆ 'ಬ್ರಹ್ಮಜಿಜ್ಞಾಸಾಕರ್ತವ್ಯಾ' ಎಂಬ ಅನ್ವಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಾಕ್ಯಗಳ ಅಧ್ಯಾಹಾರವನ್ನು ಅವಶ್ಯವಾಗಿ ಮಾಡಬೇಕು. ಆದ್ದರಿಂದ 'ಯತ್ರಾಽನವಸರೋ' ಎಂಬ ನಿಯಮದಂತೆ ಕರ್ತವ್ಯಾ ಎಂಬ ಪದದ ಅಧ್ಯಾಹಾರವನ್ನು ''ಯತೋ ನಾರಾಯಣಪ್ರಸಾದಮೃತೇ'' ಇತ್ಯಾದಿ ವಾಕ್ಯದ ಅಧ್ಯಾಹಾರವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡಿದಾಗ ಪರಿಪೂರ್ಣವಾದ ಬೋಧವು ಸೂತ್ರದಿಂದಲೇ ಬರುತ್ತದೆ. ಇಷ್ಟು ಮೊದಲನೆಯ ಸಮಾಧಾನ -

**ಪ್ರಾಮಾಣಿಕವಾದ್ದರಿಂದ ಪರಾಮರ್ಶವು ತಪ್ಪಲ್ಲ.**
**(ಎರಡನೆಯ ಸಮಾಧಾನ)**

''ಜನ್ಮಾದ್ಯಸ್ಯ ಯತಃ'' ಎಂಬ ಸೂತ್ರದಲ್ಲಿ 'ಅಸ್ಯ' ಎಂಬ ಸರ್ವನಾಮ ಪದದಿಂದ ಜಗತ್ತನ್ನು ಪರಾಮರ್ಶಿಸಲಾಗಿದೆ. ಇಲ್ಲಿ ಜಗತ್ತು ಪೂರ್ವಪ್ರಕೃತವಾಗಿಲ್ಲ. ಆದರೂ ಸಹ ಪ್ರಮಾಣಪ್ರಮಿತ-ವಾಗಿರುವುದರಿಂದ ಅದರ ಬಲದಿಂದಲೇ ಬುದ್ಧಿಯಲ್ಲಿ ಸನ್ನಿಹಿತವಾಗುತ್ತದೆ. ಹೀಗೆ ಬುದ್ಧಿಯಲ್ಲಿ

ಸನ್ನಿಹಿತವಾದ ಜಗತ್ತನ್ನು 'ಅಸ್ಯ' ಎಂದು ಪರಾಮರ್ಶ ಮಾಡಲಾಗಿದೆ. ಅದರಂತೆ ಪ್ರಕೃತ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿಯೂ "ಅತಃ" ಎಂಬ ಸರ್ವನಾಮಶಬ್ದದಿಂದ ಪ್ರಮಾಣಗಳ ಬಲದಿಂದ ಬುದ್ಧಿಯಲ್ಲಿ ಸನ್ನಿಹಿತವಾದ ಅನುಗ್ರಹಾದಿಗಳನ್ನು ಪರಾಮರ್ಶ ಮಾಡಬಹುದು ಏನೂ ತಪ್ಪಿಲ್ಲ.

ಪ್ರಶ್ನೆ :- ದೃಷ್ಟಾಂತವೇ ಸರಿಯಿಲ್ಲ. ಏಕೆಂದರೆ "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ 'ಅಸ್ಯ' ಎಂಬ ಸರ್ವನಾಮದಿಂದ ಜಗತ್ತನ್ನು ನಿರ್ದೇಶಿಸಿರುವುದು ಸತ್ಯ. ಆದರೆ ಪ್ರಮಾಣಸಿದ್ಧವಾಗಿದೆಯೆಂಬ ಕಾರಣದಿಂದ ನಿರ್ದೇಶಿಸಿದ್ದಲ್ಲ. ಹೊರತಾಗಿ "ಯತೋ ವಾ ಇಮಾನಿ ಭೂತಾನಿ ಜಾಯಂತೇ" 'ಯಾರಿಂದ ಈ ಪ್ರಾಣಿಗಳು ಹುಟ್ಟುತ್ತವೆಯೋ" ಎಂಬ ವಿಷಯವಾಕ್ಯದಲ್ಲಿರುವ 'ಇಮಾನಿ' ಎಂಬುದನ್ನೇ ವಿಪರಿಣಾಮ ಮಾಡಿಕೊಂಡು ಸೂತ್ರದಲ್ಲಿ 'ಅಸ್ಯ' ಎಂದು ಹೇಳಲಾಗಿದೆ. ಶ್ರುತಿಯಲ್ಲಿರುವ 'ಇಮಾನಿ' ಎಂಬ ಪದವು ಜಗತ್ತನ್ನು ಹೇಳುತ್ತಿದೆ. ಆದ್ದರಿಂದ 'ಅಸ್ಯ' ಎಂಬ ಪದವೂ ಜಗತ್ತನ್ನೇ ಹೇಳಬೇಕು. ಹೀಗೆಯೇ ಉತ್ತರಿಸಲು ಬರುವಾಗ ಪ್ರಾಮಾಣಿಕವಾದ್ದರಿಂದ ಪರಾಮರ್ಶವು ಯುಕ್ತವಾಗುತ್ತದೆಂಬ ಉತ್ತರವು ಸಮಂಜಸವಲ್ಲ.

ಉತ್ತರ :- 'ಇಮಾನಿ' ಎಂಬುದರ ವಿಪರಿಣಾಮವೇ 'ಅಸ್ಯ' ಎಂಬ ಪದವಾಗಿದೆಯೆಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ 'ಅಸ್ಯ' ಎಂಬ ಪದದಿಂದ ಸಮಸ್ತಜಗತ್ತನ್ನೇ ಪರಾಮರ್ಶಿಸಲಾಗಿದೆ. ಆದರೆ 'ಇಮಾನಿ' ಎಂಬ ಪದವು ಕೇವಲ ಪ್ರಾಣಿವರ್ಗವನ್ನಷ್ಟೇ ಹೇಳುತ್ತಿವೆ. ಕಾರಣವೇನೆಂದರೆ ಶ್ರುತಿಯಲ್ಲಿ ಮುಂದೆ 'ಭೂತಾನಿ' ಎಂಬ ಪದವಿದೆ. ಭೂತಪದವು ಕೇವಲ ಚೇತನಮಾತ್ರಪರವಾದ್ದರಿಂದ ಸಮಸ್ತಜಗತ್ತನ್ನು ವಿವಕ್ಷಿಸಲು ಸಾಧ್ಯವಿಲ್ಲ. ಹೀಗೆ ಕೇವಲ ಚೇತನಮಾತ್ರಪರವಾದ 'ಇಮಾನಿ' ಎಂಬ ಪದದ ಪರಿಣಾಮವೇ 'ಅಸ್ಯ' ಎಂಬ ಪದವಾಗಿದೆಯೆಂದು ಹೇಳಲು ಬರುವುದಿಲ್ಲ.

ಪ್ರಶ್ನೆ :- 'ಭೂತ' ಶಬ್ದದಿಂದ ಕೇವಲ ಚೇತನವರ್ಗವನ್ನಷ್ಟೇ ಅಲ್ಲದೇ ಸಮಸ್ತ ಪ್ರಪಂಚವನ್ನೇ ವಿವಕ್ಷಿಸಬೇಕು. ಏಕೆಂದರೆ ಚೇತನರನ್ನು ಸೃಷ್ಟಿ ಮಾಡಬೇಕಾದರೆ ಚೇತನರಿಂದ ಅಭಿಮನ್ಯಮಾನವಾದ ಮಹದಾದಿಜಡವನ್ನೂ ಇಟ್ಟುಕೊಳ್ಳಬೇಕು. ತಮ್ಮದೆಂದು ಅಭಿಮಾನವಿಟ್ಟಿರುವ ದೇಹ ಇಂದ್ರಿಯ ಮೊದಲಾದವುಗಳಿಲ್ಲದೇ ಚೇತನಸೃಷ್ಟಿಯನ್ನು ಹೇಳಲು ಸಾಧ್ಯವೇ ಇಲ್ಲ. ಒಂದು ವೇಳೆ ಜಡವನ್ನು ಇಟ್ಟುಕೊಳ್ಳದಿದ್ದರೆ ಸಮಸ್ತಕಾರಣತ್ವವು ಶ್ರುತಿಯಲ್ಲಿ ಪ್ರಾಪ್ತವಾಗುವುದಿಲ್ಲ, ಅದನ್ನು ವ್ಯಾಖ್ಯಾನ ಮಾಡುವ ಸೂತ್ರದಲ್ಲಿಯೂ 'ಅಸ್ಯ' ಎಂಬುದರಿಂದ ಸಮಸ್ತ ಜಗತ್ತು ಪ್ರಾಪ್ತವಾಗಲು ಸಾಧ್ಯವಿಲ್ಲ. ಆದ್ದರಿಂದ ಭೂತಶಬ್ದದಿಂದ ಸಮಸ್ತಪ್ರಪಂಚವನ್ನು ಇಟ್ಟುಕೊಳ್ಳಬೇಕು. ಅದನ್ನೇ 'ಇಮಾನಿ' ಎಂಬ ಪದವು ಹೇಳುತ್ತದೆ. 'ಇಮಾನಿ' ಪದದಿಂದ ಉಕ್ತವಾದ ಸಮಸ್ತಪ್ರಪಂಚವೇ 'ಇಮಾನಿ' ಪದದ ಪರಿಣಾಮವಾದ 'ಅಸ್ಯ' ಎಂಬ ಪದವು ಹೇಳುತ್ತದೆ. ಹೀಗೆಯೇ ಹೇಳಲು ಬರುವಾಗ 'ಅಸ್ಯ' ಪದದಿಂದ ಅಧ್ಯಾಹಾರ ಮಾಡುತ್ತೇವೆನ್ನುವುದು ತಪ್ಪಾಗುತ್ತದೆ.

ಉತ್ತರ :- ಸೂತ್ರದಲ್ಲಿರುವ 'ಅಸ್ಯ' ಪದದಿಂದ ಜಗತ್ತನ್ನು ಪರಾಮರ್ಶಿಸಲು ಪ್ರಮಾಣಸಿದ್ಧ-ವಾಗಿರುವುದು ಕಾರಣವೇ ಅಲ್ಲ. ಶ್ರುತಿಯಲ್ಲಿರುವ 'ಇಮಾನಿ' ಪದದಿಂದ ಜಗತ್ತನ್ನು ಪರಾಮರ್ಶಿಸಲು

ಪ್ರಮಾಣಸಿದ್ಧವಾಗಿರುವಿಕೆಯೇ ಕಾರಣವಾಗಿದೆ. ಅದರಂತೆ ಸೂತ್ರದಲ್ಲಿಯೂ 'ಅಸ್ಯ' ಪದದಿಂದ ಜಗತ್ತನ್ನು ಪರಾಮರ್ಶಿಸಲು ಪ್ರಮಾಣಸಿದ್ಧವಾಗಿರುವಿಕೆಯನ್ನೇ ಕಾರಣವೆಂದು ಹೇಳಬೇಕು. ಬೇರೆ ಉಪಾಯವಿಲ್ಲ. ಈ ಅಭಿಪ್ರಾಯದಲ್ಲೇ ಸುಧೆಯ ಮಾತುಗಳಿವೆ - ''ಅಸ್ಯ ಪ್ರತ್ಯಕ್ಷಾದಿಪ್ರಮಾಣಸಿದ್ಧತಯಾ ಪ್ರಕೃತಸ್ಯ ಸಮಸ್ತಪ್ರಪಂಚಸ್ಯ'' ''ಅಸ್ಯ'' ಎಂದರೆ ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಸಿದ್ಧವಾದ್ದರಿಂದ ಪ್ರಕೃತವಾಗಿರುವ ಸಮಸ್ತ ಪ್ರಪಂಚದ'' ಎಂದು.

ಇಲ್ಲಿಗೆ ಎರಡನೆಯ ಸಮಾಧಾನವು ಮುಗಿಯಿತು. ಮೊದಲನೆಯ ಮತ್ತು ಎರಡನೆಯ ಸಮಾಧಾನವು ಭಾಷ್ಯವಾಕ್ಯಗಳಿಂದ ಸೂಚಿತವಾಗಿವೆ. ಇವೆರಡರಲ್ಲಿಯೂ ಮೊದಲನೆಯ ಸಮಾಧಾನವು ಭಾಷ್ಯಕ್ಕೆ ತೀರ ಹತ್ತಿರವಾಗಿದೆ. ಅಂದರೆ ಅಂತರಂಗವಾಗಿದೆ. ಎರಡನೆಯದ್ದು ಬಹಿರಂಗವಾಗಿದೆ. ಅಧ್ಯಾಹಾರದಿಂದ ತತ್ವತಃ ಪ್ರಕೃತವಾದ್ದನ್ನು ಪರಾಮರ್ಶ ಮಾಡಬೇಕೆಂಬುದು ಮೊದಲನೆಯ ಪಕ್ಷ. ಭಾಷ್ಯದಲ್ಲಿ ''ಕರ್ತವ್ಯಾ'' ಎಂಬ ಪದದ ಅಧ್ಯಾಹಾರಕ್ಕೆ ''ಯತ್ರಾನವಸರೋಽನ್ಯತ್ರ'' ಎಂಬ ಪ್ರಮಾಣ ಹೇಳಿದರು. ಪ್ರಕೃತ ಬೇಕಾದ ವಾಕ್ಯದ ಅಧ್ಯಾಹಾರಕ್ಕೂ ಈ ಪ್ರಮಾಣವೇ ಬೇಕು. ಆದ್ದರಿಂದ ಸೂತ್ರದಲ್ಲಿ ಮಾಡಿಕೊಳ್ಳಬೇಕಾದ ವಾಕ್ಯದ ಅಧ್ಯಾಹಾರದ ಬಗ್ಗೆ ಇದರ ಮೂಲಕ ಸ್ಪಷ್ಟವಾಗಿ ಹೇಳಿದಂತಾಯಿತು. ಆದರೆ ಎರಡನೆಯ ಸಮಾಧಾನವು ಇಷ್ಟು ಸ್ಪಷ್ಟವಾಗಿ ಭಾಷ್ಯದಿಂದ ತಿಳಿಯುವುದಿಲ್ಲವಾದ್ದರಿಂದ ಬಹಿರಂಗವಾಗಿದೆ. ಅಧ್ಯಾಹಾರ ಮಾಡಬೇಕೆಂದು ಸ್ಪಷ್ಟವಾಗಿ ಹೇಳಿಲ್ಲ. ಅನೇಕ ಪ್ರಮಾಣಗಳನ್ನಷ್ಟೇ ಹೇಳಿದ್ದಾರೆ. ಈ ಅನೇಕ ಪ್ರಮಾಣಗಳಿಂದ ಪ್ರಮೇಯವು ಬುದ್ಧಿಸ್ಥವಾಗುತ್ತದೆ. ಬುದ್ಧಿಸ್ಥವಾದ್ದನ್ನು ಪರಾಮರ್ಶ ಮಾಡುವುದು ಸೂಕ್ತವಾಗಿದೆ. ಹೀಗೆ ಭಾಷ್ಯಕ್ಕೆ ಸ್ವಲ್ಪ ದೂರವಾದ್ದರಿಂದ ಬಹಿರಂಗವಾಗಿದೆ. ಆದ್ದರಿಂದ ಎರಡನೆಯ ಸಮಾಧಾನವನ್ನೇ ಮೊದಲೇಕೆ ಹೇಳಲಿಲ್ಲ? ಎಂಬ ಅವಕಾಶವೇ ಇಲ್ಲ. ಪ್ರಬಲವಾದ್ದನ್ನೇ ಮೊದಲು ಹೇಳುವುದು ಸೂಕ್ತವಾಗಿದೆ.

ಇನ್ನು ಮುಂದೆ ಮೂರನೆಯ ಸಮಾಧಾನವನ್ನು ಹೇಳುತ್ತಿದ್ದಾರೆ. ಇದು ಪ್ರಾರಂಭದ ಎರಡು ಸಮಾಧಾನಗಳಿಗಿಂತ ಭಾಷ್ಯಕ್ಕೆ ದೂರವಾಗಿದೆ. ಹೀಗೆಯೇ ಮುಂದಿನ ಸಮಾಧಾನಗಳಲ್ಲಿಯೂ ತಿಳಿಯಬೇಕು.

### ವ್ಯಾಖ್ಯೇಯದಲ್ಲಿ ಪ್ರಕೃತವಾದದ್ದನ್ನು ವ್ಯಾಖ್ಯಾನದಲ್ಲಿ ಪರಾಮರ್ಶ ಮಾಡಬಹುದು (ಮೂರನೆಯ ಸಮಾಧಾನ)

ವ್ಯಾಖ್ಯೇಯವಾದದ್ದು ಶ್ರುತಿ, ವಾಖ್ಯಾನವಾದದ್ದು ಸೂತ್ರ . ಶ್ರುತಿಯು ಹೀಗಿದೆ- ''ನಾರಾಯಣೋಽಸೌ ಪರಮೋ ವಿಚಿಂತ್ಯಃ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್'' ''ಕರ್ಮಪಾಶದಿಂದ ಬಿಡುಗಡೆ ಬಯಸಿದವರಿಗೆ ನಾರಾಯಣನು ಪ್ರಧಾನವಾಗಿ ವಿಚಾರಯೋಗ್ಯನಾಗಿದ್ದಾನೆ.'' ಈ ಶ್ರುತಿವಾಕ್ಯದ ಅರ್ಥವನ್ನೂ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರವೇ ನಿರ್ಣಯಿಸಬೇಕು. ಈ ಶ್ರುತಿವಾಕ್ಯದಲ್ಲಾದರೂ ವಿಚಾರವು ಮೋಕ್ಷಕ್ಕೆ ಕಾರಣವಾಗುತ್ತದೆಂದು ಹೇಳಿದೆ. ಇದರ ಹಿಂದಿನ ವಾಕ್ಯದಲ್ಲಿ ನಾರಾಯಣನ ಅನುಗ್ರಹದ ಮೂಲಕ ವಿಚಾರವು ಮೋಕ್ಷಕ್ಕೆ ಕಾರಣವಾಗುತ್ತದೆಂದು ಹೇಳಿದೆ. ಅದು ಹೀಗಿದೆ - ''ಯಸ್ಯ

ಪ್ರಸಾದಾತ್ ಪರಮಾರ್ಶಿರೂಪಾದಸ್ಮಾತ್ ಸಂಸಾರಾನ್ಮುಚ್ಯತೇ ನಾಪರೇಣ'' ''ಬಹಳ ದುಃಖರೂಪ-ವಾಗಿರುವ ಈ ಸಂಸಾರದಿಂದ ಮೋಕ್ಷ ಪಡೆಯುವುದು ಯಾರ ಅನುಗ್ರಹದಿಂದ ಸಾಧ್ಯವೋ ಯಾರ ಅನುಗ್ರಹವನ್ನು ಬಿಟ್ಟು ಬೇರೆ ಯಾವುದರಿಂದಲೂ ಸಾಧ್ಯವಿಲ್ಲವೋ'' ಹೀಗೆ ಸಂಪೂರ್ಣ ಈ ಶ್ರುತಿವಾಕ್ಯದಿಂದ, ವಿಚಾರದಿಂದ ನಾರಾಯಣನ ಅನುಗ್ರಹ, ನಾರಾಯಣನ ಅನುಗ್ರಹದಿಂದ ಮೋಕ್ಷವಾಗುತ್ತದೆಂದು ತಿಳಿಯುತ್ತದೆ. ಇದನ್ನು ಸೂತ್ರದಲ್ಲಿರುವ 'ಅತಃ' ಶಬ್ದದಿಂದ ಪರಾಮರ್ಶ ಮಾಡಬಹುದು. ಯಾವ ಅನೌಚಿತ್ಯವೂ ಇರುವುದಿಲ್ಲ.

ಪ್ರಶ್ನೆ :- ಮೊದಲನೆಯ ಸೂತ್ರದ ವಿಷಯವಾಕ್ಯ- ''ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ'' ಎಂಬುದು. ಆದರೆ ನೀವು ''ನಾರಾಣೋಽಸೌ'' ಎಂಬುದನ್ನು ವಿಷಯವಾಕ್ಯ ಎನ್ನುತ್ತಿದ್ದೀರಿ ಇದು ಹೇಗೆ?

ಉತ್ತರ :- ಹಾಗೇನಿಲ್ಲ. ಒಂದು ಸೂತ್ರಕ್ಕೆ ಒಂದೇ ವಿಷಯವಾಕ್ಯ ಎಂಬ ನಿಯಮವಿಲ್ಲ. ಸೂತ್ರವು ಅನೇಕಶಾಖಾನಿರ್ಣಾಯಕವಾದಾಗ ಮಾತ್ರ ಸೂತ್ರವೆನಿಸುತ್ತದೆ. ಆದ್ದರಿಂದ ವಿಚಾರವನ್ನು ವಿಧಾನಮಾಡುವ ಎಲ್ಲಾ ಶ್ರುತಿವಾಕ್ಯಗಳೂ ಈ ಸೂತ್ರದ ವಿಷಯವಾಕ್ಯವಾಗಿರುತ್ತವೆ. ಆದ್ದರಿಂದ ''ತದ್‌ವಿಜಿಜ್ಞಾಸಸ್ವ'' ಎಂಬ ವಾಕ್ಯದಂತೆ ''ಓಮಿತ್ಯೇತದಕ್ಷರಮುದ್ಗೀಥಮುಪಾಸೀತ'' ''ಆತ್ಮಾವಾಽರೇ ದ್ರಷ್ಟವ್ಯಃ'' ''ನಾರಾಯ-ಣೋಽಸೌ ಪರಮೋ ವಿಚಿಂತ್ಯಃ'' ಇತ್ಯಾದಿ ವಾಕ್ಯಗಳೆಲ್ಲವೂ ವಿಷಯವಾಕ್ಯಗಳೇ ಆಗುತ್ತವೆ. ಯಾವುದೇ ಸೂತ್ರದಲ್ಲಿ ಒಂದು ವಿಷಯವಾಕ್ಯವನ್ನು ಹೇಳಿದ್ದರೆ ಅದು ಕೇವಲ ಮಾದರಿಗಾಗಿ ಎಂದು ತಿಳಿಯಬೇಕು. ಆದ್ದರಿಂದ ''ನಾರಾಯಣೋಽಸೌ'' ಇತ್ಯಾದಿವಾಕ್ಯವು ವ್ಯಾಖ್ಯೇಯವೆಂದಂತಾಯಿತು. ಇದರಲ್ಲಿ ಹೇಳಿದ್ದನ್ನು ಸೂತ್ರದ ಅತಃ ಶಬ್ದ ಪರಾಮರ್ಶಿಸುವುದು ಸೂಕ್ತವೆ ಆಗಿದೆ. ಇಷ್ಟು ಮೂರನೆಯ ಸಮಾಧಾನ.

ಈ ಮೂರನೆಯ ಸಮಾಧಾನಕ್ಕಿಂತ ಬಹಿರಂಗವಾದ ನಾಲ್ಕನೆಯ ಸಮಾಧಾನವನ್ನು ಮುಂದೆ ಹೇಳುತ್ತಿದ್ದಾರೆ -

### ಬ್ರಹ್ಮತರ್ಕದಿಂದ ಪೂರ್ವಪ್ರಕೃತವಾಗಿದೆ
### (ನಾಲ್ಕನೆಯ ಸಮಾಧಾನ)

ವಿಚಾರದಿಂದ ಜ್ಞಾನ, ಜ್ಞಾನದಿಂದ ಭಗವದನುಗ್ರಹ, ಭಗವದನುಗ್ರಹದಿಂದ ಮೋಕ್ಷವು ಲಭಿಸುತ್ತದೆಂದು ಬ್ರಹ್ಮತರ್ಕದಲ್ಲಿ ಹೇಳಿದೆ. ಈ ಬ್ರಹ್ಮತರ್ಕವಾದರೂ ಬ್ರಹ್ಮಮೀಮಾಂಸಾಶಾಸ್ತ್ರದ ಹಿಂದಿನ ಗ್ರಂಥವಾಗಿದೆ. ಹೀಗೆ ಪೂರ್ವಪ್ರಕೃತವಾದ ಬ್ರಹ್ಮತರ್ಕದಲ್ಲಿ ಪ್ರಸಕ್ತವಾದದ್ದನ್ನೇ ಸಂಕ್ಷೇಪವಾಗಿ ಇಲ್ಲಿ 'ಅತಃ' ಶಬ್ದದಿಂದ ಪರಾಮರ್ಶಿಸಲಾಗಿದೆ. ಆದ್ದರಿಂದ 'ಅತಃ' ಶಬ್ದಕ್ಕೆ ಹೇಳಿದ ಅರ್ಥವು ಅಯುಕ್ತವಲ್ಲ.

ಪ್ರಶ್ನೆ :- ಬ್ರಹ್ಮತರ್ಕದಲ್ಲಿ ಸಿದ್ಧವಾದ ವಿಷಯವನ್ನು ಪರಾಮರ್ಶಿಸುವುದು ಎಲ್ಲಿ ಕಂಡಿದೆ?

ಉತ್ತರ :- ಅನುವ್ಯಾಖ್ಯಾನದಲ್ಲೇ ಹಾಗೆ ಹೇಳಿದ್ದಾರೆ - 'ಅತಃ' ಶಬ್ದಕ್ಕೆ ವ್ಯುತ್ಪತ್ತಿಸದ್ಭಾವಾತ್ ಎಂಬುದೂ ಒಂದು ಅರ್ಥ. ಈ ಅರ್ಥವನ್ನು ಪ್ರತಿಪಾದಿಸುವಾಗ ಹೀಗೆ ಹೇಳಿದ್ದಾರೆ -

**ಕಾರ್ಯತಾ ಚ ನ ಕಾಚಿತ್ ಸ್ಯಾತ್ ಇಷ್ಟಸಾಧನತಾಂ ವಿನಾ ॥**

''ಇಷ್ಟಸಾಧನತ್ವಕ್ಕಿಂತ ಬೇರೆಯಾದ ಕಾರ್ಯತಾವು ಇರುವುದಿಲ್ಲ.'' ಇತ್ಯಾದಿ ಮಾತುಗಳಿಂದ ವೇದಕ್ಕೆ ಕಾರ್ಯತಾಪರತ್ವವನ್ನು ನಿರಾಕರಿಸಿದ್ದಾರೆ. ಮತ್ತು ಸಿದ್ಧಪರತ್ವವನ್ನು ಸಮರ್ಥಿಸಿ ವೇದಕ್ಕೆ ಬ್ರಹ್ಮನನ್ನು ಬೋಧಿಸುವುದರಲ್ಲಿ ತಾತ್ಪರ್ಯವಿದೆಯೆಂದು ನಿರ್ಣಯಿಸಿದ್ದಾರೆ. ಕೊನೆಯಲ್ಲಿ

**ಏತತ್‌ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ ।**
**ಉಕ್ತಂ ವಿದ್ಯಾಪೃಥಕ್‌ತ್ವಾತ್ತು ಸಂಕ್ಷೇಪೇಣಾತ್ರಸೂಚಿತಮ್ ॥**

ಬ್ರಹ್ಮತರ್ಕವೆಂಬ ತರ್ಕಶಾಸ್ತ್ರದಲ್ಲಿ ಇದೆಲ್ಲವನ್ನೂ ವಿಸ್ತಾರವಾಗಿ ಹೇಳಿದೆ. ಇದು ಶಾಸ್ತ್ರವಾದ್ದರಿಂದ ಬ್ರಹ್ಮತರ್ಕದಲ್ಲಿ ಹೇಳಿದ್ದಲ್ಲವನ್ನೂ ಸಂಕ್ಷೇಪವಾಗಿ ಇಲ್ಲಿ ಅತಃ ಶಬ್ದದಿಂದ ಹೇಳಲಾಗಿದೆ'' ಎಂದು ಇದೆ. ಬ್ರಹ್ಮತರ್ಕದಲ್ಲಿ ಪ್ರಕೃತವಾದ್ದನ್ನು ಸೂತ್ರದಲ್ಲಿ ಪರಾಮರ್ಶಿಸುವುದು ತಪ್ಪಲ್ಲ. ಆದ್ದರಿಂದ ಸಿದ್ಧದಲ್ಲಿ ವ್ಯುತ್ಪತ್ತಿಯನ್ನು ಬ್ರಹ್ಮತರ್ಕವು ಹೇಳಿದೆ. ಅದನ್ನು ಸಂಕ್ಷೇಪವಾಗಿ ಅಥಃಶಬ್ದದಿಂದ ಪರಾಮರ್ಶಿಸಲಾಗಿದೆ. ಅದರಂತೆ ಇಲ್ಲಿಯೂ ಹೇಳಬಹುದು.

ವಿಚಾರದಿಂದ ಜ್ಞಾನ, ಜ್ಞಾನದಿಂದ ಅನುಗ್ರಹ, ಅನುಗ್ರಹದಿಂದ ಮೋಕ್ಷವು ದೊರೆಯುತ್ತದೆಂದು ಬ್ರಹ್ಮತರ್ಕದಲ್ಲಿ ಹೇಳಿದೆ. ಬ್ರಹ್ಮತರ್ಕದಲ್ಲಿ ಹೇಳಿದ್ದನ್ನು ಅತಃಶಬ್ದವು ಸಂಕ್ಷೇಪವಾಗಿ ಹೇಳುತ್ತಿದೆ.

ಪ್ರಶ್ನೆ :- ಬ್ರಹ್ಮತರ್ಕವೇ ಬೇರೆ ಗ್ರಂಥ. ಬ್ರಹ್ಮಮೀಮಾಂಸೆಯೇ ಬೇರೆ ಗ್ರಂಥ. ಬ್ರಹ್ಮತರ್ಕವು ಪ್ರಮಾಣಗ್ರಂಥ. ಇದು ಪ್ರಮೇಯಗ್ರಂಥ. ಹೀಗಿರಬೇಕಾದರೆ ಬ್ರಹ್ಮತರ್ಕದಲ್ಲಿ ಹೇಳಿದ್ದನ್ನು 'ಅತಃ' ಶಬ್ದದಿಂದ ಪರಾಮರ್ಶಿಸುವುದು ಹೇಗೆ?

ಉತ್ತರ :- ಬ್ರಹ್ಮತರ್ಕವು ಬೇರೆ ಗ್ರಂಥವಾಗಿದ್ದರೂ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಂಗವೇ ಆಗಿದೆ. ಇದನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

**ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ ।**
**ಮಾನನ್ಯಾಯೈಸ್ತು ತತ್‌ಸಿದ್ಧೈರ್ಮೀಮಾಂಸಾ ಮೇಯಶೋಧನಮ್ ॥**

'ತರ್ಕಶಾಸ್ತ್ರವು ಪ್ರಮಾಣ ಮತ್ತು ನ್ಯಾಯಗಳ ಬಗ್ಗೆ ಸರಿಯಾದ ತಿಳಿವಳಿಕೆಯನ್ನು ನೀಡುತ್ತದೆ. ಅಲ್ಲಿ ತಿಳಿದ ಪ್ರಮಾಣನ್ಯಾಯಗಳ ಬಲದಿಂದ ಪ್ರಮೇಯದ ಬಗ್ಗೆ ಮಾಡುವ ವಿಚಾರಮಂಥನವೇ ಈ ವಿಚಾರಶಾಸ್ತ್ರವಾಗಿದೆ.' ಇದರಿಂದ ಬ್ರಹ್ಮತರ್ಕವು ವಿಚಾರಶಾಸ್ತ್ರಕ್ಕೆ ಅಂಗವೆಂದು ಸ್ಪಷ್ಟವಾಗುತ್ತದೆ. ಮತ್ತು ಬ್ರಹ್ಮತರ್ಕವನ್ನೂ ಸಹ ಸೂತ್ರಕಾರರೇ ರಚಿಸಿದ್ದಾರೆ. ಆದ್ದರಿಂದ ಅಲ್ಲಿ ಹೇಳಿದ್ದನ್ನು ಇಲ್ಲಿ ಪರಾಮರ್ಶ ಮಾಡುವುದು ಯಾವ ಕಾರಣದಿಂದಲೂ ತಪ್ಪಲ್ಲ. ಇಲ್ಲಿಗೆ ನಾಲ್ಕನೆಯ ಸಮಾಧಾನವು ಮುಗಿಯಿತು.

ಈ ಸಮಾಧಾನವು ಶ್ರುತಿಗಿಂತ ಅತಿರಿಕ್ತವಾದ ಬ್ರಹ್ಮತರ್ಕದಿಂದ ಅಧ್ಯಾಹಾರ ಮಾಡಬೇಕೆಂದು ಹೇಳಿದ್ದರಿಂದ ಮೂರನೆಯ ಸಮಾಧಾನಕ್ಕಿಂತ ಬಹಿರಂಗವಾಗಿದೆ.

*ಪರಿಪೂರ್ಣಚಂದ್ರಿಕಾ*

## ಮುಂದಿನ ಸೂತ್ರದಿಂದಲೂ ಅಧ್ಯಾಹಾರ ಸಿದ್ಧ
## (ಐದನೆಯ ಸಮಾಧಾನ)

ಬ್ರಹ್ಮತರ್ಕದಷ್ಟು ದೂರವಾದ ಗ್ರಂಥದಿಂದ ಅಧ್ಯಾಹಾರ ಬೇಡ. ಹತ್ತಿರವಾದ (ಅಂತರಂಗವಾದ) ಮುಂದಿನ "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ ಪ್ರಕೃತವಾದ್ದನ್ನು ಈ ಸೂತ್ರದಲ್ಲಿ ಪರಾಮರ್ಶಿಸಬಹುದು.

"ಜನ್ಮಾದ್ಯಸ್ಯ ಯತಃ"ಎಂಬ ಸೂತ್ರಕ್ಕೆ ಮೂರನೆಯ ಅಧ್ಯಾಯದ ಅನುವ್ಯಾಖ್ಯಾನದಲ್ಲಿ ಮತ್ತೊಂದು ಬಗೆಯಲ್ಲಿ ವಿವರಣೆ ನೀಡಿದೆ - ವಿಷ್ಣುವು ಮೋಕ್ಷದಾತನಾದ್ದರಿಂದ ವಿಚಾರಕ್ಕೆ ಅರ್ಹನೆಂದು ಹೇಳುವುದಾದರೆ ಸಂಸಾರದ ಬಂಧನಕ್ಕೂ ಅವನೇ ಕಾರಣನಾದ್ದರಿಂದ ವಿಚಾರಕ್ಕೆ ಅಯೋಗ್ಯನೆಂದು ಏಕೆ ಹೇಳಬಾರದು? ಎಂದು ಪೂರ್ವಪಕ್ಷ.

ವಿಷ್ಣುವು ಪ್ರಸನ್ನನಾಗದ ತನಕ ಸಂಸಾರಬಂಧನವು ಪರಿಹಾರವಾಗುವುದಿಲ್ಲ. ಅವನು ಪ್ರಸನ್ನನಾಗಬೇಕಾದರೆ ಅವನ ಅನುಗ್ರಹಕ್ಕಾಗಿ ವಿಚಾರ ಮಾಡಬೇಕು. ಆದ್ದರಿಂದ ನೀವು ಆಕ್ಷೇಪಿಸಿದ ಸಂಸಾರಬಂಧನವು ವಿಚಾರಕ್ಕೆ ಅನುಕೂಲವೇ ಹೊರತು ಪ್ರತಿಕೂಲವಲ್ಲ. ಇಷ್ಟು ಸಿದ್ಧಾಂತ.

ಈ ನಿಟ್ಟಿನಲ್ಲಿ ದ್ವಿತೀಯ ಸೂತ್ರವನ್ನು ವ್ಯಾಖ್ಯಾನಿಸಿದಾಗ ಜನ್ಮಾದಿಸೂತ್ರವು ವಿಚಾರದಿಂದ ಜ್ಞಾನ, ಜ್ಞಾನದಿಂದ ಭಗವದನುಗ್ರಹ, ಭಗವದನುಗ್ರಹದಿಂದ ಮೋಕ್ಷಗಳುಂಟಾಗುವುದನ್ನು ಹೇಳುತ್ತದೆಂತಾಯಿತು. ಹೀಗೆ ಎರಡನೆಯ ಸೂತ್ರದಲ್ಲಿ ಹೇಳಿದ್ದನ್ನು ಪ್ರಥಮಸೂತ್ರದಲ್ಲಿರುವ ಅತಃಶಬ್ದವು ಪರಾಮರ್ಶ ಮಾಡುತ್ತಿದೆ.

ಪ್ರಶ್ನೆ :- ಹಿಂದೆ ಪ್ರಸಕ್ತವಾದದ್ದನ್ನು ಪರಾಮರ್ಶ ಮಾಡುವುದು ಅನೇಕ ಕಡೆ ಕಂಡಿದೆ. ಆದರೆ ಮುಂದೆ ಬರುವುದನ್ನು ಹಿಂದೆ ಪರಾಮರ್ಶ ಮಾಡುವುದು ಎಲ್ಲಿಯೂ ಕಂಡಿಲ್ಲ.

ಉತ್ತರ :- ಹಾಗೇನಿಲ್ಲ. ಮುಂದೆ ಬರುವುದನ್ನು ಹಿಂದೆ ಪರಾಮರ್ಶ ಮಾಡುವುದು ಪೂರ್ವಮೀಮಾಂಸೆಯಲ್ಲಿ ಕಂಡಿದೆ -

### ಅಥೈಷ ಜ್ಯೋತಿರಧಿಕರಣಮ್
### ಸಂಜ್ಞಾ ಚೋತ್ಪತ್ತಿಸಂಯೋಗಾತ್ (೨-೨-೨೨)[೧]

---

१ भाट्टसङ्ग्रहः –

अथाष्टमं सञ्ज्ञाकृतकर्मभेदाधिकरणम्

सूत्रम् – सञ्ज्ञा चोत्पत्तिसंयोगात् ।।२२।।

अत्र पूर्ववैषम्येण शङ्कनात् प्रत्युदाहरणसङ्गतिः । ज्योतिष्टोमे 'अथैष ज्योतिः अथैष विश्वज्योतिः अथैष सर्वज्योतिः एतेन सहस्रदक्षिणेन यजेत' इति श्रुतम् । तत्र 'प्रकृत-

'ಅಥೈಷ ಜ್ಯೋತಿರಥೈಷ ವಿಶ್ವಜ್ಯೋತಿರಥೈಷ ಸರ್ವಜ್ಯೋತಿರೇತೇನ ಸಹಸ್ರದಕ್ಷಿಣೇನ ಯಜೇತ' ಎಂಬ ವಾಕ್ಯವು ಜ್ಯೋತಿಷ್ಟೋಮಪ್ರಕರಣದಲ್ಲಿ ಶ್ರುತವಾಗಿದೆ. ಈ ಶ್ರುತಿಯಲ್ಲಿ 'ಯಜೇತ' ಎಂಬ ಶಬ್ದವಿರುವುದರಿಂದ ಜ್ಯೋತಿ, ವಿಶ್ವಜ್ಯೋತಿ, ಸರ್ವಜ್ಯೋತಿಗಳು ಯಾಗಗಳೆಂದು ತಿಳಿಯುತ್ತದೆ. ಹಿಂದೆ ಪ್ರಕೃತವಾದ ಜ್ಯೋತಿಷ್ಟೋಮಯಾಗವನ್ನೇ 'ಜ್ಯೋತಿ' ಇತ್ಯಾದಿ ಶಬ್ದಗಳು ಹೇಳುತ್ತಿವೆಯೋ? ಅಥವಾ ಕರ್ಮಾಂತರವನ್ನು ಹೇಳುತ್ತಿವೆಯೋ? ಎಂದು ಸಂದೇಹ.

**ಪೂರ್ವಪಕ್ಷ** :- ಹಿಂದಿನ ಜ್ಯೋತಿಷ್ಟೋಮಯಾಗವನ್ನೇ ಹೇಳುತ್ತಿವೆ. ಏಕೆಂದರೆ 'ಅಥೈಷ ಜ್ಯೋತಿಃ' ಎಂಬಲ್ಲಿರುವ 'ಏತತ್' ಶಬ್ದವು ಪೂರ್ವಪ್ರಕೃತವಾದದ್ದನ್ನಷ್ಟೇ ಹೇಳುತ್ತದೆ. ಮತ್ತು ಜ್ಯೋತಿಷ್ಟೋಮಪ್ರಕರಣವೂ ಆಗಿರುವುದರಿಂದ ಜ್ಯೋತಿಷ್ಟೋಮಯಾಗವನ್ನೇ 'ಯಜೇತ' ಎಂದು ವಿಧಿಸಲಾಗಿದೆ.

**ಸಿದ್ಧಾಂತ** :- ಏತಚ್ಛಬ್ದವು ಎಲ್ಲೆಡೆ ಪೂರ್ವಪ್ರಕೃತವಾದದ್ದನ್ನೇ ಹೇಳುತ್ತದೆಂಬ ನಿಯಮವೇನಿಲ್ಲ. ಮುಂದೆ ಹೇಳುವುದನ್ನೂ ಪರಾಮರ್ಶ ಮಾಡುತ್ತದೆ. 'ಜ್ಯೋತಿಃ' 'ವಿಶ್ವಜ್ಯೋತಿಃ' ಮೊದಲಾದ ಪದಗಳು ಸಹಸ್ರದಕ್ಷಿಣಾವೆಂಬ ಯಾಗಾಂತರವನ್ನು ಹೇಳುತ್ತಿವೆ. ಅದನ್ನು ಏತಚ್ಛಬ್ದವು ಪರಾಮರ್ಶಿಸುತ್ತಿದೆ. ಆದ್ದರಿಂದ ಈ ವಾಕ್ಯವು ಜ್ಯೋತಿಷ್ಟೋಮವಿಧಾಯಕವಾಗಿಲ್ಲ, ಯಾಗಾಂತರವಿಧಾಯಕಗಳಾಗಿವೆ.

---

ज्योतिष्टोमं ज्योतिरादिशब्दैरनूद्य सहस्रदक्षिणाख्यो गुणो विधीयते, अथ कर्मान्तराण्येवं-नामकान्येवंदक्षिणकानि विधीयन्ते' इति सन्देहः ।

**पूर्वपक्षस्तु** – 'युक्तं पूर्वत्रानेकसङ्ख्यायास्तदाधारभेदनियमाद् भेदकल्पकत्वम् । न तु सञ्ज्ञायाः । हेत्वभावात् । अतः 'एषः' इत्येतच्छब्देन प्रकृतं ज्योतिष्टोमं ज्योतिरादि-शब्दैरनूद्य तस्मिन् सहस्रदक्षिणाख्यो गुणो विधीयते । अन्यथा प्रकृतहान्यप्रकृतकल्पना-दोषापातात्' इति ।

**सिद्धान्तस्तु** – 'प्रकृतस्य ज्योतिष्टोमस्य अथपदेन विच्छेदात्, प्रकृते कर्मणि गुणविधिपरत्वे 'एतेन' इत्यादिवाक्येनैव पूर्तौ 'अथैष' इत्यादेर्वैय्यर्थापत्तेः, सञ्ज्ञाभेदेन प्रतीतार्थभेदस्य बाधकं विना त्यागायोगात् 'एषः' इत्येच्छब्दस्य वक्ष्यमाणेऽपि सम्भवाच्च कर्मान्तराण्येवं-नामकानि' इति ।

तथा च सूत्रम् – यथा सङ्ख्या कर्मभेदिका तथा सञ्ज्ञा च ज्योतिरादिनामधेयमपि भेदकम् । एकस्मिन्ननेकसञ्ज्ञाया अन्याय्यत्वयुक्तेः । 'दर्शपूर्णमासाभ्यां स्वर्गकामो यजेत' इति फलवाक्ये सञ्ज्ञाभेदेप्याग्नेयादितो भेदो न दृष्ट इत्यत उक्तम् – उत्पत्तिसंयोगादिति ॥ उत्पत्तिवाक्य एव सञ्ज्ञाश्रवणादिति । फलन्तु द्वादशशतसहस्रदक्षिणयोर्विकल्पः पूर्वपक्षे । सिद्धान्ते तु ज्योतिरादिकर्मसु द्वादशशतस्याऽतिदेशिकस्यौपदेशिकसहस्रदक्षिणया बाध इति ।

॥ इत्यष्टमं सञ्ज्ञाकृतकर्मभेदाधिकरणम् ॥

ಪರಿಪೂರ್ಣಚಂದ್ರಿಕಾ

ಇಲ್ಲಿ ಹೇಗೆ ಮುಂದಿರುವ ಸಹಸ್ರದಕ್ಷಿಣಾವೆಂಬ ಯಾಗವನ್ನು ಏತಚ್ಛಬ್ದವು ಪರಾಮರ್ಶಿಸುತ್ತದೋ ಅದರಂತೆ ಮುಂದಿನ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳುವ 'ಬ್ರಹ್ಮಣಃ ವಿಚಾರಸಾಧ್ಯ-ಜ್ಞಾನಜನ್ಯಪ್ರಸಾದದ್ವಾರಾ ಮೋಕ್ಷಹೇತುತ್ವಮ್' ಎಂಬುದನ್ನು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿರುವ 'ಅತಃ ಎಂಬ ಅದಸ್‌ಶಬ್ದದಿಂದ ಪರಾಮರ್ಶ ಮಾಡಬಹುದು. ಹಿಂದೆಯೇ ಪ್ರಸಕ್ತವಾಗಿರಬೇಕೆಂಬ ನಿಯಮವಿಲ್ಲ.

## ಅಥ ಶಬ್ದದಿಂದಲೇ ಪ್ರಕೃತವಾಗಿದೆ
## (ಆರನೆಯ ಸಮಾಧಾನ)

ಮುಂದಿನ ಸೂತ್ರದಿಂದ ಅಧ್ಯಾಹಾರವು ದೂರವಾಯಿತು. ಇದಕ್ಕಿಂತ ಹತ್ತಿರವಾದ (ಅಂತರಂಗವಾದ) ಈ ಸೂತ್ರದಲ್ಲಿರುವ 'ಅಥ' ಶಬ್ದದಿಂದ ಪ್ರಕೃತವಾದದ್ದನ್ನೇ ಪರಾಮರ್ಶ ಮಾಡಬಹುದು.

ಅದು ಹೀಗೆ - "ಬ್ರಹ್ಮವಿಚಾರಕ್ಕೆ ಆವಶ್ಯಕವಾದ ಅರ್ಹತೆಗಳಲ್ಲಿ ಮೋಕ್ಷಾಭಿಲಾಷೆಯೂ ಒಂದು. ಮೋಕ್ಷಾಭಿಲಾಷೆಯಿಂದ ವಿಚಾರದಲ್ಲಿ ಪ್ರವೃತ್ತಿ ಮಾಡಬೇಕು ಎಂದರೆ ವಿಚಾರಕ್ಕೆ ಮೋಕ್ಷವೇ ಫಲ ಎಂದಂತಾಯಿತು. ಆದರೆ ವಿಚಾರದಿಂದ ಸಾಕ್ಷಾತ್ತಾಗಿ ಮೋಕ್ಷವು ಲಭಿಸುವುದಿಲ್ಲ. "ಯಮೇವೈಷ ವೃಣುತೇ ತೇನ ಲಭ್ಯಃ" ಇವೇ ಮೊದಲಾದ ಪ್ರಮಾಣವಚನದಂತೆ ಜ್ಞಾನ ಹಾಗು ಭಗವಂತನ ಅನುಗ್ರಹದ ಮೂಲಕವೇ ವಿಚಾರವು ಮೋಕ್ಷಸಾಧನವಾಗುತ್ತದೆ. ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣವಚನಗಳು ಈ ಅರ್ಥವನ್ನೇ ಹೇಳುತ್ತವೆ. ಈ ಪ್ರಮಾಣವಚನಗಳ ಸಹಕಾರದಿಂದ, ಮೇಲೆ ಹೇಳಿದ ಅರ್ಥವು ಶಬ್ದದಿಂದ ದೊರೆಯುತ್ತದೆ.

ಇದಕ್ಕೆ ಉದಾ :- ಸ್ವರ್ಗಕ್ಕೆ ಯಾಗವು ಕಾರಣವೆಂದಷ್ಟೇ ಶ್ರುತಿಯು ಹೇಳುತ್ತಿದೆ. ಇದು ಹೇಗೆ ಸಾಧ್ಯ? ಯಾಗ ಮಾಡಿದರೂ ಸ್ವರ್ಗ ಸಿಗುತ್ತಿಲ್ಲ. ಈ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಯಾಗವು ಅಪೂರ್ವವನ್ನು ಹುಟ್ಟಿಸುತ್ತದೆ. ಆ ಅಪೂರ್ವದಿಂದ ಸ್ವರ್ಗವು ಲಭಿಸುತ್ತದೆ. ಈ ಅರ್ಥವನ್ನು ಶ್ರುತಿಯು ಹೇಳುತ್ತದೆಂದೇ ಹೇಳಬೇಕು.

ಮತ್ತೊಂದು ಉದಾ :- "ವ್ರೀಹಿಭಿರ್ಯಜೇತ" "ಭತ್ತದಿಂದ ಯಾಗ ಮಾಡಬೇಕು" ಈ ಶ್ರುತಿಯು ಭತ್ತಕ್ಕೆ ಯಾಗಸಾಧನತ್ವವನ್ನು ಹೇಳುತ್ತಿದೆ. ಆದರೆ ಕೇವಲವಾದ ಭತ್ತವು ಸಾಧನವಾಗದು. ಹೊರತಾಗಿ ಪ್ರೋಕ್ಷಣ, ಅವಹನನ, ಈ ಸಂಸ್ಕಾರಗಳಿಂದ ಕೂಡಿದ ಭತ್ತವೇ ಯಾಗಸಾಧನವಾಗುತ್ತದೆ. ವ್ರೀಹಿಭಿ-ರ್ಯಜೇತ, ಈ ಶ್ರುತಿಯ ಅಭಿಪ್ರಾಯವೂ ಇದೇ ಆಗಿರುತ್ತದೆಂದು ಹೇಳಬೇಕು.

ಈ ದೃಷ್ಟಾಂತದಂತೆ ಪ್ರಕೃತ ಸೂತ್ರದಲ್ಲಿರುವ ಅಥಶಬ್ದದ ಅರ್ಥದಲ್ಲಿಯೂ ತಿಳಿಯಬೇಕು. ಅರ್ಹತೆಯನ್ನು ಹೊಂದಿದ ಅನಂತರ ಎಂದಷ್ಟೇ ಅಥ ಶಬ್ದದ ಅರ್ಥವಲ್ಲ. ಅದಕ್ಕೆ ಅನಿವಾರ್ಯವಾದ ಭಗವದನುಗ್ರಹಜ್ಞಾನ ಇವುಗಳೆಲ್ಲವೂ ಅಥ ಶಬ್ದದ ಅರ್ಥಗಳೇ ಆಗಿವೆ. ಹೀಗೆ ಅಥಶಬ್ದದಿಂದ ಪ್ರಕೃತವಾದದ್ದನ್ನು ಮುಂದಿರುವ ಅತಃ ಎಂಬ ಶಬ್ದದಿಂದ ಪರಾಮರ್ಶ ಮಾಡಬಹುದು. ಇದು ಬಹಳ

ಸುಲಭವಾದದ್ದು. ಈ ಅಭಿಪ್ರಾಯದಲ್ಲೇ ಸುಧೆಯ ಮಾತಿದೆ - "ಅಧಿಕಾರಿವಿಶೇಷಣತ್ವೇನ ಪ್ರಕೃತೋ ಮೋಕ್ಷಃ ಸಂಬಧ್ಯತೇ" "ಜಿಜ್ಞಾಸುವಿನ ಅರ್ಹತೆಯನ್ನು ಹೇಳುವಾಗ ಪ್ರಕೃತವಾದ ಮೋಕ್ಷವು ಪ್ರಯೋಜನವೆಂದು ಅನ್ವಯ ಹೊಂದುತ್ತದೆ" ಎಂದು. ತತ್ವಪ್ರದೀಪದಲ್ಲಿಯೂ ಹೀಗೆಯೇ ಇದೆ - "ಃ ಶೇಷದುಃಖನಿವೃತ್ತಿಃ ಪರಮಸುಖಾವಾಪ್ತಿಶ್ಚೇಚ್ಛಾವಿಷಯತ್ವೇನ ಸದಾ ಹೃದಿ ಕೃತಾ ಅತ ಇತ್ಯುಚ್ಯತೇ" ಎಲ್ಲ ದುಃಖಗಳ ಪರಿಹಾರ ಪರಮಸುಖದ ಹೊಂದುವಿಕೆಯು ಸದಾ ಬುದ್ಧಿಯಲ್ಲಿರುವುದರಿಂದ ಅತಃ ಶಬ್ದವು ಅದನ್ನು ಹೇಳಬಹುದು ಎಂದು. ಇಲ್ಲಿಗೆ ಆರನೆಯ ಸಮಾಧಾನವು ಮುಗಿಯಿತು.

### ಅಥ ಬ್ರಹ್ಮಪದಗಳು ವ್ಯರ್ಥವೇ?

**तात्पर्यचन्द्रिका –**

**नचात्र द्वितीयपक्षे अधिकार्यादिरप्यतश्शब्देनैव परामर्शसम्भवादथशब्दादिवैयर्थ्यम् । शमादेरधिकारिविशेषणस्य सिद्धस्य प्रवृत्त्यङ्गत्वं, प्रयोजनादेस्त्वसिद्धस्यापि बुद्धिस्थस्य, तत्रापि विषयस्य नासिद्धत्वनियमः, प्रयोजनस्य तु तन्नियम इत्यादिविशेषज्ञापनार्थं पृथक्सूचनात् । यद्वा – उपनिषद्भाष्यादिरूपसिद्धार्थकथनात्मकोपदेशाधीनवाक्यार्थग्रहणात्मकस्य श्रवणस्य मननरूपजिज्ञासाधिकारिविशेषणत्वात् श्रवणविषयस्य मोक्षप्रसादादिसाध्यसाधनभावस्याथशब्दोपस्थापितत्वाद्धेतुत्वयोग्यत्वाच्च 'अतः' इति परामर्श इति ।।**

**अनुव्याख्याने तु –**

**"अतो यथार्थबन्धस्य विना विष्णुप्रसादतः ।**
**अनिवृत्तेस्तदर्थं हि जिज्ञासाऽत्र विधीयते ।**
**प्रत्यक्षवच्च प्रामाण्यं स्वत एवागमस्य हि ।**
**व्युत्पत्तिः प्रथमा तस्माद् वर्तमानेऽगते ततः" ।**

**इत्यादिना बन्धस्य मिथ्यात्वात् तन्निवृत्तेः प्रसादनैरपेक्ष्यान्न भगवत्प्रसादार्था जिज्ञासा मुमुक्षुणा कर्तव्येत्यादिशङ्कानिरासाय प्रयोजनसाधकं जगत्सत्यत्वादिकमप्यतः शब्देनोक्तम् । विषयसिद्धिहेतुयुक्तिष्वपि 'स्वप्रकाशप्रत्यगर्थाभिन्नत्वान्न विषयत्वम्' इति प्रमेये आरोपिताकारशङ्कानिरासकृत् या ब्रह्मपदसूचिता युक्तिः, तदतिरिक्ता 'शब्दस्य न प्रामाण्यं, प्रामाण्येऽपि सिद्धार्थे न प्रामाण्यम्' इत्यादिका प्रमाणे आरोपिताकारशङ्कानिरासकृद्युक्तिरप्यतःशब्देनैव सूचिता ।**

*ಪರಿಪೂರ್ಣಚಂದ್ರಿಕಾ*

ಅನುವಾದ - ಇಲ್ಲಿಯ ತನಕ ಆರು ಸಮಾಧಾನಗಳನ್ನು ಹೇಳಿದ್ದಾಯಿತು. ಇವುಗಳ ಮಧ್ಯದಲ್ಲಿ ಎರಡನೆಯ ಸಮಾಧಾನದ ಮೇಲೆ ಒಂದು ಆಕ್ಷೇಪವಿದೆ - ಪ್ರಮಾಣಸಿದ್ಧವಾದದ್ದನ್ನೆಲ್ಲ ಅತಃ ಶಬ್ದವು ಹೇಳುವುದಾದರೆ ಅಧಿಕಾರ ಪ್ರಯೋಜನ ವಿಷಯ ಇವುಗಳನ್ನು ಅತಃ ಶಬ್ದದಿಂದಲೇ ಪರಾಮರ್ಶಿಸಬಹುದು. ಪುನಃ ಅಥ ಮತ್ತು ಬ್ರಹ್ಮ ಶಬ್ದಗಳನ್ನು ಸೂತ್ರದಲ್ಲಿ ಉಲ್ಲೇಖಿಸಬೇಕಿಲ್ಲ.

ಆದರೂ ಸಹ ಏನೊ ಒಂದು ವಿಶೇಷವನ್ನು ಸೂಚಿಸಲು ಪ್ರತ್ಯೇಕವಾಗಿ ಅಥ ಬ್ರಹ್ಮಶಬ್ದಗಳನ್ನು ಹೇಳಲಾಗಿದೆ. - ಅಧಿಕಾರಿ ವಿಶೇಷಣವಾದ ಶಮಾದಿಗಳು ಸಿದ್ಧವಾಗಿ ವಿಚಾರಪ್ರವೃತ್ತಿಗೆ ಅಂಗಳಾಗಿವೆ. ಪ್ರಯೋಜನ ವಿಷಯಗಳು ಅಸಿದ್ಧಗಳಾದರೂ ಸಹ ಜ್ಞಾತವಾಗಿದ್ದುಕೊಂಡು ವಿಚಾರಪ್ರವೃತ್ತಿಗೆ ಅಂಗಗಳಾಗುತ್ತವೆ. ಅದರಲ್ಲೂ ವಿಷಯವು ಅಸಿದ್ಧವೇ ಆಗಿರಬೇಕೆಂಬ ನಿಯಮವಿಲ್ಲ. ಆದರೆ ಪ್ರಯೋಜನವು ಅಸಿದ್ಧವೇ ಆಗಿರಬೇಕೆಂಬ ನಿಯಮವಿದೆ. ಇವೇ ಮೊದಲಾದ ವಿಶೇಷವನ್ನು ತಿಳಿಸುವುದಕ್ಕಾಗಿ ಪ್ರತ್ಯೇಕವಾಗಿ ಹೇಳಲಾಗಿದೆ. ಈ ರೀತಿಯಾದ ಶಂಕೆ ಸಮಾಧಾನಗಳನ್ನು ಆರು ಮತ್ತು ಏಳನೆಯ ಪಕ್ಷದಲ್ಲಿಯೂ ತಿಳಿಯಬೇಕು.

ಏಳನೆಯ ಸಮಾಧಾನ ಹೀಗಿದೆ -

ಜ್ಞಾನ ಭಗವದನುಗ್ರಹಗಳು ಅರ್ಥಾತ್ ಅಥಶಬ್ದದಿಂದ ತಿಳಿಯುತ್ತದೆಂದು ಆರನೆಯ ಪಕ್ಷದಲ್ಲಿ ಹೇಳಿದ ಸಮಾಧಾನ. ಆದರೆ ಈಗ ಜ್ಞಾನ ಭಗವದನುಗ್ರಹಗಳೂ ಸಹ ಸಾಕ್ಷಾತ್ತಾಗಿ ಅಥಶಬ್ದದಿಂದಲೇ ಪ್ರಕೃತವಾಗುತ್ತದೆಂದು ಹೇಳುತ್ತಿದ್ದಾರೆ. ಏಕೆಂದರೆ ವಿಚಾರಕ್ಕೆ ಆವಶ್ಯಕವಾದ ಎಲ್ಲ ಅರ್ಹತೆಗಳನ್ನು 'ಅಥ' ಶಬ್ದವು ಹೇಳುತ್ತಿದೆ. ಆದ್ದರಿಂದ ಶ್ರವಣವೂ ಸಹ ವಿಚಾರಕ್ಕೆ ಬೇಕಾದ ಒಂದು ಅರ್ಹತೆಯಾಗಿದೆ. ಶ್ರವಣವು ವಾಕ್ಯಾರ್ಥಗ್ರಹಣಾತ್ಮಕವಾದದ್ದು. ಅಂದರೆ ತತ್ತ್ವವು 'ಹೀಗಿಯೇ ಇದೆ' ಎಂದು ಯುಕ್ತಿಬದ್ಧವಾಗಿ ಸಾಧಿಸದೆ. 'ಹೀಗೆ ಇದೆ' ಎಂದಷ್ಟೇ ಪಡೆಯುವ ತತ್ತ್ವಜ್ಞಾನವು ಶ್ರವಣವೆನಿಸುತ್ತದೆ. ವಾಕ್ಯಾರ್ಥಗ್ರಹಣಾತ್ಮಕ ಎಂಬಲ್ಲಿ ವಾಕ್ಯಪದದಿಂದ ಯಾವುದನ್ನು ವಿವಕ್ಷಿಸಬೇಕೆಂದರೆ ಉಪನಿಷದ್‌ಭಾಷ್ಯ, ಮಹಾಭಾರತ, ವೇದಗಳು, ಇವುಗಳಲ್ಲಿರುವ ವಾಕ್ಯಗಳಿಂದ ಅರ್ಥಜ್ಞಾನ ಬರುತ್ತದೆ. ಈ ಜ್ಞಾನವು ಗುರುಗಳ ಉಪದೇಶದಿಂದ ಬರುತ್ತದೆ. ಉಪದೇಶವು ಸಿದ್ಧಾರ್ಥ, ಕಥನಾತ್ಮಕ, ಇಂತಹ ಉಪದೇಶದಿಂದ ಬರುವ ಅರ್ಥಜ್ಞಾನವೇ ಶ್ರವಣ ಮನನರೂಪವಾದ ಜಿಜ್ಞಾಸೆಗೆ ಯಾರು ಅಧಿಕಾರಿಯೋ ಅವನಿಗೆ ಈ ಶ್ರವಣವೂ ಬಂತು ಶ್ರವಣದಲ್ಲಿ ವಿಷಯವಾದದ್ದು ಸಾಧ್ಯಸಾಧನಭಾವ. ಇಷ್ಟು ಅಥಶಬ್ದದಿಂದ ಪ್ರಾಪ್ತವಾಗುತ್ತದೆ. ಹೀಗೆ ಪ್ರಾಪ್ತವಾದ್ದನ್ನು ಕಾರಣತ್ವೇನ ಅತಃ ಶಬ್ದದಿಂದ ಪರಾಮರ್ಶಿಸಬಹುದು.

ಅನುವ್ಯಾಖ್ಯಾನದಲ್ಲಿ ಮಾಡಿದ ಅತಃಶಬ್ದಾರ್ಥವಿವರಣೆ ಹೀಗಿದೆ - ''ಸತ್ಯವಾದ ಸಂಸಾರವು ವಿಷ್ಣು-ವಿನ ಅನುಗ್ರಹವಿಲ್ಲದೆ ನಾಶವಾಗದು. ಆದ್ದರಿಂದ ವಿಷ್ಣುವಿನ ಅನುಗ್ರಹಕ್ಕಾಗಿ ವಿಚಾರ ಮಾಡಬೇಕೆಂದು ಇಲ್ಲಿ ವಿಧಿಸಲಾಗಿದೆ'' ಹೀಗೆ ಒಂದುಕಡೆ ಹೇಳಿದ್ದಾರೆ. ಮತ್ತೊಂದು ಕಡೆ - ''ಪ್ರತ್ಯಕ್ಷದಂತೆ ಆಗಮವು ಸಂಶಯವಲ್ಲದ ಭ್ರಮೆಯೂ ಅಲ್ಲದ ಜ್ಞಾನವನ್ನು ಹುಟ್ಟಿಸುತ್ತದೆ. ಆದ್ದರಿಂದ ಪ್ರತ್ಯಕ್ಷದಂತೆ ಪ್ರಮಾಣ-ವಾಗುತ್ತದೆ'' ಎಂದು ಹೇಳಿದೆ.

ಮತ್ತೊಂದೆಡೆ ಹೀಗಿದೆ - "ವರ್ತಮಾನ ಸಿದ್ಧ ಪದಾರ್ಥಗಳಲ್ಲಿ ಶಬ್ದಶಕ್ತಿಜ್ಞಾನ ಮೊದಲು ಬರುತ್ತದೆ. ಅನಂತರ ಭವಿಷ್ಯತ್ ಪದಾರ್ಥಗಳಲ್ಲಿ ಬರುತ್ತದೆ" ಎಂದು. ಇದೆಲ್ಲವನ್ನೂ ಸೇರಿಸಿ ಹೀಗೆ ಅರ್ಥ ಹೇಳಬೇಕು - ಸಂಸಾರಬಂಧನವು ಮಿಥ್ಯಾಭೂತವಾಗಿದೆ. ಇಂತಹ ಮಿಥ್ಯಾಭೂತವಾದ ಸಂಸಾರವು ತನ್ನಷ್ಟಕ್ಕೆ ತಾನೇ ನಿವೃತ್ತಿಯಾಗುತ್ತದೆ. ಇದಕ್ಕೆ ಪ್ರಸಾದದ ಅಪೇಕ್ಷೆ ಇಲ್ಲ. ಆದ್ದರಿಂದ ಭಗವತ್ ಪ್ರಸಾದಕ್ಕೋಸ್ಕರ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ ಎಂಬ ಶಂಕೆಯನ್ನು ಪರಿಹಾರ ಮಾಡಲು ಜಗತ್ ಸತ್ಯತ್ವಾದಿಗಳನ್ನು ಅತಃ ಶಬ್ದದಿಂದ ಹೇಳಲಾಗಿದೆ. ಇಂತಹ ಜಗತ್‌ಸತ್ಯತ್ವವು ಪ್ರಯೋಜನಸಾಧಕವಾಗಿದೆ.

ಇನ್ನು ವಿಷಯಸಾಧಕವಾದ ಯುಕ್ತಿಗಳು ಎರಡು ೧) ಪ್ರಮೇಯಸಾಧಕವಾದದ್ದು ೨) ಪ್ರಮಾಣಸಾಧಕವಾದದ್ದು ಎಂದು ಮೊದಲನೆಯದ್ದು ಮೇಲೆ ಹೇಳಿದಂತೆ ಅತಃ ಶಬ್ದವೇ ಶಾಸ್ತ್ರಕ್ಕೆ ವಿಷಯವಿದೆಯೆಂದು ಸಮರ್ಥಿಸಲು ಬೇಕಾಗುವ ಯುಕ್ತಿಗಳನ್ನು ಹೇಳುತ್ತದೆ. ಬ್ರಹ್ಮಪದವು ವ್ಯರ್ಥವಾಗುವುದಿಲ್ಲ. ವಿಷಯಪ್ರತಿಪಾದನೆ ಮಾಡಲು ಅನೇಕ ಯುಕ್ತಿಗಳಿವೆ ನಾರಾಯಣನ ಗುಣಪೂರ್ಣತ್ವ, ವೇದಪ್ರಾಮಾಣ್ಯ, ಶಬ್ದಗಳಿಗೆ ಸಿದ್ಧಪರತ್ವ, ಇವೇ ಮೊದಲಾದವು. ಇವುಗಳಲ್ಲಿ "ಸ್ವಪ್ರಕಾಶನಾದ ಜೀವನಿಗಿಂತ ಭಿನ್ನನಾದ ಬ್ರಹ್ಮನಿಲ್ಲ. ಆದ್ದರಿಂದ ಬ್ರಹ್ಮನು ವಿಷಯನಾಗಲಾರ" ಎಂಬ ಪ್ರಮೇಯದ ಬಗ್ಗೆ ಆರೋಪಿತದಿಂದ ಪೂರ್ವಪಕ್ಷ ಬರುತ್ತದೆ. ಇದನ್ನು ನಿರಾಸಮಾಡಲು ಗುಣಪೂರ್ಣತ್ವ ಮೊದಲಾದ ಯುಕ್ತಿಗಳನ್ನು ಬ್ರಹ್ಮಶಬ್ದವೇ ಹೇಳುತ್ತದೆ.

ಇದಕ್ಕಿಂತ ಬೇರೆಯದ್ದೇ ಆದ ಪ್ರಮಾಣದ ಮೇಲೆ ಬರುವ ಶಂಕೆಯನ್ನು 'ಅತಃ' ಶಬ್ದವು ಪರಿಹರಿಸುತ್ತದೆ - ಆಗಮಕ್ಕೆ ಪ್ರಾಮಾಣ್ಯವೇ ಇಲ್ಲ. ಪ್ರಮಾಣವೆಂದೊಪ್ಪಿದರೂ ಸಿದ್ಧಾರ್ಥದಲ್ಲಿ ಪ್ರಾಮಾಣ್ಯವನ್ನು ಹೇಳಲಾಗದು. ಆದ್ದರಿಂದ ಬ್ರಹ್ಮನ ವಿಷಯದಲ್ಲಿ ವೇದಾಂತವಿಚಾರ ಮಾಡುವುದು ಅನಾವಶ್ಯಕ. ಹೀಗೆ ಪ್ರಮಾಣದ ವಿಷಯದಲ್ಲಿ ಆರೋಪಿತವಾದ ಪೂರ್ವಪಕ್ಷ ಬರುತ್ತದೆ. ಇದನ್ನು ಪರಿಹರಿಸಲು ವೇದಪ್ರಾಮಾಣ್ಯಸಿದ್ಧಪರತ್ವ ಮೊದಲಾದ ಯುಕ್ತಿಗಳನ್ನು ಅತಃಶಬ್ದವು ಹೇಳುತ್ತದೆ. ಹೀಗೆ ಅಥ ಶಬ್ದವು ಹೇಳದ ಯುಕ್ತಿಗಳನ್ನು ಅತಃಶಬ್ದವು ಹೇಳುವುದರಿಂದ ಸಾರ್ಥಕವಾಗಿದೆ. 'ಪ್ರತ್ಯಕ್ಷವಚ್ಚ' ಇತ್ಯಾದಿ ಅನುವ್ಯಾಖ್ಯಾನಶ್ಲೋಕಾರ್ಥವು ವೇದಪ್ರಾಮಾಣ್ಯವನ್ನು ಹೇಳುತ್ತಿದೆ. 'ವ್ಯುತ್ಪತ್ತಿಃ ಪ್ರಥಮೇ' ಇತ್ಯಾದಿ ಶ್ಲೋಕಾರ್ಥವು ಸಿದ್ಧಪರತ್ವವನ್ನೂ ಸಮರ್ಥಿಸುತ್ತಿದೆ. ಇವುಗಳ ಆಧಾರದಿಂದ ಮೇಲೆ ಹೇಳಿದ ಅಭಿಪ್ರಾಯವು ದೃಢವಾಗುತ್ತದೆ.

### ಕಠಿಣಪದಾರ್ಥ

ಅತ್ರ = ಆರುಪಕ್ಷಗಳ ಮಧ್ಯದಲ್ಲಿ, ಅಥವಾ ಸೂತ್ರದಲ್ಲಿ 'ಬುದ್ಧಿಸ್ಥಸ್ಯ' ಎಂಬ ಪದಕ್ಕೆ ಹಿಂದೆ ಇರುವ 'ಪ್ರವೃತ್ತ್ಯಂಗತ್ವಂ' ಎಂಬಲ್ಲಿ ಅನ್ವಯ. ಅತಃ = ಅಸತ್ಯವೆಂದು ಹೇಳಿದರೆ ಬಾಧಕವಿರುವುದರಿಂದ ಅಥವಾ ಸತ್ಯವಾಗಿರುವುದರಿಂದ (ಅನುವ್ಯಾಖ್ಯಾನದ ಶ್ಲೋಕ) ತದರ್ಥಮ್ = ವಿಷ್ಣುವಿನ ಪ್ರಸಾದಕ್ಕೋಸ್ಕರ. ಅತ್ರ = ಮೊದಲನೆಯ ಸೂತ್ರದಲ್ಲಿ. ಸೂಚಿತಾ = ಸಂಕ್ಷೇಪವಾಗಿ ಹೇಳಲ್ಪಟ್ಟಿದೆ.

*ಪರಿಪೂರ್ಣಚಂದ್ರಿಕಾ*

प्रकाशः – नचात्रेति ।। षट्सु पक्षेषु मध्ये । यद्वा – सूत्र इत्यर्थः ।। अधिकार्यादेरिति ।। अधिकारिविषयप्रयोजनानां त्रयाणामपि ''मन्दमध्योत्तमत्वेन' इत्यादिभाष्योक्तप्रमाणेन सिद्धत्वात् 'अतो जिज्ञासा' इत्येव सूत्रणीयं स्यादिति भावः । 'बुद्धिस्थस्य प्रवृत्त्यङ्गत्वम्' इत्यन्वयः। 'तत्रापि' विषयप्रयोजनयोरपि ।। नासिद्धत्वनियम इति ।। धर्मस्यासिद्धस्य ब्रह्मणः सिद्धस्य विषयत्वदृष्टेरिति भावः । यद्यप्येषा शङ्का तदनन्तरमेव कर्तव्या, तथाऽपि यथाऽधिकारिविशेषणेच्छाविषयत्वेन मोक्षस्य प्रयोजनत्वं लब्धं, तथा ब्रह्मज्ञानफलं नित्यमन्यफलमनित्यमित्येवंभूतनित्यानित्यवस्तुविवेकरूपाधिकारिविशेषणविषयत्वेन ब्रह्माख्यविषयस्याप्युपस्थापितत्वात् 'अतः' इति परामर्शो पृथग् ब्रह्मपदं नोपाददीतेति शङ्कया अपि निरासात् । तथा सप्तमेऽपि श्रवणविषयतया ब्रह्मणोऽथशब्देनोपस्थापनेनैवंविधशङ्कयास्तत्राप्युदयेन तन्निरासार्थत्वाच्चात्र कृता । अत एवान्त्योपान्त्ययोर्मध्ये एवैतच्छङ्कासमाधानमित्याहुः । 'इत्यादिविशेषः' इत्यादिपदेन स्वरूपाधिक्यमङ्गलार्थकत्वविषयवाक्यविशेषसूचनादिविशेषपरिग्रहः ।

यद्वा – ''तदेवं स्वर्गादिसाधने'' इत्यादिना अथादिपदानां भिन्नभिन्नशङ्कानिरासकत्वरूपो वक्ष्यमाणो विशेषो ग्राह्यः । 'अतः' इत्यनेनैव हेतुवाचिना त्रयाणां ग्रहणे सिद्धानामेव हेतुत्वमिति सर्वेषां सिद्धत्वमसिद्धत्वमेव वा ज्ञायेतेति भावः ।

प्रसादादेः सर्वस्यापि साक्षादथशब्देन लाभप्रकारमाह ।। यद्वेति ।। जिज्ञासैव श्रवणमिति मते, तस्याधिकारिविशेषणत्वायोगात् तत्स्वरूपमुक्तम् उपनिषद्भाष्यादीत्यादिना । 'सिद्धार्थ' इति मननाद् भेदोक्तिः न्यायनिर्णीतार्थेत्यर्थः । श्रवणविषयाणामनेकेषामथशब्देनोपस्थापितत्वात् 'अतः' इति परामर्शः स्यादित्यत उक्तम् ।। हेतुत्वयोग्यत्वाच्चेति ।। नेतरत् तद्योग्यमित्याशयः ।

एवं भाष्योक्तं ज्ञानजन्यप्रसादद्वारा मोक्षप्रयोजनकत्वरूपमतःशब्दार्थं सप्तधा समर्थ्य, अधुना ''सूत्रे भाष्येऽनुभाष्ये च'' इति प्रतिज्ञातार्थसिद्धयेऽनुव्याख्यानोक्तं

फलसाधकहेतुविषयसाधकहेतुद्वय परामर्शपरत्वमप्यनुव्याख्यान एव विक्षिप्य समर्थितं सङ्गृह्य स्पष्टीकरोति ।। अनुव्याख्याने त्वित्यादिना मतान्तरमुक्तमित्यन्तेन ।। 'अतः' असत्यत्वे बाधकात्, सत्यत्वे साधकसत्त्वाद्वेत्यर्थः । 'तदर्थं' विष्णुप्रसादार्थम् । 'अत्र' आद्यसूत्रे । प्रत्यक्षादिवदागमस्य प्रामाण्यं, 'स्वत एव' संशयविपर्ययाजनकत्वे सति ज्ञानजनकत्वादेवेत्यर्थः । 'तस्मात्' वर्तमानार्थव्युत्पत्तेः कारणत्वात्, अनागतार्थव्युत्पत्तेः कार्यत्वात् । 'वर्तमाने' सिद्धे व्युत्पत्तिः प्रथमा । 'ततः' पश्चात् । 'अगते' अनागते व्युत्पत्तिरित्यर्थः । त्रीण्यपि वचनानि भिन्नभिन्नस्थानानि, अतो नान्योन्यमसङ्गतिर्दोषाय । यद्यपि "व्युत्पत्तिः" इति वाक्यं पूर्वं, "प्रत्यक्षवच्च" इति पश्चात्तनम् । तथाऽपि वक्ष्यमाणदिशोपपादनसौकर्याय व्यत्यासेनोपन्यास इति न दोषः । 'इत्यादिना' इत्यस्य, 'अतःशब्देनोक्तम्' 'अतःशब्देनैव सूचिता' 'इत्युक्त्वा' इत्यन्वयः । आद्यश्लोकस्याभिप्रायवर्णनं 'बन्धस्य' इत्यादि । उत्तरार्धयोर्विवरणं – 'विषयसिद्धि' इत्यादि । शब्दस्य न प्रामाण्यमिति शङ्कानिरासः "प्रत्यक्षवच्च" इत्यनेनोपपादितः । "व्युत्पत्तिः" इत्यनेन सिद्धार्थे प्रामाण्यं नेति शङ्कानिरास इति विवेकः ।।

**प्रसादनैरपेक्ष्यादिति** ।। शुक्तिरूप्यादिनिवृत्तौ तथोपलम्भादिति भावः । न केवलं प्रयोजनमित्यपेरर्थः । सत्यस्यापि निवर्त्यत्वमादिपदार्थः । 'विषयसिद्धिहेतुयुक्तिषु' गुणपूर्तिवेदप्रामाण्यसिद्धार्थबोधकत्वादिरूपासु मध्ये, 'या ब्रह्मपदसूचिता तदतिरिक्ता युक्तिरतःशब्देनैव सूचिता' इत्यन्वयः । सङ्क्षिप्योक्तेत्यर्थः । 'तदतिरिक्ता' इत्युक्त्या न ब्रह्मपदवैयर्थ्यमिति भावः । एतेन – सिद्धार्थे व्युत्पत्त्या प्रामाण्योपपादकानुव्याख्यानावतारिकासुधायां – "एवं मीमांसाप्रयोजनसमर्थनार्थत्वेनातःशब्दं द्वेधा व्याख्याय, विषयसमर्थनपरतयाऽपि व्याख्याति" इत्युक्तत्वात्, अतश्शब्देनैव विषयसिद्धेर्ब्रह्मेति व्यर्थमिति शङ्का निरस्ता ।

**गुरुराजीय – नचात्रेति** ।। यद्यपि द्वितीयपक्षानुपपत्तिशङ्कातत्परिहारौ तत्रैव सङ्गतौ तथापि तेनैव न्यायेन षष्ठेऽप्यनुपपत्तिशङ्कापरिहारौ तदेवमिति वक्ष्यमाणन्याये

ज्ञेयाविति सूचयितुं षष्ठानन्तरं तदुक्तिरिति ज्ञेयम् । भाष्यानुव्याख्यानयो-र्यसाङ्कर्यशङ्कानिरासार्थमेदमाह ।। अनुव्याख्याने त्विति ।। अनुव्याख्याने इत्युक्त्वा इति मतान्तरमुक्तमिति सम्बन्धः । अनुव्याख्यानोक्तशब्दार्थविशेषमाह 'अनुव्याख्याने त्विति' इति वा ।

ವಿವರಣೆ - ಶಂಕೆ :- ಎರಡನೆಯ ಸಮಾಧಾನದಲ್ಲಿ ಒಂದು ಸಮಸ್ಯೆ ಇದೆ - ಸೂತ್ರದಲ್ಲಿರುವ ಅತಃ ಶಬ್ದವು ಪ್ರಮಾಣಸಿದ್ಧವಾದದ್ದೆಲ್ಲವನ್ನು ಹೇಳುತ್ತದೆ. ಜ್ಞಾನ ಪ್ರಸಾದಾದಿಗಳು ಪ್ರಮಾಣಸಿದ್ಧವಾದ್ದರಿಂದ ಬುದ್ಧಿಯಲ್ಲಿ ಸನ್ನಿಹಿತವಾಯಿತು. ಆದ್ದರಿಂದ ಸೂತ್ರದಲ್ಲಿರುವ ಅತಃ ಶಬ್ದವೇ ಜ್ಞಾನಪ್ರಸಾದಾದಿಗಳನ್ನು ಹೇಳುವುದರಿಂದ ಪುನಃ ಜ್ಞಾನಪ್ರಸಾದಾದಿಗಳನ್ನು ಸೂತ್ರವು ಹೇಳಬೇಕಾಗಿಲ್ಲವೆಂದು ಎರಡನೆಯ ಪಕ್ಷದಲ್ಲಿ ಸಮರ್ಥಿಸಿದ ವಿಚಾರ. ಹೀಗೆ ಹೇಳುವುದಾದರೆ ಸೂತ್ರದಲ್ಲಿ 'ಅಥ' ಶಬ್ದವನ್ನು ಬ್ರಹ್ಮಶಬ್ದವನ್ನೂ ಸಹ ಹೇಳಬೇಕಾಗಿಲ್ಲ. ಏಕೆಂದರೆ ಬ್ರಹ್ಮವಿಚಾರಕ್ಕೆ ಬೇಕಾಗುವ ಅರ್ಹತೆ, ಪ್ರಯೋಜನ, ಮತ್ತು ವಿಷಯ. ಇವೆಲ್ಲವೂ ಸಹ ಪ್ರಮಾಣಗಳಿಂದಲೇ ಸಿದ್ಧವಾಗಿವೆ - 'ಮಂದಮಧ್ಯಮೋತ್ತಮತ್ವೇನ ತ್ರಿವಿಧಾ ಹ್ಯಧಿಕಾರಿಣಃ' ಇತ್ಯಾದಿ ಭಾಷ್ಯದಲ್ಲಿ ಹೇಳಿದ ಪ್ರಮಾಣಗಳಿಂದ ಸ್ಪಷ್ಟವಾಗಿ ಸಿದ್ಧವಾಗಿದೆ. ಆದ್ದರಿಂದ 'ಅತೋ ಜಿಜ್ಞಾಸಾ'' ಎಂದಷ್ಟೇ ಸೂತ್ರವು ಸಾಕು. 'ಅಥ' ಮತ್ತು 'ಬ್ರಹ್ಮ'ಪದಗಳು ಬೇಕಾಗಿಲ್ಲ.

ಸಮಾಧಾನ - ಹೌದು, ಆದರೆ ವಿಶೇಷಪ್ರಮೇಯವೊಂದನ್ನು ತೋರಿಸುವುದಕ್ಕಾಗಿ ಅಥ ಬ್ರಹ್ಮ ಪದಗಳು ಬೇಕಾಗಿವೆ. ಅದು ಹೀಗಿದೆ - ಅಧಿಕಾರದಲ್ಲಿ ವಿಶೇಷಣವಾದ ಶಮದಮಾದಿಗಳಿಗೂ ಬ್ರಹ್ಮ ಎಂಬ ವಿಷಯಕ್ಕೂ ಮೋಕ್ಷ ಎಂಬ ಪ್ರಯೋಜನಕ್ಕೂ ಪರಸ್ಪರವಾದ ವೈಲಕ್ಷಣ್ಯವಿದೆ. ಶಮದಮಾದಿಗಳು ವಿಚಾರಕ್ಕಿಂತ ಮೊದಲು ಸಿದ್ಧವಾಗಿರಬೇಕು. ಸಿದ್ಧವಾದ ಶಮದಮಾದಿಗಳೇ ಜಿಜ್ಞಾಸಾದಲ್ಲಿ ಅಂಗಗಳಾ-ಗುತ್ತವೆ. ಮೋಕ್ಷರೂಪವಾದ ಪ್ರಯೋಜನವಾದರೂ ಮೊದಲು ಅಸಿದ್ಧವಾಗಿರಬೇಕು. ಇಂತಹ ಮೋಕ್ಷವು ಇದ್ದಮಾತ್ರದಿಂದ ಪ್ರವೃತ್ತಿಗೆ ಅಂಗವಾಗುವುದಿಲ್ಲ, ಬುದ್ಧಿಸ್ಥವಾಗಬೇಕು. ಮೋಕ್ಷದ ಜ್ಞಾನದಿಂದಷ್ಟೇ ಪ್ರವೃತ್ತಿಯುಂಟಾಗುತ್ತದೆ. ಇನ್ನು ವಿಷಯವು ಕೆಲವೊಮ್ಮೆ ಸಿದ್ಧವಾಗಿರುತ್ತದೆ ಕೆಲವೊಮ್ಮೆ ಅಸಿದ್ಧವಾಗಿರುತ್ತದೆ. ಅಸಿದ್ಧವೇ ಆಗಿರಬೇಕೆಂಬ ನಿಯಮವಿಲ್ಲ. ಪ್ರಕೃತ ವಿಷಯನಾದ ಬ್ರಹ್ಮನು ಸಿದ್ಧನೇ ಆಗಿದ್ದಾನೆ. ಆದರೆ ''ಅಥಾತೋ ಧರ್ಮಜಿಜ್ಞಾಸಾ'' ಎಂಬಲ್ಲಿ ಧರ್ಮವು ಸಿದ್ಧವಾಗಿಲ್ಲ. ಅಸಿದ್ಧವಾಗಿದ್ದುಕೊಂಡೇ ವಿಷಯ-ವಾಗಿದೆ. ಆದ್ದರಿಂದ -

ಶಮದಮಾದಿಗಳು - ಸಿದ್ಧವೇ ಆಗಿರಬೇಕು

ಪ್ರಯೋಜನವು - ಅಸಿದ್ಧವೇ ಆಗಿರಬೇಕು.

ವಿಷಯವು - ಸಿದ್ಧವೂ ಅಸಿದ್ಧವೂ ಆಗಿರಬಹುದು.

ಈ ವಿಶೇಷವನ್ನು ತಿಳಿಸಲು ೧) ಅಥ ೨) ಅತಃ ೩) ಬ್ರಹ್ಮ, ಎಂಬ ಮೂರು ಪದಗಳನ್ನು ಪದಗಳನ್ನು ಹೇಳಿದ್ದು ಸಾರ್ಥಕವಾಗಿದೆ.

*ಜಿಜ್ಞಾಸಾಧಿಕರಣ*

ಪ್ರಶ್ನೆ :- ಎರಡನೆಯ ಸಮಾಧಾನದ ಅನಂತರವೇ ಇದನ್ನು ಹೇಳಬೇಕಿತ್ತು. ಆದರೆ ಆರನೇ ಸಮಾಧಾನದ ಅನಂತರ ಹೇಳಲು ಏನು ಕಾರಣ? ಅಥವಾ ಏಳು ಸಮಾಧಾನಗಳನ್ನು ಮುಗಿಸಿ ಕೊನೆಯಲ್ಲಿ ಹೇಳಬೇಕಿತ್ತಲ್ಲವೆ?

ಉತ್ತರ :- ಇಲ್ಲೇ ಹೇಳಲು ಕಾರಣವಿದೆ. ಈ ಸಮಾಧಾನವು ಆರು ಮತ್ತು ಏಳನೆಯ ಪಕ್ಷದಲ್ಲಿಯೂ ಸಮಾನವಾಗಿದೆಯೆಂದು ತಿಳಿಸಲು ಇಲ್ಲಿ ಹೇಳಿದ್ದಾರೆ. ಆರನೆಯ ಪಕ್ಷದ ಮೇಲೆ ಬರುವ ಶಂಕೆ ಹೀಗಿದೆ - ಅಥ ಶಬ್ದದಿಂದ ಮೋಕ್ಷರೂಪ ಪ್ರಯೋಜನವನ್ನು ಹೇಳಿದಂತೆ ಬ್ರಹ್ಮನನ್ನೂ ಹೇಳಿದಂತಾಗುತ್ತದೆ. ಏಕೆಂದರೆ ಮುಮುಕ್ಷುವು ಹೇಗೆ ಅಧಿಕಾರಿವಿಶೇಷಣವೋ ಅದರಂತೆ ನಿತ್ಯಾನಿತ್ಯವಸ್ತುವಿವೇಕವೂ ವಿಶೇಷಣವಾಗುತ್ತದೆ. ಮುಖ್ಯವಾಗಿ ವೈರಾಗ್ಯವು ವಿಶೇಷಣವಾಗಿದೆ. ಅದಕ್ಕೆ ಜನಕವಾಗಿ ನಿತ್ಯಾನಿತ್ಯ-ವಸ್ತುವಿವೇಕವೂ ವಿಶೇಷಣವಾಗುತ್ತದೆ. 'ಬ್ರಹ್ಮ ನಿತ್ಯಂ' 'ಅನ್ಯದನಿತ್ಯಂ' ಎಂಬುದು ವಿವೇಕವೆನಿಸಿದೆ. ಇಲ್ಲಿ ಬ್ರಹ್ಮನು ಸೇರಿದ್ದಾನೆ. ಹೀಗೆ 'ಅಥ' ಶಬ್ದದಿಂದಲೇ ಬ್ರಹ್ಮನು ಸಿದ್ಧನಾಗುತ್ತಾನೆ. ಅದನ್ನು ಅತಃ ಶಬ್ದವು ಹೇಳುವುದರಿಂದ ಸೂತ್ರದಲ್ಲಿ ಪ್ರತ್ಯೇಕವಾಗಿ ಬ್ರಹ್ಮಶಬ್ದವು ಬೇಕಾಗಿಲ್ಲವೆಂದು. ಆರನೆಯ ಸಮಾಧಾನದ ಮೇಲೆ ಶಂಕೆ ಬರುತ್ತದೆ. ಈ ಶಂಕೆಗೂ ಉತ್ತರ ನೀಡಲು ಇಲ್ಲಿಯೇ ಹೇಳಲಾಗಿದೆ - ಸೂತ್ರದಲ್ಲಿ ಪ್ರತ್ಯೇಕವಾಗಿ ಬ್ರಹ್ಮಪದವನ್ನು ಹಾಕಿದ್ದು ವೈಲಕ್ಷಣ್ಯವನ್ನು ಸೂಚನೆ ಮಾಡಲು ಮತ್ತು ಬ್ರಹ್ಮಪದವು ಸಿದ್ಧವಾಗುತ್ತದೆ. ಹೀಗೆ ಆರನೆಯ ಪಕ್ಷದ ಶಂಕೆಗೆ ಸಮಾಧಾನ.

ಏಳನೆಯ ಪಕ್ಷದಲ್ಲಿಯೂ ಇದು ಸಮಾನವಾಗಿದೆ - ಅಥಶಬ್ದದಿಂದ ಶಮದಮಾದಿಗಳೂ, ವಿಷ್ಣುಭಕ್ತಿ, ಶ್ರವಣ, ಇವೆಲ್ಲವನ್ನೂ ತೆಗೆದುಕೊಳ್ಳಬೇಕು. ಇಲ್ಲಿರುವ ಶ್ರವಣ ಶಬ್ದಕ್ಕೆ ಔಪದೇಶಿಕವಾಕ್ಯಾರ್ಥಗ್ರಹಣವೆಂದರ್ಥ. ಅಂದರೆ ಮೋಕ್ಷಕ್ಕೂ ಪ್ರಸಾದಕ್ಕೂ, ಪ್ರಸಾದಕ್ಕೂ ಜ್ಞಾನಕ್ಕೂ, ಜ್ಞಾನಕ್ಕೂ ವಿಚಾರಕ್ಕೂ, ಇಲ್ಲಿ ಇರುವ ಸಾಧ್ಯಸಾಧನಭಾವವು ಶ್ರವಣವಿಷಯವಾಗಿ ಪ್ರಕೃತವಾಗಿದೆ. ಇದನ್ನು ಅತಃ ಶಬ್ದದಿಂದ ಪರಾಮರ್ಶ ಮಾಡಬಹುದು ಅಥ = ಶ್ರವಣ ಮಾಡಿದ ಮೇಲೆ ಅತಃ = ಆದ್ದರಿಂದಲೇ ಬ್ರಹ್ಮಜಿಜ್ಞಾಸಾ ಕರ್ತವ್ಯಾ ಎಂಬಲ್ಲಿ ಹೇತುವಾಗಲು ಅತಃ ಎಂಬುದು ಸಾಧ್ಯ. ಹೀಗೆ ಅತಃ = ಜಿಜ್ಞಾಸಾ ಜ್ಞಾನ ಪ್ರಸಾದ ಮೋಕ್ಷಾಣಾಂ ಸಾಧ್ಯಸಾಧನಸದ್ಭಾವಾತ್ ಎಂಬುದು ಏಳನೆಯ ಪಕ್ಷ.

ಇಲ್ಲಿಯೂ ಪ್ರಶ್ನೆ ಬರುತ್ತದೆ ಅಥ = ಶ್ರವಣ ಮಾಡಿದ ಮೇಲೆ ಎಂದು ಹೇಳುವಾಗ ಶ್ರವಣಕ್ಕೆ ಜ್ಞಾನ ಪ್ರಸಾದಾದಿಗಳು ವಿಷಯವಾಗುವಂತೆ ಬ್ರಹ್ಮನೂ ವಿಷಯ. ಹೀಗೆ ಮೋಕ್ಷಾದಿಗಳಂತೆ ಬ್ರಹ್ಮನೂ ಪ್ರಾಪ್ತನಾಗುವುದರಿಂದ, ಪುನಃ ಬ್ರಹ್ಮಪದ ವ್ಯರ್ಥವೆಂಬ ಪ್ರಶ್ನೆಗೆ ಮೇಲೆ ಹೇಳಿದ ಸಮಾಧಾನವನ್ನೇ ಇಟ್ಟುಕೊಳ್ಳಬೇಕು. ಬ್ರಹ್ಮಪದವನ್ನು ಪುನಃ ಹೇಳಿದ್ದರಿಂದ ವೈಲಕ್ಷಣ್ಯವನ್ನು ಸೂಚಿಸಿದಂತಾಯಿತು.

ಗ್ರಂಥದಲ್ಲಿ "ಇತ್ಯಾದಿ ವಿಶೇಷಜ್ಞಾಪನಾರ್ಥಂ" ಎಂದು ಆದಿಪದವನ್ನು ಹೇಳಿದ್ದಾರೆ. ಇದರಿಂದ ಇನ್ನೂ ಅನೇಕ ಪ್ರಯೋಜನಗಳಿರುವುದರಿಂದ 'ಅಥ' 'ಬ್ರಹ್ಮ' ಪದಗಳನ್ನು ಉಲ್ಲೇಖಿಸಿದ್ದಾರೆಂದು ತಿಳಿಯಬೇಕು. ೧) ವೈಲಕ್ಷಣ್ಯಜ್ಞಾಪನ ೨) ಸ್ವರೂಪಾಧಿಕ್ಯ ೩) ಮಂಗಲಾರ್ಥಕತ್ವ ೪) 'ತದ್‌ಬ್ರಹ್ಮ' ಇತ್ಯಾದಿ ವಿಷಯವಾಕ್ಯ ಪ್ರದರ್ಶನ ೫) ಗುಣಪೂರ್ಣತ್ವಕಥನ.

*ಪರಿಪೂರ್ಣಚಂದ್ರಿಕಾ*

ಹೀಗೆ ಅನೇಕ ಪ್ರಯೋಜನಗಳಿರುವುದರಿಂದ 'ಅಥ' ಮತ್ತು ಬ್ರಹ್ಮಪದಗಳನ್ನು ನಿವೇಶಿಸಿದ್ದು ಅತ್ಯಂತ ಸಾರ್ಥಕ.

ಆರು ಮತ್ತು ಏಳನೆಯ ಪಕ್ಷದಲ್ಲಿ ಇಷ್ಟು ವ್ಯತ್ಯಾಸ. ಆರನೆಯ ಪಕ್ಷದಲ್ಲಿ ಮೋಕ್ಷ ಹೇತುತ್ವವಷ್ಟೇ ಅಥ ಶಬ್ದದಿಂದ ಪ್ರಾಪ್ತವಾಗಿದೆ. ಏಳನೆಯ ಪಕ್ಷದಲ್ಲಿ ಶ್ರವಣದಲ್ಲಿ ಎಲ್ಲವೂ ಸೇರಿದ್ದರಿಂದ ಪ್ರಸಾದ, ಜ್ಞಾನ, ಮೋಕ್ಷ ಎಲ್ಲವೂ ಅಥ ಶಬ್ದದಿಂದ ಪ್ರಾಪ್ತವಾಗುತ್ತದೆ.

ಕೆಲವರು ಶ್ರವಣವನ್ನೇ ವಿಚಾರವೆನ್ನುತ್ತಾರೆ. ಅವರ ಮತದಲ್ಲಿ ಏಳನೆಯ ಸಮಾಧಾನವನ್ನು ಹೇಳಲಾಗದು. ಆದರೆ ವಿಚಾರವು ಮನನರೂಪವಾಗಿದೆ ಎಂದು ಹೇಳುವ ನಮ್ಮ ಮತದಲ್ಲಿ ಯಾವ ಸಮಸ್ಯೆಯೂ ಇಲ್ಲ.

## ಅನುವ್ಯಾಖ್ಯಾನದಲ್ಲಿ ಏನು ಹೇಳಿದೆ?

ಜ್ಞಾನಜನ್ಯಪ್ರಸಾದದ್ವಾರಾ ಮೋಕ್ಷವೇ ಪ್ರಯೋಜನವಾಗಿವುಳ್ಳದ್ದು ವಿಚಾರ. ಆದ್ದರಿಂದ ಎಂದು ಅತಃ ಶಬ್ದದ ಅರ್ಥವನ್ನು ಭಾಷ್ಯವು ಹೇಳಿದೆ. ಭಾಷ್ಯದಲ್ಲಿ ಹೇಳಿದ ಈ ಅರ್ಥವು ಅತ್ಯಂತ ಸಮಂಜಸವಾಗಿದೆಯೆಂದು ಏಳು ಬಗೆಯಲ್ಲಿ ಸಮರ್ಥಿಸಿದರು. ಗ್ರಂಥಕಾರರು ಗ್ರಂಥದ ಪ್ರಾರಂಭದಲ್ಲಿ "ಸೂತ್ರೇ ಭಾಷ್ಯೇಽನುಭಾಷ್ಯೇ ಚ" ಎಂದು ಅನುವ್ಯಾಖ್ಯಾನಾದಿಗಳಲ್ಲಿ ಹೇಳಿದ್ದನ್ನು ಸ್ಪಷ್ಟಪಡಿಸುತ್ತೇವೆಂದು ಪ್ರತಿಜ್ಞೆ ಮಾಡಿದ್ದಾರೆ. ಇಲ್ಲಿಯ ತನಕ ಭಾಷ್ಯದ ಮಾತಷ್ಟೇ ನಮಗೆ ಸ್ಪಷ್ಟವಾಯಿತು. ಆದರೆ ಅನುವ್ಯಾಖ್ಯಾನದಲ್ಲಿ ಅತಃ ಶಬ್ದಕ್ಕೆ ಏನರ್ಥ ಹೇಳಿದ್ದಾರೆ? ಎಂಬ ಪ್ರಶ್ನೆ ಬಂದರೆ 'ಅನುವ್ಯಾಖ್ಯಾನೇ ತು' ಎಂಬಲ್ಲಿಂದ ಪ್ರಾರಂಭಿಸಿ ಮುಂದಿನ ಮೂಲದಲ್ಲಿರುವ 'ಮತಾಂತರಮುಕ್ತಮ್' ಎಂಬಲ್ಲಿಯ ತನಕ ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು ಸ್ಪಷ್ಟಪಡಿಸುತ್ತಿದ್ದಾರೆ.

ಅನುವ್ಯಾಖ್ಯಾನದಲ್ಲಿ, ಮೋಕ್ಷವೆಂಬ ಫಲಸಾಧನೆಗಾಗಿ ಒಂದು ಹೇತುವನ್ನು ಬ್ರಹ್ಮನೆಂಬ ವಿಷಯ-ಸಾಧನೆಗಾಗಿ ಎರಡನೇ ಹೇತುವನ್ನು ಅತಃ ಶಬ್ದದಿಂದ ಪರಾಮರ್ಶಿಸಬೇಕೆಂದು ಹೇಳಿದ್ದಾರೆ. ಆದರೆ ಈ ವಿಷಯವು ಅನುವ್ಯಾಖ್ಯಾನದಲ್ಲಿ ಒಂದೇ ಕಡೆ ಹೇಳಿಲ್ಲ. ವಿಕ್ಷಿಪ್ತವಾಗಿ ಅಲ್ಲಲ್ಲಿ ಹೇಳಿದೆ. ಅದನ್ನು ಸಂಗ್ರಹಿಸಿ ಇಲ್ಲಿ ಒಂದೇ ಕಡೆ ಹೇಳುತ್ತಿದ್ದಾರೆ.

'ಅತೋ ಯಥಾರ್ಥಬಂಧಸ್ಯ' ಇತ್ಯಾದಿ ವಾಕ್ಯವು ಒಂದೆಡೆ ಇದೆ. 'ಪ್ರತ್ಯಕ್ಷವಚ್ಚ' ಇತ್ಯಾದಿವಾಕ್ಯವು ಮತ್ತೊಂದೆಡೆ ಇದೆ. "ವ್ಯುತ್ಪತ್ತಿಃ ಪ್ರಥಮಾ" ಇತ್ಯಾದಿ ವಾಕ್ಯವು ಇನ್ನೊಂದೆಡೆ ಇದೆ. ಹೀಗೆ ಒಂದೊಂದು ಕಡೆ ಇರುವ ವಾಕ್ಯಗಳನ್ನು ಒಂದೇ ಕಡೆ ಸೇರಿಸಿ ಅವುಗಳ ಅಭಿಪ್ರಾಯವನ್ನು ಗ್ರಂಥಕಾರರು ಸ್ಪಷ್ಟಪಡಿಸುತ್ತಿದ್ದಾರೆ.

ಪ್ರಶ್ನೆ :- 'ವ್ಯುತ್ಪತ್ತಿಃ' ಇತ್ಯಾದಿ ವಾಕ್ಯವು ಅನುವ್ಯಾಖ್ಯಾನದಲ್ಲಿ ಮೊದಲು ಹೇಳಿದೆ. "ಪ್ರತ್ಯಕ್ಷವಚ್ಚ" ಇತ್ಯಾದಿ ವಾಕ್ಯವು ಅನಂತರವಿದೆ. ಗ್ರಂಥಕಾರರು ಇಲ್ಲಿ ವ್ಯತ್ಯಾಸ ಮಾಡಿ ಏಕೆ ಹೇಳಿದ್ದಾರೆ?

ಉತ್ತರ :- ಹೌದು, ಆದರೆ ಮುಂದೆ ಉಪಪಾದನೆ ಮಾಡಲು ಅನುಕೂಲವಾಗುತ್ತದೆಂದು ಹೀಗೆ ಹೇಳಿದ್ದಾರೆ.

ಗ್ರಂಥದಲ್ಲಿ 'ಅತಃ ಶಬ್ದೇನ ಉಕ್ತಮ್' ಎಂದಿದೆ. ಇದಕ್ಕೆ ಮುಂದಿನ ವಾಕ್ಯದ ಕೊನೆಯಲ್ಲಿರುವ 'ಅತಃ ಶಬ್ದೇನೈವ ಸೂಚಿತಾ' ಎಂಬಲ್ಲಿ ಮತ್ತು ಅದರ ಮುಂದಿನ ವಾಕ್ಯದಲ್ಲಿರುವ 'ಇತ್ಯುಕ್ತ್ವಾ' ಎಂಬಲ್ಲಿಯೂ ಅನ್ವಯ ಮಾಡಿಕೊಳ್ಳಬೇಕು.

ಮೊದಲನೆಯ ಶ್ಲೋಕದ ಅಭಿಪ್ರಾಯವನ್ನು 'ಬಂಧಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ವಿಷಯಸಿದ್ಧಿ' ಇತ್ಯಾದಿ ವಾಕ್ಯದಿಂದ ಉತ್ತರಾರ್ಧದ ವಿವರಣೆ ಮಾಡಿದ್ದಾರೆ. ಶಬ್ದಕ್ಕೆ ಪ್ರಾಮಾಣ್ಯವೇ ಇಲ್ಲವೆಂಬ ಶಂಕೆಯನ್ನು 'ಪ್ರತ್ಯಕ್ಷವಚ್ಚ' ಇತ್ಯಾದಿಯಾಗಿ ಉಪಪಾದಿಸುತ್ತದೆ. ಸಿದ್ಧಾರ್ಥದಲ್ಲಿ ಪ್ರಾಮಾಣ್ಯವಿಲ್ಲವೆಂಬ ಶಂಕೆ ಬಂದರೆ ಅದನ್ನು 'ವ್ಯುತ್ಪತ್ತಿಃ' ಇತ್ಯಾದಿ ಮಾತುಗಳಿಂದ ನಿರಾಸ ಮಾಡುತ್ತಿದ್ದಾರೆ.

ಶುಕ್ತಿರೂಪ್ಯವು ಮಿಥ್ಯಾಭೂತವಾಗಿದೆ. ಇದರ ನಿವೃತ್ತಿಗೆ ಯಾವ ಪ್ರಸಾದವೂ ಬೇಕಿಲ್ಲವೆಂದು ಕಂಡಿದೆ. ಅದರಂತೆ ಮಿಥ್ಯಾಭೂತವಾದ ಸಂಸಾರನಿವೃತ್ತಿಗೂ ಯಾರ ಪ್ರಸಾದವೂ ಬೇಡ. ಗ್ರಂಥದಲ್ಲಿ ಸಮರ್ಥಿಸಿದ ರೀತಿಯಿಂದ ಸುಧೆಯ ಮೇಲೆ ಬಂದ ಆಕ್ಷೇಪವೊಂದು ಪರಿಹಾರವಾಯಿತು. ವೇದವು ಸಿದ್ಧಪರವಾದ್ದರಿಂದಲೇ ಪ್ರಮಾಣವಾಗಿದೆಯೆಂದು ಸಮರ್ಥಿಸುವ ಅನುವ್ಯಾಖ್ಯಾನಕ್ಕೆ ಸುಧೆಯಲ್ಲಿರುವ ವ್ಯಾಖ್ಯಾನ ಹೀಗಿದೆ -

ವಿಚಾರ ಮಾಡುವುದರಿಂದ ಪ್ರಯೋಜನವಿದೆಯೆಂದು ಅತಃ ಶಬ್ದವು ಸಮರ್ಥಿಸುತ್ತದೆಂಬುದನ್ನು ಭಾಷ್ಯಕಾರರು ಎರಡು ಪ್ರಕಾರದಲ್ಲಿ ತೋರಿಸಿದರು. ಈಗ ವಿಷಯವಿದೆಯೆಂದು ಸಮರ್ಥಿಸುವ ಉದ್ದೇಶವೂ ಅತಃ ಶಬ್ದಕ್ಕೆ ಇದೆಯೆಂದು ತೋರಿಸುತ್ತಿದ್ದಾರೆ ಎಂದು. ಸುಧೆಯ ಈ ಮಾತುಗಳ ಮೇಲೆ ಒಂದು ಆಕ್ಷೇಪ ಬರುತ್ತದೆ. - ವಿಚಾರಕ್ಕೆ ವಿಷಯವಿದೆಯೆಂದು ಅತಃ ಶಬ್ದವೇ ಸಮರ್ಥಿಸುವುದಾದರೆ ಬ್ರಹ್ಮಶಬ್ದವು ವ್ಯರ್ಥ. ಈ ಆಕ್ಷೇಪವನ್ನು ಈಗ ಪರಿಹರಿಸಿದಂತಾಯಿತು.




**ಅತಃಶಬ್ದಾರ್ಥ**

'ಅತಃ' ಆದರಿಂದ, ಎಂದು ಹೇಳಿದರೆ 'ಯಾವುದರಿಂದ?' ಎಂಬ ಪ್ರಶ್ನೆ ಬರುತ್ತದೆ. ಹಿಂದೆ ಪಕೃತವಾದುದನ್ನ ಮನಸ್ಸಿನಲ್ಲಿಟ್ಟುಕೊಂಡು 'ಅದರಿಂದ' ಎಂದು ಸರ್ವನಾಮ ಶಬ್ದವನ್ನು ಪ್ರಯೋಗಿಸುತ್ತೇವೆ. ಸೂತ್ರದಲ್ಲಿ 'ಅತಃ' ಶಬ್ದಕ್ಕೆ ಭಾಷ್ಯದಲ್ಲಿ 'ನಾರಾಯಣನ ಅನುಗ್ರಹವಿಲ್ಲದೆ ಮೋಕ್ಷವಿಲ್ಲ. ಜ್ಞಾನವಿಲ್ಲದ ನಾರಾಯಣನ ಪರಮಾನುಗ್ರಹ ಲಭ್ಯವಿಲ್ಲ. ಅದರಿಂದ ಬ್ರಹ್ಮವಿಚಾರ ಮಾಡಬೇಕು' ಎಂದು ಅರ್ಥ ಉಕ್ತವಾಗಿದೆ. ಇಲ್ಲಿ ಮೋಕ್ಷಕ್ಕೆ ನಾರಾಯಣನ ಅನುಗ್ರಹವು ಕಾರಣ. ಅನುಗ್ರಹಕ್ಕೆ ಜ್ಞಾನ ಕಾರಣ. ಜ್ಞಾನಕ್ಕೆ ವಿಚಾರ ಕಾರಣ - ಇವೆಲ್ಲವೂ ಹಿಂದೆ ಪ್ರಕೃತವೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಏಳು ಬಗೆಯ ಪರಿಹಾರಗಳಿವೆ.

*ಪರಿಪೂರ್ಣಚಂದ್ರಿಕಾ*

(೧) ಪ್ರಯೋಜನವನವಿಲ್ಲದ ಈ ವಿಚಾರಶಾಸ್ತ್ರವೇಕೆ ಎಂಬ ಪೂರ್ವಪಕ್ಷಕ್ಕೆ ಸಮಾಧಾನ ಹೇಳಬಲ್ಲ ಶಬ್ದವು ಸೂತ್ರದಲ್ಲಿ ಬೇರೆ ಯಾವುದೂ ಇಲ್ಲ. ಶ್ರುತಿಗನುಗುಣವಾಗಿ ಭಾಷ್ಯದಲ್ಲಿ ಹೇಳಿದಂತೆ ಮೇಲಿನ ಎಲ್ಲ ಅಂಶಗಳನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕು. ಆದರಿಂದ ಪ್ರಕೃತವಾದುದನ್ನು ಅತಃಶಬ್ದ ಹೇಳುತ್ತದೆ. 'ಸ್ರುವದಿಂದ ಬೇರ್ಪಡಿಸಿ ತೆಗೆಯಬೇಕು' ಎಂದು ಶ್ರುತಿವಾಕ್ಯವಿದೆ. ಏನನ್ನು? ಎಂದರೆ 'ದ್ರವ ಪದಾರ್ಥವನ್ನು' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದಾಧ್ಯಾಹಾರಕ್ಕೆ ಪ್ರಮಾಣವಾಗಿ ಭಾಷ್ಯದಲ್ಲಿ 'ಅವಶ್ಯಕವಾದ ಪದವನ್ನೋ ವಾಕ್ಯವನ್ನೋ ಅಧ್ಯಾಹಾರ ಮಾಡಿಕೊಳ್ಳಬೇಕು' ಎಂಬ ವಚನವನ್ನು ಉದಾಹರಿಸಲಾಗಿದೆ. ಇಲ್ಲಿ 'ವಾಕ್ಯವನ್ನೋ' ಎಂಬುದರಿಂದ ಅತಃ ಶಬ್ದಕ್ಕೆ ಅಪೇಕ್ಷಿವಾದ ಮೇಲೆ ಹೇಳಿದ ವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂಚಿತವಾಗಿದೆ.

(೨) 'ಜನ್ಮಾದ್ಯಸ್ಯಯತಃ' ಎಂಬ ಸೂತ್ರದಲ್ಲಿ 'ಅಸ್ಯ' 'ಇದರ' ಎಂದರೆ. 'ಈ ಅನುಭವಸಿದ್ಧವಾದ ಪ್ರಪಂಚದ' ಜನ್ಮಾದಿಕರ್ತ ಎಂದು ಹೇಲಿದೆ. ಹಾಗೇ ಪ್ರಕೃತದಲ್ಲಿ 'ಅತಃ' ಎಂಬುದರಿಂದ 'ಮೋಕ್ಷ ಭಗವದನುಗ್ರಹ ಮುಂತಾದ ಪ್ರಮಾಣಸಿದ್ಧವಾದ ಪ್ರಯೋಜನವಿರುವುದರಿಂದ' ಎಂದು ಉಕ್ತವಾಗಬಹುದು. ಪ್ರಕೃತವಾಗುವುದೆಂದರೇನು? ಬುದ್ಧಿಸ್ಥವಾಗಿರುವುದು. ಪ್ರಮಾಣಸಿದ್ಧವಾದುದು ಆ ಪ್ರಮಾಣದ ಬಲದಿಂದಲೆ ಬುದ್ಧಿಸ್ಥವಾಗಿರುತ್ತದೆ.

ಜನ್ಮಾದಿಸೂತ್ರದಲ್ಲಿ 'ಅಸ್ಯ' ಎಂದಿರುವುದು ಅದರ ವಿಷಯ ವಾಕ್ಯದಲ್ಲಿ 'ಯತೋ ವಾ ಇಮಾನಿ ಭೂತಾನಿ' ಎಂದು ಹೇಳಿದ 'ಇಮಾನಿ' ಪದದ ರೂಪಾಂತರ ಹೊರತು 'ಅನುಭವಸಿದ್ಧವಾದ' ಎಂಬ ಅರ್ಥದಲ್ಲಿ ಅಲ್ಲ ಎಂಬ ಆಕ್ಷೇಪ ಬರಬಹುದು. ಆದರೆ ವಿಷಯ ವಾಕ್ಯದಲ್ಲಿಯೂ 'ಇಮಾನಿ' 'ಈ ಚೇತನಗಳು' ಎಂದುದು ಅನುಭವಸಿದ್ಧವಾದುಗಳೆಂಬ ಅಭಿಪ್ರಾಯದಿಂದಲೆ.

(೩) ಈ ಸೂತ್ರಕ್ಕೆ ಅನೇಕ ವಿಚಾರವಿಧಾಯಕ ವಾಕ್ಯಗಳು ವಿಷಯವಾಕ್ಯಗಳಾಗಿವೆ. ಅವುಗಳಲ್ಲಿ ಅನೇಕ ಕಡೆ ಮೋಕ್ಷ ಭಗವದನುಗ್ರಹ ಮುಂತಾದುವನ್ನು ಹೇಳಿರುವುದರಿಂದ ಸೂತ್ರ ಅವುಗಳನ್ನು ಮನಸಿನಲ್ಲಿಟ್ಟುಕೊಂಡು 'ಅತಃ' ಎಂದಿದೆ.

(೪) ವಿಚಾರವು ಜ್ಞಾನ ಭಗವದನುಗ್ರಹಗಳಿಗೆ ಕಾರಣವಾಗುವುದು ಬ್ರಹತ್ತರ್ಕದಲ್ಲಿ ಉಕ್ತವಾಗಿದೆ. ಬ್ರಹತ್ತರ್ಕ ಈ ವಿಚಾರಶಾಸ್ತ್ರಕ್ಕೆ ಅಂಗವಾಗಿದೆ. ಅಲ್ಲದೆ ಬ್ರಹತ್ತರ್ಕವನ್ನು ರಚಿಸಿದವರೂ ಸೂತ್ರಕಾರರಾದ ಬಾದರಾಯಣರೆ. ಆದರಿಂದ ಬ್ರಹತ್ತರ್ಕದಲ್ಲಿ ಹೇಳಿದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ಸೂತ್ರಕಾರರು 'ಅತಃ' ಎಂದಿದ್ದಾರೆ.

(೫) ಮುಂದೆ ಜನ್ಮಾದಿಸೂತ್ರದಲ್ಲಿ ವಿಚಾರದಿಂದ ಜ್ಞಾನ, ಭಗವದನುಗ್ರಹ, ಮೋಕ್ಷಗಳುಂಟಾಗುವುದನ್ನು ಹೇಳುತ್ತಿದೆ. ಅಲ್ಲಿ ಹೇಳಲಿರುವುದನ್ನು ಪ್ರಥಮ ಸೂತ್ರವು ಅತಃ ಎಂದು ನಿರ್ದೇಶಿಸಬಹುದು. ಅಥೈಷ ಜ್ಯೋತಿಃ ಅಥೈಷ ವಿಶ್ವಜ್ಯೋತಿಃ ಎಂಬಲ್ಲಿ ಬರುವ 'ಏಷಃ' 'ಈ ಯಾಗವು' ಮುಂದೆ ಹೇಳುವ ಯಾಗವನ್ನು ನಿರ್ದೇಶಿಸುತ್ತಿದೆ ಎಂದು ಮೀಮಾಂಸಕರು ಒಪ್ಪಿದ್ದಾರೆ.

(೬) ಈ ಸೂತ್ರದಲ್ಲಿಯೆ ಅಥಶಬ್ದವು 'ಮೋಕ್ಷಾಭಿಲಾಷೆಯನ್ನು ಹೊಂದಿದ ಬಳಿಕ' ಬ್ರಹ್ಮವಿಚಾರ ಮಾಡಬೇಕೆಂದು ಹೇಳಿದೆ. ಮೋಕ್ಷವು ಜ್ಞಾನ ಭಗವದನುಗ್ರಹಗಳ ಮೂಲಕವೆ ವಿಚಾರದಿಂದ ಲಭ್ಯವೆಂಬುದು

ಪ್ರಮಾಣಸಿದ್ಧ. ಯಾಗಕ್ಕೆ ಸ್ವರ್ಗವೆ ಫಲವೆಂದು ಶ್ರುತಿ ಹೇಳುವಾಗ ಸ್ವರ್ಗವು ಅದೃಷ್ಟದ ಮೂಲಕವ ಲಭ್ಯವಾದ್ದರಿಂದ ಅದನ್ನೂ ಶ್ರುತಿಯು ಹೇಳಿದಂತಾಗುವುದು. ಭತ್ತವು ಯಾಗ ಸಾಧನವೆಂದು ಶ್ರುತಿ ಹೇಳುವಾಗ ಪ್ರೋಕ್ಷಣ ಅವಹನನಾದಿಗಳ ಮೂಲಕವೆ ಭತ್ತವು ಯಾಗಸಾಧನವಾಗುವುದರಿಂದ ಅದನ್ನೂ ಶ್ರುತಿ ಹೇಳಿದಂತಾಗುವುದು. ಅದರಿಂದ ವಿಚಾರವು ಜ್ಞಾನ ಭಗವದನುಗ್ರಹಗಳ ಮೂಲಕ ಮೋಕ್ಷಸಾಧನವಾಗುವುದರಿಂದ ಅದನ್ನೂ ಅಥಶಬ್ದ ಹೇಳಿದಂತಾಗುವುದು. ಆಗ ಪ್ರಕೃತವಾದುದನ್ನು ಅತಃ ಶಬ್ದವು ನಿರ್ದೇಶಿಸುತ್ತದೆ.

(೭) ಮನನರೂಪವಾದ ವಿಚಾರಕ್ಕ ಶ್ರವಣ ಮೊದಲಿಗೆ ಅವಶ್ಯಕವೆಂದು ಅಥಶಬ್ದ ಹೇಳುತ್ತದೆ. ಶ್ರವಣಕಾಲದಲ್ಲಿ ತಿಳಿದಿದ್ದ ಮೋಕ್ಷ ಭಗವದನುಗ್ರಹಾದಿಗಳ ಕಾರ್ಯಕಾರಣಭಾವ ಮನನ ಪ್ರಾರಂಭದಲ್ಲಿ ಬುದ್ಧಿಸ್ಥವಾಗಿದ್ದು ವಿಚಾರಕರ್ತವ್ಯತ್ವಕ್ಕೆ ಅದು ಹೇತುವಾಗಲು ಯೋಗ್ಯವೂ ಆಗಿರುವುದರಿಂದ ಅದನ್ನು ಹೇತುವೆಂದು ಅತಃಶಬ್ದವು ನಿರ್ದೇಶಿಸುತ್ತದೆ.

• • • • •

## ಅಥ ಶಬ್ದಕ್ಕೆ ಮೂರು ಅರ್ಥ

### तात्पर्यचन्द्रिका –

**अपेक्षितार्थहेतुसूचकत्वादतःशब्दस्य, इत्युक्त्वा – 'यतोऽनुभवतः सर्वं सिद्धमेतदतोऽपि च' इत्यादिना बुद्धौ विपरिवर्तमानं हि साक्षात् प्रकृतं, ग्रन्थोक्तत्वं तु तल्लिङ्गं, बन्धसत्यत्वादिकं चानुभवसिद्धत्वात् प्रकृतमिति मतान्तरमुक्त्वा ''अतस्तदर्थं सङ्क्षेपादत इत्यभ्यसूचयत्'' इत्यादिना मीमांसाङ्गभूतब्रह्मतर्काख्यतर्कशास्त्रे सूत्रकृत्कृते प्रकृतो जिज्ञासाकर्तव्यत्वोपयोगी युक्तिकलापोऽतःशब्दार्थः। तर्कशास्त्रस्य मीमांसाङ्गत्वं च तन्निर्णीतस्वरूपसङ्ख्याबलाबलादिभिः प्रमाणैरिह प्रमेयशोधनादिति मतान्तरमुक्तम् ।**

ಅನುವಾದ - ೧) ಜಿಜ್ಞಾಸಾಕರ್ತವ್ಯತ್ವಕ್ಕೆ ಅಪೇಕ್ಷಿತವಾದ ಏನೇನು ಸಾಧಕಯುಕ್ತಿಗಳು ಇವೆಯೋ ಅವೆಲ್ಲವನ್ನು ಅತಃಶಬ್ದವು ಹೇಳುತ್ತದೆ.

೨) "ಯಾವ ಕಾರಣದಿಂದ ದುಃಖಾದಿಬಂಧವೆಲ್ಲವೂ ಸತ್ಯವೆಂಬ ಅನುಭವವು ನಮಗಿದೆಯೋ, ಆ ಕಾರಣದಿಂದಲೂ" ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ. ಬುದ್ಧಿಯಲ್ಲಿ ಹೇಳಿದ ಎಂಬುದು ಬುದ್ಧಿಸ್ಥವಾಗಿದೆಯೆನ್ನಲು ಕಾರಣಮಾತ್ರ. ಬಂಧಸತ್ಯತ್ವಾದಿಗಳು ಅನುಭವಸಿದ್ಧವಾದ್ದರಿಂದ ಪ್ರಕೃತಗಳಾಗಿವೆ. ಆದ್ದರಿಂದ ಅತಃ ಶಬ್ದದಿಂದ ಪರಾಮರ್ಶಿಸಬಹುದು.

*ಪರಿಪೂರ್ಣಚಂದ್ರಿಕಾ*

೩) "ಅತಸ್ತದರ್ಥಂ ಸಂಕ್ಷೇಪಾದತ ಇತ್ಯಭ್ಯಸೂಚಯತ್" ಇದೆಲ್ಲವನ್ನು ಬ್ರಹತ್ತರ್ಕದಲ್ಲಿ ಹೇಳಿರುವುದರಿಂದ ಸಂಕ್ಷೇಪವಾಗಿ ಸೂತ್ರಕಾರರು ಅತಃ ಎಂದು ಸೂಚಿಸಿದ್ದಾರೆಂದು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ಬ್ರಹತ್ತರ್ಕವಾದರೂ ಬ್ರಹ್ಮಮೀಮಾಂಸೆಗೆ ಅಂಗವಾಗಿದೆ. ಸೂತ್ರಕಾರರಿಂದಲೇ ರಚಿತವಾಗಿದೆ. ಪ್ರಕೃತವಾದ ಜಿಜ್ಞಾಸಾಕರ್ತವ್ಯತ್ವಕ್ಕೆ ಉಪಯುಕ್ತವಾದ ಯುಕ್ತಿಗಳನ್ನು ಹೇಳಿದ್ದಾರೆ. ಆದ್ದರಿಂದ ಬ್ರಹತ್ತರ್ಕದಲ್ಲಿ ಹೇಳಿದ್ದನ್ನು ಇಲ್ಲಿ 'ಅತಃ' ಎಂದು ಪರಾಮರ್ಶಿಸಬಹುದು. ಬ್ರಹತ್ತರ್ಕವು ಬ್ರಹ್ಮಮೀಮಾಂಸೆಗೆ ಹೇಗೆ ಅಂಗ? ಎಂದರೆ ಬ್ರಹತ್ತರ್ಕದಲ್ಲಿ ಪ್ರಮಾಣಗಳ ಸಂಖ್ಯೆ ಎಷ್ಟು? ಆ ಪ್ರಮಾಣಗಳಲ್ಲಿ ಪ್ರಬಲವಾದದ್ದು ಯಾವುದು? ದುರ್ಬಲವಾದದ್ದು ಯಾವುದು? ಇತ್ಯಾದಿಯಾಗಿ ವಿಚಾರ ಮಾಡಲಾಗಿದೆ. ಅದನ್ನು ತಿಳಿದರೆ ಪ್ರಮಾಣಗಳ ಸಹಾಯದಿಂದ ಪ್ರಮೇಯವಿಚಾರ ಮಾಡುವುದು ಸುಲಭವಾಗುತ್ತದೆ. ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಂಗವಾದ ಬ್ರಹತ್ತರ್ಕದಲ್ಲಿ ಹೇಳಿದ್ದನ್ನು 'ಅತಃ' ಎಂದು ಪರಾಮರ್ಶಿಸುವುದು ಸೂಕ್ತವೇ ಆಗಿದೆ.

ಈ ರೀತಿಯಾಗಿ ಅನುವ್ಯಾಖ್ಯಾನದಲ್ಲಿ ಅತಃ ಶಬ್ದಾರ್ಥವನ್ನು ಮೂರು ಬಗೆಯಲ್ಲಿ ಸಮರ್ಥಿಸಿದ್ದಾರೆ.

**प्रकाशः** – ननु पक्षद्वयेऽप्यप्रकृतस्य कथम् 'अतः' इति परामर्श इत्यतोऽनुव्याख्यान एव विक्षिप्योक्तं त्रेधा समाधानं दर्शयितुमेकं तावदाह ।। **अपेक्षितेति** ।। यद्यपीदम् "अतो यथार्थबन्धस्य" इति श्लोकाभिप्रायं कथयता सुधाकृतैव "सेयमाशङ्का अतःशब्देनापेक्षितार्थसाधकहेतुसूचकेन निराकृता" इत्यनेनोक्तम् । तथाऽपि तदुक्तमेवानुयाख्यानोक्तं मत्वैतदुक्तम्। समाध्यन्तरे अप्याह । **यत इत्यादिना** ।। नन्वनुभवसिद्धस्यापि कथं परामर्शः, ग्रन्थतोऽप्रकृतत्वादित्यतोऽभिप्रायमाह ।। **बुद्धाविति** ।। **बन्धसत्यत्वादिकमिति** – 'सर्वम्' इत्यस्यार्थः । एतेन "वेदप्रामाण्यादिकम्" इति सुधास्यादिपदस्य बन्धसत्यत्वादिकमप्यर्थ उक्तो भवति । 'अतः' ब्रह्मतर्के प्रकृतत्वात् । "इत्यादिना" इत्यस्य 'उक्तम्' इत्यन्वयः । अन्यत्र प्रकृतस्यान्यत्र कथं परामर्श इत्यत उक्तम् – **मीमांसाङ्गेति**। एककर्तृकत्वाच्च तत्रत्यस्यात्र परामर्शो युक्तः इति भावेनोक्तं – **सूत्रकृत्कृत इति** । 'तन्निर्णीत' इति "प्रमाणन्यायसच्छिक्षा" इति श्लोकार्थोक्तिः ।

**ವಿವರಣೆ** - ಪ್ರಯೋಜನಸಾಧಕವಾದ ಯುಕ್ತಿಯನ್ನು ಮತ್ತು ವಿಷಯಸಾಧಕವಾದ ಯುಕ್ತಿಯನ್ನು ಅತಃಶಬ್ದವು ಸೂಚಿಸುತ್ತದೆಂದು ಎರಡು ಪಕ್ಷಗಳನ್ನು ಹೇಳಿದ್ದಾಯಿತು. ಆದರೆ ಈ ಎರಡೂ ಪಕ್ಷಗಳಲ್ಲಿ ಹಿಂದೆ ಪ್ರಕೃತವಾಗದ ಯುಕ್ತಿಗಳನ್ನು ಅತಃಶಬ್ದವು ಹೇಗೆ ನಿರ್ದೇಶಿಸುತ್ತದೆ? ಎಂಬ ಪ್ರಶ್ನೆ ಬರುತ್ತದೆ. ಈ

ಪ್ರಶ್ನೆಗೆ ಮೂರು ಬಗೆಯಲ್ಲಿ ಅನುವ್ಯಾಖ್ಯಾನವು ಉತ್ತರಿಸಿದೆ. ಅವುಗಳಲ್ಲಿ ಮೊದಲನೆಯ ಸಮಾಧಾನವನ್ನು 'ಅಪೇಕ್ಷಿತಾರ್ಥ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ.

ವಸ್ತುತಸ್ತು ಅನುವ್ಯಾಖ್ಯಾನದಲ್ಲಿ ಇದನ್ನು ಹೇಳೇ ಇಲ್ಲ. "ಅತೋ ಯಥಾರ್ಥಬಂಧಸ್ಯ" ಎಂಬ ಶ್ಲೋಕದ ಅಭಿಪ್ರಾಯವನ್ನು ಹೇಳುತ್ತಾ ಸುಧಾಕಾರರೇ ಹೀಗೆ ಹೇಳಿದ್ದಾರೆ - "ಸೇಯಮಾಶಂಕಾऽತಃಶಬ್ದೇನಾಪೇಕ್ಷಿತಾರ್ಥಸಾಧಕಹೇತುಸೂಚಕೇನ ನಿರಾಕೃತಾ" 'ಅಪೇಕ್ಷಿತವಾದ ಸಾಧಕ ಹೇತುಗಳನ್ನು ಸೂಚಿಸುವ ಅತಃ ಶಬ್ದದಿಂದ ಈ ಆಶಂಕೆಯು ನಿರಾಕರಿಸಲ್ಪಟ್ಟಿದೆ' ಎಂದು. ಆದರೂ ಸುಧೆಯಲ್ಲಿ ಹೇಳಿದ ಈ ಅಭಿಪ್ರಾಯವು ಅನುವ್ಯಾಖ್ಯಾನದಿಂದಲೇ ತಿಳಿಯುತ್ತಿರುವುದರಿಂದ ಗ್ರಂಥಕಾರರು ಅನುವ್ಯಾಖ್ಯಾನದಲ್ಲಿ ಹೇಳಿದೆಯೆಂದೇ ಹೇಳಿದ್ದಾರೆ.

ಎರಡನೆಯ ಸಮಾಧಾನವನ್ನು "ಯತೋऽನುಭವತಃ" ಇತ್ಯಾದಿ ಅನುವ್ಯಾಖ್ಯಾನದ ಮಾತುಗಳಿಂದ ಹೇಳುತ್ತಿದ್ದಾರೆ.

'ಇದಂ' 'ತತ್' 'ಏತದ್' ಇವುಗಳೆಲ್ಲವು ಪ್ರಕೃತ ಪರಾಮರ್ಶಕ, ಪ್ರಕೃತ ಎಂದರೆ ಬುದ್ಧಿಯಲ್ಲಿ ವಿಪರಿವರ್ತಮಾನವಾದದ್ದು. ಇದಕ್ಕೆ ಗ್ರಂಥೋಕ್ತತ್ವವು ಲಿಂಗ. ಹೊರತು ಪ್ರಕೃತತ್ವ ಎಂದರೆ ಗ್ರಂಥೋಕ್ತತ್ವವಲ್ಲ. ಈಗ 'ಅತಃ' ಶಬ್ದದ ಅರ್ಥವನ್ನಾಗಿ ಹೇಳುತ್ತಿರುವುದೆಲ್ಲ ಅನುಭವ ಸಿದ್ಧವಾಗಿದೆ. ೧) ದುಃಖಾದಿಬಂಧದ ಸತ್ಯತೆ ೨) ಶಬ್ದಾನಾಂ ಪ್ರಾಮಾಣ್ಯಾತ್ ೩) ಸಿದ್ಧೇವ್ಯುತ್ಪತ್ತಿಸದ್ಭಾವಾತ್ ೪) ವೇದಾನಾಂ ಪ್ರಾಮಾಣ್ಯಾತ್ ೫) ಮೋಕ್ಷರೂಪ ಪ್ರಯೋಜನಸದ್ಭಾವಾತ್, ಇವೆಲ್ಲವೂ ಅನುಭವಸಿದ್ಧವಾಗಿವೆ. ಅನುಭವಸಿದ್ಧವಾದ್ದರಿಂದ ಬುದ್ಧಿಯಲ್ಲಿ ಇದೆಯೆಂದಾಯಿತು. ಅದನ್ನು ಅತಃ ಎಂದು ಪರಾಮರ್ಶಿಸಬಹುದು. ಪ್ರಕೃತವಾಗದಿರುವುದರಿಂದ? ಅನುಭವಸಿದ್ಧವಾದ ಮಾತ್ರಕ್ಕೆ ಪರಾಮರ್ಶಿಸುವುದು ಹೇಗೆ ಎಂಬ ಶಂಕೆಯು ಪರಿಹಾರವಾಯಿತು.

ಮೂರನೆಯ ಸಮಾಧಾನ - ಬ್ರಹತ್ತರ್ಕದಲ್ಲಿ ಹೇಳಿದ್ದನ್ನೆಲ್ಲ ಇಲ್ಲಿ ಸಂಕ್ಷೇಪವಾಗಿ ಅತಃ ಎಂದು ಹೇಳಿದ್ದಾರೆ. ಗ್ರಂಥಾಂತರದಲ್ಲಿ ಹೇಳಿದ್ದನ್ನು ಇಲ್ಲಿ ಹೇಗೆ ಪರಾಮರ್ಶಿಸುವುದು? ಎಂದರೆ ಬ್ರಹತರ್ಕವು ಈ ಮೀಮಾಂಸಾಶಾಸ್ತ್ರಕ್ಕೆ ಅಂಗವಾಗಿದೆ. ಮತ್ತು ಎರಡೂ ಗ್ರಂಥಗಳನ್ನು ಸೂತ್ರಕಾರರೇ ಮಾಡಿರುವುದರಿಂದ ಪರಾಮರ್ಶಿಸಬಹುದು.

ತರ್ಕಶಾಸ್ತ್ರವು ಮೀಮಾಂಸಾಶಾಸ್ತ್ರಕ್ಕೆ ಹೇಗೆ ಅಂಗವಾಗುತ್ತದೆ? ಎಂಬ ಪ್ರಶ್ನೆಗೆ 'ತರ್ಕಶಾಸ್ತ್ರಸ್ಯ' ಇತ್ಯಾದಿ ಮಾತುಗಳಿಂದ ಉತ್ತರಿಸುತ್ತಿದ್ದಾರೆ.

**ಪ್ರಮಾಣನ್ಯಾಯಸಙ್ಕ್ಲೃಪ್ತ್ಯಾ ಕ್ರಿಯತೇ ತರ್ಕಶಾಸ್ತ್ರತಃ ।**
**ಮಾನನ್ಯಾಯೈಸ್ತು ತತ್‌ಸಿದ್ಧೈರ್ಮೀಮಾಂಸಾ ಮೇಯಶೋಧನಮ್ ॥**

ಪ್ರತ್ಯಕ್ಷಮೊದಲಾದ ಪ್ರಮಾಣಗಳ ಮತ್ತು ಅನುಮಾನದ ಉದ್ದೇಶ, ಲಕ್ಷಣಾ, ವಿಭಾಗರೂಪವಾದ ನಿರೂಪಣೆಯು ಬ್ರಹತ್ತರ್ಕ ಎಂಬ ತರ್ಕಶಾಸ್ತ್ರದಲ್ಲಿ ಮಾಡಲ್ಪಟ್ಟಿದೆ. ಈ ತರ್ಕಶಾಸ್ತ್ರದಿಂದ ಸಿದ್ಧವಾದ

ಪ್ರಮಾಣನ್ಯಾಯಗಳ ಸಹಾಯದಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಮೇಯವನ್ನು ಶೋಧನ ಮಾಡುತ್ತದೆ.

ಅನುವ್ಯಾಖ್ಯಾನದ ಈ ಶ್ಲೋಕದ ಅಭಿಪ್ರಾಯವನ್ನೇ 'ತನ್ನಿರ್ಣೀತಿ' ಇತ್ಯಾದಿ ಮಾತುಗಳಿಂದ ವಿವರಿಸಿದ್ದಾರೆ. ಒಟ್ಟು ಮೂರು ಅಂಶ -

೧) ತರ್ಕಶಾಸ್ತ್ರವು ಮೀಮಾಂಸಾಗ್ರಂಥಕ್ಕೆ ಅಂಗ

೨) ಎರಡೂ ಗ್ರಂಥಗಳನ್ನು ಸೂತ್ರಕಾರರೇ ಮಾಡಿದ್ದು

೩) ಜಿಜ್ಞಾಸಾಕರ್ತವ್ಯತ್ವಕ್ಕೆ ಉಪಯೋಗಿಯಾದ ಅಂಶಗಳನ್ನು ಬ್ರಹತ್ತರ್ಕದಲ್ಲಿ ಹೇಳಿದ್ದಾರೆ. ಆದ್ದರಿಂದ ಅಲ್ಲಿ ಹೇಳಿದ ಯುಕ್ತಿಕಲಾಪಗಳನ್ನು ಅತಃ ಎಂದು ಪರಾಮರ್ಶಿಸಬಹುದೆಂದು.

ಇಲ್ಲಿಯ ತನಕ ಮೂರು ಬಗೆಯಲ್ಲಿ ಅತಃ ಶಬ್ದಾರ್ಥವನ್ನು ವಿವರಿಸಿದಂತಾಯಿತು.

೧) ಜಿಜ್ಞಾಸಾಕರ್ತವ್ಯತ್ವಕ್ಕೆ ಉಪಯುಕ್ತವಾದ ಎಲ್ಲ ಯುಕ್ತಿಗಳನ್ನು ಅತಃ ಶಬ್ದವು ಹೇಳುತ್ತಿದೆ.

೨) ಅತಃ ಶಬ್ದದ ಅರ್ಥಗಳು ಎಷ್ಟು ಇವೆಯೋ ಅವೆಲ್ಲವೂ ಶ್ರೋತೃ ಮತ್ತು ವಕ್ತೃಗಳ ಬುದ್ಧಿಯಲ್ಲಿ ವಿಪರಿವರ್ತಮಾನವಾಗಿದೆ. ಅವುಗಳನ್ನು ಅತಃ ಶಬ್ದವು ಪರಾಮರ್ಶಿಸುತ್ತದೆ.

೩) ಬ್ರಹತ್ತರ್ಕದಲ್ಲಿ ಹೇಳಿದ ಜಿಜ್ಞಾಸಾಕರ್ತವ್ಯತ್ವಕ್ಕೆ ಉಪಯೋಗಿಯಾದ ಅಂಶಗಳನ್ನು ಇಲ್ಲಿ ಅತಃ ಶಬ್ದದಿಂದ ತೆಗೆದುಕೊಳ್ಳಬೇಕು.

ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆಂದಷ್ಟೇ ಇಲ್ಲಿ ಹೇಳಿದ್ದಾರೆ. ಇದರ ಸಮರ್ಥನೆಯನ್ನು ಸುಧೆಯಲ್ಲಿ ನೋಡಿ ತಿಳಿಯಬೇಕು.

## 'ಅಥ' 'ಅತಃ' ಶಬ್ದಾರ್ಥಗಳ ಉಪಸಂಹಾರ

### तात्पर्यचन्द्रिका –

**तदेवं स्वर्गादिसाधने ज्योतिष्टोमादौ यथा तत्कामस्त्रैवर्णिकोऽधिकारी, तथा विचारस्य सत्यपि विषये फले च मुमुक्षुः त्रैवर्णिकोऽधिकारी, नतु शान्त्यादिकमपि तद्विशेषणमिति शङ्का, राजसूयादौ राजत्वादिरिव वचनाच्छान्त्यादिरपि तद्विशेषणमिति सूचयताऽथशब्देन परिहृता । विषयप्रयोजनयोरभावान्निरधिकारिकत्वमिति शङ्का तु तत्समर्पकाभ्यामतश्शब्दब्रह्मशब्दाभ्यां निराकृता । एवं – सत्यपि विषये जिज्ञासा न साक्षान्मोक्षहेतुः । नापि ज्ञानद्वारा । तस्य ''कर्मणा ज्ञानमातनोति'' इत्यादिश्रुत्या कर्मणाऽपि सिद्धेः । किञ्च – ज्ञानमपि न साक्षान्मोक्षहेतुः । नापि भगवत्प्रसादद्वारा । तस्य ''तत्कर्म हरितोषं यत्''**

**इत्यादिना कर्मणाऽपि सिद्धेः । ज्ञानेनाज्ञाननिवृत्तौ प्रसादस्यानपेक्षितत्वाच्चेति शङ्का अतःशब्देन प्रसादादेर्मोक्षादिहेतुत्वं सूचयता परिहृता । अहमिति ब्रह्मणि ज्ञायमानेऽपि मोक्षानुपलम्भान्निष्प्रयोजनत्वमिति शङ्का तु विषयसूचकेन ब्रह्मपदेनैव निरस्तेति द्रष्टव्यम् ।**

ಅನುವಾದ - ಸ್ವರ್ಗವನ್ನು ಹೊಂದಬೇಕಾದರೆ ಏನು ಮಾಡಬೇಕು? ಜ್ಯೋತಿಷ್ಟೋಮಯಾಗವನ್ನು ಮಾಡಬೇಕು. ಜ್ಯೋತಿಷ್ಟೋಮಯಾಗವನ್ನು ಮಾಡಲು ಯಾರು ಅಧಿಕಾರಿಗಳು? ಸ್ವರ್ಗಾಪೇಕ್ಷಿಯೂ ತ್ರೈವರ್ಣಿಕನೂ ಅಧಿಕಾರಿಯೆನಿಸುತ್ತಾನೆ. ಮೋಕ್ಷವನ್ನು ಹೊಂದಬೇಕಾದರೆ ಏನು ಮಾಡಬೇಕು? ಬ್ರಹ್ಮವಿಚಾರವನ್ನು ಮಾಡಬೇಕು. ಬ್ರಹ್ಮವಿಚಾರದಲ್ಲಿ ಯಾರು ಅಧಿಕಾರಿಗಳು? ಮೋಕ್ಷವನ್ನು ಬಯಸುವ ತ್ರೈವರ್ಣಿಕನೂ ಅಧಿಕಾರಿಯೆನಿಸುತ್ತಾನೆ.

ಈ ನಿಟ್ಟಿನಲ್ಲಿ ಚಿಂತಿಸಿದಾಗ ಶಮದಮಾದಿಗಳ ಅವಶ್ಯಕತೆಯೇ ಇರುವುದಿಲ್ಲ. ಬ್ರಹ್ಮವಿಚಾರಕ್ಕಾಗಿ ವಿಷಯ ಮತ್ತು ಪ್ರಯೋಜನಗಳಿದ್ದರೆ ಸಾಕು. ಈ ಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿಯೇ ಸೂತ್ರದಲ್ಲಿ 'ಅಥ' ಎಂದು ಹೇಳಿದ್ದಾರೆ. ಯಾವ ರೀತಿಯಾಗಿ ವಿಷಯವನ್ನು ಹೇಳಲು ಬ್ರಹ್ಮಪದವು ಪ್ರಯೋಜನವನ್ನು ಹೇಳಲು 'ಅತಃ' ಪದವು ಸಾರ್ಥಕವಾಗಿದೆಯೋ ಅದರಂತೆ ಅಧಿಕಾರಿವಿಶೇಷಣವನ್ನು ಸಮರ್ಥಿಸಲು 'ಅಥ' ಶಬ್ದವು ಸಾರ್ಥಕವಾಗಿದೆ.

'ರಾಜಾ ರಾಜಸೂಯೇನ ಯಜೇತ' 'ರಾಜನು ರಾಜಸೂಯಯಾಗ ಮಾಡಬೇಕು' ಎಂಬ ಶ್ರುತಿಯಿದೆ. ಇದರಿಂದ ರಾಜಸೂಯಯಾಗಕ್ಕೆ ರಾಜನು ಅಧಿಕಾರಿಯೆಂದು ತಿಳಿಯುತ್ತದೆ. "ಬ್ರಾಹ್ಮಣೋ ವಾಜಪೇಯೇನ ಯಜೇತ" "ಬ್ರಾಹ್ಮಣನು ವಾಜಪೇಯಯಾಗವನ್ನು ಮಾಡಬೇಕು" ಈ ಶ್ರುತಿಯಿಂದ ವಾಜಪೇಯಯಾಗ ಮಾಡಲು ಬ್ರಾಹ್ಮಣನು ಅಧಿಕಾರಿಯೆಂದು ತಿಳಿಯುತ್ತದೆ. ಅದರಂತೆ ಪ್ರಕೃತದಲ್ಲಿಯೂ "ಭಕ್ತಿಮಾನ್ ಪರಮೇ ವಿಷ್ಣೌ" "ಸರ್ವೋತ್ತಮನಾದ ವಿಷ್ಣುವಿನಲ್ಲಿ ಭಕ್ತಿಯುಳ್ಳವನು" ಇತ್ಯಾದಿ ವಚನಗಳಿರುವುದರಿಂದ ಬ್ರಹ್ಮವಿಚಾರ ಮಾಡುವವನು ಶಮದಮಾದಿಸಂಪನ್ನನಾಗಿರಬೇಕೆಂದು ತಿಳಿಯುತ್ತದೆ. ಇದನ್ನು ಅಥ ಶಬ್ದವು ಸೂಚಿಸುತ್ತದೆ.

ಹೀಗೆ ವಿಷಯ ಮತ್ತು ಪ್ರಯೋಜನಗಳೇ ಇಲ್ಲವಾದ್ದರಿಂದ ಈ ಗ್ರಂಥವು ನಿರಧಿಕಾರಿಕವಾಗಿದೆಯೆಂಬ ಶಂಕೆಯು ಅತಃ ಮತ್ತು ಬ್ರಹ್ಮಶಬ್ದಗಳಿಂದ ಪರಿಹಾರವಾಗುತ್ತದೆ. ಅಂದರೆ ಅತಃ ಶಬ್ದವು ಪ್ರಯೋಜನಸೂಚಕ. ಬ್ರಹ್ಮಪದವು ವಿಷಯಸೂಚಕವಾದ್ದರಿಂದ ಶಂಕೆಯು ಪರಿಹಾರವಾಗುತ್ತದೆ ಎಂದಷ್ಟೇ ಅಲ್ಲ. ಎರಡೂ ಶಬ್ದಗಳು ವಿಷಯಸೂಚಕಗಳೂ ಪ್ರಯೋಜನಸೂಚಕಗಳೂ ಆಗಿವೆ. ವಿಷಯವಿಲ್ಲವೆಂಬ ಶಂಕೆಯ ಪರಿಹಾರವನ್ನು ಹೇಗೆ ಮಾಡುತ್ತವೆಯೆಂದು ಹಿಂದೆ ಹೇಳಿದ್ದಾಯಿತು. ಈಗ ಪ್ರಯೋಜನವಿಲ್ಲ ಎಂಬ ಆಕ್ಷೇಪವನ್ನು ಪರಿಹಾರ ಮಾಡುತ್ತವೆಂಬುದನ್ನು ವಿವರಿಸಬೇಕಾಗಿದೆ - ವಿಷಯಸಿದ್ಧವಾದರೂ ಜಿಜ್ಞಾಸೆಯು ಸಾಕ್ಷಾತ್ತಾಗಿ ಮೋಕ್ಷ ಕಾರಣವಾಗುವುದಿಲ್ಲ. ಜ್ಞಾನವನ್ನು ಹುಟ್ಟಿಸುವ

ಮೂಲಕ ಮೋಕ್ಷಕಾರಣವಾಗುತ್ತದೆಂದು ಹೇಳಬೇಕು. ಆದರೆ ಜ್ಞಾನವನ್ನು ಕರ್ಮದಿಂದ ಸಂಪಾದನೆ ಮಾಡಬಹುದು. ಅದಕ್ಕೆ ವಿಚಾರವು ಬೇಕಾಗಿಲ್ಲ. "ಕರ್ಮಣಾ ಜ್ಞಾನಮಾತನೋತಿ" "ಕರ್ಮದಿಂದ ಜ್ಞಾನಸಂಪಾದನೆ ಮಾಡಬೇಕು" ಎಂಬ ಶ್ರುತಿಯು ಜ್ಞಾನವು ಕರ್ಮದಿಂದಲೇ ಲಭಿಸುತ್ತದೆಂದು ಹೇಳಿದೆ.

ಮತ್ತು ಜ್ಞಾನವೂ ಕೂಡ ನೇರವಾಗಿ ಮೋಕ್ಷಕಾರಣವಾಗುವುದಿಲ್ಲ. "ಯಸ್ಯ ಪ್ರಸಾದಾತ್" ಇತ್ಯಾದಿ ಶ್ರುತಿಯು ಭಗವದನುಗ್ರಹದಿಂದಲೇ ಮೋಕ್ಷವಾಗುತ್ತದೆಂದು ಹೇಳುತ್ತಿದೆ. ಇನ್ನು ಪ್ರಸಾದವನ್ನು ತಂದಕೊಡುವುದರ ಮೂಲಕವಾಗಿ ಜ್ಞಾನವು ಮೋಕ್ಷಕಾರಣವೆಂದು ಹೇಳಬೇಕು. ಆದರೆ ಇದನ್ನೂ ಒಪ್ಪಲು ಸಾಧ್ಯವಿಲ್ಲ. "ತತ್‌ಕರ್ಮ ಹರಿತೋಷಂ ಯತ್" "ಹರಿಯ ಅನುಗ್ರಹವನ್ನು ತಂದು-ಕೊಡುವಂತಹದ್ದೇ ನಿಜವಾದ ಕರ್ಮ" ಈ ಸ್ಮೃತಿಯು ಕರ್ಮದಿಂದಲೂ ಹರಿಯ ಅನುಗ್ರಹವನ್ನು ಪಡೆಯಬಹುದೆಂದು ಹೇಳುತ್ತಿದೆ. ವಸ್ತುತಸ್ತು ಅದ್ವೈತಿಗಳೇ ಹೇಳುವಂತೆ ಮೋಕ್ಷವನ್ನು ಪಡೆಯಲು ಅನುಗ್ರಹವು ಬೇಕೇ ಆಗಿಲ್ಲ. ಮೋಕ್ಷವೆಂದರೆ ಅಜ್ಞಾನನಿವೃತ್ತಿ, ಅಜ್ಞಾನವಾದರೂ ಸಹ ಜ್ಞಾನದಿಂದ ನಿವೃತ್ತಿಯಾಗುತ್ತದೆ. ಮಧ್ಯದಲ್ಲಿ ಅನುಗ್ರಹವೇನು ಬೇಕಾಗಿಲ್ಲ. ಆದ್ದರಿಂದ ಯಾವುದೇ ರೀತಿಯಲ್ಲಿಯೂ ಜ್ಞಾನವು ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಹೀಗೆ ವಿಚಾರಕ್ಕೆ ಮೋಕ್ಷವೇ ಪ್ರಯೋಜನವೆಂಬುದನ್ನು ಸಮರ್ಥಿಸಲು ಬರುವುದಿಲ್ಲ.

ಈ ರೀತಿಯಾದ ಆಕ್ಷೇಪವನ್ನು ಶಬ್ದವು ಪರಿಹರಿಸುತ್ತದೆ. "ವಿಚಾರದಿಂದ ಜ್ಞಾನವು, ಜ್ಞಾನದಿಂದ ಪ್ರಸಾದವು ಪ್ರಸಾದದಿಂದ ಮೋಕ್ಷವು ದೊರೆಯುತ್ತದೆಂಬ" ವಿಚಾರವು ಪ್ರಮಾಣಸಿದ್ಧವಾಗಿದೆ. ಆದ್ದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು.

ಮತ್ತೊಂದು ಆಕ್ಷೇಪವು ಇದರ ಮೇಲೆ ಬರುತ್ತದೆ - 'ಅಹಂ' ಎಂದು ನಮಗೆ ಬ್ರಹ್ಮಜ್ಞಾನ ಈಗ ಇದ್ದರೂ ಅದರಿಂದ ಮೋಕ್ಷವು ದೊರೆಯುತ್ತಿಲ್ಲ. ಆದ್ದರಿಂದ ವಿಚಾರಕ್ಕೆ ಮೋಕ್ಷವನ್ನು ಪ್ರಯೋಜನವೆಂದು ಹೇಳಲಾಗದು. ಹೀಗೆ ಬಂದ ಆಕ್ಷೇಪವನ್ನು ವಿಷಯಸೂಚಕವಾದ ಬ್ರಹ್ಮಪದವು ಪರಿಹರಿಸುತ್ತದೆ. ಆದ್ದರಿಂದ 'ಅಥ', 'ಅತಃ', 'ಬ್ರಹ್ಮ', ಮೂರೂ ಪದಗಳೂ ಅತ್ಯಂತ ಸಾರ್ಥಕಗಳಾಗಿವೆ.

**ಕಠಿಣಪದಾರ್ಥ**

**ತತ್‌ಕಾಮಃ** = ಸ್ವರ್ಗವನ್ನು ಬಯಸುವವನು. '**ಕರ್ಮಣಾಽಸಿದ್ಧೇಃ**' ಎಂಬುದಕ್ಕೆ ಹಿಂದಿರುವ '**ಇತಿ ಶಂಕಾ ತು**' ಎಂಬಲ್ಲಿ ಅನ್ವಯ ಮಾಡಬೇಕು. **ಪ್ರಸಾದಾದೇಃ ಮೋಕ್ಷಾದಿಹೇತುತ್ವಂ** = ಪ್ರಸಾದಕ್ಕೆ ಮೋಕ್ಷಹೇತುತ್ವವನ್ನು ಜ್ಞಾನಕ್ಕೆ ಪ್ರಸಾದಹೇತುತ್ವವನ್ನು

**प्रकाशः** – तदेवमतश्शब्दार्थं प्रस्थानद्वयोक्तं समर्थ्य, इदानीमथब्रह्मशब्दार्थ-विविक्तत्वेनातःशब्दार्थं निष्कृष्टुम्, अथादेरप्यर्थं वदन् "भक्तिमान् परमे विष्णौ, कर्मणा त्वधमः प्रोक्तः" इत्यादिभाष्यस्योत्सूत्रितत्वभ्रमनिरासायातःशब्दारूढत्वं

**टीकोक्तं स्फोरयन्नुपसंहरति ।। तदेवमित्यादिना ।। यद्वा – इह पूर्वपक्षे** 'विषयाभावादेव नाधिकार्यादि' इत्युक्ततया विषयोपपादकब्रह्मपदेनैवाधिकार्यादिसिद्धेः 'ब्रह्मजिज्ञासा' इत्येव पूर्त्याऽथातःपदयोर्वैयर्थ्यमित्यतो भिन्नभिन्नशङ्कानिरासकत्वात् सार्थक्यमिति भावेन, अथादिपदव्यावर्त्यशङ्का पूर्वं तत्तदर्थं निष्कृष्याह । **तदेवमित्यादिना ।। 'तत्कामः' स्वर्गादिकामः ।। त्रैवर्णिक इति ।।** उभयत्र कर्मब्रह्मतन्त्रगतापशूद्रनयन्यायेनेति भावः । **ब्रह्मातःशब्दाभ्यामथशब्दस्यागतार्थत्वायोक्तम् ।। सत्यपि विषये फले चेति ।। राजत्वादिरिवेति ।। यथा** "राजा राजसूयेन यजेत" इत्यत्र 'राजा' इति वचनाद् राजत्वं तत्राधिकारिविशेषणम्, यथावा "ब्राह्मणो वाजपेयेन यजेत" इत्यत्र ब्राह्मणत्वं, तथा "भक्तिमान् परमे विष्णौ" इत्यादिवचनात् शान्त्यादिरपि तद्विशेषणमित्यर्थः । एतेन "भक्तिमान्" इत्यादिभाष्यं नोत्सूत्रितमित्युक्तं भवति । एतेनैव – शमादिकं नाधिकारिविशेषणमिति मन्यमानाः स्मृतिसूत्रविरोधान्निरस्ताः ।। **'अतश्शब्दब्रह्मशब्दाभ्याम्'** इति यथायोगमन्वयः । तेनाथशब्देनैव निरधिकारिकत्वशङ्कानिरासात् तयोर्वैयर्थ्यमिति निरस्तम् । अत एवेह ब्रह्मपदव्यावर्त्यपूर्वपक्षस्यैव प्रपञ्चनादेवमेव निरधिकारिकत्वशङ्का पूर्वमुक्ता ।

नन्वतश्शब्दस्याधिकारिविशेषणत्वेन प्रकृतमोक्षार्थकत्वेऽपि सप्रयोजनत्वेन विचारकर्तव्यत्वे सम्भवति प्रसादाद्यर्थपरत्ववर्णनमयुक्तमित्यत आह – **एवमिति ।।** न केवलं निष्प्रयोजनत्वाशङ्कानिरासकत्वमतश्शब्दस्य, किन्तु वक्ष्यमाणशङ्काद्वयनिरासकत्वमपीति समुच्चयार्थ एवंशब्दः । यद्वा – 'अतश्शब्दब्रह्मशब्दाभ्याम्' इति द्वयोः प्रत्येकमेवान्वयः । तत्र द्वयोर्यथाक्रमं प्रमाणप्रमेययोरारोपितान्यथाकारशङ्कानिवर्तनेन विषयसमपर्कत्वस्योक्तदिशा स्फुटत्वेन तदनुक्त्वा, निष्प्रयोजनत्वशङ्का च ज्ञानादेः कर्मजन्यत्वादिप्रयुक्तैका, आत्मज्ञाने सत्यपि तदनुपलम्भकृताऽन्या, तद्द्वयोरपि क्रमान्निवर्तनेन द्वयमपि प्रयोजनार्पकमित्येतद् व्यनक्ति ।। **एवमिति ।। न साक्षादिति ।।** "तमेवम्" इति ज्ञानस्यैव मोक्षहेतुत्वश्रुतेः । ज्ञानजनन एव सामर्थ्याच्चेति भावः । 'कर्मणा सिद्धेः' इत्यस्य 'इति

शङ्का' इत्यनेनान्वयः ।। न साक्षादिति ।। ''यस्य प्रसादात्'' इत्यादिश्रुत्या प्रसादस्यैव तद्धेतुत्वश्रवणात्,

''.................................. न हरिं विना ।
ज्ञानस्वभावतोऽपि स्यान्मुक्तिः कस्यापि हि क्वचित् ।।''

इत्याद्यनुव्याख्यानोक्तदिशा स्वतोऽसामर्थ्याच्चेति भावः । प्रसादं विना ज्ञानादेव मोक्ष इत्यत्र युक्तिं चाह ।। ज्ञानेनेति ।। अज्ञाननिवृत्तेरेव मोक्षत्वात् । नहि दीपस्यान्धकारनिवृत्तावन्यापेक्षेति परैरङ्गीकारादिति भावः ।। प्रसादादेरिति ।। प्रसादज्ञानयोर्मोक्षप्रसादहेतुत्वमित्यर्थः । तथा ''श्रवणं मननं चैव'' ''कर्मणा त्वधमः प्रोक्तः'' इत्यादिभाष्योक्तदिशा कर्मणोऽन्तःकरणशुद्धिद्वारा परम्परयैव ज्ञानहेतुत्वं, कर्मादिजन्यप्रसादादेर्मोक्षेतरहेतुत्वं च सूचयता इत्यप्यर्थः । तेन ''कर्मणा'' इत्यादिकं भाष्यं नोत्सूत्रिमिति ध्येयम् ।। ब्रह्मपदेनैवेति ।। अतो ना तश्शब्दारूढत्वप्रतिपादनक्लेश इति भावः। अत एव पूर्वं ब्रह्मपदव्यावर्त्यपूर्वपक्षप्रपञ्चने निष्प्रयोजनत्वशङ्कैवमेवोक्तेति भावः ।

गुरुराजीय – ननु विषयाभावेनैव प्रयोजनादित्रितयस्य पूर्वपक्षितत्वात् सिद्धान्ते ब्रह्मशब्देन विषये साधिते अन्यत्त्रितयं सेत्स्यतीति किमधिकार्यादिसाधकेनाथशब्दादिनेत्याशङ्क्य ब्रह्मशब्दनिवर्त्याधिकारिप्रयोजनशङ्का अथशब्दातःशब्दनिवर्त्या त्वन्येति न वैयर्थ्यमित्याह – तदेवमिति ।। ननु शांत्यादिकमित्यत्रापि सिद्धान्त्यभिमताधिकाराभावाज्जिज्ञासाक्षेप एव पूर्वपक्षेऽभिप्रेतः ।। अतश्शब्दब्रह्मशब्दाभ्यामिति ।। अतश्शब्दब्रह्मशब्दाभ्यामेव निराकृतत्वेन न तदर्थमथशब्दो येन वैयर्थ्यमिति भावः ।

ವಿವರಣೆ - ಇಲ್ಲಿಯ ತನಕ ಪೂರ್ವಪ್ರಸ್ಥಾನವೆನಿಸಿದ ಭಾಷ್ಯ ತತ್ವಪ್ರಕಾಶಿಕೆಯಲ್ಲಿ, ಉತ್ತರಪ್ರಸ್ಥಾನವೆನಿಸಿದ ಅನುವ್ಯಾಖ್ಯಾನ ಸುಧೆಯಲ್ಲಿ ಹೇಳಿದ ಅಥ, ಅತಃ ಶಬ್ದಾರ್ಥಗಳನ್ನು ತಿಳಿದಿದ್ದಾಯಿತು. ಈಗ ಅಥ ಮತ್ತು ಅತಃ ಶಬ್ದಗಳಲ್ಲಿರುವ ಅರ್ಥವ್ಯತ್ಯಾಸವನ್ನು ತಿಳಿಯಬೇಕಾಗಿದೆ. ಅದಕ್ಕೋಸ್ಕರ ಅಥ ಅತಃ ಬ್ರಹ್ಮಶಬ್ದಗಳು ಪರಸ್ಪರವಾಗಿ ಬೇರೆ ಬೇರೆ ಅರ್ಥಗಳನ್ನೇ ಹೇಳುತ್ತಿವೆಯೆಂದು ಸಮರ್ಥಿಸುತ್ತಿದ್ದಾರೆ. ವಸ್ತುತಸ್ತು ಇಲ್ಲಿ ಕೇವಲ ಅತಃಶಬ್ದಾರ್ಥದ ಉಪಸಂಹಾರವನ್ನಷ್ಟೇ ಮಾಡಬೇಕು. ಏಕೆಂದರೆ ಅಥ

ಶಬ್ದಾರ್ಥದ ವಿವರಣೆಯನ್ನು ಹಿಂದೆಯೇ ಮುಗಿಸಿದ್ದಾರೆ, ಆದರೂ ಸಹ ಇವುಗಳ ಅರ್ಥದಲ್ಲಿರುವ ವೈಲಕ್ಷಣ್ಯವನ್ನು ತಿಳಿಯಲು ಮೂರೂ ಶಬ್ದಗಳ ಅರ್ಥವನ್ನು ಹೇಳಿ ಉಪಸಂಹಾರ ಮಾಡುತ್ತಿದ್ದಾರೆ.

ಮತ್ತು "ಭಕ್ತಿಮಾನ್ ಪರಮೇ ವಿಷ್ಣೌ" ಇತ್ಯಾದಿ ಭಾಷ್ಯವಾಕ್ಯಗಳಲ್ಲಿ "ಕರ್ಮಣಾತ್ವಥಮಃ ಪ್ರೋಕ್ತಃ" ಇತ್ಯಾದಿ ಭಾಷ್ಯವಾಕ್ಯಗಳಲ್ಲಿಯೂ ಅಧಿಕಾರಿವರ್ಗದ ತಾರತಮ್ಯವನ್ನು ಅಥಶಬ್ದದ ಅರ್ಥವನ್ನಾಗಿ ಹೇಳಿದ್ದಾರೆ. ಭಾಷ್ಯದಲ್ಲಿ ಸಮರ್ಥಿಸಿದ ಈ ವಿಚಾರವೆಲ್ಲವೂ ಸೂತ್ರದಲ್ಲಿ ಹೇಳಿಲ್ಲ. ಆದ್ದರಿಂದ ಉತ್ಸೂತ್ರಿತವಾಗುತ್ತದೆ. ಈ ರೀತಿಯಾದ ಭ್ರಮೆಯನ್ನು ಪರಿಹರಿಸಲು ಟೀಕೆಯಲ್ಲಿ ಮಾಡಿದ ಸೂತ್ರಾರೂಢವನ್ನು ತೋರಿಸುತ್ತಿದ್ದಾರೆ. ಹಾಗೆಯೇ ಅಥ ಅತಃ ಶಬ್ದಗಳ ಅರ್ಥವನ್ನು ಉಪಸಂಹಾರ ಮಾಡುತ್ತಿದ್ದಾರೆ. "ತದೇವಂ" ಇತ್ಯಾದಿ ವಾಕ್ಯದಿಂದ.

ಅಥವಾ ಈ ವಾಕ್ಯಕ್ಕೆ ಮತ್ತೊಂದು ಬಗೆಯಲ್ಲಿ ಅವತಾರಿಕೆಯನ್ನು ಹೇಳಬಹುದು. ಈ ಅಧಿಕರಣದ ಪೂರ್ವಪಕ್ಷದಲ್ಲಿ ವಿಷಯವಿಲ್ಲವೆಂಬುದನ್ನೇ ದೀರ್ಘವಾಗಿ ಹೇಳಿದ್ದಾರೆ. ಸಿದ್ಧಾಂತದಲ್ಲಿಯೂ ಹಾಗೆಯೇ ಮಾಡಿದ್ದಾರೆ. ಅಧಿಕಾರಿ ಸಂಬಂಧಗಳ ಅಭಾವವನ್ನು ದೀರ್ಘವಾಗಿ ಮಾಡಿಲ್ಲ. ಕೇವಲ ವಿಷಯವಿಲ್ಲದ್ದರಿಂದಲೇ ಅಧಿಕಾರ್ಯಾದಿಗಳನ್ನು ಇಲ್ಲವೆಂದಿದ್ದಾರೆ. ಆದ್ದರಿಂದ ವಿಷಯವನ್ನು ಉಪಪಾದನ ಮಾಡುವ ಬ್ರಹ್ಮಪದದಿಂದಲೇ ಅಧಿಕಾರ್ಯಾದಿಗಳು ಸಿದ್ಧವಾಗುತ್ತವೆ. ಪುನಃ ಅಧಿಕಾರ್ಯಾದಿಗಳನ್ನು ಹೇಳಲು ಅಥ ಅತಃ ಶಬ್ದಗಳು ಬೇಕಾಗಿಲ್ಲ. ಕೇವಲ 'ಬ್ರಹ್ಮಜಿಜ್ಞಾಸಾ' ಎಂದಷ್ಟೇ ಸೂತ್ರವು ಸಾಕು. ಈರೀತಿಯಾಗಿ ಪ್ರಬಲವಾದ ಆಕ್ಷೇಪ ಬರುತ್ತದೆ. ಇದನ್ನು ಪರಿಹರಿಸಲು "ತದೇವಂ" ಇತ್ಯಾದಿ ವಾಕ್ಯಗಳು ಹೊರಟಿವೆ. ಅಥಶಬ್ದದಿಂದ ಯಾವ ಶಂಕೆಯು ಪರಿಹಾರವಾಗುತ್ತದೋ, ಅದಕ್ಕಿಂತ ವಿಭಿನ್ನವಾದ ಶಂಕೆಯು ಅತಃ ಎಂಬ ಶಬ್ದದಿಂದ ಪರಿಹಾರವಾಗುತ್ತದೆ. ಆದ್ದರಿಂದ ಎರಡೂ ಪದಗಳು ಸಾರ್ಥಕಗಳಾಗಿವೆ. ಈ ಅಭಿಪ್ರಾಯದಿಂದ ಅಥ ಮತ್ತು ಅತಃ ಪದದಿಂದ ಪರಿಹಾರವಾಗುವ ಆಶಂಕೆಯನ್ನು ವಿವರಿಸುತ್ತಾ ಅದರ ಪರಿಹಾರವನ್ನು ಸಮರ್ಥಿಸುತ್ತಿದ್ದಾರೆ. ಇದರಿಂದ ಅಥ, ಅತಃ, ಬ್ರಹ್ಮ ಈ ಮೂರು ಪದಗಳಿಗೆ ಇರುವ ಅರ್ಥವ್ಯತ್ಯಾಸವು ಅವುಗಳ ಅನಿವಾರ್ಯತೆಯು ಸ್ಪಷ್ಟವಾಗುತ್ತವೆ.

ಪೂರ್ವಮೀಮಾಂಸೆಯಲ್ಲಿಯೂ ಅಪಶೂದ್ರಾಧಿಕರಣವು ಬರುತ್ತದೆ. ಬ್ರಹ್ಮಮೀಮಾಂಸೆಯಲ್ಲಿಯೂ ಅಪಶೂದ್ರಾಧಿಕರಣವು ಬರುತ್ತದೆ. ಆ ಎರಡೂ ಕಡೆ ಹೇಳಿದ ಅಪಶೂದ್ರಾಧಿಕರಣದ ನ್ಯಾಯದಿಂದ ಸ್ವರ್ಗಕಾಮಿಯಾದ ತ್ರೈವರ್ಣಿಕರಷ್ಟೇ ಜ್ಯೋತಿಷ್ಟೋಮದಲ್ಲಿ ಅಧಿಕಾರಿಗಳೆಂದು ತಿಳಿಯುತ್ತದೆ. ಅದರಂತೆ ಇಲ್ಲಿಯೂ ಅತಃ ಮತ್ತು ಬ್ರಹ್ಮಶಬ್ದಗಳನ್ನು ಹೇಳಿದರೆ ಸಾಕು ವಿಷಯ ಫಲಗಳನ್ನು ಹೇಳಿದಂತಾಗುತ್ತದೆ. ಶಮದಮಾದಿಗಳು ಬೇಡ. ಅದನ್ನು ತಿಳಿಸುವ ಅಥಶಬ್ದವೂ ಬೇಡ ಈ ಶಂಕೆಗೆ ಉತ್ತರವಾಗಿ ಸೂತ್ರದಲ್ಲಿ 'ಅಥ' ಶಬ್ದವನ್ನು ಹೇಳಿದ್ದಾರೆ.

"ಭಕ್ತಿಮಾನ್ ಪರಮೇ ವಿಷ್ಣೌ" ಇತ್ಯಾದಿ ಪ್ರಮಾಣವಚನಗಳನ್ನು ಉದಾಹರಿಸಿದ್ದು ಸೂತ್ರದಲ್ಲಿಲ್ಲ-ವಾದ್ದರಿಂದ ಉತ್ಸೂತ್ರಿತವಾಯಿತು ಎಂದು ಹಿಂದೆ ಶಂಕಿಸಲಾಗಿತ್ತು. ಇದೂ ಈಗ ಪರಿಹಾರವಾಯಿತು. ಸೂತ್ರಕಾರರು 'ಅತಃ' ಮತ್ತು 'ಬ್ರಹ್ಮ' ಶಬ್ದಗಳನ್ನು ಪ್ರಯೋಗ ಮಾಡಿ ನಿರಧಿಕಾರಿಕತ್ವವನ್ನು ಪರಿಹಾರ

ಮಾಡಿ ಪುನಃ ಅಥ ಶಬ್ದವನ್ನು ಹೇಳಿದ್ದಾರೆ. ಇದರ ಅನ್ಯಥಾನುಪಪತ್ತಿಯಿಂದ ಕೇವಲ ಮೋಕ್ಷಕಾಮನೆಯುಳ್ಳವನು ಅಧಿಕಾರಿಯಲ್ಲ. ಹೊರತು ಬೇರೆ ಬೇರೆ ಪ್ರಮಾಣಗಳ ಬಲದಿಂದ ಅಧಿಕಾರಿವಿಶೇಷಣಗಳನ್ನು ತಿಳಿಸಿದ್ದಾರೆ. ಆ ಅಧಿಕಾರಿವಿಶೇಷಣಗಳು ಯಾವುದೆಂದು ಆಚಾರ್ಯರು 'ಭಕ್ತಿಮಾನ್' ಇತ್ಯಾದಿ ಶ್ಲೋಕದಿಂದ ವಿವರಿಸಿದ್ದಾರೆ.

ರಾಮಾನುಜರ ಆಕ್ಷೇಪ - ಶಮಾದಿಗಳು ಕೇವಲ ಧ್ಯಾನಕ್ಕೆ ಅಂಗಗಳೇ ಹೊರತು ಜಿಜ್ಞಾಸೆಗೆ ಅಂಗವಲ್ಲ. ಇನ್ನು ನಿತ್ಯಾನಿತ್ಯವಸ್ತುವಿವೇಕವು ಅನ್ಯೋನ್ಯಾಶ್ರಯಗ್ರಸ್ತವಾದ್ದರಿಂದ ಜಿಜ್ಞಾಸೆಗೆ ಅಂಗವಲ್ಲ.

ಪರಿಹಾರ - ಮೇಲೆ ಹೇಳಿದ ಮಾತುಗಳಿಂದಲೇ ಇವರ ವಾದವೂ ನಿರಸ್ತವಾಯಿತು. ಇವರಿಗೆ ಸ್ಮೃತಿ ಮತ್ತು ಸೂತ್ರವಿರೋಧ ಬರುತ್ತದೆ. ಏಕೆಂದರೆ ಸೂತ್ರಕಾರರೇ 'ಅಥ' ಶಬ್ದದಿಂದ ಶಮಾದಿಗಳನ್ನು ಜಿಜ್ಞಾಸೆಗೆ ಅಂಗವೆಂದು ಹೇಳಿದ್ದಾರೆ. ಇದು ಹೇಗೆ ಗೊತ್ತಾಗುತ್ತದೆಂದರೆ ಸ್ಮೃತಿಬಲದಿಂದ ಅತಃ ಬ್ರಹ್ಮಶಬ್ದಗಳೇ ಸಾಕಾಗಿರುವಾಗ ಪುನಃ ಅಥಶಬ್ದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಸ್ಮೃತಿಯಲ್ಲಿ ಹೇಳಿದ ಅಧಿಕಾರಿವಿಶೇಷಣಗಳು ಸೂತ್ರಕಾರರಿಗೆ ಸಮ್ಮತವೆಂದು ತಿಳಿಯುತ್ತದೆ. ಹೀಗೆ ರಾಮಾನುಜರಿಗೆ ಸ್ಮೃತಿ ಸೂತ್ರವಿರೋಧ ಬರುತ್ತದೆ.

ಗ್ರಂಥದಲ್ಲಿ 'ಅತಃಶಬ್ದಬ್ರಹ್ಮಶಬ್ದಾಭ್ಯಾಂ' ಎಂದಿದೆ. ಇದರ ಹಿಂದೆ 'ವಿಷಯ ಪ್ರಯೋಜನಾಭಾವಾತ್' ಎಂದಿದೆ. ಇದನ್ನು ನೋಡಿದಾಗ ಅತಃ ಶಬ್ದದಿಂದ ವಿಷಯಾಭಾವಶಂಕೆ ಹೋಯಿತು, ಬ್ರಹ್ಮಶಬ್ದದಿಂದ ಪ್ರಯೋಜನಾಭಾವಶಂಕೆ ಹೋಯಿತೆಂದು ಅನಿಸುತ್ತದೆ. ಆದರೆ ಯಥಾಯೋಗ್ಯವಾಗಿ ಅನ್ವಯವನ್ನು ಮಾಡಬೇಕು. ಅತಃಶಬ್ದದಿಂದ ಪ್ರಯೋಜನಾಭಾವಶಂಕೆಯು ಬ್ರಹ್ಮಶಬ್ದದಿಂದ ವಿಷಯಾಭಾವಶಂಕೆಯೂ ನಿರಸ್ತವಾಯಿತೆಂದು ತಿಳಿಯಬೇಕು.

ಶಂಕೆ - 'ಅಥ' ಶಬ್ದದಿಂದಲೇ ನಿರಧಿಕಾರಿಕತ್ವಶಂಕೆಯು ನಿರಸ್ತವಾಯಿತು. ಪುನಃ ಅತಃ ಮತ್ತು ಬ್ರಹ್ಮಶಬ್ದಗಳು ವ್ಯರ್ಥ.

ಪರಿಹಾರ :- ಈ ಶಂಕೆಯೂ ಮೇಲಿನ ಮಾತುಗಳಿಂದಲೇ ನಿರಸ್ತವಾಯಿತು. ಅತಃ ಬ್ರಹ್ಮ ಶಬ್ದಗಳು ನಿರಧಿಕಾರಿಕತ್ವಶಂಕೆಯನ್ನು ಪರಿಹಾರ ಮಾಡುತ್ತವೆ. ಅಥಪದವು ಆ ಅಧಿಕಾರಿಯ ವಿಶೇಷಣದ ಬಗ್ಗೆ ವಿವರಣೆ ನೀಡುತ್ತದೆ. ಆದ್ದರಿಂದ ಮೂರೂ ಪದಗಳು ಸಾರ್ಥಕ.

ನ್ಯಾಯವಿವರಣ, ಅನುವ್ಯಾಖ್ಯಾನ, ತತ್ವಪ್ರಕಾಶಿಕಾ, ಚಂದ್ರಿಕಾ ಎಲ್ಲದರಲ್ಲೂ ಬ್ರಹ್ಮಪದವ್ಯಾವರ್ತ್ಯವಾದ ಪೂರ್ವಪಕ್ಷವನ್ನೇ ಬಹಳವಾಗಿ ಮಾಡಲಾಗಿದೆ. ಆದ್ದರಿಂದಲೇ ವಿಷಯ ಪ್ರಯೋಜನಾದಿಗಳಿಲ್ಲದಿರುವುದರಿಂದ ನಿರಧಿಕಾರಿಕತ್ವಶಂಕೆಯನ್ನು ಮಾಡಿದ್ದರು. ಆ ಅಧಿಕಾರಿಯ ವಿಶೇಷಣಗಳ ಬಗ್ಗೆ ಆಕ್ಷೇಪಪರಿಹಾರಗಳನ್ನು ಮಾಡಿಲ್ಲ. ಏಕೆಂದರೆ ಅಧಿಕಾರಿವಿಶೇಷಣಗಳ ಶಂಕೆಯು ಬ್ರಹ್ಮಪದವ್ಯಾವರ್ತ್ಯವಲ್ಲ ಅಥಶಬ್ದವ್ಯಾವರ್ತ್ಯವಾದದ್ದು. ಈ ಅಂಶವನ್ನು ಇಲ್ಲಿ ಗಮನಿಸಬೇಕು.

ಶಂಕೆ - 'ಅತಃ' ಶಬ್ದಕ್ಕೆ ಜ್ಞಾನ, ಪ್ರಸಾದ ಇವುಗಳನ್ನೆಲ್ಲ ಅರ್ಥವನ್ನಾಗಿ ಏಕೆ ಹೇಳಬೇಕು? ಅಥ ಶಬ್ದದಿಂದ ಮುಮುಕ್ಷಾ ಎಂಬ ಅಧಿಕಾರಿವಿಶೇಷಣವಾಗಿ ಮೋಕ್ಷವು ಪ್ರಕೃತವಾಗಿದೆ. ಅಂತಹ

ಮೋಕ್ಷರೂಪಪ್ರಯೋಜವಿರುವುದರಿಂದ ಬ್ರಹ್ಮವಿಚಾರವು ಸಾರ್ಥಕವಾಗಿದೆ ಎಂಬ ಅರ್ಥವನ್ನು ಅತಃ ಶಬ್ದವು ಹೇಳಿದರೆ ಸಾಕು.

ಸಮಾಧಾನ :- ನಿಷ್ಪ್ರಯೋಜನತ್ವಶಂಕೆಯ ನಿರಾಸವಷ್ಟೇ ಅತಃ ಶಬ್ದದ ಪ್ರಯೋಜನವಲ್ಲ. ಹೀಗೆ ಮುಂದೆ ಹೇಳುವ ಎರಡು ಶಂಕೆಗಳ ನಿರಾಸವೂ ಅತಃಶಬ್ದದ ಉದ್ದೇಶವಾಗಿದೆ. ಇದನ್ನು ತಿಳಿಸಲು ಗ್ರಂಥದಲ್ಲಿ 'ಏವಂ' ಎಂದು ಹೇಳಿದ್ದಾರೆ. ಅಥವಾ 'ಏವಂ' ಇತ್ಯಾದಿ ವಾಕ್ಯಕ್ಕೆ ಮತ್ತೊಂದು ಬಗೆಯಲ್ಲಿ ಅವತಾರಿಕೆ ನೀಡಬಹುದು. ಅತಃ ಶಬ್ದ, ಬ್ರಹ್ಮ ಶಬ್ದ ಎರಡೂ ಪ್ರಯೋಜನಾರ್ಥಕಗಳೇ ಆಗಿವೆ. ಏಕೆಂದರೆ ಎರಡೂ ನಿಷ್ಪ್ರಯೋಜನತ್ವಶಂಕೆಯನ್ನು ಪರಿಹಾರಿಸುತ್ತವೆ. ಜ್ಞಾನಾದಿಗಳು ಕರ್ಮಾದಿಜನ್ಯವಾದ್ದರಿಂದ ವಿಚಾರವು ಬೇಡವೆಂಬ ನಿಷ್ಪ್ರಯೋಜನತ್ವ ಶಂಕೆಯನ್ನು ಅತಃಶಬ್ದವು ಪರಿಹಾರ ಮಾಡುತ್ತಿದೆ. ಆತ್ಮಜ್ಞಾನವಿದ್ದರೂ ಮೋಕ್ಷ ಸಿಗುತ್ತಿಲ್ಲವಾದ್ದರಿಂದ ವಿಚಾರವು ಬೇಡವೆಂಬ ನಿಷ್ಪ್ರಯೋಜನತ್ವ ಶಂಕೆಯನ್ನು ಬ್ರಹ್ಮಶಬ್ದವು ಪರಿಹಾರ ಮಾಡುತ್ತಿದೆ. ಆದ್ದರಿಂದ ಅತಃಶಬ್ದ ಬ್ರಹ್ಮಶಬ್ದ ಎರಡೂ ಪ್ರಯೋಜನಾರ್ಥಕ-ಗಳೆಂದು ಸಿದ್ಧವಾಯಿತು. ಹೀಗೆ ಎರಡೂ ಪದಗಳು ಪ್ರತ್ಯೇಕವಾಗಿ ವಿಷಯಸಮರ್ಪಕಗಳೂ ಆಗಿವೆ. ಪ್ರಯೋಜನಸಮರ್ಪಕಗಳೂ ಆಗಿವೆ.

ಅನುವ್ಯಾಖ್ಯಾನದಲ್ಲಿ ಹೇಳಿದಂತೆ 'ವೇದಪ್ರಾಮಾಣ್ಯಾತ್' ಇತ್ಯಾದಿ ಐದು ಅರ್ಥಗಳಿವೆ. ಅವುಗಳಲ್ಲಿ ಕೆಲವು ಪ್ರಮಾಣಾರೋಪಿತಶಂಕಾನಿವರ್ತಕಗಳು. ಕೆಲವು ಪ್ರಮೇಯಾರೋಪಿತ ಶಂಕಾನಿವರ್ತಗಳು ಹೀಗೆ ಅತಃ ಮತ್ತು ಬ್ರಹ್ಮ ಎಂಬೆರಡೂ ಪದಗಳೂ ವಿಷಯಸಮರ್ಪಕಗಳಾಗಿವೆ. ಇದನ್ನು ಹಿಂದೆಯೇ ಸ್ಪಷ್ಟಪಡಿಸಿದ್ದರಿಂದ ಇಲ್ಲಿ ಹೇಳಿಲ್ಲ. ಆದರೆ ಎರಡೂ ಪ್ರಯೋಜನಸಮರ್ಪಕ ಹೇಗೆಂಬುದನ್ನು ಇಲ್ಲಿ ವಿವರಿಸುತ್ತಿದ್ದಾರೆ.

ಈ ನಿಟ್ಟಿನಲ್ಲಿ 'ಏವಂ' ಪದದ ಅರ್ಥವನ್ನು ಹೀಗೆ ತಿಳಿಯಬೇಕು - ವಿಷಯಾಭಾವ ಸಮರ್ಪಕವಾದ ಶಂಕೆಯನ್ನು ಹಿಂದೆ ಹೇಳಿದಂತೆ ಅತಃ ಬ್ರಹ್ಮಶಬ್ದಗಳು ಪರಿಹರಿಸುತ್ತವೆ. ಏವಂ = ಹಾಗೆಯೇ, ಪ್ರಯೋಜನಾಭಾವಶಂಕೆಯನ್ನು ಎರಡೂ ಪದಗಳು ಪರಿಹರಿಸುತ್ತವೆಂದು ಗ್ರಂಥಕಾರರು ಹೇಳುತ್ತಿದ್ದಾರೆ.

ಜಿಜ್ಞಾಸೆಯು ಸಾಕ್ಷಾತ್ತಾಗಿ ಮೋಕ್ಷಕಾರಣವಾಗದು ಎಂಬುದನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದೆ -

**ನರ್ತೇ ತ್ವತ್‌ಕ್ರಿಯತೇ ಕಿಂಚಿದಿತ್ಯಾದೇರ್ನ ಹರಿಂ ವಿನಾ ।**
**ಜ್ಞಾನಸ್ವಭಾವತೋಽಪಿ ಸ್ಯಾತ್ ಮುಕ್ತಿಃ ಕಸ್ಯಾಪಿ ಹಿ ಕ್ವಚಿತ್ ॥**

"ಹೇ ಪರಮಾತ್ಮನೇ ! ನಿನ್ನ ಪ್ರೇರಣೆ ಇಲ್ಲದೆ ಯಾವ ಕ್ರಿಯೆಯೂ ನಡೆಯುವುದಿಲ್ಲ; ಇವೇ ಮೊದಲಾದ ಆಗಮಗಳಿಂದ ಮೋಕ್ಷವು ಜ್ಞಾನಸ್ವಭಾವದಿಂದ ದೊರೆಯುವುದಾದರೂ ಸಹ ಶ್ರೀಹರಿಯ ಅನುಗ್ರಹವಿಲ್ಲದೆ ಯಾವತ್ತೂ ಯಾರಿಗೂ ದೊರೆಯುವುದಿಲ್ಲ." ಎಂಬರ್ಥದ ಈ ಮಾತಿನಂತೆ ಮೋಕ್ಷಕ್ಕಾಗಿ ಪ್ರಸಾದವು ಬೇಕೇ ಬೇಕೆಂದು ತಿಳಿಯುತ್ತದೆ.

*ಪರಿಪೂರ್ಣಚಂದ್ರಿಕಾ*

ದೀಪವು ಅಂಧಕಾರವನ್ನು ನಿವೃತ್ತಿ ಮಾಡಬೇಕಾದರೆ ಮತ್ತೊಂದರ ಅಪೇಕ್ಷೆಯು ಬೇಕಿಲ್ಲ. ಅದರಂತೆ ಜ್ಞಾನದಿಂದ ಅಜ್ಞಾನನಿವೃತ್ತಿಯಾಗಬೇಕಾದರೆ ಪ್ರಸಾದಾದಿಗಳ ಅಪೇಕ್ಷೆಯು ಇಲ್ಲ.

ಈ ಆಶಂಕೆಯನ್ನು ಅತಃಶಬ್ದವು ಪರಿಹರಿಸುತ್ತದೆಂದು ತಿಳಿಯಬೇಕು. ಅದು ಹೀಗೆ -

ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವಚ ।
ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥

ಶ್ರವಣ, ಮನನ, ಧ್ಯಾನ, ಭಕ್ತಿ ಇವುಗಳೇ ಜ್ಞಾನಸಂಪಾದನೆಗೆ ಪ್ರಧಾನವಾದ ಕಾರಣಗಳು. ಬೇರೆ ಯಾವುದೂ ಅಲ್ಲ''

**ಕರ್ಮಣಾತ್ವಧಮಃ ಪ್ರೋಕ್ತಃ ಪ್ರಸಾದಃ**

ಕರ್ಮದಿಂದ ಲಭಿಸುವ ಭಗವದನುಗ್ರಹವು ಅತ್ಯಲ್ಪ. ಇವೇ ಮೊದಲಾದ ಭಾಷ್ಯದ ಮಾತುಗಳಿಂದ ವಿಚಾರಕ್ಕೆ ಜ್ಞಾನವು, ಜ್ಞಾನಕ್ಕೆ ಭಗವದನುಗ್ರಹವು. ಭಗವದನುಗ್ರಹಕ್ಕೆ ಮೋಕ್ಷವೂ ಪ್ರಯೋಜನವೆಂದು ತಿಳಿಯುತ್ತದೆ. ಅಷ್ಟೇ ಅಲ್ಲದೆ ಆಚರಿಸಿದ ಶುಭಕರ್ಮವು ಅಂತಃಕರಣಶುದ್ಧಿಯನ್ನುಂಟುಮಾಡುತ್ತದೆ. ಅದರಿಂದ ಜ್ಞಾನವು ಪ್ರಾಪ್ತವಾಗುತ್ತದೆ. ಕರ್ಮವು ಭಗವದನುಗ್ರಹವನ್ನು ತಂದುಕೊಟ್ಟರೂ ಸಹ ಆ ಅನುಗ್ರಹವು ಅಲ್ಪಪ್ರಮಾಣದಲ್ಲಿರುತ್ತದೆ ಮೋಕ್ಷಕಾರಣವಾಗಲು ಸಾಧ್ಯವಿಲ್ಲ. ಸ್ವರ್ಗಾದಿಗಳನ್ನಷ್ಟೇ ತಂದು ಕೊಡುತ್ತದೆ. ಹೀಗೆ ಬ್ರಹ್ಮವಿಚಾರ ಮಾಡುವುದರಿಂದ ಮೋಕ್ಷವೆಂಬ ಮಹಾಪ್ರಯೋಜನವೇ ಲಭಿಸುತ್ತದೆಂದು ಅತಃಶಬ್ದವು ಘೋಷಿಸುತ್ತದೆ. ಹೀಗೆ ಹೇಳಿದ್ದರಿಂದ ಒಂದು ಆಕ್ಷೇಪವು ಪರಿಹಾರವಾಯಿತು - 'ಕರ್ಮಣಾ ತ್ವಧಮಃ' ಇತ್ಯಾದಿ ಭಾಷ್ಯವು ಸೂತ್ರಕ್ಕೆ ಸಂಬಂಧವಿಲ್ಲದ ವಿಚಾರವನ್ನು ಹೇಳುತ್ತಿದೆಯೆಂದು, ಆದರೆ ಇದೆಲ್ಲವು ಅತಃ ಶಬ್ದದ ಅಭಿಪ್ರಾಯವೇ ಆಗಿದೆಯೆಂದು ಟೀಕೆಯಲ್ಲಿ ಹೇಳಿದೆ. ಹಾಗಾಗಿ ಯಾವ ಆಕ್ಷೇಪಕ್ಕೂ ಅವಕಾಶವಿಲ್ಲ.

ಇನ್ನು ಅಥಶಬ್ದದಿಂದ ಮೋಕ್ಷವಷ್ಟೇ ಪ್ರಕೃತವಾಗಿದೆ. ಅದನ್ನಷ್ಟೇ ಅತಃ ಶಬ್ದವು ಹೇಳಿದರೆ ಸಾಕು. ಜ್ಞಾನ, ಅನುಗ್ರಹಾದಿಗಳನ್ನು ಏಕೆ ಹೇಳಬೇಕು? ಭಾಷ್ಯದಲ್ಲಿ ಅದರ ವಿಶ್ಲೇಷಣೆಯಾದರೂ ಏಕೆ ಬೇಕು? ಮೇಲೆ ಹೇಳಿದ ಸಮಾಧಾನದಿಂದಲೇ ಈ ಆಕ್ಷೇಪಕ್ಕೆ ಈಗ ಅವಕಾಶವೇ ಇಲ್ಲ.

ಇದುವರೆಗೂ ಹೇಳಿದ ವಿಚಾರವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಪ್ರಯೋಜನವಿಲ್ಲವೆಂಬ ಆಕ್ಷೇಪವು ಎರಡು ರೀತಿಯಲ್ಲಿ ಬರುತ್ತದೆ -

೧) ಜ್ಞಾನವನ್ನು ಮತ್ತು ಭಗವದನುಗ್ರಹವನ್ನು ಕರ್ಮದಿಂದ ಸಂಪಾದನೆ ಮಾಡಬಹುದು. ಅದಕ್ಕೆ ವಿಚಾರವು ಬೇಕಾಗಿಲ್ಲ. ಆದ್ದರಿಂದ ವಿಚಾರಕ್ಕೆ ಪ್ರಯೋಜನವಿಲ್ಲ.

೨) ಬ್ರಹ್ಮಜ್ಞಾನವು 'ಅಹಂ' ಎಂದು ಇದ್ದರೂ ಅದರಿಂದ ಮೋಕ್ಷವು ದೊರೆಯುತ್ತಿಲ್ಲ. ಆದ್ದರಿಂದ ಬ್ರಹ್ಮವಿಚಾರವು ಅನಾವಶ್ಯಕ. ಮೊದಲನೆಯ ಆಕ್ಷೇಪವನ್ನು ಅತಃಶಬ್ದವು ಎರಡನೆಯ ಆಕ್ಷೇಪವನ್ನು ಬ್ರಹ್ಮಶಬ್ದವು ಪರಿಹಾರ ಮಾಡುತ್ತಿದೆ ಎಂದು.

*ಜಿಜ್ಞಾಸಾಧಿಕರಣ*

ಈ ರೀತಿಯಾಗಿ 'ಅಥ' 'ಅತಃ' 'ಬ್ರಹ್ಮ' ಮೂರೂ ಶಬ್ದಗಳೂ ಜಿಜ್ಞಾಸೆಯ ಮೇಲೆ ಬರುವ ಬೇರೆ ಬೇರೆ ಆಕ್ಷೇಪಗಳನ್ನು ಪರಿಹರಿಸುತ್ತಾ ಸಾರ್ಥಕಗಳಾಗಿವೆ.

• • • • •

## ಬ್ರಹ್ಮಸೂತ್ರಾರ್ಥದಲ್ಲಿ ಯಾವುದೇ ದೋಷವಿಲ್ಲ

**तात्पर्यचन्द्रिका –**

**यद्यपि विषयादिकं समन्वयाध्यायादौ वक्ष्यते । तथाऽपि शास्त्रेण विषयादिकं निश्चित्य शास्त्रे प्रवृत्तावन्योन्याश्रयादादौ तत् सूचनीयम् । अध्ययनविधिवाक्यवदेतत्सूत्रस्यापि शास्त्रान्तर्गतस्य शास्त्रारम्भ-प्रतिपादकेन स्वेनैवारम्भसिद्धेर्नानवस्था । यद्यपि विषयादिकमागमादेवापाततः प्रतीतम्, तथाऽपि पूर्वपक्षोक्तन्यायेन तदभावशङ्कायां न्यायेनैतत् प्रतिपादयितुं सूत्रम् । एवंच अथशब्दलभ्यहेतुत्वस्यैवातश्शब्देनोक्त्या भास्करस्येव नास्माकं पौनरुक्त्यम् । अधिकारिविशेषणस्य शमादेर्विचारकारकत्वस्याथशब्देन लाभेऽपि सप्रयोजनत्वादेर्विचारकर्तव्यताप्रमाणस्यातश्शब्देनोक्तेः ।**

ಅನುವಾದ - ವಿಷಯ ಅಧಿಕಾರಾದಿಗಳನ್ನು ಮುಂದಿನ ಸಮನ್ವಯಾಧ್ಯಾಯಾದಿಗಳಲ್ಲೇ ಹೇಳುತ್ತಾರೆ. ಪ್ರಥಮಸೂತ್ರದಲ್ಲಿ ಹೇಳಬೇಕಾಗಿಲ್ಲ. ಆದರೂ ಸಹ ಶಾಸ್ತ್ರದಿಂದಲೇ ವಿಷಯಾದಿಗಳನ್ನು ಹೇಳಿದರೆ ಶಾಸ್ತ್ರಾಧ್ಯಯನದಲ್ಲಿ ಪ್ರವೃತ್ತಿ ಮಾಡಲು ಆಗುವುದಿಲ್ಲ. ವಿಷಯ ಪ್ರಯೋಜನಾದಿಗಳು ಮೊದಲು ತಿಳಿದರಷ್ಟೇ ಅಂತಹ ಶಾಸ್ತ್ರದಲ್ಲಿ ಪ್ರವೃತ್ತಿ ಕೂಡುತ್ತದೆ. ಈಗ ಶಾಸ್ತ್ರಾಧ್ಯಯನದಿಂದ ತಿಳಿಯುತ್ತವೆ ಎಂದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಆದ್ದರಿಂದ ವಿಷಯಾದಿಗಳನ್ನು ಪ್ರಾರಂಭದಲ್ಲಿ ಸಂಕ್ಷೇಪವಾಗಿ ಹೇಳಲೇಬೇಕು. ಈಗ ಅನ್ಯೋನ್ಯಾಶ್ರಯವಿಲ್ಲ. ಹಾಗಾದರೆ ಈ ಸೂತ್ರದ ಅಧ್ಯಯನಕ್ಕೆ ಮತ್ತೊಂದರ ಅಧ್ಯಯನವು ಬೇಕು. ಹಾಗಾಗಿ ಅನವಸ್ಥಾ ದೋಷ ಬರುತ್ತದಲ್ಲವೇ?

ಇದಕ್ಕೆ ಉತ್ತರ - ಈ ಸೂತ್ರದ ಅಧ್ಯಯನಕ್ಕೆ ಮತ್ತೊಂದರ ಅಧ್ಯಯನ ಬೇಕಾಗಿಲ್ಲ. ಯಾವ ರೀತಿಯಾಗಿ "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ವಾಕ್ಯವು ತನ್ನ ಅಧ್ಯಯನಕ್ಕೆ ಪ್ರೇರಕವಾಗಿ ಸಮಸ್ತವೇದದ ಅಧ್ಯಯನಕ್ಕೂ ಪ್ರೇರಕವಾಗುತ್ತದೋ, ಅದರಂತೆ ಈ ಸೂತ್ರವೂ ಸಹ ಶಾಸ್ತ್ರದ ಒಂದು ಭಾಗವಾಗಿರುವುದರಿಂದ "ಶಾಸ್ತ್ರಾಧ್ಯಯನವನ್ನು ಮಾಡಬೇಕು" ಎಂದರೆ ತನ್ನ ಅಧ್ಯಯನವನ್ನು ಮಾಡಬೇಕೆಂದಂತಾಗುತ್ತದೆ. ಆದ್ದರಿಂದ ತನ್ನ ಅಧ್ಯಯನಕ್ಕೆ ತಾನೇ ಪ್ರೇರಕವಾಗಿ ಮತ್ತೊಂದನ್ನು ಅಪೇಕ್ಷಿಸುತ್ತಿಲ್ಲ. ಹಾಗಾಗಿ ಅನಾವಸ್ಥಾ ಬರುವುದಿಲ್ಲ.

*ಪರಿಪೂರ್ಣಚಂದ್ರಿಕಾ*

ವಸ್ತುತಸ್ತು ಈ ವಿಚಾರಶಾಸ್ತ್ರವನ್ನು ಅಧ್ಯಯನ ಮಾಡುವ ಮೊದಲು ಉಪನಿಷದ್ ಭಾಷ್ಯಾದಿಗಳ ಅಧ್ಯಯನವನ್ನು ಮಾಡಿರಬೇಕು. ಆ ಕಾಲದಲ್ಲಿಯೇ ಈ ಶಾಸ್ತ್ರದ ವಿಷಯ ಪ್ರಯೋಜನಾದಿಗಳು ತಿಳಿದುಬಿಡುತ್ತವೆ. ಪುನಃ ಪ್ರಥಮ ಸೂತ್ರವು ಅದನ್ನೇ ಹೇಳುವುದು ವ್ಯರ್ಥವೆಂದು ಶಂಕೆಯ ಭಾವ.

ಆದರೂ ಸಹ ಉಪನಿಷತ್ತಿನ ಮಾತುಗಳಿಗೆ ಪೂರ್ವಪಕ್ಷನ್ಯಾಯಗಳಿಂದ ಅನ್ಯಾರ್ಥವೇ ತೋರಿ. ವಿಷಯಾದಿಗಳೇ ಇಲ್ಲವೆಂದಾಗಬೇಕಾದೀತು. ಅದಕ್ಕೋಸ್ಕರ ವಿಷಯಾದಿಗಳನ್ನು ತೋರಿಸುವ ಸಿದ್ಧಾಂತಯುಕ್ತಿಗಳನ್ನು ಸೂತ್ರದಲ್ಲಿ ಸಮರ್ಥಿಸುವ ಅನಿವಾರ್ಯತೆ ಇದೆ. ಆದ್ದರಿಂದ ಸೂತ್ರವು ಸಾರ್ಥಕ.

ಹೀಗೆ ಅಥ, ಅತಃ, ಬ್ರಹ್ಮ ಈ ಮೂರೂ ಶಬ್ದಗಳು ಸಾರ್ಥಕಗಳಾಗಿ ಬೇರೆ ಬೇರೆ ಅರ್ಥಗಳನ್ನೇ ಹೇಳುತ್ತವೆ. ಆದ್ದರಿಂದ ಭಾಸ್ಕರರಿಗೆ ಬರುವ ಪುನರುಕ್ತಿದೋಷವು ನಮಗೆ ಬರುವುದಿಲ್ಲ.

ಅಥ ಶಬ್ದದಿಂದ ಲಭಿಸಿದ ಹೇತುತ್ವವನ್ನೇ ಅತಃ ಶಬ್ದವೂ ಹೇಳುತ್ತದೆಂದು ಭಾಸ್ಕರರು ಹೇಳುತ್ತಾರೆ. ಆದರೆ ನಾವು ಹಾಗೆ ಹೇಳುವುದಿಲ್ಲ. ಅಥಶಬ್ದವು ಜಿಜ್ಞಾಸುವಿನಲ್ಲಿರಬೇಕಾದ ಶಮದಮಾದಿಗುಣಗಳನ್ನು ಹೇಳುತ್ತವೆ. ಈ ಶಮದಮಾದಿಗುಣಗಳಾದರೂ ವಿಚಾರಕ್ಕೆ ಅನಿವಾರ್ಯಗಳಾಗಿವೆ. 'ಅತಃ' ಶಬ್ದವು ವಿಚಾರಕರ್ತವ್ಯತ್ವಕ್ಕೆ ಸಾಧಕವಾದ ಸಫಲತ್ವ ಮೊದಲಾದ ಯುಕ್ತಿಗಳನ್ನು ಸಾಧಕವಾದ ಸಫಲತ್ವ ಮೊದಲಾದ ಯುಕ್ತಿಗಳನ್ನು ಹೇಳುತ್ತಿದೆ. ಹೀಗೆ ಬೇರೆ ಬೇರೆ ಅರ್ಥಗಳನ್ನು ಹೇಳುವುದರಿಂದ ಪುನರುಕ್ತಿಯು ಬರುವುದಿಲ್ಲ. ಮೂರೂ ಪದಗಳು ಸಾರ್ಥಕಗಳಾಗಿವೆ.

**ಕಠಿಣಪದಾರ್ಥ**

**ಸೂಚನೀಯಮ್** = ಸಂಕ್ಷೇಪವಾಗಿ ಹೇಳಬೇಕು. **ಆಗಮಾದೇವ** = ಸಿದ್ಧಾರ್ಥಬೋಧಕವಾದ ಉಪನಿಷದ್‌ಭಾಷ್ಯಾದಿಗಳಿಂದಲೇ ವಿಷಯ ಪ್ರಯೋಜನಸಿದ್ಧಿಗೆ ಅಂಗಭೂತವಾದ ಎಂದು ಸುಧಾಮಾತಿಗೆ ಉಪಲಕ್ಷಣ ಮಾಡಬೇಕು. ಅಥವಾ ಶಮದಮಾದಿಗಳು ಎಂದು ಆದಿಶಬ್ದದ ಅರ್ಥ. **ಆಪಾತತಃ** = ವಿಚಾರವಿಲ್ಲದೆ. "ಸಪ್ರಯೋಜನತ್ವಾದೇಃ" ಈ ವಾಕ್ಯದಲ್ಲಿರುವ ಆದಿ ಪದದಿಂದ.

**प्रकाशः** – नन्विदं सूत्रमनर्थकं, विषयस्य पूर्वद्विके अधिकारफलयोरुत्तरद्विके प्रतिपादनेन तत एव तज्ज्ञानसम्भवादिति चोद्यमनूद्यावद्यति ।। यद्यपीति ।।

ननु यथा शास्त्रप्रवर्तकमिदं सूत्रं, तथैतत्सूत्रप्रवर्तकेनाप्यन्येन भाव्यम् । अन्यथैतत्सूत्रं विनाऽपि शास्त्रे प्रवृत्तिप्रसङ्ग इत्याशङ्कां सदृष्टान्तं निराह ।।

अध्ययनेति ।। यथा "स्वाध्यायोऽध्येतव्यः" इति वाक्यं सर्ववेदाध्ययनप्रवर्तकं सत् स्वाध्ययनेऽपि प्रवर्तयति, स्वाध्यायाध्ययनत्वादेव, तथा विषयादिसत्त्वाच्छास्त्रमारभ्यमित्युक्ते अस्यापि प्रागुक्तरीत्या शास्त्रान्तर्गतत्वादारम्भः सिध्यतीत्यर्थः ।

नन्वथापि श्रवणस्य विचाराधिकारिविशेषणत्वात् सिद्धार्थबोधकोपनिषद्भाष्यादिनैव विषयादिज्ञानसम्भवेनान्योन्याश्रयाभावादिदं सूत्रं व्यर्थमित्याशङ्कामनूद्य प्रत्याह ।। यद्यपीति ।। 'आपाततः' विनैव विचारमित्यर्थः । एवं निष्कृष्यातश्शब्दार्थोक्तेरुपयोगमाह ।। एवंचेति ।। एवं हि तन्मतं 'अथशब्दस्तावदानन्तर्याभिधानमुखेन हेतुतयैव पूर्ववृत्तमवगमयति । आनन्तर्यमात्रस्य विफलत्वात्' इति । तथाच अथशब्देनैव प्रकृतस्य हेतुत्वसिद्धेरतश्शब्दस्य पुनरुक्ततेत्यर्थः ।

नन्वथशब्दलब्धस्य हेतुत्वमार्थिकमिति चेत् सत्यम् । तथाऽप्यार्थिके तात्पर्यात् । तस्यैव च वाक्यार्थेऽन्वयात् । पूर्वतन्त्रेऽप्येवं व्याख्यातमिति चेत्, किमतः । नहि पराङ्गं दग्धमिति स्वाङ्गदाहदुःखं निवर्तत इति भावः । तदेव व्यनक्ति ।। अधिकारीति ।। एतेन "अथशब्दो हि जिज्ञासाजनकमधिकारिस्थं धर्ममनधिकारिकत्वशङ्कानिरासायानुवदति । अतश्शब्देन तु विषयप्रयोजनसिद्ध्यङ्गभूतं न्यायकलापं सूत्रकारः स्वयमाचष्टे, इति कुतः पौनरुक्त्यम्" इति सुधावाक्यं विवृतं भवति । 'सप्रयोजनत्वादेः' इत्यनेन 'विषयप्रयोजनसिद्ध्यङ्गभूतम्' इति सुधास्थमुपलक्षणमित्युक्तं भवति । यद्वा – सुधावाक्यमनुव्याख्यानानुसारि । इदं भाष्यटीकाद्यनुसारि । अत एव पूर्वमवादि "अनुव्याख्याने प्रयोजनसाधकमप्यतश्शब्देनोक्तम्" इति ।

**गुरुराजीय** – सूत्रवैयर्थ्यं परिहरति – **यद्यपीति** ।। नन्वेवं प्रथमसूत्रारम्भसिद्ध्यर्थमपि सूत्रान्तराद्यन्वेषणीयमित्यनवस्था स्यादित्यत आह – **अध्ययनविधिवाक्यवदिति** ।। तथापि विषयादिसिद्धिरागमादेव भविष्यतीति व्यर्थमेतदित्यत आह – **यद्यपीति** ।। एवं चाथातःशब्दौ व्याख्याय परेषामथातःशब्दयोरैकार्थ्येन पौनरुक्त्यमिव न स्वमते पौनरुक्त्यमित्याह ।। **एवं चेति** ।। ननु कथं न पौनरुक्त्यं स्वेनाप्यथ-

**शब्दोपस्थापितयुक्तिकलापस्यातश्शब्दार्थत्वेनोक्तत्वादित्यत आह – अधिकारि-विशेषणस्येति ।। ननु सप्रयोजनत्वादिकथनं व्यर्थं जिज्ञासानुपयोगित्वादित्यत उक्तं विचारकर्तव्यताप्रमाणस्येति ।।**

**ವಿವರಣೆ** - ಇಲ್ಲಿಯ ತನಕ ಫಲ, ಅಧಿಕಾರ, ವಿಷಯ ಇವುಗಳನ್ನೆಲ್ಲ ಮೊದಲನೆಯ ಸೂತ್ರವು ಹೇಳುತ್ತಿದೆಯೆಂದು ಸಮರ್ಥಿಸಿದ್ದಾಯಿತು. ಇದರ ಮೇಲೆ ಬರುವ ಆಕ್ಷೇಪವನ್ನು ಈಗ ಪರಿಹರಿಸುತ್ತಿದ್ದಾರೆ.

**ಆಕ್ಷೇಪ** - ವಿಚಾರದ ವಿಷಯವನ್ನು ಬ್ರಹ್ಮಶಬ್ದವು ಹೇಳಬೇಕಾಗಿಲ್ಲ. ಬ್ರಹ್ಮಸೂತ್ರದ ಪ್ರಾರಂಭದ ಎರಡು ಅಧ್ಯಾಯಗಳು ಬ್ರಹ್ಮನೆಂಬ ವಿಷಯವನ್ನೇ ಪ್ರತಿಪಾದಿಸುತ್ತಿವೆ. ಇನ್ನು ಅಧಿಕಾರದ ಬಗ್ಗೆ ಮೂರನೆಯ ಅಧ್ಯಾಯವು ವಿವರಿಸುತ್ತಿದೆ. ಪುನಃ ಅದನ್ನು 'ಅತಃ' ಶಬ್ದವು ಹೇಳಬೇಕಾಗಿಲ್ಲ. ಮೋಕ್ಷರೂಪಪ್ರಯೋಜದ ಬಗ್ಗೆ ನಾಲ್ಕನೆಯ ಅಧ್ಯಾಯವು ವಿವರಿಸುತ್ತಿದೆ. ಅದನ್ನು 'ಅಥ' ಶಬ್ದದಿಂದ ಪುನಃ ಹೇಳುವುದು ಅನಾವಶ್ಯಕ. ಹೀಗೆ ನಾಲ್ಕು ಅಧ್ಯಾಯಗಳಿಂದಲೇ ವಿಷಯಾದಿಗಳನ್ನು ತಿಳಿಯಲು ಬರುತ್ತದೆ. ಪ್ರಥಮಸೂತ್ರದಲ್ಲಿ ಇವುಗಳನ್ನು ಹೇಳಿದ್ದು ವ್ಯರ್ಥ.

ಈ ಆಕ್ಷೇಪವನ್ನು ಅನುವಾದ ಮಾಡಿ 'ಯದ್ಯಪಿ' ಇತ್ಯಾದಿ ವಾಕ್ಯಗಳಿಂದ ಖಂಡಿಸುತ್ತಿದ್ದಾರೆ. (ಅವದ್ಯತಿ = ಖಂಡಿಸುತ್ತಿದ್ದಾರೆ)

**ಸಮಾಧಾನ** :- ಒಂದುವೇಳೆ 'ಜನ್ಮಾದ್ಯಸ್ಯ ಯತಃ' ಇತ್ಯಾದಿ ಸಮಸ್ತಶಾಸ್ತ್ರದಿಂದಲೇ ವಿಷಯಾದಿಗಳನ್ನು ತಿಳಿಯುವುದಾದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ - ಶಾಸ್ತ್ರವನ್ನು ಅಧ್ಯಯನ ಮಾಡಬೇಕಾದರೆ ಈ ಸೂತ್ರದ ಅಧ್ಯಯನವನ್ನು ಮೊದಲು ಮಾಡಿರಬೇಕು. ಆದರೆ ಈ ಸೂತ್ರದ ಅಧ್ಯಯನ ಮಾಡಲು ಶಾಸ್ತ್ರದ ಅಧ್ಯಯನ ಮಾಡಬೇಕು. ಹಾಗಾದಲ್ಲಿ ಶಾಸ್ತ್ರಾಧ್ಯಯನದ ಮೊದಲು ಸೂತ್ರದ ಅಧ್ಯಯನ ಬೇಕು. ಈ ಸೂತ್ರದ ಅಧ್ಯಯನಕ್ಕಿಂತ ಮೊದಲು ಮತ್ತೊಂದರ ಅಧ್ಯಯನ ಬೇಕೆಂದು ಅನವಸ್ಥಾ ಬರುತ್ತದೆ. ಒಂದು ವೇಳೆ ಮತ್ತೊಂದರ ಅಧ್ಯಯನವೂ ಬೇಡವೆಂದರೆ ಶಾಸ್ತ್ರದ ಅಧ್ಯಯನವನ್ನು ಕುರಿತು ಈ ಸೂತ್ರದ ಅಧ್ಯಯನವೂ ಬೇಡವೆಂಬ ಆಕ್ಷೇಪವು ಬರುತ್ತದೆ. ಈ ಆಕ್ಷೇಪವನ್ನು 'ಅಧ್ಯಯನ' ಇತ್ಯಾದಿ ವಾಕ್ಯಗಳಿಂದ ದೃಷ್ಟಾಂತಪೂರ್ವಕವಾಗಿ ನಿರಾಕರಣೆ ಮಾಡುತ್ತಿದ್ದಾರೆ.

"ಸ್ವಾಧ್ಯಾಯೋಽಧ್ಯೇತವ್ಯಃ" "ಸ್ವಶಾಖಾಧ್ಯಯನವನ್ನು ಮಾಡಬೇಕು" ಎಂಬ ವಾಕ್ಯವು ವೇದಾ-ಧ್ಯಯನವನ್ನು ವಿಧಿಸುತ್ತಿದೆ. ಇದರಿಂದ ವೇದಾಧ್ಯಯನದಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಆದರೆ ಈ ವಾಕ್ಯದ ಅಧ್ಯಯನಕ್ಕೆ ಪ್ರೇರಕವಾಗಿ ಮತ್ತೊಂದರ ಅಧ್ಯಯನ ಬೇಡವೇ? ಎಂಬ ಪ್ರಶ್ನೆ ಬರುತ್ತದೆ. ಈ ಸಂದರ್ಭದಲ್ಲಿ ತನಗೆ ತಾನೇ ಪ್ರೇರಕವಾಗುತ್ತದೆ. ಮತ್ತೊಂದರ ಅಧ್ಯಯನವು ಬೇಡವೆಂದು ಉತ್ತರಿಸುತ್ತೇವೆ. ಏಕೆಂದರೆ ಇದೂ ವೇದವೇ ಆಗಿರುವುದರಿಂದ ವೇದಾಧ್ಯಯನ ಮಾಡಬೇಕೆಂದರೆ ತನ್ನ ಅಧ್ಯಯನವನ್ನು ಮಾಡಬೇಕೆಂದೇ ಅದು ಹೇಳುತ್ತಿದೆ. ಅದರಂತೆ ಪ್ರಕೃತದಲ್ಲಿಯೂ ಪ್ರಥಮಸೂತ್ರವು ವಿಷಯಾದಿಗಳಿರುವುದರಿಂದ ಶಾಸ್ತ್ರವನ್ನು ಆರಂಭಣೀಯವೆಂದು ಹೇಳುತ್ತಿದೆ. ಆದರೆ ಈ ಸೂತ್ರವೂ

ಶಾಸ್ತ್ರವೇ ಆಗಿರುವುದರಿಂದ ತನ್ನ ಆರಂಭಣೀಯತ್ವವೂ ಇದರಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ತನ್ನ ಅಧ್ಯಯನಕ್ಕೆ ತಾನೇ ಪ್ರೇರಕ ಹೊರತು ಮತ್ತೊಂದರ ಅಪೇಕ್ಷೆ ಬೇಕಾಗಿಲ್ಲ. ಅನವಸ್ಥಾದೋಷಕ್ಕೆ ಅವಕಾಶವಿಲ್ಲ.

ಪ್ರಶ್ನೆ :- ಪ್ರಥಮಸೂತ್ರದಿಂದ ಸಮಸ್ತಶಾಸ್ತ್ರಕ್ಕೆ ಮತ್ತು ತನಗೆ ಆರಂಭಣೀಯತ್ವವು ಸಿದ್ಧವಾಗುತ್ತದೆಂಬ ವಿಚಾರ ಇರಲಿ. ಆದರೆ ಮೊದಲನೆಯ ಸೂತ್ರದ ಅಧ್ಯಯನದಲ್ಲಿ ಪ್ರವೃತ್ತಿಯಾದರೂ ಹೇಗೆ ಉಂಟಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರ ನೀಡಿದಂತಾಗಲಿಲ್ಲ?

ಉತ್ತರ :- ಈ ಪ್ರಶ್ನೆಗೆ ಸುಧೆಯ ಜಿಜ್ಞಾಸಾಧಿಕರಣದಲ್ಲೊಂದೆಡೆ ಹೀಗೆ ಉತ್ತರಿಸಿದ್ದಾರೆ - ಹಿತೈಷಿಯೊಬ್ಬನ ಮಾತನ್ನು ಕೇಳಿ ಪ್ರಥಮ ಸೂತ್ರದಲ್ಲಿ ಪ್ರವೃತ್ತಿ ಮಾಡುತ್ತಾನೆ. ಅಥವಾ ಪಿತೃವಾಕ್ಯದಿಂದ ಅಥವಾ ಯಾದೃಚ್ಛಿಕವಾಗಿ ಹೇಗೋ ತಿಳಿದು ಪ್ರಥಮಸೂತ್ರದಲ್ಲಿ ಪ್ರವೃತ್ತಿ ಮಾಡುತ್ತಾನೆ. ಪ್ರಥಮಸೂತ್ರದ ಅಧ್ಯಯನರುಚಿಯಿಂದ ಸಮಸ್ತಶಾಸ್ತ್ರದ ಅಧ್ಯಯನದಲ್ಲಿ ಸುಲಭವಾಗಿ ಪ್ರವೃತ್ತಿ ಮಾಡುತ್ತಾನೆ

ಆಕ್ಷೇಪ :- ವಿಷಯಾದಿಗಳನ್ನು ಪ್ರಥಮಸೂತ್ರದಿಂದಲೇ ಏಕೆ ತಿಳಿಯಬೇಕು? "ಭಕ್ತಿಮಾನ್ ಪರಮೇ ವಿಷ್ಣೌ" ಇತ್ಯಾದಿ ವಾಕ್ಯಗಳಿಂದ ಅಧಿಕಾರವು ತಿಳಿಯುತ್ತದೆ. "ಕರ್ಮಣಾಃ ತ್ವಧಮ ಪ್ರೋಕ್ತಃ" "ಯಮೇವೈಷ" ಇತ್ಯಾದಿ ಶ್ರುತಿಗಳ ಬಲದಿಂದ ಮೋಕ್ಷವೇ ಪ್ರಯೋಜನವೆಂದು ತಿಳಿಯಬಹುದು. "ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ" ಇತ್ಯಾದಿ ಶ್ರುತಿ ಬಲದಿಂದ ಬ್ರಹ್ಮನೇ ವಿಷಯನೆಂದು ತಿಳಿಯಬಹುದು. ಹೀಗೆ ಪ್ರತಿಯೊಂದನ್ನೂ ಸಹ ಪ್ರಥಮಸೂತ್ರವಿಲ್ಲದೆ ಸಿದ್ಧಾರ್ಥಬೋಧಕವಾದ ಆಗಮಾದಿಗಳಿಂದಲೇ ತಿಳಿಯಬಹುದು. ಪ್ರಥಮಸೂತ್ರವು ಇದನ್ನು ತಿಳಿಸಬೇಕಾಗಿಲ್ಲ. ಆದ್ದರಿಂದ ಮೊದಲನೆಯ ಸೂತ್ರವು ವ್ಯರ್ಥ.

ಸಮಾಧಾನ :- ಹೌದು, ಆದರೆ ಆಗಮವಾಕ್ಯಗಳಿಗೆ ಹಾಗೆ ಅರ್ಥವೇ ಅಲ್ಲವೆಂದು ಪೂರ್ವಪಕ್ಷಕಾರನು ಆಕ್ಷೇಪ ಮಾಡುತ್ತಾನೆ. ಈ ಆಕ್ಷೇಪವನ್ನು ಸೂತ್ರೋಕ್ತನ್ಯಾಯದಿಂದಲೇ ಪರಿಹಾರ ಮಾಡಬೇಕು.

ಒಂದು ವೇಳೆ ಆಪಾತತಃ ವಿಷಯಪ್ರತಿಪಾದಕವಾದ ವೇದದಿಂದಲೇ ಎಲ್ಲವನ್ನು ತಿಳಿಯುತ್ತೇವೆಯೆಂದರೆ ಸಮಸ್ತಶಾಸ್ತ್ರವೇ ವ್ಯರ್ಥವಾಗುತ್ತದೆ. ಅದಕ್ಕೋಸ್ಕರ ಶ್ರುತಿಗಳ ಮೇಲೆ ಬಂದ ಆಕ್ಷೇಪವನ್ನು ಪರಿಹರಿಸಲು ನ್ಯಾಯಗಳನ್ನು ಸೂತ್ರವು ಹೇಳುತ್ತಿದೆಯೆಂದು ಹೇಳಬೇಕು. ಅದರಂತೆ ಇಲ್ಲಿಯೂ ಸಹ ವಿಷಯ-ಪ್ರಯೋಜನಾದಿಗಳು ಪ್ರಮಾಣಾಂತರದಿಂದ ತಿಳಿದಿದ್ದರೂ ಸಹ ಅವುಗಳನ್ನು ನ್ಯಾಯಪುರಸ್ಸರವಾಗಿ ದೃಢೀಕರಿಸಲು ಪ್ರಥಮಸೂತ್ರವು ಬೇಕೇ ಬೇಕು.

ಹೀಗೆ ವಿಷಯ, ಪ್ರಯೋಜನ ಅಧಿಕಾರಿಗಳನ್ನು ತಿಳಿಸುವ 'ಅಥ' 'ಅತಃ' ಬ್ರಹ್ಮ ಈ ಮೂರೂ ಶಬ್ದಗಳು ಸಾರ್ಥಕ. ಅವುಗಳು ಭಿನ್ನ ಭಿನ್ನ ಅರ್ಥಗಳನ್ನು ಪ್ರತಿಪಾದಿಸುವುದರಿಂದ ಭಾಸ್ಕರಮತದಂತ ನಮ್ಮ ಮತದಲ್ಲಿ ಪುನರುಕ್ತಿಯು ಬರುವುದಿಲ್ಲ.

ಭಾಸ್ಕರರು ಸೂತ್ರಾರ್ಥವನ್ನು ಹೀಗೆ ಹೇಳುತ್ತಾರೆ - 'ಅಥ' ಶಬ್ದವು ಆನಂತರ್ಯವನ್ನು ಹೇಳುತ್ತದೆ. ಯಾವುದರ ಅನಂತರ ಎಂದು ಹೇಳುತ್ತೇವೋ, ಅದೇ ವಿಚಾರಕ್ಕೆ ಹೇತು ಆಗುತ್ತದೆ. ಕೇವಲ

ಆನಂತರ್ಯವನ್ನು ಹೇಳುವುದು ವ್ಯರ್ಥ. ಉದಾಹರಣೆ - ಕುಲಾಲನು ದಂಡಚಕ್ರಾದಿಗಳನ್ನು ಸಂಪಾದನೆ ಮಾಡಿ ಅನಂತರ ಘಟವನ್ನು ಮಾಡುತ್ತಾನೆಂದು ಹೇಳಿದರೆ. ದಂಡಚಕ್ರಾದಿಗಳು ಕಾರಣ ಎಂದು ತಿಳಿಯುತ್ತದೆ. ಹೀಗೆ ಆನಂತರ್ಯಪ್ರತಿಯೋಗಿಯು ಎಲ್ಲೆಡೆ ಕಾರಣವೇ ಆಗಿರುತ್ತವೆಂದು ಹೇಳುತ್ತಾರೆ.

ನಿರಾಕರಣೆ :- ಇದು ತಪ್ಪು. ಹೀಗೆ ಹೇಳಿದರೆ ಪುನರುಕ್ತಿ ಬರುತ್ತದೆ. ಅಥ ಶಬ್ದದಿಂದಲೇ ಹೇತುವು ತಿಳಿಯುವಾಗ ಪುನಃ ಅದನ್ನು ಹೇಳಲು ಅತಃಶಬ್ದ ಬೇಕಾಗಿಲ್ಲ.

ಭಾಸ್ಕರರು :- ಹೇತುತ್ವವು ಶಬ್ದದಿಂದ ತಿಳಿಯುವುದಿಲ್ಲ. ಆರ್ಥಿಕವಾಗಿ ತಿಳಿಯುತ್ತದೆ. 'ಅತಃ' ಶಬ್ದವು ಸ್ಪಷ್ಟವಾಗಿ ಹೇತುವನ್ನು ಹೇಳುತ್ತಿದೆ 'ಅತಃ' ಎಂಬಲ್ಲಿರುವ ತಸಿಲ್ ಪ್ರತ್ಯಯದಿಂದ ಇದು ತಿಳಿಯುತ್ತದೆ.

ನಿರಾಕರಣೆ :- ಆದರೂ ಸಹ ಆರ್ಥಿಕಾರ್ಥದಲಿ ತಾತ್ಪರ್ಯವನ್ನು ಒಪ್ಪಲೇಬೇಕು. ಅಥ ಶಬ್ದದ ತಾತ್ಪರ್ಯವಾಗಲೀ ಅತಃಶಬ್ದದ ತಾತ್ಪರ್ಯವಾಗಲೀ ಒಂದೇ ಆಯಿತು. ಇದನ್ನೇ ವಾಕ್ಯಾರ್ಥದಲ್ಲಿ ಅನ್ವಯ ಹೇಳುವುದರಿಂದ 'ಅಥ' 'ಅತಃ' ಶಬ್ದಾರ್ಥಗಳಿಗೆ ಪುನರುಕ್ತಿಯು ತಪ್ಪಿದ್ದಲ್ಲ.

ಭಾಸ್ಕರರು :- ಪೂರ್ವಮೀಮಾಂಸೆಯಲ್ಲಿ ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ - 'ಅಥಾತೋ ಧರ್ಮಜಿಜ್ಞಾಸಾ' ಎಂಬಲ್ಲಿ 'ಅಥ'ಶಬ್ದದಿಂದ ಆನಂತರ್ಯವು ಆರ್ಥಿಕವಾಗಿ ಲಭ್ಯವಾಗಿದೆ. ಅದನ್ನೇ ಸ್ಪಷ್ಟವಾಗಿ 'ಅತಃ' ಶಬ್ದವು ಹೇಳುತ್ತಿದೆಯೆಂದು ಮೀಮಾಂಸಕರೂ ಒಪ್ಪಿದ್ದಾರೆ. ಅದರಂತೆ ನಾವು ಹೇಳಿದರೆ ಏನು ತಪ್ಪು?

ನಿರಾಕರಣೆ - ಮೀಮಾಂಸಕರು ಹೇಳಿದ್ದೂ ಸಹ ತಪ್ಪೇ. ಅಥವಾ ಮೀಮಾಂಸಕರು ಹೇಳಿದರೆ ಹೇಳಿಕೊಳ್ಳಲಿ. ಅವರು ಹೇಳಿದ ಮಾತ್ರಕ್ಕೆ ನಾವೂ ಹಾಗೇಕೆ ಹೇಳಬೇಕು? "ನಹಿ ಪರಾಂಗಂ ದಗ್ಧಮಿತಿ ಸ್ವಾಂಗದಾಹದುಃಖಂ ನಿವರ್ತತೇ" ಮತ್ತೊಬ್ಬರ ದೇಹವು ಸುಟ್ಟಿತೆಂದು ನಮ್ಮ ದೇಹ ಸುಟ್ಟಿದ ದುಃಖವು ನಾಶವಾಗುತ್ತದೆಯೇ? ಅದರಂತೆ ಇಲ್ಲಿಯೂ ಮೀಮಾಂಸಕರಿಗೆ ಬರುವ ದೋಷ ನಿಮಗೂ ಬಂದೇ ಬರುತ್ತದೆ.

ಇನ್ನು ನಮ್ಮ ಮತದಲ್ಲಿ ಪುನರುಕ್ತಿಯು ಬರುವುದಿಲ್ಲವೆಂದು 'ಅಧಿಕಾರಿ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ. ಸುಧೆಯಲ್ಲಿ ಈ ವಿಚಾರವು ಸ್ಪಷ್ಟವಾಗಿದೆ - ಅಥ ಶಬ್ದವು ಏನು ಹೇಳುತ್ತಿದೆ? ಎಂದರೆ ಜಿಜ್ಞಾಸೆಗೆ ಕಾರಣವಾದ ಗುಣಗಳನ್ನು ಹೇಳುತ್ತದೆ. ಮತ್ತು ವಿಚಾರಯೋಗ್ಯನಾದ ಜಿಜ್ಞಾಸುವೇ ಇಲ್ಲವಲ್ಲ? ಎಂಬ ಆಕ್ಷೇಪವನ್ನು ಪರಿಹರಿಸುತ್ತದೆ. ಇದೆಲ್ಲವೂ ಶ್ರುತಿಸಿದ್ಧವಾಗಿದೆ. ಮತ್ತು ಅದರ ಪ್ರಯೋಜನಸಾಧಕನ್ಯಾಯಗಳನ್ನು ಸ್ವತಃ ಹೇಳುತ್ತಿದೆ. ಹೀಗಾದಾಗ ಪುನರುಕ್ತಿಗೆ ಅವಕಾಶವೆಲ್ಲಿ? ಹೀಗೆ ಸುಧೆಯಲ್ಲಿ ಹೇಳಿದ್ದನ್ನು ವಿವರಿಸಿದಂತಾಯಿತು.

ಸುಧೆಯಲ್ಲಿ "ವಿಷಯ ಪ್ರಯೋಜನಸಾಧಕಯುಕ್ತಿಗಳನ್ನು ಅತಃಶಬ್ದವು ಹೇಳುತ್ತಿದೆ" ಎಂಬ ಮಾತಿದೆ. ಇದಕ್ಕೆ ಉಪಲಕ್ಷಣಯಾ ಹೀಗೆ ಅರ್ಥ ಮಾಡಬೇಕು. ವಿಷಯ ಮತ್ತು ಪ್ರಯೋಜನಗಳೆರಡರ ಸಾಧಕಯುಕ್ತಿಗಳನ್ನು ಅತಃ ಶಬ್ದವು ಹೇಳುತ್ತಿದೆ ಎಂದು.

ಅಥವಾ ಸುಧಾವಾಕ್ಯವು ಅನುವ್ಯಾಖ್ಯಾನವನ್ನು ಅನುಸರಿಸಿ ಹೊರಟಿದೆ. ಚಂದ್ರಿಕೆಯು ಭಾಷ್ಯ ಟೀಕೆಯನ್ನು ಅನುಸರಿಸಿ ಹೊರಟಿದೆ. ಚಂದ್ರಿಕೆಯಲ್ಲಿ 'ಸಪ್ರಯೋಜನತ್ವಾತ್' ಎಂದಷ್ಟೇ ಅತಃ ಶಬ್ದಾರ್ಥವನ್ನು ಹೇಳಲಾಗಿದೆ. ಇದು ಭಾಷ್ಯ ಟೀಕೆಗಳಿಗೆ ಅನುಗುಣವಾಗಿದೆ. ಸುಧೆಯಲ್ಲಿ ಪ್ರಯೋಜನಸಾಧಕವಾದ ನ್ಯಾಯಕಲಾಪವನ್ನು 'ಅತಃ' ಶಬ್ದವು ಹೇಳಿದೆ, ಎಂಬುದು ಅನುವ್ಯಾಖ್ಯಾನವನ್ನು ಅನುಸರಿಸಿ ಹೇಳಿದ್ದು. ಆದ್ದರಿಂದ ಪರಸ್ಪರ ವಿರೋಧವಿಲ್ಲ.

ನಮ್ಮ ಸಿದ್ಧಾಂತದ ಪ್ರಕಾರ 'ಅತಃ' ಶಬ್ದಾರ್ಥ ವಿಚಾರವು ಮುಗಿಯಿತು. ಇಲ್ಲಿಯ ತನಕ ಓಂ, ಅಥ, ಅತಃ, ಮೂರು ಶಬ್ದಾರ್ಥಗಳ ಚಿಂತನೆಯು ಸಮಾಪ್ತವಾಯಿತು.

## ಸಾರ

### ಅಥ ಅತಃ ಬ್ರಹ್ಮ ಶಬ್ದಗಳ ಸಾರ್ಥಕತೆ

ಅತಃಶಬ್ದವು ಹೀಗೆ ಶ್ರವಣಕಾಲದಲ್ಲಿ ತಿಳಿದಿರುವ ಮತ್ತು ಪ್ರಮಾಣಸಿದ್ಧವಾದ ಜಿಜ್ಞಾಸುವಿನ ಅರ್ಹತೆಗಳು, ವಿಷಯ, ಪ್ರಯೋಜನ ಎಲ್ಲವನ್ನೂ ಹೇಳುವುದಾದರೆ ಅಥ ಬ್ರಹ್ಮ ಶಬ್ದಗಳು ಏಕೆ? ಎಂದರೆ, ಅರ್ಹತೆ ವಿಷಯ ಪ್ರಯೋಜನಗಳ ವೈಲಕ್ಷಣ್ಯಸೂಚನೆಗಾಗಿ ಮೂರು ಶಬ್ದಗಳು ಬೇಕು. ಅರ್ಹತೆ ಸಿದ್ಧವಾದುದೆ ಇರಬೇಕು. ಪ್ರಯೋಜನ ಅಸಿದ್ಧವೆ ಇರಬೇಕು. ವಿಷಯ ಧರ್ಮವಿಚಾರದಲ್ಲಿ ಅಸಿದ್ಧವಾದ ಯಾಗಾದಿಧರ್ಮ, ಬ್ರಹ್ಮವಿಚಾರದಲ್ಲಿ ಸಿದ್ಧವಾದ ಬ್ರಹ್ಮ. ಇವು ಮೂರರಲ್ಲಿರುವ ವೈಲಕ್ಷಣ್ಯಗಳು. ಮತ್ತು ಮೂರು ಶಬ್ದಗಳಲ್ಲಿಯೂ ತಮ್ಮದೆ ಆದ ವಿಲಕ್ಷಣಶಕ್ತಿ ಇದೆ, ಮಂಗಳಕರವಾಗಿದೆ. ಸೂತ್ರದಿಂದ ಅರ್ಥನಿರ್ಣಯವಾಗಬೇಕಾಗಿರುವ ಬೇರೆಬೇರೆ ಶ್ರುತಿವಾಕ್ಯಗಳನ್ನು ಜ್ಞಾಪಿಸುತ್ತವೆ. ಬೇರೆಬೇರೆ ಸಂದೇಹಗಳಿಗೆ ತಮ್ಮದೆ ಆದ ಪರಿಹಾರವನ್ನೂ ನೀಡುತ್ತವೆ.

ಸಂಸಾರ ಮಿಥ್ಯೆಯಾದ್ದರಿಂದ ಜ್ಞಾನದಿಂದ ಅದು ನಿವೃತ್ತಿಹೊಂದಲು ನಾರಾಯಣನ ಅನುಗ್ರಹ ಬೇಕಾಗಿಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ಜಗತ್ ಸತ್ಯತ್ವವನ್ನೂ ಸತ್ಯವಸ್ತುವಿಗೆ ಮಾತ್ರವೆ ನಾಶಯೋಗ್ಯತ್ವ ಮುಂತಾದ ಯುಕ್ತಿಯನ್ನೂ ಅತಃ ಶಬ್ದ ಹೇಳುತ್ತದೆ. ಕೇವಲ ಪ್ರಯೋಜನವನ್ನಲ್ಲ. ವಿಷಯ ಪ್ರತಿಪಾದನೆಗೆ ಬೇಕಾಗುವ ಗುಣಪೂರ್ಣತ್ವಾದಿ ಯುಕ್ತಿಗಳನ್ನು ಬ್ರಹ್ಮಶಬ್ದ ಹೇಳುತ್ತದೆ. ಆಗಮವು ಪ್ರಮಾಣವಲ್ಲ. ಪ್ರಮಾಣವೆಂದೊಪ್ಪಿದರೂ ಸಿದ್ಧವಾದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ವೇದಪ್ರಾಮಾಣ್ಯ ಸಿದ್ಧಪರತ್ವ ಮುಂತಾದ ವಿಷಯ ಸಾಧಕಯುಕ್ತಿಗಳನ್ನೂ ಅತಃಶಬ್ದ ಹೇಳುತ್ತದೆ.

• • • • •

### ಅದ್ವೈತಿಗಳ 'ಅತಃ' ಶಬ್ದಾರ್ಥ ವಿಮರ್ಶೆ

**तात्पर्यचन्द्रिका –**

**भामत्यां तु – ब्रह्मशब्देन तत्प्रमाणं वेद उपस्थापितः 'अतः' इति परा-**

मृश्यते[1] । स च योग्यत्वात् ''तद्यथेह'' इत्यादिः । तथाच ब्रह्मज्ञानकर्मणोः नित्यानित्यफलत्वप्रतिपादकादागमादिहामुत्र फलभोगाविरागादि, ततश्च ब्रह्म-जिज्ञासा । एवंच नातश्शब्देन जिज्ञासां प्रति साधनकलापस्य हेतुतोच्यते । येन पौनरुक्त्यम् । किन्तु तत्स्वरूपालाभपरिहारोऽभिधीयत इत्युक्तम् । तन्न । हेतोर्विचारकर्तव्यत्वादिरूपसाध्यान्वयत्यागेन विरागादिसाधनान्वयायोगात् । अथशब्दार्थानन्तर्योपसर्जनस्य विरागस्यातश्शब्दोक्तहेत्वन्वयायोग्यत्वाच्च । अथशब्दोपस्थापितविरागेणैव स्वजनकस्य 'तद्यथा' इत्यादेः वाक्यस्य साक्षादेवोपस्थापनसम्भवे ब्रह्मशब्देन परम्परयोपस्थापनोक्त्ययुक्तेश्च । विरागहेतुत्वेन त्वदभिप्रेतसत्यानृतविवेके 'नेह नाना' इत्यादेरेव हेतुतया वक्तव्यत्वेन, 'तद्यथा' इत्याद्युक्त्ययुक्तेश्च ।

ಅನುವಾದ - ಅದ್ವೈತಮತದ ಪ್ರಕಾರ 'ಅತಃ' ಶಬ್ದಾರ್ಥವೇನು? ಎಂದು ಚಿಂತಿಸುವಾಗ ಭಾಮತೀಕಾರರು ಹೀಗೆ ಹೇಳುತ್ತಾರೆ -

ಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಾಗಿರುವ ವೇದವು ಪ್ರಕೃತವಾಗುತ್ತದೆ. ಅದನ್ನು ಅತಃಶಬ್ದದ ಪ್ರಾತಿಪದಿಕವು ಪರಾಮರ್ಶಿಸುತ್ತದೆ. ಆದರೆ ಎಲ್ಲವನ್ನು ಪರಾಮರ್ಶ ಮಾಡುವುದಿಲ್ಲ. 'ಅತಃ' ಎಂಬುದರಿಂದ ತಿಳಿಯುವ ಹೇತುತ್ವದ ಅನ್ವಯಕ್ಕೆ ಯೋಗ್ಯವಾದ "ತದ್ಯಥೇಹ ಕರ್ಮಚಿತೋ" ಇವೇ ಮೊದಲಾದ ವಾಕ್ಯಗಳನ್ನು ಮಾತ್ರ ಪರಾಮರ್ಶಿಸುತ್ತದೆ. ಆದ್ದರಿಂದ ಬ್ರಹ್ಮಜ್ಞಾನದ ಫಲವು ನಿತ್ಯ, ಕರ್ಮಫಲವು ಅನಿತ್ಯ. ಹೀಗೆ ಹೇಳುವ ವಾಕ್ಯಗಳ ಆಧಾರದಿಂದ ನಮಗೆ ಐಹಿಕ ಆಮುಷ್ಮಿಕ ಫಲಭೋಗದಲ್ಲಿ ವೈರಾಗ್ಯ ಬರುತ್ತದೆ. ವೈರಾಗ್ಯದಿಂದ ಬ್ರಹ್ಮವಿಚಾರವು ನಡೆಯುತ್ತದೆಂದು ಸೂತ್ರಾರ್ಥ. ವಿಚಾರ ಮಾಡಬೇಕಾದರೆ ಸಾಧನಚತುಷ್ಟಯವನ್ನು ಹೊಂದಿರಬೇಕು. ಇದನ್ನು ಅಥ ಶಬ್ದವೇ ಹೇಳುತ್ತದೆ ಹೊರತು ಅತಃ ಶಬ್ದವು ಹೇಳುತ್ತಿಲ್ಲ. ಹಾಗೆ ಹೇಳಿದ್ದರೆ ಪುನರುಕ್ತಿದೋಷ ಬರುತ್ತಿತ್ತು. ಹೊರತಾಗಿ ವಿಚಾರಸಾಧನವಾದ ವೈರಾಗ್ಯ ಹುಟ್ಟಲು ಸಾಧ್ಯವೇ ಇಲ್ಲವೆಂಬ ಆಕ್ಷೇಪ ಬಂದರೆ ಅದನ್ನು ಪರಿಹಾರ ಮಾಡಲು 'ಅತಃ'ಶಬ್ದ ಹೊರಟಿದೆ. ಭಾಮತಿಯ ಅಭಿಪ್ರಾಯವನ್ನು ಇಷ್ಟು ಕಲ್ಪತರುವಿನಲ್ಲಿ ವಿವರಿಸಿದೆ.

ಇದು ತಪ್ಪು. ಭಾಮತೀಕಾರರ ಪ್ರಕಾರ 'ಅಧಿಕಾರಪ್ರಾಪ್ತಿಯ ಅನಂತರ ಬ್ರಹ್ಮಜ್ಞಾನೇಚ್ಛೆಯು ಉಂಟಾಗುತ್ತದೆ' ಎಂದು ಸೂತ್ರಾರ್ಥ. ಅರ್ಥಾತ್ ಬ್ರಹ್ಮವಿಚಾರವು ಕರ್ತವ್ಯವೆಂದೇ ಹೇಳಿದಂತಾಯಿತು.

१ भामती – अत्र च ब्रह्मपदेन तत्प्रमाणं वेद उपस्थापितः । स च योग्यत्वात् 'तद्यथेह कर्मचितः' इत्यादिरत इति सर्वनाम्ना परामृश्य, हेतुपञ्चम्या निर्दिश्यते ।

ಆದ್ದರಿಂದ ಮುಖ್ಯವಾದ ಸಾಧ್ಯ ವಿಚಾರಕರ್ತವ್ಯತ್ವ. ಇಲ್ಲಿ ಅತಃಶಬ್ದ ಹೇಳುವ ಹೇತುವನ್ನು 'ವಿಚಾರವು ಕರ್ತವ್ಯ' ಎಂಬ ಮುಖ್ಯ ಸಾಧ್ಯದೊಡನೆ ಅನ್ವಯ ಮಾಡದೆ ಅಮುಖ್ಯ ಸಾಧ್ಯವಾದ ವೈರಾಗ್ಯದಲ್ಲಿ ಅನ್ವಯ ಮಾಡುವುದು ಅನುಚಿತ.

ಮತ್ತು 'ವೈರಾಗ್ಯವನ್ನು ಪಡೆದ ಅನಂತರ' ಎಂಬ ಅಥಶಬ್ದದ ಅರ್ಥದಲ್ಲಿ ವಿಶೇಷಣವಾಗಿ (ಗೌಣವಾಗಿ) ಇರುವ ವೈರಾಗ್ಯದಲ್ಲಿ ಅತಃಶಬ್ದಾರ್ಥವಾದ ಹೇತುತ್ವವನ್ನು ಅನ್ವಯ ಮಾಡುವುದು ಕೂಡುವುದೂ ಇಲ್ಲ.

ಹಾಗಾದಲ್ಲಿ ವೈರಾಗ್ಯವನ್ನು ಹೊಂದಲು ಪ್ರಮಾಣವೇ ಇಲ್ಲವೆಂದಾಯಿತು. ಆದ್ದರಿಂದ ಬೇರೆ ಗತಿಯಿಲ್ಲದೆ ಹೀಗೆ ಮಾಡಿದ್ದೇವೆ, ಎಂದರೆ 'ವೈರಾಗ್ಯವನ್ನು ಹೊಂದದ ಅನಂತರ' ಎಂಬರ್ಥವನ್ನು ಅಥಶಬ್ದವು ಹೇಳುತ್ತದೆ. ಇದರಿಂದ ವೈರಾಗ್ಯವು ತನಗೆ ಕಾರಣವಾದ 'ತದ್ಯಥೇಹ' ಇತ್ಯಾದಿ ಪ್ರಮಾಣವಾಕ್ಯಗಳನ್ನು ನೆನಪಿಗೆ ತಂದುಕೊಡುತ್ತದೆ. ಹೀಗೆ ನೇರವಾಗಿ ಹೇಳುವುದನ್ನು ಬಿಟ್ಟು ಪರಂಪರಯಾ ಹೇಳುವುದು ಅಯುಕ್ತ. ಬ್ರಹ್ಮಶಬ್ದದಿಂದ ಬ್ರಹ್ಮನ ಸ್ಮರಣೆ ಬಂದು, ಆ ಬ್ರಹ್ಮನಿಂದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಾದ ವೇದವಾಕ್ಯದ ಸ್ಮರಣೆ ಬರಬೇಕು, ಅದರಿಂದ ವೈರಾಗ್ಯಕ್ಕೆ ಕಾರಣವಾದ ವೇದವಾಕ್ಯಗಳ ಸ್ಮರಣೆ ಬರಬೇಕು. ಹೀಗೆ ನೀವು ಹೇಳುತ್ತಿದ್ದೀರಿ. ಇದು ಬಳಸುಮಾರ್ಗ.

ಮತ್ತೊಂದು ದೋಷ - ವೈರಾಗ್ಯಸ್ವರೂಪವನ್ನು ಸಮರ್ಥಿಸಲು "ತದ್ಯಥೇಹ" ಇತ್ಯಾದಿ ವಾಕ್ಯವನ್ನು ಪ್ರಮಾಣವನ್ನಾಗಿ ನೀವು ಹೇಳಿದಿರಿ. ಆದರೆ ಇದು ಸರಿಯಲ್ಲ. ವೈರಾಗ್ಯಕ್ಕೆ ಕಾರಣವಾದದ್ದು "ಬ್ರಹ್ಮನಷ್ಟೇ ಸತ್ಯ ಪ್ರಪಂಚವೆಲ್ಲವೂ ಮಿಥ್ಯಾ" ಎಂಬ ವಿವೇಕ. ಈ ವಿವೇಕಕ್ಕೆ ಸಾಧಕಪ್ರಮಾಣ ಎಂದರೆ "ನೇಹ ನಾನಾಸ್ತಿ ಕಿಂಚನ" "ಬ್ರಹ್ಮನಲ್ಲಿ ಆರೋಪಿತವಾದ ಈ ಭೇದಪ್ರಪಂಚವು ಪಾರಮಾರ್ಥಿಕವಾಗಿಲ್ಲ" ಎಂಬುದೇ ಆಗುತ್ತದೆ. ಹೊರತು 'ತದ್ಯಥೇಹ' ಎಂಬ ವಾಕ್ಯವಾಗುವುದಿಲ್ಲ.

**ಪ್ರಕಾಶಃ** – परोक्तमतश्शब्दार्थं निराह – भामत्यां त्विति ।। अत इतीति ।। 'अतः' इत्यत्र प्रातिपदिकेनेत्यर्थः । तर्हि सर्वे वेदान्ताः परामृश्येरन्नित्यत्रा आह – योग्यत्वादिति ।। अतश्शब्दोक्तहेतुत्वान्वये शक्तत्वादित्यर्थः । "तद्यथेह कर्मचितो लोकः क्षीयते एवमेवामुत्र पुण्यचितो लोकः क्षीयते" इत्यादिः कर्मणोऽनित्यफलकत्वबोधकः "ब्रह्मविदाप्नोति परम्" इत्यादि ब्रह्मज्ञानस्य नित्यफलत्वबोधकः ।। एवंचेति ।। यद्यपीदं भामत्यां न स्पष्टम् । तथाऽपि कल्पतरावुक्तत्वादेवमुक्तम् – तत्स्वरूपेति ।। जिज्ञासां प्रति वैराग्यादिरूपसाधन-कलापस्वरूपालाभपरिहार इत्यर्थः । अन्यथा अनुकूलवेदनीये लौकिके "यन्न दुःखेन सम्भिन्नम्" इत्यादिदुःखासम्भिन्ने आमुष्मिके च सुखे न विरज्येतेति

वैराग्यादिस्वरूपं दुर्लभं स्यात् । अक्षय्यवाक्यानित्यत्वज्ञानेन विवेकोऽपि न स्यादिति भावः ।।

हेतोरिति ।। ''अतो ब्रह्मजिज्ञासा'' इत्यत्रातश्शब्दार्थस्य हेतोर्जिज्ञासाकर्तव्यत्वरूपप्रधानसाध्यान्वयः, 'तस्मादनित्यः शब्दः' इत्यादाविव स्पष्टं प्रतीयत इति प्रतीतस्यास्मदुक्तरीत्या योग्यस्य साक्षात् प्रधानसाध्यान्वयस्य त्यागेन जिज्ञासासाधनीभूतवैराग्यादिरूपा प्रधानसाध्यान्वयो न युक्त इत्यर्थः । यद्यपि तन्मते यथाश्रुते कर्तव्यपदाध्याहाराभावात् जिज्ञासा कर्तव्येति नार्थः । तथाऽपि जिज्ञासा ज्ञानेच्छा भवितुं युक्तेति श्रौतार्थे सति, अर्थाद् विचारकर्तव्यत्वं प्राप्तमित्येवमुक्तम् ।

नन्वन्यस्याप्रकृतत्वादथशब्दार्थानन्तर्यप्रतियोगिनो वैराग्यादेरेव 'अतः' इति हेतुत्वोक्तौ पौनरुक्त्यापत्तेः, ब्रह्मपदोपस्थापितप्रमाणस्यैव योग्यस्याथपदोपस्थापितवैराग्यादौ हेतुत्वमुच्यत इति चेन्न । अन्यस्य प्रकृतत्वस्य प्रागेव बहुधा प्रतिपादितत्वात् । दोषान्तरं चाह – अथशब्दार्थेति ।। 'उपसर्जनस्य' आनन्तर्यविशेषणस्य । ननु वैराग्यादेः स्वरूपालाभे साधानाभावेन जिज्ञासाऽयोगादेवमुक्तमित्यत आह – अथशब्देति ।। आनन्तर्यप्रतियोगित्वेनोपस्थापितेत्यर्थः।। सम्भव इति ।। अत एव भगवता भाष्ये अथपदव्याख्याऽवसर एव ''आब्रह्मस्तम्बपर्यन्तम्'' इति ''परीक्ष्य लोकान्'' इत्यादिप्रमाणमुक्तमिति भावः ।। परम्परयेति ।। ब्रह्मोपस्थितिद्वारा तत्प्रमाणस्यैवोपस्थापनादिति भावः । यदपि 'योग्यत्वात् तद्यथा इत्यादिः' इत्युक्तं तदपि नेत्याह ।। विरागेति ।। ''नित्यानित्यवस्तुविवेकः'' इत्यादिभाष्यव्याख्यायां 'नित्यः प्रत्यगात्मा' इत्यादिना तथैव त्वयोक्तत्वादिति भावः ।।

गुरुराजीय – एवं स्वीयमतःशब्दव्याख्यानं समर्थ्य परकीयतद्व्याख्यानमनूद्य दूषयति – भामत्यां त्विति ।। तत्प्रमाणमिति ।। ब्रह्मणि प्रमाणमित्यर्थः । ब्रह्मशब्दस्य वेदवाचकत्वेन तेन तदुपस्थापनमिति भावः । तर्हि सकलवेदान्ताः परामृश्येरन्नेत्याह – योग्यत्वादिति ।। अथःशब्दोक्तहेतुत्वसमर्थनयोग्यत्वादि-

त्यर्थः । ननु तद्यथेहेत्यस्योपस्थानं कुत इत्यत आह – स च योग्यत्वादिति ॥ ततश्चेति ॥ विरागादेरित्यर्थः ॥ किंत्विति ॥ तस्य शमादेर्यत् स्वरूपं तस्यालाभः असिद्धिरित्यर्थः ॥ विरागादिसाधनान्वयायोगादिति ॥ विरागादिमज्जिज्ञासासाधनं तदन्वयायोग्यत्वादित्यर्थः । तथाच प्रधानसाध्येन स्वारसिकाकाङ्क्षायाः सत्वेन तेनैवातःशब्दस्यान्वयो नतु विरागादिसाधनेन । तेन स्वारसिकाकाङ्क्षाभावादिति भावः ॥ अथशब्दार्थेति ॥ तथाचान्यविशेषणत्वेनोपस्थितस्य नान्यविशेषणान्वये योग्यत्वमिति भावः ॥ परम्परयेति ॥ ब्रह्मशब्देन तत्प्रमाणवेदोपस्थापनं तेन च तज्ज्ञानसाधनवैराग्यसाधनवाक्योपस्थापनं तेन विरागसिद्धिरित्येवं परंपरयोपस्थापनोक्त्ययोगादित्यर्थः ।

किञ्च 'नेह नाना' इतिवाक्यमेव त्वयोदाहर्तव्यम् । तस्यैव विरागहेतुसत्यानृतविवेकहेतुत्वेन त्वदभिमतत्वात् । ननु तद्यथेहेत्यादीत्याह – विरागहेतुत्वेनेति ॥

**ವಿವರಣೆ** - ಅದ್ವೈತಮತದಲ್ಲಿ 'ಅತಃ' ಶಬ್ದದ ಅರ್ಥವನ್ನು ಏನು ಹೇಳುತ್ತಾರೆ? ಎಂದು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

ಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಬ್ರಹ್ಮವಿಷಯದಲ್ಲಿ ಪ್ರಮಾಣವಾಗಿರುವ ವೇದವು ಪ್ರಕೃತವಾಗುತ್ತದೆ. "ಬ್ರಹ ಜಾತಿ ಜೀವ ಕಮಲಾಸನ ಶಬ್ದರಾಶಿಷು" ಎಂಬಂತೆ ಬ್ರಹ್ಮಶಬ್ದಕ್ಕೆ ವೇದವೆಂಬ ಅರ್ಥವು ಪ್ರಸಿದ್ಧವಾಗಿದೆ. ಆದ್ದರಿಂದ ಬ್ರಹ್ಮಶಬ್ದ ಕೇಳಿದಾಗ ವೇದವು ಬುದ್ಧಿಯಲ್ಲಿ ಸನ್ನಿಹಿತವಾಗುತ್ತದೆ. ಅಂತಹ ವೇದವನ್ನು 'ಅತಃ' ಶಬ್ದದ ಪ್ರಾತಿಪದಿಕವು ಪರಾಮರ್ಶ ಮಾಡುತ್ತದೆ.

ಹಾಗಾದರೆ ಸಕಲವೇದವನ್ನೂ ಅತಃ ಶಬ್ದವು ಪರಾಮರ್ಶಿಸಲಿ ಎಂದರೆ ಹಾಗಾಗುವುದಿಲ್ಲ. 'ಅತಃ' ಎಂಬಲ್ಲಿರುವ 'ತಸಿಲ್' ಪ್ರತ್ಯಯದಿಂದ ಹೇತುತ್ವವು ತಿಳಿಯುತ್ತಿದೆ. ಆ ಹೇತುತ್ವದಲ್ಲಿ ಅನ್ವಯ ಹೊಂದಲು ಯಾವುದು ಯೋಗ್ಯವಾಗಿದೆಯೋ ಅಂತಹ ವೇದವನ್ನಷ್ಟೇ ಇಟ್ಟುಕೊಳ್ಳಬೇಕು. ಸಮಸ್ತವೇದಕ್ಕೇ ಅನ್ವಯಯೋಗ್ಯತ್ವವಿರುವುದಿಲ್ಲ. ಆ ವೇದಗಳು ಯಾವುದೆಂದರೆ "ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ" "ಏವಮೇವಾಽಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ ॥" "ಇಲ್ಲಿ ಯಾವ ರೀತಿಯಾಗಿ ಮತ್ತೊಬ್ಬರ ಸೇವೆಯಿಂದ ದೊರೆಯುವ ಸುಖವು ನಶ್ವರವಾಗಿರುತ್ತದೊ, ಅದರಂತೆ ಅಲ್ಲಿಯೂ ಪುಣ್ಯದಿಂದ ಪಡೆದ ಸುಖವು ನಶ್ವರವಾಗಿರುತ್ತದೆ" "ಬ್ರಹ್ಮವಿದಾಪ್ನೋತಿ ಪರಂ" "ಬ್ರಹ್ಮನನ್ನು ತಿಳಿದವನು ಬ್ರಹ್ಮನನ್ನೇ ಹೊಂದುತ್ತಾನೆ" ಈ ವಾಕ್ಯಗಳನ್ನಷ್ಟೇ ಇಲ್ಲಿ ಪರಾಮರ್ಶ ಮಾಡಬೇಕು. ಜ್ಞಾನವು ನಿತ್ಯವಾದ ಫಲವನ್ನು ಕೊಡುತ್ತದೆಂಬ ವೇದವಾಕ್ಯಗಳನ್ನು ಕರ್ಮವು ಅನಿತ್ಯವಾದ ಫಲವನ್ನು ಕೊಡುತ್ತದೆಂಬ ವೇದವಾಕ್ಯಗಳನ್ನು ಮಾತ್ರ ಇಲ್ಲಿ ತೆಗೆದುಕೊಳ್ಳಬೇಕು. ಏಕೆಂದರೆ ಜಿಜ್ಞಾಸಾಕಾರಣತ್ವವನ್ನು ತಸಿಲ್ ಪ್ರತ್ಯಯವು ಹೇಳುತ್ತಿದೆ. "ಸಹಸ್ರಶೀರ್ಷಾ ಪುರುಷಃ" ಇತ್ಯಾದಿ

ವಾಕ್ಯಗಳನ್ನು ತೆಗೆದುಕೊಂಡರೆ ಅವು ಜಿಜ್ಞಾಸೆಯನ್ನು ಕುರಿತು ಕಾರಣಗಳೇ ಆಗಿರುವುದಿಲ್ಲ. ಆದ್ದರಿಂದ ಸಕಲವೇದವನ್ನು ಇಟ್ಟುಕೊಳ್ಳಬಾರದು.

ಇಂತಹ ವೇದವಾಕ್ಯಗಳಿಂದ ಬ್ರಹ್ಮ ಜ್ಞಾನಫಲವು ನಿತ್ಯ, ಕರ್ಮಜ್ಞಾನಫಲವು ಅನಿತ್ಯವೆಂಬ ಜ್ಞಾನ ಬರುತ್ತದೆ. ಇಂತಹ ಜ್ಞಾನದಿಂದ ಐಹಿಕಆಮುಷ್ಮಿಕಫಲಗಳಲ್ಲಿ ವೈರಾಗ್ಯ ಬರುತ್ತದೆ. ಹೀಗೆ ನಿತ್ಯಾನಿತ್ಯವಸ್ತು-ವಿವೇಕದಿಂದ ವೈರಾಗ್ಯ ಬರುತ್ತದೆ. ವೈರಾಗ್ಯದಿಂದ ಶಮದಮಾದಿಗಳು ಬರುತ್ತವೆ. ಶಮದಮಾದಿಗಳಿಂದ ಮುಮುಕ್ಷಾ ಎಂಬುದು ಬರುತ್ತದೆ (ಭಾಮತೀಮತದಲ್ಲಿ ಪೂರ್ವಪೂರ್ವವಾದದ್ದೆಲ್ಲ ಹೇತುವಾಗುತ್ತದೆಂದು ಹೇಳಿದ್ದಾರೆ.) ಇದರ ಅನಂತರ 'ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು' ಎಂಬ ಅರಿವು ಮೂಡುತ್ತದೆ.

ಗಮನಿಸಬೇಕಾದ ಅಂಶ ಇಷ್ಟು - ನಿತ್ಯಾನಿತ್ಯವಸ್ತುವಿವೇಕಾದಿಗಳಿಗೆ ಕಾರಣತ್ವವನ್ನು ಅಥಶಬ್ದವು ಹೇಳುತ್ತದೆ. ಅತಃಶಬ್ದವು ಕೇವಲ ನಿತ್ಯಾನಿತ್ಯವಸ್ತುವಿವೇಕಾದಿಗಳ ಸ್ವರೂಪವನ್ನಷ್ಟೇ ಸಮರ್ಥಿಸುತ್ತಿದೆ. ಸಾಧನಕಲಾಪಗಳಿಗೆ ವೇದರೂಪವಾದ ಪ್ರಮಾಣವಿರುವುದರಿಂದ ಎಂದು ಅತಃಶಬ್ದದ ಅರ್ಥ.

ಇಷ್ಟು ವಿಷಯವು ಭಾಮತಿಯಲ್ಲಿ ಸ್ಪಷ್ಟವಾಗಿ ಹೇಳಿಲ್ಲ. ಕಲ್ಪತರುವಿನಲ್ಲಿ ಅತ್ಯಂತ ಸ್ಪಷ್ಟವಾಗಿ ವಿವರಿಸಿದೆ. ಕಲ್ಪತರುವು ಭಾಮತಿಯ ವ್ಯಾಖ್ಯಾನವಾಗಿರುವುದರಿಂದ ಭಾಮತಿಕಾರರ ಅಭಿಪ್ರಾಯವೂ ಇದೇ ಆಗಿರುತ್ತದೆಂದು ಗ್ರಂಥದಲ್ಲಿ 'ಭಾಮತ್ಯಾಂ ತು' ಎಂದು ಹೇಳಿದ್ದಾರೆ.

ನಿತ್ಯಾನಿತ್ಯವಸ್ತುವಿವೇಕಗಳ ವಿಷಯದಲ್ಲಿ ಅತಃಶಬ್ದದಿಂದ ಪ್ರಮಾಣವನ್ನು ಹೇಳಲೇಬೇಕು. ಒಂದು ವೇಳೆ ಹೇಳದಿದ್ದರೆ ವೈರಾಗ್ಯ ಹುಟ್ಟಲು ಸಾಧ್ಯವೇ ಇಲ್ಲ. ಏಕೆಂದರೆ ಪ್ರತಿನಿತ್ಯ ನಾವು ಅನುಭವಿಸುವ ಲೌಕಿಕಸುಖವು ರುಚಿಕರವಾಗಿರುತ್ತದೆ. ಮತ್ತು ಆಮುಷ್ಮಿಕ ಸುಖವೂ ಸಹ "ಯನ್ನ ದುಃಖೇನ ಸಂಭಿನ್ನಮ್" 'ಯಾವುದು ದುಃಖಮಿಶ್ರಿತವಲ್ಲವೋ' ಎಂಬ ವಚನದಂತೆ ದುಃಖದಿಂದ ಮಿಶ್ರಿತ-ವಾಗಿರುವುದಿಲ್ಲ. ಹಾಗಾಗಿ ಲೌಕಿಕಸುಖದಲ್ಲಾಗಲೀ ಆಮುಷ್ಮಿಕಸುಖದಲ್ಲಾಗಲೀ ವೈರಾಗ್ಯವನ್ನು ಏಕೆ ತಾಳಬೇಕು? ಎಂದನಿಸುತ್ತದೆ. ಆದ್ದರಿಂದ ವೈರಾಗ್ಯ ಹುಟ್ಟಲು ಸಾಧ್ಯವೇ ಇಲ್ಲ.

ಮತ್ತು "ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಂ ಭವತಿ" "ಚಾತುರ್ಮಾಸ್ಯಯಾಗ ಮಾಡಿದವನ ಪುಣ್ಯವು ಅಕ್ಷಯವಾದ ಫಲವನ್ನು ನೀಡುತ್ತದೆ" ಎಂಬ ವಾಕ್ಯವನ್ನು ನೋಡಿದಾಗ ಕರ್ಮಫಲವು ನಿತ್ಯವಾಗಿದೆಯೆಂಬ ಭಾವನೆ ಬರುತ್ತದೆ. ಹೀಗಾದಾಗ ನಿತ್ಯಾನಿತ್ಯವಿವೇಕವೂ ಬರದೇ ಇರಬೇಕಾದೀತು.

ಅದಕ್ಕೋಸ್ಕರ ವೈರಾಗ್ಯ, ನಿತ್ಯಾನಿತ್ಯವಸ್ತುವಿವೇಕ ಇವುಗಳ ವಿಷಯದಲ್ಲಿ ಪ್ರಮಾಣಗಳನ್ನು ಹೇಳಬೇಕು. ಆವಾಗ ಪ್ರಮಾಣಗಳ ಬಲದಿಂದ ಐಹಿಕ ಆಮುಷ್ಮಿಕ ಸುಖಗಳಲ್ಲಿ ವಿರಕ್ತಿಯನ್ನು ತಾಳಬೇಕು. ಮತ್ತು ನಿತ್ಯಾನಿತ್ಯವಸ್ತುವಿವೇಕವನ್ನು ಹೊಂದಬೇಕೆಂದು ತಿಳಿಯುತ್ತದೆ. ಪ್ರಮಾಣಗಳನ್ನು ನೋಡಿ ವೈರಾಗ್ಯವು. ನಿತ್ಯಾನಿತ್ಯವಸ್ತುವಿವೇಕವು ಉಂಟಾಗುತ್ತದೆ. ಇಷ್ಟು ಭಾಮತೀಕಾರ ಮಾಡಿದ ಅತಃ ಶಬ್ದಾರ್ಥವಿಚಾರ. ಇದು ಸರಿಯಲ್ಲ.

*ಜಿಜ್ಞಾಸಾಧಿಕರಣ*

ಅತಃಶಬ್ದದಿಂದ ತಿಳಿಯುತ್ತಿರುವ ಹೇತುವಿಗೆ ಮುಖ್ಯವಾದ 'ವಿಚಾರವು ಕರ್ತವ್ಯ' ಎಂಬ ಮುಖ್ಯ ಸಾಧ್ಯದೊಡನೆ ಅನ್ವಯ ಮಾಡುವುದೇ ಉಚಿತ. ನೀವು ಅಮುಖ್ಯ ಸಾಧ್ಯವಾದ ವೈರಾಗ್ಯದಲ್ಲಿ ಅನ್ವಯ ಮಾಡುತ್ತಿದ್ದೀರಿ, ಇದು ಲೋಕವಿರುದ್ಧ. ಉದಾಹರಣೆ - 'ತಸ್ಮಾತ್ ಅನಿತ್ಯಃ ಶಬ್ದಃ' 'ಆದ್ದರಿಂದ ಶಬ್ದವು ಅನಿತ್ಯ' ಇತ್ಯಾದಿಯಾಗಿ ಲೌಕಿಕಪ್ರಯೋಗಗಳಿವೆ. ಮೊದಲು ಶಬ್ದವು ಕೃತಕವೆಂದು ಉಪಪಾದನೆ ಮಾಡಿ ಕೊನೆಗೆ 'ತಸ್ಮಾದನಿತ್ಯಃ ಶಬ್ದಃ' ಎಂದು ಹೇಳಿದರೆ ಕೃತಕತ್ವಾದಿಗಳು ಅನಿತ್ಯತ್ವದ ಜೊತೆಗೆ ಅನ್ವಯ ಹೊಂದುತ್ತವೆ ಹೊರತು ಬೇರೆಡೆ ಅನ್ವಯ ಹೊಂದುವುದಿಲ್ಲ. ಈ ರೀತಿಯಾದ ಅನ್ವಯವು ಪ್ರಥಮಪ್ರತೀತ ಮತ್ತು ಸ್ವರಸಪ್ರತೀತ ಹಾಗೆಯೇ ಪ್ರಕೃತದಲ್ಲಿಯೂ ಬ್ರಹ್ಮಜಿಜ್ಞಾಸಾಕರ್ತವ್ಯತ್ವಕ್ಕೆ ಸಾಧನವಾದ ವೈರಾಗ್ಯಾದಿಗಳಲ್ಲಿ ಅನ್ವಯ ಮಾಡುವುದು ಅಸ್ವರಸ. ಗತಿಯಿಲ್ಲದಾಗ ಹಾಗೆ ಅಪ್ರಧಾನವಾದ್ದರಲ್ಲಿ ಅನ್ವಯ ಮಾಡುವುದು ಕೆಲವೆಡೆ ಕಂಡಿದೆ - 'ಹೇತುಸಾಧಕಹೇತುಗಳಲ್ಲಿ' ಹೇತುವಿಗೆ ಪ್ರಧಾನಸಾಧ್ಯದಲ್ಲಿ ಅನ್ವಯವು ಅಶಕ್ಯವಾದಾಗ ಅದರ ಸಾಧನದಲ್ಲಿ ಅನ್ವಯ ಮಾಡ-ಲಾಗುತ್ತದೆ. ಆದರೆ ಪ್ರಕೃತ ಹಾಗೆ ಗತಿಯಿಲ್ಲವೆಂದು ಹೇಳಲಾಗದು. 'ಅತಃ ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎಂದು ಸುಲಭವಾಗಿ ಅನ್ವಯ ಮಾಡಬಹುದು. ಅದನ್ನು ಬಿಟ್ಟು ವಿಚಾರಕರ್ತವ್ಯತ್ವಕ್ಕೆ ಸಾಧನವಾದ ವೈರಾಗ್ಯಾದಿಗಳಲ್ಲಿ ಅನ್ವಯ ಮಾಡುವುದು ಅನುಚಿತ. ಆದ್ದರಿಂದ ನಾವು ಹೇಳುವಂತೆ ಅನ್ವಯ ಮಾಡುವುದೇ ಸೂಕ್ತವಾಗಿದೆ. (ಸಾಧನಾನ್ವಯ ಎಂಬ ಪಾಠವನ್ನು ಇಟ್ಟುಕೊಂಡರೆ ಸ್ವರಸವಾಗುತ್ತದೆ)

ಪ್ರಶ್ನೆ :- ಭಾಮತೀಮತದಲ್ಲಿ 'ಕರ್ತವ್ಯಾ' ಎಂಬ ಪದದ ಅಧ್ಯಾಹಾರವೇ ಇಲ್ಲ. 'ಬ್ರಹ್ಮಜಿಜ್ಞಾಸಾ ಭವತಿ' ಎಂದು ಅವರು ಹೇಳುತ್ತಾರೆ. ಆದ್ದರಿಂದ 'ವಿಚಾರಕರ್ತವ್ಯತ್ವ' ಎಂಬ ಸಾಧ್ಯಾನ್ವಯವು ಯೋಗ್ಯವೆಂದು ಅವರನ್ನು ಕುರಿತು ಆಕ್ಷೇಪ ಮಾಡುವುದು ಹೇಗೆ ಸರಿ?

ಉತ್ತರ :- ಹೌದು, ಆದರೆ ವಿಚಾರಕರ್ತವ್ಯತ್ವವು ಅರ್ಥಾತ್ ತಿಳಿಯುತ್ತದೆಂದು ಅವರೇ ಹೇಳಿದ್ದಾರೆ - ''ಬ್ರಹ್ಮಜ್ಞಾನೇಚ್ಛಾ ಭವಿತುಂ ಯುಕ್ತಾ'' ಎಂದು ಹೇಳುವುದರಿಂದ ವಿಚಾರವನ್ನು ಮಾಡಬೇಕೆಂದೇ ಆಕ್ಷೇಪದಿಂದ ತಿಳಿಯುತ್ತದೆ. ಅಥಶಬ್ದಾರ್ಥಕ್ಕೆ ಅನ್ವಯ ಹೇಳಲು ಆಕ್ಷೇಪದಿಂದ ವಿಚಾರಕರ್ತವ್ಯತ್ವವನ್ನು ಅವರು ಒಪ್ಪಲೇಬೇಕಾಗುತ್ತದೆ. ಈ ಅಭಿಪ್ರಾಯದಿಂದ ನಾವು ಭಾಮತೀಕಾರರಿಗೆ ಹೇಳಿದ ದೋಷವು ಸೂಕ್ತವೇ ಆಗಿದೆ.

ಶಂಕೆ :- ಬೇರೆ ಗತಿಯಿಲ್ಲದಿರುವುದರಿಂದಲೇ ನಾವು ವೈರಾಗ್ಯದಲ್ಲಿ ಅನ್ವಯ ಮಾಡಿದ್ದೇವೆ. ಅತಃ ಶಬ್ದದಿಂದ ಯಾವುದನ್ನು ತೆಗೆದುಕೊಳ್ಳಬೇಕು? ಬೇರೆ ಯಾವುದೂ ಪ್ರಕೃತವಾಗಿಲ್ಲ. 'ವೈರಾಗ್ಯ ಮೊದಲಾದವುಗಳನ್ನು ಹೊಂದಿದ ಅನಂತರ ಬ್ರಹ್ಮವಿಚಾರ' ವೆಂದು ಅಥಶಬ್ದವು ಹೇಳಿದೆ. ಇದರಿಂದ ವೈರಾಗ್ಯವು ಪ್ರಕೃತವಾಗಿದೆ. ಹೀಗೆ ಪ್ರಕೃತವಾದ ವೈರಾಗ್ಯಾದಿಗಳ ಸ್ವರೂಪವನ್ನು ಪ್ರಮಾಣದಿಂದ 'ಅತಃ' ಶಬ್ದವು ಸಮರ್ಥಿಸುತ್ತಿದೆ. ಈ ವಿಷಯದಲ್ಲಿ ಬ್ರಹ್ಮಶಬ್ದವಿರುವುದರಿಂದ ವೇದವೇ ಪ್ರಮಾಣವಾಗಿದೆಯೆಂದು ತಿಳಿಯುತ್ತದೆ. ಒಂದು ವೇಳೆ ಹೀಗೆ ಹೇಳದೆ ವೈರಾಗ್ಯಕ್ಕೆ ವಿಚಾರಹೇತುತ್ವವನ್ನು ಅತಃಶಬ್ದವು ಹೇಳುತ್ತಿದೆಯೆಂದು ಹೇಳಿದರೆ ಪುನರುಕ್ತಿ ಬರುತ್ತದೆ. ಅಥಶಬ್ದ ಹೇಳಿದ್ದನ್ನೇ ಅತಃಶಬ್ದವೂ

ಹೇಳಿದಂತಾಗುತ್ತದೆ. ಹೀಗೆ ಗತ್ಯಂತರಾಭಾವಾತ್ ಪ್ರಮಾಣಸಾಧಕವೆಂದೇ ಹೇಳಬೇಕು. ಆ ಪ್ರಮಾಣವಾದರೂ ಸಾಧನದಲ್ಲೇ ಅನ್ವಯವಾಗಬೇಕು.

ಸಮಾಧಾನ :- 'ಅತಃಶಬ್ದದಿಂದ ಪರಾಮರ್ಶ ಮಾಡಲು ಯಾವದೂ ಪ್ರಕೃತವಾಗಿಲ್ಲವೆಂದು ಹೇಳಿದ್ದೇ ತಪ್ಪು. ಯಾವುದು ಹೇಗೆ ಪ್ರಕೃತವಾಗಿದೆ ಎಂಬುದನ್ನು ಹಿಂದೆ ಏಳು ಬಗೆಯಲ್ಲಿ ಸಮರ್ಥಿಸಿದ್ದೇವೆ. ಅದನ್ನು ಪರಾಮರ್ಶಿಸಿ ಜಿಜ್ಞಾಸಾಕರ್ತವ್ಯತ್ವದಲ್ಲಿ ಸುಲಭವಾಗಿ ಅನ್ವಯ ಮಾಡಬಹುದು. ಆದ್ದರಿಂದ ನಾವು ಮಾಡಿದ ವ್ಯಾಖ್ಯಾನವೇ ಸರಿಯಾಗಿದೆ. ಮತ್ತು ಅಥಶಬ್ದಕ್ಕೆ 'ವೈರಾಗ್ಯವನ್ನು ಪಡೆದ ಅನಂತರ' ಎಂಬರ್ಥವನ್ನು ಹೇಳುವಾಗಲೇ ವೈರಾಗ್ಯಸ್ವರೂಪಸಮರ್ಥಕವಾದ ಪ್ರಮಾಣಗಳೂ ಉಪಸ್ಥಿತಗಳಾಗುತ್ತವೆ. ಅದಕ್ಕೋಸ್ಕರ 'ಅತಃ' ಪದವು ಬೇಡ. ಆದ್ದರಿಂದಲೇ ಭಗವಾನ್ ಭಾಷ್ಯಕಾರರು ಅಥಶಬ್ದದ ವ್ಯಾಖ್ಯಾನ ಸಂದರ್ಭದಲ್ಲಿಯೇ 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್' 'ಆಬ್ರಹಸ್ತಂಬಪರ್ಯಂತಂ' ಇತ್ಯಾದಿ ಪ್ರಮಾಣವಾಕ್ಯಗಳನ್ನು ಉದಾಹರಿಸಿದ್ದಾರೆ.

ಹೀಗೆ ಅನೇಕ ದೋಷಗಳಿರುವುದರಿಂದ 'ಅತಃ' ಶಬ್ದವು 'ವೈರಾಗ್ಯಾದಿಗಳ ಸ್ವರೂಪನಿರ್ಧಾರಕ' ಎಂಬ ಭಾಮತಿಯ ವ್ಯಾಖ್ಯಾನವು ಅಸಾಧುವಾಗಿದೆ.




**ಭಾಮತಿಯಲ್ಲಿ ಅತಃಶಬ್ದಾರ್ಥ**

ಬ್ರಹ್ಮಶಬ್ದದಿಂದ ಪ್ರಕೃತವಾದ, ಬ್ರಹ್ಮವಿಷಯದಲ್ಲಿ ಪ್ರಮಾಣವಾದ ವೇದವನ್ನು ಅತಃಶಬ್ದ ನಿರ್ದೇಶಿಸುತ್ತದೆ. ಆದರೆ ಎಲ್ಲ ವೇದವನ್ನಲ್ಲ.ವಿಚಾರ ಸಾಧನವಾದ ವೈರಾಗ್ಯ ಹುಟ್ಟುವ ಸಂಭವವಿಲ್ಲ ಎಂಬ ಆಕ್ಷೇಪಕ್ಕೆ ಪರಿಹಾರವಾಗಿ ಬ್ರಹ್ಮಜ್ಞಾನಫಲ ನಿತ್ಯ, ಕರ್ಮಫಲ ಅನಿತ್ಯ ಎನ್ನುವ ವೇದ ವಾಕ್ಯಗಳನ್ನು ಮಾತ್ರ ನಿರ್ದೇಶಿಸಿ ನಿತ್ಯಾನಿತ್ಯ ವಿವೇಕವೂ ಆ ಮೂಲಕ ವಿಷಯ ವೈರಾಗ್ಯವೂ ಲಭ್ಯವೆನ್ನುತ್ತದೆ. ಇದು ಕಲ್ಪತರುವಿನಲ್ಲಿ ಸ್ಪಷ್ಟವಿದೆ.

ಆದರೆ ಭಾಮತೀಪ್ರಕಾರ 'ಅಧಿಕಾರ ಪ್ರಾಪ್ತಿಯ ಅನಂತರ ಬ್ರಹ್ಮಜ್ಞಾನೇಚ್ಛೆ ಉಂಟಾಗುವುದು ಯುಕ್ತ' ಎಂದು ಸೂತ್ರ ಹೇಳಿದಾಗ ಅರ್ಥಾತ್ ಬ್ರಹ್ಮವಿಚಾರ ಕರ್ತವ್ಯ ಎಂದು ಹೇಳಿದಂತಾಗುವುದು. ಅತಃ ಎಂಬುದನ್ನು ಮುಖ್ಯಸಾಧ್ಯವಾದ ವಿಚಾರಕರ್ತವ್ಯತ್ವದಲ್ಲಿ ಅನ್ವಯಿಸುವುದು ಸ್ವರಸ. ಆದರೆ ವೈರಾಗ್ಯವನ್ನು ಪಡೆದ ಅನಂತರ ಎಂಬ ಅಥಶಬ್ದಾರ್ಥದಲ್ಲಿ ಸೇರಿರುವ ವೈರಾಗ್ಯ ಎಂಬ ಅಂಶಕ್ಕೆ ಅತಃ ಶಬ್ದವನ್ನು ಅನ್ವಯಿಸುವುದು ಸರಿಯಲ್ಲ.

---

**तात्पर्यचन्द्रिका –**

**विवरणे तु – अथशब्दगृहीताया एव साधनकलापस्य ब्रह्मविचारहेतुतायाः "अक्षय्यं ह वै चातुर्मास्ययाजिनः सुकृतम्" इत्यादिनाऽपवादशङ्कायां**

**प्राप्तायां तन्निराकरणं पुनरथशब्दोक्तहेतुत्वाभिधायिनाऽतश्शब्देन क्रियते इत्युक्तम् । तदपि न । अथशब्दोक्तानधिकाभिधायिना अतश्शब्देन अपवादशङ्कानिरासे, अथशब्देनैव तन्निरासप्रसङ्गात् । हेतुत्वसाधकहेतोः कथन एव ह्यपवादशङ्कानिरासः नतूक्तस्यैव हेतुत्वस्य पदान्तरेण कथन इति दिक् ।**

ಅನುವಾದ - ವಿವರಣಕಾರರು ಅತಃಶಬ್ದಾರ್ಥವನ್ನು ಹೀಗೆ ಹೇಳಿದ್ದಾರೆ - ಅಥಶಬ್ದಕ್ಕೆ ವಿಚಾರ-ಕಾರಣವಾದ ಸಾಧನಸಂಪತ್ತಿನ ಅನಂತರ'' ಎಂದರ್ಥ. ಇದರ ಮೇಲೆ ಬರುವ ಅಪವಾದ ಶಂಕೆಯನ್ನು ಅತಃಶಬ್ದವು ಪರಿಹರಿಸುತ್ತಿದೆ - ''ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಮ್'' ಎಂಬ ವಾಕ್ಯವು ಕರ್ಮಫಲಕ್ಕೆ ನಿತ್ಯತ್ವವನ್ನು ಹೇಳುತ್ತಿದೆ. ಇದನ್ನು ನೋಡಿದಾಗ ನಮಗೆ 'ಬ್ರಹ್ಮಜ್ಞಾನಫಲವು ನಿತ್ಯ ಬೇರೆಲ್ಲವೂ ಅನಿತ್ಯ' ಎಂಬ ವಿವೇಕ ಬರುವುದಿಲ್ಲ. ವೈರಾಗ್ಯವೂ ಬರುವುದಿಲ್ಲ. ಆದ್ದರಿಂದ 'ವಿವೇಕ ವೈರಾಗ್ಯ ಮೊದಲಾದ ಸಾಧನಸಂಪತ್ತನ್ನು ಹೊಂದದೆ ವಿಚಾರವು ಉಂಟಾಗುವುದಿಲ್ಲ' ಹೀಗೆ ಬಂದ ಅಪವಾದ ಶಂಕೆಯನ್ನು ಅತಃ ಶಬ್ದವು ಪರಿಹರಿಸುತ್ತದೆಂದು ಹೇಳಿದ್ದಾರೆ.

ಇದು ತಪ್ಪು. ಅಥಶಬ್ದವು ಎಷ್ಟು ಅರ್ಥವನ್ನು ಹೇಳುತ್ತದೋ ಅಷ್ಟೇ ಅರ್ಥವನ್ನು 'ಅತಃ' ಶಬ್ದವು ಹೇಳುತ್ತದೆ. ಆದರೂ ಅಪವಾದಶಂಕೆಯನ್ನು ಪರಿಹಾರ ಮಾಡುತ್ತದೆಂದು ಹೇಳಿದರೆ ಅಥಶಬ್ದವೇ ಆಶಂಕೆಯನ್ನು ಪರಿಹರಿಸಲಿ.

'ವಿಚಾರಕ್ಕೆ ಸಾಧನಸಂಪತ್ತು ಕಾರಣವಾಗಿದೆ' ಎಂಬ ವಿಷಯದ ಮೇಲೆ ಆಶಂಕೆ ಬಂದರೆ ಅದನ್ನು ಪರಿಹರಿಸಿ ಕಾರಣತ್ವವನ್ನು ಸಮರ್ಥಿಸಲು ಮತ್ತೊಂದು ಹೇತುವನ್ನು ಹೇಳಬೇಕು ಆವಾಗಷ್ಟೇ ಅಪವಾದಶಂಕೆಯು ಪರಿಹಾರವಾಗುತ್ತದೆ. ಹೊರತು ಹೇಳಿದ ವಿಚಾರವನ್ನೇ ಪುನಃ ಮತ್ತೊಮ್ಮೆ ಬೇರೆ ಪದದಿಂದ ಹೇಳಿದ ಮಾತ್ರಕ್ಕೆ ಅಪವಾದ ಶಂಕೆಯು ಪರಿಹಾರವಾಗುವುದಿಲ್ಲ.

**प्रकाशः – विवरणे त्विति ।।** अथशब्दार्थानन्तर्यप्रतियोगिनो वैराग्यादि-साधनचतुष्टयस्यैव 'अतः' इति हेतुत्वमुच्यते । 'अथ' साधनकलापानन्तरम्, 'अतः' साधनकलापादिति । नच कारणादानन्तर्यस्याव्यवधेरव्यभिचाराच्च मुख्यत्वेन, तेनैव वैराग्यादेर्हेतुत्वलाभात् पुनरुक्तिरिति वाच्यम् । अक्षय्यवाक्येन कर्मजन्यसुखस्य नित्यत्वावगमेन ब्रह्मज्ञानफलं नित्यमन्यफलमनित्यमिति विवेकस्य तद्धेतुकवैराग्यादेश्चायोगेन विवेकादिसाधनकलापस्य न विचारहेतुत्व-मित्यपवादशङ्कानिरासार्थत्वेनापौनरुक्त्यात् । दृश्यन्ते चापवादनिरासार्था अपि ''मृडमृद'' इत्यादिविधय इति, दूष्यांशस्यार्थः ।। इति दिगिति ।। अयं भावः ।

विचारकर्तव्यत्वरूपप्रधानसाध्ये अपेक्षितसप्रयोजनत्वादिस्वतन्त्रहेतुसमर्पणपरत्व-सम्भवे, आनन्तर्योपसर्जनस्य हेतुतया प्राप्तस्यातश्शब्देन हेतुत्वोक्तेरयुक्तत्वात् । अथशब्दोपस्थापितवैराग्यादिनैव स्वजनकस्य कृतकत्वरूपोपपत्त्युपबृंहितत्वेन प्रबलस्य "तद्यथेह कर्मचितो लोकः क्षीयते" इत्यादिवाक्यस्योपस्थापनेन तत एवापवादशङ्कानिरासससम्भवाच्च । जिज्ञासाकर्तव्यतायामपेक्षितहेतोरवश्यो-पन्यसनीयस्य सप्रयोजनत्वादेरनुपन्यासे जिज्ञासाकर्तव्यत्वासिद्धेश्च । अयं च दोषः प्राचीनमतेऽपि बोध्यः । नच मतद्वयेऽपि जिज्ञासापदेनैव प्रयोजनादेर्विचार-कर्तव्यताहेतोर्लाभ इति वाच्यम्, निरसिष्यमाणत्वात् । हेतुपरेणातःपदेनैव फलादेर्हेतोः कथनस्यौचित्याच्चेत्यादि ध्येयमिति ।

गुरुराजीय – विवरणोक्तपौनरुक्त्यपरिहारं दूषयितुमनुवदति – विवरणे त्विति ।। अक्षय्यं हवै चातुर्मास्ययाजिनः सुकृतं भवतीत्यादिश्रुत्या कर्मणामप्यनन्त स्थिरफलकत्वोक्त्या कर्मणामल्पास्थिरफलकत्वं ब्रह्मज्ञानस्य स्थिरफलकत्वमित्येवंरूप-जिज्ञासाहेतुभूतनित्यानित्यविवेकादेरभावान्न विचारः कर्तव्य इति भावः ।। अपवादशङ्कयामिति ।। चातुर्मास्यादिकमेव कर्तव्यं तेनैव मोक्षप्राप्तिर्भविष्यति किं ब्रह्मजिज्ञासया इत्यपवादशङ्कयामित्यर्थः ।। अतश्शब्देनेति ।। उक्तस्यैव पुनः शब्दान्तरेणोक्तौ दार्ढ्येन शङ्कानिराकरणं भवतीति भावः । अत्र वक्तव्यं किमथ-शब्देनोक्तमेवातःशब्देनोच्यते ततोऽधिकं किञ्चित् । नाद्य इत्याह – अथ-शब्दोक्तेति ।। ननूक्तस्यैव हेतुत्वस्य पदान्तरेण कथने दार्ढ्यहेतुत्वेन शङ्कानिराकरण-मित्युक्तमत आह – हेतुत्वसाधकेति ।। वैराग्यादेर्जिज्ञासाहेतुत्वसाधकहेतोरित्यर्थः । द्वितीयं दूषयति – द्विगिति ।। भिन्नार्थत्वे च तेनैव पौनरुक्त्यासम्भवे अपवाद-शङ्कानिराकरणमनर्थकं स्यादिति भावः ।

ವಿವರಣೆ - ಇಲ್ಲಿಯ ತನಕ ಭಾಮತಿಯಲ್ಲಿ ಹೇಳಿದ ಅತಃಶಬ್ದಾರ್ಥವನ್ನು ನಿರಾಕರಿಸಿದ್ದಾಯಿತು. ಪ್ರಕೃತ ವಿವರಣದಲ್ಲಿ ಹೇಳಿದ ಅತಃಶಬ್ದಾರ್ಥವನ್ನು ನಿರಾಕರಿಸಲಾಗಿದೆ. ವಿವರಣಕಾರರು ಪುನರುಕ್ತಿಯನ್ನು ಪರಿಹರಿಸಲು ಪ್ರಯತ್ನಪಟ್ಟಿದ್ದಾರೆ. ಅದನ್ನು ವ್ಯರ್ಥವೆನಿಸಲು ಮೊದಲು ಅನುವಾದ ಮಾಡುತ್ತಿದ್ದಾರೆ.

'ವೈರಾಗ್ಯ ಮೊದಲಾದ ಸಾಧನಗಳನ್ನು ಪಡೆದ ಅನಂತರ' ಎಂಬರ್ಥವನ್ನು ಅಥಶಬ್ದವು ಹೇಳುತ್ತದೆ. ಇಲ್ಲಿ ಆನಂತರ್ಯಕ್ಕೆ ಪ್ರತಿಯೋಗಿಯಾದದ್ದು ವೈರಾಗ್ಯವೇ ಮೊದಲಾದ ಸಾಧನಚತುಷ್ಟಯಗಳು. ಈ

ಸಾಧನಚತುಷ್ಟಯಗಳೇ ಬ್ರಹ್ಮವಿಚಾರಕ್ಕೆ ಕಾರಣಗಳಾಗಿವೆಯೆಂದು 'ಅತಃ' ಶಬ್ದವು ಹೇಳುತ್ತದೆ. ಆದ್ದರಿಂದ ಸೂತ್ರಾರ್ಥ ಹೀಗೆ - ಅಥ = ಸಾಧನಚತುಷ್ಟಯಗಳನ್ನು ಹೊಂದಿದ ಅನಂತರ, ಅತಃ = ಸಾಧನಸಂಪತ್ತು ಇರುವುದರಿಂದಲೇ ಬ್ರಹ್ಮಜಿಜ್ಞಾಸಾ = ಬ್ರಹ್ಮವಿಚಾರ ಎಂದು.

ಪ್ರಶ್ನೆ :- ಕಾರ್ಯದಲ್ಲಿ ಕಾರಣದ ಆನಂತರ್ಯವು ವ್ಯವಧಾನವಿಲ್ಲದೆ ಬರುತ್ತದೆ. ಮತ್ತು ಅವ್ಯಭಿಚರಿತವಾಗಿ ಬರುತ್ತದೆ. ಆದ್ದರಿಂದ ಪುನರುಕ್ತಿ ಬರುತ್ತದೆ. ಏಕೆಂದರೆ 'ವೈರಾಗ್ಯ ಮೊದಲಾದ ಸಾಧನಚತುಷ್ಟಯವನ್ನು ಪಡೆದ ಅನಂತರ' ಎಂದು ಹೇಳಿದಾಗ ಮುಖ್ಯವಾದ ಆನಂತರ್ಯವನ್ನೇ ಇಟ್ಟುಕೊಳ್ಳಬೇಕು. ಆದ್ದರಿಂದ 'ವಿಚಾರಕ್ಕೆ ಕಾರಣವಾದ ಸಾಧನಚತುಷ್ಟಯದ ಅನಂತರ' ಎಂಬ ಅತಃ ಶಬ್ದದ ಅರ್ಥವೂ ಅಥಶಬ್ದದಿಂದಲೇ ದೊರೆಯುತ್ತದೆ. ಪುನಃ ಇದನ್ನೇ ಅತಃಶಬ್ದವೂ ಹೇಳಿದರೆ ಪುನರುಕ್ತಿ ಬರುತ್ತದೆ.

ಉತ್ತರ :- ಪುನರುಕ್ತಿ ಬರುವುದಿಲ್ಲ. "ಅಕ್ಷಯ್ಯಂ ಹ ವೈ ಚಾತುರ್ಮಾಸ್ಯ ಯಾಜಿನಃ ಸುಕೃತಂ" ಎಂಬ ವಾಕ್ಯವು ಕರ್ಮಫಲವನ್ನು ನಿತ್ಯವೆಂದು ಹೇಳುತ್ತಿದೆ. ಇದನ್ನು ನೋಡಿದಾಗ ನಮಗೆ ಬ್ರಹ್ಮಜ್ಞಾನಫಲವಷ್ಟೇ ನಿತ್ಯ. ಅನ್ಯಫಲವು ಅನಿತ್ಯವೆಂಬ ವಿವೇಕವು ಬರಲು ಸಾಧ್ಯವಿಲ್ಲ. ಮತ್ತು ವೈರಾಗ್ಯವೂ ಬರುವುದಿಲ್ಲ. ಆದ್ದರಿಂದ "ವಿವೇಕ ವೈರಾಗ್ಯ ಮೊದಲಾದ ಸಾಧನ ಸಂಪತ್ತು ಇಲ್ಲದಿರುವುದರಿಂದ ವಿಚಾರವು ಬರುವುದಿಲ್ಲ" ಎಂಬ ಆಕ್ಷೇಪವನ್ನು ಪರಿಹಾರ ಮಾಡಲು ಅತಃಶಬ್ದವು ಬೇಕು. ಪುನರುಕ್ತಿಯು ಬರುವುದಿಲ್ಲ.

ಪ್ರಶ್ನೆ :- ಅಪವಾದಕ್ಕೆ ಅಪವಾದ ಹೇಳುವ ಮಾತು ನಿಷೇಧರೂಪವಾಗಿರಬೇಕು. ವಿಧಿರೂಪವಾಗಿ ಇರಲು ಸಾಧ್ಯವಿಲ್ಲ. ಉದಾಹರಣೆ - 'ಕರ್ಮಣಿ ದ್ವಿತೀಯಾ' ಎಂದು ಮೊದಲು ಹೇಳಿ ಅನಂತರ ಅಪವಾದವಾಗಿ "ಕರ್ತೃಕರ್ಮಣೋಃ ಕೃತಿ" ಎಂದು ಹೇಳಿದೆ. ಪುನಃ ಅದಕ್ಕೆ ಅಪವಾದವಾಗಿ 'ನ ಲೋಕಾವ್ಯಯನಿಷ್ಠ' ಇತ್ಯಾದಿಯಾಗಿ ಹೇಳಿದೆ. ಇಲ್ಲಿ ಅಪವಾದದ ಅಪವಾದವು "ನ" ಎಂದು ನಿಷೇಧರೂಪವಾಗಿ ಇದೆ. ಆದರೆ ಇಲ್ಲಿ 'ಅತಃ' ಎಂಬುದು ವಿಧಿರೂಪವಾಗಿದೆ.

ಉತ್ತರ :- ಹಾಗೇನು ನಿಯಮವಿಲ್ಲ. ಅಪವಾದದ ಅಪವಾದವು ಎಲ್ಲ ಕಡೆ ನಿಷೇಧರೂಪವಾಗಿಯೇ ಇರುತ್ತದೆಂಬ ನಿಯಮವಿಲ್ಲ. ಉದಾಹರಣೆ - 'ನ ಕ್ತ್ವಾ ಸೇಟ್' ಎಂಬ ಸೂತ್ರದಲ್ಲಿ 'ಕ್ತ್ವಾ' ಪ್ರತ್ಯಯವು ಸೇಟ್ ಆಗುವುದಿಲ್ಲವೆಂದು ನಿಷೇಧ ಮಾಡಿದೆ. ಅದನ್ನು ಪುನಃ 'ಮೃಡಮೃದ' ಇತ್ಯಾದಿ ಸೂತ್ರದಲ್ಲಿ 'ಕ್ತ್ವಾ' ಪ್ರತ್ಯಯವು ಸೇಟ್ ಆಗುತ್ತದೆಂದು ಅಪವಾದ ಹೇಳಿದ್ದಾರೆ. ಇದು ಅಪವಾದದ ಅಪವಾದವಾಗಿದೆ. 'ಮೃಡ' ಮೊದಲಾದ ಧಾತುಗಳಿಗೆ ಬರುವ ಕ್ತ್ವಾ ಪ್ರತ್ಯಯವು 'ಸೇಟ್' ಆಗುತ್ತದೆ. ಆದ್ದರಿಂದ 'ಮೃಡಿತ್ವಾ' 'ಮೃದಿತ್ವಾ' ಎಂಬಲ್ಲೆಲ್ಲ 'ಇಟ್' ಕೇಳಿಸುತ್ತದೆ. ಅದರಂತೆ 'ಅತಃ' ಎಂಬುದು ಅಪವಾದನಿರಾಸಕವಾದರೂ ವಿಧಿರೂಪವಾಗಬಹುದು.

ನ್ಯಾಯಮೃತದ 'ವಿಶ್ವಮಿಥ್ಯಾತ್ವಸ್ಯ ಆಗಮಾದಿಬಾಧಃ' ಎಂಬಲ್ಲಿ ಗ್ರಂಥಕಾರರೇ ಈ ಸೂತ್ರವನ್ನು ಉಲ್ಲೇಖಿಸಿ ಸಮರ್ಥಿಸಿದ್ದಾರೆ.

*ಪರಿಪೂರ್ಣಚಂದ್ರಿಕಾ*

ವಿವರಣಕಾರರ ಈ ಸಮರ್ಥನೆಯನ್ನು ಗ್ರಂಥದಲ್ಲಿ 'ತದಪಿ ನ' ಇತ್ಯಾದಿಯಾಗಿ ನಿರಾಕರಿಸಿದ್ದಾರೆ. (ನಿರಾಕರಣೆಯು ಸುಲಭವಾಗಿ ಇರುವುದರಿಂದ ವ್ಯಾಖ್ಯಾನಿಸಿಲ್ಲ.)

ಇತಿ ದಿಕ್ - ಎಂದು ಹೇಳಿದ್ದರಿಂದ ಈ ರೀತಿಯಾದ ಇನ್ನೂ ಹಲವು ದೋಷಗಳನ್ನು ಅನುಸಂಧಾನ ಮಾಡಿಕೊಳ್ಳಬೇಕು.

(ಪ್ರಾಸಂಗಿಕ ವಿಚಾರ - ಎಲ್ಲಾದರೂ ಗ್ರಂಥದಲ್ಲಿ 'ಪೂರ್ವಮುಕ್ತಂ' ಎಂದು ಬಂದರೆ ಅದರ ವಿವರಣೆಯನ್ನು ಶಿಷ್ಯನೇ ತಿಳಿಯಬೇಕು. ಒಂದುವೇಳೆ 'ವಕ್ಷ್ಯತಿ' ಎಂದು ಬಂದರೆ ಅದರ ವಿವರಣೆಯನ್ನು ಗುರುಗಳು ಮಾಡಬೇಕು. 'ಇತಿದಿಕ್' ಎಂದು ಬಂದರೆ ಅದರ ವಿವರಣೆಯನ್ನು ಮಾಡಲು ನಮಗೆ ಸಾಮರ್ಥ್ಯವಿಲ್ಲದ ಕಾರಣ ಟಿಪ್ಪಣಿಕಾರರೇ ಮಾಡಬೇಕು. ಪ್ರಕೃತ 'ಇತಿದಿಕ್' ಎಂಬ ಗ್ರಂಥಕಾರರ ಮಾತಿಗೆ ರಾಯರು ಬಹಳ ಸುಂದರವಾಗಿ ವಿವರಿಸುತ್ತಿದ್ದಾರೆ)

ವಿಚಾರವು 'ಕರ್ತವ್ಯ' ಎಂಬುದು ಮುಖ್ಯವಾದ ಸಾಧ್ಯ. ಆ ಸಾಧ್ಯಕ್ಕೆ ಅಪೇಕ್ಷಿತವಾದದ್ದು ಸಪ್ರಯೋಜನತ್ವವೇ ಮೊದಲಾದ ಸ್ವತಂತ್ರಹೇತುಗಳು. ಅದನ್ನೇ ಅತಃಶಬ್ದವು ಹೇಳುತ್ತದೆಂದು ನಾವು ಹೇಳುವಂತೆ ಹೇಳಬೇಕು. ಅದನ್ನು ಬಿಟ್ಟು 'ಅಥ' ಶಬ್ದದ ಅರ್ಥದಲ್ಲಿ ವಿಶೇಷಣರೂಪವಾಗಿ ಇರುವ ವೈರಾಗ್ಯ ಮೊದಲಾದವನ್ನು ವಿಚಾರಹೇತುವೆಂದು ಅತಃ ಶಬ್ದವು ಹೇಳುತ್ತಿದೆ ಎಂಬುದು ಅಯುಕ್ತ. ಮತ್ತು ಈ ಅರ್ಥವನ್ನು ಅಥಶಬ್ದವೇ ಹೇಳುವುದರಿಂದ ಪುನರುಕ್ತಿಯೂ ಬರುತ್ತದೆ.

ಇನ್ನು ಅಪವಾದಶಂಕಾನಿರಾಸಕ್ಕೋಸ್ಕರ ಅತಃ ಶಬ್ದವು ಸಾರ್ಥಕವೆಂದು ಹೇಳಬೇಕು. ಆದರೆ ಇದು ಅಥಶಬ್ದದಿಂದಲೇ ಪರಿಹಾರವಾಗುತ್ತದೆ. ಅಥಶಬ್ದದಿಂದ ಹೇಳಲ್ಪಟ್ಟ ವೈರಾಗ್ಯವೇ ತನಗೆ ಕಾರಣವಾದ "ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ" ಮೊದಲಾದ ಈ ಶ್ರುತಿಗಳನ್ನು ನೆನಪು ಮಾಡುತ್ತದೆ. ಆದ್ದರಿಂದ ಅಪವಾದಶಂಕೆಯು ನಿರಾಸವಾಗುತ್ತದೆ.

ಪ್ರಶ್ನೆ :- "ಅಕ್ಷಯ್ಯಂ ಹ ವೈ" ಎಂಬ ವಾಕ್ಯದಿಂದ ಅಪವಾದಶಂಕೆಯು ಬಂದಿದೆ. ಅದನ್ನು "ತದ್ಯಥೇಹ" ಎಂಬ ಶ್ರುತಿಯು ಹೇಗೆ ಪರಿಹರಿಸುತ್ತದೆ? ಎರಡೂ ಪ್ರತಿಪಕ್ಷಗಳಾಗಿರುವಾಗ. ಒಂದಕ್ಕೆ ಮಾತ್ರ ಪ್ರಾಬಲ್ಯವನ್ನು ಹೇಳಲಾಗದು.

ಉತ್ತರ :- 'ತದ್ಯಥೇಹ' ಎಂಬುದೇ ಪ್ರಬಲವಾಗಿದೆ. ಏಕೆಂದರೆ ಇದು ಕೃತಕತ್ವಾದಿ ಉಪಪತ್ತಿಗಳಿಂದ ಉಪಬೃಂಹಿತವಾಗಿದೆ. "ಕರ್ಮಫಲಂ ಅನಿತ್ಯಂ ಕೃತಕತ್ವಾತ್" ಎಂಬ ಯುಕ್ತಿಯ ಸಹಕಾರದಿಂದ ಪ್ರಬಲವಾಗಿದೆ. ಈ ಶ್ರುತಿಯನ್ನು 'ಅಥ' ಶಬ್ದವೇ ಉಪಸ್ಥಾಪನೆ ಮಾಡುತ್ತದೆ. ಅಪವಾದಶಂಕೆಯನ್ನು ನಿರಾಸ ಮಾಡಲು ಅತ್ಯಂತ ಸಮರ್ಥವಾಗುತ್ತದೆ.

ಮತ್ತೊಂದು ದೋಷ - ಪೂರ್ವಪಕ್ಷ ಮಾಡಬೇಕಾದರೆ ವಿಷಯ ಪ್ರಯೋಜನಾದಿಗಳು ಇಲ್ಲದಿರುವುದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ. ಎಂದು ನಾವೂ ಹೇಳಿದ್ದೇವೆ ನೀವೂ ಹೇಳಿದ್ದೀರಿ. ಸಿದ್ಧಾಂತ ಮಾಡಬೇಕಾದರೆ ಅದಕ್ಕೆ ಅನುಗುಣವಾಗಿ ಪ್ರಯೋಜನಾದಿಗಳಿರುವುದರಿಂದ

ಜಿಜ್ಞಾಸೆಯು ಕರ್ತವ್ಯವಾಗಿದೆಯೆಂದು ಸಮರ್ಥಿಸಬೇಕು. ಅದನ್ನೇ ನೀವು ಹೇಳದೆ ಬೇರೆ ಏನನ್ನೋ ಹೇಳುತ್ತಾ ಕುಳಿತರೆ ಜಿಜ್ಞಾಸಾಕರ್ತವ್ಯತ್ವವೇ ಸಿದ್ಧವಾಗದಿರಬೇಕಾದೀತು. ಈ ದೋಷವು ವಿವರಣಕಾರರಿಗಷ್ಟೇ ಅಲ್ಲ ಭಾಮತೀಕಾರರಿಗೂ ಸಮಾನವಾಗಿದೆ.

ಪ್ರಶ್ನೆ :- ಪ್ರಯೋಜನವನ್ನು ಹೇಳಲು ಇನ್ನೊಂದು ಪದ ಬೇಡ ಜಿಜ್ಞಾಸಾಪದದಿಂದಲೇ ಪ್ರಯೋಜನಾದಿಗಳು ಸಿದ್ಧವಾಗಿವೆ.

ಉತ್ತರ :- ಇದನ್ನು ಮುಂದೆ ನಿರಾಕರಿಸುತ್ತೇವೆ. ಮತ್ತು ಜಿಜ್ಞಾಸಾಕರ್ತವ್ಯತ್ವಕ್ಕೆ ಹೇತುಭೂತವಾದ ಸಪ್ರಯೋಜನತ್ವಾದಿಗಳನ್ನು 'ಅತಃ' ಪದದಿಂದ ಹೇಳುವುದೇ ಸೂಕ್ತ, ಹೊರತು ಜಿಜ್ಞಾಸಾಪದದಿಂದ ಹೇಳುವುದು ಸೂಕ್ತವಲ್ಲ. 'ಅತಃ' ಎಂಬಲ್ಲಿ 'ತಸಿಲ್' ಪ್ರತ್ಯಯವು ಹೇತ್ವರ್ಥಕವಾಗಿಯೇ ಇದೆ. ಆದ್ದರಿಂದ ಇದರರ್ಥವಾಗಿ ಹೇಳುವುದು ಸಮಂಜಸವಾಗಿದೆ.




**ವಿವರಣದಲ್ಲಿ ಅತಃ ಶಬ್ದಾರ್ಥ**

'ಅಥ' ಸಾಧನ ಸಂಪತ್ತನ್ನು ಪಡೆದ ಅನಂತರ 'ಅತಃ' ಸಾಧನಸಂಪತ್ತು ಇರುವುದರಿಂದ ಬ್ರಹ್ಮವಿಚಾರ ಎಂದರ್ಥ. ಇಲ್ಲಿ ಅಥಶಬ್ದದಿಂದ ಮುಖ್ಯವಾದ ಕಾರಣದ ಆನಂತರ್ಯವಿಟ್ಟುಕೊಂಡಾಗ ಅತಃ ಶಬ್ದವೂ ಅದನ್ನೇ ಹೇಳುವುದು ಪುನರುಕ್ತಿಯಲ್ಲವೆ? ಎಂಬ ಸಂದೇಹ ಬರಬಹುದು. ಕರ್ಮಫಲ ನಿತ್ಯವೆಂದು ಹೇಳುವ ಕೆಲವು ಶ್ರುತಿಗಳನ್ನು ಕಂಡವನಿಗೆ ಬ್ರಹ್ಮಜ್ಞಾನ ಫಲವೊಂದೇ ನಿತ್ಯ, ಬೇರೆಲ್ಲವೂ ಅನಿತ್ಯ ಎಂಬ ವಿವೇಕ ಬಾರದೆ ಇದ್ದೀತು. ವಿಚಾರವಾಗದೆ ಇದ್ದೀತು. ಆಗ ಪುನಃ 'ಸಾಧನ ಸಂಪತ್ತು ಇರುವುದರಿಂದ ಎಂದು ಹೇಳಿದರೆ ಈ ಪುನರುಕ್ತಿಯಿಂದಲೆ ಸಂದೇಹ ಪರಿಹಾರವಾಗುತ್ತದೆ'. ಎಂದು ವಿವರಣಮತವು ಹೇಳುತ್ತದೆ. ಆದರೆ ಅಥಶಬ್ದವು ಹೇಳಿದುದಕ್ಕಿಂತ ಹೆಚ್ಚೇನೂ ಹೇಳದೆ ಹೇಳಿದ್ದನ್ನೇ ತಿರುಗಿ ಹೇಳಿದ ಮಾತ್ರಕ್ಕೆ ಅತಃಶಬ್ದ ಹೇಗೆ ಸಂದೇಹ ಪರಿಹಾರಕವಾದೀತು? ವಿಚಾರ ಕರ್ತವ್ಯತ್ವವೆಂಬ ಮುಖ್ಯಸಾಧ್ಯಕ್ಕೆ ಹೇತುವನ್ನು ಹೇಳಲು ಬರುವಾಗ ಅಥಶಬ್ದದ ಅರ್ಥದೊಳಗೆ ವಿಶೇಷಣವಾಗಿ ಸೇರಿದ ವೈರಾಗ್ಯವೆಂಬ ಅಂಶಕ್ಕೆ ಹೇತುವನ್ನು ಅತಃ ಶಬ್ದ ಹೇಳುವುದು ಉಚಿತವೂ ಅಲ್ಲ.



• • • • •

## ರಾಮಾನುಜರ ಅತಃ ಶಬ್ದಾರ್ಥದ ವಿಮರ್ಶೆ

**तात्पर्यचन्द्रिका –**

**केचित्तु – अथशब्दो जिज्ञासाविशेषणीभूतकालपरः । नहि ब्रह्मविचारस्य कर्तव्यतामात्रं साध्यं, किन्तु धर्मजिज्ञासानन्तर्यविशिष्टम् । अतश्शब्दस्य तु तस्मिन्**

विशिष्टे साध्ये कर्मणामल्पास्थिरफलत्वनिर्णयसहितो ब्रह्मज्ञानस्य अनन्तस्थिरफलताऽऽपातप्रतीतिरूपो विशिष्टो हेतुरर्थः । ततश्च सार्थकं पदद्वयमित्याहुः[1] । तदपि

---

१ श्रीभाष्य –

अविद्यानिवृत्तिरेव हि मोक्षः । वर्णाश्रमविशेषसाध्यसाधनेतिकर्तव्यताद्यनन्तविकल्पास्पदं कर्म सकलभेददर्शननिवृत्तिरूपाज्ञाननिवृत्तेः कथमिव साधनं भवेत्? श्रुतयश्च कर्मणामनित्यफलत्वेन मोक्षविरोधित्वं ज्ञानस्यैव मोक्षसाधनत्वं च दर्शयन्ति, ''अन्तवदेवास्य तद्भवति'', ''तद्यथेह कर्मचितो लोकः क्षीयते । एवमेवामुत्र पुण्यचितो लोकः क्षीयते''. ''ब्रह्मविदाप्नोतिपरम्'' ''ब्रह्म वेद ब्रह्मैव भवति'', ''तमेव विदित्वाऽति मृत्युमेति'' इत्याद्याः ।। यदपि चेदमुक्तम् –

यज्ञादिकर्मापेक्षा विद्येति, तत् वस्तुविरोधाच्छ्रुत्यक्षरपर्यालोचनया च अन्तःकरणनैर्मल्यद्वारेण विविदिषोत्पत्तावुपयुज्यते; न फलोत्पत्तौ; विविदिषन्तीति श्रवणात् ।

विविदिषायां जातायां ज्ञानोत्पत्तौ शमदीनामेवान्तरङ्गोपायतां श्रुतिरेवाह, ''शान्तो दान्त उपरतस्तितिक्षुः समाहितो भूत्वाऽऽत्मन्येवाऽऽत्मानं पश्येत्'' इति ।।

तदेवं जन्मान्तरशतानुष्ठितानभिसंहितफलविशेषकर्ममृदितकषायस्य विविदिषोत्पत्तौ सत्याम्, ''सदेव सोम्येदमग्र आसीन् एकमेवाद्वितीयम्'', ''सत्यं ज्ञानमनन्तं ब्रह्म'', ''निष्कलं निष्क्रियं शान्तम्'', ''अयमात्मा ब्रह्म'', ''तत्त्वमसि'' इत्यादिवाक्यजन्यज्ञानादविद्या निवर्तते । वाक्यार्थज्ञानोपयोगीनि च श्रवणमनननिदिध्यासनानि । श्रवणं नाम – वेदान्तवाक्यानि आत्मैकत्वविद्याप्रतिपादकानीति तत्त्वदर्शिन आचार्यात् न्याययुक्तार्थग्रहणम् । एवमाचार्योपदिष्टस्यार्थस्य स्वात्मनि, एवमेव युक्तमिति हेतुतः प्रतिष्ठापनं मननम् । एतद्विरोध्यनादिभेदवासनानिरसनायास्यैवार्थस्यानवरतभावना निदिध्यासनम् । श्रवणादिभिर्निरस्तसमस्तभेदवासनस्य वाक्यार्थज्ञानमविद्यां निवर्तयतीति एवंरूपस्य श्रवणस्यावश्यापेक्षितमेव पूर्ववृत्तं वक्तव्यम् ।

तच्च नित्यानित्यवस्तुविवेकः, शमदमादिसाधनसंपत्, इहामुत्रफलभोगविरागः, मुमुक्षुत्वं चेत्येतत्साधनचतुष्टयम् । अनेन विना जिज्ञासानुपपत्तेः अर्थस्वभावादेवेदमेव पूर्ववृत्तमिति ज्ञायते ।।

तत्र कर्मविधिस्वरूपे निरूपिते कर्मणामल्पास्थिरफलत्वं दृष्ट्वा अध्ययनगृहीतस्वाध्यायैकदेशोपनिषद्वाक्येषु चामृतत्वरूपानन्तस्थिरफलापातप्रतीतेः तन्निर्णयफलवेदान्तविचाररूपशारीरकमीमांसायामधिकरोति ।

तथा च वेदान्तवाक्यानि केवलकर्मफलस्य क्षयित्वं ब्रह्मज्ञानस्य चाक्षयफलत्वं दर्शयन्ति, ''तद्यथेह कर्मचितो लोकः क्षीयते, एवमेवामुत्र पुण्यचितो लोकः क्षीयते,'' ''अन्तवदेवास्य

न । अथशब्दस्योक्तप्रतीत्यानन्तर्यार्थत्वे अकारणादानन्तर्योक्तेर्वैयर्थ्येन, अथशब्देनैव तस्याः हेतुत्वलाभादतश्शब्दवैयर्थ्यात् । अथशब्दस्यान्यानन्तर्यार्थत्वे तु नोक्त-प्रतीतिहेतुत्ववाचकत्वमतश्शब्दस्य । प्रकृतस्य हेतुत्वार्थोऽतश्शब्द इत्यस्य त्वन्मतस्य भङ्गात् । किञ्च सिद्धे व्युत्पत्त्यभावात् विचाराकर्तव्यत्वे त्वद्रीत्या पूर्वपक्षिते, ब्रह्मविचारकर्तव्यतामात्रं सिद्धान्तयितव्यम् । नतूक्तानन्तर्यविशिष्टम् । नहि सिद्धे व्युत्पत्त्यभावे अन्यदाऽपि विचारस्य कर्तव्यता सिध्यति ।। तदेवं –

अथशब्देनाधिकारमत इत्यमुना फलम् ।
ब्रह्मशब्देन विषयं सूचयामास सूत्रकृत् ।।

ಅನುವಾದ - ರಾಮಾನುಜರು ಅತಃಶಬ್ದಾರ್ಥವಿಚಾರವನ್ನು ಹೀಗೆ ಮಾಡಿದ್ದಾರೆ. ಅಥಶಬ್ದವು ಜಿಜ್ಞಾಸೆಯಲ್ಲಿ ವಿಶೇಷಣವಾದ 'ಆನಂತರ್ಯ' ಎಂಬ ಕಾಲವನ್ನು ಹೇಳುತ್ತದೆ. 'ಬ್ರಹ್ಮವಿಚಾರವು ಕರ್ತವ್ಯ ಎಂದಷ್ಟೇ ಸಾಧ್ಯವಲ್ಲ. ಕಿಂತು 'ಧರ್ಮಜಿಜ್ಞಾಸೆಯ ಅನಂತರ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು' ಎಂಬುದೇ ಸಾಧ್ಯವಾಗಿದೆ.

ಆದ್ದರಿಂದ ಅತಃಶಬ್ದದ ಅರ್ಥವನ್ನು ಹೀಗೆ ಹೇಳಬೇಕು - ಧರ್ಮವಿಚಾರದ ಅನಂತರ ಬ್ರಹ್ಮ-ವಿಚಾರವನ್ನು ಮಾಡಬೇಕು ಎಂಬ ವಿಶಿಷ್ಟಸಾಧ್ಯಕ್ಕೆ ಕರ್ಮಗಳು ಅಲ್ಪವಾದ ಅಸ್ಥಿರವಾದ ಫಲಗಳನ್ನಷ್ಟೇ ಕೊಡುವವು ಎಂಬ ನಿಶ್ಚಯದ ಜೊತೆಗೆ ಬ್ರಹ್ಮಜ್ಞಾನವು ಅನಂತವಾದ ಸ್ಥಿರವಾದ ಫಲಗಳನ್ನು ಕೊಡುತ್ತವೆಂಬ ಆಪಾತಪ್ರತೀತಿರೂಪವಾದ ವಿಶಿಷ್ಟಹೇತುವನ್ನು ಅತಃಶಬ್ದವು ಹೇಳುತ್ತದೆ. ಹಾಗಾಗಿ ಎರಡೂ ಪದಗಳು ಸಾರ್ಥಕಗಳಾಗಿವೆ.

ರಾಮಾನುಜರ ಈ ವ್ಯಾಖ್ಯಾನವು ಅಸಾಧುವಾಗಿದೆ. ಅಥಶಬ್ದವು ಮೇಲೆ ಹೇಳಿದ ಪ್ರತೀತಿಯ ಆನಂತರ್ಯವನ್ನು ಹೇಳುತ್ತದೆಂದು ಹೇಳಿದರೆ, ಕಾರಣವಲ್ಲದ ಯಾವುದೋ ಒಂದರ ಆನಂತರ್ಯವನ್ನು ಹೇಳುವುದರಿಂದ ವ್ಯರ್ಥವಾಗುತ್ತದೆ. ಎಂದು ಆ ಪ್ರತೀತಿಯು ಕಾರಣವೆಂದಾಗುತ್ತದೆ. ಅತಃಶಬ್ದವೂ ಇದನ್ನೇ ಹೇಳುವುದರಿಂದ ಪುನರುಕ್ತಿಯು ತಪ್ಪಿದ್ದಲ್ಲ.

---

तद्भवति", "न ह्यध्रुवैः प्राप्यते," "प्लवा ह्येते अदृढा यज्ञरूपाः" "परीक्ष्य लोकान् कर्मचितान् ब्राह्मणो निर्वेदमायात् नास्त्यकृतः कृतेन । तद्विज्ञानार्थं स गुरुमेवाभिगच्छेत् समित्पाणिश्श्रोत्रियं ब्रह्मनिष्ठम् । तस्मै स विद्वानुपसन्नाय सम्यक् प्रशान्तचित्ताय शमान्विताय । येनाक्षरं पुरुषं वेद सत्यं प्रोवाच तां तत्त्वतो ब्रह्मविद्याम् ।।", "ब्रह्मविदाप्नोति परम्", "न पुनर्मृत्यवे तदेकं पश्यति", "न पश्यो मृत्युं पश्यति", "स स्वराड् भवति"; "तमेवं विद्वानमृत इह भवति नान्यः पन्था अयनाय विद्यते", "पृथगात्मानं प्रेरितारं च मत्वा जुष्टस्ततस्तेनामृतत्वमेति" इत्यादीनि ।।

ಮೇಲೆ ಹೇಳಿದ ಪ್ರತೀತಿಯು ವಿಚಾರಹೇತು ಎಂದು ಅಥಶಬ್ದವು ಹೇಳಿದೆ. ಆದರೂ ಅದು ವಿಚಾರಹೇತುವಲ್ಲ. ಎಂಬ ಆಕ್ಷೇಪವನ್ನು ಪರಿಹರಿಸಲು ಅತಃಶಬ್ದವು ಸಾರ್ಥಕ ಎಂಬ ಸಮಾಧಾನವನ್ನು ರಾಮಾನುಜರಿಗೆ ಹೇಳಲಾಗದು. ಹಾಗಾದರೆ ಅಥಶಬ್ದದಿಂದಲೇ ಆ ಆಕ್ಷೇಪವು ಏಕೆ ಪರಿಹಾರವಾಗಬಾರದು?

ಇನ್ನು ಅಥಶಬ್ದವು ಕರ್ಮ ವಿಚಾರದ ಆನಂತರ್ಯವನ್ನು ಹೇಳಬೇಕು. ಆವಾಗ ಅತಃಶಬ್ದವು ಪ್ರತೀತಿಗೆ ಹೇತುತ್ವವನ್ನು ಹೇಳಲಾರದು. ಇದು ನಿಮಗೂ ಸಮ್ಮತ. ಅಥಃಶಬ್ದವು ಪ್ರಕೃತವಾದದ್ದಕ್ಕೆ ಹೇತುತ್ವವನ್ನು ಹೇಳುತ್ತದೆಂದು ರಾಮಾನುಜಭಾಷ್ಯ ಹೇಳಿದೆ. ಮತ್ತು ಪ್ರಕೃತವಾದದ್ದನ್ನೇ ಏತದ್‌ಶಬ್ದವು ನಿರ್ದೇಶಿಸುತ್ತದೆಂದು ಶ್ರುತಪ್ರಕಾಶವೂ ಹೇಳಿದೆ. ಇದಕ್ಕೆ ವಿರುದ್ಧವಾಗಿ ಈಗ ಹೇಳುತ್ತಿರುವುದರಿಂದ ನಿಮಗೆ ಅಪಸಿದ್ಧಾಂತ ಬರುತ್ತದೆ.

ಮತ್ತು ಪೂರ್ವಪಕ್ಷಕ್ಕೆ ಅನುಗುಣವಾಗಿ ಸಿದ್ಧಾಂತವನ್ನು ಮಾಡಬೇಕು. ನಿಮ್ಮ ಮತದಲ್ಲಿ ಆಗಮವು ಸಿದ್ಧಪರವಾಗದ ಕಾರಣ ಬ್ರಹ್ಮವಿಚಾರವು ಬೇಡವೆಂದು ಈ ಅಧಿಕರಣದ ಪೂರ್ವಪಕ್ಷ. ಅದಕ್ಕೆ ಉತ್ತರವಾಗಿ ಬ್ರಹ್ಮವಿಚಾರವು ಕರ್ತವ್ಯ ಎಂದಷ್ಟೇ ಸಿದ್ಧಾಂತ ಮಾಡಬೇಕು. 'ಧರ್ಮವಿಚಾರದ ಅನಂತರ' ಎಂದು ಹೇಳುವುದು ಅನಾವಶ್ಯಕ.

'ಧರ್ಮವಿಚಾರದ ಅನಂತರ ಬ್ರಹ್ಮವಿಚಾರ ಮಾಡುವುದು ಅಯುಕ್ತ' ಎಂದೇ ಪೂರ್ವಪಕ್ಷ ಮಾಡುತ್ತೇವೆ, ಎಂದು ಹೇಳುವುದು ತಪ್ಪು. ಏಕೆಂದರೆ ಸಿದ್ಧದಲ್ಲಿ ವ್ಯುತ್ಪತ್ತಿಯಿಲ್ಲವೆಂದು ಪೂರ್ವಪಕ್ಷಿಯು ಅಂಗೀಕರಿಸಿದ್ದಾನೆ. ಆದ್ದರಿಂದಲೇ ಬ್ರಹ್ಮವಿಚಾರವನ್ನು ಮಾಡಲಾಗದು ಎಂದು ಸಿದ್ಧವಾಗುತ್ತದೆ. ಪುನಃ ಬ್ರಹ್ಮವಿಚಾರವನ್ನು ಮಾಡಲಾಗದು ಎಂದು ವಾದಿಸುವುದರಲ್ಲಿ ಅರ್ಥವಿಲ್ಲ.

ಆದ್ದರಿಂದ ರಾಮಾನುಜಮತವು ನಿರಾಕೃತವಾಯಿತು. ಈ ರೀತಿಯಾಗಿ ಬೇರೆಲ್ಲರು ಮಾಡಿದ ಅತಃ ಶಬ್ದಾರ್ಥ ವಿಚಾರವು ಅಸಾಧುವಾಗಿದೆ.

ಅಥಶಬ್ದವು ಜಿಜ್ಞಾಸುವಿನ ಅರ್ಹತೆಯನ್ನು ಹೇಳುತ್ತದೆ. ಅತಃಶಬ್ದವು ಶಾಸ್ತ್ರಾಧ್ಯಯನದಿಂದ ದೊರೆಯುವ ಫಲವನ್ನು ಹೇಳುತ್ತದೆ. ಬ್ರಹ್ಮಶಬ್ದವು ವಿಷಯವನ್ನು ಹೇಳುತ್ತದೆ. ಸೂತ್ರಕಾರರ ಅಭಿಪ್ರಾಯ ಇದೇ ಆಗಿದೆ, ಆದ್ದರಿಂದ ನಾವು ಮಾಡಿದ ವ್ಯಾಖ್ಯಾನವೇ ಸಮಂಜಸವಾಗಿದೆ.

### ಕಠಿಣಪದಾರ್ಥ

**ಕೇಚಿತ್ತು** = ರಾಮಾನುಜರು. **ಜಿಜ್ಞಾಸಾವಿಶೇಷಣೀಭೂತಕಾಲಪರಃ** = ಜಿಜ್ಞಾಸೆಯಲ್ಲಿ ವಿಶೇಷಣವಾದ 'ಅನಂತರ' ಎಂಬ ಕಾಲವನ್ನು ಹೇಳುವಂತಹದ್ದು. **ಸಾರ್ಥಕಂ** = ಅಥಶಬ್ದಕ್ಕಿಂತ ಹೆಚ್ಚಿನ ವಿಷಯವನ್ನು ಹೇಳಿದ್ದರಿಂದ ಸಾರ್ಥಕ. **ತಸ್ಯಾಃ** = ಹಿಂದೆ ಹೇಳಿದ ಕರ್ಮಗಳು ಅಸ್ಥಿರಫಲವೆಂಬ ನಿರ್ಣಯಸಹಿತವಾದ ಬ್ರಹ್ಮಜ್ಞಾನವು ಸ್ಥಿರಫಲವೆಂಬ ಆಪಾತಪ್ರತೀತಿಗೆ. **ಅನ್ಯದಾಪಿ** = ಧರ್ಮವಿಚಾರಕ್ಕಿಂತ ಪೂರ್ವದಲ್ಲಿಯೂ.

*ಜಿಜ್ಞಾಸಾಧಿಕರಣ*

प्रकाशः – कालपर इति ।। अनन्तरकालपर इत्यर्थः । तदेवाह ।। नहीति ।। सार्थकमिति ।। अथशब्दोक्तादधिकस्यैवातश्शब्देनोक्तेरिति भावः । उक्तं च – ''अधीतसाङ्गसशिरस्क'' इत्यादिभाष्यव्याख्याऽवसरे श्रुतप्रकाशे – ''न कर्तव्यतामात्रं साध्यधर्मः । अपित्वानन्तर्यविशिष्टं कर्तव्यत्वम्'' इति । तथा ''कर्मविचारानन्तरं च ब्रह्मविचारस्य कर्तव्यत्वे कर्मणामल्पास्थिरफलत्वनिर्णयसहितानन्तस्थिरफलताऽऽपातप्रतीतिरित्ययं विशिष्टो हेतुः'' इति च[१] । अत्रातःशब्दोक्तो यो विशिष्टो हेतुः तदानन्तर्यमथशब्देनोच्यते उत ''कर्मविचारानन्तरं तत एव हेतोः ब्रह्मविचारः कर्तव्यः'' इति भाष्यानुसारात् कर्मविचारानन्तर्यमिति विकल्पौ हृदि निधायाद्ये पौनरुक्त्यं तदवस्थमेवेत्याह ।। अथशब्दस्येति ।। 'तस्याः' उक्तप्रतीतेः । ननु न वैयर्थ्यं, अथशब्देनोक्तप्रतीत्यानन्तर्यार्थकेन हेतुत्वलाभेऽपि तस्योक्तदिशाऽसिद्धिशङ्कायामत-श्शब्देन तत्परिहारात् । अत एव श्रुतप्रकाशे एतदेवाशङ्क्य ''अथशब्दाक्षिप्तहेत्वसिद्धिशङ्कापरिहारार्थत्वादतश्शब्दस्य'' इति समाहितमिति चेन्न । ''अथशब्दोक्तानधिकाभिधायिना'' इत्यादिना पूर्वग्रन्थेनैव तस्याः निरासादिति भावः । द्वितीये दोषमाह ।। अथशब्दस्येति ।। त्वन्मतस्येति ।। ''अतश्शब्दो वृत्तस्य हेतुभावे'' इति भाष्ये ''प्रकृतपरामर्शेनैतच्छब्देन'' इत्यादिना श्रुतप्रकाशे च तथोक्तेरिति भावः । यदपि धर्मविचारानन्तर्यविशिष्टं ब्रह्मविचारकर्तव्यत्वं साध्यमिति, तदपि नेत्याह ।। किञ्चेति ।। ननु विशिष्टाकर्तव्यत्वमेव पूर्वपक्ष्यते इत्यत आह ।। नहीति ।।

गुरुराजीय – रामानुजमतं दूषयितुमनुवदति ।। केचित्त्विति ।। ननु

---

१ श्रुतप्रकाशः - अनन्तस्थिरफलब्रह्मजिज्ञासेति । अनन्तस्थिरफलरूपस्य ब्रह्मणो जिज्ञासेत्यर्थः । अनन्तस्थिरफलत्वस्य ब्रह्मजिज्ञासाविशेषणत्वे जिज्ञासायास्तथात्वमागमोत्यविवेकादिजन्यज्ञानद्वारेणेति द्रष्टव्यम् । अनन्तरभाविनीति पदेनाथातश्शब्दफलितं हेतोः शास्त्रान्तरनैरपेक्ष्यं विवक्षितम् । कर्मविचारानन्तरं ब्रह्मविचारस्य कर्तव्यत्वे कर्मणामल्पास्थिरफलत्वनिर्णयसहितानन्तस्थिरफलापातप्रतीतिरित्ययं विशिष्टो हेतुः । अतश्शब्देन वृत्तस्य कर्मविचारस्य हेतुतयोक्तत्वात् कर्मविचारस्य साङ्गाध्ययनजन्यानन्तस्थिरफलापातप्रतीतिपूर्वकत्वात्, आवृत्तिविधानादिभिः कर्मणामल्पास्थिरफलत्वावगमहेतुत्वाच्च ।

ब्रह्मजिज्ञासाकर्तव्यत्वमात्रस्य साध्यत्वात् कालपरत्वेऽथशब्दवय्यर्थ्यं स्यादित्यत आह – नहीति ।। किंत्विति ।। धर्मविचारवत एव ब्रह्मविचारेऽधिकारित्वात् तदानन्तर्यार्थत्वमथशब्दस्येति भावः ।। अतश्शब्दस्य त्विति ।।

ननु कर्मणामप्यनन्तस्थिरफलत्वात् तद्विचार एव स्यात् किं ब्रह्मविचारेणेत्यत उक्तं कर्मणामिति । ननु कर्मणामिव ब्रह्मज्ञानफलस्याप्यल्पास्थिरफलत्वात् किं तद्विचारेणेत्यत उक्तं ब्रह्मेति । हेतुसिद्ध्यर्थमाह – आपातेति ।। आपातप्रतीतिः श्रुत्येति शेषः । तद्रूप इत्यर्थः । अत्र वक्तव्यं धर्मजिज्ञासानन्तर्यमथशब्दार्थः कुत इति । नच धर्मविचारवत एव ब्रह्मविचारेऽधिकारित्वात् तदर्थत्वमथशब्दस्येति वाच्यम् । आदौ धर्मविचारः कर्तव्यः पश्चाद् ब्रह्मविचार इति क्रमे श्रुत्यादिरूपक्रम-प्रमाणाभावात् । अथ कर्मणामल्पास्थिरफलत्वप्रतीत्यर्थं धर्मविचार आदौ कर्तव्य इति चेत् एवं सति कर्मणामल्पास्थिरफलकत्वप्रतीत्यानन्तर्यमेवाथशब्दार्थ उक्तः स्यात् । एवंच सति दूषणमाह ।। अथ शब्दस्येति ।। ननु अधिकारानन्तर्यमथ-शब्दार्थोऽस्त्वित्यत आह ।। अथशब्दस्यान्यानन्तर्यार्थत्वे त्विति ।। उक्तप्रतीतेः कर्मणामल्पास्थिरफलत्वप्रतीतेर्हेतुत्वं विचारकर्तव्यत्व इति शेषः । कुतो न हेतुत्ववाचकत्वमतःशब्दस्येत्यत आह – प्रकृतस्येति ।। धर्मजिज्ञासानन्तर्य-विशिष्टब्रह्मविचारकर्तव्यत्वं साध्यमित्यत्र दूषणान्तरमाह – किंचेति ।।

ननु धर्मविचारात् प्रागपि ब्रह्मविचारकर्तव्यत्वप्रतीतिः स्यात् । तदर्थमेवं साध्यं क्रियत इत्यत आह – नहीति ।। अन्यदाऽपि धर्मविचारात् प्रागपि । उक्तमर्थं कारिकारूढं करोति – तदेवमिति । अतःशब्दब्रह्मशब्दयोर्विशेषतः फलविषय-सूचकत्वोक्तिः प्राधान्याभिप्रायेण । अन्यथा प्रागतश्शब्दस्य विषयसिद्धिहेतुयुक्ति-सूचकत्वेन विषयसूचकत्वस्योक्तत्वाद् ब्रह्मशब्दस्य निष्प्रयोजनत्वशङ्का स्यात् । प्राधान्येन फलसूचकत्वस्योक्तत्वाच्च तद्विरोधः स्यादिति बोध्यम् ।

**ವಿವರಣೆ** - ರಾಮಾನುಜಮತದಲ್ಲಿ ಹೇಳಿದ ಅತಃಶಬ್ದಾರ್ಥವನ್ನು ದೂಷಣೆ ಮಾಡಲು ಅನುವಾದ ಮಾಡುತ್ತಿದ್ದಾರೆ. ರಾಮಾನುಜಭಾಷ್ಯದಲ್ಲಿ ಹೀಗೆ ಹೇಳಿದೆ -

ಅಧೀತಸಾಂಗ ಸಶಿರಸ್ಕ ವೇದಸ್ಯಾಧಿಗತಾಲ್ಪಾಸ್ಥಿರಫಲ ಕೇವಲ ಕರ್ಮಜ್ಞಾನತಯಾ ।
ಸಂಜಾತಮೋಕ್ಷಾಭಿಲಾಷಸ್ಯ ಅನಂತಸ್ಥಿರಫಲಬ್ರಹ್ಮಜಿಜ್ಞಾಸಾ ಹ್ಯನಂತರಭಾವಿನೀ ॥
*ಜಿಜ್ಞಾಸಾಧಿಕರಣ*

''ಯಾರು ಷಡಂಗ ಸಹಿತವಾಗಿ ವೇದಾಧ್ಯಯನವನ್ನು ಮಾಡುತ್ತಾನೋ, ಅಂತಹವನಿಗೆ ಕರ್ಮಫಲವು ಅಲ್ಪ ಮತ್ತು ಅಸ್ಥಿರವೆಂಬ ಅರಿವು ಬರುತ್ತದೆ. ಅನಂತರ ನಿತ್ಯಫಲರೂಪವಾದ ಮೋಕ್ಷದಲ್ಲಿ ಅಪೇಕ್ಷೆಯುಳ್ಳವನಾಗುತ್ತಾನೆ. ಅನಂತರ ಅನಂತವಾದ ಸ್ಥಿರವಾದ ಫಲವನ್ನು ಕೊಡುವ ಬ್ರಹ್ಮಜಿಜ್ಞಾಸೆಯಲ್ಲಿ ತೊಡಗುತ್ತಾನೆ.''

ಈ ರೀತಿಯಾಗಿರುವ ರಾಮಾನುಜಭಾಷ್ಯಕ್ಕೆ ಶ್ರುತಪ್ರಕಾಶದಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ-

''ನ ಕರ್ತವ್ಯತಾಮಾತ್ರಂ ಸಾಧ್ಯಧರ್ಮಃ ಅಪಿ ತ್ವಾನಂತರ್ಯವಿಶಿಷ್ಟಂ ಕರ್ತವ್ಯತ್ವಮ್''

'ಬ್ರಹ್ಮವಿಚಾರವು ಕರ್ತವ್ಯ' ಎಂದಷ್ಟೇ ಸಾಧ್ಯವಲ್ಲ, ಹೊರತು ಧರ್ಮವಿಚಾರವನ್ನು ಮಾಡಿದ ಅನಂತರ ಬ್ರಹ್ಮವಿಚಾರ ಮಾಡಬೇಕು' ಎಂದು.

ಮುಂದೆ ಅಲ್ಲಿಯೇ ಮತ್ತೊಂದು ಮಾತಿದೆ - ''ಕರ್ಮವಿಚಾರಾನಂತರಂ ಚ ಬ್ರಹ್ಮವಿಚಾರಸ್ಯ ಕರ್ತವ್ಯತ್ವೇ ಕರ್ಮಣಾಮಲ್ಪಾಸ್ಥಿರಫಲತ್ವನಿರ್ಣಯಸಹಿತಾನಂತಸ್ಥಿರಫಲತಾऽಪಾತಪ್ರತೀತಿರಿತ್ಯಯಂ ವಿಶಿಷ್ಟೋ ಹೇತುಃ''

'ಕರ್ಮವಿಚಾರವನ್ನು ಮಾಡಿದ ಬಳಿಕ ಬ್ರಹ್ಮವಿಚಾರವನ್ನು ಮಾಡಬೇಕು' ಎಂಬ ವಿಶಿಷ್ಟಸಾಧ್ಯಕ್ಕೆ ಇದು ಹೇತು - 'ಕರ್ಮಗಳು ಅಲ್ಪ ಮತ್ತು ಅಸ್ಥಿರಫಲಗಳನ್ನು ಮಾತ್ರ ಕೊಡುತ್ತವೆ ಎಂಬ ನಿಶ್ಚಯದ ಜೊತೆಗೆ ಬ್ರಹ್ಮಜ್ಞಾನವು ಅನಂತಸ್ಥಿರಫಲಕ್ಕೆ ಸಾಧನವಾಗಬಹುದೆಂಬ ಸಾಮಾನ್ಯಪ್ರತೀತಿಯು ಹೇತುವೆಂದು ಹೇಳುತ್ತದೆ' ಎಂದು. ಹೀಗೆ ಅಥ ಶಬ್ದ ಹೇಳುವ ಅರ್ಥಕ್ಕಿಂತ ಹೆಚ್ಚಿನ ಅರ್ಥವನ್ನು ಹೇಳುವುದರಿಂದ ಅತಃ ಶಬ್ದವು ಸಾರ್ಥಕ.

ಇದು ತಪ್ಪು. ನಾವು ಮಾಡುವ ವಿಕಲ್ಪಕ್ಕೆ ಉತ್ತರಿಸಲಾಗುವುದಿಲ್ಲ. ಅತಃ ಶಬ್ದದಿಂದ ಯಾವ ವಿಶಿಷ್ಟಹೇತುವು ಹೇಳಲ್ಪಟ್ಟಿದೆಯೋ, ಅದರ ಆನಂತರ್ಯವನ್ನು ಅಥ ಶಬ್ದದಿಂದ ಹೇಳುತ್ತೀರೋ? ಅಥವಾ ಕರ್ಮವಿಚಾರದ ಅನಂತರ ಕರ್ಮವಿಚಾರವನ್ನು ಮಾಡಿದ್ದರಿಂದಲೇ ಬ್ರಹ್ಮವಿಚಾರವನ್ನು ಮಾಡಬೇಕು ಎಂದು ಹೇಳುತ್ತೀರೋ? ಮೊದಲನೆಯ ಪಕ್ಷವನ್ನು ಒಪ್ಪಿದರೆ ಪುನರುಕ್ತಿ ಬರುತ್ತದೆಂದು 'ಅಥಶಬ್ದಸ್ಯ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ವಿವರಣಕಾರರಿಗೆ ಬಂದ ಪುನರುಕ್ತಿಯು ನಿಮಗೂ ತಪ್ಪಿದ್ದಲ್ಲವೆಂದು ಅಭಿಪ್ರಾಯ.

ರಾಮಾನುಜರು ಇದಕ್ಕೆ ಪರಿಹಾರ ಹೇಳುತ್ತಾರೆ - ಅತಃಶಬ್ದವು ವ್ಯರ್ಥವಾಗುವುದಿಲ್ಲ. ಅಥಶಬ್ದದಿಂದ ಶ್ರುತಪ್ರಕಾಶದಲ್ಲಿ ಹೇಳಿದ ಪ್ರತೀತಿಯು ವಿಚಾರಹೇತುವೆಂದು ಹೇಳಿದ್ದರೂ ವಸ್ತುತಃ ಅದು ವಿಚಾರಹೇತುವಲ್ಲ ಎಂಬ ಆಕ್ಷೇಪ ಬರುತ್ತದೆ. ಅದರ ಪರಿಹಾರಕ್ಕಾಗಿ ಅತಃಶಬ್ದವು ಹೊರಟಿದೆ. ಆದ್ದರಿಂದಲೇ ಶ್ರುತಪ್ರಕಾಶದಲ್ಲಿ ಇದೇ ಪ್ರಶ್ನೆಯನ್ನು ಆಕ್ಷೇಪಿಸಿ ಹೀಗೆ ಹೇಳಿದೆ - ''ಅಥಶಬ್ದಾಕ್ಷಿಪ್ತಹೇತ್ವಸಿದ್ಧಿಶಂಕಾಪರಿಹಾರಾರ್ಥತ್ವಾದತಶ್ಶಬ್ದಸ್ಯ'' ಅಥ ಶಬ್ದವು ಯಾವ ಹೇತುವನ್ನು ಹೇಳಿದೆಯೋ ಆ ಹೇತುವು ಅಸಿದ್ಧವಾಗಿದೆಯೆಂಬ ಆಕ್ಷೇಪ ಬರುತ್ತದೆ. ಆಕ್ಷೇಪದ ಪರಿಹಾರಕ್ಕಾಗಿ ಅತಃಶಬ್ದವು ಹೊರಟಿದೆ'' ಹೀಗೆ ಸಮಾಧಾನ ಹೇಳಿದೆ.

*ಪರಿಪೂರ್ಣಚಂದ್ರಿಕಾ*

ರಾಮಾನುಜರ ಈ ಸಮಾಧಾನವನ್ನು ನಾವು ಹಿಂದೆಯೇ ಖಂಡಿಸಿದ್ದೇವೆ. 'ಅಥ' ಶಬ್ದವು ಎಷ್ಟು ಅರ್ಥವನ್ನು ಹೇಳುತ್ತದೋ, ಅಷ್ಟೇ ಅರ್ಥವನ್ನು ಅತಃಶಬ್ದವು ಹೇಳುತ್ತಿದೆ. ಆದರೂ ಅಥಶಬ್ದಾರ್ಥದ ಮೇಲೆ ಬಂದ ಆಕ್ಷೇಪವನ್ನು ಅತಃಶಬ್ದವು ಪರಿಹರಿಸುವುದಾದರೆ 'ಅಥ' ಶಬ್ದವೇ ಆ ಆಕ್ಷೇಪವನ್ನೂ ಏಕೆ ಪರಿಹರಿಸಬಾರದು? ಹೀಗೆ ವಿವರಣವನ್ನು ಖಂಡಿಸಬೇಕಾದರೆ ಹೇಳಿದ ದೋಷ ಇವರಿಗೂ ಬರುತ್ತದೆ.

ಎರಡನೆಯ ಪಕ್ಷವನ್ನು ಒಪ್ಪಿದರೆ 'ಅಥಶಬ್ದಸ್ಯ ಅನ್ಯಾನಂತರ್ಯಾರ್ಥತ್ವೇ' ಇತ್ಯಾದಿ ವಾಕ್ಯದಿಂದ ದೋಷವನ್ನು ಹೇಳುತ್ತಿದ್ದಾರೆ. ನಿಮ್ಮ ಮತಕ್ಕೆ ವಿರೋಧ ಬರುತ್ತದೆಂದು ಅಭಿಪ್ರಾಯ. ಆದ್ದರಿಂದ ರಾಮಾನುಜರು ಹೇಳಿದ ಅತಃಶಬ್ದಾರ್ಥವಿಚಾರವು ಅಸಮಂಜಸವಾಗಿದೆ.




**ರಾಮಾನುಜರ ಅತಃ ಶಬ್ದಾರ್ಥ**

'ಅಥ ಬ್ರಹ್ಮಜಿಜ್ಞಾಸಾ' 'ಧರ್ಮವಿಚಾರದ ಅನಂತರ ಬ್ರಹ್ಮವಿಚಾರ ಮಾಡಬೇಕು' ಇದಕ್ಕೆ ಹೇತುವು ಕರ್ಮಫಲ ಅನಿತ್ಯವೆಂಬ ನಿಶ್ಚಯ ಮತ್ತು ಬ್ರಹ್ಮಜ್ಞಾನ ಫಲ ನಿತ್ಯವಾಗಬಹುದೆಂಬ ಸಾಮಾನ್ಯಜ್ಞಾನ. ಇದನ್ನು ಅತಃ ಶಬ್ದ ಹೇಳುತ್ತದೆ ಎಂದು ರಾಮಾನುಜಮತ. ಇದೂ ಸರಿಯಲ್ಲ. ಅಥ ಶಬ್ದ 'ಧರ್ಮವಿಚಾರದ ಅನಂತರ ಎಂದಿಷ್ಟೇ ಹೇಳಿರುವಾಗ 'ಅತಃಶಬ್ದೋ ವೃತ್ತಸ್ಯ ಹೇತುಭಾವೇ' ಎಂದು ಭಾಷ್ಯವಿರುವುದರಿಂದ ಅತಃ ಶಬ್ದವು 'ಧರ್ಮವಿಚಾರ ನಡೆದಿರುವುದರಿಂದ' ಎಂದಿಷ್ಟೇ ಹೇಳಬೇಕು. ಬೇರೇನೂ ಹೇಳಬಾರದು. ಅಥಶಬ್ದವು 'ಕರ್ಮಫಲ ಅನಿತ್ಯವೆಂಬ ನಿಶ್ಚಯ ಸಹಿತವಾದ, ಬ್ರಹ್ಮಜ್ಞಾನಫಲ ನಿತ್ಯವೆಂಬ ಜ್ಞಾನದ ಅನಂತರ' ಎಂದೇ ಹೇಳುತ್ತಿದ್ದರೆ, ಕಾರಣವಲ್ಲದ ಯಾವುದೋ ಒಂದರ ಆನಂತರ್ಯವನ್ನು ಹೇಳುವುದು ವ್ಯರ್ಥವೆಂದು ಮೇಲೆ ಹೇಳಿದ ಜ್ಞಾನವು ಕಾರಣವೆಂದೇ ಹೇಳಿದಂತಾಗುವುದರಿಂದ ಅತಃಶಬ್ದವು ತಿರುಗಿ ಅದನ್ನೇ ಹೇಳಿದರೆ ವಿವರಣಮತದಂತೆಯೆ ಪುನರುಕ್ತಿಯೆನಿಸುವುದು.

ಕರ್ಮವಿಚಾರದ ಅನಂತರ ಬ್ರಹ್ಮವಿಚಾರ ಮಾಡಬೇಕು ಏಕೆ? ಬ್ರಹ್ಮಜಿಜ್ಞಾಸುವಿಗೆ ಕರ್ಮವಿಚಾರ ಅರ್ಹತೆಯೆಂದೆ? ಮೊದಲಿಗೆ ಕರ್ಮವಿಚಾರ, ಬಳಿಕ ಬ್ರಹ್ಮವಿಚಾರ ಎಂಬ ಕ್ರಮಕ್ಕೆ ಶ್ರುತಿ ಅರ್ಥ ಪಠನ ಮುಂತಾದ ಆರು ಪ್ರಮಾಣಗಳಲ್ಲಿ ಒಂದು ಪ್ರಮಾಣವೂ ಸಿಗುವುದಿಲ್ಲ.

ಆಗಮವು ಸಿದ್ಧಪರವಲ್ಲದುದರಿಂದ ಬ್ರಹ್ಮವಿಚಾರ ಬೇಡವೆಂಬ ರಾಮಾನುಜಮತದ ಪೂರ್ವಪಕ್ಷಕ್ಕೆ ಉತ್ತರವಾಗಿ 'ಬ್ರಹ್ಮವಿಚಾರ ಕರ್ತವ್ಯ' ಎಂದೇ ಸಿದ್ಧಾಂತ ಮಾಡಬೇಕು ಹೊರತು 'ಕರ್ಮವಿಚಾರಾನಂತರ ಬ್ರಹ್ಮವಿಚಾರ ಕರ್ತವ್ಯ' ಎಂದಲ್ಲ. ಪೂರ್ವಪಕ್ಷಿ 'ಕರ್ಮವಿಚಾರಾನಂತರ ಬ್ರಹ್ಮವಿಚಾರ ಮಾಡುವುದು ಬೇಡ' ಎಂದೇನೂ ಪೂರ್ವಪಕ್ಷ ಮಾಡುವುದಿಲ್ಲ. ಏಕೆಂದರೆ ಆಗಮವು ಸಿದ್ಧಪರವಲ್ಲವೆಂದಾದರೆ ಕರ್ಮವಿಚಾರಕ್ಕಿಂತ ಮೊದಲೂ ಬ್ರಹ್ಮವಿಚಾರ ಮಾಡುವುದು ಅಯುಕ್ತವೆ ತಾನೆ?

ಒಂದೇ ಜಿಜ್ಞಾಸಾಪದವು ವಿಷಯ ಪ್ರಯೋಜನ ಸೂಚಕವಾಗಲ್ಲ

**तात्पर्यचन्द्रिका –**

**भामत्यां तु – निश्चिते जिज्ञासाऽयोगात् सन्दिग्धत्वेन ब्रह्मैव विषयः । ज्ञानमेवेच्छाविषयत्वेन प्रयोजनमिति, जिज्ञासापदेनैव विषयप्रयोजने सूचिते इत्युक्तम् । तन्न । नहि पूर्वपक्षिणा ब्रह्मज्ञाने इच्छामङ्गीकृत्य** तद्विचार **आक्षिप्तः । किंतु विषयाद्यभावेनेच्छैव नोदेतुं युक्तेत्याक्षिप्तम् । नच** तं प्रतीच्छया **विषयादिसाधनं युक्तम् । विवरणे तु – अथशब्देनाधिकारी, जिज्ञासापदेनेच्छाविषयत्वेन ब्रह्मज्ञानं प्रयोजनम्, अर्थादधिकारिविशेषणं मोक्षो ब्रह्मज्ञानफलम्, विषयश्च सूचित इत्युक्तम् । तदपि न । त्वन्मते जिज्ञासापदस्य विचारलक्षकत्वेन ज्ञानेच्छापरत्वस्याभावात् । नहि 'विषं बुभुक्षते', 'कूलं पिपतिषति' इत्यनेन विषभक्षणादेरिष्टत्वसिद्धिः । प्रतीतस्यापि मुख्यार्थस्य त्यक्तत्वात् । पूर्वपक्षिणेच्छानङ्गीकाराच्च । त्वन्मते ज्ञानेच्छाऽसम्भवस्योक्तत्वाच्च। मुमुक्षाया** अधि**कारिविशेषणत्वनिरासाच्च । विषयसूचनं त्वसन्दिग्धादन्यसूचनं विना न शक्यम् । अन्यथा शास्त्रारम्भसामर्थ्यादेव वा कर्तव्यतोक्तिसामर्थ्यादेव वा तत्प्रयोजकविषयादिसूचनसम्भवात्, जिज्ञासापदादिना तत्सूचनोक्त्ययुक्तिरिति ।**

ಅನುವಾದ - ಭಾಮತಿಯಲ್ಲಿ ಹೀಗಿದೆ - 'ಜಿಜ್ಞಾಸಾ' ಎಂಬ ಒಂದೇ ಪದದಿಂದ ವಿಷಯ ಹಾಗು ಪ್ರಯೋಜನಗಳು ಸೂಚಿತವಾಗುತ್ತವೆ. ಜ್ಞಾನೇಚ್ಛೆಯೇ ಜಿಜ್ಞಾಸಾ ಎನಿಸುತ್ತದೆ. ನಿಶ್ಚಿತವಾದ ವಿಷಯದಲ್ಲಿ ಜ್ಞಾನೇಚ್ಛೆಯು ಬರಲಾರದು. ಪ್ರಕೃತ ಬ್ರಹ್ಮನು ಜ್ಞಾನೇಚ್ಛೆಗೆ ವಿಷಯನಾಗಿದ್ದಾನೆಂದರೆ ನಿಶ್ಚಿತನಾಗಿರಲು ಸಾಧ್ಯವಿಲ್ಲ. ಸಂದಿಗ್ಧನಾಗಿದ್ದಾನೆ ಎಂದರ್ಥ. ಆದ್ದರಿಂದಲೇ ವಿಚಾರಕ್ಕೆ ವಿಷಯನಾಗಿದ್ದಾನೆ. ಹೀಗೆ ಜಿಜ್ಞಾಸಾಪದದಿಂದ ವಿಷಯದ ಲಾಭವಾಗುತ್ತದೆ.

ಮತ್ತು ಯಾವುದು ಫಲವೋ ಅದು ಇಚ್ಛೆಗೆ ವಿಷಯವಾಗಿರುತ್ತದೆ. (ಇಷ್ಟವಾಗಿರುತ್ತದೆ) ಬ್ರಹ್ಮಜ್ಞಾನವು ಇಚ್ಛೆಗೆ ವಿಷಯವಾದ್ದರಿಂದ ಫಲವೆಂದೆನಿಸುತ್ತದೆ. ಈ ಶಾಸ್ತ್ರಕ್ಕೆ ಬ್ರಹ್ಮನು ವಿಷಯ. ಬ್ರಹ್ಮಜ್ಞಾನವೇ ಮುಖ್ಯಫಲ. ಎರಡನ್ನು ಜಿಜ್ಞಾಸಾಶಬ್ದವೇ ಹೇಳುತ್ತಿದೆ.

ಇದು ತಪ್ಪು. ಪೂರ್ವಪಕ್ಷಿಯು ಬ್ರಹ್ಮಜ್ಞಾನದಲ್ಲಿ ಇಚ್ಛೆಯನ್ನು ಒಪ್ಪಿ ಬ್ರಹ್ಮವಿಚಾರವನ್ನು ಮಾತ್ರ ಬೇಡವೆಂದು ಆಕ್ಷೇಪಿಸುತ್ತಿಲ್ಲ. ವಿಷಯ ಪ್ರಯೋಜನಗಳಿಲ್ಲದ ಕಾರಣ ಬ್ರಹ್ಮಜ್ಞಾನದಲ್ಲಿ ಇಚ್ಛೆಯೇ ಬರುವುದಿಲ್ಲವೆಂದು ಆಕ್ಷೇಪಿಸಿದ್ದಾನೆ. ಜ್ಞಾನೇಚ್ಛೆಯನ್ನೇ ಒಪ್ಪದ ಅಂತಹ ಪೂರ್ವಪಕ್ಷಿಯನ್ನು ಕುರಿತು

ಜ್ಞಾನೇಚ್ಛೆ ಇರುವುದರಿಂದ ವಿಷಯ ಪ್ರಯೋಜನಗಳಿವೆಯೆಂದು ವಾದಿಸುವುದು ಅಯುಕ್ತ. ಆದ್ದರಿಂದ ಜಿಜ್ಞಾಸಾಪದವು ವಿಷಯಪ್ರಯೋಜನ ಉಭಯ ಸೂಚಕವಾಗಿದೆಯೆಂಬ ಭಾಮತೀಮತವು ಅಸಾಧುವಾಗಿದೆ.

ವಿವರಣದಲ್ಲಿ ಹೀಗಿದೆ. - ಅಥಶಬ್ದದಿಂದ ಅಧಿಕಾರಿಯು ಸೂಚಿತವಾಗಿದೆ. ಜಿಜ್ಞಾಸಾಪದದಿಂದ ಇಚ್ಛೆಗೆ ವಿಷಯವಾದ ಬ್ರಹ್ಮಜ್ಞಾನವೆಂಬ ಫಲವು ಸೂಚಿತವಾಗಿದೆ. (ಭಾಮತೀಮತದಲ್ಲಿ ಬ್ರಹ್ಮಜ್ಞಾನವೇ ಪ್ರಧಾನಫಲ, ಆದರೆ ವಿವರಣಮತದಲ್ಲಿ ಮೋಕ್ಷವು ಪ್ರಧಾನಫಲ, ಅದಕ್ಕೆ ಕೇವಲ ಸಾಧನವಾದದ್ದು ಬ್ರಹ್ಮಜ್ಞಾನ. ಇಷ್ಟು ವ್ಯತ್ಯಾಸವಿದೆ)

ಆದ್ದರಿಂದ ಬ್ರಹ್ಮಜ್ಞಾನದಿಂದ ದೊರೆಯುವ ಮೋಕ್ಷವು ಪ್ರಯೋಜನವೆಂದು ಅಥಶಬ್ದವು ಸೂಚಿಸುತ್ತದೆ. ಮೋಕ್ಷಾಭಿಲಾಷೆಯೂ ಒಂದು ಅರ್ಹತೆಯಾದ್ದರಿಂದ ಜಿಜ್ಞಾಸಾಶಬ್ದದಿಂದ ಬ್ರಹ್ಮಜ್ಞಾನ-ಫಲವಾದ ವಿಷಯವು ಸೂಚಿತವಾಗಿದೆ. ಜಿಜ್ಞಾಸಾಪದದಿಂದ ಇಚ್ಛೆಗೆ ವಿಷಯವಾದ ಬ್ರಹ್ಮಜ್ಞಾನವೆಂಬ ಫಲವು ಸೂಚಿತವಾಯಿತು. ಜೊತೆಗೆ ಬ್ರಹ್ಮನೂ ವಿಷಯನೆಂದು ಸ್ಫೋಟಕನಾದ ಎಂದು ಅಭಿಪ್ರಾಯ. ಈ ವಿವರಣಮತವೂ ತಪ್ಪು - ವಿವರಣಕಾರರಿಗೆ ಹೀಗೆ ಹೇಳಲು ಬರುವುದಿಲ್ಲ. ಏಕೆಂದರೆ 'ಜಿಜ್ಞಾಸಾ' ಪದಕ್ಕೆ 'ವಿಚಾರ'ದಲ್ಲಿ ಲಕ್ಷಣಾ ಮಾಡಲಾಗಿದೆ. ಮುಖ್ಯಾರ್ಥದಲ್ಲಿ ಬಾಧವಿದ್ದಾಗ ಲಕ್ಷಣಾ ಮಾಡಬೇಕು. ಪ್ರಕೃತ ಜ್ಞಾನದಲ್ಲಿ ಇಚ್ಛೆಯು ಬಾಧಿತವಾದ್ದರಿಂದ ಲಕ್ಷಣಾವನ್ನು ಮಾಡಲೇಬೇಕು. ''ವಿಷಂ ಬುಭುಕ್ಷತೇ'' ''ಕೂಲಂ ಪಿಪತಿಷತಿ'' ಎಂದು ಹೇಳಿದಾಗ 'ವಿಷವನ್ನು ತಿನ್ನಲು ಬಯಸುತ್ತಾನೆ' 'ನದಿಯ ದಡ ಬೀಳಲು ಬಯಸುತ್ತಿದೆ'. ಎಂಬರ್ಥವು ಪ್ರಥಮ ಪ್ರತೀತವಾಗುತ್ತದೆ. ಆದರೂ ಅದನ್ನು ಅಸಂಗತವೆಂದು ಬಿಟ್ಟು 'ಶತ್ರುಮನೆಯ ಭೋಜನವು ನಿಷಿದ್ಧ' 'ನದೀದಡವು ಯಾವಾಗ ಬೇಕಾದರೂ ಬೀಳಬಹುದೆಂಬ ಅರ್ಥವನ್ನು ಇಟ್ಟುಕೊಳ್ಳುತ್ತೇವೆ. ಅದರಂತೆ ಪ್ರಕೃತ ಜ್ಞಾನೇಚ್ಛೆಯೆಂಬ ಅರ್ಥವು ಪ್ರಥಮಪ್ರತೀತವಾದರೂ ಅದನ್ನು ಬಿಟ್ಟು ವಿಚಾರವೆಂಬ ಅರ್ಥವನ್ನೇ ಸ್ವೀಕರಿಸಬೇಕು. ಆದ್ದರಿಂದ ಜಿಜ್ಞಾಸಾಶಬ್ದವು ಫಲಸೂಚಕ-ವೆಂದು ಹೇಳಬಾರದು.

ಮತ್ತು ಪೂರ್ವಪಕ್ಷಿಯು ಬ್ರಹ್ಮಜ್ಞಾನೇಚ್ಛೆಯನ್ನೇ ಒಪ್ಪಿಲ್ಲ. ಅಂತಹವನಿಗೆ ಬ್ರಹ್ಮಜ್ಞಾನೇಚ್ಛೆಯು ಇರುವುದರಿಂದ ವಿಷಯ ಪ್ರಯೋಜನಗಳ ಲಾಭವಾಗುತ್ತದೆಂದು ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ.

ವಿವರಣಮತದಲ್ಲಿ 'ಜ್ಞಾನೇಚ್ಛೆ' ಎಂಬುದೇ ಇಲ್ಲವೆಂದು ಹಿಂದೆ ಅಥಶಬ್ದಾರ್ಥ ನಿರಾಕರಿಸುವ ಸಂದರ್ಭದಲ್ಲಿ ಉಪಪಾದಿಸಿದ್ದೇವೆ.

'ಮೋಕ್ಷೇಚ್ಛೆಯು ಅಧಿಕಾರಿಯಲ್ಲಿರಬೇಕಾದ ಒಂದು ಅರ್ಹತೆ' ಎಂದು ಅದ್ವೈತಮತದಲ್ಲಿ ಉಪ-ಪಾದಿಸಲಾಗದೆಂಬುದನ್ನು ಹಿಂದೆಯೇ ನಿರಾಕರಿಸಿದ್ದೇವೆ.

ಜಿಜ್ಞಾಸಾಶಬ್ದದಿಂದಲೇ ವಿಷಯವೂ ಸೂಚಿತವಾಗಿದೆಯೆಂಬುದೂ ತಪ್ಪು. ಯಾವ ಬ್ರಹ್ಮನನ್ನು ವಿಷಯನೆಂದು ಹೇಳುತ್ತೀರೋ ಅವನು ಜೀವಾಭಿನ್ನನೇ ಆಗಿದ್ದಾನೆ. ಜೀವನಾದರೂ ಅಸಂದಿಗ್ಧನಾದ್ದರಿಂದ

ವಿಷಯನಾಗಲಾರ. ಜೀವನಿಗಿಂತ ಭಿನ್ನನಾದವನನ್ನು ಸೂಚಿಸದಿದ್ದರೆ ವಿಷಯಸೂಚನೆ ಮಾಡಲಾಗದು. ಅಂತಹ ವಿಷಯವನ್ನು ಬ್ರಹ್ಮಶಬ್ದವೇ ಸೂಚಿಸಬೇಕು ಹೊರತು ಜಿಜ್ಞಾಸಾಶಬ್ದವಲ್ಲ.

ಒಂದು ವೇಳೆ ಜಿಜ್ಞಾಸಾಪದದಿಂದಲೇ ವಿಷಯಸೂಚನೆಯಾಗುತ್ತದೆಂದು ಹೇಳಿದರೆ ಶಾಸ್ತ್ರವನ್ನು ಆರಂಭಿಸಿರುವುದರಿಂದಲೇ ವಿಷಯ ಪ್ರಯೋಜನಗಳು ತಿಳಿಯುವಾಗ ಪ್ರಥಮಸೂತ್ರವೇ ವ್ಯರ್ಥವಾಗುತ್ತದೆ. ಅಥವಾ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ ಮಾತ್ರದಿಂದಲೇ ಅದಕ್ಕೆ ಕಾರಣವಾದ ವಿಷಯ ಪ್ರಯೋಜನಗಳೂ ಸಿದ್ಧವಾಗುತ್ತವೆ. ಪುನಃ ಅವುಗಳನ್ನು ಸೂತ್ರದಲ್ಲಿರುವ ಜಿಜ್ಞಾಸಾ ಮೊದಲಾದ ಪದಗಳಿಂದ ಸೂಚಿಸುವುದು ಅಯುಕ್ತ.

### ಕಠಿಣಪದಾರ್ಥ

**ಪ್ರಯೋಜನಮ್** = ಅವಾಂತರಪ್ರಯೋಜನವು, **ತದ್‌ವಿಚಾರಃ** = ಬ್ರಹ್ಮವಿಚಾರವು, **ಪಿಪತಿಷತಿ** = ಬೀಳಲು ಬಯಸುತ್ತದೆ. **ಉಕ್ತತ್ವಾಚ್ಚ** = ಹಿಂದೆ ಅಥಶಬ್ದಾರ್ಥದ ನಿರಾಕರಣ ಸಂದರ್ಭದಲ್ಲಿ ಹೇಳಿದ್ದೇವೆ. **ನಿರಾಸಾಚ್ಚ** = ಮೋಕ್ಷಕಾಮನೆಯು ಪರಪಕ್ಷದಲ್ಲಿ ಕೂಡುವುದಿಲ್ಲವೆಂದು ಹಿಂದೆಯೇ ನಿರಾಕರಿಸಲಾಗಿದೆ, **ಅನ್ಯಥಾ** = ಜಿಜ್ಞಾಸಾಪದದಿಂದಲೇ ವಿಷಯ ಸೂಚನೆಯಾಗುತ್ತದೆಂದು ಹೇಳಿದರೆ.

**प्रकाशः** – एवं ब्रह्मातश्शब्दाभ्यां विषयफलसिद्धिमुक्त्वा जिज्ञासापदेन तल्लाभं निराह ।। **भामत्यां त्विति** ।। निश्चिते ज्ञानेच्छारूपजिज्ञासाऽयोगाज्जिज्ञासा-पदोपादानेन जिज्ञास्यं ब्रह्म सन्दिग्धमिति सूचनात् तद्विषयः, काम्यमानस्य च फलत्वेन जिज्ञासेत्यत्र प्रत्ययार्थभूतेच्छाविषयभूतं प्रकृत्यर्थरूपं ज्ञानं प्रधानप्रयोजनमित्यर्थः ।। **नहीति** ।। नहि सर्वजनीनाहमनुभवसिद्ध आत्मा सन्दिग्धो वा सप्रयोजनो वा, येन जिज्ञास्यः सन् विचारं प्रयुञ्जीतेति त्वदीयपूर्वपक्षोपसंहारे जिज्ञासाक्षेपपूर्वं विचारस्याक्षिप्तत्वादिति भावः ।। **नचेति** ।। ज्ञानेच्छायां सिद्धायां विषयप्रयोजनसिद्धिः, तत्सिद्धौ च तत्सिद्धिरित्यन्योन्याश्रयादिति भावः ।। **प्रयोजनमिति** ।। अवान्तरप्रयोजनम् । नतु भामतीमत इव मुख्यमित्यर्थः ।। **सूचित इति** ।। 'जिज्ञासापदेन' इत्यन्वयः । मोक्षफलं त्वथशब्देन ।। **नहीति** ।। 'विषं बुभुक्षते' इत्येतच्छत्रुगृहभोजननिषेधस्य लक्षकमिति न विषभोजनेच्छापरम् । 'कूलं पिपतिषति' इत्येतत् कूलपतनमाशङ्क्यत इत्येतत्परम् । नतु पतनेच्छापरम् । 'आशङ्कायां सन् वक्तव्यः' इति कात्यायनस्मरणात् । तथाच तत्रोभयत्रान्यार्थपरत्वाद् विषभक्षणादेरिष्टत्वं

नास्ति । तद्वत् ज्ञानमपि नेष्टमिति न प्रयोजनस्य तेन लाभ इति भावः ।। पूर्वपक्षिणेति ।। तथाचान्योन्याश्रय इति भावः ।। उक्तत्वाच्चेति ।। तदीयाथशब्दार्थखण्डनप्रस्तावे । "न तावद् विचारविधौ मुमुक्षुरधिकारी" इत्यादिनेति भावः ।। निरासाच्चेति ।। "मुमुक्षा च न परपक्षे युक्ता" इत्यादिनेति भावः । यदपि जिज्ञासापदेन विषयसूचनमिति, तदपि नेत्याह ।। विषयेति ।। यदसन्दिग्धं जीवादि ततोऽन्यस्येश्वरादेः सूचनं विना न शक्यम् । तच्च ब्रह्मपदेनैवेति भावः । अयं दोषो भामतीमतेऽपि ध्येयः । ननु जिज्ञासापदोपादानसामर्थ्यादेव तत्प्रयोजकसंशयादिलाभाद् विषयादिसिद्धिर्भविष्यति । अन्यथा तद्वैयर्थ्यमित्यत आह ।। अन्यथेति ।। जिज्ञासापदसामर्थ्यादेव तत्सूचने इत्यर्थः । शास्त्रारम्भप्रयोजकविषयादिसूचकमाद्यसूत्रं हित्वैव, जन्मादिसूत्रमारभ्य शास्त्रे आरब्धे सति, यद्यत्र विषयादिकं न स्यात् तदा प्रेक्षावान् सूत्रकारो नारभेत । आरभते चातोऽत्रास्ति विषयादीत्यारम्भसामर्थ्यादेव वा तथा जिज्ञासाया विषयाद्यभावे कर्तव्यतोक्त्ययोगात् तत्सामर्थ्यादेव वेत्यर्थः । उपलक्षणमेतत् । "ईक्षतेर्नाशब्दम्, आनन्दमयोऽभ्यासात्" इत्यादौ साध्यनिर्देशसामर्थ्यादेव तत्प्रयोजकलाभात् 'ईक्षतेः' अभ्यासात्, इत्यादिहेतूपन्यासो व्यर्थ इत्यपि ध्येयम् । भामतीमते आक्षिप्तविचारकर्तव्यतासामर्थ्याभिप्रायेण वाक्यं योज्यम् । इतिशब्दोऽतशब्दव्याख्यासमाप्तौ ।

गुरुराजीय – ननु पदद्वयेन विषयप्रयोजनसूचनमयुक्तमेकेन जिज्ञासापदेनैवोभयसूचनसम्भवेन पदद्वयेन तत्सूचनस्य गौरवकरत्वादिति भामत्यामुक्तत्वादित्यतः तन्मतं दूषयितुमनुवदति – भामत्यां त्विति ।। पूर्वपक्षिणा इच्छया एवानङ्गीकृतत्वात् तद्विषयत्वेन विषयादिसाधनमयुक्तमित्याह – नहीति ।। विवरणमतं दूषयितुमनुवदति – विवरणेत्विति ।। ब्रह्मज्ञानफलं मोक्ष इत्यर्थः । ननु सन्प्रत्ययस्येच्छापरत्वात् जिज्ञासापदस्येच्छापरत्वमित्यत आह – नहीति ।। ननु जिज्ञासापदस्य ज्ञानेच्छारूपो मुख्यार्थः प्रथमप्रतीतः । तथाच तद्विषयत्वेन विषयादिलाभ इत्यत आह – प्रतीतस्यापीति ।। पूर्वपक्षिणेति ।। तथाचेच्छाविषयत्वेन विषयादिसाधनमयुक्तमिति भावः ।। त्वन्मत इति ।। न तावद् विचारविधौ काम इत्यनेनेति शेषः ।

**जिज्ञासापदेन विषयसूचनमयुक्तमित्याह – विषयेति ।। असन्दिग्धात् पदार्थादन्योऽर्थः तत्सूचनं विनेत्यर्थः ।**

**ವಿವರಣೆ** - ಬ್ರಹ್ಮಪದವು ವಿಷಯಸೂಚಕವಾಗಿದೆ. ಅತಃ ಪದವು ಪ್ರಯೋಜನಸೂಚಕವಾಗಿದೆಯೆಂಬ ನಮ್ಮ ಸಿದ್ಧಾಂತವನ್ನು ಸಮರ್ಥಿಸಿದ್ದಾಯಿತು. ಆದರೆ ಭಾಮತೀಕಾರರು ಜಿಜ್ಞಾಸಾ ಎಂಬ ಒಂದೇ ಪದವು ವಿಷಯ ಮತ್ತು ಪ್ರಯೋಜನಗಳನ್ನು ಸೂಚಿಸುತ್ತದೆಂದು ಹೇಳುತ್ತಾರೆ. ಒಂದೇ ಪದದಿಂದಲೇ ವಿಷಯಪ್ರಯೋಜನಗಳು ತಿಳಿಯುತ್ತಿರಬೇಕಾದರೆ ಎರಡು ಪದಗಳಿಂದ ಸೂಚಿಸುವುದು ಗೌರವವೆಂದು ಅವರ ಅಭಿಪ್ರಾಯ. ಇವರ ಅಭಿಪ್ರಾಯವನ್ನು ನಿರಾಕರಿಸುವುದಕ್ಕಾಗಿ ಮೊದಲು 'ಭಾಮತ್ಯಾಂ ತು' ಎಂದು ಅನುವಾದ ಮಾಡುತ್ತಿದ್ದಾರೆ.

ಜಿಜ್ಞಾಸಾಶಬ್ದದಿಂದ ವಿಷಯಪ್ರಯೋಜಗಳು ತಿಳಿಯಲಾರವು. ಪೂರ್ವಪಕ್ಷ ಮಾಡುವಾಗ ಇಚ್ಛೆಯನ್ನು ಒಪ್ಪಿದಲ್ಲಿ ವಿಷಯಪ್ರಯೋಜಗಳು ಸಿದ್ಧವಾಗುತ್ತವೆ. ಆದರೆ ಭಾಮತೀಕಾರರೇ ಪೂರ್ವಪಕ್ಷದ ಉಪಸಂಹಾರದಲ್ಲಿ ಹೀಗೆ ಹೇಳಿದ್ದಾರೆ - ''ಸಕಲಜನರಿಂದ ಆತ್ಮನು 'ಅಹಂ' ಎಂಬ ಅನುಭವದಿಂದ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಅವನ ವಿಷಯದಲ್ಲಿ ಸಂದೇಹವು ಕೂಡುವುದಿಲ್ಲ. ಅವನ ಬಗ್ಗೆ ವಿಚಾರ ಮಾಡಿದರೂ ಪ್ರಯೋಜನವಿಲ್ಲ. ವಿಷಯ ಮತ್ತು ಪ್ರಯೋಜನಗಳು ಇದ್ದಿದ್ದರೆ ಬ್ರಹ್ಮಜ್ಞಾನದಲ್ಲಿ ಇಚ್ಛೆಯು ಬರುತ್ತಿತ್ತು.'' ಎಂದು -

ಹೀಗೆ ಪೂರ್ವಪಕ್ಷ ಮಾಡಿ ಸಿದ್ಧಾಂತದಲ್ಲಿ ಜ್ಞಾನೇಚ್ಛೆ ಇರುವುದರಿಂದ ವಿಷಯ ಪ್ರಯೋಜನಗಳು ಇವೆ ಎಂದು ಹೇಳುವುದು ಸರಿಯಲ್ಲ. ಹಾಗಾದಲ್ಲಿ ಅನ್ಯೋನ್ಯಾಶ್ರಯ ಬರುತ್ತದೆ. ಜ್ಞಾನೇಚ್ಛೆಯು ಇದೆಯೆಂದು ಸಿದ್ಧವಾದರೆ ವಿಷಯ ಪ್ರಯೋಜಗಳು ಸಿದ್ಧವಾಗುತ್ತವೆ. ವಿಷಯಪ್ರಯೋಜಗಳು ಸಿದ್ಧವಾದರೆ ಜ್ಞಾನೇಚ್ಛೆಯು ಇದೆಯೆಂದು ಸಿದ್ಧವಾಗುತ್ತದೆ.

ಆದ್ದರಿಂದ ಭಾಮತೀಕಾರ ಹೇಳಿದ್ದು ಸರಿಯಲ್ಲ. ವಿವರಣದಲ್ಲಿ ಹೇಳಿದ್ದೂ ತಪ್ಪು - 'ಜಿಜ್ಞಾಸಾ' ಶಬ್ದದಿಂದ ಇಚ್ಛೆಗೆ ವಿಷಯವಾದ ಬ್ರಹ್ಮಜ್ಞಾನವೆಂಬ ಫಲವು ಸೂಚಿತವಾಗಿದೆ. ಇದರಿಂದಲೇ ಬ್ರಹ್ಮನೆಂಬ ವಿಷಯದ ಸಿದ್ಧಿಯೂ ಆಗುತ್ತದೆಂದು ವಿವರಣದಲ್ಲಿ ವಿವರಿಸಿದೆ. ಆದರೆ ಜಿಜ್ಞಾಸಾ ಪದಕ್ಕೆ ಜ್ಞಾನೇಚ್ಛಾ ಎಂಬರ್ಥವನ್ನೇ ವಿವರಣಕಾರ ಒಪ್ಪಿಲ್ಲ. ವಿಚಾರದಲ್ಲಿ ಲಕ್ಷಣಾ ಮಾಡಲಾಗಿದೆ. ಹೇಗೆಂದರೆ ''ವಿಷಂ ಬುಭುಕ್ಷತೇ'' ಎಂಬ ವಾಕ್ಯವನ್ನು ಕೇಳಿದಾಗ 'ವಿಷವನ್ನು ತಿನ್ನಲು ಇಚ್ಛಿಸುತ್ತಾನೆ' ಎಂದು ಪ್ರಥಮ-ಪ್ರತೀತವಾಗುತ್ತದೆ. ಆದರೂ ಇದನ್ನು ಪರಿತ್ಯಾಗ ಮಾಡಿ ಶತ್ರುವಿನ ಮನೆಯಲ್ಲಿ ತಿನ್ನಬಾರದು ಎಂಬರ್ಥವನ್ನು ಇಟ್ಟುಕೊಳ್ಳುತ್ತೇವೆ. ಅದರಂತೆ ''ಕೂಲಂ ಪಿಪತಿಷತಿ'' ಎಂಬ ವಾಕ್ಯವನ್ನು ಹೇಳಿದಾಗ 'ನದಿಯ ದಡವು ಬೀಳಲು ಇಚ್ಛಿಸುತ್ತದೆ' ಎಂಬರ್ಥವು ಪ್ರಥಮಪ್ರತೀತವಾಗುತ್ತದೆ.ಆದರೆ ಇದನ್ನು ಬಿಟ್ಟು ನದೀದಡವು ಯಾವಾಗ ಬೇಕಾದರೂ ಬೀಳಬಹುದು ಎಂಬರ್ಥದಲ್ಲಿ ಲಕ್ಷಣಾ ಮಾಡುತ್ತೇವೆ. ಬುಭುಕ್ಷತೇ ಮತ್ತು ಪಿಪತಿಷತಿ ಎಂಬ ಪದಗಳಲ್ಲಿ ಸನ್‌ಪ್ರತ್ಯಯವಿದೆ. ಇದಕ್ಕೆ ಆಶಂಕಾ ಎಂಬರ್ಥವನ್ನು ಹೇಳಬೇಕೆಂದು

ಕಾತ್ಯಾಯನ ಹೇಳಿದ್ದಾನೆ - 'ಆಶಂಕಾಯಾಂ ಸನ್‌ವಕ್ತವ್ಯಃ' ಆಶಂಕೆ ಎಂಬರ್ಥದಲ್ಲಿ ಸನ್‌ಪ್ರತ್ಯಯವನ್ನು ಹೇಳಬೇಕು ಎಂದು. ಆದ್ದರಿಂದ ಮೇಲೆ ಹೇಳಿದ ಅರ್ಥವು ಉಪಪನ್ನವಾಗುತ್ತದೆ.

ಮೇಲಿನ ಎರಡೂ ಉದಾಹರಣೆಗಳಲ್ಲಿ ಕೂಲಪತನವಾಗಲೀ ವಿಷಭಕ್ಷಣವಾಗಲೀ ಇಚ್ಛೆಗೆ ವಿಷಯಗಳಾಗಿಲ್ಲ. ಅದರಂತೆ ಬ್ರಹ್ಮಜ್ಞಾನವೂ ಇಚ್ಛೆಗೆ ವಿಷಯವಾಗುವುದಿಲ್ಲ. ಆದ್ದರಿಂದ ಜಿಜ್ಞಾಸಾ ಶಬ್ದದಿಂದ ಬ್ರಹ್ಮನೆಂಬ ವಿಷಯದ ಸಿದ್ಧಿಯೂ ಆಗುವುದಿಲ್ಲ. ಬ್ರಹ್ಮಜ್ಞಾನವೆಂಬ ಫಲದ ಸಿದ್ಧಿಯೂ ಆಗುವುದಿಲ್ಲ.

ಜಿಜ್ಞಾಸಾಶಬ್ದದಿಂದ ವಿಷಯಸೂಚನೆಯು ಏಕೆ ಕೂಡುವುದಿಲ್ಲ? ಎಂಬುದನ್ನು 'ವಿಷಯ ಸೂಚನಂ ತು' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಶಂಕೆ :- ಸೂತ್ರದಲ್ಲಿ ಜಿಜ್ಞಾಸಾಪದವನ್ನು ಹೇಳಿರುವುದರಿಂದಲೇ ಜಿಜ್ಞಾಸೆಗೆ ಆವಶ್ಯಕವಾದ ಸಂಶಯಾದಿಗಳನ್ನು ಹೇಳಿದಂತಾಗುತ್ತದೆ. ಅದರಿಂದ ವಿಷಯ ಪ್ರಯೋಜಗಳ ಲಾಭವೂ ಆಗುತ್ತದೆ. ಇಲ್ಲವಾದಲ್ಲಿ ಜಿಜ್ಞಾಸಾಪದವೇ ವ್ಯರ್ಥವಾಗುತ್ತದೆ.

ಪರಿಹಾರ :- ಈ ಶಂಕೆಯನ್ನು ಗ್ರಂಥದಲ್ಲಿ 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ಹಾಗೆ ಶಂಕಿಸುವುದಾದರೆ ನಿಮ್ಮ ನ್ಯಾಯದಿಂದಲೇ ಪ್ರಥಮಸೂತ್ರವೂ ವ್ಯರ್ಥವಾಗುತ್ತದೆ. ಏಕೆಂದರೆ ಪ್ರಥಮಸೂತ್ರವನ್ನು ಬಿಟ್ಟು ಜನ್ಮಾದಿಸೂತ್ರದಿಂದ ಶಾಸ್ತ್ರವನ್ನು ಆರಂಭಿಸುವುದರಿಂದಲೇ ನಮಗೆ ತಿಳಿಯುತ್ತದೆ - ವಿಷಯ ಪ್ರಯೋಜನಾದಿಗಳು ಇಲ್ಲದಿದ್ದರೆ ಪ್ರೇಕ್ಷಾವಂತರಾದ ಸೂತ್ರಕಾರರು ಈ ಶಾಸ್ತ್ರವನ್ನೇ ರಚಿಸುತ್ತಿರಲಿಲ್ಲ. ರಚಿಸಿದ್ದರಿಂದಲೇ ಈ ಶಾಸ್ತ್ರಕ್ಕೆ ವಿಷಯ ಪ್ರಯೋಜನಾದಿಗಳು ಇವೆಯೆಂದು ತಿಳಿಯುತ್ತದೆ. ಆದ್ದರಿಂದ ಮೊದಲನೆಯ ಸೂತ್ರವೇ ಬೇಡ.

ಅಥವಾ ಮೊದಲನೆಯ ಸೂತ್ರದಲ್ಲಿ ಅಥ ಜಿಜ್ಞಾಸಾ ಶಬ್ದಗಳಿಂದ ವಿಷಯ ಪ್ರಯೋಜನಾದಿಗಳು ಸೂಚಿತವಾಗಿವೆ, ಎಂದು ಹೇಳುವುದು ಬೇಡ. ಕೇವಲ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂದು ಹೇಳಿದರೆ ಸಾಕು. ಏಕೆಂದರೆ ಪ್ರೇಕ್ಷಾವಂತರಾದ ಸೂತ್ರಕಾರರು ಬ್ರಹ್ಮವಿಚಾರವನ್ನು ಮಾಡಬೇಕೆಂದು ಹೇಳಬೇಕಾದರೆ ವಿಚಾರಕರ್ತವ್ಯತ್ವಕ್ಕೆ ಉಪಯುಕ್ತವಾದ ವಿಷಯ ಪ್ರಯೋಜನಾದಿಗಳು ಇರಲೇಬೇಕು. ವಿಷಯ ಪ್ರಯೋಜನಾದಿಗಳೇ ಇಲ್ಲದೇ ವಿಚಾರವನ್ನಾದರೂ ಮಾಡಲು ಹೇಗೆ ಸಾಧ್ಯವಾಗುತ್ತದೆ? ಹೀಗೆಯೇ ವಿಷಯ ಪ್ರಯೋಜನಗಳನ್ನು ತಿಳಿಯಲು ಬರುವಾಗ ಜಿಜ್ಞಾಸಾಪದದಿಂದ ಸೂಚಿತ-ವಾಗಿದೆಯೆಂದು ಹೇಳಬೇಕಾಗಿಲ್ಲ.

ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು. - 'ಈಕ್ಷತೇರ್ನಾಶಬ್ದಂ' 'ಆನಂದಮಯೋಽಭ್ಯಾಸಾತ್' ಇತ್ಯಾದಿಸೂತ್ರಗಳಲ್ಲಿ ಕೇವಲ ಸಾಧ್ಯವನ್ನು ಹೇಳಿದರೆ ಸಾಕು ಹೇತುವನ್ನು ಹೇಳುವುದೇ ಬೇಡ. ಏಕೆಂದರೆ ಪ್ರಧಾನಕ್ಕೆ ಜ್ಞಾನವಿರದ ಕಾರಣ ಪ್ರಧಾನವು ಜಗತ್‌ಕಾರಣವಲ್ಲವೆಂದು 'ಈಕ್ಷತೇರ್ನಾಶಬ್ದಂ' ಎಂಬ ಸೂತ್ರದಲ್ಲಿ ಹೇಳಿದೆ. ಇಲ್ಲಿ 'ಪ್ರಧಾನವು ಜಗತ್‌ಕಾರಣವಲ್ಲ.' ಎಂದಷ್ಟೇ

ಹೇಳಿದರೆ ಸಾಕು. ಏಕೆಂದರೆ ಜಗತ್ಕಾರಣವಲ್ಲ ಎಂದು ಹೇಳಬೇಕಾದರೆ ಏನೋ ಕಾರಣವಿರಬೇಕು ಆಕಾರಣವು 'ಜ್ಞಾನವಿಲ್ಲದಿರುವಿಕೆಯೇ' ಆಗಿದೆಯೆಂದು ನಮಗೆ ಅರ್ಥಾತ್ ಸಿದ್ಧವಾಗುತ್ತದೆ. ಪುನಃ ಸೂತ್ರದಲ್ಲಿ 'ಈಕ್ಷತೇಃ' ಎಂದು ಹೇಳಿದ್ದು ಅನಾವಶ್ಯಕ.

ಅದರಂತೆ "ಆನಂದಮಯೋಽಭ್ಯಾಸಾತ್" ಎಂಬ ಸೂತ್ರದಲ್ಲಿ 'ಬ್ರಹ್ಮನು ಆನಂದಮಯನಾಗಿದ್ದಾನೆ' ಎಂಬ ಸಾಧ್ಯನಿರ್ದೇಶವಷ್ಟೇ ಸಾಕು. "ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ" ಎಂಬ ಹೇತುವಚನವೇ ಬೇಡ. ಆನಂದಮಯನು ಬ್ರಹ್ಮನೆಂದು ಹೇಳಬೇಕಾದರೆ ಅದಕ್ಕೆ ಕಾರಣವಿದ್ದೇವಿರುತ್ತದೆಂದು ತಿಳಿಯಲು ಬರುತ್ತದೆ. ಹೀಗೆ ಎಲ್ಲಾ ಸೂತ್ರಗಳಲ್ಲಿಯೂ ಹೇತುವಾಕ್ಯವೇ ಬೇಡವೆಂದಾಗಬೇಕಾದೀತು.

## ಸಾರ

### ಅದ್ವೈತದಲ್ಲಿ ಜಿಜ್ಞಾಸಾಶಬ್ದವು ವಿಷಯ ಪ್ರಯೋಜನ ಸೂಚಕವಲ್ಲ

ಜಿಜ್ಞಾಸೆ ಎಂದರೆ ಜ್ಞಾನೇಚ್ಛೆ. ಜ್ಞಾನೇಚ್ಛೆ ಉಂಟಾಗುತ್ತದೆ ಎಂದರೆ ವಿಷಯ ಪ್ರಯೋಜನಗಳಿರಲೇಬೇಕು. ಇಲ್ಲದಿದ್ದರೆ ಜ್ಞಾನೇಚ್ಛೆ ಉಂಟಾಗದು ಎಂದು ಭಾಮತಿ ಹೇಳುವುದು ಅಸಂಗತ. ಪೂರ್ವಪಕ್ಷಿ ವಿಷಯ ಪ್ರಯೋಜನವಿಲ್ಲದುದರಿಂದ ಜ್ಞಾನೇಚ್ಛೆ ಇಲ್ಲ ಎನ್ನುತ್ತಿದ್ದಾನೆ. ಜ್ಞಾನೇಚ್ಛೆ ಇರುವುದರಿಂದ ವಿಷಯ ಪ್ರಯೋಜನಗಳಿವೆ ಎಂದು ಸಿದ್ಧಾಂತಿ ಹೇಳುತ್ತಿದ್ದಾನೆ. ಜ್ಞಾನೇಚ್ಛೆ ಇದ್ದರೆ ವಿಷಯಾದಿ ಇದೆ. ವಿಷಯಾದಿ ಇದ್ದರೆ ಜ್ಞಾನೇಚ್ಛೆ ಇದೆ ಎನ್ನುವುದು ಅನ್ಯೋನ್ಯಾಶ್ರಯ.

ವಿವರಣ ಮತದಲ್ಲಿಯೂ ಇಚ್ಛೆಗೆ ವಿಷಯವಾದ ಬ್ರಹ್ಮಜ್ಞಾನವೆಂಬ ಫಲ ಜಿಜ್ಞಾಸಾಶಬ್ದದಿಂದ ಸೂಚಿತವಾಗುತ್ತದೆ. ಜೊತೆಗೆ ಬ್ರಹ್ಮನು ವಿಷಯನೆಂದೂ ಸೂಚಿತವಾಗುತ್ತದೆ. ಆದರೆ ವಿವರಣಮತದಲ್ಲಿ ಜಿಜ್ಞಾಸಾಶಬ್ದ ವಿಚಾರ ಎಂಬ ಅರ್ಥದಲ್ಲಿ ಲಾಕ್ಷಣಿಕ. ಏಕೆಂದರೆ ಮುಖ್ಯಾರ್ಥವಾದ ಜ್ಞಾನೇಚ್ಛೆ ಬಾಧಿತ. ಜ್ಞಾನದಲ್ಲಿ ಇಚ್ಛೆ ಎಂಬುದೆ ಇಲ್ಲ. ಜಿಜ್ಞಾಸಾಶಬ್ದದಿಂದ ಮೊದಲಿಗೆ ಜ್ಞಾನೇಚ್ಛೆಯ ಪ್ರತೀತಿ ಬಂದರೂ ಅದನ್ನು ಬಿಟ್ಟು ಲಕ್ಷಣಯಾ ವಿಚಾರವನ್ನೇ ಗ್ರಹಿಸಬೇಕು. 'ಕೂಲಂ ಪಿಪತಿಷತಿ' ಎಂದಾಗ 'ನದಿಯ ದಡ ಬೀಳಲು ಬಯಸುತ್ತದೆ' ಎಂಬ ಅರ್ಥ ಹೊಳೆದರೂ ಅದು ಅಸಂಗತವೆಂದು ಬಿಟ್ಟು 'ಆಶಂಕಾಯಾಂ ಸನ್ ವಕ್ತವ್ಯಃ' ಎಂಬ ವಾರ್ತಿಕಾನುಸಾರ 'ದಡವು ಯಾವ ಕ್ಷಣದಲ್ಲಿಯೂ ಬೀಳಬಹುದು' ಎಂಬ ಅರ್ಥವನ್ನೇ ಗ್ರಹಿಸುತ್ತೇವೆ. ಆದರಿಂದ ದಡವು ಬೀಳುವುದು ಇಚ್ಛಾವಿಷಯ ಎಂದಾಗುವುದಿಲ್ಲ. ಹಾಗೇ ವಿಚಾರ ಎಂಬ ಅರ್ಥವನ್ನು ಜಿಜ್ಞಾಸಾಶಬ್ದದಿಂದ ಗ್ರಹಿಸುವಾಗ ಜ್ಞಾನವು ಇಚ್ಛಾವಿಷಯ ಎಂದು ಹೇಳಿದಂತಾಗುವುದಿಲ್ಲ. ಆದರಿಂದ ಫಲಸೂಚನ ವಿಷಯಸೂಚನೆಗಳಿಲ್ಲ. ಪೂರ್ವಪಕ್ಷಿ ಬ್ರಹ್ಮಜ್ಞಾನೇಚ್ಛೆಯನ್ನು ಒಪ್ಪಿಲ್ಲ ಎಂಬ ದೋಷವಿದ್ದೇ ಇದೆ.

ಜಿಜ್ಞಾಸಾಶಬ್ದದಿಂದಲೆ ವಿಷಯಸೂಚನೆಯಾದರೂ ಹೇಗೆ? 'ಜ್ಞಾನೇಚ್ಛೆಗೆ ಮೊದಲು ಸಂಶಯವಿರಬೇಕು. ಅದಕ್ಕೆ ವಿಷಯವಿರಬೇಕು. ಅದರಿಂದ ವಿಷಯಸೂಚನೆ' ಎನ್ನುವುದಾದರೆ 'ಈ ಪ್ರಥಮಸೂತ್ರವೆ ಬೇಡ. ಜನ್ಮಾದಿ ಸೂತ್ರದಿಂದಲೇ ಗ್ರಂಥ ಪ್ರಾರಂಭವಾಗಲಿ. ವಿಷಯಾದಿಗಳಿಲ್ಲದಿದ್ದರೆ ವಿವೇಕಿಗಳಾದ

ಶಾಸ್ತ್ರಕಾರರು ಶಾಸ್ತ್ರವನ್ನಾರಂಭಿಸುತ್ತಿರಲಿಲ್ಲ' ಎಂದೂ ಹೇಳಬಹುದು. ಅಥವಾ 'ಬ್ರಹ್ಮವಿಚಾರವು ಕರ್ತವ್ಯ' ಎಂದಿಷ್ಟೇ ಸೂತ್ರಕಾರರು ಹೇಳಿದರೂ ಸಾಕಾಗುತ್ತಿತ್ತು. ವಿಷಯಾದಿಗಳಿಲ್ಲದಿದ್ದರೆ ವಿಚಾರವು ಕರ್ತವ್ಯ ಎಂದು ಸೂತ್ರಕಾರರು ಹೇಳುತ್ತಿರಲಿಲ್ಲ ಎನ್ನಬಹುದು. ಹಾಗೆ 'ಈಕ್ಷತೇರ್ನಾಶಬ್ದಂ' 'ಆನಂದಮಯೋಽಭ್ಯಾಸಾತ್' ಎಂದು ಮುಂತಾಗಿ ಸೂತ್ರಗಳಲ್ಲಿ ಹೇತುವನ್ನು ಹೇಳಬೇಕಾಗಿರಲಿಲ್ಲ. ಜಗತ್ಕಾರಣ ಪ್ರಧಾನವಲ್ಲ, ಆನಂದಮಯವು ಬ್ರಹ್ಮ ಎಂದು ಸೂತ್ರಗಳು ಹೇಳಬೇಕಾದರೆ ಅದಕ್ಕೆ ಸರಿಯಾದ ಕಾರಣ ವಿವರಿಸಬೇಕು ಎನ್ನುತ್ತ ಹೇತುಸೂಚನೆಯಾಗುವುದೆಂದು ತೃಪ್ತಿಪಡಬಹುದಿತ್ತು.

• • • • •

## ಬ್ರಹ್ಮಶಬ್ದಾರ್ಥ ವಿಚಾರ

**तात्पर्यचन्द्रिका –**

**ब्रह्मशब्दश्च "अथ कस्मादुच्यते ब्रह्मेति, बृहन्तो ह्यस्मिन् गुणाः" इत्यादिश्रुतिबलात् गुणपूर्त्यर्थः । परपक्षे अखण्डस्य ब्रह्मपदलक्ष्यस्यैव जिज्ञास्यत्वात् श्रुतिसूत्रस्थब्रह्मपदस्यैव मुख्यार्थत्यागः । यच्च परैः – ब्रह्मणो जीवात् भेदे तद्रूपविकलत्वेनाल्पत्वं स्यादिति निरङ्कुशमहत्वासिद्धेः, त्रिविधपरिच्छेदाभावरूपमहत्त्वार्थेन ब्रह्मपदेनैव जीवाभेदसिद्धिरित्युक्तम् । तन्न । तेनैव घटाद्यभेदप्रसङ्गात् । जीवस्वरूपस्य तात्त्विकत्वात्, घटादेश्चातथात्वाद् वैषम्यमिति चेन्न । देशकालयोरतात्त्विकत्वेऽपि गगनादाविव घटादौ तात्त्विकस्य वा स्वतुल्यसद्रूपस्य वा देशाद्यपरिच्छेदस्याभावेन अल्पत्ववदभेदस्यापरिच्छेदरूपत्वे वस्तुनो घटादेरतात्त्विकत्वेऽपि, ब्रह्मणि तात्त्विकस्य स्वतुल्यतद्रूपस्य वा वस्त्वपरिच्छेदस्याभावेन अल्पत्वप्रसङ्गात् । नच परिच्छेदकस्य देशादेर्घटतुल्यसद्रूपत्वाद् घटादेर्देशादितोऽल्पता । ब्रह्मणि तु परिच्छेदकस्य घटादेर्वस्तुनः स्वतुल्यसद्रूपत्वाभावात् तदभेदाभावेऽपि न वस्तुतोऽल्पता । जीवस्य तु ब्रह्मतुल्यसद्रूपत्वात् तदभेदाभावे, वस्तुतोऽल्पता स्यादिति वाच्यम् । तत्वतः सद्रूपे ब्रह्मणि व्यवहारतः सद्रूपदेशादिना परिच्छेदेऽपि महत्त्वसिद्धिप्रसङ्गात् । स्वतुल्यसद्रूप घटाद्यनात्मकेऽपि गगनादौ अल्पत्वबुद्ध्यभावाच्च । अन्यथा कालापरिच्छिन्नेऽपि परमाण्वादौ देशपरिच्छेदेनाल्पत्वबुद्धिवदुभयापरिच्छिन्नेऽपि गगनादौ भेदमात्रेण परिच्छिन्नत्वबुद्धिः स्यात् ।**

**ಅನುವಾದ** - ಬ್ರಹ್ಮಶಬ್ದವು ವಿಷಯಸೂಚಕವಾಗಿದೆ. ಗುಣಪೂರ್ಣತ್ವವಾಚಕವಾಗಿರುವುದರಿಂದ. "ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ" "ಯಾವ ಕಾರಣದಿಂದ ಬ್ರಹ್ಮ ಎಂದು ಕರೆಯುತ್ತಾರೆ? ಅವನಲ್ಲಿ ಗುಣಗಳು ಪೂರ್ಣವಾಗಿರುವುದರಿಂದ" ಇವೇ ಮೊದಲಾದ ಶ್ರುತಿಗಳ ಬಲದಿಂದ ಬ್ರಹ್ಮಶಬ್ದಕ್ಕೆ ಗುಣಪೂರ್ಣ ಎಂಬರ್ಥವು ಸಿದ್ಧವಾಗುತ್ತದೆ.

ಆದರೆ ಅದ್ವೈತಿಗಳು ಹೀಗೆ ಒಪ್ಪುವುದಿಲ್ಲ. ನಿರ್ವಿಶೇಷವಾದ ಶುದ್ಧಆತ್ಮಸ್ವರೂಪವೇ ಜಿಜ್ಞಾಸ್ಯವಾದ್ದರಿಂದ ಬ್ರಹ್ಮಪದದಿಂದ ವಾಚ್ಯವೆಂದು ಹೇಳುತ್ತಾರೆ.

ಹಾಗಾದಲ್ಲಿ ಅಖಂಡನಾದ ಆತ್ಮನು ಬ್ರಹ್ಮಶಬ್ದದಿಂದ ವಾಚ್ಯನಾಗಲಾರ. ಅವನಲ್ಲಿ ಯಾವ ಧರ್ಮವೂ ಇಲ್ಲದ ಕಾರಣ ಲಕ್ಷಣಾವೃತ್ತಿಯಿಂದಲೇ ವಾಚ್ಯನೆಂದು ಹೇಳಬೇಕು. ಆವಾಗ "ತದ್‌ವಿಜಿಜ್ಞಾಸಸ್ವ ತದ್ ಬ್ರಹ್ಮ" ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದಕ್ಕೂ ಸೂತ್ರದಲ್ಲಿರುವ ಬ್ರಹ್ಮಶಬ್ದಕ್ಕೂ ಮುಖ್ಯಾರ್ಥವನ್ನೇ ಬಿಟ್ಟಂತಾಗುತ್ತದೆ. ಇಲ್ಲಿ ಅದ್ವೈತಿಗಳ ಸಮರ್ಥನೆ ಹೀಗಿದೆ -

**ಅದ್ವೈತಿಗಳು** - ಬ್ರಹ್ಮಶಬ್ದದ ಮುಖ್ಯಾರ್ಥ ನಿರ್ವಿಶೇಷನಾದ ಆತ್ಮನೇ ಆಗಿದ್ದಾನೆ. ಆದರೂ ಮುಖ್ಯಾರ್ಥವನ್ನು ಬಿಟ್ಟಂತೇನು ಆಗುವುದಿಲ್ಲ. ಒಂದು ವೇಳೆ ಗುಣಪೂರ್ಣನಾದ ಬ್ರಹ್ಮನು ಬ್ರಹ್ಮಶಬ್ದ-ದಿಂದ ವಾಚ್ಯನಾದರೆ ಜೀವನಿಗಿಂತ ಭಿನ್ನನಾಗುತ್ತಾನೆ. ಆವಾಗ ಜೀವಸ್ವರೂಪನಾಗದ ಕಾರಣ ಅಲ್ಪತ್ವವು ಬರಬೇಕಾದೀತು. ಆದರೆ ಅವನಲ್ಲಿ ನಿರಂಕುಶವಾದ ಮಹತ್ವವಿದೆ. ಅದು ಸಿದ್ಧವಾಗಬೇಕಾದರೆ ದೇಶ, ಕಾಲ, ವಸ್ತುಗಳಿಂದ ಅಪರಿಮಿತನಾಗಿದ್ದಾನೆಂದು ಅಂಗೀಕರಿಸಬೇಕು. ವಸ್ತುವಿನಿಂದ ಅಪರಿಮಿತನೆಂದರೆ ಜೀವನೆಂಬ ವಸ್ತುವಿನಿಂದ ಅಭಿನ್ನನಾಗಿದ್ದಾನೆಂದರ್ಥ. ಆದ್ದರಿಂದ ಬ್ರಹ್ಮಶಬ್ದದಿಂದಲೇ ಜೀವಬ್ರಹ್ಮೈಕ್ಯವು ಸಿದ್ಧವಾಗುತ್ತದೆ.

**ದ್ವೈತಿಗಳು** :- ಇದು ಸರಿಯಲ್ಲ. ಹಾಗೆ ಬ್ರಹ್ಮಶಬ್ದದಿಂದ ಜೀವಾಭೇದವು ಸಿದ್ಧವಾಗುವುದಾದರೆ ಘಟಪಟಾದಿಗಳ ಅಭೇದವೂ ಸಿದ್ಧವಾಗಲಿ, ಘಟಾದಿಗಳ ಅಭೇದವನ್ನು ಒಪ್ಪದಿದ್ದರೆ ಘಟಸ್ವರೂಪವು ಬ್ರಹ್ಮನಲ್ಲಿ ಬರಲಿಲ್ಲವೆಂದು ಮುಖ್ಯವಾದ ಮಹತ್ವಕ್ಕೆ ಭಂಗ ಬರುತ್ತದೆ.

**ಅದ್ವೈತಿಗಳು** - ಜೀವಸ್ವರೂಪವು ಸತ್ಯವಾಗಿದೆ. ಘಟಸ್ವರೂಪವು ಮಿಥ್ಯಾಭೂತವಾಗಿದೆ. ಬ್ರಹ್ಮನು ಸತ್ಯವಾದ್ದರಿಂದ ಜೀವರಿಂದ ಅಭಿನ್ನನಾಗುತ್ತಾನೆ ಹೊರತು ಮಿಥ್ಯಾಭೂತವಾದ ಘಟಾದಿಗಳಿಂದ ಅಭಿನ್ನನಾಗುವುದಿಲ್ಲ. ಸತ್ಯವಸ್ತುಗಳಿಂದ ಅಭೇದವು ಬರದಿದ್ದರೆ ಮಾತ್ರ ಮಹತ್ವಕ್ಕೆ ಭಂಗ ಬರುತ್ತದೆ. ಹೀಗೆ ವ್ಯತ್ಯಾಸವಿದೆ.

**ದ್ವೈತಿಗಳು** - ಈ ವ್ಯತ್ಯಾಸದಿಂದ ಏನೂ ಪ್ರಯೋಜನವಿಲ್ಲ. ವಸ್ತುಗಳು ಸತ್ಯವಾಗಿರಲಿ ಅಥವಾ ಸುಳ್ಳಾಗಿರಲಿ ಅವುಗಳಿಂದ ಅಭೇದವು ಬರಲೇಬೇಕು. ಬ್ರಹ್ಮನಲ್ಲಿ ಮಹತ್ವಬುದ್ಧಿಯು ಬರಲಾರದು. ಹೇಗೆಂದರೆ - ದೇಶ ಕಾಲಗಳಲ್ಲಿ ದೇಶಾಪರಿಚ್ಛೇದ ಕಾಲಾಪರಿಚ್ಛೇದಗಳು ಇವೆ. ಆದರೆ ಇಂತಹ ದೇಶಾಪರಿಚ್ಛೇದ ಕಾಲಾಪರಿಚ್ಛೇದಗಳು ಘಟದಲ್ಲಿ ಇಲ್ಲ. ಆದ್ದರಿಂದ ಘಟವು ಅಲ್ಪವಾಗುತ್ತದೆ. ಇಲ್ಲಿ

ದೇಶಕಾಲಗಳು ಸುಳ್ಳೇ ಆಗಿವೆ ಹೊರತು ಸತ್ಯವಾಗಿಲ್ಲ. ಆದರೂ ಸತ ಸ್ವಸತ್ತಾಸಮಾನಸತ್ತಾಕವಾದ ಅಥವಾ ಸಪ್ರಕಾರಕಜ್ಞಾನದಿಂದ ಅಬಾಧ್ಯವಾದ ದೇಶಕಾಲಾದ್ಯಪರಿಚ್ಛೇದವು ಆಕಾಶದಲ್ಲಿ ಇರುವಂತೆ ಘಟದಲ್ಲಿ ಇರುವುದಿಲ್ಲ. ಆದ್ದರಿಂದ ಘಟವು ಅಲ್ಪವೆಂದು ಪ್ರಸಿದ್ಧವಾಗಿದೆ. ಇದರಂತೆ ಬ್ರಹ್ಮನೂ ಈಗ ಅಲ್ಪನಾಗಬೇಕು. ಏಕೆಂದರೆ ವಸ್ತುವಿನ ಅಭೇದವನ್ನು ವಸ್ತ್ವಪರಿಚ್ಛೇದವೆಂದು ಹೇಳುತ್ತಿದ್ದೀರಿ. ಈ ಘಟಾದಿವಸ್ತುಗಳು ಅವಾಸ್ತವವಾದರೂ ಬ್ರಹ್ಮನಲ್ಲಿ ಘಟೈಕ್ಯವು ಸ್ವಸತ್ತಾಸಮಾನಸತ್ತಾಕವಾಗಿ ಅಥವಾ ಸಪ್ರಕಾರಜ್ಞಾನದಿಂದ ಅಬಾಧ್ಯವಾಗಿ ಇಲ್ಲವೆಂದು ಹೇಳಿದರೆ ಬ್ರಹ್ಮನೂ ಅಲ್ಪನೆಂದಾಗಬೇಕಾದೀತು.

ಅದ್ವೈತಿಗಳು :- ಘಟವು ಅಲ್ಪವಾಗುತ್ತದೆ. ಆದರೆ ಬ್ರಹ್ಮನು ಅಲ್ಪನಾಗಲಾರ. ಏಕೆಂದರೆ ಘಟವು ವ್ಯಾವಹಾರಿಕಸತ್ಯ. ಅದರಂತೆ ಪರಿಚ್ಛೇದಕಗಳಾದ ದೇಶಕಾಲಗಳೂ ವ್ಯಾವಹಾರಿಕ ಸತ್ಯ. ಘಟಸತ್ತಾಸಮಾನಸತ್ತಾಕವಾದ ದೇಶಾಪರಿಚ್ಛೇದ, ಕಾಲಾಪರಿಚ್ಛೇದಗಳು ಘಟದಲ್ಲಿ ಇಲ್ಲದ ಕಾರಣ ಘಟವು ಅಲ್ಪವಾಗುತ್ತದೆ. ಆದರೆ ಘಟವು ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವಲ್ಲ. ಆದ್ದರಿಂದ ಘಟಾಭೇದ-ವಿಲ್ಲದ ಬ್ರಹ್ಮನು ಅಲ್ಪನಾಗುವುದಿಲ್ಲ. ಆದರೆ ಜೀವನು ಬ್ರಹ್ಮನಂತೆ ಪಾರಮಾರ್ಥಿಕಸತ್ಯನಾಗಿದ್ದಾನೆ. ಆದ್ದರಿಂದ ಜೀವಾಭೇದವನ್ನು ಒಪ್ಪದಿದ್ದರೆ ಬ್ರಹ್ಮನು ಅಲ್ಪನಾಗುತ್ತಾನೆ.

ದ್ವೈತಿಗಳು :- ಪಾರಮಾರ್ಥಿಕಸತ್ಯನಾದ ಬ್ರಹ್ಮನಲ್ಲಿ ವ್ಯಾವಹಾರಿಕಸತ್ಯವಾದ ತನ್ನಂತೆ ಪಾರಮಾರ್ಥಿಕಸತ್ಯವಲ್ಲದ ದೇಶಕಾಲಗಳಿಂದ ಪರಿಮಿತಿ ಇದ್ದರೂ ಬ್ರಹ್ಮನ ಮಹತ್ವಕ್ಕೆ ಭಂಗವಿಲ್ಲ-ವೆಂದಾಗಬೇಕಾದೀತು. ಏಕೆಂದರೆ ಸತ್ಯವಲ್ಲದ ವಸ್ತ್ವಪರಿಚ್ಛೇದಕ್ಕೂ ಮಹತ್ವಕ್ಕೂ ಸಂಬಂಧವಿಲ್ಲವೆಂದು ನೀವೇ ಹೇಳಿದ್ದೀರಿ.

ಮತ್ತು ಆಕಾಶದಲ್ಲಿ ಸ್ವಸತ್ತಾಸಮಾನಸತ್ತಾಕವಾದ ಘಟಾದಿಗಳ ಭೇದವಿದ್ದರೂ ಅಲ್ಪತ್ವ ಬುದ್ಧಿಯು ಬರುತ್ತಿಲ್ಲ. ಮಹತ್ವಬುದ್ಧಿಯೇ ಬರುತ್ತಿದೆ. ಆದ್ದರಿಂದ ಸತ್ಯವಾದ ವಸ್ತುವಿನ ಪರಿಚ್ಛೇದ ಬರದಿದ್ದರೆ ಮಾತ್ರ ಮಹತ್ವ ಬರುತ್ತದೆಂಬ ನಿಯಮವೂ ತಪ್ಪು.

ಒಂದುವೇಳೆ ಸ್ವಸತ್ತಾಸಮಾನಸತ್ತಾಕವಾದ ವಸ್ತುವಿನ ಅಪರಿಚ್ಛೇದವು ಇಲ್ಲದ ಕಾರಣ ಅಲ್ಪತ್ವ ಬರಬೇಕೆಂಬ ನಿಯಮವನ್ನು ಒಪ್ಪಿದರೆ ಅತಿಪ್ರಸಂಗ ಬರುತ್ತದೆ - ಪರಮಾಣುವಿನಲ್ಲಿ ಕಾಲಾಪರಿಚ್ಛೇದ ಇಲ್ಲದಿದ್ದರೂ ದೇಶಾಪರಿಚ್ಛೇದ ಇರುವುದರಿಂದ ಅಲ್ಪವೆನಿಸುತ್ತದೆ. ಅದರಂತೆ ಆಕಾಶದಲ್ಲಿ ದೇಶಕಾಲ-ಪರಿಚ್ಛೇದವು ಇಲ್ಲದಿದ್ದರೂ ಘಟಭೇದರೂಪವಾದ ಪರಿಚ್ಛೇದವು ಇರುವುದರಿಂದ ಅಲ್ಪವೆನಿಸಬೇಕಾದೀತು.

**ಕಠಿಣಪದಾರ್ಥ**

ತೇನೈವ = ಮಹತ್ತ್ವಾರ್ಥಕ ಬ್ರಹ್ಮಶಬ್ದದಿಂದಲೇ, ತಾತ್ವಿಕಸ್ಯ = ಸಪ್ರಕಾರಕ ಜ್ಞಾನದಿಂದ ಅಬಾಧ್ಯವಾದ, ಪರಿಚ್ಛೇದಕಸ್ಯ = ಘಟಾದಿನಿಷ್ಠವಾದ ಪರಿಚ್ಛೇದಕ್ಕೆ ನಿರೂಪಕವಾದ, ಘಟಾದ್ಯನಾತ್ಮಕೇಽಪಿ = ಘಟಾದಿಗಳಿಂದ ಅಭೇದವಿಲ್ಲದಿದ್ದರೂ, ಅನ್ಯಥಾ = ಸ್ವಸತ್ತಾಸಮಾನಸತ್ತಾಕವಾದ ವಸ್ತುವಿನ ಅಪರಿಚ್ಛೇದವಿಲ್ಲದ ಕಾರಣ ಅಲ್ಪತ್ವ ಬರುವುದಾದರೆ.

*ಜಿಜ್ಞಾಸಾಧಿಕರಣ*

**प्रकाशः** – एवमोमथातश्शब्दान् सम्यग् व्याख्याय, द्वयोरपव्याख्यां च प्रत्याख्याय, क्रमप्राप्तस्य ब्रह्मशब्दस्य परोक्तमर्थं निरसितुं, भगवत्पादोक्तमर्थमाह – **ब्रह्मशब्दश्चेति** ॥ ''ब्रह्मशब्देन पूर्णगुणत्वोक्तेः'' इति न्यायविवरणोक्तेरिति भावः । यद्यपि देशकालापरिच्छेदोऽपि ब्रह्मपदार्थः । तथाऽपि तत्राविवादाद् वा, गुणपूर्त्युक्त्यैव तस्यापि गुणस्य लाभाद् वा, ''देशतः कालतश्च'' इत्युपसंहारात् उपलक्षणत्वाद् वा न दोषः ॥ **अखण्डस्येति** ॥ ''अस्ति तावद् ब्रह्म नित्यशुद्ध-बुद्धमुक्तस्वभावम्'' इत्यादिपरभाष्यादौ तथैव वर्णनादिति भावः । लक्ष्यत्वं हेतुरखण्डत्वम् । तच्च मुख्यार्थत्यागे । यद्यप्यत्र ब्रह्मशब्दस्य शिवादिपरत्वं प्रच्याव्य विष्णुपरत्वमित्यपि समर्थनीयम् । तथाऽपि भाष्यानुभाष्यादौ भगवत्पादैरेव बहुप्रमाणैः समर्थितत्वान्नेह तत्र पराक्रान्तम् । यद्वा – निरङ्कुश-गुणपूर्त्यर्थत्वोक्त्यैव भाष्याद्युदाहृत श्रुतिस्मृतिशतैरेतादृशिवादिप्रहाणेन तादृश-विष्णुपरत्वसिद्धेरेवमुक्तम् । यद्वा – गुणपूर्त्यर्थत्वोक्तिमात्रेण जीवाद् भेदसिद्ध्या विषयसिद्धेस्तदेवोक्तम् । यद्वा – लक्षणसूत्र एव तस्य व्युत्पाद्यत्वाच्च भाष्यादौ तदुक्तिः शिष्यहितायेत्याद्यूह्यम् ॥ **श्रुतीति** ॥ ''तद् विजिज्ञासस्व । तद् ब्रह्म'' इति श्रुतिस्थस्येत्यर्थः । एवं ब्रह्मपदास्वारस्यमुक्त्वा यद् ब्रह्मपदस्य देशकालवस्तुपरिच्छेदलक्षणत्रिविधपरिच्छेदाभावरूपमहत्त्वमर्थ इत्युक्तम्, तदपि नेत्याह – **यच्चेति** ॥ यद्वा – ब्रह्मशब्दमुख्यार्थत्यागः । अखण्डचैतन्यस्यैव ब्रह्मशब्दस्वरसार्थत्वादित्यतस्तदनूद्यैव निराह – **यच्चेति** ॥ **तेनैवेति** ॥ उक्त-रूपमहत्त्वार्थेन ब्रह्मपदेनैवेत्यर्थः । अन्यथा तद्रूपविकलत्वेन निरङ्कुशमहत्त्वा-सिद्धेः । नचेष्टापत्तिः । ब्रह्मणि जगद्व्यावृत्त्यभिलापादिति भावः ॥ **वैषम्यमिति** ॥ तात्त्विकेनाभेदाभाव एव महत्त्वासिद्धिरिति भावः । वैषम्यमप्रयोजकमित्याह – **देशेति** ॥ यथा गगनादावतात्त्विकदेशकालाभ्यामपरिच्छेदस्य सत्त्वेन महत्त्वं, तथा घटादौ तदपरिच्छेदस्याभावेनाल्पत्वं दृष्टं, तद्वदतात्त्विकादपि घटादेरभेदरूपस्या-परिच्छेदस्य ब्रह्मण्यभावे, निरङ्कुशमहत्वासिद्ध्याऽल्पत्वं स्यादित्यर्थः ॥ **तात्त्विक-स्येति** ॥ सप्रकारकज्ञानाबाध्यस्येत्यर्थः । यद्येवंविधमपि घटाद्यपरिच्छेदं ''सर्वं खल्विदं ब्रह्म'' इति श्रुतेर्वैयात्यात् कश्चिदङ्गीकुर्यात्, तदाह – **स्वतुल्येति** ॥

ಚಂದ್ರಿಕಾ

ननु देशादेः र्घटसमसत्ताकत्वाद् देशाद्यपरिच्छेदाभावे तस्याल्पत्वं युक्तम् । नतु ब्रह्मणि । तस्य घटादेश्च भिन्नसत्ताकत्वात्, जीवब्रह्मणोश्च समसत्ताकत्वेन महत्त्वसिद्ध्यै जीवापरिच्छेद एव वक्तव्यो नतु घटाद्यपरिच्छेद इत्याशङ्क्याह – नचेति ।। 'परिच्छेदकस्य' घटादिनिष्ठपरिच्छेदनिरूपकस्य ।। घटतुल्येति ।। द्वयोर्व्यावहारिकत्वादिति भावः । 'घटादेः' इत्यनन्तरं 'देशाद्यपरिच्छेदाभावः' इति योज्यम् ।। न वस्तुतोऽल्पतेति ।। न वस्त्वभेदाभावकृतमल्पत्वमित्यर्थः ।। ब्रह्मतुल्येति ।। द्वयोस्तात्त्विकत्वादिति भावः । वस्तुतोऽल्पतेत्युक्तार्थम् । स्वतुल्यसद्रूपनिरूपितापरिच्छेद एव महत्त्वप्रयोजको नतु भिन्नसत्ताकनिरूपितः इत्ययं कल्पो न युक्तः अन्वयव्यतिरेकव्यभिचारादिति भावेनाह – तत्त्वत इति ।। स्वभिन्नसत्ताकनिरूपितापरिच्छेदस्य महत्त्वाप्रयोजकत्वोक्तेरिति भावः । 'घटाद्यनात्मके' घटाद्यपरिच्छेदरहिते । स्वतुल्यसद्रूपवस्त्वपरिच्छेदस्य महत्त्वप्रयोजकत्वे तत्राल्पत्वबुद्धिःस्यात् नचैवमस्ति । अतस्तद्वज्जीवानात्मकेऽपि ब्रह्मणि अल्पत्वबुद्ध्यभावोपपत्तिरिति भावः ।

ननु गगनादौ देशकालापरिच्छेदमात्रेण महत्त्वबुद्धिर्युक्तेत्यतस्तुल्यं ब्रह्मण्यपीति भावेन तदुपपादयति – अन्यथेति ।। स्वतुल्यसद्रूपवस्त्वपरिच्छेदाभावेनाल्पत्व इत्यर्थः ।। भेदेति । घटादिपरिच्छेदमात्रेणेत्यर्थः ।

गुरुराजीय – ननु ब्रह्मशब्देन विषयं सूचयामासेत्ययुक्तं ब्रह्मशब्दस्य गुणपूर्त्यर्थत्वाभावेन विषयसूचनासम्भवादित्यत आह – ब्रह्मशब्दश्चेति ।। ब्रह्मशब्दोऽपि स्वमत एव स्वरसो नतु परमत इत्याह – ब्रह्मशब्दश्चेति ।। परोक्तां ब्रह्मशब्देनैव जीवाभेदसिद्धिमनूद्य दूषयति – यच्च परैरिति ।। तद्रूपविकलत्वेनेति ।। जीवापरिच्छेदविकलत्वेनेत्यर्थः ।। तेनैवेति ।। ब्रह्मणो घटादिभ्यो भेदे घटापरिच्छेदविकलत्वेनेत्यर्थः । अन्यथा निरङ्कुशमहत्त्वं न स्यादिति भावः ।। वैषम्यमिति ।। तथाच घटाभेदाभावेऽप्यल्पत्वाभावेन निरङ्कुशमहत्त्वसिद्धेर्घटाद्यभेदसाधकस्तर्कोऽन्यथासिद्धः । जीवाभेदसाधकस्त्वनन्यथासिद्धः । तात्त्विकप्रतियोगिकाभेदाभावस्यैवाल्पत्वप्रयोजकत्वादिति भावः । तात्त्विकप्रतियोगिकाभेदाभावस्याल्पत्वे प्रयोजकत्वे देशादेरतात्त्विकत्वेनातात्त्विकदेशाद्यभेदाभावस्य

गगनादौ सत्त्वेन तस्याप्यल्पत्वापत्त्या तात्त्विकप्रतियोगिकाभेदाभावस्याल्पत्वप्रयोजकत्वासम्भवेन स्वतुल्यसद्रूपस्यापरिच्छेदस्यैव महत्त्वे तदभावस्यैवाल्पत्वे प्रयोजकत्वेन वक्तव्यतया तत्रच स्वतुल्यसद्रूपस्यापरिच्छेदस्य गगनादाविव घटादावभावेन तस्याल्पत्ववत् ब्रह्मणि स्वतुल्यसद्रूपस्य घटाद्यपरिच्छेदस्याभावेऽल्पत्वापत्त्या घटाद्यभेदोऽवश्यमङ्गीकार्य एवेत्याह ॥ देशकालयोरिति ॥

ननु भवत्पक्षे घटाद्यपरिच्छेदाभावेऽपि ब्रह्मणोऽल्पत्वाभावाद् व्याप्त्यभावः अन्यथाऽनेनैव न्यायेन घटाद्यभेदापात इति शिष्यशङ्कानिरासायोक्तमभेदस्यापरिच्छेदरूपत्व इति । ब्रह्मण्यपि घटाद्यारोपस्य सत्वात्त्वात् तात्त्विकस्येत्युक्तम् । स्वमतेन परं प्रति व्याप्त्यभावशङ्कापरिहारायोक्तं स्वतुल्यसद्रूपस्येति । उभयरीत्या गगनादाविवेत्युत्तरार्थम दृष्टान्तत्वेनोक्तम् । घटाद्यभेदाभावे प्रसक्तस्याल्पत्वस्य परिहारो द्वेधा । अभेदस्यापरिच्छेदत्वे घटाद्यभेदाङ्गीकारेणाभेदस्यापरिच्छेदत्वत्यागेन वेति । घटादिभेदाङ्गीकार इव जीवभेदेऽप्यल्पत्वाप्रसक्तेर्नो जीवाभेदसिद्धिरिति विपर्यये पर्यवसानं द्रष्टव्यम् । तथाच स्वतुल्यसद्रूपस्य घटाद्यपरिच्छेदस्याभावेन तद्रूपविकलत्वस्याल्पत्वं स्यादेवेति भावः ।

ननु स्वतुल्यसद्रूपस्याऽपरिच्छेदस्याभावेनाल्पत्वहेतुः । येन घटादेः स्वतुल्यसद्रूपस्य देशाद्यपरिच्छेदस्याभावेनाल्पत्ववद् ब्रह्मणोऽपि स्वतुल्यसद्रूपस्य घटाद्यपरिच्छेदस्याभावेनाल्पत्वं स्यात् । नचैवम् । किंतु स्वतुल्यसद्रूपप्रतियोगिकपरिच्छेदाभावस्यैव तत्र प्रयोजकत्वम् । तथाच घटादौ स्वतुल्यसद्रूपदेशादिप्रतियोगिकपरिच्छेदस्य सत्त्वेन घटादेरल्पत्वेऽपि घटादेर्ब्रह्मतुल्यसद्रूपत्वाभावेन तत्कृतपरिच्छेदसत्त्वेऽपि ब्रह्मणो नाल्पत्वम् । जीवस्य तु ब्रह्मतुल्यसद्रूपत्वात् तत्कृतपरिच्छेदेऽल्पत्वं स्यादिति जीवाभेदाभावेऽल्पत्वप्राप्तावपि घटाद्यपरिच्छेदाभावेऽपि नाल्पत्वमिति भावेनाह – नचेति ॥ तथाच घटादेरल्पत्वे स्वतुल्यसद्रूपदेशाद्यपरिच्छेदाभावस्य प्रयोजकत्वात् स्वतुल्यसद्रूपस्य घटाद्यपरिच्छेदस्याभावेऽपि न ब्रह्मणोऽल्पत्वापत्तिरिति भावः । घटादेर्ब्रह्मतुल्यसद्रूपत्वाभावेन तत्कृतपरिच्छेदेऽपि तस्य स्वतुल्यसद्रूपत्वा भावमात्रेणाल्पत्वानापादकत्वे ब्रह्मणि देशादिपरिच्छेदेऽपि तस्य ब्रह्मतुल्यसद्रूपत्वाभावमात्रेणै-

वाल्पत्वाभावसम्भवेन ब्रह्मणोऽपि देशादिपरिच्छेदेऽपि स्यादित्याह – तत्वत इति ।। स्वतुल्यसद्रूपत्वरूपविशेषाभावात् विशिष्टाभाव इत्यर्थः । किंच गगनादेः स्वतुल्यसद्रूपघटादिपरिच्छेदस्यैव सत्त्वेनाल्पत्वं स्यादित्याह – स्वतुल्यसद्रूपेति ।। अनेन परिच्छेदकस्य घटादेर्वस्तुनः स्वतुल्यसद्रूपत्वेऽपि तदपरिच्छेदाभावेऽपि गगनादेरनल्पत्ववद् ब्रह्मणोऽपि जीवस्य स्वतुल्यसद्रूपत्वेऽपि तदपरिच्छेदाभावेऽप्यल्पत्वाप्रसङ्गात् जीवाभेदासिद्धिः । अन्यथा गगनादेर्घटाद्यभेदोऽप्येवं स्यादित्युक्तं भवति । अल्पत्वबुद्ध्यभावादिति ।। अन्यथाल्पत्वं स्यादित्यर्थः । तदेवोपपादयति – अन्यथेति ।। देशाद्यपरिच्छेदेऽपि स्वतुल्यसद्रूपवस्त्वपरिच्छेदाभावमात्रेण ब्रह्मणोऽल्पत्व इत्यर्थः । तस्मात् स्वतुल्यसद्रूपप्रतियोगिकापरिच्छेदाभावस्याल्पत्वप्रयोजकत्वासम्भवेन स्वतुल्यसद्रूपस्यापरिच्छेदस्याभाव एवाल्पत्वप्रयोजक इति जीवाभेदवद् घटाभेदसमयाप्त्यभावेऽल्पत्वं स्यादिति भावः ।

ವಿವರಣೆ - ಪೀಠಿಕೆ : - ಇಲ್ಲಿಯ ತನಕ 'ಓಂ' 'ಅಥ' 'ಅತಃ' ಶಬ್ದಗಳನ್ನು ಚೆನ್ನಾಗಿ ವ್ಯಾಖ್ಯಾನ ಮಾಡಿದ್ದಾಯಿತು. ಅಷ್ಟೇ ಅಲ್ಲದೇ ಅದ್ವೈತಿಗಳು ಹಾಗು ವಿಶಿಷ್ಟಾದ್ವೈತಿಗಳು ಮಾಡಿದ ಅಪವ್ಯಾಖ್ಯಾನವನ್ನು ನಿರಾಕರಿಸಿದ್ದೂ ಆಯಿತು. ('ದ್ವಯೋರಪವ್ಯಾಖ್ಯಾಂ' ಎಂಬುದಕ್ಕೆ ಎರಡರ್ಥ. ೧) ಪರರು 'ಓಂ'ಕಾರಕ್ಕೆ ವ್ಯಾಖ್ಯಾನ ಮಾಡಿಲ್ಲ. ಆದ್ದರಿಂದ ಅಥಾತಃ ಶಬ್ದಗಳಿಗೆ ಪರರು ಮಾಡಿದ ಅಪವ್ಯಾಖ್ಯಾನವನ್ನು ನಿರಾಕರಿಸಿ. ೨) ಇಬ್ಬರನ್ನು ನಿರಾಕರಿಸಿ, ಎಂದು. ೩) ಈಗ ಕ್ರಮದಿಂದ ಪ್ರಾಪ್ತವಾದದ್ದು ಬ್ರಹ್ಮಶಬ್ದಾರ್ಥವಿಚಾರ. ಅದನ್ನು ಪರರು ತಪ್ಪು ತಪ್ಪಾಗಿ ಹೇಳಿದ್ದಾರೆ. ಪರರು ಹೇಳಿದ ಬ್ರಹ್ಮಶಬ್ದಾರ್ಥವಿಚಾರವನ್ನು ಅವಶ್ಯವಾಗಿ ನಿರಾಕರಣೆ ಮಾಡಬೇಕು. ಅದರ ಅನುಕೂಲಕ್ಕಾಗಿ ಮೊದಲು ಭಗವತ್ಪಾದರು ಹೇಳಿದ ಅರ್ಥವನ್ನು ಸಮರ್ಥಿಸುತ್ತಿದ್ದಾರೆ.

ವಿಷಯಸೂಚಕವಾದ ಬ್ರಹ್ಮಶಬ್ದ - ಸೂತ್ರದಲ್ಲಿರುವ ಬ್ರಹ್ಮಶಬ್ದಕ್ಕೆ ಗುಣಪರಿಪೂರ್ಣತ್ವ ಎಂದರ್ಥ. "ಬ್ರಹ್ಮಶಬ್ದೇನ ಪೂರ್ಣಗುಣತ್ವೋಕ್ತೇಃ" "ಬ್ರಹ್ಮಶಬ್ದದಿಂದ ಗುಣಪೂರ್ಣತ್ವವನ್ನು ಹೇಳಿರುವುದರಿಂದ" ಎಂದು ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಆದ್ದರಿಂದ ಗುಣಪೂರ್ಣತ್ವವೆಂಬ ಅರ್ಥವನ್ನು ಬ್ರಹ್ಮಶಬ್ದಕ್ಕೆ ಹೇಳಬೇಕು. ಆವಾಗ ಮಾತ್ರ ಬ್ರಹ್ಮಶಬ್ದವು ವಿಷಯಸೂಚಕವಾಗಲು ಸಾಧ್ಯ. ಯಾವ ವಾದಿಗಳು ಈ ಅರ್ಥವನ್ನು ಒಪ್ಪುವುದಿಲ್ಲವೋ, ಅಂತಹವರಿಗೆ ಇದು ಸಮ್ಮತವಾಗುವುದಿಲ್ಲ.

ಪ್ರಶ್ನೆ :- 'ಸರ್ವದೇಶಕಾಲಗಳಲ್ಲಿರುವವನು' ಎಂಬ ದೇಶಾಪರಿಚ್ಛೇದ ಹಾಗು ಕಾಲಾಪರಿಚ್ಛೇದಗಳೂ ಬ್ರಹ್ಮಪದದ ಅರ್ಥಗಳೇ ಆಗಿವೆ. ಇದನ್ನು ಬಿಟ್ಟು ಕೇವಲ ಗುಣತಃ ಅಪರಿಚ್ಛಿನ್ನನಾಗಿದ್ದಾನೆಂದು ಹೇಳುವುದು ಹೇಗೆ ಸರಿ?

ಉತ್ತರ :- ಬ್ರಹ್ಮನು ಸಕಲದೇಶಕಾಲಗಳಲ್ಲಿದ್ದಾನೆಂಬ ವಿಷಯದಲ್ಲಿ ನಮಗೂ ಪರರಿಗೂ ವಿವಾದ-ವಿಲ್ಲ. ಆದ್ದರಿಂದ ಅದನ್ನು ಹೇಳಿಲ್ಲ. ಅಥವಾ ಸಕಲದೇಶಕಾಲಗಳಲ್ಲಿ ಇರುವಿಕೆಯೂ ಒಂದು ಗುಣವೇ ಆಗಿವೆ. ಗುಣಪೂರ್ಣತ್ವದಿಂದಲೇ ಇದೂ ಲಾಭವಾಗುತ್ತದೆಂಬ ಅಭಿಪ್ರಾಯದಿಂದ ಪ್ರತ್ಯೇಕ ಹೇಳಿಲ್ಲ.

ಅಥವಾ, 'ಗುಣಪರಿಪೂರ್ಣತ್ವವು ಬ್ರಹ್ಮಶಬ್ದದ ಅರ್ಥ' ಎಂಬ ಮಾತಿನಿಂದ ಉಪಲಕ್ಷಣವಾಗಿ ಸಕಲದೇಶಕಾಲಗಳಲ್ಲಿರುವಿಕೆಯನ್ನು ವಿವಕ್ಷಿಸಬೇಕು. ಆದ್ದರಿಂದ ಗುಣಪೂರ್ಣತ್ವದಂತೆ ಸಕಲದೇಶದಲ್ಲಿ-ರುವಿಕೆಯು ಸಕಲಕಾಲದಲ್ಲಿರುವಿಕೆಯೂ ಬ್ರಹ್ಮಶಬ್ದದ ಅರ್ಥಗಳೇ ಆಗಿವೆಯೆಂದು ತಿಳಿಯುತ್ತದೆ. ಬ್ರಹ್ಮಶಬ್ದಾರ್ಥವಿಚಾರದ ಕೊನೆಯಲ್ಲಿ "ದೇಶತಃ ಕಾಲತಶ್ಚೈವ" ಎಂದು ಹೇಳಿದ್ದಾರೆ. ಇದರಿಂದ ಇವು ಉಪಲಕ್ಷಣವಾಗಿ ಸ್ವೀಕಾರಾರ್ಹಗಳೆಂದು ತಿಳಿಯುತ್ತದೆ.

ಅದ್ವೈತಿಗಳ ಬ್ರಹ್ಮಶಬ್ದಾರ್ಥ - ಅದ್ವೈತಿಗಳು ಗುಣಪೂರ್ಣತ್ವವೆಂಬ ಅರ್ಥವನ್ನು ಬ್ರಹ್ಮಶಬ್ದಕ್ಕೆ ಒಪ್ಪಲಾರರು. ಶಂಕರಭಾಷ್ಯ ಹೀಗಿದೆ - "ನಿತ್ಯಶುದ್ಧಬುದ್ಧಮುಕ್ತಸ್ವಭಾವಮ್" "ನಿತ್ಯ, ಶುದ್ಧ, ಬುದ್ಧ, ಮುಕ್ತಸ್ವಭಾವದ ಬ್ರಹ್ಮನಿದ್ದಾನೆ" ಎಂದು ಹೀಗೆ ಬ್ರಹ್ಮಪದಕ್ಕೆ ಲಕ್ಷಣಾ ಮಾಡಿರುವುದರಿಂದ ಮುಖ್ಯಾರ್ಥ-ವನ್ನು ಬಿಡಬೇಕು. ಲಕ್ಷಣಾವನ್ನು ಏಕೆ ಮಾಡಬೇಕು? ಎಂದರೆ ನಿರ್ವಿಶೇಷನಾದ್ದರಿಂದ ಲಕ್ಷಣಾ ಮಾಡಬೇಕು. ಮುಖ್ಯಾರ್ಥತ್ಯಾಗಕ್ಕೆ ಲಕ್ಷಣಾವು ಕಾರಣ. 'ಲಕ್ಷಣಾಸ್ವೀಕಾರಕ್ಕೆ ಅಖಂಡತ್ವಕಾರಣವೆಂದು ತಿಳಿಯಬೇಕು.

ಪ್ರಶ್ನೆ :- ಬ್ರಹ್ಮಶಬ್ದಾರ್ಥವಿಚಾರವನ್ನು ವಿವರವಾಗಿ ನಡೆಸಿದ ಗ್ರಂಥಕಾರರು ಶಿವಾದಿಪರತ್ವವನ್ನು ಬ್ರಹ್ಮಶಬ್ದಕ್ಕೆ ನಿರಾಕರಿಸಬೇಕು. ಬ್ರಹ್ಮಶಬ್ದವು ಶಿವಪರವಾಗಿದೆಯೆಂಬ ಶೈವರ ಪ್ರಬಲ ಆಕ್ಷೇಪಗಳಿವೆ. ಅವುಗಳನ್ನು ನಿರಾಕರಿಸಿ ವಿಷ್ಣುಪರತ್ವವನ್ನು ಸಮರ್ಥಿಸುವುದು ಅತ್ಯಂತ ಆವಶ್ಯಕ. ಹೀಗಿರುವಾಗ ಅದನ್ನೇಕೆ ಇಲ್ಲಿ ಮಾಡಿಲ್ಲ?

ಉತ್ತರ :- ಹೌದು. ಆದರೆ ಶ್ರೀಮದಾಚಾರ್ಯರೆ ಶಿವಪರತ್ವದ ನಿರಾಕರಣೆ ಮಾಡಿದ್ದಾರೆ. ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳಲ್ಲಿ ಅನೇಕ ಪ್ರಮಾಣಗಳನ್ನು ಉದಾಹರಿಸಿ ಬ್ರಹ್ಮಶಬ್ದವು ಶಿವಪರವಾಗದು, ವಿಷ್ಣುಪರವೇ ಆಗುತ್ತದೆಂದು ಸಮರ್ಥಿಸಿದ್ದಾರೆ. ಅಲ್ಲೇ ಸ್ಪಷ್ಟವಾಗಿದೆಯೆಂದು ಇಲ್ಲಿ ಅದನ್ನು ಹೇಳಿಲ್ಲ.

ಅಥವಾ ಇಲ್ಲಿಯೂ ಗ್ರಂಥಕಾರರು ಹೇಳಿದ್ದಾರೆಂದು ತಿಳಿಯಬಹುದು - ಬ್ರಹ್ಮಶಬ್ದವು ಪ್ರಧಾನವಾಗಿ ಗುಣಪೂರ್ಣತ್ವವನ್ನೇ ಹೇಳುತ್ತದೆಂದು ಇಲ್ಲಿ ಸಮರ್ಥಿಸಲಾಗಿದೆ. ಭಾಷ್ಯದಲ್ಲಿ ಉದಾಹರಿಸಿದ ನೂರಾರು ಶ್ರುತಿಸ್ಮೃತಿಗಳ ಆಧಾರದಿಂದ ಬ್ರಹ್ಮಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಹೊರತು ಶಿವನಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಪುನಃ ಪ್ರತ್ಯೇಕವಾಗಿ ಶಿವಪರತ್ವವನ್ನು ನಿರಾಕರಣೆ ಮಾಡಿಲ್ಲ.

ಅಥವಾ, ಶಿವಪರತ್ವದ ನಿರಾಕರಣೆಯು ಪ್ರಕೃತ ಬೇಕಾಗಿಲ್ಲವೆಂದು ಗ್ರಂಥಕಾರರು ಅದನ್ನು ಬಿಟ್ಟಿದ್ದಾರೆ. ಏಕೆಂದರೆ - ಬ್ರಹ್ಮಶಬ್ದವು ವಿಷಯಸೂಚಕವಾಗಿದೆಯೆಂದು ಸಮರ್ಥಿಸಬೇಕಾಗಿದೆ. ಅದಕ್ಕೋಸ್ಕರ

ಬ್ರಹ್ಮಶಬ್ದವು ಗುಣಪೂರ್ಣತ್ವವಾಚಕವಾಗಿದೆಯೆಂದು ಸಾಧಿಸಿದರೆ ಸಾಕು. ಜೀವನಿಗಿಂತ ಬ್ರಹ್ಮನು ಭಿನ್ನನೆಂದು ಸಿದ್ಧನಾಗುತ್ತಾನೆ. ಅಂತಹ ಬ್ರಹ್ಮನು ವಿಚಾರಕ್ಕೆ ವಿಷಯನಾಗುತ್ತಾನೆ.

ಅಥವಾ, ಮುಂದಿನ ಸೂತ್ರದಲ್ಲಿ ಹೇಳುವುದರಿಂದ ಪ್ರಕೃತ ಬೇಕಾಗಿಲ್ಲವೆಂದು ಬಿಟ್ಟಿದ್ದಾರೆ. 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಬ್ರಹ್ಮಶಬ್ದವು ಕೇವಲ ವಿಷ್ಣುಪರವೆಂದು ಸಮರ್ಥಿಸಲಾಗಿದೆ. ಅಲ್ಲಿ ಅದರ ಸಮರ್ಥನೆಯು ಅನಿವಾರ್ಯವಾಗಿದೆ. ಆದ್ದರಿಂದ ಇಲ್ಲಿ ಗ್ರಂಥಕಾರರು ಶಿವಪರತ್ವನಿರಾಕರಣೆಯನ್ನು ಮಾಡಿಲ್ಲ. ಹಾಗಾದರೆ ಭಾಷ್ಯಾದಿಗಳಲ್ಲಿ ಏಕೆ ಮಾಡಿದ್ದಾರೆಂದರೆ ಶಿಷ್ಯರ ಹಿತದೃಷ್ಟಿಯಿಂದ ಶಿಷ್ಯರಿಗೆ ಬರಬಹುದಾದ ಶಂಕೆಯನ್ನು ಪರಿಹರಿಸಿ ಮನಃಸಮಾಧಾನ ಮಾಡಿದ್ದಾರೆ.

ಹೀಗೆ ಇನ್ನೂ ಅನೇಕ ಕಾರಣಗಳನ್ನು ಊಹಿಸಿಬೇಕು. ಗ್ರಂಥದಲ್ಲಿರುವ 'ಯಚ್ಚ' ಇತ್ಯಾದಿ ವಾಕ್ಯಕ್ಕೆ ಎರಡು ಬಗೆಯಲ್ಲಿ ಅವತಾರಿಕೆ ಹೇಳಬೇಕು.

೧) ಮುಖ್ಯಾರ್ಥತ್ಯಾಗವನ್ನು ಮಾಡಿದ್ದರಿಂದ ಬ್ರಹ್ಮಪದವು ಅಸ್ವರಸವಾಯಿತೆಂದು ಇದುವರೆಗೂ ಹೇಳಿದ್ದಾಯಿತು. ಈಗ ಅವರು ಹೇಳಿದ ಮಹತ್ವ ಎಂಬರ್ಥವನ್ನು ನಿರಾಕರಿಸುತ್ತಿದ್ದಾರೆ. ಮಹತ್ವ ಎಂದರೆ ದೇಶತಃ ಕಾಲತಃ ವಸ್ತುತಃ ಪರಿಚ್ಛೇದವಿಲ್ಲದಿರುವಿಕೆ ಎಂದು ಇದನ್ನು 'ಯಚ್ಚ' ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

೨) ಅಥವಾ, ಬ್ರಹ್ಮಪದಕ್ಕೆ ಮುಖ್ಯಾರ್ಥತ್ಯಾಗವೆಂಬ ಅಸ್ವಾರಸ್ಯ ಬರುವುದಿಲ್ಲ. ಏಕೆಂದರೆ ಬ್ರಹ್ಮಪದಕ್ಕೆ ಅಖಂಡಚೈತನ್ಯಪರತ್ವವನ್ನು ಹೇಳುತ್ತೇವೆ. ಇದು ಬ್ರಹ್ಮಪದದಿಂದ ತಿಳಿಯುವ ಸ್ವರಸವಾದ ಅರ್ಥ. ಇದನ್ನು ಸ್ವೀಕರಿಸಿದಾಗ ಯಾವ ದೋಷವೂ ಇಲ್ಲವೆಂಬುದನ್ನು 'ಯಚ್ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಬ್ರಹ್ಮಶಬ್ದದಿಂದ ಗುಣಪೂರ್ಣತ್ವವು ತಿಳಿಯುವುದರಿಂದ ಜೀವಭೇದವು ಸಿದ್ಧವಾಗುತ್ತದೆಂದು ನಮ್ಮ ವ್ಯಾಖ್ಯಾನ. ಇದಕ್ಕೆ ತೀರ ವಿರುದ್ಧವಾಗಿ ಅದ್ವೈತಿಗಳು ವ್ಯಾಖ್ಯಾನಿಸುತ್ತಾರೆ. ಬ್ರಹ್ಮಪದದಿಂದ ಜೀವಾಭೇದವು ಸಿದ್ಧವಾಗುತ್ತದೆ. ಏಕೆಂದರೆ 'ಬೃಹಿ ವೃದ್ಧೌ' ಎಂಬ ಧಾತುವಿನ ಬಲದಿಂದ ಮಹತ್ವವನ್ನು ಹೇಳುತ್ತದೆ. ಮಹತ್ವವೆಂದರೆ ಅಪರಿಚ್ಛೇದ ಎಂದರ್ಥ. ಅಪರಿಚ್ಛೇದವು ಮೂರುವಿಧ, ದೇಶದಿಂದ, ಕಾಲದಿಂದ, ವಸ್ತುವಿನಿಂದ ಎಂದು ಅಪರಿಚ್ಛೇದ ಹೇಳುತ್ತೇವೆ. ಆದರೆ ಅದ್ವೈತಿಗಳು ವಸ್ತುವಿನಿಂದ ಅಪರಿಚ್ಛೇದವೆಂದು ಹೇಳುತ್ತಾರೆ. ಅಂದರೆ ಬ್ರಹ್ಮನು ಸಕಲವಸ್ತು ಸ್ವರೂಪನಾಗಿದ್ದಾನೆಂದರ್ಥ. ಒಂದು ವೇಳೆ ಬ್ರಹ್ಮನು ಜೀವನಿಗಿಂತ ಭಿನ್ನನಾದರೆ ಜೀವ ಎಂಬ ವಸ್ತುಸ್ವರೂಪದಿಂದ ವಿಕಲನಾಗುತ್ತಾನೆ. ಆವಾಗ ಸಕಲವಸ್ತುಗಳಿಂದ ಅಪರಿಚ್ಛೇದವನ್ನು ಹೇಳಿದಂತಾಗುವುದಿಲ್ಲ. ನಿರಂಕುಶಮಹತ್ವವು ಅಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮನಿಗೆ ಜೀವಾಭೇದವನ್ನು ಒಪ್ಪಲೇಬೇಕು. ಇದನ್ನು ಬ್ರಹ್ಮಶಬ್ದವೇ ಹೇಳುತ್ತದೆಂದು.

ಇದು ತಪ್ಪು. ಹಾಗಾದರೆ ಇದೇ ನ್ಯಾಯದಿಂದ ಬ್ರಹ್ಮನು ಘಟಾದಿಗಳಿಗಿಂತಲೂ ಅಭಿನ್ನನಾಗ-ಬೇಕಾದೀತು. ಒಂದುವೇಳೆ ಘಟಪಟಾದಿರೂಪತ್ವವನ್ನು ಬ್ರಹ್ಮನಿಗೆ ಹೇಳದಿದ್ದರೆ ನಿರಂಕುಶಮಹತ್ವವು

ಸಿದ್ಧವಾಗದಿರಬೇಕಾದೀತು. ಬ್ರಹ್ಮನಿಗೆ ಜಡಾಭೇದವೂ ಇಷ್ಟವೇ ಆಗಿದೆಯೆಂದು ನಿಮಗೆ ಹೇಳಲಾಗದು. ಮಿಥ್ಯಾಭೂತವಾದ ಜಗತ್ತಿಗಿಂತ ಬ್ರಹ್ಮನು ಭಿನ್ನನೇ ಆಗಿದ್ದಾನೆಂಬ ನಿಮ್ಮ ಮಾತಿಗೆ ವಿರೋಧ ಬರುತ್ತದೆ.

**ಶಂಕೆ** :- ಬ್ರಹ್ಮಶಬ್ದದಿಂದ ಜೀವಾಭೇದ ಸಿದ್ಧವಾಗುತ್ತದೆ. ಹೊರತು ಘಟಾದ್ಯಭೇದವು ಸಿದ್ಧವಾಗುವುದಿಲ್ಲ. ಏಕೆಂದರೆ ದೇಹ ಅಂತಃಕರಣಾದಿಗಳಿಂದ ಮಿಶ್ರವಾಗದ ಶುದ್ಧವಾದ ಜೀವಸ್ವರೂಪವು ತಾತ್ವಿಕವಾಗಿದೆ. ಆದರೆ ಘಟಾದಿಗಳ ಸ್ವರೂಪವೇ ಅತಾತ್ವಿಕವಾಗಿದೆ. ಹೀಗೆ ವ್ಯತ್ಯಾಸವಿರುತ್ತದೆ. ಬ್ರಹ್ಮನು ಸಕಲವಸ್ತುಸ್ವರೂಪ ಎಂದು ಹೇಳಿದಾಗ ತಾತ್ವಿಕವಾದ ಜೀವಾಭೇದವೇ ಬರುತ್ತದೆ ಹೊರತು ಘಟಾದ್ಯಭೇದವು ಬರುವುದಿಲ್ಲ. ತಾತ್ವಿಕವಾದ ಜೀವಾಭೇದವು ಬ್ರಹ್ಮನಿಗೆ ಬಾರದಿದ್ದಲ್ಲಿ ಮಾತ್ರ ನಿರಂಕುಶವಾದ ಮಹತ್ವವು ಬ್ರಹ್ಮನಲ್ಲಿ ಸಿದ್ಧಿಸುತ್ತಿರಲಿಲ್ಲ.

**ಸಮಾಧಾನ** :- ಘಟಾದಿಗಳೆಲ್ಲವೂ ಅತಾತ್ವಿಕವೆಂದೇ ಆಗಲಿ, ಆದರೂ ಬ್ರಹ್ಮನು ಘಟಾದ್ಯಾತ್ಮಕ-ವಾಗಲೇಬೇಕು. ಇಲ್ಲವಾದಲ್ಲಿ ವಸ್ತುಪರಿಚ್ಛೇದವು ಸಿದ್ಧವಾಗದೇ ಅಲ್ಪತ್ವವೇ ಬರಬೇಕಾದೀತು. ಉದಾಹರಣೆ - ಗಗನದಲ್ಲಿ ದೇಶಾಪರಿಚ್ಛೇದ ಹಾಗು ಕಾಲಾಪರಿಚ್ಛೇದವು ಪ್ರಸಿದ್ಧವಾಗಿದೆ. ಘಟವು ಹೇಗೆ ಅತಾತ್ವಿಕವೋ, ಅದರಂತೆ ದೇಶ ಮತ್ತು ಕಾಲಗಳೂ ಅತಾತ್ವಿಕಗಳೇ ಆಗಿವೆ. ಆದರೂ ದೇಶಾದ್ಯ-ಪರಿಚ್ಛೇದವು ಗಗನದಲ್ಲಿ ಇದ್ದೇ ಇದೆ. ಆದರೆ ಘಟಾದಿಗಳಲ್ಲಿ ದೇಶಾಪರಿಚ್ಛೇದವೂ ಇಲ್ಲ, ಕಾಲಾಪರಿಚ್ಛೇದವೂ ಇಲ್ಲ. ದೇಶ ಕಾಲ ಎರಡೂ ಮಿಥ್ಯಾಭೂತವಾಗಿದ್ದರೂ ಗಗನಾದಿಗಳಲ್ಲಿ ಇದೆ ಘಟಾದಿಗಳಲ್ಲಿ ಇಲ್ಲವೆಂಬ ವ್ಯವಸ್ಥೆಯನ್ನು ಅಂಗೀಕರಿಸಲಾಗಿದೆ. ಗಗನದಲ್ಲಿ ಸ್ವಸತ್ತಾಸಮಾನಸತ್ತಾಕವಾದ ದೇಶಕಾಲಾದ್ಯಪರಿಚ್ಛೇದವೂ ಇಲ್ಲ. ಘಟದಲ್ಲಿ ತಾತ್ವಿಕವಾದ ದೇಶಕಾಲಾದ್ಯಪರಿಚ್ಛೇದವೂ ಇಲ್ಲ. ಹೀಗೆ ಗಗನಕ್ಕೂ ಘಟಾದಿಗಳಿಗೂ ವೈಷಮ್ಯವಿದೆ. ಆದ್ದರಿಂದ ಘಟ ಪಟಾದಿಗಳು ಅಲ್ಪ. ಗಗನಾದಿಗಳೂ ಮಹತ್ ಎಂದು ಸಿದ್ಧವಾಗುತ್ತದೆ.

ಇದರಂತೆ ಘಟಾದಿಗಳು ಅತಾತ್ವಿಕವಾಗಿದ್ದರೂ ಅವುಗಳ ಅಭೇದವು ಬ್ರಹ್ಮನಲ್ಲಿ ಇರಲೇಬೇಕು. ಬ್ರಹ್ಮಸತ್ತಾಸಮಾನಸತ್ತಾಗಿ ವಸ್ತ್ವಪರಿಚ್ಛೇದವು ಬ್ರಹ್ಮನಲ್ಲಿ ಇರಬೇಕು. ಆವಾಗ ಮಾತ್ರ ಮಹತ್ವವು ಬರುತ್ತದೆ. ಒಂದು ವೇಳೆ ಬ್ರಹ್ಮಸತ್ತಾಸಮಾನಸತ್ತಾಕವಾದ ವಸ್ತ್ವಪರಿಚ್ಛೇದವನ್ನು ಒಪ್ಪದಿದ್ದರೆ ನಿರಂಕುಶಮಹತ್ವವು ಬ್ರಹ್ಮನಲ್ಲಿ ಬರುವುದಿಲ್ಲ. ಘಟದಲ್ಲಿ ಅಲ್ಪತ್ವ ಬಂದಂತೆ ಬ್ರಹ್ಮನಲ್ಲಿಯೂ ಅಲ್ಪತ್ವ ಬರಬೇಕಾದೀತು.

ವ್ಯಾವಹಾರಿಕವಾದ ಘಟಾದ್ಯಪರಿಚ್ಛೇದವನ್ನೇ ಬ್ರಹ್ಮನಲ್ಲಿ ಒಪ್ಪುತ್ತೇವೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯೇ ಈ ವಿಷಯದಲ್ಲಿ ಪ್ರಮಾಣವಾಗಿದೆ ಎಂದು ಧಾರ್ಷ್ಟ್ಯದಿಂದ ಆಕ್ಷೇಪಿಸಿದರೆ 'ಸ್ವತುಲ್ಯಸದ್ರೂಪಸ್ಯ' ಎಂದು ಉತ್ತರಿಸುತ್ತಿದ್ದಾರೆ.

ಗ್ರಂಥದಲ್ಲಿರುವ 'ತಾತ್ವಿಕಸ್ಯ' ಎಂಬ ಪದಕ್ಕೆ 'ವ್ಯಾವಹಾರಿಕಸ್ಯ' ಎಂದರ್ಥ. ವ್ಯಾವಹಾರಿಕವಾದ ಘಟಾದ್ಯಭೇದವು ಬ್ರಹ್ಮನಲ್ಲಿಲ್ಲವೆಂದು ನಾವು ಹೇಳಿದಾಗ ಅದ್ವೈತಿಯು 'ನಾನು ಅಂತಹ ಅಭೇದವನ್ನು

ಒಪ್ಪುತ್ತೇನೆ' ಎಂದರೆ ಅದಕ್ಕೋಸ್ಕರ ಗ್ರಂಥಕಾರರು 'ಸ್ವತುಲ್ಯಸದ್ರೂಪಸ್ಯ' ಎಂದು ಹೇಳಿದರು. ವ್ಯಾವಹಾರಿಕವಾಗಿ ಅಭೇದವಿದ್ದರೂ ಪ್ರಯೋಜನವಿಲ್ಲ. ಸ್ವಸತ್ತಾಸಮಾನಸತ್ತಾಕವಾಗಿ = ಪಾರಮಾರ್ಥಿಕವಾಗಿ, ಅಭೇದವಿರಬೇಕು. ಆವಾಗ ಮಾತ್ರ ಬ್ರಹ್ಮನಲ್ಲಿ ಅಲ್ಪತ್ವ ಬರುವುದಿಲ್ಲ. ತುಲ್ಯಸತ್ತಾಕವಾಗಿ ವಸ್ತ್ವಪರಿಚ್ಛೇದವು ಇಲ್ಲದಿದ್ದರೆ ಅಲ್ಪತ್ವವೇ ಬರುತ್ತದೆ. ಇಲ್ಲಿ ಒಂದು ವ್ಯಾಪ್ತಿಯನ್ನು ಹೇಳಿದಂತಾಯಿತು - "ಯತ್ರ ಸ್ವಸತ್ತಾಸಮಾನಸತ್ತಾಕ ಅಪರಿಚ್ಛೇದಾಭಾವಃ ತತ್ರ ಅಲ್ಪತ್ವಂ" ಎಂದು.

ಘಟಾದಿಗಳಲ್ಲಿ ಸ್ವಸತ್ತಾಸಮಾನಸತ್ತಾಕವಾದ ಅಪರಿಚ್ಛೇದವು ಇಲ್ಲ. ಅಲ್ಲಿ ಅಲ್ಪತ್ವವೇ ಕಂಡಿದೆ. ಹಾಗೆಯೇ ಬ್ರಹ್ಮನಲ್ಲಿಯೂ ಸ್ವಸತ್ತಾಸಮಾನಸತ್ತಾಕವಾದ ವಸ್ತ್ವಪರಿಚ್ಛೇದವು ಇಲ್ಲವೆಂದು ಹೇಳಿದರೆ ಆವಾಗ ಅಲ್ಪತ್ವವೂ ಬರಬೇಕಾದೀತು. ಅನುಮಾನವನ್ನು ಹೀಗೆ ಹೇಳಬೇಕು. - ಬ್ರಹ್ಮ, ಅಲ್ಪಂ ಭವಿತುಮರ್ಹತಿ, ಸ್ವಸತ್ತಾಸಮಾನಸತ್ತಾಕ ಅಪರಿಚ್ಛೇದಶೂನ್ಯತ್ವಾತ್, ಘಟವತ್, ಎಂದು.

ಆಕ್ಷೇಪ :- ಒಂದು ಪದಾರ್ಥವು ಅಲ್ಪವೋ? ಅಲ್ಲವೋ? ಎಂಬ ವ್ಯವಸ್ಥೆಯ ಬಗೆಯನ್ನು ಹೀಗೆ ಹೇಳಿದಿರಿ - ಅಪರಿಚ್ಛೇದವು ಸಮಾನಸತ್ತಾಕವಾಗಿ ಇರಬೇಕು. ಆವಾಗ ಅಲ್ಪವಾಗಲ್ಲ. ಅಪರಿಚ್ಛೇದವು ಸಮಾನಸತ್ತಾಕವಾಗಿ ಇಲ್ಲದಿದ್ದರೆ ಅಲ್ಪವಾಗುತ್ತದೆ ಎಂದು.

ಆದರೆ ನಾವು ಹೀಗೆ ಹೇಳುತ್ತೇವೆ - ಅಪರಿಚ್ಛೇದವು ಯಾವ ಸತ್ತಾದಲ್ಲಿದೆಯೆಂಬುದು ಮುಖ್ಯವಲ್ಲ. ಯಾವುದರ ಅಪರಿಚ್ಛೇದವನ್ನು ಹೇಳುತ್ತೇವೋ, ಅದು ಪರಿಚ್ಛೇದಕ. ಆ ಪರಿಚ್ಛೇದಕವು ಯಾವ ಸತ್ತಾದಲ್ಲಿದೆಯೆಂಬುದು ಮುಖ್ಯ. ಘಟವು ಏಕೆ ಅಲ್ಪವೆಂದರೆ ಪರಿಚ್ಛೇದಕವಾದ ದೇಶಕಾಲಗಳು ಘಟದಲ್ಲಿ ತುಲ್ಯಸತ್ತಾಕವಾಗಿ ಇದೆ. ಅಂತಹ ಸ್ವಸತ್ತಾಸಮಾನಸತ್ತಾಕವಾದ ಪರಿಚ್ಛೇದಕಗಳಾದ ದೇಶಕಾಲಗಳಿಂದ ಅಪರಿಚ್ಛೇದವು ಘಟದಲ್ಲಿ ಇಲ್ಲ. ಆದ್ದರಿಂದ ಘಟವು ದೇಶದಿಂದ ಹಾಗು ಕಾಲದಿಂದ ಅಲ್ಪವೆನಿಸುತ್ತದೆ. ಆದರೆ ಬ್ರಹ್ಮನಿಗೆ ಪರಿಚ್ಛೇದಕವಾದ ವಸ್ತು ಎಂದರೆ ಜೀವ ಮತ್ತು ಜಡ. ಜಡವಾದ ವಸ್ತುವು ಸ್ವತುಲ್ಯಸತ್ತಾಕವಾಗಿ ಇಲ್ಲ. ಆ ಜಡದ ಅಭೇದ ಇಲ್ಲದಿದ್ದರೆ ಬ್ರಹ್ಮನಿಗೆ ಅಲ್ಪತ್ವ ಬರುವುದಿಲ್ಲ. ಕಿಂತು ಜೀವರೂಪವಾದ ವಸ್ತುವು ಸ್ವತುಲ್ಯಸತ್ತಾಕನಾಗಿದ್ದಾನೆ. ಅಂತಹ ಜೀವನ ಅಭೇದವು ಇಲ್ಲವೆಂದರೆ ಬ್ರಹ್ಮನಲ್ಲಿ ಅಲ್ಪತ್ವ ಬಂದೇ ಬರುತ್ತದೆ. ಅದಕ್ಕಾಗಿ ಜೀವನ ಜೊತೆಗೆ ಅಭೇದವನ್ನು ಒಪ್ಪಬೇಕು. ಘಟಾದಿಗಳ ಜೊತೆಗೆ ಅಭೇದವನ್ನು ಒಪ್ಪಬೇಕಾಗಿಲ್ಲ.

ಮುಖ್ಯಾಂಶವಿಷ್ಟು - ಪರಿಚ್ಛೇದಕವಾದ ಪದಾರ್ಥವು ಸ್ವತುಲ್ಯಸತ್ತಾಕವಾಗಿ ಇದ್ದು, ಅದರ ಅಪರಿಚ್ಛೇದವು ಬ್ರಹ್ಮನಲ್ಲಿ ಇದ್ದರೆ ಅಲ್ಪವಲ್ಲ. ಇಲ್ಲದಿದ್ದರೆ ಅಲ್ಪ ಎಂದು.

ಸಮಾಧಾನ :- ಪರಿಚ್ಛೇದಕವಾದ ವಸ್ತುವನ್ನೇ ಅವಲಂಬಿಸಬೇಕೆಂದು ನೀವು ಆಕ್ಷೇಪಿಸಿದಿರಿ. ಪರಿಚ್ಛೇದಕವಾದ ವಸ್ತುವು ಸ್ವತುಲ್ಯಸತ್ತಾಕವಾಗಿ ಇರಬೇಕು. ಆವಾಗ ಮಾತ್ರ ತದಪರಿಚ್ಛೇದವೆಂಬುದನ್ನು ಹೇಳಬೇಕು. ಅದು ವಿಷಮಸತ್ತಾಕವಾಗಿ ಬಿಟ್ಟರೆ ಅದರ ಅಪರಿಚ್ಛೇದವಿಲ್ಲದಿದ್ದರೂ ಅಲ್ಪತ್ವ ಬರುವುದಿಲ್ಲವೆಂದು ನೀವು ಹೇಳಿದಿರಿ. ಆವಾಗ ದೇಶಕಾಲದಲ್ಲಿ ಇದೇ ಆಪತ್ತಿ ಬರುತ್ತದೆ. ಬ್ರಹ್ಮನು ಪಾರಮಾರ್ಥಿಕ,

ಅವನಲ್ಲಿ ದೇಶಕಾಲಗಳು ವ್ಯವಹಾರತಃ ಸದ್ರೂಪಗಳು. ಪಾರಮಾರ್ಥಿಕನಾದ ಬ್ರಹ್ಮನಲ್ಲಿ ವ್ಯಾವಹಾರಿಕವಾದ ದೇಶಕಾಲಗಳ ಪರಿಚ್ಛೇದವೇ ಇದ್ದರೂ ಕೂಡ ಬ್ರಹ್ಮನಲ್ಲಿ ಮಹತ್ವವು ಸಿದ್ಧವಾಗಬೇಕಾದೀತು. ಹೀಗೆ ನಿಮ್ಮ ವ್ಯಾಪ್ತಿಗೆ ಅನ್ವಯವ್ಯಭಿಚಾರ ಬರುತ್ತದೆ.

ಮತ್ತೊಂದು ದೋಷ - ಸ್ವತುಲ್ಯಸತ್ತಾಕವಸ್ತ್ವನಾತ್ಮಕತ್ವವನ್ನು ಹೇಳಿದರೆ ಅಲ್ಪ, ಸ್ವತುಲ್ಯಸತ್ತಾಕವಸ್ತ್ವಾತ್ಮಕವನ್ನು ಹೇಳಿದರೆ ಅಲ್ಪವಲ್ಲ. ಹೀಗೆ ನೀವು ಹೇಳಿದ ವ್ಯಾಪ್ತಿ. ಆದರೆ ಗಗನಾದಿಗಳಲ್ಲಿ ಸ್ವತುಲ್ಯಸತ್ತಾಕವಸ್ತ್ವಾತ್ಮಕತ್ವವು ಬರುವುದಿಲ್ಲ. ಗಗನಾದಿಗಳು ವ್ಯಾವಹಾರಿಕ ಘಟಾದಿಗಳೂ ವ್ಯಾವಹಾರಿಕ. ಆದ್ದರಿಂದ ಸ್ವತುಲ್ಯಸತ್ತಾಕವಾಯಿತು. ಗಗನಾದಿಗಳಲ್ಲಿ ಸ್ವತುಲ್ಯಸತ್ತಾಕವಾದ ಘಟಾದಿವಸ್ತ್ವನಾತ್ಮಕತ್ವವು ಇದೆ. ಆದರೆ ಅಲ್ಪತ್ವವಿಲ್ಲ. ಹೀಗೆ ನೀವು ಹೇಳಿದ ವ್ಯಾಪ್ತಿಗೆ ಗಗನದಲ್ಲೇ ವ್ಯತಿರೇಕವ್ಯಭಿಚಾರ ಬರುತ್ತದೆ.

ಸ್ವತುಲ್ಯಸದ್ರೂಪವಸ್ತ್ವಪರಿಚ್ಛೇದವು ಮಹತ್ವಕ್ಕೆ ಪ್ರಯೋಜಕವೆಂದು ಹೇಳುವುದಾದರೆ ಗಗನಕ್ಕೆ ಸ್ವತುಲ್ಯಸದ್ರೂಪವಸ್ತು ಅಂದರೆ ಘಟಾದಿಗಳು. ಆ ಘಟಾದಿಗಳ ಅಪರಿಚ್ಛೇದವು ಗಗನಕ್ಕೆ ಇಲ್ಲ. (ಘಟಾದ್ಯಭೇದವಿಲ್ಲ) ಆದ್ದರಿಂದ ಮಹತ್ವ ಬರಬಾರದು. ಗಗನವು ಅಲ್ಪವೆಂಬ ಬುದ್ಧಿಯು ಬರಬೇಕಾದೀತು. ಆದರೆ ಯಾರಿಗೂ ಹಾಗೆ ಬುದ್ಧಿಯು ಬರುವುದಿಲ್ಲ. ಮತ್ತು ಹಾಗೆಯೇ ಬ್ರಹ್ಮನಲ್ಲಿಯೂ ಹೇಳಬಹುದು. ಬ್ರಹ್ಮನು ಜೀವಾತ್ಮಕನಾಗುವುದು ಬೇಡ. ಸ್ವತುಲ್ಯಸದ್ರೂಪನಾದ ಜೀವಾತ್ಮಕನು ಬ್ರಹ್ಮನಲ್ಲ. ಆದರೂ ಬ್ರಹ್ಮನಲ್ಲಿ ಅಲ್ಪತ್ವ ಬುದ್ಧಿಯು ಏಕೆ ಬರಬೇಕು? ಯಾವರೀತಿಯಾಗಿ ಗಗನದಲ್ಲಿ ಸ್ವತುಲ್ಯಸದ್ರೂಪವಾದ ಘಟಾದಿಗಳಿಗಿಂತ ಅಭೇದವಿಲ್ಲದಿದ್ದರೂ ಅಲ್ಪತ್ವಬುದ್ಧಿಯು ಬರಲಿಲ್ಲವೋ, ಹಾಗೆಯೇ ಬ್ರಹ್ಮನು ಜೀವಾತ್ಮಕನಾಗದಿದ್ದರೂ ಅಲ್ಪತ್ವಬುದ್ಧಿಯು ಬರುವುದು ಬೇಡ. ನೀವು ನಿರಂಕುಶ ಮಹತ್ವಕ್ಕೋಸ್ಕರ ಜೀವಾಭೇದ ಹೇಳಿದಿರಿ. ಆದರೆ ಜೀವಭೇದವೇ ಇರಲಿ ಮಹತ್ವಬುದ್ಧಿ ಬರಲು ಏನೂ ತೊಂದರೆಯಿಲ್ಲ.

ಆಕ್ಷೇಪ :- ಗಗನದಲ್ಲಿ ಅಲ್ಪತ್ವಬುದ್ಧಿಯು ಬರುವುದಿಲ್ಲ. ಅದಕ್ಕೆ ಕಾರಣವೇನೆಂದರೆ ವಸ್ತುತಃ ಪರಿಚ್ಛಿನ್ನವಾಗಿದ್ದರೂ ದೇಶಕಾಲಗಳಿಂದ ಅಪರಿಚ್ಛಿನ್ನವಾಗಿರುವುದರಿಂದಲೇ ಅದರಲ್ಲಿ ಮಹತ್ವಬುದ್ಧಿಯು ಬರುತ್ತದೆ.

ಸಮಾಧಾನ :- ಇದು ಬ್ರಹ್ಮನಲ್ಲಿಯೂ ಸಮಾನ. ದೇಶತಃ ಕಾಲತಃ ಅಪರಿಚ್ಛಿನ್ನನಾಗಿರುವುದರಿಂದಲೇ ಬ್ರಹ್ಮನಲ್ಲಿ ಮಹತ್ವ ಬುದ್ಧಿಯು ಬರುತ್ತದೆ. ಪುನಃ ವಸ್ತುತಃ ಅಪರಿಚ್ಛೇದವನ್ನು ಹೇಳುವ ಅವಶ್ಯಕತೆ ಇಲ್ಲ.

ಒಂದುವೇಳೆ ಇದನ್ನು ಒಪ್ಪದೆ ವಸ್ತುತಃ ಅಪರಿಚ್ಛೇದವೂ ಇರಬೇಕು. ಆವಾಗ ಮಾತ್ರ ಮಹತ್ವಬುದ್ಧಿ ಬರುತ್ತದೆಂದು ಹೇಳುವುದಾದರೆ ಅತಿಪ್ರಸಂಗ ಬರುತ್ತದೆ - ಪರಮಾಣುವು ಕಾಲತಃ ಅಪರಿಚ್ಛಿನ್ನವಾಗಿದೆ. ಆದರೂ ಸಹ ದೇಶತಃ ಪರಿಚ್ಛಿನ್ನವಾಗಿದೆಯೆಂಬ ಕಾರಣದಿಂದ ಪರಮಾಣುವನ್ನು ಅಲ್ಪವೆಂದು ನಾವು ವ್ಯವಹರಿಸುತ್ತೇವೆ. ಹಾಗೆಯೇ ಗಗನಾದಿಗಳಲ್ಲಿಯೂ ದೇಶತಃ ಕಾಲತಃ ಅಪರಿಚ್ಛೇದವಿದ್ದರೂ ವಸ್ತುತಃ ಪರಿಚ್ಛೇದವಿದೆಯೆಂಬ ಕಾರಣದಿಂದ ಪರಿಚ್ಛಿನ್ನತ್ವಬುದ್ಧಿಯು ಬರಬೇಕಾದೀತು. ಆದರೆ ಯಾರೂ

ಗಗನಾದಿಗಳನ್ನು ಅಲ್ಪವೆಂದು ವ್ಯವಹರಿಸುವುದಿಲ್ಲ. ಆದ್ದರಿಂದ ಗಗನಾದಿಗಳಲ್ಲಿ ದೇಶತಃ ಕಾಲತಃ ಅಪರಿಚ್ಛೇದವಿರುವ ಮಾತ್ರದಿಂದ ಮಹತ್ವಬುದ್ಧಿಯು ಬರುತ್ತಿದೆ. ಅದರಂತೆ ಬ್ರಹ್ಮನಲ್ಲಿಯೂ ವಸ್ತುತಃ ಅಪರಿಚ್ಛೇದವನ್ನು ಉಪಪಾದಿಸುವ ಅವಶ್ಯಕತೆಯಿಲ್ಲ. ಕೇವಲ ದೇಶತಃ ಕಾಲತಃ ಅಪರಿಚ್ಛೇದವಿರುವುದರಿಂದ ಮಹತ್ವಬುದ್ಧಿ ಬರಲು ಯಾವ ಆತಂಕವೂ ಇಲ್ಲ.

## ಬ್ರಹ್ಮನ ಮಹತ್ವಕ್ಕೆ ಅಭೇದ ಬೇಕಾಗಿಲ್ಲ

**तात्पर्यचन्द्रिका –**

**ननु घटादौ स्वतुल्यसद्रूपो देशादिपरिच्छेदोऽल्पत्वं ब्रह्मणि च घटादिप्रतियोगिको भेदरूपो वस्तुपरिच्छेदो न स्वतुल्यसद्रूप इति नाल्पत्वमिति चेत् मैवम् । तथात्वे घटादिवज्जीवादपि स्वतुल्यसद्रूपभेदाभावमात्रेण महत्त्वसिद्ध्या जीवाभेदासिद्धेः। गगनादौ स्वतुल्यसद्रूपो देशाद्यपरिच्छेदो महत्त्वम् । नच ब्रह्मणि घटादिप्रतियोगिकः अभेदरूपः परिच्छेदः तथेति, महत्त्वहानिप्रसङ्गाच्च । किञ्च – स्वतुल्यसद्रूपस्यापरिच्छेदस्याभावे तादृशपरिच्छेदः स्यादेव । तात्विकस्य अतात्त्विकादपि स्वतुल्यसद्रूपभेदस्य नेदं रूप्यमिति दर्शनात् । तस्माद् ब्रह्मणो जगतो व्यावृत्तिमपरिच्छिन्नतां चाभिलषता भेदस्य परिच्छेदतैव त्याज्या । परिच्छिन्नाद् भेद अपरिच्छेदस्यैव सिद्धेः । किञ्च – निरङ्कुशमहत्त्वार्थं ब्रह्मणः सर्वात्मकत्वे, अल्पदेशादधिकदेशे अल्पगुणादधिकगुणे च महत्त्वबुद्धिवदेकात्माकाद् गगानादितोऽनेकात्मके राश्यादौ महत्त्वबुद्धिः स्स्यात् । अवयवानेकत्वेऽपि परिमाणोत्कर्षादिनैव महत्त्वम् । निबिडानेकावयवायःपिण्डादपि विरलाल्पावयवे तूलराश्यादौ महत्त्वबुद्धेः । किञ्च – अपरिच्छेदस्य ब्रह्मानन्यत्वे बृंहतिधात्वर्थस्य भावेऽपि प्रत्ययार्थाभावेन अपरिच्छिन्नत्वासिद्धिः । अन्यत्वेऽपि तात्त्विकत्वे सुतरां तद्रूपविकलत्वात् । अतात्त्विकत्वे तत्वतः परिच्छिन्नत्वापत्तेः । किञ्च – वस्तुतोऽल्पे सत्येव तन्निरूपितमहत्त्वस्य वास्तवत्वमिति ब्रह्मशब्देनैव सद्वितीयत्वम् । देशाद्यपरिच्छेदेऽपि न देशादेर्वस्तुतोऽभावो हेतुः । घटादेरपि तत्प्रसङ्गात् । देशादेः सत्त्वेऽपि तत्परिच्छेदाभावमात्रेणापि तत्सिद्धेश्च । बौद्धाभिमतक्षणिकविज्ञानादेरपि वस्तुतः कालाद्यभावेन अपरिच्छिन्नत्वप्रसङ्गाच्च । तस्मात् –**

**देशतः कालतश्चैव गुणतश्चापि पूर्णता ।**
**ब्रह्मता ननु भेदस्य राहित्यं ब्रह्मतेष्यते ।। १ ।।**

**तदुक्तं – ''देशतः कालतश्चैव गुणतश्च त्रिधा ततिः'' इति । तदेतदभिप्रेत्योक्तं भाष्ये – ''ब्रह्मशब्दश्च विष्णावेव'' इति । त्रिविधपूर्तिवाचको विष्णुशब्दः ।**

**ಅನುವಾದ - ಅದ್ವೈತಿಗಳು : -** ಘಟವು ಅಲ್ಪ, ಬ್ರಹ್ಮ ಮಹತ್, ಕಾರಣವೇನೆಂದರೆ ಘಟದಲ್ಲಿ ಯಾವ ಸತ್ತಾ ಇದೆಯೋ, ದೇಶಕಾಲಗಳ ಪರಿಚ್ಛೇದದಲ್ಲಿಯೂ ಅದೇ ಸತ್ತಾ ಇದೆ. ಹೀಗೆ ಸಮಸತ್ತಾಕವಾದ್ದರಿಂದ ದೇಶಕಾಲಗಳ ಪರಿಚ್ಛೇದವು ಘಟದಲ್ಲಿ ಅಲ್ಪತ್ವವನ್ನು ಉಂಟುಮಾಡುತ್ತವೆ. ಆದರೆ ಬ್ರಹ್ಮನಲ್ಲಿರುವ ಘಟಭೇದವೆಂಬ ವಸ್ತುಪರಿಚ್ಛೇದವು ಬ್ರಹ್ಮನಂತೆ ಪಾರಮಾರ್ಥಿಕವಾಗಿ ಸತ್ಯವಾಗಿಲ್ಲ. ಏಕೆಂದರೆ ಬ್ರಹ್ಮನಲ್ಲಿ ಪಾರಮಾರ್ಥಿಕಸತ್ಯವಾದ ಯಾವ ಧರ್ಮವೂ ಇಲ್ಲ. ಆದ್ದರಿಂದ ಬ್ರಹ್ಮನು 'ಮಹಾನ್' ಎನಿಸುತ್ತಾನೆ.

**ದ್ವೈತಿಗಳು :-** ಹಾಗಾದರೆ ಮಹತ್ವಕ್ಕೋಸ್ಕರ ಜೀವಾಭೇದವನ್ನು ಒಪ್ಪುವುದು ಬೇಡ. ಸ್ವಸತ್ತಾಸಮಾನಸತ್ತಾಕವಾದ ಘಟಭೇದವು ಬ್ರಹ್ಮನಲ್ಲಿ ಇಲ್ಲ. ಇಂತಹ ಘಟಭೇದದ ಅಭಾವವು ಬ್ರಹ್ಮನಲ್ಲಿ ಮಹತ್ವವನ್ನುಂಟುಮಾಡುವಂತೆ ಸ್ವಸತ್ತಾಸಮಾನಸಮಾನಸತ್ತಾಕವಾದ ಜೀವಭೇದದ ಅಭಾವವೇ ಬ್ರಹ್ಮನಲ್ಲಿ ಮಹತ್ವವನ್ನುಂಟುಮಾಡುತ್ತದೆ. ಮಹತ್ವಕ್ಕೋಸ್ಕರ ಜೀವಾಭೇದವನ್ನೇನು ಒಪ್ಪಬೇಕಿಲ್ಲ.

ಮತ್ತು ಆಕಾಶದಲ್ಲಿ ಸ್ವಸತ್ತಾಸಮಾನಸತ್ತಾಕವಾದ (ತನ್ನಂತೆ ಸತ್ಯವಾದ) ದೇಶಕಾಲಾಪರಿಚ್ಛೇದವು ಮಹತ್ವವನ್ನುಂಟುಮಾಡುತ್ತದೆ, ಆದರೆ ಬ್ರಹ್ಮನಲ್ಲಿರುವ ಘಟಾಭೇದರೂಪವಾದ ಘಟಾದ್ಯಪರಿಚ್ಛೇದವು ಬ್ರಹ್ಮನಂತೆ ಪಾರಮಾರ್ಥಿಕವಾಗಿ ಸತ್ಯವಾಗಿಲ್ಲ. ಆದ್ದರಿಂದ ಬ್ರಹ್ಮನಲ್ಲಿ ಮಹತ್ವವು ಬರಲಾರದು.

ಮತ್ತು ಬ್ರಹ್ಮನಲ್ಲಿ ಸ್ವಸತ್ತಾಸಮಾನಸತ್ತಾಕವಾದ ಘಟಾದ್ಯಭೇದವು ಸತ್ಯವಾಗಿ ಇಲ್ಲದಿದ್ದರೆ ಘಟಭೇದವೇ ಬ್ರಹ್ಮನಲ್ಲಿ ಸತ್ಯವೆಂದಂತಾಯಿತು. ವಿರುದ್ಧಧರ್ಮಗಳಲ್ಲಿ ಒಂದನ್ನು ನಿಷೇಧ ಮಾಡಿದರೆ ಮತ್ತೊಂದನ್ನು ವಿಧಿಸಿದಂತಾಗುತ್ತದೆ.

ಈ ನ್ಯಾಯವು ಕೇವಲ ತಾತ್ವಿಕಪ್ರತಿಯೋಗಿಸ್ಥಳದಲ್ಲಿ ಅನ್ವಯವಾಗುತ್ತದೆಂದು ಸಂಕೋಚ ಮಾಡಲು ಬರುವುದಿಲ್ಲ. ಎಂದು ಹೇಳುವುದು ತಪ್ಪು. ಏಕೆಂದರೆ ಶುಕ್ತಿರಜತವು ಅತಾತ್ವಿಕವಾಗಿದೆ. ಅತಾತ್ವಿಕವಾದ ರಜತವನ್ನು ಶುಕ್ತಿಯಲ್ಲಿ 'ನೇದಂ ರೂಪ್ಯಂ' ಎಂದು ನಿಷೇಧ ಮಾಡುತ್ತೇವೆ. ಆದ್ದರಿಂದ 'ವಿರುದ್ಧಯೋಃ' ಎಂಬ ನ್ಯಾಯವು ಅತಾತ್ವಿಕಪ್ರತಿಯೋಗಿಸ್ಥಲದಲ್ಲಿಯೂ ಅನ್ವಯವಾಗುತ್ತದೆ.

ಇಲ್ಲಿಯ ತನಕ ಇಷ್ಟನ್ನು ಸಮರ್ಥಿಸಿದಂತಾಯಿತು - ಬ್ರಹ್ಮನಲ್ಲಿ ಜಗದ್ವ್ಯಾವೃತ್ತಿಯೂ ನಿಮಗೆ ಬೇಕು. ಅಪರಿಚ್ಛಿನ್ನತ್ವವೂ ಬೇಕು. ಎರಡೂ ಸಿದ್ಧವಾಗಬೇಕಾದರೆ ಘಟಾದಿಗಳ ಭೇದದಿಂದ ಅಲ್ಪತ್ವವು

ಬಂದು ಬಿಡುತ್ತದೆಂಬ ಹೆದರಿಕೆಯನ್ನು ಮೊದಲು ಬಿಡಬೇಕು. ಅಷ್ಟೇ ಅಲ್ಲ ಅಲ್ಪವಾದ ಘಟಾದಿಗಳ ಭೇದವು ಬ್ರಹ್ಮನಲ್ಲಿ ಬರುವುದರಿಂದ ಮಹತ್ವವೇ ಸಿದ್ಧವಾಗುತ್ತದೆ.

ಮತ್ತು ಇದುವರೆಗೂ ನಡೆಸಿದ ವಿಚಾರದಿಂದ "ಯಾವ ವಸ್ತುವಿಗೆ ಸರ್ವಾಶ್ರಯತ್ವವು ಇರುತ್ತದೋ, ಆ ವಸ್ತುವಿಗೆ ಪ್ರಧಾನವಾದ ಮಹತ್ವವು ಬರುತ್ತದೆ" ಎಂಬ ವ್ಯಾಪ್ತಿಯನ್ನು ನೀವು ಹೇಳಿದಂತಾಯಿತು. ಆದರೆ ಈ ವ್ಯಾಪ್ತಿಯು ಅಸಾಧುವಾಗಿದೆ. ವ್ಯಾಪ್ತಿಯು ಸರಿಯೆನಿಸಿದಲ್ಲಿ ಅಲ್ಪಪ್ರದೇಶದಲ್ಲಿರುವ ವಸ್ತುವಿಗಿಂತ ಹೆಚ್ಚು ಪ್ರದೇಶದಲ್ಲಿರುವ ವಸ್ತು 'ಮಹತ್' ಎನಿಸುವಂತೆ ಕಡಿಮೆ ಗುಣವುಳ್ಳ ವ್ಯಕ್ತಿಗಿಂತ ಹೆಚ್ಚು ಗುಣವುಳ್ಳ ವ್ಯಕ್ತಿಯು ಮಹಾನ್ ಎನಿಸುವಂತೆ, ಏಕಾತ್ಮಕವಾದ ಆಕಾಶಕ್ಕಿಂತ ಅನೇಕಾತ್ಮಕವಾದ ಒಂದು ಧಾನ್ಯರಾಶಿಯು ಮಹಾನ್ ಎನಿಸಬೇಕಾದೀತು.

ಧಾನ್ಯರಾಶಿಯು ಅನೇಕಾತ್ಮಕವಾಗಿದೆ. ಅದರಂತೆ ಕಪಾಲಕ್ಕಿಂತ ಹೆಚ್ಚಿನ ಅವಯವಗಳು ಘಟದಲ್ಲಿ ಇರುವುದರಿಂದ ಘಟವು ಮಹಾನ್ ಎಂದು ಕಂಡಿರಬಹುದು, ಆದರೂ ಸಹ ಮಹತ್ವವನ್ನು ಕುರಿತು ಪರಿಮಾಣದ ಉತ್ಕರ್ಷವೇ ಕಾರಣ ಹೊರತು ಅವಯವಗಳ ಬಹುತ್ವವಲ್ಲ. ಇದಕ್ಕೆ ಉದಾಹರಣೆ - ಕಬ್ಬಿಣದ ತುಂಡಿಗಿಂತ ಬಹಳ ಕಡಿಮೆ ಅವಯವವುಳ್ಳ ಹತ್ತಿಯ ರಾಶಿಯು ಬಹಳ ಮಹತ್ತಾಗಿ ಕಾಣಿಸುತ್ತದೆ. ಆದ್ದರಿಂದ ಪರಿಮಾಣದ ಆಧಿಕ್ಯವೇ ಮಹತ್ವಕ್ಕೆ ಕಾರಣವಾಗಿದೆ.

**ಮತ್ತೊಂದು ದೋಷ :-** ಅಪರಿಚ್ಛೇದವು ಬ್ರಹ್ಮನಿಗಿಂತ ಅಭಿನ್ನವೆಂದು ಹೇಳಿದರೆ ಬ್ರಹ್ಮ ಎಂಬ ಹೆಸರು ಅನ್ವರ್ಥವಾಗುವುದಿಲ್ಲ. ಏಕೆಂದರೆ 'ವೃದ್ಧಿ' ಎಂಬರ್ಥದಲ್ಲಿರುವ ಬೃಹಧಾತುವಿಗೆ ಮನಿನ್ ಪ್ರತ್ಯಯ ಬರುತ್ತವೆ. ನಲೋಪ, ಅಮಾಗಮ, ಯಣಾದೇಶಗಳು ಬಂದು ಬ್ರಹ್ಮ ಎಂಬ ರೂಪವು ನಿಷ್ಪನ್ನವಾಗಿದೆ. ಇಲ್ಲಿ 'ವೃದ್ಧಿ' ಎಂದರೆ ಪರಿಚ್ಛೇದಾಭಾವ ಎಂದರ್ಥ. ಆದ್ದರಿಂದ ವಸ್ತುಭೇದಾಭಾವವು ಧಾತುವಿನ ಅರ್ಥವೆಂದಂತಾಯಿತು. ಹೀಗೆ ಧಾತ್ವರ್ಥವು ಸಾರ್ಥಕವಾದರೂ ಪ್ರತ್ಯಯವು ನಿರರ್ಥಕ-ವಾಗುತ್ತದೆ. ಏಕೆಂದರೆ ವೃದ್ಧಿಶಬ್ದದಿಂದ ತಿಳಿಯುವ ಅಪರಿಚ್ಛೇದರೂಪನಾಗಿದ್ದರೂ ವೃದ್ಧಿಮತ್ವವೆಂಬ ಅಪರಿಚ್ಛಿನ್ನತ್ವವು ಬರದೇ ಇರಬೇಕಾದೀತು.

ಅಪರಿಚ್ಛೇದವು ಬ್ರಹ್ಮನಿಗಿಂತ ಭಿನ್ನವಾಗಿ ತಾತ್ವಿಕವೆಂದು ಹೇಳುವುದಾದರೆ ಬ್ರಹ್ಮನು ಮಹತ್ ಆಗಲಾರ. ವಸ್ತುಭೇದಾಭಾವವೆಂಬ ಒಂದು ವಸ್ತುವು ಬ್ರಹ್ಮನಂತೆ ಸತ್ಯವಾಗಿದ್ದು ಇದರ ಅಭೇದವು ಬ್ರಹ್ಮನಲ್ಲಿ ಇಲ್ಲವೆಂದರೆ ಬ್ರಹ್ಮನು ಅಲ್ಪನಾಗಿದ್ದಾನೆಂಬುದು ಸ್ಪಷ್ಟ.

ಆ ಪರಿಚ್ಛೇದವು ಅತಾತ್ವಿಕವೆಂದು ಹೇಳಿದರೆ ವಸ್ತುಭೇದವು ಸತ್ಯವೆಂದಾಯಿತು. ಆಗಲೂ ಬ್ರಹ್ಮನು ಅಲ್ಪನೆಂದೇ ಆದ.

ಮತ್ತು ಬ್ರಹ್ಮಶಬ್ದದಿಂದ ಅಭೇದ ಸಿದ್ಧವಾಗುತ್ತದೆಂಬ ಮಾತು ವಿರುದ್ಧವಾಗಿದೆ. ವಾಸ್ತವಿಕವಾಗಿ ಅಲ್ಪವಾದ ವಸ್ತುವು ಇದ್ದರೆ ಮಾತ್ರ ತನ್ನಿರೂಪಿತವಾದ ಮಹತ್ವವು ಬ್ರಹ್ಮನಲ್ಲಿ ಸತ್ಯವಾಗಿ ಇರಲು ಸಾಧ್ಯ. ಹೀಗೆ ಬ್ರಹ್ಮಶಬ್ದದಿಂದಲೇ ಮತ್ತೊಂದು ವಾಸ್ತವ ಪ್ರಪಂಚ ಇದೆಯೆಂದು ಸಿದ್ಧವಾಗುತ್ತದೆ.

**ಆಕ್ಷೇಪ** :- ಎರಡನೆಯ ವಸ್ತು ಸತ್ಯವಾದರೆ ಬ್ರಹ್ಮನು ಅಪರಿಚ್ಛಿನ್ನನಾಗಲಾರ. ದೇಶಾಪರಿಚ್ಛೇದ ಕಾಲಾಪರಿಚ್ಛೇದಗಳು ಬ್ರಹ್ಮನಲ್ಲಿ ಬರಬೇಕಾದರೆ ದೇಶಕಾಲಗಳು ಸುಳ್ಳಾಗಿರಬೇಕು. ಸತ್ಯವಾಗಿರಬಾರದು.

**ಸಮಾಧಾನ** :- ಇದು ತಪ್ಪು. ದೇಶಾದ್ಯಪರಿಚ್ಛೇದ ಬರಲು ದೇಶಾದಿಗಳ ಇಲ್ಲದಿರುವಿಕೆಯು ಕಾರಣವಲ್ಲ. ಹಾಗಾದಲ್ಲಿ ಘಟದಲ್ಲಿಯೂ ಸಹ ದೇಶಾದ್ಯಪರಿಚ್ಛೇದ ಬರಬೇಕಾದೀತು. ಮತ್ತು ಈ ನಿಯಮಕ್ಕೆ ಕಾರಣವೂ ಇಲ್ಲ. ದೇಶಕಾಲವಸ್ತುಗಳಿದ್ದರೂ ಅವುಗಳ ಪರಿಚ್ಛೇದವು ಇಲ್ಲವೆಂಬ ಕಾರಣದಿಂದಷ್ಟೇ ಅಪರಿಚ್ಛೇದವು ಬರುತ್ತದೆ.

ಈ ನಿಯಮ ಒಪ್ಪಿದರೆ ಅತಿಪ್ರಸಂಗವೂ ಬರುತ್ತದೆ. ಬೌದ್ಧರಲ್ಲಿ ವಿಜ್ಞಾನವಾದಿಗಳು ವಿಜ್ಞಾನವಸ್ತು ಕ್ಷಣಿಕ ಎನ್ನುತ್ತಾರೆ. ಅವರು ವಿಜ್ಞಾನಕ್ಕಿಂತ ಬೇರೆ ಕಾಲಾದಿವಸ್ತುವನ್ನೇ ಒಪ್ಪುವುದಿಲ್ಲ. ಈಗ ನೀವು ಹೇಳುವಂತೆ ಕಾಲಾದಿವಸ್ತುವು ಇಲ್ಲದ ಮಾತ್ರದಿಂದ ಅವುಗಳ ಅಪರಿಚ್ಛೇದವು ಸಿದ್ಧವಾಗುವುದಾದರೆ ವಿಜ್ಞಾನದಲ್ಲಿಯೂ ಕಾಲಾದ್ಯಪರಿಚ್ಛೇದ ಬರಬೇಕಾದೀತು. ಆದ್ದರಿಂದ -

"ದೇಶದಿಂದ ಕಾಲದಿಂದ ಗುಣದಿಂದಲೂ ಯಾರು ಪೂರ್ಣನೋ ಅವನೇ ಬ್ರಹ್ಮಶಬ್ದದ ಅರ್ಥ. ಭೇದದ ಅಭಾವವಲ್ಲ." ಇದನ್ನೇ ಗೀತಾತಾತ್ಪರ್ಯದ ಎರಡನೆಯ ಅಧ್ಯಾಯದಲ್ಲಿ "ದೇಶದಿಂದ ಕಾಲದಿಂದ ಗುಣದಿಂದ ಎಂದು ಮೂರುವಿಧವಾದ ಪೂರ್ಣತೆಯು ಮೂರು ವಿಧವಾಗಿದೆ" ಎಂದು ಹೇಳಿದೆ. ಈ ಅಭಿಪ್ರಾಯದಿಂದಲೇ ಭಾಷ್ಯದಲ್ಲಿಯೂ "ಬ್ರಹ್ಮಶಬ್ದಶ್ಚ ವಿಷ್ಣಾವೇವ" "ಬ್ರಹ್ಮ ಎಂಬ ಹೆಸರು ವಿಷ್ಣುವಿಗೆ ಮಾತ್ರ" ಎಂದು ಹೇಳಲ್ಪಟ್ಟಿದೆ. ಏಕೆಂದರೆ ಮೂರು ಬಗೆಯಿಂದಲೂ ಪೂರ್ಣನಾದವನೇ ವಿಷ್ಣು ಎನಿಸುತ್ತಾನೆ.

**प्रकाशः** – इयता ग्रन्थेन परिच्छेदकस्य स्वतुल्यसद्रूपत्वमल्पत्वप्रयोजकमित्याशङ्क्य निरस्तम् । इदानीं परिच्छेदस्य स्वतुल्यसद्रूपत्वमल्पत्वप्रयोजकमित्याशङ्कामुद्धाव्य निरस्यति ।। **नन्विति** ।। **न स्वतुल्यसद्रूप इति** ।। तात्विकस्य कस्यापि धर्मस्य ब्रह्मण्यसम्भावादिति भावः । स्वतुल्यसद्रूपभेदस्याऽल्पत्वे तादृशभेदाभावो महत्त्वमित्युक्तं स्यात् । तथाच जीवाभेदो न सिध्यतीत्याह ।। **तथात्व इति** ।। नच जीवात् तादृशभेदाभाव एवाभेद इति वाच्यम् । घटादेरपि तादृशभेदाभावेन घटाद्यभेदापातादिति भावः । वैपरीत्यमपि सुवचमित्याह ।। **गगनादाविति** ।। 'तथा' स्वतुल्यसद्रूपः । ननु गगनादावपि तादृशदेशादिपरिच्छेदाभावेनैव महत्त्वं, नतु तादृशपरिच्छेदेन, येन ब्रह्मणि तादृशस्य घटाद्यपरिच्छेदस्याभावेन महत्त्वहानिः स्यादित्याशङ्क्यैवमपि ब्रह्मणि तादृशस्य घटादिपरिच्छेदस्याभावाभावेन महत्त्वहानिरवर्जनीयेति भावेनाह ।। **किञ्चेति** ।।

यद्वा – तादृशापरिच्छेदो महत्त्वमित्यापाद्य दूषितम् । इदानीं तादृशापरिच्छेदोऽल्पत्वमिति परोक्तरीत्यैव महत्त्वहानिरिति भावेन तादृशपरिच्छेदं ब्रह्मण्युपपादयति ।। किञ्चेति ।। 'अपरिच्छेदस्य' घटाद्यपरिच्छेदस्य । अभावे 'ब्रह्मणि' इति शेषः ।। तादृशेति ।। ब्रह्मतुल्यसद्रूपेत्यर्थः । तथाच 'अल्पत्वं स्यात्' इति शेषः । विरुद्धयोरेकस्याताात्त्विकत्वेऽन्यस्य तात्त्विकत्वनियमादिति भावः ।

ननु प्रतियोगिनो घटादेरतात्त्विकत्वात् तत्परिच्छेदापरिच्छेदयोः द्वयोरप्यतात्त्विकत्वमेव । 'विरुद्धयोः' इति न्यायस्तु तात्त्विकप्रतियोगिस्थल एवेत्याशङ्क्य, सर्वत्र दर्शनान्न सङ्कोचो न्यायस्येति भावेनाह ।। तात्त्विकस्येति ।। अप्रातिभासिकस्य । सप्रकारकज्ञानाबाध्यस्येति वा । 'शुक्तिशकलस्य' इति शेषः । वस्तुतो जीवाद् भेदेन ब्रह्मणोऽपरिच्छिन्नत्वमित्येतदुपसंहारव्याजेनाह ।। तस्मादिति ।। यस्माद् भेदस्य परिच्छेदत्वे घटादितो भेदेन ब्रह्मणः परिच्छिन्नत्वं प्रसज्यते, यस्माच्च परिच्छेदकस्य घटादेः स्वतुल्यसद्रूपत्वाभावेन वा, परिच्छेदस्य स्वतुल्यसद्रूपत्वाभावेम वा, तत् परिहर्तुं शक्यते, तस्मादित्यर्थः । एवं बाधकोपदर्शनेन वस्तुभेदो न महत्त्वभञ्जकः येन तत्सिद्धये जीवाभेदोऽभ्युपेयः स्यादित्युक्तम् । इदानीं सत्यप्यनेकात्मकत्वे महत्त्वबुद्धेरदृष्टेः, असत्यपि तस्मिन् तस्याः दर्शनाद् व्यभिचारेण, न वस्त्वभेदो महत्त्वमित्याह ।। किञ्चेति ।। ''अल्पदेशादधिकदेशे'' इति बहुव्रीहिः । अल्पदेशावस्थितात् त्र्यणुकादितोऽधिकदेशावस्थिते घटादावित्यर्थः । 'गुणः' ज्ञानादिलक्षणः । 'पुंसि' इति शेषः ।। अनेकेति ।। अनेकमाषाभिन्नतत्समुदायरूपराश्यादावित्यर्थः । नन्ववयवप्राचुर्याप्राचुर्यवतोः घटकरकयोर्महत्त्वाल्पत्वे दृष्टे इत्यतस्तत्राप्यन्यदेव प्रयोजकमित्याह ।। अवयवेति ।। अनेकाल्पावयवत्वे हेतुः – निबिडेति । विरलेति । अस्तु वा देशकालापरिच्छेदवद् वस्त्वपरिच्छेदो महत्त्वं, तथाऽपि सोऽयमपरिच्छेदः किं ब्रह्मणो भिन्नः उत अभिन्नः । भिन्नत्वेऽपि तात्त्विकोऽतात्त्विको वेति विकल्पान् हृदि कृत्वा, क्रमेण प्रत्याह ।। किञ्चेति ।। वस्त्वपरिच्छेदस्येत्यर्थः ।। प्रत्ययार्थाभावेनेति ।। ''बृहि वृद्धौ'' इत्येतस्मात् ''बृंहेरम् नलोपश्च'' इति

मनिन्प्रत्यये नलोपेऽमागमे यणि च, 'ब्रह्म' इति वृद्धिशब्दितापरिच्छेदवदुच्यते। वृद्धिशब्दितापरिच्छेदरूपत्वेऽपि वृद्धिमत्त्वरूपमपरिच्छिन्नत्वं न स्यादित्यर्थः । 'सुतराम्' असंशयम् । 'अपरिच्छिन्नत्वासिद्धिः' इत्यन्वयः । तत्र हेतुः - तद्रूपेति । स्वतुल्यसद्रूपापरिच्छेदाख्यवस्त्वभेदशून्यत्वादित्यर्थः । ब्रह्मशब्दादभेदसिद्धिरित्युपन्यासो विरुद्ध इत्याह ।। किञ्चेति ।। सद्वितीयत्वे कथमपरिच्छिन्नत्वमित्यतस्तदुपपादयति ।। देशादीति ।। येन द्वितीयाभावे सत्येवापरिच्छिन्नत्वं ब्रह्मणः स्यादिति भावः । तत्र हेतुः – घटादेरिति । वस्तुतो घटादेस्त्वन्मतेऽभावेन तदपरिच्छेदो ब्रह्मणः स्यादित्यर्थः । नचेष्टापत्तिः । घटादिव्यावृत्त्यभिलाषादिति भावः । यद्वा – घटादेरपि ब्रह्मण इव देशाद्यपरिच्छिन्नत्वप्रसङ्गादित्यर्थः । तदपरिच्छेदे तदभावो न हेतुः, घटादौ व्यभिचारादित्युक्तम् । अप्रयोजकश्चेत्याह ।। देशादेरिति ।। 'तत्सिद्धेः' अपरिच्छिन्नत्वसिद्धेः।

अतिप्रसङ्गं चाह ।। बौद्धेति ।। विज्ञानवादिमते विज्ञानव्यतिरेकेण कालादिजगतोऽभावेन कालाद्यपरिच्छेदः स्यात् । नचेष्टापत्तिः । क्षणिकत्वोपगमादित्यर्थः। अतो द्वितीयसत्त्वेऽपि ब्रह्मणोऽपरिच्छिन्नत्वं युक्तमित्यर्थः । यद्वा – देशाद्यपरिच्छेदं ब्रह्मपदार्थं ब्रुवता ब्रह्मपदेनैव देशकालरूपद्वितीयसत्त्वमुपेतमित्याह ।। देशादीत्यादिना ।। वस्तुतस्तु – देशाद्यपरिच्छेदे देशाद्यभावो न हेतुः, किन्तु तस्मिन् सत्येव तदपरिच्छेदः, तथा परिच्छिन्ने जीवादौ सत्येव तदपेक्षया अपरिच्छिन्नत्वं युज्यत इति भावेन दृष्टान्तमुपपादयति ।। देशादीत्यादिना ।। व्याख्यानं प्राग्वत् । 'तस्मात्' इत्यस्य श्लोकेनान्वयः । चापिशब्दाः प्रत्येकमभिसम्बध्यन्ते । त्रिभिः पूर्णतैवेत्युक्तैवकारव्यावर्त्यमाह ।। नन्विति ।। तदुक्तमिति ।। गीतातात्पर्ये द्वितीये । कथमस्मात् तल्लाभ इत्यत आह ।। त्रिविधेति ।। 'विष्लृ व्याप्तौ' इत्यस्य क्नुप्रत्यये रूपं 'विष्णुः' इति । व्याप्तिश्च त्रेधा भवति । ''देशतः'' इति वचनादिति भावः । यद्यप्ययं शिवादिव्यावृत्त्यर्थत्वेनोपात्तश्चक्रिरूपविशेष्यपरः । तथैव भाष्ये अग्रे प्रतिपादनात् । तथाऽपि विशेष्यं वदन् उक्तत्रिविधपूर्त्यभिधानपूर्वमेव तद् वदति । सर्वशब्दानां योगपूर्वमेव भगवति

वृत्तेरित्येवमुक्तम् । एतेनावश्यवक्तव्यं जीवभेदकं विषयसिद्ध्यङ्गं गुणपूर्णत्वं ब्रह्मपदार्थत्वेनानुक्त्वा, विष्ण्वर्थत्वमनुपयुक्तमुच्यत इति भाष्ये अनौचित्यचोद्यं निरस्तम् । विष्ण्वर्थकत्वेन तल्लाभात् । न्यायविवरणे ब्रह्मशब्देन गुणपूर्णत्वोक्ते-रुक्तत्वाच्च । विष्ण्वर्थकत्वं तु शिष्यहिताय वा गुणपूर्तियोग्यत्वाय वेति नानुपयुक्तम् । एतेन ब्रह्मपदस्याभेदार्थकत्वाच्चाभेदपूर्वपक्षोऽनेन निरस्यत इति कस्यचित् प्रलापोऽपोढः । उक्तरीत्याऽभेदार्थकत्वाभावात् । यदपि ब्रह्मशब्दस्योक्त-त्रिविधपरिच्छेदराहित्यार्थकत्वमुपेत्य, शिवपरत्वप्रलपनं, तदपि भाष्याद्युदाहृत-प्रमाणजालैर्निरस्तं ध्येयम् । ''पत्युरसामञ्जस्यात्'' इति सूत्रकृता कण्ठतः शिव-स्यापूर्णत्वदोषवत्त्वयोरुक्तत्वाच्च । तस्य चानुव्याख्याने बहुप्रमाणोदाहरणेन प्रपञ्चनाच्च । विस्तरस्तु गुरुपादकृतन्यायमौक्तिकमालातोऽनुसन्धेयः ।

गुरुराजीय – ननु तथापि घटाद्यपरिच्छेदेऽपि नाल्पत्वं स्वतुल्यसद्रूपस्य परिच्छेदस्यैवाल्पत्वप्रयोजकत्वात् । घटादौ स्वतुल्यसद्रूपस्य देशादिपरिच्छेदस्यै-वाल्पत्वप्रयोजकत्वात् ब्रह्मणश्च घटादिपरिच्छेदेऽपि तस्य स्वतुल्यसद्रूपत्वाभावेन तस्मिन् सत्यपि नाल्पत्वमिति शङ्कते – नन्विति ।। यद्यप्यत्रापि तत्वतः सद्रूपे ब्रह्मणि व्यवहारतः सद्रूपदेशादिना परिच्छेदेपि महत्त्वप्रसङ्गात् स्वतुल्य-सद्रूपघटाद्यनात्मकेऽपि गगनादावल्पत्वबुद्ध्यभावाच्चेति पूर्वपक्षिणोक्तदूषणम-वशिष्टमेव । तथापि तन्निराकरणस्यैव मुख्यप्रयोजनत्वाभावात् परमप्रमेयमेव दूषयति – मैवमिति ।। घटादौ स्वतुल्यसद्रूपस्य परिच्छेदस्यैवाल्पत्वेन दृष्टत्वात् ब्रह्मणि तदभावेनाल्पत्वाभावे गगनादौ स्वतुल्यसद्रूपापरिच्छेदस्यैव महत्त्वरूपत्वेन दृष्टत्वात् ब्रह्मणस्तदभावान्महत्त्वं न स्यादेवेत्याह – गगनादाविति ।। तथाच स्वतुल्यसद्रूपस्य परिच्छेदस्याल्पत्वप्रयोजकत्वे घटादिवज्जीवादपि स्वतुल्यसद्रूप-परिच्छेदाभावमात्रेण महत्त्वसिद्ध्या जीवाभेदासिद्ध्यापत्त्या जीवाभेदमभिलषतः स्वतुल्यसद्रूपस्य जीवापरिच्छेदस्याभावेऽल्पत्वापत्त्या जीवाभेदवत् स्वतुल्यसद्रूपस्य घटाद्यपरिच्छेदस्याभावेऽल्पत्वप्रसङ्गेन घटाभेदोऽप्यङ्गीकार्य एवेति युक्तमुक्तम् ।

ननु स्वतुल्यसद्रूपस्यापरिच्छेदस्याभावेऽल्पत्वापादनं निर्निबन्धनमित्याशङ्क्य परस्परविरुद्धयोरन्यतरनिषेधस्यान्यतरविधिना व्याप्तिमभिप्रेत्य विरुद्धत्वमेव व्यनक्ति

– **किंचेति** ।। अल्पत्वं च परिच्छेदस्तवद् व्याप्तं वेत्यभिप्रायः । प्रतियोगिनोऽतात्विकत्वादेव न स्वतुल्यसद्रूपवस्तुप्रतियोगिकः परिच्छेद इत्यत आह – **तात्विकस्येति** ।। तेनैव घटाद्यभेदप्रसङ्गादित्यस्य विपर्यये पर्यवसानमाह – **तस्मादिति** ।। जीवाभेदसाधकपरोक्ततर्कस्यान्यथासिद्धिमाह – **परिच्छिन्नादिति** ।।

एवं तर्हि निरङ्कुशमहत्त्वसिद्धये गुणोत्कर्षोऽपि नाङ्गीकार्योऽविशेषादित्यत आह – **किञ्चेति** ।। ननु गुणोत्कर्षादिवत् स्वल्पावयवारब्धघटाद्यपेक्षयाऽनेकावयवारब्धेऽपि घटे महत्त्वबुद्धेर्दृष्टत्वादनेकात्मकत्वस्यापि तत्र निमित्तत्वमित्यत आह – **अवयवानेकत्वेऽपीति** ।। तथाचात्राप्यधिकदेशत्वमेव तन्निमित्तमिति भावः । अवयवानेकत्वस्यैव तन्निमित्तत्वे बाधकमाह ।। **निबिडेति** ।।

ननु तन्निरूपितमहत्त्वस्य वास्तवत्वे न निरूपकस्य महत्त्वमावश्यकम् । तदभावस्यैवात्र निमित्तत्वादित्यत आह – **देशाद्यपरिच्छेदेऽपीति** ।। **घटादेरपीति** ।। तत्प्रसङ्गात् देशाद्यपरिच्छेदप्रसङ्गात् । देशादेरवास्तवत्वातिरिक्तस्य तत्प्रयोजकस्यानङ्गीकारादिति भावः । नन्वेवं वस्तुतस्तदभावस्याप्रयोजकत्वे ब्रह्मणि देशापरिच्छेदोपि न स्यात् । देशादेः सत्त्वादित्यत आह – **देशादेरिति** ।। घटादेरपि तत्प्रसङ्गादित्युक्तं विशदयति – **बौद्धाभिमतेति** ।।

**ವಿವರಣೆ** - ಇಲ್ಲಿಯ ತನಕ ಹೇಳಿದ ವಿಚಾರವಿಷ್ಟು - ಪರಿಚ್ಛೇದವನ್ನು (ಪರಿಮಿತಿಯನ್ನು) ಉಂಟುಮಾಡುವ ವಸ್ತುವು (ಪರಿಚ್ಛೇದಕವು) ಸ್ವತುಲ್ಯಸದ್ರೂಪವಾದರೆ (ತನ್ನಂತೆ ಸತ್ಯವಾದರೆ ಮಾತ್ರ) ಪರಿಮಿತಿವುಳ್ಳವಸ್ತುವು ಅಲ್ಪವೆನಿಸುತ್ತದೆ. ಉದಾಹರಣೆ - ಪರಿಚ್ಛೇದಕನಾದ ಜೀವನೆಂಬ ವಸ್ತುವು ಬ್ರಹ್ಮನ ಸಮಾನಸತ್ತಾವುಳ್ಳವನಾಗಿದ್ದಾನೆ. ಅಂತಹ ಜೀವನಿಂದ ಬ್ರಹ್ಮನಿಗೆ ಪರಿಚ್ಛೇದವನ್ನು ಹೇಳಿದರೆ (ಭೇದವನ್ನು ಹೇಳಿದರೆ) ಬ್ರಹ್ಮನು ಅಲ್ಪನಾಗಬೇಕಾದೀತು. ಅದಕ್ಕೋಸ್ಕರ ಅಭೇದವನ್ನು ಹೇಳಬೇಕು. ಎಂದು ಸಮರ್ಥಿಸಿದ್ದಾಯಿತು.

**ಈಗ ಹೇಳುತ್ತಿರುವ ವಿಚಾರವಿಷ್ಟು** - ಪರಿಚ್ಛೇದಕವು ಹೇಗೆ ಬೇಕಾದರೂ ಇರಲಿ, ಆದರೆ ಪರಿಚ್ಛೇದವು ಸ್ವತುಲ್ಯಸದ್ರೂಪವಾಗಿ ಇದ್ದರೆ ಅದು ಅಲ್ಪತ್ವಕ್ಕೆ ಪ್ರಯೋಜಕವಾಗುತ್ತದೆ. ಉದಾಹರಣೆ - ಘಟದಲ್ಲಿ ದೇಶಾದಿಪರಿಚ್ಛೇದವಿದೆ. ಈ ಪರಿಚ್ಛೇದವು ಧರ್ಮಿಸತ್ತಾಸಮಾನಸತ್ತಾಕವಾಗಿ ಇದೆ. ಘಟವು ವ್ಯಾವಹಾರಿಕಸತ್ಯ. ದೇಶಾದಿಪರಿಚ್ಛೇದವೂ ವ್ಯಾವಹಾರಿಕಸತ್ಯ. ಆದ್ದರಿಂದ ಘಟದಲ್ಲಿ ಅಲ್ಪತ್ವವಿದೆ. ಎಂದು ಸಮರ್ಥಿಸುತ್ತಿದ್ದಾರೆ.

ಆಕ್ಷೇಪ :- ಪರಿಚ್ಛೇದವು ಧರ್ಮಿಸತ್ತಾಸಮಾನಸತ್ತಾಕವಾಗಿದ್ದರೆ ಅಲ್ಪತ್ವ ಬರುತ್ತದೆಂದು ಘಟಾದಿಗಳಲ್ಲಿ ಕಂಡಿದೆ. ಬ್ರಹ್ಮನಲ್ಲಿ ಘಟಾದಿಗಳ ಭೇದವಿದೆ. ಆದ್ದರಿಂದ ಘಟಾದಿವಸ್ತು ಪರಿಚ್ಛೇದವು ಬ್ರಹ್ಮನಲ್ಲಿ

ಇದೆಯೆಂದಂತಾಯಿತು. ಆದರೂ ಬ್ರಹ್ಮನಲ್ಲಿ ಅಲ್ಪತ್ವವು ಬರುವುದಿಲ್ಲ. ಏಕೆಂದರೆ ಘಟಾದಿಪರಿಚ್ಛೇದವು ಧರ್ಮಿಸತ್ತಾಸಮಾನಸತ್ತಾಕವಾಗಿ ಇಲ್ಲ. ಘಟಾದಿಗಳು ವ್ಯಾವಹಾರಿಕಸತ್ಯ. ಬ್ರಹ್ಮನು ಪಾರಮಾರ್ಥಿಕಸತ್ಯ. ಹಾಗಾಗಿ ಸ್ವತುಲ್ಯಸದ್ರೂಪವಾಗಲಿಲ್ಲವೆಂದು ಅಲ್ಪತ್ವವು ಬರುವುದಿಲ್ಲ.

ತಾತ್ಪರ್ಯವಿಷ್ಟು :- ಜೀವನಿಂದ ಬ್ರಹ್ಮನಿಗೆ ಅಭೇದವಿದೆ. ಆದರೆ ಘಟಾದಿಗಳಿಂದ ಅಭೇದವಿಲ್ಲ. ಘಟಾದಿಗಳಿಂದ ಅಭೇದವಿಲ್ಲವೆಂಬ ಕಾರಣದಿಂದ ಬ್ರಹ್ಮನು ಅಲ್ಪನಾಗಲಾರ.

ಸಮಾಧಾನ :- ಪಾರಮಾರ್ಥಿಕವಾಗಿ ಘಟಾದಿಗಳ ಭೇದವಿಲ್ಲ ಎಂಬ ಕಾರಣದಿಂದ ಬ್ರಹ್ಮನಲ್ಲಿ ಮಹತ್ವವು ಬರುವುದಾದರೆ. ಜೀವನಿಂದ ಸ್ವತುಲ್ಯಸತ್ತಾಕವಾದ ಪಾರಮಾರ್ಥಿಕಭೇದವು ಇಲ್ಲವೆಂಬ ಕಾರಣದಿಂದಲೇ ಬ್ರಹ್ಮನಲ್ಲಿ ಮಹತ್ವವು ಬರಲಿ ಜೀವಬ್ರಹ್ಮರಿಗೆ ಅಭೇದವನ್ನು ಏಕೆ ಹೇಳಬೇಕು. ವ್ಯಾವಹಾರಿಕವಾಗಿ ಜೀವಬ್ರಹ್ಮರಿಗೆ ಭೇದವಿದೆಯೆಂದು ಹೇಳಲು ಏನೂ ತೊಂದರೆಯಿಲ್ಲ. ಪಾರಮಾರ್ಥಿಕಭೇದದ ಅಭಾವವೇ ಸಿದ್ಧವಾಯಿತು ಹೊರತು ಅಭೇದವು ಸಿದ್ಧವಾಗಲಿಲ್ಲ.

ಅದ್ವೈತಮತದಲ್ಲಿ ಪಾರಮಾರ್ಥಿಕಭೇದಾಭಾವವೇ ಬೇರೆ ಅಭೇದವೇ ಬೇರೆ. ಐಕ್ಯ ಮತ್ತು ಅಭೇದಗಳನ್ನು ಬ್ರಹ್ಮಸ್ವರೂಪವೆಂದು ಹೇಳುತ್ತಾರೆ. ಆದ್ದರಿಂದ ಐಕ್ಯವು ಭಾವರೂಪ. ಭೇದಾಭಾವವು ಅಭಾವರೂಪ, ಇವುಗಳಿಗೆ ಪರಸ್ಪರ ಭೇದವಿದೆ.

ಆದರೆ ಈಗ ಜೀವನಿಗೆ ಬ್ರಹ್ಮನಿಂದ ಐಕ್ಯವನ್ನು ಒಪ್ಪುತ್ತಿದ್ದಾರೆ. ಈ ಐಕ್ಯವನ್ನು ಏಕೆ ಒಪ್ಪಬೇಕು? ಭೇದಾಭಾವವೇ ಸಾಕು. ಒಂದುವೇಳೆ ಜೀವನಿಂದ ಭೇದಾಭಾವವು ಇರುವ ಮಾತ್ರದಿಂದಲೇ ಜೀವೈಕ್ಯವು ಬ್ರಹ್ಮನಿಗೆ ಇರುವುದಾದರೆ ಘಟಾದಿಗಳ ಐಕ್ಯವೂ ಬರಲಿ. ಜಡವಾದ ಘಟಾದಿಗಳಿಂದ ಬ್ರಹ್ಮನಲ್ಲಿ ವ್ಯಾವಹಾರಿಕವಾದ ಭೇದವೇ ಇದೆ ಹೊರತು ಪಾರಮಾರ್ಥಿಕಭೇದವಿಲ್ಲ. ಅಂದರೆ ಅಭೇದವನ್ನೇ ಹೇಳಿದಂತಾಯಿತು. ಬ್ರಹ್ಮನಿಗೂ ಘಟಾದಿಗಳಿಗೂ ಅಭೇದವು ಬರಬೇಕಾದೀತು.

ಮತ್ತೊಂದು ದೋಷ :- ವಿಪರೀತವಾಗಿಯೇ ಏಕೆ ಹೇಳಬಾರದು? - ಗಗನಾದಿಗಳಲ್ಲಿ ಸ್ವತುಲ್ಯಸದ್ರೂಪವಾದ ದೇಶಾಪರಿಚ್ಛೇದ ಕಾಲಾಪರಿಚ್ಛೇದಗಳು ಇರುವುದರಿಂದ ಮಹತ್ವವು ಬರುತ್ತದೆ. ಆದರೆ ಬ್ರಹ್ಮನಲ್ಲಿ ಹಾಗಿಲ್ಲ. ಘಟಾದ್ಯಭೇದವು ಬ್ರಹ್ಮನಲ್ಲಿ ಪಾರಮಾರ್ಥಿಕವಾಗಿ ಇಲ್ಲ. ಆದ್ದರಿಂದ ಮಹತ್ವವು ಬಾರದಿರಬೇಕಾದೀತು.

ಆಕ್ಷೇಪ :- ಬ್ರಹ್ಮನಲ್ಲಿ ಮಹತ್ವಹಾನಿಯೇನು ಆಗುವುದಿಲ್ಲ. ಏಕೆಂದರೆ ಗಗನದಲ್ಲಿ ಮಹತ್ವವಿದೆ. ಕಾರಣವೇನೆಂದರೆ ಸ್ವತುಲ್ಯಸತ್ತಾಕವಾದ ದೇಶಾದಿಪರಿಚ್ಛೇದವು ಇರುವುದಿಲ್ಲವೆಂದೇ ಹೊರತು ಸ್ವತುಲ್ಯಸತ್ತಾಕವಾದ ಅಪರಿಚ್ಛೇದವು ಇದೆಯೆಂಬ ಕಾರಣದಿಂದಲ್ಲ. ಒಂದುವೇಳೆ ನಾವು ಗಗನಾದಿಗಳಲ್ಲಿ ಸ್ವತುಲ್ಯಸತ್ತಾಕವಾದ ಅಪರಿಚ್ಛೇದವು ಇದೆಯೆಂಬ ಕಾರಣದಿಂದ ಮಹತ್ವವನ್ನು ಹೇಳಿದ್ದಲ್ಲಿ, ಬ್ರಹ್ಮನಲ್ಲಿ ಸ್ವತುಲ್ಯಸತ್ತಾಕವಾದ ಅಪರಿಚ್ಛೇದ ಇಲ್ಲದ ಕಾರಣ ಮಹತ್ವಹಾನಿ ಆಗುತ್ತದೆಂದು ನೀವು ಆಕ್ಷೇಪಿಸಬಹುದಿತ್ತು.

**ಸಮಾಧಾನ :-** ಅಪರಿಚ್ಛೇದ ಎಂದು ಹೇಳದೆ ಪರಿಚ್ಛೇದಾಭಾವ ಎಂದು ಹೇಳುತ್ತಿದ್ದೀರಿ. ಬ್ರಹ್ಮನಲ್ಲಿ ಸ್ವತುಲ್ಯಸತ್ತಾಕವಾದ ಘಟಾದಿಪರಿಚ್ಛೇದವು ಇಲ್ಲ. ಅಂತ ಇಲ್ಲ. ಬ್ರಹ್ಮನಲ್ಲಿ ಘಟಾದಿಪರಿಚ್ಛೇದವು ಪಾರಮಾರ್ಥಿಕವಾಗಿ ಇದ್ದೇ ಇದೆ. ಪಾರಮಾರ್ಥಿಕವಾಗಿ ಅಭೇದ ಇಲ್ಲವೆಂದರೆ ಪಾರಮಾರ್ಥಿಕವಾಗಿ ಭೇದ ಇದೆಯೆಂದೇ ಅರ್ಥ. ಪಾರಮಾರ್ಥಿಕವಾಗಿ ಘಟಾದಿಪರಿಚ್ಛೇದವು ಇರುವುದರಿಂದ ಬ್ರಹ್ಮನಲ್ಲಿ ಮಹತ್ವವು ಬರುವುದಿಲ್ಲ. ಈ ವಿಷಯವನ್ನು ಗ್ರಂಥಕಾರರು 'ಕಿಂಚ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

'ಕಿಂಚ' ಇತ್ಯಾದಿ ವಾಕ್ಯಕ್ಕೆ ಮತ್ತೊಂದು ಬಗೆಯಲ್ಲಿ ಅವತಾರಿಕೆ ಹೇಳಬಹುದು - ಸ್ವತುಲ್ಯಸತ್ತಾಕವಾದ ಅಪರಿಚ್ಛೇದವೇ ಮಹತ್ವ. ಅದಂತೂ ಬ್ರಹ್ಮನಲ್ಲಿಲ್ಲ ಆದ್ದರಿಂದ ಮಹತ್ವಹಾನಿಯಾಯಿತೆ ಎಂದು ದೂಷಿಸಿದ್ದಾಯಿತು.

ಈಗ ಸ್ವತುಲ್ಯಸತ್ತಾಕವಾದ ಪರಿಚ್ಛೇದವೇ ಅಲ್ಪತ್ವವೆಂದು ಹಿಂದೆ ಅದ್ವೈತಿಗಳು ಹೇಳಿದ್ದರು. ಅವರುಗಳು ಹೇಳುವಂತೆಯೇ ಮಹತ್ವಹಾನಿ ಬರುತ್ತದೆ. ಏಕೆಂದರೆ ಬ್ರಹ್ಮನಲ್ಲಿ ಸ್ವತುಲ್ಯಸತ್ತಾಕವಾದ ಪರಿಚ್ಛೇದವೇ ಬರುತ್ತದೆ. ಪಾರಮಾರ್ಥಿಕವಾಗಿ ಘಟಾದ್ಯಭೇದವು ಬರುವುದಿಲ್ಲವೆಂದರೆ ಪಾರ-ಮಾರ್ಥಿಕವಾಗಿ ಭೇದವು ಬರುತ್ತದೆ. ಆದ್ದರಿಂದ ಅಲ್ಪತ್ವ ಬರಬೇಕಾದೀತು. ವಿರುದ್ಧವಾದ ಎರಡು ಧರ್ಮಗಳಲ್ಲಿ ಒಂದು ಅತಾತ್ವಿಕವಾದರೆ ಮತ್ತೊಂದು ತಾತ್ವಿಕವೇ ಆಗಬೇಕು. ಬ್ರಹ್ಮನಲ್ಲಿ ಘಟಾದ್ಯಭೇದವು ಪಾರಮಾರ್ಥಿಕವಾಗಿ ಇಲ್ಲವೆಂದರೆ ಘಟಾದಿಭೇದವು ಪಾರಮಾರ್ಥಿಕವಿದೆಯೆಂದೇ ಆಯಿತು.

**ಆಕ್ಷೇಪ :-** ಪ್ರತಿಯೋಗಿಯಾದ ಘಟಾದಿಗಳು ಅತಾತ್ವಿಕವಾಗಿವೆ. ಆದ್ದರಿಂದ ಘಟಾದಿಪರಿಚ್ಛೇದವೂ ಅತಾತ್ವಿಕ. ಘಟಾದಿ ಅಪರಿಚ್ಛೇದವೂ ಅತಾತ್ವಿಕವೇ ಆಗಿದೆ. ವಿರುದ್ಧವಾದ ಎರಡು ಧರ್ಮಗಳಲ್ಲಿ ಒಂದನ್ನು ನಿಷೇಧ ಮಾಡಿದರೆ ಮತ್ತೊಂದನ್ನು ವಿಧಿಸಿದಂತಾಗುತ್ತದೆಂಬ ನ್ಯಾಯದ ವಿರೋಧವೂ ಬರುವುದಿಲ್ಲ. ಆ ನ್ಯಾಯವು ಕೇವಲ ತಾತ್ವಿಕಪ್ರತಿಯೋಗಿಸ್ಥಲದಲ್ಲಿ ಅನ್ವಯವಾಗುತ್ತದೆ.

**ಸಮಾಧಾನ :-** ನ್ಯಾಯವನ್ನು ಸಂಕೋಚ ಮಾಡುವುದು ತಪ್ಪು. ಅವ್ಯಭಿಚರಿತವಾಗಿ ಈ ನ್ಯಾಯವು ಎಲ್ಲೆಡೆ ಸಮನ್ವಯವಾಗುತ್ತದೆ. ಶುಕ್ತಿರಜತದಲ್ಲಿಯೂ ಪ್ರತಿಯೋಗಿಯಾದ ರಜತ ಅತಾತ್ವಿಕವಾಗಿಯೇ ಇದೆ. ಆದರೆ ಶುಕ್ತಿಗೆ ರಜತದಿಂದ ತಾತ್ವಿಕವಾದ ಭೇದವೇ ಇದೆ. ಸ್ವತುಲ್ಯಸತ್ತಾಕವಾಗಿಯೇ ಭೇದವಿದೆ. 'ವಿರುದ್ಧಯೋಃ' ಎಂಬ ನ್ಯಾಯವು ಅತಾತ್ವಿಕಪ್ರತಿಯೋಗಿಸ್ಥಲದಲ್ಲಿಯೂ ಸಮನ್ವಯವಾಗುತ್ತದೆ. ಆದ್ದರಿಂದ ನ್ಯಾಯವನ್ನು ಸಂಕೋಚ ಮಾಡುವುದು ತಪ್ಪು.

ಉಪಸಂಹಾರದ ನೆಪದಿಂದ ಇನ್ನೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ. ವಾಸ್ತವಿಕವಾಗಿ ಬ್ರಹ್ಮನಿಗೆ ಜೀವಾಭೇದ ಬಂದರೆ ಅಪರಿಚ್ಛೇದ ಬರುವುದಿಲ್ಲ. ಜೀವಭೇದ ಬಂದರೇನೆ ಅಪರಿಚ್ಛೇದ ಬರುತ್ತದೆ. ಏಕೆಂದರೆ ಜೀವನು ಅಣುವಾದ್ದರಿಂದ ಪರಿಚ್ಛಿನ್ನನಾಗಿದ್ದಾನೆ. ಅಂತಹ ಜೀವನಿಂದ ಅಭಿನ್ನನಾದರೆ ಬ್ರಹ್ಮನೂ ಅಣು ಆಗಬೇಕಾದೀತು. ಅದಕ್ಕೋಸ್ಕರ ಪರಿಚ್ಛಿನ್ನನಾದ ಜೀವನಿಂದಲೇ ಅಭೇದವನ್ನು ಹೇಳಬೇಕು. ಇದು

ಕೊನೆಯ ಯುಕ್ತಿ. ಈ ಯುಕ್ತಿಯನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ 'ತಸ್ಮಾತ್' ಇತ್ಯಾದಿ ವಾಕ್ಯದಿಂದ.

ಭೇದವನ್ನೇ ಪರಿಚ್ಛೇದವೆಂದು ಹೇಳಿದರೆ ಬ್ರಹ್ಮನಿಗೆ ಘಟಾದಿಗಳಿಗಿಂತ ಭೇದವೇ ಇರುವುದರಿಂದ ಪರಿಚ್ಛಿನತ್ವ ಬಂತು. ಪರಿಚ್ಛೇದಕವು ಸ್ವತುಲ್ಯಸದ್ರೂಪವಾಗದ ಕಾರಣ ಅಥವಾ ಪರಿಚ್ಛೇದವು ಸ್ವತುಲ್ಯಸದ್ರೂಪವಾಗದ ಕಾರಣ ಪರಿಚ್ಛಿನ್ನತ್ವವನ್ನು ಪರಿಹರಿಸಲು ಆಗುವುದಿಲ್ಲ. ನಿಮಗೆ ಜಗದ್ ವ್ಯಾವೃತ್ತಿಯೂ ಬ್ರಹ್ಮನಲ್ಲಿ ಸಿದ್ಧವಾಗಬೇಕು. ಅಪರಿಚ್ಛಿನ್ನತ್ವವೂ ಬರಬೇಕು. ಎರಡನ್ನೂ ಕೂಡಿಸಬೇಕಾದರೆ ಪರಿಚ್ಛಿನ್ನತ್ವಶಬ್ದಕ್ಕೆ ಭೇದವೆಂಬರ್ಥವನ್ನು ಬಿಡಬೇಕು.

ವಸ್ತುತಃ ವಿಚಾರ ಮಾಡಿದರೆ ಜಗತ್ತಿನಿಂದ ಭೇದ ಬಂದರೆ ಮಾತ್ರ ಬ್ರಹ್ಮನಿಗೆ ಅಪರಿಚ್ಛೇದ ಬರಲು ಸಾಧ್ಯ. ಆದ್ದರಿಂದ ಅಪರಿಚ್ಛಿನ್ನತ್ವ ಬರಲು ಭೇದವು ಅನುಕೂಲವೇ ಆಗಿದೆ. ಹೀಗೆ ಅನುಕೂಲ-ವಾಗಿರಬೇಕಾದರೆ ಭೇದವನ್ನು ಪರಿಚ್ಛೇದವೆಂದು ಹೇಳಿ ಅಪರಿಚ್ಛಿನ್ನತ್ವ ಬರಬೇಕಾದರೆ ಭೇದವು ಇರಬಾರದೆಂದು ಹೇಳುವುದು ಅತ್ಯಂತ ಅನುಚಿತ.

ಇಲ್ಲಿಯ ತನಕ ಬಾಧಕವನ್ನೆಲ್ಲ ಹೇಳಿದ್ದಾಯಿತು. ವಸ್ತುಭೇದವು ಮಹತ್ವಭಂಜಕವಲ್ಲ. ಒಂದುವೇಳೆ ಹಾಗಾಗಿದ್ದಲ್ಲಿ ಬ್ರಹ್ಮನಲ್ಲಿ ಜೀವಾದಿವಸ್ತುಗಳ ಭೇದವನ್ನು ಒಪ್ಪಿದ್ದರೆ ಮಹತ್ವವು ಬರುತ್ತಿರಲಿಲ್ಲ. ಮಹತ್ವಕ್ಕೋಸ್ಕರ ಜೀವಾಭೇದವನ್ನು ಒಪ್ಪಬೇಕಿತ್ತು ಇತ್ಯಾದಿಯಾಗಿ ಉಪಪಾದಿಸಿದ್ದಾಯಿತು.

ಈಗ "ಅನೇಕಾತ್ಮಕತ್ವವು ಎಲ್ಲಿ ಇರುತ್ತದೋ ಅಲ್ಲಿ ಮಾತ್ರ ಮಹತ್ವವಿರುತ್ತದೆ" ಎಂಬ ಅವರ ವ್ಯಾಪ್ತಿಗೆ ವ್ಯಭಿಚಾರವನ್ನು ಹೇಳುತ್ತಿದ್ದಾರೆ - ಧಾನ್ಯರಾಶಿಯಲ್ಲಿ, ತೆನೆಯಲ್ಲಿ, ವನದಲ್ಲಿ ಅನೇಕಾತ್ಮಕತ್ವವಿದೆ. ಆದರೆ ಗಗನಕ್ಕಿಂತ ಮಹತ್ವಬುದ್ಧಿಯು ಅವುಗಳಲ್ಲಿ ಬರುವುದಿಲ್ಲ. ಅದರಂತೆ ವಿರಲವಾದ ಮತ್ತು ಅಲ್ಪವಾದ ಹತ್ತಿಯ ರಾಶಿಯಲ್ಲಿ ಅನೇಕಾತ್ಮಕತ್ವವು ಇಲ್ಲ. ಆದರೆ ನಿಬಿಡವಾದ ಬಹು ಅವಯವವುಳ್ಳ ಹತ್ತಿಯ ಪಿಂಡಿಗಿಂತ ಮಹತ್ವಬುದ್ಧಿಯು ಬರುತ್ತದೆ. ಆದ್ದರಿಂದ ನಿಮ್ಮ ವ್ಯಾಪ್ತಿಗೆ ಅನ್ವಯವ್ಯಭಿಚಾರ ವ್ಯತಿರೇಕವ್ಯಭಿಚಾರಗಳು ಬರುತ್ತವೆ. ಆದ್ದರಿಂದ ವಸ್ತ್ವಭೇದವು ಮಹತ್ವಪ್ರಯೋಜಕವಲ್ಲ.

ಆಕ್ಷೇಪ :- ಅವಯವಪ್ರಾಚುರ್ಯದಿಂದ ಘಟದಲ್ಲಿ ಮಹತ್ವವು ಬಂದಿದ್ದಲ್ಲ, ಕಪಾಲದಲ್ಲಿ ಅವಯವ ಅಪ್ರಾಚುರ್ಯದಿಂದ ಅಲ್ಪತ್ವವೂ ಬಂದಿದ್ದಲ್ಲ. ಕಿಂತು ಘಟದಲ್ಲಿ ಉತ್‌ಕೃಷ್ಟಪರಿಮಾಣವಿರುವುದರಿಂದ ಮಹತ್ ಎನಿಸಿದೆ. ಕಪಾಲದಲ್ಲಿ ಅಪಕೃಷ್ಟಪರಿಮಾಣವಿರುವುದರಿಂದ ಅಲ್ಪವೆನಿಸಿದೆ. ಹಾಗೆಯೇ ವಿರಲಾವಯವವುಳ್ಳ ತೂಲರಾಶಿಯಲ್ಲಿಯೇ ಮಹತ್ವ ಬುದ್ಧಿಯು ಬರುತ್ತದೆ. ಆದ್ದರಿಂದ ವ್ಯಭಿಚಾರವಿಲ್ಲ.

ಇಲ್ಲಿಯ ತನಕ ದೇಶಕಾಲಾಪರಿಚ್ಛೇದಗಳು ಮಹತ್ವಪ್ರಯೋಜಕಗಳಾಗಲಿ ಆದರೆ ವಸ್ತ್ವಪರಿಚ್ಛೇದವು ಮಹತ್ವಪ್ರಯೋಜಕವಲ್ಲವೆಂದು ಉಪಪಾದಿಸಿದ್ದಾಯಿತು. ಈಗ ವಸ್ತ್ವಪರಿಚ್ಛೇದವೂ ಮಹತ್ವಪ್ರಯೋಜಕ-ವೆಂದು ಒಪ್ಪಿಕೊಳ್ಳೋಣ. ಆದರೆ ಇಲ್ಲಿ ಪ್ರಶ್ನಿಸುತ್ತೇವೆ. ಆ ಅಪರಿಚ್ಛೇದವು ಬ್ರಹ್ಮನಿಗಿಂತ ಅಭಿನ್ನವೋ? ಅಥವಾ ಭಿನ್ನವೋ? ಭಿನ್ನವೆಂದು ಹೇಳಿದಾಗಲೂ ಸತ್ಯವೋ? ಮಿಥ್ಯಾವೋ? ಒಂದುವೇಳೆ ಅಪರಿಚ್ಛೇದವು

ಅಭಿನ್ನವೆಂದು ಹೇಳಿದರೆ ಬ್ರಹ್ಮನನ್ನು ಅಪರಿಚ್ಛಿನ್ನನೆಂದು ಹೇಳಲಾಗದು. ಬ್ರಹ್ಮನು ಅಪರಿಚ್ಛೇದನಾದರೆ ಅಪರಿಚ್ಛಿನ್ನನೆಂದು ಹೇಗೆ ಹೇಳುವುದು? ನಾವು ಬ್ರಹ್ಮನನ್ನು ಗುಣರೂಪನೆಂದು ಹೇಳುತ್ತೇವೆ, ಗುಣಿಯೆಂದೂ ಹೇಳುತ್ತೇವೆ ವಿಶೇಷವನ್ನು ಒಪ್ಪಿರುವುದರಿಂದ. ಆದರೆ ಅದ್ವೈತಿಗಳು ವಿಶೇಷವನ್ನು ಒಪ್ಪಿಲ್ಲವಾದ್ದರಿಂದ ಬ್ರಹ್ಮನನ್ನು ಪರಿಚ್ಛೇದನೆಂದು ಪರಿಚ್ಛಿನ್ನನೆಂದೂ ಹೇಳಲಾಗದು. ಇನ್ನು ಅಪರಿಚ್ಛೇದವನ್ನು ಬ್ರಹ್ಮಗಿಂತ ಭಿನ್ನವೆಂದು ಹೇಳಿ ಸತ್ಯವೆಂದು ಒಪ್ಪಿಕೊಂಡರೆ ಬ್ರಹ್ಮನಲ್ಲಿ ಮಹತ್ವ ಬರಲು ಸಾಧ್ಯವೇ ಇಲ್ಲ. ಧರ್ಮಿಸತ್ತಾಸಮಾನಸತ್ತಾಕವಾದ ಪರಿಚ್ಛೇದವೆಂಬ ವಸ್ತುವಿನ ಅಭೇದವಿಲ್ಲದ್ದರಿಂದ ಮಹತ್ವವು ಬರುವುದಿಲ್ಲ.

ಅಪರಿಚ್ಛೇದವು ಬ್ರಹ್ಮನಿಗಿಂತ ಭಿನ್ನ ಮಿಥ್ಯಾವೆಂದು ಹೇಳಿದರೆ ಪಾರಮಾರ್ಥಿಕವಾಗಿ ವಸ್ತುಭೇದವು ಬರಬೇಕಾದೀತು. ಏಕೆಂದರೆ ಪರಸ್ಪರ ವಿರುದ್ಧವಾದ ಎರಡು ಧರ್ಮಗಳಲ್ಲಿ ಒಂದು ಅತಾತ್ವಿಕವಾದರೆ ಮತ್ತೊಂದು ತಾತ್ವಿಕವಾಗುತ್ತದೆ. ಪರಿಚ್ಛಿದದ ಅಭಾವವು ಅತಾತ್ವಿಕವೆಂದು ಹೇಳಿದರೆ ಪರಿಚ್ಛೇದವು ತಾತ್ವಿಕವಾಯಿತು. ಈ ಪಕ್ಷದಲ್ಲಿಯೂ ಬ್ರಹ್ಮನು ಅಲ್ಪನಾಗಬೇಕಾದೀತು ಎಂಬ ಆಪತ್ತಿಯು ಇದ್ದೇ ಇದೆ.

ಹೀಗೆ ವಸ್ತುಪರಿಚ್ಛೇದವು ಬ್ರಹ್ಮನಲ್ಲಿ ಬಂದರೂ ಸಹ ಬ್ರಹ್ಮನು ಅಲ್ಪನಾಗಲಿಯೆಂಬ ದೋಷವು ತಪ್ಪಿದ್ದಲ್ಲ. ಸರಿಯಾಗಿ ವಿಚಾರ ಮಾಡಿದರೆ ಸತ್ಯವಾಗಿ ವಸ್ತುವು ಅಲ್ಪವಾಗಿದ್ದರಷ್ಟೇ ಬ್ರಹ್ಮನಲ್ಲಿ ವಾಸ್ತವ ಮಹತ್ವ ಬರಲು ಸಾಧ್ಯ. ದೇಶಕಾಲಾದಿಗಳಿಂದ ಅಪರಿಚ್ಛಿನ್ನತ್ವ ಬರಲು ವಾಸ್ತವವಾಗದಿರುವುದು ಕಾರಣವಲ್ಲ. ಒಂದುವೇಳೆ ವಸ್ತುತಃ ದೇಶಾದಿಗಳ ಇಲ್ಲದಿರುವಿಕೆಯೇ ದೇಶಾದ್ಯಪರಿಚ್ಛೇದಕ್ಕೆ ಕಾರಣವೆಂದು ಹೇಳಿದರೆ ಘಟಾದ್ಯಪರಿಚ್ಛೇದವನ್ನು ಹೇಳಬೇಕಾದೀತು. ವಸ್ತುತಃ ಘಟಾದಿಗಳೂ ಇಲ್ಲವೆಂದು ನೀವೇ ಒಪ್ಪುತ್ತೀರಿ. ಅವುಗಳ ಅಭೇದವು ಬ್ರಹ್ಮನಲ್ಲಿ ಬರಬೇಕಾದೀತು. ಇಷ್ಟಾಪತ್ತಿಯೆಂದು ಹೇಳಲು ಬರುವುದಿಲ್ಲ. ಘಟಾದಿಗಳ ವ್ಯಾವೃತ್ತಿಯನ್ನು ಒಪ್ಪಿದ್ದೀರಿ.

'ಘಟಾದೇರಪಿ ತತ್ಪ್ರಸಂಗಾತ್' ಎಂದರೆ ಘಟಾದೇಃ ಅಪರಿಚ್ಛೇದಂ ಪ್ರತಿ ನಿರೂಪಕತ್ವಪ್ರಸಂಗಾತ್' ಎಂದರ್ಥ.

ಅಥವಾ 'ಘಟಾದೇಃ' ಎಂಬುದಕ್ಕೆ ಮತ್ತೊಂದು ವ್ಯಾಖ್ಯಾನ ಮಾಡಬಹುದು. ದೇಶ ಕಾಲಗಳು ವಾಸ್ತವವಾಗಿ ಇಲ್ಲದಿರುವುದರಿಂದ ದೇಶಾಪರಿಚ್ಛಿನ್ನತ್ವವು ಕಾಲಾಪರಿಚ್ಛಿನ್ನತ್ವವು ಬ್ರಹ್ಮನಿಗೆ ಬರುವುದಾದರೆ ಘಟಕ್ಕೂ ಬರಲಿ ಘಟದ ವಿಷಯದಲ್ಲಿಯೂ ದೇಶ ಕಾಲಗಳು ಅವಾಸ್ತವವಾದ್ದರಿಂದ ಘಟದಲ್ಲಿಯೂ ದೇಶಾಪರಿಚ್ಛಿನ್ನತ್ವ ಕಾಲಾಪರಿಚ್ಛಿನ್ನತ್ವಗಳು ಬರಬೇಕಾದಿತು. ಆದ್ದರಿಂದ ದೇಶಾದ್ಯಪರಿಚ್ಛೇದವನ್ನು ಕುರಿತು ದೇಶಾದ್ಯಭಾವವನ್ನು ಹೇತುವೆಂದು ಹೇಳಿದರೆ ಘಟಾದಿಗಳಲ್ಲಿ ವ್ಯಭಿಚಾರ ಬರುತ್ತದೆ.

ಈ ವ್ಯಾಪ್ತಿಗೆ ವ್ಯಭಿಚಾರ ಅಷ್ಟೇ ಅಲ್ಲ. ಅಪ್ರಯೋಜಕಶಂಕೆಯೂ ಬರುತ್ತದೆಂದು ''ದೇಶಾದ್ಯಪರಿಚ್ಛೇದೇಪಿ'' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಿದ್ದಾರೆ - ದೇಶಕೃತವಾದ ಇಯತ್ತಾ (ಪರಿಚ್ಛೇದ) ಕಾಲಕೃತವಾದ ಇಯತ್ತಾ ಇಲ್ಲವೆಂಬ ಕಾರಣದಿಂದಲೇ ದೇಶಾದ್ಯಪರಿಚ್ಛೇದವು ಕೂಡಬೇಕಾದರೆ

ದೇಶದ್ಯಭಾವವನ್ನು ಏಕೆ ಹೇಳಬೇಕು? "ಬ್ರಹ್ಮ ದೇಶತಃ ಅಪರಿಚ್ಛಿನ್ನಂ, ದೇಶಸ್ಯೈವ ಅಭಾವಾತ್. ಬ್ರಹ್ಮ ಕಾಲತಃ ಅಪರಿಚ್ಛಿನ್ನಂ ಕಾಲಸ್ಯೈವ ಅಭಾವಾತ್" ಎಂದು ಹೇಳಿದಾಗ ಎರಡೂ ಹೇತುಗಳು ಅಪ್ರಯೋಜಕಗಳಾಗಿವೆ. ದೇಶಕಾಲಕೃತ ಇಯತ್ತಾದ ಅಭಾವದಿಂದಲೇ ಸಾಧ್ಯವು ಸಿದ್ಧವಾಗುವಾಗ ದೇಶಾಭಾವ ಕಾಲಾಭಾವವೆಂಬ ಕಾರಣಗಳು ಬೇಕಾಗಿಲ್ಲ. ಅನ್ಯಥಾಸಿದ್ಧಗಳಾಗಿವೆ.

ಅಷ್ಟೇ ಅಲ್ಲದೇ ಅತಿಪ್ರಸಂಗವೂ ಬರುತ್ತದೆ. ಬೌದ್ಧರಲ್ಲಿ ವಿಜ್ಞಾನವಾದಿಗಳು ವಿಜ್ಞಾನಕ್ಕಿಂತ ಬೇರೆಯಾದ ಕಾಲಾದಿಜಗತ್ತನ್ನು ಒಪ್ಪುವುದಿಲ್ಲ. ಕಾಲಾದಿ ವಸ್ತುವು ಇಲ್ಲದ ಮಾತ್ರದಿಂದ ಅವುಗಳ ಅಪರಿಚ್ಛೇದವು ಸಿದ್ಧವಾಗುವುದಾದರೆ ವಿಜ್ಞಾನದಲ್ಲಿಯೂ ಕಾಲಾದಿಗಳ ಅಪರಿಚ್ಛೇದವನ್ನು ಒಪ್ಪಿದರೆ ಅನಂತಕಾಲದಲ್ಲಿ ಇರಬೇಕೆಂದರ್ಥ. ಆದರೆ ವಿಜ್ಞಾನವನ್ನು ಅವರು ಕ್ಷಣಿಕವೆಂದು ಒಪ್ಪಿದ್ದಾರೆ. ಅದರಲ್ಲಿ ಕಾಲಾಪರಿಚ್ಛೇದವನ್ನು ಒಪ್ಪಲಾಗದು.

ಆದ್ದರಿಂದ ಬ್ರಹ್ಮನು ಸದ್ವಿತೀಯನಾದರೂ ಅಪರಿಚ್ಛಿನ್ನತ್ವವು ಬಂದೇ ಬರುತ್ತದೆ. "ದೇಶಾದಿ" ಎಂಬುದಕ್ಕೆ ಮತ್ತೊಂದು ಅವತಾರಿಕೆ - ದೇಶಾದ್ಯಪರಿಚ್ಛೇದವನ್ನೇ ಬ್ರಹ್ಮಪದದ ಅರ್ಥವೆಂದು ಹೇಳುತ್ತಿದ್ದೀರಿ. ದೇಶಾದಿಗಳು ಸತ್ಯವಾದರೆ ಮಾತ್ರ ದೇಶಾದ್ಯಪರಿಚ್ಛೇದ ಹೇಳಲು ಸಾಧ್ಯ. ಆದ್ದರಿಂದ ಬ್ರಹ್ಮಪದದಿಂದಲೇ ದೇಶಕಾಲಾದಿದ್ವಿತೀಯಪದಾರ್ಥಗಳಿಗೆ ಸತ್ಯತ್ವ ಒಪ್ಪಿದಂತಾಯಿತು. ಎಂದು 'ದೇಶಾದ್ಯಪರಿಚ್ಛೇದ' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಿದ್ದಾರೆ.

ಅಥವಾ ಮತ್ತೊಂದು ಬಗೆಯಲ್ಲಿ ಅವತಾರಿಕೆ - ವಸ್ತುತಸ್ತು ದೇಶಾದ್ಯಪರಿಚ್ಛೇದಕ್ಕೆ ದೇಶಾದ್ಯಭಾವವು ಕಾರಣವಲ್ಲ. ಹೊರತಾಗಿ ದೇಶಾದಿಗಳು ಇದ್ದರಷ್ಟೇ ದೇಶಾದ್ಯಪರಿಚ್ಛೇದವನ್ನು ಹೇಳಲು ಸಾಧ್ಯ. ಅದರಂತೆ ಪರಿಚ್ಛಿನ್ನರಾದ ಜೀವರು ಸತ್ಯವಾಗಿ ಇದ್ದರಷ್ಟೇ ಅಂತಹ ಜೀವರ ಅಪೇಕ್ಷೆಯಿಂದ ಬ್ರಹ್ಮನು ಅಪರಿಚ್ಛಿನ್ನನಾಗುತ್ತಾನೆ. ಹೀಗೆ ದೃಷ್ಟಾಂತವನ್ನು ದೇಶಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. ಈ ಎರಡು ಬಗೆಯ ಅವತಾರಿಕೆ. ವ್ಯಾಖ್ಯಾನ ಮಾತ್ರ ಮೊದಲಿನಂತೆ ತಿಳಿಯಬೇಕು.

"ಬ್ರಹ್ಮಶಬ್ದಶ್ಚ ವಿಷ್ಣಾವೇವ" ಎಂದು ಆಚಾರ್ಯರು ಭಾಷ್ಯದಲ್ಲಿ ಹೇಳಿದ್ದಾರೆ. ಬ್ರಹ್ಮಶಬ್ದವು ವಿಷ್ಣು-ವಾಚಕವೇ ಆಗುತ್ತದೆ. ವಿಷ್ಣುವು ದೇಶತಃ ಕಾಲತಃ ಗುಣತಃ ವ್ಯಾಪ್ತನಾಗಿರುವುದರಿಂದ ಬ್ರಹ್ಮಶಬ್ದವಾಚ್ಯ-ನಾಗಿದ್ದಾನೆ.

'ವಿಷ್ಲೃ ವ್ಯಾಪ್ತೌ'ಧಾತುವಿಗೆ 'ಷ್ನು' ಪ್ರತ್ಯಯ ಬರುತ್ತದೆ. ಧಾತುವಿನಲ್ಲಿ 'ಲೃ' ಇತ್ ಆಗುತ್ತದೆ. ಕ್ನು ಪ್ರತ್ಯಯದಲ್ಲಿ. 'ಕ' ಕಾರ ಇತ್ ಆಗುತ್ತದೆ. ನಕಾರಕ್ಕೆ 'ರಷಾಭ್ಯಾಂ ನೋಣಃ ಸಮಾನಪದೇ' ಎಂಬ ಸೂತ್ರದಿಂದ 'ಣ'ಕಾರ ಬರುತ್ತದೆ. ಆದ್ದರಿಂದ 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗುತ್ತದೆ. ಹೀಗೆ ವ್ಯಾಪ್ತಿಯನ್ನು ವಿಷ್ಣುಶಬ್ದವು ಹೇಳುತ್ತಿದೆ. ಆ ವ್ಯಾಪ್ತಿಯು ಮೂರುವಿಧ - ೧) ದೇಶತಃ ೨) ಕಾಲತಃ ೩) ಗುಣತಃ ಎಂದು. ಹೀಗೆ ತ್ರಿವಿಧವ್ಯಾಪ್ತಿಯುಳ್ಳ ವಿಷ್ಣುವಿನಲ್ಲಿ ಬ್ರಹ್ಮಶಬ್ದವು ಬರುತ್ತದೆ.

ಪ್ರಶ್ನೆ :- ಭಾಷ್ಯದಲ್ಲಿ ಆಚಾರ್ಯರು ಮೇಲಿನ ಅಭಿಪ್ರಾಯ ಹೇಳಲು ಹೊರಟಿಲ್ಲ. ಹೊರತಾಗಿ

ಶಿವಾದಿಗಳು ಬ್ರಹ್ಮಶಬ್ದವಾಚ್ಯರಲ್ಲವೆಂದು ತಿಳಿಸಲು 'ಬ್ರಹ್ಮಶಬ್ದಶ್ಚ' ಎಂಬ ವಾಕ್ಯವು ಹೊರಟಿದೆ. ತ್ರಿವಿಧವ್ಯಾಪ್ತಿಯನ್ನು ಹೇಳುವುದಕ್ಕಾಗಿ ಅಲ್ಲ.

ಉತ್ತರ :- ಹೌದು, ಆದರೂ ವಿಶೇಷ್ಯನಾದ ವಿಷ್ಣುವನ್ನು ಹೇಳುವುದರಲ್ಲಷ್ಟೇ ತಾತ್ಪರ್ಯವಲ್ಲ ತ್ರಿವಿಧ ವ್ಯಾಪ್ತಿಯನ್ನೂ ಹೇಳುತ್ತದೆ. ಏಕೆಂದರೆ ಸಕಲಶಬ್ದಗಳೂ ಭಗವಂತನಲ್ಲಿ ಯೋಗವೃತ್ತಿಯಿಂದ ಸಮನ್ವಯವಾಗುತ್ತವೆಂದು ಹೇಳಿದೆ.

ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವು ಪರಿಹಾರವಾಯಿತು.

ಆಕ್ಷೇಪ :- ಜೀವಾಭೇದಪೂರ್ವಪಕ್ಷವನ್ನು ಪರಿಹರಿಸಬೇಕೆಂದರೆ ಜೀವಭೇದವನ್ನು ಸಮರ್ಥಿಸಬೇಕು. ಜೀವಭೇದವನ್ನು ಸಮರ್ಥಿಸುವುದರಿಂದ ವಿಷಯಸಿದ್ಧಿಯಾಗುತ್ತದೆ. ವಿಷಯಸಿದ್ಧಿಗೆ ಅಂಗವಾದದ್ದು ಗುಣಪೂರ್ಣತ್ವ. ಇಂತಹ ಗುಣಪೂರ್ಣತ್ವವು ಬ್ರಹ್ಮಶಬ್ದದ ಅರ್ಥವಾಗಿದೆಯೆಂದು ಹೇಳಬೇಕು. ಇದನ್ನು ಬಿಟ್ಟು ವಿಷ್ಣುವೆಂಬ ಅರ್ಥವನ್ನು ಹೇಳುವುದು ಅನುಚಿತ.

ಸಮಾಧಾನ :- ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಬ್ರಹ್ಮಶಬ್ದವು ವಿಷ್ಣುವೆಂಬ ಅರ್ಥವನ್ನೂ ಹೇಳುತ್ತದೆಂದು ಹೇಳಿದ್ದರಿಂದ ಗುಣಪೂರ್ಣತ್ವ ಎಂಬರ್ಥವೂ ಬ್ರಹ್ಮಶಬ್ದದಿಂದ ಹೇಳಿದಂತಾಯಿತು. ವಿಷಯಸಿದ್ಧಿಯು ಆಯಿತು. ಜೀವಭೇದವೂ ಸಿದ್ಧವಾಯಿತು.

ಪರಂಪರಯಾ ಹೇಳಿದಂತಾಯಿತು. ಸಾಕ್ಷಾತ್ತಾಗಿ ಹೇಳಿದಂತಾಯಿತು. ಎಂದರೆ ನ್ಯಾಯವಿವರಣದಲ್ಲಿ ಬ್ರಹ್ಮಶಬ್ದದಿಂದ ಗುಣಪೂರ್ಣತ್ವಾರ್ಥವನ್ನೇ ಸ್ಪಷ್ಟವಾಗಿ ಹೇಳಿದ್ದಾರೆ.

ಆಚಾರ್ಯರು ಬ್ರಹ್ಮಶಬ್ದದಿಂದ ವಿಷ್ಣು ಎಂಬರ್ಥವನ್ನು ಹೇಳಲು ಏನು ಕಾರಣ? ಎಂದರೆ ಶಿಷ್ಯರಿಗೆ ಅನುಕೂಲವಾಗುತ್ತದೆ. ಸಿದ್ಧಾಂತಕ್ಕೆ ಉಪಯುಕ್ತವಾಗದಿದ್ದರೂ ಬ್ರಹ್ಮಶಬ್ದದಿಂದ ವಿಷ್ಣು ಎಂಬರ್ಥವನ್ನು ತಿಳಿದಾಗ ಶಿವಾದಿಗಳು ವಾಚ್ಯರೆಂಬ ಸಂಶಯವು ಶಿಷ್ಯರಿಗೆ ಬರುವುದಿಲ್ಲ. ಅಥವಾ ಗುಣಪೂರ್ಣತ್ವವನ್ನು ಹೊಂದಲು ಬ್ರಹ್ಮನೇ ಯೋಗ್ಯನಾಗಿದ್ದಾನೆ ಬೇರೆಯವರಲ್ಲ ಎಂಬುದನ್ನು ಸಮರ್ಥಿಸಲು ಹೇಳಿದ್ದಾರೆ. ಆದ್ದರಿಂದ ಅನುಪಯುಕ್ತವಲ್ಲ.

ಹೀಗೆ ಹೇಳಿದ್ದರಿಂದ ಮತ್ತೊಬ್ಬ ಮೂರ್ಖನ ಆಕ್ಷೇಪವೂ ನಿರಸ್ತವಾಯಿತು. ಬ್ರಹ್ಮಪದದಿಂದ ಅಭೇದವೆಂಬ ಅರ್ಥವೇ ತಿಳಿಯುತ್ತದೆ. ಆದ್ದರಿಂದ ಅಭೇದವರ ಪೂರ್ವಪಕ್ಷವು ಈ ಶಬ್ದದಿಂದ ಪರಿಹಾರವಾಗುವುದಿಲ್ಲ ಎಂಬ ಜೊಳ್ಳು ಆಕ್ಷೇಪವು ಬರುವುದಿಲ್ಲ. ಈಗಾಗಲೇ ನಾವು ಹೇಳಿದಂತೆ. ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತದೆ ಹೊರತು 'ಅಭೇದ' ಎಂಬರ್ಥವನ್ನು ಹೇಳುವುದಿಲ್ಲ ಎಂದು.

ಶೈವರ ಆಕ್ಷೇಪ :- ಬ್ರಹ್ಮಶಬ್ದದಿಂದ ತ್ರಿವಿಧ ಅಪರಿಚ್ಛೇದವು ತಿಳಿಯುತ್ತದೆ. ಅಂತಹ ತ್ರಿವಿಧ ಅಪರಿಚ್ಛೇದವು ಶಿವನಲ್ಲಿ ಇರುವುದರಿಂದ ಶಿವನು ಬ್ರಹ್ಮಪದವಾಚ್ಯನಾಗಿದ್ದಾನೆ. ಶಿವನ ಜಿಜ್ಞಾಸೆಯನ್ನು ಸೂತ್ರವು ವಿಧಿಸುತ್ತಿದೆ.

ಪರಿಪೂರ್ಣಚಂದ್ರಿಕಾ

**ಪರಿಹಾರ :-** ಇವರ ಮತವೂ ನಿರಸ್ತವಾಯಿತು. ಭಾಷ್ಯದಲ್ಲಿ ಅನೇಕ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಇದರಿಂದ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮಾತ್ರ ಇರುವುದೆಂದು ನಿರ್ಣಯವಾಗಿದೆ.

ಅಷ್ಟೇ ಅಲ್ಲ. ''ಪತ್ಯುರಸಾಮಂಜಸ್ಯಾತ್'' ಎಂಬ ಸೂತ್ರದಲ್ಲಿ ಸೂತ್ರಕಾರರೇ ಸ್ವತಃ ಶಿವನಿಗೆ ಅಪೂರ್ಣತ್ವವನ್ನು ಸಮರ್ಥಿಸಿದ್ದಾರೆ. ಆದ್ದರಿಂದ ತ್ರಿವಿಧ ಅಪರಿಚ್ಛೇದವನ್ನು ಸಮರ್ಥಿಸಲು ಆಗುವುದಿಲ್ಲ. ಶಿವನು ಎಷ್ಟು ಬಗೆಯಲ್ಲಿ ಅಪೂರ್ಣನಾಗಿದ್ದಾನೆಂಬುದನ್ನು ಅನುವ್ಯಾಖ್ಯಾನದಲ್ಲಿಯೂ ಅನೇಕ ಪ್ರಮಾಣಗಳಿಂದ ವಿಸ್ತಾರವಾಗಿ ನಿರೂಪಿಸಿದ್ದಾರೆ.

ಹೆಚ್ಚಿನ ವಿವರಣೆಯನ್ನು ಗುರುಗಳು ಮಾಡಿದ 'ನ್ಯಾಯಮೌಕ್ತಿಕಮಾಲೆ' ಗ್ರಂಥವನ್ನು ಓದಿ ತಿಳಿದುಕೊಳ್ಳಬೇಕು.




ಬ್ರಹ್ಮಶಬ್ದಾರ್ಥ ನಿರ್ಗುಣವಲ್ಲ

ನಿರ್ಗುಣವನ್ನು ಶಬ್ದವು ಲಕ್ಷಣಾವೃತ್ತಿಯಿಂದಲೆ ಹೇಳಬೇಕಾಗುವುದರಿಂದ ಶ್ರುತಿಸೂತ್ರಗಳಲ್ಲಿ ಬ್ರಹ್ಮಶಬ್ದದ ಮುಖ್ಯಾರ್ಥವನ್ನು ಬಿಡುವುದು ಅದ್ವೈತದಲ್ಲಿ ದೋಷವಾಗುತ್ತದೆ. ಇದಕ್ಕೆ ಅದ್ವೈತದಲ್ಲಿ ಹೀಗೆ ಸಮಾಧಾನ ಹೇಳುತ್ತಾರೆ. 'ದೇಶಕಾಲ ವಸ್ತುಗಳೆಂಬ ಮೂರರ ಪರಿಮಿತಿ ಇಲ್ಲದ ತತ್ವವೆ ಮುಖ್ಯವಾಗಿ ಮಹತ್ ಎನಿಸುತ್ತದೆ. ಬ್ರಹ್ಮನಲ್ಲಿ ಜೀವನೆಂಬ ವಸ್ತುವಿನ ಸ್ವರೂಪ ಇಲ್ಲದಿದ್ದರೆ ನ್ಯೂನತೆ ಬಂದಂತಾಗುವುದು. ಮುಖ್ಯವಾದ ಮಹತ್ವವಿಲ್ಲ ಎಂದಾಗುವುದು. ಆದರಿಂದ ವಸ್ತುಪರಿಮಿತಿ ಇಲ್ಲದುದು ಎಂಬ ಬ್ರಹ್ಮಶಬ್ದದ ಮುಖ್ಯಾರ್ಥವಿಟ್ಟುಕೊಂಡಾಗಲೆ ಜೀವಬ್ರಹ್ಮೈಕ್ಯ ಸಿದ್ಧಿಸುವುದು ಎಂದು. ಇದನ್ನು ಒಪ್ಪುವುದಾದರೆ ಬ್ರಹ್ಮನಲ್ಲಿ ಜೀವೈಕ್ಯದಂತೆ ಘಟೈಕ್ಯವೂ ಬರಬೇಕಾದೀತು. ಇಲ್ಲದಿದ್ದರೆ ಘಟಸ್ವರೂಪ ಬ್ರಹ್ಮನಲ್ಲಿಲ್ಲವೆಂದು ಅವನ ಮುಖ್ಯ ಮಹತ್ವಕ್ಕೆ ಭಂಗ ಬಂದೀತು. ಘಟೈಕ್ಯವೂ ಬ್ರಹ್ಮನಲ್ಲಿ ಬರಲಿ ಎನ್ನುವಂತಿಲ್ಲ. ಅವನಲ್ಲಿ ಪ್ರಪಂಚ ವೈಲಕ್ಷಣ್ಯವನ್ನು ಅದ್ವೈತ ಹೇಳುತ್ತದೆ.

'ಘಟಸ್ವರೂಪ ಅವಾಸ್ತವವಾದ್ದರಿಂದ ಬ್ರಹ್ಮನಲ್ಲಿ ಘಟೈಕ್ಯವಿಲ್ಲದಿದ್ದರೆ ಕುಂದಿಲ್ಲ, ಜೀವಸ್ವರೂಪ ವಾಸ್ತವವಾದ್ದರಿಂದ ಜೀವೈಕ್ಯ ಮಾತ್ರ ಅವಶ್ಯಕ' ಎನ್ನುತ್ತಾರೆ. ಆದರೆ ದೇಶಕಾಲಗಳು ಅವಾಸ್ತವವಾದರೂ ಅವುಗಳ ಪರಿಮಿತಿ ಶೂನ್ಯತ್ವವು ಘಟದಲ್ಲಿ ತನ್ನಂತೆ ಸತ್ಯವಾಗಿ ಇಲ್ಲದುದರಿಂದ ಘಟ ಅಲ್ಪವೆನಿಸುತ್ತದೆ. ಹಾಗೇ ಘಟ ಅವಾಸ್ತವವಾದರೂ ಬ್ರಹ್ಮನಲ್ಲಿ ಘಟೈಕ್ಯ ತನ್ನಂತೆ ಸತ್ಯವಾಗಿ ಇಲ್ಲದಿದ್ದರೆ ಬ್ರಹ್ಮನೂ ಅಲ್ಪನೆನಿಸಬೇಕಾಗುತ್ತದೆ. 'ಮಹತ್ವ ಬರಬೇಕಾದರೆ ತನ್ನಂತೆ ಸತ್ಯವಾದ ವಸ್ತುವಿನ ಪರಿಮಿತಿ ತನ್ನಲ್ಲಿ ಇಲ್ಲ ಎಂದಾಗಬೇಕು' ಎನ್ನುವುದಾದರೆ ಬ್ರಹ್ಮನಲ್ಲಿ ದೇಶಕಾಲ ಪರಿಮಿತಿ ಬರಬಹುದೆಂದಾಯಿತು. ಏಕೆಂದರೆ ದೇಶಕಾಲಗಳು ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವಲ್ಲ. ಆಕಾಶದಲ್ಲಿ ತನ್ನಂತೆ ವ್ಯಾವಹಾರಿಕ ಸತ್ಯವಾದ ಘಟದ ಭೇದರೂಪವಾದ ಪರಿಮಿತಿ ಬರುವುದರಿಂದ ಆಕಾಶ ಅಲ್ಪವೆನಿಸಬೇಕಾದೀತು.

'ಮಹತ್ತ್ವ ಬರಬೇಕಾದರೆ ತನ್ನಂತೆ ಸತ್ಯವಾದ ಪರಿಮಿತಿ ಇಲ್ಲ ಎಂದಾಗಬೇಕು' ಎನ್ನುವುದಾದರೆ ಬ್ರಹ್ಮನಲ್ಲಿ ತನ್ನಂತೆ ಸತ್ಯವಾದ ಘಟಭೇದವಿಲ್ಲದಿರುವುದೆ ಮಹತ್ತ್ವವೆನ್ನುವಂತೆ ತನ್ನಂತೆ ಸತ್ಯವಾದ ಜೀವಭೇದವಿಲ್ಲದಿರುವುದ ಮಹತ್ತ್ವ ಎಂದಾಗಲಿ. ಜೀವೈಕ್ಯವನ್ನು ಒಪ್ಪಬೇಕಾಗಿಲ್ಲ. ಜೀವಭೇದದ ಅಭಾವವೆ ಜೀವೈಕ್ಯ ಎಂದರೆ ಘಟಭೇದದ ಅಭಾವವೆ ಘಟೈಕ್ಯ ಎಂದಾದೀತು.

ಆಕಾಶದಲ್ಲಿ ತನ್ನಂತೆ ಸತ್ಯವಾದ ದೇಶಕಾಲಪರಿಮಿತಿ ಶೂನ್ಯತ್ವವೆ ಮಹತ್ತ್ವ. ಬ್ರಹ್ಮನಲ್ಲಿ ಘಟಾಭೇದರೂಪವಾದ ಪರಿಮಿತಿಶೂನ್ಯಕ್ಕೆ ತನ್ನಂತೆ ಪಾರಮಾರ್ಥಿಕ ಸತ್ಯವಲ್ಲದ್ದರಿಂದ ಮಹತ್ತ್ವವಿಲ್ಲ ಎಂದೇಕೆ ಹೇಳಬಾರದು? ಇದಕ್ಕೆ ಅದ್ವೈತಿಗಳು ಹೇಳಬಹುದು - ಆಕಾಶದಲ್ಲಿ ತನ್ನಂತೆ ಸತ್ಯವಾದ ದೇಶಕಾಲ ಪರಿಮಿತಿ ಇಲ್ಲದ್ದರಿಂದ ಮಹತ್ತ್ವ. ಬ್ರಹ್ಮನಲ್ಲಿ ತನ್ನಂತೆ ಪಾರಮಾರ್ಥಿಕವಾದ ಘಟಭೇದವಿಲ್ಲದ್ದರಿಂದ ಮಹತ್ತ್ವ. ಹೊರತು ಅವನಲ್ಲಿ ತನ್ನಂತೆ ಸತ್ಯವಾದ ಘಟಾಭೇದವನ್ನು ನಾವು ಒಪ್ಪಿಲ್ಲ ಎಂದು. ಆದರೆ ಇದು ಸರಿಯಲ್ಲ. ಬ್ರಹ್ಮನಲ್ಲಿ ಘಟಾಭೇದ ಸತ್ಯವಲ್ಲದಿದ್ದರೆ ಘಟಭೇದ ಸತ್ಯವಿರಲೇಬೇಕು. ಎರಡು ವಿರುದ್ಧವಸ್ತುಗಳಲ್ಲಿ ಒಂದು ಸತ್ಯವಲ್ಲದಿದ್ದರೆ ಇನ್ನೊಂದು ಸತ್ಯವಿರಲೇಬೇಕು. ಆದರಿಂದ ಬ್ರಹ್ಮನಲ್ಲಿ ತನ್ನಂತೆ ಸತ್ಯವಾದ ಘಟಭೇದವೆಂಬ ಪರಿಮಿತಿ ಬರುವುದರಿಂದ ಅವನಲ್ಲಿ ಅಲ್ಪತ್ವ ಅಪರಿಹಾರ್ಯ.

ವಸ್ತುತಃ ಬ್ರಹ್ಮನಲ್ಲಿ ಜೀವಭೇದವಿದ್ದರೆ ಮಹತ್ತ್ವವೇ ಬರುತ್ತದೆ. ಅಲ್ಪತ್ವವಲ್ಲ. ಅಲ್ಪನಾದ ಜೀವನಿಗಿಂತ ಬ್ರಹ್ಮ ವಿಲಕ್ಷಣನೆಂದರೆ ಅದು ಮಹತ್ತ್ವವೆ ತಾನೆ? ಅದ್ವೈತಿಗಳಿಗೆ ಬ್ರಹ್ಮನಲ್ಲಿ ಪ್ರಪಂಚಭೇದವೂ ಬೇಕು. ಮಹತ್ತ್ವವೂ ಬೇಕು. ಎರಡೂ ಸೇರಬೇಕಾದರೆ ಭೇದವು ಅಲ್ಪತ್ವವೆನ್ನುವುದನ್ನು ಬಿಡಲೇಬೇಕು.

ದೇಶಕಾಲ ಪರಿಮಿತಿ ಶೂನ್ಯತ್ವದಂತೆ ವಸ್ತುಭೇದ ಶೂನ್ಯತ್ವವೂ ಮಹತ್ತ್ವಕ್ಕೆ ಕಾರಣವೆನ್ನುವುದಾದರೆ ಈ ವಸ್ತುಭೇದ ಶೂನ್ಯತ್ವ ಬ್ರಹ್ಮನಿಗಿಂತ ಭಿನ್ನವೊ, ಅಭಿನ್ನವೊ? ಅಭಿನ್ನ ಎಂದರೆ 'ಬ್ರಹ್ಮ' ಬ್ರಹ್ಮ ಎನಿಸಲಾರದು. ಏಕೆಂದರೆ 'ಬ್ರಹ್ಮ' ಎಂಬಲ್ಲಿ ಬೃಹಧಾತುವಿನ ಅರ್ಥ ವಸ್ತುಭೇದ ಶೂನ್ಯತ್ವ ರೂಪವಾದ ಮಹತ್ತ್ವ. ಮನಿನ್ ಪ್ರತ್ಯಯಕ್ಕೆ ಆ ಮಹತ್ತ್ವ 'ಉಳ್ಳದ್ದು' ಎಂದರ್ಥ. ಮಹತ್ತ್ವ ಬ್ರಹ್ಮಸ್ವರೂಪವೆ ಆದರೆ ಪ್ರತ್ಯಯಾರ್ಥವಿಲ್ಲ ಎಂದಾಗುವುದು.

ಮಹತ್ತ್ವ ಬ್ರಹ್ಮನಿಗಿಂತ ಭಿನ್ನವಾದರೆ, ಭಿನ್ನವಾಗಿದ್ದು ಮಿಥ್ಯೆಯಾದರೆ ವಸ್ತುತಃ ಮಹತ್ತ್ವ ಬ್ರಹ್ಮನಲ್ಲಿ ಇಲ್ಲ. ಭಿನ್ನವಾಗಿದ್ದು ಸತ್ಯವಾಗಿದ್ದರೆ ಸತ್ಯವಾದ ಆ ವಸ್ತುವಿನ ಭೇದ ಬ್ರಹ್ಮನಲ್ಲಿ ಬರುವುದರಿಂದ ಅಲ್ಪತ್ವ ಬಂದಿತು.

ಬ್ರಹ್ಮಶಬ್ದದಿಂದಲೆ ಜೀವಾಭೇದ ಸಿದ್ಧವಾಗುವುದೂ ಸುಳ್ಳು. ಜೀವರು ಬೇರೆ ಇದ್ದರೆ ಮಾತ್ರ ಅಲ್ಪರಾದ ಜೀವರಿಗಿಂತ ಬ್ರಹ್ಮನಲ್ಲಿ ಮಹತ್ತ್ವ ಬಂದೀತು. ಆದರಿಂದ ಬ್ರಹ್ಮಶಬ್ದದಿಂದಲೆ ಜೀವಭೇದ ಸಿದ್ಧವಾಗುತ್ತದೆ.

ಬ್ರಹ್ಮನಲ್ಲಿ ದೇಶಕಾಲ ಪರಿಮಿತಿ ಶೂನ್ಯತ್ವರೂಪವಾದ ಮಹತ್ತ್ವ ಬರಲು ದೇಶಕಾಲಗಳ ಅಸ್ತಿತ್ವವೆ ಕಾರಣ. ಅಭಾವವಲ್ಲ. ಆದ್ದರಿಂದ ದೇಶಕಾಲಗಳಿಂದಲೂ ಗುಣಗಳಿಂದಲೂ ಪೂರ್ಣನೆನಿಸುವುದೆ ಬ್ರಹ್ಮಶಬ್ದದ ಅರ್ಥ. ಈ ಅರ್ಥದಲ್ಲಿ ವಿಷ್ಣುವೆ ಬ್ರಹ್ಮ. 'ವಿಷ್ಣು' ಶಬ್ದವೂ ಪೂರ್ಣತ್ವ ಎಂಬ ಅರ್ಥದ ವಿಷ್ ಧಾತುವಿಗೆ ಕ್ನು ಪ್ರತ್ಯಯ ಸೇರುವುದರಿಂದಾಗಿದೆ.

---

ಪರಿಪೂರ್ಣಚಂದ್ರಿಕಾ

## 'ಬ್ರಹ್ಮ ಜಿಜ್ಞಾಸಾ' ಎಂಬಲ್ಲಿ ಸಮಾಸ ವಿಚಾರ

**तात्पर्यचन्द्रिका –**

**अत्र परैः ब्रह्मणो जिज्ञासेति षष्ठीसमासः । न चतुर्थीसमासः । षष्ठी च कर्मणि । नतु शेषे । कर्मणि षष्ठ्या हि प्रतीत्यनुबन्धितया जिज्ञासापेक्षितकर्मणः साक्षाल्लाभः । शेषषष्ठ्या तु सामान्यद्वारेणेति कुसृष्टिः । शेषषष्ठीपक्षे 'तद् विजिज्ञासस्व' इति साक्षाज्जिज्ञासाकर्मत्वप्रतिपादकश्रुत्यननुगमश्चेति शेषषष्ठी निराकृता । तदयुक्तम् । परपक्षे विचारजन्यज्ञानकर्मणो ब्रह्मणो विचारकर्मत्वायोगात् । अपरोक्षवृत्तिव्याप्यस्य फलव्याप्यत्वनियमाच्च । स्वपक्षे कर्मणि षष्ठ्यामपि प्रमाण-साधनप्रयोजनादिपरिकरयुक्तस्यैव ब्रह्मणो जिज्ञासाकर्मत्वान्न प्रमाणादि-विचारस्याप्रतिज्ञाततताप्रसङ्गः । ''कृद्योगलक्षणा च षष्ठी समस्यते'' इति प्रतिप्रसवात् 'प्रतिपदविधाना षष्ठी न समस्यते' इत्यस्य निषेधस्य नायं विषय इति' ।**

---

१ पञ्चपञ्चपादिका

अत उपसंहरति – तस्माद्यथोक्तसाधनसम्पत्त्यनन्तरं ब्रह्मजिज्ञासा कर्तव्येति ।। यतः परिपूर्णो हेतुरनन्तरमवश्यं कार्यमारभते, अतः कर्तव्येत्यावश्यकतामाह भाष्यकारः । यतो द्वैतानुषङ्गादतितरामुद्विजमानेन ब्रह्मात्मत्वं च हस्तप्राप्तमिव मन्यमानेन प्रवर्तितव्यमेव ब्रह्मजिज्ञासायाम्; प्रदीप्तशिरसेव जलराशौ, स्पृशतेव च सुस्वादु फलमङ्गुल्यग्रेणाग्र-पादस्थेन । एवं सत्यर्थाद् धर्मजिज्ञासाया नियमेन पूर्ववृत्तत्वमथशब्देन पूर्वोक्तेन न्यायेन निराक्रियते ।।

ब्रह्मणो जिज्ञासा ब्रह्मजिज्ञासेति ।। अन्तर्णीतविचारार्थान्वये हि चतुर्थीसमासः स्यात्, न शब्दाभिधेय इत्यवयवार्थमङ्गीकृत्य षष्ठीसमासो दर्शितः ।।

ब्रह्मशब्दस्यार्थनिर्देशावसरे प्राप्ते सूत्रकार एव निर्देक्ष्यतीति कथयति – ब्रह्म च वक्ष्यमाणलक्षणं ''जन्माद्यस्य यत'' इति ।।

तत्र यदन्यैर्वृत्तिकारैर्ब्रह्मशब्दस्यार्थान्तरमाशङ्क्य निरस्यते – न खलु ब्राह्मणजातिरिह गृह्यते, प्रत्यक्षसिद्धत्वाद् जिज्ञास्यत्वाभावात्; नापि तत्कर्तृका जिज्ञासा, त्रैवर्णिकाधि-कारात्; नापि जीवपरिग्रहः, तत्कर्तृत्वे विशेषणानर्थक्यात्, कर्मत्वे नित्यसिद्धत्वात्; न शब्दराशेर्ग्रहणम्, तस्य धर्मजिज्ञासौत्पत्तिकसूत्राभ्यामर्थवत्त्वप्रमाणत्वयोर्निरूपितत्वात्; नापि हिरण्यगर्भस्य, तदवाप्तेरपि विरक्तस्य ब्रह्मजिज्ञासोपदेशात्; नापि तत्कर्तृकता,

ಅನುವಾದ - 'ಬ್ರಹ್ಮಜಿಜ್ಞಾಸಾ' ಎಂಬಲ್ಲಿ ಯಾವ ಸಮಾಸ? ಎಂಬ ವಿಚಾರವು ಪ್ರಾಪ್ತವಾದಾಗ ಅದ್ವೈತಿಗಳು ಹೀಗೆ ಹೇಳುತ್ತಾರೆ - "ಬ್ರಹ್ಮಣಃ ಜಿಜ್ಞಾಸಾ" ಎಂದು ಷಷ್ಠೀಸಮಾಸವನ್ನೇ ಮಾಡಬೇಕು.

---

ज्ञानवैराग्ययोः सह सिद्धात्वात् – इति, तदपि न कर्तव्यमित्याह – अत एव न ब्रह्मशब्दस्य जात्याद्यर्थान्तरमाशङ्कितव्यमिति ।।

ब्रह्मण इति कर्मणि षष्ठी ।। वृत्त्यन्तरे तु शेषलक्षणा व्याख्याता, तां निरस्यति – न शेष इति ।। तत्र हेतुमाह – जिज्ञास्यापेक्षत्वाज्जिज्ञासाया इति ।। अथापि स्याद् अन्यद् जिज्ञास्यमिति, तदर्थमाह – जिज्ञास्यान्तरानिर्देशाच्चेति ।।

पुनः शेषषष्ठीवाद्याह – ननु शेषषष्ठीपरिग्रहेऽपि ब्रह्मणो जिज्ञासाकर्मत्वं न विरुध्यते; सम्बन्धसामान्यस्य विशेषनिष्ठत्वादिति ।। यद्यपि "शेषे षष्ठी"ति सम्बन्धमात्रे षष्ठी विहिता; तथाऽपि व्यवहारो विशेषमवलम्बते, बहवश्च सम्बन्धविशेषाः, तत्रावश्यमन्यतमः प्रतिपत्तव्यः; अन्यथा व्यवहारानुपपत्तेः । तत्र प्रकरणोपपदयोर्विशेषहेत्वोरभावादर्थाद् विशेषक्रियोपादानात् कारकत्वेनैव सम्बन्धः । तत्रापि सकर्मिकायाः कर्मकारकमभ्यर्हितम्, इति कर्मत्वं ब्रह्मणो न विरुध्यते । एवमपि साधारणे शब्देऽभिप्रेतमर्थं विहायार्थान्तरं परिगृह्य, पुनस्तद्द्वारेणाभिप्रेतमर्थं प्रतिपद्यमानस्य व्यर्थः प्रयासः स्यात्, तदाह – एवमपि प्रत्यक्षं ब्रह्मणः कर्मत्वमुत्सृज्य सामान्यद्वारेण परोक्षं कर्मत्वं कल्पयतो व्यर्थः प्रयासः स्यादिति ।।

ननु किमिति व्यर्थः? शेषषष्ठीपरिग्रहे सामान्येन यत्किञ्चिद् ब्रह्मसम्बन्धि येन येन जिज्ञासितेन विना ब्रह्म जिज्ञासितं न भवति तत्सर्वं जिज्ञास्यत्वेन प्रतिज्ञातं स्यात्; अतो न विशिष्टसम्बन्धो विवक्ष्यते; सामान्ये तस्याप्यन्तर्भावादिति यद्युच्यते, तदाह – न व्यर्थः; ब्रह्माश्रिताशेषविचारप्रतिज्ञानार्थत्वादिति चेदिति ।। स्वयमेव परोक्तमाशङ्क्योत्तरमाह – न; प्रधानपरिग्रहे तदपेक्षितानामर्थाक्षिप्तत्वादिति संक्षेपतो वस्तुसङ्ग्रहवाक्यम् । एतदेव प्रपञ्चयति – ब्रह्म हि ज्ञानेनाप्तुमिष्टतमत्वात्, प्रधानम् । तस्मिन् प्रधाने जिज्ञासाकर्मणि परिगृहीते यैर्जिज्ञासितैर्विना ब्रह्म जिज्ञासितं न भवति, तान्यर्थाक्षिप्तान्येव, इति न पृथक् सूत्रयितव्यानि । यथा 'राजासौ गच्छती'त्युक्ते सपरिवारस्य राज्ञो गमनमुक्तं भवति, तद्वदिति ।। यस्माद् ब्रह्मावाप्तिः पुरुषार्थः, तेन तद् ज्ञानेनाप्तुमिष्टतमम्, अतस्तदर्थत्वात् प्रवृत्तेः प्रधानं तत् । तस्मिन् प्रधाने जिज्ञास्यमाने, येन जिज्ञासितेन विना न सम्पूर्णा जिज्ञासा, तत् सामर्थ्यादेव तादर्थ्येन जिज्ञास्यते, न पृथगभिधानेन कृत्यमस्ति । यथा 'राजाऽसो गच्छती'त्युक्ते यावता परिवारेण विना राज्ञो गमनं न सम्पद्यते, तावतो गमनमर्थाक्षिप्तमिति न पृथगभिधीयते लोके, तद्वदिहापि स्वरूप-प्रमाण-युक्ति-साधन-प्रयोजनानि ब्रह्मज्ञानपरिपूर्णतार्थमर्थादेव जिज्ञास्यत्वान्न पृथक् सूत्रयितव्यानि ।

ಪಂಚಪೂರ್ಣಚಂದ್ರಿಕಾ

ಚತುರ್ಥೀತತ್ಪುರುಷವನ್ನು ಮಾಡಬಾರದು. ಷಷ್ಠೀ ಸಮಾಸದಲ್ಲಿಯೂ ಕರ್ಮಷಷ್ಠೀಯನ್ನೇ ಮಾಡಬೇಕು. ಶೇಷಷಷ್ಠಿಯನ್ನು ಮಾಡಬಾರದು. ಕರ್ಮಷಷ್ಠಿಯನ್ನು ಮಾಡಿದಾಗ ಪ್ರತೀತಿಯಲ್ಲಿ ವಿಶೇಷಣವಾಗಿ ಜಿಜ್ಞಾಸೆಗೆ ಅಪೇಕ್ಷಿತವಾದ ಕರ್ಮವು ಸಾಕ್ಷಾತ್ತಾಗಿ ಪ್ರಾಪ್ತವಾಗುತ್ತದೆ ಶೇಷಷಷ್ಠಿಯನ್ನು ಆಶ್ರಯಿಸಿದರೆ ಕರ್ಮತ್ವವು ಪರಂಪರಯಾ ಲಾಭವಾಗುತ್ತದೆ. ಇದು ಬಳಸು ದಾರಿ.

ಶೇಷಷಷ್ಠಿಯನ್ನು ಆಶ್ರಯಿಸಿದರೆ ಶ್ರುತ್ಯನನುಗಮವೆಂಬ ಮತ್ತೊಂದು ದೋಷವೂ ಬರುತ್ತದೆ. ಏಕೆಂದರೆ ಶ್ರುತಿಯು "ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ" ಎಂದು ಸ್ಪಷ್ಟವಾಗಿ ಬ್ರಹ್ಮನನ್ನು ಕರ್ಮವೆಂದು ಹೇಳುತ್ತಿದೆ. ಶೇಷಷಷ್ಠಿಯನ್ನು ವಿವಕ್ಷಿಸಿದರೆ ಸೂತ್ರವು ಕೇವಲ 'ಜಿಜ್ಞಾಸೆಗೆ ಸಂಬಂಧಿಸಿದವನು ಬ್ರಹ್ಮ" ಎಂದಷ್ಟೇ ಹೇಳಿದಂತಾಗುತ್ತದೆ. ಆವಾಗ ಶ್ರುತಿವಾಕ್ಯಕ್ಕೂ ಸೂತ್ರಕ್ಕೂ ಹೊಂದಿಕೆಯಾಗಿರುವುದಿಲ್ಲ. ಇಷ್ಟು ಅದ್ವೈತಸಿದ್ಧಾಂತ.

ಇದು ತಪ್ಪು. ಅದ್ವೈತಮತದ ಪ್ರಕಾರ ಬ್ರಹ್ಮನಲ್ಲಿ ಯಾವ ಕಾರಕಶಕ್ತಿಯೂ ಇಲ್ಲ. ವಿಚಾರದಿಂದ ಬರುವ ಜ್ಞಾನಕ್ಕೆ ಅವನು ಕರ್ಮಕಾರಕನಾಗಲಾರ. ಆದ್ದರಿಂದ ಜಿಜ್ಞಾಸೆಗೂ ಅವನು ಕರ್ಮನಾಗಲಾರ. ಜ್ಞಾನಕ್ಕೆ ಕರ್ಮನಾದವನೇ ವಿಚಾರಕ್ಕೂ ಕರ್ಮನಾಗಬೇಕು.

ಮತ್ತು ಅಪರೋಕ್ಷವೃತ್ತಿಗೆ ಬ್ರಹ್ಮನು ವಿಷಯನಾಗುತ್ತಾನೆಂದರೆ ಅಪರೋಕ್ಷವೃತ್ತಿಯಲ್ಲಿ ಪ್ರತಿಬಿಂಬಿಸುವ ಚೈತನ್ಯಕ್ಕೂ ವಿಷಯನೆಂದು ಹೇಳಲೇಬೇಕು. ಆವಾಗ ಕರ್ತೃಕರ್ಮಗಳೆರಡೂ ಒಂದು ಎಂದಂತಾಗುವುದು. ಇದರ ವಿರೋಧ ಬರಬಾರದೆಂದು ಅದ್ವೈತಿಗಳು ಚೈತನ್ಯದಲ್ಲಿ ಕರ್ಮತ್ವವನ್ನು ಒಪ್ಪಿಲ್ಲ. ಆದ್ದರಿಂದ ಬ್ರಹ್ಮನು ಕರ್ಮನೆನಿಸುವುದು ಹೇಗೆ?

ನಮ್ಮ ಸಿದ್ಧಾಂತದಲ್ಲಿ ಕರ್ಮಷಷ್ಠಿಯನ್ನೇ ಹೇಳುತ್ತೇವೆ. ಅದ್ವೈತಿಗಳಿಗಿರುವ ಯಾವ ದೋಷವೂ ನಮಗೆ ಬರುವುದಿಲ್ಲ. 'ಬ್ರಹ್ಮಕರ್ಮಕಜಿಜ್ಞಾಸಾ' ಎಂದು ಹೇಳುವ ನಮ್ಮ ಅಭಿಪ್ರಾಯ ಬ್ರಹ್ಮಸ್ವರೂಪ-ವಿಚಾರವು ಪ್ರಧಾನವಾಗಿದೆಯೆಂದು. ಆದ್ದರಿಂದ ಇದಕ್ಕೆ ಸಂಬಂಧಪಟ್ಟ ಲಕ್ಷಣ, ಪ್ರಮಾಣ, ಪ್ರಯೋಜನ ಮೊದಲಾದವುಗಳ ವಿಚಾರವನ್ನು ಮಾಡಬೇಕೆಂಬುದೇ ಶ್ರುತಿಸೂತ್ರಗಳ ಅಭಿಪ್ರಾಯ. ಹಾಗಾಗಿ ಮುಂದೆ ಮಾಡುವ ಪ್ರಮಾಣಾದಿ ವಿಚಾರಗಳಿಗೆ ಅಪ್ರತಿಜ್ಞಾತತ್ವದೋಷ ಬರುವುದಿಲ್ಲ.

"ಪ್ರತಿಪದವಿಧಾನಾ ಷಷ್ಠೀ ನ ಸಮಸ್ಯತೇ" ಎಂಬ ನಿಷೇಧವಿರುವುದರಿಂದ ಬ್ರಹ್ಮಜಿಜ್ಞಾಸಾ ಎಂದು ಸಮಾಸವಾಗುವುದಿಲ್ಲ. ಎಂಬ ಶಂಕೆಗೆ ಅವಕಾಶವಿಲ್ಲ. "ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೇ" ಎಂಬ ಪ್ರತಿಪ್ರಸವವಿದೆ. ಸಮಾಸನಿಷೇಧವನ್ನು ನಿಷೇಧಿಸುತ್ತಿರುವುದರಿಂದ 'ಬ್ರಹ್ಮಜಿಜ್ಞಾಸಾ' ಎಂಬುದು "ಪ್ರತಿಪದವಿಧಾನಾ ಷಷ್ಠೀ ನ ಸಮಸ್ಯತೇ" ಎಂಬ ನಿಷೇಧಕ್ಕೆ ವಿಷಯವಾಗುವುದಿಲ್ಲ.

ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂದು ಕರ್ಮಾರ್ಥದಲ್ಲಿ ಷಷ್ಠೀತತ್ಪುರುಷವನ್ನು ಮಾಡಬಹುದು. ಯಾವ ಬಾಧಕವೂ ನಮಗಿಲ್ಲ.

*ಜಿಜ್ಞಾಸಾಧಿಕರಣ*

**प्रकाशः** – क्रमप्राप्तं ''ब्रह्मजिज्ञासा'' इत्यत्र समासशोधनं कर्तुं पराभिमतमनूद्य निरस्यति ।। **अत्र परैर्मायावादिभिरिति** ।। 'निराकृता' इत्यन्वयः । यद्यपि सिद्धान्तेऽपि कर्मणि षष्ठ्या समासः । नात्र किञ्चित् परोक्तं विरोधि निरसनीयमस्ति तथाऽपि तादृशसमासः सिद्धान्त एव युक्तो नतु परमत इति, तद्भाष्यकारानौचित्यप्रदर्शनार्थं स्वभावोपन्यासः ।। **न चतुर्थीति** ।। वृत्तिकारैर्ब्रह्मणे जिज्ञासेति चतुर्थी समास उक्तः । स न भवति । ''तादर्थ्यसमासे प्रकृतिविकृतिग्रहणं कर्तव्यम्'' इति कात्यायनवचनेन यूपदार्वादिष्वेव प्रकृतिविकारभूतेषु चतुर्थीसमासनियमादिति भावः । 'षष्ठी च कर्मणि' इत्युक्तं व्यनक्ति ।। **कर्मणि षष्ठ्या हीति** ।। प्रतीतौ विशेषणत्वेन सम्बन्धितयेत्यर्थः ।

एतदुक्तं भवति । जिज्ञासेत्यत्रेच्छाया अनुबन्धिज्ञानम् । ज्ञानस्य ज्ञेयं ब्रह्म । न खलु ज्ञानं ज्ञेयं विना निरूप्यते । नच जिज्ञासा ज्ञानं विनेति प्रतीत्यनुबन्धित्वात् प्रथमं जिज्ञासाकर्मैव अपेक्ष्यते, नतु सम्बन्धिमात्रमिति ।।

**सामान्येति** ।। सम्बन्धसामान्यस्य विशेषनिष्ठत्वात्, प्रसक्तनिषेधेन जिज्ञासाकर्मत्वलाभ इति कुसृष्टिरित्यर्थः । यद्यपि परपक्षे षष्ठ्याः कर्मत्वार्थकत्वस्यैव निरस्यत्वेन तावदेवाऽनुवदनीयम् । नतु शेष षष्ठीनिरासप्रकारोऽपि । तस्यादूषणात् । तथाऽपि तस्य सिद्धान्तेऽपि प्रतिपिपादयिषितत्वेन तदनुवाद इत्यदोषः ।। **विचारेति** ।। विचारस्य स्वविषयविषयकज्ञानजनकत्वेन, स्वजन्यज्ञानस्य सकलकारकशक्तिविधुरब्रह्मकर्मकत्वायोगेन तस्यापि तत्कर्मकत्वायोगात् ।

ननु कारकशक्तिविधुरस्यापि शास्त्रजन्यापरोक्षवृत्तिव्याप्यत्वेन कर्मत्वव्यपदेश इत्यत आह ।। **अपरोक्षेति** ।। **फलेति** ।। वृत्त्युपहितचैतन्येत्यर्थः । घटादौ दर्शनादिति भावः । तथाच ब्रह्मणः फलव्याप्यत्वरूपव्यापकस्याभावेनापरोक्षवृत्तिव्याप्यत्वमपि तस्य न संभवतीत्यर्थः । फलव्याप्यत्वं तु कर्तृकर्मविरोधान्नाङ्गीक्रियत इति भावः । गान्धर्वशास्त्रविचारात् षड्जादिसाक्षात्कारदृष्टेः, ब्रह्मविचारात् तदपरोक्षवृत्तिर्जायत इति 'अपरोक्षवृत्तिव्याप्यस्य' इत्युक्तम् ।

ननु सिद्धान्तेऽपि कः समासः । ब्रह्मजिज्ञासयोरैक्यायोगेन सामानाधिकरण्येन तदयोगात् । नापि द्वितीयातत्पुरुषः । श्रितादिभिरेव तस्य विधानात् । कृद्योगे द्वितीयाऽयोगाच्च । नापि तृतीयातत्पुरुषः । ब्रह्मणो विषयत्वाप्राप्तेः । अत एव न पञ्चमीसमासोऽपि । नापि वृत्तिकाररीत्या चतुर्थीसमासः । प्रकृतिविकारभाव एव तादर्थ्यसमासस्य नियमितत्वात् । नापि सप्तमीसमासः । आधारसामान्ये शक्तायास्तस्याः विषयत्वरूपविशेषार्थकत्वे प्रतिपत्तिगौरवात् । सर्वत्र "सप्तमी" इत्यादियोगविभागाश्रयणापाताच्च । षष्ठीसमासपक्षेऽपि न कर्मणि षष्ठ्या स आश्रयितुं युक्तः । तथात्वे हि ब्रह्मस्वरूपमेव जिज्ञासायां कर्मतयाऽन्वेतीति ब्रह्मजिज्ञासैव प्रतिज्ञाता, नतु प्रमाणादिजिज्ञासेति अग्रे तेषां विचारो न युक्तः स्यात् । शेषषष्ठ्या तदाश्रयणे तु सम्बन्धमात्रं शेष इति, साक्षात् पारम्पर्येण च ब्रह्मतत्प्रमाणादिजिज्ञासायाः ब्रह्मसम्बन्धित्वात् सर्वजिज्ञासा प्रतिज्ञाता भवति । तथाच "कर्मणि षष्ठीपरिग्रहाय 'जिज्ञास्योऽयं विधीयते इत्युक्तम्" इति सुधावाक यानुपपत्तिरित्याशङ्क्य "कर्मणि षष्ठीसमासं समर्थयते ।। स्वपक्ष इति ।। ब्रह्मजिज्ञासायां प्रतिज्ञातायां लक्षणप्रमाणादिजिज्ञासामन्तरेण तस्या अभावात्, प्रधानब्रह्मजिज्ञासयैवार्थात् प्रमाणादिजिज्ञासाऽपि लभ्यत इति भावः । अत एव 'परिकरयुक्तस्य' इति परिकरपदप्रयोगः । उक्तं च सुधायां "तस्या विनाऽप्यभिधानेन लाभात्" इत्यादि । ननु यदि षष्ठी कर्मणि, न शेषे, तर्हि "कर्मणि च" इति कर्मणि षष्ठ्या समासप्रतिषेधात् कथं समास इति चेन्न । "उभयप्राप्तौ कर्मणि" इत्यनेन विहितायास्तेन निषेधात् । इहच कर्मण एवोपादानं नतु कर्तुरित्युभयप्राप्त्यभावात् । यद्यथशब्दादधिकारिलाभात् कथंचित् कर्तृप्राप्तिं मन्यसे, तर्हि "स्त्रीप्रत्यययोराकारयोः प्रयोगे नेति वक्तव्यम्" इति अकार-प्रत्ययांतप्रयोगे "उभयप्राप्तौ" इति षष्ठ्या निषेधादिह तेन न षष्ठीत्यवेहि । अत एव तत्र मञ्जर्यां 'धर्मजिज्ञासा देवदत्तस्य' इत्युदाहृतम् । जिज्ञासाशब्दस्य 'अप्रत्ययात्' इति विहिताकारप्रत्ययान्तस्य "कर्तृकर्मणोः कृति" इत्येव षष्ठी । नन्वेवमपि "प्रतिपदविहिता षष्ठी न समस्यते" इति निषेधात् "सर्पिषो

ज्ञानम्'' इत्यादाविवेहापि षष्ठीसमासो न स्यादित्यत आह ।। **कृद्योगेति** ।। ''कर्तृकर्मणोः कृति'' इत्यनेन **विहितेत्यर्थः** । 'प्रतिप्रसवः' अपवादापवादः ।। **नायं विषय इति** ।। ''ज्ञोऽविदर्थस्य करणे'' इति विहिता षष्ठी ''सर्पिषो ज्ञानम्'' इत्यत्रेति भावः ।

**गुरुराजीय** – परोक्ता कर्मणि षष्ठ्यपि तन्मते न युक्तेत्यनुवादपूर्वकमाह ।। **अत्र परैरिति** ।। **प्रतीत्यनुबन्धितयेति** ।। प्रतिपत्तौ विशेषणत्वेनानुबध्यत इत्यनुबन्धः । स्वरूपेण निरूपितायां जिज्ञासायां पश्चात् सम्बन्धिन्यपेक्षा । ब्रह्म ज्ञानद्वारा जिज्ञासास्वरूपनिरूपकमिति प्रथमोदिताकाङ्क्षावशेन ब्रह्मजिज्ञासया कर्मत्वेन सम्बध्यते । नतु सम्बन्धिमात्रतयेत्यर्थः ।

ननु विचारजन्यज्ञानकर्मत्वस्य ब्रह्मण्यभ्युपगमात् कर्मणि षष्ठ्युपपत्तिः । नचैवं दृश्यत्वापत्त्या मिथ्यात्वापत्तिरिति वाच्यम् । फलव्याप्यत्वरूपदृश्यत्वस्यैव तद्व्याप्यत्वाङ्गीकारेण ब्रह्मणस्तदापादनानुपपत्तेरित्यत आह – **अपरोक्षेति** ।। वृत्तिव्याप्यत्वमात्रस्यातीतादिसाधारण्ये तस्यापि फलव्याप्यत्वे विषयापरोक्ष्यं स्यादित्यत उक्तम् **अपरोक्षेति** ।। स्वपक्षे कर्मणि षष्ठीमुपपादयति – **स्वपक्ष इति** ।। **कृद्योगलक्षणाचेति** ।। जिज्ञासापदस्य चाकारप्रत्ययान्तत्वात् कृद्योगः । यस्तु ''कर्मणि च'' इति कर्मणि षष्ठ्याः समासप्रतिषेधः स ''उभयप्राप्तौ कर्मणि''इति या कर्तृकर्मणोरपि सामर्थ्यादुभयप्राप्तौ कर्मण्येवेति नियमिता षष्ठी तद्विषयः । यथा आश्चर्यो गवां दोहोऽगोपेनेति । एवं ह्याश्चर्यं व्यज्यते । प्राप्त्यभावात् । कर्तृकर्मणोः कृत्येव षष्ठी तेन ब्रह्मजिज्ञासेत्युपपन्नः समासः ।

ವಿವರಣೆ - ಬ್ರಹ್ಮಜಿಜ್ಞಾಸಾ ಎಂಬಲ್ಲಿ ಯಾವ ಸಮಾಸ ಮಾಡಬೇಕು? ಎಂಬ ವಿಮರ್ಶೆಯು ಪ್ರಾರಂಭವಾಗುತ್ತಿದೆ. ಸಿದ್ಧಾಂತದ ಪ್ರಕಾರ 'ಬ್ರಹ್ಮಜಿಜ್ಞಾಸಾ' ಎಂಬಲ್ಲಿ ಯಾವ ಸಮಾಸವೆಂದು ನಿರ್ಧಾರ ಮಾಡುವ ಮೊದಲು ಅದ್ವೈತಿಗಳು ಹೇಳುವ ಸಮಾಸವಿಚಾರವನ್ನು 'ಅತ್ರ ಪರೈಃ' ಇತ್ಯಾದಿ ವಾಕ್ಯಗಳಿಂದ ಅನುವಾದ ಮಾಡಿ ಖಂಡನೆ ಮಾಡುತ್ತಿದ್ದಾರೆ. 'ಅತ್ರ ಪರೈಃ' ಎಂಬುದಕ್ಕೆ ಮುಂದಿರುವ ''ಶೇಷಷಷ್ಠೀ ನಿರಾಕೃತಾ'' ಎಂಬಲ್ಲಿ ಅನ್ವಯ ಮಾಡಬೇಕು.

ಪ್ರಶ್ನೆ :- ಅದ್ವೈತಿಗಳನ್ನು ಖಂಡನೆ ಮಾಡುವುದು ಅನಾವಶ್ಯಕ. ಏಕೆಂದರೆ ಅದ್ವೈತಿಗಳು ಬ್ರಹ್ಮಜಿಜ್ಞಾಸಾ ಎಂಬಲ್ಲಿ ಚತುರ್ಥೀಸಮಾಸವನ್ನಾಗಲೀ ಶೇಷಷಷ್ಠೀಸಮಾಸವನ್ನಾಗಲೀ ಅಂಗೀಕರಿಸು-

ವುದಿಲ್ಲ. ಕರ್ಮಣಿಷಷ್ಠೀಸಮಾಸವನ್ನೇ ಅಂಗೀಕರಿಸುತ್ತಾರೆ. ಸಿದ್ಧಾಂತದಲ್ಲಿಯೂ ಕರ್ಮಣಿಷಷ್ಠೀಯನ್ನೇ ಅಂಗೀಕರಿಸಿ ಉಳಿದ ಸಮಾಸಗಳನ್ನು ನಿಷೇಧಿಸಲಾಗಿದೆ. ಹೀಗಿರುವಾಗ ಅದ್ವೈತಿಗಳಿಗೂ ನಮಗೂ ವಿಪ್ರತಿಪತ್ತಿಯೇ ಇಲ್ಲ. ವಿಪ್ರತಿಪತ್ತಿ ಇಲ್ಲದ ವಿಷಯದಲ್ಲೇಕೆ ಖಂಡನ ಮಂಡನೆಗಳು?

ಉತ್ತರ :- ಸತ್ಯ. ಆದರೆ ಕರ್ಮಣಿ ಷಷ್ಠೀಸಮಾಸವು ಸಿದ್ಧಾಂತದಲ್ಲಷ್ಟೇ ಉಪಪನ್ನವಾಗುತ್ತದೆ. ಅದ್ವೈತಮತದಲ್ಲಿ ಉಪಪನ್ನವಾಗುವುದಿಲ್ಲ. ಹೀಗೆ ಅನುಪಪನ್ನವಾದ ಸಮಾಸವನ್ನು ಭಾಷ್ಯಕಾರರು ಹೇಳಿದ್ದು ಅನುಚಿತವೆಂದು ತೋರಿಸುವುದಕ್ಕಾಗಿ ನಮ್ಮ ಅಭಿಪ್ರಾಯವನ್ನು ಇಲ್ಲಿ ಮಂಡಿಸಲಾಗಿದೆ. (ಸ್ವಭಾವೋಪನ್ಯಾಸಃ ಎಂಬಲ್ಲಿರುವ ಸ್ವಭಾವ ಶಬ್ದಕ್ಕೆ 'ತಮ್ಮ ಅಭಿಪ್ರಾಯ' ಎಂದರ್ಥ.)

ಅದ್ವೈತಿಗಳು :- "ಬ್ರಹ್ಮಣಃ ಜಿಜ್ಞಾಸಾ" ಎಂದು ಷಷ್ಠೀಸಮಾಸವನ್ನು ಮಾಡಬೇಕು. ಹೊರತು ಚತುರ್ಥೀಸಮಾಸವನ್ನು ಮಾಡಬಾರದು. ವೃತ್ತಿಕಾರರು "ಬ್ರಹ್ಮಣೇ ಜಿಜ್ಞಾಸಾ" "ಬ್ರಹ್ಮನಿಗೋಸ್ಕರ ಜಿಜ್ಞಾಸೆ" ಎಂದು ಚತುರ್ಥೀಸಮಾಸವನ್ನು ಹೇಳುತ್ತಾರೆ. ಇದು ಯುಕ್ತವಲ್ಲ. ಏಕೆಂದರೆ ಚತುರ್ಥೀಸಮಾಸ ಮಾಡಬೇಕಾದರೆ ಪ್ರಕೃತಿವಿಕೃತಿಭಾವವಿರಬೇಕು. ಪ್ರಕೃತಿವಿಕೃತಿಭಾವವಿಲ್ಲದಿದ್ದರೆ ಚತುರ್ಥೀಸಮಾಸವನ್ನು ಮಾಡಬಾರದು. ಹೀಗೆ ಕಾತ್ಯಾಯನನೇ ವಾರ್ತಿಕದಲ್ಲಿ ಹೇಳಿದ್ದಾನೆ - "ತಾದರ್ಥ್ಯಸಮಾಸೇ ಪ್ರಕೃತಿವಿಕೃತಿ ಗ್ರಹಣಂ ಕರ್ತವ್ಯಂ" "ಅದಕ್ಕೋಸ್ಕರ ಎಂಬರ್ಥದಲ್ಲಿ ಸಮಾಸ ಮಾಡಬೇಕಾದರೆ ಪ್ರಕೃತಿವಿಕೃತಿ ಭಾವವಿರಬೇಕು" ಎಂದು. ಅಂದರೆ ಉಪಾದಾನಉಪಾದೇಯಭಾವವಿದ್ದರೆ ಮಾತ್ರ ಚತುರ್ಥೀವಿಭಕ್ತಿಯು ಬರುತ್ತದೆ. ಉದಾಹರಣೆ - "ಯೂಪಾಯ ದಾರೂ" "ಯೂಪಕ್ಕಾಗಿ ಕಟ್ಟಿಗೆ" ಎಂಬಲ್ಲಿ ದಾರುವು ಪ್ರಕೃತಿ, ಯೂಪವು ವಿಕೃತಿಯಾಗಿದೆ. ಯಾವುದು ವಿಕೃತಿಯೋ ಅದೇ ಮೊದಲಿದ್ದು ಚತುರ್ಥೀವಿಭಕ್ತಿಯನ್ನು ಹೊಂದುತ್ತದೆ. ಅದರಂತೆ "ಕುಂಡಲಾಯ ಅಷ್ಟಾಪದಮ್" "ಕುಂಡಲಕ್ಕೋಸ್ಕರ ಚಿನ್ನ" ಎಂಬಲ್ಲಿಯೂ ಚಿನ್ನದ ವಿಕಾರವಾದ್ದರಿಂದ ಕುಂಡಲ ಶಬ್ದಕ್ಕೆ ಚತುರ್ಥೀವಿಭಕ್ತಿಯು ಬಂದಿದೆ. ಹಾಗೆಯೇ ಇಲ್ಲಿ "ಬ್ರಹ್ಮಣೇ ಜಿಜ್ಞಾಸಾ" ಎಂಬಲ್ಲಿಯೂ ಪ್ರಕೃತಿವಿಕೃತಿಭಾವವನ್ನು ಹೇಳಬೇಕು. ಆದರೆ ಹಾಗೆ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಚತುರ್ಥೀಸಮಾಸ ಮಾಡುವುದು ತಪ್ಪು.

ಇನ್ನು ಷಷ್ಠೀಸಮಾಸವನ್ನು ಮಾಡುವುದಿದ್ದರೂ ಕರ್ಮಣೀ ಷಷ್ಠೀಯನ್ನೇ ಮಾಡಬೇಕು. ಶೇಷೇಷಷ್ಠೀ-ಯನ್ನು ಮಾಡಬಾರದು.

ನೂರೊಂದು ಅರ್ಥಗಳು ಷಷ್ಠೀವಿಭಕ್ತಿಗೆ ಇವೆ. ಅವುಗಳಲ್ಲಿ ಕೆಲವನ್ನು ಕರ್ಮಾದ್ಯರ್ಥಗಳಲ್ಲಿ ವಿಧಾನ ಮಾಡಲಾಗಿದೆ. ಉಳಿದ ಎಲ್ಲ ಅರ್ಥಗಳು ಸಂಬಂಧಾರ್ಥದಲ್ಲಿ ಬರುತ್ತವೆಂದು 'ಷಷ್ಠೀ ಶೇಷೇ' ಎಂಬ ಸೂತ್ರವು ಹೇಳುತ್ತದೆ. ಪ್ರಕೃತ "ಬ್ರಹ್ಮಣಃ ಜಿಜ್ಞಾಸಾ" ಎಂಬಲ್ಲಿ ಶೇಷೇಷಷ್ಠೀಯನ್ನು ವಿವಕ್ಷಿಸಲು ಬರುವುದಿಲ್ಲ. ಏಕೆಂದರೆ ಜಿಜ್ಞಾಸೆಯ ಸ್ವರೂಪವನ್ನು ತಿಳಿಯಲು ಮೊದಲು ಅದರ ಕರ್ಮವನ್ನು ತಿಳಿಯಬೇಕು. ಅದನ್ನು ಸಾಕ್ಷಾತ್ತಾಗಿ ತಿಳಿಸುವ ವಿಭಕ್ತಿ ಎಂದರೆ ಕರ್ಮಾರ್ಥಕ ಷಷ್ಠೀ ಹೊರತು ಸಂಬಂಧಾರ್ಥಕ ಷಷ್ಠೀ ಅಲ್ಲ. ಅದು ಹೀಗೆ - 'ಜಿಜ್ಞಾಸಾ' ಎಂದರೆ 'ಜ್ಞಾನೇಚ್ಛೆ'. ಇಚ್ಛೆಯನ್ನು ತಿಳಿಯಬೇಕೆಂದರೆ ಅದರ ವಿಷಯವಾದ ಜ್ಞಾನವನ್ನು ಮೊದಲು ತಿಳಿಯಬೇಕು. ಜ್ಞಾನವನ್ನು

ತಿಳಿಯಬೇಕೆಂದರೆ ಜ್ಞಾನಕ್ಕೆ ವಿಷಯವಾದ ಜ್ಞೇಯವನ್ನು ತಿಳಿಯಬೇಕು. ಅಂದರೆ ಇಚ್ಛೆಯು ಜ್ಞಾನನಿರೂಪ್ಯ. ಜ್ಞಾನವು ಜ್ಞೇಯನಿರೂಪ್ಯ ಎಂದರ್ಥ. ಹಾಗಾಗಿ 'ಜಿಜ್ಞಾಸಾ' ಎಂದರೆ ನಮಗೆ ಯಾವುದರ ಜಿಜ್ಞಾಸೆಯೆಂದು ಪ್ರಶ್ನೆ ಬಂದೇ ಬರುತ್ತದೆ. ಹೀಗೆ ಜಿಜ್ಞಾಸೆಗೆ ಕರ್ಮವಾಗಿರುವ ಜ್ಞೇಯವು ಯಾವುದೆಂಬ ತಿಳಿಯುವ ಅಪೇಕ್ಷೆ ಬರುತ್ತದೆ ಹೊರತು ಜಿಜ್ಞಾಸೆಯ ಸಂಬಂಧವಿರುವ ಬೇರೆ ಯಾವುದೋ ಒಂದರ ಬಗ್ಗೆ ತಿಳಿಯುವ ಅಪೇಕ್ಷೆ ಬರುವುದಿಲ್ಲ. ಇಲ್ಲಿ ಕರ್ಮಣಿ ಷಷ್ಠೀಯನ್ನು ಮಾಡಿದರೆ ಸಾಕ್ಷಾತ್ತಾಗಿ ಕರ್ಮವು ಉಪಸ್ಥಿತವಾಗುತ್ತದೆ. "ಶೇಷೇಷಷ್ಠೀಯನ್ನು ಮಾಡಿದರೆ ಪರಂಪರಯಾ ಉಪಸ್ಥಿತವಾಗುತ್ತದೆ. ಆದ್ದರಿಂದ ಕರ್ಮಣಿಷಷ್ಠಿಯನ್ನು ಇಟ್ಟುಕೊಳ್ಳವುದೇ ಸಮಂಜಸ. 'ಪ್ರತೀತ್ಯನುಬಂಧಿತಯಾ' ಎಂದರೆ ಪ್ರತೀತಿಯಲ್ಲಿ ವಿಶೇಷಣತ್ವೇನ ಸಂಬಂಧವುಳ್ಳದ್ದು ಎಂದರ್ಥ. ಜಿಜ್ಞಾಸಾದಲ್ಲಿ ಅನುಬಂಧಿಯಾದ = ವಿಶೇಷಣವಾದ ಪ್ರತೀತಿಯಲ್ಲಿ ವಿಶೇಷಣವಾದದ್ದು ಕರ್ಮ. ಇದು ಕರ್ಮಣಿ ಷಷ್ಠಿಯಿಂದ ಸಾಕ್ಷಾಲ್ಲಾಭವಾಗುತ್ತದೆಂದರ್ಥ.

ಪ್ರಶ್ನೆ :- "ಪರೋಕ್ತೇ ದೂಷ್ಯ ಏವಾಂಶಃ ಮಿತ್ಯೈಃಶಬ್ದೈರನೂದ್ಯತೇ" ಎಂದು ಗ್ರಂಥಕಾರರು ಗ್ರಂಥಾರಂಭದಲ್ಲಿ ಪ್ರತಿಜ್ಞೆ ಮಾಡಿದ್ದಾರೆ. ಅದಕ್ಕನುಗುಣವಾಗಿ ಇಲ್ಲಿ ಶೇಷೇಷಷ್ಠೀಸಮಾಸದ ನಿರಾಕರಣೆಯನ್ನು ಅನುವಾದ ಮಾಡಬೇಕಾಗಿರಲಿಲ್ಲ. ಏಕೆಂದರೆ ಕರ್ಮತ್ವಾರ್ಥಕವಾದ ಷಷ್ಠಿಯನ್ನಷ್ಟೇ ಮುಂದೆ ನಿರಾಸಮಾಡುತ್ತೇವೆ.

ಉತ್ತರ :- ಹೌದು. ಶೇಷೇಷಷ್ಠಿಯಂತೂ ಬರುವುದಿಲ್ಲವೆಂಬುದು ನಮಗೂ ಸಮ್ಮತವಾದ್ದರಿಂದ ಎಲ್ಲಾದರೂ ಅದರ ನಿರಾಸ ಮಾಡಲೇಬೇಕು. ಪ್ರಸಕ್ತಿಯು ಒದಗಿ ಬಂದಿದ್ದರಿಂದ ಇಲ್ಲಿಯೇ ನಿರಾಸ ಮಾಡಿದ್ದಾರೆ. ಆದ್ದರಿಂದ ಹೇಳಿದ್ದೇನು ತಪ್ಪಿಲ್ಲ.

**ತತ್ವವಾದಿಗಳು** :- ಅದ್ವೈತಮತದಲ್ಲಿ ಕರ್ಮಾರ್ಥದಲ್ಲಿ ಷಷ್ಠೀವಿಭಕ್ತಿಯನ್ನು ಹೇಳಲಾಗದು. ಯಾವ ಕಾರಕಶಕ್ತಿಯೂ ಬ್ರಹ್ಮನಿಗಿಲ್ಲ. ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ ಈ ಯಾವ ಕಾರಕಶಕ್ತಿಯನ್ನೂ ಬ್ರಹ್ಮನು ಹೊಂದಿಲ್ಲವೆಂದು ಅವರೇ ಒಪ್ಪಿದ್ದಾರೆ. ನಿರ್ವಿಶೇಷನಾದ್ದರಿಂದ ಪ್ರಾತಿಭಾಸಿಕಕ್ಕೂ ಅರ್ಥಕ್ರಿಯಾಕಾರಿತ್ವವನ್ನು ಅವರು ಒಪ್ಪುವುದಿಲ್ಲ. ಪಾರಮಾರ್ಥಿಕಕ್ಕೂ ಅರ್ಥಕ್ರಿಯಾ-ಕಾರಿತ್ವವನ್ನು ಅವರು ಒಪ್ಪುವುದಿಲ್ಲ ಕೇವಲ ವ್ಯಾವಹಾರಿಕಕ್ಕಷ್ಟೇ ಒಪ್ಪಿದ್ದಾರೆ. ಪಾರಮಾರ್ಥಿಕನಾದ ಬ್ರಹ್ಮನಿಗೆ ಕ್ರಿಯಾಹೇತುತ್ವವೆಂಬ ಕಾರಕತ್ವಸಾಮಾನ್ಯವೇ ಇಲ್ಲವಾದ ಮೇಲೆ ಕರ್ಮತ್ವವಿಶೇಷ ಬರುವುದು ಸಾಧ್ಯವೇ ಇಲ್ಲ. ಆದ್ದರಿಂದ ವಿಚಾರಜನ್ಯಜ್ಞಾನದಲ್ಲಿ ಬ್ರಹ್ಮನು ಕರ್ಮನಾಗುವುದಿಲ್ಲವೆಂದು ಅವರು ಹೇಳಬೇಕು. ಹಾಗಾದಾಗ ವಿಚಾರದಲ್ಲಿಯೂ ಕರ್ಮನಾಗಲಾರ.

ಪ್ರಶ್ನೆ :- ಬ್ರಹ್ಮನು ಸಕಲಕಾರಕವಿಧುರನಾಗಿದ್ದಾನೆ. ಆದರೂ ಶಾಸ್ತ್ರಜನ್ಯಅಪರೋಕ್ಷವೃತ್ತಿಗೆ ವ್ಯಾಪ್ಯನಾಗಿದ್ದಾನೆ. ಜಿಜ್ಞಾಸೆಯಲ್ಲಿ ಅವನು ಕರ್ಮನಾಗಬೇಕಾದರೆ ಜ್ಞಾನದಲ್ಲಿಯೂ ಕರ್ಮನಾಗಬೇಕು. ಜ್ಞಾನದಲ್ಲಿ ಕರ್ಮ ಎಂದರೆ ಕರ್ಮಕಾರಕನಾಗಬೇಕೆಂದರ್ಥವಲ್ಲ. ವೇದಾಂತಜನ್ಯವಾದ ಅಪರೋಕ್ಷ-ವೃತ್ತಿಯಲ್ಲಿ ವ್ಯಾಪ್ಯನಾಗಿದ್ದಾನೆ. ಅಷ್ಟು ಮಾತ್ರದಿಂದ ಗೌಣವಾದ ಕರ್ಮತ್ವವನ್ನು ಹೇಳಬಹುದು.

*ಪರಿಪೂರ್ಣಚಂದ್ರಿಕಾ*

ಸಂಗೀತಶಾಸ್ತ್ರವಿಚಾರದಿಂದ ಷಡ್ಜ ಮೊದಲಾದ ಸಪ್ತಸ್ವರಗಳ ಸಾಕ್ಷಾತ್ಕಾರವಾಗುವಂತೆ ಬ್ರಹ್ಮವಿಚಾರದಿಂದ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ಕಾರಕಶಕ್ತಿಯು ಬೇಡ ಆದರೂ ವಿಚಾರದಿಂದ ಬರುವ ಅಪರೋಕ್ಷವೃತ್ತಿಗೆ ಬ್ರಹ್ಮನು ವಿಷಯನಾಗುತ್ತಾನೆ. ಈ ಅರ್ಥದಲ್ಲಿ ಅವನು ಜ್ಞಾನಕರ್ಮನೆನಿಸುತ್ತಾನೆ.

ಉತ್ತರ :- ಬ್ರಹ್ಮನು ಅಪರೋಕ್ಷವೃತ್ತಿಗೆ ವ್ಯಾಪ್ಯನಾದನೆಂದರೆ ಫಲವ್ಯಾಪ್ಯನೂ ಆಗಬೇಕು. ಯಾವುದೆಲ್ಲ ಅಪರೋಕ್ಷವೃತ್ತಿಗೆ ವ್ಯಾಪ್ಯವೋ ಅವುಗಳೆಲ್ಲ ಫಲವ್ಯಾಪ್ಯವೆಂದು ಅವನೇ ಒಪ್ಪಿದ್ದಾನೆ. ಅಂತಃಕರಣವೃತ್ತಿಯು ಪರೋಕ್ಷವೃತ್ತಿ ಅಪರೋಕ್ಷವೃತ್ತಿಯೆಂದು ಎರಡುವಿಧವಾಗಿದೆ. ಪರೋಕ್ಷವೃತ್ತಿಯಿಂದ ಚೈತನ್ಯದ ಅಭಿವ್ಯಕ್ತಿ ಆಗುವುದಿಲ್ಲ. ಅಪರೋಕ್ಷವೃತ್ತಿಯಿಂದ ಚೈತನ್ಯದ ಅಭಿವ್ಯಕ್ತಿ ಆಗುತ್ತದೆ. ಪರ್ವತೋ ವಹ್ನಿಮಾನ್ ಧೂಮಾತ್ ಎಂಬುದು ಪರೋಕ್ಷವೃತ್ತಿ. ಇಲ್ಲಿ ಚೈತನ್ಯದ ಅಭಿವ್ಯಕ್ತಿ ಇಲ್ಲ. ಆದರೆ 'ಅಯಂ ಘಟಃ' ಇತ್ಯಾದಿಕಡೆಯಲ್ಲಿ ಅಪರೋಕ್ಷವೃತ್ತಿಯಿಂದ ಚೈತನ್ಯವು ಅಭಿವ್ಯಕ್ತವಾಗುತ್ತದೆಂದು ನಿಮ್ಮ ಸಿದ್ಧಾಂತ. ಪ್ರಕೃತ ಬ್ರಹ್ಮನು ಅಪರೋಕ್ಷವೃತ್ತಿಗೆ ವಿಷಯನೆಂದರೆ ಚೈತನ್ಯಕ್ಕೂ ವಿಷಯನೆಂದು ಹೇಳಬೇಕು. ಆವಾಗ ಕರ್ತೃಕರ್ಮಭಾವವಿರೋಧ ಬರುತ್ತದೆ. ಆದ್ದರಿಂದ ವ್ಯಾಪಕನಿವೃತ್ತೌ ವ್ಯಾಪ್ಯನಿವೃತ್ತಿಃ. ಫಲವ್ಯಾಪ್ಯತ್ವ ಇಲ್ಲವಾದ್ದರಿಂದ ಅಪರೋಕ್ಷವೃತ್ತಿವ್ಯಾಪ್ಯತ್ವವೂ ಬರುವುದಿಲ್ಲ. ಜ್ಞಾನಕರ್ಮತ್ವವನ್ನು ಗೌಣವಾಗಿಯೂ ಹೇಳಲು ಬಾರದ ಕಾರಣ ವಿಚಾರಕರ್ಮತ್ವವನ್ನು ಹೇಳಲು ಬರುವುದಿಲ್ಲ.

ಇದರಿಂದ ಇಷ್ಟು ತಿಳಿಯುತ್ತದೆ - ಶೇಷೇಷಷ್ಠಿಯನ್ನು ಮಾಡಬಾರದು. ಕರ್ಮಣಿಷಷ್ಠಿಯನ್ನು ಮಾಡಬೇಕೆಂಬುದು ವಸ್ತುಸ್ಥಿತಿಯಾದರೂ ನಿಮಗೆ ಅದನ್ನು ಹೇಳಲು ಬರುವುದಿಲ್ಲ. ಹಾಗೆ ಹೇಳಿದರೆ ಅಪಸಿದ್ಧಾಂತ ಬರುತ್ತದೆ.

ಸಿದ್ಧಾಂತದಲ್ಲಿ ಯಾವ ಸಮಾಸ? ಕರ್ಮಧಾರಯ ಸಮಾಸವಂತೂ ಸಾಧ್ಯವಿಲ್ಲ. ಕರ್ಮಧಾರಯ-ಸಮಾಸ ಮಾಡುವುದಿದ್ದರೆ ಎರಡೂ ವಸ್ತುಗಳಿಗೆ ಅಭೇದಾನ್ವಯವನ್ನು ಹೇಳಬೇಕು. ಬ್ರಹ್ಮರೂಪವಾದ ಜಿಜ್ಞಾಸೆಯೆಂದು ಅಭೇದಾನ್ವಯವನ್ನು ಮಾಡಲು ಬರುವುದಿಲ್ಲ.

ದ್ವಿತೀಯಾತತ್ಪುರುಷವೂ ತಪ್ಪು. 'ಶ್ರಿತ' ಮೊದಲಾದ ಕೆಲವು ಶಬ್ದಗಳ ಜೊತೆಗೆ ಮಾತ್ರ ದ್ವಿತೀಯಾ-ತತ್ಪುರುಷವನ್ನು ಹೇಳಿದ್ದಾರೆ. 'ಜಿಜ್ಞಾಸಾಶಬ್ದವು ಅವುಗಳಲ್ಲಿ ಸೇರಿಲ್ಲ. ಕೃದಂತಶಬ್ದವಾಗಿದೆ. ಕೃದಂತಶಬ್ದ-ಯೋಗವಿದ್ದಾಗ ಷಷ್ಠೀಯನ್ನೇ ವಿಧಿಸಿದ್ದಾರೆ. ದ್ವಿತೀಯಾ ಬರುವುದಿಲ್ಲ.

ತೃತೀಯಾತತ್ಪುರುಷವೂ ತಪ್ಪು - ಬ್ರಹ್ಮನಿಂದ ಜಿಜ್ಞಾಸೆ ಎಂದು ಹೇಳಿದಂತಾಯಿತು. ಇದರಿಂದ ಬ್ರಹ್ಮನು ಜಿಜ್ಞಾಸೆಗೆ ವಿಷಯನೆಂದು ತಿಳಿಯುವುದಿಲ್ಲ. ಬ್ರಹ್ಮನಿಗೆ ವಿಷಯತ್ವ ಬರುವುದಿಲ್ಲವೆಂಬುದರಿಂದಲೇ ಪಂಚಮೀತತ್ಪುರುಷವೂ ಕೂಡುವುದಿಲ್ಲ.

ಇಲ್ಲಿ ಚತುರ್ಥೀತತ್ಪುರುಷವೂ ತಪ್ಪು. ವೃತ್ತಿಕಾರರು ಚತುರ್ಥೀಸಮಾಸವನ್ನು ಹೇಳಿದ್ದರೂ ಸಹ ಅದನ್ನು ಇಟ್ಟುಕೊಳ್ಳುವುದು ಶಕ್ಯವಿಲ್ಲ. ತಾದರ್ಥ್ಯಸಮಾಸವಾಗುವುದಾದರೆ ಉಪಾದಾನ ಉಪಾದೇಯ-ಭಾವವಿರಬೇಕು. ಅದು ಇಲ್ಲಿ ಇಲ್ಲ. ಸಪ್ತಮೀತತ್ಪುರುಷವೂ ತಪ್ಪು. ಅಧಿಕರಣಾರ್ಥದಲ್ಲಿ ಸಪ್ತಮೀ

ಬರಬೇಕು. "ಆಧಾರೋ ಅಧಿಕರಣಂ" ಎಂಬಂತೆ ಆಧಾರವೇ ಅಧಿಕರಣವಾಗಿದೆ. ಆಗ ಬ್ರಹ್ಮನು ಜಿಜ್ಞಾಸೆಗೆ ಆಧಾರ ಎಂದಂತಾಯಿತು. ಆಧಾರವು ಬಹುವಿಧವಾಗಿದೆ. ಅವುಗಳಲ್ಲಿ ವಿಷಯವೂ ಒಂದು ಆಧಾರ. ಸಾಮಾನ್ಯವಾಚಕವಾದ ಆಧಾರಶಬ್ದದಿಂದ ವಿಷಯವೆಂಬ ವಿಶೇಷವನ್ನು ತಿಳಿಯುವುದು ಕಷ್ಟಸಾಧ್ಯ.

ಮತ್ತು ಸಪ್ತಮೀಸಮಾಸಾದಿಗಳನ್ನೇ ಮಾಡುತ್ತೇವೆಂದರೆ 'ಸಪ್ತಮೀ' ಇತ್ಯಾದಿಯಾಗಿ ಯೋಗವಿಭಾಗ ಮಾಡಬೇಕಾದೀತು. ದ್ವಿತೀಯಾ, ತೃತೀಯಾ, ಸಪ್ತಮೀ ಎಲ್ಲಾ ಸೂತ್ರಗಳಲ್ಲಿಯೂ ಕೆಲವು ಶಬ್ದಗಳ ಯೋಗವಿದ್ದಾಗ ಮಾತ್ರ ದ್ವಿತೀಯಾದಿಸಮಾಸಗಳನ್ನು ಮಾಡಬೇಕೆಂದು ನಿಯಮವನ್ನು ಮಾಡಲಾಗಿದೆ. ಈಗ ಬ್ರಹ್ಮಜಿಜ್ಞಾಸಾ ಎಂಬುದು ಆ ನಿಯಮದಲ್ಲಿ ಒಳಪಡುವುದಿಲ್ಲ. ಆದರೂ ನೀವು ದ್ವಿತೀಯಾದಿ-ಸಮಾಸವನ್ನೇ ಮಾಡುತ್ತೀರಾದರೆ ದ್ವಿತೀಯಾ, ಸಪ್ತಮೀ, ಇತ್ಯಾದಿಯಾಗಿ ಸೂತ್ರಗಳನ್ನು ಬೇರ್ಪಡಿಸಿ, ಅಂತಹ ಬೇರ್ಪಟ್ಟ ಸೂತ್ರದಿಂದ ಇಲ್ಲಿ ಸಮಾಸವಿಧಾನ ಮಾಡಬೇಕು. ಈ ದೋಷವು ಸಪ್ತಮೀ ಸಮಾಸದಲ್ಲಿ ಮಾತ್ರವಲ್ಲ. ಸಕಲ ಸಮಾಸಗಳಲ್ಲಿಯೂ ಬರುತ್ತದೆ. ಈ ರೀತಿಯಾದ ಯೋಗವಿಭಾಗವು ಅಪ್ರಾಮಾಣಿಕ.

ಇನ್ನು ಕರ್ಮಣಿ ಷಷ್ಠೀಸಮಾಸವನ್ನು ಹೇಳಲಾಗದು. "ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕು" ಎಂದಂತಾಯಿತು. ಆವಾಗ ಮುಂದಿನಶಾಸ್ತ್ರದಲ್ಲಿ ಬ್ರಹ್ಮಸ್ವರೂಪದ ವಿಚಾರವನ್ನಷ್ಟೇ ಮಾಡಬೇಕೆಂದಾ-ಗುತ್ತದೆ. ಆವಾಗ ಪ್ರಮಾಣಾದಿಗಳ ವಿಚಾರ ಮಾಡಿದ್ದು ತಪ್ಪಾಗುತ್ತದೆ.

ಪ್ರಶ್ನೆ :- ಶೇಷಷಷ್ಠೀಸಮಾಸವನ್ನು ಮಾಡಬಹುದು. ಮೇಲಿನ ಯಾವ ದೋಷಗಳೂ ಈ ಪಕ್ಷದಲ್ಲಿ ಇಲ್ಲ. ಏಕೆಂದರೆ ಸಂಬಂಧಸಾಮಾನ್ಯವಷ್ಟೇ ಪ್ರಾಪ್ತವಾಗುತ್ತದೆ. ಬ್ರಹ್ಮಸ್ವರೂಪ ಜಿಜ್ಞಾಸೆಯೂ ಸಾಕ್ಷಾತ್ ಬ್ರಹ್ಮನ ಸಂಬಂಧಿಯಾಗಿದೆ. ಅದಕ್ಕೆ ಸಂಬಂಧಪಟ್ಟ ಪ್ರಮಾಣಾದಿಗಳ ಜಿಜ್ಞಾಸೆಯೂ ಪರಂಪರವಾಗಿ ಬ್ರಹ್ಮಸಂಬಂಧಿಯಾಗಿದೆ. ಹೀಗೆ ಎಲ್ಲವೂ ಬ್ರಹ್ಮವಿಚಾರವೆಂದೇ ಆಗುತ್ತದೆ. ಯಾವ ವಿಚಾರವೂ ಅಸಂಗತವಾಗುವುದಿಲ್ಲ. ಆದ್ದರಿಂದ ಶೇಷಷಷ್ಠೀಯು ಸಮಂಜಸವಾಗಿದೆ.

ಆಗಲಿ ಶೇಷಷಷ್ಠಿಯನ್ನೇ ಮಾಡೋಣ ಎಂದರೆ ಸುಧಾವಿರೋಧ ಬರುತ್ತದೆ "ಕರ್ಮಣಿ ಷಷ್ಠಿಯನ್ನು ಸ್ವೀಕರಿಸಬೇಕೆಂದು ಸೂಚನೆ ಮಾಡುವುದಕ್ಕಾಗಿ 'ವಿಷ್ಣುವು ಜಿಜ್ಞಾಸ್ಯ'ನೆಂದು ಅನುವ್ಯಾಖ್ಯಾನವು ಹೇಳಿದೆ" ಎಂದು ಸುಧೆಯಲ್ಲಿದೆ. ಆದರೆ ನೀವು ಶೇಷಷಷ್ಠೀಯನ್ನಿಟ್ಟುಕೊಂಡರೆ ಈ ವಾಕ್ಯದ ಗತಿಯೇನು?

ಉತ್ತರ :- ಸುಧೆಯಲ್ಲಿ ಹೇಳಿದಂತೆ ಕರ್ಮಷಷ್ಠಿಯನ್ನೇ ಸ್ವೀಕರಿಸಬೇಕು. ಶೇಷಷಷ್ಠಿಯನ್ನು ಸ್ವೀಕರಿಸಬಾರದು. ಹಾಗಾದರೆ ಪ್ರಮಾಣಗಳ ವಿಚಾರ ಮಾಡಿದ್ದು ಅಸಂಗತವೆಂದಾಗುತ್ತದೆ. ಎಂಬುದು ತಪ್ಪು. ಬ್ರಹ್ಮಕರ್ಮಕಜಿಜ್ಞಾಸಾ ಎಂದರೆ ಬ್ರಹ್ಮಸ್ವರೂಪವನ್ನೇ ಜಿಜ್ಞಾಸೆ ಮಾಡಬೇಕು. ಉಳಿದ ಪ್ರಮಾಣಾದಿಗಳ ಜಿಜ್ಞಾಸೆ ಮಾಡಬಾರದೆಂದು ಅದರ ಅಭಿಪ್ರಾಯವಲ್ಲ. ಬ್ರಹ್ಮವಿಚಾರವನ್ನು ಪ್ರಧಾನವನ್ನಾಗಿ ಮಾಡಬೇಕೆಂದು ಹಾಗೆ ಪ್ರತಿಜ್ಞೆ ಮಾಡಲಾಗಿದೆ. ಅದಕ್ಕೆ ಸಂಬಂಧಪಟ್ಟ ಲಕ್ಷಣ ಪ್ರಮಾಣ

ಪ್ರಯೋಜನ ಮೊದಲಾದ ಉಳಿದ ವಿಚಾರಗಳನ್ನು ಮಾಡಬೇಕೆಂದು ಪ್ರತಿಜ್ಞೆ ಮಾಡಿದಂತಾಯಿತು. ಇವುಗಳಿಲ್ಲದೆ ಕೇವಲ ಬ್ರಹ್ಮಸ್ವರೂಪವಿಚಾರ ಮಾಡಲು ಸಾಧ್ಯವೂ ಇಲ್ಲ. ಆದ್ದರಿಂದ ಕರ್ಮಷಷ್ಠೀ-ಸಮಾಸವನ್ನೇ ಮಾಡಬೇಕು. ಉಳಿದ ಯಾವ ಸಮಾಸಗಳನ್ನೂ ಮಾಡಬಾರದು.

ಪ್ರಶ್ನೆ :- ''ಬ್ರಹ್ಮಣಃ ಜಿಜ್ಞಾಸಾ'' ಎಂದು ಷಷ್ಠೀತತ್ಪುರುಷ ಸಮಾಸವನ್ನು ಮಾಡಬೇಕು. ಅದರಲ್ಲೂ ಕರ್ಮಷಷ್ಠಿಯನ್ನೇ ಮಾಡಬೇಕು ಹೊರತು ಶೇಷಷಷ್ಠಿಯನ್ನು ಮಾಡಬಾರದೆಂದು ಇದುವರೆಗೂ ನಿರ್ಣಯಿಸಿದ ವಿಚಾರ. ಆದರೆ ವ್ಯಾಕರಣದಂತೆ ಕರ್ಮಷಷ್ಠಿಯನ್ನು ಮಾಡಲು ಬರುವುದಿಲ್ಲ. 'ಕರ್ಮಣಿ ಚ' ಎಂಬ ಸೂತ್ರದಲ್ಲಿ ಸಪ್ತಮ್ಯೇಕವಚನಾಂತವಾದ ಶಬ್ದವನ್ನು ಹೇಳಿ ವಿಧಿಸಿದ ಷಷ್ಠಿಗೆ ಸಮಾಸ ಮಾಡಬಾರದು ಎಂದು ಹೇಳಿದೆ. ಅದರಂತೆ ಇಲ್ಲಿ ಕರ್ಮಷಷ್ಠಿಯನ್ನು ಮಾಡಿದರೆ ''ಬ್ರಹ್ಮಜಿಜ್ಞಾಸಾ'' ಎಂಬ ಸಮಾಸವು ಅನುಪಪನ್ನವಾಗುತ್ತದೆ.

ಉತ್ತರ :- 'ಕರ್ಮಣಿ ಚ ' ಎಂಬ ನಿಷೇಧವು ಇಲ್ಲಿ ಅನ್ವಯಿಸುವುದಿಲ್ಲ. ''ಉಭಯಪ್ರಾಪ್ತೌ ಕರ್ಮಣಿ'' ಎಂಬ ಸೂತ್ರದಿಂದ ಷಷ್ಠಿಯು ಎಲ್ಲಿ ಬರುತ್ತದೋ, ಅಲ್ಲಿ ಮಾತ್ರ ಈ ಸೂತ್ರವು ನಿಷೇಧಮಾಡುತ್ತದೆ. ಕೃದಂತಶಬ್ದದ ಯೋಗವಿದ್ದಾಗ ಕರ್ತೃ ಹಾಗು ಕರ್ಮ ಎರಡರ್ಥಗಳಲ್ಲಿಯೂ ಷಷ್ಠಿಯು ಬರಲು ಪ್ರಸಕ್ತಿಯಿದ್ದಾಗ ಕರ್ಮಾರ್ಥದಲ್ಲಿ ಮಾತ್ರ ಷಷ್ಠಿಯು ಬರುತ್ತದೆಂದು ''ಉಭಯ-ಪ್ರಾಪ್ತೌ'' ಇತ್ಯಾದಿ ಸೂತ್ರವು ಹೇಳುತ್ತಿದೆ. ಈ ಸೂತ್ರದಿಂದ ಯಾವ ಶಬ್ದಕ್ಕೆ ಷಷ್ಠಿಯು ಬರುತ್ತದೋ ಅಲ್ಲಿ ಮಾತ್ರ ''ಕರ್ಮಣಿ ಚ'' ಎಂಬ ಸೂತ್ರದಿಂದ ಹೇಳಿದ ಸಮಾಸನಿಷೇಧವು ಬರುತ್ತದೆ. ಆದರೆ 'ಬ್ರಹ್ಮಣಃ ಜಿಜ್ಞಾಸಾ' ಎಂಬಲ್ಲಿ ''ಉಭಯಪ್ರಾಪ್ತೌ ಕರ್ಮಣಿ'' ಎಂಬ ಸೂತ್ರಕ್ಕೆ ಅವಕಾಶವೇ ಇಲ್ಲ.

'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರಕ್ಕೆ ಇದು ಉದಾಹರಣೆ - 'ಆಶ್ಚರ್ಯೋ ಗವಾಂ ದೋಹಃ ಅಗೋಪಾಲಕೇನ'' ''ಗೋಪಾಲಕನಲ್ಲದವನನ್ನು ಹಾಲನ್ನು ಕರೆಯುವುದು ಆಶ್ಚರ್ಯ'' ಎಂಬಲ್ಲಿ 'ದೋಹಃ' ಎಂಬುದು ಕೃದಂತಶಬ್ದ. 'ದುಹ್' ಧಾತುವಿಗೆ 'ಅಃ' ಪ್ರತ್ಯಯ ಬಂದು ರೂಪ-ವಾಗಿದೆ. ದೋಹನಕ್ಕೆ ಕರ್ಮ ಗೋ, ಅಗೋಪಾಲಕ ಕರ್ತಾ. ಗೋಶಬ್ದಕ್ಕೆ ಷಷ್ಠಿಯು ಅಗೋಪಾಲಕಶಬ್ದಕ್ಕೆ ತೃತೀಯಾ ಬರುತ್ತದೆ. ಹೀಗೆ ಉಭಯ ಪ್ರಾಪ್ತವಾದಾಗ ಕರ್ಮಾರ್ಥದಲ್ಲಿ ಮಾತ್ರ ಷಷ್ಠಿಯು ಬಂದಿದೆ. 'ಬ್ರಹ್ಮಣಃ ಜಿಜ್ಞಾಸಾ' ಎಂಬಲ್ಲಿ ಹೀಗೆ ಸಮನ್ವಯಮಾಡಲು ಬರುವುದೇ ಇಲ್ಲ. ಆದ್ದರಿಂದ ಕರ್ಮಣಿ ಚ ಸೂತ್ರವೂ ಪ್ರಸಕ್ತವಾಗುವುದಿಲ್ಲ. ಒಂದು ವೇಳೆ ಸೂತ್ರದಲ್ಲಿ 'ಅಧಿಕಾರಿಣಾ ಬ್ರಹ್ಮಣಃ ಜಿಜ್ಞಾಸಾ' ಎಂದು ಸೂತ್ರದಲ್ಲಿ ಹೇಳಿದ್ದರೆ ಜಿಜ್ಞಾಸಾಶಬ್ದವು ಕೃದಂತವಾಗಿದೆ. ಬ್ರಹ್ಮನು ಕರ್ಮ. ಅಧಿಕಾರಿಯು ಕರ್ತಾ. ಹೀಗಿರುವುದರಿಂದ 'ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಕರ್ಮಾರ್ಥಕ ಬ್ರಹ್ಮಶಬ್ದಕ್ಕೆ ಷಷ್ಠಿಯು ಬರುತ್ತಿತ್ತು. 'ಕರ್ಮಣಿ ಚ' ಸೂತ್ರವು ಆವಾಗ ಸಮಾಸ ನಿಷೇಧ ಮಾಡುತ್ತಿತ್ತು. ಆದರೆ ಸೂತ್ರಕಾರರು ಹಾಗೆ ಹೇಳಿಲ್ಲ. ಕೇವಲ 'ಬ್ರಹ್ಮಜಿಜ್ಞಾಸಾ' ಎಂದು ಕರ್ಮವನ್ನಷ್ಟೇ ಹೇಳಿರುವುದರಿಂದ ಸಮಾಸ ಬಾರದಿರಲು ಕಾರಣವೇ ಇಲ್ಲ. 'ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ' ಎಂಬ ಕರ್ಮಾರ್ಥಕ ಷಷ್ಠೀತತ್ಪುರುಷವು ಸಾಧುವೇ ಆಗಿದೆ.

*ಜಿಜ್ಞಾಸಾಧಿಕರಣ*

ಪ್ರಶ್ನೆ :- ಅಧಿಕಾರಿಯನ್ನು ಸೂತ್ರಕಾರರು ಹೇಳಿದ್ದಾರೆ. 'ಅಥ' ಎಂದರೆ ''ಶಮದಮಾದ್ಯ-ಧಿಕಾರಸಂಪತ್ತ್ಯನಂತರಮ್'' ಎಂದರ್ಥ. ಈ ಶಬ್ದದಿಂದ ಅಧಿಕಾರಿಯು ಪ್ರಾಪ್ತನಾಗಿದ್ದಾನೆ. ಬ್ರಹ್ಮಶಬ್ದವು ಜಿಜ್ಞಾಸೆಯ ಕರ್ಮವನ್ನು ಹೇಳುತ್ತಿದೆ. ಆದ್ದರಿಂದ ಮೇಲೆ ಹೇಳಿದ ನಿಷೇಧವು ಏಕೆ ಬರುವುದಿಲ್ಲ?

ಉತ್ತರ :- ಈ ಪ್ರಶ್ನೆ ಮಾಡುವವರಿಗೆ ಬೇರೆ ಸಮಾಧಾನವನ್ನೇ ಹೇಳುತ್ತೇವೆ - ''ಅಕಾಕಾರಯೋಃ ಪ್ರಯೋಗೇನೇತಿ ವಕ್ತವ್ಯಂ'' ಎಂಬ ವಾರ್ತಿಕದಲ್ಲಿ ಸ್ತ್ರೀಲಿಂಗದಲ್ಲಿ ಕ್ತಿನ್‌ಪ್ರತ್ಯಯ ಬರುತ್ತದೆ. ಆಗ ಆ ಪ್ರಕರಣದಲ್ಲಿ ವಿಧಿಸಿದ 'ಅಕ' 'ಅ' ಎಂಬ ಕೃತ್‌ಪ್ರತ್ಯಯಗಳ ಸಂಬಂಧ ಬಂದಾಗ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಲ್ಲಿ ಹೇಳುವ ಷಷ್ಠಿಯು ಬರುವುದಿಲ್ಲ ಎಂದು ಹೇಳಿದೆ.

ಉದಾಹರಣೆ - 'ಚಿಕೀರ್ಷಾ ದೇವದತ್ತಸ್ಯ ಕಟಸ್ಯ' ''ದೇವದತ್ತನಿಗೆ ಚಾಪೆ ಮಾಡಬೇಕೆಂಬ ಇಚ್ಛೆ ಇದೆ'' ಎಂಬಲ್ಲಿ ಚಿಕೀರ್ಷಾ ಎಂಬುದು ಕೃದಂತವಾಗಿದೆ. 'ಕೃಞ್' ಧಾತುವಿಗೆ 'ಸನ್' ಪ್ರತ್ಯಯ 'ಆ'ಕಾರ-ವೆಂಬ ಸ್ತ್ರೀಪ್ರತ್ಯಯ ಬಂದು ರೂಪವಾಗಿದೆ. ದೇವದತ್ತನು ಕರ್ತಾ, ಕಟವು ಕರ್ಮ. ಹೀಗೆ ಉಭಯಪ್ರಾಪ್ತವಾಗಿದ್ದರಿಂದ ಕರ್ಮದಲ್ಲಿಯೇ ಷಷ್ಠಿಯು ಬರುತ್ತದೆಂದು ಸೂತ್ರವು ಹೇಳಿದೆ. ಆದರೆ 'ದೇವದತ್ತಸ್ಯ ಕಟಸ್ಯ' ಎಂಬಲ್ಲಿ 'ಉಭಯ' ಇತ್ಯಾದಿ ಸೂತ್ರವು ಪ್ರವೃತ್ತಿ ಮಾಡುವುದಿಲ್ಲ. ಏಕೆಂದರೆ 'ಆ'ಕಾರಾದಿ ಸ್ತ್ರೀಪ್ರತ್ಯಯ ಬಂದಿರುವುದರಿಂದ ಸೂತ್ರಕ್ಕೆ ಅವಕಾಶವಿಲ್ಲವೆಂದು ವಾರ್ತಿಕವು ಹೇಳುತ್ತಿದೆ.

ಪ್ರಕೃತ 'ಜಿಜ್ಞಾಸಾ' ಎಂಬಲ್ಲಿಯೂ 'ಆ'ಕಾರವೆಂಬ ಸ್ತ್ರೀಪ್ರತ್ಯಯ ಬಂದಿದೆ. ವಾರ್ತಿಕದ ಆಧಾರದಿಂದ ಇಲ್ಲಿ 'ಉಭಯ' ಇತ್ಯಾದಿ ಸೂತ್ರಕ್ಕೆ ಅವಕಾಶವಿಲ್ಲವೆಂದು ತಿಳಿಯುತ್ತದೆ. 'ಜಿಜ್ಞಾಸಾ' ಶಬ್ದವು ಸನ್ ಪ್ರತ್ಯಯಾಂತವಾದ ಜ್ಞಾ ಧಾತುವಿನಿಂದ ನಿಷ್ಪನ್ನವಾಗಿದೆ. ''ಅಃ ಪ್ರತ್ಯಯಾತ್'' ಎಂಬ ಸೂತ್ರವು ಯಾವುದೇ ಪ್ರತ್ಯಯಾಂತವಾದ ಧಾತುವಿಗೆ 'ಅ' ಪ್ರತ್ಯಯವನ್ನು ವಿಧಾನ ಮಾಡುತ್ತದೆ. ಇದು ಕೃತ್ ಪ್ರತ್ಯಯವಾಗಿದೆ. ಆದ್ದರಿಂದ ''ಕರ್ತೃಕರ್ಮಣೋಃ ಕೃತಿ'' 'ಕೃದಂತಶಬ್ದಯೋಗವಿದ್ದಾಗ ಕರ್ತೃಕರ್ಮ ಎಂಬೆರಡೂ ಅರ್ಥಗಳಲ್ಲಿ ಷಷ್ಠಿಯು ಬರುತ್ತದೆ'' ಎಂಬ ಸೂತ್ರದಿಂದಲೇ ಷಷ್ಠಿವಿಭಕ್ತಿಯು ಬರುತ್ತದೆ. ಹೊರತು 'ಉಭಯಪ್ರಾಪ್ತೌ ಕರ್ಮಣಿ'' ಎಂಬ ಸೂತ್ರದಿಂದ ಅಲ್ಲ.

ಮಂಜರಿಯನ್ನು ನೋಡಿದಾಗ ಈ ವಿಚಾರವು ಸಂವಾದಪ್ರಮಾಣದಿಂದ ದೃಢವಾಗುತ್ತದೆ. - ಆ ಮಂಜರಿಯಲ್ಲಿ ನೀಡಿದ ಉದಾಹರಣೆ - ದೇವದತ್ತನ ಧರ್ಮಜಿಜ್ಞಾಸೆ' ಎಂದು ಇಲ್ಲಿ ದೇವದತ್ತನೆಂದು ಕರ್ತನನ್ನು ಧರ್ಮವೆಂದು ಕರ್ಮವನ್ನು ಹೇಳಿದ್ದರೂ ಜಿಜ್ಞಾಸಾ ಶಬ್ದವು ಸ್ತ್ರೀಲಿಂಗದಲ್ಲಿರುವ ಅ ಪ್ರತ್ಯಯಾಂತವಾದ ಶಬ್ದವಾಗಿದೆ. ಆದ್ದರಿಂದ 'ಕರ್ತೃಕರ್ಮಣೋಃ ಕೃತಿಃ' ಎಂಬ ಸೂತ್ರದಿಂದ ಷಷ್ಠಿವಿಭಕ್ತಿಯು ಬರುತ್ತದೆ. ಇಲ್ಲಿ 'ಕರ್ಮಣಿ ಚ' ಎಂಬ ಸೂತ್ರದಿಂದ ಸಮಾಸನಿಷೇಧ ಮಾಡಲು ಬರುವುದಿಲ್ಲ. ಷಷ್ಠೀಸಮಾಸ ಮಾಡಲು ಯಾವ ತೊಂದರೆಯೂ ಇಲ್ಲ.

ಪ್ರಶ್ನೆ :- ಆದರೂ 'ಬ್ರಹ್ಮಜಿಜ್ಞಾಸಾ' ಎಂಬ ಸಮಾಸವು ಯುಕ್ತವಾಗುವುದಿಲ್ಲ. ಏಕೆಂದರೆ ''ಪ್ರತಿಪದ-ವಿಧಾನಾ ಷಷ್ಠೀ ನ ಸಮಸ್ಯತೇ'' ''ಪದವನ್ನು ಪ್ರತ್ಯೇಕವಾಗಿ ನಿರ್ದೇಶಮಾಡಿ ವಿಧಾನ ಮಾಡಿದ ಷಷ್ಠಿಗೆ

ಸಮಾಸ ಮಾಡಬಾರದು'' ಎಂದು ಈ ವಿಧಿಯು ಹೇಳುತ್ತದೆ. ಪ್ರಕೃತ ''ಕರ್ತೃಕರ್ಮಣೋಃ ಕೃತಿ'' ಎಂಬ ಸೂತ್ರವು 'ಕೃತಿ' ಕೃದಂತವಾದ ಶಬ್ದದ ಯೋಗವಿದ್ದಾಗ ಎಂದು ಪದವನ್ನು ಪ್ರತ್ಯೇಕ ನಿರ್ದೇಶ ಮಾಡಿ ಷಷ್ಠಿಯನ್ನು ವಿಧಿಸುತ್ತಿದೆ. ಇಲ್ಲಿ ಸಮಾಸ ಮಾಡುವುದು ತಪ್ಪು.

ಉದಾಹರಣೆ - 'ಸರ್ಪಿಷೋ ಜ್ಞಾನಂ' 'ತುಪ್ಪದ ಕಾರ್ಯ ಜ್ಞಾನ' ಎಂಬಲ್ಲಿ ಜ್ಞಾನಶಬ್ದವು ಲ್ಯುಡಂತವಾಗಿದೆ. ಸರ್ಪಿಸ್ ಶಬ್ದಕ್ಕೆ ಕರ್ಮಾರ್ಥದಲ್ಲಿ ಷಷ್ಠಿಯು ಬರುತ್ತದೆ. ಏಕೆಂದರೆ ''ಜ್ಞೋಽವಿದರ್ಥಸ್ಯ ಕರಣೇ'' ಎಂಬ ಸೂತ್ರದಲ್ಲಿ ಜ್ಞಾನಾರ್ಥಕವಲ್ಲದ 'ಜ್ಞಾ' ಧಾತುವಿನ ಅರ್ಥಕ್ಕೆ ಯಾವುದು ಕರಣವೋ ಅದರ ಕರಣತ್ವವನ್ನು ವಿವಕ್ಷೆ ಮಾಡದೆ ಕೇವಲ ಸಂಬಂಧವನ್ನು ವಿವಕ್ಷೆ ಮಾಡಿದರೆ ಆ ಅರ್ಥದಲ್ಲಿ ಷಷ್ಠಿವಿಭಕ್ತಿಯು ಬರುತ್ತದೆಂದು ಹೇಳಿದೆ. ಈ ಸೂತ್ರದಿಂದ ಇಲ್ಲಿ ಷಷ್ಠೀವಿಭಕ್ತಿ ಬಂದಿದೆ. ಇದು ಪ್ರತಿಪದವಿಧಾನಾ ಷಷ್ಠಿ ಎನಿಸಿದೆ. ಹಾಗಾಗಿ ಇಲ್ಲಿ ಸಮಾಸ ಮಾಡದೆ 'ಸರ್ಪಿಷೋ ಜ್ಞಾನಂ'' ಎಂದೇ ಹೇಳಬೇಕು. ಹಾಗೆಯೇ 'ಬ್ರಹ್ಮಣಃ ಜಿಜ್ಞಾಸಾ' ಎಂದು ಬಿಡಿಸಿಯೇ ಹೇಳಬೇಕು. ಸಮಾಸ ಮಾಡಬಾರದು.

ಉತ್ತರ :- ನೀವು ಹೇಳಿದ ವಿಷಯಕ್ಕೂ ಪುನಃ ಅಪವಾದವಿದೆ. ''ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೇ'' ಎಂಬ ವಾರ್ತಿಕವು ಕೃದಂತಶಬ್ದದ ಸಂಬಂಧದಿಂದ ''ಕರ್ತೃಕರ್ಮಣೋಃ ಕೃತಿ'' ಎಂಬ ಸೂತ್ರದಿಂದ ಬಂದ ಷಷ್ಠಿಯು ಸಮಾಸವನ್ನು ಹೊಂದುತ್ತದೆಂದು ಹೇಳುತ್ತದೆ. ಇದಕ್ಕೆ ಪ್ರತಿಪ್ರಸವ ಎನ್ನುತ್ತಾರೆ. ಅಂದರೆ ''ಪ್ರತಿಪದವಿಧಾನ'' ಎಂಬ ನಿಷೇಧವನ್ನು ನಿಷೇಧಿಸುತ್ತಿದೆ.

ಆದ್ದರಿಂದ ''ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ'' ಎಂದು ಸಮಾಸವಾಗಲು ಯಾವ ವಿಘ್ನಗಳೂ ಇಲ್ಲ. ಇದು ಕರ್ಮಾರ್ಥಕವಾದ ಷಷ್ಠೀತತ್ಪುರುಷ ಸಮಾಸವಾಗಿದೆ. ಈ ವಿಚಾರವನ್ನು ನಾವಷ್ಟೇ ಹೇಳಬೇಕು. ಅದ್ವೈತಿಗಳು ಹೇಳಬಾರದು. ಅವರಿಗೆ ಹೀಗೆ ಹೇಳುವ ಯೋಗ್ಯತೆಯಿಲ್ಲ.




**'ಬ್ರಹ್ಮಜಿಜ್ಞಾಸಾ'-ಯಾವ ಸಮಾಸ?**

'ಬ್ರಹ್ಮಜಿಜ್ಞಾಸಾಶಬ್ದ ಷಷ್ಠೀತತ್ಪುರುಷ ಸಮಾಸ. ಕರ್ಮಾರ್ಥಕ ಷಷ್ಠೀವಿಭಕ್ತಿಯನ್ನಿಟ್ಟುಕೊಳ್ಳಬೇಕು. ಶೇಷ ಷಷ್ಠಿಯನ್ನಲ್ಲ. ಶೇಷ ಷಷ್ಠಿಯಿಂದ ಜಿಜ್ಞಾಸೆಗೆ ಸಂಬಂಧಿಸಿದುದು ಬ್ರಹ್ಮ ಎಂದಿಷ್ಟೇ ತಿಳಿಯುತ್ತದೆ. ಯಾವ ಸಂಬಂಧ? ಎಂದು ವಿಚಾರ ಬಂದಾಗ ಬೇರಾವುದೂ ಅಲ್ಲ, ಕರ್ಮತ್ವವೆ ಸಂಬಂಧ ಎಂದು ತಿಳಿಯಬೇಕಾಗುತ್ತದೆ. ಇದು ಬಳಸು ದಾರಿ. ಶ್ರುತಿಯಲ್ಲಿಯೂ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂದು ಬ್ರಹ್ಮನನ್ನು ಜಿಜ್ಞಾಸೆಗೆ ಕರ್ಮ ಎಂದೇ ನಿರ್ದೇಶಿಸಿದೆ' ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ನಿರ್ಗುಣಬ್ರಹ್ಮ ಯಾವ ಕಾರಕವೂ ಆಗಲಾರದು, ಕರ್ಮವೆನಿಸುವುದು ಹೇಗೆ?

ವಿಚಾರದಿಂದ ಬರುವ ಅಪರೋಕ್ಷವೃತ್ತಿಗೆ ವಿಷಯನಾಗುವುದೇ ಕರ್ಮತ್ವವೆನ್ನುವುದೂ ಸರಿಯಲ್ಲ. ಅಪರೋಕ್ಷವೃತ್ತಿಯಲ್ಲಿ ಪ್ರತಿಬಿಂಬಿತವಾಗುವ ಚೈತನ್ಯಕ್ಕೆ ಘಟಾದಿಗಳು ವಿಷಯವಾಗುವುದರಿಂದಲೆ ಘಟಾದಿಗಳು

ಕರ್ಮವೆನಿಸುತ್ತವೆ. ವೃತ್ತಿಯಲ್ಲಿ ಪ್ರತಿಬಿಂಬಿಸುವುದೂ ತಾನೆ, ಆ ಪ್ರತಿಬಿಂಬಕ್ಕೆ ವಿಷಯನಾಗವುದೂ ತಾನೆ ಎಂದರೆ ಕರ್ತೃಕರ್ಮಗಳೆರಡೂ ಒಂದು ಎಂದಂತಾಗುವುದೆಂದು ಹೆದರಿ ಅದ್ವೈತಿಗಳು ಚೈತನ್ಯದಲ್ಲಿ ಕರ್ಮತ್ವವನ್ನು ಒಪ್ಪಿಲ್ಲ. ಆದರಿಂದ ಬ್ರಹ್ಮಕರ್ಮವೆನಿಸುವುದು ಹೇಗೆ?

ನಮ್ಮ ಸಿದ್ಧಾಂತದಲ್ಲಿ ಕರ್ಮಷಷ್ಠೀಸಮಾಸವನ್ನೇ ಒಪ್ಪಿದ್ದೇವೆ. ಇದು ಬ್ರಹ್ಮಸ್ವರೂಪ ವಿಚಾರ ಪ್ರಧಾನ ಎಂಬ ಅಭಿಪ್ರಾಯದಿಂದ. ಜೊತೆಗೆ ಬ್ರಹ್ಮಸ್ವರೂಪವಿಚಾರಕ್ಕೆ ಸಂಬಂಧಿಸಿದ ಲಕ್ಷಣ ಪ್ರಮಾಣ ಪ್ರಯೋಜನ ಮುಂತಾದ ಬೇರೆ ವಿಷಯಗಳ ವಿಚಾರವನ್ನೂ ಮಾಡಬೇಕೆಂಬುದು ಶ್ರುತಿಸೂತ್ರಗಳ ಅಭಿಪ್ರಾಯ.

'ಕರ್ಮಾರ್ಥದಲ್ಲಿ' ಎಂದು ವಿಹಿತವಾದ ಷಷ್ಠೀವಿಭಕ್ತಿ ಬಂದಿದ್ದರೆ ಸಮಾಸವಾಗುವುದಿಲ್ಲ ಎಂದು 'ಕರ್ಮಣಿ ಚ' ಎಂಬ ಸೂತ್ರ ಹೇಳುತ್ತದೆ. ಪ್ರಕೃತದಲ್ಲಿ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಲ್ಲಿ 'ಕರ್ಮಣಿ' 'ಕರ್ಮಾರ್ಥದಲ್ಲಿ' ಎಂದು ಷಷ್ಠಿ ವಿಹಿತವಾಗಿದೆ ಎಂಬ ಸಮಸ್ಯೆಗೆ ಹೀಗೆ ಉತ್ತರ - 'ಅಕಾಕಾರಯೋಃ ಪ್ರಯೋಗೇ ನೇತಿ ವಕ್ತವ್ಯಂ' ಎಂಬ ವಾರ್ತಿಕದಂತೆ 'ಅಕ' ಮತ್ತು 'ಅ' ಪ್ರತ್ಯಯ ಸ್ಥಳಗಳಲ್ಲಿ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಂತೆ ಕರ್ಮಷಷ್ಠಿ ಬರುವುದು ನಿಷಿದ್ಧವಾಗಿದೆ. ಪ್ರಕೃತದಲ್ಲಿ 'ಜಿಜ್ಞಾಸಾ' ಶಬ್ದ ಸನ್‌ಪ್ರತ್ಯಯಾಂತವಾದ 'ಜಿಜ್ಞಾಸ' ಶಬ್ದದ ಮೇಲೆ 'ಅ' ಪ್ರತ್ಯಯ ಬಂದು ಸಿದ್ಧವಾಗಿರುವುದರಿಂದ 'ಉಭಯಪ್ರಾಪ್ತೌ ಕರ್ಮಣಿ' ಸೂತ್ರವಿಹಿತವಾದ ಷಷ್ಠಿ ಬರುವುದಿಲ್ಲ. 'ಕರ್ತೃಕರ್ಮಣೋಃ ಕೃತಿ' ಎಂದೇ ಷಷ್ಠಿ ಬಂದಿದೆ. ಆದರಿಂದ 'ಕರ್ಮಣಿ ಚ' ಎಂದು ಷಷ್ಠೀಸಮಾಸ ನಿಷೇಧವಿಲ್ಲ. 'ಕೃದ್ಯೋಗ ಲಕ್ಷಣಾ ಷಷ್ಠೀ ಸಮಸ್ಯತೇ' ಎಂದು ಪ್ರತಿಪ್ರಸವವಿರುವುದರಿಂದ 'ಪ್ರತಿಪದವಿಧಾನ ಷಷ್ಠೀ ನ ಸಮಸ್ಯತೇ' ಎನ್ನುವ ನಿಷೇಧವೂ ಅನ್ವಯಿಸುವುದಿಲ್ಲ.

• • • • •

## ಜಿಜ್ಞಾಸಾ ಶಬ್ದಾರ್ಥ ನಿರೂಪಣೆ

### तात्पर्यचन्द्रिका –

युक्त्यनुसन्धानात्मको मननापरनामको विचारो जिज्ञासा । सुधायाम् – ''जिज्ञासा नाम युक्त्यनुसन्धानात्मकं विचारापरपर्यायं मननम्'' इत्युक्तत्वात् । न्यायनिबन्धनात्मकशास्त्रारम्भणीयत्वस्य न्यायानुसन्धानकर्तव्यतोक्तिमात्रेण सिद्धेश्च । नत्वौपदेशिकवाक्यार्थग्रहणलक्षणश्रवणस्य कर्तव्यता उक्तरूपशास्त्रस्याऽरम्भणीयत्वे हेतुः । ''श्रवणजं ज्ञानं पूर्ववृत्तम्'' इति सुधायां मीमांसातस्तस्य पूर्ववृत्तत्वेनोक्ततया शास्त्रस्यारम्भणीयत्वं विनाऽपि तत्कर्तव्यतासिद्धेः । ''श्रवणादिरूपा जिज्ञासा कार्या' इति टीकायां त्वतद्गुणसंविज्ञानबहुव्रीहिणा विचार एवोक्तः । अत एव ''विचारेऽपि तत्प्रयोगात्'' इत्युत्तरग्रन्थः । यद्वा – यथा

**श्रवणनिदिध्यासने विहितत्वान्मुमुक्षुणा कार्ये, तथा मननमपीति दृष्टान्ततया तयोरुपादानम् । नतु शास्त्रारम्भहेतुतया । अथवा – निदिध्यासनस्याकर्तव्यत्वे तदङ्गमननस्यापि तथात्वात्, परम्परया निदिध्यासनकर्तव्यता आरम्भणीयत्वे हेतुः । तथा – प्रतिवाक्यार्थमयं वाक्यार्थो युक्त अन्यो वेति संशयादि-निरासकविचारशास्त्रव्युत्पाद्यन्यायावताराङ्गसन्देहकारणस्य यत्नसाध्यस्य प्रतिवाक्य-मयमस्य वाक्यस्यार्थ इत्येवंरूपस्य श्रवणजज्ञानस्याभावे शास्त्रारम्भासिद्धेः तत्कर्तव्यताऽप्यारम्भणीयत्वे हेतुरेवेत्यारम्भसिध्यर्थमेव त्रितयकर्तव्यतोक्ता ।**

ಅನುವಾದ - ಸೂತ್ರದಲ್ಲಿರುವ 'ಜಿಜ್ಞಾಸಾ' ಶಬ್ದಕ್ಕೆ ವಿಚಾರ ಎಂದರ್ಥ. ಇದನ್ನು ಮನನ ಎಂದೂ ಕರೆಯುತ್ತಾರೆ. ಸಮನ್ವಯಕ್ಕೋಸ್ಕರ ಉಪಕ್ರಮ ಮೊದಲಾದ ಯುಕ್ತಿಗಳನ್ನು ಆಲೋಚನೆ ಮಾಡುವುದೇ ಮನನ ಎನಿಸುತ್ತದೆ.

ಇದನ್ನು ಸುಧೆಯಲ್ಲಿ ಹೇಳಿದ್ದಾರೆ - "ಜಿಜ್ಞಾಸಾ ಎಂದರೆ ಯುಕ್ತ್ಯನುಸಂಧಾನಾತ್ಮಕನಾದ ವಿಚಾರವೇ ಮನನ" ಎಂದು ಈ ಶಾಸ್ತ್ರವು ಅನೇಕ ಯುಕ್ತಿಗಳ ಸಂಗ್ರಹಾತ್ಮಕವಾಗಿದೆ. ಇಂತಹ ಶಾಸ್ತ್ರವು ಆರಂಭಣೀಯವಾಗಿದೆಯೆಂದು ಸಮರ್ಥಿಸಲು ಯುಕ್ತಿಗಳ ಆಲೋಚನೆಯನ್ನು ಸೂತ್ರದಲ್ಲಿ ಮಾಡಬೇಕೆಂದು ಹೇಳಿದರೆ ಸಾಕು. ಶ್ರವಣ ಮಾಡಬೇಕೆಂದು ಹೇಳುವುದು ಅನಾವಶ್ಯಕ. ಉಪನಿಷದ್ ಭಾಷ್ಯ ಮೊದಲಾದ ಉಪದೇಶದ ಮಾತುಗಳಿಂದ ಬರುವ ವಾಕ್ಯಾರ್ಥ ಜ್ಞಾನವೇ ಶ್ರವಣವೆನಿಸುತ್ತದೆ.

ಈ ಶ್ರವಣದ ಅವಶ್ಯಕತೆಯಿಂದ ಯುಕ್ತಿಸಂಗ್ರಹರೂಪವಾದ ಶಾಸ್ತ್ರದ ಅವಶ್ಯಕತೆಯನ್ನು ಹೇಗೆ ಹೇಳಲು ಸಾಧ್ಯ?

ಈ ವಿಷಯದಲ್ಲಿ ಸುಧೆಯ ಸಮ್ಮತಿಯೂ ಇದೆ - 'ಶ್ರವಣದಿಂದ ಪ್ರಾಪ್ತವಾಗುವ ಜ್ಞಾನವು ಜಿಜ್ಞಾಸೆ-ಗಿಂತ ಹಿಂದೆಯೇ ಬಂದಿದೆ' ಎಂದು. ವಿಚಾರಕ್ಕಿಂತ ಮೊದಲು ಶ್ರವಣವಿದೆಯೆಂದರೆ ಶ್ರವಣವಿಲ್ಲದೆಯೂ ವಿಚಾರ ಶಾಸ್ತ್ರವು ಪ್ರಾರಂಭವಾಗುತ್ತದೆಂದು ಹೇಳಿದಂತಾಯಿತು.

ವಸ್ತುತಃ ಟೀಕೆಯಲ್ಲಿ "ಶ್ರವಣಾದಿರೂಪವಾದ ಜಿಜ್ಞಾಸೆಯು ಕರ್ತವ್ಯವಾಗಿದೆ" ಎಂದು ಹೇಳಿದ. ಆಪಾತತಃ ಈ ಮಾತು ಸುಧೆಗೆ ವಿರುದ್ಧವೆಂದು ತೋರುತ್ತದೆ ಆದರೆ ಅನೇಕ ರೀತಿಯಲ್ಲಿ ಸುಧೆಗೆ ವಿರುದ್ಧವಾಗಿಲ್ಲವೆಂದು ತಿಳಿಯಬಹುದು.

ಶ್ರವಣಾದಿ ಎಂಬಲ್ಲಿ 'ಅತದ್ಗುಣಸಂವಿಜ್ಞಾನಬಹುವ್ರೀಹಿ' ಸಮಾಸವನ್ನು ಮಾಡಬೇಕು. ಶ್ರವಣವು ಯಾವುದಕ್ಕೆ ಆದಿಯಾಗಿದೆಯೋ ಅದು ಎಂದರೆ ಮನನ ಎಂದರ್ಥ. ಆದ್ದರಿಂದ ಮನನರೂಪವಾದ ವಿಚಾರವನ್ನು ಮಾಡಬೇಕೆಂದು ಸುಧೆಯ ಅರ್ಥ. ಈ ಅರ್ಥವನ್ನು ಹೇಳುವುದು ಟೀಕೆಗೆ ವಿರುದ್ಧವಲ್ಲ.

"ವಿಚಾರ ಎಂಬರ್ಥದಲ್ಲಿಯೂ ಜಿಜ್ಞಾಸಾ ಶಬ್ದದ ಪ್ರಯೋಗವಿರುವುದರಿಂದ" ಎಂದು ಟೀಕೆಯಲ್ಲಿಯೇ ಮುಂದಿದೆ.

ಅಥವಾ "ಶ್ರವಣಾದಿರೂಪಾ" ಎಂಬ ಶಬ್ದಕ್ಕೆ ಮತ್ತೊಂದು ಅರ್ಥ. ಶ್ರವಣ ಮನನ ನಿದಿಧ್ಯಾಸನ ಇವು ಮೂರೂ ಜಿಜ್ಞಾಸೆಗಳೇ ಆಗಿವೆ. ಆದರೆ ಶ್ರವಣ ಮತ್ತು ನಿದಿಧ್ಯಾಸನಗಳು ಶಾಸ್ತ್ರದಲ್ಲಿ ವಿಹಿತವಾದ್ದರಿಂದ ಮುಮುಕ್ಷುವಿಗೆ ಹೇಗೆ ಆವಶ್ಯಕವೋ, ಅದರಂತೆ ಮನನವೂ ಆವಶ್ಯಕವಾಗಿದೆಯೆಂದು ದೃಷ್ಟಾಂತಕೋಸ್ಕರ 'ಶ್ರವಣಾದಿರೂಪಾ' ಎನ್ನಲಾಗಿದೆ. ಹೊರತು ಶ್ರವಣ,ನಿದಿಧ್ಯಾಸನಗಳು ಶಾಸ್ತ್ರದ ಆರಂಭಣೀಯತ್ವಕ್ಕೆ ಪ್ರಯೋಜಕಗಳೆಂಬ ಅಭಿಪ್ರಾಯದಿಂದಲ್ಲ. ಅಥವಾ ಮತ್ತೊಂದು ಬಗೆಯಲ್ಲಿ ಸಮಾಧಾನ ಹೇಳಬಹುದು 'ಶ್ರವಣಾದಿರೂಪಾ' ಎಂದರೆ ಶ್ರವಣ ಮನನ ನಿದಿಧ್ಯಾಸನ ಮೂರನ್ನೂ ಇಟ್ಟುಕೊಳ್ಳಬೇಕು. ಅವುಗಳಲ್ಲಿ ನಿದಿಧ್ಯಾಸನವು ಅಕರ್ತವ್ಯವಾದರೆ ನಿದಿಧ್ಯಾಸನದ ಅಂಗವಾದ ಮನನವೂ ಅಕರ್ತವ್ಯವಾಗುತ್ತದೆ. ಮನನವು ಅಕರ್ತವ್ಯವಾದರೆ ಶಾಸ್ತ್ರವು ಅನಾರಂಭಣೀಯವಾಗುತ್ತದೆ. ಹೀಗೆ ನಿದಿಧ್ಯಾಸನವು ಪರಂಪರಯಾ ಶಾಸ್ತ್ರಾರಂಭಕ್ಕೆ ಪ್ರಯೋಜಕವಾಗಿದೆ. ಅದರಂತೆ ಶ್ರವಣವೂ ಶಾಸ್ತ್ರಾರಂಭಪ್ರಯೋಜಕವಾಗಿದೆ. ಈ ವಾಕ್ಯಕ್ಕೆ ಈ ಅರ್ಥವೇ ಸರಿಯೆ? ಅಥವಾ ಬೇರೆ ಅರ್ಥವಿದೆಯೆ? ಎಂಬ ಸಂಶಯದ ಪರಿಹಾರಕ್ಕೋಸ್ಕರ ಶಾಸ್ತ್ರವು ಯುಕ್ತಿಗಳನ್ನು ಹೇಳುತ್ತದೆ. ಸಂಶಯಕ್ಕಿಂತ ಮೊದಲು 'ಈ ವಾಕ್ಯಕ್ಕೆ ಇದು ಅರ್ಥ' ಎಂಬ ಧರ್ಮಿಜ್ಞಾನವು ಶ್ರವಣದಿಂದ ಬರಬೇಕು. ಪ್ರಯತ್ನಪಟ್ಟರೆ ಮಾತ್ರ ವಾಕ್ಯಾರ್ಥಜ್ಞಾನ ಬರಲು ಸಾಧ್ಯ. ಹೀಗೆ ಶ್ರವಣವೂ ಸಹ ಶಾಸ್ತ್ರಾರಂಭಪ್ರಯೋಜಕವಾಗಿರುತ್ತದೆ.

**प्रकाशः – एवं समासार्थं निरूप्य क्रमप्राप्तजिज्ञासापदार्थं निरूपयति ।। युक्त्यनुसन्धानेति ।।** भगवति शक्तितात्पर्यावधारणरूपसमन्वयायोपक्रमादि-रूपयुक्त्यनुसन्धानात्मकेत्यर्थः । **टीकायामेवमनुक्तेराह – सुधायामिति ।।** अत्र जिज्ञासाशब्देन तस्यैव ग्रहणे युक्तिं चाह **।। न्यायेति ।। मात्रेणेति ।।** नतु **श्रवणस्यापि कर्तव्यतोक्त्येत्यर्थः । येन श्रवणमपि जिज्ञासापदेनात्र ग्राह्यं स्यादिति** भावः । **तदेवाह ।। नहीति ।। विचारः श्रवणमिति** परमतव्यावृत्त्यर्थम् । **औपदेशिकेति ।** उपनिषद्भाष्यदिरूपोपदेशजातवाक्यार्थग्रहणेत्यर्थः **।। उक्तेति ।।** न्यायनिबन्धनात्मकरूपेत्यर्थः । न्यायानुसन्धानस्य तन्निबन्धनात्मकशास्त्रं विना अयोगेन तत्कर्तव्यत्वमेव तदारम्भणीयत्वं प्रयोजयति, नतु वाक्यार्थग्रहणम्, तस्य व्याख्यानादिरूपोपदेशापेक्षत्वादिति भावः । यद्यपि वक्ष्यमाणदिशा श्रवण- कर्त॰ यत्वमपि शास्त्रारम्भप्रयोजकम् । तथाऽपि परम्परया तथात्वेऽपि न साक्षादिति भावः । श्रवणकर्तव्यत्वं न शास्त्रारम्भप्रयोजकमित्यत्र सुधासंमतिपूर्वकं हेतुमाह –

श्रवणजमिति ।। तर्हि टीकाविरोध इत्यतः तद्वाक्यस्य चतुर्धा समाधिमाह – श्रवणादीति ।। तस्य गुणस्यान्यपदार्थविचारं प्रत्युपसर्जनीभूतस्य श्रवणस्यान्यपदार्थे संविज्ञानं यस्मिन् बहुव्रीहौ नास्ति सोऽयमतद्गुणसंविज्ञानबहुव्रीहिः । तथाच श्रवणस्य त्यागेनान्यपदार्थो विचार एव जिज्ञासापदार्थ उक्त इत्यर्थः । अस्मिन् पक्षे श्रवणपूर्वकत्वं मननस्य द्योतयितुमेवं निर्देश इति भावः । उपात्तस्याविवक्षायां ज्ञापकमाह – अत एवेति ।। 'तत्प्रयोगात्' सन्नन्तप्रयोगादित्यर्थः ।। यद्वेति ।। अस्मिन् पक्षे टीकायां 'श्रवणादि' इति 'श्रवणादेः' इति च द्विःश्रवणशब्दप्रयोग-स्वारस्यादादिपदोपात्तमनननिदिध्यासनयोः स्वारस्यम् । "विचारेऽपि तत्प्रयोगात्" इति टीका च विचारार्थकत्वप्रदर्शनमुखेन छत्रिन्यायेन श्रवण-निदिध्यासनयोः लक्षकतया त्रितयार्थत्वाभिप्रायेणोपपन्नेत्याशयः । जिज्ञासाशब्दस्य त्रितयार्थत्वेन त्रिषु कर्तव्यत्वान्वयेऽपि विचारकार्यत्वमेव शास्त्रारम्भे हेतुः नत्वितरकार्यत्वमपीत्यर्थः । ननु विषयाद्यभावेन मननाकर्तव्यत्वपूर्वपक्षोक्तौ तुल्यन्यायतया श्रवणादेरपि तथात्वप्राप्त्या कथं दृष्टान्तत्वम्? इत्यत आह – अथवेति ।। 'तदङ्ग' इति अकर्तव्यत्वे हेतुः । तदङ्गत्वं च न्यायामृते तृतीयपरिच्छेदे साधितमिति भावः । 'परम्परया' मननकर्तव्यताद्वारा । 'आरम्भणीयत्वे' 'शास्त्रस्य' इति शेषः । श्रवणकर्तव्यत्वस्याप्यारम्भहेतुत्वमाह – तथेति ।। यत्रेति ।। नह्यापातत एव एवंरूपज्ञानं भवतीति भावः । 'हेतुः' इति 'परम्परया' इत्यन्वयः ।

गुरुराजीय – ननु सुधायां विचारापरपर्यायमननस्यैव जिज्ञासाशब्दार्थत्वे-नोक्तत्वात् तद्विरोध इत्यतः सुधाटीकयोर्विरोधं परिहरति – युक्त्यनुसन्धानात्मक इति ।। ननु न श्रवणादिरूपजिज्ञासेति टीकायामतद्गुणसंविज्ञानबहुव्रीहिणा विचारमात्रस्यैव जिज्ञासाशब्दार्थत्वमभिप्रेतं तज्ज्ञापकाभावात् । नच विचारेऽपि तत्प्रयोगादित्युत्तरग्रन्थ एव तत्र मानमिति वाच्यम् । तस्येच्छाव्यतिरिक्तेऽप्यर्थे सन्न तशब्दप्रयोगादित्येवंपरत्वेनाप्युपपन्नत्वादित्यरुच्या पक्षान्तरमाह – यद्वेति ।। अत्रापि दृष्टान्तत्वज्ञापकं टीकायां किमपि नास्तीत्यरुचेराह – अथवेति ।। तदङ्गेति हेतुगर्भविशेषणम् । तथाच दर्शपूर्णमासयोरकर्तव्यत्वे प्रयाजादेरकर्तव्यत्ववत्

अङ्गभूतस्य निदिध्यासनस्याकर्तव्यत्वे मननस्याकर्तव्यत्वमिति भावः ।। तयेति ।। संशयादिनिरासको यो विचारशास्त्रव्युत्पाद्यो न्यायः तदवतारेऽङ्गभूतो यः सन्देहः तत्कारणस्येत्यर्थः । तथाच श्रवणजज्ञानाभावे धर्मिज्ञानाभावेन तत्साध्यसन्देहासम्भवेन न्यायावतारासम्भवेन तद्ग्रथनात्मकशास्त्रस्यानारम्भणीयत्वं स्यादिति भावः ।

**ವಿವರಣೆ** - ಇಲ್ಲಿಯ ತನಕ 'ಬ್ರಹ್ಮಜಿಜ್ಞಾಸಾ' ಎಂಬ ಶಬ್ದದ ಸಮಾಸವಿಚಾರವನ್ನು ಮಾಡಿದ್ದಾಯಿತು. ಈಗ ಜಿಜ್ಞಾಸಾಶಬ್ದದ ಅರ್ಥವನ್ನು ನಮ್ಮ ಸಿದ್ಧಾಂತದಂತೆ ನಿರೂಪಣೆ ಮಾಡಲು ಪ್ರಾರಂಭಿಸಿದ್ದಾರೆ.

"ಯುಕ್ತ್ಯನುಸಂಧಾನಾತ್ಮಕಃ" ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – ಸಮಸ್ತ-ಶ್ರುತಿಗಳ ಶಕ್ತಿ ಹಾಗು ತಾತ್ಪರ್ಯಗಳು ಭಗವಂತನನ್ನು ತಿಳಿಸುವುದರಲ್ಲಿಯೇ ಎಂದು ನಿರ್ಣಯಿಸುವುದು ಸಮನ್ವಯವೆನಿಸುತ್ತದೆ. ಇಂತಹ ಸಮನ್ವಯ ಮೊದಲಾದ ವಿಷಯದಲ್ಲಿ ಉಪಕ್ರಮ ಮೊದಲಾದ ಯುಕ್ತಿಗಳನ್ನು ಅನುಸಂಧಾನ ಮಾಡುವುದೇ ವಿಚಾರವಾಗಿದೆ. ಈ ವಿಚಾರವನ್ನೇ ಜಿಜ್ಞಾಸೆ ಮನನ ಎಂದೂ ಕರೆಯಲಾಗಿದೆ. ಹಾಗಾಗಿ, ವಿಚಾರ, ಜಿಜ್ಞಾಸೆ, ಮನನ ಇವೆಲ್ಲವೂ ಪರ್ಯಾಯ ಪದಗಳು. ಜಿಜ್ಞಾಸಾ ಪದಕ್ಕೆ ಈ ಅರ್ಥವನ್ನು ಟೀಕೆಯಲ್ಲಿ ಹೇಳಿಲ್ಲ. ಆದರೆ ಸುಧೆಯಲ್ಲಿ ಹೇಳಿದ್ದಾರೆ. ಜಿಜ್ಞಾಸಾಶಬ್ದಕ್ಕೆ ಸುಧೆಯಲ್ಲಿ ಹೇಳಿದ ಅರ್ಥವನ್ನು ಇಟ್ಟುಕೊಳ್ಳುವುದೇ ಇಲ್ಲಿ ಸಮಂಜಸವಾಗಿದೆಯೆಂದು "ನ್ಯಾಯನಿಬಂಧನ" ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ಯುಕ್ತ್ಯನುಸಂಧಾನಾತ್ಮಕವಾದ ಈ ಶಾಸ್ತ್ರದ ಅವಶ್ಯಕತೆಯನ್ನು ಸಮರ್ಥಿಸಲು ಯುಕ್ತಿಗಳ ಅನುಸಂಧಾನವು ಆವಶ್ಯಕ ಎಂದೇ ಹೇಳಬೇಕು ಹೊರತು ಶ್ರವಣವು ಆವಶ್ಯಕ ಎಂದು ಹೇಳಬೇಕಾಗಿಲ್ಲ. ಹಾಗಾಗಿದ್ದಲ್ಲಿ ಶ್ರವಣವನ್ನೂ ಜಿಜ್ಞಾಸಾಪದದಿಂದ ಸ್ವೀಕರಿಸಬಹುದಿತ್ತು. ಅದ್ವೈತಿಗಳು ಶ್ರವಣವನ್ನೇ ವಿಚಾರವೆಂದು ಹೇಳುತ್ತಾರೆ. ಇದು ತಪ್ಪು. ಉಪನಿಷದ್‌ಭಾಷ್ಯವೇ ಮೊದಲಾದ ಉಪದೇಶಮಾತುಗಳಿಂದ ಬರುವ ವಾಕ್ಯಾರ್ಥಜ್ಞಾನವು ಶ್ರವಣವೆನಿಸುತ್ತದೆ. ಇದನ್ನು ವಿಚಾರವೆಂದು ಹೇಳುವುದು ವಿರುದ್ಧ. ಇಂತಹ ಶ್ರವಣದ ಆವಶ್ಯಕತೆಯನ್ನು ಪ್ರಾರಂಭದಲ್ಲಿ ಹೇಳುವುದು ಅನಾವಶ್ಯಕ.

ವಸ್ತುತಸ್ತು ನಾವೂ ಸಹ ಶ್ರವಣದ ಆವಶ್ಯಕತೆಯಿಂದ ಶಾಸ್ತ್ರದ ಆವಶ್ಯಕತೆಯೂ ನಿರ್ಣಯ-ವಾಗುತ್ತದೆಂದು ಹೇಳುತ್ತೇವೆ. ಆದರೆ ಶ್ರವಣವನ್ನು ಸಾಕ್ಷಾತ್ತಾಗಿ ಶಾಸ್ತ್ರಕಾರಣತ್ವವೆಂದು ಹೇಳಿಲ್ಲ. ಉಪನಿಷದ್‌ಭಾಷ್ಯಾದಿಗಳ ಶ್ರವಣದಿಂದ ಅರ್ಥಜ್ಞಾನ ಬರುತ್ತದೆ. ಬಂದಂತಹ ಅರ್ಥಜ್ಞಾನದಲ್ಲಿ ಸಂಶಯ-ಪರಿಹಾರಕವಾಗಿ ನಿಶ್ಚಯ ಬರಬೇಕಾದರೆ ಯುಕ್ತಿಗಳು ಬೇಕು. ಅಂತಹ ಯುಕ್ತಿಗಳ ಸಂಗ್ರಹಾತ್ಮಕವಾದ ಈ ಶಾಸ್ತ್ರವು ಆವಶ್ಯಕವಾಗುತ್ತದೆ. ಹೀಗೆ ಪರಂಪರಯಾ ಶ್ರವಣವು ಶಾಸ್ತ್ರಕಾರಣವಾದ್ದರಿಂದ ಹಾಗೆ ಹೇಳಿದ್ದೇವೆ. ಸಾಕ್ಷಾತ್ತಾಗಿ ಕಾರಣವೆಂಬ ಅಭಿಪ್ರಾಯದಿಂದಲ್ಲ. ಈ ವಿಷಯದಲ್ಲಿ ಸುಧಾಸಮ್ಮತಿಯನ್ನು 'ಶ್ರವಣಜಂ' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಿದ್ದಾರೆ.

ಹಾಗಾದರೆ ಟೀಕೆಯಲ್ಲಿ "ಶ್ರವಣಾದಿರೂಪವಾದ ಜಿಜ್ಞಾಸೆಯು ಕರ್ತವ್ಯವಾಗಿದೆ" ಎಂದು ಹೇಳಿದ್ದು ಸುಧೆಗೆ ವಿರುದ್ಧವಾಯಿತು?

*ಪರಿಪೂರ್ಣಚಂದ್ರಿಕಾ*

ಈ ಪ್ರಶ್ನೆಗೆ ನಾಲ್ಕು ಬಗೆಯಲ್ಲಿ ಸಮಾಧಾನವನ್ನು ಹೇಳುತ್ತಿದ್ದಾರೆ -

೧) ''ಶ್ರವಣಾದಿರೂಪಾ'' ಎಂಬ ಶಬ್ದಕ್ಕೆ ಅತದ್ಗುಣಸಂವಿಜ್ಞಾನಬಹುವ್ರೀಹಿಸಮಾಸ ಮಾಡಬೇಕು. ಆವಾಗ ಶ್ರವಣವೇ ಆದಿಯಾಗಿವುಳ್ಳ ಮನನ ಎಂದರ್ಥವಾಗುತ್ತದೆ. ವಿಶೇಷಣವನ್ನು ಬಿಟ್ಟು ಅನ್ಯಪದಾರ್ಥವೇ ಮತ್ತೊಂದು ಪದಾರ್ಥದಲ್ಲಿ ಅನ್ವಯವಾಗುವುದಿದ್ದರೆ ಅದನ್ನು ಅತದ್ಗುಣ-ಸಂವಿಜ್ಞಾನಬಹುವ್ರೀಹಿಯೆಂದು ಕರೆಯುತ್ತಾರೆ. ಪ್ರಕೃತ ಶ್ರವಣಾದಿ ಎಂಬಲ್ಲಿ ಮನನವು ಅನ್ಯಪದಾರ್ಥ. ಅದಕ್ಕೆ ಶ್ರವಣವು ವಿಶೇಷಣವಾಗಿದೆ. ಈ ವಿಶೇಷಣವನ್ನು ಬಿಟ್ಟು ಕೇವಲ ಮನನವೇ ''ಶ್ರವಣಾದಿರೂಪಾ ಜಿಜ್ಞಾಸಾ'' ಎಂಬ ವಾಕ್ಯದಲ್ಲಿ ಇನ್ನೊಂದು ಪದಾರ್ಥದೊಡನೆ ಅನ್ವಯ ಹೊಂದುವ ಅಭಿಪ್ರಾಯ-ವಿರುವುದರಿಂದ ಅತದ್ಗುಣಸಂವಿಜ್ಞಾನಬಹುವ್ರೀಹಿ ಎಂದನಿಸುತ್ತದೆ.

ಪ್ರಶ್ನೆ :- ಶ್ರವಣಾದಿ ಎಂಬ ಶಬ್ದದಿಂದ ಶ್ರವಣವನ್ನು ಬಿಟ್ಟು ಮನನವನ್ನೇ ಇಟ್ಟುಕೊಳ್ಳವುದಾದರೆ ಮನನ ಎಂದೇ ಹೇಳಬಹುದಿತ್ತು. ಶ್ರವಣ ಎಂಬ ಶಬ್ದಪ್ರಯೋಗವು ಬೇಡವಾಗಿತ್ತು.

ಉತ್ತರ :- ಶ್ರವಣಶಬ್ದವನ್ನೇ ಪ್ರಯೋಗಿಸಲು ಕಾರಣವಿದೆ. ಮನನರೂಪವಾದ ವಿಚಾರವು ಶ್ರವಣದ ಅನಂತರವೇ ಸಾಧ್ಯ, ಎಂದು ತಿಳಿಸಬೇಕಾಗಿದೆ. 'ಮನನ' ಎಂಬ ಶಬ್ದವನ್ನೇ ಪ್ರಯೋಗಿಸಿದ್ದರೆ ಈ ವಿಷಯವು ತಿಳಿಯುತ್ತಿರಲಿಲ್ಲ. ಶ್ರಣವನ್ನು ತ್ಯಾಗ ಮಾಡಿ ವಿಚಾರವನ್ನೇ ಜಿಜ್ಞಾಸಾಶಬ್ದದಿಂದ ವಿವಕ್ಷಿಸುವುದು ತಪ್ಪಲ್ಲ. ಇದಕ್ಕೆ ಟೀಕೆಯ ಮಾತೇ ಸಂವಾದಿಯಾಗಿದೆ. ''ವಿಚಾರೇಽಪಿ ತತ್ಪ್ರಯೋಗಾತ್'' ಎಂದು ಟೀಕೆ ಇದೆ. 'ಜಿಜ್ಞಾಸಾ' ಎಂದರೆ 'ಜ್ಞಾತುಮಿಚ್ಛಾ' ಎಂಬರ್ಥವನ್ನು ಈಗ ಇಟ್ಟುಕೊಳ್ಳವುದೇ ಬೇಡ. ರೂಢಿಯಿಂದ 'ವಿಚಾರ' ಎಂಬರ್ಥವನ್ನೇ ಹೇಳಬಹುದು.

೨) ಅಥವಾ, 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದರೆ ಶ್ರವಣಮನನನಿದಿಧ್ಯಾಸನರೂಪವಾದ ಜಿಜ್ಞಾಸೆಯನ್ನು ಮಾಡಬೇಕೆಂದೇ ಸೂತ್ರದ ಅರ್ಥ. ಹಾಗಾದರೆ ಟೀಕೆಯಲ್ಲಿ 'ಶ್ರವಣಾದಿರೂಪಾ ಜಿಜ್ಞಾಸಾ' ಎಂಬ ಮಾತಿಗೆ ಏನು ಅರ್ಥ? ಎಂದರೆ ಕೇವಲ ದೃಷ್ಟಾಂತಪರವಾಗಷ್ಟೇ ಈ ವಾಕ್ಯ ಹೊರಟಿದೆ. ಯಾವ ರೀತಿಯಾಗಿ ಮುಮುಕ್ಷುವು ಶ್ರವಣನಿದಿಧ್ಯಾಸನಗಳನ್ನು ವಿಹಿತವಾದ್ದರಿಂದ ಮಾಡಬೇಕೋ, ಅದರಂತೆ ಮನನವನ್ನೂ ಮಾಡಬೇಕು ಎಂದು. ಹೊರತು ಶಾಸ್ತ್ರಾರಂಭಕ್ಕೆ ಹೇತುವಾಗಿ ಶ್ರವಣ ನಿದಿಧ್ಯಾಸನಗಳನ್ನು ಹೇಳಿಲ್ಲ. ವಿಚಾರವಷ್ಟೇ ಶಾಸ್ತ್ರಾರಂಭಹೇತುವಾಗಿದೆ.

ಈ ಪಕ್ಷವನ್ನು ವಿವಕ್ಷಿಸಿದಾಗ ಟೀಕೆಯು ಬಹಳ ಸ್ವರಸವಾಗುತ್ತದೆ. ಟೀಕೆಯಲ್ಲಿ ಒಮ್ಮೆ 'ಶ್ರವಣಾದೇಃ' ಎಂದಿದ್ದಾರೆ. ಮತ್ತೊಮ್ಮೆ 'ಶ್ರವಣಾದಿ' ಎಂದಿದ್ದಾರೆ. ಹೀಗೆ ಎರಡುಬಾರಿ ಮಾಡಿದ ಶಬ್ದಪ್ರಯೋಗವು ಸಾಧುವಾಗುತ್ತದೆ. ಮತ್ತು ಆದಿಪದದಿಂದ ಸ್ವೀಕರಿಸಿದ ಮನನ ನಿದಿಧ್ಯಾಸನಗಳೂ ಸ್ವರಸವಾಗುತ್ತವೆ. ಏಕೆಂದರೆ ಶ್ರವಣ, ಮನನ, ನಿದಿಧ್ಯಾಸನ ಪ್ರತಿಯೊಂದಕ್ಕೂ ಕರ್ತವ್ಯತ್ವದಲ್ಲಿ ಅನ್ವಯ ಮಾಡಿದೆ.

ಪ್ರಶ್ನೆ :- ಹಾಗಾದರೆ ಮುಂದೆ ''ವಿಚಾರೇಽಪಿ ತತ್ ಪ್ರಯೋಗಾತ್'' ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಶ್ರವಣನಿದಿಧ್ಯಾಸನಗಳನ್ನು ಬಿಟ್ಟು. ಕೇವಲ ವಿಚಾರದಲ್ಲಿ ಪ್ರಯೋಗವೆಂದದ್ದು ತಪ್ಪಲ್ಲವೇ?

ಉತ್ತರ :- ಏನೂ ತಪ್ಪಿಲ್ಲ. ಸೂತ್ರದಲ್ಲಿರುವ ಜಿಜ್ಞಾಸಾ ಶಬ್ದಕ್ಕೆ ರೂಢಿಯಿಂದ ಮನನವನ್ನು ವಿವಕ್ಷಿಸಬೇಕು. ಛತ್ರಿನ್ಯಾಯದಿಂದ ಶ್ರವಣ ನಿದಿಧ್ಯಾಸನಗಳನ್ನೂ ವಿವಕ್ಷಿಸಬೇಕು. ವಾಚ್ಯಾರ್ಥವಿಚಾರವೇ ಆಗಿದೆಯೆಂದು ಟೀಕಾಮಾತು ಹೊರಟಿದೆ. ಅಜಹಲ್ಲಕ್ಷಣಾದಿಂದ ಶ್ರವಣ ನಿದಿಧ್ಯಾಸನಗಳನ್ನು ಇಟ್ಟುಕೊಳ್ಳಬೇಕೆಂದು ಟೀಕೆಯ ಅಭಿಪ್ರಾಯ.

ಆದ್ದರಿಂದ ಸೂತ್ರದಲ್ಲಿರುವ ಮತ್ತು ಶ್ರುತಿಯಲ್ಲಿರುವ ಜಿಜ್ಞಾಸಾಶಬ್ದವು ಛತ್ರಿನ್ಯಾಯದಿಂದ ಮೂರೂ ಅರ್ಥಗಳನ್ನು ಹೇಳುತ್ತದೆಂದಾಯಿತು. ಅವುಗಳಲ್ಲಿ ವಿಚಾರವು ಮಾತ್ರ ಶಾಸ್ತ್ರಾರಂಭಹೇತು. ಉಳಿದ ಶ್ರವಣ ನಿದಿಧ್ಯಾಸಗಳು ಕೇವಲ ದೃಷ್ಟಾಂತಗಳಾಗಿವೆ.

ಪ್ರಶ್ನೆ :- ವಿಷಯಾದಿಗಳು ಇಲ್ಲದಿರುವುದರಿಂದ ವಿಚಾರವು ಅಕರ್ತವ್ಯವೆಂದು ಪೂರ್ವಪಕ್ಷ. ವಿಷಯಾದಿಗಳು ಇಲ್ಲವೆಂಬ ಇದೇ ನ್ಯಾಯದಿಂದಲೇ ಶ್ರವಣ ನಿದಿಧ್ಯಾಸನಗಳೂ ಅಕರ್ತವ್ಯವೆಂದು ಪೂರ್ವಪಕ್ಷ ಬರುತ್ತದೆ. ಆದ್ದರಿಂದ ಶ್ರವಣ ಮನನ ನಿದಿಧ್ಯಾಸನ ಮೂರೂ ಅಕರ್ತವ್ಯವೆಂದು ಪೂರ್ವಪಕ್ಷಿಯ ಅಭಿಪ್ರಾಯ. ಅಂತಹವನನ್ನು ಕುರಿತು ಶ್ರವಣ ನಿದಿಧ್ಯಾಸನಗಳು ಹೇಗೆ ಕರ್ತವ್ಯವೋ, ಅದರಂತೆ ಮನನವು ಕರ್ತವ್ಯವೆಂಬ ದೃಷ್ಟಾಂತವು ಹೇಗೆ ಸರಿಯಾಗುತ್ತದೆ?

ಉತ್ತರ :- ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿಯೇ ಎರಡನೆಯ ಪಕ್ಷವನ್ನು ಬಿಟ್ಟು ಮೂರನೆಯ ಪಕ್ಷವನ್ನು ಹೇಳುತ್ತಿದ್ದಾರೆ.

ವಸ್ತುತಃ ಇಲ್ಲಿ ಎರಡನೆಯ ಪಕ್ಷವನ್ನೇ ಆಶ್ರಯಿಸಿ ಪೂರ್ವಪಕ್ಷಿಗೆ ಉತ್ತರಿಸಬಹುದು. "ಆತ್ಮಾ ವಾ ಅರೇ!" ಇತ್ಯಾದಿ ಶ್ರುತಿಯಲ್ಲಿ ಶ್ರವಣ ನಿದಿಧ್ಯಾಸನಗಳು ವಿಹಿತವಾಗಿರುವುದರಿಂದ ಕರ್ತವ್ಯಗಳಾಗಿವೆ. ಅದರಂತೆ ಮನನವೂ ವಿಹಿತವಾದ್ದರಿಂದ ಕರ್ತವ್ಯವೇ ಆಗುತ್ತದೆಂದು ಉತ್ತರಿಸಬಹುದು. ಆದರೂ ಮತ್ತೂ ಸ್ವಾರಸ್ಯವಾದ ಅರ್ಥ ಹೇಳಲು ಮೂರನೆಯ ಪಕ್ಷ ಹೊರಟಿದೆ.

ಅಥವಾ, ಶ್ರವಣ, ಮನನ, ನಿದಿಧ್ಯಾಸನ, ಮೂರೂ ಕರ್ತವ್ಯಗಳೇ ಆಗಿವೆ. ಮೂರೂ ಸಹ ಶಾಸ್ತ್ರಾರಂಭದಲ್ಲಿ ಹೇತುಗಳಾಗುತ್ತವೆ.

ಅದು ಹೀಗೆ - ನಮ್ಮ ಮತದಲ್ಲಿ ನಿದಿಧ್ಯಾಸನಕ್ಕೆ ಮನನವು ಅಂಗ, ಮನನಕ್ಕೆ ಶ್ರವಣವು ಅಂಗ. ಹೀಗಿದ್ದಾಗ ನಿದಿಧ್ಯಾಸನವು ಒಂದುವೇಳೆ ಅಕರ್ತವ್ಯವಾದರೆ ಅದರ ಅಂಗವಾದ ಮನನವೂ ಬೇಡವೆಂದಂತೆ ಆಗುತ್ತದೆ. ಮನನವೇ ಬೇಡವೆಂದರೆ ಶಾಸ್ತ್ರವು ಅನಾರಂಭಣೀಯವಾಗುತ್ತದೆ. ನಿದಿಧ್ಯಾಸನವು ಕರ್ತ್ಯವ್ಯವಾದರೆ ಮನನವು ಕರ್ತವ್ಯವಾಗುತ್ತದೆ. ಮನನವು ಕರ್ತವ್ಯವಾದ್ದರಿಂದ ಅದಕ್ಕೆ ಉಪಯುಕ್ತ ಶಾಸ್ತ್ರವು ಕರ್ತವ್ಯವೆಂದಾಯಿತು. ಹೀಗೆ ಪರಂಪರಯಾ ನಿದಿಧ್ಯಾಸನವು ಶಾಸ್ತ್ರಾರಂಭಹೇತುವಾಗಿದೆ. ಮನನವು ನಿದಿಧ್ಯಾಸನಕ್ಕೆ ಹೇಗೆ ಅಂಗವಾಗುತ್ತದೆಂಬ ವಿಚಾರವು ನಿದಿಧ್ಯಾಸನಕ್ಕೆ ಹೇಗೆ ಅಂಗವಾಗುತ್ತದೆಂಬ ವಿಚಾರವು ನ್ಯಾಯಾಮೃತದ ತೃತೀಯಪರಿಚ್ಛೇದದಲ್ಲಿ ವಿವರಿಸಿದೆ.

*ಪರಿಪೂರ್ಣಚಂದ್ರಿಕಾ*

ಇನ್ನು ಶ್ರವಣವು ಶಾಸ್ತ್ರಾರಂಭಹೇತು ಹೇಗೆ ಆಗುತ್ತದೆ? ಎಂಬುದನ್ನು 'ತಥಾ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. ಇದು ವಿಚಾರಶಾಸ್ತ್ರ. ವಿಚಾರಶಾಸ್ತ್ರದಿಂದ ವ್ಯುತ್ಪಾದ್ಯವಾದದ್ದು ನ್ಯಾಯಗಳು. ಸಂದೇಹ ವಿಪರೀತಜ್ಞಾನಗಳಿದ್ದರಷ್ಟೇ ನ್ಯಾಯಾವತಾರ. ಸಂಶಯ ಬರಬೇಕಾದರೆ ಧರ್ಮಿಜ್ಞಾನವು ಇರಬೇಕು. "ಅಯಂ ವಾಕ್ಯಾರ್ಥೋ ಯುಕ್ತೋ ನವಾ?" ಎಂಬ ಸಂಶಯ ಬರಬೇಕಾದರೆ ವಾಕ್ಯಾರ್ಥ ಏನು ಎಂದು ಮೊದಲು ಧರ್ಮಿಜ್ಞಾನವು ಇರಬೇಕು. ಧರ್ಮಿಜ್ಞಾನ ಬರಬೇಕಾದರೆ ಶ್ರವಣವು ಮೊದಲು ಇರಬೇಕು. ಈಗ ಶ್ರವಣವೇ ಇಲ್ಲವೆಂದಾದರೆ ಧರ್ಮಿಜ್ಞಾನ ಬರಲು ಸಾಧ್ಯವಿಲ್ಲ. ಧರ್ಮಿಜ್ಞಾನ ಬರದಿದ್ದರೆ ಸಂಶಯವು ಬರಲು ಸಾಧ್ಯವಿಲ್ಲ. ಸಂಶಯವೇ ಇಲ್ಲವಾದರೆ ನ್ಯಾಯದ ಪ್ರವೃತ್ತಿಯೇ ಆಗುವುದಿಲ್ಲ. ಆದ್ದರಿಂದ ವಿಚಾರಶಾಸ್ತ್ರವೇ ಅನಾರಂಭಣೀಯವಾಗುತ್ತದೆ. ಹೀಗೆ ಶ್ರವಣದ ಕರ್ತವ್ಯತ್ವವು ಶಾಸ್ತ್ರಾರಂಭ ಪ್ರಯೋಜಕವಾಗಿದೆ.

ಹೀಗೆ ಶಾಸ್ತ್ರಾರಂಭದ ಸಿದ್ಧಿಗೋಸ್ಕರವೇ ಶ್ರವಣ ಮನನ ನಿದಿಧ್ಯಾಸನಗಳನ್ನು ಹೇಳಿದ್ದು. ಇವುಗಳಲ್ಲಿ ಮನನವು ಸಾಕ್ಷಾತ್ತಾಗಿ ಕಾರಣ, ಶ್ರವಣ ನಿದಿಧ್ಯಾಸನಗಳು ಪರಂಪರಯಾ ಕಾರಣಗಳು. ಈ ಪಕ್ಷವು ಟೀಕೆಯ ಸ್ವರಸಾರ್ಥವಾಗಿದೆ. ಮೊದಲಿನ ಎರಡು ಪಕ್ಷಗಳು ಸುಧೆಗೆ ಅನುಗುಣವಾಗಿ ಸಮರ್ಥಿಸಿದ್ದು.

## ಜಿಜ್ಞಾಸಾಪದದಿಂದ ಶ್ರವಣಾದಿಗಳನ್ನು ವಿವಕ್ಷಿಸುವ ಬಗೆ

### तात्पर्यचन्द्रिका –

यस्तु – सर्वशाखाधिकरणे टीकायां श्रवणमनने कर्तव्ये इति प्रथमसूत्रे उक्तमित्यनुवादः, स तदुत्तराधिकरणे निदिध्यासनस्य विचारयिष्यमाणत्वात् तत्र तयोरेव विचार्यत्वात् तदुपयोगितयैकदेशानुवादः । नतु प्रथमसूत्रे तन्मात्रोक्त्या । अत एवोपासना नाम ब्रह्मजिज्ञासेति त्रिविधोपासनाया जिज्ञासात्वं तत्रैवोक्तम् । न चैकस्य जिज्ञासाशब्दस्य श्रवणाद्यनेकार्थत्वायोगः । इच्छार्थो जिज्ञासाशब्दो विचारलक्षक इति पक्षे दोषाभावात् । मननरूपविचाराभिधायक इति पक्षे श्रवणादौ छत्रिवल्लक्षणोपपत्तेः । यद्वा – इह टीकायां जिज्ञासाविचारशब्दाभ्यां साक्षात् प्रमाणद्वारा वा चित्तस्य तत्प्रावण्यरूपा श्रवणादित्रयानुगतोपासना विवक्षिता । नतु सुधायामिव मननमिति, युक्ता टीका । सुधायां तु सति मननकर्तव्यत्वे इतरा-कर्तव्यत्वेन शास्त्रानारम्भाभावात् तत्कर्तव्यतैवारम्भे(भ) हेतुरिति मननमेव जिज्ञासात्वेनोक्तमिति, मननविधिमूलमेवेदं सूत्रम् । समानविषयत्वात् । नतु विवरणमत इव श्रवणविधिमूलम् । विस्तृतं चैतदन्यत्र ।

ಅನುವಾದ - ಸರ್ವವೇದಾಂತಪ್ರತ್ಯಯಾಧಿಕರಣದ ಟೀಕೆಯಲ್ಲಿ "ಶ್ರವಣ ಮನನಗಳೆರಡನ್ನು ಅವಶ್ಯ ಆಚರಿಸಬೇಕೆಂದು ಪ್ರಥಮಸೂತ್ರದಲ್ಲಿ ಹೇಳಿದೆ" ಎಂದಿದೆ. ಆದರೆ ಮೂರನೆಯ ಪಕ್ಷದಲ್ಲಿ ಶ್ರವಣ ಮನನ ನಿದಿಧ್ಯಾಸನ ಮೂರಕ್ಕೂ ಕರ್ತವ್ಯತ್ವವನ್ನು ಹೇಳಿದ್ದರಿಂದ ಪರಸ್ಪರವಿರೋಧ ಬರುತ್ತದೆ. ಆದರೆ ಸರ್ವಶಾಖಾಧಿಕರಣದ ಟೀಕೆಯ ಅಭಿಪ್ರಾಯ ಹಾಗಲ್ಲ. ಅದರ ಮುಂದೆ ಉಪಸಂಹಾರಾಧಿಕರಣದಲ್ಲಿ ನಿದಿಧ್ಯಾಸನದ ಬಗ್ಗೆ ವಿಶೇಷ ವಿಚಾರವನ್ನು ಮಾಡಿದ್ದಾರೆ. ಆದ್ದರಿಂದ ಸರ್ವವೇದಾಂತಪ್ರತ್ಯಯಾ-ಧಿಕರಣದಲ್ಲಿ ಅದನ್ನು ಬಿಟ್ಟು ಕೇವಲ ಶ್ರವಣ ಮನನಗಳ ಬಗ್ಗೆ ವಿಚಾರ ಮಾಡುತ್ತಿದ್ದಾರೆ. ಶ್ರವಣ ಮನನಗಳ ಬಗ್ಗೆ ವಿಚಾರವು ಪ್ರಸ್ತಾಪವಾದಾಗ ಜಿಜ್ಞಾಸಾಧಿಕರಣದಲ್ಲಿ ಹೇಳಿದ ಒಂದಂಶವನ್ನಷ್ಟೇ ಸ್ವೀಕರಿಸುತ್ತಿದ್ದಾರೆ. ಹೊರತು ಜಿಜ್ಞಾಸಾಧಿಕರಣದಲ್ಲಿ ಶ್ರವಣ ಮನನ ಎರಡನ್ನು ಮಾತ್ರ ಹೇಳಿದ್ದಾರೆಂಬ ಅಭಿಪ್ರಾಯವಲ್ಲ. ಆದ್ದರಿಂದಲೇ ಉಪಾಸನೆ ಎಂದರೆ ಬ್ರಹ್ಮಜಿಜ್ಞಾಸೆ ಎಂದು ಶ್ರವಣ ಮನನ ನಿದಿಧ್ಯಾಸನ ಮೂರನ್ನು ಜಿಜ್ಞಾಸಾಪದದ ಅರ್ಥವೆಂದು ಅಲ್ಲಿಯೇ ಹೇಳಿದ್ದಾರೆ.

ಒಂದೇ ಜಿಜ್ಞಾಸಾಶಬ್ದವು ಶ್ರವಣವೇ ಮೊದಲಾದ ಅನೇಕ ಅರ್ಥಗಳನ್ನು ಹೇಗೆ ಹೇಳುತ್ತದೆ? ಎಂಬ ಪ್ರಶ್ನೆಗೆ ಇಷ್ಟು ಉತ್ತರ.

ಜಿಜ್ಞಾಸಾಶಬ್ದಕ್ಕೆ 'ಜ್ಞಾನೇಚ್ಛೆ' ಎಂದರ್ಥ. ಲಕ್ಷಣಾವೃತ್ತಿಯಿಂದ ಮನನವೆಂದು ಅರ್ಥೈಸಬೇಕೆಂಬ ಪಕ್ಷದಲ್ಲಿ ದೋಷವಿಲ್ಲ. ಮನನರೂಪವಾದ ವಿಚಾರದಲ್ಲಿ ಶಕ್ತಿವುಳ್ಳದ್ದಾಗಿದೆ ಎಂಬ ಪಕ್ಷದಲ್ಲಿ ಮನನವೇ ಮುಖ್ಯಾರ್ಥವಾದರೂ ಲಕ್ಷಣಾವೃತ್ತಿಯಿಂದ ಶ್ರವಣನಿದಿಧ್ಯಾಸನಗಳನ್ನೂ ಛತ್ರಿನ್ಯಾಯದಿಂದ ಇಟ್ಟು-ಕೊಳ್ಳಬೇಕು.

ಅಥವಾ ಮತ್ತೊಂದು ಪರಿಹಾರ - ಟೀಕೆಯು ಜಿಜ್ಞಾಸೆಯೆಂದೂ ವಿಚಾರವೆಂದೂ ಕರೆದಿರುವುದು ಉಪಾಸನೆಯನ್ನು. ಈ ಉಪಾಸನೆಯು ಶ್ರವಣ ಮನನ ನಿದಿಧ್ಯಾಸನ ಮೂರರಲ್ಲಿಯೂ ಸೇರಿರುವ ಒಂದು ಅಂಶವಾಗಿದೆ. ಅಂದರೆ ಭಗವಂತನ ವಿಷಯದಲ್ಲಿನ ಏಕಾಗ್ರತೆ. ಇದು ನಿದಿಧ್ಯಾಸನದಿಂದ ಸಾಕ್ಷಾತ್ತಾಗಿ ಲಭಿಸುತ್ತದೆ. ಶ್ರವಣ ಮನನಗಳಿಂದ ಪ್ರಮಾಣಗಳ ಮೂಲಕ ಲಭಿಸುತ್ತದೆ. ಹೀಗೆಯೇ ಹೊರತು ಸುಧೆಯಲ್ಲಿ ಹೇಳಿದಂತೆ ಮನನವೊಂದೇ ಉಪಾಸನೆ ಅನಿಸುವುದಿಲ್ಲ. ಸುಧೆಯು ಕೇವಲ ಮನನವನ್ನೇ ಜಿಜ್ಞಾಸಾ ವಿಚಾರಶಬ್ದಗಳಿಂದ ಕರೆದಿದೆ. ಏಕೆಂದರೆ ಮನನದ ಆವಶ್ಯಕತೆಯೊಂದನ್ನು ಒಪ್ಪಿದರೆ ಸಾಕು. ಶಾಸ್ತ್ರವನ್ನಾರಂಭಿಸುವುದಕ್ಕೆ ಬೇರೆ ಯಾವುದರ ಆವಶ್ಯಕತೆಯೂ ಇಲ್ಲ. ಕೇವಲ ಮನನದಿಂದಷ್ಟೇ ಶಾಸ್ತ್ರವು ಆರಂಭವಾಗುತ್ತದೆ. ಆದ್ದರಿಂದ ಮನನವನ್ನು ವಿಧಿಸುವ ಶ್ರುತಿವಾಕ್ಯದ ವಿಷಯದಲ್ಲಿ ಈ ಸೂತ್ರವು ವಿಚಾರ ಮಾಡುತ್ತಿದೆ. ಎಂದು ಹೇಳಬೇಕು. ಆವಾಗ ಶ್ರುತಿ ಮತ್ತು ಸೂತ್ರಗಳು ಒಂದೇ ಅಭಿಪ್ರಾಯವುಳ್ಳವುಗಳೆಂದು ತಿಳಿಯುತ್ತದೆ.

ಆದರೆ ವಿವರಣದಲ್ಲಿ ಇದಕ್ಕೆ ವಿರುದ್ಧವಾಗಿ ಹೇಳಿದೆ. "ಈ ಸೂತ್ರವು ಶ್ರವಣವಿಧಾಯಕ ಶ್ರುತಿವಾಕ್ಯದ ಬಗ್ಗೆ ವಿಚಾರ ಮಾಡುತ್ತಿದೆ" ಎಂದು. ಇದನ್ನು ಸಮರ್ಥಿಸುವುದು ಕಷ್ಟವೆಂದು ನ್ಯಾಯಾಮೃತದ ಮೂರನೆಯ ಪರಿಚ್ಛೇದದಲ್ಲಿ ವಿಸ್ತಾರವಾಗಿ ವಿಚಾರಮಾಡಲಾಗಿದೆ.

*ಪರಿಪೂರ್ಣಚಂದ್ರಿಕಾ*

**ಕಠಿಣಪದಾರ್ಥ**

**ಸಾಕ್ಷಾತ್** = ನಿದಿಧ್ಯಾಸನದಿಂದ ನೇರವಾಗಿ, **ಪ್ರಮಾಣದ್ವಾರಾ** = ಶ್ರವಣ ಮನನವೆಂಬ ಪ್ರಮಾಣಗಳ ಮೂಲಕವಾಗಿ, **ತತ್ಪ್ರಾವಣ್ಯಂ** = ಭಗವನ್ಮಾತ್ರನಿಷ್ಠತ್ವ, **ಅನ್ಯತ್ರ** = ನ್ಯಾಯಾಮೃತದ ಮೂರನೇ ಪರಿಚ್ಛೇದದಲ್ಲಿ, **ಸರ್ವಶಾಖಾಧಿಕರಣೇ** = ಸರ್ವವೇದಾಂತಪ್ರತ್ಯಯಾಧಿಕರಣದಲ್ಲಿ, **ತತ್ರ** = ಸರ್ವವೇದಾಂತಪ್ರತ್ಯಯಾಧಿಕರಣದಲ್ಲಿ, **ತಯೋರೇವ** = ಶ್ರವಣಮನನಗಳಷ್ಟೇ, **ಉಪಾಸನಾ** = ಶ್ರವಣ ಮನನ ನಿದಿಧ್ಯಾಸನ ಮೂರರಿಂದ ಕೂಡಿದ್ದು.

**प्रकाशः** – ननु यथाकथंचित् त्रितयकर्तव्यत्वस्याभिमतत्वे ''सर्ववेदान्तप्रत्ययं चोदनाद्यविशेषात्'' इति तृतीयतृतीयपादाद्याधिकरणे द्वयोरेव कर्तव्यत्वोक्त्यनुवादो विरुध्येतेत्यत आह ।। **यस्त्विति** ।। टीकोक्तत्रितयार्थत्वं साधयति ।। **नचेति** ।। **इच्छार्थ इति** ।। ज्ञानांशस्यानुपयोगात् प्रत्ययार्थ एवोक्तः ।। **दोषाभावादिति** ।। श्रवणादित्रितयलक्षकत्वे बाधकाभावादिति भावः ।। **छत्रिवदिति** ।। यथा छत्र्यच्छत्रिसमुदाये छत्रिसाहचर्यात् ''छत्रिणो गच्छन्ति'' इति लक्षणया छत्रिशब्दः, तथा विचारे शक्तस्य तत्सहपठितयोर्लक्षणोपपत्तेरित्यर्थः । सुधायां पक्षद्वयस्याप्युक्तेः इति पक्षे इति पक्षपदप्रयोगः । एतेन ''विचारेऽपि'' इति टीकावाक्यं, विचारशब्दस्योपलक्षणतया श्रवणादेरसन्वाच्यत्वेऽपि लक्षणया श्रवणादौ प्रयोगसम्भवादिति, विचारे प्रयोगवशात् तत्र शक्तस्यापि छत्रिवल्लक्षणया श्रवणादौ प्रयोगसम्भवादिति च, द्वेधा योज्यमित्युक्तं भवति । कथं तर्हि प्रस्थानद्वयस्य विरोधपरिहारः । अत्र त्रितयस्यापि विवक्षितत्वोक्तेरित्यतः सर्वशाखाधिकरण-टीकानुसारेणाभिप्रायान्तरं वर्णयन्नुक्तपक्षत्रयेऽपि, प्रस्थानद्वयविरोधं सुधाशय-वर्णनेन परिहरति ।। **यद्वेति** ।। 'साक्षात्' निदिध्यासनेन । 'प्रमाणद्वारा' श्रवण-मननाभ्याम् । 'तत्प्रावण्यं' भगवदेकनिष्ठता ।। **अन्यत्रेति**।। न्यायामृते तृतीय-परिच्छेदे इत्यर्थः । तथाच जिज्ञासाशब्दस्य विचारमात्रार्थकत्वं प्रागुक्तं युक्तमिति भावः ।

**गुरुराजीय** – ननु त्रितयकर्तव्यत्वस्य प्रथमसूत्रार्थत्वे सर्वशाखाधिकरणीय-टीकाविरोधः । तत्र श्रवणमननयोरेव कर्तव्यत्वस्य प्रथमसूत्रार्थत्वेनोक्तत्वादित्यत

आह – **यस्त्विति** ।। **तत्र तयोरेवेति** ।। श्रवणमननयोरित्यर्थः। स्वोक्ताभिप्राये उत्तरग्रन्थसंमतिमाह – **अत एवेति** ।। त्रितयकर्तव्यत्वस्य प्रथमसूत्रार्थत्वं यतोऽत एवेत्यर्थः ।। **छत्रिवदिति** ।। छत्रिपदस्य छत्र्यच्छत्रिसमुदाये लक्षणावत् जिज्ञासाशब्दस्य मननार्थत्वाजिज्ञासाशब्दस्य मननार्थकस्य श्रवणमनननिदिध्यासनसमूहे लक्षणेति भावः । छत्रिवल्लक्षणायामरुच्याह – **यद्वेति** ।। तथाच साक्षात् परम्परया चित्तस्य तत्प्रावण्यरूपस्य श्रवणमनननिदिध्यासनत्रितयानुगतत्वाचैकवाक्यतानुपपत्तिरिति भावः । नन्वेवं तर्हि सुधाविरोध इत्यत आह – **सुधायां त्विति** ।। ननु श्रवणविधिमूलमेवेदं सूत्रमस्तु । नच समानविषयत्वाभावान्मूलमूलिभावोऽनुपपन्न इत्युक्तमिति वाच्यम् । अद्वितीये ब्रह्मणि वेदान्तानां शक्तितात्पर्यावधारणं श्रवणम् । तच्चोपक्रमोपसंहारादितात्पर्यलिङ्गविचाराधीनमिति विचारविधायकश्रवणविध्योरेकविषयत्वसम्भवादित्यत आह – **विस्तृतं चैतदिति** ।। न्यायामृते तृतीयपरिच्छेदे श्रवणविधेर्विवरणोक्तविचारविधायकत्वभङ्गे इत्यर्थः ।

**ವಿವರಣೆ** - ಶಾಸ್ತ್ರಾರಂಭಕ್ಕೆ ಮನನವು ಹೇಗೆ ಆವಶ್ಯಕವೋ ಅದರಂತೆ ಶ್ರವಣ ನಿದಿಧ್ಯಾಸನಗಳೂ ಆವಶ್ಯಕಗಳೆಂದು ಹಿಂದಿನ ಸಮಾಧಾನದಲ್ಲಿ ನಿರ್ಣಯಿಸಿದ ವಿಚಾರ. ಹೀಗೆ ಹೇಳಿದರೆ ಸರ್ವವೇದಾಂತಪ್ರತ್ಯಯಾಧಿಕರಣದ ವಿರೋಧ ಬರುತ್ತದೆ. ಸರ್ವಶಾಖಾಧಿಕರಣ ಎಂದು ಸರ್ವವೇದಾಂತ ಪ್ರತ್ಯಯಾಧಿಕರಣದ ಮತ್ತೊಂದು ಹೆಸರು. ಇದು ಮೂರನೆ ಅಧ್ಯಾಯದ ಮೂರನೆ ಪಾದದ ಮೊದಲನೆಯ ಅಧಿಕರಣವಾಗಿದೆ. ಈ ಅಧಿಕರಣದಲ್ಲಿ "ಶ್ರವಣಮನನೇ ಕರ್ತವ್ಯೇ" ಇತಿ ಪ್ರಥಮಸೂತ್ರೇ ಉಕ್ತಮ್" "ಕೇವಲ ಶ್ರವಣ ಮನನಗಳಷ್ಟೇ ಕರ್ತವ್ಯಗಳೆಂದು ಪ್ರಥಮಸೂತ್ರದಲ್ಲಿ" ಹೇಳಲಾಗಿದೆ. ಆದರೆ ಈಗ ಶ್ರವಣ ಮನನ ನಿದಿಧ್ಯಾಸನ ಮೂರೂ ಸಹ ಕರ್ತವ್ಯಗಳೆಂದು ಹೇಳುತ್ತಿದ್ದೀರಿ. ಇದು ವಿರುದ್ಧ. ಸರ್ವವೇದಾಂತಪ್ರತ್ಯಯಾಧಿಕರಣದಲ್ಲಿ ಹೇಳಿದಂತೆ ಶ್ರವಣ ಮನನಗಳಿಗಷ್ಟೇ ಇಲ್ಲಿ ಕರ್ತವ್ಯತ್ವವನ್ನು ಹೇಳಬೇಕಿತ್ತು. ಅದಕ್ಕೆ ವಿರುದ್ಧವಾಗಿ ಮೂರರ ಕರ್ತವ್ಯತ್ವ ಪ್ರತಿಪಾದನೆಯು ಅನುಚಿತವಾಗಿದೆ.

ಈ ಪ್ರಶ್ನೆಗೆ 'ಯಸ್ತು' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಇಷ್ಟು ಅಭಿಪ್ರಾಯ - ಸರ್ವವೇದಾಂತಪ್ರತ್ಯಯಾಧಿಕರಣದಲ್ಲಿ ಕೇವಲ ಶ್ರವಣ ಮನನಗಳ ಬಗ್ಗೆ ವಿಚಾರ ಮಾಡಲಾಗಿದೆ. ಅಂದರೆ ಶ್ರವಣ ಮನನಗಳನ್ನು ಸರ್ವಶಾಖಾವಿಶೇಷವಾಗಿ ಮಾಡಬೇಕೋ? ಅಥವಾ ಸ್ವಸ್ವಶಾಖಾವಿಶೇಷವಾಗಷ್ಟೇ ಮಾಡಬೇಕೋ? ಎಂದು ವಿಚಾರ ಮಾಡಲಾಗಿದೆ.

ಹೀಗೆ ವಿಚಾರವು ಪ್ರಸಕ್ತವಾದಾಗ ಶ್ರವಣ ಮನನಗಳಿಗೆ ಪ್ರಥಮಸೂತ್ರದಲ್ಲಿ ಕರ್ತವ್ಯತ್ವವನ್ನು ಹೇಳಿದ್ದಾರೆಂದು ಹೇಳಲಾಗಿದೆ. ಇದು ಕೇವಲ ಏಕದೇಶದ ಅನುವಾದ. ಜಿಜ್ಞಾಸಾಧಿಕರಣದಲ್ಲಿ ಮೂರರ ಕರ್ತವ್ಯತ್ವ ಹೇಳಿಲ್ಲ ಎಂದೇನು ಇದರ ಅಭಿಪ್ರಾಯವಲ್ಲ. ಮೂರರ ಕರ್ತವ್ಯತ್ವವನ್ನು ಹೇಳಿರಲಿ. ಆದರೆ

ಶ್ರವಣಮನನಗಳಿಗಂತೂ ಕರ್ತವ್ಯತ್ವ ಹೇಳಿದ್ದಾರೆಂಬ ಅಂಶವನ್ನಷ್ಟೇ ಸ್ವೀಕರಿಸಿದ್ದಾರೆ. ಹಾಗಾಗಿ ವಿರೋಧಕ್ಕೆ ಅವಕಾಶವೇ ಇಲ್ಲ.

ಸರ್ವವೇದಾಂತ ಪ್ರತ್ಯಯಾಧಿಕರಣದಲ್ಲಿ ಕೇವಲ ಶ್ರವಣ ಮನನ ವಿಚಾರವನ್ನಷ್ಟೇ ಏಕೆ ಮಾಡಿದ್ದಾರೆ? ನಿದಿಧ್ಯಾಸನದ ವಿಚಾರವನ್ನೂ ಮಾಡಲಿ ಎಂದರೆ. ನಿದಿಧ್ಯಾಸನದ ವಿಚಾರವನ್ನು ಮುಂದಿನ ಉಪಸಂಹಾರಾಧಿಕರಣದಲ್ಲಿ ಮಾಡಿದ್ದಾರೆ. ಹಾಗಾಗಿ ಶ್ರವಣ, ಮನನಗಳ ವಿಚಾರವಷ್ಟೇ ಅಲ್ಲಿ ಪ್ರಸಕ್ತವಾಗಿದೆ.

ಟೀಕೆಯ ಮಾತಿಗೆ ವಾಖ್ಯಾನಿಸಿದ ಮೂರೂ ಅರ್ಥಗಳು ಅಯುಕ್ತವಲ್ಲವೆಂದು 'ನಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ಪ್ರಶ್ನೆ :- ಗ್ರಂಥಕಾರರು 'ಇಚ್ಛಾರ್ಥೋ ಜಿಜ್ಞಾಸಾಶಬ್ದಃ' ಎಂದು ಹೇಳಿದ್ದು ಹೇಗೆ ಸರಿ? ಜಿಜ್ಞಾಸಾ-ಶಬ್ದಕ್ಕೆ 'ಜ್ಞಾತುಮಿಚ್ಛಾ' ಎಂದರ್ಥ. ಹೀಗಿರುವಾಗ ಜ್ಞಾನವೆಂಬುದನ್ನು ಬಿಟ್ಟು ಇಚ್ಛೆಯನ್ನು ಮಾತ್ರ ಹೇಗೆ ಸ್ವೀಕರಿಸಿದರು?

ಉತ್ತರ :- ಹೌದು. ಆದರೆ ಜಿಜ್ಞಾಸಾಶಬ್ದಾರ್ಥದಲ್ಲಿ ಜ್ಞಾನವು ಗೌಣ, ಇಚ್ಛೆಯೇ ಪ್ರಧಾನವಾಗಿದೆ. ಜ್ಞಾನವು ಅಪ್ರಧಾನವಾಗಿ ಅನುಪಯುಕ್ತವಾದ್ದರಿಂದ ಇಲ್ಲಿ ಗ್ರಂಥಕಾರರು ಹೇಳಿಲ್ಲ.

ಗ್ರಂಥದಲ್ಲಿ 'ಛತ್ರಿವತ್' ಎಂದಿದೆ. ಇದರರ್ಥ ಹೀಗೆ - "ಛತ್ರಿಣಃ ಗಚ್ಛಂತಿ" "ಕೊಡೆ ಹಿಡಿದವರು ಹೋಗುತ್ತಿದ್ದಾರೆ" ಎಂಬ ಪ್ರಯೋಗವು ಪ್ರಸಿದ್ಧವಾಗಿದೆ. ಇಲ್ಲಿ ಛತ್ರಿಶಬ್ದಕ್ಕೆ ಕೊಡೆ ಹಿಡಿದವರು ಕೊಡೆ ಹಿಡಿಯದವರು ಇಬ್ಬರೂ ಸೇರಿದ ಗುಂಪು ಎಂದು ಅರ್ಥ. ಆದ್ದರಿಂದ ಛತ್ರಿಶಬ್ದಕ್ಕೆ ಛತ್ರಿಸಮುದಾಯದಲ್ಲಿ ಶಕ್ತಿ. ತತ್ಸಹಪಠಿತವಾದ್ದರಿಂದ ಅಛತ್ರಿಸಮುದಾಯದಲ್ಲಿ ಲಕ್ಷಣಾ ಮಾಡಬೇಕು. ಅದರಂತೆ ಇಲ್ಲಿಯೂ ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಶಕ್ತಿ. ತತ್ಸಹಪಠಿತವಾದ್ದರಿಂದ ಶ್ರವಣ ನಿದಿಧ್ಯಾಸನಗಳಲ್ಲಿ ಲಕ್ಷಣಾ ಮಾಡಬೇಕು.

'ಇತಿ ಪಕ್ಷೇ' ಎಂದು ಗ್ರಂಥಕಾರರು ಹೇಳಿದ್ದಾರೆ ಇದರಿಂದ ವಿಚಾರದಲ್ಲಿ ಲಕ್ಷಣಾ ಮತ್ತು ಶಕ್ತಿ ಎರಡೂ ಪಕ್ಷಗಳೂ ಸುಧೆಯಲ್ಲಿ ಹೇಳಲ್ಪಟ್ಟಿವೆಯೆಂದು ತಿಳಿಸಿದ್ದಾರೆ.

ವಿಚಾರಲಕ್ಷಕತ್ವಪಕ್ಷವನ್ನು ಸುಧಾಕಾರರು ಉಲ್ಲೇಖ ಮಾಡಿದ್ದರೂ ಸಹ ಅದು ಅದ್ವೈತಮತದ ಅನುವಾದ, ನಮ್ಮ ಮತವಲ್ಲ. ಗ್ರಂಥಕಾರರೂ ಸಹ ಇದನ್ನು ಅದ್ವೈತಮತವೆಂದು ಮುಂದೆ ಹೇಳುವವರಿದ್ದಾರೆ.

ಪ್ರಕೃತ ಎರಡು ಪಕ್ಷವನ್ನು ಹೇಳಿದಂತಾಯಿತು.

೧) ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾ. ಈ ಪಕ್ಷದಲ್ಲಿ ಶ್ರವಣ ಮನನ ನಿದಿಧ್ಯಾಸನ ಮೂರರಲ್ಲಿಯೂ ಲಕ್ಷಣಾ ಮಾಡಿದಂತಾಯಿತು.

೨) ಜಿಜ್ಞಾಸಾಶಬ್ದಕ್ಕೆ ಮನನದಲ್ಲಿ ರೂಢಿಯನ್ನು ಹೇಳಿದಾಗ ಶ್ರವಣ ನಿದಿಧ್ಯಾಸನಗಳಲ್ಲಿ ಮಾತ್ರ ಲಕ್ಷಣಾ.

ಹೀಗೆ ಗ್ರಂಥದಲ್ಲಿ ಎರಡು ಪಕ್ಷಗಳನ್ನು ಸಮರ್ಥಿಸಿದ್ದರಿಂದ ಟೀಕೆಯ ಮತ್ತೊಂದು ಮಾತನ್ನು ವ್ಯಾಖ್ಯಾನಿಸಿದಂತಾಯಿತು.

"ಶ್ರವಣಾದೇರಸನ್‌ವಾಚ್ಯತ್ವೇಽಪಿ ವಿಚಾರೇಽಪಿ ತತ್‌ಪ್ರಯೋಗಾತ್" ಎಂಬ ಟೀಕೆಯ ಮಾತಿಗೂ ಎರಡರ್ಥ. 'ಜಿಜ್ಞಾಸಾ' ಎಂಬ ಶಬ್ದದಲ್ಲಿರುವ ಸನ್‌ಪ್ರತ್ಯಯದಿಂದ ಇಚ್ಛಾ ಮಾತ್ರ ವಾಚ್ಯವಾಗುತ್ತದೆ. ಶ್ರವಣಾದಿಗಳು ಸನ್‌ಪ್ರತ್ಯಯದಿಂದ ವಾಚ್ಯಗಳಲ್ಲ. ಆದರೂ ಸಹ ಲಕ್ಷಣಾದಿಂದ ಶ್ರವಣಾದಿಗಳಲ್ಲಿ ಪ್ರಯೋಗ ಕೂಡುತ್ತದೆ. ಹಾಗೆಯೇ ವಿಚಾರದಲ್ಲಿ ಶಕ್ತಿ ಇದ್ದರೂ ಛತ್ರಿನ್ಯಾಯದಿಂದ ಶ್ರವಣಾದಿಗಳಲ್ಲಿ ಪ್ರಯೋಗವು ಉಪಪನ್ನವಾಗುತ್ತದೆ ಎಂದು.

ಪ್ರಶ್ನೆ :- ಉತ್ತರಪ್ರಸ್ಥಾನವೆನಿಸಿದ ಸುಧೆಯಲ್ಲಿ ಜಿಜ್ಞಾಸಾಶಬ್ದದಿಂದ ವಿಚಾರಮಾತ್ರ ವಿವಕ್ಷಿತ ಎನ್ನಲಾಗಿದೆ. ಪೂರ್ವಪ್ರಸ್ಥಾನವೆನಿಸಿದ ಟೀಕೆಯಲ್ಲಿ ಮೂರೂ ವಿವಕ್ಷಿತ ಎಂದಿದ್ದಾರೆ. ಆದ್ದರಿಂದ ಪ್ರಸ್ಥಾನದ್ವಯಗಳಿಗೆ ವಿರೋಧ ಬರುತ್ತದಲ್ಲವೇ ?

ಉತ್ತರ :- ಈ ವಿರೋಧ ಪರಿಹಾರಕ್ಕೋಸ್ಕರ ಮತ್ತೊಂದು ಪಕ್ಷವನ್ನು ಆಶ್ರಯಿಸುತ್ತಿದ್ದಾರೆ ಯದ್ವಾ ಎಂದು. ಈ ಪಕ್ಷವು ಸರ್ವವೇದಾಂತಪ್ರತ್ಯಯಾಧಿಕರಣದ ಟೀಕೆಗೆ ಅನುಸಾರಿಯಾಗಿದೆ. ಹಿಂದಿನ ಮೂರೂ ಪಕ್ಷಗಳಲ್ಲಿಯೂ ಬಂದ ಪ್ರಸ್ಥಾನದ್ವಯಗಳ ವಿರೋಧವನ್ನು ಪರಿಹರಿಸುತ್ತಾ ಸುಧೆಯ ಆಶಯವನ್ನು ವರ್ಣಿಸುತ್ತಿದೆ.

ಸೂತ್ರವು ಶ್ರವಣವಿಧಿಮೂಲವೆಂದು ವಿವರಣಮತ. ಅದ್ವಿತೀಯನಾದ ಬ್ರಹ್ಮನನ್ನು ಬೋಧಿಸು-ವುದರಲ್ಲಿಯೇ ವೇದಾಂತದ ಶಕ್ತಿತಾತ್ಪರ್ಯಗಳೆಂದು ನಿರ್ಣಯಿಸುವುದೇ ಶ್ರವಣ. ಈ ಶ್ರವಣವು ಉಪಕ್ರಮವೇ ಮೊದಲಾದ ತಾತ್ಪರ್ಯಲಿಂಗಗಳ ವಿಚಾರ ಸಾಧನವಾಗಿದೆ. ಆದ್ದರಿಂದ ಶ್ರವಣವಿಧಾಯಕ ಶ್ರುತಿವಾಕ್ಯಕ್ಕೂ ವಿಚಾರದ ಕರ್ತವ್ಯತ್ವವನ್ನು ಹೇಳುವ ಸೂತ್ರಕ್ಕೂ ಭಿನ್ನಾಭಿಪ್ರಾಯವಿಲ್ಲ ಎಂದು ವಿವರಣದಲ್ಲಿರುವ ಸಮರ್ಥನೆ. ಇದರ ಖಂಡನೆಯನ್ನು ನ್ಯಾಯಾಮೃತದ ತೃತೀಯಪರಿಚ್ಛೇದದಲ್ಲಿ ಮಾಡಲಾಗಿದೆ.




'ಜಿಜ್ಞಾಸಾ' ಶಬ್ದಾರ್ಥ - ಸ್ವಮತದಲ್ಲಿ

ಟೀಕೆಯಲ್ಲಿ ಶ್ರವಣ ಮನನ ನಿದಿಧ್ಯಾಸನ ಇವು ಮೂರು ಜಿಜ್ಞಾಸೆಯ ಎಂದಿದೆ. ಸುಧೆಯಲ್ಲಿ ಮನನವೇ ಜಿಜ್ಞಾಸೆ ಎಂದಿದೆ. ಇವುಗಳ ವಿರೋಧ ಪರಿಹಾರಕ್ಕೆ ಹೀಗೆ ಹೇಳಬೇಕು - 'ಜಿಜ್ಞಾಸೆ' ಎಂದರೆ ಶ್ರವಣ ಮುಂತಾದ

ಮೂರರಲ್ಲಿಯೂ ಹಾಸು ಹೊಕ್ಕಾಗಿರುವ ಉಪಾಸನೆ, ಅಂದರೆ ಭಗವಂತನಲ್ಲಿ ಮನಸ್ಸಿನ ಏಕಾಗ್ರತೆ. ಇದು ನಿದಿಧ್ಯಾಸನದಲ್ಲಿ ಸ್ವತಃ ಇದೆ. ಶ್ರವಣ ಮನನಗಳಲ್ಲಿ ಪ್ರಮಾಣಗಳ ಮೂಲಕ ಇದೆ ಎಂಬುದು ಟೀಕೆಯ ಅಭಿಪ್ರಾಯ. ಇದು ಸುಧೆಗೂ ಸಮ್ಮತವೆ. ಆದರೆ ಶಾಸ್ತ್ರದ ಅವಶ್ಯಕತೆಯನ್ನು ಸಮರ್ಥಿಸಲು ಮನನ ರೂಪದ ಉಪಾಸನೆಯ ಅವಶ್ಯಕತೆಯನ್ನು ಸಮರ್ಥಿಸಿದರೆ ಸಾಕು ಎಂದು ಸುಧೆ ಅಭಿಪ್ರಾಯಪಡುತ್ತದೆ.

ಜಿಜ್ಞಾಸಾ ಶಬ್ದವು ಜ್ಞಾಧಾತುವಿಗೆ ಇಚ್ಛೆ ಎಂಬ ಅರ್ಥದ 'ಸನ್' ಪ್ರತ್ಯಯ ಸೇರಿ ನಿಷ್ಪನ್ನವಾಗಿದ್ದರೂ ಆ ಶಬ್ದದಿಂದ ಮೊದಲಿಗೆ ವಿಚಾರ ಎಂಬ ಅರ್ಥವೇ ಹೊಳೆಯುತ್ತದೆ ಹೊರತು ಜ್ಞಾನೇಚ್ಛೆಯಲ್ಲ. ಅದರಿಂದಲೆ ಎಲ್ಲ ಸೂತ್ರಕಾರರೂ ಧರ್ಮಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂದು 'ಜಿಜ್ಞಾಸಾ' ಶಬ್ದವನ್ನೆ ಬಳಸುತ್ತಾರೆ. ಅದೇ ಅರ್ಥದ 'ಬುಭುತ್ಸಾ'ಶಬ್ದವನ್ನಲ್ಲ. ಏಕೆ? ಎಂಬ ಪ್ರಶ್ನೆಗೆ, ಬುಭುತ್ಸಾ ಶಬ್ದವನ್ನು ಹೇಳಿದರೆ ಮೊದಲಿಗೆ ಜ್ಞಾನೇಚ್ಛೆ ಎಂಬ ಅರ್ಥ ಹೊಳೆಯುತ್ತದೆ ಹೊರತು ವಿಚಾರವೆಂಬ ಅರ್ಥವಲ್ಲ ಎಂದೇ ಉತ್ತರಿಸಬೇಕು. ಆದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರ ಎಂಬ ಅರ್ಥದಲ್ಲಿ ರೂಢಿ ಎಂದು ಒಪ್ಪಬೇಕು. ಲಕ್ಷಣಾ ಎಂದಲ್ಲ.

• • • • •

## ವಿಚಾರದಲ್ಲಿ ಶಕ್ತಿ, ಲಕ್ಷಣಾ ಅಲ್ಲ.

### तात्पर्यचन्द्रिका –

यत्तु पञ्चपादीविवरणयोरुक्तम् । अवयवशक्त्या ज्ञानेच्छावाचिनो जिज्ञासाशब्दस्य विचारे लक्षणया प्रयोगप्रत्यययोरुपपत्तौ न शक्त्यन्तरकल्पनम् । अनन्यथासिद्धकार्यान्तराभावादिति, जिज्ञासाशब्दो विचारे लाक्षणिको नतु रूढ इति[१] ।

---

१ पञ्चपादिका

ज्ञातुमिच्छा जिज्ञासेति जिज्ञासापदस्यावयवार्थं कथयतीच्छाप्रदर्शनार्थम् । ततश्चेच्छायाः फलविषयत्वात् तज्ज्ञानस्यापवर्गपर्यन्तता सूचिता भवति । तदाह – अवगतिपर्यन्तं ज्ञानं सन्वाच्याया इच्छायाः कर्म; फलविषयत्वादिच्छायाः इति ।। अवगतिरिति साक्षादनुभव उच्यते । ज्ञानन्तु परोक्षेऽनुभवानारूढेऽपि सम्भवति । संनिहितेऽप्यसम्भावितविषयेऽनवसितरूपमित्युक्तं पुरस्तात्; तदाह – ज्ञानेन हि प्रमाणेनावगन्तुमिष्टं ब्रह्म, ब्रह्मावगतिर्हि पुरुषार्थः । ब्रह्मरूपतासाक्षात्करणमित्यर्थः ।

तदेतच्छास्त्रान्तर्भूतं सूत्रम् । अनेन च प्रयोज्य-संबन्धिन्योर्जिज्ञासामुमुक्षाक्रिययोरेकस्याः कारणान्तरसिद्धायाः पूर्ववृत्ततया हेतुत्वमर्थादुपात्तमितरस्यास्तदनन्तरं तत्प्रयुक्तायाः कर्तव्यता श्रुत्याऽभिहिता । तत्र जानात्येवासौ मयैतत् कर्तव्यमिति, उपायन्तु न वेद । ततस्तस्योपायः कथनीयः।

तन्न । यतः,

**जिज्ञासाशब्दतो हीच्छामज्ञात्वैव विजानते ।**
**विचारं लौकिकास्तेन तत्रायं रूढ इष्यते ।।**

---

शास्त्रस्य च सम्बन्धाभिधेयप्रयोजनानि वक्तव्यानि; इतरथा प्रेक्षारहितमिव सर्वमापद्येत । अतोऽनेनैव सूत्रेणेदमपि सर्वं सूचितमिति कथयितुमाह – तस्माद् ब्रह्म जिज्ञासितव्यमिति ।। अन्तर्णीतविचारार्थविधेयत्वाङ्गीकारेण मीमांसितव्यमित्यर्थः ।।
एतदुक्तं भवति – ब्रह्मज्ञानकामेनेदं शास्त्रं श्रोतव्यम्; यस्माद् ब्रह्मज्ञानमनेन शास्त्रेण निरूप्यते । तेन प्रयोज्यस्याभिमतोपायः शास्त्रम्, इत्यर्थात् शास्त्रस्य सम्बन्धाभिधेयप्रयोजनं कथितं भवति ।।

**पञ्चपादिकाविवरणम्**

प्रयोज्यः इत्यधिकारी । एकस्या इति । साधनकलापस्येति । तस्य कारणान्तरमदृष्टं यज्ञादि दृष्टञ्च व्याप्त्यनुसंधानादि । अर्थादुपात्तमिति । आनन्तर्याभिधानसामर्थ्यादिति । अतःशब्दस्य मुखतो हेतुत्वाभिधायिनोऽप्याशङ्कान्तरनिवृत्तौ तात्पर्यादर्थाद्धेतुत्वमुक्तम्; इत्यनुवादे प्रयोजनाभावात् कर्तव्यपदमध्याहृत्य जिज्ञासा कर्तव्यतया श्रुत्यःऽभिहिता ।
ननु इच्छासंयोगाद् ज्ञानस्य साध्यतावगमात् तदेव कर्तव्यमस्त्विति ? नेत्याह – तत्र जानात्येवेति ।। इष्यमाणस्य साध्यता स्वयं सिद्धा, न शब्दमपेक्षते; सुखसंवेदनत्वादित्यर्थः । किं तर्हि विधीयत इति ? तदाह – उपायं तु न वेदेति ।। अनवगताभिलषितोपाय एव विधिशब्दैः प्रतिपाद्यत इत्यर्थः दृष्टोपायत्वेऽप्यपरोक्षानुभवं प्रत्यदृष्टोपायताऽपि दर्शिता श्रवणादिविधेः ।।
ननु पदार्थव्याख्यानादेव स्वयमेव वाक्यार्थं प्रतिपद्यते, किं वाक्यार्थकथनेन? सत्यम्; संबन्धादीनामर्थात् प्रतिभासो वाक्यार्थकथनेन भवतीत्याह – शास्त्रस्य संबन्धाभिधेयप्रयोजनानीति ।।
मुमुक्षुणा ब्रह्मानुभवाय विचारः कर्तव्य इति वाक्यार्थः । कथमत्रार्थात् संबन्धादिप्रतिपत्तिः? तदाह – एतदुक्तं भवतीत्यादिना ।। ननु ब्रह्मज्ञानद्वारेण काम्यमानमोक्षसाधनं विचारः, इति फलसंबन्धे सिद्धेऽपि कथं विषयादि सिद्धिरिति ? तत्राह – अर्थाच्छास्त्रस्येति ।।

**इति श्रीमत्परमहंसपरिव्राजकानन्यानुभवपूज्यपादशिष्यस्वप्रकाशानुभवभगवतः कृतौ पञ्चपादिकाविवरणे प्रथमसूत्रार्थवर्णनं ताम तृतीयवर्णकं समाप्तम् ।।**

ವಂಶಾರ್ಥಚಂದ್ರಿಕಾ

अन्यथा मण्डपादीनां गृहादौ स्यान्न रूढता ।
गङ्गाशब्दात्तु तीरादि तद्धीपूर्वं प्रकाशते ॥

तथाहि । जिज्ञासाशब्दात् मीमांसाशब्दादिव इच्छाप्रतीत्यभावेऽपि विचारः प्रतीयते । अन्यथा बुभुत्सापदादपि विलम्बेन तद्धीसम्भवान्नियमेन विचारे जिज्ञासापदं न प्रयुज्येत । स्वीकृतश्च त्वयाऽपि 'विचारसाध्यज्ञानेच्छा जिज्ञासाशब्दात् प्रतीयते । नोपदेशमात्रसाध्यज्ञानविषया' इति वदता, विचारप्रतीतेरिच्छाप्रतीतिपूर्वकत्वाभावः । एवंच ''तद् विजिज्ञासस्व'' इत्यादावस्मिंश्च सूत्रे विधौ न लक्षणा ।

ಅನುವಾದ - ಪಂಚಪಾದಿಕಾ ಮತ್ತು ವಿವರಣದಲ್ಲಿ ಹೀಗೆ ಹೇಳಿದ್ದಾರೆ - 'ಜಿಜ್ಞಾಸಾ' ಶಬ್ದಕ್ಕೆ ವಿಚಾರದಲ್ಲಿ ರೂಢಿಯನ್ನು ಹೇಳಬಾರದು. ಅವಯವ ಶಕ್ತಿಯಿಂದ ಜ್ಞಾನೇಚ್ಛೆ ಎಂಬರ್ಥವು ದೊರೆಯುತ್ತದೆ. ವಿಚಾರದಲ್ಲಿ ಲಕ್ಷಣಾ ಮಾಡಬೇಕು. ವಿಚಾರವೆಂಬರ್ಥದಲ್ಲಿ ಜಿಜ್ಞಾಸಾಶಬ್ದದ ಪ್ರಯೋಗವಿದೆ. ವಿಚಾರಶಬ್ದಪ್ರಯೊಗ ಮಾಡಿದಾಗ ವಿಚಾರದ ಪ್ರತೀತಿಯೂ ಬರುತ್ತದೆ. ಇವೆರಡೂ ಲಕ್ಷಣಾವೃತ್ತಿಯಿಂದಲೇ ಉಪಪನ್ನವಾಗುತ್ತವೆ. ಇದಕ್ಕೋಸ್ಕರ ರೂಢಿಯನ್ನು ಕಲ್ಪನೆ ಮಾಡುವ ಅವಶ್ಯಕತೆ ಇಲ್ಲ. ಈಗಾಗಲೇ ಜಿಜ್ಞಾಸಾಶಬ್ದಕ್ಕೆ ಜ್ಞಾನೇಚ್ಛೆಯಲ್ಲಿ ಶಕ್ತಿಯನ್ನು ಅಂಗೀಕರಿಸಲಾಗಿದೆ. ಪುನಃ ವಿಚಾರದಲ್ಲಿ ಶಕ್ತಿಯನ್ನು ಅಂಗೀಕರಿಸುವುದು ತಪ್ಪು. ಶಕ್ತಿಯ ಕಾರ್ಯವೆಂದರೆ ಪ್ರಯೋಗ ಮತ್ತು ಪ್ರತೀತಿಗಳು. ಎರಡೂ ಸಹ ಲಕ್ಷಣಾದಿಂದಲೇ ಕೂಡುತ್ತವೆ. ಈ ಎರಡು ಕಾರ್ಯಗಳನ್ನು ಬಿಟ್ಟು ಬೇರೆ ಯಾವ ಪ್ರಯೋಜನವೂ ಶಕ್ತಿಗೆ ಇರುವುದಿಲ್ಲ. ಹೀಗೆ ಅನನ್ಯಥಾಸಿದ್ಧವಾದ ಕಾರ್ಯಾಂತರವಿಲ್ಲದ ಕಾರಣ ಜಿಜ್ಞಾಸಾಶಬ್ದಕ್ಕೆ ಲಕ್ಷಣಾವನ್ನೇ ಹೇಳಬೇಕು. ರೂಢಿಯನ್ನು ಹೇಳಬಾರದು.

ಇದು ತಪ್ಪು. ಏಕೆಂದರೆ -

ಜಿಜ್ಞಾಸಾಶಬ್ದವನ್ನು ಕೇಳಿದಾಗ ಇಚ್ಛೆಯನ್ನು ಮೊದಲು ತಿಳಿಯದೆ ನೇರವಾಗಿ ವಿಚಾರವನ್ನೇ ಲೌಕಿಕರು ತಿಳಿಯುತ್ತಾರೆ. ಆದ್ದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾವನ್ನು ಒಪ್ಪಲು ಬರುವುದಿಲ್ಲ. ರೂಢಿಯನ್ನೇ ಹೇಳಬೇಕು. ಹೀಗೆ ಒಪ್ಪದಿದ್ದಲ್ಲಿ 'ಮಂಟಪ' ಮೊದಲಾದ ಶಬ್ದಗಳಿಗೆ ಗೃಹಾದಿಗಳಲ್ಲಿ ರೂಢಿಯೆಂಬ ಪ್ರಸಿದ್ಧಿಯೂ ತಪ್ಪಾಗಬೇಕಾದೀತು. ಗಂಗಾ ಶಬ್ದದಂತೆ ಇದಲ್ಲ. ಗಂಗಾಶಬ್ದವನ್ನು ಕೇಳಿದಾಗ ಮೊದಲು ತೀರದ ಬೋಧ ಬಂದು ಅನಂತರ ಪ್ರವಾಹದ ಬೋಧ ಬರುತ್ತದೆ.

ಇದರ ಸ್ಪಷ್ಟ ವಿವರಣೆ ಹೀಗಿದೆ - ಮೀಮಾಂಸಾಶಬ್ದವನ್ನು ಕೇಳಿದಾಗ ಇಚ್ಛೆಯ ಪ್ರತೀತಿ ಬರದಿದ್ದರೂ ನೇರವಾಗಿ ವಿಚಾರದ ಪ್ರತೀತಿ ಬರುತ್ತದೆ. ಅದರಂತೆ ಜಿಜ್ಞಾಸಾಶಬ್ದವನ್ನು ಕೇಳಿದಾಗಲೂ ಇಚ್ಛೆಯ ಪ್ರತೀತಿ ಬರದೆ ನೇರವಾಗಿ ವಿಚಾರದ ಪ್ರತೀತಿಯು ಬರುತ್ತಿರುವುದರಿಂದ ಲಕ್ಷಣಾ ಮಾಡಬಾರದು.

ಆದರೂ ಲಕ್ಷಣಾವನ್ನೇ ಮಾಡುವುದಾದರೆ ಬುಭುತ್ಸಾಪದವನ್ನೇ ಸೂತ್ರದಲ್ಲಿ ಹೇಳಬಹುದಿತ್ತು. ಏಕೆಂದರೆ ಬುಭುತ್ಸಾಪದವನ್ನು ಕೇಳಿದಾಗ ಮೊದಲು ಇಚ್ಛೆಯ ಬೋಧ ಬರುತ್ತದೆ. ಅನಂತರ ವಿಲಂಬವಾಗಿ ವಿಚಾರದಲ್ಲಿ ಲಕ್ಷಣಾ ಮಾಡಬಹುದು. ಆದರೆ ಸೂತ್ರಕಾರರು ಬುಭುತ್ಸಾಪದವನ್ನು ಹಾಕದೇ ಜಿಜ್ಞಾಸಾಪದವನ್ನೇ ಹೇಳಿದ್ದರಿಂದ ಲಕ್ಷಣಾ ಮಾಡಬಾರದೆಂದು ತಿಳಿಯುತ್ತದೆ.

ಈ ವಿಚಾರವನ್ನು ನೀವೂ ಸಹ ಅಂಗೀಕರಿಸಿದ್ದೀರಿ. ವಿಚಾರಸಾಧ್ಯವಾದ ಜ್ಞಾನೇಚ್ಛೆಯೇ ಜಿಜ್ಞಾಸಾಶಬ್ದದಿಂದ ಪ್ರತೀತವಾಗುತ್ತದೆ. ಹೊರತು ಕೇವಲ ಗುರೂಪದೇಶದಿಂದ ಸಾಧ್ಯವಾದ ಜ್ಞಾನವಿಷಯಕ ಇಚ್ಛೆಯಲ್ಲ'' ಎಂದು ಹೇಳುವ ಮೂಲಕ ಜ್ಞಾನೇಚ್ಛೆಯ ಪ್ರತೀತಿಯ ಅನಂತರ ವಿಚಾರಪ್ರತೀತಿ ಎಂಬುದನ್ನು ನಿರಾಕರಿಸಿದ್ದೀರಿ.

ಆದ್ದರಿಂದ ತದ್‌ವಿಜಿಜ್ಞಾಸಸ್ವ ಎಂಬ ಶ್ರುತಿಯಲ್ಲಾಗಲೀ ಸೂತ್ರದಲ್ಲಾಗಲೀ ವಿಧಿಯಲ್ಲಿ ಲಕ್ಷಣಾ ಮಾಡಬಾರದು.

**ಕಠಿಣಪದಾರ್ಥ**

**ಮಂಟಪಾದೀನಾಂ = ಮಂಟಪ ಮೊದಲಾದ ಶಬ್ದಗಳಿಗೆ, ಅನ್ಯಥಾ = ಲಕ್ಷಣಾದಿಂದ ವಿಚಾರಪ್ರತೀತಿಯನ್ನು ಹೇಳುವುದಾದರೆ**

**प्रकाशः** – जिज्ञासाशब्दस्य विचारे शक्तिं साधयितुं परोक्तं प्रतिक्षेपायानुवदति ।। **यत्त्विति** ।। प्रयोगप्रत्ययान्यथानुपपत्त्या हि शक्तिकल्पनम् । तौ चान्यथोपपन्नावित्यर्थः । प्रयोगप्रत्ययाभ्यामन्यदेव शक्तिकल्पकं किं न स्यादित्यत आह ।। **अनन्यथेति** ।। 'यतस्तत्र रूढ इष्यते परीक्षकैरतस्तत्र' इत्यन्वयः । लौकिकाः 'इच्छामज्ञात्वैव' व्यवधानं विनैव । विचारं विजानते 'हि' यस्मात् तेनेत्यर्थः । 'मण्डपादीनां' मण्डपादिशब्दानाम् । श्लोकं व्याचष्टे ।। **तथाहीति** ।। ''मान विचारणे'' इत्यस्मात् ''मान्बधदान्शान्भ्यो दीर्घश्चाभ्यासस्य'' इति स्वार्थ एव सनो विधानादिच्छाप्रतीतिं विना विचारः प्रतीयत इति ''मीमांसाशब्दादिव'' इत्युक्तम्। अत एव वृत्तौ ''मानेर्जिज्ञासायां सन्'' इत्युक्तमिति भावः । एतेनानन्यधीपूर्वकविचारप्रतीतिरूपानन्यथासिद्धकार्यं शक्तिकल्पकं वदता तादृशकार्यान्तराभावादिति हेतोरसिद्धिरुक्तेति ध्येयम् । नियमेन विचारे जिज्ञासापदप्रयोगोऽप्यनन्यथासिद्धं कार्यं शक्तिकल्पकमित्यभिप्रेत्य तद्व्यतिरेकमुखेनोपपादयति ।। **अन्यथेति** ।। लक्षणया विचारप्रतीतावभिमताया-

मित्यर्थः । 'धर्मबुभुत्सा' 'ब्रह्मबुभुत्सा' इत्युक्तावपि बोधेच्छान्तर्णीतविचार-लक्षणासम्भवेऽपि नियमेन जिज्ञासापदं न प्रयुज्येत । प्रयुज्यते च सर्वशिष्टैरतस्तत्र रूढ इति भावः । एतेन – झडिति प्रत्ययनियतप्रयोगयोरन्यथानुपपत्तिवर्णनेन प्रयोगप्रत्ययसामान्यस्यान्यथोपपत्तिवर्णनं न प्रकृतोपयुक्तमित्युक्तं भवति । अविलम्बेन विचारप्रतीतिः परस्यापि सम्मतेत्याह ।। स्वीकृतश्चेति ।। ज्ञानेच्छाधीदशायामेव ज्ञानहेतुत्वेन विचारस्यापि प्रतीतेः नेच्छाज्ञानानन्तरं तद्धीरित्यर्थः ।। ज्ञानविषयेति ।। 'इच्छा' इत्यनुषङ्गः । एवं सति ''न विधौ परश्शब्दार्थः'' इत्येतदपि अनुकूलितं भवतीत्याह ।। एवंचेति ।। तत्र रूढत्वे सतीत्यर्थः ।

गुरुराजीय – परोक्तजिज्ञासाशब्दस्य विचारे लक्षणादिकं ''नच श्रवणादेर-सन्वाच्यता'' इति टीकाविरुद्धत्वादनूद्य दूषयति ।। यत्त्विति ।। शक्त्यन्तर-कल्पनमिति ।। अवयवशक्त्यतिरिक्तसमुदायशक्तिरूपशक्त्यन्तरकल्पनमित्यर्थः । जिज्ञासाशब्दस्य विचारे शक्तिः किं प्रयोगप्रत्ययार्थं वाक्यार्थान्तरार्थं वा । नाद्य इत्याह ।। विचार इति ।। न द्वितीय इत्याह ।। अनन्यथासिद्धेति ।। जिज्ञासा-शब्दादिच्छाप्रतीतौ सत्यामेवानुपपत्तिप्रतिसन्धानपूर्वं विचारः प्रतीयत इति कृत्वा लक्षणा स्वीक्रियते एवमेव वा । नाद्य इत्याह ।। जिज्ञासाशब्दादिति ।। स्वीकृत-श्चेति ।। एतच्च स्वयमेव विवरिष्यति – किञ्चेत्यादिना ।

ವಿವರಣೆ - ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಶಕ್ತಿಯನ್ನೇ ಹೇಳಬೇಕು ಲಕ್ಷಣಾ ಹೇಳಬಾರದು. ಆದರೆ ಅದ್ವೈತಿಗಳು ಶಕ್ತಿಯನ್ನು ಅಂಗೀಕರಿಸದೆ ಲಕ್ಷಣಾವನ್ನು ಒಪ್ಪುತ್ತಾರೆ. ಅವರ ಮತವನ್ನು ನಿರಾಕರಣೆ ಮಾಡುವುದು ಆತ್ಯವಶ್ಯ. ಅದಕ್ಕೋಸ್ಕರ ಮೊದಲು ಪಂಚಪಾದಿಕಾ ಮತ್ತು ವಿವರಣದಲ್ಲಿ ಹೇಳಿದ್ದನ್ನು ಅನುವಾದ ಮಾಡುತ್ತಿದ್ದಾರೆ.

ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಶಕ್ತಿಯನ್ನು ಅಂಗೀಕರಿಸಬೇಕಾದರೆ ಪ್ರಯೋಗ ಮತ್ತು ಪ್ರತ್ಯಯಗಳ ಅನ್ಯಥಾನುಪಪತ್ತಿಯನ್ನು ಹೇಳಬೇಕು. ಆದರೆ ವಿಚಾರವಂಬರ್ಥದಲ್ಲಿ ಪ್ರಯೋಗ ಮತ್ತು ಪ್ರತೀತಿ ಇವೆರಡೂ ಲಕ್ಷಣಾವೃತ್ತಿಯಿಂದಲೇ ದೊರೆಯಲು ಸಂಭವವಿರುವಾಗ ಅದಕ್ಕಾಗಿ ರೂಢಿಯನ್ನು ಕಲ್ಪಿಸುವ ಅವಶ್ಯಕತೆ ಇಲ್ಲ. ಪ್ರಯೋಗ ಮತ್ತು ಪ್ರತೀತಿಗಳು ಶಕ್ತಿಯನ್ನು ಅಂಗೀಕರಿಸದಿದ್ದರೂ ಉಪಪನ್ನಗಳಾಗಿವೆ. ಇನ್ನು ಪ್ರಯೋಗ ಮತ್ತು ಪ್ರತೀತಿಗಳನ್ನು ಬಿಟ್ಟರೆ ಉಳಿದ ಶಕ್ತಿಯ ಕಾರ್ಯಗಳು ಯಾವುದೂ ಇಲ್ಲ. ಆದ್ದರಿಂದ ಲಕ್ಷಣಾವನ್ನೇ ಅಂಗೀಕರಿಸುವುದು ಸೂಕ್ತ.

''ಯತಃ ತತ್ರ ರೂಢಃ ಇಷ್ಯತೇ ಪರೀಕ್ಷಕೈಃ ಅತಃ ತನ್ನ' ಯಾವ ಕಾರಣದಿಂದ ಜಿಜ್ಞಾಸಾಶಬ್ದಕ್ಕೆ ಜ್ಞಾನಿಗಳು ವಿಚಾರದಲ್ಲಿ ರೂಢಿಯನ್ನು ಅಂಗೀಕರಿಸಿದ್ದಾರೋ ಆ ಕಾರಣದಿಂದ ಲಕ್ಷಣಾವನ್ನು ಒಪ್ಪಬಾರದು ಎಂದು ಶ್ಲೋಕದ ಕೊನೆಯ ಪಾದದ ಜೊತೆಗೆ ಅನ್ವಯ ಮಾಡಬೇಕು.

ಲೌಕಿಕರು ಜಿಜ್ಞಾಸಾಶಬ್ದವನ್ನು ಕೇಳಿದಾಗ ಮೊದಲು ಇಚ್ಛೆಯನ್ನು ತಿಳಿಯದೇ ತಡಮಾಡದ ವಿಚಾರವನ್ನೇ ತಿಳಿಯುತ್ತಾರೆ. ಆ ಕಾರಣದಿಂದಲೂ ಲಕ್ಷಣಾ ಮಾಡಬಾರದು ಎಂದು ಶ್ಲೋಕದ ಮೂರುಪಾದಗಳ ಅರ್ಥ.

ಗ್ರಂಥಕಾರರು ಶ್ಲೋಕದಲ್ಲಿ ಸಂಗ್ರಹಾತ್ಮಕವಾಗಿ ಹೇಳಿದ ವಿಚಾರವನ್ನು ತಾವೇ ವ್ಯಾಖ್ಯಾನಿಸುತ್ತಿದ್ದಾರೆ 'ತಥಾಹಿ' ಇತ್ಯಾದಿ ವಾಕ್ಯದಿಂದ.

'ಮೀಮಾಂಸಾ' ಶಬ್ದವನ್ನು ಕೇಳಿದಾಗ ಇಚ್ಛಾಪ್ರತೀತಿ ಬರದೆ ನೇರವಾಗಿ ವಿಚಾರದ ಪ್ರತೀತಿಯೇ ಬರುತ್ತದೆ ಅದು ಹೀಗೆ - ''ಮಾನ್‌ಬಧದಾನ್‌ಶಾನ್‌ಭ್ಯೋ ದೀರ್ಘಶ್ಚಾಭ್ಯಾಸಸ್ಯ'' (೩-೧-೬) ಎಂಬ ಸೂತ್ರದಲ್ಲಿ ಮಾನ್, ಬಧ, ದಾನ್, ಶಾನ್ ಇಷ್ಟು ಧಾತುಗಳಿಗೆ ಅವುಗಳ ಅರ್ಥದಲ್ಲಿಯೇ ಸನ್‌ಪ್ರತ್ಯಯ ಬರುತ್ತದೆ. ಮತ್ತು ಧಾತುಗಳ ಅಭ್ಯಾಸದ ಇಕಾರಕ್ಕೆ ದೀರ್ಘವೂ ಬರುತ್ತದೆಂದು ಹೇಳಿದೆ. ಪ್ರಕೃತ ವಿಚಾರಾರ್ಥಕವಾದ 'ಮಾನ್' ಧಾತುವಿಗೆ ಸ್ವಾರ್ಥದಲ್ಲಿ ಸನ್ ಪ್ರತ್ಯಯ ಬಂದು ಮೀಮಾಂಸಾ ಎಂಬ ರೂಪವು ನಿಷ್ಪನ್ನವಾಗಿದೆ. ಆದ್ದರಿಂದ ಈ ಶಬ್ದವನ್ನು ಕೇಳಿದಾಗ ವಿಚಾರ ಎಂಬರ್ಥವೇ ತಿಳಿಯುತ್ತದೆ ಹೊರತು ಜಾನೇಚ್ಛೆಯ ಪ್ರತೀತಿಯು ಬರುವುದೇ ಇಲ್ಲ. ಅದರಂತೆ ಜಿಜ್ಞಾಸಾಶಬ್ದದಿಂದಲೂ ಜ್ಞಾನೇಚ್ಛೆಯ ಪ್ರತೀತಿಯು ಬರದೆ ಕೇವಲ ವಿಚಾರದ ಪ್ರತೀತಿ ಬರುವುದೇ ನಮ್ಮ ಅನುಭವವಾಗಿದೆ. ಈ ಕಾರಣದಿಂದಲೇ ವೃತ್ತಿಯಲ್ಲಿ ''ಮಾನೇರ್ಜಿಜ್ಞಾಸಾಯಾಂ ಸನ್'' ಮಾನಧಾತುವಿಗೆ ಜಿಜ್ಞಾಸೆ ಎಂಬರ್ಥದಲ್ಲಿ ಸನ್‌ಪ್ರತ್ಯಯ ಬರುತ್ತದೆಂದು ಹೇಳಿದೆ.

ಹೀಗೆ ಹೇಳಿದ್ದರಿಂದ ವಿಚಾರದಲ್ಲಿ ಲಕ್ಷಣಾ ಮಾಡಲು ಅವನು ಹೇಳಿದ ''ಅನನ್ಯಥಾಸಿದ್ಧ-ಕಾರ್ಯಾಂತರಾಭಾವಾತ್'' ಎಂಬ ಹೇತುವಿಗೆ ಅಸಿದ್ಧಿಯನ್ನು ಹೇಳಿದಂತಾಯಿತು.

ರೂಢಿಯ ಕಾರ್ಯ ಒಂದೂ ಇಲ್ಲವಾದ್ದರಿಂದ ಲಕ್ಷಣಾ ಮಾಡಬೇಕೆಂದು ವಿವರಣಕಾರರ ಆಕ್ಷೇಪ. ಆದರೆ ಜಿಜ್ಞಾಸಾಶಬ್ದವನ್ನು ನೇರವಾಗಿ ವಿಚಾರದಲ್ಲೇ ಪ್ರಯೋಗಿಸುವುದು ಅನೇಕ ಕಡೆ ಕಂಡಿದೆ. ಪ್ರೇಕ್ಷಾವಂತರ ಪ್ರಯೋಗವಿದೆ. ಇದೂ ಸಹ ಒಂದು ರೂಢಿಯ ಕಾರ್ಯವೇ ಆಗಿದೆ. ಹೀಗಿರುವಾಗ ರೂಢಿಯ ಪ್ರಯೋಜನವು ಬೇರೆ ಯಾವುದು ಇಲ್ಲವೆನ್ನುವುದು ಬಹಳ ತಪ್ಪು.

'ವಿಚಾರ' ಎಂಬರ್ಥದಲ್ಲಿ ನಿಯಮೇನ ಜಿಜ್ಞಾಸಾಪದವನ್ನು ಪ್ರಯೋಗ ಮಾಡಲಾಗಿದೆ. ಶಕ್ತಿಯ ಕಾರ್ಯವೆನಿಸಿದ ಇದು ಅನನ್ಯಥಾಸಿದ್ಧವಾಗಿದೆ. ''ನಿಯಮೇನ ವಿಚಾರದಲ್ಲಿ ಜಿಜ್ಞಾಸಾಪದಪ್ರಯೋಗ'' ಎಂಬ ಈ ಅನನ್ಯಥಾಸಿದ್ಧವಾದ ಕಾರ್ಯದಿಂದ ಜಿಜ್ಞಾಸಾಪದಕ್ಕೆ ವಿಚಾರದಲ್ಲಿ ಶಕ್ತಿಯನ್ನು ಅಂಗೀಕರಿಸಬೇಕು. ಇಲ್ಲವಾದಲ್ಲಿ ಬರುವ ತೊಂದರೆಯನ್ನು 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಿದ್ದಾರೆ.

*ಪರಿಪೂರ್ಣಚಂದ್ರಿಕಾ*

ಒಂದು ವೇಳೆ ಜಿಜ್ಞಾಸಾ ಪದದಿಂದ ಜ್ಞಾನೇಚ್ಛೆಯ ಪ್ರತೀತಿಯೇ ಬರುವುದಾದರೆ ಎಲ್ಲಾ ಶಿಷ್ಟರೂ ಜಿಜ್ಞಾಸಾಪದವನ್ನೇ ಏಕೆ ಪ್ರಯೋಗಿಸಬೇಕಿತ್ತು? ಜಿಜ್ಞಾಸಾಪದಕ್ಕೆ ಸಮಾನಾರ್ಥವಾದ ಬುಭುತ್ಸಾ ವಿವಿದಿಷಾ ಇತ್ಯಾದಿ ಪದಗಳನ್ನೂ ಪ್ರಯೋಗಿಸಬಹುದಿತ್ತು. ಅದನ್ನು ಬಿಟ್ಟು ಎಲ್ಲಾ ಸೂತ್ರಕಾರರೂ ವಿಚಾರ ಎಂಬರ್ಥದಲ್ಲಿ ಜಿಜ್ಞಾಸಾಶಬ್ದವನ್ನೇ ಪ್ರಯೋಗಿಸಿದ್ದಾರೆ. ಇದಕ್ಕೆ ಕಾರಣವಿಷ್ಟೇ - ಬುಭುತ್ಸಾ ಮೊದಲಾದ ಶಬ್ದಗಳಿಂದ ಜ್ಞಾನೇಚ್ಛೆಯ ಪ್ರತೀತಿ ಬರುತ್ತದೆ. ಆದರೆ ಜಿಜ್ಞಾಸಾಶಬ್ದದಿಂದ ನೇರವಾಗಿ ವಿಚಾರದ ಪ್ರತೀತಿಯೇ ಬರುತ್ತದೆ ಎಂಬ ವ್ಯತ್ಯಾಸ ಹೇಳಬೇಕು. ಇದೇ ಅನನ್ಯಥಾಸಿದ್ಧವಾದ ರೂಢಿಯ ಕಾರ್ಯವಾಗಿದೆ. ಆದ್ದರಿಂದ ಜಿಜ್ಞಾಸಾಶಬ್ದದಿಂದ ವಿಚಾರದ ಪ್ರತೀತಿ ಉಂಟಾಗುವುದು ಮತ್ತು ಆ ಅರ್ಥದಲ್ಲಿ ಜಿಜ್ಞಾಸಾಶಬ್ದದ ಪ್ರಯೋಗ ಇವೆರಡೂ ಲಕ್ಷಣಾವೃತ್ತಿಯ ಕಾರ್ಯಗಳೆಂದು ವಾದಿಸುವುದರಲ್ಲಿ ಅರ್ಥವಿಲ್ಲ.

ಜಿಜ್ಞಾಸಾಪದವನ್ನು ಕೇಳಿದಾಗ ಕಾಲವ್ಯವಧಾನವಿಲ್ಲದೆ ವಿಚಾರಪ್ರತೀತಿ ಬರುತ್ತದೆಂಬುದು ಅದ್ವೈತಿಗೂ ಸಮ್ಮತವಾಗಿದೆಯೆಂದು 'ಸ್ವೀಕೃತಶ್ಚ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಜ್ಞಾನೇಚ್ಛಾಪ್ರತೀತಿ ಬರುವ ದಶೆಯಲ್ಲೇ ಜ್ಞಾನಹೇತುವಾಗಿ ವಿಚಾರದ ಪ್ರತೀತಿಯೂ ಬರುತ್ತದೆಂದು ನೀವೂ ಒಪ್ಪಿದ್ದೀರಿ. ಆದ್ದರಿಂದ ಇಚ್ಛೆಯ ಪ್ರತೀತಿಯ ಅನಂತರ ವಿಚಾರದ ಪ್ರತೀತಿಯೆಂಬ ನಿಮ್ಮ ವಾದವು ಅಪಸಿದ್ಧಾಂತಗ್ರಸ್ತವಾಗಿದೆ.

ವಿಚಾರದಲ್ಲಿ ಶಕ್ತಿಯನ್ನು ಅಂಗೀಕರಿಸುವುದರಿಂದ ಮತ್ತೊಂದು ದೊಡ್ಡ ಪ್ರಯೋಜನವಿದೆ. "ನ ವಿಧೌ ಪರಃ ಶಬ್ದಾರ್ಥಃ" "ವಿಧಿಯಲ್ಲಿ ಲಕ್ಷಣಾ ಮಾಡಬಾರದು" ಎಂಬ ನ್ಯಾಯವು ಪ್ರಸಿದ್ಧವಾಗಿದೆ. "ತದ್‌ವಿಜಿಜ್ಞಾಸಸ್ವ" ಎಂಬ ಶ್ರುತಿಗೆ "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರಕ್ಕೆ ವಿಚಾರವಿಧಿಯಲ್ಲಿ ಲಕ್ಷಣಾವನ್ನು ಹೇಳುತ್ತಿದ್ದೀರಿ. ಇದು ಮೇಲೆ ಹೇಳಿದ ನ್ಯಾಯಕ್ಕೆ ವಿರುದ್ಧವಾಗಿದೆ. ಅದಕ್ಕೋಸ್ಕರ ವಿಚಾರದಲ್ಲಿ ಶಕ್ತಿಯನ್ನು ಅಂಗೀಕರಿಸಬೇಕು. ಹೀಗೆ ಶಕ್ತಿಯನ್ನು ಅಂಗೀಕರಿಸಿದಾಗ "ನ ವಿಧೌ ಪರಃ ಶಬ್ದಾರ್ಥಃ" ಎಂಬ ನ್ಯಾಯವನ್ನು ಅನುಸರಿಸಿದಂತಹ ಮಹಾಲಾಭವೂ ಆಗುತ್ತದೆ.

## ವಿಚಾರವು ಗೌಣವಾದರೆ ಅನೇಕ ಅನುಪಪತ್ತಿಗಳು

### तात्पर्यचन्द्रिका –

**अन्यथा लोके, मण्डपशब्दस्य मण्डपानकर्तृत्वरूपयौगिकार्थसम्बन्धाद् गृहविशेषे, प्रवीणकुशलादिशब्दानां च प्रकृष्टवीणावादनादिगतप्रागल्भ्यरूपगुण-योगादेव निपुणे, वाजिशब्दस्य च वाजशब्दवाच्यान्नवत्सम्बन्धादेवाश्वजातौ प्रयोगसम्भवाद् रूढिर्न स्यात् । वेदे च ''अपरिमितं देयम्'' इत्याधानप्रकरणे श्रुतस्यापरिमितशब्दस्य परिमितान्यरूपमुख्यार्थनिष्ठानेकत्वगुणयोगादेव बहुत्ववति प्रयोगसम्भवाद्रूढिर्न स्यात् । उक्ता च रूढिः षष्ठे । नच प्रवीणादिशब्दे इष्टापत्तिः ।**

**यौगिकार्थप्रतीत्यभावेऽपि नैपुण्यप्रतीतेः । नचैवं ''वैश्वदेवेन यजेत' इत्यादौ ''वैश्वदेवीमामिक्षाम्'' इति वाक्यविहितयागे यौगिकस्य वैश्वदेवशब्दस्य वैश्वदेवा-वैश्वदेवसमुदाये, गङ्गापदादेश्च तीरादौ लक्षणा न स्यात् । किन्तु रूढिरेव स्यादिति वाच्यम् । तत्र मुख्यार्थप्रतीतिपूर्वकमेवेतरप्रतीतेः । प्रकृते च तदभावादित्युक्त-त्वात् । किञ्च त्वन्मते ज्ञानसामान्येच्छायाः काप्यभावात्, अपरोक्षेच्छायां च जिज्ञासाशब्दस्यावयवशक्त्यभावात्, समुदायशक्तेः कल्प्यत्वाविशेषे, विचारे समुदायशक्तिः, अपरोक्षेच्छायां च लक्षणेत्येव किं न स्यात् । एतेन – जिज्ञासाशब्दवाच्ययेच्छया आक्षिप्तो विचार इह विधीयत इति विवरणाभिप्रेतं मतान्तरं निरस्तम् । विचाराक्षेपस्य भामतीनिरासावसरे निराकरिष्यमाणत्वाच्च । तस्माज्जिज्ञासाशब्दो विचारे रूढ एव ।**

ಅನುವಾದ - ಒಂದು ವೇಳೆ ಜಿಜ್ಞಾಸಾಶಬ್ದಕ್ಕೆ 'ವಿಚಾರ' ಎಂಬರ್ಥವು ಗೌಣವೆಂದು ಹೇಳುವುದಾದರೆ ಮಂಟಪಶಬ್ದಕ್ಕೆ ಮಂಟಪ ಎಂಬರ್ಥವೂ ಗೌಣವೆನ್ನಬೇಕಾದೀತು. ಏಕೆಂದರೆ ಹಾಲಿನ ಕೆನೆಯನ್ನು ಸೇವಿಸುವವನು ಎಂಬ ಯೋಗಿಕಾರ್ಥದ ಸಂಬಂಧವು ಗೃಹವಿಶೇಷದಲ್ಲಿ ಇದೆ. ಅದರಂತೆ ಪ್ರವೀಣ ಎಂಬ ಶಬ್ದವು ನಿಪುಣನಲ್ಲಿ, ಕುಶಲ ಎಂಬ ಶಬ್ದವು ಕೈಚಳಕವುಳ್ಳ ವ್ಯಕ್ತಿಯಲ್ಲಿ ಗೌಣವೆಂದಾಗಬೇಕಾದೀತು. ಇಲ್ಲಿಯೂ ಸಹ ಒಳ್ಳೆಯ ವೀಣೆ ನುಡಿಸುವವನಲ್ಲಿರುವ ''ಪ್ರೌಢಿಮೆ'' ಎಂಬ ಗುಣವು ನಿಪುಣನಾದ ವ್ಯಕ್ತಿಯಲ್ಲಿದೆ. ದರ್ಭೆ ಕೊಯ್ಯುವವನಲ್ಲಿರುವ ಕೈಚಳಕತೆಯೆಂಬ ಗುಣವು ನಿಪುಣನಲ್ಲಿ ಸಮಾನವಾಗಿ ಇದೆ ಹಾಗೆಯೇ ವಾಜಶಬ್ದವು ಕುದುರೆಯಲ್ಲಿ ಗೌಣವೆಂದಾಗಬೇಕಾದೀತು. ವಾಜಶಬ್ದವಾಚ್ಯವಾದದ್ದು ಅನ್ನ. ಅನ್ನವುಳ್ಳ ಪುರುಷನು ವಾಜಿ ಆಗಿದ್ದಾನೆ. ಈ ಅನ್ನವಂತ ಪುರುಷನ ಸಂಬಂಧ ಕುದುರೆಯಲ್ಲಿ ಇದೆ. ಹೀಗೆ ಎಲ್ಲೆಡೆಯೂ ಯೋಗಿಕಾರ್ಥಸಂಬಂಧವನ್ನು ಹೇಳಲು ಬರುತ್ತದೆ. ಆದ್ದರಿಂದ ಜಿಜ್ಞಾಸಾಶಬ್ದವು ವಿಚಾರದಲ್ಲಿ ಗೌಣವಾದರೆ ಮಂಟಪಾದಿಶಬ್ದಗಳೂ ಕೂಡ ಗೃಹವಿಶೇಷಾದ್ಯರ್ಥಗಳಲ್ಲಿ ಗೌಣವೆಂದು ಹೇಳಬೇಕಾದೀತು. ಗೃಹವಿಶೇಷಾದ್ಯರ್ಥಗಳಲ್ಲಿ ರೂಢವಾಗಿವೆ ಎಂಬುದನ್ನು ಅಲ್ಲಗಳೆಯಬೇಕಾದೀತು.

ವೇದದಲ್ಲಿಯೂ ಈ ಆಪತ್ತಿ ಇದೆ. ''ಅಪರಿಮಿತಂ ದೇಯಂ'' ಎಂದು ಆಧಾನ ಪ್ರಕರಣದಲ್ಲಿ ಬರುವ ಅಪರಿಮಿತ ಶಬ್ದಕ್ಕೆ 'ಬಹಳ' ಎಂಬರ್ಥವು ಗೌಣವೆಂದಾಗಬೇಕಾದೀತು. ಏಕೆಂದರೆ ಪರಿಮಿತಿ ಇಲ್ಲದೆಂಬ ಅರ್ಥವನ್ನು ಇಟ್ಟುಕೊಂಡು ಇದನ್ನೇ ಮುಖ್ಯಾರ್ಥವೆಂದು ಹೇಳಬಹುದು.

ಪರಿಮಿತಿ ಇಲ್ಲದ ವಸ್ತುಗಳು ಹೇಗೆ ಅನೇಕವೋ ಹಾಗೆಯೇ ಬಹಳವಾಗಿರುವ ವಸ್ತುಗಳೂ ಅನೇಕ ಎಂಬ ಸಾದೃಶ್ಯದ ಅಭಿಪ್ರಾಯದಿಂದ ಬಹಳವಾಗಿರುವ ವಸ್ತುಗಳನ್ನೂ ಅಪರಿಮಿತ ಎಂದು ಕರೆಯಬಹುದು. ಹೀಗೆ ರೂಢಿವೃತ್ತಿಯನ್ನು ಒಪ್ಪಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯ ಮಾಡಿದ್ದಾರೆ.

*ಪರಿಪೂರ್ಣಚಂದ್ರಿಕಾ*

ಗೃಹವಿಶೇಷಾದ್ಯರ್ಥದಲ್ಲಿ ಮಂಟಪಾದಿಶಬ್ದಗಳನ್ನು ಗೌಣವೆಂದೇ ಹೇಳುತ್ತೇವೆ. ಇದು ನಮಗೆ ಇಷ್ಟಾಪತ್ತಿ ಎಂದು ಹೇಳಬಾರದು. ಯೌಗಿಕಾರ್ಥಪ್ರತೀತಿಯು ಬರದೆ ನೇರವಾಗಿ ನೈಪುಣ್ಯದ ಪ್ರತೀತಿಯು ಬರುವುದರಿಂದ ರೂಢಿಯೆಂದು ಒಪ್ಪಿಕೊಳ್ಳಬೇಕು.

ಪ್ರಶ್ನೆ :- ಜಿಜ್ಞಾಸಾಪದಕ್ಕೆ ಜ್ಞಾನೇಚ್ಛೆ ಎಂಬ ಅವಯವಾರ್ಥ ತೋರಿದರೂ ವಿಚಾರವೆಂಬ ಅರ್ಥದಲ್ಲಿ ರೂಢಿಯನ್ನು ಒಪ್ಪುತ್ತಿದ್ದೀರಿ. ಹಾಗಾದರೆ ಅತಿಪ್ರಸಂಗ ಬರುತ್ತದೆ - "ವೈಶ್ವದೇವೇನ ಯಜೇತ" "ವೈಶ್ವದೇವಯಾಗವನ್ನು ಮಾಡಬೇಕು" ಎಂಬಲ್ಲಿರುವ ವೈಶ್ವದೇವ ಶಬ್ದಕ್ಕೆ ವೈಶ್ವದೇವ ಮತ್ತು ಅವೈಶ್ವದೇವ ಯಾಗಗಳ ಸಮೂಹದಲ್ಲಿ ಲಕ್ಷಣಾವನ್ನು ಮೀಮಾಂಸಕರು ಅಂಗೀಕರಿಸಿದ್ದಾರೆ. ಇದೂ ತಪ್ಪಾದೀತು. ಇಲ್ಲಿಯೂ ಸಹ "ವೈಶ್ವದೇವೀಮಾಮಿಕ್ಷಾಂ"ಎಂಬ ವಾಕ್ಯದಲ್ಲಿ ವಿಹಿತವಾದ್ದರಿಂದ ವೈಶ್ವದೇವಶಬ್ದದ ಅವಯವಾರ್ಥವು ತೋರುತ್ತಿದೆ. ಅದರಂತೆ ಗಂಗಾಪದದಿಂದ ಗಂಗಾಪ್ರವಾಹವೆಂಬ ಅವಯವಾರ್ಥವು ಮೊದಲು ತೋರುತ್ತದೆ. ಆದ್ದರಿಂದ ತೀರದಲ್ಲಿ ಲಕ್ಷಣಾ ಮಾಡದೇ ಇರಬೇಕಾದೀತು. ಹೊರತಾಗಿ ಇಲ್ಲಿಯೂ ರೂಢಿಯನ್ನೇ ಹೇಳಬೇಕಾದೀತು.

ಉತ್ತರ :- ಈ ಪ್ರಶ್ನೆಗೆ ಹಿಂದೆಯೇ ಉತ್ತರಿಸಿದ್ದಾಗಿದೆ. ವೈಶ್ವದೇವ ಶಬ್ದವನ್ನು ಕೇಳಿದಾಗ ಅಥವಾ ಗಂಗಾಶಬ್ದವನ್ನು ಕೇಳಿದಾಗ ಮೊದಲು ಮುಖ್ಯಾರ್ಥದಲ್ಲಿ ಪ್ರತೀತಿಯೇ ಬರುತ್ತದೆ. ಅನಂತರ ಅವೈಶ್ವದೇವ ಯಾಗ ಅಥವಾ ತೀರದ ಬೋಧ ಬರುತ್ತದೆ. ಆದರೆ ಪ್ರಕೃತ ಜಿಜ್ಞಾಸಾ ಶಬ್ದದಲ್ಲಿ ಹಾಗಿಲ್ಲ. ಜ್ಞಾನೇಚ್ಛೆಯು ಮೊದಲು ತೋರುವುದಿಲ್ಲ. ಹೀಗೆ ವ್ಯತ್ಯಾಸವಿರುವುದರಿಂದ ಅತಿಪ್ರಸಂಗವಿಲ್ಲ. ಮತ್ತು ಅದ್ವೈತಿಗಳಾದ ನಿಮಗೆ ಹಾಗೆ ಪ್ರಶ್ನಿಸಲೂ ಬರುವುದಿಲ್ಲ. ಏಕೆಂದರೆ ನಿಮ್ಮ ಮತದ ಪ್ರಕಾರ ಸಾಮಾನ್ಯವಾದ ಜ್ಞಾನದಲ್ಲಿ ಇಚ್ಛೆಯೆಂದೇ ಹೇಳಲು ಬರುವುದಿಲ್ಲ. ಅಪರೋಕ್ಷಜ್ಞಾನದ ಇಚ್ಛೆ ಎಂದು ಹೇಳಬೇಕು. ಆದರೆ ಜಿಜ್ಞಾಸಾಶಬ್ದವು ಜ್ಞಾನಸಾಮಾನ್ಯದ ಇಚ್ಛೆಯನ್ನಷ್ಟೇ ಹೇಳುತ್ತದೆ ಹೊರತು ಅಪರೋಕ್ಷಜ್ಞಾನದ ಇಚ್ಛೆಯನ್ನು ಹೇಳುವುದಿಲ್ಲ. ಆದ್ದರಿಂದ 'ಅಪರೋಕ್ಷಜ್ಞಾನೇಚ್ಛೆ' ಎಂಬರ್ಥದಲ್ಲಿ ರೂಢಿಯನ್ನೇ ಒಪ್ಪಬೇಕಾಗುತ್ತದೆ. ಹಾಗಾದರೆ ರೂಢ್ಯರ್ಥ ಒಂದನ್ನು ಒಪ್ಪುವುದು ಇಬ್ಬರಿಗೂ ಸಮಾನವಾಯಿತು. ಹೀಗಿರುವಾಗ ವಿಚಾರ ಎಂಬ ಅರ್ಥದಲ್ಲೇ ರೂಢಿಯನ್ನು ಒಪ್ಪಿ ಅಪರೋಕ್ಷಜ್ಞಾನೇಚ್ಛೆ ಎಂಬರ್ಥದಲ್ಲಿ ಲಕ್ಷಣಾವೃತ್ತಿಯೆಂದು ಅದ್ವೈತಿಗಳು ಏಕೆ ಹೇಳಬಾರದು?

ಹೀಗೆ ಹೇಳಿದ್ದರಿಂದ ವಿವರಣವನ್ನೂ ನಿರಾಕರಿಸಿದಂತಾಯಿತು. ಜಿಜ್ಞಾಸಾಶಬ್ದದಿಂದ ವಾಚ್ಯವಾದದ್ದು ಇಚ್ಛೆ. ಈ ಇಚ್ಛೆಯಿಂದ ವಿಚಾರವು ಆಕ್ಷೇಪಲಭ್ಯವಾಗಿದೆ. ಇಂತಹ ವಿಚಾರವನ್ನೇ ಇಲ್ಲಿ ವಿಧಿಸಲಾಗಿದೆಯೆಂದು ವಿವರಣದಲ್ಲಿ ಹೇಳಿದೆ.

ಆದರೆ ಅರ್ಥಾಪತ್ತಿಯಿಂದ ವಿಚಾರವು ತಿಳಿಯುವುದಿಲ್ಲವೆಂಬುದನ್ನು ಭಾಮತೀಮತದ ನಿರಾಕರಣೆಯನ್ನು ಮಾಡುವಾಗಲೇ ಇದನ್ನೂ ಜೊತೆಗೆ ನಿರಾಕರಿಸುವವರಿದ್ದೇವೆ. ಆದ್ದರಿಂದ ಜಿಜ್ಞಾಸಾಶಬ್ದವು ವಿಚಾರ ಎಂಬರ್ಥದಲ್ಲಿ ರೂಢವಾಗಿದೆಯೆಂದೇ ಹೇಳಬೇಕು.

प्रकाशः – द्वितीयश्लोकं व्याचष्टे ।। अन्यथेति ।। आदिपदार्थमाह ।। प्रवीणेति ।। मण्डपशब्दो मण्डं पिबतीति व्युत्पत्त्या मण्डपानकर्तरि मुख्यस्सन् तदधिष्ठितत्वरूपतत्सम्बन्धाद् गृहविशेषे लाक्षणिकः स्यान्नतु रूढः । तथा प्रवीणशब्दः प्रकृष्टवीणावति मुख्यस्सन् प्रकृष्टवीणावादनसमर्थगतप्रौढत्वरूपगुणयोगान्निपुणे गौणस्स्यान्नतु रूढः । तथा कुशलशब्दोऽपि कुशान् लुनातीति कुशच्छेत्तरि मुख्यस्सन् तद्गतवैदग्ध्यरूपगुणयोगान्निपुणे गौणो नतु रूढः स्यादित्यर्थः । 'वीणावत्' इति मतुप्, नतु वतिः ।। अन्नवदिति ।। अन्नवान् पुरुषः, तत्सम्बन्धादित्यर्थः ।। वेदे चेति ।। षष्ठे "अपरिमाणे शिष्टस्य सङ्ख्याप्रतिषेधस्तत् श्रुतित्वात्" इति सप्तमपादीयदशमाधिकरणे आधाने श्रुतम् "एका देया द्वे देये षट् देयाः शतं देयं सहस्रं देयमपरिमितं देयम्" इति वाक्यमुदाहृत्य "अपरिमितं देयम्" इति किं पूर्वोक्तैकादिपरिमाणनिषेधः उतायमपि सङ्ख्यान्तरविधिः इति संशये, अपरिमितशब्दस्यावयवशक्त्या परिमाणशून्यवाचित्वात् तस्य च दानायोगात् प्रकृतपरिमाणमनूद्य तस्य प्रतिषेधः क्रियत इति प्राप्ते, अवयवशक्तेर्बलीयस्या समुदायशक्त्या तस्य स्वार्थवाचकत्वात् सुज्ञातपरिमाणेष्वपि बहुत्वमात्रेणापरिमितशब्दप्रयोगदृष्ट्या तस्यालब्धात्मकत्वादयमपि सन्निहितसहस्रादधिकसङ्ख्यान्तरविधिरिति सिद्धान्तितम् । अत्रानेकत्वगुणयोगनिमित्तं गौणत्वमनादृत्य रूढ्याश्रयणं कृतं, तन्न स्यादित्यर्थः । इष्टापत्तिमाशङ्क्याह ।। उक्ता चेति ।। यौगिकार्थेति ।। तथाच प्रतीतिविरोध इति भावः ।

उत्तरार्धं व्याख्यातुं शङ्कामुत्थापयति ।। नचैवमिति ।। ज्ञानेच्छायां यौगिकस्य विचारे रूढत्व इत्यर्थः । आद्ये चतुर्थे पादे "वैश्वदेवे विकल्प इति चेत्" इति दशमाधिकरणे चिन्तितम् । चातुर्मास्येषु वैश्वदेववरुणप्रघाससाकमेधशुनासीरीयाख्यकर्मसमुदायेषु पर्वशब्दितेषु मध्ये वैश्वदेवपर्वणि श्रूयते "आग्नेयमष्टाकपालं निर्वपति सोम्यं चरुं सावित्रं द्वादशकपालं सारस्वतं चरुं पौष्णं चरुं मारुतं सप्तकपालं वैश्वदेवीमामिक्षां द्यावापृथिव्यमेककपालम्" इति । तत्सन्निधाविदमाम्नातं "वैश्वदेवेन यजेत" इति ।। तत्र किं 'यजेत' इत्यनूदितानां प्रकृताग्नेयादियागानां

वैश्वदेवशब्दो विश्वदेवाख्यदेवतारूपगुणविधिपरः, किं वा तेषामेव नामधेयमिति संशये, नामत्वे तस्याविधेयत्वात् विधेयांतराभावाच्च वाक्यमिदमनर्थकं स्यादतो देवताविधिः "आनर्थक्यप्रतिहतानां विपरीतं बलाबलम्" इत्युत्पत्तिशिष्टाभिरप्यग्न्यादिदेवताभिर्विश्वेदेवता विकल्प्यन्त इति प्राप्ते, वैश्वदेवशब्दस्य छत्रिन्यायेन लक्षणया 'यजेत' इत्यनूदितप्रकृताग्नेयादिवैश्वदेवावैश्वदेवयागसमुदायनामत्वेऽपि "प्राचीनप्रवणे वैश्वदेवेन यजेत" इत्यादिषु वैश्वदेवशब्देनाग्नेयादियागसमुदायग्रहणोपपत्त्या प्राचीनप्रवणसम्बन्धसिद्धेर्नानर्थक्यम् । अन्यथा आमिक्षायागस्यैव प्राचीनप्रवणसम्बन्धः स्यात् । तस्मान्नामधेयमिति सिद्धान्तितम् ।। अत्रैकत्र यौगिकस्यान्यत्र लक्षणा दृष्टा । सा न स्यादिति शङ्कार्थः । यद्यपि वैश्वदेवशब्दस्य "यद् विश्वे देवाः समयजन्त तद् वैश्वदेवस्य वैश्वदेवत्वम्" इति वाक्यशेषाद् विश्वदेवयष्टृकत्वगुणयोगेन यौगिकत्वमपि सिद्धान्ते दर्शितम् । तथाऽपि लाक्षणिकत्वपक्षस्याप्युक्तेरेवमुक्तम् । यद्वा – तदीयदेवताधिकरणे देवतानां कर्मानधिकारोक्तेस्तद्विरुद्धार्थवादलब्धयोगापेक्षया आमिक्षायागविधिमुखलब्धलक्षणैव ज्यायसीति सैव सिद्धान्तिनोऽभिमतेति भावेनैवमुक्तिः । वेदे दोषमाशङ्क्य लोके चाशङ्कते ।। गङ्गेति ।। मुख्यार्थेति ।। आमिक्षायागप्रवाहादिरूपमुख्यार्थधीपूर्वमेवेतरस्याग्नेयादियागतीरादेः प्रतीतेरित्यर्थः । एतेन "तद्धीपूर्वम्" इति चतुर्थपादो व्याख्यातः । 'प्रकृते' जिज्ञासाशब्दे । क्वापीति ।। प्रागुक्तरीत्येति भावः ।। अवयवशक्तीति ।। ज्ञानसामान्येच्छायामेव तस्य शक्तेरिति भावः ।। एतेनेति ।। ज्ञानसामान्येच्छाया अभावेनापरोक्षेच्छायामवयवशक्त्यभावेन चेत्यर्थः । 'इच्छया' ज्ञानेच्छया ।। तस्मादिति ।। व्याकरणविरोधस्तु समाधास्यत इति भावः ।

गुरुराजीय – आदिशब्दं विवृण्वन्नेव द्वितीयनिराकरणपरत्वेन द्वितीयकारिकां व्याचष्टे – अन्यथेति ।। अत्रापि मण्डपशब्दस्य मण्डपानकर्तृत्वरूपयोगेन गृहस्वामिनि वृत्तिः तत्सम्बन्धाद् गृहादौ प्रवृत्तिरिति लक्षणा स्यादिति भावः । इष्टापत्तिं परिहरति – उक्ता चेति ।। गङ्गाशब्दात्तु तीरादीति कारिकांशमवतारयति – नचैवमिति ।। नन्वेवं विचारस्यापीच्छाप्रतीतिपूर्वकप्रतीतिकत्वे लाक्षणिकत्वं

स्यादित्यत आह – **प्रकृते चेति** ।। जिज्ञासाशब्दान्मीमांसाशब्दादिवेच्छाप्रतीत्यभावेऽपि विचारः प्रतीयत इत्युक्तत्वादिति भावः । जिज्ञासाशब्दस्यावयवशक्त्यतिरिक्तशक्त्यन्तरकल्पनामेवाङ्गीकृत्य परिहारः कृतः । इदानीं स्वीकृतश्चेत्यादिना सूचितकल्पनाभावमेवाह – **किञ्च त्वन्मत इति** ।। जिज्ञासाशब्दस्य ज्ञानसामान्येच्छायां शक्तिः अपरोक्षेच्छायां वा । नाद्य इत्याह – **ज्ञानेति** ।। द्वितीयं दूषयति – **अपरोक्षेति** ।। नन्वनन्यलभ्ये हि शक्तिः कल्पनीया जिज्ञासापदादाक्षेपेणैव लाभसम्भवानानन्यलभ्यत्वमित्येतद् विवरणमतमतिदेशेन दूषयति – **एतेनेति** ।। इच्छाप्रतीत्यभावेऽपि जिज्ञासाशब्दाद् विचारप्रतीत्युपपादनेनेत्यर्थः ।

**ವಿವರಣೆ** - ಜಿಜ್ಞಾಸಾಪದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡಬೇಕೆಂದು ಅದ್ವೈತಿಗಳ ವಾದ. ಆದರೆ ಆಪಾತರಮಣೀಯವಾದ ಈ ವಾದದಲ್ಲಿ ಹುರುಳಿಲ್ಲ. ಲೌಕಿಕರಿಗೆ ಮೊದಲು ಅವಯವಾರ್ಥ ತೋರಿ ಅನಂತರ ಬೇರೆ ಅರ್ಥ ತೋರಿದರೆ ಅಂತಹ ಸ್ಥಳದಲ್ಲಿ ಲಕ್ಷಣಾ ಮಾಡಬೇಕು. ಆದರೆ ಜಿಜ್ಞಾಸಾಶಬ್ದವನ್ನು ಕೇಳಿದಾಗ ಜ್ಞಾನೇಚ್ಛೆ ಎಂಬ ಅವಯವಾರ್ಥ ತೋರದೆ ಸಾಕ್ಷಾತ್ತಾಗಿ ವಿಚಾರ ಎಂಬರ್ಥವನ್ನೇ ಲೌಕಿಕರು ತಿಳಿಯುತ್ತಿದ್ದಾರೆ. ಹಾಗಾಗಿ ವಿಚಾರಯೆಂಬರ್ಥದಲ್ಲಿ ರೂಢಿಯನ್ನೇ ಹೇಳಬೇಕು. ಆದರೂ ನೀವು ರೂಢಿಯನ್ನು ಒಪ್ಪದೇ ಲಕ್ಷಣಾವನ್ನೇ ಹೇಳುವುದಾದರೆ ಮಂಟಪ ಮೊದಲಾದ ಶಬ್ದಗಳಿಗೆ ಗೃಹ ಮೊದಲಾದ ಅರ್ಥಗಳಲ್ಲಿ ರೂಢಿಯನ್ನು ಒಪ್ಪದೇ ಲಕ್ಷಣಾವನ್ನೇ ಹೇಳಬೇಕಾದೀತು. ಲಕ್ಷಣಾಕ್ಕೆ ಪ್ರಸಿದ್ಧವಾದ "ಗಂಗಾಯಾಂ ಘೋಷಃ" ಇತ್ಯಾದಿ ಸ್ಥಳದಲ್ಲೆಲ್ಲ ಅವಯವಾರ್ಥದ ಪ್ರತೀತಿಯ ಮೂಲಕವೇ ತೀರಾದಿಬೋಧ ಬರುವುದು ಅನುಭವಸಿದ್ಧವಾಗಿದೆ, ಇಷ್ಟು ವಿಷಯವನ್ನು ಹಿಂದೆ ಗ್ರಂಥಕಾರರು "ಜಿಜ್ಞಾಸಾಶಬ್ದತೋ" ಇತ್ಯಾದಿ ಎರಡು ಶ್ಲೋಕಗಳಿಂದ ಹೇಳಿದ್ದರು. ಮೊದಲನೆಯ ಶ್ಲೋಕವನ್ನು ಇದುವರೆಗೂ ವಿವರಿಸಿದ್ದಾಯಿತು. ಈಗ "ಅನ್ಯಥಾ ಮಂಟಪಾದೀನಾಂ" ಇತ್ಯಾದಿ ಎರಡನೆಯ ಶ್ಲೋಕವನ್ನು ವ್ಯಾಖ್ಯಾನಿಸಿದ್ದಾರೆ. ತಾವೇ ಸಂಗ್ರಹಿಸಿ ರಚಿಸಿದ ಶ್ಲೋಕವನ್ನು ತಾವೇ ವ್ಯಾಖ್ಯಾನಿಸುತ್ತಿದ್ದಾರೆ.

"ಅನ್ಯಥಾ ಮಂಟಪಾದೀನಾಂ" ಎಂಬ ಪಾಠಕ್ಕಿಂತ "ಅನ್ಯಥಾ ಮಂಡಪಾದೀನಾಂ" ಎಂಬ ಪಾಠವು ಸ್ವರಸವೆನಿಸುತ್ತದೆ.

ಮಂಡಪಶಬ್ದವು ಮಂಟಪ (ಗೃಹವಿಶೇಷ) ಎಂಬರ್ಥದಲ್ಲಿ ರೂಢವಾಗಿದೆ. ಇದನ್ನು ಯಾರೂ ಗೌಣಪ್ರಯೋಗವೆಂದು ಹೇಳುವುದಿಲ್ಲ. ಆದರೆ ನಿಮ್ಮ ಪ್ರಕಾರ ಈಗ ಗೌಣವೆಂದಾಗಬೇಕಾಗುತ್ತದೆ. ಹೇಗೆಂದರೆ ಮಂಡ = ಹಾಲಿನ ಕೆನೆಯನ್ನು ಪ = ಸೇವಿಸುವವನು ಎಂದು ಇದರರ್ಥ. ಅವಯವಾರ್ಥದಿಂದ ತಿಳಿಯುವ ವ್ಯಕ್ತಿಯ ವಶವಾಗಿರುವುದರಿಂದ (ತದಧಿಷ್ಠಿತತ್ವ ಎಂಬ ಸಂಬಂಧವಿರುವುದರಿಂದ) ಗೃಹವಿಶೇಷವೂ ಮಂಡಪವೆನಿಸುತ್ತದೆ. ಹೀಗೆ ಮಂಡಪಶಬ್ದವು ಲಾಕ್ಷಣಿಕವೆಂದಾಗ ಗೌಣವೇ ಆಗಲಿ ರೂಢವಾಗುವುದು ಬೇಡ.

*ಪರಿಪೂರ್ಣಚಂದ್ರಿಕಾ*

ಅದೇರೀತಿ ಪ್ರವೀಣಶಬ್ದಕ್ಕೆ ಉತ್ಕೃಷ್ಟವಾಗಿ ವೀಣೆ ನುಡಿಸುವವನು ಎಂದು ಯೋಗದಿಂದ ತಿಳಿಯುವ ಅರ್ಥ. ಆದರೆ ಲೋಕದಲ್ಲಿ ಯಾವುದೇ ಕಲೆಯಲ್ಲಿ ನಿಪುಣನಾದರೂ ಪ್ರವೀಣ ಎಂದು ಕರೆಯುತ್ತಾರೆ.

ಇದನ್ನು ಗೌಣವೆಂದು ಯಾರೂ ಹೇಳುವುದಿಲ್ಲ. ಆದರೆ ವೀಣೆ ನುಡಿಸುವವನಲ್ಲಿರುವ ಪ್ರಾಗಲ್ಭ್ಯ ಎಂಬ ಗುಣದ ಸಾದೃಶ್ಯ ಇತರ ಕಲಾವಿದರಲ್ಲಿಯೂ ಇದೆ. ಹಾಗಾಗಿ ಗೌಣ ಪ್ರಯೋಗವೆಂದಾಗಬೇಕಾದೀತು.

'ಕುಶಲ' ಶಬ್ದವನ್ನು ಲೋಕವಲ್ಲಿ ಯಾವುದೇ ನಿಪುಣನಲ್ಲಿ ಪ್ರಯೋಗಿಸುತ್ತೇವೆ. ವಸ್ತುತಃ 'ಕುಶಂ ಲಾತಿ' ದರ್ಭೆ ಕೊಯ್ಯುವವನು ಎಂದು ಕುಶಲಶಬ್ದದ ಯೋಗಾರ್ಥ, ಆದರೆ ನಿಪುಣಸಾಮಾನ್ಯನಲ್ಲಿ ಕುಶಲ ಶಬ್ದದ ಪ್ರಯೋಗ ಲೋಕದಲ್ಲಿ ರೂಢಿಯಾಗಿದೆ. ಈಗ ಇದೂ ಗೌಣವಾಗಬೇಕಾದೀತು. ಏಕೆಂದರೆ ದರ್ಭೆ ಕೊಯ್ಯುವವನಲ್ಲಿರುವ ನೈಪುಣ್ಯದ ಸಾದೃಶ್ಯವು ಇತರ ನಿಪುಣನಲ್ಲಿಯೂ ಸಾಧಾರಣವಾಗಿದೆ. ಆದ್ದರಿಂದ ಗೌಣವೆಂದಾಗಿ ರೂಢಿಯಲ್ಲವೆಂದಾಗಬೇಕಾದೀತು.

ವಾಜಿ, ಶಬ್ದವು ಕುದುರೆಯಲ್ಲಿ ರೂಢವಾಗಿದೆ. ಆದರೆ ನಿಮ್ಮ ಪ್ರಕಾರ ಇದೂ ಗೌಣವಾಗಬೇಕಾದೀತು. ಏಕೆಂದರೆ ವಾಜಶಬ್ದಕ್ಕೆ ಅನ್ನವೆಂದು ಅರ್ಥ. ವಾಜಿ ಎಂದರೆ ಅನ್ನವಂತನಾದ ಪುರುಷ ಎಂದರ್ಥ. ಅನ್ನವಂತನ ಸಂಬಂಧ ಕುದುರೆಗೆ ಇರುವುದರಿಂದ ಕುದುರೆ ವಾಜಿಶಬ್ದದಿಂದ ವಾಚ್ಯವಾಗುತ್ತದೆಂದು ಹೇಳಬಹುದು.

### [1]'ಅಪರಿಮಾಣಶಿಷ್ಟಸ್ಯ ಸಂಖ್ಯಾಪ್ರತಿಷೇಧಸ್ತಚ್ಛ್ರುತಿತ್ವಾತ್'

---

१ अथ दशममाधानेऽपरिमितं देयमित्यनेन संख्यान्तरविधानाधिकरणम् (सूत्रे २१-२२)

अपरिमाणशिष्टस्य संख्याप्रतिषेधस्तच्छ्रुतित्वात् ॥ २१ ॥

(कल्पान्तरं वा तुल्यवत्प्रसङ्ख्यानात् ॥ २२ ॥)

उत्तरचिन्तोपोद्घातत्वेनेदमारभ्यते । आधाने श्रूयते ''एका देया । द्वे देये । षट् देयाः द्वादश देयाः । चतुर्विंशतिर्देयाः । शतं देयं, सहस्रं देयं । अपरिमितं देयम्'' इति । तत्रापरिमितशब्देन प्रागुक्तैकादिसंख्याप्रतिषेधः क्रियते ''एकद्व्यादिसंख्यापरिच्छिन्नं न देयम्'' इति, किं वा संख्यान्तरविधिरिति सन्देहे, नञ उत्तरपदेनैवान्वयमुपेत्य परिमितं परिमाणोपेतं न भवति यत्तदपरिमितमित्याश्रयणे परिमाणशून्यं द्रव्यं देयमिति प्रतीतेस्तादृशद्रव्यस्य निःस्वरूपतया दानायोगादगत्या समर्थसमासेन नञो देयपदान्वय-मुपेत्य प्रागुक्तैकद्व्यादिसंख्यापरिमितं न देयमित्यर्थस्य वाच्यत्वात् प्रागुक्तसंख्याप्रतिषेध इत्युपेयम् । एवञ्च विहितप्रतिषिद्धत्वादेकादिगोव्यक्तिदानस्य विकल्प इति प्राप्तम् । तदाह सूत्रे, अपरिमाणे चोद्यमाने शिष्टस्यैकादेः प्रतिषेधः स्यात् । कुतः? तच्छ्रुतित्वात् नञः प्रतिषेधवाचित्वात् । परिमितशब्दस्य वा प्रकृतैकादिपरत्वादिति । सिद्धान्तस्तु, ''अपरि-मितमस्य धनम्'' इत्यादौ बहुत्वयुक्ते धनेऽपरिमितशब्दस्य बहुलप्रयोगदर्शनेन रूढ्या

## (ಪೂರ್ವಮೀಮಾಂಸಾ ಅಧ್ಯಾಯ ೬ - ಪಾದ ೭ -ಅಧಿ. ೧೦)

ವೇದದಲ್ಲಿಯೂ'ಅಪರಿಮಿತಂ ದೇಯಂ' ಎಂದು ಆಧಾನ ಪ್ರಕರಣದಲ್ಲಿ ಬರುವ 'ಅ-ಪರಿಮಿತ' ಶಬ್ದಕ್ಕೆ ಪರಿಮಿತಿ ಇಲ್ಲದುದೆಂಬ ಅವಯವಾರ್ಥವನ್ನಿಟ್ಟುಕೊಂಡು ಅದು ಮುಖ್ಯಾರ್ಥವೆಂದೂ 'ಬಹಳ' ಎಂದು ಅರ್ಥವು ಗೌಣವೆಂದೂ ಹೇಳಬಹುದು. ಪರಿಮಿತಿ ಇಲ್ಲದವುಗಳು ಹೇಗೆ ಅನೇಕವೊ ಹಾಗೆಯೇ ಬಹಳವಾಗಿರುವ ವಸ್ತುಗಳೂ ಅನೇಕ ಎಂಬ ಸಾದೃಶ್ಯದ ಅಭಿಪ್ರಾಯದಿಂದ ಬಹಳವಾಗಿರುವ ವಸ್ತುಗಳನ್ನೇ 'ಅ-ಪರಿಮಿತ' ಎಂದು ಕರೆಯಲಾಗಿದೆ ಎನ್ನಬಹುದು. ಆದರೆ ಮೀಮಾಂಸಕರು 'ಬಹಳ' ಎಂಬುದೇ ಅಪರಿಮಿತ ಶಬ್ದದ ರೂಢಿಯ ಅರ್ಥವೆಂದು ಅಂಗೀಕರಿಸಿದ್ದಾರೆ. 'ಅಪರಿಮಿತಂ' ಎನ್ನುವ ವಾಕ್ಯಕ್ಕೆ ಹಿಂದ ಹೇಳಿದ ಸಂಖ್ಯಾಮಿತಿಯನ್ನು ನಿಷೇಧಿಸುವುದರಲ್ಲಿಯೆ ತಾತ್ಪರ್ಯ. ಏಕೆಂದರೆ 'ಪರಿಮಿತ' ಎಂದರೆ ಹಿಂದ ಹೇಳಿದ ಸಂಖ್ಯಾಪರಿಮಿತಿಯೇ ಅರ್ಥ. ನಞ್ ಶಬ್ದಕ್ಕೆ ನಿಷೇಧವು ಅರ್ಥ'. ಎಂಬ ಅಧಿಕರಣದಲ್ಲಿ 'ಏಕಾ ದೇಯಾ ದ್ವೇ ದೇಯೇ ಷಡ್ ದೇಯಾಃ ಶತಂ ದೇಯಂ ಸಹಸ್ರಂ ದೇಯಂ ಅಪರಿಮಿತಂ ದೇಯಂ' 'ಒಂದನ್ನು ಕೊಡಬೇಕು ಎರಡನ್ನು ಕೊಡಬೇಕು ಆರನ್ನು ಕೊಡಬೇಕು ನೂರು ಕೊಡಬೇಕು ಸಾವಿರ ಕೊಡಬೇಕು ಅಪರಿಮಿತ ಕೊಡಬೇಕು' ಎಂಬ ವಾಕ್ಯದಲ್ಲಿ ಅಪರಿಮಿತವೆಂಬುದು ಹಿಂದೆ ಹೇಳಿದ ಸಂಖ್ಯೆಗಳ ನಿಷೇಧವೆ ಅಥವಾ ಬೇರೊಂದು ಸಂಖ್ಯೆಯ ವಿಧಾನವೆ ಎಂದು ಸಂದೇಹ.

'ಅ-ಪರಿಮಿತ' ಎಂದು ಮಿತಿ ಇಲ್ಲದುದು ಎಂಬ ಅವಯವಾರ್ಥ ಹೊಳೆಯುತ್ತದೆ. ಮಿತಿಯ ಇಲ್ಲದುದನ್ನು ದಾನ ಮಾಡುವುದು ಅಶಕ್ಯವಾದುದರಿಂದ ಹಿಂದೆ ಹೇಳಿದ ಸಂಖ್ಯೆಗಳ ಮಿತಿ ಇಲ್ಲದವುಗಳೆಂದು ಅರ್ಥಇಟ್ಟುಕೊಳ್ಳಬೇಕು. ಆದ್ದರಿಂದ ಹಿಂದೆ ಹೇಳಿದ ಸಂಖ್ಯಾಮಿತಿಯ ವಿಧಿ ನಿಷೇಧಗಳಿಂದ ವಿಕಲ್ಪ ಸಿದ್ಧವಾಗುತ್ತದೆ ಎಂದು ಪೂರ್ವಪಕ್ಷ.

ಶಬ್ದಗಳನ್ನು ಕೇಳಿದೊಡನೆ ಅವುಗಳ ರೂಢಿಯ ಅರ್ಥವೆ ಮೊದಲು ಹೊಳೆಯುತ್ತದೆ. ಅವಯವಾರ್ಥವಲ್ಲ. ಬಹಳವಾಗಿರುವ ವಸ್ತುಗಳಲ್ಲಿ ಸಂಖ್ಯಾಮಿತಿ ಇದೆ ಎಂದು ತಿಳಿದಿದ್ದರೂ ಅಪರಿಮಿತ ಎಂದು ವ್ಯವಹಾರ ಮಾಡುವುದು ರೂಢಿಯಲ್ಲಿ ಇದೆ. ಆದ್ದರಿಂದ 'ಬಹಳ' ಎಂಬ ರೂಢಿಯ ಅರ್ಥವನ್ನ ಇಟ್ಟುಕೊಂಡು ಹಿಂದೆ ಹೇಳಿದ ಸಂಖ್ಯೆಗಳಲ್ಲಿ ದೊಡ್ಡದಾದ ಸಾವಿರಕ್ಕಿಂತಲೂ ಹೆಚ್ಚಿನ ಇನ್ನೊಂದು ಸಂಖ್ಯೆಯನ್ನೆ 'ಅಪರಿಮಿತ' ಎಂದು ವಿಧಿಸಲಾಗಿದೆ ಎಂದು ಸಿದ್ಧಾಂತ.

ಪ್ರವೀಣ ಮಂಡಪ ಮುಂತಾದ ಮೇಲೆ ಹೇಳಿದ ಶಬ್ದಗಳು ಅವುಗಳ ಪ್ರಸಿದ್ಧಾರ್ಥದಲ್ಲಿ ರೂಢಿಯ ಶಬ್ದಗಳಲ್ಲವೆಂದೊಪ್ಪಿದರೆ ಬಾಧಕವೇನು? ಈ ಪ್ರಶ್ನೆಗೆ ಅನುಭವವೆ ಉತ್ತರ ಹೇಳುತ್ತದೆ. ಪ್ರವೀಣ ಮುಂತಾದ ಶಬ್ದಗಳನ್ನು ಕೇಳಿದೊಡನೆ ಅವುಗಳ ಅವಯವಾರ್ಥ ಪ್ರತೀತಿ ಇಲ್ಲದೆಯೂ ಪ್ರಸಿದ್ಧ ಅರ್ಥಗಳು ಹೊಳೆಯುವುದು ಅನುಭವಸಿದ್ಧ. ಆ ಅರ್ಥಗಳಲ್ಲಿ ರೂಢಿ ಇಲ್ಲದಿದ್ದರೆ ಇದು ಶಕ್ಯವಿಲ್ಲ.

---

**बाहुल्यवाची सनयं शब्दः संख्यान्तरविशिष्टविधिपरः । योगाद् रूढेर्बलवत्ताया अत्रैवाद्यपादे स्थितत्वादिति ।**

**इति दशममाधानेऽपरिमितं देयमित्यनेन सङ्ख्यान्तरविधानाधिकरणम् (सूत्रे २१-२२)**

ಪರಿಪೂರ್ಣಚಂದ್ರಿಕಾ

ಒಂದು ಪ್ರಶ್ನೆ - ಜಿಜ್ಞಾಸಾ ಶಬ್ದಕ್ಕೆ ಜ್ಞಾನೇಚ್ಛೆ ಎಂಬ ಅವಯವಾರ್ಥವಿದ್ದರೂ ವಿಚಾರವೆಂಬ ಅರ್ಥದಲ್ಲಿ ಅದಕ್ಕೆ ರೂಢಿ ಇದೆ ಎಂದೊಪ್ಪಿದರೆ 'ವೈಶ್ವದೇವೇನ ಯಜೇತ' 'ವೈಶ್ವದೇವ ಯಾಗವನ್ನು ಮಾಡಬೇಕು' ಎಂಬಲ್ಲಿ ಬರುವ ವೈಶ್ವದೇವ ಶಬ್ದಕ್ಕೆ ವೈಶ್ವದೇವ ಮತ್ತಿತರ ಯಾಗಗಳ ಸಮೂಹವೆಂಬ ಅರ್ಥದಲ್ಲಿ ಮೀಮಾಂಸಕರು ಲಕ್ಷಣಾವೃತ್ತಿಯನ್ನು ಅಂಗೀಕರಿಸಿರುವುದು ಸರಿಯಲ್ಲವೆಂದಾದೀತು. 'ವೈಶ್ವದೇವೀಮಾಮಿಕ್ಷಾಂ' 'ವಿಶ್ವೇದೇವತೆಗಳಿಗೆ ಆಮಿಕ್ಷೆ (ಬಿಸಿಹಾಲಿಗೆ ಮೊಸರು ಸೇರಿದಾಗ ಸಿಗುವ ದ್ರವಭಾಗ) ಯನ್ನು ನಿರ್ವಾಪ ಮಾಡಬೇಕು' ಎಂಬಲ್ಲಿ ವಿಹಿತವಾದ ಯಾಗ ಎಂದು ವೈಶ್ವದೇವಶಬ್ದದ ಅವಯವಾರ್ಥವಿದೆ.

## ವೈಶ್ವದೇವಾಧಿಕರಣ

### °ವೈಶ್ವದೇವೇ ವಿಕಲ್ಪ ಇತಿ ಚ (೧-೪-೧೧)

१ **अथैकादशं वैश्वदेवादिशब्दानां यागनामधेयताधिकरणम् (सूत्राणि १३-१६)**

**वैश्वदेवे विकल्प इति चेत् ॥ १३ ॥**

**(न वा प्रकरणात् प्रत्यक्षविधानाच्च, नहि प्रकरणं द्रव्यस्य ॥ १४ ॥**

**मिथश्चानर्थसम्बन्धः ॥ १५ ॥ परार्थत्वाद्गुणानाम् ॥ १६ ॥**

पूर्वसिद्धान्तन्यायेनेह शङ्कनात् सङ्गतिः । चातुर्मास्याख्ये कर्मणि वैश्वदेववरुणप्रघाससाकमेधशुनासीरीयशब्दितपर्वनामककर्मसमुदायचतुष्टयमाम्नातम् । तत्र प्रथमे पर्वणि अष्टौ यागा विहिताः 'आग्नेयमष्टाकपालं निर्वपति, सौम्यं चरुं, सावित्रं द्वादशकपालं, सारस्वतं चरुं, पौष्णं चरुं, मारुतं सप्तकपालं, वैश्वदेवीमामिक्षां, द्यावापृथिव्यमेककपालम्' इति । तेषां यागानां सन्निधौ 'वैश्वदेवेन यजेत' इति श्रुतम् ।

तत्र वैश्वदेवशब्दो गुणविधिः, उत नामधेयमिति सन्देहः । पूर्वत्र 'निर्मन्थ्येनेष्टकाः पचन्ति' इत्यत्र यथा पाकविधिनैव विशेष्यस्याग्नेः प्राप्त्योपसर्जनभूताचिरमथनरूपगुणविधिस्तथेहाप्युक्तयागान् 'यजेत' इत्यनूद्योपसर्जनीभूतविश्वदेवाख्यादेवतारूपो गुणो विधीयते । सप्तमे यागे विश्वदेवानां प्राप्तत्वेऽपि तदन्यसप्तयागेषु गुणविधिरस्तु । इतः पूर्वमुत्पत्तिशिष्टगुणप्राबल्यस्यानुक्तेस्तुल्यबलत्वेनाग्न्यादिभिर्विश्वदेवदेवता विकल्प्यन्ते । तथाच सूत्रम् ॥ **वैश्वदेवे विकल्प इति चेत् ॥** इति । एवं प्राप्ते, सिद्धान्तः उत्पत्तिवाक्ये विहितानष्टौ यागान् यजिनाऽनूद्याष्टानां संघे वैश्वदेवनामसम्बन्धः क्रियते । स च सम्बन्धो द्वेधा । आमिक्षायागे विश्वेषां देवानामिज्यमानतया तत्सहचरितानां सर्वेषां छत्रिन्यायेनौपचारिको वा, 'यद्विश्वे देवाः समयजन्त तद्वैश्वदेवस्य वैश्वदेवत्वम्' इति ब्राह्मणवाक्योक्त्या विश्वदेवकर्तृकत्वाद्वेति । नच संघे नामसम्बन्धो व्यर्थः । 'प्राचीनप्रवणे वैश्वदेवेन यजेत' इत्यत्र एकेन वैश्वदेवनाम्ना अष्टानां समुदायस्य प्राचीनप्रवणसम्बन्धसिद्ध्यर्थत्वात् । द्वितीये गुणाधिकरणे उत्पत्तिशिष्टप्राबल्यस्य वक्ष्यमाणत्वेन विकल्पायोगाच्चेति । फलन्तु

೧) ವೈಶ್ವದೇವ ೨) ವರುಣಪ್ರಘಾಸ ೩) ಸಾಕಮೇಧ ೪) ಶುನಾಸೀರೀಯ. ಇವು ನಾಲ್ಕು ಚಾತುರ್ಮಾಸ್ಯಕರ್ಮಗಳು. ಇವುಗಳ ಮಧ್ಯದಲ್ಲಿ ಮೊದಲನೆಯ ವೈಶ್ವದೇವಪರ್ವದಲ್ಲಿ ಎಂಟು ಯಾಗಗಳನ್ನು 'ಆಗ್ನೇಯಮಷ್ಟಾಕಪಾಲಂ ನಿರ್ವಪೇತ್ ಸೌಮ್ಯಂ ಚರುಂ ಸಾವಿತ್ರಂ ದ್ವಾದಶಕಪಾಲಂ ಸಾರಸ್ವತಂ ಚರುಂ ಪೌಷ್ಣಂ ಚರುಂ ಮಾರುತಂ ಸಪ್ತಕಪಾಲಂ ವೈಶ್ವದೇವಮಾಮಿಕ್ಷಾಂ ದ್ಯಾವಾಪೃಥಿವ್ಯಮೇಕಕಪಾಲಮ್' ಎಂಬ ಶ್ರುತಿಯು ಹೇಳುತ್ತಿದೆ. ೧) ಆಗ್ನೇಯ ಅಷ್ಟಾಕಪಾಲಯಾಗ ೨) ಸೌಮ್ಯಚರುಯಾಗ ೩) ಸಾವಿತ್ರದ್ವಾದಶಕಪಾಲಯಾಗ ೪) ಸಾರಸ್ವತಚರುಯಾಗ ೫) ಪೌಷ್ಣಚರುಯಾಗ ೬) ಮಾರುತ ಸಪ್ತಕಪಾಲಯಾಗ ೭) ವೈಶ್ವದೇವಮಾಮಿಕ್ಷಾಯಾಗ ೮) ದ್ಯಾವಾಪೃಥಿವ್ಯ ಏಕಕಪಾಲಯಾಗ, ಎಂದು. ಈ ಶ್ರುತಿಯ ಹತ್ತಿರದಲ್ಲೇ 'ವೈಶ್ವದೇವೇನ ಯಜೇತ' ಎಂಬ ವಾಕ್ಯ ಶ್ರುತವಾಗಿದೆ.

'ವೈಶ್ವದೇವೇನ ಯಜೇತ' ಎಂಬ ಈ ವಾಕ್ಯದಲ್ಲಿ 'ಯಜೇತ' ಎಂದು ಹಿಂದೆ ಪ್ರಕೃತವಾದ ಎಂಟು ಯಾಗಗಳನ್ನು ಅನುವಾದ ಮಾಡಲಾಗಿದೆ. ಅವುಗಳಲ್ಲಿ 'ವೈಶ್ವದೇವೇನ' ಎಂದು ವಿಶ್ವೇದೇವತಾ ಎಂಬ ಗುಣವನ್ನು ವಿಧಿಸುತ್ತಿದೆಯೋ? ಅಥವಾ ಎಂಟು ಯಾಗಗಳಲ್ಲಿ ವೈಶ್ವದೇವ ಎಂಬ ನಾಮಧೇಯವನ್ನು ವಿಧಿಸುತ್ತಿದೆಯೋ? ಎಂದು ಸಂದೇಹ.

ಪೂರ್ವಪಕ್ಷ :- ನಾಮಧೇಯವು ಸ್ವಯಂ ವಿಧಾಯಕವಲ್ಲ. ಮತ್ತು ಬೇರೆ ಯಾವುದೂ ವಿಧೇಯವಾಗದ ಕಾರಣ ಈ ವಾಕ್ಯವು ವ್ಯರ್ಥವಾಗುತ್ತಿತ್ತು. ಆದ್ದರಿಂದ ವೈಶ್ವದೇವ ಎಂಬ ನಾಮಧೇಯವು ವಿಧೇಯವಾದ ಯಾಗದಲ್ಲಿ ವಿಶೇಷಣವಾಗುತ್ತದೆ. ಹಿಂದೆ ಪ್ರಾಪ್ತವಾದ ಯಾಗಗಳಲ್ಲಿಯೇ ವಿಶ್ವೇದೇವತೆಗಳನ್ನು ವಿಧಿಸುತ್ತಿದೆ.

ಯಾಗವನ್ನು ವಿಧಾನ ಮಾಡುವ ವಾಕ್ಯದಿಂದಲೇ ಯಾವ ದೇವತೆಗಳು ವಿಹಿತರಾಗಿದ್ದರೋ, ಅವರು ಉತ್ಪತ್ತಿವಿಶಿಷ್ಟದೇವತೆಗಳು. ಇವರಿಗೆ ಪ್ರಾಬಲ್ಯ ಹೇಳಬೇಕು. ಆದರೂ ಕೂಡ 'ಆನರ್ಥಕ್ಯ ಪ್ರತಿಹತಾನಾಂ ವಿಪರೀತಂ ಬಲಾಬಲಂ' ಎಂಬ ನ್ಯಾಯ ಹೇಳುವಂತೆ 'ವೈಶ್ವದೇವೇನ ಯಜೇತ' ಎಂಬ ವಾಕ್ಯಕ್ಕೆ ವೈಯರ್ಥ್ಯದೋಷ ಬರುತ್ತದೆ. ಆದ್ದರಿಂದ ಉತ್ಪತ್ತಿವಿಶಿಷ್ಟ ಅಗ್ನ್ಯಾದಿದೇವತೆಗಳನ್ನು ಮತ್ತು ವಿಶ್ವೇದೇವತೆಗಳನ್ನು ಈ ಮಂತ್ರವು ವಿಕಲ್ಪವಾಗಿ ವಿಧಿಸುತ್ತಿದೆಯೆಂದು ಒಪ್ಪಿಕೊಳ್ಳಬೇಕು. ಹಿಂದೆ ವಿಹಿತವಾದ ಎಂಟು ಯಾಗಗಳನ್ನು ಅನುವಾದ ಮಾಡಿ 'ವೈಶ್ವದೇವೇನ ಯಜೇತ' ಎಂದು ಗುಣವನ್ನು ವಿಧಾನ ಮಾಡುತ್ತಿದೆಯೆಂದು ಪೂರ್ವಪಕ್ಷ.

ಸಿದ್ಧಾಂತ :- 'ವೈಶ್ವದೇವೇನ ಯಜೇತ' ಎಂಬ ವಾಕ್ಯವು ಹಿಂದೆ ಪ್ರಕೃತವಾದ ಎಂಟು ಯಾಗಗಳನ್ನು ಅನುವಾದ ಮಾಡಿ ಆ ಎಲ್ಲಾ ಯಾಗಗಳ ಸಮೂಹಕ್ಕೆ 'ವೈಶ್ವದೇವ' ಎಂಬ ಹೆಸರನ್ನಿಡುತ್ತಿದೆ. ಎಂಟು ಯಾಗಗಳ ಮಧ್ಯ ವೈಶ್ವದೇವಯಾಗ ಮತ್ತು ಆಗ್ನೇಯ ಮೊದಲಾದ ಬೇರೆ ಯಾಗಗಳೂ ಸೇರಿವೆ. ಆದರೂ ಈ ಎಲ್ಲಾ ಗುಂಪುಗಳಿಗೆ ವೈಶ್ವದೇವ ಎಂದು ಕರೆಯಬಹುದು. ಕೊಡೆ ಹಿಡಿದವರ ಮಧ್ಯದಲ್ಲಿ

---

विश्वैर्देवैरग्न्यादेरविकल्प इति व्यक्तम् ।

इत्येकादशं वैश्वदेवादिशब्दानां यागनामधेयताधिकरणम् (सूत्रे १३-१६)

ಪರಿಪೂರ್ಣಚಂದ್ರಿಕಾ

ಕೆಲವರು ಕೊಡೆ ಹಿಡಿಯದವರೂ ಇರುತ್ತಾರೆ. ಆದರೂ 'ಛತ್ರಿಣೋ ಯಾಂತಿ' ಕೊಡೆ ಹಿಡಿದವರು ಹೋಗುತ್ತಿದ್ದಾರೆಂದು ಹೇಗೆ ಹೇಳುತ್ತೇವೋ ಅದರಂತೆ ಸಮೂಹದಲ್ಲಿ ಆಗ್ನೇಯಾದಿ ಯಾಗಗಳಿದ್ದರೂ ವೈಶ್ವದೇವವೆಂದು ಕರೆಯಬಹುದು. ಹೀಗೆ ಎಂಟು ಯಾಗಗಳ ಗುಂಪನ್ನು ವೈಶ್ವದೇವ ಎಂದು ಕರೆಯಬೇಕು. ಇದರಿಂದ ಮತ್ತೊಂದು ಪ್ರಯೋಜನವೂ ಲಭ್ಯವಾಗುತ್ತದೆ. 'ಪ್ರಾಚೀನಪ್ರವಣೇ ವೈಶ್ವದೇವೇನ ಯಜೇತ' ಇತ್ಯಾದಿ ವಿಧಿಗಳು ಇಳಿಜಾರಾದ ಸ್ಥಳದಲ್ಲಿ ವೈಶ್ವದೇವಯಾಗ ಮಾಡಬೇಕೆಂದು ಹೇಳುತ್ತಿವೆ. ಒಂದು ವೇಳೆ ವೈಶ್ವದೇವಶಬ್ದದಿಂದ ಎಂಟು ಯಾಗಗಳ ಸಮೂಹವನ್ನು ವಿವಕ್ಷಿಸದಿದ್ದರೆ ಕೇವಲ ಎರಡನೆಯದ್ದಾದ ವೈಶ್ವದೇವಾಮಿಕ್ಷಾಯಾಗಕ್ಕೆ ಮಾತ್ರ ಪ್ರಾಚೀನಪ್ರಮಾಣದೇಶಸಂಬಂಧವೆಂದು ಸಿದ್ಧವಾಗುತ್ತಿತ್ತು. ಉಳಿದ ಏಳು ಯಾಗಗಳಿಗೆ ಸಿದ್ಧವಾಗುತ್ತಿರಲಿಲ್ಲ. ಆದ್ದರಿಂದ ವೈಶ್ವದೇವಯಾಗ ಮಾಡಬೇಕೆಂಬ ವಾಕ್ಯವು ಯಾಗಸಮೂಹದಲ್ಲಿ ವೈಶ್ವದೇವ ಎಂಬ ನಾಮಧೇಯವನ್ನು ವಿಧಿಸುತ್ತಿದೆಯೆಂದು ಸಿದ್ಧಾಂತ.

ಇಲ್ಲಿ ಒಂದು ಅರ್ಥದಲ್ಲಿ ಯೌಗಿಕವಾದ ಶಬ್ದ ಬೇರೆ ಅರ್ಥಗಳಲ್ಲಿ ಲಾಕ್ಷಣಿಕವಾಗಿದೆ. ಇದು ಸರಿಯಲ್ಲವೆಂದು ಆಕ್ಷೇಪಕಾರರ ಅಭಿಪ್ರಾಯ. ವಸ್ತುತಃ 'ಯದ್ ವಿಶ್ವೇದೇವಾಃ ಸಮಯಜಂತ ತದ್ ವೈಶ್ವದೇವಸ್ಯ ವೈಶ್ವದೇವತ್ವಮ್' ಎಂಬ ವಾಕ್ಯಶೇಷದಲ್ಲಿ 'ವಿಶ್ವೇದೇವತೆಗಳು ಮಾಡಿದ ಯಾಗ' ಎಂಬರ್ಥದಲ್ಲಿ ವೈಶ್ವದೇವಶಬ್ದವು ಯೌಗಿಕವೆಂದೂ ಹೇಳಿದೆ. ಆದರೆ ಲಾಕ್ಷಣಿಕ ಎಂಬ ಪಕ್ಷವನ್ನು ಹೇಳಿರುವುದರಿಂದ ಹೀಗೆ ಹೇಳಲಾಗಿದೆ.

ಅಥವಾ ಪೂರ್ವಮೀಮಾಂಸೆಯ ದೇವತಾಧಿಕರಣದಲ್ಲಿ ಯಾಗಾದಿಕರ್ಮದಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಹೇಳಿದ್ದಾರೆ. ಇದಕ್ಕೆ ನೀವು ಹೇಳುತ್ತಿರುವ ಅರ್ಥವಾದದಿಂದ ಲಭಿಸುವ ಯೌಗಿಕತ್ವಪಕ್ಷವು ವಿರುದ್ಧವಾಗಿದೆ. ಆದ್ದರಿಂದ ವೈಶ್ವದೇವಾಮೀಕ್ಷಾಯಾಗವಿಧಿಯ ಬಲದಿಂದ ಲಕ್ಷಣಾ ಒಪ್ಪುವುದೇ ಹೆಚ್ಚು ಸಮಂಜಸ. ಸಿದ್ಧಾಂತಿಯ ಈ ಅಭಿಪ್ರಾಯವನ್ನು ಗಮನಿಸಬೇಕು.

ಲಕ್ಷಣಾಪಕ್ಷ ಮತ್ತು ವಾಕ್ಯಶೇಷಲಭ್ಯ ಯೌಗಿಕಾರ್ಥಪಕ್ಷ ಎರಡನ್ನೂ ಇಟ್ಟುಕೊಂಡು ಸಿದ್ಧಾಂತ ಮಾಡಲಾಗಿದೆ. ಈ ಅಂಶದಲ್ಲಿ ಇದನ್ನು ದೃಷ್ಟಾಂತವನ್ನಾಗಿ ಹೇಳಿದ್ದಾರೆ.




ಜಿಜ್ಞಾಸಾ ಶಬ್ದಾರ್ಥ ಅದ್ವೈತ ಮತದಲ್ಲಿ

ಪಂಚಪಾದಿಕಾ ವಿವರಣೆಗಳಲ್ಲಿ ರೂಢಿಯನ್ನು ನಿರಾಕರಿಸಿದರೂ ಭಂಗ್ಯಂತರದಿಂದ ಅದನ್ನೇ ಒಪ್ಪಿರುವಂತೆ ಕಾಣುತ್ತದೆ. ಏಕೆಂದರೆ 'ವಿಚಾರದಿಂದ ಲಭ್ಯವಾಗಬಲ್ಲ ಜ್ಞಾನದ ಇಚ್ಛೆಯು 'ಜಿಜ್ಞಾಸಾ' ಶಬ್ದದಿಂದ ಪ್ರತೀತವಾಗುತ್ತದೆ. ಕೇವಲ ಉಪದೇಶದಿಂದ ಲಭಿಸುವ ಜ್ಞಾನದ ಇಚ್ಛೆಯಲ್ಲ' ಎಂದು ಅವರು ಹೇಳುತ್ತಾರೆ. ಇಲ್ಲಿ ಜ್ಞಾನೇಚ್ಛೆ ಪ್ರತೀತವಾಗುವಾಗಲೇ ಆ ಜ್ಞಾನ 'ವಿಚಾರಲಭ್ಯ' ಎಂದು ವಿಚಾರದ ಪ್ರತೀತಿಯೂ ಮೊದಲಿಗೆ

ಆಗುತ್ತಿದೆ ಎಂದು ಒಪ್ಪಿದಂತಾಯಿತು. ಹೀಗೆ ಮೊದಲಿಗೇ ವಿಚಾರದ ಪ್ರತೀತಿ ಇರುವುದಾದರೆ ರೂಢಿಯನ್ನೇ ಏಕೆ ಒಪ್ಪಬಾರದು? ರೂಢಿಯನ್ನು ಒಪ್ಪಿದರೆ 'ತದ್ ವಿಜಿಜ್ಞಾಸಸ್ವ' 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಶ್ರುತಿಸೂತ್ರಗಳಲ್ಲಿ ಲಕ್ಷಣಾವೃತ್ತಿಯನ್ನು ತಪ್ಪಿಸಬಹುದು. 'ವಿಧಿವಾಕ್ಯದಲ್ಲಿ ಲಕ್ಷಣಾವೃತ್ತಿ ಕೂಡದು' ಎಂಬ ನಿಯಮವನ್ನೂ ಪಾಲಿಸಿದಂತಾಗುವುದು. ಲಕ್ಷಣಾವೃತ್ತಿ ಎಂದೇ ಆಗ್ರಹಿಸುವುದಾದರೆ ಮಂಡಪ ಪ್ರವೀಣ ಕುಶಲ ವಾಜಿ ಶಬ್ದಗಳನ್ನೂ ಲಾಕ್ಷಣಿಕವೆನ್ನುತ್ತ ರೂಢಿಯನ್ನು ಅಲ್ಲಗಳೆಯಬಹುದು. ವೇದದಲ್ಲಿಯೂ 'ಅಪರಿಮಿತ ಗೋವುಗಳನ್ನು ದಾನ ಮಾಡಬೇಕು' ಎಂಬ ವಾಕ್ಯದಲ್ಲಿ 'ಅಪರಿಮಿತ'ವೆಂದರೆ 'ಸಂಖ್ಯಾಮಿತಿ ಇಲ್ಲದ' ಎಂಬ ಅವಯವಾರ್ಥವಿಟ್ಟುಕೊಳ್ಳದೆ, ನೇರವಾಗಿ ಪ್ರತೀತವಾಗುವ 'ಬಹಳ' ಎಂಬ ರೂಢ್ಯರ್ಥವನ್ನೆ ಇಟ್ಟುಕೊಳ್ಳಲಾಗಿದೆ. 'ವೈಶ್ವದೇವೇನ ಯಜೇತ' ಎಂಬಲ್ಲಿ 'ವೈಶ್ವದೇವ' ಶಬ್ದಕ್ಕೆ ವೈಶ್ವದೇವ ಮತ್ತಿತರ ಯಾಗಗಳ ಸಮೂಹ ಎಂಬ ಅರ್ಥದಲ್ಲಿ ರೂಢಿಯನ್ನು ಇಟ್ಟುಕೊಳ್ಳದೆ ಲಕ್ಷಣಾವೃತ್ತಿಯನ್ನಿಟ್ಟುಕೊಂಡುದು, ಅಲ್ಲಿ ವೈಶ್ವದೇವ' ಎಂದಾಗ ಆ ಹೆಸರಿನ ಆಮಿಕ್ಷಾಯಾಗವೆಂಬ ಮುಖ್ಯಾರ್ಥವೆ ಮೊದಲಿಗೆ ಹೊಳೆಯುವುದರಿಂದ, ಅನಂತರ ಹೊಳೆಯುವ ಯಾಗ ಸಮೂಹದಲ್ಲಿ ಲಕ್ಷಣಾವೃತ್ತಿ ಸಹಜವಾಗಿರುವುದರಿಂದ ಎನ್ನಬೇಕು. ಪ್ರಕೃತದಲ್ಲಿ 'ಜಿಜ್ಞಾಸೆ' ಎಂದಾಗ 'ಜ್ಞಾನೇಚ್ಛೆ ಎಂಬ ಮುಖ್ಯಾರ್ಥ ಹೊಳೆದ ಬಳಿಕವೆ ವಿಚಾರವೆಂಬ ಅಮುಖ್ಯಾರ್ಥ ಪ್ರತೀತಿ' ಎಂಬುದಿಲ್ಲ ತಾನೆ?

ಅದ್ವೈತಮತದಲ್ಲಿಯೂ ಜಿಜ್ಞಾಸಾಶಬ್ದಕ್ಕೆ ಜ್ಞಾನೇಚ್ಛೆ ಎಂಬ ಮುಖ್ಯಾರ್ಥವಿಟ್ಟುಕೊಳ್ಳಲಾಗದು. ಏಕೆಂದರೆ ಜ್ಞಾನದಲ್ಲಿ ಇಚ್ಛೆ ಅಸಂಭವ ಎಂದು ಅವರೇ ಹೇಳುತ್ತಾರೆ. ಅಪರೋಕ್ಷಜ್ಞಾನದ ಇಚ್ಛೆ ಎಂಬ ಅರ್ಥದಲ್ಲಿ ರೂಢಿಯನ್ನೇ ಒಪ್ಪಬೇಕಾಗುತ್ತದೆ. ಏಕೆಂದರೆ ಆ ಅರ್ಥವೇ ಮೊದಲಿಗೆ ಹೊಳೆಯುತ್ತದೆ. ಸಾಮಾನ್ಯವಾಗಿ ಜ್ಞಾನೇಚ್ಛೆಯಲ್ಲ ಎಂದು ಅವರು ಹೇಳಬೇಕು. ಹೀಗೆ ಎರಡು ಮತದಲ್ಲಿಯೂ ರೂಢಿ ಅವಶ್ಯಕವೆಂದ ಮೇಲೆ ವಿಚಾರದಲ್ಲಿ ರೂಢಿ; ಅಪರೋಕ್ಷ ಜ್ಞಾನೇಚ್ಛೆಯಲ್ಲಿ ಲಕ್ಷಣಾ ಎಂದಾಗಲಿ.

• • • • •

## ಜಿಜ್ಞಾಸಾ ಎಂದರೆ ಕೇವಲ 'ಇಚ್ಛೆ'ಯೇ?
## (ರಾಮಾನುಜಮತ ವಿಮರ್ಶೆ)

### तात्पर्यचन्द्रिका –

**केचित्तु – जिज्ञासाशब्दो रूढ्या लक्षणया वा विचारं नार्पयति । नाप्यर्थादाक्षिपति । किंत्विच्छार्थ एव । तथाऽपि इच्छायाः विषयवैलक्षण्याधीनत्वेन अविधेयत्वादिच्छां प्रति कर्मीभूतमिष्यमाणं विचारात्मकं तर्करूपं ज्ञानं विधेयम्[१] ।**

---

१ श्रुतप्रकाशः –
ज्ञातुमिच्छा जिज्ञासा । इच्छाया इष्यमाणप्रधानत्वादिष्यमाणं ज्ञानमिह विधीयते । मीमांसापूर्वभागज्ञातस्य कर्मणोऽल्पास्थिरफलत्वात् उपरितनभागावसेयस्य ब्रह्मज्ञानस्यान्ताक्षयफलत्वाच्च पूर्ववृत्तात् कर्मज्ञानादनन्तरं तत एव हेतोर्ब्रह्म ज्ञातव्यमित्युक्तं भवति । तदाह वृत्तिकारः- ''वृत्तात् कर्माधिगमादनन्तरं ब्रह्मविविदिषा'' इति । वक्ष्यति

**यद्यपि जिज्ञासा कर्तव्येति प्रत्ययार्थभूतेच्छायाः कर्तव्यत्वं भाति, नतु ज्ञानस्य । तथाऽपि "स्नात्वा भुञ्जीत" "प्राङ्मुखो भुञ्जीत" इत्यत्र भुजिधातोः विधिप्रत्ययान्तत्वेन भोजनस्य कर्तव्यत्वे प्रतीतेऽपि तस्य रागतः प्राप्तत्वेन, अप्राप्तयोः स्नानप्राङ्मुखत्वयोः विधेस्तात्पर्यम् । नचैतावता भुजिधातोः स्नाने रूढिः लक्षणा वा आक्षेपकता वाऽस्ति । एवमिहापीच्छायाः अविधेयत्वाद् विचारात्मकं ज्ञानं विधेयम्, नतु जिज्ञासाशब्दस्य विचारे रूढ्यादिरित्याहुः ।**

ಅನುವಾದ - ರಾಮಾನುಜರು ಹೀಗೆ ಹೇಳುತ್ತಾರೆ - ಜಿಜ್ಞಾಸಾಶಬ್ದವು ರೂಢಿಯಿಂದ ವಿಚಾರವನ್ನು ಹೇಳುತ್ತದೆಂಬ ದ್ವೈತಮತವೂ ಸರಿಯಿಲ್ಲ. ಲಕ್ಷಣಾದಿಂದ ವಿಚಾರವನ್ನು ಹೇಳುತ್ತದೆಂಬ ವಿವರಣಮತವೂ ಸರಿಯಿಲ್ಲ. ಅರ್ಥಾಪತ್ತಿಯಿಂದ ವಿಚಾರವು ತಿಳಿಯುತ್ತದೆಂಬ ಭಾಮತೀಮತವೂ ಸರಿಯಿಲ್ಲ. ಕೇವಲ 'ಇಚ್ಛೆ' ಎಂಬರ್ಥವನ್ನೇ ಜಿಜ್ಞಾಸಾ ಶಬ್ದವು ಹೇಳುತ್ತದೆ.

ಆದರೆ ಇಚ್ಛೆಯನ್ನು ವಿಧಾನ ಮಾಡಲಾಗದು. ವಿಷಯದಲ್ಲಿ ವೈಶಿಷ್ಟ್ಯವಿದ್ದರೆ ಮಾತ್ರ ಇಚ್ಛೆಯು ಬರುತ್ತದೆ. ಆದ್ದರಿಂದ 'ಜಿಜ್ಞಾಸೆಯು ಕರ್ತವ್ಯ' ಎಂಬಲ್ಲಿ ವಿಚಾರವು ಇಚ್ಛೆಗೆ ಕರ್ಮವಾಗಿದೆ. ಈ ವಿಚಾರವು ತರ್ಕರೂಪವಾದ ಜ್ಞಾನವಾಗಿದೆ. ಇದನ್ನು ವಿಧಾನ ಮಾಡಬಹುದು.

ಪ್ರಶ್ನೆ : - 'ಜಿಜ್ಞಾಸೆಯು ಕರ್ತವ್ಯ' ಎಂದಾಗ ಸನ್‌ಪ್ರತ್ಯಯಾರ್ಥವಾದ ಇಚ್ಛೆಯು ಕರ್ತವ್ಯವೆಂದೇ ನಮಗೆ ತಿಳಿಯುತ್ತದೆ ಜ್ಞಾನವು ಕರ್ತವ್ಯವೆಂದು ತಿಳಿಯುವುದಿಲ್ಲ.

ಉತ್ತರ :- 'ಸ್ನಾತ್ವಾ ಭುಂಜೀತ' ಸ್ನಾನ ಮಾಡಿ ಊಟ ಮಾಡಬೇಕು 'ಪ್ರಾಙ್ಮುಖೋ ಭುಂಜೀತ' ಪೂರ್ವಾಭಿಮುಖವಾಗಿ ಕುಳಿತು ಊಟ ಮಾಡಬೇಕು ಎಂಬಲ್ಲಿ ಭುಜಿಧಾತುವು ವಿಧಿಪ್ರತ್ಯಯಾಂತವಾಗಿದೆ. ಆದ್ದರಿಂದ ಭೋಜನವನ್ನೇ ವಿಧಾನ ಮಾಡುತ್ತಿದೆಯೆಂದು ತೋರುತ್ತದೆ. ಆದರೆ ಭೋಜನದಲ್ಲಿ ಆಸೆಯಿಂದಲೇ ಪ್ರವೃತ್ತಿ ಉಂಟಾಗುತ್ತದೆ. ಅದನ್ನು ವಿಧಾನ ಮಾಡಬೇಕಾಗಿಲ್ಲ. ಆದರೆ ಸ್ನಾನ ಹಾಗು ಪೂರ್ವಾಭಿಮುಖವಾಗಿ ಕುಳಿತುಕೊಳ್ಳುವಿಕೆಗಳು ರಾಗದಿಂದ ಪ್ರಾಪ್ತವಲ್ಲದ ಕಾರಣ ಅವುಗಳಲ್ಲಿ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ. ಪ್ರವೃತ್ತಿ ಉಂಟಾಗಲು 'ಸ್ನಾತ್ವಾ ಭುಂಜೀತ' ಇತ್ಯಾದಿ ವಿಧಿವಾಕ್ಯಗಳು ಹೊರಟವೆ. ಹೀಗೆ ವಿಧಿವಾಕ್ಯಗಳ ತಾತ್ಪರ್ಯ ಸ್ನಾನ ಮತ್ತು ಪ್ರಾಙ್‌ಮುಖತ್ವಗಳಲ್ಲೇ ಹೊರತು ಭೋಜನದಲ್ಲಿ ಅಲ್ಲ. ಹೀಗೆಂದ ಮಾತ್ರದಿಂದ ಭುಜಿಧಾತುವಿಗೆ ಸ್ನಾನ ಪ್ರಾಙ್‌ಮುಖತ್ವಗಳಲ್ಲಿ ರೂಢಿಯನ್ನಾಗಲೀ ಲಕ್ಷಣಾವನ್ನಾಗಲೀ ಅರ್ಥಾಪತ್ತಿಯನ್ನಾಗಲೀ ಯಾರೂ ಅಂಗೀಕರಿಸುವುದಿಲ್ಲ.

---

च कर्मब्रह्ममीमांसयोरैकशास्त्र्यम्, "संहितमेतच्छारीरकं जैमिनीयेन षोडशलक्षणेनेति शास्त्रैकत्वसिद्धिः" इति ।
अतः प्रतिपिपादयिषितार्थभेदेन षट्कभेदवत् अध्यायभेदवच्च पूर्वोत्तरमीमांसयोर्भेदः ।

ಅದರಂತೆ ಪ್ರಕೃತದಲ್ಲಿಯೂ ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ರೂಢಿ ಮೊದಲಾದವುಗಳನ್ನು ಒಪ್ಪಬಾರದು. ಇಚ್ಛೆಯು ವಿಧೇಯವಲ್ಲದ ಕಾರಣ ವಿಚಾರರೂಪವಾದ ಜ್ಞಾನವೇ ವಿಧೇಯವಾಗಿದೆ. ಫಲರೂಪವಾದ ಜ್ಞಾನವನ್ನು ಇಟ್ಟುಕೊಳ್ಳಬಾರದು. ತರ್ಕರೂಪವಾದ ಜ್ಞಾನವನ್ನು ಇಟ್ಟುಕೊಳ್ಳಬೇಕೆಂದು ಅಭಿಪ್ರಾಯ.

**प्रकाशः** – **'रूढ्या'** इति सिद्धान्तदिशा । **'लक्षणया'** इति विवरणरीत्या । **नापीति** ।। भामतीरीत्येति भावः । **विचारात्मकमिति** ।। ''विचारात्मकं ज्ञानमेव तात्पर्यतो विधीयते'' इति । ''अत्र तर्करूपं ज्ञानं विधेयं, तर्कानुगृहीतवाक्यजन्यप्रमितिरूपज्ञानं तु फलत्वान्न विधेयम्'' इति च श्रुतप्रकाशोक्तेरिति भावः । श्रुतप्रकाशोक्तशङ्कासमाधी अनुवदति[1] ।। **यद्यपीति** ।। **'तस्य'** भोजनस्य ।। **अप्राप्तयोरिति** ।। नियमेनाप्राप्तयोरित्यर्थः ।। **स्नानेति** ।। स्नात्वैव भुञ्जीत प्राङ्मुख एव भुञ्जीतेति स्नानप्राङ्मुखत्वयोर्नियम इत्यर्थः । उक्तं च – ''स्नानप्राङ्मुखत्वनियमयोरेव विधेस्तात्पर्यम्'' इति ।

**गुरुराजीय** – रामानुजमतं दूषयितुमनुवदति – **केचित्त्विति** ।। यद्यप्यत्र भामतीमतदूषणानन्तरं केषाञ्चित्पक्षो दूषणीयः । तथैव नियतत्वात् । तथापीच्छाया अविधेयत्वादिति टीकानिवर्त्यक्रमानुसारेणैवमुक्तमिति ध्येयम् । नन्विच्छाया अविधेयत्वात् तदर्थत्वे जिज्ञासापदवैयर्थ्यमित्यत आह – **तथापीति** ।। ज्ञानमात्रस्य विधेयत्वासम्भवादाह – **तर्करूपमिति** ।। तर्करूपमित्युत्तरत्र दूषणार्थमनूदितम् । विचारात्मकमित्यनेनैवाविधेयत्वशङ्कापरिहारात् ।।

ವಿವರಣೆ - ಜಿಜ್ಞಾಸಾಶಬ್ದಾರ್ಥವು ರಾಮಾನುಜಮತದಲ್ಲಿ ಬಹಳ ವಿಭಿನ್ನವಾಗಿದೆ. 'ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎಂದರೆ ತರ್ಕರೂಪವಾದ ವಿಚಾರ ಮಾಡಬೇಕೆಂದರ್ಥ.

ನಮಗೂ ರಾಮಾನುಜರಿಗೂ ಇಷ್ಟು ವ್ಯತ್ಯಾಸ - ಜಿಜ್ಞಾಸಾ ಮಾಡಬೇಕೆಂಬ ಶಬ್ದಕ್ಕೆ ವಿಚಾರ ಮಾಡಬೇಕೆಂದು ನಾವು ಹೇಳುತ್ತೇವೆ. ಅವರು ಜಿಜ್ಞಾಸಾಶಬ್ದಕ್ಕೆ ಇಚ್ಛೆಯೆಂಬರ್ಥವನ್ನು ಒಪ್ಪಿ ತರ್ಕರೂಪವಾದ ವಿಚಾರ ಮಾಡಬೇಕೆಂದು ಹೇಳುತ್ತಿದ್ದಾರೆ. ಕಾರಣ ಹೀಗಿದೆ - ಇಚ್ಛೆಯನ್ನು ವಿಧಾನ ಮಾಡಲಾಗದು. 'ಸ್ನಾತ್ವಾ ಭುಂಜೀತ' ಎಂಬಲ್ಲಿ ಭೋಜನವು ರಾಗತಃ ಪ್ರಾಪ್ತವಾದ್ದರಿಂದ ಸ್ನಾನವಷ್ಟೇ

---

१ श्रुतप्रकाशः - ब्रह्मजिज्ञासेति सन्नन्तनिर्देशो विचारस्य रागप्राप्तत्वज्ञापनार्थः । एवमेव, 'धर्मजिज्ञासा' इत्यत्रापि । अत्र तर्करूपं ज्ञानं विधेयम्, तर्कानुगृहीतवाक्यजन्यप्रमिति रूपज्ञानं तु फलत्वन्न विधेयम् ।

ಹೇಗೆ ವಿಧೇಯವೋ ಅದರಂತೆ ಇಲ್ಲಿಯೂ 'ವಿಚಾರಃ ಕರ್ತವ್ಯಃ' ಎಂದೇ ಅಭಿಪ್ರಾಯ. ರೂಢಿ, ಲಕ್ಷಣಾ ಯಾವುದೂ ಬೇಡ. ಶ್ರುತಪ್ರಕಾಶದಲ್ಲಿ ಇದನ್ನೇ ಹೇಳಿದ್ದಾರೆ - ತರ್ಕದ ಸಹಾಯದಿಂದ ಹುಟ್ಟುವ ಪ್ರಮಿತಿರೂಪವಾದ ಜ್ಞಾನವು ಫಲರೂಪವಾದ್ದರಿಂದ ವಿಧಾನ ಮಾಡಲು ಯೋಗ್ಯವಲ್ಲ. ಆದರೆ ಕಾರಣವಾದ ತರ್ಕರೂಪಜ್ಞಾನವು ವಿಧೇಯವಾಗಿದೆ.

**तात्पर्यचन्द्रिका –**

**तन्न । स्नानादिकं हि प्राधान्येनाप्रतीतत्वाद् विधातुं युक्तम् । इह तु ज्ञानमिच्छां प्रति कर्मतया प्राधान्येन प्रतीतमिति कथं तद्विरोधिनी विधेयता । नहि स्वर्गकामपदेनेच्छाविषयतया प्रतीतः स्वर्गो विधेयः । किंच – ''प्राङ्मुखो भुञ्जीत'' इत्यादौ विधेयप्राङ्मुखत्वादेराश्रयमर्पयितुं भुजिधातुः सार्थकः । प्रकृते तु विधेयज्ञानं प्रतीच्छाया आश्रयत्वाद्यभावात् ''तद् विजिज्ञासस्व'' इति श्रुतौ सूत्रे च सन्प्रत्ययो व्यर्थः । किञ्च – जानातेः प्रतीतौ स्वारस्यात्, सन्वाच्याया इच्छायाश्च प्रमितिरूपफलविषयत्वस्य स्वरसत्वात्, न सन्नन्तजानातेस्तर्करूपज्ञानपरता । किंच – त्वत्पक्षे विचारकर्तव्यताया मानान्तरप्राप्तत्वात् ''श्रोतव्यः'' इत्यादिवाक्यवत् सूत्रमपि अनुवादकमेव स्यादिति, कथं विधायकतोक्तिः । कथंचिद्प्राप्तिसम्पादने तु ''श्रोतव्यः'' इत्यादिरपि विधिः स्यात् । तस्मात् जिज्ञासाशब्दस्य इच्छार्थत्वे विध्यसम्भवात् तद्विध्यर्थं स रूढ्या विचारपरः । तदेतदाह ।। नच श्रवणादेरसन्वाच्यतेति ।।**

ಅನುವಾದ - ರಾಮಾನುಜರ ಈ ವಾದವು ಸರಿಯಿಲ್ಲ - 'ಸ್ನಾತ್ವಾ ಭುಂಜೀತ' ಎಂಬ ದೃಷ್ಟಾಂತವೇ ವಿಷಮವಾಗಿದೆ. ಕ್ರಿಯೆಯಲ್ಲಿ ಯಾವುದು ಪ್ರಧಾನವಾಗಿ ಪ್ರತೀತವಾಗಿರುವುದಿಲ್ಲವೋ ಅದನ್ನು ಮಾತ್ರ ವಿಧಾನ ಮಾಡಬೇಕು. 'ಸ್ನಾತ್ವಾ ಭುಂಜೀತ' ಎಂಬಲ್ಲಿ ಸ್ನಾನವು ಪ್ರಧಾನವಾಗಿ ತೋರಿಲ್ಲ. ಭೋಜನಕ್ಕೋಸ್ಕರ ಸ್ನಾನವಾದ್ದರಿಂದ ಭೋಜನವೇ ಪ್ರಧಾನವಾಗಿದೆ, ಆದರೆ 'ಜಿಜ್ಞಾಸಾ ಕರ್ತವ್ಯಾ' ಎಂಬಲ್ಲಿ ಜ್ಞಾನವು ಪ್ರಧಾನವಾಗಿಯೇ ಕ್ರಿಯೆಯಲ್ಲಿ ತೋರುತ್ತಿದೆ. ಯಾವುದನ್ನು ಅಪೇಕ್ಷಿಸುತ್ತೇವೋ ಅದೇ ಪ್ರಧಾನವಾಗಿರುತ್ತದೆ. ಇಲ್ಲಿ ಜ್ಞಾನವು ಅಪೇಕ್ಷ್ಯಮಾಣವಾದ್ದರಿಂದ ಇಚ್ಛೆಯಲ್ಲಿ ಕರ್ಮವಾಗಿ ಪ್ರಧಾನತ್ವೇನ ತೋರುತ್ತಿದೆ. ಆದ್ದರಿಂದ ವಿಧಾನ ಮಾಡಲು ಬರುವುದಿಲ್ಲ. ಏಕೆಂದರೆ ಪ್ರಾಧಾನ್ಯ ಮತ್ತು ವಿಧೇಯತಾಗಳು ಪರಸ್ಪರವಿರುದ್ಧಗಳಾಗಿವೆ. ''ಯತ್ರ ಪ್ರಾಧಾನ್ಯಂ ನ ತತ್ರ ವಿಧೇಯತಾ'' ಎಂಬ ವ್ಯಾಪ್ತಿಗೆ ದೃಷ್ಟಾಂತ - ''ಸ್ವರ್ಗಕಾಮೋ ಜ್ಯೋತಿಷ್ಟೋಮೇನ ಯಜೇತ'' ಎಂಬಲ್ಲಿ ಸ್ವರ್ಗವು ಪ್ರಧಾನವಾಗಿದೆ.

ಯಾವುದನ್ನು ಅಪೇಕ್ಷಿಸುತ್ತೇವೋ ಅದು ಪ್ರಧಾನವಾದ್ದರಿಂದ ಯಾಗವು ಪ್ರಧಾನವಲ್ಲ. ಹೀಗೆ ಸ್ವರ್ಗಕಾಮಪದದಿಂದ ಇಚ್ಛಾವಿಷಯವಾಗಿ ಪ್ರತೀತವಾದ ಸ್ವರ್ಗವು ಪ್ರಧಾನವಾಗಿದೆ ವಿಧೇಯವಾಗಿಲ್ಲ. ಹಾಗೆಯೇ ಜ್ಞಾನವೂ ಪ್ರಧಾನವಾದ್ದರಿಂದ ವಿಧೇಯವಾಗುವುದಿಲ್ಲ.

ಮತ್ತು ''ಪ್ರಾಙ್ಮುಖೋ ಭುಂಜೀತ'' ಎಂಬಲ್ಲಿ ಪ್ರಾಙ್ಮುಖತ್ವವು ವಿಧೇಯವಾಗಿದೆ. ಆದರೆ ಯಾವ ಸಂದರ್ಭದಲ್ಲಿ ಪ್ರಾಙ್ಮುಖತ್ವವೆಂದು ಆಶ್ರಯವನ್ನು ಹೇಳಬೇಕು. ಆ ಆಶ್ರಯವನ್ನು ಸಮರ್ಪಣ ಮಾಡಲು 'ಭುಜಿ' ಧಾತುವು ಸಾರ್ಥಕವಾಗಿದೆ. ಅದರಂತೆ ಪ್ರಕೃತ ವಿಧೇಯವಾದ ಜ್ಞಾನಕ್ಕೆ ಇಚ್ಛೆಯನ್ನು ಆಶ್ರಯವೆಂದು ಹೇಳಲಾಗದು. ವಿಷಯವೆಂದೂ ಹೇಳಲಾಗದು. ಹೀಗಿರುವಾಗ ''ತದ್‌ವಿಜಿಜ್ಞಾಸಸ್ವ'' ಎಂಬ ಶ್ರುತಿಯಲ್ಲಿ ಮತ್ತು ಸೂತ್ರದಲ್ಲಿ ಸನ್ ಪ್ರತ್ಯಯವನ್ನು ಹೇಳಿದ್ದು ವ್ಯರ್ಥವೇ ಆಗಿದೆ.

**ಮತ್ತೊಂದು ದೋಷ** - ಪ್ರಮಿತಿ ಎನಿಸಿದ ಫಲರೂಪಜ್ಞಾನ, ಕರಣರೂಪಜ್ಞಾನವೆಂದು ಜ್ಞಾನವು ಎರಡುವಿಧ. ಇವುಗಳಲ್ಲಿ ಫಲರೂಪಜ್ಞಾನವೇ ಪ್ರಧಾನವಾಗಿದೆ. ಪ್ರಧಾನವಾದ ಈ ಫಲರೂಪಜ್ಞಾನವೇ ಜ್ಞಾಧಾತುವಿನಿಂದ ವಾಚ್ಯವಾಗಿದೆಯೆಂದು ಹೇಳುವುದೇ ಸ್ವರಸ. ಮತ್ತು ತರ್ಕರೂಪವಾದ ಸಾಧನಜ್ಞಾನವನ್ನು ಇಟ್ಟುಕೊಳ್ಳಲೂ ಬರುವುದಿಲ್ಲ. ಏಕೆಂದರೆ ಸನ್‌ಪ್ರತ್ಯಯದಿಂದ ವಾಚ್ಯವಾದ ಇಚ್ಛೆಯು ಫಲರೂಪವಾದ ಜ್ಞಾನವಿಷಯಕವಾಗಿಯೇ ಇರುತ್ತದೆ; ಹೊರತು ಸಾಧನರೂಪವಾದ ತರ್ಕಜ್ಞಾನವನ್ನು ಜ್ಞಾಧಾತುವಿನಿಂದ ವಿವಕ್ಷಿಸಬಾರದು.

**ಮತ್ತೊಂದು ದೋಷ** - ರಾಮಾನುಜಮತದಲ್ಲಿ ವಿಚಾರಕರ್ತವ್ಯತ್ವವನ್ನು ಮಾನಾಂತರಪ್ರಾಪ್ತವೆಂದು ಅಂಗೀಕರಿಸಿದ್ದಾರೆ. ಆದ್ದರಿಂದಲೇ ''ಆತ್ಮಾವಾಽರೇ ದ್ರಷ್ಟವ್ಯಃ ಶ್ರೋತವ್ಯಃ'' ಇತ್ಯಾದಿ ಶ್ರುತಿಯನ್ನು ಅನುವಾದಕವೆಂದು ಒಪ್ಪಿದ್ದಾರೆ. ಅದರಂತೆ ಈ ಸೂತ್ರವೂ ಕೂಡ ವಿಚಾರಕರ್ತವ್ಯವೆಂದು ಹೇಳುವುದಾದರೆ ಪ್ರಮಾಣಾಂತರಪ್ರಾಪ್ತವಾದ್ದರಿಂದ ಅನುವಾದಕವೆಂದು ಒಪ್ಪಿಕೊಂಡಂತಾಯಿತು. ವಿಧಿಯೆಂದು ಈಗ ಹೇಗೆ ಹೇಳುತ್ತೀರಿ? ಇನ್ನು ವಿಚಾರಕರ್ತವ್ಯತ್ವವನ್ನು ಕಥಂಚಿತ್ ಅಪ್ರಾಪ್ತ ಎಂದು ಹೇಳುತ್ತೇವೆಂದರೆ 'ಶ್ರೋತವ್ಯಃ' ಇತ್ಯಾದಿ ವಾಕ್ಯಗಳೂ ವಿಧಿಯೆಂದೇ ಆಗಲಿ ಅವುಗಳನ್ನು ಅನುವಾದಕವೆಂದು ಹೇಳಲಾಗದು.

ಆದ್ದರಿಂದ ಜಿಜ್ಞಾಸಾಶಬ್ದಕ್ಕೆ 'ಇಚ್ಛೆ' ಎಂಬರ್ಥವನ್ನು ಹೇಳಿದರೆ ವಿಧಿಯನ್ನು ಮಾಡಲಾಗದು. ವಿಧಿ ಮಾಡಬೇಕಾದರೆ ರೂಢಿಯಿಂದ ವಿಚಾರಪರವೆಂದೇ ಹೇಳಬೇಕು. ಇಷ್ಟೆಲ್ಲಾ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಟೀಕೆಯಲ್ಲಿ ''ನ ಚ ಶ್ರವಣಾದೇರಸನ್‌ವಾಚ್ಯತಾ'' ಎಂದು ಹೇಳಿದ್ದಾರೆ.

### ಕಠಿಣಪದಾರ್ಥ

**ತದ್‌ವಿರೋಧಿನೀ** = ಪ್ರಾಧಾನ್ಯಕ್ಕೆ ವಿರುದ್ಧವಾದದ್ದು. **ಪ್ರಮಿತಿರೂಪ-ಫಲವಿಷಯತ್ವಸ್ಯ** = ಇತಿಕರ್ತವ್ಯತಾರೂಪವಾದ ತರ್ಕದ ಅನುಗ್ರಹವಡೆದ ವೇದಾಂತವಾಕ್ಯದಿಂದ ಹುಟ್ಟಿದ ಯಥಾರ್ಥಜ್ಞಾನವೆಂಬ ಮೀಮಾಂಸೆಯ ಫಲಕ್ಕೆ ವಿಷಯವಾದ.

*ಪರಿಪೂರ್ಣಚಂದ್ರಿಕಾ*

प्रकाशः – दृष्टान्तवैषम्योपपादनपूर्वकं विध्ययोग्यत्वेन दूषयति ।। ज्ञानेति ।। प्राधान्यज्ञापककामपदादेरभावादिति भावः । अङ्गीकृतं च प्राधान्यं श्रीभाष्ये "इच्छाया इष्यमाणप्रधानत्वादिष्यमाणं ज्ञानमिह विधीयते" इति ।। तद्विरोधिनीति ।। प्राधान्यविरोधिनीत्यर्थः । यद्यपि प्राधान्यविरोधि गुणत्वं, नतु विधेयत्वम् । तस्यानुवाद्यत्वविरोधित्वात् । तथाऽपि प्राधान्यस्यानुवाद्यत्वेन, गुणत्वस्य विधेयत्वेन सामानाधिकरण्यनियमेन प्राधान्यविधेयत्वयोर्भिन्नाधिकरणतानियमात् 'विरोधिनी' इत्युक्तम् । ननु प्रवर्तनात्मा विधिरिष्टे पुरुषं प्रवर्तयति । ज्ञानं चेष्टमिति सत्यपि प्राधान्ये तदेव विधेयमित्यतोऽतिप्रसङ्गमाह ।। नहीति ।।

"फलांशे भावनायास्तु प्रत्ययो न विधायकः"

इति भट्टोक्तेरिति भावः । अत एव चतुर्थाध्यायाद्यपादे "यस्मिन् प्रीतिः पुरुषस्य तल्लिप्सार्थलक्षणाविभक्तत्वात्" इति द्वितीयाधिकरणे द्वितीया वर्णके फलांशे विधिव्यापारोऽस्त्युत नेति संशये, विधेयभावनाविशेषणत्वात् करणादिवत् फलांशोऽपि विधीयत इति प्राप्ते, रागतस्तत्र प्रवृत्तिसिद्धेर्न फलांशो विधीयत इत्युक्तम् ।

ननु 'यजेत स्वर्गकामः' इत्यत्रेष्टसाधनं मानान्तराप्राप्तं सन्निहितं च धात्वर्थं परित्यज्य, विप्रकृष्टरागप्राप्तस्वर्गविधानं न युज्यते । इह तु सन्निहितत्वादिष्टत्वाच्च युज्यत इति भावेनाह ।। किञ्चेति ।। यद्वा – "सक्तून् जुहोति" इत्यत्र द्वितीयया प्रधान्यप्रतीतावप्यप्राप्तत्वेन विधेयकत्वं दृष्टमित्याशयेनाह – किञ्चेति । यत्रहि गुणः कारकतामापद्यते, स आश्रयः । यथा "दध्नेन्द्रियकामस्य जुहुयात्" इत्यत्र दधिरूपगुणस्य धात्वर्थो होमः । दध्ना होमनिर्वृत्तिद्वारेन्द्रियनिष्पत्तेः । तथा प्राङ्मुखत्वादिकमपि भोजनरूपक्रियानिर्वृत्तिद्वारा आयुष्यादिफलं जनयतीति निर्वर्त्यक्रियारूपाश्रयमनुवदितुं भुजिधातुः सार्थकः । इह तु ज्ञानेनेच्छानिर्वृत्तिद्वारा कस्यचिदजननेनाश्रयत्वायोगेन तदनुवादानुपपत्तेः 'ब्रह्मज्ञानम्' इति सूत्रविन्यासः स्यात् । 'तद् विजानीहि' इति श्रुतिविन्यासः स्यात् । नतु सन्नंतत्वेनेत्यर्थः ।

एतेन – ''गुप्तिज्किद्भ्यः सन्'' इत्यत्र 'सन्' इति योगविभागमाश्रित्य जिज्ञासाशब्दे सनः स्वार्थिकत्ववर्णनं प्रत्युक्तम् । 'ब्रह्मज्ञानम्' इत्येतावता पूर्त्या सनो व्यर्थत्वात् । योगविभागस्य क्लिष्टत्वाच्च । यदपि प्रमाजनकवाक्यानुग्राहक-तर्करूपं ज्ञानं विधेयमित्युक्तं, तदपि नेत्याह ।। **किंचेति** ।। **प्रमितिरूपेति** ।। इति कर्तव्यताभूततर्कानुगृहीतवेदान्तवाक्यजन्यप्रमारूपमीमांसाफलविषयत्वस्येत्यर्थः । उपलक्षणमेतत् । ज्ञानसामन्ये शक्तस्य जानातेस्तर्कज्ञानरूपविशेषपरत्व-स्यानुचितत्वादित्यपि ध्येयम् । तर्करूपज्ञानस्य विधेयतोक्तिश्चायुक्तेत्याह ।। **किञ्चेति** ।। श्रवणविधिमूलत्वात् सूत्रस्य ''श्रोतव्य इत्यादिवाक्यवत्'' इत्युक्तम् ।

ननु जिज्ञासामात्रप्राप्तावपि कर्मविचारानन्तर्यविशिष्टं न प्राप्तमित्यत आह ।। **कथञ्चिदिति** ।। जिज्ञासाशब्दतो हीच्छाम् इत्यादिनोक्तं टीकारूढं करोति ।। **तदेतदिति** ।। अतद्गुणसंविज्ञानबहुव्रीहिणा विचारस्य 'असन्वाच्यता' सन्नन्त-जिज्ञासापदवाच्यत्वाभाव इत्यर्थः ।

**गुरुराजीय – तद्विरोधिनीति** ।। विधेयत्वस्य गुणत्वव्याप्यत्वेन प्राधान्य-विरोधित्वमिति भावः । ननु प्राधान्येन सह विधेयत्वस्य विरोधः किमेवमेव वा उत यत् प्रति प्राधान्यं तत् प्रत्येव विधेयत्वं विरुद्धम् । नाद्यः । तथात्वे दर्शपूर्णमासयागस्यापि प्राधान्येन विधेयत्वानुपपत्तेः । न द्वितीयः । यागस्य सोमं प्रति प्राधान्येऽपि फलं प्रत्यप्राधान्येन विधेयत्ववत् । प्रकृते ज्ञानस्येच्छां प्रति प्राधान्येऽपि मोक्षरूपफलं प्रत्यप्राधान्याद् विधेयत्वं सम्भवतीत्यत आह – **किंचेति** ।। ननु ज्ञानमात्रस्य पुंतंत्रत्वाभावेनाविधेयत्वेऽपि तर्करूपज्ञानं पुंतंत्रत्वाद् विधेयम् । तथाचेष्यमाणतर्करूपज्ञानोपस्थापकत्वान्न सन्प्रत्ययवैयर्थ्यमित्यत आह – **सन्नंतजानातेरिति** ।। नच जानातेस्तर्कपरता युक्ता । यतोऽयं जानातिः सन्नंत इत्यर्थः ।

ननु जानातेः प्रमितौ स्वरसत्वेऽपि इच्छायाः प्रमितिरूपफलविषयत्व-स्वारस्येऽपि फलीभूतज्ञानस्य विधातुमशक्यत्वात् सन्नंतजानातेस्तर्करूपज्ञानपरत्व-मावश्यकमित्यत आह – **किंचेति** ।। **मानान्तरप्राप्तत्वादिति** ।। सति विचारे ज्ञानमन्यथा नेत्यन्वयव्यतिरेकरूपमानान्तरप्राप्तत्वादित्यर्थः । तथापि मोक्षसाधन-

**ज्ञानसाधनरूपविशिष्टालौकिकवस्तुविचारप्रतिपादनस्याप्राप्तत्वात् सूत्रस्य विधायकत्वं स्यादित्यत आह – कथंचिदिति ।। जिज्ञासाशब्दस्य विचारे रूढिप्रतिपादनमुप-संहरति – तस्मादिति ।।**

**ವಿವರಣೆ** - ರಾಮಾನುಜಮತವು ಸರಿಯಿಲ್ಲ. ದೃಷ್ಟಾಂತವು ವಿಷಮವಾಗಿದೆಯೆಂದು ಹೇಳುತ್ತಾ ಇಚ್ಛಾವಿಷಯವಾಗಿ ಪ್ರಧಾನಶ್ರೇಸ ಪ್ರತೀತವಾದದ್ದನ್ನು ವಿಧಾನ ಮಾಡಲು ಸಾಧ್ಯವೇ ಇಲ್ಲವೆಂದು ಸ್ನಾನಾದಿಕಂ ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಸ್ನಾತ್ವಾ ಭುಂಜೀತ' ಇತ್ಯಾದಿ ಸ್ಥಳದಲ್ಲಿ 'ಸ್ನಾನಕಾಮಃ ಭುಂಜೀತ' ಎಂದೇನು ಇಲ್ಲ. ಇಚ್ಛೆಗೆ ವಿಷಯವಾದದ್ದು ಪ್ರಧಾನವಾದದ್ದು ಇಲ್ಲ. ಆದರೆ ಇಲ್ಲಿ ಇಷ್ಯಮಾಣವೇ ಇಚ್ಛೆಗೆ ಪ್ರಧಾನವಾಗಿ ಇದೆ ಶ್ರೀಭಾಷ್ಯದಲ್ಲಿ ಇದನ್ನು ಅಂಗೀಕರಿಸಲಾಗಿದೆ - "ಇಚ್ಛಾಯಾಃ ಇಷ್ಯಮಾಣ ಪ್ರಧಾನತ್ವಾದಿಷ್ಯಮಾಣಂ ಜ್ಞಾನಮಿಹ ವಿಧೀಯತೇ" ಇಷ್ಯಮಾಣವನ್ನೇ ಪ್ರಧಾನವನ್ನಾಗಿ ಹೊಂದಿರುವಂತಹದ್ದು ಇಚ್ಛೆ. ಇಂತಹ ಇಷ್ಯಮಾಣವಾದ ಜ್ಞಾನವನ್ನು ಇಲ್ಲಿ ವಿಧಿಸಲಾಗಿದೆ. ಎಂದು. ಶ್ರೀಭಾಷ್ಯದ ಈ ಮಾತು 'ಮೇ ಮಾತಾ ವಂಧ್ಯಾ" ಎಂಬಂತೆ ಸ್ವವ್ಯಾಹತವಾಗಿದೆ. ಪ್ರಧಾನವೆಂದರೆ ವಿಧಾನ ಮಾಡಲು ಅಯೋಗ್ಯವೆಂದರ್ಥ. ಪುನಃ ಅದನ್ನೇ ವಿಧಾನ ಮಾಡಿದರೆ ವ್ಯಾಹತವಾಗುತ್ತದೆ.

ಪ್ರಶ್ನೆ :- ವಿಧೇಯತ್ವಕ್ಕೂ ಪ್ರಾಧಾನ್ಯಕ್ಕೂ ವಿರೋಧವಿಲ್ಲ. ಗುಣತ್ವಕ್ಕೂ ಪ್ರಾಧಾನ್ಯಕ್ಕೂ ವಿರೊಧ ಕಂಡಿದೆ. ಹೀಗಿರುವಾಗ ಗ್ರಂಥಕಾರರು ವಿಧೇಯತ್ವಕ್ಕೂ ಪ್ರಾಧಾನ್ಯಕ್ಕೂ ವಿರೋಧವೆಂದು ಹೇಗೆ ಹೇಳಿದರು?

ಉತ್ತರ :- ಪ್ರಾಧಾನ್ಯಕ್ಕೆ ಅನುವಾದ್ಯತ್ವದ ಜೊತೆಗೆ ವ್ಯಾಪ್ತಿ ಇದೆ. ಗುಣತ್ವಕ್ಕೆ ವಿಧೇಯತ್ವದ ಜೊತೆಗೆ ವ್ಯಾಪ್ತಿಯಿದೆ. ಆದ್ದರಿಂದ ಪ್ರಾಧಾನ್ಯಕ್ಕೂ ವಿಧೇಯತ್ವಕ್ಕೂ ವಿರೋಧ ಬರುತ್ತದೆ. ಪ್ರಧಾನವಾದ ಸ್ವರ್ಗವು ಅನುವಾದ್ಯವಾಗಿರುತ್ತದೆ. ಸ್ವರ್ಗಸಾಧನವಾದ ಯಾಗ ಅಪ್ರಧಾನ(ಗುಣ)ವಾಗಿದೆ. ಆದ್ದರಿಂದಲೇ ವಿಧೇಯವಾಗಿದೆ. ಹೀಗೆ ವ್ಯಾಪ್ತಿಯು ಸಿದ್ಧವಾದ್ದರಿಂದ ಪ್ರಧಾನವು ವಿಧೇಯವಾಗಿರಲ್ಲ. ವಿಧೇಯವು ಪ್ರಧಾನವಾಗಿರಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಪ್ರಾಧಾನ್ಯದ ಜೊತೆಗೆ ವ್ಯಾಪ್ತವಾದ ಅನುವಾದ್ಯತ್ವಕ್ಕೆ ವಿಧೇಯತ್ವದಿಂದ ವಿರೋಧವಿದೆಯೆಂದರೆ ಪ್ರಾಧಾನ್ಯದಿಂದಲೂ ವಿರೋಧವಿದೆಯೆಂದೇ ಸಿದ್ಧವಾಯಿತು. ಅಗ್ನಿಗೆ ವಿರೋಧಿಯಾಗಿದ್ದು ಧೂಮಕ್ಕೂ ವಿರೋಧಿಯೇ ಆಗಿರುತ್ತದೆ.

ಮತ್ತು "ಯತ್ರ ಗುಣತ್ವಂ ತತ್ರ ವಿಧೇಯತ್ವಂ" ಎಂಬ ವ್ಯಾಪ್ತಿಯಿದೆ. ಗುಣತ್ವಕ್ಕೂ ಪ್ರಾಧಾನ್ಯಕ್ಕೂ ವಿರೋಧ ಬಂದರೆ ವಿಧೇಯತ್ವಕ್ಕೂ ಪ್ರಾಧಾನ್ಯಕ್ಕೂ ವಿರೋಧ ಬಂದೇ ಬರುತ್ತದೆ.

**ಶಂಕೆ** - ವಿಧಿಯು ಪ್ರವರ್ತನಾರೂಪವಾದ್ದರಿಂದ, ಇಷ್ಟದಲ್ಲಿಯೇ ಪುರುಷನನ್ನು ಪ್ರವರ್ತಿಸಬೇಕು. ಜ್ಞಾನವು ಇಷ್ಟವಾದ್ದರಿಂದ ಪ್ರವೃತ್ತಿ ಮಾಡಿಸಲು ಏನು ತೊಂದರೆ?

**ಸಮಾಧಾನ** - ಸ್ವರ್ಗ ಇಷ್ಟವಾಗಿದ್ದರೂ ವಿಧೇಯವಾಗಿಲ್ಲದ್ದರಿಂದ ಅತಿಪ್ರಸಂಗ ಬರುತ್ತದೆ.

ಲಿಙ್ ಲೋಟ್ ತವ್ಯ ಪ್ರತ್ಯಯಗಳು ಭಾವನಾವಿಧಾಯಕಗಳಾಗಿವೆ. ಆದರೆ ಸ್ವರ್ಗರೂಪ-ಫಲಾಂಶದಲ್ಲಿ ಭಾವನಾ ವಿಧಾಯಕಗಳಲ್ಲ. ಆದ್ದರಿಂದಲೇ ಪೂರ್ವಮೀಮಾಂಸೆಯ ನಾಲ್ಕನೇ ಅಧ್ಯಾಯದ ಮೊದಲನೇ ಪಾದದ ನಾಲ್ಕನೇ ಅಧಿಕರಣದ ಎರಡನೇ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ - ಫಲಾಂಶದಲ್ಲಿ ವಿಧಿವ್ಯಾಪಾರವು ಇದೆಯೋ? ಇಲ್ಲವೋ? ಎಂದು ಸಂಶಯ. ವಿಧೇಯವಾದ ಭಾವನಾದಲ್ಲಿ ವಿಶೇಷಣವಾದ್ದರಿಂದ ಕರಣಾದಿಗಳಂತೆ ಫಲಾಂಶವನ್ನೂ ವಿಧಾನ ಮಾಡಬೇಕೆಂದು ಪೂರ್ವಪಕ್ಷ. 'ಯಾಗೇನ ಸ್ವರ್ಗಂ ಭಾವಯೇತ್' ಎಂದು ಭಾವನಾವನ್ನು ವಿಧಾನ ಮಾಡಲಾಗಿದೆ. ಸ್ವರ್ಗ ವಿಷಯ. ಯಾಗ ಕರಣ. ಯಾಗಕರಣಸ್ವರ್ಗಕರ್ಮಕಭಾವನಾವನ್ನು ವಿಧಾನವನ್ನು ಹೇಳಿದಂತಾಯಿತು. ಭಾವನಾವನ್ನು ವಿಧಾನ ಮಾಡುವಾಗ ಫಲಾಂಶವಾದ ಸ್ವರ್ಗವೂ ವಿಧೇಯವೆಂದು ಪೂರ್ವಪಕ್ಷ. ಸ್ವರ್ಗವು ರಾಗತಃ ಪ್ರಾಪ್ತವಾದ್ದರಿಂದ ಪುನಃ ಅಲ್ಲಿ ವಿಧಾನ ಬೇಕಾಗಿಲ್ಲ. ಎಂದು ಸಿದ್ಧಾಂತ.

## ಸ್ವರ್ಗಸ್ಯಾವಿಧೇಯತ್ವಾಧಿಕರಣಮ್

**ಯಸ್ಮಿನ್ ಪ್ರೀತಿಃ ಪುರುಷಸ್ಯ ತಲ್ಲಿಪ್ಸಾರ್ಥಲಕ್ಷಣಾ ವಿಭಕ್ತತ್ವಾತ್ (೪ -೧ -೨)**

ಈ ಅಧಿಕರಣಕ್ಕೆ ಎರಡನೆಯ ವ್ಯಾಖ್ಯಾನ ಹೀಗಿದೆ - ಫಲಾಂಶವಾದ ಸ್ವರ್ಗಕ್ಕೆ ವಿಧೇಯತ್ವ ಇದೆಯೋ? ಇಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ** :- 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವಿಧಿವಾಕ್ಯವು ಭಾವನಾವನ್ನು ವಿಧಾನ ಮಾಡುತ್ತಿದೆ. ಆ ಭಾವನಾವು ಜ್ಯೋತಿಷ್ಟೋಮಕರಣಕಸ್ವರ್ಗಸಾಧ್ಯಕ ಸೋಮಕ್ರಯಣಾ-ದಿಇತಿಕರ್ತವ್ಯತಾವಿಶಿಷ್ಟವಾಗಿದೆ. ಈ ಮೂರು ಅಂಶಗಳಿಂದ ಕೂಡಿದ ಭಾವನಾಕ್ಕೆ ವಿಧೇಯತ್ವ ಹೇಳಿದರೆ ವಿಶೇಷಣವಾದ ಸ್ವರ್ಗಕ್ಕೂ ವಿಧೇಯತ್ವ ಹೇಳಿದಂತಾಗುತ್ತದೆ.

**ಸಿದ್ಧಾಂತ** :- ಇಲ್ಲಿ ಜ್ಯೋತಿಷ್ಟೋಮಾದಿಗಳೇ ವಿಧೇಯಗಳಾಗಿವೆ ಹೊರತು ಸ್ವರ್ಗವು ವಿಧೇಯ-ವಾಗಿಲ್ಲ. ಸುಖರೂಪವಾದ ಸ್ವರ್ಗದಲ್ಲಿ ಮಾನಸಿಕಪ್ರವೃತ್ತಿಯನ್ನು ಪ್ರತಿಯೊಬ್ಬರೂ ಮಾಡಿರುತ್ತಾರೆ. ಆದರೆ ಕಷ್ಟಸಾಧ್ಯವಾದ ಜ್ಯೋತಿಷ್ಟೋಮದಲ್ಲಿ ಯಾರೂ ಪ್ರವೃತ್ತಿ ಮಾಡಿರುವುದಿಲ್ಲ. ಎಲ್ಲಿ ಪುರುಷರ ಪ್ರವೃತ್ತಿ ಆಗಿರುವುದಿಲ್ಲವೋ ಅದನ್ನೇ ವಿಧಾನ ಮಾಡಬೇಕು. ಹಾಗಾಗಿ ಜ್ಯೋತಿಷ್ಟೋಮವೇ ವಿಧೇಯ-ವಾಗುತ್ತದೆ.

ಇದರಂತೆ ಮಾನಸಿಕಪ್ರವೃತ್ತಿಯು ಜ್ಞಾನದಲ್ಲಿಯೂ ಉಂಟಾಗಿರುತ್ತದಾದ್ದರಿಂದ ಜ್ಞಾನವು ವಿಧೇಯ-ವಾಗುವುದಿಲ್ಲ. ಈ ಅಂಶದಲ್ಲಿ ಇದನ್ನು ದೃಷ್ಟಾಂತವೆಂದು ತಿಳಿಯಬೇಕು.

ಆದ್ದರಿಂದ ಇಷ್ಟಸಾಧನವನ್ನು ವಿಧಾನ ಮಾಡಬಹುದೇ ಹೊರತು, ಇಷ್ಟವನ್ನು ವಿಧಾನ ಮಾಡ-ಬೇಕಾಗಿಲ್ಲ.

**ಶಂಕೆ** - ವೈಷಮ್ಯವಿದೆ. 'ಸ್ವರ್ಗಕಾಮೋ ಯಜೇತ' ಎಂಬಲ್ಲಿ ಸ್ವರ್ಗವನ್ನು ವಿಧಾನ ಮಾಡಲ್ಲ. ಏಕೆಂದರೆ ಅಲ್ಲಿ ಲಿಙ್‌ಪ್ರತ್ಯಯವು ಸ್ವರ್ಗಶಬ್ದದ ಮೇಲೆ ಇಲ್ಲ. ಯಜ್ ಧಾತುವಿನ ಮೇಲೆ ಇದೆ. ಆವಾಗ

ಲಿಜ್‌ಪ್ರತ್ಯಯಕ್ಕೆ ಧಾತ್ವರ್ಥವೇ ಸನ್ನಿಹಿತವಾಗಿದೆ. ಮತ್ತು ಪ್ರಮಾಣಾಂತರದಿಂದ ಅಪ್ರಾಪ್ತ. ಇದನ್ನು ಬಿಟ್ಟು ಪ್ರಕೃಷ್ಟವಾದ ಮತ್ತು ರಾಗಪ್ರಾಪ್ತವಾದ ಸ್ವರ್ಗವನ್ನು ವಿಧೇಯವೆಂದು ಹೇಳುವುದು ತಪ್ಪು. ಆದರೆ ಪ್ರಕೃತ ಜಿಜ್ಞಾಸಾ ಎಂಬಲ್ಲಿ ಜ್ಞಾನವು ಸನ್ನಿಹಿತವೂ ಇಷ್ಟವೂ ಆಗಿರುವುದರಿಂದ ವಿಧೇಯವಾಗಬಹುದು.

**ಸಮಾಧಾನ** :- ಯಾವುದು ಅಪ್ರಧಾನವೋ ಇಷ್ಟಸಾಧನವೋ ಅದೇ ವಿಧೇಯವಾಗಿರುತ್ತದೆ. ಆ ಗುಣವಾದದ್ದು ಎಲ್ಲಿದ್ದುಕೊಂಡು ಕಾರಕತ್ವವನ್ನು ಆಪಾದಿಸುತ್ತದೋ ಅದು ಆಶ್ರಯವೆನಿಸುತ್ತದೆ. **ಉದಾಹರಣೆ** - 'ದಧ್ನಾ ಇಂದ್ರಿಯಕಾಮಸ್ಯ ಜುಹುಯಾತ್' ಎಂಬಲ್ಲಿ ದಧಿ ಎಂಬ ಗುಣವನ್ನು ವಿಧಾನ ಮಾಡಲಾಗಿದೆ. ದಧಿಯೆಂಬ ವಿಧೇಯವು ಇಂದ್ರಿಯಗಳಿಗೆ ಕಾರಕವಾಗಿದೆ. ಕೇವಲ ದಧಿಯಿಂದ ಇಂದ್ರಿಯಪಾಟವ ಬರುವುದಿಲ್ಲ. ಹೋಮದ ದ್ವಾರಾ ಇಂದ್ರಿಯಪಾಟವ ಬರುತ್ತದೆ. ಅದೇರೀತಿ ಪ್ರಾಙ್ಮುಖತ್ವಾದಿಗಳೂ ಸಹ ಭೋಜನರೂಪಕ್ರಿಯೆಯ ಅನುಷ್ಠಾನದಿಂದ ಆಯುಷ್ಯಾದಿಫಲಜನಕವಾಗಿವೆ. (ನಿವೃತ್ತಿ = ಅನುಷ್ಠೇಯ) ಹೀಗೆ ಕ್ರಿಯಾರೂಪವಾದ ಆಶ್ರಯವನ್ನು ಅನುವಾದ ಮಾಡಲು ಭುಜಿಧಾತುವು ಸಾರ್ಥಕವಾಗಿದೆ. ಆದರೆ ಜ್ಞಾನವು ವಿಧೇಯವೆಂದಾಗ ಹೀಗೆ ಹೇಳಲಾಗದು. ಜ್ಞಾನವು ಮೋಕ್ಷ-ಸಾಧನವಾಗಿದೆ. ಕೇವಲ ಜ್ಞಾನವು ಮೋಕ್ಷಸಾಧನವಲ್ಲ. ಇಚ್ಛೆಯನ್ನು ಅನುಷ್ಠಾನ ಮಾಡುವ ಮೂಲಕ ಮೋಕ್ಷಸಾಧನವೆಂದೇನು ನಿಯಮವಿಲ್ಲ. ಏಕೆಂದರೆ ಜ್ಞಾನದ ಪೂರ್ವದಲ್ಲಿಯೇ ಇಚ್ಛೆಯು ಇದೆ. ಆದ್ದರಿಂದ ಆಶ್ರಯತ್ವದ ಅರ್ಪಣೆಯು ಕೂಡುವುದಿಲ್ಲ. ಸನ್ ಪ್ರತ್ಯಯವೇ ಬೇಡ. ಕೇವಲ "ಬ್ರಹ್ಮಜ್ಞಾನಮ್" ಎಂದಷ್ಟೇ ಸೂತ್ರವಿನ್ಯಾಸ ಮಾಡಬೇಕಿತ್ತು. "ತದ್ ವಿಜಾನೀಹಿ" ಎಂದಷ್ಟೇ ಸೂತ್ರ-ವಿನ್ಯಾಸ ಸಾಕಿತ್ತು. ಸನ್ನಂತವಾಗಿ ಬೇಕಾಗಿಲ್ಲ.

ಹೀಗೆ ಹೇಳಿದ್ದರಿಂದ ಮತ್ತೊಂದು ವಾದವು ನಿರಾಕೃತವಾಯಿತು. ಕೆಲವು ಧಾತುಗಳಿಗೆ ಸ್ವಾರ್ಥದಲ್ಲಿ ಸನ್‌ಪ್ರತ್ಯಯ ಬರುತ್ತದೆಂದು "ಗುಪ್‌ತಿಜ್‌ಕಿದ್‌ಭ್ಯಃ ಸನ್" ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಆದರೆ ಜ್ಞಾಧಾತುವಿಗೆ ಸ್ವಾರ್ಥದಲ್ಲಿ ಸನ್ ಪ್ರತ್ಯಯವನ್ನು ಹೇಳಿಲ್ಲ. ಆದರೂ ಸೂತ್ರವನ್ನು ಯೋಗವಿಭಾಗ ಮಾಡಿದಾಗ ಕೇವಲ 'ಸನ್' ಎಂದೇ ಸೂತ್ರ. ಈ ಪ್ರಕಾರ ಯಾವುದೇ ಧಾತುಗಳಿಗೆ ಸ್ವಾರ್ಥದಲ್ಲಿ ಸನ್ ಪ್ರತ್ಯಯ ಬರಬಹುದು. ಆದ್ದರಿಂದ 'ಜ್ಞಾ' ಧಾತುವಿನ ಮೇಲೆ ಸ್ವಾರ್ಥದಲ್ಲಿ ಸನ್ ಪ್ರತ್ಯಯ ಬಂದರೆ ಜಿಜ್ಞಾಸಾ ಶಬ್ದಕ್ಕೆ ಜ್ಞಾನವೆಂದಷ್ಟೇ ಅರ್ಥವಾಗುತ್ತದೆ. ಎಂಬ ಮತವೂ ತಪ್ಪು.

ಹಾಗಾದಲ್ಲಿ ಸನ್‌ಪ್ರತ್ಯಯವೇ ಬೇಡ. ಸ್ವಾರ್ಥೇ ಎಂದರೆ ವ್ಯರ್ಥವೆಂದೇ ಅರ್ಥ. ಮತ್ತು ಸೂತ್ರವನ್ನು ಹಾಗೆ ಯೋಗವಿಭಾಗ ಮಾಡುವುದೂ ಕ್ಲಿಷ್ಟ. ಸೂತ್ರಕಾರನ ಅಭಿಪ್ರಾಯವು ನೀವು ಅಂದುಕೊಂಡಂತೆ ಇರುವುದಿಲ್ಲ. ಹಾಗೇ ಸಮರ್ಥನೆ ಮಾಡಲೂ ಸಹ ಆಗುವುದಿಲ್ಲ.

ಮತ್ತು ಪ್ರಮಾಜನಕವಾದ ವಾಕ್ಯಕ್ಕೆ ಅನುಗ್ರಾಹಕವಾದ ತರ್ಕರೂಪಜ್ಞಾನವು ವಿಧೇಯವೆಂದು ಏನು ಹೇಳಿದ್ದಾರೋ ಅದೂ ಕೂಡ ಅಸಮಂಜಸವಾಗಿದೆಯೆಂದು 'ಕಿಂಚ ಜಾನಾತೇಃ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಜ್ಞಾ' ಧಾತುವು ಜ್ಞಾನಸಾಮಾನ್ಯದಲ್ಲಷ್ಟೇ ಶಕ್ತವಾಗಿದೆ.ಆದಕ್ಕೆ ತರ್ಕರೂಪಜ್ಞಾನವೆಂಬ ವಿಶೇಷಾರ್ಥ-ವನ್ನು ಹೇಳುವುದು ಅನುಚಿತವೆಂದು ತಿಳಿಯಬೇಕು.

*ಜಿಜ್ಞಾಸಾಧಿಕರಣ*

ಪ್ರಶ್ನೆ :- ವಿಚಾರಕರ್ತವ್ಯತ್ವವು ಮಾನಾಂತರಪ್ರಾಪ್ತವಾಗಿದೆ. ಆದ್ದರಿಂದ ಸೂತ್ರವು ಅನುವಾದಕ-ವಾಗಬೇಕಾಗುತ್ತದೆಂಬ ಆಪತ್ತಿ ಇಲ್ಲ. ಕರ್ಮವಿಚಾರದ ಅನಂತರ ವಿಚಾರವನ್ನು ಮಾಡಬೇಕೆಂದು ಸೂತ್ರ ಹೇಳುತ್ತಿದೆ. ಇದು ಮಾನಾಂತರಪ್ರಾಪ್ತವಲ್ಲ. ಆದ್ದರಿಂದ ಸೂತ್ರವು ಅನುವಾದಕ ಆಗಲ್ಲ.

ಉತ್ತರ :- ಹೀಗೆ ಆಕ್ಷೇಪಿಸುವುದಾದರೆ ಶ್ರೋತವ್ಯಃ ಇತ್ಯಾದಿವಾಕ್ಯಗಳೂ ಅನುವಾದಕಗಳಾದಿರ-ಬೇಕಾದೀತು. 'ಜಿಜ್ಞಾಸಾಶಬ್ದತೋ ಹೀಟ್ಯಾಂ' ಇತ್ಯಾದಿ ಹಿಂದಿನ ಮೂಲದಲ್ಲಿ ಹೇಳಿದ ಶ್ಲೋಕದಿಂದ ಆರಂಭಿಸಿ ಇಲ್ಲಿಯ ತನಕ ಹೇಳಿದ ವಿಚಾರಗಳನ್ನೆಲ್ಲ ಟೀಕಾರೂಢ ಮಾಡುತ್ತಿದ್ದಾರೆ 'ತದೇತದಿತಿ' ಎಂದು.




### ಜಿಜ್ಞಾಸಾಶಬ್ದಾರ್ಥ ರಾಮಾನುಜಮತದಲ್ಲಿ

ರಾಮಾನುಜಮತದಲ್ಲಿ 'ಜಿಜ್ಞಾಸೆ' ಎಂದರೆ ಜ್ಞಾನೇಚ್ಛೆ. ಆದರೆ ವಿಚಾರ ಎಂಬ ಅರ್ಥದಲ್ಲಿ ಲಕ್ಷಣಾ ಮಾಡಬೇಕಾಗಿಲ್ಲ. 'ಸ್ನಾನ ಮಾಡಿ ಭೋಜನ ಮಾಡಬೇಕು' ಎಂಬಲ್ಲಿ ಭೋಜನಪ್ರವೃತ್ತಿ ಸ್ವಾಭಾವಿಕವಾದ್ದರಿಂದ ಅದನ್ನು ವಿಧಿಸುವುದಿಲ್ಲ. ಪೂರ್ವದಲ್ಲಿ ತಪ್ಪದೆ ಸ್ನಾನ ಮಾಡುವುದು ಅವಶ್ಯಕವೆಂದು ವಿಧಿ. ಇಲ್ಲಿ ಭೋಜನ ಮಾಡಬೇಕು ಎಂಬ ಮಾತಿಗೇ ಸ್ನಾನವಿಧಿ ಅರ್ಥವಲ್ಲ. ಅದಕ್ಕೆ ರೂಢಿ ಲಕ್ಷಣೆ ಅರ್ಥಾಪತ್ತಿ ಯಾವುದೂ ಬೇಡ. ಹಾಗೆಯೆ 'ವಿಚಾರರೂಪವಾದ ಜ್ಞಾನವನ್ನು ಬಯಸಬೇಕು' 'ತದ್ ವಿಜಿಜ್ಞಾಸಸ್ವ' ಎಂದಾಗ ಇಚ್ಛೆ ಸ್ವಾಭಾವಿಕವಾಗಿ ಬರುವಂಥದ್ದಾದರಿಂದ ಅದನ್ನು ವಿಧಿಸುವುದಿಲ್ಲ. ವಿಚಾರ ಮಾಡಬೇಕೆಂದು ವಿಧಿ. ಇದಕ್ಕೆ ರೂಢಿ ಲಕ್ಷಣಾ ಯಾವುದೂ ಬೇಡ. - ಹೀಗೆ ಹೇಳುತ್ತಾರೆ. ಆದರೆ ವಿಚಾರ ಇಚ್ಛೆಗೆ ಕರ್ಮವಾಗಿದ್ದು ಉದ್ದೇಶ್ಯವೆನಿಸುವುದರಿಂದ ವಿಧೇಯವೆನಿಸಲಾರದು. ಪ್ರಧಾನವು ಗೌಣವಾಗಲಾರದು. 'ವಿಧಿಯು ಇಷ್ಟ ವಿಷಯದಲ್ಲಿ ಪ್ರೇರಣೆ ನೀಡುವುದರಿಂದ ಇಷ್ಟವಾದ ವಿಚಾರವೆ ವಿಹಿತವಾಗುತ್ತದೆ' ಎಂದೂ ಹೇಳುವುದು ಸರಿಯಲ್ಲ. ಫಲವು ಇಷ್ಟವಾದ್ದರಿಂದ ಸ್ವಾಭಾವಿಕ ಪ್ರವೃತ್ತಿ ಸಾಧ್ಯವೆಂದು ಅದರಲ್ಲಿ ವಿಧಿ ಇಲ್ಲವೆಂದ ಮೀಮಾಂಸಕರ ಸಿದ್ಧಾಂತ. ಯದ್ಯಪಿ ವಿಚಾರ ಇಷ್ಟಸಾಧನವಾದ್ದರಿಂದ ವಿಧೇಯ ಎನಿಸಬಹುದು. ಆದರೂ 'ಪೂರ್ವಾಭಿಮುಖವಾಗಿ ಕುಳಿತು ಭೋಜನ ಮಾಡಬೇಕು' ಎಂಬಲ್ಲಿ ಪೂರ್ವಾಭಿಮುಖವಾಗುವುದು ಭೋಜನ ಕ್ರಿಯೆಯಲ್ಲಿ ಇದ್ದರೆ ಆಗ ಆಯುಷ್ಯಾದಿ ಫಲ ಲಭಿಸುವುದು ಎನ್ನಲು 'ಭೋಜನ' ಶಬ್ದಬೇಕು. ಪೂರ್ವಾಭಿಮುಖತ್ವವು ಭೋಜನಕ್ರಿಯಾದ್ವಾರಾ ಫಲಕಾರಿ. ಪ್ರಕೃತದಲ್ಲಿ ವಿಚಾರವು ಇಚ್ಛೆಯ ಮೂಲಕ ಸಾಧಿಸುವುದು ಏನೂ ಇಲ್ಲ. ವಿಚಾರ ಮಾಡಬೇಕು. ಅದರಿಂದ ಫಲ. ಇಚ್ಛೆ ಮಾಡೆಂದು ಹೇಳಬೇಕಾಗಿಲ್ಲ. ಸನ್‌ಪ್ರತ್ಯಯ ವ್ಯರ್ಥ. ವಸ್ತುತಃ ಜ್ಞಾನೇಚ್ಛೆ ಜಿಜ್ಞಾಸಾ ಶಬ್ದದ ಅರ್ಥ. ವಿಚಾರೇಚ್ಛೆಯಲ್ಲ. ವಿಚಾರದಿಂದ ಜ್ಞಾನ ಉಂಟಾಗುವುದು ಅನುಭವ ಸಿದ್ಧವಾದ್ದರಿಂದ ಜ್ಞಾನಕ್ಕಾಗಿ ವಿಚಾರವನ್ನು ವಿಧಿಸುವುದೂ ವ್ಯರ್ಥ. 'ಜ್ಞಾನಕ್ಕಾಗಿ ವಿಚಾರ ಮಾಡವುದು ಲೋಕದಲ್ಲಿ ಸಿದ್ಧವಾಗಿದ್ದರೂ ಕರ್ಮವಿಚಾರಾ ನಂತರ ಬ್ರಹ್ಮವಿಚಾರ ಎನ್ನುವುದು ಹೊಸತು, ಅದನ್ನು ವಿಧಿಸಬೇಕು' ಎನ್ನುವುದಾದರೆ 'ಕರ್ಮವಿಚಾರಾನಂತರವೇ ವೇದಾಂತ ಶ್ರವಣ' ಎನ್ನುವುದೂ ಹಾಗೇ ಹೊಸತು. ಅದನ್ನೂ ವಿಧಾನ ಮಾಡಬಹುದು. ಅದನ್ನು ರಾಮಾನುಜೀಯರು ಒಪ್ಪಿಲ್ಲ.

---

ಪರಿಪೂರ್ಣಚಂದ್ರಿಕಾ

## ವಿಚಾರದಲ್ಲಿ ರೂಢಿ, ಲಕ್ಷಣಾ ಅಲ್ಲ. (ಸ್ವಮತ)

**तात्पर्यचन्द्रिका –**

**नन्विच्छायामपि जिज्ञासापदप्रयोगादिच्छाऽत्र जिज्ञासाशब्दार्थः किं न स्यादित्यत्राह ।। इच्छाया अविधेयत्वादिति ।। सुधायां तु "ज्ञानेच्छांतर्णीतो विचारो जिज्ञासापदेन लक्ष्यते" इति परमतमुक्त्वा, "यदिच जिज्ञासाशब्दो मीमांसाशब्दवद् विचार एव उपसंख्यायते" इति स्वमतमुक्तं । यद्वा – सुधायां पक्षद्वयेऽपि जिज्ञासाशब्दस्य विचारपरत्वाविशेषात् अन्यतरनिर्धारणस्य अप्रयोजनत्वात् पक्षद्वयोक्तिः । तदनुसारेणात्रापि 'असन्वाच्यत्वेऽपि लक्षणया विचारेऽपि तत्प्रयोगात् मुख्यार्थस्य चेच्छाया अविधेयत्वात्' इत्यपि योज्यम् ।**

ಅನುವಾದ - ಜಿಜ್ಞಾಸಾಪದವನ್ನು 'ಜ್ಞಾನೇಚ್ಛೆ' ಎಂಬರ್ಥದಲ್ಲಿ ಪ್ರಯೋಗಿಸಲಾಗುತ್ತದೆ. ಆ ಅರ್ಥವನ್ನೇ ಸೂತ್ರದಲ್ಲಿರುವ ಜಿಜ್ಞಾಸಾಪದಕ್ಕೆ ವಿವಕ್ಷಿಸಿದರೆ ಏನು ತಪ್ಪು? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ಇಚ್ಛಾಯಾಃ ಅವಿಧೇಯತ್ವಾತ್' ಎಂದು ಉತ್ತರಿಸಲಾಗಿದೆ. ಇಚ್ಛೆಯನ್ನು ಮಾಡೆಂದು ವಿಧಿಸಲಾಗದು.

ಹಾಗಾದರೆ ನ್ಯಾಯಸುಧೆಯಲ್ಲಿ ಜ್ಞಾನೇಚ್ಛೆಯಿಂದ ಅರ್ಥಾತ್ ಸಿದ್ಧವಾದದ್ದು ವಿಚಾರ. ಇದು ಜಿಜ್ಞಾಸಾಪದದಿಂದ ಲಕ್ಷಣಯಾ ಲಭ್ಯವಾದ ಅರ್ಥವೆಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ ಇದನ್ನು ಪರಮತರೀತಿಯಿಂದ ಹೇಳಿದ್ದು. ನಮ್ಮ ಮತವನ್ನು ಅಲ್ಲಿಯೇ ಮುಂದೆ ಹೇಳಿದ್ದಾರೆ - ಯಾವ ರೀತಿಯಾಗಿ ಮೀಮಾಂಸಾಶಬ್ದವು 'ವಿಚಾರ' ಎಂಬರ್ಥದಲ್ಲಿ ರೂಢವಾಗಿದೆಯೋ ಅದರಂತೆ ಜಿಜ್ಞಾಸಾ-ಶಬ್ದವೂ ವಿಚಾರ ಎಂಬರ್ಥದಲ್ಲಿ ರೂಢವಾಗಿದೆ. ಎಂದು ಅಥವಾ ಶಕ್ತಿಪಕ್ಷದಲ್ಲಾಗಲೀ ಲಕ್ಷಣಾಪಕ್ಷ-ದಲ್ಲಾಗಲೀ ಜಿಜ್ಞಾಸಾಪದಕ್ಕೆ ವಿಚಾರ ಎಂಬರ್ಥವೇ ಹೊರತು ಏನೂ ಅರ್ಥವ್ಯತ್ಯಾಸವಿಲ್ಲ. ಹೀಗಿರುವಾಗ ಎರಡರಲ್ಲಿ ಒಂದು ಪಕ್ಷವನ್ನು ಮಾತ್ರ ನಿರ್ಧಾರ ಮಾಡುವುದು ಅನಾವಶ್ಯಕ. ಆದ್ದರಿಂದ ಎರಡೂ ಪಕ್ಷಗಳನ್ನು ಹೇಳಿದ್ದಾರೆ.

ಸುಧೆಗೆ ಅನುಸಾರಿಯಾಗಿ ಟೀಕೆಗೂ ಅರ್ಥ ಹೇಳಬಹುದು. ಆವಾಗ ಲಕ್ಷಣಾ ಹಾಗು ರೂಢಿಗಳೆಂಬ ಅರ್ಥವು ತಿಳಿಯುತ್ತದೆ. ಸನ್ ಪ್ರತ್ಯಯದಿಂದ ವಾಚ್ಯವಾಗದಿದ್ದರೂ ಲಕ್ಷಣಾದಿಂದ ವಿಚಾರದಲ್ಲಿ ಪ್ರಯೋಗವಿದೆ. ಮುಖ್ಯಾರ್ಥವಾದ ಇಚ್ಛೆಯನ್ನು ಇಟ್ಟುಕೊಂಡರೆ ಅದಕ್ಕೆ ವಿಧಾನವು ಕೂಡುವುದಿಲ್ಲ. ಆದ್ದರಿಂದ ಅಮುಖ್ಯಾರ್ಥವಾದ ವಿಚಾರವನ್ನು ಇಟ್ಟುಕೊಳ್ಳಬೇಕು.

**प्रकाशिका – ननु नानेन वाक्येन जिज्ञासाशब्दस्य तत्र शक्तताभिप्रायोऽवगन्तुं शक्यते, विचारस्य सन्नंतावाच्यत्वेऽपि लक्षणया विचारेऽपि "जिज्ञासितम्"**

इत्यादिप्रयोगवत् उपपत्तेरित्युत्तरवाक्यार्थसम्भवात् । अत एव ''इच्छाया अविधेयत्वात्'' इति मुख्यार्थे विध्यनुपपत्तिं लक्षणाबीजमाहेत्याशङ्क्य, नेदं लक्षणाबीजोपपादनार्थं प्रवृत्तम्, येन पूर्वतनं परिहारवाक्यं लक्षणाभिप्रायेण वर्ण्येतेति भावेन प्रकारान्तरेणावतारयति ।। नन्विति ।। सुधाविरोधमाशंक्याह ।। सुधायां त्विति ।। एवंच तद्वाक्यद्वयं स्वपरमतत्वेन योज्यमित्युक्तं भवति ।। तथाच न विरोध इत्याशयः । नन्वेवं योजनायां न ज्ञापकमस्ति । अत एव प्रमेयदीपिकायाम् –

''मा कर्म फलहेतुर्भूर्मा ते सङ्गोऽस्त्वकर्मणि ।''

इति वाक्यभाष्यव्याख्यावसरे ''ज्ञानेच्छापूर्वको विचारो लक्ष्यते'' इति विचारे लक्षणा कण्ठोक्तेत्यत आह – यद्वेति ।। अत्रापीति ।। टीकायामपीत्यर्थः ।। इत्यपीति ।। लक्षणापक्षपरतयाऽपीत्यर्थः ।

गुरुराजीय – ननु टीकायां श्रवणादौ सन्नंतपदलक्ष्यत्वेनैव जिज्ञासाशब्दप्रयोगो विवक्षितः । अन्यथा इच्छारूपमुख्यार्थानुपपत्तिकथनपरया ''इच्छाया अविधेयत्वाद्'' इत्युत्तरटीकया विरोध इत्यतस्तद्वाक्यमन्यथा व्याचष्टे ।। नन्विच्छायामपीति ।। नन्वेवं टीकायां विचारे रूढत्वमेव यद्यभिप्रेतं तर्हि सुधाविरोधः स्यात् । तत्र ज्ञानेच्छान्तर्णीतो विचारो लक्ष्यत इत्युक्तत्वादित्यत आह ।। सुधायां त्विति ।। उपसंख्यायत इति ।। ''मान्बधान्शान्भ्यो दीर्घश्च'' इत्यत्र मीमांसाशब्दो यथा वर्तते तथा जिज्ञासाशब्दोऽपि तत्र द्रष्टव्यः । ननु मूलव्याख्यानावसरे परोक्तिरनवसरपराहतेत्यस्वरसादाह ।। यद्वेति । तर्ह्येतट्टीका-विरोध इत्यत आह ।। तदनुसारेणेति ।। सुधानुसारेणेत्यर्थः ।

ವಿವರಣೆ - ಆಕ್ಷೇಪ :- ''ನಚ ಶ್ರವಣಾದೇರಸನ್‌ವಾಚ್ಯತಾ ವಿಚಾರೇऽಪಿ ತತ್ ಪ್ರಯೋಗಾತ್'' ಟೀಕೆಯ ಈ ಮಾತಿಗೆ ವಿಚಾರದಲ್ಲಿ ರೂಢಿಯೆಂಬರ್ಥವನ್ನೇ ಗ್ರಂಥಕಾರರು ಮೊದಲು ಸಮರ್ಥಿಸಿದರು. ಅಷ್ಟೇ ಅಲ್ಲದೇ ಟೀಕಾರಾಯರ ಅಭಿಪ್ರಾಯವೂ ರೂಢಿಯೇ ಆಗಿದೆಯೆಂದು ಸಮರ್ಥಿಸಿದರು. ಆದರೆ ಇದು ತಪ್ಪು. ಏಕೆಂದರೆ ಮುಂದಿನ ಟೀಕೆಯಲ್ಲಿ ''ಇಚ್ಛಾಯಾಃ ಅವಿಧೇಯತ್ವಾತ್'' ಎಂದು ಮುಖ್ಯಾರ್ಥದಲ್ಲಿ ಅನುಪಪತ್ತಿ ಹೇಳಿದ್ದಾರೆ. ಆದ್ದರಿಂದ : 'ವಿಚಾರೇऽಪಿ ತತ್‌ಪ್ರಯೋಗಾತ್' ಎಂಬುದಕ್ಕೆ 'ಲಕ್ಷಣಯಾ ಪ್ರಯೋಗಾತ್' ಎಂದು ಹೇಳಬಹುದು. ಮುಂದೆ ಗ್ರಂಥಕಾರರು ಈ ಪಕ್ಷವನ್ನು 'ಯದ್ವಾ'

ಎಂದು ಸಮರ್ಥಿಸಿದ್ದಾರೆ. ಆದರೆ ಇದನ್ನೇ ಟೀಕೆಯ ಅರ್ಥವನ್ನಾಗಿ ವ್ಯಾಖ್ಯಾನಿಸುವುದು ಹೆಚ್ಚು ಸೂಕ್ತ. ಆವಾಗ ಈ ಟೀಕಾಮಾತಿನಿಂದ ರೂಢಿಯು ಸಿದ್ಧವಾಗುವುದಿಲ್ಲ. ಪ್ರಯೋಗಾತ್ ಎಂಬುದಕ್ಕೆ 'ಲಕ್ಷಣಯಾ ಪ್ರಯೋಗಾತ್' ಎಂದು ಹೇಳಬಹುದು. ಶಕ್ತಿ ಎಂದು ಹೇಳಿದ್ದು ಸರಿಯಲ್ಲ.

**ಸಮಾಧಾನ :-** 'ಇಚ್ಛಾಯಾಃ ಅವಿಧೇಯತ್ವಾತ್' ಎಂಬ ಮುಂದಿನ ವಾಕ್ಯವು ಲಕ್ಷಣಾಬೀಜವನ್ನು ತೋರಿಸಲು ಹೊರಟದ್ದೇ ಅಲ್ಲ. ಒಂದುವೇಳೆ ಲಕ್ಷಣಾಬೀಜವಾದ ಮುಖ್ಯಾರ್ಥಾನುಪಪತ್ತಿಯನ್ನು ತೋರಿಸಲು ಹೊರಟದ್ದರೆ ಹಿಂದಿನ ವಾಕ್ಯವಾದ 'ವಿಚಾರೇಪಿ ತತ್ ಪ್ರಯೋಗಾತ್' ಎಂಬುದಕ್ಕೆ 'ಲಕ್ಷಣಯಾ ಪ್ರಯೋಗಾತ್' ಎಂಬರ್ಥವನ್ನು ಹೇಳಬಹುದಿತ್ತು. ಹಾಗಾದರೆ 'ಇಚ್ಛಾಯಾಃ ಅವಿಧೇಯತ್ವಾತ್' ಎಂದು ಟೀಕಾರಾಯರು ಏಕೆ ಬರೆದಿದ್ದಾರೆ? ಎಂದರೆ ಪ್ರಕಾರಾಂತರದಿಂದ ಗ್ರಂಥಕಾರರು 'ನನು' ಇತ್ಯಾದಿ ವಾಕ್ಯದಿಂದ ಅವತಾರಿಕೆ ಕೊಡುತ್ತಿದ್ದಾರೆ. - ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಪ್ರಯೋಗವಿರುವುದರಿಂದ ಆ ಅರ್ಥವನ್ನು ಇಟ್ಟುಕೊಳ್ಳಬೇಕು. ಹೀಗೆ ಹೇಳಿದಾಗ ಪುನಃ ಪ್ರಶ್ನೆ ಬರುತ್ತದೆ.- ಹಾಗಾದರೆ ಇಚ್ಛೆಯಲ್ಲಿಯೂ ಜಿಜ್ಞಾಸಾಶಬ್ದದ ಪ್ರಯೋಗವಿದೆ. ಆದ್ದರಿಂದ ಜಿಜ್ಞಾಸಾಶಬ್ದಕ್ಕೆ ಇಚ್ಛೆಯೂ ಸಹ ಅರ್ಥವಾಗಲಿ? ಎಂಬ ಪ್ರಶ್ನೆಯ ಪರಿಹಾರಕ್ಕೋಸ್ಕರ 'ಇಚ್ಛಾಯಾಃ ಅವಿಧೇಯತ್ವಾತ್'' ಎಂದು ಹೇಳಿದ್ದಾರೆ. ಹೀಗೆ ಚಿಂತನೆ ಮಾಡಿದರೆ ಈ ವಾಕ್ಯವು ಲಕ್ಷಣಾಪರವೆಂದು ಹೇಳಲಾಗದು.

**ಪ್ರಶ್ನೆ :-** ನ್ಯಾಯಸುಧೆಯ ವಿರೋಧವನ್ನು ಪರಿಹಾರ ಮಾಡಿದ್ದು ಸರಿಯಲ್ಲ. ಏಕೆಂದರೆ ಲಕ್ಷಣಾಪಕ್ಷವು ಸ್ವಮತವಲ್ಲ ಎನ್ನಲು ಏನೂ ಆಧಾರವಿಲ್ಲ. ಅಷ್ಟೇ ಅಲ್ಲದೇ ಪ್ರಮೇಯ ದೀಪಿಕೆಯಲ್ಲಿ 'ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ' ಎಂಬ ಗೀತಾ ಮಾತಿನ ಭಾಷ್ಯಕ್ಕೆ ವ್ಯಾಖ್ಯಾನಿಸುತ್ತಾ ಟೀಕಾರಾಯರೇ ಹೀಗೆ ಹೇಳುತ್ತಾರೆ. 'ಜ್ಞಾನೇಚ್ಛಾಪೂರ್ವಕೋ ವಿಚಾರೋ ಲಕ್ಷ್ಯತೇ' ಎಂದು ವಿಚಾರದಲ್ಲಿ ಲಕ್ಷಣಾವನ್ನೇ ಅಂಗೀಕರಿಸಿದ್ದಾರೆ.

**ಉತ್ತರ :-** ಈ ಪ್ರಶ್ನೆಗೆ ಉತ್ತರ ನೀಡಲು 'ಯದ್ವಾ' ಇತ್ಯಾದಿಯಾಗಿ ಗ್ರಂಥಕಾರರು ಹೇಳುತ್ತಿದ್ದಾರೆ. ಲಕ್ಷಣಾವೇ ಆಗಲಿ ರೂಢಿಯೇ ಆಗಲಿ ವಿಚಾರಪರವಾದರೆ ಸಾಕು. ವಸ್ತುತಃ ವಿಚಾರ ಮಾಡಿದರೆ ರೂಢಿಯೇ ಹೊರತು ಲಕ್ಷಣಾವಲ್ಲವೆಂಬುದು ಸಿದ್ಧಾಂತ.




**ಶಕ್ತಿಪಕ್ಷ - ಲಕ್ಷಣಾಪಕ್ಷ**

'ಇಚ್ಛೆಯನ್ನು ಮಾಡೆಂದು ವಿಧಿಸಲಾಗದು' ಎನ್ನುವ ಟೀಕಾವಾಕ್ಯವು ಜ್ಞಾನೇಚ್ಛೆ ಎಂಬ ಮುಖ್ಯಾರ್ಥದಲ್ಲಿ ಅನುಪಪತ್ತಿಯನ್ನು ಹೇಳುತ್ತ ವಿಚಾರದಲ್ಲಿ ಲಕ್ಷಣಾವನ್ನ ಹೇಳುತ್ತಿದೆ ಎನಿಸಬಹುದು. ಆದರೆ ವಸ್ತುತಃ ಇಚ್ಛಾವಿಧಿ ಕೂಡದಿರುವುದರಿಂದ ಜ್ಞಾನೇಚ್ಛೆ ಜಿಜ್ಞಾಸಾಶಬ್ದದ ಅರ್ಥವಲ್ಲ. ವಿಚಾರದಲ್ಲಿಯೆ ರೂಢಿ ಎಂದು ಅಭಿಪ್ರಾಯ. ನ್ಯಾಯಸುಧೆಯಲ್ಲಿ ವಿಚಾರದಲ್ಲಿ ಲಕ್ಷಣಾ ಎಂದಿರುವುದು ಪರಮತಾನುಸಾರ. ಅಲ್ಲಿಯೆ ಮುಂದೆ

'ಜಿಜ್ಞಾಸಾಶಬ್ದವನ್ನು ಮೀಮಾಂಸಾಶಬ್ದದಂತೆ ವಿಚಾರಾರ್ಥದಲ್ಲಿಯೆ ಇಟ್ಟುಕೊಳ್ಳಬೇಕು' ಎಂದಿರುವುದು ಸ್ವಮತಾನುಸಾರ. ಅಥವಾ ಪ್ರಮೇಯದೀಪಿಕೆಯಲ್ಲಿ 'ಮಾ ಕರ್ಮಫಲಹೇತುರ್ಭೂಃ' ಎಂಬ ಗೀತಾಭಾಷ್ಯ ವ್ಯಾಖ್ಯಾನಕಾಲದಲ್ಲಿ 'ಜ್ಞಾನೇಚ್ಛೆಯ ಅನಂತರ ಬರುವ ವಿಚಾರದಲ್ಲಿ ಲಕ್ಷಣಾ' ಎಂದಿರುವುದರಿಂದ ಹೀಗೆ ಹೇಳಬೇಕು - ಸುಧೆಯಲ್ಲಿ ಶಕ್ತಿ ಲಕ್ಷಣಾಪಕ್ಷಗಳನ್ನು ಎರಡನ್ನೂ ಹೇಳಿದೆ. ಎರಡರಲ್ಲಿಯೂ ವಿಚಾರ ಎಂಬರ್ಥವಿದ್ದೇ ಇದೆ. ಅದರಿಂದ ಯಾವ ಪಕ್ಷ ಸರಿ ಎಂಬ ವಿಚಾರ ಬೇಕಾಗಿಲ್ಲ ಎಂಬುದು ಅದರ ಅಭಿಪ್ರಾಯ. ಅದರಿಂದ ಇಲ್ಲಿ ಟೀಕಾವಾಕ್ಯಕ್ಕೂ ಲಕ್ಷಣಾಪಕ್ಷವನ್ನು ಹೇಳುವ ಅಭಿಪ್ರಾಯವೆನ್ನಬಹುದು.

ವಸ್ತುತಃ ಶಕ್ತಿಪಕ್ಷವೇ ಸರಿ. 'ಜಿಜ್ಞಾಸಾ' ಶಬ್ದದಲ್ಲಿ ಇಚ್ಛಾರ್ಥಕ ಸನ್ ಪ್ರತ್ಯಯ ಸ್ವರ ಸಂಸ್ಕಾರಗಳಿಗಾಗಿ ಇದೆ ಎಂದು ತಿಳಿಯಬೇಕು. ಜಿಜ್ಞಾಸತೇ ಬುಭುತ್ಸತೇ ಎಂದು ಹೇಳುವಾಗ ಅದು ಸಾರ್ಥಕವೇ ಆಗಿದೆ.

• • • • •

## ಜ್ಞಾನೇಚ್ಛೆ ಎಂಬರ್ಥವೂ ಅಲ್ಲ
## (ಭಾಮತೀ ವಿಮರ್ಶೆ)

**तात्पर्यचन्द्रिका –**

**भामत्यां तु – न जिज्ञासा नाम विचारः । इच्छायां सन्विधानात् । नच शास्त्रप्रवृत्त्यङ्गविषयप्रयोजनसूचनेन स्वार्थपरत्वोपपत्तौ विचारे लक्षणा युक्ता । एवंच मुमुक्षानन्तरं ब्रह्मजिज्ञासा भवितुं युक्तेत्येव श्रौतोऽर्थः । विचारस्त्वार्थिकोऽर्थः । ज्ञातुमिच्छा हि सन्दिग्धे विषये निर्णयाय भवति । निर्णयश्च विचारसाध्य इति इच्छानिमित्तेन विचाराक्षेपात् । आर्थिके चास्मिन्नर्थे कर्तव्यपदाध्याहारादित्युक्तम् । तदपि न । विचारे रूढेरुक्तत्वात् । व्याकरणस्य च साधुत्वमात्रपरत्वात् । उक्तं हि –**

**''यत्रार्थस्य विसंवादः प्रत्यक्षेणोपलभ्यते ।**
**स्वरसंस्कारमात्रार्था तत्र व्याकरणस्मृतिः ।।'' इति ।**

**'भवति' इत्याद्यध्याहारस्य स्वतःसिद्धत्वेऽपि अनुवादत्वप्रसङ्गात् । ''तद् विजिज्ञासस्व'' इति श्रुत्यनुसारिणा च सूत्रेणेच्छाया अविधेयत्वेन लक्षणयाऽपि विचारस्य विधेयत्वात् । विषयाद्यभावादिच्छाभावं वदन्तं प्रति इच्छया विषयादि-सूचनोक्त्ययुक्तेश्च । किञ्च – एवं सति तावन्मात्रेण नैराकाङ्क्ष्यात्नार्थिकविचार-कर्तव्यतापरता युक्ता । शास्त्रारम्भवत् तस्य फलत्वेनैव सिद्धेः । कथं च विचारं**

विना इच्छाया अनुपपत्तिः । येन विचाराक्षेपकता । नहि कारणस्य कार्यं विनाऽनुपपत्तिः । नच इच्छा विचारसामग्री । फलेच्छायां सत्यामपि साधनाननुष्ठानदर्शनात् । तस्माद् भामत्युक्तमयुक्तम् । तदेतदाह ।। भवतीत्यादिकथनस्य वैयर्थ्यादित्यादिना ।। एतेन कौमुद्यां यस्मादधिकारिणां ब्रह्मज्ञानेच्छा सम्पन्ना, तस्माद् ब्रह्मविचारः कर्तव्य इत्यवान्तरवाक्ये श्रुत्येच्छापरत्वेऽपि, महावाक्ये लक्षणया विचारपर इत्युभयपरो जिज्ञासाशब्दः । अत एव विचारे लाक्षणिकोऽपि विषयादिसूचक इति, यदुक्तं, तदपि निरस्तम् । युगपद्वृत्तिद्वयप्रसङ्गात् । उक्तरीत्या विषयफलयोरन्यथैव सूचनसम्भवेन जिज्ञासाशब्दस्य इच्छापरत्वे मानाभावाच्च । अध्याहारसापेक्षावान्तरवाक्यभेदादिकल्पनानुपपत्तेश्च । तस्मात् जिज्ञासाशब्दो विचारपरो, नेच्छापर इति ।।

ಅನುವಾದ - ಭಾಮತಿಯಲ್ಲಿ ಹೀಗಿದೆ - 'ಜಿಜ್ಞಾಸಾ' ಶಬ್ದಕ್ಕೆ ವಿಚಾರ ಎಂದರ್ಥವಲ್ಲ. 'ಇಚ್ಛೆ' ಎಂಬರ್ಥದಲ್ಲಿ 'ಸನ್' ಪ್ರತ್ಯಯವನ್ನು ವಿಧಾನ ಮಾಡಿದ್ದರಿಂದ ಇಚ್ಛೆಯಲ್ಲಿ ಶಕ್ತಿಯನ್ನೇ ಅಂಗೀಕರಿಸಬಹುದು. ಇದರಿಂದ ಶಾಸ್ತ್ರಪ್ರವೃತ್ತಿಗೆ ಬೇಕಾಗುವ ವಿಷಯಪ್ರಯೋಜನಗಳ ಲಾಭವೂ ಆಗುತ್ತದೆ. ಹೀಗೆ ಮುಖ್ಯಾರ್ಥವಾದ ಇಚ್ಛೆಯನ್ನು ಇಟ್ಟುಕೊಳ್ಳಲು ಬರುವಾಗ ಅದನ್ನು ಬಿಟ್ಟು ಲಕ್ಷಣಾದಿಂದ ವಿಚಾರವನ್ನಿಟ್ಟುಕೊಳ್ಳುವುದು ಸೂಕ್ತವಲ್ಲ. ಆದ್ದರಿಂದ 'ಮೋಕ್ಷೇಚ್ಛೆಯು ಬಂದಾಗ ಬ್ರಹ್ಮಜ್ಞಾನದಲ್ಲಿ ಇಚ್ಛೆಯು ಸಹಜವಾಗಿ ಬರುತ್ತದೆಂದು ಸೂತ್ರದ ಅರ್ಥ. ಇಲ್ಲಿ ವಿಚಾರವು ಅರ್ಥಾತ್ ತೋರುತ್ತಿದೆ. ಏಕೆಂದರೆ ಸಂದಿಗ್ಧವಾದ ವಿಷಯದಲ್ಲಷ್ಟೇ ನಿರ್ಣಯಕ್ಕೋಸ್ಕರ ಜ್ಞಾನೇಚ್ಛೆ ಬರುತ್ತದೆ. ಆ ನಿರ್ಣಯವು ವಿಚಾರದಿಂದಷ್ಟೇ ಸಾಧ್ಯ. ಇಲ್ಲಿ ಇಚ್ಛೆಯು ನಿಮಿತ್ತವಾಗಿದೆ. ನಿಮಿತ್ತವಾದ ಇಚ್ಛೆಯಿಂದ ನೈಮಿತ್ತಿಕವಾದ ವಿಚಾರವು ಆಕ್ಷೇಪದಿಂದ ಲಭ್ಯವಾಗುತ್ತದೆ. ಹೀಗೆ ಆಕ್ಷೇಪದಿಂದ ಲಭ್ಯವಾದ ವಿಚಾರದಲ್ಲಿ 'ಕರ್ತವ್ಯ' ಎಂಬ ಪದವನ್ನು ಸೂತ್ರದಲ್ಲಿ ಅಧ್ಯಾಹಾರ ಮಾಡಬೇಕು.

ಭಾಮತಿಯ ಈ ಅಭಿಪ್ರಾಯ ಸರಿಯಲ್ಲ. ಜಿಜ್ಞಾಸಾಶಬ್ದಕ್ಕೆ ವಿಚಾರವೆಂಬ ಅರ್ಥದಲ್ಲಿ ರೂಢಿಯನ್ನು ಹೇಳುವುದೇ ಸೂಕ್ತವೆಂದು ಹಿಂದೆ ಹೇಳಿದ್ದೇವೆ. ಹಾಗಾದರೆ ಇಚ್ಛಾರ್ಥದಲ್ಲಿ ಬಂದ 'ಸನ್' ಪ್ರತ್ಯಯದ ವಿರೋಧ ಬರುತ್ತದೆ. ಎಂದರೆ ವ್ಯಾಕರಣವು ಕೇವಲ ಶಬ್ದಸಾಧುತ್ವಕ್ಕೋಸ್ಕರ ಹೊರಟಿರುತ್ತದೆ. ಇಚ್ಛಾರ್ಥವನ್ನು ಇಟ್ಟುಕೊಳ್ಳಲೇಬೇಕೆಂಬ ನಿಯಮವಿಲ್ಲ.

ತಿಳಿದವರು ಹೀಗೆ ಹೇಳುತ್ತಾರೆ. "ವ್ಯಾಕರಣದ ಪ್ರಕಾರ ಯಾವ ಶಬ್ದಕ್ಕೆ ಅರ್ಥವನ್ನು ಹೇಳಲು ಬರುವುದಿಲ್ಲವೆಂದು ಅನುಭವಸಿದ್ಧವಾಗಿರುತ್ತದೋ, ಅಂತಹ ಸ್ಥಳಗಳಲ್ಲಿ ವ್ಯಾಕರಣದ ಪ್ರವೃತ್ತಿಯು ಕೇವಲ ಸ್ವರಕ್ಕೋಸ್ಕರ ಅಥವಾ ಶಬ್ದಸಾಧುತ್ವಜ್ಞಾನಕ್ಕೋಸ್ಕರ" ಎಂದು.

"ಮೋಕ್ಷೇಚ್ಛೆಯು ಯಾವಾಗ ಬರುತ್ತದೋ, ಆವಾಗ ಬ್ರಹ್ಮಜ್ಞಾನೇಚ್ಛೆಯೂ ಬರುತ್ತದೆ" ಎಂದು ಸೂತ್ರಾರ್ಥ ಹೇಳಿದ್ದೂ ಸರಿಯಲ್ಲ. ಭವತಿ' ಎಂಬ ಶಬ್ದದ ಅಧ್ಯಾಹಾರವು ಸ್ವತಃಸಿದ್ಧವಾಗಿದೆ. ಆದರೂ ಅಧ್ಯಾಹಾರ ಮಾಡಿದರೆ ವಾಕ್ಯವು ಕೇವಲ ಅನುವಾದವಾಗುತ್ತದೆ. ವಿಧಿ ಎಂದಾಗುವುದಿಲ್ಲ. ಮತ್ತು ಶ್ರುತಿಗೆ ಅನುಗುಣವಾಗಿ ಸೂತ್ರ ಹೇಳಬೇಕು. 'ತದ್ ವಿಜಜ್ಞಾಸಸ್ವ' 'ಬ್ರಹ್ಮನ ಜಿಜ್ಞಾಸೆ ಮಾಡು' ಎಂದು ಶ್ರುತಿಯು ವಿಧಿಸುತ್ತಿದೆ. ಅದಕ್ಕನುಗುಣವಾಗಿ ಸೂತ್ರದಲ್ಲಿಯೂ ವಿಧಾನ ಮಾಡಬೇಕು. ಜಿಜ್ಞಾಸಾಪದಕ್ಕೆ 'ಇಚ್ಛೆ' ಎಂಬರ್ಥವನ್ನು ಇಟ್ಟುಕೊಂಡರೆ ವಿಧಿಯು ಕೊಡುವುದಿಲ್ಲ. ಅದಕ್ಕೋಸ್ಕರ ವಿಚಾರದಲ್ಲಿ ಲಕ್ಷಣಾವನ್ನು ಮಾಡಿ 'ವಿಚಾರ ಮಾಡು' ಎಂದು ವಿಧಿಯನ್ನೇ ಅಂಗೀಕರಿಸಬೇಕು.

ಮತ್ತು 'ವಿಷಯ ಪ್ರಯೋಜನಾದಿಗಳು ಇಲ್ಲದಿರುವುದರಿಂದ ಜ್ಞಾನೇಚ್ಛೆಯು ಬರುವುದಿಲ್ಲ' ಎಂದು ಪೂರ್ವಪಕ್ಷಿ ಹೇಳಿದ್ದಾನೆ. ಇಂತಹ ಇಚ್ಛೆಯನ್ನು ಒಪ್ಪದ ಪೂರ್ವಪಕ್ಷಿಯನ್ನು ಕುರಿತು ಜ್ಞಾನೇಚ್ಛೆ ಬರುವುದರಿಂದ ವಿಷಯಾದಿಗಳು ಇರಲೇಬೇಕೆಂದು ಹೇಳುವುದು ಕೂಡುವುದಿಲ್ಲ. (ಅನ್ಯೋನ್ಯಾಶ್ರಯ ಬರುತ್ತದೆ)

'ಮೋಕ್ಷದಲ್ಲಿ ಇಚ್ಛೆಯು ಯಾವಾಗ ಬರುತ್ತದೋ ಆವಾಗ ಬ್ರಹ್ಮಜ್ಞಾನೇಚ್ಛೆಯು ಸ್ವತಃ ಬರುತ್ತದೆಂಬುದು ಶ್ರೌತಾರ್ಥ. ವಿಚಾರವು ಆರ್ಥಿಕಾರ್ಥ' ಎಂದು ಭಾಮತಿಯಲ್ಲಿ ಹೇಳಿದ್ದೂ ಸರಿಯಲ್ಲ. ಏಕೆಂದರೆ ಶ್ರೌತಾರ್ಥವನ್ನು ಹೇಳುವುದರಿಂದಲೇ ಆಕಾಂಕ್ಷೆಯು ಶಾಂತವಾಗುತ್ತದೆ. ಶ್ರೌತಾರ್ಥವಾದ ಬ್ರಹ್ಮಜ್ಞಾನೇಚ್ಛೆಯು ಬರುತ್ತದೆಂದು ಹೇಳಿದ್ದರಿಂದಲೇ ವಿಷಯಾದಿಗಳು ಸಿದ್ಧವಾಗುತ್ತವೆ. ಪುನಃ 'ವಿಚಾರ ಮಾಡು' ಎಂದು ಆರ್ಥಿಕಾರ್ಥವನ್ನು ಒಪ್ಪುವ ಆವಶ್ಯಕತೆ ಇಲ್ಲ. ಮತ್ತು ಯಾವ ರೀತಿಯಾಗಿ ಈ ಅಧಿಕರಣದ ಫಲವಾದ ಶಾಸ್ತ್ರಾರಂಭವು ಫಲರೂಪವಾಗಿಯೇ ಸಿದ್ಧವಾಗುತ್ತದೋ ಅದರಂತೆ ವಿಚಾರ-ಕರ್ತವ್ಯತ್ವವೂ ಫಲರೂಪವಾಗಿಯೇ ಸಿದ್ಧವಾಗುತ್ತದೆ. ಸೂತ್ರದ ಆರ್ಥಿಕಾರ್ಥ ಎಂದು ಹೇಳುವುದು ಬೇಡ.

'ಇಚ್ಛೆಯು ಆಕ್ಷೇಪಕ, ವಿಚಾರವು ಆಕ್ಷಿಪ್ತ' ಎಂಬ ಭಾಮತಿಯ ಪ್ರಧಾನಕಲ್ಪನೆಯೇ ಸರಿಯಿಲ್ಲ. ವಿಚಾರವನ್ನು ಬಿಟ್ಟು ಇಚ್ಛೆಯು ಹೇಗೆ ತಾನೆ ಅನುಪಪನ್ನವಾಗುತ್ತದೆ? ಹಾಗಿದ್ದಲ್ಲಿ ವಿಚಾರಕ್ಕೆ ಇಚ್ಛೆಯು ಆಕ್ಷೇಪಕವಾಗುತ್ತಿತ್ತು. ಏಕೆಂದರೆ ದಂಡವೆಂಬ ಒಂದು ಕಾರಣವಿದ್ದ ಮಾತ್ರದಿಂದ ಘಟರೂಪ ಕಾರ್ಯವು ಸಿದ್ಧವಾಗಬೇಕಾಗಿಲ್ಲ. ಹೊರತಾಗಿ ಎಲ್ಲ ಕಾರಣಗಳೂ ಇರಬೇಕು. ವಿಚಾರಕ್ಕೆ ಜ್ಞಾನೇಚ್ಛೆ ಎಂಬ ಒಂದೇ ಕಾರಣವಿದ್ದಿದ್ದರೆ ವಿಚಾರವು ಸಿದ್ಧವಾಗಿಯೇ ಆಗುತ್ತದೆ ಎನ್ನಬಹುದಿತ್ತು. ಆದರೆ ಫಲೇಚ್ಛೆ ಇದ್ದಮಾತ್ರದಿಂದ ಯಾರೂ ಸಹ ಸಾಧನದಲ್ಲಿ ಪ್ರವೃತ್ತಿ ಮಾಡುವುದಿಲ್ಲ. ಉದಾಸೀನವಾಗಿಯೇ ಇರುತ್ತಾರೆ. ಆದ್ದರಿಂದ ಇಚ್ಛೆಯನ್ನು ವಿಚಾರಸಾಮಗ್ರಿ ಎಂದೂ ಹೇಳಲಾಗದು. ಆದ್ದರಿಂದ ಭಾಮತಿಯಲ್ಲಿ ಹೇಳಿದ್ದು ಅಯುಕ್ತ-ವಾಗಿದೆ. ಇದನ್ನು ಟೀಕೆಯಲ್ಲಿ 'ಭವತೀತ್ಯಾದಿಕಥನಸ್ಯ ವೈಯರ್ಥ್ಯಾತ್' 'ಭವತಿ' ಮುಂತಾಗಿ ಸೂತ್ರದಲ್ಲಿ ಹೇಳುವುದು ವ್ಯರ್ಥ ಎಂದು ಹೇಳಿದ್ದಾರೆ.

ಪದಾರ್ಥಕೌಮುದಿಯಲ್ಲಿ ಸೂತ್ರಾರ್ಥ ಹೀಗಿದೆ - 'ಬ್ರಹ್ಮಜ್ಞಾನಾಧಿಕಾರಿಗಳಿಗೆ ಬ್ರಹ್ಮಜ್ಞಾನೇಚ್ಛೆ ಬರುವುದರಿಂದ ಬ್ರಹ್ಮವಿಚಾರ ಮಾಡಬೇಕು' ಎಂದು. ಇಲ್ಲಿ ಜಿಜ್ಞಾಸಾಶಬ್ದವನ್ನು ಎರಡು ಬಾರಿ

ಇಟ್ಟುಕೊಳ್ಳಲಾಗಿದೆ. ಅವಾಂತರವಾಕ್ಯದಲ್ಲಿ ಜಿಜ್ಞಾಸಾಶಬ್ದಕ್ಕೆ ಶಕ್ತಿವೃತ್ತಿಯಿಂದ ಜ್ಞಾನೇಚ್ಛೆ ಎಂದರ್ಥ ಮಹಾವಾಕ್ಯದಲ್ಲಿ ಲಕ್ಷಣಾವೃತ್ತಿಯಿಂದ ವಿಚಾರ ಎಂದರ್ಥ. ಹೀಗೆ ಜಿಜ್ಞಾಸಾಶಬ್ದಕ್ಕೆ ಎರಡೂ ಅರ್ಥಗಳನ್ನು ಹೇಳಬೇಕು. ಆದ್ದರಿಂದ ಜಿಜ್ಞಾಸಾಶಬ್ದವು ಲಕ್ಷಣಾದಿಂದ ವಿಚಾರವನ್ನು ಹೇಳುತ್ತಿದ್ದರೂ ಜೊತೆಗೆ ಜ್ಞಾನೇಚ್ಛೆಯನ್ನೂ ಹೇಳುತ್ತಿರುವುದರಿಂದ ವಿಷಯಾದಿಗಳನ್ನು ಅದು ಸೂಚಿಸುತ್ತದೆ ಎಂದು.

ಇದೂ ಸಹ ತಪ್ಪು. ಹಾಗಾದಲ್ಲಿ ಒಂದೇ ಶಬ್ದಕ್ಕೆ ಶಕ್ತಿ ಮತ್ತು ಲಕ್ಷಣಾ ಎಂಬೆರಡು ವೃತ್ತಿಗಳನ್ನು ಏಕಕಾಲದಲ್ಲಿ ಒಪ್ಪಬೇಕಾದೀತು.

ಮತ್ತೊಂದು ದೋಷ - ಜಿಜ್ಞಾಸಾಶಬ್ದವು ಇಚ್ಛಾರ್ಥಕ ಎನ್ನಲು ಯಾವ ಪ್ರಮಾಣವೂ ಇಲ್ಲ. ವಿಷಯಾದಿಗಳ ಸೂಚನೆ ಮಾಡುವುದಕ್ಕೋಸ್ಕರವೂ ಬೇಕಾಗಿಲ್ಲ. ಹಿಂದೆ ಹೇಳಿದಂತೆ ವಿಷಯ ಪ್ರಯೋಜನಾದಿಗಳ ಸೂಚನೆಯು ಬೇರೆ ರೀತಿಯಿಂದಲೂ ಸಾಧ್ಯವಿರುವಾಗ ಜ್ಞಾನೇಚ್ಛಾಬೋಧಕವೆನ್ನಲು ಕಾರಣವಿಲ್ಲ. ಆದ್ದರಿಂದ 'ಗಂಗಾಯಾಂ ಮೀನಘೋಷೌ' ಎಂಬಲ್ಲಿ ಯಾವ ರೀತಿಯಾಗಿ ಬೇರೆ ಗತಿಯಿಲ್ಲದೆ ವೃತ್ತಿದ್ವಯವನ್ನು ಒಪ್ಪುತ್ತೇವೋ ಅದರಂತೆ ಇಲ್ಲಿಯೂ ವೃತ್ತಿದ್ವಯ ಒಪ್ಪುತ್ತೇವೆ ಎಂದು ಹೇಳಲಾಗದು. ಅಷ್ಟೇ ಅಲ್ಲದೇ 'ಯಸ್ಮಾತ್' ಇತ್ಯಾದಿಯಾಗಿ ಅಧ್ಯಾಹಾರ ಮಾಡಿ ಅವಾಂತರವಾಕ್ಯ ಮಹಾವಾಕ್ಯ ಎಂದು ವಿಭಾಗ ಮಾಡುವುದೂ ಸರಿಯಲ್ಲ.

ಆದ್ದರಿಂದ ಜಿಜ್ಞಾಸಾಶಬ್ದವು ವಿಚಾರಾರ್ಥಕವೇ ಹೊರತು ಜ್ಞಾನೇಚ್ಛಾಪರವಲ್ಲ.

**प्रकाशिका** – लक्षणया विचारोऽत्र किं न स्यादित्यत आह ।। **नचेति** ।। तत्सूचनाप्रकारः प्रागेवोक्तः । कल्पतरूक्तं सूत्रार्थनिष्कर्षमनुवदति ।। **एवञ्चेति** ।। विचारस्यार्थिकताप्रकारं कल्पतरूक्तमेवाह ।। **ज्ञातुमिति** ।। 'इच्छामुखेन' इति भामत्युक्तमनुवदति ।। **इच्छानिमित्तेनेति** ।। इच्छारूपनिमित्तेनेत्यर्थः ।। **रूढेरिति** ।। तथाच विचारार्थकत्वेऽपि न स्वार्थपरित्याग इति भावः । तर्हि ''धातोः कर्मणः समानकर्तृकादिच्छायां वा''इति इच्छार्थकसन्विधायकव्याकरणस्मृतिविरोध इत्यत आह ।। **व्याकरणस्येति** ।। 'घटं जिज्ञासते' 'घटं बुभुत्सते' इत्यादा-विच्छार्थकत्वेन सनः सावकाशत्वात्, अत्र चेच्छाबोधं विनैव विचारबोधेनार्थ-विसंवादस्य प्रागेव दर्शितत्वात्, । 'ब्रह्मजिज्ञासा' 'धर्मजिज्ञासा' इत्यादौ साधुत्वमात्रपरत्वं व्याकरणस्येत्यर्थः । यदपि ''एवंच'' इत्यादिना श्रौतार्थवर्णनं, तदपि नेत्याह ।। **भवतीत्यादीति** ।। यदपि ''शास्त्रप्रवृत्त्यङ्ग'' इत्यादि, तदपि नेति, प्रागुक्तं स्मारयति ।। **विषयादीति** ।। यदपि ''विचारस्त्वार्थिकोऽर्थः'' इत्यादि, तदपि नेत्याह ।। **किञ्चेति** ।। यदपि 'इच्छया विचाराक्षेपः' इति प्रागुक्तं,

तदपि नेत्याह ।। **किञ्चेति** । यदपि 'इच्छया विचाराक्षेपः' इति प्रागुक्तं, तदपि नेत्याह – **कथञ्चेति** । इच्छायाः विचारसाध्यज्ञानगोचरत्वेन तं प्रति कारणत्वेन कार्यरूपविचारं विना अनुपपत्त्या तदाक्षेपः, उत सामग्रीत्वेन । आद्य आह ।। **नहीति** ।। केवलं दण्डे सत्यपि घटानुदयादिति भावः ।। द्वितीय आह ।। **नचेच्छेति** ।। भामतीमतनिरासं टीकारूढं करोति ।। **तदेतदिति** ।। एतेन – धर्मविचारानन्तरं शिवाराधनरूपधर्मानुष्ठानविशुद्धचित्तस्य विवेकादिसम्पत्त्या ब्रह्मज्ञानेच्छा भवतीति श्रौतोऽर्थः । तदिष्यमाणं ब्रह्मज्ञानं विचारमन्तरेण न भवतीति तत्स्वरूप-प्रमाणादिविचारस्तदाक्षिप्तोऽर्थः इति शिवार्कमणिदीपिकोक्तं निरस्तं बोध्यम् । विस्तरस्तु न्यायमौक्तिकमालायां बोध्यः ।। **एतेनेति** ।। भामतीमतदूषणेनेत्यर्थः ।। **इच्छापरत्वेऽपीति** ।। 'जिज्ञासाशब्दस्य' इति शेषः । 'अधिकारिणां ब्रह्मज्ञानेच्छा भवति' इत्यवान्तरवाक्यम् । 'यस्मात्' इत्यादि महावाक्यप्रदर्शनम् । 'अत एव' मुख्यार्थस्यापि सत्त्वादेव ।। **वृत्तिद्वयेति** ।। नन्ववान्तरवाक्ये विषयादिसूचनार्थं मुख्यवृत्तिरपि जिज्ञासाशब्दो महावाक्ये आवर्तमानो लाक्षणिकोऽपि न दुष्यतीत्यनुशयेनाह ।। **उक्तेति** ।। यद्वा – अगत्या 'गङ्गायां मीनघोषौ' इत्यादाविव वृत्तिद्वयमपि सह्यमित्यत आह ।। **उक्तेति** ।। 'अस्माभिः' इति शेषः ।। **अध्याहारेति** ।। 'यस्मात्' इत्यध्याहारेत्यर्थः । एवं सूत्रावयवपदानामर्थः सविस्तरं निरूपितः । सूत्रतात्पर्यं च निरूपितम् ।

**गुरुराजीय** – ननु जिज्ञासाशब्दस्य विचारे रूढिर्लक्षणा वा न स्वीकर्तव्या । आक्षेपादेव तल्लाभ इति भामतीमतं दूषयितुमनुवदति ।। **भामत्यां त्विति** ।। जिज्ञासाशब्दस्य विचारे योगो लक्षणा रूढिर्वा । नाद्य इत्याह ।। **इच्छायामिति** ।। "धातोः समानकर्तृकादिच्छायां वा"इति सूत्रादित्यर्थः । न द्वितीय इत्याह ।। **नचेति** ।। ननु स्वार्थपरत्वे वैय्यर्थ्यमित्यत उक्तम् ।। **शास्त्रप्रवृत्त्यङ्गेति** ।। कल्पकाभावात् तृतीयोऽपि नेत्याशयः ।

ननु प्रवर्तके सूत्रेऽवश्यमध्याहर्तव्यकर्तव्यपदान्वयार्थं युक्ता विचारे लक्षणेत्यत आह ।। **एवंचेत्यादिना** ।। **इच्छानिमित्तेनेति** ।। इच्छालक्षणनिमित्तेन नैमित्तिक-विचाराक्षेप इति भावः । इच्छामुखेनेति पाठपक्षे इच्छोपदर्शनमुखेनेत्यर्थः ।

नन्वाक्षिप्तस्य विचारस्य केनान्वय इत्यत आह ॥ आर्थिके चेति ॥ ननु रूढिपक्षेऽपीच्छायां सन्निधायकव्याकरणविरोध इत्यत आह ॥ व्याकरणस्य चेति ॥ किंच विचारे लक्षणावश्यमङ्गीकर्तव्या । अन्यथा अध्याहृतकर्तव्यपदान्वयानुपपत्तेः । नच तदध्याहार एवमस्त्विति वाच्यम् । तथा सति वाक्यस्य साकाङ्क्षत्वेनापूर्णत्वापत्त्या तस्यावश्यकत्वात् । नन्वस्ति भवत्योः सर्वत्र सम्बन्धेन न सूत्रस्य साकाङ्क्षत्वमित्युक्तमिति चत् तत्राह ॥ भवतीत्याद्यध्याहारस्येति ॥ किंच जिज्ञासाशब्दस्य विचारलक्षकत्वमावश्यकम् । तद्विजिज्ञासस्वेति श्रुताविच्छाया अविधेयत्वाज्जिज्ञासाशब्दस्य विचारपरत्वस्यैव वक्तव्यत्वेन तदनुसारिसूत्रेऽपि तस्यैव विधेयतया वक्तव्यत्वात् । अन्यथा श्रुतिसूत्रयोर्भिन्नविषयत्वं स्यादिति भावेनाह ॥ तद् विजिज्ञासस्वेतीति ॥ ननु शास्त्रप्रवृत्त्यङ्गविषयप्रयोजनसूचनेनैव जिज्ञासाशब्दस्य स्वार्थभूतेच्छापरत्वोपपत्तौ किमर्थं विचारे लक्षणेत्यत आह ॥ विषयाद्यभावादिति ॥ इच्छया विचार आक्षिप्यत इत्येतद् दूषयति ॥ कथंचेति ॥ ननु इच्छाया विचारसामग्रीत्वात् तदभावे विचारानुपपत्तिरित्यत आह ॥ नचेति ॥ स्वोक्तं टीकारूढं करोति ॥ तदेतदिति ॥ ननु जिज्ञासापदस्य रूढलाक्षणिकार्थमात्रस्वीकरणमयुक्तम् । यौगिकार्थस्यापि सम्भवात् । नच यौगिकार्थस्य लाक्षणिकेनान्वय इति वाच्यम् । अवान्तरमहावाक्यविवक्षयाऽन्वयोपपत्तेरिति कौमुद्युक्तं दूषयितुमनुवदति ॥ एतेनेति ॥ श्रुत्या अवयवशक्त्येत्यर्थः ॥ अत एवेति ॥ इच्छापरत्वादेवेत्यर्थः । ननु मदुक्तरीत्या युगपद्वृत्तिद्वयविरोधो न दूषणम् । किंच विषयादिसिध्द्यन्यथानुपपत्त्या इच्छापरत्वमावश्यकमित्यत आह ॥ उक्तरीत्येति ॥ ननु जिज्ञासाशब्दस्येच्छापरत्वमवश्यं स्वीकर्तव्यम् । बाधकाभावात् । नचानन्वयः । अवान्तरवाक्यादिविवक्षयाऽन्वयोपपत्तेरित्यत आह ॥ अध्याहारेति ॥ तथाचाध्याहारस्यैव बाधकत्वान्नेयं कल्पना युक्तेति भावः ।

**ವಿವರಣೆ** - ಪಂಚಪಾದಿಕಾವಿವರಣದಲ್ಲಿ ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾವನ್ನು ಅಂಗೀಕರಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ಭಾಮತಿಯಲ್ಲಿ ಮತ್ತು ಕಲ್ಪತರುವಿನಲ್ಲಿ ಜಿಜ್ಞಾಸಾಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡಬಾರದೆಂದು ಸಮರ್ಥಿಸಲಾಗಿದೆ. ಶಕ್ತಿವೃತ್ತಿಯಿಂದ ಜ್ಞಾನೇಚ್ಛೆಯು ತಿಳಿಯುತ್ತದೆ. ಇದರಿಂದ ಅರ್ಥಾತ್ ವಿಚಾರವು ಸಿದ್ಧವಾಗುತ್ತದೆ. ಹಾಗಾಗಿ ವಿಚಾರವು ಅರ್ಥಾಪತ್ತಿಪ್ರಮಾಣದಿಂದ ಸಿದ್ಧವಾಗುತ್ತದೆ, ಹೊರತು ಅದರಲ್ಲಿ ಯಾವ ವೃತ್ತಿಯನ್ನೂ ಅಂಗೀಕರಿಸಬೇಕಾಗಿಲ್ಲವೆಂದು ಭಾಮತಿಕಾರರ ಅಭಿಪ್ರಾಯ.

(ಟಿಪ್ಪಣಿಯಲ್ಲಿರುವ ಎಲ್ಲ ವಿಷಯಗಳನ್ನು ಚಂದ್ರಿಕಾನುವಾದದ ಜೊತೆಗೆ ಸೇರಿಸಿ ಬರೆದದ್ದರಿಂದ ಇಲ್ಲಿ ಪುನಃ ಟಿಪ್ಪಣಿಯ ಅನುವಾದವನ್ನು ಮಾಡಿಲ್ಲ.)

## ಸಾರ

'ಲಕ್ಷಣಾಪಕ್ಷದಲ್ಲಿ 'ಜ್ಞಾನೇಚ್ಛೆ ಬರುತ್ತದೆ' ಎಂದು ಸೂತ್ರವು ಹೇಳುತ್ತದೆ. ಜ್ಞಾನದಲ್ಲಿ ಇಚ್ಛೆ ಬರಲು ಜ್ಞಾನಕ್ಕೆ ವಿಷಯ ಪ್ರಯೋಜನಗಳಿರುವುದು ಕಾರಣ. ಆದರಿಂದ ಅರ್ಥಾತ್ ವಿಷಯ ಪ್ರಯೋಜನಗಳಿವೆ ಎಂದಂತಾಗುವುದು' ಎನ್ನುತ್ತಾರೆ. ಇದು ಸರಿಯಲ್ಲ ಪೂರ್ವಪಕ್ಷಿಯು ಜ್ಞಾನೇಚ್ಛೆ ಬರುತ್ತದೆ ಎನ್ನುವುದನ್ನೇ ಒಪ್ಪಿಲ್ಲ ಎಂದು ಹಿಂದೆಯೆ ಹೇಳಿದೆ. 'ಜ್ಞಾನೇಚ್ಛೆ ಉಂಟಾಗುತ್ತದೆ' ಎಂದು ಹೇಳಿದಾಗ ಅರ್ಥಾತ್ ಅದರ ಫಲವಾದ ವಿಚಾರವೂ ಉಂಟಾಗುತ್ತದೆ ಎಂದಂತಾಗುವುದು ಎನ್ನುತ್ತಾರೆ. ಇದೂ ಸರಿಯಲ್ಲ. ಒಂದು ಕಾರಣವಿದ್ದ ಮಾತ್ರಕ್ಕೆ ಕಾರ್ಯವಾಗಬೇಕಿಲ್ಲ. ಎಲ್ಲ ಕಾರಣಗಳಿರಲೇಬೇಕು. ಇಚ್ಛೆ ಒಂದೇ ಕಾರಣವಾಗಿದ್ದರೆ ಕಾರ್ಯವು ನಿಯಮೇನ ಆಗಬೇಕಾದೀತು. ಆದರೆ ಫಲೇಚ್ಛೆ ಒಂದರಿಂದಲೆ ಸಾಧನದಲ್ಲಿ ಪ್ರವೃತ್ತಿ ಕಂಡಿಲ್ಲ.

'ಬ್ರಹ್ಮಜ್ಞಾನೇಚ್ಛೆ ಬರುವುದರಿಂದ ವಿಚಾರ ಮಾಡಬೇಕು ಎಂದು ಸೂತ್ರಾರ್ಥ. ಇಲ್ಲಿ ಶಕ್ತಿಯಿಂದ ಜ್ಞಾನೇಚ್ಛೆಯೂ ಲಕ್ಷಣೆಯಿಂದ ವಿಚಾರವೂ ಪ್ರತೀತವಾಗುತ್ತದೆ' ಎಂದು ಕೌಮುದಿಯಲ್ಲಿ ಹೇಳಿದೆ. ಆದರೆ ಏಕಕಾಲದಲ್ಲಿ ಶಕ್ತಿಲಕ್ಷಣಾ ಎಂಬ ಎರಡು ವೃತ್ತಿಗಳನ್ನು ಒಪ್ಪಲಾಗದು. ವಿಷಯ ಪ್ರಯೋಜನ ಸೂಚನೆ ಬೇರೆ ರೀತಿಯಿಂದ ಲಭ್ಯವಿರುವಾಗ ಶಕ್ತಿಯಿಂದ ಜ್ಞಾನೇಚ್ಛೆ ಎಂಬ ಅರ್ಥ ಆವಶ್ಯಕವೂ ಅಲ್ಲ. 'ಭವತಿ' ಎಂದು ಅಧ್ಯಾಹಾರ ಮಾಡಿ ಎರಡು ವಾಕ್ಯಗಳನ್ನು ಮಾಡುವುದೂ ಅನುಚಿತ.

● ● ● ● ●

## ಶಾಸ್ತ್ರವು ತಾತ್ವಿಕ ಪರಬ್ರಹ್ಮ ಪರವೆಂಬುದು ತಪ್ಪು.
## (ಅದ್ವೈತಮತ ನಿರಾಕರಣೆ)

### तात्पर्यचन्द्रिका –

यत्तु परैरस्य शास्त्रस्य पूर्वतन्त्रेण गतार्थत्वमाशङ्क्य, तत्र कार्यनिष्ठो वेदभागो विचारितः । इह तु वस्तुतत्वनिष्ठो विचार्यत इति अगतार्थत्वमुक्तम् । तन्न । इहातत्त्वभूतोपास्यसविशेषब्रह्मविचारस्य उपासनापादे तद्विधिविचारस्य चायोगात् । नचोपासना मन्मत इव त्वन्मतेऽपि मोक्षसाधनम्, येन फलसाधनादियुक्तब्रह्मविचारप्रतिज्ञानात् तद्विचारः सङ्गच्छेत । त्वन्मते हि उपासनाया मानसत्वेन विद्यासाम्यपि अनित्यफलत्वात्, हेयत्वाच्च, तद्वाक्यानामतत्त्वावेदकत्वात् उद्गीथाद्युपासनानां कर्माश्रितत्वाच्च, ''समुद्रं मनसा ध्यायीत'' इत्यादिवाक्यविहितसमुद्रध्यानादिवत् कर्मकाण्ड एवोपासनाया विचारो युक्तः । निर्विशेषज्ञानार्थत्वा-

**वुपासनाया इह विचारे च, यागादिनित्यकर्मणामपि तदर्थत्वात्, मानससङ्कल्परूपतयोपासनावत् विधासाम्याच्च, तद्विचारोऽपि इहैव स्यात् । तस्मात् सर्वस्यापि वेदस्य ब्रह्मपरत्वात् सर्वोऽपीहैव विचार्यः । कर्मदेवमीमांसयोस्तु वेदैकदेशावान्तरतात्पर्यविषयकर्मदेवताविचार इति ।**

ಅನುವಾದ - ಅದ್ವೈತಿಗಳು ಹೀಗೆ ಹೇಳುತ್ತಾರೆ - 'ಪೂರ್ವಮೀಮಾಂಸೆಯಲ್ಲಿಯೇ ಬ್ರಹ್ಮವಿಚಾರವು ಆಗಿಹೋಗಿದೆ. ಪುನಃ ಈ ಶಾಸ್ತ್ರದಲ್ಲಿ ಬ್ರಹ್ಮಮೀಮಾಂಸೆ ಮಾಡುವುದು ಅನಾವಶ್ಯಕ'.

ಈ ಆಕ್ಷೇಪಕ್ಕೆ ಇಷ್ಟು ಉತ್ತರ - ಪೂರ್ವಮೀಮಾಂಸೆಯಲ್ಲಿ ಕರ್ಮಪರವಾದ ವೇದಭಾಗವು ವಿಚಾರಿತವಾಗಿದೆ. ಈ ಬ್ರಹ್ಮಮೀಮಾಂಸೆಯಲ್ಲಿ ತಾತ್ತ್ವಿಕವಾದ ಪರಬ್ರಹ್ಮನನ್ನು ಹೇಳುವ ವೇದಭಾಗವನ್ನು ವಿಚಾರ ಮಾಡಲಾಗಿದೆ. ಆದ್ದರಿಂದ ವ್ಯರ್ಥವಲ್ಲ ಎಂದು.

ಇದು ತಪ್ಪು. ಹಾಗಾದಲ್ಲಿ ಪ್ರಥಮಾಧ್ಯಾಯದ ಪ್ರಥಮಪಾದದ ಅಂತರಾಧಿಕರಣ ಮೊದಲಾದವುಗಳಲ್ಲಿ ಮತ್ತು ದ್ವಿತೀಯಪಾದದಲ್ಲಿ ಉಪಾಸ್ಯನಾದ ಅತಾತ್ತ್ವಿಕನಾದ ಸವಿಶೇಷಬ್ರಹ್ಮನ ವಿಚಾರವು ಕೂಡುವುದಿಲ್ಲ. ಮತ್ತು ಉಪಾಸನಾ ಪಾದದಲ್ಲಿ ಉಪಾಸನಾವಿಧಿಯ ವಿಚಾರವೂ ಕೂಡುವುದಿಲ್ಲ. 'ತಾತ್ತ್ವಿಕವಾದ ಬ್ರಹ್ಮವಿಚಾರವೆಂದರೆ ಫಲಸಾಧನಾದಿಯುಕ್ತವಾದ ಬ್ರಹ್ಮವಿಚಾರವೇ 'ಅಥಾತೋ ಬ್ರಹ್ಮಜಿಜ್ಞಾಸಾ'' ಎಂಬ ಸೂತ್ರದಲ್ಲಿ ಪ್ರತಿಜ್ಞಾತವಾಗಿದೆ. ಆದ್ದರಿಂದ ಅನುಪಪತ್ತಿಯು ಬರುವುದಿಲ್ಲ' ಎಂದು ಹೇಳಬಾರದು. ಏಕೆಂದರೆ ನಮ್ಮ ಮತದಲ್ಲಿ ಉಪಾಸನೆಯು ಮೋಕ್ಷಸಾಧನವಾದರೂ ಅದ್ವೈತಮತದಲ್ಲಿ ಉಪಾಸನೆಯು ಮೋಕ್ಷಸಾಧನವಲ್ಲ.

ಶಂಕಾ :- ಬ್ರಹ್ಮಮೀಮಾಂಸೆಯಲ್ಲಿ ಉಪಾಸನೆಯ ಬಗ್ಗೆ ವಿಚಾರ ಮಾಡಬಹುದು. ಏಕೆಂದರೆ ಉಪಾಸನೆಯು ಮಾನಸವ್ಯಾಪಾರರೂಪವಾದ್ದರಿಂದ ಬ್ರಹ್ಮವಿದ್ಯೆಗೆ ಸದೃಶವಾಗಿದೆ.

ಸಮಾಧಾನ :- ಇದೂ ಸರಿಯಲ್ಲ. ಬ್ರಹ್ಮಮೀಮಾಂಸೆಯಿಂದ ನಿತ್ಯಫಲ ದೊರಕುತ್ತದೆ. ಇದರಲ್ಲಿ ಅನಿತ್ಯಫಲ ನೀಡುವ ಉಪಾಸನಾವಿಚಾರವು ಕೂಡುವುದಿಲ್ಲ. ಅಷ್ಟೇ ಅಲ್ಲದೇ ಉಪಾಸನೆಯು ಹೇಯವೂ ಆಗಿದೆ. ಮತ್ತು 'ನಾಮವನ್ನು ಬ್ರಹ್ಮನೆಂದು ಉಪಾಸನೆ ಮಾಡಬೇಕು' ಎಂದು ಹೇಳುವ ಉಪಾಸನಾವಾಕ್ಯಗಳು ಅತತ್ತ್ವವೇದಕಗಳಾಗಿವೆ. ಉದ್ಗೀಥಾದ್ಯುಪಾಸನೆಯಾದರೂ ಕರ್ಮಸಿದ್ಧಿಗೋಸ್ಕರವೇ ಇರುವಂತಹದ್ದು. ಆದ್ದರಿಂದ ಸಮುದ್ರವನ್ನು ಮನಸ್ಸಿನಿಂದ ಧ್ಯಾನಿಸಬೇಕು' ಇತ್ಯಾದಿ ವಾಕ್ಯದಲ್ಲಿ ವಿಹಿತವಾದ ಸಮುದ್ರಧ್ಯಾನಾದಿಗಳಂತೆ ಉಪಾಸನೆಗಳೆಲ್ಲವನ್ನೂ ಕರ್ಮಕಾಂಡದಲ್ಲಿಯೇ ವಿಚಾರ ಮಾಡಬೇಕು. ಹೊರತು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅಲ್ಲ.

ಉಪಾಸನೆಗಳೆಲ್ಲವೂ ನಿರ್ವಿಶೇಷಬ್ರಹ್ಮಜ್ಞಾನಕ್ಕೋಸ್ಕರ ಸಾಧನಗಳಾಗಿವೆ. ಆದ್ದರಿಂದ ಬ್ರಹ್ಮಮೀಮಾಂಸೆಯಲ್ಲಿ ಅವುಗಳ ವಿಚಾರವನ್ನೂ ಮಾಡಬಹುದು. ಎಂದರೆ ಯಾಗಾದಿ ನಿತ್ಯಕರ್ಮಗಳೂ ಸಹ

'ಕರ್ಮಣಾ ಜ್ಞಾನಮಾತನೋತಿ' ಎಂಬ ವಚನದಂತೆ ಬ್ರಹ್ಮಜ್ಞಾನಸಂಪಾದನೆಗೆ ಸಾಧನಗಳಾಗುತ್ತವೆ. ಆದ್ದರಿಂದ ಅವುಗಳ ವಿಚಾರವೂ ಬ್ರಹ್ಮಮೀಮಾಂಸೆಯಲ್ಲಿ ಬರಲಿ ಯಾಗವೂ ಕೂಡ 'ದೇವತೋದ್ದೇಶೇನ ದ್ರವ್ಯತ್ಯಾಗಃ' ಎಂದೆನಿಸಿದ್ದರಿಂದ ಮಾನಸಸಂಕಲ್ಪರೂಪವಾಗಿದೆ. ಉಪಾಸನೆಯಂತೆ ಇದೂ ಕೂಡ ಬ್ರಹ್ಮವಿದ್ಯೆಗೆ ಸದೃಶವಾದ್ದರಿಂದ ಬ್ರಹ್ಮಮೀಮಾಂಸೆಯಲ್ಲಿಯೇ ಯಾಗವಿಚಾರವನ್ನೂ ಮಾಡಬೇಕಾದೀತು.

ಆದ್ದರಿಂದ ಬ್ರಹ್ಮಕಾಂಡ ಕರ್ಮಕಾಂಡರೂಪವಾದ ಸಕಲವೇದವು ಬ್ರಹ್ಮನಲ್ಲಿಯೇ ಮುಖ್ಯತಾತ್ಪರ್ಯ ಹೊಂದಿದೆ. ಸಕಲ ವೇದವಿಚಾರವು ಬ್ರಹ್ಮಮೀಮಾಂಸೆಯಲ್ಲೇ ನಡೆಯಬೇಕು. ಆದರೂ ಕರ್ಮಭಾಗವು ಅವಾಂತರತಾತ್ಪರ್ಯದಿಂದ ಕರ್ಮವನ್ನು ದೇವತಾಭಾಗವು ಅವಾಂತರತಾತ್ಪರ್ಯದಿಂದ ದೇವತೆಯನ್ನು ಹೇಳುತ್ತದೆಂದು ಹೇಳಬೇಕು.

**प्रकाशः** - तत्र केचिदाहुः । ''अथातो धर्मजिज्ञासा'' इत्यनेन सकलवेदार्थविचारस्योक्तत्वाद्धर्मपदस्य वेदार्थोपलक्षकत्वाद् ब्रह्मज्ञानस्य चोदनालक्षणत्वेन ''चोदनालक्षणोऽर्थो धर्मः'' इति धर्मरूपत्वाच्च, सर्ववेदस्य तत्र विचारितत्वान्नेदमारम्भणीयमिति । अस्याः शङ्कायाः स्वमतेन परिहारं चिकीर्षुः परोक्तं निरस्यति ।। **यत्तु परैरिति** ।। **'कार्यनिष्ठः'** कर्मपरः ।। **वस्तुतत्त्वेति** ।। तात्त्विकवस्तुरूपब्रह्मपर इत्यर्थः ।। **सविशेषेति** ।। आद्ये अन्तराधिकरणादौ द्वितीयपादे च सविशेषब्रह्मणोऽतात्त्विकस्य विचारादित्यर्थः । ननु फलसाधनादियुक्तब्रह्मणो विचारस्य प्रतिज्ञातत्वात् विद्विचारो युक्त इत्याशङ्क्याह ।। **नचेति** ।। ननूपासनायाः मनोवृत्तित्वेन विद्यानिभत्वादिह विचारो युक्त इत्यत आह ।। **त्वन्मते हीति** ।। **अनित्येति** ।। तथाच नित्यफलसाधनविचारे तस्या अनिवेश्यतेति भावः ।। **अतत्त्वेति** ।। नामादौ ब्रह्मत्वादेरतात्त्विकत्वादिति भावः ।

ननूपासनावाक्यस्य तत्कर्तव्यतामात्रपरत्वेन स्वार्थपरत्वाभावान्नैवमिति चेन्न । तत्कर्तव्यताया अपि तथात्वात् । नहि तत्त्वनिष्ठवाक्यविचारे तेषां विचारो युक्त इति भावः ।। **उद्गीथेति** ।। ''ओमित्येतदक्षरमुद्गीथमुपासीत'' इत्यादीनां सामभक्तित्वादिति भावः । 'तदर्थत्वात्' ज्ञानार्थत्वात् । ''कर्मणा ज्ञानमातनोति'' इत्यादेरिति भावः । कथं तर्हि गतार्थतानिरास इत्यतः स्वयमाह ।। **तस्मादिति** ।।

**''शब्दजातस्य सर्वस्य यत्प्रमाणश्च निर्णयः ।''**

ಪರಿಪೂರ್ಣಚಂದ್ರಿಕಾ

इति स्मृतेरिति भावः । उक्तं च सुधायामेवमेव समाधानं ''स एव सर्ववेदार्थः'' इत्यादिः व्याख्यावसरे ।

गुरुराजीय – ननु पूर्वमीमांसया गतार्थत्वान्न ब्रह्ममीमांसाऽऽरब्धव्येत्यतः परोक्तगतार्थत्वपरिहारं दूषयितुमनुवदति ।। यदिति ।। गतार्थत्वमिति ।। सर्वस्यापि वेदस्य कर्मपरत्वेन कर्ममीमांसायामेव विचारितत्वेन ब्रह्ममीमांसावैयर्थ्यमिति भावः । तद्विधिविचारस्येति ।। सविशेषब्रह्मोपासनाविधिविचारस्येत्यर्थः । ननू-पासनाया मोक्षसाधनत्वात् विद्विचार इह क्रियत इत्यत आह – नचेति ।। वस्तुतत्वविषया साकं मानसत्वेन साम्यान्न तद्विचारस्यात्रासङ्गतिरित्यत आह – नचेति ।। ननूपासनाया वस्तुतत्वविषया साकं मानसत्वेन साम्यान्न तद्विचारस्यात्रासङ्गतिरित्यत आह – त्वन्मते हीति ।। विद्यासाम्येऽपीति ।। ज्ञानत्वेन रूपेण साम्येऽपीत्यर्थः । तथाच ज्ञानत्वसाम्यादिह विचारश्चेत् तर्हि-नित्यफलत्वहेयत्वातत्वावेदकवेद्यत्वादिरूपेण कर्मसाम्यात् तत्रैव विचारः कर्तव्य इति भावः । उपासनाया मानसत्वेन विद्यासाम्यात् । कर्मणां च विद्यासाम्याभावान्न तद्विचारस्यात्र सङ्गतिरित्यत आह – मानससङ्कल्पतयेति ।। यागस्य देवतामुद्दिश्य द्रव्यत्यागरूपत्वात् त्यागस्य मानससङ्कल्पविशेषरूपत्वेन कर्मणामपि मानसत्वेन विद्यासाम्यात् तेषामप्यत्र विचार्यत्वापत्तिरिति भावः । स्वमते गतार्थत्वं परिहरति – तस्मादिति ।। तथाच पूर्वमीमांसादौ सर्ववेदविचाराभावान्न गतार्थत्वमिति भावः । सर्वस्याप्यत्र विचार्यत्वे कर्ममीमांसादेर्वैयर्थ्यमित्यत आह – कर्मेति ।। तथाच तयोर्महातात्पर्यविषयब्रह्मविचाराकरणान्नानयोर्गतार्थत्वमिति भावः ।

ವಿವರಣೆ - ಇಲ್ಲಿಯ ತನಕ ಸೂತ್ರದಲ್ಲಿರುವ ಓಂ, ಅಥ, ಅತಃ, ಬ್ರಹ್ಮಜಿಜ್ಞಾಸಾ, ಈ ಎಲ್ಲಾ ಪದಗಳ ಅರ್ಥವನ್ನು ವಿಸ್ತಾರವಾಗಿ ನಿರೂಪಿಸಿದ್ದಾಯಿತು. ಅಷ್ಟೇ ಅಲ್ಲದೇ ಸೂತ್ರದ ತಾತ್ಪರ್ಯವನ್ನೂ ಹೇಳಿದ್ದಾಯಿತು. ಈ ವಿಷಯದಲ್ಲಿ ಕೆಲವರು ಹೀಗೆ ಹೇಳುತ್ತಾರೆ - 'ಅಥಾತೋ ಧರ್ಮಜಿಜ್ಞಾಸಾ' ಎಂಬ ಪೂರ್ವಮೀಮಾಂಸೆಯ ಪ್ರಥಮಸೂತ್ರದಲ್ಲಿ ಸಕಲ ವೇದಾರ್ಥವಿಚಾರ ಮಾಡಬೇಕೆಂದು ಹೇಳಲಾಗಿದೆ.

'ಧರ್ಮ' ಪದ ಇರುವುದರಿಂದ ಧರ್ಮವಿಚಾರವೆಂದಷ್ಟೇ ತಿಳಿಯುತ್ತದೆ. ಸಕಲವೇದಾರ್ಥವಿಚಾರ-ವೆಂದು ಹೇಗೆ ಹೇಳುತ್ತೀರಿ? ಎಂದರೆ,

ಸೂತ್ರದಲ್ಲಿರುವ 'ಧರ್ಮ' ಪದವು ಸಕಲವೇದಾರ್ಥವನ್ನು ಉಪಲಕ್ಷಣಯಾ ಹೇಳುತ್ತಿದೆ. ಆದ್ದರಿಂದ ಪೂರ್ವಮೀಮಾಂಸೆಯ ಹನ್ನೆರಡು ಅಧ್ಯಾಯಗಳಲ್ಲಿ ಸಕಲವೇದಾರ್ಥವಿಚಾರವನ್ನೂ ಮಾಡಲಾಗಿದೆ.

ಹೀಗೆ ಪೂರ್ವಮೀಮಾಂಸೆಯಲ್ಲೇ ಸಕಲವೇದಾರ್ಥವಿಚಾರ ಮಾಡಿದ ಮೇಲೆ ಪುನಃ ವೇದವ್ಯಾಸರ ಈ ಬ್ರಹ್ಮಮೀಮಾಂಸಾಶಾಸ್ತ್ರ ಏಕೆ ಬೇಕು?

ಮತ್ತು ಬ್ರಹ್ಮಜ್ಞಾನವೂ ಧರ್ಮವೇ ಆಗಿದೆ. ಏಕೆಂದರೆ ಎರಡನೆಯ ಸೂತ್ರ 'ಚೋದನಾ-ಲಕ್ಷಣಾऽರ್ಥೋ ಧರ್ಮಃ' ಎಂದು ಧರ್ಮದ ಲಕ್ಷಣವನ್ನು ಹೇಳುತ್ತಿದೆ. ವೇದಜ್ಞಾಪ್ಯವೂ ಪುರುಷಾರ್ಥ-ರೂಪವೂ ಆಗಿರುವುದೇ ಧರ್ಮವೆಂದು ಧರ್ಮದ ಸಾಮಾನ್ಯಲಕ್ಷಣ. ಪುರುಷಾರ್ಥರೂಪವಾದದ್ದನ್ನಷ್ಟೇ ಲಕ್ಷಣವೆಂದರೆ ಅಗಮ್ಯಾಗಮನಗಳಲ್ಲಿ ಅತಿವ್ಯಾಪ್ತಿ. ವೇದಜ್ಞಾಪ್ಯವೆಂದಷ್ಟೇ ಹೇಳಿದರೆ ಶ್ಯೇನಯಾಗಾದಿ-ಗಳಲ್ಲಿ ಅತಿವ್ಯಾಪ್ತಿ. ಅದಕ್ಕಾಗಿ ಎರಡನ್ನೂ ಹೇಳಬೇಕು. ಪ್ರಕೃತ ವೇದವಿಹಿತವಾಗಿರುವ ಪುರುಷಾರ್ಥರೂಪವೂ ಆಗಿರುವ ಬ್ರಹ್ಮಜ್ಞಾನವು ಧರ್ಮವೇ ಆಗಿದೆ. ಹೀಗೆ ಪೂರ್ವಮೀಮಾಂಸೆಯಲ್ಲಿ ಬ್ರಹ್ಮವಿಚಾರವು ಆಗಿ ಹೋಗಿದೆ. ಪುನಃ ಈ ಬ್ರಹ್ಮಮೀಮಾಂಸಾಶಾಸ್ತ್ರವು ಬೇಕಾಗಿಲ್ಲ.

ಈ ಪ್ರಶ್ನೆಗೆ ನಾವೂ ಉತ್ತರಿಸಬೇಕು. ಅದ್ವೈತಿಗಳೂ ಉತ್ತರಿಸಬೇಕು. ನಮ್ಮ ಉತ್ತರಕ್ಕಿಂತ ಮೊದಲು ಅದ್ವೈತಿಗಳ ಉತ್ತರವನ್ನು 'ಯತ್ತು' ಇತ್ಯಾದಿಯಾಗಿ ವಿಮರ್ಶಿಸುತ್ತಿದ್ದಾರೆ.

ಅದ್ವೈತಿಗಳ ಉತ್ತರ - 'ಪೂರ್ವಮೀಮಾಂಸೆಯಲ್ಲಿ ಕರ್ಮಪರವಾದ ವೇದವಿಚಾರ ಬ್ರಹ್ಮಮೀಮಾಂಸೆಯಲ್ಲಿ ವಸ್ತುತತ್ವನಿಷ್ಠವಾದ ವಿಚಾರ. ಆದ್ದರಿಂದ ವೈಯ್ಯರ್ಥ್ಯವಿಲ್ಲ' ಎಂದು.

ಇವರ ಉತ್ತರ ಸರಿಯಲ್ಲ. ಬ್ರಹ್ಮಮೀಮಾಂಸೆಯಲ್ಲಿ ಬ್ರಹ್ಮವಿಚಾರ ಎಂದು ಹೇಳದೆ ವಸ್ತುತತ್ವನಿಷ್ಠವಿಚಾರವೆಂದು ಹೇಳಿದ್ದೇ ಅವರ ವಾದಕ್ಕೆ ಮಾರಕವಾಗಿದೆ. ಏಕೆಂದರೆ ಸವಿಶೇಷ ಬ್ರಹ್ಮನು ತಾತ್ವಿಕನಲ್ಲ. ಆದರೂ ಅವನ ವಿಚಾರವನ್ನು ಈ ಶಾಸ್ತ್ರದಲ್ಲಿ ನಡೆಸಿದ್ದೀರಿ.

ಅದ್ವೈತಿಗಳು ಪ್ರಥಮಾಧ್ಯಾಯವನ್ನು ಸಮನ್ವಯಾಧ್ಯಾಯವೆಂದೇ ಹೇಳುತ್ತಾರೆ. ಆದರೆ ಮೊದಲನೆಯ ಪಾದದಲ್ಲಿ ಸ್ಪಷ್ಟಲಿಂಗ ಸಮನ್ವಯ ಎಂದು ಎರಡು ಮತ್ತು ಮೂರನೆಯ ಪಾದಗಳಲ್ಲಿ ಅಸ್ಪಷ್ಟಬ್ರಹ್ಮಲಿಂಗಸಮನ್ವಯವೆಂದು ಹೇಳುತ್ತಾರೆ. ಹಾಗಾದರೆ ಎರಡು ಮತ್ತು ಮೂರನೆಯ ಪಾದಗಳಲ್ಲಿ ಭೇದವು ಹೇಗೆ? ಎಂಬ ಪ್ರಶ್ನೆಗೆ ಅದ್ವೈತಿಗಳ ಉತ್ತರವಿಷ್ಟು - ಎರಡನೆಯ ಪಾದದಲ್ಲಿ ಸಗುಣಬ್ರಹ್ಮನನ್ನು ಮೂರನೆಯ ಪಾದದಲ್ಲಿ ನಿರ್ಗುಣಬ್ರಹ್ಮನನ್ನು ವಿಚಾರ ಮಾಡುವುದರಿಂದ ಪಾದಭೇದವು ಕೂಡುತ್ತದೆ ಎಂದು. ಮೊದಲನೆಯ ಪಾದದಲ್ಲಿ ಸಗುಣನಿರ್ಗುಣ ಇಬ್ಬರನ್ನೂ ವಿಚಾರ ಮಾಡಲಾಗಿದೆ. ಆದ್ದರಿಂದ ತಾತ್ವಿಕನಲ್ಲದ ಸಗುಣಬ್ರಹ್ಮವಿಚಾರವನ್ನು ಅನೇಕ ಕಡೆ ಮಾಡಿದ್ದು ಹೇಗೆ ತಾನೆ ಕೂಡುತ್ತದೆ? ಮತ್ತು ಉಪಾಸನಾಪಾದದಲ್ಲಿ ಉಪಾಸನಾವಿಧಿವಿಚಾರವನ್ನು ಅದ್ವೈತಿಗಳೂ ಮಾಡಿದ್ದಾರೆ. ನಿರ್ಗುಣಬ್ರಹ್ಮನ ಉಪಾಸನಾ ಇಲ್ಲದ ಕಾರಣ ಇದೂ ಸಹ ಸಗುಣಬ್ರಹ್ಮವಿಷಯಕವೇ ಆಗಿದೆ.

ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವೈಯರ್ಥ್ಯದೋಷವನ್ನು ಪರಿಹರಿಸಲು ಅದ್ವೈತಿಗಳಿಗೆ ಆಗುವುದಿಲ್ಲ. ಇದಕ್ಕೆ ಅದ್ವೈತಿಗಳು ಉತ್ತರಿಸಬಹುದು - 'ಉಪಾಸನಾ ವಿಚಾರವು ತಪ್ಪಲ್ಲ. ಉಪಾಸನೆಯು ಜ್ಞಾನವಾಗದಿದ್ದರೂ ಜ್ಞಾನಕ್ಕೆ ಸದೃಶವಾಗಿದೆ. ಆದ್ದರಿಂದ ಜ್ಞಾನದಂತೆ ಇದೂ ಸಹ ಮೋಕ್ಷಸಾಧನವಾಗುತ್ತದೆ'

ಎಂದು. ಈ ಉತ್ತರವನ್ನು ಅದ್ವೈತಿಗಳಿಗೆ ಹೇಳಲಾಗದು. ಏಕೆಂದರೆ 'ಯಾ ಉಪಾಸನಾ ಸಾ ಅವಿದ್ಯ-ಮಾನವಿಷಯಕಾ' ಎಂದು ಅದ್ವೈತಿಗಳು ಹೇಳುತ್ತಾರೆ. ಇಲ್ಲದಿರುವುದನ್ನೇ ಉಪಾಸನೆ ಮಾಡಬೇಕಾದ್ದರಿಂದ ಅತತ್ತ್ವಾವೇದಕತ್ವವು ತಪ್ಪಿದ್ದಲ್ಲ.

(ಉಪಾಸನೆಯನ್ನು ನಾವು ಜ್ಞಾನರೂಪವೆನ್ನುತ್ತೇವೆ. ಮಾನಸೋಪಾಸನಾಮಯವಾದ ವಸ್ತುವನ್ನು ಮನಸ್ಸಿನಿಂದ ನೋಡುವುದೇ ಉಪಾಸನೆ. ಆದ್ದರಿಂದ ಅಪರೋಕ್ಷಜ್ಞಾನರೂಪವೇ ಆಗಿರುತ್ತದೆ. ಆದರೆ ಅದ್ವೈತಿಗಳು ಜ್ಞಾನರೂಪವೆಂದು ಹೇಳುವುದಿಲ್ಲ.)

ಮತ್ತು 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಇತ್ಯಾದಿಯಾಗಿ ಉದ್ಗೀಥಾದ್ಯುಪಾಸನೆಗಳನ್ನು ಹೇಳಲಾಗಿದೆ. ಈ ಉದ್ಗೀಥೋಪಾಸನೆಯು ಕೇವಲ ಕರ್ಮಸಿದ್ಧಿಗೋಸ್ಕರ ಕೆಲವು ಯಜ್ಞಗಳಲ್ಲಿ ಉಪಾಸನೆಯು ಅಂಗವಾಗಿರುತ್ತೇ, ಸಮುದ್ರಧ್ಯಾನವು ಹೇಗೆ ಯಜ್ಞಾಂಗವೋ ಶ್ರಾದ್ಧಕಾಲದಲ್ಲಿ ಮಾಡುವ ಗಯಾಧ್ಯಾನವು ಹೇಗೆ ಕರ್ಮಾಂಗವೋ ಅದರಂತೆ.

ಮತ್ತು ಛಾಂದೋಗ್ಯದಲ್ಲಿ 'ನಾಮ ಬ್ರಹ್ಮೇತ್ಯುಪಾಸೀತ' 'ವಾಚಂ ಬ್ರಹ್ಮೇತ್ಯುಪಾಸೀತ' ಇತ್ಯಾದಿಯಾಗಿ ಇದೆ. ಇಲ್ಲಿ ನಾಮಕ್ಕಾಗಲೀ 'ವಾಕ್'ಗೆ ಆಗಲಿ ಬ್ರಹ್ಮತ್ವವು ಇಲ್ಲ. ಆದರೂ ಸಹ ನಾಮ ಮತ್ತು ವಾಕ್‌ಗಳನ್ನೇ ಬ್ರಹ್ಮನೆಂದು ಉಪಾಸಿಸಬೇಕೆಂದು ಅದ್ವೈತಿಗಳು ಬ್ರಹ್ಮದೃಷ್ಟ್ಯಧಿಕರಣದಲ್ಲಿ ವ್ಯಾಖ್ಯಾನಿಸಿದ್ದಾರೆ. ನಾಮಾದಿಗಳಿಗೆ ಬ್ರಹ್ಮತ್ವವಿಲ್ಲದ ಕಾರಣ ಉಪಾಸನಾವಾಕ್ಯವು ಅತತ್ತ್ವಾವೇದಕವಾಯಿತು.

ಶಂಕೆ :- ಉಪಾಸನಾವಾಕ್ಯವು ಕೇವಲ ಉಪಾಸನಾಕರ್ತವ್ಯತ್ವವನ್ನಷ್ಟೇ ಹೇಳುತ್ತದೆ. ಹೊರತು ಸ್ವಾರ್ಥವನ್ನು ಹೇಳುವುದಿಲ್ಲ. ಆ ವಾಕ್ಯಕ್ಕೆ ನಾಮಬ್ರಹ್ಮರ ಅಭೇದದಲ್ಲಿ ತಾತ್ಪರ್ಯವಿಲ್ಲ. ಉಪಾಸನೆ-ಯಲ್ಲಷ್ಟೇ ತಾತ್ಪರ್ಯ.

ಸಮಾಧಾನ :- ಏನೇ ಆದರೂ ಅತತ್ತ್ವಾವೇದಕತ್ವವೂ ತಪ್ಪಿದ್ದಲ್ಲ. ಏಕೆಂದರೆ ಬ್ರಹ್ಮನನ್ನು ಬಿಟ್ಟು ಎಲ್ಲವೂ ಮಿಥ್ಯಾಭೂತಗಳಾದ್ದರಿಂದ ಏನನ್ನು ಪ್ರತಿಪಾದಿಸಿದರೂ ಉಪಾಸನಾ ವಾಕ್ಯಗಳಿಗೆ ಅತತ್ತ್ವಾ-ವೇದಕತ್ವವು ಬಂದೇ ಬರುತ್ತದೆ. ತತ್ವನಿಷ್ಠವಾದ ವಾಕ್ಯಗಳನ್ನು ವಿಚಾರ ಮಾಡುವ ಸಂದರ್ಭದಲ್ಲಿ ಅವುಗಳ ವಿಚಾರವು ಯುಕ್ತವಲ್ಲ.

ಶಂಕೆ - ಉಪಾಸನೆಯು ನಿರ್ವಿಶೇಷ ಬ್ರಹ್ಮಜ್ಞಾನಸಂಪಾದನೆಗೆ ಸಾಧನವಾದ್ದರಿಂದ ಬ್ರಹ್ಮ-ಮೀಮಾಂಸೆಯಲ್ಲಿ ಅವುಗಳ ವಿಚಾರವು ಯುಕ್ತವೇ ಆಗಿದೆ. ಏಕೆಂದರೆ

'ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ ಕರ್ತುಮನೀಶ್ವರಾಃ।
ಯೇ ಮಂದಾಸ್ತೇನುಕಂಪ್ಯಂತೇ ಸವಿಶೇಷನಿರೂಪಣೈಃ॥

ಮಂದರಿಗೋಸ್ಕರ ಸವಿಶೇಷೋಪಾಸನೆಯು ಸಾರ್ಥಕವಾಗಿದೆ.

ಸಮಾಧಾನ :- ಹಾಗಾದರೆ ಕರ್ಮಾದಿಸಕಲವಿಚಾರವೂ ಇಲ್ಲೇ ನಡೆಯಲಿ. 'ಕರ್ಮಣಾ ಜ್ಞಾನಮಾತನೋತಿ' ಎಂದು ಕರ್ಮವೂ ಜ್ಞಾನಸಾಧನವಾಗಿದೆ.

**ಶಂಕೆ :-** ಕರ್ಮಕ್ಕೂ ಉಪಾಸನೆಗೂ ವ್ಯತ್ಯಾಸವಿದೆ. ಉಪಾಸನೆಗೆ ಜ್ಞಾನಸಾಮ್ಯವಿದೆ. ಆದ್ದರಿಂದ ಉಪಾಸನಾವಿಚಾರವು ಇಲ್ಲಿ ಸಮಂಜಸವಾಗುತ್ತದೆ. ಆದರೆ ಕರ್ಮವು ಶರೀರಪರಿಸ್ಪಂದರೂಪವಾದ್ದರಿಂದ ಜ್ಞಾನಕ್ಕೆ ವಿಸದೃಶವಾಗಿದೆ.

**ಸಮಾಧಾನ :-** ಉಪಾಸನೆಗೆ ಜ್ಞಾನಸಾಮ್ಯವಿದೆಯೆನ್ನುವುದಾದರೆ ಕರ್ಮಕ್ಕೂ ಜ್ಞಾನಸಾಮ್ಯವಿದೆ. ಯಾಗ ಎಂದರೆ 'ದೇವತೋದ್ದೇಶೇನ ದ್ರವ್ಯತ್ಯಾಗಃ' ಎಂದು. ಇದೂ ಒಂದು ಮನೋವೃತ್ತಿಪ್ರಭೇದವಾದ್ದರಿಂದ ಕರ್ಮವಿಚಾರವೆಲ್ಲವೂ ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲೇ ನಡೆಯಲಿ.

ನಮ್ಮ ಸಮಾಧಾನ ಸ್ವರಸವಾಗಿದೆ - ಸಕಲವೇದಭಾಗಗಳಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸಕಲವೇದಾರ್ಥವಿಚಾರವನ್ನು ಮಾಡಬೇಕು. ಹಾಗಾದರೆ ಕರ್ಮಕಾಂಡ ಬ್ರಹ್ಮಕಾಂಡ ಎಂಬ ಪ್ರಭೇದವೇಕೆ? ಎಂದರೆ ವೇದಗಳಲ್ಲಿ ಕೆಲವು ಭಾಗಗಳಿಗೆ ಅವಾಂತರತಾತ್ಪರ್ಯ ಕರ್ಮದಲ್ಲಿ ಮತ್ತೆ ಕೆಲವು ಭಾಗಗಳ ಅವಾಂತರತಾತ್ಪರ್ಯ ಬ್ರಹ್ಮನಲ್ಲಿ ಇರುವುದರಿಂದ ಆ ಪ್ರಭೇದವು ಯುಕ್ತವಾಗಿದೆ. ಆದರೆ ಮುಖ್ಯತಾತ್ಪರ್ಯ ವಿಷ್ಣುವಿನಲ್ಲೇ ತಿಳಿಯಬೇಕು. ಇದನ್ನೇ 'ಸರ್ವೇವೇದಾಃ ಯತ್ಪದಮಾಮನಂತಿ' 'ವೇದಾಕ್ಷರಾಣಿ ಯಾನೀಹ ಪಠಿತಾನಿ ದ್ವಿಜಾತಿಭಿಃ ತಾವಂತಿ ಹರಿನಾಮಾನಿ' ಇತ್ಯಾದಿ ಪ್ರಮಾಣಗಳು ತಿಳಿಸುತ್ತಿವೆ, ಮತ್ತು 'ಶಬ್ದಜಾತಸ್ಯ ಸರ್ವಸ್ಯ ಯತ್ ಪ್ರಮಾಣಶ್ಚ ನಿರ್ಣಯಃ' ಎಂಬ ಸ್ಮೃತಿವಚನವೂ ಇದನ್ನೇ ಹೇಳುತ್ತಿದೆ. ನ್ಯಾಯಸುಧೆಯಲ್ಲಿಯೂ 'ಸ ಏವ ಸರ್ವವೇದಾರ್ಥಃ' ಎಂಬ ಅನುವ್ಯಾಖ್ಯಾನವನ್ನು ವಿವರಿಸುತ್ತಾ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ.




ಬ್ರಹ್ಮಸೂತ್ರದಲ್ಲಿ ವಿಚಾರಾಂಶ

ವೇದವಿಹಿತವೆಲ್ಲವೂ ಧರ್ಮ. ಬ್ರಹ್ಮಜ್ಞಾನವೂ ವೇದವಿಹಿತವೆಂದ ಮೇಲೆ ಧರ್ಮವಿಚಾರದಲ್ಲಿಯೆ ಬ್ರಹ್ಮವಿಚಾರ ಆಗಿಹೋಗಿದೆ. ಹೊಸ ವಿಚಾರಾಂಶ ಇಲ್ಲಿ ಏನಿದೆ? ಅದ್ವೈತಿಗಳು ಹೇಳುತ್ತಾರೆ - ಧರ್ಮವಿಚಾರದಲ್ಲಿ ಕರ್ಮಪರ ವೇದಭಾಗವಿಚಾರ. ಇಲ್ಲಿ ವಾಸ್ತವ ಬ್ರಹ್ಮತತ್ತ್ವವಿಚಾರವು ವಿಶೇಷ ಎಂದು. ಆದರೆ ಅವಾಸ್ತವವಾದ ಸಗುಣ ಬ್ರಹ್ಮನನ್ನೇ ಇಲ್ಲಿ ಎಲ್ಲೆಡೆ ವಿಚಾರಿಸಲಾಗಿದೆ. ಉಪಾಸನಾಪಾದದಲ್ಲಿ ಮೋಕ್ಷಸಾಧನವಾಗದ ಉಪಾಸನಾ ವಿಚಾರವಿದೆ. ನಾಮದಲ್ಲಿ ಬ್ರಹ್ಮತ್ವವನ್ನು ಆರೋಪಿಸುವಂಥ ಅತಾತ್ವಿಕವಾದ ಉಪಾಸನೆಯನ್ನೂ ಅತಾತ್ವಿಕವಾದ ಅದರ ಕರ್ತವ್ಯತೆಯನ್ನೂ ಹೇಳುತ್ತದೆ. ಉದ್ಗೀಥೋಪಾಸನೆಯಂಥ ಉಪಾಸನೆಗಳೂ ಮಾನಸಕರ್ಮಗಳೇ ಆಗಿವೆ. ಉದ್ಗೀಥವೂ ಸಾಮಗಾನ ರೂಪವಾದ ಒಂದು ಕರ್ಮವೆ. ಇವೆಲ್ಲವೂ ಕರ್ಮವಿಚಾರದಲ್ಲಿಯೆ ಬರಬೇಕು. ಇಲ್ಲಿ ಅಲ್ಲ. ಅವೂ ಕೂಡ ನಿರ್ಗುಣೋಪಾಯಸನೆಗೆ ಸಾಧನಗಳೆನ್ನುವುದಾದರೆ ಯಾಗಾದಿ ಕರ್ಮಗಳೂ ಜ್ಞಾನ ಸಾಧನವಾಗುವುದರಿಂದ ಇಲ್ಲಿಯೆ ಬರಬೇಕಾದೀತು. ಮತ್ತು 'ಯಾಗ' ಎಂದರೆ ಈ ಆಹುತಿ ಈ ದೇವತೆಗೆ ಎಂಬ ಮಾನಸ ಸಂಕಲ್ಪವಾಗಿದ್ದು ಉಪಾಸನೆಯಂತೆಯೆ ಬ್ರಹ್ಮಜ್ಞಾನವೆಂಬ ಮಾನಸ ವ್ಯಾಪಾರ ವಿಚಾರದಲ್ಲಿ ಬರಲು ಯೋಗ್ಯವಾಗಿದೆ.

*ಪರಿಪೂರ್ಣಚಂದ್ರಿಕಾ*

ನಾವು ಹೇಳುವ ಸಮಾಧಾನ ಹೀಗಿದೆ - ಎಲ್ಲ ವೇದಗಳ ವಿಚಾರವೂ ಬ್ರಹ್ಮಸೂತ್ರದಲ್ಲಿ ಬರಬೇಕು. ಕೇವಲ ಜ್ಞಾನಕಾಂಡ ವಿಚಾರವಲ್ಲ, ಆದರೆ ಮುಖ್ಯತಾತ್ಪರ್ಯವಾದ ಭಗವಂತನ ವಿಚಾರ ಇಲ್ಲಿ ಹೊಸತು. ಅವಾಂತರತಾತ್ಪರ್ಯಗೋಚರವಾದ ಕರ್ಮದೇವತಾ ವಿಚಾರಗಳು ಮಾತ್ರ ಕರ್ಮಮೀಮಾಂಸಾ ದೈವೀಮೀಮಾಂಸಾಗಳಲ್ಲಿ ಆಗಿರುತ್ತವೆ ಎಂದು.



● ● ● ● ●

## ಬ್ರಹ್ಮಾಭೇದಜ್ಞಾನಕ್ಕಾಗಿ ವಿಚಾರ ಬೇಕಾಗಿಲ್ಲ

**तात्पर्यचन्द्रिका –**

**यदपि परैः – ब्रह्मणो जिज्ञास्यत्वार्थमेव प्रत्यगर्थेऽहमस्मीति प्रत्यक्त्वरूपेण सामान्येन प्रतिपत्तिः । चार्वाकादीनामहमर्थे देहेन्द्रियमनःशून्यब्रह्मत्वादिविप्रतिपत्तेः विशेषविप्रतिपत्तिश्चेत्युक्तम् । तन्न्यधिकरणम् । प्रत्यगर्थ एव ब्रह्मेति चेत्, अस्तु तावत् ।**

**तथाऽपि न तावद् बिम्बं ब्रह्म जिज्ञासाधर्मि । प्रतिबिम्बे तु सामान्यप्रतिपत्त्यादीति युक्तम् । प्रतिबिम्बमात्रे विप्रतिपत्त्या बिम्बे जिज्ञासाऽदर्शनेन ब्रह्मोद्दिश्य प्रत्यगर्थाभेदादिविधानाय ब्रह्मण्येव तयोर्वक्तव्यत्वात् । नापि देहत्वादिना विप्रतिपन्नः प्रतिबिम्बः प्रत्यगर्थ एव जिज्ञासाधर्मी, प्रतीचो ब्रह्मत्वेन जिज्ञासा च ब्रह्मजिज्ञासेति युक्तम् । लोके निश्चितेन धर्मिणेवानिश्चितेन प्रकारेण विशिष्य विचारपदाप्रयोगेण, सूत्रे अश्रुतप्रत्यक्पदकल्पनापातात् । 'धर्मजिज्ञासा' इत्यादाविव श्रुतस्य ब्रह्मपदस्य कस्य कथं विचार इति प्रथमाकाङ्क्षितप्रधानधर्मिपरत्वसम्भवे, तत्त्यागेन तद्विपरीतप्रकारपरत्वायोगेन श्रुतहानापाताच्च । विरुद्धांशत्यागेन मुखमात्रस्येव चिन्मात्रस्यैवाभेदस्वीकारेण विशिष्टयोर्बिम्बप्रतिबिम्बयोरभेदाभावेन ब्रह्माभेदविधानाय तस्योद्देश्यत्वासम्भवाच्च । किञ्च – धर्मिण्यतदारोपनिवृत्त्यर्थत्वात् लक्षणस्य उत्तरसूत्रे प्रत्यगर्थ एव ब्रह्मत्वेन लक्षणीयः स्यात् । नहि वस्तुतः पुरुषे इदंत्वादिना ज्ञायमाने स्थाणुत्वाद्यारोपः 'करचरणादिमान् पुरुषः' इति पुरुषलक्षणोक्त्या निवर्तते । किन्तु 'अयं पुरुषः' इत्याद्युक्त्या । नच जिज्ञासुना प्रतीचो ब्रह्मत्वं निश्चितम् । येन ब्रह्मणि लक्षिते प्रतीचिलक्षणविरोध्याकारो मिथ्येति**

**ज्ञायेत । नापि लक्षणं प्रतीचोऽसाधारणधर्मतया तेन निश्चितम् । येन ब्रह्मणि तत्कथनमुखेन ब्रह्माभेदो ज्ञाप्येत । त्वत्पक्षेऽपि "शारीरश्चोभयेऽपि हि भेदेनैनमधीयते", "प्राणभृच्च", "अधिकं तु भेदनिर्देशात्" इत्यादौ जन्मादि-सूत्रोक्तलक्षणस्य जीवे निषेधात् ।**

ಅನುವಾದ - ಬ್ರಹ್ಮವಿಚಾರಕ್ಕೆ ಏನು ಕಾರಣ? ಎಂಬ ಪ್ರಶ್ನೆಗೆ ಅದ್ವೈತಿಗಳು ಹೀಗೆ ಹೇಳುತ್ತಾರೆ - ಪ್ರತ್ಯಗರ್ಥ ಎನಿಸಿದ ಜೀವನು 'ಅಹಮಸ್ಮಿ' ಎಂದು ದೇಹದೊಳಗೆ ಮಾತ್ರ ಇರುವವನಾಗಿ ಸಾಮಾನ್ಯತಃ ಸಿದ್ಧನಾಗಿದ್ದಾನೆ. ಜೀವನ ಈ ಸಾಮಾನ್ಯಜ್ಞಾನವೇ ಬ್ರಹ್ಮನ ವಿಶೇಷ ವಿಚಾರಕ್ಕೆ ಕಾರಣವಾಗಿದೆ. ಮತ್ತು ಅಹಮರ್ಥನಾದ ಜೀವನನ್ನು ಚಾರ್ವಾಕರು ದೇಹವೆನ್ನುತ್ತಾರೆ. ಪುನಃ ಕೆಲವರು ಶೂನ್ಯವೆನ್ನುತ್ತಾರೆ. ಇನ್ನು ಕೆಲವರು ಮನಸ್ಸೆನ್ನುತ್ತಾರೆ. ಬೇರೆ ಕೆಲವರು ಇಂದ್ರಿಯವೆನ್ನುತ್ತಾರೆ. ಬೇರೆಯವರು ಬ್ರಹ್ಮನೆನ್ನುತ್ತಾರೆ. ಹೀಗೆ ವಿವಾದಗಳಿರುವುದರಿಂದ ಜೀವನ ಬಗ್ಗೆ ವಿಶೇಷಜ್ಞಾನವನ್ನು ಪಡೆಯಬೇಕಾಗಿದೆ. ಅದಕ್ಕೋಸ್ಕರ ಬ್ರಹ್ಮವಿಚಾರವನ್ನು ಮಾಡಬೇಕಾಗಿದೆ. ಹೀಗೆ ಬ್ರಹ್ಮವಿಚಾರಕ್ಕೆ ಎರಡು ಕಾರಣಗಳು.

ಇದು ಸರಿಯಲ್ಲ - ಅದ್ವೈತಿಗಳು ಹೇಳಿದ ಕಾರಣ ಅಸಂಗತವಾಗಿದೆ. ಜೀವನ ವಿಷಯದಲ್ಲಿರುವ ಸಾಮಾನ್ಯಜ್ಞಾನ ಮತ್ತು ವಿಶೇಷಜ್ಞಾನಗಳು ಬ್ರಹ್ಮನ ಬಗ್ಗೆ ವಿಚಾರ ಮಾಡಲು ಹೇಗೆ ಕಾರಣಗಳಾಗುತ್ತವೆ?

ಜೀವನೇ ಬ್ರಹ್ಮನಾಗಿದ್ದಾನೆಂದು ಅಭೇದವನ್ನು ಒಪ್ಪಿದರೂ ಬ್ರಹ್ಮವಿಚಾರವು ಕೂಡುವುದಿಲ್ಲ. ಏಕೆಂದರೆ ಬಿಂಬನಾದ ಬ್ರಹ್ಮನೇ ಜಿಜ್ಞಾಸೆಗೆ ಧರ್ಮಿ. ಇದಕ್ಕೆ ಕಾರಣ ಏನಂದರೆ ಪ್ರತಿಬಿಂಬನಾದ ಜೀವನ ವಿಷಯದಲ್ಲಿರುವ ಸಾಮಾನ್ಯಜ್ಞಾನ ಮತ್ತು ವಿಶೇಷವಿವಾದಗಳು ಎನ್ನುವುದು ಕೂಡುವುದಿಲ್ಲ. ಪ್ರತಿಬಿಂಬನಾದ ಜೀವನಲ್ಲಿರುವ ವಿಪ್ರತಿಪತ್ತಿಯಿಂದ ಬಿಂಬನಾದ ಬ್ರಹ್ಮನಲ್ಲಿ ಜಿಜ್ಞಾಸೆ ಬಂದದ್ದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಬ್ರಹ್ಮನಲ್ಲಿ ಜೀವಾಭೇದವನ್ನು ಹೇಳಲು ಬ್ರಹ್ಮನಲ್ಲಿಯೇ ಸಾಮಾನ್ಯಜ್ಞಾನ ವಿಶೇಷವಿವಾದಗಳನ್ನು ಕಾರಣಗಳನ್ನಾಗಿ ಹೇಳಬೇಕು.

ಇನ್ನು ಜೀವನನ್ನು ಉದ್ದೇಶಿಸಿ ಬ್ರಹ್ಮಾಭೇದ ಹೇಳಿದಾಗಲೂ ಬ್ರಹ್ಮವಿಚಾರವು ಕೂಡುವುದಿಲ್ಲ. ಏಕೆಂದರೆ ಜೀವನು ದೇಹಕ್ಕಿಂತ ಭಿನ್ನನೋ? ಅಭಿನ್ನನೋ? ಇತ್ಯಾದಿಯಾಗಿ ವಿಪ್ರತಿಪನ್ನನಾದ ಪ್ರತಿಬಿಂಬನಾದ ಪ್ರತ್ಯಗರ್ಥನಾದ ಜೀವನೇ ಜಿಜ್ಞಾಸೆಗೆ ಧರ್ಮಿ ಆಗಿದ್ದಾನೆ. ಅಂತಹ ಪ್ರತ್ಯಕ್ ಚೈತನ್ಯನೆನಿಸಿದ ಜೀವನ ಬ್ರಹ್ಮತ್ವೇನ ಜಿಜ್ಞಾಸೆಯೇ ಬ್ರಹ್ಮಜಿಜ್ಞಾಸಾ ಎನಿಸುತ್ತದೆ ಎಂದು ಹೇಳಬೇಕು. ಇದೂ ಸಹ ಯುಕ್ತವಲ್ಲ. ಲೋಕದಲ್ಲಿ ನಿಶ್ಚಿತವಾದ ಧರ್ಮಿಯನ್ನು ವಿವಕ್ಷಿಸಿ ವಿಚಾರಪದವನ್ನು ಪ್ರಯೋಗಿಸಿದಂತೆ ಅನಿಶ್ಚಿತವಾದ ಪ್ರಕಾರವನ್ನು ಉದ್ದೇಶಿಸಿ ವಿಚಾರಪದವನ್ನು ಪ್ರಯೋಗಿಸುವುದಿಲ್ಲ. ಆದ್ದರಿಂದ ಪ್ರಕೃತ ಜಿಜ್ಞಾಸೆಗೆ ಧರ್ಮಭೂತನಾದ ಪ್ರತ್ಯಕ್‌ಚೈತನ್ಯನಾದ ಜೀವನು ಧರ್ಮಿಯಾದ್ದರಿಂದ ಸೂತ್ರದಲ್ಲಿ 'ಪ್ರತ್ಯಗ್‌ಜಿಜ್ಞಾಸಾ' ಎಂದು ಹೇಳಬೇಕಾಗಿತ್ತು. ಹೀಗೆ ಹೇಳಿದರೆ ಅಶ್ರುತಕಲ್ಪನಾದೋಷ ಬರುತ್ತದೆ.

ಪರಿಪೂರ್ಣಚಂದ್ರಿಕಾ

ಮತ್ತು 'ಧರ್ಮಜಿಜ್ಞಾಸಾ' ಎಂಬಲ್ಲಿ ಧರ್ಮವೇ ಧರ್ಮಿಯಾಗಿದೆ. ಆದ್ದರಿಂದ ಧರ್ಮಧರ್ಮಿಕ-ಜಿಜ್ಞಾಸಾ ಎಂದು ಅಲ್ಲಿ ಅರ್ಥೈಸಲಾಗಿದೆ. ಅದರಂತೆ ಇಲ್ಲಿಯೂ ಸಹ ಬ್ರಹ್ಮಜಿಜ್ಞಾಸಾ ಎಂದರೆ ಬ್ರಹ್ಮಧರ್ಮಿಕಜಿಜ್ಞಾಸಾ ಎಂದೇ ಅರ್ಥ. ಹೊರತು ಬ್ರಹ್ಮಪ್ರಕಾರಕ ಜಿಜ್ಞಾಸಾ ಎಂದಲ್ಲ. ಏಕೆಂದರೆ 'ವಿಚಾರ' ಶಬ್ದವನ್ನು ಕೇಳಿದಾಕ್ಷಣ ನಮಗೆ ಯಾವುದರ ಬಗ್ಗೆ ಎಂದೇ ಮೊದಲು ಆಕಾಂಕ್ಷೆ ಬರುತ್ತದೆ. ಹೇಗೆ ಎಂಬ ಪ್ರಕಾರದ ಜಿಜ್ಞಾಸೆ ಅನಂತರ ಬರುತ್ತದೆ. ಹೀಗೆ ಪ್ರಥಮಾಕಾಂಕ್ಷಿತವಾಗಿ ಪ್ರಧಾನವಾದದ್ದು ಧರ್ಮಿ. ಧರ್ಮಿವಾಚಕಪದ ಬ್ರಹ್ಮಪದ. ಪ್ರಕಾರವು ದ್ವಿತೀಯಾಕಾಂಕ್ಷಿತವಾಗಿ ಅಪ್ರಧಾನವಾಗಿದೆ. ನೀವು ಬ್ರಹ್ಮಪ್ರಕಾರಕಜಿಜ್ಞಾಸಾ ಎಂದು ಹೇಳಿದರೆ, ಪ್ರಥಮಾಂಕಾಂಕ್ಷಿತವಾದ ಪ್ರಧಾನವಾದ ಬ್ರಹ್ಮಶಬ್ದವನ್ನು ಬಿಟ್ಟಂತಾಗುತ್ತದೆ. 'ಶ್ರುತಹಾನ' ಎಂಬ ದೋಷ ಬರುತ್ತದೆ.

ಮತ್ತೊಂದು ದೊಡ್ಡ ದೋಷ - 'ಪ್ರತಿಬಿಂಬನು ಜಿಜ್ಞಾಸೆಗೆ ಧರ್ಮಿ, ಪ್ರತಿಬಿಂಬನ ಬಿಂಬಾ-ಭೇದಜಿಜ್ಞಾಸೆಯೇ ಬ್ರಹ್ಮಜಿಜ್ಞಾಸೆ' ಎಂದು ನೀವು ಹೇಳುತ್ತೀರಿ. ಆದರೆ ನಿಮ್ಮ ಬಿಂಬ ಪ್ರತಿಬಿಂಬಗಳಿಗೆ ಅಭೇದವನ್ನು ಹೇಳಲು ಬರುವುದಿಲ್ಲ. ಅಲ್ಪಜ್ಞತ್ವ ಸರ್ವಜ್ಞತ್ವವೆಂಬ ಎಲ್ಲ ವಿರುದ್ಧಧರ್ಮಗಳನ್ನು ಬಿಟ್ಟು ಚಿನ್ಮಾತ್ರಕ್ಕೆ ಮಾತ್ರ ಅಭೇದವನ್ನು ಸ್ವೀಕರಿಸಿದ್ದೀರಿ ಮುಖದಂತೆ. ಆದ್ದರಿಂದ ವಿಶಿಷ್ಟವಾದ ಬಿಂಬಪ್ರತಿಬಿಂಬಗಳಿಗೆ ಅಭೇದವೇ ಇಲ್ಲ. ಹೀಗಿರುವಾಗ ಬ್ರಹ್ಮಾಭೇದವನ್ನು ವಿಧಾನ ಮಾಡಲು ಪ್ರತಿಬಿಂಬನಾದ ಜೀವನನ್ನು ಉದ್ದೇಶವೆಂದು ಹೇಳಿದ್ದೇ ಕೂಡುವುದಿಲ್ಲ.

ಈ ಪಕ್ಷದಲ್ಲಿ ಮುಂದಿನ ಲಕ್ಷಣಸೂತ್ರವೂ ಅಸ್ವರಸವಾಗುತ್ತದೆ. ಏಕೆಂದರೆ ಧರ್ಮಿವಿಷಯದಲ್ಲಿ ತಪ್ಪುಕಲ್ಪನೆಯನ್ನು ದೂರ ಮಾಡುವುದಕ್ಕಾಗಿಯೇ ಲಕ್ಷಣವಿರುತ್ತದೆ. ಜೀವನ ಬಗ್ಗೆ ವಿಚಾರ ಮಾಡಲು ಹೊರಟಿದೆ ಎಂದು ಮೇಲೆ ಜೀವನಲ್ಲಿರುವ ದೇಹರೂಪತ್ವ ಮೊದಲಾದ ತಪ್ಪುಕಲ್ಪನೆಗಳನ್ನು ದೂರಮಾಡಲು 'ಜೀವನು ಬ್ರಹ್ಮನೇ ಆಗಿದ್ದಾನೆ' ಎಂದು ಮುಂದಿನ ಸೂತ್ರವಿರಬೇಕಿತ್ತು. ಅದನ್ನು ಬಿಟ್ಟು ಬ್ರಹ್ಮನು ಜನ್ಮಾದಿಕಾರಣನಾಗಿದ್ದಾನೆ' ಎಂದು ಹೇಳುವುದರಿಂದ ಏನೂ ಪ್ರಯೋಜನವಿಲ್ಲ. ಜೀವನು ಬ್ರಹ್ಮನೇ ಆಗಿದ್ದಾನಾದ್ದರಿಂದ ಬ್ರಹ್ಮನಿಗೆ ಹೇಳಿದ ಲಕ್ಷಣ ಜೀವನ ಲಕ್ಷಣವೂ ಆಗುತ್ತದೆ. ಆದ್ದರಿಂದ ಜೀವನ ವಿಷಯದಲ್ಲಿನ ತಪ್ಪುಕಲ್ಪನೆಗಳು ದೂರವಾಗುತ್ತವೆ ಎಂದರೆ ಇದೂ ಸಹ ತಪ್ಪು. ಏಕೆಂದರೆ ಮನುಷ್ಯನನ್ನು ನೋಡಿ 'ಸ್ಥಾಣು' (ಕೊಂಬೆಗಳಿಲ್ಲದ ಮರ) ಎಂದು ತಪ್ಪಾಗಿ ತಿಳಿದಾಗ ಇದನ್ನು ಪರಿಹರಿಸಲು 'ಕೈ ಕಾಲು ಇರುವಿಕೆಯು ಮನುಷ್ಯನ ಲಕ್ಷಣ, ಎಂದು ಹೇಳಿದ ಮಾತ್ರದಿಂದ ಸ್ಥಾಣುವಲ್ಲ ಮನುಷ್ಯನೆಂಬ ಭಾವನೆಯು ಬರುವುದಿಲ್ಲ, ಹೊರತಾಗಿ 'ಇವನು ಮನುಷ್ಯ' ಎಂದೇ ಹೇಳಬೇಕು. ಅದರಂತೆ ಜೀವನನ್ನು ದೇಹರೂಪನೆಂದು ತಪ್ಪಾಗಿ ತಿಳಿದ ಸಂದರ್ಭದಲ್ಲಿ 'ಬ್ರಹ್ಮನು ಜನ್ಮಾದಿಕಾರಣ' ಎಂದು ಉತ್ತರಿಸುವುದು ಅತ್ಯಂತ ಅಸಂಬದ್ಧವಾಗಿದೆ. ಜಿಜ್ಞಾಸುವಿಗೆ ಜೀವನು ಬ್ರಹ್ಮನೇ ಆಗಿದ್ದಾನೆಂದು ಮೊದಲು ನಿಶ್ಚಯ-ವಾಗಿರುವುದಿಲ್ಲ. ಒಂದುವೇಳೆ ಹಾಗೆ ನಿಶ್ಚಯವಾಗಿದ್ದರೆ ಬ್ರಹ್ಮನ ಲಕ್ಷಣವನ್ನು ಹೇಳಿದಾಗ ಆ ಲಕ್ಷಣವು ಜೀವನ ಲಕ್ಷಣವೂ ಆಗುತ್ತಿತ್ತು. ಇದರಿಂದ ಈ ಲಕ್ಷಣಕ್ಕೆ ವಿರುದ್ಧವಾದ ದೇಹರೂಪತ್ವಾದಿಕಲ್ಪನೆಗಳು ದೂರವಾಗುತ್ತಿದ್ದವು.

*ಜಿಜ್ಞಾಸಾಧಿಕರಣ*

ಮತ್ತು ಜನ್ಮಾದಿಕಾರಣತ್ವವು ಜೀವನ ಅಸಾಧಾರಣಲಕ್ಷಣವೆಂದು ಮೊದಲು ಸಿದ್ಧವಾಗಿಲ್ಲ. ಹಾಗೆ ಸಿದ್ಧವಾಗಿದ್ದರೆ ಜೀವನ ಅಸಾಧಾರಣಲಕ್ಷಣವನ್ನು ಬ್ರಹ್ಮನಿಗೆ ಹೇಳಿದಾಗ ಜೀವನು ಬ್ರಹ್ಮನೇ ಎಂದು ಸಿದ್ಧನಾಗುತ್ತಿದ್ದ. ಜನ್ಮಾದಿಕಾರಣತ್ವವು ಜೀವನ ಲಕ್ಷಣವೆಂದು ಅದ್ವೈತಮತದಂತೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಮುಂದೆ 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ । ಪ್ರಾಣಭೃಚ್ಚ । ಅಧಿಕಂ ತು ಭೇದನಿರ್ದೇಶಾತ್' ಇವೇ ಮೊದಲಾದ ಸೂತ್ರಗಳಲ್ಲಿ ಜನ್ಮಾದಿಸೂತ್ರದಲ್ಲಿ ಹೇಳಿದ ಬ್ರಹ್ಮಲಕ್ಷಣವು ಜೀವನಲ್ಲಿ ಸರ್ವಥಾ ಬರುವುದಿಲ್ಲವೆಂದು ನೀವೇ ನಿಷೇಧ ಮಾಡಿದ್ದೀರಿ.

**प्रकाशः** - ननुच यदि ब्रह्म प्रसिद्धं न जिज्ञासितव्यम्' अथाप्रसिद्धं तर्हि न जिज्ञासितुं शक्यमित्याशङ्क्य, जिज्ञासाधर्मिणि तदुपयुक्तसामान्यप्रसिद्धिविशेष-विप्रतिपत्ती स्वमतेन दर्शयिष्यन् परोक्ते अनूद्य निरस्यति ।। **यदपीति** ।। देहमात्रं चैतन्यविशिष्टं अहमर्थ इति चार्वाकाः । इन्द्रियाण्येवेत्यपरे । मन एवेत्यन्ये । शून्यमेवेत्येके । ब्रह्मैवेति कश्चित् । एवं बहूनां नानात्वेन विप्रतिपत्तेरित्यर्थः ।। **तद्व्यधिकरणमिति** ।। अहमर्थे त्वंपदार्थे सामान्यप्रतिपत्तिविशेषविप्रतिपत्त्योः सत्त्वेऽपि, जिज्ञास्ये ब्रह्मणि तत्पदार्थे तयोरप्रदर्शनादिति भावः । नन्वत एव परभाष्ये "आत्मा च ब्रह्म" इत्युक्तमित्याशङ्कते ।। **प्रत्यगर्थ एवेति** ।। उक्तं च भामत्यां – "तत्पदार्थस्य शब्दतः त्वंपदार्थस्य प्रत्यक्षतः प्रसिद्धेः त्वंपदार्थस्य तत्पदार्थब्रह्मभावावगमः" इति । प्रत्यगर्थस्य ब्रह्माभेदो यद्यपि सौत्रब्रह्मपदेनैव निरस्तः । तथाऽप्यङ्गीकृत्य दूषयति ।। **अस्त्विति** ।। तत्त्वंपदार्थयोः "तत् त्वमसि" इत्यनेनाभेदावगमो हि त्रेधा । तत्पदार्थं बिम्बभूतं ब्रह्मोद्दिश्य त्वं-पदार्थप्रत्यगर्थाभेदविधानेन वा, त्वंपदार्थमुद्दिश्य तत्पदार्थाभेदविधानेन वा, उभयत्र विरुद्धांशत्यागेनैक्यमात्रविधानेन वा । तत्राद्ये जिज्ञासाधर्मि तत्पदार्थो ब्रह्मैव । तस्य प्रत्यगभिन्नत्वेन जिज्ञासा ब्रह्मजिज्ञासा । द्वितीये प्रत्यगर्थो जिज्ञासाधर्मि । तस्य ब्रह्मत्वेन जिज्ञासा ब्रह्मजिज्ञासा । तृतीये बिम्बमेव जिज्ञासाधर्मि । विशेष्यमेकमिति१ तज्जिज्ञासा ब्रह्मजिज्ञासेति पक्षत्रयं हृदि निधायाद्यं निरस्यति ।। **तथापीति** ।। अभेदाङ्गीकारेऽपि वैयधिकरण्यमेवेत्यर्थः । 'तयोः' सामान्यप्रसिद्धिविशेषविप्रतिपत्त्योः । द्वितीयमनूद्य निरस्यति ।।

---

१ निर्विशेषमेकमित्यपि पाठः ।

नापीति ।। 'प्रतीचः' प्रत्यक्चैतन्यस्य । जिज्ञासाधर्मित्वेन निश्चितत्वात्, 'पुरोवृत्तिजिज्ञासा' 'धर्मजिज्ञासा' इत्यादिवत् 'प्रत्यग्जिज्ञासा' इत्येव सूत्रं स्यात्, नतु 'ब्रह्मजिज्ञासा' इति । ब्रह्मत्वप्रकारस्यानिश्चितत्वादित्यर्थः ।। श्रुतेति ।। प्रकारार्थकस्य ब्रह्मपदस्य हानिः स्यादित्यर्थः । किञ्चास्मिन् पक्षे प्रत्यगर्थं विशिष्टमुद्दिश्य विशिष्टविरुद्धांशत्यागेन ब्रह्माभेदो विधेयः । नचैवं युक्तम् । चिन्मात्रैक्याङ्गीकारादित्याह ।। विरुद्धेति ।। 'तस्य' प्रत्यगर्थस्य । तथाच प्रत्यगर्थे विशेष्यभूतं चिन्मात्रमेवोद्देश्यमिति तत्रैव सामान्यप्रसिद्ध्यादिकं दर्शनीयं, नतु विशिष्ट इति, तत्र तत्प्रदर्शनं व्यधिकरणमिति भावः । अयं च दोषः आद्यपक्षेऽपि समः । तत्रापि विशिष्टस्य ब्रह्मणः उद्देश्यत्वासम्भवस्य वक्तुं शक्यत्वात् । तथाच 'ब्रह्माभेद' इत्युपलक्षणम् । 'प्रत्यगभेदविधानाय' इत्यपि ग्राह्यम् । 'तस्य' इत्यस्य ब्रह्मण इत्यर्थः । तथाच तच्छब्देन तस्य प्रसिद्ध्युपदर्शनं व्यधिकरणमित्यपि ध्येयम् । एवं द्वितीयपक्षे ब्रह्मपदास्वारस्यमुक्त्वा द्वितीय-सूत्रास्वारस्यमाह ।। किंचेति ।। जिज्ञास्येऽतदाकारारोपनिवृत्त्यर्थं लक्षणं, प्रत्यगर्थश्च जिज्ञास्य इति तत्राब्रह्मत्वारोपनिवृत्तये 'प्रत्यग्ब्रह्म' इति लक्षणसूत्रं स्यात् । नतु जन्मादिकारणत्वेन ब्रह्म लक्षणीयम् । तस्य व्यधिकरणत्वादित्यर्थः । ननु प्रत्यगर्थस्यैव वस्तुतो ब्रह्मत्वाद् ब्रह्मलक्षणोक्त्या प्रतीच्यतदाकारनिवृत्तिर्ज्ञायत इत्याशङ्क्य, वैयधिकरण्यमेव दृष्टान्तेनाह ।। नहीति ।। तथाच 'प्रतीचि' प्रत्यगर्थे, अहंत्वादिना ज्ञायमाने देहेन्द्रियाद्यात्मकत्वारोपो 'जगत्कारणं ब्रह्म' इत्याद्युक्त्या न निवर्तते । किन्तु 'प्रत्यग् ब्रह्म' इत्युक्त्येति भावः । ब्रह्मणो लक्षणं प्रतीचि अतदारोपनिवर्तकं नेत्येतदेव स्फुटयति । नचेति । 'जिज्ञासुना' इति हेतुगर्भम्, अन्यथा जिज्ञासाऽयुक्तेरिति भावः । 'तेन' जिज्ञासुना ।। ब्रह्मणीति ।। प्रत्यग-साधारणधर्मतया ज्ञातस्य ब्रह्मणि कथने प्रत्यग्ब्रह्मणोरैक्यं ज्ञाप्येत इत्यर्थः । प्रत्यगसाधारणधर्मत्वेन अनिश्चितत्वे हेतुमाह ।। त्वत्पक्षेऽपीति ।।

गुरुराजीय – ननु विचारे सामान्यविप्रतिपत्तिर्विशेषविप्रतिपत्तिश्च कारणम् । प्रकृते तदभावात् कथं ब्रह्मणो जिज्ञास्यत्वमित्यतः परोक्तं सामान्यप्रतिपत्त्यादिकं

दूषयितुमनुवदति – यदपि परैरिति ।। तत्राधिकरणमिति ।। सामन्यप्रतिपत्त्यादेर्जिज्ञास्यत्वसमानाधिकरणस्यैव दृष्टत्वेन जिज्ञास्यब्रह्मण्येव तयोर्वक्तव्यत्वेन प्रत्यगर्थे तदुपपादनस्य व्यधिकरणत्वादित्यर्थः । ननु न वैय्यधिकरण्यम् । प्रत्यगर्थस्यैव ब्रह्मत्वादित्याशयेन शङ्कते ।। प्रत्यगर्थ एवेति ।। अस्तु तावदिति ।। वैय्यधिकरण्यपरिहार इति शेषः । प्रत्यगर्थ एव ब्रह्मेति वदतः कोऽभिप्रायः । ब्रह्मण एव जिज्ञासाधर्मित्वेऽपि ब्रह्मप्रत्यगर्थयोर्बिम्बप्रतिबिम्बभावेनैक्यात् प्रत्यगर्थे सामान्यप्रतिपत्त्यादिकं न व्यधिकरणमिति वा उत प्रत्यगर्थस्यैव जिज्ञासाधर्मित्वेन सामान्यप्रतिपत्त्यादेश्च तत्रैव सत्त्वेन न वैय्यधिकरण्यमिति अथवा चिन्मात्रे विप्रतिपत्तिः ब्रह्मण एव जिज्ञासाधर्मित्वमिति वा उत प्रत्यगर्थस्यैव जिज्ञासाधर्मित्वेन सामान्यप्रतिपत्त्यादेश्च तत्रैव सत्त्वेन न वैय्यधिकरण्यमिति अथवा चिन्मात्रे विप्रतिपत्तिः ब्रह्मण एव जिज्ञासाधर्मित्वमिति वा चिन्मात्रे विप्रतिपत्त्या चिन्मात्रमेव जिज्ञासाधर्मीति वा जिज्ञासाधर्मिणि ब्रह्मण्येव प्रतीचोन्यन्नवेति विप्रतिपत्त्या न वैय्यधिकरण्यमिति वा । नाद्य इत्याह ।। न तावदिति ।। प्रतिबिम्बमात्र इति ।। बिम्बभूतब्रह्माभिन्नत्वेनाज्ञात इत्यर्थः । अयं भावः । प्रत्यगर्थनिष्ठविप्रतिपत्त्यादेर्ब्रह्मणो जिज्ञास्यत्वोपयुक्तत्वं तदा स्यात् यदि ब्रह्मणः प्रत्यगर्थाभेदो ज्ञायेत । अन्यथाऽतिप्रसङ्गात् । तज्ज्ञापनं च तज्जिज्ञासापूर्वमेव । जिज्ञासा च विप्रतिपत्त्यादिपूर्विका । तथाच तादृशजिज्ञासोपयुक्तविप्रतिपत्त्यादिकं ब्रह्मण्येव वाच्यमिति । न द्वितीय इत्याह – नापीति ।। देहत्वादिनेति ।। आदिशब्देनेन्द्रियत्वादिकं ग्राह्यम् । ननु प्रत्यगर्थस्य जिज्ञासाधर्मित्वे ब्रह्मजिज्ञासेत्यनुपपन्नम् । तत्र ब्रह्मणो जिज्ञासाधर्मित्वस्य प्रतीतेरित्यत आह – प्रतीच इति ।। तथाच ब्रह्मशब्दो ब्रह्मत्वरूपप्रकारपरो नतु धर्मिपर इति भावः । एवं तर्हि लोके पुरोवर्तिविचारः कर्तव्य इति निश्चितधर्मिपुरस्कारेण विचारपदप्रयोगादनिश्चितप्रकारपुरस्कारेण विचारपदप्रयोगाभावेन ब्रह्मत्वरूपप्रकारस्य निश्चितत्वेन प्रत्यक् जिज्ञासेति सूत्रं स्यान्नतु ब्रह्मजिज्ञासेति । तथाश्रुतकल्पनं स्यादित्याह – लोक इति ।। न केवलमश्रुतकल्पनं श्रुतहानमपीत्याह ।। धर्मेति ।।

ननु जीवस्य ब्रह्मत्वाज्जीवमुद्दिश्य तस्य ब्रह्माभेदो बोध्यते । नच सिद्धत्वात् तद्बोधनमयुक्तमिति वाच्यम् । जीवत्वोपलक्षितचिन्मात्राभेदस्यासिद्धत्वादित्यत आह

– किंचेति ।। ननु प्रत्यगर्थस्य ब्रह्मत्वाद् ब्रह्मलक्षणे उक्ते जीवे धर्मिण्यारोपिता तदाकारनिवृत्तिर्भविष्यतीत्यत आह – नहीति ।। ननु पुरुषस्य निर्णीतत्वे लक्षणोक्तौ सत्यामभेदारोपनिवृत्तिवत् प्रकृतेऽपि ब्रह्मलक्षणोक्त्या तदारोपनिवृत्तिर्भविष्यतीत्यत आह – नचेति ।। ननु ब्रह्मलक्षणकथनमुखेन ब्रह्माभेदज्ञानार्थं लक्षणं कथ्यत इत्यत आह – नापीति ।। न केवलं ब्रह्मलक्षणं जीवेनोपपद्यते । अपितु त्वयाऽपि ब्रह्मलक्षणं जीवे निषिद्धमित्याह – त्वत्पक्षेऽपीति ।।

ವಿವರಣೆ - ಬ್ರಹ್ಮನು ಪ್ರಸಿದ್ಧನೋ? ಅಪ್ರಸಿದ್ಧನೋ? ಪ್ರಸಿದ್ಧನಾದರೆ ಅವನ ವಿಚಾರ ಅನಾವಶ್ಯಕ. ಅಪ್ರಸಿದ್ಧನಾದರೆ ಅವನ ವಿಚಾರ ಸಾಧ್ಯವಿಲ್ಲ. ಈ ಪ್ರಶ್ನೆಗೆ ನಾವು ಹಾಗು ಅದ್ವೈತಿಗಳು ಇಬ್ಬರೂ ಉತ್ತರಿಸಬೇಕು.

ನಮ್ಮ ಉತ್ತರ :- ಬ್ರಹ್ಮನು ಸಾಮಾನ್ಯತಃ ಸಿದ್ಧನಾಗಿದ್ದರೂ ವಿಶೇಷವಾಗಿ ಸಿದ್ಧನಾಗಿಲ್ಲ. ಸಾಮಾನ್ಯ-ವಾಗಿ ಸಿದ್ಧನಾದ್ದರಿಂದ ವಿಚಾರ ಮಾಡಬಹುದು. ವಿಶೇಷವಾಗಿ ಸಿದ್ಧನಾಗದಿರುವುದರಿಂದ ವಿಶೇಷ ವಿಚಾರದಲ್ಲಿ ವಿವಾದವಿರುವುದರಿಂದ ವಿಚಾರವು ಸಾರ್ಥಕ.

ನಮ್ಮ ಈ ಉತ್ತರವನ್ನು ಹೇಳುವ ಮೊದಲು ಅದ್ವೈತಿಗಳು ಏನು ಹೇಳುತ್ತಾರೆ ಎಂಬುದನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ.

ಅದ್ವೈತಿಗಳ ಉತ್ತರ :- ಶಂಕರಭಾಷ್ಯದಲ್ಲಿ 'ಆತ್ಮಾ ಚ ಬ್ರಹ್ಮ' 'ಜೀವನೇ ಬ್ರಹ್ಮ' ಎಂದು ಹೇಳಿದೆ. ಭಾಮತಿಯಲ್ಲಿಯೂ 'ತತ್‌ಪದಾರ್ಥಸ್ಯ ಶಬ್ದತಸ್ತ್ವಂಪದಾರ್ಥಸ್ಯ ಪ್ರತ್ಯಕ್ಷತಃ ಪ್ರಸಿದ್ಧೇ ಸ್ತ್ವಂ ಪದಾರ್ಥಸ್ಯ ತತ್‌ಪದಾರ್ಥಬ್ರಹ್ಮಭಾವಾವಗಮಃ' 'ತತ್ ಪದಾರ್ಥನಾದ ಬ್ರಹ್ಮನು ಶ್ರುತಿಯಿಂದ ಸಿದ್ಧನಾಗಿದ್ದಾನೆ. ತ್ವಂ ಪದಾರ್ಥನಾದ ಜೀವನು ಅನುಭವದಿಂದ ಸಿದ್ಧನಾಗಿದ್ದಾನೆ. ಆದ್ದರಿಂದ ಜೀವಬ್ರಹ್ಮರಿಗೆ ಅಭೇದವು ಸಿದ್ಧವಾಗುತ್ತದೆ' ಎಂದು ಹೇಳಿದೆ.

ಆದ್ದರಿಂದ ಜೀವನ ಬಗ್ಗೆ ಸಾಮಾನ್ಯಜ್ಞಾನ ವಿಶೇಷವಿಷಯದಲ್ಲಿ ವಿವಾದವು ಬ್ರಹ್ಮನ ವಿಚಾರಕ್ಕೆ ಕಾರಣವಾಗಿದೆಯೆಂದು ಅದ್ವೈತಿಗಳು ಉತ್ತರಿಸುತ್ತಾರೆ.

ಇದು ಸರಿಯಲ್ಲ. ಸೂತ್ರದಲ್ಲಿ 'ಬ್ರಹ್ಮಜಿಜ್ಞಾಸಾ' ಎಂಬಲ್ಲಿ ಬ್ರಹ್ಮ ಪದದಿಂದ ಗುಣಪೂರ್ಣತ್ವವನ್ನು ಹೇಳಿದ್ದಾರೆ. ಇದರಿಂದ ಗುಣಪೂರ್ಣನಾದ ಬ್ರಹ್ಮನು ಅಪೂರ್ಣಗುಣನಾದ ಜೀವನಿಗಿಂತ ಭಿನ್ನನಾಗಿ-ದ್ದಾನೆಂದು ತಿಳಿಯುತ್ತದೆ.

ಹೀಗೆ ಸೂತ್ರದಿಂದಲೇ ಬ್ರಹ್ಮಾಭೇದವು ಕೂಡುವುದಿಲ್ಲವೆಂದು ತಿಳಿಯುತ್ತದೆ. ಆದರೂ ಸಹ ಅಭೇದವನ್ನು ಅಂಗೀಕರಿಸಿ 'ತಥಾಪಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

*ಜಿಜ್ಞಾಸಾಧಿಕರಣ*

ಅಭೇದವನ್ನು ಒಪ್ಪಿದರೂ ಕೂಡ ಬ್ರಹ್ಮವಿಚಾರವನ್ನು ಕೂಡಿಸಲು ಬರುವುದಿಲ್ಲ. ಏಕೆಂದರೆ 'ತತ್ತ್ವಮಸಿ' ಎಂಬ ಶ್ರುತಿಯಲ್ಲಿರುವ ತತ್ ಮತ್ತು ತ್ವಂ ಪದಾರ್ಥಗಳಿಗೆ ಮೂರು ಬಗೆಯಲ್ಲಿ ಅಭೇದವನ್ನು ಹೇಳಬಹುದು.

೧) ತತ್‌ಪದಾರ್ಥನಾದ ಬಿಂಬರೂಪನಾದ ಬ್ರಹ್ಮನಲ್ಲಿ ತ್ವಂ ಪದಾರ್ಥನಾದ ಪ್ರತಿಬಿಂಬನಾದ ಜೀವನ ಅಭೇದವನ್ನು ಹೇಳಬಹುದು.

೨) 'ತ್ವಂ' ಪದಾರ್ಥನಾದ ಜೀವನಲ್ಲಿ 'ತತ್' ಪದಾರ್ಥನಾದ ಬ್ರಹ್ಮನ ಅಭೇದವನ್ನು ಹೇಳಬಹುದು.

೩) ಅಥವಾ ಜೀವನಲ್ಲಿರುವ ಅಲ್ಪಜ್ಞತ್ವ, ಬ್ರಹ್ಮನಲ್ಲಿರುವ ಸರ್ವಜ್ಞತ್ವ ಎಂಬ ವಿರುದ್ಧಾಂಶಗಳನ್ನು ಬಿಟ್ಟು ಕೇವಲ ಚೈತನ್ಯಕ್ಕೆ ಅಭೇದವನ್ನು ಹೇಳಬಹುದು, ಎಂದು.

ಇವುಗಳಲ್ಲಿ ಮೊದಲನೆಯ ಪಕ್ಷವನ್ನು ಇಟ್ಟುಕೊಂಡಾಗ ವಿಚಾರಕ್ಕೆ ಧರ್ಮಿ ಆದವನು ತತ್ ಪದಾರ್ಥನಾದ ಬ್ರಹ್ಮನೇ ಆಗಿದ್ದಾನೆ. ಅಂತಹ ಬ್ರಹ್ಮನು ಪ್ರತ್ಯಗರ್ಥನಾದ ಜೀವನಿಗಿಂತ ಅಭಿನ್ನನಾಗಿದ್ದಾನೋ? ಇಲ್ಲವೋ? ಎಂಬ ಜಿಜ್ಞಾಸೆ ಬರುವುದರಿಂದ ಇದು ಬ್ರಹ್ಮಜಿಜ್ಞಾಸೆ ಎನಿಸುತ್ತದೆ.

ಎರಡನೆಯ ಪಕ್ಷದಲ್ಲಿ ಜೀವನಲ್ಲಿ ಪ್ರತ್ಯಗರ್ಥನಾದ ಜೀವನೇ ಜಿಜ್ಞಾಸೆಗೆ ಧರ್ಮಿ. ಅಂತಹ ಜೀವನಲ್ಲಿ ಬ್ರಹ್ಮನ ಅಭೇದ ಇದೆಯೋ? ಇಲ್ಲವೋ? ಎಂಬ ಜಿಜ್ಞಾಸೆಯು ಬ್ರಹ್ಮಜಿಜ್ಞಾಸೆ ಎನಿಸುತ್ತದೆ.

ಮೂರನೆಯ ಪಕ್ಷದಲ್ಲಿ ಬಿಂಬನೇ ಜಿಜ್ಞಾಸೆಗೆ ಧರ್ಮಿ. ಬ್ರಹ್ಮನಲ್ಲಿ ಶುದ್ಧಚೈತನ್ಯಾಭೇದವಿರುವುದರಿಂದ ಅದು ಬ್ರಹ್ಮಜಿಜ್ಞಾಸೆ ಎನಿಸುತ್ತದೆ. ಇವುಗಳಲ್ಲಿ ಮೊದಲನೆಯ ಪಕ್ಷ ಸರಿಯಲ್ಲವೆಂದು 'ತಥಾಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಎರಡನೆಯ ಪಕ್ಷವು ಸರಿಯಲ್ಲವೆಂದು 'ನಾಪಿ' ಇತ್ಯಾದಿವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಈ ಪಕ್ಷದಲ್ಲಿ ಜಿಜ್ಞಾಸೆಗೆ ಜೀವನು ಧರ್ಮಿಯಾದ್ದರಿಂದ 'ಜೀವಜಿಜ್ಞಾಸಾ' ಎಂದೇ ಸೂತ್ರ ಇರಬೇಕಿತ್ತು. ಏಕೆಂದರೆ ಲೋಕದಲ್ಲಿ ಹೇಗೆ ಕಂಡಿದೆ ಎಂದರೆ - ಎಲ್ಲೆಲ್ಲಿ ವಿಚಾರ ಮಾಡುತ್ತೇವೋ ಅಲ್ಲೆಲ್ಲಾ ಧರ್ಮಿಯು ನಿಶ್ಚಿತವಾಗಿರುತ್ತದೆ. ಪ್ರಕಾರವು ಅನಿಶ್ಚಿತವಾಗಿರುತ್ತದೆ. ಪ್ರಕಾರವಾಚಕಪದವನ್ನು ವಿವಕ್ಷಿಸಿ ಯಾರೂ ಸಹ ವಿಚಾರಪದವನ್ನು ಪ್ರಯೋಗ ಮಾಡುವುದಿಲ್ಲ. ಹೊರತು ಧರ್ಮಿವಾಚಕಪದವನ್ನು ವಿವಕ್ಷಿಸಿಯೇ ವಿಚಾರಪದವನ್ನು ಪ್ರಯೋಗ ಮಾಡುತ್ತಾರೆ. ಪುರೋವರ್ತಿಯಾದ ವಸ್ತುವನ್ನು ನೋಡಿ ನಮಗೆ ಸ್ಥಾಣುವೋ? ಪುರುಷನೋ? ಎಂಬ ಜಿಜ್ಞಾಸಾ ಬರುತ್ತದೆ. ಇದನ್ನು ಪುರೋವರ್ತಿಜಿಜ್ಞಾಸಾ ಎಂದೇ ಎಲ್ಲರೂ ಹೇಳುತ್ತಾರೆ. ಸ್ಥಾಣುತ್ವಜಿಜ್ಞಾಸಾ ಎಂದಾಗಲೀ ಪುರುಷತ್ವಜಿಜ್ಞಾಸಾ ಎಂದಾಗಲೀ ಯಾರೂ ಹೇಳುವುದಿಲ್ಲ. ಅದರಂತೆ ಸೂತ್ರದಲ್ಲಿಯೂ ಜೀವಜಿಜ್ಞಾಸಾ ಎಂದೇ ಹೇಳಬೇಕಾಗುವುದು. ಅಶ್ರುತವಾದ ಜೀವ ಶಬ್ದವನ್ನು ಸೇರಿಸಿದಂತಾಯಿತು.

ಮತ್ತು ಈ ಪಕ್ಷದಲ್ಲಿ ಪ್ರತ್ಯಗರ್ಥನಾದ ಪ್ರತಿಬಿಂಬಜೀವನನ್ನು ಉದ್ದೇಶಿಸಿ ಬಿಂಬನಾದ ಬ್ರಹ್ಮನ ಅಭೇದವನ್ನು ವಿಧಾನ ಮಾಡಬೇಕು.ಆದರೆ ಇದು ಕೂಡುವುದಿಲ್ಲ. ನೀವು ಚಿನ್‌ಮಾತ್ರಗಳಿಗಷ್ಟೇ

ಐಕ್ಯವನ್ನು ಅಂಗೀಕರಿಸಿದ್ದೀರಿ. ಆದ್ದರಿಂದ ವಿಶಿಷ್ಟನಾದ ಪ್ರತ್ಯಗರ್ಥದ ಒಳಗೆ ಅಡಗಿರುವ ಚಿನ್ಮಾತ್ರನನ್ನು ಉದ್ದೇಶಿಸಿ ಬಿಂಬನ ಒಳಗೆ ಅಡಗಿರುವ ಚಿನ್ಮಾತ್ರನ ಅಭೇದವನ್ನು ವಿಧಾನ ಮಾಡಬೇಕು. ಇಲ್ಲಿ ಚಿನ್ ಮಾತ್ರನೇ ಉದ್ದೇಶನಾದ್ದರಿಂದ ಚಿನ್ಮಾತ್ರನ ವಿಷಯದಲ್ಲೇ ಸಾಮಾನ್ಯಪ್ರಸಿದ್ಧಿ ಮೊದಲಾದವುಗಳನ್ನು ತೋರಿಸಬೇಕು. ಹೊರತು ಅಹಂ ಎಂಬ ವಿಶಿಷ್ಟನಲ್ಲಿ ಸಾಮಾನ್ಯಪ್ರಸಿದ್ಧ್ಯಾದಿಗಳನ್ನು ತೋರಿಸಿದ್ದು ಸರಿಯಿಲ್ಲ ಹಾಗೆ ತೋರಿಸಿದ್ದು ವ್ಯಧಿಕರಣವಾಗುತ್ತದೆ.

ಈ ದೋಷ ಪ್ರಥಮಪಕ್ಷದಲ್ಲಿಯೂ ಬರುತ್ತದೆ. ವಿಶಿಷ್ಟಬ್ರಹ್ಮನನ್ನು ಉದ್ದೇಶ ಮಾಡಿ ಪ್ರತಿಬಿಂಬನಾದ ಜೀವನ ಅಭೇದವನ್ನು ಅಲ್ಲಿಯೂ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಗ್ರಂಥಕಾರರು ಹೇಳಿದ 'ಬ್ರಹ್ಮಾಭೇದವಿಧಾನಾಯ' ಎಂಬುದು ಉಪಲಕ್ಷಣ. ಮೊದಲನೆಯ ಪಕ್ಷಕ್ಕೆ ಹೊಂದುವಂತೆ 'ಪ್ರತ್ಯಗ-ಭೇದವಿಧಾನಾಯ' ಎಂದೂ ಇಟ್ಟುಕೊಳ್ಳಬೇಕು. ವಿಶಿಷ್ಟಬ್ರಹ್ಮನನ್ನು ಉದ್ದೇಶ ಮಾಡಿದ್ದು ವ್ಯಧಿಕರಣ ಆಗುತ್ತದೆ.

ಹೀಗೆ ಎರಡನೆಯ ಪಕ್ಷವನ್ನು ಅಂಗೀಕರಿಸಿದರೆ ಬ್ರಹ್ಮಪದವು ಸ್ವರಸವಾಗುವುದಿಲ್ಲ ಎಂದು ಹೇಳಿದ್ದಾಯಿತು. ಈಗ ಎರಡನೆಯ ಸೂತ್ರವೂ ಅಸ್ವರಸವಾಗುತ್ತದೆಂದು 'ಕಿಂಚ' ಇತ್ಯಾದಿವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. (ಮುಂದಿನ ಟಿಪ್ಪಣಿಯ ವಿಚಾರವನ್ನು ಮೂಲಾನುವಾದದಲ್ಲಿಯೇ ಸೇರಿಸಿ ಬರೆಯ-ಲಾಗಿದೆ).

## ಚಿನ್ಮಾತ್ರೈಕ್ಯವನ್ನೂ ವಿವಕ್ಷಿಸಲಾಗದು

### तात्पर्यचन्द्रिका –

**अत एव – उभयानुगतचिन्मात्रे तत्वंपदलक्ष्ये विप्रतिपत्तिः, जिज्ञासाधर्मि तु बिम्बं ब्रह्म चिन्मात्रमेवेति प्रत्युक्तम् । विशेष्यमात्रे विप्रतिपत्त्या विशिष्टधर्मिक-विचारादर्शनात् । विशिष्टस्य मुमुक्षुभिरविचार्यत्वाच्च । चिन्मात्रे देहत्वादिविप्रति-पत्तेरभावाच्च । सौत्रब्रह्मशब्दास्वारस्याच्च । अथ जिज्ञासाधर्मिणि ब्रह्मण्येव प्रतीचोऽन्यत्वेवेति विप्रतिपत्तेः न वैयधिकरण्यम् । तर्हि भवदीयभाष्ये – इह सूत्रे प्रतीचिदेहत्वादिविप्रतिपत्त्युक्तिः । उत्तरसूत्रे जीवाद् भेदकस्य लक्षणस्योक्तिश्च अयुक्ता ।**

ಅನುವಾದ - 'ತತ್' ಮತ್ತು ತ್ವಂ ಪದಗಳಿಂದ ಲಕ್ಷ್ಯವಾದದ್ದು ಜೀವ ಬ್ರಹ್ಮರೆಂಬ ಎರಡು ವಿಶಿಷ್ಟ ಪದಾರ್ಥಗಳಲ್ಲಿ ಅನುಗತವಾಗಿರುವ ಚಿನ್ ಮಾತ್ರ. ವಿಶೇಷ್ಯವಾದ ಚಿನ್ಮಾತ್ರದಲ್ಲಿಯೇ ವಿಪ್ರತಿಪತ್ತಿ. ಆದರೆ ಜಿಜ್ಞಾಸೆಗೆ ಧರ್ಮಿಯಾದವನು ವಿಶಿಷ್ಟನಾದ ಬಿಂಬರೂಪನಾದ ಬ್ರಹ್ಮ. ಈ ಬ್ರಹ್ಮನು ಚಿನ್ ಮಾತ್ರನೇ ಆಗಿರುವುದರಿಂದ ಬ್ರಹ್ಮಜಿಜ್ಞಾಸೆಯು ಕೂಡುತ್ತದೆಂದು ಮೂರನೆಯ ಪಕ್ಷ.

ಹಿಂದಿನ ಎರಡು ಪಕ್ಷಗಳನ್ನು ನಿರಾಕರಿಸಿದ್ದರಿಂದ ಈ ಮೂರನೆಯ ಪಕ್ಷವೂ ಸಹ ನಿರಾಕೃತವಾಯಿತು. ವಿಶೇಷಮಾತ್ರದಲ್ಲಿ ಬರುವ ವಿಪ್ರತಿಪತ್ತಿಯಿಂದ ವಿಶಿಷ್ಟಧರ್ಮಿಕವಾದ ವಿಚಾರವು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ವೈಯಧಿಕರಣ್ಯ ತಪ್ಪಿದ್ದಲ್ಲ.

ಮತ್ತೊಂದು ದೋಷ - ವಿಶಿಷ್ಟನಾದ ಬ್ರಹ್ಮನು ಮಿಥ್ಯಾಭೂತನಾದ್ದರಿಂದ ಅವನನ್ನು ಮೋಕ್ಷಾರ್ಥಿಯು ವಿಚಾರ ಮಾಡುವುದು ಯುಕ್ತವಲ್ಲ. ಮತ್ತು ದೇಹಾದಿರೂಪದಿಂದ ವಿಪ್ರತಿಪತ್ತಿಯು ಚಿನ್‌ಮಾತ್ರನಲ್ಲಿ ಬರಲು ಸಾಧ್ಯವೇ ಇಲ್ಲ.

ಸೂತ್ರದಲ್ಲಿರುವ ಬ್ರಹ್ಮಶಬ್ದವು ಅಸ್ವರಸವಾಗುತ್ತದೆ. ಜಿಜ್ಞಾಸಾಧರ್ಮಿಯಾದ ಬ್ರಹ್ಮನಲ್ಲಿಯೇ ಜೀವನಿಗಿಂತ ಭಿನ್ನನೋ? ಅಲ್ಲವೋ? ಎಂಬ ವಿಪ್ರತಿಪತ್ತಿಯನ್ನು ತೋರಿಸಿರುವುದರಿಂದ ವೈಯ್ಯಧಿಕರಣ್ಯವಿಲ್ಲ ಎಂಬ ಶಂಕೆಯೂ ಸರಿಯಲ್ಲ. ನಿಮ್ಮ ಶಂಕರಭಾಷ್ಯದಲ್ಲೇ ಈ ಸೂತ್ರಕ್ಕೆ ವ್ಯಾಖ್ಯಾನಿಸುತ್ತಾ ಜೀವನ ಬಗ್ಗೆ ದೇಹರೂಪನಾಗಿ ವಿಪ್ರತಿಪತ್ತಿ ತೋರಿಸಿದ್ದು ಕೂಡುವುದಿಲ್ಲ. ಮತ್ತು ಎರಡನೆಯ ಸೂತ್ರದಲ್ಲಿ ಜೀವ ಪರಮಾತ್ಮಭೇದವನ್ನು ಸಮರ್ಥಿಸುವ ಜನ್ಮಾದಿಕಾರಣತ್ವಲಕ್ಷಣ ಹೇಳಿದ್ದೂ ಸಹ ಅಯುಕ್ತವಾಗಿದೆ.

**प्रकाशः** - एवं द्वितीयपक्षं निरस्य, इदानीं तत्त्वंपदलक्ष्यचिन्मात्रैक्यमिति तृतीयं निराह ।। **अत एवेति** ।। चिन्मात्र एव विप्रतिपत्त्या तत्रैक्यविधानं युक्तमिति भावः ।। **बिम्बं ब्रह्मेति** ।। तथाच 'ब्रह्मजिज्ञासा' इति व्यपदेशः लक्षणसूत्रं च युज्यत इति भावः । सामानाधिकरण्यायाह ।। **चिन्मात्रमेवेति** ।। 'अत एव' इत्युक्तं वैयधिकरण्यं व्यनक्ति ।। **विशेष्येति** ।। **विशिष्टस्येति** ।। तस्य मिथ्यात्वादिति भावः । निर्विशेषज्ञानार्थत्वेन विशिष्टविचारस्त्वंतराधिकरणे निरसिष्यत इति भावः ।। **चिन्मात्र इति** ।। तदीयभाष्ये त्वंपदार्थे विशिष्टेऽहमर्थ एव "देहमात्रं चैतन्यविशिष्टमात्मेति प्राकृता जनाः" इत्यादिना विप्रतिपत्त्युक्तेः । तत्पदार्थे च विशिष्ट एव "अस्ति तद्व्यतिरिक्त ईश्वरः सर्वशक्तिः इति केचित्" इत्यादिना विप्रतिपत्त्युक्तेः चिन्मात्रेऽभावादित्यर्थः । एतेन चिन्मात्रमेव जिज्ञासाधर्मीति पक्षोऽपि प्रत्युक्तो ध्येयः ।। **ब्रह्मशब्देति** ।। चिन्मात्रमेव ब्रह्मेत्यङ्गीकारेण बिम्बे विशिष्टे जिज्ञासाधर्मिणि ब्रह्मशब्दो न स्वरस इत्यर्थः ।

ननु "अस्ति तावद् ब्रह्म नित्यशुद्ध" इत्यादिपरभाष्ये भामत्यामागमादापाततो ब्रह्मणि सामान्यप्रसिद्ध्युक्तेः "अस्ति तद्व्यतिरिक्तः" इत्यादिभाष्यव्याख्यावसरे च "तत्पदार्थे विप्रतिपत्तिमाह" इत्यवतारिकापूर्वं जीवाभिन्नत्वेन विप्रतिपत्त्युक्ते-

र्जिज्ञासाधर्मिणि ब्रह्मण्येव सामान्यप्रसिद्धिविशेषविप्रतिपत्ती स्त इति न कोऽपि दोष इत्याशङ्क्य निराह ॥ अथेति ॥ 'न वैयधिकरण्यम्' इत्युपलक्षणम् । 'ब्रह्मजिज्ञासा' इति व्यपदेशश्च युक्त इति ध्येयम् ॥ तर्हीति ॥ नन्विह सूत्रे प्रतीचि देहत्वादिविप्रतिपत्तिर्न युक्ता, तस्याः जिज्ञासाधर्मिणिब्रह्मणि विप्रतिपत्ति-सूचन एव तात्पर्यात् । उक्तं च भामत्याम् – "त्वंपदार्थविप्रतिपत्तिद्वारा तत्पदार्थे विप्रतिपत्तिं सूचयित्वा" इति । तथाच न दोष इति चेत्, अयमाशयः । जीवभेदाभेदविप्रतिपत्तौ त्वन्मते ब्रह्मविचारपरे द्वितीयसूत्रे जीवाभेदस्यैव वाच्यत्वेन भेदकलक्षणोक्तिरयुक्तेति तत्कथनं व्यधिकरणम् । अत एवोक्तम् – उत्तरसूत्र इत्यादि ।

किंच ब्रह्मणि सामान्यप्रसिद्धिः किं विशिष्टे, उत निर्विशेषे । नाद्यः । तस्य प्रत्यगभेदाभावेनोद्देश्यत्वाभावात् तदुद्दिश्य जीवाभेदविधानायोगात् । मुमुक्षुभि-रजिज्ञास्यत्वाच्च । भाष्ये "नित्यशुद्धबुद्धमुक्तस्वभावम्" इत्यनौपाधिके ब्रह्मणि प्रसिद्धिप्रदर्शनायुक्तेश्च । न द्वितीयः । तत्र विप्रतिपत्त्यभावात् । त्वयाऽपि विशिष्ट एव तत्प्रदर्शनाच्च । "सर्वज्ञं सर्वशक्तिसमन्वितम्" इति विशिष्टे प्रसिद्ध्युक्त्य-युक्तेश्च । तस्यावेद्यत्वेन शब्दात् प्रतीत्ययोगाच्च । एतेन – वेदादेवापाततो ब्रह्म सविशेषं क्वचिन्निर्विशेषं च प्रतीतमिति विरुद्धवाक्यद्वयाद् विप्रतिपत्तिः । अत एव भाष्ये द्विविधब्रह्मरूपप्रदर्शनमिति निरस्तम् । भाष्ये 'केचित्' इति वादि-विप्रतिपत्त्युक्त्ययोगादिति । एतेन एतदधिकरणान्तर्गतं "एतेनैतदपि परास्तम्" इत्यादिना "नैवं सूत्रकार आहेत्यलम्" इत्यन्तं सामान्यप्रसिद्ध्यादिप्रदर्शक-परभाष्यखण्डनपरं सुधावाक्यं विवृतं भवति ।

गुरुराजीय – न तृतीयचतुर्थावित्याह – अत एवेति ॥ तत्त्वंपदलक्ष्य इति ॥ प्रत्यगर्थ एव विप्रतिपत्त्यादेस्सत्त्वेन तदलक्ष्ये तदभावादित्यर्थः । अत एवेति परामृष्टं हेतुमाह – विशेष्यमात्र इति ॥ चिन्मात्रं धर्मीत्युक्तं दूषयति – चिन्मात्र इति ॥ तस्य देहादिभिन्नत्वादेर्निर्णीतत्वात् तद्विचारवैयर्थ्यमिति भावः ॥ सौत्रब्रह्मशब्देति ॥ ब्रह्मशब्दस्य विशिष्टपरत्वेन चिन्मात्रपरत्वेऽस्वारस्यमित्यर्थः । नापि पञ्चम इत्याह – अथेति ।

**ವಿವರಣೆ** - 'ತೃತೀಯೇ ಬಿಂಬಮೇವ ಜಿಜ್ಞಾಸಾಧರ್ಮಿವಿಶೇಷ್ಯಮೇಕಮಿತಿ ತದ್ವಿಜಿಜ್ಞಾಸಾ ಬ್ರಹ್ಮಜಿಜ್ಞಾಸಾ' ಎಂಬುದು ಮೂರನೆಯ ಪಕ್ಷ. ಇದರ ಅಭಿಪ್ರಾಯ ಹೀಗಿದೆ - ತತ್ ಮತ್ತು ತ್ವಂ ಪದಗಳಿಂದ ಲಕ್ಷಣಯಾ ತೆಗೆದುಕೊಂಡಿರುವ ಜೀವಬ್ರಹ್ಮರಲ್ಲಿ ಯಾವ ಚಿನ್ಮಾತ್ರವು ಅನುಗತವಾಗಿದೆಯೋ, ಆ ಚಿನ್ಮಾತ್ರವನ್ನು ವಿಧಾನ ಮಾಡಿ ಐಕ್ಯವನ್ನು ತತ್ತ್ವಮಸಿವಾಕ್ಯದಲ್ಲಿ ವಿಧಾನ ಮಾಡಲಾಗಿದೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿ ಬ್ರಹ್ಮಪದದಿಂದ ಬಿಂಬನಾದ ಬ್ರಹ್ಮನನ್ನು ತೆಗೆದುಕೊಳ್ಳಬೇಕು.ಅವನ ಜಿಜ್ಞಾಸಾ ಎಂದರೆ ಎರಡೂ ವಿಶಿಷ್ಟಗಳಲ್ಲಿ ಅನುಗತವಾದ ವಿಶೇಷ್ಯವು ಒಂದೇ ಆಗಿದೆಯೆಂಬ ಜಿಜ್ಞಾಸೆಯೇ ಬ್ರಹ್ಮಜಿಜ್ಞಾಸಾ ಎನಿಸುತ್ತದೆ.

ಗಮನಿಸಬೇಕಾದ ಅಂಶ - ಮೂರನೆಯ ಪಕ್ಷದಲ್ಲಿ ವಿಶೇಷ್ಯವಾದ ಚಿನ್ಮಾತ್ರದಲ್ಲಿ ವಿಪ್ರತಿಪತ್ತಿ-ವಿಶಿಷ್ಟನಾದ ಬ್ರಹ್ಮನು ಜಿಜ್ಞಾಸಾಧರ್ಮಿ. ಹಿಂದಿನ ಪಕ್ಷಗಳಲ್ಲಿ ಒಂದು ವಿಶಿಷ್ಟಪದಾರ್ಥದಲ್ಲಿ ವಿಪ್ರತಿಪತ್ತಿ, ಇನ್ನೊಂದು ವಿಶಿಷ್ಟಪದಾರ್ಥದಲ್ಲಿ ಜಿಜ್ಞಾಸಾವನ್ನೂ ಹೇಳಲಾಗಿತ್ತು. ಆದರೆ ಆ ಎರಡು ವಿಶಿಷ್ಟಪದಾರ್ಥಗಳಿಗೆ ಭೇದವೇ ಬರುವುದರಿಂದ ಅಭೇದ ಹೇಳುವುದು ಕಷ್ಟ. ಈ ಪಕ್ಷದಲ್ಲಿ ವಿಶೇಷ್ಯ ಮತ್ತು ವಿಶಿಷ್ಟಗಳಿಗೆ ಅಭೇದ ಹೇಳುವುದು ಕಷ್ಟವಲ್ಲ. ಮತ್ತು ಈ ಪಕ್ಷದಲ್ಲಿ 'ಬ್ರಹ್ಮಜಿಜ್ಞಾಸಾ' ಎಂಬ ವ್ಯಪದೇಶವು, ಲಕ್ಷಣಸೂತ್ರವೂ ಯುಕ್ತವಾಗುತ್ತದೆ ಎಂದು ಅದ್ವೈತಿಯ ಅಭಿಪ್ರಾಯ. ಈ ಮೂರನೆಯ ಪಕ್ಷದಲ್ಲಿಯೂ ಹಿಂದಿನ ಪಕ್ಷಗಳಲ್ಲಿ ಬರುವ ದೋಷ ಸಮಾನವೆಂದು ನಮ್ಮ ಅಭಿಪ್ರಾಯ.

ಮತ್ತು ವಿಶಿಷ್ಟನು ಮಿಥ್ಯಾಭೂತನಾದ್ದರಿಂದ ಅವನ ಜಿಜ್ಞಾಸೆಯನ್ನು ಮುಮುಕ್ಷುಗಳು ಮಾಡಬೇಕಾಗಿಲ್ಲ. ನಿರ್ವಿಶೇಷಜ್ಞಾನಕ್ಕೋಸ್ಕರ ವಿಶಿಷ್ಟವಿಚಾರವನ್ನು ಮುಮುಕ್ಷುಗಳು ಮಾಡಬೇಕೆಂದು ಉತ್ತರಿಸಲಾಗದು. ಇದನ್ನು ಮುಂದೆ ಅಂತರಾಧಿಕರಣದಲ್ಲಿ ನಿರಾಕರಿಸುವವರಿದ್ದೇವೆ.

ಮತ್ತು ಶುದ್ಧಚೈತನ್ಯವು ದೇಹವೋ? ಅಲ್ಲವೋ? ಎಂಬ ವಿಪ್ರತಿಪತ್ತಿಯು ಅಸಂಭಾವಿತ. ಶಾಂಕರ-ಭಾಷ್ಯದ ಮಾತೂ ಸಹ ಇದಕ್ಕೆ ಸಂವಾದಿಯಾಗಿದೆ. ತ್ವಂ ಪದಾರ್ಥನೂ, ವಿಶಿಷ್ಟನೂ, ಅಹಮರ್ಥನೂ ಆದ ಜೀವನ ವಿಷಯದಲ್ಲೇ ವಿಪ್ರತಿಪತ್ತಿಯನ್ನು ಹೇಳಬೇಕೆಂದು ಶಾಂಕರಭಾಷ್ಯ ಹೀಗೆ ಹೇಳಿದೆ - 'ದೇಹಮಾತ್ರಂ ಚೈತನ್ಯವಿಶಿಷ್ಟಮಾತ್ಮೇತಿ ಪ್ರಾಕೃತಾ ಜನಾಃ'' ''ಚೈತನ್ಯವಿಶಿಷ್ಟ ದೇಹವೇ ಜೀವನೆಂದು ಅಜ್ಞಾನಿ ಜನರು ಹೇಳುತ್ತಾರೆ ಎಂದು. ಮತ್ತು 'ಅಸ್ತಿ ತದ್‌ವ್ಯತಿರಿಕ್ತ ಈಶ್ವರಸ್ಸರ್ವಜ್ಞಃ ಸರ್ವಶಕ್ತಿರಿತಿ ಕೇಚಿತ್' ಜೀವನಿಗಿಂತ ಭಿನ್ನನಾದ ಸರ್ವಜ್ಞನಾದ ಸರ್ವಶಕ್ತನಾದ ಈಶ್ವರನು ಇದ್ದಾನೆಂದು ಕೆಲವರು ಹೇಳುತ್ತಾರೆ'. ಈ ಮಾತಿನಿಂದಲೂ ಬ್ರಹ್ಮನ ವಿಷಯದಲ್ಲೇ ಶಾಂಕರಭಾಷ್ಯವು ವಿಪ್ರತಿಪತ್ತಿಯನ್ನು ಹೇಳಿದೆ. ಹಾಗಾಗಿ ಚಿನ್ಮಾತ್ರನಲ್ಲಿ ಈ ವಿಪ್ರತಿಪತ್ತಿಯು ಕೂಡುವುದಿಲ್ಲ.

ವಿಶಿಷ್ಟಬ್ರಹ್ಮನು ಜಿಜ್ಞಾಸೆಗೆ ಧರ್ಮಿ ಅಲ್ಲ. ಚಿನ್ಮಾತ್ರನೇ ಧರ್ಮಿ ಆಗಿದ್ದಾನೆಂಬ ನಾಲ್ಕನೇ ಪಕ್ಷವೂ ಸಹ ದೇಹತ್ವಾದಿನಾ ಚಿನ್ಮಾತ್ರನಲ್ಲಿ ವಿಪ್ರತಿಪತ್ತಿಯು ಕೂಡುವುದಿಲ್ಲವೆಂಬ ಮೇಲೆ ಹೇಳಿದ ಯುಕ್ತಿಯಿಂದಲೇ ನಿರಾಕೃತವಾಯಿತು. (ಈ ಪಕ್ಷವನ್ನು ಗ್ರಂಥಕಾರರು ಹೇಳಿಲ್ಲ)

*ಪರಿಪೂರ್ಣಚಂದ್ರಿಕಾ*

ಮತ್ತು ಸೂತ್ರದಲ್ಲಿರುವ ಬ್ರಹ್ಮಶಬ್ದವೂ ಅಸ್ವರಸವಾಗುತ್ತದೆ. ಏಕೆಂದರೆ ನಿಮ್ಮ ಮತದಲ್ಲಿ ಚಿನ್ ಮಾತ್ರನನ್ನೇ ಮುಖ್ಯವಾಗಿ ಬ್ರಹ್ಮ ಎಂದು ಹೇಳುತ್ತೀರಿ. ಈಗ ಸೂತ್ರದಲ್ಲಿನ ಬ್ರಹ್ಮಶಬ್ದಕ್ಕೆ ವಿಶಿಷ್ಟಬ್ರಹ್ಮನೆಂಬ ಅರ್ಥವು ಅಸ್ವರಸವಾಗುತ್ತದೆ. ಜಿಜ್ಞಾಸೆಗೆ ಧರ್ಮಿ ಬಿಂಬನಾದ ವಿಶಿಷ್ಟ ಬ್ರಹ್ಮನೆಂದು ಹೇಳುತ್ತಿರುವುದರಿಂದ ಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ವಿಶಿಷ್ಟಬ್ರಹ್ಮನೇ ನಿಮಗೆ ಅಭಿಪ್ರೇತನಾಗಿದ್ದಾನೆ. ಹಾಗಾದಲ್ಲಿ ಚಿನ್ ಮಾತ್ರನೆಂಬ ಸ್ವರಸ ಅರ್ಥವನ್ನು ಬ್ರಹ್ಮಶಬ್ದಕ್ಕೆ ಹೇಳಿದಂತಾಗುವುದಿಲ್ಲ.

ಆಕ್ಷೇಪ :- 'ಅಸ್ತಿ ತಾವತ್ ಬ್ರಹ್ಮ ನಿತ್ಯಶುದ್ಧ' ಇತ್ಯಾದಿ ಶಂಕರಭಾಷ್ಯಕ್ಕೆ ವ್ಯಾಖ್ಯಾನಿಸುತ್ತಾ ಭಾಮತಿಯಲ್ಲಿ ಹೀಗೆ ಹೇಳಿದೆ. ಆಗಮದಿಂದ ಆಪಾತತಃ ಬ್ರಹ್ಮನಲ್ಲಿ ಸಾಮಾನ್ಯತಃ ಪ್ರಸಿದ್ಧಿಯಿದೆ, ಎಂದು. ಮತ್ತು 'ಅಸ್ತಿ ತದ್‌ವ್ಯತಿರಿಕ್ತಃ' ಇತ್ಯಾದಿ ಭಾಷ್ಯದ ವ್ಯಾಖ್ಯಾನದಲ್ಲೂ 'ತತ್‌ಪದಾರ್ಥೇ ವಿಪ್ರತಿಪತ್ತಿಮಾಹ' ಪರಮಾತ್ಮನ ಬಗ್ಗೆ ವಿವಾದವನ್ನು ತೋರಿಸಲಾಗಿದೆ ಎಂದು ಅವತಾರಿಕೆ ನೀಡಲಾಗಿದೆ. ಹೀಗೆ ಅವತಾರಿಕೆ ನೀಡಿ ಪರಮಾತ್ಮನು ಜೀವನಿಗಿಂತ ಭಿನ್ನನೋ? ಅಲ್ಲವೋ? ಎಂದು ವಿಪ್ರತಿಪತ್ತಿಯನ್ನು ಹೇಳಲಾಗಿದೆ. ಹೀಗೆ ಬ್ರಹ್ಮನಲ್ಲಿ ಸಾಮಾನ್ಯಪ್ರಸಿದ್ಧಿ, ವಿಶೇಷವಿಪ್ರತಿಪತ್ತಿ ಜಿಜ್ಞಾಸಾಧರ್ಮಿತ್ವ ಎಲ್ಲವೂ ಬ್ರಹ್ಮನಲ್ಲೇ ಬರುತ್ತದೆ. ಆದ್ದರಿಂದ ವೈಯಧಿಕರಣ್ಯದೋಷವಿಲ್ಲ. ಸೂತ್ರದಲ್ಲಿರುವ ಬ್ರಹ್ಮಶಬ್ದವೂ ಸ್ವರಸವಾಗುತ್ತದೆ. ಮುಂದಿನ ಸೂತ್ರದಲ್ಲಿ ಹೇಳಿದ ಲಕ್ಷಣವೂ ಉಪಪನ್ನವಾಗುತ್ತದೆ.

ಸಮಾಧಾನ :- ಹಾಗಾದರೆ ಹಿಂದೆ ಜೀವನಲ್ಲಿ ಅಹಂ ಎಂಬ ಪ್ರಸಿದ್ಧಿಯನ್ನು ದೇಹತ್ವಾದಿನಾ ವಿಪ್ರತಿಪತ್ತಿಯನ್ನು ಏಕೆ ತೋರಿಸಿದಿರಿ? ಸಂದರ್ಭಕ್ಕೆ ತಕ್ಕಂತೆ ಮಾತು ಬದಲಾಯಿಸುವುದು ತಪ್ಪಲ್ಲವೇ?

ಆಕ್ಷೇಪ :- ಪ್ರಥಮಸೂತ್ರದಲ್ಲಿ ಜೀವನ ವಿಷಯದಲ್ಲಿ ದೇಹತ್ವಾದಿನಾ ವಿಪ್ರತಿಪತ್ತಿ ತೋರಿಸಿದ್ದು ಅಯುಕ್ತವಲ್ಲ. ಜಿಜ್ಞಾಸಾಧರ್ಮಿಯಾದ ಬ್ರಹ್ಮನ ವಿಷಯದಲ್ಲಿ ವಿಪ್ರತಿಪತ್ತಿ ಇದೆಯೆಂದು ತೋರಿಸುವುದ-ಕ್ಕೋಸ್ಕರ ಜೀವನ ವಿಷಯದಲ್ಲಿ ವಿಪ್ರತಿಪತ್ತಿ ತೋರಿಸುವರಲ್ಲೇ ತಾತ್ಪರ್ಯ.

**"ತ್ವಂಪದಾರ್ಥವಿಪ್ರತಿಪತ್ತಿದ್ವಾರಾ ತತ್‌ಪದಾರ್ಥೇ ವಿಪ್ರತಿಪತ್ತಿಂ ಸೂಚಯಿತ್ವಾ"** ಹೀಗೆ ಭಾಮತಿಯಲ್ಲಿ ಹೇಳಿದೆ.

ಸಮಾಧಾನ :- ಇದು ತಪ್ಪು. ಜೀವನಿಗೂ ಪರಮಾತ್ಮನಿಗೂ ಭೇದವೋ? ಅಭೇದವೋ? ಎಂಬ ವಿವಾದ ಬಂದಿದ್ದರೆ ಅದ್ವೈತಮತಪ್ರಕಾರ ಎರಡನೇ ಸೂತ್ರದಲ್ಲಿ ಜೀವಪರಮಾತ್ಮರ ಅಭೇದವನ್ನು ಸಿದ್ಧಾಂತ ಮಾಡಿ ಹೇಳಬೇಕಿತ್ತು. ಆದರೆ ಅಲ್ಲಿ ಜೀವನ ಭೇದವನ್ನೇ ಸಾಧಿಸುವ ಜನ್ಮಾದಿಕಾರಣತ್ವ-ರೂಪಲಕ್ಷಣವನ್ನೇ ಹೇಳಿದ್ದಾರೆ. ಇದು ವ್ಯಧಿಕರಣವಾಗುತ್ತದೆ.

ಮತ್ತು ಭಾಮತಿಯಲ್ಲಿ ಆಗಮದಿಂದ ಸಾಮಾನ್ಯಪ್ರಸಿದ್ಧಿಯನ್ನು ಹಿಂದೆ ಹೇಳಲಾಗಿತ್ತು. ಇಲ್ಲಿ ಪ್ರಶ್ನಿಸುತ್ತೇವೆ. ಆ ಸಾಮಾನ್ಯಪ್ರಸಿದ್ಧಿಯು ವಿಶಿಷ್ಟನಲ್ಲೊ? ಅಥವಾ ನಿರ್ವಿಶೇಷನಲ್ಲೋ? ವಿಶಿಷ್ಟನಲ್ಲಿ ಎಂದು ಹೇಳಲಾಗದು. ವಿಶಿಷ್ಟನಾದ ಜೀವನಿಗೂ ಬ್ರಹ್ಮನಿಗೂ ನೀವು ಐಕ್ಯವನ್ನು ಒಪ್ಪಿಲ್ಲ. ವಿಶೇಷಕ್ಕೂ ಚಿನ್‌ಮಾತ್ರಕ್ಕೂ ಮಾತ್ರ ಐಕ್ಯವೆಂದು ಹಿಂದೆ ಹೇಳಿದ್ದೀರಿ. ಮಿಥ್ಯಾಭೂತನಾದ ಪರಮಾತ್ಮನ ವಿಷಯದಲ್ಲಿ

ಮೋಕ್ಷಾರ್ಥಿಯು ವಿಚಾರ ಮಾಡುವುದೂ ಸಹ ಕೂಡುವುದಿಲ್ಲ. ಅಷ್ಟೇ ಅಲ್ಲದೆ 'ನಿತ್ಯಶುದ್ಧಬುದ್ಧಮುಕ್ತ-ಸ್ವಭಾವಂ' ಎಂದು ಶುದ್ಧನ ವಿಷಯದಲ್ಲೇ ಸಾಮಾನ್ಯಪ್ರಸಿದ್ಧಿಯನ್ನು ತೋರಿಸುವುದೂ ಕೂಡುವುದಿಲ್ಲ.

ಇನ್ನು ನಿರ್ವಿಶೇಷಬ್ರಹ್ಮನಲ್ಲೂ ಸಾಮಾನ್ಯಪ್ರಸಿದ್ಧಿಯನ್ನು ಹೇಳಲಾಗದು. ನಿರ್ವಿಶೇಷನಾದ್ದರಿಂದಲೇ ಅವನಲ್ಲಿ ವಿಪ್ರತಿಪತ್ತಿ ಹುಟ್ಟುವುದಿಲ್ಲ. ಮತ್ತು ನೀನೇ ವಿಶಿಷ್ಟನಲ್ಲಿ ಸಾಮಾನ್ಯಪ್ರಸಿದ್ಧಿಯನ್ನು ತೋರಿಸಿದ್ದಿ. 'ಸರ್ವಜ್ಞಂ ಸರ್ವಶಕ್ತಿಸಮನ್ವಿತಮ್' ಎಂದು ವಿಶಿಷ್ಟನಲ್ಲಿ ಸಾಮಾನ್ಯಪ್ರಸಿದ್ಧಿಯನ್ನು ಹೇಳಿದ್ದೀರಿ. ಮತ್ತು ನಿರ್ವಿಶೇಷನು ಅವೇದ್ಯನಾದ್ದರಿಂದ ಶಬ್ದದಿಂದ ತಿಳಿಯಲಾರ.

**ಕೆಲವು ಅದ್ವೈತಿಗಳ ಆಕ್ಷೇಪ** - ವೇದದಲ್ಲಿ ಕೆಲವು ವಾಕ್ಯಗಳು ವಿಶಿಷ್ಟನನ್ನು ಪ್ರತಿಪಾದಿಸುತ್ತಿವೆ. ಇನ್ನು ಕೆಲವು ವಾಕ್ಯಗಳು ಶುದ್ಧನನ್ನು ಪ್ರತಿಪಾದಿಸುತ್ತಿವೆ. ವಿರುದ್ಧವಾಗಿ ಕಾಣುವ ಈ ಉಭಯವಿಧವಾಕ್ಯಗಳಿಂದ ನಮಗೆ ಸಂಶಯ ಉಂಟಾಗಿದೆ. ಆದ್ದರಿಂದಲೇ ಶಾಂಕರಭಾಷ್ಯದಲ್ಲಿಯೂ ವಿಶಿಷ್ಟಬ್ರಹ್ಮ ಶುದ್ಧಬ್ರಹ್ಮ ಎಂದು ಇಬ್ಬರು ಬ್ರಹ್ಮರನ್ನು ಹೇಳಿದ್ದಾರೆಂದು ಕೆಲವರು ಹೇಳಿದ್ದಾರೆ.

**ಸಮಾಧಾನ** :- ಆದರೆ ಇದು ಶಾಂಕರಭಾಷ್ಯಕ್ಕೆ ವಿರುದ್ಧ. ಶಾಂಕರಭಾಷ್ಯದಲ್ಲಿ 'ಕೇಚಿತ್' ಕೆಲವು ವಾದಿಗಳು ಹೀಗೆ ಹೇಳುತ್ತಾರೆಂದು ಹೇಳಿದ್ದು ವಿವಾದಿಗಳಲ್ಲಿ ಉಂಟಾದ ವಿವಾದವನ್ನು ಹೇಳಿದೆ ಹೊರತು ಶ್ರುತಿವಾಕ್ಯಗಳಲ್ಲಿನ ವಿರೋಧವನ್ನಲ್ಲ.

ಇಲ್ಲಿಯ ತನಕ ನ್ಯಾಯಸುಧೆಯಲ್ಲಿ 'ಏತೇನ ಏತದಪಿ ಪರಾಸ್ತಂ' ಎಂಬಲ್ಲಿಂದ 'ನೈವಂ ಸೂತ್ರಕಾರ ಆಹೇತ್ಯಲಂ' ಎಂಬಲ್ಲಿಯ ತನಕ ಹೇಳಿದ ಅಂಶಗಳನ್ನೆಲ್ಲಾ ವಿವರಿಸಿದಂತಾಯಿತು.




**ಸಾಮಾನ್ಯ ಪರಿಚಯ-ವಿಶೇಷ ವಿವಾದ**

ವಿಚಾರವಿಷಯದ ಬಗ್ಗೆ ಮೊದಲಿಗೆ ಸಾಮಾನ್ಯಪರಿಚಯ ಮತ್ತು ವಿಶೇಷ ವಿವಾದಗಳು ಬೇಕು. ಸಾಮಾನ್ಯವಾಗಿ ಏನೂ ಪರಿಚಯವಿಲ್ಲದಿದ್ದರೆ ಅಥವಾ ವಿಶೇಷ ಅಂಶಗಳಲ್ಲಿ ವಿವಾದವಿಲ್ಲದಿದ್ದರೆ ವಿಚಾರವು ಹೊರಡುವುದಿಲ್ಲ. ಬ್ರಹ್ಮವಿಚಾರಕ್ಕೆ ಅವಶ್ಯಕವಾದ ಸಾಮಾನ್ಯ ಪರಿಚಯ ವಿಶೇಷವಿವಾದಗಳ ಬಗ್ಗೆ ಅದ್ವೈತಿಗಳು ಹೇಳುವುದು ಹೀಗೆ -

'ನಾನು' ಎಂದು ಜೀವನ ಬಗ್ಗೆ ಸಾಮಾನ್ಯ ಪರಿಚಯವಿದೆ. ಶರೀರ ಹೊರತಾಗಿ ಬೇರೆ ಜೀವವೆಂಬುದಿಲ್ಲ ಎಂದು ಚಾರ್ವಾಕರು ಹೇಳುತ್ತಾರೆ, ಇಂದ್ರಿಯಗಳೆ ಜೀವ, ಮನಸ್ಸೆ ಜೀವ, ಬ್ರಹ್ಮನೇ ಜೀವ, ಶೂನ್ಯವೆ ಜೀವ ಎಂದು ಮುಂತಾಗಿ ವಿಶೇಷವಿವಾದಗಳೂ ಇವೆ. ಅದರಿಂದ ಬ್ರಹ್ಮವಿಚಾರ ಉಂಟಾಗುತ್ತದೆ. ಜೀವನ ಸಾಮಾನ್ಯ ಪರಿಚಯ ವಿಶೇಷವಿವಾದಗಳಿಂದ ಬ್ರಹ್ಮನ ವಿಚಾರ ಹೇಗೆ ಎಂದರೆ ಜೀವನೆ ಬ್ರಹ್ಮ ಎನ್ನುತ್ತದೆ ವೇದಾಂತ. ಇದು ಮೂರು ರೀತಿಗಳಿಂದ ಶಕ್ಯವಿದೆ-

(೧) ಬ್ರಹ್ಮನಲ್ಲಿ ಜೀವಾಭೇದವಿಚಾರ ನಡೆಯುವುದರಿಂದ ಅದು ಬ್ರಹ್ಮವಿಚಾರ

(೨) ಜೀವನಲ್ಲಿ ಬ್ರಹ್ಮಾಭೇದ ವಿಚಾರ ನಡೆಯುವುದರಿಂದ ಅದು ಬ್ರಹ್ಮವಿಚಾರ

(೩) ಜೀವಬ್ರಹ್ಮರೊಳಗಿರುವ ಕೇವಲ ಚೈತನ್ಯಾಂಶಗಳಿಗೆ ಅಭೇದ ವಿಚಾರ. ಕೇವಲ ಚೈತನ್ಯ ಸ್ವರೂಪನಾದ ಬ್ರಹ್ಮನಲ್ಲಿ ಕೇವಲ ಚೈತನ್ಯಾಭೇದ ವಿಚಾರ ನಡೆಯುವುದರಿಂದ ಅದು ಬ್ರಹ್ಮವಿಚಾರ.

ಇವು ಮೂರು ಅಸಂಗತ. ಮೊದಲಿನ ಪಕ್ಷದಲ್ಲಿ ಜೀವನ ಬಗ್ಗೆ ವಿವಾದ ಬಂದಾಗ ಬ್ರಹ್ಮನ ಬಗ್ಗೆ ವಿಚಾರ ಮಾಡುವುದು, ಬ್ರಹ್ಮನಲ್ಲಿ ಜೀವಾಭೇದವನ್ನು ಹೇಳುವುದು ಕೂಡುವುದಿಲ್ಲ. ಎರಡನೆ ಪಕ್ಷದಲ್ಲಿ ಜೀವನು ಬ್ರಹ್ಮ ಹೌದೆ ಅಲ್ಲವೆ ಎನ್ನುವ ವಿಚಾರ ಜೀವವಿಚಾರವಾಗುವುದೆ ಹೊರತು ಬ್ರಹ್ಮವಿಚಾರವಾಗುವುದಿಲ್ಲ, ಶಬ್ದ ನಿತ್ಯವೆ ಅನಿತ್ಯವೆ ಎಂಬುದು ಶಬ್ದವಿಚಾರವಾಗುವುದೇ ಹೊರತು ನಿತ್ಯತ್ವವಿಚಾರವೂ ಆಗುವುದಿಲ್ಲ, ಅನಿತ್ಯತ್ವ ವಿಚಾರವೂ ಆಗುವುದಿಲ್ಲ. ಜೀವನಲ್ಲಿ ಬ್ರಹ್ಮಾಭೇದವೆನ್ನುವುದು ಅದ್ವೈತವೂ ಅಲ್ಲ. ಜೀವಬ್ರಹ್ಮರಲ್ಲಿರುವ ವಿರುದ್ಧಾಂಶಗಳನ್ನು ಬಿಟ್ಟು ಶುದ್ಧ ಚೈತನ್ಯಾಭೇದ ಹೇಳುವುದೇ ಅದ್ವೈತ. ಜೀವನೆಂಬ ವಿಶಿಷ್ಟ ಪದಾರ್ಥದಲ್ಲಿ ವಿಶೇಷ್ಯವಾಗಿರುವ ಶುದ್ಧಚೈತನ್ಯವನ್ನೇ ಉದ್ದೇಶಿಸಿ ಅಭೇದವನ್ನು ವಿಧಿಸಬೇಕು. ಆದರಿಂದ ಸಾಮಾನ್ಯ ಪರಿಚಯ ವಿವಾದಗಳನ್ನೂ ಶುದ್ಧನಲ್ಲಿಯ ತೋರಿಸಬೇಕು. ಈ ದೋಷ ಮೊದಲಿನ ಪಕ್ಷದಲ್ಲಿಯೂ ಇದೆ. ಆ ಪಕ್ಷದಲ್ಲಿಯೂ ಬ್ರಹ್ಮ ಎಂಬ ವಿಶಿಷ್ಟ ಪದಾರ್ಥದಲ್ಲಿ ಜೀವಾಭೇದವನ್ನು ಹೇಳುವುದು ಅದ್ವೈತಕ್ಕೆ ಸಮ್ಮತವಲ್ಲ. ಎರಡನೆ ಪಕ್ಷದಲ್ಲಿ ಜೀವವಿಚಾರವಾದ್ದರಿಂದ ಜೀವನಲ್ಲಿ ದೇಹರೂಪತ್ವ ಮುಂತಾದ ತಪ್ಪು ಕಲ್ಪನೆಗಳನ್ನು ಕಳೆಯಲು ಬ್ರಹ್ಮಾಭೇದವನ್ನು ಜನ್ಮಾಧಿಕರಣದಲ್ಲಿ ಹೇಳಬೇಕು. ಜಗಜ್ಜನ್ಮಾದಿಕಾರಣತ್ವರೂಪವಾದ ಬ್ರಹ್ಮಲಕ್ಷಣವನ್ನು ಹೇಳುವುದು ಅಸಂಗತ. ''ಜೀವನು ಬ್ರಹ್ಮನೆ ಆಗಿರುವುದರಿಂದ ಬ್ರಹ್ಮಲಕ್ಷಣವೆ ಜೀವಲಕ್ಷಣವೂ ಆಗಬಹುದು' ಎನ್ನುವುದು ಅಯುಕ್ತ. ಮನುಷ್ಯನನ್ನು ಮೋಟು ಮರವೆಂದು ಭ್ರಮಿಸಿದಾಗ ಈತ ಮನುಷ್ಯನೆನ್ನಬೇಕು ಹೊರತು, ಮನುಷ್ಯನ ಲಕ್ಷಣಗಳು ಹೀಗೆ ಎಂದು ಹೇಳುವುದಲ್ಲ. ಜನ್ಮಾದಿಗಳು ಜೀವನ ಅಸಾಧಾರಣ ಲಕ್ಷಣಗಳೆಂದು ಮೊದಲಿಗೆ ಸಿದ್ಧವೂ ಆಗಿಲ್ಲ. ಅದು ಅದ್ವೈತ ಸಿದ್ಧಾಂತವೂ ಅಲ್ಲ. ಮುಂದೆ 'ಶಾರೀರಶ್ಚೋಭಯೇಽಪಿ ಹಿ ಭೇದೇನೈನ-ಮಧೀಯತೇ' 'ಪ್ರಾಣಭೃಚ್ಚ' ಇತ್ಯಾದಿ ಸೂತ್ರಗಳಲ್ಲಿ ಜನ್ಮಾದಿಸೂತ್ರೋಕ್ತ ಬ್ರಹ್ಮಲಕ್ಷಣ ಜೀವನಲ್ಲಿ ಅಸಂಭವಿ ಎಂದೇ ಹೇಳಿದೆ. ಮೂರನೆ ಪಕ್ಷದಲ್ಲಿ ಶುದ್ಧಚೈತನ್ಯದ ಬಗ್ಗೆ ವಿವಾದ, ವಿಶಿಷ್ಟಬ್ರಹ್ಮನ ಬಗ್ಗೆ ವಿಚಾರ ಎನ್ನುವುದು ಕೂಡುವುದಿಲ್ಲ. ವಿಶಿಷ್ಟಬ್ರಹ್ಮ ಮಿಥ್ಯವಾದ್ದರಿಂದ ಮೋಕ್ಷಾರ್ಥಿ ಅವನ ಬಗ್ಗೆ ವಿಚಾರ ಮಾಡುವುದೂ ಅಯುಕ್ತ. ಶುದ್ಧ ಚೈತನ್ಯದ ಬಗ್ಗೆ ವಿವಾದವೂ ಇಲ್ಲ. ಶಾಂಕರಭಾಷ್ಯದಲ್ಲಿ ಜೀವನ ಬಗ್ಗೆ ಮತ್ತು ವಿಶಿಷ್ಟ ಬ್ರಹ್ಮನ ಬಗ್ಗೆ ವಿವಾದಗಳನ್ನೇ ಹೇಳಿದೆ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಬ್ರಹ್ಮನೆಂದರೆ ವಿಶಿಷ್ಟ ಬ್ರಹ್ಮ, ಪರಮಾತ್ಮ ಎಂದೂ ಹೇಳುತ್ತಾರೆ. ಆದರೆ ಪರಮಾತ್ಮ ಅದ್ವೈತದಲ್ಲಿ ಮಿಥ್ಯೆ. ಸತ್ಯವಾದ ಶುದ್ಧಚೈತನ್ಯವೆ ಬ್ರಹ್ಮ. ಮಿಥ್ಯವಾದುದು ಯಾವುದೂ ಬ್ರಹ್ಮ ಅಲ್ಲ. 'ಅಸ್ತಿ ತಾವದ್ ಬ್ರಹ್ಮ ನಿತ್ಯಶುದ್ಧ' ಎಂದು ಮುಂತಾಗಿ ಶಾಂಕರಭಾಷ್ಯದ ಭಾಮತಿಯಲ್ಲಿ ಪರಮಾತ್ಮನ ಬಗ್ಗೆ ಸಾಮಾನ್ಯ ಪರಿಚಯವನ್ನೂ 'ಅಸ್ತಿ ತದ್ವ್ಯತಿರಿಕ್ತ' ಎಂಬ ಭಾಷ್ಯದ ಭಾಮತಿಯಲ್ಲಿ ಪರಮಾತ್ಮನ ಬಗ್ಗೆ ವಿವಾದವನ್ನೂ ಹೇಳಿದ್ದರಿಂದ ಪರಮಾತ್ಮನ ಬಗ್ಗೆಯ ವಿಚಾರ ಎಂದು ಅದ್ವೈತಿಗಳು ಹೇಳಿದರೆ ಅದೂ ಸರಿಯಲ್ಲ. ಶಾಂಕರಭಾಷ್ಯದಲ್ಲಿ ಜೀವನ ಬಗ್ಗೆ ದೇಹರೂಪತ್ವಾದಿ ವಿವಾದವನ್ನು ಹೇಳಿದ್ದು ಕೂಡಲಾರದು. ಅದು ಪರಮಾತ್ಮನ ಬಗ್ಗೆ ವಿವಾದ ಸೂಚನೆಗಾಗಿ ಎನ್ನುವುದಾದರೆ ಜೀವಪರಮಾತ್ಮರೊಳಗೆ ಭೇದಾಭೇದ

ವಿವಾದ ಪರಿಹಾರಕ್ಕೆ ಜನ್ಮಾಧಿಕರಣದಲ್ಲಿ ಅಭೇದವನ್ನು ಹೇಳಬೇಕಾಗಿತ್ತು. ಅಲ್ಲಿ ಭೇದಸಾಧಕವಾದ ಜನ್ಮಾದಿ-ಕರ್ತೃತ್ವರೂಪ ಲಕ್ಷಣವನ್ನೇ ಹೇಳಿದೆ.

ಬ್ರಹ್ಮನ ಬಗ್ಗೆ ಸಾಮಾನ್ಯಪರಿಚಯವಿದೆ ಎನ್ನುತ್ತಾರೆ. ಇಲ್ಲಿ ಬ್ರಹ್ಮ ವಿಶಿಷ್ಟವೆಂಬ ಅಭಿಪ್ರಾಯವೆಂದರೆ ವಿಶಿಷ್ಟವು ಮಿಥ್ಯಾ. ಅದರ ವಿಚಾರ ಅನಾವಶಕ್ಯ. ಅದರಲ್ಲಿ ಜೀವಾಭೇದವೂ ಇಲ್ಲ. ಶಾಂಕರಭಾಷ್ಯದಲ್ಲಿ 'ನಿತ್ಯಶುದ್ಧಬುದ್ಧಮುಕ್ತಸ್ವಭಾವಂ' ಎಂದು ಶುದ್ಧದ ಪರಿಚಯವನ್ನೇ ಹೇಳಿದೆ. ಬ್ರಹ್ಮ ಶುದ್ಧವೆಂಬ ಅಭಿಪ್ರಾಯದಲ್ಲಿ ಶುದ್ಧದ ಬಗ್ಗೆ ವಿವಾದವಿಲ್ಲದಿರುವುದು, ವಿಶಿಷ್ಟದ ಬಗ್ಗೆಯೇ ವಿವಾದಗಳನ್ನು ಭಾಷ್ಯದಲ್ಲಿ ತೋರಿಸಿದುದು, 'ಸರ್ವಜ್ಞಂ ಸರ್ವಶಕ್ತಿಸಮನ್ವಿತಂ' ಎಂದು ವಿಶಿಷ್ಟದ ಬಗ್ಗೆ ಸಾಮಾನ್ಯ ಪರಿಚಯ ನೀಡಿದುದು, ಶುದ್ಧ ಅವೇದ್ಯವಾದ್ದರಿಂದ ಶಬ್ದದಿಂದ ಹೇಳಲಾಗದುದು ಎಂದು ಅನೇಕ ದೋಷಗಳಿವೆ.

ಶುದ್ಧಚೈತನ್ಯದ ಬಗ್ಗೆ ಸಾಮಾನ್ಯಜ್ಞಾನ ವಿಶೇಷಜ್ಞಾನಗಳಿಲ್ಲದಿರುವುದರಿಂದಲೂ ಅದರ ಬಗ್ಗೆ ವಿಚಾರ ಕೂಡಲಾರದು. ಏಕೆಂದರೆ ಶುದ್ಧನಲ್ಲಿ ಸಾಮಾನ್ಯ ವಿಶೇಷ ಧರ್ಮಗಳೇ ಇಲ್ಲ. ಅದರಿಂದ ಹೀಗೆ ಹೇಳಬೇಕು - 'ಗುಣಪೂರ್ಣನಾದ ಪರಮಾತ್ಮನ ಬಗ್ಗೆ ಉಪನಿಷತ್ತುಗಳಿಂದ ಸಾಮಾನ್ಯ ಪರಿಚಯ ಉಂಟಾಗಿರುತ್ತದೆ. ಮತ್ತು ಪರಮಾತ್ಮ ಸಗುಣನೆ ನಿರ್ಗುಣನೆ ಅಲ್ಪಗುಣನೆ ಎಂದು ಮುಂತಾಗಿ ವಿವಾದಗಳಿರುವುದರಿಂದ ಅವನ ಬಗ್ಗೆಯ ವಿಚಾರ' ಎಂದು.

• • • • •

## ಭಾಸ್ಕರರ ನಿರಾಕರಣೆ

**तात्पर्यचन्द्रिका –**

**एतेन भास्करीयं – जगत्कारणे प्रधानत्वादिविप्रतिपत्तिप्रदर्शनं निरस्तम् । आद्यसूत्रे कारणपदस्य उत्तरसूत्रे तल्लक्षणस्य च कर्तव्यत्वप्रसङ्गात् ।**

**किञ्च –**

**ज्ञातं सामान्यतोऽज्ञातं विशेषेण विचार्यते ।**
**ज्ञाताज्ञातविभागस्तु निर्विशेषे न युज्यते ।**

**उक्तं चानुव्याख्याने –**

**''इदमित्थमिति ज्ञानं जिज्ञासाया: प्रयोजनम्'' इति ।**

**तस्माद् वेदान्तादिना आपातप्रतीते ब्रह्मणि सगुणनिर्गुणाल्पगुणत्वादिना विप्रतिपत्तेः जिज्ञास्यत्वमिति । तदुक्तमनुव्याख्याने–**

**''तस्माद् ब्रह्मैव जिज्ञास्यमस्मदीयं गुणार्णवम् ।**
**वासुदेवाख्यमद्वन्द्वं परं ब्रह्माखिलोत्तमम्'' इति ।।१।।**

*ಪರಿಪೂರ್ಣಚಂದ್ರಿಕಾ*

ಅನುವಾದ - ಭಾಸ್ಕರರು ಜಗತ್ಕಾರಣ ಪ್ರಧಾನವೋ? ಬ್ರಹ್ಮನೋ? ಎಂಬ ವಿವಾದವನ್ನು ತೋರಿಸಿದ್ದಾರೆ. ಅದ್ವೈತಮತವನ್ನು ನಿರಾಕರಿಸಿದ್ದರಿಂದಲೇ ಇವರನ್ನೂ ನಿರಾಕರಿಸಿದಂತಾಯಿತು. ಇವರು ಹೇಳುವಂತೆ ಆಗಿದ್ದಲ್ಲಿ ಪ್ರಥಮಸೂತ್ರ 'ಅಥಾತಃ ಕಾರಣ ಜಿಜ್ಞಾಸಾ' ಎಂದಿರಬೇಕಿತ್ತು. ಎರಡನೆಯ ಸೂತ್ರವು ಕಾರಣಲಕ್ಷಣವನ್ನೇ ಹೇಳಬೇಕಿತ್ತು.

ಮತ್ತೊಂದು ದೋಷ - ಯಾವ ವಿಷಯದಲ್ಲಿ ಸಾಮಾನ್ಯಜ್ಞಾನವಿದ್ದು ವಿಶೇಷ ಜ್ಞಾನವಿಲ್ಲವೋ ಅಂತಹ ವಿಷಯದಲ್ಲಿ ಮಾತ್ರ ವಿಶೇಷ ವಿಚಾರವು ಸಾಧ್ಯ. ನಿರ್ವಿಶೇಷನಾದ ಚೈತನ್ಯನ ಬಗ್ಗೆ ಸಾಮಾನ್ಯಜ್ಞಾನ ವಿಶೇಷತಃ ಅಜ್ಞಾನಗಳು ಇಲ್ಲದ ಕಾರಣ ವಿಚಾರವೇ ಕೂಡುವುದಿಲ್ಲ.

ಅನುವ್ಯಾಖ್ಯಾನದಲ್ಲೂ ಹೇಳಿದ್ದಾರೆ - 'ಇದಮಿತ್ಥಂ' ಎಂಬ ನಿಶ್ಚಯಜ್ಞಾನವೇ ಜಿಜ್ಞಾಸೆಯ ಪ್ರಯೋಜನ, ಎಂದು. ಇದು ನಿರ್ವಿಶೇಷಬ್ರಹ್ಮನಲ್ಲಿ ಕೂಡುವುದಿಲ್ಲ.

ಆದ್ದರಿಂದ ಹೀಗೆ ಹೇಳಬೇಕು - ಉಪನಿಷತ್ತು ಮೊದಲಾದವುಗಳಿಂದ ವಿಚಾರ ಮಾಡುವ ಮೊದಲೇ ಪರಮಾತ್ಮನು ಸಾಮಾನ್ಯವಾಗಿ ತಿಳಿದಿದ್ದಾನೆ. ಇವನು ಸಗುಣನೋ ನಿರ್ಗುಣನೋ? ಅಲ್ಪಗುಣನೋ? ಇತ್ಯಾದಿಯಾಗಿ ವಿವಾದವಿರುವುದರಿಂದ ಪರಮಾತ್ಮನು ಜಿಜ್ಞಾಸ್ಯನಾಗುತ್ತಾನೆ ಎಂದು ಈಕ್ಷತ್ಯಧಿಕರಣದ ಅನುವ್ಯಾಖ್ಯಾನದಲ್ಲಿ ಇದನ್ನೇ ಹೇಳಿದ್ದಾರೆ. - 'ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಜಿಜ್ಞಾಸ್ಯನಾದವನು ಗುಣಪರಿಪೂರ್ಣನಾದ ದ್ವಂದ್ವರಹಿತನಾದ ವಾಸುದೇವನಾದ ಅದ್ವಿತೀಯಸರ್ವೋತ್ತಮನಾದ ಪರಬ್ರಹ್ಮನೇ ಆಗಿದ್ದಾನೆ' ಎಂದು.

**प्रकाशः – आद्यसूत्र इति ।।** 'कारणजिज्ञासा' इत्येव स्यात्, द्वितीयसूत्रेऽपि जिज्ञास्यस्य कारणस्यैव लक्षणं स्यात्, नतु ब्रह्मण इत्यर्थः । विप्रतिपत्त्यभावाच्चिन्मात्रे न जिज्ञासेत्युक्तम्, इदानीं सामान्यज्ञानविशेषज्ञानाभ्यां जिज्ञासा । नच ते निर्धर्मके स्त इत्याह – **किञ्चेति ।।** 'विशेषेणाज्ञातम्' इत्यन्वयः ।। **इदमित्थमिति ।।** इदमिति सामान्यज्ञानमित्थमिति विशेषज्ञानं वदता ''ज्ञातं सामान्यतः'' इत्यादि सूचितमिति भावः । एवं परमते जिज्ञासोपयुक्तं सामान्यप्रसिद्ध्यादि निरस्य स्वमतेन तदाह – **तस्मादिति ।। आपातेति ।।** विचारात् प्रागेव सिद्धार्थबोधकोपनिषद्भाष्यादिना प्रतीत इत्यर्थः ।। **तदुक्तमिति ।।** ईक्षत्यधिकरण इति ध्येयम् ।' गुणार्णवम्' इत्युक्त्या सगुणत्वादिविप्रतिपत्तिः । 'वासुदेवम्' इत्युक्त्या शिवत्वादिविप्रतिपत्तिः सूचिता । एवं पदान्तरैरपि द्रष्टव्यम् ।

**गुरुराजीय – आद्यसूत्रे कारणेति ।।** लोके निश्चितेन धर्मिणेवानिश्चितेन प्रकारेण विशिष्यविचारपादाप्रयोगेण सूत्रे अश्रुतकारणपदकल्पकापातात् ।। **उत्तरसूत्र इति ।।**

**धर्मिण्यतदारोपनिवृत्त्यर्थत्वाल्लक्षणस्योत्तरसूत्रे कारणमेव ब्रह्मत्वेन लक्षणीयं स्यादित्यर्थः । तथाच ब्रह्मलक्षणकथनमसङ्गतमिति भावः । किंच सामान्यतो ज्ञातस्य विशेषतोऽज्ञातस्य विषयत्वेन त्वन्मते सामान्यविशेषभावाभावान्न तस्य जिज्ञास्यतेत्याह – किंचेति ।। नच जिज्ञासाया निर्विशेषज्ञानसाधनत्वाज्जिज्ञासाऽऽवश्यकीति वाच्यम् । तत्तच्छब्दसमन्वयेव गुणविशेषलाभेन विशेषज्ञानस्यैव साधनत्वं नतु विशेषज्ञानस्येत्यत्रानुव्याख्यानसंमतिमाह – उक्तं चेति ।। ननु परोक्त-सामान्यप्रतिपत्तिविशेषप्रतिपत्त्योर्दूषितत्वेन तयोरभावात् प्रयोजकाभावेन भवन्मते कथं विचारारम्भ इत्यत उपसंहारव्याजेन ते दर्शयति – तस्मादिति ।। अत्रा-नुव्याख्यानसंमतिमाह – तदुक्तमिति ।।**

**ವಿವರಣೆ** - ಅದ್ವೈತಿಗಳೇ ಆದ ಭಾಸ್ಕರರು ಕಾರಣ ಜಿಜ್ಞಾಸೆಯನ್ನು ಪ್ರಥಮಸೂತ್ರ ಹೇಳುತ್ತಿದೆ ಎನ್ನುತ್ತಾರೆ. ಹಾಗಾದಲ್ಲಿ ಜಿಜ್ಞಾಸೆಯಲ್ಲಿ ಯಾವುದು ಧರ್ಮಿಯೋ ಅದನ್ನೇ ಹೇಳಬೇಕೆಂದು ಹಿಂದೆ ಉಪಪಾದಿಸಿದ ಪ್ರಕಾರ 'ಕಾರಣಜಿಜ್ಞಾಸಾ' ಎಂದೇ ಸೂತ್ರವಿರಬೇಕಿತ್ತು. ಪ್ರಕಾರನಾದ ಬ್ರಹ್ಮನನ್ನು ಹೇಳಬೇಕಾಗಿರಲಿಲ್ಲ. ಮತ್ತು ಜಗತ್ಕಾರಣನೇ ಜಿಜ್ಞಾಸಾಧರ್ಮಿಯಾದ್ದರಿಂದ ಜಗತ್ಕಾರಣನ ಲಕ್ಷಣವನ್ನೇ ಮುಂದಿನ ಸೂತ್ರದಿಂದ ಬ್ರಹ್ಮನ ಲಕ್ಷಣವನ್ನು ಹೇಳುವುದು ಅಸಂಗತವಾಗುತ್ತದೆ. ಆದ್ದರಿಂದ ಶ್ರುತಹಾನ ಅಶ್ರುತಕಲ್ಪನಾದೋಷಗಳು ಇವರಿಗೂ ತಪ್ಪಿದ್ದಲ್ಲ.

ಹೀಗೆ ಭಾಸ್ಕರರನ್ನು ನಿರಾಕರಿಸಿ ಪುನಃ ಅದ್ವೈತಿಗಳನ್ನು ನಿರಾಕರಿಸುತ್ತಿದ್ದಾರೆ. ಶುದ್ಧಚೈತನ್ಯದ ಬಗ್ಗೆ ವಿವಾದವಿಲ್ಲದಿರುವುದರಿಂದ ಅದರ ಬಗ್ಗೆ ವಿಚಾರ ಕೂಡುವುದಿಲ್ಲ ಎಂಬುದನ್ನು ತೋರಿಸಿದ್ದಾಯಿತು. ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಸಾಮಾನ್ಯಜ್ಞಾನವಿಲ್ಲದೆ ಇದ್ದರೆ ವಿಶೇಷಜ್ಞಾನವನ್ನು ಹೊಂದಲು ಸಾಧ್ಯವಿಲ್ಲ. ಶುದ್ಧಚೈತನ್ಯನು ನಿರ್ವಿಶೇಷನಾದ್ದರಿಂದ ಸಾಮಾನ್ಯಜ್ಞಾನವನ್ನು ಮೊದಲು ಅನಂತರ ವಿಶೇಷಜ್ಞಾನವನ್ನು ಅವನಲ್ಲಿ ಹೇಗೆ ತಾನೆ ಒಪ್ಪಲು ಸಾಧ್ಯ? ಆದ್ದರಿಂದ ಜಿಜ್ಞಾಸ್ಯನಾಗಲಾರ.

ಆಕ್ಷೇಪ :- ನಿರ್ವಿಶೇಷಜ್ಞಾನಕ್ಕೆ ಜಿಜ್ಞಾಸೆಯು ಸಾಧನವಾಗಿದೆ. ಆದ್ದರಿಂದ ಜಿಜ್ಞಾಸೆಯು ಆವಶ್ಯಕವೇ ಆಗಿದೆ.

ಸಮಾಧಾನ :- ಯಾವುದೇ ಶಬ್ದವನ್ನು ಸಮನ್ವಯ ಮಾಡುವುದರಿಂದ ಗುಣವಿಶೇಷವೇ ಸಿದ್ಧವಾಗುತ್ತದೆ ಹೊರತು ಯಾವ ಗುಣವೂ ಇಲ್ಲವೆಂದು ಸಿದ್ಧವಾಗುವುದಿಲ್ಲ. ಆದ್ದರಿಂದ ಜಿಜ್ಞಾಸೆಯು ವಿಶೇಷಜ್ಞಾನಕ್ಕೆ ಸಾಧನವಾಗಿದೆ, ಹೊರತು ನಿರ್ವಿಶೇಷಜ್ಞಾನಕ್ಕೆ ಅಲ್ಲ. ಈ ವಿಷಯದಲ್ಲಿ ಅನುವ್ಯಾಖ್ಯಾನ ಸಮ್ಮತಿಯನ್ನು 'ಉಕ್ತಂಚ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

*ಪರಿಪೂರ್ಣಚಂದ್ರಿಕಾ*

ಆದ್ದರಿಂದ ಜಿಜ್ಞಾಸೆಗೆ ಉಪಯುಕ್ತವಾದ ಸಾಮಾನ್ಯಪ್ರಸಿದ್ಧಿ, ವಿಶೇಷತಃಅಪ್ರಸಿದ್ಧಿ ಮೊದಲಾದವುಗಳನ್ನು ಪರರಿಗೆ ಉಪಪಾದಿಸಲಾಗದೆಂದು ಇಲ್ಲಿಯೂ ಸಮರ್ಥಿಸಿದ್ದಾಯಿತು. ಈಗ ನಮ್ಮ ಸಿದ್ಧಾಂತದ ಪ್ರಕಾರ ಜಿಜ್ಞಾಸ್ಯತ್ವವು ಹೇಗೆ ಕೂಡುತ್ತದೆಂದು 'ತಸ್ಮಾತ್' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಅನುವ್ಯಾಖ್ಯಾನದ ಈ ಶ್ಲೋಕವನ್ನೇ ಮಂಗಳವನ್ನಾಗಿ ಹಾಡುತ್ತಾ ಗ್ರಂಥಕಾರರು ಜಿಜ್ಞಾಸಾಧಿಕರಣವನ್ನು ಮುಗಿಸುತ್ತಿದ್ದಾರೆ.

**ತಸ್ಮಾತ್ ಶಾಸ್ತ್ರೇಣ ಜಿಜ್ಞಾಸ್ಯಮ್ ಅಸ್ಮದೀಯಂ ಗುಣಾರ್ಣವಮ್ ।**
**ವಾಸುದೇವಾಖ್ಯಮದ್ವಂದ್ವಮ್ ಪರಂಬ್ರಹ್ಮಾಖಿಲೋತ್ತಮಮಮ್ ॥**

ಇಲ್ಲಿಯ ತನಕ ಸಮರ್ಥಿಸಿದ ವಿಚಾರದಿಂದ ಸರ್ವೋತ್ತಮನೂ, ಅದ್ವಿತೀಯನೂ, ಪರಬ್ರಹ್ಮನೂ ಆಗಿರುವ, ಗುಣಪರಿಪೂರ್ಣನಾದ, ನಮ್ಮ ಪ್ರಿಯತಮನಾದ ವಾಸುದೇವನ ಬಗ್ಗೆ ಜಿಜ್ಞಾಸೆ ಮಾಡಬೇಕು.

## ಟೀಕಾಕ್ಷರಗಳ ಅರ್ಥ

## तात्पर्यचन्द्रिका –

**टीकाशेषाक्षरार्थस्तु – ''नामानि सर्वाणि'' इति श्रुतौ 'अनृतस्य' इत्यनेन ऋतशब्दवाच्यात् विष्णोः अन्यद् विवक्षितमित्याह ।। विष्विततरस्येति ।। लक्ष्म्या ब्रह्मादीनां स्वाधीनत्वोक्तेरिति ।। अस्य सूक्तस्यांम्भ्रिणीदेवताकत्वात् अम्भ्रिण्याश्च लक्ष्मीमूर्तित्वादिति भावः ।। हरिवंशत्रयेति ।। हरिवंशे भागत्रयं विवक्षितम् । नटनं वञ्चनं वेति ।। विद्यमानाकाराच्छादनेनाविद्यमानाकारान्तरप्रदर्शनं 'नटनम्' । 'वञ्चनं' त्वविद्यमानकथनम् । काप्यविद्यमानं लिङ्गमूलान्वेषणादिकम् अतथ्यम् । विष्ण्वादौ विद्यमानं रुद्रादिनिष्ठतयोच्यमानं स्वातन्त्र्यादिकं वितथ्यम् । शिष्टं सुगमम् ।**

**इति श्रीमद्ब्रह्मण्यतीर्थपूज्यपादशिष्यश्रीमद्व्यासतीर्थभिक्षुविरचितायां तात्पर्यचन्द्रिकायां जिज्ञासाधिकरणं सम्पूर्णम् ।। १ ।।**

ಅನುವಾದ - ಟೀಕೆಯ ಉಳಿದ ಎಲ್ಲ ವಾಕ್ಯಗಳ ಅರ್ಥ ಹೀಗಿದೆ -

ವಿಷ್ವಿತ್ತರಸ್ಯ = 'ನಾಮಾನಿ ವಿಶ್ವಾ' ಇತ್ಯಾದಿ ಶ್ರುತಿಯಲ್ಲಿ 'ಅನೃತಸ್ಯ' ಎಂಬ ಪದವಿದೆ. ಅದಕ್ಕೆ 'ಋತ' ನಾಮಕನಾದ ವಿಷ್ಣುವಿಗಿಂತ ಬೇರೆಯಾದ ;

ಲಕ್ಷ್ಮ್ಯಾ ಬ್ರಹ್ಮಾದೀನಾಂ ಸ್ವಾಧೀನತ್ವೋಕ್ತೇಃ = 'ಅಂಭ್ರಿಣೀಸೂಕ್ತಕ್ಕೆ ಅಂಭ್ರಿಣೀ ಎನಿಸಿದ ಲಕ್ಷ್ಮಿಯೇ

ದೇವತೆಯಾಗಿದ್ದಾಳೆ ; ಆದ್ದರಿಂದ ಬ್ರಹ್ಮಾದಿದೇವತೆಗಳು ತನ್ನ ಅಧೀನರೆಂದು ಲಕ್ಷ್ಮಿಯೇ ಹೇಳಿದಂತಾಯಿತು. ಆದ್ದರಿಂದ' ಎಂದು ಅಭಿಪ್ರಾಯ.

**ಹರಿವಂಶತ್ರಯೀ** = ಹರಿವಂಶದ ಮೂರೂ ಭಾಗಗಳಲ್ಲಿ.

**ನಟನಂ** = ಇರುವ ಆಕಾರವನ್ನು ಮರೆಮಾಚಿ ಇಲ್ಲದ ಆಕಾರವನ್ನು ತೋರಿಸುವುದು ;

**ವಂಚನಂ** = ಇಲ್ಲದ್ದನ್ನು ಹೇಳುವುದು ;

**ಅತಥ್ಯಮ್** = ಎಲ್ಲಿಯೂ ಇಲ್ಲದ ಲಿಂಗಮೂಲದ ಅನ್ವೇಷಣ ಮೊದಲಾದವು.

**ವಿತಥ್ಯಮ್** = ವಿಷ್ಣು ಮೊದಲಾದವರಲ್ಲಿ ಇರುವ ಸ್ವಾತಂತ್ರ್ಯಾದಿಗಳನ್ನು ರುದ್ರಾದಿಗಳಲ್ಲಿ ವರ್ಣಿಸುವುದು. ಉಳಿದ ಟೀಕಾಪಂಕ್ತಿಗಳ ಅರ್ಥವು ಸುಲಲಿತವಾಗಿದೆ.

**ಶ್ರೀಮದ್‌ಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದರ ಶಿಷ್ಯರಾದ ಶ್ರೀಮದ್‌ವ್ಯಾಸತೀರ್ಥರಿಂದ ರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಂಪೂರ್ಣವಾಯಿತು.**

**प्रकाशः** – दुर्गमानि कानिचिद् वाक्यानि व्यनक्ति– **टीकाशेषाक्षरार्थस्त्विति** ।। व्याख्यातावशिष्टाशेषेत्यर्थः । शेषाक्षरार्थ इति वा ।। **नामानीति** ।। विश्वेत्यस्यार्थानुवादः – **सर्वाणीति** ।।

**इति श्रीमद्राघवेन्द्रतीर्थभिक्षुविरचिते तात्पर्यचन्द्रिकाप्रकाशे जिज्ञासाधिकरणं सम्पूर्णम् ।।**

**ಅನುವಾದ** - ಟೀಕೆಯ ಕೆಲವು ಕಠಿಣಪದಾರ್ಥಗಳನ್ನು 'ಟೀಕಾಶೇಷಾಕ್ಷರಾರ್ಥಸ್ತು' ಎಂಬುದರಿಂದ ಹೇಳುತ್ತಿದ್ದಾರೆ. 'ಟೀಕೆಯ ಅಶೇಷಾಕ್ಷರಾರ್ಥ' ಎಂದರೆ 'ವ್ಯಾಖ್ಯಾನ ಮಾಡದೆ ಉಳಿದಿರುವ ಪದಗಳ ಅರ್ಥಗಳು' ಎಂದರ್ಥ. ಅಥವಾ 'ಉಳಿದ ಪದಗಳ ಅರ್ಥ' ಎಂದು. 'ನಾಮಾನಿ ವಿಶ್ವಾ' ಎಂಬ ಶ್ರುತಿಯಲ್ಲಿರುವ ವಿಶ್ವಶಬ್ದದ ಅರ್ಥಾನುವಾದವನ್ನು 'ಸರ್ವಾಣಿ' ಎಂದು ಮಾಡಿದ್ದಾರೆ.

**ಶ್ರೀಮದ್ರಾಘವೇಂದ್ರತೀರ್ಥರಿಂದ ರಚಿತವಾದ ಶ್ರೀಮತ್ತಾತ್ಪರ್ಯಚಂದ್ರಿಕೆಗೆ ಪ್ರಕಾಶಿಕಾ ಎಂಬ ಟಿಪ್ಪಣಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತಿಯಾಯಿತು.**

**गुरुराजीय** – श्रुतिस्थानृतशब्दस्य मिथ्यात्वमर्थः प्रतीयते तद्वारणाय टीकायामनृतस्य विष्णिवतरस्येति व्याख्यातं तत् कथं शब्दलभ्यमित्यत आह – **नामानीति** ।। **ऋतशब्देति** ।।

**"ऋगताविति धातोस्तु पूर्वावगतवत् सदा ।
स्थितेर्ब्रह्मर्तमित्युक्तमनृतं परिणामतः "** ।।

*ಪರಿಪೂರ್ಣಚಂದ್ರಿಕಾ*

इति वचनादिति भावः । ननु ब्रह्मादीनां लक्ष्म्यधीनत्वं कुतः सूक्तद्रष्टृदेवताधीनत्वमेव किं न स्यादित्यत आह – अस्येति ।। भागत्रयमिति ।। खिलाखिलपारिजातविवक्षयेत्यर्थः । नटनवंचनशब्दिते अतथ्यवितथ्ये त्वर्थनिष्ठे इति भेद इति द्रष्टव्यम् ।।

इति श्रीमद्गुरुराजानुग्रहपात्रभूतपांडुरङ्गीकेशवाचार्यविरचिते
तात्पर्यचन्द्रिकाभावदीपे जिज्ञासाधिकरणं सम्पूर्णम् ।।

ಶ್ರುತಿಯಲ್ಲಿರುವ 'ಅನೃತ' ಶಬ್ದಕ್ಕೆ ಮಿಥ್ಯಾ ಎಂಬರ್ಥವು ತೋರುತ್ತದೆ. ಅದನ್ನು ಪರಿಹರಿಸಲು ಟೀಕೆಯಲ್ಲಿ 'ವಿಷ್ಣುವಿಗಿಂತ ಭಿನ್ನವಾದ' ಎಂಬರ್ಥವನ್ನು ಹೇಳಿದ್ದಾರೆ. ಈ ಅರ್ಥವು ಅನೃತಶಬ್ದದಿಂದ ಹೇಗೆ ಲಭ್ಯವಾಗುತ್ತದೆ? ಎಂಬ ಪ್ರಶ್ನೆಗೆ ಪ್ರಕೃತ ಗ್ರಂಥಕಾರರು ನಾಮಾನಿ ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಋಗತಾವಿತಿಧಾತೋಸ್ತು ಪೂರ್ವಾವಗತವತ್ ಸದಾ ।
ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಮನೃತಂ ಪರಿಣಾಮತಃ ।।

ಈ ವಚನದ ಆಧಾರದಿಂದ 'ಋಗತೌ' ಎಂಬ ಧಾತುವಿನಿಂದ ಅನೃತಶಬ್ದವು ನಿಷ್ಪನ್ನವಾಗಿದೆ.

ಬ್ರಹ್ಮಾದಿಗಳೆಲ್ಲರೂ ಲಕ್ಷ್ಮೀದೇವಿಯ ಅಧೀನರೆಂದು ಹೇಗೆ ತಿಳಿಯುತ್ತದೆ? ಅಂಭೃಣೀಸೂಕ್ತದ ದ್ರಷ್ಟಾರರಾದ ಋಷಿಗಳ ಅಧೀನರೆಂದು ತಿಳಿಯಬೇಕಲ್ಲವೇ? ಈ ಪ್ರಶ್ನೆಗೆ 'ಅಸ್ಯ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಹರಿವಂಶದ ಭಾಗತ್ರಯವೆಂದರೆ ಖಿಲ, ಅಖಿಲ, ಪಾರಿಜಾತ ಎಂದು.

ಇಲ್ಲಿಗೆ ಶ್ರೀಮದ್ಗುರುರಾಜರ ಅನುಗ್ರಹಕ್ಕೆ ಪಾತ್ರರಾದ ಪಾಂಡುರಂಗೀಕೇಶವಾಚಾರ್ಯರಿಂದ ರಚಿಸಲ್ಪಟ್ಟ
ತಾತ್ಪರ್ಯಚಂದ್ರಿಕಾಭಾವದೀಪದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

## ಸಾರ

### ಟೀಕೆಯಲ್ಲಿ ಉಳಿದ ವಾಕ್ಯಗಳ ಅರ್ಥ

'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿ 'ಅನೃತಸ್ಯ' ಎಂದರೆ ಋತನಾಮಕನಾದ ವಿಷ್ಣುವಿಗಿಂತ ಬೇರೆಯಾದ ಎಂದರ್ಥ. ಅಂಭೃಣೀಸೂಕ್ತದಲ್ಲಿ ಅದರ ದೇವತೆಯಾದ ಲಕ್ಷ್ಮೀಸ್ವರೂಪಳಾದ ಅಂಭೃಣೀದೇವಿ ಬ್ರಹ್ಮಾದಿಗಳೆಲ್ಲ ತನ್ನ ಅಧೀನರೆನ್ನುತ್ತಿದ್ದಾಳೆ. ಹರಿವಂಶದಲ್ಲಿ ಮೂರು ಪರ್ವಗಳಿರುವುದರಿಂದ ಮೂರು ಹರಿವಂಶಗಳೆಂದು ವ್ಯವಹಾರ. ಇಲ್ಲದ್ದನ್ನು ತೋರುವುದು ನಟನ, ಇಲ್ಲದ್ದನ್ನು ಹೇಳುವುದು ವಂಚನ, ಎಲ್ಲೂ ಇಲ್ಲದ ಲಿಂಗಮೂಲಾನ್ವೇಷಣ ಮುಂತಾದುದು ಅತಥ್ಯ. ಬೇರೆಯವರಲ್ಲಿರುವುದನ್ನು ತನ್ನಲ್ಲಿ ಹೇಳಿಕೊಂಡರೆ ಅದು ಮಿಥ್ಯ.

---

।। ಶ್ರೀಮಧ್ವೇಶಾರ್ಪಣಮಸ್ತು ।।

# ಭಾಗ - ೩

***ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,***
***ಅಣುಭಾಷ್ಯ, ತತ್ವಮಂಜರೀ,***
***ತಂತ್ರದೀಪಿಕಾ, ನ್ಯಾಯಮುಕ್ತಾವಲೀ,***
***ಸೂತ್ರಾರ್ಥರತ್ನಾವಲೀ***

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

प्रथमाध्याये प्रथमः पादः जिज्ञासाधिकरणम्-१-१-१

जयन्ति जानकीभर्तृश्चरणाम्भोजरेणवः ।
नमत्सुरकिरीटस्थान् ये मणीनतिशेरते ।।१।।

ಅನುವಾದ -- ಸೀತಾಪತಿಯಾದ ಶ್ರೀರಾಮಚಂದ್ರನ ಪಾದಕಮಲಗಳಲ್ಲಿ ಭೃಂಗಾಯಮಾನವಾದ ಧೂಳಿನ ಕಣಗಳು ವಿಜಯಶಾಲಿಗಳಾಗಿವೆ. ಇಂತಹ ಪಾದಕಮಲದಲ್ಲಿ ಎಲ್ಲ ದೇವತೆಗಳು ತಮ್ಮ ಕಿರೀಟಗಳನ್ನು ಘಟ್ಟಿಸುತ್ತಾರೆ. ಕಿರೀಟದಲ್ಲಿ ಹೊಳೆಯುವ ಆ ಮಣಿಗಳ ಕಾಂತಿಗಿಂತಲೂ ಈ ಪಾದಧೂಳಿಗಳ ಕಾಂತಿಯೇ ಹೆಚ್ಚಾಗಿದೆ.

दुरन्तदुरितध्वान्तविपाटनपटीयसे ।
बादरायणसञ्ज्ञाय परस्मै महसे नमः ।।२।।

ದುಷ್ಟಮತಗಳನ್ನು ನಾಶಮಾಡುವುದರಲ್ಲಿ ಸಮರ್ಥರಾದ, ಶ್ರೇಷ್ಠರಾದ, ಬಾದರಾಯಣ ಎಂಬ ಹೆಸರನ್ನುಳ್ಳ ಕಾಂತಿಯುಕ್ತರಾದ ವೇದವ್ಯಾಸರಿಗೆ ನಮಸ್ಕಾರ.

नमामि श्रीमदानन्दतीर्थाचार्यं परं गुरुम् ।
यस्य वाणीकृपाणीयं निकृन्तति भवाटवीम् ।।३।।

ಯಾರ ಮಾತುಗಳೆಂಬ ಖಡ್ಗವು ಸಂಸಾರವೆಂಬ ಕಾಡನ್ನೇ ನುಚ್ಚುನೂರು ಮಾಡುತ್ತದೋ ಅಂತಹ ಶ್ರೀಮದಾನಂದತೀರ್ಥರೆಂಬ ಉತ್ತಮಗುರುಗಳಾದ ಆಚಾರ್ಯರನ್ನು ಸಾಷ್ಟಾಂಗ ನಮಸ್ಕರಿಸುತ್ತೇನೆ.

प्रणम्य चरणाम्भोजे गुरूणां तत्कृपाबलात् ।
सन्न्यायविवृतिव्याख्यां करिष्यामि यथामति ।।४।।

ಗುರುಗಳಾದ ಅಕ್ಷೋಭ್ಯತೀರ್ಥರ ಪಾದಕಮಲಗಳಲ್ಲಿ ನಮಸ್ಕರಿಸಿ ಅವರ ಕೃಪೆಯ ಬಲದಿಂದ ನ್ಯಾಯವಿವರಣವೆಂಬ ಶ್ರೀಮದಾಚಾರ್ಯರ ಗ್ರಂಥಕ್ಕೆ ಬುದ್ಧಿಗೆ ನಿಲುಕಿದಷ್ಟು ವ್ಯಾಖ್ಯಾನ ಮಾಡುತ್ತೇನೆ.

चेतनाचेतनजगन्नियन्त्रेऽशेषसंविदे ।
नमो नारायणायाजशर्वशक्रादिवन्दित ।।१।।

ಎಲೈ ಪರಮಾತ್ಮನೇ! ನೀನು ಚತುರ್ಮುಖಬ್ರಹ್ಮರುದ್ರಇಂದ್ರಆದಿತ್ಯ ಮೊದಲಾದವರಿಂದ ವಂದ್ಯನಾಗಿದ್ದಿ. ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತನ್ನು ನಿಯಮನ ಮಾಡುವ, ಸರ್ವಜ್ಞನಾದ, ನಾರಾಯಣನೆನಿಸಿಕೊಂಡ ನಿನಗೆ ಸಾಷ್ಟಾಂಗನಮಸ್ಕಾರ.

**टीका – ग्रन्थारम्भे विघ्नविघातायाचार्यः समुचितविशिष्टेष्टदेवतां नारायणमुपश्लोकयति – चेतनेति ।। जन्मादिसूत्रे यत् 'सकलजगज्जन्मादिहेतुत्वं सार्वज्ञ्याद्यशेषगुणवत्त्वं च' इति द्विविधं ब्रह्मलक्षणमभिप्रेतं तदाद्येन पदद्वयेन नारायणस्य सूचितम् । 'चेतना' इति सकलजगत्सङ्ग्रहार्थम् । तेन कथञ्चिज्जगदेक-देशनियमनवतां विरिञ्चादीनां व्युदासः । अत्र द्वितीयान्तस्य जगच्छब्दस्य तृन्नन्तेन नियन्तृशब्देन समासः । तेन जगन्नियमने नारायणस्य प्रयोजनसद्भावे प्राक्तदूनत्वादपूर्णता । अन्यथा तदेवायुक्तमित्येतदपि निरस्तम् । तृनस्ताच्छील्यार्थत्वात् । अशेषविषयत्वादशेषा संविद्यस्यासावशेषसंवित् । अनेनैव विशिष्टता चोपपादिता भवति । अजेत्यादिनेष्टदेवतात्वमुपपादयति । अजादयो हीश्वरा न कस्यापि वन्दारव इति केषाञ्चिदभिमानः । तन्निरासायैषां ग्रहणम् । आदिपदेनादित्यानां ग्रहणम् । अत एव समासार्थतया प्राप्तयोरपि शर्वशक्रयोः स्वरूपेणोपादानम् । नान्येषामिव मम परोक्षो नारायण इति ज्ञापनाय सम्बुद्ध्यन्तप्रयोगः । तुभ्यमित्यध्याहारेण सम्बन्धः ।।१।।**

ಶ್ರೀಮದಾಚಾರ್ಯರು ನ್ಯಾಯವಿವರಣಗ್ರಂಥವನ್ನು ಪ್ರಾರಂಭಿಸುತ್ತಿದ್ದಾರೆ. ನಿರ್ವಿಘ್ನವಾಗಿ ಗ್ರಂಥವು ಪರಿಸಮಾಪ್ತಿಯಾಗಬೇಕೆಂಬ ಉದ್ದೇಶದಿಂದ ಅಧಿಕೃತ, ವಿಶಿಷ್ಟ, ಇಷ್ಟನಾದ ನಾರಾಯಣನನ್ನು 'ಚೇತನ' ಎಂಬ ಮಂಗಳಶ್ಲೋಕದಿಂದ ಸ್ತೋತ್ರಮಾಡುತ್ತಿದ್ದಾರೆ.

ಮುಂದಿನ ಜನ್ಮಾದಿಸೂತ್ರದಲ್ಲಿ ಸಕಲಜಗಜ್ಜನ್ಮಾದಿಕರ್ತೃತ್ವ ಮತ್ತು ಸಾರ್ವಜ್ಞ್ಯಾದ್ಯಶೇಷಗುಣವತ್ವವನ್ನು ಬ್ರಹ್ಮನ ಲಕ್ಷಣವೆಂದು ಪ್ರತಿಪಾದಿಸುತ್ತಾರೆ. ಅದನ್ನೇ ಶ್ಲೋಕದಲ್ಲಿರುವ ಎರಡು ಪದಗಳಿಂದ ನಾರಾಯಣನಲ್ಲಿ ಸೂಚಿಸಿದ್ದಾರೆ. ಸಕಲಜಗತ್ತನ್ನು ವಿವಕ್ಷಿಸಬೇಕೆಂಬ ಉದ್ದೇಶದಿಂದಲೇ 'ಚೇತನಾಚೇತನ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಸಮಸ್ತಜಗತ್ತನ್ನು ವಿವಕ್ಷಿಸದಿದ್ದಲ್ಲಿ ಚತುರ್ಮುಖಾದಿಗಳೂ ಸಹ ಜಗತ್ತಿನ ಏಕದೇಶವನ್ನು ನಿಯಮನಮಾಡುತ್ತಾರಾದ್ದರಿಂದ ಜಗನ್ನಿಯಂತೃತ್ವಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬರುತ್ತಿತ್ತು. ಅದನ್ನು ಪರಿಹರಿಸುವುದಕ್ಕಾಗಿ ಜಗತ್‌ಶಬ್ದದಲ್ಲಿ ಚೇತನಾಚೇತನ ಎಂದು ವಿಶೇಷಣ ಹೇಳಿದ್ದಾರೆ.

'ಚೇತನಾಚೇತನಜಗನ್ನಿಯಂತ್ರೇ' ಎಂಬಲ್ಲಿ ದ್ವಿತೀಯಾತತ್ಪುರುಷಸಮಾಸವನ್ನು ಮಾಡಬೇಕು. ಷಷ್ಠೀತತ್ಪುರುಷಸಮಾಸವನ್ನು ಮಾಡಬಾರದು. ದ್ವಿತೀಯಾಂತವಾದ ಜಗತ್‌ಶಬ್ದವು ತೃನ್ನಂತವಾದ

ನಿಯಂತೃಶಬ್ದದಲ್ಲಿ ಸಮಾಸವನ್ನು ಹೊಂದಿದೆ. ಆದ್ದರಿಂದ ಜಗತ್ತನ್ನು ನಿಯಮನಮಾಡುವುದರಲ್ಲಿ ನಾರಾಯಣನಿಗೆ ಪ್ರಯೋಜನವಿಲ್ಲವೆಂದು ತಿಳಿಯುತ್ತದೆ. ಪ್ರಯೋಜನವಿಲ್ಲದಿದ್ದರೆ ನಿಯಮನವೇ ಕೂಡುವುದಿಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಸ್ವಭಾವಾರ್ಥದಲ್ಲಿ ತೃನ್‌ಪ್ರತ್ಯಯವು ಬಂದಿರುವುದರಿಂದ.

'ಅಶೇಷಾಸಂವಿತ್ ಯಸ್ಯ ಸಃ ಅಶೇಷಸಂವಿತ್' ಎಂದು ವಿಗ್ರಹ. ಅಶೇಷವಿಷಯಕವಾದ ಜ್ಞಾನವುಳ್ಳವನೆಂದು ಇದರ ಅರ್ಥ. ಚೇತನಾಚೇತನಜಗನ್ನಿಯಂತ್ರೇ; ಅಶೇಷಸಂವಿದೇ ಎಂಬೆರಡು ವಿಶೇಷಣಗಳಿಂದ ಸರ್ವೋತ್ಕೃಷ್ಟನು ತಿಳಿದು ವಿಶಿಷ್ಟನೆಂದು ಹೇಳಿದಂತಾಗುತ್ತದೆ. 'ಅಜ' ಇತ್ಯಾದಿ ವಿಶೇಷಣದಿಂದ ಇಷ್ಟದೇವತೆಯೆಂದು ಉಪಪಾದಿಸಿದ್ದಾರೆ. 'ಬ್ರಹ್ಮದೇವರು, ರುದ್ರದೇವರು ಇವರುಗಳನ್ನೇ ಸರ್ವೋತ್ತಮರು' ಎಂದು ಹೇಳುವ ಮತವನ್ನು ಈ ವಿಶೇಷಣದಿಂದ ನಿರಾಕರಿಸಿದ್ದಾರೆ. ಚತುರ್ಮುಖಾದಿಗಳು ಯಾರನ್ನೂ ನಮಸ್ಕರಿಸುವುದಿಲ್ಲವೆಂದು ಅವರ ವಾದ. ಆದರೆ ನಾರಾಯಣನಿಗೆ ಚತುರ್ಮುಖ, ರುದ್ರ, ಇಂದ್ರ ಮೊದಲಾದವರೆಲ್ಲರೂ ನಮಸ್ಕರಿಸುವುದರಿಂದ ಅವರ ಮತವು ಸರಿಯಲ್ಲವೆಂದು ತಿಳಿಸಿದ್ದಾರೆ. ಆದಿಪದದಿಂದ ಆದಿತ್ಯನನ್ನು ಸ್ವೀಕರಿಸಬೇಕು. ಪರವಾದಿಗಳನ್ನು ನಿರಾಕರಿಸುವ ವಿವಕ್ಷೆ ಆಚಾರ್ಯರಿಗೆ ಇಲ್ಲದಿದ್ದರೆ ಶರ್ವ, ಶಕ್ರ ಇತ್ಯಾದಿ ದೇವತೆಗಳ ಹೆಸರನ್ನು ಉಲ್ಲೇಖಿಸುವ ಅವಶ್ಯಕತೆ ಇರಲಿಲ್ಲ. ಕೇವಲ 'ಅಜಾದಿವಂದಿತ' ಎಂದಿಷ್ಟೇ ಸಾಕಿತ್ತು.

ಉಳಿದವರಂತೆ ನನಗೆ ನಾರಾಯಣನು ಪರೋಕ್ಷನಲ್ಲವೆಂದು ತಿಳಿಸಲು ಸಂಬುದ್ಧ್ಯಂತ ಪ್ರಯೋಗವನ್ನು ಮಾಡಿದ್ದಾರೆ. 'ತುಭ್ಯಮ್' ಎಂದು ಅಧ್ಯಾಹಾರ ಮಾಡಿಕೊಂಡು ಅನ್ವಯಿಸಬೇಕು.

ವಿವರಣೆ -- 'ಕರ್ತೃಕರ್ಮಣೋಃ ಕೃತಿ' (೨/೩/೬೫) ಎಂಬ ಸೂತ್ರವು ಕೃತ್‌ಪ್ರತ್ಯಯ ಯೋಗವಿದ್ದಾಗ ಷಷ್ಠೀವಿಭಕ್ತಿಯನ್ನು ವಿಧಿಸಿದೆ. ಆದರೆ 'ನಲೋಕಾವ್ಯಯನಿಷ್ಠಾಖಲರ್ಥತೃನಾಮ್' ಎಂಬ ಸೂತ್ರವು ತೃನ್ ಪ್ರತ್ಯಯಯೋಗವಿದ್ದಾಗ ಷಷ್ಠೀವಿಭಕ್ತಿಯನ್ನು ನಿಷೇಧಿಸಿದೆ. ಆದ್ದರಿಂದ ದ್ವಿತೀಯಾವಿಭಕ್ತಿಯನ್ನೇ ಹೇಳಿ; 'ಜಗಂತಿ ನಿಯಂತಾ ಜಗನ್ನಿಯಂತಾ' ಎಂದೇ ಹೇಳಬೇಕು. ಇಲ್ಲಿರುವ ತೃನ್‌ಪ್ರತ್ಯಯವು ಸ್ವಭಾವಾರ್ಥದಲ್ಲಿದೆ. 'ಆಕ್ವೇತ-ಚ್ಛೀಲತದ್ಧರ್ಮತತ್ಸಾಧುಕಾರಿಷು' (೩/೩/೧೩೪) ಎಂಬ ಅಧಿಕಾರಸೂತ್ರದಲ್ಲಿ ತೃನ್' ಎಂಬ ಸೂತ್ರವು ಪ್ರಸಕ್ತವಾಗಿದೆ. ಈ ಸೂತ್ರದಲ್ಲಿ ತಾಚ್ಛೀಲ್ಯಾರ್ಥದಲ್ಲಿ ತೃನ್‌ಪ್ರತ್ಯಯವನ್ನು ವಿಧಿಸಲಾಗಿದೆ. ಆದ್ದರಿಂದ ಶೀಲಂ ಪ್ರಭಾವ ಎಂಬ ಅಮರಕೋಶದ ಮಾತಿನಂತೆ ನಿಯಂತುಂ ಶೀಲಮಸ್ಯಾಸ್ತೀತಿ ಎಂಬ ವಿಗ್ರಹದಿಂದ ಜಗನ್ನಿಯಮನಾದಿಗಳನ್ನು ಭಗವಂತನ ಸ್ವಭಾವವೆಂದು ಹೇಳಬೇಕು. ಹೊರತು ಫಲಾಪೇಕ್ಷೆಯಿಂದ ಜಗತ್ತನ್ನು ನಿಯಮಿಸಲಾರ. ಫಲವೇ ಇಲ್ಲದಿದ್ದರೆ ನಿಯಮನಪ್ರವೃತ್ತಿ ಹೇಗೆ ಕೂಡುತ್ತದೆ? ಎಂದು ಪ್ರಶ್ನಿಸಬಾರದು. ಸ್ವಭಾವಪ್ರವೃತ್ತಿಗೆ ಫಲದ ಅಪೇಕ್ಷೆ ಇರುವುದಿಲ್ಲ. ಸುಡುವಿಕೆಯೆಂಬ ಸ್ವಭಾವವನ್ನು ಹೊಂದಿದ ಅಗ್ನಿಯು ಫಲಾಪೇಕ್ಷೆಯಿಂದ ಸುಡುವುದಿಲ್ಲ. ಆದ್ದರಿಂದ 'ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಮಾತಿನಂತೆ ಸೃಷ್ಟ್ಯಾದಿವ್ಯಾಪಾರಗಳಲ್ಲಿ ಭಗವಂತನು ಸ್ವಭಾವದಿಂದಷ್ಟೇ ಪ್ರವರ್ತಿಸುತ್ತಾನೆ.

**न्यायविवरणम् –**

**कृत्वा भाष्यानुभाष्येऽहमपि वेदार्थसत्पतेः ।**
**कृष्णस्य सूत्रानुव्याख्यासन्न्यायविवृतिं स्फुटम् ॥२॥**

*ಪಂಪೂರ್ಣಚಂದ್ರಿಕಾ*

**करोमि मन्दबुद्धीनां बुधानां चोपकारिकाम् ।**
**प्रीत्यै तस्यैव दैवस्य तत्प्रसादपुरःसरः ।।२।।**

ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳನ್ನು ನಾನು ರಚಿಸಿರುತ್ತೇನೆ. ಆದರೂ ಸಹ ವೇದಾರ್ಥಗಳ ಪಾಲಕನಾದ ಶ್ರೀವೇದವ್ಯಾಸರ ಸೂತ್ರಗಳಿಗೆ ಅನುಸಾರಿಯಾದ ಸನ್ಯಾಯವಿವರಣೆಯೆಂಬ ವ್ಯಾಖ್ಯಾನವನ್ನು ಮಾಡಲು ಹೊರಟಿದ್ದೇನೆ. ಇದು ಮಂದಬುದ್ಧಿಗಳಿಗೂ ಮತ್ತು ಜ್ಞಾನಿಗಳಿಗೂ ಉಪಕಾರಿಯಾಗಿದೆ. ಭಗವಂತನ ಅನುಗ್ರಹದಿಂದ ಅವನ ಪ್ರೀತಿಗಾಗಿ ಇದನ್ನು ರಚಿಸುತ್ತಿದ್ದೇನೆ.

टीका – **कृत्वा** इत्यादिना श्लोकद्वयेन ग्रन्थारम्भं समर्थयते । तथा हि । सूत्रार्थग्रहणाय खल्वयमारम्भः । तच्च भाष्यानुव्याख्यानाभ्यामेव सिद्धमिति किमनेनेत्यत उक्तं **'भाष्यानुभाष्ये कृत्वापि सूत्रानुव्याख्यासन्न्यायविवृतिं करोमि'** इति ।। सत्यं सूत्रार्थग्रहणाय भाष्यनुभाष्ये कृते तथाप्युव्याख्यायामुक्ता ये सन्न्यायास्तोषां विवृतिं 'विव्रियन्तेऽनया' इति तद्विवरणार्थं ग्रन्थं करोमीति । न्यायशब्देन पूर्वोत्तरपक्षयुक्तयोऽभिधीयन्ते । अत्र तासां प्रतिपादकानि वाक्यान्युपलक्ष्यन्ते । पूर्वपक्षन्यायानां सत्वं, सदलत्वं सूत्रप्रयोजकत्वमिति यावत् । सिद्धान्तन्यायानां तु तत्वनिश्चयसामर्थ्यम् । अथवा सिद्धान्तयुक्तय एव सन्न्यायाः ।

न च तेषां विवरणमन्तरेण पूर्वपक्षन्यायविवरणं सुबोधमिति तेऽप्युपलक्षणीयाः । अत एव प्रायेण सिद्धान्तप्राधान्येनैव विवृतिर्वर्तिष्यते । 'लिङ्गं साधारणम्' इत्यादि विषयवाक्यविवरणं तु कचिदेवेति नोक्तम् । साध्यनिर्देशस्तु न्यायविवरणाङ्गमेवेति । न चैवं वाच्यं न सूत्राणामयङ्ग्रन्थ इति । परम्परया सूत्रार्थग्रहणोपायत्वादिति भावेन प्रसिद्धोऽप्यनुव्याख्यायाः सूत्रसम्बन्धो दर्शितः । एतच्च प्रारिप्सिताग्रन्थगौरवसम्पादनार्थम् ।

ननु सूत्राणामेव गौरवं कुतः । परमाप्तप्रणीतत्वादिति भावेनोक्तं – कृष्णस्येति ।। समासे गुणीभूतस्यापि सूत्रपदस्य बुद्ध्या विविक्तस्य भिन्नपदेन विशेषणं युज्यते ।

वेदार्थनिर्णयार्थत्वे श्रुतियुक्तिसम्पादितत्वाच्च गौरवं सूत्राणामिति भावेनोक्तं वेदार्थसत्पतेरिति । मुख्यपालकस्य । स्यादेतत् 'अथातो धर्मजिज्ञासा' इत्यादिनैव वेदार्थस्य निर्णीतत्वाद्गतार्थानि सूत्राणीत्यतो वा तदुक्तं वेदार्थसत्पतेरिति ।। ब्रह्मैव हि सर्ववेदानां मुख्योऽर्थः । तन्निर्णयाय चैतानि सूत्राणि भगवता कृतानीति भगवति वेदार्थसत्पतित्वम् । अन्ये तु पुनरेतन्न्यायोपजीवनेन वेदैकदेशामुख्यार्थ-कर्मादिनिर्णयाय सूत्राणि प्रणीतवन्ति इति ।

ननु सन्न्यायविवृतिं शिष्या एव करिष्यन्ति किमनेन स्वकृतग्रन्थविवरणेनेत्यतः उक्तम् – अहमिति ।। अनेनान्येषामसामर्थ्यं सूचयति । 'ईदूदेदितिप्रगृह्यत्वे मणीवादीनां प्रतिषेध' इति वचनाद्भाष्यानुभाष्येऽहमिति प्रकृतिभावाभावः । यद्वा अनुव्याख्यायाः सन्न्यायाः भाष्यानुभाष्ययोरेव विवृताः । यथा भाष्ये 'सर्वज्ञा हि रुद्रादयः' इत्यादिना । अनुभाष्ये च 'आप्तैः प्रत्यक्षतो दृष्टा' इत्यादिना । किमनेनेत्यत उक्तं सूत्रानुव्याख्यासन्न्यायानां विवरणं भाष्यानुभाष्ये कृत्वाऽप्यत्र स्फुटीकरोमीति । सामीप्याद्वर्तमानव्यपदेशः । स्फुटत्वं च सर्वविषयत्वेनाक्षरार्थ-व्याख्यानेन चेत्यादि । किमनेन स्फुटीकरणेन, येनायं ग्रन्थः कर्तव्यः स्यादित्यत उक्तम् – मन्दबुद्धिनामुपकारिकामिति ।। न चैवं महाबुद्धीनामनुपादेयात तद-पेक्षितस्याप्यत्राभावादिति भावेनोक्तम् – बुधानां चेति ।

अस्तु परेषामिदं प्रयोजनं स्व(स्य तु)कृतग्रन्थप्रवृत्तिरेव नेत्यत आह – प्रीत्या इति ।। संक्षेपविस्तराभ्यां स्वग्रन्थे विवृते सत्सु चोपकृतेषु सूत्रकृतो महती प्रीतिर्भवति । एतेनैतदपि निरस्तम् । आदौ दुर्गमार्थानि वाक्यानि विरच्य पुनस्तद्विवरणं, वृथा लवणं जग्ध्वा पुनः पानीयान्वेषणमनुसरतीति । प्रीत्या एवेति सम्बन्धः ।

न केवलं ग्रन्थनिर्माणफलं तत्प्रीतिरपि तु तत्कारणं चेत्याह – तत्प्रसादेति ।। तत्प्रसादः पुरःसर इव कारणं यस्य ग्रन्थं कुर्वतो मम सोऽहं तथोक्त इति ।। २ ।।

'ಕೃತ್ವಾ' ಇತ್ಯಾದಿಯಾಗಿ ಎರಡು ಶ್ಲೋಕಗಳಿಂದ ಗ್ರಂಥಪ್ರತಿಜ್ಞೆಯನ್ನು ಮಾಡಿ, ಆರಂಭಣೀಯತ್ವವನ್ನು ಸಮರ್ಥಿಸುತ್ತಿದ್ದಾರೆ. ಅದು ಹೀಗೆ --

ಸೂತ್ರಗಳ ಅರ್ಥವನ್ನು ತಿಳಿಸುವುದಕ್ಕಾಗಿ ಈ ಗ್ರಂಥವು ಹೊರಟಿದೆ. ಆದರೆ ಬ್ರಹ್ಮಸೂತ್ರಭಾಷ್ಯ ಅನುವ್ಯಾಖ್ಯಾನಗಳಿಂದಲೇ ಈ ಪ್ರಯೋಜನವು ಲಾಭವಾಗುವಾಗ ಪುನಃ ಈ ಗ್ರಂಥದ ಕೃತ್ಯವೇನು? ಎಂಬ ಪ್ರಶ್ನೆಗೆ 'ಭಾಷ್ಯಾನುಭಾಷ್ಯೇ ಕೃತ್ವಾಽಪಿ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಕರೋಮಿ' ಎಂದು ಉತ್ತರಿಸಿದ್ದಾರೆ. ಹೌದು, ಸೂತ್ರಗಳ ಅರ್ಥವನ್ನು ತಿಳಿಸುವುದಕ್ಕಾಗಿ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳನ್ನು ರಚಿಸಿದ್ದಾಗಿದೆ. ಆದರೂ ಸಹ ಈ ಗ್ರಂಥವು ವ್ಯರ್ಥವಲ್ಲ. ಅನುವ್ಯಾಖ್ಯಾನದಲ್ಲಿ ಯಾವ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳನ್ನು ಹೇಳಿದ್ದೇವೋ, ಅದನ್ನು ವಿವರಿಸುವುದಕ್ಕಾಗಿ ಈ ಗ್ರಂಥ ಹೊರಟಿದೆ.

ಶ್ಲೋಕದಲ್ಲಿರುವ ಸನ್ನ್ಯಾಯಶಬ್ದಕ್ಕೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ವಿವಕ್ಷಿಸಬೇಕು. ಅವುಗಳನ್ನು ಪ್ರತಿಪಾದಿಸುವ ವಾಕ್ಯಗಳನ್ನೂ ಸಹ ಉಪಲಕ್ಷಣಯಾ ಸ್ವೀಕರಿಸಬೇಕು. ಸಿದ್ಧಾಂತಯುಕ್ತಿಗಳಂತೆ ಪೂರ್ವಪಕ್ಷಯುಕ್ತಿಗಳನ್ನು ಸನ್ನ್ಯಾಯ ಎಂದು ಹೇಳಿದ್ದು ತಪ್ಪಲ್ಲ. ಪೂರ್ವಪಕ್ಷಯುಕ್ತಿಗಳೂ ಸಹ ಸೂತ್ರಪ್ರಯೋಜಕವಾದ್ದರಿಂದ ಸನ್ನ್ಯಾಯಗಳೆನ್ನಿಸುತ್ತವೆ. ಸಿದ್ಧಾಂತಯುಕ್ತಿಗಳಂತೂ ತತ್ತ್ವನಿಶ್ಚಾಯಕ-ವಾದ್ದರಿಂದ ಸನ್ನ್ಯಾಯಗಳೆನ್ನಿಸುತ್ತವೆ. ಅಥವಾ ಕೇವಲ ಸಿದ್ಧಾಂತಯುಕ್ತಿಗಳನ್ನೇ ಸನ್ನ್ಯಾಯಪದದಿಂದ ಇಟ್ಟುಕೊಳ್ಳಬೇಕು.

ಸಿದ್ಧಾಂತಯುಕ್ತಿಗಳನ್ನು ವಿವರಣೆ ಮಾಡದಿದ್ದರೆ ಪೂರ್ವಪಕ್ಷನ್ಯಾಯಗಳೇ ಅರ್ಥವಾಗಲಾರವು. ಆದ್ದರಿಂದ ಉಪಲಕ್ಷಣಯಾ ಪೂರ್ವಪಕ್ಷನ್ಯಾಯಗಳನ್ನು ಇಟ್ಟುಕೊಳ್ಳಬೇಕು. ಆದ್ದರಿಂದಲೇ ಈ ಗ್ರಂಥದಲ್ಲಿ ಮುಂದೆ ಸಿದ್ಧಾಂತನ್ಯಾಯಗಳನ್ನೇ ಪ್ರಧಾನವಾಗಿ ವಿವರಿಸಿದ್ದಾರೆ.

ಮುಂದೆ ತೃತೀಯಪಾದದಲ್ಲಿ 'ಲಿಂಗಂ ಸಾಧಾರಣಮ್' ಇತ್ಯಾದಿಯಾಗಿ ಅಧಿಕರಣಗಳ ವಿಷಯವಾಕ್ಯವನ್ನು ವಿವರಿಸಿದ್ದಾರೆ. ಆದರೆ ಆ ವಿಷಯವಾಕ್ಯದ ಉದಾಹರಣೆ ಕೆಲವೆಡೆ ಮಾತ್ರ ಮಾಡಿರುವುದರಿಂದ ಇಲ್ಲಿ ಅದರ ಪ್ರಸಿದ್ಧಿಯನ್ನು ಮಾಡಿಲ್ಲ. ನ್ಯಾಯವನ್ನು ವಿವರಿಸುವಾಗ ಆ ನ್ಯಾಯಗಳಿಂದ ದೊರೆಯುವ ಫಲರೂಪವಾದ ಸಾಧ್ಯವನ್ನೂ ಸಹ ಮುಂದೆ ನಿರ್ದೇಶಿಸುತ್ತಾರೆ. ಅಂತಹ ಸಾಧ್ಯನಿರ್ದೇಶವು ನ್ಯಾಯವಿವರಣಕ್ಕೆ ಅದು ಅಂಗವೇ ಆಗಿದೆ.

ಕೇವಲ ನ್ಯಾಯಗಳನ್ನಷ್ಟೇ ಈ ಅಧಿಕರಣದಲ್ಲಿ ಉಲ್ಲೇಖಿಸುವುದಾದರೆ ಈ ಗ್ರಂಥವು ಸೂತ್ರವ್ಯಾಖ್ಯಾನವೆನಿಸುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಪರಂಪರಯಾ ಸೂತ್ರವನ್ನೇ ಈ ಗ್ರಂಥವು ವ್ಯಾಖ್ಯಾನಿಸುತ್ತಿದೆ. ಅನುವ್ಯಾಖ್ಯಾನವಂತೂ ಸೂತ್ರವನ್ನು ನೇರವಾಗಿ ವ್ಯಾಖ್ಯಾನಿಸುತ್ತದೆಂಬ ವಿಷಯದಲ್ಲಿ ವಿಪ್ರತಿಪತ್ತಿಯಿಲ್ಲ. ಅಂತಹ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನ್ಯಾಯಗಳನ್ನೇ ಇಲ್ಲಿ ವಿವರಿಸುತ್ತಿರುವುದರಿಂದ ಪರಂಪರೆಯಾ ಈ ಗ್ರಂಥವೂ ಸಹ ಸೂತ್ರವ್ಯಾಖ್ಯಾನವೇ ಆಗುತ್ತದೆ. ಇದನ್ನು ತಿಳಿಸುವುದಕ್ಕಾಗಿಯೇ 'ಅನುವ್ಯಾಖ್ಯಾಸನ್ನ್ಯಾಯವಿವೃತಿಂ' ಎಂಬಲ್ಲಿ ಅನುವ್ಯಾಖ್ಯಾ ಎಂಬ ಪದವನ್ನು ನಿರ್ದೇಶಿಸಿದ್ದಾರೆ. ಈ ಗ್ರಂಥವು ಸೂತ್ರವ್ಯಾಖ್ಯಾನವಾಗಿದೆಯೆಂದು ಏಕೆ ಹೇಳಬೇಕೆಂದರೆ ಪ್ರಾರಿಪ್ಸಿತವಾದ ಈ ಗ್ರಂಥದಲ್ಲಿ ಎಲ್ಲರಿಗೂ ಗೌರವ ಹುಟ್ಟಬೇಕು. ಸೂತ್ರವ್ಯಾಖ್ಯಾನವೆಂದು ಹೇಳಿದಾಗ ಸಹಜವಾಗಿ ಗೌರವಬುದ್ಧಿಯು ಉಂಟಾಗುತ್ತದೆ.

*ಪರಿಪೂರ್ಣಚಂದ್ರಿಕಾ*

ಸೂತ್ರಗಳಿಂದ ಮಾತ್ರಕ್ಕೆ ಏಕೆ ಗೌರವಬುದ್ಧಿ ಹುಟ್ಟಬೇಕು? ಎಂದು ಪ್ರಶ್ನಿಸಿದರೆ ಸೂತ್ರವನ್ನು ರಚಿಸಿದವರು ಅತ್ಯಂತ ಆಪ್ತರಾದ ವೇದವ್ಯಾಸದೇವರು. ಆದಕ್ಕಾಗಿಯೇ 'ಕೃಷ್ಣಸ್ಯ' ಎಂಬ ಪದವನ್ನು ಹೇಳಿದ್ದಾರೆ. 'ಕೃಷ್ಣಸ್ಯ' ಎಂಬ ಪದಕ್ಕೆ ಸಮಾಸದಲ್ಲಿ ವಿಶೇಷಣವಾದ ಸೂತ್ರದಲ್ಲಿ ಅನ್ವಯಿಸಬೇಕು. ಸಮಾಸಅಘಟಿತವಾದ ಪದಾರ್ಥಕ್ಕೆ ಸಮಾಸಘಟಿತವಾದ ಪದಾರ್ಥದಲ್ಲಿ ಅನ್ವಯವು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಬುದ್ಧಿಯಿಂದ ಸೂತ್ರಪದವನ್ನು ಬೇರ್ಪಡಿಸಿದಾಗ ಭಿನ್ನಪದವಾಗುತ್ತದೆ. ಅಂತಹ ಸೂತ್ರದಲ್ಲಿ 'ಕೃಷ್ಣಸ್ಯ' ಎಂಬುದು ಅನ್ವಯ ಹೊಂದುತ್ತದೆ.

ವೇದಾರ್ಥಸತ್ತತೇಃ ಎಂಬುದನ್ನು ವೇದವ್ಯಾಸರಿಗೆ ವಿಶೇಷಣವನ್ನಾಗಿ ಹೇಳಿದ್ದಾರೆ. ಇದಕ್ಕೆ ಎರಡು ಪ್ರಯೋಜನ. ೧. ವೇದಗಳ ಅರ್ಥವನ್ನು ನಿರ್ಣಯಿಸುವುದಕ್ಕಾಗಿ ಶ್ರುತಿ ಹಾಗೂ ಯುಕ್ತಿಗಳನ್ನು ಹೇಳಿದ್ದರಿಂದ ಸೂತ್ರಗಳಲ್ಲಿ ಗೌರವಬುದ್ಧಿಯುಂಟಾಗುತ್ತದೆ. ೨. 'ಅಥಾತೋ ಧರ್ಮಜಿಜ್ಞಾಸಾ' ಇತ್ಯಾದಿ ಜೈಮಿನಿಸೂತ್ರಗ್ರಂಥದಿಂದಲೇ ವೇದಾರ್ಥವು ನಿರ್ಣಯವಾಗಿರುವಾಗ ಬ್ರಹ್ಮಸೂತ್ರಗಳಿಗೆ ಗತಾರ್ಥತ್ವವು ಬರುತ್ತದಲ್ಲವೇ? ಎಂಬ ಶಂಕೆಯನ್ನು ಪರಿಹರಿಸಲು 'ವೇದಾರ್ಥಸತ್ತತೇಃ' ಎಂದು ಹೇಳಿದ್ದಾರೆ. ಬ್ರಹ್ಮನೇ ಸಕಲವೇದಗಳ ಮುಖ್ಯಾರ್ಥನು. ಇದನ್ನು ನಿರ್ಣಯಿಸುವುದಕ್ಕಾಗಿಯೇ ಈ ಸೂತ್ರಗಳು ವೇದವ್ಯಾಸದೇವರಿಂದ ರಚಿಸಲ್ಪಟ್ಟಿವೆ. ಹೀಗೆ ಬ್ರಹ್ಮನೇ ವೇದಗಳ ಮುಖ್ಯಾರ್ಥನೆಂದು ತಿಳಿಸಲು ವೇದಾರ್ಥಸತ್ತತಿಯೆಂದು ಹೇಳಿದ್ದಾರೆ. ಆದರೆ ಜೈಮಿನಿಮೊದಲಾದವರು ಬ್ರಹ್ಮಸೂತ್ರಗಳಲ್ಲಿ ಹೇಳಿದ ನ್ಯಾಯವನ್ನೇ ಉಪಜೀವಿಸಿ ವೇದದ ಏಕದೇಶವನ್ನಷ್ಟೇ ಅಮುಖ್ಯವಾದ ಕರ್ಮಾದಿಪರವಾಗಿ ಸಮರ್ಥಿಸಿದ್ದಾರೆ. ಆದ್ದರಿಂದ ಬ್ರಹ್ಮಸೂತ್ರಕ್ಕೆ ಗತಾರ್ಥತ್ವವು ಬರುವುದಿಲ್ಲ.

ಪೂರ್ವಪಕ್ಷ ಹಾಗೂ ಸಿದ್ಧಾಂತನ್ಯಾಯಗಳ ಸಂಗ್ರಹವನ್ನು ಶಿಷ್ಯರೇ ಮಾಡಬಹುದು. ತಾವು ಮಾಡಿರುವ ಅನುವ್ಯಾಖ್ಯಾನಗ್ರಂಥಕ್ಕೆ ತಾವೇ ವ್ಯಾಖ್ಯಾನಿಸಿಕೊಳ್ಳುವ ಅವಶ್ಯಕತೆ ಏನಿದೆ? ಎಂಬ ಸಂಶಯವನ್ನು ಪರಿಹರಿಸಲು ಅಹಂ ಎಂದಿದ್ದಾರೆ. ಇದರಿಂದ ಬೇರೆಯವರಿಗೆ ನ್ಯಾಯಗಳನ್ನು ಸಂಗ್ರಹಿಸಲು ಸಾಧ್ಯವಿಲ್ಲವೆಂದು ಸೂಚಿಸಿದ್ದಾರೆ.

'ಭಾಷ್ಯಾನುಭಾಷ್ಯೇಽಹಂ' ಎಂದು ಒಟ್ಟಿಗೆ ಹೇಳಿದ್ದಾರೆ. ಇದು ಹೇಗೆ ಸರಿ? ಏಕೆಂದರೆ 'ಈದೂದೇದ್ದಿವಚನಂ ಪ್ರಗೃಹ್ಯಮ್' (೧/೧/೧೧) ಎಂಬ ಸೂತ್ರದಲ್ಲಿ ಈದಂತ, ಊದಂತ ಮತ್ತು ಏದಂತಶಬ್ದಗಳಿಗೆ ಪ್ರಗೃಹ್ಯಸಂಜ್ಞೆಯನ್ನು ಹೇಳಿದ್ದಾರೆ.

'ಭಾಷ್ಯಾನುಭಾಷ್ಯೇಽಹಂ' ಎಂದು ಒಟ್ಟಿಗೆ ಹೇಳಿದ್ದು ತಪ್ಪಲ್ಲ. 'ಈದೂದೇದ್ದಿವಚನಂ ಪ್ರಗೃಹ್ಯಮ್' ಎಂಬ ಸೂತ್ರದಿಂದ ಪ್ರಗೃಹ್ಯಸಂಜ್ಞೆ ಬಂದು ಪ್ರಕೃತಿಭಾವವು ಬರಬೇಕು. ಆದರೆ 'ಮಣೀವಾದೀನಾಂ ಪ್ರತಿಷೇಧಃ' ಎಂಬ ವಾರ್ತಿಕದಂತೆ ಪ್ರಗೃಹ್ಯಸಂಜ್ಞೆಯು ಅನಿತ್ಯವೆಂದು ತಿಳಿಯುತ್ತದೆ. ಆದ್ದರಿಂದ ಭಾಷ್ಯಾನುಭಾಷ್ಯೇ ಅಹಮ್ ಎಂದು ಬಿಡಿಸಿ ಹೇಳಬೇಕಾಗಿಲ್ಲ. ಅಥವಾ ಭಾಷ್ಯಾನುಭಾಷ್ಯ ಎಂಬುದು ದ್ವಿವಚನಾಂತಪದವೇ ಅಲ್ಲ. ಸಪ್ತಮ್ಯಂತ ಪದವಾಗಿದೆ. ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಸನ್ನ್ಯಾಯಗಳನ್ನು ಭಾಷ್ಯ ಹಾಗೂ ಅನುವ್ಯಾಖ್ಯಾನಗಳಲ್ಲಿಯೇ ವಿವರಿಸಿದ್ದೇವೆ. 'ಸರ್ವಜ್ಞಾ ಹಿ ರುದ್ರಾದಯಃ' ಎಂದು ಭಾಷ್ಯದಲ್ಲಿ; 'ಆಪ್ತೈಃ ಪ್ರತ್ಯಕ್ಷತೋ ದೃಷ್ಟ್ವಾ' ಎಂಬ ಅನುವ್ಯಾಖ್ಯಾನದಲ್ಲಿ ಸನ್ನ್ಯಾಯಗಳನ್ನು ಹೇಳಿದ್ದು

ಕಾಣಿಸುತ್ತದೆ. ಹಾಗಾದರೆ ಈ ಗ್ರಂಥವೇಕೆ? ಎಂಬ ಶಂಕೆಗೆ ಅವಕಾಶವಿಲ್ಲ. ಭಾಷ್ಯ ಅನುವ್ಯಾಖ್ಯಾನಗಳಲ್ಲಿ ಸನ್ನ್ಯಾಯಗಳನ್ನು ಹೇಳಿದ್ದರೂ ಈ ಗ್ರಂಥದಲ್ಲಿ ಸ್ಪಷ್ಟವಾಗಿ ಸಂಗ್ರಹಿಸಲಾಗಿದೆ. ಆದ್ದರಿಂದ ವ್ಯರ್ಥವಲ್ಲ.

ಭವಿಷ್ಯತ್‌ಕಾಲದಲ್ಲಿ ಸನ್ನ್ಯಾಯಗಳನ್ನು ಸಂಗ್ರಹಿಸುವುದಾದರೂ ಆ ಭವಿಷ್ಯತ್‌ಕಾಲದ ಸಾಮೀಪ್ಯ ವರ್ತಮಾನಕಾಲಕ್ಕಿರುವುದರಿಂದ 'ಕರೋಮಿ' ಎಂಬ ವರ್ತಮಾನಪ್ರಯೋಗವು ತಪ್ಪಲ್ಲ. ಸ್ಪಷ್ಟತ್ವ ಎಂದರೆ ಎಲ್ಲಾ ನ್ಯಾಯಗಳನ್ನು ಮತ್ತು ಸೂತ್ರಗಳಲ್ಲಿ ಉಲ್ಲೇಖಿಸಿದ ಆ ನ್ಯಾಯಪದಗಳ ಅರ್ಥವನ್ನು ಹೇಳುವ ಮೂಲಕ ಸ್ಪಷ್ಟಪಡಿಸುತ್ತೇನೆ ಎಂದರ್ಥ. ಹೀಗೆ ಸ್ಪಷ್ಟಪಡಿಸುವುದರಿಂದ ಏನು ಪ್ರಯೋಜನ? ಎಂಬ ಪ್ರಶ್ನೆಗೆ 'ಮಂದಬುದ್ಧೀನಾಂ ಉಪಕಾರಿಕಾಂ' ಎಂದಿದ್ದಾರೆ. ಹಾಗಾದರೆ ಬುದ್ಧಿವಂತರಿಗೆ ಈ ಗ್ರಂಥವು ಅನುಪಾದೇಯವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಬುಧಾನಾಂ ಚ' ಎಂದು ಉತ್ತರಿಸಿದ್ದಾರೆ.

ಈ ಗ್ರಂಥದಿಂದ ಬೇರೆಯವರಿಗೆ ಪ್ರಯೋಜನವಿದ್ದರೂ, ತನಗೆ ಪ್ರಯೋಜನವಿಲ್ಲದ ಕಾರಣ ಏಕೆ ರಚಿಸಬೇಕು? ಎಂಬ ಪ್ರಶ್ನೆಗೆ 'ಪ್ರೀತ್ಯಾ' ಎಂಬ ಪದದಿಂದ ಉತ್ತರಿಸಿದ್ದಾರೆ. ಸಂಕ್ಷೇಪ ಹಾಗೂ ವಿಸ್ತಾರವಾಗಿ ತಮ್ಮ ಗ್ರಂಥವನ್ನು ವಿವರಿಸಿದಾಗ ಸಜ್ಜನರಿಗೆ ಉಪಕಾರ ಮಾಡಿದಂತಾಗಿ ಸೂತ್ರಕಾರರು ಪ್ರಸನ್ನರಾಗುತ್ತಾರೆ. ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವೂ ನಿರಸ್ತವಾಯಿತು. 'ಮೊದಲು ವಾಕ್ಯಗಳನ್ನು ಕಠಿಣವಾಗಿ ರಚನೆ ಮಾಡಿ, ಪುನಃ ಅದನ್ನೇ ವಿವರಣೆ ಮಾಡಿದರೆ ವ್ಯರ್ಥವಾಗಿ ಉಪ್ಪನ್ನು ತಿಂದು ಪುನಃ ನೀರನ್ನು ಕುಡಿಯುವಂತಾಗುತ್ತದೆ' ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಸಂಕ್ಷೇಪವಿಸ್ತಾರವಾಗಿ ಹೇಳಿದಾಗಲೇ ಬುಭುತ್ಸುಗಳಿಗೆ ಪ್ರವೃತ್ತಿ ಉಂಟಾಗಲು ಸಾಧ್ಯ.

**न्यायविवरणम् — जीवव्यतिरिक्तेश्वरस्याभावात्तस्य च स्वप्रकाशत्वान्न जिज्ञास्यतेति प्राप्ते 'अथातो ब्रह्मजिज्ञासा' इत्याह ॥ 'तद्विजिज्ञासस्व तद्ब्रह्म' इति ब्रह्मशब्देन पूर्णगुणत्वोक्तेर्नानुभवसिद्धाल्पगुणजीवाभेदः । अथ कस्मादुच्यते ब्रह्मेति । 'बृहन्तो ह्यस्मिन् गुणाः' इति श्रुतेः ॥१॥**

ಅನುವಾದ -- ''ಜೀವವ್ಯತಿರಿಕ್ತನಾದ ಈಶ್ವರನೇ ಇಲ್ಲ. ಅಂತಹ ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಈಶ್ವರನು ಜಿಜ್ಞಾಸ್ಯನಲ್ಲ'' ಎಂದು ಪೂರ್ವಪಕ್ಷ. ಇದರ ನಿರಾಕರಣೆಗಾಗಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರವು ಹೊರಟಿದೆ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತಿರುವುದರಿಂದ ಅಲ್ಪಗುಣನಾದ ಜೀವನಿಂದ ಬ್ರಹ್ಮನಿಗೆ ಅಭೇದವನ್ನು ಹೇಳಲು ಸಾಧ್ಯವಿಲ್ಲ. 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ' ಎಂದು ಪ್ರಶ್ನಿಸಿದಾಗ 'ಬೃಹಂತೋ ಹ್ಯಸ್ಮಿನ್ ಗುಣಾಃ' ಎಂದು ಶ್ರುತಿಯು ಉತ್ತರಿಸಿದೆ. ಇದರಿಂದ ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತಿದೆ ಎಂದು ತಿಳಿಯುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ನ್ಯಾಯವಿವರಣದ
ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

*ಪರಿಪೂರ್ಣಚಂದ್ರಿಕಾ*

टीका – एवं न्यायविवरणारम्भमुपपाद्येदानीं प्रथमाधिकरणपूर्वपक्षन्यायं तावद्विवृणोति – जीवेति ।।

ननु प्रथमद्वितीयपादयोर्युक्तिमालैव नास्ति । तत्कस्य विवरणमुच्यते । यद्यप्यत्र 'बाहुल्यं लिङ्गशब्दानां' इत्यादिवत् न न्यायाः सङ्ग्रहेणोक्ताः तथापि प्रत्यधिकरणं सिद्धान्तन्यायस्तावदुक्ता एव । पूर्वपक्षन्याया अपि क्वचिदुक्ताः क्वचिदनुमिताः सन्त्येवेति युक्तं विवरणम् । यद्यप्यत्र विषयप्रयोजनसम्बन्धाधिकारिणामनुपपत्त्या पूर्वपक्षः, तदुपपादनेन च सिद्धान्तः तथाप्युपलक्षणतया विषयनिराकरणसमर्थनयोरेव विवरणं क्रियते । एवमन्यत्रापि द्रष्टव्यम् । अत्र तावत् 'ओतत्वावाची' इत्यादिना सिद्धान्तन्यायोऽभिहितः । तेनानुमितश्चायं पूर्वपक्षन्यायोऽत्र विव्रियते । ईश्वरो हि विचारविषयतयाऽभिमतः । न चासौ जीवव्यतिरिक्तोऽस्ति प्रमाणाभावात् । प्रत्यक्षानुमानयोस्तद्विषयत्वानङ्गीकारात् । आगमस्य कार्यज्ञापकत्वात् । सिद्धज्ञापकत्वेऽपि तस्य जीवविषयत्वोपपत्तेरिति भावः । ततः किं स एव विचारविषयो भवत्वित्यत आह – तस्य चेति ।। उपलक्षणमेतत् । स्वप्रकाशज्ञानाश्रयत्वेन मानसप्रत्यक्षेण वा निश्चितत्वादित्यपि द्रष्टव्यम् । जिज्ञास्यता विचारविषयता । सन्दिग्धो हि विचारस्य विषयो भवति । न हि निश्चिते संशयो युज्यते विरोधादिति । चः समुच्चये । समुच्चिताभ्यामेव द्वाभ्यां विषयाक्षेपसम्भवात् ।। एतन्निरासाय सूत्रमवतारयति – प्राप्त इति ।। तन्निरासार्थं सूत्रकार इति शेषः । अनुव्याख्यान्यायविवरणं प्रतिज्ञाय सूत्रोदाहरणसङ्गतमिति चेन्न, येऽनुव्याख्यायामुक्ता न्यायास्ते नोत्सूत्रिताः अपि तु सूत्र एवोक्तास्तदाक्षिप्ता अध्यायान्ते कृतया द्विरुक्त्या सूचिता एवेति ज्ञापनार्थत्वेन सङ्गतत्वात् ।

अत्र सूत्रे ब्रह्मशब्देन सूचितमनुव्याख्यया स एव ब्रह्मशब्दार्थ इति व्याख्यातं सिद्धान्तन्यायं विवृणोति – तद्विजिज्ञासस्वेति ।। कर्तव्यैव जिज्ञासा श्रुतिविहितत्वात् । न च विषयाभावः । ईश्वरस्य विचारविषयत्वात् । न च जीवव्यतिरिक्तेश्वरे प्रमाणाभावः । यतः 'तद्विजिज्ञासस्व' इति श्रुतिः जिज्ञासां विधाय 'तद्ब्रह्मे'ति जिज्ञास्ये ब्रह्मशब्दं प्रयुङ्क्ते । तेन ज्ञायते जीवातिरिक्तः परमेश्वरो विष्णुर्जिज्ञासाविषयोऽस्तीति । कथम्? ब्रह्मशब्देन जिज्ञासाविषयस्य भगवतः

पूर्णगुणत्वोक्तेः । जीवानां चाल्पगुणतया स्वस्यानुभवसिद्धत्वात् । न च पूर्णगुणोऽल्पगुणानतिरिक्त इति शक्यते वक्तुम्, विरोधात् । श्रुतेश्च सिद्धार्थत्वस्य सिद्धत्वात् ।

कुतो ब्रह्मशब्दस्य पूर्णगुणार्थत्वम्? इत्यत आह – अथेति ।। उच्यते विष्णुः । ततो जीवोऽस्तु निश्चितो मा वा भूत् । 'तद्ब्रह्म' इति वाक्येन जीवातिरिक्ततया प्रतीतस्य नानाविधविगानविषयतया सन्दिग्धप्रकारस्य वेदार्थस्य विष्णोर्मोक्षप्रयोजनजिज्ञासा मुमुक्षुणा कर्तव्येति सिद्धम् ।।

इदं सूत्रं शास्त्रव्यापारस्य विचारस्य कर्तव्यतासमर्थनद्वारेण शास्त्रस्यारम्भणीयतां प्रतिपादयदपि 'तद्विजिज्ञासस्व' इति वाक्यार्थविचारपरत्वात् वेदार्थमीमांसा-शास्त्रान्तर्गतमपि भवतीति वेदितव्यम् । एतदर्थविचारणमेव चतुरध्याय्यां भविष्यतीति प्रायेण न्यायविवरणस्यैवात्र ग्रन्थे प्रक्रान्तत्वात् सङ्गत्यादिकमन्यतोऽव-गन्तव्यम् ।।१।।

ಇಲ್ಲಿಯ ತನಕ ನ್ಯಾಯವಿವರಣಗ್ರಂಥಕ್ಕೆ ಆರಂಭಣೀಯತ್ವವನ್ನು ಸಮರ್ಥಿಸಿದ್ದಾಯಿತು. ಈಗ ಮೊದಲನೆಯ ಜಿಜ್ಞಾಸಾಧಿಕರಣದ ಪೂರ್ವಪಕ್ಷದ ನ್ಯಾಯವನ್ನು 'ಜೀವ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ.

ಪ್ರಥಮ ಹಾಗೂ ದ್ವಿತೀಯಪಾದಗಳಲ್ಲಿ ನ್ಯಾಯಮಾಲೆಯನ್ನು ಹೇಳಿಯೇ ಇಲ್ಲ. ಅಲ್ಲಿ ಯಾವುದರ ವಿವರಣೆಯನ್ನು ಮಾಡುತ್ತೀರಿ? ಎಂದು ಪ್ರಶ್ನಿಸಬಾರದು. ವಸ್ತುತಃ 'ಬಾಹುಲ್ಯಂ ಲಿಂಗಶಬ್ದಾನಾಮ್' ಇತ್ಯಾದಿಯಾಗಿ ನ್ಯಾಯಗಳನ್ನು ಅಲ್ಲಿ ಸಂಗ್ರಹಿಸಿಲ್ಲ. ಆದರೂ ಸಹ ಪ್ರತಿಯೊಂದು ಅಧಿಕರಣಗಳ ಸಿದ್ಧಾಂತನ್ಯಾಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಕೆಲವೊಮ್ಮೆ ಪೂರ್ವಪಕ್ಷನ್ಯಾಯಗಳನ್ನು ಹೇಳಿದ್ದಾರೆ. ಕೆಲವೊಮ್ಮೆ ಸೂಚಿಸಿದ್ದಾರೆ. ಆದ್ದರಿಂದ ಅಲ್ಲಿಯೂ ನ್ಯಾಯದ ವಿವರಣೆ ಇದ್ದೇ ಇದೆ.

ಈ ಅಧಿಕರಣದ ಪೂರ್ವಪಕ್ಷವನ್ನು ಕೇವಲ ವಿಷಯಾಭಾವದಿಂದಷ್ಟೇ ಇಲ್ಲಿ ಹೇಳಿದ್ದಾರೆ. ಆದರೆ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿ ಈ ನಾಲ್ಕರ ಅನುಪಪತ್ತಿಯಿಂದಲೇ ಪೂರ್ವಪಕ್ಷ ಮಾಡಿ ಸಿದ್ಧಾಂತ ಮಾಡಬೇಕಲ್ಲವೆ? ಹೌದು, ಆದರೆ ವಿಷಯದ ನಿರಾಕರಣೆಯಿಂದ ಉಪಲಕ್ಷಣಯಾ ಪ್ರಯೋಜನಾದಿಗಳ ನಿರಾಕರಣೆಯನ್ನು ಇಟ್ಟುಕೊಳ್ಳಬೇಕು. ಇದರಂತೆ ಬೇರೆ ಅಧಿಕರಣಗಳಲ್ಲಿಯೂ ತಿಳಿಯಬೇಕು.

'ಓತತ್ವವಾಚಿ' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಸಿದ್ಧಾಂತನ್ಯಾಯವನ್ನು ಹೇಳಿದ್ದಾರೆ. ಆದರಿಂದ ಅನುಮಿತವಾದ ಪೂರ್ವಪಕ್ಷನ್ಯಾಯವನ್ನು ಇಲ್ಲಿ ವಿವರಿಸಿದ್ದಾರೆ. ಈಶ್ವರನು ವಿಚಾರವಿಷಯನೆಂದು

ಸಮ್ಮತನಾಗಿದ್ದಾನೆ. ಆದರೆ ಇಂತಹ ಈಶ್ವರನು ಜೀವನಿಗಿಂತ ಭಿನ್ನನಾಗಿದ್ದಾನೆನ್ನಲು ಪ್ರಮಾಣವಿಲ್ಲ. ಪ್ರತ್ಯಕ್ಷ, ಅನುಮಾನಗಳಿಗೆ ಅವನು ಗೋಚರನಲ್ಲ. ಆಗಮವು ಕೇವಲ ಕಾರ್ಯಬೋಧಕವಾಗಿದೆ. ಸಿದ್ಧಬೋಧಕವೆಂದು ಒಪ್ಪಿದರೂ ಸಿದ್ಧನಾದ ಜೀವನನ್ನೇ ಪ್ರತಿಪಾದಿಸುತ್ತದೆ ಹೊರತು ಬ್ರಹ್ಮನನ್ನು ಪ್ರತಿಪಾದಿಸಲಾರದು ಎಂದು ಜೀವವ್ಯತಿರಿಕ್ತ ಈಶ್ವರಸ್ಯಾಭಾವಾತ್ ಎಂಬ ಪದದ ಅಭಿಪ್ರಾಯ. ಹಾಗಾದರೆ ಜೀವನೇ ವಿಚಾರವಿಷಯನಾಗಲಿ? ಎಂಬ ಪ್ರಶ್ನೆಗೆ 'ತಸ್ಯ ಚ' ಎಂಬುದರಿಂದ ಉತ್ತರಿಸಿದ್ದಾರೆ. ಜೀವನು ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆಂದು ಆಚಾರ್ಯರು ಹೇಳಿದ್ದಾರೆ. ಉಪಲಕ್ಷಣಯಾ ಸ್ವಪ್ರಕಾಶಜ್ಞಾನಕ್ಕೆ ಆಶ್ರಯನಾದ್ದರಿಂದ ಮತ್ತು ಮಾನಸಪ್ರತ್ಯಕ್ಷದಿಂದಲೂ ನಿಶ್ಚಿತನಾಗಿದ್ದರಿಂದ ನಿತ್ಯಸಿದ್ಧನಾಗಿದ್ದಾನೆಂದು ತಿಳಿಯಬೇಕು. ಜಿಜ್ಞಾಸ್ಯತಾ ಎಂಬ ಪದಕ್ಕೆ 'ವಿಚಾರವಿಷಯನಾಗಿದ್ದಾನೆ' ಎಂದರ್ಥ. 'ಸಂದಿಗ್ಧವಾದದ್ದಷ್ಟೇ ವಿಚಾರಕ್ಕೆ ವಿಷಯವಾಗುತ್ತದೆ. ನಿಶ್ಚಿತವಾದ್ದರಲ್ಲಿ ಸಂಶಯವು ಕೂಡುವುದಿಲ್ಲ. ಹಾಗಾದಲ್ಲಿ ವಿರೋಧ ಬರುತ್ತದೆ. ಸಮುಚ್ಚಯಾರ್ಥದಲ್ಲಿ ಚಕಾರವಿದೆ. ಜೀವವ್ಯತಿರಿಕ್ತವಾದ ಈಶ್ವರಾಭಾವ ಹಾಗೂ ಜೀವನ ನಿತ್ಯಸಿದ್ಧತ್ವವು ವಿಷಯವನ್ನು ಆಕ್ಷೇಪಿಸುತ್ತಿದೆ. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಪ್ರಾಪ್ತೇ' ಎಂದು ನೇರವಾಗಿ ಸೂತ್ರವನ್ನೇ ಉಲ್ಲೇಖಿಸುತ್ತಿದ್ದಾರೆ. 'ಪ್ರಾಪ್ತೇ' ಎಂಬ ಪದದ ಅನಂತರ 'ಪೂರ್ವಪಕ್ಷದ ನಿರಾಸಕ್ಕೋಸ್ಕರ ಸೂತ್ರಕಾರರು' ಎಂಬುದನ್ನು ಶೇಷಪೂರಣ ಮಾಡಬೇಕು. ಅನುವ್ಯಾಖ್ಯಾನದ ನ್ಯಾಯಗಳನ್ನು ವಿವರಿಸುತ್ತೇನೆಂದು ಪ್ರತಿಜ್ಞೆಗೈದು ಸೂತ್ರವನ್ನು ಉದಾಹರಿಸುವುದು ಅಸಂಗತವಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ''ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನ್ಯಾಯಗಳು ಉತ್ಸೂತ್ರಿತಗಳಲ್ಲ. ಸೂತ್ರಕಾರರೇ ಆ ನ್ಯಾಯಗಳನ್ನು ಹೇಳಿದ್ದಾರೆ. ಕೆಲವೊಮ್ಮೆ ಸೂಚಿಸಿರುತ್ತಾರೆ'' ಎಂಬುದನ್ನು ತಿಳಿಸುವುದಕ್ಕಾಗಿ ಸೂತ್ರವನ್ನೇ ಇಲ್ಲಿ ಉಲ್ಲೇಖಿಸಿದ್ದಾರೆ.

ಸೂತ್ರದಲ್ಲಿರುವ 'ಬ್ರಹ್ಮ'ಶಬ್ದದಿಂದ ಯಾವ ಅರ್ಥವು ಸೂಚಿತವಾಗಿದೆಯೋ, ಅದೇ ಅರ್ಥವನ್ನೇ ಅನುವ್ಯಾಖ್ಯಾನದಲ್ಲಿ 'ಸ ಏವ ಬ್ರಹ್ಮಶಬ್ದಾರ್ಥಃ' ಎಂದು ವ್ಯಾಖ್ಯಾನಿಸಿದ್ದಾರೆ. ಅದರಿಂದ ತಿಳಿಯುವ ಸಿದ್ಧಾಂತನ್ಯಾಯವನ್ನು 'ತದ್ವಿಜಿಜ್ಞಾಸಸ್ವ' ಎಂದು ವಿವರಿಸಿದ್ದಾರೆ. ಶ್ರುತಿವಿಹಿತವಾದ್ದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಆಗಿದೆ. ವಿಷಯವೇ ಇಲ್ಲವೆಂಬ ಗೊಂದಲ ಬೇಡ. ಈಶ್ವರನು ವಿಚಾರವಿಷಯನಾಗಿದ್ದಾನೆ. ಜೀವವ್ಯತಿರಿಕ್ತನಾದ ಈಶ್ವರನಿದ್ದಾನೆನ್ನಲು ಅನೇಕ ಪ್ರಮಾಣಗಳಿವೆ. 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯು ಜಿಜ್ಞಾಸೆಯನ್ನು ವಿಧಿಸಿ, 'ತದ್ಬ್ರಹ್ಮ' ಎಂದು ಬ್ರಹ್ಮಶಬ್ದವನ್ನು ಪ್ರಯೋಗಿಸಿದೆ. ಇದರಿಂದ ಜೀವವ್ಯತಿರಿಕ್ತನಾದ ಸರ್ವೋತ್ತಮನಾದ ವಿಷ್ಣುವು ಜಿಜ್ಞಾಸೆಗೆ ವಿಷಯನಾಗಿದ್ದಾನೆಂದು ತಿಳಿಯುತ್ತದೆ. ಏಕೆಂದರೆ ಬ್ರಹ್ಮಶಬ್ದವು ಜಿಜ್ಞಾಸಾವಿಷಯನಾದ ಭಗವಂತನಲ್ಲಿ ಗುಣಪೂರ್ಣತ್ವವನ್ನು ಹೇಳುತ್ತಿದೆ. ಆದರೆ ಜೀವನು ಅಲ್ಪಗುಣನೆಂದು ನಮ್ಮೆಲ್ಲರ ಅನುಭವ ಹೇಳುತ್ತಿದೆ. ಪೂರ್ಣಗುಣನಾದ ಭಗವಂತನಿಗೂ ಅಲ್ಪಗುಣನಾದ ಜೀವನಿಗೂ ಐಕ್ಯವನ್ನು ಹೇಳಿದರೆ ಪರಸ್ಪರವಿರೋಧ ಬರುತ್ತದೆ.

ಬ್ರಹ್ಮಶಬ್ದಕ್ಕೆ ಗುಣಪೂರ್ಣತ್ವವೆಂಬ ಅರ್ಥವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಅಥ' ಎಂದು ಉತ್ತರಿಸಿದ್ದಾರೆ. ಬ್ರಹ್ಮಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಜೀವನು ನಿಶ್ಚಿತನಾಗಲಿ, ಬಿಡಲಿ

ಸಂದಿಗ್ಧನಾದ ವಿಷ್ಣುವು ಶಾಸ್ತ್ರಕ್ಕೆ ವಿಷಯನಾಗುತ್ತಾನೆ. 'ತದ್ಬ್ರಹ್ಮ' ಎಂಬ ವಾಕ್ಯದಿಂದ ಜೀವನಿಗಿಂತ ಅತಿರಿಕ್ತನಾಗಿ ಬ್ರಹ್ಮನು ಶ್ರುತನಾಗಿದ್ದಾನೆ. ಅನೇಕಪ್ರಕಾರಗಳಲ್ಲಿ ಈ ಬ್ರಹ್ಮನ ಬಗ್ಗೆ ಸಂದೇಹಗಳಿವೆ? ವೇದಾರ್ಥನಾದ ವಿಷ್ಣುವಿನ ಮೋಕ್ಷಪ್ರಯೋಜಕವಾದ ಜಿಜ್ಞಾಸೆಯು ಮುಮುಕ್ಷುವಿಗೆ ಕರ್ತವ್ಯವೇ ಆಗಿದೆ ಎಂದು ಸಿದ್ಧವಾಯಿತು.

ಈ ಸೂತ್ರವು ಶಾಸ್ತ್ರದ ವಿಚಾರಕರ್ತವ್ಯತ್ವವನ್ನು ಸಮರ್ಥಿಸುವ ಮೂಲಕ ಶಾಸ್ತ್ರಕ್ಕೆ ಆರಂಭಣೀಯತ್ವವನ್ನು ಸಮರ್ಥಿಸುತ್ತಿದೆ. ಆದರೂ ಸಹ 'ತದ್ವಿಜಿಜ್ಞಾಸಸ್ವ' ಎಂಬ ಶ್ರುತ್ಯರ್ಥವನ್ನು ವಿಚಾರಮಾಡುತ್ತಿರುವುದರಿಂದ ವೇದಾರ್ಥಮೀಮಾಂಸಾಶಾಸ್ತ್ರದಲ್ಲಿ ಅಂತರ್ಭಾವ ಹೊಂದುತ್ತದೆಂದು ತಿಳಿಯಬೇಕು. ಇಂತಹ ಬ್ರಹ್ಮನ ವಿಚಾರಕ್ಕೋಸ್ಕರವೇ ನಾಲ್ಕು ಅಧ್ಯಾಯಗಳು ಹೊರಟಿರುವುದರಿಂದ ನ್ಯಾಯವಿವರಣವನ್ನು ಈ ಗ್ರಂಥದಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ಸಂಗತ್ಯಾದಿಗಳನ್ನು ಈ ಗ್ರಂಥದಲ್ಲಿ ಹೇಳಿಲ್ಲ. ಬೇರೆ ಗ್ರಂಥಗಳಿಂದಲೇ ಅವುಗಳನ್ನು ತಿಳಿಯಬೇಕು.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

* * * * * *

**श्रीमदानन्दतीर्थभगवत्पादाचार्यविरचितम्**

# अणुभाष्यम्

*ಜಿಜ್ಞಾಸಾಧಿಕರಣ*

**नारायणं गुणैः सर्वैरुदीर्णं दोषवर्जितम् ।**
**ज्ञेयं गम्यं गुरूंश्चापि नत्वा सूत्रार्थ उच्यते ॥**

ನಾರಾಯಣನು ಸಕಲಗುಣಪರಿಪೂರ್ಣನಾಗಿದ್ದಾನೆ. ಸಕಲದೋಷಗಳಿಂದ ವಿದೂರನಾಗಿದ್ದಾನೆ. ಸಜ್ಜನರಿಂದ ತಿಳಿಯಲು ಅರ್ಹನು ಮತ್ತು ಹೊಂದಲು ಯೋಗ್ಯನೂ ಆಗಿದ್ದಾನೆ. ಇಂತಹ ಲಕ್ಷ್ಮೀಪತಿಯನ್ನು ಭಕ್ತಿಯಿಂದ ನಮಸ್ಕಾರ ಮಾಡಿ, ಮತ್ತು ಗುರುಗಳಾದ ವೇದವ್ಯಾಸದೇವರನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳಿಗೆ ಅರ್ಥವನ್ನು ಹೇಳುತ್ತೇನೆ.

ಪ್ರತಿಪದಾರ್ಥ - ಸರ್ವೈಃ = ಸಕಲವಿಧವಾದ, ಗುಣೈಃ = ಕಲ್ಯಾಣಗುಣಗಳಿಂದ, ಉದೀರ್ಣಂ = ಪೂರ್ಣನಾದ (ಉತ್ಕೃಷ್ಟನಾದ), ದೋಷವರ್ಜಿತಮ್ = ಸಕಲದೋಷಗಳಿಂದ ವಿದೂರನಾದ, ಜ್ಞೇಯಂ = ಸಜ್ಜನರ ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನಗಳಿಗೆ ವಿಷಯನಾದ, ಗಮ್ಯಂ = ಜ್ಞಾನಿಗಳಿಂದ ಹೊಂದಲು ಯೋಗ್ಯನಾದ, ನಾರಾಯಣಂ = ಲಕ್ಷ್ಮೀಪತಿಯಾದ ನಾರಾಯಣನನ್ನು, ನತ್ವಾ = ನಮಸ್ಕಾರಮಾಡಿ, ಅಪಿ = ಮತ್ತು (ಅಪಿ ಪದವು ಗುರುದೇವತೆಗಳ ಭೇದದಲ್ಲಿ ಅರುಚಿಯನ್ನು ತೋರಿಸುತ್ತಿದೆ), ಗುರೂಂಶ್ಚ = ಗುರುಗಳಾದ ವೇದವ್ಯಾಸದೇವರನ್ನೂ ಕೂಡ, ನತ್ವಾ = ನಮಸ್ಕಾರ ಮಾಡಿ, ಸೂತ್ರಾರ್ಥಃ = ಬ್ರಹ್ಮಸೂತ್ರಾರ್ಥವು (ಸಮಸ್ತವೇದಇತಿಹಾಸಪುರಾಣ ಮೊದಲಾದ ಸಕಲಶಬ್ದರಾಶಿಗಳಿಂದ ಪ್ರತಿಪಾದ್ಯನಾದ ನಾರಾಯಣನೆಂಬ ಬ್ರಹ್ಮಸೂತ್ರಾರ್ಥವು), (ಮಯಾ = ನನ್ನಿಂದ), ಉಚ್ಯತೇ = ಹೇಳಲ್ಪಡುತ್ತದೆ.

**अणुभाष्यम् – विष्णुरेव विजिज्ञास्यः ...**

ದೇಶಕಾಲಗುಣಗಳಿಂದ ಅಪರಿಮಿತನಾದ ವಿಷ್ಣುವೆಂಬ ಭಗವಂತನ ಬಗ್ಗೆಯೇ ಶ್ರವಣ, ಮನನ, ನಿದಿಧ್ಯಾಸನವೆಂಬ ಜಿಜ್ಞಾಸೆಯನ್ನು ಮಾಡಬೇಕು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ಅಣುಭಾಷ್ಯದ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

* * * * * * *

*ಪರಿಪೂರ್ಣಚಂದ್ರಿಕಾ*

श्री राघवेन्द्रतीर्थविरचिता

# तत्वमञ्जरी

*ಮಂಗಳಾಚರಣೆ*

समस्तगुणसम्पूर्णं सर्वदोषविवर्जितम् ।
लक्ष्मीनारायणं वन्दे भक्ताभीष्टफलप्रदम् ॥

ಲಕ್ಷ್ಮೀನಾರಾಯಣನು ಸಕಲಗುಣಪರಿಪೂರ್ಣನೂ ಸಕಲದೋಷರಹಿತನೂ ಆಗಿದ್ದಾನೆ. ಸಕಲಭಕ್ತರ ಅಭೀಷ್ಟಗಳನ್ನು ಪೂರೈಸುವ ಇಂತಹ ಭಗವಂತನನ್ನು ಗ್ರಂಥಾರಂಭದಲ್ಲಿ ನಮಸ್ಕರಿಸುತ್ತೇನೆ.

संसारक्लेशसंश्रान्तसज्जनावनतत्पराः ।
दयालवो महान्तस्तान् गुरून् नत्वा गुरुं(गिरं) भजे ॥

ಕರುಣಾಶಾಲಿಗಳೂ ಮಹಾಮಹಿಮರೂ ಆದ ಗುರುಗಳು ವಿವಿಧ ಸಾಂಸಾರಿಕ ದುಃಖಗಳಿಂದ ಸಂತ್ರಸ್ತರಾದ ಸಜ್ಜನರ ರಕ್ಷಣೆಯಲ್ಲಿ ಆಸಕ್ತರಾಗಿದ್ದಾರೆ. ಇವರನ್ನು ನಮಿಸಿ, ವಾಗ್ದೇವಿಯನ್ನೂ ಭಜಿಸುತ್ತೇನೆ.

ಗ್ರಂಥಪ್ರತಿಜ್ಞೆ

'ग्रन्थोऽयमपि बह्वर्थो भाष्यं चात्यर्थविस्तरम्' ।
इत्युक्तिसाम्यात् सङ्क्षेपभाष्यं चात्यर्थविस्तरम् ॥

ಶ್ರೀಮದಾಚಾರ್ಯರು ಅನುವ್ಯಾಖ್ಯಾನಪ್ರಾರಂಭದಲ್ಲಿ "ಅನುವ್ಯಾಖ್ಯಾನಗ್ರಂಥವು ಅನೇಕಾರ್ಥಗಳನ್ನೊಳಗೊಂಡಿದೆ. ಭಾಷ್ಯವೂ ಸಹ ವಿಸ್ತಾರ ಅರ್ಥವುಳ್ಳದ್ದಾಗಿದೆ" ಎಂದು ಹೇಳಿದ್ದಾರೆ. ಆಚಾರ್ಯರ ಈ ಮಾತಿನಂತೆ ಅಣುಭಾಷ್ಯಗ್ರಂಥವೂ ಸಹ ಬಹಳ ಅರ್ಥಗರ್ಭಿತವಾಗಿದೆ.

'अनन्तोऽर्थः प्रकटितस्त्वयाणौ भाष्यसङ्ग्रहे' ।
इत्याहुः श्रीमदानन्दतीर्थार्यौपसदा अपि ॥

ಆಚಾರ್ಯರ ಸಮೀಪಕಾಲದಲ್ಲಿದ್ದ ಶ್ರೀನಾರಾಯಣಪಂಡಿತಾಚಾರ್ಯರು 'ತಾವು ಚಿಕ್ಕದಾದ ಅಣುಭಾಷ್ಯಗ್ರಂಥದಲ್ಲಿ ಅಪಾರ ಅರ್ಥಗಳನ್ನು ತುಂಬಿದ್ದೀರಿ' ಎಂದು ಹೇಳಿದ್ದಾರೆ.

अतोऽनेकार्थयुक्त(गुम्भ)स्य नैतद्भाष्यस्य विस्तृतौ ।
शक्तोस्म्यथापि लेशेन व्याख्यां कुर्यां यथामति ॥

ಹೀಗೆ ಬಹಳ ಅರ್ಥಗರ್ಭಿತವಾದ ಈ ಅಣುಭಾಷ್ಯವನ್ನು ವ್ಯಾಖ್ಯಾನಿಸಲು ನಾನು ಸಮರ್ಥನಲ್ಲ. ಆದರೂ ಬುದ್ಧಿಗೆ ನಿಲುಕಿದಷ್ಟು ಲೇಶತಃ ವ್ಯಾಖ್ಯಾನಮಾಡಲು ಪ್ರಯತ್ನಿಸುತ್ತೇನೆ.

*ಪರಿಪೂರ್ಣಚಂದ್ರಿಕಾ*

सूत्रार्थं हृदि कृत्वैव भाष्यार्थं सम्प्रकाशये ।
अविक्षेपेण बोधार्थं बुध्यन्तां तद्विवेकिनः ॥

ಬುದ್ಧಿಗೆ ಸುಲಭವಾಗಿ ಅರ್ಥವಾಗುವುದಕ್ಕಾಗಿ ಸೂತ್ರಗಳ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು, ಅಣುಭಾಷ್ಯದ ಅರ್ಥವನ್ನು ಈ ಗ್ರಂಥದಲ್ಲಿ ವ್ಯಾಖ್ಯಾನಿಸಲಾಗಿದೆ. ವಿವೇಕಿಗಳು ಇದನ್ನು ಗಮನಿಸಬೇಕು.

- ಟೀಕಾ -

इह खल्वधिकारिणामखिलक्लेशनिवृत्तिविशिष्टपरमानन्दावाप्तिनिदान-भगवज्ज्ञानाय प्रवृत्तानाम् अनन्ताम्नायानाम् इतिकर्तव्यतारूपाणि नारायणावतार-बादरायणकृतानि ब्रह्मसूत्राणि अन्यैरन्यथाव्याख्यातानि अन्यकृतप्रायाणि मन्वानो भगवानानन्दतीर्थमुनिर्यथावद् व्याचिख्यासुर्भाष्यानुभाष्ये विधाय सङ्क्षेपभाष्यमपि विधित्सुरध्यायचतुष्टयोक्तगुणविशिष्टेष्टदेवतागुरुनतिपूर्वं चिकीर्षितं प्रतिजानीते ।

ಅನುವಾದ - ಮೋಕ್ಷವನ್ನು ಅಪೇಕ್ಷಿಸುವ ಅಧಿಕಾರಿಗಳ ಸಕಲವಿಧದುಃಖಗಳನ್ನು ಪರಿಹರಿಸಿ, ವಿಶಿಷ್ಟವಾದ ಪರಮಾನಂದವನ್ನು ನೀಡುವುದಕ್ಕಾಗಿ ಭಗವಂತನ ಅರಿವನ್ನು ಮೂಡಿಸಲು ಸಕಲ ವೇದಗಳು ಹೊರಟಿವೆ. ಕಠಿಣವಾದ ವೇದಗಳ ಅರ್ಥವನ್ನು ತಿಳಿಸಲು ಬ್ರಹ್ಮಮೀಮಾಂಸಾಶಾಸ್ತ್ರವು ನಾರಾಯಣನ ಅವತಾರರೂಪರಾದ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟಿದೆ. ಇಂತಹ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇತರ ವ್ಯಾಖ್ಯಾನಕಾರರು ಅಪಾರ್ಥವಾಗುವಂತೆ ಭಾಷ್ಯಗಳನ್ನು ಬರೆದಿದ್ದಾರೆ. ಆ ಭಾಷ್ಯಗಳೆಲ್ಲವೂ ನಿಷ್ಪ್ರಯೋಜಕಗಳೆಂಬ ಅಭಿಪ್ರಾಯದಿಂದ ಷಡ್ಗುಣೈಶ್ವರ್ಯಸಂಪನ್ನರಾದ ಶ್ರೀಮದಾನಂದತೀರ್ಥಮುನಿಗಳು ಯಥಾರ್ಥವಾದ ಅರ್ಥವನ್ನು ತಿಳಿಸಲು ಭಾಷ್ಯ, ಅನುವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಅನಂತರ ತಾವು ಬರೆದ ಎರಡು ಗ್ರಂಥಗಳಲ್ಲಿರುವ ಸಕಲಪ್ರಮೇಯಗಳನ್ನು ಸಂಕ್ಷೇಪವಾಗಿ ತಿಳಿಸಲು ಈ ಅಣುಭಾಷ್ಯ ಗ್ರಂಥವನ್ನು ರಚಿಸಲು ಹೊರಟಿದ್ದಾರೆ. ಗ್ರಂಥಾರಂಭದ ಮೊದಲು ನಾಲ್ಕು ಅಧ್ಯಾಯಗಳಲ್ಲಿರುವ ಸಾರವನ್ನು ನಾಲ್ಕು ವಿಶೇಷಣಗಳಿಂದ ಸೂಚಿಸುತ್ತಾ, ವಿಶಿಷ್ಟದೇವತೆ ಇಷ್ಟದೇವತೆ ಹಾಗು ಗುರುವೂ ಆದ ನಾರಾಯಣನನ್ನು ನಮಸ್ಕರಿಸುತ್ತಿದ್ದಾರೆ ಮತ್ತು ತಾವು ಮಾಡಲು ಬಯಸಿರುವ ಗ್ರಂಥಪ್ರತಿಜ್ಞೆಯನ್ನೂ ಸಹ 'ನಾರಾಯಣಂ ಗುಣೈಸ್ಸರ್ವೈಃ' ಎಂದು ಮಾಡುತ್ತಿದ್ದಾರೆ.

- ಮಂಗಳಶ್ಲೋಕವ್ಯಾಖ್ಯಾನ -

नारायणं गुणैः सर्वैरुदीर्णं दोषवर्जितम् ।
ज्ञेयं गम्यं गुरूंश्चापि नत्वा सूत्रार्थ उच्यते ॥

सर्वैरानन्दज्ञानधृतिबलौदार्यवीर्यादिभिर्गुणैः परिपूर्णम् । चिन्तासन्तापपुण्य-पापलेपजनिमृतिप्रभृतिदोषवर्जितम् । सद्भिः वैराग्यभक्तिश्रवणमनननध्यानजन्या-

**परोक्षज्ञानेन विषयीकर्तव्यम् । अत एव ज्ञानरूपोपायात् सद्भिः प्राप्यमपि नारायणं नत्वेति विशेषणसमुच्चयेऽपिशब्दः । तेन विशिष्टस्यैव ज्ञेयत्वलाभात्, 'विशिष्टं मन्दोपास्यं शुद्धं मुमुक्षुज्ञेयम्' इति प्रत्युक्तम् ।**

ನಾರಾಯಣನು ಆನಂದ, ಜ್ಞಾನ, ಕಾಂತಿ, ಬಲ, ಔದಾರ್ಯ, ವೀರ್ಯ ಮೊದಲಾದ ಸಕಲಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಚಿಂತೆ, ದುಃಖ, ಪುಣ್ಯಪಾಪಗಳ ಸಂಬಂಧ, ಜನನ, ಮರಣ, ಮೊದಲಾದ ಸಕಲದೋಷಗಳಿಂದ ರಹಿತನಾಗಿದ್ದಾನೆ. ಇಂತಹ ನಾರಾಯಣನನ್ನು ವೈರಾಗ್ಯ, ಭಕ್ತಿ, ಶ್ರವಣ, ಮನನ, ನಿದಿಧ್ಯಾಸನ ಇವುಗಳಿಂದ ಸಜ್ಜನರು ಅಪರೋಕ್ಷಜ್ಞಾನದಿಂದ ವಿಷಯೀಕರಿಸಲ್ಪಡಬೇಕು. ಆದ್ದರಿಂದಲೇ ಜ್ಞಾನವೆಂಬ ಉಪಾಯದಿಂದ ಸಜ್ಜನರಿಗೆ ಹೊಂದಲ್ಪಡುವವನಾದರೂ, ಹೀಗೆ ಹೇಳಿದ್ದರಿಂದ ವಿಶಿಷ್ಟನಾದ ಬ್ರಹ್ಮನೇ ಜ್ಞೇಯನಾಗಿದ್ದಾನೆಂದು ಸಿದ್ಧವಾಗುತ್ತದೆ. ಆದ್ದರಿಂದ ''ವಿಶಿಷ್ಟಬ್ರಹ್ಮನು ಅಜ್ಞಜನರಿಂದ ಉಪಾಸ್ಯನು. ಶುದ್ಧ(ನಿರ್ಗುಣ)ಬ್ರಹ್ಮನು ಪ್ರಾಜ್ಞರಿಂದ ಉಪಾಸ್ಯನು' ಎಂಬ ಅದ್ವೈತಮತವನ್ನು ನಿರಾಕರಿಸಿದಂತಾಯಿತು.

**'गुरूंश्च नत्वा' इति गुरुदेवताननतिसमुच्चये 'च'शब्दः । यद्वा टीकारीत्या गुरुदेवताभेदे अरुचिसूचकः 'अपि'शब्दः । गुरुत्वाद्बहुवचनम् । उक्तं च गीताभाष्य-व्याख्याने 'बहुवचनं गौरवादेव' इति । ''तमेव शास्त्रप्रभवम् इत्यादिभिर्बहुभिः प्रकारैर्यद्गुरुत्वोपपादनं तेन गुरूंश्चेति बहुवचनान्तं पदं विवृतम्'' इति सुधाशयं वा । सूत्रार्थो ब्रह्मसूत्रार्थः ।**

'ಗುರೂಂಶ್ಚ ನತ್ವಾ' ಎಂಬಲ್ಲಿರುವ 'ಚ'ಕಾರವು ದೇವತೆ ಹಾಗೂ ಗುರು ಇಬ್ಬರ ನಮಸ್ಕಾರದ ಸಮುಚ್ಚಯವನ್ನು ಸೂಚಿಸುತ್ತಿದೆ. ಅಥವಾ, ತತ್ತ್ವಪ್ರಕಾಶಿಕಾದಲ್ಲಿ ಹೇಳಿದಂತೆ ಶ್ರೀಮದಾಚಾರ್ಯರಿಗೆ ಗುರು ಹಾಗೂ ದೇವತೆಗಳಲ್ಲಿರುವ ಭೇದದಲ್ಲಿ ಅರುಚಿಯನ್ನು 'ಅಪಿ'ಶಬ್ದವು ಸೂಚಿಸುತ್ತಿದೆ. ಗುರುಗಳಲ್ಲಿರುವ ಗೌರವಸೂಚಕವಾದ್ದರಿಂದ 'ಗುರೂನ್' ಎಂಬ ಬಹುವಚನ ಪ್ರಯೋಗವಿದೆ. ಇದನ್ನೇ ಗೀತಾಭಾಷ್ಯದ ವ್ಯಾಖ್ಯಾನದಲ್ಲಿ 'ಬಹುವಚನಂ ಗೌರವಾದೇವ' (ಗೌರವಕ್ಕೋಸ್ಕರವೇ ಬಹುವಚನವು) ಎಂದು ಹೇಳಲ್ಪಟ್ಟಿದೆ. ಮತ್ತು '' 'ತಮೇವ ಶಾಸ್ತ್ರಪ್ರಭವಮ್' ಇತ್ಯಾದಿ ಅನುವ್ಯಾಖ್ಯಾನಶ್ಲೋಕದಲ್ಲಿ ಅನೇಕ ಪ್ರಕಾರದಿಂದ ಗುರುತ್ವವನ್ನು ಪ್ರತಿಪಾದಿಸಿದ್ದಾರೆ. ಅದೆಲ್ಲವೂ 'ಗುರೂನ್' ಎಂಬ ಬಹುವಚನ ಪ್ರಯೋಗದ ವ್ಯಾಖ್ಯಾನವೇ ಆಗಿದೆ'' ಎಂದು ವ್ಯಾಖ್ಯಾನಿಸುವ ನ್ಯಾಯಸುಧೆಯನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. 'ಸೂತ್ರಾರ್ಥಃ' ಎಂದರೆ 'ಬ್ರಹ್ಮಸೂತ್ರಗಳ ಅರ್ಥವು' ಎಂದರ್ಥ.

**अत्र 'नारायणम्' इत्युक्त्यैव आनन्दचिदात्मकदेहमिति लाभात् देहसत्वे 'दोषवर्जितम्' इत्ययुक्तम्, तदसत्वे ज्ञानादिगुणोदीर्णता न युक्तेति निरस्तम् ।**

*ಪರಿಪೂರ್ಣಚಂದ್ರಿಕಾ*

'देहोऽयं मे सदानन्दो नैव प्रकृतिनिर्मितः ।
परिपूर्णश्च सर्वत्र तेन नारायणोऽस्म्यहम् ।।'

**इति द्वितीयाध्यायगीताभाष्योक्तब्रह्मवैवर्तस्मृतेः 'गुणैरुदीर्णम्' इत्यस्य गुणोदीर्णदेहमित्यर्थः । यद्वा 'आह च तन्मात्रम्' (ब्र.सू. ३/२/१६) इत्यत्र वक्ष्यमाणदिशा तस्य गुणोदीर्णतोक्त्यैव तदभिन्नदेहस्यापि लाभः । अधिकं तु टीकायां बोध्यम् ।**

ಮಂಗಳಶ್ಲೋಕದಲ್ಲಿ 'ನಾರಾಯಣಂ' ಎಂದಿದ್ದಾರೆ. ಹೀಗೆ ಹೇಳಿದ್ದರಿಂದಲೇ 'ಚಿದಾನಂದಾದ್ಯಾತ್ಮಕ ದೇಹವುಳ್ಳವನು' ಎಂಬರ್ಥವು ತಿಳಿಯುತ್ತದೆ. ಇದರಿಂದ 'ಭಗವಂತನಿಗೆ ದೇಹವಿದ್ದಲ್ಲಿ ದೋಷವು ಇರಬೇಕಾದೀತು; ದೇಹವಿಲ್ಲದಿದ್ದರೆ ಗುಣಗಳು ಇರಲು ಸಾಧ್ಯವಿಲ್ಲ' ಎಂಬ ಆಕ್ಷೇಪವನ್ನು ನಿರಾಕರಿಸಿ-ದಂತಾಯಿತು.

'ದೇಹೋಽಯಂ ಮೇ ಸದಾನಂದೋ ನೈವ ಪ್ರಕೃತಿನಿರ್ಮಿತಃ ।
ಪರಿಪೂರ್ಣಶ್ಚ ಸರ್ವತ್ರ ತೇನ ನಾರಾಯಣೋಽಸ್ಮ್ಯಹಮ್ ।।'

"ನನ್ನ ಶರೀರವು ನಿತ್ಯವಾಗಿ ಆನಂದಸ್ವರೂಪವಾಗಿದೆ; ಪ್ರಕೃತಿಯಿಂದ ನಿರ್ಮಿತವಾಗಿಲ್ಲ; ಸದಾ ಗುಣಪರಿಪೂರ್ಣವಾಗಿದೆ; ಆದ್ದರಿಂದಲೇ ನಾನು 'ನಾರಾಯಣ'ನಾಗಿದ್ದೇನೆ" ಎಂಬ ದ್ವಿತೀಯಾಧ್ಯಾಯದ ಗೀತಾಭಾಷ್ಯದಲ್ಲಿ ಉದಾಹರಿಸಿದ ಬ್ರಹ್ಮವೈವರ್ತದ ವಚನದಿಂದ "ಗುಣೈರುದೀರ್ಣಂ" ಎಂಬುದಕ್ಕೆ ಗುಣಗಳಿಂದ ತುಂಬಿದ ದೇಹವುಳ್ಳವನು ಎಂದು ಅರ್ಥೈಸಬೇಕು. ಅಥವಾ 'ಆಹಂ ಚ ತನ್ಮಾತ್ರಮ್' ಎಂಬ ಬ್ರಹ್ಮಸೂತ್ರದಲ್ಲಿ ಮುಂದೆ ಹೇಳುವಂತೆ ಗುಣೋದೀರ್ಣಶಬ್ದದಿಂದಲೇ ಗುಣಗಳಿಗಿಂತ ಅಭಿನ್ನವಾದ ದೇಹವುಳ್ಳವನೆಂಬ ಅರ್ಥವು ದೊರೆಯುತ್ತದೆ. ಹೆಚ್ಚಿನ ವಿಚಾರವನ್ನು ತತ್ತ್ವಪ್ರಕಾಶಿಕಾದಿಂದ ತಿಳಿಯಬೇಕು.

**ननु 'जीवचैतन्यादन्यस्य ब्रह्मणो मानाभावेनाभावात्, तस्य च अहंधीसिद्धत्वेन अविषयत्वात् सत्यपि ज्ञाने मुक्त्यदृष्ट्या फलाभावात् तत एवाधिकार्याद्यभावाच्च 'तद्विजिज्ञासस्व' इत्युक्तिरयुक्ता' इत्याशङ्कायां प्राप्तायाम् – ओं अथातो ब्रह्मजिज्ञासेति ।।**

ಜೀವನಿಗಿಂತ ಭಿನ್ನನಾದ ಬ್ರಹ್ಮನ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಅಂತಹ ಬ್ರಹ್ಮನಾದರೂ ಅಹಂ ಎಂಬ ಅನುಭವದಿಂದ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಜಿಜ್ಞಾಸೆಗೆ ವಿಷಯನಾಗಲಾರ. ಮತ್ತು ಇಂತಹ ಬ್ರಹ್ಮನ ಜ್ಞಾನ ಬಂದಿದ್ದರೂ ಮೋಕ್ಷವು ದೊರೆಯುತ್ತಿಲ್ಲ. ಆದ್ದರಿಂದ ಪ್ರಯೋಜನವಿಲ್ಲ. ಹೀಗೆ ಶಾಸ್ತ್ರಕ್ಕೆ ವಿಷಯ ಪ್ರಯೋಜನಗಳಿಲ್ಲದ ಕಾರಣ ಅಧಿಕಾರ ಮತ್ತು ಸಂಬಂಧಗಳು ಇರಲು ಸಾಧ್ಯವಿಲ್ಲ. ಆದ್ದರಿಂದ ತದ್‌ವಿಜಿಜ್ಞಾಸಸ್ವ ಎಂಬ ಶ್ರುತಿಗೆ ಅರ್ಥವೇ ಇಲ್ಲ. ಈ ಆಶಂಕೆಯನ್ನು ಪರಿಹರಿಸಲು ಪ್ರಥಮ ಸೂತ್ರವು ಹೊರಟಿದೆ- ಓಂ ಅಥಾತೋಬ್ರಹ್ಮಜಿಜ್ಞಾಸಾ ಎಂದು.

*ಪರಿಪೂರ್ಣಚಂದ್ರಿಕಾ*

*ಸೂತ್ರವ್ಯಾಖ್ಯಾನ*

**तद्व्याचष्टे – विष्णुरेव विजिज्ञास्य इति ।। विष्णुरेव देशकालगुणापरिच्छेद-रूपव्याप्तिमान् विष्ण्वाख्यो भगवानेव विजिज्ञास्यः । अथातःपदोक्ताभ्यां अधिकारिफलाभ्यां विशिष्टया श्रवणमननध्यानरूपजिज्ञासया विषयीकर्तव्यः । तद्विषया सा कार्या इति यावत् । न जीवः । येन 'तद्विजिज्ञासस्व' इत्युक्तिरयुक्ता स्यात् ।**

ಈ ಸೂತ್ರವನ್ನು ಶ್ರೀಮದಾಚಾರ್ಯರು ವಿಷ್ಣುರೇವ ವಿಜಿಜ್ಞಾಸ್ಯಃ ಎಂದು ವ್ಯಾಖ್ಯಾನಿಸುತ್ತಿದ್ದಾರೆ. ವಿಷ್ಣುರೇವ= ದೇಶ, ಕಾಲ, ಗುಣಗಳಿಂದ ಪರಿಮಿತಿ ಇಲ್ಲದ ವಿಷ್ಣುವೆಂಬ ಭಗವಂತನೇ, ವಿಜಿಜ್ಞಾಸ್ಯಃ= ಅಥ ಮತ್ತು ಅತಃ ಪದಗಳಿಂದ ಹೇಳಲ್ಪಟ್ಟ ಅಧಿಕಾರ ಮತ್ತು ಫಲಗಳಿಂದ ವಿಶಿಷ್ಟವಾದ ಶ್ರವಣ ಮನನ, ನಿದಿಧ್ಯಾಸನ ರೂಪವಾದ ಜಿಜ್ಞಾಸೆಯಿಂದ ವಿಷಯೀಕರಿಸಬೇಕು. ವಿಷ್ಣುವಿಷಯಕವಾದ ಜಿಜ್ಞಾಸೆಯನ್ನು ಮಾಡಬೇಕೆಂದಂತಾಯಿತು. ಹೊರತು ಜೀವನ ಜಿಜ್ಞಾಸೆಯನ್ನಲ್ಲ. ಹಾಗದಲ್ಲಿ ತದ್‌ವಿಜಿಜ್ಞಾಸಸ್ವ ಎಂಬ ಶ್ರುತಿಯು ತಪ್ಪಾಗುತ್ತಿತ್ತು.

**'विष्लृ व्याप्तौ' 'बृहवृद्धौ' इत्यवयवशक्त्या विष्णुब्रह्मशब्दयोरेकार्थत्वेन श्रौतब्रह्मपदेन तादृशार्थस्य प्रतीतेः । 'स विष्णुराह हि' 'तं ब्रह्मेत्याचक्षते' इत्युक्तेश्च । तस्य चानेवंरूपजीवाद्भिन्नस्य अहंबुद्ध्या असिद्धत्वेन अगुणसगुणत्वादिना विमतस्य विषयत्वसम्भवेन, तज्ज्ञानात् मुक्तिरूपफलस्य, तत्कामिनोऽधिकारिणश्च सम्भवात् तद्विजिज्ञासस्व इत्युक्तिर्युक्ता इति भावः ।**

ಬ್ರಹ್ಮಶಬ್ದದ ಅರ್ಥ ವಿಷ್ಣುವೇ ಆಗಿದ್ದಾನೆ.

ವಿಷ್ಣುವೆಂಬ ಶಬ್ದವು ವಿಷ್‌ಲೃ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇದರರ್ಥ ವ್ಯಾಪ್ತಿ. ಬೃಹವೆಂಬ ಧಾತುವಿನಿಂದ ಬ್ರಹ್ಮ ಶಬ್ದವು ನಿಷ್ಪನ್ನವಾಗಿದೆ. ಇದರರ್ಥ ವೃದ್ಧಿ ಎಂದು. ಹೀಗೆ ಅವಯವಶಕ್ತಿಯಿಂದ ಎರಡೂ ಶಬ್ದಗಳೂ ಒಂದೇ ಅರ್ಥವನ್ನು ಹೇಳುತ್ತಿವೆ. ಆದ್ದರಿಂದ ತದ್‌ಬ್ರಹ್ಮ ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದಕ್ಕೆ ವಿಷ್ಣುವೆಂಬರ್ಥವು ಸಿದ್ಧವಾಯಿತು.

"ಸ ವಿಷ್ಣುರಾಹ ಹಿ ,ತಂ ಬ್ರಹ್ಮೇತ್ಯಾಚಕ್ಷತೇ" ಎಂಬೆರಡು ದೇವತಾಕಾಂಡದ ಸೂತ್ರಗಳಿಂದಲೂ ವಿಷ್ಣುವೇ ಬ್ರಹ್ಮಶಬ್ದಾರ್ಥವೆಂದು ತಿಳಿಯುತ್ತದೆ. ಅಂತಹ ವಿಷ್ಣುವು ಜೀವನಿಂಗಿತ ಭಿನ್ನನಾದ್ದರಿಂದ ಅಹಂ ಎಂಬ ಅನುಭವಕ್ಕೆ ವಿಷಯನಾಗಿಲ್ಲ. ಮತ್ತು ಸಗುಣನೋ? ನಿರ್ಗುಣನೋ? ಎಂಬ ವಿವಾದಕ್ಕೆ ವಿಷಯನಾಗಿದ್ದಾನೆ. ಆದ್ದರಿಂದ ಜಿಜ್ಞಾಸೆಗೂ ವಿಷಯನಾಗಿದ್ದಾನೆ. ಇವನ ಜ್ಞಾನದಿಂದ ಮೋಕ್ಷವೆಂಬ ಫಲವು ದೊರೆಯುತ್ತದೆ. ಆ ಮೋಕ್ಷವನ್ನು ಅಪೇಕ್ಷಿಸುವವರೇ ಅಧಿಕಾರಿಗಳು. ಆದ್ದರಿಂದ ತದ್‌ವಿಜಿಜ್ಞಾಸಸ್ವ ಎಂಬ ಶ್ರುತಿಯಲ್ಲಿ ಹೇಳಿದ್ದು ಸಮಂಜಸವಾಗಿದೆ.

*ಪರಿಪೂರ್ಣಚಂದ್ರಿಕಾ*

यथासूत्रं विष्णोर्जिज्ञासा कर्तव्या इति वाच्येप्येवमुक्तिरग्रे अनुषङ्गार्थं विष्णुरित्यवश्यं वाच्ये सति तदनुरोधेन वा, 'तद्विजिज्ञासस्व' 'आत्मानं पश्येत्' 'तमेवैकं जानथ' इत्येवमादितिङन्तमेवात्र नोदाहरणीयं किन्तु 'स विजिज्ञासितव्यः' 'नारायणोऽसौ परमो विचिन्त्यः' 'नारायणं महाज्ञेयम्' 'आत्मा वा अरे द्रष्टव्यः श्रोतव्यो मन्तव्यो निदिध्यासितव्यः' इत्याद्यपीति वा, विधेयजिज्ञासाविषयत्वेन ब्रह्मणो प्राधान्यप्राप्तौ उद्देश्यज्ञानविशेषणत्वेन प्राधान्यमस्तीति वा, 'ब्रह्मजिज्ञासा' इत्यत्र कर्मणि षष्ठ्यासमासो न शेषषष्ठ्यादिनेति वा सूचयितुम् ।

सूत्रे 'जिज्ञासा' इत्युक्तावपि 'वि'इत्युक्तिः श्रुत्यनुगमाय वा, अध्ययनशमदमादिसम्पत्तिरूपाधिकारजिज्ञासोत्थज्ञानजप्रसादजन्यमुक्तिरूपफलाभ्याम् 'अथातः' शब्दोक्ताभ्यां जिज्ञासाया वैशिष्ट्यमस्तीति सूचनाय वेति ज्ञातव्यम् । विष्णुरिति ब्रह्मपदव्याख्यानेन जीवान्यविषयसिद्ध्यैव तज्ज्ञानस्य मुक्ताख्यफलस्य च तद्योग्यस्याधिकारिणः सिद्धावपि फलस्य कर्मजत्वादिना जिज्ञासाफलत्वाप्राप्त्या शूद्रादिव्यावृत्ताधिकारस्याप्राप्त्या च तदुभयप्रापकाथातःशब्दार्थयोरप्यवश्यं वाच्यत्वात् हीत्यनेन तदुक्तिः । तेन सूत्रस्य श्रुतिविसंवादः प्रत्युक्तः ।

'विजिज्ञास्यो विष्णुः' इत्यनुक्त्वा एवमुक्तिः 'अदेङ्गुण' इत्यादाविव सति धर्मिणि (धर्मचिन्ता) धर्माश्चिन्त्या इति वा, 'वृद्धिरादैच्' इत्यत्रैव मङ्गलार्थं वा । आद्याध्यायद्वये विष्ण्वाख्यविषयस्य उत्तरद्वये विजिज्ञासायाः तत्रापि तृतीयाद्यद्विपाद्यां विशब्दोक्ताधिकारस्य 'चिन्ता' इति वक्ष्यमाणचिन्ताक्रमसूचनाय वा इति ध्येयम् । सूत्रे तु 'स्मार्तेन शब्दतोऽर्थतश्चाधिक्येन प्राधान्यद्योतनायाथातःशब्दयोरेव पूर्वं निर्देशः' इति भावः ।

अत्र प्राधान्येन 'विष्णुरेव जिज्ञासितव्यः' इत्यर्थस्याभिमतत्वात् 'न अङ्गावबद्धास्तु न शाखासु हि प्रतिवेदम्' (३/३/५७) इत्यनेन विरोधः शङ्क्यः । 'परिवारतया ग्राह्या अपि हेयाः प्रधानतः' इत्यनुभाष्योक्तेः ।

'सर्ववर्णाश्रमैर्विष्णुरेक एवेज्यते सदा ।
रमाब्रह्मादयस्तस्य परिवारतयैव तु ।।' इत्यन्यत्रोक्तेश्च ।।१।।

ಪಂಪೂರ್ಣಚಂದ್ರಿಕಾ

ಶ್ರೀಮದಾಚಾರ್ಯರು ವಿಷ್ಣುರೇವ ವಿಜಿಜ್ಞಾಸ್ಯಃ ಎಂದು ಹೇಳಿದ್ದಾರೆ ಆದರೆ ಸೂತ್ರಕ್ಕೆ ಅನುಗುಣವಾಗಿ ವಿಷ್ಣೋಃ ಜಿಜ್ಞಾಸಾ ಕರ್ತವ್ಯಾ ಎಂದು ಹೇಳಬೇಕಾಗಿತ್ತು. ಆದರೆ ಮುಂದಿನ ಸೂತ್ರಗಳಲ್ಲಿ ಅನುವೃತ್ತಿಯನ್ನು ಮಾಡಿಕೊಳ್ಳಬೇಕಾದರೆ. ವಿಷ್ಣುಃ ಎಂದು ಪ್ರಥಮಾಂತವಾಗಿ ಹೇಳುವುದು ಅನಿವಾರ್ಯವಾಗಿದೆ. ಆದನ್ನು ಅನುಸರಿಸಿ ವಿಜಿಜ್ಞಾಸ್ಯಃ ಎಂದು ಹೇಳಿದ್ದಾರೆ.

ವಿಜಿಜ್ಞಾಸ್ಯಃ ಎಂದು ಹೇಳಲು -ಮತ್ತೊಂದು ಕಾರಣ- ತದ್‌ವಿಜಿಜ್ಞಾಸಸ್ವ, ಆತ್ಮಾನಂ ಪಶ್ಯೇತ್, ತಮೇವೈಕಂ ಜಾನಥ, ಇತ್ಯಾದಿ ತಿಙಂತವಾದ ಶ್ರುತಿಗಳನ್ನಷ್ಟೇ ಇಲ್ಲಿ ವಿವರಿಸಬಾರದು. ಹೊರತಾಗಿ ಸವಿಜಿಜ್ಞಾಸಿತವ್ಯಃ'' ''ನಾರಾಯಣೋಸೌ ಪರಮಂ ವಿಚಿಂತ್ಯಃ'' ''ನಾರಾಯಣಂ ಮಹಾಜ್ಞೇಯಮ್'' ''ಆತ್ಮಾ ವಾ ಅರೇ ದ್ರಷ್ಟವ್ಯಃ, ಮಂತವ್ಯಃ, ನಿದಿಧ್ಯಾಸಿತವ್ಯಃ ಇತ್ಯಾದಿ ಕೃದಂತಶ್ರುತಿಗಳನ್ನು ವಿಷಯವಾಕ್ಯಗಳನ್ನಾಗಿ ವಿವಕ್ಷಿಸಬೇಕು. ಇದನ್ನು ಸೂಚಿಸಲು ಜಿಜ್ಞಾಸಾ ಪದವನ್ನು ಹೇಳದೆ ವಿಜಿಜ್ಞಾಸ್ಯಃ ಎಂಬ ಪದವನ್ನು ಹೇಳಿದ್ದಾರೆ.

''ಬ್ರಹ್ಮವೆಂಬುದು ವಿಧೇಯದಲ್ಲಿ ವಿಶೇಷಣಮಾಡಿದಾಗ ಅಪ್ರಧಾನವಾಗಬೇಕಾದೀತು; ಉದ್ದೇಶ-ವಾದ ಜ್ಞಾನದಲ್ಲಿ ವಿಶೇಷಣಮಾಡಿದಾಗ ಪ್ರಧಾನವಾಗುತ್ತದೆ. ಇದನ್ನು ತೋರಿಸಲು ಜಿಜ್ಞಾಸಾ ಎಂಬ ಪದವನ್ನು ಪ್ರಯೋಗಿಸದೆ ವಿಜಿಜ್ಞಾಸ್ಯವೆಂಬ ಪದವನ್ನು ಪ್ರಯೋಗಿಸಿದ್ದಾರೆ.

ಅಥವಾ ಬ್ರಹ್ಮಜಿಜ್ಞಾಸಾ ಎಂಬ ಪದವನ್ನು ವಿಗ್ರಹ ಮಾಡಿದಾಗ ಬ್ರಹ್ಮಣಃ ಜಿಜ್ಞಾಸಾ ಎಂದಾಗುತ್ತದೆ ಇಲ್ಲಿ ಬ್ರಹ್ಮಣಃ ಎಂಬಲ್ಲಿರುವ ಷಷ್ಠಿಯು ಕರ್ಮಣಿಷಷ್ಠೀ ಹೊರತು ಶೇಷಷಷ್ಠಿಯಲ್ಲ. ಇದನ್ನು ಸೂಚಿಸಲು ವಿಜಿಜ್ಞಾಸ್ಯವೆಂಬ ಪದವನ್ನು ಪ್ರಯೋಗಿಸಿದ್ದಾರೆ.

ಶ್ರುತಿಯಲ್ಲಿ ವಿಜಿಜ್ಞಾಸಸ್ವ ಎಂದು ವಿ ಉಪಸರ್ಗವಿರುವುದರಿಂದ ಅದರ ಅನುಗಮಕ್ಕೋಸ್ಕರ ಅಣುಭಾಷ್ಯದಲ್ಲಿಯೂ ವಿ ಉಪಸರ್ಗವನ್ನು ಪ್ರಯೋಗಿಸಿದ್ದಾರೆ.

ಅಥವಾ ಅಥ ಶಬ್ದದ ಅರ್ಥವಾದ ಅಧ್ಯಯನ ಶಮ ದಮ ಮೊದಲಾದ ಅಧಿಕಾರ ರೂಪವಾದ ಸಂಪತ್ತು ಮತ್ತು ಅತಃ ಎಂಬ ಪದದ ಅರ್ಥವಾದ ಜಿಜ್ಞಾಸೆಯಿಂದ ಉಂಟಾದ ಜ್ಞಾನದಿಂದ ಪಡೆಯಲ್ಪಟ್ಟ ಭಗವಂತನ ಪ್ರಸಾದದಿಂದ ಪಡೆಯಲ್ಪಟ್ಟ ಮುಕ್ತಿಯೆಂಬ ಫಲ. ಇವುಗಳಿಂದ ಜಿಜ್ಞಾಸೆಯು ವಿಶಿಷ್ಟವಾಗಿದೆ. ಎಂಬುದನ್ನು ಸೂಚಿಸಲು ವಿ ಉಪಸರ್ಗವನ್ನು ಹೇಳಿದ್ದಾರೆ.

ಅಥವಾ ಬ್ರಹ್ಮಪದದ ಅರ್ಥವನ್ನೇ ವಿಷ್ಣುವೆಂದು ಹೇಳಿದ್ದರಿಂದ ಜೀವಭಿನ್ನನಾದ ವಿಷ್ಣು ಜಿಜ್ಞಾಸೆಗೆ ವಿಷಯನಾಗಿದ್ದಾನೆಂದು ಸಿದ್ಧವಾಗುತ್ತದೆ. ವಿಷ್ಣುವಿನ ಜ್ಞಾನದಿಂದ ಮೋಕ್ಷವೆಂಬ ಫಲವು ಅದಕ್ಕೆ ಯೋಗ್ಯರಾದವರೇ ಅಧಿಕಾರಿಗಳಾಗುತ್ತಾರೆಂದು ನಿರ್ಣಯವಾಗುತ್ತದೆ. ಹೀಗಿದ್ದರೂ ಕರ್ಮದಿಂದಲೂ ಮೋಕ್ಷವು ದೊರೆಯಬಹುದು. ಶುದ್ರಾದಿಗಳೂ ಅಧಿಕಾರಿಗಳಾಗಬಹುದು ಎಂಬ ಸಂದೇಹಕ್ಕೆ ಅವಕಾಶ ವಿರುವುದರಿಂದ ಅದನ್ನು ಪರಿಹರಿಸುವ ಅಥ ಮತ್ತು ಅತಃ ಶಬ್ದಗಳ ಅರ್ಥವನ್ನು ಅಣುಭಾಷ್ಯದಲ್ಲಿ ಅವಶ್ಯವಾಗಿ ಹೇಳಬೇಕು. ಆ ಅಥ ಅತಃ ಶಬ್ದಗಳ ಅರ್ಥವನ್ನೆ ವಿ ಎಂಬ ಉಪಸರ್ಗ ಹೇಳುತ್ತಿದೆ. ಹೀಗೆ ಹೇಳಿದ್ದರಿಂದ ಸೂತ್ರವು ಶ್ರುತಿಗೆ ಅನುಸಾರಿಯಾಗಿಲ್ಲವೆಂಬ ಆಕ್ಷೇಪವನ್ನು ಪರಿಹರಿಸಿದಂತಾಯಿತು.

*ಪರಿಪೂರ್ಣಚಂದ್ರಿಕಾ*

॥श्रीः ॥

श्रीराघवेन्द्रतीर्थविरचिता

# तन्त्रदीपिका

प्रणम्य गुणसम्पूर्णं दोषातीतं रमापतिम् ।
पूर्णबोधं गुरूनन्यान् कुर्मः सूत्रार्थसङ्ग्रहम् ॥ १ ॥

ಪರಿಪೂರ್ಣನಾದ, ಸಕಲದೋಷವಿದೂರನಾದ ಲಕ್ಷ್ಮೀಪತಿಯನ್ನು ಮತ್ತು ಪೂರ್ಣಪ್ರಜ್ಞರನ್ನು ಇತರ ಗುರುಗಳನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳ ಅರ್ಥವನ್ನು ಸಂಗ್ರಹಿಸುತ್ತೇವೆ.

गुरुपादकृतोऽप्यस्ति सङ्ग्रहो हृदयङ्गमः ।
प्रस्थानभेदप्रोक्तार्थसङ्ग्रहोऽथाप्ययं मम ॥ २ ॥

ಗುರುಗಳಾದ ಶ್ರೀವಿಜಯೀಂದ್ರತೀರ್ಥರು ಮನೋಹರವಾದ ಸೂತ್ರಾರ್ಥಸಂಗ್ರಹವನ್ನು ಈಗಾಗಲೇ ಮಾಡಿದ್ದಾರೆ. ಆದರೂ ಬೇರೆ ಪ್ರಸ್ಥಾನಗಳಲ್ಲಿ ಹೇಳಲ್ಪಟ್ಟ ಅರ್ಥಗಳನ್ನು ಸಂಗ್ರಹಿಸುವುದಕ್ಕಾಗಿ ನನ್ನ ಪ್ರಯತ್ನ.

ब्रह्मरुद्रादिभिः ज्ञानार्थं अर्थितो नारायणः व्यासत्वेन अवतीर्य उत्सन्नान् वेदान् अभिव्यक्तिपूर्वकं अनेकधा विभज्य तदर्थनिर्णयाय ब्रह्मसूत्राणि व्यातेने ॥

तत्रेदमादिमं सूत्रम् –

॥ ॐ अथातो ब्रह्मजिज्ञासा ॐ ॥ १-१-१

ತತ್ವಜ್ಞಾನಕ್ಕೋಸ್ಕರ ಚತುರ್ಮುಖಬ್ರಹ್ಮರುದ್ರಾದಿಗಳಿಂದ ಪ್ರಾರ್ಥಿಸಲ್ಪಟ್ಟ ನಾರಾಯಣನು ವೇದವ್ಯಾಸರೂಪದಿಂದ ಅವತರಿಸಿದನು. ಅಪಪಾಠಾದಿಗಳಿಂದ ತಿರೋಹಿತವಾದ ವೇದಗಳನ್ನು ಅಭಿವ್ಯಕ್ತಿಗೊಳಿಸುವ ಮೂಲಕ ಅನೇಕ ಬಗೆಯಲ್ಲಿ ವಿಭಾಗಿಸಿದನು. ಆ ವೇದಗಳ ಅರ್ಥನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ರಚಿಸಿದನು.

ಆ ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂದು.

अत्र नये चतुरध्यायात्मकैतच्छास्त्रस्य आरम्भणीयत्वोपयुक्ततया जिज्ञासाकर्तव्यत्वं समर्थ्यते । अत्र आद्यन्तयोः ओङ्कारः ''स्रवत्यनोङ्कृतं ब्रह्म परस्ताच्च विशीर्यते'' इति श्रुतिसिद्धः । आद्यः दृष्टादृष्टार्थः । अत एव एतत्सूत्रावयवत्वात् सर्वसूत्रेषु

अनुषङ्गः न स्यात् इति सर्वसूत्रेषु अदृष्टमात्रार्थतयाऽऽदौ अनुषङ्गायासंहिततया पठ्यते । अन्त्यः अदृष्टमात्रार्थः । न सूत्रावयवः । अन्वयप्रतियोग्यसमर्पक इति यावत् ।

ಈ ಜಿಜ್ಞಾಸಾಧಿಕರಣದಲ್ಲಿ ನಾಲ್ಕುಅಧ್ಯಾಯಗಳನ್ನೊಳಗೊಂಡ ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭಣೀಯತ್ವಕ್ಕೆ ಉಪಯುಕ್ತವಾಗುವ ಬ್ರಹ್ಮಜಿಜ್ಞಾಸೆಯ ಕರ್ತವ್ಯತ್ವವನ್ನು ಸಮರ್ಥಿಸಲಾಗಿದೆ.

ಪ್ರಥಮ ಸೂತ್ರದ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಮೊದಲನೆಯ ಓಂಕಾರಕ್ಕೆ ದೃಷ್ಟ ಹಾಗೂ ಅದೃಷ್ಟವೆಂಬ ಎರಡು ಬಗೆಯ ಪ್ರಯೋಜನವಿದೆ. ದೃಷ್ಟಪ್ರಯೋಜನವಿರುವುದರಿಂದ ಪ್ರಥಮಸೂತ್ರದ ಅವಯವವಾದ ಓಂಕಾರವು ಮುಂದಿನ ಎಲ್ಲ ಸೂತ್ರಗಳಲ್ಲಿಯೂ ಅನುವೃತ್ತಿಯನ್ನು ಹೊಂದುವುದಿಲ್ಲವೆಂಬ ಕಾರಣದಿಂದ ಪ್ರತಿಯೊಂದು ಸೂತ್ರಗಳಲ್ಲಿಯೂ ಕೇವಲ ಅದೃಷ್ಟಪ್ರಯೋಜನಕ್ಕಾಗಿ ಓಂಕಾರದ ಅನುವೃತ್ತಿಯನ್ನು ಮಾಡಿಕೊಳ್ಳಬೇಕೆಂದು ಸೂಚಿಸಲು ಸೂತ್ರದಲ್ಲಿ ಅಥಶಬ್ದದ ಜೊತೆಗೆ ಸೇರಿಸದೆ ಪ್ರತ್ಯೇಕವಾಗಿ ಉಚ್ಚರಿಸಿದ್ದಾರೆ. ಆದರೆ ಕೊನೆಯ ಓಂಕಾರಕ್ಕೆ ಅದೃಷ್ಟಪ್ರಯೋಜನವಷ್ಟೇ ಇದೆ. ಅದು ಸೂತ್ರದ ಅವಯವವಲ್ಲ. ಅಂದರೆ ಸೂತ್ರದಲ್ಲಿರುವ ಪದಾರ್ಥಗಳ ಜೊತೆಗೆ ಅನ್ವಯವನ್ನು ಹೊಂದಿಲ್ಲ ಎಂದರ್ಥ.

ओङ्काराथशब्दौ मङ्गलफलकौ क्रमात् गुणपूर्त्यानन्तर्यवाचकौ । ओमित्येतत् योग्यतया जिज्ञासागुणभूतब्रह्मविशेषणम् । अथेति योग्यतया अधिकारात् इत्यन्वेति । अत इति ''यस्य प्रसादात्'' इत्यादिनिर्णेयश्रुत्यादिस्थं फलादि परामृश्यते । ब्रह्मशब्दः गुणपूर्त्यर्थः सन् चिदचिद्विलक्षणविष्णुवाची । ''स विष्णुराह हि' 'तं ब्रह्मेत्याचक्षते'' इत्युक्तेः । ब्रह्मणो जिज्ञासा इति कर्मणि षष्ठ्या समासः ।

ಓಂಕಾರ ಮತ್ತು ಅಥಶಬ್ದಗಳು ಮಂಗಲವೆಂಬ ಪ್ರಯೋಜನವುಳ್ಳವುಗಳು. ಮತ್ತು ಕ್ರಮವಾಗಿ ಗುಣಪೂರ್ಣತ್ವ ಮತ್ತು ಆನಂತರ್ಯವೆಂಬ ಅರ್ಥವುಳ್ಳವುಗಳು. 'ಓಂ' ಎಂಬ ಪದಕ್ಕೆ ಗುಣಪೂರ್ಣತ್ವ ಎಂದರ್ಥ. ಇದು ಜಿಜ್ಞಾಸಾವಿಷಯನಾದ ಸಮಾಸದಲ್ಲಿ ಗುಣಭೂತನಾದ ಬ್ರಹ್ಮನಲ್ಲಿ ಅನ್ವಯ-ಯೋಗ್ಯತೆಯನ್ನು ಪಡೆದಿರುವ ಕಾರಣ ವಿಶೇಷಣವಾಗಿದೆ.

ಅಥ ಎಂಬ ಪದವು ಅಧಿಕಾರಾತ್ ಎಂಬಲ್ಲಿ ಅನ್ವಯಯೋಗ್ಯತೆಯನ್ನು ಪಡೆದಿರುವ ಕಾರಣ ವಿಶೇಷಣವಾಗಿದೆ.

ಅತ ಎಂಬ ಪದವು 'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್' ಇತ್ಯಾದಿ ನಿರ್ಣಯಿಸಲ್ಪಡುವ ಶ್ರುತಿಮೊದಲಾದವುಗಳಲ್ಲಿ ಹೇಳಲ್ಪಟ್ಟ ಮೋಕ್ಷರೂಪವಾದ ಫಲ ಮೊದಲಾದವುಗಳನ್ನು ಪರಾಮರ್ಶ-ಮಾಡುತ್ತದೆ.

ಪರಿಪೂರ್ಣಚಂದ್ರಿಕಾ

ಬ್ರಹ್ಮ ಎಂಬ ಪದವು ಗುಣಪೂರ್ಣತ್ವ ಎಂಬರ್ಥವನ್ನು ಹೇಳುವ ಮೂಲಕ ಚಿದಚಿದ್ವಿಲಕ್ಷಣನಾದ ವಿಷ್ಣುವನ್ನು ಪ್ರತಿಪಾದಿಸುತ್ತದೆ. 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬ ದೈವೀಮೀಮಾಂಸಾಸೂತ್ರವು ಬ್ರಹ್ಮಶಬ್ದಕ್ಕೆ ವಿಷ್ಣು ಎಂಬರ್ಥವನ್ನು ಸಮರ್ಥಿಸಿದೆ.

'ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ' ಎಂದು ಕರ್ಮಾರ್ಥವುಳ್ಳ ಷಷ್ಠೀವಿಭಕ್ತ್ಯಂತ ಪದದ ಜೊತೆಗೆ ಜಿಜ್ಞಾಸಾ ಪದವು ಸಮಾಸವನ್ನು ಹೊಂದಿದೆ.

**ततश्च, अथ अध्ययनशमदमादिरूपाधिकारसम्पत्त्यनन्तरम्, अतः अकारवाच्यात् प्रसन्नात् ब्रह्मणः ज्ञानोत्थप्रसादजमोक्षाख्यफलसत्त्वात्, बन्धस्य सत्यत्वात्, आगमस्य प्रामाण्यात्, सिद्धार्थप्रमापकत्वात् वा । ॐ ब्रह्मणो गुणपरिपूर्णस्य विष्णोः जिज्ञासा कर्तव्या इति शेषः । ब्रह्मज्ञानाय सर्ववेदविषयकश्रवणमनन-निदिध्यासनरूपा मननमात्ररूपा वा ''तद्विजिज्ञासस्व'' इत्यादिश्रुत्युक्ता कर्तव्या इत्यर्थः ।**

ಆದ್ದರಿಂದ ಸೂತ್ರಗಳಲ್ಲಿರುವ ಪದಗಳಿಗೆ ಹೀಗೆ ಅರ್ಥ - ಅಥ = ಅಧ್ಯಯನ ಶಮದಮ ಮೊದಲಾದ ಅಧಿಕಾರಿಸಂಪತ್ತನ್ನು ಪಡೆದ ನಂತರ; ಅತಃ = ೧. ಅಕಾರವಾಚ್ಯನಾದ ಪ್ರಸನ್ನನಾದ ಬ್ರಹ್ಮನಿಂದ ದೊರೆಯುವ ಅಪರೋಕ್ಷಜ್ಞಾನದಿಂದ ಹುಟ್ಟುವ ಪ್ರಸಾದಜನ್ಯವಾದ ಮೋಕ್ಷವೆಂಬ ಫಲವಿರುವುದರಿಂದ, ೨. ಬಂಧವು ಸತ್ಯವಾದ್ದರಿಂದ, ೩. ಆಗಮಗಳು ಪ್ರಮಾಣವಾದ್ದರಿಂದ, ೪. ಆಗಮಗಳಿಗೆ ಸಿದ್ಧವಿಷಯದಲ್ಲಿ ಯಥಾರ್ಥಜ್ಞಾನವನ್ನುಂಟುಮಾಡುವ ಸಾಮರ್ಥ್ಯವಿರುವುದರಿಂದ; ಓಂ = ಗುಣಪರಿಪೂರ್ಣನಾದ, ಬ್ರಹ್ಮಣಃ = ವಿಷ್ಣುವಿನ, ಜಿಜ್ಞಾಸಾ = ವಿಚಾರವು, ಕರ್ತವ್ಯಾ = ಮಾಡಲ್ಪಡಬೇಕು. ಇಲ್ಲಿ 'ಕರ್ತವ್ಯಾ' ಎಂಬ ಪದವನ್ನು ಸೇರಿಸಿಕೊಳ್ಳಬೇಕು.

''ಬ್ರಹ್ಮಜ್ಞಾನಕ್ಕೋಸ್ಕರ ಸಕಲವೇದವಿಷಯಕವಾದ ಶ್ರವಣ, ಮನನ, ನಿದಿಧ್ಯಾಸನರೂಪವಾದ ಅಥವಾ ಕೇವಲ ಮನನರೂಪವಾದ 'ತದ್ವಿಜಿಜ್ಞಾಸಸ್ವ' ಇತ್ಯಾದಿಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆ'' ಎಂದರ್ಥ.

**ॐब्रह्मशब्दयोः यौगिकत्वेपि एकस्य रूढत्वमाश्रित्य विशेषवाचित्वेन ''आत्मेति तूपगच्छन्ति'' इत्यत्रेवान्वयो बोध्यः ।**

ಓಂ ಹಾಗೂ ಬ್ರಹ್ಮ ಎಂಬ ಎರಡೂ ಶಬ್ದಗಳು ಯೌಗಿಕವಾಗಿವೆ. ಆದರೂ ಒಂದನ್ನು ರೂಢವೆಂದು ಪರಿಗಣಿಸಿ ವಿಶೇಷ್ಯವಾಚಕವೆನ್ನಬೇಕು. 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' ಎಂಬ ಸೂತ್ರದಲ್ಲಿ ಅನ್ವಯ ಮಾಡಿದಂತೆ ಇಲ್ಲಿಯೂ ತಿಳಿಯಬೇಕು.

**ब्रह्मशब्दात् विषयसिद्धावपि ओमित्युक्तिः न केवलं ब्रह्मशब्दात् विषयसिद्धिः**

''ओमित्येतदक्षरं उद्गीथं उपासीत'' इत्यादौ गुणपूर्णार्थोङ्कारादपि इति युक्त्यन्तरसूचनाय । ब्रह्मणि किं मानं इत्यतः वेदरूपप्रमाणसूचनाय च । ओङ्कारवाच्यस्य ब्रह्मणः इत्युक्त्या व्याहृतिगायत्रिपुरुषसूक्तद्वारा सर्ववेदानां तद्व्याख्यानत्वात् वेदा एव तत्र मानमिति सिद्धेरिति भावः । तेन ब्रह्मणः प्रमितत्वेऽनुग्राह्यप्रमाणाभावात् जिज्ञासा न कर्तव्या इति न शङ्क्यम् ।

ಬ್ರಹ್ಮಶಬ್ದದಿಂದಲೇ ಶಾಸ್ತ್ರ ವಿಷಯವು ಸಿದ್ಧವಾದ ಮೇಲೆ ಪುನಃ ಓಂಕಾರವೇಕೆ? ಎಂದು ಪ್ರಶ್ನಿಸಬಾರದು. ಬ್ರಹ್ಮಶಬ್ದದಿಂದ ವಿಷಯಸಿದ್ಧವಾದಂತೆ ಓಂಕಾರದಿಂದಲೂ 'ಓಮಿತ್ಯೇತದಕ್ಷರಂ ಉದ್ಗೀಥಮುಪಾಸೀತ' ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಗುಣಪೂರ್ಣವೆಂಬ ಅರ್ಥವಿರುವ ಓಂಕಾರಾದಿಗಳು ವಿಷಯವಾಗಿವೆ. ಈ ಯುಕ್ತ್ಯಂತರದ ಸೂಚನೆಗಾಗಿ ಓಂಕಾರವನ್ನು ಸೂತ್ರದಲ್ಲಿ ಸೇರಿಸಿದ್ದಾರೆ. ಮತ್ತು ಬ್ರಹ್ಮನ ವಿಷಯದಲ್ಲಿ ಪ್ರಮಾಣವೇನು? ಎಂಬ ಪ್ರಶ್ನೆಗೆ ವೇದಗಳೇ ಪ್ರಮಾಣವಾಗಿವೆ ಎಂದು ಸೂಚಿಸುವುದಕ್ಕಾಗಿಯೂ ಓಂಕಾರವನ್ನು ಸೂತ್ರದಲ್ಲಿ ಸೇರಿಸಿದ್ದಾರೆ. 'ಓಂಕಾರವಾಚ್ಯಸ್ಯ ಬ್ರಹ್ಮಣಃ' (ಓಂಕಾರವಾಚ್ಯನಾದ ಬ್ರಹ್ಮನ) ಎಂಬ ಮಾತಿನಂತೆ ವ್ಯಾಹೃತಿ ಗಾಯತ್ರೀ ಮತ್ತು ಪುರುಷಸೂಕ್ತಗಳ ಮೂಲಕ ಸಮಸ್ತವೇದಗಳು ಓಂಕಾರದ ವ್ಯಾಖ್ಯಾನಗಳಾಗಿವೆ. ಆದ್ದರಿಂದ ಬ್ರಹ್ಮನ ವಿಷಯದಲ್ಲಿ ವೇದಗಳೇ ಪ್ರಮಾಣಗಳೆಂದು ಸಿದ್ಧವಾಗುತ್ತವೆಂದು ಅಭಿಪ್ರಾಯ.

गुरुपादास्तु ''ब्रह्म किं इत्यतः ॐ इत्युक्तम् । रक्षकस्य इत्यर्थः । अवतिरूपत्वात् । रक्षकश्च विष्णुः प्रसिद्धः'' इत्याहुः ॥

ಗುರುಗಳಾದ ವಿಜಯೀಂದ್ರತೀರ್ಥರು ಬ್ರಹ್ಮನು ಯಾರು? ಎಂಬ ಪ್ರಶ್ನೆಗೆ ಓಂ ಎಂದು ಉತ್ತರಿಸಿದ್ದಾರೆ. ರಕ್ಷಕನಾದ ಎಂದು ಇದರ ಅರ್ಥ. ಏಕೆಂದರೆ ಅವ ಎಂಬ ಧಾತುವಿನಿಂದ ಓಂಕಾರವು ನಿಷ್ಪನ್ನವಾಗಿದೆ. ವಿಷ್ಣುವು ರಕ್ಷಕನೆಂದು ಪ್ರಸಿದ್ಧವಾದ ವಿಚಾರ ಎನ್ನುತ್ತಾರೆ.

विभाषा गुण इति गुणशब्दस्य परतन्त्रमात्रार्थकत्वोक्तेः अत इति साधु । कृद्योगलक्षणा च षष्ठी समस्यत इत्युक्तेः ब्रह्मजिज्ञासा इति साधु । कर्तुः अनुपादानात् न उभयप्राप्तौ कर्मणीति षष्ठी । तेन कर्मणि च इति न निषेधः ।

'ವಿಭಾಷಾ ಗುಣೇ' ಎಂಬ ಸೂತ್ರದಲ್ಲಿ ಗುಣಶಬ್ದಕ್ಕೆ ಕೃದಂತವಾದ ಪದದ ಜೊತೆಗೆ ಷಷ್ಠೀವಿಭಕ್ತ್ಯಂತ-ಪದವು ಸಮಾಸಪಡೆಯುತ್ತದೆಂದು ಹೇಳಿದ್ದರಿಂದ ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂಬ ವ್ಯುತ್ಪತ್ತಿಯು ನಿರ್ದುಷ್ಟವಾಗಿದೆ. ಈ ಸೂತ್ರದಲ್ಲಿ ಕರ್ತೃವಾಚಕಪದವಿಲ್ಲದ ಕಾರಣ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯು ಬರುವುದಿಲ್ಲ. ಆದ್ದರಿಂದ 'ಕರ್ಮಣಿ ಚ' ಎಂಬ ಸೂತ್ರವು ಷಷ್ಠೀತತ್ಪುರುಷಸಮಾಸವನ್ನು ನಿಷೇಧಿಸುವುದಿಲ್ಲ.

*ಸಂಪೂರ್ಣಚಂದ್ರಿಕಾ*

पूर्वेणाध्यायद्वयेन ब्रह्मशब्दार्थस्य उत्तरेण च साधनफलयोः उपपादनात् ब्रह्मणः अथ जिज्ञासा इति वाच्ये अथात इत्यादि अथातःशब्दयोः स्वरूपतः अर्थतश्च आधिक्यादिति सूचनाय । अत्र अथातोब्रह्मपदानि क्रमात् निरधिकारिकत्व-निष्फलत्वनिर्विषयत्वशङ्काव्युदासकानि ॥१॥

ಮೊದಲೆರಡು ಅಧ್ಯಾಯಗಳಲ್ಲಿ ಬ್ರಹ್ಮಶಬ್ದದ ಅರ್ಥವನ್ನು, ಮುಂದಿನ ಎರಡು ಅಧ್ಯಾಯಗಳಲ್ಲಿ ಸಾಧನ ಮತ್ತು ಫಲಗಳನ್ನು ವಿಚಾರ ಮಾಡಿದ್ದಾರೆ. ಆದ್ದರಿಂದ ಬ್ರಹ್ಮಣಃ ಅಥ ಜಿಜ್ಞಾಸಾ ಎಂದು ಸೂತ್ರದ ವಿನ್ಯಾಸವಿರಬೇಕಿತ್ತು. ಆದರೂ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ರಚಿಸಲು ಕಾರಣವಿದೆ. ಅಥ ಮತ್ತು ಅತಃ ಶಬ್ದಗಳಿಗೆ ಶಬ್ದಸ್ವರೂಪದಿಂದ ಹಾಗೂ ಅರ್ಥಸ್ವರೂಪದಿಂದಲೂ ಶ್ರೇಷ್ಠತ್ವವಿದೆ. ಇದನ್ನು ಸೂಚಿಸುವುದಕ್ಕಾಗಿ ಅಥಾತಃ ಎಂದೇ ಹೇಳಿದ್ದಾರೆ. ಸೂತ್ರದಲ್ಲಿರುವ ಅಥ ಅತಃ ಬ್ರಹ್ಮ ಎಂಬ ಪದಗಳು ಕ್ರಮವಾಗಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಧಿಕಾರಿ, ಫಲ, ವಿಷಯಗಳಿಲ್ಲವೆಂಬ ಶಂಕೆಗಳನ್ನು ಪರಿಹರಿಸುತ್ತವೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

* * * * * * *

* * * * *

श्रीराघवेन्द्रयतिकृता

# न्यायमुक्तावली

प्रणम्य रमणं लक्ष्म्याः पूर्णबोधगुरूनपि ।
न्यायमुक्तावलिं कुर्मो विदुषां कण्ठभूषणम् ।।

ಲಕ್ಷ್ಮೀಪತಿಯನ್ನು ಹಾಗೂ ಗುರುಗಳಾದ ಪೂರ್ಣಪ್ರಜ್ಞರನ್ನು ನಮಸ್ಕರಿಸಿ, ವಿದ್ವಾಂಸರ ಕಂಠಕ್ಕೆ ಅಲಂಕಾರಭೂತವಾದ ನ್ಯಾಯಮುಕ್ತಾವಲಿಯನ್ನು(ನ್ಯಾಯವೆಂಬ ಮುತ್ತಿನ ಸರವನ್ನು) ರಚಿಸುತ್ತಿದ್ದೇವೆ.

ज्ञानार्थं ब्रह्मरुद्रेन्दादिभिरर्थितो भगवान्नारायणः व्यासत्वेनावतीर्य उत्सन्नान्वेदान् व्यञ्जयन् तदर्थनिर्णयाय ब्रह्मसूत्रसन्दर्भात्मकं शास्त्रं प्राणिनां हिताय प्रणिनाय । तदेतन्न्यायनिबन्धनात्मकशास्त्रस्य विषयादिमत्तासाधनेन आरम्भणीयत्वं साधयितुं तदुपयुक्ततया न्यायानुसन्धानात्मकविचारमननापरनामकजिज्ञासाकर्तव्यत्वं साधयितुमिदं सूत्रम् । ।। ॐ अथातो ब्रह्मजिज्ञासा ॐ ।। १ ।। इति ।

ತತ್ತ್ವಜ್ಞಾನಕ್ಕೋಸ್ಕರ ಚತುರ್ಮುಖಬ್ರಹ್ಮ ರುದ್ರ ಇಂದ್ರನೇ ಮೊದಲಾದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣದೇವರು ವೇದವ್ಯಾಸರೂಪದಿಂದ ಭೂಮಿಯಲ್ಲಿ ಅವತರಿಸಿದರು. ಅಪಪಾಠಾದಿಗಳಿಂದ ತಿರೋಹಿತವಾದ ವೇದಸಮುದಾಯವನ್ನು ಉದ್ಧರಿಸಿ ವಿಭಾಗಿಸಿದರು. ಆ ವೇದಗಳ ಅರ್ಥನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರವೆಂಬ ಶಾಸ್ತ್ರವನ್ನು ಸಜ್ಜನರ ಹಿತಕ್ಕೋಸ್ಕರ ರಚಿಸಿದರು. ಈ ಶಾಸ್ತ್ರವು ನ್ಯಾಯನಿಬಂಧನಾತ್ಮಕವಾಗಿದೆ. ಇಂತಹ ಶಾಸ್ತ್ರಕ್ಕೆ ವಿಷಯಪ್ರಯೋಜನಾದಿಗಳನ್ನು ತೋರಿಸುವ ಮೂಲಕ ಆರಂಭಣೀಯತ್ವವನ್ನು ಸಮರ್ಥಿಸುವುದಕ್ಕೆ ಉಪಯುಕ್ತವಾದ ನ್ಯಾಯನಿಬಂಧನ, ವಿಚಾರ, ಮನನ ಈ ಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ಜಿಜ್ಞಾಸೆಯನ್ನು ಅವಶ್ಯ ಆಚರಿಸಬೇಕೆಂದು ಸಾಧಿಸುವುದಕ್ಕಾಗಿ ಮೊದಲನೆಯ ಸೂತ್ರವು ಹೊರಟಿದೆ. 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂದು.

एतादादिपञ्चाधिकरण्याः अध्यायपादपीठत्वात् शास्त्रमात्रे तदन्येषां प्रायः शास्त्राध्यायपादेषु अन्तर्भावः टीकायां प्रतिनयं स्पष्टः । अनन्तरसङ्गतिश्च अनेकविधा । यथोक्तम् –

आक्षेपिक्यातिदेशिक्यावुपोद्घातापवादते ।
प्रसङ्गश्चेत्यादिरूपा सा चानन्तर्यलक्षणा ।। इति ।

अस्यैव आदित्वात् नात्र पूर्वसङ्गतिः ।

*ಸಂಪೂರ್ಣಚಂದ್ರಿಕಾ*



## ಜಿಜ್ಞಾಸೆ ............. ಬ್ರಹ್ಮಜಿಜ್ಞಾಸೆ

'ಜಿಜ್ಞಾಸೆ' ಎಂದರೆ 'ವಿಚಾರ' ಎಂದರ್ಥ. ವಿಚಾರವು ಶ್ರವಣ, ಮನನ ಹಾಗೂ ನಿದಿಧ್ಯಾಸನರೂಪವಾದದ್ದು.
'ದುಃಖ ಬೇಡವೇ ಬೇಡ; ಸುಖ ಬೇಕೇ ಬೇಕು' - ಇದು ಎಲ್ಲರ ಕನಸು.
ಊಂಹೂಂ. ಕನಸಲ್ಲ....... ಗುರಿ. ಪ್ರತಿಯೊಬ್ಬ ಜೀವಿಯೂ ಸಾಧಿಸಲೇ ಬೇಕಾದ ಗುರಿ.
ಇದುವೆ ಸಂಸಾರಬಂಧನದಿಂದ ಮುಕುತಿ.
'ಪರಬ್ರಹ್ಮನ ಅನುಗ್ರಹದಿಂದಷ್ಟೇ ಇಂತಹ ಮುಕುತಿಯು ದೊರೆಯುವುದು' ಎಂದು ಉಪನಿಷತ್ತುಗಳೇ
ಮೊದಲಾದ ದಿವ್ಯಗ್ರಂಥಗಳು ಸಾರಿ ಸಾರಿ ಹೇಳುತ್ತಿವೆ.
ಅಂತೆಯೇ 'ಬ್ರಹ್ಮಜಿಜ್ಞಾಸೆ' ಎಂಬುದು ಉದ್ಧಾರವನ್ನು ಬಯಸುವ ಪ್ರತಿಯೊಬ್ಬ ಜೀವಿಯ ಆದ್ಯಕರ್ತವ್ಯ.
'ಬ್ರಹ್ಮ'ಶಬ್ದದಿಂದ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಮಹಾವಿಷ್ಣುವೇ. ವಿಶ್ವನಾಯಕ.
ಉಳಿದವರೆಲ್ಲ ಉಳಿದದ್ದೆಲ್ಲ ಅವನ ಕಿಂಕರರು. ಅವನ ಅಧೀನಗಳು.

ಬ್ರಹ್ಮಸೂತ್ರ. ಬ್ರಹ್ಮಸೂತ್ರಭಾಷ್ಯ ಹತ್ತಾರು ಟೀಕಾ ಟಿಪ್ಪಣಿಗಳು - ಈ ಎಲ್ಲಾ ಗ್ರಂಥಗಳ
ಅತ್ಯಂತಸಾರರೂಪವಾದ ಗ್ರಂಥವೇ ''ಪರಿಪೂರ್ಣಚಂದ್ರಿಕಾ''.
ಜಿಜ್ಞಾಸಾಧಿಕರಣದ ಸಮಸ್ತವಿಷಯವೂ ಈ ಸಂಪುಟದಲ್ಲಿ ಸಂಪನ್ನವಾಗಿದೆ.

ಗುರುಗಳು ಸಿಗುವುದೇ ಕಷ್ಟ. ಆಧುನಿಕ ಜೀವನಶೈಲಿ..... ಬಿಡುವಿಲ್ಲದ ಕೆಲಸದ ಒತ್ತಡ......
ಸಿಕ್ಕ ಅವಕಾಶದಲ್ಲಿ ಗುರುಗಳಿಂದ ಪಡೆದ ಉಪದೇಶವೋ ಅತ್ಯಲ್ಪ...... ತೃಪ್ತಿಯಿಲ್ಲ.
...... ಕಲಿತದ್ದನ್ನು ಜೀರ್ಣಿಸಿಕೊಳ್ಳುವುದು ಸುಲಭವಲ್ಲ.......
ಸಂಸ್ಕೃತ ಮೂಲದೊಂದಿಗೆ ಎಲ್ಲಾ ಗ್ರಂಥಗಳು ಸುಲಭವಾಗಿ ಅರ್ಥವಾಗುವಂತೆ
ಕಸ್ತೂರಿ ಕನ್ನಡದಲ್ಲಿ ಸಿಕ್ಕಿಬಿಟ್ಟರೆ........ ಆಹಾ ..... ಇದಕ್ಕಿಂತ ಸೌಭಾಗ್ಯ ಇನ್ನೊಂದಿಲ್ಲ!!
ಗ್ರಂಥವೆಂಬ ಗುರುವಿನ ಪ್ರತಿಬಿಂಬದಿಂದಾದರೂ ತಿಳಿಯುವ...... 'ಕಾತರ'.... 'ಶ್ರದ್ಧೆ'.
ಇಂತಹ ಜಿಜ್ಞಾಸುಗಳಿಗಾಗಿಯೇ ಇದೋ ನಿಮ್ಮ ಕೈಯ್ಯಲ್ಲಿದೆ ಪರಿಪೂರ್ಣಚಂದ್ರಿಕಾ.

ಸೂತ್ರ - ಭಾಷ್ಯ - ಟೀಕಾ - ಟಿಪ್ಪಣಿ - ವಿವರಣೆ - ತುಲನೆ - ವಿಶ್ಲೇಷಣೆ - ತಾತ್ಪರ್ಯ ......
ಬಯಸಿದ್ದೆಲ್ಲವನ್ನೂ ನೀಡುವ ಕಾಮಧೇನು.
ಯಾವುದೇ ಸಂಶಯಕೂಪದಲ್ಲಿ ಬೀಳದಂತೆ ಎಚ್ಚರ ವಹಿಸುವ, ಸುಸ್ಪಷ್ಟವಾಗಿ ತತ್ತ್ವನಿಶ್ಚಯವನ್ನು ನೀಡುವ,
ಅಮೃತತ್ವದೆಡೆಗೆ ಅಕ್ಕರೆಯಿಂದ ಕೈಹಿಡಿದು ಕರೆದೊಯ್ಯುವ **ಬೆಳದಿಂಗಳು**

ಪ್ರಕಾಶಕರು : ಶ್ರೀಹರಿವಾಯುಪ್ರಕಾಶನ ಮೈಸೂರು